إِنَّا نَحْنُ نَزَّلْنَا الذِّكْرَ وَإِنَّا لَهُ لَحَافِظُونَ

إِنَّهُ لَقُرْآنٌ كَرِيمٌ فِي كِتَابٍ مَكْنُونٍ لَا يَمَسُّهُ إِلَّا الْمُطَهَّرُونَ تَنْزِيلٌ مِنْ رَبِّ الْعَالَمِينَ

ಆದರಣೀಯ ಖುರ್‌ಆನ್ ಹಾಗೂ ಅದರ ಕನ್ನಡ ಅರ್ಥಾನುವಾದವು
ಖಾದಿಮುಲ್ ಹರಮೈನ್ ಅಶ್ಶರೀಫೈನ್ ಸಲ್ಮಾನ್ ಬಿನ್ ಅಬ್ದುಲ್ ಅಝೀಝ್ ಆಲು ಸವೂದ್
ದೊರೆಯ ಆದೇಶದ ಮೇರೆಗೆ ಮುದ್ರಣವಾಗಿರುತ್ತದೆ.

تشرّف بالأمر بطباعة هذه الترجمة لمعاني القرآن الكريم
خادم الحرمين الشريفين الملك سلمان بن عبدالعزيز آل سعود
ملك المملكة العربية السعودية

# ترجمة معاني القرآن الكريم
## إلى اللُّغةِ الكنّاديّة

إعداد :
الشيخ محمد حمزة بتّور

مُجمّع المَلِكِ فهدٍ لطِباعةِ المُصحفِ الشّريفِ
بالمدينةِ المنوّرة

# ಆದರಣೀಯ ಖುರ್‌ಆನ್ ಹಾಗೂ ಅದರ ಕನ್ನಡ ಅರ್ಥಾನುವಾದ

ಅನುವಾದ:
ಶೇಖ್ ಮುಹಮ್ಮದ್ ಹಂಝ ಪುತ್ತೂರು

**ಅಲ್‌ಮಲಿಕ್ ಫಹದ್ ಪವಿತ್ರ ಮುಸ್ಹಫ್ ಮುದ್ರಣಾಲಯ ಸಂಕೀರ್ಣ**
ಅಲ್ ಮದೀನ ಅಲ್ ಮುನವ್ವರ

بِسۡمِ ٱللَّهِ ٱلرَّحۡمَٰنِ ٱلرَّحِيمِ

# مقدمة

بقلم معالي الشيخ الدكتور

**عبد اللطيف بن عبد العزيز بن عبد الرحمن آل الشيخ**

وزير الشؤون الإسلامية والدعوة والإرشاد

المشرف العام على المجمع

الحمد لله رب العالمين، القائل في كتابه الكريم:

﴿... قَدۡ جَآءَكُم مِّنَ ٱللَّهِ نُورٞ وَكِتَٰبٞ مُّبِينٞ ﴾

والصلاة والسلام على أشرف الأنبياء والمرسلين، نبينا محمد صَلَّى ٱللَّهُ عَلَيۡهِ وَسَلَّمَ، القائل: «**خيركُم مَن تعلَّم القرآن وعلَّمه**».

أما بعد:

فإنفاذاً لتوجيهات خادم الحرمين الشريفين، الملك سلمان بن عبدالعزيز آل سعود -حفظه الله- بالعناية بكتاب الله، والعمل على تيسير نشره، وتوزيعه بين المسلمين، في مشارق الأرض ومغاربها، وتفسيره، وترجمة معانيه إلى مختلف لغات العالم.

وإيماناً من وزارة الشؤون الإسلامية والدعوة والإرشاد بالمملكة العربية السعودية بأهمية ترجمة معاني القرآن الكريم إلى جميع لغات العالم المهمة؛ تسهيلاً لفهمه على المسلمين الناطقين بغير العربية، وتحقيقاً للبلاغ المأمور به في قوله صَلَّى ٱللَّهُ عَلَيۡهِ وَسَلَّمَ: «**بلِّغوا عنِّي ولو آية**».

وخدمةً لإخواننا الناطقين باللغة الكنَّادية بولاية "كرناتكا بالهند" يطيب لمجمع الملك فهد لطباعة لمصحف الشريف بالمدينة المنورة أن يقدم للقارئ الكريم هذه الترجمة إلى اللغة الكنَّادية التي أعدّها الشيخ محمد حمزة بتّور بتكليف من الحركة السلفية بجنوب كرناتكا، وراجعها من قبل المجمع الشيخ عمر فاروق أولال، والشيخ عبد اللطيف محمد علي.

ونحمد الله سبحانه وتعالى أن وفق لإنجاز هذا العمل العظيم، الذي نرجو أن يكون خالصاً لوجهه الكريم، وأن ينفع به الناس.

إننا لندرك أن ترجمة معاني القرآن الكريم -مهما بلغت دقتها- ستكون قاصرة عن أداء المعاني العظيمة التي يدل عليها النص القرآني المعجز، وأن المعاني التي تؤديها الترجمة إنما هي حصيلة ما بلغه علم المترجم في فهم كتاب الله الكريم، وأنه يعتريها ما يعتري عمل البشر كلّه من خطأ ونقص.

ومن ثم نرجو من كل قارئ لهذه الترجمة أن يوافي مجمع الملك فهد لطباعة المصحف الشريف بالمدينة النبوية بما قد يجده فيها من خطأ أو نقص أو زيادة؛ للإفادة من الاستدراكات في الطبعات القادمة إن شاء الله.

والله الموفق، وهو الهادي إلى سواء السبيل، اللّهُمَّ تقبل منّا إنّك أنت السميع العليم.

ಪರಮ ದಯಾಮಯನೂ,
ಕರುಣಾನಿಧಿಯೂ ಆದ ಅಲ್ಲಾಹುವಿನ ನಾಮದಿಂದ

## ಮೊದಲ ಮಾತು

**ಮಆಲಿ ಡಾಃ ಅಬ್ದುಲ್ಲತೀಫ್ ಬಿನ್ ಅಬ್ದುಲ್ ಅಝೀಝ್**
**ಬಿನ್ ಅಬ್ದುರ್ರಹ್ಮಾನ್ ಆಲು ಶೇಖ್,**
ಮಿನಿಸ್ಟರ್ ಆಫ್ ಇಸ್ಲಾಮಿಕ್ ಅಫೈರ್ಸ್, ಎಂಡೋವ್‌ಮೆಂಟ್ಸ್,
ದಅವಾ ಆಂಡ್ ಗೈಡೆನ್ಸ್ ಆಂಡ್
ಸೂಪರ್‌ವೈಸರ್ ಜನರಲ್,
ಮಲಿಕ್ ಫಹದ್ ಖುರ್‌ಆನ್ ಪ್ರಿಂಟಿಂಗ್ ಪ್ರೆಸ್ ಕಾಂಪ್ಲೆಕ್ಸ್.

"ನಿಮಗೆ ಅಲ್ಲಾಹುವಿನ ವತಿಯಿಂದ ಒಂದು ಪ್ರಕಾಶವೂ, ಸ್ಪಷ್ಟವಾದ ಒಂದು ಗ್ರಂಥವೂ ಬಂದಿರುವುದು" ಎಂದು ಹೇಳಿರುವ ಸರ್ವಲೋಕಗಳ ಪ್ರಭುವಿಗೆ ಸರ್ವ ಸ್ತುತಿಗಳು ಮೀಸಲು. "ನಿಮ್ಮ ಪೈಕಿ ಖುರ್‌ಆನ್ ಕಲಿಯುವವನು ಹಾಗೂ ಕಲಿಸುವವನು ಅತ್ಯುತ್ತಮನಾಗಿರುವನು" ಎಂದು ಹೇಳಿರುವ ಪ್ರವಾದಿವರ್ಯರಾದ ಮುಹಮ್ಮದ್(ﷺ)ರ ಮೇಲೆ ಅಲ್ಲಾಹುವಿನ ಸುರಕ್ಷೆ ಹಾಗೂ ಕಾರುಣ್ಯವು ವರ್ಷಿಸಲಿ.

ವಿವಿಧ ವಿಶ್ವ ಭಾಷೆಗಳಿಗೆ ಆದರಣೀಯ ಖುರ್‌ಆನನ್ನು ಭಾಷಾಂತರ ಮಾಡಿಸಲು ಹಾಗೂ ಅದರ ವ್ಯಾಖ್ಯಾನ ಗ್ರಂಥಗಳನ್ನು ಪೌರಾತ್ಯ ಹಾಗೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿರುವ ಮುಸ್ಲಿಮರ ನಡುವೆ ವಿತರಣೆ ಮಾಡಲು ಖಾದಿಮುಲ್ ಹರಮೈನ್ ಅಶ್ಶರೀಫೈನ್ ಸಲ್ಮಾನ್ ಬಿನ್ ಅಬ್ದುಲ್ ಅಝೀಝ್ ಆಲು ಸವೂದ್ ದೊರೆ–ಅವರ ಮೇಲೆ ಅಲ್ಲಾಹುವಿನ ರಕ್ಷೆಯಿರಲಿ–ಯ ಸೂಚನೆಗಳನ್ನು ಜಾರಿಗೆತರುವ ಮೂಲಕ ಹಾಗೂ "ನನ್ನಿಂದ ಒಂದು ಸೂಕ್ತಿಯನ್ನಾದರೂ ತಲುಪಿಸಿರಿ" ಎಂಬ ಪ್ರವಾದಿ ನುಡಿಮುತ್ತನ್ನು ಸಾಕ್ಷಾತ್ಕಾರ ಮಾಡುವ ನಿಟ್ಟಿನಲ್ಲಿ ಅರಬೇತರ ಭಾಷೆಯನ್ನಾಡುವ ಜನರು ಸುಲಲಿತವಾಗಿ ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ಆದರಣೀಯ ಖುರ್‌ಆನ್ ಭಾಷಾಂತರ ಮಾಡುವುದನ್ನು ತನ್ನ ಬಾಧ್ಯತೆಯಾಗಿ ಸೌದಿ ಅರೇಬಿಯಾದ ಇಸ್ಲಾಮೀ ಪ್ರಬೋಧನಾಕಾರ್ಯ ಮಂತ್ರಾಲಯವು ಭಾವಿಸಿರುವುದರಿಂದ ಈ

ಭಾಷಾಂತರವನ್ನು ಭಾರತದ ಕರ್ನಾಟಕ ರಾಜ್ಯದ ಕನ್ನಡ ಭಾಷೆಯನ್ನಾಡುವ ಜನರ ಸೇವೆಯಲ್ಲಿ ಸಮರ್ಪಿಸುವುದಕ್ಕೆ ಅಲ್‌ಮಲಿಕ್ ಫಹದ್ ಪವಿತ್ರ ಮುಸ್ಹಫ್ ಮುದ್ರಣಾಲಯ ಸಂಕೀರ್ಣವು ಹರ್ಷಪಡುತ್ತದೆ. ಇದರ ಭಾಷಾಂತರವನ್ನು ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ಖರ್ಚುವೆಚ್ಚದಲ್ಲಿ ನಿರ್ವಹಿಸಿರುವುದು ಶೈಖ್ ಮುಹಮ್ಮದ್ ಹಂಝ ಇಬ್ರಾಹೀಮ್ ಪುತ್ತೂರು ಹಾಗೂ ಇದರ ಪರಿಶೀಲನೆ ನಡೆಸಿರುವುದು ಪ್ರಿಂಟಿಂಗ್ ಪ್ರೆಸ್ ಸಂಕೀರ್ಣ ವತಿಯಿಂದ ಶೈಖ್ ಉಮರ್ ಅಹ್ಮದ್ ಉಳ್ಳಾಲ ಮತ್ತು ಶೈಖ್ ಅಬ್ದುಲ್ಲತೀಫ್ ಮುಹಮ್ಮದ್ ಅಲಿ ಆಗಿದ್ದಾರೆ.

ಈ ಮಹತ್ಕಾರ್ಯವು ಈಡೇರಲು ಅನುಗ್ರಹ ನೀಡಿದ ಅಲ್ಲಾಹುವಿಗೆ ಸ್ತುತಿಯನ್ನರ್ಪಿಸುವುದರ ಜೊತೆಗೆ ಇದು ವಿಶ್ವದ ಜನರಿಗೆ ಪ್ರಯೋಜನಕರವಾಗಲು ಹಾಗೂ ಈ ಪ್ರಯತ್ನವು ಅಲ್ಲಾಹುವಿನ ಸಂತೃಪ್ತಿಗೆ ಮಾತ್ರ ಸೀಮಿತವಾಗಲು ನಾವು ಪ್ರಾರ್ಥಿಸುತ್ತೇವೆ.

ಆದರಣೀಯ ಖುರ್‌ಆನ್‌ನ ಅರ್ಥಾನುವಾದವು ಅದೆಷ್ಟೇ ಸೂಕ್ಷ್ಮತೆಯಿಂದ ಮಾಡಲಾಗಿದ್ದರೂ ಪ್ರಮಾದಗಳಿಂದ ಮುಕ್ತವಲ್ಲ ಹಾಗೂ ಈ ಅತಿಮಾನುಷ ಗ್ರಂಥದ ಪಠ್ಯದ ಅರ್ಥವನ್ನು ನೀಡುವುದರಲ್ಲಿ ಪರಿಪೂರ್ಣವಾಗಿರುವುದಿಲ್ಲ ಎಂಬುದನ್ನು ನಾವು ಅರ್ಥಮಾಡಿಕೊಂಡಿದ್ದೇವೆ. ಪ್ರಸ್ತುತ ಭಾಷಾಂತರದಲ್ಲಿ ಕಾಣುವ ಅರ್ಥವು ಇದರ ಭಾಷಾಂತರಕಾರನು ಆದರಣೀಯ ಖುರ್‌ಆನನ್ನು ಅರ್ಥ ಮಾಡಿಕೊಂಡಿರುವುದಕ್ಕೆ ಪೂರಕವಾಗಿದೆಯೇ ಹೊರತು ಇನ್ನೇನಲ್ಲ. ಇದರಲ್ಲಿ ಮನುಷ್ಯರಲ್ಲಿ ಕಾಣುವ ಕುಂದುಕೊರತೆಗಳು ಕಂಡು ಬಂದರೆ ಅದು ಸಹಜವೇ ಆಗಿದೆ.

ಹೀಗಿರುವಾಗ ಮದೀನಾದಲ್ಲಿರುವ ಅಲ್‌ಮಲಿಕ್ ಫಹದ್ ಪವಿತ್ರ ಮುಸ್ಹಫ್ ಮುದ್ರಣಾಲಯ ಸಂಕೀರ್ಣವು ಇನ್‌ಶಾಅಲ್ಲಾಹ್ ಮುಂದೆ ನಡೆಸುವ ಮುದ್ರಣಕ್ಕೆ ಸಹಕಾರಿಯಾಗುವ ರೀತಿಯಲ್ಲಿ ಎಲ್ಲಾದರೂ ಕಂಡು ಬಂದ ಮುದ್ರಣ ದೋಷ, ಕುಂದುಕೊರತೆಗಳನ್ನು ನಮ್ಮ ಗಮನಕ್ಕೆ ತರಬೇಕೆಂದು ನಾವು ಪ್ರತಿಯೊಬ್ಬ ವಾಚಕನಲ್ಲಿ ಭಿನ್ನವಿಸುತ್ತಿದ್ದೇವೆ.

ಸಹಾಯಕ್ಕಾಗಿ ಅಲ್ಲಾಹುವಿನ ಮೊರೆ ಹೋಗುತ್ತೇವೆ. ಅವನು ಸನ್ಮಾರ್ಗದೆಡೆಗೆ ಮುನ್ನಡೆಸಲಿ. ಓ ಪ್ರಭೂ, ನಮ್ಮಿಂದ ಇದನ್ನು ಸ್ವೀಕರಿಸು. ನಿಶ್ಚಯವಾಗಿಯೂ ನೀನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವೆ.

بِسۡمِ ٱللَّهِ ٱلرَّحۡمَٰنِ ٱلرَّحِيمِ

## ಆದರಣೀಯ ಖುರ್‌ಆನ್‌ನ ಅರ್ಥಾನುವಾದಗಳ ಮುನ್ನುಡಿ

ಆದರಣೀಯ ಖುರ್‌ಆನ್ ಎಂಬುದು ಅಲ್ಲಾಹು ಅದರ ಅಕ್ಷರಗಳು ಹಾಗೂ ಅದರ ವಿವರಣೆಯಾಗಿರುವ ಅರ್ಥದೊಂದಿಗೆ ತನ್ನ ಸಂದೇಶವಾಹಕರೂ, ಲೋಕಕ್ಕೆ ಕಾರುಣ್ಯವಾಗಿಯೂ, ಸುವಾರ್ತೆ ನೀಡುವವರೂ, ಮುನ್ನೆಚ್ಚರಿಕೆ ನೀಡುವವರೂ, ಅಲ್ಲಾಹುವಿನ ಅಪ್ಪಣೆಯೊಂದಿಗೆ ಅವನೆಡೆಗೆ ಕರೆಯುವ ಪ್ರಬೋಧಕನೂ, ಪ್ರಕಾಶಪೂರ್ಣ ಬೆಳಕೂ ಆಗಿ ಬಂದಂತಹ ಮುಹಮ್ಮದ್(ﷺ)ರ ಮೇಲೆ ಅವತೀರ್ಣಗೊಳಿಸಿಕೊಟ್ಟಂತಹ ವಚನಗಳಾಗಿವೆ. ಪ್ರಸ್ತುತ ಆದರಣೀಯ ಖುರ್‌ಆನ್‌ನ ಪರಿಚಯ ಹಾಗೂ ಅದರ ಸಂದೇಶವನ್ನು ಸಂಕ್ಷಿಪ್ತವಾಗಿ ನಿಮಗೆ ಸಮರ್ಪಿಸುತ್ತಿದ್ದೇವೆ.

## ಆದರಣೀಯ ಖುರ್‌ಆನ್‌ನ ಕುರಿತು ಸಾಮಾನ್ಯ ಪರಿಚಯ

### ಒಂದನೆಯದಾಗಿ, ಆದರಣೀಯ ಖುರ್‌ಆನ್‌ನ ಪರಿಚಯ ಮತ್ತು ಅದರ ನಾಮ ಹಾಗೂ ವಿಶೇಷತೆಗಳ ಕುರಿತು ವಿವರಣೆ:

ಆದರಣೀಯ ಖುರ್‌ಆನ್ ಅಲ್ಲಾಹುವಿನ ವಚನವಾಗಿದ್ದು ಪ್ರವಾದಿ ಮುಹಮ್ಮದ್(ﷺ)ರಿಗೆ ಅವತೀರ್ಣಗೊಂಡದ್ದೂ ಅಲ್ಲಾಹುವಿನ ಕಡೆಯಿಂದ ಅವನ ಪದಸಂಪತ್ತು ಹಾಗೂ ಅರ್ಥಸಂಪತ್ತುಗಳೊಂದಿಗೆ ಬೋಧನೆಗೊಂಡದ್ದೂ ಆಗಿದೆ. ಗ್ರಂಥ ರೂಪದಲ್ಲಿ ಬರೆಯಲಾದುದೂ, ಸಜ್ಜನ ಸಮುದಾಯಗಳು ತಮ್ಮ ಮುಂದಿನ ಪೀಳಿಗೆಗಳಿಗೆ ಹಸ್ತಾಂತರ ಮಾಡುತ್ತಿರುವಂತಹುದೂ, ನಿರಂತರ ಪಾರಾಯಣ ಮಾಡಲಾಗುವಂತಹುದೂ ಆದ ವಿಶಿಷ್ಟ ಗ್ರಂಥವಾಗಿದೆ.

ಪ್ರವಾದಿ ಮುಹಮ್ಮದ್(ﷺ)ರವರ ಮೇಲೆ ಅವತೀರ್ಣವಾದ ದಿವ್ಯಬೋಧನೆಯನ್ನು ಖುರ್‌ಆನ್ ಎಂದು ಹೆಸರಿಸಿದವನು ಸ್ವತಃ ಅಲ್ಲಾಹುವೇ ಆಗಿದ್ದಾನೆ. ಅಲ್ಲಾಹು ಹೇಳುತ್ತಾನೆ:

﴿ إِنَّا نَحۡنُ نَزَّلۡنَا عَلَيۡكَ ٱلۡقُرۡءَانَ تَنزِيلٗا ﴾ [الدهر: ٢٣]

"ಖಂಡಿತವಾಗಿಯೂ ನಾವು ತಮಗೆ ಈ ಖುರ್‌ಆನನ್ನು ಹಂತ ಹಂತವಾಗಿ ಅವತೀರ್ಣಗೊಳಿಸಿಕೊಟ್ಟಿರುವೆವು." (ಅಲ್ ಇನ್ಸಾನ್: 23) ಏಕೆಂದರೆ ಅದು ಓದಲ್ಪಡಬೇಕು, ಪಾರಾಯಣ ಮಾಡಲ್ಪಡಬೇಕು ಹಾಗೂ ಅದು ತೊರೆಯಲ್ಪಡಬಾರದು ಎಂಬುದು ಅದರ ಉದ್ದೇಶಗಳಲ್ಲಿ ಸೇರಿವೆ.

ಅಲ್ಲಾಹು ಅದನ್ನು ಅಲ್‌ಕಿತಾಬ್ (ಗ್ರಂಥ) ಅಂತಲೂ ಕರೆದಿದ್ದಾನೆ. ಅವನು ಹೇಳುತ್ತಾನೆ:

﴿إِنَّآ أَنزَلۡنَآ إِلَيۡكَ ٱلۡكِتَٰبَ بِٱلۡحَقِّ﴾ [النساء: ١٠٥]

"ನಾವು ತಮಗೆ ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು." (ಅನ್ನಿಸಾ: 105) ಏಕೆಂದರೆ ಅದು ಬರೆಯಲ್ಪಡಬೇಕು ಹಾಗೂ ಅದು ಕಡೆಗಣಿಸಲ್ಪಡಬಾರದು ಎಂಬುದು ಅದರ ಉದ್ದೇಶಗಳಲ್ಲಿ ಸೇರಿವೆ.

ಈ ಆದರಣೀಯ ಖುರ್‌ಆನನ್ನು ಅಲ್ಲಾಹು ಹಲವು ನಾಮಗಳಲ್ಲಿ ಕರೆದಿರುತ್ತಾನೆ: ಅಲ್‌ಫುರ್ಕಾನ್ (ಸತ್ಯಾಸತ್ಯ ವಿವೇಚಕ), ದಿಕ್ರ್ (ಉದ್ಬೋಧೆ), ಹುದಾ (ಸನ್ಮಾರ್ಗ), ನೂರ್ (ಪ್ರಕಾಶ), ಶಿಫಾ (ಶಮನ), ಹಕೀಂ (ಯುಕ್ತಿಪೂರ್ಣ), ಮೌಇಳ (ಸದುಪದೇಶ) ಮುಂತಾದ ಹೆಸರುಗಳಲ್ಲಿ ಖುರ್‌ಆನ್‌ನ ಮಹಾನತೆ ಹಾಗೂ ಅದರ ಸಂಪೂರ್ಣ ಸಂದೇಶವನ್ನು ತಿಳಿಯಪಡಿಸಿದ್ದಾನೆ.

ಇನ್ನು ಅಲ್‌ಮುಸ್ಹಫ್ ಎಂಬ ಪದವು ಖುರ್‌ಆನ್ ಬರೆಯಲ್ಪಟ್ಟಂತಹ ಹಾಳೆಗಳ ಸುಹುಫ್ ಎಂಬುದರಿಂದ ಪಡೆಯಲಾಗಿದೆ. ಪ್ರವಾದಿ ಅನುಚರರು ಆದರಣೀಯ ಖುರ್‌ಆನ್ ಬರೆಯಲ್ಪಟ್ಟಿರುವುದು ಹಾಳೆಗಳಲ್ಲಾಗಿದೆ ಎಂಬ ಕಾರಣದಿಂದ ಮುಸ್ಹಫ್ ಎಂಬ ಹೆಸರಿನಲ್ಲಿ ಸಾರ್ವತ್ರಿಕವಾಗಿ ಚಾಲ್ತಿಗೆ ತಂದರು.

ಆದರಣೀಯ ಖುರ್‌ಆನ್ ಅಲ್ಲಾಹುವಿನ ಕಡೆಯ ವಾಣಿಯಾಗಿದ್ದು ಅದನ್ನು ತಂದು ಪ್ರವಾದಿ ಮುಹಮ್ಮದ್(ﷺ)ರವರ ಹೃದಯಕ್ಕೆ ಇಳಿಸಿಕೊಟ್ಟವರು ಮಲಕ್ ಜಿಬ್ರೀಲ್ (عَلَيْهِ السَّلَامُ) ಆಗಿದ್ದಾರೆ. ಅಲ್ಲಾಹು ಹೇಳುತ್ತಾನೆ:

﴿وَإِنَّهُۥ لَتَنزِيلُ رَبِّ ٱلۡعَٰلَمِينَ ۝ نَزَلَ بِهِ ٱلرُّوحُ ٱلۡأَمِينُ ۝ عَلَىٰ قَلۡبِكَ لِتَكُونَ مِنَ ٱلۡمُنذِرِينَ ۝ بِلِسَانٍ عَرَبِيّٖ مُّبِينٖ﴾ [الشعراء: ١٩٢-١٩٥].

"ಖಂಡಿತವಾಗಿಯೂ ಇದು (ಖುರ್‌ಆನ್) ಸರ್ವಲೋಕಗಳ ಪ್ರಭು ಅವತೀರ್ಣಗೊಳಿಸಿರುವುದಾಗಿದೆ. ಪ್ರಾಮಾಣಿಕ ಆತ್ಮನು (ಜಿಬ್ರೀಲ್) ಅದರೊಂದಿಗೆ ತಮ್ಮ ಹೃದಯದಲ್ಲಿ ಇಳಿದಿರುವರು. ತಾವು ಮುನ್ನೆಚ್ಚರಿಕೆ ನೀಡುವವರಲ್ಲಿ ಸೇರಿದವರಾಗುವ ಸಲುವಾಗಿ. ಸ್ಪಷ್ಟವಾದ ಅರಬಿ ಭಾಷೆಯಲ್ಲಿ (ಅದು ಅವತೀರ್ಣಗೊಂಡಿದೆ)." (ಅಶ್ಶುಅರಾ: 192–195)

ಈ ವಿಷಯದಲ್ಲಿ ಪ್ರವಾದಿ ಮುಹಮ್ಮದ್(ﷺ) ಹೊಸಬರೇನೂ ಅಲ್ಲ. ಅವರ ಸಹೋದರರಾದ ಸಕಲ ಸಂದೇಶವಾಹಕರು(عَلَيْهِمُ السَّلَامُ)ಗಳ

ಮೇಲೂ ಅಲ್ಲಾಹುವಿನ ವಾಣಿಯನ್ನು ಜಿಬ್ರೀಲ್(عَلَيْهِ السَّلَامُ) ತಂದು ಕೊಡುತ್ತಿದ್ದರು. ಅಲ್ಲಾಹು ತನ್ನ ಈ ಮಹತ್ತರವಾದ ಹೊಣೆಗಾರಿಕೆಗೆ ತಾನಿಚ್ಛಿಸುವವರನ್ನು ನಿಯೋಗಿಸುತ್ತಾನೆ. ಅವನು ಹೇಳುತ್ತಾನೆ:

﴿ ٱللَّهُ يَصۡطَفِي مِنَ ٱلۡمَلَٰٓئِكَةِ رُسُلٗا وَمِنَ ٱلنَّاسِۚ إِنَّ ٱللَّهَ سَمِيعُۢ بَصِيرٞ ﴾ [الحج: ٧٥]

“ಅಲ್ಲಾಹು ಮಲಕ್‍ಗಳಿಂದಲೂ, ಮನುಷ್ಯರಿಂದಲೂ ಸಂದೇಶವಾಹಕರನ್ನು ಆರಿಸುವನು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ, ನೋಡುವವನೂ ಆಗಿರುವನು.” (ಅಲ್‍ಹಜ್ಜ್: 75) ಅದಕ್ಕೆ ಯಾರು ಯೋಗ್ಯರಾದವರು ಮತ್ತು ಯಾರು ಯೋಗ್ಯರಲ್ಲ ಎಂಬುದನ್ನು ಅಲ್ಲಾಹು ಅತ್ಯಂತ ಅರಿವುಳ್ಳವನಾಗಿರುವನು. ಏಕೆಂದರೆ ಸೃಷ್ಟಿಗಳನ್ನು ಸೃಷ್ಟಿಸಿದವನು ಅವನಾಗಿದ್ದಾನೆ. ಅವನು ಹೇಳುತ್ತಾನೆ:

﴿ وَرَبُّكَ يَخۡلُقُ مَا يَشَآءُ وَيَخۡتَارُ ﴾ [القصص: ٦٨]

“ತಮ್ಮ ಪ್ರಭು ತಾನಿಚ್ಛಿಸುವುದನ್ನು ಸೃಷ್ಟಿಸುವನು ಮತ್ತು (ತಾನಿಚ್ಛಿಸುವುದನ್ನು) ಆರಿಸುವನು.” (ಅಲ್‍ಕಸಸ್: 68)

**ಎರಡನೆಯದಾಗಿ, ಆದರಣೀಯ ಖುರ್‌ಆನ್‍ನ ಅವತರಣಿಕೆ:**

ಹಿಜರಿ ಶಕೆ 610 ರಮದಾನ್ ತಿಂಗಳ 17ರ ಸೋಮವಾರದಂದು ಪವಿತ್ರ ಮಕ್ಕಾದಲ್ಲಿರುವ ಪರ್ವತಗಳಲ್ಲೊಂದರಲ್ಲಿರುವ ಹಿರಾ ಗುಹೆಯಲ್ಲಿ ಮಲಕ್ ಜಿಬ್ರೀಲ್(عَلَيْهِ السَّلَامُ) ಅವರೆಡೆಗೆ ಈ ಕೆಳಗಿನ ಸೂಕ್ತಿಗಳೊಂದಿಗೆ ಇಳಿದು ಬಂದರು.

﴿ ٱقۡرَأۡ بِٱسۡمِ رَبِّكَ ٱلَّذِي خَلَقَ ۞ خَلَقَ ٱلۡإِنسَٰنَ مِنۡ عَلَقٍ ۞ ٱقۡرَأۡ وَرَبُّكَ ٱلۡأَكۡرَمُ ۞ ٱلَّذِي عَلَّمَ بِٱلۡقَلَمِ ۞ عَلَّمَ ٱلۡإِنسَٰنَ مَا لَمۡ يَعۡلَمۡ ﴾ [العلق: ١ - ٥]

“ಸೃಷ್ಟಿಸಿರುವ ತಮ್ಮ ಪ್ರಭುವಿನ ನಾಮದಿಂದ ಓದಿರಿ. ಅವನು ಮನುಷ್ಯನನ್ನು ರಕ್ತಪಿಂಡದಿಂದ ಸೃಷ್ಟಿಸಿರುವನು. ತಾವು ಓದಿರಿ, ಲೇಖನಿಯ ಮೂಲಕ ಕಲಿಸಿಕೊಟ್ಟ ತಮ್ಮ ಪ್ರಭು ಅತ್ಯಧಿಕ ಔದಾರ್ಯವುಳ್ಳವನಾಗಿರುವನು. ಅವನು ಮನುಷ್ಯನು ಅರಿಯದಿರುವುದನ್ನು ಅವನಿಗೆ ಕಲಿಸಿಕೊಟ್ಟಿರುವನು.” (ಅಲ್‍ಅಲಕ್: 1–5) ಪ್ರವಾದಿ(صَلَّى اللَّهُ عَلَيْهِ وَسَلَّمَ)ಯವರ ಮೇಲೆ ಪ್ರಪ್ರಥಮವಾಗಿ ಅವತೀರ್ಣಗೊಂಡ ಸೂಕ್ತಿಗಳು ಇವುಗಳಾಗಿದ್ದವು.

ಪ್ರವಾದಿ(ﷺ)ಯವರು ಅವುಗಳೊಂದಿಗೆ ತಮ್ಮ ಮನೆಯವರ ಬಳಿಗೆ ಬಂದರು. ಅವರು ಭಯವಿಹ್ವಲರಾಗಿದ್ದರು. ತಮ್ಮ ಪ್ರಾಣವು ಅಪಾಯಕ್ಕೀಡಾಗಿದೆಯೆಂದು ಗಾಬರಿಗೊಂಡಿದ್ದರು. ಸತ್ಯವಿಶ್ವಾಸಿಗಳ ಮಾತೆಯಾದ ಅವರ ಪತ್ನಿ ಖದೀಜ ಬಿಂತ್ ಖುವೈಲಿದ್(رَضِيَ ٱللَّٰهُ عَنْهَا)ರಲ್ಲಿ ವಿಷಯವನ್ನು ತಿಳಿಸಿದರು. "ನಾನು ನನ್ನ ಪ್ರಾಣದ ಬಗ್ಗೆ ಭಯಭೀತನಾಗಿದ್ದೇನೆ ಎಂದು ಹೇಳಿದರು. ಆಕೆ ಪ್ರವಾದಿಯವರಿಗೆ ಸಾಂತ್ವನ ಕೊಟ್ಟರು: "ಖಂಡಿತ ಹಾಗಾಗದು. ನೀವು ಸುವಾರ್ತೆ ಪಡೆಯಿರಿ. ಅಲ್ಲಾಹುವಿನಾಣೆ! ಅವನು ತಮ್ಮನ್ನು ಎಂದಿಗೂ ಅಪಮಾನಿಸಲಾರನು. ಕಾರಣವೇನಂದರೆ ತಾವು ಕುಟುಂಬ ಬಂಧವನ್ನು ಸೇರಿಸುತ್ತೀರಿ. ಸತ್ಯವನ್ನೇ ನುಡಿಯುತ್ತೀರಿ. ಇತರರೆ ಸಂಕಷ್ಟವನ್ನು ವಹಿಸಿಕೊಳ್ಳುತ್ತೀರಿ. ಅತಿಥಿಗಳನ್ನು ಸತ್ಕರಿಸುತ್ತೀರಿ. ಅರ್ಹತೆಯುಳ್ಳ ನಿಜವಾದ ಸಂಕಷ್ಟಪೀಡಿತನಿಗೆ ತಾವು ನೆರವಾಗುತ್ತೀರಿ." ಅನಂತರ ಆಕೆ ಅವರನ್ನು ಚಿಂತಕನೂ, ಗ್ರಂಥಗಳ ಜ್ಞಾನಿಯೂ ಆದ ವರಕಃ ಬಿನ್ ನೌಫಲ್‌ರಲ್ಲಿಗೆ ಕರೆದುಕೊಂಡು ಹೋದರು. ಆಕೆ ಹೇಳಿದರು: ಓ ಮಾವ! ತಮ್ಮ ಸಹೋದರ ಪುತ್ರನ ಮಾತನ್ನೊಮ್ಮೆ ಕೇಳಿರಿ." ಪ್ರವಾದಿ(ﷺ)ಯವರು ತಮಗಾದ ಅನುಭವವನ್ನು ವಿವರಿಸಿಕೊಟ್ಟಾಗ ವರಕಃ ಬಿನ್ ನೌಫಲ್ ಹೇಳಿದರು: ಇದು ಪ್ರವಾದಿ ಮೂಸಾ(عَلَيْهِ ٱلسَّلَامُ)ರಲ್ಲಿಗೆ ಬಂದ ಅದೇ ನಾಮೂಸ್(ಅರ್ಥಾತ್ ಜಿಬ್ರೀಲ್ ಎಂಬ ಮಲಕ್. ಅವರು ದಿವ್ಯವಾಣಿಯೊಂದಿಗೆ ಎಲ್ಲ ಅಂಬಿಯಾಗಳ ಬಳಿಗೆ ನಿಯೋಗಿಸಲ್ಪಟ್ಟ ಮಲಕ್ ದೂತ.) ಆಗಿದ್ದಾರೆ. ಅಯ್ಯೋ! ಅಕಟಾ! ತಮ್ಮನ್ನು ತಮ್ಮ ಜನತೆ ಹೊರಗಟ್ಟುವ ದಿನದಂದು ನಾನು ಬದುಕಿರುತ್ತಿದ್ದರೆ! ಆಗ ಪ್ರವಾದಿ(ﷺ)ಯವರು ಕೇಳಿದರು: ಏನು! ನಾನು ಅವರಿಂದ ಹೊರಗಟ್ಟಲಾಗುವೆನೆ? ವರಕಃ ಹೇಳಿದರು: ಹೌದು! ತಾವು ತಂದಿರುವಂತಹ ಇದೇ ಸಂದೇಶದೊಂದಿಗೆ ಯಾರೆಲ್ಲ ಬಂದಿದ್ದರೋ ಅವರೆಲ್ಲರೊಂದಿಗೆ ಅವರ ಜನತೆ ಹಗೆತನ ತೋರಿಸಿದ್ದರು. ಆ ದಿನವನ್ನು ನಾನು ಎದುರಿಸುತ್ತಿದ್ದರೆ ತಮಗೆ ಬಲಿಷ್ಠ ಸಹಾಯವನ್ನು ನೀಡುತ್ತಿದ್ದೆ." ವರಕಃ ಈ ಭೇಟಿಯ ಕೆಲವೇ ಸಮಯದಲ್ಲಿ ಇಹಲೋಕವಾಸ ತ್ಯಜಿಸಿದ್ದರು.

ಇತರ ಪ್ರವಾದಿಗಳ ಮೇಲೆ ಅವತೀರ್ಣಗೊಂಡ ಹಾಗೆ ಈ ಆದರಣೀಯ ಖುರ್‌ಆನ್ ಪ್ರವಾದಿ(ﷺ)ಯವರ ಮೇಲೆ ಒಂದೇ ಬಾರಿಗೆ ಅವತೀರ್ಣಗೊಂಡ ಗ್ರಂಥವಲ್ಲ. ಅದು 23 ವರ್ಷಗಳ ಕಾಲಾವಧಿಯಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಅವತೀರ್ಣಗೊಂಡಿತ್ತು. ಕೆಲವೊಮ್ಮೆ ಪೂರ್ಣ ಅಧ್ಯಾಯ ಇನ್ನು ಕೆಲವೊಮ್ಮೆ ಯಾವುದಾದರೂ ಅಧ್ಯಾಯದ ಸೂಕ್ತಿಗಳು ಅವತೀರ್ಣಗೊಳ್ಳುತ್ತಿದ್ದವು.

ಆದರಣೀಯ ಖುರ್‌ಆನ್ ಹಂತ ಹಂತವಾಗಿ ಅವತೀರ್ಣಗೊಂಡಿರುವುದರ ಯುಕ್ತಿಯೇನೆಂದರೆ (ನೋಡಿರಿ ತಫ್ಸೀರ್ ತ್ವಬ್‌ರಿ 19/10, ಅಬೂ ಶಾಮ ಮುಕದ್ದಸಿಯವರ ಅಲ್‌ಮುರ್ಶಿದ್ ಅಲ್ ವಜೀಝ್ ಪು. 28) ಮಲಕ್ ಜಿಬ್ರೀಲ್(عَلَيْهِ السَّلَامُ) ಹೊಸ ಹೊಸ ವಾಣಿಗಳೊಂದಿಗೆ ಇಳಿದು ಬರುವ ಸಂದರ್ಭಗಳಲ್ಲಿ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ಯವರ ಹೃದಯಕ್ಕೆ ಸ್ಥಿರತೆ ನೀಡುವುದು ಹಾಗೂ ಅವರನ್ನು ಸುದೃಢಗೊಳಿಸುವುದಾಗಿದೆ. ಇದು ಪ್ರವಾದಿತ್ವದ ಆರಂಭದಲ್ಲಿ ಅವರು ತಂದ ಶರೀಅತ್‌ಗೆ ವಿರುದ್ಧವಾಗಿರುವ ಬಹುದೇವಾರಾಧಕರ ವಿರೋಧವನ್ನೂ, ತಡೆಯನ್ನೂ ಎದುರಿಸುವಾಗ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ) ಯವರಿಗೆ ಮನೋದಾರ್ಢ್ಯತೆ, ಸ್ಥಿರತೆ ಸಿಗಲೆಂದಾಗಿತ್ತು. ಅಲ್ಲಾಹು ಹೇಳುತ್ತಾನೆ:

﴿ وَقَالَ ٱلَّذِينَ كَفَرُواْ لَوْلَا نُزِّلَ عَلَيْهِ ٱلْقُرْءَانُ جُمْلَةً وَٰحِدَةً
كَذَٰلِكَ لِنُثَبِّتَ بِهِۦ فُؤَادَكَ وَرَتَّلْنَٰهُ تَرْتِيلًا ﴾ [الفرقان: ٣٢]

"ಸತ್ಯನಿಷೇಧಿಗಳು ಹೇಳಿದರು: "ಕುರ್‌ಆನನ್ನು ಇವರ ಮೇಲೆ ಒಮ್ಮೆಲೇ ಇಳಿಸಲಾಗಿಲ್ಲವೇಕೆ? ಅದು ಹೀಗೆ (ಹಂತ ಹಂತವಾಗಿ ಅವತೀರ್ಣಗೊಳ್ಳಬೇಕಾಗಿದೆ.) ಅದರ ಮೂಲಕ ತಮ್ಮ ಹೃದಯವನ್ನು ನಾವು ಸುದೃಢಗೊಳಿಸುವ ಸಲುವಾಗಿ ಅದನ್ನು ನಾವು ತಮಗೆ ಸಾವಧಾನವಾಗಿ ಪಾರಾಯಣ ಮಾಡುತ್ತಾ ಓದಿಕೊಡುವೆವು." (ಅಲ್‌ಫುರ್‌ಕಾನ್: 32)

ಅದೇ ಪ್ರಕಾರ ಆದರಣೀಯ ಖುರ್‌ಆನ್‌ನ ಅವತೀರ್ಣಿಕೆಯು ಬೇರೆ ಬೇರೆ ಸಂದರ್ಭಗಳಲ್ಲಾಗಿದ್ದುದರ ಹಿಂದೆ ಮತ್ತೊಂದು ಮಹಾ ತರಬೇತಿಯ ಉದ್ದೇಶವೂ ಅಡಗಿದೆ. ಅದೆಂದರೆ ಸತ್ಯವಿಶ್ವಾಸಿಗಳಿಗೆ ಹಂತ ಹಂತವಾಗಿ ಜ್ಞಾನ ಹಾಗೂ ಕರ್ಮಗಳಲ್ಲಿ ತರಬೇತಿ ನೀಡಿ ಅವರಿಗೆ ಅದು ಕರಗತ ಮಾಡುವುದನ್ನು ಸುಲಭವಾಗಿಸಲು ಹಾಗೂ ಅವರಿದ್ದಂತಹ ಅಜ್ಞಾನ, ಅವಿಶ್ವಾಸ, ಬಹುದೇವಾರಾಧನೆಗಳಂತಹ ಅಂಧಕಾರಗಳಿಂದ ನೈಜವಿಶ್ವಾಸದ, ಏಕದೇವಾರಾಧನೆಯ ಹಾಗೂ ಜ್ಞಾನದ ಬೆಳಕಿನೆಡೆಗೆ ಕರೆತರುವುದಾಗಿದೆ.

### ಮೂರನೆಯದಾಗಿ, ಆದರಣೀಯ ಖುರ್‌ಆನಿನ ಲಿಖಿತ:

ಲಿಖಿತವಾಗಿ ದಾಖಲಿಸಿಡುವ ಪ್ರಕ್ರಿಯೆಯು ಗ್ರಂಥದ ಪಥ್ಯ ಸಂರಕ್ಷಣೆಯ ಅತಿ ಮುಖ್ಯ ಭಾಗವಾಗಿದೆ. ಯಾವುದೇ ವಚನವು ಬರೆಯಲ್ಪಡದಿದ್ದರೆ ಅದು ಮರೆಯಲ್ಪಡುವುದು ನಿಶ್ಚಿತ. ಆದರಣೀಯ ಖುರ್‌ಆನ್ ಸಕಲ ಲೋಕಕ್ಕೆ ಅಂತ್ಯ ದಿನದ ವರೆಗೂ ಸನ್ಮಾರ್ಗವಾಗಿ ಅವತೀರ್ಣವಾಗಿರುವುದರಿಂದ ಅದು ಲಿಖಿತರೂಪದಲ್ಲಿ ಸಂಗ್ರಹಿಸಲ್ಪಡುವುದು ಅತ್ಯಂತ ಅನಿವಾರ್ಯವಾಗಿತ್ತು.

ಅದರ ಬರೆದಿಡುವಿಕೆಗೆ ಪ್ರವಾದಿ(ﷺ)ಯವರ ಹೆಚ್ಚಿನ ಗಮನ, ಶ್ರದ್ಧೆ ಪ್ರಾಪ್ತವಾಗಿತ್ತು. ಬರಹ ಜ್ಞಾನವಿರುವ ಸಹಾಬಿಗಳಿಗೆ ಅವರು ಅದನ್ನು ಬರೆದಿಡುವಂತೆ ಆದೇಶಿಸಿ ಅವರನ್ನು ದಿವ್ಯವಾಣಿಯ ಬರಹಗಾರರನ್ನಾಗಿ ನಿಶ್ಚಯಿಸಿದ್ದರು. ಅವರ ಪೈಕಿ ಪ್ರಮುಖರು ಹಾಗೂ ಪ್ರಸಿದ್ಧರು ಅನ್ಸಾರಿ ಸಹಾಬಿಯಾಗಿದ್ದ ಝ್ಯೆದ್ ಬಿನ್ ಸಾಬಿತ್(رَضِيَ ٱللَّٰهُ عَنْهُ) ಆಗಿದ್ದರು. (ತಫ್ಸೀರ್ ತ್ವಬ್‌ರಿ 1/28)

ಪ್ರವಾದಿ(ﷺ)ಯವರು ತಮಗೆ ದಿವ್ಯವಾಣಿ ಪ್ರಾಪ್ತವಾದಾಗಲೆಲ್ಲಾ ಅದನ್ನು ಹೃದಯ ಪಾಠ ಮಾಡಿಕೊಂಡು ತಾವು ನಿಶ್ಚಯಿಸಿದ ಬರಹಗಾರರಲ್ಲೊಬ್ಬರಿಗೆ ಅದನ್ನು ಬರೆದಿಡಲು ಹೇಳಿಕೊಡುತ್ತಿದ್ದರು ಮತ್ತು ನೀವು ಈ ಸೂಕ್ತಿಗಳನ್ನು ಇಂತಿಂತಹ ಅಧ್ಯಾಯದ ಇಂತಿಂತಹ ಉಲ್ಲೇಖವಿರುವ ಸ್ಥಳದಲ್ಲಿ ಬರೆದಿಡಿರಿ ಎನ್ನುತ್ತಿದ್ದರು. (ಸುನನು ಅಬೀ ದಾವೂದ್ 786, ಸುನನುತ್ತಿರ್ಮಿದಿ 3086, ಮುಸ್ತದ್ರಕ್‌ನಲ್ಲಿ ಹಾಕಿಂ 3325, ಅವರು ಹೇಳಿದರು: “ಬುಖಾರಿ ಮುಸ್ಲಿಂ ಗ್ರಂಥಗಳ ಶರತ್ತಿನ ಪ್ರಕಾರ ಈ ಹದೀಸ್ ಸ್ವಹೀಹ್ ಆಗಿದೆ. ಅವರೆಡರಲ್ಲಿ ಈ ಹದೀಸ್ ಬಂದಿಲ್ಲ.”) ಅವರು ಅಧ್ಯಾಯದ ಹೆಸರು ಹೇಳಿ ಅದರಲ್ಲಿ ಸೂಕ್ತಿಗಳನ್ನು ಬರೆದಿಡಲು ಹೇಳಿದ ಬಳಿಕ ಅವುಗಳನ್ನು ಹೃದಯಪಾಠ ಮಾಡಲು ಆದೇಶಿಸುತ್ತಿದ್ದರು. ಹೀಗೆ ಆದರಣೀಯ ಖುರ್‌ಆನ್ ಸಂಪೂರ್ಣವಾಗಿ ಪ್ರವಾದಿ(ﷺ)ಯವರ ಕಾಲದಲ್ಲೇ ತೊಗಲುಗಳಲ್ಲಿ ಬರೆಯಲ್ಪಟ್ಟಿತ್ತು. (ಸ್ವಹೀಹ್ ಬುಖಾರಿ 4592, 4593.)

ಮಲಕ್ ಜಿಬ್ರೀಲ್(عَلَيْهِ ٱلسَّلَامُ) ಪ್ರತಿ ವರ್ಷ ಪ್ರವಾದಿ(ﷺ)ಯವರಿಗೆ ಆದರಣೀಯ ಖುರ್‌ಆನನ್ನು ಒಂದು ಬಾರಿ ಸಂಪೂರ್ಣವಾಗಿ ಓದಿಕೊಡುತ್ತಿದ್ದರು. ಆದರೆ ಅವರು ಇಹಲೋಕ ವಾಸ ತ್ಯಜಿಸಿದ ವರ್ಷದಲ್ಲಿ ಇಂದು ಮುಸ್ಲಿಮರ ಕೈಯಲ್ಲಿರುವ ಮುಸ್ಹಫ್‌ನಲ್ಲಿರುವ ಅಧ್ಯಾಯಗಳ, ಸೂಕ್ತಿಗಳ ಕ್ರಮದಂತೆಯೇ ಎರಡು ಬಾರಿ ಸಂಪೂರ್ಣವಾಗಿ ಓದಿಕೊಟ್ಟಿದ್ದರು. ಈ ವಿಚಾರವನ್ನು ಅಲ್ಲಾಹುವಿನ ಕೆಳಗಿನ ವಚನಗಳು ದೃಢಪಡಿಸುತ್ತವೆ:

﴿ إِنَّ عَلَيْنَا جَمْعَهُۥ وَقُرْءَانَهُۥ ۞ فَإِذَا قَرَأْنَٰهُ فَٱتَّبِعْ قُرْءَانَهُۥ ﴾ [القيامة: ١٧- ١٨]

“ಖಂಡಿತವಾಗಿಯೂ ಅದರ (ಖುರ್‌ಆನಿನ) ಕ್ರೋಢೀಕರಣ ಮತ್ತು ಅದರ ಪಾರಾಯಣವು ನಮ್ಮ ಕರ್ತವ್ಯವಾಗಿದೆ. ನಾವು ಅದನ್ನು ಪಾರಾಯಣ ಮಾಡಿಕೊಟ್ಟರೆ ಆ ಪಾರಾಯಣವನ್ನು ಹಿಂಬಾಲಿಸಿರಿ.” (ಅಲ್‌ಕಿಯಾಮಃ17–18) ಮತ್ತು

﴿ سَنُقۡرِئُكَ فَلَا تَنسَىٰٓ ﴾ [الأعلى: ٦]

“ನಾವು ತಮಗೆ ಓದಿಕೊಡುವೆವು. ಆಗ ತಾವು ಮರೆಯಲಾರಿರಿ.” (ಅಲ್‌ಅಅಲಾ: 6).

## ನಾಲ್ಕನೆಯದಾಗಿ:
## ಗ್ರಂಥದ ಹಾಳೆಗಳಲ್ಲಿ ಆದರಣೀಯ ಖುರ್‌ಆನ್‌ನ ಕ್ರೋಢೀಕರಣ:

ಪ್ರವಾದಿ(ﷺ)ಯವರ ನಿಧನದ ಬಳಿಕ ಸನ್ಮಾರ್ಗದರ್ಶಿ ಖಲೀಫ ಅಬೂಬಕರ್ ಸಿದ್ದೀಕ್(رَضِيَ ٱللَّهُ عَنْهُ)ರವರು ಸುವ್ಯವಸ್ಥಿತವಾಗಿ ಗ್ರಂಥದ ಹಾಳೆಗಳಲ್ಲಿ ಕ್ರೋಢೀಕರಿಸಲು ಆದೇಶಿಸಿದರು. ಇದು ಹಾಫಿಝ್(ಕಂಠಪಾಠ ಮಾಡಿದವರು)ಗಳ ಮರಣದೊಂದಿಗೆ ಇಲ್ಲವೇ ಲಿಖಿತ ತೊಗಲುಗಳ ನಾಶದೊಂದಿಗೆ ಖುರ್‌ಆನ್‌ನ ಯಾವುದೇ ಭಾಗವು ನಷ್ಟವಾಗದಿರಲೆಂದಾಗಿತ್ತು. ಈ ಮಹತ್ಕಾರ್ಯದ ನೇತೃತ್ವವನ್ನು ವಹಿಸಿಕೊಂಡ ದಿವ್ಯವಾಣಿಯ ಬರಹಗಾರರಾದ ಝೈದ್ ಬಿನ್ ಸಾಬಿತ್(رَضِيَ ٱللَّهُ عَنْهُ)ರವರು ಪುನಃ ಪರಿಶೀಲನೆಯ ಬಳಿಕ, ತೊಗಲುಗಳಲ್ಲಿ ಬರೆಯಲಾದವುಗಳನ್ನು ಹಾಗೂ ಕಂಠಪಾಠ ಮಾಡಲಾದವುಗಳನ್ನು ಪರಸ್ಪರ ತುಲನೆ ಮಾಡಿ ದೃಢಪಡಿಸಿದ ನಂತರ ಹಾಳೆಗಳಲ್ಲಿ ಬರೆದಿಟ್ಟರು. ಪ್ರಸ್ತುತ ಗ್ರಂಥ ಹಾಳೆಗಳು ಅಬೂಬಕರ್ ಸಿದ್ದೀಕ್(رَضِيَ ٱللَّهُ عَنْهُ)ರವರ ಮನೆಯಲ್ಲಿ ಅವರ ಮರಣದವರೆಗೆ ಸುರಕ್ಷಿತವಾಗಿಡಲಾಗಿದ್ದವು. ಅನಂತರ ಎರಡನೇ ಖಲೀಫ ಉಮರ್(رَضِيَ ٱللَّهُ عَنْهُ)ರವರ ಮನೆಯಲ್ಲಿ ಸುರಕ್ಷಿತವಾಗಿಡಲಾಗಿದ್ದವು. ಅವರ ಮರಣಾನಂತರ ವಿಶ್ವಾಸಿಗಳ ಮಾತೆ ಪ್ರವಾದಿ ಪತ್ನಿ ಹಫ್ಸ ಬಿಂತ್ ಉಮರ್(رَضِيَ ٱللَّهُ عَنْهَا)ರವರ ಮನೆಯಲ್ಲಿ ಸಂರಕ್ಷಿಸಲಾಗಿದ್ದವು. (ಸ್ವಹೀಹ್ ಬುಖಾರಿ 4986, ಸುನನುತ್ತಿರ್ಮಿದಿ 3103, ಮುಸ್ನದ್ ಅಹ್ಮದ್ 76)

ಇಸ್ಲಾಮ್ ನಾಲ್ಕೂ ದಿಕ್ಕಿನಲ್ಲಿ ಹಬ್ಬತೊಡಗಿದಾಗ ಮುಸ್ಲಿಮರು ತಮಗೆ ಪಾರಾಯಣ ಮಾಡಲು ಮುಸ್ಹಫ್‌ಗಳ ಅಗತ್ಯವನ್ನು ಮುಂದಿಟ್ಟರು. ಕೆಲವು ಸಹಾಬಿಗಳು ಅಂದಿನ ಸನ್ಮಾರ್ಗದರ್ಶಿ ಖಲೀಫ ಉಸ್ಮಾನ್ ಬಿನ್ ಅಫ್ಫಾನ್(رَضِيَ ٱللَّهُ عَنْهُ)ರವರಲ್ಲಿ ಮಾದರಿ ಗ್ರಂಥದ ಹಾಳೆಗಳ ಆಧಾರದಲ್ಲಿ ಜನರು ತಮ್ಮ ಪಾರಾಯಣದ ಉದ್ದೇಶದಿಂದ ಒಟ್ಟುಗೂಡ ಬೇಕಾದ ಅವಶ್ಯಕತೆಯ ಕಡೆಗೆ ಬೆಳಕು ಚೆಲ್ಲಿದರು. ಅವರು ಬರವಣಿಗೆ ಬಲ್ಲ ಕುರ್‌ಆನ್‌ನ ಹಾಫಿಝ್‌ಗಳ ಒಂದು ತಂಡಕ್ಕೆ ಪ್ರಸ್ತುತ ಕಾರ್ಯವನ್ನು ಕೈಗೆತ್ತಿಕೊಳ್ಳಲು ಆದೇಶಿಸಿದರು. ಅವರ ನೇತೃತ್ವವನ್ನು ಝೈದ್ ಬಿನ್ ಸಾಬಿತ್(رَضِيَ ٱللَّهُ عَنْهُ)ರವರೇ ವಹಿಸಿಕೊಂಡರು. ಅಬೂಬಕರ್ ಸಿದ್ದೀಕ್(رَضِيَ ٱللَّهُ عَنْهُ)ರವರ ಕಾಲದಲ್ಲಿ ಕ್ರೋಢೀಕರಣಗೊಂಡ ಅದೇ ಗ್ರಂಥದ ಹಾಳೆಗಳನ್ನು ಮುಂದಿಟ್ಟುಕೊಂಡು ಒಂದೇ ಗ್ರಂಥದಲ್ಲಿ ಅವೆಲ್ಲವನ್ನೂ

ಕ್ರೋಢೀಕರಿಸಿದರು ಮತ್ತು ಅದರಿಂದ ಅನೇಕ ಪ್ರತಿಗಳನ್ನು ಹೊರತಂದರು. ಅವುಗಳ ಪೈಕಿ ಒಂದೊಂದು ಪ್ರತಿಯನ್ನು ಇಸ್ಲಾಮೀ ರಾಜ್ಯದ ಮಹಾ ಪಟ್ಟಣಗಳಿಗೆ ಕಳುಹಿಸಿಕೊಟ್ಟು ಅವುಗಳನ್ನು ನಕಲು ಮಾಡಿಕೊಂಡು ಮುಸ್ಹಫ್‌ಗಳನ್ನು ರಚಿಸಲು ಅವರು ಮುಸ್ಲಿಮರಿಗೆ ಆದೇಶವಿತ್ತರು.

ಇಂದು ಜಗತ್ತಿನಲ್ಲಿರುವ ಸಕಲ ಅರಿಯಲ್ಪಟ್ಟ ಮುಸ್ಹಫ್‌ಗಳು ಅದು ಹಸ್ತಪ್ರತಿಯಾಗಿರಲಿ ಇಲ್ಲವೇ ಮುದ್ರಿತ ರೂಪದಲ್ಲಿರಲಿ ಎಲ್ಲದರ ಮೂಲವು ವಿವಿಧ ಪಟ್ಟಣಗಳಿಗೆ ಕಳುಹಿಸಿಕೊಡಲಾದ ಆ ಮುಸ್ಹಫ್‌ಗಳ ನಕಲುಗಳಾಗಿವೆ. ಅವುಗಳು ಮೂಲಗಳ ಪಠ್ಯದೊಂದಿಗಾಗಲಿ, ಕ್ರಮದೊಂದಿಗಾಗಲಿ ಕಿಂಚಿತ್ ವ್ಯತ್ಯಾಸವನ್ನೂ ಹೊಂದಿರುವುದಿಲ್ಲ.

ಇಂದಿನ ದಿನಗಳ ವರೆಗೂ ಮುಸ್ಲಿಮರು ಪವಿತ್ರ ಮುಸ್ಹಫ್‌ಗಳ ಮುದ್ರಣಕ್ಕೆ ಹೆಚ್ಚಿನ ಗಮನಕೊಡುತ್ತಾರೆ. ಆಧುನಿಕ ಮುದ್ರಣ ಯಂತ್ರಗಳು ಹಾಗೂ ಆಧುನಿಕ ತಂತ್ರಜ್ಞಾನಗಳನ್ನು ಅಳವಡಿಸುವ ಮೂಲಕ ಮುಸ್ಹಫ್ ಮುದ್ರಣದಲ್ಲಿ ನವೀನತೆಯನ್ನು ಹಾಗೂ ಉತ್ಕೃಷ್ಟತೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಹೀಗೆ ಖುರ್‌ಆನಿನ ಪಠ್ಯವನ್ನು ಸನ್ಮಾರ್ಗದರ್ಶಿ ಉಸ್ಮಾನ್ ಬಿನ್ ಅಫ್ಫಾನ್ (رَضِيَ اللَّهُ عَنْهُ) ಕಾಲದಲ್ಲಿನ ಅಧಿಕೃತವಾದ ರಸ್ಮುಲ್ ಉಸ್ಮಾನಿ ಎಂಬ ಹೆಸರಿನಲ್ಲಿ ಪ್ರಸಿದ್ಧವಾದ ಅದೇ ಲಿಪಿಯನ್ನಾಧರಿಸಿ ಮುದ್ರಣದ ಉತ್ಕೃಷ್ಟತೆಯನ್ನು ಕಾಪಾಡಿಕೊಂಡು ಬರಲಾಗಿದೆ.

ಈ ನಿಟ್ಟಿನಲ್ಲಿ ಮದೀನ ಮುನವ್ವರದಲ್ಲಿರುವ ಅಲ್‌ಮಲಿಕ್ ಫಹದ್ ಪವಿತ್ರ ಮುಸ್ಹಫ್ ಮುದ್ರಣಾಲಯ ಸಂಕೀರ್ಣವು ಸಹ ಆದರಣೀಯ ಖುರ್‌ಆನಿಗೆ ನೀಡಲಾದ ಉನ್ನತವಾದ ಪರಿಗಣನೆಯ ದ್ಯೋತಕವಾಗಿ ಕಾರ್ಯನಿರ್ವಹಿಸುವ ಸಂಸ್ಥೆಯಲ್ಲದೆ ಇನ್ನೇನೂ ಅಲ್ಲ. ಅಲ್ಲಾಹುವಿನ ಗ್ರಂಥದ ಕಡೆಗಿರುವ ಅತ್ಯಾಸಕ್ತಿ, ಅದರ ಸೇವೆ ಮಾಡುವ ಉತ್ಕಟವಾದ ಹಂಬಲ, ಮುಸ್ಲಿಮರಿಗೆ ಮುಸ್ಹಫ್‌ಗಳು ಸುಲಭವಾಗಿ ಲಭ್ಯವಾಗಬೇಕೆಂಬ ಇಚ್ಛೆಯು ಸವೂದಿ ರಾಜಾಡಳಿತದ ಚುಕ್ಕಾಣಿ ಹಿಡಿದವರಲ್ಲಿ ಉಂಟಾಗಿರುವುದು ಅದರ ಉತ್ಕೃಷ್ಟ ಮುದ್ರಣಕ್ಕೂ, ವಿನ್ಯಾಸಕ್ಕೂ, ಸಂರಕ್ಷಣೆಗೂ ನಾಂದಿಯಾಯಿತು.

### ಐದನೆಯದಾಗಿ, ಮುಸ್ಹಫ್‌ನ ಕ್ರಮೀಕರಣ ಹಾಗೂ ಕಾಂಡಗಳ ವರ್ಗೀಕರಣ:

ಆದರಣೀಯ ಖುರ್‌ಆನ್ ಸೂರಃ ಫಾತಿಹಾದೊಂದಿಗೆ ಆರಂಭವಾಗಿ ಸೂರಃ ಅನ್ನಾಸ್‌ನಲ್ಲಿ ಕೊನೆಗೊಳ್ಳುತ್ತದೆ. ಅದು 114 ಅಧ್ಯಾಯಗಳನ್ನು ಒಳಗೊಂಡಿದೆ. ಈ ಕ್ರಮವು ತೌಕೀಫಿ ಆಗಿದೆ. ಅಂದರೆ ಪ್ರವಾದಿ(صَلَّى اللَّهُ عَلَيْهِ وَسَلَّمَ) ಯವರಿಂದಲೇ ನಿಶ್ಚಿತವಾದ ಕ್ರಮವಾಗಿದ್ದು ದಿವ್ಯವಾಣಿ ಅವತೀರ್ಣವಾದ ಅದೇ ಕ್ರಮವನ್ನು ಅವಲಂಬಿಸಲಾಗಿಲ್ಲ. ಪ್ರಪ್ರಥಮವಾಗಿ ಅವತೀರ್ಣವಾದ

ಸೂರಃ ಅಲ್‌ಅಲಕ್ ಆಗಿದ್ದರೂ ಖುರ್‌ಆನ್‌ನಲ್ಲಿ 96ನೇ ಕ್ರಮಾಂಕದಲ್ಲಿ ಬಂದಿದೆ. ಸಹಾಬಾಗಳು ಸೂಕ್ತಿಗಳ ಹಾಗೂ ಸೂರಃಗಳ ಕ್ರಮವನ್ನು ಅರಿತವರಾಗಿದ್ದರು.

ಇಂದು ಆದರಣೀಯ ಖುರ್‌ಆನ್ ಮೂವತ್ತು ಕಾಂಡಗಳಾಗಿ ವಿಂಗಡಿಸಲ್ಪಟ್ಟಿದೆ. ಮುಸ್ಲಿಮರಿಗೆ ಪಾರಾಯಣ ಸುಲಭವಾಗಲು ಪ್ರತಿಯೊಂದು ಕಾಂಡವು ಎರಡು ವಿಭಾಗಗಳಾಗಿ ವಿಂಗಡಿಸಲಾಗಿದೆ.

### ಆರನೆಯದಾಗಿ, ಆದರಣೀಯ ಖುರ್‌ಆನ್‌ನ ಅಧ್ಯಯನ.

ಪ್ರವಾದಿ(ﷺ)ಯವರಿಗೆ ಅವತೀರ್ಣಗೊಂಡ ಅದೇ ಕ್ರಮದಲ್ಲಿ ಅದರ ಪಾರಾಯಣ ಮಾಡುವುದಕ್ಕೂ, ಅದರ ಪಠ್ಯವನ್ನು ಕಂಠಪಾಠ ಮಾಡುವುದಕ್ಕೂ, ಅದರ ಅಧ್ಯಯನ ನಡೆಸುವುದಕ್ಕೂ ಮುಸ್ಲಿಮರು ತೀವ್ರ ಆಸಕ್ತಿಯನ್ನು ತೋರಿಸುತ್ತಾರೆ. ಸಹಾಬಾಗಳ ಪೈಕಿಯ ಪಾರಾಯಣ ವಿದ್ವಾಂಸರು ಹಾಗೂ ಕಂಠಪಾಠ ಮಾಡಿಕೊಂಡ ಹಾಫಿಝ್‌ಗಳು ಮುಂದಿನ ತಲೆಮಾರಿನ ತಾಬಿಈಗಳಿಗೆ ಕಲಿಸಿಕೊಡುವ ಮಹತ್ಕಾರ್ಯವನ್ನು ನಿರ್ವಹಿಸಿ ಅದರ ಪಠ್ಯವನ್ನು ಕರಾರುವಕ್ಕಾಗಿ ಹಸ್ತಾಂತರಿಸಿದರು. ಪ್ರತಿಯೊಂದು ಸೂಕ್ತಿಯ ಮುಂದೆ ನಿಲ್ಲಿಸಿ ಅದರ ಅರ್ಥದ ಆಳವನ್ನು ಅರಿತುಕೊಳ್ಳುವಂತೆ ಮಾಡಿದಾಗ ಅವರು ಅದರ ಜ್ಞಾನ ಹಾಗೂ ಕೃತಿಯನ್ನು ಕಲಿತುಕೊಂಡರು. ಅನಂತರ ತಾಬಿಈಗಳು ಪಾರಾಯಣ ಕಲಿಸುವ ಶಾಲೆಗಳನ್ನು ಸ್ಥಾಪಿಸಿದರು. ಅವರು ಸಹಾಬಾಗಳಿಂದ ಕಲಿತ ಪಾರಾಯಣ ಕ್ರಮ, ನಿಖರತೆಯುಳ್ಳ ಪಠ್ಯ, ಅದರ ಅಕ್ಷರ ಮತ್ತು ಪದಗಳ ಸಂಖ್ಯೆ, ಸೂರಃ ಮತ್ತು ಸೂಕ್ತಿಗಳ ಕ್ರಮೀಕರಣ, ಅದರ ಸುಂದರ ಪಠನ ಮತ್ತು ಸೂಕ್ಷ್ಮವಾದ ಸಾದರಪಡಿಸುವಿಕೆ, ಅದರ ಪಾರಾಯಣ ಶೈಲಿ ಮುಂತಾದ ವಿಷಯಗಳ ಕುರಿತು ಅವರು ನಿಷ್ಠಾವಂತರಾಗಿದ್ದರು. ಹೀಗೆ ಆದರಣೀಯ ಖುರ್‌ಆನ್ ಅಧ್ಯಯನ, ಕಂಠಪಾಠ, ಪಾರಾಯಣ ಮಾಡಲಾಗುತ್ತಾ ಉಳಿದುಬಿಟ್ಟಿತು. ಒಬ್ಬ ವಿದ್ಯಾರ್ಥಿಯು ಹೃದಯ ಪಾಠ ಮಾಡಿಕೊಂಡ ಪಾರಾಯಣ ತಜ್ಞನಾದ ತನ್ನ ಗುರುವಿನಿಂದ ನೇರವಾಗಿ ಸ್ಪಷ್ಟ ಅರಬೀ ಶಾಸ್ತ್ರ ಭಾಷೆಯೊಂದಿಗೆ ಸಂಶುದ್ಧವಾಗಿ ಪ್ರವಾದಿ(ﷺ)ಯವರ ಮೇಲೆ ಅವತೀರ್ಣಗೊಂಡಂದಿನಿಂದ ಇಂದಿನ ವರೆಗಿನ ಅದೇ ಕ್ರಮದಲ್ಲಿ ಅದನ್ನು ಕಲಿತುಕೊಳ್ಳುತ್ತಾನೆ.

ಆದರಣೀಯ ಖುರ್‌ಆನ್ ಅದರ ಪದಗಳ, ಅಕ್ಷರಗಳ ಹಾಗೂ ಉಚ್ಚಾರಣೆಯ ವಿಧದೊಂದಿಗೆ ವಿವಿಧ ಪಠನ ಶೈಲಿಯ ಮೂಲಕ ಪಾರಾಯಣಗೊಳ್ಳುತ್ತದೆ. ಇದು ತಾಬಿಈಗಳು ಸಹಾಬಾಗಳ ಪೈಕಿ ಕಂಠಪಾಠ

ಮಾಡಿದ ಪಾರಾಯಣ ತಜ್ಞರಿಂದ ಕಲಿತುಕೊಂಡದ್ದಾಗಿದೆ. ಸಹಾಬಾಗಳು ನೇರವಾಗಿ ಪ್ರವಾದಿ(ﷺ)ಯವರಿಂದ ಕಲಿತುಕೊಂಡಿದ್ದರು ಹಾಗೂ ಅದಕ್ಕೆ ಅನುಮತಿಯನ್ನು ಪಡೆದಿದ್ದರು. ಅವುಗಳ ಪೈಕಿ ಕಿರಾಅತು ಆಸಿಮ್; ಇದು ಅವರ ಶಿಷ್ಯ ಹಫ್ಸ್ ಬಿನ್ ಸುಲೈಮಾನ್‌ರಿಂದ ವರದಿಯಾದುದಾಗಿದೆ. ಕಿರಾಅತು ನಾಫಿಅ್; ಇದು ಅವರ ಶಿಷ್ಯ ವರ್ಷ್ ಎಂದು ನಾಮಾಂಕಿತವಿರುವ ಉಸ್ಮಾನ್ ಬಿನ್ ಸಈದ್‌ರಿಂದ ವರದಿಯಾದುದಾಗಿದೆ. ಅದೇ ರೀತಿ ಬಸ್ವರ ನಿವಾಸಿಯಾದ ಅಬೂ ಅಮ್ರ್‌ರಿಂದ ವರದಿಯಾಗಿರುವ ದೂರಿ ಎಂಬ ಕಿರಾಅತ್ ಕ್ರಮ ಮತ್ತು ನಾಫಿಅ್ ರಿಂದ ವರದಿಯಾಗಿರುವ ಕಾಲೂನ್ ಎಂಬ ಕಿರಾಅತ್ ಕ್ರಮ ಮುಂತಾದವುಗಳು ಇಂದು ನಮ್ಮ ಈ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾದ ಪಾರಾಯಣ ಕ್ರಮಗಳಾಗಿವೆ.

## ಏಳನೆಯದಾಗಿ, ಆದರಣೀಯ ಖುರ್‌ಆನ್‌ನ ವ್ಯಾಖ್ಯಾನ:

ಖುರ್‌ಆನ್ ವ್ಯಾಖ್ಯಾನವೆಂದರೆ ಅದರ ಅರ್ಥವನ್ನು ಸ್ಪಷ್ಟಪಡಿಸುವುದಾಗಿದೆ. (ಝುರ್‌ಕಷಿಯವರ ಅಲ್‌ಬುರ್ಹಾನ್ 1/13)ಒಂದು ವಚನದ ಉದ್ದೇಶವು ಅದು ತಿಳಿಸುವ ನೈಜ ಅರ್ಥದ ಮುಂದೆ ನಿಲ್ಲುವುದರಿಂದ ಮಾತ್ರವೇ ಈಡೇರಲು ಸಾಧ್ಯ. ಅಲ್ಲಾಹು ಆದರಣೀಯ ಖುರ್‌ಆನ್‌ನ ವಾಚಕನಿಗೆ ಅದರ ನೈಜಾರ್ಥವನ್ನು ಅರಿಯಬೇಕೆಂದು ಪ್ರೇರಣೆ ನೀಡುತ್ತಾನೆ:

﴿ كِتَٰبٌ أَنزَلۡنَٰهُ إِلَيۡكَ مُبَٰرَكٞ لِّيَدَّبَّرُوٓاْ ءَايَٰتِهِۦ وَلِيَتَذَكَّرَ أُوْلُواْ ٱلۡأَلۡبَٰبِ ﴾ [ص: ٢٩]

“ಇದು ನಾವು ತಮಗೆ ಅವತೀರ್ಣಗೊಳಿಸಿರುವ ಅನುಗ್ರಹೀತ ಗ್ರಂಥವಾಗಿದೆ. ಇದರಲ್ಲಿರುವ ದೃಷ್ಟಾಂತಗಳ ಕುರಿತು ಅವರು ಚಿಂತಿಸುವ ಸಲುವಾಗಿ ಮತ್ತು ಬುದ್ಧಿವಂತರು ಪ್ರಜ್ಞಾವಂತರಾಗುವ ಸಲುವಾಗಿ” (ಸೂರಃ ಸ್ವಾದ್: 29) ತದಬ್ಬುರ್ (ಚಿಂತನೆ) ಎಂದರೆ ನೈಜಾರ್ಥವನ್ನು ಅರಿಯುವುದಾಗಿದೆ. ಆದರಣೀಯ ಖುರ್‌ಆನ್‌ನ ಅರ್ಥದಲ್ಲಿ ಸಹಾಬಾಗಳಿಗೆ ಕ್ಲಿಷ್ಟಕರವಾಗಿ ತೋರುವವುಗಳಿಗೆ ಪ್ರವಾದಿ(ﷺ)ಯವರು ಸ್ಪಷ್ಟಗೊಳಿಸಿ ಕೊಡುತ್ತಿದ್ದರು.(ನೋಡಿರಿ: ತಫ್ಸೀರುತ್ತ್ವಬ್‌ರಿ 1/38, ಇಬ್ನು ತೈಮಿಯರವರ ಉಸೂಲುತ್ತಫ್‌ಸೀರ್ ಎಂಬ ಗ್ರಂಥದ ಮುನ್ನುಡಿ) ಆದರೆ ಭಾಷೆಯ ಹಿಡಿತ ಹಾಗೂ ಅವರದೇ ಭಾಷೆಯಲ್ಲಿ ಆದರಣೀಯ ಖುರ್‌ಆನ್‌ನ ಅವತೀರ್ಣಿಕೆಯು ಅವರನ್ನು ಖುರ್‌ಆನ್‌ನ ಅರ್ಥಗಳ ಕುರಿತಾದ ಹೆಚ್ಚಿನ ಪ್ರಶ್ನೆಗಳಿಂದ ಮುಕ್ತರನ್ನಾಗಿಸಿದ್ದವು. ಕಾಲಕ್ರಮೇಣ ಬಂದ ಜನರಲ್ಲಿ ಇದರ ಅವಶ್ಯಕತೆಯು ಹೆಚ್ಚುತ್ತಾ ಬಂತು.

ಪ್ರವಾದಿ(ﷺ)ಯವರಿಂದಲೂ, ಅವರ ಸಹಾಬಾಗಳಿಂದಲೂ, ತಾಬಿಈನ್‌ಗಳ ಪೈಕಿಯ ಅವರ ಶಿಷ್ಯಂದಿರಿಂದಲೂ ವರದಿಯಾಗುವ ಮೂಲಕ ಆದರಣೀಯ ಖುರ್‌ಆನ್‌ನ ವ್ಯಾಖ್ಯಾನಗಳು ರೂಪಿತವಾಗಿವೆ. ಇವುಗಳು ಇಲ್ಮುತ್ತಫ್‌ಸೀರ್(ವ್ಯಾಖ್ಯಾನ ಜ್ಞಾನ)ನ ಅಡಿಪಾಯಗಳಾಗಿವೆ. ತಫ್‌ಸೀರುಗಳ ಪೈಕಿ ಆದರಣೀಯ ಖುರ್‌ಆನ್‌ನ್ನು ಅರ್ಥ ಮಾಡಿಕೊಳ್ಳಲು ಮುಖ್ಯ ಮಾರ್ಗವಾಗಿರುವ ಇವುಗಳು ತಫ್‌ಸೀರುಲ್ ಮಅಸೂರ್ ಎಂಬುದಾಗಿ ಪ್ರಸಿದ್ಧವಾಗಿವೆ. ಏಕೆಂದರೆ ಇವು ಪ್ರಥಮ ತಲೆಮಾರಿನ ಜನರು ಖುರ್‌ಆನ್ ಸೂಕ್ತಿಗಳನ್ನು ಹೇಗೆ ಅರ್ಥಮಾಡಿಕೊಂಡಿದ್ದರೋ ಆ ಅರ್ಥವನ್ನು ನಮಗೆ ವಿವರಿಸಿಕೊಡುತ್ತವೆ. ಆ ತಲೆಮಾರು ತಮ್ಮ ಅರಬೀ ಭಾಷೆಯ ಹಿಡಿತವನ್ನು ಹೊಂದಿರುವುದರ ಜೊತೆಗೆ ಆದರಣೀಯ ಖುರ್‌ಆನ್‌ನ ಅವತೀರ್ಣ ಕಾಲದಲ್ಲಿ ನಡೆದಂತಹ ಎಲ್ಲ ವಿಧ ಘಟನೆಗಳಿಗೂ ಸಾಕ್ಷಿಯಾಗಿದ್ದಂತಹ ಜನರಾಗಿದ್ದರು.

### 1) ತಫ್ಸೀರುಗಳ ವಿಧಗಳು:

ವ್ಯಾಖ್ಯಾನಗಾರರಾದ ವಿದ್ವಾಂಸರ ವೀಕ್ಷಣೆಗಳು ಅವರ ಜ್ಞಾನ ಪಡೆಯುವ ವೀಕ್ಷಣೆಯ ಪ್ರಕಾರವೇ ವಿಭಿನ್ನತೆಯನ್ನು ಹೊಂದಿವೆ. ಆದರಣೀಯ ಖುರ್‌ಆನ್‌ನ ತಫ್ಸೀರುಗಳಲ್ಲಿ ಭಾಷಾ ಸಾಹಿತ್ಯವನ್ನು ವಿವರಿಸಲು ರಚಿಸಲ್ಪಟ್ಟವುಗಳಿವೆ, ಕರ್ಮಶಾಸ್ತ್ರ ನಿಯಮಗಳನ್ನು ವಿವರಿಸಲು ರಚಿಸಲ್ಪಟ್ಟವುಗಳಿವೆ, ಇನ್ನು ಕೆಲವು ಚಾರಿತ್ರಿಕ ದೃಷ್ಟಿಕೋನವನ್ನು ಮುಂದಿಟ್ಟುಕೊಂಡು ಇಲ್ಲವೇ ಬೌದ್ಧಿಕ, ಇಲ್ಲವೇ ಉತ್ತಮ ಸ್ವಭಾವಗುಣ ಮುಂತಾದ ವಿಷಯಗಳನ್ನು ಮುಂದಿಟ್ಟುಕೊಂಡು ರಚಿಸಲ್ಪಟ್ಟವುಗಳಿವೆ. ಇವುಗಳಾಧಾರದಲ್ಲಿ ತಫ್ಸೀರ್‌ನ ವಿದ್ವಾಂಸರು ತಫ್ಸೀರುಗಳನ್ನು ಎರಡು ಗುಂಪಾಗಿ ವಿಂಗಡಿಸಿದ್ದಾರೆ:

1. ತಫ್‌ಸೀರುಲ್ ಮಅಸೂರ್ (ಪರಂಪರೆಯನ್ನು ಆಧರಿಸಿದವುಗಳು): ಇವು ಪ್ರವಾದಿ(ﷺ)ಯವರಿಂದಲೂ, ಸಹಾಬಿಗಳಿಂದಲೂ, ತಾಬಿಇಗಳಿಂದಲೂ ವರದಿಯಾದವುಗಳು.

2. ತಫ್ಸೀರುರ್ರಅಯ್ ಅಥವಾ ತಫ್ಸೀರುಲ್ ಇಜ್ತಿಹಾದ್: ಅಧಿಕೃತವಾದ ಜ್ಞಾನದ ಆಧಾರದಲ್ಲಿ ಅಭಿಪ್ರಾಯ, ಸಂಶೋಧನೆಗಳನ್ನು ಮುಂದಿಟ್ಟುಕೊಂಡು ರಚಿಸಲಾದವುಗಳು.

## 2) ತಫ್ಸೀರುಗಳ ಅತ್ಯುತ್ತಮ ಪರಂಪರೆ ಹಾಗೂ ಅವುಗಳ ಹಿನ್ನೆಲೆಗಳು:

ತಫ್‌ಸೀರುಲ್ ಮಅಸೂರ್ (ಪರಂಪರೆಯನ್ನು ಆಧರಿಸಿದವು)ಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತದೆ. ಏಕೆಂದರೆ ಅವು ಪ್ರವಾದಿ(ﷺ)ಯವರಿಂದಲೂ, ಅವರ ಅನುಚರರಾದ ಸಹಾಬಿಗಳಿಂದಲೂ, ಅವರ ಶಿಷ್ಯರಾದ ತಾಬಿಇಗಳಿಂದಲೂ ವರದಿಯಾದವುಗಳಾಗಿವೆ. ಇವರೆಲ್ಲರೂ ಇತರ ಎಲ್ಲರಿಗಿಂತಲೂ ಈ ವಿಷಯದಲ್ಲಿ ಹೆಚ್ಚು ಬಲ್ಲವರಾಗಿದ್ದಾರೆ. ಆದರಣೀಯ ಖುರ್‌ಆನ್ ಸೂಕ್ತಿಗಳ ಹೆಚ್ಚಿನ ಅರಿವನ್ನು ಹೊಂದಿರುವ ಒಬ್ಬ ಮುಫಸ್ಸಿರ್ ಈ ಕೆಳಗಿನ ಅಂಶಗಳ ಕಡೆಗೆ ಗಮನಕೊಡಬೇಕಾದುದು ಅತ್ಯಗತ್ಯವಾಗಿದೆ.

ತಫ್‌ಸೀರುಲ್ ಮಅಸೂರುಗಳಲ್ಲಿ ದೃಢಪಟ್ಟಿರುವ ಸೂಕ್ತಿಗಳ ಅರ್ಥದ ಕಡೆಗೆ ಹೆಚ್ಚಿನ ಗಮನಕೊಡಬೇಕಾಗಿದೆ. ಅದಕ್ಕೆ ವಿರುದ್ಧವಾದ ಅರ್ಥವು ಉಂಟಾಗದಂತೆ ಜಾಗ್ರತೆ ವಹಿಸಬೇಕು.

ಆದರಣೀಯ ಖುರ್‌ಆನ್ ತಂದಿರುವಂತಹ ಸಾಮಾನ್ಯ ಅರ್ಥಗಳು ಮತ್ತು ಪ್ರವಾದಿ ಚರ್ಯೆಯು ಸ್ಪಷ್ಟಪಡಿಸಿರುವ ಅರ್ಥಗಳಿಗೂ ತಫ್‌ಸೀರುಗಳಿಗೂ ಹೊಂದಾಣಿಕೆಯಿರಬೇಕು. ಅವುಗಳ ಅರ್ಥಗಳಿಗೆ ವಿರುದ್ಧವಾದ ತಫ್ಸೀರನ್ನು ಬರೆಯುವುದು ಯಾವ ಮುಫಸ್ಸಿರ್‌ಗೂ ಅನುವದನೀಯವಲ್ಲ. ಆದರಣೀಯ ಖುರ್‌ಆನ್‌ನ ಸೂಕ್ತಿಗಳು ಪರಸ್ಪರ ವ್ಯಾಖ್ಯಾನ ಮಾಡುತ್ತವೆಯೇ ಹೊರತು ಪರಸ್ಪರ ವೈರುಧ್ಯವನ್ನು ಸೃಷ್ಟಿಸುವುದಿಲ್ಲ. ಖುರ್‌ಆನ್‌ನಲ್ಲಿ ಸಂಕ್ಷಿಪ್ತವಾಗಿ ಬಂದಿರುವುದಕ್ಕೆ ಪ್ರವಾದಿ ಚರ್ಯೆಯು ವಿಶದೀಕರಣ ಹಾಗೂ ವ್ಯಾಖ್ಯಾನವಾಗಿರುತ್ತದೆ.

ಪದಗಳ ಉದ್ದೇಶವನ್ನು ತಿಳಿಸುವುದರಲ್ಲೂ, ವಾಕ್ಯ ರಚನೆಯಲ್ಲೂ, ಅವುಗಳ ಪ್ರಯೋಗದಲ್ಲೂ ಅರಬೀ ಭಾಷೆಯ ಸಾಹಿತ್ಯಿಕ ನಿಯಮಗಳ ಕುರಿತು ಒಬ್ಬ ಮುಫಸ್ಸಿರಿಗೆ ಹೆಚ್ಚಿನ ಅರಿವು ಇರಬೇಕು. ಆದರಣೀಯ ಖುರ್‌ಆನ್ ಅರಬೀ ಭಾಷೆಯಲ್ಲಿ ಅವತೀರ್ಣಗೊಂಡಿದ್ದು ಆ ಭಾಷೆಯ ನಿಯಮಗಳ ಬೆಳಕಿನಲ್ಲಿ ಅದನ್ನು ಅರ್ಥ ಮಾಡಿಕೊಳ್ಳಬೇಕಾದುದು ಅತ್ಯಂತ ಅಗತ್ಯವಾಗಿದೆ.

ಮುತಶಾಬಿಹ್ (ಅಸ್ಪಷ್ಟ ಅರ್ಥಗಳಿರುವ) ಸೂಕ್ತಿಗಳ ವಿವರಣೆಗೆ ಮುಹ್ಕಮ್ (ಸ್ಪಷ್ಟ ಅರ್ಥಗಳಿರುವ) ಸೂಕ್ತಿಗಳೆಡೆಗೆ ತಿರುಗಬೇಕು. ಕಾರಣವೇನೆಂದರೆ ಖುರ್‌ಆನ್ ಸೂಕ್ತಿಗಳು ಪರಸ್ಪರ ವಿವರಿಸುವವುಗಳಾಗಿವೆ. ಖುರ್‌ಆನ್ ಹೆಚ್ಚಿನ ಸೂಕ್ತಿಗಳು ಅರ್ಥ ಸ್ಪಷ್ಟತೆಯಿರುವ ಮುಹ್ಕಮ್‌ಗಳಾಗಿವೆ. ಅರ್ಥಗಳು ಪರಸ್ಪರ ಅಸ್ಪಷ್ಟವಾಗುವ ಮುತಶಾಬಿಹ್ ಸೂಕ್ತಿಗಳು ಸಹ ಇವೆ. ಅವುಗಳನ್ನು ಮುಹ್ಕಮ್

ಸೂಕ್ತಿಗಳ ಕಡೆಗೆ ಮರಳಿಸಿ ಅವುಗಳ ಉದ್ದೇಶವನ್ನು ಮತ್ತು ಅರ್ಥವನ್ನು ವಿವರಿಸಬೇಕಾಗಿದೆ. ಅಲ್ಲಾಹು ಹೇಳುತ್ತಾನೆ:

﴿ هُوَ ٱلَّذِيٓ أَنزَلَ عَلَيۡكَ ٱلۡكِتَٰبَ مِنۡهُ ءَايَٰتٞ مُّحۡكَمَٰتٌ هُنَّ أُمُّ ٱلۡكِتَٰبِ وَأُخَرُ مُتَشَٰبِهَٰتٞۖ فَأَمَّا ٱلَّذِينَ فِي قُلُوبِهِمۡ زَيۡغٞ فَيَتَّبِعُونَ مَا تَشَٰبَهَ مِنۡهُ ٱبۡتِغَآءَ ٱلۡفِتۡنَةِ وَٱبۡتِغَآءَ تَأۡوِيلِهِۦۖ وَمَا يَعۡلَمُ تَأۡوِيلَهُۥٓ إِلَّا ٱللَّهُۗ وَٱلرَّٰسِخُونَ فِي ٱلۡعِلۡمِ يَقُولُونَ ءَامَنَّا بِهِۦ كُلّٞ مِّنۡ عِندِ رَبِّنَاۗ وَمَا يَذَّكَّرُ إِلَّآ أُوْلُواْ ٱلۡأَلۡبَٰبِ ﴾ [آل عمران: ٧].

“(ಓ ಪ್ರವಾದಿಯವರೇ, ತಮಗೆ ಗ್ರಂಥವನ್ನು ಅವತೀರ್ಣಗೊಳಿಸಿದವನು ಅವನೇ ಆಗಿರುವನು. ಅದರಲ್ಲಿ ಸುಷ್ಟವೂ, ಖಚಿತವೂ ಆಗಿರುವ ವಚನಗಳಿವೆ. ಅವು ಗ್ರಂಥದ ಮೂಲವಾಗಿವೆ. ಅರ್ಥದಲ್ಲಿ ಪರಸ್ಪರ ಹೋಲಿಕೆಯಿರುವ ಕೆಲವು ವಚನಗಳೂ ಇವೆ. ಆದರೆ ಹೃದಯದಲ್ಲಿ ವಕ್ರತೆಯುಳ್ಳವರಾರೋ ಅವರು ಗೊಂದಲ ಮತ್ತು ವ್ಯಾಖ್ಯಾನವನ್ನು ಅರಸುತ್ತಾ ಅರ್ಥದಲ್ಲಿ ಪರಸ್ಪರ ಹೋಲಿಕೆಯಿರುವ ವಚನಗಳನ್ನು ಹಿಂಬಾಲಿಸುವರು. ಅದರ ವ್ಯಾಖ್ಯಾನವು ಅಲ್ಲಾಹುವಿನ ವಿನಾ ಯಾರಿಗೂ ತಿಳಿದಿಲ್ಲ. ಜ್ಞಾನದಲ್ಲಿ ಸುದೃಢರಾಗಿರುವರು ಹೇಳುವರು: “ನಾವಿದರಲ್ಲಿ ವಿಶ್ವಾಸವಿಟ್ಟಿರುವೆವು. ಎಲ್ಲವೂ ನಮ್ಮ ಪ್ರಭುವಿನ ವತಿಯಿಂದಾಗಿದೆ.” ಬುದ್ಧಿವಂತರು ಮಾತ್ರ ಚಿಂತಿಸಿ ಮನದಟ್ಟು ಮಾಡಿಕೊಳ್ಳುವರು.ಹಿ(ಆಲು ಇಮ್ರಾನ್: 7)

ಪ್ರಾಪಂಚಿಕ ವಿಷಯಗಳ ಬಗ್ಗೆ ತಿಳಿಸುವ ಸೂಕ್ತಿಗಳ ವ್ಯಾಖ್ಯಾನ ಮಾಡುವಾಗ ದೃಢಪಟ್ಟಿರುವ ವೈಜ್ಞಾನಿಕ ಸಂಗತಿಗಳ ಕುರಿತು ಸಾಕಷ್ಟು ಅರಿವನ್ನು ಹೊಂದಿರಬೇಕು. ಖುರ್‌ಆನ್‌ಗೆ ಹೊಂದದಂತಹ ಅರ್ಥಗಳು ಅದರಲ್ಲಿ ಬರುವುದನ್ನು ತಡೆಗಟ್ಟ ಬೇಕಾಗಿರುವುದರಿಂದ ವೈಜ್ಞಾನಿಕ ವೀಕ್ಷಣೆಗಳನ್ನು ಆದರಣೀಯ ಖುರ್‌ಆನ್‌ನ ವ್ಯಾಖ್ಯಾನದಲ್ಲಿ ಅನಾವಶ್ಯವಾಗಿ ತುರುಕಬಾರದು.

ಪವಿತ್ರ ಶರೀಅತ್‌ನ ವಿಧಿಗಳಿಂದ ಅಲ್ಲಾಹುವಿನ ವಚನಗಳನ್ನು ದೂರ ಮಾಡುವ ದುರ್ವ್ಯಾಖ್ಯಾನಗಳು ಸಂಭವಿಸದಂತೆ ಎಚ್ಚರ ವಹಿಸಬೇಕು. ಅವುಗಳು ಅರಬೀ ಭಾಷಾ ನಿಯಮಗಳಿಂದ ಖುರ್‌ಆನನ್ನು ದೂರ ಮಾಡಲು ಶಕ್ತವಾಗಬಲ್ಲವು. ಇದು ಕೆಲವೊಮ್ಮೆ ತಪ್ಪುಗ್ರಹಿಕೆ ಉಂಟು ಮಾಡುವ ಉದ್ದೇಶದಿಂದ ಇಲ್ಲವೇ ಅರಬೀ ಭಾಷೆಯ ನಿಯಮ ಹಾಗೂ ಪ್ರಯೋಗಗಳ

ಕುರಿತಾದ ಅಜ್ಞಾನದಿಂದಾಗಿಯೂ ಉಂಟಾಗಬಹುದು. ಇಲ್ಲವೇ ಅಲ್ಲಾಹುವಿನ ವಚನಗಳಿಂದ ಶುದ್ಧವಾಗಿರಬೇಕಾದ ಮಿಥ್ಯ ಅರ್ಥಗಳನ್ನು ಸೂಚಿಸುವ ರೀತಿಯಲ್ಲೂ ಆಗಿರಬಹುದು.

**ಎಂಟನೆಯದಾಗಿ, ಆದರಣೀಯ ಖುರ್‌ಆನ್‌ನ ಮುಅಜಿಝಃ(ಅತಿಮಾನುಷಿಕತೆ):**

ಭಾಷಾರ್ಥದಲ್ಲಿ ಈಜಾಝ್ (ಅತಿಮಾನುಷಿಕತೆ) ಎಂದರೆ ಯಾವುದಾದರೂ ಕಾರ್ಯ ಇಲ್ಲವೇ ಅಭಿಪ್ರಾಯ ಇಲ್ಲವೇ ಯೋಜನೆಗಳು ನಡೆಯಲು ಅಸಾಮರ್ಥ್ಯವುಂಟಾಗುವುದಾಗಿದೆ. ಪ್ರವಾದಿಗಳು ಸಂದೇಶವಾಹಕರುಗಳ ಮೂಲಕ ಅವರ ಅಧಿಕೃತತೆಗೆ ಪುರಾವೆಯಾಗಿ ನಡೆಯುವ ಸಂಗತಿಗೆ ಮುಅಜಿಝಃ ಎನ್ನಲಾಗುತ್ತದೆ. ಪ್ರಸ್ತುತ ಪದವು ಖುರ್‌ಆನ್‌ನಲ್ಲಿ ಬಂದಿರುವುದಿಲ್ಲ. ಆದರೆ ಆಯಃ (ದೃಷ್ಟಾಂತ) ಬುರ್ಹಾನ್ (ಪುರಾವೆ) ಇತ್ಯಾದಿ ಪ್ರಯೋಗಗಳು ಅದರಲ್ಲಿ ಕಾಣಬಹುದು.

ಆದರಣೀಯ ಖುರ್‌ಆನ್ ಅಲ್ಲಾಹುವಿನ ವಚನಗಳಾಗಿವೆ. ಅದರ ಅರ್ಥಗಳಲ್ಲಿ ಪರಿಪೂರ್ಣತೆಯಿದೆ. ಅದರ ಸೂಕ್ತಿಗಳಲ್ಲಿ , ವಾಕ್ಯಗಳಲ್ಲಿ ಮನುಷ್ಯರು ರಚಿಸಲು ಅಸಮರ್ಥರಾಗುವಷ್ಟು ಸೌಂದರ್ಯವಿದೆ. ಅಲ್ಲಾಹು ಹೀಗೆ ಹೇಳುತ್ತಾನೆ:

﴿ الٓرۚ كِتَٰبٌ أُحۡكِمَتۡ ءَايَٰتُهُۥ ثُمَّ فُصِّلَتۡ مِن لَّدُنۡ حَكِيمٍ خَبِيرٍ ﴾ [هود: ١].

“ಅಲಿಫ್, ಲಾಮ್, ರಾ. ಇದು ಗ್ರಂಥವಾಗಿದೆ. ಇದರಲ್ಲಿರುವ ಸೂಕ್ತಿಗಳನ್ನು ಸಮಗ್ರಗೊಳಿಸಲಾಗಿದೆ. ತರುವಾಯ ಅವುಗಳನ್ನು ವಿಶದೀಕರಿಸಲಾಗಿದೆ. ಇದು ಯುಕ್ತಿಪೂರ್ಣನೂ, ಸೂಕ್ಷ್ಮಜ್ಞಾನಿಯೂ ಆಗಿರುವ ಅಲ್ಲಾಹುವಿನ ವತಿಯಿಂದಿರುವುದಾಗಿದೆ.” (ಹೂದ್: 1)

ಬಹುದೇವಾರಾಧಕರು ಆದರಣೀಯ ಖುರ್‌ಆನ್‌ನ ಮೂಲದ ಬಗ್ಗೆ ಸಂಶಯವುಂಟು ಮಾಡಲು ಹಾಗೂ ಜನರನ್ನು ಅದರಿಂದ ದೂರ ಮಾಡಲು ಸುಳ್ಳುಗಳನ್ನು ಮತ್ತು ಸಂದೇಹಗಳನ್ನು ಸೃಷ್ಟಿ ಮಾಡುವ ಮೂಲಕ ಶತಾಯಗತಾಯ ಪ್ರಯತ್ನಿಸಿದ್ದರು.(ನೋಡಿರಿ: ಅಲ್‌ಅನ್‌ಆಂ7,25, ಅಲ್‌ಅಂಬಿಯಾ 5, ಸಬಅ್43, ಯಾಸೀನ್69, ಅಸ್ಸಾಫ್ಫಾತ್ 36, ಸ್ವಾದ್ 4, ಅತ್ತೂರ್30.) ಆಗ ಅಲ್ಲಾಹು ಅವರು ಸತ್ಯಸಂಧರಾಗಿದ್ದರೆ ಈ ಆದರಣೀಯ ಖುರ್‌ಆನ್‌ನಂತಹುದನ್ನು ರಚಿಸಿ ತರಲು, ಇಲ್ಲವೇ ಇದರಲ್ಲಿರುವಂತಹ ಹತ್ತು ಅಧ್ಯಾಯಗಳನ್ನು ರಚಿಸಿ ತರಲು ಇಲ್ಲವೇ ಕನಿಷ್ಠ ಒಂದು ಅಧ್ಯಾಯವನ್ನಾದರೂ

ರಚಿಸಿ ತರಲು ಅವರಿಗೆ ಸವಾಲೆಸೆದನು. ಅವರದರಲ್ಲಿ ಅಸಮರ್ಥರಾದರು ಮಾತ್ರವಲ್ಲ ಆದರಣೀಯ ಖುರ್‌ಆನ್ ಅವರದೇ ಭಾಷೆಯಾದ ಅರಬೀ ಭಾಷೆಯಲ್ಲಾಗಿದ್ದರೂ ಅದರಂತಹ ವಿಚಾರಗಳನ್ನು ಇಲ್ಲವೇ ಅದಕ್ಕೆ ಹೋಲುವಂತಹುದನ್ನು ತರುವುದು ಅಸಾಧ್ಯವೆಂಬುದಾಗಿ ಒಪ್ಪಿಕೊಂಡರು. ಅಲ್ಲಾಹು ಹೇಳುತ್ತಾನೆ:

﴿ أَمۡ يَقُولُونَ ٱفۡتَرَىٰهُۖ قُلۡ فَأۡتُواْ بِسُورَةٖ مِّثۡلِهِۦ وَٱدۡعُواْ مَنِ
ٱسۡتَطَعۡتُم مِّن دُونِ ٱللَّهِ إِن كُنتُمۡ صَٰدِقِينَ ﴾ [يونس: ٣٨].

"ಅವರು (ಪ್ರವಾದಿಯವರು) ಇದನ್ನು ಸ್ವತಃ ರಚಿಸಿರುವರು ಎಂದು ಅವರು ಹೇಳುತ್ತಿರುವರೇ? ಹೇಳಿರಿ: ಹಾಗಾದರೆ ಇದಕ್ಕೆ ಸಮಾನವಾಗಿರುವ ಒಂದು ಅಧ್ಯಾಯವನ್ನು (ರಚಿಸಿ) ತನ್ನಿರಿ. ಅಲ್ಲಾಹುವಿನ ಹೊರತು ನಿಮಗೆ ಸಾಧ್ಯವಾಗುವ ಎಲ್ಲರನ್ನೂ ಆಹ್ವಾನಿಸಿರಿ. ನೀವು ಸತ್ಯಸಂಧರಾಗಿದ್ದರೆ." (ಯೂನುಸ್: 38)

ಆದರಣೀಯ ಖುರ್‌ಆನ್ ಸ್ಪಷ್ಟವಾಗಿ ಮನುಷ್ಯರು ಮಾತ್ರವಲ್ಲ ಅವರ ನಂತರ ಜಿನ್ನ್‌ಗಳು ಸಹ ಅವರು ಪರಸ್ಪರ ಸಹಾಯಕರಾಗಿದ್ದರೂ ಸಹ ಖುರ್‌ಆನ್‌ನಂತಹ ಒಂದು ಗ್ರಂಥವನ್ನು ತರಲು ಸಾಧ್ಯವಿಲ್ಲವೆಂಬ ಒಂದು ವಾಸ್ತವಿಕತೆಯನ್ನು ಘಂಟಾಘೋಷವಾಗಿ ಸಾರಿತು.

﴿ قُل لَّئِنِ ٱجۡتَمَعَتِ ٱلۡإِنسُ وَٱلۡجِنُّ عَلَىٰٓ أَن يَأۡتُواْ بِمِثۡلِ هَٰذَا ٱلۡقُرۡءَانِ
لَا يَأۡتُونَ بِمِثۡلِهِۦ وَلَوۡ كَانَ بَعۡضُهُمۡ لِبَعۡضٖ ظَهِيرٗا ﴾ [بني إسرائيل: ٨٨].

"(ಓ ಪ್ರವಾದಿಯವರೇ!) ಹೇಳಿರಿ: ಈ ಖುರ್‌ಆನ್‌ಗೆ ಸಮಾನವಾಗಿರುವ ಒಂದನ್ನು ರಚಿಸಿ ತರಲು ಮನುಷ್ಯರು ಮತ್ತು ಜಿನ್ನ್‌ಗಳು ಒಟ್ಟುಗೂಡಿದರೂ ಸಹ ಖಂಡಿತವಾಗಿಯೂ ಅದಕ್ಕೆ ಸಮಾನವಾಗಿರುವುದನ್ನು ತರಲು ಅವರಿಂದಾಗದು. ಅವರಲ್ಲಿ ಕೆಲವರು ಇತರ ಕೆಲವರಿಗೆ ಬೆಂಬಲ ನೀಡಿದರೂ ಸರಿಯೇ." (ಅಲ್‌ಇಸ್ರಾ: 88)

ಆದರಣೀಯ ಖುರ್‌ಆನ್ ಮುಅಜಿಝಃ ಆಗಿದೆ. ಏಕೆಂದರೆ ಅದು ಅಲ್ಲಾಹುವಿನ ವಚನವಾಗಿದೆ. ಸೃಷ್ಟಿಗಳ ವಚನಗಳಿಗೂ ಅದಕ್ಕೂ ಯಾವೊಂದು ಹೋಲಿಕೆಯೂ ಇಲ್ಲ. ಅದು ತನ್ನ ಪದಗಳ ಹಾಗೂ ಸೂಕ್ತಿಗಳ ಮೂಲಕ ಹಾಗೂ ಭಾಷೆಯ ಮೂಲಕ, ತನ್ನ ವಿವರಣೆ ಹಾಗೂ ಸಾಹಿತ್ಯದ ಮೂಲಕ ಒಂದು ದೃಷ್ಟಾಂತ ಹಾಗೂ ಪುರಾವೆಯಾಗಿದೆ. ಅದರಲ್ಲಿರುವ ವೃತ್ತಾಂತಗಳು

ಹಾಗೂ ಸತ್ಯಕಥೆಗಳು, ಅದರಲ್ಲಿರುವ ನಿಯಮ ಸಂಹಿತೆ ಹಾಗೂ ಕರ್ಮಶಾಸ್ತ್ರಗಳು, ಅದರಲ್ಲಿರುವ ಮಾನಸಿಕ ಹಾಗೂ ಭಾವನಾತ್ಮಕ ಪ್ರಭಾವ, ಜ್ಞಾನದ ಭಂಡಾರಗಳು ಅದು ಒಂದು ದೃಷ್ಟಾಂತವಾಗಿದೆ ಎಂಬುದನ್ನು ಎತ್ತಿತೋರಿಸುತ್ತದೆ.

ಎಷ್ಟೋ ಪ್ರಾಕೃತಿಕ ತಜ್ಞರು, ಖಗೋಳ ಶಾಸ್ತ್ರಜ್ಞರು, ಭೌತಶಾಸ್ತ್ರ ತಜ್ಞರು, ವೈದ್ಯಶಾಸ್ತ್ರಜ್ಞರು ಮುಂತಾದವರು ಅದರ ಮುಂದೆ ನಿಬ್ಬೆರಗಾಗಿದ್ದಾರೆ. ವೈಜ್ಞಾನಿಕ ಸತ್ಯಗಳ ಕುರಿತು ಹಾಗೂ ತಮಗೆ ಸಂಬಂಧಿಸಿದ ಪ್ರಾಪಂಚಿಕ ವಾಸ್ತವಿಕತೆಗಳ ಕುರಿತು ಸೂಕ್ಷ್ಮವಾದ ಪ್ರಯೋಗಗಳ ಮೂಲಕ ಅದು ಮಾತನಾಡುವದನ್ನು ಕಂಡು ಈ ಮಹಾಮೇಧಾವಿಗಳೆಲ್ಲ ಅದು ಒಬ್ಬ ನಿರಕ್ಷರಸ್ಥನಾದ ಪ್ರವಾದಿಯಿಂದ ರಚಿತವಾಗಿದೆ ಎಂಬುದನ್ನು ಕಲ್ಪಿಸಿಕೊಳ್ಳಲು ಸಹ ಸಾಧ್ಯವಿಲ್ಲವೆನ್ನುತ್ತಾರೆ. ಅದೂ ಸಹ ಈ ಶಾಸ್ತ್ರಜ್ಞಾನಗಳ ಕುರಿತು ಒಂದಿಷ್ಟೂ ಪ್ರಜ್ಞೆಯಿರದಂತಹ ಕತ್ತಲ ಜಗತ್ತಿನಲ್ಲಿ ಹುಟ್ಟಿ ಬೆಳೆದ ಒಬ್ಬ ಮನುಷ್ಯನಲ್ಲಿ!! ಕೊನೆಗೆ ಖುರ್‌ಆನ್ ಮನುಷ್ಯ ನಿರ್ಮಿತವಲ್ಲ ಬದಲು ಅದು ಮನುಷ್ಯರ ಸೃಷ್ಟಿಕರ್ತನ ವಚನಗಳಾಗಿವೆ ಎಂಬುದಾಗಿ ಅವರು ಕಂಡುಕೊಂಡ ಸತ್ಯವು ಅವರಲ್ಲಿ ಎಷ್ಟೋ ಮಂದಿಗೆ ಇಸ್ಲಾಮನ್ನು ಸ್ವೀಕರಿಸಲು ಕಾರಣವಾಯಿತು.

ಆದರಣೀಯ ಖುರ್‌ಆನಿನ ಅದೆಷ್ಟೋ ಸೂಕ್ತಿಗಳು ಅಲ್ಲಾಹುವಿನ ಏಕತ್ವದ ಕುರಿತು ಅವನ ಅದ್ಭುತ ಸೃಷ್ಟಿಯ ಕುರಿತು ಪರಾಮರ್ಶಿಸುತ್ತದೆ.

﴿ سَنُرِيهِمْ ءَايَٰتِنَا فِى ٱلْءَافَاقِ وَفِىٓ أَنفُسِهِمْ حَتَّىٰ يَتَبَيَّنَ لَهُمْ أَنَّهُ ٱلْحَقُّ ۗ
أَوَلَمْ يَكْفِ بِرَبِّكَ أَنَّهُۥ عَلَىٰ كُلِّ شَىْءٍ شَهِيدٌ ﴾ [حم السجدة: ٥٣].

“ಈ ಖುರ್‌ಆನ್ ಸತ್ಯವೆಂದು ಅವರಿಗೆ ಸ್ಪಷ್ಟವಾಗುವ ರೀತಿಯಲ್ಲಿ ದಿಗಂತಗಳಲ್ಲೂ, ಸ್ವತಃ ಅವರಲ್ಲೂ ನಾವು ಅವರಿಗೆ ಸದ್ಯವೇ ನಮ್ಮ ದೃಷ್ಟಾಂತಗಳನ್ನು ತೋರಿಸಿ ಕೊಡುವೆವು. ತಮ್ಮ ಪ್ರಭು ಪ್ರತಿಯೊಂದು ವಿಷಯದಲ್ಲೂ ಸಾಕ್ಷಿಯಾಗಿರುವೆನೆಂಬುದು ಸಾಕಾಗಲಾರದೇ?” (ಫುಸ್ಸಿಲತ್: 53)

**ಒಂಬತ್ತನೆಯದಾಗಿ, ಆದರಣೀಯ ಖುರ್‌ಆನ್‌ನ ಭಾಷಾಂತರ:**

ಭಾಷಾಂತರವೆಂದರೆ ಮಾತುಗಳನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ವರ್ಗಾಯಿಸುವುದಾಗಿದೆ. (ಇಬ್ನುಲ್ ಮನ್‌ಝೂರ್‌ರವರ ಲಿಸಾನುಲ್ ಅರಬ್ ನಿಘಂಟು ನೋಡಿರಿ.) ಭಾಷಾಂತರ ಎಂಬುದು ಸುಲಭವೇನಲ್ಲ.

ಏಕೆಂದರೆ ಭಾಷಾಂತರವು ಇನ್ನೊಂದು ಭಾಷಾಪಠ್ಯವನ್ನು ರಚಿಸುವುದಕ್ಕೆ ಸಮಾನವಾಗಿದೆ. ಒಂದು ಭಾಷೆಯ ಪಠ್ಯವನ್ನು ಇನ್ನೊಂದು ಭಾಷೆಗೆ ವರ್ಗಾಯಿಸುವಾಗ ಅನುವಾದಗೊಳ್ಳುವ ಭಾಷೆಯ ಅಂತಃಸತ್ವವನ್ನು ಉಳಿಸಿಕೊಳ್ಳುವುದು ಸ್ವಲ್ಪ ಕಷ್ಟವಾಗುತ್ತದೆ. ಮನುಷ್ಯರು ಬಳಸುವ ಭಾಷೆಯನ್ನು ಅನುವಾದ ಮಾಡುವಾಗ ಕ್ಲಿಷ್ಟತೆ ಅನುಭವವಾಗುವುದು ಸಾಮಾನ್ಯ. ಹಾಗಿರುವಾಗ ಅಲ್ಲಾಹು ಅರಬೀ ಭಾಷೆಯಲ್ಲಿ ಇಳಿಸಿರುವಂತಹ ಅವನ ವಚನವಾದ ಆದರಣೀಯ ಖುರ್‌ಆನ್‌ನ ಭಾಷಾಂತರ ಮಾಡುವುದು ಅದಕ್ಕಿಂತಲೂ ಕ್ಲಿಷ್ಟಕರವಾಗಿದೆ. ಅದು ಅಲ್ಲಾಹುವಿನ ಕಡೆಯಿಂದ ಅವನ ಪದಗಳ ಹಾಗೂ ಭಾವಾರ್ಥದ ಜೊತೆಗೆ ಅವತೀರ್ಣಗೊಂಡಿರುವುದಾಗಿದೆ. ಆದರಣೀಯ ಖುರ್‌ಆನ್‌ನ ಭಾವಾರ್ಥವನ್ನು ತಾನು ಸಂಪೂರ್ಣವಾಗಿ ಅರಿತುಕೊಂಡಿದ್ದೇನೆ ಇಲ್ಲವೇ ಅದರ ಪಠ್ಯದಲ್ಲಿರುವ ಅರಬೀ ಪದ ಬಳಕೆಯ ಶೈಲಿಯು ತನಗೂ ಕರಗತವಾಗಿದೆ ಎಂದು ವಾದಿಸಲು ಯಾವೊಬ್ಬ ಮನುಷ್ಯನಿಂದಲೂ ಸಾಧ್ಯವಿಲ್ಲ.

ಆದರಣೀಯ ಖುರ್‌ಆನ್‌ನ ಭಾಷಾಂತರವು ಕ್ಲಿಷ್ಟಕರವಾಗಿದ್ದರೂ ಅದನ್ನು ತಲುಪಿಸಿಕೊಡುವುದು ಹಾಗೂ ಅದರ ಸಂದೇಶವನ್ನು ಭೂಮುಖದ ಇತರ ಜನಾಂಗಗಳಿಗೆ –ಅವರ ಭಾಷೆಗಳು ಎಷ್ಟೇ ಇರಲಿ– ಪ್ರಚಾರ ಮಾಡುವುದು ಅನಿವಾರ್ಯವೆಂಬುದನ್ನು ಮುಸ್ಲಿಮರ ವಿದ್ವಾಂಸರು ಒತ್ತಿಹೇಳುತ್ತಾರೆ. ಅದು ಭಾಷಾಂತರ ಮೂಲಕವಲ್ಲದೆ ಸಾಧ್ಯವಾಗದು. (ಇಬ್ನುತೀಮಿಯರವರ ಮಜ್ಮೂಉಲ್ ಫತಾವ 4/116)

ಆದರಣೀಯ ಖುರ್‌ಆನ್‌ನ ಇತರ ಭಾಷೆಗಳಿಗೆ ಮಾಡಲಾದ ಭಾಷಾಂತರವು... (ಇಬ್ನುತೀಮಿಯರವರ ಮಜ್ಮೂಉಲ್ ಫತಾವ 4/115, 542, ಮುಹಮ್ಮದ್ ಹುಸೈನ್ ಅದ್ದಹಬಿಯವರ ಅತ್ತಫ್‌ಸೀರು ವಲ್‌ಮುಫಸ್ಸಿರೂನ್ 1/23)

1. ಒಂದೋ ಆದರಣೀಯ ಖುರ್‌ಆನ್‌ನ ಭಾವಾರ್ಥವಾಗಿರುತ್ತದೆ. ಅದು ವ್ಯಾಖ್ಯಾನಗಳಿಂದ ಮುಕ್ತವಾದ ಖುರ್‌ಆನ್ ಪಠ್ಯವು ತಿಳಿಸುವ ಅರ್ಥಕ್ಕೆ ಸೀಮಿತವಾಗಿರುವ ಭಾಷಾಂತರವಾಗಿರುತ್ತದೆ.

2. ಇಲ್ಲವೇ ವ್ಯಾಖ್ಯಾನದ ಉದ್ದೇಶವಿಟ್ಟುಕೊಂಡು ಇನ್ನಷ್ಟು ಸ್ಪಷ್ಟಪಡಿಸುವ ಹಾಗೂ ಉಪಮೆಗಳನ್ನು ಮುಂದಿಡುವ ಭಾಷಾಂತರವಾಗಿರುತ್ತದೆ. ಇದು ಅರಬೇತರ ಭಾಷೆಗಳಲ್ಲಿರುವ ಖುರ್‌ಆನ್‌ನ ವ್ಯಾಖ್ಯಾನದ ಸ್ಥಾನವನ್ನು ಪಡೆಯುತ್ತದೆ.

ಆದರಣೀಯ ಖುರ್‌ಆನ್ ಭಾವಾರ್ಥವನ್ನು ಎಷ್ಟೇ ಸೂಕ್ಷ್ಮವಾಗಿ ಭಾಷಾಂತರ ಮಾಡಿದರೂ ಭಾಷಾಂತರಕಾರ ಎರಡೂ ಭಾಷೆಗಳಲ್ಲಿ ಎಷ್ಟೇ ಪಾರಂಗತ್ಯ ಹೊಂದಿದ್ದರೂ ಸೂಕ್ತಿಗಳ ಭಾವಾರ್ಥದ ಆಳ ಜ್ಞಾನ ಹೊಂದಿದ್ದರೂ ಆ ಭಾಷಾಂತರವು ಖುರ್‌ಆನ್ ಎಂಬುದಾಗಿ ಕರೆಯಲ್ಪಡದು. ಹೀಗೆ ಹೇಳಲು ಎರಡು ಕಾರಣಗಳಿವೆ. (ಅಲ್‌ಮಜ್ಮೂಉ ಶರಹಿಲ್‌ಮುಹದ್ದಬ್ 3/342)

ಒಂದನೆಯದಾಗಿ, ಆದರಣೀಯ ಖುರ್‌ಆನ್ ಅಲ್ಲಾಹುವಿನ ವಚನಗಳಾಗಿವೆ. ಅದು ಅರಬೀ ಭಾಷೆಯಲ್ಲಿದ್ದು ವಿಶದೀಕರಣ ಹಾಗೂ ಭಾಷಾ ದೃಢೀಕರಣದಲ್ಲಿ ಅತ್ಯಂತ ಉನ್ನತ ಸ್ಥಾನದಲ್ಲಿದೆ. ಅದರ ಸೂಕ್ತಿಗಳ ರಚನೆಯನ್ನು ಇನ್ನೊಂದು ಭಾಷೆಗೆ ವರ್ಗಾಯಿಸುವಾಗ ಅದಕ್ಕೆ ಖುರ್‌ಆನ್ ಎಂದು ಹೆಸರಿಡುವುದು ಮಿಥ್ಯೆಯಾಗುತ್ತದೆ.

ಎರಡನೆಯದಾಗಿ, ಭಾಷಾಂತರವು ಆದರಣೀಯ ಖುರ್‌ಆನ್‌ನ ಭಾಷಾಂತರಕಾರನ ತಿಳುವಳಿಕೆಯಿಂದ ಹೊರಹೊಮ್ಮುವಂತಹುದು. ಅದು ಸಹ ವ್ಯಾಖ್ಯಾನದ ದೃಷ್ಟಿಯಲ್ಲೇ ನೋಡಲಾಗುತ್ತದೆ. ಯಾವ ರೀತಿ ವ್ಯಾಖ್ಯಾನವನ್ನು ಖುರ್‌ಆನ್ ಎಂದು ಕರೆಯಲಾಗುವುದಿಲ್ಲವೋ ಅದೇ ರೀತಿ ಭಾಷಾಂತರವನ್ನು ಸಹ ಖುರ್‌ಆನ್ ಎಂದು ಕರೆಯಲಾಗುವುದಿಲ್ಲ.

ಆದರಣೀಯ ಖುರ್‌ಆನ್‌ನ ಭಾಷಾಂತರವು ಸ್ವೀಕಾರಾರ್ಹವಾಗಲು ಖುರ್‌ಆನ್ ಭಾವಾರ್ಥದ ವಿವರಣೆಗೆ ವಿದ್ವಾಂಸರು ಯಾವೆಲ್ಲ ನಿಯಮಗಳನ್ನು ಮುಂದಿಟ್ಟಿದ್ದಾರೋ ಅವು ಪಾಲನೆಯಾಗಿರಬೇಕು. ಒಬ್ಬ ಭಾಷಾಂತರಕಾರ ಆದರಣೀಯ ಖುರ್‌ಆನ್‌ನ ಭಾವಾರ್ಥದ ನೈಜ ಉದ್ದೇಶದಿಂದ ಸರಿಸಿ ತಪ್ಪಾದ ಅರ್ಥವನ್ನು ಪ್ರಚಾರಮಾಡಲು ತನ್ನ ಭಾಷಾಂತರವನ್ನು ಒಂದು ಮರೆಯಾಗಿ ಸ್ವೀಕರಿಸುವ ಸಾಧ್ಯತೆಯ ಬಗ್ಗೆ ಇಲ್ಲವೇ ಮುಸ್ಲಿಮರ ಭಾವನೆಗಳಿಗೆ ಧಕ್ಕೆ ತರುವ ಅಥವಾ ಅವರು ಪವಿತ್ರವೆಂದು ಭಾವಿಸುವ ವಸ್ತುಗಳಿಗೆ ಅಪಚಾರವೆಸಗುವ ಸಾಧ್ಯತೆಯ ಬಗ್ಗೆ ಎಚ್ಚರವಹಿಸಬೇಕಾಗುತ್ತದೆ. ಇಂತಹ ಅನುಭವವು ಕೆಲವೊಂದು ಭಾಷಾಂತರದಲ್ಲಿ ಸಂಭವಿಸಿದ್ದು ಅವುಗಳನ್ನು ಕೆಲವು ಓರಿಯಂಟಲಿಸ್ಟುಗಳು ಹಾಗೂ ಮುಸ್ಲಿಂ ನಾಮಧಾರಿಗಳು ಸುಳ್ಳು ಪ್ರಚಾರ ಮಾಡುವ ಉದ್ದೇಶದಿಂದ ಬರೆದಿದ್ದರು. ಇಂತಹವರು ಈ ಮಹಾ ಇಸ್ಲಾಮಿನ ಬುನಾದಿಯನ್ನು ಛಿದ್ರಗೊಳಿಸುವ ಉದ್ದೇಶದಿಂದ ಹಾಗೂ ಅಧಿಕೃತ ವಿಶ್ವಾಸದಿಂದಲೂ, ಉನ್ನತ ಶರೀಅತ್‌ನಿಂದಲೂ ಜನರನ್ನು ತಿರುಗಿಸುವ

ಉದ್ದೇಶದಿಂದ ತಮ್ಮಲ್ಲಿರುವ ಮಿಥ್ಯ ವಿಶ್ವಾಸವನ್ನು ಪ್ರಚಾರ ಮಾಡಲು ಹವಣಿಸುತ್ತಿರುತ್ತಾರೆ.

ಪ್ರಸ್ತುತ ಸಂಗತಿಗಳನ್ನು ಮುಂದಿಟ್ಟುಕೊಂಡು ಅಲ್‌ಮಲಿಕ್ ಫಹದ್ ಪವಿತ್ರ ಮುಸ್ಹಫ್ ಮುದ್ರಣಾಲಯ ಸಂಕೀರ್ಣವು ತನ್ನ ಹೆಗಲಲ್ಲಿ ಆದರಣೀಯ ಖುರ್‌ಆನ್‌ನ ಅವಲಂಬನಾರ್ಹ ಭಾಷಾಂತರದ ಹೊಣೆಯನ್ನು ಹೊತ್ತುಕೊಂಡಿದೆ. ಈ ಮೂಲಕ ಆದರಣೀಯ ಖುರ್‌ಆನ್‌ನ ಉನ್ನತ ಸಂದೇಶವನ್ನು ಅರಬೇತರ ಭಾಷೆಯನ್ನಾಡುವ ಜನರಿಗೆ ಅವರದೇ ಭಾಷೆಯಲ್ಲಿ ತಲುಪಿಸುವ ಉತ್ಕಟೇಚ್ಛೆಯನ್ನು ಹೊಂದಿದೆ.

**والحمد لله رب العالمين، وصلى الله على نبينا محمد وعلى آله وصحابته أجمعين، والتابعين، ومن تبعهم بإحسان إلى يوم الدين.**

## ಅಲ್‌ಫಾತಿಹಃ (ಪ್ರಾರಂಭ)

## سُورَةُ الفَاتِحَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 7

بِسۡمِ ٱللَّهِ ٱلرَّحۡمَٰنِ ٱلرَّحِيمِ ١

1. ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ.

ٱلۡحَمۡدُ لِلَّهِ رَبِّ ٱلۡعَٰلَمِينَ ٢

2. ಸರ್ವಲೋಕ ಪರಿಪಾಲಕನಾಗಿರುವ ಅಲ್ಲಾಹುವಿಗೆ, ಸರ್ವ ಸ್ತುತಿ.

ٱلرَّحۡمَٰنِ ٱلرَّحِيمِ ٣

3. ಪರಮ ದಯಾಮಯನೂ, ಕರುಣಾನಿಧಿಯೂ,

مَٰلِكِ يَوۡمِ ٱلدِّينِ ٤

4. ಪ್ರತಿಫಲ ದಿನದ ಮಾಲಿಕನೂ ಆಗಿರುವ (ಅಲ್ಲಾಹುವಿಗೆ).

إِيَّاكَ نَعۡبُدُ وَإِيَّاكَ نَسۡتَعِينُ ٥

5. ನಾವು ನಿನ್ನನ್ನು ಮಾತ್ರ ಆರಾಧಿಸುವೆವು. ನಾವು ನಿನ್ನಿಂದ ಮಾತ್ರ ಸಹಾಯ ಯಾಚಿಸುವೆವು.(1)

ٱهۡدِنَا ٱلصِّرَٰطَ ٱلۡمُسۡتَقِيمَ ٦

6. ನಮ್ಮನ್ನು ನೇರವಾದ ಮಾರ್ಗದಲ್ಲಿ ಮುನ್ನಡೆಸು.(2)

صِرَٰطَ ٱلَّذِينَ أَنۡعَمۡتَ عَلَيۡهِمۡ غَيۡرِ ٱلۡمَغۡضُوبِ عَلَيۡهِمۡ وَلَا ٱلضَّآلِّينَ ٧

7. ಅಂದರೆ ನೀನು ಅನುಗ್ರಹಿಸಿದವರ ಮಾರ್ಗದಲ್ಲಿ; ಕ್ರೋಧಕ್ಕೀಡಾದವರ ಮಾರ್ಗದಲ್ಲಲ್ಲ; ಪಥಭ್ರಷ್ಟರಾದವರ ಮಾರ್ಗದಲ್ಲೂ ಅಲ್ಲ.(3)

---

1 ಆರಾಧನೆ ಮತ್ತು ಸಹಾಯಯಾಚನೆ ಅಬೇಧ್ಯ ಸಂಬಂಧವಿರುವ ವಿಷಯಗಳಾಗಿವೆ. ಜನರು ವಿವಿಧ ವ್ಯಕ್ತಿಗಳನ್ನು ಮತ್ತು ವಿವಿಧ ಶಕ್ತಿಗಳನ್ನು ಆರಾಧಿಸುತ್ತಿರುವುದು ಆ ಆರಾಧ್ಯರಿಂದ ಅಲೌಕಿಕವಾದ ರೀತಿಯಲ್ಲಿ ಏನಾದರೂ ಸಹಾಯ ದೊರೆಯಬಹುದೆಂಬ ನಿರೀಕ್ಷೆಯಿಂದಾಗಿದೆ. ಜಗದೊಡೆಯನ ಹೊರತು ಯಾರಿಂದಲೂ ಅಲೌಕಿಕವಾದ ಸಹಾಯ ನಿರೀಕ್ಷಿಸುವುದು ಮತ್ತು ಅದಕ್ಕಾಗಿ ಪ್ರಾರ್ಥಿಸುವುದು ಇಸ್ಲಾಮ್ ಕಲಿಸುವ ಏಕದೇವ ಸಿದ್ಧಾಂತಕ್ಕೆ ವಿರುದ್ಧವಾಗಿದೆ.

2 ನಿಷ್ಕಳಂಕವಾದ ಏಕದೇವಾರಾಧನೆಯ ಮಾರ್ಗದಲ್ಲಿ, ಅಲ್ಲಾಹುವಿನೊಂದಿಗೆ ನೇರವಾಗಿ ಪ್ರಾರ್ಥಿಸುವ ಮಾರ್ಗದಲ್ಲಿ, ಪ್ರವಾದಿಗಳು ಮತ್ತು ಸಜ್ಜನರು ಅನುಸರಿಸಿದ ನೇರವಾದ ಮಾರ್ಗದಲ್ಲಿ ನಮ್ಮನ್ನು ಮುನ್ನಡೆಸು ಎಂದರ್ಥ.

3 'ಕ್ರೋಧಕ್ಕೀಡಾದವರು' ಎಂಬ ಪದದ ವ್ಯಾಪ್ತಿಯಲ್ಲಿ ಅವಿಶ್ವಾಸ, ಸತ್ಯನಿಷೇಧ ಮತ್ತು ಹಟಮಾರಿತನವನ್ನು ಮೈಗೂಡಿಸಿದವರೆಲ್ಲರೂ ಸೇರುತ್ತಾರಾದರೂ ಇಲ್ಲಿ ಪ್ರಮುಖವಾಗಿ ಉದ್ದೇಶಿಸಲಾಗಿರುವುದು, ದೈವಿಕ ಗ್ರಂಥದ ವಾಹಕರೆಂದು ಹೆಮ್ಮೆಪಡುವುದರೊಂದಿಗೆ ಸ್ವಾರ್ಥ ಹಿತಾಸಕ್ತಿಗಳಿಗಾಗಿ ಅಲ್ಲಾಹುವಿನ ವಚನಗಳನ್ನು ದುರ್ವ್ಯಾಖ್ಯಾನ ಮಾಡಿದ ಕಾರಣದಿಂದ ಅವನ ಕೋಪಕ್ಕೀಡಾದ ಯಹೂದಿಗಳನ್ನಾಗಿದೆ. ಈ ನಿಲುವನ್ನು ಹೊಂದಿರುವ ಯಾವುದೇ ಸಮುದಾಯದ ಸ್ಥಿತಿಯೂ ಇದಕ್ಕಿಂತ ಭಿನ್ನವಲ್ಲ. 'ಪಥಭ್ರಷ್ಟರು' ಎಂದರೆ ಇಲ್ಲಿ ಪ್ರಮುಖವಾಗಿ ಉದ್ದೇಶಿಸಲಾಗಿರುವುದು ಈಸಾ(عَلَيۡهِ ٱلسَّلَامُ)ರನ್ನು ದೇವಪುತ್ರರಾಗಿ ಮತ್ತು ಪುರೋಹಿತಶಾಹಿಯನ್ನು ಧರ್ಮದ ಬುನಾದಿಯಾಗಿ ಮಾಡಿಕೊಂಡ ಕ್ರೈಸ್ತರನ್ನಾಗಿದೆ. ದೈವಿಕ ಸಂದೇಶ ಲಭಿಸಿಯೂ ವ್ಯತಿಚಲಿಸಿದ ಯಾವುದೇ ಸಮುದಾಯವೂ ದಾರಿತಪ್ಪಿದ ಸಮುದಾಯವೇ ಆಗಿದೆ.

## ಅಲ್‌ಬಕರಃ (ಹಸು)[1]

## سُورَةُ البَقَرَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 286

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

الٓمٓ ١

1. ಅಲಿಫ್–ಲಾಮ್–ಮೀಮ್.

ذَٰلِكَ ٱلۡكِتَٰبُ لَا رَيۡبَۛ فِيهِۛ هُدٗى لِّلۡمُتَّقِينَ ٢

2. ಇದು ಗ್ರಂಥ. ಇದರಲ್ಲಿ ಸಂದೇಹವೇ ಇಲ್ಲ. ಭಯಭಕ್ತಿ ಪಾಲಿಸುವವರಿಗೆ ಇದು ಸನ್ಮಾರ್ಗವನ್ನು ತೋರಿಸಿಕೊಡುತ್ತದೆ.

ٱلَّذِينَ يُؤۡمِنُونَ بِٱلۡغَيۡبِ وَيُقِيمُونَ ٱلصَّلَوٰةَ وَمِمَّا رَزَقۡنَٰهُمۡ يُنفِقُونَ ٣

3. ಅವರು (ಭಯಭಕ್ತಿ ಪಾಲಿಸುವವರು) ಅಗೋಚರ ವಿಷಯಗಳಲ್ಲಿ ವಿಶ್ವಾಸವಿಡುವವರೂ, ನಮಾಝ್ ಸಂಸ್ಥಾಪಿಸುವವರೂ, ನಾವು ಒದಗಿಸಿರುವ ಸಂಪತ್ತಿನಿಂದ ವ್ಯಯಿಸುವವರೂ ಆಗಿರುವರು.

وَٱلَّذِينَ يُؤۡمِنُونَ بِمَآ أُنزِلَ إِلَيۡكَ وَمَآ أُنزِلَ مِن قَبۡلِكَ وَبِٱلۡأٓخِرَةِ هُمۡ يُوقِنُونَ ٤

4. ಅವರು ತಮಗೂ, ತಮಗಿಂತ ಮುಂಚಿನವರಿಗೂ ಅವತೀರ್ಣಗೊಂಡಿರುವುದರಲ್ಲಿ ವಿಶ್ವಾಸವಿಡುವವರೂ, ಪರಲೋಕದಲ್ಲಿ ದೃಢವಿಶ್ವಾಸವಿಡುವವರೂ ಆಗಿರುವರು.

أُوْلَٰٓئِكَ عَلَىٰ هُدٗى مِّن رَّبِّهِمۡۖ وَأُوْلَٰٓئِكَ هُمُ ٱلۡمُفۡلِحُونَ ٥

5. ಅವರು ತಮ್ಮ ಪ್ರಭುವಿನ ವತಿಯ ಸನ್ಮಾರ್ಗದಲ್ಲಿರುವರು. ಯಶಸ್ಸು ಗಳಿಸಿದವರು ಅವರೇ ಆಗಿರುವರು.

إِنَّ ٱلَّذِينَ كَفَرُواْ سَوَآءٌ عَلَيۡهِمۡ ءَأَنذَرۡتَهُمۡ أَمۡ لَمۡ تُنذِرۡهُمۡ لَا يُؤۡمِنُونَ ٦

6. ಸತ್ಯನಿಷೇಧಿಗಳಿಗೆ ತಾವು ಮುನ್ನೆಚ್ಚರಿಕೆ ನೀಡಿದರೂ, ನೀಡದಿದ್ದರೂ ಅವರ ಪಾಲಿಗೆ ಅದು ಸಮಾನವಾಗಿರುವುದು. ಅವರು ವಿಶ್ವಾಸವಿಡಲಾರರು.

خَتَمَ ٱللَّهُ عَلَىٰ قُلُوبِهِمۡ وَعَلَىٰ سَمۡعِهِمۡۖ

7. ಅಲ್ಲಾಹು ಅವರ ಹೃದಯಗಳ ಮೇಲೆ ಮತ್ತು ಕಿವಿಗಳ ಮೇಲೆ ಮುದ್ರೆಯೊತ್ತಿರುವನು[2]

---

1 ಅಲ್ಲಾಹು ಇಸ್ರಾಈಲರೊಂದಿಗೆ ಒಂದು ಹಸುವನ್ನು ಕೊಯ್ಯಲು ಆದೇಶಿಸಿದ ಘಟನೆಯನ್ನು ವಿವರಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ 'ಅಲ್ ಬಕರಃ' (ಹಸು) ಎಂಬ ಹೆಸರು ಬಂದಿದೆ.

2 ಸತ್ಯವನ್ನು ಗ್ರಹಿಸಲು ಅವರು ಸ್ವಲ್ಪವೂ ಆಸಕ್ತಿ ತೋರಿಸದಿರುವುದರಿಂದ ಅಲ್ಲಾಹು ಅವರ ಹೃದಯ, ಕಣ್ಣು ಮತ್ತು ಕಿವಿಗಳನ್ನು ಮುಚ್ಚಿದ ಸ್ಥಿತಿಯಲ್ಲಿಟ್ಟಿರುವನು.

ಅವರ ದೃಷ್ಟಿಗಳ ಮೇಲೆ ಒಂದು ಹೊದಿಕೆಯಿರುವುದು. ಅವರಿಗೆ ಭೀಕರ ಶಿಕ್ಷೆಯೂ ಇರುವುದು.

وَعَلَىٰٓ أَبۡصَٰرِهِمۡ غِشَٰوَةٞۖ وَلَهُمۡ عَذَابٌ
عَظِيمٞ ٧

8. ‘ನಾವು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಟ್ಟಿರುವೆವು’ ಎಂದು ಹೇಳುವ ಕೆಲವರು ಜನರಲ್ಲಿರುವರು; ಆದರೆ ಅವರು ವಿಶ್ವಾಸಿಗಳಲ್ಲ.

وَمِنَ ٱلنَّاسِ مَن يَقُولُ ءَامَنَّا بِٱللَّهِ
وَبِٱلۡيَوۡمِ ٱلۡأٓخِرِ وَمَا هُم بِمُؤۡمِنِينَ ٨

9. ಅವರು ಅಲ್ಲಾಹುವನ್ನು ಮತ್ತು ವಿಶ್ವಾಸಿಗಳನ್ನು ವಂಚಿಸಲು ಯತ್ನಿಸುತ್ತಿರುವರು. ಆದರೆ ಅವರು ಸ್ವತಃ ತಮ್ಮನ್ನೇ ವಿನಾ ವಂಚಿಸಲಾರರು.(1) ಅವರದನ್ನು ಗ್ರಹಿಸುವುದಿಲ್ಲ.

يُخَٰدِعُونَ ٱللَّهَ وَٱلَّذِينَ ءَامَنُواْ وَمَا
يَخۡدَعُونَ إِلَّآ أَنفُسَهُمۡ وَمَا يَشۡعُرُونَ ٩

10. ಅವರ ಹೃದಯಗಳಲ್ಲಿ ಒಂದು ರೀತಿಯ ರೋಗ ವಿದೆ. ಅಲ್ಲಾಹು ಅವರಿಗೆ ರೋಗವನ್ನು ಉಲ್ಬಣಗೊಳಿಸಿರುವನು. ಸುಳ್ಳು ನುಡಿಯುವ ಫಲವಾಗಿ ಅವರಿಗೆ ಯಾತನಾಮಯವಾದ ಶಿಕ್ಷೆಯೂ ಇರುವುದು.

فِي قُلُوبِهِم مَّرَضٞ فَزَادَهُمُ ٱللَّهُ
مَرَضٗاۖ وَلَهُمۡ عَذَابٌ أَلِيمُۢ بِمَا كَانُواْ
يَكۡذِبُونَ ١٠

11. ‘ನೀವು ನಾಡಿನಲ್ಲಿ ಗಲಭೆ ಮಾಡದಿರಿ’ ಎಂದು ಅವರೊಂದಿಗೆ ಹೇಳಲಾದರೆ, ‘ನಾವು ಮಾಡುತ್ತಿರುವುದು ಸುಧಾರಣೆ ಮಾತ್ರವಾಗಿದೆ’ ಎಂದು ಅವರು ಉತ್ತರಿಸುವರು.

وَإِذَا قِيلَ لَهُمۡ لَا تُفۡسِدُواْ فِي ٱلۡأَرۡضِ قَالُوٓاْ
إِنَّمَا نَحۡنُ مُصۡلِحُونَ ١١

12. ಆದರೆ ವಾಸ್ತವಿಕವಾಗಿ ಗಲಭೆಕೋರರು ಅವರೇ ಆಗಿರುವರು. ಆದರೆ ಅವರದನ್ನು ಗ್ರಹಿಸಲಾರರು.

أَلَآ إِنَّهُمۡ هُمُ ٱلۡمُفۡسِدُونَ وَلَٰكِن لَّا
يَشۡعُرُونَ ١٢

13. ‘ಜನರು ವಿಶ್ವಾಸವಿಟ್ಟಿರುವಂತೆ ನೀವೂ ವಿಶ್ವಾಸ ವಿಡಿರಿ’ ಎಂದು ಅವರೊಂದಿಗೆ ಹೇಳಲಾದರೆ, ‘ಈ ಮೂರ್ಖರು ವಿಶ್ವಾಸವಿಟ್ಟಿರುವಂತೆ ನಾವು ವಿಶ್ವಾಸವಿಡುವುದೇ?’ ಎಂದು ಅವರು ಕೇಳುವರು. ಆದರೆ ವಾಸ್ತವಿಕವಾಗಿ

وَإِذَا قِيلَ لَهُمۡ ءَامِنُواْ كَمَآ ءَامَنَ ٱلنَّاسُ
قَالُوٓاْ أَنُؤۡمِنُ كَمَآ ءَامَنَ ٱلسُّفَهَآءُۗ أَلَآ إِنَّهُمۡ
هُمُ ٱلسُّفَهَآءُ وَلَٰكِن لَّا يَعۡلَمُونَ ١٣

1 ಜಗತ್ತಿನಲ್ಲಿರುವ ಮನುಷ್ಯರೆಲ್ಲರೂ ವಿಶ್ವಾಸಿಗಳಾದರೂ ಅದರಿಂದ ಅಲ್ಲಾಹುವಿಗೇನೂ ಲಾಭವಿಲ್ಲ. ಇನ್ನು ಮನುಷ್ಯರೆಲ್ಲರೂ ಅವನನ್ನು ನಿಷೇಧಿಸಿದರೂ ಅವನಿಗೇನೂ ನಷ್ಟವಿಲ್ಲ. ಮನುಷ್ಯರು ಏನೇ ವಂಚನೆ ಮಾಡಿದರೂ ಅದರ ಫಲವನ್ನು ಸ್ವತಃ ಅವರೇ ಅನುಭವಿಸುವರು.

ಮೂರ್ಖರು ಅವರೇ ಆಗಿರುವರು. ಆದರೆ ಅವರು ಅದನ್ನು ಅರಿತುಕೊಳ್ಳಲಾರರು.

**14.** ವಿಶ್ವಾಸಿಗಳನ್ನು ಬೇಟಿಯಾಗುವಾಗ ಅವರು ಹೇಳುವರು: 'ನಾವು ವಿಶ್ವಾಸವಿಟ್ಟಿರುವೆವು'. ತಮ್ಮ (ಒಡನಾಡಿಗಳಾದ) ಸ್ಯತಾನರ ಬಳಿ ಒಂಟಿಯಾಗಿರುವಾಗ ಅವರು ಹೇಳುವರು: 'ನಾವು ನಿಮ್ಮ ಜೊತೆಯಲ್ಲೇ ಇರುವೆವು.ನಾವು (ಅವರನ್ನು) ಕೇವಲ ಗೇಲಿ ಮಾಡುವವರಾಗಿದ್ದೇವೆ'.

وَإِذَا لَقُوا۟ ٱلَّذِينَ ءَامَنُوا۟ قَالُوٓا۟ ءَامَنَّا وَإِذَا
خَلَوْا۟ إِلَىٰ شَيَـٰطِينِهِمْ قَالُوٓا۟ إِنَّا مَعَكُمْ
إِنَّمَا نَحْنُ مُسْتَهْزِءُونَ ١٤

**15.** ಆದರೆ ಅಲ್ಲಾಹು ಅವರನ್ನು ಗೇಲಿಮಾಡುತ್ತಿರುವನು ಮತ್ತು ಅತಿಕ್ರಮಗಳಲ್ಲಿ ವಿಹರಿಸುವಂತೆ ಅವರನ್ನು ಬಿಟ್ಟುಬಿಟ್ಟಿರುವನು.

ٱللَّهُ يَسْتَهْزِئُ بِهِمْ وَيَمُدُّهُمْ فِى طُغْيَـٰنِهِمْ
يَعْمَهُونَ ١٥

**16.** ಅವರು ಸನ್ಮಾರ್ಗವನ್ನು ಮಾರಿ ಬದಲಿಗೆ ದುರ್ಮಾರ್ಗವನ್ನು ಖರೀದಿಸಿದವರಾಗಿರುವರು. ಆದರೆ ಅವರ ವ್ಯಾಪಾರವು ಲಾಭಕರವಾಗದು ಮತ್ತು ಅವರು ಗುರಿಯನ್ನೂ ತಲುಪಲಾರರು.

أُو۟لَـٰٓئِكَ ٱلَّذِينَ ٱشْتَرَوُا۟ ٱلضَّلَـٰلَةَ بِٱلْهُدَىٰ
فَمَا رَبِحَت تِّجَـٰرَتُهُمْ وَمَا كَانُوا۟
مُهْتَدِينَ ١٦

**17.** ಅವರನ್ನು ಒಬ್ಬ ವ್ಯಕ್ತಿಯೊಂದಿಗೆ ಹೋಲಿಸಬಹುದು; ಅವನು ಒಂದು ಬೆಂಕಿಯನ್ನು ಉರಿಸಿದನು. ಪರಿಸರವೆಲ್ಲವೂ ಬೆಳಗಿದಾಗ ಅಲ್ಲಾಹು ಆ ಬೆಳಕನ್ನು ನಂದಿಸಿದನು ಮತ್ತು ಏನನ್ನೂ ಕಾಣಲಾಗದಂತಹ ಕತ್ತಲೆಯಲ್ಲಿ (ಪರದಾಡುವಂತೆ) ಅವರನ್ನು ಬಿಟ್ಟನು.

مَثَلُهُمْ كَمَثَلِ ٱلَّذِى ٱسْتَوْقَدَ نَارًا فَلَمَّآ
أَضَآءَتْ مَا حَوْلَهُۥ ذَهَبَ ٱللَّهُ بِنُورِهِمْ
وَتَرَكَهُمْ فِى ظُلُمَـٰتٍ لَّا يُبْصِرُونَ ١٧

**18.** ಅವರು ಕಿವುಡರು, ಮೂಕರು ಮತ್ತು ಕುರುಡರಾಗಿರುವರು. ಆದ್ದರಿಂದ ಅವರು (ಸತ್ಯದೆಡೆಗೆ) ಮರಳಿ ಬರಲಾರರು.

صُمٌّۢ بُكْمٌ عُمْىٌ فَهُمْ لَا يَرْجِعُونَ ١٨

**19.** ಅಥವಾ (ಅವರನ್ನು) ಆಕಾಶದಿಂದ ಸುರಿಯುವ ಒಂದು ಜಡಿಮಳೆಗೆ ಹೋಲಿಸಬಹುದು. ಅದರೊಂದಿಗೆ ಕಾರ್ಗತ್ತಲು, ಸಿಡಿಲು ಮತ್ತು ಮಿಂಚುಗಳಿವೆ. ಸಿಡಿಲಿನ ಗರ್ಜನೆಯ ನಿಮಿತ್ತ ಮರಣವನ್ನು

أَوْ كَصَيِّبٍ مِّنَ ٱلسَّمَآءِ فِيهِ ظُلُمَـٰتٌ
وَرَعْدٌ وَبَرْقٌ يَجْعَلُونَ أَصَـٰبِعَهُمْ فِىٓ
ءَاذَانِهِم مِّنَ ٱلصَّوَٰعِقِ حَذَرَ ٱلْمَوْتِ ۚ وَٱللَّهُ
مُحِيطٌۢ بِٱلْكَـٰفِرِينَ ١٩

ಭಯಪಟ್ಟು ಅವರು ತಮ್ಮ ಬೆರಳುಗಳನ್ನು ಕಿವಿಗಳಲ್ಲಿ ತೂರಿಸುವರು. ಅಲ್ಲಾಹು ಸತ್ಯನಿಷೇಧಿಗಳನ್ನು ಆವರಿಸಿರುವನು.

**20.** ಮಿಂಚು ಅವರ ದೃಷ್ಟಿಗಳನ್ನು ಅಪಹರಿಸುವಂತಿರುವುದು. ಅದು (ಮಿಂಚು) ಅವರಿಗೆ ಬೆಳಕು ನೀಡುವಾಗಲೆಲ್ಲ ಅವರು ಆ ಬೆಳಕಿನಲ್ಲಿ ನಡೆಯುವರು. ಕತ್ತಲಾಗುವಾಗ ಅವರು ನಿಂತುಬಿಡುವರು. ಅಲ್ಲಾಹು ಇಚ್ಛಿಸಿದರೆ ಅವನು ಅವರ ಶ್ರವಣವನ್ನು ಮತ್ತು ದೃಷ್ಟಿಯನ್ನು ಪೂರ್ಣವಾಗಿ ನಾಶಮಾಡುತ್ತಿದ್ದನು. ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

يَكَادُ ٱلۡبَرۡقُ يَخۡطَفُ أَبۡصَٰرَهُمۡۖ كُلَّمَآ أَضَآءَ لَهُم مَّشَوۡاْ فِيهِ وَإِذَآ أَظۡلَمَ عَلَيۡهِمۡ قَامُواْۚ وَلَوۡ شَآءَ ٱللَّهُ لَذَهَبَ بِسَمۡعِهِمۡ وَأَبۡصَٰرِهِمۡۚ إِنَّ ٱللَّهَ عَلَىٰ كُلِّ شَىۡءٖ قَدِيرٞ ٢٠

**21.** ಓ ಮನುಷ್ಯರೇ! ನಿಮ್ಮನ್ನು ಮತ್ತು ನಿಮ್ಮ ಪೂರ್ವಿಕರನ್ನು ಸೃಷ್ಟಿಸಿದ ನಿಮ್ಮ ರಬ್ಬನ್ನು ಆರಾಧಿಸಿರಿ. ನೀವು ಭಯಭಕ್ತಿ ಪಾಲಿಸುವವರಾಗುವ ಸಲುವಾಗಿ.

يَٰٓأَيُّهَا ٱلنَّاسُ ٱعۡبُدُواْ رَبَّكُمُ ٱلَّذِى خَلَقَكُمۡ وَٱلَّذِينَ مِن قَبۡلِكُمۡ لَعَلَّكُمۡ تَتَّقُونَ ٢١

**22.** ನಿಮಗೋಸ್ಕರ ಭೂಮಿಯನ್ನು ಹಾಸನ್ನಾಗಿ ಮತ್ತು ಆಕಾಶವನ್ನು ಮೇಲ್ಛಾವಣಿಯನ್ನಾಗಿ ಮಾಡಿಕೊಟ್ಟಿರುವ ಹಾಗೂ ಆಕಾಶದಿಂದ ನೀರನ್ನು ಇಳಿಸಿ ತನ್ಮೂಲಕ ನಿಮಗೆ ಭಕ್ಷ್ಯಯೋಗ್ಯ ಫಲಗಳನ್ನು ಉತ್ಪಾದಿಸಿಕೊಟ್ಟಿರುವ (ರಬ್ಬನ್ನು ಆರಾಧಿಸಿರಿ). ಆದ್ದರಿಂದ (ಇವೆಲ್ಲವನ್ನೂ) ಅರಿತವರಾಗಿದ್ದೂ ಸಹ ನೀವು ಅಲ್ಲಾಹುವಿಗೆ ಪ್ರತಿಸ್ಪರ್ಧಿಗಳನ್ನು ಮಾಡದಿರಿ.(1)

ٱلَّذِى جَعَلَ لَكُمُ ٱلۡأَرۡضَ فِرَٰشٗا وَٱلسَّمَآءَ بِنَآءٗ وَأَنزَلَ مِنَ ٱلسَّمَآءِ مَآءٗ فَأَخۡرَجَ بِهِۦ مِنَ ٱلثَّمَرَٰتِ رِزۡقٗا لَّكُمۡۖ فَلَا تَجۡعَلُواْ لِلَّهِ أَندَادٗا وَأَنتُمۡ تَعۡلَمُونَ ٢٢

**23.** ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿರುವುದರ (ಕುರ್‌ಆನ್‌ನ)

وَإِن كُنتُمۡ فِى رَيۡبٖ مِّمَّا نَزَّلۡنَا عَلَىٰ عَبۡدِنَا

1 ಜನನ–ಮರಣಗಳನ್ನು ನೀಡಿ, ತಲೆಮಾರುಗಳ ಮೂಲಕ ಜೀವ ಎಂಬ ವಿಸ್ಮಯವನ್ನು ನೆಲೆನಿಲ್ಲಿಸಿದ, ಆಕಾಶದಲ್ಲಿ ಮತ್ತು ಭೂಮಿಯಲ್ಲಿ ಬದುಕನ್ನು ಸಾಗಿಸಲು ಅಗತ್ಯವಿರುವ ಅದ್ಭುತಕರವಾದ ವ್ಯವಸ್ಥೆಯನ್ನು ಸಜ್ಜುಗೊಳಿಸಿದ ಜಗದೊಡೆಯನನ್ನು ಬಹುತೇಕ ಎಲ್ಲ ಧರ್ಮೀಯರೂ ಅಂಗೀಕರಿಸುತ್ತಾರೆ. ಆದರೆ ಇದನ್ನು ತಿಳಿದೂ ಕೂಡ ಅವರ ಪೈಕಿ ಹೆಚ್ಚಿನವರೂ ಅಲ್ಲಾಹೇತರ ಶಕ್ತಿಗಳನ್ನು ಪೂಜಿಸುವುದರಲ್ಲಿ ಮತ್ತು ಪ್ರಾರ್ಥಿಸುವುದರಲ್ಲಿ ತಲ್ಲೀನರಾಗಿರುವರು. ಇದು ಸೃಷ್ಟಿಕರ್ತನಿಗೆ ಪ್ರತಿಸ್ಪರ್ಧಿಗಳನ್ನು ಮಾಡುವುದಾಗಿದ್ದು, ಇದು ನಿಷಿದ್ಧವೆಂದು ಈ ಸೂಕ್ತಿಯು ಸೂಚಿಸುತ್ತದೆ.

فَأۡتُواْ بِسُورَةٖ مِّن مِّثۡلِهِۦ وَٱدۡعُواْ شُهَدَآءَكُم مِّن دُونِ ٱللَّهِ إِن كُنتُمۡ صَٰدِقِينَ ٢٣

ಕುರಿತು ನೀವು ಸಂದೇಹದಲ್ಲಿದ್ದರೆ ಅದರಂತಿರುವ ಒಂದು ಅಧ್ಯಾಯವನ್ನಾದರೂ ತನ್ನಿರಿ. ಅಲ್ಲಾಹುವಿನ ಹೊರತು ನಿಮಗಿರುವ ಸಹಾಯಕರನ್ನೂ ಆಹ್ವಾನಿಸಿರಿ. ನೀವು ಸತ್ಯಸಂಧರಾಗಿದ್ದರೆ (ಅದನ್ನು ಮಾಡಿ ತೋರಿಸಿರಿ).

فَإِن لَّمۡ تَفۡعَلُواْ وَلَن تَفۡعَلُواْ فَٱتَّقُواْ ٱلنَّارَ ٱلَّتِي وَقُودُهَا ٱلنَّاسُ وَٱلۡحِجَارَةُۖ أُعِدَّتۡ لِلۡكَٰفِرِينَ ٢٤

**24.** ನಿಮಗೆ ಅದನ್ನು ಮಾಡಲು ಸಾಧ್ಯವಾಗದಿದ್ದಲ್ಲಿ–ಅದನ್ನು ಮಾಡಲು ನಿಮಗೆ ಎಂದೂ ಸಾಧ್ಯವಾಗದು–ಮನುಷ್ಯರನ್ನು ಮತ್ತು ಕಲ್ಲುಗಳನ್ನು[1] ಇಂಧನವಾಗಿಸಿ ಉರಿಸಲಾಗುವ ನರಕಾಗ್ನಿಯನ್ನು ಭಯಪಡಿರಿ. ಅದನ್ನು ಸತ್ಯನಿಷೇಧಿಗಳಿಗಾಗಿ ಸಿದ್ಧಗೊಳಿಸಲಾಗಿದೆ.

وَبَشِّرِ ٱلَّذِينَ ءَامَنُواْ وَعَمِلُواْ ٱلصَّٰلِحَٰتِ أَنَّ لَهُمۡ جَنَّٰتٖ تَجۡرِي مِن تَحۡتِهَا ٱلۡأَنۡهَٰرُۖ كُلَّمَا رُزِقُواْ مِنۡهَا مِن ثَمَرَةٖ رِّزۡقٗا قَالُواْ هَٰذَا ٱلَّذِي رُزِقۡنَا مِن قَبۡلُۖ وَأُتُواْ بِهِۦ مُتَشَٰبِهٗاۖ وَلَهُمۡ فِيهَآ أَزۡوَٰجٞ مُّطَهَّرَةٞۖ وَهُمۡ فِيهَا خَٰلِدُونَ ٢٥

**25.** (ಓ ಪ್ರವಾದಿಯವರೇ!) ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರಿಗೆ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿವೆ ಎಂಬ ಶುಭವಾರ್ತೆಯನ್ನು ತಿಳಿಸಿರಿ. ಅದರ ಒಂದೊಂದು ಫಲವನ್ನು ಅವರಿಗೆ ತಿನ್ನಲು ನೀಡಲಾದಾಗ ಅವರು ಹೇಳುವರು: 'ಇದು ನಮಗೆ ಮುಂಚೆ ನೀಡಲಾಗಿರುವುದೇ ಆಗಿದೆ!' ಆದರೆ ಅವರಿಗೆ ಅದನ್ನು ನೀಡಲಾಗಿರುವುದು ಪರಸ್ಪರ ಹೋಲಿಕೆಯಿರುವ ರೀತಿಯಲ್ಲಾಗಿದೆ.[2] ಅವರಿಗೆ ಅಲ್ಲಿ ಪರಿಶುದ್ಧವಾದ ಸಂಗಾತಿಗಳಿರುವರು ಮತ್ತು ಅವರು ಅಲ್ಲಿ ಶಾಶ್ವತವಾಗಿ ವಾಸಿಸುವರು.

۞إِنَّ ٱللَّهَ لَا يَسۡتَحۡيِۦٓ أَن يَضۡرِبَ مَثَلٗا مَّا بَعُوضَةٗ فَمَا فَوۡقَهَاۚ فَأَمَّا ٱلَّذِينَ ءَامَنُواْ فَيَعۡلَمُونَ أَنَّهُ ٱلۡحَقُّ مِن رَّبِّهِمۡۖ وَأَمَّا ٱلَّذِينَ

**26.** ಖಂಡಿತವಾಗಿಯೂ ಅಲ್ಲಾಹು ಯಾವುದೇ ವಸ್ತುವನ್ನು ಹೋಲಿಸುವುದರಲ್ಲೂ ನಾಚಿಕೆಪಡಲಾರನು; ಅದೊಂದು ಸೊಳ್ಳೆಯಾಗಿರಲಿ ಅಥವಾ ಅದಕ್ಕಿಂತಲೂ

1 ಇಲ್ಲಿ ಉದ್ದೇಶಿಸಲಾಗಿರುವುದು ವಿಶೇಷ ತರಹದ ಕಲ್ಲುಗಳು ಅಥವಾ ಕಲ್ಲುಗಳಿಂದ ನಿರ್ಮಿಸಲಾದ ವಿಗ್ರಹಗಳಾಗಿವೆ ಎಂದು ಕೆಲವು ತಫ್ಸೀರ್‌ಗಳಲ್ಲಿ ಬಂದಿದೆ.

2 ಮೇಲ್ನೋಟಕ್ಕೆ ಒಂದೇ ತರಹ ಕಾಣುವುದಾದರೂ ರುಚಿ ಮತ್ತು ಗುಣಮಟ್ಟದಲ್ಲಿ ಅಗಾಧ ವ್ಯತ್ಯಾಸಗಳಿರುವ ಅನೇಕ ಬಗೆಯ ಫಲಗಳನ್ನು ಅವರಿಗೆ ನೀಡಲಾಗುವುದು ಎಂದರ್ಥ.

كَفَرُواْ فَيَقُولُونَ مَاذَآ أَرَادَ ٱللَّهُ بِهَٰذَا
مَثَلٗاۘ يُضِلُّ بِهِۦ كَثِيرٗا وَيَهۡدِي بِهِۦ كَثِيرٗاۚ
وَمَا يُضِلُّ بِهِۦٓ إِلَّا ٱلۡفَٰسِقِينَ ٢٦

ತುಚ್ಛವಾದ ವಸ್ತುವಾಗಿರಲಿ! ವಿಶ್ವಾಸಿಗಳಿಗೆ ಅದು ತಮ್ಮ ರಬ್‌ನ ವತಿಯ ಸತ್ಯವೆಂದು ಮನದಟ್ಟಾಗುವುದು. 'ಈ ಹೋಲಿಕೆಯಿಂದ ಅಲ್ಲಾಹು ಇಚ್ಛಿಸುವುದಾದರೂ ಏನು?' ಎಂದು ಸತ್ಯನಿಷೇಧಿಗಳು ಕೇಳುವರು. ಹೀಗೆ ಈ ಹೋಲಿಕೆಯಿಂದಾಗಿ ಅವನು ಅನೇಕ ಜನರನ್ನು ದಾರಿಗೆಡಿಸುವನು ಮತ್ತು ಅನೇಕ ಜನರನ್ನು ಸನ್ಮಾರ್ಗದಲ್ಲಿ ಸೇರಿಸುವನು. ಇದರ ಮೂಲಕ ಅವನು ಧಿಕ್ಕಾರಿಗಳನ್ನಲ್ಲದೆ ಇನ್ನಾರನ್ನೂ ದಾರಿಗೆಡಿಸಲಾರನು.

ٱلَّذِينَ يَنقُضُونَ عَهۡدَ ٱللَّهِ مِنۢ بَعۡدِ
مِيثَٰقِهِۦ وَيَقۡطَعُونَ مَآ أَمَرَ ٱللَّهُ بِهِۦٓ أَن
يُوصَلَ وَيُفۡسِدُونَ فِي ٱلۡأَرۡضِۚ أُوْلَٰٓئِكَ هُمُ
ٱلۡخَٰسِرُونَ ٢٧

27. ಅವರು ಅಲ್ಲಾಹುವಿನ ಕರಾರನ್ನು, ಅದು ಸುದೃಢಗೊಂಡ ಬಳಿಕವೂ ಅದಕ್ಕೆ ತದ್ವಿರುದ್ಧವಾಗಿ ವರ್ತಿಸುವವರೂ, ಅಲ್ಲಾಹು ಜೋಡಿಸಬೇಕೆಂದು ಆದೇಶಿಸಿರುವುದನ್ನು[1] ಕಡಿದು ಬೇರ್ಪಡಿಸುವವರೂ, ಭೂಮಿಯಲ್ಲಿ ವಿನಾಶವನ್ನುಂಟು ಮಾಡುವವರೂ ಆಗಿರುವರು. ನಷ್ಟ ಹೊಂದಿದವರು ಅವರೇ ಆಗಿರುವರು.

كَيۡفَ تَكۡفُرُونَ بِٱللَّهِ وَكُنتُمۡ أَمۡوَٰتٗا
فَأَحۡيَٰكُمۡۖ ثُمَّ يُمِيتُكُمۡ ثُمَّ يُحۡيِيكُمۡ ثُمَّ
إِلَيۡهِ تُرۡجَعُونَ ٢٨

28. ನೀವು ಅಲ್ಲಾಹುವನ್ನು ಹೇಗೆ ನಿಷೇಧಿಸುವಿರಿ? ನೀವು ನಿರ್ಜೀವಿಗಳಾಗಿದ್ದಿರಿ. ತರುವಾಯ ಅವನು ನಿಮಗೆ ಜೀವವನ್ನು ನೀಡಿದನು. ತರುವಾಯ ಅವನು ನಿಮ್ಮನ್ನು ಮೃತಪಡಿಸುವನು. ಬಳಿಕ ಪುನಃ ಜೀವವನ್ನು ನೀಡುವನು. ತರುವಾಯ ನಿಮ್ಮನ್ನು ಅವನೆಡೆಗೆ ಮರಳಿಸಲಾಗುವುದು.

هُوَ ٱلَّذِي خَلَقَ لَكُم مَّا فِي ٱلۡأَرۡضِ
جَمِيعٗا ثُمَّ ٱسۡتَوَىٰٓ إِلَى ٱلسَّمَآءِ فَسَوَّىٰهُنَّ
سَبۡعَ سَمَٰوَٰتٖۚ وَهُوَ بِكُلِّ شَيۡءٍ
عَلِيمٞ ٢٩

29. ಭೂಮಿಯಲ್ಲಿರುವುದೆಲ್ಲವನ್ನೂ ನಿಮಗೋಸ್ಕರ ಸೃಷ್ಟಿಸಿಕೊಟ್ಟವನು ಅವನಾಗಿರುವನು. ಇದಲ್ಲದೆ ಅವನು ಆಕಾಶದತ್ತ ಏರಿ ಅದನ್ನು ಏಳಾಕಾಶಗಳಾಗಿ ಕ್ರಮೀಕರಿಸಿರುವನು ಅವನು ಸಕಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

1 ಕುಟುಂಬ ಸಂಬಂಧ, ಧಾರ್ಮಿಕ ಸಂಬಂಧ, ಮಾನವೀಯತೆ ಇತ್ಯಾದಿಗಳು ಅಲ್ಲಾಹು ಪರಸ್ಪರ ಜೋಡಿಸಲು ಆದೇಶಿಸಿರುವ ಸಂಬಂಧಗಳಾಗಿವೆ.

**30.** ‘ನಾನು ಭೂಮಿಯಲ್ಲಿ ಒಬ್ಬ ‘ಖಲೀಫಃ’[1] ನನ್ನು ನಿಯೋಗಿಸಲಿರುವೆನು’ ಎಂದು ತಮ್ಮ ರಬ್ ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಹೇಳಿದರು: ‘ಅಲ್ಲಿ ವಿನಾಶವನ್ನುಂಟು ಮಾಡುವವರನ್ನು ಮತ್ತು ರಕ್ತ ಹರಿಸುವವರನ್ನು ನೀನು ನಿಯೋಗಿಸುವೆಯಾ? ನಾವು ನಿನ್ನ ಮಹತ್ವವನ್ನು ಕೀರ್ತನೆ ಮಾಡುವವರೂ, ನಿನ್ನ ಪರಿಪಾವನತೆಯನ್ನು ಕೊಂಡಾಡುವವರೂ ಆಗಿರುವೆವು’. ಅವನು (ಅಲ್ಲಾಹು) ಹೇಳಿದನು: ‘ನೀವು ಅರಿಯದಿರುವುದನ್ನು ನಾನು ಅರಿತಿರುವೆನು’.

وَإِذْ قَالَ رَبُّكَ لِلْمَلَٰٓئِكَةِ إِنِّى جَاعِلٌ فِى ٱلْأَرْضِ خَلِيفَةً ۖ قَالُوٓا۟ أَتَجْعَلُ فِيهَا مَن يُفْسِدُ فِيهَا وَيَسْفِكُ ٱلدِّمَآءَ وَنَحْنُ نُسَبِّحُ بِحَمْدِكَ وَنُقَدِّسُ لَكَ ۖ قَالَ إِنِّىٓ أَعْلَمُ مَا لَا تَعْلَمُونَ ﴿٣٠﴾

**31.** ಅವನು (ಅಲ್ಲಾಹು) ಆದಮ್‌ರಿಗೆ ಹೆಸರುಗಳೆಲ್ಲವನ್ನೂ ಕಲಿಸಿದನು.[2] ತರುವಾಯ ಅವನು ಆ ಹೆಸರಿಟ್ಟವುಗಳನ್ನು ಮಲಕ್‌ಗಳಿಗೆ ತೋರಿಸಿ ಹೇಳಿದನು: ‘ನೀವು ಸತ್ಯಸಂಧರಾಗಿದ್ದರೆ ಇವುಗಳ ಹೆಸರುಗಳನ್ನು ನನಗೆ ತಿಳಿಸಿಕೊಡಿರಿ’.

وَعَلَّمَ ءَادَمَ ٱلْأَسْمَآءَ كُلَّهَا ثُمَّ عَرَضَهُمْ عَلَى ٱلْمَلَٰٓئِكَةِ فَقَالَ أَنۢبِـُٔونِى بِأَسْمَآءِ هَٰٓؤُلَآءِ إِن كُنتُمْ صَٰدِقِينَ ﴿٣١﴾

**32.** ಅವರು ಹೇಳಿದರು: ‘ನಾವು ನಿನ್ನ ಪರಿಪಾವನತೆಯನ್ನು ಕೊಂಡಾಡುವೆವು. ನೀನು ಕಲಿಸಿಕೊಟ್ಟಿರುವವುಗಳಲ್ಲದೆ ಬೇರಾವ ಅರಿವೂ ನಮಗಿಲ್ಲ. ನೀನಂತೂ ಸರ್ವಜ್ಞನೂ ಮಹಾಜ್ಞಾನಿಯೂ ಆಗಿರುವೆ’.

قَالُوا۟ سُبْحَٰنَكَ لَا عِلْمَ لَنَآ إِلَّا مَا عَلَّمْتَنَآ ۖ إِنَّكَ أَنتَ ٱلْعَلِيمُ ٱلْحَكِيمُ ﴿٣٢﴾

**33.** ಅಲ್ಲಾಹು ಹೇಳಿದನು: ‘ಓ ಆದಮ್! ಇವರಿಗೆ ಅವುಗಳ ಹೆಸರುಗಳನ್ನು ತಿಳಿಸಿಕೊಡಿರಿ’.

قَالَ يَٰٓـَٔادَمُ أَنۢبِئْهُم بِأَسْمَآئِهِمْ ۖ فَلَمَّآ أَنۢبَأَهُم

---

1 ‘ಖಲೀಫಃ’ ಎಂಬ ಪದಕ್ಕೆ ಉತ್ತರಾಧಿಕಾರಿ, ಬದಲಿಗೆ ನಿಲ್ಲುವವನು (alternate), ಪ್ರತಿನಿಧಿ ಮುಂತಾದ ಅರ್ಥಗಳಿವೆ. ಇದು ಆದಮ್ ರನ್ನು ಮಾತ್ರ ಉದ್ದೇಶಿಸಲಾದ ಏಕವಚನವಾಗಿರಬಹುದು ಅಥವಾ ಸಂಪೂರ್ಣ ಮನುಕುಲವನ್ನು ಉದ್ದೇಶಿಸಲಾದ ಕುಲನಾಮವಾಗಿರಬಹುದು. ಪ್ರತಿಯೊಬ್ಬ ಮನುಷ್ಯನೂ ತನ್ನ ಪೂರ್ವಿಕರ ವಂಶವನ್ನು ಮುಂದುವರಿಸುತ್ತಾ ನಾಗರಿಕತೆಯನ್ನು ಬೆಳೆಸುತ್ತಾನೆ. ಪ್ರತಿಯೊಂದು ತಲೆಮಾರು ಗತ ತಲೆಮಾರಿನ ಸ್ಥಾನವನ್ನು ತುಂಬಿ ಬದುಕಿನ ಕ್ಷೇತ್ರದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸುತ್ತದೆ. ಸರ್ವ ಚರಾಚರಗಳೂ ದೈವಿಕ ನಿಯಮಕ್ಕೆ ಅಥವಾ ಪ್ರಕೃತಿ ನಿಯಮಕ್ಕೆ ವಿಧೇಯವಾಗಿ ವರ್ತಿಸಲು ವಿಧಿಸಲ್ಪಟ್ಟಿರುವಾಗ, ಮನುಷ್ಯನು ಮಾತ್ರ ಒಂದು ಮಿತಿಯವರೆಗೆ ಲೌಕಿಕ ವಸ್ತುಗಳ ಮೇಲೆ ನಿಯಂತ್ರಣ ಹೊಂದಿದವನಾಗಿ ಭೂಮಿಗೆ ಕಳುಹಿಸಲ್ಪಟ್ಟಿರುವನು.

2 ಒಂದು ವಸ್ತುವಿನ ಹೆಸರು ಅದರ ಬಾಹ್ಯ ಹಾಗೂ ಆಂತರಿಕ ರೂಪವನ್ನು ಸೂಚಿಸುತ್ತದೆ. ಹೆಸರು ಮತ್ತು ತಾತ್ಪರ್ಯಗಳು ಪರಸ್ಪರ ಸಂಬಂಧವನ್ನು ಹೊಂದಿವೆ. ಮಾನವನು ಪ್ರತಿಯೊಂದು ವಸ್ತು ಹಾಗೂ ವಾಸ್ತವಿಕತೆಯನ್ನು ಒಂದು ಹೆಸರಿಡುವ ಮೂಲಕ ತನ್ನ ವ್ಯಾವಹಾರಿಕ ಕ್ಷೇತ್ರಕ್ಕೆ ತರುತ್ತಾನೆ. ನಾಮಕರಣ ಮಾಡುವ ಕೌಶಲ್ಯವನ್ನು ಅಲ್ಲಾಹು ಆದಿಮಾನವನಿಗೇ ನೀಡಿದ್ದಾನೆಂದು ಈ ಸೂಕ್ತಿಯು ಸೂಚಿಸುತ್ತದೆ.

ತರುವಾಯ ಅವರು (ಆದಮ್) ಮಲಕ್‌ಗಳಿಗೆ ಅವುಗಳ ಹೆಸರುಗಳನ್ನು ತಿಳಿಸಿಕೊಟ್ಟಾಗ ಅಲ್ಲಾಹು ಹೇಳಿದನು: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಅಗೋಚರ ವಿಷಯಗಳನ್ನೂ, ನೀವು ಬಹಿರಂಗಪಡಿಸುವ ಹಾಗೂ ರಹಸ್ಯವಾಗಿಡುವ ಎಲ್ಲವನ್ನೂ ನಾನು ಅರಿತಿರುವೆನೆಂದು ನಾನು ನಿಮ್ಮೊಂದಿಗೆ ಹೇಳಿರಲಿಲ್ಲವೇ?

بِأَسۡمَآئِهِمۡ قَالَ أَلَمۡ أَقُل لَّكُمۡ إِنِّيٓ أَعۡلَمُ غَيۡبَ ٱلسَّمَٰوَٰتِ وَٱلۡأَرۡضِ وَأَعۡلَمُ مَا تُبۡدُونَ وَمَا كُنتُمۡ تَكۡتُمُونَ ٣٣

**34.** 'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ (ವನ್ನು ಸ್ಮರಿಸಿರಿ). ಅವರು ಸಾಷ್ಟಾಂಗವೆರಗಿದರು; ಇಬ್ಲೀಸ್‌ನ ಹೊರತು. ಅವನು ನಿರಾಕರಿಸಿದನು ಮತ್ತು ಅಹಂಕಾರಪಟ್ಟನು. ಅವನು ಸತ್ಯನಿಷೇಧಿಗಳಲ್ಲಿ ಸೇರಿದವನಾಗಿರುವನು.

وَإِذۡ قُلۡنَا لِلۡمَلَٰٓئِكَةِ ٱسۡجُدُواْ لِأٓدَمَ فَسَجَدُوٓاْ إِلَّآ إِبۡلِيسَ أَبَىٰ وَٱسۡتَكۡبَرَ وَكَانَ مِنَ ٱلۡكَٰفِرِينَ ٣٤

**35.** 'ಓ ಆದಮ್! ತಾವು ಮತ್ತು ತಮ್ಮ ಸಂಗಾತಿ ಸ್ವರ್ಗದಲ್ಲಿ ವಾಸಿಸಿರಿ ಮತ್ತು ಅದರಲ್ಲಿ ನೀವಿಚ್ಛಿಸಿದಲ್ಲಿಂದ ಇಬ್ಬರೂ ಯಥೇಷ್ಟವಾಗಿ ತಿನ್ನಿರಿ. ಆದರೆ ಈ ಮರವನ್ನು ನೀವು ಸಮೀಪಿಸದಿರಿ. ಹಾಗೇನಾದರೂ ಆದರೆ ನೀವಿಬ್ಬರೂ ಅಕ್ರಮಿಗಳಾಗಿ ಬಿಡುವಿರಿ' ಎಂದು ನಾವು ಆದೇಶಿಸಿದೆವು.

وَقُلۡنَا يَٰٓـَٔادَمُ ٱسۡكُنۡ أَنتَ وَزَوۡجُكَ ٱلۡجَنَّةَ وَكُلَا مِنۡهَا رَغَدًا حَيۡثُ شِئۡتُمَا وَلَا تَقۡرَبَا هَٰذِهِ ٱلشَّجَرَةَ فَتَكُونَا مِنَ ٱلظَّٰلِمِينَ ٣٥

**36.** ಆದರೆ ಸೈತಾನನು ಅವರನ್ನು ಅದರಿಂದ ವ್ಯತಿಚಲನೆಗೊಳಿಸಿದನು[1] ಮತ್ತು ಅವರಿಬ್ಬರೂ ಸವಿಯುತ್ತಿದ್ದವು(ಸುಖಾನುಭೂತಿ)ಗಳಿಂದ ಅವರನ್ನು ಹೊರಗಟ್ಟಿದನು. ನಾವು (ಅವರೊಂದಿಗೆ) ಹೇಳಿದೆವು: 'ನೀವು ಇಳಿದು ಹೋಗಿರಿ.[2] ನಿಮ್ಮಲ್ಲಿ ಕೆಲವರು ಕೆಲವರಿಗೆ

فَأَزَلَّهُمَا ٱلشَّيۡطَٰنُ عَنۡهَا فَأَخۡرَجَهُمَا مِمَّا كَانَا فِيهِۖ وَقُلۡنَا ٱهۡبِطُواْ بَعۡضُكُمۡ لِبَعۡضٍ عَدُوّٞۖ وَلَكُمۡ فِي ٱلۡأَرۡضِ مُسۡتَقَرّٞ وَمَتَٰعٌ إِلَىٰ حِينٖ ٣٦

1 ಆ ಮರವು ಅನಶ್ವರತೆಯನ್ನು ಗಳಿಸಿಕೊಡುತ್ತದೆಯೆಂದು ದುಷ್ಪ್ರೇರಣೆ ನೀಡುವ ಮೂಲಕ ಸೈತಾನನು ಆದಮ್ ದಂಪತಿಗಳನ್ನು ಆಮಿಷಕ್ಕೊಳಗಾಗಿಸಿದನು.

2 ಇದು ಸರಿ–ತಪ್ಪು, ಸತ್ಯ–ಮಿಥ್ಯಗಳನ್ನು ವಿವೇಚನೆಯಿಂದ ಗ್ರಹಿಸಿ ಬದುಕನ್ನು ಸಾಗಿಸಲು ನಿರ್ಬಂಧಿತನಾಗಿರುವ ಮನುಷ್ಯನು ಮೊಟ್ಟಮೊದಲನೆಯದಾಗಿ ಎದುರಿಸಿದ ಪರೀಕ್ಷೆಯಾಗಿತ್ತು. ಹಿತಾಕಾಂಕ್ಷಿಯಾದ ಆಪ್ತಮಿತ್ರನ ವೇಷದಲ್ಲಿ ಬರುವ ಸಾಕ್ಷಾತ್ ಶತ್ರುವಾದ ಸೈತಾನನ ಸಾಮರ್ಥ್ಯವನ್ನು ಅವಿಸ್ಮರಣೀಯವಾದ ಒಂದು ಅನುಭವದ ಮೂಲಕ ಮನುಷ್ಯನು ಇಲ್ಲಿ ಅರಿತುಕೊಳ್ಳುತ್ತಾನೆ.

ಶತ್ರುಗಳಾಗಿರುವರು. ಒಂದು ನಿರ್ದಿಷ್ಟ ಕಾಲದವರೆಗೂ ನಿಮಗೆ ಭೂಮಿಯಲ್ಲಿ ವಾಸಸ್ಥಳ ಮತ್ತು ಜೀವನ ಸೌಕರ್ಯಗಳು ಇರುವುವು.'

**37.** ತರುವಾಯ ಆದಮ್ ತಮ್ಮ ರಬ್‌ನಿಂದ ಕೆಲವು ವಚನಗಳನ್ನು ಸ್ವೀಕರಿಸಿದರು. (ಆ ವಚನಗಳ ಮೂಲಕ ಪಶ್ಚಾತ್ತಾಪಪಟ್ಟ) ಆದಮ್‌ರಿಗೆ ಅಲ್ಲಾಹು ಪಾಪಮುಕ್ತಿ ದಯಪಾಲಿಸಿದನು. ಅವನು (ಅಲ್ಲಾಹು) ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

فَتَلَقَّىٰٓ ءَادَمُ مِن رَّبِّهِۦ كَلِمَٰتٖ فَتَابَ عَلَيۡهِۚ إِنَّهُۥ هُوَ ٱلتَّوَّابُ ٱلرَّحِيمُ ٣٧

**38.** ನಾವು ಹೇಳಿದೆವು: 'ನೀವೆಲ್ಲರೂ ಇಲ್ಲಿಂದ ಇಳಿದು ಹೋಗಿರಿ. ತರುವಾಯ ನನ್ನ ವತಿಯ ಮಾರ್ಗದರ್ಶನವು ನಿಮ್ಮ ಬಳಿಗೆ ಬರುವಾಗ ಆ ನನ್ನ ಮಾರ್ಗದರ್ಶನವನ್ನು ಯಾರು ಅನುಸರಿಸುವರೋ, ಅವರು ಭಯಪಡಬೇಕಾಗಿಲ್ಲ; ಅವರು ದುಃಖಿಸಬೇಕಾಗಿಯೂ ಇಲ್ಲ'.

قُلۡنَا ٱهۡبِطُواْ مِنۡهَا جَمِيعٗاۖ فَإِمَّا يَأۡتِيَنَّكُم مِّنِّي هُدٗى فَمَن تَبِعَ هُدَايَ فَلَا خَوۡفٌ عَلَيۡهِمۡ وَلَا هُمۡ يَحۡزَنُونَ ٣٨

**39.** 'ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಯಾರೋ ಅವರು ನರಕವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು'.

وَٱلَّذِينَ كَفَرُواْ وَكَذَّبُواْ بِـَٔايَٰتِنَآ أُوْلَٰٓئِكَ أَصۡحَٰبُ ٱلنَّارِۖ هُمۡ فِيهَا خَٰلِدُونَ ٣٩

**40.** ಓ ಇಸ್ರಾಈಲ್ ಸಂತತಿಗಳೇ![1] ನಾನು ನಿಮಗೆ ಕರುಣಿಸಿರುವ ನನ್ನ ಅನುಗ್ರಹವನ್ನು ಸ್ಮರಿಸಿರಿ ಮತ್ತು ನನ್ನೊಂದಿಗೆ ಮಾಡಿರುವ ಕರಾರನ್ನು ನೆರವೇರಿಸಿರಿ. ಹಾಗಾದರೆ ನಿಮ್ಮೊಂದಿಗೆ ಮಾಡಿರುವ ಕರಾರನ್ನು ನಾನೂ ನೆರವೇರಿಸುವೆನು. ನೀವು ನನ್ನನ್ನು ಮಾತ್ರ ಭಯಪಡಿರಿ.

يَٰبَنِيٓ إِسۡرَٰٓءِيلَ ٱذۡكُرُواْ نِعۡمَتِيَ ٱلَّتِيٓ أَنۡعَمۡتُ عَلَيۡكُمۡ وَأَوۡفُواْ بِعَهۡدِيٓ أُوفِ بِعَهۡدِكُمۡ وَإِيَّٰيَ فَٱرۡهَبُونِ ٤٠

1 'ಇಸ್ರಾಈಲ್' ಎಂಬುದು ಪ್ರವಾದಿ ಇಬ್ರಾಹೀಮ್(عَلَيۡهِ ٱلسَّلَامُ)ರವರ ಮೊಮ್ಮಗನಾದ ಯಅ್‌ಕೂಬ್(عَلَيۡهِ ٱلسَّلَامُ)ರವರ ಉಪನಾಮವಾಗಿದೆ. ಅವರ ವಂಶ ಪರಂಪರೆಯನ್ನು 'ಇಸ್ರಾಈಲರು' ಎನ್ನಲಾಗುತ್ತದೆ. ಅಲ್ಲಾಹು ಇಸ್ರಾಈಲರಿಗೆ ನೀಡಿದ ಅಪಾರ ಅನುಗ್ರಹಗಳನ್ನು, ಮತ್ತು ಆ ಅನುಗ್ರಹಗಳಿಗೆ ವಿರುದ್ಧವಾಗಿ ಅವರು ನಿಷೇಧಾತ್ಮಕ ಧೋರಣೆಯನ್ನು ಕೈಗೊಂಡಾಗ ಅವರಿಗೆ ನೀಡಲಾದ ಶಿಕ್ಷೆಗಳನ್ನು, ಕುರ್‌ಆನ್ ಹಲವು ಕಡೆಗಳಲ್ಲಿ ಪ್ರಸ್ತಾಪಿಸಿದೆ. ಇಸ್ರಾಈಲರ ಚರಿತ್ರೆಯಲ್ಲಿ ನಮಗೆ ಅನೇಕ ನೀತಿಪಾಠಗಳಿವೆ.

**41.** ನಿಮ್ಮ ಬಳಿಯಿರುವ ಗ್ರಂಥಗಳನ್ನು ದೃಢೀಕರಿಸುತ್ತಾ ನಾನು ಅವತೀರ್ಣಗೊಳಿಸಿರುವ ಸಂದೇಶದಲ್ಲಿ (ಕುರ್‌ಆನ್‌ನಲ್ಲಿ) ವಿಶ್ವಾಸವಿಡಿರಿ. ಅದನ್ನು ಮೊಟ್ಟಮೊದಲು ನಿಷೇಧಿಸುವವರು ನೀವಾಗದಿರಿ. ನನ್ನ ಸೂಕ್ತಿಗಳನ್ನು ನೀವು ಅಲ್ಪ ಬೆಲೆಗೆ (ಲೌಕಿಕ ಲಾಭಕ್ಕೆ) ಬದಲಾಗಿ ಮಾರದಿರಿ. ನೀವು ನನ್ನೊಂದಿಗೆ ಮಾತ್ರ ಭಯಭಕ್ತಿಯುಳ್ಳವರಾಗಿರಿ.

وَءَامِنُواْ بِمَآ أَنزَلۡتُ مُصَدِّقٗا لِّمَا مَعَكُمۡ وَلَا تَكُونُوٓاْ أَوَّلَ كَافِرِۭ بِهِۦۖ وَلَا تَشۡتَرُواْ بِـَٔايَٰتِي ثَمَنٗا قَلِيلٗا وَإِيَّٰيَ فَٱتَّقُونِ ٤١

**42.** ನೀವು ಸತ್ಯವನ್ನು ಮಿಥ್ಯದೊಂದಿಗೆ ಬೆರೆಸದಿರಿ. ಅರಿತವರಾಗಿದ್ದೂ ಕೂಡ ಸತ್ಯವನ್ನು ಮರೆಮಾಚದಿರಿ.

وَلَا تَلۡبِسُواْ ٱلۡحَقَّ بِٱلۡبَٰطِلِ وَتَكۡتُمُواْ ٱلۡحَقَّ وَأَنتُمۡ تَعۡلَمُونَ ٤٢

**43.** ನಮಾಝ್ ಸಂಸ್ಥಾಪಿಸಿರಿ, ಝಕಾತ್ ನೀಡಿರಿ ಮತ್ತು (ಅಲ್ಲಾಹುವಿನ ಮುಂದೆ) ತಲೆಬಾಗುವವರೊಂದಿಗೆ ನೀವೂ ತಲೆಬಾಗಿರಿ.

وَأَقِيمُواْ ٱلصَّلَوٰةَ وَءَاتُواْ ٱلزَّكَوٰةَ وَٱرۡكَعُواْ مَعَ ٱلرَّٰكِعِينَ ٤٣

**44.** ನೀವು ಜನರಿಗೆ ಒಳಿತನ್ನು ಆದೇಶಿಸಿ, ನಿಮ್ಮ ಸ್ವಂತ ವಿಷಯದಲ್ಲಿ (ಅದನ್ನು) ಮರೆತುಬಿಡುವುದೇ? ನೀವು ಗ್ರಂಥ ಪಾರಾಯಣ ಮಾಡುತ್ತಿರುವವರಾಗಿದ್ದೂ ಸಹ! ನೀವು ಚಿಂತಿಸುವುದಿಲ್ಲವೇ?

۞أَتَأۡمُرُونَ ٱلنَّاسَ بِٱلۡبِرِّ وَتَنسَوۡنَ أَنفُسَكُمۡ وَأَنتُمۡ تَتۡلُونَ ٱلۡكِتَٰبَۚ أَفَلَا تَعۡقِلُونَ ٤٤

**45.** ಸಹನೆ ಮತ್ತು ನಮಾಝ್‌ನ ಮೂಲಕ ನೀವು (ಅಲ್ಲಾಹುವಿನ) ಸಹಾಯವನ್ನು ಬೇಡಿರಿ. ಖಂಡಿತವಾಗಿಯೂ ಅದು (ನಮಾಝ್) ಭಕ್ತಿಯಿಲ್ಲದವರಿಗೆ ಬಹುದೊಡ್ಡ (ಪ್ರಯಾಸಕರ) ವಿಷಯವಾಗಿದೆ.

وَٱسۡتَعِينُواْ بِٱلصَّبۡرِ وَٱلصَّلَوٰةِۚ وَإِنَّهَا لَكَبِيرَةٌ إِلَّا عَلَى ٱلۡخَٰشِعِينَ ٤٥

**46.** ಅವರು (ಭಕ್ತಿಯುಳ್ಳವರು) ತಾವು ತಮ್ಮ ರಬ್‌ನೊಂದಿಗೆ ಭೇಟಿಯಾಗಲಿರುವೆವು ಮತ್ತು ಅವನ ಬಳಿಗೇ ಮರಳಿ ಹೋಗಲಿರುವೆವು ಎಂದು ದೃಢವಾಗಿ ವಿಶ್ವಾಸವಿಡುವವರಾಗಿರುವರು.

ٱلَّذِينَ يَظُنُّونَ أَنَّهُم مُّلَٰقُواْ رَبِّهِمۡ وَأَنَّهُمۡ إِلَيۡهِ رَٰجِعُونَ ٤٦

**47.** ಓ ಇಸ್ರಾಈಲ್ ಸಂತತಿಗಳೇ! ನಾನು ನಿಮಗೆ ದಯಪಾಲಿಸಿರುವ ನನ್ನ ಅನುಗ್ರಹವನ್ನು ಮತ್ತು ನಾನು ನಿಮಗೆ ಇತರ ಜನರಿಗಿಂತ ಹೆಚ್ಚು ಶ್ರೇಷ್ಠತೆ ನೀಡಿರುವುದನ್ನು ಸ್ಮರಿಸಿರಿ.

يَٰبَنِيٓ إِسۡرَٰٓءِيلَ ٱذۡكُرُواْ نِعۡمَتِيَ ٱلَّتِيٓ أَنۡعَمۡتُ عَلَيۡكُمۡ وَأَنِّي فَضَّلۡتُكُمۡ عَلَى ٱلۡعَٰلَمِينَ ٤٧

48. ಒಬ್ಬನು ಇನ್ನೊಬ್ಬನಿಗೆ ಯಾವುದೇ ಉಪಕಾರ ವನ್ನು ಮಾಡಲಾಗದ, ಯಾವ ವ್ಯಕ್ತಿಯಿಂದಲೂ ಯಾವುದೇ ಶಿಫಾರಸ್ಸನ್ನು ಸ್ವೀಕರಿಸಲಾಗದ, ಯಾವ ವ್ಯಕ್ತಿಯಿಂದಲೂ ಯಾವುದೇ ಪ್ರಾಯಶ್ಚಿತ್ತವನ್ನು ಪಡೆಯಲಾಗದ ಮತ್ತು ಅವರಿಗೆ ಯಾವುದೇ ಸಹಾಯವೂ ದೊರೆಯದ ಒಂದು ದಿನ[1] ವನ್ನು ನೀವು ಭಯಪಡಿರಿ.

وَٱتَّقُواْ يَوۡمًا لَّا تَجۡزِي نَفۡسٌ عَن نَّفۡسٖ شَيۡـٔٗا وَلَا يُقۡبَلُ مِنۡهَا شَفَٰعَةٞ وَلَا يُؤۡخَذُ مِنۡهَا عَدۡلٞ وَلَا هُمۡ يُنصَرُونَ ٤٨

49. ನಿಮ್ಮ ಗಂಡುಮಕ್ಕಳನ್ನು ದಾರುಣವಾಗಿ ಸಾಯಿಸುತ್ತಲೂ, ನಿಮ್ಮ ಸ್ತ್ರೀಯರನ್ನು ಜೀವಿಸಲು ಬಿಡುತ್ತಲೂ, ನಿಮಗೆ ಕಠೋರ ಹಿಂಸೆಗಳನ್ನು ನೀಡುತ್ತಿದ್ದ ಫಿರ್‌ಔನ್‌ನ ಜನರಿಂದ ನಾವು ನಿಮ್ಮನ್ನು ಪಾರುಮಾಡಿದ ಸಂದರ್ಭ(ವನ್ನು ಸ್ಮರಿಸಿರಿ). ಅದರಲ್ಲಿ ನಿಮ್ಮ ರಬ್‌ನ ವತಿಯ ಮಹಾ ಪರೀಕ್ಷೆಯೊಂದಿತ್ತು.

وَإِذۡ نَجَّيۡنَٰكُم مِّنۡ ءَالِ فِرۡعَوۡنَ يَسُومُونَكُمۡ سُوٓءَ ٱلۡعَذَابِ يُذَبِّحُونَ أَبۡنَآءَكُمۡ وَيَسۡتَحۡيُونَ نِسَآءَكُمۡۚ وَفِي ذَٰلِكُم بَلَآءٞ مِّن رَّبِّكُمۡ عَظِيمٞ ٤٩

50. ಕಡಲನ್ನು ಸೀಳಿ ನಾವು ನಿಮ್ಮನ್ನು ರಕ್ಷಿಸಿದ ಮತ್ತು ನೀವು ನೋಡುತ್ತಿರುವಂತೆಯೇ ಫಿರ್‌ಔನ್‌ನ ಜನರನ್ನು ಮುಳುಗಿಸಿದ ಸಂದರ್ಭ(ವನ್ನು ಸ್ಮರಿಸಿರಿ).

وَإِذۡ فَرَقۡنَا بِكُمُ ٱلۡبَحۡرَ فَأَنجَيۡنَٰكُمۡ وَأَغۡرَقۡنَآ ءَالَ فِرۡعَوۡنَ وَأَنتُمۡ تَنظُرُونَ ٥٠

51. ನಾವು ಮೂಸಾರಿಗೆ ನಲ್ವತ್ತು ರಾತ್ರಿಗಳನ್ನು ನಿಗದಿ ಪಡಿಸಿದ[2] ಮತ್ತು (ಅದಕ್ಕೋಸ್ಕರ) ಅವರು ಹೊರಟು ಹೋದ ಬಳಿಕ ನೀವು ಅಕ್ರಮವಾಗಿ ಕರುವೊಂದನ್ನು (ಆರಾಧ್ಯಮೂರ್ತಿಯಾಗಿ) ಮಾಡಿಕೊಂಡ ಸಂದರ್ಭ (ವನ್ನು ಸ್ಮರಿಸಿರಿ).

وَإِذۡ وَٰعَدۡنَا مُوسَىٰٓ أَرۡبَعِينَ لَيۡلَةٗ ثُمَّ ٱتَّخَذۡتُمُ ٱلۡعِجۡلَ مِنۢ بَعۡدِهِۦ وَأَنتُمۡ ظَٰلِمُونَ ٥١

52. ತರುವಾಯ ಅದರ ಬಳಿಕವೂ ನಾವು ನಿಮ್ಮನ್ನು ಕ್ಷಮಿಸಿದೆವು. ನೀವು ಕೃತಜ್ಞರಾಗುವ ಸಲುವಾಗಿ.

ثُمَّ عَفَوۡنَا عَنكُم مِّنۢ بَعۡدِ ذَٰلِكَ لَعَلَّكُمۡ تَشۡكُرُونَ ٥٢

---

1 ಅದು ಪರಲೋಕದಲ್ಲಿ ಅಲ್ಲಾಹು ತೀರ್ಪು ವಿಧಿಸುವ ದಿನವಾಗಿದೆ.

2 ನಲ್ವತ್ತು ದಿನಗಳೆಂದರೆ ಗ್ರಂಥವನ್ನು ಪಡೆಯುವ ಸಲುವಾಗಿ ಪ್ರವಾದಿ ಮೂಸಾ (عَلَيۡهِ ٱلسَّلَامُ) ರವರು ಸೀನಾ ಪರ್ವತದಲ್ಲಿ ಪ್ರಾರ್ಥನಾ ನಿರತರಾಗಿ ಕಾದಿರಲು ಆದೇಶಿಸಲಾದ ಕಾಲಾವಧಿಯಾಗಿದೆ. ಸಹೋದರನಾದ ಪ್ರವಾದಿ ಹಾರೂನ್ (عَلَيۡهِ ٱلسَّلَامُ) ರನ್ನು ಮತ್ತು ಇಸ್ರಾಈಲರನ್ನು ಕೆಳಗೆ ಕಣಿವೆಯಲ್ಲಿ ನಿಲ್ಲಿಸಿ ಅವರು ಪರ್ವತದತ್ತ ತೆರಳಿದ್ದರು. ಆದರೆ ಸ್ವರ್ಣ ನಿರ್ಮಿತ, ಧ್ವನಿ ಹೊರಡಿಸುವ ಕರುವಿನ ವಿಗ್ರಹವೊಂದನ್ನು ಕಂಡಾಗ ಹಾರೂನ್ (عَلَيۡهِ ٱلسَّلَامُ) ರವರ ಎಚ್ಚರಿಕೆಯ ಹೊರತಾಗಿಯೂ ಇಸ್ರಾಈಲರು ಮೂಸಾ (عَلَيۡهِ ٱلسَّلَامُ) ರವರು ಕಲಿಸಿದ ತೌಹೀದನ್ನು ಮರೆತು ಅದನ್ನು ಪೂಜಿಸತೊಡಗಿದರು.

53. ನೀವು ಸನ್ಮಾರ್ಗ ಪಡೆಯುವ ಸಲುವಾಗಿ ನಾವು ಗ್ರಂಥವನ್ನು ಮತ್ತು ಸತ್ಯಾಸತ್ಯತೆಯನ್ನು ಭೇರ್ಪಡಿಸುವ ಪ್ರಮಾಣವನ್ನು ಮೂಸಾರಿಗೆ ನೀಡಿದ ಸಂದರ್ಭ(ವನ್ನು ಸ್ಮರಿಸಿರಿ).

وَإِذْ ءَاتَيْنَا مُوسَى ٱلْكِتَٰبَ وَٱلْفُرْقَانَ لَعَلَّكُمْ تَهْتَدُونَ ﴿٥٣﴾

54. 'ಓ ನನ್ನ ಜನರೇ! ಕರುವನ್ನು (ಆರಾಧ್ಯಮೂರ್ತಿ ಯಾಗಿ) ಮಾಡಿಕೊಳ್ಳುವ ಮೂಲಕ ನೀವು ಸ್ವತಃ ನಿಮ್ಮ ಮೇಲೆಯೇ ಅನ್ಯಾಯವೆಸಗಿರುವಿರಿ. ಆದ್ದರಿಂದ ನೀವು ನಿಮ್ಮ ಸೃಷ್ಟಿಕರ್ತನತ್ತ ಪಶ್ಚಾತ್ತಾಪದೊಂದಿಗೆ ಮರಳಿರಿ ಮತ್ತು (ಪ್ರಾಯಶ್ಚಿತ್ತವಾಗಿ) ನಿಮ್ಮನ್ನೇ ನೀವು ವಧಿಸಿರಿ. ನಿಮ್ಮ ಸೃಷ್ಟಿಕರ್ತನ ಬಳಿ ಅದು ನಿಮಗೆ ಉತ್ತಮವಾಗಿದೆ' ಎಂದು ಮೂಸಾ ತನ್ನ ಜನತೆಯೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ತರುವಾಯ ಅಲ್ಲಾಹು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ಅವನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَإِذْ قَالَ مُوسَىٰ لِقَوْمِهِۦ يَٰقَوْمِ إِنَّكُمْ ظَلَمْتُمْ أَنفُسَكُم بِٱتِّخَاذِكُمُ ٱلْعِجْلَ فَتُوبُوٓا۟ إِلَىٰ بَارِئِكُمْ فَٱقْتُلُوٓا۟ أَنفُسَكُمْ ذَٰلِكُمْ خَيْرٌ لَّكُمْ عِندَ بَارِئِكُمْ فَتَابَ عَلَيْكُمْ ۚ إِنَّهُۥ هُوَ ٱلتَّوَّابُ ٱلرَّحِيمُ ﴿٥٤﴾

55. 'ಓ ಮೂಸಾ! ಅಲ್ಲಾಹುವನ್ನು ಪ್ರತ್ಯಕ್ಷವಾಗಿ ಕಾಣುವ ತನಕ ತಮ್ಮಲ್ಲಿ ನಾವು ಎಂದೂ ವಿಶ್ವಾಸವಿಡಲಾರೆವು' ಎಂದು ನೀವು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಆಗ ನೀವು ನೋಡುತ್ತಿರುವಂತೆಯೇ ಅಗ್ನಿಮಿಂಚು ನಿಮ್ಮನ್ನು ಹಿಡಿದುಬಿಟ್ಟಿತು.

وَإِذْ قُلْتُمْ يَٰمُوسَىٰ لَن نُّؤْمِنَ لَكَ حَتَّىٰ نَرَى ٱللَّهَ جَهْرَةً فَأَخَذَتْكُمُ ٱلصَّٰعِقَةُ وَأَنتُمْ تَنظُرُونَ ﴿٥٥﴾

56. ತರುವಾಯ ನಿಮ್ಮ ಮರಣದ ಬಳಿಕ ನಾವು ನಿಮ್ಮನ್ನು ಎಬ್ಬಿಸಿದೆವು. ನೀವು ಕೃತಜ್ಞರಾಗುವ ಸಲುವಾಗಿ.

ثُمَّ بَعَثْنَٰكُم مِّنۢ بَعْدِ مَوْتِكُمْ لَعَلَّكُمْ تَشْكُرُونَ ﴿٥٦﴾

57. ನಾವು ನಿಮಗೆ ಮೋಡದ ನೆರಳನ್ನು ನೀಡಿದೆವು ಮತ್ತು ಮನ್ನ[1] ಹಾಗೂ ಸಲ್ವಾ (ಲಾವಕ್ಕಿ)ವನ್ನು ಇಳಿಸಿಕೊಟ್ಟೆವು. 'ನಾವು

وَظَلَّلْنَا عَلَيْكُمُ ٱلْغَمَامَ وَأَنزَلْنَا عَلَيْكُمُ ٱلْمَنَّ وَٱلسَّلْوَىٰ ۖ كُلُوا۟ مِن

1 ಮನ್ನ ಎಂದರೆ ಜೇನಿನಂತಹ ದಪ್ಪವಾದ ಒಂದು ಸಿಹಿಪದಾರ್ಥವಾಗಿದೆ.

طَيِّبَٰتِ مَا رَزَقۡنَٰكُمۡۚ وَمَا ظَلَمُونَا وَلَٰكِن كَانُوٓاْ أَنفُسَهُمۡ يَظۡلِمُونَ ٥٧

ನಿಮಗೆ ಅನ್ನಾಧಾರವಾಗಿ ಒದಗಿಸಿರುವ ವಿಶಿಷ್ಟ ವಸ್ತುಗಳಿಂದ ತಿನ್ನಿರಿ' (ಎಂದು ನಾವು ಆದೇಶಿಸಿದೆವು). ಅವರು (ಆ ಬಳಿಕವೂ ಕೃತಘ್ನರಾದವರು) ನಮಗೆ ಯಾವುದೇ ಅನ್ಯಾಯವನ್ನು ಮಾಡಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗುತ್ತಿರುವರು.

وَإِذۡ قُلۡنَا ٱدۡخُلُواْ هَٰذِهِ ٱلۡقَرۡيَةَ فَكُلُواْ مِنۡهَا حَيۡثُ شِئۡتُمۡ رَغَدٗا وَٱدۡخُلُواْ ٱلۡبَابَ سُجَّدٗا وَقُولُواْ حِطَّةٞ نَّغۡفِرۡ لَكُمۡ خَطَٰيَٰكُمۡۚ وَسَنَزِيدُ ٱلۡمُحۡسِنِينَ ٥٨

**58.** 'ನೀವು ಈ ಪಟ್ಟಣವನ್ನು ಪ್ರವೇಶಿಸಿರಿ. ಇಲ್ಲಿ ನಿಮಗಿಷ್ಟವಿರುವಲ್ಲಿಂದ ಯಥೇಷ್ಟವಾಗಿ ತಿನ್ನಿರಿ. ತಲೆಬಾಗಿಸಿಕೊಂಡು ದ್ವಾರವನ್ನು ದಾಟಿರಿ ಮತ್ತು ಪಶ್ಚಾತ್ತಾಪ ವಚನವನ್ನು ಹೇಳಿರಿ. ನಾವು ನಿಮ್ಮ ಪಾಪಗಳನ್ನು ಕ್ಷಮಿಸುವೆವು ಮತ್ತು ಸತ್ಕರ್ಮವೆಸಗುವವರಿಗೆ ಹೆಚ್ಚು ಹೆಚ್ಚು ಅನುಗ್ರಹಗಳನ್ನು ನೀಡುವೆವು' ಎಂದು ನಾವು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

فَبَدَّلَ ٱلَّذِينَ ظَلَمُواْ قَوۡلًا غَيۡرَ ٱلَّذِي قِيلَ لَهُمۡ فَأَنزَلۡنَا عَلَى ٱلَّذِينَ ظَلَمُواْ رِجۡزٗا مِّنَ ٱلسَّمَآءِ بِمَا كَانُواْ يَفۡسُقُونَ ٥٩

**59.** ಆದರೆ ಅಕ್ರಮಿಗಳಾದ ಜನರು ತಮಗೆ ಆದೇಶಿಸಲಾಗಿರುವ ಮಾತಿಗೆ ಬದಲಾಗಿ ಬೇರೊಂದು ಮಾತನ್ನು ಬಳಸಿದರು. ಆದುದರಿಂದ ಅವರು ಧಿಕ್ಕಾರ ತೋರುತ್ತಿದ್ದ ಫಲವಾಗಿ ಆ ಅಕ್ರಮಿಗಳ ಮೇಲೆ ನಾವು ಆಕಾಶದಿಂದ ಶಿಕ್ಷೆಯನ್ನು ಇಳಿಸಿದೆವು.

۞وَإِذِ ٱسۡتَسۡقَىٰ مُوسَىٰ لِقَوۡمِهِۦ فَقُلۡنَا ٱضۡرِب بِّعَصَاكَ ٱلۡحَجَرَۖ فَٱنفَجَرَتۡ مِنۡهُ ٱثۡنَتَا عَشۡرَةَ عَيۡنٗاۖ قَدۡ عَلِمَ كُلُّ أُنَاسٖ مَّشۡرَبَهُمۡۖ كُلُواْ وَٱشۡرَبُواْ مِن رِّزۡقِ ٱللَّهِ وَلَا تَعۡثَوۡاْ فِي ٱلۡأَرۡضِ مُفۡسِدِينَ ٦٠

**60.** ಮೂಸಾ ತಮ್ಮ ಜನತೆಗೋಸ್ಕರ ನೀರನ್ನು ಬೇಡಿದ ಸಂದರ್ಭ(ವನ್ನು ಸ್ಮರಿಸಿರಿ). ಆಗ ನಾವು ಹೇಳಿದೆವು: 'ತಮ್ಮ ಬೆತ್ತದಿಂದ ಬಂಡೆಗಲ್ಲಿನ ಮೇಲೆ ಹೊಡೆಯಿರಿ'. ಆಗ ಅದರಿಂದ ಹನ್ನೆರಡು ಚಿಲುಮೆಗಳು ಚಿಮ್ಮಿದವು. ಜನರ ಪೈಕಿ ಪ್ರತಿಯೊಂದು ಗುಂಪಿನವರೂ[1] ತಾವು ನೀರನ್ನು ಪಡೆಯಬೇಕಾದ ಸ್ಥಳಗಳನ್ನು ಅರಿತುಕೊಂಡರು. 'ಅಲ್ಲಾಹು ಒದಗಿಸಿದ ಅನ್ನಾಧಾರದಿಂದ ತಿನ್ನಿರಿ ಮತ್ತು ಕುಡಿಯಿರಿ. ಭೂಮಿಯಲ್ಲಿ ಕ್ಷೋಭೆ ಮಾಡುತ್ತಾ ವಿನಾಶಕಾರಿಗಳಾಗದಿರಿ' (ಎಂದು ನಾವು ಆದೇಶಿಸಿದೆವು).

1 ಇಸ್ರಾಈಲರಲ್ಲಿ ಹನ್ನೆರಡು ಉಪಗೋತ್ರಗಳಿದ್ದವು.

61. 'ಓ ಮೂಸಾ! ಒಂದೇ ಬಗೆಯ ಆಹಾರವನ್ನು ಸಹಿಸಿಕೊಂಡಿರಲು ನಮಗೆ ಸಾಧ್ಯವಿಲ್ಲ. ಆದ್ದರಿಂದ ಮಣ್ಣಿನಲ್ಲಿ ಮೊಳಕೆಯೊಡೆದು ಬೆಳೆಯುವಂತಹ ವಿಧದ ಸೊಪ್ಪು, ಸೌತೆ, ಗೋಧಿ, ಹೆಸರು, ಈರುಳ್ಳಿ ಇತ್ಯಾದಿಗಳನ್ನು ನಮಗೆ ಉತ್ಪಾದಿಸಿಕೊಡಲು ತಾವು ತಮ್ಮ ರಬ್‌ನೊಂದಿಗೆ ಪ್ರಾರ್ಥಿಸಿರಿ' ಎಂದು ನೀವು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಮೂಸಾ ಹೇಳಿದರು: 'ಅತ್ಯುತ್ತಮವಾದುದನ್ನು ತೊರೆದು ತೀರಾ ಕೀಳು ಮಟ್ಟದಲ್ಲಿರುವುದನ್ನು ನೀವು ಬದಲಿಯಾಗಿ ಬೇಡುತ್ತಿರುವಿರಾ?[1] ಹಾಗಾದರೆ ನೀವು ಪಟ್ಟಣವೊಂದರಲ್ಲಿ ಇಳಿದುಕೊಳ್ಳಿರಿ. ನೀವು ಬೇಡುವುದೆಲ್ಲವೂ ಅಲ್ಲಿ ನಿಮಗೆ ಸಿಗುವುದು.' (ಇಂತಹ ಕೆಟ್ಟ ಹಟಮಾರಿತನಗಳಿಂದಾಗಿ) ಅವರ ಮೇಲೆ ಅಪಮಾನ ಮತ್ತು ದಾರಿದ್ರ್ಯವನ್ನು ಹೊದಿಸಲಾಯಿತು ಮತ್ತು ಅವರು ಅಲ್ಲಾಹುವಿನ ಕ್ರೋಧಕ್ಕೆ ಪಾತ್ರರಾದರು. ಇದು ಅವರು ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿರುವ ಮತ್ತು ಪ್ರವಾದಿಗಳನ್ನು ಅನ್ಯಾಯವಾಗಿ ಕೊಲೆಗೈದಿರುವ ಫಲವಾಗಿದೆ. ಇದು ಅವರು ಅವಿಧೇಯತೆ ತೋರಿಸಿರುವ ಮತ್ತು ಅತಿಕ್ರಮವೆಸಗಿರುವ ಫಲವೂ ಆಗಿದೆ.

وَإِذۡ قُلۡتُمۡ يَٰمُوسَىٰ لَن نَّصۡبِرَ عَلَىٰ طَعَامٖ وَٰحِدٖ فَٱدۡعُ لَنَا رَبَّكَ يُخۡرِجۡ لَنَا مِمَّا تُنۢبِتُ ٱلۡأَرۡضُ مِنۢ بَقۡلِهَا وَقِثَّآئِهَا وَفُومِهَا وَعَدَسِهَا وَبَصَلِهَاۖ قَالَ أَتَسۡتَبۡدِلُونَ ٱلَّذِي هُوَ أَدۡنَىٰ بِٱلَّذِي هُوَ خَيۡرٌۚ ٱهۡبِطُواْ مِصۡرٗا فَإِنَّ لَكُم مَّا سَأَلۡتُمۡۗ وَضُرِبَتۡ عَلَيۡهِمُ ٱلذِّلَّةُ وَٱلۡمَسۡكَنَةُ وَبَآءُو بِغَضَبٖ مِّنَ ٱللَّهِۗ ذَٰلِكَ بِأَنَّهُمۡ كَانُواْ يَكۡفُرُونَ بِـَٔايَٰتِ ٱللَّهِ وَيَقۡتُلُونَ ٱلنَّبِيِّـۧنَ بِغَيۡرِ ٱلۡحَقِّۗ ذَٰلِكَ بِمَا عَصَواْ وَّكَانُواْ يَعۡتَدُونَ ٦١

62. (ಪ್ರವಾದಿ ಮುಹಮ್ಮದ್‌ರಲ್ಲಿ) ವಿಶ್ವಾಸವಿಟ್ಟವರು, ಯಹೂದ ಧರ್ಮವನ್ನು ಸ್ವೀಕರಿಸಿದವರು, ಕ್ರೈಸ್ತರು, ಸಾಬಿಈಗಳು,[2] ಇವರಲ್ಲಿ ಯಾರೇ

إِنَّ ٱلَّذِينَ ءَامَنُواْ وَٱلَّذِينَ هَادُواْ وَٱلنَّصَٰرَىٰ وَٱلصَّٰبِـِٔينَ مَنۡ ءَامَنَ بِٱللَّهِ وَٱلۡيَوۡمِ ٱلۡأٓخِرِ

1 ವಾಗ್ದಾನ ಮಾಡಲಾದ ಭೂಮಿಯನ್ನು ಪ್ರವೇಶಿಸುವ ಮುಂಚೆ ಒಂದು ತಾತ್ಕಾಲಿಕ ವಸತಿ ಎಂಬ ನೆಲೆಯಲ್ಲಿ ಸೀನಾ ಕಣಿವೆಯಲ್ಲಿ ವಾಸಿಸುವಂತೆ ಅವರೊಂದಿಗೆ ಆದೇಶಿಸಲಾಗಿತ್ತು. ಅಲ್ಲಿ ಅವರಿಗೆ ಅಲ್ಲಾಹುವಿನ ವರದಾನವಾದ ಮನ್ನ ಮತ್ತು ಸಲ್ವಾಗಳು ಲಭಿಸಿದವು. ಕೃಷಿ ಮಾಡಲು ಅಯೋಗ್ಯವಾಗಿರುವ ಸೀನಾ ಕಣಿವೆಯಲ್ಲಿ ಅವರನ್ನು ವಾಸಿಸುವಂತೆ ಮಾಡಿರುವುದು ಅವರನ್ನು ಪರೀಕ್ಷಿಸುವ ಸಲುವಾಗಿ ಮತ್ತು ಅವರಿಗೆ ತ್ಯಾಗ ಹಾಗೂ ಶಿಸ್ತಿನ ತರಬೇತಿ ನೀಡುವ ಸಲುವಾಗಿತ್ತು. ಕೆಲವು ಮಹತ್ವಪೂರ್ಣ ಗುರಿಗಳನ್ನು ಮುಂದಿಟ್ಟುಕೊಂಡು ಇವೆಲ್ಲವನ್ನು ಮಾಡಿಸಲಾಗಿತ್ತು. ಆದರೆ ಇಸ್ರಾಈಲರಲ್ಲಿ ಹೆಚ್ಚಿನವರೂ ಇತರೆಲ್ಲವುಗಳಿಗಿಂತಲೂ ಹೆಚ್ಚಿನ ಆದ್ಯತೆಯನ್ನು ಸುಖಾಡಂಬರದ ಬದುಕಿಗೆ ನೀಡಿದರು.

2 ಸಾಬಿಈಗಳು ಎಂದರೆ ಪ್ರಾಚೀನ ಅರೇಬಿಯಾದಲ್ಲಿದ್ದ ಒಂದು ಧಾರ್ಮಿಕ ಪಂಗಡವಾಗಿದೆ. ಇವರು ದೇವವಿಶ್ವಾಸಿಗಳಾಗಿದ್ದರೂ ಕೂಡ ಜ್ಯೋತಿಷ್ಯದಲ್ಲಿ ಮತ್ತು ಗ್ರಹಗಳ ಪ್ರಭಾವದಲ್ಲಿ ನಂಬಿಕೆಯುಳ್ಳವರಾಗಿದ್ದರು.

وَعَمِلَ صَٰلِحًا فَلَهُمْ أَجْرُهُمْ عِندَ رَبِّهِمْ
وَلَا خَوْفٌ عَلَيْهِمْ وَلَا هُمْ يَحْزَنُونَ ٦٢

ಆಗಿರಲಿ, ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಟ್ಟವರು ಹಾಗೂ ಸತ್ಕರ್ಮವೆಸಗಿದವರು ಯಾರೋ ಅವರಿಗೆ ಅವರ ರಬ್‌ನ ಬಳಿ ಅರ್ಹ ಪ್ರತಿಫಲವಿರುವುದು. ಅವರು ಭಯಪಡಬೇಕಾಗಿಲ್ಲ; ಅವರು ದುಃಖಿಸಬೇಕಾಗಿಯೂ ಬರದು.

وَإِذْ أَخَذْنَا مِيثَٰقَكُمْ وَرَفَعْنَا فَوْقَكُمُ
ٱلطُّورَ خُذُوا۟ مَآ ءَاتَيْنَٰكُم بِقُوَّةٍ
وَٱذْكُرُوا۟ مَا فِيهِ لَعَلَّكُمْ تَتَّقُونَ ٦٣

**63.** ನಾವು ನಿಮ್ಮಿಂದ ಕರಾರನ್ನು ಪಡೆದುಕೊಂಡ ಮತ್ತು ನಿಮ್ಮ ಮೇಲೆ ಪರ್ವತವನ್ನು ಎತ್ತಿಹಿಡಿದ[1] ಸಂದರ್ಭ(ವನ್ನು ಸ್ಮರಿಸಿರಿ): 'ನಾವು ನಿಮಗೆ ನೀಡಿರುವುದನ್ನು ಗಂಭೀರವಾಗಿ ತೆಗೆದು ಕೊಳ್ಳಿರಿ ಮತ್ತು ಭಯಭಕ್ತಿಪಾಲಿಸುವ ಸಲುವಾಗಿ ಅದರಲ್ಲಿ ಆದೇಶಿಸಲಾಗಿರುವುದನ್ನು ಸ್ಮರಿಸುತ್ತಿರಿ'(ಎಂದು ನಾವು ಆದೇಶಿಸಿದೆವು).

ثُمَّ تَوَلَّيْتُم مِّنۢ بَعْدِ ذَٰلِكَ ۖ فَلَوْلَا فَضْلُ
ٱللَّهِ عَلَيْكُمْ وَرَحْمَتُهُۥ لَكُنتُم مِّنَ
ٱلْخَٰسِرِينَ ٦٤

**64.** ತರುವಾಯ ಅದರ ಬಳಿಕವೂ ನೀವು ವಿಮುಖರಾದಿರಿ. ಅಲ್ಲಾಹುವಿನ ಔದಾರ್ಯ ಮತ್ತು ದಯೆಯು ನಿಮ್ಮ ಮೇಲಿರದಿರುತ್ತಿದ್ದರೆ ಖಂಡಿತವಾಗಿಯೂ ನೀವು ನಷ್ಟ ಹೊಂದಿದವರಲ್ಲಿ ಸೇರಿದವರಾಗುತ್ತಿದ್ದಿರಿ.

وَلَقَدْ عَلِمْتُمُ ٱلَّذِينَ ٱعْتَدَوْا۟ مِنكُمْ
فِى ٱلسَّبْتِ فَقُلْنَا لَهُمْ كُونُوا۟ قِرَدَةً
خَٰسِـِٔينَ ٦٥

**65.** 'ಸಬ್ತ್'[2] ದಿನದಲ್ಲಿ ನಿಮ್ಮ ಪೈಕಿ ಅತಿಕ್ರಮವೆಸಗಿದವರ ಬಗ್ಗೆ ನೀವು ಅರಿತಿರುವಿರಿ. ಆಗ ನಾವು ಅವರೊಂದಿಗೆ 'ನೀವು ನಿಂದ್ಯ ಕಪಿಗಳಾಗಿರಿ' ಎಂದೆವು.

فَجَعَلْنَٰهَا نَكَٰلًا لِّمَا بَيْنَ يَدَيْهَا وَمَا
خَلْفَهَا وَمَوْعِظَةً لِّلْمُتَّقِينَ ٦٦

**66.** ಹೀಗೆ ನಾವದನ್ನು (ಆ ಶಿಕ್ಷೆಯನ್ನು) ಆ ಕಾಲದಲ್ಲಿರುವವರಿಗೂ, ಅದರ ನಂತರದವರಿಗೂ ಒಂದು ನೀತಿಪಾಠವಾಗಿ ಮತ್ತು ಭಯಭಕ್ತಿಯುಳ್ಳವರಿಗೆ ಒಂದು ತತ್ವೋಪದೇಶವಾಗಿ ಮಾಡಿದೆವು.

---

1 ಪರ್ವತವನ್ನು ಅವರ ಮೇಲೆ ಬೀಳಬಹುದಾದ ವಿಧದಲ್ಲಿ ಒಂದು ಕೊಡೆಯಂತೆ ಎತ್ತಿಹಿಡಿದದ್ದಾಗಿ 'ಸೂರಃ ಅಲ್‌ಅಅ್‌ರಾಫ್'ನಲ್ಲಿ ಹೇಳಲಾಗಿದೆ.

2 'ಸಬ್ತ್' ದಿನ (ಶನಿವಾರ)ದಂದು ಎಲ್ಲ ಲೌಕಿಕ ಕಾರ್ಯಕಲಾಪಗಳನ್ನು ವರ್ಜಿಸಿ ಧಾರ್ಮಿಕ ಕಾರ್ಯಗಳಲ್ಲಿ ಮಗ್ನರಾಗಿರಬೇಕೆಂದು ಇಸ್ರಾಈಲರೊಂದಿಗೆ ಆದೇಶಿಸಲಾಗಿತ್ತು. ಆದರೆ ಆ ಆದೇಶವನ್ನು ಇಸ್ರಾಈಲರು ಉಪಾಯದಿಂದ ಉಲ್ಲಂಘಿಸಿದರು. ಆದ್ದರಿಂದ ಅಲ್ಲಾಹು ಅವರನ್ನು ಶಿಕ್ಷಿಸಿದನು.

67. 'ಅಲ್ಲಾಹು ನಿಮ್ಮೊಂದಿಗೆ ಒಂದು ಹಸುವನ್ನು ಕೊಯ್ಯಲು ಆದೇಶಿಸುತ್ತಿರುವನು' ಎಂದು ಮೂಸಾ ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಹೇಳಿದರು: 'ತಾವು ನಮ್ಮನ್ನು ಗೇಲಿ ಮಾಡುತ್ತಿರುವಿರಾ?' ಮೂಸಾ ಹೇಳಿದರು: 'ಅಜ್ಞಾನಿಗಳಲ್ಲಿ ಸೇರಿದವನಾಗುವುದರಿಂದ ನಾನು ಅಲ್ಲಾಹುವಿನೊಂದಿಗೆ ಅಭಯ ಯಾಚಿಸುತ್ತಿರುವೆನು.'

وَإِذۡ قَالَ مُوسَىٰ لِقَوۡمِهِۦٓ إِنَّ ٱللَّهَ يَأۡمُرُكُمۡ أَن تَذۡبَحُواْ بَقَرَةٗۖ قَالُوٓاْ أَتَتَّخِذُنَا هُزُوٗاۖ قَالَ أَعُوذُ بِٱللَّهِ أَنۡ أَكُونَ مِنَ ٱلۡجَٰهِلِينَ ٦٧

68. (ಆಗ) ಅವರು ಹೇಳಿದರು: 'ಅದು (ಹಸು) ಯಾವ ತರಹದ್ದಾಗಿರಬೇಕೆಂದು ನಮಗೆ ವಿವರಿಸಿಕೊಡಲು ತಾವು ತಮ್ಮ ರಬ್‌ನೊಂದಿಗೆ ನಮಗೋಸ್ಕರ ಪ್ರಾರ್ಥಿಸಿರಿ.' ಮೂಸಾ ಹೇಳಿದರು: 'ಅದು ಹೆಚ್ಚು ಪ್ರಾಯವಾಗಿರುವುದಾಗಲಿ, ತೀರಾ ಎಳೆಯದಾಗಲಿ ಅಲ್ಲದ ಮಧ್ಯ ವಯಸ್ಸಿನ ಒಂದು ಹಸುವಾಗಿರಬೇಕೆಂದು ಅವನು (ಅಲ್ಲಾಹು) ಹೇಳುತ್ತಿರುವನು. ಆದ್ದರಿಂದ ಆದೇಶಿಸಲಾಗುವ ಪ್ರಕಾರ ನೀವು ಕಾರ್ಯನಿರ್ವಹಿಸಿರಿ'.

قَالُواْ ٱدۡعُ لَنَا رَبَّكَ يُبَيِّن لَّنَا مَا هِيَۚ قَالَ إِنَّهُۥ يَقُولُ إِنَّهَا بَقَرَةٞ لَّا فَارِضٞ وَلَا بِكۡرٌ عَوَانُۢ بَيۡنَ ذَٰلِكَۖ فَٱفۡعَلُواْ مَا تُؤۡمَرُونَ ٦٨

69. ಅವರು ಹೇಳಿದರು: 'ಅದು ಯಾವ ಬಣ್ಣದ್ದಾಗಿರಬೇಕೆಂದು ನಮಗೆ ವಿವರಿಸಿಕೊಡಲು ತಾವು ತಮ್ಮ ರಬ್‌ನೊಂದಿಗೆ ನಮಗೋಸ್ಕರ ಪ್ರಾರ್ಥಿಸಿರಿ.' ಮೂಸಾ ಹೇಳಿದರು: 'ಅದು ನೋಡುಗರಿಗೆ ಸಂತೋಷವನ್ನು ನೀಡುವ ಶುಭ್ರ ಹಳದಿ ಬಣ್ಣದ ಒಂದು ಹಸುವಾಗಿರಬೇಕೆಂದು ಅಲ್ಲಾಹು ಹೇಳುತ್ತಿರುವನು'.

قَالُواْ ٱدۡعُ لَنَا رَبَّكَ يُبَيِّن لَّنَا مَا لَوۡنُهَاۚ قَالَ إِنَّهُۥ يَقُولُ إِنَّهَا بَقَرَةٞ صَفۡرَآءُ فَاقِعٞ لَّوۡنُهَا تَسُرُّ ٱلنَّٰظِرِينَ ٦٩

70. ಅವರು ಹೇಳಿದರು: 'ಅದು ಯಾವ ತರಹದ್ದಾಗಿರ ಬೇಕೆಂದು ನಮಗೆ ಸ್ಪಷ್ಟ ಮಾಡಿಕೊಡಲು ತಾವು ತಮ್ಮ ರಬ್‌ನೊಂದಿಗೆ ನಮಗೋಸ್ಕರ ಪ್ರಾರ್ಥಿಸಿರಿ. ಖಂಡಿತ

قَالُواْ ٱدۡعُ لَنَا رَبَّكَ يُبَيِّن لَّنَا مَا هِيَ إِنَّ ٱلۡبَقَرَ تَشَٰبَهَ عَلَيۡنَا وَإِنَّآ إِن شَآءَ ٱللَّهُ لَمُهۡتَدُونَ ٧٠

ವಾಗಿಯೂ ಹಸುಗಳು ಪರಸ್ಪರ ಹೋಲಿಕೆಯುಳ್ಳದ್ದಾಗಿ ನಮಗೆ ಭಾಸವಾಗುತ್ತಿದೆ. ಅಲ್ಲಾಹು ಇಚ್ಛಿಸಿದರೆ ಖಂಡಿತವಾಗಿಯೂ ನಾವು ಅವನ ಮಾರ್ಗದರ್ಶನದಂತೆ ಕಾರ್ಯನಿರ್ವಹಿಸುವೆವು'.

71. (ಆಗ) ಮೂಸಾ ಹೇಳಿದರು: 'ಅದು ನೆಲವನ್ನು ಉಳುವುದಕ್ಕಾಗಲಿ, ಕೃಷಿಯ ನೀರಾವರಿಗಾಗಲಿ ಬಳಸಲಾಗುವಂತದ್ದಲ್ಲದ, ಕಲೆಗಳೇನೂ ಇಲ್ಲದ, ಅಂಗವೈಕಲ್ಯವಿಲ್ಲದ ಒಂದು ಹಸುವಾಗಿರಬೇಕೆಂದು ಅಲ್ಲಾಹು ಹೇಳುತ್ತಿರುವನು'. ಅವರು ಹೇಳಿದರು: 'ಇದೀಗ ತಾವು ಸರಿಯಾದ ಮಾಹಿತಿಯನ್ನು ಒದಗಿಸಿರುವಿರಿ.' ತರುವಾಯ ಅವರು ಅದನ್ನು ಕೊಯ್ದರು. ಅದನ್ನು ನಿರ್ವಹಿಸುವುದು ಅವರಿಗೆ ಅಷ್ಟು ಸುಲಭವಾಗಿರಲಿಲ್ಲ.

قَالَ إِنَّهُۥ يَقُولُ إِنَّهَا بَقَرَةٌ لَّا ذَلُولٌ تُثِيرُ ٱلْأَرْضَ وَلَا تَسْقِى ٱلْحَرْثَ مُسَلَّمَةٌ لَّا شِيَةَ فِيهَا ۚ قَالُوا۟ ٱلْـَٔـٰنَ جِئْتَ بِٱلْحَقِّ ۚ فَذَبَحُوهَا وَمَا كَادُوا۟ يَفْعَلُونَ ﴿٧١﴾

72. (ಓ ಇಸ್ರಾಈಲ್ ಸಂತತಿಗಳೇ!), ನೀವೊಬ್ಬ ವ್ಯಕ್ತಿಯನ್ನು ಕೊಲೆಗೈದು ತರುವಾಯ ಪರಸ್ಪರ ಆರೋಪ ಹೊರಿಸುತ್ತಾ ನುಣುಚಿಕೊಂಡ ಸಂದರ್ಭ(ವನ್ನು ಸ್ಮರಿಸಿರಿ). ಆದರೆ ನೀವು ಮರೆಮಾಚುವುದನ್ನು ಖಂಡಿತವಾಗಿಯೂ ಅಲ್ಲಾಹು ಬಹಿರಂಗಪಡಿಸುವವನಾಗಿರುವನು.

وَإِذْ قَتَلْتُمْ نَفْسًا فَٱدَّٰرَْٰٔتُمْ فِيهَا ۖ وَٱللَّهُ مُخْرِجٌ مَّا كُنتُمْ تَكْتُمُونَ ﴿٧٢﴾

73. ಆಗ ನಾವು ಹೇಳಿದೆವು: 'ನೀವು ಅದರ (ಹಸುವಿನ) ಒಂದು ಭಾಗದಿಂದ ಆ ಮೃತದೇಹಕ್ಕೆ ಹೊಡೆಯಿರಿ.'[1] ಹೀಗೆ ಅಲ್ಲಾಹು ಮರಣಹೊಂದಿದವರಿಗೆ ಜೀವವನ್ನು ನೀಡುವನು. ನೀವು ಚಿಂತಿಸುವ ಸಲುವಾಗಿ ಅವನು ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸಿಕೊಡುತ್ತಿರುವನು.

فَقُلْنَا ٱضْرِبُوهُ بِبَعْضِهَا ۚ كَذَٰلِكَ يُحْىِ ٱللَّهُ ٱلْمَوْتَىٰ وَيُرِيكُمْ ءَايَـٰتِهِۦ لَعَلَّكُمْ تَعْقِلُونَ ﴿٧٣﴾

1 ಹೀಗೆ ಆ ಕೊಲೆಗೈಯಲಾದ ವ್ಯಕ್ತಿಯ ಮೃತದೇಹಕ್ಕೆ ಹಸುವಿನ ದೇಹದ ಒಂದು ಭಾಗದಿಂದ ಬಡಿದಾಗ ಅಲ್ಲಾಹು ಆ ವ್ಯಕ್ತಿಯನ್ನು ಪುನರ್ಜೀವಗೊಳಿಸಿದನು. ಅಲ್ಲಾಹು ಇದನ್ನು ಅವರಿಗೆ ಒಂದು ದೃಷ್ಟಾಂತವಾಗಿ ತೋರಿಸಿಕೊಟ್ಟಿದ್ದನು. ಅಲ್ಲಾಹುವಿನಿಂದ ಏನನ್ನೂ ಬಚ್ಚಿಡಲು ಸಾಧ್ಯವಿಲ್ಲ ಮತ್ತು ಪುನರುತ್ಥಾನ ಹಾಗೂ ಪಾರಲೌಕಿಕ ಬದುಕು ನಿಷೇಧಿಸಲಾಗದ ಸತ್ಯವಾಗಿದೆ ಎಂದು ಅವರಿಗೆ ಮನದಟ್ಟು ಮಾಡಿಸುವ ಸಲುವಾಗಿ ಅಲ್ಲಾಹು ಹೀಗೆ ಮಾಡಿದ್ದನು.

**74.** ತರುವಾಯ ಅದರ ಬಳಿಕವೂ ನಿಮ್ಮ ಹೃದಯಗಳು ಕಠೋರವಾದವು. ಅವುಗಳು ಬಂಡೆಯಂತೆ ಅಥವಾ ಅದಕ್ಕಿಂತಲೂ ಹೆಚ್ಚು ಕಠೋರವಾದವು. ಬಂಡೆಗಳ ಪೈಕಿ ಕೆಲವೊಂದರಿಂದ ನದಿಗಳು ಚಿಮ್ಮಿ ಹರಿಯುವುದಿದೆ. ಕೆಲವು ಹೋಳಾಗಿ ನೀರು ಹೊರಬರುವುದಿದೆ. ಕೆಲವು ಅಲ್ಲಾಹುವಿನ ಭಯದಿಂದ ಕೆಳಗುರುಳಿ ಬೀಳುವುದಿದೆ. ನೀವು ಮಾಡುತ್ತಿರುವುದರ ಬಗ್ಗೆ ಅಲ್ಲಾಹು ಕಿಂಚಿತ್ತೂ ಅಲಕ್ಷ್ಯನಲ್ಲ.[1]

ثُمَّ قَسَتۡ قُلُوبُكُم مِّنۢ بَعۡدِ ذَٰلِكَ فَهِيَ كَٱلۡحِجَارَةِ أَوۡ أَشَدُّ قَسۡوَةٗۚ وَإِنَّ مِنَ ٱلۡحِجَارَةِ لَمَا يَتَفَجَّرُ مِنۡهُ ٱلۡأَنۡهَٰرُۚ وَإِنَّ مِنۡهَا لَمَا يَشَّقَّقُ فَيَخۡرُجُ مِنۡهُ ٱلۡمَآءُۚ وَإِنَّ مِنۡهَا لَمَا يَهۡبِطُ مِنۡ خَشۡيَةِ ٱللَّهِۗ وَمَا ٱللَّهُ بِغَٰفِلٍ عَمَّا تَعۡمَلُونَ ٧٤

**75.** (ಓ ಸತ್ಯವಿಶ್ವಾಸಿಗಳೇ!), ಅವರು (ಯಹೂದರು) ನಿಮ್ಮನ್ನು ನಂಬುವರೆಂದು ನೀವು ಆಶಿಸುತ್ತಿರುವಿರಾ? ಅವರ ಪೈಕಿ ಒಂದು ಗುಂಪು ಅಲ್ಲಾಹುವಿನ ವಚನಗಳನ್ನು ಆಲಿಸಿ, ಸರಿಯಾಗಿ ಮನದಟ್ಟು ಮಾಡಿಕೊಂಡ ನಂತರವೂ ಅದನ್ನು (ವಚನವನ್ನು) ಮನಃಪೂರ್ವಕವಾಗಿ ಸ್ಥಾನಾಂತರ ಮಾಡುತ್ತಿರುವರು.

۞أَفَتَطۡمَعُونَ أَن يُؤۡمِنُواْ لَكُمۡ وَقَدۡ كَانَ فَرِيقٞ مِّنۡهُمۡ يَسۡمَعُونَ كَلَٰمَ ٱللَّهِ ثُمَّ يُحَرِّفُونَهُۥ مِنۢ بَعۡدِ مَا عَقَلُوهُ وَهُمۡ يَعۡلَمُونَ ٧٥

**76.** ವಿಶ್ವಾಸವಿಟ್ಟವರನ್ನು ಭೇಟಿಯಾಗುವಾಗ ಅವರು 'ನಾವು ವಿಶ್ವಾಸವಿಟ್ಟಿರುವೆವು' ಎನ್ನುವರು. ಆದರೆ ತಮ್ಮವರನ್ನು ಏಕಾಂತದಲ್ಲಿ ಸಂಧಿಸುವಾಗ ಅವರು (ಪರಸ್ಪರ ಆರೋಪ ಹೊರಿಸುತ್ತಾ) ಹೇಳುವರು: 'ಅಲ್ಲಾಹು ನಿಮಗೆ ಬಹಿರಂಗಪಡಿಸಿದ ವಿಷಯಗಳನ್ನು, ಅವರದನ್ನು ನಿಮ್ಮ ರಬ್‌ನ ಸನ್ನಿಧಿಯಲ್ಲಿ ನಿಮ್ಮ ವಿರುದ್ಧ ಆಧಾರವಾಗಿಸುವ ಸಲುವಾಗಿ[2]

وَإِذَا لَقُواْ ٱلَّذِينَ ءَامَنُواْ قَالُوٓاْ ءَامَنَّا وَإِذَا خَلَا بَعۡضُهُمۡ إِلَىٰ بَعۡضٖ قَالُوٓاْ أَتُحَدِّثُونَهُم بِمَا فَتَحَ ٱللَّهُ عَلَيۡكُمۡ لِيُحَآجُّوكُم بِهِۦ عِندَ رَبِّكُمۡۚ أَفَلَا تَعۡقِلُونَ ٧٦

1 ಕೆಲವೊಮ್ಮೆ ಬಂಡೆಗಲ್ಲುಗಳಿಂದಲೂ ಮನುಷ್ಯರು ಮತ್ತು ಇತರ ಜೀವರಾಶಿಗಳಿಗೆ ಪ್ರಯೋಜನವುಂಟಾಗಬಹುದು. ಆದರೆ ಕಠೋರವಾದ ಹೃದಯಗಳನ್ನು ಹೊಂದಿರುವವರಿಂದ ಜನರಿಗೆ ಪ್ರಯೋಜನಕರವಾದ ಏನನ್ನೂ ನಿರೀಕ್ಷಿಸಲಾಗದು.

2 ಜನರು ಸತ್ಯವನ್ನು ಅರಿತುಕೊಂಡರೆ ತಮ್ಮ ಗುಟ್ಟು ಬಹಿರಂಗವಾದೀತು ಎಂಬ ಭಯವು ಗ್ರಂಥಗಳನ್ನು ದುರ್ವ್ಯಾಖ್ಯಾನ ಮಾಡುವವರೆಲ್ಲರಿಗೂ ಇರುವ ಅತಿದೊಡ್ಡ ಸಮಸ್ಯೆಯಾಗಿದೆ. ಕುರ್‌ಆನ್‌ನ ಅರ್ಥವನ್ನು ಭಾಷಾಂತರ ಮಾಡುವುದನ್ನು ವಿರೋಧಿಸುವವರು ಯಾವ ನಿಲುವನ್ನು ತಳೆದಿದ್ದರೋ ಅದೇ ನಿಲುವನ್ನು ಯಹೂದರು ಸಹ ತಳೆದಿದ್ದರು. ಗ್ರಂಥದ ಹುರುಳನ್ನು ಇತರರಿಗೆ ಬಹಿರಂಗಪಡಿಸಿದರೆ ವಿರೋಧಿಗಳ ತರ್ಕಗಳ ಮುಂದೆ ತಾವು ನಿರುತ್ತರರಾಗುವೆವು ಎಂಬುದು ಅವರ ಚಿಂತೆಯಾಗಿತ್ತು.

ನೀವು ಅವರಿಗೆ ತಿಳಿಸಿಕೊಡುತ್ತಿರುವಿರಾ? ನೀವು ಚಿಂತಿಸುವುದಿಲ್ಲವೇ?'

77. ಆದರೆ ಅವರು ರಹಸ್ಯವಾಗಿಡುವುದನ್ನು ಮತ್ತು ಬಹಿರಂಗ ಪಡಿಸುವುದನ್ನು ಅಲ್ಲಾಹು ಅರಿಯುತ್ತಿರುವನೆಂಬುದು ಅವರಿಗೆ ತಿಳಿಯದೇ?

أَوَ لَا يَعۡلَمُونَ أَنَّ ٱللَّهَ يَعۡلَمُ مَا يُسِرُّونَ
وَمَا يُعۡلِنُونَ ٧٧

78. ಅವರಲ್ಲಿ (ಇಸ್ರಾಈಲರಲ್ಲಿ) ಕೆಲವು ಅನಕ್ಷರಸ್ಥರಿರುವರು. ಕೆಲವು ವ್ಯರ್ಥ ನಿರೀಕ್ಷೆಗಳ ವಿನಾ ಗ್ರಂಥದ ಬಗ್ಗೆ ಅವರಿಗೇನೂ ಅರಿವಿಲ್ಲ. ಅವರು ಊಹೆಯನ್ನು ಮಾತ್ರ ಅವಲಂಬಿಸುತ್ತಿರುವರು.

وَمِنۡهُمۡ أُمِّيُّونَ لَا يَعۡلَمُونَ ٱلۡكِتَٰبَ إِلَّآ
أَمَانِيَّ وَإِنۡ هُمۡ إِلَّا يَظُنُّونَ ٧٨

79. ತಮ್ಮ ಸ್ವಹಸ್ತಗಳಿಂದ ಗ್ರಂಥವನ್ನು ಬರೆದು, ತರುವಾಯ 'ಇದು ಅಲ್ಲಾಹುವಿನಿಂದಾಗಿದೆ ಎಂದು ಹೇಳುವವರಿಗೆ ವಿನಾಶವಿದೆ. ತನ್ಮೂಲಕ ತುಚ್ಛವಾದ ಸಂಪಾದನೆಯನ್ನು ಪಡೆಯುವ ಸಲುವಾಗಿ (ಅವರದನ್ನು ಮಾಡುತ್ತಿರುವರು). ಅವರ ಕೈಗಳು ಬರೆದ ಕಾರಣದಿಂದಲೂ (ತನ್ಮೂಲಕ) ಅವರು ಸಂಪಾದಿಸಿದ ಕಾರಣದಿಂದಲೂ ಅವರಿಗೆ ವಿನಾಶವಿದೆ.

فَوَيۡلٞ لِّلَّذِينَ يَكۡتُبُونَ ٱلۡكِتَٰبَ بِأَيۡدِيهِمۡ
ثُمَّ يَقُولُونَ هَٰذَا مِنۡ عِندِ ٱللَّهِ لِيَشۡتَرُواْ
بِهِۦ ثَمَنٗا قَلِيلٗاۖ فَوَيۡلٞ لَّهُم مِّمَّا كَتَبَتۡ
أَيۡدِيهِمۡ وَوَيۡلٞ لَّهُم مِّمَّا يَكۡسِبُونَ ٧٩

80. ಅವರು (ಯಹೂದರು) ಹೇಳಿದರು: 'ಎಣಿಸಲಾದ ದಿನಗಳಲ್ಲಿ ಹೊರತು ನರಕಾಗ್ನಿಯು ನಮ್ಮನ್ನು ಎಂದಿಗೂ ಸ್ಪರ್ಶಿಸಲಾರದು'. (ಓ ಪ್ರವಾದಿಯವರೇ!) ಕೇಳಿರಿ: 'ನೀವು ಅಲ್ಲಾಹುವಿನಿಂದ ಯಾವುದಾದರೂ ಕರಾರನ್ನು ಪಡೆದಿರುವಿರಾ? ಹಾಗಿದ್ದರೆ ಖಂಡಿತವಾಗಿಯೂ ಅಲ್ಲಾಹು ತನ್ನ ಕರಾರನ್ನು ಉಲ್ಲಂಘಿಸಲಾರನು; ಅಥವಾ ನಿಮಗೆ ಅರಿವಿಲ್ಲದ ವಿಷಯವನ್ನು ನೀವು ಅಲ್ಲಾಹುವಿನ ಬಗ್ಗೆ ಹೇಳುತ್ತಿರುವಿರಾ?'

وَقَالُواْ لَن تَمَسَّنَا ٱلنَّارُ إِلَّآ أَيَّامٗا مَّعۡدُودَةٗۚ
قُلۡ أَتَّخَذۡتُمۡ عِندَ ٱللَّهِ عَهۡدٗا فَلَن
يُخۡلِفَ ٱللَّهُ عَهۡدَهُۥٓۖ أَمۡ تَقُولُونَ عَلَى ٱللَّهِ
مَا لَا تَعۡلَمُونَ ٨٠

81. ಹೌದು! ಯಾರು ದುಷ್ಕೃತ್ಯವೆಸಗುವನೋ ಮತ್ತು ಅವನ ಪಾಪವು ಅವನನ್ನು ಆವರಿಸಿಕೊಳ್ಳುವುದೋ ಅವರು ನರಕವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

بَلَىٰۚ مَن كَسَبَ سَيِّئَةٗ وَأَحَٰطَتۡ بِهِۦ
خَطِيٓـَٔتُهُۥ فَأُوْلَٰٓئِكَ أَصۡحَٰبُ ٱلنَّارِۖ هُمۡ
فِيهَا خَٰلِدُونَ ٨١

**82.** ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರು ಸ್ವರ್ಗವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

وَٱلَّذِينَ ءَامَنُواْ وَعَمِلُواْ ٱلصَّـٰلِحَـٰتِ أُوْلَـٰٓئِكَ أَصْحَـٰبُ ٱلْجَنَّةِ ۖ هُمْ فِيهَا خَـٰلِدُونَ ﴿٨٢﴾

**83.** 'ಅಲ್ಲಾಹುವಿನ ಹೊರತು ಯಾರನ್ನೂ ಆರಾಧಿಸದಿರಿ; ಮಾತಾಪಿತರಿಗೆ, ನಿಕಟ ಸಂಬಂಧಿಕರಿಗೆ, ಅನಾಥರಿಗೆ ಮತ್ತು ನಿರ್ಗತಿಕರಿಗೆ ಒಳಿತನ್ನು ಮಾಡಿರಿ; ಜನರೊಂದಿಗೆ ಒಳ್ಳೆಯ ಮಾತನ್ನು ಆಡಿರಿ; ನಮಾಝ್ ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ' ಎಂದು ನಾವು ಇಸ್ರಾಈಲ್ ಸಂತತಿಗಳಿಂದ ಕರಾರನ್ನು ಪಡೆದ ಸಂದರ್ಭ(ವನ್ನು ಸ್ಮರಿಸಿರಿ). (ಆದರೆ ಓ ಇಸ್ರಾಈಲ್ ಸಂತತಿಗಳೇ!) ತರುವಾಯ ನಿಮ್ಮ ಪೈಕಿ ಕೆಲವೇ ಜನರ ಹೊರತು ಉಳಿದವರೆಲ್ಲರೂ ವಿಮುಖರಾಗುತ್ತಾ ಹಿಂದಿರುಗಿ ಹೋದಿರಿ.

وَإِذْ أَخَذْنَا مِيثَـٰقَ بَنِىٓ إِسْرَٰٓءِيلَ لَا تَعْبُدُونَ إِلَّا ٱللَّهَ وَبِٱلْوَٰلِدَيْنِ إِحْسَانًا وَذِى ٱلْقُرْبَىٰ وَٱلْيَتَـٰمَىٰ وَٱلْمَسَـٰكِينِ وَقُولُواْ لِلنَّاسِ حُسْنًا وَأَقِيمُواْ ٱلصَّلَوٰةَ وَءَاتُواْ ٱلزَّكَوٰةَ ثُمَّ تَوَلَّيْتُمْ إِلَّا قَلِيلًا مِّنكُمْ وَأَنتُم مُّعْرِضُونَ ﴿٨٣﴾

**84.** 'ನೀವು ಪರಸ್ಪರ ರಕ್ತವನ್ನು ಹರಿಸಬಾರದು ಮತ್ತು ನಿಮ್ಮವರನ್ನು ಒಕ್ಕಲೆಬ್ಬಿಸಬಾರದು' ಎಂದು ನಾವು ನಿಮ್ಮಿಂದ ಖಾತ್ರಿಯನ್ನು ಪಡೆದ ಸಂದರ್ಭ(ವನ್ನು ಸ್ಮರಿಸಿರಿ). ತರುವಾಯ ನೀವು ಅದನ್ನು ಒಪ್ಪಿಕೊಂಡಿರಿ. ನೀವು ಅದಕ್ಕೆ ಸಾಕ್ಷಿಗಳೂ ಆಗಿದ್ದಿರಿ.

وَإِذْ أَخَذْنَا مِيثَـٰقَكُمْ لَا تَسْفِكُونَ دِمَآءَكُمْ وَلَا تُخْرِجُونَ أَنفُسَكُم مِّن دِيَـٰرِكُمْ ثُمَّ أَقْرَرْتُمْ وَأَنتُمْ تَشْهَدُونَ ﴿٨٤﴾

**85.** ಆ ಬಳಿಕವೂ ನೀವು ನಿಮ್ಮವರನ್ನೇ ವಧಿಸು ತ್ತಿರುವಿರಿ, ನಿಮ್ಮಲ್ಲೊಂದು ಗುಂಪನ್ನು ಅವರ ಮನೆಗಳಿಂದ ಹೊರಗಟ್ಟುತ್ತಿರುವಿರಿ. ಅತ್ಯಂತ ಪಾಪಕರವಾಗಿಯೂ ಅತಿಕ್ರಮವಾಗಿಯೂ ನೀವು ಅವರಿಗೆ ವಿರುದ್ಧವಾಗಿ ಪರಸ್ಪರ ನೆರವಾಗುತ್ತಿರುವಿರಿ. ಅವರು ನಿಮ್ಮ ಬಳಿಗೆ ಯುದ್ಧಕೈದಿಗಳಾಗಿ ಬಂದರೆ ಪರಿಹಾರ ಧನವನ್ನು ನೀಡಿ ಅವರನ್ನು ಸ್ವತಂತ್ರಗೊಳಿಸುತ್ತಿರುವಿರಿ. ವಾಸ್ತವಿಕವಾಗಿ ಅವರನ್ನು ಹೊರಗಟ್ಟುವುದು ನಿಮ್ಮ ಮೇಲೆ

ثُمَّ أَنتُمْ هَـٰٓؤُلَآءِ تَقْتُلُونَ أَنفُسَكُمْ وَتُخْرِجُونَ فَرِيقًا مِّنكُم مِّن دِيَـٰرِهِمْ تَظَـٰهَرُونَ عَلَيْهِم بِٱلْإِثْمِ وَٱلْعُدْوَٰنِ وَإِن يَأْتُوكُمْ أُسَـٰرَىٰ تُفَـٰدُوهُمْ وَهُوَ مُحَرَّمٌ عَلَيْكُمْ إِخْرَاجُهُمْ ۚ أَفَتُؤْمِنُونَ بِبَعْضِ ٱلْكِتَـٰبِ وَتَكْفُرُونَ بِبَعْضٍ ۚ فَمَا جَزَآءُ مَن يَفْعَلُ ذَٰلِكَ مِنكُمْ إِلَّا خِزْىٌ فِى ٱلْحَيَوٰةِ ٱلدُّنْيَا ۖ وَيَوْمَ ٱلْقِيَـٰمَةِ يُرَدُّونَ

إِلَىٰٓ أَشَدِّ ٱلۡعَذَابِۗ وَمَا ٱللَّهُ بِغَٰفِلٍ عَمَّا
تَعۡمَلُونَ ٨٥

ನಿಷಿದ್ಧವಾಗಿತ್ತು. ನೀವು ಗ್ರಂಥದ ಕೆಲವು ಭಾಗಗಳಲ್ಲಿ ವಿಶ್ವಾಸವಿಟ್ಟು ಇತರ ಕೆಲವನ್ನು ತಿರಸ್ಕರಿಸುವುದೇ? ನಿಮ್ಮ ಪೈಕಿ ಹೀಗೆ ಮಾಡುವವರಿಗೆ ಐಹಿಕ ಜೀವನದಲ್ಲಿ ಅಪಮಾನವಲ್ಲದೆ ಬೇರೇನೂ ಸಿಗಲಾರದು. ಪುನರುತ್ಥಾನ ದಿನದಂದು ಅವರನ್ನು ಅತಿಕಠೋರವಾದ ಶಿಕ್ಷೆಯೆಡೆಗೆ ತಳ್ಳಲಾಗುವುದು. ನೀವು ಮಾಡುತ್ತಿರುವುದರ ಬಗ್ಗೆ ಅಲ್ಲಾಹು ಕಿಂಚಿತ್ತೂ ಅಲಕ್ಷ್ಯನಲ್ಲ.

أُوْلَٰٓئِكَ ٱلَّذِينَ ٱشۡتَرَوُاْ ٱلۡحَيَوٰةَ ٱلدُّنۡيَا
بِٱلۡأٓخِرَةِۖ فَلَا يُخَفَّفُ عَنۡهُمُ ٱلۡعَذَابُ وَلَا
هُمۡ يُنصَرُونَ ٨٦

**86.** ಅವರು ಪರಲೋಕವನ್ನು ಮಾರಿ ಐಹಿಕ ಜೀವನವನ್ನು ಖರೀದಿಸಿದವರಾಗಿರುವರು. ಅವರಿಗೆ ಶಿಕ್ಷೆಯನ್ನು ಹಗುರಗೊಳಿಸಲಾಗದು ಮತ್ತು ಅವರಿಗೆ ಯಾವುದೇ ಸಹಾಯವೂ ದೊರೆಯಲಾರದು.

وَلَقَدۡ ءَاتَيۡنَا مُوسَى ٱلۡكِتَٰبَ وَقَفَّيۡنَا مِنۢ
بَعۡدِهِۦ بِٱلرُّسُلِۖ وَءَاتَيۡنَا عِيسَى ٱبۡنَ مَرۡيَمَ
ٱلۡبَيِّنَٰتِ وَأَيَّدۡنَٰهُ بِرُوحِ ٱلۡقُدُسِۗ أَفَكُلَّمَا
جَآءَكُمۡ رَسُولُۢ بِمَا لَا تَهۡوَىٰٓ أَنفُسُكُمُ
ٱسۡتَكۡبَرۡتُمۡ فَفَرِيقٗا كَذَّبۡتُمۡ وَفَرِيقٗا
تَقۡتُلُونَ ٨٧

**87.** ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು. ಅವರ ಬಳಿಕ ನಾವು ನಿರಂತರವಾಗಿ ಸಂದೇಶವಾಹಕರನ್ನು ಕಳುಹಿಸಿದೆವು. ಮರ್ಯಮ್‌ರ ಮಗನಾದ ಈಸಾರಿಗೆ ನಾವು ಸ್ಪಷ್ಟವಾದ ದೃಷ್ಟಾಂತಗಳನ್ನು ನೀಡಿದೆವು ಮತ್ತು ಅವರಿಗೆ ನಾವು ಪವಿತ್ರಾತ್ಮನ[1] ಬೆಂಬಲವನ್ನೂ ನೀಡಿದೆವು. ತರುವಾಯ ನಿಮ್ಮ ಮನಸ್ಸಿಗೆ ಅಪ್ರಿಯವಾದ ವಿಷಯಗಳೊಂದಿಗೆ ಯಾವುದೇ ಸಂದೇಶವಾಹಕರು ನಿಮ್ಮ ಬಳಿಗೆ ಬರುವಾಗಲೆಲ್ಲ ನೀವು ಅಹಂಕಾರ ಪಡುವುದು, ಕೆಲವು ಸಂದೇಶವಾಹಕರನ್ನು ತಿರಸ್ಕರಿಸುವುದು ಮತ್ತು ಕೆಲವರನ್ನು ಕೊಲ್ಲುವುದನ್ನು ಮಾಡುವುದೇ?

وَقَالُواْ قُلُوبُنَا غُلۡفُۢۚ بَل لَّعَنَهُمُ ٱللَّهُ
بِكُفۡرِهِمۡ فَقَلِيلٗا مَّا يُؤۡمِنُونَ ٨٨

**88.** ಅವರು ಹೇಳಿದರು: 'ನಮ್ಮ ಹೃದಯಗಳು ಮುಚ್ಚಲ್ಪಟ್ಟಿವೆ'. ಅಲ್ಲ; ಅವರ ನಿಷೇಧದಿಂದಾಗಿ ಅಲ್ಲಾಹು ಅವರನ್ನು ಶಪಿಸಿರುವನು. ಆದ್ದರಿಂದ ಅವರು ಅತ್ಯಲ್ಪವೇ ವಿಶ್ವಾಸವಿಡುವರು.

---

1 'ಪವಿತ್ರಾತ್ಮ' ಎಂಬ ಪದದ ತಾತ್ಪರ್ಯ ಪ್ರವಾದಿ (عَلَيۡهِمُ ٱلسَّلَامُ) ಗಳಿಗೆ ಅಲ್ಲಾಹನ ಸಂದೇಶವನ್ನು ತಲುಪಿಸಿಕೊಡುವ ಜಿಬ್ರೀಲ್ (عَلَيۡهِ ٱلسَّلَامُ) ಎಂಬ ಮಲಕ್ ಆಗಿರುವರೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು.

89. ಅವರ ವಶದಲ್ಲಿರುವ ಗ್ರಂಥವನ್ನು ದೃಢೀಕರಿಸುವ ಒಂದು ಗ್ರಂಥವು (ಕುರ್‌ಆನ್) ಅಲ್ಲಾಹುವಿನ ವತಿಯಿಂದ ಅವರ ಬಳಿ ಬಂದಾಗ (ಅವರದನ್ನು ತಿರಸ್ಕರಿಸಿದರು). ಮುಂಚೆ ಅವರು (ಅಂತಹ ಒಂದು ಗ್ರಂಥದೊಂದಿಗೆ ಬರುವ ಪ್ರವಾದಿಯ ಮುಖಾಂತರ) ಅವಿಶ್ವಾಸಿಗಳ ವಿರುದ್ಧ (ಅಲ್ಲಾಹುವಿನೊಂದಿಗೆ) ಗೆಲುವಿಗಾಗಿ ಪ್ರಾರ್ಥಿಸುತ್ತಿದ್ದರು. ಅವರಿಗೆ ಸುಪರಿಚಿತವಾದ ಆ ಸಂದೇಶವು ಬಂದಾಗ ಅವರದನ್ನು ನಿಷೇಧಿಸಿದರು. ಆದ್ದರಿಂದ ಆ ನಿಷೇಧಿಗಳ ಮೇಲೆ ಅಲ್ಲಾಹುವಿನ ಶಾಪವಿರಲಿ.

وَلَمَّا جَآءَهُمۡ كِتَٰبٞ مِّنۡ عِندِ ٱللَّهِ مُصَدِّقٞ لِّمَا مَعَهُمۡ وَكَانُواْ مِن قَبۡلُ يَسۡتَفۡتِحُونَ عَلَى ٱلَّذِينَ كَفَرُواْ فَلَمَّا جَآءَهُم مَّا عَرَفُواْ كَفَرُواْ بِهِۦۚ فَلَعۡنَةُ ٱللَّهِ عَلَى ٱلۡكَٰفِرِينَ ﴿٨٩﴾

90. ಅಲ್ಲಾಹು ತನ್ನ ದಾಸರ ಪೈಕಿ ತಾನಿಚ್ಛಿಸುವವರ ಮೇಲೆ ತನ್ನ ಅನುಗ್ರಹವನ್ನು ಇಳಿಸಿಕೊಡುವನು ಎಂಬ ವಿದ್ವೇಷದ ನಿಮಿತ್ತ ಅಲ್ಲಾಹು ಅವತೀರ್ಣಗೊಳಿಸಿದ ಸಂದೇಶವನ್ನು ನಿಷೇಧಿಸುವ ಮೂಲಕ ಅವರು ತಮ್ಮ ಆತ್ಮ ಗಳನ್ನು ಮಾರಿ ಪಡೆದ ಬೆಲೆಯು ಎಷ್ಟು ನಿಕೃಷ್ಟವಾದುದು! ಅದರಿಂದಾಗಿ ಅವರು ಕ್ರೋಧದ ಮೇಲೆ ಕ್ರೋಧಕ್ಕೆ ಪಾತ್ರರಾದರು. ಸತ್ಯನಿಷೇಧಿಗಳಿಗೆ ಅಪಮಾನಕರವಾದ ಶಿಕ್ಷೆಯಿರುವುದು.

بِئۡسَمَا ٱشۡتَرَوۡاْ بِهِۦٓ أَنفُسَهُمۡ أَن يَكۡفُرُواْ بِمَآ أَنزَلَ ٱللَّهُ بَغۡيًا أَن يُنَزِّلَ ٱللَّهُ مِن فَضۡلِهِۦ عَلَىٰ مَن يَشَآءُ مِنۡ عِبَادِهِۦۖ فَبَآءُو بِغَضَبٍ عَلَىٰ غَضَبٖۚ وَلِلۡكَٰفِرِينَ عَذَابٞ مُّهِينٞ ﴿٩٠﴾

91. ‘ಅಲ್ಲಾಹು ಅವತೀರ್ಣಗೊಳಿಸಿರುವುದರಲ್ಲಿ (ಕುರ್‌ಆನ್‌ನಲ್ಲಿ) ವಿಶ್ವಾಸವಿಡಿರಿ’ ಎಂದು ಅವರೊಂದಿಗೆ ಹೇಳಲಾದರೆ, ‘ನಮಗೆ ಅವತೀರ್ಣಗೊಂಡಿರುವ ಸಂದೇಶದಲ್ಲಿ ನಾವು ವಿಶ್ವಾಸವಿಡುವೆವು’ ಎಂದು ಅವರು ಹೇಳುವರು. ಅದರಾಚೆಗಿರುವುದನ್ನು ಅವರು ನಿಷೇಧಿಸುತ್ತಿರುವರು. ವಸ್ತುತಃ ಅದು (ಕುರ್‌ಆನ್) ಅವರ ಬಳಿಯಿರುವ ಗ್ರಂಥವನ್ನು ದೃಢೀಕರಿಸುವ ಸತ್ಯಸಂದೇಶವಾಗಿದೆ. (ಓ ಪ್ರವಾದಿಯವರೇ!) ತಾವು ಹೇಳಿರಿ: ‘ನೀವು ವಿಶ್ವಾಸಿಗಳಾಗಿದ್ದರೆ ಈ ಹಿಂದೆ ನೀವು ಅಲ್ಲಾಹುವಿನ ಪ್ರವಾದಿಗಳನ್ನು ಏಕೆ ವಧಿಸುತ್ತಿದ್ದಿರಿ?’

وَإِذَا قِيلَ لَهُمۡ ءَامِنُواْ بِمَآ أَنزَلَ ٱللَّهُ قَالُواْ نُؤۡمِنُ بِمَآ أُنزِلَ عَلَيۡنَا وَيَكۡفُرُونَ بِمَا وَرَآءَهُۥ وَهُوَ ٱلۡحَقُّ مُصَدِّقٗا لِّمَا مَعَهُمۡۗ قُلۡ فَلِمَ تَقۡتُلُونَ أَنۢبِيَآءَ ٱللَّهِ مِن قَبۡلُ إِن كُنتُم مُّؤۡمِنِينَ ﴿٩١﴾

92. ಸ್ಪಷ್ಟವಾದ ಪುರಾವೆಗಳೊಂದಿಗೆ ಮೂಸಾ ನಿಮ್ಮ ಬಳಿಗೆ ಬಂದಿದ್ದರು. ತರುವಾಯ ಅದರ ಬಳಿಕ ನೀವು ಅಕ್ರಮಿಗಳಾಗಿರುತ್ತಾ ಕರುವನ್ನು (ಆರಾಧ್ಯಮೂರ್ತಿಯಾಗಿ) ಮಾಡಿಕೊಂಡಿರಿ.

۞ وَلَقَدۡ جَآءَكُم مُّوسَىٰ بِٱلۡبَيِّنَٰتِ ثُمَّ ٱتَّخَذۡتُمُ ٱلۡعِجۡلَ مِنۢ بَعۡدِهِۦ وَأَنتُمۡ ظَٰلِمُونَ ٩٢

93. ನಾವು ನಿಮ್ಮಿಂದ ಕರಾರನ್ನು ಪಡೆದ ಮತ್ತು ನಿಮ್ಮ ಮೇಲೆ ಪರ್ವತವನ್ನು ಎತ್ತಿಹಿಡಿದ ಸಂದರ್ಭ(ವನ್ನು ಸ್ಮರಿಸಿರಿ). 'ನಾವು ನಿಮಗೆ ನೀಡಿದ ಸಂದೇಶವನ್ನು ಬಿಗಿಯಾಗಿ ಹಿಡಿಯಿರಿ ಮತ್ತು (ನಮ್ಮ ಆದೇಶಗಳನ್ನು) ಕಿವಿಗೊಟ್ಟು ಆಲಿಸಿರಿ' (ಎಂದು ನಾವು ಆದೇಶಿಸಿದೆವು).ಆಗ ಅವರು ಹೇಳಿದರು: 'ನಾವು ಆಲಿಸಿರುವೆವು ಮತ್ತು ಧಿಕ್ಕರಿಸಿರುವೆವು.' ಅವರ ನಿಷೇಧಾತ್ಮಕ ಧೋರಣೆಯ ಫಲವಾಗಿ ಕರುವಿನೊಂದಿಗಿರುವ ಭಕ್ತಿಯು ಅವರ ಹೃದಯಗಳಲ್ಲಿ ಲೀನವಾಗಿಬಿಟ್ಟಿದೆ. (ಓ ಪ್ರವಾದಿಯವರೇ!) ತಾವು ಹೇಳಿರಿ: 'ನೀವು ವಿಶ್ವಾಸಿಗಳಾಗಿದ್ದರೆ ಆ ವಿಶ್ವಾಸವು ನಿಮ್ಮೊಂದಿಗೆ ಆದೇಶಿಸುವ ವಿಷಯವು ಎಷ್ಟು ನಿಕೃಷ್ಟವಾದುದು!'

وَإِذۡ أَخَذۡنَا مِيثَٰقَكُمۡ وَرَفَعۡنَا فَوۡقَكُمُ ٱلطُّورَ خُذُواْ مَآ ءَاتَيۡنَٰكُم بِقُوَّةٖ وَٱسۡمَعُواْۖ قَالُواْ سَمِعۡنَا وَعَصَيۡنَا وَأُشۡرِبُواْ فِي قُلُوبِهِمُ ٱلۡعِجۡلَ بِكُفۡرِهِمۡۚ قُلۡ بِئۡسَمَا يَأۡمُرُكُم بِهِۦٓ إِيمَٰنُكُمۡ إِن كُنتُم مُّؤۡمِنِينَ ٩٣

94. (ಓ ಪ್ರವಾದಿಯವರೇ!) ಹೇಳಿರಿ: 'ಪರಲೋಕ ಭವನವು ಅಲ್ಲಾಹುವಿನ ಬಳಿ ಇತರ ಯಾರಿಗೂ ಲಭ್ಯವಾಗದೆ ಕೇವಲ ನಿಮಗೋಸ್ಕರ ಮಾತ್ರ ಇರುವುದಾಗಿದ್ದರೆ ನೀವು ಮರಣವನ್ನು ಹಂಬಲಿಸಿರಿ. ನೀವು ಸತ್ಯಸಂಧರಾಗಿದ್ದರೆ.'

قُلۡ إِن كَانَتۡ لَكُمُ ٱلدَّارُ ٱلۡأٓخِرَةُ عِندَ ٱللَّهِ خَالِصَةٗ مِّن دُونِ ٱلنَّاسِ فَتَمَنَّوُاْ ٱلۡمَوۡتَ إِن كُنتُمۡ صَٰدِقِينَ ٩٤

95. ಆದರೆ ಅವರ ಕೈಗಳು ಈಗಾಗಲೇ ಮಾಡಿಟ್ಟಿರುವ (ದುಷ್ಕರ್ಮಗಳ) ನಿಮಿತ್ತ ಅವರೆಂದೂ ಮರಣವನ್ನು ಆಶಿಸಲಾರರು. ಅಲ್ಲಾಹು ಅಕ್ರಮಿಗಳ ಕುರಿತು ಸೂಕ್ಷ್ಮ ಜ್ಞಾನವುಳ್ಳವನಾಗಿರುವನು.

وَلَن يَتَمَنَّوۡهُ أَبَدَۢا بِمَا قَدَّمَتۡ أَيۡدِيهِمۡۚ وَٱللَّهُ عَلِيمُۢ بِٱلظَّٰلِمِينَ ٩٥

96. ಖಂಡಿತವಾಗಿಯೂ ಜನರ ಪೈಕಿ ಐಹಿಕ ಜೀವನ ದೊಂದಿಗೆ ಬಹುದೇವ ವಿಶ್ವಾಸಿಗಳಿಗಿಂತಲೂ ಹೆಚ್ಚು ಅತ್ಯಾಸೆಯುಳ್ಳವರಾಗಿ ತಾವು ಅವರನ್ನು (ಯಹೂದರನ್ನು) ಕಾಣುವಿರಿ. ಅವರಲ್ಲಿ

وَلَتَجِدَنَّهُمۡ أَحۡرَصَ ٱلنَّاسِ عَلَىٰ حَيَوٰةٖ وَمِنَ ٱلَّذِينَ أَشۡرَكُواْۚ يَوَدُّ أَحَدُهُمۡ لَوۡ يُعَمَّرُ أَلۡفَ سَنَةٖ وَمَا هُوَ بِمُزَحۡزِحِهِۦ

مِنَ ٱلۡعَذَابِ أَن يُعَمَّرَۗ وَٱللَّهُ بَصِيرُۢ بِمَا يَعۡمَلُونَ ٩٦

ಪ್ರತಿಯೊಬ್ಬನೂ ತನಗೆ ಸಾವಿರ ವರ್ಷ ಆಯುಸ್ಸು ಸಿಗುತ್ತಿದ್ದರೆ ಎಂದು ಹಂಬಲಿಸುವನು. ಒಬ್ಬನಿಗೆ ದೀರ್ಘಾಯುಸ್ಸು ಸಿಗುವುದು ಎಂದರೆ ಅದು ಅವನನ್ನು ಶಿಕ್ಷೆಯಿಂದ ವಿಮುಕ್ತಿಗೊಳಿಸುವ ಸಂಗತಿಯಲ್ಲ. ಅವರು ಮಾಡುತ್ತಿರುವುದನ್ನು ಅಲ್ಲಾಹು ಸೂಕ್ಷ್ಮವಾಗಿ ವೀಕ್ಷಿಸುವವನಾಗಿರುವನು.

قُلۡ مَن كَانَ عَدُوّٗا لِّجِبۡرِيلَ فَإِنَّهُۥ نَزَّلَهُۥ عَلَىٰ قَلۡبِكَ بِإِذۡنِ ٱللَّهِ مُصَدِّقٗا لِّمَا بَيۡنَ يَدَيۡهِ وَهُدٗى وَبُشۡرَىٰ لِلۡمُؤۡمِنِينَ ٩٧

**97.** (ಓ ಪ್ರವಾದಿಯವರೇ!) ಹೇಳಿರಿ: ‘(ಕುರ್‌ಆನನ್ನು ತಲುಪಿಸಿಕೊಡುವ) ಜಿಬ್ರೀಲ್ (ಎಂಬ ಮಲಕ್)ನೊಂದಿಗೆ ಯಾರಿಗಾದರೂ ಶತ್ರುತ್ವವಿರುವುದಾದರೆ ಆತ ಅದನ್ನು ತಮ್ಮ ಹೃದಯದಲ್ಲಿ ಅವತೀರ್ಣಗೊಳಿಸಿದ್ದು ಅಲ್ಲಾಹುವಿನ ಆದೇಶ ಪ್ರಕಾರ ಮಾತ್ರವಾಗಿದೆ. ಪೂರ್ವ ಗ್ರಂಥಗಳನ್ನು ದೃಢೀಕರಿಸುವ ಸಲುವಾಗಿ ಮತ್ತು ವಿಶ್ವಾಸಿಗಳಿಗೆ ಮಾರ್ಗದರ್ಶನವೂ ಶುಭವಾರ್ತೆಯೂ ಆಗಿ(ಇದನ್ನು ಅವತೀರ್ಣಗೊಳಿಸಲಾಗಿದೆ.)’

مَن كَانَ عَدُوّٗا لِّلَّهِ وَمَلَٰٓئِكَتِهِۦ وَرُسُلِهِۦ وَجِبۡرِيلَ وَمِيكَىٰلَ فَإِنَّ ٱللَّهَ عَدُوّٞ لِّلۡكَٰفِرِينَ ٩٨

**98.** ಯಾರಿಗಾದರೂ ಅಲ್ಲಾಹುವಿನೊಂದಿಗೆ, ಅವನ ಮಲಕ್‌ಗಳೊಂದಿಗೆ, ಅವನ ಸಂದೇಶವಾಹಕರೊಂದಿಗೆ, ಜಿಬ್ರೀಲ್‌ನೊಂದಿಗೆ ಮತ್ತು ಮೀಕಾಈಲ್‌ನೊಂದಿಗೆ ಶತ್ರುತ್ವವಿರುವುದಾದರೆ ಖಂಡಿತವಾಗಿಯೂ ಅಲ್ಲಾಹು ಆ ಅವಿಶ್ವಾಸಿಗಳ ಶತ್ರುವಾಗಿರುವನು.

وَلَقَدۡ أَنزَلۡنَآ إِلَيۡكَ ءَايَٰتِۭ بَيِّنَٰتٖۖ وَمَا يَكۡفُرُ بِهَآ إِلَّا ٱلۡفَٰسِقُونَ ٩٩

**99.** ಖಂಡಿತವಾಗಿಯೂ ನಾವು ತಮಗೆ ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸಿರುವೆವು. ಧಿಕ್ಕಾರಿಗಳಲ್ಲದೆ ಯಾರೂ ಅವುಗಳನ್ನು ನಿಷೇಧಿಸಲಾರರು.

أَوَكُلَّمَا عَٰهَدُواْ عَهۡدٗا نَّبَذَهُۥ فَرِيقٞ مِّنۡهُمۚ بَلۡ أَكۡثَرُهُمۡ لَا يُؤۡمِنُونَ ١٠٠

**100.** ಅವರು (ಯಹೂದರು) ಯಾವುದೇ ಕರಾರು ಮಾಡಿಕೊಂಡಾಗಲೂ ಅವರ ಪೈಕಿ ಒಂದು ಗುಂಪು ಅದನ್ನು ಎಸೆದು ಬಿಡುವುದೇ? ಮಾತ್ರವಲ್ಲ, ಅವರಲ್ಲಿ ಹೆಚ್ಚಿನವರಿಗೂ ವಿಶ್ವಾಸವೇ ಇಲ್ಲ.

101. ಅವರಲ್ಲಿರುವ ಗ್ರಂಥವನ್ನು ದೃಢೀಕರಿಸುತ್ತಾ ಅಲ್ಲಾಹುವಿನ ಬಳಿಯಿಂದ ಒಬ್ಬ ಸಂದೇಶವಾಹಕರು ಅವರ ಬಳಿ ಬಂದಾಗ ಗ್ರಂಥ ನೀಡಲಾದವರ ಪೈಕಿ ಒಂದು ಗುಂಪು ಅಲ್ಲಾಹುವಿನ ಗ್ರಂಥವನ್ನು ಯಾವುದೇ ಅರಿವಿಲ್ಲದವರಂತೆ ತಮ್ಮ ಬೆನ್ನ ಹಿಂದಕ್ಕೆ ಎಸೆದುಬಿಟ್ಟರು.

وَلَمَّا جَآءَهُمْ رَسُولٌ مِّنْ عِندِ ٱللَّهِ مُصَدِّقٌ لِّمَا مَعَهُمْ نَبَذَ فَرِيقٌ مِّنَ ٱلَّذِينَ أُوتُوا۟ ٱلْكِتَٰبَ كِتَٰبَ ٱللَّهِ وَرَآءَ ظُهُورِهِمْ كَأَنَّهُمْ لَا يَعْلَمُونَ ﴿١٠١﴾

102. ಸುಲೈಮಾನ್‌ರ ರಾಜ್ಯಭಾರದ (ರಹಸ್ಯವೆಂಬ) ಹೆಸರಲ್ಲಿ ಸೈತಾನರು ಪ್ರಚಾರ ಮಾಡಿರುವುದನ್ನು ಅವರು (ಇಸ್ರಾಈಲರು) ಅನುಸರಿಸಿದರು. ಸುಲೈಮಾನ್‌ರು ಅವಿಶ್ವಾಸ ತಾಳಿರಲಿಲ್ಲ. ಆದರೆ ಜನರಿಗೆ ಮಾಂತ್ರಿಕ ವಿದ್ಯೆಯನ್ನು ಕಲಿಸಿಕೊಡುವ ಮೂಲಕ ಸೈತಾನರು ಅವಿಶ್ವಾಸ ತಾಳಿದರು. ಬಾಬಿಲೋನಿಯಾದಲ್ಲಿ ಹಾರೂತ್ ಮತ್ತು ಮಾರೂತ್ ಎಂಬ ಎರಡು ಮಲಕ್‌ಗಳಿಗೆ[1] ಲಭ್ಯವಾದವುಗಳ (ಬಗ್ಗೆ ಸೈತಾನರು ಕಲ್ಪಿಸಿ ಹೇಳುತ್ತಿದ್ದವುಗಳನ್ನೂ ಅವರು ಅನುಸರಿಸಿದರು). ಆದರೆ ಹಾರೂತ್ ಮತ್ತು ಮಾರೂತ್ ಯಾರಿಗೆ ಕಲಿಸುವಾಗಲೂ 'ನಮ್ಮದು ಕೇವಲ ಒಂದು ಪರೀಕ್ಷೆ ಮಾತ್ರವಾಗಿದೆ, ಆದ್ದರಿಂದ (ಇದನ್ನು ಬಳಸಿ) ಅವಿಶ್ವಾಸಿಯಾಗದಿರು' ಎಂದು ಹೇಳದೇ ಕಲಿಸಿಕೊಡುತ್ತಿರಲಿಲ್ಲ. ಹೀಗೆ ಪತಿಪತ್ನಿಯರ ಮಧ್ಯೆ ಒಡಕು ಮೂಡಿಸುವ ತಂತ್ರಗಳನ್ನು ಜನರು ಅವರಿಂದ ಕಲಿತುಕೊಳ್ಳುತ್ತಿದ್ದರು. ಆದರೆ

وَٱتَّبَعُوا۟ مَا تَتْلُوا۟ ٱلشَّيَٰطِينُ عَلَىٰ مُلْكِ سُلَيْمَٰنَ ۖ وَمَا كَفَرَ سُلَيْمَٰنُ وَلَٰكِنَّ ٱلشَّيَٰطِينَ كَفَرُوا۟ يُعَلِّمُونَ ٱلنَّاسَ ٱلسِّحْرَ وَمَآ أُنزِلَ عَلَى ٱلْمَلَكَيْنِ بِبَابِلَ هَٰرُوتَ وَمَٰرُوتَ ۚ وَمَا يُعَلِّمَانِ مِنْ أَحَدٍ حَتَّىٰ يَقُولَآ إِنَّمَا نَحْنُ فِتْنَةٌ فَلَا تَكْفُرْ ۖ فَيَتَعَلَّمُونَ مِنْهُمَا مَا يُفَرِّقُونَ بِهِۦ بَيْنَ ٱلْمَرْءِ وَزَوْجِهِۦ ۚ وَمَا هُم بِضَآرِّينَ بِهِۦ مِنْ أَحَدٍ إِلَّا بِإِذْنِ ٱللَّهِ ۚ وَيَتَعَلَّمُونَ مَا يَضُرُّهُمْ وَلَا يَنفَعُهُمْ ۚ وَلَقَدْ عَلِمُوا۟ لَمَنِ ٱشْتَرَىٰهُ مَا لَهُۥ فِى ٱلْءَاخِرَةِ مِنْ خَلَٰقٍ ۚ وَلَبِئْسَ مَا شَرَوْا۟ بِهِۦٓ أَنفُسَهُمْ ۚ لَوْ كَانُوا۟ يَعْلَمُونَ ﴿١٠٢﴾

1 ಈ ಸೂಕ್ತಿಯಲ್ಲಿ 'ಮಲಕೈನ್' ಮತ್ತು 'ಮಲಿಕೈನ್' ಎಂಬ 'ಕಿರಾಅತ್' (ಪಾರಾಯಣ ವ್ಯತ್ಯಾಸ) ಇದೆ. 'ಮಲಕೈನ್' ಎಂಬ ಪದಕ್ಕೆ ಇಬ್ಬರು ಮಲಕ್‌ಗಳು ಎಂಬ ಭಾಷಿಕ ಅರ್ಥವನ್ನೇ ಕೆಲವು ವ್ಯಾಖ್ಯಾನಕಾರರು ನೀಡಿದ್ದಾರೆ. ಇತರ ಕೆಲವರ ಪ್ರಕಾರ 'ಮಲಕೈನ್' ಎಂದರೆ ಮಲಕ್‌ಗಳಂತೆ ಮಾನವಾತೀತ ಪದವಿಯನ್ನು ನೀಡಿ ಜನರಿಂದ ಗೌರವಿಸಲಾದ ಇಬ್ಬರು ವ್ಯಕ್ತಿಗಳು ಎಂದಾಗಿದೆ. 'ಮಲಿಕೈನ್' ಎಂಬುದರ ಅರ್ಥ ಇಬ್ಬರು ರಾಜಂದಿರು ಎಂದಾಗಿದೆ. ಕೆಲವು ಮಾಂತ್ರಿಕ ವಿದ್ಯೆಗಳು ಹಾರೂತ್ ಮತ್ತು ಮಾರೂತ್‌ರ ಬಳಿಯಿತ್ತೆಂದು ಈ ಸೂಕ್ತಿಯಿಂದ ಸ್ಪಷ್ಟವಾಗುತ್ತದೆ. ಅಲ್ಲಾಹು ಇಚ್ಛಿಸಿದ ಜನರಿಗೆ ಸಿಹ್ರ್ (ಮಾಟ) ತಗಲುತ್ತದೆ. ಆದರೆ ಸಿಹ್ರ್‌ಗೆ ಸಿಹ್ರ್‌ನ ಮೂಲಕ ಚಿಕಿತ್ಸೆ ಮಾಡಲು ಅನುಮತಿಯಿಲ್ಲ. ಕುರ್‌ಆನಿನ ಮೂಲಕ ಅಥವಾ ದೃಢಪಟ್ಟ ಹದೀಸ್‌ಗಳಲ್ಲಿ ಬಂದ ಪ್ರಾರ್ಥನೆಗಳ ಮೂಲಕ ಚಿಕಿತ್ಸೆ ಮಾಡಬಹುದಾಗಿದೆ. 'ಸಿಹ್ರ್' ಎಂಬ ಪದದ ವ್ಯಾಪ್ತಿಯಲ್ಲಿ ಬರುವ ಮಾಟ, ವಾಮಾಚಾರ, ಮಂತ್ರವಾದ ಇತ್ಯಾದಿಗಳೆಲ್ಲವೂ ನಿಷಿದ್ಧವಾಗಿವೆ.

ಅಲ್ಲಾಹುವಿನ ಅನುಮತಿಯ ವಿನಾ ಅದರಿಂದ ಯಾರಿಗೂ ಯಾವುದೇ ಹಾನಿಯನ್ನು ಮಾಡಲು ಅವರಿಗೆ ಸಾಧ್ಯವಾಗದು. ಸ್ವತಃ ಅವರಿಗೇ ಹಾನಿಯನ್ನುಂಟು ಮಾಡುವ ಮತ್ತು ಯಾವುದೇ ಪ್ರಯೋಜನವನ್ನೂ ನೀಡದ ವಿದ್ಯೆಯನ್ನು ಅವರು ಕಲಿಯುತ್ತಿರುವರು. ಅದನ್ನು (ಆ ವಿದ್ಯೆಯನ್ನು) ಯಾರು ಗಳಿಸಿದನೋ ಅವನಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲವೆಂದು ಅವರು ಚೆನ್ನಾಗಿ ಅರಿತುಕೊಂಡಿದ್ದರು. ಸ್ವತಃ ತಮ್ಮನ್ನು ಮಾರಿ ಅವರು ಪಡೆದ ಬೆಲೆಯು ಅದೆಷ್ಟು ನಿಕೃಷ್ಟವಾದುದು! ಅವರಿಗೆ ತಿಳುವಳಿಕೆಯಿರುತ್ತಿದ್ದರೆ!

وَلَوۡ أَنَّهُمۡ ءَامَنُواْ وَٱتَّقَوۡاْ لَمَثُوبَةٞ مِّنۡ عِندِ ٱللَّهِ خَيۡرٞۚ لَّوۡ كَانُواْ يَعۡلَمُونَ ١٠٣

**103.** ಅವರು ವಿಶ್ವಾಸವಿಟ್ಟವರೂ, ಭಯಭಕ್ತಿ ಪಾಲಿಸಿದವರೂ ಆಗಿರುತ್ತಿದ್ದರೆ ಅಲ್ಲಾಹುವಿನಿಂದ ಸಿಗುವ ಪ್ರತಿಫಲವು ಎಷ್ಟೋ ಉತ್ತಮವಾಗಿರುತ್ತಿತ್ತು! ಅವರದನ್ನು ಅರಿತಿರುತ್ತಿದ್ದರೆ!

يَٰٓأَيُّهَا ٱلَّذِينَ ءَامَنُواْ لَا تَقُولُواْ رَٰعِنَا وَقُولُواْ ٱنظُرۡنَا وَٱسۡمَعُواْۗ وَلِلۡكَٰفِرِينَ عَذَابٌ أَلِيمٞ ١٠٤

**104.** ಓ ಸತ್ಯವಿಶ್ವಾಸಿಗಳೇ! ನೀವು (ಪ್ರವಾದಿಯೊಂದಿಗೆ) 'ರಾಇನಾ'[1] ಎಂದು ಹೇಳದಿರಿ. ಬದಲಿಗೆ 'ಉನ್‌ಝುರ್‌ನಾ' ಎಂದು ಹೇಳಿರಿ ಮತ್ತು ಕಿವಿಗೊಟ್ಟು ಆಲಿಸಿರಿ. ಸತ್ಯನಿಷೇಧಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆ.

مَّا يَوَدُّ ٱلَّذِينَ كَفَرُواْ مِنۡ أَهۡلِ ٱلۡكِتَٰبِ وَلَا ٱلۡمُشۡرِكِينَ أَن يُنَزَّلَ عَلَيۡكُم مِّنۡ خَيۡرٖ مِّن رَّبِّكُمۡۚ وَٱللَّهُ يَخۡتَصُّ بِرَحۡمَتِهِۦ مَن يَشَآءُۚ وَٱللَّهُ ذُو ٱلۡفَضۡلِ ٱلۡعَظِيمِ ١٠٥

**105.** ನಿಮ್ಮ ರಬ್‌ನಿಂದ ಏನಾದರೂ ಒಳಿತು ನಿಮ್ಮ ಮೇಲೆ ಇಳಿಸಲಾಗುವುದನ್ನು ಗ್ರಂಥದವರಲ್ಲಿ ಮತ್ತು ಬಹುದೇವಾರಾಧಕರಲ್ಲಿ ಸೇರಿದ ಸತ್ಯನಿಷೇಧಿಗಳು ಸ್ವಲ್ಪವೂ ಇಷ್ಟಪಡಲಾರರು. ಅಲ್ಲಾಹು ತನ್ನ

1 'ರಾಇನಾ' ಎಂಬ ಅರಬಿ ಪದದ ಅರ್ಥ 'ನಮ್ಮನ್ನು ಪರಿಗಣಿಸಿರಿ' ಎಂದಾಗಿದೆ. ಪ್ರವಾದಿ(ﷺ)ರವರೊಂದಿಗಿನ ಸಂಭಾಷಣೆಯಲ್ಲಿ ಸಹಾಬಿಗಳು ಕೆಲವೊಮ್ಮೆ ಈ ಪದವನ್ನು ಬಳಸುತ್ತಿದ್ದರು. ಆದರೆ ಯಹೂದರ ಭಾಷೆಯಲ್ಲಿ 'ರಾಇನಾ' ಎಂಬುದು ಒಂದು ಅಸಭ್ಯ ಪದವಾಗಿದೆ. ಪ್ರವಾದಿ(ﷺ)ರವರನ್ನು ಅವಹೇಳನ ಮಾಡುವುದಕ್ಕಾಗಿ ದ್ವಂದ್ವಾರ್ಥವಿರುವ ಈ ಪದವನ್ನು ಅವರು ಬಳಸುತ್ತಿದ್ದರು. ಆದ್ದರಿಂದ ಕುರ್‌ಆನ್ ಆ ಪದವನ್ನು ನಿರೋಧಿಸಿ ಅದರ ಬದಲಿಗೆ 'ನಮ್ಮ ಕಡೆಗೆ ಗಮನ ಹರಿಸಿರಿ' ಎಂಬ ಅರ್ಥವನ್ನು ಹೊಂದಿರುವ 'ಉನ್‌ಝುರ್‌ನಾ' ಎಂಬ ಪದವನ್ನು ಬಳಸುವಂತೆ ಸೂಚಿಸಿತು. ವಿಶ್ವಾಸಿಗಳು ಪರಸ್ಪರ ಹೊಂದಿರುವ ಐಕ್ಯತೆಗೆ ಮಾರಕವಾಗುವಂತಹ ಒಂದು ಪದಪ್ರಯೋಗ ಕೂಡ ಬರದಂತೆ ಎಚ್ಚರವಹಿಸಬೇಕೆಂಬ ಸೂಚನೆಯು ಇದರಲ್ಲಿದೆ.

ದಯೆಯಿಂದ ತಾನಿಚ್ಛಿಸುವವರನ್ನು ವಿಶೇಷವಾಗಿ ಅನುಗ್ರಹಿಸುವನು. ಅಲ್ಲಾಹು ಮಹಾ ಅನುಗ್ರಹದ ಒಡೆಯನಾಗಿರುವನು.

106. ನಾವು ಯಾವುದಾದರೂ 'ಆಯತ್ತ'ನ್ನು ರದ್ದುಗೊಳಿಸುವುದಾದರೆ[1] ಅಥವಾ ವಿಸ್ಮೃತಿಗೊಳಿಸುವುದಾದರೆ ಅದರ ಬದಲಿಗೆ ಅದಕ್ಕಿಂತಲೂ ಉತ್ತಮವಾಗಿರುವುದನ್ನು ಅಥವಾ ಅದಕ್ಕೆ ಸಮಾನವಾಗಿರುವುದನ್ನು ತರುವೆವು. ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನೆಂಬುದು ತಮಗೆ ತಿಳಿಯದೇ?

۞ مَا نَنسَخۡ مِنۡ ءَايَةٍ أَوۡ نُنسِهَا نَأۡتِ بِخَيۡرٖ مِّنۡهَآ أَوۡ مِثۡلِهَآۗ أَلَمۡ تَعۡلَمۡ أَنَّ ٱللَّهَ عَلَىٰ كُلِّ شَيۡءٖ قَدِيرٌ ١٠٦

107. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗೆ ಮಾತ್ರವಿರುವುದಾಗಿದೆ ಮತ್ತು ಅಲ್ಲಾಹುವಿನ ಹೊರತು ನಿಮಗೆ ಅನ್ಯ ರಕ್ಷಕನಾಗಲಿ, ಸಹಾಯಕನಾಗಲಿ ಇಲ್ಲವೆಂಬುದು ತಮಗೆ ತಿಳಿಯದೇ?

أَلَمۡ تَعۡلَمۡ أَنَّ ٱللَّهَ لَهُۥ مُلۡكُ ٱلسَّمَٰوَٰتِ وَٱلۡأَرۡضِۗ وَمَا لَكُم مِّن دُونِ ٱللَّهِ مِن وَلِيّٖ وَلَا نَصِيرٍ ١٠٧

108. ಮುಂಚೆ ಮೂಸಾರೊಂದಿಗೆ ಪ್ರಶ್ನಿಸಲಾದಂತಹ ಪ್ರಶ್ನೆಗಳನ್ನು[2] ನಿಮ್ಮ ಸಂದೇಶವಾಹಕರೊಂದಿಗೂ ಪ್ರಶ್ನಿಸಲು ನೀವು ಇಚ್ಛಿಸುತ್ತಿರುವಿರಾ? ಯಾರು ಸತ್ಯವಿಶ್ವಾಸಕ್ಕೆ ಬದಲಿಯಾಗಿ ಅವಿಶ್ವಾಸವನ್ನು ಪಡೆಯುತ್ತಾನೋ ಅವನು ಖಂಡಿತವಾಗಿಯೂ ಸತ್ಯಮಾರ್ಗದಿಂದ ಪಥಭ್ರಷ್ಟನಾಗಿರುವನು.

أَمۡ تُرِيدُونَ أَن تَسۡـَٔلُواْ رَسُولَكُمۡ كَمَا سُئِلَ مُوسَىٰ مِن قَبۡلُۗ وَمَن يَتَبَدَّلِ ٱلۡكُفۡرَ بِٱلۡإِيمَٰنِ فَقَدۡ ضَلَّ سَوَآءَ ٱلسَّبِيلِ ١٠٨

109. ನೀವು ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ನಿಮ್ಮನ್ನು ಅವಿಶ್ವಾಸಿಗಳನ್ನಾಗಿ ಬದಲಾಯಿಸಬೇಕೆಂದು ಗ್ರಂಥದವರ ಪೈಕಿ ಹೆಚ್ಚಿನವರೂ ಆಶಿಸುವರು.

وَدَّ كَثِيرٞ مِّنۡ أَهۡلِ ٱلۡكِتَٰبِ لَوۡ يَرُدُّونَكُم مِّنۢ بَعۡدِ إِيمَٰنِكُمۡ كُفَّارًا حَسَدٗا مِّنۡ

1 ಸೃಷ್ಟಿಗಳ ಮನೋವೃತ್ತಿ, ಸ್ವಭಾವ ಮತ್ತು ಕಾರ್ಯವೈಖರಿಗಳನ್ನು ಸೂಕ್ಷ್ಮವಾಗಿ ಅರಿಯುವವನು ಅಲ್ಲಾಹುವಾಗಿರುವನು. ತನ್ನ ಇಚ್ಛೆಯಂತೆ ಅವನು ತನ್ನ ವಿಧಿನಿಷೇಧಗಳನ್ನು ಬದಲಾವಣೆಗೊಳಿಸುವುದನ್ನು ಅಥವಾ ರದ್ದುಗೊಳಿಸುವುದನ್ನು ಮಾಡುತ್ತಾನೆ. ಅಲ್ಲಾಹುವಿನ ಯಾವುದೇ ನಿರ್ಧಾರವೂ ಸೂಕ್ಷ್ಮವಾಗಿ ಚಿಂತಿಸಿದರೆ ಸೃಷ್ಟಿಗಳಿಗೆ ಹಿತಕರವೇ ಹೊರತು ಹಾನಿಕರವಲ್ಲವೆಂದು ತಿಳಿದು ಬರುತ್ತದೆ.

2 'ನಮಗೆ ಅಲ್ಲಾಹುವನ್ನು ಪ್ರತ್ಯಕ್ಷವಾಗಿ ತೋರಿಸಿಕೊಡು' ಎಂದು ಯಹೂದರು ಮೂಸಾ ರೊಂದಿಗೆ ಅಪೇಕ್ಷಿಸಿದ್ದರು. ಇಂತಹ ಧಿಕ್ಕಾರದ ಪ್ರಶ್ನೆಗಳೆಡೆಗೆ ಇಲ್ಲಿ ಸೂಚನೆ ನೀಡಲಾಗಿದೆ.

عِندِ أَنفُسِهِم مِّنۢ بَعۡدِ مَا تَبَيَّنَ لَهُمُ ٱلۡحَقُّۖ
فَٱعۡفُواْ وَٱصۡفَحُواْ حَتَّىٰ يَأۡتِيَ ٱللَّهُ بِأَمۡرِهِۦٓۗ
إِنَّ ٱللَّهَ عَلَىٰ كُلِّ شَيۡءٖ قَدِيرٞ ١٠٩

(ಅವರು ಆ ನಿಲುವನ್ನು ಹೊಂದಿರುವುದು) ಸತ್ಯವು ಸ್ಪಷ್ಟವಾಗಿ ಮನದಟ್ಟಾದ ಬಳಿಕವೂ ಸ್ವಾರ್ಥಪೂರಿತ ಅಸೂಯೆಯ ನಿಮಿತ್ತವಾಗಿದೆ. ಆದ್ದರಿಂದ (ಅವರ ವಿಷಯದಲ್ಲಿ) ಅಲ್ಲಾಹು ತನ್ನ ಆಜ್ಞೆಯನ್ನು ತರುವವರೆಗೆ ನೀವು ಕ್ಷಮಿಸಿರಿ ಮತ್ತು ಮನ್ನಿಸಿರಿ. ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَأَقِيمُواْ ٱلصَّلَوٰةَ وَءَاتُواْ ٱلزَّكَوٰةَۚ وَمَا
تُقَدِّمُواْ لِأَنفُسِكُم مِّنۡ خَيۡرٖ تَجِدُوهُ عِندَ
ٱللَّهِۗ إِنَّ ٱللَّهَ بِمَا تَعۡمَلُونَ بَصِيرٞ ١١٠

110. ನೀವು ನಮಾಝ್ ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ. ನೀವು ನಿಮ್ಮ ಸ್ವಹಿತಕ್ಕಾಗಿ ಉತ್ತಮವಾದ ಯಾವುದೇ ಕಾರ್ಯವನ್ನು ಪೂರ್ವಭಾವಿಯಾಗಿ ಮಾಡಿಟ್ಟರೂ ಅದರ ಪ್ರತಿಫಲವನ್ನು ಅಲ್ಲಾಹುವಿನ ಬಳಿ ಕಾಣುವಿರಿ. ಅಲ್ಲಾಹು ನೀವು ಮಾಡುವುತ್ತಿರುವುದನ್ನೆಲ್ಲಾ ವೀಕ್ಷಿಸುವವನಾಗಿರುವನು.

وَقَالُواْ لَن يَدۡخُلَ ٱلۡجَنَّةَ إِلَّا مَن كَانَ
هُودًا أَوۡ نَصَٰرَىٰۗ تِلۡكَ أَمَانِيُّهُمۡۗ قُلۡ هَاتُواْ
بُرۡهَٰنَكُمۡ إِن كُنتُمۡ صَٰدِقِينَ ١١١

111. ಯಹೂದರೋ ಕ್ರೈಸ್ತರೋ ಆಗದ ಹೊರತು ಯಾರೂ ಸ್ವರ್ಗವನ್ನು ಪ್ರವೇಶಿಸಲಾರರು' ಎಂದು ಅವರು ಹೇಳುತ್ತಿರುವರು. ಅವೆಲ್ಲವೂ ಅವರ ವ್ಯಾಮೋಹಗಳಾಗಿವೆ. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸತ್ಯಸಂಧರಾಗಿದ್ದರೆ (ಅದರ ಬಗ್ಗೆ ನಿಮಗೆ ಲಭ್ಯವಾಗಿರುವ) ಪುರಾವೆಯನ್ನು ತನ್ನಿರಿ.'

بَلَىٰۚ مَنۡ أَسۡلَمَ وَجۡهَهُۥ لِلَّهِ وَهُوَ مُحۡسِنٞ
فَلَهُۥٓ أَجۡرُهُۥ عِندَ رَبِّهِۦ وَلَا خَوۡفٌ
عَلَيۡهِمۡ وَلَا هُمۡ يَحۡزَنُونَ ١١٢

112. ಹೌದು! ಯಾರು ಸತ್ಕರ್ಮಿಯಾಗಿರುತ್ತಾ ಸ್ವತಃ ತನ್ನನ್ನು ಅಲ್ಲಾಹುವಿಗೆ ಸಮರ್ಪಿಸಿರುವನೋ ಅವನ ಪ್ರತಿಫಲವು ಅವನಿಗೆ ಅವನ ರಬ್‌ನ ಬಳಿಯಿರುವುದು. ಅಂತಹವರಿಗೆ ಯಾವುದೇ ಭಯವೂ ಇರಲಾರದು. ಅವರು ದುಃಖಿಸಬೇಕಾಗಿಯೂ ಬರದು.

وَقَالَتِ ٱلۡيَهُودُ لَيۡسَتِ ٱلنَّصَٰرَىٰ عَلَىٰ
شَيۡءٖ وَقَالَتِ ٱلنَّصَٰرَىٰ لَيۡسَتِ ٱلۡيَهُودُ
عَلَىٰ شَيۡءٖ وَهُمۡ يَتۡلُونَ ٱلۡكِتَٰبَۗ كَذَٰلِكَ

113. 'ಕ್ರೈಸ್ತರಿಗೆ ಯಾವ ಬುನಾದಿಯೂ ಇಲ್ಲ' ಎಂದು ಯಹೂದರು ಹೇಳಿದರು. 'ಯಹೂದರಿಗೆ ಯಾವ ಬುನಾದಿಯೂ ಇಲ್ಲ' ಎಂದು ಕ್ರೈಸ್ತರು ಹೇಳಿದರು. ಅವರಂತೂ

قَالَ ٱلَّذِينَ لَا يَعْلَمُونَ مِثْلَ قَوْلِهِمْۚ فَٱللَّهُ
يَحْكُمُ بَيْنَهُمْ يَوْمَ ٱلْقِيَـٰمَةِ فِيمَا كَانُوا۟
فِيهِ يَخْتَلِفُونَ ﴿١١٣﴾

ಗ್ರಂಥ ಪಾರಾಯಣ ಮಾಡುವವರಾಗಿರುವರು. ಅವರು ಹೇಳಿದಂತೆಯೇ ಅರಿವಿಲ್ಲದೆ ಕೆಲವರೂ ಹೇಳಿರುವರು. ಅವರು ಯಾವೆಲ್ಲ ವಿಷಯಗಳ ಕುರಿತು ಭಿನ್ನಾಭಿಪ್ರಾಯ ತಾಳಿರುವರೋ ಅವೆಲ್ಲವುಗಳ ಕುರಿತು ಪುನರುತ್ಥಾನ ದಿನದಂದು ಅಲ್ಲಾಹು ಅವರ ನಡುವೆ ತೀರ್ಪು ವಿಧಿಸಲಿರುವನು.

وَمَنْ أَظْلَمُ مِمَّن مَّنَعَ مَسَـٰجِدَ ٱللَّهِ أَن
يُذْكَرَ فِيهَا ٱسْمُهُۥ وَسَعَىٰ فِى خَرَابِهَآۚ
أُو۟لَـٰٓئِكَ مَا كَانَ لَهُمْ أَن يَدْخُلُوهَآ إِلَّا
خَآئِفِينَۚ لَهُمْ فِى ٱلدُّنْيَا خِزْىٌ وَلَهُمْ فِى
ٱلْـَٔاخِرَةِ عَذَابٌ عَظِيمٌ ﴿١١٤﴾

**114.** ಅಲ್ಲಾಹುವಿನ ಮಸೀದಿಗಳಲ್ಲಿ ಅವನ ನಾಮವು ಸ್ಮರಿಸಲಾಗುವುದನ್ನು ಅಡ್ಡಿಪಡಿಸುವವನಿಗಿಂತಲೂ ಮತ್ತು ಅವುಗಳ (ಮಸೀದಿಗಳ) ನಾಶಕ್ಕಾಗಿ ಪರಿಶ್ರಮಿಸುವವನಿಗಿಂತಲೂ ದೊಡ್ಡ ಅಕ್ರಮಿ ಯಾರಿರುವನು?[1] ಭಯಭೀತರಾಗಿಯೇ ವಿನಾ ಆ ಮಸೀದಿಗಳನ್ನು ಪ್ರವೇಶಿಸುವುದು ಅವರಿಗೆ ಯುಕ್ತವಾದುದಲ್ಲ. ಅವರಿಗೆ ಇಹಲೋಕದಲ್ಲಿ ಅಪಮಾನವಿದೆ. ಪರಲೋಕದಲ್ಲಂತೂ ಅವರಿಗೆ ಕಠೋರವಾದ ಶಿಕ್ಷೆಯಿರುವುದು.

وَلِلَّهِ ٱلْمَشْرِقُ وَٱلْمَغْرِبُۚ فَأَيْنَمَا تُوَلُّوا۟ فَثَمَّ
وَجْهُ ٱللَّهِۚ إِنَّ ٱللَّهَ وَٰسِعٌ عَلِيمٌ ﴿١١٥﴾

**115.** ಪೂರ್ವ ಮತ್ತು ಪಶ್ಚಿಮವು ಅಲ್ಲಾಹುವಿನದ್ದಾಗಿವೆ. ಆದ್ದರಿಂದ ನೀವು ಎತ್ತ ತಿರುಗಿ ಪ್ರಾರ್ಥಿಸಿದರೂ ಅಲ್ಲಿ ಅಲ್ಲಾಹುವಿನ ಮುಖವಿದೆ. ಖಂಡಿತವಾಗಿಯೂ ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ, ಸರ್ವಜ್ಞನೂ ಆಗಿರುವನು.

وَقَالُوا۟ ٱتَّخَذَ ٱللَّهُ وَلَدًاۗ سُبْحَـٰنَهُۥۖ بَل لَّهُۥ مَا
فِى ٱلسَّمَـٰوَٰتِ وَٱلْأَرْضِۖ كُلٌّ لَّهُۥ قَـٰنِتُونَ ﴿١١٦﴾

**116.** 'ಅಲ್ಲಾಹು ಸಂತತಿಯನ್ನು ಮಾಡಿಕೊಂಡಿರುವನು' ಎಂದು ಅವರು ಹೇಳುವರು. ಅವನು ಪರಮಪಾವನನು! ಹಾಗಲ್ಲ; ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದಾಗಿವೆ. ಎಲ್ಲರೂ ಅವನಿಗೆ ಶರಣಾದವರಾಗಿರುವರು.

1 ಮಸೀದಿಯು ಅಲ್ಲಾಹುವಿನ ನಾಮವನ್ನು ಸ್ತುತಿಸುವುದಕ್ಕಿರುವ ಅವನ ಭವನವಾಗಿದೆ. ಆದರೆ ಇಂದು ಹಲವು ಕಡೆಗಳಲ್ಲೂ ಮಸೀದಿಗಳನ್ನು ಮೂಢನಂಬಿಕೆಗಳ ಪ್ರಚಾರ ಕೇಂದ್ರಗಳನ್ನಾಗಿ ಪರಿವರ್ತಿಸಲಾಗಿದೆ. ಇದೊಂದು ಮಹಾಪಾಪವಾಗಿದೆ.

117. ಯಾವ ಪೂರ್ವ ಮಾದರಿಯೂ ಇಲ್ಲದೆ ಆಕಾಶಗಳನ್ನು ಮತ್ತು ಭೂಮಿಯನ್ನು ನಿರ್ಮಿಸಿದವನು. ಅವನೊಂದು ವಿಷಯವನ್ನು ತೀರ್ಮಾನಿಸಿದರೆ ಅದರೊಂದಿಗೆ 'ಉಂಟಾಗು' ಎಂದು ಮಾತ್ರ ಹೇಳುವನು; ತಕ್ಷಣ ಅದು ಉಂಟಾಗುವುದು!

بَدِيعُ ٱلسَّمَٰوَٰتِ وَٱلْأَرْضِ ۖ وَإِذَا قَضَىٰٓ أَمْرًا فَإِنَّمَا يَقُولُ لَهُۥ كُن فَيَكُونُ ﴿١١٧﴾

118. ಅರಿವಿಲ್ಲದವರು ಹೇಳಿದರು: 'ಅಲ್ಲಾಹು ನಮ್ಮೊಂದಿಗೆ ಏಕೆ (ನೇರವಾಗಿ) ಮಾತನಾಡುವುದಿಲ್ಲ? ಅಥವಾ ನಮಗೆ (ಮನದಟ್ಟಾಗುವಂತಹ) ಒಂದು ದೃಷ್ಟಾಂತವೇಕೆ ಬರುವುದಿಲ್ಲ?' ಹೀಗೆ ಇವರು ಹೇಳಿದಂತೆಯೇ ಇವರ ಪೂರ್ವಿಕರೂ ಹೇಳಿರುವರು. ಇವರ ಮತ್ತು ಅವರ ಹೃದಯಗಳು ಪರಸ್ಪರ ಹೋಲಿಕೆಯಿರುವುದಾಗಿವೆ. ದೃಢವಾಗಿ ವಿಶ್ವಾಸವಿಡುವ ಜನರಿಗೆ ನಾವು ದೃಷ್ಟಾಂತ ಗಳನ್ನು ಸ್ಪಷ್ಟಗೊಳಿಸಿಕೊಟ್ಟಿರುವೆವು.

وَقَالَ ٱلَّذِينَ لَا يَعْلَمُونَ لَوْلَا يُكَلِّمُنَا ٱللَّهُ أَوْ تَأْتِينَآ ءَايَةٌ ۗ كَذَٰلِكَ قَالَ ٱلَّذِينَ مِن قَبْلِهِم مِّثْلَ قَوْلِهِمْ ۘ تَشَٰبَهَتْ قُلُوبُهُمْ ۗ قَدْ بَيَّنَّا ٱلْءَايَٰتِ لِقَوْمٍ يُوقِنُونَ ﴿١١٨﴾

119. ಖಂಡಿತವಾಗಿಯೂ ನಾವು ತಮ್ಮನ್ನು ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿ ಸತ್ಯದೊಂದಿಗೆ ಕಳುಹಿಸಿರುವೆವು. ನರಕವಾಸಿಗಳ ಬಗ್ಗೆ ತಮ್ಮೊಂದಿಗೆ ಪ್ರಶ್ನಿಸಲಾಗದು.

إِنَّآ أَرْسَلْنَٰكَ بِٱلْحَقِّ بَشِيرًا وَنَذِيرًا ۖ وَلَا تُسْـَٔلُ عَنْ أَصْحَٰبِ ٱلْجَحِيمِ ﴿١١٩﴾

120. ತಾವು ಅವರ ಮಾರ್ಗವನ್ನು ಅನುಸರಿಸುವ ತನಕ ಯಹೂದರಾಗಲಿ, ಕ್ರೈಸ್ತರಾಗಲಿ ಎಂದಿಗೂ ತಮ್ಮ ಬಗ್ಗೆ ಸಂತೃಪ್ತರಾಗಲಾರರು. ಹೇಳಿರಿ: 'ಅಲ್ಲಾಹುವಿನ ಮಾರ್ಗದರ್ಶನವೇ ನೈಜ ಮಾರ್ಗದರ್ಶನವಾಗಿದೆ.' ತಮಗೆ ಅರಿವು ಲಭಿಸಿದ ಬಳಿಕ ತಾವೇನಾದರೂ ಅವರ ದೇಹೇಚ್ಛೆಗಳನ್ನು ಅನುಸರಿಸುವುದಾದರೆ ತಮ್ಮನ್ನು ಅಲ್ಲಾಹುವಿನಿಂದ ರಕ್ಷಿಸಲು ಮತ್ತು ತಮಗೆ ಸಹಾಯ ಮಾಡಲು ಯಾರೂ ಇರಲಾರರು.

وَلَن تَرْضَىٰ عَنكَ ٱلْيَهُودُ وَلَا ٱلنَّصَٰرَىٰ حَتَّىٰ تَتَّبِعَ مِلَّتَهُمْ ۗ قُلْ إِنَّ هُدَى ٱللَّهِ هُوَ ٱلْهُدَىٰ ۗ وَلَئِنِ ٱتَّبَعْتَ أَهْوَآءَهُم بَعْدَ ٱلَّذِى جَآءَكَ مِنَ ٱلْعِلْمِ ۙ مَا لَكَ مِنَ ٱللَّهِ مِن وَلِىٍّ وَلَا نَصِيرٍ ﴿١٢٠﴾

**121.** ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ಅದನ್ನು ಪಾರಾಯಣ ಮಾಡಬೇಕಾದ ರೀತಿಯಲ್ಲೇ ಪಾರಾಯಣ ಮಾಡುತ್ತಿರುವರು. ಅವರು ಅದರಲ್ಲಿ ವಿಶ್ವಾಸವಿಡುತ್ತಿರುವರು. ಆದರೆ ಯಾರು ಅದರಲ್ಲಿ ಅವಿಶ್ವಾಸವಿಡುವರೋ ಅವರೇ ನಷ್ಟ ಹೊಂದಿದವರಾಗಿರುವರು.

ٱلَّذِينَ ءَاتَيۡنَٰهُمُ ٱلۡكِتَٰبَ يَتۡلُونَهُۥ حَقَّ تِلَاوَتِهِۦٓ أُوْلَٰٓئِكَ يُؤۡمِنُونَ بِهِۦۗ وَمَن يَكۡفُرۡ بِهِۦ فَأُوْلَٰٓئِكَ هُمُ ٱلۡخَٰسِرُونَ ﴿١٢١﴾

**122.** ಓ ಇಸ್ರಾಈಲ್ ಸಂತತಿಗಳೇ! ನಾನು ನಿಮಗೆ ದಯಪಾಲಿಸಿರುವ ನನ್ನ ಅನುಗ್ರಹವನ್ನು ಮತ್ತು ನಾನು ನಿಮಗೆ ಇತರ ಜನರಿಗಿಂತ ಹೆಚ್ಚು ಶ್ರೇಷ್ಠತೆ ನೀಡಿರುವುದನ್ನು ಸ್ಮರಿಸಿರಿ.

يَٰبَنِيٓ إِسۡرَٰٓءِيلَ ٱذۡكُرُواْ نِعۡمَتِيَ ٱلَّتِيٓ أَنۡعَمۡتُ عَلَيۡكُمۡ وَأَنِّي فَضَّلۡتُكُمۡ عَلَى ٱلۡعَٰلَمِينَ ﴿١٢٢﴾

**123.** ಒಬ್ಬನು ಇನ್ನೊಬ್ಬನಿಗೆ ಯಾವುದೇ ಉಪಕಾರ ವನ್ನು ಮಾಡಲಾಗದ, ಯಾವ ವ್ಯಕ್ತಿಯಿಂದಲೂ ಯಾವುದೇ ಪ್ರಾಯಶ್ಚಿತ್ತವನ್ನು ಸ್ವೀಕರಿಸಲಾಗದ, ಯಾವ ವ್ಯಕ್ತಿಗೂ ಯಾವುದೇ ಶಿಫಾರಸ್ಸು ಪ್ರಯೋಜನಕರವಾಗದ, ಅವರಿಗೆ ಯಾವುದೇ ಸಹಾಯವೂ ದೊರೆಯದ ಒಂದು ದಿನವನ್ನು ನೀವು ಭಯಪಡಿರಿ.

وَٱتَّقُواْ يَوۡمٗا لَّا تَجۡزِي نَفۡسٌ عَن نَّفۡسٖ شَيۡـٔٗا وَلَا يُقۡبَلُ مِنۡهَا عَدۡلٞ وَلَا تَنفَعُهَا شَفَٰعَةٞ وَلَا هُمۡ يُنصَرُونَ ﴿١٢٣﴾

**124.** ಇಬ್ರಾಹೀಮ್‌ರನ್ನು ಅವರ ರಬ್ ಕೆಲವು ಆಜ್ಞೆಗಳ ಮೂಲಕ ಪರೀಕ್ಷಿಸಿದ ಮತ್ತು ಅವರು ಅದನ್ನು ನೆರವೇರಿಸಿದ ಸಂದರ್ಭ(ವನ್ನು ಸ್ಮರಿಸಿರಿ). (ಆಗ) ಅಲ್ಲಾಹು ಅವರೊಂದಿಗೆ ಹೇಳಿದನು: 'ತಮ್ಮನ್ನು ನಾನು ಮಾನವರಿಗೆ ನಾಯಕನಾಗಿ ಮಾಡುವೆನು'. ಇಬ್ರಾಹೀಮ್ ಹೇಳಿದರು: 'ನನ್ನ ಸಂತತಿಗಳಲ್ಲಿ ಸೇರಿದವರನ್ನೂ (ನಾಯಕರಾಗಿ ಮಾಡು)'. ಅಲ್ಲಾಹು ಹೇಳಿದನು: '(ಸರಿ, ಆದರೆ) ನನ್ನ ಈ ನಿರ್ಧಾರ ಅಕ್ರಮಿಗಳಿಗೆ ಅನ್ವಯವಾಗಲಾರದು'.

۞وَإِذِ ٱبۡتَلَىٰٓ إِبۡرَٰهِـۧمَ رَبُّهُۥ بِكَلِمَٰتٖ فَأَتَمَّهُنَّۖ قَالَ إِنِّي جَاعِلُكَ لِلنَّاسِ إِمَامٗاۖ قَالَ وَمِن ذُرِّيَّتِيۖ قَالَ لَا يَنَالُ عَهۡدِي ٱلظَّٰلِمِينَ ﴿١٢٤﴾

**125.** ನಾವು ಆ ಭವನವನ್ನು (ಕಅ್‌ಬಾವನ್ನು) ಜನರು ಸಮ್ಮಿಲನಗೊಳ್ಳುವ ಸ್ಥಳವಾಗಿಯೂ, ಒಂದು ಸುರಕ್ಷಿತ ಕೇಂದ್ರವಾಗಿಯೂ ಮಾಡಿದ ಸಂದರ್ಭ(ವನ್ನು ಸ್ಮರಿಸಿರಿ). ಇಬಾಹೀಮ್

وَإِذۡ جَعَلۡنَا ٱلۡبَيۡتَ مَثَابَةٗ لِّلنَّاسِ وَأَمۡنٗا وَٱتَّخِذُواْ مِن مَّقَامِ إِبۡرَٰهِـۧمَ مُصَلّٗىۖ وَعَهِدۡنَآ إِلَىٰٓ إِبۡرَٰهِـۧمَ وَإِسۡمَٰعِيلَ أَن طَهِّرَا بَيۡتِيَ

ನಿಂತು ಪ್ರಾರ್ಥಿಸಿದ ಸ್ಥಳವನ್ನು ನೀವು (ನಮಾಝ್‌ನ) ಸ್ಥಳವಾಗಿ ಮಾಡಿಕೊಳ್ಳಿರಿ. 'ಪ್ರದಕ್ಷಿಣೆ ಮಾಡುವವರಿಗೂ, ಇಅ್‌ತಿಕಾಫ್ ನಿರ್ವಹಿಸುವವರಿಗೂ, ತಲೆಬಾಗುತ್ತಾ ಮತ್ತು ಸಾಷ್ಟಾಂಗವೆರಗುತ್ತಾ ನಮಾಝ್ ಮಾಡುವವರಿಗೂ ನನ್ನ ಭವನವನ್ನು ನೀವಿಬ್ಬರೂ ಸ್ವಚ್ಛಗೊಳಿಸಿರಿ' ಎಂದು ನಾವು ಇಬ್ರಾಹೀಮ್ ಮತ್ತು ಇಸ್ಮಾಈಲ್‌ರಿಗೆ ಆಜ್ಞೆಯಿತ್ತೆವು.

لِلطَّآئِفِينَ وَٱلْعَٰكِفِينَ وَٱلرُّكَّعِ ٱلسُّجُودِ ﴿١٢٥﴾

126. ಓ ನನ್ನ ರಬ್! ನೀನು ಇದನ್ನೊಂದು ನಿರ್ಭೀತ ಪಟ್ಟಣವನ್ನಾಗಿ ಮಾಡು ಮತ್ತು ಇಲ್ಲಿನ ನಿವಾಸಿಗಳ ಪೈಕಿ ಅಲ್ಲಾಹುವಿನಲ್ಲಿ ಹಾಗೂ ಅಂತ್ಯದಿನದಲ್ಲಿ ವಿಶ್ವಾಸವಿಡುವವರಿಗೆ ಹಣ್ಣುಹಂಪಲುಗಳ ಆಹಾರವನ್ನು ನೀಡು' ಎಂದು ಇಬ್ರಾಹೀಮ್ ಪ್ರಾರ್ಥಿಸಿದ ಸಂದರ್ಭ(ವನ್ನು ಸ್ಮರಿಸಿರಿ). ಅಲ್ಲಾಹು ಹೇಳಿದನು: 'ನಾನು ಅವಿಶ್ವಾಸಿಗೂ (ಆಹಾರ ನೀಡುವೆನು), ನಾನು ಅವನಿಗೆ ಅಲ್ಪಕಾಲದ ಸುಖವನ್ನು ಮಾತ್ರ ನೀಡುವೆನು. ತರುವಾಯ ನರಕ ಶಿಕ್ಷೆಯನ್ನು ಸವಿಯುವಂತೆ ನಾನು ಅವನನ್ನು ನಿರ್ಬಂಧಿಸುವೆನು. (ಅವನು) ತಲುಪುವ ಆ ಸ್ಥಳವು ಅತ್ಯಂತ ನಿಕೃಷ್ಟವಾದುದಾಗಿದೆ!'

وَإِذْ قَالَ إِبْرَٰهِـۧمُ رَبِّ ٱجْعَلْ هَٰذَا بَلَدًا ءَامِنًا وَٱرْزُقْ أَهْلَهُۥ مِنَ ٱلثَّمَرَٰتِ مَنْ ءَامَنَ مِنْهُم بِٱللَّهِ وَٱلْيَوْمِ ٱلْـَٔاخِرِ ۖ قَالَ وَمَن كَفَرَ فَأُمَتِّعُهُۥ قَلِيلًا ثُمَّ أَضْطَرُّهُۥٓ إِلَىٰ عَذَابِ ٱلنَّارِ ۖ وَبِئْسَ ٱلْمَصِيرُ ﴿١٢٦﴾

127. ಇಬ್ರಾಹೀಮ್ ಮತ್ತು ಇಸ್ಮಾಈಲ್ ಜೊತೆಯಾಗಿ ಆ ಭವನದ (ಕಅ್‌ಬಾದ) ಅಡಿಪಾಯವನ್ನು ಎತ್ತರಿಸುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). (ಅವರಿಬ್ಬರೂ ಪ್ರಾರ್ಥಿಸಿದರು): ಓ ನಮ್ಮ ರಬ್! ನಮ್ಮಿಂದ ಇದನ್ನು ಸ್ವೀಕರಿಸು. ಖಂಡಿತವಾಗಿಯೂ ನೀನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವೆ.

وَإِذْ يَرْفَعُ إِبْرَٰهِـۧمُ ٱلْقَوَاعِدَ مِنَ ٱلْبَيْتِ وَإِسْمَٰعِيلُ رَبَّنَا تَقَبَّلْ مِنَّآ ۖ إِنَّكَ أَنتَ ٱلسَّمِيعُ ٱلْعَلِيمُ ﴿١٢٧﴾

128. ಓ ನಮ್ಮ ರಬ್! ನಮ್ಮಿಬ್ಬರನ್ನೂ ನಿನಗೆ ಸಂಪೂರ್ಣ ಶರಣಾದವರಾಗಿ ಮಾಡು, ನಿನಗೆ ಸಂಪೂರ್ಣ ಶರಣಾದ ಒಂದು ಸಮುದಾಯವನ್ನು ನಮ್ಮ ಸಂತತಿಗಳಲ್ಲಿಯೂ

رَبَّنَا وَٱجْعَلْنَا مُسْلِمَيْنِ لَكَ وَمِن ذُرِّيَّتِنَآ أُمَّةً مُّسْلِمَةً لَّكَ وَأَرِنَا مَنَاسِكَنَا وَتُبْ عَلَيْنَآ ۖ إِنَّكَ أَنتَ ٱلتَّوَّابُ ٱلرَّحِيمُ ﴿١٢٨﴾

ಮಾಡು, ನಮಗೆ ನಮ್ಮ ಆರಾಧನಾ ಕ್ರಮಗಳನ್ನು ತೋರಿಸಿಕೊಡು ಮತ್ತು ನಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸು. ಖಂಡಿತವಾಗಿಯೂ ನೀನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವೆ'.

**129.** ಓ ನಮ್ಮ ರಬ್! ಅವರಿಗೆ (ನಮ್ಮ ಸಂತತಿಗಳಿಗೆ) ನಿನ್ನ ದೃಷ್ಟಾಂತಗಳನ್ನು ಓದಿಕೊಡುವ, ಗ್ರಂಥವನ್ನು ಮತ್ತು ಜ್ಞಾನವನ್ನು ಕಲಿಸಿಕೊಡುವ ಮತ್ತು ಅವರನ್ನು ಶುದ್ಧೀಕರಿಸುವ ಓರ್ವ ಸಂದೇಶವಾಹಕರನ್ನು ಅವರಿಂದಲೇ ಕಳುಹಿಸಿಕೊಡು. ಖಂಡಿತವಾಗಿಯೂ ನೀನು ಪ್ರತಾಪಶಾಲಿಯೂ ಮಹಾಜ್ಞಾನಿಯೂ ಆಗಿರುವೆ'.

رَبَّنَا وَٱبۡعَثۡ فِيهِمۡ رَسُولٗا مِّنۡهُمۡ يَتۡلُواْ عَلَيۡهِمۡ ءَايَٰتِكَ وَيُعَلِّمُهُمُ ٱلۡكِتَٰبَ وَٱلۡحِكۡمَةَ وَيُزَكِّيهِمۡۖ إِنَّكَ أَنتَ ٱلۡعَزِيزُ ٱلۡحَكِيمُ ١٢٩

**130.** ಸ್ವತಃ ತನ್ನನ್ನೇ ಮೂರ್ಖನನ್ನಾಗಿ ಮಾಡಿಕೊಂಡವನ ಹೊರತು ಇಬ್ರಾಹೀಮ್‌ರ ಮಾರ್ಗದಿಂದ ವಿಮುಖನಾಗುವವನು ಯಾರಿರುವನು? ನಾವು ಅವರನ್ನು (ಇಬ್ರಾಹೀಮ್‌ರನ್ನು) ಇಹಲೋಕದಲ್ಲಿ ವಿಶೇಷವಾಗಿ ಆರಿಸಿರುವೆವು. ಪರಲೋಕದಲ್ಲಿ ಅವರು ಸಜ್ಜನರಲ್ಲೇ ಸೇರಿದವರಾಗಿರುವರು.

وَمَن يَرۡغَبُ عَن مِّلَّةِ إِبۡرَٰهِـۧمَ إِلَّا مَن سَفِهَ نَفۡسَهُۥۚ وَلَقَدِ ٱصۡطَفَيۡنَٰهُ فِي ٱلدُّنۡيَاۖ وَإِنَّهُۥ فِي ٱلۡأٓخِرَةِ لَمِنَ ٱلصَّٰلِحِينَ ١٣٠

**131.** ಅವರೊಂದಿಗೆ ಅವರ ರಬ್ 'ಶರಣಾಗು' ಎಂದಾಗ 'ಸರ್ವಲೋಕಗಳ ರಬ್ಬಿಗೆ ನಾನು ಸಂಪೂರ್ಣ ಶರಣಾಗಿರುವೆನು' ಎಂದು ಅವರು ಹೇಳಿದರು.

إِذۡ قَالَ لَهُۥ رَبُّهُۥٓ أَسۡلِمۡۖ قَالَ أَسۡلَمۡتُ لِرَبِّ ٱلۡعَٰلَمِينَ ١٣١

**132.** ಇಬ್ರಾಹೀಮ್ ಮತ್ತು ಯಅ್‌ಕೂಬ್ ತಮ್ಮ ಸಂತತಿಗಳಿಗೆ ಇದನ್ನು (ಶರಣಾಗತಿಯನ್ನು) ಉಪದೇಶಿಸಿದರು. 'ಓ ನನ್ನ ಮಕ್ಕಳೇ! ಈ ಧರ್ಮವನ್ನು ಅಲ್ಲಾಹು ನಿಮಗೆ ವಿಶೇಷವಾಗಿ ಆರಿಸಿಕೊಟ್ಟಿರುವನು. ಆದ್ದರಿಂದ ಅಲ್ಲಾಹುವಿಗೆ ಸಂಪೂರ್ಣ ಶರಣಾದವರಾಗಿ (ಮುಸ್ಲಿಮರಾಗಿ) ವಿನಾ ನೀವು ಮರಣ ಹೊಂದುವಂತಾಗದಿರಲಿ' (ಎಂದು ಅವರಿಬ್ಬರೂ ಉಪದೇಶಿಸಿದ್ದರು.)

وَوَصَّىٰ بِهَآ إِبۡرَٰهِـۧمُ بَنِيهِ وَيَعۡقُوبُ يَٰبَنِيَّ إِنَّ ٱللَّهَ ٱصۡطَفَىٰ لَكُمُ ٱلدِّينَ فَلَا تَمُوتُنَّ إِلَّا وَأَنتُم مُّسۡلِمُونَ ١٣٢

**133.** ‘ನನ್ನ ಬಳಿಕ ನೀವು ಯಾರನ್ನು ಆರಾಧಿಸುವಿರಿ’ ಎಂದು ಮರಣಾಸನ್ನ ವೇಳೆಯಲ್ಲಿ ಯಅ್‌ಕೂಬ್ ತಮ್ಮ ಮಕ್ಕಳೊಂದಿಗೆ ಪ್ರಶ್ನಿಸಿದಾಗ ನೀವು ಅಲ್ಲಿ ಉಪಸ್ಥಿತರಿದ್ದಿರಾ? ಅವರು ಹೇಳಿದರು: ‘ತಮ್ಮ ಆರಾಧ್ಯನೂ, ತಮ್ಮ ಪಿತಾಮಹರಾದ ಇಬ್ರಾಹೀಮ್, ಇಸ್‌ಹಾಕ್ ಮತ್ತು ಇಸ್ಮಾಈಲರ ಆರಾಧ್ಯನೂ ಆಗಿರುವ ಏಕೈಕ ಆರಾಧ್ಯನನ್ನು ಮಾತ್ರ ನಾವು ಆರಾಧಿಸುವೆವು. ನಾವು ಅವನಿಗೆ ಸಂಪೂರ್ಣ ಶರಣಾಗಿ ಜೀವಿಸುವೆವು’.

أَمۡ كُنتُمۡ شُهَدَآءَ إِذۡ حَضَرَ يَعۡقُوبَ ٱلۡمَوۡتُ إِذۡ قَالَ لِبَنِيهِ مَا تَعۡبُدُونَ مِنۢ بَعۡدِيۖ قَالُواْ نَعۡبُدُ إِلَٰهَكَ وَإِلَٰهَ ءَابَآئِكَ إِبۡرَٰهِـۧمَ وَإِسۡمَٰعِيلَ وَإِسۡحَٰقَ إِلَٰهٗا وَٰحِدٗا وَنَحۡنُ لَهُۥ مُسۡلِمُونَ ١٣٣

**134.** ಅದು ಗತಿಸಿಹೋದ ಒಂದು ಸಮುದಾಯವಾಗಿದೆ. ಅವರು ಸಂಪಾದಿಸಿರುವುದರ ಫಲ ಅವರಿಗೂ; ನೀವು ಸಂಪಾದಿಸಿರುವುದರ ಫಲ ನಿಮಗೂ ಇದೆ. ಅವರೇನು ಮಾಡುತ್ತಿದ್ದರೋ ಅದರ ಕುರಿತು ನಿಮ್ಮೊಂದಿಗೆ ಪ್ರಶ್ನಿಸಲಾಗದು.

تِلۡكَ أُمَّةٞ قَدۡ خَلَتۡۖ لَهَا مَا كَسَبَتۡ وَلَكُم مَّا كَسَبۡتُمۡۖ وَلَا تُسۡـَٔلُونَ عَمَّا كَانُواْ يَعۡمَلُونَ ١٣٤

**135.** ‘ನೀವು ಯಹೂದರೋ ಕ್ರೈಸ್ತರೋ ಆದರೆ ಮಾತ್ರ ಸನ್ಮಾರ್ಗ ಪಡೆದವರಾಗುವಿರಿ’ ಎಂದು ಅವರು ಹೇಳುವರು. ಹೇಳಿರಿ: ‘ಅಲ್ಲ; (ನಾವು ಅನುಸರಿಸಬೇಕಾದುದು) ಶುದ್ಧಮನಸ್ಕರಾಗಿರುವ ಇಬ್ರಾಹೀಮ್‌ರ ಮಾರ್ಗವನ್ನಾಗಿದೆ. ಅವರು ಬಹುದೇವಾರಾಧಕರ ಪೈಕಿ ಸೇರಿದವರಾಗಿರಲಿಲ್ಲ.’

وَقَالُواْ كُونُواْ هُودًا أَوۡ نَصَٰرَىٰ تَهۡتَدُواْۗ قُلۡ بَلۡ مِلَّةَ إِبۡرَٰهِـۧمَ حَنِيفٗاۖ وَمَا كَانَ مِنَ ٱلۡمُشۡرِكِينَ ١٣٥

**136.** ಹೇಳಿರಿ: ‘ಅಲ್ಲಾಹುವಿನಲ್ಲಿ, ಅವನಿಂದ ನಮಗೆ ಅವತೀರ್ಣಗೊಳಿಸಲಾಗಿರುವುದರಲ್ಲಿ, ಇಬ್ರಾಹೀಮ್‌ರಿಗೆ, ಇಸ್ಮಾಈಲ್‌ರಿಗೆ, ಇಸ್‌ಹಾಕ್‌ರಿಗೆ, ಯಅ್‌ಕೂಬ್‌ರಿಗೆ ಮತ್ತು ಯಅ್‌ಕೂಬ್‌ರ ಸಂತತಿಗೆ ಅವತೀರ್ಣಗೊಳಿಸಲಾಗಿರುವುದರಲ್ಲಿ, ಮೂಸಾ ಮತ್ತು ಈಸಾರಿಗೆ ನೀಡಲಾಗಿರುವುದರಲ್ಲಿ, ಸರ್ವ ಪ್ರವಾದಿಗಳಿಗೆ

قُولُوٓاْ ءَامَنَّا بِٱللَّهِ وَمَآ أُنزِلَ إِلَيۡنَا وَمَآ أُنزِلَ إِلَىٰٓ إِبۡرَٰهِـۧمَ وَإِسۡمَٰعِيلَ وَإِسۡحَٰقَ وَيَعۡقُوبَ وَٱلۡأَسۡبَاطِ وَمَآ أُوتِيَ مُوسَىٰ وَعِيسَىٰ وَمَآ أُوتِيَ ٱلنَّبِيُّونَ مِن رَّبِّهِمۡ لَا نُفَرِّقُ بَيۡنَ أَحَدٖ مِّنۡهُمۡ وَنَحۡنُ لَهُۥ مُسۡلِمُونَ ١٣٦

ಅವರ ಪ್ರಭುವಿನಿಂದ ನೀಡಲಾಗಿರುವುದರಲ್ಲಿ (ಸಂದೇಶದಲ್ಲಿ) ನಾವು ವಿಶ್ವಾಸವಿಟ್ಟಿರುವೆವು. ಅವರ ಪೈಕಿ ಯಾರ ಮಧ್ಯೆಯೂ ನಾವು ತಾರತಮ್ಯ ಮಾಡಲಾರೆವು. ನಾವು ಅವನಿಗೆ (ಅಲ್ಲಾಹುವಿಗೆ) ಸಂಪೂರ್ಣ ಶರಣಾದವರಾಗಿರುವೆವು.'

**137.** ನೀವು ವಿಶ್ವಾಸವಿಟ್ಟಿರುವಂತೆಯೇ ಅವರೂ ವಿಶ್ವಾಸವಿಟ್ಟರೆ ಅವರು ಸನ್ಮಾರ್ಗ ಪಡೆದವರಾದರು. ಅವರು ವಿಮುಖರಾದರೆ ಅವರ ಧೋರಣೆಯು ಕೇವಲ ವರ್ಗವಿರೋಧ ಮಾತ್ರವಾಗಿದೆ. ಅವರಿಂದ ತಮ್ಮನ್ನು ರಕ್ಷಿಸಲು ತಮಗೆ ಅಲ್ಲಾಹು ಸಾಕು. ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

فَإِنْ ءَامَنُواْ بِمِثْلِ مَآ ءَامَنتُم بِهِۦ فَقَدِ ٱهْتَدَواْۖ وَّإِن تَوَلَّوْاْ فَإِنَّمَا هُمْ فِي شِقَاقٍۖ فَسَيَكْفِيكَهُمُ ٱللَّهُۚ وَهُوَ ٱلسَّمِيعُ ٱلْعَلِيمُ ١٣٧

**138.** 'ಅಲ್ಲಾಹು ನೀಡಿದ ಬಣ್ಣವಾಗಿದೆ (ನಮ್ಮದು). ಅಲ್ಲಾಹುವಿಗಿಂತ ಉತ್ತಮವಾಗಿ ಬಣ್ಣವನ್ನು ನೀಡುವವನು ಯಾರಿರುವನು? ನಾವು ಅವನನ್ನೇ ಆರಾಧಿಸುತ್ತಿರುವೆವು'.

صِبْغَةَ ٱللَّهِ وَمَنْ أَحْسَنُ مِنَ ٱللَّهِ صِبْغَةًۖ وَنَحْنُ لَهُۥ عَٰبِدُونَ ١٣٨

**139.** (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ನಮ್ಮ ಮತ್ತು ನಿಮ್ಮ ರಬ್ ಆಗಿರುವಾಗ ಅವನ ವಿಷಯದಲ್ಲಿ ನೀವು ನಮ್ಮೊಂದಿಗೆ ತರ್ಕಿಸುತ್ತಿರುವಿರಾ? ನಮಗೆ ನಮ್ಮ ಕರ್ಮ(ಫಲ)ಗಳು; ನಿಮಗೆ ನಿಮ್ಮ ಕರ್ಮ(ಫಲ) ಗಳು ಇರುವುವು. ನಾವು ಅವನೊಂದಿಗೆ ನಿಷ್ಕ ಳಂಕತೆಯುಳ್ಳವರಾಗಿರುವೆವು.'

قُلْ أَتُحَآجُّونَنَا فِي ٱللَّهِ وَهُوَ رَبُّنَا وَرَبُّكُمْ وَلَنَآ أَعْمَٰلُنَا وَلَكُمْ أَعْمَٰلُكُمْ وَنَحْنُ لَهُۥ مُخْلِصُونَ ١٣٩

**140.** ಇಬ್ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬ್‌ರ ಸಂತತಿಗಳೆಲ್ಲರೂ ಯಹೂದರೋ ಕ್ರೈಸ್ತರೋ ಆಗಿದ್ದರೆಂದು ನೀವು ಹೇಳುತ್ತಿರುವಿರಾ? (ಓ ಪ್ರವಾದಿಯವರೇ!) ತಾವು ಕೇಳಿರಿ: 'ಹೆಚ್ಚಿನ ಅರಿವಿರುವುದು ನಿಮಗೋ ಅಥವಾ ಅಲ್ಲಾಹುವಿಗೋ?' ಅಲ್ಲಾಹುವಿನಿಂದ ದೊರೆತ ಸಾಕ್ಷ್ಯವು ತನ್ನ ಬಳಿಯಿದ್ದೂ ಅದನ್ನು

أَمْ تَقُولُونَ إِنَّ إِبْرَٰهِـۧمَ وَإِسْمَٰعِيلَ وَإِسْحَٰقَ وَيَعْقُوبَ وَٱلْأَسْبَاطَ كَانُواْ هُودًا أَوْ نَصَٰرَىٰۗ قُلْ ءَأَنتُمْ أَعْلَمُ أَمِ ٱللَّهُۗ وَمَنْ أَظْلَمُ مِمَّن كَتَمَ شَهَٰدَةً عِندَهُۥ مِنَ ٱللَّهِۗ وَمَا ٱللَّهُ بِغَٰفِلٍ عَمَّا تَعْمَلُونَ ١٤٠

ಮರೆಮಾಚಿದವನಿಗಿಂತ ದೊಡ್ಡ ಅಕ್ರಮಿ ಯಾರಿರುವನು? ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಅಲಕ್ಷ್ಯನಲ್ಲ.

**141.** ಅದು ಗತಿಸಿಹೋದ ಒಂದು ಸಮುದಾಯವಾಗಿದೆ. ಅವರು ಸಂಪಾದಿಸಿರುವುದರ ಫಲ ಅವರಿಗೆ; ನೀವು ಸಂಪಾದಿಸಿರುವುದರ ಫಲ ನಿಮಗೆ ಇರುವುದು. ಅವರೇನು ಮಾಡುತ್ತಿದ್ದರೋ ಅದರ ಕುರಿತು ನಿಮ್ಮೊಂದಿಗೆ ಪ್ರಶ್ನಿಸಲಾಗದು.

**142.** 'ಇವರು ಇದುವರೆಗೆ (ಪ್ರಾರ್ಥನಾ ವೇಳೆಯಲ್ಲಿ) ಅಭಿಮುಖವಾಗಿ ನಿಂತ ದಿಕ್ಕಿನಿಂದ ಇವರನ್ನು ತಿರುಗಿಸಿದ್ದಾದರೂ ಏನು?' ಎಂದು ಜನರ ಪೈಕಿ ತಿಳಿಗೇಡಿಗಳು ಕೇಳುವರು[1] (ಓ ಪ್ರವಾದಿಯವರೇ!) ಹೇಳಿರಿ: 'ಪೂರ್ವ ಮತ್ತು ಪಶ್ಚಿಮವು ಅಲ್ಲಾಹುವಿನದ್ದಾಗಿವೆ. ತಾನಿಚ್ಛಿಸುವವರನ್ನು ಅವನು ನೇರ ಮಾರ್ಗದೆಡೆಗೆ ಮುನ್ನಡೆಸುವನು'.

**143.** ಹೀಗೆ ನಾವು ನಿಮ್ಮನ್ನು ಒಂದು ಮಧ್ಯಮ ಸಮುದಾಯವಾಗಿ ಮಾಡಿದೆವು; ನೀವು ಜನರ ಮೇಲೆ ಸಾಕ್ಷಿಗಳಾಗುವ ಸಲುವಾಗಿ ಮತ್ತು ಸಂದೇಶವಾಹಕರು ನಿಮ್ಮ ಮೇಲೆ ಸಾಕ್ಷಿಯಾಗುವ ಸಲುವಾಗಿ. ತಾವು ಇದು ವರೆಗೆ ತಿರುಗಿ ನಿಂತಿದ್ದ ದಿಕ್ಕನ್ನು ನಾವು ಕಿಬ್ಲಾ ಆಗಿ ಮಾಡಿರುವುದು ಸಂದೇಶವಾಹಕರನ್ನು ಅನುಸರಿಸುವವರು ಯಾರು ಮತ್ತು ವಿಮುಖರಾಗುವವರು ಯಾರು ಎಂದು ಅರಿಯುವ ಸಲುವಾಗಿ ಮಾತ್ರವಾಗಿತ್ತು. ಅಲ್ಲಾಹು ಸತ್ಯಮಾರ್ಗಕ್ಕೆ ಸೇರಿಸಿದವರ

تِلۡكَ أُمَّةٞ قَدۡ خَلَتۡۖ لَهَا مَا كَسَبَتۡ
وَلَكُم مَّا كَسَبۡتُمۡۖ وَلَا تُسۡـَٔلُونَ عَمَّا
كَانُواْ يَعۡمَلُونَ ١٤١

۞سَيَقُولُ ٱلسُّفَهَآءُ مِنَ ٱلنَّاسِ مَا وَلَّىٰهُمۡ
عَن قِبۡلَتِهِمُ ٱلَّتِي كَانُواْ عَلَيۡهَاۚ قُل لِّلَّهِ
ٱلۡمَشۡرِقُ وَٱلۡمَغۡرِبُۚ يَهۡدِي مَن يَشَآءُ إِلَىٰ
صِرَٰطٖ مُّسۡتَقِيمٖ ١٤٢

وَكَذَٰلِكَ جَعَلۡنَٰكُمۡ أُمَّةٗ وَسَطٗا لِّتَكُونُواْ
شُهَدَآءَ عَلَى ٱلنَّاسِ وَيَكُونَ ٱلرَّسُولُ
عَلَيۡكُمۡ شَهِيدٗاۗ وَمَا جَعَلۡنَا ٱلۡقِبۡلَةَ
ٱلَّتِي كُنتَ عَلَيۡهَآ إِلَّا لِنَعۡلَمَ مَن يَتَّبِعُ
ٱلرَّسُولَ مِمَّن يَنقَلِبُ عَلَىٰ عَقِبَيۡهِۚ وَإِن
كَانَتۡ لَكَبِيرَةً إِلَّا عَلَى ٱلَّذِينَ هَدَى ٱللَّهُۗ
وَمَا كَانَ ٱللَّهُ لِيُضِيعَ إِيمَٰنَكُمۡۚ إِنَّ ٱللَّهَ
بِٱلنَّاسِ لَرَءُوفٞ رَّحِيمٞ ١٤٣

1 ಆರಂಭ ಕಾಲದಲ್ಲಿ ಬೈತುಲ್ ಮುಕದ್ದಿಸ್ ಅಥವಾ ಮಸ್ಜಿದುಲ್ ಅಕ್ಸಾದತ್ತ ತಿರುಗಿ ನಮಾಝ್ ನಿರ್ವಹಿಸುವಂತೆ ಮುಸ್ಲಿಮರಿಗೆ ಆಜ್ಞೆ ನೀಡಲಾಗಿತ್ತು. ಮದೀನಾ ಜೀವನದ ದ್ವಿತೀಯ ವರ್ಷದಲ್ಲಿ ಕಅ್‌ಬಾದತ್ತ ತಿರುಗಿ ನಮಾಝ್ ನಿರ್ವಹಿಸಲು ಅಲ್ಲಾಹುವಿನ ಆಜ್ಞೆ ಲಭಿಸಿತು.

ಹೊರತು ಇತರೆಲ್ಲರಿಗೂ ಅದು (ಕಿಬ್ಲಾ ಬದಲಾವಣೆ) ಒಂದು ಮಹಾ ಸಮಸ್ಯೆಯೇ ಆಗಿರುವುದು. ಅಲ್ಲಾಹು ನಿಮ್ಮ ವಿಶ್ವಾಸವನ್ನು ವ್ಯರ್ಥಗೊಳಿಸಲಾರನು. ಖಂಡಿತವಾಗಿಯೂ ಅಲ್ಲಾಹು ಮನುಷ್ಯರೊಂದಿಗೆ ಅತ್ಯಧಿಕ ದಯೆಯುಳ್ಳವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

قَدْ نَرَىٰ تَقَلُّبَ وَجْهِكَ فِي ٱلسَّمَآءِ ۖ فَلَنُوَلِّيَنَّكَ قِبْلَةً تَرْضَىٰهَا ۚ فَوَلِّ وَجْهَكَ شَطْرَ ٱلْمَسْجِدِ ٱلْحَرَامِ ۚ وَحَيْثُ مَا كُنتُمْ فَوَلُّوا۟ وُجُوهَكُمْ شَطْرَهُۥ ۗ وَإِنَّ ٱلَّذِينَ أُوتُوا۟ ٱلْكِتَـٰبَ لَيَعْلَمُونَ أَنَّهُ ٱلْحَقُّ مِن رَّبِّهِمْ ۗ وَمَا ٱللَّهُ بِغَـٰفِلٍ عَمَّا يَعْمَلُونَ ﴿١٤٤﴾

**144.** (ಓ ಪ್ರವಾದಿಯವರೇ!) ತಮ್ಮ ಮುಖವು ಆಕಾಶದೆಡೆಗೆ ತಿರುಗುತ್ತಿರುವುದನ್ನು ನಾವು ಕಾಣುತ್ತಿರುವೆವು. ಆದ್ದರಿಂದ ತಾವು ಇಷ್ಟಪಡುವಂತಹ ಕಿಬ್ಲಾದೆಡೆಗೆ ಖಂಡಿತ ವಾಗಿಯೂ ನಾವು ತಮ್ಮನ್ನು ತಿರುಗಿಸುವೆವು. ಆದ್ದರಿಂದ ತಾವು ಇನ್ನು ಮುಂದೆ ತಮ್ಮ ಮುಖವನ್ನು ಮಸ್ಜಿದುಲ್ ಹರಾಮ್‌ನೆಡೆಗೆ ತಿರುಗಿಸಿರಿ. (ಓ ವಿಶ್ವಾಸಿಗಳೇ!) ನೀವು ಎಲ್ಲಿದ್ದರೂ ನಿಮ್ಮ ಮುಖಗಳನ್ನು ಅದರೆಡೆಗೆ ತಿರುಗಿಸಿರಿ. ಗ್ರಂಥ ನೀಡಲಾದವರಿಗೆ ಇದು ಅವರ ರಬ್‌ನ ವತಿಯ ಸತ್ಯವೆಂದು ಚೆನ್ನಾಗಿ ತಿಳಿದಿದೆ. ಅವರು ಮಾಡುತ್ತಿರುವುದರ ಬಗ್ಗೆ ಅಲ್ಲಾಹು ಕಿಂಚಿತ್ತೂ ಅಲಕ್ಷ್ಯನಲ್ಲ.

وَلَئِنْ أَتَيْتَ ٱلَّذِينَ أُوتُوا۟ ٱلْكِتَـٰبَ بِكُلِّ ءَايَةٍ مَّا تَبِعُوا۟ قِبْلَتَكَ ۚ وَمَآ أَنتَ بِتَابِعٍ قِبْلَتَهُمْ ۚ وَمَا بَعْضُهُم بِتَابِعٍ قِبْلَةَ بَعْضٍ ۚ وَلَئِنِ ٱتَّبَعْتَ أَهْوَآءَهُم مِّنۢ بَعْدِ مَا جَآءَكَ مِنَ ٱلْعِلْمِ ۙ إِنَّكَ إِذًا لَّمِنَ ٱلظَّـٰلِمِينَ ﴿١٤٥﴾

**145.** ತಾವು ಗ್ರಂಥ ನೀಡಲಾದವರ ಬಳಿಗೆ ಸರ್ವವಿಧ ದೃಷ್ಟಾಂತಗಳನ್ನು ತಂದರೂ ಅವರು ತಮ್ಮ ಕಿಬ್ಲಾವನ್ನು ಅನುಸರಿಸಲಾರರು. ಅವರ ಕಿಬ್ಲಾವನ್ನು ತಾವೂ ಅನುಸರಿಸಲಾರಿರಿ. ಅವರ ಪೈಕಿ ಒಂದು ಗುಂಪು ಮತ್ತೊಂದು ಗುಂಪಿನ ಕಿಬ್ಲಾವನ್ನು ಅನುಸರಿಸಲಾರರು. ಸ್ಪಷ್ಟವಾದ ಅರಿವು ತಮ್ಮ ಬಳಿಗೆ ಬಂದ ಬಳಿಕವೂ ತಾವೇನಾದರೂ ಅವರ ಇಚ್ಛೆಗಳನ್ನು ಅನುಸರಿಸುವುದಾದರೆ ಖಂಡಿತವಾಗಿಯೂ ತಾವು ಅತಿಕ್ರಮಿಗಳ ಪೈಕಿ ಸೇರಿದವರಾಗುವಿರಿ.

146. ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ತಮ್ಮ ಮಕ್ಕಳನ್ನು ಗುರುತಿಸುವಂತೆಯೇ ಅವರನ್ನು (ಪ್ರವಾದಿಯನ್ನು ) ಗುರುತಿಸುವರು. ಖಂಡಿತವಾಗಿಯೂ ಅವರ ಪೈಕಿ ಒಂದು ಪಂಗಡವು ತಿಳಿದೂ ತಿಳಿದೂ ಸತ್ಯವನ್ನು ಬಚ್ಚಿಡುತ್ತಿದ್ದಾರೆ.

ٱلَّذِينَ ءَاتَيْنَٰهُمُ ٱلْكِتَٰبَ يَعْرِفُونَهُۥ كَمَا يَعْرِفُونَ أَبْنَآءَهُمْ ۖ وَإِنَّ فَرِيقًا مِّنْهُمْ لَيَكْتُمُونَ ٱلْحَقَّ وَهُمْ يَعْلَمُونَ ﴿١٤٦﴾

147. (ಓ ಪ್ರವಾದಿಯವರೇ! ಈ ಸಂದೇಶವು) ತಮ್ಮ ರಬ್‌ನ ವತಿಯ ಸತ್ಯವಾಗಿದೆ. ಆದ್ದರಿಂದ ತಾವು ಸಂದೇಹ ಪಡುವವರ ಪೈಕಿ ಎಂದಿಗೂ ಸೇರದಿರಿ.

ٱلْحَقُّ مِن رَّبِّكَ فَلَا تَكُونَنَّ مِنَ ٱلْمُمْتَرِينَ ﴿١٤٧﴾

148. ಪ್ರತಿಯೊಂದು ಸಮುದಾಯಕ್ಕೂ (ಪ್ರಾರ್ಥನಾ ವೇಳೆಯಲ್ಲಿ) ಅವರು ತಿರುಗಿ ನಿಲ್ಲುವ ಒಂದು ದಿಕ್ಕಿದೆ.[1] ಆದ್ದರಿಂದ ನೀವು ಸತ್ಕರ್ಮಗಳೆಡೆಗೆ ಮುನ್ನುಗ್ಗಿರಿ. ನೀವು ಎಲ್ಲೇ ಇದ್ದರೂ ಅಲ್ಲಾಹು ನಿಮ್ಮನ್ನೆಲ್ಲ ಒಟ್ಟುಗೂಡಿಸಿ ಕರೆತರುವನು. ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَلِكُلٍّ وِجْهَةٌ هُوَ مُوَلِّيهَا ۖ فَٱسْتَبِقُوا۟ ٱلْخَيْرَٰتِ ۚ أَيْنَ مَا تَكُونُوا۟ يَأْتِ بِكُمُ ٱللَّهُ جَمِيعًا ۚ إِنَّ ٱللَّهَ عَلَىٰ كُلِّ شَىْءٍ قَدِيرٌ ﴿١٤٨﴾

149. ತಾವು ಯಾವ ಕಡೆಯಿಂದ ಹೊರಟರೂ (ಪ್ರಾರ್ಥನಾ ವೇಳೆಯಲ್ಲಿ) ತಮ್ಮ ಮುಖವನ್ನು ಮಸ್ಜಿದುಲ್ ಹರಾಮ್‌ನೆಡೆಗೆ ತಿರುಗಿಸಿರಿ. ಖಂಡಿತವಾಗಿಯೂ ಅದು ತಮ್ಮ ರಬ್‌ನ ವತಿಯ ಸತ್ಯ(ವಾದ ನಿರ್ದೇಶನ)ವಾಗಿದೆ. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಅಲಕ್ಷ್ಯನಲ್ಲ.

وَمِنْ حَيْثُ خَرَجْتَ فَوَلِّ وَجْهَكَ شَطْرَ ٱلْمَسْجِدِ ٱلْحَرَامِ ۖ وَإِنَّهُۥ لَلْحَقُّ مِن رَّبِّكَ ۗ وَمَا ٱللَّهُ بِغَٰفِلٍ عَمَّا تَعْمَلُونَ ﴿١٤٩﴾

150. ತಾವು ಯಾವ ಕಡೆಯಿಂದ ಹೊರಟರೂ ತಮ್ಮ ಮುಖವನ್ನು ಮಸ್ಜಿದುಲ್ ಹರಾಮ್‌ನೆಡೆಗೆ ತಿರುಗಿಸಿರಿ. (ಓ ವಿಶ್ವಾಸಿಗಳೇ!)

وَمِنْ حَيْثُ خَرَجْتَ فَوَلِّ وَجْهَكَ شَطْرَ ٱلْمَسْجِدِ ٱلْحَرَامِ ۚ وَحَيْثُ مَا كُنتُمْ فَوَلُّوا۟

1 ಪ್ರತಿಯೊಂದು ಸಮುದಾಯಕ್ಕೂ ಅವರ ಪ್ರಾರ್ಥನೆಗಳಿಗೆ ಏಕೀಭಾವ ನೀಡುವ ಸಲುವಾಗಿ ಒಂದು ಕಿಬ್ಲಾ ನಿಶ್ಚಯಿಸಲಾಗಿರುತ್ತದೆ. ಕಿಬ್ಲಾ ನಿಶ್ಚಯಿಸುವುದರಲ್ಲಿ ಪರಿಗಣಿಸಬೇಕಾದ ಅಂಶಗಳ ಬಗ್ಗೆ ವಿಭಿನ್ನ ದೃಷ್ಟಿಕೋನಗಳಿರಲೂಬಹುದು. ಆದರೆ ಅಂತಹ ಭಿನ್ನಮತಗಳನ್ನು ಮರೆತು ಸತ್ಯವಿಶ್ವಾಸಿಗಳು ಸಂಪೂರ್ಣವಾಗಿ ಅಲ್ಲಾಹುವಿನ ತೀರ್ಮಾನವನ್ನು ಅಂಗೀಕರಿಸಬೇಕಾಗಿದೆ. ಕಿಬ್ಲಾದ ವಿಷಯವು ಸೇರಿದಂತೆ ಯಾವುದೇ ವಿಷಯದಲ್ಲೂ ಅಲ್ಲಾಹುವಿನ ಆಜ್ಞೆಗಳನ್ನು ಪೂರ್ಣವಾಗಿ ಅನುಸರಿಸುವುದರಲ್ಲೇ ಜನರಿಗೆ ಹಿತವಿದೆ.

ನೀವು ಎಲ್ಲೇ ಇದ್ದರೂ ನಿಮ್ಮ ಮುಖಗಳನ್ನು ಅದರೆಡೆಗೆ ತಿರುಗಿಸಿರಿ. ಇದು ನಿಮ್ಮ ವಿರುದ್ಧ ಜನರಿಗೆ ಯಾವ ಸಮರ್ಥನೆಯೂ ಇಲ್ಲದಾಗುವ ಸಲುವಾಗಿದೆ; ಅವರ ಪೈಕಿ ಕೆಲವು ಅಕ್ರಮಿಗಳು (ತರ್ಕಿಸಬಹುದು) ಎಂಬುದರ ಹೊರತು. ಆದರೆ ನೀವು ಅವರನ್ನು ಭಯಪಡದಿರಿ; ನನ್ನನ್ನು ಭಯಪಡಿರಿ. ಇವೆಲ್ಲವೂ ನಾನು ನಿಮಗೆ ನನ್ನ ಅನುಗ್ರಹವನ್ನು ಪೂರ್ಣಗೊಳಿಸುವ ಸಲುವಾಗಿ ಮತ್ತು ನೀವು ಸನ್ಮಾರ್ಗ ಪಡೆಯುವ ಸಲುವಾಗಿದೆ.

وُجُوهَكُمْ شَطْرَهُۥ لِئَلَّا يَكُونَ لِلنَّاسِ عَلَيْكُمْ حُجَّةٌ إِلَّا ٱلَّذِينَ ظَلَمُوا۟ مِنْهُمْ فَلَا تَخْشَوْهُمْ وَٱخْشَوْنِى وَلِأُتِمَّ نِعْمَتِى عَلَيْكُمْ وَلَعَلَّكُمْ تَهْتَدُونَ ﴿١٥٠﴾

**151.** ಇದು ನಮ್ಮ ದೃಷ್ಟಾಂತಗಳನ್ನು ನಿಮಗೆ ಓದಿಕೊಡುವ, ನಿಮ್ಮನ್ನು ಶುದ್ಧೀಕರಿಸುವ, ನಿಮಗೆ ಗ್ರಂಥವನ್ನು ಮತ್ತು ಜ್ಞಾನವನ್ನು ಕಲಿಸುವ ಮತ್ತು ನಿಮಗೆ ಅರಿವಿಲ್ಲದಂತಹ ವಿಷಯಗಳನ್ನು ಕಲಿಸಿಕೊಡುವ ಓರ್ವ ಸಂದೇಶವಾಹಕನನ್ನು ನಾವು ನಿಮ್ಮಿಂದಲೇ ನಿಮ್ಮೆಡೆಗೆ ಕಳುಹಿಸಿ (ತನ್ಮೂಲಕ ನಿಮಗೆ ಅನುಗ್ರಹ ನೀಡಿ)ದಂತೆಯೇ ಆಗಿದೆ.

كَمَآ أَرْسَلْنَا فِيكُمْ رَسُولًا مِّنكُمْ يَتْلُوا۟ عَلَيْكُمْ ءَايَـٰتِنَا وَيُزَكِّيكُمْ وَيُعَلِّمُكُمُ ٱلْكِتَـٰبَ وَٱلْحِكْمَةَ وَيُعَلِّمُكُم مَّا لَمْ تَكُونُوا۟ تَعْلَمُونَ ﴿١٥١﴾

**152.** ಆದ್ದರಿಂದ ನೀವು ನನ್ನನ್ನು ಸ್ಮರಿಸಿರಿ; ನಾನೂ ನಿಮ್ಮನ್ನು ಸ್ಮರಿಸುವೆನು. ನನಗೆ ಕೃತಜ್ಞತೆ ಸಲ್ಲಿಸಿರಿ ಮತ್ತು ನನ್ನೊಂದಿಗೆ ಕೃತಘ್ನತೆ ತೋರದಿರಿ.

فَٱذْكُرُونِىٓ أَذْكُرْكُمْ وَٱشْكُرُوا۟ لِى وَلَا تَكْفُرُونِ ﴿١٥٢﴾

**153.** ಓ ಸತ್ಯವಿಶ್ವಾಸಿಗಳೇ! ನೀವು ಸಹನೆ ಹಾಗೂ ನಮಾಝ್‌ನ ಮೂಲಕ (ಅಲ್ಲಾಹುವಿನಲ್ಲಿ) ಸಹಾಯ ಯಾಚಿಸಿರಿ. ಖಂಡಿತವಾಗಿಯೂ ಅಲ್ಲಾಹು ಸಹನಾಶೀಲರೊಂದಿಗಿರುವನು.

يَـٰٓأَيُّهَا ٱلَّذِينَ ءَامَنُوا۟ ٱسْتَعِينُوا۟ بِٱلصَّبْرِ وَٱلصَّلَوٰةِ ۚ إِنَّ ٱللَّهَ مَعَ ٱلصَّـٰبِرِينَ ﴿١٥٣﴾

**154.** ನೀವು ಅಲ್ಲಾಹುವಿನ ಮಾರ್ಗದಲ್ಲಿ ವಧಿಸಲ್ಪಟ್ಟವರ ಕುರಿತು ಮೃತಪಟ್ಟವರೆಂದು ಹೇಳದಿರಿ. ಅವರು ಜೀವಂತವಾಗಿರುವರು; ಆದರೆ, ನೀವು (ಅದರ ಕುರಿತು) ಗ್ರಹಿಸಲಾರಿರಿ.(1)

وَلَا تَقُولُوا۟ لِمَن يُقْتَلُ فِى سَبِيلِ ٱللَّهِ أَمْوَٰتٌۢ ۚ بَلْ أَحْيَآءٌ وَلَـٰكِن لَّا تَشْعُرُونَ ﴿١٥٤﴾

1 ಮರಣಾನಂತರ ಜೀವನದಲ್ಲಿ ನಂಬಿಕೆಯಿಲ್ಲದವನಿಗೆ ಹುತಾತ್ಮತೆಯ ಮಹತ್ವವನ್ನು ಗ್ರಹಿಸಲಾಗದು. ಭೌತಿಕ ದೃಷ್ಟಿಕೋನದಲ್ಲಿ ವೀಕ್ಷಿಸುವುದಾದರೆ ಒಬ್ಬ ಹುತಾತ್ಮನು ತನ್ನ ಜೀವನವನ್ನು ಸ್ವತಃ ನಾಶಪಡಿಸಿದವನಾಗಿರುವನು;

**155.** ಕೆಲವೊಂದು ಭಯ, ಹಸಿವು, ಸೊತ್ತುನಾಶ, ಪ್ರಾಣಹಾನಿ, ಫಲಗಳ ನಾಶ ಇತ್ಯಾದಿಗಳ ಮೂಲಕ ನಾವು ನಿಮ್ಮನ್ನು ಖಂಡಿತವಾಗಿಯೂ ಪರೀಕ್ಷಿಸುವೆವು. (ಇಂತಹ ಸಂದರ್ಭಗಳಲ್ಲಿ) ಸಹನೆ ಪಾಲಿಸುವವರಿಗೆ ಶುಭವಾರ್ತೆಯನ್ನು ತಿಳಿಸಿರಿ.

وَلَنَبۡلُوَنَّكُم بِشَيۡءٖ مِّنَ ٱلۡخَوۡفِ وَٱلۡجُوعِ
وَنَقۡصٖ مِّنَ ٱلۡأَمۡوَٰلِ وَٱلۡأَنفُسِ وَٱلثَّمَرَٰتِۗ
وَبَشِّرِ ٱلصَّٰبِرِينَ ١٥٥

**156.** ತಮಗೆ ಯಾವುದಾದರೂ ವಿಪತ್ತು ಬಾಧಿಸಿದರೆ ಅವರು (ಆ ಸಹನಾಶೀಲರು) ಹೇಳುವರು: 'ಖಂಡಿತವಾಗಿಯೂ ನಾವು ಅಲ್ಲಾಹುವಿನ ಅಧೀನದಲ್ಲಿರುವೆವು ಮತ್ತು ಅವನೆಡೆಗೇ ಮರಳುವವರಾಗಿರುವೆವು.'

ٱلَّذِينَ إِذَآ أَصَٰبَتۡهُم مُّصِيبَةٞ قَالُوٓاْ إِنَّا لِلَّهِ
وَإِنَّآ إِلَيۡهِ رَٰجِعُونَ ١٥٦

**157.** ಅವರ ಮೇಲೆ ಅವರ ರಬ್‌ನ ವತಿಯ ಅನುಗ್ರಹಗಳು ಮತ್ತು ದಯೆಯಿದೆ. ಸನ್ಮಾರ್ಗ ಪಡೆದವರು ಅವರೇ ಆಗಿರುವರು.

أُوْلَٰٓئِكَ عَلَيۡهِمۡ صَلَوَٰتٞ مِّن رَّبِّهِمۡ وَرَحۡمَةٞۖ
وَأُوْلَٰٓئِكَ هُمُ ٱلۡمُهۡتَدُونَ ١٥٧

**158.** ಖಂಡಿತವಾಗಿಯೂ 'ಸಫಾ' ಮತ್ತು 'ಮರ್ವಾ' ಅಲ್ಲಾಹು ನಿಶ್ಚಯಿಸಿದ ಧರ್ಮಲಾಂಛನಗಳಲ್ಲಿ ಸೇರಿದ್ದಾಗಿವೆ. ಕಅ್‌ಬಾಲಯಕ್ಕೆ ತೆರಳಿ ಹಜ್ ಅಥವಾ ಉಮ್ರಾ ನಿರ್ವಹಿಸುವ ಯಾರ ಮೇಲೂ ಅವುಗಳ ಮೂಲಕ ಪ್ರದಕ್ಷಿಣೆ ಮಾಡುವುದರಲ್ಲಿ ಯಾವುದೇ ದೋಷವಿಲ್ಲ.(1) ಯಾರಾದರೂ ಸ್ವಇಚ್ಛೆಯಿಂದ ಸತ್ಕರ್ಮ ವೆಸಗುವುದಾದರೆ ಖಂಡಿತವಾಗಿಯೂ ಅಲ್ಲಾಹು ಕೃತಜ್ಞನೂ, ಸರ್ವಜ್ಞನೂ ಆಗಿರುವನು.

۞إِنَّ ٱلصَّفَا وَٱلۡمَرۡوَةَ مِن شَعَآئِرِ ٱللَّهِۖ
فَمَنۡ حَجَّ ٱلۡبَيۡتَ أَوِ ٱعۡتَمَرَ فَلَا جُنَاحَ
عَلَيۡهِ أَن يَطَّوَّفَ بِهِمَاۚ وَمَن تَطَوَّعَ خَيۡرٗا
فَإِنَّ ٱللَّهَ شَاكِرٌ عَلِيمٌ ١٥٨

---

ಎಂದೆಂದಿಗೂ ನಾಶಹೊಂದಿದವನಾಗಿರುವನು. ಆದರೆ ಅಲ್ಲಾಹುವಿನ ಮಾರ್ಗದಲ್ಲಿ ಹುತಾತ್ಮನಾದವನು ಶಾಶ್ವತ ಜೀವನವನ್ನು ಪಡೆದವನಾಗಿರುವನೆಂದು ಕುರ್‌ಆನ್ ನಮಗೆ ಮನದಟ್ಟು ಮಾಡಿಕೊಡುತ್ತದೆ.

1 ಪ್ರವಾದಿ ಮುಹಮ್ಮದ್(ﷺ)ರವರಿಗಿಂತ ಮುಂಚೆ ಅರಬರು ಸಫಾ ಹಾಗೂ ಮರ್ವಾಗಳಲ್ಲಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಿದ್ದರು. ಸಫಾ–ಮರ್ವಾಗಳಿಗೆ ವಿಗ್ರಹಾರಾಧನೆಯೊಂದಿಗಿರುವ ಈ ಸಂಬಂಧದ ನಿಮಿತ್ತ ಅವುಗಳ ಮಧ್ಯೆ ಪ್ರದಕ್ಷಿಣೆ ಮಾಡಲು ಮುಸ್ಲಿಮರಿಗೆ ಮಾನಸಿಕ ಪ್ರಯಾಸ ತಲೆದೋರುತ್ತಿತ್ತು. ಹಜ್ಜ್ ಮತ್ತು ಉಮ್ರಾಗಳ ಒಂದು ಅಂಗವಾಗಿರುವ ಸಫಾ–ಮರ್ವಾಗಳ ಪ್ರದಕ್ಷಿಣೆಗೆ ವಿಗ್ರಹಾರಾಧನೆಯೊಂದಿಗೆ ಯಾವುದೇ ಸಂಬಂಧವಿಲ್ಲ, ಅವು ಅಲ್ಲಾಹುವಿನ ಧರ್ಮದ ಲಾಂಛನಗಳಲ್ಲಿ ಸೇರಿದ್ದಾಗಿವೆ ಹಾಗೂ ಅವುಗಳನ್ನು ಪ್ರದಕ್ಷಿಣೆ ಮಾಡಲು ಮನಪ್ರಯಾಸವುಂಟಾಗಬೇಕಾದ ಅಗತ್ಯವಿಲ್ಲ ಎಂದು ಈ ಸೂಕ್ತಿಯು ನಮಗೆ ಮನವರಿಕೆ ಮಾಡುತ್ತದೆ. ಉಮ್ರಾವನ್ನು ಪ್ರತ್ಯೇಕವಾಗಿಯೂ, ಹಜ್ಜ್‌ನೊಂದಿಗೆ ಸೇರಿಸಿಯೂ ನಿರ್ವಹಿಸಬಹುದಾಗಿದೆ.

**159.** ನಾವು ಅವತೀರ್ಣಗೊಳಿಸಿದ ಪುರಾವೆಗಳನ್ನು ಮತ್ತು ಮಾರ್ಗದರ್ಶನವನ್ನು ಗ್ರಂಥದ ಮೂಲಕ ನಾವು ಜನರಿಗೆ ವಿವರಿಸಿಕೊಟ್ಟ ಬಳಿಕವೂ ಬಚ್ಚಿಡುವವರು ಯಾರೋ, ಅವರನ್ನು ಅಲ್ಲಾಹು ಶಪಿಸುವನು ಮತ್ತು ಶಪಿಸುವವರೆಲ್ಲರೂ ಅವರನ್ನು ಶಪಿಸುವರು.

إِنَّ ٱلَّذِينَ يَكۡتُمُونَ مَآ أَنزَلۡنَا مِنَ ٱلۡبَيِّنَٰتِ وَٱلۡهُدَىٰ مِنۢ بَعۡدِ مَا بَيَّنَّٰهُ لِلنَّاسِ فِي ٱلۡكِتَٰبِ أُوْلَٰٓئِكَ يَلۡعَنُهُمُ ٱللَّهُ وَيَلۡعَنُهُمُ ٱللَّٰعِنُونَ ١٥٩

**160.** ಆದರೆ ಪಶ್ಚಾತ್ತಾಪಪಟ್ಟವರು, ತಮ್ಮ ಸ್ಥಿತಿಯನ್ನು ಸುಧಾರಣೆಗೊಳಿಸಿದವರು ಮತ್ತು (ಸತ್ಯವನ್ನು ಜನರಿಗೆ)ವಿವರಿಸಿಕೊಡುವವರು ಇದರಿಂದ ಹೊರತಾಗಿರುವರು. ಅಂತಹವರ ಪಶ್ಚಾತ್ತಾಪವನ್ನು ನಾನು ಸ್ವೀಕರಿಸುವೆನು. ನಾನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವೆನು.

إِلَّا ٱلَّذِينَ تَابُواْ وَأَصۡلَحُواْ وَبَيَّنُواْ فَأُوْلَٰٓئِكَ أَتُوبُ عَلَيۡهِمۡ وَأَنَا ٱلتَّوَّابُ ٱلرَّحِيمُ ١٦٠

**161.** ಸತ್ಯವನ್ನು ನಿಷೇಧಿಸುವವರು ಮತ್ತು ಸತ್ಯನಿಷೇಧಿಗಳಾಗಿರುತ್ತಲೇ ಮರಣ ಹೊಂದುವವರಾರೋ ಅವರ ಮೇಲೆ ಅಲ್ಲಾಹುವಿನ, ಮಲಕ್‌ಗಳ ಮತ್ತು ಮನುಷ್ಯರೆಲ್ಲರ ಶಾಪವಿರುವುದು.

إِنَّ ٱلَّذِينَ كَفَرُواْ وَمَاتُواْ وَهُمۡ كُفَّارٌ أُوْلَٰٓئِكَ عَلَيۡهِمۡ لَعۡنَةُ ٱللَّهِ وَٱلۡمَلَٰٓئِكَةِ وَٱلنَّاسِ أَجۡمَعِينَ ١٦١

**162.** ಅವರು ಅದನ್ನು ಶಾಶ್ವತವಾಗಿ ಅನುಭವಿಸುವರು. ಅವರಿಗೆ ಶಿಕ್ಷೆಯನ್ನು ಹಗುರಗೊಳಿಸಲಾಗದು ಮತ್ತು ಅವರಿಗೆ ಕಾಲಾವಕಾಶವನ್ನೂ ನೀಡಲಾಗದು.

خَٰلِدِينَ فِيهَا لَا يُخَفَّفُ عَنۡهُمُ ٱلۡعَذَابُ وَلَا هُمۡ يُنظَرُونَ ١٦٢

**163.** ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನು. ಅವನ ಹೊರತು ಅನ್ಯ ಆರಾಧ್ಯರೇ ಇಲ್ಲ. ಅವನು ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವನು.

وَإِلَٰهُكُمۡ إِلَٰهٞ وَٰحِدٞۖ لَّآ إِلَٰهَ إِلَّا هُوَ ٱلرَّحۡمَٰنُ ٱلرَّحِيمُ ١٦٣

**164.** ಖಂಡಿತವಾಗಿಯೂ[(1)] ಆಕಾಶಗಳ ಮತ್ತು ಭೂಮಿಯ ಸೃಷ್ಟಿಯಲ್ಲಿ, ರಾತ್ರಿ ಮತ್ತು ಹಗಲುಗಳ ಬದಲಾವಣೆಯಲ್ಲಿ, ಜನರಿಗೆ

إِنَّ فِي خَلۡقِ ٱلسَّمَٰوَٰتِ وَٱلۡأَرۡضِ وَٱخۡتِلَٰفِ ٱلَّيۡلِ وَٱلنَّهَارِ وَٱلۡفُلۡكِ ٱلَّتِي

1 ಇಸ್ಲಾಮ್ ಮಾನವನ ಬುದ್ಧಿಯೊಂದಿಗೆ ಮಾತನಾಡುತ್ತದೆ. ಜಗತ್ತಿನಲ್ಲಿರುವ ಚಿಕ್ಕ ಮತ್ತು ದೊಡ್ಡದಾಗಿರುವ ಸರ್ವ ವಸ್ತುಗಳನ್ನೂ ಆವರಿಸಿಕೊಂಡಿರುವ ಅದ್ಭುತವಾದ ವ್ಯವಸ್ಥೆಗಳನ್ನು ಎತ್ತಿ ತೋರಿಸುತ್ತಾ ಪ್ರಪಂಚದೊಡೆಯನ ಅನಿಷೇಧ್ಯವಾದ ಅಸ್ತಿತ್ವದ ಬಗ್ಗೆಯಿರುವ ಸ್ಪಷ್ಟ ಪರಿಜ್ಞಾನದೆಡೆಗೆ ಕುರ್‌ಆನ್ ಮಾನವರನ್ನು ಮುನ್ನಡೆಸುತ್ತದೆ.

ಉಪಯುಕ್ತವಾದ ವಸ್ತುಗಳೊಂದಿಗೆ ಸಮುದ್ರದ ಮೂಲಕ ಚಲಿಸುವ ಹಡಗಿನಲ್ಲಿ, ಅಲ್ಲಾಹು ಆಕಾಶದಿಂದ ಮಳೆನೀರನ್ನು ಇಳಿಸಿ ತನ್ಮೂಲಕ ನಿರ್ಜೀವವಾಗಿರುವ ಭೂಮಿಗೆ ಜೀವ ನೀಡುವುದರಲ್ಲಿ, ಭೂಮುಖದಲ್ಲಿ ಸರ್ವವಿಧ ಜೀವರಾಶಿಗಳನ್ನು ಹಬ್ಬಿಸಿರುವುದರಲ್ಲಿ, ಗಾಳಿಯ ಗತಿಕ್ರಮದಲ್ಲಿ ಮತ್ತು ಆಕಾಶಗಳ ಹಾಗೂ ಭೂಮಿಯ ನಡುವೆ ನಿಯಂತ್ರಿಸಲಾಗುವ ಮೋಡಗಳ ಚಲನೆಯಲ್ಲಿ ಚಿಂತಿಸುವ ಜನರಿಗೆ ಅನೇಕ ದೃಷ್ಟಾಂತಗಳಿವೆ.

تَجۡرِي فِي ٱلۡبَحۡرِ بِمَا يَنفَعُ ٱلنَّاسَ وَمَآ أَنزَلَ ٱللَّهُ مِنَ ٱلسَّمَآءِ مِن مَّآءٖ فَأَحۡيَا بِهِ ٱلۡأَرۡضَ بَعۡدَ مَوۡتِهَا وَبَثَّ فِيهَا مِن كُلِّ دَآبَّةٖ وَتَصۡرِيفِ ٱلرِّيَٰحِ وَٱلسَّحَابِ ٱلۡمُسَخَّرِ بَيۡنَ ٱلسَّمَآءِ وَٱلۡأَرۡضِ لَأٓيَٰتٖ لِّقَوۡمٖ يَعۡقِلُونَ ١٦٤

165. ಅಲ್ಲಾಹುವೇತರರನ್ನು ಅವನಿಗೆ ಪ್ರತಿಸ್ಪರ್ಧಿಗಳಾಗಿ ಮಾಡುವ ಕೆಲವು ಜನರಿರುವರು. ಅಲ್ಲಾಹುವನ್ನು ಪ್ರೀತಿಸುವಂತೆಯೇ ಅವರು ಅವರನ್ನೂ (ಅಲ್ಲಾಹುವೇತರರನ್ನೂ) ಪ್ರೀತಿಸುವರು. ಆದರೆ ಸತ್ಯವಿಶ್ವಾಸಿಗಳು ಅಲ್ಲಾಹುವಿನಲ್ಲಿ ಗಾಢವಾದ ಪ್ರೀತಿಯನ್ನು ಹೊಂದಿರುವರು. ಅಕ್ರಮಿಗಳು ಪರಲೋಕ ಶಿಕ್ಷೆಯನ್ನು ಕಣ್ಣಾರೆ ಕಾಣುವ ಸಂದರ್ಭ, ಶಕ್ತಿಸಾಮರ್ಥ್ಯವೆಲ್ಲವೂ ಸಂಪೂರ್ಣವಾಗಿ ಅಲ್ಲಾಹುವಿಗೇ ಆಗಿದೆ ಮತ್ತು ಖಂಡಿತವಾಗಿಯೂ ಅಲ್ಲಾಹು ಕಠೋರವಾಗಿ ಶಿಕ್ಷಿಸುವವನಾಗಿರುವನು ಎಂಬುದನ್ನು ಕಾಣುತ್ತಿದ್ದರೆ (ಎಷ್ಟು ಒಳಿತಾಗಿರುತ್ತಿತ್ತು!)

وَمِنَ ٱلنَّاسِ مَن يَتَّخِذُ مِن دُونِ ٱللَّهِ أَندَادٗا يُحِبُّونَهُمۡ كَحُبِّ ٱللَّهِۖ وَٱلَّذِينَ ءَامَنُوٓاْ أَشَدُّ حُبّٗا لِّلَّهِۗ وَلَوۡ يَرَى ٱلَّذِينَ ظَلَمُوٓاْ إِذۡ يَرَوۡنَ ٱلۡعَذَابَ أَنَّ ٱلۡقُوَّةَ لِلَّهِ جَمِيعٗا وَأَنَّ ٱللَّهَ شَدِيدُ ٱلۡعَذَابِ ١٦٥

166. ಅನುಸರಿಸಲ್ಪಟ್ಟವರು (ನಾಯಕರು) ಅನುಸರಿಸಿದವರನ್ನು (ಅನುಯಾಯಿಗಳನ್ನು) ಬಿಟ್ಟು ದೂರ ಸರಿಯುವ ಮತ್ತು ಅವರು ಶಿಕ್ಷೆಯನ್ನು ಕಣ್ಣಾರೆ ಕಾಣುವ ಹಾಗೂ ಅವರು ಪರಸ್ಪರ ಹೊಂದಿರುವ ಸಂಬಂಧಗಳು ಮುರಿದು ಬೀಳುವ ಸಂದರ್ಭ!

إِذۡ تَبَرَّأَ ٱلَّذِينَ ٱتُّبِعُواْ مِنَ ٱلَّذِينَ ٱتَّبَعُواْ وَرَأَوُاْ ٱلۡعَذَابَ وَتَقَطَّعَتۡ بِهِمُ ٱلۡأَسۡبَابُ ١٦٦

167. ಅನುಸರಿಸಿದವರು (ಅನುಯಾಯಿಗಳು) ಹೇಳುವರು: ‘ನಮಗೆ (ಇಹಲೋಕದೆಡೆಗೆ) ಮರಳುವ ಒಂದು ಅವಕಾಶವು

وَقَالَ ٱلَّذِينَ ٱتَّبَعُواْ لَوۡ أَنَّ لَنَا كَرَّةٗ فَنَتَبَرَّأَ مِنۡهُمۡ كَمَا تَبَرَّءُواْ مِنَّاۗ كَذَٰلِكَ يُرِيهِمُ

ٱللَّهُ أَعۡمَٰلَهُمۡ حَسَرَٰتٍ عَلَيۡهِمۡۖ وَمَا هُم بِخَٰرِجِينَ مِنَ ٱلنَّارِ ١٦٧

ಲಭ್ಯವಾಗುತ್ತಿದ್ದರೆ ಅವರು ನಮ್ಮನ್ನು ಬಿಟ್ಟು ದೂರ ಸರಿದಂತೆ ನಾವೂ ಅವರನ್ನು ಬಿಟ್ಟು ದೂರ ಸರಿಯುವೆವು'. ಹೀಗೆ ಅವರ ಕರ್ಮಗಳೆಲ್ಲವೂ ಅವರ ವಿಷಾದಕ್ಕೆ ಹೇತುವಾಗಿ ಪರಿಣಮಿಸುವುದನ್ನು ಅಲ್ಲಾಹು ಅವರಿಗೆ ತೋರಿಸಿಕೊಡುವನು. ನರಕಾಗ್ನಿಯಿಂದ ಹೊರಹೋಗಲು ಅವರಿಗೆ ಖಂಡಿತ ಸಾಧ್ಯವಾಗದು.

يَٰٓأَيُّهَا ٱلنَّاسُ كُلُواْ مِمَّا فِي ٱلۡأَرۡضِ حَلَٰلٗا طَيِّبٗا وَلَا تَتَّبِعُواْ خُطُوَٰتِ ٱلشَّيۡطَٰنِۚ إِنَّهُۥ لَكُمۡ عَدُوّٞ مُّبِينٌ ١٦٨

**168.** ಓ ಜನರೇ! ಭೂಮಿಯಲ್ಲಿರುವುದರ ಪೈಕಿ ಧರ್ಮಸಮ್ಮತವಾಗಿರುವ ಮತ್ತು ಉತ್ತಮವಾಗಿರುವ ಆಹಾರಗಳನ್ನು ತಿನ್ನಿರಿ. ಸೈತಾನನ ಹೆಜ್ಜೆ ಗುರುತುಗಳನ್ನು ಹಿಂಬಾಲಿಸದಿರಿ. ಖಂಡಿತವಾಗಿಯೂ ಅವನು ನಿಮ್ಮ ಬಹಿರಂಗ ಶತ್ರುವಾಗಿರುವನು.

إِنَّمَا يَأۡمُرُكُم بِٱلسُّوٓءِ وَٱلۡفَحۡشَآءِ وَأَن تَقُولُواْ عَلَى ٱللَّهِ مَا لَا تَعۡلَمُونَ ١٦٩

**169.** ದುಷ್ಕೃತ್ಯ ಮತ್ತು ನೀಚಕೃತ್ಯದಲ್ಲಿ ತಲ್ಲೀನರಾಗಲು ಹಾಗೂ ನಿಮಗೆ ಅರಿವಿಲ್ಲದಿರುವುದನ್ನು ಅಲ್ಲಾಹುವಿನ ಹೆಸರಿನಲ್ಲಿ ಹೇಳಲು ಅವನು ನಿಮ್ಮೊಂದಿಗೆ ಆಜ್ಞಾಪಿಸುವನು.

وَإِذَا قِيلَ لَهُمُ ٱتَّبِعُواْ مَآ أَنزَلَ ٱللَّهُ قَالُواْ بَلۡ نَتَّبِعُ مَآ أَلۡفَيۡنَا عَلَيۡهِ ءَابَآءَنَآۚ أَوَلَوۡ كَانَ ءَابَآؤُهُمۡ لَا يَعۡقِلُونَ شَيۡـٔٗا وَلَا يَهۡتَدُونَ ١٧٠

**170.** 'ಅಲ್ಲಾಹು ಅವತೀರ್ಣಗೊಳಿಸಿರುವುದನ್ನು ಅನುಸರಿಸಿರಿ' ಎಂದು ಅವರೊಂದಿಗೆ ಹೇಳಲಾದರೆ 'ಇಲ್ಲ, ನಮ್ಮ ಪೂರ್ವಿಕರು ಯಾವುದನ್ನು ಅನುಸರಿಸುವುದಾಗಿ ನಾವು ಕಂಡಿರುವೆವೋ ಅದನ್ನೇ ನಾವು ಅನುಸರಿಸುವೆವು' ಎಂದು ಅವರು ಹೇಳುವರು. ಅವರ ಪೂರ್ವಿಕರು ಏನನ್ನೂ ಚಿಂತಿಸದವರು ಮತ್ತು ಸನ್ಮಾರ್ಗ ಪಡೆಯದವರಾಗಿದ್ದರೂ ಕೂಡ (ಇವರು ಅವರನ್ನು ಅನುಸರಿಸುವರೇ?)

وَمَثَلُ ٱلَّذِينَ كَفَرُواْ كَمَثَلِ ٱلَّذِي يَنۡعِقُ بِمَا لَا يَسۡمَعُ إِلَّا دُعَآءٗ وَنِدَآءٗۚ صُمُّۢ بُكۡمٌ عُمۡيٞ فَهُمۡ لَا يَعۡقِلُونَ ١٧١

**171.** ಸತ್ಯನಿಷೇಧಿಗಳ ಉಪಮೆಯು ಕರೆ ಮತ್ತು ಕೂಗನ್ನು ಬಿಟ್ಟು ಬೇರೇನನ್ನೂ ಕೇಳದ ಪ್ರಾಣಿಯೊಂದಿಗೆ ಕಿರುಚುವವನಂತಿದೆ. ಅವರು ಕಿವುಡರು, ಮೂಕರು ಮತ್ತು

ಅಂಧರಾಗಿರುವರು. ಆದ್ದರಿಂದ ಅವರು (ಏನನ್ನೂ) ಚಿಂತಿಸಿ ಗ್ರಹಿಸಲಾರರು.

**172.** ಓ ಸತ್ಯವಿಶ್ವಾಸಿಗಳೇ! ನಾವು ನಿಮಗೆ ನೀಡಿರುವವುಗಳ ಪೈಕಿ ಉತ್ತಮವಾದುದನ್ನು ತಿನ್ನಿರಿ ಮತ್ತು ಅಲ್ಲಾಹುವಿಗೆ ಕೃತಜ್ಞತೆ ಸಲ್ಲಿಸಿರಿ; ನೀವು ಅವನನ್ನು ಮಾತ್ರ ಆರಾಧಿಸುವವರಾಗಿದ್ದರೆ.

يَـٰٓأَيُّهَا ٱلَّذِينَ ءَامَنُواْ كُلُواْ مِن طَيِّبَٰتِ مَا
رَزَقۡنَٰكُمۡ وَٱشۡكُرُواْ لِلَّهِ إِن كُنتُمۡ إِيَّاهُ
تَعۡبُدُونَ ١٧٢

**173.** ಅವನು ನಿಮಗೆ ನಿಷಿದ್ಧಗೊಳಿಸಿರುವುದು ಶವ, ರಕ್ತ, ಹಂದಿ ಮಾಂಸ ಮತ್ತು ಅಲ್ಲಾಹುವೇತರರಿಗಾಗಿ ಘೋಷಿಸ(ಕೊಯ್ಯ)ಲಾಗಿರುವುದನ್ನು[1] ಮಾತ್ರವಾಗಿದೆ. ಆದರೆ ಯಾರಾದರೂ (ನಿಷಿದ್ಧವಾಗಿರುವುದನ್ನು ತಿನ್ನಲು) ನಿರ್ಬಂಧಿತನಾದರೆ ಅವನ ಮೇಲೆ ದೋಷವಿಲ್ಲ. (ಆದರೆ) ಅವನು ನಿಯಮೋಲ್ಲಂಘನೆಗೆ ದಾರ್ಷ್ಟ್ಯ ತೋರದವನೂ (ಅನಿವಾರ್ಯತೆಯ) ಮಿತಿಯನ್ನು ಮೀರದವನೂ ಆಗಿರಬೇಕು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

إِنَّمَا حَرَّمَ عَلَيۡكُمُ ٱلۡمَيۡتَةَ وَٱلدَّمَ وَلَحۡمَ
ٱلۡخِنزِيرِ وَمَآ أُهِلَّ بِهِۦ لِغَيۡرِ ٱللَّهِۖ فَمَنِ
ٱضۡطُرَّ غَيۡرَ بَاغٖ وَلَا عَادٖ فَلَآ إِثۡمَ عَلَيۡهِۚ
إِنَّ ٱللَّهَ غَفُورٞ رَّحِيمٌ ١٧٣

**174.** ಅಲ್ಲಾಹು ಅವತೀರ್ಣಗೊಳಿಸಿದ ಗ್ರಂಥದಲ್ಲಿರುವ ವಿಷಯಗಳನ್ನು ಮರೆಮಾಚುವವರು ಮತ್ತು ಅದಕ್ಕೆ ಪ್ರತಿಯಾಗಿ ತುಚ್ಛ ಲಾಭವನ್ನು ಗಳಿಸುವವರಾರೋ ಅವರು ತಮ್ಮ ಉದರಗಳಲ್ಲಿ ತುಂಬಿಸುವುದು ನರಕಾಗ್ನಿಯ ವಿನಾ ಇನ್ನೇನೂ ಅಲ್ಲ. ಪುನರುತ್ಥಾನ ದಿನದಂದು ಅಲ್ಲಾಹು ಅವರೊಂದಿಗೆ ಮಾತನಾಡಲಾರನು ಮತ್ತು ಅವರನ್ನು (ಪಾಪಗಳಿಂದ) ಶುದ್ಧೀಕರಿಸಲಾರನು.

إِنَّ ٱلَّذِينَ يَكۡتُمُونَ مَآ أَنزَلَ ٱللَّهُ مِنَ
ٱلۡكِتَٰبِ وَيَشۡتَرُونَ بِهِۦ ثَمَنٗا قَلِيلًا
أُوْلَـٰٓئِكَ مَا يَأۡكُلُونَ فِي بُطُونِهِمۡ إِلَّا
ٱلنَّارَ وَلَا يُكَلِّمُهُمُ ٱللَّهُ يَوۡمَ ٱلۡقِيَٰمَةِ وَلَا
يُزَكِّيهِمۡ وَلَهُمۡ عَذَابٌ أَلِيمٌ ١٧٤

1 ಅಲ್ಲಾಹುವೇತರರ ಸಂಪ್ರೀತಿಯನ್ನು ಬಯಸಿ ಅವರಿಗೆ ಹರಕೆಯಾಗಿ ಘೋಷಿಸಲಾದ ಮತ್ತು ಅವರ ಹೆಸರಲ್ಲಿ ಬಲಿ ನೀಡಲಾದ ಮೃಗಗಳ ಮಾಂಸವನ್ನು ತಿನ್ನಬಾರದೆಂದು ಈ ಸೂಕ್ತಿಯು ನಮಗೆ ಮನವರಿಕೆ ಮಾಡಿಕೊಡುತ್ತದೆ.

ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು.

أُوْلَٰٓئِكَ ٱلَّذِينَ ٱشْتَرَوُاْ ٱلضَّلَٰلَةَ بِٱلْهُدَىٰ
وَٱلْعَذَابَ بِٱلْمَغْفِرَةِۚ فَمَآ أَصْبَرَهُمْ عَلَى
ٱلنَّارِ ١٧٥

175. ಅವರು ಸನ್ಮಾರ್ಗಕ್ಕೆ ಬದಲಾಗಿ ದುರ್ಮಾರ್ಗವನ್ನು ಹಾಗೂ ಪಾಪಮುಕ್ತಿಗೆ ಬದಲಾಗಿ ಶಿಕ್ಷೆಯನ್ನು ಖರೀದಿಸಿದವರಾಗಿರುವರು. ನರಕ ಶಿಕ್ಷೆಯನ್ನು ತಾಳಿಕೊಳ್ಳುವುದರಲ್ಲಿ ಅವರಿಗಿರುವ ತಾಳ್ಮೆಯೆಂತಹುದು!

ذَٰلِكَ بِأَنَّ ٱللَّهَ نَزَّلَ ٱلْكِتَٰبَ بِٱلْحَقِّۗ وَإِنَّ
ٱلَّذِينَ ٱخْتَلَفُواْ فِى ٱلْكِتَٰبِ لَفِى شِقَاقٍۭ
بَعِيدٍ ١٧٦

176. ಅದೇಕೆಂದರೆ ಅಲ್ಲಾಹು ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿರುವನು ಎಂಬುದರಿಂದಾಗಿದೆ. ಗ್ರಂಥದ ವಿಷಯದಲ್ಲಿ ಭಿನ್ನರಾಗಿರುವವರಾರೋ ಖಂಡಿತವಾಗಿಯೂ ಅವರು (ಸತ್ಯದಿಂದ) ದೂರವಾದ ವಿರೋಧದಲ್ಲಿರುವರು.[1]

۞ لَّيْسَ ٱلْبِرَّ أَن تُوَلُّواْ وُجُوهَكُمْ قِبَلَ
ٱلْمَشْرِقِ وَٱلْمَغْرِبِ وَلَٰكِنَّ ٱلْبِرَّ مَنْ
ءَامَنَ بِٱللَّهِ وَٱلْيَوْمِ ٱلْءَاخِرِ وَٱلْمَلَٰٓئِكَةِ
وَٱلْكِتَٰبِ وَٱلنَّبِيِّۦنَ وَءَاتَى ٱلْمَالَ عَلَىٰ
حُبِّهِۦ ذَوِى ٱلْقُرْبَىٰ وَٱلْيَتَٰمَىٰ وَٱلْمَسَٰكِينَ
وَٱبْنَ ٱلسَّبِيلِ وَٱلسَّآئِلِينَ وَفِى ٱلرِّقَابِ
وَأَقَامَ ٱلصَّلَوٰةَ وَءَاتَى ٱلزَّكَوٰةَ وَٱلْمُوفُونَ
بِعَهْدِهِمْ إِذَا عَٰهَدُواْۖ وَٱلصَّٰبِرِينَ فِى
ٱلْبَأْسَآءِ وَٱلضَّرَّآءِ وَحِينَ ٱلْبَأْسِۗ أُوْلَٰٓئِكَ
ٱلَّذِينَ صَدَقُواْۖ وَأُوْلَٰٓئِكَ هُمُ ٱلْمُتَّقُونَ ١٧٧

177. ನೀವು ನಿಮ್ಮ ಮುಖಗಳನ್ನು ಪೂರ್ವದೆಡೆಗೆ ಅಥವಾ ಪಶ್ಚಿಮದೆಡೆಗೆ ತಿರುಗಿಸುವುದಲ್ಲ ಪುಣ್ಯ.[2] ಆದರೆ ಅಲ್ಲಾಹುವಿನಲ್ಲಿ, ಅಂತ್ಯದಿನದಲ್ಲಿ, ಮಲಕ್‌ಗಳಲ್ಲಿ, ಗ್ರಂಥದಲ್ಲಿ ಮತ್ತು ಪ್ರವಾದಿಗಳಲ್ಲಿ ವಿಶ್ವಾಸವಿಡುವವನು, ಸಂಪತ್ತಿನ ಮೇಲೆ ಪ್ರೀತಿಯಿದ್ದೂ ಅದನ್ನು ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ, ದಾರಿಹೋಕನಿಗೆ, ಯಾಚಿಸಿ ಬರುವವರಿಗೆ ಮತ್ತು ಗುಲಾಮ ವಿಮೋಚನೆಗೆ ವ್ಯಯಿಸುವವನು, ನಮಾಝನ್ನು ಸಂಸ್ಥಾಪಿಸುವವನು, ಝಕಾತ್ ನೀಡುವವನು, ಕರಾರು ಮಾಡಿದರೆ ಅದನ್ನು ನೆರವೇರಿಸುವವನು ಮತ್ತು

1 ಗ್ರಂಥ ನೀಡಲಾದ ಯಹೂದ ಮತ್ತು ಕ್ರೈಸ್ತರ ಬಗ್ಗೆ ಹೇಳುವುದಾದರೆ ಅವರ ಸಮಸ್ಯೆಯು ಸನ್ಮಾರ್ಗವು ಸ್ಪಷ್ಟವಾಗದಿರುವುದಲ್ಲ. ಬದಲಾಗಿ ಅವರ ಪುರೋಹಿತರಿಗೆ ಪ್ರವಾದಿ(ﷺ) ರವರ ಮೇಲೆ, ಕುರ್‌ಆನ್‌ನ ಮೇಲೆ ಮತ್ತು ಸತ್ಯವಿಶ್ವಾಸಿಗಳ ಮೇಲಿರುವ ಅಸೂಯೆ ಮತ್ತು ಅವರ ಸ್ವಾರ್ಥ ಹಿತಾಸಕ್ತಿಗಳೇ ಅವರನ್ನು ಸತ್ಯದಿಂದ ದೂರವಾಗಿಸಿದ್ದವು.

2 ಇದು ಬೈತುಲ್ ಮುಕದ್ದಿಸ್‌ನ ಬದಲಿಗೆ ಕಅ್‌ಬಾವನ್ನು ಕಿಬ್ಲಾ ಆಗಿ ಮಾಡಿರುವುದನ್ನು ತೀಕ್ಷ್ಣವಾಗಿ ವಿಮರ್ಶಿಸಿದ ಯಹೂದ ಕ್ರೈಸ್ತರಿಗೆ ನೀಡಿದ ಉತ್ತರವಾಗಿದೆ.

ದಾರಿದ್ರ್ಯ, ಸಂಕಷ್ಟ ಹಾಗೂ ಯುದ್ಧದ ಸಂದರ್ಭಗಳಲ್ಲಿ ತಾಳ್ಮೆ ವಹಿಸುವವರು ಯಾರೋ ಅವರೇ ಪುಣ್ಯವಂತರು. ಸತ್ಯವನ್ನು ಪಾಲಿಸಿದವರು ಅವರೇ ಆಗಿರುವರು ಮತ್ತು ಭಯಭಕ್ತಿಯುಳ್ಳವರೂ ಅವರೇ ಆಗಿರುವರು.

يَٰٓأَيُّهَا ٱلَّذِينَ ءَامَنُواْ كُتِبَ عَلَيۡكُمُ ٱلۡقِصَاصُ فِي ٱلۡقَتۡلَىۖ ٱلۡحُرُّ بِٱلۡحُرِّ وَٱلۡعَبۡدُ بِٱلۡعَبۡدِ وَٱلۡأُنثَىٰ بِٱلۡأُنثَىٰۚ فَمَنۡ عُفِيَ لَهُۥ مِنۡ أَخِيهِ شَيۡءٞ فَٱتِّبَاعُۢ بِٱلۡمَعۡرُوفِ وَأَدَآءٌ إِلَيۡهِ بِإِحۡسَٰنٖۗ ذَٰلِكَ تَخۡفِيفٞ مِّن رَّبِّكُمۡ وَرَحۡمَةٞۗ فَمَنِ ٱعۡتَدَىٰ بَعۡدَ ذَٰلِكَ فَلَهُۥ عَذَابٌ أَلِيمٞ ١٧٨

178. ಓ ಸತ್ಯವಿಶ್ವಾಸಿಗಳೇ! ಕೊಲೆಗೀಡಾದವರ ವಿಷಯದಲ್ಲಿ ಸಮಾನ ಶಿಕ್ಷೆ ಜಾರಿಗೊಳಿಸುವುದನ್ನು ನಿಮ್ಮ ಮೇಲೆ ವಿಧಿಸಲಾಗಿದೆ. ಸ್ವತಂತ್ರನಿಗೆ ಪ್ರತಿಯಾಗಿ ಸ್ವತಂತ್ರ, ಗುಲಾಮನಿಗೆ ಪ್ರತಿಯಾಗಿ ಗುಲಾಮ ಮತ್ತು ಹೆಣ್ಣಿಗೆ ಪ್ರತಿಯಾಗಿ ಹೆಣ್ಣು (ವಧಿಸಲ್ಪಡಲಿ). ಇನ್ನು ಅವನಿಗೆ (ಕೊಲೆಗಾರನಿಗೆ) ಅವನ ಸಹೋದರನ ವತಿಯಿಂದ ಏನಾದರೂ ರಿಯಾಯಿತಿ ಸಿಗುವುದಾದರೆ ಅವನು ಶಿಷ್ಟಾಚಾರವನ್ನು ಪಾಲಿಸಲಿ ಮತ್ತು ಉತ್ತಮ ರೀತಿಯಲ್ಲಿ (ರಕ್ತ ಪರಿಹಾರವನ್ನು) ನೀಡಲಿ.[1] ಅದು ನಿಮ್ಮ ರಬ್‌ನ ವತಿಯ ರಿಯಾಯಿತಿಯೂ, ಕರುಣೆಯೂ ಆಗಿದೆ. ಇನ್ನು ಯಾರಾದರೂ ಅದರ ಬಳಿಕವೂ ಅತಿಕ್ರಮವೆಸಗಿದರೆ ಅವನಿಗೆ ಯಾತನಾಮಯವಾದ ಶಿಕ್ಷೆಯಿದೆ.

وَلَكُمۡ فِي ٱلۡقِصَاصِ حَيَوٰةٞ يَٰٓأُوْلِي ٱلۡأَلۡبَٰبِ لَعَلَّكُمۡ تَتَّقُونَ ١٧٩

179. ಓ ಬುದ್ಧಿವಂತರೇ! ಸಮಾನ ಶಿಕ್ಷೆಯನ್ನು ಜಾರಿ ಗೊಳಿಸುವುದರಲ್ಲಿ ನಿಮ್ಮ ಜೀವನದ ಅಸ್ತಿತ್ವವಿದೆ[2] (ಈ ನಿಯಮ ನಿರ್ದೇಶನಗಳಿರುವುದು) ನೀವು ಭಯಭಕ್ತಿ ಪಾಲಿಸುವ ಸಲುವಾಗಿದೆ.

1 ಕೊಲೆಪಾತಕಿಗೆ ಕ್ಷಮಾದಾನ ನೀಡಲು ಮತ್ತು ಪ್ರತೀಕಾರದ ಬದಲು ರಕ್ತ ಪರಿಹಾರವನ್ನು ಪಡೆಯಲು ಕೊಲೆಗೀಡಾದವನ ನಿಕಟ ಸಂಬಂಧಿಕರಿಗೆ ಇಸ್ಲಾಮ್ ಅನುಮತಿ ನೀಡಿದೆ. ಕೊಲೆಪಾತಕಿಯ ಕಡೆಯವರು ಇದನ್ನೊಂದು ಬಲಹೀನತೆಯಾಗಿ ಪರಿಗಣಿಸಬಾರದು. ಸಾಧ್ಯವಾದಷ್ಟು ಬೇಗನೇ ಅವರು ನ್ಯಾಯಬದ್ಧವಾದ ರಕ್ತ ಪರಿಹಾರವನ್ನು ನೀಡಬೇಕು.

2 ಮರಣದಂಡನೆಯನ್ನು ಕ್ರೂರವೆಂದು ವಾದಿಸಿ ಅದನ್ನು ವಿರೋಧಿಸುವವರ ಧೋರಣೆ ತಪ್ಪೆಂದು ಕುರ್‌ಆನ್ ಸ್ಪಷ್ಟಪಡಿಸುತ್ತದೆ. ಪ್ರಾಣ, ಸೊತ್ತು ಮತ್ತು ಮಾನಕ್ಕೆ ಬೆದರಿಕೆಯೊಡ್ಡುವ ಸಮಾಜಘಾತಕರಿಗೆ ಮಾದರೀಯೋಗ್ಯ ಶಿಕ್ಷೆ ನೀಡದ ಹೊರತು ಜನರು ನೆಮ್ಮದಿಯ ಜೀವನ ಸಾಗಿಸಲು ಸಾಧ್ಯವಿಲ್ಲವೆಂದು ಅನುಭವಗಳು ಸಾಬೀತುಪಡಿಸಿವೆ.

**180.** ನಿಮ್ಮಲ್ಲಿ ಯಾರಾದರೂ ಮರಣಾಸನ್ನನಾಗುವ ವೇಳೆ ಸೊತ್ತನ್ನು ಬಿಟ್ಟಗಲುವುದಾದರೆ ಮಾತಾಪಿತರಿಗೆ ಮತ್ತು ನಿಕಟ ಸಂಬಂಧಿಕರಿಗೆ ನ್ಯಾಯಬದ್ಧವಾಗಿ ವಸಿಯ್ಯತ್ ಮಾಡುವುದನ್ನು ನಿಮ್ಮ ಮೇಲೆ ಕಡ್ಡಾಯವಾಗಿ ವಿಧಿಸಲಾಗಿದೆ.(1) ಇದು ಭಯಭಕ್ತಿ ಪಾಲಿಸುವವರ ಮೇಲಿರುವ ಒಂದು ಹೊಣೆಯಾಗಿದೆ.

كُتِبَ عَلَيۡكُمۡ إِذَا حَضَرَ أَحَدَكُمُ ٱلۡمَوۡتُ إِن تَرَكَ خَيۡرًا ٱلۡوَصِيَّةُ لِلۡوَٰلِدَيۡنِ وَٱلۡأَقۡرَبِينَ بِٱلۡمَعۡرُوفِۖ حَقًّا عَلَى ٱلۡمُتَّقِينَ ١٨٠

**181.** ಅದನ್ನು(ವಸಿಯ್ಯತ್ತನ್ನು) ಆಲಿಸಿದ ಬಳಿಕ ಯಾರಾದರೂ ಅದನ್ನು ಬದಲಾಯಿಸಿದರೆ ಅದರ ಪಾಪವು ಬದಲಾಯಿಸುವವರ ಮೇಲೆ ಮಾತ್ರವಾಗಿದೆ. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

فَمَنۢ بَدَّلَهُۥ بَعۡدَ مَا سَمِعَهُۥ فَإِنَّمَآ إِثۡمُهُۥ عَلَى ٱلَّذِينَ يُبَدِّلُونَهُۥٓۚ إِنَّ ٱللَّهَ سَمِيعٌ عَلِيمٌ ١٨١

**182.** ವಸಿಯ್ಯತ್ ಮಾಡಿದವನ ವತಿಯಿಂದ ಯಾವುದಾದರೂ ಅನ್ಯಾಯ ಅಥವಾ ಪಾಪವು ಜರಗಿರುವುದಾಗಿ ಯಾರಾದರೂ ಭಯಪಟ್ಟು ಅವರ (ಸಂಬಂಧಿತ ಕಕ್ಷಿಗಳ) ಮಧ್ಯೆ ಸಂಧಾನ ಮಾಡುವುದಾದರೆ ಅದರಲ್ಲಿ ದೋಷವಿಲ್ಲ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

فَمَنۡ خَافَ مِن مُّوصٖ جَنَفًا أَوۡ إِثۡمًا فَأَصۡلَحَ بَيۡنَهُمۡ فَلَآ إِثۡمَ عَلَيۡهِۚ إِنَّ ٱللَّهَ غَفُورٞ رَّحِيمٞ ١٨٢

**183.** ಓ ಸತ್ಯವಿಶ್ವಾಸಿಗಳೇ! ನಿಮಗಿಂತ ಮುಂಚಿನವರ ಮೇಲೆ ವಿಧಿಸಲಾದಂತೆ ನಿಮ್ಮ ಮೇಲೂ ಉಪವಾಸ ಆಚರಿಸುವುದನ್ನು

يَٰٓأَيُّهَا ٱلَّذِينَ ءَامَنُواْ كُتِبَ عَلَيۡكُمُ ٱلصِّيَامُ كَمَا كُتِبَ عَلَى ٱلَّذِينَ مِن

---

1 ಪ್ರತಿಯೊಬ್ಬ ಹಕ್ಕುದಾರನಿಗೆ ಇರುವ ಪಾಲನ್ನು ನಿಖರವಾಗಿ ನಿಗದಿಗೊಳಿಸಲಾದ ವಾರೀಸು ನಿಯಮವನ್ನೊಳಗೊಂಡ ಸೂಕ್ತಿಗಳು ಅವತೀರ್ಣಗೊಳ್ಳುವ ಮೊದಲು ವಸಿಯ್ಯತನ್ನು (ಉಯಿಲನ್ನು) ಕಡ್ಡಾಯಗೊಳಿಸಿದ ಈ ಸೂಕ್ತಿಯು ಅವತೀರ್ಣಗೊಂಡಿತ್ತು. ಹೆತ್ತವರಿಗೂ, ನಿಕಟ ಸಂಬಂಧಿಕರಿಗೂ ಪಾಲನ್ನು ನಿಯಮಬದ್ಧವಾಗಿ ನಿರ್ಣಯಿಸಲಾಗಿರುವುದರಿಂದ ಇನ್ನು ಅವರಿಗಾಗಿ ವಸಿಯ್ಯತ್ ಮಾಡಬೇಕಾದ ಅಗತ್ಯವಿಲ್ಲವೆಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯಪಟ್ಟಿರುವರು. 'ಉತ್ತರಾಧಿಕಾರಿಗೆ ವಸಿಯ್ಯತ್ ಇಲ್ಲ' ಎಂಬ ಪ್ರವಾದಿ ವಚನವು ಈ ಅಭಿಪ್ರಾಯವನ್ನು ಬೆಂಬಲಿಸುತ್ತದೆ. ನಿಕಟ ಸಂಬಂಧಿಕರಲ್ಲಿ ಕೆಲವರು ಕಷ್ಟ ಅನುಭವಿಸುವವರೂ, ಇನ್ನು ಕೆಲವರು ಸಂಪನ್ನರೂ ಆಗಿರುವ ಸಂದರ್ಭದಲ್ಲಿ, ಹೆತ್ತವರು ಮುಸ್ಲಿಮೇತರರಾಗಿರುವ ಸಂದರ್ಭದಲ್ಲಿ, ಮತ್ತು ನಿಯಮಬದ್ಧವಾಗಿ ಹಕ್ಕುದಾರರಲ್ಲದ ನಿಕಟ ಸಂಬಂಧಿಕರಿರುವ ಸಂದರ್ಭದಲ್ಲಿ ವಸಿಯ್ಯತ್ತಿನ ವಿಧಿ (ಒಟ್ಟು ಸೊತ್ತಿನ ಮೂರರಲ್ಲಿ ಒಂದಂಶವನ್ನು ದಾಟಬಾರದು ಎಂಬ ನಿಯಮದೊಂದಿಗೆ) ಪ್ರಸಕ್ತ ಜಾರಿಯಲ್ಲಿದೆಯೆಂದು ಸೂಕ್ಷ್ಮ ವೀಕ್ಷಕರಾದ ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು.

قَبْلِكُمْ لَعَلَّكُمْ تَتَّقُونَ ﴿١٨٣﴾

ಕಡ್ಡಾಯವಾಗಿ ವಿಧಿಸಲಾಗಿದೆ. ನೀವು ಭಯಭಕ್ತಿ ಪಾಲಿಸುವ ಸಲುವಾಗಿ.

أَيَّامًا مَّعْدُودَاتٍ ۚ فَمَن كَانَ مِنكُم مَّرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ ۚ وَعَلَى الَّذِينَ يُطِيقُونَهُ فِدْيَةٌ طَعَامُ مِسْكِينٍ ۖ فَمَن تَطَوَّعَ خَيْرًا فَهُوَ خَيْرٌ لَّهُ ۚ وَأَن تَصُومُوا خَيْرٌ لَّكُمْ إِن كُنتُمْ تَعْلَمُونَ ﴿١٨٤﴾

**184**. ಎಣಿಸಲಾದ ಕೆಲವು ದಿನಗಳಲ್ಲಿ ಮಾತ್ರವಾಗಿದೆ. ನಿಮ್ಮ ಪೈಕಿ ಯಾರಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಅವನು ಇತರ ದಿನಗಳಲ್ಲಿ ಆ ಸಂಖ್ಯೆಯಷ್ಟು (ಉಪವಾಸವನ್ನು ಆಚರಿಸಲಿ). (ಬಹಳ ಕಷ್ಟದಿಂದ ಮಾತ್ರ) ಅದು ಸಾಧ್ಯವಾಗುವವರು[1] (ಅದರ ಬದಲಿಗೆ) ಒಬ್ಬ ಬಡವನಿಗಿರುವ ಆಹಾರವನ್ನು ಪ್ರಾಯಶ್ಚಿತ್ತವಾಗಿ ನೀಡಲಿ. ಯಾರಾದರೂ ಸ್ವಇಚ್ಛೆಯಿಂದ ಒಳಿತನ್ನು ಮಾಡುವುದಾದರೆ ಅದು ಅವನ ಪಾಲಿಗೆ ಒಳ್ಳೆಯದೇ ಆಗಿದೆ.[2] ನೀವು ಅರಿತವರಾಗಿದ್ದರೆ ಉಪವಾಸ ಆಚರಿಸುವುದೇ ನಿಮಗೆ ಅತ್ಯುತ್ತಮವಾಗಿದೆ.

شَهْرُ رَمَضَانَ الَّذِي أُنزِلَ فِيهِ الْقُرْآنُ هُدًى لِّلنَّاسِ وَبَيِّنَاتٍ مِّنَ الْهُدَىٰ وَالْفُرْقَانِ ۚ فَمَن شَهِدَ مِنكُمُ الشَّهْرَ فَلْيَصُمْهُ ۖ وَمَن كَانَ مَرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ ۗ يُرِيدُ اللَّهُ بِكُمُ الْيُسْرَ وَلَا يُرِيدُ بِكُمُ الْعُسْرَ وَلِتُكْمِلُوا الْعِدَّةَ وَلِتُكَبِّرُوا اللَّهَ عَلَىٰ مَا هَدَاكُمْ وَلَعَلَّكُمْ تَشْكُرُونَ ﴿١٨٥﴾

**185**. ಜನರಿಗೆ ಮಾರ್ಗದರ್ಶಿಯಾಗಿಯೂ, ಸನ್ಮಾರ್ಗವನ್ನು ತೋರಿಸಿಕೊಡುವ ಮತ್ತು ಸತ್ಯಾಸತ್ಯತೆಗಳನ್ನು ಬೇರ್ಪಡಿಸುವ ಸುಸ್ಪಷ್ಟ ಆಧಾರಪ್ರಮಾಣವಾಗಿಯೂ, ಕುರ್‌ಆನ್ ಅವತೀರ್ಣಗೊಂಡ ತಿಂಗಳಾಗಿದೆ ರಮದಾನ್. ಆದ್ದರಿಂದ ನಿಮ್ಮ ಪೈಕಿ ಯಾರಾದರೂ ಆ ತಿಂಗಳಲ್ಲಿ ಉಪಸ್ಥಿತರಿದ್ದರೆ ಅವನು ಅದರಲ್ಲಿ ಉಪವಾಸವನ್ನು ಆಚರಿಸಲಿ. ಯಾರಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ, ಅವನು ಇತರ ದಿನಗಳಲ್ಲಿ ಆ ಸಂಖ್ಯೆಯಷ್ಟು (ಉಪವಾಸವನ್ನು ಆಚರಿಸಲಿ). ಅಲ್ಲಾಹು ನಿಮಗೆ ನಿರಾಳತೆಯನ್ನು ಬಯಸುತ್ತಿರುವನು. ನಿಮಗೆ ಪ್ರಯಾಸವನ್ನುಂಟು ಮಾಡಲು

1 ಈ ಸೂಕ್ತಿಯಲ್ಲಿ ಬಲಹೀನರು, ನಿತ್ಯರೋಗಿಗಳು, ವಯೋವೃದ್ಧರು ಮುಂತಾದವರನ್ನು ಉದ್ದೇಶಿಸಲಾಗಿದೆ ಎಂದು ಹಲವು ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ.

2 ಒಬ್ಬ ಬಡವನ ಆಹಾರಕ್ಕಿಂತ ಹೆಚ್ಚಾಗಿ ಯಾರಾದರೂ ದಾನ ಮಾಡಿದರೆ ಅದು ಅವನ ಪಾಲಿಗೆ ಉತ್ತಮವೇ ಆಗಿದೆ ಎಂದರ್ಥ.

ಬಯಸುವುದಿಲ್ಲ. ನೀವು ಆ ಸಂಖ್ಯೆಯನ್ನು ಪೂರ್ತಿಗೊಳಿಸುವ ಸಲುವಾಗಿಯೂ, ಅಲ್ಲಾಹು ನಿಮಗೆ ಸನ್ಮಾರ್ಗವನ್ನು ತೋರಿಸಿಕೊಟ್ಟ ಕಾರಣ ನೀವು ಅವನ ಮಹತ್ವವನ್ನು ಕೊಂಡಾಡುವ ಸಲುವಾಗಿಯೂ ಮತ್ತು ನೀವು ಅವನಿಗೆ ಕೃತಜ್ಞತೆ ಸಲ್ಲಿಸುವ ಸಲುವಾಗಿಯೂ (ಈ ರೀತಿ ಆಜ್ಞಾಪಿಸಲಾಗಿದೆ).

وَإِذَا سَأَلَكَ عِبَادِى عَنِّى فَإِنِّى قَرِيبٌ ۖ أُجِيبُ دَعْوَةَ ٱلدَّاعِ إِذَا دَعَانِ ۖ فَلْيَسْتَجِيبُوا۟ لِى وَلْيُؤْمِنُوا۟ بِى لَعَلَّهُمْ يَرْشُدُونَ ﴿١٨٦﴾

**186.** ನನ್ನ ದಾಸರು ತಮ್ಮೊಂದಿಗೆ ನನ್ನ ಬಗ್ಗೆ ಕೇಳಿದರೆ ಖಂಡಿತವಾಗಿಯೂ ನಾನು (ಅವರಿಗೆ ಅತಿ) ನಿಕಟವಾಗಿರುವೆನು (ಎಂದು ಹೇಳಿರಿ). ಪ್ರಾರ್ಥಿಸುವವನು ನನ್ನನ್ನು ಕರೆದು ಪ್ರಾರ್ಥಿಸಿದರೆ ನಾನು ಆ ಪ್ರಾರ್ಥನೆಗೆ ಉತ್ತರವನ್ನು ನೀಡುವೆನು.[1] ಆದ್ದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನಲ್ಲಿ ವಿಶ್ವಾಸವಿಡಲಿ. ಅವರು ಸನ್ಮಾರ್ಗ ಪಡೆದವರಾಗಲೂ ಬಹುದು.

أُحِلَّ لَكُمْ لَيْلَةَ ٱلصِّيَامِ ٱلرَّفَثُ إِلَىٰ نِسَآئِكُمْ ۚ هُنَّ لِبَاسٌ لَّكُمْ وَأَنتُمْ لِبَاسٌ لَّهُنَّ ۗ عَلِمَ ٱللَّهُ أَنَّكُمْ كُنتُمْ تَخْتَانُونَ أَنفُسَكُمْ فَتَابَ عَلَيْكُمْ وَعَفَا عَنكُمْ ۖ فَٱلْـَٔـٰنَ بَـٰشِرُوهُنَّ وَٱبْتَغُوا۟ مَا كَتَبَ ٱللَّهُ لَكُمْ ۚ وَكُلُوا۟ وَٱشْرَبُوا۟ حَتَّىٰ يَتَبَيَّنَ لَكُمُ ٱلْخَيْطُ ٱلْأَبْيَضُ مِنَ ٱلْخَيْطِ ٱلْأَسْوَدِ مِنَ ٱلْفَجْرِ ۖ ثُمَّ أَتِمُّوا۟ ٱلصِّيَامَ إِلَى ٱلَّيْلِ ۚ وَلَا تُبَـٰشِرُوهُنَّ وَأَنتُمْ عَـٰكِفُونَ فِى ٱلْمَسَـٰجِدِ ۗ تِلْكَ حُدُودُ ٱللَّهِ فَلَا تَقْرَبُوهَا ۗ كَذَٰلِكَ يُبَيِّنُ ٱللَّهُ ءَايَـٰتِهِۦ لِلنَّاسِ لَعَلَّهُمْ يَتَّقُونَ ﴿١٨٧﴾

**187.** ಉಪವಾಸದ ರಾತ್ರಿಯಲ್ಲಿ ನಿಮ್ಮ ಪತ್ನಿಯರೊಂದಿಗೆ ಲೈಂಗಿಕ ಸಂಪರ್ಕ ಹೊಂದಲು ನಿಮಗೆ ಅನುಮತಿಸಲಾಗಿದೆ. ಅವರು ನಿಮಗೊಂದು ಉಡುಪಾಗಿರುವರು ಮತ್ತು ನೀವು ಅವರಿಗೊಂದು ಉಡುಪಾಗಿರುವಿರಿ. (ಲೈಂಗಿಕ ಸಂಪರ್ಕ ನಿಷಿದ್ಧವೆಂದು ಭಾವಿಸಿ) ನೀವು ಆತ್ಮವಂಚನೆ ಮಾಡುತ್ತಿರುವಿರಿ ಎಂದು ಅಲ್ಲಾಹು ಅರಿತಿರುವನು. ಆದ್ದರಿಂದ ಅವನು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿರುವನು ಮತ್ತು ನಿಮ್ಮನ್ನು ಕ್ಷಮಿಸಿರುವನು. ಆದ್ದರಿಂದ ಇನ್ನು ಮುಂದೆ ನೀವು ಅವರೊಂದಿಗೆ ಲೈಂಗಿಕ ಸಂಪರ್ಕವನ್ನು ಮಾಡಿರಿ ಮತ್ತು (ದಾಂಪತ್ಯ

1 ಪ್ರಾರ್ಥನೆಯಲ್ಲಿ ಅಲ್ಲಾಹು ಮತ್ತು ಮಾನವರ ನಡುವೆ ಯಾವುದೇ ಮಧ್ಯವರ್ತಿಯ ಅಗತ್ಯವಿಲ್ಲವೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

ಜೀವನದಲ್ಲಿ) ಅಲ್ಲಾಹು ನಿಮಗೆ ವಿಧಿಸಿರುವುದನ್ನು ಅರಸಿರಿ. ಕಪ್ಪು ನೂಲಿನಿಂದ ಪ್ರಭಾತದ ಬಿಳಿಯ ನೂಲು ನಿಮಗೆ ಸ್ಪಷ್ಟವಾಗುವವರೆಗೆ ತಿನ್ನಿರಿ ಮತ್ತು ಕುಡಿಯಿರಿ. ತರುವಾಯ ರಾತ್ರಿಯಾಗುವ ತನಕ ಉಪವಾಸವನ್ನು ಪೂರ್ತಿಗೊಳಿಸಿರಿ. ಆದರೆ ನೀವು ಮಸೀದಿಗಳಲ್ಲಿ ಇಅ್‌ತಿಕಾಫ್ ನಿರ್ವಹಿಸುತ್ತಿರುವಾಗ ಅವರೊಂದಿಗೆ (ಪತ್ನಿಯರೊಂದಿಗೆ) ಲೈಂಗಿಕ ಸಂಪರ್ಕ ಮಾಡದಿರಿ. ಇವು ಅಲ್ಲಾಹುವಿನ ಸೀಮೆಗಳಾಗಿವೆ. ಆದ್ದರಿಂದ ನೀವು ಇವುಗಳನ್ನು ಉಲ್ಲಂಘಿಸುವ ಸಲುವಾಗಿ ಸಮೀಪಿಸದಿರಿ. ಜನರು ಭಯಭಕ್ತಿ ಪಾಲಿಸುವ ಸಲುವಾಗಿ ಅಲ್ಲಾಹು ಹೀಗೆ ತನ್ನ ದೃಷ್ಟಾಂತಗಳನ್ನು ಅವರಿಗೆ ವಿವರಿಸಿಕೊಡುವನು.

**188.** ನೀವು ಪರಸ್ಪರರ ಸಂಪತ್ತನ್ನು ಅನ್ಯಾಯವಾಗಿ ತಿನ್ನದಿರಿ. ನೀವು ತಿಳಿದವರಾಗಿದ್ದೂ ಸಹ ಜನರ ಸಂಪತ್ತಿನಿಂದ ಏನನ್ನಾದರೂ ಧರ್ಮಬಾಹಿರವಾಗಿ ಗಳಿಸಿ ತಿನ್ನುವ ಸಲುವಾಗಿ ಅದರೊಂದಿಗೆ ನ್ಯಾಯಾಧೀಶರ ಬಳಿ ತೆರಳುವುದನ್ನೂ ಮಾಡದಿರಿ.[1]

وَلَا تَأۡكُلُوٓاْ أَمۡوَٰلَكُم بَيۡنَكُم بِٱلۡبَٰطِلِ وَتُدۡلُواْ بِهَآ إِلَى ٱلۡحُكَّامِ لِتَأۡكُلُواْ فَرِيقٗا مِّنۡ أَمۡوَٰلِ ٱلنَّاسِ بِٱلۡإِثۡمِ وَأَنتُمۡ تَعۡلَمُونَ ١٨٨

**189.** (ಓ ಪ್ರವಾದಿಯವರೇ!) ಅವರು ತಮ್ಮೊಂದಿಗೆ ಚಂದ್ರಕಲೆಗಳ ಬಗ್ಗೆ ಕೇಳುತ್ತಿರುವರು. ಹೇಳಿರಿ: 'ಅದು ಜನರ ಅಗತ್ಯಗಳಿಗೆ, ಹಜ್ ಯಾತ್ರೆಗೆ ಮತ್ತು ಕಾಲನಿರ್ಣಯ ಮಾಡುವುದಕ್ಕಿರುವ ಉಪಾಧಿಗಳಾಗಿವೆ'. ಪುಣ್ಯವಿರುವುದು ನೀವು ಮನೆಗಳನ್ನು ಹಿಂಭಾಗದಿಂದ ಪ್ರವೇಶಿಸುವುದರಲ್ಲಲ್ಲ. ಆದರೆ ಭಯಭಕ್ತಿ

۞ يَسۡـَٔلُونَكَ عَنِ ٱلۡأَهِلَّةِۖ قُلۡ هِيَ مَوَٰقِيتُ لِلنَّاسِ وَٱلۡحَجِّۗ وَلَيۡسَ ٱلۡبِرُّ بِأَن تَأۡتُواْ ٱلۡبُيُوتَ مِن ظُهُورِهَا وَلَٰكِنَّ ٱلۡبِرَّ مَنِ ٱتَّقَىٰۗ وَأۡتُواْ ٱلۡبُيُوتَ مِنۡ أَبۡوَٰبِهَاۚ وَٱتَّقُواْ ٱللَّهَ لَعَلَّكُمۡ تُفۡلِحُونَ ١٨٩

1 ಇಸ್ಲಾಮ್ ಅನುಮತಿಸಿದ ಕ್ರಯ–ವಿಕ್ರಯಗಳ ಮೂಲಕವಲ್ಲದೆ ಒಬ್ಬ ಮುಸ್ಲಿಮನು ಯಾರ ಸೊತ್ತನ್ನೂ ಕಬಳಿಸಬಾರದು. ಅಧಿಕಾರಿಗಳಿಗೆ ಲಂಚ ನೀಡಿ ಅಥವಾ ನ್ಯಾಯಾಧೀಶರ ಬಳಿ ಸುಳ್ಳುಸಾಕ್ಷ್ಯ ಹೇಳಿ ಅನ್ಯರ ಧನವನ್ನು ಅನ್ಯಾಯವಾಗಿ ಸ್ವಾಧೀನಪಡಿಸುವುದು ಅತಿಹೀನವಾದ ಪಾಪವಾಗಿದೆ.

ಪಾಲಿಸುವವನಾರೋ ಅವನೇ ಪುಣ್ಯವಂತನು. ನೀವು ಮನೆಗಳನ್ನು ಅವುಗಳ ಬಾಗಿಲುಗಳಿಂದ ಪ್ರವೇಶಿಸಿರಿ.[1] ಮೋಕ್ಷ ಪಡೆಯುವ ಸಲುವಾಗಿ ನೀವು ಅಲ್ಲಾಹುವನ್ನು ಭಯಪಡಿರಿ.

**190**. ನಿಮ್ಮೊಂದಿಗೆ ಯುದ್ಧ ಮಾಡುವವರೊಂದಿಗೆ ಅಲ್ಲಾಹುವಿನ ಮಾರ್ಗದಲ್ಲಿ ನೀವೂ ಯುದ್ಧ ಮಾಡಿರಿ. ಆದರೆ ಹದ್ದು ಮೀರದಿರಿ. ಖಂಡಿತವಾಗಿಯೂ ಹದ್ದು ಮೀರುವವರನ್ನು ಅಲ್ಲಾಹು ಮೆಚ್ಚಲಾರನು.

وَقَٰتِلُواْ فِي سَبِيلِ ٱللَّهِ ٱلَّذِينَ يُقَٰتِلُونَكُمۡ وَلَا تَعۡتَدُوٓاْۚ إِنَّ ٱللَّهَ لَا يُحِبُّ ٱلۡمُعۡتَدِينَ ١٩٠

**191**. ನೀವು ಅವರನ್ನು ಕಂಡಲ್ಲಿ ವಧಿಸಿರಿ. ಅವರು ನಿಮ್ಮನ್ನು ಹೊರಗಟ್ಟಿದ ಸ್ಥಳದಿಂದ ನೀವೂ ಅವರನ್ನು ಹೊರಗಟ್ಟಿರಿ. (ಯಾಕೆಂದರೆ ಅವರು ಮಾಡುತ್ತಿರುವ) ಕ್ಷೋಭೆಯು ಕೊಲೆಗಿಂತಲೂ ಗುರುತರವಾಗಿದೆ. ಮಸ್ಜಿದುಲ್ ಹರಾಮ್‌ನ ಬಳಿ ಅವರು ನಿಮ್ಮೊಂದಿಗೆ ಯುದ್ಧ ಮಾಡುವ ತನಕ ನೀವು ಅವರೊಂದಿಗೆ ಅಲ್ಲಿ ಯುದ್ಧ ಮಾಡದಿರಿ. ಇನ್ನು ಅವರು ನಿಮ್ಮೊಂದಿಗೆ (ಅಲ್ಲೇ) ಯುದ್ಧ ಮಾಡುವುದಾದರೆ ನೀವು ಅವರನ್ನು ವಧಿಸಿರಿ. ಸತ್ಯನಿಷೇಧಿಗಳಿಗೆ ಹೀಗೆ ಪ್ರತಿಫಲವನ್ನು ನೀಡಲಾಗುವುದು.

وَٱقۡتُلُوهُمۡ حَيۡثُ ثَقِفۡتُمُوهُمۡ وَأَخۡرِجُوهُم مِّنۡ حَيۡثُ أَخۡرَجُوكُمۡۚ وَٱلۡفِتۡنَةُ أَشَدُّ مِنَ ٱلۡقَتۡلِۚ وَلَا تُقَٰتِلُوهُمۡ عِندَ ٱلۡمَسۡجِدِ ٱلۡحَرَامِ حَتَّىٰ يُقَٰتِلُوكُمۡ فِيهِۖ فَإِن قَٰتَلُوكُمۡ فَٱقۡتُلُوهُمۡۗ كَذَٰلِكَ جَزَآءُ ٱلۡكَٰفِرِينَ ١٩١

**192**. ಇನ್ನು ಅವರೇನಾದರೂ (ಪಶ್ಚಾತ್ತಾಪಪಟ್ಟು, ಯುದ್ಧವನ್ನು) ಸ್ಥಗಿತಗೊಳಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

فَإِنِ ٱنتَهَوۡاْ فَإِنَّ ٱللَّهَ غَفُورٞ رَّحِيمٞ ١٩٢

**193**. ಕ್ಷೋಭೆಯು ಇಲ್ಲದಾಗುವ ತನಕ ಮತ್ತು ಧರ್ಮವು ಅಲ್ಲಾಹುವಿಗೋಸ್ಕರ ತನಕ ನೀವು ಅವರೊಂದಿಗೆ ಯುದ್ಧ ಮಾಡಿರಿ. ಆದರೆ ಅವರೇನಾದರೂ (ಯುದ್ಧವನ್ನು) ನಿಲ್ಲಿಸಿದರೆ

وَقَٰتِلُوهُمۡ حَتَّىٰ لَا تَكُونَ فِتۡنَةٞ وَيَكُونَ ٱلدِّينُ لِلَّهِۖ فَإِنِ ٱنتَهَوۡاْ فَلَا عُدۡوَٰنَ إِلَّا عَلَى ٱلظَّٰلِمِينَ ١٩٣

1 ಪಾಪ ಮತ್ತು ದುಷ್ಕೃತ್ಯಗಳನ್ನೆಸಗಿದವರು ಮುಂಬಾಗಿಲುಗಳ ಮೂಲಕ ತಮ್ಮ ಮನೆಗಳನ್ನು ಪ್ರವೇಶಿಸಬಾರದೆಂಬ ಸಂಪ್ರದಾಯ ಅಜ್ಞಾನ ಕಾಲದ ಅರಬರ ಮಧ್ಯೆ ಚಾಲ್ತಿಯಲ್ಲಿತ್ತು. ಅದರ ನಿರರ್ಥಕತೆಯನ್ನು ಇಲ್ಲಿ ಎತ್ತಿ ತೋರಿಸಲಾಗಿದೆ.

(ಅವರ ಪೈಕಿ) ಅಕ್ರಮಿಗಳ ವಿರುದ್ಧವೇ ಹೊರತು ಅನಂತರ ಯಾವ ಆಕ್ರಮಣವೂ ಉಂಟಾಗಕೂಡದು.

**194.** ನಿಷಿದ್ಧ ತಿಂಗಳ (ಯುದ್ಧಕ್ಕೆ)[1] ನಿಷಿದ್ಧ ತಿಂಗಳಲ್ಲೇ (ಪ್ರತಿದಾಳಿ ಮಾಡಿರಿ). ನಿಷಿದ್ಧವಾಗಿರುವ ಇತರ ವಿಷಯಗಳನ್ನು ಉಲ್ಲಂಘಿಸುವಾಗಲೂ (ಅದೇ ರೀತಿ) ಪ್ರತಿಕ್ರಿಯಿಸಿರಿ. ಹೀಗೆ ನಿಮ್ಮ ಮೇಲೆ ಯಾರು ಅತಿಕ್ರಮವೆಸಗಿದರೂ, ಅವನು ನಿಮ್ಮ ಮೇಲೆ ಅತಿಕ್ರಮವೆಸಗಿದ ರೀತಿಯಲ್ಲೇ ನೀವೂ ಅವನ ಮೇಲೆ 'ಅತಿಕ್ರಮ'ವೆಸಗಿರಿ. ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಅಲ್ಲಾಹು ಭಯಭಕ್ತಿ ಪಾಲಿಸುವವರ ಜೊತೆಗಿರುವನೆಂಬುದನ್ನು ಅರಿತುಕೊಳ್ಳಿರಿ.

ٱلشَّهۡرُ ٱلۡحَرَامُ بِٱلشَّهۡرِ ٱلۡحَرَامِ وَٱلۡحُرُمَٰتُ قِصَاصٞۚ فَمَنِ ٱعۡتَدَىٰ عَلَيۡكُمۡ فَٱعۡتَدُواْ عَلَيۡهِ بِمِثۡلِ مَا ٱعۡتَدَىٰ عَلَيۡكُمۡۚ وَٱتَّقُواْ ٱللَّهَ وَٱعۡلَمُوٓاْ أَنَّ ٱللَّهَ مَعَ ٱلۡمُتَّقِينَ ١٩٤

**195.** ನೀವು ಅಲ್ಲಾಹುವಿನ ಮಾರ್ಗದಲ್ಲಿ ವ್ಯಯಿಸಿರಿ. (ಜಿಪುಣತೆ ಮತ್ತು ಉದಾಸೀನತೆಯ ಮೂಲಕ) ನಿಮ್ಮ ಕೈಗಳನ್ನು ನೀವೇ ವಿನಾಶದೆಡೆಗೆ ತಳ್ಳದಿರಿ. ನೀವು ಒಳಿತನ್ನು ಮಾಡಿರಿ. ಖಂಡಿತವಾಗಿಯೂ ಒಳಿತು ಮಾಡುವವರನ್ನು ಅಲ್ಲಾಹು ಪ್ರೀತಿಸುವನು.

وَأَنفِقُواْ فِي سَبِيلِ ٱللَّهِ وَلَا تُلۡقُواْ بِأَيۡدِيكُمۡ إِلَى ٱلتَّهۡلُكَةِ وَأَحۡسِنُوٓاْۚ إِنَّ ٱللَّهَ يُحِبُّ ٱلۡمُحۡسِنِينَ ١٩٥

**196.** ನೀವು ಅಲ್ಲಾಹುವಿಗಾಗಿ 'ಹಜ್ಜ್' ಮತ್ತು 'ಉಮ್ರಾ'ಗಳನ್ನು ಪೂರ್ಣವಾಗಿ ನಿರ್ವಹಿಸಿರಿ. ನಿಮಗೆ(ಹಜ್ಜ್ ನಿರ್ವಹಿಸುವುದರಿಂದ) ತಡೆಯುಂಟು ಮಾಡಲಾದರೆ ನಿಮಗೆ ಸಾಧ್ಯವಾಗುವ ಒಂದು ಬಲಿಮೃಗವನ್ನು (ಬಲಿ ನೀಡಿರಿ). ಬಲಿಮೃಗವು ತಲುಪಬೇಕಾದ ಸ್ಥಳವನ್ನು ತಲುಪುವ ತನಕ[2]

وَأَتِمُّواْ ٱلۡحَجَّ وَٱلۡعُمۡرَةَ لِلَّهِۚ فَإِنۡ أُحۡصِرۡتُمۡ فَمَا ٱسۡتَيۡسَرَ مِنَ ٱلۡهَدۡيِۖ وَلَا تَحۡلِقُواْ رُءُوسَكُمۡ حَتَّىٰ يَبۡلُغَ ٱلۡهَدۡيُ مَحِلَّهُۥۚ فَمَن كَانَ مِنكُم مَّرِيضًا أَوۡ بِهِۦٓ أَذٗى مِّن رَّأۡسِهِۦ فَفِدۡيَةٞ مِّن صِيَامٍ أَوۡ صَدَقَةٍ أَوۡ نُسُكٖۚ فَإِذَآ أَمِنتُمۡ فَمَن تَمَتَّعَ بِٱلۡعُمۡرَةِ

1 ರಜಬ್, ದುಲ್ ಕಅ್‌ದಃ, ದುಲ್ ಹಿಜ್ಜಃ ಮತ್ತು ಮುಹರ್ರಮ್ ಎಂಬೀ ನಾಲ್ಕು ತಿಂಗಳುಗಳು ಯುದ್ಧ ನಿಷೇಧಿತ ತಿಂಗಳುಗಳಾಗಿವೆ. ಈ ತಿಂಗಳುಗಳಲ್ಲಿ ಯುದ್ಧವನ್ನು ಆರಂಭಿಸುವುದು ಪಾಪವಾಗಿದೆ. ಆದರೆ ಪ್ರತಿರೋಧಿಸುವುದು ಪಾಪವಲ್ಲ.

2 ಸಾಮಾನ್ಯವಾಗಿ ಬಲಿಕರ್ಮವನ್ನು ನಿರ್ವಹಿಸಬೇಕಾದುದು ಮಕ್ಕಾದಲ್ಲಾಗಿದೆ. ದಾರಿಮಧ್ಯೆ ಎಲ್ಲಾದರೂ ತಡೆಯುಂಟಾದರೆ ಅಲ್ಲೇ ಬಲಿಕರ್ಮ ನಡೆಸಬಹುದು. ಹಾಜಿಗಳು ಬಲಿಕರ್ಮ ನಿರ್ವಹಿಸಿದ ನಂತರವೇ ತಲೆಗೂದಲು ಬೋಳಿಸಿ ಇಹ್ರಾಮ್‌ನಿಂದ ಮುಕ್ತವಾಗುವುದು ಉತ್ತಮವಾಗಿದೆ.

إِلَى ٱلۡحَجِّ فَمَا ٱسۡتَيۡسَرَ مِنَ ٱلۡهَدۡيِۚ فَمَن
لَّمۡ يَجِدۡ فَصِيَامُ ثَلَٰثَةِ أَيَّامٖ فِي ٱلۡحَجِّ
وَسَبۡعَةٍ إِذَا رَجَعۡتُمۡۗ تِلۡكَ عَشَرَةٞ كَامِلَةٞۗ
ذَٰلِكَ لِمَن لَّمۡ يَكُنۡ أَهۡلُهُۥ حَاضِرِي
ٱلۡمَسۡجِدِ ٱلۡحَرَامِۚ وَٱتَّقُواْ ٱللَّهَ وَٱعۡلَمُوٓاْ أَنَّ
ٱللَّهَ شَدِيدُ ٱلۡعِقَابِ ١٩٦

ನೀವು ತಲೆಗೂದಲು ಬೋಳಿಸದಿರಿ. ನಿಮ್ಮ ಪೈಕಿ ಯಾರಾದರೂ ರೋಗಿಯಾಗಿದ್ದರೆ ಅಥವಾ ಅವನ ತಲೆಯಲ್ಲಿ ಏನಾದರೂ ಕಾಯಿಲೆಯಿದ್ದರೆ ಅವನು (ತಲೆಗೂದಲು ಬೋಳಿಸುವುದಕ್ಕೆ) ಪ್ರಾಯಶ್ಚಿತ್ತವಾಗಿ ಉಪವಾಸ ಅಥವಾ ದಾನಧರ್ಮ ಅಥವಾ ಬಲಿಕರ್ಮ ನಿರ್ವಹಿಸಿದರೆ ಸಾಕು. ಇನ್ನು ನೀವು ಭಯಮುಕ್ತ ಸ್ಥಿತಿಯಲ್ಲಿದ್ದರೆ ಮತ್ತು ನಿಮ್ಮಲ್ಲಿ ಯಾರಾದರೂ ಉಮ್ರಾ ನಿರ್ವಹಿಸಿ ಹಜ್ಜ್ ತನಕ ವಿಶ್ರಾಂತಿ ಪಡೆಯುವುದಾದರೆ[1] ಸಾಧ್ಯವಾಗುವ ಒಂದು ಬಲಿಮೃಗವನ್ನು ಅವನು (ಹಜ್ಜ್ ಕರ್ಮಗಳ ಮಧ್ಯೆ ಬಲಿ ನೀಡಲಿ). ಇನ್ನು ಯಾರಿಗಾದರೂ ಅದು ದೊರೆಯದಿದ್ದಲ್ಲಿ ಹಜ್ಜ್‌ನ ಮಧ್ಯೆ ಮೂರು ದಿನ ಮತ್ತು ನೀವು (ಊರಿಗೆ) ಮರಳಿದ ಬಳಿಕ ಏಳು ದಿನ ಸೇರಿ ಒಟ್ಟು ಹತ್ತು ದಿನ ಉಪವಾಸ ಆಚರಿಸಲಿ. ಈ ನಿಯಮವು ಕುಟುಂಬ ಸಮೇತ ಮಸ್ಜಿದುಲ್ ಹರಾಮ್‌ನಲ್ಲಿ ವಾಸಿಸದವರಿಗಾಗಿದೆ. ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಅಲ್ಲಾಹು ಕಠೋರವಾಗಿ ಶಿಕ್ಷಿಸುವವನಾಗಿರುವನೆಂಬುದನ್ನು ಅರಿತುಕೊಳ್ಳಿರಿ.

ٱلۡحَجُّ أَشۡهُرٞ مَّعۡلُومَٰتٞۚ فَمَن فَرَضَ فِيهِنَّ
ٱلۡحَجَّ فَلَا رَفَثَ وَلَا فُسُوقَ وَلَا جِدَالَ
فِي ٱلۡحَجِّۗ وَمَا تَفۡعَلُواْ مِنۡ خَيۡرٖ يَعۡلَمۡهُ ٱللَّهُۗ
وَتَزَوَّدُواْ فَإِنَّ خَيۡرَ ٱلزَّادِ ٱلتَّقۡوَىٰۖ وَٱتَّقُونِ
يَٰٓأُوْلِي ٱلۡأَلۡبَٰبِ ١٩٧

**197.** ಹಜ್ಜ್‌ನ ಕಾಲವು ಅರಿಯಲ್ಪಟ್ಟ ತಿಂಗಳುಗಳಾಗಿವೆ. ಯಾರಾದರೂ ಆ ತಿಂಗಳುಗಳಲ್ಲಿ ಹಜ್ಜ್ ಕರ್ಮವನ್ನು ಪ್ರವೇಶಿಸಿದರೆ ತರುವಾಯ ಹಜ್ಜ್ ವೇಳೆಯಲ್ಲಿ ಲೈಂಗಿಕ ಸಂಪರ್ಕವಾಗಲಿ, ದುಷ್ಕೃತ್ಯವಾಗಲಿ, ಕುತರ್ಕವಾಗಲಿ ಮಾಡದಿರಲಿ. ನೀವು ಏನೇ ಸತ್ಕರ್ಮ ನಿರ್ವಹಿಸಿದರೂ ಅದನ್ನು ಅಲ್ಲಾಹು

1 ಹಜ್ ಮತ್ತು ಉಮ್ರಾ ಜೊತೆಯಾಗಿ ನಿರ್ವಹಿಸುವುದಕ್ಕೆ ಮೂರು ರೂಪಗಳಿವೆ. ಅವುಗಳಲ್ಲೊಂದು 'ತಮತ್ತುಅ್'. ಶವ್ವಾಲ್, ದುಲ್‌ಕಅ್‌ದಃ, ದುಲ್–ಹಿಜ್ಜ, ಎಂಬೀ ತಿಂಗಳುಗಳಲ್ಲಿ ಮೊದಲು ಉಮ್ರಾ ನಿರ್ವಹಿಸಿ ನಂತರ ಇಹ್ರಾಮ್‌ನಿಂದ ಮುಕ್ತರಾಗಿ ವಿಶ್ರಾಂತಿಯಲ್ಲಿದ್ದು ಬಳಿಕ ಅದೇ ವರ್ಷ, ಅದೇ ಯಾತ್ರೆಯಲ್ಲಿ ಹಜ್ಜ್ ಕರ್ಮಕ್ಕಾಗಿ ಇಹ್ರಾಮ್‌ಗೆ ಪ್ರವೇಶಿಸುವ ವಿಧಾನಕ್ಕೆ 'ತಮತ್ತುಅ್' ಎನ್ನಲಾಗುತ್ತದೆ.

ಅರಿಯುವವನು. ನೀವು (ಹಜ್ಜ್‌ಗೆ ಹೊರಡುವಾಗ) ಯಾತ್ರಾ ಸಿದ್ಧತೆಗಳನ್ನು ಸಜ್ಜುಗೊಳಿಸಿರಿ. ಆದರೆ ಯಾತ್ರಾ ಸಿದ್ಧತೆಗಳಲ್ಲಿ ಅತ್ಯುತ್ತಮವಾದುದು ಭಯಭಕ್ತಿಯಾಗಿದೆ. ಓ ಬುದ್ಧಿವಂತರೇ! ನನ್ನನ್ನು ಭಯಪಟ್ಟು ಜೀವಿಸಿರಿ.

**198**. (ಹಜ್ಜ್‌ನ ವೇಳೆಯಲ್ಲಿ) ನೀವು ನಿಮ್ಮ ರಬ್‌ನ ವತಿಯ ಯಾವುದೇ ಐಹಿಕ ಅನುಗ್ರಹವನ್ನು ಅರಸುವುದರಲ್ಲಿ ಯಾವುದೇ ದೋಷವಿಲ್ಲ. ನೀವು ಅರಫಾತ್‌ನಿಂದ ಹೊರಟು ಬಂದರೆ ಮಶ್‌ಅರುಲ್ ಹರಾಮ್‌ನ ಬಳಿ ಅಲ್ಲಾಹುವನ್ನು ಸ್ಮರಿಸಿರಿ. ಅವನು ನಿಮಗೆ ಮಾರ್ಗದರ್ಶನ ನೀಡಿದಂತೆ ನೀವು ಅವನನ್ನು ಸ್ಮರಿಸಿರಿ. ಖಂಡಿತವಾಗಿಯೂ ಇದಕ್ಕಿಂತ ಮುಂಚೆ ನೀವು ಪಥಭ್ರಷ್ಟರಲ್ಲಿ ಸೇರಿದವರಾಗಿದ್ದಿರಿ.

لَيۡسَ عَلَيۡكُمۡ جُنَاحٌ أَن تَبۡتَغُواْ فَضۡلٗا
مِّن رَّبِّكُمۡۚ فَإِذَآ أَفَضۡتُم مِّنۡ عَرَفَٰتٖ
فَٱذۡكُرُواْ ٱللَّهَ عِندَ ٱلۡمَشۡعَرِ ٱلۡحَرَامِۖ
وَٱذۡكُرُوهُ كَمَا هَدَىٰكُمۡ وَإِن كُنتُم مِّن
قَبۡلِهِۦ لَمِنَ ٱلضَّآلِّينَ ١٩٨

**199**. ತರುವಾಯ ಜನರು (ಯಾತ್ರಾರ್ಥಿಗಳು) ಎಲ್ಲಿಂದ ಹೊರಡುತ್ತಾರೋ ಅಲ್ಲಿಂದಲೇ ನೀವೂ ಹೊರಡಿರಿ. ಅಲ್ಲಾಹುವಿನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

ثُمَّ أَفِيضُواْ مِنۡ حَيۡثُ أَفَاضَ ٱلنَّاسُ
وَٱسۡتَغۡفِرُواْ ٱللَّهَۚ إِنَّ ٱللَّهَ غَفُورٞ رَّحِيمٞ ١٩٩

**200**. ನೀವು ಹಜ್ಜ್ ಕರ್ಮಗಳನ್ನು ನಿರ್ವಹಿಸಿದರೆ ನಿಮ್ಮ ಪೂರ್ವಜರನ್ನು ಸ್ಮರಿಸುವ ರೀತಿಯಲ್ಲಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ನೀವು ಅಲ್ಲಾಹುವನ್ನು ಸ್ಮರಿಸಿರಿ. ಜನರ ಪೈಕಿ ಓ ನಮ್ಮ ರಬ್! ನಮಗೆ ಇಹಲೋಕದಲ್ಲಿ (ಅನುಗ್ರಹವನ್ನು) ದಯಪಾಲಿಸು’ ಎಂದು ಹೇಳುವ ಕೆಲವರಿರುವರು. ಅಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇರಲಾರದು.

فَإِذَا قَضَيۡتُم مَّنَٰسِكَكُمۡ فَٱذۡكُرُواْ ٱللَّهَ
كَذِكۡرِكُمۡ ءَابَآءَكُمۡ أَوۡ أَشَدَّ ذِكۡرٗاۗ فَمِنَ
ٱلنَّاسِ مَن يَقُولُ رَبَّنَآ ءَاتِنَا فِي ٱلدُّنۡيَا وَمَا
لَهُۥ فِي ٱلۡأٓخِرَةِ مِنۡ خَلَٰقٖ ٢٠٠

**201.** ಓ ನಮ್ಮ ರಬ್! ನಮಗೆ ಇಹಲೋಕದಲ್ಲಿ ಒಳಿತನ್ನು ದಯಪಾಲಿಸು ಮತ್ತು ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ಪಾರುಮಾಡು' ಎಂದು ಹೇಳುವ ಕೆಲವರೂ ಅವರಲ್ಲಿರುವರು.

وَمِنْهُم مَّن يَقُولُ رَبَّنَآ ءَاتِنَا فِى ٱلدُّنْيَا حَسَنَةً وَفِى ٱلْـَٔاخِرَةِ حَسَنَةً وَقِنَا عَذَابَ ٱلنَّارِ ﴿٢٠١﴾

**202.** ಅವರು ಸಂಪಾದಿಸಿರುವುದಕ್ಕೆ ಪ್ರತಿಫಲವಾಗಿ ಅವರಿಗೆ ಬಹುದೊಡ್ಡ ಪಾಲಿರುವುದು. ಅಲ್ಲಾಹು ಶೀಘ್ರವಾಗಿ ವಿಚಾರಣೆ ಮಾಡುವವನಾಗಿರುವನು.

أُو۟لَـٰٓئِكَ لَهُمْ نَصِيبٌ مِّمَّا كَسَبُوا۟ ۚ وَٱللَّهُ سَرِيعُ ٱلْحِسَابِ ﴿٢٠٢﴾

**203.** ಎಣಿಸಲಾದ ದಿನಗಳಲ್ಲಿ ನೀವು ಅಲ್ಲಾಹುವನ್ನು ಸ್ಮರಿಸಿರಿ.[1] (ಅವುಗಳ ಪೈಕಿ) ಎರಡೇ ದಿನಗಳಲ್ಲಿ ಯಾರಾದರೂ ಆತುರದಿಂದ ಮರಳಿದರೆ ಅವನ ಮೇಲೆ ದೋಷವಿಲ್ಲ. ಯಾರಾದರೂ (ಒಂದು ದಿನ ಹೆಚ್ಚು) ವಿಳಂಬ ಮಾಡಿದರೆ ಅವನ ಮೇಲೂ ದೋಷವಿಲ್ಲ. ಭಯಭಕ್ತಿ ಪಾಲಿಸುವವನಿಗೆ (ಅದೇ ಉತ್ತಮವಾಗಿದೆ). ನೀವು ಅಲ್ಲಾಹುವನ್ನು ಭಯಪಡಿರಿ. ಅವನ ಕಡೆಗೇ ನೀವು ಒಟ್ಟುಗೂಡಿಸಲಾಗುವಿರಿ ಎಂಬುದನ್ನು ಅರಿತುಕೊಳ್ಳಿರಿ.

۞ وَٱذْكُرُوا۟ ٱللَّهَ فِىٓ أَيَّامٍ مَّعْدُودَٰتٍ ۚ فَمَن تَعَجَّلَ فِى يَوْمَيْنِ فَلَآ إِثْمَ عَلَيْهِ وَمَن تَأَخَّرَ فَلَآ إِثْمَ عَلَيْهِ ۚ لِمَنِ ٱتَّقَىٰ ۗ وَٱتَّقُوا۟ ٱللَّهَ وَٱعْلَمُوٓا۟ أَنَّكُمْ إِلَيْهِ تُحْشَرُونَ ﴿٢٠٣﴾

**204.** ಜನರ ಪೈಕಿ ಕೆಲವರಿರುವರು, ಐಹಿಕ ಜೀವನದ ವಿಷಯದಲ್ಲಿ ಅವನ ಮಾತು ತಮಗೆ ಆಕರ್ಷಕವಾಗಿ ಕಾಣುವುದು. ತನ್ನ ಹೃದಯ ಪರಿಶುದ್ಧತೆಗೆ ಅವನು ಅಲ್ಲಾಹುವನ್ನು ಸಾಕ್ಷಿಯಾಗಿಸುವನು. ವಾಸ್ತವಿಕವಾಗಿ ಅವನು (ಸತ್ಯದ) ಕಡುವೈರಿಯಾಗಿರುವನು.

وَمِنَ ٱلنَّاسِ مَن يُعْجِبُكَ قَوْلُهُۥ فِى ٱلْحَيَوٰةِ ٱلدُّنْيَا وَيُشْهِدُ ٱللَّهَ عَلَىٰ مَا فِى قَلْبِهِۦ وَهُوَ أَلَدُّ ٱلْخِصَامِ ﴿٢٠٤﴾

**205.** ಅವನು ಮರಳಿ ಹೋಗುವಾಗ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡಲು, ಬೆಳೆ ನಾಶಪಡಿಸಲು ಮತ್ತು ಪ್ರಾಣಹಾನಿಗೈಯ್ಯಲು

وَإِذَا تَوَلَّىٰ سَعَىٰ فِى ٱلْأَرْضِ لِيُفْسِدَ فِيهَا وَيُهْلِكَ ٱلْحَرْثَ وَٱلنَّسْلَ ۗ

1 ಎಣಿಸಲಾದ ದಿನಗಳು ಎಂದರೆ ಈದುಲ್ ಅದ್‌ಹಾದ ನಂತರದ ಮೂರು ದಿನಗಳಾಗಿವೆ. ಈ ದಿನಗಳಲ್ಲಿ ಹಜ್ಜ್ ಯಾತ್ರಿಕರು 'ಮಿನಾ'ದಲ್ಲಿ ತಂಗಿ 'ಜಮ್ರಾ'ಗಳಿಗೆ ಕಲ್ಲೆಸೆದು ತಕ್ಬೀರ್ ಹೇಳುತ್ತಾ ಅಲ್ಲಾಹುವಿನ ಮಹತ್ವವನ್ನು ಕೊಂಡಾಡುತ್ತಿರುತ್ತಾರೆ. ಮಿನಾದ ತಂಗುವಿಕೆಯನ್ನು ಎರಡು ದಿನಗಳಿಗೆ ಸೀಮಿತಗೊಳಿಸಿದರೂ ಅಡ್ಡಿಯಿಲ್ಲ.

ಶ್ರಮಿಸುವನು. ಅಲ್ಲಾಹು ವಿನಾಶವನ್ನು ಇಷ್ಟಪಡಲಾರನು.

وَٱللَّهُ لَا يُحِبُّ ٱلْفَسَادَ ﴿٢٠٥﴾

**206.** 'ಅಲ್ಲಾಹುವನ್ನು ಭಯಪಡು' ಎಂದು ಅವನೊಂದಿಗೆ ಹೇಳಲಾದರೆ ದರ್ಪವು ಅವನನ್ನು ಪಾಪ ಕೃತ್ಯಗಳಲ್ಲಿ ಹಿಡಿದಿಟ್ಟುಕೊಳ್ಳುವುದು. ಅವನಿಗೆ ನರಕಾಗ್ನಿಯೇ ಸಾಕು. ಆ ವಾಸಸ್ಥಳ ಎಷ್ಟು ನಿಕೃಷ್ಟವಾದುದು!

وَإِذَا قِيلَ لَهُ ٱتَّقِ ٱللَّهَ أَخَذَتْهُ ٱلْعِزَّةُ بِٱلْإِثْمِ ۚ فَحَسْبُهُۥ جَهَنَّمُ ۚ وَلَبِئْسَ ٱلْمِهَادُ ﴿٢٠٦﴾

**207.** ಅಲ್ಲಾಹುವಿನ ಸಂತೃಪ್ತಿಯನ್ನು ಅರಸುತ್ತಾ ತನ್ನ ಶರೀರವನ್ನೇ ಮಾರಿಕೊಳ್ಳುವಂತಹವನೂ ಜನರ ಪೈಕಿ ಇರುವನು. ಅಲ್ಲಾಹು ತನ್ನ ದಾಸರೊಂದಿಗೆ ಅತ್ಯಂತ ದಯೆಯುಳ್ಳವನಾಗಿರುವನು.

وَمِنَ ٱلنَّاسِ مَن يَشْرِى نَفْسَهُ ٱبْتِغَآءَ مَرْضَاتِ ٱللَّهِ ۗ وَٱللَّهُ رَءُوفٌۢ بِٱلْعِبَادِ ﴿٢٠٧﴾

**208.** ಓ ಸತ್ಯವಿಶ್ವಾಸಿಗಳೇ! ನೀವು ಸಂಪೂರ್ಣವಾಗಿ ಶರಣಾಗತಿಯಲ್ಲಿ ಪ್ರವೇಶಿಸಿರಿ.[1] ಸೈತಾನನ ಹೆಜ್ಜೆ ಗುರುತುಗಳನ್ನು ಅನುಸರಿಸದಿರಿ. ಖಂಡಿತವಾಗಿಯೂ ಅವನು ನಿಮ್ಮ ಬಹಿರಂಗ ಶತ್ರುವಾಗಿರುವನು.

يَـٰٓأَيُّهَا ٱلَّذِينَ ءَامَنُوا۟ ٱدْخُلُوا۟ فِى ٱلسِّلْمِ كَآفَّةً وَلَا تَتَّبِعُوا۟ خُطُوَٰتِ ٱلشَّيْطَـٰنِ ۚ إِنَّهُۥ لَكُمْ عَدُوٌّ مُّبِينٌ ﴿٢٠٨﴾

**209.** ಸುವ್ಯಕ್ತ ಪುರಾವೆಗಳು ನಿಮ್ಮ ಬಳಿಗೆ ಬಂದ ಬಳಿಕವೂ ನೀವು ಜಾರಿಬಿಡುವುದಾದರೆ ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನೆಂಬುದನ್ನು ಅರಿತುಕೊಳ್ಳಿರಿ.

فَإِن زَلَلْتُم مِّنۢ بَعْدِ مَا جَآءَتْكُمُ ٱلْبَيِّنَـٰتُ فَٱعْلَمُوٓا۟ أَنَّ ٱللَّهَ عَزِيزٌ حَكِيمٌ ﴿٢٠٩﴾

**210.** ಅವರು ಕಾಯುತ್ತಿರುವುದು ಅಲ್ಲಾಹು ಮತ್ತು ಮಲಕ್‌ಗಳು ಮೋಡಗಳ ನೆರಳುಗಳಲ್ಲಿ ಅವರ ಬಳಿಗೆ ಬರುವುದನ್ನು ಮತ್ತು ವಿಷಯವು ತೀರ್ಮಾನಿಸಲಾಗುವುದನ್ನು ಮಾತ್ರವೇನು? ವಿಷಯಗಳೆಲ್ಲವನ್ನೂ ಮರಳಿಸಲಾಗುವುದು ಅಲ್ಲಾಹುವಿನ ಬಳಿಗೇ ಆಗಿದೆ.

هَلْ يَنظُرُونَ إِلَّآ أَن يَأْتِيَهُمُ ٱللَّهُ فِى ظُلَلٍ مِّنَ ٱلْغَمَامِ وَٱلْمَلَـٰٓئِكَةُ وَقُضِىَ ٱلْأَمْرُ ۚ وَإِلَى ٱللَّهِ تُرْجَعُ ٱلْأُمُورُ ﴿٢١٠﴾

---

1 ಅಲ್ಲಾಹುವಿನ ಆಜ್ಞೆಗಳು ನಮ್ಮ ಯಾವುದೇ ಸ್ವಾರ್ಥ ಹಿತಾಸಕ್ತಿಗಳಿಗೆ ವಿರುದ್ಧವಾಗಿದ್ದರೂ ಸಹ ನಾವು ಅವನ ಆಜ್ಞೆಗಳಿಗೆ ಶರಣಾಗಬೇಕಾಗಿದೆ. ಜೀವನದ ಯಾವುದೇ ರಂಗದಲ್ಲೂ ಅವನಿಗೆ ಶರಣಾಗುವುದರಿಂದ ನಾವು ಸ್ವಲ್ಪವೂ ಹಿಂದೆ ಸರಿಯಕೂಡದು.

211. ನಾವು ಇಸ್ರಾಈಲ್ ಸಂತತಿಗಳಿಗೆ ಸುಸ್ಪಷ್ಟವಾದ ಎಷ್ಟು ದೃಷ್ಟಾಂತಗಳನ್ನು ನೀಡಿರುವೆವೆಂದು ಅವರೊಂದಿಗೆ ಕೇಳಿನೋಡಿರಿ. ಅಲ್ಲಾಹುವಿನ ಅನುಗ್ರಹವು ತನ್ನ ಬಳಿಗೆ ಬಂದ ಬಳಿಕವೂ ಯಾರಾದರೂ ಅದಕ್ಕೆ ವ್ಯತಿರಿಕ್ತವಾಗಿ ವರ್ತಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಕಠೋರವಾಗಿ ಶಿಕ್ಷಿಸುವವನಾಗಿರುವನು.

سَلۡ بَنِيٓ إِسۡرَٰٓءِيلَ كَمۡ ءَاتَيۡنَٰهُم مِّنۡ ءَايَةِۭ بَيِّنَةٖۗ وَمَن يُبَدِّلۡ نِعۡمَةَ ٱللَّهِ مِنۢ بَعۡدِ مَا جَآءَتۡهُ فَإِنَّ ٱللَّهَ شَدِيدُ ٱلۡعِقَابِ ﴿٢١١﴾

212. ಸತ್ಯನಿಷೇಧಿಗಳಿಗೆ ಐಹಿಕ ಜೀವನವನ್ನು ಅಲಂಕರಿಸಿ ಕೊಡಲಾಗಿದೆ. ಅವರು ಸತ್ಯವಿಶ್ವಾಸಿಗಳನ್ನು ಗೇಲಿ ಮಾಡುವರು. ಆದರೆ ಭಯಭಕ್ತಿ ಪಾಲಿಸುವವರು ಪುನರುತ್ಥಾನ ದಿನದಂದು ಅವರಿಗಿಂತ ಮೇಲಿರುವರು. ಅಲ್ಲಾಹು ತಾನಿಚ್ಛಿಸಿದವರಿಗೆ ಲೆಕ್ಕವಿಲ್ಲದೆ ಕರುಣಿಸುವನು.

زُيِّنَ لِلَّذِينَ كَفَرُواْ ٱلۡحَيَوٰةُ ٱلدُّنۡيَا وَيَسۡخَرُونَ مِنَ ٱلَّذِينَ ءَامَنُواْۘ وَٱلَّذِينَ ٱتَّقَوۡاْ فَوۡقَهُمۡ يَوۡمَ ٱلۡقِيَٰمَةِۗ وَٱللَّهُ يَرۡزُقُ مَن يَشَآءُ بِغَيۡرِ حِسَابٖ ﴿٢١٢﴾

213. ಮಾನವರು ಒಂದೇ ಸಮುದಾಯವಾಗಿದ್ದರು. ತರುವಾಯ (ಅವರು ಭಿನ್ನರಾದಾಗ ವಿಶ್ವಾಸಿಗಳಿಗೆ) ಶುಭವಾರ್ತೆ ತಿಳಿಸಲು ಮತ್ತು (ನಿಷೇಧಿಗಳಿಗೆ) ಎಚ್ಚರಿಕೆ ನೀಡಲು ಅಲ್ಲಾಹು ಪ್ರವಾದಿಗಳನ್ನು ಕಳುಹಿಸಿದನು. ಅವರು (ಜನರು) ಭಿನ್ನಾಭಿಪ್ರಾಯ ತಾಳಿದ ವಿಷಯದಲ್ಲಿ ತೀರ್ಪು ನೀಡುವ ಸಲುವಾಗಿ ಅವರ ಜೊತೆಗೆ ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿದನು. ಆದರೆ ಸುವ್ಯಕ್ತ ಪುರಾವೆಗಳು ತಮ್ಮ ಬಳಿಗೆ ಬಂದ ಬಳಿಕವೂ ಗ್ರಂಥ ನೀಡಲಾದವರು ಅದರಲ್ಲಿ (ಗ್ರಂಥದ ವಿಷಯದಲ್ಲಿ) ಭಿನ್ನಮತ ತಾಳಿರುವುದು ಅವರು ಪರಸ್ಪರ ಹೊಂದಿದ್ದ ವಿದ್ವೇಷದ ಕಾರಣದಿಂದಾಗಿತ್ತೇ ವಿನಾ ಇನ್ನಾವುದರಿಂದಲೂ ಆಗಿರಲಿಲ್ಲ. ಆಗ ಯಾವ ಸತ್ಯದಿಂದ ಅವರು ಭಿನ್ನರಾದರೋ ಆ ಸತ್ಯದೆಡೆಗೆ ಅಲ್ಲಾಹು ತನ್ನ ಅನುಮತಿ ಪ್ರಕಾರ ಸತ್ಯವಿಶ್ವಾಸಿಗಳನ್ನು ಮುನ್ನಡೆಸಿದನು.

كَانَ ٱلنَّاسُ أُمَّةٗ وَٰحِدَةٗ فَبَعَثَ ٱللَّهُ ٱلنَّبِيِّـۧنَ مُبَشِّرِينَ وَمُنذِرِينَ وَأَنزَلَ مَعَهُمُ ٱلۡكِتَٰبَ بِٱلۡحَقِّ لِيَحۡكُمَ بَيۡنَ ٱلنَّاسِ فِيمَا ٱخۡتَلَفُواْ فِيهِۚ وَمَا ٱخۡتَلَفَ فِيهِ إِلَّا ٱلَّذِينَ أُوتُوهُ مِنۢ بَعۡدِ مَا جَآءَتۡهُمُ ٱلۡبَيِّنَٰتُ بَغۡيَۢا بَيۡنَهُمۡۖ فَهَدَى ٱللَّهُ ٱلَّذِينَ ءَامَنُواْ لِمَا ٱخۡتَلَفُواْ فِيهِ مِنَ ٱلۡحَقِّ بِإِذۡنِهِۦۗ وَٱللَّهُ يَهۡدِي مَن يَشَآءُ إِلَىٰ صِرَٰطٖ مُّسۡتَقِيمٍ ﴿٢١٣﴾

ಅಲ್ಲಾಹು ತಾನಿಚ್ಛಿಸುವವರನ್ನು ನೇರ ಮಾರ್ಗದೆಡೆಗೆ ಮುನ್ನಡೆಸುವನು.

**214.** ನಿಮಗಿಂತ ಮುಂಚೆ ಗತಿಸಿ ಹೋದವರಿಗೆ (ವಿಶ್ವಾಸಿಗಳಿಗೆ) ಬಂದಂತಹ ಪರೀಕ್ಷೆಗಳು ನಿಮಗೂ ಬಾರದೆ ಸ್ವರ್ಗವನ್ನು ಪ್ರವೇಶಿಸಬಹುದೆಂದು ನೀವು ಭಾವಿಸಿರುವಿರಾ? ದಾರಿದ್ರ್ಯ ಮತ್ತು ಸಂಕಷ್ಟಗಳು ಅವರನ್ನು ಸ್ಪರ್ಶಿಸಿದ್ದವು. ಅಲ್ಲಾಹುವಿನ ನೆರವು ಯಾವಾಗ ಬರುವುದೆಂದು ಅವರ ಪೈಕಿ ಸಂದೇಶವಾಹಕರು ಮತ್ತು ಅವರೊಂದಿಗಿದ್ದ ಸತ್ಯವಿಶ್ವಾಸಿಗಳು ಕೇಳುವಷ್ಟರ ಮಟ್ಟಿಗೆ ಅವರನ್ನು ನಡುಗಿಸಲಾಯಿತು. ಅರಿತುಕೊಳ್ಳಿರಿ! ಅಲ್ಲಾಹುವಿನ ಸಹಾಯ ಸಮೀಪದಲ್ಲೇ ಇರುವುದು.

أَمۡ حَسِبۡتُمۡ أَن تَدۡخُلُواْ ٱلۡجَنَّةَ وَلَمَّا
يَأۡتِكُم مَّثَلُ ٱلَّذِينَ خَلَوۡاْ مِن قَبۡلِكُمۖ
مَّسَّتۡهُمُ ٱلۡبَأۡسَآءُ وَٱلضَّرَّآءُ وَزُلۡزِلُواْ حَتَّىٰ
يَقُولَ ٱلرَّسُولُ وَٱلَّذِينَ ءَامَنُواْ مَعَهُۥ مَتَىٰ
نَصۡرُ ٱللَّهِۗ أَلَآ إِنَّ نَصۡرَ ٱللَّهِ قَرِيبٞ ٢١٤

**215.** (ಓ ಪ್ರವಾದಿಯವರೇ!) ತಾವು ಏನನ್ನು ವ್ಯಯಿಸಬೇಕೆಂದು ಅವರು ತಮ್ಮೊಂದಿಗೆ ಕೇಳುತ್ತಿರುವರು. ತಾವು ಹೇಳಿರಿ: 'ನೀವು ಉತ್ತಮವಾಗಿರುವ ಏನನ್ನೇ ವ್ಯಯಿಸಿದರೂ ಅದನ್ನು ಮಾತಾಪಿತರಿಗಾಗಿ, ನಿಕಟ ಸಂಬಂಧಿಕರಿಗಾಗಿ, ಅನಾಥರಿಗಾಗಿ, ನಿರ್ಗತಿಕರಿಗಾಗಿ ಮತ್ತು ದಾರಿಹೋಕನಿಗಾಗಿ ವ್ಯಯಿಸಿರಿ. ನೀವು ಉತ್ತಮವಾಗಿರುವ ಏನೇ ಮಾಡಿದರೂ ಖಂಡಿತವಾಗಿಯೂ ಅಲ್ಲಾಹು ಅದನ್ನು ಅರಿಯುವವನಾಗಿರುವನು'.

يَسۡـَٔلُونَكَ مَاذَا يُنفِقُونَۖ قُلۡ مَآ أَنفَقۡتُم
مِّنۡ خَيۡرٖ فَلِلۡوَٰلِدَيۡنِ وَٱلۡأَقۡرَبِينَ وَٱلۡيَتَٰمَىٰ
وَٱلۡمَسَٰكِينِ وَٱبۡنِ ٱلسَّبِيلِۗ وَمَا تَفۡعَلُواْ مِنۡ
خَيۡرٖ فَإِنَّ ٱللَّهَ بِهِۦ عَلِيمٞ ٢١٥

**216.** ಯುದ್ಧ ಮಾಡುವುದನ್ನು ನಿಮ್ಮ ಮೇಲೆ ಕಡ್ಡಾಯವಾಗಿ ವಿಧಿಸಲಾಗಿದೆ. ಅದಂತೂ ನಿಮಗೆ ಅಪ್ರಿಯವಾಗಿದೆ. ಆದರೆ ನೀವೊಂದು ವಿಷಯವನ್ನು ಅಸಹ್ಯಪಡುವಾಗ (ವಾಸ್ತವಿಕವಾಗಿ) ಅದು ನಿಮಗೆ ಒಳಿತಾಗಿರಲೂಬಹುದು. ನೀವೊಂದು ವಿಷಯವನ್ನು ಇಷ್ಟಪಡುವಾಗ (ವಾಸ್ತವಿಕವಾಗಿ) ಅದು ನಿಮಗೆ ಹಾನಿಕರ

كُتِبَ عَلَيۡكُمُ ٱلۡقِتَالُ وَهُوَ كُرۡهٞ لَّكُمۡۖ
وَعَسَىٰٓ أَن تَكۡرَهُواْ شَيۡـٔٗا وَهُوَ خَيۡرٞ
لَّكُمۡۖ وَعَسَىٰٓ أَن تُحِبُّواْ شَيۡـٔٗا وَهُوَ شَرّٞ
لَّكُمۡۚ وَٱللَّهُ يَعۡلَمُ وَأَنتُمۡ لَا تَعۡلَمُونَ ٢١٦

ವಾಗಿರಲೂಬಹುದು. ಅಲ್ಲಾಹು ಅರಿಯುವನು; ನೀವು ಅರಿಯಲಾರಿರಿ.

217. ನಿಷಿದ್ಧ ತಿಂಗಳಲ್ಲಿ ಯುದ್ಧ ಮಾಡುವುದರ ಕುರಿತು ಅವರು ತಮ್ಮೊಂದಿಗೆ ಕೇಳುತ್ತಿರುವರು. ತಾವು ಹೇಳಿರಿ: 'ಆ ತಿಂಗಳಲ್ಲಿ ಯುದ್ಧ ಮಾಡುವುದು ಮಹಾ ಅಪರಾಧವಾಗಿದೆ'. ಆದರೆ ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆಯುವುದು, ಅವನಲ್ಲಿ ಅವಿಶ್ವಾಸವಿಡುವುದು, ಮಸ್ಜಿದುಲ್ ಹರಾಮ್‌ನಿಂದ (ಜನರನ್ನು) ತಡೆಯುವುದು ಮತ್ತು ಅದರ ಹಕ್ಕುದಾರರನ್ನು ಅಲ್ಲಿಂದ ಹೊರಗಟ್ಟುವುದು ಅಲ್ಲಾಹುವಿನ ಬಳಿ ಅದಕ್ಕಿಂತಲೂ ಘೋರ (ಅಪರಾಧ)ವಾಗಿದೆ. ಕ್ಷೋಭೆಯು ಕೊಲೆಗಿಂತಲೂ ಗುರುತರವಾಗಿದೆ. ಅವರಿಗೆ ಸಾಧ್ಯವಾಗುವುದಾದರೆ ನಿಮ್ಮನ್ನು ನಿಮ್ಮ ಧರ್ಮದಿಂದ ವಿಮುಖಗೊಳಿಸುವವರೆಗೂ ಅವರು ನಿಮ್ಮೊಂದಿಗೆ ಯುದ್ಧ ಮಾಡುತ್ತಲೇ ಇರುವರು. ನಿಮ್ಮ ಪೈಕಿ ಯಾರಾದರೂ ತನ್ನ ಧರ್ಮದಿಂದ ಹೊರಬಂದು ತರುವಾಯ ಸತ್ಯನಿಷೇಧಿಯಾಗಿ ಮರಣ ಹೊಂದುವುದಾದರೆ, ಅಂತಹವರ ಕರ್ಮಗಳು ಇಹಲೋಕದಲ್ಲೂ ಪರಲೋಕದಲ್ಲೂ ನಿಷ್ಫಲವಾದವು. ನರಕವಾಸಿಗಳು ಅವರೇ ಆಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

يَسْـَٔلُونَكَ عَنِ ٱلشَّهْرِ ٱلْحَرَامِ قِتَالٍ فِيهِ ۖ قُلْ قِتَالٌ فِيهِ كَبِيرٌ ۖ وَصَدٌّ عَن سَبِيلِ ٱللَّهِ وَكُفْرٌۢ بِهِۦ وَٱلْمَسْجِدِ ٱلْحَرَامِ وَإِخْرَاجُ أَهْلِهِۦ مِنْهُ أَكْبَرُ عِندَ ٱللَّهِ ۚ وَٱلْفِتْنَةُ أَكْبَرُ مِنَ ٱلْقَتْلِ ۗ وَلَا يَزَالُونَ يُقَـٰتِلُونَكُمْ حَتَّىٰ يَرُدُّوكُمْ عَن دِينِكُمْ إِنِ ٱسْتَطَـٰعُوا۟ ۚ وَمَن يَرْتَدِدْ مِنكُمْ عَن دِينِهِۦ فَيَمُتْ وَهُوَ كَافِرٌ فَأُو۟لَـٰٓئِكَ حَبِطَتْ أَعْمَـٰلُهُمْ فِى ٱلدُّنْيَا وَٱلْـَٔاخِرَةِ ۖ وَأُو۟لَـٰٓئِكَ أَصْحَـٰبُ ٱلنَّارِ ۖ هُمْ فِيهَا خَـٰلِدُونَ ﴿٢١٧﴾

218. ವಿಶ್ವಾಸವಿಟ್ಟವರು, ಸ್ವಂತ ಊರನ್ನು ಬಿಟ್ಟು ಬಂದವರು ಮತ್ತು ಅಲ್ಲಾಹುವಿನ ಮಾರ್ಗದಲ್ಲಿ ಹೋರಾಟ ಮಾಡಿದವರಾರೋ ಅವರು ಅಲ್ಲಾಹುವಿನ ದಯೆಯನ್ನು ಆಶಿಸುವವರಾಗಿರುವರು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

إِنَّ ٱلَّذِينَ ءَامَنُوا۟ وَٱلَّذِينَ هَاجَرُوا۟ وَجَـٰهَدُوا۟ فِى سَبِيلِ ٱللَّهِ أُو۟لَـٰٓئِكَ يَرْجُونَ رَحْمَتَ ٱللَّهِ ۚ وَٱللَّهُ غَفُورٌ رَّحِيمٌ ﴿٢١٨﴾

**219–220.** (ಓ ಪ್ರವಾದಿಯವರೇ!) ಅವರು ತಮ್ಮೊಂದಿಗೆ ಮದ್ಯ ಮತ್ತು ಜೂಜಾಟದ ಬಗ್ಗೆ ಕೇಳುತ್ತಿರುವರು. ಹೇಳಿರಿ: ‘ಅವೆರಡರಲ್ಲೂ ಘೋರ ಪಾಪವಿದೆ ಮತ್ತು ಜನರಿಗೆ ಕೆಲವು ಪ್ರಯೋಜನಗಳೂ ಇವೆ. ಆದರೆ ಅವುಗಳಲ್ಲಿರುವ ಪಾಪವು ಪ್ರಯೋಜನಕ್ಕಿಂತಲೂ ಹಿರಿದಾಗಿದೆ’. ತಾವು ಏನನ್ನು ವ್ಯಯಿಸಬೇಕೆಂದು ಅವರು ತಮ್ಮೊಂದಿಗೆ ಕೇಳುತ್ತಿರುವರು. ಹೇಳಿರಿ: ‘(ಅಗತ್ಯಗಳನ್ನು ಪೂರೈಸಿದ ಬಳಿಕ) ಮಿಕ್ಕಿದ್ದು’. ಹೀಗೆ ಇಹಪರ ಜೀವನದ ಬಗ್ಗೆ ನೀವು ಚಿಂತಿಸುವ ಸಲುವಾಗಿ ಅಲ್ಲಾಹು ನಿಮಗೆ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವನು. ಅನಾಥರ ಬಗ್ಗೆಯೂ ಅವರು ತಮ್ಮೊಂದಿಗೆ ಕೇಳುತ್ತಿರುವರು. ಹೇಳಿರಿ: ‘ಅವರ ಒಳಿತಿಗಾಗಿ ಮಾಡುವ ಯಾವುದೇ ಕಾರ್ಯವೂ ಒಳ್ಳೆಯದೇ ಆಗಿದೆ. ನೀವು ಅವರೊಂದಿಗೆ ಜೊತೆಯಾಗಿ ಬಾಳುವುದಾದರೆ (ಅದರಲ್ಲಿ ದೋಷವಿಲ್ಲ). ಅವರು ನಿಮ್ಮ ಸಹೋದರರಾಗಿರುವರು!’ ವಿನಾಶಕಾರಿಯನ್ನು ಮತ್ತು ಸುಧಾರಣೆ ಮಾಡುವವನನ್ನು ಅಲ್ಲಾಹು ಬೇರ್ಪಡಿಸಿ ತಿಳಿಯುವನು. ಅಲ್ಲಾಹು ಇಚ್ಛಿಸುತ್ತಿದ್ದರೆ ಅವನು ನಿಮ್ಮನ್ನು ಕಷ್ಟಕ್ಕೊಳಪಡಿಸುತ್ತಿದ್ದನು. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

۞ يَسْـَٔلُونَكَ عَنِ ٱلْخَمْرِ وَٱلْمَيْسِرِ ۖ قُلْ
فِيهِمَآ إِثْمٌ كَبِيرٌ وَمَنَٰفِعُ لِلنَّاسِ وَإِثْمُهُمَآ
أَكْبَرُ مِن نَّفْعِهِمَا ۗ وَيَسْـَٔلُونَكَ مَاذَا
يُنفِقُونَ ۖ قُلِ ٱلْعَفْوَ ۗ كَذَٰلِكَ يُبَيِّنُ ٱللَّهُ
لَكُمُ ٱلْـَٔايَٰتِ لَعَلَّكُمْ تَتَفَكَّرُونَ ﴿٢١٩﴾
فِى ٱلدُّنْيَا وَٱلْـَٔاخِرَةِ ۗ وَيَسْـَٔلُونَكَ عَنِ
ٱلْيَتَٰمَىٰ ۖ قُلْ إِصْلَاحٌ لَّهُمْ خَيْرٌ ۖ وَإِن
تُخَالِطُوهُمْ فَإِخْوَٰنُكُمْ ۚ وَٱللَّهُ يَعْلَمُ
ٱلْمُفْسِدَ مِنَ ٱلْمُصْلِحِ ۚ وَلَوْ شَآءَ ٱللَّهُ
لَأَعْنَتَكُمْ ۚ إِنَّ ٱللَّهَ عَزِيزٌ حَكِيمٌ ﴿٢٢٠﴾

**221.** ಬಹುದೇವವಿಶ್ವಾಸಿನಿಯರು ವಿಶ್ವಾಸವಿಡುವ ತನಕ ನೀವು ಅವರನ್ನು ವರಿಸದಿರಿ. ಸತ್ಯವಿಶ್ವಾಸಿನಿಯಾದ ಓರ್ವ ಗುಲಾಮಸ್ತ್ರೀ ಬಹುದೇವವಿಶ್ವಾಸಿನಿಗಿಂತಲೂ ಉತ್ತಮಳಾಗಿರುವಳು. ಆಕೆ ನಿಮಗೆ ಆಕರ್ಷಕವಾಗಿ ಕಂಡರೂ ಸರಿ! ಬಹುದೇವವಿಶ್ವಾಸಿಗಳು ವಿಶ್ವಾಸವಿಡುವ ತನಕ ಅವರಿಗೆ ನೀವು ವಿವಾಹ ಮಾಡಿಕೊಡದಿರಿ. ಸತ್ಯವಿಶ್ವಾಸಿಯಾದ ಓರ್ವ ಗುಲಾಮನು

وَلَا تَنكِحُوا۟ ٱلْمُشْرِكَٰتِ حَتَّىٰ يُؤْمِنَّ ۚ
وَلَأَمَةٌ مُّؤْمِنَةٌ خَيْرٌ مِّن مُّشْرِكَةٍ وَلَوْ
أَعْجَبَتْكُمْ ۗ وَلَا تُنكِحُوا۟ ٱلْمُشْرِكِينَ حَتَّىٰ
يُؤْمِنُوا۟ ۚ وَلَعَبْدٌ مُّؤْمِنٌ خَيْرٌ مِّن مُّشْرِكٍ وَلَوْ
أَعْجَبَكُمْ ۗ أُو۟لَٰٓئِكَ يَدْعُونَ إِلَى ٱلنَّارِ ۖ وَٱللَّهُ
يَدْعُوٓا۟ إِلَى ٱلْجَنَّةِ وَٱلْمَغْفِرَةِ بِإِذْنِهِۦ ۖ وَيُبَيِّنُ
ءَايَٰتِهِۦ لِلنَّاسِ لَعَلَّهُمْ يَتَذَكَّرُونَ ﴿٢٢١﴾

ಬಹುದೇವವಿಶ್ವಾಸಿಗಿಂತಲೂ ಉತ್ತಮನಾಗಿರುವನು. ಆತ ನಿಮಗೆ ಆಕರ್ಷಕವಾಗಿ ಕಂಡರೂ ಸರಿ! ಅವರು ನರಕದೆಡೆಗೆ ಆಹ್ವಾನಿಸುತ್ತಿರುವರು. ಆದರೆ ಅಲ್ಲಾಹು ತನ್ನ ಅನುಮತಿ ಪ್ರಕಾರ ಸ್ವರ್ಗದೆಡೆಗೆ ಮತ್ತು ಪಾಪಮುಕ್ತಿಯೆಡೆಗೆ ಆಹ್ವಾನಿಸುತ್ತಿರುವನು. ಜನರು ಚಿಂತಿಸಿ ಗ್ರಹಿಸುವುದಕ್ಕಾಗಿ ಅವನು ತನ್ನ ದೃಷ್ಟಾಂತಗಳನ್ನು ಅವರಿಗೆ ವಿವರಿಸಿಕೊಡುತ್ತಿರುವನು.

222. ಅವರು ತಮ್ಮೊಂದಿಗೆ ಋತುಸ್ರಾವದ ಬಗ್ಗೆ ಕೇಳುತ್ತಿರುವರು. ಹೇಳಿರಿ: 'ಅದೊಂದು ಮಾಲಿನ್ಯವಾಗಿದೆ. ಆದ್ದರಿಂದ ಋತುಸ್ರಾವ ಕಾಲದಲ್ಲಿ ನೀವು ಸ್ತ್ರೀಯರಿಂದ ದೂರವಿರಿ. ಅವರು ಶುದ್ಧವಾಗುವವರೆಗೂ ನೀವು ಅವರನ್ನು ಸಮೀಪಿಸದಿರಿ. ಆದರೆ ಅವರು ಶುದ್ಧಿ ಯಾದರೆ ಅಲ್ಲಾಹು ನಿಮ್ಮೊಂದಿಗೆ ಆಜ್ಞಾಪಿಸಿದ ರೀತಿಯಲ್ಲಿ ನೀವು ಅವರ ಬಳಿಗೆ ತೆರಳಿರಿ'. ಖಂಡಿತವಾಗಿಯೂ ಅಲ್ಲಾಹು ಪಶ್ಚಾತ್ತಾಪಪಟ್ಟು ಮರಳುವವರನ್ನು ಪ್ರೀತಿಸು ವನು ಮತ್ತು ಶುಚಿತ್ವ ಪಾಲಿಸುವವರನ್ನೂ ಪ್ರೀತಿಸುವನು.

وَيَسْـَٔلُونَكَ عَنِ ٱلْمَحِيضِ ۖ قُلْ هُوَ أَذًى فَٱعْتَزِلُوا۟ ٱلنِّسَآءَ فِى ٱلْمَحِيضِ ۖ وَلَا تَقْرَبُوهُنَّ حَتَّىٰ يَطْهُرْنَ ۖ فَإِذَا تَطَهَّرْنَ فَأْتُوهُنَّ مِنْ حَيْثُ أَمَرَكُمُ ٱللَّهُ ۚ إِنَّ ٱللَّهَ يُحِبُّ ٱلتَّوَّٰبِينَ وَيُحِبُّ ٱلْمُتَطَهِّرِينَ ﴿٢٢٢﴾

223. ನಿಮ್ಮ ಪತ್ನಿಯರು ನಿಮ್ಮ ಹೊಲವಾಗಿರುವರು. ಆದ್ದರಿಂದ ನೀವು ಇಚ್ಛಿಸುವ ರೀತಿಯಲ್ಲಿ ನಿಮ್ಮ ಹೊಲದೆಡೆಗೆ ತೆರಳಿರಿ. ನಿಮ್ಮ ಸ್ವಂತಕ್ಕೆ ಬೇಕಾದುದನ್ನು ನೀವು ಮುಂಗಡವಾಗಿ ಮಾಡಿಟ್ಟುಕೊಳ್ಳಿರಿ.(1) ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನೀವು ಅವನನ್ನು ಭೇಟಿಯಾಗಲಿರುವಿರಿ ಎಂಬುದನ್ನು ಅರಿತುಕೊಳ್ಳಿರಿ. ಸತ್ಯವಿಶ್ವಾಸಿಗಳಿಗೆ ಶುಭವಾರ್ತೆ ತಿಳಿಸಿರಿ.

نِسَآؤُكُمْ حَرْثٌ لَّكُمْ فَأْتُوا۟ حَرْثَكُمْ أَنَّىٰ شِئْتُمْ ۖ وَقَدِّمُوا۟ لِأَنفُسِكُمْ ۚ وَٱتَّقُوا۟ ٱللَّهَ وَٱعْلَمُوٓا۟ أَنَّكُم مُّلَٰقُوهُ ۗ وَبَشِّرِ ٱلْمُؤْمِنِينَ ﴿٢٢٣﴾

1 ಇಲ್ಲಿ ಸೂಚಿಸಿರುವುದು ಭವಿಷ್ಯದಲ್ಲಿ ಮತ್ತು ಪರಲೋಕ ಜೀವನದಲ್ಲಿ ಪ್ರಯೋಜನಕರವಾಗುವ ರೀತಿಯಲ್ಲಿ ಸಂತತಿಯನ್ನು ಧರ್ಮನಿಷ್ಠೆಯೊಂದಿಗೆ ಬೆಳೆಸಬೇಕಾದ ಅಗತ್ಯದ ಬಗ್ಗೆಯಾಗಿರಬಹುದು.

224. ನೀವು ಅಲ್ಲಾಹುವಿನ ಹೆಸರಲ್ಲಿ ಶಪಥ ಮಾಡಿರುವಿರಿ ಎಂಬ ಕಾರಣದಿಂದಾಗಿ ಸತ್ಕಾರ್ಯವನ್ನು ಮಾಡಲು, ಭಯಭಕ್ತಿ ಪಾಲಿಸಲು ಮತ್ತು ಜನರ ಮಧ್ಯೆ ಸಂಧಾನ ಮಾಡಲು ನೀವು ಅವನನ್ನು ಒಂದು ಅಡ್ಡಿಯಾಗಿ ಮಾಡಿಕೊಳ್ಳದಿರಿ.[1] ಅಲ್ಲಾಹು ಎಲ್ಲವನ್ನೂ ಆಲಿಸುವವನೂ ಅರಿಯುವವನೂ ಆಗಿರುವನು.

وَلَا تَجۡعَلُواْ ٱللَّهَ عُرۡضَةٗ لِّأَيۡمَٰنِكُمۡ أَن تَبَرُّواْ وَتَتَّقُواْ وَتُصۡلِحُواْ بَيۡنَ ٱلنَّاسِۚ وَٱللَّهُ سَمِيعٌ عَلِيمٞ ٢٢٤

225. (ಮನಃಪೂರ್ವಕವಲ್ಲದ) ಅರ್ಥಶೂನ್ಯ ಶಪಥ ಮಾತುಗಳ ಕಾರಣಕ್ಕಾಗಿ ಅಲ್ಲಾಹು ನಿಮ್ಮನ್ನು ಶಿಕ್ಷಿಸಲಾರನು. ಆದರೆ ನೀವು ಮನಃಪೂರ್ವಕ ಮಾಡಿರುವುದಕ್ಕಾಗಿ ಅವನು ನಿಮ್ಮನ್ನು ಶಿಕ್ಷಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಸಹನಾಶೀಲನೂ ಆಗಿರುವನು.

لَّا يُؤَاخِذُكُمُ ٱللَّهُ بِٱللَّغۡوِ فِيٓ أَيۡمَٰنِكُمۡ وَلَٰكِن يُؤَاخِذُكُم بِمَا كَسَبَتۡ قُلُوبُكُمۡۗ وَٱللَّهُ غَفُورٌ حَلِيمٞ ٢٢٥

226. ತಮ್ಮ ಪತ್ನಿಯರೊಂದಿಗೆ (ಲೈಂಗಿಕ ಸಂಪರ್ಕ ಮಾಡುವುದಿಲ್ಲವೆಂದು) ಶಪಥ ಮಾಡಿ ದೂರ ಉಳಿಯುವವರಿಗೆ (ಅಂತಿಮ ನಿರ್ಧಾರಕ್ಕಾಗಿ) ನಾಲ್ಕು ತಿಂಗಳ ಕಾಲ ಕಾಯಬಹುದು. ಅದರ ಮಧ್ಯೆ ಅವರು (ಶಪಥವನ್ನು ಮುರಿದು ದಾಂಪತ್ಯದೆಡೆಗೆ) ಮರಳುವುದಾದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

لِّلَّذِينَ يُؤۡلُونَ مِن نِّسَآئِهِمۡ تَرَبُّصُ أَرۡبَعَةِ أَشۡهُرٖۖ فَإِن فَآءُو فَإِنَّ ٱللَّهَ غَفُورٞ رَّحِيمٞ ٢٢٦

227. ಇನ್ನು ಅವರು ವಿವಾಹ ವಿಚ್ಛೇದನೆ ಮಾಡಬೇಕೆಂದು ತೀರ್ಮಾನಿಸುವುದಾದರೆ, ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನೂ

وَإِنۡ عَزَمُواْ ٱلطَّلَٰقَ فَإِنَّ ٱللَّهَ سَمِيعٌ عَلِيمٞ ٢٢٧

1 ಯಾವುದೇ ವಿಷಯದ ಕುರಿತು ಹೇಳುವಾಗಲೂ 'ಅಲ್ಲಾಹನಾಣೆ, ನಾನದನ್ನು ಮಾಡುವೆನು ಅಥವಾ ಅಲ್ಲಾಹನಾಣೆ, ನಾನದನ್ನು ಮಾಡಲಾರೆನು' ಎಂದು ಆಣೆ ಹಾಕಿ ಹೇಳುವುದು ಅರಬರ ಒಂದು ಸ್ವಭಾವವಾಗಿತ್ತು. ಆಣೆ ಹಾಕಿ ಹೇಳಿದ ಒಂದು ವಿಷಯವನ್ನು ಉಲ್ಲಂಘಿಸಬಾರದು. ಉಲ್ಲಂಘಿಸಿದರೆ ಪ್ರಾಯಶ್ಚಿತ್ತ ನೀಡಬೇಕು. ಹೀಗಾಗಿ ಯಾವುದೇ ಒಂದು ಕಾರ್ಯವು ಅದು ಉತ್ತಮವಾಗಿದ್ದರೂ ಅದನ್ನು ಮಾಡುವುದಿಲ್ಲವೆಂದು ಎಂದಾದರೂ ಆಣೆ ಹಾಕಿದ್ದರೆ ಮತ್ತೆ ಎಂದಿಗೂ ಆ ಕಾರ್ಯವನ್ನು ಮಾಡದಿರುವಂತಹ ಒಂದು ನಿಲುವನ್ನು ಅವರು ಹೊಂದಿದ್ದರು. ಈ ನಿಲುವು ಸರಿಯಲ್ಲ ಮತ್ತು ಶಪಥವು ಸತ್ಕಾರ್ಯಗಳಿಗೆ ತಡೆಯಾಗಕೂಡದು ಎಂದು ಖುರ್‌ಆನ್ ಎಚ್ಚರಿಸುತ್ತದೆ.

ಆಲಿಸುವವನೂ ಅರಿಯುವವನೂ ಆಗಿರುವನು.

وَٱلۡمُطَلَّقَٰتُ يَتَرَبَّصۡنَ بِأَنفُسِهِنَّ ثَلَٰثَةَ
قُرُوٓءٖۚ وَلَا يَحِلُّ لَهُنَّ أَن يَكۡتُمۡنَ مَا خَلَقَ
ٱللَّهُ فِيٓ أَرۡحَامِهِنَّ إِن كُنَّ يُؤۡمِنَّ بِٱللَّهِ
وَٱلۡيَوۡمِ ٱلۡأٓخِرِۚ وَبُعُولَتُهُنَّ أَحَقُّ بِرَدِّهِنَّ فِي
ذَٰلِكَ إِنۡ أَرَادُوٓاْ إِصۡلَٰحٗاۚ وَلَهُنَّ مِثۡلُ ٱلَّذِي
عَلَيۡهِنَّ بِٱلۡمَعۡرُوفِۚ وَلِلرِّجَالِ عَلَيۡهِنَّ
دَرَجَةٞۗ وَٱللَّهُ عَزِيزٌ حَكِيمٌ ٢٢٨

**228.** ವಿಚ್ಛೇದಿತ ಸ್ತ್ರೀಯರು ತಮ್ಮ ವಿಷಯದಲ್ಲಿ ಮೂರು ಋತುಸ್ರಾವ ಕಾಲಗಳವರೆಗೆ ಕಾದಿರಲಿ. ಅವರು ಅಲ್ಲಾಹುವಿನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಡುವವರಾಗಿದ್ದರೆ ತಮ್ಮ ಗರ್ಭಗಳಲ್ಲಿ ಅಲ್ಲಾಹು ಸೃಷ್ಟಿಸಿರುವುದನ್ನು ಮರೆಮಾಚಲು ಅವರಿಗೆ ಅನುಮತಿಯಿಲ್ಲ. ಅವರು (ಪತಿಯಂದಿರು) ನಿಲುವನ್ನು ಉತ್ತಮಗೊಳಿಸಲು ಇಚ್ಛಿಸುವುದಾದರೆ ಅದರೊಳಗೆ (ಪ್ರಸ್ತುತ ಅವಧಿಯೊಳಗೆ) ಅವರನ್ನು ಮರಳಿ ಪಡೆಯಲು ಅವರ ಪತಿಯಂದಿರು ಹೆಚ್ಚು ಅರ್ಹತೆಯುಳ್ಳವರಾಗಿರುವರು. ಸ್ತ್ರೀಯರಿಗೆ (ಪತಿಯರೊಂದಿಗೆ) ಬಾಧ್ಯತೆಗಳಿರುವಂತೆ ಅವರಿಗೆ ಸಿಗಬೇಕಾದ ನ್ಯಾಯೋಚಿತ ಹಕ್ಕುಗಳೂ ಇವೆ. ಆದರೆ ಪುರುಷರಿಗೆ ಅವರಿಗಿಂತ ಹೆಚ್ಚಿನ ಒಂದು ಪದವಿಯಿದೆ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

ٱلطَّلَٰقُ مَرَّتَانِۖ فَإِمۡسَاكُۢ بِمَعۡرُوفٍ أَوۡ
تَسۡرِيحُۢ بِإِحۡسَٰنٖۗ وَلَا يَحِلُّ لَكُمۡ أَن
تَأۡخُذُواْ مِمَّآ ءَاتَيۡتُمُوهُنَّ شَيۡـًٔا إِلَّآ أَن
يَخَافَآ أَلَّا يُقِيمَا حُدُودَ ٱللَّهِۖ فَإِنۡ خِفۡتُمۡ
أَلَّا يُقِيمَا حُدُودَ ٱللَّهِ فَلَا جُنَاحَ عَلَيۡهِمَا
فِيمَا ٱفۡتَدَتۡ بِهِۦۗ تِلۡكَ حُدُودُ ٱللَّهِ
فَلَا تَعۡتَدُوهَاۚ وَمَن يَتَعَدَّ حُدُودَ ٱللَّهِ
فَأُوْلَٰٓئِكَ هُمُ ٱلظَّٰلِمُونَ ٢٢٩

**229.** (ಹಿಂದಕ್ಕೆ ಪಡೆಯಲು ಅನುಮತಿಯಿರುವ) ವಿವಾಹ ವಿಚ್ಛೇದನೆಯು ಎರಡು ಬಾರಿ ಮಾತ್ರವಾಗಿದೆ. ತರುವಾಯ ಒಂದೋ ಶಿಷ್ಟಾಚಾರದೊಂದಿಗೆ ಬಳಿಯಿರಿಸಿ ಕೊಳ್ಳುವುದನ್ನು ಅಥವಾ ಉತ್ತಮ ರೀತಿಯಲ್ಲಿ ಬಿಡುಗಡೆಗೊಳಿಸುವುದನ್ನು ಮಾಡಬೇಕಾಗಿದೆ. ನೀವು ಅವರಿಗೆ (ಪತ್ನಿಯರಿಗೆ) ಕೊಟ್ಟಿರುವುದರಿಂದ ಏನನ್ನೂ ಮರಳಿ ಪಡೆಯಲು ನಿಮಗೆ ಅನುಮತಿಯಿಲ್ಲ; ಅಲ್ಲಾಹುವಿನ ನಿಯಮ ವ್ಯಾಪ್ತಿಗಳನ್ನು ಪಾಲಿಸಲು ಸಾಧ್ಯವಾಗುವುದಿಲ್ಲವೆಂದು ಅವರಿಬ್ಬರಿಗೂ ಭಯವುಂಟಾಗುವ ಹೊರತು. ಅವರಿಗೆ (ದಂಪತಿಗಳಿಗೆ) ಅಲ್ಲಾಹುವಿನ

ನಿಯಮವ್ಯಾಪ್ತಿಗಳನ್ನು ಪಾಲಿಸಲು ಸಾಧ್ಯವಾಗಲಾರದೆಂದು ನಿಮಗೆ ಭಯವುಂಟಾದರೆ ಅವಳು ಏನಾದರೂ ಬಿಟ್ಟು ಕೊಟ್ಟು ಸ್ವತಃ ವಿಚ್ಛೇದನೆ ಪಡೆಯುವುದರಲ್ಲಿ ಅವರಿಬ್ಬರಿಗೂ ದೋಷವಿಲ್ಲ. ಇವು ಅಲ್ಲಾಹುವಿನ ನಿಯಮವ್ಯಾಪ್ತಿಗಳಾಗಿವೆ. ಆದ್ದರಿಂದ ನೀವು ಇವುಗಳನ್ನು ಉಲ್ಲಂಘಿಸದಿರಿ. ಅಲ್ಲಾಹುವಿನ ನಿಯಮಗಳನ್ನು ಉಲ್ಲಂಘಿಸುವವರಾರೋ ಅವರೇ ಅಕ್ರಮಿಗಳಾಗಿರುವರು.

**230.** ಇನ್ನು (ಮೂರನೇ ಬಾರಿಯೂ) ಅವನು ಅವಳನ್ನು ವಿಚ್ಛೇದಿಸುವುದಾದರೆ ತದನಂತರ ಅವಳು ಬೇರೊಬ್ಬ ಪತಿಯನ್ನು ವರಿಸುವ ತನಕ ಅವನಿಗೆ ಧರ್ಮಸಮ್ಮತವಾಗಲಾರಳು. ತರುವಾಯ ಅವನೂ ಅವಳನ್ನು ವಿಚ್ಛೇದಿಸಿದರೆ ಮತ್ತು ಅಲ್ಲಾಹುವಿನ ನಿಯಮವ್ಯಾಪ್ತಿಗಳನ್ನು ಪಾಲಿಸುವೆವೆಂದು ಇವರಿಬ್ಬರೂ ಭಾವಿಸುವುದಾದರೆ (ಹಳೆಯ ದಾಂಪತ್ಯದೆಡೆಗೆ) ಮರಳಿ ಹೋಗುವುದರಲ್ಲಿ ಇವರಿಬ್ಬರಿಗೂ ದೋಷವಿಲ್ಲ. ಇವು ಅಲ್ಲಾಹುವಿನ ನಿಯಮವ್ಯಾಪ್ತಿಗಳಾಗಿವೆ. ಅರಿತುಕೊಳ್ಳುವ ಜನರಿಗಾಗಿ ಅಲ್ಲಾಹು ಇವುಗಳನ್ನು ವಿವರಿಸಿಕೊಡುತ್ತಿರುವನು.

فَإِن طَلَّقَهَا فَلَا تَحِلُّ لَهُۥ مِنۢ بَعۡدُ حَتَّىٰ تَنكِحَ زَوۡجًا غَيۡرَهُۥۗ فَإِن طَلَّقَهَا فَلَا جُنَاحَ عَلَيۡهِمَآ أَن يَتَرَاجَعَآ إِن ظَنَّآ أَن يُقِيمَا حُدُودَ ٱللَّهِۗ وَتِلۡكَ حُدُودُ ٱللَّهِ يُبَيِّنُهَا لِقَوۡمٖ يَعۡلَمُونَ ٢٣٠

**231.** ನೀವು ಸ್ತ್ರೀಯರನ್ನು ವಿಚ್ಛೇದನೆ ಮಾಡಿ ಅವರು ತಮ್ಮ ಅವಧಿ ತಲುಪಿದರೆ ಒಂದೋ ಅವರನ್ನು ಶಿಷ್ಟಾಚಾರದೊಂದಿಗೆ ಬಳಿಯಿರಿಸಿಕೊಳ್ಳಿರಿ ಅಥವಾ ಅವರನ್ನು ಶಿಷ್ಟಾಚಾರದೊಂದಿಗೆ ಬಿಡುಗಡೆಗೊಳಿಸಿರಿ. ಸತಾಯಿಸುವ ಸಲುವಾಗಿ ನೀವು ಅವರನ್ನು ಅನ್ಯಾಯವಾಗಿ ವಶದಲ್ಲಿಟ್ಟುಕೊಳ್ಳದಿರಿ. ಯಾರಾದರೂ ಹಾಗೆ ಮಾಡಿದರೆ ಅವನು ಸ್ವತಃ ತನ್ನ ಮೇಲೆಯೇ ಅಕ್ರಮವೆಸಗಿರುವನು.

وَإِذَا طَلَّقۡتُمُ ٱلنِّسَآءَ فَبَلَغۡنَ أَجَلَهُنَّ فَأَمۡسِكُوهُنَّ بِمَعۡرُوفٍ أَوۡ سَرِّحُوهُنَّ بِمَعۡرُوفٖۚ وَلَا تُمۡسِكُوهُنَّ ضِرَارٗا لِّتَعۡتَدُواْۚ وَمَن يَفۡعَلۡ ذَٰلِكَ فَقَدۡ ظَلَمَ نَفۡسَهُۥۚ وَلَا تَتَّخِذُوٓاْ ءَايَٰتِ ٱللَّهِ هُزُوٗاۚ وَٱذۡكُرُواْ نِعۡمَتَ ٱللَّهِ عَلَيۡكُمۡ وَمَآ أَنزَلَ عَلَيۡكُم مِّنَ ٱلۡكِتَٰبِ وَٱلۡحِكۡمَةِ يَعِظُكُم بِهِۦۚ

وَٱتَّقُواْ ٱللَّهَ وَٱعۡلَمُوٓاْ أَنَّ ٱللَّهَ بِكُلِّ شَيۡءٍ عَلِيمٞ ٢٣١

ನೀವು ಅಲ್ಲಾಹುವಿನ ವಚನಗಳನ್ನು ಗೇಲಿಮಾಡದಿರಿ. ಅಲ್ಲಾಹು ನಿಮಗೆ ದಯಪಾಲಿಸಿರುವ ಅನುಗ್ರಹವನ್ನು ಸ್ಮರಿಸಿರಿ. ನಿಮಗೆ ಸದುಪದೇಶ ನೀಡುತ್ತಾ ಅವನು ಅವತೀರ್ಣಗೊಳಿಸಿದ ಗ್ರಂಥ ಮತ್ತು ಜ್ಞಾನವನ್ನು ಸ್ಮರಿಸಿರಿ. ಅಲ್ಲಾಹುವನ್ನು ಭಯಪಡಿರಿ. ಅಲ್ಲಾಹು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನೆಂಬುದನ್ನು ಅರಿತುಕೊಳ್ಳಿರಿ.

وَإِذَا طَلَّقۡتُمُ ٱلنِّسَآءَ فَبَلَغۡنَ أَجَلَهُنَّ فَلَا تَعۡضُلُوهُنَّ أَن يَنكِحۡنَ أَزۡوَٰجَهُنَّ إِذَا تَرَٰضَوۡاْ بَيۡنَهُم بِٱلۡمَعۡرُوفِۗ ذَٰلِكَ يُوعَظُ بِهِۦ مَن كَانَ مِنكُمۡ يُؤۡمِنُ بِٱللَّهِ وَٱلۡيَوۡمِ ٱلۡأٓخِرِۗ ذَٰلِكُمۡ أَزۡكَىٰ لَكُمۡ وَأَطۡهَرُۚ وَٱللَّهُ يَعۡلَمُ وَأَنتُمۡ لَا تَعۡلَمُونَ ٢٣٢

**232.** ನೀವು ಸ್ತ್ರೀಯರನ್ನು ವಿಚ್ಛೇದನೆ ಮಾಡಿ, ಅವರು ತಮ್ಮ ಅವಧಿ ತಲುಪಿದರೆ, ಅವರು ತಮ್ಮ ಪತಿಯಂದಿರನ್ನು ವಿವಾಹವಾಗುವುದಕ್ಕೆ ನೀವು ಅಡ್ಡಿಯನ್ನುಂಟು ಮಾಡದಿರಿ; ಶಿಷ್ಟಾಚಾರದೊಂದಿಗೆ ಅವರು ಪರಸ್ಪರ ಸಂತೃಪ್ತರಾಗಿದ್ದರೆ. ಅದು ನಿಮ್ಮ ಪೈಕಿ ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರಿಗಿರುವ ಉಪದೇಶವಾಗಿದೆ. ಅದು ನಿಮಗೆ ಅತ್ಯಂತ ಸಭ್ಯವೂ, ಅತ್ಯಧಿಕ ಪರಿಶುದ್ಧವೂ ಆಗಿದೆ. ಅಲ್ಲಾಹು ಅರಿಯುವನು; ನೀವು ಅರಿಯಲಾರಿರಿ.

۞وَٱلۡوَٰلِدَٰتُ يُرۡضِعۡنَ أَوۡلَٰدَهُنَّ حَوۡلَيۡنِ كَامِلَيۡنِۖ لِمَنۡ أَرَادَ أَن يُتِمَّ ٱلرَّضَاعَةَۚ وَعَلَى ٱلۡمَوۡلُودِ لَهُۥ رِزۡقُهُنَّ وَكِسۡوَتُهُنَّ بِٱلۡمَعۡرُوفِۚ لَا تُكَلَّفُ نَفۡسٌ إِلَّا وُسۡعَهَاۚ لَا تُضَآرَّ وَٰلِدَةُۢ بِوَلَدِهَا وَلَا مَوۡلُودٞ لَّهُۥ بِوَلَدِهِۦۚ وَعَلَى ٱلۡوَارِثِ مِثۡلُ ذَٰلِكَۗ فَإِنۡ أَرَادَا فِصَالًا عَن تَرَاضٖ مِّنۡهُمَا وَتَشَاوُرٖ فَلَا جُنَاحَ عَلَيۡهِمَاۗ وَإِنۡ أَرَدتُّمۡ أَن تَسۡتَرۡضِعُوٓاْ أَوۡلَٰدَكُمۡ فَلَا جُنَاحَ عَلَيۡكُمۡ إِذَا سَلَّمۡتُم مَّآ ءَاتَيۡتُم بِٱلۡمَعۡرُوفِۗ وَٱتَّقُواْ ٱللَّهَ وَٱعۡلَمُوٓاْ أَنَّ ٱللَّهَ بِمَا تَعۡمَلُونَ بَصِيرٞ ٢٣٣

**233.** ತಾಯಂದಿರು ತಮ್ಮ ಶಿಶುಗಳಿಗೆ ಎರಡು ವರ್ಷ ಪೂರ್ತಿಯಾಗಿ ಮೊಲೆಯುಣಿಸಲಿ. ಇದು (ಶಿಶುವಿನ) ಸ್ತನಪಾನವನ್ನು ಪೂರ್ತಿಗೊಳಿಸಲು ಇಚ್ಛಿಸುವವರಿಗಾಗಿದೆ. ಅವರಿಗೆ (ಮೊಲೆಯುಣಿಸುವ ತಾಯಂದಿರಿಗೆ) ಶಿಷ್ಟಾಚಾರಕ್ಕನುಗುಣವಾಗಿ ಆಹಾರ ಮತ್ತು ಉಡುಪುಗಳನ್ನು ಒದಗಿಸಬೇಕಾದುದು ಶಿಶುವಿನ ತಂದೆಯಾಗಿರುವವನ ಕರ್ತವ್ಯವಾಗಿದೆ. ಆದರೆ ಯಾವ ವ್ಯಕ್ತಿಯೊಂದಿಗೂ ಅವನ ಸಾಮರ್ಥ್ಯಕ್ಕಿಂತ ಮಿಗಿಲಾಗಿರುವುದನ್ನು ನೀಡಲು ಒತ್ತಾಯಿಸಲ್ಪಡಬಾರದು. ಯಾವ ತಾಯಿಯೂ ತನ್ನ ಶಿಶುವಿನ ಕಾರಣದಿಂದಾಗಿ

ಸತಾಯಿಸಲ್ಪಡದಿರಲಿ. ಹಾಗೆಯೇ ಯಾವ ತಂದೆಯೂ ತನ್ನ ಶಿಶುವಿನ ಕಾರಣದಿಂದಾಗಿ ಸತಾಯಿಸಲ್ಪಡದಿರಲಿ. (ತಂದೆಯ ಅನುಪಸ್ಥಿತಿಯಲ್ಲಿ ಅವನ) ಹಕ್ಕುದಾರರಿಗೆ (ಶಿಶುವಿನ ವಿಷಯದಲ್ಲಿ) ಅಂತಹುದೇ ಬಾಧ್ಯತೆಗಳಿವೆ. ಇನ್ನು ಅವರಿಬ್ಬರೂ ಪರಸ್ಪರ ಸಮಾಲೋಚನೆಯೊಂದಿಗೆ ಹಾಗೂ ಸಂತೃಪ್ತಿಯೊಂದಿಗೆ (ಶಿಶುವಿನ) ಸ್ತನಪಾನವನ್ನು ಸ್ಥಗಿತಗೊಳಿಸಲು ಇಚ್ಛಿಸಿದರೆ ಅವರ ಮೇಲೆ ದೋಷವಿಲ್ಲ. ನಿಮ್ಮ ಶಿಶುಗಳಿಗೆ (ಇತರ ಯಾರಿಂದಲಾದರೂ) ಮೊಲೆಯುಣಿಸಲು ನೀವು ಇಚ್ಛಿಸುವುದಾದರೆ ಮತ್ತು (ಆ ಸಾಕುತಾಯಂದಿರಿಗೆ) ನೀಡಬೇಕಾದುದನ್ನು ನೀವು ಶಿಷ್ಟಾಚಾರದೊಂದಿಗೆ ನೀಡುವುದಾದರೆ ಅದರಲ್ಲೂ ನಿಮಗೆ ದೋಷವಿಲ್ಲ. ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹು ನೋಡುತ್ತಿರುವನೆಂಬುದನ್ನು ಅರಿತುಕೊಳ್ಳಿರಿ.

**234.** ನಿಮ್ಮಲ್ಲಿ ಯಾರಾದರೂ ತಮ್ಮ ಪತ್ನಿಯರನ್ನು ಬಿಟ್ಟಗಲಿ ಮರಣ ಹೊಂದುವುದಾದರೆ ಅವರು (ಪತ್ನಿಯರು) ತಮ್ಮ ವಿಷಯದಲ್ಲಿ ನಾಲ್ಕು ತಿಂಗಳು ಮತ್ತು ಹತ್ತು ದಿನ ಕಾಯಬೇಕಾಗಿದೆ. ಆ ಬಳಿಕ ಅವರ ಅವಧಿಯು ತಲುಪಿದರೆ ಅವರು ತಮ್ಮ ವಿಷಯದಲ್ಲಿ ಶಿಷ್ಟಾಚಾರದೊಂದಿಗೆ ಏನಾದರೂ ಮಾಡುವುದಾದರೆ ಅದರಲ್ಲಿ ನಿಮಗೆ ದೋಷವಿಲ್ಲ. ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ಸೂಕ್ಷ್ಮವಾಗಿ ಅರಿಯುತ್ತಿರುವನು.

وَٱلَّذِينَ يُتَوَفَّوۡنَ مِنكُمۡ وَيَذَرُونَ أَزۡوَٰجٗا يَتَرَبَّصۡنَ بِأَنفُسِهِنَّ أَرۡبَعَةَ أَشۡهُرٖ وَعَشۡرٗاۖ فَإِذَا بَلَغۡنَ أَجَلَهُنَّ فَلَا جُنَاحَ عَلَيۡكُمۡ فِيمَا فَعَلۡنَ فِيٓ أَنفُسِهِنَّ بِٱلۡمَعۡرُوفِۗ وَٱللَّهُ بِمَا تَعۡمَلُونَ خَبِيرٞ ٢٣٤

**235.** (ಇದ್ದಃದ ಅವಧಿಯಲ್ಲಿ) ಆ ಸ್ತ್ರೀಯರೊಂದಿಗಿನ ವಿವಾಹ ಪ್ರಸ್ತಾಪವನ್ನು ನೀವು ಸೂಚ್ಯವಾಗಿ ತಿಳಿಸುವುದರಲ್ಲಿ ಅಥವಾ ಮನಸ್ಸಿನಲ್ಲಿ ಬಚ್ಚಿಡುವುದರಲ್ಲಿ ನಿಮಗೆ ದೋಷವಿಲ್ಲ. ನೀವು

وَلَا جُنَاحَ عَلَيۡكُمۡ فِيمَا عَرَّضۡتُم بِهِۦ مِنۡ خِطۡبَةِ ٱلنِّسَآءِ أَوۡ أَكۡنَنتُمۡ فِيٓ أَنفُسِكُمۡۚ عَلِمَ ٱللَّهُ أَنَّكُمۡ

ಅವರನ್ನು ಸ್ಮರಿಸುತ್ತಿರುವಿರಿ ಎಂಬುದನ್ನು ಅಲ್ಲಾಹು ಅರಿತಿರುವನು. ಆದರೆ ನೀವು ಅವರೊಂದಿಗೆ ಗೌರವಾನ್ವಿತ ಮಾತುಗಳನ್ನಾಡುವುದರ ವಿನಾ ಗುಪ್ತವಾಗಿ ಯಾವುದೇ ನಿಶ್ಚಯವನ್ನೂ ಮಾಡದಿರಿ. ನಿಯಮಾನುಸೃತವಾಗಿರುವ ಅವಧಿ (ಇದ್ದಃ) ಪೂರ್ತಿಯಾಗುವವರೆಗೆ ನೀವು (ವಿಚ್ಛೇದಿತೆಯರೊಂದಿಗೆ) ವಿವಾಹ ಕರಾರನ್ನು ಸ್ಥಾಪಿಸಲು ನಿರ್ಧರಿಸದಿರಿ. ನಿಮ್ಮ ಮನಸ್ಸುಗಳಲ್ಲಿರುವುದನ್ನು ಅಲ್ಲಾಹು ಅರಿಯುವನೆಂಬುದನ್ನು ನೀವು ಅರಿತುಕೊಳ್ಳಿರಿ ಮತ್ತು ಅವನನ್ನು ಭಯಪಡಿರಿ. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಸಹನಾಶೀಲನೂ ಆಗಿರುವನೆಂಬುದನ್ನು ಅರಿತುಕೊಳ್ಳಿರಿ.

سَتَذْكُرُونَهُنَّ وَلَـٰكِن لَّا تُوَاعِدُوهُنَّ سِرًّا إِلَّآ أَن تَقُولُواْ قَوْلًا مَّعْرُوفًاۚ وَلَا تَعْزِمُواْ عُقْدَةَ ٱلنِّكَاحِ حَتَّىٰ يَبْلُغَ ٱلْكِتَـٰبُ أَجَلَهُۥۚ وَٱعْلَمُوٓاْ أَنَّ ٱللَّهَ يَعْلَمُ مَا فِىٓ أَنفُسِكُمْ فَٱحْذَرُوهُۚ وَٱعْلَمُوٓاْ أَنَّ ٱللَّهَ غَفُورٌ حَلِيمٌ ٢٣٥

**236.** ನೀವು ಪತ್ನಿಯರನ್ನು ಸ್ಪರ್ಶಿಸುವ ಮೊದಲೇ ಅಥವಾ ಅವರ ವಧುದಕ್ಷಿಣೆಯನ್ನು ನಿಶ್ಚಯಿಸುವ ಮೊದಲೇ ಅವರೊಂದಿಗಿರುವ ವಿವಾಹ ಸಂಬಂಧವನ್ನು ನೀವು ಕಡಿದರೆ (ಮಹ್ರ್ ನೀಡದಿರುವುದಕ್ಕಾಗಿ) ನಿಮ್ಮ ಮೇಲೆ ದೋಷವಿಲ್ಲ. ಆದರೆ ನೀವು ಅವರಿಗೆ ಶಿಷ್ಟಾಚಾರದನ್ವಯ –ಸಾಮರ್ಥ್ಯವುಳ್ಳವನು ತನ್ನ ಸಾಮರ್ಥ್ಯಕ್ಕನುಸಾರವಾಗಿ ಮತ್ತು ಇಕ್ಕಟ್ಟಿನಲ್ಲಿರುವವನು ತನ್ನ ಸ್ಥಿತಿಗನುಸಾರವಾಗಿ– ಜೀವನಾಂಶವಾಗಿ ಏನಾದರೂ ನೀಡಲಿ. ಇದು ಸತ್ಕರ್ಮಿಗಳ ಮೇಲಿರುವ ಬಾಧ್ಯತೆಯಾಗಿದೆ.

لَّا جُنَاحَ عَلَيْكُمْ إِن طَلَّقْتُمُ ٱلنِّسَآءَ مَا لَمْ تَمَسُّوهُنَّ أَوْ تَفْرِضُواْ لَهُنَّ فَرِيضَةًۚ وَمَتِّعُوهُنَّ عَلَى ٱلْمُوسِعِ قَدَرُهُۥ وَعَلَى ٱلْمُقْتِرِ قَدَرُهُۥ مَتَـٰعًۢا بِٱلْمَعْرُوفِۖ حَقًّا عَلَى ٱلْمُحْسِنِينَ ٢٣٦

**237.** ಇನ್ನು ನೀವು ಅವರನ್ನು (ಪತ್ನಿಯರನ್ನು) ಸ್ಪರ್ಶಿಸುವ ಮೊದಲೇ ವಿಚ್ಛೇದಿಸಿದರೆ ಮತ್ತು ಅವರಿಗೆ ವಧುದಕ್ಷಿಣೆಯನ್ನು ಈ ಮೊದಲೇ ನಿಶ್ಚಯಿಸಿಬಿಟ್ಟಿದ್ದರೆ, ನಿಶ್ಚಯಿಸಿರುವುದರ ಅರ್ಧಾಂಶವನ್ನು (ಕೊಡಬೇಕಾಗಿದೆ). ಅವರು (ಪತ್ನಿಯರು) ವಿನಾಯಿತಿ ತೋರಿಸಿದ ಹೊರತು. ಅಥವಾ ವಿವಾಹ ಒಪ್ಪಂದವು

وَإِن طَلَّقْتُمُوهُنَّ مِن قَبْلِ أَن تَمَسُّوهُنَّ وَقَدْ فَرَضْتُمْ لَهُنَّ فَرِيضَةً فَنِصْفُ مَا فَرَضْتُمْ إِلَّآ أَن يَعْفُونَ أَوْ يَعْفُوَاْ ٱلَّذِى بِيَدِهِۦ عُقْدَةُ ٱلنِّكَاحِۚ وَأَن تَعْفُوٓاْ أَقْرَبُ لِلتَّقْوَىٰۚ وَلَا تَنسَوُاْ ٱلْفَضْلَ بَيْنَكُمْۚ إِنَّ ٱللَّهَ بِمَا تَعْمَلُونَ بَصِيرٌ ٢٣٧

ಯಾರ ಕೈಯಲ್ಲಿದೆಯೋ ಅವನು (ಪತಿ) (ಮಹ್ರ್ ಪೂರ್ತಿಯಾಗಿ ನೀಡಿ) ವಿನಾಯಿತಿ ತೋರಿಸಿದ ಹೊರತು. (ಓ ಪತಿಯಂದಿರೇ!) ನೀವು ವಿನಾಯಿತಿ ತೋರಿಸುವುದು ಧರ್ಮನಿಷ್ಠೆಗೆ ಹೆಚ್ಚು ನಿಕಟವಾಗಿದೆ. ನೀವು ಪರಸ್ಪರ ಹೊಂದಿರುವ ಔದಾರ್ಯವನ್ನು ಮರೆಯದಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದನ್ನು ಅಲ್ಲಾಹು ವೀಕ್ಷಿಸುವವನಾಗಿರುವನು.

**238**. ನೀವು ನಮಾಝ್‌ಗಳನ್ನು ಸೂಕ್ಷ್ಮತೆಯೊಂದಿಗೆ ನಿರ್ವಹಿಸಿರಿ. ವಿಶೇಷವಾಗಿ ಉತ್ಕೃಷ್ಟವಾದ ನಮಾಝ್.[1] ನೀವು ಅಲ್ಲಾಹುವಿನ ಮುಂದೆ ಭಯಭಕ್ತಿಯುಳ್ಳವರಾಗಿ ನಿಂತು ನಮಾಝ್ ನಿರ್ವಹಿಸಿರಿ.

حَٰفِظُواْ عَلَى ٱلصَّلَوَٰتِ وَٱلصَّلَوٰةِ ٱلْوُسْطَىٰ وَقُومُواْ لِلَّهِ قَٰنِتِينَ ﴿٢٣٨﴾

**239**. ನೀವು (ಶತ್ರುಗಳ ದಾಳಿಯನ್ನು) ಭಯಪಟ್ಟರೆ ನಡೆಯುತ್ತಾ ಅಥವಾ ವಾಹನಗಳಲ್ಲಿ (ನಮಾಝ್ ನಿರ್ವಹಿಸಬಹುದು). ನೀವು ನಿರ್ಭಯ ಸ್ಥಿತಿಯಲ್ಲಾದರೆ ನೀವು ಅರಿಯದಿರುವುದನ್ನು ಅಲ್ಲಾಹು ನಿಮಗೆ ಕಲಿಸಿಕೊಟ್ಟಿರುವ ರೀತಿಯಲ್ಲಿ ನೀವು ಅವನನ್ನು ಸ್ಮರಿಸಿರಿ.

فَإِنْ خِفْتُمْ فَرِجَالًا أَوْ رُكْبَانًاۖ فَإِذَآ أَمِنتُمْ فَٱذْكُرُواْ ٱللَّهَ كَمَا عَلَّمَكُم مَّا لَمْ تَكُونُواْ تَعْلَمُونَ ﴿٢٣٩﴾

**240**. ನಿಮ್ಮ ಪೈಕಿ ಪತ್ನಿಯರನ್ನು ಬಿಟ್ಟಗಲಿ ಮರಣ ಹೊಂದುವವರು ತಮ್ಮ ಪತ್ನಿಯರಿಗೆ ಒಂದು ವರ್ಷದ ತನಕ (ಮನೆಯಿಂದ) ಹೊರಕಳಿಸದೆ ಜೀವನಾಂಶವನ್ನು ನೀಡಲು ವಸಿಯ್ಯತ್ ಮಾಡಬೇಕಾಗಿದೆ. ಇನ್ನು ಅವರು (ಸ್ವತಃ) ಹೊರಹೋದರೆ ತಮ್ಮ ವಿಷಯದಲ್ಲಿ ಶಿಷ್ಟಾಚಾರದ ಪ್ರಕಾರ ಅವರು ಏನು ಮಾಡುತ್ತಾರೋ ಅದರಲ್ಲಿ ನಿಮಗೆ ದೋಷವಿಲ್ಲ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَٱلَّذِينَ يُتَوَفَّوْنَ مِنكُمْ وَيَذَرُونَ أَزْوَٰجًا وَصِيَّةً لِّأَزْوَٰجِهِم مَّتَٰعًا إِلَى ٱلْحَوْلِ غَيْرَ إِخْرَاجٍۚ فَإِنْ خَرَجْنَ فَلَا جُنَاحَ عَلَيْكُمْ فِى مَا فَعَلْنَ فِىٓ أَنفُسِهِنَّ مِن مَّعْرُوفٍۗ وَٱللَّهُ عَزِيزٌ حَكِيمٌ ﴿٢٤٠﴾

1 ಪ್ರಬಲ ಅಭಿಪ್ರಾಯ ಪ್ರಕಾರ 'ಸ್ವಲಾತುಲ್ ವುಸ್ತಾ' ಎಂದರೆ ಅಸ್ರ್ ನಮಾಝ್.

وَلِلۡمُطَلَّقَٰتِ مَتَٰعُۢ بِٱلۡمَعۡرُوفِۖ حَقًّا عَلَى
ٱلۡمُتَّقِينَ ٢٤١

241. ವಿಚ್ಛೇದಿತೆಯರಿಗೆ ನ್ಯಾಯಬದ್ಧವಾಗಿ
ಏನಾದರೂ ಜೀವನಾಂಶವನ್ನು
ನೀಡಬೇಕಾಗಿದೆ. ಇದು ಭಯಭಕ್ತಿ
ಪಾಲಿಸುವವರ ಬಾಧ್ಯತೆಯಾಗಿದೆ.

كَذَٰلِكَ يُبَيِّنُ ٱللَّهُ لَكُمۡ ءَايَٰتِهِۦ لَعَلَّكُمۡ
تَعۡقِلُونَ ٢٤٢

242. ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ಹೀಗೆ
ಅಲ್ಲಾಹು ತನ್ನ ದೃಷ್ಟಾಂತಗಳನ್ನು ನಿಮಗೆ
ವಿವರಿಸಿಕೊಡುತ್ತಿರುವನು.

۞أَلَمۡ تَرَ إِلَى ٱلَّذِينَ خَرَجُواْ مِن
دِيَٰرِهِمۡ وَهُمۡ أُلُوفٌ حَذَرَ ٱلۡمَوۡتِ فَقَالَ
لَهُمُ ٱللَّهُ مُوتُواْ ثُمَّ أَحۡيَٰهُمۡۚ إِنَّ ٱللَّهَ لَذُو
فَضۡلٍ عَلَى ٱلنَّاسِ وَلَٰكِنَّ أَكۡثَرَ ٱلنَّاسِ
لَا يَشۡكُرُونَ ٢٤٣

243. ಸಾವಿರಾರು ಜನರಿದ್ದೂ ಸಹ
ಮೃತ್ಯುಭಯದಿಂದ ತಮ್ಮ ಮನೆಗಳನ್ನು
ತೊರೆದು ಹೊರಹೋದ ಒಂದು ಜನತೆಯ
ಬಗ್ಗೆ ತಾವು ಅರಿತಿಲ್ಲವೇ? ಆಗ ಅಲ್ಲಾಹು
ಅವರೊಂದಿಗೆ ಹೇಳಿದನು: 'ನೀವು ಮರಣ
ಹೊಂದಿರಿ'. ತರುವಾಯ ಅವನು ಅವರಿಗೆ
ಜೀವವನ್ನು ನೀಡಿದನು. ಖಂಡಿತವಾಗಿಯೂ
ಅಲ್ಲಾಹು ಜನರ ಮೇಲೆ
ಔದಾರ್ಯವುಳ್ಳವನಾಗಿರುವನು. ಆದರೆ
ಜನರಲ್ಲಿ ಹೆಚ್ಚಿನವರೂ ಕೃತಜ್ಞತೆ ಸಲ್ಲಿಸುವುದಿಲ್ಲ.

وَقَٰتِلُواْ فِي سَبِيلِ ٱللَّهِ وَٱعۡلَمُوٓاْ أَنَّ ٱللَّهَ
سَمِيعٌ عَلِيمٞ ٢٤٤

244. ನೀವು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ
ಮಾಡಿರಿ ಮತ್ತು ಅಲ್ಲಾಹು ಎಲ್ಲವನ್ನು
ಆಲಿಸುವವನೂ ಅರಿಯುವವನೂ
ಆಗಿರುವನೆಂಬುದನ್ನು ಅರಿತುಕೊಳ್ಳಿರಿ.

مَّن ذَا ٱلَّذِي يُقۡرِضُ ٱللَّهَ قَرۡضًا حَسَنٗا
فَيُضَٰعِفَهُۥ لَهُۥٓ أَضۡعَافٗا كَثِيرَةٗۚ وَٱللَّهُ
يَقۡبِضُ وَيَبۡصُۜطُ وَإِلَيۡهِ تُرۡجَعُونَ ٢٤٥

245. ಅಲ್ಲಾಹುವಿಗೆ ಉತ್ತಮ ಸಾಲ ನೀಡುವವನು
ಯಾರಿರುವನು? ಹಾಗಾದರೆ ಅಲ್ಲಾಹು
ಅದನ್ನು ಅವನಿಗೆ ಅನೇಕ ದುಪ್ಪಟ್ಟುಗಳಾಗಿ
ಹೆಚ್ಚಿಸಿಕೊಡುವನು. (ಸಂಪತ್ತನ್ನು)
ಹಿಡಿದಿಟ್ಟುಕೊಳ್ಳುವುದು ಮತ್ತು
ವೃದ್ಧಿಪಡಿಸುವುದು ಅಲ್ಲಾಹುವಾಗಿರುವನು.
ನಿಮ್ಮನ್ನು ಅವನೆಡೆಗೇ ಮರಳಿಸಲಾಗುವುದು.

أَلَمۡ تَرَ إِلَى ٱلۡمَلَإِ مِنۢ بَنِيٓ إِسۡرَٰٓءِيلَ مِنۢ
بَعۡدِ مُوسَىٰٓ إِذۡ قَالُواْ لِنَبِيّٖ لَّهُمُ ٱبۡعَثۡ

246. ಮೂಸಾರವರ ಕಾಲಾನಂತರದ ಕೆಲವು
ಇಸ್ರಾಈಲೀ ಪ್ರಮುಖರು ತಮ್ಮ
ಪ್ರವಾದಿಯೊಂದಿಗೆ[1] 'ನಮಗೊಬ್ಬ ರಾಜನನ್ನು

1 ಅವರು ಈ ಬೇಡಿಕೆಯನ್ನು ಮುಂದಿಟ್ಟದ್ದು ಪ್ರವಾದಿ ಸಮುವೇಲರೊಂದಿಗಾಗಿತ್ತು ಎಂದು ಇಬ್ನ್ ಕಸೀರ್ ಉದ್ಧರಿಸಿದ್ದಾರೆ.

لَنَا مَلِكًا نُّقَٰتِلۡ فِي سَبِيلِ ٱللَّهِۖ قَالَ هَلۡ
عَسَيۡتُمۡ إِن كُتِبَ عَلَيۡكُمُ ٱلۡقِتَالُ أَلَّا
تُقَٰتِلُواْۖ قَالُواْ وَمَا لَنَآ أَلَّا نُقَٰتِلَ فِي سَبِيلِ
ٱللَّهِ وَقَدۡ أُخۡرِجۡنَا مِن دِيَٰرِنَا وَأَبۡنَآئِنَاۖ
فَلَمَّا كُتِبَ عَلَيۡهِمُ ٱلۡقِتَالُ تَوَلَّوۡاْ إِلَّا
قَلِيلٗا مِّنۡهُمۡۚ وَٱللَّهُ عَلِيمُۢ بِٱلظَّٰلِمِينَ ٢٤٦

ನಿಯೋಗಿಸಿರಿ. (ಅವನ ನಾಯಕತ್ವದಲ್ಲಿ) ನಾವು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುವೆವು' ಎಂದು ಹೇಳಿದ ಸಂದರ್ಭವನ್ನು ತಾವು ಅರಿತಿಲ್ಲವೇ? ಅವರು (ಪ್ರವಾದಿ) ಕೇಳಿದರು: 'ನಿಮಗೆ ಯುದ್ಧ ಮಾಡಲು ಆಜ್ಞೆ ಬಂದಾಗ ನೀವು ಯುದ್ಧ ಮಾಡದಿರುವಿರಾ?' ಅವರು ಹೇಳಿದರು: 'ನಮ್ಮ ವಾಸಸ್ಥಳಗಳಿಂದ ಮತ್ತು ಸಂತತಿಗಳಿಂದ ನಮ್ಮನ್ನು ಹೊರಹಾಕಲಾಗಿರುವಾಗ ಅಲ್ಲಾಹುವಿನ ಮಾರ್ಗದಲ್ಲಿ ನಾವು ಯುದ್ಧ ಮಾಡದಿರುವುದಾದರೂ ಹೇಗೆ?' ಆದರೆ ಅವರಿಗೆ ಯುದ್ಧ ಮಾಡಲು ಆಜ್ಞಾಪಿಸಲಾದಾಗ ಅವರ ಪೈಕಿ ಕೆಲವರ ಹೊರತು (ಉಳಿದವರೆಲ್ಲರೂ) ಹಿಂದೆ ಸರಿದರು. ಅಲ್ಲಾಹು ಅಕ್ರಮಿಗಳ ಬಗ್ಗೆ (ಚೆನ್ನಾಗಿ) ಅರಿಯುವವನಾಗಿರುವನು.

وَقَالَ لَهُمۡ نَبِيُّهُمۡ إِنَّ ٱللَّهَ قَدۡ بَعَثَ لَكُمۡ
طَالُوتَ مَلِكٗاۚ قَالُوٓاْ أَنَّىٰ يَكُونُ لَهُ ٱلۡمُلۡكُ
عَلَيۡنَا وَنَحۡنُ أَحَقُّ بِٱلۡمُلۡكِ مِنۡهُ وَلَمۡ يُؤۡتَ
سَعَةٗ مِّنَ ٱلۡمَالِۚ قَالَ إِنَّ ٱللَّهَ ٱصۡطَفَىٰهُ
عَلَيۡكُمۡ وَزَادَهُۥ بَسۡطَةٗ فِي ٱلۡعِلۡمِ
وَٱلۡجِسۡمِۖ وَٱللَّهُ يُؤۡتِي مُلۡكَهُۥ مَن يَشَآءُۚ
وَٱللَّهُ وَٰسِعٌ عَلِيمٞ ٢٤٧

**247.** ಅವರೊಂದಿಗೆ ಅವರ ಪ್ರವಾದಿ ಹೇಳಿದರು: 'ಅಲ್ಲಾಹು ನಿಮಗೆ ರಾಜನಾಗಿ ತಾಲೂತ್‌ರನ್ನು ಕಳುಹಿಸಿರುವನು'. ಅವರು ಹೇಳಿದರು: 'ಅವರು ನಮ್ಮ ರಾಜನಾಗುವುದಾದರೂ ಹೇಗೆ? ರಾಜಾಧಿಕಾರಕ್ಕೆ ಅವರಿಗಿಂತಲೂ ಹೆಚ್ಚು ಅರ್ಹತೆಯಿರುವುದು ನಮಗಾಗಿದೆ. ಅವರಿಗೆ ಆರ್ಥಿಕ ಸಮೃದ್ಧಿಯನ್ನೂ ಸಹ ದಯಪಾಲಿಸಲಾಗಿಲ್ಲ!' ಅವರು (ಪ್ರವಾದಿ) ಹೇಳಿದರು: 'ಅಲ್ಲಾಹು ನಿಮಗಿಂತಲೂ ಉತ್ಕೃಷ್ಟರನ್ನಾಗಿ ಅವರನ್ನು ಆರಿಸಿರುವನು ಮತ್ತು ಅವರಿಗೆ ಅಪಾರ ಜ್ಞಾನವನ್ನು ಹಾಗೂ ದೈಹಿಕ ಬಲವನ್ನು ನೀಡಿರುವನು. ಅಲ್ಲಾಹು ತಾನಿಚ್ಛಿಸಿದವರಿಗೆ ತನ್ನ ವತಿಯ ಆಧಿಪತ್ಯವನ್ನು ನೀಡುವನು. ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ ಎಲ್ಲವನ್ನು ಅರಿಯುವವನೂ ಆಗಿರುವನು'.

وَقَالَ لَهُمْ نَبِيُّهُمْ إِنَّ ءَايَةَ مُلْكِهِۦٓ أَن يَأْتِيَكُمُ ٱلتَّابُوتُ فِيهِ سَكِينَةٌ مِّن رَّبِّكُمْ وَبَقِيَّةٌ مِّمَّا تَرَكَ ءَالُ مُوسَىٰ وَءَالُ هَٰرُونَ تَحْمِلُهُ ٱلْمَلَٰٓئِكَةُ ۚ إِنَّ فِى ذَٰلِكَ لَءَايَةً لَّكُمْ إِن كُنتُم مُّؤْمِنِينَ ﴿٢٤٨﴾

**248.** ಅವರೊಂದಿಗೆ ಅವರ ಪ್ರವಾದಿ ಹೇಳಿದರು: ‘ಆ ಪೆಟ್ಟಿಗೆ ನಿಮ್ಮ ಬಳಿಗೆ ತಲುಪುವುದು ತಾಲೂತ್‌ನ ರಾಜಾಳ್ವಿಕೆಗಿರುವ ಪುರಾವೆಯಾಗಿದೆ. ಅದರಲ್ಲಿ ನಿಮ್ಮ ರಬ್‌ನ ವತಿಯ ಮನಃಶಾಂತಿ ಮತ್ತು ಮೂಸಾ ಹಾಗೂ ಹಾರೂನ್‌ರ ಕುಟುಂಬಗಳು ಬಿಟ್ಟು ಹೋಗಿರುವ ಅವಶೇಷಗಳಿವೆ.[1] ಅದನ್ನು ಮಲಕ್‌ಗಳು ಹೊತ್ತು ತರುವರು. ನೀವು ಸತ್ಯವಿಶ್ವಾಸಿಗಳಾಗಿದ್ದರೆ ನಿಸ್ಸಂದೇಹ ವಾಗಿಯೂ ನಿಮಗೆ ಅದರಲ್ಲಿ ಮಹಾ ದೃಷ್ಟಾಂತವಿದೆ’.

فَلَمَّا فَصَلَ طَالُوتُ بِٱلْجُنُودِ قَالَ إِنَّ ٱللَّهَ مُبْتَلِيكُم بِنَهَرٍ فَمَن شَرِبَ مِنْهُ فَلَيْسَ مِنِّى وَمَن لَّمْ يَطْعَمْهُ فَإِنَّهُۥ مِنِّىٓ إِلَّا مَنِ ٱغْتَرَفَ غُرْفَةًۢ بِيَدِهِۦ ۚ فَشَرِبُوا۟ مِنْهُ إِلَّا قَلِيلًا مِّنْهُمْ ۚ فَلَمَّا جَاوَزَهُۥ هُوَ وَٱلَّذِينَ ءَامَنُوا۟ مَعَهُۥ قَالُوا۟ لَا طَاقَةَ لَنَا ٱلْيَوْمَ بِجَالُوتَ وَجُنُودِهِۦ ۚ قَالَ ٱلَّذِينَ يَظُنُّونَ أَنَّهُم مُّلَٰقُوا۟ ٱللَّهِ كَم مِّن فِئَةٍ قَلِيلَةٍ غَلَبَتْ فِئَةً كَثِيرَةًۢ بِإِذْنِ ٱللَّهِ ۗ وَٱللَّهُ مَعَ ٱلصَّٰبِرِينَ ﴿٢٤٩﴾

**249.** ತರುವಾಯ ಸೈನ್ಯದೊಂದಿಗೆ ಹೊರಟಾಗ ತಾಲೂತ್ ಹೇಳಿದರು: ‘ಅಲ್ಲಾಹು ಒಂದು ನದಿಯ ಮೂಲಕ ನಿಮ್ಮನ್ನು ಪರೀಕ್ಷಿಸುವನು. ಯಾರು ಅದರಿಂದ ಕುಡಿದನೋ ಅವನು ನನ್ನ ಪೈಕಿ ಸೇರಿದವನಲ್ಲ ಮತ್ತು ಯಾರು ಅದರ ರುಚಿ ನೋಡಲಿಲ್ಲವೋ ಅವನು ನನ್ನ ಪೈಕಿ ಸೇರಿದವನಾಗಿರುವನು; ಆದರೆ ತನ್ನ ಕೈಯಿಂದ ಒಂದು ಬೊಗಸೆ ಮಾತ್ರ ಬಾಚಿದವನ ಹೊರತು.’ ಆದರೆ ಅವರ ಪೈಕಿ ಕೆಲವರ ಹೊರತು (ಉಳಿದವರೆಲ್ಲರೂ) ಅದರಿಂದ ಕುಡಿದರು. ಹೀಗೆ ತಾಲೂತ್ ಮತ್ತು ಅವರ ಜೊತೆಗಿರುವ ವಿಶ್ವಾಸಿಗಳು ಆ ನದಿಯನ್ನು ದಾಟಿದಾಗ ಅವರು ಹೇಳಿದರು: ‘ಜಾಲೂತ್ (ಗೋಲಿಯತ್) ಮತ್ತು ಅವನ ಸೈನ್ಯವನ್ನು ಎದುರಿಸುವ ಧೈರ್ಯ ಇಂದು ನಮಗಿಲ್ಲ’. ತಾವು ಅಲ್ಲಾಹುವನ್ನು ಭೇಟಿಯಾಗಲಿರುವೆವು ಎಂಬ ದೃಢವಿಶ್ವಾಸ ಹೊಂದಿದವರು ಹೇಳಿದರು: ‘ಎಷ್ಟು ಚಿಕ್ಕ ಚಿಕ್ಕ ಸೈನ್ಯಗಳು ಅಲ್ಲಾಹುವಿನ ಅನುಮತಿಯೊಂದಿಗೆ ದೊಡ್ಡ ದೊಡ್ಡ ಸೈನ್ಯಗಳನ್ನು ಸೋಲಿಸಿವೆ! ಅಲ್ಲಾಹು ಸಹನೆ ವಹಿಸುವವರ ಜೊತೆಗಿರುವನು’.

1 ಅಲ್ಲಾಹನ ಸಂದೇಶಗಳನ್ನು ದಾಖಲಿಸಿದ ಹಲಗೆ ತುಂಡುಗಳು, ಪ್ರವಾದಿ ಮೂಸಾ (عَلَيْهِ ٱلسَّلَامُ) ರವರ ಬೆತ್ತ ಹಾಗೂ ಉಡುಪುಗಳು ಮತ್ತು ತೌರಾತ್‌ನ ಕೆಲವು ಭಾಗಗಳು ಆ ಪೆಟ್ಟಿಗೆಯಲ್ಲಿದ್ದವು.

وَلَمَّا بَرَزُواْ لِجَالُوتَ وَجُنُودِهِۦ قَالُواْ رَبَّنَآ أَفۡرِغۡ عَلَيۡنَا صَبۡرٗا وَثَبِّتۡ أَقۡدَامَنَا وَٱنصُرۡنَا عَلَى ٱلۡقَوۡمِ ٱلۡكَٰفِرِينَ ٢٥٠

**250**. ತರುವಾಯ ಅವರು ಜಾಲೂತ್ ಮತ್ತು ಅವನ ಸೈನ್ಯದ ವಿರುದ್ಧ ಹೋರಾಟಕ್ಕಿಳಿದಾಗ ಪ್ರಾರ್ಥಿಸಿದರು: ಓ ನಮ್ಮ ರಬ್! ನಮ್ಮ ಮೇಲೆ ಸಹನೆಯನ್ನು ಸುರಿಸು, ನಮ್ಮ ಪಾದಗಳನ್ನು ಸ್ಥಿರಗೊಳಿಸು ಮತ್ತು ಸತ್ಯನಿಷೇಧಿಗಳಾದ ಜನರ ವಿರುದ್ಧ ನಮಗೆ ನೆರವನ್ನು ನೀಡು'.

فَهَزَمُوهُم بِإِذۡنِ ٱللَّهِ وَقَتَلَ دَاوُۥدُ جَالُوتَ وَءَاتَىٰهُ ٱللَّهُ ٱلۡمُلۡكَ وَٱلۡحِكۡمَةَ وَعَلَّمَهُۥ مِمَّا يَشَآءُۗ وَلَوۡلَا دَفۡعُ ٱللَّهِ ٱلنَّاسَ بَعۡضَهُم بِبَعۡضٖ لَّفَسَدَتِ ٱلۡأَرۡضُ وَلَٰكِنَّ ٱللَّهَ ذُو فَضۡلٍ عَلَى ٱلۡعَٰلَمِينَ ٢٥١

**251**. ತರುವಾಯ ಅವರು ಅಲ್ಲಾಹುವಿನ ಅನುಮತಿಯೊಂದಿಗೆ ಅವರನ್ನು (ಶತ್ರುಗಳನ್ನು) ಸೋಲಿಸಿದರು. ದಾವೂದ್ ಜಾಲೂತ್‌ನನ್ನು ವಧಿಸಿದರು. ಅಲ್ಲಾಹು ಅವರಿಗೆ (ದಾವೂದ್‌ರಿಗೆ) ಆಧಿಪತ್ಯ ಮತ್ತು ಜ್ಞಾನವನ್ನು ನೀಡಿದನು ಹಾಗೂ ತಾನಿಚ್ಛಿಸಿದ ಹಲವನ್ನೂ ಕಲಿಸಿದನು. ಅಲ್ಲಾಹು ಮನುಷ್ಯರ ಪೈಕಿ ಕೆಲವರನ್ನು ಕೆಲವರ ಮೂಲಕ ತಡೆಯದಿರುತ್ತಿದ್ದರೆ ಭೂಲೋಕವು ಕ್ಷೋಭೆಗೊಳಗಾಗುತ್ತಿತ್ತು. ಆದರೆ ಅಲ್ಲಾಹು ಸರ್ವಲೋಕದವರೊಂದಿಗೆ ಅತ್ಯಂತ ಔದಾರ್ಯವುಳ್ಳವನಾಗಿರುವನು.

تِلۡكَ ءَايَٰتُ ٱللَّهِ نَتۡلُوهَا عَلَيۡكَ بِٱلۡحَقِّۚ وَإِنَّكَ لَمِنَ ٱلۡمُرۡسَلِينَ ٢٥٢

**252**. ಇವೆಲ್ಲವೂ ಅಲ್ಲಾಹುವಿನ ದೃಷ್ಟಾಂತಗಳಾಗಿವೆ. ಇದನ್ನು ನಾವು ತಮಗೆ ಸತ್ಯದೊಂದಿಗೆ ಓದಿಕೊಡುತ್ತಿರುವೆವು. ಖಂಡಿತವಾಗಿಯೂ ತಾವು ಸಂದೇಶವಾಹಕರ ಪೈಕಿ ಸೇರಿದವರಾಗಿರುವಿರಿ.

۞تِلۡكَ ٱلرُّسُلُ فَضَّلۡنَا بَعۡضَهُمۡ عَلَىٰ بَعۡضٖۘ مِّنۡهُم مَّن كَلَّمَ ٱللَّهُۖ وَرَفَعَ بَعۡضَهُمۡ دَرَجَٰتٖۚ وَءَاتَيۡنَا عِيسَى ٱبۡنَ مَرۡيَمَ ٱلۡبَيِّنَٰتِ وَأَيَّدۡنَٰهُ بِرُوحِ ٱلۡقُدُسِۗ وَلَوۡ شَآءَ ٱللَّهُ مَا ٱقۡتَتَلَ ٱلَّذِينَ مِنۢ بَعۡدِهِم مِّنۢ بَعۡدِ مَا جَآءَتۡهُمُ ٱلۡبَيِّنَٰتُ وَلَٰكِنِ ٱخۡتَلَفُواْ

**253**. ನಾವು ಆ ಸಂದೇಶವಾಹಕರ ಪೈಕಿ ಕೆಲವರಿಗೆ ಇತರ ಕೆಲವರಿಗಿಂತ ಶ್ರೇಷ್ಠತೆಯನ್ನು ನೀಡಿರುವೆವು. ಅವರ ಪೈಕಿ ಅಲ್ಲಾಹು (ನೇರವಾಗಿ) ಸಂಭಾಷಣೆ ಮಾಡಿದವರಿರುವರು.[1] ಅವರ ಪೈಕಿ ಕೆಲವರನ್ನು ಅವನು ಹಲವು ಪದವಿಗಳಿಗೇರಿಸಿರುವನು. ಮರ್ಯಮ್‌ರ ಪುತ್ರ ಈಸಾರಿಗೆ ನಾವು ಸುವ್ಯಕ್ತ ದೃಷ್ಟಾಂತಗಳನ್ನು

1 ಇಹಲೋಕದಲ್ಲಿ ಅಲ್ಲಾಹು ನೇರವಾಗಿ ಸಂಭಾಷಣೆ ನಡೆಸಿರುವುದು ಪ್ರವಾದಿ ಮೂಸಾ (عَلَيۡهِ السَّلَامُ) ರವರೊಂದಿಗೆ ಮಾತ್ರವಾಗಿದೆ.

فَمِنْهُم مَّنْ ءَامَنَ وَمِنْهُم مَّن كَفَرَ ۚ وَلَوْ
شَآءَ ٱللَّهُ مَا ٱقْتَتَلُوا۟ وَلَـٰكِنَّ ٱللَّهَ يَفْعَلُ
مَا يُرِيدُ ﴿٢٥٣﴾

ನೀಡಿರುವೆವು ಮತ್ತು ಪವಿತ್ರಾತ್ಮನ ಮೂಲಕ ಅವರಿಗೆ ನಾವು ಬೆಂಬಲವನ್ನೂ ನೀಡಿರುವೆವು. ಅಲ್ಲಾಹು ಇಚ್ಛಿಸುತ್ತಿದ್ದರೆ ಸ್ಪಷ್ಟವಾದ ಪುರಾವೆಗಳು ತಮ್ಮ ಬಳಿಗೆ ಬಂದ ಬಳಿಕವೂ ಅವರ (ಸಂದೇಶವಾಹಕರ) ಅನುಯಾಯಿಗಳು (ಪರಸ್ಪರ) ಕಾದಾಡುತ್ತಿರಲಿಲ್ಲ. ಆದರೆ ಅವರು ಭಿನ್ನರಾದರು. ಅವರ ಪೈಕಿ ವಿಶ್ವಾಸವಿಟ್ಟವರೂ ನಿಷೇಧಿಸಿದವರೂ ಉಂಟಾದರು. ಅಲ್ಲಾಹು ಇಚ್ಛಿಸುತ್ತಿದ್ದರೆ ಅವರು (ಪರಸ್ಪರ) ಕಾದಾಡುತ್ತಿರಲಿಲ್ಲ. ಆದರೆ ಅಲ್ಲಾಹು ತಾನಿಚ್ಛಿಸುವುದನ್ನು ಮಾಡುವನು.

يَـٰٓأَيُّهَا ٱلَّذِينَ ءَامَنُوٓا۟ أَنفِقُوا۟ مِمَّا
رَزَقْنَـٰكُم مِّن قَبْلِ أَن يَأْتِىَ يَوْمٌ لَّا بَيْعٌ
فِيهِ وَلَا خُلَّةٌ وَلَا شَفَـٰعَةٌ ۗ وَٱلْكَـٰفِرُونَ هُمُ
ٱلظَّـٰلِمُونَ ﴿٢٥٤﴾

**254.** ಓ ಸತ್ಯವಿಶ್ವಾಸಿಗಳೇ! ಕ್ರಯ–ವಿಕ್ರಯವಾಗಲಿ, ಗೆಳೆತನವಾಗಲಿ, ಶಿಫಾರಸಾಗಲಿ ಪ್ರಯೋಜನವಾಗದ ಒಂದು ದಿನವು ಬರುವುದಕ್ಕೆ ಮುಂಚಿತವಾಗಿ ನಾವು ನಿಮಗೆ ನೀಡಿರುವುದರಿಂದ ವ್ಯಯಿಸಿರಿ. ಸತ್ಯನಿಷೇಧಿಗಳಾರೋ ಅವರೇ ಅಕ್ರಮಿಗಳಾಗಿರುವರು.

ٱللَّهُ لَآ إِلَـٰهَ إِلَّا هُوَ ٱلْحَىُّ ٱلْقَيُّومُ ۚ لَا
تَأْخُذُهُۥ سِنَةٌ وَلَا نَوْمٌ ۚ لَّهُۥ مَا فِى ٱلسَّمَـٰوَٰتِ
وَمَا فِى ٱلْأَرْضِ ۗ مَن ذَا ٱلَّذِى يَشْفَعُ عِندَهُۥٓ
إِلَّا بِإِذْنِهِۦ ۚ يَعْلَمُ مَا بَيْنَ أَيْدِيهِمْ وَمَا
خَلْفَهُمْ ۖ وَلَا يُحِيطُونَ بِشَىْءٍ مِّنْ عِلْمِهِۦٓ
إِلَّا بِمَا شَآءَ ۚ وَسِعَ كُرْسِيُّهُ ٱلسَّمَـٰوَٰتِ
وَٱلْأَرْضَ ۖ وَلَا يَـُٔودُهُۥ حِفْظُهُمَا ۚ وَهُوَ ٱلْعَلِىُّ
ٱلْعَظِيمُ ﴿٢٥٥﴾

**255.** ಅಲ್ಲಾಹು! ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಎಂದೆಂದಿಗೂ ಜೀವಿಸಿರುವವನೂ ಎಲ್ಲವನ್ನೂ ನಿಯಂತ್ರಿಸುವವನೂ ಆಗಿರುವನು. ತೂಕಡಿಕೆಯಾಗಲಿ, ನಿದ್ರೆಯಾಗಲಿ ಅವನನ್ನು ಬಾಧಿಸದು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದಾಗಿವೆ. ಅವನ ಅನುಮತಿಯ ವಿನಾ ಅವನ ಬಳಿ ಶಿಫಾರಸು ಮಾಡುವವನು ಯಾರಿರುವನು? ಅವರ ಮುಂದಿರುವುದನ್ನೂ, ಅವರ ಹಿಂದಿರುವುದನ್ನೂ ಅವನು ಅರಿಯುತ್ತಾನೆ. ಅವನ ಜ್ಞಾನದಿಂದ ಅವನು ಇಚ್ಛೆಸಿರುವುದನ್ನಲ್ಲದೆ (ಬೇರೇನನ್ನೂ) ಸೂಕ್ಷ್ಮವಾಗಿ ಅರಿಯಲು ಅವರಿಗೆ ಸಾಧ್ಯವಿಲ್ಲ.

ಅವನ ಕುರ್ಸೀ[1] ಆಕಾಶಗಳನ್ನು ಮತ್ತು ಭೂಮಿಯನ್ನು ಆವರಿಸಿಕೊಂಡಿದೆ. ಅವುಗಳ ಸಂರಕ್ಷಣೆಯು ಅವನಿಗೆ ಕಿಂಚಿತ್ತೂ ಭಾರವಿರುವುದಲ್ಲ. ಅವನು ಉನ್ನತನೂ, ಮಹಾನನೂ ಆಗಿರುವನು.

256. ಧರ್ಮದ ವಿಷಯದಲ್ಲಿ ಯಾವುದೇ ಬಲಾತ್ಕಾರವಿಲ್ಲ. ಸನ್ಮಾರ್ಗವು ದುರ್ಮಾರ್ಗದಿಂದ ಸ್ಪಷ್ಟವಾಗಿ ಬೇರ್ಪಟ್ಟು ನಿಂತಿದೆ. ಆದ್ದರಿಂದ ಯಾರು ಮಿಥ್ಯಾರಾಧ್ಯರನ್ನು ನಿಷೇಧಿಸಿ ಅಲ್ಲಾಹುವಿನಲ್ಲಿ ವಿಶ್ವಾಸವಿಡುವನೋ ಅವನು ಅತ್ಯಂತ ಬಲಿಷ್ಠವಾದ ಹಗ್ಗವನ್ನು ಹಿಡಿದಿರುವನು. ಅದೆಂದೂ ಕಡಿದು ಹೋಗಲಾರದು. ಅಲ್ಲಾಹು (ಎಲ್ಲವನ್ನು) ಆಲಿಸುವವನೂ ಅರಿಯುವವನೂ ಆಗಿರುವನು.

لَآ إِكۡرَاهَ فِي ٱلدِّينِۖ قَد تَّبَيَّنَ ٱلرُّشۡدُ مِنَ ٱلۡغَيِّۚ فَمَن يَكۡفُرۡ بِٱلطَّٰغُوتِ وَيُؤۡمِنۢ بِٱللَّهِ فَقَدِ ٱسۡتَمۡسَكَ بِٱلۡعُرۡوَةِ ٱلۡوُثۡقَىٰ لَا ٱنفِصَامَ لَهَاۗ وَٱللَّهُ سَمِيعٌ عَلِيمٌ ٢٥٦

257. ಅಲ್ಲಾಹು ಸತ್ಯವಿಶ್ವಾಸಿಗಳ ರಕ್ಷಕನಾಗಿರುವನು. ಅವನು ಅವರನ್ನು ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತರುವನು. ಆದರೆ ಸತ್ಯನಿಷೇಧಿಗಳ ರಕ್ಷಕರು ತಾಗೂತ್ (ಮಿಥ್ಯಾರಾಧ್ಯರು)ಗಳಾಗಿರುವರು. ಅವರು (ಮಿಥ್ಯಾರಾಧ್ಯರು) ಅವರನ್ನು ಪ್ರಕಾಶದಿಂದ ಅಂಧಕಾರಗಳೆಡೆಗೆ ಕೊಂಡೊಯ್ಯುವರು. ಅವರು ನರಕವಾಸಿಗಳಾಗಿರುವರು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು.

ٱللَّهُ وَلِيُّ ٱلَّذِينَ ءَامَنُواْ يُخۡرِجُهُم مِّنَ ٱلظُّلُمَٰتِ إِلَى ٱلنُّورِۖ وَٱلَّذِينَ كَفَرُوٓاْ أَوۡلِيَآؤُهُمُ ٱلطَّٰغُوتُ يُخۡرِجُونَهُم مِّنَ ٱلنُّورِ إِلَى ٱلظُّلُمَٰتِۗ أُوْلَٰٓئِكَ أَصۡحَٰبُ ٱلنَّارِۖ هُمۡ فِيهَا خَٰلِدُونَ ٢٥٧

258. ಇಬ್ರಾಹೀಮ್‌ರೊಂದಿಗೆ ಅವರ ರಬ್‌ನ ವಿಷಯದಲ್ಲಿ ತರ್ಕಿಸಿದವನ ಕುರಿತು ತಾವು ಅರಿತಿಲ್ಲವೇ?[2] (ಅವನು ತರ್ಕಿಸಲು

أَلَمۡ تَرَ إِلَى ٱلَّذِي حَآجَّ إِبۡرَٰهِـۧمَ فِي رَبِّهِۦٓ أَنۡ ءَاتَىٰهُ ٱللَّهُ ٱلۡمُلۡكَ إِذۡ قَالَ إِبۡرَٰهِـۧمُ

1 'ಕುರ್ಸೀ' ಎಂಬ ಪದಕ್ಕೆ ಪಾದಸ್ಥಾನ (موضع القدمين), ಅರ್ಶ್ (ಸಿಂಹಾಸನ) ಮೊದಲಾದ ವ್ಯಾಖ್ಯಾನಗಳು ಬಂದಿವೆ. ಪುರಾವೆಗಳ ಬೆಂಬಲವಿರುವುದು ಮೊದಲನೆಯ ವ್ಯಾಖ್ಯಾನಕ್ಕಾಗಿದೆ. ಅಲ್ಲಾಹುವಿನ ಎಲ್ಲ ಸಿಫತ್ (ವಿಶೇಷಣ)ಗಳಲ್ಲೂ ಅವು ಕುರ್‌ಆನ್ ಮತ್ತು ಸಹೀಹಾದ ಹದೀಸ್‌ಗಳಲ್ಲಿ ಹೇಗೆ ಬಂದಿವೆಯೋ ಅದೇ ರೀತಿಯಲ್ಲಿ ವಿಶ್ವಾಸವಿಡಬೇಕಾಗಿದೆ ಮತ್ತು ಅವುಗಳನ್ನು ವ್ಯಾಖ್ಯಾನಮುಕ್ತಗೊಳಿಸಬೇಕಾಗಿದೆ.

2 ಇಲ್ಲಿ ಪ್ರಸ್ತಾಪಿಸಲಾಗಿರುವುದು ಪ್ರವಾದಿ ಇಬ್ರಾಹೀಮ್ (عَلَيْهِ السَّلَامُ) ರವರ ಕಾಲದಲ್ಲಿ ಇರಾಕನ್ನು ಆಳುತ್ತಿದ್ದ ನಮ್ರೂದ್ ಎಂಬ ದೇವನಿಷೇಧಿ ಸ್ವೇಚ್ಛಾಧಿಪತಿಯ ಕುರಿತಾಗಿದೆ. (ಇಬ್ನುಕಸೀರ್)

رَبِّيَ ٱلَّذِى يُحۡىِۦ وَيُمِيتُ قَالَ أَنَا۠ أُحۡىِۦ وَأُمِيتُۖ قَالَ إِبۡرَٰهِـۧمُ فَإِنَّ ٱللَّهَ يَأۡتِى بِٱلشَّمۡسِ مِنَ ٱلۡمَشۡرِقِ فَأۡتِ بِهَا مِنَ ٱلۡمَغۡرِبِ فَبُهِتَ ٱلَّذِى كَفَرَۗ وَٱللَّهُ لَا يَهۡدِى ٱلۡقَوۡمَ ٱلظَّـٰلِمِينَ ﴿٢٥٨﴾

ಮುಂದಾಗಿರುವುದು) ಅಲ್ಲಾಹು ಅವನಿಗೆ ಆಧಿಪತ್ಯವನ್ನು ನೀಡಿರುವ ಕಾರಣದಿಂದಾಗಿದೆ. ‘ನನ್ನ ರಬ್ ಜೀವ ಮತ್ತು ಮರಣವನ್ನು ನೀಡುವವನಾಗಿರುವನು’ ಎಂದು ಇಬ್ರಾಹೀಮ್ ಹೇಳಿದಾಗ ‘ನಾನೂ ಜೀವ ಮತ್ತು ಮರಣವನ್ನು ನೀಡುವೆನು’ ಎಂದು ಅವನು ಹೇಳಿದನು. ಇಬ್ರಾಹೀಮ್ ಹೇಳಿದರು: ‘ಅಲ್ಲಾಹು ಸೂರ್ಯನನ್ನು ಪೂರ್ವದಿಕ್ಕಿನಿಂದ ತರುತ್ತಾನೆ. ನೀನು ಅದನ್ನು ಪಶ್ಚಿಮದಿಂದ ತಾ’. ಆಗ ಆ ಸತ್ಯನಿಷೇಧಿಯು ನಿರುತ್ತರನಾದನು. ಅಕ್ರಮಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗಕ್ಕೆ ಸೇರಿಸಲಾರನು.

أَوۡ كَٱلَّذِى مَرَّ عَلَىٰ قَرۡيَةٖ وَهِىَ خَاوِيَةٌ عَلَىٰ عُرُوشِهَا قَالَ أَنَّىٰ يُحۡىِۦ هَـٰذِهِ ٱللَّهُ بَعۡدَ مَوۡتِهَاۖ فَأَمَاتَهُ ٱللَّهُ مِاْئَةَ عَامٖ ثُمَّ بَعَثَهُۥۖ قَالَ كَمۡ لَبِثۡتَۖ قَالَ لَبِثۡتُ يَوۡمًا أَوۡ بَعۡضَ يَوۡمٖۖ قَالَ بَل لَّبِثۡتَ مِاْئَةَ عَامٖ فَٱنظُرۡ إِلَىٰ طَعَامِكَ وَشَرَابِكَ لَمۡ يَتَسَنَّهۡۖ وَٱنظُرۡ إِلَىٰ حِمَارِكَ وَلِنَجۡعَلَكَ ءَايَةٗ لِّلنَّاسِۖ وَٱنظُرۡ إِلَى ٱلۡعِظَامِ كَيۡفَ نُنشِزُهَا ثُمَّ نَكۡسُوهَا لَحۡمٗاۚ فَلَمَّا تَبَيَّنَ لَهُۥ قَالَ أَعۡلَمُ أَنَّ ٱللَّهَ عَلَىٰ كُلِّ شَىۡءٖ قَدِيرٞ ﴿٢٥٩﴾

**259.** ಅಥವಾ ಮೇಲ್ಛಾವಣಿಗಳೊಂದಿಗೆ ಕುಸಿದುಬಿದ್ದಿರುವ[1] ಒಂದು ಪಟ್ಟಣದ ಮೂಲಕ ಸಂಚರಿಸುತ್ತಿದ್ದ ಒಬ್ಬನಂತೆ. ಆ ವ್ಯಕ್ತಿ ಹೇಳಿದರು: ‘ನಿರ್ಜೀವವಾದ ಬಳಿಕ ಅಲ್ಲಾಹು ಇದನ್ನು ಜೀವಂತವಾಗಿಸುವುದಾದರೂ ಹೇಗೆ?’ ಆಗ ಅಲ್ಲಾಹು ಅವರನ್ನು ನೂರು ವರ್ಷಗಳ ಕಾಲ ನಿರ್ಜೀವ ಸ್ಥಿತಿಯಲ್ಲಿಟ್ಟನು. ಆಮೇಲೆ ಅವರನ್ನು ಪುನರ್ಜೀವಗೊಳಿಸಿ ಕೇಳಿದನು: ‘ತಾವು ಎಷ್ಟು ವರ್ಷ (ನಿರ್ಜೀವ ಸ್ಥಿತಿಯಲ್ಲಿ) ಕಳೆದಿರುವಿರಿ?’ ‘ಒಂದು ದಿನ ಅಥವಾ ಒಂದು ದಿನದ ಸ್ವಲ್ಪ ಭಾಗ (ಕಳೆದಿರುವೆನು)’ ಎಂದು ಅವರು ಉತ್ತರಿಸಿದರು. ಅವನು (ಅಲ್ಲಾಹು) ಹೇಳಿದನು: ‘ಅಲ್ಲ, ತಾವು ನೂರು ವರ್ಷ ಕಳೆದಿರುವಿರಿ, ತಮ್ಮ ಆಹಾರ–ಪಾನೀಯಗಳತ್ತ ನೋಡಿರಿ, ಅವು ಬದಲಾಗಿಲ್ಲ. ತಮ್ಮ ಕತ್ತೆಯೆಡೆಗೆ ನೋಡಿರಿ (ಅದು ಹೇಗಿದೆಯೆಂದು?). ತಮ್ಮನ್ನು ಜನರಿಗೊಂದು ದೃಷ್ಟಾಂತವಾಗಿ ಮಾಡುವ ಸಲುವಾಗಿ ನಾವಿದನ್ನು ಮಾಡಿದೆವು. ನಾವು ಆ

1 ಹೆಚ್ಚಿನ ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ ಪ್ರಸ್ತುತ ವ್ಯಕ್ತಿ ಉಝೈರ್(عَلَيْهِالسَّلَامُ)ಆಗಿದ್ದರು ಮತ್ತು ಆ ಪಟ್ಟಣ ಫ್ಯಾಲಸ್ತೀನ್ ಆಗಿತ್ತು.

ಮೂಳೆಗಳನ್ನು ಹೇಗೆ ಜೋಡಿಸುವೆವು ಮತ್ತು ಅವುಗಳಿಗೆ ಹೇಗೆ ಮಾಂಸವನ್ನು ಹೊದಿಯುವೆವು ಎಂದು ನೋಡಿರಿ'. ಹೀಗೆ ಅವರಿಗೆ ವಿಷಯವು ಸ್ಪಷ್ಟವಾದಾಗ ಅವರು ಹೇಳಿದರು: 'ಖಂಡಿತವಾಗಿಯೂ ಅಲ್ಲಾಹು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನೆಂದು ನಾನು ಅರಿತುಕೊಂಡಿರುವೆನು'.

**260**. ಓ ನನ್ನ ರಬ್! ನೀನು ಮರಣ ಹೊಂದಿದವರನ್ನು ಜೀವಂತಗೊಳಿಸುವುದು ಹೇಗೆಂಬುದನ್ನು ನನಗೆ ತೋರಿಸಿಕೊಡು' ಎಂದು ಇಬ್ರಾಹೀಮ್ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅಲ್ಲಾಹು ಕೇಳಿದನು: 'ತಾವು ವಿಶ್ವಾಸವಿಟ್ಟಿಲ್ಲವೇ?' ಅವರು ಹೇಳಿದರು: 'ವಿಶ್ವಾಸವಿಟ್ಟಿರುವೆನು, ಆದರೂ ನನ್ನ ಮನಸ್ಸಿಗೆ ಶಾಂತಿ ದೊರೆಯಲೆಂದಾಗಿದೆ.' ಅಲ್ಲಾಹು ಹೇಳಿದನು: 'ಹಾಗಾದರೆ ತಾವು ನಾಲ್ಕು ಹಕ್ಕಿಗಳನ್ನು ಹಿಡಿದು ಅವುಗಳನ್ನು ತಮಗೆ ಹತ್ತಿರವಾಗಿಸಿರಿ.'(1) ತರುವಾಯ (ಅವುಗಳನ್ನು ತುಂಡು ತುಂಡಾಗಿಸಿ) ಅವುಗಳ ಪ್ರತಿಯೊಂದು ಭಾಗವನ್ನು ಒಂದೊಂದು ಬೆಟ್ಟದ ಮೇಲಿಡಿರಿ. ಬಳಿಕ ಅವುಗಳನ್ನು ಕೂಗಿ ಕರೆಯಿರಿ. ಅವು ತಕ್ಷಣ ತಮ್ಮ ಬಳಿಗೆ ಓಡಿ ಬರುವುವು. ಅಲ್ಲಾಹು ಪ್ರತಾಪ ಶಾಲಿಯೂ ಯುಕ್ತಿಪೂರ್ಣನೂ ಆಗಿರುವನೆಂಬುದನ್ನು ತಾವು ಅರಿತುಕೊಳ್ಳಿರಿ.'

وَإِذْ قَالَ إِبْرَٰهِـۧمُ رَبِّ أَرِنِى كَيْفَ تُحْىِ ٱلْمَوْتَىٰ ۖ قَالَ أَوَلَمْ تُؤْمِن ۖ قَالَ بَلَىٰ وَلَـٰكِن لِّيَطْمَئِنَّ قَلْبِى ۖ قَالَ فَخُذْ أَرْبَعَةً مِّنَ ٱلطَّيْرِ فَصُرْهُنَّ إِلَيْكَ ثُمَّ ٱجْعَلْ عَلَىٰ كُلِّ جَبَلٍ مِّنْهُنَّ جُزْءًا ثُمَّ ٱدْعُهُنَّ يَأْتِينَكَ سَعْيًا ۚ وَٱعْلَمْ أَنَّ ٱللَّهَ عَزِيزٌ حَكِيمٌ ﴿٢٦٠﴾

**261**. ಅಲ್ಲಾಹುವಿನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ವ್ಯಯಿಸುವವರನ್ನು ಒಂದು ಧಾನ್ಯಕ್ಕೆ ಹೋಲಿಸಬಹುದು. ಅದು ಏಳು ತೆನೆಗಳನ್ನು ಉತ್ಪಾದಿಸಿತು. ಪ್ರತಿಯೊಂದು ತೆನೆಯಲ್ಲೂ ನೂರು ಧಾನ್ಯಗಳಿವೆ. ಅಲ್ಲಾಹು ತಾನಿಚ್ಛಿಸು ವವರಿಗೆ ಇಮ್ಮಡಿಯಾಗಿ ಕೊಡುವನು.

مَّثَلُ ٱلَّذِينَ يُنفِقُونَ أَمْوَٰلَهُمْ فِى سَبِيلِ ٱللَّهِ كَمَثَلِ حَبَّةٍ أَنۢبَتَتْ سَبْعَ سَنَابِلَ فِى كُلِّ سُنۢبُلَةٍ مِّا۟ئَةُ حَبَّةٍ ۗ وَٱللَّهُ يُضَـٰعِفُ لِمَن يَشَآءُ ۗ وَٱللَّهُ وَٰسِعٌ عَلِيمٌ ﴿٢٦١﴾

1 ಹಕ್ಕಿಗಳನ್ನು ಹತ್ತಿರವಾಗಿಸಲು ಸೂಚಿಸಿದ್ದು ಅವುಗಳನ್ನು ಸೂಕ್ಷ್ಮವಾಗಿ ಬೇರ್ಪಡಿಸಿ ತಿಳಿಯುವ ಸಲುವಾಗಿದೆ.

ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ, (ಎಲ್ಲವನ್ನೂ) ಅರಿಯುವವನೂ ಆಗಿರುವನು.

262. ಅಲ್ಲಾಹುವಿನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ವ್ಯಯಿಸುವವರು, ತರುವಾಯ ಅದರ ಹಿಂದೆಯೇ ತಾವು ಖರ್ಚು ಮಾಡಿರುವುದನ್ನು ಎತ್ತಿಹೇಳುವುದಾಗಲಿ ಕಿರುಕುಳಕೊಡುವುದಾಗಲಿ ಮಾಡದವರು ಯಾರೋ ಅವರಿಗೆ ಅವರ ರಬ್‌ನ ಬಳಿಯಲ್ಲಿ ಅರ್ಹ ಪ್ರತಿಫಲವಿದೆ. ಅವರು ಏನನ್ನೂ ಭಯಪಡಬೇಕಾಗಿಲ್ಲ ಮತ್ತು ಅವರು ದುಃಖಿಸಬೇಕಾಗಿಯೂ ಬರದು.

ٱلَّذِينَ يُنفِقُونَ أَمْوَٰلَهُمْ فِى سَبِيلِ ٱللَّهِ ثُمَّ لَا يُتْبِعُونَ مَآ أَنفَقُوا۟ مَنًّا وَلَآ أَذًى لَّهُمْ أَجْرُهُمْ عِندَ رَبِّهِمْ وَلَا خَوْفٌ عَلَيْهِمْ وَلَا هُمْ يَحْزَنُونَ ﴿٢٦٢﴾

263. ಕೊಟ್ಟದ್ದರ ಹಿಂದೆಯೇ ಮನನೋಯಿಸುವ ದಾನಧರ್ಮಕ್ಕಿಂತಲೂ ಸಭ್ಯವಾದ ಮಾತು ಮತ್ತು ಕ್ಷಮೆಯು ಉತ್ತಮವಾಗಿದೆ. ಅಲ್ಲಾಹು ಸ್ವಯಂ ಪರ್ಯಾಪ್ತನೂ, ಸಹನಾಶೀಲನೂ ಆಗಿರುವನು.

۞ قَوْلٌ مَّعْرُوفٌ وَمَغْفِرَةٌ خَيْرٌ مِّن صَدَقَةٍ يَتْبَعُهَآ أَذًى ۗ وَٱللَّهُ غَنِىٌّ حَلِيمٌ ﴿٢٦٣﴾

264. ಓ ಸತ್ಯವಿಶ್ವಾಸಿಗಳೇ! (ಕೊಟ್ಟದ್ದನ್ನು) ಎತ್ತಿಹೇಳುತ್ತಲೂ, ಕಿರುಕುಳಕೊಡುತ್ತಲೂ ನೀವು ನಿಮ್ಮ ದಾನಧರ್ಮಗಳನ್ನು ನಿಷ್ಫಲಗೊಳಿಸದಿರಿ. ಅಲ್ಲಾಹುವಿನಲ್ಲಿ ಮತ್ತು ಪರಲೋಕದಲ್ಲಿ ವಿಶ್ವಾಸವಿಡದೆ ಜನರಿಗೆ ತೋರಿಸುವ ಸಲುವಾಗಿ ತಮ್ಮ ಸಂಪತ್ತನ್ನು ವ್ಯಯಿಸುವವನಂತೆ ನೀವಾಗದಿರಿ. ಮೇಲ್ಭಾಗದಲ್ಲಿ ಸ್ವಲ್ಪ ಮಣ್ಣಿರುವ ಒಂದು ನುಣುಪಾದ ಬಂಡೆಯೊಂದಿಗೆ ಅವನನ್ನು ಹೋಲಿಸಬಹುದು. ಆ ಬಂಡೆಯ ಮೇಲೆ ಜಡಿಮಳೆಯೊಂದು ಸುರಿಯಿತು. ಆ ಮಳೆಯು ಅದನ್ನು ಬೋಳು ಬಂಡೆಯಾಗಿ ಪರಿವರ್ತಿಸಿತು. ಅವರು ಪರಿಶ್ರಮಿಸಿರುವ ಯಾವುದೇ ಪ್ರತಿಫಲವನ್ನು ಗಳಿಸಲೂ ಅವರಿಗೆ ಸಾಧ್ಯವಾಗದು. ಸತ್ಯನಿಷೇಧಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗಕ್ಕೆ ಸೇರಿಸಲಾರನು.

يَـٰٓأَيُّهَا ٱلَّذِينَ ءَامَنُوا۟ لَا تُبْطِلُوا۟ صَدَقَـٰتِكُم بِٱلْمَنِّ وَٱلْأَذَىٰ كَٱلَّذِى يُنفِقُ مَالَهُۥ رِئَآءَ ٱلنَّاسِ وَلَا يُؤْمِنُ بِٱللَّهِ وَٱلْيَوْمِ ٱلْـَٔاخِرِ ۖ فَمَثَلُهُۥ كَمَثَلِ صَفْوَانٍ عَلَيْهِ تُرَابٌ فَأَصَابَهُۥ وَابِلٌ فَتَرَكَهُۥ صَلْدًا ۖ لَّا يَقْدِرُونَ عَلَىٰ شَىْءٍ مِّمَّا كَسَبُوا۟ ۗ وَٱللَّهُ لَا يَهْدِى ٱلْقَوْمَ ٱلْكَـٰفِرِينَ ﴿٢٦٤﴾

265. ಅಲ್ಲಾಹುವಿನ ಸಂತೃಪ್ತಿಯನ್ನು ಅರಸುತ್ತಾ ತಮ್ಮ ಮನಸ್ಸುಗಳಲ್ಲಿ (ಸತ್ಯವಿಶ್ವಾಸವನ್ನು) ಧೃಢಗೊಳಿಸಿ ಸಂಪತ್ತನ್ನು ವ್ಯಯಿಸುವವನ ಉದಾಹರಣೆಯು ಎತ್ತರ ಪ್ರದೇಶದಲ್ಲಿರುವ ಒಂದು ತೋಟದಂತಿದೆ. ಅದರ ಮೇಲೆ ಜಡಿಮಳೆಯೊಂದು ಸುರಿದಾಗ ಅದು ತನ್ನ ಫಲವನ್ನು ದ್ವಿಗುಣಗೊಳಿಸಿತು. ಇನ್ನು ಜಡಿಮಳೆಯು ಸುರಿಯದಿದ್ದರೂ ಒಂದು ತುಂತುರು ಮಳೆಯು ಅದಕ್ಕೆ ಸಾಕಾಗುವುದು. ಅಲ್ಲಾಹು ನೀವು ಮಾಡುತ್ತಿರುವವುಗಳನ್ನು ವೀಕ್ಷಿಸುವವನಾಗಿರುವನು.

وَمَثَلُ ٱلَّذِينَ يُنفِقُونَ أَمۡوَٰلَهُمُ ٱبۡتِغَآءَ مَرۡضَاتِ ٱللَّهِ وَتَثۡبِيتٗا مِّنۡ أَنفُسِهِمۡ كَمَثَلِ جَنَّةِۭ بِرَبۡوَةٍ أَصَابَهَا وَابِلٞ فَـَٔاتَتۡ أُكُلَهَا ضِعۡفَيۡنِ فَإِن لَّمۡ يُصِبۡهَا وَابِلٞ فَطَلّٞۗ وَٱللَّهُ بِمَا تَعۡمَلُونَ بَصِيرٌ ٢٦٥

266. ನಿಮ್ಮಲ್ಲೊಬ್ಬನಿಗೆ ಖರ್ಜೂರದ ಮರಗಳು ಮತ್ತು ದ್ರಾಕ್ಷಿ ಬಳ್ಳಿಗಳಿರುವ ಒಂದು ತೋಟವಿದೆಯೆಂದು ಭಾವಿಸಿರಿ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿವೆ. ಅದರಲ್ಲಿ ಅವನಿಗೆ ಎಲ್ಲ ವಿಧದ ಫಲವರ್ಗಗಳಿವೆ. ಅವನಿಗೆ ವೃದ್ಧಾಪ್ಯವೂ ಬಾಧಿಸಿದೆ. ಬಲಹೀನರಾದ ಹಲವು ಮಕ್ಕಳೂ ಅವನಿಗಿದ್ದಾರೆ. ಹೀಗಿರುವಾಗ ಅಗ್ನಿಯನ್ನು ಹೊಂದಿರುವ ಒಂದು ಚಂಡಮಾರುತವು ಆ ತೋಟಕ್ಕೆ ತಗುಲಿ ಅದು ಸುಟ್ಟುಹೋಗುತ್ತದೆ.(1) ಇಂತಹ ಒಂದು ಸ್ಥಿತಿಯನ್ನು ಹೊಂದಲು ನಿಮ್ಮ ಪೈಕಿ ಯಾರಾದರೂ ಆಶಿಸುವವರೇ? ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ಹೀಗೆ ಅಲ್ಲಾಹು ನಿಮಗೆ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವನು.

أَيَوَدُّ أَحَدُكُمۡ أَن تَكُونَ لَهُۥ جَنَّةٞ مِّن نَّخِيلٖ وَأَعۡنَابٖ تَجۡرِي مِن تَحۡتِهَا ٱلۡأَنۡهَٰرُ لَهُۥ فِيهَا مِن كُلِّ ٱلثَّمَرَٰتِ وَأَصَابَهُ ٱلۡكِبَرُ وَلَهُۥ ذُرِّيَّةٞ ضُعَفَآءُ فَأَصَابَهَآ إِعۡصَارٞ فِيهِ نَارٞ فَٱحۡتَرَقَتۡۗ كَذَٰلِكَ يُبَيِّنُ ٱللَّهُ لَكُمُ ٱلۡأٓيَٰتِ لَعَلَّكُمۡ تَتَفَكَّرُونَ ٢٦٦

267. ಓ ಸತ್ಯವಿಶ್ವಾಸಿಗಳೇ! ನೀವು ಸಂಪಾದಿಸಿದ ಉತ್ತಮ ವಸ್ತುಗಳಿಂದ ಮತ್ತು ನಾವು ನಿಮಗೆ ಭೂಮಿಯಿಂದ ಉತ್ಪಾದಿಸಿಕೊಟ್ಟಿರುವುದರಿಂದ ನೀವು ವ್ಯಯಿಸಿರಿ. ಕಣ್ಣುಮುಚ್ಚಿಕೊಂಡೇ ವಿನಾ

يَـٰٓأَيُّهَا ٱلَّذِينَ ءَامَنُوٓاْ أَنفِقُواْ مِن طَيِّبَٰتِ مَا كَسَبۡتُمۡ وَمِمَّآ أَخۡرَجۡنَا لَكُم مِّنَ ٱلۡأَرۡضِۖ وَلَا تَيَمَّمُواْ ٱلۡخَبِيثَ مِنۡهُ تُنفِقُونَ

1 ತೋರಿಕೆಗಾಗಿ ಕೊಡುವ ಮತ್ತು ಕೊಟ್ಟದ್ದನ್ನು ಎತ್ತಿ ಹೇಳುವ ದುರ್ಗುಣವು ಒಂದು ಅಗ್ನಿ ಮಾರುತದಂತೆ ದಾನಧರ್ಮಗಳ ಫಲವನ್ನು ಸುಟ್ಟುಹಾಕುತ್ತದೆ.

وَلَسۡتُم بِـَٔاخِذِيهِ إِلَّآ أَن تُغۡمِضُواْ فِيهِۚ
وَٱعۡلَمُوٓاْ أَنَّ ٱللَّهَ غَنِيٌّ حَمِيدٌ ٢٦٧

ನೀವು ಸ್ವೀಕರಿಸದಂತಹ ಕೆಟ್ಟ ವಸ್ತುಗಳನ್ನು (ದಾನ ಧರ್ಮಗಳಾಗಿ) ವ್ಯಯಿಸಲು ತೆಗೆದಿರಿಸದಿರಿ. ಅಲ್ಲಾಹು ಸ್ವಯಂ ಪರ್ಯಾಪ್ತನೂ ಸ್ತುತ್ಯರ್ಹನೂ ಆಗಿರುವನೆಂಬುದನ್ನು ಅರಿತುಕೊಳ್ಳಿರಿ.

ٱلشَّيۡطَٰنُ يَعِدُكُمُ ٱلۡفَقۡرَ وَيَأۡمُرُكُم
بِٱلۡفَحۡشَآءِۖ وَٱللَّهُ يَعِدُكُم مَّغۡفِرَةٗ مِّنۡهُ
وَفَضۡلٗاۗ وَٱللَّهُ وَٰسِعٌ عَلِيمٞ ٢٦٨

**268.** ಸೈತಾನನು ನಿಮಗೆ ಬಡತನದ ಕುರಿತು ಭಯಪಡಿಸುವನು ಮತ್ತು ನಿಮ್ಮನ್ನು ನೀಚಕೃತ್ಯಗಳಿಗೆ ಪ್ರೇರೇಪಿಸುವನು. ಆದರೆ ಅಲ್ಲಾಹು ನಿಮ್ಮೊಂದಿಗೆ ತನ್ನ ವತಿಯ ಪಾಪಮುಕ್ತಿ ಮತ್ತು ಔದಾರ್ಯವನ್ನು ವಾಗ್ದಾನ ಮಾಡುತ್ತಿರುವನು. ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ (ಎಲ್ಲವನ್ನು) ಅರಿಯುವವನೂ ಆಗಿರುವನು.

يُؤۡتِي ٱلۡحِكۡمَةَ مَن يَشَآءُۚ وَمَن يُؤۡتَ
ٱلۡحِكۡمَةَ فَقَدۡ أُوتِيَ خَيۡرٗا كَثِيرٗاۗ وَمَا
يَذَّكَّرُ إِلَّآ أُوْلُواْ ٱلۡأَلۡبَٰبِ ٢٦٩

**269.** ಅವನು ತಾನಿಚ್ಛಿಸುವವರಿಗೆ (ನೈಜ) ಜ್ಞಾನವನ್ನು ನೀಡುವನು. ಯಾರಿಗೆ (ನೈಜ) ಜ್ಞಾನ ನೀಡಲಾಗಿದೆಯೋ ಅವನಿಗೆ (ತನ್ಮೂಲಕ) ಅತ್ಯಧಿಕ ಒಳಿತುಗಳನ್ನು ನೀಡಲಾಗಿದೆ. ಆದರೆ ಬುದ್ಧಿವಂತರು ಮಾತ್ರ ಚಿಂತಿಸಿ ಗ್ರಹಿಸುವರು.

وَمَآ أَنفَقۡتُم مِّن نَّفَقَةٍ أَوۡ نَذَرۡتُم مِّن نَّذۡرٖ
فَإِنَّ ٱللَّهَ يَعۡلَمُهُۥۗ وَمَا لِلظَّٰلِمِينَ مِنۡ
أَنصَارٍ ٢٧٠

**270.** ನೀವೇನೇ ವ್ಯಯಿಸಿದರೂ ಮತ್ತು ಏನೇ ಹರಕೆ ಹೊತ್ತರೂ ಖಂಡಿತವಾಗಿಯೂ ಅಲ್ಲಾಹು ಅದನ್ನು ಅರಿಯುವನು. ಅಕ್ರಮಿಗಳಿಗೆ[1] ಸಹಾಯಕರಾಗಿ ಯಾರೂ ಇರಲಾರರು.

إِن تُبۡدُواْ ٱلصَّدَقَٰتِ فَنِعِمَّا هِيَۖ وَإِن
تُخۡفُوهَا وَتُؤۡتُوهَا ٱلۡفُقَرَآءَ فَهُوَ خَيۡرٞ لَّكُمۡۚ
وَيُكَفِّرُ عَنكُم مِّن سَيِّـَٔاتِكُمۡۗ وَٱللَّهُ
بِمَا تَعۡمَلُونَ خَبِيرٞ ٢٧١

**271.** ನೀವು ಬಹಿರಂಗವಾಗಿ ದಾನ ಧರ್ಮ ಮಾಡುವುದಾದರೆ ಅದು ಒಳ್ಳೆಯದೇ ಆಗಿದೆ. ಆದರೆ ನೀವು ಅದನ್ನು ಗೋಪ್ಯವಾಗಿಡುವುದಾದರೆ ಮತ್ತು ಬಡವರಿಗೆ ನೀಡುವುದಾದರೆ[2] ಅದು ನಿಮ್ಮ ಪಾಲಿಗೆ

1 ಜಿಪುಣತೆ, ಸ್ವಾರ್ಥ ಹಾಗೂ ದುರ್ವ್ಯಯಗಳೆಲ್ಲವೂ ಅಕ್ರಮವಾಗಿದೆಯೆಂದು ಈ ಸೂಕ್ತಿಯು ಸೂಚಿಸುತ್ತದೆ.

2 ಬಹಿರಂಗವಾಗಿ ದಾನಧರ್ಮ ಮಾಡುವಾಗ ಹೆಚ್ಚಿನ ಸಂದರ್ಭಗಳಲ್ಲಿ ಕೊಡುವವನಿಗೆ ಅಹಂಭಾವವೂ, ಪಡೆಯುವವನಿಗೆ ಕೀಳರಿಮೆಯೂ ಉಂಟಾಗುತ್ತದೆ. ಸ್ವಾಭಿಮಾನವಿರುವವರಾರೂ ಬಹಿರಂಗ ದಾನವನ್ನು ಸ್ವೀಕರಿಸಲು ಮುಂದೆ ಬರಲಾರರು. ನೈಜ ಹಕ್ಕುದಾರರನ್ನು ಹುಡುಕಿ ಗುಪ್ತವಾಗಿ ನೀಡುವ ದಾನವು ಕೊಡುವವನಿಗೆ ಮತ್ತು ಪಡೆಯುವವನಿಗೆ ಸಮಾನವಾದ ಸಂತೃಪ್ತಿ ಮತ್ತು ಗೌರವವನ್ನು ನೀಡುತ್ತದೆ.

ಅತ್ಯುತ್ತಮವಾಗಿದೆ. ನಿಮ್ಮ ಕೆಡುಕುಗಳ ಪೈಕಿ ಹಲವನ್ನು ಅದು ಅಳಿಸಿಹಾಕುತ್ತದೆ. ಅಲ್ಲಾಹು ನೀವು ಮಾಡುತ್ತಿರುವವುಗಳ ಕುರಿತು ಸೂಕ್ಷ್ಮವಾಗಿ ಅರಿಯುವವನಾಗಿರುವನು.

۞ لَّيۡسَ عَلَيۡكَ هُدَىٰهُمۡ وَلَٰكِنَّ ٱللَّهَ يَهۡدِي مَن يَشَآءُۗ وَمَا تُنفِقُواْ مِنۡ خَيۡرٖ فَلِأَنفُسِكُمۡۚ وَمَا تُنفِقُونَ إِلَّا ٱبۡتِغَآءَ وَجۡهِ ٱللَّهِۚ وَمَا تُنفِقُواْ مِنۡ خَيۡرٖ يُوَفَّ إِلَيۡكُمۡ وَأَنتُمۡ لَا تُظۡلَمُونَ ﴿٢٧٢﴾

**272.** ಅವರನ್ನು ಸನ್ಮಾರ್ಗಕ್ಕೆ ಸೇರಿಸುವ ಹೊಣೆ ತಮ್ಮ ಮೇಲಿಲ್ಲ. ಆದರೆ ಅಲ್ಲಾಹು ತಾನಿಚ್ಛಿಸುವವರನ್ನು ಸನ್ಮಾರ್ಗಕ್ಕೆ ಸೇರಿಸುವನು. ನೀವು ಉತ್ತಮವಾಗಿರುವ ಏನನ್ನು ವ್ಯಯಿಸಿದರೂ ಅದು ನಿಮ್ಮ ಒಳಿತಿಗೇ ಆಗಿದೆ. ನೀವು ವ್ಯಯಿಸುವುದು ಅಲ್ಲಾಹುವಿನ ಸಂತೃಪ್ತಿಯನ್ನು ಅರಸಿಕೊಂಡು ಮಾತ್ರವಾಗಿರಬೇಕಾಗಿದೆ. ನೀವು ಉತ್ತಮವಾಗಿರುವ ಏನನ್ನು ವ್ಯಯಿಸಿದರೂ ಅದರ ಪ್ರತಿಫಲವನ್ನು ನಿಮಗೆ ಪೂರ್ಣವಾಗಿ ನೀಡಲಾಗುವುದು. ನಿಮ್ಮೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

لِلۡفُقَرَآءِ ٱلَّذِينَ أُحۡصِرُواْ فِي سَبِيلِ ٱللَّهِ لَا يَسۡتَطِيعُونَ ضَرۡبٗا فِي ٱلۡأَرۡضِ يَحۡسَبُهُمُ ٱلۡجَاهِلُ أَغۡنِيَآءَ مِنَ ٱلتَّعَفُّفِ تَعۡرِفُهُم بِسِيمَٰهُمۡ لَا يَسۡـَٔلُونَ ٱلنَّاسَ إِلۡحَافٗاۗ وَمَا تُنفِقُواْ مِنۡ خَيۡرٖ فَإِنَّ ٱللَّهَ بِهِۦ عَلِيمٌ ﴿٢٧٣﴾

**273.** ಭೂಮಿಯಲ್ಲಿ ಸಂಚರಿಸಿ ಜೀವನಾಧಾರಗಳನ್ನು ಅರಸಲು ಸಾಧ್ಯವಿಲ್ಲದ ವಿಧದಲ್ಲಿ ಅಲ್ಲಾಹುವಿನ ಮಾರ್ಗದಲ್ಲಿ ಮಗ್ನರಾಗಿರುವ ಬಡವರಿಗಾಗಿ (ವ್ಯಯಿಸಿರಿ). (ಅವರ) ಸಭ್ಯತೆಯನ್ನು ಕಂಡು (ಅವರ ಬಗ್ಗೆ) ಅರಿವಿಲ್ಲದವನು ಅವರನ್ನು ಧನಿಕರೆಂದು ಭಾವಿಸುವನು. ಆದರೆ ಅವರ ಲಕ್ಷಣದಿಂದ ತಮಗೆ ಅವರನ್ನು ಗುರುತಿಸಬಹುದು. ಅವರು ಜನರೊಂದಿಗೆ ಕಾಡಿಬೇಡುವವರಲ್ಲ. ನೀವು ಉತ್ತಮವಾಗಿರುವ ಏನನ್ನು ಖರ್ಚು ಮಾಡಿದರೂ ಖಂಡಿತವಾಗಿಯೂ ಅಲ್ಲಾಹು ಅದನ್ನು ಅರಿಯುವವನಾಗಿರುವನು.

ٱلَّذِينَ يُنفِقُونَ أَمۡوَٰلَهُم بِٱلَّيۡلِ وَٱلنَّهَارِ سِرّٗا وَعَلَانِيَةٗ فَلَهُمۡ أَجۡرُهُمۡ عِندَ رَبِّهِمۡ وَلَا خَوۡفٌ عَلَيۡهِمۡ وَلَا هُمۡ يَحۡزَنُونَ ﴿٢٧٤﴾

**274.** ಹಗಲು ಮತ್ತು ರಾತ್ರಿ ಗೋಪ್ಯವಾಗಿ ಮತ್ತು ಬಹಿರಂಗವಾಗಿ ತಮ್ಮ ಸಂಪತ್ತನ್ನು ವ್ಯಯಿಸುವವರಿಗೆ ಅವರ ರಬ್‌ನ ಬಳಿ ಅರ್ಹ ಪ್ರತಿಫಲವಿದೆ. ಅವರು ಏನನ್ನೂ

ಭಯಪಡಬೇಕಾಗಿಲ್ಲ ಮತ್ತು ಅವರು ದುಃಖಿಸಬೇಕಾಗಿಯೂ ಬರದು.

ٱلَّذِينَ يَأْكُلُونَ ٱلرِّبَوٰاْ لَا يَقُومُونَ إِلَّا كَمَا يَقُومُ ٱلَّذِى يَتَخَبَّطُهُ ٱلشَّيْطَٰنُ مِنَ ٱلْمَسِّ ۚ ذَٰلِكَ بِأَنَّهُمْ قَالُوٓاْ إِنَّمَا ٱلْبَيْعُ مِثْلُ ٱلرِّبَوٰاْ ۗ وَأَحَلَّ ٱللَّهُ ٱلْبَيْعَ وَحَرَّمَ ٱلرِّبَوٰاْ ۚ فَمَن جَآءَهُۥ مَوْعِظَةٌ مِّن رَّبِّهِۦ فَٱنتَهَىٰ فَلَهُۥ مَا سَلَفَ وَأَمْرُهُۥٓ إِلَى ٱللَّهِ ۖ وَمَنْ عَادَ فَأُوْلَٰٓئِكَ أَصْحَٰبُ ٱلنَّارِ ۖ هُمْ فِيهَا خَٰلِدُونَ ﴿٢٧٥﴾

**275.** ಬಡ್ಡಿ ತಿನ್ನುವವರು ಸೈತಾನನ ಬಾಧೆಯಿಂದ ಮಗುಚಿ ಬಿದ್ದವನು ಎದ್ದೇಳುವವನಂತೆಯೇ ವಿನಾ ಎದ್ದೇಳಲಾರರು.[1] ಅದು 'ವ್ಯಾಪಾರವು ಬಡ್ಡಿಯಂತೆಯೇ ಆಗಿದೆ' ಎಂದು ಅವರು ಹೇಳಿರುವುದರ ಫಲವಾಗಿದೆ. ಆದರೆ ಅಲ್ಲಾಹು ವ್ಯಾಪಾರವನ್ನು ಧರ್ಮ ಸಮ್ಮತಗೊಳಿಸಿರುವನು ಮತ್ತು ಬಡ್ಡಿಯನ್ನು ನಿಷಿದ್ಧಗೊಳಿಸಿರುವನು. ಆದ್ದರಿಂದ ತನ್ನ ರಬ್‌ನ ಉಪದೇಶವು ತಲುಪಿದ ಬಳಿಕ (ಅದನ್ನು ಅನುಸರಿಸಿ) ಯಾರಾದರೂ (ಬಡ್ಡಿಯನ್ನು) ಸ್ಥಗಿತಗೊಳಿಸಿದರೆ ಅವನು ಮುಂಚೆ ಪಡೆದದ್ದು ಅವನಿಗಿರುವುದೇ ಆಗಿದೆ. ಅವನ ವಿಷಯವು ಅಲ್ಲಾಹುವಿನ ತೀರ್ಮಾನಕ್ಕೆ ಬಿಟ್ಟದ್ದಾಗಿದೆ. ಇನ್ನು ಯಾರಾದರೂ (ಪುನಃ ಬಡ್ಡಿ ವ್ಯವಹಾರದತ್ತ) ಮರಳುವುದಾದರೆ ಅವರೇ ನರಕವಾಸಿಗಳು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

يَمْحَقُ ٱللَّهُ ٱلرِّبَوٰاْ وَيُرْبِى ٱلصَّدَقَٰتِ ۗ وَٱللَّهُ لَا يُحِبُّ كُلَّ كَفَّارٍ أَثِيمٍ ﴿٢٧٦﴾

**276.** ಅಲ್ಲಾಹು ಬಡ್ಡಿಯನ್ನು ಅಳಿಸುವನು ಮತ್ತು ದಾನ ಧರ್ಮಗಳನ್ನು ಪೋಷಿಸುವನು. ಕೃತಘ್ನನಾದ ಯಾವ ಪಾಪಿಯನ್ನೂ ಅಲ್ಲಾಹು ಇಷ್ಟಪಡಲಾರನು.

إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ وَأَقَامُواْ ٱلصَّلَوٰةَ وَءَاتَوُاْ ٱلزَّكَوٰةَ لَهُمْ أَجْرُهُمْ عِندَ رَبِّهِمْ وَلَا خَوْفٌ عَلَيْهِمْ وَلَا هُمْ يَحْزَنُونَ ﴿٢٧٧﴾

**277.** ವಿಶ್ವಾಸವಿಡುವವರು, ಸತ್ಕರ್ಮಗೈಯುವವರು, ನಮಾಝ್ ಸಂಸ್ಥಾಪಿಸುವವರು ಮತ್ತು ಝಕಾತ್ ನೀಡುವವರು ಯಾರೋ ಅವರಿಗೆ ಖಂಡಿತವಾಗಿಯೂ ಅವರ ರಬ್‌ನ ಬಳಿ ಅರ್ಹ ಪ್ರತಿಫಲವಿದೆ. ಅವರು ಏನನ್ನೂ ಭಯಪಡಬೇಕಾಗಿಲ್ಲ ಮತ್ತು ಅವರು ದುಃಖಿಸಬೇಕಾಗಿಯೂ ಬರದು.

1 ಬಡ್ಡಿ ವ್ಯವಹಾರ ಮಾಡುವವರಿಗೆ ಪುನರುತ್ಥಾನ ದಿನದಂದು ಅಲ್ಲಾಹು ತಂದೊಡ್ಡುವ ಸ್ಥಿತಿಯನ್ನು ಈ ಉದಾಹರಣೆಯ ಮೂಲಕ ಸೂಚಿಸಲಾಗಿದೆಯೆಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು

278. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಬಡ್ಡಿಯ ಪೈಕಿ ಬರಲು ಬಾಕಿಯಿರುವುದನ್ನು ಬಿಟ್ಟುಬಿಡಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ!

يَٰٓأَيُّهَا ٱلَّذِينَ ءَامَنُواْ ٱتَّقُواْ ٱللَّهَ وَذَرُواْ مَا بَقِيَ مِنَ ٱلرِّبَوٰٓاْ إِن كُنتُم مُّؤْمِنِينَ ﴿٢٧٨﴾

279. ನೀವು ಹಾಗೆ ಮಾಡುವುದಿಲ್ಲವೆಂದಾದರೆ ಅಲ್ಲಾಹು ಮತ್ತು ಅವನ ಸಂದೇಶವಾಹಕರ ಕಡೆಯಿಂದ (ನಿಮ್ಮ ಮೇಲಿರುವ) ಯುದ್ಧ ಘೋಷಣೆಯ ಬಗ್ಗೆ ಅರಿತುಕೊಳ್ಳಿರಿ. ನೀವು ಪಶ್ಚಾತ್ತಾಪಪಟ್ಟು ಮರಳುವುದಾದರೆ ನಿಮ್ಮ ಬಂಡವಾಳವು ನಿಮಗೇ ಸಿಗುವುದು. ನೀವು ಅನ್ಯಾಯವೆಸಗದಿರಿ ಮತ್ತು ನಿಮಗೂ ಅನ್ಯಾಯವಾಗದಿರಲಿ.

فَإِن لَّمْ تَفْعَلُواْ فَأْذَنُواْ بِحَرْبٍ مِّنَ ٱللَّهِ وَرَسُولِهِۦۖ وَإِن تُبْتُمْ فَلَكُمْ رُءُوسُ أَمْوَٰلِكُمْ لَا تَظْلِمُونَ وَلَا تُظْلَمُونَ ﴿٢٧٩﴾

280. ಇನ್ನು (ಸಾಲಗಾರರ ಪೈಕಿ) ಯಾರಾದರೂ ಇಕ್ಕಟ್ಟಿನಲ್ಲಿದ್ದರೆ (ಅವನಿಗೆ) ನಿರಾಳತೆ ದೊರೆಯುವ ತನಕ ಸಮಯಾವಕಾಶವನ್ನು ನೀಡಿರಿ. ನೀವು ಅರಿವುಳ್ಳವರಾಗಿದ್ದರೆ ದಾನವಾಗಿ (ಬಿಟ್ಟು) ಬಿಡುವುದು ನಿಮಗೆ ಹೆಚ್ಚು ಉತ್ತಮವಾಗಿದೆ.

وَإِن كَانَ ذُو عُسْرَةٍ فَنَظِرَةٌ إِلَىٰ مَيْسَرَةٍۚ وَأَن تَصَدَّقُواْ خَيْرٌ لَّكُمْ إِن كُنتُمْ تَعْلَمُونَ ﴿٢٨٠﴾

281. ನಿಮ್ಮನ್ನು ಅಲ್ಲಾಹುವಿನೆಡೆಗೆ ಮರಳಿಸಲಾಗುವ ಒಂದು ದಿನವನ್ನು ನೀವು ಭಯಪಡಿರಿ. ತರುವಾಯ ಪ್ರತಿಯೊಬ್ಬನಿಗೂ ಅವನು ಮಾಡಿರುವುದರ ಪ್ರತಿಫಲವನ್ನು ಪೂರ್ಣವಾಗಿ ನೀಡಲಾಗುವುದು. ಅವರೊಂದಿಗೆ (ಕಿಂಚಿತ್ತೂ) ಅನ್ಯಾಯವೆಸಗಲಾಗದು.

وَٱتَّقُواْ يَوْمًا تُرْجَعُونَ فِيهِ إِلَى ٱللَّهِۖ ثُمَّ تُوَفَّىٰ كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿٢٨١﴾

282. ಓ ಸತ್ಯವಿಶ್ವಾಸಿಗಳೇ! ಒಂದು ನಿಶ್ಚಿತಾವಧಿ ನಿಶ್ಚಯಿಸಿ ನೀವು ಪರಸ್ಪರ ಸಾಲ ವ್ಯವಹಾರ ಮಾಡಿದರೆ ಅದನ್ನು ಬರೆದಿಟ್ಟುಕೊಳ್ಳಿರಿ. ಒಬ್ಬ ಬರಹಗಾರನು ನಿಮ್ಮ ಮಧ್ಯೆ ನ್ಯಾಯಬದ್ಧವಾಗಿ ಅದನ್ನು ಬರೆದಿಡಲಿ. ಯಾವುದೇ ಬರಹಗಾರನೂ ಅವನಿಗೆ ಅಲ್ಲಾಹು ಕಲಿಸಿ ಕೊಟ್ಟಿರುವ ಪ್ರಕಾರ ಬರೆಯಲು ನಿರಾಕರಿಸದಿರಲಿ. ಅವನು ಅದನ್ನು ಬರೆದಿಡಲಿ

يَٰٓأَيُّهَا ٱلَّذِينَ ءَامَنُوٓاْ إِذَا تَدَايَنتُم بِدَيْنٍ إِلَىٰٓ أَجَلٍ مُّسَمًّى فَٱكْتُبُوهُۚ وَلْيَكْتُب بَّيْنَكُمْ كَاتِبٌۢ بِٱلْعَدْلِۚ وَلَا يَأْبَ كَاتِبٌ أَن يَكْتُبَ كَمَا عَلَّمَهُ ٱللَّهُۚ فَلْيَكْتُبْ وَلْيُمْلِلِ ٱلَّذِى عَلَيْهِ ٱلْحَقُّ وَلْيَتَّقِ ٱللَّهَ رَبَّهُۥ وَلَا يَبْخَسْ مِنْهُ شَيْـًٔاۚ فَإِن كَانَ

ٱلَّذِى عَلَيۡهِ ٱلۡحَقُّ سَفِيهًا أَوۡ ضَعِيفًا أَوۡ
لَا يَسۡتَطِيعُ أَن يُمِلَّ هُوَ فَلۡيُمۡلِلۡ وَلِيُّهُۥ
بِٱلۡعَدۡلِۚ وَٱسۡتَشۡهِدُواْ شَهِيدَيۡنِ مِن
رِّجَالِكُمۡۖ فَإِن لَّمۡ يَكُونَا رَجُلَيۡنِ فَرَجُلٞ
وَٱمۡرَأَتَانِ مِمَّن تَرۡضَوۡنَ مِنَ ٱلشُّهَدَآءِ
أَن تَضِلَّ إِحۡدَىٰهُمَا فَتُذَكِّرَ إِحۡدَىٰهُمَا
ٱلۡأُخۡرَىٰۚ وَلَا يَأۡبَ ٱلشُّهَدَآءُ إِذَا مَا دُعُواْۚ
وَلَا تَسۡـَٔمُوٓاْ أَن تَكۡتُبُوهُ صَغِيرًا أَوۡ كَبِيرًا
إِلَىٰٓ أَجَلِهِۦۚ ذَٰلِكُمۡ أَقۡسَطُ عِندَ ٱللَّهِ
وَأَقۡوَمُ لِلشَّهَٰدَةِ وَأَدۡنَىٰٓ أَلَّا تَرۡتَابُوٓاْ إِلَّآ أَن
تَكُونَ تِجَٰرَةً حَاضِرَةٗ تُدِيرُونَهَا بَيۡنَكُمۡ
فَلَيۡسَ عَلَيۡكُمۡ جُنَاحٌ أَلَّا تَكۡتُبُوهَاۗ
وَأَشۡهِدُوٓاْ إِذَا تَبَايَعۡتُمۡۚ وَلَا يُضَآرَّ كَاتِبٞ
وَلَا شَهِيدٞۚ وَإِن تَفۡعَلُواْ فَإِنَّهُۥ فُسُوقُۢ
بِكُمۡۗ وَٱتَّقُواْ ٱللَّهَۖ وَيُعَلِّمُكُمُ ٱللَّهُۗ وَٱللَّهُ
بِكُلِّ شَيۡءٍ عَلِيمٞ ٢٨٢

ಮತ್ತು ಸಾಲಗಾರನು (ಬರೆದಿಡ ಬೇಕಾದ ವಾಕ್ಯವನ್ನು) ಹೇಳಿ ಬರೆಯಿಸಲಿ. ಅವನು ತನ್ನ ರಬ್ಬಾದ ಅಲ್ಲಾಹುವನ್ನು ಭಯಪಡಲಿ ಮತ್ತು (ಬಾಧ್ಯತೆಯಿಂದ) ಏನನ್ನೂ ಕಡಿತಗೊಳಿಸದಿರಲಿ. ಇನ್ನು ಸಾಲಗಾರನು ವಿವೇಚನೆಯಿಲ್ಲದವನೋ ಬಲಹೀನನೋ ಆಗಿದ್ದರೆ ಅಥವಾ ವಾಕ್ಯ ಹೇಳಿ ಬರೆಯಿಸಲು ಅಸಮರ್ಥನಾಗಿದ್ದರೆ, ಅವನಿಗಾಗಿ ಅವನ ಪೋಷಕರು ನ್ಯಾಯಬದ್ಧವಾಗಿ (ವಾಕ್ಯವನ್ನು) ಹೇಳಿ ಬರೆಯಿಸಲಿ. ನಿಮ್ಮ ಪೈಕಿ ಇಬ್ಬರು ಪುರುಷರನ್ನು ಸಾಕ್ಷಿ ನಿಲ್ಲಿಸಿರಿ. ಇನ್ನು ಇಬ್ಬರೂ ಪುರುಷರಲ್ಲದಿದ್ದರೆ ನೀವು ಇಷ್ಟಪಡುವ ಸಾಕ್ಷಿಗಳ ಪೈಕಿ ಒಬ್ಬ ಪುರುಷ ಮತ್ತು ಇಬ್ಬರು ಸ್ತ್ರೀಯರು ಸಾಕು. ಅವರ ಪೈಕಿ ಒಬ್ಬಳಿಗೆ ಪ್ರಮಾದವುಂಟಾದರೆ ಇನ್ನೊಬ್ಬಳು ಆಕೆಯನ್ನು ನೆನಪಿಸುವ ಸಲುವಾಗಿ. (ಸಾಕ್ಷ್ಯಕ್ಕಾಗಿ) ಆಹ್ವಾನಿಸಲಾದಾಗ ಸಾಕ್ಷಿಗಳು ನಿರಾಕರಿಸದಿರಲಿ. ವ್ಯವಹಾರವು ಚಿಕ್ಕದಾಗಿರಲಿ ಅಥವಾ ದೊಡ್ಡದಾಗಿರಲಿ, ಅದರ ಅವಧಿ ತೋರಿಸಿ ಅದನ್ನು ಬರೆದಿಡಲು ಉದಾಸೀನ ಮಾಡದಿರಿ. ಇದು ಅಲ್ಲಾಹುವಿನ ಬಳಿ ಅತ್ಯಂತ ನ್ಯಾಯಬದ್ಧವೂ, ಸಾಕ್ಷ್ಯಕ್ಕೆ ಹೆಚ್ಚು ಬಲ ನೀಡುವಂತದ್ದೂ ಆಗಿದೆ. ನಿಮಗೆ ಅನುಮಾನವುಂಟಾಗದಿರಲು ಹೆಚ್ಚು ಸೂಕ್ತವೂ ಆಗಿದೆ. ಆದರೆ ನೀವು ಪರಸ್ಪರ ನಡೆಸುವ ನಗದು ವ್ಯವಹಾರಗಳು ಇದರಿಂದ ಹೊರತಾಗಿವೆ. ಅದನ್ನು ಬರೆದಿಡದಿದ್ದರೆ ನಿಮಗೆ ದೋಷವಿಲ್ಲ. ಆದರೆ ನೀವು ಪರಸ್ಪರ ಕ್ರಯ–ವಿಕ್ರಯ ಮಾಡುವಾಗ ಸಾಕ್ಷಿ ನಿಲ್ಲಿಸಿರಿ. ಬರಹಗಾರನಾಗಲಿ, ಸಾಕ್ಷಿಯಾಗಲಿ ಸತಾಯಿಸಲ್ಪಡಬಾರದು. ನೀವು ಹಾಗೆ ಮಾಡಿದರೆ ಅದು ನಿಮ್ಮ ಧಿಕ್ಕಾರವಾಗುವುದು. ನೀವು ಅಲ್ಲಾಹುವನ್ನು ಭಯಪಡಿರಿ. ಅಲ್ಲಾಹು

ನಿಮಗೆ ಕಲಿಸಿಕೊಡುತ್ತಿರುವನು. ಅಲ್ಲಾಹು ಸರ್ವ ವಿಷಯಗಳ ಬಗ್ಗೆಯೂ ಅರಿವುಳ್ಳವನಾಗಿರುವನು.

**283**. ನೀವು ಯಾತ್ರೆಯಲ್ಲಿದ್ದು ಮತ್ತು ಒಬ್ಬ ಬರಹಗಾರನು ನಿಮಗೆ ಸಿಗದಿದ್ದರೆ, ಅಡವು ವಸ್ತುಗಳನ್ನು ವಶಕ್ಕೆ ಒಪ್ಪಿಸಿರಿ. ನಿಮ್ಮ ಪೈಕಿ ಒಬ್ಬನು ಇನ್ನೊಬ್ಬನಿಗೆ ನಂಬಿಕೆಯ ಮೇಲೆ ಏನಾದರೂ ನೀಡಿದರೆ ನಂಬಿಕೆಗೆ ಪಾತ್ರನಾದವನು ತನ್ನ ಪ್ರಾಮಾಣಿಕತೆಯನ್ನು ಮೆರೆಯಲಿ ಮತ್ತು ತನ್ನ ರಬ್ಬಾದ ಅಲ್ಲಾಹುವನ್ನು ಭಯಪಡಲಿ. ನೀವು ಸಾಕ್ಷ್ಯವನ್ನು ಬಚ್ಚಿಡದಿರಿ. ಯಾರು ಅದನ್ನು ಬಚ್ಚಿಡುವನೋ ಅವನ ಹೃದಯವು ಪಾಪಭರಿತವಾಗಿದೆ. ಅಲ್ಲಾಹು ನೀವು ಮಾಡುತ್ತಿರುವುದೆಲ್ಲವನ್ನೂ ಅರಿಯುವವನಾಗಿರುವನು.

۞ وَإِن كُنتُمْ عَلَىٰ سَفَرٍ وَلَمْ تَجِدُوا۟ كَاتِبًا فَرِهَٰنٌ مَّقْبُوضَةٌ ۖ فَإِنْ أَمِنَ بَعْضُكُم بَعْضًا فَلْيُؤَدِّ ٱلَّذِى ٱؤْتُمِنَ أَمَٰنَتَهُۥ وَلْيَتَّقِ ٱللَّهَ رَبَّهُۥ ۗ وَلَا تَكْتُمُوا۟ ٱلشَّهَٰدَةَ ۚ وَمَن يَكْتُمْهَا فَإِنَّهُۥٓ ءَاثِمٌ قَلْبُهُۥ ۗ وَٱللَّهُ بِمَا تَعْمَلُونَ عَلِيمٌ ﴿٢٨٣﴾

**284**. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ನೀವು ನಿಮ್ಮ ಮನಸ್ಸುಗಳಲ್ಲಿರುವುದನ್ನು ಬಹಿರಂಗಗೊಳಿಸಿದರೂ ಅಥವಾ ಮರೆಮಾಚಿದರೂ ಅಲ್ಲಾಹು ಅದರ ಕುರಿತು ನಿಮ್ಮನ್ನು ವಿಚಾರಣೆ ಮಾಡುವನು. ತರುವಾಯ ತಾನಿಚ್ಛಿಸುವವರಿಗೆ ಅವನು ಕ್ಷಮಿಸುವನು ಮತ್ತು ತಾನಿಚ್ಛಿಸುವವರನ್ನು ಶಿಕ್ಷಿಸುವನು. ಅಲ್ಲಾಹು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

لِّلَّهِ مَا فِى ٱلسَّمَٰوَٰتِ وَمَا فِى ٱلْأَرْضِ ۗ وَإِن تُبْدُوا۟ مَا فِىٓ أَنفُسِكُمْ أَوْ تُخْفُوهُ يُحَاسِبْكُم بِهِ ٱللَّهُ ۖ فَيَغْفِرُ لِمَن يَشَآءُ وَيُعَذِّبُ مَن يَشَآءُ ۗ وَٱللَّهُ عَلَىٰ كُلِّ شَىْءٍ قَدِيرٌ ﴿٢٨٤﴾

**285**. ತಮ್ಮ ರಬ್‌ನ ವತಿಯಿಂದ ತನಗೆ ಅವತೀರ್ಣಗೊಳಿಸಲಾಗಿರುವುದರಲ್ಲಿ ಸಂದೇಶವಾಹಕರು ವಿಶ್ವಾಸವಿಟ್ಟಿರುವರು. (ತರುವಾಯ) ಸತ್ಯವಿಶ್ವಾಸಿಗಳು ಸಹ ವಿಶ್ವಾಸವಿಟ್ಟಿರುವರು. ಅವರೆಲ್ಲರೂ ಅಲ್ಲಾಹುವಿನಲ್ಲಿ, ಅವನ ಮಲಕ್‌ಗಳಲ್ಲಿ, ಅವನ

ءَامَنَ ٱلرَّسُولُ بِمَآ أُنزِلَ إِلَيْهِ مِن رَّبِّهِۦ وَٱلْمُؤْمِنُونَ ۚ كُلٌّ ءَامَنَ بِٱللَّهِ وَمَلَٰٓئِكَتِهِۦ وَكُتُبِهِۦ وَرُسُلِهِۦ لَا نُفَرِّقُ بَيْنَ أَحَدٍ مِّن رُّسُلِهِۦ ۚ وَقَالُوا۟ سَمِعْنَا وَأَطَعْنَا ۖ غُفْرَانَكَ رَبَّنَا وَإِلَيْكَ ٱلْمَصِيرُ ﴿٢٨٥﴾

ಗ್ರಂಥಗಳಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟಿರುವರು. 'ಅವನ ಸಂದೇಶವಾಹಕರ ಪೈಕಿ ಯಾರ ನಡುವೆಯೂ ನಾವು ವ್ಯತ್ಯಾಸ ಕಲ್ಪಿಸಲಾರೆವು' (ಎಂಬುದು ಅವರ ನಿಲುವಾಗಿದೆ). 'ನಾವು ಆಲಿಸಿರುವೆವು ಮತ್ತು ಅನುಸರಿಸಿರುವೆವು, ನಮ್ಮ ಪ್ರಭೂ! ನಮಗೆ ಪಾಪಮುಕ್ತಿಯನ್ನು ದಯಪಾಲಿಸು, (ನಮ್ಮ) ಮರಳುವಿಕೆಯು ನಿನ್ನ ಬಳಿಗೇ ಆಗಿರುವುದು' ಎಂದು ಅವರು ಹೇಳುವರು.

**286**. ಅಲ್ಲಾಹು ಯಾರನ್ನೂ ಅವನ ಸಾಮರ್ಥ್ಯಕ್ಕೆ ಮೀರಿರುವುದನ್ನು ಮಾಡಲು ಬಲವಂತ ಪಡಿಸಲಾರನು. ಅವನು ಸಂಪಾದಿಸಿರುವುದರ ಪ್ರತಿಫಲವು ಸ್ವತಃ ಅವನಿಗೇ ಆಗಿದೆ. ಅವನು ಸಂಪಾದಿಸಿರುವುದರ ದುಷ್ಫಲವು ಸ್ವತಃ ಅವನ ಮೇಲೆಯೇ ಆಗಿದೆ. 'ಓ ನಮ್ಮ ರಬ್! ನಾವು ಮರೆತರೆ ಅಥವಾ ಪ್ರಮಾದವೆಸಗಿದರೆ ನಮ್ಮನ್ನು ಶಿಕ್ಷಿಸದಿರು. ಓ ನಮ್ಮ ರಬ್! ನಮ್ಮ ಪೂರ್ವಿಕರ ಮೇಲೆ ನೀನು ಹೊರಿಸಿದಂತಹ ಭಾರವನ್ನು ನಮ್ಮ ಮೇಲೆ ಹೊರಿಸದಿರು. ಓ ನಮ್ಮ ರಬ್! ನಮಗೆ ಸಾಮರ್ಥ್ಯವಿಲ್ಲದಿರುವುದನ್ನು ನಮ್ಮ ಮೇಲೆ ಹೊರಿಸದಿರು. ನಮ್ಮನ್ನು ಕ್ಷಮಿಸು, ನಮ್ಮನ್ನು ಮನ್ನಿಸು ಮತ್ತು ನಮ್ಮೊಂದಿಗೆ ದಯೆ ತೋರು. ನೀನು ನಮ್ಮ ರಕ್ಷಕನಾಗಿರುವೆ. ಆದ್ದರಿಂದ ಸತ್ಯನಿಷೇಧಿಗಳಾದ ಜನರ ವಿರುದ್ಧ ನಮಗೆ ಸಹಾಯವನ್ನು ನೀಡು'.

لَا يُكَلِّفُ ٱللَّهُ نَفْسًا إِلَّا وُسْعَهَا ۚ لَهَا
مَا كَسَبَتْ وَعَلَيْهَا مَا ٱكْتَسَبَتْ ۗ رَبَّنَا
لَا تُؤَاخِذْنَآ إِن نَّسِينَآ أَوْ أَخْطَأْنَا ۚ رَبَّنَا
وَلَا تَحْمِلْ عَلَيْنَآ إِصْرًا كَمَا حَمَلْتَهُۥ عَلَى
ٱلَّذِينَ مِن قَبْلِنَا ۚ رَبَّنَا وَلَا تُحَمِّلْنَا مَا لَا
طَاقَةَ لَنَا بِهِۦ ۖ وَٱعْفُ عَنَّا وَٱغْفِرْ لَنَا
وَٱرْحَمْنَآ ۚ أَنتَ مَوْلَىٰنَا فَٱنصُرْنَا عَلَى ٱلْقَوْمِ
ٱلْكَٰفِرِينَ ٢٨٦

## ಆಲು ಇಮ್ರಾನ್ (ಇಮ್ರಾನ್‌ರ ಕುಟುಂಬ)[1]

## سُورَةُ آلِ عِمۡرَانَ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 200

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

الٓمٓ ﴿١﴾

1. ಅಲಿಫ್–ಲಾಮ್–ಮೀಮ್.

ٱللَّهُ لَآ إِلَٰهَ إِلَّا هُوَ ٱلۡحَيُّ ٱلۡقَيُّومُ ﴿٢﴾

2. ಅಲ್ಲಾಹು – ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಎಂದೆಂದೂ ಜೀವಿಸಿರುವವನೂ ಸರ್ವವನ್ನೂ ನಿಯಂತ್ರಿಸುವವನೂ ಆಗಿರುವನು.

نَزَّلَ عَلَيۡكَ ٱلۡكِتَٰبَ بِٱلۡحَقِّ مُصَدِّقٗا لِّمَا بَيۡنَ يَدَيۡهِ وَأَنزَلَ ٱلتَّوۡرَىٰةَ وَٱلۡإِنجِيلَ ﴿٣﴾ مِن قَبۡلُ هُدٗى لِّلنَّاسِ وَأَنزَلَ ٱلۡفُرۡقَانَۗ إِنَّ ٱلَّذِينَ كَفَرُواْ بِـَٔايَٰتِ ٱللَّهِ لَهُمۡ عَذَابٞ شَدِيدٞۗ وَٱللَّهُ عَزِيزٞ ذُو ٱنتِقَامٍ ﴿٤﴾

3-4. ಪೂರ್ವಗ್ರಂಥಗಳನ್ನು ದೃಢೀಕರಿಸುತ್ತಾ ಅವನು ತಮಗೆ ಈ ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿರುವನು. ಇದಕ್ಕಿಂತ ಮುಂಚೆ ಅವನು ಮಾನವರಿಗೆ ಸನ್ಮಾರ್ಗದರ್ಶಿಯಾಗಿ ತೌರಾತ್ ಮತ್ತು ಇಂಜೀಲನ್ನೂ ಅವತೀರ್ಣಗೊಳಿಸಿದ್ದನು. ಸತ್ಯಾಸತ್ಯತೆಗಳ ವಿವೇಚನೆಗಿರುವ ಆಧಾರಪ್ರಮಾಣವನ್ನೂ ಅವನು ಅವತೀರ್ಣಗೊಳಿಸಿರುವನು. ಖಂಡಿತವಾಗಿಯೂ ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರಿಗೆ ಕಠಿಣವಾದ ಶಿಕ್ಷೆಯಿರುವುದು. ಅಲ್ಲಾಹು ಪ್ರತಾಪಶಾಲಿಯೂ, ಶಿಕ್ಷಾಕ್ರಮ ಕೈಗೊಳ್ಳುವವನೂ ಆಗಿರುವನು.

إِنَّ ٱللَّهَ لَا يَخۡفَىٰ عَلَيۡهِ شَيۡءٞ فِي ٱلۡأَرۡضِ وَلَا فِي ٱلسَّمَآءِ ﴿٥﴾

5. ಖಂಡಿತವಾಗಿಯೂ ಭೂಮಿಯಲ್ಲಿರುವ ಅಥವಾ ಆಕಾಶದಲ್ಲಿರುವ ಯಾವ ವಸ್ತುವೂ ಅಲ್ಲಾಹುವಿನಿಂದ ಮರೆಯಾಗಿರಲಾರದು.

1 ಇಮ್ರಾನ್‌ರವರು ಪ್ರವಾದಿ ಈಸಾ (عَلَيۡهِ ٱلسَّلَامُ) ರವರ ತಾತ. ಈ ಅಧ್ಯಾಯದಲ್ಲಿ ಪ್ರವಾದಿ ಈಸಾ (عَلَيۡهِ ٱلسَّلَامُ) ರವರ ಮತ್ತು ಮರ್ಯಮ್(عَلَيۡهَا ٱلسَّلَامُ) ರವರ ಇತಿಹಾಸವನ್ನು ವಿವರಿಸಿರುವುದರಿಂದ ಇದಕ್ಕೆ 'ಆಲು ಇಮ್ರಾನ್' (ಇಮ್ರಾನ್‌ರ ಕುಟುಂಬ) ಎಂದು ಹೆಸರಿಡಲಾಗಿದೆ.

6. ಗರ್ಭಾಶಯಗಳೊಳಗೆ ತಾನಿಚ್ಛಿಸುವ ರೀತಿಯಲ್ಲಿ ನಿಮಗೆ ರೂಪ ನೀಡುವವನು ಅವನೇ ಆಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

هُوَ ٱلَّذِى يُصَوِّرُكُمۡ فِى ٱلۡأَرۡحَامِ كَيۡفَ
يَشَآءُۚ لَآ إِلَٰهَ إِلَّا هُوَ ٱلۡعَزِيزُ ٱلۡحَكِيمُ ٦

7. (ಓ ಪ್ರವಾದಿಯವರೇ!) ತಮಗೆ ಗ್ರಂಥವನ್ನು ಅವತೀರ್ಣಗೊಳಿಸಿದವನು ಅವನೇ ಆಗಿರುವನು. ಅದರಲ್ಲಿ ಸುಸ್ಪಷ್ಟವೂ, ಖಚಿತವೂ ಆಗಿರುವ ವಚನಗಳಿವೆ. ಅವು ಗ್ರಂಥದ ಮೂಲಭಾಗವಾಗಿವೆ. ಅರ್ಥದಲ್ಲಿ ಪರಸ್ಪರ ಹೋಲಿಕೆಯಿರುವ ಕೆಲವು ವಚನಗಳೂ ಇವೆ. ಆದರೆ ಹೃದಯಗಳಲ್ಲಿ ವಕ್ರತೆಯುಳ್ಳವರಾರೋ ಅವರು ಗೊಂದಲವನ್ನುಂಟು ಮಾಡುವ ಉದ್ದೇಶದಿಂದ ಮತ್ತು ದುರ್ವ್ಯಾಖ್ಯಾನ ಮಾಡುವ ಬಯಕೆಯಿಂದ ಅರ್ಥದಲ್ಲಿ ಪರಸ್ಪರ ಹೋಲಿಕೆಯಿರುವ ವಚನಗಳನ್ನು ಹಿಂಬಾಲಿಸುವರು. ಅದರ ನೈಜ ವ್ಯಾಖ್ಯಾನವು ಅಲ್ಲಾಹುವಿನ ವಿನಾ ಯಾರಿಗೂ ತಿಳಿದಿಲ್ಲ. ಜ್ಞಾನದಲ್ಲಿ ಸುದೃಢರಾಗಿರುವರು ಹೇಳುವರು: 'ನಾವಿದರಲ್ಲಿ ವಿಶ್ವಾಸವಿಟ್ಟಿರುವೆವು. ಎಲ್ಲವೂ ನಮ್ಮ ರಬ್‌ನ ವತಿಯಿಂದಾಗಿದೆ'. ಬುದ್ಧಿವಂತರು ಮಾತ್ರ ಚಿಂತಿಸಿ ಅರ್ಥ ಮಾಡಿಕೊಳ್ಳುವರು.

هُوَ ٱلَّذِىٓ أَنزَلَ عَلَيۡكَ ٱلۡكِتَٰبَ مِنۡهُ
ءَايَٰتٞ مُّحۡكَمَٰتٌ هُنَّ أُمُّ ٱلۡكِتَٰبِ وَأُخَرُ
مُتَشَٰبِهَٰتٞۖ فَأَمَّا ٱلَّذِينَ فِى قُلُوبِهِمۡ زَيۡغٞ
فَيَتَّبِعُونَ مَا تَشَٰبَهَ مِنۡهُ ٱبۡتِغَآءَ ٱلۡفِتۡنَةِ
وَٱبۡتِغَآءَ تَأۡوِيلِهِۦۖ وَمَا يَعۡلَمُ تَأۡوِيلَهُۥٓ إِلَّا
ٱللَّهُۗ وَٱلرَّٰسِخُونَ فِى ٱلۡعِلۡمِ يَقُولُونَ ءَامَنَّا
بِهِۦ كُلّٞ مِّنۡ عِندِ رَبِّنَاۗ وَمَا يَذَّكَّرُ إِلَّآ أُوْلُواْ
ٱلۡأَلۡبَٰبِ ٧

8. (ಅವರು ಪ್ರಾರ್ಥಿಸುವರು:) 'ಓ ನಮ್ಮ ರಬ್! ನಮ್ಮನ್ನು ಸನ್ಮಾರ್ಗಕ್ಕೆ ಸೇರಿಸಿದ ಬಳಿಕ ನಮ್ಮ ಹೃದಯಗಳನ್ನು ವಕ್ರಗೊಳಿಸದಿರು. ನಿನ್ನ ವತಿಯ ದಯೆಯನ್ನು ನಮಗೆ ದಯಪಾಲಿಸು. ಖಂಡಿತವಾಗಿಯೂ ನೀನು ಅತ್ಯಧಿಕ ಔದಾರ್ಯವುಳ್ಳವನಾಗಿರುವೆ.'

رَبَّنَا لَا تُزِغۡ قُلُوبَنَا بَعۡدَ إِذۡ هَدَيۡتَنَا
وَهَبۡ لَنَا مِن لَّدُنكَ رَحۡمَةًۚ إِنَّكَ أَنتَ
ٱلۡوَهَّابُ ٨

9. 'ಓ ನಮ್ಮ ರಬ್! ಖಂಡಿತವಾಗಿಯೂ ಒಂದು ದಿನದಂದು ನೀನು ಜನರೆಲ್ಲರನ್ನೂ ಒಟ್ಟುಗೂಡಿಸುವೆ. ಅದರಲ್ಲಿ ಸಂದೇಹವೇ ಇಲ್ಲ. ಖಂಡಿತವಾಗಿಯೂ ಅಲ್ಲಾಹು ವಾಗ್ದಾನವನ್ನು ಉಲ್ಲಂಘಿಸಲಾರನು'.

رَبَّنَآ إِنَّكَ جَامِعُ ٱلنَّاسِ لِيَوۡمٖ لَّا رَيۡبَ
فِيهِۚ إِنَّ ٱللَّهَ لَا يُخۡلِفُ ٱلۡمِيعَادَ ٩

**10.** ಖಂಡಿತವಾಗಿಯೂ ಸತ್ಯನಿಷೇಧಿಗಳು ಯಾರೋ ಅವರಿಗೆ ಅವರ ಸಂಪತ್ತಾಗಲಿ ಸಂತಾನವಾಗಲಿ ಅಲ್ಲಾಹುವಿನ ವಿರುದ್ಧ ಯಾವ ಪ್ರಯೋಜನವನ್ನೂ ನೀಡಲಾರದು. ನರಕಾಗ್ನಿಯ ಇಂಧನವಾಗುವವರು ಅವರೇ ಆಗಿರುವರು.

إِنَّ ٱلَّذِينَ كَفَرُواْ لَن تُغۡنِيَ عَنۡهُمۡ
أَمۡوَٰلُهُمۡ وَلَآ أَوۡلَٰدُهُم مِّنَ ٱللَّهِ شَيۡـٔٗاۖ
وَأُوْلَٰٓئِكَ هُمۡ وَقُودُ ٱلنَّارِ ١٠

**11.** ಫಿರ್‌ಔನ್‌ನ ಜನರ ಮತ್ತು ಅವರ ಪೂರ್ವಜರ ಸ್ಥಿತಿಯಂತೆ. ಅವರು ನಮ್ಮ ದೃಷ್ಟಾಂತಗಳನ್ನು ತಿರಸ್ಕರಿಸಿದರು. ಆಗ ಅವರ ಪಾಪಗಳ ನಿಮಿತ್ತ ಅಲ್ಲಾಹು ಅವರನ್ನು ಶಿಕ್ಷಿಸಿದನು. ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು.

كَدَأۡبِ ءَالِ فِرۡعَوۡنَ وَٱلَّذِينَ مِن قَبۡلِهِمۡۚ
كَذَّبُواْ بِـَٔايَٰتِنَا فَأَخَذَهُمُ ٱللَّهُ بِذُنُوبِهِمۡۗ
وَٱللَّهُ شَدِيدُ ٱلۡعِقَابِ ١١

**12.** (ಓ ಪ್ರವಾದಿಯವರೇ!) ಸತ್ಯನಿಷೇಧಿಗಳೊಂದಿಗೆ ಹೇಳಿರಿ: 'ನೀವು ಸೋಲಿಸಲಾಗುವಿರಿ ಮತ್ತು ನರಕದೆಡೆಗೆ ಒಟ್ಟಾಗಿ ಮುನ್ನಡೆಸಲಾಗುವಿರಿ. ಆ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!'.

قُل لِّلَّذِينَ كَفَرُواْ سَتُغۡلَبُونَ وَتُحۡشَرُونَ
إِلَىٰ جَهَنَّمَۖ وَبِئۡسَ ٱلۡمِهَادُ ١٢

**13.** (ಬದ್ರ್‌ನಲ್ಲಿ) ಮುಖಾಮುಖಿಯಾದ ಆ ಎರಡು ಬಣಗಳಲ್ಲಿ ಖಂಡಿತವಾಗಿಯೂ ನಿಮಗೊಂದು ದೃಷ್ಟಾಂತವಿದೆ. ಒಂದು ಬಣವು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧಮಾಡುತ್ತಿತ್ತು. ಇನ್ನೊಂದು ಬಣವಾದರೋ ಅವರು ಸತ್ಯನಿಷೇಧಿಗಳಾಗಿದ್ದರು. ಅವರಿಗೆ (ಸತ್ಯನಿಷೇಧಿಗಳಿಗೆ) ಇವರು (ಸತ್ಯವಿಶ್ವಾಸಿಗಳು) ತಮಗಿಂತ ಇಮ್ಮಡಿಯಿರುವುದಾಗಿ ಕಂಡಿದ್ದರು.(1) ಅಲ್ಲಾಹು ತನ್ನ ಸಹಾಯದಿಂದ ತಾನಿಚ್ಛಿಸುವವರಿಗೆ ಬೆಂಬಲ ನೀಡುವನು. ಖಂಡಿತವಾಗಿಯೂ ದೃಷ್ಟಿಯುಳ್ಳವರಿಗೆ ಇದರಲ್ಲೊಂದು ನೀತಿಪಾಠವಿದೆ.

قَدۡ كَانَ لَكُمۡ ءَايَةٞ فِي فِئَتَيۡنِ ٱلۡتَقَتَاۖ
فِئَةٞ تُقَٰتِلُ فِي سَبِيلِ ٱللَّهِ وَأُخۡرَىٰ كَافِرَةٞ
يَرَوۡنَهُم مِّثۡلَيۡهِمۡ رَأۡيَ ٱلۡعَيۡنِۚ وَٱللَّهُ يُؤَيِّدُ
بِنَصۡرِهِۦ مَن يَشَآءُۚ إِنَّ فِي ذَٰلِكَ لَعِبۡرَةٗ
لِّأُوْلِي ٱلۡأَبۡصَٰرِ ١٣

**14.** ಪತ್ನಿಯರು, ಗಂಡುಮಕ್ಕಳು, ಶೇಖರಿಸಿಡಲಾದ ಚಿನ್ನ ಮತ್ತು ಬೆಳ್ಳಿ, ಉತ್ಕೃಷ್ಟ ತಳಿಯ ಕುದುರೆಗಳು, ಜಾನುವಾರುಗಳು, ಕೃಷಿಗಳು

زُيِّنَ لِلنَّاسِ حُبُّ ٱلشَّهَوَٰتِ مِنَ ٱلنِّسَآءِ
وَٱلۡبَنِينَ وَٱلۡقَنَٰطِيرِ ٱلۡمُقَنطَرَةِ مِنَ ٱلذَّهَبِ

1 ಮುಸ್ಲಿಮರಿಗಿಂತ ಮೂರು ಪಟ್ಟು ಅಧಿಕಸಂಖ್ಯೆಯಲ್ಲಿದ್ದ ಶತ್ರುಗಳಿಗೆ ಭಯ ಹುಟ್ಟಿಸುವ ಸಲುವಾಗಿ ಅಲ್ಲಾಹು ಅವರಿಗೆ ಆ ರೀತಿ ತೋರಿಸಿಕೊಟ್ಟಿದ್ದನು.

ಮುಂತಾದ ಆಸೆಪಡಲಾಗುವ ವಸ್ತುಗಳ ಮೇಲಿನ ಪ್ರೀತಿಯನ್ನು ಜನರಿಗೆ ಆಕರ್ಷಕಗೊಳಿಸಲಾಗಿದೆ. ಅವು ಐಹಿಕ ಜೀವನದ ಸುಖಗಳಾಗಿವೆ. ಆದರೆ (ಜನರಿಗೆ) ಮರಳಿ ತಲುಪಬೇಕಾದ ಅತ್ಯುತ್ತಮ ಸ್ಥಳವಿರುವುದು ಅಲ್ಲಾಹುವಿನ ಬಳಿಯಲ್ಲಾಗಿದೆ.

وَٱلْفِضَّةِ وَٱلْخَيْلِ ٱلْمُسَوَّمَةِ وَٱلْأَنْعَٰمِ
وَٱلْحَرْثِ ۗ ذَٰلِكَ مَتَٰعُ ٱلْحَيَوٰةِ ٱلدُّنْيَا ۖ وَٱللَّهُ
عِندَهُۥ حُسْنُ ٱلْمَـَٔابِ ﴿١٤﴾

**15.** (ಓ ಪ್ರವಾದಿಯವರೇ!) ಹೇಳಿರಿ: ‘ಅದಕ್ಕಿಂತಲೂ (ಆ ಐಹಿಕ ಸುಖಭೋಗಗಳಿಗಿಂತಲೂ) ಅತ್ಯುತ್ತಮವಾಗಿರುವುದನ್ನು ನಾನು ನಿಮಗೆ ತಿಳಿಸಿಕೊಡಲೇ?’ ಭಯಭಕ್ತಿ ಪಾಲಿಸಿದವರಿಗೆ ತಮ್ಮ ರಬ್‌ನ ಬಳಿ ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. (ಅವರಿಗೆ) ಪರಿಶುದ್ಧ ಸಂಗಾತಿಗಳೂ ಇರುವರು ಮತ್ತು ಅಲ್ಲಾಹುವಿನ ವತಿಯ ಸಂತೃಪ್ತಿಯೂ ಇರುವುದು. ಅಲ್ಲಾಹು ತನ್ನ ದಾಸರನ್ನು ವೀಕ್ಷಿಸುವವನಾಗಿರುವನು.

۞ قُلْ أَؤُنَبِّئُكُم بِخَيْرٍ مِّن ذَٰلِكُمْ ۚ
لِلَّذِينَ ٱتَّقَوْا۟ عِندَ رَبِّهِمْ جَنَّٰتٌ تَجْرِى
مِن تَحْتِهَا ٱلْأَنْهَٰرُ خَٰلِدِينَ فِيهَا وَأَزْوَٰجٌ
مُّطَهَّرَةٌ وَرِضْوَٰنٌ مِّنَ ٱللَّهِ ۗ وَٱللَّهُ بَصِيرٌۢ
بِٱلْعِبَادِ ﴿١٥﴾

**16.** ‘ಓ ನಮ್ಮ ರಬ್! ನಾವು ವಿಶ್ವಾಸವಿಟ್ಟಿರುವೆವು. ಆದ್ದರಿಂದ ನಮ್ಮ ಪಾಪಗಳನ್ನು ಕ್ಷಮಿಸು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ಪಾರುಮಾಡು’ ಎಂದು ಪ್ರಾರ್ಥಿಸುವವರು.

ٱلَّذِينَ يَقُولُونَ رَبَّنَآ إِنَّنَآ ءَامَنَّا فَٱغْفِرْ لَنَا
ذُنُوبَنَا وَقِنَا عَذَابَ ٱلنَّارِ ﴿١٦﴾

**17.** ಅವರು (ಅಲ್ಲಾಹುವಿನ ದಾಸರು) ಸಹನೆ ವಹಿಸುವವರೂ, ಸತ್ಯಸಂಧರೂ, ಭಯಭಕ್ತಿಯುಳ್ಳವರೂ, ವ್ಯಯಿಸುವವರೂ, ರಾತ್ರಿಯ ಅಂತ್ಯಯಾಮಗಳಲ್ಲಿ ಪಾಪಮುಕ್ತಿಯನ್ನು ಬೇಡುವವರೂ ಆಗಿರುವರು.

ٱلصَّٰبِرِينَ وَٱلصَّٰدِقِينَ وَٱلْقَٰنِتِينَ
وَٱلْمُنفِقِينَ وَٱلْمُسْتَغْفِرِينَ بِٱلْأَسْحَارِ ﴿١٧﴾

**18.** ತನ್ನ ಹೊರತು ಅನ್ಯ ಆರಾಧ್ಯರಿಲ್ಲವೆಂದು ಅಲ್ಲಾಹು ಸಾಕ್ಷ್ಯವಹಿಸಿರುವನು. ಮಲಕ್‌ಗಳೂ ಜ್ಞಾನವುಳ್ಳವರೂ (ಅದಕ್ಕೆ ಸಾಕ್ಷಿಗಳಾಗಿರುವರು). ಅವನು ಸದಾ

شَهِدَ ٱللَّهُ أَنَّهُۥ لَآ إِلَٰهَ إِلَّا هُوَ وَٱلْمَلَٰٓئِكَةُ
وَأُو۟لُوا۟ ٱلْعِلْمِ قَآئِمًۢا بِٱلْقِسْطِ ۚ لَآ إِلَٰهَ إِلَّا
هُوَ ٱلْعَزِيزُ ٱلْحَكِيمُ ﴿١٨﴾

ನ್ಯಾಯಪಾಲಿಸುವವನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಪ್ರತಾಪಶಾಲಿಯೂ, ಯುಕ್ತಿ ಪೂರ್ಣನೂ ಆಗಿರುವನು.

**19.** ಖಂಡಿತವಾಗಿಯೂ ಅಲ್ಲಾಹುವಿನ ಬಳಿ ಧರ್ಮವೆಂದರೆ ಇಸ್ಲಾಮ್ ಮಾತ್ರವಾಗಿದೆ. ಗ್ರಂಥ ನೀಡಲಾದವರು ತಮಗೆ (ಧಾರ್ಮಿಕ) ಜ್ಞಾನವು ಬಂದ ಬಳಿಕ ಭಿನ್ನರಾದುದು ಅವರು ಪರಸ್ಪರ ಹೊಂದಿರುವ ವಿದ್ವೇಷದ ನಿಮಿತ್ತವೇ ವಿನಾ ಇನ್ನಾವುದರಿಂದಲೂ ಆಗಿರಲಿಲ್ಲ. ಯಾರಾದರೂ ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅತಿ ಶೀಘ್ರವಾಗಿ ವಿಚಾರಣೆ ಮಾಡುವವನಾಗಿರುವನು.

إِنَّ ٱلدِّينَ عِندَ ٱللَّهِ ٱلۡإِسۡلَٰمُۗ وَمَا ٱخۡتَلَفَ
ٱلَّذِينَ أُوتُواْ ٱلۡكِتَٰبَ إِلَّا مِنۢ بَعۡدِ مَا
جَآءَهُمُ ٱلۡعِلۡمُ بَغۡيَۢا بَيۡنَهُمۡۗ وَمَن يَكۡفُرۡ
بِـَٔايَٰتِ ٱللَّهِ فَإِنَّ ٱللَّهَ سَرِيعُ ٱلۡحِسَابِ ١٩

**20.** ಅವರೇನಾದರೂ ತಮ್ಮೊಂದಿಗೆ ತರ್ಕಿಸಿದರೆ ತಾವು ಹೇಳಿರಿ: ‘ನಾನು ಸ್ವತಃ ನನ್ನನ್ನೇ ಸಂಪೂರ್ಣವಾಗಿ ಅಲ್ಲಾಹುವಿಗೆ ಶರಣಾಗಿಸಿರುವೆನು. ನನ್ನನ್ನು ಅನುಸರಿಸಿದವರು ಸಹ (ಹಾಗೆಯೇ ಮಾಡಿರುವರು)’. ‘ನೀವು (ಅಲ್ಲಾಹುವಿಗೆ) ಶರಣಾಗಿದ್ದೀರಾ?’ ಎಂದು ಗ್ರಂಥ ನೀಡಲಾದವರೊಂದಿಗೆ ಮತ್ತು ಅನಕ್ಷರಸ್ಥರೊಂದಿಗೆ (ಬಹುದೇವಾರಾಧಕರಾದ ಅರಬರೊಂದಿಗೆ) ತಾವು ಕೇಳಿರಿ. ಅವರೇನಾದರೂ ಶರಣಾದರೆ ಅವರು ಸನ್ಮಾರ್ಗವನ್ನು ಪಡೆದಿರುವರು. ಅವರೇನಾದರೂ ತಿರುಗಿ ನಡೆದರೆ ತಮ್ಮ ಹೊಣೆಯು ಅವರಿಗೆ (ದಿವ್ಯಸಂದೇಶವನ್ನು) ತಲುಪಿಸಿಕೊಡುವುದು ಮಾತ್ರವಾಗಿದೆ. ಅಲ್ಲಾಹು (ತನ್ನ) ದಾಸರನ್ನು ವೀಕ್ಷಿಸುವವನಾಗಿರುವನು.

فَإِنۡ حَآجُّوكَ فَقُلۡ أَسۡلَمۡتُ وَجۡهِيَ
لِلَّهِ وَمَنِ ٱتَّبَعَنِۗ وَقُل لِّلَّذِينَ أُوتُواْ
ٱلۡكِتَٰبَ وَٱلۡأُمِّيِّـۧنَ ءَأَسۡلَمۡتُمۡۚ فَإِنۡ أَسۡلَمُواْ
فَقَدِ ٱهۡتَدَواْۖ وَّإِن تَوَلَّوۡاْ فَإِنَّمَا عَلَيۡكَ
ٱلۡبَلَٰغُۗ وَٱللَّهُ بَصِيرُۢ بِٱلۡعِبَادِ ٢٠

**21.** ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸುವವರು, ಅನ್ಯಾಯವಾಗಿ ಪ್ರವಾದಿಗಳನ್ನು ಹತ್ಯೆ ಮಾಡುವವರು ಮತ್ತು

إِنَّ ٱلَّذِينَ يَكۡفُرُونَ بِـَٔايَٰتِ ٱللَّهِ
وَيَقۡتُلُونَ ٱلنَّبِيِّـۧنَ بِغَيۡرِ حَقّٖ وَيَقۡتُلُونَ

ನ್ಯಾಯ ಪಾಲಿಸಲು ಆದೇಶಿಸುವವರನ್ನು ವಧಿಸುವವರು ಯಾರೋ ಅವರಿಗೆ ಯಾತನಾಮಯ ಶಿಕ್ಷೆಯ ಕುರಿತು ಶುಭವಾರ್ತೆಯನ್ನು ತಿಳಿಸಿರಿ.

ٱلَّذِينَ يَأۡمُرُونَ بِٱلۡقِسۡطِ مِنَ ٱلنَّاسِ فَبَشِّرۡهُم بِعَذَابٍ أَلِيمٍ ٢١

**22.** ಇಹಲೋಕದಲ್ಲೂ, ಪರಲೋಕದಲ್ಲೂ ತಮ್ಮ ಕರ್ಮಗಳು ನಿಷ್ಫಲಗೊಂಡಿರುವವರು ಅವರೇ ಆಗಿರುವರು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

أُوْلَٰٓئِكَ ٱلَّذِينَ حَبِطَتۡ أَعۡمَٰلُهُمۡ فِي ٱلدُّنۡيَا وَٱلۡأٓخِرَةِ وَمَا لَهُم مِّن نَّٰصِرِينَ ٢٢

**23.** ಗ್ರಂಥದಿಂದ ಒಂದು ಪಾಲನ್ನು ನೀಡಲಾದವರೆಡೆಗೆ ತಾವು ನೋಡಲಿಲ್ಲವೇ? ಅವರ ನಡುವೆ ತೀರ್ಪು ನೀಡುವ ಸಲುವಾಗಿ ಅವರನ್ನು ಅಲ್ಲಾಹುವಿನ ಗ್ರಂಥದತ್ತ ಆಹ್ವಾನಿಸಲಾಗುತ್ತದೆ. ತರುವಾಯ ಅವರಲ್ಲೊಂದು ಬಣವು ಕಡೆಗಣಿಸುತ್ತಾ ಮರಳಿಹೋಗುತ್ತದೆ.[1]

أَلَمۡ تَرَ إِلَى ٱلَّذِينَ أُوتُواْ نَصِيبٗا مِّنَ ٱلۡكِتَٰبِ يُدۡعَوۡنَ إِلَىٰ كِتَٰبِ ٱللَّهِ لِيَحۡكُمَ بَيۡنَهُمۡ ثُمَّ يَتَوَلَّىٰ فَرِيقٞ مِّنۡهُمۡ وَهُم مُّعۡرِضُونَ ٢٣

**24.** 'ಎಣಿಸಲಾದ ಕೆಲವು ದಿನಗಳ ಹೊರತು ನರಕಾಗ್ನಿಯು ನಮ್ಮನ್ನು ಸ್ಪರ್ಶಿಸದು' ಎಂದು ಅವರು ಹೇಳಿರುವುದೇ ಅದಕ್ಕಿರುವ ಕಾರಣವಾಗಿದೆ. ಅವರು ಸ್ವತಃ ಏನನ್ನು ಹೆಣೆಯುತ್ತಿದ್ದರೋ ಅದು ಅವರನ್ನು ಅವರ ಧರ್ಮದ ವಿಷಯದಲ್ಲಿ ವಂಚಿಸಿತು.

ذَٰلِكَ بِأَنَّهُمۡ قَالُواْ لَن تَمَسَّنَا ٱلنَّارُ إِلَّآ أَيَّامٗا مَّعۡدُودَٰتٖۖ وَغَرَّهُمۡ فِي دِينِهِم مَّا كَانُواْ يَفۡتَرُونَ ٢٤

**25.** ಯಾವ ಸಂದೇಹವೂ ಇಲ್ಲದಂತಹ ಒಂದು ದಿನದಂದು ನಾವು ಅವರನ್ನು ಒಟ್ಟುಗೂಡಿಸುವಾಗ (ಅವರ ಸ್ಥಿತಿ) ಹೇಗಿರಬಹುದು? (ಅಂದು) ಪ್ರತಿಯೊಬ್ಬ ವ್ಯಕ್ತಿಗೂ ಅವನು ಸಂಪಾದಿಸಿರುವುದರ

فَكَيۡفَ إِذَا جَمَعۡنَٰهُمۡ لِيَوۡمٖ لَّا رَيۡبَ فِيهِ وَوُفِّيَتۡ كُلُّ نَفۡسٖ مَّا كَسَبَتۡ وَهُمۡ لَا يُظۡلَمُونَ ٢٥

---

1 ಜನರ ಸಮಸ್ಯೆಗಳನ್ನು ದೈವಿಕ ಗ್ರಂಥದ ಆಧಾರದಲ್ಲಿ ಬಗೆಹರಿಸುವ ಸಲುವಾಗಿ ಪ್ರವಾದಿ ಮೂಸಾ(عَلَيْهِ السَّلَامُ) ಮತ್ತು ಪ್ರವಾದಿ ಈಸಾ(عَلَيْهِ السَّلَامُ) ರವರಿಗೆ ಗ್ರಂಥಗಳನ್ನು ಅವತೀರ್ಣಗೊಳಿಸಲಾಗಿತ್ತು. ಆದರೆ ತಾವು ಗ್ರಂಥದವರೆಂದು ಹೆಮ್ಮೆಪಡುವ ಮತ್ತು ತಮಗೆ ಶಾಶ್ವತ ನರಕ ಶಿಕ್ಷೆಯನ್ನು ಸವಿಯಬೇಕಾಗಿ ಬರಲಾರದು ಎಂದು ಖಡಾಖಂಡಿತವಾಗಿ ಹೇಳಿಕೊಳ್ಳುವವರನ್ನು ಗ್ರಂಥದ ತೀರ್ಪು ಅಂಗೀಕರಿಸಲು ಆಹ್ವಾನಿಸಲಾಗುವಾಗ ಅವರ ನಿಲುವು ಬದಲಾಗುತ್ತದೆ. ಗ್ರಂಥವನ್ನು ಕಡೆಗಣಿಸಿ ಅವರು ಸ್ವೇಚ್ಛೆಯನ್ನು ಅನುಸರಿಸುತ್ತಾರೆ. ಕುರ್‌ಆನ್‌ನ ಅನುಯಾಯಿಗಳೆಂದು ಹೆಮ್ಮೆಪಡುವವರಲ್ಲಿ ಹಲವರ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ.

ಪ್ರತಿಫಲವನ್ನು ಪೂರ್ಣವಾಗಿ ನೀಡಲಾಗುವುದು. ಅವರೊಂದಿಗೆ ಯಾವುದೇ ಅನ್ಯಾಯವೆಸಗಲಾಗದು.

**26.** ಹೇಳಿರಿ: 'ಓ ಆಧಿಪತ್ಯದ ಒಡೆಯನಾಗಿರುವ ಅಲ್ಲಾಹುವೇ! ನೀನಿಚ್ಛಿಸುವವರಿಗೆ ಆಧಿಪತ್ಯವನ್ನು ನೀಡುವೆ ಮತ್ತು ನೀನಿಚ್ಛಿಸುವವರಿಂದ ಅಧಿಪತ್ಯವನ್ನು ತೆಗೆದುಬಿಡುವೆ. ನೀನಿಚ್ಛಿಸುವವರನ್ನು ಗೌರವಿಸುವೆ. ನೀನಿಚ್ಛಿಸುವವರನ್ನು ಅವಮಾನಿಸುವೆ. ಒಳಿತಿರುವುದು ನಿನ್ನ ಕೈಯಲ್ಲಾಗಿದೆ. ಖಂಡಿತವಾಗಿಯೂ ನೀನು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವೆ.

قُلِ ٱللَّهُمَّ مَٰلِكَ ٱلۡمُلۡكِ تُؤۡتِي ٱلۡمُلۡكَ مَن تَشَآءُ وَتَنزِعُ ٱلۡمُلۡكَ مِمَّن تَشَآءُ وَتُعِزُّ مَن تَشَآءُ وَتُذِلُّ مَن تَشَآءُۖ بِيَدِكَ ٱلۡخَيۡرُۖ إِنَّكَ عَلَىٰ كُلِّ شَيۡءٖ قَدِيرٞ ٢٦

**27.** ನೀನು ರಾತ್ರಿಯನ್ನು ಹಗಲಿಗೆ ಪ್ರವೇಶಗೊಳಿಸುವೆ ಮತ್ತು ಹಗಲನ್ನು ರಾತ್ರಿಗೆ ಪ್ರವೇಶಗೊಳಿಸುವೆ. ನಿರ್ಜೀವಿಯಿಂದ ಜೀವವಿರುವುದನ್ನು ಹೊರತರುವೆ ಮತ್ತು ಜೀವವಿರುವುದರಿಂದ ನಿರ್ಜೀವಿಯನ್ನು ಹೊರತರುವೆ.[1] ನೀನಿಚ್ಛಿಸುವವರಿಗೆ ಲೆಕ್ಕವಿಲ್ಲದೆ ನೀಡುವೆ'.

تُولِجُ ٱلَّيۡلَ فِي ٱلنَّهَارِ وَتُولِجُ ٱلنَّهَارَ فِي ٱلَّيۡلِۖ وَتُخۡرِجُ ٱلۡحَيَّ مِنَ ٱلۡمَيِّتِ وَتُخۡرِجُ ٱلۡمَيِّتَ مِنَ ٱلۡحَيِّۖ وَتَرۡزُقُ مَن تَشَآءُ بِغَيۡرِ حِسَابٖ ٢٧

**28.** ಸತ್ಯವಿಶ್ವಾಸಿಗಳು ಸತ್ಯವಿಶ್ವಾಸಿಗಳನ್ನಲ್ಲದೆ ಸತ್ಯನಿಷೇಧಿಗಳನ್ನು ಆಪ್ತಮಿತ್ರರಾಗಿ ಮಾಡದಿರಲಿ. ಯಾರಾದರೂ ಹಾಗೆ ಮಾಡಿದರೆ ಅವನಿಗೆ ಅಲ್ಲಾಹುವಿನೊಂದಿಗೆ ಯಾವ ಸಂಬಂಧವೂ ಇರಲಾರದು. ಆದರೆ ನೀವು ಅವರೊಂದಿಗೆ ಎಚ್ಚರದಿಂದ ವರ್ತಿಸುವುದರ ಹೊರತು. ಅಲ್ಲಾಹು ತನ್ನ ಬಗ್ಗೆ ನಿಮ್ಮನ್ನು ಎಚ್ಚರಿಸುತ್ತಿರುವನು. ನಿಮ್ಮ ಮರಳುವಿಕೆಯು ಅಲ್ಲಾಹುವಿನ ಬಳಿಗೇ ಆಗಿದೆ.

لَّا يَتَّخِذِ ٱلۡمُؤۡمِنُونَ ٱلۡكَٰفِرِينَ أَوۡلِيَآءَ مِن دُونِ ٱلۡمُؤۡمِنِينَۖ وَمَن يَفۡعَلۡ ذَٰلِكَ فَلَيۡسَ مِنَ ٱللَّهِ فِي شَيۡءٍ إِلَّآ أَن تَتَّقُواْ مِنۡهُمۡ تُقَىٰةٗۗ وَيُحَذِّرُكُمُ ٱللَّهُ نَفۡسَهُۥۗ وَإِلَى ٱللَّهِ ٱلۡمَصِيرُ ٢٨

1 'ಜೀವ' ಎಂಬ ನಿಗೂಢವಾದ ವಿದ್ಯಮಾನವನ್ನು ಸರಿಸಿದರೆ ಯಾವುದೇ ಜೀವಿಯೂ ಕೇವಲ ನಿರ್ಜೀವ ಧಾತು ಲವಣಗಳ ಸಮುಚ್ಚಯ ಮಾತ್ರವಾಗಿದೆ. ನಿರ್ಜೀವಾವಸ್ಥೆಯಿಂದಲೇ ಜೀವದ ಪ್ರಪ್ರಥಮ ಸ್ಫುರಣವುಂಟಾಗಿದೆ ಎಂಬ ವಿಷಯದಲ್ಲಿ ಯಾರಿಗೂ ತರ್ಕವಿರಲಾರದು. ಮರಣದ ಮೂಲಕ ಪುನಃ ನಿರ್ಜೀವಾವಸ್ಥೆಗೆ ಮರಳಿ ಹೋಗುವ ವಿಷಯವೂ ಹೀಗೆಯೇ ಆಗಿದೆ. ಮಾತ್ರವಲ್ಲ, ಜೀವಿಗಳ ದೇಹದಿಂದ ನಿರ್ಜೀವಕೋಶಗಳು, ಉಗುರು, ರೋಮ ಮುಂತಾದ ನಿರ್ಜೀವ ವಸ್ತುಗಳೂ ಹೊರಬರುತ್ತವೆ.

29. (ಓ ಪ್ರವಾದಿಯವರೇ!) ಹೇಳಿರಿ: 'ನೀವು ನಿಮ್ಮ ಹೃದಯಗಳಲ್ಲಿರುವುದನ್ನು ಮರೆಮಾಚಿದರೂ, ಬಹಿರಂಗಪಡಿಸಿದರೂ ಅಲ್ಲಾಹು ಅದನ್ನು ಅರಿಯುವನು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದನ್ನೂ ಅವನು ಅರಿಯುವನು. ಅಲ್ಲಾಹು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು'.

قُلۡ إِن تُخۡفُواْ مَا فِي صُدُورِكُمۡ أَوۡ تُبۡدُوهُ يَعۡلَمۡهُ ٱللَّهُۗ وَيَعۡلَمُ مَا فِي ٱلسَّمَٰوَٰتِ وَمَا فِي ٱلۡأَرۡضِۗ وَٱللَّهُ عَلَىٰ كُلِّ شَيۡءٖ قَدِيرٞ ٢٩

30. ಪ್ರತಿಯೊಬ್ಬ ವ್ಯಕ್ತಿಯೂ ತಾನು ನಿರ್ವಹಿಸಿರುವ ಒಳಿತನ್ನು ಮತ್ತು ತಾನು ನಿರ್ವಹಿಸಿರುವ ಕೆಡುಕನ್ನು (ತನ್ನ ಮುಂದೆ) ಪ್ರದರ್ಶಿಸಲಾಗಿರುವುದಾಗಿ ಕಾಣುವ ದಿನ(ವನ್ನು ಸ್ಮರಿಸಿರಿ). "ತನ್ನ ಮತ್ತು ಅದರ (ದುಷ್ಕರ್ಮಗಳ) ಮಧ್ಯೆ ವಿದೂರವಾದ ಅಂತರವು ಇರುತ್ತಿದ್ದರೆ" ಎಂದು ಪ್ರತಿಯೊಬ್ಬನೂ ಅಂದು ಆಶಿಸುವನು. ಅಲ್ಲಾಹು ತನ್ನ ಬಗ್ಗೆ ನಿಮ್ಮನ್ನು ಎಚ್ಚರಿಸುತ್ತಿರುವನು. ಅಲ್ಲಾಹು (ತನ್ನ) ದಾಸರೊಂದಿಗೆ ಅಪಾರ ದಯೆಯುಳ್ಳವನಾಗಿರುವನು.

يَوۡمَ تَجِدُ كُلُّ نَفۡسٖ مَّا عَمِلَتۡ مِنۡ خَيۡرٖ مُّحۡضَرٗا وَمَا عَمِلَتۡ مِن سُوٓءٖ تَوَدُّ لَوۡ أَنَّ بَيۡنَهَا وَبَيۡنَهُۥٓ أَمَدَۢا بَعِيدٗاۗ وَيُحَذِّرُكُمُ ٱللَّهُ نَفۡسَهُۥۗ وَٱللَّهُ رَءُوفُۢ بِٱلۡعِبَادِ ٣٠

31. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಅಲ್ಲಾಹುವನ್ನು ಪ್ರೀತಿಸುತ್ತಿರುವಿರಿ ಎಂದಾದರೆ ನನ್ನನ್ನು ಅನುಸರಿಸಿರಿ. ಅಲ್ಲಾಹು ನಿಮ್ಮನ್ನು ಪ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು'.

قُلۡ إِن كُنتُمۡ تُحِبُّونَ ٱللَّهَ فَٱتَّبِعُونِي يُحۡبِبۡكُمُ ٱللَّهُ وَيَغۡفِرۡ لَكُمۡ ذُنُوبَكُمۡۚ وَٱللَّهُ غَفُورٞ رَّحِيمٞ ٣١

32. ಹೇಳಿರಿ: 'ನೀವು ಅಲ್ಲಾಹುವನ್ನು ಮತ್ತು ಸಂದೇಶವಾಹಕರನ್ನು ಅನುಸರಿಸಿರಿ'. ಅವರೇನಾದರೂ ವಿಮುಖರಾಗುವುದಾದರೆ ಖಂಡಿತವಾಗಿಯೂ ಅಲ್ಲಾಹು ಸತ್ಯನಿಷೇಧಿಗಳನ್ನು ಮೆಚ್ಚಲಾರನು.

قُلۡ أَطِيعُواْ ٱللَّهَ وَٱلرَّسُولَۖ فَإِن تَوَلَّوۡاْ فَإِنَّ ٱللَّهَ لَا يُحِبُّ ٱلۡكَٰفِرِينَ ٣٢

**33.** ಖಂಡಿತವಾಗಿಯೂ ಅಲ್ಲಾಹು ಆದಮ್‌ರನ್ನು, ನೂಹ್‌ರನ್ನು, ಇಬ್ರಾಹೀಮ್‌ರ ಕುಟುಂಬವನ್ನು ಮತ್ತು ಇಮ್ರಾನ್‌ರ ಕುಟುಂಬವನ್ನು ಜಗತ್ತಿನ ಜನರ ಪೈಕಿ ಉತ್ಕೃಷ್ಟರಾಗಿ ಆರಿಸಿರುವನು.

۞ إِنَّ ٱللَّهَ ٱصۡطَفَىٰٓ ءَادَمَ وَنُوحٗا وَءَالَ إِبۡرَٰهِيمَ وَءَالَ عِمۡرَٰنَ عَلَى ٱلۡعَٰلَمِينَ ٣٣

**34.** ಅವರಲ್ಲಿ ಕೆಲವರು ಇತರ ಕೆಲವರ ಸಂತತಿಗಳಾಗಿರುವರು. ಅಲ್ಲಾಹು (ಎಲ್ಲವನ್ನು) ಆಲಿಸುವವನೂ, ಅರಿಯುವವನೂ ಆಗಿರುವನು.

ذُرِّيَّةَۢ بَعۡضُهَا مِنۢ بَعۡضٖۗ وَٱللَّهُ سَمِيعٌ عَلِيمٌ ٣٤

**35.** ಓ ನನ್ನ ರಬ್! ನನ್ನ ಉದರದಲ್ಲಿರುವ ಶಿಶುವನ್ನು ನಿನಗೋಸ್ಕರ ಮುಡಿಪಾಗಿಡಲು ನಾನು ಹರಕೆ ಹೊತ್ತಿರುವೆನು.[1] ಆದ್ದರಿಂದ ಅದನ್ನು ನನ್ನಿಂದ ಸ್ವೀಕರಿಸು. ಖಂಡಿತವಾಗಿಯೂ ನೀನು (ಎಲ್ಲವನ್ನು) ಆಲಿಸುವವನೂ ಅರಿಯುವವನೂ ಆಗಿರುವೆ' ಎಂದು ಇಮ್ರಾನ್‌ರ ಪತ್ನಿ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

إِذۡ قَالَتِ ٱمۡرَأَتُ عِمۡرَٰنَ رَبِّ إِنِّي نَذَرۡتُ لَكَ مَا فِي بَطۡنِي مُحَرَّرٗا فَتَقَبَّلۡ مِنِّيٓۖ إِنَّكَ أَنتَ ٱلسَّمِيعُ ٱلۡعَلِيمُ ٣٥

**36.** ತರುವಾಯ ಆಕೆ ಶಿಶುವನ್ನು ಹೆತ್ತಾಗ ಆಕೆ ಹೇಳಿದರು: 'ಓ ನನ್ನ ರಬ್! ನಾನು ಹೆತ್ತಿರುವುದು ಹೆಣ್ಣು ಶಿಶುವನ್ನಾಗಿದೆ!' ಆಕೆ ಏನನ್ನು ಹೆತ್ತಿರುವಳೆಂಬುದರ ಕುರಿತು ಅಲ್ಲಾಹು ಹೆಚ್ಚು ಅರಿವುಳ್ಳವನಾಗಿರುವನು. ಗಂಡು ಹೆಣ್ಣಿನಂತಲ್ಲ! 'ಆ ಶಿಶುವಿಗೆ ನಾನು ಮರ್ಯಮ್ ಎಂದು ಹೆಸರಿಟ್ಟಿರುವೆನು ಮತ್ತು ಆಕೆಯನ್ನೂ ಆಕೆಯ ಸಂತತಿಯನ್ನೂ ಬಹಿಷ್ಕೃತನಾದ ಶೈತಾನನಿಂದ ಕಾಪಾಡಲು ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿರುವೆನು' (ಎಂದು ಆಕೆ ಹೇಳಿದರು).

فَلَمَّا وَضَعَتۡهَا قَالَتۡ رَبِّ إِنِّي وَضَعۡتُهَآ أُنثَىٰ وَٱللَّهُ أَعۡلَمُ بِمَا وَضَعَتۡ وَلَيۡسَ ٱلذَّكَرُ كَٱلۡأُنثَىٰۖ وَإِنِّي سَمَّيۡتُهَا مَرۡيَمَ وَإِنِّيٓ أُعِيذُهَا بِكَ وَذُرِّيَّتَهَا مِنَ ٱلشَّيۡطَٰنِ ٱلرَّجِيمِ ٣٦

**37.** ಹೀಗೆ ಆಕೆಯ (ಮರ್ಯಮ್‌ರ) ರಬ್ ಆಕೆಯನ್ನು ಉತ್ತಮ ರೀತಿಯಲ್ಲಿ ಸ್ವೀಕರಿಸಿದನು ಮತ್ತು ಆಕೆಯನ್ನು ಉತ್ತಮ ರೀತಿಯಲ್ಲಿ

فَتَقَبَّلَهَا رَبُّهَا بِقَبُولٍ حَسَنٖ وَأَنۢبَتَهَا نَبَاتًا حَسَنٗا وَكَفَّلَهَا زَكَرِيَّاۖ كُلَّمَا دَخَلَ عَلَيۡهَا

1 ಗಂಡು ಮಕ್ಕಳನ್ನು ಬೈತುಲ್ ಮುಕದ್ದಸ್‌ನ ಸೇವೆಗಾಗಿ ಹರಕೆ ಹೊರುವುದು ಆ ಕಾಲದ ಒಂದು ವಾಡಿಕೆಯಾಗಿತ್ತು. ಈ ಸೇವೆ ಹೆಣ್ಣು ಮಕ್ಕಳಿಗೆ ಯೋಗ್ಯವಲ್ಲವೆಂದು ಅವರು ಭಾವಿಸಿದ್ದರು. ಆದರೂ ಮರ್ಯಮರ(عَلَيۡهَا ٱلسَّلَامُ) ವಿಷಯದಲ್ಲಿ ತನ್ನ ಹರಕೆಯನ್ನು ನೆರವೇರಿಸಿಯೇ ತೀರುವೆನೆಂದು ಅವರ ತಾಯಿ ನಿರ್ಧರಿಸಿದ್ದರು.

ಬೆಳೆಸಿದನು. ಆಕೆಯ ಪೋಷಣೆಯ ಹೊಣೆಯನ್ನು ಅವನು ಝಕರಿಯ್ಯಾರಿಗೆ ವಹಿಸಿಕೊಟ್ಟನು.[1] ಮಿಹ್ರಾಬ್(ಪ್ರಾರ್ಥನಾ ಸ್ಥಳ)ನಲ್ಲಿ ಝಕರಿಯ್ಯರವರು ಆಕೆಯ ಬಳಿಗೆ ತೆರಳಿದಾಗಲೆಲ್ಲ ಆಕೆಯ ಬಳಿ ಏನಾದರೊಂದು ಆಹಾರವನ್ನು ಕಾಣುತ್ತಿದ್ದರು. ಅವರು ಕೇಳಿದರು: 'ಓ ಮರ್ಯಮ್! ಇದು ನಿನಗೆಲ್ಲಿಂದ ದೊರೆಯುತ್ತದೆ?' ಆಕೆ ಉತ್ತರಿಸಿದರು: 'ಅದು ಅಲ್ಲಾಹುವಿನ ಬಳಿಯಿಂದಾಗಿದೆ. ಖಂಡಿತವಾಗಿಯೂ ಅಲ್ಲಾಹು ತಾನಿಚ್ಛಿಸುವವರಿಗೆ ಲೆಕ್ಕವಿಲ್ಲದೆ ದಯಪಾಲಿಸುವನು'.

زَكَرِيَّا ٱلۡمِحۡرَابَ وَجَدَ عِندَهَا رِزۡقٗاۖ قَالَ يَٰمَرۡيَمُ أَنَّىٰ لَكِ هَٰذَاۖ قَالَتۡ هُوَ مِنۡ عِندِ ٱللَّهِۖ إِنَّ ٱللَّهَ يَرۡزُقُ مَن يَشَآءُ بِغَيۡرِ حِسَابٍ ٣٧

**38.** ಅಲ್ಲಿ ಝಕರಿಯ್ಯಾ ತಮ್ಮ ರಬ್‌ನೊಂದಿಗೆ ಪ್ರಾರ್ಥಿಸುತ್ತಾ ಹೇಳಿದರು: 'ಓ ನನ್ನ ರಬ್! ನಿನ್ನ ವತಿಯಿಂದ ನನಗೊಂದು ಉತ್ತಮ ಸಂತತಿಯನ್ನು ದಯಪಾಲಿಸು. ಖಂಡಿತವಾಗಿಯೂ ನೀನು ಪ್ರಾರ್ಥನೆಯನ್ನು ಆಲಿಸುವವನಾಗಿರುವೆ'.

هُنَالِكَ دَعَا زَكَرِيَّا رَبَّهُۥۖ قَالَ رَبِّ هَبۡ لِي مِن لَّدُنكَ ذُرِّيَّةٗ طَيِّبَةًۖ إِنَّكَ سَمِيعُ ٱلدُّعَآءِ ٣٨

**39.** ತರುವಾಯ ಅವರು ಮಿಹ್ರಾಬ್‌ನಲ್ಲಿ ಪ್ರಾರ್ಥನೆ ಮಾಡುತ್ತಾ ನಿಂತಿರುವಾಗ ಮಲಕ್‌ಗಳು ಅವರನ್ನು ಕರೆದು: 'ಅಲ್ಲಾಹು ತಮಗೆ ಯಹ್ಯಾ (ಎಂಬ ಮಗುವಿ)ನ ಕುರಿತು ಶುಭವಾರ್ತೆಯನ್ನು ತಿಳಿಸುತ್ತಿರುವನು. ಅವರು (ಯಹ್ಯಾ) ಅಲ್ಲಾಹುವಿನ ವತಿಯ ವಚನವೊಂದನ್ನು ದೃಢೀಕರಿಸುವವರೂ,[2] ನಾಯಕರೂ, ಆತ್ಮಸಂಯಮವುಳ್ಳವರೂ, ಸಜ್ಜನರಲ್ಲಿ ಸೇರಿದ ಪ್ರವಾದಿಯೂ ಆಗಿರುವರು' ಎಂದು ಹೇಳಿದರು.

فَنَادَتۡهُ ٱلۡمَلَٰٓئِكَةُ وَهُوَ قَآئِمٞ يُصَلِّي فِي ٱلۡمِحۡرَابِ أَنَّ ٱللَّهَ يُبَشِّرُكَ بِيَحۡيَىٰ مُصَدِّقَۢا بِكَلِمَةٖ مِّنَ ٱللَّهِ وَسَيِّدٗا وَحَصُورٗا وَنَبِيّٗا مِّنَ ٱلصَّٰلِحِينَ ٣٩

**40.** ಅವರು (ಝಕರಿಯ್ಯ) ಹೇಳಿದರು: 'ಓ ನನ್ನ ರಬ್! ನನಗೊಂದು ಗಂಡುಮಗು ಹುಟ್ಟುವುದಾದರೂ ಹೇಗೆ? ನಾನು ವೃದ್ಧಾಪ್ಯವನ್ನು ತಲುಪಿದವನಾಗಿರುವೆನು

قَالَ رَبِّ أَنَّىٰ يَكُونُ لِي غُلَٰمٞ وَقَدۡ بَلَغَنِيَ ٱلۡكِبَرُ وَٱمۡرَأَتِي عَاقِرٞۖ قَالَ كَذَٰلِكَ ٱللَّهُ يَفۡعَلُ مَا يَشَآءُ ٤٠

1 ಪ್ರವಾದಿ ಝಕರಿಯ್ಯಾ(عَلَيۡهِ ٱلسَّلَامُ) ರವರು ಮರ್ಯಮ್(عَلَيۡهَا ٱلسَّلَامُ) ರವರ ಮಾತೃಸಹೋದರಿಯ ಪತಿಯಾಗಿರುವರು.

2 ಇಲ್ಲಿ 'ವಚನ' ಎಂಬುದರ ತಾತ್ಪರ್ಯವು ಪ್ರವಾದಿ ಈಸಾ(عَلَيۡهِ ٱلسَّلَامُ) ರವರಾಗಿರುವರೆಂದು 45ನೇ ಸೂಕ್ತಿಯು ಸೂಚಿಸುತ್ತದೆ. ಪ್ರವಾದಿ ಯಹ್ಯಾ(عَلَيۡهِ ٱلسَّلَامُ) ರವರು ಪ್ರವಾದಿ ಈಸಾ(عَلَيۡهِ ٱلسَّلَامُ) ರವರ ಪ್ರವಾದಿತ್ವಕ್ಕೆ ಸಾಕ್ಷಿಯಾಗಿದ್ದರು.

ಮತ್ತು ನನ್ನ ಪತ್ನಿಯು ಬಂಜೆಯಾಗಿರುವಳು'. ಅಲ್ಲಾಹು ಹೇಳಿದನು: 'ಹಾಗೆಯೇ ಆಗಿದೆ. ಅಲ್ಲಾಹು ತಾನಿಚ್ಛಿಸುವುದನ್ನು ಮಾಡುವನು'.

قَالَ رَبِّ ٱجۡعَل لِّيٓ ءَايَةٗۖ قَالَ ءَايَتُكَ أَلَّا تُكَلِّمَ ٱلنَّاسَ ثَلَٰثَةَ أَيَّامٍ إِلَّا رَمۡزٗاۗ وَٱذۡكُر رَّبَّكَ كَثِيرٗا وَسَبِّحۡ بِٱلۡعَشِيِّ وَٱلۡإِبۡكَٰرِ ٤١

**41.** ಅವರು (ಝಕರಿಯ್ಯ) ಹೇಳಿದರು: 'ಓ ನನ್ನ ರಬ್! ನನಗೊಂದು ದೃಷ್ಟಾಂತವನ್ನು ಮಾಡಿಕೊಡು'. ಅಲ್ಲಾಹು ಹೇಳಿದನು: 'ತಾವು ಮೂರು ದಿನಗಳ ಕಾಲ ಜನರೊಂದಿಗೆ ಸನ್ನೆಯ ಮೂಲಕವೇ ವಿನಾ ಮಾತನಾಡದಿರುವುದು ತಮಗಿರುವ ದೃಷ್ಟಾಂತವಾಗಿದೆ. ತಾವು ತಮ್ಮ ಪ್ರಭುವನ್ನು ಅತ್ಯಧಿಕವಾಗಿ ಸ್ಮರಿಸುತ್ತಿರಿ ಮತ್ತು ಸಂಜೆ ಹಾಗೂ ಮುಂಜಾನೆಯಲ್ಲಿ ಅವನ ಪರಿಪಾವನತೆಯನ್ನು ಕೊಂಡಾಡುತ್ತಿರಿ'.

وَإِذۡ قَالَتِ ٱلۡمَلَٰٓئِكَةُ يَٰمَرۡيَمُ إِنَّ ٱللَّهَ ٱصۡطَفَىٰكِ وَطَهَّرَكِ وَٱصۡطَفَىٰكِ عَلَىٰ نِسَآءِ ٱلۡعَٰلَمِينَ ٤٢

**42.** 'ಓ ಮರ್ಯಮ್! ಖಂಡಿತವಾಗಿಯೂ ಅಲ್ಲಾಹು ತಮ್ಮನ್ನು ವಿಶೇಷವಾಗಿ ಆರಿಸಿರುವನು, ತಮಗೆ ಪಾವಿತ್ರ್ಯತೆಯನ್ನು ದಯಪಾಲಿಸಿರುವನು ಮತ್ತು ಜಗತ್ತಿನ ಸ್ತ್ರೀಯರ ಪೈಕಿ ತಮ್ಮನ್ನು ಉತ್ಕೃಷ್ಟಳಾಗಿ ಆರಿಸಿರುವನು' ಎಂದು ಮಲಕ್‌ಗಳು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

يَٰمَرۡيَمُ ٱقۡنُتِي لِرَبِّكِ وَٱسۡجُدِي وَٱرۡكَعِي مَعَ ٱلرَّٰكِعِينَ ٤٣

**43.** 'ಓ ಮರ್ಯಮ್! ತಾವು ತಮ್ಮ ರಬ್‌ಗಾಗಿ ಭಯಭಕ್ತಿ ಪಾಲಿಸಿರಿ, ಸಾಷ್ಟಾಂಗವೆರಗಿರಿ ಮತ್ತು ತಲೆಬಾಗುವವರೊಂದಿಗೆ ತಾವೂ ತಲೆಬಾಗಿರಿ'.

ذَٰلِكَ مِنۡ أَنۢبَآءِ ٱلۡغَيۡبِ نُوحِيهِ إِلَيۡكَۚ وَمَا كُنتَ لَدَيۡهِمۡ إِذۡ يُلۡقُونَ أَقۡلَٰمَهُمۡ أَيُّهُمۡ يَكۡفُلُ مَرۡيَمَ وَمَا كُنتَ لَدَيۡهِمۡ إِذۡ يَخۡتَصِمُونَ ٤٤

**44.** (ಓ ಪ್ರವಾದಿಯವರೇ!) ಇವು ನಾವು ತಮಗೆ ದಿವ್ಯಸಂದೇಶವಾಗಿ ನೀಡುತ್ತಿರುವ ಅಗೋಚರ ವಿಷಯಗಳಲ್ಲಿ ಸೇರಿದವುಗಳಾಗಿವೆ. ಅವರ ಪೈಕಿ ಮರ್ಯಮ್‌ರ ಸಂರಕ್ಷಣೆಯ ಹೊಣೆಯನ್ನು ಯಾರು ವಹಿಸಿಕೊಳ್ಳಬೇಕೆಂದು ತೀರ್ಮಾನಿಸುವ ಸಲುವಾಗಿ ಅವರು ತಮ್ಮ ಲೇಖನಿಗಳನ್ನು ಹಾಕಿ ಚೀಟಿಯೆತ್ತುವ ಸಂದರ್ಭದಲ್ಲಿ ತಾವು ಅವರ ಬಳಿಯಿರಲಿಲ್ಲ. ಅವರು ತರ್ಕಿಸುತ್ತಿದ್ದಾಗಲೂ ತಾವು ಅವರ ಬಳಿಯಿರಲಿಲ್ಲ.

45. 'ಓ ಮರ್ಯಮ್! ಖಂಡಿತವಾಗಿಯೂ ಅಲ್ಲಾಹು ತನ್ನ ವತಿಯ ಒಂದು 'ವಚನ'ದ[1] ಕುರಿತು ತಮಗೆ ಶುಭವಾರ್ತೆಯನ್ನು ತಿಳಿಸುತ್ತಿರುವನು. ಅವರ ಹೆಸರು ಮರ್ಯಮ್‌ರ ಪುತ್ರ ಈಸಾ ಮಸೀಹ್[2] ಎಂದಾಗಿರುವುದು. ಅವರು ಇಹಲೋಕದಲ್ಲೂ ಪರಲೋಕದಲ್ಲೂ ಮಹತ್ವವುಳ್ಳವರೂ, ಸಾಮೀಪ್ಯವನ್ನು ಗಳಿಸಿದವರಲ್ಲಿ ಸೇರಿದವರೂ ಆಗಿರುವರು' ಎಂದು ಮಲಕ್‌ಗಳು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

إِذۡ قَالَتِ ٱلۡمَلَـٰٓئِكَةُ يَـٰمَرۡيَمُ إِنَّ ٱللَّهَ يُبَشِّرُكِ بِكَلِمَةٖ مِّنۡهُ ٱسۡمُهُ ٱلۡمَسِيحُ عِيسَى ٱبۡنُ مَرۡيَمَ وَجِيهٗا فِي ٱلدُّنۡيَا وَٱلۡأٓخِرَةِ وَمِنَ ٱلۡمُقَرَّبِينَ ٤٥

46. 'ಅವರು ತೊಟ್ಟಿಲಲ್ಲಿರುವಾಗಲೂ, ಮಧ್ಯವಯಸ್ಕರಾಗಿರುವಾಗಲೂ ಜನರೊಂದಿಗೆ ಮಾತನಾಡುವರು ಮತ್ತು ಅವರು ಸಜ್ಜನರಲ್ಲಿ ಸೇರಿದವರಾಗಿರುವರು'.

وَيُكَلِّمُ ٱلنَّاسَ فِي ٱلۡمَهۡدِ وَكَهۡلٗا وَمِنَ ٱلصَّـٰلِحِينَ ٤٦

47. ಆಕೆ (ಮರ್ಯಮ್) ಹೇಳಿದರು: 'ಓ ನನ್ನ ರಬ್! ನನ್ನನ್ನು ಯಾವೊಬ್ಬ ಮನುಷ್ಯನೂ ಸ್ಪರ್ಶಿಸದಿರುವಾಗ ನನಗೆ ಮಗುವಾಗುವುದಾದರೂ ಹೇಗೆ!?' ಅಲ್ಲಾಹು ಹೇಳಿದನು: 'ಹಾಗೆಯೇ ಆಗುವುದು. ಅಲ್ಲಾಹು ತಾನಿಚ್ಛಿಸುವುದನ್ನು ಸೃಷ್ಟಿಸುವನು. ಅವನೊಂದು ವಿಷಯವನ್ನು ತೀರ್ಮಾನಿಸಿದರೆ ಅದರೊಂದಿಗೆ 'ಉಂಟಾಗು' ಎಂದಷ್ಟೇ ಹೇಳುವನು. ತಕ್ಷಣ ಅದುಂಟಾಗುವುದು!'

قَالَتۡ رَبِّ أَنَّىٰ يَكُونُ لِي وَلَدٞ وَلَمۡ يَمۡسَسۡنِي بَشَرٞۖ قَالَ كَذَٰلِكِ ٱللَّهُ يَخۡلُقُ مَا يَشَآءُۚ إِذَا قَضَىٰٓ أَمۡرٗا فَإِنَّمَا يَقُولُ لَهُۥ كُن فَيَكُونُ ٤٧

48. ಅವನು ಅವರಿಗೆ (ಈಸಾರಿಗೆ) ಗ್ರಂಥವನ್ನೂ, ಜ್ಞಾನವನ್ನೂ, ತೌರಾತನ್ನೂ, ಇಂಜೀಲನ್ನೂ[3] ಕಲಿಸುವನು.

وَيُعَلِّمُهُ ٱلۡكِتَٰبَ وَٱلۡحِكۡمَةَ وَٱلتَّوۡرَىٰةَ وَٱلۡإِنجِيلَ ٤٨

1 ಸ್ತ್ರೀ–ಪುರುಷ ಸಂಪರ್ಕವಿಲ್ಲದೆಯೇ ಅಲ್ಲಾಹುವಿನ ಆಜ್ಞೆಯಂತೆ ಜನಿಸಿರುವ ಕಾರಣ ಪ್ರವಾದಿ ಈಸಾ(عَلَيۡهِ ٱلسَّلَامُ) ರವರನ್ನು 'ಅಲ್ಲಾಹುವಿನ ವಚನ' ಎಂದು ಬಣ್ಣಿಸಲಾಗಿದೆ.

2 'ಈಸಾ' (عَلَيۡهِ ٱلسَّلَامُ) ಎಂಬುದು ವ್ಯಕ್ತಿಯ ಹೆಸರಾಗಿದೆ. 'ಮಸೀಹ್' ಎಂಬುದು ಪದವಿಯಾಗಿದೆ. ಮಸೀಹ್ ಎಂದರೆ ಅಭಿಷೇಕ ಮಾಡಲಾದವನು ಎಂದರ್ಥ. ಪೀತಾರೋಹಣದ ಸಮಯದಲ್ಲಿ ದೊರೆಗಳನ್ನು ಸುಗಂಧ ದ್ರವ್ಯಗಳ ಲೇಪನ ಇತ್ಯಾದಿಗಳಿಂದ ಅಭಿಷೇಕ ಮಾಡುವ ಸಂಪ್ರದಾಯವಿರುವ ಕಾರಣ ಅವರು ದೊರೆ ಎಂಬ ಪದಕ್ಕೆ ಪರ್ಯಾಯವಾಗಿ ಮಸೀಹ್ ಎಂಬ ಪದವನ್ನು ಬಳಸಲಾರಂಬಿಸಿದರು. ಪ್ರವಾದಿ ಈಸಾ (عَلَيۡهِ ٱلسَّلَامُ) ರವರ ಅನುಯಾಯಿಗಳು ಅವರಿಗೆ ಇಸ್ರಾಈಲ್‌ನ ದೊರೆ ಎಂಬ ಪದವಿ ನೀಡಿದ್ದರು.

3 ತೌರಾತ್ ಎಂದರೆ ಬೈಬಲ್‌ನ ಹಳೆಯ ಒಡಂಬಡಿಕೆ ಮತ್ತು ಇಂಜೀಲ್ ಎಂದರೆ ಬೈಬಲ್‌ನ ಹೊಸ ಒಡಂಬಡಿಕೆ

49. (ಅವನು ಅವರನ್ನು) ಇಸ್ರಾಈಲ್ ಸಂತತಿಯೆಡೆಗೆ ಒಬ್ಬ ಸಂದೇಶವಾಹಕರಾಗಿ ಕಳುಹಿಸುವನು. (ಈಸಾ ಅವರೊಂದಿಗೆ ಹೇಳುವರು) 'ನಾನು ನಿಮ್ಮ ರಬ್‌ನ ವತಿಯ ದೃಷ್ಟಾಂತದೊಂದಿಗೆ ನಿಮ್ಮ ಬಳಿಗೆ ಬಂದಿರುವೆನು. ನಾನು ಜೇಡಿ ಮಣ್ಣಿನಿಂದ ಹಕ್ಕಿಯ ಆಕೃತಿಯೊಂದನ್ನು ನಿಮಗಾಗಿ ವಿನ್ಯಾಸಗೊಳಿಸುವೆನು. ತರುವಾಯ ನಾನದರಲ್ಲಿ ಊದುವಾಗ ಅಲ್ಲಾಹುವಿನ ಅನುಮತಿಯೊಂದಿಗೆ ಅದೊಂದು ಹಕ್ಕಿಯಾಗಿ ಮಾರ್ಪಡುವುದು. ನಾನು ಅಲ್ಲಾಹುವಿನ ಅನುಮತಿಯೊಂದಿಗೆ ಹುಟ್ಟು ಕುರುಡನನ್ನೂ, ಕುಷ್ಠರೋಗಿಯನ್ನೂ ಗುಣಪಡಿಸುವೆನು ಮತ್ತು ಸತ್ತವರನ್ನು ಜೀವಂತಗೊಳಿಸುವೆನು. ನೀವು ತಿನ್ನುತ್ತಿರುವುದರ ಕುರಿತು ಮತ್ತು ನೀವು ನಿಮ್ಮ ಮನೆಗಳಲ್ಲಿ ಸಂಗ್ರಹಿಸಿಡುತ್ತಿರುವುದರ ಕುರಿತು ನಾನು ನಿಮಗೆ ತಿಳಿಸಿ ಕೊಡುವೆನು. ನೀವು ವಿಶ್ವಾಸವಿಡುವವರಾಗಿದ್ದರೆ ಖಂಡಿತವಾಗಿಯೂ ಅದರಲ್ಲಿ ನಿಮಗೊಂದು ದೃಷ್ಟಾಂತವಿದೆ.

وَرَسُولًا إِلَىٰ بَنِيٓ إِسۡرَٰٓءِيلَ أَنِّي قَدۡ جِئۡتُكُم بِـَٔايَةٖ مِّن رَّبِّكُمۡ أَنِّيٓ أَخۡلُقُ لَكُم مِّنَ ٱلطِّينِ كَهَيۡـَٔةِ ٱلطَّيۡرِ فَأَنفُخُ فِيهِ فَيَكُونُ طَيۡرَۢا بِإِذۡنِ ٱللَّهِۖ وَأُبۡرِئُ ٱلۡأَكۡمَهَ وَٱلۡأَبۡرَصَ وَأُحۡيِ ٱلۡمَوۡتَىٰ بِإِذۡنِ ٱللَّهِۖ وَأُنَبِّئُكُم بِمَا تَأۡكُلُونَ وَمَا تَدَّخِرُونَ فِي بُيُوتِكُمۡۚ إِنَّ فِي ذَٰلِكَ لَأٓيَةٗ لَّكُمۡ إِن كُنتُم مُّؤۡمِنِينَ ﴿٤٩﴾

50. ನನ್ನ ಮುಂದಿರುವ ತೌರಾತನ್ನು ದೃಢೀಕರಿಸುವವನಾಗಿಯೂ ನಿಮ್ಮ ಮೇಲೆ ನಿಷಿದ್ಧಗೊಳಿಸಲಾಗಿರುವ ವಸ್ತುಗಳ ಪೈಕಿ ಕೆಲವನ್ನು ನಿಮಗೆ ಧರ್ಮಸಮ್ಮತಗೊಳಿಸುವ ಸಲುವಾಗಿಯೂ[1] (ನಾನು ನಿಯೋಗಿಸಲ್ಪಟ್ಟಿರುವೆನು). ನಿಮ್ಮ ರಬ್‌ನ

وَمُصَدِّقٗا لِّمَا بَيۡنَ يَدَيَّ مِنَ ٱلتَّوۡرَىٰةِ وَلِأُحِلَّ لَكُم بَعۡضَ ٱلَّذِي حُرِّمَ عَلَيۡكُمۡۚ وَجِئۡتُكُم بِـَٔايَةٖ مِّن رَّبِّكُمۡ فَٱتَّقُواْ ٱللَّهَ وَأَطِيعُونِ ﴿٥٠﴾

ಎಂದು ಭಾವಿಸಲಾಗುತ್ತದೆ. ಆದರೆ ಮೂಸಾ ಮತ್ತು ಈಸಾ(عَلَيۡهِمَا السَّلَامُ)ರವರಿಗೆ ಅಲ್ಲಾಹುವಿನ ಕಡೆಯಿಂದ ಅವತೀರ್ಣಗೊಂಡಿದ್ದ ಸಂದೇಶಗಳ ಹೊರತಾಗಿ ಪುರೋಹಿತರು ಮತ್ತು ಇತಿಹಾಸಕಾರರು ಸ್ವತಃ ರಚಿಸಿ ಸೇರ್ಪಡೆಗೊಳಿಸಿದ ಹಲವು ಭಾಗಗಳು ಇಂದಿನ ಬೈಬಲ್‌ನಲ್ಲಿ ಸೇರಿಕೊಂಡಿವೆಯೆಂದು ಬೈಬಲ್ ಹಾಗೂ ಕ್ರೈಸ್ತ ಸಭೆಯ ಇತಿಹಾಸದಿಂದ ತಿಳಿದು ಬರುತ್ತದೆ.

1 ಯಹೂದರ ಧಿಕ್ಕಾರದ ನಿಮಿತ್ತ ಅಲ್ಲಾಹು ಅವರ ಮೇಲೆ ಕೆಲವು ಕಠಿಣ ನಿಯಮಗಳನ್ನು ಜಾರಿಗೊಳಿಸಿದ್ದನು. ಒಂಟೆಯ ಮಾಂಸ ತಿನ್ನುವುದು, ಶನಿವಾರ ಉದ್ಯೋಗ ಮಾಡುವುದು ಇತ್ಯಾದಿ ಅವರ ಮೇಲೆ ಹೇರಲಾದ ನಿಷೇಧಗಳಾಗಿದ್ದವು. ಆದರೆ ಅಲ್ಲಾಹು ಈಸಾ(عَلَيۡهِ السَّلَامُ) ರವರ ಮೂಲಕ ಇಂತಹ ನಿಯಮಗಳಿಗೆ ವಿನಾಯಿತಿ ನೀಡಿದನು.

ವತಿಯ ದೃಷ್ಟಾಂತದೊಂದಿಗೆ ನಾನು ನಿಮ್ಮ ಬಳಿಗೆ ಬಂದಿರುವೆನು. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

إِنَّ ٱللَّهَ رَبِّي وَرَبُّكُمْ فَٱعْبُدُوهُۚ هَٰذَا صِرَٰطٌ مُّسْتَقِيمٌ ﴿٥١﴾

51. ಖಂಡಿತವಾಗಿಯೂ ಅಲ್ಲಾಹು ನನ್ನ ಮತ್ತು ನಿಮ್ಮ ರಬ್ ಆಗಿರುವನು ಆದ್ದರಿಂದ ಅವನನ್ನು ಆರಾಧಿಸಿರಿ. ಇದು ನೇರವಾದ ಮಾರ್ಗವಾಗಿದೆ'

۞ فَلَمَّآ أَحَسَّ عِيسَىٰ مِنْهُمُ ٱلْكُفْرَ قَالَ مَنْ أَنصَارِيٓ إِلَى ٱللَّهِۖ قَالَ ٱلْحَوَارِيُّونَ نَحْنُ أَنصَارُ ٱللَّهِ ءَامَنَّا بِٱللَّهِ وَٱشْهَدْ بِأَنَّا مُسْلِمُونَ ﴿٥٢﴾

52. ತರುವಾಯ ಈಸಾರಿಗೆ ಅವರ ನಿಷೇಧವು ಮನದಟ್ಟಾದಾಗ ಅವರು ಹೇಳಿದರು: 'ಅಲ್ಲಾಹುವಿನೆಡೆಗೆ ನನ್ನ ಸಹಾಯಕರಾಗಿ ಯಾರಿದ್ದೀರಿ?' ಹವಾರಿಗಳು ಹೇಳಿದರು: 'ನಾವು ಅಲ್ಲಾಹುವಿನ ಸಹಾಯಕರಾಗಿರುವೆವು. ನಾವು ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರುವೆವು ಮತ್ತು ನಾವು (ಅವನಿಗೆ) ಶರಣಾದವರಾಗಿರುವೆವು ಎಂಬುದಕ್ಕೆ ತಾವು ಸಾಕ್ಷ್ಯವಹಿಸಿರಿ'.

رَبَّنَآ ءَامَنَّا بِمَآ أَنزَلْتَ وَٱتَّبَعْنَا ٱلرَّسُولَ فَٱكْتُبْنَا مَعَ ٱلشَّٰهِدِينَ ﴿٥٣﴾

53. (ತರುವಾಯ ಅವರು ಹೀಗೆ ಪ್ರಾರ್ಥಿಸಿದರು): 'ಓ ನಮ್ಮ ರಬ್! ನೀನು ಅವತೀರ್ಣಗೊಳಿಸಿರುವುದರಲ್ಲಿ ನಾವು ವಿಶ್ವಾಸವಿಟ್ಟಿರುವೆವು ಮತ್ತು ನಾವು (ನಿನ್ನ) ಸಂದೇಶವಾಹಕರನ್ನು ಅನುಸರಿಸಿರುವೆವು. ಆದ್ದರಿಂದ ನಮ್ಮನ್ನು ಸಾಕ್ಷ್ಯವಹಿಸಿದವರೊಂದಿಗೆ ದಾಖಲಿಸು'.

وَمَكَرُواْ وَمَكَرَ ٱللَّهُۖ وَٱللَّهُ خَيْرُ ٱلْمَٰكِرِينَ ﴿٥٤﴾

54. ಅವರು (ಸತ್ಯನಿಷೇಧಿಗಳು) ತಂತ್ರ ಹೂಡಿದರು. ಅಲ್ಲಾಹು ಕೂಡ ತಂತ್ರ ಹೂಡಿದನು. ತಂತ್ರ ಹೂಡುವವರಲ್ಲಿ ಅಲ್ಲಾಹು ಅತ್ಯುತ್ತಮನಾಗಿರುವನು.

إِذْ قَالَ ٱللَّهُ يَٰعِيسَىٰٓ إِنِّي مُتَوَفِّيكَ وَرَافِعُكَ إِلَيَّ وَمُطَهِّرُكَ مِنَ ٱلَّذِينَ كَفَرُواْ وَجَاعِلُ ٱلَّذِينَ ٱتَّبَعُوكَ فَوْقَ

55. 'ಓ ಈಸಾ! ಖಂಡಿತವಾಗಿಯೂ ತಮ್ಮನ್ನು ನಾನು ಪೂರ್ಣವಾಗಿ ವಹಿಸಿಕೊಳ್ಳುವೆನು ಮತ್ತು ತಮ್ಮನ್ನು ನನ್ನ ಬಳಿಗೆ ಎತ್ತಿಕೊಳ್ಳುವೆನು. ತಮ್ಮನ್ನು ನಾನು ಸತ್ಯ ನಿಷೇಧಿಗಳಿಂದ

ಪರಿಶುದ್ಧಗೊಳಿಸುವೆನು ಮತ್ತು ತಮ್ಮನ್ನು ಅನುಸರಿಸಿದವರನ್ನು ಪುನರುತ್ಥಾನ ದಿನದವರೆಗೂ ಸತ್ಯ ನಿಷೇಧಿಗಳಿಗಿಂತ ಶ್ರೇಷ್ಠರಾಗಿ ಮಾಡುವೆನು. ತರುವಾಯ ನಿಮ್ಮ ಮರಳುವಿಕೆಯು ನನ್ನ ಬಳಿಗಾಗಿದೆ. ನೀವು ಭಿನ್ನಾಭಿಪ್ರಾಯ ಹೊಂದುತ್ತಿರುವ ವಿಷಯದಲ್ಲಿ ಆಗ ನಾನು ನಿಮ್ಮ ನಡುವೆ ತೀರ್ಪು ನೀಡುವೆನು' ಎಂದು ಅಲ್ಲಾಹು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

ٱلَّذِينَ كَفَرُوٓاْ إِلَىٰ يَوۡمِ ٱلۡقِيَٰمَةِۖ ثُمَّ إِلَيَّ
مَرۡجِعُكُمۡ فَأَحۡكُمُ بَيۡنَكُمۡ فِيمَا كُنتُمۡ
فِيهِ تَخۡتَلِفُونَ ٥٥

56. ಆದರೆ (ಸತ್ಯವನ್ನು) ನಿಷೇಧಿಸಿದವರಿಗೆ ನಾನು ಇಹಲೋಕದಲ್ಲೂ, ಪರಲೋಕದಲ್ಲೂ ಕಠೋರ ಶಿಕ್ಷೆಯನ್ನು ನೀಡುವೆನು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

فَأَمَّا ٱلَّذِينَ كَفَرُواْ فَأُعَذِّبُهُمۡ عَذَابٗا
شَدِيدٗا فِي ٱلدُّنۡيَا وَٱلۡأٓخِرَةِ وَمَا لَهُم مِّن
نَّٰصِرِينَ ٥٦

57. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ, ಅವರಿಗೆ ಅಲ್ಲಾಹು ಅವರ ಪ್ರತಿಫಲವನ್ನು ಪೂರ್ಣವಾಗಿ ನೀಡುವನು. ಅಲ್ಲಾಹು ಅಕ್ರಮಿಗಳನ್ನು ಇಷ್ಟಪಡಲಾರನು.

وَأَمَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ
فَيُوَفِّيهِمۡ أُجُورَهُمۡۗ وَٱللَّهُ لَا يُحِبُّ
ٱلظَّٰلِمِينَ ٥٧

58. ಇವು ನಾವು ತಮಗೆ ಓದಿಕೊಡುತ್ತಿರುವ (ಅಲ್ಲಾಹುವಿನ) ದೃಷ್ಟಾಂತಗಳಲ್ಲೂ, ಯುಕ್ತಿಪೂರ್ಣ ಉಪದೇಶಗಳಲ್ಲೂ ಸೇರಿದ ವಿಷಯಗಳಾಗಿವೆ.

ذَٰلِكَ نَتۡلُوهُ عَلَيۡكَ مِنَ ٱلۡأٓيَٰتِ وَٱلذِّكۡرِ
ٱلۡحَكِيمِ ٥٨

59. ಅಲ್ಲಾಹುವಿನ ಮಟ್ಟಿಗೆ ಈಸಾರವರ ಉಪಮೆಯು ಆದಮ್‌ರ ಉಪಮೆಯಂತಿದೆ. ಅವರನ್ನು (ಆದಮ್‌ರ ರೂಪವನ್ನು) ಅವನು ಮಣ್ಣಿನಿಂದ ಸೃಷ್ಟಿಸಿದನು. ತರುವಾಯ ಅದರೊಂದಿಗೆ ಉಂಟಾಗು ಎಂದನು. ತಕ್ಷಣ ಅವರು (ಆದಮ್) ಉಂಟಾದರು.[1]

إِنَّ مَثَلَ عِيسَىٰ عِندَ ٱللَّهِ كَمَثَلِ ءَادَمَۖ
خَلَقَهُۥ مِن تُرَابٖ ثُمَّ قَالَ لَهُۥ كُن
فَيَكُونُ ٥٩

60. ಇದು ತಮ್ಮ ರಬ್‌ನ ವತಿಯ ಸತ್ಯವಾಗಿದೆ. ಆದ್ದರಿಂದ ತಾವು ಸಂದೇಹಪಡುವವರ ಪೈಕಿ ಸೇರದಿರಿ.

ٱلۡحَقُّ مِن رَّبِّكَ فَلَا تَكُن مِّنَ
ٱلۡمُمۡتَرِينَ ٦٠

1 ತಂದೆಯಿಲ್ಲದೆ ಜನಿಸಿದ ಈಸಾ(عَلَيۡهِ ٱلسَّلَامُ) ರವರು ಮತ್ತು ತಂದೆ ತಾಯಂದಿರಿಬ್ಬರೂ ಇಲ್ಲದೆ ಸೃಷ್ಟಿಸಲಾದ ಆದಮ್(عَلَيۡهِ ٱلسَّلَامُ) ರವರು ಅಲ್ಲಾಹುವಿನ ಸೃಷ್ಟಿಗಳೇ ವಿನಾ ಅವನ ಪುತ್ರರಲ್ಲ.

61. ಜ್ಞಾನವು ತಮ್ಮ ಬಳಿಗೆ ಬಂದ ಬಳಿಕವೂ ಅವರ (ಈಸಾರವರ) ವಿಷಯದಲ್ಲಿ ಯಾರಾದರೂ ತಮ್ಮೊಂದಿಗೆ ತರ್ಕಿಸಿದರೆ ತಾವು ಹೇಳಿರಿ: 'ಬನ್ನಿರಿ! ನಾವು ನಮ್ಮ ಮಕ್ಕಳನ್ನೂ ನಿಮ್ಮ ಮಕ್ಕಳನ್ನೂ ಕರೆಯೋಣ. ನಮ್ಮ ಸ್ತ್ರೀಯರನ್ನೂ ನಿಮ್ಮ ಸ್ತ್ರೀಯರನ್ನೂ ಕರೆಯೋಣ. ನಾವು ಮತ್ತು ನೀವೂ (ಒಟ್ಟುಗೂಡೋಣ). ತರುವಾಯ ಸುಳ್ಳು ಹೇಳುವವರ ಮೇಲೆ ಅಲ್ಲಾಹುವಿನ ಶಾಪವೆರಗಲು ಮನಸಾರೆ ಪ್ರಾರ್ಥಿಸೋಣ'.

فَمَنْ حَآجَّكَ فِيهِ مِنۢ بَعْدِ مَا جَآءَكَ مِنَ ٱلْعِلْمِ فَقُلْ تَعَالَوْا۟ نَدْعُ أَبْنَآءَنَا وَأَبْنَآءَكُمْ وَنِسَآءَنَا وَنِسَآءَكُمْ وَأَنفُسَنَا وَأَنفُسَكُمْ ثُمَّ نَبْتَهِلْ فَنَجْعَل لَّعْنَتَ ٱللَّهِ عَلَى ٱلْكَـٰذِبِينَ ﴿٦١﴾

62. ಖಂಡಿತವಾಗಿಯೂ ಇದು ನೈಜ ಘಟನೆಗಳ ವಿವರಣೆಯಾಗಿದೆ. ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

إِنَّ هَـٰذَا لَهُوَ ٱلْقَصَصُ ٱلْحَقُّ ۚ وَمَا مِنْ إِلَـٰهٍ إِلَّا ٱللَّهُ ۚ وَإِنَّ ٱللَّهَ لَهُوَ ٱلْعَزِيزُ ٱلْحَكِيمُ ﴿٦٢﴾

63. ತರುವಾಯ ಅವರು ವಿಮುಖರಾಗುವುದಾದರೆ ಖಂಡಿತವಾಗಿಯೂ ಅಲ್ಲಾಹು ವಿನಾಶಕಾರಿಗಳ ಕುರಿತು ಅರಿವುಳ್ಳವನಾಗಿರುವನು.

فَإِن تَوَلَّوْا۟ فَإِنَّ ٱللَّهَ عَلِيمٌۢ بِٱلْمُفْسِدِينَ ﴿٦٣﴾

64. (ಓ ಪ್ರವಾದಿಯವರೇ!) ಹೇಳಿರಿ: 'ಓ ಗ್ರಂಥದವರೇ! ನಮ್ಮ ಮತ್ತು ನಿಮ್ಮ ನಡುವೆ ಸಮಾನವಾಗಿರುವ ಒಂದು ವಚನದೆಡೆಗೆ ಬನ್ನಿರಿ.(1) ಅಂದರೆ ನಾವು ಅಲ್ಲಾಹುವಿನ ಹೊರತು (ಇನ್ನಾರನ್ನೂ) ಆರಾಧಿಸಬಾರದು, ಅವನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡಬಾರದು ಮತ್ತು ನಮ್ಮಲ್ಲಿ ಕೆಲವರು ಕೆಲವರನ್ನು ಅಲ್ಲಾಹುವಿನ ಹೊರತಾಗಿರುವ ರಬ್‌ಗಳನ್ನಾಗಿ ಮಾಡಬಾರದು'(ಎಂಬ ತತ್ವಸಿದ್ಧಾಂತದೆಡೆಗೆ ಬನ್ನಿರಿ). ತರುವಾಯ ಅವರೇನಾದರೂ ವಿಮುಖರಾಗುವುದಾದರೆ 'ನಾವು (ಅಲ್ಲಾಹುವಿಗೆ)

قُلْ يَـٰٓأَهْلَ ٱلْكِتَـٰبِ تَعَالَوْا۟ إِلَىٰ كَلِمَةٍ سَوَآءٍۭ بَيْنَنَا وَبَيْنَكُمْ أَلَّا نَعْبُدَ إِلَّا ٱللَّهَ وَلَا نُشْرِكَ بِهِۦ شَيْـًٔا وَلَا يَتَّخِذَ بَعْضُنَا بَعْضًا أَرْبَابًا مِّن دُونِ ٱللَّهِ ۚ فَإِن تَوَلَّوْا۟ فَقُولُوا۟ ٱشْهَدُوا۟ بِأَنَّا مُسْلِمُونَ ﴿٦٤﴾

1 ಅರ್ಥಾತ್ ನಮಗೂ ನಿಮಗೂ ಸಮಾನವಾಗಿ ಅಂಗೀಕರಿಸಬಹುದಾದ ಒಂದು ಸಾಮಾನ್ಯ ತತ್ವದೆಡೆಗೆ ಬನ್ನಿರಿ.

ಶರಣಾದವರಾಗಿರುವೆವು ಎಂಬುದಕ್ಕೆ ನೀವು ಸಾಕ್ಷ್ಯವಹಿಸಿರಿ’ ಎಂದು ಅವರೊಂದಿಗೆ ಹೇಳಿರಿ.[1]

**65.** ಓ ಗ್ರಂಥದವರೇ! ನೀವು ಇಬ್ರಾಹೀಮ್‌ರ ವಿಷಯದಲ್ಲಿ ಏಕೆ ತರ್ಕಿಸುತ್ತಿರುವಿರಿ? ತೌರಾತ್ ಮತ್ತು ಇಂಜೀಲ್ ಅವರ ಕಾಲಾನಂತರವಲ್ಲದೆ ಅವತೀರ್ಣಗೊಂಡಿಲ್ಲ. ನೀವು ಚಿಂತಿಸಲಾರಿರೇ?

يَٰٓأَهۡلَ ٱلۡكِتَٰبِ لِمَ تُحَآجُّونَ فِيٓ إِبۡرَٰهِيمَ وَمَآ أُنزِلَتِ ٱلتَّوۡرَىٰةُ وَٱلۡإِنجِيلُ إِلَّا مِنۢ بَعۡدِهِۦٓۚ أَفَلَا تَعۡقِلُونَ ٦٥

**66.** ಓ ಜನರೇ! ನೀವು ನಿಮಗೆ ಅರಿವಿರುವ ವಿಷಯದಲ್ಲಿ ತರ್ಕಿಸಿರುವಿರಿ. ಆದರೆ ನಿಮಗೆ ಅರಿವಿಲ್ಲದ ವಿಷಯದಲ್ಲಿ ನೀವೇಕೆ ತರ್ಕಿಸುತ್ತಿರುವಿರಿ? ಅಲ್ಲಾಹು ಅರಿಯುವನು; ನೀವು ಅರಿಯಲಾರಿರಿ.

هَٰٓأَنتُمۡ هَٰٓؤُلَآءِ حَٰجَجۡتُمۡ فِيمَا لَكُم بِهِۦ عِلۡمٞ فَلِمَ تُحَآجُّونَ فِيمَا لَيۡسَ لَكُم بِهِۦ عِلۡمٞۚ وَٱللَّهُ يَعۡلَمُ وَأَنتُمۡ لَا تَعۡلَمُونَ ٦٦

**67.** ಇಬ್ರಾಹೀಮ್‌ರು ಯಹೂದಿಯೋ, ಕ್ರೈಸ್ತರೋ ಆಗಿರಲಿಲ್ಲ. ಆದರೆ ಅವರು ಋಜುಮನಸ್ಕರೂ, (ಅಲ್ಲಾಹುವಿಗೆ) ಶರಣಾದವರೂ ಆಗಿದ್ದರು. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.

مَا كَانَ إِبۡرَٰهِيمُ يَهُودِيّٗا وَلَا نَصۡرَانِيّٗا وَلَٰكِن كَانَ حَنِيفٗا مُّسۡلِمٗا وَمَا كَانَ مِنَ ٱلۡمُشۡرِكِينَ ٦٧

**68.** ಖಂಡಿತವಾಗಿಯೂ ಜನರ ಪೈಕಿ ಇಬ್ರಾಹೀಮ್‌ರೊಂದಿಗೆ ಹೆಚ್ಚು ನಿಕಟರಾಗಿರುವವರು ಅವರನ್ನು ಅನುಸರಿಸಿದವರು ಮತ್ತು ಈ ಪ್ರವಾದಿಯೂ, (ಈ ಪ್ರವಾದಿಯಲ್ಲಿ) ವಿಶ್ವಾಸವಿಟ್ಟವರೂ ಆಗಿರುವರು. ಅಲ್ಲಾಹು ಸತ್ಯವಿಶ್ವಾಸಿಗಳ ರಕ್ಷಕನಾಗಿರುವನು.

إِنَّ أَوۡلَى ٱلنَّاسِ بِإِبۡرَٰهِيمَ لَلَّذِينَ ٱتَّبَعُوهُ وَهَٰذَا ٱلنَّبِيُّ وَٱلَّذِينَ ءَامَنُواْۗ وَٱللَّهُ وَلِيُّ ٱلۡمُؤۡمِنِينَ ٦٨

**69.** ನಿಮ್ಮನ್ನು ಪಥಭ್ರಷ್ಟಗೊಳಿಸಲು ಸಾಧ್ಯವಾಗಿರುತ್ತಿದ್ದರೆ! ಎಂದು ಗ್ರಂಥದವರ ಪೈಕಿ ಒಂದು ಪಂಗಡದವರು ಆಶಿಸುವರು. ಆದರೆ ಸ್ವತಃ ತಮ್ಮನ್ನೇ ವಿನಾ ಅವರು

وَدَّت طَّآئِفَةٞ مِّنۡ أَهۡلِ ٱلۡكِتَٰبِ لَوۡ يُضِلُّونَكُمۡ وَمَا يُضِلُّونَ إِلَّآ أَنفُسَهُمۡ وَمَا يَشۡعُرُونَ ٦٩

1 ಸತ್ಯಕ್ಕೆ ಸಾಕ್ಷಿಯಾಗುವುದು ಮತ್ತು ಸತ್ಯ ಸಂದೇಶ ತಲುಪಿಸಿ ಕೊಡುವುದು ಮಾತ್ರ ಸಂದೇಶವಾಹಕರ ಹೊಣೆಯಾಗಿದೆ. ಧರ್ಮವನ್ನು ಬಲವಂತವಾಗಿ ಯಾರ ಮೇಲೂ ಹೇರುವ ಹೊಣೆ ಸಂದೇಶವಾಹಕರಿಗಾಗಲಿ ಧರ್ಮಬೋಧಕರಿಗಾಗಲಿ ಇಲ್ಲ.

ಪಥಭ್ರಷ್ಟಗೊಳಿಸಲಾರರು. ಅವರದನ್ನು ಗ್ರಹಿಸುವುದಿಲ್ಲ.

**70.** ಓ ಗ್ರಂಥದವರೇ! ನೀವು ಅಲ್ಲಾಹುವಿನ ದೃಷ್ಟಾಂತಗಳನ್ನು, ಸ್ವತಃ ನೀವೇ ಅವುಗಳಿಗೆ ಸಾಕ್ಷಿಗಳಾಗಿದ್ದೂ ಕೂಡ ಏಕೆ ನಿಷೇಧಿಸುತ್ತಿರುವಿರಿ?

يَٰٓأَهۡلَ ٱلۡكِتَٰبِ لِمَ تَكۡفُرُونَ بِـَٔايَٰتِ ٱللَّهِ وَأَنتُمۡ تَشۡهَدُونَ ﴿٧٠﴾

**71.** ಓ ಗ್ರಂಥದವರೇ! ನೀವು ಸತ್ಯವನ್ನು ಅಸತ್ಯದೊಂದಿಗೆ ಏಕೆ ಬೆರೆಸುತ್ತಿರುವಿರಿ ಮತ್ತು ತಿಳಿದವರಾಗಿದ್ದೂ ಸಹ ಸತ್ಯವನ್ನೇಕೆ ಮುಚ್ಚಿಡುತ್ತಿರುವಿರಿ?

يَٰٓأَهۡلَ ٱلۡكِتَٰبِ لِمَ تَلۡبِسُونَ ٱلۡحَقَّ بِٱلۡبَٰطِلِ وَتَكۡتُمُونَ ٱلۡحَقَّ وَأَنتُمۡ تَعۡلَمُونَ ﴿٧١﴾

**72.** ಗ್ರಂಥದವರ ಪೈಕಿ ಒಂದು ಪಂಗಡದವರು (ತಮ್ಮ ಅನುಯಾಯಿಗಳೊಂದಿಗೆ) ಹೇಳಿದರು: 'ನೀವು ಹಗಲಿನ ಆರಂಭದಲ್ಲಿ ಈ ವಿಶ್ವಾಸಿಗಳಿಗೆ ಅವತೀರ್ಣ ಗೊಂಡಿರುವುದರಲ್ಲಿ ವಿಶ್ವಾಸವಿಡಿರಿ ಮತ್ತು ಅದರ ಕೊನೆಯಲ್ಲಿ ಅದನ್ನು ನಿಷೇಧಿಸಿರಿ. (ಅದನ್ನು ನೋಡಿ) ಅವರು (ವಿಶ್ವಾಸಿಗಳು) ಹಿಂದಕ್ಕೆ ಬರಲೂಬಹುದು.'[1]

وَقَالَت طَّآئِفَةٌ مِّنۡ أَهۡلِ ٱلۡكِتَٰبِ ءَامِنُواْ بِٱلَّذِيٓ أُنزِلَ عَلَى ٱلَّذِينَ ءَامَنُواْ وَجۡهَ ٱلنَّهَارِ وَٱكۡفُرُوٓاْ ءَاخِرَهُۥ لَعَلَّهُمۡ يَرۡجِعُونَ ﴿٧٢﴾

**73.** (ಅವರು ಹೇಳುವರು): 'ನಿಮ್ಮ ಧರ್ಮವನ್ನು ಅನುಸರಿಸಿದವರನ್ನಲ್ಲದೆ ನೀವು ನಂಬದಿರಿ'. (ಓ ಪ್ರವಾದಿಯವರೇ!) ಹೇಳಿರಿ: 'ಖಂಡಿತವಾಗಿಯೂ (ನೈಜ) ಮಾರ್ಗದರ್ಶನವು ಅಲ್ಲಾಹುವಿನ ಮಾರ್ಗದರ್ಶನವಾಗಿದೆ.' (ಅವರು ಹೀಗೂ ಹೇಳುವರು): 'ನಿಮಗೆ ನೀಡಲಾದಂತಹ (ಗ್ರಂಥ) ಇನ್ನಾರಿಗಾದರೂ ನೀಡಲಾಗುವುದೆಂದಾಗಲಿ ಅಥವಾ ಅವರು (ವಿಶ್ವಾಸಿಗಳು) ನಿಮ್ಮ ರಬ್‌ನ ಬಳಿ ನಿಮ್ಮೊಂದಿಗೆ ವಾದ ಮಾಡುವರೆಂದಾಗಲಿ

وَلَا تُؤۡمِنُوٓاْ إِلَّا لِمَن تَبِعَ دِينَكُمۡ قُلۡ إِنَّ ٱلۡهُدَىٰ هُدَى ٱللَّهِ أَن يُؤۡتَىٰٓ أَحَدٞ مِّثۡلَ مَآ أُوتِيتُمۡ أَوۡ يُحَآجُّوكُمۡ عِندَ رَبِّكُمۡۗ قُلۡ إِنَّ ٱلۡفَضۡلَ بِيَدِ ٱللَّهِ يُؤۡتِيهِ مَن يَشَآءُۗ وَٱللَّهُ وَٰسِعٌ عَلِيمٞ ﴿٧٣﴾

1 ಬೆಳಗ್ಗೆ ವಿಶ್ವಾಸ ಘೋಷಿಸಿದವರು ಸಂಜೆಯಾಗುವಾಗ ವಿಶ್ವಾಸವನ್ನು ತ್ಯಜಿಸಿದರೆಂಬ ವಿಷಯ ತಿಳಿದಾಗ, ಅವರು ಸತ್ಯವಿಶ್ವಾಸವನ್ನು ತ್ಯಜಿಸಲು ಸಮರ್ಪಕವಾದ ಕಾರಣಗಳೇನಾದರೂ ಇರಬಹುದೆಂದು ಕೆಲವರಾದರೂ ಭಾವಿಸುವರು ಎಂಬುದಾಗಿತ್ತು ಅವರ ಲೆಕ್ಕಾಚಾರ.

(ನೀವು ನಂಬದಿರಿ)'. (ಓ ಪ್ರವಾದಿಯವರೇ!) ಹೇಳಿರಿ: 'ಖಂಡಿತವಾಗಿಯೂ ಅನುಗ್ರಹವಿರುವುದು ಅಲ್ಲಾಹುವಿನ ಕೈಯಲ್ಲಾಗಿದೆ. ತಾನಿಚ್ಛಿಸುವವರಿಗೆ ಅವನು ಅದನ್ನು ದಯಪಾಲಿಸುವನು. ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ, (ಎಲ್ಲವನ್ನು) ಅರಿಯುವವನೂ ಆಗಿರುವನು.'

**74.** ಅವನು ತಾನಿಚ್ಛಿಸುವವರನ್ನು ತನ್ನ ಕರುಣೆಯಿಂದ ವಿಶೇಷವಾಗಿ ಆರಿಸುವನು. ಅಲ್ಲಾಹು ಮಹಾ ಅನುಗ್ರಹದ ಒಡೆಯನಾಗಿರುವನು.

يَخْتَصُّ بِرَحْمَتِهِۦ مَن يَشَآءُ ۗ وَٱللَّهُ ذُو ٱلْفَضْلِ ٱلْعَظِيمِ ﴿٧٤﴾

**75.** ತಾವು ಒಂದು ಚಿನ್ನದ ರಾಶಿಯನ್ನು ನಂಬಿಕೆಯೊಂದಿಗೆ ವಹಿಸಿಕೊಟ್ಟರೆ ಅದನ್ನು ತಮಗೆ ಮರಳಿ ಒಪ್ಪಿಸುವಂತಹವರು ಗ್ರಂಥದವರಲ್ಲಿರುವರು. ಅವರಲ್ಲಿ ಮತ್ತೊಂದು ವಿಧದವರೂ ಇರುವರು. ಅವರಿಗೆ ತಾವು ನಂಬಿಕೆಯೊಂದಿಗೆ ಒಂದು ದೀನಾರ್ ವಹಿಸಿಕೊಟ್ಟರೂ ನಿರಂತರವಾಗಿ (ಕೇಳುತ್ತಾ) ನಿಲ್ಲದ ಹೊರತು ಅವರು ಅದನ್ನು ತಮಗೆ ಮರಳಿ ಒಪ್ಪಿಸಲಾರರು. ಇದು ಅನಕ್ಷರಸ್ಥರ[1] ವಿಷಯದಲ್ಲಿ (ಅವರನ್ನು ವಂಚಿಸುವುದರಲ್ಲಿ) ನಮಗೆ ದೋಷವಿಲ್ಲವೆಂದು ಅವರು ಹೇಳಿರುವ ಕಾರಣದಿಂದಾಗಿದೆ. ಅವರು ತಿಳಿದವರಾಗಿದ್ದೂ ಸಹ ಅಲ್ಲಾಹುವಿನ ಹೆಸರಲ್ಲಿ ಸುಳ್ಳು ಹೇಳುತ್ತಿರುವರು.

۞ وَمِنْ أَهْلِ ٱلْكِتَٰبِ مَنْ إِن تَأْمَنْهُ بِقِنطَارٍ يُؤَدِّهِۦٓ إِلَيْكَ وَمِنْهُم مَّنْ إِن تَأْمَنْهُ بِدِينَارٍ لَّا يُؤَدِّهِۦٓ إِلَيْكَ إِلَّا مَا دُمْتَ عَلَيْهِ قَآئِمًا ۗ ذَٰلِكَ بِأَنَّهُمْ قَالُوا۟ لَيْسَ عَلَيْنَا فِى ٱلْأُمِّيِّۦنَ سَبِيلٌ وَيَقُولُونَ عَلَى ٱللَّهِ ٱلْكَذِبَ وَهُمْ يَعْلَمُونَ ﴿٧٥﴾

**76.** ಹಾಗಲ್ಲ! ಯಾರಾದರೂ ತನ್ನ ಕರಾರನ್ನು ನೆರವೇರಿಸಿದರೆ ಮತ್ತು ಭಯಭಕ್ತಿ ಪಾಲಿಸಿದರೆ ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸುವವರನ್ನು ಪ್ರೀತಿಸುವನು.

بَلَىٰ مَنْ أَوْفَىٰ بِعَهْدِهِۦ وَٱتَّقَىٰ فَإِنَّ ٱللَّهَ يُحِبُّ ٱلْمُتَّقِينَ ﴿٧٦﴾

1 ಪಾವಿತ್ರ್ಯತೆಯಿರುವುದು ದೇವರ ಮಕ್ಕಳಾದ ಇಸ್ರಾಈಲರ ಜೀವ ಹಾಗೂ ಸೊತ್ತುಗಳಿಗೆ ಮಾತ್ರವಾಗಿದೆ. ಆದ್ದರಿಂದ ಅನಕ್ಷರಸ್ಥರೂ ಅನಾಗರಿಕರೂ ಆಗಿರುವ ಅರಬರ ಸೊತ್ತನ್ನು ವಶಪಡಿಸಿದರೆ ಅದರಲ್ಲಿ ಯಾವುದೇ ತಪ್ಪಿಲ್ಲವೆಂದು ಯಹೂದಿಗಳ ಪೈಕಿ ಕೆಲವರು ಭಾವಿಸಿಕೊಂಡಿದ್ದರು.

إِنَّ ٱلَّذِينَ يَشۡتَرُونَ بِعَهۡدِ ٱللَّهِ وَأَيۡمَٰنِهِمۡ
ثَمَنًا قَلِيلًا أُوْلَٰٓئِكَ لَا خَلَٰقَ لَهُمۡ فِي
ٱلۡأٓخِرَةِ وَلَا يُكَلِّمُهُمُ ٱللَّهُ وَلَا يَنظُرُ
إِلَيۡهِمۡ يَوۡمَ ٱلۡقِيَٰمَةِ وَلَا يُزَكِّيهِمۡ وَلَهُمۡ
عَذَابٌ أَلِيمٌ ٧٧

**77.** ಅಲ್ಲಾಹುವಿನೊಂದಿಗಿರುವ ಕರಾರನ್ನು ಮತ್ತು ತಮ್ಮ ಶಪಥಗಳನ್ನು ನಿಕೃಷ್ಟ ಬೆಲೆಗೆ ಮಾರುವವರಾರೋ ಅಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇರಲಾರದು. ಪುನರುತ್ಥಾನ ದಿನದಂದು ಅಲ್ಲಾಹು ಅವರೊಂದಿಗೆ ಮಾತನಾಡುವುದಾಗಲಿ, ಅವರೆಡೆಗೆ (ಕರುಣೆಯ) ನೋಟವನ್ನು ಬೀರುವುದಾಗಲಿ ಮಾಡಲಾರನು. ಅವರನ್ನು ಶುದ್ಧೀಕರಿಸುವುದನ್ನೂ ಮಾಡಲಾರನು. ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು.

وَإِنَّ مِنۡهُمۡ لَفَرِيقًا يَلۡوُۥنَ أَلۡسِنَتَهُم
بِٱلۡكِتَٰبِ لِتَحۡسَبُوهُ مِنَ ٱلۡكِتَٰبِ وَمَا هُوَ
مِنَ ٱلۡكِتَٰبِ وَيَقُولُونَ هُوَ مِنۡ عِندِ ٱللَّهِ
وَمَا هُوَ مِنۡ عِندِ ٱللَّهِ وَيَقُولُونَ عَلَى ٱللَّهِ
ٱلۡكَذِبَ وَهُمۡ يَعۡلَمُونَ ٧٨

**78.** ಗ್ರಂಥದ ವಾಕ್ಯಶೈಲಿಯನ್ನು ಅದು ಗ್ರಂಥದಲ್ಲಿ ಸೇರಿದ್ದಾಗಿದೆಯೆಂದು ನೀವು ಭಾವಿಸುವ ಸಲುವಾಗಿ ತಮ್ಮ ನಾಲಗೆಗಳ ಮೂಲಕ ತಿರುಚುವಂತಹ ಕೆಲವರೂ ಅವರಲ್ಲಿರುವರು. ಆದರೆ ಅದು ಗ್ರಂಥಕ್ಕೆ ಸೇರಿದ್ದಲ್ಲ. ಅದು 'ಅಲ್ಲಾಹುವಿನ ವತಿಯಿಂದಾಗಿದೆ' ಎಂದು ಅವರು ಹೇಳುವರು. ಆದರೆ ಅದು ಅಲ್ಲಾಹುವಿನ ವತಿಯಿಂದಲ್ಲ. ಅವರು ತಿಳಿದವರಾಗಿದ್ದೂ ಸಹ ಅಲ್ಲಾಹುವಿನ ಹೆಸರಲ್ಲಿ ಸುಳ್ಳು ಹೇಳುತ್ತಿರುವರು.

مَا كَانَ لِبَشَرٍ أَن يُؤۡتِيَهُ ٱللَّهُ ٱلۡكِتَٰبَ
وَٱلۡحُكۡمَ وَٱلنُّبُوَّةَ ثُمَّ يَقُولَ لِلنَّاسِ كُونُواْ
عِبَادًا لِّي مِن دُونِ ٱللَّهِ وَلَٰكِن كُونُواْ
رَبَّٰنِيِّـۧنَ بِمَا كُنتُمۡ تُعَلِّمُونَ ٱلۡكِتَٰبَ
وَبِمَا كُنتُمۡ تَدۡرُسُونَ ٧٩

**79.** ಒಬ್ಬ ಮನುಷ್ಯನಿಗೆ ಅಲ್ಲಾಹು ಗ್ರಂಥವನ್ನು, ಧಾರ್ಮಿಕ ಜ್ಞಾನವನ್ನು ಮತ್ತು ಪ್ರವಾದಿತ್ವವನ್ನು ನೀಡುವುದು, ತರುವಾಯ ಅವನು ಜನರೊಂದಿಗೆ 'ನೀವು ಅಲ್ಲಾಹುವಿನ ಹೊರತು ನನ್ನ ದಾಸರಾಗಿರಿ' ಎಂದು ಹೇಳುವುದು ಉಂಟಾಗಲು ಸಾಧ್ಯವಿಲ್ಲ. ಆದರೆ 'ನೀವು ಗ್ರಂಥವನ್ನು ಕಲಿಸಿಕೊಡುತ್ತಿರುವ ಮೂಲಕ ಮತ್ತು ನೀವು ಕಲಿಯುತ್ತಿರುವುದರ ಮೂಲಕ ನೀವು ಅಲ್ಲಾಹುವಿನ ನಿಷ್ಕಳಂಕ ದಾಸರಾಗಿರಿ' (ಎಂದೇ ಅವನು ಹೇಳುವನು).

وَلَا يَأۡمُرَكُمۡ أَن تَتَّخِذُواْ ٱلۡمَلَٰٓئِكَةَ

**80.** ನೀವು ಮಲಕ್‌ಗಳನ್ನು ಮತ್ತು ಪ್ರವಾದಿಗಳನ್ನು ರಬ್‌ಗಳನ್ನಾಗಿ ಮಾಡಿಕೊಳ್ಳಿರಿ ಎಂದು ಅವನು

وَٱلنَّبِيِّـۧنَ أَرۡبَابًاۗ أَيَأۡمُرُكُم بِٱلۡكُفۡرِ بَعۡدَ إِذۡ أَنتُم مُّسۡلِمُونَ ٨٠

ನಿಮ್ಮೊಂದಿಗೆ ಆದೇಶಿಸಲಾರನು. ನೀವು ಮುಸ್ಲಿಮರಾದ ಬಳಿಕ ಅವನು ನಿಮ್ಮೊಂದಿಗೆ ಅವಿಶ್ವಾಸಿಗಳಾಗಲು ಆದೇಶಿಸುವನು (ಎಂದೇ ನೀವು ಭಾವಿಸುತ್ತಿರುವುದು?)

وَإِذۡ أَخَذَ ٱللَّهُ مِيثَٰقَ ٱلنَّبِيِّـۧنَ لَمَآ ءَاتَيۡتُكُم مِّن كِتَٰبٖ وَحِكۡمَةٖ ثُمَّ جَآءَكُمۡ رَسُولٞ مُّصَدِّقٞ لِّمَا مَعَكُمۡ لَتُؤۡمِنُنَّ بِهِۦ وَلَتَنصُرُنَّهُۥۚ قَالَ ءَأَقۡرَرۡتُمۡ وَأَخَذۡتُمۡ عَلَىٰ ذَٰلِكُمۡ إِصۡرِيۖ قَالُوٓاْ أَقۡرَرۡنَاۚ قَالَ فَٱشۡهَدُواْ وَأَنَا۠ مَعَكُم مِّنَ ٱلشَّٰهِدِينَ ٨١

**81.** ಅಲ್ಲಾಹು ಪ್ರವಾದಿಗಳಿಂದ ಕರಾರು ಪಡೆದ ಸಂದರ್ಭ(ವನ್ನು ಸ್ಮರಿಸಿರಿ). 'ನಾನು ನಿಮಗೆ ಗ್ರಂಥವನ್ನುಮತ್ತು ಜ್ಞಾನವನ್ನು ನೀಡಿ, ತರುವಾಯ ನಿಮ್ಮ ಬಳಿಯಿರುವುದನ್ನು ದೃಢೀಕರಿಸುತ್ತಾ ಓರ್ವ ಸಂದೇಶವಾಹಕರು ನಿಮ್ಮ ಬಳಿ ಬಂದರೆ ನೀವು ಖಂಡಿತವಾಗಿಯೂ ಅವನಲ್ಲಿವಿಶ್ವಾಸವಿಡಬೇಕು ಮತ್ತು ಅವನಿಗೆ ಸಹಾಯ ಮಾಡಬೇಕು ಎಂದು'. (ತರುವಾಯ) ಅಲ್ಲಾಹು (ಅವರೊಂದಿಗೆ) ಕೇಳಿದನು: 'ನೀವಿದನ್ನು ಒಪ್ಪಿಕೊಂಡು, ಆ ವಿಷಯದಲ್ಲಿ ನನ್ನೊಂದಿಗಿರುವ ಹೊಣೆಯನ್ನು ವಹಿಸಿಕೊಂಡಿರುವಿರಾ?' ಅವರು ಹೇಳಿದರು: 'ಹೌದು. ನಾವು ಒಪ್ಪಿಕೊಂಡಿರುವೆವು'. ಅವನು ಹೇಳಿದನು: 'ಹಾಗಾದರೆ ನೀವು ಅದಕ್ಕೆ ಸಾಕ್ಷಿಗಳಾಗಿರಿ. ನಾನೂ ನಿಮ್ಮೊಂದಿಗೆ ಸಾಕ್ಷಿಯಾಗಿರುವೆನು'.

فَمَن تَوَلَّىٰ بَعۡدَ ذَٰلِكَ فَأُوْلَٰٓئِكَ هُمُ ٱلۡفَٰسِقُونَ ٨٢

**82.** ಅದರ ನಂತರವೂ[1] ಯಾರಾದರೂ ವಿಮುಖರಾಗುವುದಾದರೆ ಅವರೇ ಧಿಕ್ಕಾರಿಗಳಾಗಿರುವರು.

أَفَغَيۡرَ دِينِ ٱللَّهِ يَبۡغُونَ وَلَهُۥٓ أَسۡلَمَ مَن فِي ٱلسَّمَٰوَٰتِ وَٱلۡأَرۡضِ طَوۡعٗا وَكَرۡهٗا وَإِلَيۡهِ يُرۡجَعُونَ ٨٣

**83.** ಅಲ್ಲಾಹುವಿನ ಧರ್ಮವಲ್ಲದ ಬೇರಾವುದೋ ಧರ್ಮವನ್ನು ಅವರು ಅರಸುತ್ತಿರುವರೇ? (ವಾಸ್ತವಿಕವಾಗಿ) ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ವಿಧೇಯತೆಯೊಂದಿಗೆ ಅಥವಾ

1 ಈ ಕರಾರಿನ ಬಗ್ಗೆ ಅರಿತುಕೊಂಡ ಬಳಿಕ ಒಬ್ಬ ಪೂರ್ವ ಪ್ರವಾದಿಯ ಅನುಯಾಯಿಗಳು ತಮ್ಮತ್ತ ಕಳುಹಿಸಲಾಗುವ ಹೊಸ ಪ್ರವಾದಿಯನ್ನು ತಿರಸ್ಕರಿಸಿದರೆ ಅದು ಗಂಭೀರ ಅಪರಾಧವಾಗಿದೆ. ಆದರೆ ಅಂತ್ಯ ಪ್ರವಾದಿ ಮುಹಮ್ಮದ್(ﷺ) ರವರ ಬಳಿಕ ನಕಲಿ ಪ್ರವಾದಿತ್ವವನ್ನು ವಾದಿಸುತ್ತಾ ಬರುವವರ ವಿಷಯವು ಇದರಿಂದ ಸಂಪೂರ್ಣ ಭಿನ್ನವಾಗಿದೆ. ನಕಲಿ ಪ್ರವಾದಿಗಳನ್ನು ತಿರಸ್ಕರಿಸದವರೇ ಸತ್ಯನಿಷೇಧಿಗಳಾಗಿರುವರು.

ಬಲವಂತವಾಗಿ ಅವನಿಗೆ ಶರಣಾಗಿರುವರು. ಅವರನ್ನು ಮರಳಿಸಲಾಗುವುದು ಅವನ ಬಳಿಗೇ ಆಗಿರುವುದು.

**84.** (ಓ ಪ್ರವಾದಿಯವರೇ!) ಹೇಳಿರಿ: ‘ಅಲ್ಲಾಹುವಿನಲ್ಲಿ, ನಮಗೆ ಅವತೀರ್ಣಗೊಳಿಸಲಾಗಿರುವುದರಲ್ಲಿ (ಕುರ್‌ಆನ್‌ನಲ್ಲಿ), ಇಬ್ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬ್ ಸಂತತಿಗಳಿಗೆ ಅವತೀರ್ಣಗೊಳಿಸಲಾಗಿರುವುದರಲ್ಲಿ, ಮೂಸಾ, ಈಸಾ ಹಾಗೂ ಇತರ ಪ್ರವಾದಿಗಳಿಗೆ ಅವರ ರಬ್‌ನ ವತಿಯಿಂದ ನೀಡಲಾಗಿರುವುದರಲ್ಲಿ ನಾವು ವಿಶ್ವಾಸವಿಟ್ಟಿರುವೆವು. ಅವರ ಪೈಕಿ ಯಾರ ನಡುವೆಯೂ ನಾವು ವ್ಯತ್ಯಾಸ ಕಲ್ಪಿಸಲಾರೆವು. ನಾವು ಅಲ್ಲಾಹುವಿಗೆ ಶರಣಾದವರಾಗಿರುವೆವು’.

قُلْ ءَامَنَّا بِٱللَّهِ وَمَآ أُنزِلَ عَلَيْنَا وَمَآ أُنزِلَ عَلَىٰٓ إِبْرَٰهِيمَ وَإِسْمَٰعِيلَ وَإِسْحَٰقَ وَيَعْقُوبَ وَٱلْأَسْبَاطِ وَمَآ أُوتِىَ مُوسَىٰ وَعِيسَىٰ وَٱلنَّبِيُّونَ مِن رَّبِّهِمْ لَا نُفَرِّقُ بَيْنَ أَحَدٍ مِّنْهُمْ وَنَحْنُ لَهُۥ مُسْلِمُونَ ﴿٨٤﴾

**85.** ಯಾರಾದರೂ ಇಸ್ಲಾಮ್‌ಗೆ (ಅಲ್ಲಾಹುವಿಗಿರುವ ಸಮರ್ಪಣೆಗೆ) ಹೊರತಾಗಿರುವುದನ್ನು ಧರ್ಮವಾಗಿ ಅರಸುವುದಾದರೆ ಅದನ್ನು ಅವನಿಂದ ಎಂದಿಗೂ ಸ್ವೀಕರಿಸಲಾಗದು. ಪರಲೋಕದಲ್ಲಿ ಅವನು ನಷ್ಟಹೊಂದಿದದವರ ಪೈಕಿ ಸೇರಿದವನಾಗುವನು.

وَمَن يَبْتَغِ غَيْرَ ٱلْإِسْلَٰمِ دِينًا فَلَن يُقْبَلَ مِنْهُ وَهُوَ فِى ٱلْءَاخِرَةِ مِنَ ٱلْخَٰسِرِينَ ﴿٨٥﴾

**86.** ವಿಶ್ವಾಸವಿಟ್ಟ ಬಳಿಕ, ಸಂದೇಶವಾಹಕರನ್ನು ಸತ್ಯವೆಂದು ಸಾಕ್ಷ್ಯವಹಿಸಿದ ಬಳಿಕ ಮತ್ತು ಸುವ್ಯಕ್ತ ಪುರಾವೆಗಳು ತಮ್ಮ ಬಳಿಗೆ ಬಂದ ಬಳಿಕ ಅವಿಶ್ವಾಸಿಗಳಾಗಿ ಮಾರ್ಪಟ್ಟ ಒಂದು ಜನತೆಯನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸುವುದಾದರೂ ಹೇಗೆ? ಅಕ್ರಮಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

كَيْفَ يَهْدِى ٱللَّهُ قَوْمًا كَفَرُوا۟ بَعْدَ إِيمَٰنِهِمْ وَشَهِدُوٓا۟ أَنَّ ٱلرَّسُولَ حَقٌّ وَجَآءَهُمُ ٱلْبَيِّنَٰتُ ۚ وَٱللَّهُ لَا يَهْدِى ٱلْقَوْمَ ٱلظَّٰلِمِينَ ﴿٨٦﴾

**87.** ಅಂತಹವರಿಗಿರುವ ಪ್ರತಿಫಲವು ಅಲ್ಲಾಹುವಿನ, ಮಲಕ್‌ಗಳ ಮತ್ತು ಜನರೆಲ್ಲರ ಶಾಪವು ಅವರ ಮೇಲಿರುವುದು ಎಂಬುದಾಗಿದೆ.

أُو۟لَٰٓئِكَ جَزَآؤُهُمْ أَنَّ عَلَيْهِمْ لَعْنَةَ ٱللَّهِ وَٱلْمَلَٰٓئِكَةِ وَٱلنَّاسِ أَجْمَعِينَ ﴿٨٧﴾

**88.** ಅವರು ಅದರಲ್ಲಿ (ಶಾಪ ನಿಮಿತ್ತ ಶಿಕ್ಷೆಯಲ್ಲಿ) ಶಾಶ್ವತರಾಗಿರುವವರು. ಅವರಿಗೆ ಶಿಕ್ಷೆಯನ್ನು ಹಗುರ ಗೊಳಿಸಲಾಗದು. ಅವರಿಗೆ ಕಾಲಾವಕಾಶವನ್ನೂ ನೀಡಲಾಗದು.

خَٰلِدِينَ فِيهَا لَا يُخَفَّفُ عَنۡهُمُ ٱلۡعَذَابُ وَلَا هُمۡ يُنظَرُونَ ٨٨

**89.** ಆದರೆ ಅದರ (ಅವಿಶ್ವಾಸದ) ಬಳಿಕ ಪಶ್ಚಾತ್ತಾಪ ಪಟ್ಟು, ಜೀವನವನ್ನು ಸುಧಾರಿಸಿಕೊಂಡವರ ಹೊರತು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

إِلَّا ٱلَّذِينَ تَابُواْ مِنۢ بَعۡدِ ذَٰلِكَ وَأَصۡلَحُواْ فَإِنَّ ٱللَّهَ غَفُورٞ رَّحِيمٌ ٨٩

**90.** ಖಂಡಿತವಾಗಿಯೂ ವಿಶ್ವಾಸವಿಟ್ಟ ಬಳಿಕ ಅವಿಶ್ವಾಸಿಗಳಾಗಿ ಮಾರ್ಪಟ್ಟವರು ಮತ್ತು ಅವಿಶ್ವಾಸವನ್ನು ಹೆಚ್ಚಿಸುತ್ತಲೇ ಹೋದವರು ಯಾರೋ ಅವರ ಪಶ್ಚಾತ್ತಾಪವನ್ನು ಎಂದಿಗೂ ಸ್ವೀಕರಿಸಲಾಗದು. ಪಥಭ್ರಷ್ಟರಾಗಿರುವವರು ಅವರೇ ಆಗಿರುವರು.

إِنَّ ٱلَّذِينَ كَفَرُواْ بَعۡدَ إِيمَٰنِهِمۡ ثُمَّ ٱزۡدَادُواْ كُفۡرٗا لَّن تُقۡبَلَ تَوۡبَتُهُمۡ وَأُوْلَٰٓئِكَ هُمُ ٱلضَّآلُّونَ ٩٠

**91.** ಅವಿಶ್ವಾಸವಿರಿಸಿದವರು ಮತ್ತು ಅವಿಶ್ವಾಸಿಗಳಾಗಿಯೇ ಮರಣಹೊಂದಿದವರ ಪೈಕಿ ಒಬ್ಬನು ಭೂಮಿ ತುಂಬಾ ಚಿನ್ನವನ್ನು ಪ್ರಾಯಶ್ಚಿತ್ತವಾಗಿ ನೀಡಿದರೂ ಅದನ್ನು ಅವನಿಂದ ಸ್ವೀಕರಿಸಲಾಗದು. ಅವರಿಗೆ ಯಾತನಾಮಯವಾದ ಶಿಕ್ಷೆಯಿದೆ. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

إِنَّ ٱلَّذِينَ كَفَرُواْ وَمَاتُواْ وَهُمۡ كُفَّارٞ فَلَن يُقۡبَلَ مِنۡ أَحَدِهِم مِّلۡءُ ٱلۡأَرۡضِ ذَهَبٗا وَلَوِ ٱفۡتَدَىٰ بِهِۦٓۗ أُوْلَٰٓئِكَ لَهُمۡ عَذَابٌ أَلِيمٞ وَمَا لَهُم مِّن نَّٰصِرِينَ ٩١

**92.** ನೀವು ಏನನ್ನು ಇಷ್ಟಪಡುತ್ತಿರುವಿರೋ ಅದರಿಂದ ನೀವು ವ್ಯಯಿಸುವ ತನಕ ನಿಮಗೆ ಪುಣ್ಯವನ್ನು ಸಂಪಾದಿಸಲು ಸಾಧ್ಯವಾಗದು. ನೀವು ಏನೇ ವ್ಯಯಿಸಿದರೂ ಖಂಡಿತವಾಗಿಯೂ ಅಲ್ಲಾಹು ಅದರ ಕುರಿತು ಅರಿವುಳ್ಳವನಾಗಿರುವನು.

لَن تَنَالُواْ ٱلۡبِرَّ حَتَّىٰ تُنفِقُواْ مِمَّا تُحِبُّونَۚ وَمَا تُنفِقُواْ مِن شَيۡءٖ فَإِنَّ ٱللَّهَ بِهِۦ عَلِيمٞ ٩٢

**93.** ಇಸ್ರಾಈಲ್ ಸಂತತಿಗಳಿಗೆ ಎಲ್ಲ ಆಹಾರಗಳೂ ಧರ್ಮಸಮ್ಮತವಾಗಿತ್ತು. ತೌರಾತ್ ಅವತೀರ್ಣಗೊಳ್ಳುವ ಮುನ್ನ ಇಸ್ರಾಈಲ್‌ರು

۞ كُلُّ ٱلطَّعَامِ كَانَ حِلّٗا لِّبَنِيٓ إِسۡرَٰٓءِيلَ إِلَّا مَا حَرَّمَ إِسۡرَٰٓءِيلُ عَلَىٰ نَفۡسِهِۦ مِن

(ಯಅ್‌ಕೂಬ್‌ರು) ಸ್ವತಃ ತಮ್ಮ ಮೇಲೆ ನಿಷಿದ್ಧಗೊಳಿಸಿದವುಗಳ ಹೊರತು. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸತ್ಯಸಂಧರಾಗಿದ್ದರೆ ತೌರಾತನ್ನು ತಂದು ಅದನ್ನು ಪಾರಾಯಣ ಮಾಡಿರಿ'.[1]

قَبۡلِ أَن تُنَزَّلَ ٱلتَّوۡرَىٰةُۗ قُلۡ فَأۡتُواْ بِٱلتَّوۡرَىٰةِ فَٱتۡلُوهَآ إِن كُنتُمۡ صَٰدِقِينَ ﴿٩٣﴾

**94.** ತರುವಾಯ ಅದರ ಬಳಿಕವೂ ಅಲ್ಲಾಹುವಿನ ಮೇಲೆ ಸುಳ್ಳು ಹೆಣೆದವರಾರೋ ಅವರೇ ಅಕ್ರಮಿಗಳಾಗಿರುವರು.

فَمَنِ ٱفۡتَرَىٰ عَلَى ٱللَّهِ ٱلۡكَذِبَ مِنۢ بَعۡدِ ذَٰلِكَ فَأُوْلَٰٓئِكَ هُمُ ٱلظَّٰلِمُونَ ﴿٩٤﴾

**95.** (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ಸತ್ಯವನ್ನೇ ಹೇಳಿರುವನು. ಆದ್ದರಿಂದ ಋಜು ಮನಸ್ಕನಾದ ಇಬ್ರಾಹೀಮ್‌ರ ಧರ್ಮವನ್ನು ಅನುಸರಿಸಿರಿ. ಅವರು ಬಹುದೇವಾರಾಧಕರ ಪೈಕಿ ಸೇರಿದವರಾಗಿರಲಿಲ್ಲ.'

قُلۡ صَدَقَ ٱللَّهُۗ فَٱتَّبِعُواْ مِلَّةَ إِبۡرَٰهِيمَ حَنِيفٗاۖ وَمَا كَانَ مِنَ ٱلۡمُشۡرِكِينَ ﴿٩٥﴾

**96.** ಖಂಡಿತವಾಗಿಯೂ ಮನುಷ್ಯರಿಗಾಗಿ ಸ್ಥಾಪಿಸಲಾದ ಮೊಟ್ಟಮೊದಲ ಆರಾಧನಾಲಯವು ಬಕ್ಕಾದಲ್ಲಿರುವುದಾಗಿದೆ.[2] (ಅದು) ಅನುಗ್ರಹೀತವೂ, ಸರ್ವಲೋಕಗಳ ಜನರಿಗೆ ಮಾರ್ಗದರ್ಶಿಯೂ ಆಗಿದೆ.

إِنَّ أَوَّلَ بَيۡتٖ وُضِعَ لِلنَّاسِ لَلَّذِي بِبَكَّةَ مُبَارَكٗا وَهُدٗى لِّلۡعَٰلَمِينَ ﴿٩٦﴾

**97.** ಅದರಲ್ಲಿ ಸ್ಪಷ್ಟವಾದ ದೃಷ್ಟಾಂತಗಳಿವೆ. (ವಿಶೇಷತಃ) ಇಬ್ರಾಹೀಮ್‌ರು ನಿಂತ ಸ್ಥಳವಿದೆ. ಯಾರು ಅದನ್ನು ಪ್ರವೇಶಿಸಿದನೋ ಅವನು ನಿರ್ಭೀತನಾಗಿರುವನು. ಆ ಭವನವನ್ನು ತಲುಪಲು ಸಾಧ್ಯವಿರುವ ಜನರು ಅದರೆಡೆಗೆ ಹಜ್ಜ್ ಯಾತ್ರೆ ಮಾಡುವುದು ಅವರಿಗೆ ಅಲ್ಲಾಹುವಿನೊಂದಿಗಿರುವ ಬಾಧ್ಯತೆಯಾಗಿದೆ.

فِيهِ ءَايَٰتُۢ بَيِّنَٰتٞ مَّقَامُ إِبۡرَٰهِيمَۖ وَمَن دَخَلَهُۥ كَانَ ءَامِنٗاۗ وَلِلَّهِ عَلَى ٱلنَّاسِ حِجُّ ٱلۡبَيۡتِ مَنِ ٱسۡتَطَاعَ إِلَيۡهِ سَبِيلٗاۚ وَمَن كَفَرَ فَإِنَّ ٱللَّهَ غَنِيٌّ عَنِ ٱلۡعَٰلَمِينَ ﴿٩٧﴾

1 ಗ್ರಂಥದವರನ್ನು ಕುರ್‌ಆನ್ ಪ್ರವಾದಿ ಇಬ್ರಾಹೀಮ್(عَلَيْهِ السَّلَامُ)ರವರ ಋಜುವಾದ ಮಾರ್ಗದೆಡೆಗೆ ಆಹ್ವಾನಿಸಿದಾಗ ಅವರೊಂದು ತರ್ಕವನ್ನು ಮುಂದಿಟ್ಟರು. ಇಬ್ರಾಹೀಮ್(عَلَيْهِ السَّلَامُ)ರವರ ಧರ್ಮದಲ್ಲಿ ಒಂಟೆ ಮಾಂಸವು ನಿಷಿದ್ಧವಲ್ಲವೇ? ಹಾಗಾದರೆ ಪ್ರವಾದಿ ಮುಹಮ್ಮದ್(صَلَّى ٱللَّهُ عَلَيْهِ وَسَلَّمَ) ರವರು ಏಕೆ ಅದನ್ನು ಸೇವಿಸುತ್ತಿರುವರು? ಈ ಆಯತ್ ಅದಕ್ಕಿರುವ ಉತ್ತರವಾಗಿದೆ. ಒಂಟೆ ಮಾಂಸವನ್ನು ಪ್ರವಾದಿ ಇಬ್ರಾಹೀಮ್(عَلَيْهِ السَّلَامُ)ರವರು ನಿಷಿದ್ಧವೆಂದು ಘೋಷಿಸಿರಲಿಲ್ಲ. ಅವರ ಕಾಲಾನಂತರ ಪ್ರವಾದಿ ಯಅ್‌ಕೂಬ್(عَلَيْهِ السَّلَامُ)ರವರು ಸ್ವತಃ ತಮ್ಮ ಮೇಲೆ ಅದನ್ನು ನಿಷಿದ್ಧವೆಂದು ಘೋಷಿಸಿದ್ದರು. ತರುವಾಯ ಇಸ್ರಾಈಲರಿಗೆ ಅದನ್ನು ನಿಷಿದ್ಧಗೊಳಿಸಲಾಯಿತು.

2 ಪವಿತ್ರ ಮಕ್ಕಾಗೆ ಅರಬಿಯಲ್ಲಿ ಬಕ್ಕ ಎಂಬ ಹೆಸರೂ ಇದೆ.

ಯಾರಾದರೂ ಅವಿಶ್ವಾಸವಿಡುವುದಾದರೆ ಖಂಡಿತವಾಗಿಯೂ ಅಲ್ಲಾಹು ಸರ್ವಲೋಕದವರಿಂದ ನಿರಪೇಕ್ಷನಾಗಿರುವನು.

**98.** (ಓ ಪ್ರವಾದಿಯವರೇ!) ಹೇಳಿರಿ: 'ಓ ಗ್ರಂಥದವರೇ! ನೀವು ಮಾಡುತ್ತಿರುವವುಗಳಿಗೆಲ್ಲ ಅಲ್ಲಾಹು ಸಾಕ್ಷಿಯಾಗಿರುವಾಗ ನೀವೇಕೆ ಅಲ್ಲಾಹುವಿನ ಸೂಕ್ತಿಗಳನ್ನು ನಿಷೇಧಿಸುತ್ತಿರುವಿರಿ?'

قُلْ يَٰٓأَهْلَ ٱلْكِتَٰبِ لِمَ تَكْفُرُونَ بِـَٔايَٰتِ ٱللَّهِ وَٱللَّهُ شَهِيدٌ عَلَىٰ مَا تَعْمَلُونَ ﴿٩٨﴾

**99.** (ಓ ಪ್ರವಾದಿಯವರೇ!) ಹೇಳಿರಿ: 'ಓ ಗ್ರಂಥದವರೇ! ವಿಶ್ವಾಸವಿಟ್ಟವರನ್ನು ಅಲ್ಲಾಹುವಿನ ಮಾರ್ಗದಿಂದ, (ಅದು ಸರಿಯಾಗಿದೆ ಎಂಬುದಕ್ಕೆ) ಸ್ವತಃ ನೀವೇ ಸಾಕ್ಷಿಗಳಾಗಿರುವಾಗ, ಅದನ್ನು ವಕ್ರವಾಗಿಸಲು ಪ್ರಯತ್ನಿಸುತ್ತಾ ನೀವೇಕೆ ತಡೆಯುತ್ತಿರುವಿರಿ?' ನೀವು ಮಾಡುತ್ತಿರುವ ಯಾವುದರ ಕುರಿತೂ ಅಲ್ಲಾಹು ಅಲಕ್ಷ್ಯನಲ್ಲ.

قُلْ يَٰٓأَهْلَ ٱلْكِتَٰبِ لِمَ تَصُدُّونَ عَن سَبِيلِ ٱللَّهِ مَنْ ءَامَنَ تَبْغُونَهَا عِوَجًا وَأَنتُمْ شُهَدَآءُ ۗ وَمَا ٱللَّهُ بِغَٰفِلٍ عَمَّا تَعْمَلُونَ ﴿٩٩﴾

**100.** ಓ ಸತ್ಯವಿಶ್ವಾಸಿಗಳೇ! ನೀವು ಗ್ರಂಥ ನೀಡಲಾದವರ ಪೈಕಿ ಒಂದು ಪಂಗಡವನ್ನು ಅನುಸರಿಸಿದರೆ, ನೀವು ವಿಶ್ವಾಸವಿಟ್ಟ ಬಳಿಕ ಅವರು ನಿಮ್ಮನ್ನು ಅವಿಶ್ವಾಸಿಗಳಾಗಿ ಮಾರ್ಪಡಿಸುವರು.

يَٰٓأَيُّهَا ٱلَّذِينَ ءَامَنُوٓا۟ إِن تُطِيعُوا۟ فَرِيقًا مِّنَ ٱلَّذِينَ أُوتُوا۟ ٱلْكِتَٰبَ يَرُدُّوكُم بَعْدَ إِيمَٰنِكُمْ كَٰفِرِينَ ﴿١٠٠﴾

**101.** ನಿಮಗೆ ಅಲ್ಲಾಹುವಿನ ವಚನಗಳನ್ನು ಓದಿ ಕೊಡಲಾಗುತ್ತಿರುವಾಗ ಮತ್ತು ನಿಮ್ಮ ಮಧ್ಯೆ ಅವನ ಸಂದೇಶವಾಹಕರಿರುವಾಗ ನೀವು ಹೇಗೆ ತಾನೆ ಅವಿಶ್ವಾಸಿಗಳಾಗಿ ಮಾರ್ಪಡುವಿರಿ? ಯಾರು ಅಲ್ಲಾಹುವನ್ನು ಬಿಗಿಯಾಗಿ ಹಿಡಿಯುವನೋ ಅವನು ನೇರಮಾರ್ಗದೆಡೆಗೆ ಮುನ್ನಡೆಸಲಾಗಿರುವನು.

وَكَيْفَ تَكْفُرُونَ وَأَنتُمْ تُتْلَىٰ عَلَيْكُمْ ءَايَٰتُ ٱللَّهِ وَفِيكُمْ رَسُولُهُۥ ۗ وَمَن يَعْتَصِم بِٱللَّهِ فَقَدْ هُدِىَ إِلَىٰ صِرَٰطٍ مُّسْتَقِيمٍ ﴿١٠١﴾

**102.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಬೇಕಾದ ರೀತಿಯಲ್ಲಿ ಭಯಪಡಿರಿ. ಮುಸ್ಲಿಮರಾಗಿಯೇ ವಿನಾ ನೀವು ಮರಣಹೊಂದುವಂತಾಗದಿರಲಿ.

يَٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ حَقَّ تُقَاتِهِۦ وَلَا تَمُوتُنَّ إِلَّا وَأَنتُم مُّسْلِمُونَ ﴿١٠٢﴾

**103**. ನೀವು ಒಟ್ಟಾಗಿ ಅಲ್ಲಾಹುವಿನ ಹಗ್ಗವನ್ನು ಬಿಗಿಯಾಗಿ ಹಿಡಿಯಿರಿ. ನೀವು ಭಿನ್ನರಾಗದಿರಿ. ನೀವು ಪರಸ್ಪರ ಶತ್ರುಗಳಾಗಿದ್ದಾಗ ಅಲ್ಲಾಹು ನಿಮಗೆ ದಯಪಾಲಿಸಿದ ಅನುಗ್ರಹವನ್ನು ಸ್ಮರಿಸಿರಿ. ಅವನು ನಿಮ್ಮ ಹೃದಯಗಳನ್ನು ಪರಸ್ಪರ ಬೆಸೆದನು. ಹಾಗೆಯೇ ಅವನ ಅನುಗ್ರಹದ ನಿಮಿತ್ತ ನೀವು ಸಹೋದರರಾಗಿ ಮಾರ್ಪಟ್ಟಿರಿ. ನೀವು ಅಗ್ನಿಕುಂಡದ[1] ಅಂಚಿನಲ್ಲಿದ್ದಿರಿ. ತರುವಾಯ ಅವನು ನಿಮ್ಮನ್ನು ಅದರಿಂದ ರಕ್ಷಿಸಿದನು. ಹೀಗೆ ಅಲ್ಲಾಹು ತನ್ನ ದೃಷ್ಟಾಂತಗಳನ್ನು ನಿಮಗೆ ವಿವರಿಸಿಕೊಡುತ್ತಿರುವನು. ನೀವು ಸನ್ಮಾರ್ಗವನ್ನು ಪಡೆದವರಾಗುವ ಸಲುವಾಗಿ.

وَٱعۡتَصِمُواْ بِحَبۡلِ ٱللَّهِ جَمِيعٗا وَلَا تَفَرَّقُواْۚ
وَٱذۡكُرُواْ نِعۡمَتَ ٱللَّهِ عَلَيۡكُمۡ إِذۡ كُنتُمۡ
أَعۡدَآءٗ فَأَلَّفَ بَيۡنَ قُلُوبِكُمۡ فَأَصۡبَحۡتُم
بِنِعۡمَتِهِۦٓ إِخۡوَٰنٗا وَكُنتُمۡ عَلَىٰ شَفَا حُفۡرَةٖ
مِّنَ ٱلنَّارِ فَأَنقَذَكُم مِّنۡهَاۗ كَذَٰلِكَ يُبَيِّنُ
ٱللَّهُ لَكُمۡ ءَايَٰتِهِۦ لَعَلَّكُمۡ تَهۡتَدُونَ ١٠٣

**104**. ಒಳಿತಿನೆಡೆಗೆ ಆಹ್ವಾನಿಸುವ, ಸದಾಚಾರವನ್ನು ಆದೇಶಿಸುವ ಮತ್ತು ದುರಾಚಾರವನ್ನು ವಿರೋಧಿಸುವ ಒಂದು ಸಮುದಾಯವು ನಿಮ್ಮಲ್ಲಿ ಉದ್ಭವಿಸಲಿ. ಯಶಸ್ಸುಗಳಿಸಿದವರು ಅವರೇ ಆಗಿರುವರು.

وَلۡتَكُن مِّنكُمۡ أُمَّةٞ يَدۡعُونَ إِلَى ٱلۡخَيۡرِ
وَيَأۡمُرُونَ بِٱلۡمَعۡرُوفِ وَيَنۡهَوۡنَ عَنِ
ٱلۡمُنكَرِۚ وَأُوْلَٰٓئِكَ هُمُ ٱلۡمُفۡلِحُونَ ١٠٤

**105**. ತಮ್ಮ ಬಳಿಗೆ ಸ್ಪಷ್ಟವಾದ ಪುರಾವೆಗಳು ಬಂದ ಬಳಿಕವೂ ವಿವಿಧ ಪಂಗಡಗಳಾಗಿ ಬೇರ್ಪಟ್ಟು ಭಿನ್ನರಾಗಿ ಹೋದವರಂತೆ ನೀವಾಗದಿರಿ. ಘೋರ ಶಿಕ್ಷೆಯಿರುವುದು ಅವರಿಗೇ ಆಗಿದೆ.

وَلَا تَكُونُواْ كَٱلَّذِينَ تَفَرَّقُواْ وَٱخۡتَلَفُواْ
مِنۢ بَعۡدِ مَا جَآءَهُمُ ٱلۡبَيِّنَٰتُۚ وَأُوْلَٰٓئِكَ
لَهُمۡ عَذَابٌ عَظِيمٞ ١٠٥

**106**. ಕೆಲವು ಮುಖಗಳು ಬೆಳ್ಳಗಾಗುವ ಮತ್ತು ಕೆಲವು ಮುಖಗಳು ಕರ್ರಗಾಗುವ ದಿನ! ಮುಖಗಳು ಕರ್ರಗಾದವರಾರೋ ಅವರೊಂದಿಗೆ: 'ವಿಶ್ವಾಸವಿಟ್ಟ ಬಳಿಕ ನೀವು ಅವಿಶ್ವಾಸಿಗಳಾಗಿ ಮಾರ್ಪಟ್ಟಿರುವಿರಾ? ನೀವು ಅವಿಶ್ವಾಸಿಗಳಾಗಿ ಮಾರ್ಪಟ್ಟ ಫಲವಾಗಿ ಶಿಕ್ಷೆಯ ರುಚಿಯನ್ನು ಸವಿಯಿರಿ.' ಎಂದು ಹೇಳಲಾಗುವುದು.

يَوۡمَ تَبۡيَضُّ وُجُوهٞ وَتَسۡوَدُّ وُجُوهٞۚ فَأَمَّا
ٱلَّذِينَ ٱسۡوَدَّتۡ وُجُوهُهُمۡ أَكَفَرۡتُم بَعۡدَ
إِيمَٰنِكُمۡ فَذُوقُواْ ٱلۡعَذَابَ بِمَا كُنتُمۡ
تَكۡفُرُونَ ١٠٦

---

1 ಬಹುದೇವಾರಾಧನೆ ಮತ್ತು ಅಕ್ರಮ ಪ್ರವೃತ್ತಿಗಳ ನಿಮಿತ್ತ ನೀವು ನರಕಾಗ್ನಿಯ ಹೊಂಡದಲ್ಲಿ ಬೀಳುವವರಾಗಿದ್ದಿರಿ. ಆಗ ಅಲ್ಲಾಹು ನಿಮ್ಮನ್ನು ಸತ್ಯವಿಶ್ವಾಸದ ಮೂಲಕ ರಕ್ಷಿಸಿದನು ಎಂದು ಅಲ್ಲಾಹು ಅವರಿಗೆ ನೆನಪಿಸುತ್ತಿರುವನು.

107. ಆದರೆ ಮುಖಗಳು ಬೆಳ್ಳಗಾದವರು ಯಾರೋ ಅವರು ಅಲ್ಲಾಹುವಿನ ಕರುಣೆಯಲ್ಲಿರುವರು. ಅವರು ಅದರಲ್ಲಿ ಶಾಶ್ವತವಾಸಿಗಳಾಗಿರುವರು.

وَأَمَّا ٱلَّذِينَ ٱبۡيَضَّتۡ وُجُوهُهُمۡ فَفِي رَحۡمَةِ ٱللَّهِۖ هُمۡ فِيهَا خَٰلِدُونَ ١٠٧

108. ಇವು ಅಲ್ಲಾಹುವಿನ ದೃಷ್ಟಾಂತಗಳಾಗಿವೆ. ಇವುಗಳನ್ನು ತಮಗೆ ಸತ್ಯದೊಂದಿಗೆ ಓದಿಕೊಡುತ್ತಿರುವೆವು ಅಲ್ಲಾಹು ಸರ್ವಲೋಕದವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲು ಇಚ್ಛಿಸಲಾರನು.

تِلۡكَ ءَايَٰتُ ٱللَّهِ نَتۡلُوهَا عَلَيۡكَ بِٱلۡحَقِّۗ وَمَا ٱللَّهُ يُرِيدُ ظُلۡمٗا لِّلۡعَٰلَمِينَ ١٠٨

109. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ವಿಷಯಗಳೆಲ್ಲವೂ ಮರಳಿಸಲಾಗುವುದು ಅಲ್ಲಾಹುವಿನ ಬಳಿಗಾಗಿದೆ.

وَلِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۚ وَإِلَى ٱللَّهِ تُرۡجَعُ ٱلۡأُمُورُ ١٠٩

110. ನೀವು ಮನುಕುಲಕ್ಕಾಗಿ ಹೊರತರಲಾಗಿರುವ ಉತ್ತಮ ಸಮುದಾಯವಾಗಿರುವಿರಿ. ನೀವು ಸದಾಚಾರವನ್ನು ಆದೇಶಿಸುತ್ತಿರುವಿರಿ, ದುರಾಚಾರವನ್ನು ವಿರೋಧಿಸುತ್ತಿರುವಿರಿ ಮತ್ತು ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರುವಿರಿ. ಗ್ರಂಥದವರು ವಿಶ್ವಾಸವಿಡುತ್ತಿದ್ದರೆ ಅದು ಅವರ ಪಾಲಿಗೆ ಉತ್ತಮವಾಗಿರುತ್ತಿತ್ತು. ಅವರ ಪೈಕಿ ವಿಶ್ವಾಸವಿಟ್ಟವರೂ ಇರುವರು. ಆದರೆ ಅವರ ಪೈಕಿ ಹೆಚ್ಚಿನವರೂ ಧಿಕ್ಕಾರಿಗಳಾಗಿರುವರು.

كُنتُمۡ خَيۡرَ أُمَّةٍ أُخۡرِجَتۡ لِلنَّاسِ تَأۡمُرُونَ بِٱلۡمَعۡرُوفِ وَتَنۡهَوۡنَ عَنِ ٱلۡمُنكَرِ وَتُؤۡمِنُونَ بِٱللَّهِۗ وَلَوۡ ءَامَنَ أَهۡلُ ٱلۡكِتَٰبِ لَكَانَ خَيۡرٗا لَّهُمۚ مِّنۡهُمُ ٱلۡمُؤۡمِنُونَ وَأَكۡثَرُهُمُ ٱلۡفَٰسِقُونَ ١١٠

111. ಕ್ಷುಲ್ಲಕ ಉಪಟಳಗಳ ವಿನಾ ನಿಮಗೆ ಯಾವುದೇ ಹಾನಿಯನ್ನು ಮಾಡಲೂ ಅವರಿಗೆ ಸಾಧ್ಯವಾಗಲಾರದು. ಅವರು ನಿಮ್ಮೊಂದಿಗೆ ಯುದ್ಧ ಹೂಡುವುದಾದರೂ ಅವರು ವಿಮುಖರಾಗಿ ಓಡುವರು. ತರುವಾಯ ಅವರಿಗೆ ಸಹಾಯವು ದೊರೆಯಲಾರದು.

لَن يَضُرُّوكُمۡ إِلَّآ أَذٗىۖ وَإِن يُقَٰتِلُوكُمۡ يُوَلُّوكُمُ ٱلۡأَدۡبَارَ ثُمَّ لَا يُنصَرُونَ ١١١

112. ಅವರು ಎಲ್ಲಿ ಕಂಡುಬಂದರೂ ನಿಂದ್ಯತೆಯು ಅವರ ಮೇಲೆ ಹೇರಲ್ಪಟ್ಟಿರುವುದು. ಅಲ್ಲಾಹುವಿನಿಂದಿರುವ ಹಗ್ಗದಿಂದ ಅಥವಾ

ضُرِبَتۡ عَلَيۡهِمُ ٱلذِّلَّةُ أَيۡنَ مَا ثُقِفُوٓاْ إِلَّا بِحَبۡلٖ مِّنَ ٱللَّهِ وَحَبۡلٖ مِّنَ ٱلنَّاسِ

ಜನರಿಂದಿರುವ ಹಗ್ಗದಿಂದ ವಿನಾ (ಅವರಿಗೆ ಅದರಿಂದ ಮುಕ್ತಿ ಸಿಗಲಾರದು). ಅವರು ಅಲ್ಲಾಹುವಿನ ಕ್ರೋಧಕ್ಕೆ ಪಾತ್ರರಾಗಿರುವರು ಮತ್ತು ನಿಕೃಷ್ಟತೆಯು ಅವರ ಮೇಲೆ ಹೇರಲ್ಪಟ್ಟಿರುವುದು. ಅದು ಅವರು ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿರುವ ಮತ್ತು ಪ್ರವಾದಿಗಳನ್ನು ಅನ್ಯಾಯವಾಗಿ ಕೊಲೆಗೈದಿರುವ ಕಾರಣದಿಂದಾಗಿದೆ. ಅದು ಅವರು ಧಿಕ್ಕಾರ ತೋರಿರುವ ಮತ್ತು ಅತಿಕ್ರಮವೆಸಗಿರುವ ಕಾರಣದಿಂದಲೂ ಆಗಿದೆ.

وَبَآءُو بِغَضَبٍ مِّنَ ٱللَّهِ وَضُرِبَتْ عَلَيْهِمُ
ٱلْمَسْكَنَةُ ۚ ذَٰلِكَ بِأَنَّهُمْ كَانُوا۟ يَكْفُرُونَ
بِـَٔايَـٰتِ ٱللَّهِ وَيَقْتُلُونَ ٱلْأَنۢبِيَآءَ بِغَيْرِ حَقٍّ ۚ
ذَٰلِكَ بِمَا عَصَوا۟ وَّكَانُوا۟ يَعْتَدُونَ ﴿١١٢﴾

**113.** ಅವರೆಲ್ಲರೂ ಸಮಾನರಲ್ಲ. ಸನ್ಮಾರ್ಗದಲ್ಲಿ ನೆಲೆನಿಂತಿರುವ ಒಂದು ಸಮುದಾಯವು ಗ್ರಂಥದವರಲ್ಲಿದೆ: ಅವರು ರಾತ್ರಿ ವೇಳೆಯಲ್ಲಿ ಸಾಷ್ಟಾಂಗ (ನಮಾಝ್) ಮಾಡುತ್ತಾ ಅಲ್ಲಾಹುವಿನ ವಚನಗಳನ್ನು ಪಾರಾಯಣ ಮಾಡುತ್ತಿರುವರು.

۞ لَيْسُوا۟ سَوَآءً ۗ مِّنْ أَهْلِ ٱلْكِتَـٰبِ أُمَّةٌ
قَآئِمَةٌ يَتْلُونَ ءَايَـٰتِ ٱللَّهِ ءَانَآءَ ٱلَّيْلِ وَهُمْ
يَسْجُدُونَ ﴿١١٣﴾

**114.** ಅವರು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರೂ, ಸದಾಚಾರನ್ನು ಆದೇಶಿಸುವವರೂ, ದುರಾಚಾರವನ್ನು ವಿರೋಧಿಸುವವರೂ, ಸತ್ಕರ್ಮಗಳೆಡೆಗೆ ಧಾವಂತದಿಂದ ಮುನ್ನುಗ್ಗುವವರೂ ಆಗಿರುವರು. ಅವರು ಸಜ್ಜನರಲ್ಲಿ ಸೇರಿದವರಾಗಿರುವರು.

يُؤْمِنُونَ بِٱللَّهِ وَٱلْيَوْمِ ٱلْـَٔاخِرِ وَيَأْمُرُونَ
بِٱلْمَعْرُوفِ وَيَنْهَوْنَ عَنِ ٱلْمُنكَرِ
وَيُسَـٰرِعُونَ فِى ٱلْخَيْرَٰتِ ۖ وَأُو۟لَـٰٓئِكَ مِنَ
ٱلصَّـٰلِحِينَ ﴿١١٤﴾

**115.** ಅವರು ಯಾವುದೇ ಸತ್ಕಾರ್ಯ ಮಾಡಿದರೂ ಅದರ ಪ್ರತಿಫಲವನ್ನು ಅವರಿಗೆ ನಿಷೇಧಿಸಲ್ಪಡದು. ಅಲ್ಲಾಹು ಭಯಭಕ್ತಿ ಪಾಲಿಸುವವರ ಕುರಿತು ಅರಿವುಳ್ಳವನಾಗಿರುವನು.

وَمَا يَفْعَلُوا۟ مِنْ خَيْرٍ فَلَن يُكْفَرُوهُ ۗ وَٱللَّهُ
عَلِيمٌۢ بِٱلْمُتَّقِينَ ﴿١١٥﴾

**116.** ಖಂಡಿತವಾಗಿಯೂ ಸತ್ಯನಿಷೇಧಿಗಳಾರೋ, ಅವರಿಗೆ ಅವರ ಸಂಪತ್ತಾಗಲಿ, ಸಂತಾನವಾಗಲಿ ಅಲ್ಲಾಹುವಿನ ಶಿಕ್ಷೆಯಿಂದ ಎಂದಿಗೂ ಯಾವ ರಕ್ಷಣೆಯನ್ನೂ ಒದಗಿಸದು. ನರಕವಾಸಿಗಳು ಅವರೇ

إِنَّ ٱلَّذِينَ كَفَرُوا۟ لَن تُغْنِىَ عَنْهُمْ
أَمْوَٰلُهُمْ وَلَآ أَوْلَـٰدُهُم مِّنَ ٱللَّهِ شَيْـًٔا ۖ
وَأُو۟لَـٰٓئِكَ أَصْحَـٰبُ ٱلنَّارِ ۚ هُمْ فِيهَا
خَـٰلِدُونَ ﴿١١٦﴾

ಆಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

مَثَلُ مَا يُنفِقُونَ فِي هَٰذِهِ ٱلْحَيَوٰةِ ٱلدُّنْيَا كَمَثَلِ رِيحٍ فِيهَا صِرٌّ أَصَابَتْ حَرْثَ قَوْمٍ ظَلَمُوٓاْ أَنفُسَهُمْ فَأَهْلَكَتْهُ ۚ وَمَا ظَلَمَهُمُ ٱللَّهُ وَلَٰكِنْ أَنفُسَهُمْ يَظْلِمُونَ ﴿١١٧﴾

117. ಈ ಐಹಿಕ ಜೀವನದಲ್ಲಿ ಅವರು ವ್ಯಯಿಸುವುದನ್ನು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದ ಒಂದು ಜನತೆಯ ಕೃಷಿಸ್ಥಳದಲ್ಲಿ ಬಲವಾಗಿ ಬೀಸಿ ತರುವಾಯ ಅದನ್ನು ನಾಶ ಮಾಡಿದ ಒಂದು ಶೀತಲ ಮಾರುತದೊಂದಿಗೆ ಹೋಲಿಸಬಹುದು.(1) ಅಲ್ಲಾಹು ಅವರೊಂದಿಗೆ ಅನ್ಯಾಯವೆಸಗಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿರುವರು.

يَٰٓأَيُّهَا ٱلَّذِينَ ءَامَنُواْ لَا تَتَّخِذُواْ بِطَانَةً مِّن دُونِكُمْ لَا يَأْلُونَكُمْ خَبَالًا وَدُّواْ مَا عَنِتُّمْ قَدْ بَدَتِ ٱلْبَغْضَآءُ مِنْ أَفْوَٰهِهِمْ وَمَا تُخْفِي صُدُورُهُمْ أَكْبَرُ ۚ قَدْ بَيَّنَّا لَكُمُ ٱلْءَايَٰتِ ۖ إِن كُنتُمْ تَعْقِلُونَ ﴿١١٨﴾

118. ಓ ಸತ್ಯವಿಶ್ವಾಸಿಗಳೇ! ನೀವು ನಿಮ್ಮವರನ್ನಲ್ಲದೆ ಇತರರನ್ನು ಆತ್ಮೀಯಮಿತ್ರರನ್ನಾಗಿ ಮಾಡಿಕೊಳ್ಳದಿರಿ. ನಿಮಗೆ ಹಾನಿಯನ್ನುಂಟುಮಾಡುವ ಯಾವುದೇ ವಿಷಯದಲ್ಲಿ ಅವರು ಒಂದಿಷ್ಟೂ ಎಡವಲಾರರು. ನೀವು ಸಂಕಷ್ಟಕ್ಕೀಡಾಗುವುದು ಅವರಿಗೆ ಪ್ರಿಯವಾಗಿದೆ. ಅವರ ಬಾಯಿಯಿಂದ ವಿದ್ವೇಷವು ಬಹಿರಂಗಗೊಂಡಿದೆ. ಅವರ ಹೃದಯಗಳು ಮರೆಮಾಚುತ್ತಿರುವುದು ಹೆಚ್ಚು ಮಾರಕವಾಗಿದೆ. ನಿಮಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಟ್ಟಿರುವೆವು, ನೀವು ಚಿಂತಿಸಿ ಗ್ರಹಿಸುವವರಾಗಿದ್ದರೆ.

هَٰٓأَنتُمْ أُوْلَآءِ تُحِبُّونَهُمْ وَلَا يُحِبُّونَكُمْ وَتُؤْمِنُونَ بِٱلْكِتَٰبِ كُلِّهِۦ وَإِذَا لَقُوكُمْ

119. ಅಗೋ ನೋಡಿರಿ! ನೀವು ಅವರನ್ನು ಪ್ರೀತಿಸುತ್ತಿರುವಿರಿ. ಆದರೆ ಅವರು ನಿಮ್ಮನ್ನು ಪ್ರೀತಿಸುತ್ತಿಲ್ಲ. ನೀವು ಎಲ್ಲ ಗ್ರಂಥಗಳಲ್ಲೂ

1 ಕೀರ್ತಿ ಮತ್ತು ದುರಭಿಮಾನಕ್ಕಾಗಿ ಹಣ ಖರ್ಚುಮಾಡುವವರ ಪೈಕಿ ಹೆಚ್ಚಿನವರೂ ತಾವು ದೊಡ್ಡ ಜನಸೇವೆ ಮಾಡುತ್ತಿರುವೆವು ಎಂದು ತೋರ್ಪಡಿಸುವರು. ಆದರೆ ಪರಲೋಕವನ್ನು ತಲುಪಿದಾಗ ಸತ್ಯನಿಷೇಧ ಮತ್ತು ಕಾಪಟ್ಯವು ಅವರ ಕರ್ಮಗಳನ್ನೆಲ್ಲ ನಿಷ್ಫಲಗೊಳಿಸಿದ್ದಾಗಿ ಅವರು ಕಾಣುವರು. ಆಗ ಅವರ ಸ್ಥಿತಿಯು ಅತಿವೃಷ್ಟಿಯುಂಟಾಗಿ ನಾಶವಾದ ಕೃಷಿಯ ಒಡೆಯನಂತಿರುವುದು.

قَالُوٓاْ ءَامَنَّا وَإِذَا خَلَوۡاْ عَضُّواْ عَلَيۡكُمُ
ٱلۡأَنَامِلَ مِنَ ٱلۡغَيۡظِۚ قُلۡ مُوتُواْ بِغَيۡظِكُمۡۗ
إِنَّ ٱللَّهَ عَلِيمُۢ بِذَاتِ ٱلصُّدُورِ ﴿١١٩﴾

ವಿಶ್ವಾಸವಿಡುತ್ತಿರುವಿರಿ.[1] ನಿಮ್ಮನ್ನು ಭೇಟಿಯಾಗುವಾಗ ಅವರು 'ನಾವು ವಿಶ್ವಾಸ ವಿಟ್ಟಿರುವೆವು' ಎನ್ನುವರು. ಆದರೆ ಅವರು ಏಕಾಂಗಿಗಳಾಗುವಾಗ ನಿಮ್ಮ ಮೇಲಿರುವ ಕೋಪದ ನಿಮಿತ್ತ ಅವರು ಬೆರಳುಗಳನ್ನು ಕಚ್ಚುವರು. (ಓ ಪ್ರವಾದಿಯವರೇ!) ಹೇಳಿರಿ: 'ನೀವು ನಿಮ್ಮ ಕೋಪದೊಂದಿಗೆ ಮರಣ ಹೊಂದಿರಿ!'. ಖಂಡಿತವಾಗಿಯೂ ಅಲ್ಲಾಹು ಹೃದಯಗಳೊಳಗಿರುವುದನ್ನು ಅರಿಯುವವನಾಗಿರುವನು.

إِن تَمۡسَسۡكُمۡ حَسَنَةٞ تَسُؤۡهُمۡ وَإِن
تُصِبۡكُمۡ سَيِّئَةٞ يَفۡرَحُواْ بِهَاۖ وَإِن تَصۡبِرُواْ
وَتَتَّقُواْ لَا يَضُرُّكُمۡ كَيۡدُهُمۡ شَيۡـًٔاۗ إِنَّ
ٱللَّهَ بِمَا يَعۡمَلُونَ مُحِيطٞ ﴿١٢٠﴾

**120.** ನಿಮಗೇನಾದರೂ ಒಳಿತುಂಟಾದರೆ ಅದು ಅವರಿಗೆ ಅಸಮಾಧಾನವುಂಟುಮಾಡುವುದು. ನಿಮಗೇನಾದರೂ ಕೆಡುಕು ಬಾಧಿಸಿದರೆ ಅದರಿಂದಾಗಿ ಅವರು ಆನಂದಿಸುವರು. ನೀವು ಸಹನೆ ವಹಿಸುತ್ತಲೂ, ಭಯಭಕ್ತಿ ಪಾಲಿಸುತ್ತಲೂ ಇದ್ದರೆ ಅವರ ಕುತಂತ್ರವು ನಿಮಗೆ ಯಾವ ಹಾನಿಯನ್ನೂ ಮಾಡದು. ಖಂಡಿತವಾಗಿಯೂ ಅಲ್ಲಾಹು ಅವರು ಮಾಡುತ್ತಿರುವುದನ್ನೆಲ್ಲ ಆವರಿಸಿ ಕೊಂಡಿರುವನು.

وَإِذۡ غَدَوۡتَ مِنۡ أَهۡلِكَ تُبَوِّئُ ٱلۡمُؤۡمِنِينَ
مَقَٰعِدَ لِلۡقِتَالِۗ وَٱللَّهُ سَمِيعٌ عَلِيمٌ ﴿١٢١﴾

**121.** (ಓ ಪ್ರವಾದಿಯವರೇ!) ಸತ್ಯವಿಶ್ವಾಸಿಗಳಿಗೆ ಯುದ್ಧ ತಾಣಗಳನ್ನು ಸಜ್ಜುಗೊಳಿಸುವ ಸಲುವಾಗಿ ತಾವು ಮುಂಜಾನೆ ತಮ್ಮ ಕುಟುಂಬದಿಂದ ಹೊರಹೋದ ಸಂದರ್ಭ(ವನ್ನು ಸ್ಮರಿಸಿರಿ). ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

1 ಮುಸ್ಲಿಮರ ಮತ್ತು ಗ್ರಂಥದವರ ಮಧ್ಯೆಯಿರುವ ಮೂಲಭೂತವಾದ ವ್ಯತ್ಯಾಸವೊಂದನ್ನು ಇಲ್ಲಿ ಸೂಚಿಸಲಾಗಿದೆ. ಅಲ್ಲಾಹು ಅವತೀರ್ಣಗೊಳಿಸಿದ ಸರ್ವ ಗ್ರಂಥಗಳಲ್ಲೂ ಮುಸ್ಲಿಮರು ವಿಶ್ವಾಸವಿಡುತ್ತಾರೆ. ಆದರೆ ಯಹೂದಿಗಳು ಇಂಜೀಲ್ ಮತ್ತು ಕುರ್‌ಆನನ್ನು ತಿರಸ್ಕರಿಸುತ್ತಾರೆ. ಕ್ರೈಸ್ತರು ಕುರ್‌ಆನ್‌ನ ಹೊರತು ಉಳಿದ ಗ್ರಂಥಗಳಲ್ಲಿ ವಿಶ್ವಾಸವಿಡುತ್ತಾರೆ. ಆದ್ದರಿಂದ ಮುಸ್ಲಿಮರ ಹೊರತು ಇತರೆಲ್ಲರೂ ಅಲ್ಲಾಹುವಿನ ಸಂದೇಶವನ್ನು ತಿರಸ್ಕರಿಸುವವರಾಗಿರುವರು.

**122.** ನಿಮ್ಮ ಪೈಕಿ ಎರಡು ಪಂಗಡಗಳು ಹೇಡಿತನ ತೋರಲು ಬಯಸಿದ ಸಂದರ್ಭ(ವನ್ನು ಸ್ಮರಿಸಿರಿ). ಆದರೆ ಆ ಎರಡು ಪಂಗಡಗಳ ರಕ್ಷಕನು ಅಲ್ಲಾಹುವಾಗಿರುವನು. ಸತ್ಯವಿಶ್ವಾಸಿಗಳು ಅಲ್ಲಾಹುವಿನ ಮೇಲೆಯೇ ಭರವಸೆಯಿಡಲಿ.[1]

إِذْ هَمَّت طَّآئِفَتَانِ مِنكُمْ أَن تَفْشَلَا وَٱللَّهُ وَلِيُّهُمَا ۗ وَعَلَى ٱللَّهِ فَلْيَتَوَكَّلِ ٱلْمُؤْمِنُونَ ﴿١٢٢﴾

**123.** ಬದ್ರ್‌ನಲ್ಲಿ ನೀವು ಬಲಹೀನರಾಗಿದ್ದಾಗ ಅಲ್ಲಾಹು ನಿಮಗೆ ಸಹಾಯವಿತ್ತಿರುವನು. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ. ನೀವು ಕೃತಜ್ಞತೆ ಸಲ್ಲಿಸುವವರಾಗಲೂಬಹುದು.

وَلَقَدْ نَصَرَكُمُ ٱللَّهُ بِبَدْرٍ وَأَنتُمْ أَذِلَّةٌ ۖ فَٱتَّقُوا۟ ٱللَّهَ لَعَلَّكُمْ تَشْكُرُونَ ﴿١٢٣﴾

**124.** (ಓ ಪ್ರವಾದಿಯವರೇ!) 'ನಿಮ್ಮ ರಬ್ ಮೂರು ಸಾವಿರ ಮಲಕ್‌ಗಳನ್ನು ಇಳಿಸಿ ನಿಮಗೆ ಸಹಾಯಮಾಡುವನು ಎಂಬುದು ನಿಮಗೆ ಸಾಕಾಗಲಾರದೇ?' ಎಂದು ತಾವು ಸತ್ಯವಿಶ್ವಾಸಿಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

إِذْ تَقُولُ لِلْمُؤْمِنِينَ أَلَن يَكْفِيَكُمْ أَن يُمِدَّكُمْ رَبُّكُم بِثَلَٰثَةِ ءَالَٰفٍ مِّنَ ٱلْمَلَٰٓئِكَةِ مُنزَلِينَ ﴿١٢٤﴾

**125.** (ತರುವಾಯ ಅಲ್ಲಾಹು ಹೀಗೆ ವಾಗ್ದಾನ ಮಾಡಿದನು): ಹೌದು! ನೀವು ಸಹನೆ ವಹಿಸಿದರೆ ಮತ್ತು ಭಯಭಕ್ತಿ ಪಾಲಿಸಿದರೆ ನಿಮ್ಮ ಬಳಿಗೆ ಶತ್ರುಗಳು ಈ ಕ್ಷಣದಲ್ಲೇ ಬಂದರೂ ನಿಮ್ಮ ರಬ್ ವಿಶೇಷ ಗುರುತುಗಳಿರುವ ಐದು ಸಾವಿರ ಮಲಕ್‌ಗಳ ಮೂಲಕ ನಿಮಗೆ ಸಹಾಯ ಮಾಡುವನು.[2]

بَلَىٰٓ ۚ إِن تَصْبِرُوا۟ وَتَتَّقُوا۟ وَيَأْتُوكُم مِّن فَوْرِهِمْ هَٰذَا يُمْدِدْكُمْ رَبُّكُم بِخَمْسَةِ ءَالَٰفٍ مِّنَ ٱلْمَلَٰٓئِكَةِ مُسَوِّمِينَ ﴿١٢٥﴾

---

1 ಉಹುದ್ ಯುದ್ಧಕ್ಕೆ ಸಂಬಂಧಿಸಿದ ವಿಷಯಗಳತ್ತ ಕುರ್‌ಆನ್ ಗಮನ ಸೆಳೆಯುತ್ತದೆ. ಕಾಲಾಳುಪಡೆ, ಅಶ್ವಸೇನೆ ಮತ್ತು ಬಿಲ್ವಿದ್ಯೆ ಪ್ರವೀಣರನ್ನು ಕೆಲವು ವಿಶೇಷ ಸ್ಥಳಗಳಲ್ಲಿ ನಿಲ್ಲಿಸುವ ಮೂಲಕ ಪ್ರವಾದಿ(ﷺ)ರವರು ಯುದ್ಧವನ್ನು ರೂಪಿಸಿದ್ದರು. ಯುದ್ಧತಂತ್ರದ ಪ್ರಮುಖ ಭಾಗವಾದ ಒಂದು ಸ್ಥಳದಲ್ಲಿ ಕಾವಲು ನಿಲ್ಲಿಸಲಾಗಿದ್ದ ಬಿಲ್ಗಾರರು ತಮ್ಮ ಕಾರ್ಯನಿರ್ವಹಣೆಯಲ್ಲಿ ಲೋಪವೆಸಗಿದ ಕಾರಣ ಉಹುದ್ ಯುದ್ಧದಲ್ಲಿ ಮುಸ್ಲಿಮರಿಗೆ ಕೆಲವು ನಾಶನಷ್ಟಗಳು ಸಂಭವಿಸಿದವು. ರಣರಂಗದಲ್ಲಿ ಹೋರಾಡುತ್ತಿದ್ದವರ ಪೈಕಿ ಎರಡು ಜನಾಂಗದವರು ಭಯವಿಹ್ವಲರಾಗಿ ಹಿಂದಿರುಗಿ ಓಡಬೇಕೆಂದು ಒಂದು ಕ್ಷಣ ಭಾವಿಸಿದರಾದರೂ ಅಲ್ಲಾಹು ಅವರ ಮನಸ್ಸಿಗೆ ಸುದೃಢತೆಯನ್ನು ನೀಡಿದ ವಿಷಯವನ್ನು ಇಲ್ಲಿ ನೆನಪಿಸುತ್ತಿರುವನು.

2 ಬದ್ರ್‌ನಲ್ಲಿ ಅಲ್ಲಾಹು ಸತ್ಯವಿಶ್ವಾಸಿಗಳಿಗೆ ಮಲಕ್‌ಗಳ ಬೆಂಬಲವನ್ನು ನೀಡಿದ್ದನೆಂದು ಹೆಚ್ಚಿನ ಕುರ್‌ಆನ್ ವ್ಯಾಖ್ಯಾನಕಾರರು ಹೇಳಿದ್ದಾರೆ. ಇಲ್ಲಿ ಪರಾಮರ್ಶಿಸಿರುವುದು ಅಲ್ಲಾಹುವಿನ ವಾಗ್ದಾನವನ್ನಾಗಿದೆ. ಅವನು ವಾಗ್ದಾನ

وَمَا جَعَلَهُ ٱللَّهُ إِلَّا بُشۡرَىٰ لَكُمۡ وَلِتَطۡمَئِنَّ قُلُوبُكُم بِهِۦۗ وَمَا ٱلنَّصۡرُ إِلَّا مِنۡ عِندِ ٱللَّهِ ٱلۡعَزِيزِ ٱلۡحَكِيمِ ١٢٦

**126.** ನಿಮಗೊಂದು ಶುಭವಾರ್ತೆಯಾಗಿ ಮತ್ತು ನಿಮ್ಮ ಹೃದಯಗಳು ಶಾಂತವಾಗಲಿಕ್ಕಾಗಿಯೇ ವಿನಾ ಅಲ್ಲಾಹು ಅದನ್ನು ಮಾಡಿರಲಿಲ್ಲ. ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಿನ ಬಳಿಯಿಂದಲೇ ವಿನಾ ಸಹಾಯವು ಬರಲಾರದು.

لِيَقۡطَعَ طَرَفٗا مِّنَ ٱلَّذِينَ كَفَرُوٓاْ أَوۡ يَكۡبِتَهُمۡ فَيَنقَلِبُواْ خَآئِبِينَ ١٢٧

**127.** ಇದು ಸತ್ಯನಿಷೇಧಿಗಳ ಒಂದು ಭಾಗವನ್ನು ನಿರ್ಮೂಲನ ಮಾಡುವುದಕ್ಕಾಗಿ ಅಥವಾ ಅವರನ್ನು ಶರಣಾಗಿಸಿ ಅವರು ಹತಾಶರಾಗಿ ಮರಳಿ ಹೋಗುವ ಸಲುವಾಗಿದೆ.

لَيۡسَ لَكَ مِنَ ٱلۡأَمۡرِ شَيۡءٌ أَوۡ يَتُوبَ عَلَيۡهِمۡ أَوۡ يُعَذِّبَهُمۡ فَإِنَّهُمۡ ظَٰلِمُونَ ١٢٨

**128.** (ಓ ಪ್ರವಾದಿಯವರೇ!) ತೀರ್ಮಾನದಲ್ಲಿ ತಮಗೆ ಯಾವ ಹಕ್ಕೂ ಇಲ್ಲ[1] ಅವನು (ಅಲ್ಲಾಹು) ಅವರ ಪಶ್ಚಾತ್ತಾಪವನ್ನು ಸ್ವೀಕರಿಸಲೂಬಹುದು ಅಥವಾ ಅವರನ್ನು ಶಿಕ್ಷಿಸಲೂಬಹುದು. ಖಂಡಿತವಾಗಿಯೂ ಅವರು ಅಕ್ರಮಿಗಳಾಗಿರುವರು.

وَلِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۚ يَغۡفِرُ لِمَن يَشَآءُ وَيُعَذِّبُ مَن يَشَآءُۚ وَٱللَّهُ غَفُورٞ رَّحِيمٞ ١٢٩

**129.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ತಾನಿಚ್ಛಿಸುವವರನ್ನು ಅವನು ಕ್ಷಮಿಸುವನು ಮತ್ತು ತಾನಿಚ್ಛಿಸುವವರನ್ನು ಅವನು ಶಿಕ್ಷಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَٰٓأَيُّهَا ٱلَّذِينَ ءَامَنُواْ لَا تَأۡكُلُواْ ٱلرِّبَوٰٓاْ أَضۡعَٰفٗا مُّضَٰعَفَةٗۖ وَٱتَّقُواْ ٱللَّهَ لَعَلَّكُمۡ تُفۡلِحُونَ ١٣٠

**130.** ಓ ಸತ್ಯವಿಶ್ವಾಸಿಗಳೇ! ನೀವು ದುಪ್ಪಟ್ಟು ದುಪ್ಪಟ್ಟಾಗಿ ಬಡ್ಡಿಯನ್ನು ತಿನ್ನದಿರಿ. ಅಲ್ಲಾಹುವನ್ನು ಭಯಪಡಿರಿ. ನೀವು ಯಶಸ್ಸು ಗಳಿಸಲೂಬಹುದು.

---

ನೆರವೇರಿಸುವುದು ಅಗತ್ಯಕ್ಕನುಸಾರವಾಗಿರುತ್ತದೆ. ಎಷ್ಟು ಮಲಕ್‌ಗಳನ್ನು ಬದ್ರ್‌ಗೆ ಕಳುಹಿಸಲಾಯಿತು ಮತ್ತು ಅವರು ಯುದ್ಧದಲ್ಲಿ ಯಾವ ಪಾತ್ರವನ್ನು ವಹಿಸಿದ್ದರು ಎಂಬ ಬಗ್ಗೆ ದೃಢಪಟ್ಟ ವರದಿಗಳು ಲಭ್ಯವಿಲ್ಲ.

1 ಕೆಲವು ನಿರ್ದಿಷ್ಟ ವ್ಯಕ್ತಿಗಳನ್ನು ಶಪಿಸಲು ಪ್ರವಾದಿ(ﷺ)ರವರು ಅಲ್ಲಾಹುವಿನೊಂದಿಗೆ ಪ್ರಾರ್ಥಿಸಿದಾಗ ಯಾವುದೇ ವಿಷಯದಲ್ಲೂ ತೀರ್ಮಾನ ಕೈಗೊಳ್ಳುವ ಅಧಿಕಾರವಿರುವುದು ಕೇವಲ ಅಲ್ಲಾಹುವಿಗೆ ಮಾತ್ರವೆಂದು ಸ್ಪಷ್ಟಪಡಿಸುವ ಈ ಆಯತ್ ಅವತೀರ್ಣಗೊಂಡಿತೆಂದು ಬುಖಾರಿ (4549) ಮತ್ತಿತರರು ವರದಿ ಮಾಡಿದ ಹದೀಸಿನಲ್ಲಿ ಕಾಣಬಹುದು.

131. ಸತ್ಯನಿಷೇಧಿಗಳಿಗಾಗಿ ಸಿದ್ಧಗೊಳಿಸಲಾಗಿರುವ ನರಕಾಗ್ನಿಯನ್ನು ನೀವು ಭಯಪಡಿರಿ.

وَٱتَّقُواْ ٱلنَّارَ ٱلَّتِيٓ أُعِدَّتۡ لِلۡكَٰفِرِينَ ١٣١

132. ಅಲ್ಲಾಹುವನ್ನು ಮತ್ತು ಸಂದೇಶವಾಹಕರನ್ನು ಅನುಸರಿಸಿರಿ. ನಿಮಗೆ ಕರುಣೆ ಲಭಿಸಲೂಬಹುದು.

وَأَطِيعُواْ ٱللَّهَ وَٱلرَّسُولَ لَعَلَّكُمۡ تُرۡحَمُونَ ١٣٢

133. ನಿಮ್ಮ ರಬ್‌ನ ವತಿಯ ಪಾಪಮುಕ್ತಿಗಾಗಿ ಮತ್ತು ಆಕಾಶ ಭೂಮಿಗಳಷ್ಟು ವಿಶಾಲವಾಗಿರುವ ಸ್ವರ್ಗಕ್ಕಾಗಿ ಧಾವಂತದಿಂದ ಮುಂದೆ ಬನ್ನಿರಿ. ಅದನ್ನು ಭಯಭಕ್ತಿ ಪಾಲಿಸುವವರಿಗಾಗಿ ಸಿದ್ಧಗೊಳಿಸಲಾಗಿದೆ.

۞وَسَارِعُوٓاْ إِلَىٰ مَغۡفِرَةٖ مِّن رَّبِّكُمۡ وَجَنَّةٍ عَرۡضُهَا ٱلسَّمَٰوَٰتُ وَٱلۡأَرۡضُ أُعِدَّتۡ لِلۡمُتَّقِينَ ١٣٣

134. (ಅಂದರೆ) ಅನುಕೂಲ ಸ್ಥಿತಿಯಲ್ಲೂ ಪ್ರತಿಕೂಲ ಸ್ಥಿತಿಯಲ್ಲೂ ದಾನ ಧರ್ಮ ಮಾಡುವ, ಕೋಪವನ್ನು ಅದುಮಿಡುವ ಮತ್ತು ಜನರಿಗೆ ಕ್ಷಮೆ ನೀಡುವವರಿಗೆ. ಅಲ್ಲಾಹು ಸತ್ಕರ್ಮಿಗಳನ್ನು ಪ್ರೀತಿಸುವನು.

ٱلَّذِينَ يُنفِقُونَ فِي ٱلسَّرَّآءِ وَٱلضَّرَّآءِ وَٱلۡكَٰظِمِينَ ٱلۡغَيۡظَ وَٱلۡعَافِينَ عَنِ ٱلنَّاسِۗ وَٱللَّهُ يُحِبُّ ٱلۡمُحۡسِنِينَ ١٣٤

135. ಏನಾದರೂ ನೀಚಕೃತ್ಯವನ್ನು ಮಾಡಿದರೆ ಅಥವಾ ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದರೆ ಅಲ್ಲಾಹುವನ್ನು ಸ್ಮರಿಸಿ ತಮ್ಮ ಪಾಪಗಳಿಗೆ ಕ್ಷಮೆ ಬೇಡುವವರಿಗಾಗಿದೆ. ಅಲ್ಲಾಹುವಿನ ಹೊರತು ಪಾಪಗಳನ್ನು ಕ್ಷಮಿಸುವವನು ಇನ್ನಾರಿರುವನು? ತಿಳಿದವರಾಗಿದ್ದೂ ಸಹ ತಾವು ಮಾಡಿದ (ನೀಚ) ಕೃತ್ಯಗಳಲ್ಲಿ ಅವರು ಅಚಲರಾಗಿ ನಿಲ್ಲಲಾರರು.

وَٱلَّذِينَ إِذَا فَعَلُواْ فَٰحِشَةً أَوۡ ظَلَمُوٓاْ أَنفُسَهُمۡ ذَكَرُواْ ٱللَّهَ فَٱسۡتَغۡفَرُواْ لِذُنُوبِهِمۡ وَمَن يَغۡفِرُ ٱلذُّنُوبَ إِلَّا ٱللَّهُ وَلَمۡ يُصِرُّواْ عَلَىٰ مَا فَعَلُواْ وَهُمۡ يَعۡلَمُونَ ١٣٥

136. ಅಂಥಹವರಿಗಿರುವ ಪ್ರತಿಫಲವು ಅವರ ರಬ್‌ನ ವತಿಯ ಪಾಪಮುಕ್ತಿ ಮತ್ತು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಾಗಿವೆ. ಅವರು ಅದರಲ್ಲಿ ಶಾಶ್ವತರಾಗಿರುವರು. ಕರ್ಮವೆಸಗುವವರಿಗೆ ದೊರೆಯುವ ಪ್ರತಿಫಲ ಎಷ್ಟು ಉತ್ತಮವಾದುದು!

أُوْلَٰٓئِكَ جَزَآؤُهُم مَّغۡفِرَةٞ مِّن رَّبِّهِمۡ وَجَنَّٰتٞ تَجۡرِي مِن تَحۡتِهَا ٱلۡأَنۡهَٰرُ خَٰلِدِينَ فِيهَاۚ وَنِعۡمَ أَجۡرُ ٱلۡعَٰمِلِينَ ١٣٦

137. ನಿಮಗಿಂತ ಮುಂಚೆ ಹಲವು (ದೈವಿಕ) ಕ್ರಮಗಳು ಗತಿಸಿಹೋಗಿವೆ. ಆದ್ದರಿಂದ ನೀವು ಭೂಮಿಯಲ್ಲಿ ಸಂಚರಿಸಿ ಸತ್ಯನಿಷೇಧಿಗಳ ಪರ್ಯಾವಸಾನವು ಹೇಗಾಯಿತೆಂಬುದನ್ನು ನೋಡಿರಿ.

138. ಇದು ಮನುಷ್ಯರಿಗಿರುವ ಒಂದು ಘೋಷಣೆಯೂ ಭಯಭಕ್ತಿಯುಳ್ಳವರಿಗಿರುವ ಮಾರ್ಗದರ್ಶಿಯೂ, ಉಪದೇಶವೂ ಆಗಿದೆ.

139. ನೀವು ಬಲಹೀನರಾಗುವುದಾಗಲಿ ದುಃಖಿಸುವುದಾಗಲಿ ಮಾಡದಿರಿ. ನೀವು ವಿಶ್ವಾಸಿಗಳಾಗಿದ್ದರೆ ನೀವೇ ಅತ್ಯುನ್ನತರಾಗಿರುವಿರಿ.

140. ನಿಮಗೆ ಗಾಯಗಳುಂಟಾಗಿದ್ದರೆ (ಈ ಹಿಂದೆ) ಆ ಜನರಿಗೂ ಗಾಯಗಳುಂಟಾಗಿದ್ದವು. ವಿಶ್ವಾಸವಿಟ್ಟವರು ಯಾರೆಂದು ಅಲ್ಲಾಹು ಗುರುತಿಸುವ ಸಲುವಾಗಿ ಮತ್ತು ನಿಮ್ಮ ಪೈಕಿ ಹುತಾತ್ಮರನ್ನು ಪಡೆಯುವ ಸಲುವಾಗಿ ಆ (ಯುದ್ಧ) ದಿನಗಳಲ್ಲಿ ಸೋಲು ಗೆಲುವುಗಳನ್ನು ನಾವು ಜನರ ನಡುವೆ ಬದಲಾಯಿಸುತ್ತಿದ್ದೆವು. ಅಲ್ಲಾಹು ಅಕ್ರಮಿಗಳನ್ನು ಇಷ್ಟಪಡಲಾರನು.

141. ವಿಶ್ವಾಸವಿಟ್ಟವರನ್ನು ಅಲ್ಲಾಹು ಶುದ್ಧೀಕರಿಸುವ ಸಲುವಾಗಿ ಮತ್ತು ಸತ್ಯನಿಷೇಧಿಗಳನ್ನು ಅಳಿಸಿಹಾಕುವ ಸಲುವಾಗಿ.

142. ನಿಮ್ಮ ಪೈಕಿ ಧರ್ಮಯುದ್ಧದಲ್ಲಿ ತೊಡಗಿಕೊಂಡವರು ಮತ್ತು ಸಹನೆ ವಹಿಸಿದವರು ಯಾರೆಂದು ಅಲ್ಲಾಹು ಗುರುತಿಸದೆ ಸ್ವರ್ಗ ಪ್ರವೇಶ ಮಾಡಬಹುದೆಂದು ನೀವು ಭಾವಿಸಿರುವಿರಾ?

143. ಮರಣವನ್ನು ನೇರವಾಗಿ ಕಾಣುವ ಮುನ್ನ ನೀವದನ್ನು ಆಶಿಸುವವರಾಗಿದ್ದಿರಿ. ಈಗಲಾದರೋ ನೀವದನ್ನು ಕಣ್ಣಾರೆ ನೋಡಿರುವಿರಿ.

قَدۡ خَلَتۡ مِن قَبۡلِكُمۡ سُنَنٞ فَسِيرُواْ فِي ٱلۡأَرۡضِ فَٱنظُرُواْ كَيۡفَ كَانَ عَٰقِبَةُ ٱلۡمُكَذِّبِينَ ١٣٧

هَٰذَا بَيَانٞ لِّلنَّاسِ وَهُدٗى وَمَوۡعِظَةٞ لِّلۡمُتَّقِينَ ١٣٨

وَلَا تَهِنُواْ وَلَا تَحۡزَنُواْ وَأَنتُمُ ٱلۡأَعۡلَوۡنَ إِن كُنتُم مُّؤۡمِنِينَ ١٣٩

إِن يَمۡسَسۡكُمۡ قَرۡحٞ فَقَدۡ مَسَّ ٱلۡقَوۡمَ قَرۡحٞ مِّثۡلُهُۥۚ وَتِلۡكَ ٱلۡأَيَّامُ نُدَاوِلُهَا بَيۡنَ ٱلنَّاسِ وَلِيَعۡلَمَ ٱللَّهُ ٱلَّذِينَ ءَامَنُواْ وَيَتَّخِذَ مِنكُمۡ شُهَدَآءَۗ وَٱللَّهُ لَا يُحِبُّ ٱلظَّٰلِمِينَ ١٤٠

وَلِيُمَحِّصَ ٱللَّهُ ٱلَّذِينَ ءَامَنُواْ وَيَمۡحَقَ ٱلۡكَٰفِرِينَ ١٤١

أَمۡ حَسِبۡتُمۡ أَن تَدۡخُلُواْ ٱلۡجَنَّةَ وَلَمَّا يَعۡلَمِ ٱللَّهُ ٱلَّذِينَ جَٰهَدُواْ مِنكُمۡ وَيَعۡلَمَ ٱلصَّٰبِرِينَ ١٤٢

وَلَقَدۡ كُنتُمۡ تَمَنَّوۡنَ ٱلۡمَوۡتَ مِن قَبۡلِ أَن تَلۡقَوۡهُ فَقَدۡ رَأَيۡتُمُوهُ وَأَنتُمۡ تَنظُرُونَ ١٤٣

144. ಮುಹಮ್ಮದ್‌ರು ಅಲ್ಲಾಹುವಿನ ಓರ್ವ ಸಂದೇಶವಾಹಕರಾಗಿರುವರೇ ಹೊರತು ಇನ್ನಾರೂ ಅಲ್ಲ. ಅವರಿಗಿಂತ ಮುಂಚೆ ಅನೇಕ ಸಂದೇಶವಾಹಕರು ಗತಿಸಿ ಹೋಗಿರುವರು. ಅವರೇನಾದರೂ ಮರಣಹೊಂದಿದರೆ ಅಥವಾ ಕೊಲ್ಲಲ್ಪಟ್ಟರೆ ನೀವು ಹಿಮ್ಮುಖವಾಗಿ ಮರಳಿ ಹೋಗುವುದೇ? ಯಾರಾದರೂ ಹಿಮ್ಮುಖವಾಗಿ ಮರಳಿ ಹೋದರೆ ಅವನು ಅಲ್ಲಾಹುವಿಗೆ ಯಾವ ಹಾನಿಯನ್ನೂ ಮಾಡಲಾರನು. ಕೃತಜ್ಞತೆ ಸಲ್ಲಿಸುವವರಿಗೆ ಅಲ್ಲಾಹು ತಕ್ಕ ಪ್ರತಿಫಲವನ್ನು ನೀಡುವನು.

وَمَا مُحَمَّدٌ إِلَّا رَسُولٌ قَدْ خَلَتْ مِن قَبْلِهِ ٱلرُّسُلُ ۚ أَفَإِيْن مَّاتَ أَوْ قُتِلَ ٱنقَلَبْتُمْ عَلَىٰٓ أَعْقَـٰبِكُمْ ۚ وَمَن يَنقَلِبْ عَلَىٰ عَقِبَيْهِ فَلَن يَضُرَّ ٱللَّهَ شَيْـًٔا ۗ وَسَيَجْزِى ٱللَّهُ ٱلشَّـٰكِرِينَ ﴿١٤٤﴾

145. ಅಲ್ಲಾಹುವಿನ ಅನುಮತಿಯಿಲ್ಲದೆ ಯಾವ ವ್ಯಕ್ತಿಗೂ ಮರಣಹೊಂದಲು ಸಾಧ್ಯವಾಗಲಾರದು. ಅದು ಅವಧಿ ನಿಶ್ಚಯಿಸಲಾದ ಒಂದು ವಿಧಿಯಾಗಿದೆ. ಯಾರು ಇಹಲೋಕದ ಪ್ರತಿಫಲವನ್ನು ಬಯಸುವನೋ ಅವನಿಗೆ ನಾವದನ್ನು ಇಲ್ಲಿಯೇ ನೀಡುವೆವು. ಯಾರು ಪರಲೋಕದ ಪ್ರತಿಫಲವನ್ನು ಬಯಸುವನೋ ಅವನಿಗೆ ನಾವದನ್ನು ಅಲ್ಲಿ ನೀಡುವೆವು. ಕೃತಜ್ಞತೆ ಸಲ್ಲಿಸುವವರಿಗೆ ನಾವು ತಕ್ಕ ಪ್ರತಿಫಲ ನೀಡುವೆವು.

وَمَا كَانَ لِنَفْسٍ أَن تَمُوتَ إِلَّا بِإِذْنِ ٱللَّهِ كِتَـٰبًا مُّؤَجَّلًا ۗ وَمَن يُرِدْ ثَوَابَ ٱلدُّنْيَا نُؤْتِهِۦ مِنْهَا وَمَن يُرِدْ ثَوَابَ ٱلْـَٔاخِرَةِ نُؤْتِهِۦ مِنْهَا ۚ وَسَنَجْزِى ٱلشَّـٰكِرِينَ ﴿١٤٥﴾

146. ಎಷ್ಟೋಂದು ಪ್ರವಾದಿಗಳ ಜೊತೆಗೂಡಿ ಅನೇಕ ಮಂದಿ ಅಲ್ಲಾಹುವಿನ ದಾಸರು ಯುದ್ಧ ಮಾಡಿರುವರು! ಅಲ್ಲಾಹನ ಮಾರ್ಗದಲ್ಲಿ ತಮಗೆ ಒದಗಿದ ಯಾವುದರಿಂದಲೂ ಅವರು ಎದೆಗುಂದಲಿಲ್ಲ. ಅವರು ಬಲಹೀನರಾಗಲಿಲ್ಲ ಮತ್ತು ದೈನ್ಯತೆ ತೋರಿಸಲೂ ಇಲ್ಲ. ಅಲ್ಲಾಹು ಸಹನಾಶೀಲರನ್ನು ಪ್ರೀತಿಸುವನು.

وَكَأَيِّن مِّن نَّبِىٍّ قَـٰتَلَ مَعَهُۥ رِبِّيُّونَ كَثِيرٌ فَمَا وَهَنُوا۟ لِمَآ أَصَابَهُمْ فِى سَبِيلِ ٱللَّهِ وَمَا ضَعُفُوا۟ وَمَا ٱسْتَكَانُوا۟ ۗ وَٱللَّهُ يُحِبُّ ٱلصَّـٰبِرِينَ ﴿١٤٦﴾

147. ಅವರ ಮಾತು 'ಓ ನಮ್ಮ ರಬ್! ನಮ್ಮ ಪಾಪಗಳನ್ನೂ, ನಮ್ಮ ಕರ್ಮಗಳಲ್ಲಿ ಉಂಟಾದಂತಹ ಅತಿಕ್ರಮಗಳನ್ನೂ ಕ್ಷಮಿಸು, ನಮ್ಮ ಪಾದಗಳನ್ನು ಸುದೃಢಗೊಳಿಸು ಮತ್ತು

وَمَا كَانَ قَوْلَهُمْ إِلَّآ أَن قَالُوا۟ رَبَّنَا ٱغْفِرْ لَنَا ذُنُوبَنَا وَإِسْرَافَنَا فِىٓ أَمْرِنَا وَثَبِّتْ أَقْدَامَنَا وَٱنصُرْنَا عَلَى ٱلْقَوْمِ ٱلْكَـٰفِرِينَ ﴿١٤٧﴾

ಸತ್ಯನಿಷೇಧಿಗಳಾದ ಜನರ ವಿರುದ್ಧ ನಮಗೆ ಸಹಾಯ ಮಾಡು' ಎಂದು ಹೇಳಿರುವುದಲ್ಲದೆ ಇನ್ನೇನೂ ಆಗಿರಲಿಲ್ಲ.

**148.** ಆದ್ದರಿಂದ ಅಲ್ಲಾಹು ಅವರಿಗೆ ಇಹಲೋಕದ ಪ್ರತಿಫಲವನ್ನೂ, ಪರಲೋಕದ ಉತ್ಕೃಷ್ಟ ಪ್ರತಿಫಲವನ್ನೂ ನೀಡಿದನು. ಅಲ್ಲಾಹು ಸತ್ಕರ್ಮಿಗಳನ್ನು ಪ್ರೀತಿಸುವನು.

فَـَٔاتَىٰهُمُ ٱللَّهُ ثَوَابَ ٱلدُّنْيَا وَحُسْنَ ثَوَابِ
ٱلْـَٔاخِرَةِ ۗ وَٱللَّهُ يُحِبُّ ٱلْمُحْسِنِينَ ﴿١٤٨﴾

**149.** ಓ ಸತ್ಯವಿಶ್ವಾಸಿಗಳೇ! ನೀವು ಸತ್ಯನಿಷೇಧಿಗಳನ್ನು ಅನುಸರಿಸುವುದಾದರೆ ಅವರು ನಿಮ್ಮನ್ನು ಹಿಂದಕ್ಕೆ ಮರಳಿ ಕೊಂಡೊಯ್ಯುವರು. ತರುವಾಯ ನೀವು ನಷ್ಟಹೊಂದಿದವರಾಗಿ ಮಾರ್ಪಡುವಿರಿ.

يَـٰٓأَيُّهَا ٱلَّذِينَ ءَامَنُوٓا۟ إِن تُطِيعُوا۟ ٱلَّذِينَ
كَفَرُوا۟ يَرُدُّوكُمْ عَلَىٰٓ أَعْقَـٰبِكُمْ فَتَنقَلِبُوا۟
خَـٰسِرِينَ ﴿١٤٩﴾

**150.** ಅಲ್ಲ, ನಿಮ್ಮ ರಕ್ಷಕನು ಅಲ್ಲಾಹುವಾಗಿರುವನು. ಅವನು ಸಹಾಯ ಮಾಡುವವರಲ್ಲಿ ಅತ್ಯುತ್ತಮನಾಗಿರುವನು.

بَلِ ٱللَّهُ مَوْلَىٰكُمْ ۖ وَهُوَ خَيْرُ
ٱلنَّـٰصِرِينَ ﴿١٥٠﴾

**151.** ಅಲ್ಲಾಹು ಯಾವ ಆಧಾರಪ್ರಮಾಣವನ್ನೂ ಅವತೀರ್ಣಗೊಳಿಸದಿರುವ ವಸ್ತುಗಳನ್ನು ಅವನೊಂದಿಗೆ ಸಹಭಾಗಿಗಳನ್ನಾಗಿ ಮಾಡಿರುವ ಕಾರಣದಿಂದ ನಾವು ಸತ್ಯನಿಷೇಧಿಗಳ ಹೃದಯಗಳಲ್ಲಿ ಭಯವನ್ನು ಹಾಕುವೆವು. ಅವರ ವಾಸಸ್ಥಳವು ನರಕವಾಗಿದೆ. ಅಕ್ರಮಿಗಳ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!

سَنُلْقِى فِى قُلُوبِ ٱلَّذِينَ كَفَرُوا۟ ٱلرُّعْبَ
بِمَآ أَشْرَكُوا۟ بِٱللَّهِ مَا لَمْ يُنَزِّلْ بِهِۦ
سُلْطَـٰنًا ۖ وَمَأْوَىٰهُمُ ٱلنَّارُ ۚ وَبِئْسَ مَثْوَى
ٱلظَّـٰلِمِينَ ﴿١٥١﴾

**152.** ಅಲ್ಲಾಹುವಿನ ಅನುಮತಿಯೊಂದಿಗೆ ನೀವು ಅವರನ್ನು ವಧಿಸುತ್ತಿರುವಾಗ ನಿಮ್ಮೊಂದಿಗಿರುವ ವಾಗ್ದಾನದಲ್ಲಿ ಅಲ್ಲಾಹು ಸತ್ಯಸಂಧತೆಯನ್ನು ಪಾಲಿಸಿರುವನು. ಆದರೆ ನೀವು ಹೇಡಿತನವನ್ನು ತೋರಿಸಿ, ಕಾರ್ಯ ನಿರ್ವಹಣೆಯಲ್ಲಿ ಪರಸ್ಪರ ತರ್ಕಿಸಿ, ನೀವು ಇಷ್ಟಪಡುವುದನ್ನು ಅಲ್ಲಾಹು ನಿಮಗೆ ತೋರಿಸಿಕೊಟ್ಟ ಬಳಿಕವೂ ನೀವು

وَلَقَدْ صَدَقَكُمُ ٱللَّهُ وَعْدَهُۥٓ إِذْ
تَحُسُّونَهُم بِإِذْنِهِۦ ۖ حَتَّىٰٓ إِذَا فَشِلْتُمْ
وَتَنَـٰزَعْتُمْ فِى ٱلْأَمْرِ وَعَصَيْتُم مِّنۢ بَعْدِ
مَآ أَرَىٰكُم مَّا تُحِبُّونَ ۚ مِنكُم مَّن يُرِيدُ
ٱلدُّنْيَا وَمِنكُم مَّن يُرِيدُ ٱلْـَٔاخِرَةَ ۚ ثُمَّ
صَرَفَكُمْ عَنْهُمْ لِيَبْتَلِيَكُمْ ۖ وَلَقَدْ

عَفَا عَنكُمْۗ وَٱللَّهُ ذُو فَضْلٍ عَلَى ٱلْمُؤْمِنِينَ ﴿١٥٢﴾

ಅವಿಧೇಯತೆ ತೋರಿದಾಗ (ಪರಿಸ್ಥಿತಿಯು ನಿಮಗೆ ವಿರುದ್ಧವಾಯಿತು). ನಿಮ್ಮಲ್ಲಿ ಇಹಲೋಕವನ್ನು ಬಯಸುವವರಿರುವರು. ಪರಲೋಕವನ್ನು ಬಯಸುವವರೂ ನಿಮ್ಮಲ್ಲಿರುವರು. ತರುವಾಯ ನಿಮ್ಮನ್ನು ಪರೀಕ್ಷಿಸುವ ಸಲುವಾಗಿ ಅಲ್ಲಾಹು ನಿಮ್ಮನ್ನು ಅವರಿಂದ (ಶತ್ರುಗಳಿಂದ) ವಿಮುಖಗೊಳಿಸಿದನು. ಅಲ್ಲಾಹು ನಿಮಗೆ ಕ್ಷಮಿಸಿರುವನು. ಅಲ್ಲಾಹು ಸತ್ಯವಿಶ್ವಾಸಿಗಳ ಮೇಲೆ ಔದಾರ್ಯವುಳ್ಳವನಾಗಿರುವನು.

۞ إِذْ تُصْعِدُونَ وَلَا تَلْوُۥنَ عَلَىٰٓ أَحَدٍ وَٱلرَّسُولُ يَدْعُوكُمْ فِىٓ أُخْرَىٰكُمْ فَأَثَٰبَكُمْ غَمًّۢا بِغَمٍّ لِّكَيْلَا تَحْزَنُوا۟ عَلَىٰ مَا فَاتَكُمْ وَلَا مَآ أَصَٰبَكُمْۗ وَٱللَّهُ خَبِيرٌۢ بِمَا تَعْمَلُونَ ﴿١٥٣﴾

**153.** ಯಾರನ್ನೂ ತಿರುಗಿನೋಡದೆ ನೀವು (ರಣರಂಗದಿಂದ) ಓಡಿಹೋಗುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). ಸಂದೇಶವಾಹಕರು ನಿಮ್ಮನ್ನು ಹಿಂದಿನಿಂದ ಕರೆಯುತ್ತಿದ್ದರು. ಆಗ ಯಾವುದು ನಿಮ್ಮ ಕೈತಪ್ಪಿ ಹೋಯಿತೋ ಅದರ ನಿಮಿತ್ತವಾಗಲಿ ಅಥವಾ ನಿಮ್ಮನ್ನು ಬಾಧಿಸಿರುವ ಆಪತ್ತಿನ ನಿಮಿತ್ತವಾಗಲಿ ನೀವು ದುಃಖಿಸದಿರಲೆಂದು ಅಲ್ಲಾಹು ನಿಮಗೆ ವ್ಯಥೆಯ ಮೇಲೆ ವ್ಯಥೆಯನ್ನು ಪ್ರತಿಫಲವಾಗಿ ನೀಡಿದನು. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

ثُمَّ أَنزَلَ عَلَيْكُم مِّنۢ بَعْدِ ٱلْغَمِّ أَمَنَةً نُّعَاسًا يَغْشَىٰ طَآئِفَةً مِّنكُمْۖ وَطَآئِفَةٌ

**154.** ತರುವಾಯ ಆ ವ್ಯಥೆಯ ಬಳಿಕ ಅಲ್ಲಾಹು ನಿಮಗೆ ಒಂದು ನಿರ್ಭೀತ ಸ್ಥಿತಿಯನ್ನು ಅಥವಾ ತೂಕಡಿಕೆಯನ್ನು ನೀಡಿದನು.(1)

1 ಉಹುದ್ ಯುದ್ಧದ ಪ್ರಾರಂಭ ಹಂತದಲ್ಲಿ ಮುಸ್ಲಿಮರಿಗೆ ನಿರ್ಣಾಯಕವಾದ ಗೆಲುವು ಸಿಕ್ಕಿತ್ತು. ಒಂದು ಗುಡ್ಡದ ಮೇಲೆ ಕಾವಲು ನಿಲ್ಲಿಸಲಾಗಿದ್ದ ಬಿಲ್ಗಾರರು ಇನ್ನು ಇಲ್ಲಿ ಕಾವಲು ನಿಲ್ಲಬೇಕಾದ ಅಗತ್ಯವಿಲ್ಲವೆಂದು ಭಾವಿಸಿ ಶತ್ರುಗಳು ಬಿಟ್ಟು ಹೋದ ಯುದ್ಧಸಾಮಾಗ್ರಿಗಳನ್ನು ಸಂಗ್ರಹಿಸುವ ಸಲುವಾಗಿ ರಣರಂಗಕ್ಕೆ ಇಳಿದು ಬಂದರು. ಈ ಸಂದರ್ಭವನ್ನು ಗಮನಿಸಿದ ಶತ್ರುಗಳು ಅಡಗುದಾಣದಿಂದ ಒಮ್ಮೇಲೇ ಆಕ್ರಮಣ ಮಾಡಿದಾಗ ಮುಸ್ಲಿಮ್ ಸೈನಿಕರು ದಿಕ್ಕೆಟ್ಟು ಹೋದರು. ಪ್ರವಾದಿ(ﷺ)ರವರ ಮುಂದಿನ ಹಲ್ಲು ಬಾಣದೇಟಿನಿಂದ ತುಂಡಾಯಿತು. ಎಪ್ಪತ್ತು ಸಹಾಬಿಗಳು ಹತರಾದರು. ಪ್ರವಾದಿ(ﷺ)ರವರು ಹತರಾದರೆಂಬ ವದಂತಿಯೂ ಹಬ್ಬಿತು. 144ನೇ ಸೂಕ್ತಿಯಲ್ಲಿ ಇದನ್ನು ಸೂಚಿಸಲಾಗಿದೆ. ಆದರೆ ಅಲ್ಪ ಸಮಯದ ಗೊಂದಲದ ಬಳಿಕ ಧೀರರಾದ ಕೆಲವು ಸಹಾಬಾಗಳು ಪ್ರವಾದಿ(ﷺ)ರವರ ಸುತ್ತಲೂ ಅಚಲರಾಗಿ ನಿಂತು ಧೈರ್ಯದಿಂದ ಹೋರಾಡುತ್ತಾ ಯುದ್ಧದ ಗತಿಯನ್ನು ತಿರುಗಿಸಿ ಶತ್ರುಗಳ ನಿರೀಕ್ಷೆಗಳನ್ನು ಹುಸಿಗೊಳಿಸಿದರು. ಇಲ್ಲಿ ಪರಾಮರ್ಶಿಸಿರುವುದು ಆ ಸಂದರ್ಭದಲ್ಲಿ ಅಲ್ಲಾಹು ಅವರಿಗೆ ನೀಡಿದ ಸುರಕ್ಷತಾ ಪ್ರಜ್ಞೆ ಮತ್ತು ಸುಖಕರವಾದ ತೂಕಡಿಕೆಯ ಬಗ್ಗೆಯಾಗಿದೆ.

ತೂಕಡಿಕೆಯು ನಿಮ್ಮಲ್ಲಿ ಒಂದು ಪಂಗಡವನ್ನು ಆವರಿಸುತ್ತಿತ್ತು. ಇನ್ನೊಂದು ಗುಂಪು ತಮ್ಮ ದೇಹದ ಬಗ್ಗೆ ಚಿಂತಿಸುತ್ತಾ ಅಸ್ವಸ್ಥರಾಗಿದ್ದರು. ಅವರು ಅಲ್ಲಾಹುವಿನ ಬಗ್ಗೆ ಭಾವಿಸಿದ್ದುದು ಸತ್ಯಕ್ಕೆ ವಿರುದ್ಧವಾದ ಇಸ್ಲಾಮೇತರ ಭಾವನೆಯನ್ನಾಗಿತ್ತು. 'ವಿಷಯದಲ್ಲಿ ನಮಗೇನಾದರೂ ಸ್ವಾಧೀನತೆಯಿದೆಯೇ?' ಎಂದು ಅವರು ಕೇಳುವರು. (ಓ ಪ್ರವಾದಿಯವರೇ!) ಹೇಳಿರಿ: 'ವಿಷಯವು ಸಂಪೂರ್ಣವಾಗಿಯೂ ಅಲ್ಲಾಹುವಿನ ಸ್ವಾಧೀನದಲ್ಲಾಗಿದೆ.' ತಮ್ಮ ಮುಂದೆ ಪ್ರಕಟಗೊಳಿಸದಂತಹ ಇನ್ನೇನನ್ನೋ ಅವರು ತಮ್ಮ ಮನಸ್ಸುಗಳಲ್ಲಿ ಮರೆಮಾಚುತ್ತಿರುವರು. 'ವಿಷಯದಲ್ಲಿ ನಮಗೇನಾದರೂ ಸ್ವಾಧೀನತೆಯಿರುತ್ತಿದ್ದರೆ ನಾವಿಲ್ಲಿ ವಧಿಸಲ್ಪಡುತ್ತಿರಲಿಲ್ಲ.' ಎಂದು ಅವರು ಹೇಳುವರು. (ಓ ಪ್ರವಾದಿಯವರೇ!) ಹೇಳಿರಿ: 'ನೀವು ನಿಮ್ಮ ಮನೆಗಳಲ್ಲಿದ್ದರೂ ಕೂಡ ಹತರಾಗಲು ವಿಧಿಸಲ್ಪಟ್ಟವರು ಯಾರೋ ಅವರು ಹತರಾಗಿ ಬೀಳುವ ಸ್ಥಳಗಳೆಡೆಗೆ (ಸ್ವತಃ) ಹೊರಟುಬರುತ್ತಿದ್ದರು.' ಇವು ನಿಮ್ಮ ಹೃದಯಗಳಲ್ಲಿರುವುದನ್ನು ಅಲ್ಲಾಹು ಪರೀಕ್ಷಿಸುವ ಸಲುವಾಗಿತ್ತು ಮತ್ತು ನಿಮ್ಮ ಹೃದಯಗಳಲ್ಲಿರುವುದನ್ನು ಶುದ್ಧೀಕರಿಸುವ ಸಲುವಾಗಿತ್ತು. ಅಲ್ಲಾಹು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

قَدْ أَهَمَّتْهُمْ أَنفُسُهُمْ يَظُنُّونَ بِٱللَّهِ غَيْرَ
ٱلْحَقِّ ظَنَّ ٱلْجَٰهِلِيَّةِ ۖ يَقُولُونَ هَل لَّنَا مِنَ
ٱلْأَمْرِ مِن شَىْءٍ ۗ قُلْ إِنَّ ٱلْأَمْرَ كُلَّهُۥ لِلَّهِ ۗ
يُخْفُونَ فِىٓ أَنفُسِهِم مَّا لَا يُبْدُونَ لَكَ ۖ
يَقُولُونَ لَوْ كَانَ لَنَا مِنَ ٱلْأَمْرِ شَىْءٌ مَّا
قُتِلْنَا هَٰهُنَا ۗ قُل لَّوْ كُنتُمْ فِى بُيُوتِكُمْ
لَبَرَزَ ٱلَّذِينَ كُتِبَ عَلَيْهِمُ ٱلْقَتْلُ إِلَىٰ
مَضَاجِعِهِمْ ۖ وَلِيَبْتَلِىَ ٱللَّهُ مَا فِى صُدُورِكُمْ
وَلِيُمَحِّصَ مَا فِى قُلُوبِكُمْ ۗ وَٱللَّهُ عَلِيمٌۢ
بِذَاتِ ٱلصُّدُورِ ﴿١٥٤﴾

155. ಎರಡು ಬಣಗಳು ಮುಖಾಮುಖಿಯಾದ ದಿನದಂದು ನಿಮ್ಮ ಪೈಕಿ ವಿಮುಖರಾಗಿ ಓಡಿದವರಾರೋ ಅವರು ಮಾಡಿದ ಕೆಲವು ಕೃತ್ಯಗಳ ಕಾರಣದಿಂದಾಗಿ ಸೈತಾನನು ಅವರನ್ನು ದಾರಿ ತಪ್ಪಿಸಿದ್ದನು. ಅಲ್ಲಾಹು ವಾದರೋ ಅವರನ್ನು ಕ್ಷಮಿಸಿರುವನು.

إِنَّ ٱلَّذِينَ تَوَلَّوْا۟ مِنكُمْ يَوْمَ ٱلْتَقَى
ٱلْجَمْعَانِ إِنَّمَا ٱسْتَزَلَّهُمُ ٱلشَّيْطَٰنُ بِبَعْضِ
مَا كَسَبُوا۟ ۖ وَلَقَدْ عَفَا ٱللَّهُ عَنْهُمْ ۗ إِنَّ ٱللَّهَ
غَفُورٌ حَلِيمٌ ﴿١٥٥﴾

ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಸಹನಾಶೀಲನೂ ಆಗಿರುವನು.

**156.** ಓ ಸತ್ಯವಿಶ್ವಾಸಿಗಳೇ! ತಮ್ಮ ಸಹೋದರರು ಯಾತ್ರೆಗಾಗಿ ಅಥವಾ ಯುದ್ಧ ಸನ್ನದ್ಧರಾಗಿ ಹೊರಟು ತರುವಾಯ ಮರಣವನ್ನಪ್ಪಿದರೆ 'ಇವರು ನಮ್ಮ ಬಳಿಯಿರುತ್ತಿದ್ದರೆ ಮರಣವನ್ನಪ್ಪುತ್ತಿರಲಿಲ್ಲ ಮತ್ತು ಕೊಲೆಗೀಡಾಗುತ್ತಲೂ ಇರಲಿಲ್ಲ.' ಎಂದು ಹೇಳುವ ಸತ್ಯನಿಷೇಧಿಗಳಂತೆ ನೀವಾಗದಿರಿ. ಅಲ್ಲಾಹು ಅವರ ಹೃದಯಗಳಲ್ಲಿ ಅದನ್ನೊಂದು ಖೇದಕರ ವಿಷಯವಾಗಿಸುವನು. ಜೀವ ಮತ್ತು ಮರಣವನ್ನು ನೀಡುವವನು ಅಲ್ಲಾಹುವಾಗಿರುವನು. ಅಲ್ಲಾಹು ನೀವು ಮಾಡುತ್ತಿರುವುದನ್ನು ವೀಕ್ಷಿಸುವವನಾಗಿರುವನು.

يَـٰٓأَيُّهَا ٱلَّذِينَ ءَامَنُواْ لَا تَكُونُواْ كَٱلَّذِينَ كَفَرُواْ وَقَالُواْ لِإِخْوَٰنِهِمْ إِذَا ضَرَبُواْ فِى ٱلْأَرْضِ أَوْ كَانُواْ غُزًّى لَّوْ كَانُواْ عِندَنَا مَا مَاتُواْ وَمَا قُتِلُواْ لِيَجْعَلَ ٱللَّهُ ذَٰلِكَ حَسْرَةً فِى قُلُوبِهِمْ ۗ وَٱللَّهُ يُحْىِۦ وَيُمِيتُ ۗ وَٱللَّهُ بِمَا تَعْمَلُونَ بَصِيرٌ ﴿١٥٦﴾

**157.** ನೀವು ಅಲ್ಲಾಹುವಿನ ಮಾರ್ಗದಲ್ಲಿ ವಧಿಸಲ್ಪಟ್ಟರೆ ಅಥವಾ ಮರಣವನ್ನಪ್ಪಿದರೆ ಅಲ್ಲಾಹುವಿನಿಂದ ದೊರೆಯುವ ಪಾಪಮುಕ್ತಿ ಮತ್ತು ದಯೆಯು ಅವರು ಶೇಖರಿಸಿಡುವುದೆಲ್ಲಕ್ಕಿಂತಲೂ ಹೆಚ್ಚು ಉತ್ತಮವಾಗಿದೆ.

وَلَئِن قُتِلْتُمْ فِى سَبِيلِ ٱللَّهِ أَوْ مُتُّمْ لَمَغْفِرَةٌ مِّنَ ٱللَّهِ وَرَحْمَةٌ خَيْرٌ مِّمَّا يَجْمَعُونَ ﴿١٥٧﴾

**158.** ನೀವು ಮರಣವನ್ನಪ್ಪಿದರೂ ವಧಿಸಲ್ಪಟ್ಟರೂ ಖಂಡಿತವಾಗಿಯೂ ನಿಮ್ಮನ್ನು ಒಟ್ಟುಗೂಡಿಸಲಾಗುವುದು ಅಲ್ಲಾಹುವಿನ ಬಳಿಗೇ ಆಗಿರುವುದು.

وَلَئِن مُّتُّمْ أَوْ قُتِلْتُمْ لَإِلَى ٱللَّهِ تُحْشَرُونَ ﴿١٥٨﴾

**159.** (ಓ ಪ್ರವಾದಿಯವರೇ!) ತಾವು ಅವರೊಂದಿಗೆ ಸೌಮ್ಯವಾಗಿ ವರ್ತಿಸಿರುವುದು ಅಲ್ಲಾಹುವಿನ ವತಿಯ ದಯೆಯಿಂದಲೇ ಆಗಿದೆ. ತಾವೊಬ್ಬ ಒರಟು ಸ್ವಭಾವಿಯೋ ಕಠಿಣ ಹೃದಯಿಯೋ ಆಗಿರುತ್ತಿದ್ದರೆ ಅವರು ತಮ್ಮ ಸನಿಹದಿಂದ ಚದುರಿಹೋಗುತ್ತಿದ್ದರು. ಆದ್ದರಿಂದ ಅವರನ್ನು ಕ್ಷಮಿಸಿರಿ ಮತ್ತು ಅವರಿಗೋಸ್ಕರ

فَبِمَا رَحْمَةٍ مِّنَ ٱللَّهِ لِنتَ لَهُمْ ۖ وَلَوْ كُنتَ فَظًّا غَلِيظَ ٱلْقَلْبِ لَٱنفَضُّواْ مِنْ حَوْلِكَ ۖ فَٱعْفُ عَنْهُمْ وَٱسْتَغْفِرْ لَهُمْ وَشَاوِرْهُمْ فِى ٱلْأَمْرِ ۖ فَإِذَا عَزَمْتَ فَتَوَكَّلْ عَلَى ٱللَّهِ ۚ إِنَّ ٱللَّهَ يُحِبُّ ٱلْمُتَوَكِّلِينَ ﴿١٥٩﴾

ಪಾಪಮುಕ್ತಿಯನ್ನು ಬೇಡಿರಿ. ಕಾರ್ಯನಿರ್ವಹಣೆಯಲ್ಲಿ ಅವರೊಂದಿಗೆ ಸಮಾಲೋಚನೆ ಮಾಡಿರಿ. ತರುವಾಯ ತಾವೊಂದು ನಿರ್ಧಾರವನ್ನು ತಳೆದರೆ ಅಲ್ಲಾಹುವಿನ ಮೇಲೆ ಭರವಸೆಯಿಡಿರಿ. ತನ್ನ ಮೇಲೆ ಭರವಸೆಯಿಡುವವರನ್ನು ಅಲ್ಲಾಹು ಖಂಡಿತವಾಗಿಯೂ ಪ್ರೀತಿಸುವನು.

**160**. ಅಲ್ಲಾಹು ನಿಮಗೆ ಸಹಾಯ ಮಾಡುವುದಾದರೆ ನಿಮ್ಮನ್ನು ಸೋಲಿಸುವವರಾರೂ ಇರಲಾರರು. ಅವನೇನಾದರೂ ನಿಮ್ಮನ್ನು ಕೈಬಿಡುವುದಾದರೆ ಅವನ ನಂತರ ನಿಮಗೆ ಸಹಾಯ ಮಾಡುವವನು ಯಾರಿರುವನು? ಸತ್ಯವಿಶ್ವಾಸಿಗಳು ಭರವಸೆಯಿಡುವುದು ಅಲ್ಲಾಹುವಿನ ಮೇಲೆಯೇ ಆಗಿರಲಿ.

إِن يَنصُرۡكُمُ ٱللَّهُ فَلَا غَالِبَ لَكُمۡۖ وَإِن يَخۡذُلۡكُمۡ فَمَن ذَا ٱلَّذِي يَنصُرُكُم مِّنۢ بَعۡدِهِۦۗ وَعَلَى ٱللَّهِ فَلۡيَتَوَكَّلِ ٱلۡمُؤۡمِنُونَ ١٦٠

**161**. ವಂಚನೆ ಮಾಡುವುದು ಯಾವ ಪ್ರವಾದಿಗೂ ಯುಕ್ತವಲ್ಲ.[1] ಯಾರಾದರೂ ವಂಚನೆ ಮಾಡಿದರೆ ಅವನು ಪುನರುತ್ಥಾನದಿನದಂದು ತಾನು ವಂಚನೆ ಮಾಡಿ ಪಡೆದ ವಸ್ತುವಿನೊಂದಿಗೆ ಬರುವನು. ತರುವಾಯ ಪ್ರತಿಯೊಬ್ಬ ವ್ಯಕ್ತಿಗೂ ತಾನು ಸಂಪಾದಿಸಿಟ್ಟಿರುವುದರ ಫಲವನ್ನು ಪೂರ್ಣವಾಗಿ ನೀಡಲಾಗುವುದು. ಅವರೊಂದಿಗೆ ಯಾವುದೇ ಅನ್ಯಾಯವೆಸಗಲಾಗದು.

وَمَا كَانَ لِنَبِيٍّ أَن يَغُلَّۚ وَمَن يَغۡلُلۡ يَأۡتِ بِمَا غَلَّ يَوۡمَ ٱلۡقِيَٰمَةِۚ ثُمَّ تُوَفَّىٰ كُلُّ نَفۡسٖ مَّا كَسَبَتۡ وَهُمۡ لَا يُظۡلَمُونَ ١٦١

**162**. ಅಲ್ಲಾಹುವಿನ ಸಂತೃಪ್ತಿಯನ್ನು ಹಿಂಬಾಲಿಸಿದವನು ಅಲ್ಲಾಹುವಿನ ಕ್ರೋಧಕ್ಕೆ ಪಾತ್ರನಾದವನಂತಾಗಿರುವನೇ? ಅವನ ವಾಸಸ್ಥಳವು ನರಕವಾಗಿದೆ. ಆ ಸ್ಥಳವು ಎಷ್ಟು ನಿಕೃಷ್ಟವಾದುದು!

أَفَمَنِ ٱتَّبَعَ رِضۡوَٰنَ ٱللَّهِ كَمَنۢ بَآءَ بِسَخَطٖ مِّنَ ٱللَّهِ وَمَأۡوَىٰهُ جَهَنَّمُۖ وَبِئۡسَ ٱلۡمَصِيرُ ١٦٢

1 ಶತ್ರುಗಳು ರಣರಂಗದಲ್ಲಿ ಬಿಟ್ಟು ಹೋಗುವ ಸೊತ್ತುಗಳು ಮುಸ್ಲಿಮರ ಹಕ್ಕಾಗಿವೆ. ಅವುಗಳನ್ನು ಹೇಗೆ ಹಂಚಿಕೊಳ್ಳಬೇಕೆಂಬ ಬಗ್ಗೆ ಕುರ್‌ಆನ್‌ನಲ್ಲಿ ಸ್ಪಷ್ಟ ನಿರ್ದೇಶನವಿದೆ (ನೋಡಿ: 8/41). ಆದರೆ ಪ್ರವಾದಿ(ﷺ)ರವರು ಅದನ್ನು ನ್ಯಾಯಬದ್ಧವಾಗಿ ಹಂಚುತ್ತಿಲ್ಲವೆಂದು ಕಪಟವಿಶ್ವಾಸಿಗಳು ಆರೋಪ ಹೊರಿಸಿದಾಗ ಅವರಿಗೆ ಈ ಸೂಕ್ತಿಯಲ್ಲಿ ಉತ್ತರವನ್ನು ನೀಡಲಾಗಿದೆ.

163. ಅವರು ಅಲ್ಲಾಹುವಿನ ಬಳಿ ಹಲವು ಪದವಿಗಳಲ್ಲಿರುವರು. ಅವರು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ವೀಕ್ಷಿಸುತ್ತಿರುವನು.

هُمْ دَرَجَٰتٌ عِندَ ٱللَّهِ ۗ وَٱللَّهُ بَصِيرٌۢ بِمَا يَعْمَلُونَ ﴿١٦٣﴾

164. ಸತ್ಯವಿಶ್ವಾಸಿಗಳಿಗೆ ಅಲ್ಲಾಹುವಿನ ಸೂಕ್ತಿಗಳನ್ನು ಓದಿಕೊಡುವ, ಅವರನ್ನು ಶುದ್ಧೀಕರಿಸುವ, ಅವರಿಗೆ ಗ್ರಂಥವನ್ನು ಮತ್ತು ಜ್ಞಾನವನ್ನು ಕಲಿಸುವ ಓರ್ವ ಸಂದೇಶವಾಹಕರನ್ನು ಅವರಿಂದಲೇ ಕಳುಹಿಸುವ ಮೂಲಕ ಖಂಡಿತವಾಗಿಯೂ ಅಲ್ಲಾಹು ಅವರಿಗೆ ಮಹಾ ಅನುಗ್ರಹವನ್ನು ನೀಡಿರುವನು. ಇದಕ್ಕೆ ಮುನ್ನ ಅವರು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿ ದ್ದವರಾಗಿದ್ದರು.

لَقَدْ مَنَّ ٱللَّهُ عَلَى ٱلْمُؤْمِنِينَ إِذْ بَعَثَ فِيهِمْ رَسُولًا مِّنْ أَنفُسِهِمْ يَتْلُوا۟ عَلَيْهِمْ ءَايَٰتِهِۦ وَيُزَكِّيهِمْ وَيُعَلِّمُهُمُ ٱلْكِتَٰبَ وَٱلْحِكْمَةَ وَإِن كَانُوا۟ مِن قَبْلُ لَفِى ضَلَٰلٍ مُّبِينٍ ﴿١٦٤﴾

165. ನಿಮಗೊಂದು ಆಪತ್ತು ಬಾಧಿಸಿದಾಗ ಅದರ ದುಪ್ಪಟ್ಟನ್ನು ನೀವು ಶತ್ರುಗಳಿಗೆ ಮಾಡಿಟ್ಟಿದ್ದರೂ[1] 'ಇದು ಹೇಗೆ ಸಂಭವಿಸಿತು' ಎಂದು ನೀವು ಕೇಳುವುದೇ? (ಓ ಪ್ರವಾದಿಯವರೇ!) ಹೇಳಿರಿ: 'ಅದು ಸಂಭವಿಸಿದ್ದು ನಿಮ್ಮ ವತಿಯಿಂದಲೇ ಆಗಿದೆ.' ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

أَوَلَمَّآ أَصَٰبَتْكُم مُّصِيبَةٌ قَدْ أَصَبْتُم مِّثْلَيْهَا قُلْتُمْ أَنَّىٰ هَٰذَا ۖ قُلْ هُوَ مِنْ عِندِ أَنفُسِكُمْ ۗ إِنَّ ٱللَّهَ عَلَىٰ كُلِّ شَىْءٍ قَدِيرٌ ﴿١٦٥﴾

166. ಎರಡು ಬಣಗಳು ಮುಖಾಮುಖಿಯಾದ ದಿನದಂದು ನಿಮಗೆ ವಿಪತ್ತು ಬಾಧಿಸಿದ್ದು ಅಲ್ಲಾಹುವಿನ ಅನುಮತಿಯಿಂದಲೇ ಆಗಿತ್ತು. ಅದು ಸತ್ಯವಿಶ್ವಾಸಿಗಳು ಯಾರೆಂದು ಗುರುತಿಸುವುದಕ್ಕಾಗಿತ್ತು.

وَمَآ أَصَٰبَكُمْ يَوْمَ ٱلْتَقَى ٱلْجَمْعَانِ فَبِإِذْنِ ٱللَّهِ وَلِيَعْلَمَ ٱلْمُؤْمِنِينَ ﴿١٦٦﴾

167. ಮತ್ತು ಕಪಟವಿಶ್ವಾಸಿಗಳು ಯಾರೆಂದು ಗುರುತಿಸುವುದಕ್ಕಾಗಿತ್ತು. 'ಬನ್ನಿರಿ! ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿರಿ

وَلِيَعْلَمَ ٱلَّذِينَ نَافَقُوا۟ ۚ وَقِيلَ لَهُمْ تَعَالَوْا۟ قَٰتِلُوا۟ فِى سَبِيلِ ٱللَّهِ أَوِ ٱدْفَعُوا۟ ۖ قَالُوا۟ لَوْ

1 ಉಹುದ್ ಯುದ್ಧದಲ್ಲಿ ಎಪ್ಪತ್ತು ಮುಸ್ಲಿಮರು ಹತರಾದರು. ಆದರೆ ಅದಕ್ಕಿಂತ ಮೊದಲು ಬದ್ರ್ ಯುದ್ಧದಲ್ಲಿ ಎಪ್ಪತ್ತು ಸತ್ಯನಿಷೇಧಿಗಳನ್ನು ವಧಿಸಲಾಗಿತ್ತು ಮತ್ತು ಎಪ್ಪತ್ತು ಜನರನ್ನು ಸೆರೆ ಹಿಡಿಯಲಾಗಿತ್ತು.

ಅಥವಾ ಪ್ರತಿರೋಧವನ್ನಾದರೂ ಒಡ್ಡಿರಿ' ಎಂದು ಅವರೊಂದಿಗೆ (ಕಪಟವಿಶ್ವಾಸಿಗಳೊಂದಿಗೆ) ಹೇಳಲಾಯಿತು. ಆಗ ಅವರು 'ಯುದ್ಧವು ನಡೆಯುವುದೆಂದು ನಮಗೆ ತಿಳಿದಿರುತ್ತಿದ್ದರೆ ನಾವೂ ನಿಮ್ಮನ್ನು ಹಿಂಬಾಲಿಸುತ್ತಿದ್ದೆವು' ಎಂದು ಹೇಳಿದರು. ಅಂದು ಅವರು ಸತ್ಯವಿಶ್ವಾಸಕ್ಕಿಂತಲೂ ಹೆಚ್ಚಾಗಿ ಸತ್ಯನಿಷೇಧಕ್ಕೆ ನಿಕಟವಾಗಿದ್ದರು. ತಮ್ಮ ಹೃದಯಗಳಲ್ಲಿ ಇಲ್ಲದ್ದನ್ನು ಅವರು ಬಾಯಿ ಮೂಲಕ ಹೇಳುತ್ತಿರುವರು. ಅವರು ಮರೆಮಾಚುವುದರ ಕುರಿತು ಅಲ್ಲಾಹು ಅತಿಹೆಚ್ಚು ಅರಿವುಳ್ಳವನಾಗಿರುವನು.

نَعۡلَمُ قِتَالٗا لَّٱتَّبَعۡنَٰكُمۡۗ هُمۡ لِلۡكُفۡرِ يَوۡمَئِذٍ أَقۡرَبُ مِنۡهُمۡ لِلۡإِيمَٰنِۚ يَقُولُونَ بِأَفۡوَٰهِهِم مَّا لَيۡسَ فِي قُلُوبِهِمۡۚ وَٱللَّهُ أَعۡلَمُ بِمَا يَكۡتُمُونَ ١٦٧

**168.** ಅವರು (ಯುದ್ಧಕ್ಕೆ ಹೋಗದೆ) ಮನೆಯಲ್ಲೇ ಕುಳಿತುಕೊಂಡು (ಯುದ್ಧಕ್ಕೆ ಹೋದ) ತಮ್ಮ ಸಹೋದರರ ಕುರಿತು 'ನಮ್ಮ ಮಾತನ್ನು ಕೇಳಿರುತ್ತಿದ್ದರೆ ಅವರು ವಧಿಸಲ್ಪಡುತ್ತಿರಲಿಲ್ಲ' ಎಂದು ಹೇಳುವವರೂ ಆಗಿರುವರು. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸತ್ಯಸಂಧರಾಗಿದ್ದರೆ ಸ್ವತಃ ನಿಮ್ಮಿಂದಲೇ ಮರಣವನ್ನು ತಡೆಗಟ್ಟಿರಿ.'

ٱلَّذِينَ قَالُواْ لِإِخۡوَٰنِهِمۡ وَقَعَدُواْ لَوۡ أَطَاعُونَا مَا قُتِلُواْۗ قُلۡ فَٱدۡرَءُواْ عَنۡ أَنفُسِكُمُ ٱلۡمَوۡتَ إِن كُنتُمۡ صَٰدِقِينَ ١٦٨

**169.** ಅಲ್ಲಾಹುವಿನ ಮಾರ್ಗದಲ್ಲಿ ವಧಿಸಲ್ಪಟ್ಟವರನ್ನು ತಾವು ಮೃತರೆಂದು ಭಾವಿಸದಿರಿ. ಆದರೆ ಅವರು ತಮ್ಮ ರಬ್‌ನ ಬಳಿ ಜೀವಂತವಾಗಿರುವರು. ಅವರಿಗೆ ಅನ್ನಾಧಾರವನ್ನು ನೀಡಲಾಗುತ್ತಿರುವುದು.[1]

وَلَا تَحۡسَبَنَّ ٱلَّذِينَ قُتِلُواْ فِي سَبِيلِ ٱللَّهِ أَمۡوَٰتَۢاۚ بَلۡ أَحۡيَآءٌ عِندَ رَبِّهِمۡ يُرۡزَقُونَ ١٦٩

**170.** ಅಲ್ಲಾಹು ತನ್ನ ಅನುಗ್ರಹದಿಂದ ಅವರಿಗೆ ದಯಪಾಲಿಸಿರುವುದರಲ್ಲಿ ಅವರು ಸಂತುಷ್ಟರಾಗಿರುವರು. ತಮ್ಮೊಂದಿಗೆ ಸೇರದಿರುವ, ಆದರೆ ತಮ್ಮ ಹಿಂದೆ (ಇಹಲೋಕದಲ್ಲಿ) ಜೀವಿಸುತ್ತಿರುವ ವಿಶ್ವಾಸಿಗಳ

فَرِحِينَ بِمَآ ءَاتَىٰهُمُ ٱللَّهُ مِن فَضۡلِهِۦ وَيَسۡتَبۡشِرُونَ بِٱلَّذِينَ لَمۡ يَلۡحَقُواْ بِهِم مِّنۡ خَلۡفِهِمۡ أَلَّا خَوۡفٌ عَلَيۡهِمۡ وَلَا هُمۡ يَحۡزَنُونَ ١٧٠

1 ಹುತಾತ್ಮರಿಗೆ ಅಲ್ಲಾಹುವಿನ ಬಳಿಯಿರುವ ಜೀವನ ಮತ್ತು ಅವರಿಗಿರುವ ಅನ್ನಾಧಾರವು ಅಲೌಕಿಕ ವಿಷಯಗಳಲ್ಲಿ ಸೇರಿದ್ದಾಗಿರುವುದರಿಂದ ಅದರ ಕುರಿತಿರುವ ಹೆಚ್ಚಿನ ಮಾಹಿತಿಗಳು ನಮಗೆ ಅಜ್ಞಾತವಾಗಿವೆ.

ಕುರಿತು, ಅವರಿಗೆ ಯಾವ ಭಯವೂ ಇರಲಾರದು ಮತ್ತು ಅವರು ದುಃಖಿಸಬೇಕಾಗಿಯೂ ಬರಲಾರದೆಂದು ಭಾವಿಸಿ ಅವರು (ಆ ಹುತಾತ್ಮರು) ಹರ್ಷಪಡುತ್ತಿರುವರು.

۞ يَسْتَبْشِرُونَ بِنِعْمَةٍ مِّنَ ٱللَّهِ وَفَضْلٍ وَأَنَّ ٱللَّهَ لَا يُضِيعُ أَجْرَ ٱلْمُؤْمِنِينَ ﴿١٧١﴾

**171.** ಅಲ್ಲಾಹುವಿನ ಅನುಗ್ರಹ ಮತ್ತು ಔದಾರ್ಯದಿಂದಾಗಿ ಮತ್ತು ಸತ್ಯವಿಶ್ವಾಸಿಗಳ ಪ್ರತಿಫಲವನ್ನು ಅಲ್ಲಾಹು ವ್ಯರ್ಥಗೊಳಿಸಲಾರನು ಎಂಬುದರಿಂದಾಗಿ ಅವರು ಹರ್ಷಪಡುತ್ತಿರುವರು.

ٱلَّذِينَ ٱسْتَجَابُوا۟ لِلَّهِ وَٱلرَّسُولِ مِنۢ بَعْدِ مَآ أَصَابَهُمُ ٱلْقَرْحُ ۚ لِلَّذِينَ أَحْسَنُوا۟ مِنْهُمْ وَٱتَّقَوْا۟ أَجْرٌ عَظِيمٌ ﴿١٧٢﴾

**172.** ಗಾಯಗೊಂಡ ಬಳಿಕವೂ ಅಲ್ಲಾಹುವಿನ ಮತ್ತು ಸಂದೇಶವಾಹಕರ ಕರೆಗೆ ಓಗೊಟ್ಟವರಾರೋ ಅವರ ಪೈಕಿ ಸತ್ಕರ್ಮವೆಸಗಿದವರಿಗೂ ಭಯಭಕ್ತಿ ಪಾಲಿಸಿದವರಿಗೂ ಮಹಾ ಪ್ರತಿಫಲವಿದೆ.

ٱلَّذِينَ قَالَ لَهُمُ ٱلنَّاسُ إِنَّ ٱلنَّاسَ قَدْ جَمَعُوا۟ لَكُمْ فَٱخْشَوْهُمْ فَزَادَهُمْ إِيمَـٰنًا وَقَالُوا۟ حَسْبُنَا ٱللَّهُ وَنِعْمَ ٱلْوَكِيلُ ﴿١٧٣﴾

**173.** 'ಆ ಜನರು ನಿಮ್ಮ ವಿರುದ್ಧ (ಸೈನ್ಯವನ್ನು) ಜಮಾವಣೆಗೊಳಿಸಿರುವರು; ಆದ್ದರಿಂದ ಅವರನ್ನು ಭಯಪಡಿರಿ' ಎಂದು ಜನರು ಅವರೊಂದಿಗೆ ಹೇಳಿದಾಗ ಅದು ಅವರ ವಿಶ್ವಾಸವನ್ನು ಅಧಿಕಗೊಳಿಸಿತು. ಅವರು ಹೇಳಿದರು: 'ನಮಗೆ ಅಲ್ಲಾಹು ಸಾಕು. ಭರವಸೆಯಿಡಲು ಅತ್ಯುತ್ತಮನು ಅವನೇ ಆಗಿರುವನು.'[1]

فَٱنقَلَبُوا۟ بِنِعْمَةٍ مِّنَ ٱللَّهِ وَفَضْلٍ لَّمْ يَمْسَسْهُمْ سُوٓءٌ وَٱتَّبَعُوا۟ رِضْوَٰنَ ٱللَّهِ ۗ وَٱللَّهُ ذُو فَضْلٍ عَظِيمٍ ﴿١٧٤﴾

**174.** ತರುವಾಯ ಅವರು ಅಲ್ಲಾಹುವಿನ ವತಿಯ ಅನುಗ್ರಹ ಮತ್ತು ಔದಾರ್ಯದೊಂದಿಗೆ ಮರಳಿದರು. ಯಾವುದೇ ಹಾನಿಯೂ ಅವರನ್ನು ಸ್ಪರ್ಶಿಸಲಿಲ್ಲ. ಅವರು

---

1 ಅಬೂ ಸುಫ್ಯಾನ್ ಮತ್ತು ಅವರ ಅನುಯಾಯಿಗಳು ಉಹುದ್ ಯುದ್ಧದಲ್ಲಿ ಸೋತು ಹಿಂದಿರುಗಿದಾಗ ಅವರನ್ನು ಹಿಂಬಾಲಿಸಿ ಪುನಃ ಬೆದರಿಸಲು ಪ್ರವಾದಿ(ﷺ)ರವರು ಮತ್ತು ಮುಸ್ಲಿಮರು ನಿರ್ಧರಿಸಿದರು. ಈ ವಿಷಯವನ್ನರಿತ ಅಬೂ ಸುಫ್ಯಾನ್ ದಾರಿ ಮಧ್ಯೆ ಭೇಟಿಯಾದ ಒಂದು ವರ್ತಕ ತಂಡದೊಂದಿಗೆ, ನೀವು ಮುಹಮ್ಮದ್(ﷺ)ರನ್ನು ಪುನಃ ಮದೀನಕ್ಕೆ ಮರಳುವಂತೆ ಪ್ರೇರೇಪಿಸಬೇಕು, ಅದಕ್ಕಾಗಿ ನಾನು ಅವರನ್ನು ಎದುರಿಸಲು ದೊಡ್ಡ ಸೈನ್ಯವೊಂದನ್ನು ಜಮಾವಣೆಗೊಳಿಸಿರುವೆನು ಎಂದು ಹೆದರಿಸಬೇಕು ಎಂದು ಹೇಳಿದರು. ವರ್ತಕ ತಂಡವು 'ಹಂರಾಉಲ್ ಅಸದ್' ಎಂಬ ಸ್ಥಳದಲ್ಲಿ ಪ್ರವಾದಿ(ﷺ)ರನ್ನು ಭೇಟಿಯಾಗಿ ಅಬೂ ಸುಫ್ಯಾನ್ ಹೇಳಿದಂತೆ ಹೇಳಿ ಹೆದರಿಸಿದರು. ಆಗ ಪ್ರವಾದಿ(ﷺ)ಮತ್ತು ಸಹಾಬಾಗಳು ಹೇಳಿದ ಮಾತುಗಳಾಗಿವೆ ಇವು.

ಅಲ್ಲಾಹುವಿನ ಸಂತೃಪ್ತಿಯನ್ನು ಹಿಂಬಾಲಿಸಿದರು. ಅಲ್ಲಾಹು ಮಹಾ ಔದಾರ್ಯವುಳ್ಳನಾಗಿರುವನು.

**175.** ಅದು (ನಿಮ್ಮನ್ನು ಹೆದರಿಸಿದ್ದು) ಸ್ವತಃ ಸೈತಾನನೇ ಆಗಿದ್ದನು. ಅವನು ತನ್ನ ಮಿತ್ರರ ಕುರಿತು (ನಿಮ್ಮನ್ನು) ಹೆದರಿಸುತ್ತಿರುವನು. ಆದ್ದರಿಂದ ನೀವು ಅವರನ್ನು ಭಯ ಪಡದಿರಿ. ನನ್ನನ್ನು ಭಯಪಡಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ.

إِنَّمَا ذَٰلِكُمُ ٱلشَّيۡطَٰنُ يُخَوِّفُ أَوۡلِيَآءَهُۥ
فَلَا تَخَافُوهُمۡ وَخَافُونِ إِن كُنتُم
مُّؤۡمِنِينَ ١٧٥

**176.** ಸತ್ಯನಿಷೇಧದೆಡೆಗೆ ಧಾವಂತದಿಂದ ಮುನ್ನುಗ್ಗುತ್ತಿರುವವರು ತಮ್ಮನ್ನು ದುಃಖಕ್ಕೀಡು ಮಾಡದಿರಲಿ. ಖಂಡಿತವಾಗಿಯೂ ಅವರು ಅಲ್ಲಾಹುವಿಗೆ ಯಾವುದೇ ಹಾನಿಯನ್ನೂ ಉಂಟುಮಾಡಲಾರರು. ಪರಲೋಕದಲ್ಲಿ ಅವರಿಗೆ ಯಾವ ಪಾಲನ್ನೂ ನೀಡದಿರಲು ಅಲ್ಲಾಹು ಬಯಸುತ್ತಿರುವನು. ಅವರಿಗೆ ಕಠಿಣವಾದ ಶಿಕ್ಷೆಯಿರುವುದು.

وَلَا يَحۡزُنكَ ٱلَّذِينَ يُسَٰرِعُونَ فِي ٱلۡكُفۡرِۚ
إِنَّهُمۡ لَن يَضُرُّواْ ٱللَّهَ شَيۡـٔٗاۚ يُرِيدُ ٱللَّهُ أَلَّا
يَجۡعَلَ لَهُمۡ حَظّٗا فِي ٱلۡأٓخِرَةِۖ وَلَهُمۡ عَذَابٌ
عَظِيمٌ ١٧٦

**177.** ಖಂಡಿತವಾಗಿಯೂ ಸತ್ಯವಿಶ್ವಾಸಕ್ಕೆ ಬದಲಾಗಿ ಸತ್ಯನಿಷೇಧವನ್ನು ಖರೀದಿಸಿದವರು ಯಾರೋ ಅವರು ಅಲ್ಲಾಹುವಿಗೆ ಯಾವುದೇ ಹಾನಿಯನ್ನೂ ಉಂಟುಮಾಡಲಾರರು. ಯಾತನಾಮಯವಾದ ಶಿಕ್ಷೆಯಿರುವುದು ಅವರಿಗೇ ಆಗಿರುವುದು.

إِنَّ ٱلَّذِينَ ٱشۡتَرَوُاْ ٱلۡكُفۡرَ بِٱلۡإِيمَٰنِ لَن
يَضُرُّواْ ٱللَّهَ شَيۡـٔٗاۖ وَلَهُمۡ عَذَابٌ أَلِيمٞ ١٧٧

**178.** ಸತ್ಯನಿಷೇಧಿಗಳಿಗೆ ನಾವು ಕಾಲಾವಕಾಶವನ್ನು ದೀರ್ಘಗೊಳಿಸಿ ಕೊಡುವುದು ಅವರಿಗೆ ಒಳಿತಾಗಿದೆಯೆಂದು ಅವರೆಂದೂ ಭಾವಿಸದಿರಲಿ. ನಾವು ಅವರಿಗೆ ಕಾಲಾವಕಾಶವನ್ನು ದೀರ್ಘಗೊಳಿಸಿ ಕೊಡುವುದು ಅವರು ಪಾಪಗಳನ್ನು ಹೆಚ್ಚಿಸಲೆಂದೇ ಆಗಿದೆ. ಅವರಿಗೆ ನಿಂದ್ಯವಾದ ಶಿಕ್ಷೆಯಿರುವುದು.

وَلَا يَحۡسَبَنَّ ٱلَّذِينَ كَفَرُوٓاْ أَنَّمَا نُمۡلِي
لَهُمۡ خَيۡرٞ لِّأَنفُسِهِمۡۚ إِنَّمَا نُمۡلِي لَهُمۡ
لِيَزۡدَادُوٓاْ إِثۡمٗاۖ وَلَهُمۡ عَذَابٞ مُّهِينٞ ١٧٨

**179.** ಒಳಿತಿನಿಂದ ಕೆಡುಕನ್ನು ಬೇರ್ಪಡಿಸಿ ತೋರಿಸುವ ತನಕ ಇಂದು ನೀವಿರುವ ಸ್ಥಿತಿಯಲ್ಲಿ ಅಲ್ಲಾಹು ಸತ್ಯವಿಶ್ವಾಸಿಗಳನ್ನು ಬಿಟ್ಟುಬಿಡಲಾರನು. ಅಲ್ಲಾಹು ನಿಮಗೆ ಅಗೋಚರ ಜ್ಞಾನವನ್ನು ಪ್ರಕಟಗೊಳಿಸುವುದನ್ನೂ ಮಾಡಲಾರನು. ಆದರೆ (ಅಗೋಚರ ಜ್ಞಾನವನ್ನು ತಿಳಿಸಿ ಕೊಡುವ ಸಲುವಾಗಿ) ಅಲ್ಲಾಹು ತನ್ನ ಸಂದೇಶವಾಹಕರ ಪೈಕಿ ತಾನಿಚ್ಛಿಸುವವರನ್ನು ಆರಿಸುವನು. ಆದ್ದರಿಂದ ಅಲ್ಲಾಹುವಿನಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿಡಿರಿ. ನೀವು ವಿಶ್ವಾಸವಿಟ್ಟರೆ ಮತ್ತು ಭಯಭಕ್ತಿ ಪಾಲಿಸಿದರೆ ನಿಮಗೆ ಮಹಾ ಪ್ರತಿಫಲವಿರುವುದು.

مَّا كَانَ ٱللَّهُ لِيَذَرَ ٱلْمُؤْمِنِينَ عَلَىٰ مَآ أَنتُمْ عَلَيْهِ حَتَّىٰ يَمِيزَ ٱلْخَبِيثَ مِنَ ٱلطَّيِّبِ ۗ وَمَا كَانَ ٱللَّهُ لِيُطْلِعَكُمْ عَلَى ٱلْغَيْبِ وَلَـٰكِنَّ ٱللَّهَ يَجْتَبِى مِن رُّسُلِهِۦ مَن يَشَآءُ ۖ فَـَٔامِنُوا۟ بِٱللَّهِ وَرُسُلِهِۦ ۚ وَإِن تُؤْمِنُوا۟ وَتَتَّقُوا۟ فَلَكُمْ أَجْرٌ عَظِيمٌ ﴿١٧٩﴾

**180.** ಜಿಪುಣತನ ತೋರುವವರು ಯಾರೋ ಅವರಿಗೆ ಅಲ್ಲಾಹು ತನ್ನ ಅನುಗ್ರಹದಿಂದ ದಯಪಾಲಿಸಿರುವುದನ್ನು ಅವರೆಂದೂ ಪ್ರಯೋಜನಕರವೆಂದು ಭಾವಿಸದಿರಲಿ. ಅಲ್ಲ, ಅದು ಅವರಿಗೆ ಹಾನಿಕರವಾಗಿದೆ. ಅವರು ಜಿಪುಣತನ ತೋರಿದ ಧನದಿಂದ ಪುನರುತ್ಥಾನ ದಿನದಂದು ಅವರ ಕೊರಳಿಗೆ ಹಾರವನ್ನು ಹಾಕಲಾಗುವುದು. ಆಕಾಶಗಳ ಮತ್ತು ಭೂಮಿಯ ವಾರೀಸು ಹಕ್ಕು ಅಲ್ಲಾಹುವಿಗಿರುವುದಾಗಿದೆ. ಅಲ್ಲಾಹು ನೀವು ಮಾಡುತ್ತಿರುವುದರ ಬಗ್ಗೆ ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَلَا يَحْسَبَنَّ ٱلَّذِينَ يَبْخَلُونَ بِمَآ ءَاتَىٰهُمُ ٱللَّهُ مِن فَضْلِهِۦ هُوَ خَيْرًا لَّهُم ۖ بَلْ هُوَ شَرٌّ لَّهُمْ ۖ سَيُطَوَّقُونَ مَا بَخِلُوا۟ بِهِۦ يَوْمَ ٱلْقِيَـٰمَةِ ۗ وَلِلَّهِ مِيرَٰثُ ٱلسَّمَـٰوَٰتِ وَٱلْأَرْضِ ۗ وَٱللَّهُ بِمَا تَعْمَلُونَ خَبِيرٌ ﴿١٨٠﴾

**181.** 'ಅಲ್ಲಾಹು ಬಡವನಾಗಿರುವನು ಮತ್ತು ನಾವು ಧನಿಕರಾಗಿರುವೆವು' ಎಂದು ಹೇಳಿದವರ ಮಾತನ್ನು[1] ಖಂಡಿತವಾಗಿಯೂ ಅಲ್ಲಾಹು ಆಲಿಸಿರುವನು. ಅವರು ಹೇಳಿರುವ ಮಾತನ್ನು ಮತ್ತು ಅವರು ಪ್ರವಾದಿಗಳನ್ನು

لَّقَدْ سَمِعَ ٱللَّهُ قَوْلَ ٱلَّذِينَ قَالُوٓا۟ إِنَّ ٱللَّهَ فَقِيرٌ وَنَحْنُ أَغْنِيَآءُ ۘ سَنَكْتُبُ مَا قَالُوا۟ وَقَتْلَهُمُ ٱلْأَنۢبِيَآءَ بِغَيْرِ حَقٍّ وَنَقُولُ ذُوقُوا۟ عَذَابَ ٱلْحَرِيقِ ﴿١٨١﴾

1 'ನೀವು ಅಲ್ಲಾಹುವಿಗೆ ಉತ್ತಮವಾದ ಸಾಲವನ್ನು ನೀಡಿರಿ' ಎಂಬ ಕುರ್‌ಆನಿನ ಆಹ್ವಾನವನ್ನು ಲೇವಡಿ ಮಾಡುತ್ತಾ ಯಹೂದಿಗಳು ಈ ಮಾತನ್ನು ಹೇಳಿದ್ದರು.

ಅನ್ಯಾಯವಾಗಿ ವಧಿಸಿರುವುದನ್ನು ನಾವು ದಾಖಲಿಸುವೆವು. 'ಧಗಧಗಿಸುವ ನರಕ ಶಿಕ್ಷೆಯನ್ನು ಆಸ್ವಾದಿಸಿರಿ' ಎಂದು ನಾವು (ಅವರೊಂದಿಗೆ) ಹೇಳುವೆವು.

ذَٰلِكَ بِمَا قَدَّمَتۡ أَيۡدِيكُمۡ وَأَنَّ ٱللَّهَ لَيۡسَ بِظَلَّامٖ لِّلۡعَبِيدِ ﴿١٨٢﴾

**182.** ಅದು ನಿಮ್ಮ ಕೈಗಳು ಮುಂಗಡವಾಗಿ ಮಾಡಿಟ್ಟಿರುವುದರಿಂದಲೂ ಅಲ್ಲಾಹು ದಾಸರೊಂದಿಗೆ ಅನ್ಯಾಯವೆಸಗಲಾರನು ಎಂಬುದರಿಂದಲೂ ಆಗಿದೆ.

ٱلَّذِينَ قَالُوٓاْ إِنَّ ٱللَّهَ عَهِدَ إِلَيۡنَآ أَلَّا نُؤۡمِنَ لِرَسُولٍ حَتَّىٰ يَأۡتِيَنَا بِقُرۡبَانٖ تَأۡكُلُهُ ٱلنَّارُۗ قُلۡ قَدۡ جَآءَكُمۡ رُسُلٞ مِّن قَبۡلِي بِٱلۡبَيِّنَٰتِ وَبِٱلَّذِي قُلۡتُمۡ فَلِمَ قَتَلۡتُمُوهُمۡ إِن كُنتُمۡ صَٰدِقِينَ ﴿١٨٣﴾

**183.** 'ನಮ್ಮ ಮುಂದೆ ಒಂದು ಬಲಿ ನೀಡಿ ಅದನ್ನು ಅಗ್ನಿಯು ಭಕ್ಷಿಸುವುದನ್ನು (ಕಣ್ಣಾರೆ ಕಾಣುವ) ತನಕ ಯಾವ ಸಂದೇಶವಾಹಕನಲ್ಲಿಯೂ ನಾವು ವಿಶ್ವಾಸವಿಡಬಾರದು ಎಂದು ಅಲ್ಲಾಹು ನಮ್ಮಿಂದ ಕರಾರು ಪಡೆದಿರುವನು' ಎಂದು ಹೇಳಿದವರಾಗಿರುವರು. (ಓ ಪ್ರವಾದಿಯವರೇ!) ಹೇಳಿರಿ: 'ಸ್ಪಷ್ಟವಾದ ಪುರಾವೆಗಳ ಸಹಿತ ಮತ್ತು ನೀವು ಹೇಳುತ್ತಿರುವ ಇದರ ಸಹಿತ ನನಗಿಂತ ಮುಂಚೆ ಅನೇಕ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರುವರು. ನೀವು ಸತ್ಯಸಂಧರಾಗಿದ್ದರೆ ನೀವೇಕೆ ಅವರನ್ನು ವಧಿಸಿದಿರಿ?'

فَإِن كَذَّبُوكَ فَقَدۡ كُذِّبَ رُسُلٞ مِّن قَبۡلِكَ جَآءُو بِٱلۡبَيِّنَٰتِ وَٱلزُّبُرِ وَٱلۡكِتَٰبِ ٱلۡمُنِيرِ ﴿١٨٤﴾

**184.** ಅವರು ತಮ್ಮನ್ನು ನಿಷೇಧಿಸುವುದಾದರೆ ತಮಗಿಂತ ಮುಂಚೆ ಸ್ಪಷ್ಟವಾದ ಪುರಾವೆಗಳೊಂದಿಗೆ, ಗ್ರಂಥಗಳೊಂದಿಗೆ ಮತ್ತು ಪ್ರಕಾಶ ಬೀರುವ ಗ್ರಂಥದೊಂದಿಗೆ ಬಂದ ಸಂದೇಶವಾಹಕರು ಕೂಡ ನಿಷೇಧಿಸಲ್ಪಟ್ಟಿರುವರು.

كُلُّ نَفۡسٖ ذَآئِقَةُ ٱلۡمَوۡتِۗ وَإِنَّمَا تُوَفَّوۡنَ أُجُورَكُمۡ يَوۡمَ ٱلۡقِيَٰمَةِۖ فَمَن زُحۡزِحَ عَنِ ٱلنَّارِ وَأُدۡخِلَ ٱلۡجَنَّةَ فَقَدۡ فَازَۗ وَمَا ٱلۡحَيَوٰةُ ٱلدُّنۡيَآ إِلَّا مَتَٰعُ ٱلۡغُرُورِ ﴿١٨٥﴾

**185.** ಪ್ರತಿಯೊಂದು ಶರೀರವೂ ಮರಣದ ರುಚಿಯನ್ನು ಸವಿಯಲಿದೆ. ನಿಮಗೆ ನಿಮ್ಮ ಪ್ರತಿಫಲಗಳನ್ನು ಪೂರ್ಣವಾಗಿ ನೀಡಲಾಗುವುದು ಪುನರುತ್ಥಾನ ದಿನದಂದು ಮಾತ್ರವಾಗಿದೆ. ಆಗ ಯಾರು ನರಕದಿಂದ ದೂರ ಸರಿಸಲಾಗುವನೋ ಮತ್ತು ಸ್ವರ್ಗಕ್ಕೆ ಪ್ರವೇಶಿಸಲ್ಪಡಲಾಗುವನೋ

ಅವನು ಜಯಗಳಿಸಿದನು. ಐಹಿಕ ಜೀವನವು ವಂಚನಾತ್ಮಕವಾದ ಸುಖಾನುಭೂತಿಯಲ್ಲದೆ ಇನ್ನೇನೂ ಅಲ್ಲ.

**186.** ಖಂಡಿತವಾಗಿಯೂ ನಿಮ್ಮ ಸಂಪತ್ತುಗಳಲ್ಲಿಯೂ ಶರೀರಗಳಲ್ಲಿಯೂ ನಿಮ್ಮನ್ನು ಪರೀಕ್ಷಿಸಲಾಗುವುದು. ನಿಮಗಿಂತ ಮುಂಚೆ ಗ್ರಂಥ ನೀಡಲಾದವರಿಂದಲೂ, ಬಹುದೇವಾರಾಧಕರಿಂದಲೂ ಖಂಡಿತವಾಗಿಯೂ ನೀವು ಅನೇಕ ಚುಚ್ಚು ಮಾತುಗಳನ್ನು ಕೇಳಿಸಿಕೊಳ್ಳಲಿರುವಿರಿ. ನೀವು ಸಹನೆ ವಹಿಸುವುದಾದರೆ ಮತ್ತು ಭಯಭಕ್ತಿ ಪಾಲಿಸುವುದಾದರೆ ಖಂಡಿತವಾಗಿಯೂ ಅದು ದೃಢನಿರ್ಧಾರ ತಳೆಯುವ ವಿಷಯಗಳಲ್ಲಿ ಸೇರಿದ್ದಾಗಿವೆ.

۞ لَتُبۡلَوُنَّ فِيٓ أَمۡوَٰلِكُمۡ وَأَنفُسِكُمۡ
وَلَتَسۡمَعُنَّ مِنَ ٱلَّذِينَ أُوتُواْ ٱلۡكِتَٰبَ مِن
قَبۡلِكُمۡ وَمِنَ ٱلَّذِينَ أَشۡرَكُوٓاْ أَذٗى كَثِيرٗاۚ
وَإِن تَصۡبِرُواْ وَتَتَّقُواْ فَإِنَّ ذَٰلِكَ مِنۡ عَزۡمِ
ٱلۡأُمُورِ ١٨٦

**187.** ಗ್ರಂಥ ನೀಡಲಾದವರೊಂದಿಗೆ ಖಂಡಿತವಾಗಿಯೂ ಅದನ್ನು (ಗ್ರಂಥವನ್ನು) ನೀವು ಜನರಿಗೆ ವಿವರಿಸಿಕೊಡಬೇಕು ಮತ್ತು ಅದನ್ನು ಮರೆಮಾಚಬಾರದೆಂದು ಅಲ್ಲಾಹು ಕರಾರು ಪಡೆದ ಸಂದರ್ಭ(ವನ್ನು ಸ್ಮರಿಸಿರಿ). ಆದರೆ ಅವರದನ್ನು (ಗ್ರಂಥವನ್ನು) ತಮ್ಮ ಬೆನ್ನಹಿಂದಕ್ಕೆ ಎಸೆದರು ಮತ್ತು ಅದರ ಬದಲಿಗೆ ತುಚ್ಛವಾದ ಬೆಲೆಯನ್ನು ಪಡೆದರು. ಅವರು ಬದಲಿಗೆ ಪಡೆದದ್ದು ಅದೆಷ್ಟು ನಿಕೃಷ್ಟವಾದುದು!

وَإِذۡ أَخَذَ ٱللَّهُ مِيثَٰقَ ٱلَّذِينَ أُوتُواْ ٱلۡكِتَٰبَ
لَتُبَيِّنُنَّهُۥ لِلنَّاسِ وَلَا تَكۡتُمُونَهُۥ فَنَبَذُوهُ
وَرَآءَ ظُهُورِهِمۡ وَٱشۡتَرَوۡاْ بِهِۦ ثَمَنٗا قَلِيلٗاۖ
فَبِئۡسَ مَا يَشۡتَرُونَ ١٨٧

**188.** ತಾವು ಮಾಡಿರುವ ಕರ್ಮಗಳ ಬಗ್ಗೆ ಸಂತೋಷ ಪಡುವ ಮತ್ತು ತಾವು ಮಾಡಿರದಂತಹ ಕರ್ಮಗಳ ಹೆಸರಿನಲ್ಲಿ ಪ್ರಶಂಸಿಸಲಾಗುವುದನ್ನು ಇಷ್ಟಪಡುವ ಜನರ ಬಗ್ಗೆ ಅವರು ಶಿಕ್ಷೆಯಿಂದ ಮುಕ್ತರಾದ ಸ್ಥಿತಿಯಲ್ಲಿರುವರು ಎಂದು ತಾವೆಂದೂ ಭಾವಿಸದಿರಿ. ಯಾತನಾಮಯವಾದ ಶಿಕ್ಷೆಯಿರುವುದು ಅವರಿಗಾಗಿದೆ.

لَا تَحۡسَبَنَّ ٱلَّذِينَ يَفۡرَحُونَ بِمَآ أَتَواْ
وَّيُحِبُّونَ أَن يُحۡمَدُواْ بِمَا لَمۡ يَفۡعَلُواْ فَلَا
تَحۡسَبَنَّهُم بِمَفَازَةٖ مِّنَ ٱلۡعَذَابِۖ وَلَهُمۡ
عَذَابٌ أَلِيمٞ ١٨٨

**189.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗಿರುವುದಾಗಿದೆ. ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَلِلَّهِ مُلۡكُ ٱلسَّمَٰوَٰتِ وَٱلۡأَرۡضِۗ وَٱللَّهُ عَلَىٰ كُلِّ شَيۡءٖ قَدِيرٌ ١٨٩

**190.** ಖಂಡಿತವಾಗಿಯೂ ಆಕಾಶಗಳ ಮತ್ತು ಭೂಮಿಯ ಸೃಷ್ಟಿಯಲ್ಲಿ ಮತ್ತು ರಾತ್ರಿ ಹಗಲುಗಳ ಬದಲಾವಣೆಯಲ್ಲಿ ಬುದ್ಧಿವಂತರಿಗೆ ಅನೇಕ ದೃಷ್ಟಾಂತಗಳಿವೆ.

إِنَّ فِي خَلۡقِ ٱلسَّمَٰوَٰتِ وَٱلۡأَرۡضِ وَٱخۡتِلَٰفِ ٱلَّيۡلِ وَٱلنَّهَارِ لَأٓيَٰتٖ لِّأُوْلِي ٱلۡأَلۡبَٰبِ ١٩٠

**191.** ಅವರು ನಿಂತುಕೊಂಡು, ಕುಳಿತುಕೊಂಡು ಮತ್ತು ಮಲಗಿಕೊಂಡು ಅಲ್ಲಾಹುವನ್ನು ಸ್ಮರಿಸುವವರೂ, ಆಕಾಶಗಳ ಮತ್ತು ಭೂಮಿಯ ಸೃಷ್ಟಿಯ ಕುರಿತು ಚಿಂತಿಸುತ್ತಿರುವವರೂ ಆಗಿರುವರು. (ಅವರು ಹೇಳುವರು): 'ಓ ನಮ್ಮ ರಬ್! ನೀನಿದನ್ನು ವ್ಯರ್ಥವಾಗಿ ಸೃಷ್ಟಿಸಿಲ್ಲ. ನೀನು ಪರಮ ಪಾವನನಾಗಿರುವೆ. ಆದ್ದರಿಂದ ನಮ್ಮನ್ನು ನರಕಶಿಕ್ಷೆಯಿಂದ ಪಾರುಮಾಡು.

ٱلَّذِينَ يَذۡكُرُونَ ٱللَّهَ قِيَٰمٗا وَقُعُودٗا وَعَلَىٰ جُنُوبِهِمۡ وَيَتَفَكَّرُونَ فِي خَلۡقِ ٱلسَّمَٰوَٰتِ وَٱلۡأَرۡضِ رَبَّنَا مَا خَلَقۡتَ هَٰذَا بَٰطِلٗا سُبۡحَٰنَكَ فَقِنَا عَذَابَ ٱلنَّارِ ١٩١

**192.** ಓ ನಮ್ಮ ರಬ್! ನೀನು ಯಾರನ್ನಾದರೂ ನರಕಾಗ್ನಿಗೆ ಪ್ರವೇಶಗೊಳಿಸುವುದಾದರೆ ಅವನನ್ನು ನೀನು ನಿಂದ್ಯನಾಗಿ ಮಾಡಿರುವೆ. ಅಕ್ರಮಿಗಳಿಗೆ ಸಹಾಯಕರಾಗಿ ಯಾರೂ ಇರಲಾರರು.

رَبَّنَآ إِنَّكَ مَن تُدۡخِلِ ٱلنَّارَ فَقَدۡ أَخۡزَيۡتَهُۥۖ وَمَا لِلظَّٰلِمِينَ مِنۡ أَنصَارٖ ١٩٢

**193.** ಓ ನಮ್ಮ ರಬ್! ಸತ್ಯವಿಶ್ವಾಸದೆಡೆಗೆ ಆಹ್ವಾನಿಸುವ ಓರ್ವ ಉಪದೇಶಕನು 'ನೀವು ನಿಮ್ಮ ರಬ್‌ನಲ್ಲಿ ವಿಶ್ವಾಸವಿಡಿರಿ' ಎಂದು ಹೇಳುವುದನ್ನು ಖಂಡಿತವಾಗಿಯೂ ನಾವು ಆಲಿಸಿರುವೆವು. ಆದ್ದರಿಂದ ನಾವು ವಿಶ್ವಾಸವಿಟ್ಟಿರುವೆವು. ಓ ನಮ್ಮ ರಬ್! ಆದ್ದರಿಂದ ನಮ್ಮ ಪಾಪಗಳನ್ನು ಕ್ಷಮಿಸು ಮತ್ತು ನಮ್ಮ ದೋಷಗಳನ್ನು ನಮ್ಮಿಂದ ಅಳಿಸು. ನಮ್ಮನ್ನು ಸಜ್ಜನರೊಂದಿಗೆ ಮರಣಗೊಳಿಸು.

رَّبَّنَآ إِنَّنَا سَمِعۡنَا مُنَادِيٗا يُنَادِي لِلۡإِيمَٰنِ أَنۡ ءَامِنُواْ بِرَبِّكُمۡ فَـَٔامَنَّاۚ رَبَّنَا فَٱغۡفِرۡ لَنَا ذُنُوبَنَا وَكَفِّرۡ عَنَّا سَيِّـَٔاتِنَا وَتَوَفَّنَا مَعَ ٱلۡأَبۡرَارِ ١٩٣

194. ಓ ನಮ್ಮ ರಬ್! ನಿನ್ನ ಸಂದೇಶವಾಹಕರ ಮೂಲಕ ನೀನು ನಮ್ಮೊಂದಿಗೆ ವಾಗ್ದಾನ ಮಾಡಿರುವುದನ್ನು ನಮಗೆ ದಯಪಾಲಿಸು ಮತ್ತು ಪುನರುತ್ಥಾನ ದಿನದಂದು ನಮ್ಮನ್ನು ಅಪಮಾನಿಸದಿರು. ಖಂಡಿತವಾಗಿಯೂ ನೀನು ವಾಗ್ದಾನವನ್ನು ಉಲ್ಲಂಘಿಸುವುದಿಲ್ಲ.'

رَبَّنَا وَءَاتِنَا مَا وَعَدتَّنَا عَلَىٰ رُسُلِكَ وَلَا تُخۡزِنَا يَوۡمَ ٱلۡقِيَٰمَةِۗ إِنَّكَ لَا تُخۡلِفُ ٱلۡمِيعَادَ ١٩٤

195. ಆಗ ಅವರ ರಬ್ ಅವರಿಗೆ ಉತ್ತರಿಸಿದನು: 'ಪುರುಷನಾಗಿರಲಿ ಸ್ತ್ರೀಯಾಗಿರಲಿ ನಿಮ್ಮ ಪೈಕಿ ಕರ್ಮವೆಸಗುವ ಯಾರ ಕರ್ಮವನ್ನೂ ನಾನು ನಿಷ್ಫಲಗೊಳಿಸೆನು. ನಿಮ್ಮಲ್ಲಿ ಪ್ರತಿಯೊಂದು ವರ್ಗದವರೂ ಇನ್ನೊಂದು ವರ್ಗದಿಂದ ಉದ್ಭವಿಸಿದವರಾಗಿರುವಿರಿ.(1) ಆದ್ದರಿಂದ ತಮ್ಮ ಊರನ್ನು ತೊರೆದವರು, ಸ್ವಂತ ಮನೆಗಳಿಂದ ಹೊರದಬ್ಬಲಾದವರು, ನನ್ನ ಮಾರ್ಗದಲ್ಲಿ ಹಿಂಸೆಗೀಡಾದವರು, ಯುದ್ಧದಲ್ಲಿ ನಿರತರಾದವರು ಮತ್ತು ವಧಿಸಲಾದವರು ಯಾರೋ ಅವರ ಪಾಪಗಳನ್ನು ನಾನು ಅಳಿಸುವೆನು ಮತ್ತು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಅವರನ್ನು ಪ್ರವೇಶಗೊಳಿಸುವೆನು.' ಇದು ಅಲ್ಲಾಹುವಿನ ವತಿಯ ಪ್ರತಿಫಲವಾಗಿದೆ. ಅಲ್ಲಾಹುವಿನ ಬಳಿ ಅತ್ಯುತ್ತಮವಾದ ಪ್ರತಿಫಲವಿದೆ.

فَٱسۡتَجَابَ لَهُمۡ رَبُّهُمۡ أَنِّي لَآ أُضِيعُ عَمَلَ عَٰمِلٖ مِّنكُم مِّن ذَكَرٍ أَوۡ أُنثَىٰۖ بَعۡضُكُم مِّنۢ بَعۡضٖۖ فَٱلَّذِينَ هَاجَرُواْ وَأُخۡرِجُواْ مِن دِيَٰرِهِمۡ وَأُوذُواْ فِي سَبِيلِي وَقَٰتَلُواْ وَقُتِلُواْ لَأُكَفِّرَنَّ عَنۡهُمۡ سَيِّـَٔاتِهِمۡ وَلَأُدۡخِلَنَّهُمۡ جَنَّٰتٖ تَجۡرِي مِن تَحۡتِهَا ٱلۡأَنۡهَٰرُ ثَوَابٗا مِّنۡ عِندِ ٱللَّهِۚ وَٱللَّهُ عِندَهُۥ حُسۡنُ ٱلثَّوَابِ ١٩٥

196. ನಾಡುಗಳಲ್ಲಿ ಸತ್ಯನಿಷೇಧಿಗಳ ಸ್ವಚ್ಛಂದ ಮೆರೆದಾಟವು ತಮ್ಮನ್ನು ವಂಚಿಸದಿರಲಿ.

لَا يَغُرَّنَّكَ تَقَلُّبُ ٱلَّذِينَ كَفَرُواْ فِي ٱلۡبِلَٰدِ ١٩٦

197. ಅದು ಕ್ಷಣಿಕವಾದ ಒಂದು ಸುಖಾನುಭೂತಿಯಾಗಿದೆ. ತರುವಾಯ ಅವರಿಗಿರುವ ವಾಸಸ್ಥಳವು ನರಕಾಗ್ನಿಯಾಗಿದೆ. ಆ ವಾಸಸ್ಥಳವು ಅದೆಷ್ಟು ನಿಕೃಷ್ಟವಾದುದು!

مَتَٰعٞ قَلِيلٞ ثُمَّ مَأۡوَىٰهُمۡ جَهَنَّمُۖ وَبِئۡسَ ٱلۡمِهَادُ ١٩٧

1 ಗಂಡು ಮತ್ತು ಹೆಣ್ಣು ಬೇರೆ ಬೇರೆ ವರ್ಗಗಳಲ್ಲ. ಮನುಷ್ಯಕುಲದಲ್ಲಿರುವ ಎರಡು ವಿಭಾಗಗಳಷ್ಟೇ ಆಗಿವೆ. ಇದರ ತಾತ್ಪರ್ಯವೇನೆಂದರೆ ಸತ್ಕರ್ಮಗೈಯ್ಯುವವನು ಗಂಡಾದರೂ ಹೆಣ್ಣಾದರೂ ಅವರಿಬ್ಬರೂ ಪುಣ್ಯ ಪಡೆಯುವುದರಲ್ಲಿ ಸಮಾನರು ಎಂದಾಗಿದೆ.

198. ಆದರೆ ತಮ್ಮ ರಬ್ಬನ್ನು ಭಯಪಟ್ಟು ಜೀವಿಸಿದವರು ಯಾರೋ ಅವರಿಗೆ ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. ಅದು ಅಲ್ಲಾಹುವಿನ ವತಿಯ ಸತ್ಕಾರವಾಗಿದೆ. ಸಜ್ಜನರಿಗೆ ಅಲ್ಲಾಹುವಿನ ಬಳಿಯಿರುವುದೇ ಅತ್ಯುತ್ತಮವಾಗಿದೆ.

لَـٰكِنِ ٱلَّذِينَ ٱتَّقَوْا۟ رَبَّهُمْ لَهُمْ جَنَّـٰتٌ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَا نُزُلًا مِّنْ عِندِ ٱللَّهِ ۗ وَمَا عِندَ ٱللَّهِ خَيْرٌ لِّلْأَبْرَارِ ﴿١٩٨﴾

199. ಖಂಡಿತವಾಗಿಯೂ ಗ್ರಂಥದವರ ಪೈಕಿ ಅಲ್ಲಾಹುವಿನಲ್ಲಿಯೂ, ನಿಮಗೆ ಅವತೀರ್ಣಗೊಂಡಿರುವುದರಲ್ಲಿಯೂ ತಮಗೆ ಅವತೀರ್ಣಗೊಂಡಿರುವುದರಲ್ಲಿಯೂ ವಿಶ್ವಾಸವಿಡುವವರಿರುವರು. (ಅವರು) ಅಲ್ಲಾಹುವಿನೊಂದಿಗೆ ವಿನಮ್ರತೆಯುಳ್ಳವರೂ, ಅಲ್ಲಾಹುವಿನ ವಚನಗಳನ್ನು ಮಾರಿ ತುಚ್ಛವಾದ ಬೆಲೆ ಪಡೆಯದವರೂ ಆಗಿರುವರು. ಅಂತಹವರಿಗೆ ಅವರ ರಬ್‌ನ ಬಳಿ ಅರ್ಹ ಪ್ರತಿಫಲವಿರುವುದು. ಖಂಡಿತವಾಗಿಯೂ ಅಲ್ಲಾಹು ಅತಿಶೀಘ್ರವಾಗಿ ವಿಚಾರಣೆ ಮಾಡುವವನಾಗಿರುವನು.

وَإِنَّ مِنْ أَهْلِ ٱلْكِتَـٰبِ لَمَن يُؤْمِنُ بِٱللَّهِ وَمَآ أُنزِلَ إِلَيْكُمْ وَمَآ أُنزِلَ إِلَيْهِمْ خَـٰشِعِينَ لِلَّهِ لَا يَشْتَرُونَ بِـَٔايَـٰتِ ٱللَّهِ ثَمَنًا قَلِيلًا ۗ أُو۟لَـٰٓئِكَ لَهُمْ أَجْرُهُمْ عِندَ رَبِّهِمْ ۗ إِنَّ ٱللَّهَ سَرِيعُ ٱلْحِسَابِ ﴿١٩٩﴾

200. ಓ ಸತ್ಯವಿಶ್ವಾಸಿಗಳೇ! ಸಹನೆ ಪಾಲಿಸಿರಿ, ಸ್ಥೈರ್ಯವಂತರಾಗಿರಿ ಮತ್ತು ಪ್ರತಿರೋಧ ಸನ್ನದ್ಧರಾಗಿರಿ. ಅಲ್ಲಾಹುವನ್ನು ಭಯಪಟ್ಟು ಜೀವಿಸಿರಿ. ನೀವು ಯಶಸ್ಸುಗಳಿಸಲೂ ಬಹುದು.

يَـٰٓأَيُّهَا ٱلَّذِينَ ءَامَنُوا۟ ٱصْبِرُوا۟ وَصَابِرُوا۟ وَرَابِطُوا۟ وَٱتَّقُوا۟ ٱللَّهَ لَعَلَّكُمْ تُفْلِحُونَ ﴿٢٠٠﴾

## ಅನ್ನಿಸಾಅ್ (ಸ್ತ್ರೀಯರು)[1]

## سُورَةُ النِّسَاءِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 176

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಓ ಮನುಷ್ಯರೇ! ನಿಮ್ಮನ್ನು ಒಂದೇ ಶರೀರದಿಂದ ಸೃಷ್ಟಿಸಿರುವ ಮತ್ತು ಅದರಿಂದಲೇ ಅದರ ಸಂಗಾತಿಯನ್ನು ಸೃಷ್ಟಿಸಿರುವ ಹಾಗೂ ಅವರಿಬ್ಬರಿಂದಲೂ ಅನೇಕ ಪುರುಷರನ್ನೂ ಸ್ತ್ರೀಯರನ್ನೂ ಹಬ್ಬಿಸಿರುವ ನಿಮ್ಮ ರಬ್ಬನ್ನು ಭಯಪಡಿರಿ. ಯಾವ ಅಲ್ಲಾಹುವಿನ ವಿಚಾರದಲ್ಲಿ ನೀವು ಪರಸ್ಪರ ಪ್ರಶ್ನಿಸುತ್ತಿರುವಿರೋ[2] ಅವನನ್ನು ಭಯಪಡಿರಿ ಮತ್ತು ಕುಟುಂಬ ಸಂಬಂಧಗಳನ್ನು (ಕಾಪಾಡಿರಿ). ಖಂಡಿತವಾಗಿಯೂ ಅಲ್ಲಾಹು ನಿಮ್ಮನ್ನು ಸೂಕ್ಷ್ಮವಾಗಿ ವೀಕ್ಷಿಸುವವನಾಗಿರುವನು.

يَٰٓأَيُّهَا ٱلنَّاسُ ٱتَّقُواْ رَبَّكُمُ ٱلَّذِي خَلَقَكُم مِّن نَّفۡسٖ وَٰحِدَةٖ وَخَلَقَ مِنۡهَا زَوۡجَهَا وَبَثَّ مِنۡهُمَا رِجَالٗا كَثِيرٗا وَنِسَآءٗۚ وَٱتَّقُواْ ٱللَّهَ ٱلَّذِي تَسَآءَلُونَ بِهِۦ وَٱلۡأَرۡحَامَۚ إِنَّ ٱللَّهَ كَانَ عَلَيۡكُمۡ رَقِيبٗا ١

2. ಅನಾಥರಿಗೆ ಅವರ ಸೊತ್ತನ್ನು ಕೊಟ್ಟುಬಿಡಿರಿ. ಉತ್ತಮವಾಗಿರುವುದಕ್ಕೆ ಬದಲು ನಿಕೃಷ್ಟವಾಗಿರುವುದನ್ನು ಬದಲಾಯಿಸದಿರಿ. ಅವರ ಸಂಪತ್ತನ್ನು ನಿಮ್ಮ ಸಂಪತ್ತಿನೊಂದಿಗೆ ಸೇರಿಸಿ ತಿನ್ನದಿರಿ. ಖಂಡಿತವಾಗಿಯೂ ಅದೊಂದು ಘೋರ ಪಾಪವಾಗಿದೆ.

وَءَاتُواْ ٱلۡيَتَٰمَىٰٓ أَمۡوَٰلَهُمۡۖ وَلَا تَتَبَدَّلُواْ ٱلۡخَبِيثَ بِٱلطَّيِّبِۖ وَلَا تَأۡكُلُوٓاْ أَمۡوَٰلَهُمۡ إِلَىٰٓ أَمۡوَٰلِكُمۡۚ إِنَّهُۥ كَانَ حُوبٗا كَبِيرٗا ٢

3. ಅನಾಥೆಯರ ವಿಷಯದಲ್ಲಿ[3] ನ್ಯಾಯ ಪಾಲಿಸಲು ಸಾಧ್ಯವಾಗಲಾರದೆಂದು ನೀವು

وَإِنۡ خِفۡتُمۡ أَلَّا تُقۡسِطُواْ فِي ٱلۡيَتَٰمَىٰ

---

1 ಸ್ತ್ರೀಯರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಪ್ರತಿಪಾದಿಸಿರುವ ಕಾರಣ ಈ ಅಧ್ಯಾಯಕ್ಕೆ ಸ್ತ್ರೀಯರು ಎಂಬ ಹೆಸರು ಬಂದಿದೆ.

2 ಈ ಸೂಚನೆ ಅಲ್ಲಾಹುವಿನ ಹೆಸರಲ್ಲಿ ಪರಸ್ಪರ ತರ್ಕಿಸುವುದರ ಕುರಿತು, ಅಲ್ಲಾಹುವಿನ ಹೆಸರಿನಲ್ಲಿ ಪರಸ್ಪರ ಹಕ್ಕುವಾದಗಳನ್ನು ಮಂಡಿಸುವುದರ ಕುರಿತು ಅಥವಾ ಅಲ್ಲಾಹುವಿನ ಹೆಸರಿನಲ್ಲಿ ಪರಸ್ಪರ ಸಹಾಯಯಾಚನೆ ಮಾಡುವುದರ ಕುರಿತಾಗಿರಬಹುದು.

3 ಅನಾಥೆಯರ ಪೋಷಣೆಯ ಹೊಣೆಯನ್ನು ವಹಿಸಿದವರು ಅವರ ಸಂಪತ್ತು ಮತ್ತು ಸೌಂದರ್ಯದಲ್ಲಿ ಕಣ್ಣಿಟ್ಟು ಅವರನ್ನು ವಿವಾಹವಾಗುವ ಸಂಪ್ರದಾಯ ಅರಬರ ಮಧ್ಯೆ ರೂಢಿಯಲ್ಲಿತ್ತು. ಆದರೆ ಅವರಲ್ಲಿ ಹೆಚ್ಚಿನವರೂ ಆ 'ಅನಾಥೆ' ಪತ್ನಿಯರೊಂದಿಗೆ ನ್ಯಾಯ ಪಾಲಿಸುತ್ತಿರಲಿಲ್ಲ. ನ್ಯಾಯ ಪಾಲಿಸದ ಯಾವುದೇ ವಿವಾಹ ಸಂಪ್ರದಾಯವೂ ಇಸ್ಲಾಮಿನಲ್ಲಿ ನಿಷಿದ್ಧವಾಗಿದೆ.

فَٱنكِحُواْ مَا طَابَ لَكُم مِّنَ ٱلنِّسَآءِ
مَثۡنَىٰ وَثُلَٰثَ وَرُبَٰعَۖ فَإِنۡ خِفۡتُمۡ أَلَّا
تَعۡدِلُواْ فَوَٰحِدَةً أَوۡ مَا مَلَكَتۡ أَيۡمَٰنُكُمۡۚ
ذَٰلِكَ أَدۡنَىٰٓ أَلَّا تَعُولُواْ ٣

ಭಯಪಡುವುದಾದರೆ (ಇತರ) ಸ್ತ್ರೀಯರ ಪೈಕಿ ನೀವು ಇಷ್ಟಪಡುವ ಇಬ್ಬರು, ಮೂವರು ಅಥವಾ ನಾಲ್ವರನ್ನು ವಿವಾಹವಾಗಿರಿ. ಆದರೆ (ಅವರ ಮಧ್ಯೆ) ನ್ಯಾಯ ಪಾಲಿಸಲು ಸಾಧ್ಯವಿಲ್ಲವೆಂದು ನೀವು ಭಯಪಡುವುದಾದರೆ ಒಬ್ಬಳನ್ನು ಮಾತ್ರ (ವಿವಾಹವಾಗಿರಿ) ಅಥವಾ ನಿಮ್ಮ ಅಧೀನದಲ್ಲಿರುವ ಗುಲಾಮ ಸ್ತ್ರೀಯನ್ನು (ಪತ್ನಿಯನ್ನಾಗಿ ಮಾಡಿಕೊಳ್ಳಿರಿ). ನೀವು ಎಲ್ಲೆ ಮೀರದಿರಲು ಇದು ಅತ್ಯಂತ ಸೂಕ್ತವಾಗಿದೆ.

وَءَاتُواْ ٱلنِّسَآءَ صَدُقَٰتِهِنَّ نِحۡلَةٗۚ فَإِن طِبۡنَ
لَكُمۡ عَن شَيۡءٖ مِّنۡهُ نَفۡسٗا فَكُلُوهُ هَنِيٓـٔٗا
مَّرِيٓـٔٗا ٤

4. ಸ್ತ್ರೀಯರಿಗೆ ಅವರ ವಧುದಕ್ಷಿಣೆಯನ್ನು ಆತ್ಮ ಸಂತೃಪ್ತಿಯೊಂದಿಗೆ ನೀಡಿರಿ. ಇನ್ನು ಅವರು ಉತ್ತಮ ಮನಸ್ಸಿನೊಂದಿಗೆ ಅದರಿಂದ ಏನಾದರೂ ಬಿಟ್ಟುಕೊಡುವುದಾದರೆ ನೀವದನ್ನು ಹೃತ್ಪೂರ್ವಕವಾಗಿ ನಿಶ್ಚಿಂತೆಯಿಂದ ಸೇವಿಸಿರಿ.

وَلَا تُؤۡتُواْ ٱلسُّفَهَآءَ أَمۡوَٰلَكُمُ ٱلَّتِي
جَعَلَ ٱللَّهُ لَكُمۡ قِيَٰمٗا وَٱرۡزُقُوهُمۡ فِيهَا
وَٱكۡسُوهُمۡ وَقُولُواْ لَهُمۡ قَوۡلٗا مَّعۡرُوفٗا ٥

5. ಅಲ್ಲಾಹು ನಿಮ್ಮ ಅಸ್ತಿತ್ವಕ್ಕಿರುವ ಮಾರ್ಗವಾಗಿ ಮಾಡಿರುವ ನಿಮ್ಮ ಸಂಪತ್ತನ್ನು ನೀವು ವಿವೇಕವಿಲ್ಲದವರಿಗೆ ಬಿಟ್ಟುಕೊಡಬಾರದು. ನೀವು ಅವರಿಗೆ ಅದರಿಂದ ಅನ್ನಾಧಾರ ಮತ್ತು ಉಡುಪುಗಳನ್ನು ನೀಡಿರಿ ಹಾಗೂ ಅವರೊಂದಿಗೆ ಶಿಷ್ಟಾಚಾರದ ಮಾತುಗಳನ್ನಾಡಿರಿ.

وَٱبۡتَلُواْ ٱلۡيَتَٰمَىٰ حَتَّىٰٓ إِذَا بَلَغُواْ ٱلنِّكَاحَ
فَإِنۡ ءَانَسۡتُم مِّنۡهُمۡ رُشۡدٗا فَٱدۡفَعُوٓاْ إِلَيۡهِمۡ
أَمۡوَٰلَهُمۡۖ وَلَا تَأۡكُلُوهَآ إِسۡرَافٗا وَبِدَارًا أَن
يَكۡبَرُواْۚ وَمَن كَانَ غَنِيّٗا فَلۡيَسۡتَعۡفِفۡۖ
وَمَن كَانَ فَقِيرٗا فَلۡيَأۡكُلۡ بِٱلۡمَعۡرُوفِۚ
فَإِذَا دَفَعۡتُمۡ إِلَيۡهِمۡ أَمۡوَٰلَهُمۡ فَأَشۡهِدُواْ
عَلَيۡهِمۡۚ وَكَفَىٰ بِٱللَّهِ حَسِيبٗا ٦

6. ನೀವು ಅನಾಥರನ್ನು ಪರೀಕ್ಷಿಸಿರಿ. ಅವರು ವಿವಾಹ ಪ್ರಾಯವನ್ನು ತಲುಪಿದರೆ ಮತ್ತು ನೀವು ಅವರಲ್ಲಿ ಕರ್ತವ್ಯ ಪ್ರಜ್ಞೆಯನ್ನು ಕಾಣುವುದಾದರೆ ಅವರ ಸಂಪತ್ತನ್ನು ಅವರಿಗೆ ಬಿಟ್ಟು ಕೊಡಿರಿ. ಅವರು (ಅನಾಥರು) ಪ್ರೌಢರಾಗುತ್ತಿರುವುದನ್ನು ಗಮನಿಸಿ ಅಮಿತವಾಗಿ ಮತ್ತು ಆತುರದಿಂದ ಅದನ್ನು ತಿಂದುಮುಗಿಸದಿರಿ. ಇನ್ನು (ಅನಾಥರ ಪೋಷಣೆಯ ಹೊಣೆ ಹೊತ್ತಿರುವ) ಯಾರು ಸಾಮರ್ಥ್ಯವುಳ್ಳವನಾಗಿರುವನೋ ಅವನು

(ಅದರಿಂದ ತೆಗೆಯದೆ) ಸಭ್ಯತೆಯನ್ನು ಪ್ರದರ್ಶಿಸಲಿ. ಯಾರು ಬಡವನಾಗಿರುವನೋ ಅವನು ಶಿಷ್ಟಾಚಾರದೊಂದಿಗೆ ಅದರಿಂದ ತಿನ್ನಲಿ. ತರುವಾಯ ಅವರ ಸೊತ್ತನ್ನು ಅವರಿಗೆ ಹಸ್ತಾಂತರಿಸುವಾಗ ನೀವದಕ್ಕೆ ಸಾಕ್ಷಿಯನ್ನು ನಿಲ್ಲಿಸಿರಿ. ಲೆಕ್ಕ ವಿಚಾರಣೆ ಮಾಡುವವನಾಗಿ ಅಲ್ಲಾಹು ಸಾಕು.

لِّلرِّجَالِ نَصِيبٌ مِّمَّا تَرَكَ ٱلْوَٰلِدَانِ وَٱلْأَقْرَبُونَ وَلِلنِّسَآءِ نَصِيبٌ مِّمَّا تَرَكَ ٱلْوَٰلِدَانِ وَٱلْأَقْرَبُونَ مِمَّا قَلَّ مِنْهُ أَوْ كَثُرَ ۚ نَصِيبًا مَّفْرُوضًا ﴿٧﴾

7. ಮಾತಾಪಿತರು ಮತ್ತು ನಿಕಟ ಸಂಬಂಧಿಕರು ಬಿಟ್ಟುಹೋಗಿರುವ ಸಂಪತ್ತಿನಲ್ಲಿ ಪುರುಷರಿಗೆ ಪಾಲಿದೆ. ಮಾತಾಪಿತರು ಮತ್ತು ನಿಕಟ ಸಂಬಂಧಿಕರು ಬಿಟ್ಟುಹೋಗಿರುವ ಸಂಪತ್ತಿನಲ್ಲಿ ಸ್ತ್ರೀಯರಿಗೂ ಪಾಲಿದೆ. (ಆ ಸಂಪತ್ತು) ಕಡಿಮೆಯಿರಲಿ ಅಥವಾ ಹೆಚ್ಚಿರಲಿ ಅದು ನಿಶ್ಚಯಿಸಲಾದ ಪಾಲಾಗಿದೆ.

وَإِذَا حَضَرَ ٱلْقِسْمَةَ أُو۟لُوا۟ ٱلْقُرْبَىٰ وَٱلْيَتَٰمَىٰ وَٱلْمَسَٰكِينُ فَٱرْزُقُوهُم مِّنْهُ وَقُولُوا۟ لَهُمْ قَوْلًا مَّعْرُوفًا ﴿٨﴾

8. (ಸಂಪತ್ತು) ಪಾಲು ಮಾಡುವ ಸಂದರ್ಭದಲ್ಲಿ (ಇತರ) ಸಂಬಂಧಿಕರು, ಅನಾಥರು ಮತ್ತು ಬಡವರು ಉಪಸ್ಥಿತರಿದ್ದರೆ ಅದರಿಂದ ಅವರಿಗೆ ಏನಾದರೂ ಕೊಟ್ಟುಬಿಡಿರಿ ಮತ್ತು ಅವರೊಂದಿಗೆ ಶಿಷ್ಟಾಚಾರದ ಮಾತುಗಳನ್ನಾಡಿರಿ.[1]

وَلْيَخْشَ ٱلَّذِينَ لَوْ تَرَكُوا۟ مِنْ خَلْفِهِمْ ذُرِّيَّةً ضِعَٰفًا خَافُوا۟ عَلَيْهِمْ فَلْيَتَّقُوا۟ ٱللَّهَ وَلْيَقُولُوا۟ قَوْلًا سَدِيدًا ﴿٩﴾

9. ತಮ್ಮ ಹಿಂದೆ ಬಲಹೀನರಾದ ಸಂತತಿಗಳನ್ನು ಬಿಟ್ಟುಹೋದರೆ (ಅವರ ಗತಿಯೇನೆಂದು) ಭಯಪಡುವವರು (ಅದೇ ರೀತಿ ಇತರರ ಮಕ್ಕಳ ವಿಷಯದಲ್ಲಿಯೂ) ಭಯಪಡಲಿ.[2] ಅವರು ಅಲ್ಲಾಹುವನ್ನು ಭಯಪಡಲಿ ಮತ್ತು ಸರಿಯಾದ ಮಾತನ್ನೇ ಆಡಲಿ.

---

1 ವಾರೀಸು ನಿಯಮದ ಪ್ರಕಾರ ಆಸ್ತಿಯಲ್ಲಿ ಹಕ್ಕಿಲ್ಲದ ಕೆಲವು ಸಂಬಂಧಿಕರು –ವಿಶೇಷವಾಗಿ ಅನಾಥರು ಮತ್ತು ನಿರ್ಗತಿಕರು–ಮೃತನ ಬಳಿಕ ನಿರಾಶ್ರಿತರಾಗಬಹುದು. ವಾರೀಸು ನಿಯಮ ಪ್ರಕಾರ ಹಕ್ಕುಳ್ಳವರು ಇಂತಹವರಿಗೆ ಏನಾದರೂ ನೀಡಬೇಕೆಂದು ಈ ಸೂಕ್ತಿಯು ಕಲಿಸುತ್ತದೆ.

2 ತಾನು ಮೃತಪಟ್ಟರೆ ತನ್ನ ಮಕ್ಕಳು ಅನಾಥರಾಗಿ ಇತರರ ಹಿಂಸೆ ಮತ್ತು ಶೋಷಣೆಗೆ ಬಲಿಯಾಗುವ ದಾರುಣ ಸ್ಥಿತಿಯನ್ನು ಯಾರೂ ಇಷ್ಟಪಡಲಾರರು. ಇನ್ನೊಬ್ಬರ ಅನಾಥ ಮಕ್ಕಳು ತನ್ನ ರಕ್ಷಣೆಯಲ್ಲಿರುವಾಗ ಸ್ವಂತ ಮಕ್ಕಳಿಗೆ ಸಂಭವಿಸಬಹುದಾದ ಈ ಸ್ಥಿತಿಯ ಬಗ್ಗೆ ಆಲೋಚಿಸಿದರೆ ಯಾರನ್ನೇ ಆದರೂ ನ್ಯಾಯದಲ್ಲಿ ದೃಢವಾಗಿ ನಿಲ್ಲಲು ಅದು ಪ್ರೇರೇಪಿಸದಿರದು.

إِنَّ ٱلَّذِينَ يَأۡكُلُونَ أَمۡوَٰلَ ٱلۡيَتَٰمَىٰ
ظُلۡمًا إِنَّمَا يَأۡكُلُونَ فِي بُطُونِهِمۡ نَارٗاۖ
وَسَيَصۡلَوۡنَ سَعِيرٗا ﴿١٠﴾

10. ಖಂಡಿತವಾಗಿಯೂ ಅನಾಥರ ಸೊತ್ತನ್ನು ಅನ್ಯಾಯವಾಗಿ ತಿನ್ನುವವರು ಯಾರೋ ಅವರು ತಮ್ಮ ಉದರಗಳಲ್ಲಿ ತುಂಬಿಸುವುದು ಅಗ್ನಿಯನ್ನೇ ಆಗಿದೆ. ತರುವಾಯ ಅವರನ್ನು ನರಕಾಗ್ನಿಯಲ್ಲಿ ಉರಿಸಲಾಗುವುದು.

يُوصِيكُمُ ٱللَّهُ فِيٓ أَوۡلَٰدِكُمۡۖ لِلذَّكَرِ مِثۡلُ
حَظِّ ٱلۡأُنثَيَيۡنِۚ فَإِن كُنَّ نِسَآءٗ فَوۡقَ
ٱثۡنَتَيۡنِ فَلَهُنَّ ثُلُثَا مَا تَرَكَۖ وَإِن كَانَتۡ
وَٰحِدَةٗ فَلَهَا ٱلنِّصۡفُۚ وَلِأَبَوَيۡهِ لِكُلِّ وَٰحِدٖ
مِّنۡهُمَا ٱلسُّدُسُ مِمَّا تَرَكَ إِن كَانَ لَهُۥ
وَلَدٞۚ فَإِن لَّمۡ يَكُن لَّهُۥ وَلَدٞ وَوَرِثَهُۥٓ أَبَوَاهُ
فَلِأُمِّهِ ٱلثُّلُثُۚ فَإِن كَانَ لَهُۥٓ إِخۡوَةٞ فَلِأُمِّهِ
ٱلسُّدُسُۚ مِنۢ بَعۡدِ وَصِيَّةٖ يُوصِي بِهَآ أَوۡ
دَيۡنٍۗ ءَابَآؤُكُمۡ وَأَبۡنَآؤُكُمۡ لَا تَدۡرُونَ
أَيُّهُمۡ أَقۡرَبُ لَكُمۡ نَفۡعٗاۚ فَرِيضَةٗ مِّنَ ٱللَّهِۗ
إِنَّ ٱللَّهَ كَانَ عَلِيمًا حَكِيمٗا ﴿١١﴾

11. ನಿಮ್ಮ ಮಕ್ಕಳ ವಿಷಯದಲ್ಲಿ ಅಲ್ಲಾಹು ನಿಮಗೆ ನಿರ್ದೇಶನವನ್ನು ನೀಡುತ್ತಿರುವನು. ಇಬ್ಬರು ಸ್ತ್ರೀಯರ ಪಾಲು ಒಬ್ಬ ಗಂಡಿಗಿದೆ. ಇನ್ನು ಹೆಣ್ಮಕ್ಕಳು ಇಬ್ಬರಿಗಿಂತಲೂ ಹೆಚ್ಚಿದ್ದರೆ[1] (ಮೃತ ವ್ಯಕ್ತಿ) ಬಿಟ್ಟುಹೋದ ಸೊತ್ತಿನ ಮೂರನೇ ಎರಡು ಭಾಗವು ಅವರಿಗಿದೆ. ಓರ್ವ ಪುತ್ರಿ ಮಾತ್ರವಿರುವುದಾದರೆ ಅವಳಿಗೆ ಅರ್ಧಭಾಗವಿದೆ. ಮೃತ ವ್ಯಕ್ತಿಗೆ ಮಕ್ಕಳಿದ್ದರೆ ಅವನ ಮಾತಾಪಿತರಲ್ಲಿ ಪ್ರತಿಯೊಬ್ಬರಿಗೂ ಅವನು ಬಿಟ್ಟುಹೋದ ಸೊತ್ತಿನ ಆರನೇ ಒಂದು ಭಾಗವಿದೆ. ಇನ್ನು ಅವನಿಗೆ ಮಕ್ಕಳಿರದಿದ್ದರೆ ಮತ್ತು ಮಾತಾಪಿತರು ಅವನ ಉತ್ತರಾಧಿಕಾರಿಗಳಾಗಿದ್ದರೆ ಅವನ ತಾಯಿಗೆ ಮೂರನೇ ಒಂದು ಭಾಗವಿದೆ.[2] ಇನ್ನು ಅವನಿಗೆ ಸಹೋದರರಿದ್ದರೆ ಅವನ ತಾಯಿಗೆ ಆರನೇ ಒಂದು ಭಾಗವಿದೆ.[3] ಮೃತ ವ್ಯಕ್ತಿ ಮಾಡಿರುವ ವಸಿಯ್ಯತ್ ಮತ್ತು ಸಾಲವಿದ್ದರೆ ಅದನ್ನು ಸಂದಾಯ ಮಾಡಿದ ನಂತರ (ವಾಗಿದೆ ಈ ಪಾಲು ಹಂಚಿಕೆ). ನಿಮ್ಮ

1 ಇಬ್ಬರು ಹೆಣ್ಮಕ್ಕಳಿದ್ದರೂ ಮೂರನೇ ಎರಡು ಭಾಗವು ದೊರೆಯುವುದು. ಪ್ರವಾದಿ(ﷺ)ರವರು ಸಅ್‌ದ್ ಇಬ್ನ್ ರಬೀಅ್(رضي الله عنه)ರವರ ಇಬ್ಬರು ಹೆಣ್ಮಕ್ಕಳಿಗೆ ಈ ರೀತಿ ನೀಡಲು ಆದೇಶಿಸಿದ್ದರು.

2 ಉಳಿದ ಮೂರನೇ ಎರಡು ಭಾಗವು ತಂದೆಗೆ ಸೇರುತ್ತದೆ.

3 ಮೃತ ವ್ಯಕ್ತಿಗೆ ಗಂಡುಮಕ್ಕಳಾಗಲಿ ತಂದೆಯಾಗಲಿ ಇಲ್ಲದಿರುವಾಗ ಮಾತ್ರ ಸಹೋದರನು (ಅಥವಾ ಸಹೋದರರು) ಹಕ್ಕುದಾರರಾಗುತ್ತಾರೆ. ತಾಯಿ ಮತ್ತು ಒಂದಕ್ಕಿಂತ ಹೆಚ್ಚು ಸಹೋದರರು ಮಾತ್ರವಿರುವ ಸಂದರ್ಭದಲ್ಲಿ ಆರನೇ ಒಂದನ್ನು ಕಳೆದು ಉಳಿದಿರುವುದೆಲ್ಲವೂ ಸಹೋದರರಿಗೆ ಸೇರುತ್ತದೆ. ಓರ್ವ ಸಹೋದರ ಮತ್ತು ತಾಯಿ ಮಾತ್ರ ಹಕ್ಕುದಾರರಾಗಿ ಇದ್ದರೆ ತಾಯಿಗೆ ಮೂರನೇ ಒಂದು ಮತ್ತು ಸಹೋದರನಿಗೆ ಮೂರನೇ ಎರಡು ಭಾಗವು ದೊರೆಯುತ್ತದೆ. ತಾಯಿ ಮತ್ತು ಸಹೋದರಿಯರು ಮಾತ್ರ ಹಕ್ಕುದಾರರಾಗಿ ಬಿಟ್ಟರೂ ತಾಯಿಗೆ ಆರನೇ ಒಂದು ಭಾಗವೇ ದೊರೆಯುತ್ತದೆ.

ತಂದೆಯಂದಿರಲ್ಲಿ ಮತ್ತು ಮಕ್ಕಳಲ್ಲಿ ನಿಮಗೆ ಹೆಚ್ಚು ಪ್ರಯೋಜನಕಾರಿಯಾಗಿರುವವರು ಯಾರೆಂದು ನಿಮಗೆ ತಿಳಿದಿರಲಾರದು. ಇದು ಅಲ್ಲಾಹುವಿನ ವತಿಯಿಂದಿರುವ (ಪಾಲು) ನಿರ್ಣಯವಾಗಿದೆ. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

**12.** ನಿಮ್ಮ ಪತ್ನಿಯರಿಗೆ ಸಂತಾನವಿಲ್ಲದಿದ್ದರೆ ಅವರು ಬಿಟ್ಟುಹೋದ ಸೊತ್ತಿನಲ್ಲಿ ಅರ್ಧ ಭಾಗವು ನಿಮಗಿದೆ. ಇನ್ನು ಅವರಿಗೆ ಸಂತಾನವಿದ್ದರೆ ಅವರು ಬಿಟ್ಟುಹೋಗಿರುವುದರ ನಾಲ್ಕನೇ ಒಂದು ಭಾಗವು ನಿಮಗಿದೆ. ಇದು ಅವರು ಮಾಡುವ ವಸಿಯ್ಯತ್ ಮತ್ತು ಸಾಲವಿದ್ದರೆ ಅದನ್ನು ಕಳೆದ ನಂತರವಾಗಿದೆ. ನಿಮಗೆ ಸಂತಾನವಿಲ್ಲದಿದ್ದರೆ ನೀವು ಬಿಟ್ಟುಹೋದ ಸೊತ್ತಿನಲ್ಲಿ ನಾಲ್ಕನೇ ಒಂದು ಭಾಗವು ಅವರಿಗೆ (ಪತ್ನಿಯರಿಗೆ) ಇದೆ. ಇನ್ನು ನಿಮಗೆ ಸಂತಾನವಿದ್ದರೆ ನೀವು ಬಿಟ್ಟುಹೋಗಿರುವುದರಲ್ಲಿ ಎಂಟನೇ ಒಂದು ಭಾಗವು ಅವರಿಗಿದೆ. ಇದು ನೀವು ಮಾಡುವ ವಸಿಯ್ಯತ್ ಮತ್ತು ಸಾಲವಿದ್ದರೆ ಅದನ್ನು ಕಳೆದ ನಂತರವಾಗಿದೆ. ವಾರೀಸು ಹಕ್ಕು ಪಡೆಯುವ ಗಂಡು ಅಥವಾ ಹೆಣ್ಣು, ತಂದೆ ಹಾಗೂ ಮಕ್ಕಳಿಲ್ಲದ ವ್ಯಕ್ತಿಯಾಗಿದ್ದರೆ ಮತ್ತು ಅವನಿಗೆ (ತಾಯಿಗೆ ಸೇರಿದ) ಓರ್ವ ಸಹೋದರನಾಗಲಿ ಸಹೋದರಿಯಾಗಲಿ ಇರುವುದಾದರೆ ಅವರಲ್ಲಿ (ಆ ಸಹೋದರ ಸಹೋದರಿಯರಲ್ಲಿ) ಪ್ರತಿಯೊಬ್ಬರಿಗೂ ಆರನೇ ಒಂದು ಭಾಗವು ಇದೆ. ಇನ್ನು ಅವರು ಅದಕ್ಕಿಂತಲೂ ಹೆಚ್ಚಿದ್ದರೆ ಅವರು ಮೂರನೇ ಒಂದು ಭಾಗವನ್ನು ಸಮಾನವಾಗಿ ಹಂಚಬೇಕಾಗಿದೆ.[1] ಇದು ಹಾನಿಕರವಲ್ಲದ

۞ وَلَكُمْ نِصْفُ مَا تَرَكَ أَزْوَٰجُكُمْ إِن لَّمْ يَكُن لَّهُنَّ وَلَدٌ ۚ فَإِن كَانَ لَهُنَّ وَلَدٌ فَلَكُمُ ٱلرُّبُعُ مِمَّا تَرَكْنَ ۚ مِنۢ بَعْدِ وَصِيَّةٍ يُوصِينَ بِهَآ أَوْ دَيْنٍ ۚ وَلَهُنَّ ٱلرُّبُعُ مِمَّا تَرَكْتُمْ إِن لَّمْ يَكُن لَّكُمْ وَلَدٌ ۚ فَإِن كَانَ لَكُمْ وَلَدٌ فَلَهُنَّ ٱلثُّمُنُ مِمَّا تَرَكْتُم ۚ مِّنۢ بَعْدِ وَصِيَّةٍ تُوصُونَ بِهَآ أَوْ دَيْنٍ ۗ وَإِن كَانَ رَجُلٌ يُورَثُ كَلَٰلَةً أَوِ ٱمْرَأَةٌ وَلَهُۥٓ أَخٌ أَوْ أُخْتٌ فَلِكُلِّ وَٰحِدٍ مِّنْهُمَا ٱلسُّدُسُ ۚ فَإِن كَانُوٓا۟ أَكْثَرَ مِن ذَٰلِكَ فَهُمْ شُرَكَآءُ فِى ٱلثُّلُثِ ۚ مِنۢ بَعْدِ وَصِيَّةٍ يُوصَىٰ بِهَآ أَوْ دَيْنٍ غَيْرَ مُضَآرٍّ ۚ وَصِيَّةً مِّنَ ٱللَّهِ ۗ وَٱللَّهُ عَلِيمٌ حَلِيمٌ ﴿١٢﴾

1 ಈ ಸೂಕ್ತಿಯಲ್ಲಿ ಹೇಳಿರುವುದು ತಾಯಿಗೆ ಸೇರಿದ ಸಹೋದರರ ಹಕ್ಕಿನ ಕುರಿತಾಗಿದೆ. ಇತರ ಸಹೋದರರ ಹಕ್ಕಿನ

ವಸಿಯ್ಯತ್ ಮತ್ತು ಸಾಲವಿದ್ದರೆ ಅದನ್ನು ಕಳೆದ ನಂತರವಾಗಿದೆ.[1] ಇದು ಅಲ್ಲಾಹುವಿನ ಕಡೆಯ ನಿರ್ದೇಶನವಾಗಿದೆ. ಅಲ್ಲಾಹು ಸರ್ವಜ್ಞನೂ ಸಹನಾಶೀಲನೂ ಆಗಿರುವನು.

تِلْكَ حُدُودُ ٱللَّهِ ۚ وَمَن يُطِعِ ٱللَّهَ وَرَسُولَهُۥ يُدْخِلْهُ جَنَّـٰتٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَا ۚ وَذَٰلِكَ ٱلْفَوْزُ ٱلْعَظِيمُ ﴿١٣﴾

**13.** ಇದು ಅಲ್ಲಾಹುವಿನ ನಿಯಮವ್ಯಾಪ್ತಿಗಳಾಗಿವೆ. ಯಾರು ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸುವನೋ ಅವನನ್ನು ಅಲ್ಲಾಹು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಮಾಡಿಸುವನು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅದು ಮಹಾ ವಿಜಯವಾಗಿದೆ.

وَمَن يَعْصِ ٱللَّهَ وَرَسُولَهُۥ وَيَتَعَدَّ حُدُودَهُۥ يُدْخِلْهُ نَارًا خَـٰلِدًا فِيهَا وَلَهُۥ عَذَابٌ مُّهِينٌ ﴿١٤﴾

**14.** ಯಾರು ಅಲ್ಲಾಹುವಿಗೆ ಮತ್ತು ಅವನ ಸಂದೇಶವಾಹಕರಿಗೆ ಅವಿಧೇಯತೆ ತೋರುವನೋ ಮತ್ತು ಅವನ (ನಿಯಮ) ವ್ಯಾಪ್ತಿಗಳನ್ನು ಮೀರುವನೋ ಅವನನ್ನು ಅಲ್ಲಾಹು ನರಕಾಗ್ನಿಗೆ ಪ್ರವೇಶ ಮಾಡಿಸುವನು. ಅವನು ಅದರಲ್ಲಿ ಶಾಶ್ವತವಾಗಿ ವಾಸಿಸುವನು. ಅವನಿಗೆ ಅಪಮಾನಕರವಾದ ಶಿಕ್ಷೆಯಿದೆ.

وَٱلَّـٰتِى يَأْتِينَ ٱلْفَـٰحِشَةَ مِن نِّسَآئِكُمْ فَٱسْتَشْهِدُوا۟ عَلَيْهِنَّ أَرْبَعَةً مِّنكُمْ ۖ فَإِن شَهِدُوا۟ فَأَمْسِكُوهُنَّ فِى ٱلْبُيُوتِ حَتَّىٰ يَتَوَفَّىٰهُنَّ ٱلْمَوْتُ أَوْ يَجْعَلَ ٱللَّهُ لَهُنَّ سَبِيلًا ﴿١٥﴾

**15.** ನಿಮ್ಮ ಸ್ತ್ರೀಯರ ಪೈಕಿ ನೀಚ ಕೃತ್ಯಗಳಲ್ಲಿ ತೊಡಗುವವರು ಯಾರೋ ಅವರಿಗೆ ವಿರುದ್ಧವಾಗಿ ನಿಮ್ಮ ಪೈಕಿ ನಾಲ್ವರನ್ನು ಸಾಕ್ಷಿಗಳಾಗಿ ತನ್ನಿರಿ. ತರುವಾಯ ಅವರು ಸಾಕ್ಷ್ಯವಹಿಸಿದರೆ ಮರಣವು ಅವರನ್ನು ವಶಪಡಿಸುವ ತನಕ ಅಥವಾ ಅಲ್ಲಾಹು

---

ಕುರಿತು 4/176ರಲ್ಲಿ ವಿವರಿಸಲಾಗಿದೆ. ತಾಯಿಗೆ ಸೇರಿದ ಸಹೋದರರಿಗಿರುವ ವಾರೀಸು ಹಕ್ಕಿನಲ್ಲಿ ಗಂಡಿಗೂ ಹೆಣ್ಣಿಗೂ ಸಮಾನ ಪಾಲಿದೆ. ಅವರಿಗೆ ಹಕ್ಕು ನೀಡಲಾಗಿರುವುದು ತಾಯಿಯ ಪ್ರತಿನಿಧಿಗಳು ಎಂಬ ನೆಲೆಯಲ್ಲಾಗಿದೆ.

1 ವಸಿಯ್ಯತ್‌ನ ಮೂಲಕ ಒಟ್ಟು ಸೊತ್ತಿನ ಮೂರನೇ ಒಂದು ಭಾಗವನ್ನು ಮಾತ್ರ ಯಾರಿಗಾದರೂ ನೀಡಬಹುದು. ಅದಕ್ಕಿಂತ ಹೆಚ್ಚು ನೀಡುವುದು ಹಕ್ಕುದಾರರಿಗೆ ಮಾಡುವ ಅನ್ಯಾಯವಾಗಿದೆ. ಹಕ್ಕುದಾರರೊಂದಿಗಿರುವ ದ್ವೇಷದ ನಿಮಿತ್ತ ಅವರಿಗೆ ತನ್ನ ಸೊತ್ತಿನಿಂದ ತನ್ನ ಮರಣಾನಂತರ ಏನೂ ದೊರೆಯಬಾರದೆಂದು ಭಾವಿಸಿ ಓರ್ವನು ತಾನಿಷ್ಟಪಡುವ ವ್ಯಕ್ತಿಗೆ ಒಂದು ದೊಡ್ಡ ಮೊತ್ತ ಸಾಲವನ್ನು ಮರಳಿಸಬೇಕಾಗಿದೆ ಎಂದು ದಾಖಲಿಸಿಡುವುದಾಗಲಿ ಉಯಿಲು ಬರೆಯುವುದಾಗಲಿ ಮಾಡುವುದು ಅನ್ಯಾಯವಾಗಿದೆ.

ಅವರಿಗೊಂದು ಮಾರ್ಗವನ್ನು ಮಾಡಿಕೊಡುವ ತನಕ ಅವರನ್ನು ನೀವು ಮನೆಗಳಲ್ಲಿ ತಡೆದಿರಿಸಿರಿ.[1]

16. ನಿಮ್ಮ ಪೈಕಿ ಆ ನೀಚಕೃತ್ಯವನ್ನು ಮಾಡುವ ಇಬ್ಬರನ್ನೂ ಸತಾಯಿಸಿರಿ.[2] ತರುವಾಯ ಅವರಿಬ್ಬರೂ ಪಶ್ಚಾತ್ತಾಪಪಟ್ಟು ನಡತೆಯನ್ನು ತಿದ್ದಿಕೊಂಡರೆ ಅವರನ್ನು ಬಿಟ್ಟುಬಿಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَٱلَّذَانِ يَأۡتِيَٰنِهَا مِنكُمۡ فَـَٔاذُوهُمَاۖ فَإِن تَابَا وَأَصۡلَحَا فَأَعۡرِضُواْ عَنۡهُمَآۗ إِنَّ ٱللَّهَ كَانَ تَوَّابٗا رَّحِيمًا ١٦

17. ಅಜ್ಞಾನದಿಂದಾಗಿ ಪಾಪವೆಸಗಿ, ಬಳಿಕ ಶೀಘ್ರದಲ್ಲೇ ಪಶ್ಚಾತ್ತಾಪಪಡುವವರ ಪಶ್ಚಾತ್ತಾಪವನ್ನು ಸ್ವೀಕರಿಸುವ ಬಾಧ್ಯತೆಯನ್ನಷ್ಟೇ ಅಲ್ಲಾಹು ವಹಿಸಿಕೊಂಡಿರುವನು. ಅಂಥಹವರ ಪಶ್ಚಾತ್ತಾಪವನ್ನು ಅಲ್ಲಾಹು ಸ್ವೀಕರಿಸುವನು. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

إِنَّمَا ٱلتَّوۡبَةُ عَلَى ٱللَّهِ لِلَّذِينَ يَعۡمَلُونَ ٱلسُّوٓءَ بِجَهَٰلَةٖ ثُمَّ يَتُوبُونَ مِن قَرِيبٖ فَأُوْلَٰٓئِكَ يَتُوبُ ٱللَّهُ عَلَيۡهِمۡۗ وَكَانَ ٱللَّهُ عَلِيمًا حَكِيمٗا ١٧

18. ಪಶ್ಚಾತ್ತಾಪವೆಂಬುದು ಪಾಪವೆಸಗುತ್ತಾ ಕೊನೆಗೆ ಮರಣಾಸನ್ನನಾಗುವಾಗ 'ನಾನು ಪಶ್ಚಾತ್ತಾಪ ಪಟ್ಟಿರುವೆನು' ಎಂದು ಹೇಳುವವರಿಗೆ ಇರುವಂತದ್ದಲ್ಲ. ಸತ್ಯನಿಷೇಧಿಗಳಾಗಿಯೇ ಮರಣ ಹೊಂದುವವರಿಗೂ ಇರುವಂತದ್ದಲ್ಲ. ಅಂತಹವರಿಗೆ ನಾವು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

وَلَيۡسَتِ ٱلتَّوۡبَةُ لِلَّذِينَ يَعۡمَلُونَ ٱلسَّيِّـَٔاتِ حَتَّىٰٓ إِذَا حَضَرَ أَحَدَهُمُ ٱلۡمَوۡتُ قَالَ إِنِّي تُبۡتُ ٱلۡـَٰٔنَ وَلَا ٱلَّذِينَ يَمُوتُونَ وَهُمۡ كُفَّارٌۚ أُوْلَٰٓئِكَ أَعۡتَدۡنَا لَهُمۡ عَذَابًا أَلِيمٗا ١٨

1 ವ್ಯಭಿಚಾರಕ್ಕಿರುವ ಶಿಕ್ಷೆಯನ್ನು ನೀಡಬೇಕಾದರೆ ಸತ್ಯಸಂಧರಾದ ನಾಲ್ವರು ಅದನ್ನು ಕಂಡಿರಬೇಕು ಮತ್ತು ಅವರು ಸಾಕ್ಷ್ಯವಹಿಸಬೇಕು. ಇಸ್ಲಾಮಿನ ಎಲ್ಲ ನಿಯಮಗಳಂತೆ ಶಿಕ್ಷಾ ನಿಯಮಗಳು ಕೂಡ ಹಂತ ಹಂತವಾಗಿ ಅವತೀರ್ಣಗೊಂಡಿವೆ. ಈ ವಚನ ಅವತೀರ್ಣಗೊಂಡಿರುವುದು 100 ಛಡಿಯೇಟಿನ ಶಿಕ್ಷೆ ನಿಶ್ಚಯಿಸುವುದಕ್ಕೆ ಮುಂಚೆಯಾಗಿದೆ. 'ಅಲ್ಲಾಹು ಅವರಿಗೊಂದು ಮಾರ್ಗವನ್ನು ಮಾಡಿಕೊಡುವ ತನಕ' ಎಂಬುದರ ತಾತ್ಪರ್ಯ ನಿಶ್ಚಿತವೂ ಅಂತಿಮವೂ ಆದ ಶಿಕ್ಷಾನಿಯಮವು ಅವತೀರ್ಣಗೊಳ್ಳುವ ತನಕ ಎಂದಾಗಿರಬಹುದು.

2 ಈ ಸೂಕ್ತಿಯು ವ್ಯಭಿಚಾರದಲ್ಲಿ ನಿರತರಾಗುವ ಸ್ತ್ರೀ ಪುರುಷರ ಬಗ್ಗೆ ಎಂದು ಹಲವು ಕುರ್‌ಆನ್ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಇದು ಸಲಿಂಗರತಿ ಮಾಡುವ ಪುರುಷರ ಕುರಿತಾಗಿದೆ ಎಂದು ಇನ್ನು ಕೆಲವರ ಅಭಿಪ್ರಾಯ. ವ್ಯಭಿಚಾರಕ್ಕಿರುವ ಕರಾರುವಾಕ್ಕಾದ ಶಿಕ್ಷಾನಿಯಮವು ಅವತೀರ್ಣಗೊಂಡದ್ದು ಇದರ ನಂತರವಾಗಿತ್ತು.

**19.** ಓ ಸತ್ಯವಿಶ್ವಾಸಿಗಳೇ! ಸ್ತ್ರೀಯರನ್ನು ಬಲವಂತದಿಂದ ವಾರೀಸು ಸೊತ್ತನ್ನಾಗಿ ಪಡೆಯಲು ನಿಮಗೆ ಅನುಮತಿಯಿಲ್ಲ.[1] ಅವರಿಗೆ (ಪತ್ನಿಯರಿಗೆ) ನೀವು ಕೊಟ್ಟಿರುವುದರಲ್ಲಿ ಒಂದಂಶವನ್ನು ಹಿಂದಕ್ಕೆ ಪಡೆಯುವ ಸಲುವಾಗಿ ನೀವು ಅವರನ್ನು ತಡೆದಿರಿಸದಿರಿ.[2] ಅವರು ಯಾವುದಾದರೂ ಬಹಿರಂಗ ನೀಚಕೃತ್ಯವೆಸಗಿದ ಹೊರತು. ನೀವು ಅವರೊಂದಿಗೆ ಸಭ್ಯವಾಗಿ ವರ್ತಿಸಿರಿ. ನೀವು ಅವರನ್ನು ಅಸಹ್ಯಪಡುತ್ತೀರಿ ಎಂದಾದರೆ ಬಹುಶಃ ನೀವು ಅಸಹ್ಯಪಡುವ ವಸ್ತುವೊಂದರಲ್ಲಿ ಅಲ್ಲಾಹು ಯಥೇಷ್ಟ ಒಳಿತುಗಳನ್ನು ಇಟ್ಟಿರಲೂಬಹುದು.

يَٰٓأَيُّهَا ٱلَّذِينَ ءَامَنُوا۟ لَا يَحِلُّ لَكُمْ أَن
تَرِثُوا۟ ٱلنِّسَآءَ كَرْهًا ۖ وَلَا تَعْضُلُوهُنَّ
لِتَذْهَبُوا۟ بِبَعْضِ مَآ ءَاتَيْتُمُوهُنَّ إِلَّآ
أَن يَأْتِينَ بِفَٰحِشَةٍ مُّبَيِّنَةٍ ۚ وَعَاشِرُوهُنَّ
بِٱلْمَعْرُوفِ ۚ فَإِن كَرِهْتُمُوهُنَّ فَعَسَىٰٓ أَن
تَكْرَهُوا۟ شَيْـًٔا وَيَجْعَلَ ٱللَّهُ فِيهِ خَيْرًا
كَثِيرًا ١٩

**20.** ಓರ್ವ ಪತ್ನಿಯ ಸ್ಥಾನದಲ್ಲಿ ಇನ್ನೋರ್ವ ಪತ್ನಿಯನ್ನು ಬದಲಾಯಿಸುವುದಾದರೆ ಅವರಲ್ಲಿ ಒಬ್ಬಳಿಗೆ ನೀವು ಸಂಪತ್ತಿನ ರಾಶಿಯನ್ನೇ ಕೊಟ್ಟಿದ್ದರೂ ಅದರಿಂದ ಏನನ್ನೂ ಹಿಂದಕ್ಕೆ ಪಡೆಯದಿರಿ. ಸುಳ್ಳಾರೋಪ ಹೊರಿಸಿ ಮತ್ತು ಸ್ಪಷ್ಟವಾದ ಪಾಪದೊಂದಿಗೆ ನೀವದನ್ನು ಹಿಂದಕ್ಕೆ ಪಡೆಯುವಿರಾ?

وَإِنْ أَرَدتُّمُ ٱسْتِبْدَالَ زَوْجٍ مَّكَانَ زَوْجٍ
وَءَاتَيْتُمْ إِحْدَىٰهُنَّ قِنطَارًا فَلَا تَأْخُذُوا۟
مِنْهُ شَيْـًٔا ۚ أَتَأْخُذُونَهُۥ بُهْتَٰنًا وَإِثْمًا
مُّبِينًا ٢٠

**21.** ನೀವು ಪರಸ್ಪರ ಒಂದಾಗಿರುವಾಗ ಮತ್ತು ಅವರು ನಿಮ್ಮಿಂದ ಬಲಿಷ್ಠವಾದ ಕರಾರೊಂದನ್ನು ಪಡೆದಿರುವಾಗ ನೀವು ಹೇಗೆ ತಾನೇ ಅದನ್ನು ಹಿಂದಕ್ಕೆ ಪಡೆಯುವಿರಿ?

وَكَيْفَ تَأْخُذُونَهُۥ وَقَدْ أَفْضَىٰ بَعْضُكُمْ
إِلَىٰ بَعْضٍ وَأَخَذْنَ مِنكُم مِّيثَٰقًا
غَلِيظًا ٢١

**22.** ನಿಮ್ಮ ತಂದೆಯಂದಿರು ವರಿಸಿದ ಸ್ತ್ರೀಯರನ್ನು ನೀವು ವಿವಾಹವಾಗದಿರಿ. ಈ ಹಿಂದೆ ಗತಿಸಿಹೋಗಿರುವುದರ ಹೊರತು.

وَلَا تَنكِحُوا۟ مَا نَكَحَ ءَابَآؤُكُم مِّنَ
ٱلنِّسَآءِ إِلَّا مَا قَدْ سَلَفَ ۚ إِنَّهُۥ كَانَ

---

1 ಅಜ್ಞಾನಕಾಲದಲ್ಲಿ ಅರಬರ ಪೈಕಿ ಯಾರಾದರೂ ಮರಣ ಹೊಂದಿದರೆ ಅವರ ಸೊತ್ತಿನೊಂದಿಗೆ ಅವರ ಪತ್ನಿಯರನ್ನೂ ಕೂಡ ವಾರೀಸುದಾರರು ಹಂಚಿಕೊಳ್ಳುತ್ತಿದ್ದರು.

2 ಪತ್ನಿಯರನ್ನು ಸತಾಯಿಸುವುದು ಮತ್ತು ಅವರು ವಿವಾಹ ವಿಚ್ಛೇದನೆ ಬೇಡುವಾಗ, ಮಹ್ರನ್ನು ಮರಳಿ ನೀಡಿದರೆ ಮಾತ್ರ ವಿಚ್ಛೇದನೆ ನೀಡುವೆನೆಂದು ಹಟ ಹಿಡಿಯುವುದು ಮುಂತಾದ ಕೆಟ್ಟ ಸಂಪ್ರದಾಯಗಳನ್ನು ಕುರ್‌ಆನ್ ವಿರೋಧಿಸುತ್ತದೆ.

فَٰحِشَةً وَمَقْتًا وَسَآءَ سَبِيلًا ﴿٢٢﴾

ಖಂಡಿತವಾಗಿಯೂ ಅದೊಂದು ನೀಚಕೃತ್ಯವೂ ಅಸಹ್ಯ ಪ್ರವೃತ್ತಿಯೂ ಕೆಟ್ಟ ಮಾರ್ಗವೂ ಆಗಿದೆ.

حُرِّمَتْ عَلَيْكُمْ أُمَّهَٰتُكُمْ وَبَنَاتُكُمْ
وَأَخَوَٰتُكُمْ وَعَمَّٰتُكُمْ وَخَٰلَٰتُكُمْ
وَبَنَاتُ ٱلْأَخِ وَبَنَاتُ ٱلْأُخْتِ وَأُمَّهَٰتُكُمُ
ٱلَّٰتِىٓ أَرْضَعْنَكُمْ وَأَخَوَٰتُكُم مِّنَ
ٱلرَّضَٰعَةِ وَأُمَّهَٰتُ نِسَآئِكُمْ وَرَبَٰٓئِبُكُمُ
ٱلَّٰتِى فِى حُجُورِكُم مِّن نِّسَآئِكُمُ ٱلَّٰتِى
دَخَلْتُم بِهِنَّ فَإِن لَّمْ تَكُونُوا۟ دَخَلْتُم
بِهِنَّ فَلَا جُنَاحَ عَلَيْكُمْ وَحَلَٰٓئِلُ
أَبْنَآئِكُمُ ٱلَّذِينَ مِنْ أَصْلَٰبِكُمْ وَأَن
تَجْمَعُوا۟ بَيْنَ ٱلْأُخْتَيْنِ إِلَّا مَا قَدْ سَلَفَ ۗ إِنَّ
ٱللَّهَ كَانَ غَفُورًا رَّحِيمًا ﴿٢٣﴾

23. ನಿಮ್ಮ ತಾಯಂದಿರು, ಪುತ್ರಿಯರು, ಸಹೋದರಿಯರು, ಪಿತೃ ಸಹೋದರಿಯರು, ಮಾತೃ ಸಹೋದರಿ ಯರು, ಸಹೋದರ ಪುತ್ರಿಯರು, ಸಹೋದರಿ ಪುತ್ರಿಯರು, ನಿಮಗೆ ಮೊಲೆಯುಣಿಸಿದ ಸಾಕುತಾಯಂದಿರು, ಸ್ತನಪಾನ ಸಂಬಂಧದ ನಿಮ್ಮ ಸಹೋದರಿಯರು, ನಿಮ್ಮ ಪತ್ನಿಯರ ತಾಯಂದಿರು (ಮುಂತಾದವರನ್ನು ವಿವಾಹವಾಗುವುದು) ನಿಮಗೆ ನಿಷಿದ್ಧಗೊಳಿಸಲಾಗಿದೆ. ನೀವು ಲೈಂಗಿಕ ಸಂಪರ್ಕ ಮಾಡಿರುವ ನಿಮ್ಮ ಪತ್ನಿಯರ ಮಕ್ಕಳಾಗಿ ನಿಮ್ಮ ಪೋಷಣೆಯಲ್ಲಿರುವ ಸಾಕುಪುತ್ರಿಯರನ್ನು (ವಿವಾಹವಾಗುವುದು ನಿಮಗೆ ನಿಷಿದ್ಧಗೊಳಿಸಲಾಗಿದೆ). ಇನ್ನು ನೀವು ಅವರೊಂದಿಗೆ (ಪತ್ನಿಯರೊಂದಿಗೆ) ಲೈಂಗಿಕ ಸಂಪರ್ಕ ಮಾಡಿರದಿದ್ದರೆ (ಅವರ ಮಕ್ಕಳನ್ನು ವಿವಾಹವಾಗುವುದರಲ್ಲಿ) ನಿಮಗೆ ದೋಷವಿಲ್ಲ. ನಿಮ್ಮ ಬೆನ್ನೆಲುಬಿನಿಂದ ಜನಿಸಿದ ಪುತ್ರರ ಪತ್ನಿಯರು ಕೂಡ (ನಿಮಗೆ ನಿಷಿದ್ಧವಾಗಿರುವರು). ಇಬ್ಬರು ಸಹೋದರಿಯರನ್ನು ಏಕಕಾಲದಲ್ಲಿ ಪತ್ನಿಯರನ್ನಾಗಿ ಮಾಡುವುದನ್ನೂ (ನಿಷಿದ್ಧಗೊಳಿಸಲಾಗಿದೆ). ಮುಂಚೆ ಗತಿಸಿಹೋಗಿರುವುದರ ಹೊರತು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

۞ وَٱلْمُحْصَنَٰتُ مِنَ ٱلنِّسَآءِ إِلَّا مَا
مَلَكَتْ أَيْمَٰنُكُمْ ۖ كِتَٰبَ ٱللَّهِ عَلَيْكُمْ ۚ
وَأُحِلَّ لَكُم مَّا وَرَآءَ ذَٰلِكُمْ أَن تَبْتَغُوا۟

24. (ಇತರರ) ವೈವಾಹಿಕ ಬಂಧನದಲ್ಲಿರುವ ಸ್ತ್ರೀಯರು ಕೂಡ (ನಿಮಗೆ ನಿಷಿದ್ಧವಾಗಿರುವರು). ನಿಮ್ಮ ಕೈಗಳು ಒಡೆತನದಲ್ಲಿರಿಸಿರುವ (ಗುಲಾಮಸ್ತ್ರೀಯರ) ಹೊರತು.(1) ಇದು ನಿಮ್ಮ

1 ಯುದ್ಧದಲ್ಲಿ ಶತ್ರುಗಳ ಪತ್ನಿಯರು ಸೆರೆಯಾಳುಗಳಾಗಿ ಹಿಡಿಯಲ್ಪಟ್ಟರೆ ಮತ್ತು ಅವರು ಮುಸ್ಲಿಮರ ಗುಲಾಮರಾದರೆ ಮುಸ್ಲಿಮರು ಅವರನ್ನು ಪತ್ನಿಯರಾಗಿ ಮಾಡಿಕೊಳ್ಳಬಹುದು ಎಂದು ಇದರಿಂದ ಮನವರಿಕೆಯಾಗುತ್ತದೆ.

بِأَمْوَٰلِكُم مُّحْصِنِينَ غَيْرَ مُسَٰفِحِينَ ۚ فَمَا ٱسْتَمْتَعْتُم بِهِۦ مِنْهُنَّ فَـَٔاتُوهُنَّ أُجُورَهُنَّ فَرِيضَةً ۚ وَلَا جُنَاحَ عَلَيْكُمْ فِيمَا تَرَٰضَيْتُم بِهِۦ مِنۢ بَعْدِ ٱلْفَرِيضَةِ ۚ إِنَّ ٱللَّهَ كَانَ عَلِيمًا حَكِيمًا ﴿٢٤﴾

ಮೇಲಿರುವ ಅಲ್ಲಾಹುವಿನ ನಿಯಮವಾಗಿದೆ. ನೀವು ವೈವಾಹಿಕ ಬದುಕು ಸಾಗಿಸುವ ಉದ್ದೇಶ ಹೊಂದಿದವರೂ, ನೀಚಕೃತ್ಯವನ್ನು ಬಯಸದವರೂ ಆಗಿರುವ ರೀತಿಯಲ್ಲಿ ನಿಮ್ಮ ಸಂಪತ್ತನ್ನು (ಮಹ್ರ್ ಆಗಿ) ನೀಡುವ ಮೂಲಕ ಇವರ ಹೊರತಾಗಿರುವ ಸ್ತ್ರೀಯರೊಂದಿಗೆ (ವಿವಾಹ ಸಂಬಂಧವನ್ನು) ಅರಸುವುದು ನಿಮಗೆ ಧರ್ಮಸಮ್ಮತವಾಗಿದೆ. ತರುವಾಯ ನೀವು ಅವರಿಂದ ಸುಖವನ್ನು ಪಡೆದರೆ ಅವರ ವಧುದಕ್ಷಿಣೆಯನ್ನು ಒಂದು ಬಾಧ್ಯತೆ ಎಂಬ ನೆಲೆಯಲ್ಲಿ ಕೊಟ್ಟುಬಿಡಿರಿ. ಬಾಧ್ಯತೆ (ವಧುದಕ್ಷಿಣೆ) ನಿಶ್ಚಯಿಸಿದ ಬಳಿಕ ನೀವಿಬ್ಬರು ಪರಸ್ಪರ ತೃಪ್ತಿಯೊಂದಿಗೆ ಏನಾದರೂ ವಿನಾಯಿತಿ ತೋರುವುದಾದರೆ ನಿಮ್ಮ ಮೇಲೆ ಯಾವುದೇ ದೋಷವಿಲ್ಲ. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನೂ ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَمَن لَّمْ يَسْتَطِعْ مِنكُمْ طَوْلًا أَن يَنكِحَ ٱلْمُحْصَنَٰتِ ٱلْمُؤْمِنَٰتِ فَمِن مَّا مَلَكَتْ أَيْمَٰنُكُم مِّن فَتَيَٰتِكُمُ ٱلْمُؤْمِنَٰتِ ۚ وَٱللَّهُ أَعْلَمُ بِإِيمَٰنِكُم ۚ بَعْضُكُم مِّنۢ بَعْضٍ ۚ فَٱنكِحُوهُنَّ بِإِذْنِ أَهْلِهِنَّ وَءَاتُوهُنَّ أُجُورَهُنَّ بِٱلْمَعْرُوفِ مُحْصَنَٰتٍ غَيْرَ مُسَٰفِحَٰتٍ وَلَا مُتَّخِذَٰتِ أَخْدَانٍ ۚ فَإِذَآ أُحْصِنَّ فَإِنْ أَتَيْنَ بِفَٰحِشَةٍ فَعَلَيْهِنَّ نِصْفُ مَا عَلَى ٱلْمُحْصَنَٰتِ مِنَ ٱلْعَذَابِ ۚ ذَٰلِكَ لِمَنْ خَشِىَ ٱلْعَنَتَ مِنكُمْ ۚ وَأَن تَصْبِرُوا۟ خَيْرٌ لَّكُمْ ۗ وَٱللَّهُ غَفُورٌ رَّحِيمٌ ﴿٢٥﴾

**25.** ಸತ್ಯವಿಶ್ವಾಸಿನಿಯರಾದ ಸ್ವತಂತ್ರ ಸ್ತ್ರೀಯರನ್ನು ವಿವಾಹವಾಗಲು ನಿಮ್ಮ ಪೈಕಿ ಯಾರಿಗಾದರೂ ಆರ್ಥಿಕವಾಗಿ ಸಾಧ್ಯವಾಗದಿದ್ದರೆ ನಿಮ್ಮ ಕೈಗಳು ಒಡೆತನದಲ್ಲಿರಿಸಿರುವ ಸತ್ಯವಿಶ್ವಾಸಿನಿಯರಾದ ಗುಲಾಮಸ್ತ್ರೀಯರ ಪೈಕಿ ಯಾರನ್ನಾದರೂ (ಪತ್ನಿಯರನ್ನಾಗಿ ಸ್ವೀಕರಿಸಬಹುದು). ಅಲ್ಲಾಹು ನಿಮ್ಮ ವಿಶ್ವಾಸದ ಕುರಿತು ಚೆನ್ನಾಗಿ ಅರಿಯುವವನಾಗಿರುವನು. ನಿಮ್ಮಲ್ಲಿ ಕೆಲವರು ಕೆಲವರಿಂದ[1] ಉದ್ಭವಿಸಿದವರಾಗಿರುವಿರಿ. ಅವರನ್ನು (ಆ ಗುಲಾಮ ಸ್ತ್ರೀಯರನ್ನು) ಅವರ ಪೋಷಕರ ಅನುಮತಿಯೊಂದಿಗೆ ವಿವಾಹವಾಗಿರಿ. ಅವರ ವಧುದಕ್ಷಿಣೆಯನ್ನು ಶಿಷ್ಟಾಚಾರಕ್ಕನುಸಾರವಾಗಿ ಅವರಿಗೆ ನೀಡಿರಿ. ಅವರು ನೀಚಕೃತ್ಯದಲ್ಲಿ ಭಾಗಿಯಾಗದವರೂ

1 ಗುಲಾಮಗಿರಿಯು ಮನುಷ್ಯನ ಮೇಲೆ ಹೇರಲಾಗಿರುವ ಪದ್ಧತಿಯಾಗಿದೆ. ಮನುಷ್ಯರೆಂಬ ನೆಲೆಯಲ್ಲಿ ಗುಲಾಮರು ಮತ್ತು ಸ್ವತಂತ್ರರು ಪರಸ್ಪರ ಸಹೋದರರಾಗಿದ್ದಾರೆ.

ಗುಪ್ತ ಸಂಗಾತಿಗಳನ್ನು ಹೊಂದಿರದವರೂ ಆಗಿರುವ ಸುಶೀಲೆಯರಾಗಿರಬೇಕು. ತರುವಾಯ ಅವರು ದಾಂಪತ್ಯ ಜೀವನಕ್ಕೆ ಕಾಲಿರಿಸಿದ ಬಳಿಕ ನೀಚ ಕೃತ್ಯದಲ್ಲಿ ಭಾಗಿಯಾಗುವುದಾದರೆ ಸ್ವತಂತ್ರ ಸ್ತ್ರೀಯರಿಗಿರುವ ಶಿಕ್ಷೆಯ ಅರ್ಧ ಭಾಗವು ಅವರಿಗಿರುವುದು.[1] ಇದು (ದಾಸಿಯರನ್ನು ವಿವಾಹವಾಗುವ ಅನುಮತಿಯು) ನಿಮ್ಮ ಪೈಕಿ (ವಿವಾಹವಾಗದಿದ್ದರೆ) ಕಷ್ಟವಾಗಬಹುದೆಂದು ಭಯಪಡುವವರಿಗಾಗಿದೆ. ಆದರೆ ನೀವು ಸಹನೆ ವಹಿಸುವುದಾದರೆ ಅದು ನಿಮಗೆ ಅತ್ಯುತ್ತಮವಾಗಿದೆ.[2] ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

**26.** ಅಲ್ಲಾಹು ನಿಮಗೆ (ವಿಷಯಗಳನ್ನು) ವಿವರಿಸಿ ಕೊಡಲು ಮತ್ತು ನಿಮ್ಮ ಪೂರ್ವಿಕರ ಉತ್ತಮ ಕ್ರಮಗಳನ್ನು ನಿಮಗೆ ತೋರಿಸಿಕೊಡಲು ಹಾಗೂ ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಲು ಇಚ್ಛಿಸುತ್ತಿರುವನು.[3] ಅಲ್ಲಾಹು ಎಲ್ಲವನ್ನೂ ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

يُرِيدُ ٱللَّهُ لِيُبَيِّنَ لَكُمۡ وَيَهۡدِيَكُمۡ سُنَنَ ٱلَّذِينَ مِن قَبۡلِكُمۡ وَيَتُوبَ عَلَيۡكُمۡۗ وَٱللَّهُ عَلِيمٌ حَكِيمٞ ٢٦

**27.** ಅಲ್ಲಾಹು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಲು ಇಚ್ಛಿಸುತ್ತಿರುವನು. ಆದರೆ ಸ್ವೇಚ್ಛೆಗಳನ್ನು ಅನುಸರಿಸಿ ಜೀವಿಸುವವರು ನೀವು ಗರಿಷ್ಠ ಪ್ರಮಾಣದಲ್ಲಿ (ಸನ್ಮಾರ್ಗದಿಂದ) ತಪ್ಪಿಹೋಗಬೇಕೆಂದು ಬಯಸುತ್ತಿರುವರು.

وَٱللَّهُ يُرِيدُ أَن يَتُوبَ عَلَيۡكُمۡ وَيُرِيدُ ٱلَّذِينَ يَتَّبِعُونَ ٱلشَّهَوَٰتِ أَن تَمِيلُواْ مَيۡلًا عَظِيمٗا ٢٧

1 ಗುಲಾಮ ಸ್ತ್ರೀ ತಪ್ಪು ಮಾಡಲು ನಿರ್ಬಂಧಿತಳಾಗುವ ಸಾಧ್ಯತೆಗಳು ಹೆಚ್ಚಾಗಿರುವುದರಿಂದ ಅವಳಿಗೆ ಶಿಕ್ಷೆಯಲ್ಲಿ ರಿಯಾಯಿತಿ ನೀಡಲಾಗಿರಬಹುದು..

2 ಗುಲಾಮ ಸ್ತ್ರೀಯರೊಂದಿಗಿರುವ ವಿವಾಹವನ್ನು ಕುರ್‌ಆನ್ ಹೆಚ್ಚಾಗಿ ಪ್ರೋತ್ಸಾಹಿಸದಿರುವುದು ಇನ್ನೊಬ್ಬರ ದಾಸ್ಯ ಮಾಡಲು ನಿರ್ಬಂಧಿತಳಾಗಿರುವ ಓರ್ವ ಹೆಣ್ಣಿಗೆ ದಾಂಪತ್ಯ ಜೀವನದ ಹಕ್ಕುಬಾಧ್ಯತೆಗಳನ್ನು ಪೂರ್ಣವಾಗಿ ಈಡೇರಿಸುವುದು ಕಷ್ಟಕರವಾಗಿರುತ್ತದೆ ಎಂಬ ಕಾರಣದಿಂದಾಗಿರಬಹುದು.

3 ಅಲ್ಲಾಹು ತನ್ನ ವಿಧಿ ನಿಷೇಧಗಳ ಮೂಲಕ ಮನುಷ್ಯರಿಗೆ ಭಾರವನ್ನು ಹೊರಿಸುತ್ತಿಲ್ಲ. ಬದಲಾಗಿ ಉತ್ತಮವಾದ ಜೀವನ ಮಾದರಿಯನ್ನು ತೋರಿಸಿ ಬದುಕನ್ನು ಧನ್ಯವಾಗಿಸಲು ಮತ್ತು ಸುಗಮಗೊಳಿಸಲು ನೆರವಾಗುತ್ತಿದ್ದಾನೆ.

**28.** ಅಲ್ಲಾಹು ನಿಮಗೆ ಭಾರವನ್ನು ಹಗುರಗೊಳಿಸಲು ಬಯಸುತ್ತಿರುವನು. ಮನುಷ್ಯನನ್ನು ಬಲಹೀನನಾಗಿ ಸೃಷ್ಟಿಸಲಾಗಿದೆ.

يُرِيدُ ٱللَّهُ أَن يُخَفِّفَ عَنكُمْۚ وَخُلِقَ ٱلْإِنسَٰنُ ضَعِيفًا ﴿٢٨﴾

**29.** ಓ ಸತ್ಯವಿಶ್ವಾಸಿಗಳೇ! ನೀವು ಪರಸ್ಪರ ಸಂತೃಪ್ತಿಯೊಂದಿಗೆ ನಡೆಸುವ ವ್ಯವಹಾರದ ಮೂಲಕವಲ್ಲದೆ ನಿಮ್ಮ ಸಂಪತ್ತುಗಳನ್ನು ನೀವು ಪರಸ್ಪರ ಅನ್ಯಾಯವಾಗಿ ತಿನ್ನದಿರಿ. ನೀವು ನಿಮ್ಮನ್ನೇ ವಧಿಸದಿರಿ.(1) ಖಂಡಿತವಾಗಿಯೂ ಅಲ್ಲಾಹು ನಿಮ್ಮೊಂದಿಗೆ ಅಪಾರ ಕರುಣೆಯುಳ್ಳವನಾಗಿರುವನು.

يَٰٓأَيُّهَا ٱلَّذِينَ ءَامَنُواْ لَا تَأْكُلُوٓاْ أَمْوَٰلَكُم بَيْنَكُم بِٱلْبَٰطِلِ إِلَّآ أَن تَكُونَ تِجَٰرَةً عَن تَرَاضٍ مِّنكُمْۚ وَلَا تَقْتُلُوٓاْ أَنفُسَكُمْۚ إِنَّ ٱللَّهَ كَانَ بِكُمْ رَحِيمًا ﴿٢٩﴾

**30.** ಯಾರು ಅತಿಕ್ರಮವಾಗಿ ಮತ್ತು ಅನ್ಯಾಯವಾಗಿ ಅದನ್ನು ಮಾಡುವನೋ ಅವನನ್ನು ನಾವು ನರಕಾಗ್ನಿಯಲ್ಲಿ ಉರಿಸುವೆವು. ಅದು ಅಲ್ಲಾಹುವಿಗೆ ಅತಿ ಸುಲಭವಾದುದಾಗಿದೆ.

وَمَن يَفْعَلْ ذَٰلِكَ عُدْوَٰنًا وَظُلْمًا فَسَوْفَ نُصْلِيهِ نَارًاۚ وَكَانَ ذَٰلِكَ عَلَى ٱللَّهِ يَسِيرًا ﴿٣٠﴾

**31.** ನಿಮಗೆ ವಿರೋಧಿಸಲಾಗಿರುವ ಮಹಾ ಪಾಪಗಳನ್ನು ನೀವು ವರ್ಜಿಸುವುದಾದರೆ ನಿಮ್ಮ ಲೋಪದೋಷಗಳನ್ನು ನಾವು ನಿಮ್ಮಿಂದ ಅಳಿಸಿಹಾಕುವೆವು ಮತ್ತು ಆದರಣೀಯವಾದ ಒಂದು ಸ್ಥಾನದಲ್ಲಿ ನಾವು ನಿಮ್ಮನ್ನು ಪ್ರವೇಶಗೊಳಿಸುವೆವು.

إِن تَجْتَنِبُواْ كَبَآئِرَ مَا تُنْهَوْنَ عَنْهُ نُكَفِّرْ عَنكُمْ سَيِّـَٔاتِكُمْ وَنُدْخِلْكُم مُّدْخَلًا كَرِيمًا ﴿٣١﴾

**32.** ಅಲ್ಲಾಹು ನಿಮ್ಮ ಪೈಕಿ ಕೆಲವರಿಗೆ ಇತರ ಕೆಲವರಿಗಿಂತಲೂ ಅಧಿಕವಾಗಿ ನೀಡಿದ ಅನುಗ್ರಹಗಳಿಗಾಗಿ ನೀವು ಹಂಬಲಿಸದಿರಿ.(2) ಪುರುಷರು ಸಂಪಾದಿಸಿರುವುದರ ಪಾಲು ಅವರಿಗಿದೆ. ಸ್ತ್ರೀಯರು ಸಂಪಾದಿಸಿರುವುದರ ಪಾಲು ಅವರಿಗಿದೆ. ಅಲ್ಲಾಹುವಿನೊಂದಿಗೆ ಅವನ ಔದಾರ್ಯದಿಂದ ಬೇಡಿಕೊಳ್ಳಿರಿ. ಖಂಡಿತವಾಗಿಯೂ ಅಲ್ಲಾಹು ಸರ್ವ

وَلَا تَتَمَنَّوْاْ مَا فَضَّلَ ٱللَّهُ بِهِۦ بَعْضَكُمْ عَلَىٰ بَعْضٍۚ لِّلرِّجَالِ نَصِيبٌ مِّمَّا ٱكْتَسَبُواْۖ وَلِلنِّسَآءِ نَصِيبٌ مِّمَّا ٱكْتَسَبْنَۚ وَسْـَٔلُواْ ٱللَّهَ مِن فَضْلِهِۦٓۗ إِنَّ ٱللَّهَ كَانَ بِكُلِّ شَيْءٍ عَلِيمًا ﴿٣٢﴾

---

1 ಸತ್ಯವಿಶ್ವಾಸಿಗಳು ಒಂದೇ ಶರೀರದಂತೆ ಐಕ್ಯದೊಂದಿಗೆ ಬಾಳಬೇಕಾದವರು ಆಗಿದ್ದಾರೆ. ಆದ್ದರಿಂದ ಓರ್ವ ವಿಶ್ವಾಸಿ ತನ್ನ ಸಹೋದರನನ್ನು ಕೊಲ್ಲುವುದು ಸ್ವತಃ ತನ್ನನ್ನೇ ಕೊಲ್ಲುವುದಕ್ಕೆ ಸಮಾನವಾಗಿದೆ. ನೀವು ನಿಮ್ಮನ್ನೇ ವಧಿಸದಿರಿ ಎಂದು ಕುರ್‌ಆನ್ ಹೇಳಿರುವುದು ಈ ಅರ್ಥದಲ್ಲಾಗಿದೆ.

2 ಇತರರ ಸಂಪಾದನೆಯ ಬಗ್ಗೆ ಇರುವ ಅಸೂಯೆ ಮತ್ತು ಅದರಿಂದ ಒಂದು ಭಾಗವನ್ನು ತನ್ನದಾಗಿಸುವ ದುರಾಸೆ ಅನೇಕ ಅತಿಕ್ರಮಗಳಿಗೂ ಆಕ್ರಮಣಗಳಿಗೂ ಪ್ರೇರಣೆ ನೀಡುತ್ತದೆ.

ವಿಷಯಗಳ ಬಗ್ಗೆಯೂ ಅರಿವುಳ್ಳವನಾಗಿರುವನು.

وَلِكُلٍّ جَعَلْنَا مَوَٰلِيَ مِمَّا تَرَكَ ٱلْوَٰلِدَانِ وَٱلْأَقْرَبُونَۚ وَٱلَّذِينَ عَقَدَتْ أَيْمَٰنُكُمْ فَـَٔاتُوهُمْ نَصِيبَهُمْۚ إِنَّ ٱللَّهَ كَانَ عَلَىٰ كُلِّ شَيْءٍ شَهِيدًا ٣٣

**33.** ಮಾತಾಪಿತರು ಮತ್ತು ನಿಕಟ ಸಂಬಂಧಿಕರು ಬಿಟ್ಟುಹೋಗಿರುವ ಸಂಪತ್ತಿನಲ್ಲಿ ಪ್ರತಿಯೊಬ್ಬನಿಗೂ ನಾವು ಹಕ್ಕುದಾರರನ್ನು ನಿಶ್ಚಯಿಸಿರುವೆವು. ನಿಮ್ಮ ಬಲಗೈಗಳು ಸಂಬಂಧ ಸ್ಥಾಪಿಸಿದವರಾರೋ ಅವರಿಗೆ ಅವರ ಪಾಲನ್ನು ನೀಡಿರಿ.(1) ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳ ಮೇಲೂ ಸಾಕ್ಷಿಯಾಗಿರುವನು.

ٱلرِّجَالُ قَوَّٰمُونَ عَلَى ٱلنِّسَآءِ بِمَا فَضَّلَ ٱللَّهُ بَعْضَهُمْ عَلَىٰ بَعْضٍ وَبِمَآ أَنفَقُواْ مِنْ أَمْوَٰلِهِمْۚ فَٱلصَّٰلِحَٰتُ قَٰنِتَٰتٌ حَٰفِظَٰتٌ لِّلْغَيْبِ بِمَا حَفِظَ ٱللَّهُۚ وَٱلَّٰتِي تَخَافُونَ نُشُوزَهُنَّ فَعِظُوهُنَّ وَٱهْجُرُوهُنَّ فِي ٱلْمَضَاجِعِ وَٱضْرِبُوهُنَّۖ فَإِنْ أَطَعْنَكُمْ فَلَا تَبْغُواْ عَلَيْهِنَّ سَبِيلًاۗ إِنَّ ٱللَّهَ كَانَ عَلِيًّا كَبِيرًا ٣٤

**34.** ಅಲ್ಲಾಹು ಮನುಷ್ಯರ ಪೈಕಿ ಒಂದು ವರ್ಗವನ್ನು ಇನ್ನೊಂದು ವರ್ಗದವರಿಗಿಂತ ಹೆಚ್ಚು ಸಾಮರ್ಥ್ಯವುಳ್ಳವರಾಗಿ ಮಾಡಿರುವುದರಿಂದಲೂ, (ಪುರುಷರು) ತಮ್ಮ ಧನವನ್ನು ವ್ಯಯಿಸುವುದರಿಂದಲೂ, ಪುರುಷರು ಸ್ತ್ರೀಯರ ಮೇಲೆ ನಿಯಂತ್ರಣಾಧಿಕಾರ ಹೊಂದಿದವರಾಗಿರುವರು. ಆದ್ದರಿಂದ ಉತ್ತಮ ಸ್ತ್ರೀಯರು ಅನುಸರಣಾಶೀಲವುಳ್ಳವರೂ ಅಲ್ಲಾಹು ಸಂರಕ್ಷಿಸಿದ ಪ್ರಕಾರ (ಪುರುಷರ) ಅನುಪಸ್ಥಿತಿಯಲ್ಲಿ (ಸಂರಕ್ಷಿಸಬೇಕಾದುದೆಲ್ಲವನ್ನೂ) ಸಂರಕ್ಷಿಸುವವರೂ ಆಗಿರುವರು. ಧಿಕ್ಕಾರ ತೋರುವರೆಂದು ನೀವು ಭಯಪಡುವ ಸ್ತ್ರೀಯರಿಗೆ ಉಪದೇಶವನ್ನು ನೀಡಿರಿ, ಶಯನ ಗೃಹದಲ್ಲಿ ಅವರನ್ನು ದೂರವಿರಿಸಿರಿ ಮತ್ತು ಅವರಿಗೆ ಹೊಡೆಯಿರಿ(2) ತರುವಾಯ ಅವರು

---

1 ಪರಸ್ಪರ ಬಲಗೈಗಳನ್ನು ಚಾಚಿ ಹಸ್ತಲಾಘವ ಮಾಡುವ ಮೂಲಕ ಅರಬ್ ಜನರು ಕರಾರುಗಳನ್ನು ದೃಢೀಕರಿಸುತ್ತಿದ್ದರು. ಹೀಗೆ ವಿವಾಹ ಒಪ್ಪಂದ ಮಾಡಿಕೊಂಡವರಿಗೆ (ಪತಿಪತ್ನಿಯರಿಗೆ) ನೀವು ಸಂಪತ್ತಿನಲ್ಲಿ ಹಕ್ಕು ನೀಡಬೇಕೆಂಬುದು ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಸ್ನೇಹ ಸಂಬಂಧದ ಅಥವಾ ಧಾರ್ಮಿಕ ಸಂಬಂಧದ ಬುನಾದಿಯಲ್ಲಿ ಓರ್ವನು ಮತ್ತೋರ್ವನಿಗೆ ತನ್ನ ಸಂಪತ್ತಿನಲ್ಲಿ ಹಕ್ಕು ನೀಡುವೆನೆಂದು ಕರಾರು ಮಾಡುವ ಒಂದು ಸಂಪ್ರದಾಯವಿತ್ತು. ಇಲ್ಲಿ ಪ್ರಸ್ತಾಪಿಸಿರುವುದು ಅದರ ಕುರಿತಾಗಿದೆ ಮತ್ತು ಈ ಹಕ್ಕು ವಾರೀಸು ಹಕ್ಕಿನ ನಿಯಮಗಳು ಅವತೀರ್ಣಗೊಳ್ಳುವುದರೊಂದಿಗೆ ರದ್ದಾಗಿದೆಯೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು.

2 ಗಾಯವಾಗದಂತೆ ಹಗುರವಾಗಿ ಹೊಡೆಯಬೇಕೆಂದು, ಮುಖಕ್ಕೆ ಹೊಡೆಯ ಬಾರದೆಂದು ಪ್ರವಾದಿ(ﷺ)ರ ವಚನಗಳು ಹೇಳುತ್ತವೆ.

ನಿಮ್ಮನ್ನು ಅನುಸರಿಸುವುದಾದರೆ ಅವರಿಗೆ ವಿರುದ್ಧವಾಗಿ ಯಾವ ಮಾರ್ಗವನ್ನೂ ಅರಸದಿರಿ. ಖಂಡಿತವಾಗಿಯೂ ಅಲ್ಲಾಹು ಉನ್ನತನೂ ಮಹಾನನೂ ಆಗಿರುವನು.

35. ಇನ್ನು ಅವರು (ದಂಪತಿಗಳು) ಪರಸ್ಪರ ಬೇರ್ಪಡುವರೆಂದು ನೀವು ಭಯಪಡುವುದಾದರೆ ಅವನ ಮನೆಯವರಿಂದ ಒಬ್ಬ ಮಧ್ಯಸ್ಥಗಾರನನ್ನೂ, ಅವಳ ಮನೆಯವರಿಂದ ಒಬ್ಬ ಮಧ್ಯಸ್ಥಗಾರನನ್ನೂ ನಿಶ್ಚಯಿಸಿರಿ. ಅವರಿಬ್ಬರೂ ಸಾಮರಸ್ಯವನ್ನು ಬಯಸುವುದಾದರೆ ಅಲ್ಲಾಹು ಅವರ ಮಧ್ಯೆ ಹೊಂದಾಣಿಕೆಯನ್ನುಂಟು ಮಾಡುವನು. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿರುವನು.

وَإِنْ خِفْتُمْ شِقَاقَ بَيْنِهِمَا فَٱبْعَثُواْ حَكَمًا مِّنْ أَهْلِهِۦ وَحَكَمًا مِّنْ أَهْلِهَآ إِن يُرِيدَآ إِصْلَٰحًا يُوَفِّقِ ٱللَّهُ بَيْنَهُمَآۗ إِنَّ ٱللَّهَ كَانَ عَلِيمًا خَبِيرًا ٣٥

36. ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನೊಂದಿಗೆ ಏನನ್ನೂ ಸಹಭಾಗಿಯಾಗಿ ಮಾಡದಿರಿ ಮತ್ತು ಮಾತಾಪಿತರೊಂದಿಗೆ ಸದ್ವರ್ತನೆ ತೋರಿರಿ. ಸಂಬಂಧಿಕರೊಂದಿಗೆ, ಅನಾಥರೊಂದಿಗೆ, ಬಡವರೊಂದಿಗೆ, ಕುಟುಂಬ ಸಂಬಂಧ ವಿರುವ ನೆರೆಹೊರೆಯವರೊಂದಿಗೆ, ಇತರ ನೆರೆಹೊರೆಯವರೊಂದಿಗೆ, ಸಹವರ್ತಿಗಳೊಂದಿಗೆ, ದಾರಿಹೋಕರೊಂದಿಗೆ ಮತ್ತು ನಿಮ್ಮ ಬಲಗೈಗಳು ಒಡೆತನದಲ್ಲಿರಿಸಿದ ಗುಲಾಮರೊಂದಿಗೆ ಸದ್ವರ್ತನೆ ತೋರಿರಿ. ದರ್ಪ ಮತ್ತು ದುರಭಿಮಾನವಿರುವ ಯಾರನ್ನೂ ಅಲ್ಲಾಹು ಮೆಚ್ಚಲಾರನು.

۞ وَٱعْبُدُواْ ٱللَّهَ وَلَا تُشْرِكُواْ بِهِۦ شَيْـًٔاۖ وَبِٱلْوَٰلِدَيْنِ إِحْسَٰنًا وَبِذِى ٱلْقُرْبَىٰ وَٱلْيَتَٰمَىٰ وَٱلْمَسَٰكِينِ وَٱلْجَارِ ذِى ٱلْقُرْبَىٰ وَٱلْجَارِ ٱلْجُنُبِ وَٱلصَّاحِبِ بِٱلْجَنۢبِ وَٱبْنِ ٱلسَّبِيلِ وَمَا مَلَكَتْ أَيْمَٰنُكُمْۗ إِنَّ ٱللَّهَ لَا يُحِبُّ مَن كَانَ مُخْتَالًا فَخُورًا ٣٦

37. ಜಿಪುಣತೆ ತೋರಿಸುವವರು, ಜಿಪುಣತೆ ತೋರಿಸಲು ಜನರನ್ನು ಪ್ರೇರೇಪಿಸುವವರು ಮತ್ತು ಅಲ್ಲಾಹು ತನ್ನ ಔದಾರ್ಯದಿಂದ ತಮಗೆ ನೀಡಿದ ಅನುಗ್ರಹವನ್ನು ಮರೆಮಾಚುವವರು ಯಾರೋ ಅಂತಹ ಕೃತಘ್ನರಿಗೆ ನಾವು ಅಪಮಾನಕರವಾದ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

ٱلَّذِينَ يَبْخَلُونَ وَيَأْمُرُونَ ٱلنَّاسَ بِٱلْبُخْلِ وَيَكْتُمُونَ مَآ ءَاتَىٰهُمُ ٱللَّهُ مِن فَضْلِهِۦۗ وَأَعْتَدْنَا لِلْكَٰفِرِينَ عَذَابًا مُّهِينًا ٣٧

38. ತೋರಿಕೆಗಾಗಿ ತಮ್ಮ ಸಂಪತ್ತನ್ನು ವ್ಯಯಿಸುವವರು ಮತ್ತು ಅಲ್ಲಾಹುವಿನಲ್ಲಾಗಲಿ ಅಂತ್ಯದಿನದಲ್ಲಾಗಲಿ ವಿಶ್ವಾಸವಿಲ್ಲದವರು ಯಾರೋ (ಅವರು ಸೈತಾನನ ಜೊತೆಗಾರರಾಗಿರುವರು). ಯಾರ ಜೊತೆಗಾರನು ಸೈತಾನನಾಗಿರುವನೋ ಅವನು ಎಷ್ಟು ಕೆಟ್ಟ ಜೊತೆಗಾರನು!

وَٱلَّذِينَ يُنفِقُونَ أَمْوَٰلَهُمْ رِئَآءَ ٱلنَّاسِ وَلَا يُؤْمِنُونَ بِٱللَّهِ وَلَا بِٱلْيَوْمِ ٱلْءَاخِرِ ۗ وَمَن يَكُنِ ٱلشَّيْطَٰنُ لَهُۥ قَرِينًا فَسَآءَ قَرِينًا ﴿٣٨﴾

39. ಅವರು ಅಲ್ಲಾಹುವಿನಲ್ಲಿಯೂ, ಅಂತ್ಯದಿನದಲ್ಲಿಯೂ ವಿಶ್ವಾಸವಿಡುವವರಾಗಿರುತ್ತಿದ್ದರೆ ಮತ್ತು ಅಲ್ಲಾಹು ಅವರಿಗೆ ನೀಡಿದವುಗಳಿಂದ ವ್ಯಯಿಸುವವರಾಗಿರುತ್ತಿದ್ದರೆ ಅವರಿಗಿರುವ ನಷ್ಟವಾದರೂ ಏನು? ಅಲ್ಲಾಹು ಅವರ ಬಗ್ಗೆ ಬಹಳ ಚೆನ್ನಾಗಿ ಅರಿತಿರುವನು.

وَمَاذَا عَلَيْهِمْ لَوْ ءَامَنُوا۟ بِٱللَّهِ وَٱلْيَوْمِ ٱلْءَاخِرِ وَأَنفَقُوا۟ مِمَّا رَزَقَهُمُ ٱللَّهُ ۚ وَكَانَ ٱللَّهُ بِهِمْ عَلِيمًا ﴿٣٩﴾

40. ಖಂಡಿತವಾಗಿಯೂ ಅಲ್ಲಾಹು ಒಂದು ಅಣುವಿನ ತೂಕದಷ್ಟೂ ಅನ್ಯಾಯವೆಸಗಲಾರನು. ಒಳಿತೇನಾದರೂ ಇರುವುದಾದರೆ ಅವನದನ್ನು ಇಮ್ಮಡಿಗೊಳಿಸಿ ಕೊಡುವನು ಮತ್ತು ತನ್ನ ವತಿಯ ಮಹಾ ಪ್ರತಿಫಲವನ್ನೂ ದಯಪಾಲಿಸುವನು.

إِنَّ ٱللَّهَ لَا يَظْلِمُ مِثْقَالَ ذَرَّةٍ ۖ وَإِن تَكُ حَسَنَةً يُضَٰعِفْهَا وَيُؤْتِ مِن لَّدُنْهُ أَجْرًا عَظِيمًا ﴿٤٠﴾

41. ನಾವು ಪ್ರತಿಯೊಂದು ಸಮುದಾಯದಿಂದಲೂ ಒಬ್ಬೊಬ್ಬ ಸಾಕ್ಷಿಯನ್ನು ತರುವಾಗ ಮತ್ತು ಇವರ ಮೇಲೆ ಸಾಕ್ಷಿಯಾಗಿ ತಮ್ಮನ್ನು ತರುವಾಗ ಸ್ಥಿತಿ ಹೇಗಿರಬಹುದು!

فَكَيْفَ إِذَا جِئْنَا مِن كُلِّ أُمَّةٍۭ بِشَهِيدٍ وَجِئْنَا بِكَ عَلَىٰ هَٰٓؤُلَآءِ شَهِيدًا ﴿٤١﴾

42. ಭೂಮಿಯನ್ನು ತಮ್ಮೊಂದಿಗೆ ಸಮತಟ್ಟಾಗಿಸಲಾಗುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅವಿಶ್ವಾಸವಿಟ್ಟವರು ಮತ್ತು ಸಂದೇಶವಾಹಕರನ್ನು ಧಿಕ್ಕರಿಸಿದವರು ಅಂದು ಆಶಿಸುವರು. ಯಾವ ವಿಷಯವನ್ನೂ ಅಲ್ಲಾಹುವಿನಿಂದ ಮುಚ್ಚಿಡಲು ಅವರಿಗೆ ಸಾಧ್ಯವಾಗಲಾರದು.

يَوْمَئِذٍ يَوَدُّ ٱلَّذِينَ كَفَرُوا۟ وَعَصَوُا۟ ٱلرَّسُولَ لَوْ تُسَوَّىٰ بِهِمُ ٱلْأَرْضُ وَلَا يَكْتُمُونَ ٱللَّهَ حَدِيثًا ﴿٤٢﴾

43. ಓ ಸತ್ಯವಿಶ್ವಾಸಿಗಳೇ! ಪಾನಮತ್ತರಾಗಿರುವ ಸ್ಥಿತಿಯಲ್ಲಿ ನೀವೇನು ಹೇಳುತ್ತಿರುವಿರೆಂಬ ಪ್ರಜ್ಞೆ ನಿಮಗುಂಟಾಗುವ ತನಕ ನೀವು ನಮಾಝನ್ನು ಸಮೀಪಿಸದಿರಿ. ಜನಾಬತ್‌ನಲ್ಲಿರುವಾಗ ನೀವು ಸ್ನಾನ ಮಾಡುವ ತನಕ (ನಮಾಝನ್ನು ಸಮೀಪಿಸದಿರಿ). ಆದರೆ ನೀವು ಹಾದು ಹೋಗುವವರಾಗಿರುವ ಹೊರತು.[1] ನೀವು ರೋಗಪೀಡಿತರಾಗಿದ್ದರೆ ಅಥವಾ ಯಾತ್ರಿಕರಾಗಿದ್ದರೆ ಅಥವಾ ನಿಮ್ಮಲ್ಲೊಬ್ಬನು ಮಲಮೂತ್ರ ವಿಸರ್ಜನೆ ಮಾಡಿ ಬರುವವನೋ, ಸ್ತ್ರೀಯರೊಂದಿಗೆ ಲೈಂಗಿಕ ಸಂಪರ್ಕ ಮಾಡಿದವನೋ[2] ಆಗಿದ್ದರೆ –ತರುವಾಯ (ಶುದ್ಧೀಕರಿಸಲು) ನಿಮಗೆ ನೀರು ಸಿಗದಿದ್ದರೆ– ನೀವು ಶುದ್ಧವಾಗಿರುವ ಭೂಮುಖವನ್ನು ಅರಸಿರಿ.[3] ತರುವಾಯ ಅದರಿಂದ ನಿಮ್ಮ ಮುಖಗಳನ್ನೂ ಕೈಗಳನ್ನೂ ಸವರಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಮನ್ನಿಸುವವನೂ ಕ್ಷಮಿಸುವವನೂ ಆಗಿರುವನು.

يَٰٓأَيُّهَا ٱلَّذِينَ ءَامَنُواْ لَا تَقۡرَبُواْ ٱلصَّلَوٰةَ وَأَنتُمۡ سُكَٰرَىٰ حَتَّىٰ تَعۡلَمُواْ مَا تَقُولُونَ وَلَا جُنُبًا إِلَّا عَابِرِي سَبِيلٍ حَتَّىٰ تَغۡتَسِلُواْۚ وَإِن كُنتُم مَّرۡضَىٰٓ أَوۡ عَلَىٰ سَفَرٍ أَوۡ جَآءَ أَحَدٞ مِّنكُم مِّنَ ٱلۡغَآئِطِ أَوۡ لَٰمَسۡتُمُ ٱلنِّسَآءَ فَلَمۡ تَجِدُواْ مَآءٗ فَتَيَمَّمُواْ صَعِيدٗا طَيِّبٗا فَٱمۡسَحُواْ بِوُجُوهِكُمۡ وَأَيۡدِيكُمۡۗ إِنَّ ٱللَّهَ كَانَ عَفُوًّا غَفُورًا ٤٣

44. ಗ್ರಂಥದಿಂದ ಒಂದು ಪಾಲು ನೀಡಲಾಗಿರುವವರೆಡೆಗೆ ತಾವು ನೋಡಿಲ್ಲವೇ? ಅವರು ದುರ್ಮಾರ್ಗವನ್ನು ಖರೀದಿಸುವವರೂ ನೀವು ದಾರಿಗೆಡಬೇಕೆಂದು ಆಶಿಸುವವರೂ ಆಗಿರುವರು.

أَلَمۡ تَرَ إِلَى ٱلَّذِينَ أُوتُواْ نَصِيبٗا مِّنَ ٱلۡكِتَٰبِ يَشۡتَرُونَ ٱلضَّلَٰلَةَ وَيُرِيدُونَ أَن تَضِلُّواْ ٱلسَّبِيلَ ٤٤

1 ಜನಾಬತ್ ಎಂದರೆ ಲೈಂಗಿಕ ಸಂಪರ್ಕ ಅಥವಾ ವೀರ್ಯಸ್ಖಲನದ ಮೂಲಕ ಉಂಟಾಗುವ ದೊಡ್ಡ ಅಶುದ್ಧಿಯಾಗಿದೆ. ದೊಡ್ಡ ಅಶುದ್ಧಿಯಿರುವ ವ್ಯಕ್ತಿಯು ನಮಾಝ್‌ನಲ್ಲಿ ಪ್ರವೇಶಿಸುವುದಾಗಲಿ ಮಸೀದಿಯಲ್ಲಿ ತಂಗುವುದಾಗಲಿ ಮಾಡಬಾರದು. ಆದರೆ ಮಸೀದಿಯ ಮೂಲಕ ಹಾದುಹೋಗಬೇಕಾಗಿ ಬಂದರೆ ಹಾದುಹೋಗಬಹುದು.

2 ಲಾಮಸ ಎಂಬ ಪದದ ಭಾಷಾರ್ಥವು ಪರಸ್ಪರ ಸ್ಪರ್ಶಿಸಿದರು ಎಂದಾಗಿದೆ. ಇದು ಲೈಂಗಿಕ ಸಂಪರ್ಕಕ್ಕಿರುವ ಒಂದು ಆಲಂಕಾರಿಕ ಪ್ರಯೋಗವಾಗಿದೆ ಎಂದು 2/236–237 ವಚನಗಳಿಂದ ಗ್ರಹಿಸಬಹುದು.

3 'ತಯಮ್ಮುಮ್' ಎಂದರೆ ವುದೂ ಮಾಡಲು ಅಥವಾ ಸ್ನಾನ ಮಾಡಲು ನೀರು ಸಿಗದ ಸಂದರ್ಭದಲ್ಲಿ ಮಾಡುವ ಶುದ್ಧೀಕರಣ ಪ್ರಕ್ರಿಯೆಯಾಗಿದೆ. ಶುದ್ಧವಾಗಿರುವ ನೆಲದ ಮೇಲೆ ಎರಡು ಅಂಗೈಗಳನ್ನು ಬಡಿದು ಅದರಿಂದ ಮುಖ ಮತ್ತು ಕೈಗಳನ್ನು ಸವರುವುದನ್ನು ತಯಮ್ಮುಮ್ ಎನ್ನಲಾಗುತ್ತದೆ.

**45.** ನಿಮ್ಮ ಶತ್ರುಗಳ ಬಗ್ಗೆ ಅಲ್ಲಾಹು ಚೆನ್ನಾಗಿ ಅರಿತಿರುವನು. ರಕ್ಷಕನಾಗಿ ಅಲ್ಲಾಹು ಸಾಕು. ಸಹಾಯ ಮಾಡುವವನಾಗಿಯೂ ಅಲ್ಲಾಹು ಸಾಕು.

وَٱللَّهُ أَعۡلَمُ بِأَعۡدَآئِكُمۡۚ وَكَفَىٰ بِٱللَّهِ وَلِيّٗا وَكَفَىٰ بِٱللَّهِ نَصِيرٗا ٤٥

**46.** ಯಹೂದರ ಪೈಕಿ ಕೆಲವರಿರುವರು. ಅವರು ವಚನಗಳನ್ನು ಅದರ ಸ್ಥಳದಿಂದ ಸ್ಥಾನಾಂತರಗೊಳಿಸುತ್ತಿರುವರು. ತಮ್ಮ ನಾಲಗೆಗಳನ್ನು ತಿರುಚುತ್ತಲೂ ಧರ್ಮವನ್ನು ಆಕ್ಷೇಪಿಸುತ್ತಲೂ ಅವರು 'ಸಮಿಅ್‌ನಾ ವಅಸೈನಾ' ಮತ್ತು 'ಇಸ್ಮಅ್ ಗೈರ ಮುಸ್ಮಅ್' ಮತ್ತು 'ರಾಇನಾ' ಎಂದೂ ಹೇಳುವರು.[1] 'ಸಮಿಅ್‌ನಾ ವಅತಅ್‌ನಾ' (ನಾವು ಆಲಿಸಿದೆವು ಮತ್ತು ಅನುಸರಿಸಿದೆವು) ಮತ್ತು 'ಇಸ್ಮಅ್' (ಆಲಿಸು) ಮತ್ತು 'ಉನ್ಜುರ್‌ನಾ' (ನಮ್ಮನ್ನು ಪರಿಗಣಿಸು) ಎಂದು ಅವರು ಹೇಳಿರುತ್ತಿದ್ದರೆ ಅದು ಅವರ ಪಾಲಿಗೆ ಅತ್ಯುತ್ತಮವೂ ವಕ್ರತೆಯಿಲ್ಲದ್ದೂ ಆಗಿರುತ್ತಿತ್ತು. ಆದರೆ ಅವರ ನಿಷೇಧದ ಕಾರಣದಿಂದಾಗಿ ಅಲ್ಲಾಹು ಅವರನ್ನು ಶಪಿಸಿರುವನು. ಆದ್ದರಿಂದ ಅಲ್ಪವೇ ವಿನಾ ಅವರು ವಿಶ್ವಾಸವಿಡಲಾರರು.

مِّنَ ٱلَّذِينَ هَادُواْ يُحَرِّفُونَ ٱلۡكَلِمَ عَن مَّوَاضِعِهِۦ وَيَقُولُونَ سَمِعۡنَا وَعَصَيۡنَا وَٱسۡمَعۡ غَيۡرَ مُسۡمَعٖ وَرَٰعِنَا لَيَّۢا بِأَلۡسِنَتِهِمۡ وَطَعۡنٗا فِي ٱلدِّينِۚ وَلَوۡ أَنَّهُمۡ قَالُواْ سَمِعۡنَا وَأَطَعۡنَا وَٱسۡمَعۡ وَٱنظُرۡنَا لَكَانَ خَيۡرٗا لَّهُمۡ وَأَقۡوَمَ وَلَٰكِن لَّعَنَهُمُ ٱللَّهُ بِكُفۡرِهِمۡ فَلَا يُؤۡمِنُونَ إِلَّا قَلِيلٗا ٤٦

**47.** ಓ ಗ್ರಂಥ ನೀಡಲಾದವರೇ! ನಾವು ಕೆಲವು ಮುಖಗಳನ್ನು ಅಳಿಸಿ ಹಾಕಿ ಅವುಗಳನ್ನು ಹಿಂಭಾಗಗಳತ್ತ ತಿರುಗಿಸುವುದಕ್ಕೆ ಮುಂಚಿತವಾಗಿ ಅಥವಾ ಸಬ್ಬತ್‌ನ ಜನರನ್ನು ನಾವು ಶಪಿಸಿದಂತೆ ನಿಮ್ಮನ್ನೂ ಶಪಿಸುವುದಕ್ಕೆ ಮುಂಚಿತವಾಗಿ ನಿಮ್ಮ ಬಳಿಯಿರುವ ಗ್ರಂಥವನ್ನು ದೃಢೀಕರಿಸುತ್ತಾ ನಾವು

يَٰٓأَيُّهَا ٱلَّذِينَ أُوتُواْ ٱلۡكِتَٰبَ ءَامِنُواْ بِمَا نَزَّلۡنَا مُصَدِّقٗا لِّمَا مَعَكُم مِّن قَبۡلِ أَن نَّطۡمِسَ وُجُوهٗا فَنَرُدَّهَا عَلَىٰٓ أَدۡبَارِهَآ أَوۡ نَلۡعَنَهُمۡ كَمَا لَعَنَّآ أَصۡحَٰبَ ٱلسَّبۡتِۚ وَكَانَ أَمۡرُ ٱللَّهِ مَفۡعُولًا ٤٧

1 ಪ್ರವಾದಿ(ﷺ)ರವರು ಏನಾದರೂ ಆದೇಶಿಸಿದರೆ ಸತ್ಯವಿಶ್ವಾಸಿಗಳು 'ಸಮಿಅ್‌ನಾ ವಅತಅ್‌ನಾ' (ನಾವು ಆಲಿಸಿದೆವು ಮತ್ತು ಅನುಸರಿಸಿದೆವು) ಎಂದು ಹೇಳುತ್ತಿದ್ದರು. ಆದರೆ ಯಹೂದರು ಇದರಲ್ಲಿ ತಂತ್ರಪೂರ್ವಕವಾಗಿ ಬದಲಾವಣೆಯನ್ನು ತಂದು 'ಸಮಿಅ್‌ನಾ ವಅಸೈನಾ' (ನಾವು ಆಲಿಸಿದೆವು ಮತ್ತು ಧಿಕ್ಕರಿಸಿದೆವು) ಎಂದು ಹೇಳುತ್ತಾ ಪ್ರವಾದಿ(ﷺ)ರವರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಗೇಲಿ ಮಾಡುತ್ತಿದ್ದರು. 'ಇಸ್ಮಅ್ ಗೈರ ಮುಸ್ಮಅ್' ಎಂಬುದು ದ್ವಂದ್ವಾರ್ಥವುಳ್ಳ ಒಂದು ಪ್ರಾರ್ಥನೆಯಾಗಿದೆ. ಆಲಿಸಿರಿ, ಆಲಿಸಬಾರದ್ದನ್ನು ತಾವು ಆಲಿಸಲು ಹೇತುವುಂಟಾಗದಿರಲಿ ಎಂದೂ, ಆಲಿಸಿರಿ, ತಮಗೆ ಆಲಿಸಲು ಸಾಧ್ಯವಾಗದಿರಲಿ ಎಂದೂ ಅದಕ್ಕೆ ಅರ್ಥವನ್ನು ಕಲ್ಪಿಸಲಾಗುತ್ತದೆ. 'ರಾಇನಾ' ಎಂಬ ಪದದ ಕುರಿತು 2:104ನೇ ಸೂಕ್ತಿಯ ಟಿಪ್ಪಣಿಯಲ್ಲಿ ವಿವರಿಸಲಾಗಿದೆ.

ಅವತೀರ್ಣಗೊಳಿಸಿರುವುದರಲ್ಲಿ ವಿಶ್ವಾಸವಿಡಿರಿ. ಅಲ್ಲಾಹುವಿನ ಆಜ್ಞೆಯು ಕಾರ್ಯರೂಪಕ್ಕೆ ತರಲಾಗುವಂತದ್ದೇ ಆಗಿದೆ.

إِنَّ ٱللَّهَ لَا يَغۡفِرُ أَن يُشۡرَكَ بِهِۦ وَيَغۡفِرُ مَا دُونَ ذَٰلِكَ لِمَن يَشَآءُۚ وَمَن يُشۡرِكۡ بِٱللَّهِ فَقَدِ ٱفۡتَرَىٰٓ إِثۡمًا عَظِيمًا ﴿٤٨﴾

**48.** ತನ್ನೊಂದಿಗೆ ಸಹಭಾಗಿತ್ವ ಮಾಡಲಾಗುವುದನ್ನು ಅಲ್ಲಾಹು ಎಂದಿಗೂ ಕ್ಷಮಿಸಲಾರನು. ಅದರ ಹೊರತಾಗಿರುವುದನ್ನು ತಾನಿಚ್ಛಿಸಿದವರಿಗೆ ಅವನು ಕ್ಷಮಿಸುವನು. ಯಾರು ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವನೋ ಖಂಡಿತವಾಗಿಯೂ ಅವನು ಘೋರವಾದ ಒಂದು ಪಾಪವನ್ನು ಹೆಣೆದನು.

أَلَمۡ تَرَ إِلَى ٱلَّذِينَ يُزَكُّونَ أَنفُسَهُمۚ بَلِ ٱللَّهُ يُزَكِّي مَن يَشَآءُ وَلَا يُظۡلَمُونَ فَتِيلًا ﴿٤٩﴾

**49.** ಸ್ವತಃ ತಮ್ಮನ್ನು ತಾವೇ ಪರಿಶುದ್ಧರೆಂದು ವಾದಿಸುವವರೆಡೆಗೆ ತಾವು ನೋಡಿಲ್ಲವೇ? ಆದರೆ ಅಲ್ಲಾಹು ತಾನಿಚ್ಛಿಸುವವರನ್ನು ಪರಿಶುದ್ಧಗೊಳಿಸುವನು. ಅವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

ٱنظُرۡ كَيۡفَ يَفۡتَرُونَ عَلَى ٱللَّهِ ٱلۡكَذِبَۖ وَكَفَىٰ بِهِۦٓ إِثۡمًا مُّبِينًا ﴿٥٠﴾

**50.** ಅವರು ಅಲ್ಲಾಹುವಿನ ಮೇಲೆ ಹೇಗೆ ಸುಳ್ಳು ಹೆಣೆಯುತ್ತಿರುವರೆಂಬುದನ್ನು ನೋಡಿರಿ. ಪ್ರತ್ಯಕ್ಷ ಪಾಪವಾಗಿ ಅದೇ ಸಾಕು.

أَلَمۡ تَرَ إِلَى ٱلَّذِينَ أُوتُواْ نَصِيبًا مِّنَ ٱلۡكِتَٰبِ يُؤۡمِنُونَ بِٱلۡجِبۡتِ وَٱلطَّٰغُوتِ وَيَقُولُونَ لِلَّذِينَ كَفَرُواْ هَٰٓؤُلَآءِ أَهۡدَىٰ مِنَ ٱلَّذِينَ ءَامَنُواْ سَبِيلًا ﴿٥١﴾

**51.** ಗ್ರಂಥದಿಂದ ಒಂದು ಪಾಲನ್ನು ನೀಡಲಾಗಿರುವವರೆಡೆಗೆ ತಾವು ನೋಡಿಲ್ಲವೇ? ಅವರು ಕ್ಷುದ್ರ ವಿದ್ಯೆಗಳಲ್ಲಿ ಮತ್ತು ಮಿಥ್ಯಾರಾಧ್ಯರಲ್ಲಿ ವಿಶ್ವಾಸವಿಡುತ್ತಿರುವರು. 'ಇವರು ವಿಶ್ವಾಸಿಗಳಿಗಿಂತಲೂ ಹೆಚ್ಚು ಸನ್ಮಾರ್ಗ ಪಡೆದವರು.' ಎಂದು ಸತ್ಯನಿಷೇಧಿಗಳ ಬಗ್ಗೆ ಅವರು ಹೇಳುವರು.

أُوْلَٰٓئِكَ ٱلَّذِينَ لَعَنَهُمُ ٱللَّهُۖ وَمَن يَلۡعَنِ ٱللَّهُ فَلَن تَجِدَ لَهُۥ نَصِيرًا ﴿٥٢﴾

**52.** ಅಲ್ಲಾಹು ಶಪಿಸಿರುವುದು ಅವರನ್ನೇ ಆಗಿದೆ. ಅಲ್ಲಾಹು ಯಾರನ್ನು ಶಪಿಸಿರುವನೋ ಅವನಿಗೆ ಯಾವ ಸಹಾಯಕನನ್ನೂ ತಾವು ಕಾಣಲಾರಿರಿ.

أَمۡ لَهُمۡ نَصِيبٌ مِّنَ ٱلۡمُلۡكِ فَإِذٗا لَّا يُؤۡتُونَ ٱلنَّاسَ نَقِيرًا ﴿٥٣﴾

**53.** ಆಧಿಪತ್ಯದಲ್ಲಿ ಅವರಿಗೇನಾದರೂ ಪಾಲಿದೆಯೇ? ಹಾಗಿರುತ್ತಿದ್ದರೆ ಅವರು ಜನರಿಗೆ ಒಂದು ಅಣುವಿನಷ್ಟೂ ನೀಡುತ್ತಿರಲಿಲ್ಲ.

54. ಅಲ್ಲಾಹು ತನ್ನ ಔದಾರ್ಯದಿಂದ ಇತರ ಜನರಿಗೆ ನೀಡಿರುವುದರಲ್ಲಿ ಅವರು ಅಸೂಯೆ ಪಡುತ್ತಿರುವರೇ? ಹಾಗಿದ್ದರೆ ಇಬ್ರಾಹೀಮ್ ಕುಟುಂಬಕ್ಕೆ ನಾವು ಗ್ರಂಥವನ್ನೂ ಜ್ಞಾನವನ್ನೂ ನೀಡಿರುವೆವು. ಅವರಿಗೆ ನಾವು ಮಹಾ ಆಧಿಪತ್ಯವನ್ನೂ ನೀಡಿರುವೆವು.

أَمۡ يَحۡسُدُونَ ٱلنَّاسَ عَلَىٰ مَآ ءَاتَىٰهُمُ ٱللَّهُ
مِن فَضۡلِهِۦۖ فَقَدۡ ءَاتَيۡنَآ ءَالَ إِبۡرَٰهِيمَ
ٱلۡكِتَٰبَ وَٱلۡحِكۡمَةَ وَءَاتَيۡنَٰهُم مُّلۡكًا
عَظِيمٗا ٥٤

55. ಅದರಲ್ಲಿ ವಿಶ್ವಾಸವಿರಿಸಿದ ಒಂದು ಪಂಗಡವು ಅವರಲ್ಲಿದೆ. ಅದರಿಂದ ವಿಮುಖರಾಗಿ ಹೋದ ಪಂಗಡವೂ ಅವರಲ್ಲಿದೆ. (ಅವರಿಗೆ) ಧಗಧಗಿಸುವ ನರಕಾಗ್ನಿಯೇ ಸಾಕು.

فَمِنۡهُم مَّنۡ ءَامَنَ بِهِۦ وَمِنۡهُم مَّن صَدَّ
عَنۡهُۚ وَكَفَىٰ بِجَهَنَّمَ سَعِيرًا ٥٥

56. ಖಂಡಿತವಾಗಿಯೂ ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಯಾರೋ ಅವರನ್ನು ನಾವು ನರಕಾಗ್ನಿಯಲ್ಲಿ ಹಾಕಿ ಉರಿಸುವೆವು. ಅವರ ಚರ್ಮಗಳು ಸುಟ್ಟು ಕರಟುವಾಗಲೆಲ್ಲ ಅವರು ಶಿಕ್ಷೆಯನ್ನು ಸವಿಯುತ್ತಲೇ ಇರುವ ಸಲುವಾಗಿ ನಾವು ಅವರಿಗೆ ಬೇರೆ ಚರ್ಮಗಳನ್ನು ಬದಲಾಯಿಸಿಕೊಡುವೆವು. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

إِنَّ ٱلَّذِينَ كَفَرُواْ بِـَٔايَٰتِنَا سَوۡفَ نُصۡلِيهِمۡ
نَارٗا كُلَّمَا نَضِجَتۡ جُلُودُهُم بَدَّلۡنَٰهُمۡ
جُلُودًا غَيۡرَهَا لِيَذُوقُواْ ٱلۡعَذَابَۗ إِنَّ ٱللَّهَ
كَانَ عَزِيزًا حَكِيمٗا ٥٦

57. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರನ್ನು ನಾವು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವೆವು. ಅವರದರಲ್ಲಿ ಎಂದೆಂದಿಗೂ ಶಾಶ್ವತವಾಗಿರುವರು. ಅವರಿಗೆ ಅಲ್ಲಿ ಪರಿಶುದ್ಧರಾದ ಸಂಗಾತಿಗಳಿರುವರು. ನಾವು ಅವರನ್ನು ಶಾಶ್ವತವಾದ ನೆರಳಿನಲ್ಲಿ ಪ್ರವೇಶಗೊಳಿಸುವೆವು.

وَٱلَّذِينَ ءَامَنُواْ وَعَمِلُواْ ٱلصَّٰلِحَٰتِ
سَنُدۡخِلُهُمۡ جَنَّٰتٖ تَجۡرِي مِن تَحۡتِهَا
ٱلۡأَنۡهَٰرُ خَٰلِدِينَ فِيهَآ أَبَدٗاۖ لَّهُمۡ فِيهَآ
أَزۡوَٰجٞ مُّطَهَّرَةٞۖ وَنُدۡخِلُهُمۡ ظِلّٗا ظَلِيلًا ٥٧

58. ನಂಬಿಕೆಯೊಂದಿಗೆ ವಹಿಸಿಕೊಡಲಾದ ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ಕೊಡಬೇಕೆಂದೂ, ಜನರ ಮಧ್ಯೆ ತೀರ್ಪು ನೀಡುವುದಾದರೆ ನ್ಯಾಯಪೂರ್ವಕವಾಗಿ ತೀರ್ಪು ನೀಡಬೇಕೆಂದೂ ಅಲ್ಲಾಹು ನಿಮ್ಮೊಂದಿಗೆ ಆಜ್ಞಾಪಿಸುತ್ತಿರುವನು.

۞إِنَّ ٱللَّهَ يَأۡمُرُكُمۡ أَن تُؤَدُّواْ ٱلۡأَمَٰنَٰتِ
إِلَىٰٓ أَهۡلِهَا وَإِذَا حَكَمۡتُم بَيۡنَ ٱلنَّاسِ أَن
تَحۡكُمُواْ بِٱلۡعَدۡلِۚ إِنَّ ٱللَّهَ نِعِمَّا يَعِظُكُم
بِهِۦٓۗ إِنَّ ٱللَّهَ كَانَ سَمِيعَۢا بَصِيرٗا ٥٨

ಖಂಡಿತವಾಗಿಯೂ ಅಲ್ಲಾಹು ನಿಮಗೆ ನೀಡುವ ಉಪದೇಶವು ಅತ್ಯುತ್ತಮವಾದುದಾಗಿದೆ! ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನೂ ಆಲಿಸುವವನೂ ಕಾಣುವವನೂ ಆಗಿರುವನು.

59. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಅನುಸರಿಸಿರಿ. (ಅವನ) ಸಂದೇಶವಾಹಕರನ್ನೂ ನಿಮ್ಮಿಂದಲೇ ಇರುವ ಕಾರ್ಯನಿರ್ವಾಹಕರನ್ನೂ ಅನುಸರಿಸಿರಿ. ನೀವು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರಾಗಿದ್ದರೆ ನಿಮ್ಮ ಮಧ್ಯೆ ಯಾವುದೇ ವಿಷಯದಲ್ಲಾದರೂ ಭಿನ್ನಾಭಿಪ್ರಾಯ ತಲೆದೋರಿದರೆ ನೀವದನ್ನು ಅಲ್ಲಾಹುವಿನೆಡೆಗೂ ಸಂದೇಶವಾಹಕರೆಡೆಗೂ ಮರಳಿಸಿರಿ. ಅದು ಅತ್ಯುತ್ತಮವಾದುದೂ ಅತಿಸೂಕ್ತ ಪರ್ಯಾವಸಾನವುಳ್ಳದ್ದೂ ಆಗಿದೆ.

يَـٰٓأَيُّهَا ٱلَّذِينَ ءَامَنُوٓا۟ أَطِيعُوا۟ ٱللَّهَ
وَأَطِيعُوا۟ ٱلرَّسُولَ وَأُو۟لِى ٱلْأَمْرِ مِنكُمْ ۖ
فَإِن تَنَـٰزَعْتُمْ فِى شَىْءٍ فَرُدُّوهُ إِلَى ٱللَّهِ
وَٱلرَّسُولِ إِن كُنتُمْ تُؤْمِنُونَ بِٱللَّهِ وَٱلْيَوْمِ
ٱلْـَٔاخِرِ ۚ ذَٰلِكَ خَيْرٌ وَأَحْسَنُ تَأْوِيلًا ٥٩

60. ತಮಗೆ ಅವತೀರ್ಣಗೊಂಡಿರುವುದರಲ್ಲಿ ಮತ್ತು ತಮಗಿಂತ ಮುಂಚೆ ಅವತೀರ್ಣಗೊಂಡಿರುವುದರಲ್ಲಿ ವಿಶ್ವಾಸವಿಟ್ಟಿರುವೆವು ಎಂದು ವಾದಿಸುವವರಡೆಗೆ ತಾವು ನೋಡಿಲ್ಲವೇ? ತೀರ್ಪು ಅರಸುತ್ತಾ ಮಿಥ್ಯಾರಾಧ್ಯರ ಬಳಿಗೆ ಹೋಗುವುದನ್ನೇ ಅವರು ಇಚ್ಛಿಸುತ್ತಿರುವರು. ವಾಸ್ತವಿಕವಾಗಿ ಮಿಥ್ಯಾರಾಧ್ಯರನ್ನು ನಿಷೇಧಿಸಬೇಕೆಂದು ಅವರೊಂದಿಗೆ ಆಜ್ಞಾಪಿಸಲಾಗಿತ್ತು. ಸೈತಾನನು ಅವರನ್ನು ವಿದೂರವಾದ ಪಥಭ್ರಷ್ಟತೆಯಲ್ಲಾಗಿಸಲು ಇಚ್ಛಿಸುತ್ತಿರುವನು.

أَلَمْ تَرَ إِلَى ٱلَّذِينَ يَزْعُمُونَ أَنَّهُمْ ءَامَنُوا۟
بِمَآ أُنزِلَ إِلَيْكَ وَمَآ أُنزِلَ مِن قَبْلِكَ
يُرِيدُونَ أَن يَتَحَاكَمُوٓا۟ إِلَى ٱلطَّـٰغُوتِ
وَقَدْ أُمِرُوٓا۟ أَن يَكْفُرُوا۟ بِهِۦ ۖ وَيُرِيدُ
ٱلشَّيْطَـٰنُ أَن يُضِلَّهُمْ ضَلَـٰلًۢا بَعِيدًا ٦٠

61. 'ಅಲ್ಲಾಹು ಅವತೀರ್ಣಗೊಳಿಸಿರುವುದರೆಡೆಗೆ ಮತ್ತು (ಅವನ) ಸಂದೇಶವಾಹಕರೆಡೆಗೆ ಬನ್ನಿರಿ' ಎಂದು ಅವರೊಂದಿಗೆ ಹೇಳಲಾದರೆ ಆ ಕಪಟವಿಶ್ವಾಸಿಗಳು ತಮ್ಮನ್ನು ತೊರೆದು ವಿಮುಖರಾಗಿ ಹೋಗುವುದನ್ನು ತಾವು ನೋಡುವಿರಿ.

وَإِذَا قِيلَ لَهُمْ تَعَالَوْا۟ إِلَىٰ مَآ أَنزَلَ ٱللَّهُ
وَإِلَى ٱلرَّسُولِ رَأَيْتَ ٱلْمُنَـٰفِقِينَ يَصُدُّونَ
عَنكَ صُدُودًا ٦١

62. ಅವರ ಸ್ವಹಸ್ತಗಳು ಮುಂಗಡವಾಗಿ ಮಾಡಿಟ್ಟಿರುವುದರ ಫಲವಾಗಿ ಅವರಿಗೇನಾದರೂ ಆಪತ್ತು ಬಾಧಿಸಿದರೆ, ತರುವಾಯ ಅವರು ತಮ್ಮ ಬಳಿಗೆ ಬಂದು ಅಲ್ಲಾಹುವಿನ ಮೇಲೆ ಆಣೆ ಹಾಕುತ್ತಾ 'ನಾವು ಒಳಿತು ಮತ್ತು ಸಂಧಾನವನ್ನಲ್ಲದೆ ಬೇರೇನನ್ನೂ ಉದ್ದೇಶಿಸಿರಲಿಲ್ಲ' ಎಂದು ಹೇಳುವಾಗ ಅವರ ಸ್ಥಿತಿ ಹೇಗಿರಬಹುದು?

فَكَيْفَ إِذَآ أَصَٰبَتْهُم مُّصِيبَةٌۢ بِمَا قَدَّمَتْ
أَيْدِيهِمْ ثُمَّ جَآءُوكَ يَحْلِفُونَ بِٱللَّهِ إِنْ
أَرَدْنَآ إِلَّآ إِحْسَٰنًا وَتَوْفِيقًا ﴿٦٢﴾

63. ಅಂತಹವರ ಹೃದಯಗಳಲ್ಲಿ ಏನಿದೆಯೆಂದು ಅಲ್ಲಾಹು ಅರಿತಿರುವನು. ಆದ್ದರಿಂದ (ಓ ಪ್ರವಾದಿಯವರೇ!) ಅವರಿಂದ ವಿಮುಖರಾಗಿರಿ. ಅವರಿಗೆ ಉಪದೇಶ ನೀಡಿರಿ ಮತ್ತು ಅವರ ಮನಸ್ಸಿಗೆ ನಾಟುವಂತಹ ಮಾತನ್ನು ಹೇಳಿರಿ.

أُو۟لَٰٓئِكَ ٱلَّذِينَ يَعْلَمُ ٱللَّهُ مَا فِى قُلُوبِهِمْ
فَأَعْرِضْ عَنْهُمْ وَعِظْهُمْ وَقُل لَّهُمْ فِىٓ
أَنفُسِهِمْ قَوْلًۢا بَلِيغًا ﴿٦٣﴾

64. ಅಲ್ಲಾಹುವಿನ ಅನುಮತಿಯೊಂದಿಗೆ ಅನುಸರಿಸಲ್ಪಡುವುದಕ್ಕಾಗಿಯೇ ವಿನಾ ಯಾವುದೇ ಸಂದೇಶವಾಹಕರನ್ನೂ ನಾವು ಕಳುಹಿಸಿಲ್ಲ. ಅವರು ಸ್ವತಃ ಅವರೊಂದಿಗೇ ಅಕ್ರಮವೆಸಗಿದಾಗ ತಮ್ಮ ಬಳಿಗೆ ಬಂದು, ಅವರು ಅಲ್ಲಾಹುವಿನೊಂದಿಗೆ ಪಾಪಮುಕ್ತಿ ಬೇಡಿದರೆ ಮತ್ತು ಅವರಿಗೋಸ್ಕರ ಸಂದೇಶವಾಹಕರೂ ಪಾಪಮುಕ್ತಿ ಬೇಡಿದರೆ ಅವರು ಅಲ್ಲಾಹುವನ್ನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನಾಗಿಯೂ ಅಪಾರ ಕರುಣೆಯುಳ್ಳವನಾಗಿಯೂ ಕಾಣುತ್ತಿದ್ದರು.

وَمَآ أَرْسَلْنَا مِن رَّسُولٍ إِلَّا لِيُطَاعَ بِإِذْنِ
ٱللَّهِ ۚ وَلَوْ أَنَّهُمْ إِذ ظَّلَمُوٓا۟ أَنفُسَهُمْ جَآءُوكَ
فَٱسْتَغْفَرُوا۟ ٱللَّهَ وَٱسْتَغْفَرَ لَهُمُ ٱلرَّسُولُ
لَوَجَدُوا۟ ٱللَّهَ تَوَّابًا رَّحِيمًا ﴿٦٤﴾

65. ಇಲ್ಲ, ತಮ್ಮ ರಬ್‌ನ ಮೇಲಾಣೆ! ಅವರು ತಮ್ಮ ಮಧ್ಯೆ ಭಿನ್ನಾಭಿಪ್ರಾಯ ತಲೆದೋರುವ ವಿಷಯದಲ್ಲಿ ತಮ್ಮನ್ನು ತೀರ್ಪುಗಾರನಾಗಿಸಿ, ತಾವು ನೀಡಿದ ತೀರ್ಪಿನ ಕುರಿತು ತರುವಾಯ ಅವರ ಮನಸ್ಸುಗಳಲ್ಲಿ ಯಾವುದೇ ಕ್ಲೇಶವೂ ಉಂಟಾಗದೆ ಅದನ್ನು ಸಂಪೂರ್ಣವಾಗಿ ಸ್ವೀಕರಿಸಿ ಅನುಸರಿಸುವವರೆಗೂ ಅವರು ವಿಶ್ವಾಸಿಗಳಾಗಲಾರರು.

فَلَا وَرَبِّكَ لَا يُؤْمِنُونَ حَتَّىٰ يُحَكِّمُوكَ
فِيمَا شَجَرَ بَيْنَهُمْ ثُمَّ لَا يَجِدُوا۟ فِىٓ
أَنفُسِهِمْ حَرَجًا مِّمَّا قَضَيْتَ وَيُسَلِّمُوا۟
تَسْلِيمًا ﴿٦٥﴾

66. ‘ನೀವು ನಿಮ್ಮ ಜೀವವನ್ನು ಬಲಿಯರ್ಪಿಸಿರಿ ಅಥವಾ ನಿಮ್ಮ ಮನೆಗಳನ್ನು ಬಿಟ್ಟು ಹೊರಹೋಗಿರಿ’ ಎಂದು ನಾವು ಅವರೊಂದಿಗೆ ಆದೇಶಿಸಿರುತ್ತಿದ್ದರೆ ಅವರ ಪೈಕಿ ಕೆಲವರ ವಿನಾ ಯಾರೂ ಅದನ್ನು ಮಾಡುತ್ತಿರಲಿಲ್ಲ. ಅವರೊಂದಿಗೆ ಉಪದೇಶಿಸಲಾಗುವ ಪ್ರಕಾರ ಅವರು ಮಾಡಿರುತ್ತಿದ್ದರೆ ಅದು ಅವರ ಪಾಲಿಗೆ ಅತ್ಯುತ್ತಮವೂ, ಅವರನ್ನು (ಸನ್ಮಾರ್ಗದಲ್ಲಿ) ಪ್ರಬಲವಾಗಿ ದೃಢಗೊಳಿಸುವಂತದ್ದೂ ಆಗಿರುತ್ತಿತ್ತು.

وَلَوۡ أَنَّا كَتَبۡنَا عَلَيۡهِمۡ أَنِ ٱقۡتُلُوٓاْ أَنفُسَكُمۡ أَوِ ٱخۡرُجُواْ مِن دِيَٰرِكُم مَّا فَعَلُوهُ إِلَّا قَلِيلٞ مِّنۡهُمۡۖ وَلَوۡ أَنَّهُمۡ فَعَلُواْ مَا يُوعَظُونَ بِهِۦ لَكَانَ خَيۡرٗا لَّهُمۡ وَأَشَدَّ تَثۡبِيتٗا ٦٦

67. ಹಾಗಿರುತ್ತಿದ್ದರೆ ನಾವು ಅವರಿಗೆ ನಮ್ಮ ವತಿಯಿಂದ ಮಹಾ ಪ್ರತಿಫಲವನ್ನು ದಯಪಾಲಿಸುತ್ತಿದ್ದೆವು.

وَإِذٗا لَّأٓتَيۡنَٰهُم مِّن لَّدُنَّآ أَجۡرًا عَظِيمٗا ٦٧

68. ನಾವವರನ್ನು ನೇರವಾದ ಮಾರ್ಗದಲ್ಲಿ ಮುನ್ನಡೆಸುತ್ತಿದ್ದೆವು.

وَلَهَدَيۡنَٰهُمۡ صِرَٰطٗا مُّسۡتَقِيمٗا ٦٨

69. ಯಾರು ಅಲ್ಲಾಹುವನ್ನು ಮತ್ತು ಸಂದೇಶವಾಹಕರನ್ನು ಅನುಸರಿಸುವನೋ ಅಂತಹವರು ಅಲ್ಲಾಹು ಅನುಗ್ರಹಿಸಿದ ಪ್ರವಾದಿಗಳು, ಸತ್ಯಸಂಧರು, ಹುತಾತ್ಮರು, ಸಜ್ಜನರು ಮುಂತಾದವರೊಂದಿಗೆ ಸೇರುವರು. ಅವರು ಎಷ್ಟು ಉತ್ತಮ ಸಂಗಾತಿಗಳಾಗಿರುವರು!

وَمَن يُطِعِ ٱللَّهَ وَٱلرَّسُولَ فَأُوْلَٰٓئِكَ مَعَ ٱلَّذِينَ أَنۡعَمَ ٱللَّهُ عَلَيۡهِم مِّنَ ٱلنَّبِيِّـۧنَ وَٱلصِّدِّيقِينَ وَٱلشُّهَدَآءِ وَٱلصَّٰلِحِينَۚ وَحَسُنَ أُوْلَٰٓئِكَ رَفِيقٗا ٦٩

70. ಅದು ಅಲ್ಲಾಹುವಿನ ವತಿಯ ಅನುಗ್ರಹವಾಗಿದೆ. ಎಲ್ಲವನ್ನೂ ಅರಿಯುವವನಾಗಿ ಅಲ್ಲಾಹು ಸಾಕು.

ذَٰلِكَ ٱلۡفَضۡلُ مِنَ ٱللَّهِۚ وَكَفَىٰ بِٱللَّهِ عَلِيمٗا ٧٠

71. ಓ ಸತ್ಯವಿಶ್ವಾಸಿಗಳೇ! ನೀವು ಎಚ್ಚರವಹಿಸಿರಿ. ಸಣ್ಣ ಗುಂಪುಗಳಾಗಿ ಅಥವಾ ಒಟ್ಟಾಗಿ ನೀವು (ಯುದ್ಧಕ್ಕೆ) ಹೊರಡಿರಿ.

يَٰٓأَيُّهَا ٱلَّذِينَ ءَامَنُواْ خُذُواْ حِذۡرَكُمۡ فَٱنفِرُواْ ثُبَاتٍ أَوِ ٱنفِرُواْ جَمِيعٗا ٧١

72. ಖಂಡಿತವಾಗಿಯೂ ನಿಮ್ಮ ಪೈಕಿ ಹೋಗಲು ಮನಸ್ಸಿಲ್ಲದೆ ಹಿಂದೆ ಉಳಿಯುವವನಿರುವನು. ನಿಮಗೇನಾದರೂ ವಿಪತ್ತು ಬಾಧಿಸಿದರೆ ‘ನಾನು ಅವರೊಂದಿಗೆ (ಯುದ್ಧಕ್ಕೆ) ಹಾಜರಾಗದಿರುವ ಕಾರಣದಿಂದ ಅಲ್ಲಾಹು ನನ್ನನ್ನು ಅನುಗ್ರಹಿಸಿರುವನು’ ಎಂದು ಅವನು ಹೇಳುವನು.

وَإِنَّ مِنكُمۡ لَمَن لَّيُبَطِّئَنَّ فَإِنۡ أَصَٰبَتۡكُم مُّصِيبَةٞ قَالَ قَدۡ أَنۡعَمَ ٱللَّهُ عَلَيَّ إِذۡ لَمۡ أَكُن مَّعَهُمۡ شَهِيدٗا ٧٢

73. ನಿಮಗೆ ಅಲ್ಲಾಹುವಿನ ವತಿಯಿಂದ ಏನಾದರೂ ಅನುಗ್ರಹವು ಲಭಿಸುವುದಾದರೆ ನಿಮ್ಮ ಮತ್ತು ಅವನ ನಡುವೆ ಪರಸ್ಪರ ಯಾವುದೇ ಗೆಳೆತನವೂ ಇರಲಿಲ್ಲವೆಂಬ ಮಟ್ಟಿನಲ್ಲಿ '(ಅಯ್ಯೋ) ನಾನು ಅವರ ಜೊತೆಗಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಹಾಗಿದ್ದರೆ ನನಗೆ ಮಹಾ ವಿಜಯವನ್ನು ಗಳಿಸಬಹುದಾಗಿತ್ತು!' ಎಂದು ಅವನು ಹೇಳುವನು.

وَلَئِنْ أَصَٰبَكُمْ فَضْلٌ مِّنَ ٱللَّهِ لَيَقُولَنَّ كَأَن لَّمْ تَكُنۢ بَيْنَكُمْ وَبَيْنَهُۥ مَوَدَّةٌ يَٰلَيْتَنِى كُنتُ مَعَهُمْ فَأَفُوزَ فَوْزًا عَظِيمًا ﴿٧٣﴾

74. ಪರಲೋಕ ಜೀವನಕ್ಕಾಗಿ ಇಹಲೋಕ ಜೀವನವನ್ನು ಮಾರಲು ಸಿದ್ಧರಾಗಿರುವವರು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಲಿ. ಯಾರಾದರೂ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿ ವಧಿಸಲ್ಪಡುವುದಾದರೆ ಅಥವಾ ಜಯಗಳಿಸುವುದಾದರೆ ನಾವು ಅವನಿಗೆ ಮಹಾ ಪ್ರತಿಫಲವನ್ನು ನೀಡುವೆವು.

۞ فَلْيُقَٰتِلْ فِى سَبِيلِ ٱللَّهِ ٱلَّذِينَ يَشْرُونَ ٱلْحَيَوٰةَ ٱلدُّنْيَا بِٱلْءَاخِرَةِ ۚ وَمَن يُقَٰتِلْ فِى سَبِيلِ ٱللَّهِ فَيُقْتَلْ أَوْ يَغْلِبْ فَسَوْفَ نُؤْتِيهِ أَجْرًا عَظِيمًا ﴿٧٤﴾

75. 'ಓ ನಮ್ಮ ರಬ್! ಅಕ್ರಮಿಗಳಾದ ಜನರು ವಾಸಿಸುವ ಈ ನಾಡಿನಿಂದ ನಮ್ಮನ್ನು ವಿಮೋಚನೆಗೊಳಿಸು ಮತ್ತು ನಿನ್ನ ವತಿಯ ಓರ್ವ ರಕ್ಷಕನನ್ನೂ, ನಿನ್ನ ವತಿಯ ಓರ್ವ ಸಹಾಯಕನನ್ನೂ ನಮಗೆ ನಿಶ್ಚಯಿಸಿಕೊಡು' ಎಂದು ಪ್ರಾರ್ಥಿಸುತ್ತಿರುವ ಪೀಡನೆಗೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡದಿರಲು ನಿಮಗೇನಾಗಿದೆ?

وَمَا لَكُمْ لَا تُقَٰتِلُونَ فِى سَبِيلِ ٱللَّهِ وَٱلْمُسْتَضْعَفِينَ مِنَ ٱلرِّجَالِ وَٱلنِّسَآءِ وَٱلْوِلْدَٰنِ ٱلَّذِينَ يَقُولُونَ رَبَّنَآ أَخْرِجْنَا مِنْ هَٰذِهِ ٱلْقَرْيَةِ ٱلظَّالِمِ أَهْلُهَا وَٱجْعَل لَّنَا مِن لَّدُنكَ وَلِيًّا وَٱجْعَل لَّنَا مِن لَّدُنكَ نَصِيرًا ﴿٧٥﴾

76. ವಿಶ್ವಾಸಿಗಳು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುತ್ತಿರುವರು. ಸತ್ಯನಿಷೇಧಿಗಳಾದರೋ ಮಿಥ್ಯಾರಾಧ್ಯರ ಮಾರ್ಗದಲ್ಲಿ ಯುದ್ಧ ಮಾಡುತ್ತಿರುವರು. ಆದ್ದರಿಂದ ನೀವು ಸೈತಾನನ ಮಿತ್ರರ ವಿರುದ್ಧ ಯುದ್ಧ ಮಾಡಿರಿ. ಖಂಡಿತವಾಗಿಯೂ ಸೈತಾನನ ಕುತಂತ್ರವು ಬಲಹೀನವಾಗಿದೆ.

ٱلَّذِينَ ءَامَنُوا۟ يُقَٰتِلُونَ فِى سَبِيلِ ٱللَّهِ ۖ وَٱلَّذِينَ كَفَرُوا۟ يُقَٰتِلُونَ فِى سَبِيلِ ٱلطَّٰغُوتِ فَقَٰتِلُوٓا۟ أَوْلِيَآءَ ٱلشَّيْطَٰنِ ۖ إِنَّ كَيْدَ ٱلشَّيْطَٰنِ كَانَ ضَعِيفًا ﴿٧٦﴾

77. '(ಯುದ್ಧಕ್ಕೆ ಹೋಗದೆ) ನಿಮ್ಮ ಕೈಗಳನ್ನು ತಡೆಹಿಡಿಯಿರಿ, ನಮಾಝ್ ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ' ಎಂದು

أَلَمْ تَرَ إِلَى ٱلَّذِينَ قِيلَ لَهُمْ كُفُّوٓا۟ أَيْدِيَكُمْ وَأَقِيمُوا۟ ٱلصَّلَوٰةَ وَءَاتُوا۟ ٱلزَّكَوٰةَ فَلَمَّا كُتِبَ

ಆದೇಶಿಸಲಾದವರೆಡೆಗೆ ತಾವು ನೋಡಿಲ್ಲವೇ? ಅವರ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಲಾದಾಗ ಅವರ ಪೈಕಿ ಒಂದು ಪಂಗಡದವರು ಅಲ್ಲಾಹುವನ್ನು ಭಯಪಡುವಂತೆ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಜನರನ್ನು ಭಯಪಡುತ್ತಿರುವರು! 'ಓ ನಮ್ಮ ರಬ್! ನಮ್ಮ ಮೇಲೆ ಯುದ್ಧವನ್ನು ಕಡ್ಡಾಯಗೊಳಿಸಿದ್ದೇಕೆ? ಸಮೀಪದ ಒಂದು ಅವಧಿಯವರೆಗಾದರೂ ನಮಗೆ ಕಾಲಾವಕಾಶವನ್ನು ಮುಂದೂಡಬಹುದಾಗಿತ್ತಲ್ಲವೇ?' ಎಂದು ಅವರು ಹೇಳುವರು. ತಾವು ಹೇಳಿರಿ: 'ಇಹಲೋಕದ ಸುಖಾನುಭೂತಿಯು ಅತ್ಯಂತ ತುಚ್ಛವಾಗಿದೆ. ಭಯಭಕ್ತಿಯುಳ್ಳವರಿಗೆ ಅತ್ಯುತ್ತಮವಾದುದು ಪರಲೋಕವಾಗಿದೆ. ನಿಮ್ಮೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.'

عَلَيۡهِمُ ٱلۡقِتَالُ إِذَا فَرِيقٞ مِّنۡهُمۡ يَخۡشَوۡنَ ٱلنَّاسَ كَخَشۡيَةِ ٱللَّهِ أَوۡ أَشَدَّ خَشۡيَةٗۚ وَقَالُواْ رَبَّنَا لِمَ كَتَبۡتَ عَلَيۡنَا ٱلۡقِتَالَ لَوۡلَآ أَخَّرۡتَنَآ إِلَىٰٓ أَجَلٖ قَرِيبٖۗ قُلۡ مَتَٰعُ ٱلدُّنۡيَا قَلِيلٞ وَٱلۡأٓخِرَةُ خَيۡرٞ لِّمَنِ ٱتَّقَىٰ وَلَا تُظۡلَمُونَ فَتِيلًا ٧٧

78. ನೀವೆಲ್ಲೇ ಇದ್ದರೂ ಮರಣವು ನಿಮ್ಮನ್ನು ವಶಪಡಿಸುವುದು. ನೀವು ಭದ್ರವಾಗಿ ನಿರ್ಮಿಸಲಾಗಿರುವ ಕೋಟೆಯೊಳಗಿದ್ದರೂ ಸರಿ. (ಓ ಪ್ರವಾದಿಯವರೇ!) ಅವರಿಗೇನಾದರೂ ಒಳಿತುಂಟಾದರೆ 'ಇದು ಅಲ್ಲಾಹುವಿನಿಂದ ದೊರೆತಿರುವುದಾಗಿದೆ.' ಎಂದು ಹೇಳುವರು. ಅವರಿಗೇನಾದರೂ ಹಾನಿಯುಂಟಾದರೆ 'ಇದು ತಮ್ಮಿಂದಾಗಿದೆ.' ಎನ್ನುವರು. ತಾವು ಹೇಳಿರಿ: 'ಎಲ್ಲವೂ ಅಲ್ಲಾಹುವಿನ ವತಿಯಿಂದಾಗಿದೆ.' ಹಾಗಿರುವಾಗ ಯಾವ ವಿಷಯವನ್ನೂ ಗ್ರಹಿಸಲು ಸಿದ್ಧರಾಗದ ಈ ಜನರಿಗೇನಾಗಿದೆ?

أَيۡنَمَا تَكُونُواْ يُدۡرِككُّمُ ٱلۡمَوۡتُ وَلَوۡ كُنتُمۡ فِي بُرُوجٖ مُّشَيَّدَةٖۗ وَإِن تُصِبۡهُمۡ حَسَنَةٞ يَقُولُواْ هَٰذِهِۦ مِنۡ عِندِ ٱللَّهِۖ وَإِن تُصِبۡهُمۡ سَيِّئَةٞ يَقُولُواْ هَٰذِهِۦ مِنۡ عِندِكَۚ قُلۡ كُلّٞ مِّنۡ عِندِ ٱللَّهِۖ فَمَالِ هَٰٓؤُلَآءِ ٱلۡقَوۡمِ لَا يَكَادُونَ يَفۡقَهُونَ حَدِيثٗا ٧٨

79. ಒಳಿತಾಗಿ ತಮಗೆ ಏನು ಲಭಿಸಿದರೂ ಅದು ಅಲ್ಲಾಹುವಿನ ವತಿಯಿಂದಾಗಿದೆ. ತಮಗೆ ಬಾಧಿಸುವ ಯಾವುದೇ ಹಾನಿಯು ಅದು ತಮ್ಮಿಂದಲೇ ಆಗಿದೆ. (ಓ ಪ್ರವಾದಿಯವರೇ!) ತಮ್ಮನ್ನು ನಾವು ಮನುಷ್ಯರೆಡೆಗಿರುವ ಓರ್ವ

مَّآ أَصَابَكَ مِنۡ حَسَنَةٖ فَمِنَ ٱللَّهِۖ وَمَآ أَصَابَكَ مِن سَيِّئَةٖ فَمِن نَّفۡسِكَۚ وَأَرۡسَلۡنَٰكَ لِلنَّاسِ رَسُولٗاۚ وَكَفَىٰ بِٱللَّهِ شَهِيدٗا ٧٩

ಸಂದೇಶವಾಹಕನನ್ನಾಗಿ ಕಳುಹಿಸಿರುವೆವು. (ಅದಕ್ಕೆ) ಸಾಕ್ಷಿಯಾಗಿ ಅಲ್ಲಾಹು ಸಾಕು.

80. (ಅಲ್ಲಾಹುವಿನ) ಸಂದೇಶವಾಹಕರನ್ನು ಯಾರು ಅನುಸರಿಸುವನೋ ಖಂಡಿತವಾಗಿಯೂ ಅವನು ಅಲ್ಲಾಹುವನ್ನು ಅನುಸರಿಸಿರುವನು. ಯಾರಾದರೂ ವಿಮುಖರಾಗುವುದಾದರೆ ತಮ್ಮನ್ನು ನಾವು ಅವರ ಮೇಲೆ ಕಾವಲುಗಾರನಾಗಿ ನಿಯೋಗಿಸಿಲ್ಲ.

مَّن يُطِعِ ٱلرَّسُولَ فَقَدۡ أَطَاعَ ٱللَّهَۖ وَمَن تَوَلَّىٰ فَمَآ أَرۡسَلۡنَٰكَ عَلَيۡهِمۡ حَفِيظٗا ٨٠

81. ಅವರು ಹೇಳುವರು: 'ನಾವು ಅನುಸರಿಸಿರುವೆವು.' ತರುವಾಯ (ಓ ಪ್ರವಾದಿ) ಅವರು ತಮ್ಮ ಬಳಿಯಿಂದ ಹೊರಟು ಹೋದರೆ ಅವರಲ್ಲಿ ಒಂದು ಗುಂಪು ತಾವು ಹೇಳುತ್ತಿರುವುದಕ್ಕೆ ವ್ಯತಿರಿಕ್ತವಾಗಿ ರಾತ್ರಿಯಲ್ಲಿ ಗೂಢಾಲೋಚನೆ ಮಾಡುವರು. ಅವರು ರಾತ್ರಿಯಲ್ಲಿ ಗೂಢಾಲೋಚನೆ ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ದಾಖಲಿಸುತ್ತಿರುವನು. ಆದ್ದರಿಂದ ತಾವು ಅವರಿಂದ ವಿಮುಖರಾಗಿರಿ ಮತ್ತು ಅಲ್ಲಾಹುವಿನ ಮೇಲೆ ಭರವಸೆಯಿಡಿರಿ. ಭರವಸೆಯಿಡಲಾಗುವವನಾಗಿ ಅಲ್ಲಾಹು ಸಾಕು.

وَيَقُولُونَ طَاعَةٞ فَإِذَا بَرَزُواْ مِنۡ عِندِكَ بَيَّتَ طَآئِفَةٞ مِّنۡهُمۡ غَيۡرَ ٱلَّذِي تَقُولُۖ وَٱللَّهُ يَكۡتُبُ مَا يُبَيِّتُونَۖ فَأَعۡرِضۡ عَنۡهُمۡ وَتَوَكَّلۡ عَلَى ٱللَّهِۚ وَكَفَىٰ بِٱللَّهِ وَكِيلًا ٨١

82. ಅವರು ಕುರ್‌ಆನ್‌ನ ಕುರಿತು ಚಿಂತಿಸುವುದಿಲ್ಲವೇ? ಅದು ಅಲ್ಲಾಹುವೇತರರಿಂದಾಗಿರುತ್ತಿದ್ದರೆ ಅವರದರಲ್ಲಿ ಅನೇಕ ವಿರೋಧಾಭಾಸಗಳನ್ನು ಕಾಣುತ್ತಿದ್ದರು.

أَفَلَا يَتَدَبَّرُونَ ٱلۡقُرۡءَانَۚ وَلَوۡ كَانَ مِنۡ عِندِ غَيۡرِ ٱللَّهِ لَوَجَدُواْ فِيهِ ٱخۡتِلَٰفٗا كَثِيرٗا ٨٢

83. ಶಾಂತಿ ಅಥವಾ (ಯುದ್ಧ)ಭೀತಿಗೆ ಸಂಬಂಧಿಸಿದ ಯಾವುದಾದರೂ ವಾರ್ತೆಯು ಅವರ ಬಳಿಗೆ ಬಂದರೆ ಅವರದನ್ನು ಪ್ರಚಾರ ಮಾಡುವರು. ತೀರ್ಪು ನೀಡುವ ಸಲುವಾಗಿ ಅವರದನ್ನು ಸಂದೇಶವಾಹಕರೆಡೆಗೆ ಮತ್ತು ಅವರಲ್ಲಿರುವ ಜ್ಞಾನಿಗಳೆಡೆಗೆ ಬಿಟ್ಟು ಬಿಡುತ್ತಿದ್ದರೆ ಅವರ ಪೈಕಿ ಅದನ್ನು ಶೋಧಿಸಿ ಗ್ರಹಿಸಲು ಸಾಮರ್ಥ್ಯವಿರುವವರು ಅದರ ನೈಜತೆಯನ್ನು

وَإِذَا جَآءَهُمۡ أَمۡرٞ مِّنَ ٱلۡأَمۡنِ أَوِ ٱلۡخَوۡفِ أَذَاعُواْ بِهِۦۖ وَلَوۡ رَدُّوهُ إِلَى ٱلرَّسُولِ وَإِلَىٰٓ أُوْلِي ٱلۡأَمۡرِ مِنۡهُمۡ لَعَلِمَهُ ٱلَّذِينَ يَسۡتَنۢبِطُونَهُۥ مِنۡهُمۡۗ وَلَوۡلَا فَضۡلُ ٱللَّهِ عَلَيۡكُمۡ وَرَحۡمَتُهُۥ لَٱتَّبَعۡتُمُ ٱلشَّيۡطَٰنَ إِلَّا قَلِيلٗا ٨٣

ಅರಿಯುತ್ತಿದ್ದರು. ನಿಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕರುಣೆಯು ಇಲ್ಲದಿರುತ್ತಿದ್ದರೆ ನಿಮ್ಮ ಪೈಕಿ ಕೆಲವರ ವಿನಾ ಎಲ್ಲರೂ ಸೈತಾನನನ್ನು ಅನುಸರಿಸುತ್ತಿದ್ದಿರಿ.

**84.** ಆದ್ದರಿಂದ (ಓ ಪ್ರವಾದಿಯವರೇ!) ತಾವು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿರಿ. ತಮ್ಮ ಸ್ವಂತ ವಿಷಯವನ್ನೇ ವಿನಾ ತಮ್ಮ ಮೇಲೆ ಹೊರಿಸಲಾಗದು. ಸತ್ಯವಿಶ್ವಾಸಿಗಳನ್ನು ಹುರಿದುಂಬಿಸಿರಿ. ಸತ್ಯನಿಷೇಧಿಗಳ ದಾಳಿಯನ್ನು ಅಲ್ಲಾಹು ತಡೆಗಟ್ಟುವನು. ಅಲ್ಲಾಹು ಅತ್ಯಂತ ಆಕ್ರಮಣಶೀಲನೂ ಅತಿಕಠಿಣವಾಗಿ ಶಿಕ್ಷಿಸುವವನೂ ಆಗಿರುವನು.

فَقَٰتِلۡ فِي سَبِيلِ ٱللَّهِ لَا تُكَلَّفُ إِلَّا
نَفۡسَكَۚ وَحَرِّضِ ٱلۡمُؤۡمِنِينَۖ عَسَى ٱللَّهُ أَن
يَكُفَّ بَأۡسَ ٱلَّذِينَ كَفَرُواْۚ وَٱللَّهُ أَشَدُّ
بَأۡسٗا وَأَشَدُّ تَنكِيلٗا ٨٤

**85.** ಯಾರು ಒಂದು ಉತ್ತಮವಾದ ಶಿಫಾರಸ್ಸು ಮಾಡುವನೋ ಆ ಒಳಿತಿನಲ್ಲಿ ಒಂದು ಪಾಲು ಅವನಿಗಿರುವುದು. ಯಾರು ಒಂದು ಕೆಟ್ಟ ಶಿಫಾರಸ್ಸು ಮಾಡುವನೋ ಆ ಕೆಡುಕಿನಲ್ಲಿ ಒಂದು ಪಾಲು ಅವನಿಗಿರುವುದು. ಅಲ್ಲಾಹು ಎಲ್ಲ ವಿಷಯಗಳಲ್ಲೂ ಮೇಲ್ವಿಚಾರಕನಾಗಿರುವನು.

مَّن يَشۡفَعۡ شَفَٰعَةً حَسَنَةٗ يَكُن لَّهُۥ
نَصِيبٞ مِّنۡهَاۖ وَمَن يَشۡفَعۡ شَفَٰعَةٗ سَيِّئَةٗ
يَكُن لَّهُۥ كِفۡلٞ مِّنۡهَاۗ وَكَانَ ٱللَّهُ عَلَىٰ كُلِّ
شَيۡءٖ مُّقِيتٗا ٨٥

**86.** ನಿಮಗೆ ಅಭಿವಂದನೆ ಸಲ್ಲಿಸಲಾದರೆ ಅದಕ್ಕಿಂತಲೂ ಉತ್ತಮವಾಗಿ (ಅವರಿಗೆ) ಅಭಿವಂದನೆ ಸಲ್ಲಿಸಿರಿ. ಅಥವಾ ಅದನ್ನು ಮರಳಿಸಿರಿ.[1] ಖಂಡಿತವಾಗಿಯೂ ಅಲ್ಲಾಹು ಪ್ರತಿಯೊಂದು ವಿಷಯದ ಕುರಿತೂ ವಿಚಾರಣೆ ಮಾಡುವವನಾಗಿರುವನು.

وَإِذَا حُيِّيتُم بِتَحِيَّةٖ فَحَيُّواْ بِأَحۡسَنَ مِنۡهَآ
أَوۡ رُدُّوهَآۗ إِنَّ ٱللَّهَ كَانَ عَلَىٰ كُلِّ شَيۡءٍ
حَسِيبًا ٨٦

**87.** ಅಲ್ಲಾಹು, ಅವನ ಹೊರತು ಅನ್ಯ ಆರಾಧ್ಯರಿಲ್ಲ. ಖಂಡಿತವಾಗಿಯೂ ಅವನು ನಿಮ್ಮೆಲ್ಲರನ್ನೂ ಪುನರುತ್ಥಾನ ದಿನದೆಡೆಗೆ ಒಟ್ಟುಗೂಡಿಸುವನು. ಅದರಲ್ಲಿ ಸಂದೇಹವೇ ಇಲ್ಲ.

ٱللَّهُ لَآ إِلَٰهَ إِلَّا هُوَۚ لَيَجۡمَعَنَّكُمۡ إِلَىٰ يَوۡمِ
ٱلۡقِيَٰمَةِ لَا رَيۡبَ فِيهِۗ وَمَنۡ أَصۡدَقُ مِنَ
ٱللَّهِ حَدِيثٗا ٨٧

1 ಅಸ್ಸಲಾಮು ಅಲೈಕುಮ್ (ನಿಮ್ಮ ಮೇಲೆ ಶಾಂತಿಯಿರಲಿ) ಎಂದು ಯಾರಾದರೂ ಹೇಳಿದರೆ ವಅಲೈಕುಮುಸ್ಸಲಾಮ್ ವರಹ್ಮತುಲ್ಲಾಹ್ (ನಿಮ್ಮ ಮೇಲೆ ಶಾಂತಿಯಿರಲಿ – ಅಲ್ಲಾಹುವಿನ ಅನುಗ್ರಹವೂ ಇರಲಿ) ಎಂದು ಮರಳಿಸಬೇಕಾಗಿದೆ. ಸಂಕ್ಷಿಪ್ತವಾಗಿ ವಅಲೈಕುಮುಸ್ಸಲಾಮ್ ಎಂದಾದರೂ ಮರಳಿಸಬೇಕಾಗಿದೆ.

ಅಲ್ಲಾಹುವಿಗಿಂತಲೂ ಸತ್ಯಸಂಧವಾಗಿ ಮಾಹಿತಿ ನೀಡುವವನು ಇನ್ನಾರಿರುವನು?

**88.** ಕಪಟ ವಿಶ್ವಾಸಿಗಳ ವಿಷಯದಲ್ಲಿ ನೀವೇಕೆ ಎರಡು ಗುಂಪುಗಳಾಗುತ್ತಿರುವಿರಿ? ಅವರು ಸಂಪಾದಿಸಿಟ್ಟಿರುವುದರ (ಕೆಡುಕಿನ) ನಿಮಿತ್ತ ಅಲ್ಲಾಹು ಅವರನ್ನು ಹಿಂದಕ್ಕೆ ತಿರುಗಿಸಿ ಬಿಟ್ಟಿರುವನು. ಅಲ್ಲಾಹು ಯಾರನ್ನು ಪಥಭ್ರಷ್ಟಗೊಳಿಸಿರುವನೋ ಅವರನ್ನು ಸನ್ಮಾರ್ಗಕ್ಕೆ ಸೇರಿಸಲು ನೀವು ಇಚ್ಛಿಸುತ್ತಿರುವಿರಾ? ಅಲ್ಲಾಹು ಯಾರನ್ನಾದರೂ ಪಥಭ್ರಷ್ಟಗೊಳಿಸಿದರೆ ತರುವಾಯ ಅವನಿಗೆ ಯಾವುದೇ ದಾರಿಯನ್ನೂ ತಾವು ಕಾಣಲಾರಿರಿ.

۞ فَمَا لَكُمۡ فِي ٱلۡمُنَٰفِقِينَ فِئَتَيۡنِ وَٱللَّهُ
أَرۡكَسَهُم بِمَا كَسَبُوٓاْۚ أَتُرِيدُونَ أَن تَهۡدُواْ
مَنۡ أَضَلَّ ٱللَّهُۖ وَمَن يُضۡلِلِ ٱللَّهُ فَلَن تَجِدَ
لَهُۥ سَبِيلٗا ٨٨

**89.** ಅವರು ನಿಷೇಧಿಸಿದಂತೆ ನೀವೂ ನಿಷೇಧಿಸಿ ತರುವಾಯ ನೀವೆಲ್ಲರೂ ಸಮಾನರಾಗಬೇಕೆಂದು ಅವರು ಆಶಿಸುವರು. ಆದ್ದರಿಂದ ಅವರು ಅಲ್ಲಾಹುವಿನ ಮಾರ್ಗದಲ್ಲಿ ತಮ್ಮ ಊರನ್ನು ತೊರೆಯುವ ತನಕ ಅವರ ಪೈಕಿ ಯಾರನ್ನೂ ನೀವು ಮಿತ್ರರನ್ನಾಗಿ ಮಾಡಿಕೊಳ್ಳದಿರಿ. ಅವರೇನಾದರೂ ವಿಮುಖರಾಗುವುದಾದರೆ ಅವರನ್ನು ಹಿಡಿಯಿರಿ ಮತ್ತು ಅವರನ್ನು ಕಂಡಲ್ಲಿ ವಧಿಸಿರಿ. ಅವರ ಪೈಕಿ ಯಾರನ್ನೂ ನೀವು ಮಿತ್ರರನ್ನಾಗಿ ಮತ್ತು ಸಹಾಯಕರನ್ನಾಗಿ ಮಾಡಿಕೊಳ್ಳದಿರಿ.

وَدُّواْ لَوۡ تَكۡفُرُونَ كَمَا كَفَرُواْ
فَتَكُونُونَ سَوَآءٗۖ فَلَا تَتَّخِذُواْ مِنۡهُمۡ
أَوۡلِيَآءَ حَتَّىٰ يُهَاجِرُواْ فِي سَبِيلِ ٱللَّهِۚ
فَإِن تَوَلَّوۡاْ فَخُذُوهُمۡ وَٱقۡتُلُوهُمۡ حَيۡثُ
وَجَدتُّمُوهُمۡۖ وَلَا تَتَّخِذُواْ مِنۡهُمۡ وَلِيّٗا وَلَا
نَصِيرًا ٨٩

**90.** ಆದರೆ ನಿಮ್ಮೊಂದಿಗೆ ಮೈತ್ರಿಯಲ್ಲಿರುವ ಒಂದು ಜನತೆಯೊಂದಿಗೆ ಸೇರಿಕೊಂಡಿರುವವರ ಹೊರತು ಅಥವಾ ನಿಮ್ಮ ವಿರುದ್ಧ ಯುದ್ಧ ಮಾಡಲಾಗಲಿ, ಸ್ವತಃ ತಮ್ಮದೇ ಜನರ ವಿರುದ್ಧ ಯುದ್ಧ ಮಾಡಲಾಗಲಿ ಹಿಂಜರಿಕೆಯುಳ್ಳವರಾಗಿ ನಿಮ್ಮ ಬಳಿಗೆ ಬರುವವರ ಹೊರತು. ಅಲ್ಲಾಹು ಇಚ್ಛಿಸುತ್ತಿದ್ದರೆ ಅವನು ನಿಮ್ಮ ಮೇಲೆ ಅವರಿಗೆ ಅಧಿಕಾರವನ್ನು ನೀಡುತ್ತಿದ್ದನು ಮತ್ತು ಅವರು ನಿಮ್ಮ ವಿರುದ್ಧ ಯುದ್ಧವನ್ನೂ ಮಾಡುತ್ತಿದ್ದರು.

إِلَّا ٱلَّذِينَ يَصِلُونَ إِلَىٰ قَوۡمِۭ بَيۡنَكُمۡ
وَبَيۡنَهُم مِّيثَٰقٌ أَوۡ جَآءُوكُمۡ حَصِرَتۡ
صُدُورُهُمۡ أَن يُقَٰتِلُوكُمۡ أَوۡ يُقَٰتِلُواْ
قَوۡمَهُمۡۚ وَلَوۡ شَآءَ ٱللَّهُ لَسَلَّطَهُمۡ عَلَيۡكُمۡ
فَلَقَٰتَلُوكُمۡۚ فَإِنِ ٱعۡتَزَلُوكُمۡ فَلَمۡ يُقَٰتِلُوكُمۡ
وَأَلۡقَوۡاْ إِلَيۡكُمُ ٱلسَّلَمَ فَمَا جَعَلَ ٱللَّهُ
لَكُمۡ عَلَيۡهِمۡ سَبِيلٗا ٩٠

ಆದರೆ ಅವರು ನಿಮ್ಮ ವಿರುದ್ಧ ಯುದ್ಧ ಮಾಡದೆ ದೂರ ನಿಂತಿದ್ದರೆ ಮತ್ತು ನಿಮ್ಮ ಮುಂದೆ ಶಾಂತಿ ಪ್ರಸ್ತಾಪವನ್ನಿಟ್ಟಿದ್ದರೆ ಅವರಿಗೆ ವಿರುದ್ಧವಾಗಿ ಯಾವುದೇ ಮಾರ್ಗವನ್ನೂ ಅಲ್ಲಾಹು ನಿಮಗೆ ಅನುಮತಿಸಿಲ್ಲ.

**91.** ಇನ್ನೊಂದು ಜನತೆಯನ್ನೂ ನೀವು ಕಾಣುವಿರಿ. ಅವರು ನಿಮ್ಮಿಂದಲೂ ಸ್ವತಃ ತಮ್ಮದೇ ಜನರಿಂದಲೂ ಸಮಾನ ಅಂತರದಲ್ಲಿದ್ದುಕೊಂಡು ಸುರಕ್ಷಿತರಾಗಿರಲು ಇಚ್ಛಿಸುವರು.[1] ಕ್ಷೋಭೆಯತ್ತ ಅವರನ್ನು ಮರಳಿ ಕರೆಯುವಾಗಲೆಲ್ಲ ಅವರು ಅದರಲ್ಲಿ ತಲೆಕೆಳಗಾಗಿ ಬೀಳುವರು.[2] ಆದರೆ ಅವರು ನಿಮ್ಮನ್ನು ಬಿಟ್ಟು ದೂರ ಸರಿಯದಿದ್ದರೆ, ನಿಮ್ಮ ಮುಂದೆ ಶಾಂತಿ ಪ್ರಸ್ತಾಪವನ್ನಿಡದಿದ್ದರೆ ಮತ್ತು ತಮ್ಮ ಕೈಗಳನ್ನು ತಡೆಹಿಡಿಯದಿದ್ದರೆ ಅವರನ್ನು ಹಿಡಿಯಿರಿ ಮತ್ತು ಕಂಡಲ್ಲಿ ವಧಿಸಿರಿ. ಅಂತಹವರ ವಿರುದ್ಧ ನಾವು ನಿಮಗೆ ಸ್ಪಷ್ಟವಾದ ಅಧಿಕಾರವನ್ನು ನೀಡಿರುವೆವು.

سَتَجِدُونَ ءَاخَرِينَ يُرِيدُونَ أَن يَأۡمَنُوكُمۡ وَيَأۡمَنُواْ قَوۡمَهُمۡ كُلَّ مَا رُدُّوٓاْ إِلَى ٱلۡفِتۡنَةِ أُرۡكِسُواْ فِيهَاۚ فَإِن لَّمۡ يَعۡتَزِلُوكُمۡ وَيُلۡقُوٓاْ إِلَيۡكُمُ ٱلسَّلَمَ وَيَكُفُّوٓاْ أَيۡدِيَهُمۡ فَخُذُوهُمۡ وَٱقۡتُلُوهُمۡ حَيۡثُ ثَقِفۡتُمُوهُمۡۚ وَأُوْلَٰٓئِكُمۡ جَعَلۡنَا لَكُمۡ عَلَيۡهِمۡ سُلۡطَٰنٗا مُّبِينٗا ٩١

**92.** ಪ್ರಮಾದವಶಾತ್ ಸಂಭವಿಸುವುದರ ವಿನಾ ಒಬ್ಬ ವಿಶ್ವಾಸಿಯನ್ನು ವಧಿಸುವುದು ಇನ್ನೊಬ್ಬ ವಿಶ್ವಾಸಿಗೆ ಯುಕ್ತವಲ್ಲ. ಒಬ್ಬ ವಿಶ್ವಾಸಿಯನ್ನು ಯಾರಾದರೂ ಪ್ರಮಾದವಶಾತ್ ವಧಿಸಿದರೆ (ಪ್ರಾಯಶ್ಚಿತ್ತವಾಗಿ) ವಿಶ್ವಾಸಿಯಾಗಿರುವ ಓರ್ವ ಗುಲಾಮನನ್ನು ವಿಮೋಚನೆ ಗೊಳಿಸಬೇಕಾಗಿದೆ ಮತ್ತು ಅವನ (ವಧಿಸಲಾದವನ) ಹಕ್ಕುದಾರರಿಗೆ ರಕ್ತ ಪರಿಹಾರವನ್ನು ಕೊಡಬೇಕಾಗಿದೆ. ಅವರು (ಆ ಹಕ್ಕುದಾರರು) ಅದನ್ನು ಉದಾರವಾಗಿ ಬಿಟ್ಟು ಕೊಡುವುದರ

وَمَا كَانَ لِمُؤۡمِنٍ أَن يَقۡتُلَ مُؤۡمِنًا إِلَّا خَطَـٔٗاۚ وَمَن قَتَلَ مُؤۡمِنًا خَطَـٔٗا فَتَحۡرِيرُ رَقَبَةٖ مُّؤۡمِنَةٖ وَدِيَةٞ مُّسَلَّمَةٌ إِلَىٰٓ أَهۡلِهِۦٓ إِلَّآ أَن يَصَّدَّقُواْۚ فَإِن كَانَ مِن قَوۡمٍ عَدُوّٖ لَّكُمۡ وَهُوَ مُؤۡمِنٞ فَتَحۡرِيرُ رَقَبَةٖ مُّؤۡمِنَةٖۖ وَإِن كَانَ مِن قَوۡمِۭ بَيۡنَكُمۡ وَبَيۡنَهُم مِّيثَٰقٞ فَدِيَةٞ مُّسَلَّمَةٌ إِلَىٰٓ أَهۡلِهِۦ وَتَحۡرِيرُ رَقَبَةٖ مُّؤۡمِنَةٖۖ فَمَن لَّمۡ يَجِدۡ فَصِيَامُ شَهۡرَيۡنِ

1 ಮುಸ್ಲಿಮರೊಂದಿಗೆ ಸಹಾನುಭೂತಿಯಿಲ್ಲದಿದ್ದರೂ ಮುಸ್ಲಿಮರೊಂದಿಗೆ ವಿರೋಧ ಕಟ್ಟಿಕೊಳ್ಳಲು ಅವರು ಬಯಸುವುದಿಲ್ಲ. ಮುಸ್ಲಿಮರೊಂದಿಗೆ ಸಹಾನುಭೂತಿ ತೋರಿಸಿದರೆ ಎದುರು ಪಂಗಡದ ಶತ್ರುತ್ವ ಮತ್ತು ಆಕ್ರಮಣವನ್ನು ಎದುರಿಸಬೇಕಾದೀತು ಎಂಬ ಭಯವೂ ಅವರಿಗಿದೆ.

2 ಮುಸ್ಲಿಮರ ಕಡೆಗೆ ವಾಲಿಕೊಂಡಿರುವಂತೆ ನಟಿಸುತ್ತಿದ್ದರೂ ಕೂಡ ಶತ್ರುಗಳು ಕ್ಷೋಭೆಯನ್ನು ಸೃಷ್ಟಿಸುವಾಗ ಇವರೂ ಅದರಲ್ಲಿ ಪಾಲ್ಗೊಳ್ಳುತ್ತಿದ್ದರು

مُتَتَابِعَيْنِ تَوْبَةً مِّنَ ٱللَّهِ وَكَانَ ٱللَّهُ عَلِيمًا حَكِيمًا ﴿٩٢﴾

ಹೊರತು. ಇನ್ನು ಅವನು (ವಧಿಸಲಾದವನು) ನಿಮ್ಮೊಂದಿಗೆ ಶತ್ರುತ್ವ ಹೊಂದಿರುವ ಜನರೊಂದಿಗೆ ಸೇರಿದವನೂ, ಸತ್ಯವಿಶ್ವಾಸಿಯೂ ಆಗಿದ್ದರೆ ಸತ್ಯವಿಶ್ವಾಸಿಯಾದ ಓರ್ವ ಗುಲಾಮನನ್ನು ವಿಮೋಚನೆಗೊಳಿಸಬೇಕಾಗಿದೆ. ಇನ್ನು ಅವನು (ವಧಿಸಲಾದವನು) ನಿಮ್ಮೊಂದಿಗೆ ಮೈತ್ರಿಯಲ್ಲಿರುವ ಒಂದು ಜನತೆಗೆ ಸೇರಿದವನಾಗಿದ್ದರೆ ಅವನ ಹಕ್ಕುದಾರರಿಗೆ ರಕ್ತಪರಿಹಾರವನ್ನು ಕೊಡಬೇಕಾಗಿದೆ ಮತ್ತು ವಿಶ್ವಾಸಿಯಾದ ಓರ್ವ ಗುಲಾಮನನ್ನು ವಿಮೋಚನೆಗೊಳಿಸಬೇಕಾಗಿದೆ. ಯಾರಿಗಾದರೂ ಅದು ಸಾಧ್ಯವಾಗುವುದಿಲ್ಲವೆಂದಾದರೆ ಅವನು ನಿರಂತರವಾಗಿ ಎರಡು ತಿಂಗಳು ಉಪವಾಸವನ್ನು ಆಚರಿಸಬೇಕಾಗಿದೆ. ಇದು ಅಲ್ಲಾಹು ನಿಶ್ಚಯಿಸಿದ ಪಶ್ಚಾತ್ತಾಪ (ಮಾರ್ಗ) ವಾಗಿದೆ. ಅಲ್ಲಾಹು ಎಲ್ಲವನ್ನೂ ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَمَن يَقْتُلْ مُؤْمِنًا مُّتَعَمِّدًا فَجَزَآؤُهُۥ جَهَنَّمُ خَٰلِدًا فِيهَا وَغَضِبَ ٱللَّهُ عَلَيْهِ وَلَعَنَهُۥ وَأَعَدَّ لَهُۥ عَذَابًا عَظِيمًا ﴿٩٣﴾

93. ಒಬ್ಬ ಸತ್ಯವಿಶ್ವಾಸಿಯನ್ನು ಯಾರಾದರೂ ಉದ್ದೇಶಪೂರ್ವಕವಾಗಿ ವಧಿಸಿದರೆ ಅವನಿಗಿರುವ ಪ್ರತಿಫಲವು ನರಕಾಗ್ನಿಯಾಗಿರುವುದು. ಅವನು ಅದರಲ್ಲಿ ಶಾಶ್ವತವಾಗಿ ವಾಸಿಸುವನು. ಅಲ್ಲಾಹು ಅವನ ಮೇಲೆ ಕ್ರೋಧಗೊಂಡಿರುವನು ಮತ್ತು ಅವನನ್ನು ಶಪಿಸಿರುವನು. ಅವನಿಗೋಸ್ಕರ ಅಲ್ಲಾಹು ಕಠಿಣವಾದ ಶಿಕ್ಷೆಯನ್ನು ಸಿದ್ಧಗೊಳಿಸಿರುವನು.

يَٰٓأَيُّهَا ٱلَّذِينَ ءَامَنُوٓاْ إِذَا ضَرَبْتُمْ فِى سَبِيلِ ٱللَّهِ فَتَبَيَّنُواْ وَلَا تَقُولُواْ لِمَنْ أَلْقَىٰٓ إِلَيْكُمُ ٱلسَّلَٰمَ لَسْتَ مُؤْمِنًا تَبْتَغُونَ عَرَضَ ٱلْحَيَوٰةِ ٱلدُّنْيَا فَعِندَ ٱللَّهِ مَغَانِمُ كَثِيرَةٌ كَذَٰلِكَ كُنتُم مِّن قَبْلُ فَمَنَّ

94. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧಕ್ಕೆ ಹೊರಟರೆ (ಶತ್ರು ಮತ್ತು ಮಿತ್ರ ಯಾರೆಂದು) ಸ್ಪಷ್ಟವಾಗಿ ಅರಿತುಕೊಳ್ಳಿರಿ. ನಿಮಗೆ ಸಲಾಮ್ ಹೇಳಿದವನೊಂದಿಗೆ ನೀನು ವಿಶ್ವಾಸಿಯಲ್ಲ ಎಂದು ನೀವು ಹೇಳದಿರಿ. ಇಹಲೋಕ

ٱللَّهُ عَلَيۡكُمۡ فَتَبَيَّنُوٓاْۚ إِنَّ ٱللَّهَ كَانَ بِمَا
تَعۡمَلُونَ خَبِيرٗا ﴿٩٤﴾

ಜೀವನದ ಲಾಭವನ್ನು[1] ಆಶಿಸುತ್ತಾ (ನೀವು ಆ ರೀತಿ ಹೇಳುತ್ತಿರುವಿರಿ). ಆದರೆ ನಿಮಗೆ ಗಳಿಸಬಹುದಾದ ಯಥೇಷ್ಟ ಸಂಪತ್ತು ಅಲ್ಲಾಹುವಿನ ಬಳಿಯಿದೆ. ಇದಕ್ಕಿಂತ ಮುಂಚೆ ನೀವು ಕೂಡ ಹೀಗೆಯೇ (ಅವಿಶ್ವಾಸದಲ್ಲಿ) ಇದ್ದವರಾಗಿದ್ದಿರಿ![2] ತರುವಾಯ ಅಲ್ಲಾಹು ನಿಮ್ಮನ್ನು ಅನುಗ್ರಹಿಸಿದನು. ಆದ್ದರಿಂದ ನೀವು (ವಸ್ತುಸ್ಥಿತಿಯನ್ನು) ಸ್ಪಷ್ಟವಾಗಿ ಅರಿತುಕೊಳ್ಳಿರಿ. ಖಂಡಿತವಾಗಿಯೂ ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ಸೂಕ್ಷ್ಮವಾಗಿ ಅರಿಯುವವನಾಗಿರುವನು.

لَّا يَسۡتَوِي ٱلۡقَٰعِدُونَ مِنَ ٱلۡمُؤۡمِنِينَ
غَيۡرُ أُوْلِي ٱلضَّرَرِ وَٱلۡمُجَٰهِدُونَ فِي
سَبِيلِ ٱللَّهِ بِأَمۡوَٰلِهِمۡ وَأَنفُسِهِمۡۚ فَضَّلَ
ٱللَّهُ ٱلۡمُجَٰهِدِينَ بِأَمۡوَٰلِهِمۡ وَأَنفُسِهِمۡ عَلَى
ٱلۡقَٰعِدِينَ دَرَجَةٗۚ وَكُلّٗا وَعَدَ ٱللَّهُ ٱلۡحُسۡنَىٰۚ
وَفَضَّلَ ٱللَّهُ ٱلۡمُجَٰهِدِينَ عَلَى ٱلۡقَٰعِدِينَ
أَجۡرًا عَظِيمٗا ﴿٩٥﴾

**95.** ನ್ಯಾಯಸಮ್ಮತವಾದ ಯಾವ ಅಡ್ಡಿಯೂ ಇಲ್ಲದೆ (ಯುದ್ಧಕ್ಕೆ ಹೋಗದೆ) ಮನೆಯಲ್ಲೇ ಕುಳಿತಿರುವ ವಿಶ್ವಾಸಿಗಳು ಮತ್ತು ತಮ್ಮ ಸಂಪತ್ತು ಹಾಗೂ ಶರೀರಗಳಿಂದ ಅಲ್ಲಾಹುವಿನ ಮಾರ್ಗದಲ್ಲಿ ಹೋರಾಡುವವರು ಸಮಾನರಾಗಲಾರರು. ತಮ್ಮ ಸಂಪತ್ತು ಮತ್ತು ಶರೀರಗಳಿಂದ ಹೋರಾಡುವವರನ್ನು ಮನೆಯಲ್ಲೇ ಕುಳಿತುಕೊಳ್ಳುವವರಿಗಿಂತ ಅಲ್ಲಾಹು ಪದವಿಯಲ್ಲಿ ಉನ್ನತೀಕರಿಸಿರುವನು. ಎಲ್ಲರಿಗೂ ಅಲ್ಲಾಹು ಉತ್ತಮವಾದ ಪ್ರತಿಫಲವನ್ನು ವಾಗ್ದಾನ ಮಾಡಿರುವನು.[3] ಆದರೆ ಮನೆಯಲ್ಲೇ ಕುಳಿತುಕೊಳ್ಳುವವರಿಗಿಂತಲೂ ಹೋರಾಡುವವರಿಗೆ

1 ರಣರಂಗದಲ್ಲಿ ಓರ್ವ ವ್ಯಕ್ತಿಯನ್ನು ಕೊಂದರೆ ಅವನ ಆಯುಧಗಳು, ಯುದ್ಧ ಕವಚ ಮತ್ತು ಅವನ ಬಳಿಯಿರುವ ಇತರ ವಸ್ತುಗಳು ಕೊಂದ ಯೋಧನ ಹಕ್ಕಾಗಿರುತ್ತದೆ. ಈ ಗಳಿಕೆಯ ಮೇಲೆ ಕಣ್ಣಿಟ್ಟು ಕೊಲ್ಲಲು ಅರ್ಹರಲ್ಲದ ಯಾರನ್ನೂ ಕೊಲ್ಲಬಾರದು.

2 ಗತ ನಿಮಿಷದವರೆಗೆ ನಿಮ್ಮ ಶತ್ರುವಾಗಿದ್ದ ಓರ್ವ ವ್ಯಕ್ತಿ ತನ್ನ ಶತ್ರುತ್ವವನ್ನು ತೊರೆದು ಸಲಾಮ್ ಹೇಳುತ್ತಾ ಮುಂದೆ ಬಂದರೆ ನೀವು ಅವನನ್ನು ಅಪಾರ್ಥ ಮಾಡಿಕೊಳ್ಳಬಾರದು. ಅವನ ಸನ್ಮನಸ್ಸನ್ನು ತುಚ್ಛೀಕರಿಸಲೂ ಬಾರದು. ನೀವು ಕೂಡಾ ಅವಿಶ್ವಾಸದಿಂದ ವಿಶ್ವಾಸದೆಡೆಗೆ ಬಂದವರೇ ಆಗಿರುವಿರಿ.

3 ಎಲ್ಲರೂ ಎಂಬ ವಾಕ್ಯದ ಉದ್ದೇಶ ಸಂಪತ್ತಿನಿಂದ ಮತ್ತು ಶರೀರದಿಂದ ಯುದ್ಧ ಮಾಡುವವರು ಮತ್ತು ನ್ಯಾಯಬದ್ಧ ಕಾರಣದಿಂದಾಗಿ ಯುದ್ಧದಲ್ಲಿ ಭಾಗವಹಿಸಲು ಸಾಧ್ಯವಾಗದವರು ಎಂದಾಗಿದೆ. ಆದರೆ ಎಲ್ಲರೂ ಯುದ್ಧದಲ್ಲಿ ಭಾಗವಹಿಸಬೇಕಾದುದು ಅನಿವಾರ್ಯವಾಗುವ ಸಂದರ್ಭದಲ್ಲಿ ನ್ಯಾಯಬದ್ಧ ಕಾರಣವಿಲ್ಲದೆ ಯುದ್ಧದಿಂದ ಹಿಂಜರಿಯುವವರಿಗೆ ಅಲ್ಲಾಹುವಿನಿಂದ ಪ್ರತಿಫಲವನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಸೂರಃ ತೌಬಾದಲ್ಲಿ ಈ ವಿಷಯವನ್ನು ಹೇಳಲಾಗಿದೆ.

ಮಹಾ ಪ್ರತಿಫಲವನ್ನು ನೀಡಿ ಅಲ್ಲಾಹು ಅವರನ್ನು ಶ್ರೇಷ್ಠಗೊಳಿಸಿರುವನು.

دَرَجَٰتٖ مِّنۡهُ وَمَغۡفِرَةٗ وَرَحۡمَةٗۚ وَكَانَ ٱللَّهُ غَفُورٗا رَّحِيمًا ﴿٩٦﴾

**96.** ಅವನ ವತಿಯ ಹಲವು ಪದವಿಗಳು, ಪಾಪಮುಕ್ತಿ ಮತ್ತು ಕಾರುಣ್ಯವು (ಅವರಿಗಿದೆ). ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

إِنَّ ٱلَّذِينَ تَوَفَّىٰهُمُ ٱلۡمَلَٰٓئِكَةُ ظَالِمِيٓ أَنفُسِهِمۡ قَالُواْ فِيمَ كُنتُمۡۖ قَالُواْ كُنَّا مُسۡتَضۡعَفِينَ فِي ٱلۡأَرۡضِۚ قَالُوٓاْ أَلَمۡ تَكُنۡ أَرۡضُ ٱللَّهِ وَٰسِعَةٗ فَتُهَاجِرُواْ فِيهَاۚ فَأُوْلَٰٓئِكَ مَأۡوَىٰهُمۡ جَهَنَّمُۖ وَسَآءَتۡ مَصِيرًا ﴿٩٧﴾

**97.** (ಅವಿಶ್ವಾಸಿಗಳ ನಡುವೆಯೇ ಜೀವಿಸುತ್ತಾ)[1] ಸ್ವತಃ ತಮ್ಮ ಮೇಲೆಯೇ ಅನ್ಯಾಯವೆಸಗಿದವರನ್ನು ಮೃತ ಪಡಿಸುವಾಗ ಮಲಕ್‌ಗಳು ಅವರೊಂದಿಗೆ 'ನೀವು ಯಾವ ಸ್ಥಿತಿಯಲ್ಲಿದ್ದಿರಿ?' ಎಂದು ಕೇಳುವರು. 'ನಾವು ನಾಡಿನಲ್ಲಿ ಮರ್ದಿತರಾಗಿದ್ದೆವು.' ಎಂದು ಅವರು ಹೇಳುವರು. ಆಗ (ಮಲಕ್‌ಗಳು) 'ನಿಮಗೆ ನಿಮ್ಮ ಊರನ್ನು ಬಿಟ್ಟು ಎಲ್ಲಾದರೂ ಹೋಗಬಹುದಾದ ರೀತಿಯಲ್ಲಿ ಅಲ್ಲಾಹುವಿನ ಭೂಮಿ ವಿಶಾಲವಾಗಿರಲಿಲ್ಲವೇ?' ಎಂದು ಕೇಳುವರು. ಅಂತಹವರ ವಾಸಸ್ಥಳವು ನರಕವಾಗಿದೆ. ಆ ಸ್ಥಳವು ಎಷ್ಟು ನಿಕೃಷ್ಟವಾದುದು!

إِلَّا ٱلۡمُسۡتَضۡعَفِينَ مِنَ ٱلرِّجَالِ وَٱلنِّسَآءِ وَٱلۡوِلۡدَٰنِ لَا يَسۡتَطِيعُونَ حِيلَةٗ وَلَا يَهۡتَدُونَ سَبِيلٗا ﴿٩٨﴾

**98.** ಆದರೆ ಯಾವ ಉಪಾಯವನ್ನು ಹೂಡಲು ಸಾಧ್ಯವಾಗದೆ, ಯಾವ ರಕ್ಷಾಮಾರ್ಗವನ್ನೂ ಕಾಣಲು ಸಾಧ್ಯವಾಗದೆ ದೌರ್ಜನ್ಯಕ್ಕೀಡಾಗಿ ಜೀವಿಸುತ್ತಿರುವ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಇದರಿಂದ ಹೊರತಾಗಿರುವರು.

فَأُوْلَٰٓئِكَ عَسَى ٱللَّهُ أَن يَعۡفُوَ عَنۡهُمۡۚ وَكَانَ ٱللَّهُ عَفُوًّا غَفُورٗا ﴿٩٩﴾

**99.** ಅಂತಹವರನ್ನು ಅಲ್ಲಾಹು ಮನ್ನಿಸಲೂ ಬಹುದು. ಅಲ್ಲಾಹು ಅತ್ಯಂತ ಮನ್ನಿಸುವವನೂ ಅತ್ಯಧಿಕ ಕ್ಷಮಿಸುವವನೂ ಆಗಿರುವನು.

1 ಪ್ರವಾದಿ(ﷺ)ರವರು ಮತ್ತು ಸಹಾಬಿಗಳು ಮಕ್ಕಾದಲ್ಲಿದ್ದಾಗ ನಾವು ಇಸ್ಲಾಮ್ ಸ್ವೀಕರಿಸಿದ್ದೇವೆ ಎಂದು ಹೇಳಿ ತರುವಾಯ ಪ್ರವಾದಿ(ﷺ)ರವರು ಮತ್ತು ಅನುಯಾಯಿಗಳು ಮದೀನಕ್ಕೆ ಹಿಜ್ರಾ ಹೋದಾಗ ಅವರೊಂದಿಗೆ ಹೋಗದೆ ಮಕ್ಕಾದಲ್ಲಿಯೇ ನೆಲೆಸಿದ ಕೆಲವರಿದ್ದರು. ಬದ್ರ್ ಯುದ್ಧದಲ್ಲಿ ಇವರು ಶತ್ರುಗಳೊಂದಿಗೆ ಸೇರಿದರು ಮತ್ತು ಯುದ್ಧದಲ್ಲಿ ಕೊಲ್ಲಲ್ಪಟ್ಟರು. ಇವರ ವಿಷಯದಲ್ಲಿ ಈ ಸೂಕ್ತಿ ಅವತೀರ್ಣಗೊಂಡಿತು. ಪ್ರವಾದಿ(ﷺ)ರವರ ಹಿಜ್ರಾ ಮತ್ತು ಮಕ್ಕಾವಿಜಯದ ನಡುವಿನ ಕಾಲಘಟ್ಟದಲ್ಲಿ ಯಾರು ಎಲ್ಲೇ ಇಸ್ಲಾಮ್ ಸ್ವೀಕರಿಸಿದರೂ ಅವರು ತಮ್ಮ ಊರನ್ನು ತ್ಯಜಿಸಿ ಮದೀನಕ್ಕೆ ಬಂದು ಮುಸ್ಲಿಮ್ ಸಮುದಾಯದೊಂದಿಗೆ ಸೇರಬೇಕೆಂಬುದು ಕಡ್ಡಾಯ ನಿಯಮವಾಗಿತ್ತು.

﴿ وَمَن يُهَاجِرْ فِي سَبِيلِ ٱللَّهِ يَجِدْ فِي ٱلْأَرْضِ مُرَٰغَمًا كَثِيرًا وَسَعَةً ۚ وَمَن يَخْرُجْ مِنۢ بَيْتِهِۦ مُهَاجِرًا إِلَى ٱللَّهِ وَرَسُولِهِۦ ثُمَّ يُدْرِكْهُ ٱلْمَوْتُ فَقَدْ وَقَعَ أَجْرُهُۥ عَلَى ٱللَّهِ ۗ وَكَانَ ٱللَّهُ غَفُورًا رَّحِيمًا ﴿١٠٠﴾

**100.** ಯಾರು ಅಲ್ಲಾಹುವಿನ ಮಾರ್ಗದಲ್ಲಿ ತನ್ನ ಊರನ್ನು ತೊರೆಯುತ್ತಾನೋ ಅವನು ಭೂಮಿಯಲ್ಲಿ ಅನೇಕ ಅಭಯ ಸ್ಥಾನಗಳನ್ನೂ, ಜೀವನ ವೈಶಾಲ್ಯತೆಗಳನ್ನೂ ಕಾಣುವನು. ಯಾರಾದರೂ ತನ್ನ ಮನೆಯಿಂದ ಅಲ್ಲಾಹುವಿನೆಡೆಗೆ ಮತ್ತು ಅವನ ಸಂದೇಶವಾಹಕರೆಡೆಗೆ ವಲಸೆ ಹೊರಟು, ತರುವಾಯ (ದಾರಿ ಮಧ್ಯೆ) ಮರಣವು ಅವನನ್ನು ವಶಪಡಿಸಿದರೆ ಅವನಿಗಿರುವ ಪ್ರತಿಫಲವು ಅಲ್ಲಾಹುವಿನ ಬಳಿ ಖಾತ್ರಿಯಾಗಿ ಬಿಟ್ಟಿತು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَإِذَا ضَرَبْتُمْ فِي ٱلْأَرْضِ فَلَيْسَ عَلَيْكُمْ جُنَاحٌ أَن تَقْصُرُوا۟ مِنَ ٱلصَّلَوٰةِ إِنْ خِفْتُمْ أَن يَفْتِنَكُمُ ٱلَّذِينَ كَفَرُوٓا۟ ۚ إِنَّ ٱلْكَٰفِرِينَ كَانُوا۟ لَكُمْ عَدُوًّا مُّبِينًا ﴿١٠١﴾

**101.** ನೀವು ಭೂಮಿಯಲ್ಲಿ ಯಾತ್ರೆ ಮಾಡುವಾಗ ಸತ್ಯನಿಷೇಧಿಗಳು ನಿಮಗೆ ತೊಂದರೆಯುಂಟು ಮಾಡುವರು ಎಂದು ನೀವು ಭಯಪಡುವುದಾದರೆ ನಮಾಝನ್ನು ಸಂಕ್ಷಿಪ್ತಗೊಳಿಸಿ ನಿರ್ವಹಿಸುವುದರಲ್ಲಿ ನಿಮಗೆ ದೋಷವಿಲ್ಲ. ಖಂಡಿತವಾಗಿಯೂ ಸತ್ಯನಿಷೇಧಿಗಳು ನಿಮ್ಮ ಪ್ರತ್ಯಕ್ಷ ಶತ್ರುಗಳಾಗಿರುವರು.

وَإِذَا كُنتَ فِيهِمْ فَأَقَمْتَ لَهُمُ ٱلصَّلَوٰةَ فَلْتَقُمْ طَآئِفَةٌ مِّنْهُم مَّعَكَ وَلْيَأْخُذُوٓا۟ أَسْلِحَتَهُمْ ۖ فَإِذَا سَجَدُوا۟ فَلْيَكُونُوا۟ مِن وَرَآئِكُمْ وَلْتَأْتِ طَآئِفَةٌ أُخْرَىٰ لَمْ يُصَلُّوا۟ فَلْيُصَلُّوا۟ مَعَكَ وَلْيَأْخُذُوا۟ حِذْرَهُمْ وَأَسْلِحَتَهُمْ ۗ وَدَّ ٱلَّذِينَ كَفَرُوا۟ لَوْ تَغْفُلُونَ عَنْ أَسْلِحَتِكُمْ وَأَمْتِعَتِكُمْ فَيَمِيلُونَ عَلَيْكُم مَّيْلَةً وَٰحِدَةً ۚ وَلَا جُنَاحَ عَلَيْكُمْ إِن كَانَ بِكُمْ أَذًى مِّن مَّطَرٍ أَوْ كُنتُم مَّرْضَىٰٓ أَن تَضَعُوٓا۟ أَسْلِحَتَكُمْ ۖ

**102.** (ಓ ಪ್ರವಾದಿಯವರೇ!) ತಾವು ಅವರ ಜೊತೆಗಿರುವಾಗ ಮತ್ತು ಅವರಿಗೆ ನಾಯಕತ್ವ ನೀಡುತ್ತಾ ನಮಾಝ್ ನಿರ್ವಹಿಸುತ್ತಿರುವಾಗ ಅವರ ಪೈಕಿ ಒಂದು ಗುಂಪು ತಮ್ಮ ಜೊತೆಗೆ ನಿಲ್ಲಲಿ. ಅವರು ತಮ್ಮ ಆಯುಧಗಳನ್ನು ಹಿಡಿದು ಕೊಂಡಿರಲಿ. ಅವರು ಸುಜೂದ್ ಮಾಡಿದ ನಂತರ ತಮ್ಮ ಹಿಂಭಾಗಕ್ಕೆ ಸರಿದು ನಿಂತು ನಮಾಝ್ ನಿರ್ವಹಿಸದ ಇನ್ನೊಂದು ಗುಂಪು ಬಂದು ತಮ್ಮೊಂದಿಗೆ ನಮಾಝ್ ನಿರ್ವಹಿಸಲಿ. ಅವರು ಎಚ್ಚರ ವಹಿಸುತ್ತಿರಲಿ ಮತ್ತು ತಮ್ಮ ಆಯುಧಗಳನ್ನು ಹಿಡಿದುಕೊಂಡಿರಲಿ. ನೀವು ನಿಮ್ಮ ಆಯುಧಗಳ ಬಗ್ಗೆ ಮತ್ತು ನಿಮ್ಮ ಸಾಮಗ್ರಿಗಳ

وَخُذُواْ حِذۡرَكُمۡۗ إِنَّ ٱللَّهَ أَعَدَّ لِلۡكَٰفِرِينَ عَذَابٗا مُّهِينٗا ١٠٢

ಬಗ್ಗೆ ಅಲಕ್ಷ್ಯರಾದರೆ ನಿಮ್ಮ ಮೇಲೆ ಒಮ್ಮೆಲೆ ಮುಗಿಬಿದ್ದು ದಾಳಿ ಮಾಡಬಹುದೆಂದು ಸತ್ಯನಿಷೇಧಿಗಳು ಆಶಿಸುವರು. ಆದರೆ ಮಳೆಯ ನಿಮಿತ್ತ ನಿಮಗೆ ಕಿರಿಕಿರಿಯುಂಟಾದರೆ ಅಥವಾ ನೀವು ರೋಗಪೀಡಿತರಾದರೆ ನಿಮ್ಮ ಆಯುಧಗಳನ್ನು ಕೆಳಗಿಡುವುದರಲ್ಲಿ ದೋಷವಿಲ್ಲ. ಆದರೆ ನೀವು ಎಚ್ಚರವಹಿಸುತ್ತಿರಿ. ಖಂಡಿತವಾಗಿಯೂ ಅಲ್ಲಾಹು ಸತ್ಯನಿಷೇಧಿಗಳಿಗೆ ಅಪಮಾನಕರವಾದ ಶಿಕ್ಷೆಯನ್ನು ಸಿದ್ಧಗೊಳಿಸಿರುವನು.

فَإِذَا قَضَيۡتُمُ ٱلصَّلَوٰةَ فَٱذۡكُرُواْ ٱللَّهَ قِيَٰمٗا وَقُعُودٗا وَعَلَىٰ جُنُوبِكُمۡۚ فَإِذَا ٱطۡمَأۡنَنتُمۡ فَأَقِيمُواْ ٱلصَّلَوٰةَۚ إِنَّ ٱلصَّلَوٰةَ كَانَتۡ عَلَى ٱلۡمُؤۡمِنِينَ كِتَٰبٗا مَّوۡقُوتٗا ١٠٣

**103.** ನೀವು ನಮಾಝ್ ನಿರ್ವಹಿಸಿದ ಬಳಿಕ ನಿಂತುಕೊಂಡು, ಕುಳಿತುಕೊಂಡು ಮತ್ತು ಮಲಗಿಕೊಂಡು ಅಲ್ಲಾಹುವನ್ನು ಸ್ಮರಿಸಿರಿ. ಶಾಂತಿಯಿರುವ ಸಂದರ್ಭದಲ್ಲಿ ನೀವು ನಮಾಝನ್ನು ಕ್ರಮ ಪ್ರಕಾರ ಸಂಸ್ಥಾಪಿಸಿರಿ. ಖಂಡಿತವಾಗಿಯೂ ನಮಾಝ್ ಸತ್ಯವಿಶ್ವಾಸಿಗಳ ಮೇಲೆ ಸಮಯ ನಿಶ್ಚಯಿಸಲಾದ ಒಂದು ಕಡ್ಡಾಯ ಕರ್ಮವಾಗಿದೆ.

وَلَا تَهِنُواْ فِي ٱبۡتِغَآءِ ٱلۡقَوۡمِۖ إِن تَكُونُواْ تَأۡلَمُونَ فَإِنَّهُمۡ يَأۡلَمُونَ كَمَا تَأۡلَمُونَۖ وَتَرۡجُونَ مِنَ ٱللَّهِ مَا لَا يَرۡجُونَۗ وَكَانَ ٱللَّهُ عَلِيمًا حَكِيمًا ١٠٤

**104.** ಶತ್ರು ಸಮೂಹವನ್ನು ಅರಸುವುದರಲ್ಲಿ ನೀವು ಬಲಹೀನರಾಗದಿರಿ. ನೀವು ನೋವು ಅನುಭವಿಸುತ್ತಿರುವಿರಿ ಎಂದಾದರೆ ನೀವು ನೋವು ಅನುಭವಿಸುತ್ತಿರುವಂತೆಯೇ ಅವರೂ ನೋವು ಅನುಭವಿಸುತ್ತಿರುವರು.(1) ಅವರಿಗೆ ನಿರೀಕ್ಷಿಸಲಿಕ್ಕಿಲ್ಲದ್ದನ್ನು (ಅನುಗ್ರಹವನ್ನು) ನೀವು ಅಲ್ಲಾಹುವಿನಿಂದ ನಿರೀಕ್ಷಿಸುತ್ತಿರುವಿರಿ. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

1 ಗಾಯ, ಕಷ್ಟನಷ್ಟ ಇತ್ಯಾದಿಗಳುಂಟಾಗಬಹುದೆಂದು ಭಾವಿಸಿ ನೀವು ಪ್ರತ್ಯಾಕ್ರಮಣ ಮಾಡಲು ಹಿಂಜರಿಯದಿರಿ. ನಿಮ್ಮಂತೆಯೇ ಶತ್ರುಗಳೂ ಕೂಡ ಇವೆಲ್ಲವನ್ನೂ ಅನುಭವಿಸುತ್ತಿರುವರು.

إِنَّآ أَنزَلۡنَآ إِلَيۡكَ ٱلۡكِتَٰبَ بِٱلۡحَقِّ لِتَحۡكُمَ
بَيۡنَ ٱلنَّاسِ بِمَآ أَرَىٰكَ ٱللَّهُۚ وَلَا تَكُن
لِّلۡخَآئِنِينَ خَصِيمٗا ١٠٥

105. ಅಲ್ಲಾಹು ತಮಗೆ ತೋರಿಸಿಕೊಟ್ಟ ಪ್ರಕಾರ ತಾವು ಜನರ ಮಧ್ಯೆ ತೀರ್ಪು ನೀಡುವ ಸಲುವಾಗಿ ನಾವು ತಮಗೆ ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು. ತಾವು ವಂಚಕರಿಗಾಗಿ ವಾದಿಸುವವರಾಗದಿರಿ.

وَٱسۡتَغۡفِرِ ٱللَّهَۖ إِنَّ ٱللَّهَ كَانَ غَفُورٗا
رَّحِيمٗا ١٠٦

106. ಅಲ್ಲಾಹುವಿನೊಂದಿಗೆ ಪಾಪಮುಕ್ತಿ ಬೇಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَلَا تُجَٰدِلۡ عَنِ ٱلَّذِينَ يَخۡتَانُونَ أَنفُسَهُمۡۚ
إِنَّ ٱللَّهَ لَا يُحِبُّ مَن كَانَ خَوَّانًا أَثِيمٗا ١٠٧

107. ಆತ್ಮವಂಚನೆ ಮಾಡುವವರಿಗಾಗಿ ತಾವು ತರ್ಕಿಸದಿರಿ. ಮಹಾ ವಂಚಕನೂ ಪಾಪಿಯೂ ಆಗಿರುವ ಯಾರನ್ನೂ ಅಲ್ಲಾಹು ಮೆಚ್ಚಲಾರನು.

يَسۡتَخۡفُونَ مِنَ ٱلنَّاسِ وَلَا يَسۡتَخۡفُونَ
مِنَ ٱللَّهِ وَهُوَ مَعَهُمۡ إِذۡ يُبَيِّتُونَ مَا لَا
يَرۡضَىٰ مِنَ ٱلۡقَوۡلِۚ وَكَانَ ٱللَّهُ بِمَا يَعۡمَلُونَ
مُحِيطًا ١٠٨

108. ಅವರು ಜನರಿಂದ (ವಾಸ್ತವಿಕತೆಗಳನ್ನು) ಮರೆ ಮಾಚುತ್ತಿರುವರು. ಆದರೆ ಅಲ್ಲಾಹುವಿನಿಂದ (ಏನನ್ನೂ) ಮರೆಮಾಚಲು ಅವರಿಗೆ ಸಾಧ್ಯವಾಗದು. ಅಲ್ಲಾಹು ಮೆಚ್ಚದ ಮಾತುಗಳೊಂದಿಗೆ ಅವರು ರಾತ್ರಿಯಲ್ಲಿ ಗೂಢಾಲೋಚನೆ ಮಾಡುತ್ತಿರುವಾಗ ಅವನು ಅವರೊಂದಿಗೇ ಇರುವನು. ಅವರು ಮಾಡುತ್ತಿರುವುದನ್ನೆಲ್ಲ ಅಲ್ಲಾಹು ಪೂರ್ಣವಾಗಿ ಅರಿಯುವವನಾಗಿರುವನು.

هَٰٓأَنتُمۡ هَٰٓؤُلَآءِ جَٰدَلۡتُمۡ عَنۡهُمۡ فِي
ٱلۡحَيَوٰةِ ٱلدُّنۡيَا فَمَن يُجَٰدِلُ ٱللَّهَ عَنۡهُمۡ
يَوۡمَ ٱلۡقِيَٰمَةِ أَم مَّن يَكُونُ عَلَيۡهِمۡ
وَكِيلٗا ١٠٩

109. ಓ ಜನರೇ! ಐಹಿಕ ಜೀವನದಲ್ಲಿ ನೀವು ಅವರಿಗಾಗಿ ತರ್ಕಿಸಿರುವಿರಿ. ಆದರೆ ಪುನರುತ್ಥಾನದ ದಿನಂದು ಅವರಿಗಾಗಿ ಅಲ್ಲಾಹುವಿನೊಂದಿಗೆ ತರ್ಕಿಸುವವನು ಯಾರಿರುವನು? ಅಥವಾ ಅವರ ಕಾರ್ಯವನ್ನು ವಹಿಸಿಕೊಳ್ಳುವವನು ಯಾರಿರುವನು?

وَمَن يَعۡمَلۡ سُوٓءًا أَوۡ يَظۡلِمۡ نَفۡسَهُۥ ثُمَّ
يَسۡتَغۡفِرِ ٱللَّهَ يَجِدِ ٱللَّهَ غَفُورٗا رَّحِيمٗا ١١٠

110. ಯಾರಾದರೂ ಒಂದು ಪಾಪವನ್ನು ಮಾಡಿದರೆ ಅಥವಾ ಸ್ವತಃ ತನ್ನ ಮೇಲೆಯೇ ಅಕ್ರಮವೆಸಗಿದರೆ ತರುವಾಯ ಅವನು ಅಲ್ಲಾಹುವಿನೊಂದಿಗೆ ಪಾಪಮುಕ್ತಿ

ಬೇಡುವುದಾದರೆ ಅಲ್ಲಾಹುವನ್ನು ಅತ್ಯಧಿಕ ಕ್ಷಮಿಸುವವನಾಗಿಯೂ ಕರುಣಾನಿಧಿಯಾಗಿಯೂ ಕಾಣುವನು.

**111.** ಯಾರು ಪಾಪವನ್ನು ಗಳಿಸುವನೋ ಅವನದನ್ನು ಗಳಿಸುವುದು ಸ್ವತಃ ತನಗೆ ದೋಷಕರವಾಗಿಯೇ ಆಗಿದೆ. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَمَن يَكۡسِبۡ إِثۡمٗا فَإِنَّمَا يَكۡسِبُهُۥ عَلَىٰ
نَفۡسِهِۦۚ وَكَانَ ٱللَّهُ عَلِيمًا حَكِيمٗا ﴿١١١﴾

**112.** ಯಾರಾದರೂ ಒಂದು ದೋಷವನ್ನು ಅಥವಾ ಪಾಪವನ್ನು ಮಾಡಿ ತರುವಾಯ ಅದನ್ನು ಒಬ್ಬ ನಿರಪರಾಧಿಯ ಮೇಲೆ ಹೊರಿಸಿದರೆ ಖಂಡಿತವಾಗಿಯೂ ಅವನು ಒಂದು ಸುಳ್ಳಾರೋಪವನ್ನೂ ಪ್ರತ್ಯಕ್ಷವಾದ ಒಂದು ಪಾಪವನ್ನೂ ವಹಿಸುವವನಾಗಿರುವನು.

وَمَن يَكۡسِبۡ خَطِيٓـَٔةً أَوۡ إِثۡمٗا ثُمَّ يَرۡمِ
بِهِۦ بَرِيٓـٔٗا فَقَدِ ٱحۡتَمَلَ بُهۡتَٰنٗا وَإِثۡمٗا
مُّبِينٗا ﴿١١٢﴾

**113.** ತಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯ ಇಲ್ಲದಿರುತ್ತಿದ್ದರೆ ಅವರ ಪೈಕಿ ಒಂದು ಗುಂಪು ತಮ್ಮನ್ನು ಪಥಭ್ರಷ್ಟಗೊಳಿಸಲು ಸಿದ್ಧರಾಗಿಬಿಡುತ್ತಿದ್ದರು. ಆದರೆ ಅವರು ಪಥಭ್ರಷ್ಟಗೊಳಿಸುತ್ತಿರುವುದು ಸ್ವತಃ ತಮ್ಮನ್ನೇ ಆಗಿದೆ. ಅವರು ತಮಗೆ ಯಾವುದೇ ಹಾನಿಯನ್ನೂ ಮಾಡಲಾರರು. ಅಲ್ಲಾಹು ತಮಗೆ ಗ್ರಂಥವನ್ನೂ ಜ್ಞಾನವನ್ನೂ ಅವತೀರ್ಣಗೊಳಿಸಿರುವನು ಮತ್ತು ತಮಗೆ ಅರಿವಿಲ್ಲದಿರುವುದನ್ನು ಕಲಿಸಿರುವನು. ತಮ್ಮ ಮೇಲಿರುವ ಅಲ್ಲಾಹುವಿನ ಅನುಗ್ರಹವು ಅತ್ಯಂತ ಮಹತ್ತರವಾದುದಾಗಿದೆ.

وَلَوۡلَا فَضۡلُ ٱللَّهِ عَلَيۡكَ وَرَحۡمَتُهُۥ لَهَمَّت
طَّآئِفَةٞ مِّنۡهُمۡ أَن يُضِلُّوكَ وَمَا يُضِلُّونَ إِلَّآ
أَنفُسَهُمۡۖ وَمَا يَضُرُّونَكَ مِن شَيۡءٖۚ وَأَنزَلَ
ٱللَّهُ عَلَيۡكَ ٱلۡكِتَٰبَ وَٱلۡحِكۡمَةَ وَعَلَّمَكَ
مَا لَمۡ تَكُن تَعۡلَمُۚ وَكَانَ فَضۡلُ ٱللَّهِ
عَلَيۡكَ عَظِيمٗا ﴿١١٣﴾

**114.** ಏನಾದರೂ ದಾನಧರ್ಮ ಮಾಡುವುದಕ್ಕಾಗಲಿ, ಸದಾಚಾರ ಕೈಗೊಳ್ಳುವುದಕ್ಕಾಗಲಿ ಅಥವಾ ಜನರ ಮಧ್ಯೆ ಸಂಧಾನ ಮಾಡುವುದಕ್ಕಾಗಲಿ ಆದೇಶಿಸುವವರ ಮಾತುಗಳ ಹೊರತು ಅವರ ಗೂಢಾಲೋಚನೆಗಳ ಪೈಕಿ ಹೆಚ್ಚಿನವುಗಳಲ್ಲಿಯೂ ಯಾವುದೇ ಒಳಿತಿಲ್ಲ.

۞لَّا خَيۡرَ فِي كَثِيرٖ مِّن نَّجۡوَىٰهُمۡ إِلَّا مَنۡ
أَمَرَ بِصَدَقَةٍ أَوۡ مَعۡرُوفٍ أَوۡ إِصۡلَٰحِۭ بَيۡنَ
ٱلنَّاسِۚ وَمَن يَفۡعَلۡ ذَٰلِكَ ٱبۡتِغَآءَ مَرۡضَاتِ
ٱللَّهِ فَسَوۡفَ نُؤۡتِيهِ أَجۡرًا عَظِيمٗا ﴿١١٤﴾

ಯಾರು ಅಲ್ಲಾಹುವಿನ ಸಂತೃಪ್ತಿಯನ್ನು ಅರಸುತ್ತಾ ಅದನ್ನು ಮಾಡುತ್ತಾನೋ ಅವನಿಗೆ ನಾವು ಮಹಾ ಪ್ರತಿಫಲವನ್ನು ನೀಡುವೆವು.

**115.** ತನಗೆ ಸನ್ಮಾರ್ಗವು ಸ್ಪಷ್ಟವಾದ ಬಳಿಕ ಯಾರು ಸಂದೇಶವಾಹಕರಿಗೆ ವಿರುದ್ಧವಾಗಿ ನಡೆಯುವನೋ ಮತ್ತು ಸತ್ಯವಿಶ್ವಾಸಿಗಳದ್ದಲ್ಲದ ಮಾರ್ಗವನ್ನು ಅನುಸರಿಸುವನೋ ಅವನು ತಿರುಗಿದ ಮಾರ್ಗಕ್ಕೆ ನಾವು ಅವನನ್ನು ತಿರುಗಿಸುವೆವು ಮತ್ತು ನರಕಾಗ್ನಿಗೆಸೆದು ಉರಿಸುವೆವು. ಆ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!

وَمَن يُشَاقِقِ ٱلرَّسُولَ مِنۢ بَعۡدِ مَا تَبَيَّنَ لَهُ ٱلۡهُدَىٰ وَيَتَّبِعۡ غَيۡرَ سَبِيلِ ٱلۡمُؤۡمِنِينَ نُوَلِّهِۦ مَا تَوَلَّىٰ وَنُصۡلِهِۦ جَهَنَّمَۖ وَسَآءَتۡ مَصِيرًا ﴿١١٥﴾

**116.** ತನ್ನೊಂದಿಗೆ ಸಹಭಾಗಿತ್ವ ಮಾಡಲಾಗುವುದನ್ನು ಅಲ್ಲಾಹು ಖಂಡಿತವಾಗಿಯೂ ಕ್ಷಮಿಸಲಾರನು. ಅದರ ಹೊರತಾಗಿರುವುದನ್ನು ಅವನಿಚ್ಛಿಸುವವರಿಗೆ ಕ್ಷಮಿಸುವನು. ಯಾರು ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವನೋ ಅವನು ವಿದೂರವಾದ ಪಥಭ್ರಷ್ಟತೆಯಲ್ಲಿರುವನು.

إِنَّ ٱللَّهَ لَا يَغۡفِرُ أَن يُشۡرَكَ بِهِۦ وَيَغۡفِرُ مَا دُونَ ذَٰلِكَ لِمَن يَشَآءُۚ وَمَن يُشۡرِكۡ بِٱللَّهِ فَقَدۡ ضَلَّ ضَلَٰلَۢا بَعِيدًا ﴿١١٦﴾

**117.** ಅಲ್ಲಾಹುವಿನ ಹೊರತು ಅವರು ಕರೆದು ಪ್ರಾರ್ಥಿಸುತ್ತಿರುವುದು ಕೆಲವು ದೇವತೆಗಳನ್ನೇ ವಿನಾ ಇನ್ನೇನಲ್ಲ. (ವಾಸ್ತವಿಕವಾಗಿ) ಅವರು ಕರೆದು ಪ್ರಾರ್ಥಿಸುತ್ತಿರುವುದು ಧಿಕ್ಕಾರಿಯಾದ ಸೈತಾನನನ್ನು ಮಾತ್ರವಾಗಿದೆ.

إِن يَدۡعُونَ مِن دُونِهِۦٓ إِلَّآ إِنَٰثٗا وَإِن يَدۡعُونَ إِلَّا شَيۡطَٰنٗا مَّرِيدٗا ﴿١١٧﴾

**118.** ಅಲ್ಲಾಹು ಅವನನ್ನು (ಸೈತಾನನನ್ನು) ಶಪಿಸಿರುವನು. ಅವನು (ಅಲ್ಲಾಹುವಿನೊಂದಿಗೆ) ಹೇಳಿದನು: 'ನಿನ್ನ ದಾಸರ ಪೈಕಿ (ನನಗಿರುವ) ಒಂದು ನಿಶ್ಚಿತ ಪಾಲನ್ನು ನಾನು ಪಡೆದೇ ತೀರುವೆನು.

لَّعَنَهُ ٱللَّهُۘ وَقَالَ لَأَتَّخِذَنَّ مِنۡ عِبَادِكَ نَصِيبٗا مَّفۡرُوضٗا ﴿١١٨﴾

**119.** ಖಂಡಿತವಾಗಿಯೂ ನಾನು ಅವರನ್ನು ದಾರಿಗೆಡಿಸುವೆನು ಮತ್ತು ಅವರಲ್ಲಿ ಮಿಥ್ಯ ವ್ಯಾಮೋಹಗಳನ್ನು ಹುಟ್ಟಿಸುವೆನು.

وَلَأُضِلَّنَّهُمۡ وَلَأُمَنِّيَنَّهُمۡ وَلَأٓمُرَنَّهُمۡ فَلَيُبَتِّكُنَّ ءَاذَانَ ٱلۡأَنۡعَٰمِ وَلَأٓمُرَنَّهُمۡ

ಖಂಡಿತವಾಗಿಯೂ ನಾನು ಅವರೊಂದಿಗೆ ಆದೇಶಿಸುವೆನು. ಆಗ ಅವರು ಜಾನುವಾರುಗಳ ಕಿವಿಗಳನ್ನು ಹರಿಯುವರು.(1) ಖಂಡಿತವಾಗಿಯೂ ನಾನು ಅವರೊಂದಿಗೆ ಆದೇಶಿಸುವೆನು. ಆಗ ಅವರು ಅಲ್ಲಾಹುವಿನ ಸೃಷ್ಟಿ (ಪ್ರಕೃತಿ) ಯನ್ನು ಬದಲಾಯಿಸುವರು.'(2) ಯಾರು ಅಲ್ಲಾಹುವಿನ ಹೊರತು ಸೈತಾನನನ್ನು ರಕ್ಷಕನಾಗಿ ಮಾಡಿಕೊಳ್ಳುವನೋ ಖಂಡಿತವಾಗಿಯೂ ಅವನು ಸ್ಪಷ್ಟವಾದ ನಷ್ಟಕ್ಕೀಡಾಗಿರುವನು.

فَلَيُغَيِّرُنَّ خَلۡقَ ٱللَّهِۚ وَمَن يَتَّخِذِ ٱلشَّيۡطَٰنَ وَلِيّٗا مِّن دُونِ ٱللَّهِ فَقَدۡ خَسِرَ خُسۡرَانٗا مُّبِينٗا ١١٩

**120.** ಅವನು (ಸೈತಾನನು) ಅವರಿಗೆ ವಾಗ್ದಾನ ಮಾಡುವನು ಮತ್ತು ಅವರಲ್ಲಿ ಮಿಥ್ಯ ವ್ಯಾಮೋಹಗಳನ್ನು ಹುಟ್ಟಿಸುವನು. ಅವರಿಗೆ ಸೈತಾನನು ವಾಗ್ದಾನ ಮಾಡುವುದು ವಂಚನೆಯ ವಿನಾ ಇನ್ನೇನೂ ಆಗಿರಲಾರದು.

يَعِدُهُمۡ وَيُمَنِّيهِمۡۖ وَمَا يَعِدُهُمُ ٱلشَّيۡطَٰنُ إِلَّا غُرُورًا ١٢٠

**121.** ಅಂತಹವರ ವಾಸಸ್ಥಳವು ನರಕಾಗ್ನಿಯಾಗಿದೆ. ಅದರಿಂದ ಪಾರಾಗಲು ಯಾವ ದಾರಿಯನ್ನೂ ಅವರು ಕಾಣಲಾರರು.

أُوْلَٰٓئِكَ مَأۡوَىٰهُمۡ جَهَنَّمُ وَلَا يَجِدُونَ عَنۡهَا مَحِيصٗا ١٢١

**122.** ಆದರೆ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರನ್ನು ನಾವು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವೆವು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಇದು ಅಲ್ಲಾಹುವಿನ ಸತ್ಯ ವಾಗ್ದಾನವಾಗಿದೆ. ಅಲ್ಲಾಹುವಿಗಿಂತಲೂ ಸತ್ಯಸಂಧವಾಗಿ ಮಾತನಾಡುವವನು ಇನ್ನಾರಿರುವನು?

وَٱلَّذِينَ ءَامَنُواْ وَعَمِلُواْ ٱلصَّٰلِحَٰتِ سَنُدۡخِلُهُمۡ جَنَّٰتٖ تَجۡرِي مِن تَحۡتِهَا ٱلۡأَنۡهَٰرُ خَٰلِدِينَ فِيهَآ أَبَدٗاۖ وَعۡدَ ٱللَّهِ حَقّٗاۚ وَمَنۡ أَصۡدَقُ مِنَ ٱللَّهِ قِيلٗا ١٢٢

1 ಕೆಲವು ಆರಾಧ್ಯರಿಗೆ ಹರಕೆಯಾಗಿ ಸಲ್ಲಿಸಲ್ಪಟ್ಟ ಒಂಟೆಗಳನ್ನು ಗುರುತಿಸಲು ಅರಬರು ಅವುಗಳ ಕಿವಿಗಳನ್ನು ಕತ್ತರಿಸುತ್ತಿದ್ದರು.

2 ಅಲ್ಲಾಹು ಸರ್ವ ವಸ್ತುವನ್ನೂ ಸಂತುಲಿತ ಪ್ರಕೃತಿಯೊಂದಿಗೆ ಸೃಷ್ಟಿಸಿರುವನು. ಮಾನವ ಜೀವನವು ಕೂಡ ಈ ಪ್ರಕೃತಿನಿಯಮಗಳಿಗೆ ಒಳಪಟ್ಟಿದೆ. ಪ್ರಕೃತಿ ನಿಯಮಗಳಿಗೆ ವಿರುದ್ಧವಾದ ಯಾವುದೇ ಪ್ರವೃತ್ತಿಯೂ ದುಷ್ಪರಿಣಾಮಗಳನ್ನು ಉಂಟುಮಾಡುತ್ತವೆಯಾದ್ದರಿಂದ ಅದು ನಿಷಿದ್ಧವಾಗಿದೆ. ಪ್ರಕೃತಿ ವಿರುದ್ಧ ಲೈಂಗಿಕತೆ ಮತ್ತು ಸ್ವಚ್ಛಂದ ಲೈಂಗಿಕತೆಗಳಿಂದುಂಟಾಗುವ ದುಷ್ಪರಿಣಾಮಗಳು ಇಂದು ನಿಷೇಧಿಸಲಾಗದ ಸತ್ಯವಾಗಿ ದೃಢಪಟ್ಟಿವೆ.

123. ವಾಸ್ತವಿಕತೆಯು ನಿಮ್ಮ ಬಯಕೆಗಳಿಗೆ ಅನುಸಾರವಾಗಿಲ್ಲ. ಗ್ರಂಥದವರ ಬಯಕೆಗಳಿಗೆ ಅನುಸಾರವಾಗಿಯೂ ಇಲ್ಲ. ಪಾಪವನ್ನು ಯಾರೇ ಮಾಡಿದರೂ ಅದಕ್ಕಿರುವ ಪ್ರತಿಫಲವನ್ನು ಅವನಿಗೆ ನೀಡಲಾಗುವುದು. ಅಲ್ಲಾಹುವಿನ ಹೊರತು ಯಾವ ರಕ್ಷಕನನ್ನೂ, ಸಹಾಯಕನನ್ನೂ ಅವನು ಕಾಣಲಾರನು.

لَّيۡسَ بِأَمَانِيِّكُمۡ وَلَآ أَمَانِيِّ أَهۡلِ
ٱلۡكِتَٰبِۗ مَن يَعۡمَلۡ سُوٓءٗا يُجۡزَ بِهِۦ
وَلَا يَجِدۡ لَهُۥ مِن دُونِ ٱللَّهِ وَلِيّٗا وَلَا
نَصِيرٗا ١٢٣

124. ಗಂಡಾಗಲಿ ಹೆಣ್ಣಾಗಲಿ ಯಾರು ಸತ್ಯವಿಶ್ವಾಸಿಯಾಗಿರುತ್ತಾ ಸತ್ಕರ್ಮವೆಸಗುತ್ತಾನೋ ಅಂತಹವರು ಸ್ವರ್ಗವನ್ನು ಪ್ರವೇಶಿಸುವರು. ಅವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

وَمَن يَعۡمَلۡ مِنَ ٱلصَّٰلِحَٰتِ مِن ذَكَرٍ
أَوۡ أُنثَىٰ وَهُوَ مُؤۡمِنٞ فَأُوْلَٰٓئِكَ يَدۡخُلُونَ
ٱلۡجَنَّةَ وَلَا يُظۡلَمُونَ نَقِيرٗا ١٢٤

125. ಸಾತ್ವಿಕನಾಗಿರುತ್ತಾ ಯಾರು ತನ್ನ ಮುಖವನ್ನು ಅಲ್ಲಾಹುವಿಗೆ ಶರಣಾಗಿಸುವನೋ ಮತ್ತು ಸತ್ಯಮಾರ್ಗದಲ್ಲಿ ದೃಢವಾಗಿ ನೆಲೆನಿಂತು ಇಬ್ರಾಹೀಮ್‌ರ ಮಾರ್ಗವನ್ನು ಅನುಸರಿಸುವನೋ ಅವನಿಗಿಂತಲೂ ಉತ್ತಮ ಧರ್ಮನಿಷ್ಠೆಯುಳ್ಳವನು ಇನ್ನಾರಿರುವನು? ಅಲ್ಲಾಹು ಇಬ್ರಾಹೀಮ್‌ರನ್ನು ಆಪ್ತಮಿತ್ರರನ್ನಾಗಿ ಮಾಡಿಕೊಂಡಿರುವನು.[1]

وَمَنۡ أَحۡسَنُ دِينٗا مِّمَّنۡ أَسۡلَمَ وَجۡهَهُۥ لِلَّهِ
وَهُوَ مُحۡسِنٞ وَٱتَّبَعَ مِلَّةَ إِبۡرَٰهِيمَ حَنِيفٗاۗ
وَٱتَّخَذَ ٱللَّهُ إِبۡرَٰهِيمَ خَلِيلٗا ١٢٥

126. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಅಲ್ಲಾಹು ಸಕಲ ವಿಷಯಗಳ ಕುರಿತು ಪೂರ್ಣವಾಗಿ ಅರಿಯುವವನಾಗಿರುವನು.

وَلِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۚ
وَكَانَ ٱللَّهُ بِكُلِّ شَيۡءٖ مُّحِيطٗا ١٢٦

127. ಸ್ತ್ರೀಯರ ವಿಷಯದಲ್ಲಿ ಅವರು ತಮ್ಮೊಂದಿಗೆ ವಿಧಿಯನ್ನು ಕೇಳುತ್ತಿರುವರು. ತಾವು ಹೇಳಿರಿ: 'ಅವರ ವಿಷಯದಲ್ಲಿ ಅಲ್ಲಾಹು ನಿಮಗೆ ವಿಧಿ ನೀಡುತ್ತಿರುವನು. ನೀವು ಸ್ತ್ರೀಯರಿಗೆ

وَيَسۡتَفۡتُونَكَ فِي ٱلنِّسَآءِۖ قُلِ ٱللَّهُ يُفۡتِيكُمۡ
فِيهِنَّ وَمَا يُتۡلَىٰ عَلَيۡكُمۡ فِي ٱلۡكِتَٰبِ فِي
يَتَٰمَى ٱلنِّسَآءِ ٱلَّٰتِي لَا تُؤۡتُونَهُنَّ

1 ಒಬ್ಬ ವ್ಯಕ್ತಿ ತನ್ನನ್ನು ತಾನೇ ಅಲ್ಲಾಹುವಿನ ಇಚ್ಛೆಗೆ ಶರಣಾಗಿಸುವುದನ್ನು ಇಸ್ಲಾಮ್ ಎನ್ನಲಾಗುತ್ತದೆ. ಧರ್ಮದ ತಿರುಳು ಇದುವೇ ಆಗಿದೆ. ಅಲ್ಲಾಹು ಇಬ್ರಾಹೀಮ್(عَلَيْهِ ٱلسَّلَامُ)ರವರನ್ನು ಆಪ್ತಮಿತ್ರರನ್ನಾಗಿ ಮಾಡಿರುವುದು ಶರಣಾಗತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಕಾರಣದಿಂದಾಗಿದೆ. ನಾವು ಇಬ್ರಾಹೀಮ್(عَلَيْهِ ٱلسَّلَامُ)ರವರ ವಂಶದವರೆಂದು ಹಕ್ಕು ಮಂಡಿಸುವ ಎಲ್ಲರೂ ಅವರ ಮಾದರಿಯನ್ನು ಅನುಸರಿಸಬೇಕಾಗಿದೆ.

مَا كُتِبَ لَهُنَّ وَتَرْغَبُونَ أَن تَنكِحُوهُنَّ
وَٱلْمُسْتَضْعَفِينَ مِنَ ٱلْوِلْدَٰنِ وَأَن تَقُومُوا۟
لِلْيَتَٰمَىٰ بِٱلْقِسْطِ ۚ وَمَا تَفْعَلُوا۟ مِنْ خَيْرٍ
فَإِنَّ ٱللَّهَ كَانَ بِهِۦ عَلِيمًا ﴿١٢٧﴾

ನಿಶ್ಚಯಿಸಲಾದ ಹಕ್ಕನ್ನು ನೀಡದೆ, ವಿವಾಹವಾಗಲು ಆಶಿಸುವ ಅನಾಥೆಯರ ವಿಷಯದಲ್ಲಿ ನಿಮಗೆ ಈ ಗ್ರಂಥದಲ್ಲಿ ಓದಿಕೊಡಲಾಗುತ್ತಿರುವುದನ್ನು ಮತ್ತು ಬಲಹೀನರಾದ ಮಕ್ಕಳ ವಿಷಯದಲ್ಲಿ (ಓದಿಕೊಡಲಾಗುತ್ತಿರುವುದನ್ನು ಗಮನವಿಟ್ಟು ಆಲಿಸಿರಿ). ಅನಾಥರೊಂದಿಗೆ ನೀವು ನ್ಯಾಯೋಚಿತವಾಗಿ ವರ್ತಿಸಬೇಕೆಂಬ ಆದೇಶವನ್ನೂ (ಗಮನಿಸಿರಿ). ನೀವು ಮಾಡುವ ಯಾವುದೇ ಸತ್ಕಾರ್ಯವನ್ನೂ ಅಲ್ಲಾಹು (ಸಂಪೂರ್ಣವಾಗಿ) ಅರಿಯುವವನಾಗಿರುವನು.

وَإِنِ ٱمْرَأَةٌ خَافَتْ مِنۢ بَعْلِهَا نُشُوزًا أَوْ
إِعْرَاضًا فَلَا جُنَاحَ عَلَيْهِمَآ أَن يُصْلِحَا
بَيْنَهُمَا صُلْحًا ۚ وَٱلصُّلْحُ خَيْرٌ ۗ وَأُحْضِرَتِ
ٱلْأَنفُسُ ٱلشُّحَّ ۚ وَإِن تُحْسِنُوا۟ وَتَتَّقُوا۟ فَإِنَّ
ٱللَّهَ كَانَ بِمَا تَعْمَلُونَ خَبِيرًا ﴿١٢٨﴾

**128.** ಓರ್ವ ಸ್ತ್ರೀ ತನ್ನ ಪತಿಯಿಂದ ವಿರಸವನ್ನೋ ತಿರಸ್ಕಾರವನ್ನೋ ಭಯಪಡುವುದಾದರೆ ಅವರು ಪರಸ್ಪರ ಸಂಧಾನ ಮಾಡಿಕೊಳ್ಳುವುದರಲ್ಲಿ ಅವರಿಗೆ ದೋಷವಿಲ್ಲ. ಸಂಧಾನ ಮಾಡುವುದೇ ಹೆಚ್ಚು ಉತ್ತಮವಾಗಿದೆ. ಜಿಪುಣತೆಯು ಮನಸ್ಸುಗಳನ್ನು ಬಿಟ್ಟುಹೋಗುವಂತದ್ದಲ್ಲ. ನೀವು ಉತ್ತಮ ರೀತಿಯಲ್ಲಿ ವರ್ತಿಸುತ್ತಲೂ ಭಯಭಕ್ತಿ ಪಾಲಿಸುತ್ತಲೂ ಇರುವುದಾದರೆ ಖಂಡಿತವಾಗಿಯೂ ಅಲ್ಲಾಹು ನೀವು ಮಾಡುತ್ತಿರುವುದೆಲ್ಲವನ್ನೂ ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَلَن تَسْتَطِيعُوٓا۟ أَن تَعْدِلُوا۟ بَيْنَ ٱلنِّسَآءِ
وَلَوْ حَرَصْتُمْ ۖ فَلَا تَمِيلُوا۟ كُلَّ ٱلْمَيْلِ
فَتَذَرُوهَا كَٱلْمُعَلَّقَةِ ۚ وَإِن تُصْلِحُوا۟ وَتَتَّقُوا۟
فَإِنَّ ٱللَّهَ كَانَ غَفُورًا رَّحِيمًا ﴿١٢٩﴾

**129.** ನೀವು ಎಷ್ಟೇ ಹಾತೊರೆದರೂ ಪತ್ನಿಯರ ಮಧ್ಯೆ ಸಮಾನ ನ್ಯಾಯ ಪಾಲಿಸಲು ನಿಮಗೆ ಎಂದೂ ಸಾಧ್ಯವಾಗಲಾರದು. ಆದ್ದರಿಂದ ನೀವು (ಒಬ್ಬಳೆಡೆಗೆ) ಸಂಪೂರ್ಣವಾಗಿ ವಾಲಿಕೊಂಡು ಇನ್ನೊಬ್ಬಳನ್ನು ತೂಗಾಡುತ್ತಿರುವವಳಂತೆ ಬಿಟ್ಟುಬಿಡದಿರಿ. ನೀವು (ನಡತೆಯನ್ನು) ಸುಧಾರಣೆ ಮಾಡುವುದಾದರೆ ಭಯಭಕ್ತಿ ಪಾಲಿಸುವುದಾದರೆ ಅಲ್ಲಾಹು

ಖಂಡಿತವಾಗಿಯೂ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

**130.** ಇನ್ನು ಅವರಿಬ್ಬರೂ ಬೇರ್ಪಡುವುದಾದರೆ ಅಲ್ಲಾಹು ತನ್ನ ವಿಶಾಲವಾದ ಸಾಮರ್ಥ್ಯದಿಂದ ಅವರಲ್ಲಿ ಪ್ರತಿಯೊಬ್ಬರಿಗೂ ಸ್ವಾವಲಂಬನೆಯನ್ನು ನೀಡುವನು. ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ ಯುಕ್ತಿಪೂರ್ಣನೂ ಆಗಿರುವನು.

وَإِن يَتَفَرَّقَا يُغْنِ ٱللَّهُ كُلًّا مِّن سَعَتِهِۦۚ وَكَانَ ٱللَّهُ وَٰسِعًا حَكِيمًا ﴿١٣٠﴾

**131.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ನೀವು ಅಲ್ಲಾಹುವನ್ನು ಭಯಪಡಬೇಕೆಂದು ನಿಮಗಿಂತ ಮುಂಚೆ ಗ್ರಂಥ ನೀಡಲಾದವರೊಂದಿಗೂ ನಿಮ್ಮೊಂದಿಗೂ ನಾವು ವಸಿಯ್ಯತ್ ಮಾಡಿರುವೆವು. ನೀವು ಅವಿಶ್ವಾಸವಿಡುವುದಾದರೆ (ಅಲ್ಲಾಹುವಿಗೆ ಯಾವುದೇ ನಷ್ಟವಿಲ್ಲ. ಯಾಕೆಂದರೆ) ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಅಲ್ಲಾಹು ನಿರಪೇಕ್ಷನೂ ಸ್ತುತ್ಯರ್ಹನೂ ಆಗಿರುವನು.

وَلِلَّهِ مَا فِى ٱلسَّمَٰوَٰتِ وَمَا فِى ٱلْأَرْضِۗ وَلَقَدْ وَصَّيْنَا ٱلَّذِينَ أُوتُوا۟ ٱلْكِتَٰبَ مِن قَبْلِكُمْ وَإِيَّاكُمْ أَنِ ٱتَّقُوا۟ ٱللَّهَۚ وَإِن تَكْفُرُوا۟ فَإِنَّ لِلَّهِ مَا فِى ٱلسَّمَٰوَٰتِ وَمَا فِى ٱلْأَرْضِۚ وَكَانَ ٱللَّهُ غَنِيًّا حَمِيدًا ﴿١٣١﴾

**132.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಕಾರ್ಯನಿರ್ವಾಹಕನಾಗಿ ಅಲ್ಲಾಹು ಸಾಕು.

وَلِلَّهِ مَا فِى ٱلسَّمَٰوَٰتِ وَمَا فِى ٱلْأَرْضِۚ وَكَفَىٰ بِٱللَّهِ وَكِيلًا ﴿١٣٢﴾

**133.** ಓ ಜನರೇ! ತಾನಿಚ್ಛಿಸುವುದಾದರೆ ಅವನು ನಿಮ್ಮನ್ನು ಅಳಿಸಿಹಾಕಿ ಬೇರೊಂದು ಜನತೆಯನ್ನು ತರುವನು. ಅಲ್ಲಾಹು ಅದರಲ್ಲಿ ಸಾಮರ್ಥ್ಯವುಳ್ಳವನಾಗಿರುವನು.

إِن يَشَأْ يُذْهِبْكُمْ أَيُّهَا ٱلنَّاسُ وَيَأْتِ بِـَٔاخَرِينَۚ وَكَانَ ٱللَّهُ عَلَىٰ ذَٰلِكَ قَدِيرًا ﴿١٣٣﴾

**134.** ಯಾರಾದರೂ ಇಹಲೋಕದ ಪ್ರತಿಫಲವನ್ನು ಬಯಸುವುದಾದರೆ ಇಹಲೋಕದ ಪ್ರತಿಫಲ ಮತ್ತು ಪರಲೋಕದ ಪ್ರತಿಫಲವಿರುವುದು ಅಲ್ಲಾಹುವಿನ ಬಳಿಯಲ್ಲಾಗಿದೆ (ಎಂಬುದನ್ನು ಅವನು ಅರಿತಿರಲಿ). ಅಲ್ಲಾಹು ಎಲ್ಲವನ್ನೂ ಆಲಿಸುವವನೂ ವೀಕ್ಷಿಸುವವನೂ ಆಗಿರುವನು.

مَّن كَانَ يُرِيدُ ثَوَابَ ٱلدُّنْيَا فَعِندَ ٱللَّهِ ثَوَابُ ٱلدُّنْيَا وَٱلْـَٔاخِرَةِۚ وَكَانَ ٱللَّهُ سَمِيعًۢا بَصِيرًا ﴿١٣٤﴾

135. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿಗೋಸ್ಕರ ಸಾಕ್ಷ್ಯವಹಿಸುವವರಾಗಿರುತ್ತಾ ದೃಢವಾಗಿ ನಿಂತು ನ್ಯಾಯ ಪಾಲಿಸುವವರಾಗಿರಿ. ಅದು ಸ್ವತಃ ನಿಮಗೆ ಅಥವಾ ನಿಮ್ಮ ಮಾತಾಪಿತರಿಗೆ ಅಥವಾ ನಿಕಟ ಸಂಬಂಧಿಕರಿಗೆ ವಿರುದ್ಧವಾಗಿದ್ದರೂ ಸರಿ. (ನ್ಯಾಯಬೇಡುವವನು) ಧನಿಕನಾಗಿರಲಿ ಬಡವನಾಗಿರಲಿ ಅವರಿಬ್ಬರೊಂದಿಗೂ ಹೆಚ್ಚು ನಿಕಟನಾಗಿರುವವನು ಅಲ್ಲಾಹುವಾಗಿರುವನು. ಆದ್ದರಿಂದ ನೀವು ನ್ಯಾಯ ಪಾಲಿಸದೆ ದೇಹೇಚ್ಛೆಗಳನ್ನು ಅನುಸರಿಸದಿರಿ. ನೀವು ತಿರುಚುವುದಾಗಲಿ ಹಿಂದೆ ಸರಿಯುವುದಾಗಲಿ ಮಾಡಿದರೆ ಖಂಡಿತವಾಗಿಯೂ ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

۞ يَـٰٓأَيُّهَا ٱلَّذِينَ ءَامَنُوا۟ كُونُوا۟ قَوَّٰمِينَ بِٱلْقِسْطِ شُهَدَآءَ لِلَّهِ وَلَوْ عَلَىٰٓ أَنفُسِكُمْ أَوِ ٱلْوَٰلِدَيْنِ وَٱلْأَقْرَبِينَ ۚ إِن يَكُنْ غَنِيًّا أَوْ فَقِيرًا فَٱللَّهُ أَوْلَىٰ بِهِمَا ۖ فَلَا تَتَّبِعُوا۟ ٱلْهَوَىٰٓ أَن تَعْدِلُوا۟ ۚ وَإِن تَلْوُۥٓا۟ أَوْ تُعْرِضُوا۟ فَإِنَّ ٱللَّهَ كَانَ بِمَا تَعْمَلُونَ خَبِيرًا ﴿١٣٥﴾

136. ಓ ಸತ್ಯವಿಶ್ವಾಸಿಗಳೇ! ಅಲ್ಲಾಹುವಿನಲ್ಲಿಯೂ, ಅವನ ಸಂದೇಶವಾಹಕರಲ್ಲಿಯೂ, ಅವನ ಸಂದೇಶವಾಹಕರಿಗೆ ಅವನು ಅವತೀರ್ಣಗೊಳಿಸಿದ ಗ್ರಂಥದಲ್ಲಿಯೂ ಮತ್ತು ಅವರಿಗಿಂತ ಮುಂಚೆ ಅವತೀರ್ಣಗೊಳಿಸಿದ ಗ್ರಂಥದಲ್ಲಿಯೂ ವಿಶ್ವಾಸವಿಡಿರಿ. ಯಾರು ಅಲ್ಲಾಹುವಿನಲ್ಲಿಯೂ, ಅವನ ಮಲಕ್‌ಗಳಲ್ಲಿಯೂ, ಅವನ ಗ್ರಂಥಗಳಲ್ಲಿಯೂ, ಅವನ ಸಂದೇಶವಾಹಕರಲ್ಲಿಯೂ ಮತ್ತು ಅಂತ್ಯದಿನದಲ್ಲಿಯೂ ಅವಿಶ್ವಾಸವಿಡುವನೋ ಖಂಡಿತವಾಗಿಯೂ ಅವನು ವಿದೂರವಾದ ಪಥಭ್ರಷ್ಟತೆಯಲ್ಲಿರುವನು.

يَـٰٓأَيُّهَا ٱلَّذِينَ ءَامَنُوٓا۟ ءَامِنُوا۟ بِٱللَّهِ وَرَسُولِهِۦ وَٱلْكِتَـٰبِ ٱلَّذِى نَزَّلَ عَلَىٰ رَسُولِهِۦ وَٱلْكِتَـٰبِ ٱلَّذِىٓ أَنزَلَ مِن قَبْلُ ۚ وَمَن يَكْفُرْ بِٱللَّهِ وَمَلَـٰٓئِكَتِهِۦ وَكُتُبِهِۦ وَرُسُلِهِۦ وَٱلْيَوْمِ ٱلْـَٔاخِرِ فَقَدْ ضَلَّ ضَلَـٰلًۢا بَعِيدًا ﴿١٣٦﴾

137. (ಒಮ್ಮೆ) ವಿಶ್ವಾಸವಿಡುವುದು, ತರುವಾಯ ಅವಿಶ್ವಾಸವಿಡುವುದು, ತರುವಾಯ ಪುನಃ ವಿಶ್ವಾಸವಿಡುವುದು, ತರುವಾಯ ಪುನಃ ಅವಿಶ್ವಾಸವಿಡುವುದು, ಬಳಿಕ ಯಾರು ಅವಿಶ್ವಾಸವನ್ನು ಹೆಚ್ಚು ಹೆಚ್ಚಾಗಿಸುತ್ತಾರೋ ಅವರಿಗೆ ಅಲ್ಲಾಹು ಎಂದೂ ಕ್ಷಮಿಸಲಾರನು ಮತ್ತು ಅವರನ್ನು ಎಂದೂ ಸನ್ಮಾರ್ಗದೆಡೆಗೆ ಮುನ್ನಡೆಸಲಾರನು.

إِنَّ ٱلَّذِينَ ءَامَنُوا۟ ثُمَّ كَفَرُوا۟ ثُمَّ ءَامَنُوا۟ ثُمَّ كَفَرُوا۟ ثُمَّ ٱزْدَادُوا۟ كُفْرًا لَّمْ يَكُنِ ٱللَّهُ لِيَغْفِرَ لَهُمْ وَلَا لِيَهْدِيَهُمْ سَبِيلًۢا ﴿١٣٧﴾

**138.** ಕಪಟ ವಿಶ್ವಾಸಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆಯೆಂಬ ಶುಭವಾರ್ತೆಯನ್ನು ತಿಳಿಸಿರಿ.

بَشِّرِ ٱلْمُنَٰفِقِينَ بِأَنَّ لَهُمْ عَذَابًا أَلِيمًا ﴿١٣٨﴾

**139.** ಸತ್ಯವಿಶ್ವಾಸಿಗಳನ್ನು ಬಿಟ್ಟು ಸತ್ಯನಿಷೇಧಿಗಳನ್ನು ಆಪ್ತಮಿತ್ರರನ್ನಾಗಿ ಮಾಡಿಕೊಳ್ಳುವವರಾರೋ ಅವರು ಅವರ (ಸತ್ಯನಿಷೇಧಿಗಳ) ಬಳಿ ಪ್ರತಾಪವನ್ನು ಅರಸುತ್ತಿರುವರೇ? ಆದರೆ ಖಂಡಿತವಾಗಿಯೂ ಪ್ರತಾಪವು ಸಂಪೂರ್ಣವಾಗಿ ಅಲ್ಲಾಹುವಿನ ಅಧೀನದಲ್ಲಿದೆ.

ٱلَّذِينَ يَتَّخِذُونَ ٱلْكَٰفِرِينَ أَوْلِيَآءَ مِن دُونِ ٱلْمُؤْمِنِينَ ۚ أَيَبْتَغُونَ عِندَهُمُ ٱلْعِزَّةَ فَإِنَّ ٱلْعِزَّةَ لِلَّهِ جَمِيعًا ﴿١٣٩﴾

**140.** ಅಲ್ಲಾಹುವಿನ ಸೂಕ್ತಿಗಳು ನಿಷೇಧಿಸಲ್ಪಡುವುದನ್ನಾಗಲಿ ಅಪಹಾಸ್ಯಕ್ಕೊಳಗಾಗುವುದನ್ನಾಗಲಿ ನೀವು ಆಲಿಸಿದರೆ ಅಂತಹವರು ಬೇರಾವುದಾದರೂ ವಿಚಾರದಲ್ಲಿ ಪ್ರವೇಶಿಸುವ ತನಕ ನೀವು ಅವರೊಂದಿಗೆ ಕೂರದಿರಿ, ನೀವೇನಾದರೂ ಕೂರುವುದಾದರೆ ನೀವು ಕೂಡ ಅವರಂತೆಯೇ ಆಗುವಿರಿ ಎಂದು ಈ ಗ್ರಂಥದಲ್ಲಿ ಅಲ್ಲಾಹು ನಿಮಗೆ ಅವತೀರ್ಣಗೊಳಿಸಿರುವನು.[1] ಖಂಡಿತವಾಗಿಯೂ ಅಲ್ಲಾಹು ಕಪಟವಿಶ್ವಾಸಿಗಳು ಮತ್ತು ಅವಿಶ್ವಾಸಿಗಳು ಎಲ್ಲರನ್ನೂ ನರಕಾಗ್ನಿಯಲ್ಲಿ ಒಟ್ಟುಗೂಡಿಸುವನು.

وَقَدْ نَزَّلَ عَلَيْكُمْ فِى ٱلْكِتَٰبِ أَنْ إِذَا سَمِعْتُمْ ءَايَٰتِ ٱللَّهِ يُكْفَرُ بِهَا وَيُسْتَهْزَأُ بِهَا فَلَا تَقْعُدُوا۟ مَعَهُمْ حَتَّىٰ يَخُوضُوا۟ فِى حَدِيثٍ غَيْرِهِۦٓ ۚ إِنَّكُمْ إِذًا مِّثْلُهُمْ ۗ إِنَّ ٱللَّهَ جَامِعُ ٱلْمُنَٰفِقِينَ وَٱلْكَٰفِرِينَ فِى جَهَنَّمَ جَمِيعًا ﴿١٤٠﴾

**141.** ನಿಮ್ಮ ಸ್ಥಿತಿಗತಿಗಳನ್ನು ಅವರು (ಕಪಟವಿಶ್ವಾಸಿಗಳು) ಸೂಕ್ಷ್ಮವಾಗಿ ಗಮನಿಸುತ್ತಿರುವರು. ನಿಮಗೆ ಅಲ್ಲಾಹುವಿನ ವತಿಯಿಂದ ಯಾವುದಾದರೂ ಗೆಲುವು ಪ್ರಾಪ್ತವಾದರೆ 'ನಾವು ನಿಮ್ಮೊಂದಿಗಿರಲಿಲ್ಲವೇ?' ಎಂದು ಅವರು ಹೇಳುವರು. ಅವಿಶ್ವಾಸಿಗಳಿಗೇನಾದರೂ ಲಾಭವುಂಟಾದರೆ 'ನಿಮ್ಮ ಮೇಲೆ ನಾವು ಗೆಲುವಿನ ಸಾಧ್ಯತೆಯನ್ನು ಗಳಿಸಿಯೂ ವಿಶ್ವಾಸಿಗಳಿಂದ ನಿಮ್ಮನ್ನು ರಕ್ಷಿಸಲಿಲ್ಲವೇ?' ಎನ್ನುವರು. ಆದರೆ

ٱلَّذِينَ يَتَرَبَّصُونَ بِكُمْ فَإِن كَانَ لَكُمْ فَتْحٌ مِّنَ ٱللَّهِ قَالُوٓا۟ أَلَمْ نَكُن مَّعَكُمْ وَإِن كَانَ لِلْكَٰفِرِينَ نَصِيبٌ قَالُوٓا۟ أَلَمْ نَسْتَحْوِذْ عَلَيْكُمْ وَنَمْنَعْكُم مِّنَ ٱلْمُؤْمِنِينَ ۚ فَٱللَّهُ يَحْكُمُ بَيْنَكُمْ يَوْمَ ٱلْقِيَٰمَةِ ۗ وَلَن يَجْعَلَ ٱللَّهُ لِلْكَٰفِرِينَ عَلَى ٱلْمُؤْمِنِينَ سَبِيلًا ﴿١٤١﴾

---

1 ಈ ಸೂಕ್ತಿ ಅವತೀರ್ಣಗೊಂಡದ್ದು ಮದೀನದಲ್ಲಾಗಿದೆ. ಮಕ್ಕದಲ್ಲಿ ಅವತೀರ್ಣಗೊಂಡ ಸೂರಃ ಅನ್‌ಆಮ್‌ನ 68ನೇ ಸೂಕ್ತಿಯಲ್ಲಿಯೂ ಈ ವಿಷಯದ ಕುರಿತು ಎಚ್ಚರಿಕೆಯಿದೆ.

ಪುನರುತ್ಥಾನ ದಿನದಂದು ಅಲ್ಲಾಹು ನಿಮ್ಮ ಮಧ್ಯೆ ತೀರ್ಪು ನೀಡುವನು. ಅಲ್ಲಾಹು ಸತ್ಯವಿಶ್ವಾಸಿಗಳಿಗೆ ವಿರುದ್ಧವಾಗಿ ಸತ್ಯನಿಷೇಧಿಗಳಿಗೆ ಎಂದಿಗೂ ಮಾರ್ಗವನ್ನು ತೆರೆದುಕೊಡಲಾರನು.

إِنَّ ٱلْمُنَٰفِقِينَ يُخَٰدِعُونَ ٱللَّهَ وَهُوَ خَٰدِعُهُمْ وَإِذَا قَامُوٓاْ إِلَى ٱلصَّلَوٰةِ قَامُواْ كُسَالَىٰ يُرَآءُونَ ٱلنَّاسَ وَلَا يَذْكُرُونَ ٱللَّهَ إِلَّا قَلِيلًا ﴿١٤٢﴾

**142.** ಖಂಡಿತವಾಗಿಯೂ ಕಪಟವಿಶ್ವಾಸಿಗಳು ಅಲ್ಲಾಹುವನ್ನು ವಂಚಿಸುತ್ತಿರುವರು. ಆದರೆ ವಾಸ್ತವಿಕವಾಗಿ ಅಲ್ಲಾಹು ಅವರನ್ನು ವಂಚಿಸುತ್ತಿರುವನು.[1] ಅವರು ನಮಾಝ್‌ಗಾಗಿ ನಿಂತರೆ ಉದಾಸೀನರಾಗಿ ಮತ್ತು ಜನರಿಗೆ ತೋರಿಸುವ ಸಲುವಾಗಿ ನಿಲ್ಲುವರು. ಅಲ್ಪವೇ ವಿನಾ ಅವರು ಅಲ್ಲಾಹುವನ್ನು ಸ್ಮರಿಸಲಾರರು.

مُّذَبْذَبِينَ بَيْنَ ذَٰلِكَ لَآ إِلَىٰ هَٰٓؤُلَآءِ وَلَآ إِلَىٰ هَٰٓؤُلَآءِ ۚ وَمَن يُضْلِلِ ٱللَّهُ فَلَن تَجِدَ لَهُۥ سَبِيلًا ﴿١٤٣﴾

**143.** ಅವರು ಆ ಗುಂಪಿಗೋ ಈ ಗುಂಪಿಗೋ ಸೇರದೆ ಅದರ ಮಧ್ಯದಲ್ಲಿ ತೊಳಲಾಡುತ್ತಿರುವವರು. ಅಲ್ಲಾಹು ಯಾರನ್ನಾದರೂ ದಾರಿಗೆಡಿಸಿದರೆ ತರುವಾಯ ಅವನಿಗೆ ಯಾವ ಮಾರ್ಗವನ್ನೂ ತಾವು ಕಾಣಲಾರಿರಿ.

يَٰٓأَيُّهَا ٱلَّذِينَ ءَامَنُواْ لَا تَتَّخِذُواْ ٱلْكَٰفِرِينَ أَوْلِيَآءَ مِن دُونِ ٱلْمُؤْمِنِينَ ۚ أَتُرِيدُونَ أَن تَجْعَلُواْ لِلَّهِ عَلَيْكُمْ سُلْطَٰنًا مُّبِينًا ﴿١٤٤﴾

**144.** ಓ ಸತ್ಯವಿಶ್ವಾಸಿಗಳೇ! ನೀವು ಸತ್ಯವಿಶ್ವಾಸಿಗಳನ್ನಲ್ಲದೆ ಸತ್ಯನಿಷೇಧಿಗಳನ್ನು ಆಪ್ತಮಿತ್ರರಾಗಿ ಮಾಡಿಕೊಳ್ಳದಿರಿ. ನಿಮ್ಮ ವಿರುದ್ಧ ಅಲ್ಲಾಹುವಿಗೆ ಸ್ಪಷ್ಟ ಪುರಾವೆಯನ್ನು ಮಾಡಿಕೊಡಲು ನೀವು ಇಚ್ಛಿಸುತ್ತಿರುವಿರಾ?

إِنَّ ٱلْمُنَٰفِقِينَ فِى ٱلدَّرْكِ ٱلْأَسْفَلِ مِنَ ٱلنَّارِ وَلَن تَجِدَ لَهُمْ نَصِيرًا ﴿١٤٥﴾

**145.** ಖಂಡಿತವಾಗಿಯೂ ಕಪಟವಿಶ್ವಾಸಿಗಳು ನರಕದ ಅತ್ಯಂತ ತಳಮಟ್ಟದಲ್ಲಿರುವರು. ಅವರಿಗೆ ಯಾವುದೇ ಸಹಾಯಕನನ್ನೂ ತಾವು ಕಾಣಲಾರಿರಿ.

---

1 ಅಲ್ಲಾಹುವನ್ನು ವಂಚಿಸಬಹುದೆಂಬ ಭಾವನೆಯಲ್ಲಿ ಅವರು ಮಾಡುವ ಯಾವುದೇ ಕಾರ್ಯವೂ ಸ್ವತಃ ಅವರಿಗೇ ದೋಷವನ್ನು ತರುತ್ತದೆ. ಹೀಗೆ ಅವರಿಗೆ ಅರಿವಿಲ್ಲದೆಯೇ ಅವರು ಆತ್ಮವಂಚನೆ ಮಾಡುವ ಅವಸ್ಥೆಯನ್ನು ಅಲ್ಲಾಹು ಅವರಿಗೆ ಉಂಟುಮಾಡುತ್ತಾನೆ. ಇದು ಅಲ್ಲಾಹು ಅವರನ್ನು ವಂಚಿಸುತ್ತಿರುವನು ಎಂಬುದರ ತಾತ್ಪರ್ಯವಾಗಿದೆ.

146. ಆದರೆ ಪಶ್ಚಾತ್ತಾಪ ಪಟ್ಟು ಮರಳಿದವರು, ತಮ್ಮ ನಿಲುವನ್ನು ಉತ್ತಮಗೊಳಿಸಿದವರು, ಅಲ್ಲಾಹುವನ್ನು ಬಿಗಿಯಾಗಿ ಹಿಡಿದುಕೊಂಡವರು ಮತ್ತು ತಮ್ಮ ಧರ್ಮವನ್ನು ಅಲ್ಲಾಹುವಿಗೋಸ್ಕರ ನಿಷ್ಕಳಂಕಗೊಳಿಸಿದವರ ಹೊರತು. ಅವರು ಸತ್ಯವಿಶ್ವಾಸಿಗಳ ಜೊತೆಯಲ್ಲಿರುವವರಾಗಿರುವರು. ಸತ್ಯವಿಶ್ವಾಸಿಗಳಿಗೆ ಅಲ್ಲಾಹು ಮಹಾ ಪ್ರತಿಫಲವನ್ನು ನೀಡುವನು.

إِلَّا ٱلَّذِينَ تَابُواْ وَأَصۡلَحُواْ وَٱعۡتَصَمُواْ بِٱللَّهِ وَأَخۡلَصُواْ دِينَهُمۡ لِلَّهِ فَأُوْلَٰٓئِكَ مَعَ ٱلۡمُؤۡمِنِينَۖ وَسَوۡفَ يُؤۡتِ ٱللَّهُ ٱلۡمُؤۡمِنِينَ أَجۡرًا عَظِيمٗا ﴿١٤٦﴾

147. ನೀವು ಕೃತಜ್ಞತೆ ಸಲ್ಲಿಸಿದರೆ ಮತ್ತು ವಿಶ್ವಾಸವಿಟ್ಟರೆ ನಿಮ್ಮನ್ನು ಶಿಕ್ಷಿಸಿ ಅಲ್ಲಾಹುವಿಗೆ ಏನು ಸಿಗಲಿದೆ? ಅಲ್ಲಾಹು ಕೃತಜ್ಞನೂ ಸರ್ವಜ್ಞನೂ ಆಗಿರುವನು.

مَّا يَفۡعَلُ ٱللَّهُ بِعَذَابِكُمۡ إِن شَكَرۡتُمۡ وَءَامَنتُمۡۚ وَكَانَ ٱللَّهُ شَاكِرًا عَلِيمٗا ﴿١٤٧﴾

148. ಕೆಟ್ಟ ಪದಗಳನ್ನು ಬಹಿರಂಗವಾಗಿ ಬಳಸುವುದನ್ನು ಅಲ್ಲಾಹು ಮೆಚ್ಚಲಾರನು; ಆದರೆ ಅನ್ಯಾಯಕ್ಕೊಳಗಾದವನ ಹೊರತು.(1) ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

۞لَّا يُحِبُّ ٱللَّهُ ٱلۡجَهۡرَ بِٱلسُّوٓءِ مِنَ ٱلۡقَوۡلِ إِلَّا مَن ظُلِمَۚ وَكَانَ ٱللَّهُ سَمِيعًا عَلِيمًا ﴿١٤٨﴾

149. ನೀವು ಒಂದು ಸತ್ಕರ್ಮವನ್ನು ಬಹಿರಂಗಪಡಿಸಿದರೆ ಅಥವಾ ರಹಸ್ಯವಾಗಿ ಮಾಡುವುದಾದರೆ ಅಥವಾ ಒಂದು ದುಷ್ಕರ್ಮವನ್ನು ಮನ್ನಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಸರ್ವಶಕ್ತನೂ ಆಗಿರುವನು.

إِن تُبۡدُواْ خَيۡرًا أَوۡ تُخۡفُوهُ أَوۡ تَعۡفُواْ عَن سُوٓءٖ فَإِنَّ ٱللَّهَ كَانَ عَفُوّٗا قَدِيرًا ﴿١٤٩﴾

150. ಅಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ಅವಿಶ್ವಾಸವಿಟ್ಟವರು, (ವಿಶ್ವಾಸ ವಿಚಾರದಲ್ಲಿ) ಅಲ್ಲಾಹು ಮತ್ತು ಅವನ ಸಂದೇಶವಾಹಕರ ಮಧ್ಯೆ ವ್ಯತ್ಯಾಸ ಕಲ್ಪಿಸಲು ಬಯಸುವವರು ಮತ್ತು 'ನಾವು

إِنَّ ٱلَّذِينَ يَكۡفُرُونَ بِٱللَّهِ وَرُسُلِهِۦ وَيُرِيدُونَ أَن يُفَرِّقُواْ بَيۡنَ ٱللَّهِ وَرُسُلِهِۦ وَيَقُولُونَ نُؤۡمِنُ بِبَعۡضٖ وَنَكۡفُرُ بِبَعۡضٖ وَيُرِيدُونَ أَن يَتَّخِذُواْ بَيۡنَ ذَٰلِكَ سَبِيلًا ﴿١٥٠﴾

1 ದೂಷಣೆಗೊಳಗಾದವನು ಅದಕ್ಕೆ ಸಮಾನವಾದ ಭಾಷೆಯಲ್ಲಿ ಮರಳಿ ದೂಷಿಸಬಹುದು. ಹಿಂಸೆಗೊಳಗಾದವನು ಹಿಂಸಿಸಿದವನನ್ನು ದೂಷಿಸಬಹುದು. ಕೆಟ್ಟ ಪದಗಳನ್ನು ಬಹಿರಂಗವಾಗಿ ಹೇಳುವುದಕ್ಕಿರುವ ನಿಷೇಧವು ಹಿಂಸೆಗೊಳಗಾದವರಿಗೆ ಅನ್ವಯಿಸುವುದಿಲ್ಲ.

ಕೆಲವರಲ್ಲಿ ವಿಶ್ವಾಸವಿಡುವೆವು ಮತ್ತು ಕೆಲವರನ್ನು ನಿಷೇಧಿಸುವೆವು' ಎಂದು ಹೇಳುವವರು,[1] ಹಾಗೆಯೇ ಅವುಗಳ ಮಧ್ಯೆ (ವಿಶ್ವಾಸ ಮತ್ತು ಅವಿಶ್ವಾಸದ ಮಧ್ಯೆ) ಭಿನ್ನ ಮಾರ್ಗವೊಂದನ್ನು ಸ್ವೀಕರಿಸಲು ಬಯಸುವವರು ಯಾರೋ,

**151.** ಸತ್ಯವಾಗಿಯೂ ಅವಿಶ್ವಾಸಿಗಳು ಅವರೇ ಆಗಿರುವರು. ಅವಿಶ್ವಾಸಿಗಳಿಗೆ ನಾವು ನಿಂದನೀಯ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

أُوْلَٰٓئِكَ هُمُ ٱلْكَٰفِرُونَ حَقًّاۚ وَأَعْتَدْنَا لِلْكَٰفِرِينَ عَذَابًا مُّهِينًا ﴿١٥١﴾

**152.** ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡುವವರು ಮತ್ತು ಅವರ ಪೈಕಿ ಯಾರ ನಡುವೆಯೂ ವ್ಯತ್ಯಾಸ ಕಲ್ಪಿಸದವರು ಯಾರೋ ಅಲ್ಲಾಹು ಅವರಿಗೆ ಅರ್ಹ ಪ್ರತಿಫಲವನ್ನು ನೀಡುವನು. ಅಲ್ಲಾಹು ಅತ್ಯಧಿಕವಾಗಿ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَٱلَّذِينَ ءَامَنُواْ بِٱللَّهِ وَرُسُلِهِۦ وَلَمْ يُفَرِّقُواْ بَيْنَ أَحَدٍ مِّنْهُمْ أُوْلَٰٓئِكَ سَوْفَ يُؤْتِيهِمْ أُجُورَهُمْۚ وَكَانَ ٱللَّهُ غَفُورًا رَّحِيمًا ﴿١٥٢﴾

**153.** ತಾವು ಅವರಿಗೆ ಆಕಾಶದಿಂದ ಒಂದು ಗ್ರಂಥವನ್ನು ಇಳಿಸಿಕೊಡಬೇಕೆಂದು ಗ್ರಂಥದವರು ತಮ್ಮೊಂದಿಗೆ ಕೇಳುತ್ತಿರುವರು. ಆದರೆ ಅದಕ್ಕಿಂತಲೂ ಗುರುತರವಾದುದನ್ನು ಅವರು ಮೂಸಾರೊಂದಿಗೆ ಕೇಳಿದ್ದರು. (ಅಂದರೆ) 'ಅಲ್ಲಾಹುವನ್ನು ನಮಗೆ ಬಹಿರಂಗವಾಗಿ ತೋರಿಸಿಕೊಡಿರಿ' ಎಂದವರು ಹೇಳಿದ್ದರು. ಆಗ ಅವರ ಅಕ್ರಮದ ನಿಮಿತ್ತ ಅಗ್ನಿಮಿಂಚು ಅವರನ್ನು ಹಿಡಿದುಬಿಟ್ಟಿತು. ತರುವಾಯ ಅವರ ಬಳಿಗೆ ಸ್ಪಷ್ಟವಾದ ಪುರಾವೆಗಳು ಬಂದ ಬಳಿಕವೂ ಅವರು ಕರುವನ್ನು (ಆರಾಧ್ಯವನ್ನಾಗಿ) ಮಾಡಿಕೊಂಡರು. (ಆದರೂ) ನಾವದನ್ನು ಕ್ಷಮಿಸಿದೆವು. ಮೂಸಾರಿಗೆ ನಾವು ಸ್ಪಷ್ಟವಾದ ಆಧಾರಪ್ರಮಾಣವನ್ನು ನೀಡಿರುವೆವು.

يَسْـَٔلُكَ أَهْلُ ٱلْكِتَٰبِ أَن تُنَزِّلَ عَلَيْهِمْ كِتَٰبًا مِّنَ ٱلسَّمَآءِۚ فَقَدْ سَأَلُواْ مُوسَىٰٓ أَكْبَرَ مِن ذَٰلِكَ فَقَالُوٓاْ أَرِنَا ٱللَّهَ جَهْرَةً فَأَخَذَتْهُمُ ٱلصَّٰعِقَةُ بِظُلْمِهِمْۚ ثُمَّ ٱتَّخَذُواْ ٱلْعِجْلَ مِنۢ بَعْدِ مَا جَآءَتْهُمُ ٱلْبَيِّنَٰتُ فَعَفَوْنَا عَن ذَٰلِكَۚ وَءَاتَيْنَا مُوسَىٰ سُلْطَٰنًا مُّبِينًا ﴿١٥٣﴾

---

1 ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿದ್ದೇವೆ ಎನ್ನುವವರ ಪೈಕಿ ಕೆಲವರು ಪ್ರವಾದಿಗಳನ್ನು ನಿಷೇಧಿಸುತ್ತಾರೆ. ಹಾಗೆಯೇ ಕೆಲವು ಪ್ರವಾದಿಗಳಲ್ಲಿ ವಿಶ್ವಾಸವಿಡುವವರು ಇತರ ಕೆಲವು ಪ್ರವಾದಿಗಳನ್ನು ನಿಷೇಧಿಸುತ್ತಾರೆ.

154. ಅವರೊಂದಿಗೆ ಕರಾರು ಪಡೆಯುವ ಸಲುವಾಗಿ ನಾವು ಅವರ ಮೇಲೆ ಪರ್ವತವನ್ನು ಎತ್ತಿಹಿಡಿದೆವು. ‘(ಪಟ್ಟಣದ) ದ್ವಾರವನ್ನು ತಲೆಬಾಗುತ್ತಾ ಪ್ರವೇಶಿಸಿರಿ’ ಎಂದು ನಾವು ಅವರೊಂದಿಗೆ ಹೇಳಿದೆವು. ‘ನೀವು ಸಬ್ಬತ್ ದಿನದಂದು ಅತಿಕ್ರಮವೆಸಗದಿರಿ’ ಎಂದೂ ನಾವು ಅವರೊಂದಿಗೆ ಹೇಳಿದೆವು. ನಾವು ಅವರಿಂದ ಸುದೃಢವಾದ ಒಂದು ಕರಾರನ್ನು ಪಡೆದಿರುವೆವು.

وَرَفَعۡنَا فَوۡقَهُمُ ٱلطُّورَ بِمِيثَٰقِهِمۡ وَقُلۡنَا لَهُمُ ٱدۡخُلُواْ ٱلۡبَابَ سُجَّدٗا وَقُلۡنَا لَهُمۡ لَا تَعۡدُواْ فِي ٱلسَّبۡتِ وَأَخَذۡنَا مِنۡهُم مِّيثَٰقًا غَلِيظٗا ١٥٤

155. ತರುವಾಯ ಅವರು ಕರಾರನ್ನು ಉಲ್ಲಂಘಿಸಿರುವುದರಿಂದಲೂ, ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿರುವುದರಿಂದಲೂ, ಅನ್ಯಾಯವಾಗಿ ಪ್ರವಾದಿಗಳನ್ನು ವಧಿಸಿರುವುದರಿಂದಲೂ ಮತ್ತು ತಮ್ಮ ಹೃದಯಗಳು ಮುಚ್ಚಿಹೋಗಿವೆಯೆಂದು ಹೇಳಿರುವುದರಿಂದಲೂ (ಅವರು ಶಪಿಸಲ್ಪಟ್ಟಿರುವರು). ಮಾತ್ರವಲ್ಲ, ಅವರ ಸತ್ಯ ನಿಷೇಧದ ನಿಮಿತ್ತ ಅಲ್ಲಾಹು ಆ ಹೃದಯಗಳ ಮೇಲೆ ಮುದ್ರೆಯೊತ್ತಿರುವನು. ಆದ್ದರಿಂದ ಅವರು ಅಲ್ಪವೇ ವಿನಾ ವಿಶ್ವಾಸವಿಡಲಾರರು.

فَبِمَا نَقۡضِهِم مِّيثَٰقَهُمۡ وَكُفۡرِهِم بِـَٔايَٰتِ ٱللَّهِ وَقَتۡلِهِمُ ٱلۡأَنۢبِيَآءَ بِغَيۡرِ حَقّٖ وَقَوۡلِهِمۡ قُلُوبُنَا غُلۡفُۢۚ بَلۡ طَبَعَ ٱللَّهُ عَلَيۡهَا بِكُفۡرِهِمۡ فَلَا يُؤۡمِنُونَ إِلَّا قَلِيلٗا ١٥٥

156. ಅವರ ಸತ್ಯನಿಷೇಧದ ನಿಮಿತ್ತ ಮತ್ತು ಮರ್ಯಮ್‌ರ ಮೇಲೆ ಅವರು ಘೋರವಾದ ಅಪವಾದವನ್ನು ಹೊರಿಸಿದ ನಿಮಿತ್ತವೂ (ಅವರು ಶಪಿಸಲ್ಪಟ್ಟಿರುವರು)[1]

وَبِكُفۡرِهِمۡ وَقَوۡلِهِمۡ عَلَىٰ مَرۡيَمَ بُهۡتَٰنًا عَظِيمٗا ١٥٦

157. ಮತ್ತು ಅಲ್ಲಾಹುವಿನ ಸಂದೇಶವಾಹಕರಾದ ಮರ್ಯಮ್‌ರ ಪುತ್ರ ಮಸೀಹ ಈಸಾರನ್ನು ನಾವು ವಧಿಸಿರುವೆವು ಎಂದು ಅವರು ಹೇಳಿದ

وَقَوۡلِهِمۡ إِنَّا قَتَلۡنَا ٱلۡمَسِيحَ عِيسَى ٱبۡنَ مَرۡيَمَ رَسُولَ ٱللَّهِ وَمَا قَتَلُوهُ وَمَا صَلَبُوهُ

1 ಈಸಾ(عَلَيْهِ السَّلَامُ)ರವರು ವೇಶ್ಯಾ ಸಂತತಿ ಮತ್ತು ಮರ್ಯಮ್ ವೇಶ್ಯೆಯಾಗಿದ್ದಾರೆ ಎಂದು ಯಹೂದರು ಆರೋಪಿಸಿದ್ದರು. ಈಸಾ(عَلَيْهِ السَّلَامُ)ರವರು ತೊಟ್ಟಿಲಲ್ಲಿ ಮಲಗಿರುವ ಶಿಶುವಾಗಿರುವಾಗಲೇ ಅವರ ಮೂಲಕ ಅಲ್ಲಾಹು ಈ ಆರೋಪಕ್ಕೆ ಉತ್ತರವಿತ್ತಿದ್ದಾನೆ.

وَلَٰكِن شُبِّهَ لَهُمْۚ وَإِنَّ ٱلَّذِينَ ٱخۡتَلَفُواْ
فِيهِ لَفِي شَكّٖ مِّنۡهُۚ مَا لَهُم بِهِۦ مِنۡ عِلۡمٍ
إِلَّا ٱتِّبَاعَ ٱلظَّنِّۚ وَمَا قَتَلُوهُ يَقِينَۢا ﴿١٥٧﴾

ನಿಮಿತ್ತವೂ (ಅವರು ಶಪಿಸಲ್ಪಟ್ಟಿರುವರು). ವಾಸ್ತವಿಕವಾಗಿ ಅವರು ಅವರನ್ನು ವಧಿಸಿಲ್ಲ ಮತ್ತು ಶಿಲುಬೆಗೇರಿಸಿಯೂ ಇಲ್ಲ. ಆದರೆ ಅವರಿಗೆ (ವಾಸ್ತವಿಕತೆಯನ್ನು) ಗುರುತಿಸಲು ಸಾಧ್ಯವಾಗದೆ ಹೋಯಿತು.[1] ಖಂಡಿತವಾಗಿಯೂ ಅವರ (ಈಸಾರ) ವಿಷಯದಲ್ಲಿ ಭಿನ್ನರಾದವರು ಯಾರೋ ಅವರು ಅದರ ಕುರಿತು ಸಂದೇಹದಲ್ಲಿಯೇ ಇರುವರು. ಊಹಾಪೋಹಗಳನ್ನು ಅನುಸರಿಸುವುದರ ಹೊರತು ಅದರ ಕುರಿತು ಅವರಿಗೆ ಯಾವುದೇ ಅರಿವೂ ಇಲ್ಲ. ಖಂಡಿತವಾಗಿಯೂ ಅವರು ಅವರನ್ನು ವಧಿಸಿಲ್ಲ.

بَل رَّفَعَهُ ٱللَّهُ إِلَيۡهِۚ وَكَانَ ٱللَّهُ عَزِيزًا
حَكِيمٗا ﴿١٥٨﴾

**158**. ಆದರೆ ಅಲ್ಲಾಹು ಅವರನ್ನು ತನ್ನೆಡೆಗೆ ಎತ್ತಿ ಕೊಂಡಿರುವನು. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَإِن مِّنۡ أَهۡلِ ٱلۡكِتَٰبِ إِلَّا لَيُؤۡمِنَنَّ بِهِۦ
قَبۡلَ مَوۡتِهِۦۖ وَيَوۡمَ ٱلۡقِيَٰمَةِ يَكُونُ عَلَيۡهِمۡ
شَهِيدٗا ﴿١٥٩﴾

**159**. ಗ್ರಂಥದವರ ಪೈಕಿ ಯಾರೂ ಕೂಡ ಅವರ (ಈಸಾರ) ಮರಣಕ್ಕೆ ಮುಂಚಿತವಾಗಿ ಅವರಲ್ಲಿ ವಿಶ್ವಾಸವಿಡದೆ ಇರಲಾರರು.[2] ಪುನರುತ್ಥಾನ ದಿನದಂದು ಅವರು ಅವರಿಗೆ ವಿರುದ್ಧವಾಗಿ ಸಾಕ್ಷಿಯಾಗುವರು.

---

1 ಈಸಾ(عَلَيْهِ ٱلسَّلَامُ)ರವರು (ಯೇಸುಕ್ರಿಸ್ತರು) ಶಿಲುಬೆಗೇರಿಸಲ್ಪಟ್ಟಿಲ್ಲ, ಅವರು ಅಲ್ಲಾಹುವಿನೆಡೆಗೆ ಎತ್ತಲ್ಪಟ್ಟಿರುವರೆಂದು ಕುರ್‌ಆನ್ ನಿಖರವಾಗಿ ಹೇಳಿದೆ. ಆದರೆ ಶಿಲುಬೆ ಘಟನೆಯ ಕುರಿತು ಹೆಚ್ಚಿನ ಮಾಹಿತಿಗಳು ಕುರ್‌ಆನ್‌ನಲ್ಲಾಗಲಿ ಬೈಬಲ್‌ನಲ್ಲಾಗಲಿ ಕಂಡುಬರುವುದಿಲ್ಲ. ಕೆಲವು ಗ್ರಂಥಗಳಲ್ಲಿ ಕಾಣುವ ಮಾಹಿತಿಗಳ ಪೈಕಿ ಹೆಚ್ಚಿನವುಗಳೂ ಯಾವುದೇ ಆಧಾರವನ್ನು ಹೊಂದಿಲ್ಲ.

2 ಈ ಸೂಕ್ತಿಗೆ ಎರಡು ರೀತಿಯ ವ್ಯಾಖ್ಯಾನಗಳನ್ನು ನೀಡಲಾಗಿದೆ: 1. ಗ್ರಂಥದವರ ಪೈಕಿ ಯಾರೂ ಈಸಾ(عَلَيْهِ ٱلسَّلَامُ)ರವರ ಮರಣಕ್ಕೆ ಮುಂಚಿತವಾಗಿ ಅವರಲ್ಲಿ ವಿಶ್ವಾಸವಿಡದಿರಲಾರರು. 2. ಗ್ರಂಥದವರ ಪೈಕಿ ಒಬ್ಬನೂ ಕೂಡ ತನ್ನ ಮರಣಕ್ಕೆ ಮುಂಚಿತವಾಗಿ ಈಸಾ(عَلَيْهِ ٱلسَّلَامُ)ರವರಲ್ಲಿ ವಿಶ್ವಾಸವಿಡದಿರಲಾರನು. ಮೊದಲನೆಯದರ ವಿವರಣೆಯು ಹೀಗಿದೆ: ಈಸಾ(عَلَيْهِ ٱلسَّلَامُ)ರವರು ಮತ್ತೊಮ್ಮೆ ಭೂಮಿಗಿಳಿದು ಬಂದು ಇಲ್ಲಿ ಮರಣಹೊಂದುವುದಕ್ಕೆ ಮುಂಚಿತವಾಗಿ ಆ ಕಾಲದಲ್ಲಿ ಬದುಕಿರುವ ಗ್ರಂಥದವರ ಪೈಕಿ ಯಾರೂ ಅವರಲ್ಲಿ ವಿಶ್ವಾಸವಿಡದಿರಲಾರರು. ಎರಡನೆಯದರ ವಿವರಣೆಯು ಹೀಗಿದೆ: ಗ್ರಂಥದವರ ಪೈಕಿ ಒಬ್ಬನೂ ತನ್ನ ಮರಣಕ್ಕೆ ಮುಂಚಿತವಾಗಿ –ಮರಣಾಸನ್ನ ವೇಳೆಯಲ್ಲಿಯಾದರೂ–ಈಸಾ(عَلَيْهِ ٱلسَّلَامُ)ರವರಲ್ಲಿ ವಿಶ್ವಾಸವಿಡದಿರಲಾರನು.

160. ಯಹೂದರಾಗಿರುವವರ ಅಕ್ರಮದ ನಿಮಿತ್ತ ಮತ್ತು ಅಲ್ಲಾಹುವಿನ ಮಾರ್ಗದಿಂದ ಅವರು ಜನರನ್ನು ಹೆಚ್ಚುಹೆಚ್ಚಾಗಿ ತಡೆಹಿಡಿದ ನಿಮಿತ್ತ ಅವರಿಗೆ ಅನುಮತಿಸಲಾಗಿರುವ ಅನೇಕ ಉತ್ತಮ ವಸ್ತುಗಳನ್ನು ನಾವು ಅವರಿಗೆ ನಿಷಿದ್ಧಗೊಳಿಸಿದೆವು.

فَبِظُلۡمٖ مِّنَ ٱلَّذِينَ هَادُواْ حَرَّمۡنَا عَلَيۡهِمۡ طَيِّبَٰتٍ أُحِلَّتۡ لَهُمۡ وَبِصَدِّهِمۡ عَن سَبِيلِ ٱللَّهِ كَثِيرٗا ١٦٠

161. ಬಡ್ಡಿಯನ್ನು ಅವರಿಗೆ ವಿರೋಧಿಸಲಾಗಿದ್ದೂ ಅವರು ಅದನ್ನು ಪಡೆದ ನಿಮಿತ್ತವೂ, ಜನರ ಸಂಪತ್ತನ್ನು ಅವರು ಅನ್ಯಾಯವಾಗಿ ತಿಂದ ನಿಮಿತ್ತವೂ (ಅವರಿಗೆ ಅವುಗಳನ್ನು ನಿಷಿದ್ಧಗೊಳಿಸಲಾಯಿತು). ಅವರಲ್ಲಿರುವ ಸತ್ಯನಿಷೇಧಿಗಳಿಗೆ ನಾವು ಯಾತನಾಮಯ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

وَأَخۡذِهِمُ ٱلرِّبَوٰاْ وَقَدۡ نُهُواْ عَنۡهُ وَأَكۡلِهِمۡ أَمۡوَٰلَ ٱلنَّاسِ بِٱلۡبَٰطِلِۚ وَأَعۡتَدۡنَا لِلۡكَٰفِرِينَ مِنۡهُمۡ عَذَابًا أَلِيمٗا ١٦١

162. ಆದರೆ ಅವರ ಪೈಕಿ ದೃಢಜ್ಞಾನವಿರುವವರು ಮತ್ತು ಸತ್ಯವಿಶ್ವಾಸಿಗಳು ತಮಗೆ ಅವತೀರ್ಣಗೊಂಡಿರುವುದರಲ್ಲಿ ಮತ್ತು ತಮಗಿಂತ ಮುಂಚೆ ಅವತೀರ್ಣಗೊಂಡಿರುವುದರಲ್ಲಿ ವಿಶ್ವಾಸವಿಡುತ್ತಿರುವರು. ಅವರು ನಮಾಝ್ ಸಂಸ್ಥಾಪಿಸುವವರೂ, ಝಕಾತ್ ನೀಡುವವರೂ, ಅಲ್ಲಾಹುವಿನಲ್ಲಿ ಹಾಗೂ ಅಂತ್ಯದಿನದಲ್ಲಿ ವಿಶ್ವಾಸವಿಡುವವರೂ ಆಗಿರುವರು. ಅಂತಹವರಿಗೆ ನಾವು ಮಹಾ ಪ್ರತಿಫಲವನ್ನು ದಯಪಾಲಿಸುವೆವು.

لَّٰكِنِ ٱلرَّٰسِخُونَ فِي ٱلۡعِلۡمِ مِنۡهُمۡ وَٱلۡمُؤۡمِنُونَ يُؤۡمِنُونَ بِمَآ أُنزِلَ إِلَيۡكَ وَمَآ أُنزِلَ مِن قَبۡلِكَۚ وَٱلۡمُقِيمِينَ ٱلصَّلَوٰةَۚ وَٱلۡمُؤۡتُونَ ٱلزَّكَوٰةَ وَٱلۡمُؤۡمِنُونَ بِٱللَّهِ وَٱلۡيَوۡمِ ٱلۡأٓخِرِ أُوْلَٰٓئِكَ سَنُؤۡتِيهِمۡ أَجۡرًا عَظِيمًا ١٦٢

163. (ಓ ಪ್ರವಾದಿಯವರೇ!) ನೂಹ್ ಮತ್ತು ಅವರ ನಂತರದ ಪ್ರವಾದಿಗಳಿಗೆ ನಾವು ದಿವ್ಯಸಂದೇಶ ನೀಡಿರುವಂತೆ ತಮಗೂ ನಾವು ದಿವ್ಯಸಂದೇಶ ನೀಡಿರುವೆವು. ಇಬ್ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್, ಯಅ್‌ಕೂಬ್ ಸಂತತಿಗಳು, ಈಸಾ, ಅಯ್ಯೂಬ್, ಯೂನುಸ್, ಹಾರೂನ್, ಸುಲೈಮಾನ್ ಮುಂತಾದವರಿಗೂ ನಾವು ದಿವ್ಯಸಂದೇಶ ನೀಡಿರುವೆವು. ದಾವೂದ್‌ರಿಗೆ ನಾವು ಝಬೂರ್ ನೀಡಿರುವೆವು.

۞إِنَّآ أَوۡحَيۡنَآ إِلَيۡكَ كَمَآ أَوۡحَيۡنَآ إِلَىٰ نُوحٖ وَٱلنَّبِيِّـۧنَ مِنۢ بَعۡدِهِۦۚ وَأَوۡحَيۡنَآ إِلَىٰٓ إِبۡرَٰهِيمَ وَإِسۡمَٰعِيلَ وَإِسۡحَٰقَ وَيَعۡقُوبَ وَٱلۡأَسۡبَاطِ وَعِيسَىٰ وَأَيُّوبَ وَيُونُسَ وَهَٰرُونَ وَسُلَيۡمَٰنَۚ وَءَاتَيۡنَا دَاوُۥدَ زَبُورٗا ١٦٣

164. ನಾವು ಈಗಾಗಲೇ ತಮಗೆ ತಿಳಿಸಿಕೊಟ್ಟಿರುವ ಸಂದೇಶವಾಹಕರನ್ನು ಮತ್ತು ನಾವು ತಮಗೆ ತಿಳಿಸಿಕೊಟ್ಟಿರದಂತಹ ಸಂದೇಶವಾಹಕರನ್ನು (ನಾವು ಕಳುಹಿಸಿರುವೆವು). ಅಲ್ಲಾಹು ಮೂಸಾರೊಂದಿಗೆ ನೇರವಾಗಿ ಮಾತನಾಡಿರುವನು.

وَرُسُلًا قَدْ قَصَصْنَٰهُمْ عَلَيْكَ مِن قَبْلُ وَرُسُلًا لَّمْ نَقْصُصْهُمْ عَلَيْكَ ۚ وَكَلَّمَ ٱللَّهُ مُوسَىٰ تَكْلِيمًا ﴿١٦٤﴾

165. ಅವರು ಶುಭವಾರ್ತೆ ತಿಳಿಸುವ ಮತ್ತು ಮುನ್ನೆಚ್ಚರಿಕೆ ನೀಡುವ ಸಂದೇಶವಾಹಕರು ಆಗಿರುವರು. ಇದೇಕೆಂದರೆ ಸಂದೇಶವಾಹಕರ ನಿಯೋಗಾನಂತರ ಅಲ್ಲಾಹುವಿಗೆ ವಿರುದ್ಧವಾಗಿ ಜನರಿಗೆ ಯಾವುದೇ ಪುರಾವೆಯೂ ಇಲ್ಲದಿರುವ ಸಲುವಾಗಿದೆ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

رُّسُلًا مُّبَشِّرِينَ وَمُنذِرِينَ لِئَلَّا يَكُونَ لِلنَّاسِ عَلَى ٱللَّهِ حُجَّةٌۢ بَعْدَ ٱلرُّسُلِ ۚ وَكَانَ ٱللَّهُ عَزِيزًا حَكِيمًا ﴿١٦٥﴾

166. ಆದರೆ ಅಲ್ಲಾಹು ತಮಗೆ ಏನನ್ನು ಅವತೀರ್ಣಗೊಳಿಸಿರುವನೋ ಅದರ ಕುರಿತು ಸ್ವತಃ ಅವನೇ ಸಾಕ್ಷ್ಯವಹಿಸುವನು. ಅವನು ಅದನ್ನು ಅವತೀರ್ಣಗೊಳಿಸಿರುವುದು ತನ್ನ ಅರಿವಿನೊಂದಿಗೇ ಆಗಿದೆ. ಮಲಕ್‌ಗಳೂ (ಅದಕ್ಕೆ) ಸಾಕ್ಷ್ಯವಹಿಸುವರು. ಸಾಕ್ಷಿಯಾಗಿ ಅಲ್ಲಾಹು ಸಾಕು.

لَّٰكِنِ ٱللَّهُ يَشْهَدُ بِمَآ أَنزَلَ إِلَيْكَ ۖ أَنزَلَهُۥ بِعِلْمِهِۦ ۖ وَٱلْمَلَٰٓئِكَةُ يَشْهَدُونَ ۚ وَكَفَىٰ بِٱللَّهِ شَهِيدًا ﴿١٦٦﴾

167. ಅವಿಶ್ವಾಸವಿಟ್ಟವರು ಮತ್ತು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದವರು ಯಾರೋ ಖಂಡಿತವಾಗಿಯೂ ಅವರು ವಿದೂರವಾದ ಪಥಭ್ರಷ್ಟತೆಯಲ್ಲಿರುವರು.

إِنَّ ٱلَّذِينَ كَفَرُوا۟ وَصَدُّوا۟ عَن سَبِيلِ ٱللَّهِ قَدْ ضَلُّوا۟ ضَلَٰلًۢا بَعِيدًا ﴿١٦٧﴾

168-169. ಅವಿಶ್ವಾಸವಿಟ್ಟವರು ಮತ್ತು ಅಕ್ರಮವೆಸಗಿದವರು ಯಾರೋ ಅವರನ್ನು ಅಲ್ಲಾಹು ಎಂದಿಗೂ ಕ್ಷಮಿಸಲಾರನು. ನರಕದ ಮಾರ್ಗದೆಡೆಗೇ ವಿನಾ ಬೇರೊಂದು ಮಾರ್ಗದೆಡೆಗೆ ಅವನು ಅವರನ್ನು ಮುನ್ನಡೆಸಲಾರನು. ಅವರು ಅದರಲ್ಲಿ ಎಂದೆಂದಿಗೂ ಶಾಶ್ವತರಾಗಿ ವಾಸಿಸುವರು. ಅಲ್ಲಾಹುವಿಗೆ ಅದು ಬಹಳ ಸುಲಭವಾದ ವಿಷಯವಾಗಿದೆ.

إِنَّ ٱلَّذِينَ كَفَرُوا۟ وَظَلَمُوا۟ لَمْ يَكُنِ ٱللَّهُ لِيَغْفِرَ لَهُمْ وَلَا لِيَهْدِيَهُمْ طَرِيقًا ﴿١٦٨﴾ إِلَّا طَرِيقَ جَهَنَّمَ خَٰلِدِينَ فِيهَآ أَبَدًا ۚ وَكَانَ ذَٰلِكَ عَلَى ٱللَّهِ يَسِيرًا ﴿١٦٩﴾

170. ಓ ಜನರೇ! ನಿಮ್ಮ ರಬ್‌ನ ವತಿಯ ಸತ್ಯದೊಂದಿಗೆ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರುವರು. ಆದ್ದರಿಂದ ನಿಮ್ಮ ಒಳಿತಿಗಾಗಿ ನೀವು ವಿಶ್ವಾಸವಿಡಿರಿ. ನೀವು ನಿಷೇಧಿಸುವುದಾದರೆ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

يَٰٓأَيُّهَا ٱلنَّاسُ قَدْ جَآءَكُمُ ٱلرَّسُولُ بِٱلْحَقِّ مِن رَّبِّكُمْ فَـَٔامِنُوا۟ خَيْرًا لَّكُمْ ۚ وَإِن تَكْفُرُوا۟ فَإِنَّ لِلَّهِ مَا فِى ٱلسَّمَٰوَٰتِ وَٱلْأَرْضِ ۚ وَكَانَ ٱللَّهُ عَلِيمًا حَكِيمًا ١٧٠

171. ಓ ಗ್ರಂಥದವರೇ! ನೀವು ಧರ್ಮದ ವಿಷಯದಲ್ಲಿ ಹದ್ದುಮೀರದಿರಿ. ಅಲ್ಲಾಹುವಿನ ಹೆಸರಲ್ಲಿ ಸತ್ಯವನ್ನೇ ಹೊರತು ಬೇರೇನನ್ನೂ ಹೇಳದಿರಿ. ಮರ್ಯಮ್‌ರ ಮಗನಾದ ಮಸೀಹ ಈಸಾ ಅಲ್ಲಾಹುವಿನ ಸಂದೇಶವಾಹಕರು ಮಾತ್ರವಾಗಿರುವರು. ಮರ್ಯಮ್‌ರಿಗೆ ಅವನು ಹಾಕಿಕೊಟ್ಟ ಅವನ ವಚನವೂ ಅವನಿಂದಿರುವ ಒಂದು ಆತ್ಮವೂ ಆಗಿರುವರು. ಆದ್ದರಿಂದ ನೀವು ಅಲ್ಲಾಹುವಿನಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿಡಿರಿ. ತ್ರಿಯೇಕತ್ವ ಎಂದು ಹೇಳದಿರಿ.[1] ನಿಮ್ಮ ಒಳಿತಿಗಾಗಿ ನೀವು (ಹಾಗೆ ಹೇಳುವುದನ್ನು) ನಿಲ್ಲಿಸಿರಿ. ಅಲ್ಲಾಹು ಏಕಮೇವ ಆರಾಧ್ಯನು ಮಾತ್ರವಾಗಿರುವನು. ತನಗೊಂದು ಸಂತಾನವುಂಟಾಗುವುದರಿಂದ ಅವನು ಪರಮ ಪಾವನನಾಗಿರುವನು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದಾಗಿವೆ. ಕಾರ್ಯನಿರ್ವಾಹಕನಾಗಿ ಅಲ್ಲಾಹು ಸಾಕು.

يَٰٓأَهْلَ ٱلْكِتَٰبِ لَا تَغْلُوا۟ فِى دِينِكُمْ وَلَا تَقُولُوا۟ عَلَى ٱللَّهِ إِلَّا ٱلْحَقَّ ۚ إِنَّمَا ٱلْمَسِيحُ عِيسَى ٱبْنُ مَرْيَمَ رَسُولُ ٱللَّهِ وَكَلِمَتُهُۥٓ أَلْقَىٰهَآ إِلَىٰ مَرْيَمَ وَرُوحٌ مِّنْهُ ۖ فَـَٔامِنُوا۟ بِٱللَّهِ وَرُسُلِهِۦ ۖ وَلَا تَقُولُوا۟ ثَلَٰثَةٌ ۚ ٱنتَهُوا۟ خَيْرًا لَّكُمْ ۚ إِنَّمَا ٱللَّهُ إِلَٰهٌ وَٰحِدٌ ۖ سُبْحَٰنَهُۥٓ أَن يَكُونَ لَهُۥ وَلَدٌ ۘ لَّهُۥ مَا فِى ٱلسَّمَٰوَٰتِ وَمَا فِى ٱلْأَرْضِ ۗ وَكَفَىٰ بِٱللَّهِ وَكِيلًا ١٧١

172. ಅಲ್ಲಾಹುವಿನ ದಾಸನಾಗಿರುವುದರಲ್ಲಿ ಮಸೀಹರು ಎಂದೂ ತಿರಸ್ಕಾರ ಭಾವನೆಯನ್ನು ತೋರಿಸಲಾರರು.

لَّن يَسْتَنكِفَ ٱلْمَسِيحُ أَن يَكُونَ عَبْدًا لِّلَّهِ وَلَا ٱلْمَلَٰٓئِكَةُ ٱلْمُقَرَّبُونَ ۚ وَمَن

1 ತ್ರಿಯೇಕತ್ವ ಎಂಬುದು ಪ್ರವಾದಿ ಈಸಾ(عَلَيْهِ ٱلسَّلَامُ) ನಂತರ ಕ್ರೈಸ್ತ ಸಭೆಯು ಹೆಣೆದ ಒಂದು ವಿಚಿತ್ರ ದೇವಪರಿಕಲ್ಪನೆಯಾಗಿದೆ. ಅವರ ಪ್ರಕಾರ ತ್ರಿಯೇಕತ್ವ ಎಂದರೆ ತಂದೆ, ಮಗ ಮತ್ತು ಪವಿತ್ರಾತ್ಮ ಎಂಬ ಮೂರು ರೂಪಗಳಿರುವ ಒಂದೇ ದೇವರು ಎಂದಾಗಿದೆ.

يَسۡتَنكِفۡ عَنۡ عِبَادَتِهِۦ وَيَسۡتَكۡبِرۡ فَسَيَحۡشُرُهُمۡ إِلَيۡهِ جَمِيعٗا ١٧٢

(ಅಲ್ಲಾಹುವಿನ) ಸಾಮೀಪ್ಯವನ್ನು ಗಳಿಸಿದ ಮಲಕ್‌ಗಳೂ (ತೋರಿಸಲಾರರು). ಯಾರು ಅವನನ್ನು (ಅಲ್ಲಾಹುವನ್ನು) ಆರಾಧಿಸುವುದರ ಬಗ್ಗೆ ದರ್ಪತೋರಿಸುವರೋ ಮತ್ತು ಅಹಂಭಾವಪಡುವರೋ ಅವರೆಲ್ಲರನ್ನೂ ಅವನು ತನ್ನ ಬಳಿಗೆ ಒಟ್ಟುಗೂಡಿಸುವನು.

فَأَمَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ فَيُوَفِّيهِمۡ أُجُورَهُمۡ وَيَزِيدُهُم مِّن فَضۡلِهِۦۖ وَأَمَّا ٱلَّذِينَ ٱسۡتَنكَفُواْ وَٱسۡتَكۡبَرُواْ فَيُعَذِّبُهُمۡ عَذَابًا أَلِيمٗا وَلَا يَجِدُونَ لَهُم مِّن دُونِ ٱللَّهِ وَلِيّٗا وَلَا نَصِيرٗا ١٧٣

173. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರು ಯಾರೋ ಅವರ ಪ್ರತಿಫಲವನ್ನು ಅವನು ಅವರಿಗೆ ಪೂರ್ಣವಾಗಿ ನೀಡುವನು ಮತ್ತು ತನ್ನ ಅನುಗ್ರಹದಿಂದ ಅವರಿಗೆ ಹೆಚ್ಚುವರಿಯಾಗಿ ದಯಪಾಲಿಸುವನು. ಆದರೆ ತಿರಸ್ಕಾರ ಭಾವನೆಯನ್ನು ತೋರುವವರು ಮತ್ತು ದುರಹಂಕಾರ ಪಡುವವರು ಯಾರೋ ಅವರಿಗೆ ಅವನು ಯಾತನಾಮಯವಾದ ಶಿಕ್ಷೆಯನ್ನು ನೀಡುವನು. ಅವರು ಅಲ್ಲಾಹುವಿನ ಹೊರತು ಯಾವುದೇ ರಕ್ಷಕನನ್ನಾಗಲಿ ಸಹಾಯಕನನ್ನಾಗಲಿ ಕಾಣಲಾರರು.

يَٰٓأَيُّهَا ٱلنَّاسُ قَدۡ جَآءَكُم بُرۡهَٰنٞ مِّن رَّبِّكُمۡ وَأَنزَلۡنَآ إِلَيۡكُمۡ نُورٗا مُّبِينٗا ١٧٤

174. ಓ ಮನುಷ್ಯರೇ! ಖಂಡಿತವಾಗಿಯೂ ನಿಮಗೆ ನಿಮ್ಮ ರಬ್‌ನ ವತಿಯಿಂದ ಸ್ಪಷ್ಟವಾದ ಪುರಾವೆಯು ಬಂದಿರುತ್ತದೆ. ನಾವು ನಿಮಗೆ ಸ್ಪಷ್ಟವಾದ ಒಂದು ಪ್ರಕಾಶವನ್ನೂ ಇಳಿಸಿಕೊಟ್ಟಿರುವೆವು.

فَأَمَّا ٱلَّذِينَ ءَامَنُواْ بِٱللَّهِ وَٱعۡتَصَمُواْ بِهِۦ فَسَيُدۡخِلُهُمۡ فِي رَحۡمَةٖ مِّنۡهُ وَفَضۡلٖ وَيَهۡدِيهِمۡ إِلَيۡهِ صِرَٰطٗا مُّسۡتَقِيمٗا ١٧٥

175. ಆದ್ದರಿಂದ ಯಾರು ಅಲ್ಲಾಹುವಿನಲ್ಲಿ ವಿಶ್ವಾಸವಿಡುವನೋ ಮತ್ತು ಅವನನ್ನು ಬಿಗಿಯಾಗಿ ಹಿಡಿದುಕೊಳ್ಳುವನೋ ಅವರನ್ನು ಅವನು ತನ್ನ ಕಾರುಣ್ಯದಲ್ಲಿ ಮತ್ತು ಅನುಗ್ರಹದಲ್ಲಿ ಪ್ರವೇಶಗೊಳಿಸುವನು. ಅವರನ್ನು ಅವನು ನೇರಮಾರ್ಗದಲ್ಲಿ ತನ್ನೆಡೆಗೆ ಮುನ್ನಡೆಸುವನು.

يَسۡتَفۡتُونَكَ قُلِ ٱللَّهُ يُفۡتِيكُمۡ فِي ٱلۡكَلَٰلَةِۚ

176. (ಓ ಪ್ರವಾದಿಯವರೇ!) ಅವರು ತಮ್ಮೊಂದಿಗೆ ಧರ್ಮವಿಧಿಯನ್ನು ಕೇಳುತ್ತಿರುವರು. ತಾವು

إِنِ ٱمۡرُؤٌاْ هَلَكَ لَيۡسَ لَهُۥ وَلَدٞ وَلَهُۥٓ أُخۡتٞ
فَلَهَا نِصۡفُ مَا تَرَكَۚ وَهُوَ يَرِثُهَآ إِن لَّمۡ
يَكُن لَّهَا وَلَدٞۚ فَإِن كَانَتَا ٱثۡنَتَيۡنِ فَلَهُمَا
ٱلثُّلُثَانِ مِمَّا تَرَكَۚ وَإِن كَانُوٓاْ إِخۡوَةٗ رِّجَالٗا
وَنِسَآءٗ فَلِلذَّكَرِ مِثۡلُ حَظِّ ٱلۡأُنثَيَيۡنِۗ يُبَيِّنُ
ٱللَّهُ لَكُمۡ أَن تَضِلُّواْۗ وَٱللَّهُ بِكُلِّ شَيۡءٍ
عَلِيمُۢ ١٧٦

ಹೇಳಿರಿ: 'ಕಲಾಲಃ'ದ[1] ಕುರಿತು ಅಲ್ಲಾಹು ನಿಮಗೆ ಧರ್ಮ ವಿಧಿಯನ್ನು ನೀಡುತ್ತಿರುವನು. ಅಂದರೆ ಮಕ್ಕಳಿಲ್ಲದ ಓರ್ವ ವ್ಯಕ್ತಿ ಮರಣಹೊಂದಿದರೆ ಮತ್ತು ಅವನಿಗೆ ಓರ್ವ ಸಹೋದರಿಯಿದ್ದರೆ ಅವನು ಬಿಟ್ಟು ಹೋದ ಸಂಪತ್ತಿನ ಅರ್ಧಭಾಗ ಅವಳಿಗಾಗಿದೆ. ಇನ್ನು (ಸಹೋದರಿ ಮೃತಪಡುವುದಾದರೆ) ಮತ್ತು ಅವಳಿಗೆ ಮಕ್ಕಳಿಲ್ಲದಿದ್ದರೆ ಸಹೋದರನು ಅವಳ (ಪೂರ್ಣ) ಹಕ್ಕುದಾರನಾಗುವನು. ಇನ್ನು ಇಬ್ಬರು ಸಹೋದರಿಯರಿದ್ದರೆ ಅವನು (ಸಹೋದರನು) ಬಿಟ್ಟು ಹೋದ ಸಂಪತ್ತಿನ ಮೂರನೇ ಎರಡು ಭಾಗವು ಅವರಿಗಾಗಿದೆ. ಇನ್ನು ಸಹೋದರರು ಮತ್ತು ಸಹೋದರಿಯರಿದ್ದರೆ ಇಬ್ಬರು ಸ್ತ್ರೀಯರಿಗೆ ಸಿಗುವ ಪಾಲು ಓರ್ವ ಪುರುಷನಿಗಿದೆ. ನೀವು ಪಥಭ್ರಷ್ಟರಾಗದಿರಲು ಅಲ್ಲಾಹು ನಿಮಗೆ ವಿಷಯಗಳನ್ನು ವಿವರಿಸಿಕೊಡುತ್ತಿರುವನು. ಅಲ್ಲಾಹು ಸರ್ವ ವಿಷಯಗಳ ಬಗ್ಗೆ ಅರಿವುಳ್ಳವನಾಗಿರುವನು.

1 ತಂದೆಯಾಗಲಿ, ಮಕ್ಕಳಾಗಲಿ ಇಲ್ಲದ ವ್ಯಕ್ತಿಯ ಉತ್ತರಾಧಿಕಾರ ಸಮಸ್ಯೆಯನ್ನು 'ಕಲಾಲಃ' ಎನ್ನಲಾಗುತ್ತದೆ.

## ಅಲ್‌ಮಾಇದಃ (ಭಕ್ಷ್ಯಹರಿವಾಣ)[1]

## سُورَةُ المَائِدَة

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 120

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلَّذِينَ ءَامَنُوٓاْ أَوۡفُواْ بِٱلۡعُقُودِۚ أُحِلَّتۡ لَكُم بَهِيمَةُ ٱلۡأَنۡعَٰمِ إِلَّا مَا يُتۡلَىٰ عَلَيۡكُمۡ غَيۡرَ مُحِلِّي ٱلصَّيۡدِ وَأَنتُمۡ حُرُمٌۗ إِنَّ ٱللَّهَ يَحۡكُمُ مَا يُرِيدُ ١

1. ಓ ಸತ್ಯವಿಶ್ವಾಸಿಗಳೇ! ನೀವು ಕರಾರುಗಳನ್ನು ನೆರವೇರಿಸಿರಿ. ಮುಂದೆ ನಿಮಗೆ ವಿವರಿಸಿಕೊಡಲಾಗುವುದರ ಹೊರತಾಗಿರುವ ಆಡು, ಕುರಿ, ಒಂಟೆಗಳಲ್ಲಿ ಸೇರಿದ ಜಾನುವಾರುಗಳನ್ನು ನಿಮಗೆ ಅನುಮತಿಸಲಾಗಿದೆ. ಆದರೆ ನೀವು ಇಹ್ರಾಮ್‌ನ[2] ಸ್ಥಿತಿಯಲ್ಲಿರುವಾಗ ಬೇಟೆಯಾಡಲು ನಿಮಗೆ ಅನುಮತಿಯಿರುವುದಿಲ್ಲ. ಖಂಡಿತವಾಗಿಯೂ ಅಲ್ಲಾಹು ತಾನಿಚ್ಛಿಸುವುದನ್ನು ವಿಧಿಸುವನು.

يَٰٓأَيُّهَا ٱلَّذِينَ ءَامَنُواْ لَا تُحِلُّواْ شَعَٰٓئِرَ ٱللَّهِ وَلَا ٱلشَّهۡرَ ٱلۡحَرَامَ وَلَا ٱلۡهَدۡيَ وَلَا ٱلۡقَلَٰٓئِدَ وَلَآ ءَآمِّينَ ٱلۡبَيۡتَ ٱلۡحَرَامَ يَبۡتَغُونَ فَضۡلٗا مِّن رَّبِّهِمۡ وَرِضۡوَٰنٗاۚ وَإِذَا حَلَلۡتُمۡ فَٱصۡطَادُواْۚ وَلَا يَجۡرِمَنَّكُمۡ شَنَـَٔانُ قَوۡمٍ أَن صَدُّوكُمۡ عَنِ ٱلۡمَسۡجِدِ ٱلۡحَرَامِ أَن تَعۡتَدُواْۘ وَتَعَاوَنُواْ عَلَى ٱلۡبِرِّ وَٱلتَّقۡوَىٰۖ وَلَا تَعَاوَنُواْ عَلَى ٱلۡإِثۡمِ

2. ಓ ಸತ್ಯವಿಶ್ವಾಸಿಗಳೇ! ಅಲ್ಲಾಹುವಿನ ಧರ್ಮಲಾಂಛನಗಳಿಗೆ ನೀವು ಅನಾದರ ತೋರದಿರಿ. ಪವಿತ್ರವಾದ ತಿಂಗಳಿಗೆ, (ಕಅ್‌ಬಾದೆಡೆಗೆ ಕೊಂಡೊಯ್ಯುವ) ಬಲಿಮೃಗಗಳಿಗೆ, (ಅವುಗಳ ಕತ್ತುಗಳಲ್ಲಿರುವ) ಪದಕಗಳಿಗೆ ಮತ್ತು ತಮ್ಮ ರಬ್‌ನ ಔದಾರ್ಯ ಹಾಗೂ ತೃಪ್ತಿಯನ್ನು ಅರಸುತ್ತಾ ಪವಿತ್ರ ಭವನವನ್ನು ಗುರಿಯಾಗಿಸಿ ತೀರ್ಥಾಟನೆ ಮಾಡುವವರಿಗೆ (ನೀವು ಅನಾದರ ತೋರದಿರಿ). ಆದರೆ ನೀವು ಇಹ್ರಾಮ್‌ನಿಂದ

1 ಇಸ್ರಾಈಲರು ಭಕ್ಷ್ಯ ಹರಿವಾಣಕ್ಕಾಗಿ ಪ್ರಾರ್ಥಿಸಿರುವುದನ್ನು ಪ್ರತಿಪಾದಿಸಿದ ಕಾರಣ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಹಜ್ಜ್ ಅಥವಾ ಉಮ್ರಾ ನಿರ್ವಹಿಸುತ್ತೇನೆ ಎಂಬ ನಿಯ್ಯತ್ತಿನೊಂದಿಗೆ ಸಾಂಕೇತಿಕವಾಗಿ ಹಜ್ ಅಥವಾ ಉಮ್ರಾ ಕರ್ಮದಲ್ಲಿ ಪ್ರವೇಶಿಸುವುದನ್ನು 'ಇಹ್ರಾಮ್' ಎನ್ನಲಾಗುತ್ತದೆ. ಇಹ್ರಾಮ್ ಎಂಬ ಪದದ ಭಾಷಿಕ ಅರ್ಥವು ನಿಷಿದ್ಧಗೊಳಿಸುವುದು ಎಂದಾಗಿದೆ. ಹಜ್ ಅಥವಾ ಉಮ್ರಾ ಕರ್ಮದಲ್ಲಿ ಸಾಂಕೇತಿಕವಾಗಿ ಪ್ರವೇಶಿಸುವುದರೊಂದಿಗೆ ಕೆಲವು ಕರ್ಮಗಳನ್ನು ನಿಷಿದ್ಧವೆಂದು ಪರಿಗಣಿಸಿ ವರ್ಜಿಸಬೇಕಾಗಿದೆ. ಆದ್ದರಿಂದ ಅದಕ್ಕೆ ಈ ಹೆಸರು ಬಂದಿದೆ. ಒಂದೊಂದು ದಿಕ್ಕಿನಿಂದ ಹೊರಡುವ ಯಾತ್ರಾರ್ಥಿಗಳು ಇಹ್ರಾಮ್‌ನಲ್ಲಿ ಪ್ರವೇಶಿಸಲು ನಿಶ್ಚಿತ ಸ್ಥಳ (ಮೀಕಾತ್) ಗಳಿವೆ.

وَٱلۡعُدۡوَٰنِۚ وَٱتَّقُواْ ٱللَّهَۖ إِنَّ ٱللَّهَ شَدِيدُ
ٱلۡعِقَابِ ٢

ವಿಮುಕ್ತರಾದರೆ ಬೇಟೆಯಾಡಬಹುದು. ಮಸ್ಜಿದುಲ್ ಹರಾಮ್‌ನಿಂದ ನಿಮ್ಮನ್ನು ತಡೆದರು ಎಂಬ ಆಕ್ರೋಶವು ಒಂದು ಜನತೆಯೊಂದಿಗೆ ಅನ್ಯಾಯವೆಸಗಲು ನಿಮಗೆಂದೂ ಪ್ರೇರಣೆಯಾಗದಿರಲಿ. ಪುಣ್ಯ ಮತ್ತು ಧರ್ಮನಿಷ್ಠೆಯಲ್ಲಿ ಪರಸ್ಪರ ಸಹಕರಿಸಿರಿ. ಪಾಪ ಮತ್ತು ಅತಿಕ್ರಮದಲ್ಲಿ ಪರಸ್ಪರ ಸಹಕರಿಸದಿರಿ. ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು.

حُرِّمَتۡ عَلَيۡكُمُ ٱلۡمَيۡتَةُ وَٱلدَّمُ
وَلَحۡمُ ٱلۡخِنزِيرِ وَمَآ أُهِلَّ لِغَيۡرِ ٱللَّهِ
بِهِۦ وَٱلۡمُنۡخَنِقَةُ وَٱلۡمَوۡقُوذَةُ وَٱلۡمُتَرَدِّيَةُ
وَٱلنَّطِيحَةُ وَمَآ أَكَلَ ٱلسَّبُعُ إِلَّا مَا
ذَكَّيۡتُمۡ وَمَا ذُبِحَ عَلَى ٱلنُّصُبِ وَأَن
تَسۡتَقۡسِمُواْ بِٱلۡأَزۡلَٰمِۚ ذَٰلِكُمۡ فِسۡقٌۗ ٱلۡيَوۡمَ
يَئِسَ ٱلَّذِينَ كَفَرُواْ مِن دِينِكُمۡ فَلَا
تَخۡشَوۡهُمۡ وَٱخۡشَوۡنِۚ ٱلۡيَوۡمَ أَكۡمَلۡتُ
لَكُمۡ دِينَكُمۡ وَأَتۡمَمۡتُ عَلَيۡكُمۡ
نِعۡمَتِي وَرَضِيتُ لَكُمُ ٱلۡإِسۡلَٰمَ دِينٗاۚ فَمَنِ
ٱضۡطُرَّ فِي مَخۡمَصَةٍ غَيۡرَ مُتَجَانِفٖ لِّإِثۡمٖ
فَإِنَّ ٱللَّهَ غَفُورٞ رَّحِيمٞ ٣

3. ಶವ, ರಕ್ತ, ಹಂದಿ ಮಾಂಸ, ಅಲ್ಲಾಹುವೇತರರ ಹೆಸರಲ್ಲಿ ಘೋಷಿಸ(ಕೊಯ್ಯ)ಲಾಗಿರುವುದು, ಉಸಿರುಗಟ್ಟಿ ಸತ್ತಿರುವುದು, ಹೊಡೆದು ಕೊಲ್ಲಲಾಗಿರುವುದು, ಕೆಳಗೆ ಬಿದ್ದು ಸತ್ತಿರುವುದು, ಇರಿತಕ್ಕೊಳಗಾಗಿ ಸತ್ತಿರುವುದು, ವನ್ಯ ಮೃಗಗಳು ಕಚ್ಚಿ ತಿಂದಿರುವುದು ಇತ್ಯಾದಿ ನಿಮಗೆ ನಿಷಿದ್ಧಗೊಳಿಸಲಾಗಿದೆ. ಆದರೆ (ಸಾಯುವ ಮೊದಲೇ) ನೀವು ಕೊಯ್ದಿರುವುದು ಇದರಿಂದ ಹೊರತಾಗಿದೆ. ವಿಗ್ರಹಗಳ ಮುಂದೆ ಬಲಿಯರ್ಪಿಸಲಾಗಿರುವುದು ಕೂಡ (ನಿಮಗೆ ನಿಷಿದ್ಧವಾಗಿದೆ). ಬಾಣಗಳನ್ನು ಬಳಸಿ ಅದೃಷ್ಟ ಪರೀಕ್ಷಿಸುವುದನ್ನು[1] ಕೂಡ (ನಿಮಗೆ ನಿಷಿದ್ಧಗೊಳಿಸಲಾಗಿದೆ). ಅವೆಲ್ಲವೂ ಧಿಕ್ಕಾರ ಪ್ರವೃತ್ತಿಗಳಾಗಿವೆ. ನಿಮ್ಮ ಧರ್ಮವನ್ನು ಸೋಲಿಸುವ ವಿಷಯದಲ್ಲಿ ಇಂದು ಸತ್ಯನಿಷೇಧಿಗಳು ನಿರಾಶರಾಗಿರುವರು. ಆದ್ದರಿಂದ ನೀವು ಅವರನ್ನು ಭಯಪಡದಿರಿ. ನನ್ನನ್ನು ಭಯಪಡಿರಿ. ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪೂರ್ತೀಕರಿಸಿಕೊಟ್ಟಿರುವೆನು. ನನ್ನ ಅನುಗ್ರಹವನ್ನು ನಾನು ನಿಮಗೆ

1 ವಿಶೇಷವಾದ ಕೆಲವು ಚಿಹ್ನೆಗಳನ್ನು ಹೊಂದಿರುವ ಬಾಣಗಳಂತಿರುವ ಕೆಲವು ಕೋಲುಗಳನ್ನು ಬತ್ತಳಿಕೆಯಲ್ಲಿಟ್ಟು ಅದನ್ನು ಅಲ್ಲಾಡಿಸಿ ಅದರಿಂದ ಒಂದನ್ನು ಹೊರತೆಗೆದು ಅದರಲ್ಲಿರುವ ಚಿಹ್ನೆಯ ಆಧಾರದಲ್ಲಿ ಭಾಗ್ಯ–ನಿರ್ಭಾಗ್ಯಗಳನ್ನು ಪರೀಕ್ಷಿಸುವ ಒಂದು ಸಂಪ್ರದಾಯ ಅರಬರಲ್ಲಿ ರೂಢಿಯಲ್ಲಿತ್ತು.

ನೆರವೇರಿಸಿಕೊಟ್ಟಿರುವೆನು. ಇಸ್ಲಾಮನ್ನು ಧರ್ಮವಾಗಿ ನಾನು ನಿಮಗೆ ತೃಪ್ತಿಪಟ್ಟಿರುವೆನು. ಯಾರಾದರೂ ಹಸಿವಿನ ನಿಮಿತ್ತ (ನಿಷಿದ್ಧವಾಗಿರುವುದನ್ನು ತಿನ್ನಲು) ನಿರ್ಬಂಧಿತನಾದರೆ ಮತ್ತು ಅವನು ಧಿಕ್ಕಾರದತ್ತ ವಾಲುವವನಲ್ಲದಿದ್ದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

**4.** ತಮಗೆ ಏನೆಲ್ಲಾ ಅನುಮತಿಸಲಾಗಿವೆಯೆಂದು ಅವರು ತಮ್ಮೊಂದಿಗೆ ಕೇಳುವರು. ತಾವು ಹೇಳಿರಿ: 'ಉತ್ತಮವಾದ ವಸ್ತುಗಳೆಲ್ಲವನ್ನೂ ನಿಮಗೆ ಅನುಮತಿಸಲಾಗಿದೆ. ಅಲ್ಲಾಹು ನಿಮಗೆ ನೀಡಿದ ವಿದ್ಯೆಯನ್ನು ಬಳಸಿ ಬೇಟೆಗಾರಿಕೆಯನ್ನು ತರಬೇತಿ ನೀಡುವ ರೀತಿಯಲ್ಲಿ ನೀವು ತರಬೇತುಗೊಳಿಸಿದ ಯಾವುದೇ ಬೇಟೆಮೃಗವು ನಿಮಗೋಸ್ಕರ ಹಿಡಿದು ತಂದಿರುವುದನ್ನು ತಿನ್ನಿರಿ. ಆ ಬೇಟೆಯ ಮೇಲೆ ನೀವು ಅಲ್ಲಾಹುವಿನ ನಾಮವನ್ನು ಉಚ್ಚರಿಸಿರಿ. ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಅತಿ ಶೀಘ್ರವಾಗಿ ವಿಚಾರಣೆ ನಡೆಸುವವನಾಗಿರುವನು.

يَسْـَٔلُونَكَ مَاذَآ أُحِلَّ لَهُمْۖ قُلْ أُحِلَّ لَكُمُ ٱلطَّيِّبَٰتُ وَمَا عَلَّمْتُم مِّنَ ٱلْجَوَارِحِ مُكَلِّبِينَ تُعَلِّمُونَهُنَّ مِمَّا عَلَّمَكُمُ ٱللَّهُۖ فَكُلُوا۟ مِمَّآ أَمْسَكْنَ عَلَيْكُمْ وَٱذْكُرُوا۟ ٱسْمَ ٱللَّهِ عَلَيْهِۖ وَٱتَّقُوا۟ ٱللَّهَۚ إِنَّ ٱللَّهَ سَرِيعُ ٱلْحِسَابِ ٤

**5.** ಇಂದು ನಿಮಗೆ ಎಲ್ಲ ಉತ್ತಮ ವಸ್ತುಗಳನ್ನೂ ಧರ್ಮಸಮ್ಮತಗೊಳಿಸಲಾಗಿದೆ. ಗ್ರಂಥ ನೀಡಲಾದವರ ಆಹಾರವು ನಿಮಗೆ ಧರ್ಮಸಮ್ಮತವಾಗಿದೆ. ನಿಮ್ಮ ಆಹಾರವು ಅವರಿಗೂ ಧರ್ಮಸಮ್ಮತವಾಗಿದೆ. ಸತ್ಯವಿಶ್ವಾಸಿನಿಯರ ಪೈಕಿ ಪತಿವ್ರತೆಯರಾದ ಸ್ತ್ರೀಯರು ಮತ್ತು ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟವರ ಪೈಕಿ ಪತಿವ್ರತೆಯರಾದ ಸ್ತ್ರೀಯರು –ನೀವು ಅವರಿಗೆ ವಧುದಕ್ಷಿಣೆಯನ್ನು ನೀಡಿದ್ದರೆ– (ನಿಮಗೆ ಧರ್ಮಸಮ್ಮತವಾಗಿದ್ದಾರೆ).

ٱلْيَوْمَ أُحِلَّ لَكُمُ ٱلطَّيِّبَٰتُۖ وَطَعَامُ ٱلَّذِينَ أُوتُوا۟ ٱلْكِتَٰبَ حِلٌّ لَّكُمْ وَطَعَامُكُمْ حِلٌّ لَّهُمْۖ وَٱلْمُحْصَنَٰتُ مِنَ ٱلْمُؤْمِنَٰتِ وَٱلْمُحْصَنَٰتُ مِنَ ٱلَّذِينَ أُوتُوا۟ ٱلْكِتَٰبَ مِن قَبْلِكُمْ إِذَآ ءَاتَيْتُمُوهُنَّ أُجُورَهُنَّ مُحْصِنِينَ غَيْرَ مُسَٰفِحِينَ وَلَا مُتَّخِذِىٓ أَخْدَانٍۗ وَمَن يَكْفُرْ بِٱلْإِيمَٰنِ فَقَدْ حَبِطَ عَمَلُهُۥ وَهُوَ فِى ٱلْءَاخِرَةِ مِنَ ٱلْخَٰسِرِينَ ٥

ನೀವು ವೈವಾಹಿಕ ಬದುಕು ಸಾಗಿಸುವುದನ್ನು ಬಯಸುವವರೂ, ವ್ಯಭಿಚಾರ ಮಾಡದವರೂ, ಗುಪ್ತ ಸಂಗಾತಿಗಳನ್ನು ಇಟ್ಟುಕೊಳ್ಳದವರೂ ಆಗಿರಬೇಕಾಗಿದೆ. ಯಾರಾದರೂ ಸತ್ಯವಿಶ್ವಾಸವನ್ನು ತಿರಸ್ಕರಿಸುವುದಾದರೆ ಅವನ ಕರ್ಮವು ನಿಷ್ಫಲವಾಗಿ ಬಿಡುವುದು. ಪರಲೋಕದಲ್ಲಿ ಅವನು ನಷ್ಟ ಹೊಂದಿದವರೊಂದಿಗೆ ಸೇರುವವನು.

6. ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್‌ಗಾಗಿ ಸಿದ್ಧರಾದರೆ ನಿಮ್ಮ ಮುಖಗಳನ್ನು ಮತ್ತು ಮೊಣಕೈಗಳವರೆಗೆ ಎರಡು ಕೈಗಳನ್ನು ತೊಳೆಯಿರಿ. ತಲೆಗಳನ್ನು ಸವರಿರಿ ಮತ್ತು ಎರಡು ಕಾಲುಗಳನ್ನು ಹರಡುಗಂಟಿನ ತನಕ ತೊಳೆಯಿರಿ. ನೀವು ಜನಾಬತ್ (ದೊಡ್ಡ ಅಶುದ್ಧಿ)ನಲ್ಲಿರುವವರಾದರೆ (ಸ್ನಾನ ಮಾಡಿ) ಶುದ್ಧರಾಗಿರಿ. ನೀವು ರೋಗಿಗಳಾಗಿದ್ದರೆ ಅಥವಾ ಯಾತ್ರಿಕರಾಗಿದ್ದರೆ ಅಥವಾ ನಿಮ್ಮಲ್ಲೊಬ್ಬನು ಮಲಮೂತ್ರ ವಿಸರ್ಜನೆ ಮಾಡಿ ಬರುವವನಾಗಿದ್ದರೆ ಅಥವಾ ನೀವು ಸ್ತ್ರೀಯರೊಂದಿಗೆ ಲೈಂಗಿಕ ಸಂಪರ್ಕ ಮಾಡಿದ ಸ್ಥಿತಿಯಲ್ಲಿದ್ದರೆ ಹಾಗೂ ನಿಮಗೆ ನೀರು ದೊರೆಯದಿದ್ದರೆ ಶುದ್ಧವಾದ ಭೂಮಿಯ ಮೇಲ್ಭಾಗವನ್ನು ಅರಸಿರಿ.[1] ತರುವಾಯ ಅದರಿಂದ ನಿಮ್ಮ ಮುಖ ಮತ್ತು ಕೈಗಳನ್ನು ಸವರಿರಿ. ಅಲ್ಲಾಹು ನಿಮಗೆ ತೊಂದರೆಕೊಡಲು ಇಚ್ಛಿಸುವುದಿಲ್ಲ. ಆದರೆ ಅವನು ನಿಮ್ಮನ್ನು ಶುದ್ಧೀಕರಿಸಲು ಮತ್ತು ತನ್ನ ಅನುಗ್ರಹವನ್ನು ನಿಮಗೆ ಪೂರ್ತೀಕರಿಸಿ ಕೊಡಲು ಇಚ್ಛಿಸುವನು. ನೀವು ಕೃತಜ್ಞತೆ ಸಲ್ಲಿಸುವವರಾಗಲೂಬಹುದು.

يَٰٓأَيُّهَا ٱلَّذِينَ ءَامَنُوٓاْ إِذَا قُمۡتُمۡ إِلَى ٱلصَّلَوٰةِ فَٱغۡسِلُواْ وُجُوهَكُمۡ وَأَيۡدِيَكُمۡ إِلَى ٱلۡمَرَافِقِ وَٱمۡسَحُواْ بِرُءُوسِكُمۡ وَأَرۡجُلَكُمۡ إِلَى ٱلۡكَعۡبَيۡنِۚ وَإِن كُنتُمۡ جُنُبٗا فَٱطَّهَّرُواْۚ وَإِن كُنتُم مَّرۡضَىٰٓ أَوۡ عَلَىٰ سَفَرٍ أَوۡ جَآءَ أَحَدٞ مِّنكُم مِّنَ ٱلۡغَآئِطِ أَوۡ لَٰمَسۡتُمُ ٱلنِّسَآءَ فَلَمۡ تَجِدُواْ مَآءٗ فَتَيَمَّمُواْ صَعِيدٗا طَيِّبٗا فَٱمۡسَحُواْ بِوُجُوهِكُمۡ وَأَيۡدِيكُم مِّنۡهُۚ مَا يُرِيدُ ٱللَّهُ لِيَجۡعَلَ عَلَيۡكُم مِّنۡ حَرَجٖ وَلَٰكِن يُرِيدُ لِيُطَهِّرَكُمۡ وَلِيُتِمَّ نِعۡمَتَهُۥ عَلَيۡكُمۡ لَعَلَّكُمۡ تَشۡكُرُونَ ٦

7. 'ನಾವು ಆಲಿಸಿರುವೆವು ಮತ್ತು ಅನುಸರಿಸಿರುವೆವು' ಎಂದು ನೀವು ಹೇಳಿದ ಸಂದರ್ಭ ಅಲ್ಲಾಹು ನಿಮಗೆ ನೀಡಿರುವ

وَٱذۡكُرُواْ نِعۡمَةَ ٱللَّهِ عَلَيۡكُمۡ وَمِيثَٰقَهُ ٱلَّذِي وَاثَقَكُم بِهِۦٓ إِذۡ قُلۡتُمۡ سَمِعۡنَا

1 ಟಿಪ್ಪಣಿ 124 ನೋಡಿರಿ.

ಅನುಗ್ರಹವನ್ನು ಮತ್ತು ಅವನು ನಿಮ್ಮೊಂದಿಗೆ ಬಲಿಷ್ಠವಾದ ಕರಾರು ಪಡೆದಿರುವುದನ್ನೂ (ಸ್ಮರಿಸಿರಿ). ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಹೃದಯಗಳೊಳಗಿರುವುದನ್ನು ಅರಿಯುವವನಾಗಿರುವನು.

وَأَطَعۡنَاۖ وَٱتَّقُواْ ٱللَّهَۚ إِنَّ ٱللَّهَ عَلِيمُۢ بِذَاتِ ٱلصُّدُورِ ٧

8. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿಗೋಸ್ಕರ ನೆಲೆಗೊಳ್ಳುವವರೂ, ನ್ಯಾಯಕ್ಕೆ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ಜನತೆಯೊಂದಿಗೆ ನಿಮಗಿರುವ ಆಕ್ರೋಶವು ನ್ಯಾಯ ಪಾಲಿಸದಿರಲು ನಿಮ್ಮನ್ನು ಪ್ರೇರೇಪಿಸದಿರಲಿ. ನ್ಯಾಯ ಪಾಲಿಸಿರಿ. ಅದು ಧರ್ಮನಿಷ್ಠೆಗೆ ಅತ್ಯಂತ ನಿಕಟವಾಗಿದೆ. ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದನ್ನು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

يَٰٓأَيُّهَا ٱلَّذِينَ ءَامَنُواْ كُونُواْ قَوَّٰمِينَ لِلَّهِ شُهَدَآءَ بِٱلۡقِسۡطِۖ وَلَا يَجۡرِمَنَّكُمۡ شَنَـَٔانُ قَوۡمٍ عَلَىٰٓ أَلَّا تَعۡدِلُواْۚ ٱعۡدِلُواْ هُوَ أَقۡرَبُ لِلتَّقۡوَىٰۖ وَٱتَّقُواْ ٱللَّهَۚ إِنَّ ٱللَّهَ خَبِيرُۢ بِمَا تَعۡمَلُونَ ٨

9. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರು ಯಾರೋ ಅವರಿಗೆ ಅಲ್ಲಾಹು ಪಾಪ ಮುಕ್ತಿಯನ್ನು ಮತ್ತು ಮಹಾ ಪ್ರತಿಫಲವನ್ನು ವಾಗ್ದಾನ ಮಾಡಿರುವನು.

وَعَدَ ٱللَّهُ ٱلَّذِينَ ءَامَنُواْ وَعَمِلُواْ ٱلصَّـٰلِحَٰتِ لَهُم مَّغۡفِرَةٞ وَأَجۡرٌ عَظِيمٞ ٩

10. ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಯಾರೋ ಅವರೇ ನರಕವಾಸಿಗಳಾಗಿರುವರು.

وَٱلَّذِينَ كَفَرُواْ وَكَذَّبُواْ بِـَٔايَٰتِنَآ أُوْلَـٰٓئِكَ أَصۡحَٰبُ ٱلۡجَحِيمِ ١٠

11. ಓ ಸತ್ಯವಿಶ್ವಾಸಿಗಳೇ! ಒಂದು ಜನತೆಯು ನಿಮ್ಮ ವಿರುದ್ಧ (ದಾಳಿ ಮಾಡುವ ಸಲುವಾಗಿ) ತಮ್ಮ ಕೈಗಳನ್ನು ಚಾಚಲು ಮುಂದಾದಾಗ ಅವರ ಕೈಗಳನ್ನು ನಿಮ್ಮಿಂದ ತಡೆಗಟ್ಟುವ ಮೂಲಕ ಅಲ್ಲಾಹು ನಿಮಗೆ ಮಾಡಿದ ಅನುಗ್ರಹವನ್ನು ಸ್ಮರಿಸಿರಿ. ನೀವು ಅಲ್ಲಾಹುವನ್ನು ಭಯಪಡಿರಿ. ಸತ್ಯವಿಶ್ವಾಸಿಗಳು ಭರವಸೆಯನ್ನಿಡುವುದು ಅಲ್ಲಾಹುವಿನ ಮೇಲೆಯೇ ಆಗಿರಲಿ.

يَٰٓأَيُّهَا ٱلَّذِينَ ءَامَنُواْ ٱذۡكُرُواْ نِعۡمَتَ ٱللَّهِ عَلَيۡكُمۡ إِذۡ هَمَّ قَوۡمٌ أَن يَبۡسُطُوٓاْ إِلَيۡكُمۡ أَيۡدِيَهُمۡ فَكَفَّ أَيۡدِيَهُمۡ عَنكُمۡۖ وَٱتَّقُواْ ٱللَّهَۚ وَعَلَى ٱللَّهِ فَلۡيَتَوَكَّلِ ٱلۡمُؤۡمِنُونَ ١١

12. ಅಲ್ಲಾಹು ಇಸ್ರಾಈಲ್ ಸಂತತಿಗಳೊಂದಿಗೆ ಕರಾರನ್ನು ಪಡೆದಿರುವನು. ಅವರ ಪೈಕಿ ಹನ್ನೆರಡು ಜನರನ್ನು ನಾವು ನಾಯಕರನ್ನಾಗಿ ಮಾಡಿ ಕಳುಹಿಸಿರುವೆವು. ಅಲ್ಲಾಹು (ಅವರೊಂದಿಗೆ) ಹೇಳಿದನು: 'ಖಂಡಿತವಾಗಿಯೂ ನಾನು ನಿಮ್ಮೊಂದಿಗಿರುವೆನು. ನೀವು ನಮಾಝ್ ಸಂಸ್ಥಾಪಿಸುವುದಾದರೆ, ಝಕಾತ್ ನೀಡುವುದಾದರೆ, ನನ್ನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟರೆ, ಅವರಿಗೆ ಸಹಾಯಮಾಡಿದರೆ ಮತ್ತು ಅಲ್ಲಾಹುವಿಗೆ ಉತ್ತಮವಾದ ಸಾಲವನ್ನು ನೀಡಿದರೆ ಖಂಡಿತವಾಗಿಯೂ ನಾನು ನಿಮ್ಮಿಂದ ನಿಮ್ಮ ಪಾಪಗಳನ್ನು ಅಳಿಸುವೆನು ಮತ್ತು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಪ್ರವೇಶ ಮಾಡಿಸುವೆನು. ಆದರೆ ಅದರ ಬಳಿಕವೂ ನಿಮ್ಮ ಪೈಕಿ ಯಾರು ಅವಿಶ್ವಾಸವಿಡುವನೋ ಅವನು ನೇರಮಾರ್ಗದಿಂದ ವ್ಯತಿಚಲಿಸಿದವನಾಗಿರುವನು.

۞ وَلَقَدۡ أَخَذَ ٱللَّهُ مِيثَٰقَ بَنِيٓ إِسۡرَٰٓءِيلَ وَبَعَثۡنَا مِنۡهُمُ ٱثۡنَيۡ عَشَرَ نَقِيبٗاۖ وَقَالَ ٱللَّهُ إِنِّي مَعَكُمۡۖ لَئِنۡ أَقَمۡتُمُ ٱلصَّلَوٰةَ وَءَاتَيۡتُمُ ٱلزَّكَوٰةَ وَءَامَنتُم بِرُسُلِي وَعَزَّرۡتُمُوهُمۡ وَأَقۡرَضۡتُمُ ٱللَّهَ قَرۡضًا حَسَنٗا لَّأُكَفِّرَنَّ عَنكُمۡ سَيِّـَٔاتِكُمۡ وَلَأُدۡخِلَنَّكُمۡ جَنَّٰتٖ تَجۡرِي مِن تَحۡتِهَا ٱلۡأَنۡهَٰرُۚ فَمَن كَفَرَ بَعۡدَ ذَٰلِكَ مِنكُمۡ فَقَدۡ ضَلَّ سَوَآءَ ٱلسَّبِيلِ ١٢

13. ತರುವಾಯ ಅವರು ಕರಾರು ಉಲ್ಲಂಘಿಸಿದ ನಿಮಿತ್ತ ನಾವು ಅವರನ್ನು ಶಪಿಸಿದೆವು ಮತ್ತು ಅವರ ಹೃದಯಗಳನ್ನು ಕಠೋರಗೊಳಿಸಿದೆವು. ಅವರು ಗ್ರಂಥದ ವಾಕ್ಯಗಳನ್ನು ಅವುಗಳ ಸ್ಥಳದಿಂದ ಸ್ಥಾನಾಂತರಗೊಳಿಸುತ್ತಿರುವರು.[1] ಅವರಿಗೆ ಉಪದೇಶ ನೀಡಲಾಗಿರುವುದರಲ್ಲಿ ಒಂದಂಶವನ್ನು ಅವರು ಮರೆತುಬಿಟ್ಟರು. ಅವರ ಪೈಕಿ ಕೆಲವರ ಹೊರತು ಅವರು ನಡೆಸುತ್ತಿರುವ ವಂಚನೆಯನ್ನು ತಾವು (ಮುಂದೆಯೂ) ಕಾಣುತ್ತಲೇ ಇರುವಿರಿ. ತಾವು ಅವರನ್ನು ಮನ್ನಿಸಿರಿ ಮತ್ತು ಕಡೆಗಣಿಸಿರಿ. ಖಂಡಿತವಾಗಿಯೂ ಉತ್ತಮ ರೀತಿಯಲ್ಲಿ ವರ್ತಿಸುವವರನ್ನು ಅಲ್ಲಾಹು ಮೆಚ್ಚುವನು.

فَبِمَا نَقۡضِهِم مِّيثَٰقَهُمۡ لَعَنَّٰهُمۡ وَجَعَلۡنَا قُلُوبَهُمۡ قَٰسِيَةٗۖ يُحَرِّفُونَ ٱلۡكَلِمَ عَن مَّوَاضِعِهِۦ وَنَسُواْ حَظّٗا مِّمَّا ذُكِّرُواْ بِهِۦۚ وَلَا تَزَالُ تَطَّلِعُ عَلَىٰ خَآئِنَةٖ مِّنۡهُمۡ إِلَّا قَلِيلٗا مِّنۡهُمۡۖ فَٱعۡفُ عَنۡهُمۡ وَٱصۡفَحۡۚ إِنَّ ٱللَّهَ يُحِبُّ ٱلۡمُحۡسِنِينَ ١٣

1 ಅಂದರೆ ಅವರು ಗ್ರಂಥದ ವಾಕ್ಯಗಳನ್ನು ಅಸಾಂದರ್ಭಿಕವಾಗಿ ಉದ್ಧರಿಸುವ ಮೂಲಕ ದುರ್ವ್ಯಾಖ್ಯಾನ ಮಾಡುತ್ತಿದ್ದರು ಅಥವಾ ವಾಕ್ಯರಚನೆಯಲ್ಲೇ ಬದಲಾವಣೆ ಮಾಡುತ್ತಿದ್ದರು.

**14.** 'ನಾವು ಕ್ರೈಸ್ತರು' ಎಂದು ಹೇಳಿದವರಿಂದಲೂ ನಾವು ಕರಾರನ್ನು ಪಡೆದಿರುವೆವು. ತರುವಾಯ ಅವರಿಗೆ ಉಪದೇಶ ನೀಡಲಾಗಿರುವುದರಲ್ಲಿ ಒಂದಂಶವನ್ನು ಅವರು ಮರೆತುಬಿಟ್ಟರು. ಆದ್ದರಿಂದ ಅವರ ನಡುವೆ ಪುನರುತ್ಥಾನದ ದಿನದ ತನಕ ನಾವು ಶತ್ರುತ್ವವನ್ನೂ ವಿದ್ವೇಷವನ್ನೂ ಹಚ್ಚಿದೆವು. ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ತರುವಾಯ ಅವರಿಗೆ ತಿಳಿಸಿಕೊಡುವನು.

وَمِنَ ٱلَّذِينَ قَالُوٓاْ إِنَّا نَصَٰرَىٰٓ أَخَذۡنَا
مِيثَٰقَهُمۡ فَنَسُواْ حَظّٗا مِّمَّا ذُكِّرُواْ بِهِۦ
فَأَغۡرَيۡنَا بَيۡنَهُمُ ٱلۡعَدَاوَةَ وَٱلۡبَغۡضَآءَ إِلَىٰ يَوۡمِ
ٱلۡقِيَٰمَةِۚ وَسَوۡفَ يُنَبِّئُهُمُ ٱللَّهُ بِمَا كَانُواْ
يَصۡنَعُونَ ١٤

**15.** ಓ ಗ್ರಂಥದವರೇ! ನೀವು ಗ್ರಂಥದಿಂದ ಮರೆ ಮಾಚುತ್ತಿರುವ ಅನೇಕ ವಿಷಯಗಳನ್ನು ನಿಮಗೆ ಬಹಿರಂಗ ಪಡಿಸುತ್ತಾ ನಮ್ಮ ಸಂದೇಶವಾಹಕರು (ಇಗೋ) ನಿಮ್ಮ ಬಳಿಗೆ ಬಂದಿರುವರು. ಹೆಚ್ಚಿನವುಗಳನ್ನೂ ಅವರು ಕ್ಷಮಿಸುವರು. ನಿಮಗೆ ಅಲ್ಲಾಹುವಿನ ವತಿಯಿಂದ ಒಂದು ಪ್ರಕಾಶವೂ ಸ್ಪಷ್ಟವಾದ ಒಂದು ಗ್ರಂಥವೂ ಬಂದಿದೆ.

يَٰٓأَهۡلَ ٱلۡكِتَٰبِ قَدۡ جَآءَكُمۡ رَسُولُنَا
يُبَيِّنُ لَكُمۡ كَثِيرٗا مِّمَّا كُنتُمۡ تُخۡفُونَ مِنَ
ٱلۡكِتَٰبِ وَيَعۡفُواْ عَن كَثِيرٖۚ قَدۡ جَآءَكُم
مِّنَ ٱللَّهِ نُورٞ وَكِتَٰبٞ مُّبِينٞ ١٥

**16.** ತನ್ನ ಸಂತೃಪ್ತಿಯನ್ನು ಅರಸುತ್ತಿರುವವರನ್ನು ಅಲ್ಲಾಹು ಅದರ ಮೂಲಕ ಶಾಂತಿಯ ಹಾದಿಗಳೆಡೆಗೆ ಮುನ್ನಡೆಸುವನು. ಅವನು ಅವರನ್ನು ತನ್ನ ಅಪ್ಪಣೆಯೊಂದಿಗೆ ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತರುವನು ಮತ್ತು ಅವರನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸುವನು.

يَهۡدِي بِهِ ٱللَّهُ مَنِ ٱتَّبَعَ رِضۡوَٰنَهُۥ سُبُلَ
ٱلسَّلَٰمِ وَيُخۡرِجُهُم مِّنَ ٱلظُّلُمَٰتِ إِلَى
ٱلنُّورِ بِإِذۡنِهِۦ وَيَهۡدِيهِمۡ إِلَىٰ صِرَٰطٖ
مُّسۡتَقِيمٖ ١٦

**17.** 'ಮರ್ಯಮ್‌ರ ಪುತ್ರ ಮಸೀಹನೇ ಅಲ್ಲಾಹು'[1] ಎಂದು ಹೇಳಿದವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿರುವರು. (ಓ ಪ್ರವಾದಿಯವರೇ!) ತಾವು ಹೇಳಿರಿ:

لَّقَدۡ كَفَرَ ٱلَّذِينَ قَالُوٓاْ إِنَّ ٱللَّهَ هُوَ
ٱلۡمَسِيحُ ٱبۡنُ مَرۡيَمَۚ قُلۡ فَمَن يَمۡلِكُ مِنَ
ٱللَّهِ شَيۡـًٔا إِنۡ أَرَادَ أَن يُهۡلِكَ ٱلۡمَسِيحَ

---

1 ಯೇಸು ದೇವಪುತ್ರರಾಗಿದ್ದಾರೆ ಎಂಬ ವಾದವನ್ನು ವಿಸ್ತಾರಗೊಳಿಸಿದರೆ ಯೇಸುವೇ ಸ್ವತಃ ದೇವರಾಗಿದ್ದಾರೆ ಎಂಬ ತನಕ ಅದು ತಲುಪುತ್ತದೆ. ಬಹುಸಂಖ್ಯಾತ ಕ್ರೈಸ್ತರ ಅಭಿಪ್ರಾಯ ಪ್ರಕಾರ ತಂದೆ, ಪುತ್ರ ಮತ್ತು ಪವಿತ್ರಾತ್ಮ ಒಂದೇ ಅಸ್ತಿತ್ವದ ವಿವಿಧ ರೂಪಗಳಾಗಿದ್ದಾರೆ. ಕ್ರೈಸ್ತರು ಯೇಸುವನ್ನು ಕರ್ತ, ದೇವರು, ಪ್ರಭು ಎಂಬಿತ್ಯಾದಿ ಹೆಸರುಗಳಲ್ಲಿ ಕರೆಯುತ್ತಿರುವರು.

ٱبۡنَ مَرۡيَمَ وَأُمَّهُۥ وَمَن فِي ٱلۡأَرۡضِ جَمِيعٗاۗ وَلِلَّهِ مُلۡكُ ٱلسَّمَٰوَٰتِ وَٱلۡأَرۡضِ وَمَا بَيۡنَهُمَاۚ يَخۡلُقُ مَا يَشَآءُۚ وَٱللَّهُ عَلَىٰ كُلِّ شَيۡءٖ قَدِيرٞ ١٧

'ಮರ್ಯಮ್‌ರ ಪುತ್ರ ಮಸೀಹರನ್ನು, ಅವರ ತಾಯಿಯನ್ನು ಮತ್ತು ಭೂಮಿಯಲ್ಲಿರುವ ಸರ್ವರನ್ನೂ ಅಲ್ಲಾಹು ನಾಶ ಮಾಡಲು ಬಯಸಿದರೆ ಅವನ ಯಾವುದೇ ನಿರ್ಧಾರದಲ್ಲಿ ಪ್ರಭಾವ ಬೀರಲು ಯಾರಿಗೆ ಸಾಧ್ಯವಿದೆ?' ಆಕಾಶಗಳಲ್ಲಿ, ಭೂಮಿಯಲ್ಲಿ ಮತ್ತು ಅವರೆಡರ ಮಧ್ಯೆಯಿರುವ ಎಲ್ಲದರ ಆಧಿಪತ್ಯ ಅಲ್ಲಾಹುವಿಗಿರುವುದಾಗಿದೆ. ತಾನಿಚ್ಛಿಸುವುದನ್ನು ಅವನು ಸೃಷ್ಟಿಸುವನು. ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَقَالَتِ ٱلۡيَهُودُ وَٱلنَّصَٰرَىٰ نَحۡنُ أَبۡنَٰٓؤُاْ ٱللَّهِ وَأَحِبَّٰٓؤُهُۥۚ قُلۡ فَلِمَ يُعَذِّبُكُم بِذُنُوبِكُمۖ بَلۡ أَنتُم بَشَرٞ مِّمَّنۡ خَلَقَۚ يَغۡفِرُ لِمَن يَشَآءُ وَيُعَذِّبُ مَن يَشَآءُۚ وَلِلَّهِ مُلۡكُ ٱلسَّمَٰوَٰتِ وَٱلۡأَرۡضِ وَمَا بَيۡنَهُمَاۖ وَإِلَيۡهِ ٱلۡمَصِيرُ ١٨

18. ಯಹೂದರು ಮತ್ತು ಕ್ರೈಸ್ತರು ಹೇಳಿದರು: 'ನಾವು ಅಲ್ಲಾಹುವಿನ ಮಕ್ಕಳಾಗಿರುವೆವು ಮತ್ತು ಅವನಿಗೆ ಅತ್ಯಂತ ಪ್ರೀತಿಪಾತ್ರರಾಗಿರುವೆವು.' (ಓ ಪ್ರವಾದಿಯವರೇ!) ತಾವು ಹೇಳಿರಿ: 'ಮತ್ತೇಕೆ ನಿಮ್ಮ ಪಾಪಗಳಿಗಾಗಿ ಅವನು ನಿಮ್ಮನ್ನು ಶಿಕ್ಷಿಸುವುದು?' ಅಲ್ಲ, ನೀವು ಕೇವಲ ಅವನ ಸೃಷ್ಟಿಗಳಲ್ಲಿ ಸೇರಿದ ಮನುಷ್ಯರು ಮಾತ್ರವಾಗಿರುವಿರಿ. ತಾನಿಚ್ಛಿಸಿದವರಿಗೆ ಅವನು ಕ್ಷಮಿಸುವನು ಮತ್ತು ತಾನಿಚ್ಛಿಸಿದವರನ್ನು ಅವನು ಶಿಕ್ಷಿಸುವನು. ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವ ಎಲ್ಲದರ ಆಧಿಪತ್ಯವು ಅಲ್ಲಾಹುವಿಗಿರುವುದಾಗಿದೆ. ಮರಳುವಿಕೆಯು ಅವನ ಬಳಿಗೇ ಆಗಿದೆ.

يَٰٓأَهۡلَ ٱلۡكِتَٰبِ قَدۡ جَآءَكُمۡ رَسُولُنَا يُبَيِّنُ لَكُمۡ عَلَىٰ فَتۡرَةٖ مِّنَ ٱلرُّسُلِ أَن تَقُولُواْ مَا جَآءَنَا مِنۢ بَشِيرٖ وَلَا نَذِيرٖۖ فَقَدۡ جَآءَكُم بَشِيرٞ وَنَذِيرٞۗ وَٱللَّهُ عَلَىٰ كُلِّ شَيۡءٖ قَدِيرٞ ١٩

19. ಓ ಗ್ರಂಥದವರೇ! ಸಂದೇಶವಾಹಕರು ಬರದಂತಹ ಒಂದು ಮಧ್ಯಾವಧಿಯು ಕಳೆದ ಬಳಿಕ ನಿಮಗೆ (ವಾಸ್ತವಿಕತೆಗಳನ್ನು) ವಿವರಿಸಿಕೊಡುತ್ತಾ ನಮ್ಮ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರುವರು. ಇದು 'ಒಬ್ಬ ಶುಭವಾರ್ತೆ ತಿಳಿಸುವವನಾಗಲಿ ಮುನ್ನೆಚ್ಚರಿಕೆ ನೀಡುವವನಾಗಲಿ ನಮ್ಮ ಬಳಿಗೆ ಬಂದಿರಲಿಲ್ಲ' ಎಂದು ನೀವು ಹೇಳಬಾರದೆಂದಾಗಿದೆ. ಈಗ ನಿಮಗೆ ಶುಭವಾರ್ತೆ ತಿಳಿಸುವ ಮತ್ತು

ಮುನ್ನೆಚ್ಚರಿಕೆ ನೀಡುವ ವ್ಯಕ್ತಿ (ಇಗೋ) ನಿಮ್ಮ ಬಳಿಗೆ ಬಂದಿರುವರು. ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

20. ಮೂಸಾ ತನ್ನ ಜನತೆಯೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ): 'ಓ ನನ್ನ ಜನರೇ! ನಿಮ್ಮಲ್ಲಿ ಪ್ರವಾದಿಗಳನ್ನು ಕಳುಹಿಸಿದಾಗಲೂ, ನಿಮ್ಮನ್ನು ಅರಸರನ್ನಾಗಿ ಮಾಡಿದಾಗಲೂ ಮತ್ತು ಮನುಷ್ಯರ ಪೈಕಿ ಯಾರಿಗೂ ನೀಡಿರದಂತಹ ಹಲವನ್ನೂ ನಿಮಗೆ ನೀಡಿದಾಗಲೂ ಅಲ್ಲಾಹು ನಿಮಗೆ ದಯಪಾಲಿಸಿದ ಅನುಗ್ರಹಗಳನ್ನು ಸ್ಮರಿಸಿರಿ.'

وَإِذۡ قَالَ مُوسَىٰ لِقَوۡمِهِۦ يَٰقَوۡمِ ٱذۡكُرُواْ نِعۡمَةَ ٱللَّهِ عَلَيۡكُمۡ إِذۡ جَعَلَ فِيكُمۡ أَنۢبِيَآءَ وَجَعَلَكُم مُّلُوكٗا وَءَاتَىٰكُم مَّا لَمۡ يُؤۡتِ أَحَدٗا مِّنَ ٱلۡعَٰلَمِينَ ٢٠

21. 'ಓ ನನ್ನ ಜನರೇ! ಅಲ್ಲಾಹು ನಿಮಗೆ ವಾಗ್ದಾನ ಮಾಡಿರುವ ಪವಿತ್ರ ಭೂಮಿಯನ್ನು ಪ್ರವೇಶಿಸಿರಿ.[1] ನೀವು ಹಿಂದಕ್ಕೆ ಮರಳಿಹೋಗದಿರಿ. ಅನ್ಯಥಾ ನೀವು ನಷ್ಟ ಹೊಂದಿದವರಾಗುವಿರಿ.'

يَٰقَوۡمِ ٱدۡخُلُواْ ٱلۡأَرۡضَ ٱلۡمُقَدَّسَةَ ٱلَّتِي كَتَبَ ٱللَّهُ لَكُمۡ وَلَا تَرۡتَدُّواْ عَلَىٰٓ أَدۡبَارِكُمۡ فَتَنقَلِبُواْ خَٰسِرِينَ ٢١

22. ಅವರು ಹೇಳಿದರು: 'ಓ ಮೂಸಾ! ಅಲ್ಲಿ ಪರಾಕ್ರಮಿಗಳಾದ ಜನರಿರುವರು. ಅವರು ಅಲ್ಲಿಂದ ಹೊರಹೋಗುವವರೆಗೆ ನಾವು ಅದನ್ನು ಎಂದಿಗೂ ಪ್ರವೇಶಿಸಲಾರೆವು. ಅವರು

قَالُواْ يَٰمُوسَىٰٓ إِنَّ فِيهَا قَوۡمٗا جَبَّارِينَ وَإِنَّا لَن نَّدۡخُلَهَا حَتَّىٰ يَخۡرُجُواْ مِنۡهَا فَإِن يَخۡرُجُواْ مِنۡهَا فَإِنَّا دَٰخِلُونَ ٢٢

1 ಯೂಸುಫ್(عَلَيْهِ السَّلَامُ)ರವರು ಈಜಿಪ್ಟಿನಲ್ಲಿ ತಮ್ಮ ನೆಲೆಯನ್ನು ಭದ್ರಪಡಿಸುವುದರೊಂದಿಗೆ ಇಸ್ರಾಈಲರು ಅಲ್ಲಿನ ಪೌರರಾದರು. ಆದರೆ ತದನಂತರ ಫರೋವ ಚಕ್ರವರ್ತಿಗಳ ಕೆಳಗೆ ಅವರು ಕ್ರೂರವಾದ ಗುಲಾಮಗಿರಿಯನ್ನು ಅನುಭವಿಸಬೇಕಾಗಿ ಬಂತು. ಪವಿತ್ರ ಭೂಮಿಯಲ್ಲಿ (ಪ್ಯಾಲಸ್ತೀನ್‌ನಲ್ಲಿ) ಅವರನ್ನು ನೆಲೆಗೊಳಿಸುವೆನೆಂದು ಅಲ್ಲಾಹು ಅವರಿಗೆ ಪ್ರವಾದಿಗಳ ಮೂಲಕ ವಾಗ್ದಾನ ಮಾಡಿದ್ದನು.

ಅಲ್ಲಾಹು ಒಂದು ಜನಸಮೂಹವನ್ನು ಒಂದು ಸ್ಥಳದಲ್ಲಿ ನೆಲೆಗೊಳಿಸುವನು ಎಂದರೆ ಅದರರ್ಥ ಅವನು ಅಲ್ಲಿನ ನಿವಾಸಿಗಳನ್ನು ಒಕ್ಕಲೆಬ್ಬಿಸಿ ಖಾಲಿ ಮಾಡಿಸಿ ಅದನ್ನು ಇವರಿಗೆ ನೀಡುವನು ಎಂದರ್ಥವಲ್ಲ. ಶಿಸ್ತು ಮತ್ತು ಶೌರ್ಯದೊಂದಿಗೆ ಮುಂದಡಿಯಿಟ್ಟು, ಅಡೆತಡೆಗಳನ್ನು ಭೇದಿಸಿ ಅಧಿವಾಸ ಮಾಡುವವರನ್ನು ಅಲ್ಲಾಹು ಅನುಗ್ರಹಿಸುವನು. ಇದು ಅಲ್ಲಾಹುವಿನ ಕಾರ್ಯವಿಧಾನವಾಗಿದೆ. ಅಲ್ಲಾಹನ ಕಾರ್ಯವಿಧಾನದ ಬಗ್ಗೆ ಅವರಿಗಿದ್ದ ವಿಕಲ ಕಲ್ಪನೆ ಮತ್ತು ಹೇಡಿತನವು ಜೊತೆಗೂಡಿದಾಗ ಇಸ್ರಾಈಲರು ವಿಧೇಯತೆಯೆಂಬುದೇ ಇಲ್ಲದ ಒಂದು ಜನತೆಯಾಗಿ ಮಾರ್ಪಟ್ಟರು.

ಸೀನಾ ಮರುಭೂಮಿಯಲ್ಲಿ ನಲ್ವತ್ತು ವರ್ಷಗಳ ಕಾಲ ಉನ್ಮಾದಿತರಾಗಿ ಅಲೆದಾಡುವ ಶಿಕ್ಷೆಯನ್ನು ಅಲ್ಲಾಹು ಅವರಿಗೆ ನೀಡಿದನು. ಈ ಮಧ್ಯೆ ಮೂಸಾ(عَلَيْهِ السَّلَامُ) ಮತ್ತು ಹಾರೂನ್(عَلَيْهِ السَّلَامُ)ರವರು ಮರಣಹೊಂದಿದರು. ನಂತರ ಯೂಶಅ್(عَلَيْهِ السَّلَامُ)ರವರ ಕಾಲದಲ್ಲಿ ಇಸ್ರಾಈಲರಿಗೆ ವಾಗ್ದಾನ ಮಾಡಲಾದ ಭೂಮಿಯಲ್ಲಿ ಅಧಿವಾಸ ಮಾಡಲು ಸಾಧ್ಯವಾಯಿತು.

ಅಲ್ಲಿಂದ ನಿರ್ಗಮಿಸಿದರೆ ಖಂಡಿತವಾಗಿಯೂ ನಾವು (ಅದನ್ನು) ಪ್ರವೇಶಿಸುವೆವು.'

**23.** ಭಯಭಕ್ತಿಯಿರುವವರ ಪೈಕಿ ಅಲ್ಲಾಹು ಅನುಗ್ರಹಿಸಿದ ಇಬ್ಬರು ಹೇಳಿದರು: 'ನೀವು ದ್ವಾರವನ್ನು ದಾಟಿ ಅವರತ್ತ ಪ್ರವೇಶಿಸಿರಿ. ನೀವೇನಾದರೂ ಪ್ರವೇಶಿಸುವುದಾದರೆ ಖಂಡಿತವಾಗಿಯೂ ನೀವೇ ಜಯಶಾಲಿಗಳಾಗುವಿರಿ! ನೀವು ವಿಶ್ವಾಸಿಗಳಾಗಿದ್ದರೆ ಅಲ್ಲಾಹುವಿನ ಮೇಲೆ ಭರವಸೆಯನ್ನಿಡಿರಿ.'

قَالَ رَجُلَانِ مِنَ ٱلَّذِينَ يَخَافُونَ أَنْعَمَ ٱللَّهُ عَلَيْهِمَا ٱدْخُلُواْ عَلَيْهِمُ ٱلْبَابَ فَإِذَا دَخَلْتُمُوهُ فَإِنَّكُمْ غَٰلِبُونَ ۚ وَعَلَى ٱللَّهِ فَتَوَكَّلُوٓاْ إِن كُنتُم مُّؤْمِنِينَ ﴿٢٣﴾

**24.** ಅವರು ಹೇಳಿದರು: 'ಓ ಮೂಸಾ! ಅವರು ಅಲ್ಲಿರುವ ತನಕ ನಾವೆಂದೂ ಅದನ್ನು ಪ್ರವೇಶಿಸಲಾರೆವು. ಆದ್ದರಿಂದ ತಾವು ಮತ್ತು ತಮ್ಮ ರಬ್ ಹೋಗಿ ಯುದ್ಧ ಮಾಡಿರಿ. ನಾವು ಇಲ್ಲೇ ಕುಳಿತುಕೊಂಡಿರುವೆವು.'

قَالُواْ يَٰمُوسَىٰٓ إِنَّا لَن نَّدْخُلَهَآ أَبَدًا مَّا دَامُواْ فِيهَا فَٱذْهَبْ أَنتَ وَرَبُّكَ فَقَٰتِلَآ إِنَّا هَٰهُنَا قَٰعِدُونَ ﴿٢٤﴾

**25.** ಅವರು (ಮೂಸಾ) ಹೇಳಿದರು: 'ಓ ನನ್ನ ರಬ್! ನನ್ನ ಮತ್ತು ನನ್ನ ಸಹೋದರನ ವಿಷಯವಲ್ಲದೇ ಬೇರೇನೂ ನನ್ನ ಅಧೀನದಲ್ಲಿಲ್ಲ. ಆದ್ದರಿಂದ ನಮ್ಮನ್ನು ಮತ್ತು ಈ ಧಿಕ್ಕಾರಿಗಳಾದ ಜನರನ್ನು ಪರಸ್ಪರ ಬೇರ್ಪಡಿಸು.'

قَالَ رَبِّ إِنِّى لَآ أَمْلِكُ إِلَّا نَفْسِى وَأَخِى ۖ فَٱفْرُقْ بَيْنَنَا وَبَيْنَ ٱلْقَوْمِ ٱلْفَٰسِقِينَ ﴿٢٥﴾

**26.** ಅವನು (ಅಲ್ಲಾಹು) ಹೇಳಿದನು: 'ಖಂಡಿತವಾಗಿಯೂ ಆ ಭೂಮಿಯು ನಲ್ವತ್ತು ವರ್ಷಗಳ ಕಾಲ ಅವರಿಗೆ ನಿಷಿದ್ಧವಾಗಿರುವುದು. (ಅದುವರೆಗೆ) ಅವರು ಭೂಮಿಯಲ್ಲಿ ದಿಗ್ಭ್ರಾಂತರಾಗಿ ಅಲೆದಾಡುವರು. ಆದ್ದರಿಂದ ಆ ಧಿಕ್ಕಾರಿಗಳಾದ ಜನರ ನಿಮಿತ್ತ ತಾವು ದುಃಖಿಸದಿರಿ.'

قَالَ فَإِنَّهَا مُحَرَّمَةٌ عَلَيْهِمْ ۛ أَرْبَعِينَ سَنَةً ۛ يَتِيهُونَ فِى ٱلْأَرْضِ ۚ فَلَا تَأْسَ عَلَى ٱلْقَوْمِ ٱلْفَٰسِقِينَ ﴿٢٦﴾

**27.** (ಓ ಪ್ರವಾದಿಯವರೇ!) ಅವರಿಗೆ ಆದಮ್‌ರ ಇಬ್ಬರು ಮಕ್ಕಳ ವೃತ್ತಾಂತವನ್ನು ಸತ್ಯಸಂಧವಾಗಿ ಓದಿ ಕೊಡಿರಿ. ಅವರಿಬ್ಬರೂ ಒಂದೊಂದು ಬಲಿಯನ್ನು ಅರ್ಪಿಸಿದ

۞ وَٱتْلُ عَلَيْهِمْ نَبَأَ ٱبْنَىْ ءَادَمَ بِٱلْحَقِّ إِذْ قَرَّبَا قُرْبَانًا فَتُقُبِّلَ مِنْ أَحَدِهِمَا وَلَمْ يُتَقَبَّلْ مِنَ ٱلْءَاخَرِ قَالَ لَأَقْتُلَنَّكَ ۖ قَالَ

إِنَّمَا يَتَقَبَّلُ ٱللَّهُ مِنَ ٱلْمُتَّقِينَ ﴿٢٧﴾

ಸಂದರ್ಭ. ಒಬ್ಬನಿಂದ ಅದು ಸ್ವೀಕರಿಸಲ್ಪಟ್ಟಿತು. ಆದರೆ ಇನ್ನೊಬ್ಬನಿಂದ ಸ್ವೀಕರಿಸಲ್ಪಡಲಿಲ್ಲ. ಅವನು ಹೇಳಿದನು: 'ಖಂಡಿತವಾಗಿಯೂ ನಾನು ನಿನ್ನನ್ನು ಕೊಲ್ಲುವೆನು.' ಅವನು (ಬಲಿ ಸ್ವೀಕರಿಸಲ್ಪಟ್ಟವನು) ಹೇಳಿದನು: 'ಅಲ್ಲಾಹು ಸ್ವೀಕರಿಸುವುದು ಭಯಭಕ್ತಿಯುಳ್ಳವರಿಂದ ಮಾತ್ರವಾಗಿದೆ.'

لَئِنۢ بَسَطتَ إِلَيَّ يَدَكَ لِتَقْتُلَنِى مَآ أَنَا۠ بِبَاسِطٍ يَدِىَ إِلَيْكَ لِأَقْتُلَكَ ۖ إِنِّىٓ أَخَافُ ٱللَّهَ رَبَّ ٱلْعَـٰلَمِينَ ﴿٢٨﴾

**28.** 'ನನ್ನನ್ನು ಕೊಲ್ಲುವುದಕ್ಕಾಗಿ ನೀನು ನನ್ನೆಡೆಗೆ ನಿನ್ನ ಕೈಯನ್ನು ಚಾಚಿದರೂ ನಿನ್ನನ್ನು ಕೊಲ್ಲುವುದಕ್ಕಾಗಿ ನಾನು ನಿನ್ನೆಡೆಗೆ ನನ್ನ ಕೈಯನ್ನು ಚಾಚಲಾರೆ. ಖಂಡಿತವಾಗಿಯೂ ನಾನು ಸರ್ವಲೋಕಗಳ ರಬ್ಬಾದ ಅಲ್ಲಾಹುವನ್ನು ಭಯಪಡುತ್ತಿರುವೆನು.'

إِنِّىٓ أُرِيدُ أَن تَبُوٓأَ بِإِثْمِى وَإِثْمِكَ فَتَكُونَ مِنْ أَصْحَـٰبِ ٱلنَّارِ ۚ وَذَٰلِكَ جَزَٰٓؤُا۟ ٱلظَّـٰلِمِينَ ﴿٢٩﴾

**29.** 'ನನ್ನ ಪಾಪಕ್ಕೆ ಮತ್ತು ನಿನ್ನ ಪಾಪಕ್ಕೆ ನೀನು ಅರ್ಹನಾಗಿ, ತರುವಾಯ ನೀನು ನರಕವಾಸಿಗಳ ಪೈಕಿ ಸೇರಿದವನಾಗಬೇಕೆಂದು ನಾನು ಬಯಸುತ್ತಿರುವೆನು. ಇದು ಅಕ್ರಮಿಗಳಿಗಿರುವ ಪ್ರತಿಫಲವಾಗಿದೆ.'

فَطَوَّعَتْ لَهُۥ نَفْسُهُۥ قَتْلَ أَخِيهِ فَقَتَلَهُۥ فَأَصْبَحَ مِنَ ٱلْخَـٰسِرِينَ ﴿٣٠﴾

**30.** ಕೊನೆಗೆ ಅವನ ಸಹೋದರನನ್ನು ಕೊಲ್ಲುವಂತೆ ಅವನ ಮನಸ್ಸು ಅವನನ್ನು ಪ್ರೇರೇಪಿಸಿತು. ಅವನು ಅವನನ್ನು ಕೊಂದನು ಮತ್ತು ನಷ್ಟ ಹೊಂದಿದವರಲ್ಲಿ ಸೇರಿದವನಾದನು.

فَبَعَثَ ٱللَّهُ غُرَابًا يَبْحَثُ فِى ٱلْأَرْضِ لِيُرِيَهُۥ كَيْفَ يُوَٰرِى سَوْءَةَ أَخِيهِ ۚ قَالَ يَـٰوَيْلَتَىٰٓ أَعَجَزْتُ أَنْ أَكُونَ مِثْلَ هَـٰذَا ٱلْغُرَابِ فَأُوَٰرِىَ سَوْءَةَ أَخِى ۖ فَأَصْبَحَ مِنَ ٱلنَّـٰدِمِينَ ﴿٣١﴾

**31.** ಆಗ ತನ್ನ ಸಹೋದರನ ಕಳೇಬರವನ್ನು ಮರೆಮಾಚುವುದು ಹೇಗೆಂದು ಅವನಿಗೆ ತೋರಿಸಿಕೊಡುವ ಸಲುವಾಗಿ ನೆಲವನ್ನು ಅಗೆಯುವ ಒಂದು ಕಾಗೆಯನ್ನು ಅಲ್ಲಾಹು ಕಳುಹಿಸಿದನು. ಅವನು ಹೇಳಿದನು: 'ಅಯ್ಯೋ! ನನ್ನ ಸಹೋದರನ ಕಳೇಬರವನ್ನು ಮರೆಮಾಚಲು ಈ ಕಾಗೆಯಂತಾಗಲಾದರೂ ನನಗೆ ಸಾಧ್ಯವಾಗಲಿಲ್ಲವಲ್ಲ!' ಹೀಗೆ ಅವನು ವಿಷಾದಿಸುವವರ ಪೈಕಿ ಸೇರಿದವನಾದನು.

32. ತನ್ನಿಮಿತ್ತ ನಾವು ಇಸ್ರಾಈಲ್ ಸಂತತಿಗಳಿಗೆ ಈ ರೀತಿ ವಿಧಿ ನೀಡಿದೆವು: ಒಬ್ಬನನ್ನು ಕೊಂದಿರುವುದಕ್ಕೆ ಪ್ರತಿಯಾಗಿ ಅಥವಾ ಭೂಮಿಯಲ್ಲಿ ಕ್ಷೋಭೆ ಮಾಡಿರುವುದಕ್ಕಾಗಿ ವಿನಾ ಒಬ್ಬ ವ್ಯಕ್ತಿಯನ್ನು ಯಾರಾದರೂ ಹತ್ಯೆ ಮಾಡಿದರೆ ಅವನು ಸಂಪೂರ್ಣ ಮನುಷ್ಯಕುಲವನ್ನು ಹತ್ಯೆ ಮಾಡಿರುವುದಕ್ಕೆ ಸಮಾನವಾಗಿದೆ. ಒಬ್ಬ ವ್ಯಕ್ತಿಯ ಜೀವವನ್ನು ಯಾರಾದರೂ ಉಳಿಸಿದರೆ ಅವನು ಸಂಪೂರ್ಣ ಮನುಷ್ಯಕುಲದ ಜೀವವನ್ನು ಉಳಿಸಿರುವುದಕ್ಕೆ ಸಮಾನವಾಗಿದೆ. ನಮ್ಮ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ (ಇಸ್ರಾಈಲರ) ಬಳಿಗೆ ಹೋಗಿದ್ದರು. ಆ ಬಳಿಕವೂ ಅವರ ಪೈಕಿ ಅನೇಕ ಮಂದಿ ಭೂಮಿಯಲ್ಲಿ ಅತಿಕ್ರಮವೆಸಗುವವರೇ ಆಗಿದ್ದರು.

مِنۡ أَجۡلِ ذَٰلِكَ كَتَبۡنَا عَلَىٰ بَنِيٓ إِسۡرَٰٓءِيلَ أَنَّهُۥ مَن قَتَلَ نَفۡسَۢا بِغَيۡرِ نَفۡسٍ أَوۡ فَسَادٖ فِي ٱلۡأَرۡضِ فَكَأَنَّمَا قَتَلَ ٱلنَّاسَ جَمِيعٗا وَمَنۡ أَحۡيَاهَا فَكَأَنَّمَآ أَحۡيَا ٱلنَّاسَ جَمِيعٗاۚ وَلَقَدۡ جَآءَتۡهُمۡ رُسُلُنَا بِٱلۡبَيِّنَٰتِ ثُمَّ إِنَّ كَثِيرٗا مِّنۡهُم بَعۡدَ ذَٰلِكَ فِي ٱلۡأَرۡضِ لَمُسۡرِفُونَ ٣٢

33. ಅಲ್ಲಾಹು ಮತ್ತು ಅವನ ಸಂದೇಶವಾಹಕರ ವಿರುದ್ಧ ಹೋರಾಡುವವರು ಮತ್ತು ಭೂಮಿಯಲ್ಲಿ ಕ್ಷೋಭೆ ಮಾಡಲು ಯತ್ನಿಸುವವರು ಯಾರೋ ಅವರಿಗಿರುವ ಪ್ರತಿಫಲವು ಅವರನ್ನು ವಧಿಸಲಾಗುವುದು ಅಥವಾ ಶಿಲುಬೆಗೇರಿಸಲಾಗುವುದು ಅಥವಾ ಅವರ ಕೈಕಾಲುಗಳನ್ನು ವಿರುದ್ಧ ದಿಕ್ಕಿನಿಂದ ಕತ್ತರಿಸಲಾಗುವುದು ಅಥವಾ ಅವರನ್ನು ಗಡಿಪಾರುಗೊಳಿಸಲಾಗುವುದು ಎಂಬುದು ಮಾತ್ರವಾಗಿದೆ. ಅದು ಅವರಿಗೆ ಇಹಲೋಕದಲ್ಲಿರುವ ಅಪಮಾನವಾಗಿದೆ. ಪರಲೋಕದಲ್ಲಿ ಅವರಿಗೆ ಕಠೋರವಾದ ಶಿಕ್ಷೆಯಿದೆ.

إِنَّمَا جَزَٰٓؤُاْ ٱلَّذِينَ يُحَارِبُونَ ٱللَّهَ وَرَسُولَهُۥ وَيَسۡعَوۡنَ فِي ٱلۡأَرۡضِ فَسَادًا أَن يُقَتَّلُوٓاْ أَوۡ يُصَلَّبُوٓاْ أَوۡ تُقَطَّعَ أَيۡدِيهِمۡ وَأَرۡجُلُهُم مِّنۡ خِلَٰفٍ أَوۡ يُنفَوۡاْ مِنَ ٱلۡأَرۡضِۚ ذَٰلِكَ لَهُمۡ خِزۡيٞ فِي ٱلدُّنۡيَاۖ وَلَهُمۡ فِي ٱلۡأٓخِرَةِ عَذَابٌ عَظِيمٌ ٣٣

34. ಆದರೆ, ಅವರ ವಿರುದ್ಧ ಕ್ರಮ ಕೈಗೊಳ್ಳಲು ನಿಮಗೆ ಸಾಧ್ಯವಾಗುವುದಕ್ಕೆ ಮುಂಚಿತವಾಗಿ ಪಶ್ಚಾತ್ತಾಪಪಟ್ಟು ಮರಳಿದವರಾರೋ ಅವರು ಇದರಿಂದ ಹೊರತಾಗಿರುವರು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನೆಂಬುದನ್ನು ಅರಿತುಕೊಳ್ಳಿರಿ.

إِلَّا ٱلَّذِينَ تَابُواْ مِن قَبۡلِ أَن تَقۡدِرُواْ عَلَيۡهِمۡۖ فَٱعۡلَمُوٓاْ أَنَّ ٱللَّهَ غَفُورٞ رَّحِيمٞ ٣٤

35. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಅವನೆಡೆಗೆ ಸಮೀಪಗೊಳಿಸುವ ಮಾರ್ಗವನ್ನು ಹುಡುಕಿರಿ[1] ಹಾಗೂ ಅವನ ಮಾರ್ಗದಲ್ಲಿ ಹೋರಾಡಿರಿ. (ತನ್ಮೂಲಕ) ನಿಮಗೆ ಯಶಸ್ವಿಯಾಗಲು ಸಾಧ್ಯವಾಗಬಹುದು.

يَٰٓأَيُّهَا ٱلَّذِينَ ءَامَنُواْ ٱتَّقُواْ ٱللَّهَ وَٱبۡتَغُوٓاْ إِلَيۡهِ ٱلۡوَسِيلَةَ وَجَٰهِدُواْ فِي سَبِيلِهِۦ لَعَلَّكُمۡ تُفۡلِحُونَ ﴿٣٥﴾

36. ಪುನರುತ್ಥಾನ ದಿನದ ಶಿಕ್ಷೆಯಿಂದ ವಿಮುಕ್ತಿ ಪಡೆಯುವ ಸಲುವಾಗಿ ಪ್ರಾಯಶ್ಚಿತ್ತ ನೀಡಲು ಸತ್ಯನಿಷೇಧಿಗಳ ವಶದಲ್ಲಿ ಭೂಮಿಯಲ್ಲಿರುವುದೆಲ್ಲವೂ ಮತ್ತು ಅದರಷ್ಟೇ ಬೇರೆಯೂ ಇದ್ದರೂ ಅವರಿಂದ ಅದನ್ನು ಸ್ವೀಕರಿಸಲಾಗದು. ಅವರಿಗೆ ಯಾತನಾಮಯ ಶಿಕ್ಷೆಯಿರುವುದು.

إِنَّ ٱلَّذِينَ كَفَرُواْ لَوۡ أَنَّ لَهُم مَّا فِي ٱلۡأَرۡضِ جَمِيعٗا وَمِثۡلَهُۥ مَعَهُۥ لِيَفۡتَدُواْ بِهِۦ مِنۡ عَذَابِ يَوۡمِ ٱلۡقِيَٰمَةِ مَا تُقُبِّلَ مِنۡهُمۡۖ وَلَهُمۡ عَذَابٌ أَلِيمٞ ﴿٣٦﴾

37. ಅವರು ನರಕದಿಂದ ಹೊರಹೋಗಲು ಬಯಸುವರು. ಆದರೆ ಅದರಿಂದ ಹೊರಹೋಗಲು ಅವರಿಗೆಂದೂ ಸಾಧ್ಯವಾಗಲಾರದು. ಅವರಿಗೆ ಶಾಶ್ವತವಾದ ನೆಲೆನಿಲ್ಲುವ ಶಿಕ್ಷೆಯಿದೆ.

يُرِيدُونَ أَن يَخۡرُجُواْ مِنَ ٱلنَّارِ وَمَا هُم بِخَٰرِجِينَ مِنۡهَاۖ وَلَهُمۡ عَذَابٞ مُّقِيمٞ ﴿٣٧﴾

38. ಕದಿಯುವವನು ಮತ್ತು ಕದಿಯುವವಳು (ಯಾರೋ) ಅವರಿಬ್ಬರ ಕೈಗಳನ್ನು ಕಡಿಯಿರಿ. ಅದು ಅವರು ಗಳಿಸಿರುವುದರ ಪ್ರತಿಫಲವೂ, ಅಲ್ಲಾಹುವಿನ ವತಿಯ ಮಾದರಿಯೋಗ್ಯ ಶಿಕ್ಷೆಯೂ ಆಗಿದೆ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَٱلسَّارِقُ وَٱلسَّارِقَةُ فَٱقۡطَعُوٓاْ أَيۡدِيَهُمَا جَزَآءَۢ بِمَا كَسَبَا نَكَٰلٗا مِّنَ ٱللَّهِۗ وَٱللَّهُ عَزِيزٌ حَكِيمٞ ﴿٣٨﴾

39. ಆದರೆ ಅಕ್ರಮವೆಸಗಿದ ನಂತರ ಯಾರಾದರೂ ಪಶ್ಚಾತ್ತಾಪಪಟ್ಟು ನಿಲುವನ್ನು ಉತ್ತಮಗೊಳಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅವನ ಪಶ್ಚಾತ್ತಾಪವನ್ನು ಸ್ವೀಕರಿಸುವನು.

فَمَن تَابَ مِنۢ بَعۡدِ ظُلۡمِهِۦ وَأَصۡلَحَ فَإِنَّ ٱللَّهَ يَتُوبُ عَلَيۡهِۚ إِنَّ ٱللَّهَ غَفُورٞ رَّحِيمٌ ﴿٣٩﴾

1 ಅಲ್ಲಾಹು ನಿರ್ದೇಶಿಸಿದ ಮಾತು ಹಾಗೂ ಕರ್ಮಗಳಾಗಿವೆ ಅಲ್ಲಾಹುವಿನೆಡೆಗೆ ಸಮೀಪಗೊಳ್ಳಲಿರುವ ಮಾರ್ಗ. ಅದು ಮಧ್ಯವರ್ತಿಗಳೋ ಶಿಫಾರಸುಗಾರರೋ ಅಲ್ಲ.

ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

**40.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗೆ ಸೇರಿದ್ದಾಗಿದೆಯೆಂದು ತಾವು ಅರಿತಿಲ್ಲವೇ? ಅವನು ತಾನಿಚ್ಛಿಸುವವರನ್ನು ಶಿಕ್ಷಿಸುವನು ಮತ್ತು ತಾನಿಚ್ಛಿಸುವವರನ್ನು ಕ್ಷಮಿಸುವನು. ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

أَلَمۡ تَعۡلَمۡ أَنَّ ٱللَّهَ لَهُۥ مُلۡكُ ٱلسَّمَٰوَٰتِ
وَٱلۡأَرۡضِ يُعَذِّبُ مَن يَشَآءُ وَيَغۡفِرُ لِمَن
يَشَآءُۗ وَٱللَّهُ عَلَىٰ كُلِّ شَيۡءٖ قَدِيرٌ ٤٠

**41.** ಓ ಸಂದೇಶವಾಹಕರೇ! ಸತ್ಯನಿಷೇಧದೆಡೆಗೆ ಧಾವಂತದಿಂದ ಮುನ್ನುಗ್ಗುವವರು (ಅವರ ಕೃತ್ಯಗಳು) ತಮ್ಮನ್ನು ದುಃಖಕ್ಕೀಡು ಮಾಡದಿರಲಿ. ಅವರು ವಿಶ್ವಾಸವು ತಮ್ಮ ಹೃದಯಕ್ಕೆ ಇಳಿಯದೆ ನಾವು ವಿಶ್ವಾಸವಿಟ್ಟಿರುವೆವು ಎಂದು ಬಾಯಿಯ ಮೂಲಕ ಹೇಳುವವರಲ್ಲಿ ಸೇರಿದವರಾಗಿರುವರು ಮತ್ತು ಯಹೂದರಲ್ಲಿ ಸೇರಿದವರಾಗಿರುವರು. ಅವರು ಸುಳ್ಳನ್ನು ಕಿವಿಗೊಟ್ಟು ಆಲಿಸುವವರೂ ತಮ್ಮ ಬಳಿಗೆ ಬರದಂತಹ ಇತರ ಜನರ ಮಾತುಗಳನ್ನು ಕಿವಿಗೊಟ್ಟು ಆಲಿಸುವವರೂ ಆಗಿರುವರು. ಅವರು ಗ್ರಂಥದ ವಾಕ್ಯಗಳನ್ನು ಅವುಗಳ ಸಂದರ್ಭಗಳಿಂದ ಸ್ಥಾನಾಂತರಗೊಳಿಸುತ್ತಿರುವರು. ಅವರು ಹೇಳುವರು: 'ನಿಮಗೆ (ಪ್ರವಾದಿಯವರ ಬಳಿ) ಇದೇ ತೀರ್ಪು ನೀಡಲಾಗುವುದಾದರೆ ಅದನ್ನು ಒಪ್ಪಿಕೊಳ್ಳಿರಿ. ಇದೇ ತೀರ್ಪು ನೀಡಲಾಗುವುದಿಲ್ಲವೆಂದಾದರೆ ನೀವು ಎಚ್ಚರ ವಹಿಸಿರಿ.' ಅಲ್ಲಾಹು ಯಾರನ್ನಾದರೂ ನಾಶ ಮಾಡಲು ಇಚ್ಛಿಸುವುದಾದರೆ ಅವನಿಗೋಸ್ಕರ ಅಲ್ಲಾಹುವಿನಿಂದ ಏನನ್ನಾದರೂ ಅಧೀನಗೊಳಿಸಲು ತಮಗೆಂದೂ ಸಾಧ್ಯವಾಗದು. ಅಲ್ಲಾಹು ಅಂತಹವರ

۞يَٰٓأَيُّهَا ٱلرَّسُولُ لَا يَحۡزُنكَ ٱلَّذِينَ
يُسَٰرِعُونَ فِي ٱلۡكُفۡرِ مِنَ ٱلَّذِينَ قَالُوٓاْ
ءَامَنَّا بِأَفۡوَٰهِهِمۡ وَلَمۡ تُؤۡمِن قُلُوبُهُمۡۛ وَمِنَ
ٱلَّذِينَ هَادُواْۛ سَمَّٰعُونَ لِلۡكَذِبِ سَمَّٰعُونَ
لِقَوۡمٍ ءَاخَرِينَ لَمۡ يَأۡتُوكَۖ يُحَرِّفُونَ ٱلۡكَلِمَ
مِنۢ بَعۡدِ مَوَاضِعِهِۦۖ يَقُولُونَ إِنۡ أُوتِيتُمۡ
هَٰذَا فَخُذُوهُ وَإِن لَّمۡ تُؤۡتَوۡهُ فَٱحۡذَرُواْۚ
وَمَن يُرِدِ ٱللَّهُ فِتۡنَتَهُۥ فَلَن تَمۡلِكَ لَهُۥ مِنَ
ٱللَّهِ شَيۡـًٔاۚ أُوْلَٰٓئِكَ ٱلَّذِينَ لَمۡ يُرِدِ ٱللَّهُ أَن
يُطَهِّرَ قُلُوبَهُمۡۚ لَهُمۡ فِي ٱلدُّنۡيَا خِزۡيٞۖ وَلَهُمۡ
فِي ٱلۡأٓخِرَةِ عَذَابٌ عَظِيمٞ ٤١

ಹೃದಯಗಳನ್ನು ಶುದ್ಧೀಕರಿಸಲು ಇಚ್ಛಿಸಿಲ್ಲ. ಅವರಿಗೆ ಇಹಲೋಕದಲ್ಲಿ ಅಪಮಾನವಿದೆ ಮತ್ತು ಪರಲೋಕದಲ್ಲಿ ಕಠೋರ ಶಿಕ್ಷೆಯಿದೆ.

42. ಅವರು ಸುಳ್ಳನ್ನು ಕಿವಿಗೊಟ್ಟು ಆಲಿಸುವವರೂ ನಿಷಿದ್ಧವಾದ ಸಂಪಾದನೆಯನ್ನು ಯಥೇಷ್ಟವಾಗಿ ತಿನ್ನುವವರೂ ಆಗಿರುವರು. ಅವರು ತಮ್ಮ ಬಳಿಗೆ ಬರುವುದಾದರೆ ಅವರ ನಡುವೆ ತೀರ್ಪು ನೀಡಿರಿ ಅಥವಾ ಅವರನ್ನು ಅವಗಣಿಸಿರಿ. ತಾವು ಅವರನ್ನು ಅವಗಣಿಸುವುದಾದರೆ ಅವರು ತಮಗೆ ಯಾವ ಹಾನಿಯನ್ನೂ ಮಾಡಲಾರರು. ಆದರೆ ತಾವು ತೀರ್ಪು ನೀಡುವುದಾದರೆ ಅವರ ನಡುವೆ ನ್ಯಾಯೋಚಿತ ತೀರ್ಪನ್ನೇ ನೀಡಿರಿ. ನ್ಯಾಯ ಪಾಲಿಸುವವರನ್ನು ಅಲ್ಲಾಹು ಖಂಡಿತವಾಗಿಯೂ ಮೆಚ್ಚುವನು.

سَمَّٰعُونَ لِلۡكَذِبِ أَكَّٰلُونَ لِلسُّحۡتِۚ فَإِن جَآءُوكَ فَٱحۡكُم بَيۡنَهُمۡ أَوۡ أَعۡرِضۡ عَنۡهُمۡۖ وَإِن تُعۡرِضۡ عَنۡهُمۡ فَلَن يَضُرُّوكَ شَيۡـٔٗاۖ وَإِنۡ حَكَمۡتَ فَٱحۡكُم بَيۡنَهُم بِٱلۡقِسۡطِۚ إِنَّ ٱللَّهَ يُحِبُّ ٱلۡمُقۡسِطِينَ ﴿٤٢﴾

43. ಅವರು ತಮ್ಮನ್ನು ತೀರ್ಪುಗಾರನನ್ನಾಗಿ ಮಾಡುವುದಾದರೂ ಹೇಗೆ? ಅವರ ಬಳಿ ತೌರಾತ್ ಇದೆ. ಅದರಲ್ಲಿ ಅಲ್ಲಾಹುವಿನ ವಿಧಿ ನಿಷೇಧಗಳಿವೆ. ತರುವಾಯ ಅದರ ಬಳಿಕವೂ ಅವರು ವಿಮುಖರಾಗುತ್ತಿರುವರು. ವಾಸ್ತವಿಕವಾಗಿ ಅವರು ವಿಶ್ವಾಸಿಗಳೇ ಅಲ್ಲ.

وَكَيۡفَ يُحَكِّمُونَكَ وَعِندَهُمُ ٱلتَّوۡرَىٰةُ فِيهَا حُكۡمُ ٱللَّهِ ثُمَّ يَتَوَلَّوۡنَ مِنۢ بَعۡدِ ذَٰلِكَۚ وَمَآ أُوْلَٰٓئِكَ بِٱلۡمُؤۡمِنِينَ ﴿٤٣﴾

44. ಖಂಡಿತವಾಗಿಯೂ ನಾವು ತೌರಾತನ್ನು ಅವತೀರ್ಣಗೊಳಿಸಿರುವೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿತ್ತು. (ಅಲ್ಲಾಹುವಿಗೆ) ಶರಣಾಗತರಾದ ಪ್ರವಾದಿಗಳು ಅದಕ್ಕನುಗುಣವಾಗಿ ಯಹೂದರಿಗೆ ತೀರ್ಪು ನೀಡುತ್ತಿದ್ದರು. ಸಜ್ಜನರೂ, ಧರ್ಮವಿದ್ವಾಂಸರೂ (ಹಾಗೆಯೇ ತೀರ್ಪು ನೀಡುತ್ತಿದ್ದರು). ಯಾಕೆಂದರೆ ಅಲ್ಲಾಹುವಿನ ಗ್ರಂಥದ ಸಂರಕ್ಷಣೆಯನ್ನು ಅವರಿಗೆ ವಹಿಸಿಕೊಡಲಾಗಿತ್ತು. ಅವರು ಅದಕ್ಕೆ ಸಾಕ್ಷಿಗಳೂ ಆಗಿದ್ದರು. ಆದ್ದರಿಂದ ನೀವು ಜನರನ್ನು ಭಯಪಡದಿರಿ. ನನ್ನನ್ನು ಮಾತ್ರ

إِنَّآ أَنزَلۡنَا ٱلتَّوۡرَىٰةَ فِيهَا هُدٗى وَنُورٞۚ يَحۡكُمُ بِهَا ٱلنَّبِيُّونَ ٱلَّذِينَ أَسۡلَمُواْ لِلَّذِينَ هَادُواْ وَٱلرَّبَّٰنِيُّونَ وَٱلۡأَحۡبَارُ بِمَا ٱسۡتُحۡفِظُواْ مِن كِتَٰبِ ٱللَّهِ وَكَانُواْ عَلَيۡهِ شُهَدَآءَۚ فَلَا تَخۡشَوُاْ ٱلنَّاسَ وَٱخۡشَوۡنِ وَلَا تَشۡتَرُواْ بِـَٔايَٰتِي ثَمَنٗا قَلِيلٗاۚ وَمَن لَّمۡ يَحۡكُم بِمَآ أَنزَلَ ٱللَّهُ فَأُوْلَٰٓئِكَ هُمُ ٱلۡكَٰفِرُونَ ﴿٤٤﴾

ಭಯಪಡಿರಿ. ನನ್ನ ಸೂಕ್ತಿಗಳನ್ನು ನೀವು ತುಚ್ಛಬೆಲೆಗೆ ಮಾರಾಟ ಮಾಡದಿರಿ. ಅಲ್ಲಾಹು ಅವತೀರ್ಣಗೊಳಿಸಿರುವುದಕ್ಕೆ ಅನುಗುಣವಾಗಿ ಯಾರು ತೀರ್ಪು ನೀಡುವುದಿಲ್ಲವೋ ಅವರೇ ಅವಿಶ್ವಾಸಿಗಳಾಗಿರುವರು.

**45.** ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು, ಮೂಗಿಗೆ ಮೂಗು, ಕಿವಿಗೆ ಕಿವಿ, ಹಲ್ಲಿಗೆ ಹಲ್ಲು, ಗಾಯಗಳಿಗೆ ತತ್ಸಮಾನವಾದ ಪ್ರತೀಕಾರ, ಈ ರೀತಿ ನಾವು ಅವರಿಗೆ ಅದರಲ್ಲಿ (ತೌರಾತ್‌ನಲ್ಲಿ) ವಿಧಿಸಿರುವೆವು. ಯಾರಾದರೂ (ಪ್ರತಿಕಾರ ಕೈಗೊಳ್ಳದೆ) ಮನ್ನಿಸುವುದಾದರೆ ಅದು ಅವನಿಗೆ ಪಶ್ಚಾತ್ತಾಪ(ಕ್ಕೆ ನೆರವಾಗುವ ಒಂದು ಪುಣ್ಯಕರ್ಮ) ವಾಗಿದೆ. ಅಲ್ಲಾಹು ಅವತೀರ್ಣಗೊಳಿಸಿರುವುದಕ್ಕೆ ಅನುಗುಣವಾಗಿ ಯಾರು ತೀರ್ಪು ನೀಡುವುದಿಲ್ಲವೋ ಅವರೇ ಅಕ್ರಮಿಗಳಾಗಿರುವರು.[1]

وَكَتَبْنَا عَلَيْهِمْ فِيهَآ أَنَّ ٱلنَّفْسَ بِٱلنَّفْسِ وَٱلْعَيْنَ بِٱلْعَيْنِ وَٱلْأَنفَ بِٱلْأَنفِ وَٱلْأُذُنَ بِٱلْأُذُنِ وَٱلسِّنَّ بِٱلسِّنِّ وَٱلْجُرُوحَ قِصَاصٌ ۚ فَمَن تَصَدَّقَ بِهِۦ فَهُوَ كَفَّارَةٌ لَّهُۥ ۚ وَمَن لَّمْ يَحْكُم بِمَآ أَنزَلَ ٱللَّهُ فَأُو۟لَـٰٓئِكَ هُمُ ٱلظَّـٰلِمُونَ ﴿٤٥﴾

**46.** ತರುವಾಯ ಅವರ (ಆ ಪ್ರವಾದಿಗಳ) ಹೆಜ್ಜೆ ಗುರುತುಗಳಲ್ಲಿಯೇ ಮರ್ಯಮ್‌ರ ಮಗನಾದ ಈಸಾರನ್ನು ತನ್ನ ಮುಂದಿರುವ ತೌರಾತನ್ನು ದೃಢೀಕರಿಸುವವರಾಗಿ ನಾವು ಕಳುಹಿಸಿದೆವು. ಸನ್ಮಾರ್ಗದರ್ಶನ ಮತ್ತು ಸತ್ಯಪ್ರಕಾಶವನ್ನು ಹೊಂದಿದ್ದ ಇಂಜೀಲನ್ನು ನಾವು ಅವರಿಗೆ ನೀಡಿದೆವು. ಅದು ತನ್ನ ಮುಂದಿರುವ ತೌರಾತನ್ನು ದೃಢೀಕರಿಸುವ ಗ್ರಂಥವೂ, ಭಯಭಕ್ತಿ ಪಾಲಿಸುವವರಿಗೆ ಮಾರ್ಗದರ್ಶಿಯೂ, ಸದುಪದೇಶವೂ ಆಗಿದೆ.

وَقَفَّيْنَا عَلَىٰٓ ءَاثَـٰرِهِم بِعِيسَى ٱبْنِ مَرْيَمَ مُصَدِّقًا لِّمَا بَيْنَ يَدَيْهِ مِنَ ٱلتَّوْرَىٰةِ ۖ وَءَاتَيْنَـٰهُ ٱلْإِنجِيلَ فِيهِ هُدًى وَنُورٌ وَمُصَدِّقًا لِّمَا بَيْنَ يَدَيْهِ مِنَ ٱلتَّوْرَىٰةِ وَهُدًى وَمَوْعِظَةً لِّلْمُتَّقِينَ ﴿٤٦﴾

**47.** ಇಂಜೀಲ್‌ನ ಜನರು ಅಲ್ಲಾಹು ಅದರಲ್ಲಿ ಅವತೀರ್ಣಗೊಳಿಸಿರುವ ಪ್ರಕಾರ ತೀರ್ಪು ನೀಡಲಿ. ಅಲ್ಲಾಹು ಅವತೀರ್ಣಗೊಳಿಸಿರುವುದಕ್ಕೆ ಅನುಗುಣವಾಗಿ

وَلْيَحْكُمْ أَهْلُ ٱلْإِنجِيلِ بِمَآ أَنزَلَ ٱللَّهُ فِيهِ ۚ وَمَن لَّمْ يَحْكُم بِمَآ أَنزَلَ ٱللَّهُ فَأُو۟لَـٰٓئِكَ هُمُ ٱلْفَـٰسِقُونَ ﴿٤٧﴾

1 ಬಡವರು ಯಾವುದಾದರೂ ತಪ್ಪೆಸಗಿದರೆ ಯಹೂದರು ಗ್ರಂಥದಲ್ಲಿ ಹೇಳಿರುವ ರೀತಿಯ ಶಿಕ್ಷೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುತ್ತಿದ್ದರು. ಆದರೆ ಶ್ರೀಮಂತರು ಅಥವಾ ಪ್ರಮುಖರು ತಪ್ಪೆಸಗಿದರೆ ಯಾವುದಾದರೂ ಸಣ್ಣ ಶಿಕ್ಷೆಯನ್ನು ನೀಡುತ್ತಿದ್ದರು.

ಯಾರು ತೀರ್ಪು ನೀಡುವುದಿಲ್ಲವೋ ಅವರೇ ಧಿಕ್ಕಾರಿಗಳಾಗಿರುವರು.

**48.** (ಓ ಪ್ರವಾದಿಯವರೇ!) ತಮಗೆ ನಾವು ಗ್ರಂಥವನ್ನು ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು. ಅದು ತನ್ನ ಮುಂದಿರುವ ಗ್ರಂಥಗಳನ್ನು ದೃಢೀಕರಿಸುತ್ತದೆ ಮತ್ತು ಅವುಗಳನ್ನು ಸಂರಕ್ಷಿಸುತ್ತದೆ.(1) ಆದ್ದರಿಂದ ಅಲ್ಲಾಹು ಅವತೀರ್ಣಗೊಳಿಸಿರುವುದಕ್ಕೆ ಅನುಗುಣವಾಗಿ ತಾವು ಅವರ ಮಧ್ಯೆ ತೀರ್ಪು ನೀಡಿರಿ. ತಮಗೆ ತಲುಪಿದ ಸತ್ಯವನ್ನು ತೊರೆದು ತಾವು ಅವರ ದೇಹೇಚ್ಛೆಗಳನ್ನು ಅನುಸರಿಸದಿರಿ. ನಿಮ್ಮಲ್ಲಿ ಪ್ರತಿಯೊಂದು ಸಮುದಾಯಕ್ಕೂ ನಾವು ಒಂದೊಂದು ನಿಯಮಸಂಹಿತೆ ಮತ್ತು ಕರ್ಮಮಾರ್ಗವನ್ನು ಮಾಡಿಕೊಟ್ಟಿರುವೆವು. ಅಲ್ಲಾಹು ಇಚ್ಛಿಸಿದ್ದರೆ ಅವನು ನಿಮ್ಮನ್ನು ಒಂದೇ ಸಮುದಾಯವನ್ನಾಗಿ ಮಾಡುತ್ತಿದ್ದನು. ಆದರೆ ಅವನು ನಿಮಗೆ ದಯಪಾಲಿಸಿರುವುದರಲ್ಲಿ ನಿಮ್ಮನ್ನು ಪರೀಕ್ಷಿಸಲು (ಇಚ್ಛಿಸುವನು). ಆದ್ದರಿಂದ ನೀವು ಸತ್ಕರ್ಮಗಳೆಡೆಗೆ ಸ್ಪರ್ಧಿಸಿ ಧಾವಿಸಿರಿ. ನಿಮ್ಮೆಲ್ಲರ ಮರಳುವಿಕೆಯು ಅಲ್ಲಾಹುವಿನ ಬಳಿಗೇ ಆಗಿದೆ. ಆಗ ಅವನು ನಿಮಗೆ ನೀವು ಭಿನ್ನರಾಗಿರುವ ವಿಷಯಗಳ ಕುರಿತು ತಿಳಿಸಿಕೊಡುವನು.

وَأَنزَلۡنَآ إِلَيۡكَ ٱلۡكِتَٰبَ بِٱلۡحَقِّ مُصَدِّقٗا لِّمَا بَيۡنَ يَدَيۡهِ مِنَ ٱلۡكِتَٰبِ وَمُهَيۡمِنًا عَلَيۡهِۖ فَٱحۡكُم بَيۡنَهُم بِمَآ أَنزَلَ ٱللَّهُۖ وَلَا تَتَّبِعۡ أَهۡوَآءَهُمۡ عَمَّا جَآءَكَ مِنَ ٱلۡحَقِّۚ لِكُلّٖ جَعَلۡنَا مِنكُمۡ شِرۡعَةٗ وَمِنۡهَاجٗاۚ وَلَوۡ شَآءَ ٱللَّهُ لَجَعَلَكُمۡ أُمَّةٗ وَٰحِدَةٗ وَلَٰكِن لِّيَبۡلُوَكُمۡ فِي مَآ ءَاتَىٰكُمۡۖ فَٱسۡتَبِقُواْ ٱلۡخَيۡرَٰتِۚ إِلَى ٱللَّهِ مَرۡجِعُكُمۡ جَمِيعٗا فَيُنَبِّئُكُم بِمَا كُنتُمۡ فِيهِ تَخۡتَلِفُونَ ٤٨

**49.** ಅಲ್ಲಾಹು ಅವತೀರ್ಣಗೊಳಿಸಿರುವುದಕ್ಕೆ ಅನುಗುಣವಾಗಿ ತಾವು ಅವರ ನಡುವೆ ತೀರ್ಪು ನೀಡಲೂ, ಅವರ ದೇಹೇಚ್ಛೆಗಳನ್ನು ಅನುಸರಿಸದಿರಲೂ, ಅಲ್ಲಾಹು ತಮಗೆ ಅವತೀರ್ಣಗೊಳಿಸಿರುವ ಯಾವುದಾದರೂ ಆದೇಶದಿಂದ ಅವರು ತಮ್ಮನ್ನು ವ್ಯತಿ ಚಲನೆಗೊಳಿಸುವುದರ ಕುರಿತು

وَأَنِ ٱحۡكُم بَيۡنَهُم بِمَآ أَنزَلَ ٱللَّهُ وَلَا تَتَّبِعۡ أَهۡوَآءَهُمۡ وَٱحۡذَرۡهُمۡ أَن يَفۡتِنُوكَ عَنۢ بَعۡضِ مَآ أَنزَلَ ٱللَّهُ إِلَيۡكَۖ فَإِن تَوَلَّوۡاْ فَٱعۡلَمۡ أَنَّمَا يُرِيدُ ٱللَّهُ أَن يُصِيبَهُم بِبَعۡضِ ذُنُوبِهِمۡۗ وَإِنَّ كَثِيرٗا مِّنَ ٱلنَّاسِ لَفَٰسِقُونَ ٤٩

1 ಪೂರ್ವ ಗ್ರಂಥಗಳ ನೈಜ ಒಳಾಂಶವು ಏನೆಂಬುದನ್ನು ಸ್ಪಷ್ಟಪಡಿಸುತ್ತಾ ಮತ್ತು ಅವುಗಳಲ್ಲಿ ನಡೆದ ಹಸ್ತಕ್ಷೇಪಗಳನ್ನು ಬಹಿರಂಗಪಡಿಸುತ್ತಾ ಕುರ್‌ಆನ್ ಅವುಗಳನ್ನು ಸಂರಕ್ಷಿಸುತ್ತದೆ.

ಎಚ್ಚರವಹಿಸಲೂ (ನಾವು ತಮ್ಮೊಂದಿಗೆ ಆದೇಶಿಸುತ್ತಿರುವೆವು). ಇನ್ನು ಅವರೇನಾದರೂ ವಿಮುಖರಾಗುವುದಾದರೆ ಅರಿತುಕೊಳ್ಳಿರಿ! ಅವರ ಕೆಲವು ಪಾಪಗಳ ನಿಮಿತ್ತ ಅಲ್ಲಾಹು ಅವರನ್ನು ನಾಶ ಮಾಡಲು ಇಚ್ಛಿಸುತ್ತಿರುವನು. ಖಂಡಿತವಾಗಿಯೂ ಮನುಷ್ಯರಲ್ಲಿ ಹೆಚ್ಚಿನವರೂ ಧಿಕ್ಕಾರಿಗಳಾಗಿರುವರು.

50. ಜಾಹಿಲಿಯ್ಯತ್ತಿನ (ಇಸ್ಲಾಮೇತರ) ತೀರ್ಪನ್ನು ಅವರು ಅರಸುತ್ತಿರುವರೇ? ದೃಢವಿಶ್ವಾಸಿಗಳಾದ ಜನರಿಗೆ ಅಲ್ಲಾಹುವಿಗಿಂತಲೂ ಉತ್ತಮವಾಗಿ ತೀರ್ಪು ನೀಡುವವನು ಯಾರಿರುವನು?

أَفَحُكۡمَ ٱلۡجَٰهِلِيَّةِ يَبۡغُونَۚ وَمَنۡ أَحۡسَنُ مِنَ ٱللَّهِ حُكۡمٗا لِّقَوۡمٖ يُوقِنُونَ ٥٠

51. ಓ ಸತ್ಯವಿಶ್ವಾಸಿಗಳೇ! ಯಹೂದರನ್ನು ಮತ್ತು ಕ್ರೈಸ್ತರನ್ನು ನೀವು ಆಪ್ತ ಮಿತ್ರರನ್ನಾಗಿ ಮಾಡದಿರಿ. ಅವರು ಪರಸ್ಪರ ಆಪ್ತ ಮಿತ್ರರಾಗಿರುವರು. ನಿಮ್ಮ ಪೈಕಿ ಯಾರು ಅವರನ್ನು ಆಪ್ತ ಮಿತ್ರರಾಗಿ ಮಾಡಿಕೊಳ್ಳುವನೋ ಅವನು ಕೂಡ ಅವರೊಂದಿಗೇ ಸೇರಿದವನಾಗಿರುವನು. ಖಂಡಿತವಾಗಿಯೂ ಅಕ್ರಮಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗಕ್ಕೆ ಸೇರಿಸಲಾರನು.

۞ يَـٰٓأَيُّهَا ٱلَّذِينَ ءَامَنُواْ لَا تَتَّخِذُواْ ٱلۡيَهُودَ وَٱلنَّصَٰرَىٰٓ أَوۡلِيَآءَۘ بَعۡضُهُمۡ أَوۡلِيَآءُ بَعۡضٖۚ وَمَن يَتَوَلَّهُم مِّنكُمۡ فَإِنَّهُۥ مِنۡهُمۡۗ إِنَّ ٱللَّهَ لَا يَهۡدِي ٱلۡقَوۡمَ ٱلظَّـٰلِمِينَ ٥١

52. ಆದರೆ ಹೃದಯಗಳಲ್ಲಿ ರೋಗವಿರುವ ಕೆಲವರು ಅವರ ಬಗ್ಗೆ (ಅವರೊಂದಿಗೆ ಮೈತ್ರಿ ಸ್ಥಾಪಿಸುವ ಬಗ್ಗೆ) ಆತುರ ಪಡುತ್ತಿರುವುದಾಗಿ ತಾವು ಕಾಣುವಿರಿ. 'ನಮಗೇನಾದರೂ ಆಪತ್ತು ಸಂಭವಿಸಬಹುದೆಂದು ನಾವು ಭಯಪಡುತ್ತಿರುವೆವು' ಎಂದು ಅವರು ಹೇಳುವರು. ಆದರೆ ಅಲ್ಲಾಹು (ನಿಮಗೆ) ಪೂರ್ಣವಾದ ವಿಜಯವನ್ನು ನೀಡುವುದಾಗಲಿ ಅಥವಾ ತನ್ನ ವತಿಯ ಬೇರೇನಾದರೂ ಆದೇಶವನ್ನು ತರುವುದಾಗಲಿ ಮಾಡಬಹುದು. ಆಗ ತಮ್ಮ ಮನಸ್ಸುಗಳೊಳಗೆ

فَتَرَى ٱلَّذِينَ فِي قُلُوبِهِم مَّرَضٞ يُسَٰرِعُونَ فِيهِمۡ يَقُولُونَ نَخۡشَىٰٓ أَن تُصِيبَنَا دَآئِرَةٞۚ فَعَسَى ٱللَّهُ أَن يَأۡتِيَ بِٱلۡفَتۡحِ أَوۡ أَمۡرٖ مِّنۡ عِندِهِۦ فَيُصۡبِحُواْ عَلَىٰ مَآ أَسَرُّواْ فِيٓ أَنفُسِهِمۡ نَٰدِمِينَ ٥٢

ಮರೆಮಾಚಿಟ್ಟಿರುವುದರ ಕುರಿತು ಅವರು ವಿಷಾದಿಸುವವರಾಗಿ ಮಾರ್ಪಡುವರು.

53. (ಅಂದು) ಸತ್ಯವಿಶ್ವಾಸಿಗಳು ಹೇಳುವರು: 'ನಾವು ನಿಮ್ಮೊಂದಿಗೇ ಇರುವೆವು ಎಂದು ಅಲ್ಲಾಹುವಿನ ಮೇಲೆ ಬಲವಾದ ಆಣೆಯಿಟ್ಟು ಹೇಳಿದವರು ಇವರಾಗಿರುವರೇ?' ಅವರ ಕರ್ಮಗಳು ನಿಷ್ಫಲವಾದವು ಮತ್ತು ಅವರು ನಷ್ಟ ಹೊಂದಿದವರಾಗಿ ಮಾರ್ಪಟ್ಟರು.

وَيَقُولُ ٱلَّذِينَ ءَامَنُوٓاْ أَهَٰٓؤُلَآءِ ٱلَّذِينَ أَقۡسَمُواْ بِٱللَّهِ جَهۡدَ أَيۡمَٰنِهِمۡ إِنَّهُمۡ لَمَعَكُمۡۚ حَبِطَتۡ أَعۡمَٰلُهُمۡ فَأَصۡبَحُواْ خَٰسِرِينَ ٥٣

54. ಓ ಸತ್ಯವಿಶ್ವಾಸಿಗಳೇ! ನಿಮ್ಮಲ್ಲಿ ಯಾರಾದರೂ ತನ್ನ ಧರ್ಮವನ್ನು ತ್ಯಜಿಸಿ ಹಿಂದಿರುಗಿಹೋಗುವುದಾದರೆ ಖಂಡಿತವಾಗಿಯೂ ಅಲ್ಲಾಹು ತಾನು ಪ್ರೀತಿಸುವಂತಹ ಬೇರೊಂದು ಜನತೆಯನ್ನು ಬದಲಿಯಾಗಿ ತರುವನು.[1] ಅವರು ಅಲ್ಲಾಹುವನ್ನು ಪ್ರೀತಿಸುವರು ಮತ್ತು ವಿಶ್ವಾಸಿಗಳೊಂದಿಗೆ ವಿನಯತೋರುವವರೂ ಸತ್ಯನಿಷೇಧಿಗಳೊಂದಿಗೆ ಪ್ರತಾಪ ಪ್ರಕಟಿಸುವವರೂ ಆಗಿರುವರು. ಅವರು ಅಲ್ಲಾಹುವಿನ ಮಾರ್ಗದಲ್ಲಿ ಹೋರಾಡುವರು ಮತ್ತು ಆಕ್ಷೇಪಿಸುವವನ ಯಾವ ಆಕ್ಷೇಪವನ್ನೂ ಭಯಪಡಲಾರರು. ಅದು ಅಲ್ಲಾಹುವಿನ ಅನುಗ್ರಹವಾಗಿದೆ. ತಾನಿಚ್ಛಿಸುವವರಿಗೆ ಅವನು ಅದನ್ನು ದಯಪಾಲಿಸುವನು. ಅಲ್ಲಾಹು ಅಪಾರ ಸಾಮರ್ಥ್ಯವುಳ್ಳವನೂ ಸರ್ವಜ್ಞನೂ ಆಗಿರುವನು.

يَٰٓأَيُّهَا ٱلَّذِينَ ءَامَنُواْ مَن يَرۡتَدَّ مِنكُمۡ عَن دِينِهِۦ فَسَوۡفَ يَأۡتِي ٱللَّهُ بِقَوۡمٖ يُحِبُّهُمۡ وَيُحِبُّونَهُۥٓ أَذِلَّةٍ عَلَى ٱلۡمُؤۡمِنِينَ أَعِزَّةٍ عَلَى ٱلۡكَٰفِرِينَ يُجَٰهِدُونَ فِي سَبِيلِ ٱللَّهِ وَلَا يَخَافُونَ لَوۡمَةَ لَآئِمٖۚ ذَٰلِكَ فَضۡلُ ٱللَّهِ يُؤۡتِيهِ مَن يَشَآءُۚ وَٱللَّهُ وَٰسِعٌ عَلِيمٌ ٥٤

55. ನಿಮ್ಮ ಆಪ್ತಮಿತ್ರರು ಅಲ್ಲಾಹು, ಅವನ ಸಂದೇಶವಾಹಕರು ಮತ್ತು ವಿನಮ್ರತೆಯುಳ್ಳವರಾಗಿ ನಮಾಝ್ ಸಂಸ್ಥಾಪಿಸುವ ಹಾಗೂ ಝಕಾತ್ ನೀಡುವ ಸತ್ಯವಿಶ್ವಾಸಿಗಳು ಮಾತ್ರವಾಗಿರುವರು.

إِنَّمَا وَلِيُّكُمُ ٱللَّهُ وَرَسُولُهُۥ وَٱلَّذِينَ ءَامَنُواْ ٱلَّذِينَ يُقِيمُونَ ٱلصَّلَوٰةَ وَيُؤۡتُونَ ٱلزَّكَوٰةَ وَهُمۡ رَٰكِعُونَ ٥٥

---

1 ಅಲ್ಲಾಹುವಿನ ಧರ್ಮವು ಅಸ್ತಿತ್ವದಲ್ಲಿರುವುದು ನಿಮ್ಮನ್ನು ಅವಲಂಬಿಸಿಯಲ್ಲ. ನೀವು ನಿಷ್ಠೆ ಬದಲಾಯಿಸಿದರೆ ಸತ್ಯಧರ್ಮವೆಂದೂ ನಾಶವಾಗಲಾರದು. ಅಲ್ಲಾಹುವಿನೊಂದಿಗೆ ಸುದೃಢ ನಂಟನ್ನು ಹೊಂದಿರುವ ಒಂದು ಗುಂಪು ಎಲ್ಲ ಕಾಲಗಳಲ್ಲೂ ಧರ್ಮಸೇವೆ ಮಾಡುತ್ತಲೇ ಇರುವುದು. ಆದರೆ ನಿಮ್ಮ ಇಹಪರ ವಿಜಯವು ಅಲ್ಲಾಹುವಿನ ಅನುಗ್ರಹವನ್ನು ಅವಲಂಬಿಸಿಕೊಂಡಿದೆ ಎಂಬ ವಾಸ್ತವಿಕತೆಯನ್ನು ನೀವೆಂದೂ ಮರೆಯದಿರಿ.

56. ಯಾರಾದರೂ ಅಲ್ಲಾಹುವನ್ನು, ಅವನ ಸಂದೇಶವಾಹಕರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಆಪ್ತಮಿತ್ರರಾಗಿ ಮಾಡಿಕೊಳ್ಳುವುದಾದರೆ ಖಂಡಿತವಾಗಿಯೂ ಅಲ್ಲಾಹುವಿನ ಪಕ್ಷದವರೇ ವಿಜಯಗಳಿಸುವವರಾಗಿರುವರು.

وَمَن يَتَوَلَّ ٱللَّهَ وَرَسُولَهُۥ وَٱلَّذِينَ ءَامَنُواْ
فَإِنَّ حِزْبَ ٱللَّهِ هُمُ ٱلْغَٰلِبُونَ ٥٦

57. ಓ ಸತ್ಯವಿಶ್ವಾಸಿಗಳೇ! ನಿಮಗಿಂತ ಮುಂಚೆ ಗ್ರಂಥ ನೀಡಲಾದವರ ಪೈಕಿ ನಿಮ್ಮ ಧರ್ಮವನ್ನು ಮೋಜು ಹಾಗೂ ವಿನೋದವಾಗಿ ಮಾಡಿಕೊಂಡವರನ್ನಾಗಲಿ, ಸತ್ಯನಿಷೇಧಿಗಳನ್ನಾಗಲಿ ನೀವು ಆಪ್ತಮಿತ್ರರನ್ನಾಗಿ ಮಾಡದಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹುವನ್ನು ಭಯಪಡಿರಿ.

يَٰٓأَيُّهَا ٱلَّذِينَ ءَامَنُواْ لَا تَتَّخِذُواْ ٱلَّذِينَ
ٱتَّخَذُواْ دِينَكُمْ هُزُوًا وَلَعِبًا مِّنَ ٱلَّذِينَ
أُوتُواْ ٱلْكِتَٰبَ مِن قَبْلِكُمْ وَٱلْكُفَّارَ
أَوْلِيَآءَ ۚ وَٱتَّقُواْ ٱللَّهَ إِن كُنتُم مُّؤْمِنِينَ ٥٧

58. ನೀವು ನಮಾಝ್‌ಗಾಗಿ ಕರೆ ಕೊಟ್ಟರೆ ಅವರು ಅದನು ಮೋಜು ಹಾಗೂ ವಿನೋದವನ್ನಾಗಿ ಮಾಡಿಕೊಳ್ಳುವರು. ಅದು ಅವರು ಚಿಂತಿಸಿ ಗ್ರಹಿಸದ ಒಂದು ಜನತೆಯಾಗಿರುವ ಕಾರಣದಿಂದಾಗಿದೆ.

وَإِذَا نَادَيْتُمْ إِلَى ٱلصَّلَوٰةِ ٱتَّخَذُوهَا هُزُوًا
وَلَعِبًا ۚ ذَٰلِكَ بِأَنَّهُمْ قَوْمٌ لَّا يَعْقِلُونَ ٥٨

59. (ಓ ಪ್ರವಾದಿಯವರೇ!) ಹೇಳಿರಿ: 'ಓ ಗ್ರಂಥದವರೇ! ನಾವು ಅಲ್ಲಾಹುವಿನಲ್ಲಿಯೂ (ಅವನ ವತಿಯಿಂದ) ನಮಗೆ ಅವತೀರ್ಣಗೊಂಡ ಗ್ರಂಥದಲ್ಲಿಯೂ, ನಮಗಿಂತ ಮುಂಚೆ ಅವತೀರ್ಣಗೊಂಡ ಗ್ರಂಥದಲ್ಲಿಯೂ ವಿಶ್ವಾಸವಿಟ್ಟಿರುವುದರಿಂದ ಮತ್ತು ನಿಮ್ಮಲ್ಲಿ ಹೆಚ್ಚಿನವರೂ ಧಿಕ್ಕಾರಿಗಳಾಗಿರುವುದರಿಂದಲೇ ಹೊರತು ಇನ್ನಾವ ಕಾರಣಕ್ಕಾಗಿ ನೀವು ನಮ್ಮನ್ನು ಆಪಾದಿಸುತ್ತಿರುವಿರಿ?'

قُلْ يَٰٓأَهْلَ ٱلْكِتَٰبِ هَلْ تَنقِمُونَ مِنَّآ إِلَّآ
أَنْ ءَامَنَّا بِٱللَّهِ وَمَآ أُنزِلَ إِلَيْنَا وَمَآ أُنزِلَ
مِن قَبْلُ وَأَنَّ أَكْثَرَكُمْ فَٰسِقُونَ ٥٩

60. ತಾವು ಹೇಳಿರಿ: 'ಅಲ್ಲಾಹುವಿನ ಬಳಿ ಅದಕ್ಕಿಂತಲೂ ನಿಕೃಷ್ಟ ಪ್ರತಿಫಲವಿರುವವರ ಕುರಿತು ನಾನು ನಿಮಗೆ ತಿಳಿಸಿಕೊಡಲೇ? ಯಾರನ್ನು ಅಲ್ಲಾಹು ಶಪಿಸಿರುವನೋ, ಯಾರೊಂದಿಗೆ ಅವನು ಕ್ರೋಧಗೊಂಡಿರುವನೋ, ಯಾವ ಪಂಗಡಕ್ಕೆ

قُلْ هَلْ أُنَبِّئُكُم بِشَرٍّ مِّن ذَٰلِكَ مَثُوبَةً
عِندَ ٱللَّهِ ۚ مَن لَّعَنَهُ ٱللَّهُ وَغَضِبَ عَلَيْهِ
وَجَعَلَ مِنْهُمُ ٱلْقِرَدَةَ وَٱلْخَنَازِيرَ وَعَبَدَ
ٱلطَّٰغُوتَ ۚ أُوْلَٰٓئِكَ شَرٌّ مَّكَانًا وَأَضَلُّ

ಸೇರಿದವರನ್ನು ಅಲ್ಲಾಹು ಕಪಿಗಳನ್ನಾಗಿಯೂ ಹಂದಿಗಳನ್ನಾಗಿಯೂ ಮಾಡಿರುವನೋ, ಯಾವ ಪಂಗಡವು ಮಿಥ್ಯಾರಾಧ್ಯರನ್ನು ಆರಾಧಿಸಿತೋ, ಅವರೇ ಅತ್ಯಂತ ನಿಕೃಷ್ಟ ಸ್ಥಾನದಲ್ಲಿರುವವರೂ, ನೇರಮಾರ್ಗದಿಂದ ಅತ್ಯಧಿಕವಾಗಿ ವ್ಯತಿಚಲಿಸಿದವರೂ ಆಗಿರುವರು.'

عَن سَوَآءِ ٱلسَّبِيلِ ۝٦٠

**61.** ನಿಮ್ಮ ಬಳಿ ಬಂದಾಗ 'ನಾವು ವಿಶ್ವಾಸವಿಟ್ಟಿರುವೆವು' ಎಂದು ಅವರು ಹೇಳುವರು. ವಾಸ್ತವಿಕವಾಗಿ ಅವರು ಅವಿಶ್ವಾಸದೊಂದಿಗೇ ಬಂದಿರುವರು ಮತ್ತು ಅವಿಶ್ವಾಸದೊಂದಿಗೇ ಅವರು ಹೊರಟು ಹೋಗಿರುವರು. ಅವರು ಮರೆಮಾಚುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿಯುವವನಾಗಿರುವನು.

وَإِذَا جَآءُوكُمْ قَالُوٓاْ ءَامَنَّا وَقَد دَّخَلُواْ بِٱلْكُفْرِ وَهُمْ قَدْ خَرَجُواْ بِهِۦۚ وَٱللَّهُ أَعْلَمُ بِمَا كَانُواْ يَكْتُمُونَ ۝٦١

**62.** ಅವರಲ್ಲಿ ಹೆಚ್ಚಿನವರೂ ಪಾಪಕೃತ್ಯಗಳೆಡೆಗೆ, ಅತಿಕ್ರಮಗಳೆಡೆಗೆ ಮತ್ತು ನಿಷಿದ್ಧ ಸಂಪಾದನೆಯನ್ನು ತಿನ್ನುವುದರೆಡೆಗೆ ಧಾವಂತದಿಂದ ಮುನ್ನುಗ್ಗುತ್ತಿರುವವರಾಗಿ ತಾವು ಕಾಣುವಿರಿ. ಅವರು ಮಾಡುತ್ತಿರುವುದು ಅತ್ಯಂತ ನಿಕೃಷ್ಟವಾಗಿರುವುದೇ ಆಗಿದೆ.

وَتَرَىٰ كَثِيرًا مِّنْهُمْ يُسَٰرِعُونَ فِى ٱلْإِثْمِ وَٱلْعُدْوَٰنِ وَأَكْلِهِمُ ٱلسُّحْتَۚ لَبِئْسَ مَا كَانُواْ يَعْمَلُونَ ۝٦٢

**63.** ಅವರು ಪಾಪಕರ ಮಾತುಗಳನ್ನು ಆಡುವುದರಿಂದಲೂ, ನಿಷಿದ್ಧ ಸಂಪಾದನೆಯನ್ನು ತಿನ್ನುವುದರಿಂದಲೂ ಸಜ್ಜನರು ಮತ್ತು ವಿದ್ವಾಂಸರು ಅವರನ್ನು ತಡೆಯಲಿಲ್ಲವೇಕೆ? ಅವರು ಮಾಡುತ್ತಿರುವುದು ಅತ್ಯಂತ ನಿಕೃಷ್ಟವಾಗಿರುವುದೇ ಆಗಿದೆ.

لَوْلَا يَنْهَىٰهُمُ ٱلرَّبَّٰنِيُّونَ وَٱلْأَحْبَارُ عَن قَوْلِهِمُ ٱلْإِثْمَ وَأَكْلِهِمُ ٱلسُّحْتَۚ لَبِئْسَ مَا كَانُواْ يَصْنَعُونَ ۝٦٣

**64.** 'ಅಲ್ಲಾಹುವಿನ ಕೈಗಳನ್ನು ಕಟ್ಟಿಹಾಕಲಾಗಿದೆ' ಎಂದು ಯಹೂದರು ಹೇಳಿದರು.[1] ಅವರ ಕೈಗಳನ್ನೇ ಕಟ್ಟಿಹಾಕಲಾಗಲಿ! ಅವರು ಹೇಳಿದ ಆ ಮಾತಿನ ನಿಮಿತ್ತ ಅವರು

وَقَالَتِ ٱلْيَهُودُ يَدُ ٱللَّهِ مَغْلُولَةٌۚ غُلَّتْ أَيْدِيهِمْ وَلُعِنُواْ بِمَا قَالُواْۘ بَلْ يَدَاهُ مَبْسُوطَتَانِ يُنفِقُ كَيْفَ يَشَآءُۚ وَلَيَزِيدَنَّ

1 ಜಿಪುಣರನ್ನು ಆಲಂಕಾರಿಕವಾಗಿ ಕೈಗಳನ್ನು ಕಟ್ಟಿಹಾಕಲಾದವರು ಎನ್ನಲಾಗುತ್ತದೆ. ಬರಗಾಲ ಮತ್ತು ಸಂಕಷ್ಟಗಳು ಎದುರಾದಾಗ ಅಲ್ಲಾಹು ಈಗ ಜಿಪುಣನಾಗಿದ್ದಾನೆ ಎಂದು ಕೆಲವು ಯಹೂದರು ಹೇಳುತ್ತಿದ್ದುದನ್ನು ಇಲ್ಲಿ ತೀಕ್ಷ್ಣವಾಗಿ ಟೀಕಿಸಲಾಗಿದೆ.

ಶಪಿಸಲ್ಪಟ್ಟಿರುವವರು. ಅಲ್ಲ, (ವಾಸ್ತವಿಕವಾಗಿ) ಅವನ ಎರಡು ಕೈಗಳೂ ಚಾಚಿಕೊಂಡಿವೆ. ತಾನಿಚ್ಛಿಸುವಂತೆ ಅವನು ವ್ಯಯಿಸುವನು. ತಮಗೆ ತಮ್ಮ ರಬ್‌ನ ವತಿಯಿಂದ ಅವತೀರ್ಣಗೊಳಿಸಲಾದ ಸಂದೇಶವು ಅವರ ಪೈಕಿ ಹೆಚ್ಚಿನವರಿಗೂ ಧಿಕ್ಕಾರ ಮತ್ತು ಅವಿಶ್ವಾಸವನ್ನು ಹೆಚ್ಚಿಸುತ್ತಲೇ ಇರುವುದು. ಪುನರುತ್ಥಾನದ ದಿನದ ತನಕ ಅವರ ನಡುವೆ ಶತ್ರುತ್ವ ಮತ್ತು ವಿದ್ವೇಷವನ್ನು ನಾವು ಹಾಕಿಬಿಟ್ಟಿರುವೆವು. ಅವರು ಯುದ್ಧಾಗ್ನಿಯನ್ನು ಉರಿಸುವಾಗಲೆಲ್ಲ ಅಲ್ಲಾಹು ಅದನ್ನು ನಂದಿಸಿಬಿಡುವನು. ಅವರು ಭೂಮಿಯಲ್ಲಿ ವಿನಾಶವುಂಟು ಮಾಡಲು ಯತ್ನಿಸುತ್ತಿರುವರು. ಅಲ್ಲಾಹು ವಿನಾಶಕಾರಿಗಳನ್ನು ಇಷ್ಟಪಡಲಾರನು.

كَثِيرًا مِّنْهُم مَّآ أُنزِلَ إِلَيْكَ مِن رَّبِّكَ
طُغْيَٰنًا وَكُفْرًا ۚ وَأَلْقَيْنَا بَيْنَهُمُ ٱلْعَدَٰوَةَ
وَٱلْبَغْضَآءَ إِلَىٰ يَوْمِ ٱلْقِيَٰمَةِ ۚ كُلَّمَآ أَوْقَدُوا۟
نَارًا لِّلْحَرْبِ أَطْفَأَهَا ٱللَّهُ ۚ وَيَسْعَوْنَ
فِى ٱلْأَرْضِ فَسَادًا ۚ وَٱللَّهُ لَا يُحِبُّ
ٱلْمُفْسِدِينَ ﴿٦٤﴾

65. ಗ್ರಂಥದವರು ವಿಶ್ವಾಸವಿಟ್ಟಿರುತ್ತಿದ್ದರೆ ಮತ್ತು ಭಯಭಕ್ತಿ ಪಾಲಿಸಿರುತ್ತಿದ್ದರೆ ನಾವು ಅವರಿಂದ ಅವರ ಪಾಪಗಳನ್ನು ಅಳಿಸುತ್ತಿದ್ದೆವು ಮತ್ತು ಅನುಗ್ರಹ ಪೂರ್ಣವಾದ ಸ್ವರ್ಗೋದ್ಯಾನಗಳಲ್ಲಿ ಅವರನ್ನು ಪ್ರವೇಶಮಾಡಿಸುತ್ತಿದ್ದೆವು.

وَلَوْ أَنَّ أَهْلَ ٱلْكِتَٰبِ ءَامَنُوا۟ وَٱتَّقَوْا۟
لَكَفَّرْنَا عَنْهُمْ سَيِّـَٔاتِهِمْ وَلَأَدْخَلْنَٰهُمْ
جَنَّٰتِ ٱلنَّعِيمِ ﴿٦٥﴾

66. ತೌರಾತ್, ಇಂಜೀಲ್ ಮತ್ತು ಅವರಿಗೆ ಅವರ ರಬ್‌ನಿಂದ ಅವತೀರ್ಣಗೊಳಿಸಲಾದ ಸಂದೇಶಗಳನ್ನು ಅವರು ಸರಿಯಾದ ವಿಧದಲ್ಲಿ ಸ್ಥಾಪಿಸಿರುತ್ತಿದ್ದರೆ ಅವರ ಮೇಲ್ಭಾಗದಿಂದ ಮತ್ತು ಕಾಲುಗಳ ಅಡಿಭಾಗದಿಂದ ಅವರಿಗೆ ಆಹಾರವು ದೊರೆಯುತ್ತಿತ್ತು. ಅವರ ಪೈಕಿ ಮಿತತ್ವವನ್ನು ಪಾಲಿಸುವ ಒಂದು ಪಂಗಡವಿದೆ. ಆದರೆ ಅವರ ಪೈಕಿ ಹೆಚ್ಚಿನವರ ಕರ್ಮಗಳೂ ಅತ್ಯಂತ ನಿಕೃಷ್ಟವಾದುದಾಗಿವೆ.

وَلَوْ أَنَّهُمْ أَقَامُوا۟ ٱلتَّوْرَىٰةَ وَٱلْإِنجِيلَ وَمَآ
أُنزِلَ إِلَيْهِم مِّن رَّبِّهِمْ لَأَكَلُوا۟ مِن فَوْقِهِمْ
وَمِن تَحْتِ أَرْجُلِهِم ۚ مِّنْهُمْ أُمَّةٌ مُّقْتَصِدَةٌ ۖ
وَكَثِيرٌ مِّنْهُمْ سَآءَ مَا يَعْمَلُونَ ﴿٦٦﴾

67. ಓ ಸಂದೇಶವಾಹಕರೇ! ತಮ್ಮ ರಬ್‌ನ ವತಿಯಿಂದ ತಮಗೆ ಅವತೀರ್ಣಗೊಂಡಿರುವುದನ್ನು (ಜನರಿಗೆ) ತಲುಪಿಸಿಕೊಡಿರಿ. ತಾವು ಹಾಗೆ ಮಾಡದಿದ್ದರೆ ತಾವು ಅವನ ದೌತ್ಯವನ್ನು

۞ يَٰٓأَيُّهَا ٱلرَّسُولُ بَلِّغْ مَآ أُنزِلَ إِلَيْكَ مِن
رَّبِّكَ ۖ وَإِن لَّمْ تَفْعَلْ فَمَا بَلَّغْتَ رِسَالَتَهُۥ ۚ
وَٱللَّهُ يَعْصِمُكَ مِنَ ٱلنَّاسِ ۗ إِنَّ ٱللَّهَ

ನೆರವೇರಿಸಿದವರಾಗಲಾರಿರಿ. ಅಲ್ಲಾಹು ತಮ್ಮನ್ನು ಜನರಿಂದ ಕಾಪಾಡುವನು. ಅಲ್ಲಾಹು ಸತ್ಯನಿಷೇಧಿಗಳಾದ ಜನರನ್ನು ಖಂಡಿತವಾಗಿಯೂ ಸನ್ಮಾರ್ಗಕ್ಕೆ ಸೇರಿಸಲಾರನು.

لَا يَهۡدِي ٱلۡقَوۡمَ ٱلۡكَٰفِرِينَ ٦٧

**68.** ತಾವು ಹೇಳಿರಿ: "ಓ ಗ್ರಂಥದವರೇ! ತೌರಾತ್, ಇಂಜೀಲ್ ಮತ್ತು ನಿಮಗೆ ನಿಮ್ಮ ರಬ್‌ನ ವತಿಯಿಂದ ಅವತೀರ್ಣಗೊಳಿಸಲಾದ ಸಂದೇಶಗಳನ್ನು ನೀವು (ಸರಿಯಾದ ವಿಧದಲ್ಲಿ) ಸ್ಥಾಪಿಸುವ ತನಕ ನೀವು ಯಾವ ತಳಹದಿಯಲ್ಲೂ ಇರಲಾರಿರಿ. ತಮಗೆ ತಮ್ಮ ರಬ್‌ನ ವತಿಯಿಂದ ಅವತೀರ್ಣಗೊಳಿಸಲಾದ ಸಂದೇಶವು ಅವರ ಪೈಕಿ ಹೆಚ್ಚಿನವರಿಗೂ ಧಿಕ್ಕಾರ ಮತ್ತು ಅವಿಶ್ವಾಸವನ್ನು ಹೆಚ್ಚಿಸುತ್ತಲೇ ಇರುವುದು. ಆದ್ದರಿಂದ ಸತ್ಯನಿಷೇಧಿಗಳಾದ ಜನರ ಕುರಿತು ತಾವು ದುಃಖಿಸದಿರಿ.

قُلۡ يَٰٓأَهۡلَ ٱلۡكِتَٰبِ لَسۡتُمۡ عَلَىٰ شَيۡءٍ حَتَّىٰ تُقِيمُواْ ٱلتَّوۡرَىٰةَ وَٱلۡإِنجِيلَ وَمَآ أُنزِلَ إِلَيۡكُم مِّن رَّبِّكُمۡۗ وَلَيَزِيدَنَّ كَثِيرٗا مِّنۡهُم مَّآ أُنزِلَ إِلَيۡكَ مِن رَّبِّكَ طُغۡيَٰنٗا وَكُفۡرٗاۖ فَلَا تَأۡسَ عَلَى ٱلۡقَوۡمِ ٱلۡكَٰفِرِينَ ٦٨

**69.** ಸತ್ಯವಿಶ್ವಾಸಿಗಳು, ಯಹೂದರು, ಸಾಬಿಈಗಳು, ಕ್ರೈಸ್ತರು, ಇವರ ಪೈಕಿ ಯಾರು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವರೋ ಮತ್ತು ಸತ್ಕರ್ಮವೆಸಗುವರೋ ಅವರು ಏನನ್ನೂ ಭಯಪಡಬೇಕಾಗಿಲ್ಲ.[1] ಅವರು ದುಃಖಿಸಬೇಕಾಗಿಯೂ ಬರದು.

إِنَّ ٱلَّذِينَ ءَامَنُواْ وَٱلَّذِينَ هَادُواْ وَٱلصَّٰبِـُٔونَ وَٱلنَّصَٰرَىٰ مَنۡ ءَامَنَ بِٱللَّهِ وَٱلۡيَوۡمِ ٱلۡأٓخِرِ وَعَمِلَ صَٰلِحٗا فَلَا خَوۡفٌ عَلَيۡهِمۡ وَلَا هُمۡ يَحۡزَنُونَ ٦٩

**70.** ನಾವು ಇಸ್ರಾಈಲ್ ಸಂತತಿಗಳಿಂದ ಕರಾರನ್ನು ಪಡೆದಿರುವೆವು ಮತ್ತು ಅವರ ಬಳಿಗೆ ಸಂದೇಶವಾಹಕರನ್ನು ಕಳುಹಿಸಿರುವೆವು. ಅವರ ಮನಸ್ಸಿಗೆ ಹಿಡಿಸದ ವಿಷಯಗಳೊಂದಿಗೆ ಅವರ ಬಳಿಗೆ ಯಾವೊಬ್ಬ ಸಂದೇಶವಾಹಕನು ಬಂದಾಗಲೂ ಸಂದೇಹವಾಹಕರ ಪೈಕಿ ಕೆಲವರನ್ನು ಅವರು ನಿಷೇಧಿಸಿದರು ಮತ್ತು ಕೆಲವರನ್ನು ಕೊಲೆಗೈದರು.

لَقَدۡ أَخَذۡنَا مِيثَٰقَ بَنِيٓ إِسۡرَٰٓءِيلَ وَأَرۡسَلۡنَآ إِلَيۡهِمۡ رُسُلٗاۖ كُلَّمَا جَآءَهُمۡ رَسُولُۢ بِمَا لَا تَهۡوَىٰٓ أَنفُسُهُمۡ فَرِيقٗا كَذَّبُواْ وَفَرِيقٗا يَقۡتُلُونَ ٧٠

---

1 ಮೋಕ್ಷಕ್ಕಿರುವ ಮಾನದಂಡವು ಯಾವುದಾದರೂ ಪ್ರಾಂತೀಯ ಧರ್ಮದ ಹೆಸರಿನಲ್ಲಿರುವ ಸಂಕುಚಿತತೆಯಲ್ಲ. ಬದಲಾಗಿ ಇಲ್ಲಿ ಪರಮ ಪ್ರಧಾನವಾಗಿರುವುದು ಏಕದೇವತ್ವದಲ್ಲಿ ಮತ್ತು ಮರಣಾನಂತರ ಜೀವನದಲ್ಲಿರುವ ವಸ್ತುನಿಷ್ಠವಾದ ವಿಶ್ವಾಸವಾಗಿದೆ.

وَحَسِبُوٓاْ أَلَّا تَكُونَ فِتۡنَةٞ فَعَمُواْ وَصَمُّواْ ثُمَّ تَابَ ٱللَّهُ عَلَيۡهِمۡ ثُمَّ عَمُواْ وَصَمُّواْ كَثِيرٞ مِّنۡهُمۡۚ وَٱللَّهُ بَصِيرُۢ بِمَا يَعۡمَلُونَ ٧١

71. ಯಾವ ಕ್ಷೋಭೆಯೂ ಉಂಟಾಗಲಾರದೆಂದು ಅವರು ಭಾವಿಸಿದರು. ಆದ್ದರಿಂದ ಅವರು ಅಂಧರೂ ಕಿವುಡರೂ ಆದರು. ತರುವಾಯ ಅಲ್ಲಾಹು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ಅನಂತರ ಪುನಃ ಅವರ ಪೈಕಿ ಹೆಚ್ಚಿನವರು ಅಂಧರೂ ಕಿವುಡರೂ ಆದರು. ಅಲ್ಲಾಹು ಅವರು ಮಾಡುತ್ತಿರುವುದನ್ನೆಲ್ಲ ವೀಕ್ಷಿಸುವವನಾಗಿರುವನು.

لَقَدۡ كَفَرَ ٱلَّذِينَ قَالُوٓاْ إِنَّ ٱللَّهَ هُوَ ٱلۡمَسِيحُ ٱبۡنُ مَرۡيَمَۖ وَقَالَ ٱلۡمَسِيحُ يَٰبَنِيٓ إِسۡرَٰٓءِيلَ ٱعۡبُدُواْ ٱللَّهَ رَبِّي وَرَبَّكُمۡۖ إِنَّهُۥ مَن يُشۡرِكۡ بِٱللَّهِ فَقَدۡ حَرَّمَ ٱللَّهُ عَلَيۡهِ ٱلۡجَنَّةَ وَمَأۡوَىٰهُ ٱلنَّارُۖ وَمَا لِلظَّٰلِمِينَ مِنۡ أَنصَارٖ ٧٢

72. ‘ಮರ್ಯಮ್‌ರ ಮಗನಾದ ಮಸೀಹನೇ ಅಲ್ಲಾಹು’ ಎಂದು ಹೇಳಿದವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿರುವರು. ಆದರೆ ಮಸೀಹರು ಹೇಳಿರುವುದೇನೆಂದರೆ: ‘ಓ ಇಸ್ರಾಈಲ್ ಸಂತತಿಗಳೇ! ನೀವು ನನ್ನ ಮತ್ತು ನಿಮ್ಮ ರಬ್ಬಾದ ಅಲ್ಲಾಹುವನ್ನು ಆರಾಧಿಸಿರಿ. ಯಾರು ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವನೋ ಖಂಡಿತವಾಗಿಯೂ ಅಲ್ಲಾಹು ಅವನಿಗೆ ಸ್ವರ್ಗವನ್ನು ನಿಷಿದ್ಧಗೊಳಿಸಿರುವನು ಮತ್ತು ನರಕಾಗ್ನಿಯು ಅವನ ವಾಸಸ್ಥಳವಾಗಿರುವುದು. ಅಕ್ರಮಿಗಳಿಗೆ[1] ಸಹಾಯಕರಾಗಿ ಯಾರೂ ಇರಲಾರರು.’

لَّقَدۡ كَفَرَ ٱلَّذِينَ قَالُوٓاْ إِنَّ ٱللَّهَ ثَالِثُ ثَلَٰثَةٖۘ وَمَا مِنۡ إِلَٰهٍ إِلَّآ إِلَٰهٞ وَٰحِدٞۚ وَإِن لَّمۡ يَنتَهُواْ عَمَّا يَقُولُونَ لَيَمَسَّنَّ ٱلَّذِينَ كَفَرُواْ مِنۡهُمۡ عَذَابٌ أَلِيمٌ ٧٣

73. ‘ಅಲ್ಲಾಹು ಮೂವರಲ್ಲಿ ಒಬ್ಬನಾಗಿರುವನು’[2] ಎಂದು ಹೇಳಿದವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿರುವರು. ಏಕಮೇವ ಆರಾಧ್ಯನ ಹೊರತು ಅನ್ಯ ಆರಾಧ್ಯರಿಲ್ಲ. ಅವರು ಹಾಗೆ ಹೇಳುವುದನ್ನು ನಿಲ್ಲಿಸದಿದ್ದರೆ ಅವರ ಪೈಕಿ ಅವಿಶ್ವಾಸವಿಟ್ಟವರನ್ನು ಖಂಡಿತವಾಗಿಯೂ ಯಾತನಾಮಯ ಶಿಕ್ಷೆಯು ಸ್ಪರ್ಶಿಸಲಿರುವುದು.

1 ಸೃಷ್ಟಿಗಳನ್ನು ಆರಾಧಿಸುವುದು ಅಥವಾ ದಿವ್ಯತ್ವದಲ್ಲಿ ಅಲ್ಲಾಹುವಿನೊಂದಿಗೆ ಯಾರನ್ನಾದರೂ ಅಥವಾ ಯಾವುದೇ ವಸ್ತುವನ್ನಾದರೂ ಸಹಭಾಗಿಯಾಗಿ ಮಾಡುವುದು ಅಕ್ಷಮ್ಯವಾದ ಗಂಭೀರ ಅಪರಾಧವಾಗಿದೆ.

2 ಯೇಸುಕ್ರಿಸ್ತರಿಗೆ ಮನುಷ್ಯ ಪ್ರವಾದಿ ಎಂಬ ಪದವಿಯನ್ನು ನೀಡಿದರೆ ಸಾಕಾಗದು ಎಂದು ಕ್ರೈಸ್ತರು ಭಾವಿಸಿದರು. ಆದ್ದರಿಂದ ಅವರು ಯೇಸುವಿಗೆ ದೇವಪುತ್ರ ಎಂಬ ಪದವಿಯನ್ನು ನೀಡಿದರು. ಧರ್ಮಾಧ್ಯಕ್ಷರಿಗೂ ಮಾನವಾತೀತ ಪದವಿ ಬೇಕೆಂದು ಅವರು ಭಾವಿಸಿದರು. ಆದ್ದರಿಂದ ಅವರಲ್ಲಿ ಪವಿತ್ರಾತ್ಮನು ನೆಲೆಸುತ್ತಾನೆಂದು ವಾದಿಸಿದರು. ಹೀಗೆ ಏಕದೇವವಿಶ್ವಾಸಕ್ಕೆ ಬದಲಾಗಿ ಒಂದಾಗಿರುವ ಮೂರು ಅಥವಾ ಮೂರಾಗಿರುವ ಒಂದು (ತ್ರಿಯೇಕತ್ವ) ಎಂಬ ವಾದ ಕ್ರೈಸ್ತ ದೇವಪರಿಕಲ್ಪನೆಯಲ್ಲಿ ಗೊಂದಲಮಯ ಸಮಸ್ಯೆಯಾಗಿ ಪರಿಣಮಿಸಿತು.

74. ಅವರು ಅಲ್ಲಾಹುವಿನೆಡೆಗೆ ಪಶ್ಚಾತ್ತಾಪದೊಂದಿಗೆ ಮರಳುವುದಾಗಲಿ, ಅವನೊಂದಿಗೆ ಪಾಪಮುಕ್ತಿ ಬೇಡುವುದಾಗಲಿ ಮಾಡಲಾರರೇ? ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

أَفَلَا يَتُوبُونَ إِلَى ٱللَّهِ وَيَسۡتَغۡفِرُونَهُۥۚ وَٱللَّهُ غَفُورٞ رَّحِيمٞ ٧٤

75. ಮರ್ಯಮ್‌ರ ಮಗ ಮಸೀಹರು ಒಬ್ಬ ಸಂದೇಶವಾಹಕರಾಗಿದ್ದರೇ ವಿನಾ ಇನ್ನಾರೂ ಆಗಿರಲಿಲ್ಲ. ಅವರಿಗಿಂತ ಮುಂಚೆ ಅನೇಕ ಸಂದೇಶವಾಹಕರು ಗತಿಸಿಹೋಗಿರುವರು. ಅವರ ತಾಯಿ ಓರ್ವ ಸತ್ಯವಂತೆಯಾಗಿದ್ದರು. ಅವರಿಬ್ಬರೂ ಆಹಾರವನ್ನು ಸೇವಿಸುತ್ತಿದ್ದರು. ನಾವು ಅವರಿಗೆ ಯಾವೆಲ್ಲ ವಿಧಗಳಲ್ಲಿ ದೃಷ್ಟಾಂತಗಳನ್ನು ಸ್ಪಷ್ಟಪಡಿಸಿ ಕೊಡುತ್ತಿರುವೆವೆಂಬುದನ್ನು ನೋಡಿರಿ. ಆದರೂ ಅವರು (ಸತ್ಯದಿಂದ) ಹೇಗೆ ತಪ್ಪಿಸಲ್ಪಡುತ್ತಿರುವರೆಂಬುದನ್ನೂ ನೋಡಿರಿ.

مَّا ٱلۡمَسِيحُ ٱبۡنُ مَرۡيَمَ إِلَّا رَسُولٞ قَدۡ خَلَتۡ مِن قَبۡلِهِ ٱلرُّسُلُ وَأُمُّهُۥ صِدِّيقَةٞۖ كَانَا يَأۡكُلَانِ ٱلطَّعَامَۗ ٱنظُرۡ كَيۡفَ نُبَيِّنُ لَهُمُ ٱلۡأٓيَٰتِ ثُمَّ ٱنظُرۡ أَنَّىٰ يُؤۡفَكُونَ ٧٥

76. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹುವಿನ ಹೊರತು ನಿಮಗೆ ಲಾಭವನ್ನಾಗಲಿ ಹಾನಿಯನ್ನಾಗಲಿ ಅಧೀನದಲ್ಲಿಟ್ಟು ಕೊಳ್ಳದವುಗಳನ್ನು ನೀವು ಆರಾಧಿಸುತ್ತಿರುವಿರಾ?' ಅಲ್ಲಾಹುವಾದರೋ ಎಲ್ಲವನ್ನೂ ಆಲಿಸುವವನೂ ಅರಿಯುವವನೂ ಆಗಿರುವನು.

قُلۡ أَتَعۡبُدُونَ مِن دُونِ ٱللَّهِ مَا لَا يَمۡلِكُ لَكُمۡ ضَرّٗا وَلَا نَفۡعٗاۚ وَٱللَّهُ هُوَ ٱلسَّمِيعُ ٱلۡعَلِيمُ ٧٦

77. ಹೇಳಿರಿ: 'ಓ ಗ್ರಂಥದವರೇ! ಸತ್ಯಕ್ಕೆ ವಿರುದ್ಧವಾಗಿ ನೀವು ನಿಮ್ಮ ಧರ್ಮದಲ್ಲಿ ಹದ್ದುಮೀರದಿರಿ. ಈ ಮೊದಲೇ ದಾರಿಗೆಟ್ಟಿರುವ ಮತ್ತು ಅನೇಕ ಜನರನ್ನು ದಾರಿಗೆಡಿಸಿ, ಸನ್ಮಾರ್ಗದಿಂದ ವ್ಯತಿಚಲಿಸಿಹೋದ ಜನತೆಯೊಂದರ ದೇಹೇಚ್ಛೆಗಳನ್ನು ನೀವು ಅನುಸರಿಸದಿರಿ.'

قُلۡ يَٰٓأَهۡلَ ٱلۡكِتَٰبِ لَا تَغۡلُواْ فِي دِينِكُمۡ غَيۡرَ ٱلۡحَقِّ وَلَا تَتَّبِعُوٓاْ أَهۡوَآءَ قَوۡمٖ قَدۡ ضَلُّواْ مِن قَبۡلُ وَأَضَلُّواْ كَثِيرٗا وَضَلُّواْ عَن سَوَآءِ ٱلسَّبِيلِ ٧٧

78. ಇಸ್ರಾಈಲ್ ಸಂತತಿಗಳಲ್ಲಿ ಸೇರಿದ ಸತ್ಯನಿಷೇಧಿಗಳು ದಾವೂದ್‌ರ ಹಾಗೂ ಮರ್ಯಮ್‌ರ ಮಗನಾದ ಈಸಾರ ನಾಲಗೆಯಿಂದ ಶಪಿಸಲ್ಪಟ್ಟಿರುವರು. ಇದು

لُعِنَ ٱلَّذِينَ كَفَرُواْ مِنۢ بَنِيٓ إِسۡرَٰٓءِيلَ عَلَىٰ لِسَانِ دَاوُۥدَ وَعِيسَى ٱبۡنِ مَرۡيَمَۚ ذَٰلِكَ بِمَا عَصَواْ وَّكَانُواْ يَعۡتَدُونَ ٧٨

ಅವರು ಧಿಕ್ಕಾರ ತೋರಿರುವುದರ ಮತ್ತು ಅತಿಕ್ರಮವೆಸಗಿರುವುದರ ಫಲವಾಗಿದೆ.

**79.** ಅವರು ಮಾಡುತ್ತಿದ್ದ ದುಷ್ಕೃತ್ಯಗಳನ್ನು ಅವರು ಪರಸ್ಪರ ತಡೆಯುತ್ತಿರಲಿಲ್ಲ. ಅವರು ಮಾಡುತ್ತಿದ್ದುದು ಅತ್ಯಂತ ನಿಕೃಷ್ಟವಾದುದೇ ಆಗಿತ್ತು.

كَانُوا۟ لَا يَتَنَاهَوْنَ عَن مُّنكَرٍ فَعَلُوهُ ۚ لَبِئْسَ مَا كَانُوا۟ يَفْعَلُونَ ﴿٧٩﴾

**80.** ಅವರಲ್ಲಿ ಹೆಚ್ಚಿನವರೂ ಸತ್ಯನಿಷೇಧಿಗಳನ್ನು ಆಪ್ತಮಿತ್ರರಾಗಿ ಮಾಡಿಕೊಳ್ಳುವುದಾಗಿ ತಾವು ಕಾಣುವಿರಿ. ಅವರು ಸ್ವತಃ ತಮಗೋಸ್ಕರ ಮುಂಗಡವಾಗಿ ಮಾಡಿಟ್ಟಿರುವುದು[1] ಅತ್ಯಂತ ನಿಕೃಷ್ಟವಾದುದೇ ಆಗಿದೆ. (ಇದರಿಂದಾಗಿ) ಅಲ್ಲಾಹು ಅವರ ಮೇಲೆ ಕ್ರೋಧಗೊಂಡಿರುವನು ಮತ್ತು ಶಿಕ್ಷೆಯಲ್ಲಿ ಅವರು ಶಾಶ್ವತವಾಗಿ ವಾಸಿಸುವರು.

تَرَىٰ كَثِيرًا مِّنْهُمْ يَتَوَلَّوْنَ ٱلَّذِينَ كَفَرُوا۟ ۚ لَبِئْسَ مَا قَدَّمَتْ لَهُمْ أَنفُسُهُمْ أَن سَخِطَ ٱللَّهُ عَلَيْهِمْ وَفِى ٱلْعَذَابِ هُمْ خَـٰلِدُونَ ﴿٨٠﴾

**81.** ಅವರು ಅಲ್ಲಾಹುವಿನಲ್ಲಿ, ಪ್ರವಾದಿಯಲ್ಲಿ ಮತ್ತು ಅವರಿಗೆ (ಪ್ರವಾದಿಗೆ) ಅವತೀರ್ಣಗೊಂಡಿರುವುದರಲ್ಲಿ ವಿಶ್ವಾಸವಿಡುತ್ತಿದ್ದರೆ ಅವರನ್ನು (ಸತ್ಯನಿಷೇಧಿಗಳನ್ನು) ಆಪ್ತಮಿತ್ರರನ್ನಾಗಿ ಮಾಡಿಕೊಳ್ಳುತ್ತಿರಲಿಲ್ಲ. ಆದರೆ ಅವರಲ್ಲಿ ಹೆಚ್ಚಿನವರೂ ಧಿಕ್ಕಾರಿಗಳಾಗಿರುವರು.

وَلَوْ كَانُوا۟ يُؤْمِنُونَ بِٱللَّهِ وَٱلنَّبِىِّ وَمَآ أُنزِلَ إِلَيْهِ مَا ٱتَّخَذُوهُمْ أَوْلِيَآءَ وَلَـٰكِنَّ كَثِيرًا مِّنْهُمْ فَـٰسِقُونَ ﴿٨١﴾

**82.** ಜನರ ಪೈಕಿ ಸತ್ಯವಿಶ್ವಾಸಿಗಳೊಂದಿಗೆ ಕಠಿಣ ಶತ್ರುತ್ವವಿರುವವರು ಯಹೂದರು ಮತ್ತು ಬಹುದೇವಾರಾಧಕರಾಗಿರುವರೆಂದು ಖಂಡಿತವಾಗಿಯೂ ತಾವು ಕಾಣುವಿರಿ. 'ನಾವು ಕ್ರೈಸ್ತರಾಗಿರುವೆವು' ಎಂದು ಹೇಳಿದವರು ಜನರ ಪೈಕಿ ಸತ್ಯವಿಶ್ವಾಸಿಗಳೊಂದಿಗೆ ಅತ್ಯಂತ ಪ್ರೀತಿಯಿರುವವರಾಗಿ ತಾವು ಕಾಣುವಿರಿ. ಅವರಲ್ಲಿ ವಿದ್ವಾಂಸರು ಮತ್ತು ಸನ್ಯಾಸಿಗಳಿರುವರು ಮತ್ತು ಅವರು

۞ لَتَجِدَنَّ أَشَدَّ ٱلنَّاسِ عَدَٰوَةً لِّلَّذِينَ ءَامَنُوا۟ ٱلْيَهُودَ وَٱلَّذِينَ أَشْرَكُوا۟ ۖ وَلَتَجِدَنَّ أَقْرَبَهُم مَّوَدَّةً لِّلَّذِينَ ءَامَنُوا۟ ٱلَّذِينَ قَالُوٓا۟ إِنَّا نَصَـٰرَىٰ ۚ ذَٰلِكَ بِأَنَّ مِنْهُمْ قِسِّيسِينَ وَرُهْبَانًا وَأَنَّهُمْ لَا يَسْتَكْبِرُونَ ﴿٨٢﴾

1 ಪ್ರತಿಯೊಬ್ಬನಿಗೂ ಶಾಶ್ವತವಾಗಿ ಅನುಭವಿಸಬೇಕಾಗಿ ಬರುವುದು ಐಹಿಕ ಜೀವನದಲ್ಲಿ ಅವನು ಮುಂಗಡವಾಗಿ ಮಾಡಿಟ್ಟಿರುವ ಕರ್ಮಗಳ ಫಲವನ್ನು ಮಾತ್ರವಾಗಿದೆ.

ಅಹಂಭಾವ ಪಡುವವರಲ್ಲ ಎಂಬುದೇ ಇದಕ್ಕಿರುವ ಕಾರಣವಾಗಿದೆ.

**83.** ಸಂದೇಶವಾಹಕರಿಗೆ ಅವತೀರ್ಣಗೊಳಿಸಲಾಗಿರುವುದನ್ನು ಆಲಿಸಿದರೆ ಸತ್ಯವನ್ನು ಗ್ರಹಿಸಿದ ಕಾರಣ ಅವರ ಕಣ್ಣುಗಳಿಂದ ಕಣ್ಣೀರು ಹರಿಯುವುದಾಗಿ ತಾವು ಕಾಣುವಿರಿ.[1] ಅವರು ಹೇಳುವರು: 'ಓ ನಮ್ಮ ರಬ್! ನಾವು ವಿಶ್ವಾಸವಿಟ್ಟಿರುವೆವು. ಆದ್ದರಿಂದ ಸತ್ಯಕ್ಕೆ ಸಾಕ್ಷ್ಯವಹಿಸಿದವರೊಂದಿಗೆ ನಮ್ಮನ್ನೂ ದಾಖಲಿಸು.

وَإِذَا سَمِعُواْ مَآ أُنزِلَ إِلَى ٱلرَّسُولِ تَرَىٰٓ أَعۡيُنَهُمۡ تَفِيضُ مِنَ ٱلدَّمۡعِ مِمَّا عَرَفُواْ مِنَ ٱلۡحَقِّۖ يَقُولُونَ رَبَّنَآ ءَامَنَّا فَٱكۡتُبۡنَا مَعَ ٱلشَّٰهِدِينَ ٨٣

**84.** ನಮ್ಮ ರಬ್ ನಮ್ಮನ್ನು ಸಜ್ಜನರೊಂದಿಗೆ ಪ್ರವೇಶ ಮಾಡಿಸಬೇಕೆಂದು ನಾವು ಹಂಬಲಿಸುತ್ತಿರುವಾಗ, ಅಲ್ಲಾಹುವಿನಲ್ಲಿ ಮತ್ತು ನಮಗೆ ಬಳಿಗೆ ಬಂದ ಸತ್ಯದಲ್ಲಿ ವಿಶ್ವಾಸವಿಡದಿರಲು ನಮಗೇನಾಗಿದೆ?'

وَمَا لَنَا لَا نُؤۡمِنُ بِٱللَّهِ وَمَا جَآءَنَا مِنَ ٱلۡحَقِّ وَنَطۡمَعُ أَن يُدۡخِلَنَا رَبُّنَا مَعَ ٱلۡقَوۡمِ ٱلصَّٰلِحِينَ ٨٤

**85.** ಅವರು ಹೇಳಿರುವ ಮಾತಿನ ಫಲವಾಗಿ ಅಲ್ಲಾಹು ಅವರಿಗೆ ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳನ್ನು ಪ್ರತಿಫಲವಾಗಿ ನೀಡಿದನು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅದು ಸತ್ಕರ್ಮಿಗಳಿಗಿರುವ ಪ್ರತಿಫಲವಾಗಿದೆ.

فَأَثَٰبَهُمُ ٱللَّهُ بِمَا قَالُواْ جَنَّٰتٖ تَجۡرِي مِن تَحۡتِهَا ٱلۡأَنۡهَٰرُ خَٰلِدِينَ فِيهَاۚ وَذَٰلِكَ جَزَآءُ ٱلۡمُحۡسِنِينَ ٨٥

**86.** ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ತಿರಸ್ಕರಿಸಿದವರಾರೋ ಅವರು ನರಕಾಗ್ನಿಯ ವಾಸಿಗಳಾಗಿರುವರು.

وَٱلَّذِينَ كَفَرُواْ وَكَذَّبُواْ بِـَٔايَٰتِنَآ أُوْلَٰٓئِكَ أَصۡحَٰبُ ٱلۡجَحِيمِ ٨٦

**87.** ಓ ಸತ್ಯವಿಶ್ವಾಸಿಗಳೇ! ಅಲ್ಲಾಹು ನಿಮಗೆ ಧರ್ಮ ಸಮ್ಮತಗೊಳಿಸಿದ ಉತ್ತಮ ವಸ್ತುಗಳನ್ನು ನೀವು ನಿಷಿದ್ಧಗೊಳಿಸದಿರಿ ಮತ್ತು ಮಿತಿ ಮೀರದಿರಿ. ಮಿತಿ ಮೀರುವವರನ್ನು ಖಂಡಿತವಾಗಿಯೂ ಅಲ್ಲಾಹು ಇಷ್ಟಪಡಲಾರನು.

يَٰٓأَيُّهَا ٱلَّذِينَ ءَامَنُواْ لَا تُحَرِّمُواْ طَيِّبَٰتِ مَآ أَحَلَّ ٱللَّهُ لَكُمۡ وَلَا تَعۡتَدُوٓاْۚ إِنَّ ٱللَّهَ لَا يُحِبُّ ٱلۡمُعۡتَدِينَ ٨٧

1 ಇಲ್ಲಿ ಪ್ರಸ್ತಾಪಿಸಲಾಗಿರುವುದು ಪ್ರವಾದಿ (ﷺ) ರವರ ಕಾಲದಲ್ಲಿ ಇಸ್ಲಾಮ್ ಸ್ವೀಕರಿಸಿದ ಕೆಲವು ಕ್ರೈಸ್ತ ಧರ್ಮೀಯರ ಕುರಿತಾಗಿದೆ.

88. ಅಲ್ಲಾಹು ನಿಮಗೆ ಅನ್ನಾಧಾರವಾಗಿ ಒದಗಿಸಿರುವುದರಲ್ಲಿ ಧರ್ಮಸಮ್ಮತವಾಗಿರುವ ಮತ್ತು ಉತ್ತಮವಾಗಿರುವವುಗಳನ್ನು ತಿನ್ನಿರಿ. ಯಾರ ಮೇಲೆ ನೀವು ವಿಶ್ವಾಸವಿಡುತ್ತಿರುವಿರೋ ಆ ಅಲ್ಲಾಹುವನ್ನು ಭಯಪಡಿರಿ.

وَكُلُواْ مِمَّا رَزَقَكُمُ ٱللَّهُ حَلَٰلًا طَيِّبًاۚ
وَٱتَّقُواْ ٱللَّهَ ٱلَّذِيٓ أَنتُم بِهِۦ مُؤۡمِنُونَ ٨٨

89. ಮನಃಪೂರ್ವಕವಲ್ಲದ ನಿಮ್ಮ ಶಪಥಗಳ ನಿಮಿತ್ತ ಅಲ್ಲಾಹು ನಿಮ್ಮನ್ನು ಶಿಕ್ಷಿಸಲಾರನು. ಆದರೆ ನೀವು ದೃಢಮನಸ್ಕರಾಗಿ ಮಾಡಿದ ಶಪಥಗಳ ನಿಮಿತ್ತ ಅವನು ನಿಮ್ಮನ್ನು ಶಿಕ್ಷಿಸುವನು. ಆದ್ದರಿಂದ ಅದರ (ಅದನ್ನು ಉಲ್ಲಂಘಿಸುವುದರ) ಪ್ರಾಯಶ್ಚಿತ್ತವು ನೀವು ನಿಮ್ಮ ಮನೆಯವರಿಗೆ ನೀಡುವ ಮಧ್ಯಮ ತರಹದ ಆಹಾರದಿಂದ ಹತ್ತು ಮಂದಿ ಬಡವರಿಗೆ ಉಣಿಸುವುದು ಅಥವಾ ಅವರಿಗೆ ಉಡುಪನ್ನು ನೀಡುವುದು ಅಥವಾ ಓರ್ವ ಗುಲಾಮನನ್ನು ವಿಮೋಚನೆಗೊಳಿಸುವುದಾಗಿದೆ. ಇನ್ನು ಯಾರಿಗಾದರೂ (ಅದಾವುದೂ) ಲಭಿಸದಿದ್ದರೆ ಅವನು ಮೂರು ದಿನ ಉಪವಾಸ ಆಚರಿಸಲಿ. ಇದು ನೀವು ಆಣೆಯಿಟ್ಟು ಹೇಳಿದ ನಿಮ್ಮ ಶಪಥಗಳನ್ನು ನೀವು ಉಲ್ಲಂಘಿಸಿದರೆ ಅದಕ್ಕಿರುವ ಪ್ರಾಯಶ್ಚಿತ್ತವಾಗಿದೆ. ನಿಮ್ಮ ಶಪಥಗಳನ್ನು ನೀವು ಕಾಯ್ದುಕೊಳ್ಳಿರಿ. ಹೀಗೆ ನೀವು ಕೃತಜ್ಞತೆ ಸಲ್ಲಿಸುವವರಾಗುವ ಸಲುವಾಗಿ ಅಲ್ಲಾಹು ತನ್ನ ಸೂಕ್ತಿಗಳನ್ನು ನಿಮಗೆ ವಿವರಿಸಿಕೊಡುತ್ತಿರುವನು.

لَا يُؤَاخِذُكُمُ ٱللَّهُ بِٱللَّغۡوِ فِيٓ أَيۡمَٰنِكُمۡ
وَلَٰكِن يُؤَاخِذُكُم بِمَا عَقَّدتُّمُ ٱلۡأَيۡمَٰنَۖ
فَكَفَّٰرَتُهُۥٓ إِطۡعَامُ عَشَرَةِ مَسَٰكِينَ
مِنۡ أَوۡسَطِ مَا تُطۡعِمُونَ أَهۡلِيكُمۡ أَوۡ
كِسۡوَتُهُمۡ أَوۡ تَحۡرِيرُ رَقَبَةٖۖ فَمَن لَّمۡ يَجِدۡ
فَصِيَامُ ثَلَٰثَةِ أَيَّامٖۚ ذَٰلِكَ كَفَّٰرَةُ أَيۡمَٰنِكُمۡ
إِذَا حَلَفۡتُمۡۚ وَٱحۡفَظُوٓاْ أَيۡمَٰنَكُمۡۚ كَذَٰلِكَ
يُبَيِّنُ ٱللَّهُ لَكُمۡ ءَايَٰتِهِۦ لَعَلَّكُمۡ
تَشۡكُرُونَ ٨٩

90. ಓ ಸತ್ಯವಿಶ್ವಾಸಿಗಳೇ! ಮದ್ಯ, ಜೂಜಾಟ, ಪ್ರತಿಷ್ಠಾಪನೆಗಳು(1) ಮತ್ತು ಭಾಗ್ಯ ಪರೀಕ್ಷಿಸುವ

يَٰٓأَيُّهَا ٱلَّذِينَ ءَامَنُوٓاْ إِنَّمَا ٱلۡخَمۡرُ وَٱلۡمَيۡسِرُ

1 ಅಮಲುಂಟು ಮಾಡುವ ಯಾವುದೇ ಪಾನೀಯವೂ ಮದ್ಯದ ವ್ಯಾಪ್ತಿಯಲ್ಲಿ ಬರುತ್ತದೆ. ಒಂದು ವಸ್ತುವಿನ ಬೆಲೆಯಾಗಿ ಅಥವಾ ಶ್ರಮದ ಪ್ರತಿಫಲವಾಗಿ ಹೊರತು ಭಾಗ್ಯ ನಿರ್ಭಾಗ್ಯಗಳನ್ನು ಆಕಸ್ಮಿಕತೆಯ ಆಧಾರದ ಮೇಲೆ ನಿರ್ಣಯಿಸುವ ಸ್ಪರ್ಧೆಗಳು, ಲಾಟರಿಗಳು, ಹಣವಿಟ್ಟು ಆಡುವ ಆಟಗಳು ಇತ್ಯಾದಿಗಳೆಲ್ಲವೂ ಜೂಜಾಟದ ವ್ಯಾಪ್ತಿಯಲ್ಲಿ ಬರುತ್ತವೆ. ಅಲ್ಲಾಹೇತರರಿಗಿರುವ ಬಲಿಪೀಠಗಳು ಮತ್ತು ಬಹುದೇವಾರಾಧನೆಗಾಗಿರುವ ಸರ್ವ ಪ್ರತಿಷ್ಠಾಪನೆಗಳೂ ಅನ್ಸಾಬ್ ಎಂಬ ಪದದ ವ್ಯಾಪ್ತಿಯಲ್ಲಿ ಬರುತ್ತವೆ.

ಬಾಣಗಳು ಪೈಶಾಚಿಕವಾಗಿರುವ ನೀಚಕೃತ್ಯಗಳಾಗಿವೆ. ಆದ್ದರಿಂದ ನೀವು ಅವೆಲ್ಲವನ್ನೂ ವರ್ಜಿಸಿರಿ. ನೀವು ಯಶಸ್ಸುಗಳಿಸಲೂಬಹುದು.

وَٱلۡأَنصَابُ وَٱلۡأَزۡلَٰمُ رِجۡسٞ مِّنۡ عَمَلِ ٱلشَّيۡطَٰنِ فَٱجۡتَنِبُوهُ لَعَلَّكُمۡ تُفۡلِحُونَ ٩٠

91. ಸೈತಾನನು ಇಚ್ಛಿಸುವುದು ಮದ್ಯ ಮತ್ತು ಜೂಜಾಟದಿಂದ ನಿಮ್ಮ ಮಧ್ಯೆ ಶತ್ರುತ್ವ ಹಾಗೂ ವಿದ್ವೇಷವನ್ನು ಬಿತ್ತಲು ಮತ್ತು ಅಲ್ಲಾಹುವಿನ ಸ್ಮರಣೆ ಹಾಗೂ ನಮಾಝ್‌ನಿಂದ ನಿಮ್ಮನ್ನು ತಡೆಯಲು ಮಾತ್ರವಾಗಿದೆ. ಆದ್ದರಿಂದ ನೀವು (ಅವುಗಳನ್ನು) ನಿಲ್ಲಿಸಲು ಸಿದ್ಧರಿರುವಿರಾ?

إِنَّمَا يُرِيدُ ٱلشَّيۡطَٰنُ أَن يُوقِعَ بَيۡنَكُمُ ٱلۡعَدَٰوَةَ وَٱلۡبَغۡضَآءَ فِي ٱلۡخَمۡرِ وَٱلۡمَيۡسِرِ وَيَصُدَّكُمۡ عَن ذِكۡرِ ٱللَّهِ وَعَنِ ٱلصَّلَوٰةِۖ فَهَلۡ أَنتُم مُّنتَهُونَ ٩١

92. ನೀವು ಅಲ್ಲಾಹುವನ್ನು ಮತ್ತು ಸಂದೇಶವಾಹಕರನ್ನು ಅನುಸರಿಸಿರಿ ಮತ್ತು (ಅವಿಧೇಯತೆಯುಂಟಾಗದಂತೆ) ಎಚ್ಚರವಹಿಸಿರಿ. ನೀವು ವಿಮುಖರಾಗುವುದಾದರೆ ನಮ್ಮ ಸಂದೇಶವಾಹಕರ ಹೊಣೆಯು ಸ್ಪಷ್ಟವಾದ ರೀತಿಯಲ್ಲಿ ಸಂದೇಶವನ್ನು ತಲುಪಿಸಿ ಕೊಡುವುದು ಮಾತ್ರವಾಗಿದೆ ಎಂಬುದನ್ನು ಅರಿತುಕೊಳ್ಳಿರಿ.

وَأَطِيعُواْ ٱللَّهَ وَأَطِيعُواْ ٱلرَّسُولَ وَٱحۡذَرُواْۚ فَإِن تَوَلَّيۡتُمۡ فَٱعۡلَمُوٓاْ أَنَّمَا عَلَىٰ رَسُولِنَا ٱلۡبَلَٰغُ ٱلۡمُبِينُ ٩٢

93. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರಿಗೆ ಅಲ್ಲಾಹುವನ್ನು ಭಯಪಟ್ಟು (ನಿಷಿದ್ಧವಾಗಿರುವವುಗಳನ್ನು ವರ್ಜಿಸಿದರೆ) ಮತ್ತು ವಿಶ್ವಾಸವಿಟ್ಟರೆ ಹಾಗೂ ಸತ್ಕರ್ಮಗೈದರೆ (ಮುಂಚೆ) ಸೇವಿಸಿರುವುದರಲ್ಲಿ ಅವರಿಗೆ ದೋಷವಿಲ್ಲ.[1] ಅವರು ಆ ಬಳಿಕವೂ ಭಯಭಕ್ತಿ ಪಾಲಿಸಿದರೆ ಮತ್ತು ವಿಶ್ವಾಸದಲ್ಲಿ ದೃಢವಾಗಿ ನಿಂತರೆ. ಅದರ ನಂತರವೂ ಅವರು ಭಯಭಕ್ತಿ ಪಾಲಿಸಿದರೆ ಮತ್ತು

لَيۡسَ عَلَى ٱلَّذِينَ ءَامَنُواْ وَعَمِلُواْ ٱلصَّٰلِحَٰتِ جُنَاحٞ فِيمَا طَعِمُوٓاْ إِذَا مَا ٱتَّقَواْ وَّءَامَنُواْ وَعَمِلُواْ ٱلصَّٰلِحَٰتِ ثُمَّ ٱتَّقَواْ وَّءَامَنُواْ ثُمَّ ٱتَّقَواْ وَّأَحۡسَنُواْۚ وَٱللَّهُ يُحِبُّ ٱلۡمُحۡسِنِينَ ٩٣

1 ಇಸ್ಲಾಮ್ ಮದ್ಯವನ್ನು ಹಂತ ಹಂತವಾಗಿ ನಿಷಿದ್ಧಗೊಳಿಸಿತ್ತು. ಮದ್ಯವನ್ನು ಸಂಪೂರ್ಣವಾಗಿ ನಿಷಿದ್ಧಗೊಳಿಸುವುದಕ್ಕೆ ಮುಂಚೆ ಕುರ್‌ಆನ್ ಅದರಲ್ಲಿರುವ ಹಾನಿಗಳ ಕುರಿತು ಎಚ್ಚರಿಸಿತು. ಪಾನಮತ್ತನಾಗಿ ನಮಾಝ್ ಮಾಡುವುದನ್ನು ವಿರೋಧಿಸಿತು. “ನೀವು ನಿಲ್ಲಿಸಲು ಸಿದ್ಧರಿರುವಿರಾ” ಎಂಬ ಸೂಕ್ತಿಯ ಮೂಲಕ ಮದ್ಯವನ್ನು ಸಂಪೂರ್ಣವಾಗಿ ನಿಷಿದ್ಧಗೊಳಿಸಲಾಯಿತು. ಪಾನನಿಷೇಧವು ಅವತೀರ್ಣಗೊಳ್ಳುವುದಕ್ಕೆ ಮುಂಚಿತವಾಗಿ ಮದ್ಯಪಾನ ಮಾಡಿದವರಿಗೆ ಪಾಪಪ್ರಜ್ಞೆ ಇರಬೇಕಾದ ಅಗತ್ಯವಿಲ್ಲವೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

ಉತ್ತಮ ರೀತಿಯಲ್ಲಿ ವರ್ತಿಸಿದರೆ, ಸದ್ವರ್ತನೆ ತೋರುವವರನ್ನು ಅಲ್ಲಾಹು ಇಷ್ಟಪಡುವನು.

يَٰٓأَيُّهَا ٱلَّذِينَ ءَامَنُواْ لَيَبۡلُوَنَّكُمُ ٱللَّهُ بِشَيۡءٖ مِّنَ ٱلصَّيۡدِ تَنَالُهُۥٓ أَيۡدِيكُمۡ وَرِمَاحُكُمۡ لِيَعۡلَمَ ٱللَّهُ مَن يَخَافُهُۥ بِٱلۡغَيۡبِۚ فَمَنِ ٱعۡتَدَىٰ بَعۡدَ ذَٰلِكَ فَلَهُۥ عَذَابٌ أَلِيمٞ ﴿٩٤﴾

94. ಓ ಸತ್ಯವಿಶ್ವಾಸಿಗಳೇ! ನಿಮ್ಮ ಕೈಗಳ ಮೂಲಕ ಮತ್ತು ಭರ್ಚಿಗಳ ಮೂಲಕ ನೀವು ಬೇಟೆಯಾಡಿ ಹಿಡಿಯುವಂತಹ ಯಾವುದಾದರೂ ಜೀವಿಗಳ ಮೂಲಕವೂ ಅಲ್ಲಾಹು ನಿಮ್ಮನ್ನು ಪರೀಕ್ಷಿಸುವನು.[1] ಇದು ಅಗೋಚರ ಸ್ಥಿತಿಯಲ್ಲಿ ಅಲ್ಲಾಹುವನ್ನು ಭಯಪಡುವವರು ಯಾರೆಂದು ಅವನು ಅರಿಯುವುದಕ್ಕಾಗಿದೆ. ಯಾರಾದರೂ ಅದರ ಬಳಿಕವೂ ಅತಿಕ್ರಮವೆಸಗಿದರೆ ಅವನಿಗೆ ಯಾತನಾಮಯ ಶಿಕ್ಷೆಯಿದೆ.

يَٰٓأَيُّهَا ٱلَّذِينَ ءَامَنُواْ لَا تَقۡتُلُواْ ٱلصَّيۡدَ وَأَنتُمۡ حُرُمٞۚ وَمَن قَتَلَهُۥ مِنكُم مُّتَعَمِّدٗا فَجَزَآءٞ مِّثۡلُ مَا قَتَلَ مِنَ ٱلنَّعَمِ يَحۡكُمُ بِهِۦ ذَوَا عَدۡلٖ مِّنكُمۡ هَدۡيَۢا بَٰلِغَ ٱلۡكَعۡبَةِ أَوۡ كَفَّٰرَةٞ طَعَامُ مَسَٰكِينَ أَوۡ عَدۡلُ ذَٰلِكَ صِيَامٗا لِّيَذُوقَ وَبَالَ أَمۡرِهِۦۗ عَفَا ٱللَّهُ عَمَّا سَلَفَۚ وَمَنۡ عَادَ فَيَنتَقِمُ ٱللَّهُ مِنۡهُۚ وَٱللَّهُ عَزِيزٞ ذُو ٱنتِقَامٍ ﴿٩٥﴾

95. ಓ ಸತ್ಯವಿಶ್ವಾಸಿಗಳೇ! ನೀವು ಇಹ್ರಾಮ್‌ನಲ್ಲಿರುವಾಗ ಬೇಟೆಮೃಗವನ್ನು ಕೊಲ್ಲದಿರಿ. ನಿಮ್ಮಲ್ಲಿ ಯಾರಾದರೂ ಉದ್ದೇಶಪೂರ್ವಕವಾಗಿ ಅದನ್ನು ಕೊಂದರೆ ನಿಮ್ಮ ಪೈಕಿ ಇಬ್ಬರು ನ್ಯಾಯಸಮ್ಮತ ವ್ಯಕ್ತಿಗಳು ಅವನು ಕೊಂದಿರುವುದಕ್ಕೆ ಸಮಾನವೆಂದು ತೀರ್ಪು ನೀಡುವ ಜಾನುವಾರನ್ನು (ಅಥವಾ ಜಾನುವಾರುಗಳನ್ನು) ಕಅ್‌ಬಾಲಯಕ್ಕೆ ತಲುಪಬೇಕಾದ ಬಲಿಮೃಗವಾಗಿ ನೀಡಲಿ. ಅಥವಾ ಪ್ರಾಯಶ್ಚಿತ್ತವಾಗಿ ಕೆಲವು ಬಡವರಿಗೆ ಆಹಾರವನ್ನು ನೀಡಲಿ. ಅಥವಾ ಅದಕ್ಕೆ ಸಮಾನವಾಗಿ ಉಪವಾಸವನ್ನು ಆಚರಿಸಲಿ.[2] ಅದು ಅವರು ಮಾಡಿದ ಕೃತ್ಯದ ಪರಿಣಾಮವನ್ನು ಅವರು ಸ್ವತಃ ಅನುಭವಿಸುವುದಕ್ಕಾಗಿದೆ. ಈ ಮುಂಚೆ ಮಾಡಿರುವುದನ್ನು ಅಲ್ಲಾಹು ಕ್ಷಮಿಸಿರುವನು. ಯಾರಾದರೂ ಅದನ್ನು

---

1 ಹಜ್ಜ್ ಉಮ್ರಾ ಕರ್ಮಗಳಲ್ಲಿ ಪ್ರವೇಶಿಸಿದವರಿಗೆ ಬೇಟೆಯಾಡುವುದು ನಿಷಿದ್ಧವಾಗಿದೆ. ಕೈಚಾಚಿ ಹಿಡಿಯುವ ದೂರದಲ್ಲಿ ಪ್ರಾಣಿಗಳನ್ನು ಕಾಣುವಾಗ ಯಾತ್ರಾರ್ಥಿಯು ಈ ನಿಷೇಧವನ್ನು ಉಲ್ಲಂಘಿಸುವನೋ ಎಂದು ಅಲ್ಲಾಹು ಪರೀಕ್ಷಿಸುವನು.

2 ಕೊಂದಪ್ರಾಣಿಯ ಬೆಲೆಯಿಂದ ಎಷ್ಟು ಬಡವರಿಗೆ ಆಹಾರವನ್ನು ನೀಡಲು ಸಾಧ್ಯವಾಗುವುದೋ ಅಷ್ಟುದಿನಗಳ ಕಾಲ ಉಪವಾಸ ಆಚರಿಸಬೇಕಾಗಿದೆ.

ಪುನರಾವರ್ತಿಸುವುದಾದರೆ ಅಲ್ಲಾಹು
ಅವನಿಗೆದುರಾಗಿ ಶಿಕ್ಷಾಕ್ರಮ ಕೈಗೊಳ್ಳುವನು.
ಅಲ್ಲಾಹು ಪ್ರತಾಪಶಾಲಿಯೂ ಶಿಕ್ಷಾಕ್ರಮ
ಕೈಗೊಳ್ಳುವವನೂ ಆಗಿರುವನು.

**96.** ನಿಮಗೆ ಮತ್ತು ಯಾತ್ರಿಕರಿಗೆ
ಜೀವನಾನುಕೂಲತೆಗಾಗಿ ಸಮುದ್ರದಲ್ಲಿ
ಬೇಟೆಯಾಡುವುದನ್ನು ಮತ್ತು ಸಮುದ್ರದಲ್ಲಿರುವ
ಭಕ್ಷ್ಯ ಸೇವಿಸುವುದನ್ನು ಅನುಮತಿಸಲಾಗಿದೆ.
ನೀವು ಇಹ್ರಾಮ್‌ನಲ್ಲಿರುವಾಗಲೆಲ್ಲ ನಿಮಗೆ
ದಡದಲ್ಲಿರುವ ಬೇಟೆ ಮೃಗಗಳನ್ನು
ನಿಷಿದ್ಧಗೊಳಿಸಲಾಗಿದೆ. ಯಾರೆಡೆಗೆ ನೀವು
ಒಟ್ಟುಗೂಡಿಸಲಾಗುವಿರೋ ಆ ಅಲ್ಲಾಹುವನ್ನು
ಭಯಪಡಿರಿ.

أُحِلَّ لَكُمْ صَيْدُ ٱلْبَحْرِ وَطَعَامُهُۥ مَتَـٰعًا
لَّكُمْ وَلِلسَّيَّارَةِ ۖ وَحُرِّمَ عَلَيْكُمْ صَيْدُ
ٱلْبَرِّ مَا دُمْتُمْ حُرُمًا ۗ وَٱتَّقُوا۟ ٱللَّهَ ٱلَّذِىٓ إِلَيْهِ
تُحْشَرُونَ ﴿٩٦﴾

**97.** ಪವಿತ್ರ ಭವನವಾದ ಕಅ್‌ಬಾಲಯವನ್ನು ಮತ್ತು
ಯುದ್ಧ ನಿಷಿದ್ಧವಾದ ತಿಂಗಳನ್ನು ಅಲ್ಲಾಹು
ಜನರ ಅಸ್ತಿತ್ವಕ್ಕೆ ಆಧಾರವಾಗಿಸಿರುವನು. (ಅದೇ
ರೀತಿ ಕಅ್‌ಬಾಲಯಕ್ಕೆ ಒಯ್ಯಲಾಗುವ)
ಬಲಿಮೃಗವನ್ನೂ, (ಅವುಗಳ)
ಕೊರಳಪಟ್ಟಿಗಳನ್ನೂ (ಅಲ್ಲಾಹು
ನಿಶ್ಚಯಿಸಿರುವನು.). ಇದು ಆಕಾಶಗಳಲ್ಲಿ ಮತ್ತು
ಭೂಮಿಯಲ್ಲಿರುವುದೆಲ್ಲವನ್ನೂ ಅಲ್ಲಾಹು
ಅರಿಯುತ್ತಿರುವನು ಮತ್ತು ಪ್ರತಿಯೊಂದು
ವಿಷಯದ ಕುರಿತೂ ಅವನು
ಅರಿವುಳ್ಳವನಾಗಿರುವನು ಎಂದು ನೀವು
ತಿಳಿದುಕೊಳ್ಳುವ ಸಲುವಾಗಿದೆ.

۞ جَعَلَ ٱللَّهُ ٱلْكَعْبَةَ ٱلْبَيْتَ ٱلْحَرَامَ قِيَـٰمًا
لِّلنَّاسِ وَٱلشَّهْرَ ٱلْحَرَامَ وَٱلْهَدْىَ وَٱلْقَلَـٰٓئِدَ ۚ
ذَٰلِكَ لِتَعْلَمُوٓا۟ أَنَّ ٱللَّهَ يَعْلَمُ مَا فِى
ٱلسَّمَـٰوَٰتِ وَمَا فِى ٱلْأَرْضِ وَأَنَّ ٱللَّهَ بِكُلِّ
شَىْءٍ عَلِيمٌ ﴿٩٧﴾

**98.** ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು
ಮತ್ತು ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ
ಅಪಾರ ಕರುಣೆಯುಳ್ಳವನೂ ಆಗಿರುವನು
ಎಂದು ಅರಿತುಕೊಳ್ಳಿರಿ.

ٱعْلَمُوٓا۟ أَنَّ ٱللَّهَ شَدِيدُ ٱلْعِقَابِ وَأَنَّ ٱللَّهَ
غَفُورٌ رَّحِيمٌ ﴿٩٨﴾

**99.** ಸಂದೇಶವಾಹಕರ ಮೇಲಿರುವುದು
ಸಂದೇಶವನ್ನು ತಲುಪಿಸಿಕೊಡುವ
ಹೊಣೆಗಾರಿಕೆ ಮಾತ್ರವಾಗಿದೆ. ನೀವು

مَّا عَلَى ٱلرَّسُولِ إِلَّا ٱلْبَلَـٰغُ ۗ وَٱللَّهُ يَعْلَمُ مَا
تُبْدُونَ وَمَا تَكْتُمُونَ ﴿٩٩﴾

ಬಹಿರಂಗಪಡಿಸುವುದನ್ನು ಮತ್ತು ಮರೆಮಾಚುವುದನ್ನು ಅಲ್ಲಾಹು ಅರಿಯುವನು.

**100.** (ಓ ಪ್ರವಾದಿಯವರೇ!) ಹೇಳಿರಿ: ‘ನಿಕೃಷ್ಟವಾದುದು ಮತ್ತು ಉತ್ಕೃಷ್ಟವಾದುದು ಸಮಾನವಾಗಲಾರದು. ನಿಕೃಷ್ಟವಾದುದರ ಹೆಚ್ಚಳವು ತಮ್ಮನ್ನು ಅಚ್ಚರಿಗೊಳಿಸಿದರೂ ಸರಿಯೇ! ಆದ್ದರಿಂದ ಓ ಬುದ್ಧಿವಂತರೇ! ನೀವು ಅಲ್ಲಾಹುವನ್ನು ಭಯಪಡಿರಿ. ನೀವು ಯಶಸ್ಸುಗಳಿಸಲೂ ಬಹುದು.

قُل لَّا يَسْتَوِى ٱلْخَبِيثُ وَٱلطَّيِّبُ وَلَوْ أَعْجَبَكَ كَثْرَةُ ٱلْخَبِيثِ ۚ فَٱتَّقُوا۟ ٱللَّهَ يَـٰٓأُو۟لِى ٱلْأَلْبَـٰبِ لَعَلَّكُمْ تُفْلِحُونَ ﴿١٠٠﴾

**101.** ಓ ಸತ್ಯವಿಶ್ವಾಸಿಗಳೇ! ಕೆಲವೊಂದು ವಿಷಯಗಳ ಕುರಿತು ನೀವು ಪ್ರಶ್ನಿಸದಿರಿ.[1] ಅವುಗಳನ್ನು ನಿಮಗೆ ಬಹಿರಂಗಪಡಿಸಲಾದರೆ ಅವು ನಿಮಗೆ ಮನಃ ಕ್ಲೇಶವನ್ನುಂಟು ಮಾಡುವುದು. ಕುರ್‌ಆನ್ ಅವತೀರ್ಣ ಗೊಳ್ಳುವ ಸಂದರ್ಭದಲ್ಲಿ ನೀವು ಅವುಗಳ ಕುರಿತು ಪ್ರಶ್ನಿಸುವುದಾದರೆ ನಿಮಗೆ ಅವುಗಳನ್ನು ಬಹಿರಂಗ ಪಡಿಸಲಾಗುವುದು. (ನೀವು ಈಗಾಗಲೇ ಪ್ರಶ್ನಿಸಿದವುಗಳನ್ನು) ಅಲ್ಲಾಹು (ನಿಮಗೆ) ಮನ್ನಿಸಿರುವನು. ಅಲ್ಲಾಹು ಅತ್ಯಧಿಕ ಮನ್ನಿಸುವವನೂ ಸಹನಾಶೀಲನೂ ಆಗಿರುವನು.

يَـٰٓأَيُّهَا ٱلَّذِينَ ءَامَنُوا۟ لَا تَسْـَٔلُوا۟ عَنْ أَشْيَآءَ إِن تُبْدَ لَكُمْ تَسُؤْكُمْ وَإِن تَسْـَٔلُوا۟ عَنْهَا حِينَ يُنَزَّلُ ٱلْقُرْءَانُ تُبْدَ لَكُمْ عَفَا ٱللَّهُ عَنْهَا ۗ وَٱللَّهُ غَفُورٌ حَلِيمٌ ﴿١٠١﴾

**102.** ನಿಮಗಿಂತ ಮುಂಚಿನ ಒಂದು ಜನತೆಯು ಅಂತಹ ಪ್ರಶ್ನೆಗಳನ್ನು ಕೇಳಿತ್ತು. ತರುವಾಯ ಅವರು ಅವುಗಳ ಕುರಿತು ಅವಿಶ್ವಾಸಿಗಳಾಗಿ ಮಾರ್ಪಟ್ಟರು.

قَدْ سَأَلَهَا قَوْمٌ مِّن قَبْلِكُمْ ثُمَّ أَصْبَحُوا۟ بِهَا كَـٰفِرِينَ ﴿١٠٢﴾

1 ಕೆಲವೊಂದು ವಿಷಯಗಳನ್ನು ಅಲ್ಲಾಹು ಕಟ್ಟುನಿಟ್ಟಾಗಿ ನಿರ್ಣಯಿಸದೆ ಬಿಟ್ಟುಬಿಡುವುದು ಮನುಷ್ಯರ ಅನುಕೂಲತೆಗಾಗಿದೆ. ಸೂರಃ ಅಲ್‌ಬಕರಾದಲ್ಲಿ ಇದಕ್ಕೊಂದು ಉದಾಹರಣೆಯನ್ನು ಕಾಣಬಹುದು. ಒಂದು ಹಸುವನ್ನು ಕೊಯ್ಯಲು ಇಸ್ರಾಈಲರೊಂದಿಗೆ ಅಲ್ಲಾಹು ಆದೇಶಿಸಿದಾಗ ಯಾವುದಾದರೂ ಒಂದು ಹಸುವನ್ನು ಕೊಯ್ದರೆ ಸಾಕಾಗುತ್ತಿತ್ತು. ಆದರೆ ಅವರು ಅನಗತ್ಯವಾದ ಪ್ರಶ್ನೆಗಳನ್ನು ಕೇಳಿದರು. ಎಲ್ಲ ಸಂಶಯಗಳನ್ನೂ ನಿವಾರಿಸಿ ಅಲ್ಲಾಹು ಹಸುವಿನ ರೂಪವನ್ನು ವಿವರಿಸಿದಾಗ ಅಂತಹ ಒಂದು ಹಸುವನ್ನು ಹುಡುಕಲು ಅವರಿಗೆ ಬಹಳ ಕಷ್ಟವಾಯಿತು. ಅನಗತ್ಯ ಪ್ರಶ್ನೆಗಳು ಸೃಷ್ಟಿಸುವ ಅವಾಂತರವನ್ನು ಇದರಿಂದ ಗ್ರಹಿಸಬಹುದಾಗಿದೆ.

103. ಬಹೀರಃ, ಸಾಇಬಃ, ವಸೀಲ ಮತ್ತು ಹಾಮ್[1] ಎಂಬ ಹರಕೆ ಮೃಗಗಳೊಂದನ್ನೂ ಅಲ್ಲಾಹು ನಿಶ್ಚಯಿಸಿಲ್ಲ. ಆದರೆ ಸತ್ಯನಿಷೇಧಿಗಳು ಅಲ್ಲಾಹುವಿನ ಮೇಲೆ ಸುಳ್ಳು ಹೆಣೆಯುತ್ತಿರುವರು. ಅವರಲ್ಲಿ ಹೆಚ್ಚಿನವರೂ ಚಿಂತಿಸಿ ಅರ್ಥಮಾಡಿಕೊಳ್ಳುವುದಿಲ್ಲ.

مَا جَعَلَ ٱللَّهُ مِنۢ بَحِيرَةٖ وَلَا سَآئِبَةٖ وَلَا وَصِيلَةٖ وَلَا حَامٖ وَلَٰكِنَّ ٱلَّذِينَ كَفَرُواْ يَفۡتَرُونَ عَلَى ٱللَّهِ ٱلۡكَذِبَۖ وَأَكۡثَرُهُمۡ لَا يَعۡقِلُونَ ١٠٣

104. 'ಅಲ್ಲಾಹು ಅವತೀರ್ಣಗೊಳಿಸಿರುವುದರೆಡೆಗೆ ಮತ್ತು ಸಂದೇಶವಾಹಕರೆಡೆಗೆ ಬನ್ನಿರಿ' ಎಂದು ಅವರೊಂದಿಗೆ ಹೇಳಲಾದರೆ 'ನಮ್ಮ ಪೂರ್ವಿಕರು ಯಾವ ಸ್ಥಿತಿಯಲ್ಲಿರುವುದಾಗಿ ನಾವು ಕಂಡಿರುವೆವೋ ಅದು ನಮಗೆ ಸಾಕು' ಎಂದು ಅವರು ಹೇಳುವರು. ಅವರ ಪೂರ್ವಿಕರು ಏನನ್ನೂ ಅರಿಯದವರೂ ಸನ್ಮಾರ್ಗ ಪಡೆಯದವರಾಗಿದ್ದರೂ (ಅದು ಅವರಿಗೆ ಸಾಕೇ?)

وَإِذَا قِيلَ لَهُمۡ تَعَالَوۡاْ إِلَىٰ مَآ أَنزَلَ ٱللَّهُ وَإِلَى ٱلرَّسُولِ قَالُواْ حَسۡبُنَا مَا وَجَدۡنَا عَلَيۡهِ ءَابَآءَنَآۚ أَوَلَوۡ كَانَ ءَابَآؤُهُمۡ لَا يَعۡلَمُونَ شَيۡـٔٗا وَلَا يَهۡتَدُونَ ١٠٤

105. ಓ ಸತ್ಯವಿಶ್ವಾಸಿಗಳೇ! ನೀವು ನಿಮ್ಮ ಬಗ್ಗೆ ಎಚ್ಚರವಹಿಸಿರಿ. ನೀವು ಸನ್ಮಾರ್ಗದಲ್ಲಿರುವವರಾದರೆ ಪಥಭ್ರಷ್ಟರಾದವರು ನಿಮಗೆ ಯಾವ ಹಾನಿಯನ್ನೂ ಮಾಡಲಾರರು. ನಿಮ್ಮೆಲ್ಲರ ಮರಳುವಿಕೆಯು ಅಲ್ಲಾಹುವಿನೆಡೆಗಾಗಿದೆ. ನೀವು ಮಾಡುತ್ತಿದ್ದುದರ ಬಗ್ಗೆ ಆಗ ಅವನು ನಿಮಗೆ ತಿಳಿಸಿಕೊಡುವನು.

يَـٰٓأَيُّهَا ٱلَّذِينَ ءَامَنُواْ عَلَيۡكُمۡ أَنفُسَكُمۡۖ لَا يَضُرُّكُم مَّن ضَلَّ إِذَا ٱهۡتَدَيۡتُمۡۚ إِلَى ٱللَّهِ مَرۡجِعُكُمۡ جَمِيعٗا فَيُنَبِّئُكُم بِمَا كُنتُمۡ تَعۡمَلُونَ ١٠٥

106. ಓ ಸತ್ಯವಿಶ್ವಾಸಿಗಳೇ! ನಿಮ್ಮಲ್ಲೊಬ್ಬನು ಮರಣಾಸನ್ನನಾದರೆ ವಸಿಯ್ಯತ್ತಿನ ಸಂದರ್ಭದಲ್ಲಿ ನಿಮ್ಮಲ್ಲಿನ ನ್ಯಾಯವಂತರಾದ ಇಬ್ಬರು ನಿಮ್ಮ ನಡುವೆ ಸಾಕ್ಷ್ಯವಹಿಸಲಿ. ನೀವು ಭೂಮಿಯಲ್ಲಿ ಯಾತ್ರೆ

يَـٰٓأَيُّهَا ٱلَّذِينَ ءَامَنُواْ شَهَٰدَةُ بَيۡنِكُمۡ إِذَا حَضَرَ أَحَدَكُمُ ٱلۡمَوۡتُ حِينَ ٱلۡوَصِيَّةِ ٱثۡنَانِ ذَوَا عَدۡلٖ مِّنكُمۡ أَوۡ ءَاخَرَانِ مِنۡ غَيۡرِكُمۡ إِنۡ أَنتُمۡ ضَرَبۡتُمۡ فِي ٱلۡأَرۡضِ

1 ಒಂದು ಒಂಟೆಯು ಐದು ಬಾರಿ ಮರಿಹಾಕಿದರೆ ಅರಬರು ಅದನ್ನು ಆರಾಧ್ಯರಿಗಾಗಿ ಮೀಸಲಿಡುತ್ತಿದ್ದರು ಮತ್ತು ಅವುಗಳ ಕಿವಿಯನ್ನು ಕತ್ತರಿಸಿ ಗುರುತನ್ನಿಡುತ್ತಿದ್ದರು. ಇದನ್ನು ಅವರು ಬಹೀರಃ ಎನ್ನುತ್ತಿದ್ದರು. ಉದ್ದೇಶಸಾಫಲ್ಯಕ್ಕಾಗಿ ಹರಕೆ ಮಾಡಿ ಅನಿರ್ಬಂಧಿತವಾಗಿ ಮೇಯಲು ಬಿಡುವ ಒಂಟೆಯನ್ನು ಅವರು ಸಾಇಬಃ ಎನ್ನುತ್ತಿದ್ದರು. ಒಂದು ಆಡು ಚೊಚ್ಚಲ ಹೆರಿಗೆಯಲ್ಲಿ ಗಂಡು ಮತ್ತು ಹೆಣ್ಣು ಮರಿಗಳನ್ನು ಹಾಕಿದರೆ ಅರಬರು ಆ ಆಡನ್ನು ವಸೀಲಃ ಎಂಬ ಹೆಸರಿನಲ್ಲಿ ಹರಕೆ ಹೊರುತ್ತಿದ್ದರು. ಒಂದು ನಿರ್ದಿಷ್ಟ ಪ್ರಾಯವನ್ನು ತಲುಪಿದ ಒಂಟೆಯನ್ನು ಹಾಮ್ ಎಂಬ ಹೆಸರಿನಲ್ಲಿ ಹರಕೆ ಹೊರುತ್ತಿದ್ದರು.

فَأَصَٰبَتۡكُم مُّصِيبَةُ ٱلۡمَوۡتِۚ تَحۡبِسُونَهُمَا
مِنۢ بَعۡدِ ٱلصَّلَوٰةِ فَيُقۡسِمَانِ بِٱللَّهِ إِنِ
ٱرۡتَبۡتُمۡ لَا نَشۡتَرِي بِهِۦ ثَمَنٗا وَلَوۡ كَانَ ذَا
قُرۡبَىٰ وَلَا نَكۡتُمُ شَهَٰدَةَ ٱللَّهِ إِنَّآ إِذٗا لَّمِنَ
ٱلۡأٓثِمِينَ ١٠٦

ಮಾಡುವವರಾಗಿದ್ದರೆ ಹಾಗೂ ನಿಮಗೆ ಮರಣಾಸನ್ನತೆಯುಂಟಾದರೆ (ವಸಿಯ್ಯತ್ತಿಗೆ ಸಾಕ್ಷಿಯಾಗಿ) ನಿಮ್ಮವರಲ್ಲದ ಇಬ್ಬರಾದರೂ ಸಾಕು.[1] ನಿಮಗೆ ಸಂಶಯವುಂಟಾದರೆ ನಮಾಝ್ ನಿರ್ವಹಿಸಿದ ನಂತರ ಅವರಿಬ್ಬರನ್ನೂ ತಡೆದು ನಿಲ್ಲಿಸಿರಿ ಮತ್ತು ಅವರು ಅಲ್ಲಾಹುವಿನ ಮೇಲೆ ಆಣೆಯಿಟ್ಟು 'ನಾವು ಇದಕ್ಕೆ (ಈ ಸತ್ಯವನ್ನು ಮರೆಮಾಚುವುದಕ್ಕೆ) ಬದಲಾಗಿ ಯಾವುದೇ ಶುಲ್ಕವನ್ನೂ ಪಡೆಯುವುದಿಲ್ಲ, ಅದು ನಿಕಟ ಸಂಬಂಧಿಕನಿಗೆ ಸೇರಿದ ವಿಷಯವಾಗಿದ್ದರೂ ಸರಿಯೇ. ಅಲ್ಲಾಹುವಿಗೋಸ್ಕರ ವಹಿಸಿದ ಸಾಕ್ಷ್ಯವನ್ನು ನಾವು ಮರೆಮಾಚುವುದಿಲ್ಲ, ನಾವೇನಾದರೂ ಹಾಗೆ ಮಾಡಿದರೆ ಖಂಡಿತವಾಗಿಯೂ ನಾವು ಪಾಪಿಗಳಲ್ಲಿ ಸೇರಿದವರಾಗುವೆವು.' (ಎಂದು ಹೇಳಲಿ).

فَإِنۡ عُثِرَ عَلَىٰٓ أَنَّهُمَا ٱسۡتَحَقَّآ إِثۡمٗا
فَـَٔاخَرَانِ يَقُومَانِ مَقَامَهُمَا مِنَ ٱلَّذِينَ
ٱسۡتَحَقَّ عَلَيۡهِمُ ٱلۡأَوۡلَيَٰنِ فَيُقۡسِمَانِ
بِٱللَّهِ لَشَهَٰدَتُنَآ أَحَقُّ مِن شَهَٰدَتِهِمَا وَمَا
ٱعۡتَدَيۡنَآ إِنَّآ إِذٗا لَّمِنَ ٱلظَّٰلِمِينَ ١٠٧

**107.** ಇನ್ನು ಅವರು (ಇಬ್ಬರು ಸಾಕ್ಷಿಗಳು) ಪಾಪಕ್ಕೆ ಪಾತ್ರರಾಗಿರುವರು ಎಂಬುದು ಸಾಬೀತಾದರೆ[2] ತಪ್ಪುಗೈದಿದ್ದು[3] ಯಾರ ವಿರುದ್ಧವಾಗಿತ್ತೋ ಅವರ ಪೈಕಿ (ಮೃತನೊಂದಿಗೆ) ಹೆಚ್ಚು ಆಪ್ತವಾಗಿರುವ ಬೇರೆ ಇಬ್ಬರು ಅವರ ಸ್ಥಾನದಲ್ಲಿ (ಸಾಕ್ಷಿಗಳಾಗಿ) ನಿಲ್ಲಲಿ. ತರುವಾಯ ಅವರಿಬ್ಬರೂ ಅಲ್ಲಾಹುವಿನ ಮೇಲೆ ಪ್ರಮಾಣ ಮಾಡಿ 'ಖಂಡಿತವಾಗಿಯೂ ಇವರ ಸಾಕ್ಷ್ಯಕ್ಕಿಂತಲೂ ಸತ್ಯಸಂಧವಾಗಿರುವುದು ನಮ್ಮ ಸಾಕ್ಷ್ಯವಾಗಿದೆ, ನಾವು ಯಾವುದೇ ಅತಿಕ್ರಮವನ್ನೂ ಮಾಡಿಲ್ಲ, ಹಾಗೆ ಮಾಡಿದ್ದರೆ ಖಂಡಿತವಾಗಿಯೂ

1 ಮುಸ್ಲಿಮರಾದ ಇಬ್ಬರು ಸಾಕ್ಷಿಗಳು ಸಿಗದಿದ್ದಲ್ಲಿ ಮುಸ್ಲಿಮೇತರರನ್ನು ವಸಿಯ್ಯತ್ತಿಗೆ ಸಾಕ್ಷಿಗಳನ್ನಾಗಿ ಮಾಡಬಹುದಾಗಿದೆ.

2 ವಸಿಯ್ಯತ್ತಿನ ಸಾಕ್ಷ್ಯವಹಿಸಿದವರು ನಕಲಿಯಾಗಿದ್ದಾರೆಂಬುದಕ್ಕೆ ಸ್ಪಷ್ಟವಾದ ಪುರಾವೆಯು ಲಭಿಸಿದರೆ ಅವರ ಸತ್ಯಸಂಧತೆಗೆ ವಿರುದ್ಧವಾಗಿ ಮೃತನಿಗೆ ಆಪ್ತರಾದ ಇಬ್ಬರು ವಾರೀಸುದಾರರು ಸಾಕ್ಷ್ಯವಹಿಸಬಹುದಾಗಿದೆ.

3 ನಕಲಿ ವಸಿಯ್ಯತ್ತಿನ ವಾದದಿಂದಾಗಿ ನಷ್ಟ ಹೊಂದುವವರು ನಿಯಮ ಪ್ರಕಾರ ವಾರೀಸುದಾರರಾಗಿರುವುದರಿಂದ ನಕಲಿ ವಸಿಯ್ಯತ್ತಿನ ಸಾಕ್ಷ್ಯವು ವಾರೀಸು ಹಕ್ಕುದಾರರ ವಿರುದ್ಧ ಮಾಡುವ ಅಪರಾಧವಾಗಿದೆ.

ನಾವು ಅಕ್ರಮಿಗಳಲ್ಲಿ ಸೇರಿದವರಾಗಿರುವೆವು' (ಎಂದು ಹೇಳಲಿ).

108. ಅವರು (ಸಾಕ್ಷಿಗಳು) ನ್ಯಾಯಬದ್ಧವಾಗಿ ಸಾಕ್ಷ್ಯವಹಿಸಲು ಇದು ಹೆಚ್ಚು ಸೂಕ್ತವಾಗಿದೆ. ಪ್ರಮಾಣ ಮಾಡಿದ ಬಳಿಕ (ವಾರೀಸುದಾರರಿಗೆ) ಪ್ರಮಾಣ ಮಾಡಲು ಅವಕಾಶ ನೀಡಲಾಗುವುದೆಂದು ಅವರಿಗೆ (ಸಾಕ್ಷಿಗಳಿಗೆ) ಭಯವುಂಟಾಗಲು (ಇದು ಹೆಚ್ಚು ಸಹಕಾರಿಯಾಗಿದೆ). ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು (ಅವನ ಆದೇಶಗಳನ್ನು) ಕಿವಿಗೊಟ್ಟು ಆಲಿಸಿರಿ. ಧಿಕ್ಕಾರಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

ذَٰلِكَ أَدۡنَىٰٓ أَن يَأۡتُواْ بِٱلشَّهَٰدَةِ عَلَىٰ وَجۡهِهَآ أَوۡ يَخَافُوٓاْ أَن تُرَدَّ أَيۡمَٰنُۢ بَعۡدَ أَيۡمَٰنِهِمۡۗ وَٱتَّقُواْ ٱللَّهَ وَٱسۡمَعُواْۗ وَٱللَّهُ لَا يَهۡدِي ٱلۡقَوۡمَ ٱلۡفَٰسِقِينَ ١٠٨

109. ಅಲ್ಲಾಹು ಸಂದೇಶವಾಹಕರನ್ನು ಒಟ್ಟುಗೂಡಿಸಿ 'ನಿಮಗೆ ಸಿಕ್ಕಿದ ಪ್ರತಿಕ್ರಿಯೆ ಏನು?' ಎಂದು ಪ್ರಶ್ನಿಸುವ ದಿನದಂದು ಅವರು ಹೇಳುವರು: 'ನಮಗೆ ಯಾವ ಅರಿವೂ ಇಲ್ಲ. ಅಗೋಚರ ವಿಷಯಗಳನ್ನು ಚೆನ್ನಾಗಿ ಅರಿಯುವವನು ನೀನೇ ಆಗಿರುವೆ.'

۞ يَوۡمَ يَجۡمَعُ ٱللَّهُ ٱلرُّسُلَ فَيَقُولُ مَاذَآ أُجِبۡتُمۡۖ قَالُواْ لَا عِلۡمَ لَنَآۖ إِنَّكَ أَنتَ عَلَّٰمُ ٱلۡغُيُوبِ ١٠٩

110. ಅಲ್ಲಾಹು (ಈಸಾರೊಂದಿಗೆ) ಹೇಳುವ ಸಂದರ್ಭ (ವನ್ನು ಗಮನಿಸಿರಿ). 'ಓ ಮರ್ಯಮ್‌ರ ಪುತ್ರ ಈಸಾ! ತೊಟ್ಟಿಲಿನಲ್ಲಿರುವಾಗಲೂ ಮಧ್ಯ ವಯಸ್ಕನಾಗಿರುವಾಗಲೂ ತಾವು ಜನರೊಂದಿಗೆ ಮಾತನಾಡುತ್ತಿದ್ದಾಗ ನಾನು ತಮಗೆ ಪವಿತ್ರಾತ್ಮನ ಮೂಲಕ ಬೆಂಬಲ ನೀಡಿದ ಸಂದರ್ಭದಲ್ಲೂ,(1) ಗ್ರಂಥ, ಜ್ಞಾನ, ತೌರಾತ್ ಮತ್ತು ಇಂಜೀಲನ್ನು ನಾನು ತಮಗೆ ಕಲಿಸಿಕೊಟ್ಟ ಸಂದರ್ಭದಲ್ಲೂ, ನನ್ನ ಅನುಮತಿ ಪ್ರಕಾರ ತಾವು ಜೇಡಿ ಮಣ್ಣಿನಿಂದ ಹಕ್ಕಿಯ

إِذۡ قَالَ ٱللَّهُ يَٰعِيسَى ٱبۡنَ مَرۡيَمَ ٱذۡكُرۡ نِعۡمَتِي عَلَيۡكَ وَعَلَىٰ وَٰلِدَتِكَ إِذۡ أَيَّدتُّكَ بِرُوحِ ٱلۡقُدُسِ تُكَلِّمُ ٱلنَّاسَ فِي ٱلۡمَهۡدِ وَكَهۡلٗاۖ وَإِذۡ عَلَّمۡتُكَ ٱلۡكِتَٰبَ وَٱلۡحِكۡمَةَ وَٱلتَّوۡرَىٰةَ وَٱلۡإِنجِيلَۖ وَإِذۡ تَخۡلُقُ مِنَ ٱلطِّينِ كَهَيۡـَٔةِ ٱلطَّيۡرِ بِإِذۡنِي فَتَنفُخُ فِيهَا فَتَكُونُ طَيۡرَۢا بِإِذۡنِيۖ وَتُبۡرِئُ ٱلۡأَكۡمَهَ وَٱلۡأَبۡرَصَ بِإِذۡنِيۖ وَإِذۡ تُخۡرِجُ ٱلۡمَوۡتَىٰ بِإِذۡنِيۖ وَإِذۡ كَفَفۡتُ بَنِيٓ إِسۡرَٰٓءِيلَ عَنكَ إِذۡ جِئۡتَهُم

1 ಯಹೂದರು ಈಸಾ(عَلَيۡهِ ٱلسَّلَامُ)ರನ್ನು ಜಾರಸಂತತಿಯಾಗಿ ಚಿತ್ರೀಕರಿಸಿದ್ದಕ್ಕೆ ಅವರು ತೊಟ್ಟಿಲಿನಲ್ಲಿ ಮಲಗಿರುವಾಗ ಪವಿತ್ರಾತ್ಮ (ಜಿಬ್ರೀಲ್ عَلَيۡهِ ٱلسَّلَامُ)ರ ಬೆಂಬಲದೊಂದಿಗೆ ಉತ್ತರ ನೀಡಿದ್ದರು. ಹಾಗೆಯೇ ಮಧ್ಯಪ್ರಾಯದಲ್ಲಿ ಪ್ರವಾದಿಯಾಗಿದ್ದಾಗ ಅವರು ಪವಿತ್ರಾತ್ಮನು ತಲುಪಿಸಿಕೊಡುತ್ತಿದ್ದ ದಿವ್ಯಸಂದೇಶದ ತಳಹದಿಯಲ್ಲಿ ಜನರೊಂದಿಗೆ ಮಾತನಾಡುತ್ತಿದ್ದರು.

بِٱلۡبَيِّنَٰتِ فَقَالَ ٱلَّذِينَ كَفَرُواْ مِنۡهُمۡ إِنۡ
هَٰذَآ إِلَّا سِحۡرٞ مُّبِينٞ ١١٠

ರೂಪವನ್ನು ಮಾಡಿ ತರುವಾಯ ಅದರಲ್ಲಿ ಊದುವಾಗ ನನ್ನ ಅನುಮತಿ ಪ್ರಕಾರ ಅದು ಹಕ್ಕಿಯಾಗಿ ಮಾರ್ಪಡುವ ಸಂದರ್ಭದಲ್ಲೂ, ನನ್ನ ಅನುಮತಿ ಪ್ರಕಾರ ತಾವು ಹುಟ್ಟು ಕುರುಡನನ್ನೂ ಕುಷ್ಠರೋಗಿಯನ್ನೂ ಗುಣಪಡಿಸುವ ಸಂದರ್ಭದಲ್ಲೂ, ನನ್ನ ಅನುಮತಿ ಪ್ರಕಾರ ತಾವು ಮರಣಹೊಂದಿದವರನ್ನು ಹೊರತರುವ ಸಂದರ್ಭದಲ್ಲೂ, ಇಸ್ರಾಈಲ್ ಸಂತತಿಗಳ ಬಳಿಗೆ ತಾವು ಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಹೋದಾಗ ಅವರ ಪೈಕಿ ಸತ್ಯನಿಷೇಧಿಗಳು ಇದು ಸ್ಪಷ್ಟವಾದ ಇಂದ್ರಜಾಲವಲ್ಲದೆ ಬೇರೇನೂ ಅಲ್ಲ ಎಂದು ಹೇಳುತ್ತಾ ತಮ್ಮನ್ನು ಆಪತ್ತಿನಲ್ಲಿ ಸಿಲುಕಿಸುವುದರಿಂದ ಅವರನ್ನು ನಾನು ತಡೆದ ಸಂದರ್ಭದಲ್ಲೂ ನಾನು ತಮಗೆ ಮತ್ತು ತಮ್ಮ ತಾಯಿಗೆ ಕರುಣಿಸಿದ ಅನುಗ್ರಹವನ್ನು ಸ್ಮರಿಸಿರಿ.'

وَإِذۡ أَوۡحَيۡتُ إِلَى ٱلۡحَوَارِيِّـۧنَ أَنۡ ءَامِنُواْ
بِي وَبِرَسُولِي قَالُوٓاْ ءَامَنَّا وَٱشۡهَدۡ بِأَنَّنَا
مُسۡلِمُونَ ١١١

**111.** 'ನೀವು ನನ್ನಲ್ಲಿ ಮತ್ತು ನನ್ನ ಸಂದೇಶವಾಹಕರಲ್ಲಿ ವಿಶ್ವಾಸವಿಡಿರಿ ಎಂದು ನಾನು ಹವಾರಿಗಳಿಗೆ[1] ಬೋಧನೆ ನೀಡಿದ ಸಂದರ್ಭದಲ್ಲೂ.' ಅವರು ಹೇಳಿದರು: 'ನಾವು ವಿಶ್ವಾಸವಿಟ್ಟಿರುವೆವು. ನಾವು ಮುಸ್ಲಿಮರಾಗಿರುವೆವೆಂಬುದಕ್ಕೆ ತಾವು ಸಾಕ್ಷ್ಯ ವಹಿಸಿರಿ.'

إِذۡ قَالَ ٱلۡحَوَارِيُّونَ يَٰعِيسَى ٱبۡنَ مَرۡيَمَ
هَلۡ يَسۡتَطِيعُ رَبُّكَ أَن يُنَزِّلَ عَلَيۡنَا مَآئِدَةٗ
مِّنَ ٱلسَّمَآءِۖ قَالَ ٱتَّقُواْ ٱللَّهَ إِن كُنتُم
مُّؤۡمِنِينَ ١١٢

**112.** ಹವಾರಿಗಳು ಹೇಳಿದ ಸಂದರ್ಭ (ವನ್ನು ಗಮನಿಸಿರಿ). 'ಓ ಮರ್ಯಮ್‌ರ ಪುತ್ರ ಈಸಾ! ಆಕಾಶದಿಂದ ನಮಗೋಸ್ಕರ ಒಂದು ಭಕ್ಷ್ಯ ಹರಿವಾಣವನ್ನು ಇಳಿಸಿಕೊಡಲು ತಮ್ಮ ರಬ್‌ಗೆ ಸಾಧ್ಯವೇ?' ಅವರು ಹೇಳಿದರು: 'ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹುವನ್ನು ಭಯಪಡಿರಿ.'

1 ಹವಾರಿಗಳು ಈಸಾ(عَلَيْهِ السَّلَامُ)ರವರ ಉತ್ತಮ ಶಿಷ್ಯರಾಗಿದ್ದರು.

113. ಅವರು ಹೇಳಿದರು: 'ನಮಗೆ ಅದರಿಂದ ತಿನ್ನಲು, ತನ್ನಿಮಿತ್ತ ನಮಗೆ ಮನಃಶಾಂತಿ ದೊರೆಯಲು, ತಾವು ನಮ್ಮೊಂದಿಗೆ ಹೇಳಿದ್ದು ಸತ್ಯವಾಗಿತ್ತೆಂದು ನಮಗೆ ಮನದಟ್ಟಾಗಲು ಮತ್ತು ನಾವು ಅದಕ್ಕೆ ಸಾಕ್ಷಿಗಳಾಗಲು ಬಯಸುತ್ತಿರುವೆವು.'

قَالُواْ نُرِيدُ أَن نَّأۡكُلَ مِنۡهَا وَتَطۡمَئِنَّ قُلُوبُنَا وَنَعۡلَمَ أَن قَدۡ صَدَقۡتَنَا وَنَكُونَ عَلَيۡهَا مِنَ ٱلشَّٰهِدِينَ ١١٣

114. ಮರ್ಯಮ್‌ರ ಪುತ್ರ ಈಸಾ ಹೇಳಿದರು: 'ಓ ಅಲ್ಲಾಹ್! ಓ ನಮ್ಮ ರಬ್! ನಮಗೆ ನೀನು ಆಕಾಶದಿಂದ ಒಂದು ಭಕ್ಷ್ಯ ಹರಿವಾಣವನ್ನು ಇಳಿಸಿಕೊಡು. ನಮಗೂ, ನಮ್ಮ ಪೈಕಿ ಮೊದಲಿನವರಿಗೂ ಮತ್ತು ಕೊನೆಯವರಿಗೂ ಅದೊಂದು ಹಬ್ಬವೂ ನಿನ್ನ ವತಿಯ ಒಂದು ದೃಷ್ಟಾಂತವೂ ಆಗಿರಲಿ. ನಮಗೆ ನೀನು ಅನ್ನಾಧಾರವನ್ನು ಕರುಣಿಸು. ಅನ್ನಾಧಾರವನ್ನು ಕರುಣಿಸುವವರಲ್ಲಿ ನೀನು ಅತ್ಯುತ್ತಮನಾಗಿರುವೆ.'

قَالَ عِيسَى ٱبۡنُ مَرۡيَمَ ٱللَّهُمَّ رَبَّنَآ أَنزِلۡ عَلَيۡنَا مَآئِدَةٗ مِّنَ ٱلسَّمَآءِ تَكُونُ لَنَا عِيدٗا لِّأَوَّلِنَا وَءَاخِرِنَا وَءَايَةٗ مِّنكَۖ وَٱرۡزُقۡنَا وَأَنتَ خَيۡرُ ٱلرَّٰزِقِينَ ١١٤

115. ಅಲ್ಲಾಹು ಹೇಳಿದನು: 'ನಾನು ನಿಮಗೆ ಅದನ್ನು ಖಂಡಿತವಾಗಿಯೂ ಇಳಿಸಿಕೊಡುವೆನು. ಆದರೆ ಅದರ ನಂತರವೂ ನಿಮ್ಮ ಪೈಕಿ ಯಾರು ಅವಿಶ್ವಾಸವಿಡುವನೋ ಅವನಿಗೆ ನಾನು ಜಗತ್ತಿನವರ ಪೈಕಿ ಯಾರಿಗೂ ನೀಡದ (ಕಠಿಣವಾದ) ಶಿಕ್ಷೆಯನ್ನು ನೀಡುವೆನು.'

قَالَ ٱللَّهُ إِنِّي مُنَزِّلُهَا عَلَيۡكُمۡۖ فَمَن يَكۡفُرۡ بَعۡدُ مِنكُمۡ فَإِنِّيٓ أُعَذِّبُهُۥ عَذَابٗا لَّآ أُعَذِّبُهُۥٓ أَحَدٗا مِّنَ ٱلۡعَٰلَمِينَ ١١٥

116. ಅಲ್ಲಾಹು ಹೇಳುವ ಸಂದರ್ಭ(ವನ್ನು ಗಮನಿಸಿರಿ): 'ಓ ಮರ್ಯಮ್‌ರ ಪುತ್ರ ಈಸಾ! ಅಲ್ಲಾಹುವಿನ ಹೊರತು ನನ್ನನ್ನು ಮತ್ತು ನನ್ನ ತಾಯಿಯನ್ನು ಆರಾಧ್ಯರನ್ನಾಗಿ ಮಾಡಿಕೊಳ್ಳಿರಿ ಎಂದು ತಾವು ಜನರೊಂದಿಗೆ ಹೇಳಿರುವಿರಾ?' ಅವರು ಹೇಳುವರು: 'ನೀನು ಪರಮ ಪಾವನನು. ನನಗೆ (ಹೇಳಲು) ಯಾವುದೇ ಹಕ್ಕಿಲ್ಲದ ಒಂದು ಮಾತನ್ನು ನಾನು ಹೇಳುವೆನೇ? ನಾನದನ್ನು ಹೇಳಿರುತ್ತಿದ್ದರೆ ಖಂಡಿತವಾಗಿಯೂ ನೀನು

وَإِذۡ قَالَ ٱللَّهُ يَٰعِيسَى ٱبۡنَ مَرۡيَمَ ءَأَنتَ قُلۡتَ لِلنَّاسِ ٱتَّخِذُونِي وَأُمِّيَ إِلَٰهَيۡنِ مِن دُونِ ٱللَّهِۖ قَالَ سُبۡحَٰنَكَ مَا يَكُونُ لِيٓ أَنۡ أَقُولَ مَا لَيۡسَ لِي بِحَقٍّۚ إِن كُنتُ قُلۡتُهُۥ فَقَدۡ عَلِمۡتَهُۥۚ تَعۡلَمُ مَا فِي نَفۡسِي وَلَآ أَعۡلَمُ مَا فِي نَفۡسِكَۚ إِنَّكَ أَنتَ عَلَّٰمُ ٱلۡغُيُوبِ ١١٦

ಅರಿತಿರುತ್ತಿದ್ದೆ. ನನ್ನ ಮನಸ್ಸಿನಲ್ಲಿರುವುದನ್ನು ನೀನು ಅರಿಯುವೆ. ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಅರಿಯಲಾರೆ. ಖಂಡಿತವಾಗಿಯೂ ನೀನು ಅಗೋಚರ ವಿಷಯಗಳನ್ನು ಅರಿಯುವವನಾಗಿರುವೆ.'

مَا قُلْتُ لَهُمْ إِلَّا مَآ أَمَرْتَنِى بِهِۦٓ أَنِ ٱعْبُدُوا۟ ٱللَّهَ رَبِّى وَرَبَّكُمْ ۚ وَكُنتُ عَلَيْهِمْ شَهِيدًا مَّا دُمْتُ فِيهِمْ ۖ فَلَمَّا تَوَفَّيْتَنِى كُنتَ أَنتَ ٱلرَّقِيبَ عَلَيْهِمْ ۚ وَأَنتَ عَلَىٰ كُلِّ شَىْءٍ شَهِيدٌ ﴿١١٧﴾

117. 'ನೀನು ನನ್ನೊಂದಿಗೆ ಆದೇಶಿಸಿರುವಂತೆ ನನ್ನ ಮತ್ತು ನಿಮ್ಮ ರಬ್ಬಾದ ಅಲ್ಲಾಹುವನ್ನು ಆರಾಧಿಸಿರಿ ಎಂಬುದರ ವಿನಾ ಬೇರೇನನ್ನೂ ನಾನು ಅವರೊಂದಿಗೆ ಹೇಳಿರಲಿಲ್ಲ. ನಾನು ಅವರೊಂದಿಗೆ ಇದ್ದಾಗಲೆಲ್ಲವೂ ನಾನು ಅವರ ಮೇಲೆ ಸಾಕ್ಷಿಯಾಗಿದ್ದೆ. ತರುವಾಯ ನೀನು ನನ್ನನ್ನು ಪೂರ್ಣವಾಗಿ ಎತ್ತಿದ ನಂತರ ಅವರ ಪರಿವೀಕ್ಷಕನು ನೀನೇ ಆಗಿದ್ದೆ. ನೀನು ಸರ್ವ ವಿಷಯಗಳ ಮೇಲೂ ಸಾಕ್ಷಿಯಾಗಿರುವೆ.'

إِن تُعَذِّبْهُمْ فَإِنَّهُمْ عِبَادُكَ ۖ وَإِن تَغْفِرْ لَهُمْ فَإِنَّكَ أَنتَ ٱلْعَزِيزُ ٱلْحَكِيمُ ﴿١١٨﴾

118. 'ನೀನು ಅವರನ್ನು ಶಿಕ್ಷಿಸುವುದಾದರೆ ಖಂಡಿತವಾಗಿಯೂ ಅವರು ನಿನ್ನ ದಾಸರಾಗಿರುವರು. ನೀನು ಅವರಿಗೆ ಕ್ಷಮೆ ನೀಡುವುದಾದರೆ ಖಂಡಿತವಾಗಿಯೂ ನೀನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವೆ.'

قَالَ ٱللَّهُ هَٰذَا يَوْمُ يَنفَعُ ٱلصَّٰدِقِينَ صِدْقُهُمْ ۚ لَهُمْ جَنَّٰتٌ تَجْرِى مِن تَحْتِهَا ٱلْأَنْهَٰرُ خَٰلِدِينَ فِيهَآ أَبَدًا ۖ رَّضِىَ ٱللَّهُ عَنْهُمْ وَرَضُوا۟ عَنْهُ ۚ ذَٰلِكَ ٱلْفَوْزُ ٱلْعَظِيمُ ﴿١١٩﴾

119. ಅಲ್ಲಾಹು ಹೇಳುವನು: 'ಈ ದಿನವು ಸತ್ಯಸಂಧರಿಗೆ ಅವರ ಸತ್ಯಸಂಧತೆಯು ಪ್ರಯೋಜನವಾಗುವ ದಿನವಾಗಿದೆ. ಅವರಿಗೆ ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅಲ್ಲಾಹು ಅವರ ಬಗ್ಗೆ ಸಂತೃಪ್ತನಾಗಿರುವನು ಮತ್ತು ಅಲ್ಲಾಹುವಿನ ಬಗ್ಗೆ ಅವರೂ ಸಂತೃಪ್ತರಾಗಿ ರುವರು. ಇದೇ ಮಹಾ ವಿಜಯವಾಗಿದೆ.'

لِلَّهِ مُلْكُ ٱلسَّمَٰوَٰتِ وَٱلْأَرْضِ وَمَا فِيهِنَّ ۚ وَهُوَ عَلَىٰ كُلِّ شَىْءٍ قَدِيرٌۢ ﴿١٢٠﴾

120. ಆಕಾಶಗಳಲ್ಲಿ, ಭೂಮಿಯಲ್ಲಿ ಮತ್ತು ಅವುಗಳಲ್ಲಿರುವುದರ ಆಧಿಪತ್ಯವು ಅಲ್ಲಾಹುವಿಗಾಗಿದೆ. ಅವನು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

## ಅಲ್‌ಅನ್‌ಆಮ್ (ಜಾನುವಾರುಗಳು)[1]

## سُورَةُ الأَنۡعَامِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 165

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿರುವ ಮತ್ತು ಅಂಧಕಾರಗಳನ್ನೂ ಪ್ರಕಾಶವನ್ನೂ ಉಂಟು ಮಾಡಿರುವ ಅಲ್ಲಾಹುವಿಗೆ ಸ್ತುತಿ.[2] ಆದರೂ ಸತ್ಯನಿಷೇಧಿಗಳು ತಮ್ಮ ರಬ್‌ನೊಂದಿಗೆ ಸಮಾನರನ್ನು ಕಲ್ಪಿಸುತ್ತಿರುವರು.

ٱلۡحَمۡدُ لِلَّهِ ٱلَّذِي خَلَقَ ٱلسَّمَٰوَٰتِ
وَٱلۡأَرۡضَ وَجَعَلَ ٱلظُّلُمَٰتِ وَٱلنُّورَۖ ثُمَّ
ٱلَّذِينَ كَفَرُواْ بِرَبِّهِمۡ يَعۡدِلُونَ ١

2. ನಿಮ್ಮನ್ನು ಜೇಡಿ ಮಣ್ಣಿನಿಂದ ಸೃಷ್ಟಿಸಿದವನು ಅವನೇ ಆಗಿರುವನು. ತರುವಾಯ ಅವನು ಒಂದು ಅವಧಿಯನ್ನು ನಿಶ್ಚಯಿಸಿದನು. ಅವನ ಬಳಿ ನಿಶ್ಚಿತವಾದ ಇನ್ನೊಂದು ಅವಧಿಯೂ ಇದೆ. ಹೀಗಿದ್ದೂ ನೀವು ಸಂದೇಹಪಡುತ್ತಿರುವಿರಿ.

هُوَ ٱلَّذِي خَلَقَكُم مِّن طِينٖ ثُمَّ قَضَىٰٓ
أَجَلٗاۖ وَأَجَلٞ مُّسَمًّى عِندَهُۥۖ ثُمَّ أَنتُمۡ
تَمۡتَرُونَ ٢

3. ಆಕಾಶಗಳಲ್ಲೂ ಭೂಮಿಯಲ್ಲೂ (ಆರಾಧಿಸಬೇಕಾದ) ಅಲ್ಲಾಹು ಅವನೇ ಆಗಿರುವನು. ನಿಮ್ಮ ರಹಸ್ಯವನ್ನೂ ಬಹಿರಂಗವನ್ನೂ ಅವನು ಅರಿಯುವನು ಮತ್ತು ನೀವು ಸಂಪಾದಿಸುತ್ತಿರುವುದನ್ನೂ ಅವನು ಅರಿಯುವನು.

وَهُوَ ٱللَّهُ فِي ٱلسَّمَٰوَٰتِ وَفِي ٱلۡأَرۡضِ
يَعۡلَمُ سِرَّكُمۡ وَجَهۡرَكُمۡ وَيَعۡلَمُ مَا
تَكۡسِبُونَ ٣

---

1 ಮನುಷ್ಯರ ಸೇವೆಗಾಗಿ ಮತ್ತು ಅವರ ಆಹಾರಕ್ಕಾಗಿ ಅಲ್ಲಾಹು ಸೃಷ್ಟಿಸಿದ ಜಾನುವಾರುಗಳ ವಿಷಯದಲ್ಲಿ ಇಸ್ಲಾಮಿನ ದೃಷ್ಟಿಕೋನ ಮತ್ತು ವಿಗ್ರಹಾರಾಧಕರ ದೃಷ್ಟಿಕೋನಗಳನ್ನು ತುಲನೆ ಮಾಡುವ ಸೂಕ್ತಿಗಳು ಈ ಅಧ್ಯಾಯದಲ್ಲಿರುವುದರಿಂದ ಇದಕ್ಕೆ ಅಲ್‌ಅನ್‌ಆಮ್ (ಜಾನುವಾರುಗಳು) ಎಂಬ ಹೆಸರು ಬಂದಿದೆ.

2 ಆಕಾಶಗಳಿಗೆ ಮತ್ತು ಭೂಮಿಗೆ ಬೇರೆ ಬೇರೆ ಸೃಷ್ಟಿಕರ್ತರನ್ನು ಪರಿಕಲ್ಪಿಸಿ ಆರಾಧಿಸುವ ಜನರಿದ್ದಾರೆ. ಅಂಧಕಾರಗಳು ಭೂತಗಳ ಸೃಷ್ಟಿಯಾಗಿದೆ ಮತ್ತು ಪ್ರಕಾಶವು ದೇವರ ಸೃಷ್ಟಿಯಾಗಿದೆಯೆಂದು ಅವರು ನಂಬುತ್ತಾರೆ. ಅವೆಲ್ಲವನ್ನೂ ನಿಷೇಧಿಸುತ್ತಾ ಜಗತ್ತಿನ ಸರ್ವ ವಸ್ತುಗಳನ್ನು ಮತ್ತು ವಿದ್ಯಮಾನಗಳನ್ನು ಸೃಷ್ಟಿಸಿರುವುದು ಅಲ್ಲಾಹು ಮಾತ್ರವಾಗಿರುವನು ಎಂದು ಈ ಸೂಕ್ತಿ ಸ್ಪಷ್ಟಪಡಿಸುತ್ತದೆ.

**4.** ಅವರ ರಬ್‌ನ ದೃಷ್ಟಾಂತಗಳಲ್ಲಿ ಸೇರಿದ ಯಾವುದೇ ದೃಷ್ಟಾಂತವು ಅವರ ಬಳಿಗೆ ಬಂದಾಗಲೂ ಅವರು ಅದರಿಂದ ವಿಮುಖರಾಗುತ್ತಲೇ ಇರುವರು.

وَمَا تَأۡتِيهِم مِّنۡ ءَايَةٖ مِّنۡ ءَايَٰتِ رَبِّهِمۡ إِلَّا
كَانُواْ عَنۡهَا مُعۡرِضِينَ ٤

**5.** ಖಂಡಿತವಾಗಿಯೂ ಸತ್ಯವು ಅವರೆಡೆಗೆ ಬಂದಾಗ ಅವರು ಅದನ್ನು ನಿಷೇಧಿಸಿದರು. ಆದರೆ ಅವರು ಯಾವುದನ್ನು ಗೇಲಿ ಮಾಡುತ್ತಿದ್ದರೋ ಅದರ ವೃತ್ತಾಂತಗಳು ತರುವಾಯ ಅವರ ಬಳಿಗೆ ಬರಲಿವೆ.

فَقَدۡ كَذَّبُواْ بِٱلۡحَقِّ لَمَّا جَآءَهُمۡ
فَسَوۡفَ يَأۡتِيهِمۡ أَنۢبَـٰٓؤُاْ مَا كَانُواْ بِهِۦ
يَسۡتَهۡزِءُونَ ٥

**6.** ಅವರಿಗಿಂತ ಮುಂಚಿನ ಎಷ್ಟು ತಲೆಮಾರುಗಳನ್ನು ನಾವು ನಾಶ ಮಾಡಿರುವೆವು ಎಂಬುದನ್ನು ಅವರು ಕಾಣಲಿಲ್ಲವೇ? ನಿಮಗೆ ನಾವು ಮಾಡಿಕೊಡದಂತಹ ಸೌಲಭ್ಯಗಳನ್ನು ಅವರಿಗೆ ಭೂಮಿಯಲ್ಲಿ ಮಾಡಿಕೊಟ್ಟಿದ್ದೆವು. ನಾವು ಅವರಿಗೆ ಯಥೇಷ್ಟವಾಗಿ ಮಳೆಯನ್ನು ಸುರಿಸಿ ಕೊಟ್ಟೆವು ಮತ್ತು ನದಿಗಳನ್ನು ಅವರ ತಳಭಾಗದಿಂದ ಹರಿಯುವಂತೆ ಮಾಡಿದ್ದೆವು. ತರುವಾಯ ಅವರ ಪಾಪಗಳ ನಿಮಿತ್ತ ನಾವು ಅವರನ್ನು ನಾಶಮಾಡಿದೆವು. ಅವರ ನಂತರ ಬೇರೊಂದು ತಲೆಮಾರನ್ನು ಸೃಷ್ಟಿಸಿದೆವು.

أَلَمۡ يَرَوۡاْ كَمۡ أَهۡلَكۡنَا مِن قَبۡلِهِم مِّن
قَرۡنٖ مَّكَّنَّـٰهُمۡ فِي ٱلۡأَرۡضِ مَا لَمۡ نُمَكِّن
لَّكُمۡ وَأَرۡسَلۡنَا ٱلسَّمَآءَ عَلَيۡهِم مِّدۡرَارٗا
وَجَعَلۡنَا ٱلۡأَنۡهَٰرَ تَجۡرِي مِن تَحۡتِهِمۡ
فَأَهۡلَكۡنَٰهُم بِذُنُوبِهِمۡ وَأَنشَأۡنَا مِنۢ بَعۡدِهِمۡ
قَرۡنًا ءَاخَرِينَ ٦

**7.** (ಓ ಪ್ರವಾದಿಯವರೇ!) ಕಾಗದದಲ್ಲಿ ಬರೆದಿರುವ ಒಂದು ಗ್ರಂಥವನ್ನು ನಾವು ತಮಗೆ ಇಳಿಸಿಕೊಟ್ಟು, ನಂತರ ಅವರು ಅದನ್ನು ಸ್ವತಃ ತಮ್ಮ ಕೈಗಳಿಂದ ಸ್ಪರ್ಶಿಸಿ ನೋಡಿದರೂ 'ಇದು ಸ್ಪಷ್ಟವಾದ ಇಂದ್ರಜಾಲವಲ್ಲದೆ ಇನ್ನೇನೂ ಅಲ್ಲ' ಎಂದು ಸತ್ಯನಿಷೇಧಿಗಳು ಹೇಳುವರು.

وَلَوۡ نَزَّلۡنَا عَلَيۡكَ كِتَٰبٗا فِي قِرۡطَاسٖ
فَلَمَسُوهُ بِأَيۡدِيهِمۡ لَقَالَ ٱلَّذِينَ كَفَرُوٓاْ إِنۡ
هَٰذَآ إِلَّا سِحۡرٞ مُّبِينٞ ٧

**8.** 'ಅವರೊಂದಿಗೆ (ಪ್ರವಾದಿಯವರೊಂದಿಗೆ) ಒಬ್ಬ ಮಲಕ್‌ನನ್ನು ಏಕೆ ಇಳಿಸಲಾಗಿಲ್ಲ?' ಎಂದು ಅವರು ಹೇಳಿದರು. ಆದರೆ ನಾವು ಮಲಕನ್ನು ಇಳಿಸಿರುತ್ತಿದ್ದರೆ ವಿಷಯವು (ಅಂತಿಮವಾಗಿ) ತೀರ್ಮಾನಿಸಲಾಗುತ್ತಿತ್ತು.

وَقَالُواْ لَوۡلَآ أُنزِلَ عَلَيۡهِ مَلَكٞۖ وَلَوۡ أَنزَلۡنَا
مَلَكٗا لَّقُضِيَ ٱلۡأَمۡرُ ثُمَّ لَا يُنظَرُونَ ٨

ತರುವಾಯ ಅವರಿಗೆ ಕಾಲಾವಕಾಶವನ್ನು ದೀರ್ಘಗೊಳಿಸಲಾಗುತ್ತಿರಲಿಲ್ಲ.

**9.** ನಾವು ಓರ್ವ ಮಲಕನ್ನು (ಸಂದೇಶವಾಹಕನನ್ನಾಗಿ) ನಿಶ್ಚಯಿಸುವುದಾದರೂ ಆ ಮಲಕನ್ನು ನಾವು ಮನುಷ್ಯನನ್ನಾಗಿಯೇ ಮಾಡುತ್ತಿದ್ದೆವು[1] ಮತ್ತು ಅವರು (ಇಂದು) ಗೊಂದಲಗೊಳಿಸುತ್ತಿರುವ ವಿಷಯದಲ್ಲಿ ನಾವು (ಆಗಲೂ) ಅವರಿಗೆ ಸಂಶಯವನ್ನುಂಟುಮಾಡುವೆವು.

وَلَوۡ جَعَلۡنَٰهُ مَلَكٗا لَّجَعَلۡنَٰهُ رَجُلٗا وَلَلَبَسۡنَا عَلَيۡهِم مَّا يَلۡبِسُونَ ٩

**10.** ತಮಗಿಂತ ಮುಂಚೆ ಅನೇಕ ಸಂದೇಶವಾಹಕರು ಅಪಹಾಸ್ಯಕ್ಕೀಡಾಗಿರುವರು. ತರುವಾಯ ಅವರನ್ನು ಗೇಲಿ ಮಾಡುತ್ತಿದ್ದವರಿಗೆ ಅವರು ಏನೆಲ್ಲ ಅಪಹಾಸ್ಯ ಮಾಡುತ್ತಿದ್ದರೋ ಅವೆಲ್ಲವೂ ಆವರಿಸಿಯೇ ಬಿಟ್ಟವು.

وَلَقَدِ ٱسۡتُهۡزِئَ بِرُسُلٖ مِّن قَبۡلِكَ فَحَاقَ بِٱلَّذِينَ سَخِرُواْ مِنۡهُم مَّا كَانُواْ بِهِۦ يَسۡتَهۡزِءُونَ ١٠

**11.** (ಓ ಪ್ರವಾದಿಯವರೇ!) ಹೇಳಿರಿ: 'ನೀವು ಭೂಮಿಯಲ್ಲಿ ಸಂಚರಿಸಿರಿ. ತರುವಾಯ ಸತ್ಯನಿಷೇಧಿಗಳ ಅಂತ್ಯವು ಹೇಗಿತ್ತೆಂಬುದನ್ನು ನೋಡಿರಿ.'

قُلۡ سِيرُواْ فِي ٱلۡأَرۡضِ ثُمَّ ٱنظُرُواْ كَيۡفَ كَانَ عَٰقِبَةُ ٱلۡمُكَذِّبِينَ ١١

**12.** ತಾವು ಕೇಳಿರಿ: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಯಾರದ್ದು?' ಹೇಳಿರಿ: 'ಅಲ್ಲಾಹುವಿನದ್ದು.' ಅವನು ಸ್ವತಃ ತನ್ನ ಮೇಲೆ ಕಾರುಣ್ಯವನ್ನು (ಬಾಧ್ಯತೆಯಾಗಿ) ವಿಧಿಸಿರುವನು. ಪುನರುತ್ಥಾನದ ದಿನದೆಡೆಗೆ ಖಂಡಿತವಾಗಿಯೂ ಅವನು ನಿಮ್ಮನ್ನು ಒಟ್ಟುಗೂಡಿಸುವನು. ಅದರಲ್ಲಿ ಸಂದೇಹವೇ ಇಲ್ಲ.[2] ಆದರೆ ಯಾರು ಸ್ವತಃ ತಮ್ಮನ್ನೇ

قُل لِّمَن مَّا فِي ٱلسَّمَٰوَٰتِ وَٱلۡأَرۡضِۖ قُل لِّلَّهِۚ كَتَبَ عَلَىٰ نَفۡسِهِ ٱلرَّحۡمَةَۚ لَيَجۡمَعَنَّكُمۡ إِلَىٰ يَوۡمِ ٱلۡقِيَٰمَةِ لَا رَيۡبَ فِيهِۚ ٱلَّذِينَ خَسِرُوٓاْ أَنفُسَهُمۡ فَهُمۡ لَا يُؤۡمِنُونَ ١٢

1 ಮನುಷ್ಯರೆಡೆಗೆ ಓರ್ವ ಮಲಕನ್ನು ಸಂದೇಶವಾಹಕನನ್ನಾಗಿ ನಿಯೋಗಿಸುವುದಾದರೆ ಆ ಮಲಕನ್ನು ಮನುಷ್ಯ ರೂಪದಲ್ಲೇ ನಿಯೋಗಿಸಬೇಕಾಗಿದೆ. ಆಗಲೂ ಆ ಸಂದೇಶವಾಹಕನ ಅಸ್ತಿತ್ವ ಮತ್ತು ವಿಶ್ವಾಸಾರ್ಹತೆಯ ಕುರಿತು ಗೊಂದಲವನ್ನುಂಟುಮಾಡಲು ಅವರಿಗೆ ಸಾಧ್ಯವಾಗುತ್ತಿತ್ತು.

2 ಮನುಷ್ಯರಿಗೆ ಅವರ ಕರ್ಮಗಳಿಗನುಗುಣವಾಗಿ ಪ್ರತಿಫಲ ನೀಡಲು ಇಹಲೋಕವು ಪರ್ಯಾಪ್ತವಲ್ಲ. ಒಬ್ಬನನ್ನು ಕೊಂದವನಿಗೂ ಸಾವಿರ ಜನರನ್ನು ಕೊಂದವನಿಗೂ ಇಲ್ಲಿ ನೀಡಲಾಗುವ ಗರಿಷ್ಠ ಶಿಕ್ಷೆಯು ಒಮ್ಮೆ ಗಲ್ಲಿಗೇರಿಸುವುದಾಗಿದೆ. ಆದ್ದರಿಂದ ಸರ್ವ ಮನುಷ್ಯರನ್ನೂ ಶಾಶ್ವತವಾದ ಒಂದು ಲೋಕದಲ್ಲಿ ಶಾಶ್ವತವಾದ

ನಷ್ಟಕ್ಕೀಡು ಮಾಡಿರುವವರೋ ಅವರು ವಿಶ್ವಾಸವಿಡಲಾರರು.

13. ರಾತ್ರಿಯಲ್ಲಿ ಮತ್ತು ಹಗಲಿನಲ್ಲಿ ಒಳಗೊಂಡಿರುವುದೆಲ್ಲವೂ ಅವನದ್ದಾಗಿವೆ. ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

۞ وَلَهُۥ مَا سَكَنَ فِي ٱلَّيۡلِ وَٱلنَّهَارِۚ وَهُوَ ٱلسَّمِيعُ ٱلۡعَلِيمُ ١٣

14. ಹೇಳಿರಿ: 'ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾಗಿರುವ ಅಲ್ಲಾಹುವಿನ ಹೊರತು ಅನ್ಯರನ್ನು ನಾನು ರಕ್ಷಕನಾಗಿ ಮಾಡಿಕೊಳ್ಳುವುದೇ? ಅವನು ಆಹಾರ ಉಣಿಸುವವನಾಗಿರುವನು. ಆದರೆ ಉಣಿಸಲ್ಪಡುವವನಲ್ಲ.' ಹೇಳಿರಿ: 'ಖಂಡಿತವಾಗಿಯೂ ಅಲ್ಲಾಹುವಿಗೆ ಶರಣಾರಾದವರ ಪೈಕಿ ಮೊದಲಿಗನಾಗಬೇಕೆಂದು ನನ್ನೊಂದಿಗೆ ಆಜ್ಞಾಪಿಸಲಾಗಿದೆ.' ತಾವು ಎಂದಿಗೂ ಬಹುದೇವಾರಾಧಕರಲ್ಲಿ ಸೇರಿದವರಾಗದಿರಿ.

قُلۡ أَغَيۡرَ ٱللَّهِ أَتَّخِذُ وَلِيّٗا فَاطِرِ ٱلسَّمَٰوَٰتِ وَٱلۡأَرۡضِ وَهُوَ يُطۡعِمُ وَلَا يُطۡعَمُۗ قُلۡ إِنِّيٓ أُمِرۡتُ أَنۡ أَكُونَ أَوَّلَ مَنۡ أَسۡلَمَۖ وَلَا تَكُونَنَّ مِنَ ٱلۡمُشۡرِكِينَ ١٤

15. ಹೇಳಿರಿ: 'ನಾನು ನನ್ನ ರಬ್‌ನೊಂದಿಗೆ ಅವಿಧೇಯತೆ ತೋರುವುದಾದರೆ ಭಯಾನಕವಾದ ದಿನವೊಂದರ ಶಿಕ್ಷೆಯ ಕುರಿತು ಖಂಡಿತವಾಗಿಯೂ ನಾನು ಭಯಪಡುತ್ತಿರುವೆನು.'

قُلۡ إِنِّيٓ أَخَافُ إِنۡ عَصَيۡتُ رَبِّي عَذَابَ يَوۡمٍ عَظِيمٖ ١٥

16. ಆ ದಿನದಂದು ಯಾರನ್ನು ಅದರಿಂದ (ಶಿಕ್ಷೆಯಿಂದ) ಸರಿಸಿಬಿಡಲಾಗುವುದೋ ಅವನ ಮೇಲೆ ಖಂಡಿತವಾಗಿಯೂ ಅಲ್ಲಾಹು ಕರುಣೆ ತೋರಿರುವನು. ಅದೇ ಸ್ಪಷ್ಟವಾದ ವಿಜಯವಾಗಿದೆ.

مَّن يُصۡرَفۡ عَنۡهُ يَوۡمَئِذٖ فَقَدۡ رَحِمَهُۥۚ وَذَٰلِكَ ٱلۡفَوۡزُ ٱلۡمُبِينُ ١٦

17. (ಓ ಪ್ರವಾದಿಯವರೇ!) ಅಲ್ಲಾಹು ತಮಗೆ ಏನಾದರೂ ಹಾನಿಯುಂಟು ಮಾಡುವುದಾದರೆ

وَإِن يَمۡسَسۡكَ ٱللَّهُ بِضُرّٖ فَلَا كَاشِفَ لَهُۥٓ

ಒಂದು ದಿನದಂದು ಒಟ್ಟುಗೂಡಿಸುವೆನೆಂದು ಅಲ್ಲಾಹು ವಾಗ್ದಾನವಿತ್ತಿರುವನು. ಅಂದು ಅವರ ಕರ್ಮಫಲಗಳಿಗೆ ಅನುಗುಣವಾಗಿ ಶಾಶ್ವತ ಶಿಕ್ಷೆಯನ್ನು ಅಥವಾ ಶಾಶ್ವತ ರಕ್ಷೆಯನ್ನು ಅವನು ನೀಡುವನು. ಅದು ಅವನ ಅಪಾರವಾದ ಕಾರುಣ್ಯದ ನಿಮಿತ್ತವಾಗಿದೆ.

ಅದನ್ನು ಸರಿಸಿಬಿಡಲು ಅವನಲ್ಲದೆ ಇನ್ನಾರೂ ಇರಲಾರರು. ಅವನು ತಮಗೆ ಏನಾದರೂ ಒಳಿತನ್ನುಂಟು ಮಾಡುವುದಾದರೆ ಅವನು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

إِلَّا هُوَۖ وَإِن يَمۡسَسۡكَ بِخَيۡرٖ فَهُوَ عَلَىٰ كُلِّ شَيۡءٖ قَدِيرٞ ١٧

18. ಅವನು ತನ್ನ ದಾಸರ ಮೇಲೆ ಪರಮಾಧಿಕಾರವುಳ್ಳವನಾಗಿರುವನು. ಅವನು ಯುಕ್ತಿಪೂರ್ಣನೂ ಸೂಕ್ಷ್ಮಜ್ಞಾನಿಯೂ ಆಗಿರುವನು.

وَهُوَ ٱلۡقَاهِرُ فَوۡقَ عِبَادِهِۦۚ وَهُوَ ٱلۡحَكِيمُ ٱلۡخَبِيرُ ١٨

19. (ಓ ಪ್ರವಾದಿಯವರೇ!) ಕೇಳಿರಿ: 'ಸಾಕ್ಷ್ಯಗಳ ಪೈಕಿ ಹಿರಿಯ ಸಾಕ್ಷ್ಯ ಯಾವುದು?' ಹೇಳಿರಿ: 'ನನ್ನ ಮತ್ತು ನಿಮ್ಮ ನಡುವೆ ಅಲ್ಲಾಹು ಸಾಕ್ಷಿಯಾಗಿರುವನು. ಈ ಕುರ್‌ಆನನ್ನು ನನಗೆ ದಿವ್ಯಸಂದೇಶವಾಗಿ ನೀಡಲಾಗಿರುವುದು ಇದರ ಮೂಲಕ ನಿಮಗೆ ಮತ್ತು ಇದು (ಇದರ ಸಂದೇಶವು) ತಲುಪುವ ಸರ್ವರಿಗೂ ನಾನು ಮುನ್ನೆಚ್ಚರಿಕೆ ನೀಡುವ ಸಲುವಾಗಿದೆ. ಅಲ್ಲಾಹುವಿನೊಂದಿಗೆ ಬೇರೆ ಆರಾಧ್ಯರಿರುವರೆಂದು ನಿಜವಾಗಿಯೂ ನೀವು ಸಾಕ್ಷ್ಯವಹಿಸುವಿರಾ?' ಹೇಳಿರಿ: 'ನಾನು ಸಾಕ್ಷ್ಯವಹಿಸಲಾರೆ' ಹೇಳಿರಿ: 'ಏಕಮೇವ ಆರಾಧ್ಯನು ಅವನು ಮಾತ್ರವಾಗಿರುವನು. ನೀವು (ಅವನೊಂದಿಗೆ) ಏನನ್ನು ಸಹಭಾಗಿಯಾಗಿ ಮಾಡುತ್ತಿರುವಿರೋ ಅದರೊಂದಿಗೆ ನನಗೆ ಯಾವುದೇ ಸಂಬಂಧವೂ ಇಲ್ಲ.'

قُلۡ أَيُّ شَيۡءٍ أَكۡبَرُ شَهَٰدَةٗۖ قُلِ ٱللَّهُۖ شَهِيدُۢ بَيۡنِي وَبَيۡنَكُمۡۚ وَأُوحِيَ إِلَيَّ هَٰذَا ٱلۡقُرۡءَانُ لِأُنذِرَكُم بِهِۦ وَمَنۢ بَلَغَۚ أَئِنَّكُمۡ لَتَشۡهَدُونَ أَنَّ مَعَ ٱللَّهِ ءَالِهَةً أُخۡرَىٰۚ قُل لَّآ أَشۡهَدُۚ قُلۡ إِنَّمَا هُوَ إِلَٰهٞ وَٰحِدٞ وَإِنَّنِي بَرِيٓءٞ مِّمَّا تُشۡرِكُونَ ١٩

20. ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ತಮ್ಮ ಮಕ್ಕಳನ್ನು ಅರಿಯುವಂತೆ ಅವರನ್ನು (ಪ್ರವಾದಿಯನ್ನು) ಅರಿಯುತ್ತಿರುವರು. ಸ್ವತಃ ತಮ್ಮನ್ನೇ ನಷ್ಟಕ್ಕೀಡು ಮಾಡಿದವರಾರೋ ಅವರು ವಿಶ್ವಾಸವಿಡಲಾರರು.

ٱلَّذِينَ ءَاتَيۡنَٰهُمُ ٱلۡكِتَٰبَ يَعۡرِفُونَهُۥ كَمَا يَعۡرِفُونَ أَبۡنَآءَهُمُۘ ٱلَّذِينَ خَسِرُوٓاْ أَنفُسَهُمۡ فَهُمۡ لَا يُؤۡمِنُونَ ٢٠

21. ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದವನಿಗಿಂತ ಅಥವಾ ಅವನ

وَمَنۡ أَظۡلَمُ مِمَّنِ ٱفۡتَرَىٰ عَلَى ٱللَّهِ كَذِبًا

ದೃಷ್ಟಾಂತಗಳನ್ನು ತಿರಸ್ಕರಿಸಿದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಖಂಡಿತವಾಗಿಯೂ ಅಕ್ರಮಿಗಳು ಯಶಸ್ವಿಯಾಗಲಾರರು.

أَوْ كَذَّبَ بِـَٔايَـٰتِهِۦٓ ۗ إِنَّهُۥ لَا يُفْلِحُ ٱلظَّـٰلِمُونَ ﴿٢١﴾

**22.** ನಾವು ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ (ವನ್ನು ಸ್ಮರಿಸಿರಿ). ತರುವಾಯ ನಾವು ಬಹುದೇವಾರಾಧಕರೊಂದಿಗೆ ಕೇಳುವೆವು: 'ನೀವು ವಾದಿಸುತ್ತಿದ್ದ ನಿಮ್ಮ ವತಿಯ ಆ ಸಹಭಾಗಿಗಳು ಎಲ್ಲಿರುವರು?'

وَيَوْمَ نَحْشُرُهُمْ جَمِيعًا ثُمَّ نَقُولُ لِلَّذِينَ أَشْرَكُوٓا۟ أَيْنَ شُرَكَآؤُكُمُ ٱلَّذِينَ كُنتُمْ تَزْعُمُونَ ﴿٢٢﴾

**23.** ತರುವಾಯ ಅವರ ಗತಿಗೇಡು 'ನಮ್ಮ ರಬ್ ಅಲ್ಲಾಹುವಿನ ಮೇಲಾಣೆ! ನಾವು ಸಹಭಾಗಿತ್ವ ಮಾಡುವವರಾಗಿರಲಿಲ್ಲ' ಎಂದು ಹೇಳುವುದರ ವಿನಾ ಇನ್ನೇನೂ ಆಗಿರದು.

ثُمَّ لَمْ تَكُن فِتْنَتُهُمْ إِلَّآ أَن قَالُوا۟ وَٱللَّهِ رَبِّنَا مَا كُنَّا مُشْرِكِينَ ﴿٢٣﴾

**24.** ಅವರು ಸ್ವತಃ ತಮ್ಮ ಮೇಲೆಯೇ ಹೇಗೆ ಸುಳ್ಳು ಹೇಳಿರುವರೆಂಬುದನ್ನು ನೋಡಿರಿ. ಅವರು ಯಾವುದನ್ನು ಹೆಣೆದಿದ್ದರೋ ಅದು ಅವರ ಪ್ರಯೋಜನಕ್ಕೆ ಬರಲೇ ಇಲ್ಲ.

ٱنظُرْ كَيْفَ كَذَبُوا۟ عَلَىٰٓ أَنفُسِهِمْ ۚ وَضَلَّ عَنْهُم مَّا كَانُوا۟ يَفْتَرُونَ ﴿٢٤﴾

**25.** ತಾವು ಹೇಳುವುದನ್ನು ಗಮನವಿಟ್ಟು ಆಲಿಸುವ ಕೆಲವರು ಅವರಲ್ಲಿರುವರು. ಆದರೆ ಅವರು ಅದನ್ನು ಗ್ರಹಿಸದಂತೆ ನಾವು ಅವರ ಹೃದಯಗಳ ಮೇಲೆ ಮುಚ್ಚಳಗಳನ್ನಿಟ್ಟಿರುವೆವು ಮತ್ತು ಅವರ ಕಿವಿಗಳಲ್ಲಿ ಬಿರಟೆಯನ್ನಿಟ್ಟಿರುವೆವು. ಅವರು ಸರ್ವ ದೃಷ್ಟಾಂತಗಳನ್ನು ಕಂಡರೂ ಅದರಲ್ಲಿ ವಿಶ್ವಾಸವಿಡಲಾರರು. ಕೊನೆಗೆ ತಮ್ಮೊಂದಿಗೆ ತರ್ಕಿಸುವ ಸಲುವಾಗಿ ತಮ್ಮ ಬಳಿಗೆ ಬಂದರೆ ಆ ಸತ್ಯನಿಷೇಧಿಗಳು ಹೇಳುವರು: 'ಇದು ಪೂರ್ವಿಕರ ಕಟ್ಟುಕಥೆಗಳೇ ವಿನಾ ಇನ್ನೇನೂ ಅಲ್ಲ.'

وَمِنْهُم مَّن يَسْتَمِعُ إِلَيْكَ ۖ وَجَعَلْنَا عَلَىٰ قُلُوبِهِمْ أَكِنَّةً أَن يَفْقَهُوهُ وَفِىٓ ءَاذَانِهِمْ وَقْرًا ۚ وَإِن يَرَوْا۟ كُلَّ ءَايَةٍ لَّا يُؤْمِنُوا۟ بِهَا ۚ حَتَّىٰٓ إِذَا جَآءُوكَ يُجَـٰدِلُونَكَ يَقُولُ ٱلَّذِينَ كَفَرُوٓا۟ إِنْ هَـٰذَآ إِلَّآ أَسَـٰطِيرُ ٱلْأَوَّلِينَ ﴿٢٥﴾

**26.** ಅವರು ಅದರಿಂದ ಜನರನ್ನು ತಡೆಯುತ್ತಿರುವರು ಮತ್ತು (ಸ್ವತಃ) ಅದರಿಂದ ದೂರ ಸರಿಯುತ್ತಿರುವರು. (ವಾಸ್ತವಿಕವಾಗಿ) ಅವರು ನಾಶ ಮಾಡುತ್ತಿರುವುದು ಸ್ವತಃ ತಮ್ಮನ್ನೇ ಆಗಿದೆ. ಅವರು (ಅದರ ಬಗ್ಗೆ) ಪ್ರಜ್ಞಾವಂತರಾಗಲಾರರು.

وَهُمْ يَنْهَوْنَ عَنْهُ وَيَنْـَٔوْنَ عَنْهُ ۖ وَإِن يُهْلِكُونَ إِلَّآ أَنفُسَهُمْ وَمَا يَشْعُرُونَ ﴿٢٦﴾

27. ಅವರನ್ನು ನರಕದಲ್ಲಿ ನಿಲ್ಲಿಸಲಾಗುವ ದೃಶ್ಯವನ್ನು ತಾವು ನೋಡಿರುತ್ತಿದ್ದರೆ! ಆಗ ಅವರು ಹೇಳುವರು: ‘ನಮ್ಮನ್ನು (ಇಹಲೋಕಕ್ಕೆ) ಮರಳಿ ಕಳುಹಿಸಲಾಗುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಹಾಗಿರುತ್ತಿದ್ದರೆ ನಾವು ನಮ್ಮ ರಬ್‌ನ ದೃಷ್ಟಾಂತಗಳನ್ನು ನಿಷೇಧಿಸದವರೂ, ಸತ್ಯವಿಶ್ವಾಸಿಗಳೊಂದಿಗೆ ಸೇರಿದವರೂ ಆಗುತ್ತಿದ್ದೆವು.’

وَلَوْ تَرَىٰٓ إِذْ وُقِفُواْ عَلَى ٱلنَّارِ فَقَالُواْ يَٰلَيْتَنَا نُرَدُّ وَلَا نُكَذِّبَ بِـَٔايَٰتِ رَبِّنَا وَنَكُونَ مِنَ ٱلْمُؤْمِنِينَ ٢٧

28. ಅಲ್ಲ, ಅವರು ಈ ಹಿಂದೆ ಏನನ್ನು ಮರೆಮಾಚುತ್ತಿದ್ದರೋ ಅದು (ಈಗ) ಅವರಿಗೆ ಬಹಿರಂಗವಾಗಿದೆ. ಮರಳಿ ಕಳುಹಿಸಲಾದರೂ ಯಾವುದರಿಂದ ಅವರನ್ನು ತಡೆಯಲಾಗಿತ್ತೋ ಅದರೆಡೆಗೇ ಅವರು ಮರಳಿಹೋಗುವರು. ಖಂಡಿತವಾಗಿಯೂ ಅವರು ಸುಳ್ಳು ಹೇಳುವವರಾಗಿರುವರು.

بَلْ بَدَا لَهُم مَّا كَانُواْ يُخْفُونَ مِن قَبْلُۖ وَلَوْ رُدُّواْ لَعَادُواْ لِمَا نُهُواْ عَنْهُ وَإِنَّهُمْ لَكَٰذِبُونَ ٢٨

29. ಅವರು ಹೇಳಿದರು: ‘ನಮ್ಮ ಈ ಇಹಲೋಕ ಜೀವನವಲ್ಲದೆ ಇನ್ನೇನೂ ಇಲ್ಲ. ನಮ್ಮನ್ನು ಪುನರುತ್ಥಾನಗೊಳಿಸಲಾಗುವುದೂ ಇಲ್ಲ’.

وَقَالُوٓاْ إِنْ هِيَ إِلَّا حَيَاتُنَا ٱلدُّنْيَا وَمَا نَحْنُ بِمَبْعُوثِينَ ٢٩

30. ಅವರನ್ನು ಅವರ ರಬ್‌ನ ಮುಂದೆ ನಿಲ್ಲಿಸಲಾಗುವುದನ್ನು ತಾವು ನೋಡಿರುತ್ತಿದ್ದರೆ! ಅವನು ಕೇಳುವನು: ‘ಇದು ಸತ್ಯವಲ್ಲವೇ?’ ಅವರು ಹೇಳುವರು: ‘ಹೌದು! ನಮ್ಮ ರಬ್‌ನ ಮೇಲಾಣೆ.’ ಅವನು ಹೇಳುವನು: ‘ಹಾಗಾದರೆ ನೀವು ನಿಷೇಧಿಸಿರುವುದರ ಫಲವಾಗಿ ಶಿಕ್ಷೆಯನ್ನು ಸವಿಯಿರಿ.’

وَلَوْ تَرَىٰٓ إِذْ وُقِفُواْ عَلَىٰ رَبِّهِمْۚ قَالَ أَلَيْسَ هَٰذَا بِٱلْحَقِّۚ قَالُواْ بَلَىٰ وَرَبِّنَاۚ قَالَ فَذُوقُواْ ٱلْعَذَابَ بِمَا كُنتُمْ تَكْفُرُونَ ٣٠

31. ಅಲ್ಲಾಹುವಿನೊಂದಿಗಿರುವ ಭೇಟಿಯನ್ನು ನಿರಾಕರಿಸಿದವರು ಖಂಡಿತವಾಗಿಯೂ ನಷ್ಟಕ್ಕೊಳಗಾಗಿರುವರು. ಕೊನೆಗೆ ಆ ಘಳಿಗೆಯು ಅವರೆಡೆಗೆ ಹಠಾತ್ತಾಗಿ ಬರುವಾಗ ಅವರು ಹೇಳುವರು: ‘ನಾವು ಈ ವಿಷಯದಲ್ಲಿ ಲೋಪವೆಸಗಿದ ಕಾರಣ ಅಯ್ಯೋ! ನಮ್ಮ ದುರ್ಗತಿಯೇ!’ ಅವರು ತಮ್ಮ ಪಾಪಗಳ ಭಾರವನ್ನು ತಮ್ಮ ಬೆನ್ನುಗಳಲ್ಲಿ

قَدْ خَسِرَ ٱلَّذِينَ كَذَّبُواْ بِلِقَآءِ ٱللَّهِۖ حَتَّىٰٓ إِذَا جَآءَتْهُمُ ٱلسَّاعَةُ بَغْتَةً قَالُواْ يَٰحَسْرَتَنَا عَلَىٰ مَا فَرَّطْنَا فِيهَا وَهُمْ يَحْمِلُونَ أَوْزَارَهُمْ عَلَىٰ ظُهُورِهِمْۚ أَلَا سَآءَ مَا يَزِرُونَ ٣١

ಹೊರುತ್ತಿರುವರು. ಅವರು ಹೊರುತ್ತಿರುವ ಭಾರವು ಎಷ್ಟು ನಿಕೃಷ್ಟವಾದುದು!

32. ಐಹಿಕ ಜೀವನವು ಆಟ ಮತ್ತು ಮನರಂಜನೆಯ ವಿನಾ ಇನ್ನೇನೂ ಅಲ್ಲ. ಭಯಭಕ್ತಿ ಪಾಲಿಸುವವರಿಗೆ ಉತ್ತಮವಾಗಿರುವುದು ಪರಲೋಕವೇ ಆಗಿದೆ. ನೀವು ಆಲೋಚಿಸುವುದಿಲ್ಲವೇ?

وَمَا ٱلْحَيَوٰةُ ٱلدُّنْيَآ إِلَّا لَعِبٌ وَلَهْوٌ ۖ وَلَلدَّارُ ٱلْـَٔاخِرَةُ خَيْرٌ لِّلَّذِينَ يَتَّقُونَ ۗ أَفَلَا تَعْقِلُونَ ﴿٣٢﴾

33. (ಓ ಪ್ರವಾದಿಯವರೇ!) ಅವರು ಹೇಳುತ್ತಿರುವ ವಿಷಯಗಳು ತಮ್ಮನ್ನು ದುಃಖಕ್ಕೀಡು ಮಾಡುತ್ತಿವೆಯೆಂದು ಖಂಡಿತವಾಗಿಯೂ ನಾವು ಅರಿತಿರುವೆವು. ಆದರೆ (ವಾಸ್ತವಿಕವಾಗಿ) ಅವರು ನಿಷೇಧಿಸುತ್ತಿರುವುದು ತಮ್ಮನ್ನಲ್ಲ. ಆದರೆ ಆ ಅಕ್ರಮಿಗಳು ನಿಷೇಧಿಸುತ್ತಿರುವುದು ಅಲ್ಲಾಹುವಿನ ದೃಷ್ಟಾಂತಗಳನ್ನಾಗಿವೆ.

قَدْ نَعْلَمُ إِنَّهُۥ لَيَحْزُنُكَ ٱلَّذِى يَقُولُونَ ۖ فَإِنَّهُمْ لَا يُكَذِّبُونَكَ وَلَـٰكِنَّ ٱلظَّـٰلِمِينَ بِـَٔايَـٰتِ ٱللَّهِ يَجْحَدُونَ ﴿٣٣﴾

34. ತಮಗಿಂತ ಮುಂಚೆಯೂ ಸಂದೇಶವಾಹಕರು ನಿಷೇಧಿಸಲ್ಪಟ್ಟಿರುವರು. ತರುವಾಯ ತಾವು ನಿಷೇಧಿಸಲ್ಪಡುವುದನ್ನು ಮತ್ತು ಹಿಂಸಿಸಲ್ಪಡುವುದನ್ನು ನಮ್ಮ ಸಹಾಯವು ಅವರೆಡೆಗೆ ಬರುವ ತನಕ ಅವರು ಸಹಿಸಿದರು. ಅಲ್ಲಾಹುವಿನ ವಚನಗಳಿಗೆ (ಆದೇಶಗಳಿಗೆ) ಬದಲಾವಣೆ ತರುವವರಾರೂ ಇಲ್ಲ. ಸಂದೇಶವಾಹಕರ ವೃತ್ತಾಂತಗಳ ಪೈಕಿ ಕೆಲವಂತೂ ತಮಗೆ ತಲುಪಿದೆ.

وَلَقَدْ كُذِّبَتْ رُسُلٌ مِّن قَبْلِكَ فَصَبَرُوا۟ عَلَىٰ مَا كُذِّبُوا۟ وَأُوذُوا۟ حَتَّىٰٓ أَتَىٰهُمْ نَصْرُنَا ۚ وَلَا مُبَدِّلَ لِكَلِمَـٰتِ ٱللَّهِ ۚ وَلَقَدْ جَآءَكَ مِن نَّبَإِى۟ ٱلْمُرْسَلِينَ ﴿٣٤﴾

35. ಅವರು ವಿಮುಖರಾಗಿ ಹೋಗುವುದು ತಮಗೆ ದುಸ್ಸಹವಾಗಿ ತೋರುವುವಾದರೆ, ಭೂಮಿಯಲ್ಲಿ (ಇಳಿದು ಹೋಗಲು) ಒಂದು ಸುರಂಗವನ್ನು ಅಥವಾ ಆಕಾಶಕ್ಕೆ (ಏರಿ ಹೋಗಲು) ಒಂದು ಏಣಿಯನ್ನು ಹುಡುಕಿ, ತರುವಾಯ ಅವರಿಗೊಂದು ದೃಷ್ಟಾಂತವನ್ನು ತಂದುಕೊಡಲು ತಮಗೆ ಸಾಧ್ಯವಾಗುವುದಾದರೆ (ಹಾಗೆ ಮಾಡಿರಿ). ಅಲ್ಲಾಹು ಇಚ್ಛಿಸಿರುತ್ತಿದ್ದರೆ ಅವರೆಲ್ಲರನ್ನೂ ಅವನು ಸನ್ಮಾರ್ಗದಲ್ಲಿ

وَإِن كَانَ كَبُرَ عَلَيْكَ إِعْرَاضُهُمْ فَإِنِ ٱسْتَطَعْتَ أَن تَبْتَغِىَ نَفَقًا فِى ٱلْأَرْضِ أَوْ سُلَّمًا فِى ٱلسَّمَآءِ فَتَأْتِيَهُم بِـَٔايَةٍ ۚ وَلَوْ شَآءَ ٱللَّهُ لَجَمَعَهُمْ عَلَى ٱلْهُدَىٰ ۚ فَلَا تَكُونَنَّ مِنَ ٱلْجَـٰهِلِينَ ﴿٣٥﴾

ಒಟ್ಟುಗೂಡಿಸುತ್ತಿದ್ದನು. ಆದ್ದರಿಂದ ತಾವೆಂದೂ ಅವಿವೇಕಿಗಳ ಪೈಕಿ ಸೇರಿಬಿಟ್ಟವರಾಗದಿರಿ.

۞ إِنَّمَا يَسْتَجِيبُ ٱلَّذِينَ يَسْمَعُونَۘ وَٱلْمَوْتَىٰ يَبْعَثُهُمُ ٱللَّهُ ثُمَّ إِلَيْهِ يُرْجَعُونَ ﴿٣٦﴾

**36.** ಆಲಿಸುವವರು ಮಾತ್ರ ಉತ್ತರಿಸುವರು. ಮರಣಹೊಂದಿದವರನ್ನು ಅಲ್ಲಾಹು ಪುನರುತ್ಥಾನಗೊಳಿಸುವನು.[1] ತರುವಾಯ ಅವರನ್ನು ಮರಳಿಸಲಾಗುವುದು ಅವನೆಡೆಗೇ ಆಗಿದೆ.

وَقَالُوا۟ لَوْلَا نُزِّلَ عَلَيْهِ ءَايَةٌ مِّن رَّبِّهِۦۚ قُلْ إِنَّ ٱللَّهَ قَادِرٌ عَلَىٰٓ أَن يُنَزِّلَ ءَايَةً وَلَٰكِنَّ أَكْثَرَهُمْ لَا يَعْلَمُونَ ﴿٣٧﴾

**37.** 'ಇವರ ಮೇಲೆ ಇವರ ರಬ್‌ನ ವತಿಯಿಂದ ಯಾವುದಾದರೂ ದೃಷ್ಟಾಂತವನ್ನೇಕೆ ಇಳಿಸಲಾಗಿಲ್ಲ' ಎಂದು ಅವರು ಕೇಳುವರು. ತಾವು ಹೇಳಿರಿ: 'ದೃಷ್ಟಾಂತವನ್ನು ಇಳಿಸಲು ಅಲ್ಲಾಹು ಖಂಡಿತವಾಗಿಯೂ ಸಾಮರ್ಥ್ಯ ಸಾಮರ್ಥ್ಯವುಳ್ಳವನಾಗಿರುವನು.' ಆದರೆ ಅವರ ಪೈಕಿ ಹೆಚ್ಚಿನವರೂ (ವಾಸ್ತವಿಕತೆಯನ್ನು) ಅರ್ಥಮಾಡಿಕೊಳ್ಳುವುದಿಲ್ಲ.

وَمَا مِن دَآبَّةٍ فِى ٱلْأَرْضِ وَلَا طَٰٓئِرٍ يَطِيرُ بِجَنَاحَيْهِ إِلَّآ أُمَمٌ أَمْثَالُكُمۚ مَّا فَرَّطْنَا فِى ٱلْكِتَٰبِ مِن شَىْءٍۚ ثُمَّ إِلَىٰ رَبِّهِمْ يُحْشَرُونَ ﴿٣٨﴾

**38.** ಭೂಮಿಯಲ್ಲಿ ಯಾವುದೇ ಜೀವಿಯೂ ಇಲ್ಲ ಮತ್ತು ಎರಡು ರೆಕ್ಕೆಗಳೊಂದಿಗೆ ಹಾರಾಡುವ ಯಾವುದೇ ಹಕ್ಕಿಯೂ ಇಲ್ಲ, ಅವು ನಿಮ್ಮಂತಿರುವ ಕೆಲವು ಸಮುದಾಯಗಳಾಗಿರುವ ಹೊರತು.[2] ನಾವು ಗ್ರಂಥದಲ್ಲಿ ಏನನ್ನೂ ಅವಗಣಿಸಿಲ್ಲ. ತರುವಾಯ ಅವರನ್ನು ಒಟ್ಟುಗೂಡಿಸಲಾಗುವುದು ಅವರ ರಬ್‌ನೆಡೆಗೇ ಆಗಿರುವುದು.[3]

---

1 ಸತ್ಯವನ್ನು ಗ್ರಹಿಸಲು ಸಿದ್ಧರಿಲ್ಲದವರು ಆತ್ಮಚೈತನ್ಯವನ್ನು ಕಳೆದುಕೊಂಡವರಾಗಿರುವರು. ಅವರ ಸ್ಥಿತಿಯು ಸತ್ತವನಿಗೆ ಸಮಾನವಾಗಿ ಬದುಕುವುದು ಎಂಬಂತಿರುವುದು. ಅವರು ಸತ್ಯಸಂದೇಶವನ್ನು ಕೇಳದಿರುವುದರಲ್ಲಿ ದುಃಖಿಸಬೇಕಾಗಿಲ್ಲ. ಅವರ ವಿಷಯವನ್ನು ಅಲ್ಲಾಹು ನೋಡಿಕೊಳ್ಳುವನು. ಅವರ ಮರಳುವಿಕೆಯು ಅವನೆಡೆಗಾಗಿದೆ.

2 ಪ್ರತಿಯೊಂದು ಜೀವಿಗೂ ಅದರದ್ದೇ ಆದ ಹಲವು ವೈಶಿಷ್ಟ್ಯತೆಗಳಿವೆ. ಹಾಗೆಯೇ ಮನುಷ್ಯನೂ ಹಲವಾರು ವಿಭಿನ್ನ ವೈಶಿಷ್ಟ್ಯತೆಗಳಿರುವ ಜೀವಿಯಾಗಿದ್ದಾನೆ. ತನ್ನ ವಿಶೇಷ ನೈಸರ್ಗಿಕ ಹಿತಾಸಕ್ತಿಗಳನ್ನು ಈಡೇರಿಸಲು ಮನುಷ್ಯನಿಗೆ ದೈವಿಕ ಮಾರ್ಗದರ್ಶನವು ನೆರವಾಗುತ್ತದೆ.

3 ಪ್ರಾಣಿಗಳಿಗೆ ಮರಣಾನಂತರ ಜೀವನವಿದೆಯೇ? ಈ ಸೂಕ್ತಿಯು ಅದನ್ನು ಸೂಚಿಸುತ್ತದೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಪ್ರಾಣಿಗಳು ಪುನರ್ಜೀವಗೊಳಿಸಲ್ಪಡುವುದೆಂದು ಸೂಚಿಸುವ ಕೆಲವು ಹದೀಸುಗಳೂ ಇವೆ.

39. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಯಾರೋ ಅವರು ಕಿವುಡರೂ, ಮೂಕರೂ, ಅಂಧಕಾರಗಳಲ್ಲಿರುವವರೂ ಆಗಿರುವರು. ಅಲ್ಲಾಹು ತಾನಿಚ್ಛಿಸುವವರನ್ನು ದಾರಿಗೆಡಿಸುವನು ಮತ್ತು ತಾನಿಚ್ಛಿಸುವವರನ್ನು ಅವನು ನೇರವಾದ ಮಾರ್ಗಕ್ಕೆ ಸೇರಿಸುವನು.

وَٱلَّذِينَ كَذَّبُواْ بِـَٔايَٰتِنَا صُمّٞ وَبُكۡمٞ فِي ٱلظُّلُمَٰتِۗ مَن يَشَإِ ٱللَّهُ يُضۡلِلۡهُ وَمَن يَشَأۡ يَجۡعَلۡهُ عَلَىٰ صِرَٰطٖ مُّسۡتَقِيمٖ ٣٩

40. (ಓ ಪ್ರವಾದಿಯವರೇ!) ಹೇಳಿರಿ: ‘ನನಗೊಮ್ಮೆ ಹೇಳಿಕೊಡಿರಿ! ಅಲ್ಲಾಹುವಿನ ಶಿಕ್ಷೆಯು ನಿಮ್ಮ ಬಳಿಗೆ ಬಂದರೆ ಅಥವಾ ಅಂತ್ಯಘಳಿಗೆಯು ನಿಮ್ಮ ಬಳಿಗೆ ಬಂದರೆ ನೀವು ಅಲ್ಲಾಹುವಿನ ಹೊರತು ಇತರರನ್ನು ಕರೆದು ಪ್ರಾರ್ಥಿಸುವಿರಾ?[1] ನೀವು ಸತ್ಯಸಂಧರಾಗಿದ್ದರೆ (ಹೇಳಿರಿ.)’

قُلۡ أَرَءَيۡتَكُمۡ إِنۡ أَتَىٰكُمۡ عَذَابُ ٱللَّهِ أَوۡ أَتَتۡكُمُ ٱلسَّاعَةُ أَغَيۡرَ ٱللَّهِ تَدۡعُونَ إِن كُنتُمۡ صَٰدِقِينَ ٤٠

41. ಇಲ್ಲ, ನೀವು ಅವನನ್ನು ಮಾತ್ರ ಕರೆದು ಪ್ರಾರ್ಥಿಸುವಿರಿ. ಆಗ ಅವನಿಚ್ಛಿಸಿದರೆ ಯಾವ ವಿಪತ್ತಿನ ನಿಮಿತ್ತ ನೀವು ಅವನನ್ನು ಕರೆದು ಪ್ರಾರ್ಥಿಸುವಿರೋ ಅದನ್ನು ಅವನು ನಿವಾರಿಸುವನು. (ಆಗ) ನೀವು (ಅವನೊಂದಿಗೆ) ಸಹಭಾಗಿಯನ್ನಾಗಿ ಮಾಡುತ್ತಿರುವವುಗಳನ್ನು ಮರೆತು ಬಿಡುವಿರಿ.

بَلۡ إِيَّاهُ تَدۡعُونَ فَيَكۡشِفُ مَا تَدۡعُونَ إِلَيۡهِ إِن شَآءَ وَتَنسَوۡنَ مَا تُشۡرِكُونَ ٤١

42. ತಮಗಿಂತ ಮುಂಚೆ ನಾವು ಹಲವು ಸಮುದಾಯಗಳೆಡೆಗೆ (ಸಂದೇಶವಾಹಕರನ್ನು) ಕಳುಹಿಸಿರುವೆವು. ತರುವಾಯ ಅವರು ವಿನಮ್ರರಾಗುವ ಸಲುವಾಗಿ ನಾವು ಅವರನ್ನು (ಆ ಸಮುದಾಯಗಳನ್ನು) ಸಂಕಷ್ಟ ಮತ್ತು ವಿಪತ್ತುಗಳಿಂದ ಹಿಡಿದೆವು.

وَلَقَدۡ أَرۡسَلۡنَآ إِلَىٰٓ أُمَمٖ مِّن قَبۡلِكَ فَأَخَذۡنَٰهُم بِٱلۡبَأۡسَآءِ وَٱلضَّرَّآءِ لَعَلَّهُمۡ يَتَضَرَّعُونَ ٤٢

---

1 ಜಾಗತಿಕವಾಗಿ ಕಂಡುಬರುವ ಬಹುದೇವಾರಾಧಕರ ಪೈಕಿ ಹೆಚ್ಚಿನವರೂ ಏಕಮೇವ ಸೃಷ್ಟಿಕರ್ತನಲ್ಲಿ ವಿಶ್ವಾಸವಿಡುವವರಾಗಿದ್ದರು. ಈಗಲೂ ಅದೇ ಸ್ಥಿತಿಯಿದೆ. ಆದರೆ ಆರಾಧನೆಯ (ಪ್ರಾರ್ಥನೆಯು ಆರಾಧನೆಯ ತಿರುಳಾಗಿದೆ) ವಿಷಯದಲ್ಲಿ ಜಗದೊಡೆಯನ ಹೊರತು ಇತರರನ್ನೂ ಅವರು ಅರಸುತ್ತಿದ್ದರು. ದೇವಸಾಮೀಪ್ಯವನ್ನು ಗಳಿಸಿದ ಸಜ್ಜನರೊಂದಿಗೆ (ಅವರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಅಥವಾ ಪ್ರತಿಷ್ಠಾಪಿಸದೆ) ಪ್ರಾರ್ಥಿಸುವುದು ಅವರು ಮಾಡುತ್ತಿದ್ದ ಬಹುದೇವಾರಾಧನೆಯ ಪ್ರಮುಖ ಅಂಗವಾಗಿತ್ತು. ಆದರೆ ಅತಿಕಠಿಣ ವಿಪತ್ತುಗಳು ಎದುರಾದಾಗ ಅವರು ಎಲ್ಲ ಸೃಷ್ಟಿಗಳನ್ನೂ ತೊರೆದು ಸೃಷ್ಟಿಕರ್ತನಲ್ಲಿ ಅಭಯ ಯಾಚಿಸುತ್ತಿದ್ದರು. ಆದರೆ ಇಂದು ಸೃಷ್ಟಿಕರ್ತನಲ್ಲಿ ವಿಶ್ವಾಸವಿಡುವವರ ಪೈಕಿ ಕೆಲವರು ನಿರ್ಣಾಯಕ ಘಟ್ಟಗಳಲ್ಲಿ ಸಹ ಮೃತರೊಂದಿಗೆ ಪ್ರಾರ್ಥಿಸುತ್ತಿರುವರು. ಇಂತಹವರ ಸ್ಥಿತಿಯು ನಿಜಕ್ಕೂ ಪರಿತಾಪಕರವಾಗಿದೆ!

43. ನಮ್ಮ ಶಿಕ್ಷೆಯು ಅವರ ಬಳಿಗೆ ಬಂದಾಗ ಅವರೇಕೆ ವಿನಮ್ರರಾಗಲಿಲ್ಲ? ಆದರೆ ಅವರ ಹೃದಯಗಳು ಕಠಿಣವಾದವು ಮತ್ತು ಅವರು ಮಾಡುತ್ತಿರುವವುಗಳನ್ನು ಸೈತಾನನು ಅವರಿಗೆ ಆಕರ್ಷಕಗೊಳಿಸಿ ತೋರಿಸಿದನು.

فَلَوۡلَآ إِذۡ جَآءَهُم بَأۡسُنَا تَضَرَّعُواْ وَلَٰكِن قَسَتۡ قُلُوبُهُمۡ وَزَيَّنَ لَهُمُ ٱلشَّيۡطَٰنُ مَا كَانُواْ يَعۡمَلُونَ ﴿٤٣﴾

44. ಅವರೊಂದಿಗೆ ಉಪದೇಶಿಸಲಾದ ಸಂಗತಿಗಳನ್ನು ಅವರು ಮರೆತು ಬಿಟ್ಟಾಗ ಸಕಲ ವಿಷಯಗಳ ದ್ವಾರಗಳನ್ನೂ ನಾವು ಅವರಿಗೆ ತೆರೆದುಕೊಟ್ಟೆವು.(1) ಕೊನೆಗೆ ಅವರಿಗೆ ನೀಡಲಾಗಿರುವುದರಲ್ಲಿ ಅವರು ಆನಂದಿಸುತ್ತಿದ್ದಾಗ ಹಠಾತ್ತನೆ ನಾವು ಅವರನ್ನು ಹಿಡಿದುಬಿಟ್ಟೆವು. ಆಗ ಅಗೋ ಅವರು ನಿರಾಶರಾಗಿ ಬಿಟ್ಟರು!

فَلَمَّا نَسُواْ مَا ذُكِّرُواْ بِهِۦ فَتَحۡنَا عَلَيۡهِمۡ أَبۡوَٰبَ كُلِّ شَيۡءٍ حَتَّىٰٓ إِذَا فَرِحُواْ بِمَآ أُوتُوٓاْ أَخَذۡنَٰهُم بَغۡتَةً فَإِذَا هُم مُّبۡلِسُونَ ﴿٤٤﴾

45. ಅಕ್ರಮಿಗಳಾದ ಆ ಜನತೆಯನ್ನು ಬೇರುಸಹಿತ ಕೀಳಲಾಯಿತು. ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗೆ ಸ್ತುತಿ.

فَقُطِعَ دَابِرُ ٱلۡقَوۡمِ ٱلَّذِينَ ظَلَمُواْۚ وَٱلۡحَمۡدُ لِلَّهِ رَبِّ ٱلۡعَٰلَمِينَ ﴿٤٥﴾

46. (ಓ ಪ್ರವಾದಿಯವರೇ!) ಹೇಳಿರಿ: ‘ನೀವು ಆಲೋಚಿಸಿದ್ದೀರಾ! ಅಲ್ಲಾಹು ನಿಮ್ಮ ಶ್ರವಣ ಮತ್ತು ದೃಷ್ಟಿಯನ್ನು ವಶಪಡಿಸಿದರೆ ಮತ್ತು ನಿಮ್ಮ ಹೃದಯಗಳ ಮೇಲೆ ಮುದ್ರೆಯೊತ್ತಿದರೆ ಅಲ್ಲಾಹುವಿನ ಹೊರತು ಅದನ್ನು ನಿಮಗೆ ತಂದುಕೊಡುವ ಅನ್ಯ ಆರಾಧ್ಯನು ಯಾರಿರುವನು?’ ನಾವು ಅವರಿಗೆ ಯಾವೆಲ್ಲಾ ವಿಧದಲ್ಲಿ ನಮ್ಮ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವೆವೆಂಬುದನ್ನು ನೋಡಿರಿ. ಅದರ ಬಳಿಕವೂ ಅವರು ವಿಮುಖರಾಗುತ್ತಿರುವರು.

قُلۡ أَرَءَيۡتُمۡ إِنۡ أَخَذَ ٱللَّهُ سَمۡعَكُمۡ وَأَبۡصَٰرَكُمۡ وَخَتَمَ عَلَىٰ قُلُوبِكُم مَّنۡ إِلَٰهٌ غَيۡرُ ٱللَّهِ يَأۡتِيكُم بِهِۗ ٱنظُرۡ كَيۡفَ نُصَرِّفُ ٱلۡأٓيَٰتِ ثُمَّ هُمۡ يَصۡدِفُونَ ﴿٤٦﴾

47. (ಓ ಪ್ರವಾದಿಯವರೇ!) ಹೇಳಿರಿ: ‘ನನಗೊಮ್ಮೆ ಹೇಳಿಕೊಡಿರಿ! ಅಲ್ಲಾಹುವಿನ ಶಿಕ್ಷೆಯು

قُلۡ أَرَءَيۡتَكُمۡ إِنۡ أَتَىٰكُمۡ عَذَابُ ٱللَّهِ

1 ಅಲ್ಲಾಹು ಅವರಿಗೆ ಅಭಿವೃದ್ಧಿಯ ಮತ್ತು ಸುಖಲೋಲುಪತೆಯ ದ್ವಾರಗಳನ್ನು ತೆರೆದುಕೊಟ್ಟನು. ತನ್ನೊಂದಿಗೆ ಶತ್ರುತ್ವ ಹೊಂದಿರುವವನಿಗೂ ಅಲ್ಲಾಹು ಇಹಲೋಕದಲ್ಲಿ ತನ್ನ ಅನುಗ್ರಹಗಳನ್ನು ಸಮೃದ್ಧವಾಗಿ ನೀಡುವನು. ಇದರ ಕುರಿತು ಯಾರೂ ತಪ್ಪು ತಿಳಿಯಬೇಕಾಗಿಲ್ಲ. ಅಹಂಕಾರಿಗಳು ಮತ್ತು ಸುಖಭೋಗಿಗಳಿಗೆ ಅಲ್ಲಾಹುವಿನ ಹಿಡಿತದಿಂದ ಪಾರಾಗಲು ಸಾಧ್ಯವಿಲ್ಲ. ಅವನು ತಾನಿಚ್ಛಿಸುವ ವೇಳೆಯಲ್ಲಿ ಅವರನ್ನು ಹಿಡಿಯುವನು ಮತ್ತು ಅವನು ತಾನಿಚ್ಛಿಸುವ ವಿಧದಲ್ಲಿ ಅವರನ್ನು ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಶಿಕ್ಷಿಸುವನು.

ಹಠಾತ್ತನೆ ಅಥವಾ ಬಹಿರಂಗವಾಗಿ[1] ನಿಮ್ಮೆಡೆಗೆ ಬಂದರೆ ಅಕ್ರಮಿಗಳಾದ ಜನತೆಯ ವಿನಾ ಇನ್ನಾರಾದರೂ ನಾಶಗೊಳಿಸಲಾಗುವರೇ?'

بَغْتَةً أَوْ جَهْرَةً هَلْ يُهْلَكُ إِلَّا ٱلْقَوْمُ ٱلظَّـٰلِمُونَ ﴿٤٧﴾

**48.** ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿಯೇ ವಿನಾ ನಾವು ಸಂದೇಶವಾಹಕರನ್ನು ಕಳುಹಿಸಲಾರೆವು. ತರುವಾಯ ಯಾರು ವಿಶ್ವಾಸವಿಡುವನೋ ಮತ್ತು ನಿಲುವನ್ನು ಸುಧಾರಿಸುವನೋ ಅವರು ಏನನ್ನೂ ಭಯಪಡಬೇಕಾಗಿಲ್ಲ. ಅವರು ದುಃಖಿಸಬೇಕಾಗಿಯೂ ಬರದು.

وَمَا نُرْسِلُ ٱلْمُرْسَلِينَ إِلَّا مُبَشِّرِينَ وَمُنذِرِينَ ۖ فَمَنْ ءَامَنَ وَأَصْلَحَ فَلَا خَوْفٌ عَلَيْهِمْ وَلَا هُمْ يَحْزَنُونَ ﴿٤٨﴾

**49.** ಆದರೆ ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಯಾರೋ ಅವರು ಧಿಕ್ಕಾರಿಗಳಾಗಿರುವ ಕಾರಣ ಶಿಕ್ಷೆಯು ಅವರನ್ನು ಸ್ಪರ್ಶಿಸುವುದು.

وَٱلَّذِينَ كَذَّبُوا۟ بِـَٔايَـٰتِنَا يَمَسُّهُمُ ٱلْعَذَابُ بِمَا كَانُوا۟ يَفْسُقُونَ ﴿٤٩﴾

**50.** ಹೇಳಿರಿ: 'ಅಲ್ಲಾಹುವಿನ ಖಜಾನೆಗಳು ನನ್ನ ಬಳಿಯಿವೆಯೆಂದು ನಾನು ನಿಮ್ಮೊಂದಿಗೆ ಹೇಳುವುದಿಲ್ಲ. ಅಗೋಚರ ವಿಷಯವನ್ನು ನಾನು ಅರಿಯುವುದೂ ಇಲ್ಲ. ನಾನೊಬ್ಬ ಮಲಕ್ ಆಗಿರುವೆನೆಂದು ನಿಮ್ಮೊಂದಿಗೆ ಹೇಳುವುದಿಲ್ಲ. ನನಗೆ ದಿವ್ಯಸಂದೇಶವಾಗಿ ನೀಡಲಾಗುವುದನ್ನೇ ವಿನಾ ನಾನು ಅನುಸರಿಸುವುದಿಲ್ಲ.' ಹೇಳಿರಿ: 'ಕುರುಡನೂ, ದೃಷ್ಟಿಯುಳ್ಳವನೂ ಸಮಾನರಾಗುವರೇ?[2] ನೀವೇಕೆ ಚಿಂತಿಸುವುದಿಲ್ಲ?'

قُل لَّآ أَقُولُ لَكُمْ عِندِى خَزَآئِنُ ٱللَّهِ وَلَآ أَعْلَمُ ٱلْغَيْبَ وَلَآ أَقُولُ لَكُمْ إِنِّى مَلَكٌ ۖ إِنْ أَتَّبِعُ إِلَّا مَا يُوحَىٰٓ إِلَىَّ ۚ قُلْ هَلْ يَسْتَوِى ٱلْأَعْمَىٰ وَٱلْبَصِيرُ ۚ أَفَلَا تَتَفَكَّرُونَ ﴿٥٠﴾

**51.** ತಮ್ಮ ರಬ್‌ನೆಡೆಗೆ ತಾವು ಒಟ್ಟುಗೂಡಿಸಲಾಗುವುದು ಎಂದು ಭಯಪಡುವವರಿಗೆ ಇದರ (ದಿವ್ಯಸಂದೇಶದ) ಮೂಲಕ ಮುನ್ನೆಚ್ಚರಿಕೆ ನೀಡಿರಿ. ಅವನ

وَأَنذِرْ بِهِ ٱلَّذِينَ يَخَافُونَ أَن يُحْشَرُوٓا۟ إِلَىٰ رَبِّهِمْ ۙ لَيْسَ لَهُم مِّن دُونِهِۦ وَلِىٌّ وَلَا شَفِيعٌ لَّعَلَّهُمْ يَتَّقُونَ ﴿٥١﴾

1 ನೀವು ಮಲಗಿರುವಾಗ ಅಥವಾ ಅಲಕ್ಷಿತರಾಗಿರುವಾಗ ಶಿಕ್ಷೆಯು ಹಠಾತ್ತನೆ ಬರಬಹುದು. ಅಥವಾ ನೀವು ನೋಡುತ್ತಿರುವಂತೆ ಶಿಕ್ಷೆಯು ಬಹಿರಂಗವಾಗಿ ಬಂದೆರಗಲೂಬಹುದು.

2 ಪ್ರವಾದಿ(ﷺ)ರವರ ಶತ್ರುಗಳು ಹೊಂದಿದ್ದ ದೇವಪರಿಕಲ್ಪನೆಗಳು ಮತ್ತು ಅಲ್ಲಾಹುವಿನ ಮೇಲೆ ಅವರು ಹೊರಿಸಿದ್ದ ಮಿಥ್ಯಾರೋಪಗಳು ಕೇವಲ ಅಂಧವಾದ ಊಹೆಗಳ ಮೇಲೆ ನಿರ್ಮಿತವಾದುದಾಗಿತ್ತು. ಈ ವಿಷಯದಲ್ಲಿ ಅವರು ಕುರುಡರಾಗಿದ್ದರು. ಪ್ರವಾದಿ(ﷺ)ರವರು ಮಾತನಾಡುತ್ತಿದ್ದುದು ದಿವ್ಯಸಂದೇಶವೆಂಬ ಸ್ಪಷ್ಟ ಜ್ಞಾನದ ಆಧಾರದಲ್ಲಾಗಿತ್ತು.

ಹೊರತು ಅವರಿಗೆ ಅನ್ಯ ರಕ್ಷಕನಾಗಲಿ ಶಿಫಾರಸ್ಸುಗಾರನಾಗಲಿ ಇರಲಾರರು. ಅವರು ಭಯಭಕ್ತಿ ಪಾಲಿಸುವವರಾಗಲೂಬಹುದು.

52. ತಮ್ಮ ರಬ್‌ನ ಪ್ರೀತಿಯನ್ನು ಬಯಸುತ್ತಾ ಮುಂಜಾನೆ ಮತ್ತು ಸಂಜೆಯಲ್ಲಿ ಅವನೊಂದಿಗೆ ಪ್ರಾರ್ಥಿಸುತ್ತಿರುವವರನ್ನು ತಾವು ದೂರ ಅಟ್ಟದಿರಿ.[1] ಅವರ ಲೆಕ್ಕ ವಿಚಾರಣೆ ಮಾಡಬೇಕಾದ ಯಾವ ಹೊಣೆಯೂ ತಮಗಿಲ್ಲ. ತಮ್ಮನ್ನು ವಿಚಾರಣೆ ಮಾಡಬೇಕಾದ ಯಾವ ಹೊಣೆಯೂ ಅವರಿಗಿಲ್ಲ.[2] ಹಾಗಿದ್ದರಲ್ಲವೇ ತಾವು ಅವರನ್ನು ಅಟ್ಟಬೇಕಾದುದು. ತಾವೇನಾದರೂ ಹಾಗೆ ಮಾಡುವುದಾದರೆ ತಾವು ಅಕ್ರಮಿಗಳ ಪೈಕಿ ಸೇರಿದವರಾಗುವಿರಿ.

وَلَا تَطْرُدِ ٱلَّذِينَ يَدْعُونَ رَبَّهُم بِٱلْغَدَوٰةِ وَٱلْعَشِيِّ يُرِيدُونَ وَجْهَهُۥ ۖ مَا عَلَيْكَ مِنْ حِسَابِهِم مِّن شَىْءٍ وَمَا مِنْ حِسَابِكَ عَلَيْهِم مِّن شَىْءٍ فَتَطْرُدَهُمْ فَتَكُونَ مِنَ ٱلظَّـٰلِمِينَ ﴿٥٢﴾

53. ಹೀಗೆ ಅವರ ಪೈಕಿ ಕೆಲವರನ್ನು ಇತರ ಕೆಲವರ ಮೂಲಕ ನಾವು ಪರೀಕ್ಷಿಸಿರುವೆವು. ನಮ್ಮ ನಡುವಿನಿಂದ ಅಲ್ಲಾಹು ಅನುಗ್ರಹಿಸಿರುವುದು ಇವರನ್ನೇ ಏನು ಎಂದು ಅವರು ಹೇಳುವ ಸಲುವಾಗಿ. ಕೃತಜ್ಞತೆ ಸಲ್ಲಿಸುವವರ ಕುರಿತು ಅಲ್ಲಾಹು ಬಹಳ ಚೆನ್ನಾಗಿ ಅರಿಯುವವನಲ್ಲವೇ?

وَكَذَٰلِكَ فَتَنَّا بَعْضَهُم بِبَعْضٍ لِّيَقُولُوٓا۟ أَهَـٰٓؤُلَآءِ مَنَّ ٱللَّهُ عَلَيْهِم مِّنۢ بَيْنِنَآ ۗ أَلَيْسَ ٱللَّهُ بِأَعْلَمَ بِٱلشَّـٰكِرِينَ ﴿٥٣﴾

54. ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವವರು ತಮ್ಮ ಬಳಿಗೆ ಬಂದರೆ 'ನಿಮ್ಮ ಮೇಲೆ ಶಾಂತಿಯಿರಲಿ. ನಿಮ್ಮ ರಬ್ ಕಾರುಣ್ಯವನ್ನು ತನ್ನ ಮೇಲೆ (ಬಾಧ್ಯತೆಯಾಗಿ) ವಿಧಿಸಿರುವನು'

وَإِذَا جَآءَكَ ٱلَّذِينَ يُؤْمِنُونَ بِـَٔايَـٰتِنَا فَقُلْ سَلَـٰمٌ عَلَيْكُمْ ۖ كَتَبَ رَبُّكُمْ عَلَىٰ نَفْسِهِ ٱلرَّحْمَةَ ۖ أَنَّهُۥ مَنْ عَمِلَ مِنكُمْ سُوٓءًۢا

1 ಪ್ರವಾದಿ(ﷺ)ರವರ ಆಪ್ತ ಅನುಯಾಯಿಗಳಲ್ಲಿ ಹೆಚ್ಚಿನವರೂ ಗುಲಾಮರು, ನಿರ್ಗತಿಕರು, ಮರ್ದಿತರು ಮತ್ತು ದೌರ್ಜನ್ಯಕ್ಕೊಳಗಾದವರಾಗಿದ್ದರು. ಅರೇಬಿಯನ್ ಜನತೆಯಲ್ಲಿದ್ದ ಧನಾಢ್ಯರಿಗೆ ಅವರೊಂದಿಗೆ ತಿರಸ್ಕಾರವಿತ್ತು. ಈ ಬಲಹೀನರನ್ನು ತಮ್ಮ ಬಳಿಯಿಂದ ದೂರ ಅಟ್ಟಿದರೆ ನಾವು ತಮ್ಮ ಹಿಂದೆ ಸೇರುವೆವು ಎಂದು ಅವರು ಪ್ರವಾದಿ(ﷺ)ರೊಂದಿಗೆ ವಾಗ್ದಾನವಿತ್ತರು. ಇದು ಅವರನ್ನು ವಿಮರ್ಶಿಸುತ್ತಾ ಅವತೀರ್ಣಗೊಂಡ ಸೂಕ್ತಿಯಾಗಿದೆ.

2 ಆ ಬಡಪಾಯಿಗಳು ಪ್ರವಾದಿ(ﷺ)ರೊಂದಿಗೆ ಸೇರಿರುವುದು ದಾನಧರ್ಮಗಳ ಮೂಲಕ ಜೀವನಾಧಾರವನ್ನು ಕಂಡುಕೊಳ್ಳುವ ಉದ್ದೇಶದಿಂದಾಗಿದೆಯೆಂಬ ಕುರೈಶೀ ಪ್ರಮುಖರ ಆರೋಪಕ್ಕೆ ಇಲ್ಲಿ ಉತ್ತರಿಸಲಾಗಿದೆ. ಮನಸ್ಸಿನಲ್ಲಿರುವ ವಿಚಾರಗಳನ್ನು ಅರಿಯುವ ಅಲ್ಲಾಹುವಿಗೆ ಮಾತ್ರ ಇಂತಹ ವಿಚಾರಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ತಕ್ಕ ಪ್ರತಿಫಲವನ್ನು ನೀಡಲು ಸಾಧ್ಯವಾಗುವುದು. ಯಾರನ್ನೇ ಆದರೂ ಅವನ ಬಾಹ್ಯವನ್ನಾಧರಿಸಿ ಮಾತ್ರ ಮೌಲ್ಯ ನಿರ್ಧಾರ ಮಾಡಬೇಕಿದೆ.

بِجَهَٰلَةٖ ثُمَّ تَابَ مِنۢ بَعۡدِهِۦ وَأَصۡلَحَ فَأَنَّهُۥ
غَفُورٞ رَّحِيمٞ ٥٤

ಎಂದು ಹೇಳಿರಿ. ನಿಮ್ಮ ಪೈಕಿ ಯಾರಾದರೂ ಅಜ್ಞಾನ ನಿಮಿತ್ತ ಏನಾದರೂ ಕೆಡುಕನ್ನು ಮಾಡಿ, ತರುವಾಯ ಪಶ್ಚಾತ್ತಾಪಪಟ್ಟು ತನ್ನ ನಿಲುವನ್ನು ಸುಧಾರಿಸುವುದಾದರೆ ಖಂಡಿತವಾಗಿಯೂ ಅವನು (ಅಲ್ಲಾಹು) ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَكَذَٰلِكَ نُفَصِّلُ ٱلۡأٓيَٰتِ وَلِتَسۡتَبِينَ سَبِيلُ
ٱلۡمُجۡرِمِينَ ٥٥

55. ಅಪರಾಧಿಗಳ ಮಾರ್ಗವು ಸ್ಪಷ್ಟವಾಗಿ ಪ್ರಕಟವಾಗುವ ಸಲುವಾಗಿ ಹೀಗೆ ನಾವು ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವೆವು.

قُلۡ إِنِّي نُهِيتُ أَنۡ أَعۡبُدَ ٱلَّذِينَ تَدۡعُونَ
مِن دُونِ ٱللَّهِۚ قُل لَّآ أَتَّبِعُ أَهۡوَآءَكُمۡ قَدۡ
ضَلَلۡتُ إِذٗا وَمَآ أَنَا۠ مِنَ ٱلۡمُهۡتَدِينَ ٥٦

56. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹುವಿನ ಹೊರತು ನೀವು ಯಾರನ್ನು ಕರೆದು ಪ್ರಾರ್ಥಿಸುತ್ತಿರುವಿರೋ ಅವರ ಆರಾಧನೆ ಮಾಡುವುದನ್ನು ಖಂಡಿತವಾಗಿಯೂ ನನಗೆ ವಿರೋಧಿಸಲಾಗಿದೆ.' ಹೇಳಿರಿ: 'ನಾನು ನಿಮ್ಮ ದೇಹೇಚ್ಛೆಗಳನ್ನು ಅನುಸರಿಸಲಾರೆನು. ಹಾಗೆ ಮಾಡಿದರೆ ನಾನು ಪಥಭ್ರಷ್ಟನಾಗುವೆನು ಮತ್ತು ಸನ್ಮಾರ್ಗ ಪಡೆದವರೊಂದಿಗೆ ಸೇರಿದವನಾಗಲಾರೆನು.'

قُلۡ إِنِّي عَلَىٰ بَيِّنَةٖ مِّن رَّبِّي وَكَذَّبۡتُم
بِهِۦۚ مَا عِندِي مَا تَسۡتَعۡجِلُونَ بِهِۦٓۚ إِنِ
ٱلۡحُكۡمُ إِلَّا لِلَّهِۖ يَقُصُّ ٱلۡحَقَّۖ وَهُوَ خَيۡرُ
ٱلۡفَٰصِلِينَ ٥٧

57. ಹೇಳಿರಿ: 'ಖಂಡಿತವಾಗಿಯೂ ನಾನು ನನ್ನ ರಬ್‌ನ ಕಡೆಯ ಸ್ಪಷ್ಟವಾದ ಪುರಾವೆಗಳ ಆಧಾರದಲ್ಲಿರುವೆನು. ನೀವದನ್ನು ನಿಷೇಧಿಸಿರುವಿರಿ. ನೀವು ಯಾವುದಕ್ಕಾಗಿ ಆತುರಪಡುತ್ತಿರುವಿರೋ ಅದು (ಶಿಕ್ಷೆ) ನನ್ನ ಬಳಿಯಿಲ್ಲ. (ಅದರ) ಆಜ್ಞಾಧಿಕಾರವಿರುವುದು ಅಲ್ಲಾಹುವಿಗೆ ಮಾತ್ರವಾಗಿದೆ. ಅವನು ಸತ್ಯವನ್ನು ವಿವರಿಸಿಕೊಡುವನು. ತೀರ್ಪು ನೀಡುವವರ ಪೈಕಿ ಅವನು ಅತ್ಯುತ್ತಮನಾಗಿರುವನು.'

قُل لَّوۡ أَنَّ عِندِي مَا تَسۡتَعۡجِلُونَ بِهِۦ
لَقُضِيَ ٱلۡأَمۡرُ بَيۡنِي وَبَيۡنَكُمۡۗ وَٱللَّهُ أَعۡلَمُ
بِٱلظَّٰلِمِينَ ٥٨

58. ಹೇಳಿರಿ: 'ನೀವು ಆತುರಪಡುತ್ತಿರುವ ವಿಷಯವು ನನ್ನ ಬಳಿಯಿರುತ್ತಿದ್ದರೆ ನನ್ನ ಮತ್ತು ನಿಮ್ಮ ಮಧ್ಯೆ ವಿಷಯವು ಈಗಾಗಲೇ ತೀರ್ಮಾನಿಸಲಾಗಿಬಿಡುತ್ತಿತ್ತು. ಅಲ್ಲಾಹು ಅಕ್ರಮಿಗಳ ಕುರಿತು ಚೆನ್ನಾಗಿ ಅರಿಯುವವನಾಗಿರುವನು.

59. ಅಗೋಚರ ವಿಷಯಗಳ ಖಜಾನೆಗಳಿರುವುದು ಅವನ ಬಳಿಯಲ್ಲಾಗಿವೆ.[1] ಅವನ ಹೊರತು ಅವುಗಳನ್ನು ಯಾರೂ ಅರಿಯಲಾರರು. ನೆಲದಲ್ಲಿ ಮತ್ತು ಸಮುದ್ರದಲ್ಲಿರುವುದನ್ನು ಅವನು ಅರಿಯುವನು. ಅವನು ಅರಿಯದ ವಿನಃ ಒಂದು ಎಲೆಯೂ ಉದುರದು. ಭೂಮಿಯ ಅಂಧಕಾರಗಳಲ್ಲಿರುವ ಒಂದು ಧಾನ್ಯವಾಗಿರಲಿ, ಹಸಿಯಾಗಿರುವ ಅಥವಾ ಒಣಗಿರುವ ಯಾವುದೇ ವಸ್ತುವಾಗಿರಲಿ ಸ್ಪಷ್ಟವಾದ ಒಂದು ಗ್ರಂಥದಲ್ಲಿ ದಾಖಲಿಸಲ್ಪಡದೆ ಇರಲಾರದು.

۞ وَعِندَهُۥ مَفَاتِحُ ٱلْغَيْبِ لَا يَعْلَمُهَآ إِلَّا هُوَ ۚ وَيَعْلَمُ مَا فِى ٱلْبَرِّ وَٱلْبَحْرِ ۚ وَمَا تَسْقُطُ مِن وَرَقَةٍ إِلَّا يَعْلَمُهَا وَلَا حَبَّةٍ فِى ظُلُمَٰتِ ٱلْأَرْضِ وَلَا رَطْبٍ وَلَا يَابِسٍ إِلَّا فِى كِتَٰبٍ مُّبِينٍ ﴿٥٩﴾

60. ರಾತ್ರಿಯಲ್ಲಿ (ನಿದ್ರಿಸುವಾಗ) ನಿಮ್ಮನ್ನು ಸಂಪೂರ್ಣವಾಗಿ ವಶಪಡಿಸುವವನು ಅವನಾಗಿರುವನು. ಹಗಲು ನೀವು ಮಾಡಿರುವುದನ್ನೆಲ್ಲ ಅವನು ಅರಿಯುವನು. ತರುವಾಯ ನಿಶ್ಚಿತವಾದ ಜೀವಿತಾವಧಿ ಪೂರ್ತಿಯಾಗುವ ಸಲುವಾಗಿ ಹಗಲಿನಲ್ಲಿ ಅವನು ನಿಮ್ಮನ್ನು ಎಬ್ಬಿಸುವನು. ತರುವಾಯ ನಿಮ್ಮ ಮರಳುವಿಕೆಯು ಅವನೆಡೆಗಾಗಿದೆ. ನೀವು ಮಾಡುತ್ತಿರುವುದರ ಕುರಿತು ತರುವಾಯ ಅವನು ನಿಮಗೆ ತಿಳಿಸಿಕೊಡುವನು.

وَهُوَ ٱلَّذِى يَتَوَفَّىٰكُم بِٱلَّيْلِ وَيَعْلَمُ مَا جَرَحْتُم بِٱلنَّهَارِ ثُمَّ يَبْعَثُكُمْ فِيهِ لِيُقْضَىٰٓ أَجَلٌ مُّسَمًّى ۖ ثُمَّ إِلَيْهِ مَرْجِعُكُمْ ثُمَّ يُنَبِّئُكُم بِمَا كُنتُمْ تَعْمَلُونَ ﴿٦٠﴾

61. ಅವನು ತನ್ನ ದಾಸರ ಮೇಲೆ ಪರಮಾಧಿಕಾರವುಳ್ಳವನಾಗಿರುವನು. ನಿಮ್ಮ ಮೇಲುಸ್ತುವಾರಿಗಾಗಿ ಅವನು ಕಾವಲುಗಾರರನ್ನು ಕಳುಹಿಸುವನು. ಕೊನೆಗೆ ಅವರ ಪೈಕಿ ಓರ್ವನಿಗೆ ಮರಣವು ಆಸನ್ನವಾಗುವಾಗ ನಮ್ಮ ದೂತರು (ಮಲಕ್‌ಗಳು) ಅವನನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವರು. (ಈ ವಿಷಯದಲ್ಲಿ) ಅವರು ಯಾವುದೇ ಲೋಪವನ್ನೆಸಗಲಾರರು.

وَهُوَ ٱلْقَاهِرُ فَوْقَ عِبَادِهِۦ ۖ وَيُرْسِلُ عَلَيْكُمْ حَفَظَةً حَتَّىٰٓ إِذَا جَآءَ أَحَدَكُمُ ٱلْمَوْتُ تَوَفَّتْهُ رُسُلُنَا وَهُمْ لَا يُفَرِّطُونَ ﴿٦١﴾

1 ಮಫಾತಿಹ್ ಎಂಬ ಪದಕ್ಕೆ ಖಜಾನೆಗಳು, ಕೀಲಿಕೈಗಳು ಎಂಬ ಅರ್ಥಗಳಿವೆ. ಅಗೋಚರ ವಿಷಯಗಳ ಖಜಾನೆಗಳು ಮತ್ತು ಕೀಲಿಕೈಗಳೆಲ್ಲವೂ ಅಲ್ಲಾಹುವಿನ ವಶದಲ್ಲಿವೆ.

ثُمَّ رُدُّوٓاْ إِلَى ٱللَّهِ مَوۡلَىٰهُمُ ٱلۡحَقِّۚ أَلَا لَهُ
ٱلۡحُكۡمُ وَهُوَ أَسۡرَعُ ٱلۡحَٰسِبِينَ ٦٢

**62.** ತರುವಾಯ ಅವರನ್ನು ಅವರ ನೈಜ ರಕ್ಷಕನಾದ ಅಲ್ಲಾಹುವಿನೆಡೆಗೆ ಮರಳಿಸಲಾಗುವುದು. ತಿಳಿಯಿರಿ! ಆಜ್ಞಾಧಿಕಾರವು ಅವನಿಗಿರುವುದಾಗಿದೆ. ಅವನು ಅತಿ ಶೀಘ್ರವಾಗಿ ವಿಚಾರಣೆ ನಡೆಸುವವನಾಗಿರುವನು.

قُلۡ مَن يُنَجِّيكُم مِّن ظُلُمَٰتِ ٱلۡبَرِّ
وَٱلۡبَحۡرِ تَدۡعُونَهُۥ تَضَرُّعٗا وَخُفۡيَةٗ
لَّئِنۡ أَنجَىٰنَا مِنۡ هَٰذِهِۦ لَنَكُونَنَّ مِنَ
ٱلشَّٰكِرِينَ ٦٣

**63.** ಹೇಳಿರಿ: ‘ಅಲ್ಲಾಹು ನಮ್ಮನ್ನು ಇದರಿಂದ (ಈ ವಿಪತ್ತುಗಳಿಂದ) ರಕ್ಷಿಸಿದರೆ ನಿಸ್ಸಂಶಯವಾಗಿಯೂ ನಾವು ಕೃತಜ್ಞತೆ ಸಲ್ಲಿಸುವವರ ಪೈಕಿ ಸೇರುವೆವು ಎನ್ನುತ್ತಾ ವಿನಮ್ರವಾಗಿಯೂ ರಹಸ್ಯವಾಗಿಯೂ ನೀವು ಅವರನ್ನು ಕರೆದು ಪ್ರಾರ್ಥಿಸುವಾಗ ನೆಲ ಮತ್ತು ಸಮುದ್ರದ ಅಂಧಕಾರಗಳಿಂದ[1] ನಿಮ್ಮನ್ನು ರಕ್ಷಿಸುವವನು ಯಾರು?’

قُلِ ٱللَّهُ يُنَجِّيكُم مِّنۡهَا وَمِن كُلِّ كَرۡبٖ
ثُمَّ أَنتُمۡ تُشۡرِكُونَ ٦٤

**64.** ಹೇಳಿರಿ: ‘ಅವುಗಳಿಂದ ಮತ್ತು ಇತರೆಲ್ಲಾ ವಿಷಮಸ್ಥಿತಿಗಳಿಂದ ನಿಮ್ಮನ್ನು ರಕ್ಷಿಸುವವನು ಅಲ್ಲಾಹುವಾಗಿರುವನು. ಅದರ ಬಳಿಕವೂ ನೀವು ಅವನೊಂದಿಗೆ ಸಹಭಾಗಿತ್ವವನ್ನು ಮಾಡುತ್ತಿರುವಿರಿ.’

قُلۡ هُوَ ٱلۡقَادِرُ عَلَىٰٓ أَن يَبۡعَثَ عَلَيۡكُمۡ
عَذَابٗا مِّن فَوۡقِكُمۡ أَوۡ مِن تَحۡتِ
أَرۡجُلِكُمۡ أَوۡ يَلۡبِسَكُمۡ شِيَعٗا وَيُذِيقَ
بَعۡضَكُم بَأۡسَ بَعۡضٍۗ ٱنظُرۡ كَيۡفَ
نُصَرِّفُ ٱلۡأٓيَٰتِ لَعَلَّهُمۡ يَفۡقَهُونَ ٦٥

**65.** ಹೇಳಿರಿ: ‘ನಿಮ್ಮ ಮೇಲ್ಭಾಗದಿಂದ ಅಥವಾ ನಿಮ್ಮ ಕಾಲುಗಳ ಅಡಿಭಾಗದಿಂದ ನಿಮ್ಮ ಮೇಲೆ ಶಿಕ್ಷೆಯನ್ನು ಕಳುಹಿಸಲು ಅಥವಾ ನಿಮ್ಮನ್ನು ವಿಭಿನ್ನ ಬಣಗಳನ್ನಾಗಿ ಮಾಡಿ ಗೊಂದಲಕ್ಕೀಡುಮಾಡಲು ಮತ್ತು ನಿಮ್ಮ ಪೈಕಿ ಕೆಲವರ ಹಿಂಸೆಯನ್ನು ಇತರ ಕೆಲವರು ಅನುಭವಿಸುವಂತೆ ಮಾಡಲು ಅವನು ಸಾಮರ್ಥ್ಯವುಳ್ಳವನಾಗಿರುವನು.’ ಅವರು ಗ್ರಹಿಸುವ ಸಲುವಾಗಿ ನಾವು ಅವರಿಗೆ ದೃಷ್ಟಾಂತಗಳನ್ನು ವಿವಿಧ ರೂಪಗಳಲ್ಲಿ ಹೇಗೆ ವಿವರಿಸಿಕೊಡುತ್ತಿರುವೆವು ಎಂಬುದನ್ನು ನೋಡಿರಿ.

---

1 ಝುಲುಮಾತ್ ಎಂಬುದರ ಭಾಷಿಕ ಅರ್ಥವು ಅಂಧಕಾರಗಳು ಎಂದಾಗಿದೆ. ಸಂಕಷ್ಟಗಳು ವಿಪತ್ತುಗಳು, ಮೌಢ್ಯತೆಗಳು ಇತ್ಯಾದಿಗಳಿಗೆ ಈ ಪದವನ್ನು ಆಲಂಕಾರಿಕವಾಗಿ ಪ್ರಯೋಗಿಸಲಾಗುತ್ತದೆ. ಇಲ್ಲಿ ಎಲ್ಲ ರೀತಿಯ ಅಂಧಕಾರಗಳನ್ನೂ ಉದ್ದೇಶಿಸಬಹುದಾಗಿದೆ.

66. (ಓ ಪ್ರವಾದಿಯವರೇ!) ಇದು ಸತ್ಯವಾಗಿದ್ದೂ ಸಹ ತಮ್ಮ ಜನತೆಯು ಇದನ್ನು ನಿಷೇಧಿಸಿದೆ. ತಾವು ಹೇಳಿರಿ: 'ನಾನು ನಿಮ್ಮ ಮೇಲೆ(ಹೊಣೆ) ವಹಿಸಲ್ಪಟ್ಟವನಲ್ಲ.'

وَكَذَّبَ بِهِۦ قَوۡمُكَ وَهُوَ ٱلۡحَقُّۚ قُل لَّسۡتُ عَلَيۡكُم بِوَكِيلٖ ﴿٦٦﴾

67. ಪ್ರತಿಯೊಂದು ವೃತ್ತಾಂತಕ್ಕೂ ಅದು (ಸತ್ಯವಾಗಿ) ಪ್ರಕಟವಾಗುವ ಒಂದು ಸಂದರ್ಭವಿದೆ. ನೀವು ಸದ್ಯವೇ ಅರಿತುಕೊಳ್ಳುವಿರಿ.

لِّكُلِّ نَبَإٖ مُّسۡتَقَرّٞۚ وَسَوۡفَ تَعۡلَمُونَ ﴿٦٧﴾

68. ನಮ್ಮ ದೃಷ್ಟಾಂತಗಳನ್ನು ಗೇಲಿ ಮಾಡುವವರನ್ನು ಕಂಡರೆ ಅವರು ಬೇರಾವುದಾದರೂ ವಿಷಯವನ್ನು ಪ್ರವೇಶಿಸುವವರೆಗೆ ತಾವು ಅವರಿಂದ ವಿಮುಖರಾಗಿರಿ. ಇನ್ನು ಸೈತಾನನೇನಾದರೂ ತಮಗೆ ಮರೆಯುವಂತೆ ಮಾಡಿದರೆ ಜ್ಞಾಪಕವಾದ ನಂತರ ಅಕ್ರಮಿಗಳಾಗಿರುವ ಆ ಜನರ ಜೊತೆಗೆ ತಾವು ಕೂರದಿರಿ.

وَإِذَا رَأَيۡتَ ٱلَّذِينَ يَخُوضُونَ فِيٓ ءَايَٰتِنَا فَأَعۡرِضۡ عَنۡهُمۡ حَتَّىٰ يَخُوضُواْ فِي حَدِيثٍ غَيۡرِهِۦۚ وَإِمَّا يُنسِيَنَّكَ ٱلشَّيۡطَٰنُ فَلَا تَقۡعُدۡ بَعۡدَ ٱلذِّكۡرَىٰ مَعَ ٱلۡقَوۡمِ ٱلظَّٰلِمِينَ ﴿٦٨﴾

69. ಭಯಭಕ್ತಿ ಪಾಲಿಸುವವರಿಗೆ ಅವರ (ಅಕ್ರಮಿಗಳ) ವಿಚಾರಣೆ ಮಾಡಬೇಕಾದ ಯಾವ ಹೊಣೆಯೂ ಇಲ್ಲ. ಆದರೆ ನೆನಪಿಸಿಕೊಡಬೇಕಾಗಿದೆ. ಅವರು ಭಯಭಕ್ತಿ ಪಾಲಿಸುವವರಾಗಲೂಬಹುದು.

وَمَا عَلَى ٱلَّذِينَ يَتَّقُونَ مِنۡ حِسَابِهِم مِّن شَيۡءٖ وَلَٰكِن ذِكۡرَىٰ لَعَلَّهُمۡ يَتَّقُونَ ﴿٦٩﴾

70. ತಮ್ಮ ಧರ್ಮವನ್ನು ಆಟ ಮತ್ತು ಮನರಂಜನೆಯಾಗಿ ಮಾಡಿಕೊಂಡವರನ್ನು ಹಾಗೂ ಐಹಿಕ ಜೀವನವನ್ನು ಕಂಡು ವಂಚನೆಗೊಳಗಾದವರನ್ನು ಅವರ ಪಾಡಿಗೆ ಬಿಟ್ಟುಬಿಡಿರಿ. ಓರ್ವ ವ್ಯಕ್ತಿಯು ತಾನು ಮಾಡಿಟ್ಟಿರುವ ಕರ್ಮಗಳ ಫಲವಾಗಿ ವಿನಾಶದೆಡೆಗೆ ತಳ್ಳಲ್ಪಡುವ ಸಾಧ್ಯತೆಯಿರುವುದರಿಂದ ಇದರ (ಈ ಕುರ್‌ಆನ್‌ನ) ಮೂಲಕ ಅವರಿಗೆ ಉಪದೇಶ ನೀಡಿರಿ. ಆ ವ್ಯಕ್ತಿಗೆ ಅಲ್ಲಾಹುವಿನ ಹೊರತು ಅನ್ಯ ರಕ್ಷಕನಾಗಲಿ, ಶಿಫಾರಸ್ಸುಗಾರನಾಗಲಿ ಇರಲಾರರು. ಸಕಲ ಪ್ರಾಯಶ್ಚಿತ್ತ ನೀಡಿದರೂ ಅವನಿಂದ ಅದನ್ನು ಸ್ವೀಕರಿಸಲಾಗದು. ಅವರು

وَذَرِ ٱلَّذِينَ ٱتَّخَذُواْ دِينَهُمۡ لَعِبٗا وَلَهۡوٗا وَغَرَّتۡهُمُ ٱلۡحَيَوٰةُ ٱلدُّنۡيَاۚ وَذَكِّرۡ بِهِۦٓ أَن تُبۡسَلَ نَفۡسُۢ بِمَا كَسَبَتۡ لَيۡسَ لَهَا مِن دُونِ ٱللَّهِ وَلِيّٞ وَلَا شَفِيعٞ وَإِن تَعۡدِلۡ كُلَّ عَدۡلٖ لَّا يُؤۡخَذۡ مِنۡهَآۗ أُوْلَٰٓئِكَ ٱلَّذِينَ أُبۡسِلُواْ بِمَا كَسَبُواْۖ لَهُمۡ شَرَابٞ مِّنۡ حَمِيمٖ وَعَذَابٌ أَلِيمُۢ بِمَا كَانُواْ يَكۡفُرُونَ ﴿٧٠﴾

ತಾವು ಸ್ವತಃ ಮಾಡಿಟ್ಟಿರುವ ಕರ್ಮಗಳ ಫಲವಾಗಿ ವಿನಾಶದೆಡೆಗೆ ತಳ್ಳಲ್ಪಟ್ಟವರಾಗಿರುವರು. ಅವರು ನಿಷೇಧಿಸುತ್ತಿರುವುದರ ಫಲವಾಗಿ ಅವರಿಗೆ ಕುದಿಯುವ ನೀರು ಮತ್ತು ಯಾತನಾಮಯ ಶಿಕ್ಷೆಯಿದೆ.

71. ಹೇಳಿರಿ: 'ಅಲ್ಲಾಹುವಿನ ಹೊರತು ನಮಗೆ ಉಪಕಾರವನ್ನಾಗಲಿ, ಹಾನಿಯನ್ನಾಗಲಿ ಮಾಡಲು ಸಾಧ್ಯವಿಲ್ಲದವರನ್ನು ನಾವು ಕರೆದು ಪ್ರಾರ್ಥಿಸುವುದೇ? ಅಲ್ಲಾಹು ನಮ್ಮನ್ನು ಸನ್ಮಾರ್ಗಕ್ಕೆ ಸೇರಿಸಿದ ಬಳಿಕ ನಾವು ಹಿಂದಕ್ಕೆ ಮರಳಿಸಲ್ಪಡುವುದೇ? (ತರುವಾಯ) ಸೈತಾನರು ಮರುಳು ಮಾಡಿ ಭೂಮಿಯಲ್ಲಿ ದಿಗ್ಭ್ರಾಂತನಾಗಿ ಅಲೆಯುವ ಒಬ್ಬನಂತೆ (ನಾವಾಗುವುದೇ?). 'ನಮ್ಮ ಬಳಿಗೆ ಬಾ' ಎಂದು ಹೇಳುತ್ತಾ ಸನ್ಮಾರ್ಗಕ್ಕೆ ಆಹ್ವಾನಿಸುವ ಕೆಲವು ಗೆಳೆಯರೂ ಅವನಿಗಿರುವರು. ಹೇಳಿರಿ: 'ಖಂಡಿತವಾಗಿಯೂ ಅಲ್ಲಾಹುವಿನ ಮಾರ್ಗದರ್ಶನವೇ ನೈಜ ಮಾರ್ಗದರ್ಶನ. ಸರ್ವಲೋಕಗಳ ರಬ್‌ಗೆ ನಾವು ಶರಣಾಗಬೇಕೆಂದು ನಮ್ಮೊಂದಿಗೆ ಆಜ್ಞಾಪಿಸಲಾಗಿದೆ.'

قُلۡ أَنَدۡعُواْ مِن دُونِ ٱللَّهِ مَا لَا يَنفَعُنَا وَلَا يَضُرُّنَا وَنُرَدُّ عَلَىٰٓ أَعۡقَابِنَا بَعۡدَ إِذۡ هَدَىٰنَا ٱللَّهُ كَٱلَّذِي ٱسۡتَهۡوَتۡهُ ٱلشَّيَٰطِينُ فِي ٱلۡأَرۡضِ حَيۡرَانَ لَهُۥٓ أَصۡحَٰبٞ يَدۡعُونَهُۥٓ إِلَى ٱلۡهُدَى ٱئۡتِنَاۗ قُلۡ إِنَّ هُدَى ٱللَّهِ هُوَ ٱلۡهُدَىٰۖ وَأُمِرۡنَا لِنُسۡلِمَ لِرَبِّ ٱلۡعَٰلَمِينَ ٧١

72. ನಮಾಝನ್ನು ಸಂಸ್ಥಾಪಿಸಿರಿ ಮತ್ತು ಅವನನ್ನು ಭಯಪಡಿರಿ ಎಂದೂ (ಆಜ್ಞಾಪಿಸಲಾಗಿದೆ). ನಿಮ್ಮೆಲ್ಲರನ್ನೂ ಒಟ್ಟುಗೂಡಿಸಲಾಗುವುದು ಅವನೆಡೆಗೇ ಆಗಿದೆ.

وَأَنۡ أَقِيمُواْ ٱلصَّلَوٰةَ وَٱتَّقُوهُۚ وَهُوَ ٱلَّذِيٓ إِلَيۡهِ تُحۡشَرُونَ ٧٢

73. ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿದವನು ಅವನಾಗಿರುವನು. ಅವನು 'ಉಂಟಾಗು' ಎಂದು ಹೇಳುವ ದಿನದಂದು ಅದು ಉಂಟಾಗುವುದು. ಅವನ ಮಾತು ಸತ್ಯವಾಗಿದೆ. ಕಹಳೆಯಲ್ಲಿ ಊದಲಾಗುವ ದಿನದಂದು[1] ಆಧಿಪತ್ಯವು

وَهُوَ ٱلَّذِي خَلَقَ ٱلسَّمَٰوَٰتِ وَٱلۡأَرۡضَ بِٱلۡحَقِّۖ وَيَوۡمَ يَقُولُ كُن فَيَكُونُۚ قَوۡلُهُ ٱلۡحَقُّۚ وَلَهُ ٱلۡمُلۡكُ يَوۡمَ يُنفَخُ فِي ٱلصُّورِۚ عَٰلِمُ ٱلۡغَيۡبِ وَٱلشَّهَٰدَةِۚ وَهُوَ ٱلۡحَكِيمُ ٱلۡخَبِيرُ ٧٣

1 ಅಂತ್ಯದಿನದಂದು ಮತ್ತು ಪುನರುತ್ಥಾನದಂದು ಕಹಳೆಯಲ್ಲಿ ಊದಲಾಗುವುದೆಂದು ಕುರ್‌ಆನ್ ಸ್ಪಷ್ಟಪಡಿಸಿದೆ. ಆದರೆ ಕಹಳೆಯ ಆಕೃತಿಯ ಕುರಿತಾಗಲಿ ಊದಲಾಗುವ ರೀತಿಯ ಕುರಿತಾಗಲಿ ನಮಗೆ ತಿಳಿದಿಲ್ಲ. ಅಗೋಚರ

ಅವನಿಗೆ ಮಾತ್ರವಾಗಿರುವುದು. ಅವನು ಅಗೋಚರ ಮತ್ತು ಗೋಚರವಾಗಿರುವುದನ್ನು ಅರಿಯುವವನಾಗಿರುವನು. ಅವನು ಯುಕ್ತಿಪೂರ್ಣನೂ ಸೂಕ್ಷ್ಮಜ್ಞಾನಿಯೂ ಆಗಿರುವನು.

۞ وَإِذۡ قَالَ إِبۡرَٰهِيمُ لِأَبِيهِ ءَازَرَ أَتَتَّخِذُ أَصۡنَامًا ءَالِهَةً إِنِّيٓ أَرَىٰكَ وَقَوۡمَكَ فِي ضَلَٰلٖ مُّبِينٖ ﴿٧٤﴾

74. ಇಬ್ರಾಹೀಮ್‌ರು ತಮ್ಮ ತಂದೆ ಆಝರ್‌ನೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). 'ತಾವು ಕೆಲವು ವಿಗ್ರಹಗಳನ್ನು ಆರಾಧ್ಯರನ್ನಾಗಿ ಮಾಡಿಕೊಂಡಿರುವಿರಾ? ಖಂಡಿತವಾಗಿಯೂ ತಾವು ಮತ್ತು ತಮ್ಮ ಜನತೆಯು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವುದಾಗಿ ನಾನು ಕಾಣುತ್ತಿರುವೆನು.'

وَكَذَٰلِكَ نُرِيٓ إِبۡرَٰهِيمَ مَلَكُوتَ ٱلسَّمَٰوَٰتِ وَٱلۡأَرۡضِ وَلِيَكُونَ مِنَ ٱلۡمُوقِنِينَ ﴿٧٥﴾

75. ಹೀಗೆ ನಾವು ಇಬ್ರಾಹೀಮ್‌ರಿಗೆ, ಅವರು ದೃಢ ವಿಶ್ವಾಸಿಗಳ ಪೈಕಿ ಸೇರಿದವರಾಗುವ ಸಲುವಾಗಿ ಆಕಾಶಗಳ ಮತ್ತು ಭೂಮಿಯ ಆಧಿಪತ್ಯಗಳನ್ನು ತೋರಿಸಿಕೊಟ್ಟೆವು.

فَلَمَّا جَنَّ عَلَيۡهِ ٱلَّيۡلُ رَءَا كَوۡكَبٗاۖ قَالَ هَٰذَا رَبِّيۖ فَلَمَّآ أَفَلَ قَالَ لَآ أُحِبُّ ٱلۡأٓفِلِينَ ﴿٧٦﴾

76. ರಾತ್ರಿಯು ಆತನನ್ನು (ಅಂಧಕಾರದಿಂದ) ಮುಚ್ಚಿದಾಗ ಆತ ಒಂದು ನಕ್ಷತ್ರವನ್ನು ಕಂಡರು. ಆತ ಹೇಳಿದರು: 'ಇದು ನನ್ನ ಪ್ರಭು!' ತರುವಾಯ ಅದು ಅಸ್ತಮಿಸಿದಾಗ ಆತ ಹೇಳಿದರು: 'ಅಸ್ತಮಿಸಿ ಹೋಗುವವರನ್ನು ನಾನು ಮೆಚ್ಚಲಾರೆನು.'[1]

فَلَمَّا رَءَا ٱلۡقَمَرَ بَازِغٗا قَالَ هَٰذَا رَبِّيۖ فَلَمَّآ أَفَلَ قَالَ لَئِن لَّمۡ يَهۡدِنِي رَبِّي لَأَكُونَنَّ مِنَ ٱلۡقَوۡمِ ٱلضَّآلِّينَ ﴿٧٧﴾

77. ತರುವಾಯ ಚಂದ್ರ ಉದಯವಾಗುವುದನ್ನು ಕಂಡಾಗ ಆತ ಹೇಳಿದರು: 'ಇದು ನನ್ನ ಪ್ರಭು!' ತರುವಾಯ ಅದೂ ಅಸ್ತಮಿಸಿದಾಗ ಆತ ಹೇಳಿದರು: 'ನನ್ನ ರಬ್ ನನಗೆ ಸನ್ಮಾರ್ಗವನ್ನು ತೋರಿಸಿಕೊಡದಿದ್ದರೆ

ವಿಷಯಗಳ ಪೈಕಿ ಪ್ರವಾದಿಗಳ ಮೂಲಕ ತಿಳಿಸಿಕೊಡಲಾಗಿರುವುದರ ಹೊರತು ಬೇರೇನನ್ನೂ ತಿಳಿಯಲು ನಮಗೆ ಸಾಧ್ಯವಿಲ್ಲ.

1 ಇಬ್ರಾಹೀಮ್(عَلَيْهِ السَّلَامُ)ರವರ ಜನತೆಯು ವಿಗ್ರಹಗಳ ಜೊತೆಗೆ ಸೂರ್ಯ, ಚಂದ್ರ ಹಾಗೂ ನಕ್ಷತ್ರಗಳನ್ನು ಆರಾಧಿಸುತ್ತಿದ್ದರು. ಅಲ್ಲಾಹುವಿನ ಸೃಷ್ಟಿಗಳಾದ ಆಕಾಶಕಾಯಗಳಿಗೆ ದಿವ್ಯತ್ವವನ್ನು ಕಲ್ಪಿಸಿ ಆರಾಧಿಸುವುದು ಬಹಳ ದೊಡ್ಡ ಮೌಢ್ಯವಾಗಿದೆ ಎಂಬುದನ್ನು ಮನದಟ್ಟು ಮಾಡಿಸಲು ಇಬ್ರಾಹೀಮ್(عَلَيْهِ السَّلَامُ)ರವರು ಇಲ್ಲಿ ಪ್ರಯತ್ನಿಸುತ್ತಿದ್ದಾರೆ.

ಖಂಡಿತವಾಗಿಯೂ ನಾನು ಪಥಭ್ರಷ್ಟ ಜನತೆಯೊಂದಿಗೆ ಸೇರಿದವನಾಗುವೆನು.'

**78.** ತರುವಾಯ ಸೂರ್ಯ ಉದಯವಾಗುವುದನ್ನು ಕಂಡಾಗ ಅವರು ಹೇಳಿದರು: 'ಇದು ನನ್ನ ಪ್ರಭು. ಇದು ಅತ್ಯಂತ ದೊಡ್ಡದಾಗಿದೆ.' ತರುವಾಯ ಅದೂ ಅಸ್ತಮಿಸಿದಾಗ ಅವರು ಹೇಳಿದರು: 'ಓ ನನ್ನ ಜನರೇ! ಖಂಡಿತವಾಗಿಯೂ ನೀವು (ಅಲ್ಲಾಹುವಿನೊಂದಿಗೆ) ಸಹಭಾಗಿಯನ್ನಾಗಿ ಮಾಡುತ್ತಿರುವ ಎಲ್ಲದರಿಂದಲೂ ನಾನು ಸಂಬಂಧಮುಕ್ತನಾಗಿರುವೆನು.'

فَلَمَّا رَءَا ٱلشَّمْسَ بَازِغَةً قَالَ هَٰذَا رَبِّي
هَٰذَآ أَكْبَرُۖ فَلَمَّآ أَفَلَتْ قَالَ يَٰقَوْمِ إِنِّي
بَرِيٓءٌ مِّمَّا تُشْرِكُونَ ۝٧٨

**79.** 'ಖಂಡಿತವಾಗಿಯೂ ನಾನು ಸತ್ಯಮಾರ್ಗದಲ್ಲಿ ದೃಢವಾಗಿ ನಿಂತವನಾಗಿ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನೆಡೆಗೆ ನನ್ನ ಮುಖವನ್ನು ತಿರುಗಿಸಿರುವೆನು. ನಾನು ಬಹುದೇವ ವಿಶ್ವಾಸಿಗಳಲ್ಲಿ ಸೇರಿದವನಲ್ಲ.'

إِنِّي وَجَّهْتُ وَجْهِيَ لِلَّذِي فَطَرَ
ٱلسَّمَٰوَٰتِ وَٱلْأَرْضَ حَنِيفًاۖ وَمَآ أَنَا۠ مِنَ
ٱلْمُشْرِكِينَ ۝٧٩

**80.** ಅವರ ಜನತೆಯು ಅವರೊಂದಿಗೆ ತರ್ಕಿಸಿತು. ಅವರು ಹೇಳಿದರು: 'ನೀವು ಅಲ್ಲಾಹುವಿನ ವಿಷಯದಲ್ಲಿ ನನ್ನೊಂದಿಗೆ ತರ್ಕಿಸುತ್ತಿರುವಿರಾ? ಖಂಡಿತವಾಗಿಯೂ ಅವನು ನನ್ನನ್ನು ಸನ್ಮಾರ್ಗದಲ್ಲಿ ಸೇರಿಸಿರುವನು. ನೀವು ಅವನೊಂದಿಗೆ ಸಹಭಾಗಿಗಳನ್ನಾಗಿ ಮಾಡುತ್ತಿರುವ ಯಾವುದನ್ನೂ ನಾನು ಭಯಪಡಲಾರೆನು. ನನ್ನ ರಬ್ ಇಚ್ಛಿಸುವುದರ ಹೊರತು (ಏನೂ ಸಂಭವಿಸದು). ನನ್ನ ರಬ್‌ನ ಜ್ಞಾನವು ಸರ್ವ ವಿಷಯಗಳನ್ನೂ ಆವರಿಸುವಷ್ಟು ವಿಶಾಲವಾಗಿದೆ. ನೀವೇಕೆ ಚಿಂತಿಸುವುದಿಲ್ಲ?'

وَحَآجَّهُۥ قَوْمُهُۥۚ قَالَ أَتُحَٰٓجُّوٓنِّي فِي ٱللَّهِ
وَقَدْ هَدَىٰنِۚ وَلَآ أَخَافُ مَا تُشْرِكُونَ بِهِۦٓ
إِلَّآ أَن يَشَآءَ رَبِّي شَيْـًٔاۗ وَسِعَ رَبِّي كُلَّ
شَيْءٍ عِلْمًاۗ أَفَلَا تَتَذَكَّرُونَ ۝٨٠

**81.** 'ನೀವು (ಅಲ್ಲಾಹುವಿನೊಂದಿಗೆ) ಸಹಭಾಗಿಯಾಗಿ ಮಾಡಿರುವವರನ್ನು ನಾನು ಹೇಗೆ ಭಯಪಡಲಿ? ಅಲ್ಲಾಹು ನಿಮ್ಮ ಮೇಲೆ ಯಾವ ಪುರಾವೆಯನ್ನೂ

وَكَيْفَ أَخَافُ مَآ أَشْرَكْتُمْ وَلَا تَخَافُونَ
أَنَّكُمْ أَشْرَكْتُم بِٱللَّهِ مَا لَمْ يُنَزِّلْ بِهِۦ
عَلَيْكُمْ سُلْطَٰنًاۚ فَأَيُّ ٱلْفَرِيقَيْنِ أَحَقُّ

ಇಳಿಸಿಕೊಡದಂತಹವುಗಳನ್ನು ಅವನೊಂದಿಗೆ ಸಹಭಾಗಿಯಾಗಿ ಮಾಡಿರುವುದರ ಕುರಿತು ನೀವಂತೂ ಭಯಪಡುತ್ತಿಲ್ಲ.[1] ಹೀಗಿರುವಾಗ ಈ ಎರಡು ಬಣಗಳ ಪೈಕಿ ನಿರ್ಭಯರಾಗಿರಲು ಹೆಚ್ಚು ಅರ್ಹರು ಯಾರು? ನಿಮಗೆ ತಿಳಿದಿದ್ದರೆ (ಹೇಳಿರಿ).'

بِٱلْأَمْنِ ۖ إِن كُنتُمْ تَعْلَمُونَ ﴿٨١﴾

**82.** ಸತ್ಯವಿಶ್ವಾಸವಿಟ್ಟವರು ಮತ್ತು ತಮ್ಮ ವಿಶ್ವಾಸದಲ್ಲಿ ಅಕ್ರಮವನ್ನು ಬೆರೆಸದವರು ಯಾರೋ ಅವರಿಗೆ ನಿರ್ಭೀತಿಯಿದೆ. ಸನ್ಮಾರ್ಗ ಪಡೆದವರು ಅವರೇ ಆಗಿರುವರು.

ٱلَّذِينَ ءَامَنُوا۟ وَلَمْ يَلْبِسُوٓا۟ إِيمَـٰنَهُم بِظُلْمٍ أُو۟لَـٰٓئِكَ لَهُمُ ٱلْأَمْنُ وَهُم مُّهْتَدُونَ ﴿٨٢﴾

**83.** ಇದು ನಾವು ಇಬ್ರಾಹೀಮ್‌ರಿಗೆ ಅವರ ಜನತೆಯ ವಿರುದ್ಧವಾಗಿ ನೀಡಿದ ನಮ್ಮ ಪುರಾವೆಯಾಗಿದೆ. ನಾವಿಚ್ಛಿಸುವವರ ಪದವಿಗಳನ್ನು ನಾವು ಏರಿಸುವೆವು. ಖಂಡಿತವಾಗಿಯೂ ತಮ್ಮ ರಬ್ ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.

وَتِلْكَ حُجَّتُنَآ ءَاتَيْنَـٰهَآ إِبْرَٰهِيمَ عَلَىٰ قَوْمِهِۦ ۚ نَرْفَعُ دَرَجَـٰتٍ مَّن نَّشَآءُ ۗ إِنَّ رَبَّكَ حَكِيمٌ عَلِيمٌ ﴿٨٣﴾

**84.** ನಾವು ಅವರಿಗೆ ಇಸ್‌ಹಾಕ್ ಮತ್ತು ಯಅ್‌ಕೂಬ್‌ರನ್ನು ದಯಪಾಲಿಸಿದೆವು. ಅವರೆಲ್ಲರನ್ನೂ ನಾವು ಸನ್ಮಾರ್ಗದಲ್ಲಿ ಸೇರಿಸಿದೆವು. ನೂಹ್‌ರನ್ನು ಅದಕ್ಕಿಂತ ಮೊದಲೇ ನಾವು ಸನ್ಮಾರ್ಗದಲ್ಲಿ ಸೇರಿಸಿದ್ದೆವು. ಅವರ ಸಂತತಿಗಳಲ್ಲಿ ಸೇರಿದ ದಾವೂದ್, ಸುಲೈಮಾನ್, ಅಯ್ಯೂಬ್, ಯೂಸುಫ್, ಮೂಸಾ ಮತ್ತು ಹಾರೂನ್‌ರನ್ನೂ (ನಾವು ಸನ್ಮಾರ್ಗದಲ್ಲಿ ಸೇರಿಸಿದೆವು). ಹೀಗೆ ನಾವು ಸತ್ಕರ್ಮಿಗಳಿಗೆ ಪ್ರತಿಫಲವನ್ನು ನೀಡುವೆವು.

وَوَهَبْنَا لَهُۥٓ إِسْحَـٰقَ وَيَعْقُوبَ ۚ كُلًّا هَدَيْنَا ۚ وَنُوحًا هَدَيْنَا مِن قَبْلُ ۖ وَمِن ذُرِّيَّتِهِۦ دَاوُۥدَ وَسُلَيْمَـٰنَ وَأَيُّوبَ وَيُوسُفَ وَمُوسَىٰ وَهَـٰرُونَ ۚ وَكَذَٰلِكَ نَجْزِى ٱلْمُحْسِنِينَ ﴿٨٤﴾

**85.** ಝಕರಿಯ್ಯಾ, ಯಹ್ಯಾ, ಈಸಾ ಮತ್ತು ಇಲ್ಯಾಸ್‌ರನ್ನೂ (ನಾವು ಸನ್ಮಾರ್ಗದಲ್ಲಿ ಸೇರಿಸಿದೆವು). ಅವರೆಲ್ಲರೂ ಸಜ್ಜನರ ಪೈಕಿ ಸೇರಿದವರಾಗಿರುವರು.

وَزَكَرِيَّا وَيَحْيَىٰ وَعِيسَىٰ وَإِلْيَاسَ ۖ كُلٌّ مِّنَ ٱلصَّـٰلِحِينَ ﴿٨٥﴾

---

1 ಅಲ್ಲಾಹುವನ್ನು ಭಯಪಡುವವರು ಸೃಷ್ಟಿಗಳಲ್ಲಿ ಯಾರನ್ನೂ ಭಯಪಡಬೇಕಾದ ಪ್ರಮೇಯವೇ ಬರುವುದಿಲ್ಲ. ಬಹುದೇವವಿಶ್ವಾಸಿಗಳಿಗೆ ಅಸಂಖ್ಯ ದೇವದೇವತೆಗಳನ್ನು ಭಯಪಡಬೇಕಾಗಿ ಬರುತ್ತದೆ. ನಿಜವಾದ ನಿರ್ಭೀತಿಯ ಕುರಿತು ಅವರಿಗೆ ಚಿಂತಿಸಲು ಸಹ ಸಾಧ್ಯವಿಲ್ಲ.

**86.** ಇಸ್ಮಾಈಲ್, ಅಲ್‌ಯಸಅ್, ಯೂನುಸ್ ಮತ್ತು ಲೂತ್‌ರನ್ನೂ (ನಾವು ಸನ್ಮಾರ್ಗದಲ್ಲಿ ಸೇರಿಸಿದೆವು). ಅವರೆಲ್ಲರನ್ನೂ ನಾವು ಸರ್ವಲೋಕದವರ ಪೈಕಿ ಶ್ರೇಷ್ಠರನ್ನಾಗಿ ಮಾಡಿದೆವು.

وَإِسۡمَٰعِيلَ وَٱلۡيَسَعَ وَيُونُسَ وَلُوطٗاۚ وَكُلّٗا فَضَّلۡنَا عَلَى ٱلۡعَٰلَمِينَ ٨٦

**87.** ಅವರ ಪೂರ್ವಜರಿಂದಲೂ, ಸಂತತಿಗಳಿಂದಲೂ, ಸಹೋದರರಿಂದಲೂ (ಕೆಲವರನ್ನು ನಾವು ಶ್ರೇಷ್ಠರನ್ನಾಗಿ ಮಾಡಿದೆವು). ಅವರನ್ನು ನಾವು ವಿಶೇಷವಾಗಿ ಆರಿಸಿದೆವು ಮತ್ತು ನೇರಮಾರ್ಗದೆಡೆಗೆ ಮುನ್ನಡೆಸಿದೆವು.

وَمِنۡ ءَابَآئِهِمۡ وَذُرِّيَّٰتِهِمۡ وَإِخۡوَٰنِهِمۡۖ وَٱجۡتَبَيۡنَٰهُمۡ وَهَدَيۡنَٰهُمۡ إِلَىٰ صِرَٰطٖ مُّسۡتَقِيمٖ ٨٧

**88.** ಇದು ಅಲ್ಲಾಹುವಿನ ಮಾರ್ಗದರ್ಶನವಾಗಿದೆ. ತನ್ಮೂಲಕ ಅವನು ತನ್ನ ದಾಸರ ಪೈಕಿ ತಾನಿಚ್ಛಿಸುವವರನ್ನು ಸನ್ಮಾರ್ಗದೆಡೆಗೆ ಮುನ್ನಡೆಸುವನು. ಅವರೇನಾದರೂ (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡಿರುತ್ತಿದ್ದರೆ ಅವರು ಮಾಡಿರುವುದೆಲ್ಲವೂ ಅವರ ಪಾಲಿಗೆ ನಿಷ್ಫಲವಾಗಿ ಹೋಗುತ್ತಿದ್ದವು.[1]

ذَٰلِكَ هُدَى ٱللَّهِ يَهۡدِي بِهِۦ مَن يَشَآءُ مِنۡ عِبَادِهِۦۚ وَلَوۡ أَشۡرَكُواْ لَحَبِطَ عَنۡهُم مَّا كَانُواْ يَعۡمَلُونَ ٨٨

**89.** ನಾವು ಗ್ರಂಥ, ಜ್ಞಾನ ಮತ್ತು ಪ್ರವಾದಿತ್ವವನ್ನು ನೀಡಿರುವುದು ಅವರಿಗೇ ಆಗಿದೆ. ಇವರೇನಾದರೂ ಅವುಗಳನ್ನು ನಿಷೇಧಿಸುವುದಾದರೆ ಅವುಗಳನ್ನು ನಿಷೇಧಿಸದಂತಹ ಒಂದು ಜನತೆಗೆ ನಾವದನ್ನು ವಹಿಸಿಕೊಟ್ಟಿರುವೆವು.[2]

أُوْلَٰٓئِكَ ٱلَّذِينَ ءَاتَيۡنَٰهُمُ ٱلۡكِتَٰبَ وَٱلۡحُكۡمَ وَٱلنُّبُوَّةَۚ فَإِن يَكۡفُرۡ بِهَا هَٰٓؤُلَآءِ فَقَدۡ وَكَّلۡنَا بِهَا قَوۡمٗا لَّيۡسُواْ بِهَا بِكَٰفِرِينَ ٨٩

**90.** ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಿದ್ದು ಅವರನ್ನೇ ಆಗಿದೆ. ಆದ್ದರಿಂದ ಅವರ ಸನ್ಮಾರ್ಗವನ್ನು ತಾವೂ ಅನುಸರಿಸಿರಿ. (ಓ ಪ್ರವಾದಿಯವರೇ!) ಹೇಳಿರಿ: 'ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವ ಪ್ರತಿಫಲವನ್ನೂ ಬೇಡುವುದಿಲ್ಲ. ಇದು

أُوْلَٰٓئِكَ ٱلَّذِينَ هَدَى ٱللَّهُۖ فَبِهُدَىٰهُمُ ٱقۡتَدِهۡۗ قُل لَّآ أَسۡـَٔلُكُمۡ عَلَيۡهِ أَجۡرًاۖ إِنۡ هُوَ إِلَّا ذِكۡرَىٰ لِلۡعَٰلَمِينَ ٩٠

1 ಒಬ್ಬ ವ್ಯಕ್ತಿ ಅಲ್ಲಾಹುವಿಗೆ ಮಾತ್ರ ಸಲ್ಲಿಸಬೇಕಾದ ಆರಾಧನೆಯನ್ನು ಅಲ್ಲಾಹೇತರರಿಗೆ ಸಲ್ಲಿಸಿದರೆ ಅವನು ಆ ತನಕ ಮಾಡಿರುವ ಸತ್ಕರ್ಮಗಳೆಲ್ಲವೂ ನಿಷ್ಫಲವಾಗಿ ಹೋಗುವುದು.

2 ಮನುಷ್ಯರೆಲ್ಲರೂ ಸತ್ಯನಿಷೇಧಿಗಳೂ, ಸೃಷ್ಟಿಪೂಜಕರೂ ಆಗಿ ಮಾರ್ಪಡಲಾರರು ಮತ್ತು ಅಂತ್ಯದಿನದವರೆಗೆ ಇಲ್ಲಿ ಏಕದೇವವಿಶ್ವಾಸಿಗಳು ಇರುವರು ಎಂದು ಈ ಸೂಕ್ತಿಯಿಂದ ಗ್ರಹಿಸಬಹುದಾಗಿದೆ.

ಸರ್ವಲೋಕದವರಿಗಿರುವ ಒಂದು ಉಪದೇಶವಲ್ಲದೆ ಇನ್ನೇನೂ ಅಲ್ಲ.'

91. ಅಲ್ಲಾಹು ಯಾವ ಮನುಷ್ಯನ ಮೇಲೂ ಏನನ್ನೂ ಅವತೀರ್ಣಗೊಳಿಸಿಲ್ಲ ಎಂದು ಅವರು ಹೇಳಿದ ಸಂದರ್ಭ ಅವರು ಅಲ್ಲಾಹುವನ್ನು ಗಣನೆ ಮಾಡಬೇಕಾದ ರೀತಿಯಲ್ಲಿ ಗಣನೆ ಮಾಡಲಿಲ್ಲ. ಹೇಳಿರಿ: 'ಹಾಗಾದರೆ ಸತ್ಯಪ್ರಕಾಶವಾಗಿ ಮತ್ತು ಮನುಷ್ಯರಿಗೆ ಮಾರ್ಗದರ್ಶನವಾಗಿ ಮೂಸಾ ತಂದಿರುವ ಗ್ರಂಥವನ್ನು ಅವತೀರ್ಣಗೊಳಿಸಿದವನು ಯಾರು? ನೀವದನ್ನು ಕಾಗದದ ತುಂಡುಗಳನ್ನಾಗಿ ಮಾಡುತ್ತಾ ಅದರ ಕೆಲವು ಭಾಗಗಳನ್ನು ಬಹಿರಂಗಪಡಿಸುತ್ತಿರುವಿರಿ ಮತ್ತು ಹೆಚ್ಚಿನ ಭಾಗಗಳನ್ನು ಮರೆಮಾಚುತ್ತಿರುವಿರಿ. ನೀವಾಗಲಿ ನಿಮ್ಮ ಪೂರ್ವಜರಾಗಲಿ ಅರಿತಿರದಂತಹ ಹಲವನ್ನೂ (ಆ ಗ್ರಂಥದ ಮೂಲಕ) ನಿಮಗೆ ಕಲಿಸಿಕೊಡಲಾಗಿತ್ತು.' ಹೇಳಿರಿ: '(ಇದನ್ನು ಅವತೀರ್ಣಗೊಳಿಸಿದವನು) ಅಲ್ಲಾಹುವಾಗಿರುವನು'. ತರುವಾಯ ತಮ್ಮ ವ್ಯರ್ಥ ಮಾತುಗಳೊಂದಿಗೆ ಆಟವಾಡುತ್ತಿರಲು ಅವರನ್ನು ಬಿಟ್ಟು ಬಿಡಿರಿ.

وَمَا قَدَرُواْ ٱللَّهَ حَقَّ قَدْرِهِۦٓ إِذْ قَالُواْ مَآ
أَنزَلَ ٱللَّهُ عَلَىٰ بَشَرٍ مِّن شَىْءٍۗ قُلْ مَنْ
أَنزَلَ ٱلْكِتَٰبَ ٱلَّذِى جَآءَ بِهِۦ مُوسَىٰ
نُورًا وَهُدًى لِّلنَّاسِۖ تَجْعَلُونَهُۥ قَرَاطِيسَ
تُبْدُونَهَا وَتُخْفُونَ كَثِيرًاۖ وَعُلِّمْتُم مَّا لَمْ
تَعْلَمُوٓاْ أَنتُمْ وَلَآ ءَابَآؤُكُمْۖ قُلِ ٱللَّهُۖ ثُمَّ
ذَرْهُمْ فِى خَوْضِهِمْ يَلْعَبُونَ ﴿٩١﴾

92. ಇದು ನಾವು ಅವತೀರ್ಣಗೊಳಿಸಿರುವ ಅನುಗ್ರಹೀತವಾದ ಗ್ರಂಥವಾಗಿದೆ. ಇದು ಇದಕ್ಕಿಂತ ಮುಂಚಿನ ಗ್ರಂಥಗಳನ್ನು ದೃಢೀಕರಿಸುತ್ತದೆ. ಉಮ್ಮುಲ್ ಕುರಾ(ಮಕ್ಕಾ) ಮತ್ತು ಅದರ ಆಸುಪಾಸಿನಲ್ಲಿರುವವರಿಗೆ ತಾವು ಮುನ್ನೆಚ್ಚರಿಕೆ ನೀಡುವ ಸಲುವಾಗಿ (ಇದನ್ನು ಅವತೀರ್ಣಗೊಳಿಸಲಾಗಿದೆ). ಪರಲೋಕದಲ್ಲಿ ವಿಶ್ವಾಸವಿಡುವವರು ಈ ಗ್ರಂಥದಲ್ಲಿ ವಿಶ್ವಾಸವಿಡುವರು. ಅವರು ತಮ್ಮ ನಮಾಝ್‌ಗಳನ್ನು ಸ್ಥಿರವಾಗಿ ಸಂರಕ್ಷಿಸುವವರಾಗಿರುವರು.

وَهَٰذَا كِتَٰبٌ أَنزَلْنَٰهُ مُبَارَكٌ مُّصَدِّقُ
ٱلَّذِى بَيْنَ يَدَيْهِ وَلِتُنذِرَ أُمَّ ٱلْقُرَىٰ وَمَنْ
حَوْلَهَاۚ وَٱلَّذِينَ يُؤْمِنُونَ بِٱلْءَاخِرَةِ يُؤْمِنُونَ
بِهِۦۖ وَهُمْ عَلَىٰ صَلَاتِهِمْ يُحَافِظُونَ ﴿٩٢﴾

وَمَنْ أَظْلَمُ مِمَّنِ ٱفْتَرَىٰ عَلَى ٱللَّهِ كَذِبًا أَوْ قَالَ أُوحِىَ إِلَىَّ وَلَمْ يُوحَ إِلَيْهِ شَىْءٌ وَمَن قَالَ سَأُنزِلُ مِثْلَ مَآ أَنزَلَ ٱللَّهُ ۗ وَلَوْ تَرَىٰٓ إِذِ ٱلظَّـٰلِمُونَ فِى غَمَرَٰتِ ٱلْمَوْتِ وَٱلْمَلَـٰٓئِكَةُ بَاسِطُوٓا۟ أَيْدِيهِمْ أَخْرِجُوٓا۟ أَنفُسَكُمُ ۖ ٱلْيَوْمَ تُجْزَوْنَ عَذَابَ ٱلْهُونِ بِمَا كُنتُمْ تَقُولُونَ عَلَى ٱللَّهِ غَيْرَ ٱلْحَقِّ وَكُنتُمْ عَنْ ءَايَـٰتِهِۦ تَسْتَكْبِرُونَ ﴿٩٣﴾

93. ಅಲ್ಲಾಹುವಿನ ಮೇಲೆ ಸುಳ್ಳು ಹೆಣೆದವನಿಗಿಂತಲೂ ಅಥವಾ ತನಗೆ ಯಾವುದೇ ದಿವ್ಯಸಂದೇಶವು ನೀಡಲ್ಪಡದಿದ್ದರೂ 'ನನಗೆ ದಿವ್ಯಸಂದೇಶ ನೀಡಲ್ಪಟ್ಟಿದೆ' ಎಂದು ಹೇಳಿದವನಿಗಿಂತಲೂ ಮತ್ತು 'ಅಲ್ಲಾಹು ಅವತೀರ್ಣಗೊಳಿಸಿದಂತಿರುವುದನ್ನು ನಾನೂ ಅವತೀರ್ಣಗೊಳಿಸುವೆನು' ಎಂದು ಹೇಳಿದವನಿಗಿಂತಲೂ ದೊಡ್ಡ ಅಕ್ರಮಿ ಯಾರಿರುವನು? ಆ ಅಕ್ರಮಿಗಳು ಮರಣ ಸಂಕಟದಲ್ಲಿರುವ ದೃಶ್ಯವನ್ನು ತಾವು ಕಂಡಿರುತ್ತಿದ್ದರೆ! ನೀವು ನಿಮ್ಮ ಆತ್ಮಗಳನ್ನು ಹೊರತಳ್ಳಿರಿ ಎಂದು ಹೇಳುತ್ತಾ ಮಲಕ್‌ಗಳು ಅವರೆಡೆಗೆ ತಮ್ಮ ಕೈಗಳನ್ನು ಚಾಚಿ ಕೊಂಡಿರುವರು.[1] 'ನೀವು ಅಲ್ಲಾಹುವಿನ ಮೇಲೆ ಸತ್ಯಕ್ಕೆ ವಿರುದ್ಧವಾಗಿರುವುದನ್ನು ಹೇಳಿರುವ ಕಾರಣದಿಂದಾಗಿ ಮತ್ತು ಅವನ ದೃಷ್ಟಾಂತಗಳನ್ನು ಅಹಂಕಾರದೊಂದಿಗೆ ನಿಷೇಧಿಸಿರುವ ಕಾರಣದಿಂದಾಗಿ ಇಂದು ನಿಮಗೆ ಹೀನಾಯ ಶಿಕ್ಷೆಯನ್ನು ನೀಡಲಾಗುವುದು' (ಎಂದು ಮಲಕ್‌ಗಳು ಹೇಳುವರು).

وَلَقَدْ جِئْتُمُونَا فُرَٰدَىٰ كَمَا خَلَقْنَـٰكُمْ أَوَّلَ مَرَّةٍ وَتَرَكْتُم مَّا خَوَّلْنَـٰكُمْ وَرَآءَ ظُهُورِكُمْ ۖ وَمَا نَرَىٰ مَعَكُمْ شُفَعَآءَكُمُ ٱلَّذِينَ زَعَمْتُمْ أَنَّهُمْ فِيكُمْ شُرَكَـٰٓؤُا۟ ۚ لَقَد تَّقَطَّعَ بَيْنَكُمْ وَضَلَّ عَنكُم مَّا كُنتُمْ تَزْعُمُونَ ﴿٩٤﴾

94. (ಅಲ್ಲಾಹು ಅವರೊಂದಿಗೆ ಹೇಳುವನು): 'ನಾವು ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದ ರೀತಿಯಲ್ಲೇ ನೀವು ನಮ್ಮ ಬಳಿಗೆ ಏಕಾಂಗಿಗಳಾಗಿ ಬಂದಿರುವಿರಿ. ನಿಮಗೆ ನಾವು ಅಧೀನಗೊಳಿಸಿಕೊಟ್ಟಿರುವುದನ್ನೆಲ್ಲ ನಿಮ್ಮ ಬೆನ್ನ ಹಿಂದೆ ಬಿಟ್ಟು ಬಂದಿರುವಿರಿ. ನೀವು (ಅಲ್ಲಾಹುವಿನ) ಸಹಭಾಗಿಗಳೆಂದು ವಾದಿಸುತ್ತಿದ್ದ ಆ ನಿಮ್ಮ ಶಿಫಾರಸ್ಸುಗಾರರನ್ನು ನಾವು ನಿಮ್ಮೊಂದಿಗೆ ಕಾಣುತ್ತಿಲ್ಲ. ನೀವು

1 ಮರಣ ಎಂಬ ವಾಸ್ತವಿಕತೆಯ ಕುರಿತು ನಿಖರವಾದ ಯಾವುದೇ ಜ್ಞಾನವು ಯಾರಿಗೂ ಇಲ್ಲ. ಮನುಷ್ಯನನ್ನು ಮೃತಪಡಿಸುವ ಹೊಣೆಯನ್ನು ಅಲ್ಲಾಹು ಮಲಕ್‌ಗೆ ವಹಿಸಿಕೊಟ್ಟಿರುವನೆಂದು ಕುರ್‌ಆನ್ ಹೇಳುತ್ತದೆ. ಮಲಕ್‌ಗಳ ಜಗತ್ತು ನಮ್ಮ ಜಗತ್ತಿಗಿಂತ ಭಿನ್ನವಾಗಿದೆ. ಆದ್ದರಿಂದ ಅವರ ಸ್ಥಿತಿಗತಿಗಳ ಕುರಿತು ಅಲ್ಲಾಹು ತಿಳಿಸಿಕೊಟ್ಟಿರುವುದರ ಹೊರತು ಬೇರೇನನ್ನೂ ತಿಳಿಯಲು ನಮಗೆ ಸಾಧ್ಯವಿಲ್ಲ.

ಪರಸ್ಪರ ಹೊಂದಿದ್ದ ಸಂಬಂಧಗಳು ಮುರಿದು ಬಿದ್ದಿವೆ ಮತ್ತು ನೀವು ವಾದಿಸುತ್ತಿದ್ದ ವಾದಗಳೆಲ್ಲವೂ ನಿಮ್ಮನ್ನು ಬಿಟ್ಟು ಹೋಗಿವೆ.’[1]

۞ إِنَّ ٱللَّهَ فَالِقُ ٱلْحَبِّ وَٱلنَّوَىٰ ۖ يُخْرِجُ ٱلْحَىَّ مِنَ ٱلْمَيِّتِ وَمُخْرِجُ ٱلْمَيِّتِ مِنَ ٱلْحَىِّ ۚ ذَٰلِكُمُ ٱللَّهُ ۖ فَأَنَّىٰ تُؤْفَكُونَ ﴿٩٥﴾

95. ಖಂಡಿತವಾಗಿಯೂ ಧಾನ್ಯವನ್ನು ಮತ್ತು ಖರ್ಜೂರದ ಬೀಜವನ್ನು ಸೀಳುವವನು ಅಲ್ಲಾಹುವಾಗಿರುವನು.[2] ಅವನು ನಿರ್ಜೀವದಿಂದ ಜೀವವನ್ನು ಹೊರತರುವನು ಮತ್ತು ಜೀವದಿಂದ ನಿರ್ಜೀವವನ್ನು ಹೊರತರುವನು. ಹಾಗಿರುವವನೇ ಅಲ್ಲಾಹು. ಹೀಗಿದ್ದೂ ನೀವು ದಾರಿತಪ್ಪಿಸಲಾಗುತ್ತಿರುವುದು ಹೇಗೆ?

فَالِقُ ٱلْإِصْبَاحِ وَجَعَلَ ٱلَّيْلَ سَكَنًا وَٱلشَّمْسَ وَٱلْقَمَرَ حُسْبَانًا ۚ ذَٰلِكَ تَقْدِيرُ ٱلْعَزِيزِ ٱلْعَلِيمِ ﴿٩٦﴾

96. ಅವನು ಪ್ರಭಾತವನ್ನು ಸೀಳುವವನಾಗಿರುವನು. ರಾತ್ರಿಯನ್ನು ಅವನು ವಿಶ್ರಾಂತಿ ವೇಳೆಯನ್ನಾಗಿ ಮಾಡಿರುವನು. ಸೂರ್ಯ ಮತ್ತು ಚಂದ್ರರನ್ನು ಎಣಿಕೆಗೆ ಆಧಾರವನ್ನಾಗಿ (ಮಾಡಿರುವನು).[3] ಇದು ಪ್ರತಾಪಶಾಲಿಯೂ ಸರ್ವಜ್ಞನೂ ಆಗಿರುವ ಅಲ್ಲಾಹುವಿನ ಕ್ರಮೀಕರಣವಾಗಿದೆ.

وَهُوَ ٱلَّذِى جَعَلَ لَكُمُ ٱلنُّجُومَ لِتَهْتَدُوا۟ بِهَا فِى ظُلُمَٰتِ ٱلْبَرِّ وَٱلْبَحْرِ ۗ قَدْ فَصَّلْنَا ٱلْءَايَٰتِ لِقَوْمٍ يَعْلَمُونَ ﴿٩٧﴾

97. ನಕ್ಷತ್ರಗಳನ್ನು, ಅವುಗಳ ಮೂಲಕ ನೀವು ದಡ ಮತ್ತು ಸಮುದ್ರದ ಅಂಧಕಾರಗಳಲ್ಲಿ ದಾರಿ ಕಾಣುವ ಸಲುವಾಗಿ ಸಜ್ಜೀಕರಿಸಿದವನು ಅವನಾಗಿರುವನು. ಅರಿತುಕೊಳ್ಳುವ ಜನರಿಗಾಗಿ ನಾವು ನಮ್ಮ ದೃಷ್ಟಾಂತಗಳನ್ನು ವಿವರಿಸಿಕೊಟ್ಟಿರುವೆವು.

وَهُوَ ٱلَّذِىٓ أَنشَأَكُم مِّن نَّفْسٍ وَٰحِدَةٍ فَمُسْتَقَرٌّ وَمُسْتَوْدَعٌ ۗ قَدْ فَصَّلْنَا

98. ನಿಮ್ಮನ್ನು ಒಂದೇ ಆತ್ಮದಿಂದ ಸೃಷ್ಟಿಸಿದವನು ಅವನಾಗಿರುವನು. ತರುವಾಯ (ನಿಮಗೆ) ಒಂದು ವಾಸ್ತವ್ಯವೂ, ಸಂಗ್ರಹಣ ಸ್ಥಳವೂ

1 ಸಜ್ಜನರೊಂದಿಗೆ ಪ್ರಾರ್ಥಿಸುವವರ ಪ್ರಮುಖ ನಿರೀಕ್ಷೆಯು ಅವರು ಅಲ್ಲಾಹುವಿನ ಬಳಿ ತಮಗಾಗಿ ಶಿಫಾರಸ್ಸು ಮಾಡುವರು ಎಂದಾಗಿದೆ. ಆದರೆ ಅಲ್ಲಾಹು ಆದೇಶಿಸದ ಮತ್ತು ಪ್ರವಾದಿಗಳು ಮಾದರಿಯಾಗಿ ತೋರಿಸದ ಈ ಶಿಫಾರಸ್ಸು ಸಂಬಂಧವು ಪರಲೋಕದಲ್ಲಿ ಮುರಿದು ಬೀಳುವುದೆಂದು ಅಲ್ಲಾಹು ನಮಗೆ ಜ್ಞಾಪಿಸುತ್ತಿದ್ದಾನೆ.

2 ಧಾನ್ಯ ಮತ್ತು ಬೀಜಗಳನ್ನು ಸೀಳಿ ಅವುಗಳ ಮೊಳಕೆಯನ್ನು ಹೊರತರುವವನು ಅಲ್ಲಾಹುವಾಗಿರುವನು.

3 ಸೂರ್ಯನನ್ನು ಅವಲಂಬಿಸಿ ನಾವು ದಿನಗಳನ್ನು ಎಣಿಸುತ್ತೇವೆ ಮತ್ತು ಚಂದ್ರನನ್ನು ಅವಲಂಬಿಸಿ ತಿಂಗಳುಗಳನ್ನು ಎಣಿಸುತ್ತೇವೆ. ಸೌರಮಾನ ವರ್ಷ ಮತ್ತು ಚಾಂದ್ರಮಾನ ವರ್ಷ ಈ ವಿಧದಲ್ಲಿರುವ ಕಾಲಗಣನೆಯ ಭಾಗವಾಗಿದೆ.

ٱلْأَيَـٰتِ لِقَوْمٍ يَفْقَهُونَ ﴿٩٨﴾

ಇರುವುದು.[1] ಗ್ರಹಿಸುವ ಜನರಿಗಾಗಿ ನಾವು ದೃಷ್ಟಾಂತಗಳನ್ನು ವಿವರಿಸಿ ಕೊಟ್ಟಿರುವೆವು.

وَهُوَ ٱلَّذِىٓ أَنزَلَ مِنَ ٱلسَّمَآءِ مَآءً فَأَخْرَجْنَا بِهِۦ نَبَاتَ كُلِّ شَىْءٍ فَأَخْرَجْنَا مِنْهُ خَضِرًا نُّخْرِجُ مِنْهُ حَبًّا مُّتَرَاكِبًا وَمِنَ ٱلنَّخْلِ مِن طَلْعِهَا قِنْوَانٌ دَانِيَةٌ وَجَنَّـٰتٍ مِّنْ أَعْنَابٍ وَٱلزَّيْتُونَ وَٱلرُّمَّانَ مُشْتَبِهًا وَغَيْرَ مُتَشَـٰبِهٍ ۗ ٱنظُرُوٓا۟ إِلَىٰ ثَمَرِهِۦٓ إِذَآ أَثْمَرَ وَيَنْعِهِۦٓ ۚ إِنَّ فِى ذَٰلِكُمْ لَـَٔايَـٰتٍ لِّقَوْمٍ يُؤْمِنُونَ ﴿٩٩﴾

**99.** ಆಕಾಶದಿಂದ ನೀರನ್ನು ಸುರಿಸಿದವನು ಅವನಾಗಿರುವನು. ತರುವಾಯ ಅದರ ಮೂಲಕ ನಾವು ಸರ್ವ ವಸ್ತುಗಳ ಮೊಳಕೆಗಳನ್ನು ಹೊರತಂದೆವು. ಬಳಿಕ ಅದರಿಂದ ಹಸಿರಾದ ಸಸ್ಯಗಳನ್ನು ಬೆಳೆಸಿದೆವು. ಆ ಸಸ್ಯಗಳಿಂದ ನಾವು ತುಂಬಿತುಳುಕುವ ಧಾನ್ಯಗಳನ್ನು ಹೊರ ತರುವೆವು. ಖರ್ಜೂರದ ಮರದಿಂದ ಅಥವಾ ಅದರ ಮೊಗ್ಗುಗಳಿಂದ ತೂಗಿ ನಿಲ್ಲುವ ಗೊನೆಗಳು ಹೊರಬರುತ್ತವೆ. (ಹಾಗೆಯೇ) ದ್ರಾಕ್ಷಿ ತೋಟಗಳನ್ನು ಮತ್ತು ಪರಸ್ಪರ ಸಾದೃಶ್ಯವಿದ್ದರೂ ಸಮಾನವಾಗಿರದಂತಹ ಆಲಿವ್ ಮತ್ತು ದಾಳಿಂಬೆಯನ್ನು (ನಾವು ಉತ್ಪಾದಿಸಿದೆವು). ಅವುಗಳು ಕಾಯಿಬಿಡುವಾಗ ಅವುಗಳ ಹಣ್ಣುಗಳೆಡೆಗೆ ಮತ್ತು ಪಕ್ವವಾಗುವುದರೆಡೆಗೆ ನೋಡಿರಿ. ವಿಶ್ವಾಸವಿಡುವ ಜನರಿಗೆ ಖಂಡಿತವಾಗಿಯೂ ಇವುಗಳಲ್ಲಿ ದೃಷ್ಟಾಂತಗಳಿವೆ.[2]

وَجَعَلُوا۟ لِلَّهِ شُرَكَآءَ ٱلْجِنَّ وَخَلَقَهُمْ ۖ وَخَرَقُوا۟ لَهُۥ بَنِينَ وَبَنَـٰتٍۭ بِغَيْرِ عِلْمٍ ۚ سُبْحَـٰنَهُۥ وَتَعَـٰلَىٰ عَمَّا يَصِفُونَ ﴿١٠٠﴾

**100.** ಅವರು ಜಿನ್ನ್‌ಗಳನ್ನು ಅಲ್ಲಾಹುವಿಗೆ ಸಹಭಾಗಿಗಳನ್ನಾಗಿ ಮಾಡಿಕೊಂಡಿರುವರು. ಆದರೆ ಅವರನ್ನು ಸೃಷ್ಟಿಸಿದವನು ಅವನಾಗಿರುವನು. ಅವನಿಗೆ ಪುತ್ರರು ಮತ್ತು ಪುತ್ರಿಯರಿರುವರೆಂದು ಯಾವ ಅರಿವೂ ಇಲ್ಲದೆ ಅವರು ಆರೋಪಿಸಿರುವರು. ಅವರು ವರ್ಣಿಸುತ್ತಿರುವುದರಿಂದೆಲ್ಲ ಅಲ್ಲಾಹು ಪರಮಪಾವನನೂ ಉನ್ನತನೂ ಆಗಿರುವನು.

1 ಮುಸ್ತಕರ್ (ವಾಸ್ತವ್ಯ) ಎಂಬುದರ ತಾತ್ಪರ್ಯ ಪುರುಷ ಬೀಜ ರೂಪುಗೊಳ್ಳುವ ಸ್ಥಳವಾಗಿದೆ ಮತ್ತು ಮುಸ್ತೌದಅ್ (ಸಂಗ್ರಹಣ ಸ್ಥಳ) ಎಂಬುದರ ತಾತ್ಪರ್ಯ ಗರ್ಭಾಶಯವಾಗಿದೆ ಎಂದು ಹಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು. ಇವುಗಳಿಗೆ ಬೇರೆ ವ್ಯಾಖ್ಯಾನಗಳೂ ಇವೆ.

2 ಹವಾಮಾನ ನಿಯಮಗಳ ಕುರಿತು ಮತ್ತು ವಿಸ್ಮಯಕರವಾದ ಜೈವ–ಸಸ್ಯ ವ್ಯವಸ್ಥೆಗಳ ಕುರಿತು ಚಿಂತಿಸುವ ಯಾರಿಗೂ ಇದೊಂದೂ ಆಕಸ್ಮಿಕವಾಗಿ ಉದ್ಭವಿಸಿದ್ದಲ್ಲವೆಂದು ಮನದಟ್ಟಾಗುವುದು. ಸರ್ವಜ್ಞನೂ ಸರ್ವಶಕ್ತನೂ ಆದ ಸೃಷ್ಟಿಕರ್ತನ ಅಸ್ತಿತ್ವಕ್ಕೆ ಇವೆಲ್ಲವೂ ಸಾಕ್ಷಿಗಳಾಗಿವೆ.

101. ಅವನು ಆಕಾಶಗಳನ್ನು ಮತ್ತು ಭೂಮಿಯನ್ನು ಯಾವುದೇ ಪೂರ್ವ ಮಾದರಿಯಿಲ್ಲದೆ ನಿರ್ಮಿಸಿದವನಾಗಿರುವನು. ಅವನಿಗೆ ಪತ್ನಿಯೇ ಇಲ್ಲದಿರುವಾಗ ಒಂದು ಸಂತಾನವಿರುವುದಾದರೂ ಹೇಗೆ? ಅವನು ಸಕಲ ವಸ್ತುಗಳನ್ನೂ ಸೃಷ್ಟಿಸಿರುವನು. ಅವನು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

بَدِيعُ ٱلسَّمَٰوَٰتِ وَٱلْأَرْضِۖ أَنَّىٰ يَكُونُ لَهُۥ وَلَدٌ وَلَمْ تَكُن لَّهُۥ صَٰحِبَةٌۖ وَخَلَقَ كُلَّ شَيْءٍۖ وَهُوَ بِكُلِّ شَيْءٍ عَلِيمٌ ﴿١٠١﴾

102. ಹಾಗಿರುವವನೇ ನಿಮ್ಮ ರಬ್ಬಾದ ಅಲ್ಲಾಹು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಸರ್ವ ವಸ್ತುಗಳ ಸೃಷ್ಟಿಕರ್ತನಾಗಿರುವನು. ಆದ್ದರಿಂದ ಅವನನ್ನು ಆರಾಧಿಸಿರಿ. ಅವನು ಸಕಲ ವಿಷಯಗಳ ಮೇಲೂ ಕಾರ್ಯನಿರ್ವಾಹಕನಾಗಿರುವನು.

ذَٰلِكُمُ ٱللَّهُ رَبُّكُمْۖ لَآ إِلَٰهَ إِلَّا هُوَۖ خَٰلِقُ كُلِّ شَيْءٍ فَٱعْبُدُوهُۚ وَهُوَ عَلَىٰ كُلِّ شَيْءٍ وَكِيلٌ ﴿١٠٢﴾

103. ಅವನನ್ನು ಕಣ್ಣುಗಳು ಕಂಡುಹಿಡಿಯಲಾರವು. ಕಣ್ಣುಗಳನ್ನು ಅವನು ಕಂಡುಹಿಡಿಯುವನು.[1] ಅವನು ಸೂಕ್ಷ್ಮಗ್ರಾಹಿಯೂ ಸೂಕ್ಷ್ಮಜ್ಞಾನಿಯೂ ಆಗಿರುವನು.

لَّا تُدْرِكُهُ ٱلْأَبْصَٰرُ وَهُوَ يُدْرِكُ ٱلْأَبْصَٰرَۖ وَهُوَ ٱللَّطِيفُ ٱلْخَبِيرُ ﴿١٠٣﴾

104. ನಿಮ್ಮ ರಬ್‌ನ ವತಿಯಿಂದ ಕಣ್ತೆರೆಸುವಂತಹ ಪುರಾವೆಗಳು ನಿಮ್ಮ ಬಳಿಗೆ ಬಂದಿವೆ. ಆದ್ದರಿಂದ ಯಾರು ಅದನ್ನು ಕಣ್ತೆರೆದು ನೋಡುವನೋ ಅದರ ಒಳಿತು ಅವನಿಗೇ ಆಗಿರುವುದು. ಯಾರು ಕುರುಡನಾಗುವನೋ ಅದರ ದೋಷವು ಅವನಿಗೇ ಆಗಿರುವುದು. ನಾನು ನಿಮ್ಮ ಮೇಲೆ ಒಬ್ಬ ಕಾವಲುಗಾರನೇನೂ ಅಲ್ಲ.

قَدْ جَآءَكُم بَصَآئِرُ مِن رَّبِّكُمْۖ فَمَنْ أَبْصَرَ فَلِنَفْسِهِۦۖ وَمَنْ عَمِيَ فَعَلَيْهَاۚ وَمَآ أَنَا۠ عَلَيْكُم بِحَفِيظٍ ﴿١٠٤﴾

105. ಹೀಗೆ ನಾವು ನಾನಾ ವಿಧಗಳಲ್ಲಿ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವೆವು. ಇದು ತಾವು (ಯಾರಿಂದಲೋ)

وَكَذَٰلِكَ نُصَرِّفُ ٱلْءَايَٰتِ وَلِيَقُولُوا۟ دَرَسْتَ وَلِنُبَيِّنَهُۥ لِقَوْمٍ يَعْلَمُونَ ﴿١٠٥﴾

1 ಈ ಸೂಕ್ತಿಯಲ್ಲಿ ತಿಳಿಸಲಾಗಿರುವುದು ಐಹಿಕ ಜೀವನದ ಬಗ್ಗೆಯಾಗಿದೆ. ಆದರೆ ಪರಲೋಕದಲ್ಲಿ ಸತ್ಯವಿಶ್ವಾಸಿಗಳು ಅಲ್ಲಾಹುವನ್ನು ಕಾಣುವರೆಂದು ಸಹೀಹಾದ ಹದೀಸ್‌ಗಳಲ್ಲಿ ಬಂದಿವೆ. ಮರಣಾನಂತರ ಜೀವನದಲ್ಲಿ ದೃಷ್ಟಿಯ ಪರದೆಯನ್ನು ತೆಗೆದು ಹಾಕಲಾಗುವುದು ಮತ್ತು ಭೌತಿಕ ಜೀವನದಲ್ಲಿ ದೃಷ್ಟಿಯ ಮೂಲಕ ಕಾಣಲು ಸಾಧ್ಯವಾಗದ ಹಲವನ್ನೂ ಕಾಣಲು ಸಾಧ್ಯವಾಗುವುದು ಎಂದು ಕುರ್‌ಆನ್ ನಮಗೆ ಸ್ಪಷ್ಟಪಡಿಸಿಕೊಟ್ಟಿದೆ. (ನೋಡಿ: 50:22)

ಕಲಿತುಬಂದದ್ದೆಂದು[1] ಸತ್ಯನಿಷೇಧಿಗಳು ಹೇಳುವ ಸಲುವಾಗಿಯೂ, ಅರ್ಥ ಮಾಡಿಕೊಳ್ಳುವ ಜನರಿಗೆ ನಾವು ಅದನ್ನು ವಿವರಿಸಿಕೊಡುವ ಸಲುವಾಗಿಯೂ ಆಗಿದೆ.

**106.** ತಮಗೆ ತಮ್ಮ ರಬ್‌ನ ವತಿಯಿಂದ ದಿವ್ಯಸಂದೇಶವಾಗಿ ನೀಡಲಾಗಿರುವುದನ್ನು ಅನುಸರಿಸಿರಿ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಬಹುದೇವಾರಾಧಕರಿಂದ ತಾವು ವಿಮುಖರಾಗಿರಿ.

ٱتَّبِعۡ مَآ أُوحِيَ إِلَيۡكَ مِن رَّبِّكَۖ لَآ إِلَٰهَ إِلَّا هُوَۖ وَأَعۡرِضۡ عَنِ ٱلۡمُشۡرِكِينَ ١٠٦

**107.** ಅಲ್ಲಾಹು ಇಚ್ಛಿಸುತ್ತಿದ್ದರೆ ಅವರು (ಅವನೊಂದಿಗೆ) ಸಹಭಾಗಿತ್ವ ಮಾಡುತ್ತಿರಲಿಲ್ಲ. ತಮ್ಮನ್ನು ನಾವು ಅವರ ಮೇಲೆ ಒಬ್ಬ ಕಾವಲುಗಾರನನ್ನಾಗಿ ಮಾಡಿಲ್ಲ. ತಾವು ಅವರ ಮೇಲೆ ಹೊಣೆ ವಹಿಸಲ್ಪಟ್ಟವರೂ ಅಲ್ಲ.

وَلَوۡ شَآءَ ٱللَّهُ مَآ أَشۡرَكُواْۗ وَمَا جَعَلۡنَٰكَ عَلَيۡهِمۡ حَفِيظٗاۖ وَمَآ أَنتَ عَلَيۡهِم بِوَكِيلٖ ١٠٧

**108.** ಅಲ್ಲಾಹುವಿನ ಹೊರತು ಅವರು ಕರೆದು ಪ್ರಾರ್ಥಿಸುತ್ತಿರುವವರನ್ನು ನೀವು ನಿಂದಿಸದಿರಿ. ಅವರು ಅರಿವಿಲ್ಲದೆ ಅತಿಕ್ರಮವಾಗಿ ಅಲ್ಲಾಹುವನ್ನು ನಿಂದಿಸಲು ಅದು ಕಾರಣವಾಗಬಹುದು. ಹೀಗೆ ಪ್ರತಿಯೊಂದು ಸಮುದಾಯಕ್ಕೂ ಅವರ ಕರ್ಮಗಳನ್ನು ನಾವು ಆಕರ್ಷಕವಾಗಿಸಿಕೊಟ್ಟಿರುವೆವು. ತರುವಾಯ ಅವರ ಮರಳುವಿಕೆಯು ಅವರ ರಬ್‌ನೆಡೆಗಾಗಿದೆ. ಆಗ ಅವರು ಮಾಡುತ್ತಿದ್ದವುಗಳ ಕುರಿತು ಅವನು ಅವರಿಗೆ ತಿಳಿಸಿಕೊಡುವನು.

وَلَا تَسُبُّواْ ٱلَّذِينَ يَدۡعُونَ مِن دُونِ ٱللَّهِ فَيَسُبُّواْ ٱللَّهَ عَدۡوَۢا بِغَيۡرِ عِلۡمٖۗ كَذَٰلِكَ زَيَّنَّا لِكُلِّ أُمَّةٍ عَمَلَهُمۡ ثُمَّ إِلَىٰ رَبِّهِم مَّرۡجِعُهُمۡ فَيُنَبِّئُهُم بِمَا كَانُواْ يَعۡمَلُونَ ١٠٨

**109.** ಒಂದು ದೃಷ್ಟಾಂತವು ತಮಗೆ ಬಂದು ತಲುಪುವುದಾದರೆ ತಾವು ಅದರಲ್ಲಿ ವಿಶ್ವಾಸವಿಡುವೆವು ಎಂದು ಅವರು ಅಲ್ಲಾಹುವಿನ ಮೇಲೆ ತಮಗೆ ಸಾಧ್ಯವಾಗುವಷ್ಟು ಬಲವಾದ ಆಣೆಯಿಟ್ಟು

وَأَقۡسَمُواْ بِٱللَّهِ جَهۡدَ أَيۡمَٰنِهِمۡ لَئِن جَآءَتۡهُمۡ ءَايَةٞ لَّيُؤۡمِنُنَّ بِهَاۚ قُلۡ إِنَّمَا ٱلۡأٓيَٰتُ عِندَ ٱللَّهِۖ وَمَا يُشۡعِرُكُمۡ أَنَّهَآ إِذَا جَآءَتۡ لَا يُؤۡمِنُونَ ١٠٩

1 ಮುಹಮ್ಮದ್ (ﷺ)ರವರು ಬೋಧಿಸುತ್ತಿರುವುದು ಯಾವುದೋ ಯಹೂದ ವಿದ್ವಾಂಸನಿಂದ ಅಥವಾ ಕ್ರೈಸ್ತ ಪುರೋಹಿತನಿಂದ ಕಲಿತು ಬಂದ ವಿಷಯಗಳನ್ನಾಗಿವೆಯೆಂದು ಅವರ ವಿರೋಧಿಗಳಲ್ಲಿ ಕೆಲವರು ವಾದಿಸಿದ್ದರು.

ಹೇಳುವರು. ಹೇಳಿರಿ: 'ದೃಷ್ಟಾಂತಗಳಿರುವುದು ಅಲ್ಲಾಹುವಿನ ಅಧೀನದಲ್ಲಿ ಮಾತ್ರವಾಗಿದೆ.' ನಿಮಗೇನು ಗೊತ್ತು? ಅದು ಬಂದರೂ ಅವರು ವಿಶ್ವಾಸವಿಡಲಾರರು.

**110**. ಇದರಲ್ಲಿ (ಈ ಕುರ್‌ಆನ್‌ನಲ್ಲಿ) ಮೊದಲ ಬಾರಿ ಅವರು ವಿಶ್ವಾಸವಿಡದಂತೆಯೇ (ಈಗಲೂ) ನಾವು ಅವರ ಹೃದಯಗಳನ್ನು ಮತ್ತು ಕಣ್ಣುಗಳನ್ನು ತಿರುಗಿಸಿ ಬಿಡುವೆವು. ಅವರು ತಮ್ಮ ಧಿಕ್ಕಾರದೊಂದಿಗೆ ಅಲೆದಾಡುವಂತೆ ನಾವು ಅವರನ್ನು ಬಿಟ್ಟು ಬಿಡುವೆವು.

وَنُقَلِّبُ أَفۡـِٔدَتَهُمۡ وَأَبۡصَٰرَهُمۡ كَمَا لَمۡ يُؤۡمِنُواْ بِهِۦٓ أَوَّلَ مَرَّةٖ وَنَذَرُهُمۡ فِي طُغۡيَٰنِهِمۡ يَعۡمَهُونَ ١١٠

**111**. ನಾವು ಅವರೆಡೆಗೆ ಮಲಕ್‌ಗಳನ್ನು ಇಳಿಸಿದರೂ, ಮೃತಪಟ್ಟವರು ಅವರೊಂದಿಗೆ ಮಾತನಾಡಿದರೂ, ಸರ್ವ ವಸ್ತುಗಳನ್ನೂ ನಾವು ಅವರ ಮುಂದೆ ಒಟ್ಟುಗೂಡಿಸಿದರೂ, ಅಲ್ಲಾಹು ಇಚ್ಛಿಸಿದ ಹೊರತು ಅವರು ವಿಶ್ವಾಸವಿಡಲಾರರು. ಆದರೆ ಅವರ ಪೈಕಿ ಹೆಚ್ಚಿನವರೂ ಅಜ್ಞಾನಿಗಳಾಗಿರುವರು.

۞ وَلَوۡ أَنَّنَا نَزَّلۡنَآ إِلَيۡهِمُ ٱلۡمَلَٰٓئِكَةَ وَكَلَّمَهُمُ ٱلۡمَوۡتَىٰ وَحَشَرۡنَا عَلَيۡهِمۡ كُلَّ شَيۡءٖ قُبُلٗا مَّا كَانُواْ لِيُؤۡمِنُوٓاْ إِلَّآ أَن يَشَآءَ ٱللَّهُ وَلَٰكِنَّ أَكۡثَرَهُمۡ يَجۡهَلُونَ ١١١

**112**. ಹೀಗೆ ನಾವು ಪ್ರತಿಯೊಬ್ಬ ಸಂದೇಶವಾಹಕನಿಗೂ ಮನುಷ್ಯರಲ್ಲಿ ಮತ್ತು ಜಿನ್ನ್‌ಗಳಲ್ಲಿ ಸೇರಿದ ಸೈತಾನರನ್ನು ಶತ್ರುಗಳನ್ನಾಗಿ ಮಾಡಿರುವೆವು. ವಂಚನಾತ್ಮಕವಾಗಿರುವ ಆಕರ್ಷಕ ಮಾತುಗಳನ್ನು ಅವರು ಪರಸ್ಪರ ದುರ್ಬೋಧನೆ ಮಾಡುತ್ತಿರುವರು.(1) ತಮ್ಮ ರಬ್ ಇಚ್ಛಿಸುತ್ತಿದ್ದರೆ ಅವರದನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಅವರು ಹೆಣೆಯುತ್ತಿರುವ ವಿಷಯಗಳೊಂದಿಗೆ ಅವರನ್ನು ಬಿಟ್ಟು ಬಿಡಿರಿ.

وَكَذَٰلِكَ جَعَلۡنَا لِكُلِّ نَبِيٍّ عَدُوّٗا شَيَٰطِينَ ٱلۡإِنسِ وَٱلۡجِنِّ يُوحِي بَعۡضُهُمۡ إِلَىٰ بَعۡضٖ زُخۡرُفَ ٱلۡقَوۡلِ غُرُورٗاۚ وَلَوۡ شَآءَ رَبُّكَ مَا فَعَلُوهُۖ فَذَرۡهُمۡ وَمَا يَفۡتَرُونَ ١١٢

1 ಒಳಿತಿನೆಡೆಗೆ ಆಹ್ವಾನಿಸುವವರನ್ನು ಮತ್ತು ಕೆಡುಕಿನಿಂದ ತಡೆಯುವವರನ್ನು ಹೆಚ್ಚಿನವರೂ ದ್ವೇಷಿಸುತ್ತಾರೆ. ವಾಸ್ತವಿಕವಾಗಿ ಅವರು ಹಿತಾಕಾಂಕ್ಷಿಗಳಾದ ಮಿತ್ರರಾಗಿದ್ದಾರೆ. ಆದರೆ ಜನರನ್ನು ನೀಚಕೃತ್ಯಗಳಲ್ಲಿ ತಲ್ಲೀನರಾಗುವಂತೆ ಮಾಡಿ ಅವರನ್ನು ದಾರಿಗೆಡಿಸಿ, ಶೋಷಣೆ ಮಾಡಲು ಯತ್ನಿಸುವವರು ಆಕರ್ಷಕ ಮಾತುಗಳಿಂದ ದುರ್ಬೋಧನೆ ಮಾಡುತ್ತಾರೆ. ಹೆಚ್ಚಿನವರೂ ಅವರನ್ನು ಪ್ರೀತಿಸುತ್ತಲೂ ಅವರಿಗೆ ನೆರವಾಗುತ್ತಲೂ ಇರುತ್ತಾರೆ. ವಾಸ್ತವಿಕವಾಗಿ ಅವರು ನಿಜವಾದ ಶತ್ರುಗಳಾಗಿದ್ದಾರೆ.

113. ಅದು ಪರಲೋಕದಲ್ಲಿ ವಿಶ್ವಾಸವಿಡದವರ ಹೃದಯಗಳು ಅದರೆಡೆಗೆ (ಆಕರ್ಷಕ ಮಾತುಗಳೆಡೆಗೆ) ವಾಲುವುದಕ್ಕಾಗಿಯೂ, ಅವರು ಅದರಲ್ಲಿ ಸಂತೃಪ್ತರಾಗುವುದಕ್ಕಾಗಿಯೂ ಮತ್ತು ಅವರು ಮಾಡುತ್ತಿರುವುದೆಲ್ಲವನ್ನೂ ಮಾಡಿಕೊಂಡಿರುವುದಕ್ಕಾಗಿಯೂ ಆಗಿದೆ.(1)

وَلِتَصۡغَىٰٓ إِلَيۡهِ أَفۡـِٔدَةُ ٱلَّذِينَ لَا يُؤۡمِنُونَ بِٱلۡأٓخِرَةِ وَلِيَرۡضَوۡهُ وَلِيَقۡتَرِفُواْ مَا هُم مُّقۡتَرِفُونَ ﴿١١٣﴾

114. (ಹೇಳಿರಿ): 'ವಿಶದವಾಗಿ ವಿವರಿಸಲಾಗಿರುವ ಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿದವನು ಅಲ್ಲಾಹುವಾಗಿರುವಾಗ ನಾನು ಅಲ್ಲಾಹೇತರರನ್ನು ತೀರ್ಪುಗಾರರನ್ನಾಗಿ ಅರಸುವುದೇ?' ಇದು ತಮ್ಮ ರಬ್‌ನ ವತಿಯಿಂದ ಸತ್ಯದೊಂದಿಗೆ ಅವತೀರ್ಣಗೊಂಡಿರುವುದಾಗಿದೆಯೆಂದು ನಾವು ಈ ಮುಂಚೆ ಯಾರಿಗೆ ಗ್ರಂಥ ನೀಡಿರುವೆವೋ ಅವರು ಅರಿತಿರುವರು. ಆದ್ದರಿಂದ ತಾವು ಯಾವತ್ತೂ ಸಂದೇಹಪಡುವವರ ಸಾಲಿಗೆ ಸೇರದಿರಿ.

أَفَغَيۡرَ ٱللَّهِ أَبۡتَغِي حَكَمٗا وَهُوَ ٱلَّذِيٓ أَنزَلَ إِلَيۡكُمُ ٱلۡكِتَٰبَ مُفَصَّلٗاۚ وَٱلَّذِينَ ءَاتَيۡنَٰهُمُ ٱلۡكِتَٰبَ يَعۡلَمُونَ أَنَّهُۥ مُنَزَّلٞ مِّن رَّبِّكَ بِٱلۡحَقِّۖ فَلَا تَكُونَنَّ مِنَ ٱلۡمُمۡتَرِينَ ﴿١١٤﴾

115. ಸತ್ಯದಲ್ಲಿಯೂ, ನ್ಯಾಯದಲ್ಲಿಯೂ ತಮ್ಮ ರಬ್‌ನ ವಚನವು ಪರಿಪೂರ್ಣವಾಗಿದೆ. ಅವನ ವಚನಗಳಿಗೆ ಬದಲಾವಣೆ ತರುವವರಾರೂ ಇಲ್ಲ. ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

وَتَمَّتۡ كَلِمَتُ رَبِّكَ صِدۡقٗا وَعَدۡلٗاۚ لَّا مُبَدِّلَ لِكَلِمَٰتِهِۦۚ وَهُوَ ٱلسَّمِيعُ ٱلۡعَلِيمُ ﴿١١٥﴾

116. ತಾವು ಭೂಮಿಯಲ್ಲಿರುವವರ ಪೈಕಿ ಹೆಚ್ಚಿನವರನ್ನು ಅನುಸರಿಸುವುದಾದರೆ ಅವರು ತಮ್ಮನ್ನು ಅಲ್ಲಾಹುವಿನ ಮಾರ್ಗದಿಂದ ವ್ಯತಿಚಲನೆಗೊಳಿಸುವರು. ಅವರು ಕೇವಲ ಊಹೆಯನ್ನಲ್ಲದೆ ಅನುಸರಿಸುವುದಿಲ್ಲ. ಅವರು ಕೇವಲ ಸುಳ್ಳನ್ನಲ್ಲದೆ ನುಡಿಯುವುದೂ ಇಲ್ಲ.

وَإِن تُطِعۡ أَكۡثَرَ مَن فِي ٱلۡأَرۡضِ يُضِلُّوكَ عَن سَبِيلِ ٱللَّهِۚ إِن يَتَّبِعُونَ إِلَّا ٱلظَّنَّ وَإِنۡ هُمۡ إِلَّا يَخۡرُصُونَ ﴿١١٦﴾

1 ಪ್ರತಿಯೊಬ್ಬನಿಗೂ ಅವನು ಆರಿಸುವ ಕರ್ಮ ಮಾರ್ಗದ ಮೂಲಕ ಮುನ್ನಡೆಯಲು ಅಲ್ಲಾಹು ಅನುವು ಮಾಡಿಕೊಡುವನು. ಅವನು ಯಾರನ್ನೂ ಬಲವಂತವಾಗಿ ಸನ್ಮಾರ್ಗದಲ್ಲಿ ಹಿಡಿದಿಡುವುದಿಲ್ಲ. ಜನರ ಮೇಲೆ ಬಲಪ್ರಯೋಗ ಮಾಡಲು ಪ್ರವಾದಿ(ﷺ)ರವರಿಗೂ ಅನುಮತಿಯಿಲ್ಲ.

117. ತನ್ನ ಮಾರ್ಗದಿಂದ ವ್ಯತಿಚಲಿಸುವವನು ಯಾರೆಂದು ಖಂಡಿತವಾಗಿಯೂ ತಮ್ಮ ರಬ್ ಅರಿತಿರುವನು. ಸನ್ಮಾರ್ಗ ಪಡೆದವರ ಕುರಿತೂ ಅವನು ಚೆನ್ನಾಗಿ ಅರಿತಿರುವನು.

إِنَّ رَبَّكَ هُوَ أَعۡلَمُ مَن يَضِلُّ عَن سَبِيلِهِۦۖ وَهُوَ أَعۡلَمُ بِٱلۡمُهۡتَدِينَ ﴿١١٧﴾

118. ಆದ್ದರಿಂದ ಅಲ್ಲಾಹುವಿನ ನಾಮವನ್ನು ಉಚ್ಚರಿಸ(ಲ್ಪಟ್ಟು ಕೊಯ್ಯ)ಲಾಗಿರುವುದರಿಂದ ತಿನ್ನಿರಿ. ನೀವು ಅವನ ಸೂಕ್ತಿಗಳಲ್ಲಿ ವಿಶ್ವಾಸವಿಡುವವರಾಗಿದ್ದರೆ!

فَكُلُواْ مِمَّا ذُكِرَ ٱسۡمُ ٱللَّهِ عَلَيۡهِ إِن كُنتُم بِـَٔايَٰتِهِۦ مُؤۡمِنِينَ ﴿١١٨﴾

119. ಅಲ್ಲಾಹುವಿನ ನಾಮವನ್ನು ಉಚ್ಚರಿಸ(ಲ್ಪಟ್ಟು ಕೊಯ್ಯ)ಲಾಗಿರುವುದರಿಂದ ತಿನ್ನದಿರಲು ನಿಮಗೇನಾಗಿದೆ? ನಿಮ್ಮ ಮೇಲೆ ನಿಷಿದ್ಧಗೊಳಿಸಿರುವುದನ್ನು ಅವನು ಈಗಾಗಲೇ ನಿಮಗೆ ವಿವರಿಸಿಕೊಟ್ಟಿರುವನು. ಆದರೆ ನೀವು (ತಿನ್ನಲು) ನಿರ್ಬಂಧಿತರಾಗುವುದರ ಹೊರತು. ಹೆಚ್ಚಿನವರೂ ಯಾವ ಅರಿವೂ ಇಲ್ಲದೆ ತಮ್ಮ ದೇಹೇಚ್ಛೆಗಳನ್ನು ಅನುಸರಿಸುತ್ತಾ (ಜನರನ್ನು) ದಾರಿತಪ್ಪಿಸುತ್ತಿರುವರು. ಖಂಡಿತವಾಗಿಯೂ ತಮ್ಮ ರಬ್ ಅತಿಕ್ರಮಿಗಳ ಕುರಿತು ಚೆನ್ನಾಗಿ ಅರಿತಿರುವನು.

وَمَا لَكُمۡ أَلَّا تَأۡكُلُواْ مِمَّا ذُكِرَ ٱسۡمُ ٱللَّهِ عَلَيۡهِ وَقَدۡ فَصَّلَ لَكُم مَّا حَرَّمَ عَلَيۡكُمۡ إِلَّا مَا ٱضۡطُرِرۡتُمۡ إِلَيۡهِۗ وَإِنَّ كَثِيرٗا لَّيُضِلُّونَ بِأَهۡوَآئِهِم بِغَيۡرِ عِلۡمٍۚ إِنَّ رَبَّكَ هُوَ أَعۡلَمُ بِٱلۡمُعۡتَدِينَ ﴿١١٩﴾

120. ಪಾಪಗಳ ಪೈಕಿ ಪ್ರತ್ಯಕ್ಷವಾಗಿರುವುದನ್ನೂ ಪರೋಕ್ಷವಾಗಿರುವುದನ್ನೂ ನೀವು ವರ್ಜಿಸಿರಿ. ಪಾಪವನ್ನು ಗಳಿಸುವವರು ಯಾರೋ ಅವರು ಮಾಡಿಕೊಂಡಿರುವುದಕ್ಕೆ ತಕ್ಕ ಪ್ರತಿಫಲವನ್ನು ಖಂಡಿತವಾಗಿಯೂ ಅವರಿಗೆ ನೀಡಲಾಗುವುದು.

وَذَرُواْ ظَٰهِرَ ٱلۡإِثۡمِ وَبَاطِنَهُۥٓۚ إِنَّ ٱلَّذِينَ يَكۡسِبُونَ ٱلۡإِثۡمَ سَيُجۡزَوۡنَ بِمَا كَانُواْ يَقۡتَرِفُونَ ﴿١٢٠﴾

121. ಅಲ್ಲಾಹುವಿನ ನಾಮವನ್ನು ಉಚ್ಚರಿಸಲ್ಪಡದವುಗಳಿಂದ ನೀವು ತಿನ್ನದಿರಿ.(1)

وَلَا تَأۡكُلُواْ مِمَّا لَمۡ يُذۡكَرِ ٱسۡمُ ٱللَّهِ عَلَيۡهِ

1 ಅಲ್ಲಾಹೇತರರಿಗೆ ಹೊರಲಾಗಿರುವ ಹರಕೆ, ಬಲಿ ಇತ್ಯಾದಿಗಳಿಗೋಸ್ಕರ ಕೊಯ್ದಪ್ರಾಣಿಯ ಮಾಂಸವನ್ನು ತಿನ್ನುವುದು ನಿಷಿದ್ಧವಾಗಿದೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಓರ್ವ ಮುಸ್ಲಿಮನು ಆಹಾರಕ್ಕಾಗಿ ಪ್ರಾಣಿಯನ್ನು ಕೊಯ್ಯುವ ಸಂದರ್ಭದಲ್ಲಿ ಅಲ್ಲಾಹುವಿನ ನಾಮವನ್ನು ಉಚ್ಚರಿಸಲು (ಬಿಸ್ಮಿಲ್ಲಾಹ್.... ಎನ್ನಲು) ಮರೆತರೆ ಆ ಮಾಂಸವು ನಿಷಿದ್ಧವಾಗದೆಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು. ಆದರೆ ಉದ್ದೇಶಪೂರ್ವಕವಾಗಿ ಬಿಸ್ಮಿ ಹೇಳದಿದ್ದರೆ ಆ ಮಾಂಸವು ನಿಷಿದ್ಧವೆಂಬುದು ಪ್ರಬಲವಾದ ಅಭಿಪ್ರಾಯವಾಗಿದೆ.

وَإِنَّهُۥ لَفِسْقٌۗ وَإِنَّ ٱلشَّيَـٰطِينَ لَيُوحُونَ
إِلَىٰٓ أَوْلِيَآئِهِمْ لِيُجَـٰدِلُوكُمْۖ وَإِنْ أَطَعْتُمُوهُمْ
إِنَّكُمْ لَمُشْرِكُونَ ﴿١٢١﴾

ಖಂಡಿತವಾಗಿಯೂ ಅದು ಧರ್ಮಬಾಹಿರವಾಗಿದೆ. ನಿಮ್ಮೊಂದಿಗೆ ತರ್ಕಿಸುವುದಕ್ಕಾಗಿ ಖಂಡಿತವಾಗಿಯೂ ಸೈತಾನರು ಅವರ ಮಿತ್ರರಿಗೆ ದುರ್ಬೋಧನೆ ನೀಡುತ್ತಿರುವರು. ನೀವೇನಾದರೂ ಅವರನ್ನು ಅನುಸರಿಸಿದರೆ ಖಂಡಿತವಾಗಿಯೂ ನೀವು (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡಿದವರಾಗುವಿರಿ.[1]

أَوَمَن كَانَ مَيْتًا فَأَحْيَيْنَـٰهُ وَجَعَلْنَا لَهُۥ
نُورًا يَمْشِى بِهِۦ فِى ٱلنَّاسِ كَمَن مَّثَلُهُۥ
فِى ٱلظُّلُمَـٰتِ لَيْسَ بِخَارِجٍ مِّنْهَا ۚ كَذَٰلِكَ
زُيِّنَ لِلْكَـٰفِرِينَ مَا كَانُوا۟ يَعْمَلُونَ ﴿١٢٢﴾

**122.** ನಿರ್ಜೀವ ಸ್ಥಿತಿಯಲ್ಲಿದ್ದ ಒಬ್ಬನಿಗೆ ನಾವು ಜೀವವನ್ನು ನೀಡಿದೆವು. ತರುವಾಯ ಅವನಿಗೆ ಒಂದು(ಸತ್ಯ)ಪ್ರಕಾಶವನ್ನು ನೀಡಿದೆವು. ಅವನು ಅದರೊಂದಿಗೆ ಜನರ ಮಧ್ಯೆ ನಡೆದಾಡುತ್ತಿರುವನು. ಅಂತಹವನು ಹೊರ ಬರಲಾಗದಂತೆ ಅಂಧಕಾರಗಳಲ್ಲಿ ಸಿಲುಕಿಕೊಂಡವನಂತಾಗುವನೇ? ಹೀಗೆ ಸತ್ಯನಿಷೇಧಿಗಳಿಗೆ ಅವರು ಮಾಡುತ್ತಿರುವುದನ್ನು ಆಕರ್ಷಕಗೊಳಿಸಿ ತೋರಿಸಲಾಗಿದೆ.

وَكَذَٰلِكَ جَعَلْنَا فِى كُلِّ قَرْيَةٍ أَكَـٰبِرَ
مُجْرِمِيهَا لِيَمْكُرُوا۟ فِيهَا ۖ وَمَا يَمْكُرُونَ إِلَّا
بِأَنفُسِهِمْ وَمَا يَشْعُرُونَ ﴿١٢٣﴾

**123.** ಹೀಗೆ ಪ್ರತಿಯೊಂದು ಊರಿನಲ್ಲೂ ಅಲ್ಲಿನ ಅಪರಾಧಿಗಳ ನಾಯಕರನ್ನು ಪಿತೂರಿಗಳಲ್ಲಿ ಮಗ್ನರಾಗುವಂತೆ ನಾವು ಮಾಡಿರುವೆವು. ಆದರೆ ಅವರು ಸ್ವತಃ ತಮ್ಮ ವಿರುದ್ಧವಲ್ಲದೆ ಕುತಂತ್ರ ಹೂಡುತ್ತಿಲ್ಲ.[2] ಅವರು (ಅದರ ಬಗ್ಗೆ) ಪ್ರಜ್ಞಾವಂತರಾಗುವುದಿಲ್ಲ.

وَإِذَا جَآءَتْهُمْ ءَايَةٌ قَالُوا۟ لَن نُّؤْمِنَ حَتَّىٰ
نُؤْتَىٰ مِثْلَ مَآ أُوتِىَ رُسُلُ ٱللَّهِ ۘ ٱللَّهُ أَعْلَمُ
حَيْثُ يَجْعَلُ رِسَالَتَهُۥ ۗ سَيُصِيبُ ٱلَّذِينَ
أَجْرَمُوا۟ صَغَارٌ عِندَ ٱللَّهِ وَعَذَابٌ شَدِيدٌۢ

**124.** ಯಾವುದೇ ದೃಷ್ಟಾಂತವು ಅವರ ಬಳಿಗೆ ಬಂದಾಗಲೂ 'ಅಲ್ಲಾಹುವಿನ ಸಂದೇಶವಾಹಕರಿಗೆ ನೀಡಲಾಗಿರುವಂತಹದ್ದು ನಮಗೂ ನೀಡಲಾಗುವವರೆಗೆ ನಾವೆಂದೂ ವಿಶ್ವಾಸವಿಡಲಾರೆವು' ಎಂದು ಅವರು

1 ಸಜ್ಜನರ ಹೆಸರಲ್ಲಿ ಹರಕೆ ಹೊರುವುದು ಬಹುದೇವಾರಾಧನೆಯಾಗಿದೆ. ಆದರೆ ಅದು ಅಲ್ಲಾಹುವಿನ ಧರ್ಮದ ಭಾಗವಾಗಿದೆ ಎಂದು ಸ್ಥಾಪಿಸಲು ದುರ್ಬೋಧನೆಗೈಯ್ಯುವ ಧಾರಾಳ ಜನರು ಎಲ್ಲಾ ಕಾಲಗಳಲ್ಲಿಯೂ ಇರುವರು. ಅವರನ್ನು ಅನುಸರಿಸಬಾರದೆಂದು ಅಲ್ಲಾಹು ಇಲ್ಲಿ ಎಚ್ಚರಿಕೆ ನೀಡುತ್ತಿದ್ದಾನೆ.

2 ಯಾರು ಏನೇ ಪಿತೂರಿ ಮಾಡಿದರೂ ಅದರಿಂದ ಅಲ್ಲಾಹುವಿಗೇನೂ ನಷ್ಟವಿಲ್ಲ. ಕುತಂತ್ರ ಹೂಡಿದುದಕ್ಕಿರುವ ಶಿಕ್ಷೆಯನ್ನು ಸ್ವತಃ ಅವರೇ ಅನುಭವಿಸಬೇಕಾಗಿ ಬರುವುದು.

بِمَا كَانُواْ يَمۡكُرُونَ ١٢٤

ಹೇಳುವರು.[1] ಆದರೆ ತನ್ನ ಸಂದೇಶವಾಹಕತ್ವವನ್ನು ಎಲ್ಲಿ ಸ್ಥಾಪಿಸಬೇಕೆಂಬುದನ್ನು ಅಲ್ಲಾಹು ಚೆನ್ನಾಗಿ ಅರಿತಿರುವನು. ಅಪರಾಧಿಗಳಿಗೆ, ಅವರು ಹೂಡಿದ ಕುತಂತ್ರದ ಫಲವಾಗಿ ಅಲ್ಲಾಹುವಿನ ಬಳಿ ನಿಂದ್ಯತೆಯನ್ನು ಮತ್ತು ಕಠಿಣವಾದ ಶಿಕ್ಷೆಯನ್ನು ಅನುಭವಿಸಬೇಕಾಗಿ ಬರುವುದು.

فَمَن يُرِدِ ٱللَّهُ أَن يَهۡدِيَهُۥ يَشۡرَحۡ صَدۡرَهُۥ لِلۡإِسۡلَٰمِۖ وَمَن يُرِدۡ أَن يُضِلَّهُۥ يَجۡعَلۡ صَدۡرَهُۥ ضَيِّقًا حَرَجًا كَأَنَّمَا يَصَّعَّدُ فِي ٱلسَّمَآءِۚ كَذَٰلِكَ يَجۡعَلُ ٱللَّهُ ٱلرِّجۡسَ عَلَى ٱلَّذِينَ لَا يُؤۡمِنُونَ ١٢٥

125. ಯಾರನ್ನು ಸನ್ಮಾರ್ಗದೆಡೆಗೆ ಮುನ್ನಡೆಸಬೇಕೆಂದು ಅಲ್ಲಾಹು ಇಚ್ಛಿಸುವನೋ ಅವನ ಹೃದಯವನ್ನು ಅವನು ಇಸ್ಲಾಮಿಗಾಗಿ ತೆರೆದುಕೊಡುವನು. ಯಾರನ್ನು ಪಥಭ್ರಷ್ಟಗೊಳಿಸಬೇಕೆಂದು ಅಲ್ಲಾಹು ಇಚ್ಛಿಸುವನೋ ಅವನ ಹೃದಯವನ್ನು ಬಿಗಿಯಾಗಿಯೂ ಸಂಕುಚಿತವಾಗಿಯೂ ಮಾಡುವನು. ಅವನು ಆಕಾಶಗಳ ಮೂಲಕ ಏರಿ ಹೋಗುತ್ತಿರುವನೋ ಎಂಬಂತೆ![2] ಹೀಗೆ ಅಲ್ಲಾಹು ವಿಶ್ವಾಸವಿಡದವರ ಮೇಲೆ ಶಿಕ್ಷೆಯನ್ನು ಹಾಕುವನು.

وَهَٰذَا صِرَٰطُ رَبِّكَ مُسۡتَقِيمٗاۗ قَدۡ فَصَّلۡنَا ٱلۡأٓيَٰتِ لِقَوۡمٖ يَذَّكَّرُونَ ١٢٦

126. ಇದು ತಮ್ಮ ರಬ್‌ನ ನೇರವಾದ ಮಾರ್ಗವಾಗಿದೆ. ಗ್ರಹಿಸುವ ಜನರಿಗಾಗಿ ನಾವು ದೃಷ್ಟಾಂತಗಳನ್ನು ವಿವರಿಸಿಕೊಟ್ಟಿರುವೆವು.

۞ لَهُمۡ دَارُ ٱلسَّلَٰمِ عِندَ رَبِّهِمۡۖ وَهُوَ وَلِيُّهُم بِمَا كَانُواْ يَعۡمَلُونَ ١٢٧

127. ಅವರಿಗೆ ಅವರ ರಬ್‌ನ ಬಳಿ ಶಾಂತಿಯ ಭವನವಿದೆ. ಅವನು ಅವರ ರಕ್ಷಕನಾಗಿರುವನು. ಇದು ಅವರು ಮಾಡುತ್ತಿದ್ದುದರ ಪ್ರತಿಫಲವಾಗಿದೆ.

---

1 ಮುಹಮ್ಮದ್ (ﷺ)ರಿಗೆ ಅಷ್ಟು ದೊಡ್ಡ ವಿಶೇಷತೆ ಏನಿದೆ? ದಿವ್ಯ ಸಂದೇಶವು ನಮಗೂ ಸಿಗಬಾರದೇಕೆ? ನಾವು ವಿಶ್ವಾಸವಿಡಬೇಕೆಂಬ ಅಗತ್ಯ ಅಲ್ಲಾಹುವಿಗಿದ್ದರೆ ಅವನು ನಮಗೂ ದಿವ್ಯಸಂದೇಶಗಳನ್ನು ತಲುಪಿಸಿಕೊಡಲಿ ಎಂಬ ಮೊಂಡುವಾದವನ್ನು ಅರೇಬಿಯಾದ ಸತ್ಯನಿಷೇಧಿಗಳ ಪೈಕಿ ಕೆಲವರು ಹೊಂದಿದ್ದರು.

2 ಇದು ದುರ್ಮಾರ್ಗವು ರೂಢಿಯಾಗಿ ಬಿಟ್ಟಿರುವ ಕಾರಣ ಸತ್ಯವನ್ನು ಅಂಗೀಕರಿಸಲು ತೀವ್ರ ಸಂಕಟ ಅನುಭವಿಸುವವರಿಗೆ ನೀಡಿದ ಒಂದು ಉಪಮೆಯಾಗಿದೆ. ಒಂದೇ ಸವನೆ ಮೇಲೇರುವ ಓರ್ವ ವ್ಯಕ್ತಿಗೆ ಮೇಲೇರಿದಷ್ಟು ಇಕ್ಕಟ್ಟು ಹೆಚ್ಚುತ್ತಲೇ ಇರುತ್ತದೆ. ಅವನ ಶ್ವಾಸೋಚ್ಛ್ವಾಸದಲ್ಲಿ ಏರುಪೇರುಂಟಾಗುತ್ತದೆ ಮತ್ತು ಹೃದಯ ಬಡಿತವು ಕ್ರಮ ತಪ್ಪುತ್ತದೆ. ಸತ್ಯವನ್ನು ಅಂಗೀಕರಿಸಬೇಕೆಂದು ಹೇಳುವಾಗ ಕೆಲವರಿಗೆ ಇಂತಹ ಇಕ್ಕಟ್ಟು ಅನುಭವವಾಗುತ್ತದೆ.

128. ಅವನು (ಅಲ್ಲಾಹು) ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ. (ಅವನು ಜಿನ್ನ್‌ಗಳೊಂದಿಗೆ ಹೇಳುವನು): 'ಓ ಜಿನ್ನ್‌ಗಳ ಸಮೂಹವೇ! ಮನುಷ್ಯರ ಪೈಕಿ ಅನೇಕ ಜನರನ್ನು ನೀವು ದಾರಿಗೆಡಿಸಿರುವಿರಿ.'[1] ಮನುಷ್ಯರಲ್ಲಿ ಸೇರಿದ ಅವರ ಆಪ್ತಮಿತ್ರರು ಹೇಳುವರು: 'ಓ ನಮ್ಮ ರಬ್! ನಮ್ಮಲ್ಲಿ ಕೆಲವರು ಇತರ ಕೆಲವರಿಂದ ಸುಖಾನುಭೂತಿಯನ್ನು ಪಡೆದಿರುವರು.[2] ತರುವಾಯ ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು ನಾವು ತಲುಪಿರುವೆವು.' ಅವನು ಹೇಳುವನು: 'ನರಕಾಗ್ನಿಯೇ ನಿಮ್ಮ ವಾಸಸ್ಥಳ! ಅಲ್ಲಾಹು ಇಚ್ಛಿಸಿದ ವಿನಾ ನೀವದರಲ್ಲಿ ಶಾಶ್ವತವಾಗಿ ವಾಸಿಸುವಿರಿ.' ಖಂಡಿತವಾಗಿಯೂ ತಮ್ಮ ರಬ್ ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.

وَيَوْمَ يَحْشُرُهُمْ جَمِيعًا يَٰمَعْشَرَ ٱلْجِنِّ قَدِ ٱسْتَكْثَرْتُم مِّنَ ٱلْإِنسِ ۖ وَقَالَ أَوْلِيَآؤُهُم مِّنَ ٱلْإِنسِ رَبَّنَا ٱسْتَمْتَعَ بَعْضُنَا بِبَعْضٍ وَبَلَغْنَآ أَجَلَنَا ٱلَّذِىٓ أَجَّلْتَ لَنَا ۚ قَالَ ٱلنَّارُ مَثْوَىٰكُمْ خَٰلِدِينَ فِيهَآ إِلَّا مَا شَآءَ ٱللَّهُ ۗ إِنَّ رَبَّكَ حَكِيمٌ عَلِيمٌ ﴿١٢٨﴾

129. ಹೀಗೆ ನಾವು ಆ ಅಕ್ರಮಿಗಳ ಪೈಕಿ ಕೆಲವರನ್ನು ಕೆಲವರಿಗೆ ಮಿತ್ರರನ್ನಾಗಿ ಮಾಡುವೆವು. ಅದು ಅವರು ಸಂಪಾದಿಸುತ್ತಿದ್ದುದರ ಫಲವಾಗಿದೆ.

وَكَذَٰلِكَ نُوَلِّى بَعْضَ ٱلظَّٰلِمِينَ بَعْضًۢا بِمَا كَانُوا۟ يَكْسِبُونَ ﴿١٢٩﴾

130. 'ಓ ಜಿನ್ನ್ ಮತ್ತು ಮನುಷ್ಯರ ಸಮೂಹವೇ! ನಿಮಗೆ ನನ್ನ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಲೂ, ನಿಮ್ಮ ಈ ದಿನದ[3] ಭೇಟಿಯ ಕುರಿತು ನಿಮಗೆ ಎಚ್ಚರಿಕೆ ನೀಡುತ್ತಲೂ, ನಿಮ್ಮಿಂದಲೇ ಇರುವ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರಲಿಲ್ಲವೇ?' ಅವರು ಹೇಳುವರು: 'ನಾವು ಸ್ವತಃ ನಮ್ಮ ವಿರುದ್ಧವೇ ಸಾಕ್ಷ್ಯ ವಹಿಸಿರುವೆವು.' ಐಹಿಕ ಜೀವನವು ಅವರನ್ನು ವಂಚಿಸಿತು.

يَٰمَعْشَرَ ٱلْجِنِّ وَٱلْإِنسِ أَلَمْ يَأْتِكُمْ رُسُلٌ مِّنكُمْ يَقُصُّونَ عَلَيْكُمْ ءَايَٰتِى وَيُنذِرُونَكُمْ لِقَآءَ يَوْمِكُمْ هَٰذَا ۚ قَالُوا۟ شَهِدْنَا عَلَىٰٓ أَنفُسِنَا ۖ وَغَرَّتْهُمُ ٱلْحَيَوٰةُ ٱلدُّنْيَا وَشَهِدُوا۟ عَلَىٰٓ أَنفُسِهِمْ أَنَّهُمْ كَانُوا۟ كَٰفِرِينَ ﴿١٣٠﴾

1 ಜಿನ್ನ್‌ಗಳ ಪ್ರಪಂಚದ ಬಗ್ಗೆ ಕುರ್‌ಆನ್ ಮತ್ತು ಸುನ್ನತ್ ವಿವರಿಸಿಕೊಟ್ಟಿರುವುದಕ್ಕಿಂತ ಹೆಚ್ಚು ತಿಳಿಯಲು ನಮಗೆ ಸಾಧ್ಯವಿಲ್ಲ. ಜಿನ್ನ್‌ಗಳಲ್ಲಿ ಸೇರಿದ ಸೈತಾನರು ನಾವು ತಿಳಿಯದ ರೀತಿಯಲ್ಲಿ ನಮ್ಮನ್ನು ದಾರಿಗೆಡಿಸಲು ಸದಾ ಪ್ರಯತ್ನಿಸುತ್ತಿರುವರೆಂದು ಕುರ್‌ಆನ್ ನಮಗೆ ಎಚ್ಚರಿಕೆ ನೀಡಿದೆ.

2 ಸೈತಾನರು ದುರ್ಬೋಧನೆ ಮಾಡುವುದು ತಾತ್ಕಾಲಿಕ ಸುಖಾನುಭೂತಿ ಮತ್ತು ಮುಂದೆ ಘೋರ ಭವಿಷ್ಯವನ್ನು ಉಂಟು ಮಾಡುವ ವಿಷಯಗಳನ್ನಾಗಿವೆ.

3 ಅಂದರೆ ಪುನರುತ್ಥಾನದ ದಿನ.

ತಾವು ಸತ್ಯನಿಷೇಧಿಗಳಾಗಿದ್ದೆವೆಂದು ಸ್ವತಃ ತಮ್ಮ ವಿರುದ್ಧವೇ ಅವರು ಸಾಕ್ಷ್ಯವಹಿಸುವರು.

ذَٰلِكَ أَن لَّمْ يَكُن رَّبُّكَ مُهْلِكَ ٱلْقُرَىٰ بِظُلْمٍ وَأَهْلُهَا غَٰفِلُونَ ١٣١

131. ಅದು (ಸಂದೇಶವಾಹಕರನ್ನು ಕಳುಹಿಸಿರುವುದು) ತಮ್ಮ ರಬ್ ನಾಡುಗಳನ್ನು, ಅದರ ನಿವಾಸಿಗಳು (ಸತ್ಯದ ಕುರಿತು) ಅಜ್ಞರಾಗಿರುತ್ತಾ ಮಾಡಿದ ಅಕ್ರಮದ ನಿಮಿತ್ತ ನಾಶ ಮಾಡುವವನಲ್ಲ[1] ಎಂಬುದರಿಂದಾಗಿದೆ.

وَلِكُلٍّ دَرَجَٰتٌ مِّمَّا عَمِلُوا۟ ۚ وَمَا رَبُّكَ بِغَٰفِلٍ عَمَّا يَعْمَلُونَ ١٣٢

132. ಪ್ರತಿಯೊಬ್ಬರಿಗೂ ಅವರು ಮಾಡಿರುವುದರ ಪ್ರತಿಫಲವಾಗಿ ಹಲವು ಪದವಿಗಳಿರುವುವು. ಅವರು ಮಾಡುತ್ತಿರುವುದರ ಕುರಿತು ತಮ್ಮ ರಬ್ ಅಲಕ್ಷ್ಯನಲ್ಲ.

وَرَبُّكَ ٱلْغَنِىُّ ذُو ٱلرَّحْمَةِ ۚ إِن يَشَأْ يُذْهِبْكُمْ وَيَسْتَخْلِفْ مِنۢ بَعْدِكُم مَّا يَشَآءُ كَمَآ أَنشَأَكُم مِّن ذُرِّيَّةِ قَوْمٍ ءَاخَرِينَ ١٣٣

133. ತಮ್ಮ ರಬ್ ನಿರಪೇಕ್ಷನೂ, ಕರುಣೆಯುಳ್ಳವನೂ ಆಗಿರುವನು. ಅವನಿಚ್ಛಿಸಿದರೆ ಬೇರೊಂದು ಜನತೆಯ ಸಂತತಿಯಿಂದ ನಿಮ್ಮನ್ನು ಬೆಳೆಸಿದಂತೆ, ನಿಮ್ಮನ್ನು ಅಳಿಸಿ, ನಿಮ್ಮ ಬಳಿಕ ತಾನಿಚ್ಛಿಸುವ ಬೇರೊಂದು ಜನತೆಯನ್ನು ಉತ್ತರಾಧಿಕಾರಿಯಾಗಿ ಮಾಡುವನು.

إِنَّ مَا تُوعَدُونَ لَءَاتٍ ۖ وَمَآ أَنتُم بِمُعْجِزِينَ ١٣٤

134. ನಿಮಗೆ ಮುನ್ನೆಚ್ಚರಿಕೆ ನೀಡಲಾಗುತ್ತಿರುವ ಆ ಸಂಗತಿಯು ಖಂಡಿತವಾಗಿಯೂ ಬಂದೇ ಬರುವುದು. (ಆ ವಿಷಯದಲ್ಲಿ ಅಲ್ಲಾಹುವನ್ನು) ಸೋಲಿಸಲು ನಿಮಗೆ ಸಾಧ್ಯವಾಗದು.

قُلْ يَٰقَوْمِ ٱعْمَلُوا۟ عَلَىٰ مَكَانَتِكُمْ إِنِّى عَامِلٌ ۖ فَسَوْفَ تَعْلَمُونَ مَن تَكُونُ لَهُۥ عَٰقِبَةُ ٱلدَّارِ ۗ إِنَّهُۥ لَا يُفْلِحُ ٱلظَّٰلِمُونَ ١٣٥

135. (ಓ ಪ್ರವಾದಿಯವರೇ!) ಹೇಳಿರಿ: 'ಓ ನನ್ನ ಜನರೇ! ನೀವು ನಿಮ್ಮ ನಿಲುವಿಗೆ ಅನುಸಾರವಾಗಿ ಕರ್ಮವೆಸಗಿರಿ. ಖಂಡಿತವಾಗಿಯೂ ನಾನೂ ಕರ್ಮವೆಸಗುವೆನು. ಜಗತ್ತಿನ ಪರ್ಯಾವಸಾನವು ಯಾರ ಪಾಲಿಗೆ ಅನುಕೂಲಕರವಾಗಿರುವುದೆಂದು ನೀವು ಸದ್ಯದಲ್ಲೇ ಅರಿಯಲಿರುವಿರಿ.

1 ಪ್ರವಾದಿಗಳ ಅಥವಾ ಧರ್ಮಬೋಧಕರ ಮೂಲಕ ದೈವಿಕ ಮಾರ್ಗದರ್ಶನವನ್ನು ಅರಿಯುವ ಅವಕಾಶವು ಜೀವನದಲ್ಲಿ ಒಮ್ಮೆಯೂ ಲಭ್ಯವಾಗದವರನ್ನು ಅಲ್ಲಾಹು ಶಿಕ್ಷಿಸಲಾರನು ಎಂದು ಇದರಿಂದ ಗ್ರಹಿಸಬಹುದು.

ಖಂಡಿತವಾಗಿಯೂ ಅಕ್ರಮಿಗಳು ಯಶಸ್ವಿಯಾಗಲಾರರು.'

وَجَعَلُواْ لِلَّهِ مِمَّا ذَرَأَ مِنَ ٱلۡحَرۡثِ وَٱلۡأَنۡعَٰمِ نَصِيبٗا فَقَالُواْ هَٰذَا لِلَّهِ بِزَعۡمِهِمۡ وَهَٰذَا لِشُرَكَآئِنَاۖ فَمَا كَانَ لِشُرَكَآئِهِمۡ فَلَا يَصِلُ إِلَى ٱللَّهِۖ وَمَا كَانَ لِلَّهِ فَهُوَ يَصِلُ إِلَىٰ شُرَكَآئِهِمۡۗ سَآءَ مَا يَحۡكُمُونَ ١٣٦

**136.** ಅಲ್ಲಾಹು ಸೃಷ್ಟಿಸಿದ ಕೃಷಿಯಿಂದಲೂ, ಜಾನುವಾರುಗಳಿಂದಲೂ ಅವರು ಅವನಿಗೆ ಒಂದು ಪಾಲನ್ನು ನಿಶ್ಚಯಿಸಿರುವರು. ತರುವಾಯ ತಮ್ಮ ವಾದಕ್ಕನುಸಾರವಾಗಿ 'ಇದು ಅಲ್ಲಾಹುವಿಗಾಗಿದೆ ಮತ್ತು ಇನ್ನೊಂದು ನಾವು ಸಹಭಾಗಿಗಳನ್ನಾಗಿ ಮಾಡಿರುವ ನಮ್ಮ ಆರಾಧ್ಯರುಗಳಿಗಾಗಿದೆ' ಎನ್ನುವರು. ಅವರ ಸಹಭಾಗಿಗಳಿಗಿರುವುದು ಅಲ್ಲಾಹುವಿನೆಡೆಗೆ ತಲುಪಲಾರದು. ಆದರೆ ಅಲ್ಲಾಹುವಿಗಿರುವುದು ಅವರ ಸಹಭಾಗಿಗಳೆಡೆಗೆ ತಲುಪುವುದು.(1) ಅವರು ನೀಡುತ್ತಿರುವ ತೀರ್ಪು ಎಷ್ಟು ನಿಕೃಷ್ಟವಾದುದು!

وَكَذَٰلِكَ زَيَّنَ لِكَثِيرٖ مِّنَ ٱلۡمُشۡرِكِينَ قَتۡلَ أَوۡلَٰدِهِمۡ شُرَكَآؤُهُمۡ لِيُرۡدُوهُمۡ وَلِيَلۡبِسُواْ عَلَيۡهِمۡ دِينَهُمۡۖ وَلَوۡ شَآءَ ٱللَّهُ مَا فَعَلُوهُۖ فَذَرۡهُمۡ وَمَا يَفۡتَرُونَ ١٣٧

**137.** ಹೀಗೆ ಬಹುದೇವವಿಶ್ವಾಸಿಗಳ ಪೈಕಿ ಹಲವರಿಗೂ ಅವರು ಸಹಭಾಗಿಗಳನ್ನಾಗಿ ಮಾಡಿರುವ ಆರಾಧ್ಯರುಗಳು ಅವರ ಮಕ್ಕಳ ವಧೆಯನ್ನು ಆಕರ್ಷಕವಾಗಿ ತೋರುವಂತೆ ಮಾಡಿರುವರು.(2) ತನ್ಮೂಲಕ ಅವರನ್ನು ವಿನಾಶಕ್ಕೀಡು ಮಾಡುವ ಸಲುವಾಗಿ ಮತ್ತು ಅವರು ತಮ್ಮ ಧರ್ಮದಲ್ಲಿ ಗೊಂದಲಕ್ಕೀಡಾಗುವಂತೆ ಮಾಡುವ ಸಲುವಾಗಿ. ಅಲ್ಲಾಹು ಇಚ್ಛಿಸುತ್ತಿದ್ದರೆ ಅವರದನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಅವರು ಹೆಣೆಯುತ್ತಿರುವುದರೊಂದಿಗೆ ಅವರನ್ನು ಬಿಟ್ಟುಬಿಡಿರಿ.

---

1 ಝಕಾತ್ ಮತ್ತು ಸದಕಾ ಮನುಷ್ಯರ ಸೊತ್ತಿನಲ್ಲಿರುವ ಅಲ್ಲಾಹುವಿನ ಹಕ್ಕಾಗಿದೆ. ಹರಕೆಗಳು ಜನರು ಸಜ್ಜನರಿಗೋಸ್ಕರ ಸ್ವತಃ ನಿರ್ಮಿಸಿದ 'ಹಕ್ಕು'ಗಳಾಗಿವೆ. ಝಕಾತ್ ಮತ್ತು ಸದಕಾ ನೀಡುವುದರಲ್ಲಿ ಲೋಪವೆಸಗಿಯಾದರೂ ಅವರು ಸಜ್ಜನರ ಮೇಲೆ ಹೊರಲಾಗಿರುವ ಹರಕೆಗಳನ್ನು ಸಂದಾಯಮಾಡುವರು. ಹರಕೆಗೆ ಮೀಸಲಿಟ್ಟಿರುವುದನ್ನು ಅವರು ಎಂದಿಗೂ ಬೇರಾವ ಉದ್ದೇಶಕ್ಕೂ ವ್ಯಯಿಸಲಾರರು. ಅಲ್ಲಾಹುವಿನ ವಿಷಯದಲ್ಲಿರುವುದಕ್ಕಿಂತಲೂ ಎಷ್ಟೋ ಹೆಚ್ಚು ನಿಷ್ಠೆಯನ್ನು ಅವರು ಸಜ್ಜನರಿಗೆ ಹರಕೆ ಸಂದಾಯ ಮಾಡುವುದರಲ್ಲಿ ಪಾಲಿಸುತ್ತಿರುವರು.

2 ಅರೇಬಿಯಾದಲ್ಲಿದ್ದ ಬಹುದೇವವಿಶ್ವಾಸಿಗಳಲ್ಲಿ ಶಿಶುಹತ್ಯೆಯು ಸಾಮಾನ್ಯವಾಗಿತ್ತು. ದೇವ–ದೇವತೆಗಳಿಗೆ ಶಿಶುಗಳನ್ನು ಬಲಿಕೊಡಲಾಗುತ್ತಿತ್ತು. ಬಡತನದ ಭಯದಿಂದಲೂ ಶಿಶುಗಳನ್ನು ಹತ್ಯೆ ಮಾಡಲಾಗುತ್ತಿತ್ತು. ಅಪಮಾನ ನಿಮಿತ್ತವೂ ಅವರು ಹೆಣ್ಣುಶಿಶುಗಳನ್ನು ಹತ್ಯೆ ಮಾಡುತ್ತಿದ್ದರು. ಇವಾವುದನ್ನೂ ಅವರು ಧರ್ಮಬಾಹಿರ ಕೃತ್ಯಗಳಾಗಿ ಪರಿಗಣಿಸುತ್ತಿರಲಿಲ್ಲ.

وَقَالُواْ هَٰذِهِۦٓ أَنۡعَٰمٞ وَحَرۡثٌ حِجۡرٞ لَّا يَطۡعَمُهَآ إِلَّا مَن نَّشَآءُ بِزَعۡمِهِمۡ وَأَنۡعَٰمٌ حُرِّمَتۡ ظُهُورُهَا وَأَنۡعَٰمٞ لَّا يَذۡكُرُونَ ٱسۡمَ ٱللَّهِ عَلَيۡهَا ٱفۡتِرَآءً عَلَيۡهِۚ سَيَجۡزِيهِم بِمَا كَانُواْ يَفۡتَرُونَ ١٣٨

138. ಅವರು ಹೇಳಿದರು: 'ಇವು ನಿಷೇಧಿತ ಜಾನುವಾರುಗಳು ಮತ್ತು ಕೃಷಿಗಳಾಗಿವೆ. ನಾವು ಇಚ್ಛಿಸುವವರಲ್ಲದೆ ಯಾರೂ ಇವುಗಳನ್ನು ತಿನ್ನಬಾರದು.' ಇದು ಅವರ ವಾದವಾಗಿದೆ. ಬೆನ್ನ ಮೇಲೆ ಸವಾರಿ ಮಾಡುವುದು ನಿಷಿದ್ಧವಾಗಿರುವ ಕೆಲವು ಜಾನುವಾರುಗಳಿವೆ. ಅವರು ಅಲ್ಲಾಹುವಿನ ನಾಮವನ್ನು ಉಚ್ಛರಿಸದಂತಹ ಬೇರೆ ಕೆಲವು ಜಾನುವಾರುಗಳಿವೆ. ಇವೆಲ್ಲವೂ ಅವರು ಅವನ (ಅಲ್ಲಾಹುವಿನ) ಮೇಲೆ ಹೆಣೆದಿರುವುದಾಗಿವೆ. ಅವರು ಹೆಣೆಯುತ್ತಿದ್ದುದಕ್ಕೆ ಅವನು ಅವರಿಗೆ ತಕ್ಕ ಪ್ರತಿಫಲವನ್ನು ನೀಡಲಿರುವನು.

وَقَالُواْ مَا فِي بُطُونِ هَٰذِهِ ٱلۡأَنۡعَٰمِ خَالِصَةٞ لِّذُكُورِنَا وَمُحَرَّمٌ عَلَىٰٓ أَزۡوَٰجِنَاۖ وَإِن يَكُن مَّيۡتَةٗ فَهُمۡ فِيهِ شُرَكَآءُۚ سَيَجۡزِيهِمۡ وَصۡفَهُمۡۚ إِنَّهُۥ حَكِيمٌ عَلِيمٞ ١٣٩

139. ಅವರು ಹೇಳಿದರು: 'ಈ ಜಾನುವಾರುಗಳ ಗರ್ಭಾಶಯಗಳಲ್ಲಿರುವುದು ನಮ್ಮ ಪೈಕಿ ಪುರುಷರಿಗೆ ಮಾತ್ರವಿರುವುದಾಗಿದೆ ಮತ್ತು ಅವು ನಮ್ಮ ಪತ್ನಿಯರಿಗೆ ನಿಷಿದ್ಧವಾಗಿವೆ.' ಅದು ಸತ್ತಿರುವುದಾಗಿದ್ದರೆ ಅದರಲ್ಲಿ ಅವರೆಲ್ಲರೂ ಪಾಲುದಾರರಾಗುವರು. ಅವರ ಈ ವಾದಕ್ಕೆ ಅವನು ಅವರಿಗೆ ತಕ್ಕ ಪ್ರತಿಫಲವನ್ನು ನೀಡಲಿರುವನು. ಖಂಡಿತವಾಗಿಯೂ ಅವನು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.

قَدۡ خَسِرَ ٱلَّذِينَ قَتَلُوٓاْ أَوۡلَٰدَهُمۡ سَفَهَۢا بِغَيۡرِ عِلۡمٖ وَحَرَّمُواْ مَا رَزَقَهُمُ ٱللَّهُ ٱفۡتِرَآءً عَلَى ٱللَّهِۚ قَدۡ ضَلُّواْ وَمَا كَانُواْ مُهۡتَدِينَ ١٤٠

140. ಯಾವುದೇ ಅರಿವಿಲ್ಲದೆ ಮೂರ್ಖತನದಿಂದ ತಮ್ಮ ಮಕ್ಕಳನ್ನು ವಧಿಸಿದವರು ಮತ್ತು ಅಲ್ಲಾಹು ಅವರಿಗೆ ದಯಪಾಲಿಸಿರುವುದನ್ನು ಅಲ್ಲಾಹುವಿನ ಹೆಸರಿನಲ್ಲಿ ಸುಳ್ಳಾರೋಪಿಸುತ್ತಾ ನಿಷಿದ್ಧಗೊಳಿಸಿದವರು ಖಂಡಿತವಾಗಿಯೂ ನಷ್ಟಕ್ಕೊಳಗಾಗಿರುವರು. ನಿಸ್ಸಂಶಯವಾಗಿಯೂ ಅವರು ಪಥಭ್ರಷ್ಟರಾಗಿರುವರು ಮತ್ತು ಅವರು ಸನ್ಮಾರ್ಗವನ್ನು ಪಡೆದವರಾಗಲಿಲ್ಲ.(1)

1 ಯಾವುದೆಲ್ಲಾ ಪವಿತ್ರವಾಗಿದೆ ಮತ್ತು ಯಾವುದೆಲ್ಲಾ ನಿಷಿದ್ಧವಾಗಿದೆ ಎಂದು ನಿರ್ಧರಿಸುವ ಅಧಿಕಾರವಿರುವುದು ಅಲ್ಲಾಹುವಿಗೆ ಮಾತ್ರವಾಗಿದೆ. ಅವನು ಏನನ್ನು ಆದೇಶಿಸುತ್ತಾನೋ ಅದು ಮಾತ್ರ ಧರ್ಮವಾಗಿದೆ. ಧರ್ಮನಿಯಮಗಳನ್ನು ಸ್ವತಃ ತಮ್ಮ ವತಿಯಿಂದ ನಿಶ್ಚಯಿಸುವ ಅರ್ಚಕರು ಮತ್ತು ಪುರೋಹಿತರು ಅಲ್ಲಾಹುವಿನ ಅಧಿಕಾರದಲ್ಲಿ ಹಸ್ತಕ್ಷೇಪ ನಡೆಸುವ ಧಿಕ್ಕಾರಿಗಳಾಗಿದ್ದಾರೆ.

141. ಚಪ್ಪರಗಳಿರುವ ಮತ್ತು ಚಪ್ಪರಗಳಿಲ್ಲದ ತೋಟಗಳನ್ನು, ಖರ್ಜೂರದ ಮರಗಳನ್ನು, ವೈವಿಧ್ಯಮಯ ಫಲಗಳಿರುವ ಕೃಷಿಗಳನ್ನು, ಪರಸ್ಪರ ಸಾದೃಶ್ಯವಿರುವ ಮತ್ತು ಸಾದೃಶ್ಯವಿಲ್ಲದಿರುವಂತಹ ಆಲಿವ್ ಮತ್ತು ದಾಳಿಂಬೆಗಳೆಲ್ಲವನ್ನು ಸೃಷ್ಟಿಸಿದವನು ಅವನೇ ಆಗಿರುವನು. ಅವು ಫಲಬಿಡುವಾಗ ಅವುಗಳ ಫಲಗಳನ್ನು ತಿನ್ನಿರಿ ಮತ್ತು ಅವುಗಳ ಫಸಲುಗಳನ್ನು ಕೊಯ್ಯುವ ದಿನದಂದು ಅವುಗಳ ಹಕ್ಕನ್ನು ನೀಡಿರಿ. ಆದರೆ ದುರ್ವ್ಯಯ ಮಾಡದಿರಿ. ಖಂಡಿತವಾಗಿಯೂ ದುರ್ವ್ಯಯ ಮಾಡುವವರನ್ನು ಅಲ್ಲಾಹು ಮೆಚ್ಚಲಾರನು.

۞ وَهُوَ ٱلَّذِىٓ أَنشَأَ جَنَّٰتٍ مَّعْرُوشَٰتٍ وَغَيْرَ مَعْرُوشَٰتٍ وَٱلنَّخْلَ وَٱلزَّرْعَ مُخْتَلِفًا أُكُلُهُۥ وَٱلزَّيْتُونَ وَٱلرُّمَّانَ مُتَشَٰبِهًا وَغَيْرَ مُتَشَٰبِهٍ ۚ كُلُوا۟ مِن ثَمَرِهِۦٓ إِذَآ أَثْمَرَ وَءَاتُوا۟ حَقَّهُۥ يَوْمَ حَصَادِهِۦ ۖ وَلَا تُسْرِفُوٓا۟ ۚ إِنَّهُۥ لَا يُحِبُّ ٱلْمُسْرِفِينَ ﴿١٤١﴾

142. ಜಾನುವಾರುಗಳ ಪೈಕಿ ಭಾರ ಹೊರುವವುಗಳನ್ನೂ, ಕೊಯ್ದು ತಿನ್ನುವಂತಹವುಗಳನ್ನೂ (ಸೃಷ್ಟಿಸಿದವನು ಅವನೇ ಆಗಿರುವನು). ಅಲ್ಲಾಹು ನಿಮಗೆ ಅನ್ನಾಧಾರವಾಗಿ ಕರುಣಿಸಿದವುಗಳಿಂದ ನೀವು ತಿನ್ನಿರಿ. ಸೈತಾನನ ಹೆಜ್ಜೆ ಗುರುತುಗಳನ್ನು ಅನುಸರಿಸದಿರಿ. ಖಂಡಿತವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರುವಾಗಿರುವನು.

وَمِنَ ٱلْأَنْعَٰمِ حَمُولَةً وَفَرْشًا ۚ كُلُوا۟ مِمَّا رَزَقَكُمُ ٱللَّهُ وَلَا تَتَّبِعُوا۟ خُطُوَٰتِ ٱلشَّيْطَٰنِ ۚ إِنَّهُۥ لَكُمْ عَدُوٌّ مُّبِينٌ ﴿١٤٢﴾

143. ಎಂಟು ವರ್ಗಗಳನ್ನು (ಅವನು ಸೃಷ್ಟಿಸಿರುವನು). ಕುರಿಗಳಿಂದ ಎರಡು (ಗಂಡು ಮತ್ತು ಹೆಣ್ಣು) ಹಾಗೂ ಆಡುಗಳಿಂದ ಎರಡು (ಗಂಡು ಮತ್ತು ಹೆಣ್ಣು). ಹೇಳಿರಿ: '(ಅವೆರಡರ ಪೈಕಿ) ಅಲ್ಲಾಹು ನಿಷಿದ್ಧಗೊಳಿಸಿರುವುದು ಎರಡು ಗಂಡು ವರ್ಗಗಳನ್ನೇ ಅಥವಾ ಎರಡು ಹೆಣ್ಣು ವರ್ಗಗಳನ್ನೇ? ಅಥವಾ ಎರಡು ಹೆಣ್ಣು ವರ್ಗಗಳ ಗರ್ಭಾಶಯಗಳ ಒಳಗಿರುವುದನ್ನೇ? ಅರಿವಿನ ಆಧಾರದೊಂದಿಗೆ ನೀವು ನನಗೆ ಹೇಳಿಕೊಡಿರಿ; ನೀವು ಸತ್ಯವಂತರಾಗಿದ್ದರೆ.'

ثَمَٰنِيَةَ أَزْوَٰجٍ ۖ مِّنَ ٱلضَّأْنِ ٱثْنَيْنِ وَمِنَ ٱلْمَعْزِ ٱثْنَيْنِ ۗ قُلْ ءَآلذَّكَرَيْنِ حَرَّمَ أَمِ ٱلْأُنثَيَيْنِ أَمَّا ٱشْتَمَلَتْ عَلَيْهِ أَرْحَامُ ٱلْأُنثَيَيْنِ ۖ نَبِّـُٔونِى بِعِلْمٍ إِن كُنتُمْ صَٰدِقِينَ ﴿١٤٣﴾

144. ಒಂಟೆಯಿಂದ ಎರಡು (ಗಂಡು ಮತ್ತು ಹೆಣ್ಣು) ಮತ್ತು ಹಸುವಿನಿಂದ ಎರಡು (ಗಂಡು

وَمِنَ ٱلْإِبِلِ ٱثْنَيْنِ وَمِنَ ٱلْبَقَرِ ٱثْنَيْنِ ۗ قُلْ

ءَآلذَّكَرَيۡنِ حَرَّمَ أَمِ ٱلۡأُنثَيَيۡنِ أَمَّا ٱشۡتَمَلَتۡ عَلَيۡهِ أَرۡحَامُ ٱلۡأُنثَيَيۡنِۖ أَمۡ كُنتُمۡ شُهَدَآءَ إِذۡ وَصَّىٰكُمُ ٱللَّهُ بِهَٰذَاۚ فَمَنۡ أَظۡلَمُ مِمَّنِ ٱفۡتَرَىٰ عَلَى ٱللَّهِ كَذِبٗا لِّيُضِلَّ ٱلنَّاسَ بِغَيۡرِ عِلۡمٍۚ إِنَّ ٱللَّهَ لَا يَهۡدِي ٱلۡقَوۡمَ ٱلظَّٰلِمِينَ ١٤٤

ಮತ್ತು ಹೆಣ್ಣು) (ವರ್ಗಗಳನ್ನು ಅವನು ಸೃಷ್ಟಿಸಿರುವನು). ಹೇಳಿರಿ: '(ಅವೆರಡರ ಪೈಕಿ) ಅಲ್ಲಾಹು ನಿಷಿದ್ಧಗೊಳಿಸಿರುವುದು ಎರಡು ಗಂಡು ವರ್ಗಗಳನ್ನೇ ಅಥವಾ ಎರಡು ಹೆಣ್ಣು ವರ್ಗಗಳನ್ನೇ ಅಥವಾ ಎರಡು ಹೆಣ್ಣು ವರ್ಗಗಳ ಗರ್ಭಾಶಯಗಳ ಒಳಗಿರುವುದನ್ನೇ? ಅಲ್ಲಾಹು ನಿಮಗಿದನ್ನು ಉಪದೇಶ ಮಾಡುವಾಗ ನೀವಲ್ಲಿ ಹಾಜರಿದ್ದಿರಾ?' ಹೀಗಿರುವಾಗ ಯಾವುದೇ ಅರಿವಿಲ್ಲದೆ ಜನರನ್ನು ದಾರಿಗೆಡಿಸುವುದಕ್ಕಾಗಿ ಅಲ್ಲಾಹುವಿನ ಮೇಲೆ ಸುಳ್ಳು ಹೆಣೆದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಖಂಡಿತವಾಗಿಯೂ ಅಕ್ರಮಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

قُل لَّآ أَجِدُ فِي مَآ أُوحِيَ إِلَيَّ مُحَرَّمًا عَلَىٰ طَاعِمٖ يَطۡعَمُهُۥٓ إِلَّآ أَن يَكُونَ مَيۡتَةً أَوۡ دَمٗا مَّسۡفُوحًا أَوۡ لَحۡمَ خِنزِيرٖ فَإِنَّهُۥ رِجۡسٌ أَوۡ فِسۡقًا أُهِلَّ لِغَيۡرِ ٱللَّهِ بِهِۦۚ فَمَنِ ٱضۡطُرَّ غَيۡرَ بَاغٖ وَلَا عَادٖ فَإِنَّ رَبَّكَ غَفُورٞ رَّحِيمٞ ١٤٥

145. (ಓ ಪ್ರವಾದಿಯವರೇ!) ಹೇಳಿರಿ: 'ನನಗೆ ದಿವ್ಯಸಂದೇಶವಾಗಿ ನೀಡಲಾಗಿರುವುದರಲ್ಲಿ ತಿನ್ನುವವನಿಗೆ ತಿನ್ನಲು ನಿಷಿದ್ಧವಾಗಿರುವಂತಹ ಏನನ್ನೂ ನಾನು ಕಾಣುತ್ತಿಲ್ಲ. ಅದು ಶವ ಅಥವಾ ಹರಿಸಲ್ಪಟ್ಟ ರಕ್ತ ಅಥವಾ ಹಂದಿ ಮಾಂಸವಾಗಿರುವುದರ ಹೊರತು. ಏಕೆಂದರೆ ಅದು ಮಲಿನವಾಗಿದೆ ಅಥವಾ ಅಲ್ಲಾಹೇತರರ ಹೆಸರಲ್ಲಿ (ಹರಕೆಯಾಗಿ) ಘೋಷಿಸಲ್ಪಡುವ ಮೂಲಕ ಧರ್ಮಬಾಹಿರವಾಗಿ ಬಿಟ್ಟಿರುವವುಗಳ ಹೊರತು.' ಆದರೆ ಯಾರಾದರೂ (ಇವುಗಳನ್ನು ತಿನ್ನಲು) ನಿರ್ಬಂಧಿತನಾಗಿದ್ದು, ಅವನು ನಿಯಮೋಲ್ಲಂಘನೆ ಮಾಡಲು ಇಚ್ಛಿಸದವನೂ ಮಿತಿಮೀರದವನೂ ಆಗಿದ್ದರೆ ಖಂಡಿತವಾಗಿಯೂ ತಮ್ಮ ರಬ್ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَعَلَى ٱلَّذِينَ هَادُواْ حَرَّمۡنَا كُلَّ ذِي ظُفُرٖۖ وَمِنَ ٱلۡبَقَرِ وَٱلۡغَنَمِ حَرَّمۡنَا عَلَيۡهِمۡ

146. ಉಗುರು ಇರುವ ಸರ್ವ ಜೀವಿಗಳನ್ನೂ ನಾವು ಯಹೂದರಿಗೆ ನಿಷಿದ್ಧಗೊಳಿಸಿದ್ದೆವು. ಹಸು, ಆಡು ಮುಂತಾದವುಗಳ ಪೈಕಿ,

ಅವುಗಳ ಕೊಬ್ಬುಗಳನ್ನು ನಾವು ಅವರಿಗೆ ನಿಷಿದ್ಧಗೊಳಿಸಿದ್ದೆವು. ಅವುಗಳ ಬೆನ್ನಿನಲ್ಲಿರುವುದು ಅಥವಾ ಕರುಳುಗಳಲ್ಲಿರುವುದು ಅಥವಾ ಮೂಳೆಗಳೊಂದಿಗೆ ಅಂಟಿಕೊಂಡಿರುವುದರ ಹೊರತು. ಇದು ನಾವು ಅವರ ಧಿಕ್ಕಾರಕ್ಕೆ ನೀಡಿದ ಪ್ರತಿಫಲವಾಗಿದೆ. ಖಂಡಿತವಾಗಿಯೂ ನಾವು ಸತ್ಯವನ್ನೇ ಹೇಳುತ್ತಿರುವೆವು.

شُحُومَهُمَآ إِلَّا مَا حَمَلَتۡ ظُهُورُهُمَآ أَوِ ٱلۡحَوَايَآ أَوۡ مَا ٱخۡتَلَطَ بِعَظۡمٖۚ ذَٰلِكَ جَزَيۡنَٰهُم بِبَغۡيِهِمۡۖ وَإِنَّا لَصَٰدِقُونَ ١٤٦

147. ಅವರೇನಾದರೂ ತಮ್ಮನ್ನು ನಿಷೇಧಿಸುವುದಾದರೆ ತಾವು ಹೇಳಿರಿ: 'ನಿಮ್ಮ ರಬ್ ವಿಶಾಲವಾದ ಕರುಣೆಯುಳ್ಳವನಾಗಿರುವನು. ಆದರೆ ಅಕ್ರಮಿಗಳಾದ ಜನರಿಂದ ಅವನ ಶಿಕ್ಷೆಯನ್ನು ಸರಿಸಿಬಿಡಲಾಗದು.'

فَإِن كَذَّبُوكَ فَقُل رَّبُّكُمۡ ذُو رَحۡمَةٖ وَٰسِعَةٖ وَلَا يُرَدُّ بَأۡسُهُۥ عَنِ ٱلۡقَوۡمِ ٱلۡمُجۡرِمِينَ ١٤٧

148. ಬಹುದೇವಾರಾಧಕರು ಹೇಳುವರು: 'ಅಲ್ಲಾಹು ಇಚ್ಛಿಸುತ್ತಿದ್ದರೆ ನಾವಾಗಲಿ, ನಮ್ಮ ಪೂರ್ವಿಕರಾಗಲಿ ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುತ್ತಿರಲಿಲ್ಲ ಮತ್ತು ನಾವು ಏನನ್ನೂ ನಿಷಿದ್ಧಗೊಳಿಸುತ್ತಿರಲಿಲ್ಲ.' ಇದೇರೀತಿ ನಮ್ಮ ಶಿಕ್ಷೆಯನ್ನು ಸವಿಯುವ ತನಕ ಅವರ ಪೂರ್ವಿಕರು ಕೂಡ ನಿಷೇಧಿಸಿದ್ದರು. ಹೇಳಿರಿ: 'ನಿಮ್ಮ ಬಳಿ ಏನಾದರೂ ಅರಿವಿದೆಯೇ? ಇದ್ದರೆ ಅದನ್ನು ನಮಗೆ ಬಹಿರಂಗಗೊಳಿಸಿರಿ. ನೀವು ಗುಮಾನಿಯನ್ನಲ್ಲದೆ ಅನುಸರಿಸುವುದಿಲ್ಲ. ನೀವು ಸುಳ್ಳನ್ನಲ್ಲದೆ ನುಡಿಯುವುದೂ ಇಲ್ಲ.

سَيَقُولُ ٱلَّذِينَ أَشۡرَكُواْ لَوۡ شَآءَ ٱللَّهُ مَآ أَشۡرَكۡنَا وَلَآ ءَابَآؤُنَا وَلَا حَرَّمۡنَا مِن شَيۡءٖۚ كَذَٰلِكَ كَذَّبَ ٱلَّذِينَ مِن قَبۡلِهِمۡ حَتَّىٰ ذَاقُواْ بَأۡسَنَاۗ قُلۡ هَلۡ عِندَكُم مِّنۡ عِلۡمٖ فَتُخۡرِجُوهُ لَنَآۖ إِن تَتَّبِعُونَ إِلَّا ٱلظَّنَّ وَإِنۡ أَنتُمۡ إِلَّا تَخۡرُصُونَ ١٤٨

149. ಹೇಳಿರಿ: 'ಉತ್ಕೃಷ್ಟ ಪುರಾವೆಯಿರುವುದು ಅಲ್ಲಾಹುವಿನಲ್ಲಾಗಿದೆ. ಅವನಿಚ್ಛಿಸುತ್ತಿದ್ದರೆ ಖಂಡಿತವಾಗಿಯೂ ನಿಮ್ಮೆಲ್ಲರನ್ನೂ ಸನ್ಮಾರ್ಗದಲ್ಲಿ ಸೇರಿಸುತ್ತಿದ್ದನು.'

قُلۡ فَلِلَّهِ ٱلۡحُجَّةُ ٱلۡبَٰلِغَةُۖ فَلَوۡ شَآءَ لَهَدَىٰكُمۡ أَجۡمَعِينَ ١٤٩

150. ಹೇಳಿರಿ: 'ಅಲ್ಲಾಹು ಇವೆಲ್ಲವನ್ನೂ ನಿಷಿದ್ಧಗೊಳಿಸಿರುವನು ಎಂಬುದಕ್ಕೆ ಸಾಕ್ಷ್ಯವಹಿಸುವ ನಿಮ್ಮ ಸಾಕ್ಷಿಗಳನ್ನು ತನ್ನಿರಿ.' ಅವರೇನಾದರೂ (ಸುಳ್ಳು) ಸಾಕ್ಷ್ಯವಹಿಸಿದರೆ

قُلۡ هَلُمَّ شُهَدَآءَكُمُ ٱلَّذِينَ يَشۡهَدُونَ أَنَّ ٱللَّهَ حَرَّمَ هَٰذَاۖ فَإِن شَهِدُواْ فَلَا تَشۡهَدۡ مَعَهُمۡۚ وَلَا تَتَّبِعۡ أَهۡوَآءَ ٱلَّذِينَ كَذَّبُواْ

بِـَٔايَـٰتِنَا وَٱلَّذِينَ لَا يُؤْمِنُونَ بِٱلْـَٔاخِرَةِ وَهُم
بِرَبِّهِمْ يَعْدِلُونَ ﴿١٥٠﴾

ತಾವು ಅವರೊಂದಿಗೆ ಸಾಕ್ಷ್ಯವಹಿಸದಿರಿ. ನಮ್ಮ ದೃಷ್ಟಾಂತಗಳನ್ನು ನಿಷೇಧಿಸುವವರೂ, ಪರಲೋಕದಲ್ಲಿ ವಿಶ್ವಾಸವಿಡದವರೂ ಆಗಿರುವವರ ದೇಹೇಚ್ಛೆಗಳನ್ನು ತಾವು ಅನುಸರಿಸದಿರಿ. ಅವರು ತಮ್ಮ ರಬ್‌ನೊಂದಿಗೆ ಸರಿಸಮಾನರನ್ನು ನಿಶ್ಚಯಿಸುವವರಾಗಿರುವರು.

۞ قُلْ تَعَالَوْا۟ أَتْلُ مَا حَرَّمَ رَبُّكُمْ
عَلَيْكُمْ ۖ أَلَّا تُشْرِكُوا۟ بِهِۦ شَيْـًٔا ۖ
وَبِٱلْوَٰلِدَيْنِ إِحْسَـٰنًا ۖ وَلَا تَقْتُلُوٓا۟ أَوْلَـٰدَكُم
مِّنْ إِمْلَـٰقٍ ۖ نَّحْنُ نَرْزُقُكُمْ وَإِيَّاهُمْ ۖ وَلَا
تَقْرَبُوا۟ ٱلْفَوَٰحِشَ مَا ظَهَرَ مِنْهَا وَمَا بَطَنَ ۖ
وَلَا تَقْتُلُوا۟ ٱلنَّفْسَ ٱلَّتِى حَرَّمَ ٱللَّهُ إِلَّا
بِٱلْحَقِّ ۚ ذَٰلِكُمْ وَصَّىٰكُم بِهِۦ لَعَلَّكُمْ
تَعْقِلُونَ ﴿١٥١﴾

**151.** (ಓ ಪ್ರವಾದಿಯವರೇ!) ಹೇಳಿರಿ: ‘ಬನ್ನಿರಿ! ನಿಮ್ಮ ರಬ್ ನಿಮ್ಮ ಮೇಲೆ ಏನೆಲ್ಲ ನಿಷಿದ್ಧಗೊಳಿಸಿರುವನೆಂದು ನಾನು ನಿಮಗೆ ಓದಿ ಕೊಡುವೆನು: ಅವನೊಂದಿಗೆ ನೀವು ಏನನ್ನೂ ಸಹಭಾಗಿಯನ್ನಾಗಿ ಮಾಡದಿರಿ, ಮಾತಾಪಿತರೊಂದಿಗೆ ಉತ್ತಮವಾಗಿ ವರ್ತಿಸಿರಿ, ಬಡತನದಿಂದಾಗಿ ನಿಮ್ಮ ಮಕ್ಕಳನ್ನು ವಧಿಸದಿರಿ, ನಿಮಗೂ, ಅವರಿಗೂ ಆಹಾರ ನೀಡುವವರು ನಾವಾಗಿರುವೆವು ಬಹಿರಂಗವಾಗಿರುವ ಮತ್ತು ಗುಪ್ತವಾಗಿರುವ ಯಾವುದೇ ನೀಚಕೃತ್ಯಗಳನ್ನು ಸಮೀಪಿಸದಿರಿ ಮತ್ತು ಅಲ್ಲಾಹು ಪವಿತ್ರಗೊಳಿಸಿದ ಜೀವವನ್ನು ನ್ಯಾಯಬದ್ಧವಾಗಿಯೇ ವಿನಾ ಕೊಲ್ಲದಿರಿ. ಇವು ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ಅವನು ನಿಮಗೆ ನೀಡಿದ ಉಪದೇಶಗಳಾಗಿವೆ.

وَلَا تَقْرَبُوا۟ مَالَ ٱلْيَتِيمِ إِلَّا بِٱلَّتِى هِىَ
أَحْسَنُ حَتَّىٰ يَبْلُغَ أَشُدَّهُۥ ۖ وَأَوْفُوا۟ ٱلْكَيْلَ
وَٱلْمِيزَانَ بِٱلْقِسْطِ ۖ لَا نُكَلِّفُ نَفْسًا إِلَّا
وُسْعَهَا ۖ وَإِذَا قُلْتُمْ فَٱعْدِلُوا۟ وَلَوْ كَانَ ذَا
قُرْبَىٰ ۖ وَبِعَهْدِ ٱللَّهِ أَوْفُوا۟ ۚ ذَٰلِكُمْ وَصَّىٰكُم
بِهِۦ لَعَلَّكُمْ تَذَكَّرُونَ ﴿١٥٢﴾

**152.** ಅತ್ಯುತ್ತಮವಾದ ಮಾರ್ಗದ ಮೂಲಕವಲ್ಲದೆ ನೀವು ಅನಾಥನ ಸಂಪತ್ತನ್ನು ಸಮೀಪಿಸದಿರಿ. ಅವನು ಪ್ರೌಢಾವಸ್ಥೆಯನ್ನು ತಲುಪುವ ತನಕ (ನೀವು ಅವನ ಸಂರಕ್ಷಣೆಯ ಹೊಣೆಯನ್ನು ವಹಿಸಿರಿ). ಅಳತೆ ಮತ್ತು ತೂಕವನ್ನು ಪೂರ್ಣವಾಗಿ ಮತ್ತು ನ್ಯಾಯಬದ್ಧವಾಗಿ ನೀಡಿರಿ. ಯಾವುದೇ ವ್ಯಕ್ತಿಗೂ ಅವನ ಸಾಮರ್ಥ್ಯಕ್ಕಿಂತ ಮಿಗಿಲಾಗಿರುವುದನ್ನು ನಾವು ಬಾಧ್ಯತೆಯಾಗಿ ಹೊರಿಸಲಾರೆವು. ನೀವು ಮಾತನಾಡುವಾಗ ನ್ಯಾಯ ಪಾಲಿಸಿರಿ. ಅದು ನಿಕಟ ಸಂಬಂಧಿಕನ ವಿಷಯದಲ್ಲಾದರೂ

ಸರಿ. ಅಲ್ಲಾಹುವಿನೊಂದಿಗಿರುವ ಕರಾರನ್ನು ಈಡೇರಿಸಿರಿ. ಇವು ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ಅವನು ನಿಮಗೆ ನೀಡಿದ ಉಪದೇಶಗಳಾಗಿವೆ.

**153.** ಖಂಡಿತವಾಗಿಯೂ ನನ್ನ ನೇರವಾದ ಮಾರ್ಗವು ಇದೇ ಆಗಿದೆ. ಆದ್ದರಿಂದ ಇದನ್ನು ಅನುಸರಿಸಿರಿ. ಇತರ ಮಾರ್ಗಗಳನ್ನು ಅನುಸರಿಸದಿರಿ. ಅವು ಅವನ (ಅಲ್ಲಾಹುವಿನ) ಮಾರ್ಗದಿಂದ ನಿಮ್ಮನ್ನು ಛಿನ್ನಭಿನ್ನಗೊಳಿಸಿ ಬಿಡುವುವು. ಇವು ನೀವು ಭಯಭಕ್ತಿ ಪಾಲಿಸುವುದಕ್ಕಾಗಿ ಅವನು ನಿಮಗೆ ನೀಡಿದ ಉಪದೇಶಗಳಾಗಿವೆ.’

وَأَنَّ هَٰذَا صِرَٰطِى مُسۡتَقِيمًا فَٱتَّبِعُوهُۖ
وَلَا تَتَّبِعُواْ ٱلسُّبُلَ فَتَفَرَّقَ بِكُمۡ عَن
سَبِيلِهِۦۚ ذَٰلِكُمۡ وَصَّىٰكُم بِهِۦ لَعَلَّكُمۡ
تَتَّقُونَ ﴿١٥٣﴾

**154.** ಒಳಿತು ಮಾಡಿದವನಿಗೆ (ಅನುಗ್ರಹದ) ಪೂರ್ತೀಕರಣವಾಗಿ ಮತ್ತು ಪ್ರತಿಯೊಂದು ವಿಷಯಕ್ಕಿರುವ ವಿವರಣೆಯೂ, ಮಾರ್ಗದರ್ಶನವೂ, ಕಾರುಣ್ಯವೂ ಆಗಿ ಅನಂತರ ನಾವು ಮೂಸಾರಿಗೆ ಗ್ರಂಥವನ್ನು ದಯಪಾಲಿಸಿದೆವು. ಅವರು ತಮ್ಮ ರಬ್‌ನೊಂದಿಗಿರುವ ಭೇಟಿಯಲ್ಲಿ ವಿಶ್ವಾಸವಿಡುವವರಾಗುವ ಸಲುವಾಗಿ.

ثُمَّ ءَاتَيۡنَا مُوسَى ٱلۡكِتَٰبَ تَمَامًا عَلَى
ٱلَّذِىٓ أَحۡسَنَ وَتَفۡصِيلًا لِّكُلِّ شَىۡءٍ
وَهُدًى وَرَحۡمَةً لَّعَلَّهُم بِلِقَآءِ رَبِّهِمۡ
يُؤۡمِنُونَ ﴿١٥٤﴾

**155.** ಇದು ನಾವು ಅವತೀರ್ಣಗೊಳಿಸಿದ ಒಂದು ಅನುಗ್ರಹೀತ ಗ್ರಂಥವಾಗಿದೆ. ಆದ್ದರಿಂದ ಇದನ್ನು ಅನುಸರಿಸಿರಿ ಮತ್ತು ಭಯಭಕ್ತಿ ಪಾಲಿಸಿರಿ. ನಿಮಗೆ ಕಾರುಣ್ಯವು ಲಭಿಸಲೂ ಬಹುದು.

وَهَٰذَا كِتَٰبٌ أَنزَلۡنَٰهُ مُبَارَكٌ فَٱتَّبِعُوهُ
وَٱتَّقُواْ لَعَلَّكُمۡ تُرۡحَمُونَ ﴿١٥٥﴾

**156.** ‘ನಮಗಿಂತ ಮುಂಚಿನ ಎರಡು ಸಮುದಾಯಗಳಿಗೆ ಮಾತ್ರ ಗ್ರಂಥವನ್ನು ಅವತೀರ್ಣಗೊಳಿಸಲಾಗಿದೆ, ಅವರು ಅದನ್ನು ಓದಿ ಕಲಿಯುತ್ತಿರುವುದರ ಕುರಿತು ನಾವಂತೂ ಅಜ್ಞರಾಗಿದ್ದೆವು’ ಎಂದು ನೀವು ಹೇಳಲೂಬಹುದು ಎಂಬುದರಿಂದ (ಇದನ್ನು ಅವತೀರ್ಣಗೊಳಿಸಲಾಗಿದೆ)[1]

أَن تَقُولُوٓاْ إِنَّمَآ أُنزِلَ ٱلۡكِتَٰبُ عَلَىٰ
طَآئِفَتَيۡنِ مِن قَبۡلِنَا وَإِن كُنَّا عَن
دِرَاسَتِهِمۡ لَغَٰفِلِينَ ﴿١٥٦﴾

1 ಪರಲೋಕದಲ್ಲಿ ವಿಚಾರಣೆಯನ್ನೆದುರಿಸುವಾಗ ಬಹುಶಃ ನೀವು ಹೀಗೆ ಹೇಳುವಿರಿ: ‘ಅರಬಿಗಳಾದ ನಮಗೆ ನಮ್ಮ

أَوۡ تَقُولُواْ لَوۡ أَنَّآ أُنزِلَ عَلَيۡنَا ٱلۡكِتَٰبُ لَكُنَّآ أَهۡدَىٰ مِنۡهُمۡۚ فَقَدۡ جَآءَكُم بَيِّنَةٞ مِّن رَّبِّكُمۡ وَهُدٗى وَرَحۡمَةٞۚ فَمَنۡ أَظۡلَمُ مِمَّن كَذَّبَ بِـَٔايَٰتِ ٱللَّهِ وَصَدَفَ عَنۡهَاۗ سَنَجۡزِي ٱلَّذِينَ يَصۡدِفُونَ عَنۡ ءَايَٰتِنَا سُوٓءَ ٱلۡعَذَابِ بِمَا كَانُواْ يَصۡدِفُونَ ﴿١٥٧﴾

157. ಅಥವಾ 'ನಮಗೊಂದು ಗ್ರಂಥವು ಅವತೀರ್ಣಗೊಂಡಿರುತ್ತಿದ್ದರೆ ನಾವು ಅವರಿಗಿಂತಲೂ ಹೆಚ್ಚು ಸನ್ಮಾರ್ಗಿಗಳಾಗಿರುತ್ತಿದ್ದೆವು' ಎಂದು ನೀವು ಹೇಳಬಹುದು ಎಂಬುದರಿಂದ. ಆದ್ದರಿಂದ ಈಗ ನಿಮಗೆ ನಿಮ್ಮ ರಬ್‌ನ ವತಿಯಿಂದ ಸ್ಪಷ್ಟವಾದ ಪ್ರಮಾಣವೂ, ಮಾರ್ಗದರ್ಶನವೂ, ಕಾರುಣ್ಯವೂ ಬಂದಿದೆ. ಇದರ ಬಳಿಕವೂ ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸುವವನು ಮತ್ತು ಅದರಿಂದ ವಿಮುಖನಾಗುವವನು ಯಾರೋ ಅವನಿಗಿಂತಲೂ ದೊಡ್ಡ ಅಕ್ರಮಿ ಇನ್ನಾರಿರುವನು? ನಮ್ಮ ದೃಷ್ಟಾಂತಗಳಿಂದ ವಿಮುಖರಾಗುವವರಿಗೆ ಅವರು ವಿಮುಖರಾಗಿರುವುದರ ಪ್ರತಿಫಲವಾಗಿ ನಾವು ಹೀನ ಶಿಕ್ಷೆಯನ್ನು ನೀಡುವೆವು.

هَلۡ يَنظُرُونَ إِلَّآ أَن تَأۡتِيَهُمُ ٱلۡمَلَٰٓئِكَةُ أَوۡ يَأۡتِيَ رَبُّكَ أَوۡ يَأۡتِيَ بَعۡضُ ءَايَٰتِ رَبِّكَۗ يَوۡمَ يَأۡتِي بَعۡضُ ءَايَٰتِ رَبِّكَ لَا يَنفَعُ نَفۡسًا إِيمَٰنُهَا لَمۡ تَكُنۡ ءَامَنَتۡ مِن قَبۡلُ أَوۡ كَسَبَتۡ فِيٓ إِيمَٰنِهَا خَيۡرٗاۗ قُلِ ٱنتَظِرُوٓاْ إِنَّا مُنتَظِرُونَ ﴿١٥٨﴾

158. ಅವರ ಬಳಿಗೆ ಮಲಕ್‌ಗಳು ಬರುವುದನ್ನು ಅಥವಾ ಸ್ವತಃ ತಮ್ಮ ರಬ್ ಬರುವುದನ್ನು ಅಥವಾ ತಮ್ಮ ರಬ್‌ನ ವತಿಯಿಂದ ಯಾವುದಾದರೂ ಒಂದು ದೃಷ್ಟಾಂತವು[1] ಬರುವುದನ್ನು ಹೊರತು ಅವರು ಇನ್ನೇನನ್ನು ಕಾಯುತ್ತಿರುವರು? ತಮ್ಮ ರಬ್‌ನ ಕೆಲವು ದೃಷ್ಟಾಂತಗಳು ಬರುವ ದಿನದಂದು ಅದಕ್ಕಿಂತ ಮುಂಚೆ ವಿಶ್ವಾಸವಿಟ್ಟಿರುವವನ ಅಥವಾ ವಿಶ್ವಾಸದೊಂದಿಗೆ ಏನಾದರೂ

ಭಾಷೆಯಲ್ಲಿ ಯಾವುದೇ ಗ್ರಂಥವನ್ನೂ ನೀಡಲಾಗಿಲ್ಲ. ಯಹೂದರಿಗೂ ಕ್ರೈಸ್ತರಿಗೂ ನೀಡಲಾದ ಗ್ರಂಥದ ಕುರಿತು ನಮಗೇನೂ ತಿಳಿದಿಲ್ಲ. ಆದ್ದರಿಂದ ನಮ್ಮನ್ನು ಶಿಕ್ಷಿಸದಿರು.' ಇಂತಹ ಒಂದು ಸಮರ್ಥನೆ ಹೇಳಲು ನಿಮಗೆ ಅವಕಾಶ ಸಿಗದಿರಲೆಂದು ನಿಮ್ಮ ತಿಳುವಳಿಕೆಗಾಗಿ ಗ್ರಂಥವು ಅವತೀರ್ಣಗೊಂಡಿದೆ.

1 ಹೃದಯವನ್ನು ಬಡಿದೆಬ್ಬಿಸುವಂತಹ ದೃಷ್ಟಾಂತಗಳೊಂದಿಗೆ ಅಲ್ಲಾಹು ಪ್ರವಾದಿಗಳನ್ನು ಕಳುಹಿಸಿರುವನು. ಪ್ರವಾದಿ ಮುಹಮ್ಮದ್ (ﷺ)ರವರ ಮೂಲಕ ಅವತೀರ್ಣಗೊಂಡ ದೃಷ್ಟಾಂತಗಳ ಪೈಕಿ ಅತಿ ಪ್ರಮುಖವಾದುದು ಅಪೌರುಷೇಯ ಗ್ರಂಥವಾಗಿರುವ ಈ ಕುರ್‌ಆನ್ ಆಗಿದೆ. ಆದರೆ ಯಾವುದೇ ದೃಷ್ಟಾಂತವನ್ನು ಕಂಡರೂ ಅದು ಮಾಂತ್ರಿಕತೆಯಾಗಿದೆ ಎನ್ನುತ್ತಾ ವಿರೋಧಿಗಳು ಅದನ್ನು ತಿರಸ್ಕರಿಸುತ್ತಿದ್ದರು. 'ಇವಾವುದೂ ದೃಷ್ಟಾಂತಗಳಲ್ಲ. ಸ್ಪಷ್ಟವೂ ಅನಿಷೇಧ್ಯವೂ ಆಗಿರುವ ದೃಷ್ಟಾಂತವನ್ನು ತನ್ನಿರಿ' ಎಂದು ಹಟಹಿಡಿಯುತ್ತಿದ್ದರು. ಈ ಸೂಕ್ತಿಯು ಇದಕ್ಕಿರುವ ಉತ್ತರವಾಗಿದೆ. ತಮ್ಮನ್ನು ಸ್ತಬ್ಧಗೊಳಿಸುವ (ಮರಣ ಅಥವಾ ಅಂತ್ಯದಿನ) ದೃಷ್ಟಾಂತವನ್ನು ಕಾಣುವಾಗ ಅವರು ವಿಶ್ವಾಸವಿಟ್ಟರೆ, ಅದು ಗತ್ಯಂತರವಿಲ್ಲದೆ ಇಡುವ ವಿಶ್ವಾಸವಾಗಿರುವುದರಿಂದ ಆ ವಿಶ್ವಾಸವನ್ನು ಅಲ್ಲಾಹು ಪರಿಗಣಿಸುವುದಿಲ್ಲವೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

ಒಳಿತನ್ನು ಮಾಡಿಟ್ಟಿರುವವನ ವಿನಾ ಯಾರಿಗೂ ಅವನ ವಿಶ್ವಾಸವು ಪ್ರಯೋಜನಕಾರಿಯಾಗದು. ಹೇಳಿರಿ: 'ನೀವು ಕಾಯುತ್ತಿರಿ, ನಾವೂ ಕಾಯುತ್ತಿರುವೆವು.'

إِنَّ ٱلَّذِينَ فَرَّقُواْ دِينَهُمۡ وَكَانُواْ شِيَعٗا لَّسۡتَ مِنۡهُمۡ فِي شَيۡءٍۚ إِنَّمَآ أَمۡرُهُمۡ إِلَى ٱللَّهِ ثُمَّ يُنَبِّئُهُم بِمَا كَانُواْ يَفۡعَلُونَ ١٥٩

159. ತಮ್ಮ ಧರ್ಮವನ್ನು ವಿಭಜನೆ ಮಾಡಿದವರು ಮತ್ತು ವಿವಿಧ ಬಣಗಳಾಗಿ ಮಾರ್ಪಟ್ಟವರು ಯಾರೋ ಅವರೊಂದಿಗೆ ತಮಗೆ ಯಾವ ಸಂಬಂಧವೂ ಇಲ್ಲ.(1) ಅವರ ವಿಷಯವು ಅಲ್ಲಾಹುವಿನೆಡೆಗೇ ಆಗಿದೆ. ಅವರು ಮಾಡುತ್ತಿದ್ದುದರ ಕುರಿತು ತರುವಾಯ ಅವನು ಅವರಿಗೆ ತಿಳಿಸಿಕೊಡುವನು.

مَن جَآءَ بِٱلۡحَسَنَةِ فَلَهُۥ عَشۡرُ أَمۡثَالِهَاۖ وَمَن جَآءَ بِٱلسَّيِّئَةِ فَلَا يُجۡزَىٰٓ إِلَّا مِثۡلَهَا وَهُمۡ لَا يُظۡلَمُونَ ١٦٠

160. ಯಾರು ಒಂದು ಒಳಿತನ್ನು ತರುವನೋ ಅವನಿಗೆ ಅದರ ಹತ್ತು ಪಟ್ಟು ಲಭಿಸುವುದು. ಯಾರು ಒಂದು ಕೆಡುಕನ್ನು ತರುವನೋ ಅವನಿಗೆ ಅದಕ್ಕೆ ಸಮಾನವಾಗಿರುವ ಪ್ರತಿಫಲವನ್ನಲ್ಲದೆ ನೀಡಲಾಗದು. ಅವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

قُلۡ إِنَّنِي هَدَىٰنِي رَبِّيٓ إِلَىٰ صِرَٰطٖ مُّسۡتَقِيمٖ دِينٗا قِيَمٗا مِّلَّةَ إِبۡرَٰهِيمَ حَنِيفٗاۚ وَمَا كَانَ مِنَ ٱلۡمُشۡرِكِينَ ١٦١

161. ಹೇಳಿರಿ: 'ಖಂಡಿತವಾಗಿಯೂ ನನ್ನ ರಬ್ ನನ್ನನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸಿರುವನು; ವಕ್ರತೆಯಿಲ್ಲದ ಧರ್ಮದೆಡೆಗೆ; ಋಜುಮಾರ್ಗದಲ್ಲಿ ನೆಲೆನಿಂತ ಇಬ್ರಾಹೀಮ್‌ರ ಧರ್ಮದೆಡೆಗೆ. ಅವರು ಬಹುದೇವವಿಶ್ವಾಸಿಗಳಲ್ಲಿ ಸೇರಿದವರಾಗಿರಲಿಲ್ಲ.'

قُلۡ إِنَّ صَلَاتِي وَنُسُكِي وَمَحۡيَايَ وَمَمَاتِي لِلَّهِ رَبِّ ٱلۡعَٰلَمِينَ ١٦٢

162. ಹೇಳಿರಿ: 'ಖಂಡಿತವಾಗಿಯೂ ನನ್ನ ನಮಾಝ್, ನನ್ನ ಬಲಿಕರ್ಮಗಳು, ನನ್ನ ಜೀವನ ಮತ್ತು ನನ್ನ ಮರಣ ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗಿರುವುದಾಗಿವೆ.

1 ಸೂಕ್ತಿಯಲ್ಲಿ ಪ್ರತಿಪಾದಿಸಿರುವುದು ಅಲ್ಲಾಹುವಿನ ಏಕತ್ವಕ್ಕೂ, ಧರ್ಮದ ಅಖಂಡತೆಗೂ ವಿರುದ್ಧವಾಗಿರುವ ವಾದಗಳೊಂದಿಗೆ ವಿವಿಧ ಪಂಗಡಗಳಾಗಿ ಬೇರ್ಪಟ್ಟವರ ಕುರಿತಾಗಿದೆ. ಆದರೆ ಸಮುದಾಯದಲ್ಲಿ ಬಹುದೇವಾರಾಧನೆ ಮತ್ತು ಇಸ್ಲಾಮೇತರ ಸಂಪ್ರದಾಯಗಳು ಬೆಳೆದು ಬರುವಾಗ ಅದನ್ನು ಖಂಡಿಸುವುದಕ್ಕಾಗಿ ಸಂಘಟಿತಗೊಳ್ಳುವವರು ಆಕ್ಷೇಪಾರ್ಹರಲ್ಲ. ಅವರು ಮಾಡುತ್ತಿರುವುದು ಒಂದು ಮಹಾ ಸೇವೆಯಾಗಿದೆ. ಪ್ರವಾದಿಗಳೆಲ್ಲರೂ ನಿರ್ವಹಿಸಿದ ಕರ್ತವ್ಯವು ಸಹ ಇದೇ ಆಗಿದೆ.

163. ಅವನಿಗೆ ಸಹಭಾಗಿಗಳೇ ಇಲ್ಲ. ನನಗೆ ಆಜ್ಞಾಪಿಸಲಾಗಿರುವುದು ಇದನ್ನೇ ಆಗಿದೆ. (ಅವನಿಗೆ) ಶರಣಾಗುವವರ ಪೈಕಿ ನಾನು ಮೊದಲಿಗನಾಗಿರುವೆನು.'

لَا شَرِيكَ لَهُۥۖ وَبِذَٰلِكَ أُمِرۡتُ وَأَنَا۠ أَوَّلُ ٱلۡمُسۡلِمِينَ ﴿١٦٣﴾

164. ಹೇಳಿರಿ: 'ಅಲ್ಲಾಹು ಸರ್ವ ವಸ್ತುಗಳ ರಬ್ಬಾಗಿರುವಾಗ ನಾನು ಅವನ ಹೊರತು ಇತರರನ್ನು ರಬ್ಬಾಗಿ ಅರಸುವುದೇ?' ಪ್ರತಿಯೊಬ್ಬನೂ ತಾನು ಮಾಡಿರುವ ಕರ್ಮಕ್ಕೆ ತಾನೇ ಹೊಣೆಗಾರನಾಗಿರುವನು. ಭಾರವನ್ನು ಹೊರುವ ಯಾರೂ ಇನ್ನೊಬ್ಬನ ಭಾರವನ್ನು ಹೊರಲಾರನು.(1) ತರುವಾಯ ನಿಮ್ಮ ಮರಳುವಿಕೆಯು ನಿಮ್ಮ ರಬ್‌ನೆಡೆಗಾಗಿದೆ. ಯಾವ ವಿಷಯದಲ್ಲಿ ನೀವು ಭಿನ್ನರಾಗಿದ್ದಿರೋ ಅದರ ಕುರಿತು ಆಗ ಅವನು ನಿಮಗೆ ತಿಳಿಸಿಕೊಡುವನು.

قُلۡ أَغَيۡرَ ٱللَّهِ أَبۡغِي رَبّٗا وَهُوَ رَبُّ كُلِّ شَيۡءٖۚ وَلَا تَكۡسِبُ كُلُّ نَفۡسٍ إِلَّا عَلَيۡهَاۚ وَلَا تَزِرُ وَازِرَةٞ وِزۡرَ أُخۡرَىٰۚ ثُمَّ إِلَىٰ رَبِّكُم مَّرۡجِعُكُمۡ فَيُنَبِّئُكُم بِمَا كُنتُمۡ فِيهِ تَخۡتَلِفُونَ ﴿١٦٤﴾

165. ನಿಮ್ಮನ್ನು ಭೂಮಿಯಲ್ಲಿ ಉತ್ತರಾಧಿಕಾರಿಗಳನ್ನಾಗಿ ಮಾಡಿದವನು ಅವನಾಗಿರುವನು. ಅವನು ನಿಮಗೆ ಏನನ್ನು ದಯಪಾಲಿಸಿರುವನೋ ಅದರಲ್ಲಿ ನಿಮ್ಮನ್ನು ಪರೀಕ್ಷಿಸುವ ಸಲುವಾಗಿ ನಿಮ್ಮ ಪೈಕಿ ಕೆಲವರ ಪದವಿಗಳನ್ನು ಇತರ ಕೆಲವರಿಗಿಂತಲೂ ಉನ್ನತಗೊಳಿಸಿರುವನು. ಖಂಡಿತವಾಗಿಯೂ ತಮ್ಮ ರಬ್ ಶೀಘ್ರವಾಗಿ ಶಿಕ್ಷಾಕ್ರಮಗಳನ್ನು ಕೈಗೊಳ್ಳುವವನಾಗಿರುವನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَهُوَ ٱلَّذِي جَعَلَكُمۡ خَلَٰٓئِفَ ٱلۡأَرۡضِ وَرَفَعَ بَعۡضَكُمۡ فَوۡقَ بَعۡضٖ دَرَجَٰتٖ لِّيَبۡلُوَكُمۡ فِي مَآ ءَاتَىٰكُمۡۗ إِنَّ رَبَّكَ سَرِيعُ ٱلۡعِقَابِ وَإِنَّهُۥ لَغَفُورٞ رَّحِيمُۢ ﴿١٦٥﴾

1 ಯಾರ ಪಾಪಭಾರವನ್ನೂ ಇನ್ನೊಬ್ಬನು ಹೊರಲಾರನು.

## ಅಲ್‌ಅಅ್‌ರಾಫ್ (ಎತ್ತರದ ಸ್ಥಳಗಳು)[1]

## سُورَةُ الأَعۡرَافِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 206

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ.

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್, ಲಾಮ್, ಮೀಮ್, ಸ್ವಾದ್

الٓمٓصٓ ١

2. (ಓ ಪ್ರವಾದಿಯವರೇ!) ಇದು ತಮಗೆ ಅವತೀರ್ಣಗೊಳಿಸಲಾಗಿರುವ ಗ್ರಂಥವಾಗಿದೆ. ಇದರ ಕುರಿತು ತಮ್ಮ ಹೃದಯದಲ್ಲಿ ಯಾವುದೇ ಸಂಕಟವುಂಟಾಗದಿರಲಿ. ಇದು ತನ್ಮೂಲಕ ತಾವು ಮುನ್ನೆಚ್ಚರಿಕೆ ನೀಡುವ ಸಲುವಾಗಿದೆ ಮತ್ತು ಸತ್ಯವಿಶ್ವಾಸಿಗಳಿಗೆ ಒಂದು ಉಪದೇಶವಾಗಿದೆ.

كِتَٰبٌ أُنزِلَ إِلَيۡكَ فَلَا يَكُن فِي صَدۡرِكَ حَرَجٞ مِّنۡهُ لِتُنذِرَ بِهِۦ وَذِكۡرَىٰ لِلۡمُؤۡمِنِينَ ٢

3. ನಿಮ್ಮ ರಬ್‌ನ ವತಿಯಿಂದ ನಿಮ್ಮೆಡೆಗೆ ಅವತೀರ್ಣಗೊಂಡಿರುವುದನ್ನು ನೀವು ಅನುಸರಿಸಿರಿ. ಅವನ ಹೊರತು ಅನ್ಯ ರಕ್ಷಕರನ್ನು ಅನುಸರಿಸದಿರಿ. ನೀವು ಸ್ವಲ್ಪ ಮಾತ್ರವೇ ಚಿಂತಿಸಿ ಗ್ರಹಿಸುತ್ತಿರುವಿರಿ.

ٱتَّبِعُواْ مَآ أُنزِلَ إِلَيۡكُم مِّن رَّبِّكُمۡ وَلَا تَتَّبِعُواْ مِن دُونِهِۦٓ أَوۡلِيَآءَۗ قَلِيلٗا مَّا تَذَكَّرُونَ ٣

4. ಎಷ್ಟು ನಾಡುಗಳನ್ನು ನಾವು ನಾಶಗೊಳಿಸಿರುವೆವು! ರಾತ್ರಿ ವೇಳೆಯಲ್ಲಿ ಅಥವಾ ಅವರು ಮಧ್ಯಾಹ್ನದ ನಿದ್ದೆಯಲ್ಲಿರುವಾಗ ನಮ್ಮ ಶಿಕ್ಷೆಯು ಅವರ ಬಳಿಗೆ ಬಂದಿತು.

وَكَم مِّن قَرۡيَةٍ أَهۡلَكۡنَٰهَا فَجَآءَهَا بَأۡسُنَا بَيَٰتًا أَوۡ هُمۡ قَآئِلُونَ ٤

5. ನಮ್ಮ ಶಿಕ್ಷೆಯು ಅವರ ಬಳಿಗೆ ಬಂದಾಗ ಅವರ ಆಕ್ರಂದನವು 'ನಾವು ಅಕ್ರಮಿಗಳಾಗಿ ಬಿಟ್ಟೆವಲ್ಲ!' ಎಂದು ಹೇಳುವುದಲ್ಲದೆ ಇನ್ನೇನೂ ಆಗಿರಲಿಲ್ಲ.

فَمَا كَانَ دَعۡوَىٰهُمۡ إِذۡ جَآءَهُم بَأۡسُنَآ إِلَّآ أَن قَالُوٓاْ إِنَّا كُنَّا ظَٰلِمِينَ ٥

6. ಖಂಡಿತವಾಗಿಯೂ ಯಾರ ಬಳಿಗೆ (ನಮ್ಮ ಸಂದೇಶವಾಹಕರನ್ನು) ಕಳುಹಿಸಲಾಯಿತೋ ಅವರನ್ನು ನಾವು ಪ್ರಶ್ನಿಸುವೆವು.

فَلَنَسۡـَٔلَنَّ ٱلَّذِينَ أُرۡسِلَ إِلَيۡهِمۡ وَلَنَسۡـَٔلَنَّ ٱلۡمُرۡسَلِينَ ٦

1 ಅಲ್‌ಅಅ್‌ರಾಫ್ ಎಂಬುದು ಪರಲೋಕದಲ್ಲಿ ಸ್ವರ್ಗಪ್ರವೇಶಕ್ಕೆ ಮುಂಚಿತವಾಗಿ ಕೆಲವರನ್ನು ತಂದು ನಿಲ್ಲಿಸುವ ಒಂದು ಸ್ಥಳವಾಗಿದೆ. 46, 48 ಸೂಕ್ತಿಗಳಲ್ಲಿ ಈ ಕುರಿತು ವಿವರಿಸಲಾಗಿದೆ.

ಖಂಡಿತವಾಗಿಯೂ ಕಳುಹಿಸಲಾದ ಸಂದೇಶವಾಹಕರನ್ನೂ ನಾವು ಪ್ರಶ್ನಿಸುವೆವು.

7. ತರುವಾಯ ನಿಖರವಾದ ಜ್ಞಾನದೊಂದಿಗೆ ನಾವು ಅವರಿಗೆ (ವಿಷಯವನ್ನು) ವಿವರಿಸಿಕೊಡುವೆವು. ನಾವು ಒಮ್ಮೆಯೂ ಅನುಪಸ್ಥಿತರಾಗಿರಲಿಲ್ಲ.

فَلَنَقُصَّنَّ عَلَيۡهِم بِعِلۡمٖۖ وَمَا كُنَّا غَآئِبِينَ ٧

8. ಆ ದಿನದಂದು (ಕರ್ಮಗಳನ್ನು) ತೂಗಿನೋಡುವುದು ಸತ್ಯವಾಗಿದೆ. ಆಗ ಯಾರ ತಕ್ಕಡಿಯು ಭಾರವಾಗುವುದೋ ಅವರೇ ಯಶಸ್ವಿಯಾದವರಾಗಿರುವರು.

وَٱلۡوَزۡنُ يَوۡمَئِذٍ ٱلۡحَقُّۚ فَمَن ثَقُلَتۡ مَوَٰزِينُهُۥ فَأُوْلَٰٓئِكَ هُمُ ٱلۡمُفۡلِحُونَ ٨

9. ಯಾರ ತಕ್ಕಡಿಗಳು ಹಗುರವಾಗುವುದೋ ಅವರು ನಮ್ಮ ದೃಷ್ಟಾಂತಗಳೊಂದಿಗೆ ಅಕ್ರಮವೆಸಗಿರುವುದರ ಫಲವಾಗಿ ಸ್ವತಃ ತಮ್ಮನ್ನೇ ನಷ್ಟಕ್ಕೀಡಾಗಿಸಿದವರಾಗಿರುವರು.

وَمَنۡ خَفَّتۡ مَوَٰزِينُهُۥ فَأُوْلَٰٓئِكَ ٱلَّذِينَ خَسِرُوٓاْ أَنفُسَهُم بِمَا كَانُواْ بِـَٔايَٰتِنَا يَظۡلِمُونَ ٩

10. ಖಂಡಿತವಾಗಿಯೂ ನಾವು ನಿಮಗೆ ಭೂಮಿಯಲ್ಲಿ ಅಧಿಕಾರವನ್ನು ನೀಡಿದೆವು. ಅಲ್ಲಿ ನಿಮಗೆ ಜೀವನ ಮಾರ್ಗಗಳನ್ನು ಮಾಡಿಕೊಟ್ಟೆವು. ನೀವು ಸ್ವಲ್ಪವೇ ಕೃತಜ್ಞತೆ ಸಲ್ಲಿಸುತ್ತಿರುವಿರಿ.

وَلَقَدۡ مَكَّنَّٰكُمۡ فِي ٱلۡأَرۡضِ وَجَعَلۡنَا لَكُمۡ فِيهَا مَعَٰيِشَۗ قَلِيلٗا مَّا تَشۡكُرُونَ ١٠

11. ಖಂಡಿತವಾಗಿಯೂ ನಾವು ನಿಮ್ಮನ್ನು ಸೃಷ್ಟಿಸಿದೆವು. ತರುವಾಯ ನಿಮಗೆ ರೂಪವನ್ನು ನೀಡಿದೆವು. ತರುವಾಯ ನಾವು ಮಲಕ್‌ಗಳೊಂದಿಗೆ ಹೇಳಿದೆವು: 'ನೀವು ಆದಮ್‌ಗೆ ಸಾಷ್ಟಾಂಗವೆರಗಿರಿ'. ಅವರು ಸಾಷ್ಟಾಂಗವೆರಗಿದರು; ಇಬ್ಲೀಸನ ಹೊರತು. ಅವನು ಸಾಷ್ಟಾಂಗವೆರಗಿದವರ ಪೈಕಿ ಸೇರಿದವನಾಗಲಿಲ್ಲ.

وَلَقَدۡ خَلَقۡنَٰكُمۡ ثُمَّ صَوَّرۡنَٰكُمۡ ثُمَّ قُلۡنَا لِلۡمَلَٰٓئِكَةِ ٱسۡجُدُواْ لِأٓدَمَ فَسَجَدُوٓاْ إِلَّآ إِبۡلِيسَ لَمۡ يَكُن مِّنَ ٱلسَّٰجِدِينَ ١١

12. ಅವನು (ಅಲ್ಲಾಹು) ಕೇಳಿದನು: 'ನಾನು ನಿನ್ನೊಂದಿಗೆ ಆಜ್ಞಾಪಿಸಿದಾಗ ಸಾಷ್ಟಾಂಗವೆರಗದಿರಲು ನಿನ್ನನ್ನು ತಡೆದಿರುವುದಾದರೂ ಏನು?' ಅವನು

قَالَ مَا مَنَعَكَ أَلَّا تَسۡجُدَ إِذۡ أَمَرۡتُكَۖ قَالَ أَنَا۠ خَيۡرٞ مِّنۡهُ خَلَقۡتَنِي مِن نَّارٖ وَخَلَقۡتَهُۥ مِن طِينٖ ١٢

ಹೇಳಿದನು: 'ನಾನು ಅವನಿಗಿಂತಲೂ (ಆದಮ್‌ಗಿಂತಲೂ) ಶ್ರೇಷ್ಠನಾಗಿರುವೆನು. ನನ್ನನ್ನು ನೀನು ಅಗ್ನಿಯಿಂದ ಸೃಷ್ಟಿಸಿರುವೆ. ಅವನನ್ನು ನೀನು ಜೇಡಿಮಣ್ಣಿನಿಂದ ಸೃಷ್ಟಿಸಿರುವೆ.'

13. ಅವನು (ಅಲ್ಲಾಹು) ಹೇಳಿದನು: 'ನೀನಿಲ್ಲಿಂದ ಇಳಿದುಹೋಗು. ಇಲ್ಲಿ ನಿನಗೆ ಅಹಂಕಾರಪಡಲು ಅನುಮತಿಯಿಲ್ಲ. ಹೊರಗೆ ಹೋಗು! ಖಂಡಿತವಾಗಿಯೂ ನೀನು ಅಪಮಾನಿತರಲ್ಲಿ ಸೇರಿದವನಾಗಿರುವೆ.'

قَالَ فَٱهۡبِطۡ مِنۡهَا فَمَا يَكُونُ لَكَ أَن تَتَكَبَّرَ فِيهَا فَٱخۡرُجۡ إِنَّكَ مِنَ ٱلصَّٰغِرِينَ ١٣

14. ಅವನು ಹೇಳಿದನು: 'ಅವರನ್ನು (ಮನುಷ್ಯರನ್ನು) ಪುನರುತ್ಥಾನಗೊಳಿಸಲಾಗುವ ದಿನದವರೆಗೆ ನನಗೆ ಕಾಲಾವಕಾಶವನ್ನು ನೀಡು.'

قَالَ أَنظِرۡنِيٓ إِلَىٰ يَوۡمِ يُبۡعَثُونَ ١٤

15. ಅವನು (ಅಲ್ಲಾಹು) ಹೇಳಿದನು: 'ಖಂಡಿತವಾಗಿಯೂ ನೀನು ಕಾಲಾವಕಾಶ ನೀಡಲಾದವರಲ್ಲಿ ಸೇರಿದವನಾಗಿರುವೆ.'[1]

قَالَ إِنَّكَ مِنَ ٱلۡمُنظَرِينَ ١٥

16. ಅವನು (ಇಬ್ಲೀಸ್) ಹೇಳಿದನು: 'ನೀನು ನನ್ನನ್ನು ದಾರಿತಪ್ಪಿಸಿರುವ ಕಾರಣ ಅವರು (ಮನುಷ್ಯರು) ನಿನ್ನ ನೇರವಾದ ಮಾರ್ಗಕ್ಕೆ ಪ್ರವೇಶಿಸುವುದನ್ನು ತಡೆಯುವ ಸಲುವಾಗಿ ನಾನು ಕಾದುಕುಳಿತುಕೊಳ್ಳುವೆನು.

قَالَ فَبِمَآ أَغۡوَيۡتَنِي لَأَقۡعُدَنَّ لَهُمۡ صِرَٰطَكَ ٱلۡمُسۡتَقِيمَ ١٦

17. ತರುವಾಯ ಅವರ ಮುಂಭಾಗದಿಂದಲೂ, ಅವರ ಹಿಂಭಾಗದಿಂದಲೂ, ಅವರ ಬಲಭಾಗಗಳಿಂದಲೂ, ಅವರ ಎಡಭಾಗಗಳಿಂದಲೂ ನಾನು ಅವರ ಬಳಿಗೆ ಬಂದೇ ಬರುವೆನು. ಅವರ ಪೈಕಿ ಹೆಚ್ಚಿನವರನ್ನೂ ನೀನು ಕೃತಜ್ಞತೆ ಸಲ್ಲಿಸುವವರನ್ನಾಗಿ ಕಾಣಲಾರೆ.'

ثُمَّ لَأٓتِيَنَّهُم مِّنۢ بَيۡنِ أَيۡدِيهِمۡ وَمِنۡ خَلۡفِهِمۡ وَعَنۡ أَيۡمَٰنِهِمۡ وَعَن شَمَآئِلِهِمۡۖ وَلَا تَجِدُ أَكۡثَرَهُمۡ شَٰكِرِينَ ١٧

18. ಅವನು (ಅಲ್ಲಾಹು) ಹೇಳಿದನು: 'ಅಪಮಾನಿತನಾಗಿಯೂ, ತಿರಸ್ಕೃತನಾಗಿಯೂ ಇಲ್ಲಿಂದ ಹೊರಗೆ ಹೋಗು. ಅವರ ಪೈಕಿ ಯಾರಾದರೂ ನಿನ್ನನ್ನು ಅನುಸರಿಸುವುದಾದರೆ

قَالَ ٱخۡرُجۡ مِنۡهَا مَذۡءُومٗا مَّدۡحُورٗاۖ لَّمَن تَبِعَكَ مِنۡهُمۡ لَأَمۡلَأَنَّ جَهَنَّمَ مِنكُمۡ أَجۡمَعِينَ ١٨

1 ಪುನರುತ್ಥಾನದ ದಿನದವರೆಗೆ ಕಾರ್ಯನಿರ್ವಹಿಸಲು ನಿನಗೆ ಅನುಮತಿ ನೀಡಲಾಗಿದೆ ಎಂದರ್ಥ.

ಖಂಡಿತವಾಗಿಯೂ ನಿಮ್ಮೆಲ್ಲರನ್ನೂ ಸೇರಿಸಿ ನಾನು ನರಕವನ್ನು ತುಂಬಿಸುವೆನು.'

19. (ಅಲ್ಲಾಹು ಹೇಳಿದನು) ಓ ಆದಮ್! ತಾವು ಮತ್ತು ತಮ್ಮ ಸಂಗಾತಿ ಈ ತೋಟದಲ್ಲಿ ತಂಗಿರಿ. ತರುವಾಯ ನೀವಿಬ್ಬರೂ ಇಚ್ಛಿಸುವ ಕಡೆಗಳಿಂದೆಲ್ಲ ತಿನ್ನಿರಿ. ಆದರೆ ಈ ಮರದ ಸಮೀಪಕ್ಕೆ ನೀವಿಬ್ಬರೂ ಹೋಗದಿರಿ. ಹೋದರೆ ನೀವು ಅಕ್ರಮಿಗಳಲ್ಲಿ ಸೇರಿದವರಾಗುವಿರಿ.

وَيَـٰٓـَٔادَمُ ٱسۡكُنۡ أَنتَ وَزَوۡجُكَ ٱلۡجَنَّةَ فَكُلَا مِنۡ حَيۡثُ شِئۡتُمَا وَلَا تَقۡرَبَا هَـٰذِهِ ٱلشَّجَرَةَ فَتَكُونَا مِنَ ٱلظَّـٰلِمِينَ ١٩

20. ಅವರಿಂದ ಮರೆಮಾಚಲಾಗಿರುವ ಅವರ ಗುಹ್ಯಭಾಗಗಳನ್ನು ಅವರಿಗೆ ಪ್ರಕಟಗೊಳಿಸುವ ಸಲುವಾಗಿ ಸೈತಾನನು ಅವರಿಬ್ಬರಿಗೂ ದುಷ್ಪ್ರೇರಣೆ ನೀಡಿದನು. ಅವನು ಹೇಳಿದನು: 'ನೀವಿಬ್ಬರೂ ಮಲಕ್‌ಗಳಾಗಿ ಬಿಡುವಿರಿ ಅಥವಾ ನೀವಿಬ್ಬರೂ ಇಲ್ಲಿ ಶಾಶ್ವತವಾಗಿ ವಾಸಿಸುವವರಾಗುವಿರಿ ಎಂಬುದರಿಂದಲೇ ವಿನಾ ನಿಮ್ಮ ರಬ್ ನಿಮ್ಮನ್ನು ಈ ಮರದಿಂದ ತಡೆದಿಲ್ಲ.'

فَوَسۡوَسَ لَهُمَا ٱلشَّيۡطَٰنُ لِيُبۡدِيَ لَهُمَا مَا وُۥرِيَ عَنۡهُمَا مِن سَوۡءَٰتِهِمَا وَقَالَ مَا نَهَىٰكُمَا رَبُّكُمَا عَنۡ هَٰذِهِ ٱلشَّجَرَةِ إِلَّآ أَن تَكُونَا مَلَكَيۡنِ أَوۡ تَكُونَا مِنَ ٱلۡخَٰلِدِينَ ٢٠

21. 'ಖಂಡಿತವಾಗಿಯೂ ನಾನು ನಿಮ್ಮಿಬ್ಬರ ಹಿತಾಕಾಂಕ್ಷಿಯಾಗಿರುವೆನು' ಎಂದು ಅವನು ಅವರೊಂದಿಗೆ ಆಣೆಯಿಟ್ಟು ಹೇಳಿದನು.

وَقَاسَمَهُمَآ إِنِّي لَكُمَا لَمِنَ ٱلنَّـٰصِحِينَ ٢١

22. ಹೀಗೆ ಅವನು ವಂಚನೆಯಿಂದ ಅವರಿಬ್ಬರನ್ನೂ ಕೆಳಮಟ್ಟಕ್ಕಿಳಿಸಿದನು. ತರುವಾಯ ಅವರಿಬ್ಬರೂ ಆ ಮರದಿಂದ ರುಚಿಯನ್ನು ಸವಿದಾಗ ಅವರಿಗೆ ಅವರ ಗುಹ್ಯಭಾಗಗಳು ಪ್ರಕಟವಾದವು. ಆ ತೋಟದ ಎಲೆಗಳಿಂದ ಅವರಿಬ್ಬರೂ ತಮ್ಮ ಶರೀರಗಳನ್ನು ಮುಚ್ಚತೊಡಗಿದರು. ಅವರಿಬ್ಬರನ್ನೂ ಕರೆದು ಅವರ ರಬ್ ಹೇಳಿದನು: 'ಆ ಮರದಿಂದ ನಾನು ನಿಮ್ಮಿಬ್ಬರನ್ನೂ ತಡೆದಿರಲಿಲ್ಲವೇ? ಖಂಡಿತವಾಗಿಯೂ ಸೈತಾನನು ನಿಮ್ಮ ಪ್ರತ್ಯಕ್ಷ ಶತ್ರುವಾಗಿರುವನೆಂದು ನಾನು ನಿಮ್ಮಿಬ್ಬರೊಂದಿಗೂ ಹೇಳಿರಲಿಲ್ಲವೇ?'

فَدَلَّىٰهُمَا بِغُرُورٖۚ فَلَمَّا ذَاقَا ٱلشَّجَرَةَ بَدَتۡ لَهُمَا سَوۡءَٰتُهُمَا وَطَفِقَا يَخۡصِفَانِ عَلَيۡهِمَا مِن وَرَقِ ٱلۡجَنَّةِۖ وَنَادَىٰهُمَا رَبُّهُمَآ أَلَمۡ أَنۡهَكُمَا عَن تِلۡكُمَا ٱلشَّجَرَةِ وَأَقُل لَّكُمَآ إِنَّ ٱلشَّيۡطَٰنَ لَكُمَا عَدُوّٞ مُّبِينٞ ٢٢

**23.** ಅವರಿಬ್ಬರೂ ಹೇಳಿದರು: ‘ಓ ನಮ್ಮ ರಬ್!
ನಾವು ಸ್ವತಃ ನಮ್ಮೊಂದಿಗೇ
ಅಕ್ರಮವೆಸಗಿರುವೆವು. ನೀನು ನಮ್ಮನ್ನು
ಕ್ಷಮಿಸದಿದ್ದರೆ ಮತ್ತು ನಮಗೆ ಕರುಣೆ
ತೋರದಿದ್ದರೆ ಖಂಡಿತವಾಗಿಯೂ ನಾವು ನಷ್ಟ
ಹೊಂದಿದವರಲ್ಲಿ ಸೇರಿದವರಾಗುವೆವು.’

قَالَا رَبَّنَا ظَلَمْنَآ أَنفُسَنَا وَإِن لَّمْ تَغْفِرْ لَنَا
وَتَرْحَمْنَا لَنَكُونَنَّ مِنَ ٱلْخَـٰسِرِينَ ٢٣

**24.** ಅವನು (ಅಲ್ಲಾಹು) ಹೇಳಿದನು: ‘ನೀವು
ಇಳಿದುಹೋಗಿರಿ. ನಿಮ್ಮ ಪೈಕಿ ಕೆಲವರು ಇತರ
ಕೆಲವರಿಗೆ ಶತ್ರುಗಳಾಗಿರುವರು. ನಿಮಗೆ
ಭೂಮಿಯಲ್ಲಿ ವಾಸಸ್ಥಳವಿದೆ. ಒಂದು ನಿರ್ದಿಷ್ಟ
ಕಾಲಾವಧಿಯವರೆಗೆ ಜೀವನಾನುಕೂಲತೆಗಳೂ
ಇವೆ.’

قَالَ ٱهْبِطُوا۟ بَعْضُكُمْ لِبَعْضٍ عَدُوٌّ ۖ
وَلَكُمْ فِى ٱلْأَرْضِ مُسْتَقَرٌّ وَمَتَـٰعٌ إِلَىٰ
حِينٍ ٢٤

**25.** ಅವನು ಹೇಳಿದನು: ‘ಅಲ್ಲೇ (ಭೂಮಿಯಲ್ಲೇ)
ನೀವು ಬದುಕುವಿರಿ, ಅಲ್ಲೇ ನೀವು
ಮರಣಹೊಂದುವಿರಿ ಮತ್ತು ಅಲ್ಲಿಂದಲೇ
ನಿಮ್ಮನ್ನು ಹೊರತರಲಾಗುವುದು.’

قَالَ فِيهَا تَحْيَوْنَ وَفِيهَا تَمُوتُونَ وَمِنْهَا
تُخْرَجُونَ ٢٥

**26.** ಓ ಆದಮ್ ಸಂತತಿಗಳೇ! ನಿಮ್ಮ
ಗುಹ್ಯಭಾಗಗಳನ್ನು ಮರೆಮಾಚುವ ಉಡುಪನ್ನು
ಮತ್ತು ಅಲಂಕಾರ ವಸ್ತ್ರವನ್ನು ನಾವು ನಿಮಗೆ
ನೀಡಿರುವೆವು. ಧರ್ಮನಿಷ್ಠೆಯ ಉಡುಪು
ಯಾವುದೋ ಅದು ಅತ್ಯುತ್ತಮವಾದುದಾಗಿದೆ.
ಅದು ಅಲ್ಲಾಹುವಿನ ದೃಷ್ಟಾಂತಗಳಲ್ಲಿ
ಸೇರಿದ್ದಾಗಿದೆ. ಅವರು ಚಿಂತಿಸಿ
ಗ್ರಹಿಸಲೂಬಹುದು.

يَـٰبَنِىٓ ءَادَمَ قَدْ أَنزَلْنَا عَلَيْكُمْ لِبَاسًا
يُوَٰرِى سَوْءَٰتِكُمْ وَرِيشًا ۖ وَلِبَاسُ ٱلتَّقْوَىٰ
ذَٰلِكَ خَيْرٌ ۚ ذَٰلِكَ مِنْ ءَايَـٰتِ ٱللَّهِ لَعَلَّهُمْ
يَذَّكَّرُونَ ٢٦

**27.** ಓ ಆದಮ್ ಸಂತತಿಗಳೇ! ನಿಮ್ಮ
ಮಾತಾಪಿತರನ್ನು, ಅವರಿಬ್ಬರ
ಗುಹ್ಯಭಾಗಗಳನ್ನು ಅವರಿಗೆ ತೋರಿಸಿಕೊಡುವ
ಸಲುವಾಗಿ ಅವನು ಅವರ ವಸ್ತ್ರವನ್ನು
ಅವರಿಂದ ಕಳಚಿಹಾಕಿ ಆ ತೋಟದಿಂದ
ಹೊರಗಟ್ಟಿದಂತೆ ಸೈತಾನನು ನಿಮ್ಮನ್ನೂ
ಕ್ಷೋಭೆಗೊಳಪಡಿಸದಿರಲಿ. ಖಂಡಿತವಾಗಿಯೂ
ನೀವು ಅವರನ್ನು ಕಾಣಲಾಗದಂತಹ ವಿಧದಲ್ಲಿ

يَـٰبَنِىٓ ءَادَمَ لَا يَفْتِنَنَّكُمُ ٱلشَّيْطَـٰنُ كَمَآ
أَخْرَجَ أَبَوَيْكُم مِّنَ ٱلْجَنَّةِ يَنزِعُ عَنْهُمَا
لِبَاسَهُمَا لِيُرِيَهُمَا سَوْءَٰتِهِمَآ ۗ إِنَّهُۥ يَرَىٰكُمْ
هُوَ وَقَبِيلُهُۥ مِنْ حَيْثُ لَا تَرَوْنَهُمْ ۗ
إِنَّا جَعَلْنَا ٱلشَّيَـٰطِينَ أَوْلِيَآءَ لِلَّذِينَ لَا
يُؤْمِنُونَ ٢٧

ಅವನು ಮತ್ತು ಅವನ ಪಂಗಡದವರು ನಿಮ್ಮನ್ನು ಕಾಣುತ್ತಿರುವರು. ಖಂಡಿತವಾಗಿಯೂ ಸತ್ಯವಿಶ್ವಾಸವಿಡದವರಿಗೆ ನಾವು ಸೈತಾನರನ್ನು ಮಿತ್ರರನ್ನಾಗಿ ಮಾಡಿರುವೆವು.

**28.** ಅವರು ಯಾವುದಾದರೂ ನೀಚಕೃತ್ಯವನ್ನು ಮಾಡಿದರೆ 'ನಮ್ಮ ಪೂರ್ವಿಕರು ಇದನ್ನು ಮಾಡುವುದಾಗಿ ನಾವು ಕಂಡಿರುವೆವು ಮತ್ತು ಅಲ್ಲಾಹು ಇದನ್ನು ನಮ್ಮೊಂದಿಗೆ ಆಜ್ಞಾಪಿಸಿರುವನು' ಎನ್ನುವರು. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ಖಂಡಿತವಾಗಿಯೂ ನೀಚಕೃತ್ಯವನ್ನು ಆಜ್ಞಾಪಿಸಲಾರನು. ನಿಮಗೆ ಅರಿವಿಲ್ಲದಿರುವುದನ್ನು ನೀವು ಅಲ್ಲಾಹುವಿನ ಹೆಸರಲ್ಲಿ ಹೇಳುತ್ತಿರುವಿರಾ?'

وَإِذَا فَعَلُواْ فَٰحِشَةً قَالُواْ وَجَدۡنَا عَلَيۡهَآ ءَابَآءَنَا وَٱللَّهُ أَمَرَنَا بِهَاۗ قُلۡ إِنَّ ٱللَّهَ لَا يَأۡمُرُ بِٱلۡفَحۡشَآءِۖ أَتَقُولُونَ عَلَى ٱللَّهِ مَا لَا تَعۡلَمُونَ ﴿٢٨﴾

**29.** ಹೇಳಿರಿ: 'ನ್ಯಾಯ ಪಾಲಿಸುವಂತೆ ನನ್ನ ರಬ್ ಆಜ್ಞಾಪಿಸಿರುವನು. ಪ್ರತಿಯೊಂದು ಆರಾಧನಾ ವೇಳೆಗಳಲ್ಲೂ[1] (ಅಥವಾ ಪ್ರತಿಯೊಂದು ಆರಾಧನಾಲಯಗಳಲ್ಲೂ) ನಿಮ್ಮ ಮುಖಗಳನ್ನು (ಅವನೆಡೆಗೆ ತಿರುಗಿಸಿ) ನಿಲ್ಲಿಸಿರಿ ಮತ್ತು ಶರಣಾಗತಿಯನ್ನು ಅವನಿಗೆ ನಿಷ್ಕಳಂಕಗೊಳಿಸಿ ಅವನೊಂದಿಗೆ ಪ್ರಾರ್ಥಿಸಿರಿ' ಅವನು ನಿಮ್ಮನ್ನು ಮೊದಲ ಬಾರಿ ಸೃಷ್ಟಿಸಿದ ಸ್ಥಿತಿಗೇ ನೀವು ಮರಳುವಿರಿ.[2]

قُلۡ أَمَرَ رَبِّي بِٱلۡقِسۡطِۖ وَأَقِيمُواْ وُجُوهَكُمۡ عِندَ كُلِّ مَسۡجِدٖ وَٱدۡعُوهُ مُخۡلِصِينَ لَهُ ٱلدِّينَۚ كَمَا بَدَأَكُمۡ تَعُودُونَ ﴿٢٩﴾

**30.** ಒಂದು ಪಂಗಡವನ್ನು ಅವನು ಸನ್ಮಾರ್ಗದಲ್ಲಿ ಸೇರಿಸಿರುವನು. ಇನ್ನೊಂದು ಪಂಗಡವು ಪಥಭ್ರಷ್ಟರಾಗಲು ಅರ್ಹರಾಗಿರುವರು. ಅವರು ಅಲ್ಲಾಹುವಿನ ಹೊರತು ಸೈತಾನರನ್ನು ರಕ್ಷಕರನ್ನಾಗಿ ಮಾಡಿಕೊಂಡಿರುವರು ಮತ್ತು ತಾವು ಸನ್ಮಾರ್ಗ ಪಡೆದವರಾಗಿರುವೆವು ಎಂದು ಭಾವಿಸುತ್ತಿರುವರು.

فَرِيقًا هَدَىٰ وَفَرِيقًا حَقَّ عَلَيۡهِمُ ٱلضَّلَٰلَةُۚ إِنَّهُمُ ٱتَّخَذُواْ ٱلشَّيَٰطِينَ أَوۡلِيَآءَ مِن دُونِ ٱللَّهِ وَيَحۡسَبُونَ أَنَّهُم مُّهۡتَدُونَ ﴿٣٠﴾

1 ಮಸ್ಜಿದ್ ಎಂಬ ಪದಕ್ಕೆ ಆರಾಧನಾ ವೇಳೆ ಮತ್ತು ಆರಾಧನಾಲಯ ಎಂಬ ಅರ್ಥಗಳಿವೆ.

2 ನಿಮ್ಮನ್ನು ಮೊದಲ ಬಾರಿ ಶೂನ್ಯದಿಂದ ಸೃಷ್ಟಿಸಿದಂತೆ ಪುನರುತ್ಥಾನದ ದಿನದಂದು ಅವನು ನಿಮ್ಮನ್ನು ಪುನಃ ಸೃಷ್ಟಿಸುವನು.

31. ಓ ಆದಮ್ ಸಂತತಿಗಳೇ! ಪ್ರತಿಯೊಂದು ಆರಾಧನಾಲಯಗಳಲ್ಲೂ (ಅಥವಾ ಆರಾಧನಾ ವೇಳೆಗಳಲ್ಲೂ) ನಿಮಗೆ ಅಲಂಕಾರವಾಗಿರುವ ಉಡುಪುಗಳನ್ನು ಧರಿಸಿರಿ.[1] ನೀವು ತಿನ್ನಿರಿ ಮತ್ತು ಕುಡಿಯಿರಿ. ಆದರೆ ದುರ್ವ್ಯಯ ಮಾಡದಿರಿ. ದುರ್ವ್ಯಯ ಮಾಡುವವರನ್ನು ಅಲ್ಲಾಹು ಮೆಚ್ಚಲಾರನು.

۞ يَٰبَنِيٓ ءَادَمَ خُذُواْ زِينَتَكُمۡ عِندَ كُلِّ مَسۡجِدٖ وَكُلُواْ وَٱشۡرَبُواْ وَلَا تُسۡرِفُوٓاْۚ إِنَّهُۥ لَا يُحِبُّ ٱلۡمُسۡرِفِينَ ٣١

32. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ತನ್ನ ದಾಸರಿಗಾಗಿ ಉತ್ಪಾದಿಸಿರುವ ಅಲಂಕಾರ ವಸ್ತುಗಳನ್ನು ಮತ್ತು ಉತ್ತಮ ಆಹಾರಗಳನ್ನು ನಿಷಿದ್ಧಗೊಳಿಸಿದವರು ಯಾರು?' ಹೇಳಿರಿ: 'ಅವುಗಳು ಐಹಿಕ ಜೀವನದಲ್ಲಿ ಸತ್ಯವಿಶ್ವಾಸಿಗಳಿಗಿರುವುದಾಗಿದೆ. ಪುನರುತ್ಥಾನ ದಿನದಂದು ಅವರಿಗೆ ಮಾತ್ರ ವಿಶೇಷವಾಗಿರುವುದಾಗಿದೆ.' ಅರಿತು ಕೊಳ್ಳುವ ಜನರಿಗಾಗಿ ನಾವು ಹೀಗೆ ದೃಷ್ಟಾಂತಗಳನ್ನು ವಿವರಿಸಿಕೊಡುವೆವು.

قُلۡ مَنۡ حَرَّمَ زِينَةَ ٱللَّهِ ٱلَّتِيٓ أَخۡرَجَ لِعِبَادِهِۦ وَٱلطَّيِّبَٰتِ مِنَ ٱلرِّزۡقِۚ قُلۡ هِيَ لِلَّذِينَ ءَامَنُواْ فِي ٱلۡحَيَوٰةِ ٱلدُّنۡيَا خَالِصَةٗ يَوۡمَ ٱلۡقِيَٰمَةِۗ كَذَٰلِكَ نُفَصِّلُ ٱلۡأٓيَٰتِ لِقَوۡمٖ يَعۡلَمُونَ ٣٢

33. ತಾವು ಹೇಳಿರಿ: 'ನನ್ನ ರಬ್ ನಿಷಿದ್ಧಗೊಳಿಸಿರುವುದು ಪ್ರತ್ಯಕ್ಷವಾಗಿರುವ ಮತ್ತು ಪರೋಕ್ಷವಾಗಿರುವ ನೀಚಕೃತ್ಯಗಳು, ಪಾಪಕೃತ್ಯಗಳು, ಅನ್ಯಾಯವಾದ ದಬ್ಬಾಳಿಕೆ, ಅಲ್ಲಾಹು ಯಾವುದೇ ಆಧಾರವನ್ನು ಇಳಿಸಿಕೊಡದಿರುವುದನ್ನು ಅವನೊಂದಿಗೆ ಸಹಭಾಗಿಯನ್ನಾಗಿ ಮಾಡುವುದು ಮತ್ತು ನಿಮಗೆ ಅರಿವಿಲ್ಲದಿರುವುದನ್ನು ಅಲ್ಲಾಹುವಿನ ಹೆಸರಲ್ಲಿ ಹೇಳುವುದು ಮಾತ್ರವಾಗಿದೆ.'

قُلۡ إِنَّمَا حَرَّمَ رَبِّيَ ٱلۡفَوَٰحِشَ مَا ظَهَرَ مِنۡهَا وَمَا بَطَنَ وَٱلۡإِثۡمَ وَٱلۡبَغۡيَ بِغَيۡرِ ٱلۡحَقِّ وَأَن تُشۡرِكُواْ بِٱللَّهِ مَا لَمۡ يُنَزِّلۡ بِهِۦ سُلۡطَٰنٗا وَأَن تَقُولُواْ عَلَى ٱللَّهِ مَا لَا تَعۡلَمُونَ ٣٣

34. ಪ್ರತಿಯೊಂದು ಸಮುದಾಯಕ್ಕೂ ಒಂದು ಅವಧಿಯಿದೆ. ಅವರ ಅವಧಿಯು ಬಂದು ಬಿಟ್ಟರೆ ಅದನ್ನು ಒಂದು ಕ್ಷಣದಷ್ಟು ಹಿಂದಕ್ಕೆ ತಳ್ಳಲು ಅಥವಾ ಅದನ್ನು ಮುಂದಕ್ಕೆ ತಳ್ಳಲು ಅವರಿಂದಾಗದು.

وَلِكُلِّ أُمَّةٍ أَجَلٞۖ فَإِذَا جَآءَ أَجَلُهُمۡ لَا يَسۡتَأۡخِرُونَ سَاعَةٗ وَلَا يَسۡتَقۡدِمُونَ ٣٤

1 ನಗ್ನರಾಗಿ ಅಥವಾ ಅರೆನಗ್ನರಾಗಿ ಪ್ರಾರ್ಥಿಸಿದರೆ ಮಾತ್ರ ಭಕ್ತಿ ಸ್ಫುರಿಸುತ್ತದೆ ಎಂಬ ಅಂಧವಿಶ್ವಾಸವು ಹಲವು ಪ್ರಾಕೃತ ಧರ್ಮಗಳಲ್ಲಿತ್ತು. ಕುರ್‌ಆನ್ ಅದನ್ನು ತಿದ್ದುತ್ತದೆ. ದುರ್ವ್ಯಯ ಮತ್ತು ಅಹಂಭಾವ ರಹಿತವಾದ ವಸ್ತ್ರ ಹಾಗೂ ಮಿತವಾದ ಆಹಾರಗಳನ್ನು ಇಸ್ಲಾಮ್ ಅಪೇಕ್ಷಣೀಯವೆಂದು ಸಾರುತ್ತದೆ.

35. ಓ ಆದಮ್ ಸಂತತಿಗಳೇ! ನಿಮಗೆ ನನ್ನ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಾ ನಿಮ್ಮಿಂದಲೇ ನಿಮ್ಮ ಬಳಿಗೆ ಸಂದೇಶವಾಹಕರು ಬರುವಾಗ ಭಯಭಕ್ತಿ ಪಾಲಿಸುವವರು ಮತ್ತು ನಿಲುವನ್ನು ಸುಧಾರಣೆ ಮಾಡುವವರು ಯಾರೋ ಅವರು ಯಾವುದನ್ನೂ ಭಯಪಡಬೇಕಾಗಿಲ್ಲ. ಅವರು ದುಃಖಿಸಬೇಕಾಗಿಯೂ ಬರಲಾರದು.

يَٰبَنِيٓ ءَادَمَ إِمَّا يَأۡتِيَنَّكُمۡ رُسُلٞ مِّنكُمۡ يَقُصُّونَ عَلَيۡكُمۡ ءَايَٰتِي فَمَنِ ٱتَّقَىٰ وَأَصۡلَحَ فَلَا خَوۡفٌ عَلَيۡهِمۡ وَلَا هُمۡ يَحۡزَنُونَ ٣٥

36. ನಮ್ಮ ದೃಷ್ಟಾಂತಗಳನ್ನು ನಿಷೇಧಿಸುವವರು ಮತ್ತು ಅವುಗಳಿಗೆದುರಾಗಿ ಅಹಂಕಾರಪಡುವವರು ಯಾರೋ ಅವರೇ ನರಕವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

وَٱلَّذِينَ كَذَّبُواْ بِـَٔايَٰتِنَا وَٱسۡتَكۡبَرُواْ عَنۡهَآ أُوْلَٰٓئِكَ أَصۡحَٰبُ ٱلنَّارِۖ هُمۡ فِيهَا خَٰلِدُونَ ٣٦

37. ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದವನಿಗಿಂತ ಅಥವಾ ಅವನ ದೃಷ್ಟಾಂತಗಳನ್ನು ನಿಷೇಧಿಸಿದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಅಂತಹವರು (ಅಲ್ಲಾಹುವಿನ) ದಾಖಲೆಯಲ್ಲಿ ಅವರಿಗೆ ನಿಶ್ಚಯಿಸಲಾಗಿರುವ ಪಾಲನ್ನು ಪಡೆಯುವರು. ಕೊನೆಗೆ ಅವರನ್ನು ಮೃತಪಡಿಸುವುದಕ್ಕಾಗಿ ನಮ್ಮ ದೂತರು (ಮಲಕ್‌ಗಳು) ಅವರ ಬಳಿಗೆ ಬರುವಾಗ ಅವರು (ಮಲಕ್‌ಗಳು) ಹೇಳುವರು: 'ಅಲ್ಲಾಹುವಿನ ಹೊರತು ನೀವು ಕರೆದು ಪ್ರಾರ್ಥಿಸುತ್ತಿದ್ದವರು ಎಲ್ಲಿರುವರು?' ಅವರು ಹೇಳುವರು: 'ಅವರು ನಮ್ಮನ್ನು ತೊರೆದು ಹೋಗಿರುವರು'. ತಾವು ಸತ್ಯನಿಷೇಧಿಗಳಾಗಿದ್ದೆವು ಎಂದು ಅವರು ಸ್ವತಃ ತಮಗೆ ವಿರುದ್ಧವಾಗಿ ತಾವೇ ಸಾಕ್ಷ್ಯವಹಿಸುವರು.

فَمَنۡ أَظۡلَمُ مِمَّنِ ٱفۡتَرَىٰ عَلَى ٱللَّهِ كَذِبًا أَوۡ كَذَّبَ بِـَٔايَٰتِهِۦٓۚ أُوْلَٰٓئِكَ يَنَالُهُمۡ نَصِيبُهُم مِّنَ ٱلۡكِتَٰبِۖ حَتَّىٰٓ إِذَا جَآءَتۡهُمۡ رُسُلُنَا يَتَوَفَّوۡنَهُمۡ قَالُوٓاْ أَيۡنَ مَا كُنتُمۡ تَدۡعُونَ مِن دُونِ ٱللَّهِۖ قَالُواْ ضَلُّواْ عَنَّا وَشَهِدُواْ عَلَىٰٓ أَنفُسِهِمۡ أَنَّهُمۡ كَانُواْ كَٰفِرِينَ ٣٧

38. ಅವನು (ಅಲ್ಲಾಹು) ಹೇಳುವನು: 'ಜಿನ್ನ್ ಮತ್ತು ಮನುಷ್ಯರ ಪೈಕಿ ನಿಮಗಿಂತ ಮುಂಚೆ ಗತಿಸಿ ಹೋಗಿರುವ ಸಮುದಾಯಗಳೊಂದಿಗೆ ನೀವೂ ನರಕಾಗ್ನಿಯನ್ನು ಪ್ರವೇಶಿಸಿರಿ'. ಒಂದೊಂದು

قَالَ ٱدۡخُلُواْ فِيٓ أُمَمٖ قَدۡ خَلَتۡ مِن قَبۡلِكُم مِّنَ ٱلۡجِنِّ وَٱلۡإِنسِ فِي ٱلنَّارِۖ كُلَّمَا دَخَلَتۡ أُمَّةٞ لَّعَنَتۡ أُخۡتَهَاۖ حَتَّىٰٓ

ಸಮುದಾಯವು (ಅದನ್ನು) ಪ್ರವೇಶಿಸುವಾಗಲೆಲ್ಲ ತನ್ನ ಸಹೋದರ ಸಮುದಾಯವನ್ನು ಶಪಿಸಲಿರುವುದು. ಕೊನೆಗೆ ಅವರೆಲ್ಲರೂ ಅಲ್ಲಿ ಒಟ್ಟುಸೇರಿದಾಗ ಅವರ ಪೈಕಿ ನಂತರ ಬಂದವರು ತಮಗಿಂತ ಮುಂಚೆ ಬಂದವರ ಕುರಿತು ಹೇಳುವರು: ‘ಓ ನಮ್ಮ ರಬ್! ನಮ್ಮನ್ನು ದಾರಿಗೆಡಿಸಿದವರು ಇವರಾಗಿರುವರು. ಆದ್ದರಿಂದ ಇವರಿಗೆ ನರಕಾಗ್ನಿಯ ಇಮ್ಮಡಿ ಶಿಕ್ಷೆಯನ್ನು ನೀಡು’. ಅವನು ಹೇಳುವನು: ‘ಎಲ್ಲರಿಗೂ ಇಮ್ಮಡಿಯಿದೆ. ಆದರೆ ನೀವು ಅರಿತುಕೊಳ್ಳಲಾರಿರಿ’.

إِذَا ٱدَّارَكُواْ فِيهَا جَمِيعًا قَالَتۡ أُخۡرَىٰهُمۡ
لِأُولَىٰهُمۡ رَبَّنَا هَٰٓؤُلَآءِ أَضَلُّونَا فَـَٔاتِهِمۡ
عَذَابًا ضِعۡفًا مِّنَ ٱلنَّارِۖ قَالَ لِكُلّٖ ضِعۡفٞ
وَلَٰكِن لَّا تَعۡلَمُونَ ٣٨

**39.** ಅವರ ಪೈಕಿ ಮೊದಲು ಬಂದವರು ತಮ್ಮ ನಂತರ ಬಂದವರೊಂದಿಗೆ ಹೇಳುವರು: ‘ನಮಗಿಂತ ಹೆಚ್ಚಿನ ಶ್ರೇಷ್ಠತೆಯೇನೂ ನಿಮಗಿಲ್ಲ. ಆದ್ದರಿಂದ ನೀವು ಗಳಿಸಿಟ್ಟಿರುವುದರ ಫಲವಾಗಿ ಶಿಕ್ಷೆಯನ್ನು ಸವಿಯಿರಿ.’

وَقَالَتۡ أُولَىٰهُمۡ لِأُخۡرَىٰهُمۡ فَمَا كَانَ لَكُمۡ
عَلَيۡنَا مِن فَضۡلٖ فَذُوقُواْ ٱلۡعَذَابَ بِمَا
كُنتُمۡ تَكۡسِبُونَ ٣٩

**40.** ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರು ಮತ್ತು ಅದಕ್ಕೆದುರಾಗಿ ಅಹಂಕಾರಪಟ್ಟವರು ಯಾರೋ ಅವರಿಗೆ ಆಕಾಶದ ದ್ವಾರಗಳನ್ನು ತೆರೆದುಕೊಡಲಾಗದು.[1] ಒಂಟೆಯು ಸೂಜಿಯ ರಂಧ್ರದಲ್ಲಿ ಪ್ರವೇಶಿಸುವ ತನಕ ಅವರು ಸ್ವರ್ಗವನ್ನು ಪ್ರವೇಶಿಸಲಾರರು. ಅಪರಾಧಿಗಳಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

إِنَّ ٱلَّذِينَ كَذَّبُواْ بِـَٔايَٰتِنَا وَٱسۡتَكۡبَرُواْ عَنۡهَا
لَا تُفَتَّحُ لَهُمۡ أَبۡوَٰبُ ٱلسَّمَآءِ وَلَا يَدۡخُلُونَ
ٱلۡجَنَّةَ حَتَّىٰ يَلِجَ ٱلۡجَمَلُ فِي سَمِّ ٱلۡخِيَاطِۚ
وَكَذَٰلِكَ نَجۡزِي ٱلۡمُجۡرِمِينَ ٤٠

**41.** ಅವರಿಗೆ ನರಕಾಗ್ನಿಯಿಂದಿರುವ ಹಾಸಿಗೆಯಿದೆ. ಅವರ ಮೇಲ್ಭಾಗದಲ್ಲಿ ಹೊದಿಕೆಗಳೂ ಇವೆ. ಅಕ್ರಮಿಗಳಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

لَهُم مِّن جَهَنَّمَ مِهَادٞ وَمِن فَوۡقِهِمۡ غَوَاشٖۚ
وَكَذَٰلِكَ نَجۡزِي ٱلظَّٰلِمِينَ ٤١

**42.** ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರು ಯಾರೋ –ಯಾವ ವ್ಯಕ್ತಿಗೂ ಅವನ ಸಾಮರ್ಥ್ಯಕ್ಕೆ ಮಿಗಿಲಾಗಿ ನಾವು ಹೊರಿಸಲಾರೆವು– ಅವರೇ ಸ್ವರ್ಗವಾಸಿಗಳು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

وَٱلَّذِينَ ءَامَنُواْ وَعَمِلُواْ ٱلصَّٰلِحَٰتِ
لَا نُكَلِّفُ نَفۡسًا إِلَّا وُسۡعَهَآ أُوْلَٰٓئِكَ
أَصۡحَٰبُ ٱلۡجَنَّةِۖ هُمۡ فِيهَا خَٰلِدُونَ ٤٢

1 ಅವರ ಸತ್ಕರ್ಮಗಳು ಮತ್ತು ಪ್ರಾರ್ಥನೆಗಳು ಅಲ್ಲಾಹುವಿನೆಡೆಗೆ ಎತ್ತಲ್ಪಡಲಾರವು ಎಂದರ್ಥ

**43.** ಅವರ (ಸತ್ಯವಿಶ್ವಾಸಿಗಳ) ಹೃದಯಗಳಲ್ಲಿರುವ ದ್ವೇಷವನ್ನು ನಾವು ನಿವಾರಿಸುವೆವು. ಅವರ ತಳಭಾಗದಿಂದ ನದಿಗಳು ಹರಿಯುತ್ತಿರುವುವು. ಅವರು ಹೇಳುವರು: 'ನಮ್ಮನ್ನು ಇದರೆಡೆಗೆ ಮುನ್ನಡೆಸಿದ ಅಲ್ಲಾಹುವಿಗೆ ಸ್ತುತಿ. ಅಲ್ಲಾಹು ನಮ್ಮನ್ನು ಸನ್ಮಾರ್ಗದೆಡೆಗೆ ಮುನ್ನಡೆಸದಿರುತ್ತಿದ್ದರೆ ಖಂಡಿತವಾಗಿಯೂ ನಾವು ಸನ್ಮಾರ್ಗವನ್ನು ಪಡೆಯುತ್ತಿರಲಿಲ್ಲ. ಖಂಡಿತವಾಗಿಯೂ ನಮ್ಮ ರಬ್‌ನ ಸಂದೇಶವಾಹಕರು ಸತ್ಯದೊಂದಿಗೆ ಬಂದಿದ್ದರು'. 'ನೀವು ಮಾಡಿಕೊಂಡಿದ್ದುದರ ಫಲವಾಗಿ ನೀವು ವಾರೀಸಾಗಿ ಪಡೆದಿರುವ ಸ್ವರ್ಗವು ಇದೇ ಆಗಿದೆ' ಎಂದು ಅವರೊಂದಿಗೆ ಕರೆದು ಹೇಳಲಾಗುವುದು.

وَنَزَعۡنَا مَا فِي صُدُورِهِم مِّنۡ غِلّٖ تَجۡرِي مِن تَحۡتِهِمُ ٱلۡأَنۡهَٰرُۖ وَقَالُواْ ٱلۡحَمۡدُ لِلَّهِ ٱلَّذِي هَدَىٰنَا لِهَٰذَا وَمَا كُنَّا لِنَهۡتَدِيَ لَوۡلَآ أَنۡ هَدَىٰنَا ٱللَّهُۖ لَقَدۡ جَآءَتۡ رُسُلُ رَبِّنَا بِٱلۡحَقِّۖ وَنُودُوٓاْ أَن تِلۡكُمُ ٱلۡجَنَّةُ أُورِثۡتُمُوهَا بِمَا كُنتُمۡ تَعۡمَلُونَ ٤٣

**44.** ಸ್ವರ್ಗವಾಸಿಗಳು ನರಕವಾಸಿಗಳನ್ನು ಕರೆದು 'ಓ ನಮ್ಮ ರಬ್! ನಮ್ಮೊಂದಿಗೆ ವಾಗ್ದಾನ ಮಾಡಿರುವುದು ಸತ್ಯವಾಗಿತ್ತೆಂದು ನಾವು ಕಂಡಿರುವೆವು. ನಿಮ್ಮ ರಬ್ (ನಿಮ್ಮೊಂದಿಗೆ) ವಾಗ್ದಾನ ಮಾಡಿರುವುದು ಸತ್ಯವಾಗಿತ್ತೆಂದು ನೀವು ಕಂಡಿರುವಿರಾ?' ಎಂದು ಕೇಳುವರು. ಅವರು ಹೇಳುವರು: 'ಹೌದು'. ಆಗ ಅವರ ಮಧ್ಯೆ ಉದ್ಘೋಷಕನೊಬ್ಬನು ಘೋಷಿಸುವನು: 'ಅಲ್ಲಾಹುವಿನ ಶಾಪವು ಅಕ್ರಮಿಗಳ ಮೇಲಿರಲಿ.

وَنَادَىٰٓ أَصۡحَٰبُ ٱلۡجَنَّةِ أَصۡحَٰبَ ٱلنَّارِ أَن قَدۡ وَجَدۡنَا مَا وَعَدَنَا رَبُّنَا حَقّٗا فَهَلۡ وَجَدتُّم مَّا وَعَدَ رَبُّكُمۡ حَقّٗاۖ قَالُواْ نَعَمۡۚ فَأَذَّنَ مُؤَذِّنُۢ بَيۡنَهُمۡ أَن لَّعۡنَةُ ٱللَّهِ عَلَى ٱلظَّٰلِمِينَ ٤٤

**45.** ಅಂದರೆ ಅಲ್ಲಾಹುವಿನ ಮಾರ್ಗದಿಂದ ತಡೆಯುವವರು, ಅದನ್ನು ವಕ್ರಗೊಳಿಸಲು ಬಯಸುವವರು ಮತ್ತು ಪರಲೋಕದಲ್ಲಿ ಅವಿಶ್ವಾಸವಿಡುವವರು ಯಾರೋ ಅವರ ಮೇಲಿರಲಿ'.

ٱلَّذِينَ يَصُدُّونَ عَن سَبِيلِ ٱللَّهِ وَيَبۡغُونَهَا عِوَجٗا وَهُم بِٱلۡأٓخِرَةِ كَٰفِرُونَ ٤٥

**46.** ಆ ಎರಡು ಪಂಗಡಗಳ ನಡುವೆ ಒಂದು ತಡೆಯಿದೆ. ಎತ್ತರದ ಸ್ಥಳಗಳಲ್ಲಿ ಕೆಲವು ಜನರಿರುವರು.[1] ಅವರು

وَبَيۡنَهُمَا حِجَابٞۚ وَعَلَى ٱلۡأَعۡرَافِ رِجَالٞ يَعۡرِفُونَ كُلَّۢا بِسِيمَىٰهُمۡۚ وَنَادَوۡاْ أَصۡحَٰبَ

1 ಸ್ವರ್ಗವಾಸಿಗಳ ಮತ್ತು ನರಕವಾಸಿಗಳ ಮಧ್ಯೆ ಒಂದು ತಡೆಗೋಡೆ ಎಂಬಂತಿರುವ ಸ್ಥಳವಿದ್ದು, ಅದರ ಎತ್ತರದ ಭಾಗವು ಅಲ್‌ಅಅ್‌ರಾಫ್ ಆಗಿದೆಯೆಂದು ಪ್ರಸ್ತುತ ಸೂಕ್ತಿಗಳಿಂದ ಗ್ರಹಿಸಬಹುದು. ಸ್ವರ್ಗವನ್ನು ನಿರೀಕ್ಷಿಸುತ್ತಿರುವ, ಆದರೆ ಇನ್ನೂ ಸ್ವರ್ಗವನ್ನು ಪ್ರವೇಶಿಸಿರದ ಅನೇಕ ಜನರು ಆ ಎತ್ತರದ ಸ್ಥಳಗಳಲ್ಲಿರುವರು.

ٱلْجَنَّةِ أَن سَلَٰمٌ عَلَيْكُمْ ۚ لَمْ يَدْخُلُوهَا وَهُمْ يَطْمَعُونَ ﴿٤٦﴾

ಪ್ರತಿಯೊಬ್ಬರನ್ನೂ[1] ಅವರ ಲಕ್ಷಣದ ಮೂಲಕ ಗುರುತಿಸುವರು. ಅವರು ಸ್ವರ್ಗವಾಸಿಗಳನ್ನು ಕರೆದು ಹೇಳುವರು: 'ನಿಮ್ಮ ಮೇಲೆ ಶಾಂತಿಯಿರಲಿ'. ಅವರು (ಎತ್ತರದ ಸ್ಥಳದಲ್ಲಿರುವವರು) ಅದನ್ನು (ಸ್ವರ್ಗವನ್ನು) ಪ್ರವೇಶಿಸಲು ಆಶಿಸುತ್ತಿದ್ದರೂ ಅದನ್ನು ಪ್ರವೇಶಿಸಿಲ್ಲ.

۞ وَإِذَا صُرِفَتْ أَبْصَٰرُهُمْ تِلْقَآءَ أَصْحَٰبِ ٱلنَّارِ قَالُوا۟ رَبَّنَا لَا تَجْعَلْنَا مَعَ ٱلْقَوْمِ ٱلظَّٰلِمِينَ ﴿٤٧﴾

**47.** ಅವರ ದೃಷ್ಟಿಗಳನ್ನು ನರಕವಾಸಿಗಳೆಡೆಗೆ ತಿರುಗಿಸಲಾದಾಗ ಅವರು ಹೇಳುವರು: 'ಓ ನಮ್ಮ ರಬ್! ನಮ್ಮನ್ನು ನೀನು ಅಕ್ರಮಿಗಳೊಂದಿಗೆ ಸೇರಿಸದಿರು'.

وَنَادَىٰٓ أَصْحَٰبُ ٱلْأَعْرَافِ رِجَالًا يَعْرِفُونَهُم بِسِيمَىٰهُمْ قَالُوا۟ مَآ أَغْنَىٰ عَنكُمْ جَمْعُكُمْ وَمَا كُنتُمْ تَسْتَكْبِرُونَ ﴿٤٨﴾

**48.** ಲಕ್ಷಣದ ಮೂಲಕ ತಮಗೆ ಗುರುತಿಸಬಹುದಾದ ಜನರನ್ನು ಕರೆದು ಎತ್ತರದ ಸ್ಥಳಗಳಲ್ಲಿರುವವರು ಹೇಳುವರು: 'ನೀವು ಸಂಗ್ರಹಿಸಿಟ್ಟಿರುವುದು ಮತ್ತು ನೀವು ಅಹಂಕಾರಪಟ್ಟಿರುವುದು ನಿಮಗೇನು ಪ್ರಯೋಜನವನ್ನು ನೀಡಿತು?'

أَهَٰٓؤُلَآءِ ٱلَّذِينَ أَقْسَمْتُمْ لَا يَنَالُهُمُ ٱللَّهُ بِرَحْمَةٍ ۚ ٱدْخُلُوا۟ ٱلْجَنَّةَ لَا خَوْفٌ عَلَيْكُمْ وَلَآ أَنتُمْ تَحْزَنُونَ ﴿٤٩﴾

**49.** ಅಲ್ಲಾಹು ಅವರಿಗೆ ತನ್ನ ಕರುಣೆಯಿಂದ ಏನನ್ನೂ ನೀಡಲಾರನು ಎಂದು ನೀವು ಆಣೆಯಿಟ್ಟು ಹೇಳಿದ್ದು ಈ ಜನರ ಕುರಿತೇ? ನೀವು ಸ್ವರ್ಗವನ್ನು ಪ್ರವೇಶಿಸಿರಿ. ನೀವು ಏನನ್ನೂ ಭಯಪಡಬೇಕಾಗಿಲ್ಲ. ನಿಮಗೆ ದುಃಖಿಸಬೇಕಾಗಿಯೂ ಬರದು (ಎಂದು ಈಗ ಹೇಳಲಾಗಿರುವುದು ಇವರೊಂದಿಗಾಗಿದೆ!)'

وَنَادَىٰٓ أَصْحَٰبُ ٱلنَّارِ أَصْحَٰبَ ٱلْجَنَّةِ أَنْ أَفِيضُوا۟ عَلَيْنَا مِنَ ٱلْمَآءِ أَوْ مِمَّا رَزَقَكُمُ ٱللَّهُ ۚ قَالُوٓا۟ إِنَّ ٱللَّهَ حَرَّمَهُمَا عَلَى ٱلْكَٰفِرِينَ ﴿٥٠﴾

**50.** ನರಕವಾಸಿಗಳು ಸ್ವರ್ಗವಾಸಿಗಳನ್ನು ಕರೆದು 'ನಮಗೆ ಸ್ವಲ್ಪ ನೀರನ್ನು ಅಥವಾ ಅಲ್ಲಾಹು ನಿಮಗೆ ನೀಡಿರುವ ಅನ್ನಾಧಾರಗಳ ಪೈಕಿ ಏನನ್ನಾದರೂ ಸುರಿದುಕೊಡಿರಿ' ಎಂದು ಹೇಳುವರು. ಅವರು ಹೇಳುವರು: 'ಖಂಡಿತವಾಗಿಯೂ ಅಲ್ಲಾಹು ಅವೆರಡನ್ನೂ ಸತ್ಯನಿಷೇಧಿಗಳಿಗೆ ನಿಷಿದ್ಧಗೊಳಿಸಿರುವನು'.

1 ಅಲ್‌ರಾಫ್‌ನಲ್ಲಿರುವವರು ಸ್ವರ್ಗವಾಸಿಗಳನ್ನು ಮತ್ತು ನರಕವಾಸಿಗಳನ್ನು ಗುರುತಿಸುವರು ಎಂದರ್ಥ.

51. (ಅಂದರೆ) ತಮ್ಮ ಧರ್ಮವನ್ನು ವಿನೋದವನ್ನಾಗಿಯೂ, ಮನೋರಂಜನೆಯನ್ನಾಗಿಯೂ ಮಾಡಿದವರು ಹಾಗೂ ಐಹಿಕ ಜೀವನವನ್ನು ಕಂಡು ಮರುಳಾದವರು ಯಾರೋ ಅವರಿಗೆ. ಅವರು ತಮ್ಮ ಈ ದಿನದ ಭೇಟಿಯನ್ನು ಹೇಗೆ ಮರೆತುಬಿಟ್ಟರೋ ಮತ್ತು ನಮ್ಮ ದೃಷ್ಟಾಂತಗಳನ್ನು ಹೇಗೆ ನಿಷೇಧಿಸಿದರೋ ಹಾಗೆಯೇ ಇಂದು ನಾವೂ ಅವರನ್ನು ಮರೆತುಬಿಡುವೆವು.

ٱلَّذِينَ ٱتَّخَذُواْ دِينَهُمْ لَهْوًا وَلَعِبًا وَغَرَّتْهُمُ ٱلْحَيَوٰةُ ٱلدُّنْيَا ۚ فَٱلْيَوْمَ نَنسَىٰهُمْ كَمَا نَسُواْ لِقَآءَ يَوْمِهِمْ هَٰذَا وَمَا كَانُواْ بِـَٔايَٰتِنَا يَجْحَدُونَ ﴿٥١﴾

52. ನಾವು ಜ್ಞಾನದ ಆಧಾರದಲ್ಲಿ ವಿಶದೀಕರಿಸಿದ ಒಂದು ಗ್ರಂಥವನ್ನು ಅವರಿಗಾಗಿ ತಂದಿರುವೆವು. ಅದು ವಿಶ್ವಾಸವಿಡುವ ಜನರಿಗೆ ಮಾರ್ಗದರ್ಶನವೂ ಕಾರುಣ್ಯವೂ ಆಗಿದೆ.

وَلَقَدْ جِئْنَٰهُم بِكِتَٰبٍ فَصَّلْنَٰهُ عَلَىٰ عِلْمٍ هُدًى وَرَحْمَةً لِّقَوْمٍ يُؤْمِنُونَ ﴿٥٢﴾

53. ಅದರಲ್ಲಿರುವ ವಿಷಯವು ಸತ್ಯವಾಗಿ ಪರಿಣಮಿಸುವುದನ್ನಲ್ಲದೆ ಅವರು ಇನ್ನೇನನ್ನು ಕಾಯುತ್ತಿರುವರು?[1] ಅದು ಸತ್ಯವಾಗಿ ಪರಿಣಮಿಸುವ ದಿನದಂದು ಅದಕ್ಕೆ ಮುಂಚೆ ಅದನ್ನು ಮರೆತುಬಿಟ್ಟವರು ಹೇಳುವರು: 'ಖಂಡಿತವಾಗಿಯೂ ನಮ್ಮ ರಬ್‌ನ ಸಂದೇಶವಾಹಕರು ಸತ್ಯದೊಂದಿಗೇ ಬಂದಿದ್ದರು. ಇನ್ನು ನಮಗಾಗಿ ಶಿಫಾರಸ್ಸು ಮಾಡುವ ಯಾರಾದರೂ ಶಿಫಾರಸ್ಸುಗಾರರು ಇರುವರೇ? ಅಥವಾ ನಾವು ಮುಂಚೆ ಮಾಡುತ್ತಿದ್ದಂತಹ ಕರ್ಮಗಳಲ್ಲದ ಬೇರೆಯೇ ಕರ್ಮಗಳನ್ನು ಮಾಡುವ ಸಲುವಾಗಿ ನಮ್ಮನ್ನು ಮರಳಿ ಕಳುಹಿಸಲಾಗುವುದೇ?' ಅವರು ಸ್ವತಃ ತಮ್ಮನ್ನೇ ನಷ್ಟಕ್ಕೊಳಗಾಗಿಸಿರುವರು. ಅವರು

هَلْ يَنظُرُونَ إِلَّا تَأْوِيلَهُۥ ۚ يَوْمَ يَأْتِى تَأْوِيلُهُۥ يَقُولُ ٱلَّذِينَ نَسُوهُ مِن قَبْلُ قَدْ جَآءَتْ رُسُلُ رَبِّنَا بِٱلْحَقِّ فَهَل لَّنَا مِن شُفَعَآءَ فَيَشْفَعُواْ لَنَآ أَوْ نُرَدُّ فَنَعْمَلَ غَيْرَ ٱلَّذِى كُنَّا نَعْمَلُ ۚ قَدْ خَسِرُوٓاْ أَنفُسَهُمْ وَضَلَّ عَنْهُم مَّا كَانُواْ يَفْتَرُونَ ﴿٥٣﴾

1 ದೈವಿಕ ಗ್ರಂಥಗಳಲ್ಲಿರುವ ವಿಷಯಗಳಲ್ಲಿ ಅತಿಪ್ರಮುಖವಾಗಿರುವುದು ಸ್ವರ್ಗದ ಬಗ್ಗೆಯಿರುವ ಶುಭವಾರ್ತೆ ಮತ್ತು ನರಕದ ಬಗ್ಗೆಯಿರುವ ಮುನ್ನೆಚ್ಚರಿಕೆಗಳಾಗಿವೆ. ಅವು ಸತ್ಯವಾಗಿ ಪರಿಣಮಿಸುವುದು ಪರಲೋಕದಲ್ಲಿ ವಿಚಾರಣೆ ನಡೆಯುವ ದಿನದಲ್ಲಾಗಿದೆ. ಅದನ್ನು ನೋಡಿ ಬಂದ ನಂತರ ವಿಶ್ವಾಸವಿಡೋಣವೆಂದು ಸತ್ಯನಿಷೇಧಿಗಳು ಕಾಯುತ್ತಿರುವರೇ? ಆದರೆ ಅಂದು ವಿಶ್ವಾಸವಿಡುವುದರಿಂದ ಯಾವುದೇ ಪ್ರಯೋಜನವಿರಲಾರದು. ಅಂದು ತಪ್ಪನ್ನು ತಿದ್ದಿಕೊಳ್ಳಲು ಯಾವುದೇ ಅವಕಾಶವೂ ಸಿಗಲಾರದು.

ಹೆಣೆಯುತ್ತಿದ್ದುದೆಲ್ಲವೂ ಅವರನ್ನು ತೊರೆದು ಹೋಗಿರುವುವು.

إِنَّ رَبَّكُمُ ٱللَّهُ ٱلَّذِى خَلَقَ ٱلسَّمَٰوَٰتِ وَٱلْأَرْضَ فِى سِتَّةِ أَيَّامٍ ثُمَّ ٱسْتَوَىٰ عَلَى ٱلْعَرْشِ يُغْشِى ٱلَّيْلَ ٱلنَّهَارَ يَطْلُبُهُۥ حَثِيثًا وَٱلشَّمْسَ وَٱلْقَمَرَ وَٱلنُّجُومَ مُسَخَّرَٰتٍۭ بِأَمْرِهِۦٓ أَلَا لَهُ ٱلْخَلْقُ وَٱلْأَمْرُ تَبَارَكَ ٱللَّهُ رَبُّ ٱلْعَٰلَمِينَ ﴿٥٤﴾

**54.** ಖಂಡಿತವಾಗಿಯೂ ಆರು ದಿನಗಳಲ್ಲಿ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದ ಅಲ್ಲಾಹುವಾಗಿರುವನು ನಿಮ್ಮ ರಬ್. ತರುವಾಯ ಅವನು ಸಿಂಹಾಸನಾರೂಢನಾದನು.(1) ಅವನು ಹಗಲನ್ನು ರಾತ್ರಿಯಿಂದ ಮುಚ್ಚುವನು. ಅದು ಕ್ಷಿಪ್ರಗತಿಯಲ್ಲಿ ಹಗಲನ್ನು ಹುಡುಕುತ್ತಾ ಸಾಗುವುದು. ತನ್ನ ಆಜ್ಞೆಗೆ ವಿಧೇಯಗೊಳಿಸಲಾದ ರೀತಿಯಲ್ಲಿ ಸೂರ್ಯ, ಚಂದ್ರ ಮತ್ತು ನಕ್ಷತ್ರಗಳನ್ನು (ಅವನು ಸೃಷ್ಟಿಸಿರುವನು). ತಿಳಿಯಿರಿ! ಸೃಷ್ಟಿ ಮತ್ತು ಆಜ್ಞಾಧಿಕಾರವು ಅವನಿಗೇ ಆಗಿವೆ.(2) ಸರ್ವ ಲೋಕಗಳ ರಬ್ಬಾದ ಅಲ್ಲಾಹು ಅನುಗ್ರಹಪೂರ್ಣನಾಗಿರುವನು.

ٱدْعُوا۟ رَبَّكُمْ تَضَرُّعًا وَخُفْيَةً إِنَّهُۥ لَا يُحِبُّ ٱلْمُعْتَدِينَ ﴿٥٥﴾

**55.** ನೀವು ನಿಮ್ಮ ರಬ್‌ನೊಂದಿಗೆ ವಿನಮ್ರತೆಯಿಂದಲೂ ರಹಸ್ಯವಾಗಿಯೂ ಪ್ರಾರ್ಥಿಸಿರಿ. ಹದ್ದುಮೀರುವವರನ್ನು ಖಂಡಿತವಾಗಿಯೂ ಅವನು ಮೆಚ್ಚಲಾರನು.

وَلَا تُفْسِدُوا۟ فِى ٱلْأَرْضِ بَعْدَ إِصْلَٰحِهَا وَٱدْعُوهُ خَوْفًا وَطَمَعًا إِنَّ رَحْمَتَ ٱللَّهِ قَرِيبٌ مِّنَ ٱلْمُحْسِنِينَ ﴿٥٦﴾

**56.** ಭೂಮಿಯಲ್ಲಿ ಸುಧಾರಣೆಯನ್ನುಂಟುಮಾಡಿದ ಬಳಿಕ ನೀವು ಅಲ್ಲಿ ಕ್ಷೋಭೆಯನ್ನುಂಟು ಮಾಡದಿರಿ. ಭಯದಿಂದಲೂ ನಿರೀಕ್ಷೆಯಿಂದಲೂ ನೀವು ಅವನೊಂದಿಗೆ ಪ್ರಾರ್ಥಿಸಿರಿ. ಖಂಡಿತವಾಗಿಯೂ ಅಲ್ಲಾಹುವಿನ ಕರುಣೆಯು ಸತ್ಕರ್ಮಿಗಳಿಗೆ ಅತಿನಿಕಟವಾಗಿದೆ.

1 ಅಲ್ಲಾಹು ಸಿಂಹಾಸನಾರೂಢನಾದನು ಅಥವಾ ಸಿಂಹಾಸನಾರೋಹಣ ಮಾಡಿದನು ಎಂದು ಕುರ್‌ಆನಿನ ಹಲವಾರು ಕಡೆ ಪ್ರಸ್ತಾಪಿಸಲಾಗಿದೆ. ಸಿಂಹಾಸನವು ಹೇಗಿದೆಯೆಂದು ಮತ್ತು ಆರೋಹಣವು ಯಾವ ವಿಧಾನದಲ್ಲಾಗಿದೆಯೆಂದು ಅಲ್ಲಾಹು ತಿಳಿಸಿಕೊಟ್ಟಿಲ್ಲ. ನಮ್ಮ ಅರಿವಿನ ವ್ಯಾಪ್ತಿಗೆ ಹೊರತಾಗಿರುವ ಅಗೋಚರ ವಿಷಯಗಳ ಬಗ್ಗೆ ನಮ್ಮ ವತಿಯ ವ್ಯಾಖ್ಯಾನಗಳಿಗೆ ಅಥವಾ ವಿಶದೀಕರಣಗಳಿಗೆ ಯಾವುದೇ ಪ್ರಸಕ್ತಿಯಿಲ್ಲ.

2 ಪ್ರಪಂಚದಲ್ಲಿರುವ ಸೂಕ್ಷ್ಮವಾದ ಮತ್ತು ಸ್ಥೂಲವಾದ ಪ್ರತಿಯೊಂದನ್ನೂ ಸೃಷ್ಟಿಸಿರುವುದು ಅಲ್ಲಾಹು ಮಾತ್ರವಾಗಿರುವನು. ಅವು ಹೇಗೆ ಕಾರ್ಯನಿರ್ವಹಿಸಬೇಕೆಂದು ತೀರ್ಮಾನಿಸುವ ಅಧಿಕಾರವು ಅವನಿಗೆ ಮಾತ್ರವಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯವಿರುವ ಮನುಷ್ಯನಿಗೂ, ಸರ್ವ ಚರಾಚರಗಳಿಗೂ ಇದು ಬಾಧಕವಾಗಿದೆ. ಆದರೆ ಅಲ್ಲಾಹುವಿನ ಆಜ್ಞಾಧಿಕಾರಕ್ಕೆ ವಿಧೇಯನಾಗಿ ತನ್ನ ಪಾತ್ರವನ್ನು ನಿಶ್ಚಯಿಸುವ ಹಕ್ಕು ಮನುಷ್ಯನಿಗಿದೆ.

وَهُوَ ٱلَّذِى يُرۡسِلُ ٱلرِّيَـٰحَ بُشۡرَۢا بَيۡنَ يَدَىۡ رَحۡمَتِهِۦۖ حَتَّىٰٓ إِذَآ أَقَلَّتۡ سَحَابًا ثِقَالًا سُقۡنَـٰهُ لِبَلَدٍ مَّيِّتٍ فَأَنزَلۡنَا بِهِ ٱلۡمَآءَ فَأَخۡرَجۡنَا بِهِۦ مِن كُلِّ ٱلثَّمَرَٰتِۚ كَذَٰلِكَ نُخۡرِجُ ٱلۡمَوۡتَىٰ لَعَلَّكُمۡ تَذَكَّرُونَ ٥٧

57. ತನ್ನ ಅನುಗ್ರಹಕ್ಕೆ (ಮಳೆಗೆ) ಮುಂಚಿತವಾಗಿ ಶುಭವಾರ್ತೆಯನ್ನು ತಿಳಿಸುತ್ತಾ ಮಾರುತಗಳನ್ನು ಕಳುಹಿಸುವವನು ಅವನಾಗಿರುವನು. ಕೊನೆಗೆ ಅವು (ಮಾರುತಗಳು) ಭಾರವಾದ ಮೋಡಗಳನ್ನು ಹೊತ್ತುಕೊಂಡಾಗ ನಾವದನ್ನು ನಿರ್ಜೀವವಾಗಿರುವ ಪ್ರದೇಶದೆಡೆಗೆ ಸಾಗಿಸುವೆವು. ತರುವಾಯ ಅಲ್ಲಿ ನಾವು ನೀರನ್ನು ಸುರಿಸುವೆವು ಮತ್ತು ತನ್ಮೂಲಕ ವಿಧದ ಬೆಳೆಗಳನ್ನು ಹೊರತರುವೆವು. ಹೀಗೆಯೇ ನಾವು ಮರಣಹೊಂದಿದವರನ್ನೂ ಹೊರತರುವೆವು. ನೀವು ಗಮನವಿಟ್ಟು ಗ್ರಹಿಸಲೂ ಬಹುದು.

وَٱلۡبَلَدُ ٱلطَّيِّبُ يَخۡرُجُ نَبَاتُهُۥ بِإِذۡنِ رَبِّهِۦۖ وَٱلَّذِى خَبُثَ لَا يَخۡرُجُ إِلَّا نَكِدًاۚ كَذَٰلِكَ نُصَرِّفُ ٱلۡأٓيَـٰتِ لِقَوۡمٍ يَشۡكُرُونَ ٥٨

58. ಉತ್ತಮವಾದ ಭೂ ಪ್ರದೇಶ; ಅದರ ಸಸ್ಯಗಳು ಅದರ ರಬ್‌ನ ಅನುಮತಿಯೊಂದಿಗೆ ಉತ್ತಮವಾಗಿ ಬೆಳೆಯುತ್ತವೆ. ಆದರೆ ಕೆಟ್ಟ ಪ್ರದೇಶದಲ್ಲಿ ಶುಷ್ಕವಾಗಿಯಲ್ಲದೆ ಸಸ್ಯಗಳು ಬೆಳೆಯಲಾರವು. ಕೃತಜ್ಞತೆ ಸಲ್ಲಿಸುವ ಜನರಿಗೆ ನಾವು ಹೀಗೆ ದೃಷ್ಟಾಂತಗಳನ್ನು ವಿವಿಧ ರೀತಿಯಲ್ಲಿ ವಿವರಿಸಿ ಕೊಡುವೆವು.

لَقَدۡ أَرۡسَلۡنَا نُوحًا إِلَىٰ قَوۡمِهِۦ فَقَالَ يَـٰقَوۡمِ ٱعۡبُدُواْ ٱللَّهَ مَا لَكُم مِّنۡ إِلَـٰهٍ غَيۡرُهُۥٓ إِنِّىٓ أَخَافُ عَلَيۡكُمۡ عَذَابَ يَوۡمٍ عَظِيمٍ ٥٩

59. ಖಂಡಿತವಾಗಿಯೂ ನಾವು ನೂಹ್‌ರನ್ನು ಅವರ ಜನತೆಯೆಡೆಗೆ ಕಳುಹಿಸಿದೆವು. ಅವರು ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯರಿಲ್ಲ. ಭಯಾನಕವಾದ ದಿನವೊಂದರ ಶಿಕ್ಷೆಯನ್ನು ಖಂಡಿತವಾಗಿಯೂ ನಾನು ನಿಮ್ಮ ಮೇಲೆ ಭಯಪಡುತ್ತಿರುವೆನು'.

قَالَ ٱلۡمَلَأُ مِن قَوۡمِهِۦٓ إِنَّا لَنَرَىٰكَ فِى ضَلَـٰلٍ مُّبِينٍ ٦٠

60. ಅವರ ಜನತೆಯ ಪೈಕಿ ಪ್ರಮುಖರು ಹೇಳಿದರು: 'ಖಂಡಿತವಾಗಿಯೂ ನಾವು ನಿನ್ನನ್ನು ಸ್ಪಷ್ಟವಾದ ದುರ್ಮಾರ್ಗದಲ್ಲಿರುವುದಾಗಿ ಕಾಣುತ್ತಿರುವೆವು'.

قَالَ يَـٰقَوۡمِ لَيۡسَ بِى ضَلَـٰلَةٌ وَلَـٰكِنِّى رَسُولٌ مِّن رَّبِّ ٱلۡعَـٰلَمِينَ ٦١

61. ನೂಹ್ ಹೇಳಿದರು: 'ಓ ನನ್ನ ಜನರೇ! ನನ್ನಲ್ಲಿ ಯಾವ ದುರ್ಮಾರ್ಗವೂ ಇಲ್ಲ. ಆದರೆ ನಾನು ಸರ್ವಲೋಕಗಳ ರಬ್‌ನ ಕಡೆಯ ಸಂದೇಶವಾಹಕನಾಗಿರುವೆನು.

**62.** ನನ್ನ ರಬ್‌ನ ಸಂದೇಶಗಳನ್ನು ನಾನು ನಿಮಗೆ ತಲುಪಿಸುತ್ತಿರುವೆನು ಮತ್ತು ನಿಮ್ಮೊಂದಿಗೆ ಪ್ರಾಮಾಣಿಕವಾಗಿ ಉಪದೇಶಿಸುತ್ತಿರುವೆನು. ನೀವು ಅರಿಯದಿರುವ ಅನೇಕ ವಿಷಯಗಳನ್ನು ಅಲ್ಲಾಹುವಿನಿಂದ ನಾನು ಅರಿಯುತ್ತಿರುವೆನು.

أُبَلِّغُكُمْ رِسَٰلَٰتِ رَبِّى وَأَنصَحُ لَكُمْ
وَأَعْلَمُ مِنَ ٱللَّهِ مَا لَا تَعْلَمُونَ ﴿٦٢﴾

**63.** ನಿಮಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿಯೂ, ತನ್ಮೂಲಕ ನೀವು ಭಯಭಕ್ತಿ ಪಾಲಿಸುವುದಕ್ಕಾಗಿಯೂ ಮತ್ತು ನಿಮಗೆ ಕಾರುಣ್ಯವು ದೊರೆಯುವುದಕ್ಕಾಗಿಯೂ ನಿಮ್ಮ ಪೈಕಿ ಓರ್ವ ಪುರುಷನ ಮೂಲಕ ನಿಮ್ಮ ರಬ್‌ನ ವತಿಯ ಒಂದು ಉಪದೇಶವು ನಿಮ್ಮೆಡೆಗೆ ಬಂದಿರುವುದರಲ್ಲಿ ನೀವು ಅಚ್ಚರಿಪಡುತ್ತಿರುವಿರಾ?'

أَوَعَجِبْتُمْ أَن جَآءَكُمْ ذِكْرٌ مِّن رَّبِّكُمْ
عَلَىٰ رَجُلٍ مِّنكُمْ لِيُنذِرَكُمْ وَلِتَتَّقُوا۟
وَلَعَلَّكُمْ تُرْحَمُونَ ﴿٦٣﴾

**64.** ಆದರೆ ಅವರು ನೂಹ್‌ರನ್ನು ನಿಷೇಧಿಸಿದರು. ಆಗ ನಾವು ಅವರನ್ನು ಮತ್ತು ಅವನ ಜೊತೆಗಿದ್ದವರನ್ನು ಹಡಗಿನಲ್ಲಿ ರಕ್ಷಿಸಿದೆವು. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರನ್ನು ನಾವು ಮುಳುಗಿಸಿದೆವು. ಖಂಡಿತವಾಗಿಯೂ ಅವರು ಅಂಧರಾಗಿರುವ ಒಂದು ಜನತೆಯಾಗಿದ್ದರು.

فَكَذَّبُوهُ فَأَنجَيْنَٰهُ وَٱلَّذِينَ مَعَهُۥ فِى ٱلْفُلْكِ
وَأَغْرَقْنَا ٱلَّذِينَ كَذَّبُوا۟ بِـَٔايَٰتِنَآ ۚ إِنَّهُمْ كَانُوا۟
قَوْمًا عَمِينَ ﴿٦٤﴾

**65.** ಆದ್ ಸಮುದಾಯದೆಡೆಗೆ ಅವರ ಸಹೋದರ ಹೂದ್‌ರನ್ನು (ಕಳುಹಿಸಿದೆವು). ಹೂದ್ ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯರಿಲ್ಲ. ನೀವು ಭಯಭಕ್ತಿ ಪಾಲಿಸಲಾರಿರೇ?'

۞ وَإِلَىٰ عَادٍ أَخَاهُمْ هُودًا ۗ قَالَ يَٰقَوْمِ
ٱعْبُدُوا۟ ٱللَّهَ مَا لَكُم مِّنْ إِلَٰهٍ غَيْرُهُۥٓ ۚ
أَفَلَا تَتَّقُونَ ﴿٦٥﴾

**66.** ಅವರ ಜನತೆಯಲ್ಲಿದ್ದ ಸತ್ಯನಿಷೇಧಿಗಳಾದ ಪ್ರಮುಖರು ಹೇಳಿದರು: 'ಖಂಡಿತವಾಗಿಯೂ ನಾವು ನಿನ್ನನ್ನು ಯಾವುದೋ ಅವಿವೇಕತನದಲ್ಲಿರುವುದಾಗಿ ಕಾಣುತ್ತಿರುವೆವು. ಖಂಡಿತವಾಗಿಯೂ ನೀನು ಸುಳ್ಳುನುಡಿಯುವವರಲ್ಲಿ ಸೇರಿದವನಾಗಿರುವೆ ಎಂದು ನಾವು ಭಾವಿಸುತ್ತಿರುವೆವು'.

قَالَ ٱلْمَلَأُ ٱلَّذِينَ كَفَرُوا۟ مِن قَوْمِهِۦٓ
إِنَّا لَنَرَىٰكَ فِى سَفَاهَةٍ وَإِنَّا لَنَظُنُّكَ مِنَ
ٱلْكَٰذِبِينَ ﴿٦٦﴾

67. ಆತ (ಹೂದ್) ಹೇಳಿದರು: 'ಓ ನನ್ನ ಜನರೇ! ನನ್ನಲ್ಲಿ ಯಾವ ಅವಿವೇಕತನವೂ ಇಲ್ಲ. ಆದರೆ ನಾನು ಸರ್ವಲೋಕಗಳ ರಬ್‌ನ ವತಿಯ ಓರ್ವ ಸಂದೇಶವಾಹಕನಾಗಿರುವೆನು.

قَالَ يَٰقَوۡمِ لَيۡسَ بِي سَفَاهَةٞ وَلَٰكِنِّي رَسُولٞ مِّن رَّبِّ ٱلۡعَٰلَمِينَ ٦٧

68. ನನ್ನ ರಬ್‌ನ ಸಂದೇಶಗಳನ್ನು ನಾನು ನಿಮಗೆ ತಲುಪಿಸುತ್ತಿರುವೆನು. ಖಂಡಿತವಾಗಿಯೂ ನಾನು ನಿಮ್ಮ ಪ್ರಾಮಾಣಿಕ ಹಿತಾಕಾಂಕ್ಷಿಯಾಗಿರುವೆನು.

أُبَلِّغُكُمۡ رِسَٰلَٰتِ رَبِّي وَأَنَا۠ لَكُمۡ نَاصِحٌ أَمِينٌ ٦٨

69. ನಿಮಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿ ನಿಮ್ಮ ಪೈಕಿ ಓರ್ವ ಪುರುಷನ ಮೂಲಕ ನಿಮ್ಮ ರಬ್‌ನ ವತಿಯ ಒಂದು ಉಪದೇಶವು ನಿಮ್ಮೆಡೆಗೆ ಬಂದಿರುವುದರಲ್ಲಿ ನೀವು ಅಚ್ಚರಿಪಡುತ್ತಿರುವಿರಾ? ನೂಹ್‌ರ ಜನತೆಯ ಬಳಿಕ ಅವನು (ಅಲ್ಲಾಹು) ನಿಮ್ಮನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿರುವುದನ್ನು ಸ್ಮರಿಸಿರಿ. ಸೃಷ್ಟಿಯಲ್ಲಿ ನಿಮಗೆ (ದೈಹಿಕ) ವಿಕಾಸವನ್ನು ಅಧಿಕಗೊಳಿಸಿರುವುದನ್ನು ಸ್ಮರಿಸಿರಿ.[1] ಅಲ್ಲಾಹುವಿನ ಅನುಗ್ರಹಗಳನ್ನೂ ಸ್ಮರಿಸಿರಿ. ನೀವು ಯಶಸ್ಸುಗಳಿಸಲೂ ಬಹುದು'.

أَوَعَجِبۡتُمۡ أَن جَآءَكُمۡ ذِكۡرٞ مِّن رَّبِّكُمۡ عَلَىٰ رَجُلٖ مِّنكُمۡ لِيُنذِرَكُمۡۚ وَٱذۡكُرُوٓاْ إِذۡ جَعَلَكُمۡ خُلَفَآءَ مِنۢ بَعۡدِ قَوۡمِ نُوحٖ وَزَادَكُمۡ فِي ٱلۡخَلۡقِ بَصۜۡطَةٗۖ فَٱذۡكُرُوٓاْ ءَالَآءَ ٱللَّهِ لَعَلَّكُمۡ تُفۡلِحُونَ ٦٩

70. ಅವರು ಹೇಳಿದರು: 'ನಾವು ಅಲ್ಲಾಹುವನ್ನು ಮಾತ್ರ ಆರಾಧಿಸಲಿಕ್ಕಾಗಿ ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಾ ಬಂದಿರುವುದನ್ನು ವರ್ಜಿಸಲಿಕ್ಕಾಗಿ ನೀನು ನಮ್ಮ ಬಳಿಗೆ ಬಂದಿರುವೆಯಾ? ಹಾಗಿದ್ದರೆ ನೀನು ನಮಗೆ ಬೆದರಿಕೆ ನೀಡುತ್ತಿರುವುದನ್ನು (ಶಿಕ್ಷೆಯನ್ನು) ನಮಗೆ ತಂದುಕೊಡು. ನೀನು ಸತ್ಯಸಂಧರ ಪೈಕಿ ಸೇರಿದವನಾಗಿದ್ದರೆ'.

قَالُوٓاْ أَجِئۡتَنَا لِنَعۡبُدَ ٱللَّهَ وَحۡدَهُۥ وَنَذَرَ مَا كَانَ يَعۡبُدُ ءَابَآؤُنَا فَأۡتِنَا بِمَا تَعِدُنَآ إِن كُنتَ مِنَ ٱلصَّٰدِقِينَ ٧٠

71. ಹೂದ್ ಹೇಳಿದರು: 'ಖಂಡಿತವಾಗಿಯೂ ನಿಮ್ಮ ರಬ್‌ನ ಕಡೆಯ ಶಿಕ್ಷೆ ಮತ್ತು ಕ್ರೋಧವು ಈಗಾಗಲೇ ನಿಮ್ಮ ಮೇಲೆರಗಿದೆ. ನೀವು ಮತ್ತು ನಿಮ್ಮ ಪೂರ್ವಿಕರು ನಾಮಕರಣ ಮಾಡಿರುವ

قَالَ قَدۡ وَقَعَ عَلَيۡكُم مِّن رَّبِّكُمۡ رِجۡسٞ وَغَضَبٌۖ أَتُجَٰدِلُونَنِي فِيٓ أَسۡمَآءٖ سَمَّيۡتُمُوهَآ أَنتُمۡ وَءَابَآؤُكُم مَّا نَزَّلَ ٱللَّهُ

1 ಅವರು ದೈಹಿಕ ಪುಷ್ಟಿ ಮತ್ತು ಆಜಾನುಬಾಹು ಶರೀರದ ನಿಮಿತ್ತ ಅನುಗ್ರಹೀತರಾಗಿದ್ದರು ಎಂದರ್ಥ.

بِهَا مِن سُلْطَٰنٍۚ فَٱنتَظِرُوٓاْ إِنِّي مَعَكُم مِّنَ ٱلْمُنتَظِرِينَ ٧١

ಕೆಲವು (ದೇವ)ನಾಮಗಳ ನಿಮಿತ್ತ ನೀವು ನನ್ನೊಂದಿಗೆ ತರ್ಕಿಸುತ್ತಿರುವಿರಾ? ಅಲ್ಲಾಹು ಅದಕ್ಕೆ ಯಾವುದೇ ಆಧಾರಪ್ರಮಾಣವನ್ನೂ ಇಳಿಸಿಲ್ಲ. ಆದ್ದರಿಂದ ನೀವು ಕಾಯುತ್ತಿರಿ. ಖಂಡಿತವಾಗಿಯೂ ನಾನೂ ನಿಮ್ಮೊಂದಿಗೆ ಕಾಯುತ್ತಿರುವೆನು'.

فَأَنجَيْنَٰهُ وَٱلَّذِينَ مَعَهُۥ بِرَحْمَةٍ مِّنَّا وَقَطَعْنَا دَابِرَ ٱلَّذِينَ كَذَّبُواْ بِـَٔايَٰتِنَاۖ وَمَا كَانُواْ مُؤْمِنِينَ ٧٢

72. ತರುವಾಯ ಅವರನ್ನೂ, ಅವರ ಜೊತೆಗಿದ್ದವರನ್ನೂ ನಮ್ಮ ಕಾರುಣ್ಯದಿಂದಾಗಿ ನಾವು ರಕ್ಷಿಸಿದೆವು. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರನ್ನು ನಾವು ನಾಮಾವಶೇಷ ಮಾಡಿದೆವು.[1] ಅವರು ವಿಶ್ವಾಸವಿಡುವವರಾಗಿರಲಿಲ್ಲ.

وَإِلَىٰ ثَمُودَ أَخَاهُمْ صَٰلِحًاۗ قَالَ يَٰقَوْمِ ٱعْبُدُواْ ٱللَّهَ مَا لَكُم مِّنْ إِلَٰهٍ غَيْرُهُۥۖ قَدْ جَآءَتْكُم بَيِّنَةٌ مِّن رَّبِّكُمْۖ هَٰذِهِۦ نَاقَةُ ٱللَّهِ لَكُمْ ءَايَةًۖ فَذَرُوهَا تَأْكُلْ فِيٓ أَرْضِ ٱللَّهِۖ وَلَا تَمَسُّوهَا بِسُوٓءٍ فَيَأْخُذَكُمْ عَذَابٌ أَلِيمٌ ٧٣

73. ಸಮೂದ್ ಜನಾಂಗದೆಡೆಗೆ ಅವರ ಸಹೋದರ ಸಾಲಿಹ್‌ರನ್ನು (ನಾವು ಕಳುಹಿಸಿದೆವು). ಅವರು ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯರಿಲ್ಲ. ನಿಮ್ಮ ರಬ್‌ನ ವತಿಯಿಂದ ನಿಮ್ಮೆಡೆಗೆ ಸ್ಪಷ್ಟವಾದ ಒಂದು ಪುರಾವೆಯು ಬಂದಿದೆ. ಇದು ನಿಮಗೆ ದೃಷ್ಟಾಂತವಾಗಿರುವ ಅಲ್ಲಾಹುವಿನ ಒಂಟೆಯಾಗಿದೆ. ಆದ್ದರಿಂದ ನೀವದನ್ನು ಬಿಟ್ಟುಬಿಡಿರಿ. ಅದು ಅಲ್ಲಾಹುವಿನ ಭೂಮಿಯಲ್ಲಿ (ಮೇಯ್ದು) ತಿನ್ನಲಿ. ಅದಕ್ಕೆ ಯಾವ ಹಾನಿಯನ್ನೂ ಮಾಡದಿರಿ. ಹಾಗೇನಾದರೂ ಮಾಡಿದರೆ ಯಾತನಾಮಯ ಶಿಕ್ಷೆಯು ನಿಮ್ಮನ್ನು ಹಿಡಿದುಕೊಳ್ಳುವುದು.

وَٱذْكُرُوٓاْ إِذْ جَعَلَكُمْ خُلَفَآءَ مِنۢ بَعْدِ عَادٍ وَبَوَّأَكُمْ فِي ٱلْأَرْضِ تَتَّخِذُونَ مِن سُهُولِهَا قُصُورًا وَتَنْحِتُونَ ٱلْجِبَالَ بُيُوتًاۖ

74. ಆದ್ ಸಮುದಾಯದ ಬಳಿಕ ಅವನು ನಿಮ್ಮನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿರುವುದನ್ನು ಸ್ಮರಿಸಿರಿ. ನಿಮಗೆ ಭೂಮಿಯಲ್ಲಿ ವಾಸಸ್ಥಳ ಮಾಡಿಕೊಟ್ಟಿರುವುದನ್ನು ಸ್ಮರಿಸಿರಿ. ಅದರ (ಭೂಮಿಯ) ಸಮತಟ್ಟು ಪ್ರದೇಶಗಳಲ್ಲಿ ನೀವು

1 ಅವರ ಮೇಲೆರಗಿದ ಶಿಕ್ಷೆಯು ಜನರನ್ನು ನೆಲದಿಂದ ಎತ್ತಿ ಎಸೆಯುವ ಒಂದು ಭೀಕರ ಬಿರುಗಾಳಿಯಾಗಿತ್ತು.

ಸೌಧಗಳನ್ನು ನಿರ್ಮಿಸುತ್ತಿರುವಿರಿ ಮತ್ತು ಪರ್ವತಗಳನ್ನು ಕೊರೆದು ಮನೆಗಳನ್ನು ನಿರ್ಮಿಸುತ್ತಿರುವಿರಿ. ಆದ್ದರಿಂದ ನೀವು ಅಲ್ಲಾಹುವಿನ ಅನುಗ್ರಹಗಳನ್ನು ಸ್ಮರಿಸಿರಿ. ವಿನಾಶಕಾರಿಗಳಾಗಿರುತ್ತಾ ಭೂಮಿಯಲ್ಲಿ ಕ್ಷೋಭೆಯುಂಟು ಮಾಡದಿರಿ'.

فَٱذۡكُرُوٓاْ ءَالَآءَ ٱللَّهِ وَلَا تَعۡثَوۡاْ فِي ٱلۡأَرۡضِ مُفۡسِدِينَ ٧٤

75. ಅವನ ಜನತೆಯಲ್ಲಿ ಸೇರಿದ ಅಹಂಕಾರಿಗಳಾದ ಪ್ರಮುಖರು ಬಲಹೀನರೆಂದು ಪರಿಗಣಿಸಲಾಗಿರುವವರೊಂದಿಗೆ (ಅಂದರೆ) ಅವರ ಪೈಕಿ ಸತ್ಯವಿಶ್ವಾಸವಿಟ್ಟವರೊಂದಿಗೆ ಹೇಳಿದರು: 'ಸ್ವಾಲಿಹ್ ತನ್ನ ರಬ್‌ನ ವತಿಯಿಂದ ಕಳುಹಿಸಲ್ಪಟ್ಟವರಾಗಿರುವರೆಂದು ನಿಮಗೆ ತಿಳಿದಿದೆಯೇ?' ಅವರು ಹೇಳಿದರು: 'ಆತ (ಸ್ವಾಲಿಹ್) ಯಾವುದರೊಂದಿಗೆ ಕಳುಹಿಸಲಾಗಿರುವರೋ ಅದರಲ್ಲಿ ನಾವು ಖಂಡಿತವಾಗಿಯೂ ವಿಶ್ವಾಸವಿಟ್ಟವರಾಗಿರುವೆವು'.

قَالَ ٱلۡمَلَأُ ٱلَّذِينَ ٱسۡتَكۡبَرُواْ مِن قَوۡمِهِۦ لِلَّذِينَ ٱسۡتُضۡعِفُواْ لِمَنۡ ءَامَنَ مِنۡهُمۡ أَتَعۡلَمُونَ أَنَّ صَٰلِحٗا مُّرۡسَلٞ مِّن رَّبِّهِۦۚ قَالُوٓاْ إِنَّا بِمَآ أُرۡسِلَ بِهِۦ مُؤۡمِنُونَ ٧٥

76. ಅಹಂಕಾರಿಗಳು ಹೇಳಿದರು: 'ನೀವು ಯಾವುದರಲ್ಲಿ ವಿಶ್ವಾಸವಿಟ್ಟಿರುವಿರೋ ಅದನ್ನು ನಾವು ಸಂಪೂರ್ಣವಾಗಿ ನಿಷೇಧಿಸಿದವರಾಗಿರುವೆವು'.

قَالَ ٱلَّذِينَ ٱسۡتَكۡبَرُوٓاْ إِنَّا بِٱلَّذِيٓ ءَامَنتُم بِهِۦ كَٰفِرُونَ ٧٦

77. ಕೊನೆಗೆ ಅವರು ಆ ಒಂಟೆಯನ್ನು ಕೊಂದು ತಮ್ಮ ರಬ್‌ನ ಆಜ್ಞೆಯನ್ನು ಧಿಕ್ಕರಿಸಿದರು. ಅವರು ಹೇಳಿದರು: 'ಓ ಸಾಲಿಹ್! ನೀನು ಸಂದೇಶವಾಹಕರಲ್ಲಿ ಸೇರಿದವನಾಗಿದ್ದರೆ ನಮಗೆ ಬೆದರಿಕೆ ನೀಡುತ್ತಿದ್ದುದನ್ನು (ಶಿಕ್ಷೆಯನ್ನು) ನಮಗೆ ತಂದುಕೊಡು'.

فَعَقَرُواْ ٱلنَّاقَةَ وَعَتَوۡاْ عَنۡ أَمۡرِ رَبِّهِمۡ وَقَالُواْ يَٰصَٰلِحُ ٱئۡتِنَا بِمَا تَعِدُنَآ إِن كُنتَ مِنَ ٱلۡمُرۡسَلِينَ ٧٧

78. ಆಗ ಭೂಕಂಪವು ಅವರನ್ನು ಹಿಡಿಯಿತು. ಬೆಳಗಾದಾಗ ಅವರು ತಮ್ಮ ಮನೆಗಳಲ್ಲಿ ಅಧೋಮುಖಿಗಳಾಗಿ ಬಿದ್ದಿದ್ದರು.

فَأَخَذَتۡهُمُ ٱلرَّجۡفَةُ فَأَصۡبَحُواْ فِي دَارِهِمۡ جَٰثِمِينَ ٧٨

79. ತರುವಾಯ ಸಾಲಿಹ್ ಅವರಿಂದ ವಿಮುಖರಾದರು. ಅವರು ಹೇಳಿದರು: 'ಓ ನನ್ನ ಜನರೇ! ಖಂಡಿತವಾಗಿಯೂ ನಾನು ನನ್ನ ರಬ್‌ನ ಸಂದೇಶವನ್ನು ನಿಮಗೆ ತಲುಪಿಸಿರುವೆನು ಮತ್ತು ನಿಮಗೆ ಪ್ರಾಮಾಣಿಕವಾಗಿ ಉಪದೇಶ ನೀಡಿರುವೆನು. ಆದರೆ ನೀವು ಉಪದೇಶ ನೀಡುವವರನ್ನು ಇಷ್ಟಪಡುವವರಾಗಿರಲಿಲ್ಲ.'

فَتَوَلَّىٰ عَنۡهُمۡ وَقَالَ يَٰقَوۡمِ لَقَدۡ أَبۡلَغۡتُكُمۡ رِسَالَةَ رَبِّي وَنَصَحۡتُ لَكُمۡ وَلَٰكِن لَّا تُحِبُّونَ ٱلنَّٰصِحِينَ ٧٩

80. ಲೂತ್‌ರನ್ನು ಕೂಡ (ನಾವು ಕಳುಹಿಸಿರುವೆವು). ಅವರು ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ): 'ನಿಮಗಿಂತ ಮುನ್ನ ಜಗತ್ತಿನಲ್ಲಿರುವವರ ಪೈಕಿ ಯಾರೂ ಮಾಡಿರದಂತಹ ನೀಚಕೃತ್ಯವನ್ನು ನೀವು ಮಾಡುವುದೇ?

وَلُوطًا إِذۡ قَالَ لِقَوۡمِهِۦٓ أَتَأۡتُونَ ٱلۡفَٰحِشَةَ مَا سَبَقَكُم بِهَا مِنۡ أَحَدٖ مِّنَ ٱلۡعَٰلَمِينَ ٨٠

81. ನೀವು ಲೈಂಗಿಕಾಸಕ್ತಿಯೊಂದಿಗೆ ಸ್ತ್ರೀಯರನ್ನು ಬಿಟ್ಟು ಪುರುಷರೆಡೆಗೆ ಹೋಗುತ್ತಿರುವಿರಿ. ನೀವು ಹದ್ದುಮೀರಿ ವರ್ತಿಸುವ ಒಂದು ಜನತೆಯಾಗಿರುವಿರಿ.'

إِنَّكُمۡ لَتَأۡتُونَ ٱلرِّجَالَ شَهۡوَةٗ مِّن دُونِ ٱلنِّسَآءِۚ بَلۡ أَنتُمۡ قَوۡمٞ مُّسۡرِفُونَ ٨١

82. 'ಇವರನ್ನು ನಿಮ್ಮ ಊರಿನಿಂದ ಹೊರಗಟ್ಟಿರಿ. ಇವರು ಪರಿಶುದ್ಧಿಯನ್ನು ಪಾಲಿಸುವ ಜನರಾಗಿರುವರು'[1] ಎಂದು ಹೇಳುವುದಲ್ಲದೆ ಅವರ ಜನತೆಯ ಉತ್ತರವು ಬೇರೇನೂ ಆಗಿರಲಿಲ್ಲ.

وَمَا كَانَ جَوَابَ قَوۡمِهِۦٓ إِلَّآ أَن قَالُوٓاْ أَخۡرِجُوهُم مِّن قَرۡيَتِكُمۡۖ إِنَّهُمۡ أُنَاسٞ يَتَطَهَّرُونَ ٨٢

83. ತರುವಾಯ ನಾವು ಆತನನ್ನು ಮತ್ತು ಆತನ ಕುಟುಂಬವನ್ನು ರಕ್ಷಿಸಿದೆವು; ಆತನ ಪತ್ನಿಯ ಹೊರತು. ಆಕೆ ಹಿಂದೆ ಉಳಿದವರಲ್ಲಿ ಸೇರಿದವಳಾಗಿದ್ದಳು.

فَأَنجَيۡنَٰهُ وَأَهۡلَهُۥٓ إِلَّا ٱمۡرَأَتَهُۥ كَانَتۡ مِنَ ٱلۡغَٰبِرِينَ ٨٣

84. ನಾವು ಅವರ ಮೇಲೆ ಒಂದು ತರದ ಮಳೆಯನ್ನು ಸುರಿಸಿದೆವು.[2] ಆಗ ಆ ಅಕ್ರಮಿಗಳ ಪರ್ಯಾವಸಾನವು ಹೇಗಿತ್ತು ಎಂಬುದನ್ನು ನೋಡಿರಿ.

وَأَمۡطَرۡنَا عَلَيۡهِم مَّطَرٗاۖ فَٱنظُرۡ كَيۡفَ كَانَ عَٰقِبَةُ ٱلۡمُجۡرِمِينَ ٨٤

---

1 ಪ್ರವಾದಿ ಲೂತ್(عَلَيْهِ السَّلَامُ) ರಿಗೆ ಅವರು ನೀಡಿದ ಈ ಪ್ರತಿಕ್ರಿಯೆಯು ಅಪಹಾಸ್ಯ ಮಿಶ್ರಿತ ಆಕ್ರೋಶವಾಗಿತ್ತು.

2 ವಿಶೇಷ ತರಹದ ಕಲ್ಲುಗಳನ್ನು ಅವರ ಮೇಲೆ ಸುರಿಸಲಾಯಿತು ಎಂದು ಖುರ್‌ಆನ್ 15:74ರಲ್ಲಿ ಹೇಳಲಾಗಿದೆ.

**85.** ಮದ್‌ಯನ್ ಜನಾಂಗದೆಡೆಗೆ ಅವರ ಸಹೋದರ ಶುಐಬ್‌ರನ್ನು (ನಾವು ಕಳುಹಿಸಿದೆವು). ಅವರು ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ನಿಮಗೆ ಅವನ ಹೊರತು ಅನ್ಯ ಆರಾಧ್ಯರಿಲ್ಲ. ಖಂಡಿತವಾಗಿಯೂ ನಿಮ್ಮ ರಬ್‌ನ ವತಿಯಿಂದ ಸ್ಪಷ್ಟವಾದ ಪುರಾವೆಯು ನಿಮ್ಮೆಡೆಗೆ ಬಂದಿದೆ. ಆದ್ದರಿಂದ ನೀವು ಅಳತೆ ಮತ್ತು ತೂಕವನ್ನು ಪೂರ್ತಿಯಾಗಿ ಕೊಡಿರಿ. ಜನರಿಗೆ ಅವರ ಸಾಮಗ್ರಿಗಳನ್ನು ಕಡಿಮೆಗೊಳಿಸದಿರಿ. ಭೂಮಿಯಲ್ಲಿ ಒಳಿತುಂಟುಮಾಡಿದ ಬಳಿಕ ಅಲ್ಲಿ ನಾಶವನ್ನುಂಟುಮಾಡದಿರಿ. ನೀವು ವಿಶ್ವಾಸಿಗಳಾಗಿದ್ದರೆ ಅದು ನಿಮಗೆ ಉತ್ತಮವಾಗಿದೆ.

وَإِلَىٰ مَدْيَنَ أَخَاهُمْ شُعَيْبًاۚ قَالَ يَٰقَوْمِ
ٱعْبُدُوا۟ ٱللَّهَ مَا لَكُم مِّنْ إِلَٰهٍ غَيْرُهُۥۖ
قَدْ جَآءَتْكُم بَيِّنَةٌ مِّن رَّبِّكُمْۖ فَأَوْفُوا۟
ٱلْكَيْلَ وَٱلْمِيزَانَ وَلَا تَبْخَسُوا۟ ٱلنَّاسَ
أَشْيَآءَهُمْ وَلَا تُفْسِدُوا۟ فِى ٱلْأَرْضِ
بَعْدَ إِصْلَٰحِهَاۚ ذَٰلِكُمْ خَيْرٌ لَّكُمْ إِن
كُنتُم مُّؤْمِنِينَ ﴿٨٥﴾

**86.** ಬೆದರಿಕೆ ಹಾಕುತ್ತಾ ಮತ್ತು ಅಲ್ಲಾಹುವಿನ ಮಾರ್ಗದಿಂದ, ಅದರಲ್ಲಿ ವಿಶ್ವಾಸವಿಟ್ಟವರನ್ನು ತಡೆಯುವ ಮೂಲಕ, ಅದು (ಆ ಮಾರ್ಗವು) ವಕ್ರವಾಗಿರಬೇಕೆಂದು ಬಯಸುತ್ತಾ ನೀವು ದಾರಿಗಳಲ್ಲೆಲ್ಲ ಕುಳಿತುಕೊಳ್ಳದಿರಿ.[1] ನೀವು ಅಲ್ಪಸಂಖ್ಯಾತರಾಗಿದ್ದಾಗ ಅವನು ನಿಮ್ಮ ಸಂಖ್ಯೆಯನ್ನು ಅಧಿಕಗೊಳಿಸಿದ್ದನ್ನು ಸ್ಮರಿಸಿರಿ ಮತ್ತು ವಿನಾಶಕಾರಿಗಳ ಪರ್ಯಾವಸಾನವು ಹೇಗಿತ್ತು ಎಂಬುದನ್ನು ನೋಡಿರಿ.

وَلَا تَقْعُدُوا۟ بِكُلِّ صِرَٰطٍ تُوعِدُونَ
وَتَصُدُّونَ عَن سَبِيلِ ٱللَّهِ مَنْ ءَامَنَ بِهِۦ
وَتَبْغُونَهَا عِوَجًاۚ وَٱذْكُرُوٓا۟ إِذْ كُنتُمْ قَلِيلًا
فَكَثَّرَكُمْۖ وَٱنظُرُوا۟ كَيْفَ كَانَ عَٰقِبَةُ
ٱلْمُفْسِدِينَ ﴿٨٦﴾

**87.** ನಾನು ಯಾವುದರೊಂದಿಗೆ ಕಳುಹಿಸಲ್ಪಟ್ಟಿರುವೆನೋ ಅದರಲ್ಲಿ ನಿಮ್ಮ ಪೈಕಿ ಒಂದು ಪಂಗಡವು ವಿಶ್ವಾಸವಿಡುವುದಾದರೆ ಮತ್ತು ಇನ್ನೊಂದು ಪಂಗಡವು ಅವಿಶ್ವಾಸವಿಡುವುದಾದರೆ ನಮ್ಮ ಮಧ್ಯೆ ಅಲ್ಲಾಹು ತೀರ್ಪು ನೀಡುವ ತನಕ

وَإِن كَانَ طَآئِفَةٌ مِّنكُمْ ءَامَنُوا۟ بِٱلَّذِىٓ
أُرْسِلْتُ بِهِۦ وَطَآئِفَةٌ لَّمْ يُؤْمِنُوا۟ فَٱصْبِرُوا۟
حَتَّىٰ يَحْكُمَ ٱللَّهُ بَيْنَنَاۚ وَهُوَ خَيْرُ
ٱلْحَٰكِمِينَ ﴿٨٧﴾

---

1 ಆ ಜನತೆಯು ದೇವನಿಷೇಧಿಗಳೂ ಅಳತೆ ಮತ್ತು ತೂಕಗಳಲ್ಲಿ ಕಡಿಮೆಗೊಳಿಸುವವರೂ ಆಗಿದ್ದರು. ಶುಐಬ್ (عَلَيْهِ السَّلَامُ)ರವರು ಸತ್ಯಧರ್ಮದೆಡೆಗೆ ಜನರನ್ನು ಕರೆದಾಗ ಆ ಉಪದೇಶವನ್ನು ಕೇಳಲು ಹೋಗುವವರನ್ನು ದಾರಿ ಮಧ್ಯೆ ಅವರು ತಡೆಯುತ್ತಿದ್ದರು. ಸತ್ಯಧರ್ಮವನ್ನು ಅಥವಾ ಅಲ್ಲಾಹುವಿನ ಧರ್ಮವನ್ನು ವಕ್ರವಾಗಿ ಮತ್ತು ವಿರೂಪವಾಗಿ ತೋರಿಸಲು ಅವರು ಯತ್ನಿಸುತ್ತಿದ್ದರು.

ತಾಳ್ಮೆಯಿಂದಿರಿ. ಅವನು ತೀರ್ಪು ನೀಡುವವರಲ್ಲಿ ಉತ್ತಮನಾಗಿರುವನು'.

**88.** ಆತನ ಜನತೆಯಲ್ಲಿರುವ ಅಹಂಕಾರಿಗಳಾದ ಪ್ರಮುಖರು ಹೇಳಿದರು: 'ಓ ಶುಐಬ್! ಖಂಡಿತವಾಗಿಯೂ ನಾವು ನಿನ್ನನ್ನೂ, ನಿನ್ನ ಜೊತೆಗಿರುವ ವಿಶ್ವಾಸಿಗಳನ್ನೂ ನಮ್ಮ ಊರಿನಿಂದ ಹೊರಗಟ್ಟುವೆವು. ಇಲ್ಲದಿದ್ದರೆ ನೀವು ನಮ್ಮ ಧರ್ಮಕ್ಕೆ ಮರಳಲೇಬೇಕು'. ಆತ ಹೇಳಿದರು: 'ನಾವು ಅದನ್ನು (ನಿಮ್ಮ ಧರ್ಮವನ್ನು) ಅಸಹ್ಯಪಡುವವರಾಗಿದ್ದರೂ ಸಹ (ಮರಳಬೇಕೇ)?'

۞ قَالَ ٱلۡمَلَأُ ٱلَّذِينَ ٱسۡتَكۡبَرُواْ مِن قَوۡمِهِۦ لَنُخۡرِجَنَّكَ يَٰشُعَيۡبُ وَٱلَّذِينَ ءَامَنُواْ مَعَكَ مِن قَرۡيَتِنَآ أَوۡ لَتَعُودُنَّ فِي مِلَّتِنَاۚ قَالَ أَوَلَوۡ كُنَّا كَٰرِهِينَ ٨٨

**89.** ಅಲ್ಲಾಹು ನಮ್ಮನ್ನು ನಿಮ್ಮ ಮಾರ್ಗದಿಂದ ರಕ್ಷಿಸಿದ ಬಳಿಕ ಪುನಃ ಅದರೆಡೆಗೇ ನಾವು ಮರಳುವುದಾದರೆ ಖಂಡಿತವಾಗಿಯೂ ನಾವು ಅಲ್ಲಾಹುವಿನ ಮೇಲೆ ಸುಳ್ಳನ್ನು ಸೃಷ್ಟಿಸಿದವರಾಗುವೆವು. ನಮ್ಮ ರಬ್ಬಾದ ಅಲ್ಲಾಹು ಇಚ್ಛಿಸಿದ ವಿನಾ ಅದರೆಡೆಗೆ ಮರಳಲು ನಮ್ಮಿಂದಾಗದು. ನಮ್ಮ ರಬ್‌ನ ಅರಿವು ಸರ್ವ ವಿಷಯಗಳನ್ನೂ ಒಳಗೊಂಡಿದೆ. ನಾವು ಅಲ್ಲಾಹುವಿನ ಮೇಲೆ ಭರವಸೆಯಿಟ್ಟಿರುವೆವು. ಓ ನಮ್ಮ ರಬ್! ನಮ್ಮ ಮತ್ತು ನಮ್ಮ ಜನತೆಯ ಮಧ್ಯೆ ನೀನು ಸತ್ಯದೊಂದಿಗೆ ತೀರ್ಪು ನೀಡು. ತೀರ್ಪು ನೀಡುವವರಲ್ಲಿ ನೀನು ಅತ್ಯುತ್ತಮನಾಗಿರುವೆ'.

قَدِ ٱفۡتَرَيۡنَا عَلَى ٱللَّهِ كَذِبًا إِنۡ عُدۡنَا فِي مِلَّتِكُم بَعۡدَ إِذۡ نَجَّىٰنَا ٱللَّهُ مِنۡهَاۚ وَمَا يَكُونُ لَنَآ أَن نَّعُودَ فِيهَآ إِلَّآ أَن يَشَآءَ ٱللَّهُ رَبُّنَاۚ وَسِعَ رَبُّنَا كُلَّ شَيۡءٍ عِلۡمًاۚ عَلَى ٱللَّهِ تَوَكَّلۡنَاۚ رَبَّنَا ٱفۡتَحۡ بَيۡنَنَا وَبَيۡنَ قَوۡمِنَا بِٱلۡحَقِّ وَأَنتَ خَيۡرُ ٱلۡفَٰتِحِينَ ٨٩

**90.** ಆತನ ಜನತೆಯಲ್ಲಿದ್ದ ಸತ್ಯನಿಷೇಧಿಗಳಾದ ಮುಖಂಡರು ಹೇಳಿದರು: 'ನೀವು ಶುಐಬ್‌ರನ್ನು ಅನುಸರಿಸುವುದಾದರೆ ತನ್ನಿಮಿತ್ತ ಖಂಡಿತವಾಗಿಯೂ ನೀವು ನಷ್ಟಹೊಂದಿದವರಾಗುವಿರಿ'

وَقَالَ ٱلۡمَلَأُ ٱلَّذِينَ كَفَرُواْ مِن قَوۡمِهِۦ لَئِنِ ٱتَّبَعۡتُمۡ شُعَيۡبًا إِنَّكُمۡ إِذٗا لَّخَٰسِرُونَ ٩٠

**91.** ತರುವಾಯ ಭೂಕಂಪವು ಅವರನ್ನು ಹಿಡಿಯಿತು. ಬೆಳಗಾದಾಗ ಅವರು ತಮ್ಮ ಮನೆಗಳಲ್ಲಿ ಅಧೋಮುಖಿಗಳಾಗಿ ಬಿದ್ದಿದ್ದರು.

فَأَخَذَتۡهُمُ ٱلرَّجۡفَةُ فَأَصۡبَحُواْ فِي دَارِهِمۡ جَٰثِمِينَ ٩١

92. ಶುಐಬ್‌ರನ್ನು ನಿಷೇಧಿಸಿದವರ ಸ್ಥಿತಿಯು ಅವರು ಅಲ್ಲಿ ವಾಸಿಸಲೇ ಇಲ್ಲ ಎಂಬಂತಾಯಿತು. ಶುಐಬ್‌ರನ್ನು ನಿಷೇಧಿಸಿದವರಾರೋ ಅವರೇ ನಷ್ಟಹೊಂದಿದವರಾದರು.[1]

ٱلَّذِينَ كَذَّبُواْ شُعَيۡبٗا كَأَن لَّمۡ يَغۡنَوۡاْ فِيهَاۚ ٱلَّذِينَ كَذَّبُواْ شُعَيۡبٗا كَانُواْ هُمُ ٱلۡخَٰسِرِينَ ٩٢

93. ತರುವಾಯ ಆತ ಅವರಿಂದ ವಿಮುಖರಾದರು. ಆತ ಹೇಳಿದರು: 'ಓ ನನ್ನ ಜನರೇ! ನನ್ನ ರಬ್‌ನ ಸಂದೇಶಗಳನ್ನು ಖಂಡಿತವಾಗಿಯೂ ನಾನು ನಿಮಗೆ ತಲುಪಿಸಿಕೊಟ್ಟಿರುವೆನು ಮತ್ತು ನಿಮಗೆ ಪ್ರಾಮಾಣಿಕವಾಗಿ ಉಪದೇಶಿಸಿರುವೆನು. ಹೀಗಿರುವಾಗ ಸತ್ಯನಿಷೇಧಿಗಳಾದ ಜನರಿಗೋಸ್ಕರ ನಾನೇಕೆ ದುಃಖಿಸಲಿ?'

فَتَوَلَّىٰ عَنۡهُمۡ وَقَالَ يَٰقَوۡمِ لَقَدۡ أَبۡلَغۡتُكُمۡ رِسَٰلَٰتِ رَبِّي وَنَصَحۡتُ لَكُمۡۖ فَكَيۡفَ ءَاسَىٰ عَلَىٰ قَوۡمٖ كَٰفِرِينَ ٩٣

94. ಯಾವುದೇ ನಾಡಿಗೂ ನಾವು ಯಾವುದೇ ಪ್ರವಾದಿಯನ್ನೂ ಕಳುಹಿಸಿರಲಿಲ್ಲ; (ಅವರು ಪ್ರವಾದಿಯನ್ನು ನಿಷೇಧಿಸಿದಾಗ) ಅಲ್ಲಿನ ನಿವಾಸಿಗಳನ್ನು ನಾವು ವಿಪತ್ತು ಮತ್ತು ಸಂಕಷ್ಟಗಳಿಂದ ಹಿಡಿಯದ ಹೊರತು.[2] ಇದು ಅವರು ವಿನಯವಂತರಾಗುವ ಸಲುವಾಗಿದೆ.

وَمَآ أَرۡسَلۡنَا فِي قَرۡيَةٖ مِّن نَّبِيٍّ إِلَّآ أَخَذۡنَآ أَهۡلَهَا بِٱلۡبَأۡسَآءِ وَٱلضَّرَّآءِ لَعَلَّهُمۡ يَضَّرَّعُونَ ٩٤

95. ನಂತರ ಅವರು ಅಭಿವೃದ್ಧಿ ಹೊಂದುವ ತನಕ ನಾವು ಸಂಕಷ್ಟದ ಸ್ಥಳದಲ್ಲಿ ಕ್ಷೇಮವನ್ನಿಟ್ಟೆವು. ಅವರು ಹೇಳಿದರು: 'ಸಂಕಷ್ಟ ಮತ್ತು ಕ್ಷೇಮವು ನಮ್ಮ ಪೂರ್ವಿಕರನ್ನೂ ಸ್ಪರ್ಶಿಸಿತ್ತು'.[3] ತರುವಾಯ ಅವರು ಗ್ರಹಿಸದ ರೀತಿಯಲ್ಲಿ ನಾವು ಅವರನ್ನು ಹಠಾತ್ತನೆ ಹಿಡಿದೆವು.

ثُمَّ بَدَّلۡنَا مَكَانَ ٱلسَّيِّئَةِ ٱلۡحَسَنَةَ حَتَّىٰ عَفَواْ وَّقَالُواْ قَدۡ مَسَّ ءَابَآءَنَا ٱلضَّرَّآءُ وَٱلسَّرَّآءُ فَأَخَذۡنَٰهُم بَغۡتَةٗ وَهُمۡ لَا يَشۡعُرُونَ ٩٥

1 ಹೀಗೆ ಶುಐಬ್(عَلَيْهِ ٱلسَّلَامُ)ರನ್ನು ಹೊರದಬ್ಬುವೆವೆಂದು ಬೆದರಿಸಿದವರನ್ನೇ ಈ ಲೋಕದಿಂದ ಹೊರದಬ್ಬಲಾಯಿತು. ಅವರ ನಿವಾಸಗಳು ಮತ್ತು ಕೃಷಿಭೂಮಿಗಳು ಸೇರಿದಂತೆ ಅಲ್ಲಿ ಜನವಾಸವನ್ನು ಸೂಚಿಸುವ ಕುರುಹುಗಳೆಲ್ಲವೂ ನಾಮಾವಶೇಷವಾಗಿ ಹೋದವು. ಶುಐಬ್ ರನ್ನು ಅನುಸರಿಸಿದವರು ನಷ್ಟಹೊಂದುವರೆಂದು ಘೋಷಿಸುತ್ತಿದ್ದವರೇ ಇಹಲೋಕ ಮತ್ತು ಪರಲೋಕದಲ್ಲಿ ಸ್ವತಃ ನಷ್ಟಹೊಂದಿದವರಾದರು.

2 ಅಲ್ಲಾಹು ಈ ರೀತಿ ಮಾಡುವುದು ಜನರು ಪ್ರವಾದಿಯನ್ನು ನಿಷೇಧಿಸುವಾಗ ಅವರ ಆ ನಿಷೇಧವು ಅವರ ಸರ್ವನಾಶಕ್ಕೆ ಹೇತುವಾಗಲಿದೆಯೆಂದು ಅವರಿಗೆ ಮನವರಿಕೆ ಮಾಡಿಕೊಡುವುದಕ್ಕಾಗಿದೆ.

3 'ನಮಗಿಂತ ಮುಂಚಿನ ತಲೆಮಾರುಗಳಲ್ಲಿಯೂ ಸಂಕಷ್ಟಗಳು ಮತ್ತು ಕ್ಷೇಮಗಳು ಪುನರಾವರ್ತಿಸಿ ಬರುತ್ತಿದ್ದವು. ಇವೆಲ್ಲವೂ ಜಗತ್ತಿನಲ್ಲಿ ಸಹಜವಾಗಿವೆ. ಇವುಗಳನ್ನು ಅಲ್ಲಾಹುವಿನ ಪರೀಕ್ಷೆಯೆಂದು ನಾವೆಂದೂ ಭಾವಿಸಲಾರೆವು.' ಎಂದು ಅವರು ಹೇಳುತ್ತಿದ್ದರು.

96. ಆ ನಾಡುಗಳಲ್ಲಿರುವವರು ವಿಶ್ವಾಸವಿಟ್ಟವರೂ, ಭಯಭಕ್ತಿ ಪಾಲಿಸುವವರೂ ಆಗಿರುತ್ತಿದ್ದರೆ ನಾವವರಿಗೆ ಆಕಾಶದಿಂದ ಮತ್ತು ಭೂಮಿಯಿಂದ ಅನುಗ್ರಹಗಳನ್ನು ತೆರೆದುಕೊಡುತ್ತಿದ್ದೆವು. ಆದರೆ ಅವರು ನಿಷೇಧಿಸಿದರು. ಆದ್ದರಿಂದ ಅವರು ಮಾಡಿಟ್ಟಿರುವುದರ ಫಲವಾಗಿ ನಾವು ಅವರನ್ನು ಹಿಡಿದೆವು.

وَلَوۡ أَنَّ أَهۡلَ ٱلۡقُرَىٰٓ ءَامَنُواْ وَٱتَّقَوۡاْ لَفَتَحۡنَا عَلَيۡهِم بَرَكَٰتٖ مِّنَ ٱلسَّمَآءِ وَٱلۡأَرۡضِ وَلَٰكِن كَذَّبُواْ فَأَخَذۡنَٰهُم بِمَا كَانُواْ يَكۡسِبُونَ ٩٦

97. ಅವರು ರಾತ್ರಿ ಮಲಗಿರುವಾಗ ನಮ್ಮ ಶಿಕ್ಷೆಯು ಅವರ ಬಳಿಗೆ ಬರುವುದರ ಕುರಿತು ನಾಡಿನ ನಿವಾಸಿಗಳು ನಿರ್ಭೀತರಾಗಿರುವರೇ?

أَفَأَمِنَ أَهۡلُ ٱلۡقُرَىٰٓ أَن يَأۡتِيَهُم بَأۡسُنَا بَيَٰتٗا وَهُمۡ نَآئِمُونَ ٩٧

98. ಅಥವಾ ಅವರು ಹಗಲಿನಲ್ಲಿ ಆಟವಾಡಿಕೊಂಡಿರುವಾಗ ನಮ್ಮ ಶಿಕ್ಷೆಯು ಅವರ ಬಳಿಗೆ ಬರುವುದರ ಕುರಿತು ನಾಡಿನ ನಿವಾಸಿಗಳು ನಿರ್ಭೀತರಾಗಿರುವರೇ?

أَوَ أَمِنَ أَهۡلُ ٱلۡقُرَىٰٓ أَن يَأۡتِيَهُم بَأۡسُنَا ضُحٗى وَهُمۡ يَلۡعَبُونَ ٩٨

99. ಅವರು ಅಲ್ಲಾಹುವಿನ ತಂತ್ರದ ಬಗ್ಗೆ ನಿರ್ಭೀತರಾಗಿರುವರೇ? ನಷ್ಟ ಹೊಂದಿರುವ ಜನರಲ್ಲದೆ ಇನ್ನಾರೂ ಅಲ್ಲಾಹುವಿನ ತಂತ್ರದ ಕುರಿತು ನಿರ್ಭೀತರಾಗಿರಲಾರರು.

أَفَأَمِنُواْ مَكۡرَ ٱللَّهِۚ فَلَا يَأۡمَنُ مَكۡرَ ٱللَّهِ إِلَّا ٱلۡقَوۡمُ ٱلۡخَٰسِرُونَ ٩٩

100. ಪೂರ್ವಿಕರ ಬಳಿಕ ಭೂಮಿಯ ಉತ್ತರಾಧಿಕಾರ ಪಡೆದವರನ್ನು, ನಾವು ಇಚ್ಛಿಸಿದರೆ ಅವರ ಪಾಪಗಳ ನಿಮಿತ್ತ ಅವರನ್ನು ಶಿಕ್ಷಿಸುವೆವು ಎಂಬ ಪ್ರಜ್ಞೆಯು ಸನ್ಮಾರ್ಗದೆಡೆಗೆ ಮುನ್ನಡೆಸಲಾರದೇ? ನಾವು ಅವರ ಹೃದಯಗಳ ಮೇಲೆ ಮುದ್ರೆಯನ್ನೊತ್ತುವೆವು. ಆದ್ದರಿಂದ ಅವರು ಏನನ್ನೂ ಕೇಳಿಸಿಕೊಳ್ಳಲಾರರು.

أَوَلَمۡ يَهۡدِ لِلَّذِينَ يَرِثُونَ ٱلۡأَرۡضَ مِنۢ بَعۡدِ أَهۡلِهَآ أَن لَّوۡ نَشَآءُ أَصَبۡنَٰهُم بِذُنُوبِهِمۡۚ وَنَطۡبَعُ عَلَىٰ قُلُوبِهِمۡ فَهُمۡ لَا يَسۡمَعُونَ ١٠٠

101. ಆ ನಾಡುಗಳ ವೃತ್ತಾಂತಗಳ ಪೈಕಿ ಕೆಲವನ್ನು ನಾವು ತಮಗೆ ವಿವರಿಸಿಕೊಡುವೆವು. ನಿಶ್ಚಯವಾಗಿಯೂ ಅವರೆಡೆಗೆ ಕಳುಹಿಸಲಾದ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರಲ್ಲಿಗೆ ಬಂದಿದ್ದರು.

تِلۡكَ ٱلۡقُرَىٰ نَقُصُّ عَلَيۡكَ مِنۡ أَنۢبَآئِهَاۚ وَلَقَدۡ جَآءَتۡهُمۡ رُسُلُهُم بِٱلۡبَيِّنَٰتِ فَمَا كَانُواْ لِيُؤۡمِنُواْ بِمَا كَذَّبُواْ مِن قَبۡلُۚ كَذَٰلِكَ يَطۡبَعُ ٱللَّهُ عَلَىٰ قُلُوبِ ٱلۡكَٰفِرِينَ ١٠١

ಆದರೂ ಅವರು ಮುಂಚೆ ನಿಷೇಧಿಸಿರುವುದರಲ್ಲಿ ಅವರೆಂದೂ ವಿಶ್ವಾಸವಿಡುವವರಾಗಲಿಲ್ಲ. ಹೀಗೆ ಅಲ್ಲಾಹು ಸತ್ಯನಿಷೇಧಿಗಳ ಹೃದಯಗಳ ಮೇಲೆ ಮುದ್ರೆಯೊತ್ತುವನು.

**102.** ಕರಾರನ್ನು ಪಾಲಿಸುವ ಗುಣವು ಅವರಲ್ಲಿ ಹೆಚ್ಚಿನವರಿಗೂ ಇರುವುದಾಗಿ ನಾವು ಕಂಡಿಲ್ಲ.(1) ಅವರ ಪೈಕಿ ಹೆಚ್ಚಿನವರನ್ನೂ ನಾವು ಧಿಕ್ಕಾರಿಗಳನ್ನಾಗಿಯೇ ಕಂಡೆವು.

وَمَا وَجَدۡنَا لِأَكۡثَرِهِم مِّنۡ عَهۡدٖۖ وَإِن وَجَدۡنَآ أَكۡثَرَهُمۡ لَفَٰسِقِينَ ١٠٢

**103.** ತರುವಾಯ ಅವರ ಬಳಿಕ ನಾವು ಮೂಸಾರನ್ನು ಫಿರ್‌ಔನ್ ಮತ್ತು ಅವನ ಪ್ರಮುಖರೆಡೆಗೆ ನಮ್ಮ ದೃಷ್ಟಾಂತಗಳೊಂದಿಗೆ ಕಳುಹಿಸಿದೆವು. ಆದರೆ ಅವರು ಆ ದೃಷ್ಟಾಂತಗಳೊಂದಿಗೆ ಅನ್ಯಾಯವೆಸಗಿದರು. ಆ ವಿನಾಶಕಾರಿಗಳ ಅಂತ್ಯವು ಹೇಗಿತ್ತೆಂಬುದನ್ನು ನೋಡಿರಿ.

ثُمَّ بَعَثۡنَا مِنۢ بَعۡدِهِم مُّوسَىٰ بِـَٔايَٰتِنَآ إِلَىٰ فِرۡعَوۡنَ وَمَلَإِيْهِۦ فَظَلَمُواْ بِهَاۖ فَٱنظُرۡ كَيۡفَ كَانَ عَٰقِبَةُ ٱلۡمُفۡسِدِينَ ١٠٣

**104.** ಮೂಸಾ ಹೇಳಿದರು: 'ಓ ಫಿರ್‌ಔನ್! ಖಂಡಿತವಾಗಿಯೂ ನಾನು ಸರ್ವಲೋಕಗಳ ರಬ್‌ನ ಸಂದೇಶವಾಹಕನಾಗಿರುವೆನು.

وَقَالَ مُوسَىٰ يَٰفِرۡعَوۡنُ إِنِّي رَسُولٞ مِّن رَّبِّ ٱلۡعَٰلَمِينَ ١٠٤

**105.** ಅಲ್ಲಾಹುವಿನ ಮೇಲೆ ಸತ್ಯವನ್ನಲ್ಲದೆ ಇನ್ನೇನನ್ನೂ ಹೇಳದಿರಲು ನಾನು ಬಾಧ್ಯಸ್ಥನಾಗಿರುವೆನು. ನಿಮ್ಮ ರಬ್‌ನ ವತಿಯ ಸ್ಪಷ್ಟವಾದ ಪುರಾವೆಯೊಂದಿಗೆ ನಾನು ನಿಮ್ಮೆಡೆಗೆ ಬಂದಿರುವೆನು. ಆದ್ದರಿಂದ ಇಸ್ರಾಈಲ್ ಸಂತತಿಗಳನ್ನು ನನ್ನ ಸಂಗಡ ಕಳುಹಿಸಿಕೊಡಿರಿ'.(2)

حَقِيقٌ عَلَىٰٓ أَن لَّآ أَقُولَ عَلَى ٱللَّهِ إِلَّا ٱلۡحَقَّۚ قَدۡ جِئۡتُكُم بِبَيِّنَةٖ مِّن رَّبِّكُمۡ فَأَرۡسِلۡ مَعِيَ بَنِيٓ إِسۡرَٰٓءِيلَ ١٠٥

1 ಅಲ್ಲಾಹುವನ್ನು ಅನುಸರಿಸುವೆನು ಎಂಬ ಕರಾರು, ಪ್ರವಾದಿಯನ್ನು ಅನುಸರಿಸುವೆನು ಮತ್ತು ಅವರಿಗೆ ಸಹಾಯ ಮಾಡುವೆನು ಎಂಬ ಕರಾರು ಹಾಗೂ ಮನುಷ್ಯರು ಪರಸ್ಪರ ಮಾಡುವ ಕರಾರು, ಇವೆಲ್ಲವನ್ನೂ ಪಾಲಿಸುವುದು ಓರ್ವ ಸತ್ಯವಿಶ್ವಾಸಿಯ ಕರ್ತವ್ಯವಾಗಿದೆ.

2 ಫಿರ್‌ಔನ್ (ಫರೋವ) ಕೋಪ್ಟಿಕ್ ವಂಶದವನಾಗಿದ್ದನು. ಈಜಿಪ್ಟಿನಲ್ಲಿ ಆಗ ಕೋಪ್ಟಿಕ್ ವಂಶ ಆಡಳಿತ ನಡೆಸುತ್ತಿತ್ತು. ಅವರು ಇಸ್ರಾಈಲರನ್ನು ಗುಲಾಮರನ್ನಾಗಿ ಮಾಡಿ ಅವರ ಕೈಯಲ್ಲಿ ಕಠಿಣವಾದ ಕೆಲಸಗಳನ್ನು ಮಾಡಿಸುತ್ತಲೂ ಅವರನ್ನು ನಿರಂತರವಾಗಿ ಪೀಡಿಸುತ್ತಲೂ ಇದ್ದರು. ಇದರ ಬಗ್ಗೆ ಖುರ್‌ಆನ್ ಹಲವು ಕಡೆಗಳಲ್ಲಿ ವಿವರಿಸಿದೆ.

106. ಫಿರ್‌ಔನ್ ಹೇಳಿದನು: 'ನೀನು ಪುರಾವೆಯೊಂದಿಗೆ ಬಂದಿರುವುದಾದರೆ ಅದನ್ನು ತೋರಿಸಿಕೊಡು. ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ'.

قَالَ إِن كُنتَ جِئۡتَ بِـَٔايَةٖ فَأۡتِ بِهَآ إِن كُنتَ مِنَ ٱلصَّـٰدِقِينَ ١٠٦

107. ಆಗ ಮೂಸಾ ತನ್ನ ಬೆತ್ತವನ್ನು ಕೆಳಗೆ ಹಾಕಿದರು. ತಕ್ಷಣ ಅದೊಂದು ಪ್ರತ್ಯಕ್ಷ ಸರ್ಪವಾಗಿ ಮಾರ್ಪಟ್ಟಿತು.

فَأَلۡقَىٰ عَصَاهُ فَإِذَا هِيَ ثُعۡبَانٞ مُّبِينٞ ١٠٧

108. ಆತ ತನ್ನ ಕೈಯ್ಯನ್ನು ಹೊರತೆಗೆದು ತೋರಿಸಿದರು. ಆಗ ನೋಡುವವರಿಗೆಲ್ಲ ಅದು ಬೆಳ್ಳಗಾಗಿ ಕಂಡಿತು.

وَنَزَعَ يَدَهُۥ فَإِذَا هِيَ بَيۡضَآءُ لِلنَّـٰظِرِينَ ١٠٨

109. ಫಿರ್‌ಔನನ ಜನತೆಯಲ್ಲಿದ್ದ ಪ್ರಮುಖರು ಹೇಳಿದರು: 'ಖಂಡಿತವಾಗಿಯೂ ಈತನೊಬ್ಬ ತಜ್ಞ ಮಾಂತ್ರಿಕನಾಗಿರುವನು.

قَالَ ٱلۡمَلَأُ مِن قَوۡمِ فِرۡعَوۡنَ إِنَّ هَٰذَا لَسَٰحِرٌ عَلِيمٞ ١٠٩

110. ಈತ ನಿಮ್ಮನ್ನು ನಿಮ್ಮ ನಾಡಿನಿಂದ ಹೊರಗಟ್ಟಲು ಇಚ್ಛಿಸುತ್ತಿರುವನು.[1] ಆದ್ದರಿಂದ ನೀವೇನು ಆದೇಶ ನೀಡುವಿರಿ?'

يُرِيدُ أَن يُخۡرِجَكُم مِّنۡ أَرۡضِكُمۡۖ فَمَاذَا تَأۡمُرُونَ ١١٠

111-112. ಅವರು (ಫಿರ್‌ಔನನೊಂದಿಗೆ) ಹೇಳಿದರು: 'ಈತನಿಗೂ, ಈತನ ಸಹೋದರನಿಗೂ ತಾವು ಸ್ವಲ್ಪ ಕಾಲಾವಕಾಶವನ್ನು ನೀಡಿರಿ. ನಗರಗಳಿಗೆ ತೆರಳಿ ಸರ್ವ ತಜ್ಞ ಮಾಂತ್ರಿಕರನ್ನು ಒಟ್ಟುಗೂಡಿಸಿ ತಮ್ಮ ಬಳಿಗೆ ಕರೆತರಲು ಆಳುಗಳನ್ನು ಕಳುಹಿಸಿರಿ'.

قَالُوٓاْ أَرۡجِهۡ وَأَخَاهُ وَأَرۡسِلۡ فِي ٱلۡمَدَآئِنِ حَٰشِرِينَ ١١١ يَأۡتُوكَ بِكُلِّ سَٰحِرٍ عَلِيمٖ ١١٢

113. ಮಾಂತ್ರಿಕರು ಫಿರ್‌ಔನನ ಬಳಿಗೆ ಬಂದರು. ಅವರು ಹೇಳಿದರು: 'ನಾವು ಜಯಗಳಿಸಿದರೆ ನಮಗೆ ಉತ್ತಮ ಪ್ರತಿಫಲ ಸಿಗುವುದು ಖಚಿತವಲ್ಲವೇ?'.

وَجَآءَ ٱلسَّحَرَةُ فِرۡعَوۡنَ قَالُوٓاْ إِنَّ لَنَا لَأَجۡرًا إِن كُنَّا نَحۡنُ ٱلۡغَٰلِبِينَ ١١٣

---

ಈಜಿಪ್ಟಿಯನ್ನರನ್ನು ಸಂಪೂರ್ಣವಾಗಿ ಸತ್ಯದೆಡೆಗೆ ಆಹ್ವಾನಿಸುವುದರೊಂದಿಗೆ ಬನೀ ಇಸ್ರಾಈಲರನ್ನು ಗುಲಾಮಗಿರಿಯಿಂದ ಮುಕ್ತಗೊಳಿಸಿ, ಅವರಲ್ಲಿ ಸತ್ಯವಿಶ್ವಾಸ ಮತ್ತು ಸ್ವಾತಂತ್ರ್ಯದ ಪ್ರಜ್ಞೆಯನ್ನು ಮೂಡಿಸುವುದು ಮೂಸಾ(عَلَيْهِ السَّلَامُ)ರವರ ಸಂದೇಶವಾಹಕತ್ವದ ಪ್ರಮುಖ ಭಾಗವಾಗಿತ್ತು.

1 ಮಾನವ ವಿಮೋಚನೆಗಾಗಿ ಪರಿಶ್ರಮಿಸುವವರನ್ನು ದೇಶದ್ರೋಹಿಗಳೆಂದೂ ಆಡಳಿತ ವಿರೋಧಿಗಳೆಂದೂ ಚಿತ್ರೀಕರಿಸುವುದು ಸರ್ವಾಧಿಕಾರಿಗಳು ಎಲ್ಲಾ ಕಾಲದಲ್ಲೂ ಅನುಸರಿಸುತ್ತಿರುವ ಒಂದು ಕುಟಿಲ ತಂತ್ರವಾಗಿದೆ.

**114.** ಫಿರ್‌ಔನ್ ಹೇಳಿದನು: ‘ಹೌದು, ಖಂಡಿತವಾಗಿಯೂ ನೀವು (ನನ್ನ ಬಳಿ) ಸಾಮೀಪ್ಯ ಪಡೆದವರಲ್ಲಿ ಸೇರಿದವರಾಗುವಿರಿ’.

قَالَ نَعَمْ وَإِنَّكُمْ لَمِنَ ٱلْمُقَرَّبِينَ ﴿١١٤﴾

**115.** ಅವರು ಹೇಳಿದರು: ‘ಓ ಮೂಸಾ! ಒಂದೋ ತಾವು ಹಾಕಿರಿ. ಅಥವಾ (ಮೊದಲು) ಹಾಕುವವರು ನಾವಾಗಿರುವೆವು’.

قَالُوا۟ يَـٰمُوسَىٰٓ إِمَّآ أَن تُلْقِىَ وَإِمَّآ أَن نَّكُونَ نَحْنُ ٱلْمُلْقِينَ ﴿١١٥﴾

**116.** ಆತ ಹೇಳಿದರು: ‘ನೀವೇ ಹಾಕಿರಿ’. ಅವರು ಹಾಕಿದಾಗ ಅವರು (ತನ್ಮೂಲಕ) ಜನರ ಕಣ್ಣುಗಳನ್ನು ಸಮ್ಮೋಹನಗೊಳಿಸಿದರು ಮತ್ತು ಅವರಲ್ಲಿ ಭಯ ಹುಟ್ಟಿಸಿದರು. ಅವರು ಮಹಾ ಇಂದ್ರಜಾಲವನ್ನೇ ತಂದಿದ್ದರು.

قَالَ أَلْقُوا۟ ۖ فَلَمَّآ أَلْقَوْا۟ سَحَرُوٓا۟ أَعْيُنَ ٱلنَّاسِ وَٱسْتَرْهَبُوهُمْ وَجَآءُو بِسِحْرٍ عَظِيمٍ ﴿١١٦﴾

**117.** ‘ತಾವು ತಮ್ಮ ಬೆತ್ತವನ್ನು ಹಾಕಿರಿ’ ಎಂದು ಮೂಸಾರಿಗೆ ನಾವು ದಿವ್ಯ ಸಂದೇಶವನ್ನು ನೀಡಿದೆವು. ಆಗ ಅಗೋ ಅವರು ಕೃತಕವಾಗಿ ನಿರ್ಮಿಸಿರುವುದೆಲ್ಲವನ್ನೂ ಅದು ನುಂಗತೊಡಗಿತು.

۞ وَأَوْحَيْنَآ إِلَىٰ مُوسَىٰٓ أَنْ أَلْقِ عَصَاكَ ۖ فَإِذَا هِىَ تَلْقَفُ مَا يَأْفِكُونَ ﴿١١٧﴾

**118.** ಹೀಗೆ ಸತ್ಯವು ದೃಢಪಟ್ಟಿತು ಮತ್ತು ಅವರು ಮಾಡಿರುವುದೆಲ್ಲವೂ ನಿಷ್ಫಲವಾಗಿ ಹೋಯಿತು.

فَوَقَعَ ٱلْحَقُّ وَبَطَلَ مَا كَانُوا۟ يَعْمَلُونَ ﴿١١٨﴾

**119.** ಅವರು ಅಲ್ಲಿಯೇ ಪರಾಭವಗೊಂಡರು ಮತ್ತು ಅಪಮಾನಿತರಾಗಿ ಮರಳಿದರು.

فَغُلِبُوا۟ هُنَالِكَ وَٱنقَلَبُوا۟ صَـٰغِرِينَ ﴿١١٩﴾

**120.** ಮಾಂತ್ರಿಕರು ಸಾಷ್ಟಾಂಗ ಬಿದ್ದರು.

وَأُلْقِىَ ٱلسَّحَرَةُ سَـٰجِدِينَ ﴿١٢٠﴾

**121-122.** ಅವರು ಹೇಳಿದರು: ‘ಸರ್ವಲೋಕಗಳ ರಬ್‌ನಲ್ಲಿ, ಮೂಸಾ ಮತ್ತು ಹಾರೂನ್‌ರ ರಬ್‌ನಲ್ಲಿ ನಾವು ವಿಶ್ವಾಸವಿಟ್ಟಿರುವೆವು’.

قَالُوٓا۟ ءَامَنَّا بِرَبِّ ٱلْعَـٰلَمِينَ ﴿١٢١﴾
رَبِّ مُوسَىٰ وَهَـٰرُونَ ﴿١٢٢﴾

**123.** ಫಿರ್‌ಔನ್ ಹೇಳಿದನು: ‘ನಾನು ನಿಮಗೆ ಅನುಮತಿ ನೀಡುವ ಮೊದಲೇ ನೀವು ವಿಶ್ವಾಸ ತಾಳಿದಿರಾ? ಇದು ಈ ನಗರದಲ್ಲಿರುವವರನ್ನು ಇಲ್ಲಿಂದ ಹೊರಗಟ್ಟುವುದಕ್ಕಾಗಿ ನೀವು ನಗರದಲ್ಲಿ ಮಾಡಿದ ಪಿತೂರಿಯಾಗಿದೆ. ಸದ್ಯವೇ ನೀವು ಅರಿತುಕೊಳ್ಳುವಿರಿ.

قَالَ فِرْعَوْنُ ءَامَنتُم بِهِۦ قَبْلَ أَنْ ءَاذَنَ لَكُمْ ۖ إِنَّ هَـٰذَا لَمَكْرٌ مَّكَرْتُمُوهُ فِى ٱلْمَدِينَةِ لِتُخْرِجُوا۟ مِنْهَآ أَهْلَهَا ۖ فَسَوْفَ تَعْلَمُونَ ﴿١٢٣﴾

**124.** ಖಂಡಿತವಾಗಿಯೂ ನಾನು ನಿಮ್ಮ ಕೈಗಳನ್ನು ಮತ್ತು ಕಾಲುಗಳನ್ನು ವಿರುದ್ಧ ದಿಕ್ಕಿನಿಂದ ಕತ್ತರಿಸುವೆನು. ತರುವಾಯ ಖಂಡಿತವಾಗಿಯೂ ನಿಮ್ಮೆಲ್ಲರನ್ನೂ ಶಿಲುಬೆಗೇರಿಸುವೆನು'.

لَأُقَطِّعَنَّ أَيۡدِيَكُمۡ وَأَرۡجُلَكُم مِّنۡ خِلَٰفٖ ثُمَّ لَأُصَلِّبَنَّكُمۡ أَجۡمَعِينَ ﴿١٢٤﴾

**125.** ಅವರು ಹೇಳಿದರು: 'ಖಂಡಿತವಾಗಿಯೂ ನಾವು ನಮ್ಮ ರಬ್‌ನೆಡೆಗೆ ಮರಳುವವರಾಗಿರುವೆವು'.

قَالُوٓاْ إِنَّآ إِلَىٰ رَبِّنَا مُنقَلِبُونَ ﴿١٢٥﴾

**126.** ನಮ್ಮ ರಬ್‌ನ ದೃಷ್ಟಾಂತಗಳು ನಮ್ಮೆಡೆಗೆ ಬಂದಾಗ ನಾವು ಅದರಲ್ಲಿ ವಿಶ್ವಾಸವಿಟ್ಟೆವು ಎಂಬುದು ಮಾತ್ರ ನೀನು ನಮ್ಮ ಮೇಲೆ ಆರೋಪ ಹೊರಿಸುತ್ತಿರುವೆ. ಓ ನಮ್ಮ ರಬ್! ನಮ್ಮ ಮೇಲೆ ಸಹನೆಯನ್ನು ಸುರಿಸಿಕೊಡು ಮತ್ತು ನಮ್ಮನ್ನು ಮುಸ್ಲಿಮರನ್ನಾಗಿ ಮೃತಪಡಿಸು'.

وَمَا تَنقِمُ مِنَّآ إِلَّآ أَنۡ ءَامَنَّا بِـَٔايَٰتِ رَبِّنَا لَمَّا جَآءَتۡنَاۚ رَبَّنَآ أَفۡرِغۡ عَلَيۡنَا صَبۡرٗا وَتَوَفَّنَا مُسۡلِمِينَ ﴿١٢٦﴾

**127.** ಫಿರ್‌ಔನನ ಜನತೆಯಲ್ಲಿದ್ದ ಪ್ರಮುಖರು ಹೇಳಿದರು: 'ಭೂಮಿಯಲ್ಲಿ ಗಲಭೆಯನ್ನುಂಟುಮಾಡಲು ಮತ್ತು ತಮ್ಮನ್ನೂ, ತಮ್ಮ ಆರಾಧ್ಯರನ್ನೂ ಕೈಬಿಡಲು ತಾವು ಮೂಸಾ ಮತ್ತು ಆತನ ಜನರನ್ನು ಬಿಟ್ಟುಬಿಡುವಿರಾ?' ಅವನು (ಫಿರ್‌ಔನ್) ಹೇಳಿದನು: 'ನಾವು ಅವರ (ಇಸ್ರಾಈಲರ) ಗಂಡುಮಕ್ಕಳನ್ನು ಕೊಲ್ಲುವೆವು ಮತ್ತು ಅವರ ಸ್ತ್ರೀಯರನ್ನು ಜೀವಂತ ಬಿಡುವೆವು. ಖಂಡಿತ ವಾಗಿಯೂ ನಾವು ಅವರ ಮೇಲೆ ಸರ್ವಾಧಿಕಾರವುಳ್ಳವರಾಗಿರುವೆವು'.

وَقَالَ ٱلۡمَلَأُ مِن قَوۡمِ فِرۡعَوۡنَ أَتَذَرُ مُوسَىٰ وَقَوۡمَهُۥ لِيُفۡسِدُواْ فِي ٱلۡأَرۡضِ وَيَذَرَكَ وَءَالِهَتَكَۚ قَالَ سَنُقَتِّلُ أَبۡنَآءَهُمۡ وَنَسۡتَحۡيِۦ نِسَآءَهُمۡ وَإِنَّا فَوۡقَهُمۡ قَٰهِرُونَ ﴿١٢٧﴾

**128.** ಮೂಸಾ ತನ್ನ ಜನರೊಂದಿಗೆ ಹೇಳಿದರು: 'ನೀವು ಅಲ್ಲಾಹುವಿನೊಂದಿಗೆ ಸಹಾಯ ಬೇಡಿರಿ ಮತ್ತು ಸಹನೆ ಪಾಲಿಸಿರಿ. ಖಂಡಿತವಾಗಿಯೂ ಭೂಮಿಯು ಅಲ್ಲಾಹುವಿನದ್ದಾಗಿದೆ. ಅವನು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅದನ್ನು ವಾರೀಸಾಗಿ

قَالَ مُوسَىٰ لِقَوۡمِهِ ٱسۡتَعِينُواْ بِٱللَّهِ وَٱصۡبِرُوٓاْۖ إِنَّ ٱلۡأَرۡضَ لِلَّهِ يُورِثُهَا مَن يَشَآءُ مِنۡ عِبَادِهِۦۖ وَٱلۡعَٰقِبَةُ لِلۡمُتَّقِينَ ﴿١٢٨﴾

ನೀಡುವನು. ಪರ್ಯಾವಸಾನವಿರುವುದು ಭಯಭಕ್ತಿಯುಳ್ಳವರಿಗಾಗಿದೆ'

129. ಅವರು ಹೇಳಿದರು: 'ತಾವು ನಮ್ಮ ಬಳಿಗೆ (ಸಂದೇಶವಾಹಕರಾಗಿ) ಬರುವ ಮುನ್ನವೂ, ತಾವು ನಮ್ಮ ಬಳಿಗೆ ಬಂದ ಬಳಿಕವೂ ನಾವು ಹಿಂಸೆಗೊಳಗಾಗಿರುವೆವು'. ಆತ ಹೇಳಿದರು: 'ನಿಮ್ಮ ರಬ್ ನಿಮ್ಮ ಶತ್ರುವನ್ನು ನಾಶಗೊಳಿಸಬಹುದು ಮತ್ತು ನಿಮ್ಮನ್ನು ಭೂಮಿಯಲ್ಲಿ ಉತ್ತರಾಧಿಕಾರಿಗಳನ್ನಾಗಿ ಮಾಡಬಹುದು. ತರುವಾಯ ನೀವು ಹೇಗೆ ಕಾರ್ಯನಿರ್ವಹಿಸುವಿರಿ ಎಂಬುದನ್ನು ಅವನು ನೋಡುವನು'.

قَالُوٓاْ أُوذِينَا مِن قَبۡلِ أَن تَأۡتِيَنَا وَمِنۢ بَعۡدِ مَا جِئۡتَنَاۚ قَالَ عَسَىٰ رَبُّكُمۡ أَن يُهۡلِكَ عَدُوَّكُمۡ وَيَسۡتَخۡلِفَكُمۡ فِي ٱلۡأَرۡضِ فَيَنظُرَ كَيۡفَ تَعۡمَلُونَ ١٢٩

130. ಫಿರ್‌ಔನನ ಜನರನ್ನು ನಾವು (ಬರಗಾಲದ) ವರ್ಷಗಳ ಮೂಲಕವೂ ಬೆಳೆಗಳ ಅಭಾವದ ಮೂಲಕವೂ ಹಿಡಿದೆವು. ಅವರು ಚಿಂತಿಸಿ ಗ್ರಹಿಸುವ ಸಲುವಾಗಿ.

وَلَقَدۡ أَخَذۡنَآ ءَالَ فِرۡعَوۡنَ بِٱلسِّنِينَ وَنَقۡصٖ مِّنَ ٱلثَّمَرَٰتِ لَعَلَّهُمۡ يَذَّكَّرُونَ ١٣٠

131. ಒಳಿತೇನಾದರೂ ಅವರೆಡೆಗೆ ಬಂದರೆ 'ಇದು ನಮಗೆ ಅರ್ಹವಾಗಿರುವುದೇ ಆಗಿದೆ' ಎಂದು ಅವರು ಹೇಳುವರು.(1) ಕೆಡುಕೇನಾದರೂ ಅವರನ್ನು ಬಾಧಿಸಿದರೆ ಅದನ್ನು ಮೂಸಾ ಮತ್ತು ಅವರ ಜೊತೆಯಲ್ಲಿರುವವರ ಮೇಲೆ ಅಪಶಕುನವಾಗಿ ಹೊರಿಸುತ್ತಿದ್ದರು. ಅರಿತುಕೊಳ್ಳಿರಿ! ಅವರ ಅಪಶಕುನವಿರುವುದು ಅಲ್ಲಾಹುವಿನ ಬಳಿಯಲ್ಲಿ ಮಾತ್ರವಾಗಿದೆ.(2) ಆದರೆ ಅವರಲ್ಲಿ ಹೆಚ್ಚಿನವರೂ ಅರಿಯುವುದಿಲ್ಲ.

فَإِذَا جَآءَتۡهُمُ ٱلۡحَسَنَةُ قَالُواْ لَنَا هَٰذِهِۦۖ وَإِن تُصِبۡهُمۡ سَيِّئَةٞ يَطَّيَّرُواْ بِمُوسَىٰ وَمَن مَّعَهُۥٓۗ أَلَآ إِنَّمَا طَٰٓئِرُهُمۡ عِندَ ٱللَّهِ وَلَٰكِنَّ أَكۡثَرَهُمۡ لَا يَعۡلَمُونَ ١٣١

132. ಅವರು ಹೇಳಿದರು: 'ನಮ್ಮನ್ನು ಮಾಂತ್ರಿಕ ವಿದ್ಯೆಯಿಂದ ವಶೀಕರಿಸುವ ಸಲುವಾಗಿ ನೀನು ಯಾವುದೇ ದೃಷ್ಟಾಂತದೊಂದಿಗೆ ನಮ್ಮೆಡೆಗೆ ಬಂದರೂ ನಾವು ನಿನ್ನಲ್ಲಿ ವಿಶ್ವಾಸವಿಡಲಾರೆವು'.

وَقَالُواْ مَهۡمَا تَأۡتِنَا بِهِۦ مِنۡ ءَايَةٖ لِّتَسۡحَرَنَا بِهَا فَمَا نَحۡنُ لَكَ بِمُؤۡمِنِينَ ١٣٢

---

1 ಉತ್ತಮವಾದ ಬೆಳೆ ಮತ್ತು ಸಮೃದ್ಧಿಯುಂಟಾದಾಗ ಇದು ನಮ್ಮ ಪರಿಶ್ರಮ ಮತ್ತು ಭೂಮಿಯ ಫಲವತ್ತತೆಯಿಂದ ಉಂಟಾಗಿದೆ ಎನ್ನುತ್ತಿದ್ದರು. ಅಲ್ಲಾಹುವಿನ ಅನುಗ್ರಹ ಎಂಬ ಪ್ರಯೋಗ ಸಹ ಅವರಿಗೆ ಸ್ವೀಕಾರಾರ್ಹವಾಗಿರಲಿಲ್ಲ.

2 ಅಪಶಕುನದ ಕುರಿತು ಜನರಲ್ಲಿರುವ ಮೂಢನಂಬಿಕೆಗಳನ್ನು ಕುರ್‌ಆನ್ ತಿರಸ್ಕರಿಸುತ್ತದೆ. ಲಾಭ ಮತ್ತು ನಷ್ಟಗಳು ಅಲ್ಲಾಹುವಿನ ವಿಧಿಗನುಸಾರವಾಗಿ ಸಂಭವಿಸುತ್ತದೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.

133. ತರುವಾಯ ನಾವು ಅವರ ವಿರುದ್ಧ ಜಲಪ್ರವಾಹ, ಮಿಡತೆ, ಹೇನು, ಕಪ್ಪೆಗಳು, ರಕ್ತ ಮುಂತಾದ ಸ್ಪಷ್ಟವಾದ ದೃಷ್ಟಾಂತಗಳನ್ನು ಕಳುಹಿಸಿದೆವು. ಆದರೆ ಅವರು ಅಹಂಕಾರಪಟ್ಟರು. ಅವರು ಅಪರಾಧಿಗಳಾದ ಒಂದು ಜನತೆಯಾಗಿದ್ದರು.

134. ಶಿಕ್ಷೆಯು ಅವರ ಮೇಲೆರಗಿದಾಗ ಅವರು ಹೇಳಿದರು: ‘ಓ ಮೂಸಾ! ನಿನ್ನ ರಬ್ ನಿನ್ನೊಂದಿಗೆ ಮಾಡಿರುವ ಕರಾರನ್ನು ಮುಂದಿಟ್ಟು ನೀನು ಅವನೊಂದಿಗೆ ನಮಗಾಗಿ ಪ್ರಾರ್ಥಿಸು. ನೀನು ಈ ಶಿಕ್ಷೆಯನ್ನು ನಮ್ಮಿಂದ ನಿವಾರಿಸಿದರೆ ಖಂಡಿತವಾಗಿಯೂ ನಾವು ನಿನ್ನಲ್ಲಿ ವಿಶ್ವಾಸವಿಡುವೆವು ಮತ್ತು ಇಸ್ರಾಈಲ್ ಸಂತತಿಗಳನ್ನು ನಿನ್ನೊಂದಿಗೆ ಕಳುಹಿಸಿಕೊಡುವೆವು’.

135. ಆದರೆ ಅವರು ತಲುಪಬೇಕಾದ ಒಂದು ಅವಧಿಯ ತನಕ ನಾವು ಅವರಿಂದ ಶಿಕ್ಷೆಯನ್ನು ನಿವಾರಿಸಿದಾಗ ಅವರು ವಾಗ್ದಾನವನ್ನು ಉಲ್ಲಂಘಿಸತೊಡಗಿದರು.

136. ಆದ್ದರಿಂದ ನಾವು ಅವರ ಮೇಲೆ ಶಿಕ್ಷಾಕ್ರಮವನ್ನು ಕೈಗೊಂಡೆವು. ಅವರು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದ ಕಾರಣದಿಂದಲೂ, ಅವುಗಳ ಕುರಿತು ಅಲಕ್ಷ್ಯತೆ ವಹಿಸಿದ್ದರ ಕಾರಣದಿಂದಲೂ ನಾವು ಅವರನ್ನು ಸಮುದ್ರದಲ್ಲಿ ಮುಳುಗಿಸಿದೆವು.

137. ನಾವು ಅನುಗ್ರಹೀತಗೊಳಿಸಿರುವ ಪೂರ್ವ ಮತ್ತು ಪಶ್ಚಿಮದ ಆ ಭೂಪ್ರದೇಶಗಳನ್ನು ಮರ್ದಿತರಾದ ಜನರಿಗೆ ನಾವು ವಾರೀಸಾಗಿ ನೀಡಿದೆವು. ಇಸ್ರಾಈಲ್ ಸಂತತಿಗಳ ಮೇಲೆ ಅವರು ಸಹನೆ ವಹಿಸಿದ ಫಲವಾಗಿ ತಮ್ಮ ರಬ್‍ನ ಉತ್ತಮವಾದ ವಚನವು ನೆರವೇರಿತು. ಫಿರ್‍ಔನ್ ಮತ್ತು ಅವನ ಜನತೆಯು ನಿರ್ಮಿಸಿರುವುದನ್ನೂ, ಅವರು

فَأَرۡسَلۡنَا عَلَيۡهِمُ ٱلطُّوفَانَ وَٱلۡجَرَادَ
وَٱلۡقُمَّلَ وَٱلضَّفَادِعَ وَٱلدَّمَ ءَايَٰتٖ
مُّفَصَّلَٰتٖ فَٱسۡتَكۡبَرُواْ وَكَانُواْ قَوۡمٗا
مُّجۡرِمِينَ ١٣٣

وَلَمَّا وَقَعَ عَلَيۡهِمُ ٱلرِّجۡزُ قَالُواْ يَٰمُوسَى
ٱدۡعُ لَنَا رَبَّكَ بِمَا عَهِدَ عِندَكَۖ لَئِن
كَشَفۡتَ عَنَّا ٱلرِّجۡزَ لَنُؤۡمِنَنَّ لَكَ
وَلَنُرۡسِلَنَّ مَعَكَ بَنِيٓ إِسۡرَٰٓءِيلَ ١٣٤

فَلَمَّا كَشَفۡنَا عَنۡهُمُ ٱلرِّجۡزَ إِلَىٰٓ أَجَلٍ هُم
بَٰلِغُوهُ إِذَا هُمۡ يَنكُثُونَ ١٣٥

فَٱنتَقَمۡنَا مِنۡهُمۡ فَأَغۡرَقۡنَٰهُمۡ فِي ٱلۡيَمِّ بِأَنَّهُمۡ
كَذَّبُواْ بِـَٔايَٰتِنَا وَكَانُواْ عَنۡهَا غَٰفِلِينَ ١٣٦

وَأَوۡرَثۡنَا ٱلۡقَوۡمَ ٱلَّذِينَ كَانُواْ يُسۡتَضۡعَفُونَ
مَشَٰرِقَ ٱلۡأَرۡضِ وَمَغَٰرِبَهَا ٱلَّتِي بَٰرَكۡنَا فِيهَاۖ
وَتَمَّتۡ كَلِمَتُ رَبِّكَ ٱلۡحُسۡنَىٰ عَلَىٰ بَنِيٓ
إِسۡرَٰٓءِيلَ بِمَا صَبَرُواْۖ وَدَمَّرۡنَا مَا كَانَ يَصۡنَعُ
فِرۡعَوۡنُ وَقَوۡمُهُۥ وَمَا كَانُواْ يَعۡرِشُونَ ١٣٧

ಎತ್ತರಕ್ಕೇರಿಸಿರುವುದನ್ನೂ ನಾವು ಧ್ವಂಸಗೊಳಿಸಿದೆವು.

**138.** ಇಸ್ರಾಈಲ್ ಸಂತತಿಗಳನ್ನು ನಾವು ಸಮುದ್ರ ದಾಟಿಸಿ (ರಕ್ಷಿಸಿ)ದೆವು ತರುವಾಯ ತಮ್ಮ ವಿಗ್ರಹಗಳ ಮುಂದೆ ಆರಾಧನಾ ಮಗ್ನರಾಗಿ ಕುಳಿತಿದ್ದ ಒಂದು ಜನತೆಯ ಬಳಿಗೆ ಅವರು ಬಂದರು. ಅವರು ಹೇಳಿದರು: "ಓ ಮೂಸಾ! ಇವರಿಗೆ ಆರಾಧ್ಯರಿರುವಂತೆ ನಮಗೂ ಒಂದು ಆರಾಧ್ಯನನ್ನು ಮಾಡಿಕೊಡಿರಿ'.[1] ಮೂಸಾ ಹೇಳಿದರು: 'ಖಂಡಿತವಾಗಿಯೂ ನೀವು ಅಜ್ಞಾನಿಗಳಾದ ಒಂದು ಜನತೆಯಾಗಿರುವಿರಿ.

وَجَٰوَزۡنَا بِبَنِيٓ إِسۡرَٰٓءِيلَ ٱلۡبَحۡرَ فَأَتَوۡاْ عَلَىٰ قَوۡمٖ يَعۡكُفُونَ عَلَىٰٓ أَصۡنَامٖ لَّهُمۡۚ قَالُواْ يَٰمُوسَى ٱجۡعَل لَّنَآ إِلَٰهٗا كَمَا لَهُمۡ ءَالِهَةٞۚ قَالَ إِنَّكُمۡ قَوۡمٞ تَجۡهَلُونَ ١٣٨

**139.** ಖಂಡಿತವಾಗಿಯೂ ಈ ಜನರು ಯಾವುದರಲ್ಲಿ ನೆಲೆಗೊಂಡಿರುವರೋ ಅದು ನಾಶವಾಗುವಂತದ್ದಾಗಿದೆ. ಅವರು ಮಾಡುತ್ತಿರುವುದೆಲ್ಲವೂ ನಿಷ್ಫಲವಾಗಿವೆ.

إِنَّ هَٰٓؤُلَآءِ مُتَبَّرٞ مَّا هُمۡ فِيهِ وَبَٰطِلٞ مَّا كَانُواْ يَعۡمَلُونَ ١٣٩

**140.** ಆತ ಹೇಳಿದರು: 'ಅಲ್ಲಾಹು ನಿಮ್ಮನ್ನು ಸರ್ವಲೋಕದವರ ಪೈಕಿ ಉತ್ಕೃಷ್ಟಗೊಳಿಸಿರುವಾಗ ಅವನ ಹೊರತು ಬೇರೊಬ್ಬ ಆರಾಧ್ಯನನ್ನು ನಾನು ನಿಮಗಾಗಿ ಅರಸುವುದೇ?'

قَالَ أَغَيۡرَ ٱللَّهِ أَبۡغِيكُمۡ إِلَٰهٗا وَهُوَ فَضَّلَكُمۡ عَلَى ٱلۡعَٰلَمِينَ ١٤٠

**141.** ನಿಮ್ಮನ್ನು ಕಠಿಣವಾಗಿ ಶಿಕ್ಷಿಸುತ್ತಿದ್ದ, ನಿಮ್ಮ ಗಂಡುಮಕ್ಕಳನ್ನು ಸಾಯಿಸುತ್ತಿದ್ದ ಮತ್ತು ನಿಮ್ಮ ಸ್ತ್ರೀಯರನ್ನು ಜೀವಂತ ಬಿಡುತ್ತಿದ್ದ ಫಿರ್‌ಔನನ ಜನರಿಂದ ನಾವು ನಿಮ್ಮನ್ನು ರಕ್ಷಿಸಿದ ಸಂದರ್ಭವನ್ನು (ಸ್ಮರಿಸಿರಿ). ಅದರಲ್ಲಿ ನಿಮ್ಮ ರಬ್‌ನ ವತಿಯ ಒಂದು ಕಠಿಣ ಪರೀಕ್ಷೆಯಿತ್ತು.

وَإِذۡ أَنجَيۡنَٰكُم مِّنۡ ءَالِ فِرۡعَوۡنَ يَسُومُونَكُمۡ سُوٓءَ ٱلۡعَذَابِ يُقَتِّلُونَ أَبۡنَآءَكُمۡ وَيَسۡتَحۡيُونَ نِسَآءَكُمۡۚ وَفِي ذَٰلِكُم بَلَآءٞ مِّن رَّبِّكُمۡ عَظِيمٞ ١٤١

**142.** ನಾವು ಮೂಸಾರಿಗೆ ಮೂವತ್ತು ರಾತ್ರಿಗಳನ್ನು ನಿಶ್ಚಯಿಸಿಕೊಟ್ಟೆವು ಮತ್ತು ಹತ್ತನ್ನು ಸೇರಿಸಿ ಅದನ್ನು ಪೂರ್ತಿಗೊಳಿಸಿದೆವು. ಹೀಗೆ ಅವರ

۞وَوَٰعَدۡنَا مُوسَىٰ ثَلَٰثِينَ لَيۡلَةٗ وَأَتۡمَمۡنَٰهَا بِعَشۡرٖ فَتَمَّ مِيقَٰتُ رَبِّهِۦٓ أَرۡبَعِينَ لَيۡلَةٗۚ

1 ಓರ್ವ ಪ್ರವಾದಿ(عَلَيۡهِ ٱلسَّلَامُ)ರವರ ಶಿಕ್ಷಣದಡಿಯಲ್ಲಿ ಜೀವಿಸುತ್ತಿರುವ ಜನರಲ್ಲೂ ಬಹುದೇವಾರಾಧನೆಯೆಡೆಗಿರುವ ಪೈಶಾಚಿಕ ಪ್ರಲೋಭನೆಯು ಅದೆಷ್ಟು ತೀವ್ರವಾಗಿದೆಯೆಂದು ಈ ಘಟನೆಯು ಸೂಚಿಸುತ್ತದೆ.

وَقَالَ مُوسَىٰ لِأَخِيهِ هَٰرُونَ ٱخۡلُفۡنِي فِي قَوۡمِي وَأَصۡلِحۡ وَلَا تَتَّبِعۡ سَبِيلَ ٱلۡمُفۡسِدِينَ ﴿١٤٢﴾

ರಬ್ ನಿರ್ಣಯಿಸಿದ ನಲ್ವತ್ತು ರಾತ್ರಿಗಳ ಸಮಯಮಿತಿಯು ಪೂರ್ತಿಯಾಯಿತು. ಮೂಸಾ ತನ್ನ ಸಹೋದರನಾದ ಹಾರೂನ್‌ರೊಂದಿಗೆ 'ನನ್ನ ಜನತೆಯ ಮೇಲೆ ನನ್ನ ಪ್ರತಿನಿಧಿಯಾಗಿರು. ಸುಧಾರಣೆ ಮಾಡು. ವಿನಾಶಕಾರಿಗಳ ಮಾರ್ಗವನ್ನು ಅನುಸರಿಸದಿರು' ಎಂದರು.

وَلَمَّا جَآءَ مُوسَىٰ لِمِيقَٰتِنَا وَكَلَّمَهُۥ رَبُّهُۥ قَالَ رَبِّ أَرِنِيٓ أَنظُرۡ إِلَيۡكَۚ قَالَ لَن تَرَىٰنِي وَلَٰكِنِ ٱنظُرۡ إِلَى ٱلۡجَبَلِ فَإِنِ ٱسۡتَقَرَّ مَكَانَهُۥ فَسَوۡفَ تَرَىٰنِيۚ فَلَمَّا تَجَلَّىٰ رَبُّهُۥ لِلۡجَبَلِ جَعَلَهُۥ دَكّٗا وَخَرَّ مُوسَىٰ صَعِقٗاۚ فَلَمَّآ أَفَاقَ قَالَ سُبۡحَٰنَكَ تُبۡتُ إِلَيۡكَ وَأَنَا۠ أَوَّلُ ٱلۡمُؤۡمِنِينَ ﴿١٤٣﴾

143. ನಮ್ಮ ನಿಶ್ಚಿತ ಸಮಯಕ್ಕೆ ಮೂಸಾ ಬಂದಾಗ ಮತ್ತು ಅವರ ರಬ್ ಅವರೊಂದಿಗೆ ಮಾತನಾಡಿದಾಗ ಅವರು ಹೇಳಿದರು: 'ಓ ನನ್ನ ರಬ್! ನನಗೆ ತೋರಿಸಿಕೊಡು. ನಾನು ನಿನ್ನನ್ನು ನೋಡಬೇಕು'. ಅವನು (ಅಲ್ಲಾಹು) ಹೇಳಿದನು: ನಿನಗೆಂದಿಗೂ ನನ್ನನ್ನು ನೋಡಲಾಗದು. ಆದರೆ ನೀನು ಆ ಪರ್ವತದೆಡೆಗೆ ನೋಡು. ಅದು ಅದರ ಸ್ಥಳದಲ್ಲಿಯೇ ದೃಢವಾಗಿ ನಿಂತರೆ ತರುವಾಯ ನೀನು ನನ್ನನ್ನು ಕಾಣುವೆ'. ತರುವಾಯ ಅವರ ರಬ್ ತನ್ನನ್ನು ಪರ್ವತಕ್ಕೆ ಪ್ರಕಟವಾದಾಗ ಅವನದನ್ನು ನುಚ್ಚುನೂರುಗೊಳಿಸಿದನು. ಮೂಸಾ ಪ್ರಜ್ಞೆ ತಪ್ಪಿಬಿದ್ದರು. ತರುವಾಯ ಅವರಿಗೆ ಪ್ರಜ್ಞೆಯು ಮರಳಿ ಬಂದಾಗ ಅವರು ಹೇಳಿದರು: 'ನೀನು ಪರಮಪಾವನನು. ನಾನು ನಿನ್ನೆಡೆಗೆ ಪಶ್ಚಾತ್ತಾಪದೊಂದಿಗೆ ಮರಳಿರುವೆನು ಮತ್ತು ನಾನು ವಿಶ್ವಾಸಿಗಳ ಪೈಕಿ ಮೊದಲಿಗನಾಗಿರುವೆನು'.

قَالَ يَٰمُوسَىٰٓ إِنِّي ٱصۡطَفَيۡتُكَ عَلَى ٱلنَّاسِ بِرِسَٰلَٰتِي وَبِكَلَٰمِي فَخُذۡ مَآ ءَاتَيۡتُكَ وَكُن مِّنَ ٱلشَّٰكِرِينَ ﴿١٤٤﴾

144. ಅವನು (ಅಲ್ಲಾಹು) ಹೇಳಿದನು: 'ಓ ಮೂಸಾ! ನಾನು ನನ್ನ ಸಂದೇಶಗಳ ಮೂಲಕ ಮತ್ತು ನನ್ನ (ನೇರ) ಮಾತುಕತೆಯ ಮೂಲಕ ಖಂಡಿತವಾಗಿಯೂ ನಿನ್ನನ್ನು ಮನುಷ್ಯರ ಪೈಕಿ ಶ್ರೇಷ್ಠನನ್ನಾಗಿ ಆರಿಸಿರುವೆನು. ಆದ್ದರಿಂದ ನಾನು ನಿನಗೆ ನೀಡಿರುವುದನ್ನು ಹಿಡಿದುಕೋ ಮತ್ತು ಕೃತಜ್ಞತೆ ಸಲ್ಲಿಸುವವರ ಪೈಕಿ ಸೇರಿದವನಾಗು'.

**145.** ಸದುಪದೇಶ ಮತ್ತು ಸರ್ವ ವಿಷಯಗಳಿಗಿರುವ ವಿಶದೀಕರಣವೂ ಸೇರಿದಂತೆ ಸಕಲ ವಿಷಯಗಳನ್ನೂ ನಾವು ಅವರಿಗೆ (ಮೂಸಾರಿಗೆ) ಹಲಗೆಗಳಲ್ಲಿ ಬರೆದುಕೊಟ್ಟೆವು. 'ಇದನ್ನು ಗಟ್ಟಿಯಾಗಿ ಹಿಡಿದುಕೋ ಮತ್ತು ಇದರಲ್ಲಿರುವ ಉತ್ತಮ ವಿಷಯಗಳನ್ನು ಸ್ವೀಕರಿಸಲು ನಿನ್ನ ಜನರಿಗೆ ಆದೇಶಿಸು. ಧಿಕ್ಕಾರಿಗಳ ವಾಸಸ್ಥಳವನ್ನು ಸದ್ಯವೇ ನಾನು ನಿನಗೆ ತೋರಿಸಿಕೊಡುವೆನು' (ಎಂದು ನಾವು ಹೇಳಿದೆವು).

وَكَتَبْنَا لَهُۥ فِى ٱلْأَلْوَاحِ مِن كُلِّ شَىْءٍ مَّوْعِظَةً وَتَفْصِيلًا لِّكُلِّ شَىْءٍ فَخُذْهَا بِقُوَّةٍ وَأْمُرْ قَوْمَكَ يَأْخُذُوا۟ بِأَحْسَنِهَا ۚ سَأُو۟رِيكُمْ دَارَ ٱلْفَٰسِقِينَ ﴿١٤٥﴾

**146.** ಭೂಮಿಯಲ್ಲಿ ಅನ್ಯಾಯವಾಗಿ ಅಹಂಕಾರ ಪಡುತ್ತಿರುವವರನ್ನು ನಾನು ನನ್ನ ದೃಷ್ಟಾಂತಗಳಿಂದ ತಿರುಗಿಸಿಬಿಡುವೆನು. ಅವರು ಸಕಲ ದೃಷ್ಟಾಂತಗಳನ್ನು ಕಂಡರೂ ಅದರಲ್ಲಿ ವಿಶ್ವಾಸವಿಡಲಾರರು. ಅವರು ಸನ್ಮಾರ್ಗವನ್ನು ಕಂಡರೆ ಅದನ್ನು ಮಾರ್ಗವನ್ನಾಗಿ ಸ್ವೀಕರಿಸಲಾರರು. ದುರ್ಮಾರ್ಗವನ್ನು ಕಂಡರೆ ಅದನ್ನು ಮಾರ್ಗವನ್ನಾಗಿ ಸ್ವೀಕರಿಸುವರು. ಅದು ಅವರು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿರುವುದರ ಮತ್ತು ಅವುಗಳ ಕುರಿತು ಅಲಕ್ಷ್ಯರಾಗಿರುವುದರ ಫಲವಾಗಿದೆ.

سَأَصْرِفُ عَنْ ءَايَٰتِىَ ٱلَّذِينَ يَتَكَبَّرُونَ فِى ٱلْأَرْضِ بِغَيْرِ ٱلْحَقِّ وَإِن يَرَوْا۟ كُلَّ ءَايَةٍ لَّا يُؤْمِنُوا۟ بِهَا وَإِن يَرَوْا۟ سَبِيلَ ٱلرُّشْدِ لَا يَتَّخِذُوهُ سَبِيلًا وَإِن يَرَوْا۟ سَبِيلَ ٱلْغَىِّ يَتَّخِذُوهُ سَبِيلًا ۚ ذَٰلِكَ بِأَنَّهُمْ كَذَّبُوا۟ بِـَٔايَٰتِنَا وَكَانُوا۟ عَنْهَا غَٰفِلِينَ ﴿١٤٦﴾

**147.** ನಮ್ಮ ದೃಷ್ಟಾಂತಗಳನ್ನು ಮತ್ತು ಪರಲೋಕದ ಭೇಟಿಯನ್ನು ನಿಷೇಧಿಸಿದವರಾರೋ ಅವರ ಕರ್ಮಗಳು ನಿಷ್ಫಲವಾಗಿವೆ. ಅವರು ಮಾಡಿಕೊಂಡಿರುವುದರ ಫಲವನ್ನಲ್ಲದೆ ಇನ್ನೇನನ್ನಾದರೂ ಅವರಿಗೆ ನೀಡಲಾಗುವುದೇ?

وَٱلَّذِينَ كَذَّبُوا۟ بِـَٔايَٰتِنَا وَلِقَآءِ ٱلْءَاخِرَةِ حَبِطَتْ أَعْمَٰلُهُمْ ۚ هَلْ يُجْزَوْنَ إِلَّا مَا كَانُوا۟ يَعْمَلُونَ ﴿١٤٧﴾

**148.** ಮೂಸಾರ ಜನತೆಯು ಅವರು ಹೋದ ಬಳಿಕ ತಮ್ಮ ಆಭರಣಗಳಿಂದ ನಿರ್ಮಿಸಿದ ಹೂಂಕರಿಸುವ ಒಂದು ಕರುವಿನ ರೂಪವನ್ನು ಆರಾಧ್ಯಮೂರ್ತಿಯನ್ನಾಗಿ ಮಾಡಿಕೊಂಡರು. ಅದು ಅವರೊಂದಿಗೆ ಮಾತನಾಡಲಾರದು ಮತ್ತು ಅವರಿಗೆ ದಾರಿ ತೋರಿಸಲಾರದು ಎಂಬುದನ್ನು ಅವರು ಕಾಣುವುದಿಲ್ಲವೇ?

وَٱتَّخَذَ قَوْمُ مُوسَىٰ مِنۢ بَعْدِهِۦ مِنْ حُلِيِّهِمْ عِجْلًا جَسَدًا لَّهُۥ خُوَارٌ ۚ أَلَمْ يَرَوْا۟ أَنَّهُۥ لَا يُكَلِّمُهُمْ وَلَا يَهْدِيهِمْ سَبِيلًا ۘ ٱتَّخَذُوهُ وَكَانُوا۟ ظَٰلِمِينَ ﴿١٤٨﴾

ಅವರು ಅದನ್ನು (ಆರಾಧ್ಯ ಮೂರ್ತಿಯನ್ನಾಗಿ) ಮಾಡಿಕೊಂಡರು ಮತ್ತು ತನ್ಮೂಲಕ ಅಕ್ರಮಿಗಳಾದರು.

149. ಅವರಿಗೆ ಖೇದವುಂಟಾದಾಗ ಮತ್ತು ತಾವು ಪಥಭ್ರಷ್ಟರಾಗಿರುವೆವೆಂದು ಕಂಡಾಗ ಅವರು ಹೇಳಿದರು: 'ನಮ್ಮ ರಬ್ ನಮಗೆ ಕರುಣೆ ತೋರದಿದ್ದರೆ ಮತ್ತು ನಮ್ಮನ್ನು ಕ್ಷಮಿಸದಿದ್ದರೆ ಖಂಡಿತವಾಗಿಯೂ ನಾವು ನಷ್ಟ ಹೊಂದಿದವರಲ್ಲಿ ಸೇರಿದವರಾಗುವೆವು.

وَلَمَّا سُقِطَ فِىٓ أَيْدِيهِمْ وَرَأَوْا۟ أَنَّهُمْ قَدْ ضَلُّوا۟ قَالُوا۟ لَئِن لَّمْ يَرْحَمْنَا رَبُّنَا وَيَغْفِرْ لَنَا لَنَكُونَنَّ مِنَ ٱلْخَـٰسِرِينَ ﴿١٤٩﴾

150. ಕುಪಿತರಾಗಿ ಮತ್ತು ದುಃಖಿತರಾಗಿ ಮೂಸಾ ತಮ್ಮ ಜನತೆಯೆಡೆಗೆ ಮರಳಿ ಬಂದಾಗ ಹೇಳಿದರು: 'ನಾನು ಹೋದ ನಂತರ ನೀವು ನನ್ನ ಹಿಂದೆ ಮಾಡಿದ ಕೃತ್ಯವು ಅತ್ಯಂತ ಕೆಟ್ಟದ್ದು. ನಿಮ್ಮ ರಬ್‌ನ ಆಜ್ಞೆಯನ್ನು ಕಾಯದೇ ನೀವು ಆತುರಪಟ್ಟಿರುವಿರಾ?' ಅವರು ಹಲಗೆಗಳನ್ನು ಕೆಳಗೆ ಹಾಕಿ ತಮ್ಮ ಸಹೋದರನ ತಲೆಯನ್ನು ಹಿಡಿದು ತಮ್ಮೆಡೆಗೆ ಎಳೆದರು. ಆತ (ಹಾರೂನ್) ಹೇಳಿದರು: 'ನನ್ನ ತಾಯಿಯ ಮಗನೇ! ಖಂಡಿತವಾಗಿಯೂ ಜನರು ನನ್ನನ್ನು ಬಲಹೀನನೆಂದು ಗಣಿಸಿದರು ಮತ್ತು ಅವರು ನನ್ನನ್ನು ಕೊಂದುಬಿಡುವಷ್ಟರ ಮಟ್ಟಿಗೆ ತಲುಪಿದ್ದರು. ಆದ್ದರಿಂದ (ನನ್ನ ಮೇಲೆ ಕೈಮಾಡಿ) ತಾವು ಶತ್ರುಗಳಿಗೆ ಸಂತೋಷವಾಗಲು ಅವಕಾಶ ನೀಡದಿರಿ ಮತ್ತು ನನ್ನನ್ನು ಅಕ್ರಮಿಗಳಾದ ಜನರ ಪೈಕಿ ಗಣಿಸದಿರಿ'.

وَلَمَّا رَجَعَ مُوسَىٰٓ إِلَىٰ قَوْمِهِۦ غَضْبَـٰنَ أَسِفًا قَالَ بِئْسَمَا خَلَفْتُمُونِى مِنۢ بَعْدِىٓ ۖ أَعَجِلْتُمْ أَمْرَ رَبِّكُمْ ۖ وَأَلْقَى ٱلْأَلْوَاحَ وَأَخَذَ بِرَأْسِ أَخِيهِ يَجُرُّهُۥٓ إِلَيْهِ ۚ قَالَ ٱبْنَ أُمَّ إِنَّ ٱلْقَوْمَ ٱسْتَضْعَفُونِى وَكَادُوا۟ يَقْتُلُونَنِى فَلَا تُشْمِتْ بِىَ ٱلْأَعْدَآءَ وَلَا تَجْعَلْنِى مَعَ ٱلْقَوْمِ ٱلظَّـٰلِمِينَ ﴿١٥٠﴾

151. ಆತ (ಮೂಸಾ) ಹೇಳಿದರು: 'ಓ ನನ್ನ ರಬ್! ನನಗೆ ಮತ್ತು ನನ್ನ ಸಹೋದರನಿಗೆ ಪಾಪಮುಕ್ತಿ ದಯಪಾಲಿಸು. ನಮ್ಮನ್ನು ನಿನ್ನ ಕಾರುಣ್ಯದಲ್ಲಿ ಸೇರಿಸು. ನೀನು ಕರುಣೆ ತೋರುವವರಲ್ಲೇ ಅತ್ಯಧಿಕ ಕರುಣೆ ತೋರುವವನಾಗಿರುವೆ'.

قَالَ رَبِّ ٱغْفِرْ لِى وَلِأَخِى وَأَدْخِلْنَا فِى رَحْمَتِكَ ۖ وَأَنتَ أَرْحَمُ ٱلرَّٰحِمِينَ ﴿١٥١﴾

**152.** ಕರುವನ್ನು ಆರಾಧ್ಯಮೂರ್ತಿಯನ್ನಾಗಿ ಮಾಡಿಕೊಂಡವರು ಯಾರೋ ಅವರಿಗೆ ತಮ್ಮ ರಬ್‌ನ ವತಿಯ ಕ್ರೋಧವೂ, ಐಹಿಕ ಜೀವನದಲ್ಲಿ ನಿಂದ್ಯತೆಯೂ ದೊರೆಯುವುದು. ಸುಳ್ಳನ್ನು ಹೆಣೆಯುವವರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

إِنَّ ٱلَّذِينَ ٱتَّخَذُواْ ٱلْعِجْلَ سَيَنَالُهُمْ غَضَبٌ مِّن رَّبِّهِمْ وَذِلَّةٌ فِي ٱلْحَيَوٰةِ ٱلدُّنْيَاۚ وَكَذَٰلِكَ نَجْزِي ٱلْمُفْتَرِينَ ﴿١٥٢﴾

**153.** ಆದರೆ ಪಾಪವೆಸಗಿದ ಬಳಿಕ ಪಶ್ಚಾತ್ತಾಪಪಡುವವರು ಮತ್ತು ವಿಶ್ವಾಸವಿಡುವವರು ಯಾರೋ ಅವರ ಪಾಲಿಗೆ ತಮ್ಮ ರಬ್ ಅದರ ನಂತರವೂ ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

وَٱلَّذِينَ عَمِلُواْ ٱلسَّيِّـَٔاتِ ثُمَّ تَابُواْ مِنۢ بَعْدِهَا وَءَامَنُوٓاْ إِنَّ رَبَّكَ مِنۢ بَعْدِهَا لَغَفُورٌ رَّحِيمٌ ﴿١٥٣﴾

**154.** ಮೂಸಾರ ಕೋಪವು ತಣ್ಣಗಾದಾಗ ಅವರು (ದಿವ್ಯಸಂದೇಶವಿರುವ) ಹಲಗೆಗಳನ್ನು ಎತ್ತಿದರು. ಅದರಲ್ಲಿರುವ ಉಲ್ಲೇಖಗಳಲ್ಲಿ ತಮ್ಮ ರಬ್ಬನ್ನು ಭಯಪಡುವ ಜನರಿಗೆ ಮಾರ್ಗದರ್ಶನವೂ, ಕಾರುಣ್ಯವೂ ಇತ್ತು.

وَلَمَّا سَكَتَ عَن مُّوسَى ٱلْغَضَبُ أَخَذَ ٱلْأَلْوَاحَۖ وَفِي نُسْخَتِهَا هُدًى وَرَحْمَةٌ لِّلَّذِينَ هُمْ لِرَبِّهِمْ يَرْهَبُونَ ﴿١٥٤﴾

**155.** ನಮ್ಮ ನಿಶ್ಚಿತ ಸಮಯಕ್ಕಾಗಿ ಮೂಸಾ ತನ್ನ ಜನರ ಪೈಕಿ ಎಪ್ಪತ್ತು ಪುರುಷರನ್ನು ಆರಿಸಿದರು. ತರುವಾಯ ಭೀಕರವಾದ ಕಂಪನವು ಅವರನ್ನು ಹಿಡಿದಾಗ ಮೂಸಾ ಹೇಳಿದರು:(1) 'ಓ ನನ್ನ ರಬ್! ನೀನು ಇಚ್ಛಿಸಿದ್ದರೆ ಇದಕ್ಕಿಂತ ಮುಂಚೆಯೇ ಇವರನ್ನು ಮತ್ತು ನನ್ನನ್ನು ನಾಶ ಮಾಡಬಹುದಾಗಿತ್ತು. ನಮ್ಮ ಪೈಕಿ ಅವಿವೇಕಿಗಳು ಮಾಡಿದ ಕೃತ್ಯದ ನಿಮಿತ್ತ ನೀನು ನಮ್ಮನ್ನು ನಾಶ ಮಾಡುವೆಯಾ? ಇದು ನಿನ್ನ ಪರೀಕ್ಷೆಯಲ್ಲದೆ ಇನ್ನೇನೂ ಅಲ್ಲ. ಇದರ ಮೂಲಕ ನೀನು ತಾನಿಚ್ಛಿಸುವವರನ್ನು ಪಥಭ್ರಷ್ಟಗೊಳಿಸುವೆ ಮತ್ತು

وَٱخْتَارَ مُوسَىٰ قَوْمَهُۥ سَبْعِينَ رَجُلًا لِّمِيقَٰتِنَاۖ فَلَمَّآ أَخَذَتْهُمُ ٱلرَّجْفَةُ قَالَ رَبِّ لَوْ شِئْتَ أَهْلَكْتَهُم مِّن قَبْلُ وَإِيَّٰيَۖ أَتُهْلِكُنَا بِمَا فَعَلَ ٱلسُّفَهَآءُ مِنَّآۖ إِنْ هِيَ إِلَّا فِتْنَتُكَ تُضِلُّ بِهَا مَن تَشَآءُ وَتَهْدِي مَن تَشَآءُۖ أَنتَ وَلِيُّنَا فَٱغْفِرْ لَنَا وَٱرْحَمْنَاۖ وَأَنتَ خَيْرُ ٱلْغَٰفِرِينَ ﴿١٥٥﴾

---

1 ಸೀನಾ ಪರ್ವತದಲ್ಲಿ ನಿರ್ದಿಷ್ಟ ದಿನಗಳನ್ನು ಆರಾಧನಾ ಮಗ್ನನಾಗಿ ಕಳೆಯಲು ಹೊರಡುವಾಗ ವಿಶೇಷವಾಗಿ ಆರಿಸಲ್ಪಟ್ಟ 70 ಜನರನ್ನು ಮೂಸಾ (عَلَيْهِ السَّلَامُ)ರವರು ತಮ್ಮೊಂದಿಗೆ ಕರೆದೊಯ್ದಿದ್ದರು. ಕಂಪನಕ್ಕೊಳಗಾದವರು ಅವರೇ ಆಗಿದ್ದರು. ಹಲವು ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ ಈ ಘಟನೆಯು ಜರುಗಿದ್ದು ಅವರು ಕರುವನ್ನು ಆರಾಧ್ಯಮೂರ್ತಿಯನ್ನಾಗಿ ಮಾಡಿಕೊಂಡ ನಂತರವಾಗಿತ್ತು

ತಾನಿಚ್ಛಿಸುವವರನ್ನು ಸನ್ಮಾರ್ಗದಲ್ಲಿ ಸೇರಿಸುವೆ. ನೀನು ನಮ್ಮ ರಕ್ಷಕನಾಗಿರುವೆ. ಆದ್ದರಿಂದ ನಮಗೆ ಕ್ಷಮೆ ನೀಡು ಮತ್ತು ನಮ್ಮ ಮೇಲೆ ಕರುಣೆ ತೋರು. ನೀನು ಕ್ಷಮಿಸುವವರಲ್ಲಿ ಉತ್ತಮನಾಗಿರುವೆ.

156. ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ನಮಗೆ ನೀನು ಒಳಿತನ್ನು ದಾಖಲಿಸು (ಅಥವಾ ವಿಧಿಸು). ಖಂಡಿತವಾಗಿಯೂ ನಾವು ನಿನ್ನೆಡೆಗೆ ಮರಳಿರುವೆವು'. ಅವನು (ಅಲ್ಲಾಹು) ಹೇಳಿದನು: 'ನಾನು ಇಚ್ಛಿಸುವವರನ್ನು ನನ್ನ ಶಿಕ್ಷೆಯಿಂದ ದಂಡಿಸುವೆನು. ನನ್ನ ಕಾರುಣ್ಯವು ಸರ್ವ ವಸ್ತುಗಳನ್ನೂ ಆವರಿಸಿಕೊಂಡಿದೆ.[1] ಭಯಭಕ್ತಿ ಪಾಲಿಸುತ್ತಲೂ, ಝಕಾತ್ ನೀಡುತ್ತಲೂ ಮತ್ತು ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಡುತ್ತಲೂ ಇರುವ ಜನರಿಗೆ ನಾನು ಅದನ್ನು (ಕಾರುಣ್ಯವನ್ನು) ವಿಧಿಸುವೆನು.'[2]

۞ وَٱكۡتُبۡ لَنَا فِي هَٰذِهِ ٱلدُّنۡيَا حَسَنَةٗ
وَفِي ٱلۡأٓخِرَةِ إِنَّا هُدۡنَآ إِلَيۡكَۚ قَالَ عَذَابِيٓ
أُصِيبُ بِهِۦ مَنۡ أَشَآءُۖ وَرَحۡمَتِي وَسِعَتۡ كُلَّ
شَيۡءٖۚ فَسَأَكۡتُبُهَا لِلَّذِينَ يَتَّقُونَ وَيُؤۡتُونَ
ٱلزَّكَوٰةَ وَٱلَّذِينَ هُم بِـَٔايَٰتِنَا يُؤۡمِنُونَ ١٥٦

157. (ಅಂದರೆ) ತಮ್ಮ ಬಳಿಯಿರುವ ತೌರಾತ್‌ನಲ್ಲಿ ಮತ್ತು ಇಂಜೀಲ್‌ನಲ್ಲಿ ಅವರು ದಾಖಲಿಸಲ್ಪಟ್ಟಿರುವುದಾಗಿ ಕಾಣುವ[3] ನಿರಕ್ಷರಿ ಪ್ರವಾದಿಯಾದ ಸಂದೇಶವಾಹಕರನ್ನು (ಪ್ರವಾದಿ ಮುಹಮ್ಮದ್‌ರನ್ನು) ಅನುಸರಿಸುವವರಿಗೆ (ಆ ಕಾರುಣ್ಯವನ್ನು ನಾನು ವಿಧಿಸುವೆನು). ಆ ಪ್ರವಾದಿಯು ಅವರೊಂದಿಗೆ ಸದಾಚಾರವನ್ನು ಆದೇಶಿಸುವರು ಮತ್ತು ದುರಾಚಾರವನ್ನು

ٱلَّذِينَ يَتَّبِعُونَ ٱلرَّسُولَ ٱلنَّبِيَّ ٱلۡأُمِّيَّ ٱلَّذِي
يَجِدُونَهُۥ مَكۡتُوبًا عِندَهُمۡ فِي ٱلتَّوۡرَىٰةِ
وَٱلۡإِنجِيلِ يَأۡمُرُهُم بِٱلۡمَعۡرُوفِ وَيَنۡهَىٰهُمۡ
عَنِ ٱلۡمُنكَرِ وَيُحِلُّ لَهُمُ ٱلطَّيِّبَٰتِ وَيُحَرِّمُ
عَلَيۡهِمُ ٱلۡخَبَٰٓئِثَ وَيَضَعُ عَنۡهُمۡ إِصۡرَهُمۡ
وَٱلۡأَغۡلَٰلَ ٱلَّتِي كَانَتۡ عَلَيۡهِمۡۚ فَٱلَّذِينَ
ءَامَنُواْ بِهِۦ وَعَزَّرُوهُ وَنَصَرُوهُ وَٱتَّبَعُواْ

1 ದುಷ್ಟರನ್ನು ಶಿಕ್ಷಿಸುವುದು ಕರುಣೆಗೆ ವಿರುದ್ಧವಲ್ಲ. ಮಕ್ಕಳನ್ನು ಒಳ್ಳೆಯವರನ್ನಾಗಿ ಬೆಳೆಸಲು ಇಚ್ಛಿಸುವ ತಂದೆ ಮತ್ತು ವಿದ್ಯಾರ್ಥಿಗಳನ್ನು ಶಿಸ್ತಿನೊಂದಿಗೆ ಬೆಳೆಸಲು ಇಚ್ಛಿಸುವ ಶಿಕ್ಷಕರು ಶಿಕ್ಷಾಕ್ರಮಗಳನ್ನು ಕೈಗೊಳ್ಳುವುದು ಸಹಜ. ಅದು ಅವರಲ್ಲಿರುವ ಕರುಣೆಗೆ ವಿರುದ್ಧವಾಗಿದೆಯೆಂದು ಬುದ್ಧಿಯಿರುವ ಯಾರೂ ಹೇಳಲಾರರು.

2 ಪರಲೋಕದಲ್ಲಿ ಅಲ್ಲಾಹುವಿನ ಕರುಣೆಯು ಸತ್ಯವಿಶ್ವಾಸಿಗಳಾದ ಸಜ್ಜನರಿಗೆ ಮಾತ್ರವಿರುವುದಾಗಿದೆ.

3 ಬೈಬಲ್‌ನ ಯೋಹಾನನ ಸುವಾರ್ತೆಯ ಒಂದನೇ ಅಧ್ಯಾಯದಲ್ಲಿ ಪ್ಯಾರಕ್ಲೀಟ್‌ನ ಆಗಮನದ ಕುರಿತು ಭವಿಷ್ಯ ಹೇಳಲಾಗಿದೆ. ಹೀಬ್ರೂ ಭಾಷೆಯಲ್ಲಿರುವ ಪ್ಯಾರಕ್ಲೀಟ್ ಎಂಬ ಪದ ಮತ್ತು ಅರಬಿ ಭಾಷೆಯಲ್ಲಿರುವ ಮುಹಮ್ಮದ್ ಎಂಬ ಪದದ ಅರ್ಥವು ಒಂದೇ ಆಗಿದೆ.

ٱلنُّورَ ٱلَّذِىٓ أُنزِلَ مَعَهُۥٓ أُوْلَـٰٓئِكَ هُمُ ٱلْمُفْلِحُونَ ﴿١٥٧﴾

ವಿರೋಧಿಸುವರು. ಅವರಿಗೆ ಉತ್ತಮ ವಸ್ತುಗಳನ್ನು ಧರ್ಮಸಮ್ಮತಗೊಳಿಸುವರು ಮತ್ತು ಕೆಟ್ಟ ವಸ್ತುಗಳನ್ನು ಅವರ ಮೇಲೆ ನಿಷಿದ್ಧಗೊಳಿಸುವರು. ಅವರ ಭಾರಗಳನ್ನು ಮತ್ತು ಅವರ ಮೇಲಿದ್ದ ಸಂಕೋಲೆಗಳನ್ನು ಕೆಳಗಿಳಿಸುವರು.[1] ಆದ್ದರಿಂದ ಆ ಪ್ರವಾದಿಯಲ್ಲಿ ವಿಶ್ವಾಸವಿಡುವವರು, ಅವರನ್ನು ಬೆಂಬಲಿಸುವವರು, ಸಹಾಯ ಮಾಡುವವರು ಮತ್ತು ಅವರೊಂದಿಗೆ ಅವತೀರ್ಣಗೊಂಡಿರುವ ಪ್ರಕಾಶವನ್ನು ಅನುಸರಿಸುವವರು ಯಾರೋ ಅವರೇ ಯಶಸ್ವಿಯಾದವರಾಗಿರುವರು.

قُلْ يَـٰٓأَيُّهَا ٱلنَّاسُ إِنِّى رَسُولُ ٱللَّهِ إِلَيْكُمْ جَمِيعًا ٱلَّذِى لَهُۥ مُلْكُ ٱلسَّمَـٰوَٰتِ وَٱلْأَرْضِ ۖ لَآ إِلَـٰهَ إِلَّا هُوَ يُحْىِۦ وَيُمِيتُ ۖ فَـَٔامِنُوا۟ بِٱللَّهِ وَرَسُولِهِ ٱلنَّبِىِّ ٱلْأُمِّىِّ ٱلَّذِى يُؤْمِنُ بِٱللَّهِ وَكَلِمَـٰتِهِۦ وَٱتَّبِعُوهُ لَعَلَّكُمْ تَهْتَدُونَ ﴿١٥٨﴾

**158.** ಹೇಳಿರಿ: ‘ಓ ಮನುಷ್ಯರೇ! ಖಂಡಿತವಾಗಿಯೂ ನಾನು ನಿಮ್ಮೆಲ್ಲರೆಡೆಗೆ (ಕಳುಹಿಸಲಾಗಿರುವ) ಅಲ್ಲಾಹುವಿನ ಸಂದೇಶವಾಹಕನಾಗಿರುವೆನು. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಯಾರಿಗಾಗಿದೆಯೋ ಅವನ(ಸಂದೇಶವಾಹಕನು). ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಜೀವವನ್ನು ನೀಡುವವನೂ ಮೃತಪಡಿಸುವವನೂ ಆಗಿರುವನು. ಆದ್ದರಿಂದ ನೀವು ಅಲ್ಲಾಹುವಿನಲ್ಲೂ, ಅವನ ಸಂದೇಶವಾಹಕರಲ್ಲೂ, ಅಂದರೆ ಅಲ್ಲಾಹುವಿನಲ್ಲೂ, ಅವನ ಸೂಕ್ತಿಗಳಲ್ಲೂ ವಿಶ್ವಾಸವಿಡುವ ನಿರಕ್ಷರಿಯಾದ ಆ ಪ್ರವಾದಿಯಲ್ಲೂ ವಿಶ್ವಾಸವಿರಿಸಿರಿ ಮತ್ತು ಅವರನ್ನು ಅನುಸರಿಸಿರಿ. ನೀವು ಸನ್ಮಾರ್ಗವನ್ನು ಪಡೆಯಲೂಬಹುದು.

وَمِن قَوْمِ مُوسَىٰٓ أُمَّةٌ يَهْدُونَ بِٱلْحَقِّ وَبِهِۦ يَعْدِلُونَ ﴿١٥٩﴾

**159.** ಮೂಸಾರ ಜನತೆಯಲ್ಲಿ ಸತ್ಯದ ಆಧಾರದಲ್ಲಿ ಮಾರ್ಗದರ್ಶನ ಮಾಡುವ ಮತ್ತು ಅದನ್ನು ಅನುಸರಿಸಿ ನ್ಯಾಯ ಪಾಲಿಸುವ ಒಂದು ಪಂಗಡವಿದೆ.

---

1 ಬನೀ ಇಸ್ರಾಈಲರ ಧಿಕ್ಕಾರ ನಿಮಿತ್ತ ಅವರ ಮೇಲೆ ಅಲ್ಲಾಹು ಹೇರಿದ್ದ ವಿಶೇಷ ನಿಷೇಧಗಳನ್ನು –ಶನಿವಾರ ಲೌಕಿಕ ಕಾರ್ಯಗಳಲ್ಲಿ ನಿರತನಾಗುವುದರ ಮೇಲೆ, ಕೆಲವು ಬಗೆಯ ಮಾಂಸಗಳನ್ನು ತಿನ್ನುವುದರ ಮೇಲಿದ್ದ ನಿಷೇಧ ಇತ್ಯಾದಿ– ಹೇರಿದ್ದನು. ಪ್ರವಾದಿ ಮುಹಮ್ಮದ್(ﷺ)ರವರ ಮೂಲಕ ಇವುಗಳನ್ನು ತೆರವುಗೊಳಿಸಿದನು.

160. ನಾವು ಅವರನ್ನು ಹನ್ನೆರಡು ಜನಾಂಗಗಳನ್ನಾಗಿ ಅಥವಾ ಸಮುದಾಯಗಳನ್ನಾಗಿ ವಿಂಗಡಿಸಿದೆವು. ಮೂಸಾರೊಂದಿಗೆ ಅವರ ಜನತೆಯು ನೀರನ್ನು ಬೇಡಿದಾಗ, 'ತಮ್ಮ ಬೆತ್ತದಿಂದ ಆ ಬಂಡೆಗಲ್ಲನ್ನು ಹೊಡೆಯಿರಿ' ಎಂದು ನಾವು ಅವರಿಗೆ ದಿವ್ಯ ಸಂದೇಶವನ್ನು ನೀಡಿದೆವು. ಆಗ ಅದರಿಂದ ಹನ್ನೆರಡು ಒರತೆಗಳು ಚಿಮ್ಮಿ ಹರಿದವು. ಎಲ್ಲ ಜನರೂ ತಮ್ಮ ಕುಡಿಯುವ ಸ್ಥಳವನ್ನು ಅರಿತುಕೊಂಡರು. ನಾವು ಅವರಿಗೆ ಮೋಡದ ನೆರಳನ್ನು ನೀಡಿದೆವು ಮತ್ತು ಮನ್ನಃ ಹಾಗೂ ಸಲ್ವಾಗಳನ್ನು ಇಳಿಸಿಕೊಟ್ಟೆವು. 'ನಾವು ನಿಮಗೆ ನೀಡಿರುವ ವಿಶಿಷ್ಟ ವಸ್ತುಗಳಿಂದ ತಿನ್ನಿರಿ' (ಎಂದು ಅವರಿಗೆ ಆದೇಶವನ್ನು ನೀಡಿದೆವು). (ಅವರ ಧಿಕ್ಕಾರದ ನಿಮಿತ್ತ) ಅವರು ನಮಗೆ ಯಾವ ಅನ್ಯಾಯವನ್ನೂ ಮಾಡಿಲ್ಲ. ಆದರೆ ಅವರು ಅನ್ಯಾಯವೆಸಗುತ್ತಿರುವುದು ಸ್ವತಃ ತಮ್ಮ ಮೇಲೇ ಆಗಿದೆ.

وَقَطَّعۡنَٰهُمُ ٱثۡنَتَيۡ عَشۡرَةَ أَسۡبَاطًا أُمَمٗاۚ وَأَوۡحَيۡنَآ إِلَىٰ مُوسَىٰٓ إِذِ ٱسۡتَسۡقَىٰهُ قَوۡمُهُۥٓ أَنِ ٱضۡرِب بِّعَصَاكَ ٱلۡحَجَرَۖ فَٱنۢبَجَسَتۡ مِنۡهُ ٱثۡنَتَا عَشۡرَةَ عَيۡنٗاۖ قَدۡ عَلِمَ كُلُّ أُنَاسٖ مَّشۡرَبَهُمۡۚ وَظَلَّلۡنَا عَلَيۡهِمُ ٱلۡغَمَٰمَ وَأَنزَلۡنَا عَلَيۡهِمُ ٱلۡمَنَّ وَٱلسَّلۡوَىٰۖ كُلُواْ مِن طَيِّبَٰتِ مَا رَزَقۡنَٰكُمۡۚ وَمَا ظَلَمُونَا وَلَٰكِن كَانُوٓاْ أَنفُسَهُمۡ يَظۡلِمُونَ ١٦٠

161. 'ನೀವು ಈ ನಾಡಿನಲ್ಲಿ ವಾಸಿಸಿರಿ. ಇಲ್ಲಿ ನೀವಿಚ್ಛಿಸುವಲ್ಲಿಂದ ತಿನ್ನಿರಿ. ನೀವು ಪಾಪ ಮುಕ್ತಿಗಾಗಿ ಪ್ರಾರ್ಥಿಸಿರಿ ಮತ್ತು ತಲೆಬಾಗಿದವರಾಗಿ ದ್ವಾರವನ್ನು ಪ್ರವೇಶಿಸಿರಿ. ನಾವು ನಿಮ್ಮ ಪಾಪಗಳನ್ನು ಕ್ಷಮಿಸುವೆವು. ಸತ್ಕರ್ಮಿಗಳಿಗೆ ನಾವು ಹೆಚ್ಚು ಹೆಚ್ಚಾಗಿ ಕೊಡುವೆವು' ಎಂದು ಅವರೊಂದಿಗೆ ಹೇಳಲಾದ ಸಂದರ್ಭ (ವನ್ನು ಸ್ಮರಿಸಿರಿ).

وَإِذۡ قِيلَ لَهُمُ ٱسۡكُنُواْ هَٰذِهِ ٱلۡقَرۡيَةَ وَكُلُواْ مِنۡهَا حَيۡثُ شِئۡتُمۡ وَقُولُواْ حِطَّةٞ وَٱدۡخُلُواْ ٱلۡبَابَ سُجَّدٗا نَّغۡفِرۡ لَكُمۡ خَطِيٓـَٰٔتِكُمۡۚ سَنَزِيدُ ٱلۡمُحۡسِنِينَ ١٦١

162. ಆಗ ಅವರಲ್ಲಿದ್ದ ಅಕ್ರಮಿಗಳು ತಮಗೆ ಆದೇಶಿಸಲಾಗಿರುವುದಕ್ಕೆ ಬದಲಾಗಿ ಬೇರೆಯೇ ಮಾತನ್ನು ಹೇಳಿದರು. ಅವರು ಅಕ್ರಮವೆಸಗಿದ ಫಲವಾಗಿ ನಾವು ಅವರ ಮೇಲೆ ಆಕಾಶದಿಂದ ಶಿಕ್ಷೆಯನ್ನು ಕಳುಹಿಸಿದೆವು.

فَبَدَّلَ ٱلَّذِينَ ظَلَمُواْ مِنۡهُمۡ قَوۡلًا غَيۡرَ ٱلَّذِي قِيلَ لَهُمۡ فَأَرۡسَلۡنَا عَلَيۡهِمۡ رِجۡزٗا مِّنَ ٱلسَّمَآءِ بِمَا كَانُواْ يَظۡلِمُونَ ١٦٢

وَسۡـَٔلۡهُمۡ عَنِ ٱلۡقَرۡيَةِ ٱلَّتِي كَانَتۡ حَاضِرَةَ ٱلۡبَحۡرِ إِذۡ يَعۡدُونَ فِي ٱلسَّبۡتِ إِذۡ تَأۡتِيهِمۡ حِيتَانُهُمۡ يَوۡمَ سَبۡتِهِمۡ شُرَّعٗا وَيَوۡمَ لَا يَسۡبِتُونَ لَا تَأۡتِيهِمۡۚ كَذَٰلِكَ نَبۡلُوهُم بِمَا كَانُواْ يَفۡسُقُونَ ١٦٣

**163.** ಸಮುದ್ರ ತೀರದಲ್ಲಿದ್ದ ಆ ಪಟ್ಟಣದ (ಅಂದರೆ) ಕುರಿತು ಅವರೊಂದಿಗೆ ಕೇಳಿ ನೋಡಿರಿ. ಸಬ್ಬತ್ ದಿನದ (ಶನಿವಾರದ) ವಿಷಯದಲ್ಲಿ ಅವರು ಅತಿಕ್ರಮವೆಸಗಿದ ಸಂದರ್ಭ.[1] ಅವರು ಸಬ್ಬತ್ ದಿನದಂದು ಅವರಿಗೆ ಬೇಕಾದ ಮೀನುಗಳು ನೀರಿನ ಮೇಲೆ ತಲೆಯೆತ್ತುತ್ತಾ ಅವರೆಡೆಗೆ ಬರುತ್ತಿದ್ದ ಮತ್ತು ಅವರು ಸಬ್ಬತ್ ಆಚರಿಸಬೇಕಾಗಿಲ್ಲದ ದಿನದಂದು ಅವು ಅವರೆಡೆಗೆ ಬಾರದಿರುತ್ತಿದ್ದ ಸಂದರ್ಭ. ಅವರು ಧಿಕ್ಕಾರ ತೋರಿರುವುದರ ಫಲವಾಗಿ ನಾವು ಅವರನ್ನು ಹೀಗೆ ಪರೀಕ್ಷಿಸಿದೆವು.

وَإِذۡ قَالَتۡ أُمَّةٞ مِّنۡهُمۡ لِمَ تَعِظُونَ قَوۡمًا ٱللَّهُ مُهۡلِكُهُمۡ أَوۡ مُعَذِّبُهُمۡ عَذَابٗا شَدِيدٗاۖ قَالُواْ مَعۡذِرَةً إِلَىٰ رَبِّكُمۡ وَلَعَلَّهُمۡ يَتَّقُونَ ١٦٤

**164.** 'ಅಲ್ಲಾಹು ನಾಶಗೊಳಿಸಲಿರುವ ಅಥವಾ ಕಠಿಣವಾಗಿ ಶಿಕ್ಷಿಸಲಿರುವ ಒಂದು ಜನತೆಗೆ ನೀವೇಕೆ ಉಪದೇಶ ನೀಡುತ್ತಿರುವಿರಿ' ಎಂದು ಅವರ ಪೈಕಿ ಒಂದು ಪಂಗಡವು ಹೇಳಿದ ಸಂದರ್ಭ(ವನ್ನು ಗಮನಿಸಿರಿ).[2] ಅವರು ಹೇಳಿದರು: 'ಇದು ನಿಮ್ಮ ರಬ್‌ನ ಬಳಿ (ನಾವು) ಅಪರಾಧದಿಂದ ಮುಕ್ತರಾಗುವ ಸಲುವಾಗಿದೆ. ಬಹುಶಃ ಅವರು ಭಯಭಕ್ತಿ ಪಾಲಿಸಲೂ ಬಹುದು'.

فَلَمَّا نَسُواْ مَا ذُكِّرُواْ بِهِۦٓ أَنجَيۡنَا ٱلَّذِينَ يَنۡهَوۡنَ عَنِ ٱلسُّوٓءِ وَأَخَذۡنَا ٱلَّذِينَ ظَلَمُواْ بِعَذَابِۭ بَـِٔيسِۭ بِمَا كَانُواْ يَفۡسُقُونَ ١٦٥

**165.** ಆದರೆ ಅವರಿಗೆ ನೆನಪಿಸಿಕೊಡಲಾಗಿರುವುದನ್ನು ಅವರು ಮರೆತು ಬಿಟ್ಟಾಗ, ದುಷ್ಕೃತ್ಯವನ್ನು ವಿರೋಧಿಸಿದವರಾರೋ ಅವರನ್ನು ನಾವು

1 ಮೀನುಗಾರಿಕೆ ಸೇರಿದಂತೆ ಯಾವುದೇ ಉದ್ಯೋಗವನ್ನೂ ಶನಿವಾರದಂದು ಮಾಡಬಾರದೆಂಬ ನಿಷೇಧವು ಅವರ ಮೇಲಿತ್ತು. ಸಮುದ್ರದಲ್ಲಿ ಮೀನುಗಳು ಭಾರೀ ಪ್ರಮಾಣದಲ್ಲಿ ಕಾಣುತ್ತಿದ್ದುದು ಅದೇ ದಿನವಾಗಿತ್ತು. ಬೇರೆ ದಿನಗಳಲ್ಲಿ ಮೀನುಗಳೇ ಇರುತ್ತಿರಲಿಲ್ಲ. ಇದು ಅಲ್ಲಾಹುವಿನ ಪರೀಕ್ಷೆಯಾಗಿತ್ತು. ಅವರು ಆ ಪರೀಕ್ಷೆಯಲ್ಲಿ ಅನುತ್ತೀರ್ಣರಾದರು.

2 ಅವರ ಪೈಕಿ ಒಂದು ಗುಂಪು ಸಬ್ಬತ್‌ನ ಪಾವಿತ್ರ್ಯತೆಯನ್ನು ಉಲ್ಲಂಘಿಸಿ ಮೀನು ಹಿಡಿಯಲು ಹೊರಟಾಗ ಸತ್ಯವಿಶ್ವಾಸದಲ್ಲಿ ಅಚಲರಾಗಿದ್ದ ಮತ್ತೊಂದು ಗುಂಪು ಜನರು ಅವರಿಗೆ ಹಿತೋಪದೇಶ ನೀಡತೊಡಗಿದರು ಮತ್ತು ಅಲ್ಲಾಹುವಿನ ವಿಧಿ–ನಿಷೇಧಗಳನ್ನು ಉಲ್ಲಂಘಿಸುವುದರಲ್ಲಿರುವ ಅಪಾಯದ ಬಗ್ಗೆ ತಿಳಿಹೇಳಿದರು. ಇದು ನೈಜ ಸತ್ಯವಿಶ್ವಾಸಿಯ ಕರ್ತವ್ಯವೂ ಆಗಿದೆ. ಆದರೆ ವಿಶ್ವಾಸಿಗಳಲ್ಲಿ ಸೇರಿದ ಇನ್ನೊಂದು ಗುಂಪಿಗೆ ಈ ಉಪದೇಶವು ವ್ಯರ್ಥವಾಗಿ ಕಂಡಿತು. ಅಪರಾಧಿಗಳನ್ನು ಅಲ್ಲಾಹು ಶಿಕ್ಷಿಸುತ್ತಾನಲ್ಲವೇ? ಹಾಗಿರುವಾಗ ನಾವೇಕೆ ಅದರಲ್ಲಿ ಮಧ್ಯಪ್ರವೇಶ ಮಾಡಬೇಕು? ಎಂಬುದಾಗಿತ್ತು ಅವರ ನಿಲುವು. ವಾಸ್ತವಿಕವಾಗಿ ಇದು ಹೇಡಿಗಳ ನಿಲುವಾಗಿದೆ. ಅಪರಾಧಿಗಳನ್ನು ತಿದ್ದಲು ಯತ್ನಿಸುವವರಿಗೆ ಅಲ್ಲಾಹು ರಕ್ಷಣೆಯ ವಾಗ್ದಾನವಿತ್ತಿರುವನು.

ರಕ್ಷಿಸಿದೆವು ಅಕ್ರಮಿಗಳಾದ ಜನರನ್ನು ಅವರು ಧಿಕ್ಕಾರ ತೋರಿರುವುದರ ಫಲವಾಗಿ ನಾವು ಕಠಿಣವಾದ ಶಿಕ್ಷೆಯ ಮೂಲಕ ಹಿಡಿದೆವು.

**166.** ಅವರಿಗೆ ವಿರೋಧಿಸಲಾಗಿರುವ ವಿಷಯಗಳಲ್ಲೆಲ್ಲ ಅವರು ಧಿಕ್ಕಾರವನ್ನು ತೋರಿದಾಗ ನಾವು ಅವರೊಂದಿಗೆ ಹೇಳಿದೆವು: 'ನೀವು ನಿಂದ್ಯರಾದ ಕಪಿಗಳಾಗಿರಿ'.

فَلَمَّا عَتَوۡاْ عَن مَّا نُهُواْ عَنۡهُ قُلۡنَا لَهُمۡ كُونُواْ قِرَدَةً خَٰسِـِٔينَ ١٦٦

**167.** ಅವರ (ಇಸ್ರಾಈಲರ) ಮೇಲೆ ಪುನರುತ್ಥಾನ ದಿನದವರೆಗೆ ಅವರಿಗೆ ಹೀನ ಶಿಕ್ಷೆ ನೀಡುತ್ತಿರುವವರನ್ನು ಕಳುಹಿಸಿಯೇ ತೀರುವೆನೆಂದು ತಮ್ಮ ರಬ್ ಘೋಷಿಸಿದ ಸಂದರ್ಭ(ವನ್ನುಸ್ಮರಿಸಿರಿ).[1] ಖಂಡಿತವಾಗಿಯೂ ತಮ್ಮ ರಬ್ ಅತಿಶೀಘ್ರವಾಗಿ ಶಿಕ್ಷಿಸುವವನಾಗಿರುವನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

وَإِذۡ تَأَذَّنَ رَبُّكَ لَيَبۡعَثَنَّ عَلَيۡهِمۡ إِلَىٰ يَوۡمِ ٱلۡقِيَٰمَةِ مَن يَسُومُهُمۡ سُوٓءَ ٱلۡعَذَابِۗ إِنَّ رَبَّكَ لَسَرِيعُ ٱلۡعِقَابِ وَإِنَّهُۥ لَغَفُورٞ رَّحِيمٞ ١٦٧

**168.** ನಾವು ಅವರನ್ನು ಭೂಮಿಯಲ್ಲಿ ಹಲವು ಜನಾಂಗಗಳಾಗಿ ವಿಂಗಡಿಸಿದೆವು. ಅವರ ಪೈಕಿ ಸಜ್ಜನರಿರುವರು. ಅದಕ್ಕಿಂತ ಕೆಳಮಟ್ಟದವರೂ ಅವರಲ್ಲಿರುವರು. ಅವರು ಮರಳಿ ಬರುವ ಸಲುವಾಗಿ ನಾವು ಅವರನ್ನು ಒಳಿತುಗಳಿಂದಲೂ ಕೆಡುಕುಗಳಿಂದಲೂ ಪರೀಕ್ಷಿಸಿದೆವು.

وَقَطَّعۡنَٰهُمۡ فِي ٱلۡأَرۡضِ أُمَمٗاۖ مِّنۡهُمُ ٱلصَّٰلِحُونَ وَمِنۡهُمۡ دُونَ ذَٰلِكَۖ وَبَلَوۡنَٰهُم بِٱلۡحَسَنَٰتِ وَٱلسَّيِّـَٔاتِ لَعَلَّهُمۡ يَرۡجِعُونَ ١٦٨

**169.** ತರುವಾಯ ಅವರ ಬಳಿಕ ಅವರ ಉತ್ತರಾಧಿಕಾರಿಗಳಾಗಿ ಒಂದು ತಲೆಮಾರು ಬಂದಿತು. ಅವರು ಗ್ರಂಥದ ಉತ್ತರಾಧಿಕಾರವನ್ನು ವಹಿಸಿಕೊಂಡರು. ಅವರು ಈ ತುಚ್ಛವಾದ ಜೀವನದ

فَخَلَفَ مِنۢ بَعۡدِهِمۡ خَلۡفٞ وَرِثُواْ ٱلۡكِتَٰبَ يَأۡخُذُونَ عَرَضَ هَٰذَا ٱلۡأَدۡنَىٰ وَيَقُولُونَ سَيُغۡفَرُ لَنَا وَإِن يَأۡتِهِمۡ عَرَضٞ مِّثۡلُهُۥ يَأۡخُذُوهُۚ أَلَمۡ يُؤۡخَذۡ عَلَيۡهِم مِّيثَٰقُ

1 ಧಿಕ್ಕಾರ, ದುಷ್ಕೃತ್ಯ, ಪಿತೂರಿ ಮುಂತಾದವುಗಳನ್ನು ತೊರೆದು ಶಾಂತಿಯುತ ಜೀವನವನ್ನು ನಡೆಸುವ ಅಭ್ಯಾಸವು ಯಹೂದರಿಗೆ ಹೆಚ್ಚಿನ ಸಂದರ್ಭಗಳಲ್ಲಿ ಇರಲಿಲ್ಲ. ಆದ್ದರಿಂದಲೇ ಅನೇಕ ಸಂದರ್ಭಗಳಲ್ಲಿ ಅವರು ಇತರ ಜನಾಂಗಗಳ ಆಕ್ರಮಣ ಮತ್ತು ದೌರ್ಜನ್ಯಗಳಿಗೆ ಬಲಿಪಶುಗಳಾಗುತ್ತಲೇ ಇರುವರು.

ٱلْكِتَٰبِ أَن لَّا يَقُولُوا۟ عَلَى ٱللَّهِ إِلَّا ٱلْحَقَّ
وَدَرَسُوا۟ مَا فِيهِ ۗ وَٱلدَّارُ ٱلْـَٔاخِرَةُ خَيْرٌ لِّلَّذِينَ
يَتَّقُونَ ۚ أَفَلَا تَعْقِلُونَ ﴿١٦٩﴾

ಸವಲತ್ತುಗಳನ್ನು ಪಡೆಯುತ್ತಿರುವವರು.[1] "ನಮಗೆ ಅದೆಲ್ಲವೂ ಕ್ಷಮಿಸಲ್ಪಡುವುದು' ಎಂದವರು ಹೇಳುವರು. ಅಂತಹ ಬೇರೆ ಸವಲತ್ತುಗಳು ಬಂದರೂ ಅವರದನ್ನು ಪಡೆಯುವರು.[2] ಅಲ್ಲಾಹುವಿನ ಮೇಲೆ ಸತ್ಯವನ್ನಲ್ಲದೆ ಬೇರೇನನ್ನೂ ಹೇಳಲಾರೆವು ಎಂದು ಗ್ರಂಥದ ಮೂಲಕ ಅವರಿಂದ ಕರಾರನ್ನು ಪಡೆಯಲಾಗಿಲ್ಲವೇ? ಅದರಲ್ಲಿರುವುದನ್ನು ಅವರು ಅಧ್ಯಯನ ಮಾಡಿಲ್ಲವೇ? ಭಯಭಕ್ತಿ ಪಾಲಿಸುವವರಿಗೆ ಪರಲೋಕ ಜೀವನವೇ ಉತ್ತಮವಾಗಿದೆ. ನೀವು ಚಿಂತಿಸಿ ಗ್ರಹಿಸಲಾರಿರೇ?

وَٱلَّذِينَ يُمَسِّكُونَ بِٱلْكِتَٰبِ
وَأَقَامُوا۟ ٱلصَّلَوٰةَ إِنَّا لَا نُضِيعُ أَجْرَ
ٱلْمُصْلِحِينَ ﴿١٧٠﴾

170. ಗ್ರಂಥವನ್ನು ಬಲವಾಗಿ ಹಿಡಿಯುವವರು ಮತ್ತು ನಮಾಝನ್ನು ಸಂಸ್ಥಾಪಿಸುವವರು ಯಾರೋ ಅಂತಹ ಸತ್ಕರ್ಮಿಗಳ ಪ್ರತಿಫಲವನ್ನು ನಾವು ಖಂಡಿತವಾಗಿಯೂ ವ್ಯರ್ಥಗೊಳಿಸಲಾರೆವು.

۞ وَإِذْ نَتَقْنَا ٱلْجَبَلَ فَوْقَهُمْ كَأَنَّهُۥ
ظُلَّةٌ وَظَنُّوٓا۟ أَنَّهُۥ وَاقِعٌۢ بِهِمْ خُذُوا۟ مَآ
ءَاتَيْنَٰكُم بِقُوَّةٍ وَٱذْكُرُوا۟ مَا فِيهِ
لَعَلَّكُمْ تَتَّقُونَ ﴿١٧١﴾

171. ನಾವು ಪರ್ವತವನ್ನು ಅವರ ಮೇಲೆ ಒಂದು ಕೊಡೆಯೆಂಬಂತೆ ಎತ್ತಿಹಿಡಿದ ಮತ್ತು ಅದು ಅವರ ಮೇಲೆ ಬೀಳುವುದೆಂದು ಅವರಿಗೆ ಖಾತ್ರಿಯಾದ ಸಂದರ್ಭವನ್ನು ಸ್ಮರಿಸಿರಿ. (ನಾವು ಹೇಳಿದೆವು): 'ನಾವು ನಿಮಗೆ ನೀಡಿರುವುದನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ ಮತ್ತು ಅದರಲ್ಲಿರುವುದನ್ನು ಸ್ಮರಿಸಿರಿ. ನೀವು ಭಯಭಕ್ತಿ ಪಾಲಿಸುವವರಾಗಲೂ ಬಹುದು'

وَإِذْ أَخَذَ رَبُّكَ مِنۢ بَنِىٓ ءَادَمَ مِن ظُهُورِهِمْ

172. ತಮ್ಮ ರಬ್ ಆದಮ್‌ರ ಸಂತತಿಗಳಿಂದ, ಅವರ ಬೆನ್ನುಗಳಿಂದ ಅವರ ಸಂತಾನಗಳನ್ನು

1 ಇಲ್ಲಿ ಸೂಚಿಸಿರುವುದು ಅವರು ಭ್ರಷ್ಟಾಚಾರದ ಮೂಲಕ ಮತ್ತು ಧರ್ಮನಿಯಮಗಳನ್ನು ಮರೆಮಾಚುವ ಮೂಲಕ ಗಳಿಸಿಕೊಂಡಿದ್ದ ತುಚ್ಛವಾದ ಐಹಿಕ ಸಂಪಾದನೆಯನ್ನಾಗಿದೆ.

2 ಹೃದಯವನ್ನು ಸ್ಪರ್ಶಿಸದ ಪಶ್ಚಾತ್ತಾಪ ಮಾತುಗಳಿಂದಲೂ ಪಾಪಗಳು ಮನ್ನಿಸಲ್ಪಡುತ್ತವೆಯೆಂದು ಅವರು ಭಾವಿಸಿದ್ದರು. ಅವರು ಸ್ವತಃ ತಮ್ಮನ್ನು ಅಲ್ಲಾಹುವಿನ ಅಚ್ಚುಮೆಚ್ಚಿನ ಸಮುದಾಯವಾಗಿದ್ದೇವೆ ಎಂದು ಪರಿಗಣಿಸುತ್ತಿದ್ದರು. ಭ್ರಷ್ಟಾಚಾರವು ಅಪರಾಧವಾಗಿದೆಯೆಂದು ಮನವರಿಕೆಯಾಗಿ ಅವರು ಪಶ್ಚಾತ್ತಾಪಪಟ್ಟ ಬಳಿಕವೂ ಲಂಚ ಸಿಗುವುದಾದರೆ ಅದನ್ನು ಪಡೆಯಲು ಅವರು ಸಂಕೋಚ ಪಡುತ್ತಿರಲಿಲ್ಲ.

ಹೊರತೆಗೆದು, ಅವರ ವಿಷಯದಲ್ಲಿ ಅವರನ್ನೇ ಸಾಕ್ಷಿಯಾಗಿ ನಿಲ್ಲಿಸಿದ ಸಂದರ್ಭ(ವನ್ನು ಸ್ಮರಿಸಿರಿ). (ಅವನು ಕೇಳಿದನು): 'ನಾನು ನಿಮ್ಮ ರಬ್ಬಲ್ಲವೇ?' ಅವರು ಹೇಳಿದರು: 'ಹೌದು, ನಾವು ಸಾಕ್ಷ್ಯವಹಿಸಿರುವೆವು'[1] 'ನಿಜವಾಗಿಯೂ ನಾವು ಇದರ ಕುರಿತು ಅಲಕ್ಷ್ಯರಾಗಿದ್ದೆವು' ಎಂದು ಪುನರುತ್ಥಾನ ದಿನದಂದು ನೀವು ಹೇಳಬಾರದು ಎಂಬುದರಿಂದ (ಹೀಗೆ ಮಾಡಲಾಯಿತು).

ذُرِّيَّتَهُمْ وَأَشْهَدَهُمْ عَلَىٰٓ أَنفُسِهِمْ أَلَسْتُ بِرَبِّكُمْ ۖ قَالُوا۟ بَلَىٰ ۛ شَهِدْنَآ ۛ أَن تَقُولُوا۟ يَوْمَ ٱلْقِيَـٰمَةِ إِنَّا كُنَّا عَنْ هَـٰذَا غَـٰفِلِينَ ﴿١٧٢﴾

173. ಅಥವಾ 'ಇದಕ್ಕಿಂತ ಮುಂಚೆಯೇ ನಮ್ಮ ಪೂರ್ವಿಕರು ಅಲ್ಲಾಹನೊಂದಿಗೆ ಸಹಭಾಗಿತ್ವ ಮಾಡಿದ್ದರು. ನಾವು ಅವರ ನಂತರ ಸಂತತಿಗಳಾಗಿ ಬಂದವರು ಮಾತ್ರವಾಗಿರುವೆವು. ಹೀಗಿರುವಾಗ ಆ ಮಿಥ್ಯವಾದಿಗಳು ಮಾಡಿರುವುದರ ನಿಮಿತ್ತ ನೀನು ನಮ್ಮನ್ನು ನಾಶ ಮಾಡುವೆಯಾ?' ಎಂದು ನೀವು ಹೇಳಬಾರದು ಎಂಬುದರಿಂದ.[2]

أَوْ تَقُولُوٓا۟ إِنَّمَآ أَشْرَكَ ءَابَآؤُنَا مِن قَبْلُ وَكُنَّا ذُرِّيَّةً مِّنۢ بَعْدِهِمْ ۖ أَفَتُهْلِكُنَا بِمَا فَعَلَ ٱلْمُبْطِلُونَ ﴿١٧٣﴾

174. ನಾವು ಹೀಗೆ ದೃಷ್ಟಾಂತಗಳನ್ನು ವಿವರಿಸಿಕೊಡುವೆವು. ಅವರು ಮರಳಲೂ ಬಹುದು.

وَكَذَٰلِكَ نُفَصِّلُ ٱلْـَٔايَـٰتِ وَلَعَلَّهُمْ يَرْجِعُونَ ﴿١٧٤﴾

175. ಅವರಿಗೆ ಒಬ್ಬನ ವೃತ್ತಾಂತವನ್ನು ಓದಿಕೊಡಿರಿ. ನಾವು ಅವನಿಗೆ ನಮ್ಮ ದೃಷ್ಟಾಂತಗಳನ್ನು ನೀಡಿದೆವು. ಆದರೆ ಅವನು ಅದರಿಂದ ನುಣುಚಿಕೊಂಡನು. ತರುವಾಯ ಸೈತಾನನು

وَٱتْلُ عَلَيْهِمْ نَبَأَ ٱلَّذِىٓ ءَاتَيْنَـٰهُ ءَايَـٰتِنَا فَٱنسَلَخَ مِنْهَا فَأَتْبَعَهُ ٱلشَّيْطَـٰنُ فَكَانَ مِنَ ٱلْغَاوِينَ ﴿١٧٥﴾

---

1 ಇಲ್ಲಿ ಹೇಳಲಾಗಿರುವುದು ಮನುಷ್ಯ ಪ್ರಕೃತಿಯಲ್ಲಿ ಒಳಗೊಂಡಿರುವ ಸತ್ಯಸಾಕ್ಷ್ಯದ ಬಗ್ಗೆಯಾಗಿದೆ. ತಾನು ಹೇಗೋ ಉಂಟಾದವನಲ್ಲ, ಬದಲಾಗಿ ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಸೃಷ್ಟಿಕರ್ತನು ತನ್ನನ್ನು ವಿಸ್ಮಯಕರವಾದ ರೀತಿಯಲ್ಲಿ ಸೃಷ್ಟಿಸಿರುವನೆಂದು ವಿಕಲ ಮನಸ್ಸನ್ನು ಹೊಂದಿರದ ಯಾವುದೇ ವ್ಯಕ್ತಿಯೂ ಒಪ್ಪಿಕೊಳ್ಳುವನು. ತಂದೆಯ ಬೆನ್ನಿನ ಭಾಗದಲ್ಲಿ ರೂಪುಗೊಳ್ಳುವ ಪುರುಷ ಬೀಜದ ಮೂಲಕ, ಪ್ರತ್ಯುತ್ಪಾದನಾ ಕೋಶದ ಮೂಲಕ ಬೆಳೆದು ತಲೆಮಾರು ತಲೆಮಾರುಗಳಾಗಿ ಭೂಮಿಯಲ್ಲಿ ನಾಯಕತ್ವವನ್ನು ವಹಿಸುತ್ತಿರುವ ಮನುಷ್ಯನು ತನ್ನ ಅಸ್ತಿತ್ವದ ಬಗ್ಗೆ ಮಾಡುವ ಯಾವುದೇ ಪ್ರಾಮಾಣಿಕ ಅನ್ವೇಷಣೆಯು ಅವನನ್ನು ದೇವವಿಶ್ವಾಸದೆಡೆಗೆ ಒಯ್ಯದಿರಲಾರದು.

2 ಅಲ್ಲಾಹುವಿನ ಅಸ್ತಿತ್ವ ಮತ್ತು ಏಕತ್ವವು ತನಗೆ ಸಂಪೂರ್ಣ ಅಪರಿಚಿತವಾಗಿತ್ತು ಎಂದು ತನ್ನ ಆತ್ಮಸಾಕ್ಷಿಯನ್ನು ವಂಚಿಸುವ ಮೂಲಕವಲ್ಲದೆ ಅಲ್ಲಾಹುವಿನ ಮುಂದೆ ಹೇಳಲು ಯಾರಿಗೂ ಸಾಧ್ಯವಾಗಲಾರದು.

ಅವನನ್ನು ಹಿಂಬಾಲಿಸಿದನು. ಕೊನೆಗೆ ಅವನು ದುರ್ಮಾರ್ಗಿಗಳ ಪೈಕಿ ಸೇರಿದವನಾದನು.

176. ನಾವು ಇಚ್ಛಿಸುತ್ತಿದ್ದರೆ ಅದರಿಂದಾಗಿ (ದೃಷ್ಟಾಂತಗಳಿಂದಾಗಿ) ನಾವು ಅವನನ್ನು ಉನ್ನತಗೊಳಿಸುತ್ತಿದ್ದೆವು. ಆದರೆ ಅವನು ಭೂಮಿಯೆಡೆಗೆ (ಅದು ಶಾಶ್ವತವೆಂಬ ಭಾವನೆಯಲ್ಲಿ) ತಿರುಗಿ ತನ್ನ ದೇಹೇಚ್ಛೆಯನ್ನು ಅನುಸರಿಸಿದನು.(1) ಆದ್ದರಿಂದ ಅವನ ಉಪಮೆಯು ಒಂದು ನಾಯಿಯಂತಿದೆ. ನೀನು ಅದನ್ನು ಅಟ್ಟಿದರೆ ಅದು ನಾಲಗೆಯನ್ನು ಹೊರಚಾಚುವುದು. ನೀನು ಅದನ್ನು ಅದರ ಪಾಡಿಗೆ ಬಿಟ್ಟರೂ ಅದು ನಾಲಗೆಯನ್ನು ಹೊರಚಾಚುವುದು.(2) ಇದು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದ ಜನತೆಯ ಉಪಮೆಯಾಗಿದೆ. (ಅವರಿಗೆ)ಈ ಕಥೆಯನ್ನು ವಿವರಿಸಿಕೊಡಿರಿ. ಅವರು ಚಿಂತಿಸಲೂ ಬಹುದು.

وَلَوْ شِئْنَا لَرَفَعْنَٰهُ بِهَا وَلَٰكِنَّهُۥٓ أَخْلَدَ إِلَى ٱلْأَرْضِ وَٱتَّبَعَ هَوَىٰهُ ۚ فَمَثَلُهُۥ كَمَثَلِ ٱلْكَلْبِ إِن تَحْمِلْ عَلَيْهِ يَلْهَثْ أَوْ تَتْرُكْهُ يَلْهَث ۚ ذَّٰلِكَ مَثَلُ ٱلْقَوْمِ ٱلَّذِينَ كَذَّبُوا۟ بِـَٔايَٰتِنَا ۚ فَٱقْصُصِ ٱلْقَصَصَ لَعَلَّهُمْ يَتَفَكَّرُونَ ﴿١٧٦﴾

177. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದ ಮತ್ತು ಸ್ವತಃ ತಮ್ಮ ಮೇಲೆಯೇ ಅಕ್ರಮವೆಸಗಿದ ಜನತೆಯ ಉಪಮೆಯು ಎಷ್ಟೊಂದು ನಿಕೃಷ್ಟವಾದುದು!.

سَآءَ مَثَلًا ٱلْقَوْمُ ٱلَّذِينَ كَذَّبُوا۟ بِـَٔايَٰتِنَا وَأَنفُسَهُمْ كَانُوا۟ يَظْلِمُونَ ﴿١٧٧﴾

178. ಅಲ್ಲಾಹು ಯಾರನ್ನು ಸನ್ಮಾರ್ಗದಲ್ಲಿ ಸೇರಿಸುವನೋ ಅವನೇ ಸನ್ಮಾರ್ಗ ಪಡೆಯುವವನಾಗಿರುವನು. ಅವನು ಯಾರನ್ನು ಪಥಭ್ರಷ್ಟಗೊಳಿಸುವನೋ ಅವರೇ ನಷ್ಟಹೊಂದಿದವರಾಗಿರುವರು.

مَن يَهْدِ ٱللَّهُ فَهُوَ ٱلْمُهْتَدِى ۖ وَمَن يُضْلِلْ فَأُو۟لَٰٓئِكَ هُمُ ٱلْخَٰسِرُونَ ﴿١٧٨﴾

---

1 ಇಲ್ಲಿ ಸೂಚಿಸಿರುವುದು ಬನೀ ಇಸ್ರಾಈಲರಲ್ಲಿದ್ದ ಓರ್ವ ಧರ್ಮ ವಿದ್ವಾಂಸನ ಕುರಿತಾಗಿದೆ. ಗ್ರಂಥದಲ್ಲಿ ನೈಪುಣ್ಯತೆಯನ್ನು ಪಡೆದ ಬಳಿಕವೂ ಅವನು ಐಹಿಕ ಲಾಭಗಳೆಡೆಗೆ ಆಕರ್ಷಿತನಾಗಿ ಅವಿಶ್ವಾಸ ಮತ್ತು ಅನೈತಿಕತೆಗಳೆಡೆಗೆ ವಾಲಿಬಿಟ್ಟನು.

2 ಉಪದೇಶ ಮಾಡಿದರೂ ಮಾಡದಿದ್ದರೂ ಭೌತಿಕ ವಿಷಯಗಳೊಂದಿಗೆ ಆತನಿಗಿರುವ ದುರಾಸೆಯಲ್ಲಿ ಯಾವುದೇ ಬದಲಾವಣೆ ಸಂಭವಿಸದು. ನಾಲಗೆಯನ್ನು ಹೊರಚಾಚಿ ಏದುಸಿರು ಬಿಡುತ್ತಾ ಓಡುವ ನಾಯಿಯಂತೆ ಐಹಿಕ ಸುಖಗಳ ಹಿಂದೆ ಆಸೆಯೊಂದಿಗೆ ಓಡುವ ತನ್ನ ನಿಲುವನ್ನು ಅವನು ಮುಂದುವರಿಸುವನು.

179. ಜಿನ್ನ್[1] ಮತ್ತು ಮನುಷ್ಯರಲ್ಲಿ ಸೇರಿದ ಅನೇಕರನ್ನು ನಾವು ನರಕಕ್ಕಾಗಿ ಸೃಷ್ಟಿಸಿರುವೆವು. ಅವರಿಗೆ ಹೃದಯಗಳಿವೆ; ಅದರಿಂದ ಅವರು ಚಿಂತಿಸಿ ಗ್ರಹಿಸಲಾರರು. ಅವರಿಗೆ ಕಣ್ಣುಗಳಿವೆ; ಅದನ್ನು ಬಳಸಿ ಅವರು ನೋಡಿ ತಿಳಿಯಲಾರರು. ಅವರಿಗೆ ಕಿವಿಗಳಿವೆ; ಅದನ್ನು ಬಳಸಿ ಅವರು ಕೇಳಿ ಅರ್ಥ ಮಾಡಿಕೊಳ್ಳಲಾರರು. ಅವರು ಜಾನುವಾರುಗಳಂತಿರುವರು. ಅಲ್ಲ, ಅವರೇ ಅತ್ಯಧಿಕ ದಾರಿಗೆಟ್ಟವರು. ಅಲಕ್ಷ್ಯರಾಗಿರುವವರು ಅವರೇ ಆಗಿರುವರು.[2]

وَلَقَدْ ذَرَأْنَا لِجَهَنَّمَ كَثِيرًا مِّنَ ٱلْجِنِّ وَٱلْإِنسِ ۖ لَهُمْ قُلُوبٌ لَّا يَفْقَهُونَ بِهَا وَلَهُمْ أَعْيُنٌ لَّا يُبْصِرُونَ بِهَا وَلَهُمْ ءَاذَانٌ لَّا يَسْمَعُونَ بِهَآ ۚ أُو۟لَـٰٓئِكَ كَٱلْأَنْعَـٰمِ بَلْ هُمْ أَضَلُّ ۚ أُو۟لَـٰٓئِكَ هُمُ ٱلْغَـٰفِلُونَ ﴿١٧٩﴾

180. ಅಲ್ಲಾಹುವಿಗೆ ಅತ್ಯುತ್ತಮವಾದ ನಾಮಗಳಿವೆ. ಆದ್ದರಿಂದ ನೀವು ಅವನನ್ನು ಆ ನಾಮಗಳಿಂದ ಕರೆಯಿರಿ.[3] ಅವನ ನಾಮಗಳಲ್ಲಿ ಕೃತ್ರಿಮವನ್ನು ತೋರಿಸುವವ ರಾರೋ[4] ಅವರನ್ನು ಬಿಟ್ಟುಬಿಡಿರಿ. ಅವರು ಮಾಡಿಕೊಂಡಿರುವುದರ ಫಲವನ್ನು ಸದ್ಯವೇ ಅವರಿಗೆ ನೀಡಲಾಗುವುದು.

وَلِلَّهِ ٱلْأَسْمَآءُ ٱلْحُسْنَىٰ فَٱدْعُوهُ بِهَا ۖ وَذَرُوا۟ ٱلَّذِينَ يُلْحِدُونَ فِىٓ أَسْمَـٰٓئِهِۦ ۚ سَيُجْزَوْنَ مَا كَانُوا۟ يَعْمَلُونَ ﴿١٨٠﴾

---

1 ಜಿನ್ನ್ ಎಂಬುದು ವಿವೇಚನಾ ಶಕ್ತಿಯಿರುವ ಮತ್ತು ಅಲ್ಲಾಹುವಿನ ವಿಧಿ–ನಿಷೇಧಗಳನ್ನು ಪಾಲಿಸಲು ಬಾಧ್ಯಸ್ಥರಾಗಿರುವ ಪ್ರತ್ಯೇಕ ಸೃಷ್ಟಿಗಳಾಗಿದ್ದಾರೆ. ಅವರ ಅಸ್ತಿತ್ವವು ನಮ್ಮ ಕಣ್ಣುಗಳಿಗೆ ಗೋಚರವಲ್ಲವೆಂದು 7:27ರಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

2 ಸನ್ಮಾರ್ಗವನ್ನು ಕಂಡುಕೊಳ್ಳಲು ನೆರವಾಗುವ ವಿಶೇಷ ಸಾಮರ್ಥ್ಯಗಳನ್ನು ಅಲ್ಲಾಹು ಮನುಷ್ಯನಿಗೆ ನೀಡಿದ್ದಾನೆ. ಮನುಷ್ಯರು ಪಥಭ್ರಷ್ಟರಾಗುತ್ತಿರುವುದು ಅವುಗಳನ್ನು ಬಳಸದಿರುವ ಕಾರಣದಿಂದಾಗಿದೆ. ಆದ್ದರಿಂದ ಅವರು ಶಿಕ್ಷೆಗೆ ಅರ್ಹರಾಗುತ್ತಾರೆ. ಆಲಿಸಬಾರದು, ಓದಬಾರದು, ಚಿಂತಿಸಬಾರದು ಎಂದು ಹೇಳುವವರು ಒಂದೋ ಈ ಕುರ್‌ಆನ್ ಸೂಕ್ತಿಯನ್ನು ಗ್ರಹಿಸಿರಲಾರರು ಅಥವಾ ಅವರು ಅದನ್ನು ವಿಸ್ಮರಿಸಿರುವರು.

3 ಅಲ್ಲಾಹುವಿನ ಮಹತ್ವಪೂರ್ಣ ಗುಣವಿಶೇಷಣಗಳನ್ನು ತಿಳಿಸುವ ಅನೇಕ ನಾಮವಿಶೇಷಣಗಳು (ಉದಾ: ಅರ್‍ರಹ್ಮಾನ್, ಅರ್‍ರಹೀಮ್) ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಬಂದಿವೆ. ಅಲ್ಲಾಹುವಿಗೆ 99 ಹೆಸರುಗಳಿವೆಯೆಂದು ಹದೀಸ್‌ನಲ್ಲಿ ಬಂದಿದ್ದರೂ ಅತ್ಯುತ್ತಮವಾದ ನಾಮಗಳ ಸಂಖ್ಯೆ ಪರಿಮಿತವಲ್ಲವೆಂದೂ ಇತರ ಹದೀಸ್‌ಗಳಿಂದ ಗ್ರಹಿಸಬಹುದಾಗಿದೆ. ಈ ನಾಮಗಳನ್ನು ಉಚ್ಛರಿಸಿ ಅವನನ್ನು ಸ್ತುತಿಸುವುದು ಮತ್ತು ಆ ಹೆಸರುಗಳ ಮೂಲಕ ಅವನೊಂದಿಗೆ ಪ್ರಾರ್ಥಿಸುವುದು ಮಹಾ ಪುಣ್ಯಕರ್ಮಗಳಾಗಿವೆ.

4 ಅಲ್ಲಾಹನ ನಾಮವಿಶೇಷಣಗಳನ್ನು ದುರ್ವ್ಯಾಖ್ಯಾನ ಮಾಡುವುದು, ದ್ವಂದ್ವಾರ್ಥವಿರುವ ಅಥವಾ ಕೆಟ್ಟ ಅರ್ಥಗಳನ್ನು ಹೊಂದಿರುವ ನಾಮಗಳನ್ನು ಅವನಿಗೆ ಬಳಸುವುದು, ಅವನ ಮಹತ್ತರ ನಾಮಗಳನ್ನು ಬೇರೆಯವರಿಗೆ ನೀಡುವುದು ಇತ್ಯಾದಿಗಳು ಇದರಲ್ಲಿ ಸೇರುತ್ತವೆ.

181. ನಾವು ಸೃಷ್ಟಿಸಿದವರ ಪೈಕಿ ಸತ್ಯದ ಆಧಾರದಲ್ಲಿ ಮಾರ್ಗದರ್ಶನ ಮಾಡುವ ಮತ್ತು ಅದನ್ನು ಅನುಸರಿಸಿ ನ್ಯಾಯ ಪಾಲಿಸುವ ಒಂದು ಸಮುದಾಯವಿದೆ.

وَمِمَّنْ خَلَقْنَآ أُمَّةٌ يَهْدُونَ بِٱلْحَقِّ وَبِهِۦ يَعْدِلُونَ ﴿١٨١﴾

182. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರು ತಿಳಿಯದ ಹಾಗೆ ಅವರನ್ನು ನಾವು ಹಂತ ಹಂತವಾಗಿ ಹಿಡಿದುಕೊಳ್ಳುವೆವು.

وَٱلَّذِينَ كَذَّبُواْ بِـَٔايَـٰتِنَا سَنَسْتَدْرِجُهُم مِّنْ حَيْثُ لَا يَعْلَمُونَ ﴿١٨٢﴾

183. ಅವರಿಗೆ ನಾನು ಕಾಲಾವಕಾಶವನ್ನು ನೀಡುವೆನು. ಖಂಡಿತವಾಗಿಯೂ ನನ್ನ ತಂತ್ರವು ಪ್ರಬಲವಾಗಿದೆ.

وَأُمْلِى لَهُمْ ۚ إِنَّ كَيْدِى مَتِينٌ ﴿١٨٣﴾

184. ಅವರು ಚಿಂತಿಸಲಾರರೇ! ಅವರ ಜೊತೆಗಾರನಿಗೆ (ಮುಹಮ್ಮದ್‌ರಿಗೆ) ಯಾವುದೇ ಮತಿಭ್ರಾಂತಿಯಿಲ್ಲ. ಅವರು ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿರುವರು.

أَوَلَمْ يَتَفَكَّرُواْ ۗ مَا بِصَاحِبِهِم مِّن جِنَّةٍ ۚ إِنْ هُوَ إِلَّا نَذِيرٌ مُّبِينٌ ﴿١٨٤﴾

185. ಆಕಾಶಗಳ ಮತ್ತು ಭೂಮಿಯ ಆಧಿಪತ್ಯ ರಹಸ್ಯಗಳ ಕುರಿತು, ಅಲ್ಲಾಹು ಸೃಷ್ಟಿಸಿದ ಯಾವುದೇ ವಸ್ತುವಿನ ಕುರಿತು, ಅವರ ಅವಧಿಯು ಸಮೀಪಿಸಿರಬಹುದು ಎಂಬುದರ ಕುರಿತಾಗಲಿ ಅವರು ಚಿಂತಿಸಿ ನೋಡಲಾರರೇ? ಇದರ (ಕುರ್‌ಆನ್‌ನ) ಬಳಿಕ ಅವರು ಯಾವ ವೃತ್ತಾಂತದಲ್ಲಿ ವಿಶ್ವಾಸವಿಡುವರು?

أَوَلَمْ يَنظُرُواْ فِى مَلَكُوتِ ٱلسَّمَـٰوَٰتِ وَٱلْأَرْضِ وَمَا خَلَقَ ٱللَّهُ مِن شَىْءٍ وَأَنْ عَسَىٰٓ أَن يَكُونَ قَدِ ٱقْتَرَبَ أَجَلُهُمْ ۖ فَبِأَىِّ حَدِيثٍۭ بَعْدَهُۥ يُؤْمِنُونَ ﴿١٨٥﴾

186. ಅಲ್ಲಾಹು ಯಾರನ್ನು ದಾರಿಗೆಡಿಸುವನೋ ಅವನನ್ನು ಸನ್ಮಾರ್ಗದಲ್ಲಿ ಸೇರಿಸುವವರು ಯಾರೂ ಇರಲಾರರು. ಅವನು (ಅಲ್ಲಾಹು) ಅವರನ್ನು ಅವರ ಧಿಕ್ಕಾರದಲ್ಲಿ ಅಂಧವಾಗಿ ವಿಹರಿಸಲು ಬಿಟ್ಟುಬಿಡುವನು.

مَن يُضْلِلِ ٱللَّهُ فَلَا هَادِىَ لَهُۥ ۚ وَيَذَرُهُمْ فِى طُغْيَـٰنِهِمْ يَعْمَهُونَ ﴿١٨٦﴾

187. ಅಂತ್ಯ ಘಳಿಗೆಯ ಕುರಿತು ಅದು ಯಾವಾಗ ಬರುವುದೆಂದು ಅವರು ತಮ್ಮೊಂದಿಗೆ ಕೇಳುವರು. ತಾವು ಹೇಳಿರಿ: 'ಅದರ ಜ್ಞಾನವಿರುವುದು ನನ್ನ ರಬ್‌ನ ಬಳಿ ಮಾತ್ರವಾಗಿದೆ. ಅದರ ಸಮಯದಲ್ಲಿ ಅವನಲ್ಲದೆ ಯಾರೂ ಅದನ್ನು

يَسْـَٔلُونَكَ عَنِ ٱلسَّاعَةِ أَيَّانَ مُرْسَىٰهَا ۖ قُلْ إِنَّمَا عِلْمُهَا عِندَ رَبِّى ۖ لَا يُجَلِّيهَا لِوَقْتِهَآ إِلَّا هُوَ ۚ ثَقُلَتْ فِى ٱلسَّمَـٰوَٰتِ وَٱلْأَرْضِ ۚ لَا تَأْتِيكُمْ إِلَّا بَغْتَةً ۗ يَسْـَٔلُونَكَ كَأَنَّكَ

ಪ್ರತ್ಯಕ್ಷಗೊಳಿಸಲಾರರು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅದು ಭಾರವಿರುವಂತದ್ದಾಗಿದೆ.[1] ಅನಿರೀಕ್ಷಿತವಾಗಿಯೇ ವಿನಾ ಅದು ನಿಮ್ಮ ಬಳಿಗೆ ಬರಲಾರದು'. ತಮಗೆ ಅದರ ಬಗ್ಗೆ ಸೂಕ್ಷ್ಮವಾಗಿ ಅರಿತವನು ಎಂಬ ಮಟ್ಟಿನಲ್ಲಿ ಅವರು ತಮ್ಮೊಂದಿಗೆ ಕೇಳುವರು. ತಾವು ಹೇಳಿರಿ: 'ಅದರ ಜ್ಞಾನವಿರುವುದು ಅಲ್ಲಾಹುವಿನ ಬಳಿ ಮಾತ್ರವಾಗಿದೆ'. ಆದರೆ ಜನರ ಪೈಕಿ ಹೆಚ್ಚಿನವರು ಅರಿತುಕೊಳ್ಳಲಾರರು.

حَفِيٌّ عَنْهَا ۖ قُلْ إِنَّمَا عِلْمُهَا عِندَ ٱللَّهِ وَلَٰكِنَّ أَكْثَرَ ٱلنَّاسِ لَا يَعْلَمُونَ ﴿١٨٧﴾

**188.** (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ಇಚ್ಛಿಸಿದ ಹೊರತು ಸ್ವತಃ ನನಗಾಗಿ ಯಾವುದೇ ಲಾಭವನ್ನಾಗಲಿ, ಹಾನಿಯನ್ನಾಗಲಿ ನಾನು ಅಧೀನದಲ್ಲಿಟ್ಟುಕೊಂಡಿಲ್ಲ. ನನಗೆ ಅಗೋಚರ ಜ್ಞಾನವಿರುತ್ತಿದ್ದರೆ ನಾನು ಧಾರಾಳ ಒಳಿತುಗಳನ್ನು ಮಾಡಿಡುತ್ತಿದ್ದೆ. ಕೆಡುಕು ನನ್ನನ್ನು ಸ್ಪರ್ಶಿಸುತ್ತಿರಲಿಲ್ಲ.[2] ನಾನೊಬ್ಬ ಮುನ್ನೆಚ್ಚರಿಕೆ ನೀಡುವವನು ಮತ್ತು ವಿಶ್ವಾಸವಿಡುವ ಜನರಿಗೆ ಶುಭವಾರ್ತೆ ತಿಳಿಸುವವನು ಮಾತ್ರವಾಗಿರುವೆನು.

قُل لَّآ أَمْلِكُ لِنَفْسِى نَفْعًا وَلَا ضَرًّا إِلَّا مَا شَآءَ ٱللَّهُ ۚ وَلَوْ كُنتُ أَعْلَمُ ٱلْغَيْبَ لَٱسْتَكْثَرْتُ مِنَ ٱلْخَيْرِ وَمَا مَسَّنِىَ ٱلسُّوٓءُ ۚ إِنْ أَنَا۠ إِلَّا نَذِيرٌ وَبَشِيرٌ لِّقَوْمٍ يُؤْمِنُونَ ﴿١٨٨﴾

**189.** ನಿಮ್ಮನ್ನು ಒಂದೇ ಶರೀರದಿಂದ ಸೃಷ್ಟಿಸಿದವನು ಅವನಾಗಿರುವನು. ತರುವಾಯ ಅದರಿಂದಲೇ ಅದರ ಜೋಡಿಯನ್ನು ಸೃಷ್ಟಿಸಿದನು.[3]

۞ هُوَ ٱلَّذِى خَلَقَكُم مِّن نَّفْسٍ وَٰحِدَةٍ وَجَعَلَ مِنْهَا زَوْجَهَا لِيَسْكُنَ إِلَيْهَا ۖ فَلَمَّا

1 ಆಕಾಶ–ಭೂಮಿಗಳಲ್ಲಿರುವವರಿಗೆ ಅಂತ್ಯದಿನವೆಂಬುದು ಅತಿಭಯಂಕರವಾದ ಒಂದು ಅನುಭವವಾಗಿರುವುದು.

2 ಪ್ರವಾದಿಗಳಿಗೆ ಅವರು ಇಚ್ಛಿಸುವ ಸಮಯಗಳಲ್ಲಿ ಅಗೋಚರ ಜ್ಞಾನವು ಸಿಗಲಾರದು. ಆದರೆ ಅಲ್ಲಾಹು ತಾನಿಚ್ಛಿಸುವಾಗ ಮಾತ್ರ ತಿಳಿಸಿಕೊಡುವ ಸಂಗತಿಗಳ ಹೊರತು. ತಮ್ಮ ಪತ್ನಿ ಆಯಿಶಾರವರ ಬಗ್ಗೆ ಸುಳ್ಳು ವದಂತಿ ಹರಡಿದಾಗ ಅದರ ನಿಜಾವಸ್ಥೆಯ ಅರಿವಿಲ್ಲದೆ ಪ್ರವಾದಿ(ﷺ)ರವರು ದುಃಖಿಸಿದ ಘಟನೆಯು ಪ್ರಸಿದ್ಧವಾಗಿದೆ. ಪ್ರವಾದಿ ಮೂಸಾ(عَلَيْهِ ٱلسَّلَامُ)ರಿಗೆ ತಮ್ಮ ಗೆಳೆಯನ ಕೃತ್ಯಗಳ ತಿರುಳು ಗ್ರಹಿಸಲು ಸಾಧ್ಯವಾಗಿಲ್ಲವೆಂದು ಸೂರ ಅಲ್‌ಕಹ್ಫ್‌ನಲ್ಲಿ ಹೇಳಲಾಗಿದೆ. ಓರ್ವ ವ್ಯಕ್ತಿಗೆ ಅಗೋಚರ ಜ್ಞಾನವು ಸಿಗುವುದಾದರೆ ಶತ್ರುಗಳು ಯಾರು, ಅವರು ಯಾವ ದಾರಿಯಲ್ಲಿ ಬಂದು ದಾಳಿ ಮಾಡುವರು, ಇತ್ಯಾದಿಗಳನ್ನು ಮುಂಗಡವಾಗಿ ಅರಿಯಬಹುದಾಗಿದೆ. ಅದೇ ರೀತಿ ಎಲ್ಲಿ ಅಪಾಯ ಸಂಭವಿಸಬಹುದು ಎಂಬುದನ್ನೂ ಅರಿಯಬಹುದು. ಇದರಿಂದಾಗಿ ಅನೇಕ ನಾಶನಷ್ಟಗಳನ್ನು ತಪ್ಪಿಸಬಹುದಾಗಿದೆ. ಹಾಗೆಯೇ ಅನೇಕ ಲಾಭಗಳನ್ನೂ ಗಳಿಸಬಹುದಾಗಿದೆ. ಆದರೆ ಅಗೋಚರ ಜ್ಞಾನವು ಅಲ್ಲಾಹುವಿನ ಅಧೀನದಲ್ಲಿ ಮಾತ್ರವಿರುವುದಾಗಿದೆಯೆಂದು ಕುರ್‌ಆನ್ ಅನೇಕ ಕಡೆ ಅಸಂದಿಗ್ಧವಾಗಿ ಘೋಷಿಸಿದೆ. (3:179, 6:59, 10:20, 27:65)

3 ಅಲ್ಲಾಹು ಆದಮ್(عَلَيْهِ ٱلسَّلَامُ)ರನ್ನು ಸೃಷ್ಟಿಸಿದನು. ತರುವಾಯ ಅವರಿಂದ ಅವರ ಸಂಗಾತಿ ಹವ್ವಾರನ್ನು ಸೃಷ್ಟಿಸಿದನು. ತರುವಾಯ ಒಂದೇ ವರ್ಗದಿಂದಲೇ ಅವನು ಗಂಡು ಮತ್ತು ಹೆಣ್ಣುಗಳನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವನು.

تَغَشَّىٰهَا حَمَلَتۡ حَمۡلًا خَفِيفٗا فَمَرَّتۡ بِهِۦۖ فَلَمَّآ أَثۡقَلَت دَّعَوَا ٱللَّهَ رَبَّهُمَا لَئِنۡ ءَاتَيۡتَنَا صَٰلِحٗا لَّنَكُونَنَّ مِنَ ٱلشَّٰكِرِينَ ١٨٩

ಆಕೆಯೊಂದಿಗೆ ಸೇರಿ ಅವನು ಸಮಾಧಾನ ಪಡೆಯುವ ಸಲುವಾಗಿ. ತರುವಾಯ ಅವನು ಅವಳನ್ನು ಕೂಡಿಕೊಂಡಾಗ ಆಕೆ ಹಗುರವಾದ ಭಾರ(ಗರ್ಭ)ವನ್ನು ಹೊತ್ತಳು. ಬಳಿಕ ಅದರೊಂದಿಗೆ ನಡೆದಾಡಿದಳು. ತರುವಾಯ ಆಕೆಗೆ ಭಾರವು ಹೆಚ್ಚಾದಾಗ ಅವರಿಬ್ಬರೂ ತಮ್ಮ ರಬ್ಬಾದ ಅಲ್ಲಾಹುವಿನೊಂದಿಗೆ ಪ್ರಾರ್ಥಿಸಿದರು: 'ನೀನು ನಮಗೊಂದು ಉತ್ತಮ ಸಂತಾನವನ್ನು ನೀಡುವುದಾದರೆ ಖಂಡಿತವಾಗಿಯೂ ನಾವು ಕೃತಜ್ಞತೆ ಸಲ್ಲಿಸುವವರ ಪೈಕಿ ಸೇರುವೆವು'.

فَلَمَّآ ءَاتَىٰهُمَا صَٰلِحٗا جَعَلَا لَهُۥ شُرَكَآءَ فِيمَآ ءَاتَىٰهُمَاۚ فَتَعَٰلَى ٱللَّهُ عَمَّا يُشۡرِكُونَ ١٩٠

**190.** ಅವನು (ಅಲ್ಲಾಹು) ಅವರಿಗೊಂದು ಉತ್ತಮ ಸಂತಾನವನ್ನು ನೀಡಿದಾಗ, ಅವನು ಅವರಿಗೆ ನೀಡಿರುವುದರಲ್ಲಿ ಅವರು ಅವನಿಗೆ ಸಹಭಾಗಿಗಳನ್ನು ಮಾಡಿಕೊಂಡರು.[1] ಅವರು ಸಹಭಾಗಿತ್ವ ಮಾಡುವುದರಿಂದ ಅಲ್ಲಾಹು ಎಷ್ಟೋ ಉನ್ನತನಾಗಿರುವನು.

أَيُشۡرِكُونَ مَا لَا يَخۡلُقُ شَيۡـٔٗا وَهُمۡ يُخۡلَقُونَ ١٩١

**191.** ಅವರೇ (ಆ ಆರಾಧ್ಯರೇ) ಸೃಷ್ಟಿಸಲ್ಪಟ್ಟವರಾಗಿರುವಾಗ ಏನನ್ನೂ ಸೃಷ್ಟಿಸದವರನ್ನು ಅವರು (ಅವನಿಗೆ) ಸಹಭಾಗಿಯನ್ನಾಗಿ ಮಾಡುವುದೇ?

وَلَا يَسۡتَطِيعُونَ لَهُمۡ نَصۡرٗا وَلَآ أَنفُسَهُمۡ يَنصُرُونَ ١٩٢

**192.** ಅವರಿಗೆ ಯಾವುದೇ ಸಹಾಯವನ್ನು ಮಾಡಲು ಅವರಿಗೆ (ಆ ಸಹಭಾಗಿಗಳಿಗೆ) ಸಾಧ್ಯವಾಗದು. ಸ್ವತಃ ತಮಗೇ ಸಹಾಯ ಮಾಡಲೂ ಅವರಿಂದಾಗದು.

وَإِن تَدۡعُوهُمۡ إِلَى ٱلۡهُدَىٰ لَا يَتَّبِعُوكُمۡۚ

**193.** ನೀವು ಅವರನ್ನು ಸನ್ಮಾರ್ಗದೆಡೆಗೆ ಕರೆದರೆ ಅವರು ನಿಮ್ಮನ್ನು ಹಿಂಬಾಲಿಸಲಾರರು.

---

1 ಮನುಷ್ಯರ ಪೈಕಿ ಹೆಚ್ಚಿನವರ ಸ್ಥಿತಿ ಇದೇ ಆಗಿದೆ. ಅಲ್ಲಾಹುವಿನ ಅಪಾರವಾದ ಔದಾರ್ಯದಿಂದ ಅವರಿಗೆ ಮಕ್ಕಳುಂಟಾದರೆ ಅದನ್ನು ಅಲ್ಲಾಹುವಿನ ಅನುಗ್ರಹವಾಗಿ ಪರಿಗಣಿಸಿ ಕೃತಜ್ಞತೆ ಸಲ್ಲಿಸುವ ಬದಲಾಗಿ ಅವರದನ್ನು ಯಾವುದಾದರೂ ದೇವದೇವತೆಯರ ಅಥವಾ ಸಜ್ಜನರ ಪ್ರಸಾದವಾಗಿ ಪರಿಗಣಿಸುತ್ತಾರೆ. ತನ್ಮೂಲಕ ಅವರ ಮೇಲೆ ಹೊತ್ತ ಹರಕೆಗಳನ್ನು ನೆರವೇರಿಸಲು ಧಾವಿಸುತ್ತಾರೆ. ವಾಸ್ತವಿಕವಾಗಿ ಇದು ಅಕ್ಷಮ್ಯ ಅಪರಾಧವಾದ ಶಿರ್ಕ್ ಆಗಿದೆ'.

سَوَآءٌ عَلَيۡكُمۡ أَدَعَوۡتُمُوهُمۡ أَمۡ أَنتُمۡ
صَٰمِتُونَ ﴿١٩٣﴾

ಅವರನ್ನು ಕರೆಯುವುದು ಅಥವಾ ಮೌನ ತಾಳುವುದು ಎರಡೂ ನಿಮ್ಮ ಪಾಲಿಗೆ ಸಮಾನವಾಗಿದೆ.

إِنَّ ٱلَّذِينَ تَدۡعُونَ مِن دُونِ ٱللَّهِ عِبَادٌ
أَمۡثَالُكُمۡۖ فَٱدۡعُوهُمۡ فَلۡيَسۡتَجِيبُواْ لَكُمۡ
إِن كُنتُمۡ صَٰدِقِينَ ﴿١٩٤﴾

**194.** ನೀವು ಅಲ್ಲಾಹುವಿನ ಹೊರತು ಯಾರನ್ನು ಕರೆದು ಪ್ರಾರ್ಥಿಸುತ್ತಿರುವಿರೋ ಖಂಡಿತವಾಗಿಯೂ ಅವರು ನಿಮ್ಮಂತಿರುವ ಸೃಷ್ಟಿಗಳು ಮಾತ್ರವಾಗಿರುವರು. ಅವರನ್ನು ಕರೆದು ಪ್ರಾರ್ಥಿಸಿರಿ; ಅವರು ನಿಮಗೆ ಉತ್ತರವನ್ನು ನೀಡಲಿ; ನೀವು ಸತ್ಯಸಂಧರಾಗಿದ್ದರೆ.

أَلَهُمۡ أَرۡجُلٞ يَمۡشُونَ بِهَآۖ أَمۡ لَهُمۡ أَيۡدٖ
يَبۡطِشُونَ بِهَآۖ أَمۡ لَهُمۡ أَعۡيُنٞ يُبۡصِرُونَ بِهَآۖ
أَمۡ لَهُمۡ ءَاذَانٞ يَسۡمَعُونَ بِهَاۗ قُلِ ٱدۡعُواْ
شُرَكَآءَكُمۡ ثُمَّ كِيدُونِ فَلَا تُنظِرُونِ ﴿١٩٥﴾

**195.** ಅವರಿಗೆ ನಡೆಯಲು ಕಾಲುಗಳಿವೆಯೇ? ಅವರಿಗೆ ಹಿಡಿದುಕೊಳ್ಳಲು ಕೈಗಳಿವೆಯೇ? ಅವರಿಗೆ ನೋಡಲು ಕಣ್ಣುಗಳಿವೆಯೇ? ಅವರಿಗೆ ಆಲಿಸಲು ಕಿವಿಗಳಿವೆಯೇ? (ಓ ಪ್ರವಾದಿಯವರೇ!) ತಾವು ಹೇಳಿರಿ: 'ನೀವು ನಿಮ್ಮ ಸಹಭಾಗಿಗಳನ್ನು ಕರೆದು ನನಗೆದುರಾಗಿ ಸಂಚು ಹೂಡಿರಿ. ನನಗೆ ಕಾಲಾವಕಾಶವನ್ನು ನೀಡದಿರಿ.[1]

إِنَّ وَلِـِّۧيَ ٱللَّهُ ٱلَّذِي نَزَّلَ ٱلۡكِتَٰبَۖ وَهُوَ
يَتَوَلَّى ٱلصَّٰلِحِينَ ﴿١٩٦﴾

**196.** ಖಂಡಿತವಾಗಿಯೂ ನನ್ನ ರಬ್ ಈ ಗ್ರಂಥವನ್ನು ಅವತೀರ್ಣಗೊಳಿಸಿದ ಅಲ್ಲಾಹುವಾಗಿರುವನು. ಅವನು ಸಜ್ಜನರ ಸಂರಕ್ಷಣೆಯ ಹೊಣೆಯನ್ನು ಹೊತ್ತಿರುವನು'.

وَٱلَّذِينَ تَدۡعُونَ مِن دُونِهِۦ لَا يَسۡتَطِيعُونَ
نَصۡرَكُمۡ وَلَآ أَنفُسَهُمۡ يَنصُرُونَ ﴿١٩٧﴾

**197.** ನೀವು ಅವನ ಹೊರತು ಯಾರನ್ನು ಕರೆದು ಪ್ರಾರ್ಥಿಸುತ್ತಿರುವಿರೋ ನಿಮಗೆ ಸಹಾಯ ಮಾಡಲು ಅವರಿಂದ ಸಾಧ್ಯವಾಗದು. ಸ್ವತಃ ತಮಗೇ ಸಹಾಯ ಮಾಡಲೂ ಅವರಿಂದಾಗದು.

1 ಅಲ್ಲಾಹುವಿನ ಹೊರತು ಯಾರಿಗೆಲ್ಲಾ ದಿವ್ಯತ್ವವನ್ನು ಕಲ್ಪಿಸಲಾಗುತ್ತದೋ ಅವರೆಲ್ಲರೂ ಅಸಹಾಯಕರಾಗಿರುವರು. ಅವರಿಗೆ ಯಾವುದೇ ಸಾಮರ್ಥ್ಯವೂ ಇಲ್ಲ. ಅವರೊಂದಿಗೆ ಪ್ರಾರ್ಥಿಸುವವರ ಮತ್ತು ಅವರ ಹೆಸರು ಹೇಳಿ ಜನರನ್ನು ಭಯಪಡಿಸುವವರ ಸ್ಥಿತಿ ನಿಜಕ್ಕೂ ಶೋಚನೀಯವಾಗಿದೆ.

**198.** ನೀವು ಅವರನ್ನು ಸನ್ಮಾರ್ಗದೆಡೆಗೆ ಕರೆದರೆ ಅವರು ಆಲಿಸಲಾರರು. ಅವರು ತಮ್ಮೆಡೆಗೆ ನೋಡುತ್ತಿರುವುದಾಗಿ ತಾವು ಕಾಣುವಿರಿ. ಆದರೆ ಅವರು ನೋಡುವುದಿಲ್ಲ.[1]

وَإِن تَدۡعُوهُمۡ إِلَى ٱلۡهُدَىٰ لَا يَسۡمَعُواْۖ وَتَرَىٰهُمۡ يَنظُرُونَ إِلَيۡكَ وَهُمۡ لَا يُبۡصِرُونَ ١٩٨

**199.** ತಾವು ಕ್ಷಮಾಶೀಲರಾಗಿರಿ, ಒಳಿತನ್ನು ಆದೇಶಿಸಿರಿ ಮತ್ತು ಅವಿವೇಕಿಗಳಿಂದ ವಿಮುಖರಾಗಿರಿ.

خُذِ ٱلۡعَفۡوَ وَأۡمُرۡ بِٱلۡعُرۡفِ وَأَعۡرِضۡ عَنِ ٱلۡجَٰهِلِينَ ١٩٩

**200.** ತಮಗೆ ಸೈತಾನನ ಕಡೆಯಿಂದ ಏನಾದರೂ ದುಷ್ಪ್ರೇರಣೆಯು ತಟ್ಟಿದರೆ ಅಲ್ಲಾಹುವಿನೊಂದಿಗೆ ಅಭಯವನ್ನು ಯಾಚಿಸಿರಿ. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

وَإِمَّا يَنزَغَنَّكَ مِنَ ٱلشَّيۡطَٰنِ نَزۡغٞ فَٱسۡتَعِذۡ بِٱللَّهِۚ إِنَّهُۥ سَمِيعٌ عَلِيمٌ ٢٠٠

**201.** ಖಂಡಿತವಾಗಿಯೂ ಭಯಭಕ್ತಿ ಪಾಲಿಸುವವರಿಗೆ ಸೈತಾನನ ಕಡೆಯಿಂದ ಏನಾದರೂ ದುಷ್ಪ್ರೇರಣೆಯು ತಟ್ಟಿದರೆ ಅವರಿಗೆ (ಅಲ್ಲಾಹುವಿನ ಬಗ್ಗೆ) ಜ್ಞಾಪಕವುಂಟಾಗುವುದು. ಆಗ ಅವರು ಒಳದೃಷ್ಟಿಯುಳ್ಳವರಾಗುವರು.

إِنَّ ٱلَّذِينَ ٱتَّقَوۡاْ إِذَا مَسَّهُمۡ طَٰٓئِفٞ مِّنَ ٱلشَّيۡطَٰنِ تَذَكَّرُواْ فَإِذَا هُم مُّبۡصِرُونَ ٢٠١

**202.** ಆದರೆ ಅವರ (ಸೈತಾನರ) ಸಹೋದರರನ್ನು ಅವರು ದುರ್ಮಾರ್ಗದಲ್ಲಿ ಬಿಟ್ಟುಬಿಟ್ಟಿರುವರು. ಆ ಬಳಿಕ ಅವರು (ದುರ್ಮಾರ್ಗದಲ್ಲಿ) ಏನನ್ನೂ ಕಡಿಮೆ ಮಾಡಲಾರರು.

وَإِخۡوَٰنُهُمۡ يَمُدُّونَهُمۡ فِي ٱلۡغَيِّ ثُمَّ لَا يُقۡصِرُونَ ٢٠٢

**203.** ತಾವು ಅವರ ಬಳಿಗೆ ಯಾವುದಾದರೂ ದೃಷ್ಟಾಂತವನ್ನು ತಂದು ಕೊಡದಿದ್ದರೆ ಅವರು ಹೇಳುವರು: 'ತಾವೇ ಅದನ್ನು ಸ್ವತಃ ಹೆಣೆದು ತರಬಾರದೇಕೆ?' (ಓ ಪ್ರವಾದಿಯವರೇ!) ಹೇಳಿರಿ: 'ನಾನು ಅನುಸರಿಸುವುದು ನನ್ನ ರಬ್‌ನ ವತಿಯಿಂದ ನೀಡಲ್ಪಡುವ ದಿವ್ಯ ಸಂದೇಶವನ್ನು ಮಾತ್ರವಾಗಿದೆ. ಇದು (ಕುರ್‌ಆನ್) ನಿಮ್ಮ ರಬ್‌ನ ವತಿಯ

وَإِذَا لَمۡ تَأۡتِهِم بِـَٔايَةٖ قَالُواْ لَوۡلَا ٱجۡتَبَيۡتَهَاۚ قُلۡ إِنَّمَآ أَتَّبِعُ مَا يُوحَىٰٓ إِلَيَّ مِن رَّبِّيۚ هَٰذَا بَصَآئِرُ مِن رَّبِّكُمۡ وَهُدٗى وَرَحۡمَةٞ لِّقَوۡمٖ يُؤۡمِنُونَ ٢٠٣

1 ಇಲ್ಲಿ ಸೂಚಿಸಿರುವುದು ಕಣ್ತೆರೆದು ನೋಡುವಂತಹ ರೂಪದಲ್ಲಿರುವ ವಿಗ್ರಹಗಳ ಬಗ್ಗೆಯಿರಬಹುದು.

ಕಣ್ತೆರೆಸುವ ಪುರಾವೆಗಳೂ, ವಿಶ್ವಾಸವಿಡುವ ಜನರಿಗೆ ಒಂದು ಮಾರ್ಗದರ್ಶಿಯೂ, ಕಾರುಣ್ಯವೂ ಆಗಿದೆ'.

**204**. ಕುರ್‌ಆನ್ ಪಾರಾಯಣ ಮಾಡಲಾದರೆ ನೀವದನ್ನು ಕಿವಿಗೊಟ್ಟು ಆಲಿಸಿರಿ ಮತ್ತು ಮೌನ ಪಾಲಿಸಿರಿ. ನಿಮಗೆ ಕರುಣೆ ದೊರೆಯಲೂ ಬಹುದು.

وَإِذَا قُرِئَ ٱلۡقُرۡءَانُ فَٱسۡتَمِعُواْ لَهُۥ وَأَنصِتُواْ لَعَلَّكُمۡ تُرۡحَمُونَ ﴿٢٠٤﴾

**205**. ವಿನಯದೊಂದಿಗೆ ಮತ್ತು ಭಯದೊಂದಿಗೆ ಧ್ವನಿಯನ್ನು ಏರಿಸದೆ ಮುಂಜಾನೆ ಮತ್ತು ಸಂಜೆ ತಾವು ತಮ್ಮ ರಬ್ಬನ್ನು ತಮ್ಮ ಮನಸ್ಸಿನಲ್ಲಿ ಸ್ಮರಿಸಿರಿ. ತಾವು ಅಲಕ್ಷ್ಯರಾಗಿರುವವರ ಪೈಕಿ ಸೇರದಿರಿ.

وَٱذۡكُر رَّبَّكَ فِي نَفۡسِكَ تَضَرُّعٗا وَخِيفَةٗ وَدُونَ ٱلۡجَهۡرِ مِنَ ٱلۡقَوۡلِ بِٱلۡغُدُوِّ وَٱلۡأٓصَالِ وَلَا تَكُن مِّنَ ٱلۡغَٰفِلِينَ ﴿٢٠٥﴾

**206**. ಖಂಡಿತವಾಗಿಯೂ ತಮ್ಮ ರಬ್‌ನ ಬಳಿಯಿರುವವರು (ಮಲಕ್‌ಗಳು) ಅವನನ್ನು ಆರಾಧಿಸುವುದರ ಕುರಿತು ಅಹಂಕಾರಪಡಲಾರರು[1] ಅವರು ಅವನ ಪರಿಪಾವನತೆಯನ್ನು ಕೊಂಡಾಡುತ್ತಿರುವರು ಮತ್ತು ಅವನಿಗೆ ಸಾಷ್ಟಾಂಗವೆರಗುತ್ತಿರುವರು.

إِنَّ ٱلَّذِينَ عِندَ رَبِّكَ لَا يَسۡتَكۡبِرُونَ عَنۡ عِبَادَتِهِۦ وَيُسَبِّحُونَهُۥ وَلَهُۥ يَسۡجُدُونَ۩ ﴿٢٠٦﴾

1 ಅಲ್ಲಾಹುವಿನ ಬಳಿ ಸಾಮೀಪ್ಯವನ್ನು ಪಡೆದಿರುವ ಮಲಕ್‌ಗಳು ಮನುಷ್ಯರಿಗಿಂತಲೂ ಉನ್ನತವಾದ ಪದವಿಯನ್ನು ಹೊಂದಿರುವವರಾಗಿರುವರು. ಆದರೂ ಅಹಂಕಾರವೆಂಬುದು ಅವರ ಬಳಿ ಸುಳಿಯಲಾರದು.

## ಅಲ್‌ಅನ್ಫಾಲ್ (ಸಮರಾರ್ಜಿತ ಸೊತ್ತುಗಳು)

## سُورَةُ الأَنفَالِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 75

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَسۡـَٔلُونَكَ عَنِ ٱلۡأَنفَالِۖ قُلِ ٱلۡأَنفَالُ لِلَّهِ وَٱلرَّسُولِۖ فَٱتَّقُواْ ٱللَّهَ وَأَصۡلِحُواْ ذَاتَ بَيۡنِكُمۡۖ وَأَطِيعُواْ ٱللَّهَ وَرَسُولَهُۥٓ إِن كُنتُم مُّؤۡمِنِينَ ١

1. (ಓ ಪ್ರವಾದಿಯವರೇ!) ಸಮರಾರ್ಜಿತ ಸೊತ್ತುಗಳ ಬಗ್ಗೆ ಅವರು ತಮ್ಮೊಂದಿಗೆ ಕೇಳುವರು.[1] ಹೇಳಿರಿ: 'ಸಮರಾರ್ಜಿತ ಸೊತ್ತುಗಳು ಅಲ್ಲಾಹುವಿಗೆ ಮತ್ತು ಸಂದೇಶವಾಹಕರಿಗಿರುವುದಾಗಿದೆ'. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಪರಸ್ಪರ ನಿಮ್ಮ ಸಂಬಂಧಗಳನ್ನು ಉತ್ತಮಗೊಳಿಸಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹುವನ್ನು ಮತ್ತು ಸಂದೇಶವಾಹಕರನ್ನು ಅನುಸರಿಸಿರಿ.

إِنَّمَا ٱلۡمُؤۡمِنُونَ ٱلَّذِينَ إِذَا ذُكِرَ ٱللَّهُ وَجِلَتۡ قُلُوبُهُمۡ وَإِذَا تُلِيَتۡ عَلَيۡهِمۡ ءَايَٰتُهُۥ زَادَتۡهُمۡ إِيمَٰنٗا وَعَلَىٰ رَبِّهِمۡ يَتَوَكَّلُونَ ٢

2. ಅಲ್ಲಾಹುವಿನ ಬಗ್ಗೆ ಪ್ರಸ್ತಾಪಿಸಲಾಗುವಾಗ ಹೃದಯಗಳು ಭಯದಿಂದ ನಡುಗುವವರು, ಅವನ ದೃಷ್ಟಾಂತಗಳನ್ನು ಓದಿಕೊಡಲಾದಾಗ ವಿಶ್ವಾಸವು ಅಧಿಕಗೊಳ್ಳುವವರು ಮತ್ತು ತಮ್ಮ ರಬ್‌ನ ಮೇಲೆ ಭರವಸೆಯಿಡುವವರು ಮಾತ್ರ ಸತ್ಯವಿಶ್ವಾಸಿಗಳಾಗಿರುವರು.

ٱلَّذِينَ يُقِيمُونَ ٱلصَّلَوٰةَ وَمِمَّا رَزَقۡنَٰهُمۡ يُنفِقُونَ ٣

3. ನಮಾಝನ್ನು ಸಂಸ್ಥಾಪಿಸುವವರು ಮತ್ತು ನಾವು ನೀಡಿರುವುದರಿಂದ ವ್ಯಯಿಸುವವರು.

أُوْلَٰٓئِكَ هُمُ ٱلۡمُؤۡمِنُونَ حَقّٗاۚ لَّهُمۡ دَرَجَٰتٌ عِندَ رَبِّهِمۡ وَمَغۡفِرَةٞ وَرِزۡقٞ كَرِيمٞ ٤

4. ನಿಜವಾಗಿಯೂ ಸತ್ಯವಿಶ್ವಾಸಿಗಳು ಅವರು ಮಾತ್ರವಾಗಿರುವರು. ಅವರಿಗೆ ಅವರ ರಬ್‌ನ ಬಳಿ ಹಲವು ಪದವಿಗಳಿವೆ. ಪಾಪಮುಕ್ತಿಯೂ, ಔದಾರ್ಯಪೂರ್ಣ ಅನ್ನಾಧಾರವೂ ಇದೆ.

---

1 ಇದು ಬದ್ರ್ ಯುದ್ಧದಲ್ಲಿ ಮುಸ್ಲಿಮರಿಗೆ ಸಿಕ್ಕಿದ ಸಮರಾರ್ಜಿತ ಸೊತ್ತನ್ನು ಪಾಲು ಮಾಡುವ ಸಂದರ್ಭದಲ್ಲಿ ವಿವಾದವೆಬ್ಬಿಸಿದವರಿಗೆ ನೀಡಿದ ಉತ್ತರವಾಗಿದೆ. ಅಲ್ಲಾಹು ಮತ್ತು ಅವನ ಪ್ರವಾದಿ(ﷺ)ರವರು ವಿಧಿಸುವ ಪ್ರಕಾರ ಸಮರಾರ್ಜಿತ ಸೊತ್ತನ್ನು ಪಾಲು ಮಾಡಬೇಕಾಗಿದೆ. ಇದರ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು 41ನೇ ಸೂಕ್ತಿಯಲ್ಲಿ ಕಾಣಬಹುದು.

5. ಸತ್ಯವಿಶ್ವಾಸಿಗಳ ಪೈಕಿ ಒಂದು ಪಂಗಡವು ಅಪ್ರಿಯತೆ ಹೊಂದಿದ್ದರೂ ಸಹ ತಮ್ಮನ್ನು ತಮ್ಮ ರಬ್ ಸತ್ಯದೊಂದಿಗೆ ತಮ್ಮ ಮನೆಯಿಂದ ಹೊರಡಿಸಿದಂತೆ.[1]

كَمَآ أَخۡرَجَكَ رَبُّكَ مِنۢ بَيۡتِكَ بِٱلۡحَقِّ وَإِنَّ فَرِيقٗا مِّنَ ٱلۡمُؤۡمِنِينَ لَكَٰرِهُونَ ٥

6. ಸತ್ಯವು ಸ್ಪಷ್ಟವಾದ ಬಳಿಕವೂ ಅವರು ಅದರ ಬಗ್ಗೆ ತಮ್ಮೊಂದಿಗೆ ತರ್ಕಿಸುತ್ತಿರುವರು; ಅವರು ನೋಡುತ್ತಿರುವಂತೆಯೇ ಅವರನ್ನು ಮರಣದೆಡೆಗೆ ಸಾಗಿಸಲಾಗುತ್ತಿದೆಯೋ ಎಂಬಂತೆ.

يُجَٰدِلُونَكَ فِي ٱلۡحَقِّ بَعۡدَ مَا تَبَيَّنَ كَأَنَّمَا يُسَاقُونَ إِلَى ٱلۡمَوۡتِ وَهُمۡ يَنظُرُونَ ٦

7. ಎರಡು ಬಣಗಳ ಪೈಕಿ ಒಂದನ್ನು ಖಂಡಿತವಾಗಿಯೂ ನಿಮಗೆ ಅಧೀನಪಡಿಸಿಕೊಡುವೆನೆಂದು ಅಲ್ಲಾಹು ನಿಮ್ಮೊಂದಿಗೆ ವಾಗ್ದಾನ ಮಾಡಿದ ಸಂದರ್ಭ(ವನ್ನು ಸ್ಮರಿಸಿರಿ). ನಿರಾಯುಧ ಬಣವು ನಿಮ್ಮದಾಗಬೇಕೆಂದು ನೀವು ಆಶಿಸುತ್ತಿದ್ದಿರಿ. ಆದರೆ ಅಲ್ಲಾಹು ತನ್ನ ವಚನಗಳ ಮೂಲಕ ಸತ್ಯವನ್ನು ಸಾಕ್ಷಾತ್ಕರಿಸಲು ಮತ್ತು ಸತ್ಯನಿಷೇಧಿಗಳನ್ನು ಬೇರುಸಹಿತ ಕತ್ತರಿಸಲು ಇಚ್ಛಿಸಿದ್ದನು.

وَإِذۡ يَعِدُكُمُ ٱللَّهُ إِحۡدَى ٱلطَّآئِفَتَيۡنِ أَنَّهَا لَكُمۡ وَتَوَدُّونَ أَنَّ غَيۡرَ ذَاتِ ٱلشَّوۡكَةِ تَكُونُ لَكُمۡ وَيُرِيدُ ٱللَّهُ أَن يُحِقَّ ٱلۡحَقَّ بِكَلِمَٰتِهِۦ وَيَقۡطَعَ دَابِرَ ٱلۡكَٰفِرِينَ ٧

8. ಅದು ಸತ್ಯವನ್ನು ಸತ್ಯವಾಗಿ ತೋರಿಸುವ ಸಲುವಾಗಿ ಮತ್ತು ಅಸತ್ಯವನ್ನು ನಿಷ್ಫಲಗೊಳಿಸುವ ಸಲುವಾಗಿದೆ. ಅಪರಾಧಿಗಳು ಎಷ್ಟೇ ಅಸಹ್ಯಪಟ್ಟರೂ ಸರಿ.

لِيُحِقَّ ٱلۡحَقَّ وَيُبۡطِلَ ٱلۡبَٰطِلَ وَلَوۡ كَرِهَ ٱلۡمُجۡرِمُونَ ٨

9. ನೀವು ನಿಮ್ಮ ರಬ್‌ನೊಂದಿಗೆ ಸಹಾಯವನ್ನು ಬೇಡುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). ಆಗ ಸಾವಿರ ಮಲಕ್‌ಗಳನ್ನು ನಿರಂತರವಾಗಿ ಕಳುಹಿಸುವ ಮೂಲಕ ನಾನು ನಿಮಗೆ

إِذۡ تَسۡتَغِيثُونَ رَبَّكُمۡ فَٱسۡتَجَابَ لَكُمۡ أَنِّي مُمِدُّكُم بِأَلۡفٖ مِّنَ ٱلۡمَلَٰٓئِكَةِ مُرۡدِفِينَ ٩

---

1 ಪ್ರವಾದಿ(ﷺ)ರವರು ಬದ್ರ್‌ನೆಡೆಗೆ ಹೊರಟು ನಿಂತಾಗ ಅದನ್ನು ಇಷ್ಟಪಡದ ಕೆಲವರಿದ್ದರು. ಒಂದೋ ಕುರೈಶಿಗಳ ವ್ಯಾಪಾರ ಸಂಘವನ್ನು (ಶಸ್ತ್ರರಹಿತ ತಂಡವನ್ನು) ಸೋಲಿಸಲು ಸಾಧ್ಯವಾಗಬಹುದು ಅಥವಾ ಖುರೈಶಿಗಳ ಶಸ್ತ್ರಸಜ್ಜಿತ ಸೇನೆಯೊಂದಿಗೆ ಯುದ್ಧ ಮಾಡಬೇಕಾಗಿ ಬರಬಹುದು ಎಂದು ಅಲ್ಲಾಹು ಪ್ರವಾದಿ(ﷺ)ರವರ ಮೂಲಕ ಅವರಿಗೆ ತಿಳಿಸಿದ್ದನು. ಯುದ್ಧಕ್ಕೆ ಹೊರಡುವ ವಿಷಯದಲ್ಲಿ ಕೆಲವರಿಗೆ ತೀವ್ರ ಸಂಕಟವುಂಟಾಗಿತ್ತು. ವ್ಯಾಪಾರ ಸರಕುಗಳನ್ನು ವಶಪಡಿಸಬೇಕು, ಆದರೆ ಶಸ್ತ್ರಸಜ್ಜಿತ ಸೈನ್ಯವನ್ನು ಎದುರಿಸುವ ಸನ್ನಿವೇಶ ಬರಬಾರದೆಂಬುದು ಅವರ ಇಂಗಿತವಾಗಿತ್ತು. ಆದರೆ ಅಲ್ಲಾಹುವಿನ ವಿಧಿಯು ನಿರ್ಣಾಯಕವಾದ ಬದ್ರ್ ಯುದ್ಧವು ನಡೆಯಬೇಕೆಂದಾಗಿತ್ತು. ಅಲ್ಲಾಹು ಅಸತ್ಯವನ್ನು ಪರಾಭವಗೊಳಿಸಿ ಸತ್ಯವನ್ನು ವಿಜಯಗೊಳಿಸಿದನು.

ಸಹಾಯ ಮಾಡುವೆನು ಎಂದು ಅವನು ನಿಮಗೆ ಉತ್ತರವಿತ್ತನು.

**10.** ನಿಮಗೊಂದು ಶುಭವಾರ್ತೆಯಾಗಿ ಮತ್ತು ನಿಮ್ಮ ಹೃದಯಗಳಿಗೆ ಶಾಂತಿ ನೀಡುವುದಕ್ಕಾಗಿ ವಿನಾ ಅಲ್ಲಾಹು ಅದನ್ನು ಮಾಡಿರಲಿಲ್ಲ. ಅಲ್ಲಾಹುವಿನ ಬಳಿಯಿಂದಲ್ಲದೆ ಯಾವುದೇ ಸಹಾಯವೂ ಇಲ್ಲ.[1] ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

وَمَا جَعَلَهُ ٱللَّهُ إِلَّا بُشْرَىٰ وَلِتَطْمَئِنَّ بِهِۦ قُلُوبُكُمْۚ وَمَا ٱلنَّصْرُ إِلَّا مِنْ عِندِ ٱللَّهِۚ إِنَّ ٱللَّهَ عَزِيزٌ حَكِيمٌ ﴿١٠﴾

**11.** ಅಲ್ಲಾಹು ತನ್ನ ವತಿಯ ಮನಃಶಾಂತಿಯ ಮೂಲಕ ನಿಮ್ಮನ್ನು ತೂಕಡಿಕೆಯಿಂದ ಆವರಿಸಿಕೊಂಡ ಸಂದರ್ಭ(ವನ್ನು ಸ್ಮರಿಸಿರಿ). ನಿಮ್ಮನ್ನು ಶುದ್ಧೀಕರಿಸಲು, ಶೈತಾನನ ದುರ್ಬೋಧನೆಯನ್ನು ನಿಮ್ಮಿಂದ ತೊಲಗಿಸಲು, ನಿಮ್ಮ ಹೃದಯಗಳಿಗೆ ಸ್ಥೈರ್ಯವನ್ನು ನೀಡಲು ಮತ್ತು ಪಾದಗಳನ್ನು ಅಚಲಗೊಳಿಸಲು ಅವನು ನಿಮ್ಮ ಮೇಲೆ ಆಕಾಶದಿಂದ ಮಳೆಯನ್ನು ಸುರಿಸಿದ ಸಂದರ್ಭ(ವನ್ನು ಸ್ಮರಿಸಿರಿ).

إِذْ يُغَشِّيكُمُ ٱلنُّعَاسَ أَمَنَةً مِّنْهُ وَيُنَزِّلُ عَلَيْكُم مِّنَ ٱلسَّمَآءِ مَآءً لِّيُطَهِّرَكُم بِهِۦ وَيُذْهِبَ عَنكُمْ رِجْزَ ٱلشَّيْطَٰنِ وَلِيَرْبِطَ عَلَىٰ قُلُوبِكُمْ وَيُثَبِّتَ بِهِ ٱلْأَقْدَامَ ﴿١١﴾

**12.** 'ನಾನು ನಿಮ್ಮೊಂದಿಗಿರುವೆನು. ಆದ್ದರಿಂದ ನೀವು ಸತ್ಯವಿಶ್ವಾಸಿಗಳನ್ನು ಅಚಲರಾಗಿ ನಿಲ್ಲಿಸಿರಿ. ಸತ್ಯನಿಷೇಧಿಗಳ ಹೃದಯಗಳಲ್ಲಿ ನಾನು ಭಯವನ್ನು ಹಾಕುವೆನು. ಆದ್ದರಿಂದ ನೀವು ಕತ್ತುಗಳ ಮೇಲಿನಿಂದ ಕಡಿಯಿರಿ ಮತ್ತು ಅವರ ಬೆರಳುಗಳೆಲ್ಲವನ್ನೂ ಕಡಿಯಿರಿ' ಎಂದು ತಮ್ಮ ರಬ್ ಮಲಕ್‌ಗಳಿಗೆ ಆದೇಶ ನೀಡಿದ ಸಂದರ್ಭ(ವನ್ನು ಸ್ಮರಿಸಿರಿ).

إِذْ يُوحِى رَبُّكَ إِلَى ٱلْمَلَٰٓئِكَةِ أَنِّى مَعَكُمْ فَثَبِّتُوا۟ ٱلَّذِينَ ءَامَنُوا۟ۚ سَأُلْقِى فِى قُلُوبِ ٱلَّذِينَ كَفَرُوا۟ ٱلرُّعْبَ فَٱضْرِبُوا۟ فَوْقَ ٱلْأَعْنَاقِ وَٱضْرِبُوا۟ مِنْهُمْ كُلَّ بَنَانٍ ﴿١٢﴾

**13.** ಅದು ಅವರು ಅಲ್ಲಾಹು ಮತ್ತು ಅವನ ಸಂದೇಶವಾಹಕರಿಗೆ ವಿರುದ್ಧವಾಗಿ ನಿಂತಿರುವುದರ ಫಲವಾಗಿದೆ. ಯಾರಾದರೂ ಅಲ್ಲಾಹು ಮತ್ತು ಅವನ ಸಂದೇಶವಾಹಕರಿಗೆ

ذَٰلِكَ بِأَنَّهُمْ شَآقُّوا۟ ٱللَّهَ وَرَسُولَهُۥۚ وَمَن يُشَاقِقِ ٱللَّهَ وَرَسُولَهُۥ فَإِنَّ ٱللَّهَ شَدِيدُ ٱلْعِقَابِ ﴿١٣﴾

1 ಸಹಾಯವು ಯಾವುದೇ ವಿಧದಲ್ಲಿರಲಿ ಅಥವಾ ಯಾರಿಂದಲೇ ಇರಲಿ, ಆತ್ಯಂತಿಕವಾದ ವಿಶ್ಲೇಷಣೆಯಲ್ಲಿ ಅದು ಅಲ್ಲಾಹುವಿನಿಂದಲೇ ಆಗಿದೆ. ಅವನು ತೀರ್ಮಾನಿಸದೆ ಯಾವುದೇ ಸಂಗತಿಯೂ ಸಂಭವಿಸಲಾರದು.

ವಿರುದ್ಧವಾಗಿ ನಿಂತರೆ ಖಂಡಿತವಾಗಿಯೂ ಅಲ್ಲಾಹು ಅತಿಕಠಿಣವಾಗಿ ಶಿಕ್ಷಿಸುವವನಾಗಿರುವನು.

14. ಅಗೋ ಅದರ ರುಚಿಯನ್ನು ಸವಿಯಿರಿ. ನರಕ ಶಿಕ್ಷೆಯಿರುವುದು ಸತ್ಯನಿಷೇಧಿಗಳಿಗಾಗಿದೆ ಎಂಬುದನ್ನು (ಅರಿತುಕೊಳ್ಳಿರಿ).

ذَٰلِكُمْ فَذُوقُوهُ وَأَنَّ لِلْكَٰفِرِينَ عَذَابَ ٱلنَّارِ ﴿١٤﴾

15. ಓ ಸತ್ಯವಿಶ್ವಾಸಿಗಳೇ! ಸತ್ಯನಿಷೇಧಿಗಳು ಯುದ್ಧಸಜ್ಜಿತರಾಗಿ ಬರುವುದನ್ನು ಕಂಡರೆ ನೀವು ಅವರಿಂದ ಬೆನ್ನು ತಿರುಗಿಸಿ ಓಡದಿರಿ.

يَٰٓأَيُّهَا ٱلَّذِينَ ءَامَنُوٓا۟ إِذَا لَقِيتُمُ ٱلَّذِينَ كَفَرُوا۟ زَحْفًا فَلَا تُوَلُّوهُمُ ٱلْأَدْبَارَ ﴿١٥﴾

16. ಯುದ್ಧ(ತಂತ್ರ)ಕ್ಕಾಗಿ ಸ್ಥಳ ಬದಲಾವಣೆ ಮಾಡುವುದಕ್ಕಾಗಿ ಅಥವಾ ಸ್ವಂತ ಗುಂಪಿನೊಂದಿಗೆ ಸೇರುವುದಕ್ಕಾಗಿ ವಿನಾ ಯಾರಾದರೂ ಅಂದು ಅವರಿಂದ (ಶತ್ರುಗಳ ಮುಂದಿನಿಂದ) ಬೆನ್ನು ತಿರುಗಿಸುವುದಾದರೆ ಅವನು ಅಲ್ಲಾಹುವಿನ ಕ್ರೋಧಕ್ಕೆ ಪಾತ್ರನಾಗುವನು. ಅವನ ವಾಸಸ್ಥಳವು ನರಕವಾಗಿರುವುದು. ಆ ವಾಸಸ್ಥಳ ಎಷ್ಟು ನಿಕೃಷ್ಟವಾದುದು![1]

وَمَن يُوَلِّهِمْ يَوْمَئِذٍ دُبُرَهُۥٓ إِلَّا مُتَحَرِّفًا لِّقِتَالٍ أَوْ مُتَحَيِّزًا إِلَىٰ فِئَةٍ فَقَدْ بَآءَ بِغَضَبٍ مِّنَ ٱللَّهِ وَمَأْوَىٰهُ جَهَنَّمُ ۖ وَبِئْسَ ٱلْمَصِيرُ ﴿١٦﴾

17. ಇನ್ನು ನೀವು ಅವರನ್ನು ಕೊಂದಿರಲಿಲ್ಲ. ಆದರೆ ಅವರನ್ನು ಕೊಂದವನು ಅಲ್ಲಾಹುವಾಗಿದ್ದನು. (ಓ ಪ್ರವಾದಿಯವರೇ!) ತಾವು ಎಸೆದಾಗ ತಾವು ಎಸೆದಿರಲಿಲ್ಲ, ಆದರೆ ಎಸೆದವನು ಅಲ್ಲಾಹುವಾಗಿದ್ದನು.[2] ಅದು ಅಲ್ಲಾಹು ತನ್ನ

فَلَمْ تَقْتُلُوهُمْ وَلَٰكِنَّ ٱللَّهَ قَتَلَهُمْ ۚ وَمَا رَمَيْتَ إِذْ رَمَيْتَ وَلَٰكِنَّ ٱللَّهَ رَمَىٰ ۚ وَلِيُبْلِىَ ٱلْمُؤْمِنِينَ مِنْهُ بَلَآءً حَسَنًا ۚ إِنَّ ٱللَّهَ سَمِيعٌ عَلِيمٌ ﴿١٧﴾

1 ಹೇಡಿತನದಿಂದ ಹಿಂಜರಿದು ಪಲಾಯನ ಮಾಡುವುದು ಮಹಾಪಾಪವಾಗಿದೆ. ಆದರೆ ಯುದ್ಧ ತಂತ್ರದ ಭಾಗವಾಗಿ ಹಿಂದೆ ಸರಿಯುವುದು ಅಪರಾಧವಲ್ಲ.

2 ಮುಸ್ಲಿಮರಿಗೆ ಶತ್ರುಗಳನ್ನು ಹೆಚ್ಚು ಹೆಚ್ಚಾಗಿ ಸಂಹರಿಸಲು ಸಾಧ್ಯವಾಗಿದ್ದು ಅವರ ಸ್ವಸಾಮರ್ಥ್ಯದಿಂದಲ್ಲ. ಬದಲಾಗಿ ಅದು ಅಲ್ಲಾಹು ಮಲಕ್‌ಗಳನ್ನು ಕಳುಹಿಸುವ ಮೂಲಕ ಮತ್ತು ಆತ್ಮವಿಶ್ವಾಸವನ್ನು ಅಧಿಕಗೊಳಿಸುವ ಮೂಲಕ ಸಹಾಯ ಮಾಡಿದ ಕಾರಣದಿಂದಾಗಿತ್ತು. ಪ್ರವಾದಿ(ﷺ) ರವರು ಒಂದು ಹಿಡಿ ಮಣ್ಣನ್ನು ಎಸೆದಾಗ ಸತ್ಯನಿಷೇಧಿಗಳು ಹಿಂಜರಿಯಲು ಆರಂಭಿಸಿದ್ದು ಪ್ರವಾದಿ(ﷺ)ರವರ ಸಾಮರ್ಥ್ಯದಿಂದಲ್ಲ. ಅಲ್ಲಾಹುವಿನ ವಿಶೇಷ ಸಹಾಯದಿಂದ ಮಾತ್ರವಾಗಿತ್ತು. ಅಲ್ಲಾಹುವಿನ ಯಾವುದೇ ಸಹಾಯಕ್ಕೂ ಒಂದು ನಿಬಂಧನೆಯಿದೆ. ಮುಸ್ಲಿಮರು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ಗರಿಷ್ಠ ಪರಿಶ್ರಮ ಪಡಬೇಕು. ಆದರೆ ಅವರು ಶಿಸ್ತನ್ನು ಕೈಬಿಟ್ಟರೆ ಅಲ್ಲಾಹು ತನ್ನ ಸಹಾಯವನ್ನು ರದ್ದುಗೊಳಿಸುವನು. ಉಹ್ದ್‌ನಲ್ಲಿ ಸೋಲುಂಟಾದದ್ದು ಇದೇ ಕಾರಣದಿಂದಾಗಿದೆ.

ವತಿಯ ಒಂದು ಉತ್ತಮ ಪರೀಕ್ಷೆಯ ಮೂಲಕ ಸತ್ಯವಿಶ್ವಾಸಿಗಳನ್ನು ಪರೀಕ್ಷಿಸುವುದಕ್ಕಾಗಿತ್ತು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

ذَٰلِكُمْ وَأَنَّ ٱللَّهَ مُوهِنُ كَيْدِ ٱلْكَٰفِرِينَ ﴿١٨﴾

**18.** (ವಾಸ್ತವಿಕತೆಯು) ಇದಾಗಿದೆ. ಅಲ್ಲಾಹು ಸತ್ಯನಿಷೇಧಿಗಳ ಸಂಚನ್ನು ಖಂಡಿತವಾಗಿಯೂ ದುರ್ಬಲಗೊಳಿಸುವನು.

إِن تَسْتَفْتِحُوا۟ فَقَدْ جَآءَكُمُ ٱلْفَتْحُ ۖ وَإِن تَنتَهُوا۟ فَهُوَ خَيْرٌ لَّكُمْ ۖ وَإِن تَعُودُوا۟ نَعُدْ وَلَن تُغْنِىَ عَنكُمْ فِئَتُكُمْ شَيْـًٔا وَلَوْ كَثُرَتْ وَأَنَّ ٱللَّهَ مَعَ ٱلْمُؤْمِنِينَ ﴿١٩﴾

**19.** (ಓ ಸತ್ಯನಿಷೇಧಿಗಳೇ!) ನೀವು ಜಯವನ್ನು ಬೇಡಿದ್ದರೆ ಖಂಡಿತವಾಗಿಯೂ ಆ ಜಯವು ನಿಮ್ಮ ಬಳಿಗೆ ಬಂದುಬಿಟ್ಟಿದೆ.(1) ನೀವು ನಿಲ್ಲಿಸುವುದಾದರೆ ಅದು ನಿಮಗೆ ಉತ್ತಮವಾಗಿದೆ. ನೀವು ಪುನರಾವರ್ತಿಸುವುದಾದರೆ ನಾವೂ ಪುನರಾವರ್ತಿಸುವೆವು. ನಿಮ್ಮ ಬಣವು ಎಷ್ಟು ದೊಡ್ಡ ಸಂಖ್ಯೆಯನ್ನು ಹೊಂದಿದ್ದರೂ ಅದು ನಿಮಗೆಂದೂ ಪ್ರಯೋಜನಕಾರಿಯಾಗದು. ಖಂಡಿತವಾಗಿಯೂ ಅಲ್ಲಾಹು ಸತ್ಯವಿಶ್ವಾಸಿಗಳ ಜೊತೆಗಿರುವನು.

يَٰٓأَيُّهَا ٱلَّذِينَ ءَامَنُوٓا۟ أَطِيعُوا۟ ٱللَّهَ وَرَسُولَهُۥ وَلَا تَوَلَّوْا۟ عَنْهُ وَأَنتُمْ تَسْمَعُونَ ﴿٢٠﴾

**20.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸಿರಿ. (ಸತ್ಯಸಂದೇಶವನ್ನು) ಆಲಿಸುವವರಾಗಿದ್ದೂ ಸಹ ನೀವು ಅವರಿಂದ (ಸಂದೇಶವಾಹಕರಿಂದ) ವಿಮುಖರಾಗದಿರಿ.

---

1 ಸತ್ಯನಿಷೇಧಿಗಳಾದ ಕುರೈಶಿಗಳು ಯುದ್ಧಕ್ಕೆ ಹೊರಡುವಾಗ ಕಅ್‌ಬಾಲಯಕ್ಕೆ ಹೋಗಿ ಈ ರೀತಿ ಪ್ರಾರ್ಥಿಸಿದ್ದರು: ಓ ಅಲ್ಲಾಹ್, ಈ ಎರಡು ಸೈನ್ಯಗಳ ಪೈಕಿ ಅತ್ಯಂತ ಉನ್ನತವಾದ, ಎರಡು ಪಂಗಡಗಳಲ್ಲಿ ಅತ್ಯಂತ ಗೌರವಾರ್ಹವಾಗಿರುವ ಮತ್ತು ಎರಡು ಜನಾಂಗಗಳಲ್ಲಿ ಅತ್ಯುತ್ತಮವಾದವರಿಗೆ ನೀನು ಸಹಾಯ ಮಾಡು. ಈ ಪ್ರಾರ್ಥನೆಯ ಆಧಾರದಲ್ಲಿ ಕೂಡ ಸಹಾಯ ಪಡೆಯಲು ಮತ್ತು ಜಯಗಳಿಸಲು ಮುಸ್ಲಿಮರು ಅತ್ಯಂತ ಅರ್ಹರಾಗಿದ್ದರು. ಯಾಕೆಂದರೆ ಎರಡು ವಿಭಾಗಗಳ ಪೈಕಿ ಅವರು ಅತ್ಯಂತ ಉನ್ನತರೂ, ಗೌರವಾರ್ಹರೂ, ಉತ್ತಮರೂ ಆಗಿದ್ದರು. ಆದ್ದರಿಂದ ಸತ್ಯನಿಷೇಧಿಗಳು ಬೇಡಿದ ಜಯವನ್ನು ಅಲ್ಲಾಹು ನೀಡಿದನು. ಆದರೆ ಅವರಿಗಲ್ಲ, ಬದಲಾಗಿ ಅದಕ್ಕೆ ಅರ್ಹರಾಗಿರುವ ಮುಸ್ಲಿಮರಿಗಾಗಿತ್ತು.

21. 'ನಾವು ಆಲಿಸಿರುವೆವು' ಎಂದು ಹೇಳಿ ಏನನ್ನೂ ಆಲಿಸದವರಂತೆ ನೀವಾಗದಿರಿ.

وَلَا تَكُونُواْ كَٱلَّذِينَ قَالُواْ سَمِعۡنَا وَهُمۡ لَا يَسۡمَعُونَ ٢١

22. ಖಂಡಿತವಾಗಿಯೂ ಜೀವಿಗಳ ಪೈಕಿ ಅಲ್ಲಾಹುವಿನ ಬಳಿ ಅತ್ಯಂತ ನಿಕೃಷ್ಟರಾಗಿರುವವರು ಚಿಂತಿಸಿ ಗ್ರಹಿಸದ ಕಿವುಡರೂ, ಮೂಕರೂ ಆಗಿರುವರು.(1)

۞إِنَّ شَرَّ ٱلدَّوَآبِّ عِندَ ٱللَّهِ ٱلصُّمُّ ٱلۡبُكۡمُ ٱلَّذِينَ لَا يَعۡقِلُونَ ٢٢

23. ಒಳಿತೇನಾದರೂ ಅವರಲ್ಲಿದೆಯೆಂದು ಅಲ್ಲಾಹು ಅರಿತಿದ್ದರೆ ಅವನು ಅವರಿಗೆ ಕೇಳಿಸುವಂತೆ ಮಾಡುತ್ತಿದ್ದನು. ಅವನು ಅವರಿಗೆ ಕೇಳಿಸುವಂತೆ ಮಾಡಿದ್ದರೂ ಸಹ ಅವರು ಅಲಕ್ಷಿಸುತ್ತಾ ವಿಮುಖರಾಗುತ್ತಿದ್ದರು.

وَلَوۡ عَلِمَ ٱللَّهُ فِيهِمۡ خَيۡرٗا لَّأَسۡمَعَهُمۡۖ وَلَوۡ أَسۡمَعَهُمۡ لَتَوَلَّواْ وَّهُم مُّعۡرِضُونَ ٢٣

24. ಓ ಸತ್ಯವಿಶ್ವಾಸಿಗಳೇ! ನಿಮಗೆ ಜೀವಚೈತನ್ಯ ನೀಡುವ ವಿಷಯದೆಡೆಗೆ ನಿಮ್ಮನ್ನು ಕರೆಯುವಾಗ(2) ನೀವು ಅಲ್ಲಾಹು ಮತ್ತು ಸಂದೇಶವಾಹಕರಿಗೆ ಓಗೊಡಿರಿ. ಅಲ್ಲಾಹು ಮನುಷ್ಯ ಮತ್ತು ಅವನ ಹೃದಯದ ಮಧ್ಯೆ ಮರೆಯನ್ನಿಡುವನು(3) ಎಂಬುದನ್ನು ಮತ್ತು ನಿಮ್ಮನ್ನು ಅವನೆಡೆಗೆ ಒಟ್ಟುಗೂಡಿಸಲಾಗುವುದು ಎಂಬುದನ್ನು ಅರಿತುಕೊಳ್ಳಿರಿ.

يَـٰٓأَيُّهَا ٱلَّذِينَ ءَامَنُواْ ٱسۡتَجِيبُواْ لِلَّهِ وَلِلرَّسُولِ إِذَا دَعَاكُمۡ لِمَا يُحۡيِيكُمۡۖ وَٱعۡلَمُوٓاْ أَنَّ ٱللَّهَ يَحُولُ بَيۡنَ ٱلۡمَرۡءِ وَقَلۡبِهِۦ وَأَنَّهُۥٓ إِلَيۡهِ تُحۡشَرُونَ ٢٤

25. ಒಂದು ಪರೀಕ್ಷೆ(ಶಿಕ್ಷೆ)ಯನ್ನು ನೀವು ಭಯಪಡಿರಿ. ಅದು ನಿಮ್ಮಲ್ಲಿನ ಅಕ್ರಮಿಗಳಿಗೆ

وَٱتَّقُواْ فِتۡنَةٗ لَّا تُصِيبَنَّ ٱلَّذِينَ ظَلَمُواْ

---

1 ಮಾತನಾಡುವ ಮತ್ತು ಆಲಿಸುವ ಶಕ್ತಿಯನ್ನು ನೀಡಿ ಅಲ್ಲಾಹು ಅವರನ್ನು ಸೃಷ್ಟಿಸಿದ್ದಾನೆ. ಆದರೆ ಅವರು ಸತ್ಯವನ್ನು ಬಹಿರಂಗವಾಗಿ ಹೇಳಲು, ಸತ್ಯವನ್ನು ಕಿವಿಗೊಟ್ಟು ಆಲಿಸಲು ಸಿದ್ಧರಿಲ್ಲದ ಕಾರಣ ಅವರು ಮೂಕರೂ, ಕಿವುಡರೂ ಆಗಿರುವರು.

2 ಅವಿಶ್ವಾಸ ಮತ್ತು ಅಧರ್ಮದ ನಿಮಿತ್ತ ಸ್ಫೂರ್ತಿಯನ್ನು ಕಳಕೊಂಡಿರುವ ಮನುಷ್ಯ ಹೃದಯಗಳಿಗೆ ನವಜೀವನವನ್ನು ನೀಡುವ ವಿಷಯಗಳೆಡೆಗೆ ಅಲ್ಲಾಹು ಮನುಷ್ಯರನ್ನು ಆಹ್ವಾನಿಸುತ್ತಿದ್ದಾನೆ.

3 ಅಲ್ಲಾಹು ನಮಗೆ ನೀಡಿದ ದಾನಗಳ ಪೈಕಿ ಅತ್ಯಮೂಲ್ಯವಾದುದು ಹೃದಯವಾಗಿದೆ. ಹೃದಯದಲ್ಲಿ ಮೂಡುವ ಆಲೋಚನೆಗಳನ್ನು ಅಲ್ಲಾಹು ಅರಿಯುತ್ತಾನೆ. ಕೃತಜ್ಞತೆ, ವಿನಮ್ರತೆ ಮತ್ತು ಸತ್ಯಾನ್ವೇಷಣೆಯ ಹಂಬಲವನ್ನು ಹೊಂದಿರುವ ಹೃದಯಕ್ಕೆ ಅಲ್ಲಾಹು ವಿಶಾಲತೆಯನ್ನು ಕರುಣಿಸುತ್ತಾನೆ. ಸತ್ಯದಿಂದ ವಿಮುಖರಾಗುವವರ ಹೃದಯದ ಮುಂದೆ ಅವನೊಂದು ಪರದೆಯನ್ನಿಡುತ್ತಾನೆ. ಇದರಿಂದಾಗಿ ಅವರಿಗೆ ಸನ್ಮಾರ್ಗವನ್ನು ಕಂಡುಕೊಳ್ಳಲು ಸಾಧ್ಯವಾಗಲಾರದು.

مِنكُمۡ خَآصَّةٗۖ وَٱعۡلَمُوٓاْ أَنَّ ٱللَّهَ شَدِيدُ ٱلۡعِقَابِ ٢٥

ಮಾತ್ರ ಪ್ರತ್ಯೇಕವಾಗಿ ಬಾಧಿಸುವಂತದ್ದಲ್ಲ.[1] ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು ಎಂಬುದನ್ನು ಅರಿತುಕೊಳ್ಳಿರಿ.

وَٱذۡكُرُوٓاْ إِذۡ أَنتُمۡ قَلِيلٞ مُّسۡتَضۡعَفُونَ فِي ٱلۡأَرۡضِ تَخَافُونَ أَن يَتَخَطَّفَكُمُ ٱلنَّاسُ فَـَٔاوَىٰكُمۡ وَأَيَّدَكُم بِنَصۡرِهِۦ وَرَزَقَكُم مِّنَ ٱلطَّيِّبَٰتِ لَعَلَّكُمۡ تَشۡكُرُونَ ٢٦

**26.** ನೀವು ಭೂಮಿಯಲ್ಲಿ ಬಲಹೀನರೆಂದು ಪರಿಗಣಿಸಲಾಗಿರುವ ಅಲ್ಪಸಂಖ್ಯಾತರಾಗಿದ್ದ ಸಂದರ್ಭವನ್ನು ಸ್ಮರಿಸಿರಿ. ಜನರು ನಿಮ್ಮನ್ನು ಅಪಹರಿಸಿಕೊಂಡು ಹೋಗುವರೆಂದು ನೀವು ಭಯಪಡುತ್ತಿದ್ದಿರಿ. ತರುವಾಯ ಅವನು ನಿಮಗೆ ಆಸರೆಯನ್ನು ನೀಡಿದನು, ತನ್ನ ಸಹಾಯದಿಂದ ನಿಮ್ಮನ್ನು ಬೆಂಬಲಿಸಿದನು ಮತ್ತು ಉತ್ತಮ ವಸ್ತುಗಳಿಂದ ನಿಮಗೆ ಅನ್ನಾಧಾರವನ್ನು ಒದಗಿಸಿದನು. ನೀವು ಕೃತಜ್ಞತೆ ಸಲ್ಲಿಸುವವರಾಗುವ ಸಲುವಾಗಿ.

يَـٰٓأَيُّهَا ٱلَّذِينَ ءَامَنُواْ لَا تَخُونُواْ ٱللَّهَ وَٱلرَّسُولَ وَتَخُونُوٓاْ أَمَٰنَٰتِكُمۡ وَأَنتُمۡ تَعۡلَمُونَ ٢٧

**27.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿಗೆ ಮತ್ತು ಸಂದೇಶವಾಹಕರಿಗೆ ವಿಶ್ವಾಸದ್ರೋಹ ಮಾಡದಿರಿ. ನಿಮ್ಮ ಮೇಲೆ ನಂಬಿಕೆಯಿಟ್ಟು ಒಪ್ಪಿಸಲಾದ ವಿಷಯಗಳಲ್ಲಿ ನೀವು ಅರಿತವರಾಗಿದ್ದೂ ಸಹ ವಿಶ್ವಾಸದ್ರೋಹ ಮಾಡದಿರಿ.

وَٱعۡلَمُوٓاْ أَنَّمَآ أَمۡوَٰلُكُمۡ وَأَوۡلَٰدُكُمۡ فِتۡنَةٞ وَأَنَّ ٱللَّهَ عِندَهُۥٓ أَجۡرٌ عَظِيمٞ ٢٨

**28.** ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತತಿಗಳು ಒಂದು ಪರೀಕ್ಷೆಯಾಗಿದೆ ಮತ್ತು ಮಹಾ ಪ್ರತಿಫಲವಿರುವುದು ಅಲ್ಲಾಹುವಿನ ಬಳಿಯಲ್ಲಾಗಿದೆ ಎಂಬುದನ್ನು ನೀವು ಅರಿತುಕೊಳ್ಳಿರಿ.

يَـٰٓأَيُّهَا ٱلَّذِينَ ءَامَنُوٓاْ إِن تَتَّقُواْ ٱللَّهَ يَجۡعَل لَّكُمۡ فُرۡقَانٗا وَيُكَفِّرۡ عَنكُمۡ سَيِّـَٔاتِكُمۡ وَيَغۡفِرۡ لَكُمۡۗ وَٱللَّهُ ذُو ٱلۡفَضۡلِ ٱلۡعَظِيمِ ٢٩

**29.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಟ್ಟು ಜೀವಿಸುವುದಾದರೆ ಅವನು ನಿಮಗೆ ಸತ್ಯಾಸತ್ಯತೆಯನ್ನು ಬೇರ್ಪಡಿಸಿ ತಿಳಿಯುವ ಶಕ್ತಿಯನ್ನು ನೀಡುವನು. ಅವನು ನಿಮ್ಮ ಪಾಪಗಳನ್ನು ಅಳಿಸುವನು ಮತ್ತು

1 ಒಬ್ಬ ಸತ್ಯವಿಶ್ವಾಸಿ ಅಕ್ರಮ ಮತ್ತು ನೀಚ ಪ್ರವೃತ್ತಿಗಳನ್ನು ಪ್ರೋತ್ಸಾಹಿಸುವುದಾಗಲಿ ಅದರ ಬಗ್ಗೆ ನಿರ್ಲಕ್ಷ್ಯ ತೋರುವುದಾಗಲಿ ಮಾಡಬಾರದು. ಅಲ್ಲಾಹುವಿನ ಪರೀಕ್ಷೆ ಅಥವಾ ಶಿಕ್ಷೆ ಕೆಲವೊಮ್ಮೆ ಎಲ್ಲರ ಮೇಲೂ ಎರಗೀತು.

ನಿಮ್ಮನ್ನು ಕ್ಷಮಿಸುವನು. ಅಲ್ಲಾಹು ಮಹಾ ಅನುಗ್ರಹವುಳ್ಳವನಾಗಿರುವನು.

30. ತಮ್ಮನ್ನು ಬಂಧಿಸಲು ಅಥವಾ ವಧಿಸಲು ಅಥವಾ ನಾಡಿನಿಂದ ಹೊರಗಟ್ಟಲು ಸತ್ಯನಿಷೇಧಿಗಳು ತಮಗೆ ವಿರುದ್ಧವಾಗಿ ಸಂಚು ಹೂಡುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). ಅವರು ತಂತ್ರ ಪ್ರಯೋಗಿಸುತ್ತಿರುವರು. ಅಲ್ಲಾಹು ಕೂಡ ತಂತ್ರ ಪ್ರಯೋಗಿಸುತ್ತಿರುವನು. ತಂತ್ರ ಪ್ರಯೋಗಿಸುವವರಲ್ಲಿ ಅಲ್ಲಾಹು ಅತ್ಯುತ್ತಮನಾಗಿರುವನು.

وَإِذْ يَمْكُرُ بِكَ ٱلَّذِينَ كَفَرُوا۟ لِيُثْبِتُوكَ أَوْ يَقْتُلُوكَ أَوْ يُخْرِجُوكَ ۚ وَيَمْكُرُونَ وَيَمْكُرُ ٱللَّهُ ۖ وَٱللَّهُ خَيْرُ ٱلْمَـٰكِرِينَ ﴿٣٠﴾

31. ಅವರಿಗೆ ನಮ್ಮ ವಚನಗಳನ್ನು ಓದಿಕೊಡಲಾಗುವಾಗ 'ನಾವು ಆಲಿಸಿರುವೆವು, ನಾವು ಇಚ್ಛಿಸಿದ್ದರೆ ಇದರಂತಿರುವುದನ್ನು (ಕುರ್‌ಆನ್‌ನಂತಿರುವುದನ್ನು) ನಾವೂ ಹೇಳುತ್ತಿದ್ದೆವು. ಇದು ಪೂರ್ವಿಕರ ಪುರಾಣಕಥೆಗಳಲ್ಲದೆ ಇನ್ನೇನೂ ಅಲ್ಲ' ಎಂದು ಅವರು ಹೇಳುವರು

وَإِذَا تُتْلَىٰ عَلَيْهِمْ ءَايَـٰتُنَا قَالُوا۟ قَدْ سَمِعْنَا لَوْ نَشَآءُ لَقُلْنَا مِثْلَ هَـٰذَآ ۙ إِنْ هَـٰذَآ إِلَّآ أَسَـٰطِيرُ ٱلْأَوَّلِينَ ﴿٣١﴾

32. 'ಓ ಅಲ್ಲಾಹ್! ಇದು ನಿನ್ನ ಕಡೆಯಿಂದಿರುವ ಸತ್ಯವಾಗಿದ್ದರೆ ನಮ್ಮ ಮೇಲೆ ಆಕಾಶದಿಂದ ಕಲ್ಲಿನ ಮಳೆಯನ್ನು ಸುರಿಸು ಅಥವಾ ನಮಗೆ ಯಾತನಾಮಯವಾದ ಶಿಕ್ಷೆಯನ್ನು ನೀಡು' ಎಂದು ಅವರು (ಅವಿಶ್ವಾಸಿಗಳು) ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ).

وَإِذْ قَالُوا۟ ٱللَّهُمَّ إِن كَانَ هَـٰذَا هُوَ ٱلْحَقَّ مِنْ عِندِكَ فَأَمْطِرْ عَلَيْنَا حِجَارَةً مِّنَ ٱلسَّمَآءِ أَوِ ٱئْتِنَا بِعَذَابٍ أَلِيمٍ ﴿٣٢﴾

33. ಆದರೆ ತಾವು ಅವರ ನಡುವೆಯಿರುವಾಗ ಅಲ್ಲಾಹು ಅವರನ್ನು ಶಿಕ್ಷಿಸಲಾರನು. ಅವರು ಪಾಪಮುಕ್ತಿಯನ್ನು ಬೇಡುತ್ತಿರುವವರಾಗಿರುವಾಗಲೂ ಅಲ್ಲಾಹು ಅವರನ್ನು ಶಿಕ್ಷಿಸಲಾರನು.

وَمَا كَانَ ٱللَّهُ لِيُعَذِّبَهُمْ وَأَنتَ فِيهِمْ ۚ وَمَا كَانَ ٱللَّهُ مُعَذِّبَهُمْ وَهُمْ يَسْتَغْفِرُونَ ﴿٣٣﴾

34. ಅಲ್ಲಾಹು ಅವರನ್ನು ಶಿಕ್ಷಿಸದಿರಲು ಅವರಿಗಿರುವ ಅರ್ಹತೆಯಾದರೂ ಏನು? ಅವರು ಮಸ್ಜಿದುಲ್ ಹರಾಮ್‌ನಿಂದ ಜನರನ್ನು ತಡೆಯುತ್ತಿರುವರು. ಅವರು ಅದರ ಸಂರಕ್ಷಕರೂ ಅಲ್ಲ. ಭಯಭಕ್ತಿಯುಳ್ಳವರ

وَمَا لَهُمْ أَلَّا يُعَذِّبَهُمُ ٱللَّهُ وَهُمْ يَصُدُّونَ عَنِ ٱلْمَسْجِدِ ٱلْحَرَامِ وَمَا كَانُوٓا۟ أَوْلِيَآءَهُۥٓ ۚ إِنْ أَوْلِيَآؤُهُۥٓ إِلَّا ٱلْمُتَّقُونَ وَلَـٰكِنَّ أَكْثَرَهُمْ لَا يَعْلَمُونَ ﴿٣٤﴾

ಹೊರತು ಇನ್ನಾರೂ ಅದರ ಸಂರಕ್ಷಕರಾಗ ತಕ್ಕವರಲ್ಲ. ಆದರೆ ಅವರಲ್ಲಿ ಹೆಚ್ಚಿನವರೂ (ಇದನ್ನು) ಗ್ರಹಿಸುವುದಿಲ್ಲ.

35. ಭವನದ (ಕಅ್‌ಬಾಲಯದ) ಬಳಿ ಅವರು ಮಾಡುವ ನಮಾಝ್ ಕೇವಲ ಶಿಳ್ಳೆ ಹೊಡೆಯುವುದು ಮತ್ತು ಚಪ್ಪಾಳೆ ತಟ್ಟುವುದಲ್ಲದೆ ಇನ್ನೇನೂ ಅಲ್ಲ.[1] ಆದ್ದರಿಂದ ನೀವು ಸತ್ಯನಿಷೇಧಿಗಳಾಗಿರುವುದರ ನಿಮಿತ್ತ ಶಿಕ್ಷೆಯನ್ನು ಸವಿಯಿರಿ.

وَمَا كَانَ صَلَاتُهُمْ عِندَ ٱلْبَيْتِ إِلَّا مُكَآءً وَتَصْدِيَةً ۚ فَذُوقُوا۟ ٱلْعَذَابَ بِمَا كُنتُمْ تَكْفُرُونَ ﴿٣٥﴾

36. ಖಂಡಿತವಾಗಿಯೂ ಸತ್ಯನಿಷೇಧಿಗಳು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆಯುವುದಕ್ಕಾಗಿ ತಮ್ಮ ಸಂಪತ್ತನ್ನು ವ್ಯಯಿಸುವರು. ಅವರದನ್ನು ವ್ಯಯಿಸುತ್ತಿರುವರು. ತರುವಾಯ ಅದು ಅವರ ಪಾಲಿಗೆ ವಿಷಾದಕ್ಕೆ ಹೇತುವಾಗಲಿರುವುದು. ಕೊನೆಗೆ ಅವರು ಪರಾಭವಗೊಳ್ಳುವರು. ಸತ್ಯನಿಷೇಧಿಗಳನ್ನು ಒಟ್ಟುಗೂಡಿಸಲಾಗುವುದು ನರಕಾಗ್ನಿಯೆಡೆಗೇ ಆಗಿರುವುದು.

إِنَّ ٱلَّذِينَ كَفَرُوا۟ يُنفِقُونَ أَمْوَٰلَهُمْ لِيَصُدُّوا۟ عَن سَبِيلِ ٱللَّهِ ۚ فَسَيُنفِقُونَهَا ثُمَّ تَكُونُ عَلَيْهِمْ حَسْرَةً ثُمَّ يُغْلَبُونَ ۗ وَٱلَّذِينَ كَفَرُوٓا۟ إِلَىٰ جَهَنَّمَ يُحْشَرُونَ ﴿٣٦﴾

37. ಅದು ಅಲ್ಲಾಹು ಒಳಿತಿನಿಂದ ಕೆಡುಕನ್ನು ಬೇರ್ಪಡಿಸುವುದಕ್ಕಾಗಿಯೂ, ಕೆಡುಕನ್ನು ಒಂದರ ಮೇಲೊಂದರಂತೆ ಇಟ್ಟು, ತರುವಾಯ ಎಲ್ಲವನ್ನೂ ರಾಶಿ ಮಾಡಿ ನರಕದಲ್ಲಿ ಹಾಕುವುದಕ್ಕಾಗಿಯೂ ಆಗಿದೆ. ನಷ್ಟಹೊಂದಿದವರು ಅಂತಹವರೇ ಆಗಿರುವರು.

لِيَمِيزَ ٱللَّهُ ٱلْخَبِيثَ مِنَ ٱلطَّيِّبِ وَيَجْعَلَ ٱلْخَبِيثَ بَعْضَهُۥ عَلَىٰ بَعْضٍ فَيَرْكُمَهُۥ جَمِيعًا فَيَجْعَلَهُۥ فِى جَهَنَّمَ ۚ أُو۟لَـٰٓئِكَ هُمُ ٱلْخَـٰسِرُونَ ﴿٣٧﴾

38. ಅವರು ನಿಲ್ಲಿಸುವುದಾದರೆ ಅವರು ಮುಂಚೆ ಮಾಡಿರುವುದನ್ನು ಅವರಿಗೆ ಕ್ಷಮಿಸಿ ಬಿಡಲಾಗುವುದು ಎಂದು ಸತ್ಯನಿಷೇಧಿಗಳೊಂದಿಗೆ ಹೇಳಿರಿ. ಇನ್ನು ಅವರು (ಸತ್ಯನಿಷೇಧದೆಡೆಗೇ) ಮರಳುವುದಾದರೆ ಪೂರ್ವಿಕರ ವಿಷಯದಲ್ಲಿ (ಅಲ್ಲಾಹುವಿನ) ಕ್ರಮವು ಈಗಾಗಲೇ ಗತಿಸಿಹೋಗಿದೆ.

قُل لِّلَّذِينَ كَفَرُوٓا۟ إِن يَنتَهُوا۟ يُغْفَرْ لَهُم مَّا قَدْ سَلَفَ وَإِن يَعُودُوا۟ فَقَدْ مَضَتْ سُنَّتُ ٱلْأَوَّلِينَ ﴿٣٨﴾

1 ಬಹುದೇವಾರಾಧಕರಲ್ಲಿ ಕಂಡುಬರುವ ಆರಾಧನಾ ಕ್ರಮಗಳೆಲ್ಲವೂ ಸದ್ದುಗದ್ದಲಗಳಿಂದ ಕೂಡಿದ್ದೇ ಆಗಿರುತ್ತದೆ. ತಾಳ ವಾದ್ಯಗಳೇ ಅವುಗಳ ಮುಖಮುದ್ರೆಯಾಗಿದೆ.

39. ಕ್ಷೋಭೆಯು ಇಲ್ಲದಾಗುವ ತನಕ ಮತ್ತು ಧರ್ಮವು ಸಂಪೂರ್ಣವಾಗಿ ಅಲ್ಲಾಹುವಿಗಾಗುವ ತನಕ[1] ಅವರೊಂದಿಗೆ ಯುದ್ಧಮಾಡಿರಿ. ಇನ್ನು ಅವರು ನಿಲ್ಲಿಸುವುದಾದರೆ ಅವರು ಮಾಡುತ್ತಿರುವುದನ್ನು ಅಲ್ಲಾಹು ವೀಕ್ಷಿಸುವವನಾಗಿರುವನು.

وَقَٰتِلُوهُمۡ حَتَّىٰ لَا تَكُونَ فِتۡنَةٞ وَيَكُونَ ٱلدِّينُ كُلُّهُۥ لِلَّهِۚ فَإِنِ ٱنتَهَوۡاْ فَإِنَّ ٱللَّهَ بِمَا يَعۡمَلُونَ بَصِيرٞ ٣٩

40. ಅವರೇನಾದರೂ ವಿಮುಖರಾಗುವುದಾದರೆ ನಿಮ್ಮ ರಕ್ಷಕನು ಅಲ್ಲಾಹುವಾಗಿರುವನು ಎಂಬುದನ್ನು ನೀವು ಅರಿತುಕೊಳ್ಳಿರಿ. (ಅವನು) ಎಷ್ಟು ಉತ್ತಮ ರಕ್ಷಕನು! ಎಷ್ಟು ಉತ್ತಮ ಸಹಾಯಕನು!

وَإِن تَوَلَّوۡاْ فَٱعۡلَمُوٓاْ أَنَّ ٱللَّهَ مَوۡلَىٰكُمۡۚ نِعۡمَ ٱلۡمَوۡلَىٰ وَنِعۡمَ ٱلنَّصِيرُ ٤٠

41. ನೀವು (ಯುದ್ಧದಲ್ಲಿ) ಗಳಿಸಿದ ಯಾವುದೇ ವಸ್ತುವಿನಿಂದಲೂ ಅದರ ಐದನೇ ಒಂದು ಭಾಗವು ಅಲ್ಲಾಹುವಿಗೂ, ಸಂದೇಶವಾಹಕರಿಗೂ, (ಸಂದೇಶವಾಹಕರ) ನಿಕಟಸಂಬಂಧಿಕರಿಗೂ, ಅನಾಥರಿಗೂ, ದರಿದ್ರರಿಗೂ, ದಾರಿಹೋಕರಿಗೂ ಇರುವುದಾಗಿದೆಯೆಂಬುದನ್ನು ಅರಿತುಕೊಳ್ಳಿರಿ.[2] ನೀವು ಅಲ್ಲಾಹುವಿನಲ್ಲೂ, ಮತ್ತು ಸತ್ಯಾಸತ್ಯ ವಿವೇಚನೆಯ ದಿನದಂದು ಅಥವಾ ಎರಡು ಬಣಗಳು ಮುಖಾಮುಖಿಯಾದ ದಿನದಂದು ನಮ್ಮ ದಾಸನ ಮೇಲೆ ನಾವು

۞ وَٱعۡلَمُوٓاْ أَنَّمَا غَنِمۡتُم مِّن شَيۡءٖ فَأَنَّ لِلَّهِ خُمُسَهُۥ وَلِلرَّسُولِ وَلِذِي ٱلۡقُرۡبَىٰ وَٱلۡيَتَٰمَىٰ وَٱلۡمَسَٰكِينِ وَٱبۡنِ ٱلسَّبِيلِ إِن كُنتُمۡ ءَامَنتُم بِٱللَّهِ وَمَآ أَنزَلۡنَا عَلَىٰ عَبۡدِنَا يَوۡمَ ٱلۡفُرۡقَانِ يَوۡمَ ٱلۡتَقَى ٱلۡجَمۡعَانِۗ وَٱللَّهُ عَلَىٰ كُلِّ شَيۡءٖ قَدِيرٌ ٤١

1 ಪ್ರವಾದಿ(ﷺ)ರವರು ಬಹಿರಂಗವಾಗಿ ಧರ್ಮಪ್ರಚಾರವನ್ನು ಆರಂಭಿಸಿದಾಗ ಅದನ್ನು ಕಿವಿಗೊಟ್ಟು ಆಲಿಸಿದ ಕೆಲವರು ಇಸ್ಲಾಮ್ ಸ್ವೀಕರಿಸಿದರು. ಆಗ ಸತ್ಯನಿಷೇಧಿಗಳು ಪ್ರವಾದಿ(ﷺ)ರವರನ್ನು ಮತ್ತು ಸತ್ಯವಿಶ್ವಾಸಿಗಳನ್ನು ನಿರ್ನಾಮ ಮಾಡಲು ಯುದ್ಧವನ್ನು ಆರಂಭಿಸಿದರು. ಅದನ್ನು ಪ್ರತಿರೋಧಿಸುವುದಕ್ಕಾಗಿ ಮತ್ತು ನಂಬಿಕೆಯ ಸ್ವಾತಂತ್ರ್ಯಕ್ಕಾಗಿ ಮುಸ್ಲಿಮರೂ ಯುದ್ಧ ಮಾಡಿದರು. ಧರ್ಮವು ಸಂಪೂರ್ಣವಾಗಿ ಅಲ್ಲಾಹುವಿಗಾಗಿರುವುದು ಎಂಬುದರ ತಾತ್ಪರ್ಯವು ಧರ್ಮವಿಶ್ವಾಸದ ವಿಷಯವು ಪುರೋಹಿತರ ಮತ್ತು ನಾಯಕರ ಬಲಪ್ರಯೋಗಗಳಿಂದ ಮುಕ್ತವಾಗಿ ಅಲ್ಲಾಹುವಿನ ಭಯದ ತಳಹದಿಯಲ್ಲಿ ಮಾತ್ರವಾಗುವುದು ಎಂದಾಗಿದೆ.

2 ಯುದ್ಧದಲ್ಲಿ ಗಳಿಸಿದ ಸಂಪತ್ತಿನಲ್ಲಿ ಐದನೇ ನಾಲ್ಕು ಭಾಗವನ್ನು ಸೈನಿಕರಿಗೆ ಹಂಚಿ, ಉಳಿದ ಐದನೇ ಒಂದು ಭಾಗವನ್ನು ಪುನಃ ಐದು ಭಾಗಗಳಾಗಿ ವಿಂಗಡಿಸಬೇಕು. ಅದರಲ್ಲಿ ಒಂದು ಭಾಗವನ್ನು ಅಲ್ಲಾಹು ಮತ್ತು ಅವನ ರಸೂಲ್ (ﷺ)ರಿಗೆ ಅಥವಾ ಧಾರ್ಮಿಕ ಅಗತ್ಯಗಳಿಗೆ, ಎರಡನೆ ಭಾಗವನ್ನು ಪ್ರವಾದಿ(ﷺ)ರವರ ಕುಟುಂಬಕ್ಕೆ ಅಥವಾ ಬನೂ ಹಾಶಿಮ್, ಬನೂ ಮುತ್ತಲಿಬ್ ಕುಟುಂಬದಲ್ಲಿ ಸೇರಿದವರಿಗೆ (ಇವೆರಡು ಕುಟುಂಬದವರು ಇಸ್ಲಾಮಿಗಾಗಿ ಅತ್ಯಂತ ಹೆಚ್ಚು ತ್ಯಾಗ ಸಹಿಸಿದವರಾಗಿದ್ದರು), ಮೂರನೇ ಭಾಗವನ್ನು ಅನಾಥರಿಗೆ, ನಾಲ್ಕನೇ ಭಾಗವನ್ನು ಬಡವರಿಗೆ ಮತ್ತು ಐದನೇ ಭಾಗವನ್ನು ದಾರಿಹೋಕರಿಗೆ ನೀಡಬೇಕು.

ಅವತೀರ್ಣಗೊಳಿಸಿರುವುದರಲ್ಲೂ[1] ವಿಶ್ವಾಸವಿಟ್ಟವರಾಗಿದ್ದರೆ. ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

إِذْ أَنتُم بِٱلْعُدْوَةِ ٱلدُّنْيَا وَهُم بِٱلْعُدْوَةِ ٱلْقُصْوَىٰ وَٱلرَّكْبُ أَسْفَلَ مِنكُمْۚ وَلَوْ تَوَاعَدتُّمْ لَٱخْتَلَفْتُمْ فِى ٱلْمِيعَـٰدِ وَلَـٰكِن لِّيَقْضِىَ ٱللَّهُ أَمْرًا كَانَ مَفْعُولًا لِّيَهْلِكَ مَنْ هَلَكَ عَنۢ بَيِّنَةٍ وَيَحْيَىٰ مَنْ حَىَّ عَنۢ بَيِّنَةٍۗ وَإِنَّ ٱللَّهَ لَسَمِيعٌ عَلِيمٌ ﴿٤٢﴾

**42.** ನೀವು (ಕಣಿವೆಯಲ್ಲಿ ಮದೀನಕ್ಕೆ) ಸಮೀಪವಿರುವ ಭಾಗದಲ್ಲೂ, ಅವರು ದೂರದ ಭಾಗದಲ್ಲೂ ಯಾತ್ರಿಕ ಸಂಘವು ನಿಮಗಿಂತ ಕೆಳಗಿನ ಭಾಗದಲ್ಲೂ ಇದ್ದ ಸಂದರ್ಭ(ವನ್ನು ಸ್ಮರಿಸಿರಿ). ನೀವು ಪರಸ್ಪರ (ಯುದ್ಧ ನಡೆಸಲು) ನಿರ್ಧರಿಸಿದ್ದರೆ ಆ ನಿರ್ಧಾರದಲ್ಲಿ ನೀವು ಭಿನ್ನಭಿನ್ನರಾಗುತ್ತಿದ್ದಿರಿ.[2] ಆದರೆ ಅದು ತೀರ್ಮಾನಿಸಲಾದ ಒಂದು ಸಂಗತಿಯನ್ನು ಅಲ್ಲಾಹು ಕಾರ್ಯರೂಪಕ್ಕೆ ತರುವ ಸಲುವಾಗಿತ್ತು. ಅಂದರೆ ನಾಶವಾದವರು ಸ್ಪಷ್ಟವಾದ ಪುರಾವೆಯನ್ನು ಕಂಡು ನಾಶವಾಗುವುದಕ್ಕಾಗಿ ಮತ್ತು ಬದುಕಿದವರು ಸ್ಪಷ್ಟವಾದ ಪುರಾವೆಯನ್ನು ಕಂಡು ಬದುಕುವುದಕ್ಕಾಗಿತ್ತು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

إِذْ يُرِيكَهُمُ ٱللَّهُ فِى مَنَامِكَ قَلِيلًاۖ وَلَوْ أَرَىٰكَهُمْ كَثِيرًا لَّفَشِلْتُمْ وَلَتَنَـٰزَعْتُمْ فِى ٱلْأَمْرِ وَلَـٰكِنَّ ٱللَّهَ سَلَّمَۗ إِنَّهُۥ عَلِيمٌۢ بِذَاتِ ٱلصُّدُورِ ﴿٤٣﴾

**43.** ತಮ್ಮ ಕನಸಿನಲ್ಲಿ ಅಲ್ಲಾಹು ಅವರನ್ನು (ಶತ್ರುಗಳನ್ನು) ತಮಗೆ ಕಡಿಮೆ ಜನರಾಗಿ ಮಾತ್ರ ತೋರಿಸಿಕೊಟ್ಟ ಸಂದರ್ಭ(ವನ್ನು ಸ್ಮರಿಸಿರಿ). ತಮಗೆ ಅವರನ್ನು ಅಧಿಕಗೊಳಿಸಿ ತೋರಿಸಿರುತ್ತಿದ್ದರೆ ನೀವು ಎದೆಗುಂದುತ್ತಿದ್ದಿರಿ ಮತ್ತು ಕಾರ್ಯ ನಿರ್ವಹಣೆಯಲ್ಲಿ ಭಿನ್ನಾಭಿಪ್ರಾಯವನ್ನು ತಾಳುತ್ತಿದ್ದಿರಿ. ಆದರೆ ಅಲ್ಲಾಹು ಕಾಪಾಡಿದನು. ಖಂಡಿತವಾಗಿಯೂ ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

---

1 ಇದರ ತಾತ್ಪರ್ಯವು ಬದ್ರ್ ಯುದ್ಧದ ದಿನಗಳಲ್ಲಿ ಅಲ್ಲಾಹು ಅವತೀರ್ಣಗೊಳಿಸಿದ ದಿವ್ಯ ಸಂದೇಶಗಳು – ವಿಶೇಷತಃ – ಯುದ್ಧದಿಂದ ಗಳಿಸಿದ ಸಂಪತ್ತಿನ ಕುರಿತಿರುವ ಆದೇಶಗಳಾಗಿವೆ.

2 ಬದ್ರ್‌ನಲ್ಲಿ ಮುಸ್ಲಿಮರು ಮತ್ತು ಶತ್ರುಗಳು ಮುಖಾಮುಖಿಯಾಗಿದ್ದು ಒಂದು ಪೂರ್ವನಿರ್ಧಾರದಿಂದಾಗಿರಲಿಲ್ಲ.

**44.** ನೀವು ಮುಖಾಮುಖಿಯಾದ ಸಂದರ್ಭದಲ್ಲಿ ನಿಮ್ಮ ದೃಷ್ಟಿಯಲ್ಲಿ ನಿಮಗೆ ಅವರನ್ನು ಕಡಿಮೆಯಾಗಿ ಮತ್ತು ಅವರ ದೃಷ್ಟಿಯಲ್ಲಿ ನಿಮ್ಮನ್ನು ಕಡಿಮೆಯಾಗಿ ತೋರಿಸಿಕೊಟ್ಟ ಸಂದರ್ಭ(ವನ್ನೂ ಸ್ಮರಿಸಿರಿ).[1] ಇದು ತೀರ್ಮಾನಿಸಲಾದ ಒಂದು ಸಂಗತಿಯನ್ನು ಅಲ್ಲಾಹು ಕಾರ್ಯರೂಪಕ್ಕೆ ತರುವ ಸಲುವಾಗಿತ್ತು. ವಿಷಯಗಳೆಲ್ಲವೂ ಮರಳಿಸಲ್ಪಡುವುದು ಅಲ್ಲಾಹುವಿನೆಡೆಗೇ ಆಗಿರುವುದು.

وَإِذۡ يُرِيكُمُوهُمۡ إِذِ ٱلۡتَقَيۡتُمۡ فِيٓ أَعۡيُنِكُمۡ قَلِيلٗا وَيُقَلِّلُكُمۡ فِيٓ أَعۡيُنِهِمۡ لِيَقۡضِيَ ٱللَّهُ أَمۡرٗا كَانَ مَفۡعُولٗاۗ وَإِلَى ٱللَّهِ تُرۡجَعُ ٱلۡأُمُورُ ﴿٤٤﴾

**45.** ಓ ಸತ್ಯವಿಶ್ವಾಸಿಗಳೇ! ನೀವು ಒಂದು(ಸೈನಿಕ) ತುಕಡಿಯನ್ನು ಎದುರುಗೊಂಡರೆ ದೃಢವಾಗಿ ನಿಲ್ಲಿರಿ ಮತ್ತು ಅಲ್ಲಾಹುವನ್ನು ಅಧಿಕವಾಗಿ ಸ್ಮರಿಸಿರಿ. ನೀವು ಜಯಗಳಿಸಲೂ ಬಹುದು.

يَٰٓأَيُّهَا ٱلَّذِينَ ءَامَنُوٓاْ إِذَا لَقِيتُمۡ فِئَةٗ فَٱثۡبُتُواْ وَٱذۡكُرُواْ ٱللَّهَ كَثِيرٗا لَّعَلَّكُمۡ تُفۡلِحُونَ ﴿٤٥﴾

**46.** ನೀವು ಅಲ್ಲಾಹುವನ್ನು ಮತ್ತು ಅವನ ಸಂದೇಶ ವಾಹಕರನ್ನು ಅನುಸರಿಸಿರಿ. ನೀವು ಭಿನ್ನಭಿನ್ನರಾಗದಿರಿ. ಹಾಗೆ ಮಾಡಿದರೆ ನೀವು ಧೈರ್ಯಗುಂದುವಿರಿ ಮತ್ತು ನಿಮ್ಮ ಸ್ಫೂರ್ತಿಯು (ನಾಶವಾಗಿ) ಹೋಗುವುದು. ನೀವು ಸಹನೆ ಪಾಲಿಸಿರಿ. ಖಂಡಿತವಾಗಿಯೂ ಅಲ್ಲಾಹು ಸಹನಾಶೀಲರೊಂದಿಗಿರುವನು.

وَأَطِيعُواْ ٱللَّهَ وَرَسُولَهُۥ وَلَا تَنَٰزَعُواْ فَتَفۡشَلُواْ وَتَذۡهَبَ رِيحُكُمۡۖ وَٱصۡبِرُوٓاْۚ إِنَّ ٱللَّهَ مَعَ ٱلصَّٰبِرِينَ ﴿٤٦﴾

**47.** ದರ್ಪದೊಂದಿಗೆ, ಜನರಿಗೆ ತೋರಿಸುವುದಕ್ಕಾಗಿ ಮತ್ತು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆಯುವುದಕ್ಕಾಗಿ ತಮ್ಮ ಮನೆಗಳಿಂದ ಹೊರಟವರಂತೆ ನೀವಾಗದಿರಿ. ಅವರು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَلَا تَكُونُواْ كَٱلَّذِينَ خَرَجُواْ مِن دِيَٰرِهِم بَطَرٗا وَرِئَآءَ ٱلنَّاسِ وَيَصُدُّونَ عَن سَبِيلِ ٱللَّهِۚ وَٱللَّهُ بِمَا يَعۡمَلُونَ مُحِيطٞ ﴿٤٧﴾

**48.** 'ಇಂದು ಜನರಲ್ಲಿ ನಿಮ್ಮನ್ನು ಸೋಲಿಸುವವರಾಗಿ ಯಾರೂ ಇಲ್ಲ. ಖಂಡಿತವಾಗಿಯೂ ನಾನು ನಿಮ್ಮ ರಕ್ಷಕನಾಗಿರುವೆನು' ಎನ್ನುತ್ತಾ ಸೈತಾನನು

وَإِذۡ زَيَّنَ لَهُمُ ٱلشَّيۡطَٰنُ أَعۡمَٰلَهُمۡ وَقَالَ لَا غَالِبَ لَكُمُ ٱلۡيَوۡمَ مِنَ ٱلنَّاسِ وَإِنِّي جَارٞ

1 ಅತಿ ಸುಲಭದಲ್ಲಿ ಜಯಗಳಿಸಬಹುದೆಂಬ ನಿರೀಕ್ಷೆಯಲ್ಲಿ ಎರಡು ಬಣಗಳೂ ರಣರಂಗಕ್ಕಿಳಿಯುವ ಸಲುವಾಗಿ ಅಲ್ಲಾಹು ಈ ರೀತಿ ಮಾಡಿದ್ದನು.

لَّكُمۡۖ فَلَمَّا تَرَآءَتِ ٱلۡفِئَتَانِ نَكَصَ عَلَىٰ
عَقِبَيۡهِ وَقَالَ إِنِّي بَرِيٓءٞ مِّنكُمۡ إِنِّيٓ أَرَىٰ
مَا لَا تَرَوۡنَ إِنِّيٓ أَخَافُ ٱللَّهَۚ وَٱللَّهُ شَدِيدُ
ٱلۡعِقَابِ ٤٨

ಅವರಿಗೆ ಅವರ ಕೃತ್ಯಗಳನ್ನು ಆಕರ್ಷಕಗೊಳಿಸಿ ತೋರಿಸಿದ ಸಂದರ್ಭ (ವನ್ನು ಸ್ಮರಿಸಿರಿ). ತರುವಾಯ ಎರಡು ಬಣಗಳು ಪರಸ್ಪರ ಎದುರುಗೊಂಡಾಗ 'ನಾನು ನಿಮ್ಮಿಂದ ಸಂಬಂಧ ಕಡಿದುಕೊಂಡಿರುವೆನು. ಖಂಡಿತವಾಗಿಯೂ ನೀವು ಕಾಣದಿರುವುದನ್ನು ನಾನು ಕಾಣುತ್ತಿರುವೆನು.[1] ಖಂಡಿತವಾಗಿಯೂ ನಾನು ಅಲ್ಲಾಹುವನ್ನು ಭಯಪಡುತ್ತಿರುವೆನು. ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು' ಎನ್ನುತ್ತಾ ಅವನು (ಸೈತಾನನು) ಹಿಂದೆ ಸರಿದುಬಿಟ್ಟನು.

إِذۡ يَقُولُ ٱلۡمُنَٰفِقُونَ وَٱلَّذِينَ فِي قُلُوبِهِم
مَّرَضٌ غَرَّ هَٰٓؤُلَآءِ دِينُهُمۡۗ وَمَن يَتَوَكَّلۡ
عَلَى ٱللَّهِ فَإِنَّ ٱللَّهَ عَزِيزٌ حَكِيمٞ ٤٩

**49.** 'ಇವರನ್ನು (ಮುಸ್ಲಿಮರನ್ನು) ಇವರ ಧರ್ಮವು ವಂಚಿಸಿದೆ' ಎಂದು ಕಪಟವಿಶ್ವಾಸಿಗಳು ಮತ್ತು ಹೃದಯದಲ್ಲಿ ರೋಗವಿರುವವರು ಹೇಳುತ್ತಿದ್ದ ಸಂದರ್ಭವಾಗಿತ್ತದು. ಯಾರಾದರೂ ಅಲ್ಲಾಹುವಿನ ಮೇಲೆ ಭರವಸೆಯನ್ನಿಡುವುದಾದರೆ ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَلَوۡ تَرَىٰٓ إِذۡ يَتَوَفَّى ٱلَّذِينَ كَفَرُواْ
ٱلۡمَلَٰٓئِكَةُ يَضۡرِبُونَ وُجُوهَهُمۡ وَأَدۡبَٰرَهُمۡ
وَذُوقُواْ عَذَابَ ٱلۡحَرِيقِ ٥٠

**50.** ಸತ್ಯನಿಷೇಧಿಗಳ ಮುಖಗಳಿಗೆ ಮತ್ತು ಹಿಂಭಾಗಗಳಿಗೆ ಬಡಿಯುತ್ತಾ[2] ಮಲಕ್‌ಗಳು ಅವರನ್ನು ಮೃತ ಪಡಿಸುವ ಸಂದರ್ಭವನ್ನು ತಾವು ಕಂಡಿರುತ್ತಿದ್ದರೆ! 'ಜ್ವಲಿಸುತ್ತಿರುವ ಅಗ್ನಿಯ ಶಿಕ್ಷೆಯನ್ನು ಸವಿಯಿರಿ'.

ذَٰلِكَ بِمَا قَدَّمَتۡ أَيۡدِيكُمۡ وَأَنَّ ٱللَّهَ
لَيۡسَ بِظَلَّٰمٖ لِّلۡعَبِيدِ ٥١

**51.** ಅದು ನಿಮ್ಮ ಕೈಗಳು ಮುಂಗಡವಾಗಿ ಮಾಡಿಟ್ಟಿರುವುದರ ಫಲವಾಗಿದೆ ಮತ್ತು ಅಲ್ಲಾಹು ದಾಸರೊಂದಿಗೆ ಕಿಂಚಿತ್ತೂ ಅಕ್ರಮವೆಸಗಲಾರನು ಎಂಬುದರಿಂದಾಗಿದೆ'.[3] (ಎಂದು ಮಲಕ್‌ಗಳು ಅವರೊಂದಿಗೆ ಹೇಳುವರು)

---

1 ಇಲ್ಲಿ ಸೂಚಿಸಿರುವುದು ಮಲಕ್‌ಗಳ ಉಪಸ್ಥಿತಿಯ ಕುರಿತಾಗಿದೆ.

2 ಮಲಕ್‌ಗಳ ಪ್ರವೃತ್ತಿಗಳು ನಮಗೆ ನೋಡಿ ಗ್ರಹಿಸಲು ಸಾಧ್ಯವಾಗದ ಅಗೋಚರ ವಿಷಯಗಳಲ್ಲಿ ಸೇರಿದ್ದಾಗಿವೆ.

3 ದುಷ್ಟರನ್ನು ಶಿಕ್ಷಿಸಬೇಕಾದುದು ನ್ಯಾಯದ ಬೇಡಿಕೆಯಾಗಿದೆ. ದುಷ್ಟರನ್ನು ಸುಮ್ಮನೆ ಬಿಡುವುದು ಶಿಷ್ಟರೊಂದಿಗೆ ತೋರಿಸುವ ಅನ್ಯಾಯವಾಗಿದೆ.

52. ಫಿರ್‌ಔನ್‌ನ ಜನರ ಮತ್ತು ಅವರಿಗಿಂತ ಮುಂಚಿನವರ ರೂಢಿಯಂತೆ. ಅವರು ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿದರು. ಆಗ ಅವರ ಪಾಪಗಳ ನಿಮಿತ್ತ ಅಲ್ಲಾಹು ಅವರನ್ನು ಹಿಡಿದನು. ಖಂಡಿತವಾಗಿಯೂ ಅಲ್ಲಾಹು ಪ್ರಬಲನೂ, ಕಠಿಣವಾಗಿ ಶಿಕ್ಷಿಸುವವನೂ ಆಗಿರುವನು.

كَدَأْبِ ءَالِ فِرْعَوْنَ وَٱلَّذِينَ مِن قَبْلِهِمْۚ كَفَرُواْ بِـَٔايَٰتِ ٱللَّهِ فَأَخَذَهُمُ ٱللَّهُ بِذُنُوبِهِمْۚ إِنَّ ٱللَّهَ قَوِيٌّ شَدِيدُ ٱلْعِقَابِ ٥٢

53. ಅದು ಅಲ್ಲಾಹು ಒಂದು ಜನತೆಗೆ ನೀಡಿದ ಅನುಗ್ರಹವನ್ನು, ಅವರು ತಮ್ಮ ನಿಲುವಿನಲ್ಲಿ ಬದಲಾವಣೆಯನ್ನು ತರುವವರೆಗೆ ಅವನು ಬದಲಾಯಿಸಲಾರನು ಮತ್ತು ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು ಎಂಬುದರಿಂದಾಗಿದೆ.

ذَٰلِكَ بِأَنَّ ٱللَّهَ لَمْ يَكُ مُغَيِّرًا نِّعْمَةً أَنْعَمَهَا عَلَىٰ قَوْمٍ حَتَّىٰ يُغَيِّرُواْ مَا بِأَنفُسِهِمْ وَأَنَّ ٱللَّهَ سَمِيعٌ عَلِيمٌ ٥٣

54. ಫಿರ್‌ಔನ್‌ನ ಜನರ ಮತ್ತು ಅವರಿಗಿಂತ ಮುಂಚಿನವರ ರೂಢಿಯಂತೆ. ಅವರು ತಮ್ಮ ರಬ್‌ನ ದೃಷ್ಟಾಂತಗಳನ್ನು ನಿಷೇಧಿಸಿದರು. ಆಗ ಅವರ ಪಾಪಗಳ ನಿಮಿತ್ತ ನಾವು ಅವರನ್ನು ನಾಶಗೊಳಿಸಿದೆವು. ಫಿರ್‌ಔನ್‌ನ ಜನರನ್ನು ನಾವು ಮುಳುಗಿಸಿದೆವು. ಅವರೆಲ್ಲರೂ ಅಕ್ರಮಿಗಳಾಗಿದ್ದರು.

كَدَأْبِ ءَالِ فِرْعَوْنَ وَٱلَّذِينَ مِن قَبْلِهِمْۚ كَذَّبُواْ بِـَٔايَٰتِ رَبِّهِمْ فَأَهْلَكْنَٰهُم بِذُنُوبِهِمْ وَأَغْرَقْنَآ ءَالَ فِرْعَوْنَۚ وَكُلٌّ كَانُواْ ظَٰلِمِينَ ٥٤

55. ಖಂಡಿತವಾಗಿಯೂ ಅಲ್ಲಾಹುವಿನ ಬಳಿ ಜೀವ ಜಾಲಗಳ ಪೈಕಿ ಅತ್ಯಂತ ನಿಕೃಷ್ಟರಾಗಿರುವವರು ಸತ್ಯನಿಷೇಧಿಗಳಾಗಿರುವರು. ಆದ್ದರಿಂದ ಅವರು ವಿಶ್ವಾಸವಿಡಲಾರರು.

إِنَّ شَرَّ ٱلدَّوَآبِّ عِندَ ٱللَّهِ ٱلَّذِينَ كَفَرُواْ فَهُمْ لَا يُؤْمِنُونَ ٥٥

56. ಅವರಲ್ಲಿ ಒಂದು ಪಂಗಡದೊಂದಿಗೆ ತಾವು ಕರಾರು ಮಾಡಿಕೊಂಡಿದ್ದಿರಿ. ತರುವಾಯ ಪ್ರತಿ ಬಾರಿಯೂ ಅವರು ತಮ್ಮ ಕರಾರನ್ನು ಉಲ್ಲಂಘಿಸುತ್ತಿರುವರು. ಅವರು (ಅಲ್ಲಾಹುವನ್ನು) ಭಯಪಡುವುದೇ ಇಲ್ಲ.

ٱلَّذِينَ عَٰهَدتَّ مِنْهُمْ ثُمَّ يَنقُضُونَ عَهْدَهُمْ فِى كُلِّ مَرَّةٍ وَهُمْ لَا يَتَّقُونَ ٥٦

57. ಆದ್ದರಿಂದ ತಾವು ಅವರನ್ನು ಯುದ್ಧದಲ್ಲಿ ಎದುರು ಗೊಂಡರೆ, ಅವರ ನಂತರ ಬರುವವರನ್ನೂ ಹಿಂದಕ್ಕಟ್ಟುವ ವಿಧದಲ್ಲಿ

فَإِمَّا تَثْقَفَنَّهُمْ فِى ٱلْحَرْبِ فَشَرِّدْ بِهِم مَّنْ خَلْفَهُمْ لَعَلَّهُمْ يَذَّكَّرُونَ ٥٧

ಅವರಿಗೆ ನಾಶನಷ್ಟಗಳನ್ನುಂಟುಮಾಡಿರಿ.
ಅವರು ಚಿಂತಿಸಿ ಗ್ರಹಿಸಲೂಬಹುದು.

58. ಯಾವುದೇ ಜನತೆಯಿಂದ ವಿಶ್ವಾಸದ್ರೋಹವುಂಟಾಗಬಹುದೆಂದು ತಾವು ಭಯಪಡುವುದಾದರೆ ತತ್ಸಮಾನವಾಗಿ ತಾವೂ ಅವರೆಡೆಗೆ ಎಸೆದುಬಿಡಿರಿ.[1] ಖಂಡಿತವಾಗಿಯೂ ಅಲ್ಲಾಹು ವಿಶ್ವಾಸಘಾತುಕರನ್ನು ಮೆಚ್ಚಲಾರನು.

وَإِمَّا تَخَافَنَّ مِن قَوۡمٍ خِيَانَةٗ فَٱنۢبِذۡ إِلَيۡهِمۡ
عَلَىٰ سَوَآءٍۚ إِنَّ ٱللَّهَ لَا يُحِبُّ ٱلۡخَآئِنِينَ ٥٨

59 ತಾವು ಮೇಲುಗೈ ಸಾಧಿಸಿರುವೆವೆಂದು ಸತ್ಯನಿಷೇಧಿಗಳು ಭಾವಿಸದಿರಲಿ. ಖಂಡಿತವಾಗಿಯೂ (ಅಲ್ಲಾಹುವನ್ನು) ಸೋಲಿಸಲು ಅವರಿಂದಾಗದು.

وَلَا يَحۡسَبَنَّ ٱلَّذِينَ كَفَرُواْ سَبَقُوٓاْۚ إِنَّهُمۡ
لَا يُعۡجِزُونَ ٥٩

60. ಅವರನ್ನು ಎದುರಿಸಲು ನಿಮಗೆ ಸಾಧ್ಯವಿರುವ ಎಲ್ಲ ಶಕ್ತಿಯನ್ನೂ, ಅಶ್ವಸೇನೆಯನ್ನೂ ಸಿದ್ಧಗೊಳಿಸಿರಿ.[2] ತನ್ಮೂಲಕ ಅಲ್ಲಾಹುವಿನ ಮತ್ತು ನಿಮ್ಮ ಶತ್ರುವನ್ನು ಹಾಗೂ ಅವರ ಹೊರತಾಗಿರುವ ನೀವು ಅರಿಯದಿರುವ, ಆದರೆ ಅಲ್ಲಾಹು ಅರಿತಿರುವ ಇತರ ಕೆಲವರನ್ನೂ ನೀವು ಭಯಪಡಿಸುವ ಸಲುವಾಗಿ. ನೀವು ಅಲ್ಲಾಹುವಿನ ಮಾರ್ಗದಲ್ಲಿ ಏನೇ ವ್ಯಯಿಸಿದರೂ ಅದಕ್ಕಿರುವ ಪೂರ್ಣ ಪ್ರತಿಫಲವನ್ನು ನಿಮಗೆ ನೀಡಲಾಗುವುದು. ನಿಮ್ಮೊಂದಿಗೆ ಅನ್ಯಾಯವೆಸಗಲಾಗದು.

وَأَعِدُّواْ لَهُم مَّا ٱسۡتَطَعۡتُم مِّن قُوَّةٖ وَمِن
رِّبَاطِ ٱلۡخَيۡلِ تُرۡهِبُونَ بِهِۦ عَدُوَّ ٱللَّهِ
وَعَدُوَّكُمۡ وَءَاخَرِينَ مِن دُونِهِمۡ لَا
تَعۡلَمُونَهُمُ ٱللَّهُ يَعۡلَمُهُمۡۚ وَمَا تُنفِقُواْ مِن
شَيۡءٖ فِي سَبِيلِ ٱللَّهِ يُوَفَّ إِلَيۡكُمۡ وَأَنتُمۡ
لَا تُظۡلَمُونَ ٦٠

61. ಇನ್ನು ಅವರೇನಾದರೂ ಶಾಂತಿಯೆಡೆಗೆ ಒಲವು ತೋರುವುದಾದರೆ ತಾವು ಕೂಡ ಅದರೆಡೆಗೆ ಒಲವು ತೋರಿರಿ ಮತ್ತು

۞وَإِن جَنَحُواْ لِلسَّلۡمِ فَٱجۡنَحۡ لَهَا وَتَوَكَّلۡ
عَلَى ٱللَّهِۚ إِنَّهُۥ هُوَ ٱلسَّمِيعُ ٱلۡعَلِيمُ ٦١

---

1 ಮುಸ್ಲಿಮರೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡಿರುವ ಶತ್ರುಗಳ ಪೈಕಿ ಒಂದು ವಿಭಾಗವು ಹೊಂಚುಹಾಕಿ ದಾಳಿ ಮಾಡಬಹುದೆಂಬ ಸೂಚನೆ ಲಭಿಸಿದರೆ ಮುಸ್ಲಿಮರು ಕೈಗೊಳ್ಳಬೇಕಾದ ಕ್ರಮವನ್ನು ಇಲ್ಲಿ ವಿವರಿಸಲಾಗಿದೆ. ಅಂದರೆ ನೀವು ತಕ್ಷಣ ಒಂದು ಯುದ್ಧಕ್ಕೆ ಸಿದ್ಧರಾಗ ಬೇಡಿರಿ. 'ಕರಾರನ್ನು ಪಾಲಿಸುವ ಮನಸ್ಸು ನಿಮಗಿಲ್ಲದಿದ್ದರೆ ಅದೇ ರೀತಿ ನಾವೂ ಕರಾರನ್ನು ತಿರಸ್ಕರಿಸುತ್ತೇವೆ' ಎಂದು ಅವರೊಂದಿಗೆ ನೇರವಾಗಿ ಹೇಳಿಬಿಡಿರಿ. ನಿಮ್ಮದು ಮುಚ್ಚುಮರೆಯಿಲ್ಲದ ಚಟುವಟಿಕೆಯಾಗಿರಬೇಕು. ವಂಚನಾತ್ಮಕವಾದ ಯಾವುದೇ ಕ್ರಮವೂ ಸಲ್ಲದು.

2 ಆಯಾ ಕಾಲದ ಯುದ್ಧ ತಂತ್ರಗಳು ಮತ್ತು ಆಯುಧಗಳು ಬೇರೆ ಬೇರೆಯಾಗಿರುವುವು. ಆಯಾ ಕಾಲದಲ್ಲಿ ಜಯಗಳಿಸಲು ನೆರವಾಗುವ ಯುದ್ಧ ಸಜ್ಜೀಕರಣಗಳನ್ನು ಮಾಡಿಕೊಂಡಿರಬೇಕು ಎಂದರ್ಥ.

ಅಲ್ಲಾಹುವಿನ ಮೇಲೆ ಭರವಸೆಯಿಡಿರಿ. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

وَإِن يُرِيدُوٓاْ أَن يَخۡدَعُوكَ فَإِنَّ
حَسۡبَكَ ٱللَّهُۚ هُوَ ٱلَّذِيٓ أَيَّدَكَ بِنَصۡرِهِۦ
وَبِٱلۡمُؤۡمِنِينَ ٦٢

62. ಅವರೇನಾದರೂ ತಮ್ಮನ್ನು ವಂಚಿಸಲು ಬಯಸುವುದಾದರೆ ಖಂಡಿತವಾಗಿಯೂ ತಮಗೆ ಅಲ್ಲಾಹು ಸಾಕು. ತನ್ನ ಸಹಾಯದಿಂದಲೂ, ವಿಶ್ವಾಸಿಗಳಿಂದಲೂ ತಮಗೆ ಬೆಂಬಲವಿತ್ತವನು ಅವನೇ ಆಗಿರುವನು.

وَأَلَّفَ بَيۡنَ قُلُوبِهِمۡۚ لَوۡ أَنفَقۡتَ مَا فِي
ٱلۡأَرۡضِ جَمِيعٗا مَّآ أَلَّفۡتَ بَيۡنَ قُلُوبِهِمۡ
وَلَٰكِنَّ ٱللَّهَ أَلَّفَ بَيۡنَهُمۡۚ إِنَّهُۥ عَزِيزٌ
حَكِيمٞ ٦٣

63. ಅವನು ಅವರ (ವಿಶ್ವಾಸಿಗಳ) ಹೃದಯಗಳನ್ನು ಪರಸ್ಪರ ಬೆಸೆದಿರುವನು. ಭೂಮಿಯಲ್ಲಿರುವುದೆಲ್ಲವನ್ನೂ ತಾವು ವ್ಯಯಿಸಿದರೂ ಅವರ ಹೃದಯಗಳನ್ನು ಪರಸ್ಪರ ಬೆಸೆಯಲು ತಮ್ಮಿಂದಾಗುತ್ತಿರಲಿಲ್ಲ. ಆದರೆ ಅಲ್ಲಾಹು ಅವರನ್ನು ಪರಸ್ಪರ ಬೆಸೆದಿರುವನು. ಖಂಡಿತವಾಗಿಯೂ ಅವನು ಪ್ರತಾಪಶಾಲಿಯೂ ಯುಕ್ತಿ ಪೂರ್ಣನೂ ಆಗಿರುವನು.

يَٰٓأَيُّهَا ٱلنَّبِيُّ حَسۡبُكَ ٱللَّهُ وَمَنِ ٱتَّبَعَكَ
مِنَ ٱلۡمُؤۡمِنِينَ ٦٤

64. ಓ ಪ್ರವಾದಿಯವರೇ! ತಮಗೆ ಮತ್ತು ತಮ್ಮನ್ನು ಅನುಸರಿಸಿದ ವಿಶ್ವಾಸಿಗಳಿಗೆ ಅಲ್ಲಾಹು ಸಾಕು.

يَٰٓأَيُّهَا ٱلنَّبِيُّ حَرِّضِ ٱلۡمُؤۡمِنِينَ عَلَى
ٱلۡقِتَالِۚ إِن يَكُن مِّنكُمۡ عِشۡرُونَ
صَٰبِرُونَ يَغۡلِبُواْ مِاْئَتَيۡنِۚ وَإِن يَكُن
مِّنكُم مِّاْئَةٞ يَغۡلِبُوٓاْ أَلۡفٗا مِّنَ ٱلَّذِينَ
كَفَرُواْ بِأَنَّهُمۡ قَوۡمٞ لَّا يَفۡقَهُونَ ٦٥

65. ಓ ಪ್ರವಾದಿಯವರೇ! ವಿಶ್ವಾಸಿಗಳನ್ನು ಯುದ್ಧಕ್ಕಾಗಿ ಹುರಿದುಂಬಿಸಿರಿ. ನಿಮ್ಮ ಪೈಕಿ ಸ್ಥೈರ್ಯವಂತರಾದ ಇಪ್ಪತ್ತು ಮಂದಿಯಿರುವುದಾದರೆ ಅವರು ಇನ್ನೂರು ಮಂದಿಯನ್ನು ಸೋಲಿಸುವರು. ನಿಮ್ಮ ಪೈಕಿ ನೂರು ಮಂದಿಯಿರುವುದಾದರೆ ಅವರು ಸತ್ಯನಿಷೇಧಿಗಳಲ್ಲಿ ಸೇರಿದ ಸಾವಿರ ಮಂದಿಯನ್ನು ಸೋಲಿಸುವರು. ಅದು ಅವರು (ಸತ್ಯನಿಷೇಧಿಗಳು) ಚಿಂತಿಸಿ ಗ್ರಹಿಸದ ಜನತೆಯಾಗಿರುವರು ಎಂಬುದರಿಂದಾಗಿದೆ.

66. ಈಗ ಅಲ್ಲಾಹು ನಿಮಗೆ ಹಗುರಗೊಳಿಸಿರುವನು. ನಿಮ್ಮಲ್ಲಿ ಬಲಹೀನತೆಯಿದೆಯೆಂದು ಅವನು ಅರಿತಿರುವನು. ಆದ್ದರಿಂದ ನಿಮ್ಮ ಪೈಕಿ ಸ್ಥೈರ್ಯವಂತರಾದ ನೂರು ಮಂದಿಯಿರುವುದಾದರೆ ಅವರು ಇನ್ನೂರು ಮಂದಿಯನ್ನು ಸೋಲಿಸುವರು. ನಿಮ್ಮ ಪೈಕಿ ಸಾವಿರ ಮಂದಿಯಿರುವುದಾದರೆ ಅವರು ಅಲ್ಲಾಹುವಿನ ಅನುಮತಿಯೊಂದಿಗೆ ಎರಡು ಸಾವಿರ ಮಂದಿಯನ್ನು ಸೋಲಿಸುವರು.[1] ಅಲ್ಲಾಹು ಸ್ಥೈರ್ಯವಂತರೊಂದಿಗಿರುವನು.

ٱلْـَٔـٰنَ خَفَّفَ ٱللَّهُ عَنكُمْ وَعَلِمَ أَنَّ فِيكُمْ ضَعْفًا ۚ فَإِن يَكُن مِّنكُم مِّا۟ئَةٌ صَابِرَةٌ يَغْلِبُوا۟ مِا۟ئَتَيْنِ ۚ وَإِن يَكُن مِّنكُمْ أَلْفٌ يَغْلِبُوٓا۟ أَلْفَيْنِ بِإِذْنِ ٱللَّهِ ۗ وَٱللَّهُ مَعَ ٱلصَّـٰبِرِينَ ﴿٦٦﴾

67. (ಶತ್ರುಗಳನ್ನು ಸೋಲಿಸಿ) ನಾಡಿನಲ್ಲಿ ಪ್ರಾಬಲ್ಯ ಸ್ಥಾಪಿಸುವವರೆಗೆ ಒಬ್ಬ ಪ್ರವಾದಿಗೆ ಯುದ್ಧ ಕೈದಿಗಳಿರುವುದು ಯುಕ್ತವಲ್ಲ.[2] ನೀವು ಇಹಲೋಕದ ತಾತ್ಕಲಿಕ ಲಾಭವನ್ನು ಬಯಸುತ್ತಿರುವಿರಿ.[3] ಆದರೆ ಅಲ್ಲಾಹು ಪರಲೋಕವನ್ನು ಬಯಸುತ್ತಿರುವನು. ಅಲ್ಲಾಹು

مَا كَانَ لِنَبِىٍّ أَن يَكُونَ لَهُۥٓ أَسْرَىٰ حَتَّىٰ يُثْخِنَ فِى ٱلْأَرْضِ ۚ تُرِيدُونَ عَرَضَ ٱلدُّنْيَا وَٱللَّهُ يُرِيدُ ٱلْـَٔاخِرَةَ ۗ وَٱللَّهُ عَزِيزٌ حَكِيمٌ ﴿٦٧﴾

1 ಮುಸ್ಲಿಮರು ದೃಢವಿಶ್ವಾಸಿಗಳೂ ಅಲ್ಪಸಂಖ್ಯಾತರೂ ಆಗಿದ್ದಾಗ ಅವರಿಗಿಂತ ಹತ್ತುಪಟ್ಟು ಅಧಿಕವಿರುವ ಶತ್ರುಸೈನ್ಯದ ಮುಂದೆ ಅಚಲರಾಗಿ ನಿಂತು ಹೋರಾಡಬೇಕು ಮತ್ತು ಹಿಂದಿರುಗಿ ಓಡಬಾರದೆಂದು ಅಲ್ಲಾಹು ಅವರಿಗೆ ಆದೇಶಿಸಿದ್ದನು. ತರುವಾಯ ದುಪ್ಪಟ್ಟು ಸಂಖ್ಯೆಗಿಂತ ಅಧಿಕವಿರುವ ಸೈನ್ಯದೊಂದಿಗೆ ಅಚಲರಾಗಿ ನಿಂತು ಹೋರಾಡಲು ಸಾಧ್ಯವಾಗದಿದ್ದರೆ ಅದರಲ್ಲಿ ದೋಷವಿಲ್ಲವೆಂದು ಆದೇಶದಲ್ಲಿ ರಿಯಾಯಿತಿ ನೀಡಲಾಯಿತು. ವಿಶ್ವಾಸಕ್ಕೆ ಸಂಬಂಧಿಸಿದಂತೆ ಅತಿಶಕ್ತರಲ್ಲದ ಅನೇಕ ಮಂದಿ ಜೊತೆಗೂಡಿ ಮುಸ್ಲಿಮರ ಸಂಖ್ಯೆಯು ಹೆಚ್ಚಾದ ಸಂದರ್ಭದಲ್ಲಿ ಈ ರಿಯಾಯಿತಿಯನ್ನು ನೀಡಲಾಯಿತು.

2 ಶತ್ರುಗಳು ಪ್ರವಾದಿ(ﷺ)ರವರ ಮತ್ತು ಅವರ ಅನುಯಾಯಿಗಳ ವಿರುದ್ಧ ಯುದ್ಧವನ್ನು ಘೋಷಿಸಿರುವುದು ಅವರು ಸತ್ಯವಿಶ್ವಾಸ ಸ್ವೀಕರಿಸಿದರು ಮತ್ತು ಸಚ್ಚಾರಿತ್ರ್ಯವಂತರಾದರು ಎಂಬ ಕಾರಣದಿಂದ ಮಾತ್ರವಾಗಿತ್ತು. ವಿಶ್ವಾಸಿಗಳು ಬಲಹೀನರಾದ ಅಲ್ಪಸಂಖ್ಯಾತರಾಗಿದ್ದರು. ಶತ್ರುಗಳು ಶಸ್ತ್ರಸಜ್ಜಿತರಾದ ಬಹು ಸಂಖ್ಯಾತರಾಗಿದ್ದರು. ಆದರೂ ಬದ್ರ್‌ನಲ್ಲಿ ಅವರು ದಯನೀಯವಾಗಿ ಸೋತುಹೋದರು. ಅವರಲ್ಲಿ ಅನೇಕ ಮಂದಿ ಮುಸ್ಲಿಮರಿಗೆ ಯುದ್ಧ ಕೈದಿಗಳಾಗಿ ದೊರೆತರು. ಸಹಾಬಿಗಳ ಪೈಕಿ ಅನೇಕ ಮಂದಿಯ ಸಲಹೆಯ ಮೇರೆಗೆ ಪ್ರವಾದಿ(ﷺ)ರವರು ಪರಿಹಾರಧನ ಪಡೆದು ಅವರನ್ನು ಬಿಟ್ಟುಬಿಡಲು ಆದೇಶಿಸಿದರು. ಈ ಕ್ರಮವು ಯುದ್ಧತಂತ್ರಕ್ಕೆ ಸರಿಹೊಂದುವುದಿಲ್ಲವೆಂದು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ. ಕ್ರೂರಿಗಳಾದ ಶತ್ರುಗಳನ್ನು ಕೊಲ್ಲುವ ಮೂಲಕ ಅಥವಾ ಗಾಯಗೊಳಿಸುವ ಮೂಲಕ ಅವರನ್ನು ದಮನಿಸಿದ ಬಳಿಕವಲ್ಲದೆ ಅವರೊಂದಿಗೆ ಉದಾರ ನಿಲುವನ್ನು ಹೊಂದಬಾರದು. ಅದು ಅಪಾಯಕಾರಿಯಾಗಿದೆಯೆಂದು ಅಲ್ಲಾಹು ಇಲ್ಲಿ ನೆನಪಿಸುತ್ತಿದ್ದಾನೆ.

3 ಪರಿಹಾರ ಧನಕ್ಕೆ ಆಸೆಪಟ್ಟು ನೀವು ಅವರನ್ನು ಬಿಡುಗಡೆ ಮಾಡುತ್ತಿರುವಿರಿ. ಶೀಘ್ರದಲ್ಲೇ ಮತ್ತೊಂದು ಯುದ್ಧವನ್ನು ಘೋಷಿಸಲು ಅದು ಶತ್ರುಗಳಿಗೆ ಅವಕಾಶವನ್ನು ನೀಡುತ್ತದೆ. ಅದು ನಿಮ್ಮ ಐಹಿಕ ಮತ್ತು ಪಾರತ್ರಿಕ ನಷ್ಟಕ್ಕೆ ಕಾರಣವಾಗಬಹುದು.

ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

لَّوۡلَا كِتَٰبٞ مِّنَ ٱللَّهِ سَبَقَ لَمَسَّكُمۡ فِيمَآ أَخَذۡتُمۡ عَذَابٌ عَظِيمٞ ٦٨

68. ಅಲ್ಲಾಹುವಿನ ಕಡೆಯ ಒಂದು ಪೂರ್ವ ನಿರ್ಧಾರವು ಇಲ್ಲದಿರುತ್ತಿದ್ದರೆ ನೀವು ಪಡೆದಿರುವುದರ ನಿಮಿತ್ತ ಘೋರ ಶಿಕ್ಷೆಯು ನಿಮ್ಮನ್ನು ಸ್ಪರ್ಶಿಸುತ್ತಿತ್ತು.

فَكُلُواْ مِمَّا غَنِمۡتُمۡ حَلَٰلٗا طَيِّبٗاۚ وَٱتَّقُواْ ٱللَّهَۚ إِنَّ ٱللَّهَ غَفُورٞ رَّحِيمٞ ٦٩

69. ಆದ್ದರಿಂದ (ಯುದ್ಧದಲ್ಲಿ) ನೀವು ಗಳಿಸಿರುವುದರ ಪೈಕಿ ಧರ್ಮಸಮ್ಮತವೂ ಉತ್ತಮವೂ ಆಗಿರುವುದನ್ನು ತಿನ್ನಿರಿ. ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَٰٓأَيُّهَا ٱلنَّبِيُّ قُل لِّمَن فِيٓ أَيۡدِيكُم مِّنَ ٱلۡأَسۡرَىٰٓ إِن يَعۡلَمِ ٱللَّهُ فِي قُلُوبِكُمۡ خَيۡرٗا يُؤۡتِكُمۡ خَيۡرٗا مِّمَّآ أُخِذَ مِنكُمۡ وَيَغۡفِرۡ لَكُمۡۚ وَٱللَّهُ غَفُورٞ رَّحِيمٞ ٧٠

70. ಓ ಪ್ರವಾದಿಯವರೇ! ನಿಮ್ಮ ವಶದಲ್ಲಿರುವ ಯುದ್ಧಕೈದಿಗಳೊಂದಿಗೆ ತಾವು ಹೇಳಿರಿ: 'ನಿಮ್ಮ ಹೃದಯಗಳಲ್ಲಿ ಒಳಿತೇನಾದರೂ ಇರುವುದಾಗಿ ಅಲ್ಲಾಹು ಅರಿತರೆ ನಿಮ್ಮಿಂದ ಪಡೆಯಲಾಗಿರುವುದಕ್ಕಿಂತಲೂ ಉತ್ತಮವಾಗಿರುವುದನ್ನು ಅವನು ನಿಮಗೆ ನೀಡುವನು ಮತ್ತು ನಿಮ್ಮನ್ನು ಕ್ಷಮಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು'.

وَإِن يُرِيدُواْ خِيَانَتَكَ فَقَدۡ خَانُواْ ٱللَّهَ مِن قَبۡلُ فَأَمۡكَنَ مِنۡهُمۡۗ وَٱللَّهُ عَلِيمٌ حَكِيمٌ ٧١

71. ಅವರು ತಮಗೆ ವಿಶ್ವಾಸದ್ರೋಹವೆಸಗಲು ಇಚ್ಛಿಸುವುದಾದರೆ ಇದಕ್ಕಿಂತ ಮುಂಚೆ ಅವರು ಅಲ್ಲಾಹುವಿನೊಂದಿಗೂ ವಿಶ್ವಾಸದ್ರೋಹವೆಸಗಿರುವರು. ಆದ್ದರಿಂದ ಅವನು ಅವರನ್ನು (ನಿಮಗೆ) ಶರಣಾಗಿಸಿದನು. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

إِنَّ ٱلَّذِينَ ءَامَنُواْ وَهَاجَرُواْ وَجَٰهَدُواْ بِأَمۡوَٰلِهِمۡ وَأَنفُسِهِمۡ فِي سَبِيلِ ٱللَّهِ وَٱلَّذِينَ

72. ವಿಶ್ವಾಸವಿಟ್ಟವರು, ತಮ್ಮ ನಾಡನ್ನು ತೊರೆದು ಹೋದವರು, ತಮ್ಮ ಸಂಪತ್ತುಗಳಿಂದ ಮತ್ತು ಸ್ವಶರೀರಗಳಿಂದ ಅಲ್ಲಾಹುವಿನ ಮಾರ್ಗದಲ್ಲಿ

ءَاوَواْ وَّنَصَرُوٓاْ أُوْلَـٰٓئِكَ بَعۡضُهُمۡ أَوۡلِيَآءُ بَعۡضٖۚ وَٱلَّذِينَ ءَامَنُواْ وَلَمۡ يُهَاجِرُواْ مَا لَكُم مِّن وَلَـٰيَتِهِم مِّن شَيۡءٍ حَتَّىٰ يُهَاجِرُواْۚ وَإِنِ ٱسۡتَنصَرُوكُمۡ فِي ٱلدِّينِ فَعَلَيۡكُمُ ٱلنَّصۡرُ إِلَّا عَلَىٰ قَوۡمِۭ بَيۡنَكُمۡ وَبَيۡنَهُم مِّيثَٰقٞۗ وَٱللَّهُ بِمَا تَعۡمَلُونَ بَصِيرٞ ٧٢

ಯುದ್ಧ ಮಾಡಿದವರು, ಅವರಿಗೆ ಆಶ್ರಯವನ್ನು ಮತ್ತು ಸಹಾಯವನ್ನು ನೀಡಿದವರು ಖಂಡಿತವಾಗಿಯೂ ಪರಸ್ಪರ ಆಪ್ತ ಮಿತ್ರರಾಗಿರುವರು. ಆದರೆ ವಿಶ್ವಾಸವಿಟ್ಟವರಾಗಿದ್ದೂ ಸಹ ತಮ್ಮ ನಾಡನ್ನು ತೊರೆದು ಹೋಗದವರಿಗೆ, ಅವರು ತಮ್ಮ ನಾಡನ್ನು ತೊರೆದು ಹೋಗುವವರೆಗೆ, ಅವರನ್ನು ರಕ್ಷಿಸಬೇಕಾದ ಯಾವುದೇ ಹೊಣೆಯೂ ನಿಮಗಿಲ್ಲ.[1] ಅವರೇನಾದರೂ ಧರ್ಮದ ವಿಷಯದಲ್ಲಿ ನಿಮ್ಮೊಂದಿಗೆ ಸಹಾಯ ಬೇಡಿದರೆ ಅವರಿಗೆ ಸಹಾಯ ನೀಡಬೇಕಾದುದು ನಿಮ್ಮ ಹೊಣೆಯಾಗಿದೆ. ಆದರೆ ನಿಮ್ಮೊಂದಿಗೆ ಕರಾರಿನಲ್ಲಿರುವ ಜನತೆಗೆ ವಿರುದ್ಧವಾಗಿ (ನೀವವರಿಗೆ ಸಹಾಯ) ಮಾಡದಿರಿ. ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹು ವೀಕ್ಷಿಸುವವನಾಗಿರುವನು.

وَٱلَّذِينَ كَفَرُواْ بَعۡضُهُمۡ أَوۡلِيَآءُ بَعۡضٍۚ إِلَّا تَفۡعَلُوهُ تَكُن فِتۡنَةٞ فِي ٱلۡأَرۡضِ وَفَسَادٞ كَبِيرٞ ٧٣

73. ಸತ್ಯನಿಷೇಧಿಗಳು ಪರಸ್ಪರ ಆಪ್ತಮಿತ್ರರಾಗಿರುವರು.[2] ನೀವು ಇದನ್ನು ಈ ನಿರ್ದೇಶನಗಳನ್ನು) ಪ್ರಯೋಗಕ್ಕೆ ತರದಿದ್ದರೆ ಭೂಮಿಯಲ್ಲಿ ಕ್ಷೋಭೆಯೂ, ಮಹಾ ವಿನಾಶವೂ ಉಂಟಾಗುವುದು.

وَٱلَّذِينَ ءَامَنُواْ وَهَاجَرُواْ وَجَٰهَدُواْ فِي سَبِيلِ ٱللَّهِ وَٱلَّذِينَ ءَاوَواْ وَّنَصَرُوٓاْ أُوْلَـٰٓئِكَ

74. ಸತ್ಯವಿಶ್ವಾಸವಿಟ್ಟವರು, ತಮ್ಮ ನಾಡನ್ನು ತೊರೆದು ಹೋದವರು, ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿದವರು,[3]

---

1 ಪ್ರವಾದಿ(ﷺ)ರವರ ಹಿಜ್ರಾ ಮತ್ತು ಮಕ್ಕಾ ವಿಜಯದ ನಡುವೆ ಯಾರು ಎಲ್ಲೇ ಇಸ್ಲಾಮ್ ಸ್ವೀಕರಿಸಿದರೂ ಮದೀನಾದೆಡೆಗೆ ಹಿಜ್ರಾ ಮಾಡುವುದು ಅವರಿಗೆ ಕಡ್ಡಾಯವಾಗಿತ್ತು. ಅಭಯಯಾಚಿಸಿ ಬಂದ ಮುಸ್ಲಿಮರ ಮತ್ತು ಮದೀನಾದಲ್ಲಿದ್ದ ಮುಸ್ಲಿಮರ ಮಧ್ಯೆ ಸುದೃಢ ಮೈತ್ರಿಯಿತ್ತು. ಮದೀನದಲ್ಲಿರುವ ಮುಸ್ಲಿಮರೊಂದಿಗೆ ಸೇರದೆ ಅವಿಶ್ವಾಸಿಗಳ ಮಧ್ಯೆ ಜೀವಿಸುವ ಸತ್ಯವಿಶ್ವಾಸಿಗಳೊಂದಿಗೆ ಇಂತಹ ಮೈತ್ರಿ ಸ್ಥಾಪಿಸುವುದು ಸಾಧ್ಯವಿಲ್ಲ. ಆದರೆ ಅವರು ಸಹಾಯ ಬೇಡಿದರೆ ಶರ್ತಬದ್ಧ ಸಹಾಯ ನೀಡುವ ಹೊಣೆ ಮುಸ್ಲಿಮರಿಗಿದೆ.

2 ಸತ್ಯನಿಷೇಧಿಗಳ ಮಧ್ಯೆ ಹಲವು ಭಿನ್ನತೆಗಳಿವೆಯಾದರೂ ಸತ್ಯವಿಶ್ವಾಸಿಗಳನ್ನು ಎದುರಿಸುವ ವಿಷಯದಲ್ಲಿ ಅವರ ನಡುವೆ ಒಗ್ಗಟ್ಟು ಮತ್ತು ಮೈತ್ರಿಯು ಉಂಟಾಗುವುದೆಂದು ಒಗ್ಗಟ್ಟಾಗುವವರೆಂದು ಕುರ್‌ಆನ್ ಎಚ್ಚರಿಸುತ್ತದೆ. ಈ ಬಗ್ಗೆ ಮುಸ್ಲಿಮರು ಎಲ್ಲಾ ಕಾಲದಲ್ಲೂ ಎಚ್ಚರವಹಿಸಬೇಕಾಗಿದೆ.

3 ಮದೀನಕ್ಕೆ ಬಂದ ಮುಹಾಜಿರ್‌ಗಳಾದ ಮುಸ್ಲಿಮರು.

هُمُ ٱلۡمُؤۡمِنُونَ حَقّٗاۚ لَّهُم مَّغۡفِرَةٞ وَرِزۡقٞ كَرِيمٞ ٧٤

ಅವರಿಗೆ ಆಶ್ರಯವನ್ನು ಮತ್ತು ಸಹಾಯವನ್ನು ನೀಡಿದವರು[1] ನೈಜ ಸತ್ಯವಿಶ್ವಾಸಿಗಳಾಗಿರುವರು. ಅವರಿಗೆ ಪಾಪಮುಕ್ತಿಯೂ ಗೌರವಾರ್ಹವಾದ ಅನ್ನಾಧಾರವೂ ಇರುವುದು.

وَٱلَّذِينَ ءَامَنُواْ مِنۢ بَعۡدُ وَهَاجَرُواْ وَجَٰهَدُواْ مَعَكُمۡ فَأُوْلَٰٓئِكَ مِنكُمۡۚ وَأُوْلُواْ ٱلۡأَرۡحَامِ بَعۡضُهُمۡ أَوۡلَىٰ بِبَعۡضٖ فِي كِتَٰبِ ٱللَّهِۚ إِنَّ ٱللَّهَ بِكُلِّ شَيۡءٍ عَلِيمُۢ ٧٥

75. ಅದರ ನಂತರ ವಿಶ್ವಾಸವಿಟ್ಟವರು, ತಮ್ಮ ನಾಡನ್ನು ತೊರೆದು ಹೋದವರು, ನಿಮ್ಮ ಜೊತೆಗೆ ಯುದ್ಧ ಮಾಡಿದವರು ಕೂಡ ನಿಮ್ಮವರೇ ಆಗಿರುವರು. ಆದರೆ ರಕ್ತ ಸಂಬಂಧವಿರುವವರು ಅಲ್ಲಾಹುವಿನ ದಾಖಲೆಯಲ್ಲಿ (ನಿಯಮದಲ್ಲಿ) ಪರಸ್ಪರ ಹೆಚ್ಚು ಸಂಬಂಧ ಹೊಂದಿದವರಾಗಿರುವರು. ಖಂಡಿತವಾಗಿಯೂ ಅಲ್ಲಾಹು ಪ್ರತಿಯೊಂದು ವಿಷಯದ ಕುರಿತೂ ಅರಿವುಳ್ಳವನಾಗಿರುವನು.

1 ಮದೀನಾ ನಿವಾಸಿಗಳಾದ ಮುಸ್ಲಿಮರು. ಅನ್ಸಾರ್ (ಸಹಾಯಕರು) ಎಂದು ಇವರನ್ನು ಕರೆಯಲಾಗುತ್ತದೆ.

## ಅತ್ತೌಬಃ (ಪಶ್ಚಾತ್ತಾಪ)[1]

## سُورَةُ التَّوۡبَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 129

بَرَآءَةٞ مِّنَ ٱللَّهِ وَرَسُولِهِۦٓ إِلَى ٱلَّذِينَ
عَٰهَدتُّم مِّنَ ٱلۡمُشۡرِكِينَ ١

1. ಬಹುದೇವವಿಶ್ವಾಸಿಗಳ ಪೈಕಿ ಯಾರೊಂದಿಗೆ ನೀವು ಒಪ್ಪಂದದಲ್ಲಿರುವಿರೋ ಅವರೊಂದಿಗಿರುವ ಅಲ್ಲಾಹುವಿನ ಮತ್ತು ಅವನ ಸಂದೇಶವಾಹಕರ ಕಡೆಯ ಹೊಣೆ ಮುಕ್ತಿಯನ್ನು ಘೋಷಿಸಲಾಗಿದೆ.

فَسِيحُواْ فِي ٱلۡأَرۡضِ أَرۡبَعَةَ أَشۡهُرٖ وَٱعۡلَمُوٓاْ
أَنَّكُمۡ غَيۡرُ مُعۡجِزِي ٱللَّهِ وَأَنَّ ٱللَّهَ
مُخۡزِي ٱلۡكَٰفِرِينَ ٢

2. ಆದ್ದರಿಂದ (ಓ ಬಹುದೇವವಿಶ್ವಾಸಿಗಳೇ!) ನೀವು ನಾಲ್ಕು ತಿಂಗಳ ಕಾಲ ಭೂಮಿಯಲ್ಲಿ ಯಥೇಷ್ಟವಾಗಿ ಸುತ್ತಾಡಿರಿ.[2] ಅಲ್ಲಾಹುವನ್ನು ಸೋಲಿಸಲು ನಿಮ್ಮಿಂದಾಗದು ಮತ್ತು ಅಲ್ಲಾಹು ಸತ್ಯನಿಷೇಧಿಗಳನ್ನು ಅಪಮಾನಗೊಳಿಸುವನು ಎಂಬುದನ್ನು ಅರಿತುಕೊಳ್ಳಿರಿ.

وَأَذَٰنٞ مِّنَ ٱللَّهِ وَرَسُولِهِۦٓ إِلَى ٱلنَّاسِ
يَوۡمَ ٱلۡحَجِّ ٱلۡأَكۡبَرِ أَنَّ ٱللَّهَ بَرِيٓءٞ مِّنَ
ٱلۡمُشۡرِكِينَ وَرَسُولُهُۥۚ فَإِن تُبۡتُمۡ فَهُوَ خَيۡرٞ
لَّكُمۡۖ وَإِن تَوَلَّيۡتُمۡ فَٱعۡلَمُوٓاْ أَنَّكُمۡ غَيۡرُ
مُعۡجِزِي ٱللَّهِۗ وَبَشِّرِ ٱلَّذِينَ كَفَرُواْ
بِعَذَابٍ أَلِيمٍ ٣

3. ಅಲ್ಲಾಹು ಮತ್ತು ಅವನ ಸಂದೇಶವಾಹಕರು ಬಹುದೇವವಿಶ್ವಾಸಿಗಳೊಂದಿಗೆ ಯಾವುದೇ ಹೊಣೆಯೂ ಇಲ್ಲವೆಂದು ಮಹಾ ಹಜ್ಜ್‌ನ ದಿನದಂದು ಅಲ್ಲಾಹು ಮತ್ತು ಅವನ ಸಂದೇಶವಾಹಕರ ವತಿಯಿಂದ ಜನರಿಗೆ (ಸಾರ್ವತ್ರಿಕವಾಗಿ) ಸಾರಲಾಗುತ್ತಿದೆ. ಆದರೆ (ಓ ಬಹುದೇವವಿಶ್ವಾಸಿಗಳೇ!) ನೀವು ಪಶ್ಚಾತ್ತಾಪಪಡುವುದಾದರೆ ಅದು ನಿಮಗೆ ಒಳಿತಾಗಿದೆ. ನೀವೇನಾದರೂ ವಿಮುಖರಾಗುವುದಾದರೆ ಅಲ್ಲಾಹುವನ್ನು

1 ಹಲವಾರು ಮಂದಿಯ ಪಶ್ಚಾತ್ತಾಪದ ಬಗ್ಗೆ ಪ್ರಸ್ತಾಪಿಸಲ್ಪಟ್ಟಿರುವುದರಿಂದ ಈ ಅಧ್ಯಾಯಕ್ಕೆ 'ತೌಬಾ' ಎಂಬ ಹೆಸರು ಬಂದಿದೆ. ಈ ಅಧ್ಯಾಯಕ್ಕೆ ಬರಾಅತ್ ಎಂಬ ಇನ್ನೊಂದು ಹೆಸರೂ ಇದೆ. ಮೊದಲ ಸೂಕ್ತಿಯ ಮೊದಲ ಪದವೇ ಬರಾಅತ್ ಎಂದಾಗಿದೆ. ಈ ಅಧ್ಯಾಯಕ್ಕೆ ಬಿಸ್ಮಿ ಇಲ್ಲ.

2 ಇದು ಒಳಸಂಚು, ಕರಾರು ಉಲ್ಲಂಘನೆ ಮುಂತಾದವುಗಳನ್ನು ರೂಢಿಯಾಗಿಸಿರುವ ಸತ್ಯನಿಷೇಧಿಗಳ ಕುರಿತು ಒಂದು ಬಹಿರಂಗ ಘೋಷಣೆಯಾಗಿದೆ. ಈ ಘೋಷಣೆಯ ಪ್ರಕಾರ ಮುಸ್ಲಿಮರು ನಾಲ್ಕು ತಿಂಗಳವರೆಗೆ ಯಾವುದೇ ದಾಳಿಯನ್ನು ನಡೆಸಲಾರರು. ತರುವಾಯ ಪ್ರಾಮಾಣಿಕ ಮಿತ್ರಪಕ್ಷಗಳ ಹೊರತು ಇತರರ ಮೇಲೆ ಎಂತಹ ದಾಳಿಯನ್ನು ನಡೆಸಲೂ ಹಿಂಜರಿಯಲಾರರು.

ಸೋಲಿಸಲು ನಿಮ್ಮಿಂದಾಗದು ಎಂಬುದನ್ನು ಅರಿತುಕೊಳ್ಳಿರಿ. (ಓ ಪ್ರವಾದಿಯವರೇ!) ಸತ್ಯನಿಷೇಧಿಗಳಿಗೆ ಯಾತನಾಮಯ ಶಿಕ್ಷೆಯಿದೆಯೆಂಬ ಶುಭವಾರ್ತೆಯನ್ನು ತಿಳಿಸಿರಿ.

4. ಆದರೆ ಬಹುದೇವವಿಶ್ವಾಸಿಗಳ ಪೈಕಿ ಯಾರೊಂದಿಗೆ ನೀವು ಒಪ್ಪಂದ ಮಾಡಿಕೊಂಡಿರುವಿರೋ ಅವರು (ಒಪ್ಪಂದವನ್ನು ಪಾಲಿಸುವುದರಲ್ಲಿ) ನಿಮ್ಮೊಂದಿಗೆ ಯಾವುದೇ ಏರುಪೇರು ಮಾಡದಿದ್ದರೆ ಮತ್ತು ನಿಮ್ಮ ವಿರುದ್ಧ ಯಾರಿಗೂ ಸಹಾಯ ಮಾಡದಿದ್ದರೆ ಅವರು ಇದರಿಂದ ಹೊರತಾಗುವರು. ನೀವು ಅವರೊಂದಿಗಿರುವ ಕರಾರನ್ನು ಅವರ ಅವಧಿಯವರೆಗೆ ಪೂರ್ತಿಗೊಳಿಸಿರಿ. ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸುವವರನ್ನು ಪ್ರೀತಿಸುವನು.

إِلَّا ٱلَّذِينَ عَـٰهَدتُّم مِّنَ ٱلْمُشْرِكِينَ ثُمَّ لَمْ يَنقُصُوكُمْ شَيْـًٔا وَلَمْ يُظَـٰهِرُوا۟ عَلَيْكُمْ أَحَدًا فَأَتِمُّوٓا۟ إِلَيْهِمْ عَهْدَهُمْ إِلَىٰ مُدَّتِهِمْ ۚ إِنَّ ٱللَّهَ يُحِبُّ ٱلْمُتَّقِينَ ﴿٤﴾

5. ತರುವಾಯ ಆ ನಿಷಿದ್ಧ ತಿಂಗಳುಗಳು ಕಳೆದರೆ[1] ಆ ಬಹುದೇವವಿಶ್ವಾಸಿಗಳನ್ನು ಕಂಡಲ್ಲಿ ವಧಿಸಿರಿ. ಅವರನ್ನು ಸೆರೆಹಿಡಿಯಿರಿ, ಸುತ್ತುವರಿಯಿರಿ ಮತ್ತು ಅವರಿಗಾಗಿ ಹೊಂಚುಹಾಕಬಹುದಾದ ಸ್ಥಳಗಳಲ್ಲೆಲ್ಲಾ ಹೊಂಚು ಹಾಕಿರಿ.[2] ಅವರೇನಾದರೂ ಪಶ್ಚಾತ್ತಾಪಪಟ್ಟು ನಮಾಝ್ ಸಂಸ್ಥಾಪಿಸಿದರೆ ಮತ್ತು ಝಕಾತ್ ನೀಡಿದರೆ ಅವರನ್ನು ಅವರ ಪಾಡಿಗೆ ಬಿಟ್ಟುಬಿಡಿರಿ.[3] ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

فَإِذَا ٱنسَلَخَ ٱلْأَشْهُرُ ٱلْحُرُمُ فَٱقْتُلُوا۟ ٱلْمُشْرِكِينَ حَيْثُ وَجَدتُّمُوهُمْ وَخُذُوهُمْ وَٱحْصُرُوهُمْ وَٱقْعُدُوا۟ لَهُمْ كُلَّ مَرْصَدٍ ۚ فَإِن تَابُوا۟ وَأَقَامُوا۟ ٱلصَّلَوٰةَ وَءَاتَوُا۟ ٱلزَّكَوٰةَ فَخَلُّوا۟ سَبِيلَهُمْ ۚ إِنَّ ٱللَّهَ غَفُورٌ رَّحِيمٌ ﴿٥﴾

---

1 ಅಂದರೆ ಕರಾರು ಪ್ರಕಾರ ಅಥವಾ ಮೇಲೆ ವಿವರಿಸಿದ ಘೋಷಣೆ ಪ್ರಕಾರ ದಾಳಿ ನಡೆಸಬಾರದ ಅವಧಿಯು ಮುಗಿದರೆ ಎಂದರ್ಥ. ಕೆಲವು ವ್ಯಾಖ್ಯಾನಕಾರರು ಇದಕ್ಕೆ 'ಯುದ್ಧ ನಿಷೇಧಿತ ತಿಂಗಳುಗಳು ಕಳೆದರೆ' ಎಂದು ವ್ಯಾಖ್ಯಾನಿಸಿದ್ದಾರೆ.

2 ಇಲ್ಲಿ ಪ್ರಸ್ತಾಪಿಸಿರುವುದು ಮುಸ್ಲಿಮರೊಂದಿಗೆ ಯುದ್ಧಹೂಡುವವರ ಕುರಿತಾಗಿದೆಯೆಂದು ಈ ಸೂಕ್ತಿಯಿಂದಲೂ, ಇದರ ನಂತರದ ಸೂಕ್ತಿಯಿಂದಲೂ ಗ್ರಹಿಸಬಹುದಾಗಿದೆ.

3 .ಅವರು ನೆಮ್ಮದಿಯಿಂದ ಬದುಕು ಸಾಗಿಸಲು ನೀವು ಅಡ್ಡಿಯಾಗದಿರಿ ಎಂದರ್ಥ.

**6.** ಬಹುದೇವವಿಶ್ವಾಸಿಗಳ ಪೈಕಿ ಯಾರಾದರೂ ಆಶ್ರಯ ಕೋರಿ ತಮ್ಮ ಬಳಿಗೆ ಬಂದರೆ ಅವನು ಅಲ್ಲಾಹುವಿನ ವಚನವನ್ನು ಆಲಿಸುವುದಕ್ಕಾಗಿ ಅವನಿಗೆ ಆಶ್ರಯವನ್ನು ನೀಡಿರಿ. ತರುವಾಯ ಅವನು ಸುರಕ್ಷಿತವಾಗಿರಬಹುದಾದ ಸ್ಥಳಕ್ಕೆ ಅವನನ್ನು ತಲುಪಿಸಿರಿ. ಅದು ಅವರು ಅರಿವಿಲ್ಲದ ಜನರಾಗಿರುವ ಕಾರಣದಿಂದಾಗಿದೆ.

وَإِنۡ أَحَدٞ مِّنَ ٱلۡمُشۡرِكِينَ ٱسۡتَجَارَكَ فَأَجِرۡهُ حَتَّىٰ يَسۡمَعَ كَلَٰمَ ٱللَّهِ ثُمَّ أَبۡلِغۡهُ مَأۡمَنَهُۥۚ ذَٰلِكَ بِأَنَّهُمۡ قَوۡمٞ لَّا يَعۡلَمُونَ ٦

**7.** ಬಹುದೇವವಿಶ್ವಾಸಿಗಳಿಗೆ ಅಲ್ಲಾಹುವಿನ ಬಳಿ ಮತ್ತು ಅವನ ಸಂದೇಶ ವಾಹಕರ ಬಳಿ ಕರಾರು ಇರುವುದಾದರೂ ಹೇಗೆ? ನೀವು ಮಸ್ಜಿದುಲ್ ಹರಾಮ್‌ನ ಬಳಿ ಯಾರೊಂದಿಗೆ ಕರಾರು ಮಾಡಿಕೊಂಡಿರುವಿರೋ ಅವರ ಹೊರತು.[1] ಅವರು ನಿಮ್ಮೊಂದಿಗೆ ಸರಿಯಾದ ರೂಪದಲ್ಲಿ ವರ್ತಿಸುತ್ತಿರುವ ತನಕ ನೀವೂ ಅವರೊಂದಿಗೆ ಸರಿಯಾಗಿ ವರ್ತಿಸಿರಿ. ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸುವವರನ್ನು ಪ್ರೀತಿಸುವನು.

كَيۡفَ يَكُونُ لِلۡمُشۡرِكِينَ عَهۡدٌ عِندَ ٱللَّهِ وَعِندَ رَسُولِهِۦٓ إِلَّا ٱلَّذِينَ عَٰهَدتُّمۡ عِندَ ٱلۡمَسۡجِدِ ٱلۡحَرَامِۖ فَمَا ٱسۡتَقَٰمُواْ لَكُمۡ فَٱسۡتَقِيمُواْ لَهُمۡۚ إِنَّ ٱللَّهَ يُحِبُّ ٱلۡمُتَّقِينَ ٧

**8.** ಅದು (ನೆಲೆನಿಲ್ಲುವುದು) ಹೇಗೆ? ಅವರು ನಿಮ್ಮ ಮೇಲೆ ಜಯಗಳಿಸುವುದಾದರೆ ನಿಮ್ಮ ವಿಷಯದಲ್ಲಿ ಕುಟುಂಬ ಸಂಬಂಧವನ್ನಾಗಲಿ ಕರಾರುಗಳನ್ನಾಗಲಿ ಅವರು ಪರಿಗಣಿಸಲಾರರು. ತಮ್ಮ ಬಾಯಿ ಮೂಲಕ ಅವರು ನಿಮ್ಮನ್ನು ಸಂತೃಪ್ತರಾಗಿಸುವರು. ಆದರೆ ಅವರ ಮನಸ್ಸುಗಳು ದ್ವೇಷಿಸುತ್ತಿರುವುವು. ಅವರ ಪೈಕಿ ಹೆಚ್ಚಿನವರೂ ಧಿಕ್ಕಾರಿಗಳಾಗಿರುವರು.

كَيۡفَ وَإِن يَظۡهَرُواْ عَلَيۡكُمۡ لَا يَرۡقُبُواْ فِيكُمۡ إِلّٗا وَلَا ذِمَّةٗۚ يُرۡضُونَكُم بِأَفۡوَٰهِهِمۡ وَتَأۡبَىٰ قُلُوبُهُمۡ وَأَكۡثَرُهُمۡ فَٰسِقُونَ ٨

**9.** ಅವರು ಅಲ್ಲಾಹುವಿನ ದೃಷ್ಟಾಂತಗಳನ್ನು ತುಚ್ಛ ಬೆಲೆಗೆ ಮಾರಿದರು. ತರುವಾಯ ಅವನ ಮಾರ್ಗದಿಂದ (ಜನರನ್ನು) ತಡೆದರು. ಖಂಡಿತವಾಗಿಯೂ ಅವರು ಮಾಡುತ್ತಿರುವುದು ಅತ್ಯಂತ ನಿಕೃಷ್ಟವಾದುದಾಗಿದೆ.

ٱشۡتَرَوۡاْ بِـَٔايَٰتِ ٱللَّهِ ثَمَنٗا قَلِيلٗا فَصَدُّواْ عَن سَبِيلِهِۦٓۚ إِنَّهُمۡ سَآءَ مَا كَانُواْ يَعۡمَلُونَ ٩

---

1 ಇಲ್ಲಿ ಸೂಚಿಸಿರುವುದು ಹುದೈಬಿಯ್ಯಃ ಎಂಬ ಸ್ಥಳದಲ್ಲಿ ಮುಸ್ಲಿಮರೊಂದಿಗೆ ಶಾಂತಿ ಒಪ್ಪಂದ ಮಾಡಿದ ಬಳಿಕ ಅದನ್ನು ಉಲ್ಲಂಘಿಸದಿರುವ ಕೆಲವು ಗೋತ್ರಗಳ ಕುರಿತಾಗಿದೆ.

**10.** ಯಾವೊಬ್ಬ ಸತ್ಯವಿಶ್ವಾಸಿಯ ವಿಷಯದಲ್ಲೂ ಅವರು ಕುಟುಂಬ ಸಂಬಂಧವನ್ನಾಗಲಿ ಕರಾರನ್ನಾಗಲಿ ಪರಿಗಣಿಸಲಾರರು. ಅತಿಕ್ರಮಿಗಳು ಅವರೇ ಆಗಿರುವರು.

لَا يَرۡقُبُونَ فِي مُؤۡمِنٍ إِلّٗا وَلَا ذِمَّةٗۚ وَأُوْلَٰٓئِكَ هُمُ ٱلۡمُعۡتَدُونَ ١٠

**11.** ಅವರೇನಾದರೂ ಪಶ್ಚಾತ್ತಾಪಪಟ್ಟು, ನಮಾಝನ್ನು ಸಂಸ್ಥಾಪಿಸಿ, ಝಕಾತ್ ನೀಡುವುದಾದರೆ ಧರ್ಮದಲ್ಲಿ ಅವರು ನಿಮ್ಮ ಸಹೋದರರಾಗಿರುವರು. ಅರಿತುಕೊಳ್ಳುವ ಜನರಿಗಾಗಿ ನಾವು ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವೆವು.

فَإِن تَابُواْ وَأَقَامُواْ ٱلصَّلَوٰةَ وَءَاتَوُاْ ٱلزَّكَوٰةَ فَإِخۡوَٰنُكُمۡ فِي ٱلدِّينِۗ وَنُفَصِّلُ ٱلۡأٓيَٰتِ لِقَوۡمٖ يَعۡلَمُونَ ١١

**12.** ಒಪ್ಪಂದ ಮಾಡಿದ ಬಳಿಕ ಅವರು ತಮ್ಮ ಪ್ರತಿಜ್ಞೆಗಳನ್ನು ಉಲ್ಲಂಘಿಸಿದರೆ ಮತ್ತು ನಿಮ್ಮ ಧರ್ಮವನ್ನು ಅಪಹಾಸ್ಯ ಮಾಡಿದರೆ ಸತ್ಯನಿಷೇಧದ ನಾಯಕರೊಂದಿಗೆ ನೀವು ಯುದ್ಧ ಮಾಡಿರಿ. ಖಂಡಿತವಾಗಿಯೂ ಅವರಿಗೆ ಪ್ರತಿಜ್ಞೆಗಳೇ ಇಲ್ಲ.(1) ಅವರು ನಿಲ್ಲಿಸಲೂಬಹುದು.

وَإِن نَّكَثُوٓاْ أَيۡمَٰنَهُم مِّنۢ بَعۡدِ عَهۡدِهِمۡ وَطَعَنُواْ فِي دِينِكُمۡ فَقَٰتِلُوٓاْ أَئِمَّةَ ٱلۡكُفۡرِ إِنَّهُمۡ لَآ أَيۡمَٰنَ لَهُمۡ لَعَلَّهُمۡ يَنتَهُونَ ١٢

**13.** ತಮ್ಮ ಪ್ರತಿಜ್ಞೆಗಳನ್ನು ಉಲ್ಲಂಘಿಸಿರುವ ಮತ್ತು ಸಂದೇಶವಾಹಕರನ್ನು ಹೊರಗಟ್ಟಲು ಯತ್ನಿಸಿರುವ ಒಂದು ಜನತೆಯೊಂದಿಗೆ ನೀವು ಯುದ್ಧ ಮಾಡುವುದಿಲ್ಲವೇ? ನಿಮ್ಮೊಂದಿಗೆ ಮೊಟ್ಟಮೊದಲ ಬಾರಿ (ಯುದ್ಧವನ್ನು) ಆರಂಭಿಸಿದವರು ಅವರೇ ಆಗಿರುವರು. ನೀವು ಅವರನ್ನು ಭಯಪಡುತ್ತಿರುವಿರಾ? ಆದರೆ ನೀವು ಭಯಪಡಲು ಹೆಚ್ಚು ಅರ್ಹನಾಗಿರುವವನು ಅಲ್ಲಾಹುವಾಗಿರುವನು. ನೀವು ಸತ್ಯವಿಶ್ವಾಸಿಗಳಾಗಿದ್ದರೆ.

أَلَا تُقَٰتِلُونَ قَوۡمٗا نَّكَثُوٓاْ أَيۡمَٰنَهُمۡ وَهَمُّواْ بِإِخۡرَاجِ ٱلرَّسُولِ وَهُم بَدَءُوكُمۡ أَوَّلَ مَرَّةٍۚ أَتَخۡشَوۡنَهُمۡۚ فَٱللَّهُ أَحَقُّ أَن تَخۡشَوۡهُ إِن كُنتُم مُّؤۡمِنِينَ ١٣

**14.** ನೀವು ಅವರೊಂದಿಗೆ ಯುದ್ಧ ಮಾಡಿರಿ. ಅಲ್ಲಾಹು ನಿಮ್ಮ ಕೈಗಳಿಂದ ಅವರನ್ನು ಶಿಕ್ಷಿಸುವನು, ಅವರನ್ನು ಅಪಮಾನಗೊಳಿಸುವನು, ಅವರ ವಿರುದ್ಧ

قَٰتِلُوهُمۡ يُعَذِّبۡهُمُ ٱللَّهُ بِأَيۡدِيكُمۡ وَيُخۡزِهِمۡ وَيَنصُرۡكُمۡ عَلَيۡهِمۡ وَيَشۡفِ صُدُورَ قَوۡمٖ مُّؤۡمِنِينَ ١٤

1 ಪ್ರತಿಜ್ಞೆ ಮಾಡಿದರೆ ಅದನ್ನು ಪಾಲಿಸುವ ಸ್ವಭಾವವೇ ಅವರಿಗಿಲ್ಲ ಎಂದರ್ಥ.

ನಿಮಗೆ ಸಹಾಯ ಮಾಡುವನು ಮತ್ತು ಸತ್ಯವಿಶ್ವಾಸಿಗಳ ಹೃದಯಗಳಿಗೆ ಅವನು ಶಮನವನ್ನು ನೀಡುವನು.

15. ಅವರ ಹೃದಯಗಳಲ್ಲಿರುವ ಕ್ರೋಧವನ್ನು ಅವನು ನಿವಾರಿಸುವನು. ಅಲ್ಲಾಹು ತಾನಿಚ್ಛಿಸಿದವರ ಪಶ್ಚಾತ್ತಾಪವನ್ನು ಸ್ವೀಕರಿಸುವನು. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَيُذْهِبْ غَيْظَ قُلُوبِهِمْۗ وَيَتُوبُ ٱللَّهُ عَلَىٰ مَن يَشَآءُۗ وَٱللَّهُ عَلِيمٌ حَكِيمٌ ﴿١٥﴾

16. ನಿಮ್ಮ ಪೈಕಿ ಯುದ್ಧ ಮಾಡಿದವರು ಮತ್ತು ಅಲ್ಲಾಹು, ಅವನ ಸಂದೇಶವಾಹಕರು ಹಾಗೂ ಸತ್ಯವಿಶ್ವಾಸಿಗಳೊಂದಿಗಲ್ಲದೆ ಇನ್ನಾರೊಂದಿಗೂ ಗುಪ್ತ ಮೈತ್ರಿ ಮಾಡಿಕೊಳ್ಳದವರು ಯಾರೆಂದು ಅರಿತುಕೊಳ್ಳದೆ ಅಲ್ಲಾಹು ನಿಮ್ಮನ್ನು ಬಿಟ್ಟುಬಿಡುವನೆಂದು ನೀವು ಭಾವಿಸಿರುವಿರಾ? ನೀವು ಮಾಡುತ್ತಿರುವುದರ ಬಗ್ಗೆ ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

أَمْ حَسِبْتُمْ أَن تُتْرَكُواْ وَلَمَّا يَعْلَمِ ٱللَّهُ ٱلَّذِينَ جَٰهَدُواْ مِنكُمْ وَلَمْ يَتَّخِذُواْ مِن دُونِ ٱللَّهِ وَلَا رَسُولِهِۦ وَلَا ٱلْمُؤْمِنِينَ وَلِيجَةًۚ وَٱللَّهُ خَبِيرٌۢ بِمَا تَعْمَلُونَ ﴿١٦﴾

17. ಸತ್ಯನಿಷೇಧಕ್ಕೆ ಸ್ವತಃ ಸಾಕ್ಷ್ಯವಹಿಸುವವರಾಗಿದ್ದುಕೊಂಡು ಅಲ್ಲಾಹುವಿನ ಮಸೀದಿಗಳ ಪರಿಪಾಲನೆ ಮಾಡಲು ಬಹುದೇವಾರಾಧಕರಿಗೆ ಹಕ್ಕಿಲ್ಲ. ಅವರ ಕರ್ಮಗಳು ನಿಷ್ಫಲವಾಗಿವೆ. ಅವರು ನರಕದಲ್ಲಿ ಶಾಶ್ವತವಾಗಿ ವಾಸಿಸುವವರಾಗಿರುವರು.

مَا كَانَ لِلْمُشْرِكِينَ أَن يَعْمُرُواْ مَسَٰجِدَ ٱللَّهِ شَٰهِدِينَ عَلَىٰٓ أَنفُسِهِم بِٱلْكُفْرِۚ أُوْلَٰٓئِكَ حَبِطَتْ أَعْمَٰلُهُمْ وَفِي ٱلنَّارِ هُمْ خَٰلِدُونَ ﴿١٧﴾

18. ಅಲ್ಲಾಹುವಿನ ಮಸೀದಿಗಳನ್ನು ಪರಿಪಾಲನೆ ಮಾಡಬೇಕಾದುದು ಅಲ್ಲಾಹುವಿನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಟ್ಟವರು, ನಮಾಝನ್ನು ಸಂಸ್ಥಾಪಿಸಿದವರು, ಝಕಾತ್ ನೀಡಿದವರು ಮತ್ತು ಅಲ್ಲಾಹುವಿನ ಹೊರತು ಇನ್ನಾರನ್ನೂ ಭಯಪಡದಿರುವವರು ಮಾತ್ರವಾಗಿರುವರು. ಅಂತಹವರು ಸನ್ಮಾರ್ಗ ಪಡೆದವರಲ್ಲಿ ಸೇರಿದವರಾಗಲೂ ಬಹುದು.

إِنَّمَا يَعْمُرُ مَسَٰجِدَ ٱللَّهِ مَنْ ءَامَنَ بِٱللَّهِ وَٱلْيَوْمِ ٱلْأٓخِرِ وَأَقَامَ ٱلصَّلَوٰةَ وَءَاتَى ٱلزَّكَوٰةَ وَلَمْ يَخْشَ إِلَّا ٱللَّهَۖ فَعَسَىٰٓ أُوْلَٰٓئِكَ أَن يَكُونُواْ مِنَ ٱلْمُهْتَدِينَ ﴿١٨﴾

19. ಹಜ್ಜ್ ಯಾತ್ರಾರ್ಥಿಗಳಿಗೆ ಕುಡಿಯಲು ನೀಡುವುದನ್ನು ಮತ್ತು ಮಸ್ಜಿದುಲ್ ಹರಾಮ್‌ನ ಪರಿಪಾಲನೆ ಮಾಡುವುದನ್ನು ಅಲ್ಲಾಹುವಿನಲ್ಲೂ, ಅಂತ್ಯದಿನದಲ್ಲೂ ವಿಶ್ವಾಸವಿಡುವ ಹಾಗೂ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುವವರ ಕರ್ಮಗಳಿಗೆ ಸಮಾನವಾಗಿ ನೀವು ಗಣಿಸುತ್ತಿರುವಿರಾ?[1] ಅವರು ಅಲ್ಲಾಹುವಿನ ಬಳಿ ಸಮಾನರಾಗಲಾರರು. ಅಕ್ರಮಿಗಳಾದ ಜನತೆಯನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

۞ أَجَعَلْتُمْ سِقَايَةَ ٱلْحَآجِّ وَعِمَارَةَ ٱلْمَسْجِدِ ٱلْحَرَامِ كَمَنْ ءَامَنَ بِٱللَّهِ وَٱلْيَوْمِ ٱلْءَاخِرِ وَجَٰهَدَ فِى سَبِيلِ ٱللَّهِ ۚ لَا يَسْتَوُۥنَ عِندَ ٱللَّهِ ۗ وَٱللَّهُ لَا يَهْدِى ٱلْقَوْمَ ٱلظَّٰلِمِينَ ﴿١٩﴾

20. ಸತ್ಯವಿಶ್ವಾಸವಿಟ್ಟವರು, ಸ್ವಂತ ನಾಡನ್ನು ತ್ಯಜಿಸಿದವರು ಮತ್ತು ತಮ್ಮ ಸಂಪತ್ತುಗಳಿಂದಲೂ ಶರೀರಗಳಿಂದಲೂ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿದವರು ಅಲ್ಲಾಹುವಿನ ಬಳಿ ಅತ್ಯುನ್ನತವಾದ ಪದವಿಯುಳ್ಳವರಾಗಿರುವರು. ವಿಜಯಗಳಿಸಿದವರು ಅವರೇ ಆಗಿರುವರು.

ٱلَّذِينَ ءَامَنُوا۟ وَهَاجَرُوا۟ وَجَٰهَدُوا۟ فِى سَبِيلِ ٱللَّهِ بِأَمْوَٰلِهِمْ وَأَنفُسِهِمْ أَعْظَمُ دَرَجَةً عِندَ ٱللَّهِ ۚ وَأُو۟لَٰٓئِكَ هُمُ ٱلْفَآئِزُونَ ﴿٢٠﴾

21. ಅವರಿಗೆ ಅವರ ರಬ್ ತನ್ನ ವತಿಯ ಅನುಗ್ರಹ, ಸಂತೃಪ್ತಿ ಮತ್ತು ಸ್ವರ್ಗೋದ್ಯಾನಗಳ ಕುರಿತು ಶುಭವಾರ್ತೆಯನ್ನು ತಿಳಿಸುವನು. ಅವರಿಗೆ ಅಲ್ಲಿ ಶಾಶ್ವತವಾದ ಸುಖಾನುಭೂತಿಗಳಿರುವುವು.

يُبَشِّرُهُمْ رَبُّهُم بِرَحْمَةٍ مِّنْهُ وَرِضْوَٰنٍ وَجَنَّٰتٍ لَّهُمْ فِيهَا نَعِيمٌ مُّقِيمٌ ﴿٢١﴾

22. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. ಖಂಡಿತವಾಗಿಯೂ ಮಹಾ ಪ್ರತಿಫಲವಿರುವುದು ಅಲ್ಲಾಹುವಿನ ಬಳಿಯಲ್ಲಾಗಿದೆ.

خَٰلِدِينَ فِيهَآ أَبَدًا ۚ إِنَّ ٱللَّهَ عِندَهُۥٓ أَجْرٌ عَظِيمٌ ﴿٢٢﴾

23. ಓ ಸತ್ಯವಿಶ್ವಾಸಿಗಳೇ! ನಿಮ್ಮ ತಂದೆಯಂದಿರಾಗಲಿ, ನಿಮ್ಮ ಸಹೋದರರಾಗಲಿ ಸತ್ಯವಿಶ್ವಾಸಕ್ಕೆ ಬದಲಾಗಿ ಸತ್ಯನಿಷೇಧವನ್ನು ಇಷ್ಟಪಡುವವರಾದರೆ ನೀವು ಅವರನ್ನು ರಕ್ಷಕರನ್ನಾಗಿ ಮಾಡಿಕೊಳ್ಳದಿರಿ. ನಿಮ್ಮ ಪೈಕಿ

يَٰٓأَيُّهَا ٱلَّذِينَ ءَامَنُوا۟ لَا تَتَّخِذُوٓا۟ ءَابَآءَكُمْ وَإِخْوَٰنَكُمْ أَوْلِيَآءَ إِنِ ٱسْتَحَبُّوا۟ ٱلْكُفْرَ عَلَى ٱلْإِيمَٰنِ ۚ وَمَن يَتَوَلَّهُم مِّنكُمْ فَأُو۟لَٰٓئِكَ هُمُ ٱلظَّٰلِمُونَ ﴿٢٣﴾

1 ಹಜ್ಜ್ ಯಾತ್ರಿಕರಿಗೆ ಕುಡಿಯುವ ನೀರು ನೀಡುವುದು ಮತ್ತು ಮಸ್ಜಿದುಲ್ ಹರಾಮ್‌ನ ಪರಿಪಾಲನೆ ಮಾಡುವುದನ್ನು ಮಕ್ಕಾದಲ್ಲಿದ್ದ ಬಹುದೇವಾರಾಧಕರು ತಾವು ಮಾಡುವ ಅತಿದೊಡ್ಡ ಪುಣ್ಯಕರ್ಮವಾಗಿ ಎತ್ತಿತೋರಿಸುತ್ತಿದ್ದರು. ಇಂತಹ ಯಾವುದೇ ಪುಣ್ಯಕರ್ಮಗಳು ಅಲ್ಲಾಹುವಿನ ಬಳಿ ಸ್ವೀಕಾರವಾಗಬೇಕಾದರೆ ಸರಿಯಾದ ವಿಶ್ವಾಸ ಮತ್ತು ತ್ಯಾಗ ಸನ್ನದ್ಧತೆಯಿರಬೇಕು. ಬಹುದೇವಾರಾಧಕರಿಗೆ ಇವೆರಡೂ ಇಲ್ಲದ್ದರಿಂದ ಅವರು ಮತ್ತು ಸತ್ಯವಿಶ್ವಾಸಿಗಳು ಎಂದೂ ಸಮಾನರಾಗಲಾರರು.

ಯಾರಾದರೂ ಅವರನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವುದಾದರೆ ಅವರೇ ಅಕ್ರಮಿಗಳಾಗಿರುವರು.

24. (ಓ ಪ್ರವಾದಿಯವರೇ!) ಹೇಳಿರಿ: 'ನಿಮ್ಮ ತಂದೆಯಂದಿರು, ನಿಮ್ಮ ಪುತ್ರರು, ನಿಮ್ಮ ಸಹೋದರರು, ನಿಮ್ಮ ಸಂಗಾತಿಗಳು, ನಿಮ್ಮ ಕುಟುಂಬಿಕರು, ನೀವು ಸಂಪಾದಿಸಿಟ್ಟಿರುವ ಸಂಪತ್ತುಗಳು, ಕುಸಿತ ಎದುರಾಗಬಹುದೆಂದು ನೀವು ಭಯಪಡುವ ವ್ಯಾಪಾರ, ನೀವು ತೃಪ್ತಿಪಡುವ ವಸತಿಗಳು ನಿಮಗೆ ಅಲ್ಲಾಹುವಿಗಿಂತಲೂ, ಅವನ ಸಂದೇಶವಾಹಕರಿಗಿಂತಲೂ ಮತ್ತು ಅವನ ಮಾರ್ಗದಲ್ಲಿರುವ ಹೋರಾಟಕ್ಕಿಂತಲೂ ಹೆಚ್ಚು ಪ್ರಿಯವಾಗಿರುವುದಾದರೆ ಅಲ್ಲಾಹು ತನ್ನ ಆದೇಶವನ್ನು ತರುವವರೆಗೆ ನೀವು ಕಾಯುತ್ತಿರಿ. ಧಿಕ್ಕಾರಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.'[1]

قُلۡ إِن كَانَ ءَابَآؤُكُمۡ وَأَبۡنَآؤُكُمۡ وَإِخۡوَٰنُكُمۡ وَأَزۡوَٰجُكُمۡ وَعَشِيرَتُكُمۡ وَأَمۡوَٰلٌ ٱقۡتَرَفۡتُمُوهَا وَتِجَٰرَةٞ تَخۡشَوۡنَ كَسَادَهَا وَمَسَٰكِنُ تَرۡضَوۡنَهَآ أَحَبَّ إِلَيۡكُم مِّنَ ٱللَّهِ وَرَسُولِهِۦ وَجِهَادٖ فِي سَبِيلِهِۦ فَتَرَبَّصُواْ حَتَّىٰ يَأۡتِيَ ٱللَّهُ بِأَمۡرِهِۦۗ وَٱللَّهُ لَا يَهۡدِي ٱلۡقَوۡمَ ٱلۡفَٰسِقِينَ ٢٤

25. ಖಂಡಿತವಾಗಿಯೂ ಅನೇಕ (ಯುದ್ಧ)ಕ್ಷೇತ್ರಗಳಲ್ಲಿ ಅಲ್ಲಾಹು ನಿಮಗೆ ಸಹಾಯ ಮಾಡಿರುವನು. ಹುನೈನ್ (ಯುದ್ಧದ) ದಿನದಂದೂ[2] (ಸಹಾಯ ಮಾಡಿರುವನು). ಅಂದರೆ ನಿಮ್ಮ ಸಂಖ್ಯಾಬಲವು ನಿಮ್ಮನ್ನು ಹಿಗ್ಗುವಂತೆ ಮಾಡಿದ, ಆದರೆ ಅದು ನಿಮಗೆ ಯಾವುದೇ ಪ್ರಯೋಜನವನ್ನೂ ಮಾಡದ ಮತ್ತು ಭೂಮಿಯು ವಿಶಾಲವಾಗಿದ್ದೂ ನಿಮಗೆ ಇಕ್ಕಟ್ಟಾಗಿ ಬಿಟ್ಟ ಹಾಗೂ ತದನಂತರ ನೀವು ವಿಮುಖರಾಗಿ ಹೋದ ಸಂದರ್ಭ.

لَقَدۡ نَصَرَكُمُ ٱللَّهُ فِي مَوَاطِنَ كَثِيرَةٖ وَيَوۡمَ حُنَيۡنٍ إِذۡ أَعۡجَبَتۡكُمۡ كَثۡرَتُكُمۡ فَلَمۡ تُغۡنِ عَنكُمۡ شَيۡـٔٗا وَضَاقَتۡ عَلَيۡكُمُ ٱلۡأَرۡضُ بِمَا رَحُبَتۡ ثُمَّ وَلَّيۡتُم مُّدۡبِرِينَ ٢٥

---

1 ಅಲ್ಲಾಹುವಿನ ಮಾರ್ಗದರ್ಶನಕ್ಕಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ಭೌತಿಕ ಸಂಬಂಧಗಳಿಗೆ ಮತ್ತು ಐಹಿಕ ಸಂಪಾದನೆಗಳಿಗೆ ನೀಡುವವರಿಗೆ ಪ್ರಸ್ತುತ ಸೂಕ್ತಿಯು ಕಠಿಣವಾದ ಎಚ್ಚರಿಕೆಯನ್ನು ನೀಡುತ್ತದೆ.

2 ಹಿಜ್ರಾ 8ನೇ ವರ್ಷದಲ್ಲಿ ಹುನೈನ್ ಯುದ್ಧವು ಜರಗಿತು ಮಕ್ಕಾ ವಿಜಯದಿಂದಾಗಿ ಕುಪಿತರಾದ ಕೆಲವೊಂದು ಜನಾಂಗಗಳು ಮುಸ್ಲಿಮರ ವಿರುದ್ಧ ಯುದ್ಧ ಹೂಡಿದರು. ಮುಸ್ಲಿಮರು ಗಣನೀಯ ಸಂಖ್ಯೆಯಲ್ಲಿದ್ದೂ ಸಹ ಯುದ್ಧದ ಆರಂಭ ಘಟ್ಟದಲ್ಲಿ ಪ್ರವಾದಿ(ﷺ)ರವರು ಮತ್ತು ಕೆಲವು ಆಪ್ತ ಅನುಚರರ ಹೊರತು ಉಳಿದವರೆಲ್ಲರೂ ವಿಮುಖರಾಗಿ ಓಡಿದರು. ಆದರೆ ಓಡಿಹೋದವರು ಕೆಲವೇ ಕ್ಷಣಗಳಲ್ಲಿ ರಣರಂಗಕ್ಕೆ ಮರಳಿಬಂದು ಅಲ್ಲಾಹುವಿನ ಸಹಾಯದೊಂದಿಗೆ ಹೋರಾಡಿ ಜಯಗಳಿಸಿದರು.

26. ತರುವಾಯ ಅಲ್ಲಾಹು ತನ್ನ ಸಂದೇಶವಾಹಕರ ಮೇಲೆ ಮತ್ತು ಸತ್ಯವಿಶ್ವಾಸಿಗಳ ಮೇಲೆ ತನ್ನ ವತಿಯ ಮನಃಶಾಂತಿಯನ್ನು ಇಳಿಸಿದನು. ನೀವು ಕಾಣದಿರುವಂತಹ ಕೆಲವು ಸೈನ್ಯಗಳನ್ನೂ ಇಳಿಸಿದನು ಮತ್ತು ಸತ್ಯನಿಷೇಧಿಗಳನ್ನು ಶಿಕ್ಷಿಸಿದನು. ಇದು ಸತ್ಯನಿಷೇಧಿಗಳಿಗಿರುವ ಪ್ರತಿಫಲವಾಗಿದೆ.

ثُمَّ أَنزَلَ ٱللَّهُ سَكِينَتَهُۥ عَلَىٰ رَسُولِهِۦ وَعَلَى ٱلْمُؤْمِنِينَ وَأَنزَلَ جُنُودًا لَّمْ تَرَوْهَا وَعَذَّبَ ٱلَّذِينَ كَفَرُوا۟ ۚ وَذَٰلِكَ جَزَآءُ ٱلْكَٰفِرِينَ ٢٦

27. ತರುವಾಯ ಅದರ ಬಳಿಕ ಅಲ್ಲಾಹು ತಾನಿಚ್ಛಿಸುವವರ ಪಶ್ಚಾತ್ತಾಪವನ್ನು ಸ್ವೀಕರಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

ثُمَّ يَتُوبُ ٱللَّهُ مِنۢ بَعْدِ ذَٰلِكَ عَلَىٰ مَن يَشَآءُ ۗ وَٱللَّهُ غَفُورٌ رَّحِيمٌ ٢٧

28. ಓ ಸತ್ಯವಿಶ್ವಾಸಿಗಳೇ! ಬಹುದೇವವಿಶ್ವಾಸಿಗಳು ಅಶುದ್ಧರಾಗಿರುವರು.[1] ಆದ್ದರಿಂದ ಈ ವರ್ಷದ ಬಳಿಕ ಅವರು ಮಸ್ಜಿದುಲ್ ಹರಾಮ್‌ನ ಸಮೀಪಕ್ಕೆ ಬರದಿರಲಿ.[2] (ಅವರ ಅನುಪಸ್ಥಿತಿಯಲ್ಲಿ) ಬಡತನವು ಎದುರಾಗಬಹುದೆಂದು ನೀವು ಭಯಪಡುವುದಾದರೆ ಅಲ್ಲಾಹು ಇಚ್ಛಿಸಿದರೆ ಅವನು ತನ್ನ ಅನುಗ್ರಹದಿಂದ ನಿಮಗೆ ಐಶ್ವರ್ಯವನ್ನು ನೀಡುವನು.[3] ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

يَٰٓأَيُّهَا ٱلَّذِينَ ءَامَنُوٓا۟ إِنَّمَا ٱلْمُشْرِكُونَ نَجَسٌ فَلَا يَقْرَبُوا۟ ٱلْمَسْجِدَ ٱلْحَرَامَ بَعْدَ عَامِهِمْ هَٰذَا ۚ وَإِنْ خِفْتُمْ عَيْلَةً فَسَوْفَ يُغْنِيكُمُ ٱللَّهُ مِن فَضْلِهِۦٓ إِن شَآءَ ۚ إِنَّ ٱللَّهَ عَلِيمٌ حَكِيمٌ ٢٨

1 ಇದರ ತಾತ್ಪರ್ಯ ಬಹುದೇವವಿಶ್ವಾಸಿಗಳ ದೇಹವು ಮಾಲಿನ್ಯದಿಂದ ಕೂಡಿದೆ ಮತ್ತು ಅವರೊಂದಿಗೆ ಅಸ್ಪೃಶ್ಯತೆಯಿಂದ ವರ್ತಿಸಬೇಕು ಎಂದಲ್ಲ. ಬದಲಾಗಿ ಅವಿಶ್ವಾಸ ಮತ್ತು ಅಧರ್ಮದ ನಿಮಿತ್ತ ಅವರ ಹೃದಯ ಮತ್ತು ಆತ್ಮ ಮಲಿನಗೊಂಡಿದೆ ಎಂದಾಗಿದೆ.

2 ಮಸ್ಜಿದುಲ್ ಹರಾಮ್ ಸ್ಥಾಪಿಸಲ್ಪಟ್ಟಿರುವುದು ಅಲ್ಲಾಹುವಿನ ಆರಾಧನೆಗಾಗಿ ಮಾತ್ರವಾಗಿದೆ. ತನ್ಮಧ್ಯೆ ಅಲ್ಲಿ ಬಹುದೇವಾರಾಧನಾ ಸಂಪ್ರದಾಯಗಳು ನುಸುಳಿಕೊಂಡವು. ಪ್ರವಾದಿ(ﷺ) ರವರು ಮಕ್ಕಾವನ್ನು ಜಯಿಸಿದೊಡನೆ ಮಸ್ಜಿದುಲ್ ಹರಾಮ್‌ನಲ್ಲಿದ್ದ ವಿಗ್ರಹಗಳನ್ನು ತೊಲಗಿಸಿ ಅದನ್ನು ಶುದ್ಧೀಕರಿಸಿದರು ಮತ್ತು ಬಹುದೇವಾರಾಧಕರಿಗೆ ಮಸ್ಜಿದುಲ್ ಹರಾಮ್‌ನ ಪ್ರವೇಶವನ್ನು ನಿಷಿದ್ಧಗೊಳಿಸಿದರು.

3 ಮಕ್ಕಾ ನಿವಾಸಿಗಳ ಆದಾಯವು ಸಂಪೂರ್ಣವಾಗಿ ಹಜ್ಜ್ ಯಾತ್ರಿಕರನ್ನು ಅವಲಂಬಿಸಿದೆ. ಬಹುದೇವಾರಾಧಕರಿಗೆ ಪ್ರವೇಶ ನಿಷಿದ್ಧಗೊಳಿಸಿದರೆ ಆದಾಯದಲ್ಲಿ ಕುಸಿತವುಂಟಾಗಬಹುದು ಎಂಬ ಅವರ ಭಯವನ್ನು ಅಲ್ಲಾಹು ನೀಗಿಸಿರುವನು.

قَٰتِلُوا۟ ٱلَّذِينَ لَا يُؤْمِنُونَ بِٱللَّهِ وَلَا بِٱلْيَوْمِ ٱلْءَاخِرِ وَلَا يُحَرِّمُونَ مَا حَرَّمَ ٱللَّهُ وَرَسُولُهُۥ وَلَا يَدِينُونَ دِينَ ٱلْحَقِّ مِنَ ٱلَّذِينَ أُوتُوا۟ ٱلْكِتَٰبَ حَتَّىٰ يُعْطُوا۟ ٱلْجِزْيَةَ عَن يَدٍ وَهُمْ صَٰغِرُونَ ﴿٢٩﴾

**29.** ಗ್ರಂಥ ನೀಡಲಾದವರ ಪೈಕಿ ಅಲ್ಲಾಹುವಿನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಡದವರು, ಅಲ್ಲಾಹು ಮತ್ತು ಅವನ ಸಂದೇಶವಾಹಕರು ನಿಷಿದ್ಧಗೊಳಿಸಿರುವುದನ್ನು ನಿಷಿದ್ಧವೆಂದು ಪರಿಗಣಿಸದವರು ಮತ್ತು ಸತ್ಯಧರ್ಮವನ್ನು ಧರ್ಮವಾಗಿ ಸ್ವೀಕರಿಸದವವರು ಯಾರೋ ಅವರು ವಿಧೇಯತೆಯೊಂದಿಗೆ ಸ್ವತಃ ತಮ್ಮ ಕೈಯಿಂದ ಕಪ್ಪವನ್ನು ನೀಡುವವರೆಗೆ ನೀವು ಅವರೊಂದಿಗೆ ಯುದ್ಧ ಮಾಡಿರಿ.

وَقَالَتِ ٱلْيَهُودُ عُزَيْرٌ ٱبْنُ ٱللَّهِ وَقَالَتِ ٱلنَّصَٰرَى ٱلْمَسِيحُ ٱبْنُ ٱللَّهِ ۖ ذَٰلِكَ قَوْلُهُم بِأَفْوَٰهِهِمْ ۖ يُضَٰهِـُٔونَ قَوْلَ ٱلَّذِينَ كَفَرُوا۟ مِن قَبْلُ ۚ قَٰتَلَهُمُ ٱللَّهُ ۚ أَنَّىٰ يُؤْفَكُونَ ﴿٣٠﴾

**30.** ಉಝೈರ್ (ಎಝ್ರಾ ಪ್ರವಾದಿ) ಅಲ್ಲಾಹುವಿನ ಪುತ್ರರಾಗಿರುವರೆಂದು ಯಹೂದರು ಹೇಳಿದರು. ಮಸೀಹ್(ಯೇಸು)ಅಲ್ಲಾಹುವಿನ ಪುತ್ರರಾಗಿರುವರೆಂದು ಕ್ರೈಸ್ತರು ಹೇಳಿದರು. ಅದು ಅವರು ಬಾಯಿ ಮೂಲಕ ಹೇಳುವ ಮಾತುಗಳಾಗಿವೆ. ಈ ಮೊದಲು ನಿಷೇಧಿಸಿದವರ ಮಾತುಗಳನ್ನು ಅವರು ಅನುಕರಿಸುತ್ತಿರುವರು. ಅಲ್ಲಾಹು ಅವರನ್ನು ಶಪಿಸಿರುವನು. ಅವರು (ಸತ್ಯದಿಂದ) ಹೇಗೆ ತಪ್ಪಿಸಲ್ಪಡುತ್ತಿರುವರು?

ٱتَّخَذُوٓا۟ أَحْبَارَهُمْ وَرُهْبَٰنَهُمْ أَرْبَابًا مِّن دُونِ ٱللَّهِ وَٱلْمَسِيحَ ٱبْنَ مَرْيَمَ وَمَآ أُمِرُوٓا۟ إِلَّا لِيَعْبُدُوٓا۟ إِلَٰهًا وَٰحِدًا ۖ لَّآ إِلَٰهَ إِلَّا هُوَ ۚ سُبْحَٰنَهُۥ عَمَّا يُشْرِكُونَ ﴿٣١﴾

**31.** ಅವರು ಅಲ್ಲಾಹುವಿನ ಹೊರತು ತಮ್ಮ ವಿದ್ವಾಂಸರನ್ನೂ, ಪುರೋಹಿತರನ್ನೂ, ಮರ್ಯಮ್‌ರ ಮಗನಾದ ಮಸೀಹರನ್ನೂ ರಬ್ಬುಗಳನ್ನಾಗಿ ಮಾಡಿಕೊಂಡರು. ಆದರೆ ಏಕೈಕ ಆರಾಧ್ಯನನ್ನು ಮಾತ್ರ ಆರಾಧಿಸಬೇಕು ಎಂಬುದನ್ನಲ್ಲದೆ ಬೇರೇನನ್ನೂ ಅವರೊಂದಿಗೆ ಆದೇಶಿಸಲಾಗಿರಲಿಲ್ಲ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವರು ಸಹಭಾಗಿತ್ವವನ್ನು ಮಾಡುವುದರಿಂದ ಅವನು ಎಷ್ಟೋ ಪಾವನನಾಗಿರುವನು.

يُرِيدُونَ أَن يُطْفِـُٔوا۟ نُورَ ٱللَّهِ بِأَفْوَٰهِهِمْ وَيَأْبَى ٱللَّهُ إِلَّآ أَن يُتِمَّ نُورَهُۥ وَلَوْ كَرِهَ

**32.** ಅವರು ತಮ್ಮ ಬಾಯಿಯಿಂದ ಅಲ್ಲಾಹುವಿನ ಪ್ರಕಾಶವನ್ನು ಊದಿ ನಂದಿಸಲು ಇಚ್ಛೆಸುತ್ತಿರುವರು. ಆದರೆ ಸತ್ಯನಿಷೇಧಿಗಳು

ಎಷ್ಟು ಅಸಹ್ಯಪಟ್ಟರೂ ಅಲ್ಲಾಹು ತನ್ನ ಪ್ರಕಾಶವನ್ನು ಪೂರ್ಣಗೊಳಿಸದೆ ಬಿಡಲಾರನು.

ٱلْكَٰفِرُونَ ﴿٣٢﴾

33. ಮಾರ್ಗದರ್ಶನ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕರನ್ನು ಕಳುಹಿಸಿದವನು ಅವನೇ ಆಗಿರುವನು; ಎಲ್ಲ ಧರ್ಮಗಳ ಮೇಲೂ ಅದು ಮೇಲುಗೈ ಸಾಧಿಸುವುದಕ್ಕಾಗಿ; ಬಹುದೇವ ವಿಶ್ವಾಸಿಗಳು ಎಷ್ಟೇ ಅಸಹ್ಯಪಟ್ಟರೂ ಸರಿ.

هُوَ ٱلَّذِىٓ أَرْسَلَ رَسُولَهُۥ بِٱلْهُدَىٰ وَدِينِ ٱلْحَقِّ لِيُظْهِرَهُۥ عَلَى ٱلدِّينِ كُلِّهِۦ وَلَوْ كَرِهَ ٱلْمُشْرِكُونَ ﴿٣٣﴾

34. ಓ ಸತ್ಯವಿಶ್ವಾಸಿಗಳೇ! ಖಂಡಿತವಾಗಿಯೂ ವಿದ್ವಾಂಸರು ಮತ್ತು ಪುರೋಹಿತರ ಪೈಕಿ ಹೆಚ್ಚಿನವರು ಅನ್ಯಾಯವಾಗಿ ಜನರ ಸಂಪತ್ತನ್ನು ತಿನ್ನುವವರೂ, ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆಯುವವರೂ ಆಗಿರುವರು.(1) ಚಿನ್ನ ಮತ್ತು ಬೆಳ್ಳಿಯನ್ನು ನಿಕ್ಷೇಪ ಮಾಡಿಡುವವರು ಮತ್ತು ಅಲ್ಲಾಹುವಿನ ಮಾರ್ಗದಲ್ಲಿ ಅದನ್ನು ವ್ಯಯಿಸದಿರುವವರು ಯಾರೋ ಅವರಿಗೆ ಯಾತನಾಮಯವಾದ ಶಿಕ್ಷೆಯಿದೆಯೆಂಬ ಶುಭವಾರ್ತೆಯನ್ನು ತಿಳಿಸಿರಿ.

۞ يَٰٓأَيُّهَا ٱلَّذِينَ ءَامَنُوٓا۟ إِنَّ كَثِيرًا مِّنَ ٱلْأَحْبَارِ وَٱلرُّهْبَانِ لَيَأْكُلُونَ أَمْوَٰلَ ٱلنَّاسِ بِٱلْبَٰطِلِ وَيَصُدُّونَ عَن سَبِيلِ ٱللَّهِ ۗ وَٱلَّذِينَ يَكْنِزُونَ ٱلذَّهَبَ وَٱلْفِضَّةَ وَلَا يُنفِقُونَهَا فِى سَبِيلِ ٱللَّهِ فَبَشِّرْهُم بِعَذَابٍ أَلِيمٍ ﴿٣٤﴾

35. ನರಕಾಗ್ನಿಯಲ್ಲಿ ಅವುಗಳನ್ನು ಕಾಯಿಸಿ, ತರುವಾಯ ಅದರಿಂದ ಅವರ ಹಣೆಗಳ, ಪಾರ್ಶ್ವಗಳ ಮತ್ತು ಬೆನ್ನುಗಳ ಮೇಲೆ ಬರೆ ಎಳೆಯುವ ದಿನದಂದು 'ಇದು ನೀವು ನಿಮಗೋಸ್ಕರ ನಿಕ್ಷೇಪ ಮಾಡಿಟ್ಟಿರುವ ನಿಧಿಯಾಗಿದೆ. ಆದ್ದರಿಂದ ನೀವು ನಿಕ್ಷೇಪ ಮಾಡಿಟ್ಟಿರುವುದನ್ನು ಸವಿಯಿರಿ' (ಎಂದು ಅವರೊಂದಿಗೆ ಹೇಳಲಾಗುವುದು).

يَوْمَ يُحْمَىٰ عَلَيْهَا فِى نَارِ جَهَنَّمَ فَتُكْوَىٰ بِهَا جِبَاهُهُمْ وَجُنُوبُهُمْ وَظُهُورُهُمْ ۖ هَٰذَا مَا كَنَزْتُمْ لِأَنفُسِكُمْ فَذُوقُوا۟ مَا كُنتُمْ تَكْنِزُونَ ﴿٣٥﴾

1 ಪ್ರವಾದಿಗಳನ್ನು ನಿಯೋಗಿಸಲ್ಪಟ್ಟಿರುವುದು ಜನರನ್ನು ಅಲ್ಲಾಹುವಿನೊಂದಿಗೆ ನಿಕಟಗೊಳಿಸುವ ಸಲುವಾಗಿದೆ. ಯಾವುದೇ ಮಧ್ಯವರ್ತಿಯೂ ಇಲ್ಲದೆ ಅಲ್ಲಾಹುವಿನೊಂದಿಗೆ ನೇರವಾಗಿ ಪ್ರಾರ್ಥಿಸಬೇಕೆಂದು ಅವರು ಕಲಿಸಿದ್ದಾರೆ. ಆದರೆ ಪುರೋಹಿತರು ಎಲ್ಲಾ ಕಾಲದಲ್ಲೂ ಇದಕ್ಕೆ ವಿರುದ್ಧವಾಗಿ ವರ್ತಿಸುವವರಾಗಿದ್ದಾರೆ. ಅವರು ಅಲ್ಲಾಹುವಿನ ಮತ್ತು ಜನರ ಮಧ್ಯೆ ಮಧ್ಯವರ್ತಿಗಳಾಗಿ ವರ್ತಿಸಿ ಜನರನ್ನು ಶೋಷಣೆಗೈಯ್ಯುವುದಕ್ಕಾಗಿ ಗ್ರಂಥವನ್ನು ದುರ್ವ್ಯಾಖ್ಯಾನ ಮಾಡುತ್ತಿದ್ದಾರೆ. ಒಟ್ಟಿನಲ್ಲಿ ಅವರು ಜನರನ್ನು ಅಲ್ಲಾಹುವಿನಿಂದ ದೂರ ಮಾಡುವುದರಲ್ಲಿ ನಿರತರಾಗಿದ್ದಾರೆ.

36. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದ ದಿನದಂದು ಅಲ್ಲಾಹು ದಾಖಲಿಸಿರುವ ಪ್ರಕಾರ ಅಲ್ಲಾಹುವಿನ ಬಳಿ ತಿಂಗಳುಗಳ ಸಂಖ್ಯೆಯು ಹನ್ನೆರಡಾಗಿದೆ. ಅವುಗಳ ಪೈಕಿ ನಾಲ್ಕು (ಯುದ್ಧವನ್ನು) ನಿಷಿದ್ಧಗೊಳಿಸಲಾದ ತಿಂಗಳುಗಳಾಗಿವೆ. ಅದೇ ಋಜುವಾದ ಧರ್ಮ. ಆದ್ದರಿಂದ ಆ (ನಾಲ್ಕು) ತಿಂಗಳುಗಳಲ್ಲಿ ನೀವು ಸ್ವತಃ ನಿಮ್ಮ ಮೇಲೆಯೇ ಅಕ್ರಮವೆಸಗದಿರಿ. ಬಹುದೇವವಿಶ್ವಾಸಿಗಳು ನಿಮ್ಮೊಂದಿಗೆ ಒಟ್ಟಾಗಿ ಯುದ್ಧ ಮಾಡುವಂತೆ ನೀವೂ ಅವರೊಂದಿಗೆ ಒಟ್ಟಾಗಿ ಯುದ್ಧ ಮಾಡಿರಿ. ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸುವವರ ಜೊತೆಗಿರುವನೆಂಬುದನ್ನು ನೀವು ಅರಿತುಕೊಳ್ಳಿರಿ.

إِنَّ عِدَّةَ ٱلشُّهُورِ عِندَ ٱللَّهِ ٱثۡنَا عَشَرَ شَهۡرٗا فِي كِتَٰبِ ٱللَّهِ يَوۡمَ خَلَقَ ٱلسَّمَٰوَٰتِ وَٱلۡأَرۡضَ مِنۡهَآ أَرۡبَعَةٌ حُرُمٞۚ ذَٰلِكَ ٱلدِّينُ ٱلۡقَيِّمُۚ فَلَا تَظۡلِمُواْ فِيهِنَّ أَنفُسَكُمۡۚ وَقَٰتِلُواْ ٱلۡمُشۡرِكِينَ كَآفَّةٗ كَمَا يُقَٰتِلُونَكُمۡ كَآفَّةٗۚ وَٱعۡلَمُوٓاْ أَنَّ ٱللَّهَ مَعَ ٱلۡمُتَّقِينَ ٣٦

37. ನಿಷಿದ್ಧಗೊಳಿಸಲಾದ ತಿಂಗಳನ್ನು ಮುಂದೂಡುವುದು ಸತ್ಯನಿಷೇಧದ ವೃದ್ಧಿಯಾಗಿದೆ.[1] ತನ್ಮೂಲಕ ಸತ್ಯನಿಷೇಧಿಗಳು ಪಥಭ್ರಷ್ಟತೆಯೆಡೆಗೆ ಒಯ್ಯಲ್ಪಡುತ್ತಿರುವರು. ಒಂದು ವರ್ಷದಲ್ಲಿ ಅವರದನ್ನು ಸಮ್ಮತಾರ್ಹಗೊಳಿಸುವರು. ಮತ್ತೊಂದು ವರ್ಷದಲ್ಲಿ ಅದನ್ನು ನಿಷಿದ್ಧಗೊಳಿಸುವರು. ಅಲ್ಲಾಹು ನಿಷಿದ್ಧಗೊಳಿಸಿದ (ತಿಂಗಳುಗಳ) ಸಂಖ್ಯೆಯನ್ನು ಸರಿದೂಗಿಸಲು ಮತ್ತು ಅಲ್ಲಾಹು ನಿಷಿದ್ಧಗೊಳಿಸಿರುವುದನ್ನು ಸಮ್ಮತಾರ್ಹಗೊಳಿಸಲು ಅವರು ಹೀಗೆ ಮಾಡುತ್ತಿರುವರು. ಅವರ ದುಷ್ಕೃತ್ಯಗಳನ್ನು ಅವರಿಗೆ ಆಕರ್ಷಕಗೊಳಿಸಿಕೊಡಲಾಗಿದೆ.

إِنَّمَا ٱلنَّسِيٓءُ زِيَادَةٞ فِي ٱلۡكُفۡرِۖ يُضَلُّ بِهِ ٱلَّذِينَ كَفَرُواْ يُحِلُّونَهُۥ عَامٗا وَيُحَرِّمُونَهُۥ عَامٗا لِّيُوَاطِـُٔواْ عِدَّةَ مَا حَرَّمَ ٱللَّهُ فَيُحِلُّواْ مَا حَرَّمَ ٱللَّهُۚ زُيِّنَ لَهُمۡ سُوٓءُ أَعۡمَٰلِهِمۡۗ وَٱللَّهُ لَا يَهۡدِي ٱلۡقَوۡمَ ٱلۡكَٰفِرِينَ ٣٧

1 ಯುದ್ಧದಾಹಿಗಳಾದ ಅರೇಬಿಯನ್ ಗೋತ್ರಗಳಿಗೆ ನಿರಂತರ ಮೂರು ತಿಂಗಳುಗಳ ಕಾಲ ಯುದ್ಧ ಮಾಡದೆ ಸುಮ್ಮನಿರುವುದು ಅಸಹನೀಯವಾಗಿತ್ತು. ಆದ್ದರಿಂದ ಯುದ್ಧ ನಿಷಿದ್ಧವಾದ ಯಾವುದಾದರೂ ಒಂದು ತಿಂಗಳಲ್ಲಿ ಯುದ್ಧದ ಅಗತ್ಯ ಬಂದರೆ ಯುದ್ಧ ಮಾಡಿ, ನಂತರ ಬರುವ ಯಾವುದಾದರೂ ಒಂದು ತಿಂಗಳನ್ನು ಇದಕ್ಕೆ ಬದಲಿಯಾಗಿ ಯುದ್ಧ ನಿಷಿದ್ಧವೆಂದು ಪರಿಗಣಿಸುವ ಸಂಪ್ರದಾಯ ಅವರ ಮಧ್ಯೆ ರೂಢಿಯಲ್ಲಿತ್ತು. ಇದನ್ನು 'ನಸೀಅ್' ಎನ್ನಲಾಗುತ್ತದೆ. ಹಜ್ ತೀರ್ಥಾಟನೆಯು ವರ್ಷಂಪ್ರತಿ ಒಂದೇ ಋತುವಿನಲ್ಲಾಗುವ ಸಲುವಾಗಿ ಚಾಂದ್ರಮಾನ ವರ್ಷವನ್ನು ಸೌರಮಾನ ವರ್ಷದೊಂದಿಗೆ ಸರಿದೂಗಿಸುವುದನ್ನೂ 'ನಸೀಅ್' ಎನ್ನಲಾಗುತ್ತದೆ. ಇವೆಲ್ಲವೂ ನಿಷಿದ್ಧವಾಗಿವೆ.

ಸತ್ಯನಿಷೇಧಿಗಳಾದ ಜನತೆಯನ್ನು ಅಲ್ಲಾಹು ಸತ್ಯಮಾರ್ಗದಲ್ಲಿ ಸೇರಿಸಲಾರನು.

يَـٰٓأَيُّهَا ٱلَّذِينَ ءَامَنُواْ مَا لَكُمۡ إِذَا قِيلَ لَكُمُ ٱنفِرُواْ فِي سَبِيلِ ٱللَّهِ ٱثَّاقَلۡتُمۡ إِلَى ٱلۡأَرۡضِۚ أَرَضِيتُم بِٱلۡحَيَوٰةِ ٱلدُّنۡيَا مِنَ ٱلۡأٓخِرَةِۚ فَمَا مَتَٰعُ ٱلۡحَيَوٰةِ ٱلدُّنۡيَا فِي ٱلۡأٓخِرَةِ إِلَّا قَلِيلٌ ٣٨

**38.** ಓ ಸತ್ಯವಿಶ್ವಾಸಿಗಳೇ! ನಿಮಗೇನಾಗಿದೆ? ‘ಅಲ್ಲಾಹುವಿನ ಮಾರ್ಗದಲ್ಲಿ (ಯುದ್ಧಕ್ಕಾಗಿ) ಹೊರಡಿರಿ’ ಎಂದು ನಿಮ್ಮೊಂದಿಗೆ ಹೇಳಲಾದಾಗ ನೀವು ಭೂಮಿಯೆಡೆಗೆ ಜೋತುಬೀಳುತ್ತಿರುವಿರಿ! ಪರಲೋಕಕ್ಕೆ ಬದಲಾಗಿ ಐಹಿಕ ಜೀವನದಲ್ಲಿ ನೀವು ಸಂತೃಪ್ತರಾಗಿರುವಿರಾ? ಆದರೆ ಪರಲೋಕಕ್ಕೆ ಹೋಲಿಸಿದರೆ ಐಹಿಕ ಸುಖಗಳು ತುಚ್ಛವೇ ಆಗಿವೆ.

إِلَّا تَنفِرُواْ يُعَذِّبۡكُمۡ عَذَابًا أَلِيمٗا وَيَسۡتَبۡدِلۡ قَوۡمًا غَيۡرَكُمۡ وَلَا تَضُرُّوهُ شَيۡـٔٗاۗ وَٱللَّهُ عَلَىٰ كُلِّ شَيۡءٖ قَدِيرٌ ٣٩

**39.** ನೀವು (ಯುದ್ಧಕ್ಕಾಗಿ) ಹೊರಡದಿದ್ದರೆ ಅಲ್ಲಾಹು ನಿಮಗೆ ಯಾತನಾಮಯ ಶಿಕ್ಷೆಯನ್ನು ನೀಡುವನು ಮತ್ತು ನಿಮ್ಮ ಹೊರತಾದ ಬೇರೊಂದು ಜನತೆಯನ್ನು ಬದಲಿಯಾಗಿ ತರುವನು. ನೀವು ಅವನಿಗೆ ಯಾವುದೇ ಹಾನಿಯನ್ನೂ ಮಾಡಲಾರಿರಿ. ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

إِلَّا تَنصُرُوهُ فَقَدۡ نَصَرَهُ ٱللَّهُ إِذۡ أَخۡرَجَهُ ٱلَّذِينَ كَفَرُواْ ثَانِيَ ٱثۡنَيۡنِ إِذۡ هُمَا فِي ٱلۡغَارِ إِذۡ يَقُولُ لِصَٰحِبِهِۦ لَا تَحۡزَنۡ إِنَّ ٱللَّهَ مَعَنَاۖ فَأَنزَلَ ٱللَّهُ سَكِينَتَهُۥ عَلَيۡهِ وَأَيَّدَهُۥ بِجُنُودٖ لَّمۡ تَرَوۡهَا وَجَعَلَ كَلِمَةَ ٱلَّذِينَ كَفَرُواْ ٱلسُّفۡلَىٰۗ وَكَلِمَةُ ٱللَّهِ هِيَ ٱلۡعُلۡيَاۗ وَٱللَّهُ عَزِيزٌ حَكِيمٌ ٤٠

**40.** ನೀವು ಅವರಿಗೆ (ಪ್ರವಾದಿಗೆ) ಸಹಾಯ ಮಾಡುವುದಿಲ್ಲವೆಂದಾದರೆ; ಸತ್ಯನಿಷೇಧಿಗಳು ಅವರನ್ನು ಹೊರಗಟ್ಟಿದ ಸಂದರ್ಭದಲ್ಲಿ ಮತ್ತು ಅವರು ಇಬ್ಬರಲ್ಲಿ ಒಬ್ಬರಾಗಿದ್ದ ಸಂದರ್ಭದಲ್ಲಿ ಅಥವಾ ಅವರಿಬ್ಬರೂ (ಪ್ರವಾದಿ ಮತ್ತು ಅಬೂಬಕ್ರ್) ಗುಹೆಯಲ್ಲಿದ್ದಾಗ ಅಲ್ಲಾಹು ಅವರಿಗೆ ಸಹಾಯ ಮಾಡಿರುವನು. ಅವರು ತಮ್ಮ ಸಂಗಡಿಗನೊಂದಿಗೆ ‘ದುಃಖಿಸದಿರಿ, ಖಂಡಿತವಾಗಿಯೂ ಅಲ್ಲಾಹು ನಮ್ಮೊಂದಿಗಿರುವನು’[1] ಎಂದು ಹೇಳಿದ

1 ಸತ್ಯನಿಷೇಧಿಗಳು ಪ್ರವಾದಿ(ﷺ)ರವರನ್ನು ವಧಿಸಲು ನಿರ್ಧರಿಸಿದಾಗ ತಮ್ಮ ಊರಾದ ಮಕ್ಕವನ್ನು ತ್ಯಜಿಸಿ ಪಲಾಯನ ಮಾಡುವುದು ಅವರಿಗೆ ಅನಿವಾರ್ಯವಾಯಿತು. ಯಾರೂ ತಿಳಿಯದಂತೆ ರಾತ್ರಿ ವೇಳೆಯಲ್ಲಿ ಪ್ರವಾದಿ(ﷺ)ರವರು ಮತ್ತು ಅಬೂಬಕ್ರ್(رضي الله عنه)ರವರು ಮದೀನಾದೆಡೆಗೆ ಹೊರಟರು. ಬೆಳಗಾದಾಗ ಪ್ರವಾದಿ(ﷺ)ರವರು ಪಾರಾದ ವಿಷಯವನ್ನು ಅರಿತ ಶತ್ರುಗಳು ಅವರನ್ನು ಹುಡುಕಲು ಆರಂಭಿಸಿದರು. ತಮ್ಮನ್ನು ಶತ್ರುಗಳು ಹಿಂಬಾಲಿಸುತ್ತಿದ್ದಾರೆಂಬುದನ್ನು ಅರಿತ ಪ್ರವಾದಿ(ﷺ)ರವರು ಮತ್ತು ಅಬೂಬಕ್ರ್(رضي الله عنه)ರವರು ಸೌರ್ ಪರ್ವತದ ಒಂದು ಗುಹೆಯಲ್ಲಿ ಆಶ್ರಯಪಡೆದರು. ಶತ್ರುಗಳು ಗುಹೆಯ

ಸಂದರ್ಭ. ಆಗ ಅಲ್ಲಾಹು ಅವರ ಮೇಲೆ ತನ್ನ ವತಿಯ ಶಾಂತಿಯನ್ನು ಇಳಿಸಿದನು. ನೀವು ಕಾಣದಂತಹ ಸೈನ್ಯಗಳೊಂದಿಗೆ ಅವರಿಗೆ ಬೆಂಬಲವನ್ನು ನೀಡಿದನು ಮತ್ತು ಸತ್ಯನಿಷೇಧಿಗಳ ವಚನವನ್ನು ಅತ್ಯಂತ ಕೀಳಾಗಿಸಿದನು. ಅಲ್ಲಾಹುವಿನ ವಚನವು ಅತ್ಯುನ್ನತವಾಗಿರುವುದಾಗಿದೆ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

ٱنفِرُواْ خِفَافًا وَثِقَالًا وَجَٰهِدُواْ بِأَمۡوَٰلِكُمۡ وَأَنفُسِكُمۡ فِي سَبِيلِ ٱللَّهِۚ ذَٰلِكُمۡ خَيۡرٞ لَّكُمۡ إِن كُنتُمۡ تَعۡلَمُونَ ٤١

41. ನೀವು ಅನುಕೂಲತೆಯಲ್ಲಿರುವಾಗಲೂ, ಇಕ್ಕಟ್ಟಿನಲ್ಲಿರುವಾಗಲೂ (ಯುದ್ಧಕ್ಕಾಗಿ) ಹೊರಡಿರಿ. ನಿಮ್ಮ ಸಂಪತ್ತುಗಳಿಂದಲೂ ಶರೀರಗಳಿಂದಲೂ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡಿರಿ. ನೀವು ಅರಿತವರಾಗಿದ್ದರೆ ಅದು ನಿಮಗೆ ಉತ್ತಮವಾಗಿದೆ.

لَوۡ كَانَ عَرَضٗا قَرِيبٗا وَسَفَرٗا قَاصِدٗا لَّٱتَّبَعُوكَ وَلَٰكِنۢ بَعُدَتۡ عَلَيۡهِمُ ٱلشُّقَّةُۚ وَسَيَحۡلِفُونَ بِٱللَّهِ لَوِ ٱسۡتَطَعۡنَا لَخَرَجۡنَا مَعَكُمۡ يُهۡلِكُونَ أَنفُسَهُمۡ وَٱللَّهُ يَعۡلَمُ إِنَّهُمۡ لَكَٰذِبُونَ ٤٢

42. ಅದು ಹತ್ತಿರದಲ್ಲೇ ಇರುವ ಒಂದು ಲಾಭವಾಗಿದ್ದರೆ ಮತ್ತು ಸುಗಮವಾದ ಯಾತ್ರೆಯಾಗಿದ್ದರೆ ಅವರು ತಮ್ಮನ್ನು ಹಿಂಬಾಲಿಸುತ್ತಿದ್ದರು. ಆದರೆ ಪ್ರಯಾಸಕರವಾಗಿರುವ ಗುರಿಯು ಅವರಿಗೆ ವಿದೂರವಾಗಿ ತೋರುತ್ತಿದೆ.[1] 'ನಮಗೆ ಸಾಧ್ಯವಾಗಿರುತ್ತಿದ್ದರೆ ನಾವೂ ನಿಮ್ಮೊಂದಿಗೆ ಹೊರಡುತ್ತಿದ್ದೆವು' ಎಂದು ಅವರು ಅಲ್ಲಾಹುವಿನ ಮೇಲೆ ಆಣೆಯಿಟ್ಟು ಹೇಳುವರು. ಅವರು ಸ್ವತಃ ತಮ್ಮನ್ನೇ ನಾಶಗೊಳಿಸುತ್ತಿರುವರು. ಖಂಡಿತವಾಗಿಯೂ ಅವರು ಸುಳ್ಳು ಹೇಳುತ್ತಿರುವರೆಂದು ಅಲ್ಲಾಹುವಿಗೆ ತಿಳಿದಿದೆ.

---

ಮುಂಭಾಗಕ್ಕೆ ಬಂದರು. ಆಗ ಅಬೂಬಕ್ರ್(رَضِيَ ٱللَّهُ عَنْهُ) ತನ್ನ ಭಯವನ್ನು ಪ್ರಕಟಿಸಿದಾಗ ಪ್ರವಾದಿ(صَلَّى ٱللَّهُ عَلَيْهِ وَسَلَّمَ) ರವರು ಈ ರೀತಿ ಉತ್ತರಿಸಿದರು. ಅವರನ್ನು ಕಾಣಲು ಸಾಧ್ಯವಾಗದೆ ಶತ್ರುಗಳು ಹೊರಟುಹೋದರು. ಇದು ಅಲ್ಲಾಹುವಿನ ಒಂದು ವಿಶೇಷ ಸಹಾಯವಾಗಿತ್ತು.

1 ಜನರು ಬರಗಾಲ ಪೀಡಿತರಾಗಿ ಸಂಕಷ್ಟದಲ್ಲಿದ್ದಾಗ ಯುದ್ಧಕ್ಕಾಗಿ ತಬೂಕ್‌ನೆಡೆಗೆ ಹೊರಡಲು ಆದೇಶವುಂಟಾಯಿತು. ಇಲ್ಲಿ ಸೂಚಿಸಿರುವುದು ಪ್ರತಿಕೂಲ ಪರಿಸ್ಥಿತಿಯಲ್ಲಿ ವಿದೂರ ಸ್ಥಳಕ್ಕೆ ಹೋಗಿ ಯುದ್ಧ ಮಾಡಲು ಹಿಂಜರಿದ ಕಪಟವಿಶ್ವಾಸಿಗಳ ಕುರಿತಾಗಿದೆ.

عَفَا ٱللَّهُ عَنكَ لِمَ أَذِنتَ لَهُمۡ حَتَّىٰ يَتَبَيَّنَ لَكَ ٱلَّذِينَ صَدَقُواْ وَتَعۡلَمَ ٱلۡكَٰذِبِينَ ﴿٤٣﴾

**43.** (ಓ ಪ್ರವಾದಿಯವರೇ!) ಅಲ್ಲಾಹು ತಮ್ಮನ್ನು ಕ್ಷಮಿಸಿರುವನು. ಸತ್ಯವನ್ನು ನುಡಿಯುವವರು ಯಾರೆಂದು ಸ್ಪಷ್ಟವಾಗಿ ತಮಗೆ ತಿಳಿದು ಬರುವ ತನಕ ಮತ್ತು ಸುಳ್ಳು ನುಡಿಯುವವರನ್ನು ತಾವು ಗುರುತಿಸುವ ತನಕ ಏಕೆ ಅವರಿಗೆ ಅನುಮತಿ ನೀಡಿದಿರಿ?

لَا يَسۡتَـٔۡذِنُكَ ٱلَّذِينَ يُؤۡمِنُونَ بِٱللَّهِ وَٱلۡيَوۡمِ ٱلۡأٓخِرِ أَن يُجَٰهِدُواْ بِأَمۡوَٰلِهِمۡ وَأَنفُسِهِمۡۗ وَٱللَّهُ عَلِيمُۢ بِٱلۡمُتَّقِينَ ﴿٤٤﴾

**44.** ಅಲ್ಲಾಹುವಿನಲ್ಲೂ, ಅಂತ್ಯದಿನದಲ್ಲೂ ವಿಶ್ವಾಸ ವಿಡುವವರು ಯಾರೋ ಅವರು ತಮ್ಮ ಸಂಪತ್ತುಗಳ ಮೂಲಕ ಮತ್ತು ಶರೀರಗಳ ಮೂಲಕ ಯುದ್ಧ ಮಾಡುವುದರಿಂದ ಬಿಟ್ಟುನಿಲ್ಲಲು ತಮ್ಮೊಂದಿಗೆ ಅನುಮತಿ ಬೇಡ ಲಾರರು. ಭಯಭಕ್ತಿ ಪಾಲಿಸುವವರ ಬಗ್ಗೆ ಅಲ್ಲಾಹು ಚೆನ್ನಾಗಿ ಅರಿತಿರುವನು.

إِنَّمَا يَسۡتَـٔۡذِنُكَ ٱلَّذِينَ لَا يُؤۡمِنُونَ بِٱللَّهِ وَٱلۡيَوۡمِ ٱلۡأٓخِرِ وَٱرۡتَابَتۡ قُلُوبُهُمۡ فَهُمۡ فِي رَيۡبِهِمۡ يَتَرَدَّدُونَ ﴿٤٥﴾

**45.** ತಮ್ಮಲ್ಲಿ ಅನುಮತಿ ಬೇಡುವವರು ಅಲ್ಲಾಹುವಿನಲ್ಲೂ, ಅಂತ್ಯದಿನದಲ್ಲೂ ವಿಶ್ವಾಸವಿಡದವರು ಮತ್ತು ಹೃದಯಗಳಲ್ಲಿ ಸಂದೇಹವಿರುವವರು ಮಾತ್ರವಾಗಿರುವರು. ಅವರು ತಮ್ಮ ಸಂದೇಹದಲ್ಲಿ ತೊಳಲಾಡುತ್ತಿರುವರು.

۞وَلَوۡ أَرَادُواْ ٱلۡخُرُوجَ لَأَعَدُّواْ لَهُۥ عُدَّةٗ وَلَٰكِن كَرِهَ ٱللَّهُ ٱنۢبِعَاثَهُمۡ فَثَبَّطَهُمۡ وَقِيلَ ٱقۡعُدُواْ مَعَ ٱلۡقَٰعِدِينَ ﴿٤٦﴾

**46.** ಅವರು ಹೊರಡಲು ಇಚ್ಛಿಸಿದ್ದರೆ ಅದಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಆದರೆ ಅವರ ಹೊರಡುವಿಕೆಯನ್ನು ಅಲ್ಲಾಹು ಇಷ್ಟಪಡದ ಕಾರಣ ಅವನು ಅವರನ್ನು ಹಿಂದೆಯೇ ಉಳಿಸಿದನು. 'ಹಿಂದೆ ಉಳಿದುಕೊಳ್ಳುವವರೊಂದಿಗೆ ನೀವೂ ಉಳಿದುಕೊಳ್ಳಿರಿ' ಎಂದು ಅವರೊಡನೆ ಹೇಳಲಾಯಿತು.

لَوۡ خَرَجُواْ فِيكُم مَّا زَادُوكُمۡ إِلَّا خَبَالٗا وَلَأَوۡضَعُواْ خِلَٰلَكُمۡ يَبۡغُونَكُمُ ٱلۡفِتۡنَةَ وَفِيكُمۡ سَمَّـٰعُونَ لَهُمۡۗ وَٱللَّهُ عَلِيمُۢ بِٱلظَّـٰلِمِينَ ﴿٤٧﴾

**47.** ಅವರು ನಿಮ್ಮೊಂದಿಗೆ ಹೊರಡುತ್ತಿದ್ದರೆ ನಿಮಗೆ ಗೊಂದಲವನ್ನಲ್ಲದೆ ಇನ್ನೇನನ್ನೂ ಅಧಿಕಗೊಳಿಸಿ ಕೊಡುತ್ತಿರಲಿಲ್ಲ. ನಿಮ್ಮ ಮಧ್ಯೆ ಅವ್ಯವಸ್ಥೆಯನ್ನುಂಟು ಮಾಡಲು ಪ್ರಯತ್ನಿಸುತ್ತಾ ಅವರು ನಿಮ್ಮ ನಡುವೆ

ಓಡಾಡುತ್ತಿದ್ದರು.[1] ಅವರು ಹೇಳುವುದನ್ನು ಕಿವಿಗೊಟ್ಟು ಆಲಿಸುವವರೂ ನಿಮ್ಮಲ್ಲಿರುವರು. ಅಲ್ಲಾಹು ಅಕ್ರಮಿಗಳ ಕುರಿತು ಚೆನ್ನಾಗಿ ಅರಿತಿರುವನು.

لَقَدِ ٱبْتَغَوُا۟ ٱلْفِتْنَةَ مِن قَبْلُ وَقَلَّبُوا۟ لَكَ ٱلْأُمُورَ حَتَّىٰ جَآءَ ٱلْحَقُّ وَظَهَرَ أَمْرُ ٱللَّهِ وَهُمْ كَـٰرِهُونَ ﴿٤٨﴾

**48.** ಅವರು ಮುಂಚೆಯೂ ಅವ್ಯವಸ್ಥೆಯನ್ನುಂಟುಮಾಡಲು ಪ್ರಯತ್ನಿಸಿದ್ದರು ಮತ್ತು ತಮಗೆದುರಾಗಿ ವಿಷಯಗಳನ್ನು ಬುಡಮೇಲುಗೊಳಿಸಿದ್ದರು. ಕೊನೆಗೆ ಅವರು ಅಸಹ್ಯಪಡುವವರಾಗಿದ್ದೂ ಸಹ ಸತ್ಯವು ಬಂದಿತು ಮತ್ತು ಅಲ್ಲಾಹುವಿನ ತೀರ್ಮಾನವು ವಿಜಯಗಳಿಸಿತು.

وَمِنْهُم مَّن يَقُولُ ٱئْذَن لِّى وَلَا تَفْتِنِّىٓ ۚ أَلَا فِى ٱلْفِتْنَةِ سَقَطُوا۟ ۗ وَإِنَّ جَهَنَّمَ لَمُحِيطَةٌۢ بِٱلْكَـٰفِرِينَ ﴿٤٩﴾

**49.** ‘(ಯುದ್ಧಕ್ಕೆ ಹೊರಡದಿರಲು) ನನಗೆ ಅನುಮತಿ ನೀಡಿರಿ. ನನ್ನನ್ನು ಕ್ಷೋಭೆಗೆ ತಳ್ಳದಿರಿ’ಎಂದು ಹೇಳುವ ಕೆಲವರು ಅವರಲ್ಲಿರುವರು. ಅರಿತು ಕೊಳ್ಳಿರಿ! ಅವರು ಬಿದ್ದಿರುವುದು ಕ್ಷೋಭೆಯಲ್ಲೇ ಆಗಿದೆ. ಖಂಡಿತವಾಗಿಯೂ ನರಕಾಗ್ನಿಯು ಸತ್ಯನಿಷೇಧಿಗಳನ್ನು ಆವರಿಸಿ ಕೊಂಡಿರುವುದು.

إِن تُصِبْكَ حَسَنَةٌ تَسُؤْهُمْ ۖ وَإِن تُصِبْكَ مُصِيبَةٌ يَقُولُوا۟ قَدْ أَخَذْنَآ أَمْرَنَا مِن قَبْلُ وَيَتَوَلَّوا۟ وَّهُمْ فَرِحُونَ ﴿٥٠﴾

**50.** ತಮಗೇನಾದರೂ ಒಳಿತುಂಟಾದರೆ ಅದವರನ್ನು ದುಃಖಿತರನ್ನಾಗಿ ಮಾಡುವುದು. ತಮಗೇನಾದರೂ ಆಪತ್ತು ಬಾಧಿಸಿದರೆ ‘ನಾವು ನಮ್ಮ ವಿಷಯದಲ್ಲಿ ಮೊದಲೇ ಎಚ್ಚರ ವಹಿಸಿರುವೆವು’ ಎಂದು ಅವರು ಹೇಳುವರು ಮತ್ತು ಸಂಭ್ರಮಪಡುತ್ತಾ ವಿಮುಖರಾಗುವರು.

قُل لَّن يُصِيبَنَآ إِلَّا مَا كَتَبَ ٱللَّهُ لَنَا هُوَ مَوْلَىٰنَا ۚ وَعَلَى ٱللَّهِ فَلْيَتَوَكَّلِ ٱلْمُؤْمِنُونَ ﴿٥١﴾

**51.** ಹೇಳಿರಿ: ‘ಅಲ್ಲಾಹು ನಮಗೆ ವಿಧಿಸಿರುವುದಲ್ಲದೆ ಬೇರೇನೂ ನಮ್ಮನ್ನು ಬಾಧಿಸಲಾರದು. ಅವನು ನಮ್ಮ ಒಡೆಯನಾಗಿರುವನು. ಸತ್ಯವಿಶ್ವಾಸಿಗಳು ಅಲ್ಲಾಹುವಿನ ಮೇಲೆಯೇ ಭರವಸೆಯನ್ನಿಡಲಿ’.

---

1 ಸುಳ್ಳು ಹೇಳುತ್ತಲೂ ಚಾಡಿ ಹೇಳುತ್ತಲೂ ಅವರು ನಿಮ್ಮ ಮಧ್ಯೆ ಗೊಂದಲವುಂಟಾಗುವಂತೆ ಮಾಡುತ್ತಿದ್ದರು ಮತ್ತು ಸೈನಿಕರನ್ನು ಹಿಂಜರಿಯುವಂತೆ ಮಾಡಲು ಗರಿಷ್ಠ ಪ್ರಯತ್ನ ಮಾಡುತ್ತಿದ್ದರು ಎಂದರ್ಥ.

52. ಹೇಳಿರಿ: 'ನೀವು ನಮ್ಮ ಕುರಿತು (ಹುತಾತ್ಮತೆ ಅಥವಾ ವಿಜಯ ಎಂಬ) ಎರಡು ಉತ್ತಮ ಸಂಗತಿಗಳಲ್ಲಿ ಯಾವುದಾದರೂ ಒಂದನ್ನಲ್ಲದೆ ಇನ್ನೇನಾದರೂ ನಿರೀಕ್ಷಿಸುತ್ತಿರುವಿರಾ? ಆದರೆ ನಾವು ನಿಮ್ಮ ಕುರಿತು ಅಲ್ಲಾಹು ತನ್ನ ವತಿಯಿಂದ ನೇರವಾಗಿ ಅಥವಾ ನಮ್ಮ ಕೈಗಳ ಮೂಲಕ ಶಿಕ್ಷೆ ನೀಡುವನು ಎಂದು ನಿರೀಕ್ಷಿಸುತ್ತಿರುವೆವು. ಆದ್ದರಿಂದ ನೀವು ನಿರೀಕ್ಷಿಸುತ್ತಿರಿ. ನಾವೂ ನಿಮ್ಮೊಂದಿಗೆ ನಿರೀಕ್ಷಿಸುವವರಾಗಿರುವೆವು'.

قُلۡ هَلۡ تَرَبَّصُونَ بِنَآ إِلَّآ إِحۡدَى ٱلۡحُسۡنَيَيۡنِۖ وَنَحۡنُ نَتَرَبَّصُ بِكُمۡ أَن يُصِيبَكُمُ ٱللَّهُ بِعَذَابٖ مِّنۡ عِندِهِۦٓ أَوۡ بِأَيۡدِينَاۖ فَتَرَبَّصُوٓاْ إِنَّا مَعَكُم مُّتَرَبِّصُونَ ٥٢

53. ಹೇಳಿರಿ: 'ನೀವು ಸ್ವಇಚ್ಛೆಯಿಂದ ಅಥವಾ ಒಲ್ಲದ ಮನಸ್ಸಿನಿಂದ ವ್ಯಯಿಸಿರಿ. (ಹೇಗೆ ವ್ಯಯಿಸಿದರೂ) ನಿಮ್ಮಿಂದ ಅದು ಸ್ವೀಕಾರವಾಗಲಾರದು. ಖಂಡಿತವಾಗಿಯೂ ನೀವು ಧಿಕ್ಕಾರಿಗಳಾದ ಒಂದು ಜನತೆಯಾಗಿರುವಿರಿ'.

قُلۡ أَنفِقُواْ طَوۡعًا أَوۡ كَرۡهٗا لَّن يُتَقَبَّلَ مِنكُمۡ إِنَّكُمۡ كُنتُمۡ قَوۡمٗا فَٰسِقِينَ ٥٣

54. ಅವರಿಂದ ಅವರ ದಾನಗಳು ಸ್ವೀಕಾರವಾಗಲು ತಡೆಯಾಗಿರುವುದು ಅವರು ಅಲ್ಲಾಹುವಿನಲ್ಲೂ, ಅವನ ಸಂದೇಶವಾಹಕರಲ್ಲೂ ಅವಿಶ್ವಾಸವಿಟ್ಟಿರುವರು, ಸೋಮಾರಿಗಳಾಗಿಯೇ ವಿನಾ ನಮಾಝ್‌ ಮಾಡಲು ಹೊರಡಲಾರರು ಮತ್ತು ಒಲ್ಲದ ಮನಸ್ಸಿನಿಂದಲೇ ವಿನಾ ವ್ಯಯಿಸಲಾರರು ಎಂಬವುಗಳು ಮಾತ್ರವಾಗಿವೆ.

وَمَا مَنَعَهُمۡ أَن تُقۡبَلَ مِنۡهُمۡ نَفَقَٰتُهُمۡ إِلَّآ أَنَّهُمۡ كَفَرُواْ بِٱللَّهِ وَبِرَسُولِهِۦ وَلَا يَأۡتُونَ ٱلصَّلَوٰةَ إِلَّا وَهُمۡ كُسَالَىٰ وَلَا يُنفِقُونَ إِلَّا وَهُمۡ كَٰرِهُونَ ٥٤

55. ಅವರ ಸಂಪತ್ತುಗಳು ಮತ್ತು ಸಂತಾನಗಳು ತಮ್ಮನ್ನು ಅಚ್ಚರಿಗೊಳಿಸದಿರಲಿ. ಅಲ್ಲಾಹು ಇಚ್ಛಿಸುವುದು ಅವುಗಳ ಮೂಲಕ ಅವರನ್ನು ಇಹಲೋಕದಲ್ಲಿ ಶಿಕ್ಷಿಸಲು ಮತ್ತು ಸತ್ಯನಿಷೇಧಿಗಳಾಗಿಯೇ ಅವರು ತಮ್ಮ ಪ್ರಾಣ ಕಳೆದುಕೊಳ್ಳುವಂತೆ ಮಾಡಲು ಮಾತ್ರವಾಗಿದೆ.

فَلَا تُعۡجِبۡكَ أَمۡوَٰلُهُمۡ وَلَآ أَوۡلَٰدُهُمۡۚ إِنَّمَا يُرِيدُ ٱللَّهُ لِيُعَذِّبَهُم بِهَا فِي ٱلۡحَيَوٰةِ ٱلدُّنۡيَا وَتَزۡهَقَ أَنفُسُهُمۡ وَهُمۡ كَٰفِرُونَ ٥٥

56. ಅವರು ಅಲ್ಲಾಹುವಿನ ಮೇಲೆ ಆಣೆಯಿಟ್ಟು 'ಖಂಡಿತವಾಗಿಯೂ ಅವರು ನಿಮ್ಮಲ್ಲಿ ಸೇರಿದವರಾಗಿರುವರು'. ಎನ್ನುವರು. ಅವರು

وَيَحۡلِفُونَ بِٱللَّهِ إِنَّهُمۡ لَمِنكُمۡ وَمَا هُم مِّنكُمۡ وَلَٰكِنَّهُمۡ قَوۡمٞ يَفۡرَقُونَ ٥٦

ನಿಮ್ಮಲ್ಲಿ ಸೇರಿದವರಲ್ಲ; ಆದರೆ ಅವರು ಭಯಭೀತರಾಗಿರುವ ಒಂದು ಜನತೆ ಯಾಗಿರುವರು.

لَوۡ يَجِدُونَ مَلۡجَـًٔا أَوۡ مَغَٰرَٰتٍ أَوۡ مُدَّخَلٗا لَّوَلَّوۡاْ إِلَيۡهِ وَهُمۡ يَجۡمَحُونَ ٥٧

**57.** ಯಾವುದಾದರೂ ಆಶ್ರಯಸ್ಥಾನವನ್ನು, ಗುಹೆ ಗಳನ್ನು ಅಥವಾ ಪ್ರವೇಶಿಸಬಹುದಾದ ಸ್ಥಳವನ್ನು ಅವರು ಕಂಡರೆ ದೌಡಾಯಿಸುತ್ತಾ ಅವರು ಅದರೆಡೆಗೆ ತಿರುಗುವರು.

وَمِنۡهُم مَّن يَلۡمِزُكَ فِي ٱلصَّدَقَٰتِ فَإِنۡ أُعۡطُواْ مِنۡهَا رَضُواْ وَإِن لَّمۡ يُعۡطَوۡاْ مِنۡهَآ إِذَا هُمۡ يَسۡخَطُونَ ٥٨

**58.** ದಾನಧರ್ಮಗಳ ವಿಷಯದಲ್ಲಿ ತಮ್ಮನ್ನು ದೂಷಿಸುವ ಕೆಲವರು ಅವರಲ್ಲಿರುವರು. ಅವರಿಗೆ ಅದರಿಂದ ಏನಾದರೂ ನೀಡಲಾದರೆ ಅವರು ಸಂತೃಪ್ತರಾಗುವರು. ಅವರಿಗೆ ಅದರಿಂದ ಏನನ್ನೂ ನೀಡಲಾಗದಿದ್ದರೆ ಅಗೋ ಅವರು ಕೋಪಿಸಿಕೊಳ್ಳುವರು.

وَلَوۡ أَنَّهُمۡ رَضُواْ مَآ ءَاتَىٰهُمُ ٱللَّهُ وَرَسُولُهُۥ وَقَالُواْ حَسۡبُنَا ٱللَّهُ سَيُؤۡتِينَا ٱللَّهُ مِن فَضۡلِهِۦ وَرَسُولُهُۥٓ إِنَّآ إِلَى ٱللَّهِ رَٰغِبُونَ ٥٩

**59.** ಅಲ್ಲಾಹು ಮತ್ತು ಅವನ ಸಂದೇಶವಾಹಕರು ನೀಡಿರುವುದರಲ್ಲಿ ಸಂತೃಪ್ತರಾಗಿ, 'ನಮಗೆ ಅಲ್ಲಾಹು ಸಾಕು, ಅಲ್ಲಾಹುವಿನ ಅನುಗ್ರಹದಿಂದ ಅವನು ಮತ್ತು ಅವನ ಸಂದೇಶವಾಹಕರು ನಮಗೆ ನೀಡುವರು, ಖಂಡಿತವಾಗಿಯೂ ನಾವು ನಮ್ಮ ಅಪೇಕ್ಷೆಗಳನ್ನು ಮುಂದಿಡುವುದು ಅಲ್ಲಾಹುವಿನೆಡೆಗೆ ಆಗಿದೆ' ಎಂದು ಅವರು ಹೇಳುತ್ತಿದ್ದರೆ (ಎಷ್ಟು ಚೆನ್ನಾಗಿರುತ್ತಿತ್ತು!)

۞إِنَّمَا ٱلصَّدَقَٰتُ لِلۡفُقَرَآءِ وَٱلۡمَسَٰكِينِ وَٱلۡعَٰمِلِينَ عَلَيۡهَا وَٱلۡمُؤَلَّفَةِ قُلُوبُهُمۡ وَفِي ٱلرِّقَابِ وَٱلۡغَٰرِمِينَ وَفِي سَبِيلِ ٱللَّهِ وَٱبۡنِ ٱلسَّبِيلِۖ فَرِيضَةٗ مِّنَ ٱللَّهِۗ وَٱللَّهُ عَلِيمٌ حَكِيمٞ ٦٠

**60.** ಝಕಾತ್ (ನೀಡಬೇಕಾದುದು) ಬಡವರಿಗೆ, ನಿರ್ಗತಿಕರಿಗೆ, ಅದಕ್ಕಾಗಿ ಕಾರ್ಯನಿರ್ವಹಿಸುವವರಿಗೆ,(1) (ಇಸ್ಲಾಮ್ ಧರ್ಮದೊಂದಿಗೆ) ಹೃದಯಗಳನ್ನು ಬೆಸೆಯಲ್ಪಟ್ಟವರಿಗೆ, ಗುಲಾಮ ವಿಮೋಚನೆಗೆ, ಸಾಲದಿಂದಾಗಿ ಕಷ್ಟಪಡುವವರಿಗೆ, ಅಲ್ಲಾಹುವಿನ ಮಾರ್ಗದಲ್ಲಿ

1 ಝಕಾತನ್ನು ಸಂಗ್ರಹಿಸಿ ವಿತರಣೆ ಮಾಡುವವರಿಗೂ ಅದರಲ್ಲಿ ಒಂದು ಪಾಲನ್ನು ಪಡೆಯುವ ಹಕ್ಕಿದೆ. ಝಕಾತನ್ನು ಪ್ರತಿಯೊಬ್ಬ ಶ್ರೀಮಂತನೂ ನೇರವಾಗಿ ನೀಡುವುದಲ್ಲ; ಬದಲಾಗಿ ಝಕಾತನ್ನು ಸಾಮೂಹಿಕವಾಗಿ ಸಂಗ್ರಹಿಸಿ ವ್ಯವಸ್ಥಿತವಾಗಿ ವಿತರಣೆ ಮಾಡುವ ವಿಧಾನವನ್ನು ಇಸ್ಲಾಮ್ ಪ್ರತಿಪಾದಿಸುತ್ತಿದೆಯೆಂದು ಈ ಸೂಕ್ತಿಯಿಂದ ಗ್ರಹಿಸಬಹುದಾಗಿದೆ.

ಮತ್ತು ದಾರಿಹೋಕರಿಗೆ[1] ಮಾತ್ರವಾಗಿದೆ. ಇದು ಅಲ್ಲಾಹುವಿನ ವತಿಯ ನಿರ್ಣಯವಾಗಿದೆ. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَمِنْهُمُ ٱلَّذِينَ يُؤْذُونَ ٱلنَّبِيَّ وَيَقُولُونَ هُوَ أُذُنٌۚ قُلْ أُذُنُ خَيْرٍ لَّكُمْ يُؤْمِنُ بِٱللَّهِ وَيُؤْمِنُ لِلْمُؤْمِنِينَ وَرَحْمَةٌ لِّلَّذِينَ ءَامَنُواْ مِنكُمْۚ وَٱلَّذِينَ يُؤْذُونَ رَسُولَ ٱللَّهِ لَهُمْ عَذَابٌ أَلِيمٌ ﴿٦١﴾

61. ಪ್ರವಾದಿಗೆ ಕಿರುಕುಳ ಕೊಡುವವರು ಮತ್ತು ಅವರು ಎಲ್ಲವನ್ನೂ ಕಿವಿಗೊಟ್ಟು ಆಲಿಸುತ್ತಾರೆ ಎಂದು ಹೇಳುವವರು ಅವರಲ್ಲಿರುವರು. ತಾವು ಹೇಳಿರಿ: 'ಅವರು ನಿಮಗೆ ಒಳಿತಾಗಿರುವುದನ್ನು ಕಿವಿಗೊಟ್ಟು ಆಲಿಸುತ್ತಾರೆ.' ಅವರು ಅಲ್ಲಾಹುವಿನಲ್ಲಿ ವಿಶ್ವಾಸವಿಡುವರೂ, ನೈಜ ವಿಶ್ವಾಸಿಗಳಲ್ಲಿ ವಿಶ್ವಾಸವಿಡುವವರೂ ಆಗಿರುವರು. ಅವರು ನಿಮ್ಮ ಪೈಕಿ ವಿಶ್ವಾಸವಿಟ್ಟವರಿಗೆ ಒಂದು ಅನುಗ್ರಹವಾಗಿರುವರು. ಅಲ್ಲಾಹುವಿನ ಸಂದೇಶವಾಹಕರಿಗೆ ಕಿರುಕುಳ ಕೊಡುವವರು ಯಾರೋ ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು.

يَحْلِفُونَ بِٱللَّهِ لَكُمْ لِيُرْضُوكُمْ وَٱللَّهُ وَرَسُولُهُۥٓ أَحَقُّ أَن يُرْضُوهُ إِن كَانُواْ مُؤْمِنِينَ ﴿٦٢﴾

62. ನಿಮ್ಮನ್ನು ತೃಪ್ತಿಪಡಿಸುವುದಕ್ಕಾಗಿ ಅವರು ಅಲ್ಲಾಹುವಿನ ಹೆಸರಲ್ಲಿ ಆಣೆ ಹಾಕಿ ನಿಮ್ಮೊಂದಿಗೆ ಮಾತನಾಡುವರು. ಆದರೆ ಅವರು ಸತ್ಯವಿಶ್ವಾಸಿಗಳಾಗಿದ್ದರೆ ಅವರು ತೃಪ್ತಿಪಡಿಸಲು ಹೆಚ್ಚು ಹಕ್ಕಿರುವವರು ಅಲ್ಲಾಹು ಮತ್ತು ಅವನ ಸಂದೇಶವಾಹಕರಾಗಿರುವರು.

أَلَمْ يَعْلَمُوٓاْ أَنَّهُۥ مَن يُحَادِدِ ٱللَّهَ وَرَسُولَهُۥ فَأَنَّ لَهُۥ نَارَ جَهَنَّمَ خَٰلِدًا فِيهَاۚ ذَٰلِكَ ٱلْخِزْيُ ٱلْعَظِيمُ ﴿٦٣﴾

63. ಯಾರಾದರೂ ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುವುದಾದರೆ ಅವನಿಗಿರುವುದು ನರಕಾಗ್ನಿಯಾಗಿದೆ ಮತ್ತು ಅವನದರಲ್ಲಿ ಶಾಶ್ವತವಾಗಿ ವಾಸಿಸುವನು ಎಂಬುದನ್ನು ಅವರು ಅರಿಯಲಾರರೇ? ಮಹಾ ಅಪಮಾನವು ಅದೇ ಆಗಿದೆ.

يَحْذَرُ ٱلْمُنَٰفِقُونَ أَن تُنَزَّلَ عَلَيْهِمْ سُورَةٌ

64. ಅವರಿಗೆ ಅವರ ಹೃದಯಗಳಲ್ಲಿರುವುದನ್ನು ತಿಳಿಸಿಕೊಡುವ (ಕುರ್‌ಆನ್‌ನ)

1 ಊರಿನಿಂದ ಹೊರಟು ಕೈಯಲ್ಲಿ ಏನೂ ಇಲ್ಲದೆ ಕಷ್ಟಪಡುವವರೆಲ್ಲರೂ ಇದರ ವ್ಯಾಪ್ತಿಯಲ್ಲಿ ಸೇರುತ್ತಾರೆ.

تُنَبِّئُهُم بِمَا فِي قُلُوبِهِمْۚ قُلِ ٱسْتَهْزِءُوٓاْ إِنَّ ٱللَّهَ مُخْرِجٞ مَّا تَحْذَرُونَ ٦٤

ಯಾವುದಾದರೂ ಒಂದು ಅಧ್ಯಾಯವು ಅವರ ವಿಷಯದಲ್ಲಿ ಅವತೀರ್ಣಗೊಳ್ಳಬಹುದೋ ಎಂದು ಕಪಟವಿಶ್ವಾಸಿಗಳು ಭಯಪಡುವರು. ತಾವು ಹೇಳಿರಿ: 'ನೀವು ಗೇಲಿ ಮಾಡಿರಿ. ನೀವು ಭಯಪಡುತ್ತಿರುವುದನ್ನು ಖಂಡಿತವಾಗಿಯೂ ಅಲ್ಲಾಹು ಬಹಿರಂಗಗೊಳಿಸುವನು'.

وَلَئِن سَأَلْتَهُمْ لَيَقُولُنَّ إِنَّمَا كُنَّا نَخُوضُ وَنَلْعَبُۚ قُلْ أَبِٱللَّهِ وَءَايَٰتِهِۦ وَرَسُولِهِۦ كُنتُمْ تَسْتَهْزِءُونَ ٦٥

65. (ಅದರ ಕುರಿತು) ತಾವು ಅವರೊಂದಿಗೆ ಪ್ರಶ್ನಿಸಿದರೆ ಅವರು ಹೇಳುವರು: 'ನಾವು ಹಾಸ್ಯ ಹೇಳುತ್ತಾ ಆಟವಾಡುತ್ತಿದ್ದುದು ಮಾತ್ರವಾಗಿತ್ತು'. ತಾವು ಹೇಳಿರಿ: ' ನೀವು ಗೇಲಿ ಮಾಡುತ್ತಿರುವುದು ಅಲ್ಲಾಹುವನ್ನು, ಅವನ ದೃಷ್ಟಾಂತಗಳನ್ನು ಮತ್ತು ಅವನ ಸಂದೇಶವಾಹಕರನ್ನೇ?

لَا تَعْتَذِرُواْ قَدْ كَفَرْتُم بَعْدَ إِيمَٰنِكُمْۚ إِن نَّعْفُ عَن طَآئِفَةٖ مِّنكُمْ نُعَذِّبْ طَآئِفَةَۢ بِأَنَّهُمْ كَانُواْ مُجْرِمِينَ ٦٦

66. ನೆಪಗಳನ್ನು ಹೇಳದಿರಿ. ವಿಶ್ವಾಸವಿಟ್ಟ ಬಳಿಕ ನೀವು ಅವಿಶ್ವಾಸವಿಟ್ಟಿರುವಿರಿ. ನಿಮ್ಮ ಪೈಕಿ ಒಂದು ಗುಂಪಿಗೆ ನಾವು ಕ್ಷಮೆ ನೀಡಿದರೆ ಇನ್ನೊಂದು ಗುಂಪನ್ನು ನಾವು ಶಿಕ್ಷಿಸುವೆವು. ಯಾಕೆಂದರೆ ಅವರು ಅಪರಾಧಿಗಳಾಗಿರುವರು.

ٱلْمُنَٰفِقُونَ وَٱلْمُنَٰفِقَٰتُ بَعْضُهُم مِّنۢ بَعْضٖۚ يَأْمُرُونَ بِٱلْمُنكَرِ وَيَنْهَوْنَ عَنِ ٱلْمَعْرُوفِ وَيَقْبِضُونَ أَيْدِيَهُمْۚ نَسُواْ ٱللَّهَ فَنَسِيَهُمْۚ إِنَّ ٱلْمُنَٰفِقِينَ هُمُ ٱلْفَٰسِقُونَ ٦٧

67. ಕಪಟವಿಶ್ವಾಸಿಗಳು ಮತ್ತು ಕಪಟವಿಶ್ವಾಸಿನಿಯರೆಲ್ಲರೂ ಒಂದೇ ವಿಧದವರಾಗಿರುವರು. ಅವರು ದುರಾಚಾರವನ್ನು ಆದೇಶಿಸುವವರೂ, ಸದಾಚಾರವನ್ನು ವಿರೋಧಿಸುವವರೂ, ತಮ್ಮ ಕೈಗಳನ್ನು ಹಿಂದಕ್ಕೆಳೆಯುವವರೂ ಆಗಿರುವರು.[1] ಅವರು ಅಲ್ಲಾಹುವನ್ನು ಮರೆತುಬಿಟ್ಟಿರುವರು. ಆದ್ದರಿಂದ ಅವನು ಕೂಡ ಅವರನ್ನು ಮರೆತುಬಿಟ್ಟಿರುವನು. ಖಂಡಿತವಾಗಿಯೂ ಕಪಟವಿಶ್ವಾಸಿಗಳೇ ಧಿಕ್ಕಾರಿಗಳಾಗಿರುವರು.

1 ಅವರು ಕಡು ಜಿಪುಣರಾಗಿರುವರು ಎಂದರ್ಥ.

**68.** ಅಲ್ಲಾಹು ಕಪಟವಿಶ್ವಾಸಿಗಳಿಗೂ, ಕಪಟವಿಶ್ವಾಸಿನಿಯರಿಗೂ, ಸತ್ಯನಿಷೇಧಿಗಳಿಗೂ ನರಕಾಗ್ನಿಯನ್ನು ವಾಗ್ದಾನ ಮಾಡಿರುವನು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. ಅವರಿಗದು ಸಾಕು. ಅಲ್ಲಾಹು ಅವರನ್ನು ಶಪಿಸಿರುವನು. ಅವರಿಗೆ ಶಾಶ್ವತವಾದ ಶಿಕ್ಷೆಯೂ ಇರುವುದು.

وَعَدَ ٱللَّهُ ٱلْمُنَٰفِقِينَ وَٱلْمُنَٰفِقَٰتِ
وَٱلْكُفَّارَ نَارَ جَهَنَّمَ خَٰلِدِينَ فِيهَا ۚ هِىَ
حَسْبُهُمْ ۚ وَلَعَنَهُمُ ٱللَّهُ ۖ وَلَهُمْ عَذَابٌ
مُّقِيمٌ ﴿٦٨﴾

**69.** ನಿಮಗಿಂತ ಮುಂಚಿನವರಂತೆಯೇ. ಅವರು ನಿಮಗಿಂತಲೂ ಹೆಚ್ಚು ಬಲಶಾಲಿಗಳಾಗಿದ್ದರು ಮತ್ತು ಯಥೇಷ್ಟ ಸಂಪತ್ತುಗಳನ್ನೂ, ಸಂತತಿಗಳನ್ನೂ ಹೊಂದಿದವರಾಗಿದ್ದರು. ಅವರು ತಮ್ಮ ಪಾಲಿನೊಂದಿಗೆ ಸುಖ ಅನುಭವಿಸಿದರು. ನಿಮ್ಮ ಪೂರ್ವಿಕರು ತಮ್ಮ ಪಾಲಿನೊಂದಿಗೆ ಸುಖ ಅನುಭವಿಸಿದಂತೆಯೇ ಈಗ ನೀವೂ ಸಹ ನಿಮ್ಮ ಪಾಲಿನೊಂದಿಗೆ ಸುಖ ಅನುಭವಿಸಿದಿರಿ. ಅವರು (ಅಧರ್ಮದಲ್ಲಿ) ನಿರತರಾದಂತೆಯೇ ನೀವೂ ನಿರತರಾದಿರಿ. ಇಹಲೋಕದಲ್ಲೂ, ಪರಲೋಕದಲ್ಲೂ ಅಂತಹವರ ಕರ್ಮಗಳೆಲ್ಲವೂ ನಿಷ್ಫಲವಾಗಿವೆ. ನಷ್ಟ ಹೊಂದಿದವರು ಅವರೇ ಆಗಿರುವರು.

كَٱلَّذِينَ مِن قَبْلِكُمْ كَانُوٓا۟ أَشَدَّ مِنكُمْ
قُوَّةً وَأَكْثَرَ أَمْوَٰلًا وَأَوْلَٰدًا فَٱسْتَمْتَعُوا۟
بِخَلَٰقِهِمْ فَٱسْتَمْتَعْتُم بِخَلَٰقِكُمْ كَمَا
ٱسْتَمْتَعَ ٱلَّذِينَ مِن قَبْلِكُم بِخَلَٰقِهِمْ
وَخُضْتُمْ كَٱلَّذِى خَاضُوٓا۟ ۚ أُو۟لَٰٓئِكَ حَبِطَتْ
أَعْمَٰلُهُمْ فِى ٱلدُّنْيَا وَٱلْءَاخِرَةِ ۖ وَأُو۟لَٰٓئِكَ هُمُ
ٱلْخَٰسِرُونَ ﴿٦٩﴾

**70.** ಅವರ ಮುಂಚಿನವರ ವೃತ್ತಾಂತವು ಅವರ ಬಳಿಗೆ ಬಂದಿಲ್ಲವೇ? ನೂಹ್‌ರ ಜನಾಂಗದವರ, ಆದ್, ಸಮೂದ್ ಜನಾಂಗಗಳ, ಇಬ್ರಾಹೀಮ್‌ರ ಜನತೆಯ, ಮದ್‌ಯನ್‌ನವರ ಮತ್ತು ಬುಡಮೇಲುಗೊಳಿಸಲಾದ ದೇಶದವರ[1] (ವೃತ್ತಾಂತ)? ಅವರ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಿದ್ದರು. ಆಗ ಅಲ್ಲಾಹು ಅವರೊಂದಿಗೆ ಯಾವುದೇ ಅನ್ಯಾಯವೆಸಗಿರಲಿಲ್ಲ. ಆದರೆ

أَلَمْ يَأْتِهِمْ نَبَأُ ٱلَّذِينَ مِن قَبْلِهِمْ قَوْمِ نُوحٍ
وَعَادٍ وَثَمُودَ وَقَوْمِ إِبْرَٰهِيمَ وَأَصْحَٰبِ
مَدْيَنَ وَٱلْمُؤْتَفِكَٰتِ ۚ أَتَتْهُمْ رُسُلُهُم
بِٱلْبَيِّنَٰتِ ۖ فَمَا كَانَ ٱللَّهُ لِيَظْلِمَهُمْ
وَلَٰكِن كَانُوٓا۟ أَنفُسَهُمْ يَظْلِمُونَ ﴿٧٠﴾

1 ಪ್ರವಾದಿ ಲೂತ್(عَلَيْهِ السَّلَامُ) ರವರ ಜನತೆಯು ವಾಸವಾಗಿದ್ದ ಸೊದೋಮ್ ಪ್ರಾಂತ್ಯವನ್ನು ಅಲ್ಲಾಹುವಿನ ಶಿಕ್ಷೆಯ ನಿಮಿತ್ತ ಬುಡಮೇಲುಗೊಳಿಸಲಾಗಿತ್ತು.

ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದರು.

71. ಸತ್ಯವಿಶ್ವಾಸಿಗಳು ಮತ್ತು ಸತ್ಯವಿಶ್ವಾಸಿನಿಯರು ಪರಸ್ಪರ ಮಿತ್ರರಾಗಿರುವರು. ಅವರು ಸದಾಚಾರವನ್ನು ಆದೇಶಿಸುವವರೂ, ದುರಾಚಾರವನ್ನು ವಿರೋಧಿಸುವವರೂ, ನಮಾಝನ್ನು ಸಂಸ್ಥಾಪಿಸುವವರೂ, ಝಕಾತನ್ನು ನೀಡುವವರೂ, ಅಲ್ಲಾಹುವನ್ನು ಹಾಗೂ ಅವನ ಸಂದೇಶವಾಹಕರನ್ನು ಅನುಸರಿಸುವವರೂ ಆಗಿರುವರು. ಅಂತಹವರಿಗೆ ಅಲ್ಲಾಹು ಕರುಣೆ ತೋರುವನು. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

وَٱلۡمُؤۡمِنُونَ وَٱلۡمُؤۡمِنَٰتُ بَعۡضُهُمۡ أَوۡلِيَآءُ بَعۡضٖۚ يَأۡمُرُونَ بِٱلۡمَعۡرُوفِ وَيَنۡهَوۡنَ عَنِ ٱلۡمُنكَرِ وَيُقِيمُونَ ٱلصَّلَوٰةَ وَيُؤۡتُونَ ٱلزَّكَوٰةَ وَيُطِيعُونَ ٱللَّهَ وَرَسُولَهُۥٓۚ أُوْلَٰٓئِكَ سَيَرۡحَمُهُمُ ٱللَّهُۗ إِنَّ ٱللَّهَ عَزِيزٌ حَكِيمٞ ٧١

72. ಅಲ್ಲಾಹು ಸತ್ಯವಿಶ್ವಾಸಿಗಳಿಗೆ ಮತ್ತು ಸತ್ಯವಿಶ್ವಾಸಿನಿಯರಿಗೆ ತಳಭಾಗದಿಂದ ನದಿಗಳು ಹರಿಯುವಂತಹ ಸ್ವರ್ಗೋದ್ಯಾನಗಳನ್ನು ವಾಗ್ದಾನ ಮಾಡಿರುವನು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಶಾಶ್ವತವಾಸಕ್ಕಿರುವ ತೋಟಗಳಲ್ಲಿ ವಿಶಿಷ್ಟವಾದ ಭವನಗಳನ್ನೂ (ವಾಗ್ದಾನ ಮಾಡಿರುವನು). ಆದರೆ ಅಲ್ಲಾಹುವಿನ ವತಿಯ ಸಂತೃಪ್ತಿಯು ಅತಿಹಿರಿದಾಗಿದೆ. ಮಹಾ ವಿಜಯವು ಅದೇ ಆಗಿದೆ.

وَعَدَ ٱللَّهُ ٱلۡمُؤۡمِنِينَ وَٱلۡمُؤۡمِنَٰتِ جَنَّٰتٖ تَجۡرِي مِن تَحۡتِهَا ٱلۡأَنۡهَٰرُ خَٰلِدِينَ فِيهَا وَمَسَٰكِنَ طَيِّبَةٗ فِي جَنَّٰتِ عَدۡنٖۚ وَرِضۡوَٰنٞ مِّنَ ٱللَّهِ أَكۡبَرُۚ ذَٰلِكَ هُوَ ٱلۡفَوۡزُ ٱلۡعَظِيمُ ٧٢

73. ಓ ಪ್ರವಾದಿಯವರೇ! ಸತ್ಯನಿಷೇಧಿಗಳೊಂದಿಗೆ ಮತ್ತು ಕಪಟವಿಶ್ವಾಸಿಗಳೊಂದಿಗೆ ಯುದ್ಧ ಮಾಡಿರಿ. ಅವರೊಂದಿಗೆ ಒರಟಾಗಿ ವರ್ತಿಸಿರಿ. ಅವರ ವಾಸಸ್ಥಳವು ನರಕವಾಗಿದೆ. ತಲುಪಲಿಕ್ಕಿರುವ ಆ ಸ್ಥಳವು ಎಷ್ಟು ನಿಕೃಷ್ಟವಾದುದು!

يَٰٓأَيُّهَا ٱلنَّبِيُّ جَٰهِدِ ٱلۡكُفَّارَ وَٱلۡمُنَٰفِقِينَ وَٱغۡلُظۡ عَلَيۡهِمۡۚ وَمَأۡوَىٰهُمۡ جَهَنَّمُۖ وَبِئۡسَ ٱلۡمَصِيرُ ٧٣

74. ನಾವು (ಆ ರೀತಿ) ಹೇಳಿರಲಿಲ್ಲವೆಂದು ಅವರು ಅಲ್ಲಾಹುವಿನ ಮೇಲೆ ಆಣೆಯಿಟ್ಟು

يَحۡلِفُونَ بِٱللَّهِ مَا قَالُواْ وَلَقَدۡ قَالُواْ كَلِمَةَ

ٱلۡكُفۡرِ وَكَفَرُواْ بَعۡدَ إِسۡلَٰمِهِمۡ وَهَمُّواْ بِمَا لَمۡ يَنَالُواْۚ وَمَا نَقَمُوٓاْ إِلَّآ أَنۡ أَغۡنَىٰهُمُ ٱللَّهُ وَرَسُولُهُۥ مِن فَضۡلِهِۦۚ فَإِن يَتُوبُواْ يَكُ خَيۡرٗا لَّهُمۡۖ وَإِن يَتَوَلَّوۡاْ يُعَذِّبۡهُمُ ٱللَّهُ عَذَابًا أَلِيمٗا فِي ٱلدُّنۡيَا وَٱلۡأٓخِرَةِۚ وَمَا لَهُمۡ فِي ٱلۡأَرۡضِ مِن وَلِيّٖ وَلَا نَصِيرٖ ٧٤

ಹೇಳುವರು.[1] ಖಂಡಿತವಾಗಿಯೂ ಅವರು ಅವಿಶ್ವಾಸದ ಮಾತನ್ನು ಆಡಿರುವರು, ಇಸ್ಲಾಮನ್ನು ಸ್ವೀಕರಿಸಿದ ಬಳಿಕ ಅವರು ಅವಿಶ್ವಾಸಿಗಳಾಗಿರುವರು. ತಮಗೆ ಸಾಧಿಸಲು ಸಾಧ್ಯವಾಗದ ಸಂಗತಿಗಾಗಿ[2] ಅವರು ಚಿಂತನೆ ನಡೆಸಿದ್ದರು. ಅಲ್ಲಾಹು ತನ್ನ ಅನುಗ್ರಹದಿಂದ ಸ್ವತಃ ಅವನು ಮತ್ತು ಅವನ ಸಂದೇಶವಾಹಕರು ಅವರಿಗೆ ಐಶ್ವರ್ಯವನ್ನು ನೀಡಿದರು ಎಂಬುದರ ಹೊರತು ಅವರ ವಿರೋಧಕ್ಕೆ ಇನ್ನಾವುದೇ ಕಾರಣವಿರಲಿಲ್ಲ. ಆದ್ದರಿಂದ ಅವರೇನಾದರೂ ಪಶ್ಚಾತ್ತಾಪಪಡುವುದಾದರೆ ಅದು ಅವರಿಗೆ ಒಳಿತಾಗಿದೆ. ಅವರೇನಾದರೂ ವಿಮುಖರಾಗುವುದಾದರೆ ಇಹಲೋಕದಲ್ಲೂ, ಪರಲೋಕದಲ್ಲೂ ಅಲ್ಲಾಹು ಅವರನ್ನು ಯಾತನಾಮಯವಾದ ಶಿಕ್ಷೆಯೊಂದಿಗೆ ಶಿಕ್ಷಿಸುವನು. ಭೂಮಿಯಲ್ಲಿ ಅವರಿಗೆ ಮಿತ್ರರಾಗಿ ಮತ್ತು ಸಹಾಯಕರಾಗಿ ಯಾರೂ ಇರಲಾರರು.

۞وَمِنۡهُم مَّنۡ عَٰهَدَ ٱللَّهَ لَئِنۡ ءَاتَىٰنَا مِن فَضۡلِهِۦ لَنَصَّدَّقَنَّ وَلَنَكُونَنَّ مِنَ ٱلصَّٰلِحِينَ ٧٥

75. ‘ಅಲ್ಲಾಹು ತನ್ನ ಅನುಗ್ರಹದಿಂದ ನಮಗೆ ನೀಡುವುದಾದರೆ ಖಂಡಿತವಾಗಿಯೂ ನಾವು ದಾನಧರ್ಮ ಮಾಡುವೆವು ಮತ್ತು ಸಜ್ಜನರ ಪೈಕಿ ಸೇರಿದವರಾಗುವೆವು’ ಎಂದು ಅಲ್ಲಾಹುವಿನೊಂದಿಗೆ ಕರಾರು ಮಾಡಿದ ಕೆಲವರು ಅವರಲ್ಲಿರುವರು.

فَلَمَّآ ءَاتَىٰهُم مِّن فَضۡلِهِۦ بَخِلُواْ بِهِۦ وَتَوَلَّواْ وَّهُم مُّعۡرِضُونَ ٧٦

76. ತರುವಾಯ ಅವನು ಅವರಿಗೆ ತನ್ನ ಅನುಗ್ರಹದಿಂದ ನೀಡಿದಾಗ ಅವರದರಲ್ಲಿ ಜಿಪುಣತೆ ತೋರಿದರು ಮತ್ತು ನಿರ್ಲಕ್ಷಿಸುವವರಾಗಿ ವಿಮುಖರಾದರು.

فَأَعۡقَبَهُمۡ نِفَاقٗا فِي قُلُوبِهِمۡ إِلَىٰ يَوۡمِ يَلۡقَوۡنَهُۥ

77. ಅವರು ಅವನನ್ನು ಭೇಟಿಯಾಗುವ ದಿನದವರೆಗೂ (ನ್ಯಾಯವಿಚಾರಣೆಯ

1 ಇಲ್ಲಿ ಸೂಚಿಸಿರುವುದು ಪ್ರವಾದಿ(ﷺ) ರವರನ್ನು ಅಪಹಾಸ್ಯ ಮಾಡಿ ಮಾತನಾಡಿದ ಮತ್ತು ಅದರ ಕುರಿತು ವಿಚಾರಿಸಲ್ಪಟ್ಟಾಗ ಅದನ್ನು ನಿರಾಕರಿಸಿದ ಕೆಲವು ಕಪಟವಿಶ್ವಾಸಿಗಳ ಕುರಿತಾಗಿದೆ.

2 ತಬೂಕ್‌ನಿಂದ ಮರಳಿ ಬರುವಾಗ ಪ್ರವಾದಿ (ﷺ)ರವರಿಗೆ ಗಂಡಾಂತರವನ್ನುಂಟು ಮಾಡಲು ಯತ್ನಿಸಿದ ಕೆಲವು ಕಪಟವಿಶ್ವಾಸಿಗಳ ಕುರಿತು ಈ ಸೂಕ್ತಿಯು ಅವತೀರ್ಣಗೊಂಡಿದೆಯೆಂದು ಕೆಲವು ಹದೀಸ್‌ಗಳಲ್ಲಿ ಬಂದಿದೆ.

بِمَآ أَخۡلَفُواْ ٱللَّهَ مَا وَعَدُوهُ وَبِمَا كَانُواْ يَكۡذِبُونَ ٧٧

ದಿನದವರೆಗೂ) ಅವರ ಹೃದಯಗಳಲ್ಲಿ ಕಾಪಟ್ಯವಿರುವುದು ಎಂಬುದನ್ನು ಅದರ ಅನಂತರ ಫಲವಾಗಿ ಅವನು ಅವರಿಗೆ ನೀಡಿದನು. ಇದು ಅವರು ಅಲ್ಲಾಹುವಿನೊಂದಿಗೆ ಮಾಡಿದ ವಾಗ್ದಾನವನ್ನು ಉಲ್ಲಂಘಿಸಿರುವುದರಿಂದ ಮತ್ತು ಸುಳ್ಳು ನುಡಿದಿರುವುದರಿಂದಾಗಿದೆ.

أَلَمۡ يَعۡلَمُوٓاْ أَنَّ ٱللَّهَ يَعۡلَمُ سِرَّهُمۡ وَنَجۡوَىٰهُمۡ وَأَنَّ ٱللَّهَ عَلَّٰمُ ٱلۡغُيُوبِ ٧٨

**78.** ಅವರ ರಹಸ್ಯವನ್ನು ಮತ್ತು ಗುಪ್ತ ಸಂಭಾಷಣೆಯನ್ನು ಅಲ್ಲಾಹು ಅರಿಯುತ್ತಿರುವನು ಎಂಬುದನ್ನು ಮತ್ತು ಅಲ್ಲಾಹು ಅಗೋಚರ ವಿಷಯಗಳನ್ನು ಚೆನ್ನಾಗಿ ಅರಿಯುವವನಾಗಿರುವನು ಎಂಬುದನ್ನು ಅವರು ಅರಿತಿಲ್ಲವೇ?

ٱلَّذِينَ يَلۡمِزُونَ ٱلۡمُطَّوِّعِينَ مِنَ ٱلۡمُؤۡمِنِينَ فِي ٱلصَّدَقَٰتِ وَٱلَّذِينَ لَا يَجِدُونَ إِلَّا جُهۡدَهُمۡ فَيَسۡخَرُونَ مِنۡهُمۡ سَخِرَ ٱللَّهُ مِنۡهُمۡ وَلَهُمۡ عَذَابٌ أَلِيمٌ ٧٩

**79.** ಸತ್ಯವಿಶ್ವಾಸಿಗಳ ಪೈಕಿ ದಾನಧರ್ಮ ಮಾಡಲು ಸ್ವಇಚ್ಛೆಯಿಂದ ಮುಂದೆ ಬರುವವರ[1] ಕುರಿತು ಮತ್ತು (ದಾನಧರ್ಮವಾಗಿ ನೀಡಲು) ತಮ್ಮ ಪರಿಶ್ರಮವನ್ನಲ್ಲದೆ ಬೇರೇನನ್ನೂ ಕಾಣದವರನ್ನು ಅವರು ದೂಷಿಸುವರು. ಹೀಗೆ ಅವರು ಆ ವಿಶ್ವಾಸಿಗಳನ್ನು ಅಪಹಾಸ್ಯ ಮಾಡುತ್ತಿರುವರು. ಅಲ್ಲಾಹು ಅವರನ್ನೂ ಅಪಹಾಸ್ಯ ಮಾಡಿರುವನು. ಅವರಿಗೆ ಯಾತನಾಮಯ ಶಿಕ್ಷೆಯಿರುವುದು.

ٱسۡتَغۡفِرۡ لَهُمۡ أَوۡ لَا تَسۡتَغۡفِرۡ لَهُمۡ إِن تَسۡتَغۡفِرۡ لَهُمۡ سَبۡعِينَ مَرَّةٗ فَلَن يَغۡفِرَ ٱللَّهُ لَهُمۡۚ ذَٰلِكَ بِأَنَّهُمۡ كَفَرُواْ بِٱللَّهِ وَرَسُولِهِۦۗ وَٱللَّهُ لَا يَهۡدِي ٱلۡقَوۡمَ ٱلۡفَٰسِقِينَ ٨٠

**80.** (ಓ ಪ್ರವಾದಿಯವರೇ!) ತಾವು ಅವರಿಗೋಸ್ಕರ ಪಾಪಮುಕ್ತಿಯನ್ನು ಬೇಡಿರಿ ಅಥವಾ ಅವರಿಗೋಸ್ಕರ ಪಾಪಮುಕ್ತಿಯನ್ನು ಬೇಡದಿರಿ. ತಾವು ಅವರಿಗೋಸ್ಕರ ಎಪ್ಪತ್ತು ಬಾರಿ ಪಾಪಮುಕ್ತಿಯನ್ನು ಬೇಡಿದರೂ ಅಲ್ಲಾಹು ಅವರನ್ನು ಕ್ಷಮಿಸಲಾರನು. ಅದು ಅವರು ಅಲ್ಲಾಹುವಿನಲ್ಲೂ, ಅವನ ಸಂದೇಶವಾಹಕರಲ್ಲೂ ಅವಿಶ್ವಾಸವಿಟ್ಟ

1 ಮಹಾತ್ಮರಾದ ಸಹಾಬಿಗಳು ತಮ್ಮ ಸಂಪತ್ತನ್ನು ಪೂರ್ಣವಾಗಿ ಅಥವಾ ಭಾಗಶಃ ಅಲ್ಲಾಹುವಿನ ಮಾರ್ಗದಲ್ಲಿ ದಾನ ಮಾಡುವಾಗ ಅವೆಲ್ಲವೂ ಜನರಿಗೆ ತೋರಿಸುವ ಸಲುವಾಗಿದೆ ಎಂದು ಕಪಟ ವಿಶ್ವಾಸಿಗಳು ದೂಷಿಸುತ್ತಿದ್ದರು.

ಕಾರಣದಿಂದಾಗಿದೆ. ಧಿಕ್ಕಾರಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

**81.** (ಯುದ್ಧಕ್ಕಾಗಿ ಹೊರಡದೆ) ಹಿಂದೆಯೇ ಉಳಿದವರು ಅಲ್ಲಾಹುವಿನ ಸಂದೇಶವಾಹಕರ ಆದೇಶಕ್ಕೆ ವಿರುದ್ಧವಾಗಿರುವ ತಮ್ಮ ಆ ಕೂರುವಿಕೆಯಲ್ಲಿ ಸಂಭ್ರಮಿಸಿದರು. ತಮ್ಮ ಸಂಪತ್ತುಗಳಿಂದ ಮತ್ತು ಶರೀರಗಳಿಂದ ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುವುದನ್ನು ಅವರು ಅಸಹ್ಯಪಟ್ಟಿರುವರು. ಅವರು ಹೇಳಿದರು: 'ಈ ಉರಿ ಬಿಸಿಲಿನಲ್ಲಿ ನೀವು ಹೊರಡದಿರಿ'. ಹೇಳಿರಿ: 'ನರಕಾಗ್ನಿಯು ಅತಿಕಠಿಣ ಉರಿಯನ್ನು ಹೊಂದಿದೆ.'. ಅವರದನ್ನು ಗ್ರಹಿಸುವವರಾಗಿರುತ್ತಿದ್ದರೆ!

فَرِحَ ٱلۡمُخَلَّفُونَ بِمَقۡعَدِهِمۡ خِلَٰفَ رَسُولِ ٱللَّهِ وَكَرِهُوٓاْ أَن يُجَٰهِدُواْ بِأَمۡوَٰلِهِمۡ وَأَنفُسِهِمۡ فِي سَبِيلِ ٱللَّهِ وَقَالُواْ لَا تَنفِرُواْ فِي ٱلۡحَرِّۗ قُلۡ نَارُ جَهَنَّمَ أَشَدُّ حَرّٗاۚ لَّوۡ كَانُواْ يَفۡقَهُونَ ٨١

**82.** ಆದ್ದರಿಂದ ತಾವು ಮಾಡಿಟ್ಟಿರುವುದರ ಫಲವಾಗಿ ಅವರು ಸ್ವಲ್ಪವೇ ನಗುತ್ತಿರಲಿ ಮತ್ತು ಹೆಚ್ಚು ಹೆಚ್ಚಾಗಿ ಅಳುತ್ತಿರಲಿ.

فَلۡيَضۡحَكُواْ قَلِيلٗا وَلۡيَبۡكُواْ كَثِيرٗا جَزَآءَۢ بِمَا كَانُواْ يَكۡسِبُونَ ٨٢

**83.** (ಯುದ್ಧವು ಮುಗಿದು) ಅವರ ಪೈಕಿ ಒಂದು ಗುಂಪಿನೆಡೆಗೆ ಅಲ್ಲಾಹು ತಮ್ಮನ್ನು (ಸುರಕ್ಷಿತವಾಗಿ) ಮರಳಿಸಿ (ಇನ್ನೊಂದು ಯುದ್ಧಕ್ಕೆ) ಹೊರಡಲು ಅವರು ತಮ್ಮೊಂದಿಗೆ ಅನುಮತಿಯನ್ನು ಬೇಡಿದರೆ ತಾವು ಹೇಳಿರಿ: 'ನೀವೆಂದಿಗೂ ನನ್ನ ಜೊತೆಗೆ ಹೊರಡಲಾರಿರಿ. ನೀವು ನನ್ನ ಜೊತೆಗೆ ಒಬ್ಬ ಶತ್ರುವಿನೊಂದಿಗೂ ಯುದ್ಧ ಮಾಡಲಾರಿರಿ. ಖಂಡಿತವಾಗಿಯೂ ಮೊದಲ ಬಾರಿ ನೀವು (ಯುದ್ಧಕ್ಕೆ ಹೋಗದೆ) ಹಿಂದುಳಿಯುವುದರಲ್ಲಿ ಸಂತೃಪ್ತರಾದಿರಿ. ಆದ್ದರಿಂದ ಹಿಂದೆ ಉಳಿದಿರುವವರೊಂದಿಗೆ ನೀವೂ ಕುಳಿತುಕೊಳ್ಳಿರಿ'.

فَإِن رَّجَعَكَ ٱللَّهُ إِلَىٰ طَآئِفَةٖ مِّنۡهُمۡ فَٱسۡتَـٔۡذَنُوكَ لِلۡخُرُوجِ فَقُل لَّن تَخۡرُجُواْ مَعِيَ أَبَدٗا وَلَن تُقَٰتِلُواْ مَعِيَ عَدُوًّاۖ إِنَّكُمۡ رَضِيتُم بِٱلۡقُعُودِ أَوَّلَ مَرَّةٖ فَٱقۡعُدُواْ مَعَ ٱلۡخَٰلِفِينَ ٨٣

**84.** ಅವರ ಪೈಕಿ ಮೃತಪಟ್ಟ ಯಾರಿಗೂ ತಾವೆಂದೂ ನಮಾಝ್ ಮಾಡದಿರಿ. ಅವನ ಗೋರಿಯ ಬಳಿ ನಿಲ್ಲದಿರಿ. ಖಂಡಿತವಾಗಿಯೂ ಅವರು ಅಲ್ಲಾಹುವಿನಲ್ಲೂ, ಅವನ

وَلَا تُصَلِّ عَلَىٰٓ أَحَدٖ مِّنۡهُم مَّاتَ أَبَدٗا وَلَا تَقُمۡ عَلَىٰ قَبۡرِهِۦٓۖ إِنَّهُمۡ كَفَرُواْ بِٱللَّهِ وَرَسُولِهِۦ وَمَاتُواْ وَهُمۡ فَٰسِقُونَ ٨٤

ಸಂದೇಶವಾಹಕರಲ್ಲೂ ಅವಿಶ್ವಾಸವಿಟ್ಟಿರುವರು ಮತ್ತು ಧಿಕ್ಕಾರಿಗಳಾಗಿಯೇ ಮರಣಹೊಂದಿರುವರು.

85. ಅವರ ಸಂಪತ್ತುಗಳು ಮತ್ತು ಸಂತತಿಗಳು ತಮ್ಮನ್ನು ಅಚ್ಚರಿಪಡಿಸದಿರಲಿ. ಅಲ್ಲಾಹು ಇಚ್ಛಿಸುವುದು ಅವುಗಳ ಮೂಲಕ ಅವರನ್ನು ಇಹಲೋಕದಲ್ಲಿ ಶಿಕ್ಷಿಸಲು ಮತ್ತು ಸತ್ಯನಿಷೇಧಿಗಳಾಗಿರುತ್ತಲೇ ಅವರು ಪ್ರಾಣ ಕಳೆದುಕೊಳ್ಳಲು ಮಾತ್ರವಾಗಿದೆ.

وَلَا تُعۡجِبۡكَ أَمۡوَٰلُهُمۡ وَأَوۡلَٰدُهُمۡۚ إِنَّمَا يُرِيدُ ٱللَّهُ أَن يُعَذِّبَهُم بِهَا فِي ٱلدُّنۡيَا وَتَزۡهَقَ أَنفُسُهُمۡ وَهُمۡ كَٰفِرُونَ ٨٥

86. ನೀವು ಅಲ್ಲಾಹುವಿನಲ್ಲಿ ವಿಶ್ವಾಸವಿಡಿರಿ ಮತ್ತು ಅವನ ಸಂದೇಶವಾಹಕರ ಜೊತೆಗೆ ಯುದ್ಧ ಮಾಡಿರಿ ಎಂದು (ಆದೇಶಿಸುವ) ಯಾವುದಾದರೂ ಅಧ್ಯಾಯವು ಅವತೀರ್ಣವಾದರೆ ಅವರ ಪೈಕಿ ಸಾಮರ್ಥ್ಯವಿರುವವರು (ಯುದ್ಧಕ್ಕಾಗಿ ಹೊರಡದಿರಲು) ತಮ್ಮೊಂದಿಗೆ ಅನುಮತಿಯನ್ನು ಬೇಡುವರು. ಅವರು ಹೇಳುವರು: 'ನಮ್ಮನ್ನು ಬಿಟ್ಟುಬಿಡಿರಿ. ನಾವು ಹಿಂದುಳಿದವರೊಂದಿಗೆ ಸೇರುವೆವು'.

وَإِذَآ أُنزِلَتۡ سُورَةٌ أَنۡ ءَامِنُواْ بِٱللَّهِ وَجَٰهِدُواْ مَعَ رَسُولِهِ ٱسۡتَـٔۡذَنَكَ أُوْلُواْ ٱلطَّوۡلِ مِنۡهُمۡ وَقَالُواْ ذَرۡنَا نَكُن مَّعَ ٱلۡقَٰعِدِينَ ٨٦

87. (ಯುದ್ಧಕ್ಕೆ ಹೊರಡದೆ) ಹಿಂದುಳಿದಿರುವ ಸ್ತ್ರೀಯರೊಂದಿಗೆ ಸೇರುವುದರಲ್ಲಿ ಅವರು ಸಂತೃಪ್ತರಾಗಿರುವರು. ಅವರ ಹೃದಯಗಳ ಮೇಲೆ ಮುದ್ರೆಯೊತ್ತಲ್ಪಟ್ಟಿರುವುದು. ಆದ್ದರಿಂದ ಅವರು (ವಿಷಯವನ್ನು) ಗ್ರಹಿಸಲಾರರು.

رَضُواْ بِأَن يَكُونُواْ مَعَ ٱلۡخَوَالِفِ وَطُبِعَ عَلَىٰ قُلُوبِهِمۡ فَهُمۡ لَا يَفۡقَهُونَ ٨٧

88. ಆದರೆ ಸಂದೇಶವಾಹಕರು ಮತ್ತು ಅವರೊಂದಿಗೆ ವಿಶ್ವಾಸವಿಟ್ಟವರು ತಮ್ಮ ಸಂಪತ್ತು ಮತ್ತು ಶರೀರಗಳ ಮೂಲಕ ಯುದ್ಧ ಮಾಡಿರುವರು. ಒಳಿತುಗಳಿರುವುದು ಅವರಿಗೇ ಆಗಿದೆ. ಯಶಸ್ವಿಯಾದವರು ಅವರೇ ಆಗಿರುವರು.

لَٰكِنِ ٱلرَّسُولُ وَٱلَّذِينَ ءَامَنُواْ مَعَهُۥ جَٰهَدُواْ بِأَمۡوَٰلِهِمۡ وَأَنفُسِهِمۡۚ وَأُوْلَٰٓئِكَ لَهُمُ ٱلۡخَيۡرَٰتُۖ وَأُوْلَٰٓئِكَ هُمُ ٱلۡمُفۡلِحُونَ ٨٨

89. ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳನ್ನು ಅಲ್ಲಾಹು

أَعَدَّ ٱللَّهُ لَهُمۡ جَنَّٰتٍ تَجۡرِي مِن تَحۡتِهَا

ಅವರಿಗೋಸ್ಕರ ಸಿದ್ಧಗೊಳಿಸಿರುವನು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. ಮಹಾ ವಿಜಯವು ಅದೇ ಆಗಿದೆ.

ٱلْأَنْهَٰرُ خَٰلِدِينَ فِيهَا ۚ ذَٰلِكَ ٱلْفَوْزُ ٱلْعَظِيمُ ﴿٨٩﴾

90. (ಯುದ್ಧಕ್ಕೆ ಹೋಗದಿರಲು) ತಮಗೆ ಅನುಮತಿ ಸಿಗುವುದಕ್ಕಾಗಿ ನೆಪವನ್ನು ಹೇಳಲೆಂದು ಗ್ರಾಮೀಣ ಅರಬಿಗಳ ಪೈಕಿ ಕೆಲವರು (ಪ್ರವಾದಿಯವರ) ಬಳಿಗೆ ಬಂದರು. ಆದರೆ ಅಲ್ಲಾಹುವಿನೊಂದಿಗೂ, ಅವನ ಸಂದೇಶವಾಹಕರೊಂದಿಗೂ ಸುಳ್ಳು ನುಡಿದವರು (ಮನೆಯಲ್ಲೇ) ಕುಳಿತರು. ಅವರ ಪೈಕಿ ಅವಿಶ್ವಾಸವಿಟ್ಟವರಿಗೆ ಯಾತನಾಮಯವಾದ ಶಿಕ್ಷೆಯು ಬಾಧಿಸಲಿರುವುದು.

وَجَآءَ ٱلْمُعَذِّرُونَ مِنَ ٱلْأَعْرَابِ لِيُؤْذَنَ لَهُمْ وَقَعَدَ ٱلَّذِينَ كَذَبُوا۟ ٱللَّهَ وَرَسُولَهُۥ ۚ سَيُصِيبُ ٱلَّذِينَ كَفَرُوا۟ مِنْهُمْ عَذَابٌ أَلِيمٌ ﴿٩٠﴾

91. ಬಲಹೀನರು, ರೋಗಿಗಳು ಮತ್ತು ಖರ್ಚು ಮಾಡಲು ಏನನ್ನೂ ಕಾಣದವರು –ಅವರು ಅಲ್ಲಾಹುವಿನ ಮತ್ತು ಸಂದೇಶವಾಹಕರ ಹಿತಾಕಾಂಕ್ಷಿಗಳಾಗಿದ್ದರೆ– (ಯುದ್ಧಕ್ಕೆ ಹೋಗದಿರುವುದರಿಂದ) ಅವರ ಮೇಲೆ ದೋಷವಿಲ್ಲ. ಸಜ್ಜನರ ಮೇಲೆ (ದೋಷಾರೋಪಣೆ ಮಾಡಲು) ಯಾವುದೇ ಮಾರ್ಗವೂ ಇಲ್ಲ. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

لَّيْسَ عَلَى ٱلضُّعَفَآءِ وَلَا عَلَى ٱلْمَرْضَىٰ وَلَا عَلَى ٱلَّذِينَ لَا يَجِدُونَ مَا يُنفِقُونَ حَرَجٌ إِذَا نَصَحُوا۟ لِلَّهِ وَرَسُولِهِۦ ۚ مَا عَلَى ٱلْمُحْسِنِينَ مِن سَبِيلٍ ۚ وَٱللَّهُ غَفُورٌ رَّحِيمٌ ﴿٩١﴾

92. ಇನ್ನೊಂದು ಗುಂಪಿನ ಮೇಲೂ ಯಾವುದೇ ದೋಷವಿಲ್ಲ. ಅವರು (ಯುದ್ಧಕ್ಕೆ ಹೊರಡಲು) ತಮ್ಮ ಬಳಿಗೆ ವಾಹನವನ್ನು ಬೇಡುತ್ತಾ ಬಂದಾಗ ತಾವು ಅವರೊಂದಿಗೆ ಹೇಳಿದಿರಿ: 'ನಿಮಗೆ ನೀಡಲು ಯಾವುದೇ ವಾಹನವನ್ನೂ ನಾನು ಕಾಣುತ್ತಿಲ್ಲ'. ಹಾಗೆಯೇ (ಯುದ್ಧಕ್ಕೆ) ವ್ಯಯಿಸಲು ಏನನ್ನೂ ಹೊಂದದ ದುಃಖದಿಂದ ಅವರು ಕಣ್ಣೀರು ಸುರಿಸುತ್ತಾ ಮರಳಿಹೋದರು (ಅಂತಹ ಗುಂಪಿನ ಮೇಲೆ).

وَلَا عَلَى ٱلَّذِينَ إِذَا مَآ أَتَوْكَ لِتَحْمِلَهُمْ قُلْتَ لَآ أَجِدُ مَآ أَحْمِلُكُمْ عَلَيْهِ تَوَلَّوا۟ وَّأَعْيُنُهُمْ تَفِيضُ مِنَ ٱلدَّمْعِ حَزَنًا أَلَّا يَجِدُوا۟ مَا يُنفِقُونَ ﴿٩٢﴾

﴿ إِنَّمَا ٱلسَّبِيلُ عَلَى ٱلَّذِينَ يَسۡتَـٔۡذِنُونَكَ وَهُمۡ أَغۡنِيَآءُۚ رَضُواْ بِأَن يَكُونُواْ مَعَ ٱلۡخَوَالِفِ وَطَبَعَ ٱللَّهُ عَلَىٰ قُلُوبِهِمۡ فَهُمۡ لَا يَعۡلَمُونَ ٩٣

93. (ದೋಷಾರೋಪಣೆ ಮಾಡಲು) ಮಾರ್ಗವಿರುವುದು ಶ್ರೀಮಂತರಾಗಿದ್ದೂ ಸಹ (ಹಿಂದುಳಿಯಲು) ತಮ್ಮೊಂದಿಗೆ ಅನುಮತಿಯನ್ನು ಬೇಡುವವರ ಮತ್ತು ಹಿಂದೆ ಉಳಿದಿರುವ ಸ್ತ್ರೀಯರೊಂದಿಗೆ ಸೇರುವುದರಲ್ಲಿ ಸಂತೃಪ್ತರಾಗಿರುವವರ ಮೇಲೆ ಮಾತ್ರವಾಗಿದೆ. ಅವರ ಹೃದಯಗಳ ಮೇಲೆ ಅಲ್ಲಾಹು ಮುದ್ರೆಯನ್ನೊತ್ತಿರುವನು. ಆದ್ದರಿಂದ ಅವರು (ವಸ್ತುಸ್ಥಿತಿಯನ್ನು) ಅರಿಯಲಾರರು.

يَعۡتَذِرُونَ إِلَيۡكُمۡ إِذَا رَجَعۡتُمۡ إِلَيۡهِمۡۚ قُل لَّا تَعۡتَذِرُواْ لَن نُّؤۡمِنَ لَكُمۡ قَدۡ نَبَّأَنَا ٱللَّهُ مِنۡ أَخۡبَارِكُمۡۚ وَسَيَرَى ٱللَّهُ عَمَلَكُمۡ وَرَسُولُهُۥ ثُمَّ تُرَدُّونَ إِلَىٰ عَٰلِمِ ٱلۡغَيۡبِ وَٱلشَّهَٰدَةِ فَيُنَبِّئُكُم بِمَا كُنتُمۡ تَعۡمَلُونَ ٩٤

94. (ಯುದ್ಧವು ಮುಗಿದು) ನೀವು ಅವರ ಬಳಿಗೆ ಮರಳಿದಾಗ ಅವರು ನಿಮ್ಮೊಂದಿಗೆ ನೆಪಗಳನ್ನು ಹೇಳತೊಡಗುವರು. ಹೇಳಿರಿ: ‘ನೀವು ನೆಪಗಳನ್ನು ಹೇಳದಿರಿ. ನಾವು ನಿಮ್ಮನ್ನು ನಂಬಲಾರೆವು. (ಯಾಕೆಂದರೆ) ನಿಮ್ಮ ವೃತ್ತಾಂತಗಳಲ್ಲಿ ಕೆಲವನ್ನು ಅಲ್ಲಾಹು ಈಗಾಗಲೇ ನಮಗೆ ತಿಳಿಸಿಕೊಟ್ಟಿರುವನು’. ಅಲ್ಲಾಹು ಮತ್ತು ಅವನ ಸಂದೇಶವಾಹಕರು ನಿಮ್ಮ ಕೃತ್ಯವನ್ನು ಕಾಣುತ್ತಿರುವರು. ತರುವಾಯ ನಿಮ್ಮನ್ನು ಅಗೋಚರ ಮತ್ತು ಗೋಚರವಾಗಿರುವುದನ್ನು ಅರಿಯುವವನೆಡೆಗೆ ಮರಳಿಸಲಾಗುವುದು. ಆಗ ನೀವು ಮಾಡುತ್ತಿರುವುದರ ಕುರಿತು ಅವನು ನಿಮಗೆ ವಿವರಿಸಿಕೊಡುವನು.

سَيَحۡلِفُونَ بِٱللَّهِ لَكُمۡ إِذَا ٱنقَلَبۡتُمۡ إِلَيۡهِمۡ لِتُعۡرِضُواْ عَنۡهُمۡۖ فَأَعۡرِضُواْ عَنۡهُمۡۖ إِنَّهُمۡ رِجۡسٌۖ وَمَأۡوَىٰهُمۡ جَهَنَّمُ جَزَآءَۢ بِمَا كَانُواْ يَكۡسِبُونَ ٩٥

95. ನೀವು ಅವರ ಬಳಿಗೆ ಮರಳಿದಾಗ, ನೀವು ಅವರನ್ನು ಬಿಟ್ಟು ವಿಮುಖರಾಗುವುದಕ್ಕಾಗಿ[1] ಅವರು ನಿಮ್ಮೊಂದಿಗೆ ಅಲ್ಲಾಹುವಿನ ಮೇಲೆ ಆಣೆಯಿಡುವರು. ಆದ್ದರಿಂದ ನೀವು ಅವರನ್ನು ಬಿಟ್ಟು ವಿಮುಖರಾಗಿರಿ. ಖಂಡಿತವಾಗಿಯೂ ಅವರು ಕಶ್ಮಲರಾಗಿರುವರು. ಅವರು ಸಂಪಾದಿಸಿರುವುದರ ಪ್ರತಿಫಲವಾಗಿ ನರಕಾಗ್ನಿಯು ಅವರ ವಾಸಸ್ಥಳವಾಗಿರುವುದು.

1 ಅರ್ಥಾತ್ ನೀವು ಅವರನ್ನು ಆಕ್ಷೇಪಿಸುವುದಾಗಲಿ, ಅವರ ಮೇಲೆ ಯಾವುದಾದರೂ ಕ್ರಮ ಕೈಗೊಳ್ಳುವುದಾಗಲಿ ಮಾಡದಿರಲಿಕ್ಕಾಗಿ.

يَحۡلِفُونَ لَكُمۡ لِتَرۡضَوۡاْ عَنۡهُمۡۖ فَإِن تَرۡضَوۡاْ
عَنۡهُمۡ فَإِنَّ ٱللَّهَ لَا يَرۡضَىٰ عَنِ ٱلۡقَوۡمِ
ٱلۡفَٰسِقِينَ ٩٦

96. ನೀವು ಅವರ ಬಗ್ಗೆ ಸಂತೃಪ್ತರಾಗುವ ಸಲುವಾಗಿ ಅವರು ನಿಮ್ಮೊಂದಿಗೆ ಆಣೆಯಿಡುವರು. ನೀವು ಅವರ ಬಗ್ಗೆ ಸಂತೃಪ್ತರಾದರೂ ಧಿಕ್ಕಾರಿಗಳಾಗಿರುವ ಜನರ ಬಗ್ಗೆ ಅಲ್ಲಾಹು ಖಂಡಿತವಾಗಿಯೂ ಸಂತೃಪ್ತನಾಗಲಾರನು.

ٱلۡأَعۡرَابُ أَشَدُّ كُفۡرٗا وَنِفَاقٗا وَأَجۡدَرُ أَلَّا
يَعۡلَمُواْ حُدُودَ مَآ أَنزَلَ ٱللَّهُ عَلَىٰ رَسُولِهِۦۗ
وَٱللَّهُ عَلِيمٌ حَكِيمٞ ٩٧

97. ಅಅ್‌ರಾಬಿಗಳು (ಗ್ರಾಮೀಣ ಅರಬರು) ಅತಿಕಠಿಣವಾದ ಅವಿಶ್ವಾಸವನ್ನೂ, ಕಾಪಟ್ಯವನ್ನೂ ಹೊಂದಿರುವರು. ಅಲ್ಲಾಹು ತನ್ನ ಸಂದೇಶವಾಹಕರ ಮೇಲೆ ಅವತೀರ್ಣಗೊಳಿಸಿರುವ ವಿಧಿನಿಯಮಗಳನ್ನು ಅರಿಯದಿರಲು ಅವರು ಹೆಚ್ಚು ಅರ್ಹರಾಗಿರುವರು.[1] ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَمِنَ ٱلۡأَعۡرَابِ مَن يَتَّخِذُ مَا يُنفِقُ
مَغۡرَمٗا وَيَتَرَبَّصُ بِكُمُ ٱلدَّوَآئِرَۚ عَلَيۡهِمۡ
دَآئِرَةُ ٱلسَّوۡءِۗ وَٱللَّهُ سَمِيعٌ عَلِيمٞ ٩٨ وَمِنَ
ٱلۡأَعۡرَابِ مَن يُؤۡمِنُ بِٱللَّهِ وَٱلۡيَوۡمِ ٱلۡأٓخِرِ
وَيَتَّخِذُ مَا يُنفِقُ قُرُبَٰتٍ عِندَ ٱللَّهِ
وَصَلَوَٰتِ ٱلرَّسُولِۚ أَلَآ إِنَّهَا قُرۡبَةٞ لَّهُمۡۚ
سَيُدۡخِلُهُمُ ٱللَّهُ فِي رَحۡمَتِهِۦٓۚ إِنَّ ٱللَّهَ غَفُورٞ
رَّحِيمٞ ٩٩

98-99. ತಾವು (ದಾನಧರ್ಮಗಳಾಗಿ) ವ್ಯಯಿಸುವುದನ್ನು ಧನನಷ್ಟವಾಗಿ ಪರಿಗಣಿಸುವ[2] ಮತ್ತು ನಿಮಗೆ ಅನಾಹುತಗಳು ಸಂಭವಿಸುವುದನ್ನು ಕಾಯುತ್ತಿರುವ ಕೆಲವರು ಅಅ್‌ರಾಬಿಗಳಲ್ಲಿರುವರು. ಕೆಟ್ಟ ವಿಪತ್ತು ಅವರ ಮೇಲೆಯೇ ಸಂಭವಿಸಲಿ. ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು. ಅಲ್ಲಾಹುವಿನಲ್ಲೂ, ಅಂತ್ಯದಿನದಲ್ಲೂ ವಿಶ್ವಾಸ ವಿಡುವ ಮತ್ತು ತಾವು ವ್ಯಯಿಸುವುದನ್ನು ಅಲ್ಲಾಹುವಿನ ಬಳಿಗೆ ನಿಕಟಗೊಳಿಸುವ

1 ನಾಗರಿಕರಾಗಿರುವ ಜನರ ಸಾಮಾನ್ಯ ಸ್ಥಿತಿಯನ್ನು ಇಲ್ಲಿ ಪರಾಮರ್ಶಿಸಲಾಗಿದೆ. ನಗರದಲ್ಲಿರುವವರೊಂದಿಗೆ ಸಂಪರ್ಕ ಹೊಂದಲು ಅನಾನುಕೂಲತೆಯಿರುವುದರಿಂದಾಗಿ ಅವರಿಗೆ ಮಾಹಿತಿಗಳು ದೊರೆಯುವ ಸಾಧ್ಯತೆಯು ಅತಿವಿರಳವಾಗಿದೆ. ಅವರ ಮಾತು ಮತ್ತು ವರ್ತನೆಗಳಲ್ಲಿ ಒರಟುತನ ಮತ್ತು ಕರ್ಕಶತೆಯು ಹೆಚ್ಚಾಗಿರುತ್ತದೆ. ಆದರೂ ಅವರ ಪೈಕಿ ಸತ್ಯವಿಶ್ವಾಸ ಸ್ವೀಕರಿಸಲು ಮತ್ತು ಜ್ಞಾನವನ್ನು ಸಂಪಾದಿಸಲು ಅವಕಾಶ ಸಿಕ್ಕಿದ ಕೆಲವರು ಪ್ರಾಮಾಣಿಕತೆಯ ಜ್ವಲಂತ ಉದಾಹರಣೆಗಳಾಗಿ ಮಾರ್ಪಟ್ಟಿರುವುದನ್ನು ಕಾಣಬಹುದಾಗಿದೆ. 99ನೇ ಸೂಕ್ತಿಯಲ್ಲಿ ಇದನ್ನು ಹೇಳಲಾಗಿದೆ.

2 ಅಲ್ಲಾಹು ದಾನಧರ್ಮ ನೀಡುವವನ ಮನಸ್ಥಿತಿಯನ್ನು ನೋಡುತ್ತಾನೆ. ನಷ್ಟವೆಂದು ಭಾವಿಸಿ ಏನನ್ನಾದರೂ ದಾನ ಮಾಡುವವನಿಗೆ ಅಲ್ಲಾಹುವಿನ ಬಳಿ ಯಾವುದೇ ಪ್ರತಿಫಲವಿರಲಾರದು. ಅಲ್ಲಾಹುವಿನ ಬಳಿ ಪ್ರತಿಫಲವಿರುವುದು ಪುಣ್ಯವೆಂಬ ನೆಲೆಯಲ್ಲಿ ಮತ್ತು ಅಲ್ಲಾಹುವಿನ ಪ್ರೀತಿಯನ್ನು ಗಳಿಸಲಿಕ್ಕಿರುವ ಮಾರ್ಗವೆಂಬ ನೆಲೆಯಲ್ಲಿ ದಾನ ಮಾಡುವವರಿಗೆ ಮಾತ್ರವಾಗಿದೆ.

ಪುಣ್ಯಕರ್ಮಗಳನ್ನಾಗಿ ಮತ್ತು ಸಂದೇಶವಾಹಕರ ಪ್ರಾರ್ಥನೆಗಳಿಗಿರುವ ಕಾರಣವನ್ನಾಗಿ ಮಾಡಿಕೊಳ್ಳುವವರೂ ಅಅ್‌ರಾಬಿಗಳಲ್ಲಿರುವರು.[1] ಅರಿತುಕೊಳ್ಳಿರಿ! ಖಂಡಿತವಾಗಿಯೂ ಅದು ಅವರಿಗೆ (ಅಲ್ಲಾಹುವಿನ) ಸಾಮೀಪ್ಯವನ್ನು ತಂದುಕೊಡುವುದು. ಅಲ್ಲಾಹು ಅವರನ್ನು ತನ್ನ ಕರುಣೆಯಲ್ಲಿ ಪ್ರವೇಶ ಮಾಡಿಸುವನು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

**100.** ಮುಹಾಜಿರ್‌ಗಳು ಮತ್ತು ಅನ್ಸಾರ್‌ಗಳ ಪೈಕಿ ಮೊಟ್ಟಮೊದಲು ಮುಂದೆ ಬಂದವರು ಮತ್ತು ಸುಕೃತ್ಯವನ್ನು ಮಾಡುತ್ತಾ ಅವರನ್ನು ಅನುಸರಿಸಿದವರು ಯಾರೋ ಅವರ ಬಗ್ಗೆ ಅಲ್ಲಾಹು ಸಂತೃಪ್ತನಾಗಿರುವನು. ಅವನ ಬಗ್ಗೆ ಅವರೂ ಸಂತೃಪ್ತರಾಗಿರುವರು. ಅವರಿಗೋಸ್ಕರ ಅವನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳನ್ನು ಸಿದ್ಧಗೊಳಿಸಿರುವನು. ಅವರದರಲ್ಲಿ ಎಂದೆಂದಿಗೂ ಶಾಶ್ವತವಾಗಿ ವಾಸಿಸುವರು. ಮಹಾ ವಿಜಯವು ಅದೇ ಆಗಿರುವುದು.

وَٱلسَّٰبِقُونَ ٱلْأَوَّلُونَ مِنَ ٱلْمُهَٰجِرِينَ وَٱلْأَنصَارِ وَٱلَّذِينَ ٱتَّبَعُوهُم بِإِحْسَٰنٍ رَّضِيَ ٱللَّهُ عَنْهُمْ وَرَضُوا۟ عَنْهُ وَأَعَدَّ لَهُمْ جَنَّٰتٍ تَجْرِى تَحْتَهَا ٱلْأَنْهَٰرُ خَٰلِدِينَ فِيهَآ أَبَدًا ۚ ذَٰلِكَ ٱلْفَوْزُ ٱلْعَظِيمُ ﴿١٠٠﴾

**101.** ನಿಮ್ಮ ಸುತ್ತ ಮುತ್ತಲಲ್ಲಿರುವ ಅಅ್‌ರಾಬಿಗಳ ಪೈಕಿಯೂ ಕಪಟವಿಶ್ವಾಸಿಗಳಿರುವರು. ಮದೀನಾ ವಾಸಿಗಳ ಪೈಕಿಯೂ ಇರುವರು. ಅವರು ತೀವ್ರ ಕಾಪಟ್ಯದಲ್ಲಿರುವರು. ತಾವು ಅವರನ್ನು ಅರಿಯಲಾರಿರಿ. ಆದರೆ ನಾವು ಅವರನ್ನು ಅರಿಯುವೆವು. ನಾವು ಅವರನ್ನು ಎರಡು ಬಾರಿ ಶಿಕ್ಷಿಸುವೆವು.[2] ತರುವಾಯ

وَمِمَّنْ حَوْلَكُم مِّنَ ٱلْأَعْرَابِ مُنَٰفِقُونَ ۖ وَمِنْ أَهْلِ ٱلْمَدِينَةِ ۙ مَرَدُوا۟ عَلَى ٱلنِّفَاقِ لَا تَعْلَمُهُمْ ۖ نَحْنُ نَعْلَمُهُمْ ۚ سَنُعَذِّبُهُم مَّرَّتَيْنِ ثُمَّ يُرَدُّونَ إِلَىٰ عَذَابٍ عَظِيمٍ ﴿١٠١﴾

1 ಪ್ರವಾದಿ(ﷺ) ರವರ ಮುಂದೆ ಯಾರಾದರೂ ಅಲ್ಲಾಹುವಿನ ಮಾರ್ಗದಲ್ಲಿ ವ್ಯಯಿಸಿದರೆ ಅವರಿಗೋಸ್ಕರ ಪ್ರವಾದಿ(ﷺ) ರವರು ಪ್ರಾರ್ಥಿಸುತ್ತಿದ್ದರು.

2 ಕಪಟವಿಶ್ವಾಸಿಗಳಿಗೆ ಐಹಿಕ ಜೀವನದಲ್ಲಿರುವ ಶಿಕ್ಷೆಯು ತಮ್ಮ ಕಾಪಟ್ಯವು ಬಹಿರಂಗವಾಗುವುದರ ಮೂಲಕ ಉಂಟಾಗುವ ಅವಮಾನ ಮತ್ತು ಹೀನವಾದ ಮರಣವಾಗಿದೆ.

ಭೀಕರವಾದ ಶಿಕ್ಷೆಯೆಡೆಗೆ ಅವರನ್ನು ತಳ್ಳಲಾಗುವುದು.

**102.** ತಮ್ಮ ತಪ್ಪುಗಳನ್ನು ಒಪ್ಪಿಕೊಂಡ ಬೇರೆ ಕೆಲವರಿರುವರು. ಅವರು ಸತ್ಕರ್ಮವನ್ನು ಬೇರೊಂದು ದುಷ್ಕರ್ಮದೊಂದಿಗೆ ಬೆರೆಸಿರುವರು.ಅಲ್ಲಾಹು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಲೂಬಹುದು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَءَاخَرُونَ ٱعۡتَرَفُواْ بِذُنُوبِهِمۡ خَلَطُواْ عَمَلٗا صَٰلِحٗا وَءَاخَرَ سَيِّئًا عَسَى ٱللَّهُ أَن يَتُوبَ عَلَيۡهِمۡۚ إِنَّ ٱللَّهَ غَفُورٞ رَّحِيمٌ ١٠٢

**103.** ಅವರನ್ನು ಶುದ್ಧೀಕರಿಸುವುದಕ್ಕಾಗಿ ಮತ್ತು ಅವರನ್ನು ಸಂಸ್ಕರಿಸುವುದಕ್ಕಾಗಿ ತಾವು ಅವರ ಸಂಪತ್ತುಗಳಿಂದ ದಾನಧರ್ಮಗಳನ್ನು ಪಡೆದುಕೊಳ್ಳಿರಿ. ತರುವಾಯ ಅವರಿಗೋಸ್ಕರ (ಅನುಗ್ರಹಕ್ಕಾಗಿ) ಪ್ರಾರ್ಥಿಸಿರಿ. ಖಂಡಿತವಾಗಿಯೂ ತಮ್ಮ ಪ್ರಾರ್ಥನೆಯು ಅವರಿಗೆ ಶಾಂತಿಯನ್ನು ನೀಡುತ್ತದೆ. ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

خُذۡ مِنۡ أَمۡوَٰلِهِمۡ صَدَقَةٗ تُطَهِّرُهُمۡ وَتُزَكِّيهِم بِهَا وَصَلِّ عَلَيۡهِمۡۖ إِنَّ صَلَوٰتَكَ سَكَنٞ لَّهُمۡۗ وَٱللَّهُ سَمِيعٌ عَلِيمٌ ١٠٣

**104.** ಖಂಡಿತವಾಗಿಯೂ ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸುವವನು ಮತ್ತು ದಾನಧರ್ಮಗಳನ್ನು ಪಡೆಯುವವನು ಅಲ್ಲಾಹುವಾಗಿರುವನು ಮತ್ತು ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು ಎಂದು ಅವರು ಅರಿತಿಲ್ಲವೇ?

أَلَمۡ يَعۡلَمُوٓاْ أَنَّ ٱللَّهَ هُوَ يَقۡبَلُ ٱلتَّوۡبَةَ عَنۡ عِبَادِهِۦ وَيَأۡخُذُ ٱلصَّدَقَٰتِ وَأَنَّ ٱللَّهَ هُوَ ٱلتَّوَّابُ ٱلرَّحِيمُ ١٠٤

**105.** (ಓ ಪ್ರವಾದಿಯವರೇ!) ತಾವು ಹೇಳಿರಿ: 'ನೀವು ಕಾರ್ಯವೆಸಗಿರಿ. ಅಲ್ಲಾಹು, ಅವನ ಸಂದೇಶ ವಾಹಕರು ಮತ್ತು ಸತ್ಯವಿಶ್ವಾಸಿಗಳು ನಿಮ್ಮ ಕೃತ್ಯವನ್ನು ವೀಕ್ಷಿಸುವರು. ತರುವಾಯ ಅಗೋಚರ ಮತ್ತು ಗೋಚರವಾಗಿರುವುದನ್ನು[1]

وَقُلِ ٱعۡمَلُواْ فَسَيَرَى ٱللَّهُ عَمَلَكُمۡ وَرَسُولُهُۥ وَٱلۡمُؤۡمِنُونَۖ وَسَتُرَدُّونَ إِلَىٰ عَٰلِمِ ٱلۡغَيۡبِ وَٱلشَّهَٰدَةِ فَيُنَبِّئُكُم بِمَا كُنتُمۡ تَعۡمَلُونَ ١٠٥

1 ಗೈಬ್' ಎಂಬ ಪದಕ್ಕೆ ಅಗೋಚರ ಎಂದು ಅರ್ಥ ನೀಡಲಾಗಿದೆ. ಈ ಪದದ ನಿಖರವಾದ ಮತ್ತು ಸೂಕ್ಷ್ಮವಾದ ಅರ್ಥವು ಮನುಷ್ಯನಿಗೆ ಅಲ್ಲಾಹು ನೀಡಿದ ಅರಿವಿನ ವ್ಯಾಪ್ತಿಗೆ ಅತೀತವಾಗಿರುವುದು ಎಂದಾಗಿದೆ. ಈ ವ್ಯಾಪ್ತಿಗೊಳಪಟ್ಟಿರುವುದನ್ನು 'ಶಹಾದತ್' ಎನ್ನಲಾಗುತ್ತದೆ.

ಅರಿಯುವವನೆಡೆಗೆ ನಿಮ್ಮನ್ನು ಮರಳಿಸಲಾಗುವುದು. ನೀವು ಮಾಡಿಕೊಂಡಿರುವುದರ ಕುರಿತು ಅವನು ಆಗ ನಿಮಗೆ ತಿಳಿಸಿಕೊಡುವನು’.

**106.** ಅಲ್ಲಾಹುವಿನ ಆಜ್ಞೆ ಬರುವವರೆಗೆ ತೀರ್ಪು ಕಾದಿರಿಸಲಾದ ಬೇರೆ ಕೆಲವರಿರುವರು.[1] ಅಲ್ಲಾಹು ಅವರನ್ನು ಶಿಕ್ಷಿಸಲೂಬಹುದು ಅಥವಾ ಅವರ ಪಶ್ಚಾತ್ತಾಪವನ್ನು ಸ್ವೀಕರಿಸಲೂಬಹುದು. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَءَاخَرُونَ مُرۡجَوۡنَ لِأَمۡرِ ٱللَّهِ إِمَّا يُعَذِّبُهُمۡ وَإِمَّا يَتُوبُ عَلَيۡهِمۡۗ وَٱللَّهُ عَلِيمٌ حَكِيمٞ ١٠٦

**107.** ಹಾನಿ ಮಾಡುವ ಉದ್ದೇಶದಿಂದಲೂ, ಅವಿಶ್ವಾಸದಿಂದಲೂ, ಸತ್ಯವಿಶ್ವಾಸಿಗಳ ಮಧ್ಯೆ ಒಡಕುಂಟು ಮಾಡುವುದಕ್ಕೂ ಮತ್ತು ಈ ಹಿಂದೆಯೇ ಅಲ್ಲಾಹು ಹಾಗೂ ಅವನ ಸಂದೇಶವಾಹಕರ ವಿರುದ್ಧ ಹೋರಾಡಿದವರಿಗೆ ಆಶ್ರಯ ನೀಡುವುದಕ್ಕೂ ಒಂದು ಮಸೀದಿಯನ್ನು ನಿರ್ಮಿಸಿದವರು (ಆ ಕಪಟವಿಶ್ವಾಸಿಗಳಲ್ಲಿರುವರು).[2] ‘ನಾವು ಒಳಿತನ್ನಲ್ಲದೆ ಬೇರೇನನ್ನೂ ಉದ್ದೇಶಿಸಿಲ್ಲ’ ಎಂದವರು ಆಣೆಯಿಟ್ಟು ಹೇಳುವರು. ಖಂಡಿತವಾಗಿಯೂ ಅವರು ಸುಳ್ಳು ನುಡಿಯುವವರಾಗಿರುವರು ಎಂಬುದಕ್ಕೆ ಅಲ್ಲಾಹು ಸಾಕ್ಷ್ಯವಹಿಸುವನು.

وَٱلَّذِينَ ٱتَّخَذُواْ مَسۡجِدٗا ضِرَارٗا وَكُفۡرٗا وَتَفۡرِيقَۢا بَيۡنَ ٱلۡمُؤۡمِنِينَ وَإِرۡصَادٗا لِّمَنۡ حَارَبَ ٱللَّهَ وَرَسُولَهُۥ مِن قَبۡلُۚ وَلَيَحۡلِفُنَّ إِنۡ أَرَدۡنَآ إِلَّا ٱلۡحُسۡنَىٰۖ وَٱللَّهُ يَشۡهَدُ إِنَّهُمۡ لَكَٰذِبُونَ ١٠٧

**108.** (ಓ ಪ್ರವಾದಿಯವರೇ!) ತಾವು ಎಂದಿಗೂ ಅದರಲ್ಲಿ ನಮಾಝ್‌ಗಾಗಿ ನಿಲ್ಲದಿರಿ. ತಾವು ನಮಾಝ್ ಮಾಡಲು ಅತ್ಯಂತ

لَا تَقُمۡ فِيهِ أَبَدٗاۚ لَّمَسۡجِدٌ أُسِّسَ عَلَى ٱلتَّقۡوَىٰ مِنۡ أَوَّلِ يَوۡمٍ أَحَقُّ أَن تَقُومَ فِيهِۚ

1 ತಬೂಕ್ ಯುದ್ಧಕ್ಕೆ ಹೋಗದೆ ಹಿಂದುಳಿದು ಕುಳಿತವರನ್ನು 101, 102 ಮತ್ತು 106ನೇ ಸೂಕ್ತಿಗಳಲ್ಲಿ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಒಂದು: ಕಾಪಟ್ಯದಲ್ಲಿ ಸಂಪೂರ್ಣವಾಗಿ ಮುಳುಗಿರುವವರು. ಎರಡು: ತಮ್ಮ ತಪ್ಪನ್ನು ಒಪ್ಪಿಕೊಂಡವರು ಮತ್ತು ಪಶ್ಚಾತ್ತಾಪ ಸ್ವೀಕರಿಸಲ್ಪಟ್ಟವರು. ಮೂರು: ಅಲ್ಲಾಹುವಿನ ಆಜ್ಞೆ ಬರುವವರೆಗೆ ತೀರ್ಪು ಕಾದಿರಿಸಲ್ಪಟ್ಟವರು.

2 ಇಲ್ಲಿ ಸೂಚಿಸಿರುವುದು ಮದೀನದ ಕುಬಾ ಮಸ್ಜಿದ್‌ನ ಸಮೀಪ ಕಪಟವಿಶ್ವಾಸಿಗಳು ನಿರ್ಮಿಸಿದ ಬೇರೊಂದು ಮಸ್ಜಿದನ್ನಾಗಿದೆ. ಮಸ್ಜಿದುದ್ದಿರಾರ್ ಅಥವಾ ಉಪಟಳದ ಮಸ್ಜಿದ್ ಎಂದೇ ಇದನ್ನು ಕರೆಯಲಾಗುತ್ತದೆ.

فِيهِ رِجَالٞ يُحِبُّونَ أَن يَتَطَهَّرُواْۚ وَٱللَّهُ
يُحِبُّ ٱلۡمُطَّهِّرِينَ ١٠٨

ಅರ್ಹವಾಗಿರುವುದು ಮೊದಲ ದಿನದಿಂದಲೇ ಭಯಭಕ್ತಿಯ ಮೇಲೆ ಸ್ಥಾಪಿಸಲಾಗಿರುವ ಮಸ್ಜಿದ್ ಆಗಿದೆ.[1] ಶುದ್ಧಿಗಳಿಸಲು ಇಷ್ಟಪಡುವ ಕೆಲವು ಜನರು ಆ ಮಸ್ಜಿದ್‌ನಲ್ಲಿರುವರು. ಶುದ್ಧಿ ಗಳಿಸುವವರನ್ನು ಅಲ್ಲಾಹು ಪ್ರೀತಿಸುವನು.

أَفَمَنۡ أَسَّسَ بُنۡيَٰنَهُۥ عَلَىٰ تَقۡوَىٰ مِنَ ٱللَّهِ
وَرِضۡوَٰنٍ خَيۡرٌ أَم مَّنۡ أَسَّسَ بُنۡيَٰنَهُۥ عَلَىٰ
شَفَا جُرُفٍ هَارٖ فَٱنۡهَارَ بِهِۦ فِي نَارِ جَهَنَّمَۗ
وَٱللَّهُ لَا يَهۡدِي ٱلۡقَوۡمَ ٱلظَّٰلِمِينَ ١٠٩

**109.** ಅಲ್ಲಾಹುವಿನಲ್ಲಿರುವ ಭಯಭಕ್ತಿ ಮತ್ತು ಅವನ ಸಂತೃಪ್ತಿಯ ಮೇಲೆ ತನ್ನ ಕಟ್ಟಡದ ಬುನಾದಿಯನ್ನು ನಿರ್ಮಿಸಿದವನು ಉತ್ತಮನಾಗಿರುವನೋ ಅಥವಾ ಕುಸಿದುಬೀಳಲು ಸಿದ್ಧವಾಗಿರುವ ಪ್ರಪಾತದ ಅಂಚಿನಲ್ಲಿ ಕಟ್ಟಡವನ್ನು ಸ್ಥಾಪಿಸಿ ತರುವಾಯ ಅದು ಅವನೊಂದಿಗೆ ಸೇರಿ ನರಕಾಗ್ನಿಯಲ್ಲಿ ಕುಸಿದು ಬಿದ್ದವನೋ? ಅಕ್ರಮಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

لَا يَزَالُ بُنۡيَٰنُهُمُ ٱلَّذِي بَنَوۡاْ رِيبَةٗ فِي
قُلُوبِهِمۡ إِلَّآ أَن تَقَطَّعَ قُلُوبُهُمۡۗ وَٱللَّهُ عَلِيمٌ
حَكِيمٌ ١١٠

**110.** ಅವರ ಹೃದಯಗಳು ಚೂರು ಚೂರಾಗಿ ಬಿಡುವ ವಿನಾ ಅವರು ನಿರ್ಮಿಸಿದ ಆ ಕಟ್ಟಡವು ಅವರ ಹೃದಯಗಳಲ್ಲಿ ಒಂದು ಭೀತಿಯಾಗಿ ಉಳಿಯದೆ ಇರಲಾರದು.[2] ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

۞إِنَّ ٱللَّهَ ٱشۡتَرَىٰ مِنَ ٱلۡمُؤۡمِنِينَ أَنفُسَهُمۡ
وَأَمۡوَٰلَهُم بِأَنَّ لَهُمُ ٱلۡجَنَّةَۚ يُقَٰتِلُونَ فِي
سَبِيلِ ٱللَّهِ فَيَقۡتُلُونَ وَيُقۡتَلُونَۖ وَعۡدًا

**111.** ಖಂಡಿತವಾಗಿಯೂ ಸತ್ಯವಿಶ್ವಾಸಿಗಳಿಂದ, ಅವರಿಗೆ ಸ್ವರ್ಗವು ಸಿಗುವುದು ಎಂಬುದಕ್ಕೆ ಬದಲಿಯಾಗಿ ಅಲ್ಲಾಹು ಅವರ ಶರೀರಗಳನ್ನೂ ಸಂಪತ್ತುಗಳನ್ನೂ

1 ಪ್ರವಾದಿ(ﷺ)ರವರು ಮೊದಲ ಬಾರಿ ಮದೀನಕ್ಕೆ ಬಂದಾಗ ಅವರು ಮದೀನದ ದಕ್ಷಿಣ ದಿಕ್ಕಿನಲ್ಲಿರುವ ಕುಬಾ ಎಂಬ ಪ್ರದೇಶದಲ್ಲಿ ಕೆಲವು ದಿನಗಳ ಕಾಲ ತಂಗಿದ್ದರು. ಈ ಸೂಕ್ತಿಯಲ್ಲಿ ಸೂಚಿಸಿರುವುದು ಅಂದು ಅಲ್ಲಿ ನಿರ್ಮಿಸಲ್ಪಟ್ಟ ಮಸ್ಜಿದ್ ಆಗಿದೆ. ಮದೀನದಲ್ಲಿರುವ ಮಸ್ಜಿದುನ್ನಬವೀ ನಂತರ ನಿರ್ಮಿಸಿದ ಮಸ್ಜಿದ್ ಆಗಿದೆ.

2 ಆ ಮಸ್ಜಿದ್ ಮತ್ತು ಅದನ್ನು ಸ್ಥಾಪಿಸಿದ ಕಪಟವಿಶ್ವಾಸಿಗಳ ವಿಷಯದಲ್ಲಿ ಅಲ್ಲಾಹು ಮತ್ತು ಅವನ ಸಂದೇಶವಾಹಕ(ﷺ)ರವರು ಯಾವ ತೀರ್ಮಾನವನ್ನು ಕೈಗೊಳ್ಳುವರು ಎಂಬುದು ಅವರನ್ನು ಭಯಭೀತಗೊಳಿಸಿದ ವಿಷಯವಾಗಿದೆ. ಅವರ ಹೃದಯಗಳು ಜೀವಂತವಾಗಿರುವವರೆಗೂ ಆ ಭೀತಿಯು ನೆಲೆನಿಲ್ಲುವುದೆಂದು ಅಲ್ಲಾಹು ಸ್ಪಷ್ಟಪಡಿಸುತ್ತಿದ್ದಾನೆ.

عَلَيۡهِ حَقّٗا فِي ٱلتَّوۡرَىٰةِ وَٱلۡإِنجِيلِ
وَٱلۡقُرۡءَانِۚ وَمَنۡ أَوۡفَىٰ بِعَهۡدِهِۦ مِنَ ٱللَّهِۚ
فَٱسۡتَبۡشِرُواْ بِبَيۡعِكُمُ ٱلَّذِي بَايَعۡتُم بِهِۦۚ
وَذَٰلِكَ هُوَ ٱلۡفَوۡزُ ٱلۡعَظِيمُ ١١١

ಖರೀದಿಸಿರುವನು. ಅವರು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುವರು. ತನ್ಮೂಲಕ ಅವರು ವಧಿಸುತ್ತಲೂ ವಧಿಸಲ್ಪಡುತ್ತಲೂ ಇರುವರು. (ಹೀಗೆ ಅವರು ಸ್ವರ್ಗವಾಸಿಗಳಾಗುವರು.) ಇದು ಅಲ್ಲಾಹು ತೌರಾತ್‌ನಲ್ಲಿ, ಇಂಜೀಲ್‌ನಲ್ಲಿ ಮತ್ತು ಕುರ್‌ಆನ್‌ನಲ್ಲಿ ತನ್ನ ಮೇಲಿರುವ ಒಂದು ಹೊಣೆಯಾಗಿ ಘೋಷಿಸಿದ ವಾಗ್ದಾನವಾಗಿದೆ.[1] ಅಲ್ಲಾಹುವಿಗಿಂತಲೂ ಹೆಚ್ಚು ತನ್ನ ವಾಗ್ದಾನವನ್ನು ಈಡೇರಿಸುವವನು ಇನ್ನಾರಿರುವನು? ಆದ್ದರಿಂದ ನೀವು (ಅಲ್ಲಾಹುವಿನೊಂದಿಗೆ) ಮಾಡಿಕೊಂಡಿರುವ ಈ ವ್ಯವಹಾರದಲ್ಲಿ ಹರ್ಷಪಡಿರಿ. ಮಹಾ ವಿಜಯವು ಅದೇ ಆಗಿದೆ.

ٱلتَّٰٓئِبُونَ ٱلۡعَٰبِدُونَ ٱلۡحَٰمِدُونَ
ٱلسَّٰٓئِحُونَ ٱلرَّٰكِعُونَ ٱلسَّٰجِدُونَ
ٱلۡأٓمِرُونَ بِٱلۡمَعۡرُوفِ وَٱلنَّاهُونَ عَنِ
ٱلۡمُنكَرِ وَٱلۡحَٰفِظُونَ لِحُدُودِ ٱللَّهِۗ وَبَشِّرِ
ٱلۡمُؤۡمِنِينَ ١١٢

**112.** ಪಶ್ಚಾತ್ತಾಪಪಡುವವರು, ಆರಾಧನಾ ನಿರತರಾಗುವವರು, ಸ್ತುತಿಕೀರ್ತನೆ ಮಾಡುವವರು, ಉಪವಾಸವನ್ನಾಚರಿಸುವವರು, ತಲೆಬಾಗುವವರು, ಸಾಷ್ಟಾಂಗ ಮಾಡುವವರು, ಸದಾಚಾರವನ್ನು ಆದೇಶಿಸುವವರು, ದುರಾಚಾರವನ್ನು ವಿರೋಧಿಸುವವರು ಮತ್ತು ಅಲ್ಲಾಹುವಿನ ನಿಯಮಮಿತಿಗಳನ್ನು ಪಾಲಿಸುವವರು. (ಇಂತಹ) ಸತ್ಯವಿಶ್ವಾಸಿಗಳಿಗೆ ಶುಭವಾರ್ತೆಯನ್ನು ತಿಳಿಸಿರಿ.

مَا كَانَ لِلنَّبِيِّ وَٱلَّذِينَ ءَامَنُوٓاْ أَن
يَسۡتَغۡفِرُواْ لِلۡمُشۡرِكِينَ وَلَوۡ كَانُوٓاْ أُوْلِي قُرۡبَىٰ
مِنۢ بَعۡدِ مَا تَبَيَّنَ لَهُمۡ أَنَّهُمۡ أَصۡحَٰبُ
ٱلۡجَحِيمِ ١١٣

**113.** ಬಹುದೇವವಿಶ್ವಾಸಿಗಳು ಜ್ವಲಿಸುವ ನರಕಾಗ್ನಿಯ ವಾಸಿಗಳಾಗಿರುವರೆಂದು ತಮಗೆ ಸ್ಪಷ್ಟವಾದ ಬಳಿಕ ಅವರಿಗಾಗಿ ಪಾಪಮುಕ್ತಿಯನ್ನು ಬೇಡುವುದು –ಅವರು ಆಪ್ತ ಸಂಬಂಧಿಕರಾಗಿದ್ದರೂ ಸರಿ– ಪ್ರವಾದಿಯವರಿಗಾಗಲಿ ಸತ್ಯವಿಶ್ವಾಸಿಗಳಿಗಾಗಲಿ ಯುಕ್ತವಾದುದಲ್ಲ.

1 ಅಲ್ಲಾಹುವಿನ ಮಾರ್ಗದಲ್ಲಿ ಶರೀರ ಮತ್ತು ಸಂಪತ್ತನ್ನು ತ್ಯಾಗ ಮಾಡುವವನಿಗೆ ಸ್ವರ್ಗನೀಡಲಾಗುವುದು ಎಂಬ ವಾಗ್ದಾನ.

114. ಇಬ್ರಾಹೀಮ್‌ರು ತಮ್ಮ ತಂದೆಗಾಗಿ ಪಾಪಮುಕ್ತಿಯನ್ನು ಬೇಡಿರುವುದು ಅವರು ತಮ್ಮ ತಂದೆಯೊಂದಿಗೆ ಮಾಡಿದ್ದ ವಾಗ್ದಾನದ ನಿಮಿತ್ತ ಮಾತ್ರವಾಗಿತ್ತು. ಆದರೆ ಆತ (ತಂದೆ) ಅಲ್ಲಾಹುವಿನ ಶತ್ರುವೆಂದು ಅವರಿಗೆ ಸ್ಪಷ್ಟವಾದಾಗ ಅವರು ಆತನನ್ನು (ತಂದೆಯನ್ನು) ಬಿಟ್ಟು ದೂರವಾದರು. ಖಂಡಿತವಾಗಿಯೂ ಇಬ್ರಾಹೀಮ್‌ರು ಅತ್ಯಂತ ವಿನಯವಂತರೂ ಸಹನಾಶೀಲರೂ ಆಗಿದ್ದರು.

وَمَا كَانَ ٱسۡتِغۡفَارُ إِبۡرَٰهِيمَ لِأَبِيهِ إِلَّا عَن مَّوۡعِدَةٖ وَعَدَهَآ إِيَّاهُ فَلَمَّا تَبَيَّنَ لَهُۥٓ أَنَّهُۥ عَدُوّٞ لِّلَّهِ تَبَرَّأَ مِنۡهُۚ إِنَّ إِبۡرَٰهِيمَ لَأَوَّٰهٌ حَلِيمٞ ١١٤

115. ಒಂದು ಜನತೆಗೆ ಮಾರ್ಗದರ್ಶನ ನೀಡಿದ ಬಳಿಕ, ಅವರು ಯಾವುದರ ಬಗ್ಗೆ ಎಚ್ಚರವಹಿಸಬೇಕೆಂಬುದನ್ನು ಸ್ಪಷ್ಟಪಡಿಸಿಕೊಡುವ ತನಕ ಅಲ್ಲಾಹು ಅವರನ್ನು ಪಥಭ್ರಷ್ಟರನ್ನಾಗಿ ಗಣಿಸಲಾರನು.[1] ಖಂಡಿತವಾಗಿಯೂ ಅಲ್ಲಾಹು ಎಲ್ಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

وَمَا كَانَ ٱللَّهُ لِيُضِلَّ قَوۡمَۢا بَعۡدَ إِذۡ هَدَىٰهُمۡ حَتَّىٰ يُبَيِّنَ لَهُم مَّا يَتَّقُونَۚ إِنَّ ٱللَّهَ بِكُلِّ شَيۡءٍ عَلِيمٌ ١١٥

116. ಖಂಡಿತವಾಗಿಯೂ ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗಿರುವುದಾಗಿದೆ. ಅವನು ಜೀವವನ್ನು ನೀಡುವನು ಮತ್ತು ಮೃತಪಡಿಸುವನು. ಅಲ್ಲಾಹುವಿನ ಹೊರತು ನಿಮಗೆ ಅನ್ಯ ರಕ್ಷಕನಾಗಲಿ, ಸಹಾಯಕನಾಗಲಿ ಇರಲಾರರು.

إِنَّ ٱللَّهَ لَهُۥ مُلۡكُ ٱلسَّمَٰوَٰتِ وَٱلۡأَرۡضِۖ يُحۡيِۦ وَيُمِيتُۚ وَمَا لَكُم مِّن دُونِ ٱللَّهِ مِن وَلِيّٖ وَلَا نَصِيرٖ ١١٦

117. ಖಂಡಿತವಾಗಿಯೂ ಅಲ್ಲಾಹು ಪ್ರವಾದಿಯವರ ಮತ್ತು ವಿಷಮ ಸ್ಥಿತಿಯಲ್ಲಿ ಅವರನ್ನು ಹಿಂಬಾಲಿಸಿದ ಮುಹಾಜಿರ್ ಮತ್ತು ಅನ್ಸಾರ್‌ಗಳ ಪಶ್ಚಾತ್ತಾಪವನ್ನು ಸ್ವೀಕರಿಸಿರುವನು. ಅವರ ಪೈಕಿ ಒಂದು ಗುಂಪಿನ[2] ಹೃದಯಗಳು

لَّقَد تَّابَ ٱللَّهُ عَلَى ٱلنَّبِيِّ وَٱلۡمُهَٰجِرِينَ وَٱلۡأَنصَارِ ٱلَّذِينَ ٱتَّبَعُوهُ فِي سَاعَةِ ٱلۡعُسۡرَةِ مِنۢ بَعۡدِ مَا كَادَ يَزِيغُ قُلُوبُ فَرِيقٖ مِّنۡهُمۡ ثُمَّ تَابَ عَلَيۡهِمۡۚ إِنَّهُۥ بِهِمۡ رَءُوفٞ رَّحِيمٞ ١١٧

1 ಮದ್ಯವನ್ನು ನಿಷಿದ್ಧಗೊಳಿಸುವ ವಿಧಿಯು ಕುರ್‌ಆನ್‌ನಲ್ಲಿ ಅವತೀರ್ಣಗೊಳ್ಳುವ ಮೊದಲು ಮದ್ಯಪಾನ ಮಾಡಿದವರನ್ನು ದುರ್ಮಾರ್ಗಿಗಳೆಂದು ಅಲ್ಲಾಹು ಎಣಿಸಲಾರನು ಎಂದು ಇದರಿಂದ ಗ್ರಹಿಸಬಹುದು. ಒಂದು ಕಾರ್ಯವು ನಿಷಿದ್ಧವೆಂದು ಘೋಷಿಸಲಾಗುವ ಮುನ್ನ ಅದನ್ನು ಮಾಡಿದವರ ವಿಧಿ ಇದೇ ರೀತಿಯಾಗಿದೆ.

2 ತಬೂಕ್‌ನೆಡೆಗಿರುವ ದುರ್ಗಮವಾದ ಯಾತ್ರೆಯ ವಿಷಯದಲ್ಲಿ ಕಡು ಪ್ರಯಾಸಗಳನ್ನು ಎದುರಿಸಬೇಕಾಗಿರುವುದರಿಂದ ಅದರಿಂದ ತಪ್ಪಿಸಿಕೊಳ್ಳಲು ಬಲಹೀನತೆ ಮತ್ತು ಚಂಚಲತೆಯನ್ನು ಪ್ರಕಟಿಸಿದ

ವ್ಯತಿಚಲಿಸುವಂತಾದ ಬಳಿಕ. ತರುವಾಯ ಅಲ್ಲಾಹು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ಖಂಡಿತವಾಗಿಯೂ ಅವನು ಅವರೊಂದಿಗೆ ಅತ್ಯಧಿಕ ಕೃಪೆಯುಳ್ಳವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

**118.** ತೀರ್ಪು ಕಾದಿರಿಸಲಾಗಿರುವ ಆ ಮೂವರ (ಪಶ್ಚಾತ್ತಾಪವನ್ನೂ ಅಲ್ಲಾಹು ಸ್ವೀಕರಿಸಿರುವನು).[1] ಭೂಮಿಯು ವಿಶಾಲವಾಗಿದ್ದೂ ಕೂಡ ಅದವರಿಗೆ ಇಕ್ಕಟ್ಟಾಗಿ ಬಿಟ್ಟಿತು. ಅವರ ಮನಸ್ಸುಗಳು ಸಹ ಅವರಿಗೆ ಇಕ್ಕಟ್ಟಾಗಿ ಪರಿಣಮಿಸಿತು. ಅಲ್ಲಾಹುವಿನಿಂದ ಪಾರಾಗಲು ಅವನೆಡೆಗಲ್ಲದೆ ಬೇರೆ ಆಶ್ರಯಗಳಿಲ್ಲವೆಂದು ಅವರು (ದೃಢವಾಗಿ) ಅರಿತುಕೊಂಡರು. ಅವರು ಪಶ್ಚಾತ್ತಾಪಪಟ್ಟು ಮರಳುವ ಸಲುವಾಗಿ ತರುವಾಯ ಅವನು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَعَلَى ٱلثَّلَٰثَةِ ٱلَّذِينَ خُلِّفُواْ حَتَّىٰٓ إِذَا ضَاقَتۡ عَلَيۡهِمُ ٱلۡأَرۡضُ بِمَا رَحُبَتۡ وَضَاقَتۡ عَلَيۡهِمۡ أَنفُسُهُمۡ وَظَنُّوٓاْ أَن لَّا مَلۡجَأَ مِنَ ٱللَّهِ إِلَّآ إِلَيۡهِ ثُمَّ تَابَ عَلَيۡهِمۡ لِيَتُوبُوٓاْۚ إِنَّ ٱللَّهَ هُوَ ٱلتَّوَّابُ ٱلرَّحِيمُ ١١٨

**119.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಸತ್ಯಸಂಧರ ಜೊತೆಗೆ ಸೇರಿದವರಾಗಿರಿ.

يَٰٓأَيُّهَا ٱلَّذِينَ ءَامَنُواْ ٱتَّقُواْ ٱللَّهَ وَكُونُواْ مَعَ ٱلصَّٰدِقِينَ ١١٩

**120.** ಮದೀನ ನಿವಾಸಿಗಳಿಗೆ ಮತ್ತು ಅವರ ಸುತ್ತ ಮುತ್ತಲಿನಲ್ಲಿರುವ ಅಅ್‌ರಾಬಿಗಳಿಗೆ ಅಲ್ಲಾಹುವಿನ ಸಂದೇಶವಾಹಕರನ್ನು ಬಿಟ್ಟು

مَا كَانَ لِأَهۡلِ ٱلۡمَدِينَةِ وَمَنۡ حَوۡلَهُم مِّنَ ٱلۡأَعۡرَابِ أَن يَتَخَلَّفُواْ عَن رَّسُولِ ٱللَّهِ

---

ದುರ್ಬಲ ಮನಸ್ಕರಾದ ಸತ್ಯವಿಶ್ವಾಸಿಗಳ ಬಗ್ಗೆ ಇಲ್ಲಿ ಪರಾಮರ್ಶಿಸಲಾಗಿದೆ. 102ನೇ ಸೂಕ್ತಿಯಲ್ಲೂ ಅವರ ಬಗ್ಗೆ ಪರಾಮರ್ಶಿಸಲಾಗಿದೆ.

1 ತೀರ್ಪು ಕಾದಿರಿಸಲ್ಪಟ್ಟವರು ಎಂದು 106ನೇ ಸೂಕ್ತಿಯಲ್ಲಿ ಹೇಳಲಾಗಿರುವುದು ಈ ಮೂರು ಮಂದಿಯ ಬಗ್ಗೆಯಾಗಿದೆ. ಅವರು ಕಅ್‌ಬ್ ಇಬ್ನ್ ಮಾಲಿಕ್, ಹಿಲಾಲ್ ಇಬ್ನ್ ಉಮಯ್ಯಃ ಮತ್ತು ಮುರಾರಃ ಇಬ್ನ್ ರಬೀಅ್ (رضي الله عنهم) ಎಂಬ ಸಹಾಬಿಗಳಾಗಿದ್ದರು. ಅನ್ಸಾರಿಗಳಾದ ಇವರು ತಬೂಕ್ ಯುದ್ಧಕ್ಕೆ ಹೋಗದಿರಲು ಸೂಕ್ತ ಕಾರಣಗಳೇನೂ ಇಲ್ಲದಿದ್ದರೂ ಹೋಗದೆ ಹಿಂದೆ ಉಳಿದಿದ್ದರು. ಇವರು ಮಾಡಿದ ಈ ಅಪರಾಧದ ನಿಮಿತ್ತ ಪ್ರವಾದಿ(صلى الله عليه وسلم)ರವರು ಮತ್ತು ಸಹಾಬಾಗಳು ಅವರೊಂದಿಗೆ ತಮ್ಮ ಸಂಪರ್ಕವನ್ನು ಕಡಿದುಬಿಟ್ಟರು. ಅವರಿಗೆ ತೀವ್ರ ದುಃಖ ಮತ್ತು ಪಶ್ಚಾತ್ತಾಪವುಂಟಾಯಿತು. ಕೊನೆಗೆ ಅಲ್ಲಾಹು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದನು.

وَلَا يَرۡغَبُواْ بِأَنفُسِهِمۡ عَن نَّفۡسِهِۦۚ ذَٰلِكَ بِأَنَّهُمۡ لَا يُصِيبُهُمۡ ظَمَأٞ وَلَا نَصَبٞ وَلَا مَخۡمَصَةٞ فِي سَبِيلِ ٱللَّهِ وَلَا يَطَـُٔونَ مَوۡطِئٗا يَغِيظُ ٱلۡكُفَّارَ وَلَا يَنَالُونَ مِنۡ عَدُوّٖ نَّيۡلًا إِلَّا كُتِبَ لَهُم بِهِۦ عَمَلٞ صَٰلِحٌۚ إِنَّ ٱللَّهَ لَا يُضِيعُ أَجۡرَ ٱلۡمُحۡسِنِينَ ١٢٠

ಹಿಂದೆ ಉಳಿಯುವುದಾಗಲಿ ಅಥವಾ ಅವರ ವಿಷಯವನ್ನು ಕಡೆಗಣಿಸಿ ತಮ್ಮದೇ ವಿಷಯಗಳಲ್ಲಿ ಆಸಕ್ತಿ ವಹಿಸುವುದಾಗಲಿ ಯುಕ್ತವಾದುದಲ್ಲ. ಅದು ಯಾಕೆಂದರೆ ಅಲ್ಲಾಹುವಿನ ಮಾರ್ಗದಲ್ಲಿ ಅವರಿಗೆ ಯಾವುದೇ ದಾಹವಾಗಲಿ, ದಣಿವಾಗಲಿ, ಹಸಿವೆಯಾಗಲಿ ಉಂಟಾಗಲಾರದು; ಸತ್ಯನಿಷೇಧಿಗಳನ್ನು ಕೆರಳಿಸುವ ಯಾವುದೇ ಕಡೆ ಅವರು ಹೆಜ್ಜೆಯಿಡಲಾರರು; ಶತ್ರುವಿಗೆ ಯಾವುದೇ ನಾಶ ನಷ್ಟಗಳನ್ನೂ ಉಂಟುಮಾಡಲಾರರು; ಅದರಿಂದಾಗಿ ಅವರಿಗೆ ಒಂದು ಪುಣ್ಯಕರ್ಮವು ದಾಖಲಾಗುವ ಹೊರತು. ಖಂಡಿತವಾಗಿಯೂ ಸತ್ಕರ್ಮಗೈಯ್ಯುವವರ ಪ್ರತಿಫಲವನ್ನು ಅಲ್ಲಾಹು ನಿಷ್ಫಲಗೊಳಿಸಲಾರನು.

وَلَا يُنفِقُونَ نَفَقَةٗ صَغِيرَةٗ وَلَا كَبِيرَةٗ وَلَا يَقۡطَعُونَ وَادِيًا إِلَّا كُتِبَ لَهُمۡ لِيَجۡزِيَهُمُ ٱللَّهُ أَحۡسَنَ مَا كَانُواْ يَعۡمَلُونَ ١٢١

**121.** ಅವರು ಚಿಕ್ಕದಾಗಿರುವ ಅಥವಾ ದೊಡ್ಡದಾಗಿರುವ ಏನನ್ನೂ ವ್ಯಯಿಸಲಾರರು; ಯಾವುದೇ ಕಣಿವೆಯನ್ನೂ ದಾಟಲಾರರು; ಅವರಿಗೆ (ಅದೊಂದು ಪುಣ್ಯಕರ್ಮವಾಗಿ) ದಾಖಲಾಗುವ ಹೊರತು. ಇದು ಅವರು ಮಾಡುತ್ತಿರುವ ಅತ್ಯುತ್ತಮ ಕರ್ಮಕ್ಕೆ ಅಲ್ಲಾಹು ತಕ್ಕ ಪ್ರತಿಫಲವನ್ನು ನೀಡುವ ಸಲುವಾಗಿದೆ.

۞ وَمَا كَانَ ٱلۡمُؤۡمِنُونَ لِيَنفِرُواْ كَآفَّةٗۚ فَلَوۡلَا نَفَرَ مِن كُلِّ فِرۡقَةٖ مِّنۡهُمۡ طَآئِفَةٞ لِّيَتَفَقَّهُواْ فِي ٱلدِّينِ وَلِيُنذِرُواْ قَوۡمَهُمۡ إِذَا رَجَعُوٓاْ إِلَيۡهِمۡ لَعَلَّهُمۡ يَحۡذَرُونَ ١٢٢

**122.** ಎಲ್ಲರೂ ಒಟ್ಟಾಗಿ (ಯುದ್ಧಕ್ಕೆ) ಹೊರಡುವುದು ಸತ್ಯವಿಶ್ವಾಸಿಗಳಿಗೆ ಯುಕ್ತವಲ್ಲ. ಅವರ ಪೈಕಿ ಪ್ರತಿಯೊಂದು ವಿಭಾಗದಿಂದ ಒಂದು ತಂಡ ಮಾತ್ರ ಹೋಗಬಾರದೇಕೆ?[1] (ಉಳಿದವರು ಪ್ರವಾದಿಯವರೊಂದಿಗೆ ಉಳಿದು) ಧರ್ಮಜ್ಞಾನವನ್ನು ಪಡೆಯಲು ಮತ್ತು ತಮ್ಮ ಜನರು (ಯುದ್ಧದಿಂದ) ಅವರ ಬಳಿಗೆ ಮರಳಿ ಬಂದಾಗ ಅವರಿಗೆ

1 ಆರೋಗ್ಯ ಮತ್ತು ಹೋರಾಡಲು ಶಕ್ತಿಯುಳ್ಳವರು ಯುದ್ಧಕ್ಕೆ ಹೋಗಲಿ. ಬೇರೆ ವಿಧದಲ್ಲಿ ಸೇವೆ ಸಲ್ಲಿಸಲು ಸಾಧ್ಯವಿರುವವರು ಹಾಗೆ ಮಾಡಲಿ.

ಎಚ್ಚರಿಕೆಯನ್ನು ನೀಡಲು ಸಾಧ್ಯವಾಗಬಹುದು.[1] ಅವರು ಎಚ್ಚರವಹಿಸಲೂ ಬಹುದು.

يَـٰٓأَيُّهَا ٱلَّذِينَ ءَامَنُواْ قَـٰتِلُواْ ٱلَّذِينَ يَلُونَكُم مِّنَ ٱلْكُفَّارِ وَلْيَجِدُواْ فِيكُمْ غِلْظَةً وَٱعْلَمُوٓاْ أَنَّ ٱللَّهَ مَعَ ٱلْمُتَّقِينَ ﴿١٢٣﴾

123. ಓ ಸತ್ಯವಿಶ್ವಾಸಿಗಳೇ! ನಿಮ್ಮ ಸಮೀಪದಲ್ಲಿ ವಾಸಿಸುವ ಸತ್ಯನಿಷೇಧಿಗಳೊಂದಿಗೆ ನೀವು ಯುದ್ಧಮಾಡಿರಿ. ಅವರು ನಿಮ್ಮಲ್ಲಿ ಕಠೋರತೆಯನ್ನು ಕಾಣಲಿ.[2] ಅಲ್ಲಾಹು ಭಯಭಕ್ತಿ ಪಾಲಿಸುವವರೊಂದಿಗಿರುವನು ಎಂಬುದನ್ನು ನೀವು ಅರಿತುಕೊಳ್ಳಿರಿ.

وَإِذَا مَآ أُنزِلَتْ سُورَةٌ فَمِنْهُم مَّن يَقُولُ أَيُّكُمْ زَادَتْهُ هَـٰذِهِۦٓ إِيمَـٰنًا فَأَمَّا ٱلَّذِينَ ءَامَنُواْ فَزَادَتْهُمْ إِيمَـٰنًا وَهُمْ يَسْتَبْشِرُونَ ﴿١٢٤﴾

124. (ಕುರ್‌ಆನ್‌ನ) ಯಾವುದಾದರೂ ಅಧ್ಯಾಯವು ಅವತೀರ್ಣಗೊಳಿಸಲಾದಾಗ 'ಇದು ನಿಮ್ಮಲ್ಲಿ ಯಾರಿಗೆ ವಿಶ್ವಾಸವನ್ನು ಅಧಿಕಗೊಳಿಸಿದೆ?' ಎಂದು ಅವರ ಪೈಕಿ ಕೆಲವರು ಕೇಳುವರು. ಸತ್ಯವಿಶ್ವಾಸಿಗಳಿಗಾದರೋ, ಅದು ಅವರ ವಿಶ್ವಾಸವನ್ನು ಅಧಿಕಗೊಳಿಸಿದೆ. ಅವರು (ಅದರಿಂದಾಗಿ) ಸಂತೋಷಪಡುವರು.

وَأَمَّا ٱلَّذِينَ فِى قُلُوبِهِم مَّرَضٌ فَزَادَتْهُمْ رِجْسًا إِلَىٰ رِجْسِهِمْ وَمَاتُواْ وَهُمْ كَـٰفِرُونَ ﴿١٢٥﴾

125. ಆದರೆ ಹೃದಯಗಳಲ್ಲಿ ರೋಗವಿರುವವರಿಗಾದರೋ, ಅದು ಅವರ ಕೆಡುಕಿಗೆ ಇನ್ನಷ್ಟು ಕೆಡುಕನ್ನು ಹೆಚ್ಚಿಸಿತು. ಅವರು ಸತ್ಯನಿಷೇಧಿಗಳಾಗಿಯೇ ಮರಣಹೊಂದಿದರು.

أَوَلَا يَرَوْنَ أَنَّهُمْ يُفْتَنُونَ فِى كُلِّ عَامٍ مَّرَّةً أَوْ مَرَّتَيْنِ ثُمَّ لَا يَتُوبُونَ وَلَا هُمْ يَذَّكَّرُونَ ﴿١٢٦﴾

126. ಅವರು ಪ್ರತಿಯೊಂದು ವರ್ಷದಲ್ಲಿಯೂ ಒಂದೋ ಎರಡೋ ಬಾರಿ ಪರೀಕ್ಷಿಸಲ್ಪಡುತ್ತಿರುವರು ಎಂಬುದನ್ನು ಅವರು ಕಾಣುವುದಿಲ್ಲವೇ? ಆ ಬಳಿಕವೂ ಅವರು ಪಶ್ಚಾತ್ತಾಪಪಟ್ಟು ಮರಳುವುದಿಲ್ಲ. ಅವರು ಚಿಂತಿಸಿ ಗ್ರಹಿಸುವುದೂ ಇಲ್ಲ.[3]

1 ಈ ಸೂಕ್ತಿಗೆ ವಿಭಿನ್ನ ವ್ಯಾಖ್ಯಾನಗಳನ್ನು ನೀಡಲಾಗಿದೆ. ಅವುಗಳ ಪೈಕಿ ಒಂದನ್ನು ಇಲ್ಲಿ ಅವಲಂಬಿಸಲಾಗಿದೆ.

2 ಅವಕಾಶ ಸಿಕ್ಕಾಗ ನಿಮಗೆ ಹಿಂಸೆ ನೀಡಲು ಯತ್ನಿಸುವವರಿಗೆ ನೀವು ನಿಮ್ಮ ಧೈರ್ಯ ಹಾಗೂ ಆವೇಶವನ್ನು ತೋರಿಸಿರಿ ಎಂದರ್ಥ.

3 ಪ್ರವಾದಿ (ﷺ) ಮತ್ತು ಅವರ ಅನುಯಾಯಿಗಳು ಜಯಗಳಿಸುತ್ತಿರುವುದರ ಕುರಿತು ಮತ್ತು ಸತ್ಯನಿಷೇಧಿಗಳು ಪರಾಭವಗೊಳ್ಳುತ್ತಿರುವುದರ ಕುರಿತು ಅವರು ಸರಿಯಾಗಿ ಚಿಂತಿಸಿ ಗ್ರಹಿಸಿರುತ್ತಿದ್ದರೆ ಅವರು ಖಂಡಿತವಾಗಿಯೂ ಪಶ್ಚಾತ್ತಾಪಪಡುತ್ತಿದ್ದರು.

وَإِذَا مَآ أُنزِلَتۡ سُورَةٞ نَّظَرَ بَعۡضُهُمۡ إِلَىٰ
بَعۡضٍ هَلۡ يَرَىٰكُم مِّنۡ أَحَدٖ ثُمَّ ٱنصَرَفُواْۚ
صَرَفَ ٱللَّهُ قُلُوبَهُم بِأَنَّهُمۡ قَوۡمٞ لَّا
يَفۡقَهُونَ ١٢٧

127. ಯಾವುದಾದರೂ ಒಂದು ಅಧ್ಯಾಯವನ್ನು ಅವತೀರ್ಣಗೊಳಿಸಲಾದಾಗ ಅವರ ಪೈಕಿ ಕೆಲವರು ಇತರ ಕೆಲವರನ್ನು 'ನಿಮ್ಮನ್ನು ಯಾರಾದರೂ ಕಾಣುತ್ತಿದ್ದಾರೆಯೇ?' ಎಂಬ ಪ್ರಶ್ನಾರ್ಥಕ ಭಾವದಲ್ಲಿ ನೋಡುವರು. ತರುವಾಯ ಅವರು ವಿಮುಖರಾಗಿ ಹೋಗುವರು.[1] ಅವರು ಚಿಂತಿಸಿ ಗ್ರಹಿಸದ ಒಂದು ಜನತೆಯಾಗಿರುವುದರಿಂದ ಅಲ್ಲಾಹು ಅವರ ಹೃದಯಗಳನ್ನು (ಸತ್ಯದಿಂದ) ತಿರುಗಿಸಿ ಬಿಟ್ಟಿರುವನು.

لَقَدۡ جَآءَكُمۡ رَسُولٞ مِّنۡ أَنفُسِكُمۡ
عَزِيزٌ عَلَيۡهِ مَا عَنِتُّمۡ حَرِيصٌ عَلَيۡكُم
بِٱلۡمُؤۡمِنِينَ رَءُوفٞ رَّحِيمٞ ١٢٨

128. ಖಂಡಿತವಾಗಿಯೂ ನಿಮಗೆ ನಿಮ್ಮಿಂದಲೇ ಒಬ್ಬ ಸಂದೇಶವಾಹಕರು ಬಂದಿರುವರು. ನೀವು ಕಷ್ಟಪಡುವುದು ಅವರಿಗೆ ಸಹಿಸಲಾಗದು, ಅವರು ನಿಮ್ಮ ಬಗ್ಗೆ ಅತ್ಯಾಸಕ್ತಿಯುಳ್ಳವರಾಗಿರುವರು. ಸತ್ಯವಿಶ್ವಾಸಿಗಳೊಂದಿಗೆ ಅಪಾರ ದಯೆಯುಳ್ಳವರೂ, ಕರುಣೆಯುಳ್ಳವರೂ ಆಗಿರುವರು.

فَإِن تَوَلَّوۡاْ فَقُلۡ حَسۡبِيَ ٱللَّهُ لَآ إِلَٰهَ إِلَّا
هُوَۖ عَلَيۡهِ تَوَكَّلۡتُۖ وَهُوَ رَبُّ ٱلۡعَرۡشِ
ٱلۡعَظِيمِ ١٢٩

129. ಅವರೇನಾದರೂ ವಿಮುಖರಾಗುವುದಾದರೆ (ಓ ಪ್ರವಾದಿಯವರೇ!) ತಾವು ಹೇಳಿರಿ: 'ನನಗೆ ಅಲ್ಲಾಹು ಸಾಕು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ನಾನು ಅವನ ಮೇಲೆ ಭರವಸೆಯಿಟ್ಟಿರುವೆನು. ಅವನು ಮಹಾ ಸಿಂಹಾಸನದ ರಬ್ಬಾಗಿರುವನು'.

1 ಕುರ್‌ಆನ್‌ನ ಪ್ರತಿಯೊಂದು ಸೂಕ್ತಿ ಮತ್ತು ಅಧ್ಯಾಯವು ಅವತೀರ್ಣಗೊಳ್ಳುವಾಗ ಸತ್ಯವಿಶ್ವಾಸಿಗಳು ಸಂತುಷ್ಟರಾಗುತ್ತಾರೆ. ಪ್ರವಾದಿ(ﷺ)ರವರು ಕುರ್‌ಆನನ್ನು ಓದಿಕೊಡುವಾಗ ಅವರ ಸನ್ನಿಧಿಯಲ್ಲಿರುವ ವಿಶ್ವಾಸಿಗಳು ಅದನ್ನು ಗಮನಕೊಟ್ಟು ಕೇಳುತ್ತಾರೆ. ಆದರೆ ಕಪಟ ವಿಶ್ವಾಸಿಗಳು ಹಾಗಲ್ಲ. ತಮ್ಮನ್ನು ಯಾರಾದರೂ ಗಮನಿಸುತ್ತಿದ್ದಾರೆಯೇ ಎಂದು ನೋಡುತ್ತಾ ಅವರು ಅಲ್ಲಿಂದ ಕದಲಲು ಯತ್ನಿಸುತ್ತಾರೆ.

# ಯೂನುಸ್

# سُورَةُ يُونُسَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 109

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್. ಲಾಮ್. ರಾ. ಇವು ಜ್ಞಾನಭರಿತವಾದ ಗ್ರಂಥದ ಸೂಕ್ತಿಗಳಾಗಿವೆ.

الٓرۚ تِلۡكَ ءَايَٰتُ ٱلۡكِتَٰبِ ٱلۡحَكِيمِ ﴿١﴾

2. 'ಜನರಿಗೆ ಮುನ್ನೆಚ್ಚರಿಕೆಯನ್ನು ನೀಡಿರಿ ಮತ್ತು ಸತ್ಯವಿಶ್ವಾಸಿಗಳಿಗೆ ತಮ್ಮ ರಬ್‌ನ ಬಳಿಯಲ್ಲಿ ಸತ್ಯಸಂಧತೆಯ ಪದವಿಯಿದೆಯೆಂಬ ಶುಭವಾರ್ತೆಯನ್ನು ತಿಳಿಸಿರಿ' ಎಂದು ಅವರಿಂದಲೇ ಇರುವ ಓರ್ವ ವ್ಯಕ್ತಿಗೆ ನಾವು ದಿವ್ಯಸಂದೇಶವನ್ನು ನೀಡಿರುವುದು ಜನರಿಗೊಂದು ಅಚ್ಚರಿಯಾಯಿತೇ? ಸತ್ಯನಿಷೇಧಿಗಳು ಹೇಳಿದರು: 'ಖಂಡಿತವಾಗಿಯೂ ಇವನೊಬ್ಬ ಸ್ಪಷ್ಟ ಮಾಂತ್ರಿಕನಾಗಿರುವನು'.

أَكَانَ لِلنَّاسِ عَجَبًا أَنۡ أَوۡحَيۡنَآ إِلَىٰ رَجُلٖ مِّنۡهُمۡ أَنۡ أَنذِرِ ٱلنَّاسَ وَبَشِّرِ ٱلَّذِينَ ءَامَنُوٓاْ أَنَّ لَهُمۡ قَدَمَ صِدۡقٍ عِندَ رَبِّهِمۡۗ قَالَ ٱلۡكَٰفِرُونَ إِنَّ هَٰذَا لَسَٰحِرٞ مُّبِينٌ ﴿٢﴾

3. ಖಂಡಿತವಾಗಿಯೂ ಆಕಾಶಗಳನ್ನು ಮತ್ತು ಭೂಮಿಯನ್ನು ಆರು ದಿನಗಳಲ್ಲಿ ಸೃಷ್ಟಿಸಿದವನಾರೋ ಆ ಅಲ್ಲಾಹುವಾಗಿರುವನು ನಿಮ್ಮ ರಬ್. ತರುವಾಯ ಕಾರ್ಯ ನಿಯಂತ್ರಣ ಮಾಡುತ್ತಾ ಅವನು ಸಿಂಹಾಸನಾರೂಢನಾದನು. ಅವನ ಅನುಮತಿಯ ನಂತರವಲ್ಲದೆ ಯಾವೊಬ್ಬ ಶಿಫಾರಸ್ಸುಗಾರನೂ ಶಿಫಾರಸ್ಸು ಮಾಡಲಾರನು. ನಿಮ್ಮ ರಬ್ಬಾದ ಅಲ್ಲಾಹು ಅವನೇ ಆಗಿರುವನು. ಆದ್ದರಿಂದ ನೀವು ಅವನನ್ನು ಆರಾಧಿಸಿರಿ. ನೀವು ಚಿಂತಿಸಿ ಗ್ರಹಿಸಲಾರಿರೇ?

إِنَّ رَبَّكُمُ ٱللَّهُ ٱلَّذِي خَلَقَ ٱلسَّمَٰوَٰتِ وَٱلۡأَرۡضَ فِي سِتَّةِ أَيَّامٖ ثُمَّ ٱسۡتَوَىٰ عَلَى ٱلۡعَرۡشِۖ يُدَبِّرُ ٱلۡأَمۡرَۖ مَا مِن شَفِيعٍ إِلَّا مِنۢ بَعۡدِ إِذۡنِهِۦۚ ذَٰلِكُمُ ٱللَّهُ رَبُّكُمۡ فَٱعۡبُدُوهُۚ أَفَلَا تَذَكَّرُونَ ﴿٣﴾

4. ನಿಮ್ಮೆಲ್ಲರ ಮರಳುವಿಕೆಯು ಅವನೆಡೆಗೇ ಆಗಿರುವುದು. ಇದು ಅಲ್ಲಾಹುವಿನ ಸತ್ಯ ವಾಗ್ದಾನವಾಗಿದೆ. ಖಂಡಿತವಾಗಿಯೂ ಅವನು

إِلَيۡهِ مَرۡجِعُكُمۡ جَمِيعٗاۖ وَعۡدَ ٱللَّهِ حَقًّاۚ إِنَّهُۥ يَبۡدَؤُاْ ٱلۡخَلۡقَ ثُمَّ يُعِيدُهُۥ لِيَجۡزِيَ

ಸೃಷ್ಟಿಯನ್ನು ಆರಂಭಿಸುವನು ಮತ್ತು ವಿಶ್ವಾಸವಿಟ್ಟವರಿಗೆ ಹಾಗೂ ಸತ್ಕರ್ಮವೆಸಗಿದವರಿಗೆ ನ್ಯಾಯಪೂರ್ವಕ ಪ್ರತಿಫಲವನ್ನು ನೀಡುವ ಸಲುವಾಗಿ ತರುವಾಯ ಅವನದನ್ನು ಪುನರಾವರ್ತಿಸುವನು. ಸತ್ಯನಿಷೇಧಿಗಳಾರೋ, ಅವರು ಸತ್ಯವನ್ನು ನಿಷೇಧಿಸಿರುವುದರ ಫಲವಾಗಿ ಅವರಿಗೆ ಕುದಿಯುವ ಪಾನೀಯ ಮತ್ತು ಯಾತನಾಮಯವಾದ ಶಿಕ್ಷೆಯಿದೆ.

ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ
بِٱلْقِسْطِ ۚ وَٱلَّذِينَ كَفَرُوا۟ لَهُمْ شَرَابٌ
مِّنْ حَمِيمٍ وَعَذَابٌ أَلِيمٌۢ بِمَا كَانُوا۟
يَكْفُرُونَ ٤

5. ಸೂರ್ಯನನ್ನು ಒಂದು ಪ್ರಕಾಶವನ್ನಾಗಿ ಮತ್ತು ಚಂದ್ರನನ್ನು ಒಂದು ಶೋಭೆಯನ್ನಾಗಿ ಮಾಡಿದವನು ಅವನೇ ಆಗಿರುವನು. ನೀವು ವರ್ಷಗಳ ಸಂಖ್ಯೆ ಮತ್ತು ಎಣಿಕೆಯನ್ನು ಅರಿತುಕೊಳ್ಳುವ ಸಲುವಾಗಿ ಅವನು ಅದಕ್ಕೆ (ಚಂದ್ರನಿಗೆ) ಹಂತಗಳನ್ನು ನಿರ್ಣಯಿಸಿರುವನು. ಅಲ್ಲಾಹು ಅದನ್ನು ಸತ್ಯದೊಂದಿಗಲ್ಲದೆ ಸೃಷ್ಟಿಸಿಲ್ಲ. ಅರಿತುಕೊಳ್ಳುವ ಜನರಿಗಾಗಿ ಅವನು ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವನು.

هُوَ ٱلَّذِى جَعَلَ ٱلشَّمْسَ ضِيَآءً وَٱلْقَمَرَ
نُورًا وَقَدَّرَهُۥ مَنَازِلَ لِتَعْلَمُوا۟ عَدَدَ
ٱلسِّنِينَ وَٱلْحِسَابَ ۚ مَا خَلَقَ ٱللَّهُ ذَٰلِكَ إِلَّا
بِٱلْحَقِّ ۚ يُفَصِّلُ ٱلْـَٔايَـٰتِ لِقَوْمٍ يَعْلَمُونَ ٥

6. ಖಂಡಿತವಾಗಿಯೂ ರಾತ್ರಿ ಮತ್ತು ಹಗಲುಗಳ ಬದಲಾವಣೆಯಲ್ಲಿಯೂ, ಅಲ್ಲಾಹು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಸೃಷ್ಟಿಸಿರುವವುಗಳಲ್ಲಿಯೂ ಭಯಭಕ್ತಿ ಪಾಲಿಸುವ ಜನರಿಗೆ ಅನೇಕ ದೃಷ್ಟಾಂತಗಳಿವೆ.

إِنَّ فِى ٱخْتِلَـٰفِ ٱلَّيْلِ وَٱلنَّهَارِ وَمَا خَلَقَ
ٱللَّهُ فِى ٱلسَّمَـٰوَٰتِ وَٱلْأَرْضِ لَـَٔايَـٰتٍ لِّقَوْمٍ
يَتَّقُونَ ٦

7-8. ನಮ್ಮೊಂದಿಗಿರುವ ಭೇಟಿಯನ್ನು ನಿರೀಕ್ಷಿಸದವರು, ಐಹಿಕ ಜೀವನದಲ್ಲಿ ಸಂತೃಪ್ತರಾಗಿ ಅದರಲ್ಲೇ ನೆಮ್ಮದಿಯನ್ನು ಕಾಣುವವರು ಮತ್ತು ನಮ್ಮ ದೃಷ್ಟಾಂತಗಳ ಕುರಿತು ಅಲಕ್ಷ್ಯರಾಗಿರುವವರು ಯಾರೋ ಅವರು ಮಾಡಿಕೊಂಡಿರುವುದರ ಫಲವಾಗಿ ಅವರ ವಾಸಸ್ಥಳವು ನರಕವಾಗಿರುವುದು.

إِنَّ ٱلَّذِينَ لَا يَرْجُونَ لِقَآءَنَا وَرَضُوا۟
بِٱلْحَيَوٰةِ ٱلدُّنْيَا وَٱطْمَأَنُّوا۟ بِهَا وَٱلَّذِينَ هُمْ
عَنْ ءَايَـٰتِنَا غَـٰفِلُونَ ٧ أُو۟لَـٰٓئِكَ مَأْوَىٰهُمُ
ٱلنَّارُ بِمَا كَانُوا۟ يَكْسِبُونَ ٨

9. ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರ

إِنَّ ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ

يَهۡدِيهِمۡ رَبُّهُم بِإِيمَٰنِهِمۡۖ تَجۡرِي مِن تَحۡتِهِمُ
ٱلۡأَنۡهَٰرُ فِي جَنَّٰتِ ٱلنَّعِيمِ ٩

ವಿಶ್ವಾಸದ ಫಲವಾಗಿ ಅವರ ರಬ್ ಅವರನ್ನು ಸನ್ಮಾರ್ಗದಲ್ಲಿ ಸೇರಿಸುವನು. ಅವರು ತಮ್ಮ ತಳಭಾಗದಿಂದ ನದಿಗಳು ಹರಿಯುತ್ತಿರುವ ಅನುಗ್ರಹಪೂರ್ಣವಾದ ಸ್ವರ್ಗೋದ್ಯಾನಗಳಲ್ಲಿರುವರು.

دَعۡوَىٰهُمۡ فِيهَا سُبۡحَٰنَكَ ٱللَّهُمَّ وَتَحِيَّتُهُمۡ
فِيهَا سَلَٰمٞۚ وَءَاخِرُ دَعۡوَىٰهُمۡ أَنِ ٱلۡحَمۡدُ لِلَّهِ
رَبِّ ٱلۡعَٰلَمِينَ ١٠

**10.** ಅಲ್ಲಿ ಅವರ ಪ್ರಾರ್ಥನೆಯು 'ಓ ಅಲ್ಲಾಹ್! ನೀನು ಪರಮ ಪಾವನನು' ಎಂದಾಗಿರುವುದು. ಅಲ್ಲಿ ಅವರ ಅಭಿವಂದನೆಯು 'ಶಾಂತಿ' ಎಂದಾಗಿರುವುದು. ಅವರ ಪ್ರಾರ್ಥನೆಯ ಕೊನೆಯ ಭಾಗವು 'ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗೆ ಸ್ತುತಿ' ಎಂದಾಗಿರುವುದು.

۞ وَلَوۡ يُعَجِّلُ ٱللَّهُ لِلنَّاسِ ٱلشَّرَّ
ٱسۡتِعۡجَالَهُم بِٱلۡخَيۡرِ لَقُضِيَ إِلَيۡهِمۡ أَجَلُهُمۡۖ
فَنَذَرُ ٱلَّذِينَ لَا يَرۡجُونَ لِقَآءَنَا فِي
طُغۡيَٰنِهِمۡ يَعۡمَهُونَ ١١

**11.** ಜನರು ಒಳಿತನ್ನು ಗಳಿಸಲು ಆತುರಪಡುವಂತೆ ಅವರಿಗೆ ಹಾನಿಯನ್ನುಂಟುಮಾಡಲು ಅಲ್ಲಾಹು ಆತುರಪಡುತ್ತಿದ್ದರೆ ಅವರ ಜೀವಿತಾವಧಿಯು ಖಂಡಿತ ಕೊನೆಗೊಳಿಸಲಾಗಿರುತ್ತಿತ್ತು.[1] ಆದರೆ ನಮ್ಮೊಂದಿಗಿರುವ ಭೇಟಿಯನ್ನು ನಿರೀಕ್ಷಿಸದವರಾರೋ ಅವರು ತಮ್ಮ ಧಿಕ್ಕಾರದೊಂದಿಗೆ ವಿಹರಿಸುವಂತೆ ನಾವು ಅವರನ್ನು ಬಿಟ್ಟುಬಿಡುವೆವು.

وَإِذَا مَسَّ ٱلۡإِنسَٰنَ ٱلضُّرُّ دَعَانَا لِجَنۢبِهِۦٓ
أَوۡ قَاعِدًا أَوۡ قَآئِمٗا فَلَمَّا كَشَفۡنَا عَنۡهُ
ضُرَّهُۥ مَرَّ كَأَن لَّمۡ يَدۡعُنَآ إِلَىٰ ضُرّٖ
مَّسَّهُۥۚ كَذَٰلِكَ زُيِّنَ لِلۡمُسۡرِفِينَ مَا كَانُواْ
يَعۡمَلُونَ ١٢

**12.** ಮನುಷ್ಯನಿಗೆ ಸಂಕಷ್ಟ ಬಾಧಿಸಿದಾಗ ಅವನು ಮಲಗಿಕೊಂಡು ಅಥವಾ ಕುಳಿತುಕೊಂಡು ಅಥವಾ ನಿಂತುಕೊಂಡು ನಮ್ಮೊಂದಿಗೆ ಪ್ರಾರ್ಥಿಸುವನು. ತರುವಾಯ ನಾವು ಅವನಿಂದ ಆ ಸಂಕಷ್ಟವನ್ನು ನಿವಾರಿಸಿದಾಗ, ತನಗೆ ಬಾಧಿಸಿದ ಆ ಸಂಕಷ್ಟದ ಬಗ್ಗೆ ಅವನು ನಮ್ಮೊಂದಿಗೆ ಪ್ರಾರ್ಥಿಸಲೇ ಇಲ್ಲವೆಂಬಂತೆ ಸಾಗಿಬಿಡುವನು. ಮಿತಿಮೀರುವವರಿಗೆ ಅವರು ಮಾಡುತ್ತಿರುವುದನ್ನು ಹೀಗೆ ಆಕರ್ಷಕಗೊಳಿಸಿ ಕೊಡಲಾಗಿದೆ.

---

1 ಜನರಿಗೆ ಪ್ರತಿಯೊಂದು ವಿಷಯದಲ್ಲೂ ಆತುರ ಹಾಗೂ ಅಸಹನೆಯಿರುತ್ತದೆ. ಲಾಭಗಳನ್ನು ಬಾಚುವ ಭರದಲ್ಲಿ ಅವರು ಅಲ್ಲಾಹುವಿನ ಎಚ್ಚರಿಕೆಗಳನ್ನು ಅವಗಣಿಸುತ್ತಾರೆ. ಅವರಿಗೆ ಶಿಕ್ಷೆ ನೀಡುವ ವಿಷಯದಲ್ಲಿಯೂ ಅಲ್ಲಾಹು ಅದೇ ರೀತಿ ಆತುರ ಪಟ್ಟಿದ್ದರೆ ಅವರ ಕತೆಯು ಎಂದೋ ಮುಗಿದು ಬಿಡುತ್ತಿತ್ತು.

وَلَقَدۡ أَهۡلَكۡنَا ٱلۡقُرُونَ مِن قَبۡلِكُمۡ
لَمَّا ظَلَمُواْ وَجَآءَتۡهُمۡ رُسُلُهُم بِٱلۡبَيِّنَٰتِ
وَمَا كَانُواْ لِيُؤۡمِنُواْۚ كَذَٰلِكَ نَجۡزِي ٱلۡقَوۡمَ
ٱلۡمُجۡرِمِينَ ﴿١٣﴾

**13.** ಖಂಡಿತವಾಗಿಯೂ ನಿಮಗಿಂತ ಮುಂಚಿನ ಅನೇಕ ತಲೆಮಾರುಗಳು ಅಕ್ರಮವೆಸಗಿದಾಗ ನಾವು ಅವರನ್ನು ನಾಶಗೊಳಿಸಿದೆವು. ಸ್ಪಷ್ಟವಾದ ಪುರಾವೆಗಳೊಂದಿಗೆ ನಮ್ಮ ಸಂದೇಶವಾಹಕರು ಅವರ ಬಳಿಗೆ ಬಂದಿದ್ದರೂ ಅವರು ವಿಶ್ವಾಸವಿಡಲಿಲ್ಲ. ಅಪರಾಧಿಗಳಾದ ಜನರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

ثُمَّ جَعَلۡنَٰكُمۡ خَلَٰٓئِفَ فِي ٱلۡأَرۡضِ مِنۢ
بَعۡدِهِمۡ لِنَنظُرَ كَيۡفَ تَعۡمَلُونَ ﴿١٤﴾

**14.** ತರುವಾಯ ಅವರ ಬಳಿಕ ನಾವು ನಿಮ್ಮನ್ನು ಭೂಮಿಯಲ್ಲಿ ಉತ್ತರಾಧಿಕಾರಿಗಳನ್ನಾಗಿ ಮಾಡಿದೆವು. ನೀವು ಹೇಗೆ ಕಾರ್ಯವೆಸಗುವಿರಿ ಎಂಬುದನ್ನು ನಾವು ನೋಡುವ ಸಲುವಾಗಿ.

وَإِذَا تُتۡلَىٰ عَلَيۡهِمۡ ءَايَاتُنَا بَيِّنَٰتٖ قَالَ
ٱلَّذِينَ لَا يَرۡجُونَ لِقَآءَنَا ٱئۡتِ بِقُرۡءَانٍ
غَيۡرِ هَٰذَآ أَوۡ بَدِّلۡهُۚ قُلۡ مَا يَكُونُ لِيٓ أَنۡ
أُبَدِّلَهُۥ مِن تِلۡقَآيِٕ نَفۡسِيٓۖ إِنۡ أَتَّبِعُ إِلَّا
مَا يُوحَىٰٓ إِلَيَّۖ إِنِّيٓ أَخَافُ إِنۡ عَصَيۡتُ رَبِّي
عَذَابَ يَوۡمٍ عَظِيمٖ ﴿١٥﴾

**15.** ನಮ್ಮ ಸ್ಪಷ್ಟವಾದ ಪುರಾವೆಗಳನ್ನು ಅವರಿಗೆ ಓದಿಕೊಡಲಾದಾಗ ನಮ್ಮೊಂದಿಗಿರುವ ಭೇಟಿಯನ್ನು ನಿರೀಕ್ಷಿಸದವರು 'ಇದಲ್ಲದ ಬೇರೊಂದು ಕುರ್‌ಆನನ್ನು ತನ್ನಿರಿ ಅಥವಾ ಇದರಲ್ಲಿ ಬದಲಾವಣೆ ಮಾಡಿರಿ' ಎಂದು ಹೇಳಿದರು. (ಓ ಪ್ರವಾದಿಯವರೇ!) ಹೇಳಿರಿ: 'ನನ್ನ ಇಚ್ಛೆಯ ಪ್ರಕಾರ ಇದರಲ್ಲಿ ಬದಲಾವಣೆ ಮಾಡುವುದು ನನಗೆ ಯುಕ್ತವಾದುದಲ್ಲ. ನನಗೆ ದಿವ್ಯಸಂದೇಶವಾಗಿ ನೀಡಲಾಗುವುದನ್ನು ಮಾತ್ರ ನಾನು ಅನುಸರಿಸುತ್ತಿರುವೆನು. ನಾನು ನನ್ನ ರಬ್ಬನ್ನು ಧಿಕ್ಕರಿಸುವುದಾದರೆ ಖಂಡಿತವಾಗಿಯೂ ಭಯಾನಕವಾದ ದಿನವೊಂದರ ಶಿಕ್ಷೆಯನ್ನು ನಾನು ಭಯಪಡುತ್ತಿರುವೆನು.'

قُل لَّوۡ شَآءَ ٱللَّهُ مَا تَلَوۡتُهُۥ عَلَيۡكُمۡ وَلَآ
أَدۡرَىٰكُم بِهِۦۖ فَقَدۡ لَبِثۡتُ فِيكُمۡ عُمُرٗا
مِّن قَبۡلِهِۦٓۚ أَفَلَا تَعۡقِلُونَ ﴿١٦﴾

**16.** ಹೇಳಿರಿ: 'ಅಲ್ಲಾಹು ಇಚ್ಛಿಸಿದ್ದರೆ ನಾನಿದನ್ನು ನಿಮಗೆ ಓದಿಕೊಡುತ್ತಿರಲಿಲ್ಲ ಮತ್ತು ನಿಮಗಿದನ್ನು ಅವನು ತಿಳಿಸಿಕೊಡುತ್ತಲೂ ಇರಲಿಲ್ಲ. ಇದಕ್ಕಿಂತ ಮುಂಚೆ ನಾನು ನಿಮ್ಮೊಂದಿಗೆ ಬಹಳ ಕಾಲದವರೆಗೆ ಬದುಕಿದ್ದೆ.[1] ನೀವು ಚಿಂತಿಸುವುದಿಲ್ಲವೇ?'

1 ಮುಹಮ್ಮದ್ (ﷺ)ರವರನ್ನು ಪ್ರವಾದಿಯಾಗಿ ನಿಯೋಗಿಸಲಾಗಿದ್ದು ಅವರ ನಲ್ವತ್ತನೇ ವಯಸ್ಸಿನಲ್ಲಾಗಿತ್ತು.

17. ಹೀಗಿರುವಾಗ ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದವನಿಗಿಂತ ಅಥವಾ ಅವನ ದೃಷ್ಟಾಂತಗಳನ್ನು ನಿಷೇಧಿಸಿದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಖಂಡಿತವಾಗಿಯೂ ಅಪರಾಧಿಗಳು ಯಶಸ್ವಿಯಾಗಲಾರರು.

فَمَنْ أَظْلَمُ مِمَّنِ ٱفْتَرَىٰ عَلَى ٱللَّهِ كَذِبًا أَوْ كَذَّبَ بِـَٔايَٰتِهِۦٓ ۚ إِنَّهُۥ لَا يُفْلِحُ ٱلْمُجْرِمُونَ ١٧

18. ಅಲ್ಲಾಹುವಿನ ಹೊರತು ತಮಗೆ ಹಾನಿಯಾಗಲಿ, ಲಾಭವಾಗಲಿ ಮಾಡದವರನ್ನು ಅವರು ಆರಾಧಿಸುತ್ತಿರುವರು. 'ಇವರು (ಆರಾಧ್ಯರು) ಅಲ್ಲಾಹುವಿನ ಬಳಿ ನಮ್ಮ ಶಿಫಾರಸ್ಸುಗಾರರಾಗಿರುವರು' ಎಂದು ಅವರು ಹೇಳುವರು. (ಓ ಪ್ರವಾದಿಯವರೇ!) ಹೇಳಿರಿ: 'ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ಅಲ್ಲಾಹು ಅರಿಯದಿರುವುದನ್ನು ನೀವು ಅವನಿಗೆ ತಿಳಿಸಿಕೊಡುತ್ತಿರುವಿರಾ?'[1] ಅವರು ಸಹಭಾಗಿತ್ವ ಮಾಡುವುದರಿಂದ ಅವನು ಎಷ್ಟೋ ಪರಿಪಾವನನೂ ಅತ್ಯುನ್ನತನೂ ಆಗಿರುವನು.

وَيَعْبُدُونَ مِن دُونِ ٱللَّهِ مَا لَا يَضُرُّهُمْ وَلَا يَنفَعُهُمْ وَيَقُولُونَ هَٰٓؤُلَآءِ شُفَعَٰٓؤُنَا عِندَ ٱللَّهِ ۚ قُلْ أَتُنَبِّـُٔونَ ٱللَّهَ بِمَا لَا يَعْلَمُ فِى ٱلسَّمَٰوَٰتِ وَلَا فِى ٱلْأَرْضِ ۚ سُبْحَٰنَهُۥ وَتَعَٰلَىٰ عَمَّا يُشْرِكُونَ ١٨

19. ಮನುಷ್ಯರು ಏಕೈಕ ಸಮುದಾಯವಲ್ಲದೆ ಇನ್ನೇನೂ ಆಗಿರಲಿಲ್ಲ. ತರುವಾಯ ಅವರು ಭಿನ್ನಭಿನ್ನರಾದರು.[2] ತಮ್ಮ ರಬ್‌ನ ವತಿಯಿಂದ ಒಂದು ವಚನವು[3] ಪೂರ್ವಭಾವಿಯಾಗಿ ಇಲ್ಲದಿರುತ್ತಿದ್ದರೆ ಅವರು

وَمَا كَانَ ٱلنَّاسُ إِلَّآ أُمَّةً وَٰحِدَةً فَٱخْتَلَفُوا۟ ۚ وَلَوْلَا كَلِمَةٌ سَبَقَتْ مِن رَّبِّكَ لَقُضِىَ بَيْنَهُمْ فِيمَا فِيهِ يَخْتَلِفُونَ ١٩

---

ಅಂದಿನಿಂದ ಅವರಿಗೆ ದಿವ್ಯಸಂದೇಶ ಸಿಗುತ್ತಿತ್ತು. ಅದಕ್ಕಿಂತ ಮುಂಚಿನ ಅವರ ಜೀವನ ಮಕ್ಕಾ ನಿವಾಸಿಗಳಿಗೆ ಸುಪರಿಚಿತವಾಗಿತ್ತು. ಅವರು ಅದಕ್ಕಿಂತ ಮುಂಚೆ ಅಲ್ಲಾಹುವಿನ ಬಗ್ಗೆಯಾಗಲಿ ಅಥವಾ ಗ್ರಂಥದ ಬಗ್ಗೆಯಾಗಲಿ ಏನೊಂದೂ ಮಾತನಾಡಿರಲಿಲ್ಲ.

1 ಅಲ್ಲಾಹುವಿನ ಬಳಿ ಶಿಫಾರಸ್ಸು ಮಾಡಿ ಉದ್ದೇಶ ಈಡೇರಿಸಿಕೊಡುವಂತಹವರು ಯಾರಾದರೂ ಇರುವುದಾದರೆ ಅದನ್ನು ಅಲ್ಲಾಹು ತಿಳಿದಿರಲೇಬೇಕು. ಆ ಶಿಫಾರಸ್ಸುಗಾರರೊಂದಿಗೆ ಪ್ರಾರ್ಥಿಸಬೇಕು ಎಂದಾಗಿದ್ದರೆ ಅಲ್ಲಾಹು ಅದನ್ನು ನಮಗೆ ತಿಳಿಸಿಕೊಡುತ್ತಿದ್ದನು. ಆದರೆ ಬಹುದೇವಾರಾಧಕರ ಸಮರ್ಥನೆಯು ಪ್ರಮಾಣಬದ್ಧವಲ್ಲ, ಬದಲಾಗಿ ಅಂಧಾನುಕರಣೆ ಮಾತ್ರವಾಗಿದೆ.

2 ಮನುಷ್ಯರು ಶುದ್ಧಪ್ರಕೃತಿಯಲ್ಲಿ ನೆಲೆನಿಂತಿದ್ದಾಗ ಅವರ ದೃಷ್ಟಿಕೋನವು ಏಕೈಕ ಅಲ್ಲಾಹು, ಏಕೈಕ ಸಮುದಾಯ ಎಂದಾಗಿತ್ತು. ಆದರೆ ತರುವಾಯ ಅವಿಶ್ವಾಸ ಮತ್ತು ಅಧಾರ್ಮಿಕತೆ ಅವರ ಮಧ್ಯೆ ಒಡಕನ್ನುಂಟುಮಾಡಿತು.

3 ಇಲ್ಲಿ 'ವಚನ' ಎಂಬುದರ ತಾತ್ಪರ್ಯವು ವಿಶ್ವಾಸಿಗಳಿಗೂ ಅವಿಶ್ವಾಸಿಗಳಿಗೂ, ಧರ್ಮನಿಷ್ಠರಿಗೂ ಧರ್ಮನಿಷೇಧಿಗಳಿಗೂ ಇಹಲೋಕದಲ್ಲಿ ಜೀವಿಸುವ ಅವಕಾಶವನ್ನು ನೀಡಲಾಗುವುದು ಮತ್ತು ಅಂತಿಮ ವಿಚಾರಣೆಯನ್ನು ಪರಲೋಕಕ್ಕೆ ಮುಂದೂಡಲಾಗುವುದು ಎಂಬ ಅಲ್ಲಾಹುವಿನ ವಿಧಿಯಾಗಿದೆ.

ಭಿನ್ನರಾಗಿರುವ ವಿಷಯದಲ್ಲಿ (ಈಗಾಗಲೇ) ಅವರ ಮಧ್ಯೆ ತೀರ್ಪು ನೀಡಲಾಗಿರುತ್ತಿತ್ತು.

وَيَقُولُونَ لَوۡلَآ أُنزِلَ عَلَيۡهِ ءَايَةٞ مِّن رَّبِّهِۦۖ فَقُلۡ إِنَّمَا ٱلۡغَيۡبُ لِلَّهِ فَٱنتَظِرُوٓاْ إِنِّي مَعَكُم مِّنَ ٱلۡمُنتَظِرِينَ ٢٠

**20.** 'ಅವರಿಗೆ (ಪ್ರವಾದಿಯವರಿಗೆ) ಅವರ ರಬ್‌ನ ವತಿಯಿಂದ ಒಂದು ದೃಷ್ಟಾಂತವನ್ನು (ನೇರವಾಗಿ) ಇಳಿಸಿಕೊಡಲಾಗಿಲ್ಲವೇಕೆ?' ಎಂದು ಅವರು ಕೇಳುವರು. (ಓ ಪ್ರವಾದಿಯವರೇ!) ತಾವು ಹೇಳಿರಿ: 'ಅಗೋಚರ ಜ್ಞಾನವಿರುವುದು ಅಲ್ಲಾಹುವಿಗೆ ಮಾತ್ರವಾಗಿದೆ.[1] ಆದ್ದರಿಂದ ನೀವು ಕಾಯುತ್ತಿರಿ. ಖಂಡಿತವಾಗಿಯೂ ನಿಮ್ಮೊಂದಿಗೆ ಕಾಯುತ್ತಿರುವವರ ಪೈಕಿ ನಾನೂ ಇರುವೆನು.'

وَإِذَآ أَذَقۡنَا ٱلنَّاسَ رَحۡمَةٗ مِّنۢ بَعۡدِ ضَرَّآءَ مَسَّتۡهُمۡ إِذَا لَهُم مَّكۡرٞ فِيٓ ءَايَاتِنَاۚ قُلِ ٱللَّهُ أَسۡرَعُ مَكۡرًاۚ إِنَّ رُسُلَنَا يَكۡتُبُونَ مَا تَمۡكُرُونَ ٢١

**21.** ಜನರಿಗೆ ಸಂಕಷ್ಟ ಬಾಧಿಸಿದ ಬಳಿಕ ನಾವವರಿಗೆ ಅನುಗ್ರಹವನ್ನು ಸವಿಯುವಂತೆ ಮಾಡಿದರೆ, ಅಗೋ ಅವರು ನಮ್ಮ ದೃಷ್ಟಾಂತಗಳ ವಿಷಯದಲ್ಲಿ ಕುತಂತ್ರ ಹೂಡುವರು.[2] ಹೇಳಿರಿ: 'ಅಲ್ಲಾಹು ಕ್ಷಿಪ್ರಗತಿಯಲ್ಲಿ ತಂತ್ರ ಹೂಡುವವನಾಗಿರು ವನು.' ನೀವು ಕುತಂತ್ರ ಹೂಡುತ್ತಿರುವುದನ್ನು ಖಂಡಿತವಾಗಿಯೂ ನಮ್ಮ ದೂತರು[3] ದಾಖಲಿಸುತ್ತಿರುವರು.

هُوَ ٱلَّذِي يُسَيِّرُكُمۡ فِي ٱلۡبَرِّ وَٱلۡبَحۡرِۖ حَتَّىٰٓ إِذَا كُنتُمۡ فِي ٱلۡفُلۡكِ وَجَرَيۡنَ بِهِم بِرِيحٖ طَيِّبَةٖ وَفَرِحُواْ بِهَا جَآءَتۡهَا رِيحٌ عَاصِفٞ وَجَآءَهُمُ ٱلۡمَوۡجُ مِن كُلِّ مَكَانٖ وَظَنُّوٓاْ أَنَّهُمۡ أُحِيطَ بِهِمۡ دَعَوُاْ ٱللَّهَ مُخۡلِصِينَ لَهُ ٱلدِّينَ لَئِنۡ أَنجَيۡتَنَا مِنۡ هَٰذِهِۦ لَنَكُونَنَّ

**22.** ನೀವು ನೆಲದಲ್ಲಿ ಮತ್ತು ಸಮುದ್ರದಲ್ಲಿ ಸಂಚರಿಸುವಂತೆ ಮಾಡುವವನು ಅವನಾಗಿರುವನು. ಕೊನೆಗೆ ನೀವು ಹಡಗಿನಲ್ಲಿರುವಾಗ ಮತ್ತು ಒಂದು ಉತ್ತಮ ಮಾರುತದಿಂದಾಗಿ ಅದು ಯಾತ್ರಿಕರನ್ನು ಹೊತ್ತು ಚಲಿಸುತ್ತಿರುವಾಗ ಮತ್ತು ಅವರು ಸಂಭ್ರಮಪಡುತ್ತಿರುವಾಗ ಒಂದು

1 ತಾನು ಇಚ್ಛಿಸುವಾಗಲೆಲ್ಲಾ ಪವಾಡವನ್ನು ತೋರಿಸಲು ಯಾವ ಪ್ರವಾದಿಗೂ ಸಾಧ್ಯವಿಲ್ಲ. ಅಲ್ಲಾಹು ಇಚ್ಛಿಸುವಾಗ ಮಾತ್ರ ಅವನು ಅವರ ಮೂಲಕ ಅದನ್ನು ತೋರಿಸಿಕೊಡುವನು.

2 ಉತ್ತಮ ಬೆಳೆ, ಸಮೃದ್ಧ ಪಶುಸಂಪತ್ತು, ಲಾಭಕರ ವ್ಯಾಪಾರ ಇತ್ಯಾದಿಗಳು ಲಭ್ಯವಾದಾಗ ಅದು ಅಲ್ಲಾಹುವಿನ ಅನುಗ್ರಹವೆಂದು ಬಗೆದು ಅವನಿಗೆ ಕೃತಜ್ಞತೆ ಸಲ್ಲಿಸುವುದಕ್ಕೆ ಬದಲಾಗಿ ಯಾವುದಾದರೂ ನಕ್ಷತ್ರದ ಅಥವಾ ದೇವ ದೇವತೆಯರ ಕೃಪೆಯಾಗಿ ಪರಿಗಣಸುವುದು ಬಹುದೇವಾರಾಧಕರ ಕುತಂತ್ರವಾಗಿದೆ.

3 ಅಲ್ಲಾಹು ನೇಮಕಗೊಳಿಸಿದ ಮಲಕ್‌ಗಳು ಮನುಷ್ಯರ ಸರ್ವ ಕರ್ಮಗಳನ್ನೂ ದಾಖಲಿಸುತ್ತಿರುವರು.

مِنَ ٱلشَّـٰكِرِينَ ﴿٢٢﴾

ಚಂಡಮಾರುತವು ಅದರೆಡೆಗೆ ಬೀಸಿತು. ಸರ್ವ ದಿಕ್ಕುಗಳಿಂದಲೂ ಅಲೆಗಳು ಅವರೆಡೆಗೆ ಅಪ್ಪಳಿಸಿದವು. ತಾವು ಆವರಿಸಲ್ಪಟ್ಟಿರುವೆವು ಎಂದು ಅವರಿಗೆ ಖಾತ್ರಿಯಾದಾಗ ಶರಣಾಗತಿಯನ್ನು ಅಲ್ಲಾಹುವಿಗೆ ನಿಷ್ಕಳಂಕಗೊಳಿಸಿ 'ನೀನು ನಮ್ಮನ್ನು ಇದರಿಂದ ರಕ್ಷಿಸುವುದಾದರೆ ಖಂಡಿತವಾಗಿಯೂ ನಾವು ಕೃತಜ್ಞತೆ ಸಲ್ಲಿಸುವವರೊಂದಿಗೆ ಸೇರಿದವರಾಗುವೆವು' ಎಂದು ಅವರು ಅವನೊಂದಿಗೆ ಪ್ರಾರ್ಥಿಸಿದರು.

فَلَمَّآ أَنجَىٰهُمۡ إِذَا هُمۡ يَبۡغُونَ فِي ٱلۡأَرۡضِ بِغَيۡرِ ٱلۡحَقِّۗ يَٰٓأَيُّهَا ٱلنَّاسُ إِنَّمَا بَغۡيُكُمۡ عَلَىٰٓ أَنفُسِكُمۖ مَّتَٰعَ ٱلۡحَيَوٰةِ ٱلدُّنۡيَاۖ ثُمَّ إِلَيۡنَا مَرۡجِعُكُمۡ فَنُنَبِّئُكُم بِمَا كُنتُمۡ تَعۡمَلُونَ ﴿٢٣﴾

23. ತರುವಾಯ ಅವನು ಅವರನ್ನು ರಕ್ಷಿಸಿದಾಗ, ಅಗೋ ಅವರು ಅನ್ಯಾಯವಾಗಿ ಭೂಮಿಯಲ್ಲಿ ಅತಿಕ್ರಮವೆಸಗುವರು. ಓ ಮನುಷ್ಯರೇ! ನಿಮ್ಮ ಅತಿಕ್ರಮವು ಸ್ವತಃ ನಿಮ್ಮ ಮೇಲೆಯೇ ಆಗಿದೆ. (ನೀವು ತನ್ಮೂಲಕ ಪಡೆಯುತ್ತಿರುವುದು) ಐಹಿಕ ಸುಖವನ್ನು ಮಾತ್ರವಾಗಿದೆ. ತರುವಾಯ ನಿಮ್ಮ ಮರಳುವಿಕೆಯು ನಮ್ಮೆಡೆಗಾಗಿರುವುದು. ಆಗ ನೀವು ಮಾಡಿಕೊಂಡಿರುವುದರ ಕುರಿತು ನಾವು ನಿಮಗೆ ತಿಳಿಸಿಕೊಡುವೆವು.

إِنَّمَا مَثَلُ ٱلۡحَيَوٰةِ ٱلدُّنۡيَا كَمَآءٍ أَنزَلۡنَٰهُ مِنَ ٱلسَّمَآءِ فَٱخۡتَلَطَ بِهِۦ نَبَاتُ ٱلۡأَرۡضِ مِمَّا يَأۡكُلُ ٱلنَّاسُ وَٱلۡأَنۡعَٰمُ حَتَّىٰٓ إِذَآ أَخَذَتِ ٱلۡأَرۡضُ زُخۡرُفَهَا وَٱزَّيَّنَتۡ وَظَنَّ أَهۡلُهَآ أَنَّهُمۡ قَٰدِرُونَ عَلَيۡهَآ أَتَىٰهَآ أَمۡرُنَا لَيۡلًا أَوۡ نَهَارٗا فَجَعَلۡنَٰهَا حَصِيدٗا كَأَن لَّمۡ تَغۡنَ بِٱلۡأَمۡسِۚ كَذَٰلِكَ نُفَصِّلُ ٱلۡأٓيَٰتِ لِقَوۡمٖ يَتَفَكَّرُونَ ﴿٢٤﴾

24. ನಾವು ಆಕಾಶದಿಂದ ನೀರನ್ನು ಇಳಿಸಿದೆವು. ತನ್ಮೂಲಕ ಮನುಷ್ಯರು ಮತ್ತು ಜಾನುವಾರುಗಳು ಸೇವಿಸುವ ಭೂಮಿಯ ಸಸ್ಯಗಳು ಅದರೊಂದಿಗೆ ಮಿಶ್ರಿತವಾಗಿ ಬೆಳೆದವು. ತರುವಾಯ ಭೂಮಿ ತನ್ನ ಶೃಂಗಾರವನ್ನು ತೊಟ್ಟು ಕಂಗೊಳಿಸಿದಾಗ ಮತ್ತು ಅವೆಲ್ಲವನ್ನೂ ವಶಪಡಿಸಲು ತಮಗೆ ಸಾಧ್ಯವಾಯಿತೆಂದು ಅದರ ಒಡೆಯರು ಭಾವಿಸಿದಾಗ, ಒಂದು ರಾತ್ರಿಯಲ್ಲಿ ಅಥವಾ ಹಗಲಲ್ಲಿ ನಮ್ಮ ಆಜ್ಞೆಯು ಅದರೆಡೆಗೆ ಬಂದು ನಿನ್ನೆ ಅವೊಂದೂ ಅಲ್ಲಿ ಅಸ್ತಿತ್ವದಲ್ಲಿರಲೇ ಇಲ್ಲ ಎಂಬಂತೆ ನಾವು ಅವುಗಳನ್ನು ನಿರ್ನಾಮವಾದ ಸ್ಥಿತಿಯಲ್ಲಾಗಿಸುತ್ತೇವೆ. ಐಹಿಕ ಜೀವನದ ಉದಾಹರಣೆಯು ಈ ರೀತಿಯಾಗಿದೆ.

ಚಿಂತಿಸುವ ಜನರಿಗಾಗಿ ನಾವು ಹೀಗೆ ದೃಷ್ಟಾಂತಗಳನ್ನು ವಿವರಿಸಿಕೊಡುವೆವು.

**25.** ಅಲ್ಲಾಹು ಶಾಂತಿಯ ಭವನದೆಡೆಗೆ ಆಹ್ವಾನಿಸುತ್ತಿರುವನು. ತಾನಿಚ್ಛಿಸುವವರನ್ನು ಅವನು ನೇರವಾದ ಮಾರ್ಗದೆಡೆಗೆ ಮುನ್ನಡೆಸುವನು.

وَٱللَّهُ يَدۡعُوٓاْ إِلَىٰ دَارِ ٱلسَّلَٰمِ وَيَهۡدِي مَن يَشَآءُ إِلَىٰ صِرَٰطٖ مُّسۡتَقِيمٖ ﴿٢٥﴾

**26.** ಸತ್ಕರ್ಮವೆಸಗಿದವರಿಗೆ ಸ್ವರ್ಗವಿದೆ ಮತ್ತು ಹೆಚ್ಚುವರಿಯೂ ಇದೆ.[1] ಅಂಧಕಾರವಾಗಲಿ, ಅಪಮಾನವಾಗಲಿ ಅವರ ಮುಖಗಳನ್ನು ಆವರಿಸದು. ಸ್ವರ್ಗವಾಸಿಗಳು ಅವರೇ ಆಗಿರುವರು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು.

۞لِّلَّذِينَ أَحۡسَنُواْ ٱلۡحُسۡنَىٰ وَزِيَادَةٞۖ وَلَا يَرۡهَقُ وُجُوهَهُمۡ قَتَرٞ وَلَا ذِلَّةٌۚ أُوْلَٰٓئِكَ أَصۡحَٰبُ ٱلۡجَنَّةِۖ هُمۡ فِيهَا خَٰلِدُونَ ﴿٢٦﴾

**27.** ಪಾಪಗಳನ್ನು ಸಂಪಾದಿಸಿದವರಿಗೆ ಪಾಪಕ್ಕೆ ಸಮಾನವಾದ ಪ್ರತಿಫಲವಿರುವುದು. ಅಪಮಾನವು ಅವರನ್ನು ಆವರಿಸುವುದು. ಅಲ್ಲಾಹುವಿನಿಂದ ಅವರನ್ನು ರಕ್ಷಿಸುವವರು ಯಾರೂ ಇರಲಾರರು. ಅವರ ಮುಖಗಳು ಕಾರ್ಗತ್ತಲ ರಾತ್ರಿಯ ತುಣುಕುಗಳು ಹೊದಿಸಲಾದಂತಿರುವುವು. ನರಕವಾಸಿಗಳು ಅವರೇ ಆಗಿರುವರು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು.

وَٱلَّذِينَ كَسَبُواْ ٱلسَّيِّـَٔاتِ جَزَآءُ سَيِّئَةِۭ بِمِثۡلِهَا وَتَرۡهَقُهُمۡ ذِلَّةٞۖ مَّا لَهُم مِّنَ ٱللَّهِ مِنۡ عَاصِمٖۖ كَأَنَّمَآ أُغۡشِيَتۡ وُجُوهُهُمۡ قِطَعٗا مِّنَ ٱلَّيۡلِ مُظۡلِمًاۚ أُوْلَٰٓئِكَ أَصۡحَٰبُ ٱلنَّارِۖ هُمۡ فِيهَا خَٰلِدُونَ ﴿٢٧﴾

**28.** ನಾವು ಅವರೆಲ್ಲರನ್ನೂ ಒಟ್ಟುಗೂಡಿಸಿ, ತರುವಾಯ ನಾವು ಬಹುದೇವವಿಶ್ವಾಸಿಗಳೊಂದಿಗೆ 'ನೀವೂ ನಿಮ್ಮ ಸಹಭಾಗಿಗಳೂ ಅಲ್ಲೇ ನಿಲ್ಲಿರಿ' ಎಂದು ಹೇಳುವ ದಿನ! ನಂತರ ನಾವವರನ್ನು ಪರಸ್ಪರ ಬೇರ್ಪಡಿಸುವೆವು. ಆಗ ಅವರು ಸಹಭಾಗಿಗಳನ್ನಾಗಿ ಮಾಡಿದವರು ಹೇಳುವರು: 'ನೀವು ಆರಾಧಿಸುತ್ತಿದ್ದುದು ನಮ್ಮನ್ನಾಗಿರಲಿಲ್ಲ.

وَيَوۡمَ نَحۡشُرُهُمۡ جَمِيعٗا ثُمَّ نَقُولُ لِلَّذِينَ أَشۡرَكُواْ مَكَانَكُمۡ أَنتُمۡ وَشُرَكَآؤُكُمۡۚ فَزَيَّلۡنَا بَيۡنَهُمۡۖ وَقَالَ شُرَكَآؤُهُم مَّا كُنتُمۡ إِيَّانَا تَعۡبُدُونَ ﴿٢٨﴾

1 ಮುಸ್ಲಿಮ್ (181)ನಲ್ಲಿ ವರದಿಯಾಗಿರುವ ಹದೀಸಿನ ಪ್ರಕಾರ ಪ್ರಸ್ತುತಃ ಹೆಚ್ಚುವರಿಯು ಸ್ವರ್ಗಕ್ಕೆ ಪ್ರವೇಶಗೈದವರಿಗೆ ದೊರೆಯುವ ಅಲ್ಲಾಹುವಿನ ಆದರಣೀಯ ಮುಖದ ದರ್ಶನವಾಗಿದೆ.

29. ಆದ್ದರಿಂದ ನಮ್ಮ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅಲ್ಲಾಹು ಸಾಕು. ನಿಮ್ಮ ಆರಾಧನೆಯ ಕುರಿತು ನಾವು ಸಂಪೂರ್ಣ ಅಜ್ಞರಾಗಿದ್ದೆವು'.

فَكَفَىٰ بِٱللَّهِ شَهِيدًۢا بَيۡنَنَا وَبَيۡنَكُمۡ إِن كُنَّا عَنۡ عِبَادَتِكُمۡ لَغَٰفِلِينَ ٢٩

30. ಅಲ್ಲಿ ಪ್ರತಿಯೊಂದು ಶರೀರವೂ ತನ್ನ ಗತಕರ್ಮಗಳನ್ನು ಪರೀಕ್ಷಿಸಿ ತಿಳಿಯುವುದು. ತಮ್ಮ ನೈಜ ರಕ್ಷಕನಾದ ಅಲ್ಲಾಹುವಿನೆಡೆಗೆ ಅವರನ್ನು ಮರಳಿಸಲಾಗುವುದು. ಅವರು ಹೆಣೆಯುತ್ತಿದ್ದುದೆಲ್ಲವೂ ಅವರಿಂದ ಅಪ್ರತ್ಯಕ್ಷವಾಗುವುವು.

هُنَالِكَ تَبۡلُواْ كُلُّ نَفۡسٖ مَّآ أَسۡلَفَتۡۚ وَرُدُّوٓاْ إِلَى ٱللَّهِ مَوۡلَىٰهُمُ ٱلۡحَقِّۖ وَضَلَّ عَنۡهُم مَّا كَانُواْ يَفۡتَرُونَ ٣٠

31. ಹೇಳಿರಿ: 'ಆಕಾಶದಿಂದ ಮತ್ತು ಭೂಮಿಯಿಂದ ನಿಮಗೆ ಅನ್ನಾಧಾರವನ್ನು ಒದಗಿಸುವವನು ಯಾರು?ಶ್ರವಣವನ್ನೂ ದೃಷ್ಟಿಯನ್ನೂ ಅಧೀನದಲ್ಲಿರಿಸಿದವನು ಯಾರು? ನಿರ್ಜೀವಿಯಿಂದ ಜೀವಿಯನ್ನು ಮತ್ತು ಜೀವಿಯಿಂದ ನಿರ್ಜೀವಿಯನ್ನು ಹೊರತರುವವನು ಯಾರು? ಕಾರ್ಯ ನಿಯಂತ್ರಣ ಮಾಡುವವನು ಯಾರು?' ಅವರು ಹೇಳುವರು: 'ಅಲ್ಲಾಹು'.(1) ಹೇಳಿರಿ: 'ಆದರೂ ನೀವು ಭಯಭಕ್ತಿ ಪಾಲಿಸಲಾರಿರೇ?'

قُلۡ مَن يَرۡزُقُكُم مِّنَ ٱلسَّمَآءِ وَٱلۡأَرۡضِ أَمَّن يَمۡلِكُ ٱلسَّمۡعَ وَٱلۡأَبۡصَٰرَ وَمَن يُخۡرِجُ ٱلۡحَيَّ مِنَ ٱلۡمَيِّتِ وَيُخۡرِجُ ٱلۡمَيِّتَ مِنَ ٱلۡحَيِّ وَمَن يُدَبِّرُ ٱلۡأَمۡرَۚ فَسَيَقُولُونَ ٱللَّهُۚ فَقُلۡ أَفَلَا تَتَّقُونَ ٣١

32. ನಿಮ್ಮ ನೈಜ ರಬ್ಬಾದ ಅಲ್ಲಾಹು ಅವನೇ ಆಗಿರುವನು. ಆದ್ದರಿಂದ ಸತ್ಯದಾಚೆಗೆ ದುರ್ಮಾರ್ಗವಲ್ಲದೆ ಇನ್ನೇನಿದೆ? ಹೀಗಿದ್ದೂ ನೀವು ಹೇಗೆ ತಪ್ಪಿಸಲ್ಪಡುತ್ತಿರುವಿರಿ?

فَذَٰلِكُمُ ٱللَّهُ رَبُّكُمُ ٱلۡحَقُّۖ فَمَاذَا بَعۡدَ ٱلۡحَقِّ إِلَّا ٱلضَّلَٰلُۖ فَأَنَّىٰ تُصۡرَفُونَ ٣٢

33. ಹೀಗೆ ಧಿಕ್ಕಾರವೆಸಗಿದವರ ವಿಷಯದಲ್ಲಿ ಅವರು ವಿಶ್ವಾಸವಿಡಲಾರರು ಎಂಬ ತಮ್ಮ ರಬ್‌ನ ವಚನವು ಸತ್ಯವಾಗಿ ಪರಿಣಮಿಸಿದೆ.

كَذَٰلِكَ حَقَّتۡ كَلِمَتُ رَبِّكَ عَلَى ٱلَّذِينَ فَسَقُوٓاْ أَنَّهُمۡ لَا يُؤۡمِنُونَ ٣٣

34. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸಹಭಾಗಿಗಳನ್ನಾಗಿ ಮಾಡಿಕೊಂಡವರ ಪೈಕಿ ಸೃಷ್ಟಿಯನ್ನು ಆರಂಭಿಸುವವರು ಹಾಗೂ

قُلۡ هَلۡ مِن شُرَكَآئِكُم مَّن يَبۡدَؤُاْ ٱلۡخَلۡقَ ثُمَّ يُعِيدُهُۥۚ قُلِ ٱللَّهُ يَبۡدَؤُاْ ٱلۡخَلۡقَ

1 ಜಗತ್ತಿನಲ್ಲಿರುವ ಬಹುದೇವಾರಾಧಕರ ಪೈಕಿ ಹೆಚ್ಚಿನವರು ಏಕೈಕ ಜಗದೊಡೆಯನ ಪ್ರಭುತ್ವವನ್ನು ಅಂಗೀಕರಿಸುವವರಾಗಿದ್ದಾರೆ.

ثُمَّ يُعِيدُهُۥۖ فَأَنَّىٰ تُؤْفَكُونَ ٣٤

ನಂತರ ಅದನ್ನು ಪುನರಾವರ್ತಿಸುವವರು ಯಾರಾದರೂ ಇರುವರೇ?' ಹೇಳಿರಿ: 'ಅಲ್ಲಾಹು ಸೃಷ್ಟಿಯನ್ನು ಆರಂಭಿಸುವನು ಹಾಗೂ ನಂತರ ಅದನ್ನು ಪುನರಾವರ್ತಿಸುವನು'. ಹೀಗಿದ್ದೂ ನೀವು ಹೇಗೆ ತಪ್ಪಿಸಲ್ಪಡುತ್ತಿರುವಿರಿ?

قُلْ هَلْ مِن شُرَكَآئِكُم مَّن يَهْدِىٓ إِلَى ٱلْحَقِّۚ قُلِ ٱللَّهُ يَهْدِى لِلْحَقِّۗ أَفَمَن يَهْدِىٓ إِلَى ٱلْحَقِّ أَحَقُّ أَن يُتَّبَعَ أَمَّن لَّا يَهِدِّىٓ إِلَّآ أَن يُهْدَىٰۖ فَمَا لَكُمْ كَيْفَ تَحْكُمُونَ ٣٥

**35.** (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸಹಭಾಗಿಗಳನ್ನಾಗಿ ಮಾಡಿಕೊಂಡವರ ಪೈಕಿ ಸತ್ಯದೆಡೆಗೆ ಮುನ್ನಡೆಸುವವರು ಯಾರಾದರೂ ಇರುವರೇ?' ಹೇಳಿರಿ: 'ಅಲ್ಲಾಹು ಸತ್ಯದೆಡೆಗೆ ಮುನ್ನಡೆಸುವನು. ಹಾಗಾದರೆ ಅನುಸರಿಸಲು ಹೆಚ್ಚು ಅರ್ಹನಾಗಿರುವುದು ಸತ್ಯದೆಡೆಗೆ ಮುನ್ನಡೆಸುವವನೇ ಅಥವಾ ಯಾರಾದರೂ ದಾರಿತೋರಿಸದ ವಿನಾ ಸನ್ಮಾರ್ಗವನ್ನು ಕಾಣಲು ಸಾಧ್ಯವಾಗದವನೇ? ಹಾಗಾದರೆ ನಿಮಗೇನಾಗಿದೆ? ನೀವು ಹೇಗೆ ತೀರ್ಪು ನೀಡುವಿರಿ?'

وَمَا يَتَّبِعُ أَكْثَرُهُمْ إِلَّا ظَنًّاۚ إِنَّ ٱلظَّنَّ لَا يُغْنِى مِنَ ٱلْحَقِّ شَيْـًٔاۚ إِنَّ ٱللَّهَ عَلِيمٌۢ بِمَا يَفْعَلُونَ ٣٦

**36.** ಅವರ ಪೈಕಿ ಹೆಚ್ಚಿನವರೂ ಊಹೆಯನ್ನೇ ವಿನಾ ಅನುಸರಿಸುತ್ತಿಲ್ಲ. ಖಂಡಿತವಾಗಿಯೂ ಸತ್ಯದ ಸ್ಥಾನದಲ್ಲಿ ಊಹೆಯು ಕಿಂಚಿತ್ತೂ ಪರ್ಯಾಪ್ತವಾಗಲಾರದು. ಅವರು ಮಾಡುತ್ತಿರುವುದರ ಕುರಿತು ಖಂಡಿತವಾಗಿಯೂ ಅಲ್ಲಾಹು ಅರಿವುಳ್ಳವನಾಗಿರುವನು.

وَمَا كَانَ هَٰذَا ٱلْقُرْءَانُ أَن يُفْتَرَىٰ مِن دُونِ ٱللَّهِ وَلَٰكِن تَصْدِيقَ ٱلَّذِى بَيْنَ يَدَيْهِ وَتَفْصِيلَ ٱلْكِتَٰبِ لَا رَيْبَ فِيهِ مِن رَّبِّ ٱلْعَٰلَمِينَ ٣٧

**37.** ಈ ಕುರ್‌ಆನ್ ಅಲ್ಲಾಹುವಿನಿಂದಾಗಿದೆಯೇ ಹೊರತು (ಇನ್ನಾರಿಂದಲೂ) ಹೆಣೆದು ರಚಿಸಲಾಗುವಂತದ್ದಲ್ಲ. ಆದರೆ ಇದು ಇದಕ್ಕಿಂತ ಮುಂಚಿನ ಗ್ರಂಥಗಳ ದೃಢೀಕರಣವೂ, ಗ್ರಂಥದ (ನಿಯಮಗಳ) ವಿಶದೀಕರಣವೂ ಆಗಿದೆ. ಇದರಲ್ಲಿ ಯಾವುದೇ ಸಂದೇಹವಿಲ್ಲ. ಇದು ಸರ್ವಲೋಕಗಳ ರಬ್‌ನ ವತಿಯಿಂದಾಗಿದೆ.

أَمْ يَقُولُونَ ٱفْتَرَىٰهُۖ قُلْ فَأْتُوا۟ بِسُورَةٍ

**38.** ಅವರು (ಪ್ರವಾದಿಯವರು) ಇದನ್ನು ಸ್ವತಃ ರಚಿಸಿರುವರು ಎಂದು ಅವರು

ಹೇಳುತ್ತಿರುವರೇ? (ಓ ಪ್ರವಾದಿಯವರೇ!) ಹೇಳಿರಿ: 'ಹಾಗಾದರೆ ಇದಕ್ಕೆ ಸಮಾನವಾಗಿರುವ ಒಂದು ಅಧ್ಯಾಯವನ್ನು (ರಚಿಸಿ) ತನ್ನಿರಿ. ಅಲ್ಲಾಹುವಿನ ಹೊರತು ನಿಮಗೆ ಸಾಧ್ಯವಾಗುವ ಎಲ್ಲರನ್ನೂ ಅಹ್ವಾನಿಸಿರಿ. ನೀವು ಸತ್ಯಸಂಧರಾಗಿದ್ದರೆ!'

مِّثۡلِهِۦ وَٱدۡعُواْ مَنِ ٱسۡتَطَعۡتُم مِّن دُونِ ٱللَّهِ إِن كُنتُمۡ صَٰدِقِينَ ٣٨

39. ಅಲ್ಲ, ಯಾವುದನ್ನು ಅವರು ಸೂಕ್ಷ್ಮವಾಗಿ ಗ್ರಹಿಸಲಿಲ್ಲವೋ ಮತ್ತು ಯಾವುದರ ಅನುಭವ ಸಾಕ್ಷ್ಯವು ಅವರಡೆಗೆ ಬರಲಿಲ್ಲವೋ ಅದನ್ನು ಅವರು ನಿಷೇಧಿಸಿದರು. ಅವರಿಗಿಂತ ಮುಂಚಿನವರೂ ಹೀಗೆಯೇ ನಿಷೇಧಿಸಿದ್ದರು. ತರುವಾಯ ಆ ಅಕ್ರಮಿಗಳ ಪರ್ಯಾವಸಾನವು ಹೇಗಿತ್ತು ಎಂಬುದನ್ನು ನೋಡಿರಿ.

بَلۡ كَذَّبُواْ بِمَا لَمۡ يُحِيطُواْ بِعِلۡمِهِۦ وَلَمَّا يَأۡتِهِمۡ تَأۡوِيلُهُۥۚ كَذَٰلِكَ كَذَّبَ ٱلَّذِينَ مِن قَبۡلِهِمۡۖ فَٱنظُرۡ كَيۡفَ كَانَ عَٰقِبَةُ ٱلظَّٰلِمِينَ ٣٩

40. ಇದರಲ್ಲಿ (ಕುರ್‌ಆನ್‌ನಲ್ಲಿ) ವಿಶ್ವಾಸವಿಡುವವರು ಅವರಲ್ಲಿರುವರು. ಇದರಲ್ಲಿ ವಿಶ್ವಾಸವಿಡದವರೂ ಅವರಲ್ಲಿರುವರು.[1] ವಿನಾಶಕಾರಿಗಳ ಬಗ್ಗೆ ತಮ್ಮ ರಬ್ ಚೆನ್ನಾಗಿ ಅರಿತಿರುವನು.

وَمِنۡهُم مَّن يُؤۡمِنُ بِهِۦ وَمِنۡهُم مَّن لَّا يُؤۡمِنُ بِهِۦۚ وَرَبُّكَ أَعۡلَمُ بِٱلۡمُفۡسِدِينَ ٤٠

41. ಅವರು ತಮ್ಮನ್ನು ನಿಷೇಧಿಸುವುದಾದರೆ ತಾವು ಹೇಳಿರಿ: 'ನನಗಿರುವುದು ನನ್ನ ಕರ್ಮವಾಗಿದೆ ಮತ್ತು ನಿಮಗಿರುವುದು ನಿಮ್ಮ ಕರ್ಮವಾಗಿದೆ.[2] ನಾನೇನು ಮಾಡುತ್ತಿರುವೆನೋ ಅದರಿಂದ ನೀವು ವಿಮುಕ್ತರಾಗಿರುವಿರಿ ಮತ್ತು ನೀವೇನು ಮಾಡುತ್ತಿರುವಿರೋ ಅದರಿಂದ ನಾನು ವಿಮುಕ್ತನಾಗಿರುವೆನು'.

وَإِن كَذَّبُوكَ فَقُل لِّي عَمَلِي وَلَكُمۡ عَمَلُكُمۡۖ أَنتُم بَرِيٓـُٔونَ مِمَّآ أَعۡمَلُ وَأَنَا۠ بَرِيٓءٞ مِّمَّا تَعۡمَلُونَ ٤١

42. ತಾವು ಹೇಳುವುದನ್ನು ಕಿವಿಗೊಟ್ಟು ಕೇಳುವ ಕೆಲವರು ಅವರಲ್ಲಿರುವರು. ಆದರೆ ಕಿವುಡರನ್ನು ಅವರು ಚಿಂತಿಸದವರಾಗಿದ್ದರೂ ಸಹ, ಕೇಳಿಸುವಂತೆ ಮಾಡಲು ತಮ್ಮಿಂದ ಸಾಧ್ಯವೇ?

وَمِنۡهُم مَّن يَسۡتَمِعُونَ إِلَيۡكَۚ أَفَأَنتَ تُسۡمِعُ ٱلصُّمَّ وَلَوۡ كَانُواْ لَا يَعۡقِلُونَ ٤٢

1 ಕೆಲವರು ಆರಂಭದಲ್ಲಿ ನಿಷೇಧಿಸಿದರೂ ತರುವಾಯ ಸತ್ಯವನ್ನು ಗ್ರಹಿಸಿ ವಿಶ್ವಾಸಿಗಳಾಗುವರು. ಇತರ ಕೆಲವರು ಸತ್ಯನಿಷೇಧದಲ್ಲಿಯೇ ದೃಢವಾಗಿ ನಿಲ್ಲುವರು.

2 ಪ್ರತಿಯೊಬ್ಬನೂ ಅನುಭವಿಸುವುದು ತನ್ನ ಕರ್ಮಫಲವನ್ನು ಮಾತ್ರವಾಗಿದೆ.

43. ತಮ್ಮೆಡೆಗೆ ದಿಟ್ಟಿಸಿ ನೋಡುವ ಕೆಲವರು ಸಹ ಅವರಲ್ಲಿರುವರು. ಆದರೆ ಕುರುಡರಿಗೆ–ಅವರು ಕಣ್ತೆರೆದು ನೋಡುವ ಸ್ಥಿತಿಯಲ್ಲಿ ಇಲ್ಲದಿದ್ದರೂ ಸನ್ಮಾರ್ಗ ತೋರಿಸಲು ತಮಗೆ ಸಾಧ್ಯವೇ?[1]

وَمِنْهُم مَّن يَنظُرُ إِلَيْكَۚ أَفَأَنتَ تَهْدِى ٱلْعُمْىَ وَلَوْ كَانُوا۟ لَا يُبْصِرُونَ ﴿٤٣﴾

44. ಖಂಡಿತವಾಗಿಯೂ ಅಲ್ಲಾಹು ಮನುಷ್ಯರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾರನು. ಆದರೆ ಮನುಷ್ಯರು ಸ್ವತಃ ತಮ್ಮ ಮೇಲೆಯೇ ಅನ್ಯಾಯವೆಸಗುತ್ತಿರುವರು.

إِنَّ ٱللَّهَ لَا يَظْلِمُ ٱلنَّاسَ شَيْـًٔا وَلَـٰكِنَّ ٱلنَّاسَ أَنفُسَهُمْ يَظْلِمُونَ ﴿٤٤﴾

45. ಅವನು ಅವರನ್ನು ಒಟ್ಟುಗೂಡಿಸುವ ದಿನದಂದು ತಾವು (ಇಹಲೋಕದಲ್ಲಿ) ಹಗಲಿನ ಒಂದಷ್ಟು ಹೊತ್ತು ಮಾತ್ರ ತಂಗಿದ್ದೆವು ಎಂಬಂತೆ ಅವರಿಗೆ ಭಾಸವಾಗುವುದು. ಅವರು ಪರಸ್ಪರ ಗುರುತಿಸಿಕೊಳ್ಳುವರು.[2] ಅಲ್ಲಾಹುವಿನೊಂದಿಗಿರುವ ಭೇಟಿಯನ್ನು ನಿಷೇಧಿಸಿದವರು ಖಂಡಿತವಾಗಿಯೂ ನಷ್ಟಕ್ಕೀಡಾಗಿರುವರು ಮತ್ತು ಅವರು ಸನ್ಮಾರ್ಗ ಪಡೆದವರಾಗಲಾರರು.

وَيَوْمَ يَحْشُرُهُمْ كَأَن لَّمْ يَلْبَثُوٓا۟ إِلَّا سَاعَةً مِّنَ ٱلنَّهَارِ يَتَعَارَفُونَ بَيْنَهُمْۚ قَدْ خَسِرَ ٱلَّذِينَ كَذَّبُوا۟ بِلِقَآءِ ٱللَّهِ وَمَا كَانُوا۟ مُهْتَدِينَ ﴿٤٥﴾

46. (ಓ ಪ್ರವಾದಿಯವರೇ!) ನಾವು ಅವರಿಗೆ ವಾಗ್ದಾನ ಮಾಡುತ್ತಿರುವ ಶಿಕ್ಷೆಗಳ ಪೈಕಿ ಕೆಲವನ್ನು ನಾವು ತಮಗೆ ತೋರಿಸಿಕೊಡುವುದಾಗಲಿ ಅಥವಾ (ಅದಕ್ಕಿಂತ ಮುಂಚೆಯೇ) ನಾವು ತಮ್ಮನ್ನು ಮೃತಪಡಿಸುವುದಾಗಲಿ ಮಾಡಿದರೂ ಅವರ ಮರಳುವಿಕೆಯು ನಮ್ಮೆಡೆಗೇ ಆಗಿದೆ. ತರುವಾಯ ಅವರು ಮಾಡುತ್ತಿರುವುದಕ್ಕೆ ಅಲ್ಲಾಹು ಸಾಕ್ಷಿಯಾಗಿರುವನು.

وَإِمَّا نُرِيَنَّكَ بَعْضَ ٱلَّذِى نَعِدُهُمْ أَوْ نَتَوَفَّيَنَّكَ فَإِلَيْنَا مَرْجِعُهُمْ ثُمَّ ٱللَّهُ شَهِيدٌ عَلَىٰ مَا يَفْعَلُونَ ﴿٤٦﴾

---

1 ಆಲಿಸುವ ಶಕ್ತಿಯಿದ್ದು ಪ್ರಯೋಜನವಿಲ್ಲ. ಆಲಿಸಿದ್ದನ್ನು ಗ್ರಹಿಸದವನು ಕಿವಿಯಿದ್ದೂ ಕಿವುಡನಾಗಿರುವನು. ನೋಡುವ ಶಕ್ತಿಯಿದ್ದು ಪ್ರಯೋಜನವಿಲ್ಲ. ನೋಡಿದ್ದನ್ನು ಗ್ರಹಿಸದವನು ಕಣ್ಣಿದ್ದೂ ಕುರುಡನಾಗಿರುವನು.

2 ಶಾಶ್ವತವಾಗಿ ಬದುಕಬೇಕಾದ ಪರಲೋಕಕ್ಕೆ ತಲುಪುವಾಗ ಐಹಿಕ ಜೀವನವು ಕೇವಲ ಒಂದು ತಾಸಿನಷ್ಟು ಮಾತ್ರವಾಗಿತ್ತೆಂದು ಜನರಿಗೆ ಭಾಸವಾಗುವುದು.

47. ಪ್ರತಿಯೊಂದು ಸಮುದಾಯಕ್ಕೂ ಒಬ್ಬ ಸಂದೇಶವಾಹಕರಿರುವರು. ಅವರೆಡೆಗಿರುವ ಸಂದೇಶವಾಹಕರೇನಾದರೂ (ಅವರೆಡೆಗೆ) ಬಂದರೆ ಅವರ ಮಧ್ಯೆ ನ್ಯಾಯಯುತವಾಗಿ ತೀರ್ಪು ನೀಡಲಾಗುವುದು.[1] ಅವರೊಂದಿಗೆ ಅನ್ಯಾಯವೆಸಗಲಾಗದು.

وَلِكُلِّ أُمَّةٍ رَّسُولٌۖ فَإِذَا جَآءَ رَسُولُهُمۡ قُضِيَ بَيۡنَهُم بِٱلۡقِسۡطِ وَهُمۡ لَا يُظۡلَمُونَ ٤٧

48. 'ಈ ವಾಗ್ದಾನವು (ನೆರವೇರಿಸಲ್ಪಡುವುದು) ಯಾವಾಗ? ನೀವು ಸತ್ಯಸಂಧರಾಗಿದ್ದರೆ(ಹೇಳಿರಿ)' ಎಂದು ಅವರು (ಸತ್ಯನಿಷೇಧಿಗಳು) ಹೇಳುವರು.

وَيَقُولُونَ مَتَىٰ هَٰذَا ٱلۡوَعۡدُ إِن كُنتُمۡ صَٰدِقِينَ ٤٨

49. (ಓ ಪ್ರವಾದಿಯವರೇ!) ಹೇಳಿರಿ: 'ಸ್ವತಃ ನನಗಾಗಿ ಯಾವುದೇ ಉಪಕಾರವನ್ನಾಗಲಿ ಹಾನಿಯನ್ನಾಗಲಿ ಮಾಡುವುದು ನನ್ನ ಅಧೀನದಲ್ಲಿಲ್ಲ. ಅಲ್ಲಾಹು ಇಚ್ಛಿಸಿದವುಗಳ ಹೊರತು'. ಪ್ರತಿಯೊಂದು ಸಮುದಾಯಕ್ಕೂ ಒಂದು ಅವಧಿಯಿದೆ.[2] ಅವರ ಅವಧಿಯೇನಾದರೂ ಬಂದುಬಿಟ್ಟರೆ ಅದನ್ನು ಒಂದು ಕ್ಷಣದಷ್ಟು ಹಿಂದಕ್ಕೆ ತಳ್ಳಲು ಅಥವಾ ಮುಂದಕ್ಕೆ ತಳ್ಳಲು ಅವರಿಂದಾಗದು.

قُل لَّآ أَمۡلِكُ لِنَفۡسِي ضَرّٗا وَلَا نَفۡعًا إِلَّا مَا شَآءَ ٱللَّهُۗ لِكُلِّ أُمَّةٍ أَجَلٌۚ إِذَا جَآءَ أَجَلُهُمۡ فَلَا يَسۡتَـٔۡخِرُونَ سَاعَةٗ وَلَا يَسۡتَقۡدِمُونَ ٤٩

50. (ಓ ಪ್ರವಾದಿಯವರೇ!) ಹೇಳಿರಿ: 'ರಾತ್ರಿಯಲ್ಲಾಗಲಿ ಅಥವಾ ಹಗಲಿನಲ್ಲಾಗಲಿ ಅಲ್ಲಾಹುವಿನ ಶಿಕ್ಷೆಯು ನಿಮ್ಮ ಬಳಿಗೆ ಬರುವುದಾದರೆ (ನಿಮ್ಮ ಸ್ಥಿತಿ ಹೇಗಿರಬಹುದೆಂದು) ನೀವು ಆಲೋಚಿಸಿರುವಿರಾ? ಅದರ ಪೈಕಿ ಯಾವ

قُلۡ أَرَءَيۡتُمۡ إِنۡ أَتَىٰكُمۡ عَذَابُهُۥ بَيَٰتًا أَوۡ نَهَارٗا مَّاذَا يَسۡتَعۡجِلُ مِنۡهُ ٱلۡمُجۡرِمُونَ ٥٠

1 ಈ ಸೂಕ್ತಿಗೆ ವಿಭಿನ್ನ ವ್ಯಾಖ್ಯಾನಗಳನ್ನು ನೀಡಲಾಗಿದೆ. ಒಂದು: ಪ್ರತಿಯೊಂದು ಜನಸಮೂಹವನ್ನೂ ಪರಲೋಕದಲ್ಲಿ ವಿಚಾರಣೆಗಾಗಿ ಹಾಜರುಗೊಳಿಸುವಾಗ ಅವರೆಡೆಗೆ ನಿಯೋಗಿಸಲ್ಪಟ್ಟ ಪ್ರವಾದಿಯು ಬಂದು ತಾನು ನಿರ್ವಹಿಸಿದ ದೌತ್ಯದ ಕುರಿತು ಸಾಕ್ಷಿ ನುಡಿಯುವರು. ಅದನ್ನನುಸರಿಸಿ ಅವರಲ್ಲಿರುವ ವಿಶ್ವಾಸಿ ಮತ್ತು ಅವಿಶ್ವಾಸಿಗಳ ಕುರಿತು ಅಲ್ಲಾಹು ನ್ಯಾಯಬದ್ಧವಾದ ತೀರ್ಮಾನ ಕೈಗೊಳ್ಳುವನು. ಎರಡು: ಓರ್ವ ಪ್ರವಾದಿಯನ್ನು ನಿಯೋಗಿಸಿ ಸತ್ಯವನ್ನು ಅವರಿಗೆ ಮನವರಿಕೆ ಮಾಡಿಕೊಡದ ಹೊರತು ಅಲ್ಲಾಹು ಯಾವ ಜನತೆಯನ್ನೂ ಶಿಕ್ಷಿಸಲಾರನು. ಪ್ರವಾದಿಯ ಆಗಮನವುಂಟಾಗಿ ಸತ್ಯವು ಅಸಂದಿಗ್ಧವಾಗಿ ಸ್ಪಷ್ಟಗೊಳಿಸಲಾದ ನಂತರ ವಿಶ್ವಾಸಿಗಳಿಗೆ ಜಯ ನೀಡುವ ಮತ್ತು ಅವಿಶ್ವಾಸಿಗಳನ್ನು ಪರಾಭವಗೊಳಿಸುವ ಮೂಲಕ ಅಲ್ಲಾಹು ನ್ಯಾಯಬದ್ಧವಾದ ತೀರ್ಮಾನ ಕೈಗೊಳ್ಳುವನು.

2 ಹದ್ದುಮೀರಿದ ಅನೈತಿಕತೆ ಮತ್ತು ಧಿಕ್ಕಾರದೊಂದಿಗೆ ಮುಂದುವರಿಯಲು ಅಲ್ಲಾಹು ಯಾರನ್ನೂ ಬಿಡಲಾರನು. ಆದರೆ ಒಂದು ನಿರ್ದಿಷ್ಟ ಅವಧಿಯವರೆಗೆ ಮಾತ್ರ ಅವನು ಕಾಲಾವಕಾಶವನ್ನು ನೀಡುವನು.

ಶಿಕ್ಷೆಗಾಗಿ ಅಪರಾಧಿಗಳು ಆತುರ
ಪಡುತ್ತಿರುವರು?'

51. ತರುವಾಯ ಅದು (ಶಿಕ್ಷೆ) ಸಂಭವಿಸುವಾಗ ನೀವದರಲ್ಲಿ ವಿಶ್ವಾಸವಿಡುವಿರಾ? (ಆಗ ನಿಮ್ಮೊಂದಿಗೆ ಹೇಳಲಾಗುವುದು): 'ನೀವು ಈ ಶಿಕ್ಷೆಗಾಗಿ ಆತುರಪಡುವವರಾಗಿದ್ದಿರಿ. ಹಾಗಿದ್ದೂ ಈಗ (ವಿಶ್ವಾಸವಿಡುವುದೇ)?'

أَثُمَّ إِذَا مَا وَقَعَ ءَامَنتُم بِهِۦٓۚ ءَآلۡـَٰٔنَ وَقَدۡ
كُنتُم بِهِۦ تَسۡتَعۡجِلُونَ ٥١

52. ತರುವಾಯ ಅಕ್ರಮಿಗಳೊಂದಿಗೆ ಹೇಳಲಾಗುವುದು: 'ಶಾಶ್ವತವಾದ ಶಿಕ್ಷೆಯನ್ನು ಸವಿಯಿರಿ. ನೀವು ಮಾಡಿರುವುದಕ್ಕೆ ಅನುಗುಣವಾಗಿಯೇ ವಿನಾ ನಿಮಗೆ ಪ್ರತಿಫಲ ನೀಡಲಾಗುವುದೇ?'

ثُمَّ قِيلَ لِلَّذِينَ ظَلَمُواْ ذُوقُواْ عَذَابَ ٱلۡخُلۡدِ
هَلۡ تُجۡزَوۡنَ إِلَّا بِمَا كُنتُمۡ تَكۡسِبُونَ ٥٢

53. 'ಇದು ಸತ್ಯವೇ?' ಎಂದು ಅವರು ತಮ್ಮೊಂದಿಗೆ ವಿಚಾರಿಸುವರು. ಹೇಳಿರಿ: 'ಹೌದು! ನನ್ನ ರಬ್‌ನ ಮೇಲಾಣೆ! ಖಂಡಿತವಾಗಿಯೂ ಇದು ಸತ್ಯವೇ ಆಗಿದೆ. ಪರಾಭವಗೊಳಿಸಲು ನಿಮಗೆ ಸಾಧ್ಯವಾಗದು'.

۞وَيَسۡتَنۢبِـُٔونَكَ أَحَقٌّ هُوَۖ قُلۡ إِي وَرَبِّيٓ
إِنَّهُۥ لَحَقٌّۖ وَمَآ أَنتُم بِمُعۡجِزِينَ ٥٣

54. ಅಕ್ರಮವೆಸಗಿದ ಪ್ರತಿಯೊಬ್ಬ ವ್ಯಕ್ತಿಯೊಂದಿಗೆ ಭೂಮಿಯಲ್ಲಿರುವುದೆಲ್ಲವೂ ಇದ್ದರೂ ಅದನ್ನವನು ಪ್ರಾಯಶ್ಚಿತ್ತವಾಗಿ ನೀಡುತ್ತಿದ್ದನು.(1) ಶಿಕ್ಷೆಯನ್ನು ಕಾಣುವಾಗ ಅವರು ತಮ್ಮ ವಿಷಾದವನ್ನು ಮನಸ್ಸಿನಲ್ಲೇ ಬಚ್ಚಿಡುವರು. ಅವರ ಮಧ್ಯೆ ನ್ಯಾಯಪೂರ್ಣವಾಗಿ ತೀರ್ಪು ನೀಡಲಾಗುವುದು. ಅವರೊಂದಿಗೆ ಅನ್ಯಾಯವೆಸಗಲಾಗದು.

وَلَوۡ أَنَّ لِكُلِّ نَفۡسٖ ظَلَمَتۡ مَا فِي ٱلۡأَرۡضِ
لَٱفۡتَدَتۡ بِهِۦۗ وَأَسَرُّواْ ٱلنَّدَامَةَ لَمَّا رَأَوُاْ
ٱلۡعَذَابَۖ وَقُضِيَ بَيۡنَهُم بِٱلۡقِسۡطِ وَهُمۡ لَا
يُظۡلَمُونَ ٥٤

55. ಅರಿಯಿರಿ! ಖಂಡಿತವಾಗಿಯೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಅರಿಯಿರಿ! ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು

أَلَآ إِنَّ لِلَّهِ مَا فِي ٱلسَّمَٰوَٰتِ وَٱلۡأَرۡضِۗ أَلَآ
إِنَّ وَعۡدَ ٱللَّهِ حَقّٞ وَلَٰكِنَّ أَكۡثَرَهُمۡ لَا
يَعۡلَمُونَ ٥٥

1 ಮನುಷ್ಯರು ಪರಲೋಕವನ್ನು ತಲುಪುವಾಗ ನರಕ ಶಿಕ್ಷೆಯಿಂದ ಪಾರಾಗುವುದಕ್ಕಾಗಿ ಏನನ್ನು ಬೇಕಾದರೂ ನೀಡಲು ಸಿದ್ಧರಾಗುವರು. ಭೂಮಿಯಲ್ಲಿರುವ ಸಂಪತ್ತೆಲ್ಲವೂ ಅವರ ವಶದಲ್ಲಿದ್ದರೂ ಅವೆಲ್ಲವನ್ನೂ ಪ್ರಾಯಶ್ಚಿತ್ತವಾಗಿ ನೀಡಲು ಅವರು ಸನ್ನದ್ಧರಾಗುವರು.

ಸತ್ಯವಾಗಿದೆ. ಆದರೆ ಅವರಲ್ಲಿ ಹೆಚ್ಚಿನವರೂ (ವಸ್ತುಸ್ಥಿತಿಯನ್ನು) ಅರಿಯಲಾರರು.

56. ಅವನು ಜೀವ ನೀಡುವವನು ಮತ್ತು ಮೃತಪಡಿಸುವವನಾಗಿರುವನು. ನೀವು ಅವನೆಡೆಗೇ ಮರಳಿಸಲಾಗುವಿರಿ.

هُوَ يُحۡيِۦ وَيُمِيتُ وَإِلَيۡهِ تُرۡجَعُونَ ٥٦

57. ಓ ಮನುಷ್ಯರೇ! ನಿಮ್ಮ ರಬ್‌ನ ವತಿಯ ಉಪದೇಶವೂ ಹೃದಯಗಳಲ್ಲಿರುವ ರೋಗಕ್ಕೆ ಉಪಶಮನವೂ ನಿಮ್ಮೆಡೆಗೆ ಬಂದಿದೆ. ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶಿಯೂ, ಕಾರುಣ್ಯವೂ (ಬಂದಿದೆ).

يَـٰٓأَيُّهَا ٱلنَّاسُ قَدۡ جَآءَتۡكُم مَّوۡعِظَةٞ مِّن رَّبِّكُمۡ وَشِفَآءٞ لِّمَا فِي ٱلصُّدُورِ وَهُدٗى وَرَحۡمَةٞ لِّلۡمُؤۡمِنِينَ ٥٧

58. ಹೇಳಿರಿ: 'ಇದು ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯದಿಂದಾಗಿದೆ. ಆದ್ದರಿಂದ ತನ್ಮೂಲಕ ಅವರು ಸಂಭ್ರಮಪಡಲಿ. ಅವರು ಸಂಪಾದಿಸಿ ಒಟ್ಟುಗೂಡಿಸುವುದಕ್ಕಿಂತಲೂ ಇದು ಅತ್ಯುತ್ತಮವಾದುದಾಗಿದೆ' .

قُلۡ بِفَضۡلِ ٱللَّهِ وَبِرَحۡمَتِهِۦ فَبِذَٰلِكَ فَلۡيَفۡرَحُواْ هُوَ خَيۡرٞ مِّمَّا يَجۡمَعُونَ ٥٨

59. ಹೇಳಿರಿ: 'ಅಲ್ಲಾಹು ನಿಮಗೆ ಇಳಿಸಿಕೊಟ್ಟ ಅನ್ನಾಧಾರಗಳ ಕುರಿತು ನೀವು ಚಿಂತಿಸಿರುವಿರಾ? ತರುವಾಯ ಅವುಗಳ ಪೈಕಿ (ಕೆಲವನ್ನು) ನೀವು ನಿಷಿದ್ಧಗೊಳಿಸಿದಿರಿ. (ಇನ್ನು ಕೆಲವನ್ನು) ಧರ್ಮಸಮ್ಮತಗೊಳಿಸಿದಿರಿ'.(1) ಹೇಳಿರಿ: '(ಹಾಗೆ ಮಾಡಲು) ನಿಮಗೆ ಅನುಮತಿ ನೀಡಿದ್ದು ಅಲ್ಲಾಹುವಾಗಿರುವನೇ? ಅಥವಾ ನೀವು ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆಯುತ್ತಿರುವಿರಾ?'

قُلۡ أَرَءَيۡتُم مَّآ أَنزَلَ ٱللَّهُ لَكُم مِّن رِّزۡقٖ فَجَعَلۡتُم مِّنۡهُ حَرَامٗا وَحَلَٰلٗا قُلۡ ءَآللَّهُ أَذِنَ لَكُمۡۖ أَمۡ عَلَى ٱللَّهِ تَفۡتَرُونَ ٥٩

60. ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆಯುವವರ ಭಾವನೆಯು ಪುನರುತ್ಥಾನ ದಿನದಂದು ಏನಾಗಿರಬಹುದು? ಖಂಡಿತವಾಗಿಯೂ ಅಲ್ಲಾಹು ಜನರ ಮೇಲೆ ಔದಾರ್ಯವುಳ್ಳವನಾಗಿರುವನು. ಆದರೆ

وَمَا ظَنُّ ٱلَّذِينَ يَفۡتَرُونَ عَلَى ٱللَّهِ ٱلۡكَذِبَ يَوۡمَ ٱلۡقِيَٰمَةِۗ إِنَّ ٱللَّهَ لَذُو فَضۡلٍ عَلَى ٱلنَّاسِ وَلَٰكِنَّ أَكۡثَرَهُمۡ لَا يَشۡكُرُونَ ٦٠

1 ಯಾವುದು ಪುಣ್ಯ ಮತ್ತು ಯಾವುದು ಪಾಪ ಎಂಬುದನ್ನು ನಿರ್ಧರಿಸುವ ಅಧಿಕಾರವಿರುವುದು ಅಲ್ಲಾಹುವಿಗೆ ಮಾತ್ರವಾಗಿದೆ.

ಜನರಲ್ಲಿ ಹೆಚ್ಚಿನವರೂ ಕೃತಜ್ಞತೆ ಸಲ್ಲಿಸುವುದಿಲ್ಲ.

وَمَا تَكُونُ فِي شَأْنٍ وَمَا تَتْلُواْ مِنْهُ مِن قُرْءَانٍ وَلَا تَعْمَلُونَ مِنْ عَمَلٍ إِلَّا كُنَّا عَلَيْكُمْ شُهُودًا إِذْ تُفِيضُونَ فِيهِ وَمَا يَعْزُبُ عَن رَّبِّكَ مِن مِّثْقَالِ ذَرَّةٍ فِي الْأَرْضِ وَلَا فِي السَّمَاءِ وَلَا أَصْغَرَ مِن ذَٰلِكَ وَلَا أَكْبَرَ إِلَّا فِي كِتَابٍ مُّبِينٍ ٦١

61. (ಓ ಪ್ರವಾದಿಯವರೇ!) ತಾವು ಯಾವುದೇ ಕಾರ್ಯದಲ್ಲಿ ನಿರತರಾಗಿರುವಾಗಲೂ, ಅದರ ಕುರಿತು ಕುರ್‌ಆನ್‌ನಿಂದ ಏನನ್ನಾದರೂ ಓದಿಕೂಡುತ್ತಿರುವಾಗಲೂ. ನೀವು ಯಾವುದೇ ಕರ್ಮವನ್ನು ಮಾಡುತ್ತಿರುವಾಗಲೂ, ನೀವದರಲ್ಲಿ ತಲ್ಲೀನರಾಗಿರುವಾಗ ನಾವು ನಿಮ್ಮ ಮೇಲೆ ಸಾಕ್ಷಿಯಾಗಿರದೆ ಇರಲಾರೆವು. ಭೂಮಿಯಲ್ಲಿ ಅಥವಾ ಆಕಾಶದಲ್ಲಿ ಒಂದು ಅಣು ತೂಕದಷ್ಟಿರುವ ಯಾವುದೇ ವಸ್ತುವೂ ತಮ್ಮ ರಬ್‌ನ(ನ ಗಮನದಿ)ಂದ ಮರೆಯಾಗಲಾರದು. ಅದಕ್ಕಿಂತಲೂ ಚಿಕ್ಕದಿರಲಿ ಅಥವಾ ದೊಡ್ಡದಿರಲಿ ಯಾವುದೂ ಸ್ಪಷ್ಟವಾದ ಗ್ರಂಥವೊಂದರಲ್ಲಿ ದಾಖಲಿಸಲಾಗಿರುವ ಹೊರತು ಇರಲಾರದು.

أَلَا إِنَّ أَوْلِيَاءَ اللَّهِ لَا خَوْفٌ عَلَيْهِمْ وَلَا هُمْ يَحْزَنُونَ ٦٢

62. ಅರಿಯಿರಿ! ಖಂಡಿತವಾಗಿಯೂ ಅಲ್ಲಾಹುವಿನ ಮಿತ್ರರು ಯಾರೋ ಅವರಿಗೆ ಯಾವುದೇ ಭಯವಿಲ್ಲ. ಅವರು ದುಃಖಿಸಬೇಕಾಗಿಯೂ ಬರದು.

الَّذِينَ ءَامَنُواْ وَكَانُواْ يَتَّقُونَ ٦٣

63. ಅವರು ವಿಶ್ವಾಸವಿಟ್ಟವರೂ ಭಯಭಕ್ತಿ ಪಾಲಿಸುವವರೂ ಆಗಿರುವರು.(1)

لَهُمُ الْبُشْرَىٰ فِي الْحَيَوٰةِ الدُّنْيَا وَفِي الْآخِرَةِ لَا تَبْدِيلَ لِكَلِمَاتِ اللَّهِ ذَٰلِكَ هُوَ الْفَوْزُ الْعَظِيمُ ٦٤

64. ಅವರಿಗೆ ಇಹಲೋಕದಲ್ಲೂ ಪರಲೋಕದಲ್ಲೂ ಶುಭವಾರ್ತೆಯಿದೆ. ಅಲ್ಲಾಹುವಿನ ವಚನಗಳಿಗೆ ಯಾವುದೇ ಬದಲಾವಣೆಯಿಲ್ಲ. ಮಹಾ ವಿಜಯವು ಅದೇ ಆಗಿದೆ.

وَلَا يَحْزُنكَ قَوْلُهُمْ إِنَّ الْعِزَّةَ لِلَّهِ جَمِيعًا هُوَ السَّمِيعُ الْعَلِيمُ ٦٥

65. (ಓ ಪ್ರವಾದಿಯವರೇ!) ಅವರ ಮಾತು ತಮಗೆ ದುಃಖವನ್ನುಂಟು ಮಾಡದಿರಲಿ. ಖಂಡಿತವಾಗಿಯೂ ಪ್ರತಾಪವು

1 ಧರ್ಮದ ನೀತಿನಿಯಮಗಳನ್ನು ಪಾಲಿಸದೆ, ಅಚ್ಚುಕಟ್ಟು, ಶುಚಿತ್ವಗಳಿಲ್ಲದೆ ಕೆಲವು ಹಾವಭಾವಗಳೊಂದಿಗೆ 'ಔಲಿಯಾ' ವೇಷವನ್ನು ತೊಡುವ ಕೆಲವರಿದ್ದಾರೆ. ಇವರಾರೂ ಅಲ್ಲಾಹುವಿನ ಮಿತ್ರರ ಪೈಕಿ ಸೇರಲಾರರೆಂದು ಈ ಸೂಕ್ತಿಯು ನಮಗೆ ಮನವರಿಕೆ ಮಾಡಿಕೊಡುತ್ತದೆ.

ಸಂಪೂರ್ಣವಾಗಿ ಅಲ್ಲಾಹುವಿಗಿರುವುದಾಗಿದೆ. ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

أَلَآ إِنَّ لِلَّهِ مَن فِي ٱلسَّمَٰوَٰتِ وَمَن فِي
ٱلۡأَرۡضِۗ وَمَا يَتَّبِعُ ٱلَّذِينَ يَدۡعُونَ مِن دُونِ
ٱللَّهِ شُرَكَآءَۚ إِن يَتَّبِعُونَ إِلَّا ٱلظَّنَّ وَإِنۡ هُمۡ
إِلَّا يَخۡرُصُونَ ٦٦

**66.** ಅರಿಯಿರಿ! ಖಂಡಿತವಾಗಿಯೂ ಆಕಾಶಗಳಲ್ಲಿರುವವರು ಮತ್ತು ಭೂಮಿಯಲ್ಲಿರುವವರೆಲ್ಲರೂ ಅಲ್ಲಾಹುವಿಗೆ ಸೇರಿದವರಾಗಿರುವರು. ಅಲ್ಲಾಹುವಿನ ಹೊರತು ಇತರ ಸಹಭಾಗಿಗಳನ್ನು[1] ಕರೆದು ಪ್ರಾರ್ಥಿಸುತ್ತಿರುವವರು ಏನನ್ನು ಅನುಸರಿಸುತ್ತಿರುವರು? ಅವರು ಅನುಸರಿಸುತ್ತಿರುವುದು ಕೇವಲ ಊಹೆಯನ್ನು ಮಾತ್ರವಾಗಿದೆ. ಅವರು ಸುಳ್ಳು ಹೆಣೆಯುವವರು ಮಾತ್ರವಾಗಿರುವರು.

هُوَ ٱلَّذِي جَعَلَ لَكُمُ ٱلَّيۡلَ لِتَسۡكُنُواْ فِيهِ
وَٱلنَّهَارَ مُبۡصِرًاۚ إِنَّ فِي ذَٰلِكَ لَأٓيَٰتٖ لِّقَوۡمٖ
يَسۡمَعُونَ ٦٧

**67.** ನೀವು ವಿಶ್ರಾಂತಿ ಪಡೆಯುವುದಕ್ಕಾಗಿ ರಾತ್ರಿಯನ್ನೂ, ಪ್ರಕಾಶಮಯವಾಗಿ ಹಗಲನ್ನೂ ಮಾಡಿಕೊಟ್ಟವನು ಅವನೇ ಆಗಿರುವನು. ಖಂಡಿತವಾಗಿಯೂ ಆಲಿಸಿ ಗ್ರಹಿಸುವ ಜನರಿಗೆ ಅದರಲ್ಲಿ ದೃಷ್ಟಾಂತಗಳಿವೆ.

قَالُواْ ٱتَّخَذَ ٱللَّهُ وَلَدٗاۗ سُبۡحَٰنَهُۥۖ هُوَ ٱلۡغَنِيُّۖ
لَهُۥ مَا فِي ٱلسَّمَٰوَٰتِ وَمَا فِي ٱلۡأَرۡضِۚ إِنۡ
عِندَكُم مِّن سُلۡطَٰنِۭ بِهَٰذَآۚ أَتَقُولُونَ عَلَى
ٱللَّهِ مَا لَا تَعۡلَمُونَ ٦٨

**68.** 'ಅಲ್ಲಾಹು ಸಂತಾನವನ್ನು ಮಾಡಿಕೊಂಡಿರುವನು' ಎಂದು ಅವರು ಹೇಳಿದರು.[2] ಅವನು ಪರಮ ಪಾವನನು. ಅವನು ನಿರಪೇಕ್ಷನಾಗಿರುವನು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದಾಗಿವೆ. ಇದಕ್ಕೆ (ಅಲ್ಲಾಹುವಿಗೆ ಸಂತಾನವಿದೆ ಎಂಬುದಕ್ಕೆ) ನಿಮ್ಮ ಬಳಿ

---

1 ವರ–ಶಾಪ, ಭಾಗ್ಯ–ನಿರ್ಭಾಗ್ಯ, ಆರೋಗ್ಯ–ಅನಾರೋಗ್ಯ ಇತ್ಯಾದಿಗಳನ್ನು ನೀಡುವ ದಿವ್ಯಶಕ್ತಿಯನ್ನು ಹೊಂದಿರುವರು ಎಂಬ ನಂಬಿಕೆಯಿಂದ ವಿವಿಧ ವ್ಯಕ್ತಿಗಳು ಮತ್ತು ಶಕ್ತಿಗಳೊಂದಿಗೆ ಪ್ರಾರ್ಥಿಸುವವರು ಅಲ್ಲಾಹುವಿನೊಂದಿಗೆ ಕೃತಘ್ನತೆ ತೋರುವವರೂ ಅವನ ಅಧಿಕಾರದಲ್ಲಿ ಇತರರನ್ನು ಶಾಮೀಲುಗೊಳಿಸುವವರೂ ಆಗಿರುವರು.

2 ಮಲಕ್‌ಗಳು ಅಲ್ಲಾಹುವಿನ ಹೆಣ್ಣು ಮಕ್ಕಳೆಂದು ಅರೇಬಿಯಾದ ಬಹುದೇವಾರಾಧಕರು ನಂಬಿದ್ದರು. ಉಝೈರ್ (عَلَيۡهِ ٱلسَّلَامُ) ಅಲ್ಲಾಹುವಿನ ಮಗನೆಂದು ಯಹೂದರು ವಾದಿಸಿದ್ದರು. ಪ್ರವಾದಿ ಈಸಾ (عَلَيۡهِ ٱلسَّلَامُ) ಅಲ್ಲಾಹುವಿನ ಮಗನೆಂದು ಕ್ರೈಸ್ತರು ವಾದಿಸಿದ್ದರು.

ಯಾವ ಪುರಾವೆಯೂ ಇಲ್ಲ. ನಿಮಗೆ ಅರಿವಿಲ್ಲದಿರುವುದನ್ನು ನೀವು ಅಲ್ಲಾಹುವಿನ ಮೇಲೆ ಹೇಳುತ್ತಿರುವಿರಾ?

قُلْ إِنَّ ٱلَّذِينَ يَفْتَرُونَ عَلَى ٱللَّهِ ٱلْكَذِبَ لَا يُفْلِحُونَ ﴿٦٩﴾

**69.** ಹೇಳಿರಿ: ‘ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆಯುವವರು ಖಂಡಿತವಾಗಿಯೂ ಯಶಸ್ವಿಯಾಗಲಾರರು’.

مَتَـٰعٌ فِى ٱلدُّنْيَا ثُمَّ إِلَيْنَا مَرْجِعُهُمْ ثُمَّ نُذِيقُهُمُ ٱلْعَذَابَ ٱلشَّدِيدَ بِمَا كَانُوا۟ يَكْفُرُونَ ﴿٧٠﴾

**70.** (ಅವರಿಗಿರುವುದು) ಇಹಲೋಕದ ಸುಖಾನುಭೂತಿ ಮಾತ್ರವಾಗಿದೆ. ತರುವಾಯ ಅವರ ಮರಳುವಿಕೆಯು ನಮ್ಮೆಡೆಗಾಗಿರುವುದು. ತರುವಾಯ ಅವರು ಅವಿಶ್ವಾಸವಿಟ್ಟ ಫಲವಾಗಿ ಅವರು ಕಠಿಣವಾದ ಶಿಕ್ಷೆಯನ್ನು ಸವಿಯುವಂತೆ ನಾವು ಮಾಡುವೆವು.

۞ وَٱتْلُ عَلَيْهِمْ نَبَأَ نُوحٍ إِذْ قَالَ لِقَوْمِهِۦ يَـٰقَوْمِ إِن كَانَ كَبُرَ عَلَيْكُم مَّقَامِى وَتَذْكِيرِى بِـَٔايَـٰتِ ٱللَّهِ فَعَلَى ٱللَّهِ تَوَكَّلْتُ فَأَجْمِعُوٓا۟ أَمْرَكُمْ وَشُرَكَآءَكُمْ ثُمَّ لَا يَكُنْ أَمْرُكُمْ عَلَيْكُمْ غُمَّةً ثُمَّ ٱقْضُوٓا۟ إِلَىَّ وَلَا تُنظِرُونِ ﴿٧١﴾

**71.** (ಓ ಪ್ರವಾದಿಯವರೇ!) ತಾವು ಅವರಿಗೆ ನೂಹ್‌ರ ವೃತ್ತಾಂತವನ್ನು ಓದಿಕೊಡಿರಿ. ಅವರು ತನ್ನ ಜನತೆಯೊಂದಿಗೆ ಹೇಳಿದ ಸಂದರ್ಭ: ‘ಓ ನನ್ನ ಜನರೇ! ನನ್ನ ಸಾನಿಧ್ಯ ಮತ್ತು ಅಲ್ಲಾಹುವಿನ ದೃಷ್ಟಾಂತಗಳ ಕುರಿತಾದ ನನ್ನ ಉಪದೇಶವು ನಿಮಗೊಂದು ದೊಡ್ಡ ಭಾರವಾಗಿ ಬಿಟ್ಟಿರುವುದಾದರೆ ನಾನು ಅಲ್ಲಾಹುವಿನ ಮೇಲೆ ಭರವಸೆ ಇಟ್ಟಿರುವೆನು. ಆದ್ದರಿಂದ ನಿಮ್ಮ ವಿಷಯವನ್ನು ನೀವು ಮತ್ತು ನೀವು ಸಹಭಾಗಿಗಳನ್ನಾಗಿ ಮಾಡಿಕೊಂಡವರು ಜೊತೆಗೂಡಿ ತೀರ್ಮಾನಿಸಿರಿ. ತರುವಾಯ ನಿಮ್ಮ ವಿಷಯದಲ್ಲಿ (ತೀರ್ಮಾನದಲ್ಲಿ) ನಿಮಗೆ ಯಾವುದೇ ಅಸ್ಪಷ್ಟತೆಯೂ ಇರದಿರಲಿ. ತರುವಾಯ ನೀವು (ಆ ತೀರ್ಮಾನವನ್ನು) ನನ್ನ ಮೇಲೆ ಜಾರಿಗೊಳಿಸಿರಿ. ನನಗೆ ನೀವು ಸ್ವಲ್ಪವೂ ಕಾಲಾವಕಾಶವನ್ನು ನೀಡದಿರಿ.

فَإِن تَوَلَّيْتُمْ فَمَا سَأَلْتُكُم مِّنْ أَجْرٍ ۖ إِنْ أَجْرِىَ إِلَّا عَلَى ٱللَّهِ ۖ وَأُمِرْتُ أَنْ أَكُونَ مِنَ ٱلْمُسْلِمِينَ ﴿٧٢﴾

**72.** ನೀವೇನಾದರೂ ವಿಮುಖರಾಗುವುದಾದರೆ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡಿರುವುದಿಲ್ಲ. ನನಗೆ ಪ್ರತಿಫಲವನ್ನು ನೀಡಬೇಕಾದವನು ಅಲ್ಲಾಹು

ಮಾತ್ರವಾಗಿರುವನು. (ಅಲ್ಲಾಹುವಿಗೆ) ಶರಣಾದವರ ಪೈಕಿ ಸೇರಿದವನಾಗಬೇಕೆಂದು ನನ್ನೊಂದಿಗೆ ಆಜ್ಞಾಪಿಸಲಾಗಿದೆ’.

73. ಆದರೆ ಅವರು ನೂಹ್‌ರನ್ನು ತಿರಸ್ಕರಿಸಿದರು. ಆಗ ನಾವು ಅವರನ್ನು ಮತ್ತು ಅವರ ಜೊತೆಗಿದ್ದವರನ್ನು ಹಡಗಿನಲ್ಲಿ ರಕ್ಷಿಸಿದೆವು. ಅವರನ್ನು ನಾವು (ಭೂಮಿಯಲ್ಲಿ) ಉತ್ತರಾಧಿಕಾರಿಗಳನ್ನಾಗಿ ಮಾಡಿದೆವು. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರನ್ನು ನಾವು ಮುಳುಗಿಸಿದೆವು. ಮುನ್ನೆಚ್ಚರಿಕೆ ನೀಡಲಾದ ಆ ಜನರ ಪರ್ಯಾವಸಾನವು ಹೇಗಿತ್ತೆಂಬುದನ್ನು ನೋಡಿರಿ.

فَكَذَّبُوهُ فَنَجَّيۡنَٰهُ وَمَن مَّعَهُۥ فِي ٱلۡفُلۡكِ
وَجَعَلۡنَٰهُمۡ خَلَٰٓئِفَ وَأَغۡرَقۡنَا ٱلَّذِينَ
كَذَّبُواْ بِـَٔايَٰتِنَاۖ فَٱنظُرۡ كَيۡفَ كَانَ عَٰقِبَةُ
ٱلۡمُنذَرِينَ ﴿٧٣﴾

74. ತರುವಾಯ ನೂಹ್‌ರ ಬಳಿಕ ನಾವು ಅನೇಕ ಸಂದೇಶವಾಹಕರನ್ನು ಅವರ ಸಮುದಾಯದೆಡೆಗೆ ಕಳುಹಿಸಿದೆವು. ಆ ಸಂದೇಶವಾಹಕರು ಅವರೆಡೆಗೆ ಪುರಾವೆಗಳೊಂದಿಗೆ ಬಂದರು. ಆದರೆ ಅವರು ಮುಂಚೆ ಯಾವುದನ್ನು ನಿಷೇಧಿಸಿದ್ದರೋ ಅದರಲ್ಲಿ ವಿಶ್ವಾಸವಿಡಲು ಅವರು ಸಿದ್ಧರಿರಲಿಲ್ಲ. ಹೀಗೆ ನಾವು ಅತಿಕ್ರಮಿಗಳ ಹೃದಯಗಳ ಮೇಲೆ ಮುದ್ರೆಯೊತ್ತುವೆವು.

ثُمَّ بَعَثۡنَا مِنۢ بَعۡدِهِۦ رُسُلًا إِلَىٰ قَوۡمِهِمۡ
فَجَآءُوهُم بِٱلۡبَيِّنَٰتِ فَمَا كَانُواْ لِيُؤۡمِنُواْ
بِمَا كَذَّبُواْ بِهِۦ مِن قَبۡلُۚ كَذَٰلِكَ نَطۡبَعُ
عَلَىٰ قُلُوبِ ٱلۡمُعۡتَدِينَ ﴿٧٤﴾

75. ತರುವಾಯ ಅವರ ಬಳಿಕ ನಾವು ನಮ್ಮ ದೃಷ್ಟಾಂತಗಳೊಂದಿಗೆ ಮೂಸಾ ಮತ್ತು ಹಾರೂನ್‌ರನ್ನು ಫಿರ್‌ಔನ್ ಹಾಗೂ ಅವನ ಪ್ರಮುಖರೆಡೆಗೆ ಕಳುಹಿಸಿದೆವು. ಆದರೆ ಅವರು ಅಹಂಕಾರ ತೋರಿದರು. ಅವರು ಅಪರಾಧಿಗಳಾದ ಒಂದು ಜನತೆಯಾಗಿದ್ದರು.

ثُمَّ بَعَثۡنَا مِنۢ بَعۡدِهِم مُّوسَىٰ وَهَٰرُونَ
إِلَىٰ فِرۡعَوۡنَ وَمَلَإِيْهِۦ بِـَٔايَٰتِنَا فَٱسۡتَكۡبَرُواْ
وَكَانُواْ قَوۡمًا مُّجۡرِمِينَ ﴿٧٥﴾

76. ನಮ್ಮ ಕಡೆಯ ಸತ್ಯವು ಅವರೆಡೆಗೆ ಬಂದಾಗ ಅವರು ಹೇಳಿದರು: ‘ಖಂಡಿತವಾಗಿಯೂ ಇದೊಂದು ಸ್ಪಷ್ಟವಾದ ಮಾಂತ್ರಿಕತೆಯಾಗಿದೆ’.

فَلَمَّا جَآءَهُمُ ٱلۡحَقُّ مِنۡ عِندِنَا قَالُوٓاْ إِنَّ
هَٰذَا لَسِحۡرٞ مُّبِينٞ ﴿٧٦﴾

77. ಮೂಸಾ ಹೇಳಿದರು: ‘ಸತ್ಯವು ನಿಮ್ಮೆಡೆಗೆ ಬಂದಾಗ ನೀವದರ ಕುರಿತು (ಮಾಂತ್ರಿಕತೆ) ಎನ್ನುತ್ತಿರುವಿರಾ? ಇದು ಮಾಂತ್ರಿಕತೆಯೇ?

قَالَ مُوسَىٰٓ أَتَقُولُونَ لِلۡحَقِّ لَمَّا جَآءَكُمۡۖ
أَسِحۡرٌ هَٰذَا وَلَا يُفۡلِحُ ٱلسَّٰحِرُونَ ﴿٧٧﴾

(ವಾಸ್ತವಿಕವಾಗಿ) ಮಾಂತ್ರಿಕರು ಯಶಸ್ವಿಯಾಗಲಾರರು'.[1]

**78.** ಅವರು ಹೇಳಿದರು: 'ನಮ್ಮ ಪೂರ್ವಿಕರು ಯಾವುದರಲ್ಲಿ ನೆಲೆಗೊಂಡಿರುವುದಾಗಿ ನಾವು ಕಂಡಿರುವೆವೋ ಅದರಿಂದ ನಮ್ಮನ್ನು ತಿರುಗಿಸಲು ಮತ್ತು ಭೂಮಿಯಲ್ಲಿ ನಿಮಗಿಬ್ಬರಿಗೆ ಮಹಿಮೆಯುಂಟಾಗಲು ನೀವು ನಮ್ಮ ಬಳಿಗೆ ಬಂದಿರುವಿರಾ? ನಾವು ನಿಮ್ಮಿಬ್ಬರಲ್ಲೂ ವಿಶ್ವಾಸವಿಡುವವರಾಗಲಾರೆವು'.

قَالُوٓاْ أَجِئۡتَنَا لِتَلۡفِتَنَا عَمَّا وَجَدۡنَا عَلَيۡهِ
ءَابَآءَنَا وَتَكُونَ لَكُمَا ٱلۡكِبۡرِيَآءُ فِي
ٱلۡأَرۡضِ وَمَا نَحۡنُ لَكُمَا بِمُؤۡمِنِينَ ٧٨

**79.** ಫಿರ್‌ಔನ್ ಹೇಳಿದನು: 'ಸರ್ವ ತಜ್ಞ ಮಾಂತ್ರಿಕರನ್ನೂ ನೀವು ನನ್ನ ಬಳಿಗೆ ಕರೆತನ್ನಿರಿ'.

وَقَالَ فِرۡعَوۡنُ ٱئۡتُونِي بِكُلِّ سَٰحِرٍ
عَلِيمٖ ٧٩

**80.** ಮಾಂತ್ರಿಕರು ಬಂದಾಗ ಮೂಸಾ ಅವರೊಂದಿಗೆ ಹೇಳಿದರು: 'ನಿಮಗೆ ಹಾಕಲಿರುವುದೆಲ್ಲವನ್ನೂ ಹಾಕಿರಿ'.

فَلَمَّا جَآءَ ٱلسَّحَرَةُ قَالَ لَهُم مُّوسَىٰٓ أَلۡقُواْ
مَآ أَنتُم مُّلۡقُونَ ٨٠

**81.** ಅವರು ಹಾಕಿದಾಗ ಮೂಸಾ ಹೇಳಿದರು: 'ನೀವು ತಂದಿರುವುದು ಇಂದ್ರಜಾಲವನ್ನಾಗಿದೆ. ಖಂಡಿತವಾಗಿಯೂ ಅಲ್ಲಾಹು ಅದನ್ನು ನಿಷ್ಫಲಗೊಳಿಸುವನು. ವಿನಾಶಕಾರಿಗಳ ಕೃತ್ಯವನ್ನು ಖಂಡಿತವಾಗಿಯೂ ಅಲ್ಲಾಹು ಸಫಲಗೊಳಿಸಲಾರನು'.

فَلَمَّآ أَلۡقَوۡاْ قَالَ مُوسَىٰ مَا جِئۡتُم بِهِ
ٱلسِّحۡرُۖ إِنَّ ٱللَّهَ سَيُبۡطِلُهُۥٓ إِنَّ ٱللَّهَ لَا
يُصۡلِحُ عَمَلَ ٱلۡمُفۡسِدِينَ ٨١

**82.** ಅಲ್ಲಾಹು ತನ್ನ ವಚನಗಳ ಮೂಲಕ ಸತ್ಯವನ್ನು ಸತ್ಯವಾಗಿ ತೋರಿಸಿಕೊಡುವನು. ಅಪರಾಧಿಗಳು ಎಷ್ಟು ಅಸಹ್ಯಪಟ್ಟರೂ ಸರಿಯೇ.

وَيُحِقُّ ٱللَّهُ ٱلۡحَقَّ بِكَلِمَٰتِهِۦ وَلَوۡ كَرِهَ
ٱلۡمُجۡرِمُونَ ٨٢

**83.** ಆದರೆ ಮೂಸಾರ ಜನತೆಯಲ್ಲಿ ಸೇರಿದ ಕೆಲವು ಯುವಕರ ಹೊರತು ಇನ್ನಾರೂ ಅವರಲ್ಲಿ ವಿಶ್ವಾಸವಿಡಲಿಲ್ಲ. (ಅದೂ ಸಹ) ಫಿರ್‌ಔನ್ ಮತ್ತು ಆ ಅವರಲ್ಲಿರುವ ಮುಖಂಡರು ಎಲ್ಲಿ ತಮ್ಮನ್ನು ಹಿಂಸಿಸುವರೋ ಎಂಬ

فَمَآ ءَامَنَ لِمُوسَىٰٓ إِلَّا ذُرِّيَّةٞ مِّن قَوۡمِهِۦ
عَلَىٰ خَوۡفٖ مِّن فِرۡعَوۡنَ وَمَلَإِيْهِمۡ أَن
يَفۡتِنَهُمۡۚ وَإِنَّ فِرۡعَوۡنَ لَعَالٖ فِي ٱلۡأَرۡضِ
وَإِنَّهُۥ لَمِنَ ٱلۡمُسۡرِفِينَ ٨٣

---

1 ಮಾಂತ್ರಿಕ ವಿದ್ಯೆ ಅಥವಾ ಕಣ್ಕಟ್ಟು ವಿದ್ಯೆಯ ಮೂಲಕ ಶಾಶ್ವತವಾದ ಫಲವನ್ನು ಉಂಟುಮಾಡಲು ಸಾಧ್ಯವಿಲ್ಲ. ಅದರ ಮೇಲೆ ಒಂದು ವಿಚಾರಧಾರೆಯನ್ನು ಸ್ಥಾಪಿಸಲೂ ಸಾಧ್ಯವಿಲ್ಲ. ದೈವಿಕ ದೃಷ್ಟಾಂತದೊಂದಿಗೆ ಹೋರಾಡಿ ಜಯಗಳಿಸಲು ಯಾವೊಬ್ಬ ಮಾಂತ್ರಿಕನಿಗೂ ಸಾಧ್ಯವಿಲ್ಲ.

ಭಯದೊಂದಿಗಾಗಿತ್ತು. ಖಂಡಿತವಾಗಿಯೂ ಫಿರ್‌ಔನ್ ಭೂಮಿಯಲ್ಲಿ ದರ್ಪ ತೋರುವವನಾಗಿದ್ದನು. ಖಂಡಿತವಾಗಿಯೂ ಅವನು ಹದ್ದುಮೀರಿದವರಲ್ಲಿ ಸೇರಿದವನಾಗಿದ್ದನು.

**84.** ಮೂಸಾ ಹೇಳಿದರು: ‘ಓ ನನ್ನ ಜನರೇ! ನೀವು ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರುವುದಾದರೆ ಅವನ ಮೇಲೆ ಭರವಸೆಯಿಡಿರಿ. ನೀವು ಅವನಿಗೆ ಶರಣಾದವರಾಗಿದ್ದರೆ’.

وَقَالَ مُوسَىٰ يَٰقَوۡمِ إِن كُنتُمۡ ءَامَنتُم بِٱللَّهِ فَعَلَيۡهِ تَوَكَّلُوٓاْ إِن كُنتُم مُّسۡلِمِينَ ٨٤

**85.** ಆಗ ಅವರು ಹೇಳಿದರು: ‘ನಾವು ಅಲ್ಲಾಹುವಿನ ಮೇಲೆ ಭರವಸೆಯಿಟ್ಟಿರುವೆವು. ಓ ನಮ್ಮ ರಬ್! ನಮ್ಮನ್ನು ಅಕ್ರಮಿಗಳಾದ ಈ ಜನತೆಯ ಹಿಂಸೆಗೆ ಬಲಿಪಶುಗಳನ್ನಾಗಿ ಮಾಡದಿರು.

فَقَالُواْ عَلَى ٱللَّهِ تَوَكَّلۡنَا رَبَّنَا لَا تَجۡعَلۡنَا فِتۡنَةٗ لِّلۡقَوۡمِ ٱلظَّٰلِمِينَ ٨٥

**86.** ನಿನ್ನ ಕಾರುಣ್ಯದಿಂದ ನಮ್ಮನ್ನು ನೀನು ಸತ್ಯನಿಷೇಧಿಗಳಾದ ಜನತೆಯಿಂದ ರಕ್ಷಿಸು’.

وَنَجِّنَا بِرَحۡمَتِكَ مِنَ ٱلۡقَوۡمِ ٱلۡكَٰفِرِينَ ٨٦

**87.** ಮೂಸಾ ಮತ್ತು ಅವರ ಸಹೋದರನಿಗೆ ನಾವು ದಿವ್ಯ ಸಂದೇಶ ನೀಡಿದೆವು: ‘ನೀವಿಬ್ಬರೂ ನಿಮ್ಮ ಜನತೆಗೋಸ್ಕರ ಈಜಿಪ್ಟಿನಲ್ಲಿ (ಪ್ರತ್ಯೇಕ) ವಸತಿಗಳನ್ನು ಸಜ್ಜುಗೊಳಿಸಿರಿ,[1] ನಿಮ್ಮ ಮನೆಗಳನ್ನು ಕಿಬ್ಲಾ ಆಗಿಮಾಡಿರಿ[2] ಮತ್ತು ನಮಾಝನ್ನು ಸಂಸ್ಥಾಪಿಸಿರಿ. ಸತ್ಯವಿಶ್ವಾಸಿಗಳಿಗೆ ತಾವು ಶುಭವಾರ್ತೆಯನ್ನು ತಿಳಿಸಿರಿ’.

وَأَوۡحَيۡنَآ إِلَىٰ مُوسَىٰ وَأَخِيهِ أَن تَبَوَّءَا لِقَوۡمِكُمَا بِمِصۡرَ بُيُوتٗا وَٱجۡعَلُواْ بُيُوتَكُمۡ قِبۡلَةٗ وَأَقِيمُواْ ٱلصَّلَوٰةَۗ وَبَشِّرِ ٱلۡمُؤۡمِنِينَ ٨٧

**88.** ಮೂಸಾ ಹೇಳಿದರು: ‘ಓ ನಮ್ಮ ರಬ್! ಫಿರ್‌ಔನ್ ಮತ್ತು ಅವನ ಪ್ರಮುಖರಿಗೆ ಐಹಿಕ ಜೀವನದಲ್ಲಿ ನೀನು ವೈಭವವನ್ನೂ

وَقَالَ مُوسَىٰ رَبَّنَآ إِنَّكَ ءَاتَيۡتَ فِرۡعَوۡنَ وَمَلَأَهُۥ زِينَةٗ وَأَمۡوَٰلٗا فِي ٱلۡحَيَوٰةِ ٱلدُّنۡيَا

1 ಶತ್ರುಗಳ ಮಧ್ಯೆ ಒಂಟಿಯಾಗಿ ವಾಸಿಸಿದರೆ ಸತ್ಯವಿಶ್ವಾಸಿಗಳು ಹೆಚ್ಚಿನ ಹಿಂಸೆಗೆ ಬಲಿಯಾಗಬೇಕಾದೀತು. ವಿಶ್ವಾಸಿಗಳು ಒಂದೆಡೆ ವಸತಿಗಳನ್ನು ನಿರ್ಮಿಸಿ ಒಟ್ಟುಸೇರಿ ಬದುಕಬೇಕೆಂದು ಆದೇಶಿಸಿರುವುದು ಅದನ್ನು ನಿವಾರಿಸುವುದಕ್ಕಾಗಿದೆ.

2 ‘ಮನೆಗಳನ್ನು ಕಿಬ್ಲಾವನ್ನಾಗಿ ಮಾಡಿರಿ’ ಎಂಬುದರ ತಾತ್ಪರ್ಯದ ಕುರಿತು ವಿಭಿನ್ನ ಅಭಿಪ್ರಾಯಗಳಿವೆ. ಒಂದು: ಮನೆಗಳನ್ನು ಆರಾಧನಾಲಯಗಳನ್ನಾಗಿಸುವುದು. ಎರಡು: ಮನೆಗಳನ್ನು ಬೈತುಲ್ ಮುಕದ್ದಿಸ್‌ಗೆ ಅಭಿಮುಖವಾಗಿ ನಿರ್ಮಿಸುವುದು. ಮೂರು: ಎಲ್ಲಾ ಮನೆಗಳನ್ನೂ ಒಂದೇ ದಿಕ್ಕಿಗೆ ಅಭಿಮುಖವಾಗಿ ನಿರ್ಮಿಸುವುದು. ಈ ಮೂರು ಅಭಿಪ್ರಾಯಗಳ ಅರ್ಥವು ಒಂದೇ ಆಗಿದೆ.

ಸಂಪತ್ತುಗಳನ್ನೂ ನೀಡಿರುವೆ. ಓ ನಮ್ಮ ರಬ್! ಜನರನ್ನು ನಿನ್ನ ಮಾರ್ಗದಿಂದ ದಾರಿಗೆಡಿಸುವುದಕ್ಕಾಗಿ (ಅವರದನ್ನು ಬಳಸುತ್ತಿರುವರು). ಓ ನಮ್ಮ ರಬ್! ಅವರ ಸಂಪತ್ತುಗಳನ್ನು ನಿರ್ನಾಮಮಾಡು. ಯಾತನಾಮಯ ಶಿಕ್ಷೆಯನ್ನು ನೋಡುವ ತನಕ ಅವರು ವಿಶ್ವಾಸವಿಡದಂತೆ ಅವರ ಹೃದಯಗಳನ್ನು ಕಠೋರವಾಗಿಸು'.

ربنا ليضلوا عن سبيلك ربنا اطمس على أموالهم واشدد على قلوبهم فلا يؤمنوا حتى يروا العذاب الأليم ﴿٨٨﴾

**89.** ಅವನು (ಅಲ್ಲಾಹು) ಹೇಳಿದನು: 'ನಿಮ್ಮಿಬ್ಬರ ಪ್ರಾರ್ಥನೆಯು ಸ್ವೀಕಾರವಾಗಿದೆ. ಆದ್ದರಿಂದ ನೀವಿಬ್ಬರೂ ನೇರವಾಗಿ ನೆಲೆನಿಲ್ಲಿರಿ. ಅರಿವಿಲ್ಲದವರ ಮಾರ್ಗವನ್ನು ನೀವಿಬ್ಬರೂ ಅನುಸರಿಸದಿರಿ'.

قال قد أجيبت دعوتكما فاستقيما ولا تتبعان سبيل الذين لا يعلمون ﴿٨٩﴾

**90.** ನಾವು ಇಸ್ರಾಈಲ್ ಸಂತತಿಗಳನ್ನು ಸಮುದ್ರ ದಾಚೆಗೆ ದಾಟಿಸಿದೆವು. ಆಗ ಫಿರ್‌ಔನ್ ಮತ್ತು ಅವನ ಸೈನ್ಯವು ಧಿಕ್ಕಾರ ಮತ್ತು ಅತಿಕ್ರಮದೊಂದಿಗೆ ಅವರನ್ನು ಹಿಂಬಾಲಿಸಿದರು. ಕೊನೆಗೆ ಮುಳುಗಿ ಸಾಯುವಂತಾದಾಗ ಅವನು ಹೇಳಿದನು: 'ಇಸ್ರಾಈಲ್ ಸಂತತಿಗಳು ಯಾವ ಆರಾಧ್ಯನಲ್ಲಿ ವಿಶ್ವಾಸವಿಟ್ಟಿರುವರೋ ಅವನ ಹೊರತು ಅನ್ಯ ಆರಾಧ್ಯನಿಲ್ಲವೆಂದು ನಾನೂ ವಿಶ್ವಾಸವಿಟ್ಟಿರುವೆನು ಮತ್ತು ನಾನು (ಅವನಿಗೆ) ಶರಣಾದವರ ಪೈಕಿ ಸೇರಿದವನಾಗಿರುವೆನು'.

۞وجاوزنا ببني إسرائيل البحر فأتبعهم فرعون وجنوده بغيا وعدوا حتى إذا أدركه الغرق قال آمنت أنه لا إله إلا الذي آمنت به بنوا إسرائيل وأنا من المسلمين ﴿٩٠﴾

**91.** (ಅಲ್ಲಾಹು ಅವನೊಂದಿಗೆ ಹೇಳಿದನು:) 'ಇದಕ್ಕೆ ಮುಂಚೆ ನೀನು ಧಿಕ್ಕರಿಸಿದವನೂ, ವಿನಾಶಕಾರಿಗಳ ಪೈಕಿ ಸೇರಿದವನೂ ಆಗಿದ್ದು ಈಗ (ವಿಶ್ವಾಸವಿಟ್ಟಿರುವೆಯಾ?)[1]

آلآن وقد عصيت قبل وكنت من المفسدين ﴿٩١﴾

**92.** ನಿನ್ನ ಹಿಂದೆ ಬರುವವರಿಗೆ ನೀನೊಂದು ದೃಷ್ಟಾಂತವಾಗುವ ಸಲುವಾಗಿ ಇಂದು ನಾವು ನಿನ್ನ ಶರೀರವನ್ನು ರಕ್ಷಿಸುವೆವು.[2] ಖಂಡಿತವಾಗಿಯೂ ಜನರ ಪೈಕಿ ಹೆಚ್ಚಿನವರು

فاليوم ننجيك ببدنك لتكون لمن خلفك آية وإن كثيرا من الناس عن آياتنا لغافلون ﴿٩٢﴾

---

1 ಇನ್ನು ತನಗೆ ಮರಣದಿಂದ ಪಾರಾಗಲು ಸಾಧ್ಯವಿಲ್ಲ ಎಂದು ಮನವರಿಕೆಯಾಗುವ ಸಂದರ್ಭ ಯಾರಾದರೂ ವಿಶ್ವಾಸವಿಡುವುದಾದರೆ ಅದರಿಂದ ಯಾವುದೇ ಪ್ರಯೋಜನವಿಲ್ಲ.

2 ಅರ್ಥಾತ್ ಮರಣದ ಬಳಿಕ ಫಿರ್‌ಔನನ ಶರೀರವು ಶಿಥಿಲವಾಗಬಾರದೆಂದು ಅಲ್ಲಾಹು ನಿರ್ಧರಿಸಿದನು.

ನಮ್ಮ ದೃಷ್ಟಾಂತಗಳ ಕುರಿತು ಅಲಕ್ಷ್ಯರಾಗಿರುವರು.

وَلَقَدْ بَوَّأْنَا بَنِىٓ إِسْرَٰٓءِيلَ مُبَوَّأَ صِدْقٍ وَرَزَقْنَٰهُم مِّنَ ٱلطَّيِّبَٰتِ فَمَا ٱخْتَلَفُوا۟ حَتَّىٰ جَآءَهُمُ ٱلْعِلْمُ ۚ إِنَّ رَبَّكَ يَقْضِى بَيْنَهُمْ يَوْمَ ٱلْقِيَٰمَةِ فِيمَا كَانُوا۟ فِيهِ يَخْتَلِفُونَ ﴿٩٣﴾

93. ಖಂಡಿತವಾಗಿಯೂ ಇಸ್ರಾಈಲ್ ಸಂತತಿಗಳನ್ನು ನಾವು ಸೂಕ್ತವಾದ ಒಂದು ಪ್ರದೇಶದಲ್ಲಿ ವಾಸ ಮಾಡಿಸಿದೆವು ಮತ್ತು ಉತ್ತಮವಾದ ವಸ್ತುಗಳಿಂದ ಅವರಿಗೆ ಅನ್ನಾಧಾರವನ್ನು ಒದಗಿಸಿದೆವು. ಆದರೆ ಜ್ಞಾನವು ಅವರ ಬಳಿಗೆ ಬಂದ ನಂತರವೇ ಅವರು ಭಿನ್ನಭಿನ್ನರಾದರು.[1] ಅವರು ಭಿನ್ನರಾಗಿರುವ ವಿಷಯದಲ್ಲಿ ತಮ್ಮ ರಬ್ ಪುನರುತ್ಥಾನ ದಿನದಂದು ಖಂಡಿತವಾಗಿಯೂ ಅವರ ಮಧ್ಯೆ ತೀರ್ಪು ನೀಡುವನು.

فَإِن كُنتَ فِى شَكٍّ مِّمَّآ أَنزَلْنَآ إِلَيْكَ فَسْـَٔلِ ٱلَّذِينَ يَقْرَءُونَ ٱلْكِتَٰبَ مِن قَبْلِكَ ۚ لَقَدْ جَآءَكَ ٱلْحَقُّ مِن رَّبِّكَ فَلَا تَكُونَنَّ مِنَ ٱلْمُمْتَرِينَ ﴿٩٤﴾

94. ತಮಗೆ ನಾವು ಅವತೀರ್ಣಗೊಳಿಸಿರುವುದರ ಕುರಿತು ತಮಗೇನಾದರೂ ಸಂದೇಹವಿರುವುದಾದರೆ ತಮಗಿಂತ ಮುಂಚೆಯೇ ಗ್ರಂಥ ಪಾರಾಯಣ ಮಾಡುತ್ತಿದ್ದವರೊಂದಿಗೆ ಕೇಳಿ ನೋಡಿರಿ.[2] ಖಂಡಿತವಾಗಿಯೂ ತಮ್ಮ ರಬ್‌ನ ವತಿಯ ಸತ್ಯವು ತಮ್ಮ ಬಳಿಗೆ ಬಂದಿದೆ. ಆದ್ದರಿಂದ ತಾವು ಸಂದೇಹಪಡುವವರಲ್ಲಿ ಸೇರದಿರಿ.

وَلَا تَكُونَنَّ مِنَ ٱلَّذِينَ كَذَّبُوا۟ بِـَٔايَٰتِ ٱللَّهِ فَتَكُونَ مِنَ ٱلْخَٰسِرِينَ ﴿٩٥﴾

95. ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿದವರಲ್ಲಿಯೂ ತಾವು ಸೇರದಿರಿ. ಹಾಗೇನಾದರೂ ಆದರೆ ತಾವು ನಷ್ಟ ಹೊಂದಿದವರಲ್ಲಿ ಸೇರಿದವರಾಗುವಿರಿ.

إِنَّ ٱلَّذِينَ حَقَّتْ عَلَيْهِمْ كَلِمَتُ رَبِّكَ لَا يُؤْمِنُونَ ﴿٩٦﴾ وَلَوْ جَآءَتْهُمْ كُلُّ ءَايَةٍ حَتَّىٰ يَرَوُا۟ ٱلْعَذَابَ ٱلْأَلِيمَ ﴿٩٧﴾

96-97. ಖಂಡಿತವಾಗಿಯೂ ಯಾರ ಮೇಲೆ ತಮ್ಮ ರಬ್‌ನ ವಚನವು[3] ದೃಢಪಟ್ಟಿರುವುದೋ, ಅವರೆಡೆಗೆ ಯಾವುದೇ ದೃಷ್ಟಾಂತಗಳು ಬಂದರೂ ಯಾತನಾಮಯವಾದ ಶಿಕ್ಷೆಯನ್ನು

1 ಗ್ರಂಥವು ಲಭಿಸಿದ ಬಳಿಕ ಮತ್ತು ಸತ್ಯವನ್ನು ಅರಿತುಕೊಂಡ ಬಳಿಕ ಅವರು ಭಿನ್ನಾಭಿಪ್ರಾಯ ತಾಳಿದರು.

2 ತೌರಾತ್ ಪಾರಾಯಣ ಮಾಡುತ್ತಿರುವ ಯಹೂದರೊಂದಿಗೆ ಮತ್ತು ಇಂಜೀಲ್ ಪಾರಾಯಣ ಮಾಡುತ್ತಿರುವ ಕ್ರೈಸ್ತರೊಂದಿಗೆ ವಿಚಾರಿಸಿದರೆ ಸಂದೇಶವಾಹಕತ್ವ ಮತ್ತು ದಿವ್ಯಸಂದೇಶಕ್ಕೆ ಸಂಬಂಧಿಸಿದ ವಿಷಯಗಳನ್ನು ಅರಿತುಕೊಳ್ಳಬಹುದು.

3 ವಚನ ಎಂಬುದರ ಉದ್ದೇಶವು ಅವರನ್ನು ಶಿಕ್ಷಿಸಲಾಗುವುದೆಂಬ ಘೋಷಣೆಯಾಗಿದೆ.

ಕಣ್ಣಾರೆ ಕಾಣುವವರೆಗೆ ಅವರು ವಿಶ್ವಾಸವಿಡಲಾರರು.

98. ಯಾವುದೇ ದೇಶವು ವಿಶ್ವಾಸವಿಟ್ಟು, ಆ ವಿಶ್ವಾಸವು ಅದಕ್ಕೆ ಪ್ರಯೋಜನಪಡದಿರುವುದೇಕೆ?[1] ಯೂನುಸ್‌ರ ಜನತೆಯ ಹೊರತು.[2] ಅವರು ವಿಶ್ವಾಸ ವಿಟ್ಟಾಗ ನಾವು ಅವರಿಂದ ಐಹಿಕ ಜೀವನದ ಅಪಮಾನಕರ ಶಿಕ್ಷೆಯನ್ನು ನಿವಾರಿಸಿದೆವು ಮತ್ತು ಒಂದು ನಿರ್ದಿಷ್ಟ ಕಾಲದವರೆಗೆ ಅವರಿಗೆ ಅನುಕೂಲತೆಯನ್ನು ನೀಡಿದೆವು.

فَلَوۡلَا كَانَتۡ قَرۡيَةٌ ءَامَنَتۡ فَنَفَعَهَآ إِيمَٰنُهَآ إِلَّا قَوۡمَ يُونُسَ لَمَّآ ءَامَنُواْ كَشَفۡنَا عَنۡهُمۡ عَذَابَ ٱلۡخِزۡيِ فِي ٱلۡحَيَوٰةِ ٱلدُّنۡيَا وَمَتَّعۡنَٰهُمۡ إِلَىٰ حِينٖ ﴿٩٨﴾

99. ತಮ್ಮ ರಬ್ ಇಚ್ಛಿಸಿರುತ್ತಿದ್ದರೆ ಭೂಮಿಯಲ್ಲಿರುವವರೆಲ್ಲರೂ ಒಟ್ಟಾಗಿ ವಿಶ್ವಾಸವಿಡುತ್ತಿದ್ದರು. ಆದ್ದರಿಂದ ಜನರು ವಿಶ್ವಾಸಿಗಳಾಗುವಂತೆ ತಾವು ಅವರನ್ನು ಬಲವಂತ ಪಡಿಸುವಿರಾ?

وَلَوۡ شَآءَ رَبُّكَ لَأٓمَنَ مَن فِي ٱلۡأَرۡضِ كُلُّهُمۡ جَمِيعًاۚ أَفَأَنتَ تُكۡرِهُ ٱلنَّاسَ حَتَّىٰ يَكُونُواْ مُؤۡمِنِينَ ﴿٩٩﴾

100. ಅಲ್ಲಾಹುವಿನ ಅನುಮತಿಯ ವಿನಾ ಯಾವ ವ್ಯಕ್ತಿಗೂ ವಿಶ್ವಾಸವಿಡಲು ಸಾಧ್ಯವಾಗಲಾರದು.[3] ಚಿಂತಿಸಿ ಗ್ರಹಿಸದವರ ಮೇಲೆ ಅವನು ನಿಕೃಷ್ಟತೆಯನ್ನು ಹಾಕಿಬಿಡುವನು.

وَمَا كَانَ لِنَفۡسٍ أَن تُؤۡمِنَ إِلَّا بِإِذۡنِ ٱللَّهِۚ وَيَجۡعَلُ ٱلرِّجۡسَ عَلَى ٱلَّذِينَ لَا يَعۡقِلُونَ ﴿١٠٠﴾

101. (ಓ ಪ್ರವಾದಿಯವರೇ!) ಹೇಳಿರಿ: 'ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಏನೆಲ್ಲ ಇವೆಯೆಂದು ನೋಡಿರಿ. ವಿಶ್ವಾಸವಿಡದ ಜನರಿಗೆ ದೃಷ್ಟಾಂತಗಳಾಗಲಿ, ಮುನ್ನೆಚ್ಚರಿಕೆಗಳಾಗಲಿ ಯಾವ ಫಲವನ್ನೂ ನೀಡಲಾರದು.'

قُلِ ٱنظُرُواْ مَاذَا فِي ٱلسَّمَٰوَٰتِ وَٱلۡأَرۡضِۚ وَمَا تُغۡنِي ٱلۡأٓيَٰتُ وَٱلنُّذُرُ عَن قَوۡمٖ لَّا يُؤۡمِنُونَ ﴿١٠١﴾

---

1 ಯಾವುದಾದರೂ ಊರಿಗೆ ಅಲ್ಲಾಹು ಪ್ರವಾದಿಯನ್ನು ನಿಯೋಗಿಸಿದರೆ ಆ ಪ್ರವಾದಿಯಲ್ಲಿ ವಿಶ್ವಾಸವಿಡುವುದು ಮತ್ತು ವಿಶ್ವಾಸದ ಮೂಲಕ ಯಶಸ್ಸನ್ನು ಪಡೆಯುವುದು ಅವರ ಕರ್ತವ್ಯವಾಗಿದೆ. ಆದರೆ ಹೆಚ್ಚಿನವರೂ ಇದನ್ನು ಮರೆತು ಬಿಡುತ್ತಾರೆ.

2 ಯೂನುಸ್(عَلَيۡهِ ٱلسَّلَامُ)ರನ್ನು ನಿಯೋಗಿಸಲಾಗಿದ್ದು ಇರಾಕ್‌ನ 'ನೀನೆವಾ' ಎಂಬ ಊರಿಗಾಗಿತ್ತು. ಆ ಪ್ರದೇಶದವರು ಮೊದಮೊದಲು ನಿಷೇಧದಲ್ಲಿ ದೃಢವಾಗಿ ನಿಂತರೂ ತರುವಾಯ ಅವರಿಗೆ ತಮ್ಮ ತಪ್ಪು ಮನದಟ್ಟಾದಾಗ ಪಶ್ಚಾತ್ತಾಪಪಟ್ಟರು ಮತ್ತು ಸತ್ಯವಿಶ್ವಾಸವನ್ನು ಸ್ವೀಕರಿಸಿದರು.

3 ಸತ್ಯಾನ್ವೇಷಣೆಯ ತುಡಿತ ಮತ್ತು ಸತ್ಯವನ್ನು ಅಂಗೀಕರಿಸುವ ಸನ್ನದ್ಧತೆ ಇರುವವರನ್ನು ಮಾತ್ರ ಅಲ್ಲಾಹು ಸತ್ಯಮಾರ್ಗದಲ್ಲಿ ಸೇರಿಸುವನು. ಮನುಷ್ಯನ ಸನ್ನದ್ಧತೆ ಮತ್ತು ಅಲ್ಲಾಹುವಿನ ಅನುಗ್ರಹ ಒಂದುಗೂಡುವಾಗ ಮಾತ್ರವೇ ಓರ್ವನು ಸತ್ಯವಿಶ್ವಾಸಿಯಾಗುವನು. ಅಲ್ಲಾಹು ಯಾರ ಮೇಲೂ ವಿಶ್ವಾಸವನ್ನು ಬಲವಂತವಾಗಿ ಹೇರಲಾರನು.

فَهَلْ يَنتَظِرُونَ إِلَّا مِثْلَ أَيَّامِ ٱلَّذِينَ خَلَوْا۟ مِن قَبْلِهِمْ ۚ قُلْ فَٱنتَظِرُوٓا۟ إِنِّى مَعَكُم مِّنَ ٱلْمُنتَظِرِينَ ﴿١٠٢﴾

102. ತಮಗಿಂತ ಮುಂಚೆ ಗತಿಸಿಹೋದವರ ಅನುಭವಗಳಂತಿರುವುದನ್ನೇ ಹೊರತು ಬೇರೇನನ್ನಾದರೂ ಅವರು ಕಾಯುತ್ತಿರುವರೇ? ಹೇಳಿರಿ: 'ನೀವು ಕಾಯುತ್ತಿರಿ. ಖಂಡಿತವಾಗಿಯೂ ನಿಮ್ಮೊಂದಿಗೆ ಕಾಯುತ್ತಿರುವವರ ಪೈಕಿ ನಾನೂ ಇರುವೆನು'.

ثُمَّ نُنَجِّى رُسُلَنَا وَٱلَّذِينَ ءَامَنُوا۟ ۚ كَذَٰلِكَ حَقًّا عَلَيْنَا نُنجِ ٱلْمُؤْمِنِينَ ﴿١٠٣﴾

103. ತರುವಾಯ ನಾವು ನಮ್ಮ ಸಂದೇಶವಾಹಕರನ್ನು ಮತ್ತು ವಿಶ್ವಾಸವಿಟ್ಟವರನ್ನು ರಕ್ಷಿಸುವೆವು. ಹೀಗೆ ವಿಶ್ವಾಸಿಗಳನ್ನು ರಕ್ಷಿಸುವುದು ನಮ್ಮ ಹೊಣೆಯಾಗಿದೆ.

قُلْ يَٰٓأَيُّهَا ٱلنَّاسُ إِن كُنتُمْ فِى شَكٍّ مِّن دِينِى فَلَآ أَعْبُدُ ٱلَّذِينَ تَعْبُدُونَ مِن دُونِ ٱللَّهِ وَلَٰكِنْ أَعْبُدُ ٱللَّهَ ٱلَّذِى يَتَوَفَّىٰكُمْ ۖ وَأُمِرْتُ أَنْ أَكُونَ مِنَ ٱلْمُؤْمِنِينَ ﴿١٠٤﴾

104. ಹೇಳಿರಿ: 'ಓ ಜನರೇ! ನನ್ನ ಧರ್ಮದ ಕುರಿತು ನಿಮಗೇನಾದರೂ ಸಂದೇಹವಿದ್ದರೆ (ತಿಳಿಯಿರಿ!) ನೀವು ಅಲ್ಲಾಹುವಿನ ಹೊರತು ಆರಾಧಿಸುವವರನ್ನು ನಾನು ಆರಾಧಿಸಲಾರೆನು. ಆದರೆ ನಿಮ್ಮನ್ನು ಮೃತಪಡಿಸುವವನಾಗಿರುವ ಅಲ್ಲಾಹುವನ್ನು ನಾನು ಆರಾಧಿಸುವೆನು. ಸತ್ಯವಿಶ್ವಾಸಿಗಳ ಪೈಕಿ ಸೇರಿದವನಾಗಬೇಕೆಂದು ನನಗೆ ಆಜ್ಞಾಪಿಸಲಾಗಿದೆ.

وَأَنْ أَقِمْ وَجْهَكَ لِلدِّينِ حَنِيفًا وَلَا تَكُونَنَّ مِنَ ٱلْمُشْرِكِينَ ﴿١٠٥﴾

105. ಋಜುಮನಸ್ಕನಾಗಿರುತ್ತಾ ನಿನ್ನ ಮುಖವನ್ನು ಧರ್ಮದೆಡೆಗೆ ನೆಲೆಗೊಳಿಸಬೇಕೆಂದು ಮತ್ತು ನೀನು ಬಹುದೇವವಿಶ್ವಾಸಿಗಳ ಪೈಕಿ ಸೇರಿದವನಾಗ ಕೂಡದೆಂದು (ನನಗೆ ಆಜ್ಞಾಪಿಸಲಾಗಿದೆ)'.

وَلَا تَدْعُ مِن دُونِ ٱللَّهِ مَا لَا يَنفَعُكَ وَلَا يَضُرُّكَ ۖ فَإِن فَعَلْتَ فَإِنَّكَ إِذًا مِّنَ ٱلظَّٰلِمِينَ ﴿١٠٦﴾

106. ಅಲ್ಲಾಹುವಿನ ಹೊರತು ತಮಗೆ ಲಾಭವನ್ನಾಗಲಿ, ಹಾನಿಯನ್ನಾಗಲಿ ಮಾಡದ ಯಾವುದರೊಂದಿಗೂ ತಾವು ಪ್ರಾರ್ಥಿಸದಿರಿ. ತಾವೇನಾದರೂ ಹಾಗೆ ಮಾಡುವುದಾದರೆ ಖಂಡಿತವಾಗಿಯೂ ತಾವು ಅಕ್ರಮಿಗಳ ಪೈಕಿ ಸೇರಿದವರಾಗುವಿರಿ.

107. ಅಲ್ಲಾಹು ತಮಗೇನಾದರೂ ಹಾನಿಯನ್ನು ನೀಡುವುದಾದರೆ ಅವನ ಹೊರತು ಅದನ್ನು ನಿವಾರಿಸುವವರಾರೂ ಇಲ್ಲ. ಅವನು ತಮಗೇನಾದರೂ ಒಳಿತನ್ನು ಉದ್ದೇಶಿಸುವುದಾದರೆ ಅವನ ಅನುಗ್ರಹವನ್ನು ತಡೆಯುವವರಾರೂ ಇಲ್ಲ. ಅವನು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅದನ್ನು (ಅನುಗ್ರಹವನ್ನು) ನೀಡುವನು. ಅವನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَإِن يَمۡسَسۡكَ ٱللَّهُ بِضُرّٖ فَلَا كَاشِفَ لَهُۥٓ إِلَّا هُوَۖ وَإِن يُرِدۡكَ بِخَيۡرٖ فَلَا رَآدَّ لِفَضۡلِهِۦۚ يُصِيبُ بِهِۦ مَن يَشَآءُ مِنۡ عِبَادِهِۦۚ وَهُوَ ٱلۡغَفُورُ ٱلرَّحِيمُ ١٠٧

108. ಹೇಳಿರಿ: 'ಓ ಜನರೇ! ನಿಮ್ಮ ರಬ್‌ನ ವತಿಯ ಸತ್ಯವು ಖಂಡಿತವಾಗಿಯೂ ನಿಮ್ಮ ಬಳಿಗೆ ಬಂದಿದೆ. ಆದ್ದರಿಂದ ಯಾರಾದರೂ ಸನ್ಮಾರ್ಗವನ್ನು ಸ್ವೀಕರಿಸುವುದಾದರೆ ಅವನು ಸನ್ಮಾರ್ಗವನ್ನು ಸ್ವೀಕರಿಸುವುದು ಅವನ ಒಳಿತಿಗೇ ಆಗಿದೆ. ಯಾರಾದರೂ ದಾರಿಗೆಡುವುದಾದರೆ ಅದರ ಪಾಪವು ಅವನಿಗೇ ಆಗಿದೆ. ನಾನು ನಿಮ್ಮ ಮೇಲೆ ಹೊಣೆ ವಹಿಸಲ್ಪಟ್ಟವನಲ್ಲ'.

قُلۡ يَٰٓأَيُّهَا ٱلنَّاسُ قَدۡ جَآءَكُمُ ٱلۡحَقُّ مِن رَّبِّكُمۡۖ فَمَنِ ٱهۡتَدَىٰ فَإِنَّمَا يَهۡتَدِي لِنَفۡسِهِۦۖ وَمَن ضَلَّ فَإِنَّمَا يَضِلُّ عَلَيۡهَاۖ وَمَآ أَنَا۠ عَلَيۡكُم بِوَكِيلٖ ١٠٨

109. ತಮಗೆ ದಿವ್ಯಸಂದೇಶವಾಗಿ ನೀಡಲಾಗುವುದನ್ನು ತಾವು ಅನುಸರಿಸಿರಿ ಮತ್ತು ಅಲ್ಲಾಹು ತೀರ್ಪು ನೀಡುವ ತನಕ ಸಹನೆ ವಹಿಸಿರಿ. ತೀರ್ಪು ನೀಡುವವರಲ್ಲಿ ಅವನು ಅತ್ಯುತ್ತಮನಾಗಿರುವನು.

وَٱتَّبِعۡ مَا يُوحَىٰٓ إِلَيۡكَ وَٱصۡبِرۡ حَتَّىٰ يَحۡكُمَ ٱللَّهُۚ وَهُوَ خَيۡرُ ٱلۡحَٰكِمِينَ ١٠٩

# ಹೂದ್

# سُورَةُ هُودٍ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 123

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್, ಲಾಮ್, ರಾ. ಇದು ಗ್ರಂಥವಾಗಿದೆ. ಇದರಲ್ಲಿರುವ ಸೂಕ್ತಿಗಳನ್ನು ವಿಚಾರಭದ್ರಗೊಳಿಸಲಾಗಿದೆ. ತರುವಾಯ ಅವುಗಳನ್ನು ವಿಶದೀಕರಿಸಲಾಗಿದೆ. ಇದು ಯುಕ್ತಿಪೂರ್ಣನೂ ಸೂಕ್ಷ್ಮಜ್ಞಾನಿಯೂ ಆಗಿರುವ ಅಲ್ಲಾಹುವಿನ ಕಡೆಯಿಂದಿರುವುದಾಗಿದೆ.

الٓرۚ كِتَٰبٌ أُحۡكِمَتۡ ءَايَٰتُهُۥ ثُمَّ فُصِّلَتۡ مِن لَّدُنۡ حَكِيمٍ خَبِيرٍ ١

2. ನೀವು ಅಲ್ಲಾಹುವಿನ ಹೊರತು ಇನ್ನಾರನ್ನೂ ಆರಾಧಿಸಬಾರದು ಎಂಬುದಕ್ಕಾಗಿ. ಖಂಡಿತವಾಗಿಯೂ ನಾನು ನಿಮಗೆ ಅವನಿಂದಿರುವ ಒಬ್ಬ ಮುನ್ನೆಚ್ಚರಿಕೆ ನೀಡುವವನೂ, ಶುಭವಾರ್ತೆ ತಿಳಿಸುವವನೂ ಆಗಿರುವೆನು.[1]

أَلَّا تَعۡبُدُوٓاْ إِلَّا ٱللَّهَۚ إِنَّنِي لَكُم مِّنۡهُ نَذِيرٞ وَبَشِيرٞ ٢

3. ನೀವು ನಿಮ್ಮ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ತರುವಾಯ ಅವನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ಅವನು ನಿಮಗೆ ನಿರ್ದಿಷ್ಟ ಅವಧಿಯೊಂದರ ತನಕ ಉತ್ತಮವಾದ ಸುಖಾನುಭೂತಿಗಳನ್ನು ನೀಡುವನು ಮತ್ತು ಉದಾರಮನಸ್ಕರಾದ ಸರ್ವರಿಗೂ ಅವರ ಔದಾರ್ಯಕ್ಕಿರುವ ಪ್ರತಿಫಲವನ್ನು ನೀಡುವನು. ನೀವೇನಾದರೂ ವಿಮುಖರಾಗುವುದಾದರೆ ಖಂಡಿತವಾಗಿಯೂ ಭಯಾನಕವಾದ ದಿನವೊಂದರ ಶಿಕ್ಷೆಯನ್ನು ನಾನು ನಿಮ್ಮ ಮೇಲೆ ಭಯಪಡುತ್ತಿರುವೆನು.

وَأَنِ ٱسۡتَغۡفِرُواْ رَبَّكُمۡ ثُمَّ تُوبُوٓاْ إِلَيۡهِ يُمَتِّعۡكُم مَّتَٰعًا حَسَنًا إِلَىٰٓ أَجَلٖ مُّسَمّٗى وَيُؤۡتِ كُلَّ ذِي فَضۡلٖ فَضۡلَهُۥۖ وَإِن تَوَلَّوۡاْ فَإِنِّيٓ أَخَافُ عَلَيۡكُمۡ عَذَابَ يَوۡمٖ كَبِيرٍ ٣

1 ಸತ್ಯವಿಶ್ವಾಸಿಗಳಿಗೆ ಇಹಪರ ಸೌಭಾಗ್ಯಗಳ ಕುರಿತು ಶುಭವಾರ್ತೆಯನ್ನು ನೀಡುವುದು ಮತ್ತು ಸತ್ಯನಿಷೇಧಿಗಳಿಗೆ ಇಹಪರ ಶಿಕ್ಷೆಯ ಕುರಿತು ಮುನ್ನೆಚ್ಚರಿಕೆ ನೀಡುವುದು ಸಂದೇಶವಾಹಕತ್ವದ ಒಂದು ಪ್ರಮುಖ ಅಂಗವಾಗಿದೆ.

4. ನಿಮ್ಮ ಮರಳುವಿಕೆಯು ಅಲ್ಲಾಹುವಿನೆಡೆಗೇ ಆಗಿದೆ. ಅವನು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

إِلَى ٱللَّهِ مَرۡجِعُكُمۡۖ وَهُوَ عَلَىٰ كُلِّ شَيۡءٖ قَدِيرٌ ٤

5. ಅರಿಯಿರಿ! ಅವನಿಂದ (ಅಲ್ಲಾಹುವಿನಿಂದ) ಅಡಗಿಕೊಳ್ಳುವುದಕ್ಕಾಗಿ ಅವರು ತಮ್ಮ ಎದೆಗಳನ್ನು ಮಡಚುತ್ತಿರುವರು.(1) ಅರಿಯಿರಿ! ಅವರು ತಮ್ಮ ಉಡುಪುಗಳನ್ನು ಹೊದ್ದುಕೊಳ್ಳುವಾಗಲೂ ಅವರು ಬಚ್ಚಿಡುವುದನ್ನೂ ಬಹಿರಂಗಗೊಳಿಸುವುದನ್ನೂ ಅವನು ಅರಿಯುವನು. ಖಂಡಿತವಾಗಿಯೂ ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು

أَلَآ إِنَّهُمۡ يَثۡنُونَ صُدُورَهُمۡ لِيَسۡتَخۡفُواْ مِنۡهُۚ أَلَا حِينَ يَسۡتَغۡشُونَ ثِيَابَهُمۡ يَعۡلَمُ مَا يُسِرُّونَ وَمَا يُعۡلِنُونَۚ إِنَّهُۥ عَلِيمُۢ بِذَاتِ ٱلصُّدُورِ ٥

6. ಭೂಮಿಯಲ್ಲಿ ಯಾವುದೇ ಜೀವಿಯೂ ಇಲ್ಲ, ಅದಕ್ಕೆ ಅನ್ನಾಧಾರ ನೀಡುವ ಹೊಣೆಯನ್ನು ಅಲ್ಲಾಹು ವಹಿಸಿಕೊಂಡಿರುವ ಹೊರತು. ಅವುಗಳ ವಾಸಸ್ಥಳವನ್ನೂ ಸಂಗ್ರಹಣಾ ಸ್ಥಳವನ್ನೂ(2) ಅವನು ಅರಿಯುವನು. ಎಲ್ಲವೂ ಸ್ಪಷ್ಟವಾದ ಒಂದು ದಾಖಲೆಯಲ್ಲಿದೆ.

۞ وَمَا مِن دَآبَّةٖ فِي ٱلۡأَرۡضِ إِلَّا عَلَى ٱللَّهِ رِزۡقُهَا وَيَعۡلَمُ مُسۡتَقَرَّهَا وَمُسۡتَوۡدَعَهَاۚ كُلّٞ فِي كِتَٰبٖ مُّبِينٖ ٦

7. ಆಕಾಶಗಳನ್ನು ಮತ್ತು ಭೂಮಿಯನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅವನೇ ಆಗಿರುವನು. ಅವನ ಅರ್ಶ್(ಸಿಂಹಾಸನ) ನೀರಿನ ಮೇಲಿತ್ತು.(3) ಇದು ಕರ್ಮವೆಸಗುವುದರಲ್ಲಿ ನಿಮ್ಮ ಪೈಕಿ ಅತ್ಯುತ್ತಮನು ಯಾರೆಂದು ನಿಮ್ಮನ್ನು ಪರೀಕ್ಷಿಸುವ ಸಲುವಾಗಿದೆ. 'ಖಂಡಿತವಾಗಿಯೂ

وَهُوَ ٱلَّذِي خَلَقَ ٱلسَّمَٰوَٰتِ وَٱلۡأَرۡضَ فِي سِتَّةِ أَيَّامٖ وَكَانَ عَرۡشُهُۥ عَلَى ٱلۡمَآءِ لِيَبۡلُوَكُمۡ أَيُّكُمۡ أَحۡسَنُ عَمَلٗاۗ وَلَئِن قُلۡتَ إِنَّكُم مَّبۡعُوثُونَ مِنۢ بَعۡدِ ٱلۡمَوۡتِ لَيَقُولَنَّ ٱلَّذِينَ كَفَرُوٓاْ إِنۡ هَٰذَآ إِلَّا

1 ಸತ್ಯದೆಡೆಗೆ ಕರೆಯಲಾದರೆ ತಲೆಯನ್ನು ಸಂಪೂರ್ಣವಾಗಿ ಬಗ್ಗಿಸಿ ಸದ್ದಿಲ್ಲದೆ ಅಡಗಿಬಿಡುತ್ತಿದ್ದ ಜನರ ಕುರಿತು ಈ ಸೂಕ್ತಿಯೆಂಬುದು ಒಂದು ವ್ಯಾಖ್ಯಾನವಾಗಿದೆ'. ಎದೆಗಳನ್ನು ಮಡಚುತ್ತಿರುವರು" ಎಂಬುದಕ್ಕೆ ತಮ್ಮ ಹಗೆಯನ್ನು ಅಡಗಿಸಿಡುವರು ಎಂಬ ಅರ್ಥವನ್ನು ನೀಡಿದ ವ್ಯಾಖ್ಯಾನಕಾರರೂ ಇದ್ದಾರೆ.

2 'ಸುರಕ್ಷಾ ಸ್ಥಳ'ವೆಂಬುದಕ್ಕೆ ಗರ್ಭಾಶಯ, ಗೋರಿ, ತಾತ್ಕಾಲಿಕ ನೆಲೆ ಎಂಬಿತ್ಯಾದಿ ವ್ಯಾಖ್ಯಾನಗಳಿವೆ.

3 ಅಲ್ಲಾಹುವಿನ ಸಿಂಹಾಸನವು ನೀರಿನ ಮೇಲಿತ್ತು ಎಂಬುದರ ತಾತ್ಪರ್ಯದ ಕುರಿತು ಖಚಿತವಾದ ಅರಿವೊಂದೂ ತಫ್ಸೀರ್ ಗ್ರಂಥಗಳಿಂದ ನಮಗೆ ಸಿಗುವುದಿಲ್ಲ. ಅಗೋಚರ ವಿಷಯಗಳ ಬಗ್ಗೆ ಅಲ್ಲಾಹು ನಮಗೆ ಏನನ್ನು ತಿಳಿಸಿಕೊಟ್ಟಿರುತ್ತಾನೋ ಅದಕ್ಕಿಂತ ಆಚೆ ಹೋಗಲು ನಮಗೆ ಅನುಮತಿಯಿಲ್ಲ. ಪ್ರಪಂಚೋತ್ಪತ್ತಿಯ ಕುರಿತು ಆಧುನಿಕ ಸಂಶೋಧನೆಗಳ ಬೆಳಕಿನಲ್ಲಿ 'ಆದಿಜಲ'ದ ಕುರಿತು ಸ್ಪಷ್ಟವಾಗಿ ಗ್ರಹಿಸಬಹುದಾಗಿದೆ ಎಂದು ಆಧುನಿಕ ಮುಸ್ಲಿಮ್ ವಿದ್ವಾಂಸರ ಪೈಕಿ ಕೆಲವರು ಹೇಳಿದ್ದಾರೆ.

سِحۡرٞ مُّبِينٞ ٧

ಮರಣಾನಂತರ ನಿಮ್ಮನ್ನು ಪುನರುತ್ಥಾನಗೊಳಿಸಲಾಗುವುದು' ಎಂದು ತಾವು ಹೇಳಿದರೆ ಅವಿಶ್ವಾಸಿಗಳು ಹೇಳುವರು: 'ಇದು ಸ್ಪಷ್ಟವಾದ ಮಾಂತ್ರಿಕತೆಯಲ್ಲದೆ ಇನ್ನೇನೂ ಅಲ್ಲ.'

وَلَئِنۡ أَخَّرۡنَا عَنۡهُمُ ٱلۡعَذَابَ إِلَىٰٓ أُمَّةٖ مَّعۡدُودَةٖ لَّيَقُولُنَّ مَا يَحۡبِسُهُۥٓۗ أَلَا يَوۡمَ يَأۡتِيهِمۡ لَيۡسَ مَصۡرُوفًا عَنۡهُمۡ وَحَاقَ بِهِم مَّا كَانُواْ بِهِۦ يَسۡتَهۡزِءُونَ ٨

8. ಒಂದು ನಿರ್ದಿಷ್ಟ ಅವಧಿಯವರೆಗೆ ನಾವು ಅವರಿಂದ ಶಿಕ್ಷೆಯನ್ನು ಮುಂದೂಡಿದರೆ ಅವರು ಹೇಳುವರು: 'ಅದನ್ನು ತಡೆದಿರಿಸಿರುವುದಾದರೂ ಏನು?' ತಿಳಿಯಿರಿ! ಅದು ಅವರೆಡೆಗೆ ಬರುವ ದಿನ ಅದನ್ನು ಅವರಿಂದ ತಿರುಗಿಸಿಬಿಡಲಾಗದು. ಯಾವುದರ ಕುರಿತು ಅವರು ಗೇಲಿ ಮಾಡುತ್ತಿದ್ದರೋ ಅದು ಅವರನ್ನು ಆವರಿಸಿಯೇ ಬಿಡುವುದು.

وَلَئِنۡ أَذَقۡنَا ٱلۡإِنسَٰنَ مِنَّا رَحۡمَةٗ ثُمَّ نَزَعۡنَٰهَا مِنۡهُ إِنَّهُۥ لَيَـُٔوسٞ كَفُورٞ ٩

9. ನಾವು ಮನುಷ್ಯನಿಗೆ ನಮ್ಮ ವತಿಯ ಯಾವುದಾದರೂ ಅನುಗ್ರಹವನ್ನು ಸವಿಯುವಂತೆ ಮಾಡಿ, ತರುವಾಯ ಅದನ್ನು ಅವನಿಂದ ಹಿಂದೆಗೆದರೆ ಖಂಡಿತವಾಗಿಯೂ ಅವನು ನಿರಾಶನೂ, ಕೃತಘ್ನನೂ ಆಗುವನು.

وَلَئِنۡ أَذَقۡنَٰهُ نَعۡمَآءَ بَعۡدَ ضَرَّآءَ مَسَّتۡهُ لَيَقُولَنَّ ذَهَبَ ٱلسَّيِّـَٔاتُ عَنِّيٓۚ إِنَّهُۥ لَفَرِحٞ فَخُورٌ ١٠

10. ಯಾವುದಾದರೂ ಸಂಕಷ್ಟವು ಅವನನ್ನು ಸ್ಪರ್ಶಿಸಿದ ಬಳಿಕ ನಾವು ಅವನಿಗೆ ಅನುಗ್ರಹವೊಂದನ್ನು ಸವಿಯುವಂತೆ ಮಾಡಿದರೆ ಖಂಡಿತವಾಗಿಯೂ ಅವನು ಹೇಳುವನು: 'ಕೆಡುಕುಗಳು ನನ್ನಿಂದ ದೂರವಾಗಿವೆ'. ಖಂಡಿತವಾಗಿಯೂ ಅವನು ಹಿಗ್ಗುವವನೂ ಅಹಂಭಾವಿಯೂ ಆಗುವನು.

إِلَّا ٱلَّذِينَ صَبَرُواْ وَعَمِلُواْ ٱلصَّٰلِحَٰتِ أُوْلَٰٓئِكَ لَهُم مَّغۡفِرَةٞ وَأَجۡرٞ كَبِيرٞ ١١

11. ಆದರೆ ಸಹನೆ ವಹಿಸಿದವರು ಮತ್ತು ಸತ್ಕರ್ಮಗೈದವರ ಹೊರತು. ಅವರಿಗೆ ಪಾಪಮುಕ್ತಿಯೂ, ಮಹಾ ಪ್ರತಿಫಲವೂ ಇರುವುದು.

فَلَعَلَّكَ تَارِكُۢ بَعۡضَ مَا يُوحَىٰٓ إِلَيۡكَ وَضَآئِقُۢ بِهِۦ صَدۡرُكَ أَن يَقُولُواْ لَوۡلَآ أُنزِلَ عَلَيۡهِ كَنزٌ أَوۡ جَآءَ مَعَهُۥ مَلَكٌۚ إِنَّمَآ

12. 'ಇವರ ಮೇಲೆ ಒಂದು ನಿಧಿಯನ್ನು ಇಳಿಸಲಾಗಿಲ್ಲವೇಕೆ? ಅಥವಾ ಇವರೊಂದಿಗೆ ಒಬ್ಬ ಮಲಕ್ ಬರಲಿಲ್ಲವೇಕೆ?' ಎಂದು ಅವರು (ತಮ್ಮ ಬಗ್ಗೆ) ಹೇಳುತ್ತಿರುವ

أَنتَ نَذِيرٌۚ وَٱللَّهُ عَلَىٰ كُلِّ شَيۡءٖ وَكِيلٌ ١٢

ಕಾರಣದಿಂದ ತಮಗೆ ನೀಡಲಾಗುತ್ತಿರುವ ದಿವ್ಯ ಸಂದೇಶಗಳ ಪೈಕಿ ಕೆಲವನ್ನು ತಾವು ಕೈಬಿಡಲೂಬಹುದು ಮತ್ತು ಅದರ ಕುರಿತು ತಮಗೆ ಮನಃಕ್ಲೇಶವುಂಟಾಗಲೂ ಬಹುದು.[1] ಆದರೆ ತಾವು ಒಬ್ಬ ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿರುವಿರಿ. ಅಲ್ಲಾಹು ಎಲ್ಲ ವಸ್ತುಗಳ ಸಂರಕ್ಷಣೆಯನ್ನು ವಹಿಸಿಕೊಂಡವನಾಗಿರುವನು.

أَمۡ يَقُولُونَ ٱفۡتَرَىٰهُۖ قُلۡ فَأۡتُواْ بِعَشۡرِ سُوَرٖ مِّثۡلِهِۦ مُفۡتَرَيَٰتٖ وَٱدۡعُواْ مَنِ ٱسۡتَطَعۡتُم مِّن دُونِ ٱللَّهِ إِن كُنتُمۡ صَٰدِقِينَ ١٣

**13.** ‘ಅಥವಾ ಇದನ್ನು ಅವರು (ಪ್ರವಾದಿಯವರು) ಸ್ವತಃ ರಚಿಸಿರುವರು’ ಎಂದು ಅವರು ಹೇಳುತ್ತಿರುವರೇ? ತಾವು ಹೇಳಿರಿ: ‘ಹಾಗಾದರೆ ಇದರಂತೆ ರಚಿಸಲಾಗಿರುವ ಹತ್ತು ಅಧ್ಯಾಯಗಳನ್ನು ತನ್ನಿರಿ. ಅಲ್ಲಾಹುವಿನ ಹೊರತು ನಿಮಗೆ ಸಾಧ್ಯವಾಗುವವರನ್ನೆಲ್ಲ ಆಹ್ವಾನಿಸಿರಿ. ನೀವು ಸತ್ಯಸಂಧರಾಗಿದ್ದರೆ!

فَإِلَّمۡ يَسۡتَجِيبُواْ لَكُمۡ فَٱعۡلَمُوٓاْ أَنَّمَآ أُنزِلَ بِعِلۡمِ ٱللَّهِ وَأَن لَّآ إِلَٰهَ إِلَّا هُوَۖ فَهَلۡ أَنتُم مُّسۡلِمُونَ ١٤

**14.** ನಿಮ್ಮ ಆಹ್ವಾನಕ್ಕೆ ಅವರಾರೂ ಸ್ಪಂದಿಸದಿದ್ದರೆ ಇದು ಅವತೀರ್ಣಗೊಂಡಿರುವುದು ಅಲ್ಲಾಹುವಿನ ಅರಿವಿನೊಂದಿಗೆ ಮಾತ್ರವಾಗಿದೆ ಮತ್ತು ಅವನ ಹೊರತು ಅನ್ಯ ಆರಾಧ್ಯನಿಲ್ಲ ಎಂಬುದನ್ನು ನೀವು ಅರಿತುಕೊಳ್ಳಿರಿ. ಇನ್ನಾದರೂ ನೀವು ಮುಸ್ಲಿಮರಾಗಲು ಸಿದ್ಧರಿರುವಿರಾ?’

مَن كَانَ يُرِيدُ ٱلۡحَيَوٰةَ ٱلدُّنۡيَا وَزِينَتَهَا

**15.** ಯಾರಾದರೂ ಐಹಿಕ ಜೀವನವನ್ನು ಮತ್ತು ಅದರ ಸೊಬಗನ್ನು ಬಯಸುವುದಾದರೆ[2]

1 ನಿರಂತರವಾಗಿ ವಿರೋಧವನ್ನೆದುರಿಸುವಾಗ ಮತ್ತು ಅಸಹ್ಯವಾದ ಕುಹಕನುಡಿಗಳನ್ನು ಕೇಳುವಾಗ ಪ್ರವಾದಿ(ﷺ)ರಿಗೆ ಸಹಜವಾಗಿ ದುಃಖವುಂಟಾಗುತ್ತಿತ್ತು. ವಿರೋಧಿಗಳಿಗೆ ಇಷ್ಟವಿಲ್ಲದ ಕೆಲವು ಕುರ್‌ಆನ್ ಸೂಕ್ತಿಗಳನ್ನು ಅವರಿಗೆ ಓದಿಕೊಡದಿರುವುದು ಒಳ್ಳೆಯದಲ್ಲವೇ ಎಂಬ ಭಾವನೆಯು ಕೆಲವೊಮ್ಮೆ ಅವರಿಗೆ ಉಂಟಾಗುತ್ತಿತ್ತು. ಪ್ರವಾದಿ(ﷺ)ರವರ ಹೊಣೆಯು ದಿವ್ಯ ಸಂದೇಶವನ್ನು ಪೂರ್ಣವಾಗಿ ಜನರಿಗೆ ತಲುಪಿಸಿಕೊಡುವುದು ಮಾತ್ರವಾಗಿದೆಯೇ ವಿನಾ ಜನರನ್ನು ವಿಶ್ವಾಸಿಗಳನ್ನಾಗಿ ಮಾರ್ಪಡಿಸುವ ಹೊಣೆ ಅವರಿಗಿಲ್ಲವೆಂದು ಅಲ್ಲಾಹು ಇಲ್ಲಿ ನೆನಪಿಸಿಕೊಡುತ್ತಾನೆ.

2 ಭೌತಿಕ ಜೀವನದ ಗುರಿಯು ಅನಶ್ವರವಾದ ಸ್ವರ್ಗವಾಗಿರಬೇಕು. ನಶ್ವರವಾದ ಐಹಿಕ ಲಾಭಗಳು ಮಹತ್ವಪೂರ್ಣವಾದ ಮನುಷ್ಯ ಜೀವನದ ಪರಮ ಗುರಿಯಾಗಿರಬಾರದು. ಇದರರ್ಥ ಭೌತಿಕವಾದ ಸುಖಸೌಕರ್ಯಗಳನ್ನೆಲ್ಲಾ ತಿರಸ್ಕರಿಸಬೇಕೆಂದಲ್ಲ. ಆದರೆ ಇಸ್ಲಾಮ್ ಕಲಿಸುವುದೇನೆಂದರೆ ಅವುಗಳನ್ನು ಪರಮ ಗುರಿಗೆ ತಲುಪಲು ಬೇಕಾದ ಮಾರ್ಗಗಳನ್ನಾಗಿ ಮಾಡಿಕೊಳ್ಳಬೇಕೆಂದಾಗಿದೆ. ಆದರೆ ಜನರಲ್ಲಿ ಹೆಚ್ಚಿನವರು ಇಹಲೋಕವನ್ನೇ ಜೀವನದ ಗುರಿಯಾಗಿ ಮಾಡಿಕೊಂಡಿದ್ದಾರೆ. ಐಹಿಕಲೋಕದಲ್ಲಿ ಅವರು ಆಶಿಸುವುದನ್ನು ನೀಡಲು ಅಲ್ಲಾಹು ಹಿಂಜರಿಯುವುದಿಲ್ಲ. ಆದರೆ ಪರಲೋಕದಲ್ಲಿ ಅವರಿಗೆ ನರಕವಲ್ಲದೆ ಬೇರೇನೂ ಇರಲಾರದು.

نُوَفِّ إِلَيۡهِمۡ أَعۡمَٰلَهُمۡ فِيهَا وَهُمۡ فِيهَا لَا يُبۡخَسُونَ ﴿١٥﴾

ಅವರ ಕರ್ಮಗಳ (ಪ್ರತಿಫಲವ)ನ್ನು ನಾವವರಿಗೆ ಅಲ್ಲಿಯೇ (ಇಹಲೋಕದಲ್ಲಿಯೇ) ಪೂರ್ಣವಾಗಿ ನೀಡುವೆವು. ಅಲ್ಲಿ ನಾವವರಿಗೆ ಏನನ್ನೂ ಕಡಿಮೆಗೊಳಿಸಲಾರೆವು.

أُوْلَٰٓئِكَ ٱلَّذِينَ لَيۡسَ لَهُمۡ فِي ٱلۡأٓخِرَةِ إِلَّا ٱلنَّارُۖ وَحَبِطَ مَا صَنَعُواْ فِيهَا وَبَٰطِلٞ مَّا كَانُواْ يَعۡمَلُونَ ﴿١٦﴾

**16.** ಅಂತಹವರಿಗೆ ಪರಲೋಕದಲ್ಲಿ ನರಕಾಗ್ನಿಯ ಹೊರತು ಇನ್ನೇನೂ ದೊರೆಯದು. ಇಹಲೋಕದಲ್ಲಿ ಅವರು ಮಾಡಿರುವುದೆಲ್ಲವೂ ವ್ಯರ್ಥವಾಗಿ ಬಿಟ್ಟಿರುವುವು. ಅವರು ಮಾಡಿಕೊಂಡಿರುವುದೆಲ್ಲವೂ ನಿಷ್ಫಲವಾಗಿರುವುವು.

أَفَمَن كَانَ عَلَىٰ بَيِّنَةٖ مِّن رَّبِّهِۦ وَيَتۡلُوهُ شَاهِدٞ مِّنۡهُ وَمِن قَبۡلِهِۦ كِتَٰبُ مُوسَىٰٓ إِمَامٗا وَرَحۡمَةًۚ أُوْلَٰٓئِكَ يُؤۡمِنُونَ بِهِۦۚ وَمَن يَكۡفُرۡ بِهِۦ مِنَ ٱلۡأَحۡزَابِ فَٱلنَّارُ مَوۡعِدُهُۥۚ فَلَا تَكُ فِي مِرۡيَةٖ مِّنۡهُۚ إِنَّهُ ٱلۡحَقُّ مِن رَّبِّكَ وَلَٰكِنَّ أَكۡثَرَ ٱلنَّاسِ لَا يُؤۡمِنُونَ ﴿١٧﴾

**17.** ಓರ್ವನು ತನ್ನ ರಬ್‌ನ ವತಿಯಿಂದಿರುವ ಸ್ಪಷ್ಟವಾದ ಪುರಾವೆಯನ್ನು ಅವಲಂಬಿಸಿರುವನು. ಅವನ ವತಿಯಿಂದ ಇರುವ ಒಂದು ಸಾಕ್ಷಿ (ಕುರ್‌ಆನ್) ಅದನ್ನು ಹಿಂಬಾಲಿಸುತ್ತಲೂ ಇರುವುದು. ಅದಕ್ಕಿಂತ ಮುಂಚೆ ಮಾರ್ಗದರ್ಶಿಯೂ ಕಾರುಣ್ಯವೂ ಆಗಿ ಮೂಸಾರ ಗ್ರಂಥವು ಬಂದಿತ್ತು. (ಹೀಗಿರುವವನು ಆ ಇಹಲೋಕ ಪ್ರೇಮಿಗಳಂತೆ ಕುರ್‌ಆನನ್ನು ನಿಷೇಧಿಸುವನೇ? ಇಲ್ಲ). ಅಂತಹವರು ಅದರಲ್ಲಿ ವಿಶ್ವಾಸವಿಡುವರು.[1] ವಿವಿಧ ಗುಂಪುಗಳ ಪೈಕಿ ಅದನ್ನು ನಿಷೇಧಿಸುವವರು ಯಾರೋ ಅವರಿಗೆ ವಾಗ್ದಾನ ನೀಡಲಾದ ಸ್ಥಳವು ನರಕವಾಗಿದೆ. ಆದ್ದರಿಂದ ಅದರ ಕುರಿತು ತಾವು ಸಂದೇಹ ಪಡದಿರಿ. ಖಂಡಿತವಾಗಿಯೂ ಅದು ತಮ್ಮ ರಬ್‌ನ ವತಿಯ ಸತ್ಯವಾಗಿದೆ. ಆದರೆ ಜನರ ಪೈಕಿ ಹೆಚ್ಚಿನವರೂ ವಿಶ್ವಾಸವಿಡಲಾರರು.

1 ಪ್ರಸ್ತುತ ಸೂಕ್ತಿಯಲ್ಲಿರುವ 'ಯತ್ಲೂ' ಎಂಬ ಪದಕ್ಕೆ ಅನುಸರಿಸುವುದು, ಓದಿಕೊಡುವುದು ಎಂಬ ಅರ್ಥಗಳಿವೆ. 'ಬಯ್ಯಿನಃ' (ಪುರಾವೆ) ಎಂಬುದರ ತಾತ್ಪರ್ಯವು ಭೌದ್ಧಿಕ ಪುರಾವೆ ಅಥವಾ ಗ್ರಂಥವಾಗಿರಬಹುದು. ಈ ವಚನವು ಕ್ರೈಸ್ತರ ಪೈಕಿ ಕುರ್‌ಆನ್‌ನಲ್ಲಿ ವಿಶ್ವಾಸವಿಟ್ಟವರ ಕುರಿತಾಗಿದೆ ಎಂಬುದಕ್ಕೆ ಹೆಚ್ಚಿನ ಸಾಧ್ಯತೆಯಿದೆ. ಅವರು ಇಂಜೀಲನ್ನು ಅವಲಂಬಿಸಿದ್ದರು. ಅದರ ಮೂಲವು ದೈವಿಕವಾಗಿದೆಯೆಂದು ದೃಢೀಕರಿಸುವ ಕುರ್‌ಆನ್ ಅದರ ನಂತರ ಬಂದಿದೆ. ಅದಕ್ಕಿಂತ ಮುಂಚೆ ಬಂದ ಮೂಸಾ(عَلَيْهِ السَّلَامُ)ರವರ ಗ್ರಂಥವಾದ ತೌರಾತ್ ಕೂಡ ಅವರ ಬಳಿಯಿದೆ. ಆದ್ದರಿಂದ ಸಂದೇಹರಹಿತವಾಗಿ ಅವರು ಕುರ್‌ಆನ್‌ನಲ್ಲಿ ವಿಶ್ವಾಸವಿಡುತ್ತಾರೆ.

18. ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದವನಿಗಿಂತಲೂ ದೊಡ್ಡ ಅಕ್ರಮಿ ಇನ್ನಾರಿರುವನು? ಅವರನ್ನು ಅವರ ರಬ್‍ನ ಮುಂದೆ ಹಾಜರುಗೊಳಿಸಲಾಗುವುದು. ಸಾಕ್ಷಿಗಳು ಹೇಳುವರು: 'ತಮ್ಮ ರಬ್‍ನ ಮೇಲೆ ಸುಳ್ಳು ಹೇಳಿದವರು ಇವರೇ ಆಗಿರುವರು.' ಅರಿಯಿರಿ! ಆ ಅಕ್ರಮಿಗಳ ಮೇಲೆ ಅಲ್ಲಾಹುವಿನ ಶಾಪವಿರುವುದು.

وَمَنۡ أَظۡلَمُ مِمَّنِ ٱفۡتَرَىٰ عَلَى ٱللَّهِ كَذِبًاۚ أُوْلَٰٓئِكَ يُعۡرَضُونَ عَلَىٰ رَبِّهِمۡ وَيَقُولُ ٱلۡأَشۡهَٰدُ هَٰٓؤُلَآءِ ٱلَّذِينَ كَذَبُواْ عَلَىٰ رَبِّهِمۡۚ أَلَا لَعۡنَةُ ٱللَّهِ عَلَى ٱلظَّٰلِمِينَ ١٨

19. ಅವರು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆಯುವವರೂ ಅದನ್ನು ವಕ್ರಗೊಳಿಸಲು ಬಯಸುವವರೂ ಆಗಿರುವರು. ಅವರು ಪರಲೋಕದಲ್ಲಿ ವಿಶ್ವಾಸವಿಡದವರಾಗಿರುವರು.

ٱلَّذِينَ يَصُدُّونَ عَن سَبِيلِ ٱللَّهِ وَيَبۡغُونَهَا عِوَجًا وَهُم بِٱلۡأٓخِرَةِ هُمۡ كَٰفِرُونَ ١٩

20. ಭೂಮಿಯಲ್ಲಿ (ಅಲ್ಲಾಹುವನ್ನು) ಪರಾಭವಗೊಳಿಸಲು ಅವರಿಂದಾಗದು. ಅಲ್ಲಾಹುವಿನ ಹೊರತು ಅವರಿಗೆ ಅನ್ಯ ರಕ್ಷಕರೂ ಇರಲಾರರು. ಅವರಿಗೆ ಶಿಕ್ಷೆಯನ್ನು ದುಪ್ಪಟ್ಟುಗೊಳಿಸಲಾಗುವುದು. ಅವರಿಗೆ ಕೇಳಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ ಮತ್ತು ಅವರು ನೋಡಿ ತಿಳಿಯುವವರೂ ಆಗಿರಲಿಲ್ಲ.

أُوْلَٰٓئِكَ لَمۡ يَكُونُواْ مُعۡجِزِينَ فِي ٱلۡأَرۡضِ وَمَا كَانَ لَهُم مِّن دُونِ ٱللَّهِ مِنۡ أَوۡلِيَآءَۘ يُضَٰعَفُ لَهُمُ ٱلۡعَذَابُۚ مَا كَانُواْ يَسۡتَطِيعُونَ ٱلسَّمۡعَ وَمَا كَانُواْ يُبۡصِرُونَ ٢٠

21. ಅಂತಹವರು ಸ್ವತಃ ತಮ್ಮನ್ನೇ ನಷ್ಟಕ್ಕೀಡು ಮಾಡಿದವರಾಗಿರುವರು. ಅವರು ಹೆಣೆದು ರಚಿಸಿರುವುದೆಲ್ಲವೂ ಅವರನ್ನು ತೊರೆದು ಹೋಗಿರುವುದು.

أُوْلَٰٓئِكَ ٱلَّذِينَ خَسِرُوٓاْ أَنفُسَهُمۡ وَضَلَّ عَنۡهُم مَّا كَانُواْ يَفۡتَرُونَ ٢١

22. ನಿಸ್ಸಂದೇಹವಾಗಿಯೂ ಪರಲೋಕದಲ್ಲಿ ಅತ್ಯಧಿಕ ನಷ್ಟ ಹೊಂದಿದವರು ಅವರೇ ಆಗಿರುವರು.

لَا جَرَمَ أَنَّهُمۡ فِي ٱلۡأٓخِرَةِ هُمُ ٱلۡأَخۡسَرُونَ ٢٢

23. ಖಂಡಿತವಾಗಿಯೂ ವಿಶ್ವಾಸವಿಟ್ಟವರು, ಸತ್ಕರ್ಮಗೈದವರು ಮತ್ತು ತಮ್ಮ ರಬ್‍ನೆಡೆಗೆ ವಿನಯವಂತರಾಗಿ ಮರಳಿದವರು ಯಾರೋ ಅವರೇ ಸ್ವರ್ಗವಾಸಿಗಳಾಗಿರುವರು. ಅವರದರಲ್ಲಿ ಶಾಶ್ವತವಾಗಿ ವಾಸಿಸುವರು.

إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ وَأَخۡبَتُوٓاْ إِلَىٰ رَبِّهِمۡ أُوْلَٰٓئِكَ أَصۡحَٰبُ ٱلۡجَنَّةِۖ هُمۡ فِيهَا خَٰلِدُونَ ٢٣

24. ಎರಡು ಪಂಗಡಗಳ ಉಪಮೆಯು ಕುರುಡನೂ ಕಿವುಡನು ಆಗಿರುವ ಓರ್ವ ವ್ಯಕ್ತಿಯಂತೆಯೂ, ದೃಷ್ಟಿಯೂ ಶ್ರವಣಶಕ್ತಿಯೂ ಇರುವ ಇನ್ನೋರ್ವ ವ್ಯಕ್ತಿಯಂತೆಯೂ ಆಗಿದೆ. ಇವರಿಬ್ಬರೂ ಉಪಮೆಯಲ್ಲಿ ಸಮಾನರಾಗುವರೇ? ನೀವು ಚಿಂತಿಸುವುದಿಲ್ಲವೇ?

۞ مَثَلُ ٱلۡفَرِيقَيۡنِ كَٱلۡأَعۡمَىٰ وَٱلۡأَصَمِّ وَٱلۡبَصِيرِ وَٱلسَّمِيعِۚ هَلۡ يَسۡتَوِيَانِ مَثَلًاۚ أَفَلَا تَذَكَّرُونَ ٢٤

25. ಖಂಡಿತವಾಗಿಯೂ ನಾವು ನೂಹ್‌ರನ್ನು ಅವರ ಜನತೆಯೆಡೆಗೆ ಕಳುಹಿಸಿರುವೆವು. (ಅವರು ಹೇಳಿದರು:) 'ಖಂಡಿತವಾಗಿಯೂ ನಾನು ನಿಮಗೆ ಸ್ಪಷ್ಟವಾದ ಮುನ್ನೆಚ್ಚರಿಕೆಯನ್ನು ನೀಡುವವನಾಗಿರುವೆನು.

وَلَقَدۡ أَرۡسَلۡنَا نُوحًا إِلَىٰ قَوۡمِهِۦٓ إِنِّي لَكُمۡ نَذِيرٞ مُّبِينٌ ٢٥

26. ನೀವು ಅಲ್ಲಾಹುವಿನ ಹೊರತು ಬೇರೆ ಯಾರನ್ನೂ ಆರಾಧಿಸಬಾರದು ಎಂಬುದಕ್ಕಾಗಿ. ಖಂಡಿತವಾಗಿಯೂ ನಾನು ನಿಮ್ಮ ಮೇಲೆ ಯಾತನಾಮಯವಾದ ದಿನವೊಂದರ ಶಿಕ್ಷೆಯನ್ನು ಭಯಪಡುತ್ತಿರುವೆನು.'

أَن لَّا تَعۡبُدُوٓاْ إِلَّا ٱللَّهَۖ إِنِّيٓ أَخَافُ عَلَيۡكُمۡ عَذَابَ يَوۡمٍ أَلِيمٖ ٢٦

27. ಆಗ ಅವರ ಜನತೆಯಲ್ಲಿರುವ ಸತ್ಯನಿಷೇಧಿಗಳಾದ ಮುಖಂಡರು ಹೇಳಿದರು: 'ನಿನ್ನನ್ನು ನಾವು ನಮ್ಮಂತಿರುವ ಒಬ್ಬ ಮನುಷ್ಯನಾಗಿಯೇ ವಿನಾ ಕಾಣುತ್ತಿಲ್ಲ. ನಮ್ಮಲ್ಲಿ ಅತ್ಯಂತ ಕೆಳವರ್ಗದವರು (ಸರಿಯಾದ ವಿವೇಚನೆ ಮಾಡದೆ) ನಿನ್ನನ್ನು ಮೊದಲ ನೋಟದಲ್ಲೇ ಹಿಂಬಾಲಿಸಿರುವುದಾಗಿ ಹೊರತು ಬೇರೆ ಯಾರಾದರೂ ನಿನ್ನನ್ನು ಹಿಂಬಾಲಿಸಿರುವುದಾಗಿ ನಾವು ಕಾಣುತ್ತಿಲ್ಲ. ನಿನಗೆ ನಮ್ಮ ಮೇಲೆ ಯಾವುದಾದರೂ ಶ್ರೇಷ್ಠತೆಯಿರುವುದಾಗಿಯೂ ನಾವು ಕಾಣುತ್ತಿಲ್ಲ. ಬದಲಾಗಿ, ನೀನು ಸುಳ್ಳು ಹೇಳುವವನಾಗಿರುವೆ ಎಂದೇ ನಾವು ಭಾವಿಸುತ್ತಿರುವೆವು'.

فَقَالَ ٱلۡمَلَأُ ٱلَّذِينَ كَفَرُواْ مِن قَوۡمِهِۦ مَا نَرَىٰكَ إِلَّا بَشَرٗا مِّثۡلَنَا وَمَا نَرَىٰكَ ٱتَّبَعَكَ إِلَّا ٱلَّذِينَ هُمۡ أَرَاذِلُنَا بَادِيَ ٱلرَّأۡيِ وَمَا نَرَىٰ لَكُمۡ عَلَيۡنَا مِن فَضۡلِۭ بَلۡ نَظُنُّكُمۡ كَٰذِبِينَ ٢٧

28. ನೂಹ್ ಹೇಳಿದರು: 'ಓ ನನ್ನ ಜನರೇ! ನೀವೇನಾದರೂ ಚಿಂತಿಸಿರುವಿರಾ? ನಾನು

قَالَ يَٰقَوۡمِ أَرَءَيۡتُمۡ إِن كُنتُ عَلَىٰ بَيِّنَةٖ

ನನ್ನ ರಬ್‌ನ ವತಿಯ ಸ್ಪಷ್ಟವಾದ ಪುರಾವೆಯನ್ನು ಅವಲಂಬಿಸುವವನಾಗಿರುವಾಗ ಮತ್ತು ಅವನು ತನ್ನ ವತಿಯ ಕಾರುಣ್ಯವನ್ನು ನನಗೆ ದಯಪಾಲಿಸಿರುವಾಗ, (ಅದು ಕಾಣಲು ಸಾಧ್ಯವಾಗದ ರೀತಿಯಲ್ಲಿ) ನಿಮಗೆ ಅಂಧತ್ವವನ್ನು ನೀಡಲಾಗಿದ್ದರೆ (ನಾನೇನು ಮಾಡಲಿ?) ನೀವದನ್ನು ಇಷ್ಟಪಡದವರಾಗಿದ್ದೂ ಸಹ ನಾವು ನಿಮ್ಮನ್ನು (ಅದಕ್ಕಾಗಿ) ಬಲವಂತಗೊಳಿಸುವೆವೇ?[1]

مِّن رَّبِّي وَءَاتَىٰنِي رَحۡمَةٗ مِّنۡ عِندِهِۦ فَعُمِّيَتۡ عَلَيۡكُمۡ أَنُلۡزِمُكُمُوهَا وَأَنتُمۡ لَهَا كَٰرِهُونَ ٢٨

29. ನನ್ನ ಜನರೇ! ನಾನು ಇದಕ್ಕಾಗಿ ನಿಮ್ಮೊಂದಿಗೆ ಯಾವುದೇ ಸಂಪತ್ತನ್ನೂ ಬೇಡಲಾರೆನು. ನನಗೆ ಪ್ರತಿಫಲ ನೀಡಬೇಕಾದವನು ಅಲ್ಲಾಹು ಮಾತ್ರವಾಗಿರುವನು. ವಿಶ್ವಾಸವಿಟ್ಟವರನ್ನು ನಾನು ದೂರ ಅಟ್ಟಲಾರೆನು.[2] ಖಂಡಿತವಾಗಿಯೂ ಅವರು ತಮ್ಮ ರಬ್ಬನ್ನು ಭೇಟಿಯಾಗುವರು.[3] ಆದರೆ ನಾನು ನಿಮ್ಮನ್ನು ಅರಿವಿಲ್ಲದ ಒಂದು ಜನತೆಯಾಗಿ ಕಾಣುತ್ತಿರುವೆನು.[4]

وَيَٰقَوۡمِ لَآ أَسۡـَٔلُكُمۡ عَلَيۡهِ مَالًاۖ إِنۡ أَجۡرِيَ إِلَّا عَلَى ٱللَّهِۚ وَمَآ أَنَا۠ بِطَارِدِ ٱلَّذِينَ ءَامَنُوٓاْۚ إِنَّهُم مُّلَٰقُواْ رَبِّهِمۡ وَلَٰكِنِّيٓ أَرَىٰكُمۡ قَوۡمٗا تَجۡهَلُونَ ٢٩

30. ನನ್ನ ಜನರೇ! ನಾನವರನ್ನು ದೂರಕ್ಕಟ್ಟುವುದಾದರೆ ಅಲ್ಲಾಹುವಿನ ಶಿಕ್ಷೆಯಿಂದ ನನ್ನನ್ನು ರಕ್ಷಿಸುವವರು ಯಾರಿರುವರು? ನೀವು ಚಿಂತಿಸಲಾರಿರೇ?

وَيَٰقَوۡمِ مَن يَنصُرُنِي مِنَ ٱللَّهِ إِن طَرَدتُّهُمۡۚ أَفَلَا تَذَكَّرُونَ ٣٠

31. ಅಲ್ಲಾಹುವಿನ ಖಜಾನೆಗಳು ನನ್ನ ಬಳಿಯಿವೆ ಎಂದು ನಾನು ನಿಮ್ಮೊಂದಿಗೆ ಹೇಳುವುದಿಲ್ಲ. ನನಗೆ ಅಗೋಚರ ವಿಷಯವೂ ತಿಳಿಯದು.

وَلَآ أَقُولُ لَكُمۡ عِندِي خَزَآئِنُ ٱللَّهِ وَلَآ أَعۡلَمُ ٱلۡغَيۡبَ وَلَآ أَقُولُ إِنِّي مَلَكٞ

1 ಜನರು ಸತ್ಯವನ್ನು ಇಷ್ಟಪಡುವುದಿಲ್ಲವೆಂದಾದರೆ ಅದನ್ನು ಅವರ ಮೇಲೆ ಬಲವಂತವಾಗಿ ಹೇರುವುದು ಪ್ರವಾದಿಗಳ ಹೊಣೆಯಲ್ಲ.

2 ಇದು ನೂಹ್‌ರನ್ನು ಹಿಂಬಾಲಿಸಿರುವುದು ಕೆಳವರ್ಗದ ಕೆಲವು ಜನರಾಗಿರುವರೆಂದು ಗೇಲಿ ಮಾಡುತ್ತಾ, ಅವರನ್ನು ದೂರ ಮಾಡಿದರೆ ನಾವು ತಮ್ಮ ಜೊತೆಗೆ ಸೇರಿಕೊಳ್ಳುವೆವು ಎಂದು ವಾಗ್ದಾನ ಮಾಡುತ್ತಿದ್ದ ಮುಖಂಡರಿಗೆ ನೀಡಿದ ಉತ್ತರವಾಗಿದೆ.

3 ಅವರು ಕೆಳವರ್ಗದವರೋ ಅಥವಾ ಮೇಲ್ವರ್ಗದವರೋ ಎಂಬುದನ್ನು ಅಲ್ಲಾಹು ಆಗ ತೀರ್ಮಾನಿಸುವನು.

4 ಅರಿವಿಲ್ಲದ ಜನರು ಬಡಪಾಯಿಗಳಾದ ಸತ್ಯವಿಶ್ವಾಸಿಗಳಲ್ಲ ಬದಲಾಗಿ ಬಲಾಢ್ಯರಾದ ಸತ್ಯನಿಷೇಧಿಗಳಾಗಿರುವರು.

وَلَآ أَقُولُ لِلَّذِينَ تَزۡدَرِيٓ أَعۡيُنُكُمۡ لَن
يُؤۡتِيَهُمُ ٱللَّهُ خَيۡرًاۖ ٱللَّهُ أَعۡلَمُ بِمَا فِيٓ
أَنفُسِهِمۡ إِنِّيٓ إِذٗا لَّمِنَ ٱلظَّٰلِمِينَ ٣١

ನಾನೊಬ್ಬ ಮಲಕ್ ಆಗಿರುವೆನೆಂದೂ ಹೇಳುವುದಿಲ್ಲ. ನಿಮ್ಮ ಕಣ್ಣುಗಳು ಯಾರನ್ನು ಕೀಳಾಗಿ ಕಾಣುತ್ತಿವೆಯೋ ಅವರ ಬಗ್ಗೆ, ಅಲ್ಲಾಹು ಅವರಿಗೆ ಯಾವುದೇ ಒಳಿತನ್ನೂ ನೀಡಲಾರನು ಎಂದು ನಾನು ಹೇಳುವುದಿಲ್ಲ. ಅವರ ಮನಸ್ಸಿನಲ್ಲಿರುವುದರ ಬಗ್ಗೆ ಚೆನ್ನಾಗಿ ಅರಿತಿರುವವನು ಅಲ್ಲಾಹುವಾಗಿರುವನು. ಹಾಗೇನಾದರೂ (ಅವರನ್ನು ದೂಷಿಸಿದರೆ) ಖಂಡಿತವಾಗಿಯೂ ನಾನು ಅಕ್ರಮಿಗಳ ಪೈಕಿ ಸೇರಿದವನಾಗುವೆನು'.

قَالُواْ يَٰنُوحُ قَدۡ جَٰدَلۡتَنَا فَأَكۡثَرۡتَ
جِدَٰلَنَا فَأۡتِنَا بِمَا تَعِدُنَآ إِن كُنتَ مِنَ
ٱلصَّٰدِقِينَ ٣٢

**32.** ಅವರು ಹೇಳಿದರು: 'ಓ ನೂಹ್! ನೀನು ನಮ್ಮೊಂದಿಗೆ ತರ್ಕಿಸಿರುವೆ. ತುಂಬಾ ಹೆಚ್ಚೇ ತರ್ಕಿಸಿರುವೆ. ನೀನು ಸತ್ಯವನ್ನೇ ಹೇಳುವವರಲ್ಲಿ ಸೇರಿದವನಾಗಿದ್ದರೆ ನೀನು ನಮಗೆ ಎಚ್ಚರಿಕೆ ನೀಡುತ್ತಿರುವುದನ್ನು (ಶಿಕ್ಷೆಯನ್ನು) ನಮ್ಮೆಡೆಗೆ ತಾ'.

قَالَ إِنَّمَا يَأۡتِيكُم بِهِ ٱللَّهُ إِن شَآءَ وَمَآ
أَنتُم بِمُعۡجِزِينَ ٣٣

**33.** ನೂಹ್ ಹೇಳಿದರು: 'ಅದನ್ನು ತರುವವನು ಅಲ್ಲಾಹು ಮಾತ್ರವಾಗಿರುವನು; ಅವನು ಇಚ್ಛಿಸುವುದಾದರೆ! (ಅವನನ್ನು) ಸೋಲಿಸಲು ನಿಮ್ಮಿಂದಾಗದು.

وَلَا يَنفَعُكُمۡ نُصۡحِيٓ إِنۡ أَرَدتُّ أَنۡ
أَنصَحَ لَكُمۡ إِن كَانَ ٱللَّهُ يُرِيدُ أَن
يُغۡوِيَكُمۡۚ هُوَ رَبُّكُمۡ وَإِلَيۡهِ تُرۡجَعُونَ ٣٤

**34.** ಅಲ್ಲಾಹು ನಿಮ್ಮನ್ನು ದಾರಿಗೆಡಿಸಲು ಇಚ್ಛಿಸಿದರೆ ನಾನು ನಿಮಗೆ ಉಪದೇಶ ನೀಡಲು ಬಯಸಿದರೂ ನನ್ನ ಉಪದೇಶವು ನಿಮಗೆ ಪ್ರಯೋಜನವಾಗದು. ಅವನು ನಿಮ್ಮ ರಬ್ಬಾಗಿರುವನು. ನಿಮ್ಮನ್ನು ಅವನೆಡೆಗೇ ಮರಳಿಸಲಾಗುವುದು'.

أَمۡ يَقُولُونَ ٱفۡتَرَىٰهُۖ قُلۡ إِنِ ٱفۡتَرَيۡتُهُۥ فَعَلَيَّ
إِجۡرَامِي وَأَنَا۠ بَرِيٓءٞ مِّمَّا تُجۡرِمُونَ ٣٥

**35.** ಅಥವಾ ಅವರು (ಪ್ರವಾದಿಯವರು) ಇದನ್ನು ಸ್ವತಃ ರಚಿಸಿರುವರು ಎಂದು ಅವರು ಹೇಳುತ್ತಿರುವರೇ? ಹೇಳಿರಿ: 'ನಾನು ಇದನ್ನು ಸ್ವತಃ ರಚಿಸಿದ್ದರೆ ನಾನು ಮಾಡಿದ ಅಪರಾಧವು ನನಗೇ ಆಗಿದೆ. ನೀವು ಮಾಡುವ ಅಪರಾಧಗಳಿಂದ ನಾನು ಸಂಪೂರ್ಣ ವಿಮುಕ್ತನಾಗಿರುವೆನು'.

36. ‘ತಮ್ಮ ಜನತೆಯ ಪೈಕಿ ಈಗಾಗಲೇ ವಿಶ್ವಾಸವಿಟ್ಟಿರುವವರ ಹೊರತು ಇನ್ನಾರೂ ವಿಶ್ವಾಸವಿಡಲಾರರು. ಆದ್ದರಿಂದ ಅವರು ಮಾಡುತ್ತಿರುವುದರ ಕುರಿತು ತಾವು ದುಃಖಿಸದಿರಿ’ ಎಂದು ನೂಹ್‌ರಿಗೆ ದಿವ್ಯ ಸಂದೇಶ ನೀಡಲಾಯಿತು.

وَأُوحِيَ إِلَىٰ نُوحٍ أَنَّهُۥ لَن يُؤْمِنَ مِن قَوْمِكَ إِلَّا مَن قَدْ ءَامَنَ فَلَا تَبْتَئِسْ بِمَا كَانُواْ يَفْعَلُونَ ﴿٣٦﴾

37. ನಮ್ಮ ಕಣ್ಣುಗಳ ಅಡಿಯಲ್ಲಿ ಮತ್ತು ನಮ್ಮ ನಿರ್ದೇಶನದ ಪ್ರಕಾರ ತಾವು ಹಡಗನ್ನು ನಿರ್ಮಿಸಿರಿ. ಅಕ್ರಮವೆಸಗಿದವರ ಕುರಿತು ತಾವು ನನ್ನೊಂದಿಗೆ ಮಾತನಾಡದಿರಿ. ಖಂಡಿತವಾಗಿಯೂ ಅವರು ಮುಳುಗಿಸಲ್ಪಡುವರು.’

وَٱصْنَعِ ٱلْفُلْكَ بِأَعْيُنِنَا وَوَحْيِنَا وَلَا تُخَٰطِبْنِى فِى ٱلَّذِينَ ظَلَمُوٓاْ إِنَّهُم مُّغْرَقُونَ ﴿٣٧﴾

38. ಅವರು (ನೂಹ್) ಹಡಗನ್ನು ನಿರ್ಮಿಸುತ್ತಿದ್ದರು. ಅವರ ಜನತೆಯಲ್ಲಿರುವ ಪ್ರಮುಖರು ಅವರ ಸನಿಹದಿಂದ ಹಾದು ಹೋಗುವಾಗಲೆಲ್ಲ ಅವರನ್ನು ಗೇಲಿಮಾಡಿದರು. ಅವರು ಹೇಳಿದರು: ‘ನೀವು ನಮ್ಮನ್ನು ಗೇಲಿಮಾಡುವುದಾದರೆ ಖಂಡಿತವಾಗಿಯೂ ನೀವು ಗೇಲಿಮಾಡಿದಂತೆಯೇ ನಾವೂ ನಿಮ್ಮನ್ನು ಗೇಲಿಮಾಡುವೆವು.

وَيَصْنَعُ ٱلْفُلْكَ وَكُلَّمَا مَرَّ عَلَيْهِ مَلَأٌ مِّن قَوْمِهِۦ سَخِرُواْ مِنْهُ ۚ قَالَ إِن تَسْخَرُواْ مِنَّا فَإِنَّا نَسْخَرُ مِنكُمْ كَمَا تَسْخَرُونَ ﴿٣٨﴾

39. ಅಪಮಾನಕರವಾದ ಶಿಕ್ಷೆಯು ಯಾರಿಗೆ ಬರಲಿದೆ ಮತ್ತು ಶಾಶ್ವತವಾದ ಶಿಕ್ಷೆಯು ಯಾರ ಮೇಲೆರಗಲಿದೆ ಎಂದು ಸದ್ಯದಲ್ಲೇ ನೀವು ಅರಿಯಲಿರುವಿರಿ’.

فَسَوْفَ تَعْلَمُونَ مَن يَأْتِيهِ عَذَابٌ يُخْزِيهِ وَيَحِلُّ عَلَيْهِ عَذَابٌ مُّقِيمٌ ﴿٣٩﴾

40. ಹೀಗೆ ನಮ್ಮ ಆಜ್ಞೆಯು ಬಂದಾಗ ಮತ್ತು ಒಲೆಯು ಚಿಲುಮೆಯುಕ್ಕಿ ಹರಿದಾಗ[1] ನಾವು ಹೇಳಿದೆವು: ‘ಎಲ್ಲ ವರ್ಗದಿಂದಲೂ ಒಂದೊಂದು ಜೋಡಿಯನ್ನು ಮತ್ತು ತಮ್ಮ ಕುಟುಂಬವನ್ನು (ಅವರ ಪೈಕಿ) ಯಾರ ಮೇಲೆ (ಶಿಕ್ಷೆಯ) ವಚನವು ಈಗಾಗಲೇ

حَتَّىٰٓ إِذَا جَآءَ أَمْرُنَا وَفَارَ ٱلتَّنُّورُ قُلْنَا ٱحْمِلْ فِيهَا مِن كُلٍّ زَوْجَيْنِ ٱثْنَيْنِ وَأَهْلَكَ إِلَّا مَن سَبَقَ عَلَيْهِ ٱلْقَوْلُ وَمَنْ ءَامَنَ ۚ وَمَآ ءَامَنَ مَعَهُۥٓ إِلَّا قَلِيلٌ ﴿٤٠﴾

1 ಸತ್ಯನಿಷೇಧಿಗಳನ್ನು ಮುಳುಗಿಸಿ ನಾಶ ಮಾಡಲು ಅಲ್ಲಾಹು ಸೃಷ್ಟಿಸಿದ ಮಹಾಪ್ರಳಯದ ಆರಂಭವು ಒಲೆಯಲ್ಲಿ ಒರತೆಯೊಡೆದು ನೀರು ಉಕ್ಕಿ ಹರಿಯುವ ಮೂಲಕ ಸಂಭವಿಸಿತು.

ವಿಧಿಸಲಾಗಿದೆಯೋ ಅವರ ಹೊರತಾದವರನ್ನು ಹಾಗೂ ವಿಶ್ವಾಸವಿಟ್ಟವರನ್ನು ಅದರಲ್ಲಿ ಹತ್ತಿಸಿರಿ' ಕೆಲವೇ ಜನರ ಹೊರತು ಯಾರೂ ಅವರೊಂದಿಗೆ ವಿಶ್ವಾಸವಿಟ್ಟಿರಲಿಲ್ಲ.

۞ وَقَالَ ٱرۡكَبُواْ فِيهَا بِسۡمِ ٱللَّهِ مَجۡرٜىٰهَا وَمُرۡسَىٰهَآۚ إِنَّ رَبِّي لَغَفُورٞ رَّحِيمٞ ٤١

41. ನೂಹ್ (ಅವರೊಂದಿಗೆ) ಹೇಳಿದರು: 'ಇದರಲ್ಲಿ ಹತ್ತಿಕೊಳ್ಳಿರಿ. ಇದರ ಸಂಚಾರವೂ, ನಿಲುಗಡೆಯೂ ಅಲ್ಲಾಹುವಿನ ನಾಮದಲ್ಲಾಗಿದೆ. ಖಂಡಿತವಾಗಿಯೂ ನನ್ನ ರಬ್ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು'.

وَهِيَ تَجۡرِي بِهِمۡ فِي مَوۡجٖ كَٱلۡجِبَالِ وَنَادَىٰ نُوحٌ ٱبۡنَهُۥ وَكَانَ فِي مَعۡزِلٖ يَٰبُنَيَّ ٱرۡكَب مَّعَنَا وَلَا تَكُن مَّعَ ٱلۡكَٰفِرِينَ ٤٢

42. ಪರ್ವತ ಸಮಾನವಾದ ಅಲೆಗಳ ಮಧ್ಯೆ ಅದು (ಹಡಗು) ಅವರನ್ನು ಹೊತ್ತು ಚಲಿಸುತ್ತಿತ್ತು. ನೂಹ್ ತಮ್ಮ ಮಗನನ್ನು ಕರೆದರು. ಅವನು ದೂರದ ಒಂದು ಸ್ಥಳದಲ್ಲಿದ್ದನು.: 'ಓ ನನ್ನ ಕಂದಾ! ನಮ್ಮೊಂದಿಗೆ ಹತ್ತು. ನೀನು ಸತ್ಯನಿಷೇಧಿಗಳಲ್ಲಿ ಸೇರಿದವನಾಗದಿರು'.

قَالَ سَـَٔاوِيٓ إِلَىٰ جَبَلٖ يَعۡصِمُنِي مِنَ ٱلۡمَآءِۚ قَالَ لَا عَاصِمَ ٱلۡيَوۡمَ مِنۡ أَمۡرِ ٱللَّهِ إِلَّا مَن رَّحِمَۚ وَحَالَ بَيۡنَهُمَا ٱلۡمَوۡجُ فَكَانَ مِنَ ٱلۡمُغۡرَقِينَ ٤٣

43. ಅವನು ಹೇಳಿದನು: 'ನೀರಿನಿಂದ ನನ್ನನ್ನು ಪಾರು ಮಾಡುವ ಯಾವುದಾದರೂ ಪರ್ವತದಲ್ಲಿ ನಾನು ಆಶ್ರಯ ಪಡೆಯುವೆನು'. ನೂಹ್ ಹೇಳಿದರು: 'ಅಲ್ಲಾಹುವಿನ ಆಜ್ಞೆಯಿಂದ ರಕ್ಷಿಸುವವರು ಇಂದು ಯಾರೂ ಇಲ್ಲ. ಯಾರ ಮೇಲೆ ಅವನು ಕರುಣೆ ತೋರಿರುವನೋ ಅವರ ಹೊರತು'. ಆಗ ಅವರಿಬ್ಬರ ಮಧ್ಯೆ ಅಲೆಯು ಅಡ್ಡವಾಗಿ ಎದ್ದಿತು. ಅವನು ಮುಳುಗಿ ನಾಶವಾದವರಲ್ಲಿ ಸೇರಿದವನಾದನು.

وَقِيلَ يَٰٓأَرۡضُ ٱبۡلَعِي مَآءَكِ وَيَٰسَمَآءُ أَقۡلِعِي وَغِيضَ ٱلۡمَآءُ وَقُضِيَ ٱلۡأَمۡرُ وَٱسۡتَوَتۡ عَلَى ٱلۡجُودِيِّۖ وَقِيلَ بُعۡدٗا لِّلۡقَوۡمِ ٱلظَّٰلِمِينَ ٤٤

44. 'ಓ ಭೂಮಿಯೇ! ನಿನ್ನ ನೀರನ್ನು ನುಂಗಿಬಿಡು! ಓ ಆಕಾಶವೇ! ಮಳೆಯನ್ನು ನಿಲ್ಲಿಸು!' ಎಂದು ಆಜ್ಞಾಪಿಸಲಾಯಿತು. ನೀರು ಇಂಗಿಹೋಯಿತು ಮತ್ತು ವಿಧಿಯು ನೆರವೇರಿಸಲ್ಪಟ್ಟಿತು. ಅದು (ಹಡಗು) ಜೂದಿ(1) ಪರ್ವತದ ಮೇಲೆ ಅಚಲವಾಗಿ ನಿಂತಿತು. 'ಅಕ್ರಮಿಗಳಾದ ಜನರಿಗೆ

1 ಆರ್ಮೇನಿಯಾದಲ್ಲಿರುವ ಅರಾರಾತ್ ಪರ್ವತ ಶ್ರೇಣಿಯಲ್ಲಿನ ಒಂದು ಪರ್ವತವನ್ನು ಜೂದೀ ಎಂದು ಹೇಳಲಾಗುತ್ತದೆ.

(ಅಲ್ಲಾಹುವಿನ ಕಾರುಣ್ಯದಿಂದ) ವಿದೂರತೆಯಿರಲಿ' ಎಂದು ಹೇಳಲಾಯಿತು.

**45.** ನೂಹ್ ತಮ್ಮ ರಬ್ಬನ್ನು ಕರೆದು ಹೇಳಿದರು: 'ಓ ನನ್ನ ರಬ್! ನನ್ನ ಮಗನು ನನ್ನ ಕುಟುಂಬಕ್ಕೆ ಸೇರಿದವನಾಗಿರುವನು. ಖಂಡಿತವಾಗಿಯೂ ನಿನ್ನ ವಾಗ್ದಾನವು ಸತ್ಯವಾಗಿದೆ.[1] ತೀರ್ಪುಗಾರರ ಪೈಕಿ ನೀನು ಅತ್ಯುತ್ತಮ ತೀರ್ಪುಗಾರನಾಗಿರುವೆ'.

وَنَادَىٰ نُوحٌ رَّبَّهُۥ فَقَالَ رَبِّ إِنَّ ٱبۡنِي مِنۡ أَهۡلِي وَإِنَّ وَعۡدَكَ ٱلۡحَقُّ وَأَنتَ أَحۡكَمُ ٱلۡحَٰكِمِينَ ﴿٤٥﴾

**46.** ಅವನು (ಅಲ್ಲಾಹು) ಹೇಳಿದನು: 'ಓ ನೂಹ್! ಖಂಡಿತವಾಗಿಯೂ ಅವನು ತಮ್ಮ ಕುಟುಂಬಕ್ಕೆ ಸೇರಿದವನಲ್ಲ.[2] ಖಂಡಿತವಾಗಿಯೂ ಅವನು ಒಳಿತಲ್ಲದ ಕರ್ಮವನ್ನು ಮಾಡಿದವನಾಗಿರುವನು. ಆದ್ದರಿಂದ ತಮಗೆ ಅರಿವಿಲ್ಲದಿರುವುದನ್ನು ನನ್ನಲ್ಲಿ ಬೇಡದಿರಿ. ತಾವು ಅರಿವಿಲ್ಲದವರ ಪೈಕಿ ಸೇರಿದವರಾಗಬಾರದೆಂದು ನಾನು ತಮಗೆ ಉಪದೇಶ ನೀಡುತ್ತಿರುವೆನು'.

قَالَ يَٰنُوحُ إِنَّهُۥ لَيۡسَ مِنۡ أَهۡلِكَۖ إِنَّهُۥ عَمَلٌ غَيۡرُ صَٰلِحٖۖ فَلَا تَسۡـَٔلۡنِ مَا لَيۡسَ لَكَ بِهِۦ عِلۡمٌۖ إِنِّيٓ أَعِظُكَ أَن تَكُونَ مِنَ ٱلۡجَٰهِلِينَ ﴿٤٦﴾

**47.** ಅವರು (ನೂಹ್) ಹೇಳಿದರು: 'ಓ ನನ್ನ ರಬ್! ನನಗೆ ಅರಿವಿಲ್ಲದಿರುವುದನ್ನು ನಿನ್ನಲ್ಲಿ ಬೇಡುವುದರಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿರುವೆನು. ನೀನು ನನ್ನನ್ನು ಕ್ಷಮಿಸದಿದ್ದರೆ ಮತ್ತು ನನ್ನೊಂದಿಗೆ ಕರುಣೆ ತೋರದಿದ್ದರೆ ನಾನು ನಷ್ಟ ಹೊಂದಿದವರಲ್ಲಿ ಸೇರಿದವನಾಗುವೆನು'.

قَالَ رَبِّ إِنِّيٓ أَعُوذُ بِكَ أَنۡ أَسۡـَٔلَكَ مَا لَيۡسَ لِي بِهِۦ عِلۡمٌۖ وَإِلَّا تَغۡفِرۡ لِي وَتَرۡحَمۡنِيٓ أَكُن مِّنَ ٱلۡخَٰسِرِينَ ﴿٤٧﴾

**48.** (ಅವರೊಂದಿಗೆ) ಹೇಳಲಾಯಿತು: 'ಓ ನೂಹ್! ನಮ್ಮ ವತಿಯ ಶಾಂತಿಯೊಂದಿಗೆ ಮತ್ತು ತಮ್ಮ ಜೊತೆಗಿರುವವರ ಪೈಕಿಯ[3] ಜನತೆಗಳಿಗಿರುವ ಅನುಗ್ರಹಗಳೊಂದಿಗೆ ತಾವು ಇಳಿಯಿರಿ. ಆದರೆ

قِيلَ يَٰنُوحُ ٱهۡبِطۡ بِسَلَٰمٖ مِّنَّا وَبَرَكَٰتٍ عَلَيۡكَ وَعَلَىٰٓ أُمَمٖ مِّمَّن مَّعَكَۚ وَأُمَمٞ سَنُمَتِّعُهُمۡ ثُمَّ يَمَسُّهُم مِّنَّا عَذَابٌ أَلِيمٞ ﴿٤٨﴾

1 ಇಲ್ಲಿ ಪರಾಮರ್ಶಿಸಿರುವುದು ನೂಹ್(عَلَيۡهِ ٱلسَّلَامُ)ರವರ ಕುಟುಂಬವನ್ನು ರಕ್ಷಿಸುವೆನು ಎಂಬ ಅಲ್ಲಾಹುವಿನ ವಾಗ್ದಾನದ ಕುರಿತಾಗಿದೆ.

2 ಒಬ್ಬ ಪ್ರವಾದಿಯ ಕುಟುಂಬವೆಂದರೆ ಅದು ಕೇವಲ ರಕ್ತಸಂಬಂಧಿಗಳು ಮಾತ್ರವಲ್ಲ. ಪ್ರವಾದಿಯಲ್ಲಿ ವಿಶ್ವಾಸವಿಡುವವರೆಲ್ಲರೂ ಅವರ ಕುಟುಂಬವಾಗಿರುವರು.

3 'ಅಲಾ ಉಮಮಿನ್ ಮಿಮ್ಮನ್ ಮಅಕ್' ಎಂಬುದನ್ನು 'ನಿನ್ನ ಜೊತೆಗಿರುವವರ ಪೈಕಿ ವಿವಿಧ ಪಂಗಡಗಳಿಗೆ' ಎಂದೂ 'ನಿನ್ನ ಜೊತೆಗಿರುವವರಿಂದ ಜನ್ಮ ಪಡೆಯುವ ಅವರ ನಂತರದ ತಲೆಮಾರುಗಳಿಗೆ' ಎಂದೂ ವ್ಯಾಖ್ಯಾನಿಸಲಾಗಿದೆ.

(ಬೇರೆ) ಕೆಲವು ಜನರಿರು ವರು. ಅವರಿಗೆ ನಾವು ಅನುಕೂಲತೆಗಳನ್ನು ದಯಪಾಲಿಸುವೆವು. ತರುವಾಯ ನಮ್ಮ ವತಿಯ ಯಾತನಾಮಯವಾದ ಶಿಕ್ಷೆಯು ಅವರನ್ನು ಸ್ಪರ್ಶಿಸಲಿರುವುದು'.

49. (ಓ ಪ್ರವಾದಿಯವರೇ!) ಇವು ಅಗೋಚರ ವೃತ್ತಾಂತಗಳಲ್ಲಿ ಸೇರಿದ್ದಾಗಿವೆ. ನಾವು ಇದನ್ನು ತಮಗೆ ದಿವ್ಯ ಸಂದೇಶವಾಗಿ ನೀಡುತ್ತಿರುವೆವು. ಇದಕ್ಕಿಂತ ಮುಂಚೆ ತಾವಾಗಲಿ, ತಮ್ಮ ಜನತೆಯಾಗಲಿ ಇದನ್ನು ಅರಿತಿರಲಿಲ್ಲ. ಆದ್ದರಿಂದ ಸಹನೆ ವಹಿಸಿರಿ. ಖಂಡಿತವಾಗಿಯೂ(ಅತ್ಯುತ್ತಮ) ಪರ್ಯಾವಸಾನವು ಭಯಭಕ್ತಿ ಪಾಲಿಸುವವರಿಗೇ ಆಗಿರುವುದು.

تِلۡكَ مِنۡ أَنۢبَآءِ ٱلۡغَيۡبِ نُوحِيهَآ إِلَيۡكَۖ مَا كُنتَ تَعۡلَمُهَآ أَنتَ وَلَا قَوۡمُكَ مِن قَبۡلِ هَٰذَاۖ فَٱصۡبِرۡۖ إِنَّ ٱلۡعَٰقِبَةَ لِلۡمُتَّقِينَ ٤٩

50. ಆದ್ ಸಮೂಹದೆಡೆಗೆ ಅವರ ಸಹೋದರರಾದ ಹೂದ್‌ರನ್ನು (ನಾವು ಕಳುಹಿಸಿದೆವು). ಅವರು ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯರಿಲ್ಲ. ನೀವು ಕೇವಲ ಸುಳ್ಳು ಹೆಣೆಯುವವರು ಮಾತ್ರವಾಗಿರುವಿರಿ.

وَإِلَىٰ عَادٍ أَخَاهُمۡ هُودٗاۚ قَالَ يَٰقَوۡمِ ٱعۡبُدُواْ ٱللَّهَ مَا لَكُم مِّنۡ إِلَٰهٍ غَيۡرُهُۥٓۖ إِنۡ أَنتُمۡ إِلَّا مُفۡتَرُونَ ٥٠

51. ನನ್ನ ಜನರೇ! ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡುವುದಿಲ್ಲ. ನನಗೆ ಪ್ರತಿಫಲ ನೀಡಬೇಕಾದವನು ನನ್ನನ್ನು ಸೃಷ್ಟಿಸಿದವನು ಮಾತ್ರವಾಗಿರುವನು. ನೀವು ಚಿಂತಿಸುವುದಿಲ್ಲವೇ?

يَٰقَوۡمِ لَآ أَسۡـَٔلُكُمۡ عَلَيۡهِ أَجۡرًاۖ إِنۡ أَجۡرِيَ إِلَّا عَلَى ٱلَّذِي فَطَرَنِيٓۚ أَفَلَا تَعۡقِلُونَ ٥١

52. ನನ್ನ ಜನರೇ! ನೀವು ನಿಮ್ಮ ರಬ್‌ನೊಂದಿಗೆ ಪಾಪ ಮುಕ್ತಿಯನ್ನು ಬೇಡಿರಿ. ತರುವಾಯ ಅವನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ಅವನು ನಿಮಗೆ ಹೇರಳವಾಗಿ ಮಳೆಯನ್ನು ಸುರಿಸಿಕೊಡುವನು. ನಿಮ್ಮ ಶಕ್ತಿಗೆ ಅವನು ಇನ್ನಷ್ಟು ಶಕ್ತಿಯನ್ನು ಸೇರಿಸಿ ಕೊಡುವನು. ನೀವು ಅಪರಾಧಿಗಳಾಗಿ ವಿಮುಖರಾಗದಿರಿ'.

وَيَٰقَوۡمِ ٱسۡتَغۡفِرُواْ رَبَّكُمۡ ثُمَّ تُوبُوٓاْ إِلَيۡهِ يُرۡسِلِ ٱلسَّمَآءَ عَلَيۡكُم مِّدۡرَارٗا وَيَزِدۡكُمۡ قُوَّةً إِلَىٰ قُوَّتِكُمۡ وَلَا تَتَوَلَّوۡاْ مُجۡرِمِينَ ٥٢

53. ಅವರು ಹೇಳಿದರು: ‘ಓ ಹೂದ್! ನೀನು ನಮಗೆ ಸ್ಪಷ್ಟವಾದ ಯಾವ ಪುರಾವೆಯನ್ನೂ ತಂದಿಲ್ಲ. ನಿನ್ನ ಮಾತಿಗೆ ಮರುಳಾಗಿ ನಾವು ನಮ್ಮ ಆರಾಧ್ಯರನ್ನು ಕೈಬಿಡಲಾರೆವು. ನಾವು ನಿನ್ನಲ್ಲಿ ವಿಶ್ವಾಸವನ್ನೂ ಇಡಲಾರೆವು.

قَالُواْ يَٰهُودُ مَا جِئۡتَنَا بِبَيِّنَةٖ وَمَا نَحۡنُ
بِتَارِكِيٓ ءَالِهَتِنَا عَن قَوۡلِكَ وَمَا نَحۡنُ لَكَ
بِمُؤۡمِنِينَ ٥٣

54-55. ನಮ್ಮ ಆರಾಧ್ಯರ ಪೈಕಿ ಕೆಲವರು ನಿನಗೆ ಯಾವುದೋ ಕೆಡುಕನ್ನು ತಗುಲಿಸಿರುವರು ಎಂದು ಮಾತ್ರವಾಗಿದೆ ನಮಗೆ ಹೇಳಲಿಕ್ಕಿರುವುದು’[1] ಹೂದ್ ಹೇಳಿದರು: ‘ನೀವು ಅಲ್ಲಾಹುವಿನೊಂದಿಗೆ ಸಹಭಾಗಿಯಾಗಿ ಮಾಡುತ್ತಿರುವ ಎಲ್ಲದರಿಂದಲೂ ನಾನು ವಿಮುಕ್ತನಾಗಿರುವೆನು ಎಂಬುದಕ್ಕೆ ನಾನು ಅಲ್ಲಾಹುವನ್ನು ಸಾಕ್ಷಿಯಾಗಿಸುತ್ತಿರುವೆನು ಮತ್ತು ನೀವೂ (ಅದಕ್ಕೆ) ಸಾಕ್ಷಿಗಳಾಗಿರಿ. ಆದ್ದರಿಂದ ನೀವು ಒಟ್ಟಾಗಿ ನನ್ನ ವಿರುದ್ಧ ಸಂಚು ಹೂಡಿರಿ. ತರುವಾಯ ನನಗೆ ಸ್ವಲ್ಪವೂ ಕಾಲಾವಕಾಶವನ್ನು ನೀಡದಿರಿ.

إِن نَّقُولُ إِلَّا ٱعۡتَرَىٰكَ بَعۡضُ ءَالِهَتِنَا
بِسُوٓءٖۗ قَالَ إِنِّيٓ أُشۡهِدُ ٱللَّهَ وَٱشۡهَدُوٓاْ أَنِّي
بَرِيٓءٞ مِّمَّا تُشۡرِكُونَ ٥٤ مِن دُونِهِۦۖ
فَكِيدُونِي جَمِيعٗا ثُمَّ لَا تُنظِرُونِ ٥٥

56. ನಾನು ನನ್ನ ಮತ್ತು ನಿಮ್ಮ ರಬ್ಬಾಗಿರುವ ಅಲ್ಲಾಹುವಿನ ಮೇಲೆ ಭರವಸೆಯಿಟ್ಟಿರುವೆನು. ಯಾವುದೇ ಜೀವಿಯೂ ಇರಲಾರದು, ಅದರ ಮುಂದಲೆಯು[2] ಅವನ ವಶದಲ್ಲಿರುವ ಹೊರತು. ಖಂಡಿತವಾಗಿಯೂ ನನ್ನ ರಬ್‌ನ ನೇರವಾದ ಮಾರ್ಗದಲ್ಲಿರುವನು.

إِنِّي تَوَكَّلۡتُ عَلَى ٱللَّهِ رَبِّي وَرَبِّكُمۚ مَّا
مِن دَآبَّةٍ إِلَّا هُوَ ءَاخِذُۢ بِنَاصِيَتِهَآۚ إِنَّ رَبِّي
عَلَىٰ صِرَٰطٖ مُّسۡتَقِيمٖ ٥٦

57. ನೀವೇನಾದರೂ ವಿಮುಖರಾಗುವುದಾದರೆ ನನ್ನನ್ನು ನಿಮ್ಮೆಡೆಗೆ ಯಾವುದರೊಂದಿಗೆ ಕಳುಹಿಸಲಾಗಿದೆಯೋ ಅದನ್ನು ನಾನು ನಿಮಗೆ ತಲುಪಿಸಿಕೊಟ್ಟಿರುವೆನು. ನನ್ನ ರಬ್‌ನ ನಿಮ್ಮ ಹೊರತಾದ ಬೇರೊಂದು ಜನತೆಯನ್ನು

فَإِن تَوَلَّوۡاْ فَقَدۡ أَبۡلَغۡتُكُم مَّآ أُرۡسِلۡتُ بِهِۦٓ
إِلَيۡكُمۡۚ وَيَسۡتَخۡلِفُ رَبِّي قَوۡمًا غَيۡرَكُمۡ
وَلَا تَضُرُّونَهُۥ شَيۡـًٔاۚ إِنَّ رَبِّي عَلَىٰ كُلِّ شَيۡءٍ
حَفِيظٞ ٥٧

1 ಹೂದ್‌ರಿಗೆ ನಮ್ಮ ಆರಾಧ್ಯರ ಪೈಕಿ ಯಾರದೋ ಶಾಪ ತಗುಲಿದೆ. ಆದ್ದರಿಂದಲೇ ನಮಗೆ ಗ್ರಹಿಸಲಾಗದ ಏನೇನನ್ನೋ ಅವನು ಮಾತನಾಡುತ್ತಿದ್ದಾನೆ ಎಂದು ಬಹುದೇವಾರಾಧಕರಾದ ಜನರು ಹೇಳುತ್ತಿದ್ದರು.

2 ಮುಂದಲೆಯು ಅವನ ವಶದಲ್ಲಿರುವುದು ಎಂದರೆ ಸಂಪೂರ್ಣ ನಿಯಂತ್ರಣವು ಅವನ ವಶದಲ್ಲಿರುವುದು ಎಂದರ್ಥ.

ಉತ್ತರಾಧಿಕಾರಿಯಾಗಿ ತರುವನು. ಅವನಿಗೆ ಯಾವುದೇ ಹಾನಿಯನ್ನು ಮಾಡಲೂ ನಿಮ್ಮಿಂದ ಸಾಧ್ಯವಾಗಲಾರದು. ಖಂಡಿತವಾಗಿಯೂ ನನ್ನ ರಬ್ ಸರ್ವ ವಸ್ತುಗಳ ಸಂರಕ್ಷಕನಾಗಿರುವನು'.

وَلَمَّا جَآءَ أَمۡرُنَا نَجَّيۡنَا هُودٗا وَٱلَّذِينَ ءَامَنُواْ مَعَهُۥ بِرَحۡمَةٖ مِّنَّا وَنَجَّيۡنَٰهُم مِّنۡ عَذَابٍ غَلِيظٖ ﴿٥٨﴾

58. ನಮ್ಮ ಆಜ್ಞೆಯು ಬಂದಾಗ ಹೂದ್ ಮತ್ತು ಅವರ ಜೊತೆಗೆ ವಿಶ್ವಾಸವಿಟ್ಟವರನ್ನು ನಾವು ನಮ್ಮ ವತಿಯ ಕರುಣೆಯಿಂದಾಗಿ ರಕ್ಷಿಸಿದೆವು. ನಾವವರನ್ನು ಕಠೋರವಾದ ಶಿಕ್ಷೆಯಿಂದ ರಕ್ಷಿಸಿದೆವು

وَتِلۡكَ عَادٞۖ جَحَدُواْ بِـَٔايَٰتِ رَبِّهِمۡ وَعَصَوۡاْ رُسُلَهُۥ وَٱتَّبَعُوٓاْ أَمۡرَ كُلِّ جَبَّارٍ عَنِيدٖ ﴿٥٩﴾

59. ಅದಾಗಿದೆ ಆದ್ ಜನಾಂಗ. ಅವರು ತಮ್ಮ ರಬ್‌ನ ದೃಷ್ಟಾಂತಗಳನ್ನು ನಿಷೇಧಿಸಿದರು, ಅವನ ಸಂದೇಶವಾಹಕರನ್ನು ಧಿಕ್ಕರಿಸಿದರು ಮತ್ತು ಹಟಮಾರಿಗಳಾದ ಸರ್ವ ಸ್ವೇಚ್ಛಾಧಿಪತಿಗಳ ಆದೇಶವನ್ನು ಅನುಸರಿಸಿದರು.

وَأُتۡبِعُواْ فِي هَٰذِهِ ٱلدُّنۡيَا لَعۡنَةٗ وَيَوۡمَ ٱلۡقِيَٰمَةِۗ أَلَآ إِنَّ عَادٗا كَفَرُواْ رَبَّهُمۡۗ أَلَا بُعۡدٗا لِّعَادٖ قَوۡمِ هُودٖ ﴿٦٠﴾

60. ಈ ಇಹಲೋಕದಲ್ಲೂ ಪುನರುತ್ಥಾನ ದಿನದಲ್ಲೂ ಶಾಪವು ಅವರ ಹಿಂದೆ ಕಳುಹಿಸಲ್ಪಟ್ಟಿತು ಅರಿಯಿರಿ! ಖಂಡಿತವಾಗಿಯೂ ಆದ್ ಜನಾಂಗದವರು ತಮ್ಮ ರಬ್ಬನ್ನು ನಿಷೇಧಿಸಿದರು.(1) ಅರಿಯಿರಿ! ಹೂದ್‌ನ ಜನತೆಯಾಗಿರುವ ಆದ್ ಜನಾಂಗಕ್ಕೆ (ಅಲ್ಲಾಹುವಿನ ಕಾರುಣ್ಯದಿಂದ) ವಿದೂರತೆಯಿರಲಿ!

۞وَإِلَىٰ ثَمُودَ أَخَاهُمۡ صَٰلِحٗاۚ قَالَ يَٰقَوۡمِ ٱعۡبُدُواْ ٱللَّهَ مَا لَكُم مِّنۡ إِلَٰهٍ غَيۡرُهُۥۖ هُوَ أَنشَأَكُم مِّنَ ٱلۡأَرۡضِ وَٱسۡتَعۡمَرَكُمۡ فِيهَا فَٱسۡتَغۡفِرُوهُ ثُمَّ تُوبُوٓاْ إِلَيۡهِۚ إِنَّ رَبِّي قَرِيبٞ مُّجِيبٞ ﴿٦١﴾

61. ಸಮೂದ್ ಜನಾಂಗದೆಡೆಗೆ ಅವರ ಸಹೋದರರಾದ ಸ್ವಾಲಿಹ್‌ರನ್ನು (ನಾವು ಕಳುಹಿಸಿದೆವು). ಅವರು ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯರಿಲ್ಲ. ಅವನು ನಿಮ್ಮನ್ನು ಭೂಮಿಯಿಂದ ಬೆಳೆಸಿದನು ಮತ್ತು ಅಲ್ಲಿ ನಿಮಗೆ ನೆಲೆಯನ್ನು ಒದಗಿಸಿದನು. ಆದ್ದರಿಂದ ನೀವು ಅವನೊಂದಿಗೆ

1 ಕಫರ ಎಂಬ ಪದಕ್ಕೆ ಅವಿಶ್ವಾಸವಿಟ್ಟನು, ನಿಷೇಧಿಸಿದನು, ಕೃತಘ್ನತೆ ತೋರಿದನು ಇತ್ಯಾದಿ ಅರ್ಥಗಳಿವೆ.

ಪಾಪಮುಕ್ತಿಯನ್ನು ಬೇಡಿರಿ. ತರುವಾಯ ಅವನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ಖಂಡಿತವಾಗಿಯೂ ನನ್ನ ರಬ್ ಅತಿನಿಕಟನೂ, (ಪ್ರಾರ್ಥನೆಗೆ) ಉತ್ತರಿಸುವವನೂ ಆಗಿರುವನು'.

**62.** ಅವರು ಹೇಳಿದರು: 'ಓ ಸ್ವಾಲಿಹ್! ನೀನು ಇದಕ್ಕೆ ಮುಂಚೆ ನಮ್ಮಲ್ಲಿ ಒಬ್ಬ ಆಶಾಪೂರ್ಣ ವ್ಯಕ್ತಿಯಾಗಿದ್ದೆ. ನಮ್ಮ ಪೂರ್ವಿಕರು ಏನನ್ನು ಆರಾಧಿಸುತ್ತಿದ್ದರೋ ಅದನ್ನು ನಾವು ಆರಾಧಿಸುವುದರಿಂದ ನೀನು ನಮ್ಮನ್ನು ತಡೆಯುತ್ತಿರುವೆಯಾ? ನೀನು ನಮ್ಮನ್ನು ಯಾವುದರೆಡೆಗೆ ಆಹ್ವಾನಿಸುತ್ತಿರುವಿರೋ ಅದರ ಬಗ್ಗೆ ನಾವು ಅವಿಶ್ವಾಸ ಹುಟ್ಟಿಸುವಂತಹ ಸಂದೇಹದಲ್ಲಿರುವೆವು'.

قَالُواْ يَٰصَٰلِحُ قَدۡ كُنتَ فِينَا مَرۡجُوّٗا قَبۡلَ هَٰذَآۖ أَتَنۡهَىٰنَآ أَن نَّعۡبُدَ مَا يَعۡبُدُ ءَابَآؤُنَا وَإِنَّنَا لَفِي شَكّٖ مِّمَّا تَدۡعُونَآ إِلَيۡهِ مُرِيبٖ ٦٢

**63.** ಸ್ವಾಲಿಹ್ ಹೇಳಿದರು: 'ಓ ನನ್ನ ಜನರೇ! ನೀವು ಆಲೋಚಿಸಿರುವಿರಾ?. ನಾನು ನನ್ನ ರಬ್‌ನ ವತಿಯ ಸ್ಪಷ್ಟವಾದ ಪುರಾವೆಯನ್ನು ಅವಲಂಬಿಸಿದವನಾಗಿರುವಾಗ ಮತ್ತು ತನ್ನ ವತಿಯ ಕಾರುಣ್ಯವನ್ನು ಅವನು ನನಗೆ ದಯಪಾಲಿಸಿರುವಾಗ, ನಾನು ಅವನನ್ನು ಧಿಕ್ಕರಿಸುವುದಾದರೆ, ಅಲ್ಲಾಹುವಿನ ಶಿಕ್ಷೆಯಿಂದ (ನನ್ನನ್ನು ರಕ್ಷಿಸುವುದಕ್ಕಾಗಿ) ನನ್ನ ನೆರವಿಗೆ ಬರುವವರು ಯಾರಿರುವರು? ನೀವು ನನಗೆ ನಷ್ಟವನ್ನೇ ಹೊರತು ಬೇರೇನನ್ನೂ ಅಧಿಕಗೊಳಿಸಲಾರಿರಿ.

قَالَ يَٰقَوۡمِ أَرَءَيۡتُمۡ إِن كُنتُ عَلَىٰ بَيِّنَةٖ مِّن رَّبِّي وَءَاتَىٰنِي مِنۡهُ رَحۡمَةٗ فَمَن يَنصُرُنِي مِنَ ٱللَّهِ إِنۡ عَصَيۡتُهُۥۖ فَمَا تَزِيدُونَنِي غَيۡرَ تَخۡسِيرٖ ٦٣

**64.** ನನ್ನ ಜನರೇ! ಇದು ನಿಮಗೆ ದೃಷ್ಟಾಂತವಾಗಿರುವ ಅಲ್ಲಾಹುವಿನ ಒಂಟೆಯಾಗಿದೆ. ಆದ್ದರಿಂದ ಅದನ್ನು ಬಿಟ್ಟುಬಿಡಿರಿ. ಅಲ್ಲಾಹುವಿನ ಭೂಮಿಯಲ್ಲಿ ಅದು ಮೇಯುತ್ತಿರಲಿ. ಯಾವುದೇ ಹಾನಿಯೊಂದಿಗೂ ಅದನ್ನು ಮುಟ್ಟದಿರಿ. ಹಾಗೇನಾದರೂ ಆದರೆ ಸನಿಹದಲ್ಲೇ ಇರುವ ಶಿಕ್ಷೆಯು ನಿಮ್ಮನ್ನು ಹಿಡಿಯುವುದು'.

وَيَٰقَوۡمِ هَٰذِهِۦ نَاقَةُ ٱللَّهِ لَكُمۡ ءَايَةٗۖ فَذَرُوهَا تَأۡكُلۡ فِيٓ أَرۡضِ ٱللَّهِۖ وَلَا تَمَسُّوهَا بِسُوٓءٖ فَيَأۡخُذَكُمۡ عَذَابٞ قَرِيبٞ ٦٤

65. ಆದರೆ ಅವರು ಅದನ್ನು ಕೊಯ್ದು ಕೊಂದರು. ಆಗ ಸ್ವಾಲಿಹ್ ಹೇಳಿದರು: 'ಮೂರು ದಿನಗಳ ಕಾಲ ನೀವು ನಿಮ್ಮ ಮನೆಗಳಲ್ಲಿ ಸುಖವಾಗಿರಿ. (ಅಷ್ಟರಲ್ಲಿ ಶಿಕ್ಷೆಯು ಬರಲಿರುವುದು.) ಇದು ಹುಸಿಯಾಗಿಸಲು ಸಾಧ್ಯವಾಗದ ಒಂದು ವಾಗ್ದಾನವಾಗಿದೆ'.

فَعَقَرُوهَا فَقَالَ تَمَتَّعُواْ فِي دَارِكُمْ ثَلَٰثَةَ
أَيَّامٍۖ ذَٰلِكَ وَعْدٌ غَيْرُ مَكْذُوبٍ ٦٥

66. ತರುವಾಯ ನಮ್ಮ ಆಜ್ಞೆಯು ಬಂದಾಗ ನಾವು ನಮ್ಮ ಕಾರುಣ್ಯದಿಂದಾಗಿ ಸ್ವಾಲಿಹ್ ಮತ್ತು ಅವರ ಜೊತೆಗೆ ವಿಶ್ವಾಸವಿಟ್ಟವರನ್ನು ರಕ್ಷಿಸಿದೆವು. ಆ ದಿನದ ಅಪಮಾನದಿಂದಲೂ (ಅವರನ್ನು ಕಾಪಾಡಿದೆವು). ಖಂಡಿತವಾಗಿಯೂ ತಮ್ಮ ರಬ್ ಬಲಿಷ್ಠನೂ ಪ್ರತಾಪಶಾಲಿಯೂ ಆಗಿರುವನು.

فَلَمَّا جَآءَ أَمْرُنَا نَجَّيْنَا صَٰلِحًا وَٱلَّذِينَ
ءَامَنُواْ مَعَهُۥ بِرَحْمَةٍ مِّنَّا وَمِنْ خِزْيِ
يَوْمِئِذٍۚ إِنَّ رَبَّكَ هُوَ ٱلْقَوِيُّ ٱلْعَزِيزُ ٦٦

67. ಅಕ್ರಮವೆಸಗಿದವರನ್ನು ಘೋರವಾದ ಒಂದು ಶಬ್ದವು ಹಿಡಿದುಬಿಟ್ಟಿತು. ಪ್ರಭಾತವಾದಾಗ ಅವರು ತಮ್ಮ ಮನೆಗಳಲ್ಲಿ ಅಧೋಮುಖಿಗಳಾಗಿ ಬಿದ್ದಿದ್ದರು.

وَأَخَذَ ٱلَّذِينَ ظَلَمُواْ ٱلصَّيْحَةُ فَأَصْبَحُواْ
فِي دِيَٰرِهِمْ جَٰثِمِينَ ٦٧

68. ಅವರು ಅಲ್ಲಿ ವಾಸಿಸಿರಲೇ ಇಲ್ಲ ಎಂಬಂತೆ (ನಾಮಾವಶೇಷವಾದರು). ಅರಿಯಿರಿ! ಖಂಡಿತವಾಗಿಯೂ ಸಮೂದ್ ಜನಾಂಗದವರು ತಮ್ಮ ರಬ್ಬನ್ನು ನಿಷೇಧಿಸಿದರು. ಅರಿಯಿರಿ! ಸಮೂದ್ ಜನಾಂಗದವರಿಗೆ (ಅಲ್ಲಾಹುವಿನ ಕಾರುಣ್ಯದಿಂದ) ವಿದೂರತೆಯಿರಲಿ!

كَأَن لَّمْ يَغْنَوْاْ فِيهَآۗ أَلَآ إِنَّ ثَمُودَاْ كَفَرُواْ
رَبَّهُمْۗ أَلَا بُعْدًا لِّثَمُودَ ٦٨

69. ನಮ್ಮ ದೂತರು ಇಬ್ರಾಹೀಮ್‌ರ ಬಳಿಗೆ ಶುಭವಾರ್ತೆಯೊಂದಿಗೆ ಬಂದರು. ಅವರು ಹೇಳಿದರು: 'ಸಲಾಮ್'. ಇಬ್ರಾಹೀಮ್ ಹೇಳಿದರು: 'ಸಲಾಮ್'. ಹೆಚ್ಚು ತಡಮಾಡದೆ ಅವರು ಹುರಿದ ಕರುವೊಂದನ್ನು ತಂದರು.

وَلَقَدْ جَآءَتْ رُسُلُنَآ إِبْرَٰهِيمَ بِٱلْبُشْرَىٰ
قَالُواْ سَلَٰمًاۖ قَالَ سَلَٰمٌۖ فَمَا لَبِثَ أَن جَآءَ
بِعِجْلٍ حَنِيذٍ ٦٩

70. ಆದರೆ ಅವರ ಕೈಗಳು ಅದರೆಡೆಗೆ (ಆಹಾರದೆಡೆಗೆ) ತಲುಪದಿರುವುದನ್ನು ಕಂಡಾಗ ಅವರಿಗೆ (ಇಬ್ರಾಹೀಮ್‌ರಿಗೆ) ಅವರ ಬಗ್ಗೆ ಶಂಕೆಯುಂಟಾಯಿತು. ಅವರ ಬಗ್ಗೆ

فَلَمَّا رَءَآ أَيْدِيَهُمْ لَا تَصِلُ إِلَيْهِ نَكِرَهُمْ
وَأَوْجَسَ مِنْهُمْ خِيفَةًۚ قَالُواْ لَا تَخَفْ إِنَّآ
أُرْسِلْنَآ إِلَىٰ قَوْمِ لُوطٍ ٧٠

ಅವರಿಗೆ ಭಯವುಂಟಾಯಿತು.[1] ಅವರು ಹೇಳಿದರು: ‘ತಾವು ಭಯಪಡದಿರಿ. ನಮ್ಮನ್ನು ಕಳುಹಿಸಲಾಗಿರುವುದು ಲೂತ್‌ರ ಜನತೆಯೆಡೆಗಾಗಿದೆ’.

وَٱمۡرَأَتُهُۥ قَآئِمَةٞ فَضَحِكَتۡ فَبَشَّرۡنَٰهَا بِإِسۡحَٰقَ وَمِن وَرَآءِ إِسۡحَٰقَ يَعۡقُوبَ ٧١

71. ಅವರ (ಇಬ್ರಾಹೀಮ್‌ರ) ಪತ್ನಿ ಅಲ್ಲಿ ನಿಂತಿದ್ದರು. ಅವರು ನಕ್ಕರು. ಆಗ ನಾವು ಅವರಿಗೆ (ಪತ್ನಿಗೆ) ಇಸ್‌ಹಾಕ್‌ರ ಕುರಿತು ಮತ್ತು ಇಸ್‌ಹಾಕ್‌ರ ನಂತರ ಯಅ್‌ಕೂಬ್‌ರ ಕುರಿತು ಶುಭವಾರ್ತೆ ನೀಡಿದೆವು.[2]

قَالَتۡ يَٰوَيۡلَتَىٰٓ ءَأَلِدُ وَأَنَا۠ عَجُوزٞ وَهَٰذَا بَعۡلِي شَيۡخًاۖ إِنَّ هَٰذَا لَشَيۡءٌ عَجِيبٞ ٧٢

72. ಅವರು (ಪತ್ನಿ) ಹೇಳಿದರು: ಅಯ್ಯೋ ನನ್ನ ಪಾಡೇ! ನಾನೋರ್ವ ವೃದ್ಧೆಯಾಗಿದ್ದೂ ಹಡೆಯುವುದೇ? ಈ ನನ್ನ ಪತಿ ಒಬ್ಬ ವೃದ್ಧನಾಗಿರುವರು! ಖಂಡಿತವಾಗಿಯೂ ಇದೊಂದು ಅಚ್ಚರಿದಾಯಕ ವಿಷಯವೇ ಆಗಿದೆ!’

قَالُوٓاْ أَتَعۡجَبِينَ مِنۡ أَمۡرِ ٱللَّهِۖ رَحۡمَتُ ٱللَّهِ وَبَرَكَٰتُهُۥ عَلَيۡكُمۡ أَهۡلَ ٱلۡبَيۡتِۚ إِنَّهُۥ حَمِيدٞ مَّجِيدٞ ٧٣

73. ಅವರು (ದೂತರು) ಹೇಳಿದರು: ‘ಅಲ್ಲಾಹುವಿನ ಆಜ್ಞೆಯ ಕುರಿತು ತಾವು ಅಚ್ಚರಿಪಡುತ್ತಿರುವಿರಾ? ಓ (ಇಬ್ರಾಹೀಮ್) ಕುಟುಂಬದವರೇ! ನಿಮ್ಮ ಮೇಲೆ ಅಲ್ಲಾಹುವಿನ ಕರುಣೆಯೂ ಅನುಗ್ರಹಗಳೂ ಇರಲಿ. ಖಂಡಿತ ವಾಗಿಯೂ ಅವನು ಸ್ತುತ್ಯರ್ಹನೂ ಮಹಿಮೆಯುಳ್ಳವನೂ ಆಗಿರುವನು’.

فَلَمَّا ذَهَبَ عَنۡ إِبۡرَٰهِيمَ ٱلرَّوۡعُ وَجَآءَتۡهُ ٱلۡبُشۡرَىٰ يُجَٰدِلُنَا فِي قَوۡمِ لُوطٍ ٧٤

74. ತರುವಾಯ ಇಬ್ರಾಹೀಮ್‌ರಿಂದ ಭಯವು ನೀಗಿದಾಗ ಮತ್ತು ಅವರಿಗೆ ಶುಭವಾರ್ತೆಯು ತಲುಪಿದಾಗ ಅವರು ಲೂತ್‌ರ ಜನತೆಯ ಕುರಿತು ನಮ್ಮೊಂದಿಗೆ ತರ್ಕಿಸತೊಡಗಿದರು.

---

1 ಮಲಕ್‌ಗಳು ಸಾಮಾನ್ಯ ಅತಿಥಿಗಳ ರೂಪದಲ್ಲಿ ಇಬ್ರಾಹೀಮ್(عَلَيۡهِ ٱلسَّلَامُ)ರವರ ಬಳಿಗೆ ಬಂದಿದ್ದರು. ಆದ್ದರಿಂದ ಅವರನ್ನು ಸತ್ಕರಿಸಲು ಇಬ್ರಾಹೀಮ(عَلَيۡهِ ٱلسَّلَامُ)ರು ಮುಂದಾದರು. ತರುವಾಯ ಅವರು ಮಲಕ್‌ಗಳಾಗಿದ್ದಾರೆಂಬ ವಿಷಯವು ಅವರಿಗೆ ತಿಳಿಯಿತು.

2 ಇಬ್ರಾಹೀಮ್(عَلَيۡهِ ٱلسَّلَامُ)ರಿಗೆ ಇಸ್‌ಹಾಕ್(عَلَيۡهِ ٱلسَّلَامُ) ಎಂಬ ಮಗನೂ, ಯಅ್‌ಕೂಬ್(عَلَيۡهِ ٱلسَّلَامُ) ಎಂಬ ಮೊಮ್ಮಗನೂ ಉಂಟಾಗುವರೆಂದು ಮಲಕ್‌ಗಳು ಅವರ ಪತ್ನಿಯಾದ ಸಾರ(رَضِيَ ٱللَّهُ عَنۡهَا)ರಿಗೆ ಶುಭವಾರ್ತೆಯನ್ನು ನೀಡಿದರು.

75. ಖಂಡಿತವಾಗಿಯೂ ಇಬ್ರಾಹೀಮ್ ಸಹನಾ ಶೀಲರೂ, ಅತ್ಯಂತ ಅನುಕಂಪವುಳ್ಳವರೂ,[1] ಪಶ್ಚಾತ್ತಾಪಪಡುವವರೂ ಆಗಿದ್ದರು.

إِنَّ إِبۡرَٰهِيمَ لَحَلِيمٌ أَوَّٰهٞ مُّنِيبٞ ﴿٧٥﴾

76. ಇಬ್ರಾಹೀಮ್! ತಾವು ಇದರಿಂದ ವಿಮುಖರಾಗಿರಿ. ಖಂಡಿತವಾಗಿಯೂ ತಮ್ಮ ರಬ್‌ನ ಆಜ್ಞೆಯು ಬಂದುಬಿಟ್ಟಿದೆ. ಖಂಡಿತವಾಗಿಯೂ ರದ್ದುಗೊಳಿಸಲಾಗದ ಶಿಕ್ಷೆಯು ಅವರೆಡೆಗೆ ಬರಲಿರುವುದು.[2]

يَٰٓإِبۡرَٰهِيمُ أَعۡرِضۡ عَنۡ هَٰذَآۖ إِنَّهُۥ قَدۡ جَآءَ أَمۡرُ رَبِّكَۖ وَإِنَّهُمۡ ءَاتِيهِمۡ عَذَابٌ غَيۡرُ مَرۡدُودٖ ﴿٧٦﴾

77. ನಮ್ಮ ದೂತರು (ಮಲಕ್‌ಗಳು) ಲೂತ್‌ರ ಬಳಿಗೆ ಬಂದಾಗ ಅವರ ವಿಷಯದಲ್ಲಿ ಲೂತ್‌ರಿಗೆ ಸಂಕಟವುಂಟಾಯಿತು. ಅವರ ಸ್ಥಿತಿಯನ್ನು ನೆನೆದು ಅವರಿಗೆ ಮನೋವ್ಯಥೆಯುಂಟಾಯಿತು. ಅವರು ಹೇಳಿದರು: ‘ಇದೊಂದು ದುಃಖದಾಯಕ ದಿನವಾಗಿದೆ’.[3]

وَلَمَّا جَآءَتۡ رُسُلُنَا لُوطٗا سِيٓءَ بِهِمۡ وَضَاقَ بِهِمۡ ذَرۡعٗا وَقَالَ هَٰذَا يَوۡمٌ عَصِيبٞ ﴿٧٧﴾

78. ಲೂತ್‌ರ ಜನರು ಅವರೆಡೆಗೆ ಧಾವಿಸಿ ಬಂದರು. ಅವರು ಮುಂಚಿನಿಂದಲೇ ದುಷ್ಕೃತ್ಯಗಳನ್ನು ಮಾಡುವವರಾಗಿದ್ದರು. ಲೂತ್ ಹೇಳಿದರು: ‘ಓ ನನ್ನ ಜನರೇ! ನನ್ನ ಹೆಣ್ಣುಮಕ್ಕಳು ಇಲ್ಲಿರುವರು. (ನೀವು ಅವರನ್ನು ವಿವಾಹವಾಗುವುದಾದರೆ) ಅವರು ನಿಮಗೆ ಅತ್ಯಂತ ಪರಿಶುದ್ಧರಾಗಿರುವರು. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನ ಅತಿಥಿಗಳ ವಿಷಯದಲ್ಲಿ ನನ್ನನ್ನು ಅಪಮಾನಿಸದಿರಿ. ನಿಮ್ಮ ಪೈಕಿ ವಿವೇಚನೆಯಿರುವ ಯಾವ ಪುರುಷನೂ ಇಲ್ಲವೇ?’

وَجَآءَهُۥ قَوۡمُهُۥ يُهۡرَعُونَ إِلَيۡهِ وَمِن قَبۡلُ كَانُواْ يَعۡمَلُونَ ٱلسَّيِّـَٔاتِۚ قَالَ يَٰقَوۡمِ هَٰٓؤُلَآءِ بَنَاتِي هُنَّ أَطۡهَرُ لَكُمۡۖ فَٱتَّقُواْ ٱللَّهَ وَلَا تُخۡزُونِ فِي ضَيۡفِيٓۖ أَلَيۡسَ مِنكُمۡ رَجُلٞ رَّشِيدٞ ﴿٧٨﴾

1 ಅವ್ವಾಹ್ ಎಂಬ ಪದಕ್ಕೆ ಜನರೊಂದಿಗೆ ಅತ್ಯಧಿಕ ಅನುಕಂಪ ತೋರುವವನು, ಅಲ್ಲಾಹುವಿನಲ್ಲಿ ಅತ್ಯಧಿಕ ಭಯಭಕ್ತಿ ಹೊಂದಿರುವವನು ಎಂಬ ಅರ್ಥಗಳಿವೆ.

2 ಅನೈಸರ್ಗಿಕ ಲೈಂಗಿಕತೆಯನ್ನು (ಸಲಿಂಗರತಿಯನ್ನು) ಬಿಟ್ಟುಬಿಡಲು ಒಪ್ಪದಿರುವ ಆ ಜನತೆಯನ್ನು ಶಿಕ್ಷಿಸಲು ಅಲ್ಲಾಹುವಿನ ಆಜ್ಞೆಯು ಬಂದಿದೆ.ಇನ್ನು ಅವರ ಕುರಿತು ತರ್ಕಿಸಿ ಪ್ರಯೋಜನವಿಲ್ಲ.

3 ಸ್ಫುರದ್ರೂಪಿಗಳಾದ ಯಾರನ್ನೇ ಆಗಲಿ ತಮ್ಮ ವಿಕೃತ ಲೈಂಗಿಕ ಕ್ರಿಯೆಗೆ ಬಲಿಪಶುವಾಗಿಸಲು ಹೇಸದ ಆ ದುಷ್ಟರು ಎಲ್ಲಿ ತನ್ನ ಅತಿಥಿಗಳನ್ನೂ ಅದಕ್ಕೆ ಬಳಸುವರೋ ಎಂದು ನೆನೆದು ಲೂತ್ ಸಂಕಟಪಟ್ಟರು.

79. ಅವರು ಹೇಳಿದರು: 'ನಿನ್ನ ಹೆಣ್ಣುಮಕ್ಕಳ ಯಾವ ಅಗತ್ಯವೂ ನಮಗಿಲ್ಲವೆಂದು ನೀನು ಖಂಡಿತವಾಗಿಯೂ ಅರಿತಿರುವೆ. ನಾವು ಏನನ್ನು ಬಯಸುತ್ತಿರುವೆವು ಎಂಬುದನ್ನೂ ನೀನು ಚೆನ್ನಾಗಿ ಅರಿತಿರುವೆ'.

قَالُواْ لَقَدْ عَلِمْتَ مَا لَنَا فِي بَنَاتِكَ مِنْ حَقٍّ وَإِنَّكَ لَتَعْلَمُ مَا نُرِيدُ ٧٩

80. ಲೂತ್ ಹೇಳಿದರು: 'ನಿಮ್ಮನ್ನು ತಡೆಯುವ ಶಕ್ತಿ ನನಗಿರುತ್ತಿದ್ದರೆ! ಅಥವಾ ಒಬ್ಬ ಬಲಶಾಲಿ ಸಹಾಯಕನ ಆಶ್ರಯವನ್ನು ನಾನು ಪಡೆಯುವಂತಿರುತ್ತಿದ್ದರೆ!'

قَالَ لَوْ أَنَّ لِي بِكُمْ قُوَّةً أَوْ ءَاوِيٓ إِلَىٰ رُكْنٖ شَدِيدٖ ٨٠

81. ಅವರು (ಮಲಕ್‌ಗಳು) ಹೇಳಿದರು: 'ಓ ಲೂತ್! ಖಂಡಿತವಾಗಿಯೂ ನಾವು ತಮ್ಮ ರಬ್‌ನ ದೂತರಾಗಿರುವೆವು. ತಮ್ಮ ಬಳಿ ತಲುಪಲು ಅವರಿಗೆ ಸಾಧ್ಯವಾಗಲಾರದು. ಆದ್ದರಿಂದ ತಾವು ರಾತ್ರಿಯ ಒಂದು ಹಂತದಲ್ಲಿ ತಮ್ಮ ಕುಟುಂಬದೊಂದಿಗೆ ಯಾತ್ರೆ ಹೊರಡಿರಿ. ನಿಮ್ಮ ಪೈಕಿ ಯಾರೂ ಹಿಂದಿರುಗಿ ನೋಡದಿರಲಿ. ಆದರೆ ತಮ್ಮ ಪತ್ನಿಯ ಹೊರತು. ಖಂಡಿತವಾಗಿಯೂ ಅವರಿಗೆ (ಜನರಿಗೆ) ಬಾಧಿಸುವ ಶಿಕ್ಷೆಯು ಆಕೆಗೂ ಬಾಧಿಸುವುದು. ಖಂಡಿತವಾಗಿಯೂ ಪ್ರಭಾತವು ಅವರಿಗೋಸ್ಕರ ನಿಶ್ಚಯಿಸಲಾಗಿರುವ ಅವಧಿಯಾಗಿದೆ. ಪ್ರಭಾತವು ಸನಿಹದಲ್ಲೇ ಇಲ್ಲವೇ?'

قَالُواْ يَٰلُوطُ إِنَّا رُسُلُ رَبِّكَ لَن يَصِلُوٓاْ إِلَيْكَۖ فَأَسْرِ بِأَهْلِكَ بِقِطْعٖ مِّنَ ٱلَّيْلِ وَلَا يَلْتَفِتْ مِنكُمْ أَحَدٌ إِلَّا ٱمْرَأَتَكَۖ إِنَّهُۥ مُصِيبُهَا مَآ أَصَابَهُمْۚ إِنَّ مَوْعِدَهُمُ ٱلصُّبْحُۚ أَلَيْسَ ٱلصُّبْحُ بِقَرِيبٖ ٨١

82. ತರುವಾಯ ನಮ್ಮ ಆಜ್ಞೆಯು ಬಂದಾಗ ನಾವು ಅದನ್ನು (ಆ ನಾಡನ್ನು) ಬುಡಮೇಲುಗೊಳಿಸಿದೆವು ಮತ್ತು ಒಂದರ ಮೇಲೊಂದರಂತೆ ಸುಟ್ಟ ಇಟ್ಟಿಗೆಗಳ ಮಳೆಯನ್ನು ಅವರ ಮೇಲೆ ಸುರಿಸಿದೆವು.

فَلَمَّا جَآءَ أَمْرُنَا جَعَلْنَا عَٰلِيَهَا سَافِلَهَا وَأَمْطَرْنَا عَلَيْهَا حِجَارَةٗ مِّن سِجِّيلٖ مَّنضُودٖ ٨٢

83. ತಮ್ಮ ರಬ್‌ನ ಬಳಿ ಗುರುತು ಹಾಕಲಾಗಿರುವ (ಇಟ್ಟಿಗೆಗಳು). ಅದು ಅಕ್ರಮಿಗಳಿಂದ ಹೆಚ್ಚು ದೂರವಾಗಿಲ್ಲ.[1]

مُّسَوَّمَةً عِندَ رَبِّكَۖ وَمَا هِيَ مِنَ ٱلظَّٰلِمِينَ بِبَعِيدٖ ٨٣

1 ಲೂತ್(عَلَيْهِ السَّلَامُ)ರವರ ಜನತೆಯು ವಾಸವಾಗಿದ್ದ ನಾಡು ಅರೇಬಿಯಾದ ಸತ್ಯನಿಷೇಧಿಗಳಿಗೆ ಸಂಬಂಧಿಸಿದಂತೆ ಹೆಚ್ಚು ದೂರದಲ್ಲಿಲ್ಲ ಎಂದರ್ಥ.

84. ಮದ್‌ಯನ್ ಜನಾಂಗದೆಡೆಗೆ ಅವರ ಸಹೋದರರಾದ ಶುಐಬ್‌ರನ್ನು (ನಾವು ಕಳುಹಿಸಿದೆವು). ಆತ ಹೇಳಿದರು: 'ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ಅವನ ಹೊರತು ನಿಮಗೆ ಅನ್ಯ ಆರಾಧ್ಯನಿಲ್ಲ. ಅಳತೆ ಮತ್ತು ತೂಕದಲ್ಲಿ ನೀವು ಕಡಿಮೆ ಮಾಡದಿರಿ. ಖಂಡಿತವಾಗಿಯೂ ನಾನು ನಿಮ್ಮನ್ನು ಸುಸ್ಥಿತಿಯಲ್ಲಿರುವವರಾಗಿ ಕಾಣುತ್ತಿರುವೆನು. ಸಂಪೂರ್ಣವಾಗಿ ಆವರಿಸುವ ದಿನವೊಂದರ ಶಿಕ್ಷೆಯನ್ನು ಖಂಡಿತವಾಗಿಯೂ ನಾನು ನಿಮ್ಮ ಮೇಲೆ ಭಯಪಡುತ್ತಿರುವೆನು.

۞ وَإِلَىٰ مَدۡيَنَ أَخَاهُمۡ شُعَيۡبٗاۚ قَالَ يَٰقَوۡمِ
ٱعۡبُدُواْ ٱللَّهَ مَا لَكُم مِّنۡ إِلَٰهٍ غَيۡرُهُۥۖ وَلَا
تَنقُصُواْ ٱلۡمِكۡيَالَ وَٱلۡمِيزَانَۖ إِنِّيٓ أَرَىٰكُم
بِخَيۡرٖ وَإِنِّيٓ أَخَافُ عَلَيۡكُمۡ عَذَابَ يَوۡمٖ
مُّحِيطٖ ٨٤

85. ನನ್ನ ಜನರೇ! ಅಳತೆ ಮತ್ತು ತೂಕವನ್ನು ನ್ಯಾಯಪೂರ್ಣವಾದ ರೀತಿಯಲ್ಲಿ ಪೂರ್ಣವಾಗಿ ಕೊಡಿರಿ. ಜನರಿಗೆ ಅವರ ವಸ್ತುಗಳನ್ನು ಕಡಿಮೆ ಮಾಡದಿರಿ. ವಿನಾಶಕಾರಿಗಳಾಗಿರುತ್ತಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡದಿರಿ.

وَيَٰقَوۡمِ أَوۡفُواْ ٱلۡمِكۡيَالَ وَٱلۡمِيزَانَ بِٱلۡقِسۡطِۖ
وَلَا تَبۡخَسُواْ ٱلنَّاسَ أَشۡيَآءَهُمۡ وَلَا تَعۡثَوۡاْ
فِي ٱلۡأَرۡضِ مُفۡسِدِينَ ٨٥

86. ನೀವು ವಿಶ್ವಾಸಿಗಳಾಗಿದ್ದರೆ ಅಲ್ಲಾಹು ಬಾಕಿಯುಳಿಸಿ ಕೊಡುವವುಗಳು ನಿಮಗೆ ಅತ್ಯುತ್ತಮವಾಗಿವೆ. ನಾನು ನಿಮ್ಮ ಮೇಲೆ ಕಾವಲುಗಾರನೇನೂ ಅಲ್ಲ'.

بَقِيَّتُ ٱللَّهِ خَيۡرٞ لَّكُمۡ إِن كُنتُم مُّؤۡمِنِينَۚ
وَمَآ أَنَا۠ عَلَيۡكُم بِحَفِيظٖ ٨٦

87. ಅವರು ಹೇಳಿದರು: 'ಓ ಶುಐಬ್! ನಮ್ಮ ಪೂರ್ವಿಕರು ಆರಾಧಿಸುತ್ತಾ ಬಂದಿರುವುದನ್ನು ನಾವು ವರ್ಜಿಸಬೇಕೆಂದು ಅಥವಾ ನಮ್ಮ ಸಂಪತ್ತುಗಳಲ್ಲಿ ನಾವಿಚ್ಛಿಸುವ ಪ್ರಕಾರ ವ್ಯವಹರಿಸಬಾರದೆಂದು ನಿನ್ನ ನಮಾಝ್ ನಿನಗೆ ಆದೇಶಿಸುತ್ತಿದೆಯೇ? ಖಂಡಿತವಾಗಿಯೂ ನೀನು ಸಹನಾಶೀಲನೂ ವಿವೇಕಮತಿಯೂ ಆಗಿರುವೆ!'[1]

قَالُواْ يَٰشُعَيۡبُ أَصَلَوٰتُكَ تَأۡمُرُكَ أَن نَّتۡرُكَ
مَا يَعۡبُدُ ءَابَآؤُنَآ أَوۡ أَن نَّفۡعَلَ فِيٓ أَمۡوَٰلِنَا
مَا نَشَٰٓؤُاْۖ إِنَّكَ لَأَنتَ ٱلۡحَلِيمُ ٱلرَّشِيدُ ٨٧

88. ಅವರು (ಶುಐಬ್) ಹೇಳಿದರು: 'ಓ ನನ್ನ ಜನರೇ! ನೀವು ಆಲೋಚಿಸಿ ನೋಡಿರುವಿರಾ?

قَالَ يَٰقَوۡمِ أَرَءَيۡتُمۡ إِن كُنتُ عَلَىٰ بَيِّنَةٖ

1 ಅವರ ಈ ಮಾತು ಶುಐಬ್(عَلَيْهِ السَّلَام)ರವರ ಮೇಲಿರುವ ವಿಶ್ವಾಸದಿಂದಾಗಿರಲಿಲ್ಲ; ಬದಲಾಗಿ ಅವರನ್ನು ಹೀಯಾಳಿಸುವುದಕ್ಕಾಗಿತ್ತು.

مِّن رَّبِّي وَرَزَقَنِي مِنْهُ رِزْقًا حَسَنًا ۚ وَمَآ
أُرِيدُ أَنْ أُخَالِفَكُمْ إِلَىٰ مَآ أَنْهَىٰكُمْ
عَنْهُ ۚ إِنْ أُرِيدُ إِلَّا ٱلْإِصْلَٰحَ مَا ٱسْتَطَعْتُ ۚ
وَمَا تَوْفِيقِيٓ إِلَّا بِٱللَّهِ ۚ عَلَيْهِ تَوَكَّلْتُ وَإِلَيْهِ
أُنِيبُ ﴿٨٨﴾

ನಾನು ನನ್ನ ರಬ್‌ನ ವತಿಯ ಸ್ಪಷ್ಟವಾದ ಪುರಾವೆಯನ್ನು ಅವಲಂಬಿಸುವವನಾಗಿರುವಾಗ ಮತ್ತು ಅವನು ತನ್ನ ವತಿಯ ಉತ್ತಮವಾದ ಅನ್ನಾಧಾರವನ್ನು[1] ನನಗೆ ಕರುಣಿಸಿರುವಾಗ (ಸತ್ಯವನ್ನು ಮುಚ್ಚಿಡುವುದು ನನ್ನಿಂದ ಹೇಗೆ ಸಾಧ್ಯ?) ನಾನು ನಿಮಗೆ ಒಂದು ವಿಷಯವನ್ನು ವಿರೋಧಿಸಿ ತರುವಾಯ ನಿಮಗೆ ವ್ಯತಿರಿಕ್ತವಾಗಿ ನಾನೇ ಅದನ್ನು ಮಾಡಲು ಬಯಸುವುದಿಲ್ಲ.[2] ನಾನು ಬಯಸುತ್ತಿರುವುದು ನನ್ನಿಂದ ಸಾಧ್ಯವಾಗುವಷ್ಟು ಸುಧಾರಣೆ ಮಾಡುವುದನ್ನು ಮಾತ್ರವಾಗಿದೆ. (ಅದಕ್ಕಿರುವ) ನೆರವು ಅಲ್ಲಾಹುವಿನಿಂದಲ್ಲದೆ ನನಗೆ ದೊರೆಯುವುದಿಲ್ಲ. ಅವನ ಮೇಲೆಯೇ ನಾನು ಭರವಸೆಯಿಟ್ಟಿರುವೆನು ಮತ್ತು ಅವನೆಡೆಗೇ ನಾನು ವಿನಮ್ರತೆಯೊಂದಿಗೆ ಮರಳುವೆನು.

وَيَٰقَوْمِ لَا يَجْرِمَنَّكُمْ شِقَاقِيٓ أَن
يُصِيبَكُم مِّثْلُ مَآ أَصَابَ قَوْمَ نُوحٍ أَوْ
قَوْمَ هُودٍ أَوْ قَوْمَ صَٰلِحٍ ۚ وَمَا قَوْمُ لُوطٍ
مِّنكُم بِبَعِيدٍ ﴿٨٩﴾

**89.** ನನ್ನ ಜನರೇ! ನೂಹ್‌ರ ಜನತೆಗೆ ಅಥವಾ ಹೂದ್‌ರ ಜನತೆಗೆ ಅಥವಾ ಸ್ವಾಲಿಹ್‌ರ ಜನತೆಗೆ ಬಾಧಿಸಿ ದಂತಹ ಶಿಕ್ಷೆಯು ನಿಮಗೂ ಬಾಧಿಸುವಂತಾಗಲು ನನ್ನೊಂದಿಗಿರುವ ವಿರೋಧವು ನಿಮಗೊಂದು ಹೇತುವಾಗದಿರಲಿ. ಲೂತ್‌ರ ಜನತೆಯು ನಿಮ್ಮಿಂದ ಹೆಚ್ಚು ವಿದೂರವಾಗಿಲ್ಲ.

وَٱسْتَغْفِرُوا۟ رَبَّكُمْ ثُمَّ تُوبُوٓا۟ إِلَيْهِ ۚ إِنَّ رَبِّي
رَحِيمٌ وَدُودٌ ﴿٩٠﴾

**90.** ನೀವು ನಿಮ್ಮ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ತರುವಾಯ ಅವನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ಖಂಡಿತವಾಗಿಯೂ ನನ್ನ ರಬ್ ಅಪಾರ ಕರುಣೆಯುಳ್ಳವನೂ, ಅತ್ಯಧಿಕ ಪ್ರೀತಿಸುವವನೂ ಆಗಿರುವನು'.

قَالُوا۟ يَٰشُعَيْبُ مَا نَفْقَهُ كَثِيرًا مِّمَّا تَقُولُ

**91.** ಅವರು ಹೇಳಿದರು: 'ಓ ಶುಐಬ್! ನೀನು ಹೇಳುತ್ತಿರುವವುಗಳಲ್ಲಿ ಹೆಚ್ಚಿನವುಗಳು ನಮಗೆ

---

1 ರಿಝ್ಕ್ ಎಂಬ ಪದಕ್ಕೆ ಉಪಜೀವನ, ಅನ್ನಾಧಾರ, ದಾನ, ಅನುಗ್ರಹ ಇತ್ಯಾದಿ ಅರ್ಥಗಳಿವೆ.

2 ಪ್ರವಾದಿಗಳು ಜನರಿಗೆ ಉಪದೇಶ ನೀಡುವುದು, ವಿಧಿನಿಷೇಧಗಳನ್ನು ಜಾರಿಗೊಳಿಸುವುದು ಮಾತ್ರವಲ್ಲದೆ ಅವುಗಳನ್ನು ತಮ್ಮ ಜೀವನದಲ್ಲಿ ಕರಾರುವಾಕ್ಕಾಗಿ ಅಳವಡಿಸಿ ಮಾದರಿಯನ್ನು ತೋರಿಸಿಕೊಡುತ್ತಿದ್ದರು.

ಅರ್ಥವಾಗುತ್ತಿಲ್ಲ. ಖಂಡಿತವಾಗಿಯೂ ನಿನ್ನನ್ನು ನಾವು ನಮ್ಮ ಪೈಕಿ ಒಬ್ಬ ಬಲಹೀನನಾಗಿ ಕಾಣುತ್ತಿರುವೆವು. ನಿನ್ನ ಕುಟುಂಬವು ಇಲ್ಲದಿರುತ್ತಿದ್ದರೆ ನಾವು ನಿನ್ನನ್ನು ಕಲ್ಲೆಸೆದು ಸಾಯಿಸುತ್ತಿದ್ದೆವು. ನಮ್ಮ ಮಟ್ಟಿಗೆ ನೀನು ಒಬ್ಬ ಬಲಶಾಲಿಯೇನೂ ಅಲ್ಲ'.

وَإِنَّا لَنَرَىٰكَ فِينَا ضَعِيفًاۖ وَلَوۡلَا رَهۡطُكَ لَرَجَمۡنَٰكَۖ وَمَآ أَنتَ عَلَيۡنَا بِعَزِيزٖ ٩١

92. ಅವರು (ಶುಐಬ್) ಹೇಳಿದರು: 'ಓ ನನ್ನ ಜನರೇ! ನಿಮ್ಮ ಮಟ್ಟಿಗೆ ನನ್ನ ಕುಟುಂಬವು ಅಲ್ಲಾಹುವಿಗಿಂತಲೂ ಹೆಚ್ಚು ಪ್ರತಾಪವುಳ್ಳವರೇನು? ನೀವಂತೂ ಅವನನ್ನು ನಿಮ್ಮ ಬೆನ್ನ ಹಿಂದಕ್ಕೆ ತಳ್ಳಿರುವಿರಿ. ಖಂಡಿತವಾಗಿಯೂ ನನ್ನ ರಬ್ ನೀವು ಮಾಡುತ್ತಿರುವುದನ್ನು ಸೂಕ್ಷ್ಮವಾಗಿ ಅರಿಯುವವನಾಗಿರುವನು.

قَالَ يَٰقَوۡمِ أَرَهۡطِيٓ أَعَزُّ عَلَيۡكُم مِّنَ ٱللَّهِ وَٱتَّخَذۡتُمُوهُ وَرَآءَكُمۡ ظِهۡرِيًّاۖ إِنَّ رَبِّي بِمَا تَعۡمَلُونَ مُحِيطٞ ٩٢

93. ನನ್ನ ಜನರೇ! ನೀವು ನಿಮ್ಮ ನಿಲುವಿಗೆ ಅನುಗುಣವಾಗಿ ಕರ್ಮವೆಸಗಿರಿ. ಖಂಡಿತವಾಗಿಯೂ ನಾನು ಕರ್ಮವೆಸಗುವೆನು. ತರುವಾಯ ಯಾರಿಗೆ ಅಪಮಾನಕರವಾದ ಶಿಕ್ಷೆಯು ಬರುವುದು ಮತ್ತು ಯಾರು ಸುಳ್ಳು ಹೇಳುತ್ತಿರುವರು ಎಂಬುದನ್ನು ಮುಂದೆ ನೀವು ಅರಿತುಕೊಳ್ಳುವಿರಿ. ನೀವು ಕಾಯುತ್ತಿರಿ. ಖಂಡಿತವಾಗಿಯೂ ನಾನೂ ನಿಮ್ಮೊಂದಿಗೆ ಕಾಯುತ್ತಿರುವವನಾಗಿರುವೆನು'.

وَيَٰقَوۡمِ ٱعۡمَلُواْ عَلَىٰ مَكَانَتِكُمۡ إِنِّي عَٰمِلٞۖ سَوۡفَ تَعۡلَمُونَ مَن يَأۡتِيهِ عَذَابٞ يُخۡزِيهِ وَمَنۡ هُوَ كَٰذِبٞۖ وَٱرۡتَقِبُوٓاْ إِنِّي مَعَكُمۡ رَقِيبٞ ٩٣

94. ನಮ್ಮ ಆಜ್ಞೆಯು ಬಂದಾಗ ನಾವು ಶುಐಬ್ ಮತ್ತು ಅವರ ಜೊತೆಗೆ ವಿಶ್ವಾಸವಿಟ್ಟವರನ್ನು ನಮ್ಮ ವತಿಯ ಕಾರುಣ್ಯದಿಂದಾಗಿ ರಕ್ಷಿಸಿದೆವು. ಅಕ್ರಮವೆಸಗಿದವರನ್ನು ಘೋರವಾದ ಶಬ್ದವು ಹಿಡಿದುಬಿಟ್ಟಿತು. ಬೆಳಗಾದಾಗ ಅವರು ತಮ್ಮ ಮನೆಗಳಲ್ಲಿ ಅಧೋಮುಖಿಗಳಾಗಿ ಬಿದ್ದಿದ್ದರು.

وَلَمَّا جَآءَ أَمۡرُنَا نَجَّيۡنَا شُعَيۡبٗا وَٱلَّذِينَ ءَامَنُواْ مَعَهُۥ بِرَحۡمَةٖ مِّنَّا وَأَخَذَتِ ٱلَّذِينَ ظَلَمُواْ ٱلصَّيۡحَةُ فَأَصۡبَحُواْ فِي دِيَٰرِهِمۡ جَٰثِمِينَ ٩٤

95. ಅವರಲ್ಲಿ ವಾಸಿಸಿರಲೇ ಇಲ್ಲವೆಂಬಂತೆ (ನಾಮಾವಶೇಷವಾದರು). ಅರಿಯಿರಿ! ಸಮೂದ್ ಜನಾಂಗವು ವಿದೂರವಾದಂತೆಯೇ

كَأَن لَّمۡ يَغۡنَوۡاْ فِيهَآۗ أَلَا بُعۡدٗا لِّمَدۡيَنَ كَمَا بَعِدَتۡ ثَمُودُ ٩٥

ಮದ್‌ಯನ್ ಜನಾಂಗಕ್ಕೂ (ಅಲ್ಲಾಹುವಿನ ಕಾರುಣ್ಯದಿಂದ) ವಿದೂರತೆಯಿರಲಿ!

**96–97.** ನಾವು ನಮ್ಮ ದೃಷ್ಟಾಂತಗಳೊಂದಿಗೆ ಮತ್ತು ಸ್ಪಷ್ಟವಾದ ಆಧಾರಪ್ರಮಾಣಗಳೊಂದಿಗೆ ಮೂಸಾರನ್ನು ಫಿರ್‌ಔನ್ ಮತ್ತು ಅವನ ಮುಖಂಡರ ಕಡೆಗೆ ಕಳುಹಿಸಿದೆವು. ಆದರೆ ಅವರು (ಮುಖಂಡರು) ಫಿರ್‌ಔನನ ಆಜ್ಞೆಯನ್ನು ಅನುಸರಿಸಿದರು. ಫಿರ್‌ಔನನ ಆಜ್ಞೆಯು ವಿವೇಚನೆಯುಳ್ಳದ್ದಾಗಿರಲಿಲ್ಲ.

وَلَقَدْ أَرْسَلْنَا مُوسَىٰ بِـَٔايَـٰتِنَا وَسُلْطَـٰنٍ
مُّبِينٍ ﴿٩٦﴾ إِلَىٰ فِرْعَوْنَ وَمَلَإِيْهِۦ فَٱتَّبَعُوٓا۟
أَمْرَ فِرْعَوْنَ ۖ وَمَآ أَمْرُ فِرْعَوْنَ بِرَشِيدٍ ﴿٩٧﴾

**98.** ಪುನರುತ್ಥಾನದ ದಿನದಂದು ಅವನು (ಫಿರ್‌ಔನ್) ತನ್ನ ಜನತೆಯ ಮುಂಚೂಣಿಯಲ್ಲಿರುವನು. ತರುವಾಯ ಅವನು ಅವರನ್ನು ನರಕದೆಡೆಗೆ ಸಾಗಿಸುವನು. (ಅವರನ್ನು) ಸಾಗಿಸಲಾಗುವ ಆ ಸ್ಥಳವು ಎಷ್ಟೊಂದು ನಿಕೃಷ್ಟವಾದುದು!

يَقْدُمُ قَوْمَهُۥ يَوْمَ ٱلْقِيَـٰمَةِ فَأَوْرَدَهُمُ ٱلنَّارَ ۖ
وَبِئْسَ ٱلْوِرْدُ ٱلْمَوْرُودُ ﴿٩٨﴾

**99.** ಇಹಲೋಕದಲ್ಲೂ ಪುನರುತ್ಥಾನ ದಿನದಲ್ಲೂ ಶಾಪವನ್ನು ಅವರ ಹಿಂದೆಯೇ ಕಳುಹಿಸಲಾಗಿರುವುದು. (ಅವರಿಗೆ) ನೀಡಲಾಗಿರುವ ಆ ಉಡುಗೊರೆಯು ಎಷ್ಟೊಂದು ನಿಕೃಷ್ಟವಾದುದು!

وَأُتْبِعُوا۟ فِى هَـٰذِهِۦ لَعْنَةً وَيَوْمَ ٱلْقِيَـٰمَةِ ۚ
بِئْسَ ٱلرِّفْدُ ٱلْمَرْفُودُ ﴿٩٩﴾

**100.** ಇವು ವಿವಿಧ ನಾಡುಗಳ ವೃತ್ತಾಂತಗಳ ಪೈಕಿ ಕೆಲವು ಮಾತ್ರವಾಗಿವೆ. ನಾವು ಇದನ್ನು ತಮಗೆ ವಿವರಿಸಿಕೊಡುತ್ತಿರುವೆವು. ಅವುಗಳ (ಆ ನಾಡುಗಳ) ಪೈಕಿ ಕೆಲವು ಅಸ್ತಿತ್ವದಲ್ಲಿವೆ ಮತ್ತು ಕೆಲವು ನಾಮಾವಶೇಷವಾಗಿವೆ.

ذَٰلِكَ مِنْ أَنۢبَآءِ ٱلْقُرَىٰ نَقُصُّهُۥ عَلَيْكَ ۖ
مِنْهَا قَآئِمٌ وَحَصِيدٌ ﴿١٠٠﴾

**101.** ನಾವು ಅವರೊಂದಿಗೆ ಯಾವುದೇ ಅನ್ಯಾಯವೆಸಗಿರಲಿಲ್ಲ. ಆದರೆ ಅವರು ಸ್ವತಃ ತಮಗೇ ಅನ್ಯಾಯವೆಸಗಿರುವರು. ತಮ್ಮ ರಬ್‌ನ ಆಜ್ಞೆಯು ಬಂದಾಗ ಅವರು ಅಲ್ಲಾಹುವಿನ ಹೊರತು ಪ್ರಾರ್ಥಿಸುತ್ತಿದ್ದ ಅವರ ಆರಾಧ್ಯರು ಅವರಿಗೆ ಯಾವುದೇ

وَمَا ظَلَمْنَـٰهُمْ وَلَـٰكِن ظَلَمُوٓا۟ أَنفُسَهُمْ ۖ
فَمَآ أَغْنَتْ عَنْهُمْ ءَالِهَتُهُمُ ٱلَّتِى يَدْعُونَ
مِن دُونِ ٱللَّهِ مِن شَىْءٍ لَّمَّا جَآءَ أَمْرُ
رَبِّكَ ۖ وَمَا زَادُوهُمْ غَيْرَ تَتْبِيبٍ ﴿١٠١﴾

ಪ್ರಯೋಜನವನ್ನೂ ಮಾಡಲಿಲ್ಲ. ಅವರು (ಆರಾಧ್ಯರು) ಅವರಿಗೆ ನಾಶವನ್ನೇ ಹೊರತು ಬೇರೇನನ್ನೂ ಅಧಿಕಗೊಳಿಸಿಲ್ಲ.

**102.** ವಿವಿಧ ನಾಡುಗಳಲ್ಲಿರುವವರು ಅಕ್ರಮಿಗಳಾಗಿದ್ದು ಅವರನ್ನು ತಮ್ಮ ರಬ್ ಹಿಡಿದಾಗ ಅವನ ಹಿಡಿತವು ಹೀಗೆಯೇ ಆಗಿತ್ತು. ಖಂಡಿತವಾಗಿಯೂ ಅವನ ಹಿಡಿತವು ಯಾತನಾಮಯವೂ ಅತಿಕಠಿಣವೂ ಆಗಿದೆ.

وَكَذَٰلِكَ أَخۡذُ رَبِّكَ إِذَآ أَخَذَ ٱلۡقُرَىٰ وَهِيَ ظَٰلِمَةٌۚ إِنَّ أَخۡذَهُۥٓ أَلِيمٞ شَدِيدٌ ١٠٢

**103.** ಪರಲೋಕದ ಶಿಕ್ಷೆಯನ್ನು ಭಯಪಡುವವರಿಗೆ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತವಿದೆ. ಅದು ಸರ್ವ ಮನುಷ್ಯರನ್ನೂ ಒಟ್ಟುಗೂಡಿಸಲಾಗುವ ಒಂದು ದಿನವಾಗಿದೆ. ಅದು (ಸರ್ವರೂ) ಹಾಜರಾಗುವ ಒಂದು ದಿನವಾಗಿದೆ.

إِنَّ فِي ذَٰلِكَ لَأٓيَةٗ لِّمَنۡ خَافَ عَذَابَ ٱلۡأٓخِرَةِۚ ذَٰلِكَ يَوۡمٞ مَّجۡمُوعٞ لَّهُ ٱلنَّاسُ وَذَٰلِكَ يَوۡمٞ مَّشۡهُودٞ ١٠٣

**104.** ನಾವದನ್ನು ಮುಂದೂಡುತ್ತಿರುವುದು ನಿರ್ದಿಷ್ಟವಾದ ಒಂದು ಅವಧಿಯವರೆಗೆ ಮಾತ್ರವಾಗಿದೆ.

وَمَا نُؤَخِّرُهُۥٓ إِلَّا لِأَجَلٖ مَّعۡدُودٖ ١٠٤

**105.** ಆ ಅವಧಿಯು ಬರುವ ದಿನದಂದು ಅವನ (ಅಲ್ಲಾಹುವಿನ) ಅನುಮತಿಯ ವಿನಾ ಯಾವೊಬ್ಬ ವ್ಯಕ್ತಿಯೂ ಮಾತನಾಡಲಾರನು. ಆಗ ಅವರ ಪೈಕಿ ದೌರ್ಭಾಗ್ಯವಂತನೂ, ಸೌಭಾಗ್ಯವಂತನೂ ಇರುವರು.

يَوۡمَ يَأۡتِ لَا تَكَلَّمُ نَفۡسٌ إِلَّا بِإِذۡنِهِۦۚ فَمِنۡهُمۡ شَقِيّٞ وَسَعِيدٞ ١٠٥

**106.** ಆದರೆ ದೌರ್ಭಾಗ್ಯವಂತರು ಯಾರೋ ಅವರು ನರಕಾಗ್ನಿಯಲ್ಲಿರುವರು. ಅವರಿಗೆ ಅಲ್ಲಿ ನಿಟ್ಟುಸಿರು ಮತ್ತು ಬಿಕ್ಕಳಿಕೆಗಳಿರುವುವು.

فَأَمَّا ٱلَّذِينَ شَقُواْ فَفِي ٱلنَّارِ لَهُمۡ فِيهَا زَفِيرٞ وَشَهِيقٌ ١٠٦

**107.** ಆಕಾಶಗಳು ಮತ್ತು ಭೂಮಿಯು ಅಸ್ತಿತ್ವದಲ್ಲಿರುವವರೆಗೆ[1] ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ತಮ್ಮ ರಬ್ ಇಚ್ಛಿಸಿದವುಗಳ ಹೊರತು.[2] ತಾನು

خَٰلِدِينَ فِيهَا مَا دَامَتِ ٱلسَّمَٰوَٰتُ وَٱلۡأَرۡضُ إِلَّا مَا شَآءَ رَبُّكَۚ إِنَّ رَبَّكَ فَعَّالٞ لِّمَا يُرِيدُ ١٠٧

---

1 ಇದು ಅನಂತ ಕಾಲದವರೆಗೆ ಅಥವಾ ಶಾಶ್ವತವಾಗಿ ಎಂಬುದಕ್ಕಿರುವ ಆಲಂಕಾರಿಕ ಪ್ರಯೋಗವಾಗಿದೆ.

2 ಅಲ್ಲಾಹು ರಿಯಾಯಿತಿ ನೀಡಲು ಇಚ್ಛಿಸಿದವರಿಗೆ ಹೊರತು ನರಕ ಶಿಕ್ಷೆಯಿಂದ ಯಾರಿಗೂ ರಿಯಾಯಿತಿ ದೊರೆಯಲಾರದು. ಅವನು ಇಚ್ಛಿಸುವವರನ್ನು ನಿಶ್ಚಿತ ಕಾಲದವರೆಗೆ ನರಕದಲ್ಲಿ ಶಿಕ್ಷಿಸಿ ತರುವಾಯ ಅವರನ್ನು ಸ್ವರ್ಗಕ್ಕೆ ಕಳುಹಿಸುವನು.

ಇಚ್ಛಿಸುವುದೆಲ್ಲವನ್ನೂ ತಮ್ಮ ರಬ್ ಖಂಡಿತವಾಗಿಯೂ ಜಾರಿಗೊಳಿಸುವವನಾಗಿರುವನು.

﴿وَأَمَّا ٱلَّذِينَ سُعِدُواْ فَفِى ٱلْجَنَّةِ خَٰلِدِينَ فِيهَا مَا دَامَتِ ٱلسَّمَٰوَٰتُ وَٱلْأَرْضُ إِلَّا مَا شَآءَ رَبُّكَ ۖ عَطَآءً غَيْرَ مَجْذُوذٍ ١٠٨﴾

108. ಆದರೆ ಸೌಭಾಗ್ಯವಂತರು ಯಾರೋ ಅವರು ಸ್ವರ್ಗದಲ್ಲಿರುವರು. ಆಕಾಶಗಳು ಮತ್ತು ಭೂಮಿಯು ಅಸ್ತಿತ್ವದಲ್ಲಿರುವವರೆಗೆ ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ತಮ್ಮ ರಬ್ ಇಚ್ಛಿಸಿದವುಗಳ ಹೊರತು.[1] ಅದು ಅನಂತವಾದ ಒಂದು ಉಡುಗೊರೆಯಾಗಿರುವುದು.

﴿فَلَا تَكُ فِى مِرْيَةٍ مِّمَّا يَعْبُدُ هَٰٓؤُلَآءِ ۚ مَا يَعْبُدُونَ إِلَّا كَمَا يَعْبُدُ ءَابَآؤُهُم مِّن قَبْلُ ۚ وَإِنَّا لَمُوَفُّوهُمْ نَصِيبَهُمْ غَيْرَ مَنقُوصٍ ١٠٩﴾

109. ಆದ್ದರಿಂದ ಇವರು ಆರಾಧಿಸುತ್ತಿರುವವುಗಳ ಕುರಿತು ತಾವು ಯಾವುದೇ ಸಂದೇಹಕ್ಕೂ ಒಳಗಾಗದಿರಿ. ಇವರಿಗಿಂತ ಮುಂಚೆ ಇವರ ಪೂರ್ವಿಕರು ಆರಾಧಿಸುತ್ತಿದ್ದಂತೆಯೇ ಇವರೂ ಆರಾಧಿಸುತ್ತಿರುವರು. ಖಂಡಿತವಾಗಿಯೂ ಅವರಿಗಿರುವ ಪಾಲನ್ನು ಕಿಂಚಿತ್ತೂ ಕಡಿಮೆ ಮಾಡದೆ ನಾವವರಿಗೆ ನೆರವೇರಿಸಿಕೊಡುವೆವು.

﴿وَلَقَدْ ءَاتَيْنَا مُوسَى ٱلْكِتَٰبَ فَٱخْتُلِفَ فِيهِ ۚ وَلَوْلَا كَلِمَةٌ سَبَقَتْ مِن رَّبِّكَ لَقُضِىَ بَيْنَهُمْ ۚ وَإِنَّهُمْ لَفِى شَكٍّ مِّنْهُ مُرِيبٍ ١١٠﴾

110. ಖಂಡಿತವಾಗಿಯೂ ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು. ತರುವಾಯ ಅದರ ಕುರಿತು ಭಿನ್ನಾಭಿಪ್ರಾಯಗಳುಂಟಾದವು. ತಮ್ಮ ರಬ್‌ನ ವತಿಯ ಒಂದು ವಚನವು ಪೂರ್ವಭಾವಿಯಾಗಿ ಇಲ್ಲದಿರುತ್ತಿದ್ದರೆ ಅವರ ನಡುವೆ ಈಗಾಗಲೇ ತೀರ್ಪು ನೀಡಲಾಗಿರುತ್ತಿತ್ತು. ಖಂಡಿತವಾಗಿಯೂ ಅವರು ಅದರ ಕುರಿತು ಅವಿಶ್ವಾಸ ಹುಟ್ಟಿಸುವಂತಹ ಸಂದೇಹದಲ್ಲಿರುವರು.

﴿وَإِنَّ كُلًّا لَّمَّا لَيُوَفِّيَنَّهُمْ رَبُّكَ أَعْمَٰلَهُمْ ۚ إِنَّهُۥ بِمَا يَعْمَلُونَ خَبِيرٌ ١١١﴾

111. ಖಂಡಿತವಾಗಿಯೂ ತಮ್ಮ ರಬ್ ಅವರಲ್ಲಿ ಪ್ರತಿಯೊಬ್ಬರಿಗೂ ಅವರ ಕರ್ಮಗಳ ಪ್ರತಿಫಲವನ್ನು ಪೂರ್ಣವಾಗಿ ನೀಡುವನು. ಖಂಡಿತವಾಗಿಯೂ ಅವರು

1 ಇದು ಸ್ವರ್ಗಪ್ರವೇಶಕ್ಕೆ ಮುಂಚಿತವಾಗಿ ನರಕಶಿಕ್ಷೆಯನ್ನು ಅನುಭವಿಸುವ ಕೆಲವರ ಕುರಿತಾಗಿರಬಹುದು. 'ತಮ್ಮ ರಬ್ ಇಚ್ಛಿಸಿದವುಗಳ ಹೊರತು' ಎಂಬ ಸೂಕ್ತಿಗೆ ಬೇರೆ ಕೆಲವು ವ್ಯಾಖ್ಯಾನಗಳನ್ನೂ ನೀಡಲಾಗಿದೆ.

ಮಾಡುತ್ತಿರುವುದರ ಬಗ್ಗೆ ಅವನು ಸೂಕ್ಷ್ಮವಾಗಿ ಅರಿಯುವವನಾಗಿರುವನು.

**112.** ಆದ್ದರಿಂದ ತಮಗೆ ಆದೇಶಿಸಲಾಗಿರುವ ಪ್ರಕಾರ ತಾವು ಮತ್ತು ತಮ್ಮೊಂದಿಗೆ (ಅಲ್ಲಾಹುವಿನೆಡೆಗೆ) ಮರಳಿದವರು ನೇರವಾದ ಮಾರ್ಗದಲ್ಲಿ ನೆಲೆಗೊಳ್ಳಿರಿ. ನೀವು ಹದ್ದುಮೀರಿ ವರ್ತಿಸದಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದೆಲ್ಲವನ್ನೂ ಅವನು ವೀಕ್ಷಿಸುವವನಾಗಿರುವನು.

فَٱسۡتَقِمۡ كَمَآ أُمِرۡتَ وَمَن تَابَ مَعَكَ وَلَا
تَطۡغَوۡاْۚ إِنَّهُۥ بِمَا تَعۡمَلُونَ بَصِيرٞ ١١٢

**113.** ಅಕ್ರಮವೆಸಗಿದವರ ಕಡೆಗೆ ನೀವು ವಾಲದಿರಿ. ಹಾಗೇನಾದರೂ ಆದರೆ ನರಕವು ನಿಮ್ಮನ್ನು ಸ್ಪರ್ಶಿಸುವುದು. ಅಲ್ಲಾಹುವಿನ ಹೊರತು ನಿಮಗೆ ಯಾವುದೇ ರಕ್ಷಕರೂ ಇರಲಾರರು. ತರುವಾಯ ನಿಮಗೆ ಸಹಾಯವೂ ಸಿಗಲಾರದು.

وَلَا تَرۡكَنُوٓاْ إِلَى ٱلَّذِينَ ظَلَمُواْ فَتَمَسَّكُمُ
ٱلنَّارُ وَمَا لَكُم مِّن دُونِ ٱللَّهِ مِنۡ أَوۡلِيَآءَ
ثُمَّ لَا تُنصَرُونَ ١١٣

**114.** ಹಗಲಿನ ಎರಡು ತುದಿಗಳಲ್ಲಿ ಮತ್ತು ರಾತ್ರಿಯ ಅಂತ್ಯ ಯಾಮಗಳಲ್ಲಿ ತಾವು ನಮಾಝನ್ನು ಸಂಸ್ಥಾಪಿಸಿರಿ.[1] ಖಂಡಿತವಾಗಿಯೂ ಸತ್ಕರ್ಮಗಳು ದುಷ್ಕರ್ಮಗಳನ್ನು ಅಳಿಸಿ ಹಾಕುತ್ತವೆ. ಇದು ಚಿಂತಿಸಿ ಗ್ರಹಿಸುವವರಿಗಿರುವ ಒಂದು ಉಪದೇಶವಾಗಿದೆ.

وَأَقِمِ ٱلصَّلَوٰةَ طَرَفَيِ ٱلنَّهَارِ وَزُلَفٗا مِّنَ
ٱلَّيۡلِۚ إِنَّ ٱلۡحَسَنَٰتِ يُذۡهِبۡنَ ٱلسَّيِّـَٔاتِۚ
ذَٰلِكَ ذِكۡرَىٰ لِلذَّٰكِرِينَ ١١٤

**115.** ತಾವು ಸಹನೆ ವಹಿಸಿರಿ. ಖಂಡಿತವಾಗಿಯೂ ಅಲ್ಲಾಹು ಸತ್ಕರ್ಮಿಗಳ ಪ್ರತಿಫಲವನ್ನು ವ್ಯರ್ಥಗೊಳಿಸಲಾರನು.

وَٱصۡبِرۡ فَإِنَّ ٱللَّهَ لَا يُضِيعُ أَجۡرَ
ٱلۡمُحۡسِنِينَ ١١٥

**116.** ಭೂಮಿಯಲ್ಲಿ ವಿನಾಶವುಂಟುಮಾಡುವುದರಿಂದ (ಜನರನ್ನು) ತಡೆಯುವ ಮತ್ತು (ಒಳಿತಿನ) ಪರಂಪರೆಯಿರುವ ಒಂದು ಗುಂಪು ನಿಮಗಿಂತ

فَلَوۡلَا كَانَ مِنَ ٱلۡقُرُونِ مِن قَبۡلِكُمۡ
أُوْلُواْ بَقِيَّةٖ يَنۡهَوۡنَ عَنِ ٱلۡفَسَادِ فِي ٱلۡأَرۡضِ

1 ಈ ಸೂಕ್ತಿಯಲ್ಲಿರುವ ಸೂಚನೆಯು ಐದು ವೇಳೆಯ ನಮಾಝ್‌ಗಳ ನಿರ್ಣಯಿತ ಸಮಯವಲ್ಲ, ಬದಲಾಗಿ ಹಗಲು ರಾತ್ರಿ ಕ್ರಮ ಪ್ರಕಾರ ನಮಾಝ್ ನಿರ್ವಹಿಸುವುದಕ್ಕಿರುವ ಆದೇಶವಾಗಿದೆ. ಹಗಲಿನ ಎರಡು ತುದಿಗಳು ಎಂದರೆ ಸುಬ್‌ಹ್ ನಮಾಝ್ ಮತ್ತು ಅಸ್ರ್ ನಮಾಝ್‌ಗಳಾಗಿವೆ. ದುಹ್ರ್ ನಮಾಝ್ ಮಧ್ಯಾಹ್ನದ ನಂತರವಿರುವ ನಮಾಝ್ ಆಗಿರುವುದರಿಂದ ಅದನ್ನು ಅಸ್ರ್‌ನೊಂದಿಗೆ ಸೇರಿಸಿ ಹೇಳಲಾಗಿದೆ. ಝುಲಫ್ ಎಂದರೆ ಹಗಲಿಗೆ ಹತ್ತಿರವಿರುವ ರಾತ್ರಿಯ ಭಾಗ ಎಂದಾಗಿದೆ. ಇದರ ತಾತ್ಪರ್ಯವು ಮಗ್ರಿಬ್ ಮತ್ತು ಇಶಾ ನಮಾಝ್‌ಗಳಾಗಿವೆ.

ಮುಂಚಿನ ತಲೆಮಾರುಗಳಲ್ಲಿ ಉಂಟಾಗಲಿಲ್ಲವೇಕೆ? ಅವರ ಪೈಕಿ ನಾವು ಪಾರು ಮಾಡಿರುವ ಕೆಲವರ ಹೊರತು. ಆದರೆ ಅಕ್ರಮಿಗಳು ತಮಗೆ ನೀಡಲಾಗಿರುವ ಸುಖಾಡಂಬರಗಳ ಬೆನ್ನು ಹತ್ತಿದರು. ಅವರು ಅಪರಾಧಿಗಳಾಗಿದ್ದರು.

إِلَّا قَلِيلًا مِّمَّنْ أَنجَيْنَا مِنْهُمْ ۗ وَٱتَّبَعَ ٱلَّذِينَ ظَلَمُوا۟ مَآ أُتْرِفُوا۟ فِيهِ وَكَانُوا۟ مُجْرِمِينَ ﴿١١٦﴾

**117.** ಊರ ನಿವಾಸಿಗಳು ಸತ್ಕಾರ್ಯಗಳನ್ನು ಮಾಡುವವರಾಗಿರುವಾಗ, ತಮ್ಮ ರಬ್ ಅನ್ಯಾಯವಾಗಿ ನಾಡುಗಳನ್ನು ನಾಶಮಾಡಲಾರನು.

وَمَا كَانَ رَبُّكَ لِيُهْلِكَ ٱلْقُرَىٰ بِظُلْمٍ وَأَهْلُهَا مُصْلِحُونَ ﴿١١٧﴾

**118.** ತಮ್ಮ ರಬ್ ಇಚ್ಛಿಸಿರುತ್ತಿದ್ದರೆ ಅವನು ಮನುಕುಲವನ್ನು ಒಂದೇ ಸಮುದಾಯವನ್ನಾಗಿ ಮಾಡುತ್ತಿದ್ದನು. (ಆದರೆ) ಅವರು ಭಿನ್ನರಾಗುತ್ತಲೇ ಇರುವರು.

وَلَوْ شَآءَ رَبُّكَ لَجَعَلَ ٱلنَّاسَ أُمَّةً وَٰحِدَةً ۖ وَلَا يَزَالُونَ مُخْتَلِفِينَ ﴿١١٨﴾

**119.** ತಮ್ಮ ರಬ್ ಕರುಣೆ ತೋರಿದವರ ಹೊರತು. ಅವನು ಅವರನ್ನು ಅದಕ್ಕಾಗಿಯೇ ಸೃಷ್ಟಿಸಿರುವನು.(1) 'ಜಿನ್ನ್ ಮತ್ತು ಮನುಷ್ಯರನ್ನು ಸೇರಿಸಿ ಖಂಡಿತವಾಗಿಯೂ ನಾನು ನರಕವನ್ನು ತುಂಬಿಸುವೆನು' ಎಂಬ ತಮ್ಮ ರಬ್‌ನ ವಚನವು ನೆರವೇರಿದೆ.

إِلَّا مَن رَّحِمَ رَبُّكَ ۚ وَلِذَٰلِكَ خَلَقَهُمْ ۗ وَتَمَّتْ كَلِمَةُ رَبِّكَ لَأَمْلَأَنَّ جَهَنَّمَ مِنَ ٱلْجِنَّةِ وَٱلنَّاسِ أَجْمَعِينَ ﴿١١٩﴾

**120.** ತಮ್ಮ ಹೃದಯಕ್ಕೆ ಸ್ಥಿರತೆಯನ್ನು ನೀಡುವ ಎಲ್ಲವನ್ನೂ ಸಂದೇಶವಾಹಕರ ವೃತ್ತಾಂತಗಳಿಂದ ನಾವು ತಮಗೆ ವಿವರಿಸಿಕೊಡುತ್ತಿರುವೆವು. ಇದರ ಮೂಲಕ ತಮಗೆ ಸತ್ಯವೂ, ಸತ್ಯವಿಶ್ವಾಸಿಗಳಿಗೆ ಉಪದೇಶ ಮತ್ತು ಬೋಧನೆಯೂ ಬಂದಿರುವುದು.

وَكُلًّا نَّقُصُّ عَلَيْكَ مِنْ أَنۢبَآءِ ٱلرُّسُلِ مَا نُثَبِّتُ بِهِۦ فُؤَادَكَ ۚ وَجَآءَكَ فِى هَٰذِهِ ٱلْحَقُّ وَمَوْعِظَةٌ وَذِكْرَىٰ لِلْمُؤْمِنِينَ ﴿١٢٠﴾

**121.** ವಿಶ್ವಾಸವಿಡದವರೊಂದಿಗೆ ತಾವು ಹೇಳಿರಿ: 'ನೀವು ನಿಮ್ಮ ನಿಲುವಿಗೆ ಅನುಗುಣವಾಗಿ ಕರ್ಮವೆಸಗಿರಿ. ಖಂಡಿತವಾಗಿಯೂ ನಾವೂ ಕರ್ಮವೆಸಗುವೆವು.

وَقُل لِّلَّذِينَ لَا يُؤْمِنُونَ ٱعْمَلُوا۟ عَلَىٰ مَكَانَتِكُمْ إِنَّا عَٰمِلُونَ ﴿١٢١﴾

1 ವಿಭಿನ್ನ ಧರ್ಮಗಳನ್ನು ಸ್ವೀಕರಿಸುವ ಸ್ವಾತಂತ್ರ್ಯವನ್ನು ನೀಡಿ ಅಲ್ಲಾಹು ಮನುಷ್ಯರನ್ನು ಸೃಷ್ಟಿಸಿರುವನು. ಆದ್ದರಿಂದ ಸ್ವತಃ ತಮ್ಮದೇ ಕರ್ಮಗಳ ಪ್ರತಿಫಲವನ್ನು ಅನುಭವಿಸಲು ಅವರು ನಿರ್ಬಂಧಿತರಾಗಿರುವರು.

وَٱنتَظِرُوٓاْ إِنَّا مُنتَظِرُونَ ﴿١٢٢﴾

وَلِلَّهِ غَيْبُ ٱلسَّمَٰوَٰتِ وَٱلْأَرْضِ وَإِلَيْهِ
يُرْجَعُ ٱلْأَمْرُ كُلُّهُۥ فَٱعْبُدْهُ وَتَوَكَّلْ عَلَيْهِ ۚ
وَمَا رَبُّكَ بِغَٰفِلٍ عَمَّا تَعْمَلُونَ ﴿١٢٣﴾

**122**. ನೀವು ಕಾಯುತ್ತಿರಿ. ಖಂಡಿತವಾಗಿಯೂ ನಾವೂ ಕಾಯುತ್ತಿರುವೆವು'.

**123**. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಅಗೋಚರ ಜ್ಞಾನಗಳು ಅಲ್ಲಾಹುವಿಗೆ ಸೇರಿದ್ದಾಗಿವೆ. ಸಂಗತಿಗಳೆಲ್ಲವೂ ಮರಳಿಸಲಾಗುವುದು ಅವನೆಡೆಗೇ ಆಗಿದೆ. ಆದ್ದರಿಂದ ತಾವು ಅವನನ್ನು ಆರಾಧಿಸಿರಿ ಮತ್ತು ಅವನ ಮೇಲೆ ಭರವಸೆಯಿಡಿರಿ. ನೀವು ಮಾಡುತ್ತಿರುವುದರ ಕುರಿತು ತಮ್ಮ ರಬ್ ಅಲಕ್ಷ್ಯನಲ್ಲ.

## ಯೂಸುಫ್

## سُورَةُ يُوسُفَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 111

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್. ಲಾಮ್. ರಾ. ಇವು ಸ್ಪಷ್ಟವಾದ ಗ್ರಂಥದ ಸೂಕ್ತಿಗಳಾಗಿವೆ.

الٓرۚ تِلۡكَ ءَايَٰتُ ٱلۡكِتَٰبِ ٱلۡمُبِينِ ١

2. ನೀವು ಚಿಂತಿಸಿ ಗ್ರಹಿಸುವ ಸಲುವಾಗಿ ಅದನ್ನು ನಾವು ಅರಬಿ ಭಾಷೆಯಲ್ಲಿ ಓದಲ್ಪಡುವ ಒಂದು ಪ್ರಮಾಣಗ್ರಂಥವಾಗಿ[1] ಅವತೀರ್ಣಗೊಳಿಸಿರುವೆವು.

إِنَّآ أَنزَلۡنَٰهُ قُرۡءَٰنًا عَرَبِيّٗا لَّعَلَّكُمۡ تَعۡقِلُونَ ٢

3. ಈ ಕುರ್‌ಆನನ್ನು ತಮಗೆ ದಿವ್ಯ ಸಂದೇಶವಾಗಿ ನೀಡುವುದರ ಮೂಲಕ ಅತ್ಯುತ್ತಮವಾದ ಒಂದು ಚರಿತ್ರೆಯನ್ನು ನಾವು ತಮಗೆ ವಿವರಿಸಿಕೊಡುತ್ತಿರುವೆವು. ಖಂಡಿತವಾಗಿಯೂ ಇದಕ್ಕಿಂತ ಮುಂಚೆ ತಾವು ಅದರ ಕುರಿತು ಅರಿವಿಲ್ಲದವರ ಪೈಕಿ ಸೇರಿದವರಾಗಿದ್ದಿರಿ.[2]

نَحۡنُ نَقُصُّ عَلَيۡكَ أَحۡسَنَ ٱلۡقَصَصِ بِمَآ أَوۡحَيۡنَآ إِلَيۡكَ هَٰذَا ٱلۡقُرۡءَانَ وَإِن كُنتَ مِن قَبۡلِهِۦ لَمِنَ ٱلۡغَٰفِلِينَ ٣

4. ಯೂಸುಫ್ ತನ್ನ ತಂದೆಯೊಂದಿಗೆ ಹೇಳಿದ ಸಂದರ್ಭ: ‘ಓ ನನ್ನ ತಂದೆಯವರೇ! ಖಂಡಿತವಾಗಿಯೂ ನಾನು ಹನ್ನೊಂದು ನಕ್ಷತ್ರಗಳನ್ನು, ಸೂರ್ಯನನ್ನು ಮತ್ತು ಚಂದ್ರನನ್ನು (ಕನಸಿನಲ್ಲಿ) ಕಂಡಿರುವೆನು. ಅವು ನನಗೆ ಸಾಷ್ಟಾಂಗವೆರಗುವುದಾಗಿ ನಾನು ಕಂಡಿರುವೆನು.’

إِذۡ قَالَ يُوسُفُ لِأَبِيهِ يَٰٓأَبَتِ إِنِّي رَأَيۡتُ أَحَدَ عَشَرَ كَوۡكَبٗا وَٱلشَّمۡسَ وَٱلۡقَمَرَ رَأَيۡتُهُمۡ لِي سَٰجِدِينَ ٤

5. ಅವರು (ತಂದೆ) ಹೇಳಿದರು: ‘ಓ ನನ್ನ ಕಂದಾ! ನಿನ್ನ ಕನಸನ್ನು ನಿನ್ನ ಸಹೋದರರಿಗೆ

قَالَ يَٰبُنَيَّ لَا تَقۡصُصۡ رُءۡيَاكَ عَلَىٰٓ

---

1 ಕುರ್‌ಆನ್ ಎಂಬ ಅರಬಿ ಪದಕ್ಕೆ ಪಾರಾಯಣ, ಪಾರಾಯಣ ಮಾಡಲ್ಪಡುವ ಗ್ರಂಥ ಎಂಬಿತ್ಯಾದಿ ಅರ್ಥಗಳಿವೆ.

2 ಯೂಸುಫ್(عَلَيۡهِ ٱلسَّلَامُ) ರವರ ಚರಿತ್ರೆ ಸೇರಿದಂತೆ ಅನೇಕ ಚರಿತ್ರೆಗಳು ಕುರ್‌ಆನ್‌ನಲ್ಲಿವೆ. ಸತ್ಯವಿಶ್ವಾಸಿಗಳು ಅನಿವಾರ್ಯವಾಗಿ ತಿಳಿದಿರಬೇಕಾದ ವಿಷಯಗಳನ್ನು ಚರಿತ್ರೆಯಿಂದ ಆರಿಸಿ ಅವುಗಳನ್ನು ಉತ್ತಮವಾದ ಶೈಲಿಯಲ್ಲಿ ವಿವರಿಸಿಕೊಡುವುದು ಅಲ್ಲಾಹುವಿನ ಕ್ರಮವಾಗಿದೆ. ದಿವ್ಯ ಸಂದೇಶವು ಲಭಿಸುವುದಕ್ಕೆ ಮುಂಚೆ ಪ್ರವಾದಿ(صَلَّى ٱللَّهُ عَلَيۡهِ وَسَلَّمَ)ರಿಗೆ ಈ ಚರಿತ್ರೆಗಳೊಂದೂ ತಿಳಿದಿರಲಿಲ್ಲ.

ವಿವರಿಸಿಕೊಡದಿರು. ಅವರು ನಿನ್ನ ವಿರುದ್ಧ ಏನಾದರೂ ತಂತ್ರವನ್ನು ಹೂಡಬಹುದು. ಖಂಡಿತವಾಗಿಯೂ ಸೈತಾನನು ಮನುಷ್ಯನ ಬಹಿರಂಗ ಶತ್ರುವಾಗಿರುವನು.[1]

إِخْوَتِكَ فَيَكِيدُوا۟ لَكَ كَيْدًا ۖ إِنَّ ٱلشَّيْطَـٰنَ لِلْإِنسَـٰنِ عَدُوٌّ مُّبِينٌ ٥

6. ಹೀಗೆ ನಿನ್ನ ರಬ್ ನಿನ್ನನ್ನು ಆರಿಸುವನು. ನಿನಗೆ ಸ್ವಪ್ನವ್ಯಾಖ್ಯಾನಗಳ ಪೈಕಿ ಕೆಲವನ್ನು ಕಲಿಸಿಕೊಡುವನು. ಈ ಮುಂಚೆ ನಿನ್ನ ಪೂರ್ವಿಕರಾದ[2] ಇಬ್ರಾಹೀಮ್ ಮತ್ತು ಇಸ್‌ಹಾಕ್‌ರ ಮೇಲೆ ಅವನು ತನ್ನ ಅನುಗ್ರಹವನ್ನು ಪೂರ್ಣಗೊಳಿಸಿದಂತೆ ನಿನ್ನ ಮೇಲೂ ಯಅ್‌ಕೂಬ್ ಕುಟುಂಬದ ಮೇಲೂ ಪೂರ್ಣಗೊಳಿಸುವನು. ಖಂಡಿತವಾಗಿಯೂ ನಿನ್ನ ರಬ್ ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು'.

وَكَذَٰلِكَ يَجْتَبِيكَ رَبُّكَ وَيُعَلِّمُكَ مِن تَأْوِيلِ ٱلْأَحَادِيثِ وَيُتِمُّ نِعْمَتَهُۥ عَلَيْكَ وَعَلَىٰٓ ءَالِ يَعْقُوبَ كَمَآ أَتَمَّهَا عَلَىٰٓ أَبَوَيْكَ مِن قَبْلُ إِبْرَٰهِيمَ وَإِسْحَـٰقَ ۚ إِنَّ رَبَّكَ عَلِيمٌ حَكِيمٌ ٦

7. ಖಂಡಿತವಾಗಿಯೂ ಯೂಸುಫ್ ಮತ್ತು ಅವರ ಸಹೋದರರಲ್ಲಿ ಕೇಳಿ ಗ್ರಹಿಸುವವರಿಗೆ ಹಲವು ದೃಷ್ಟಾಂತಗಳಿವೆ.

۞ لَّقَدْ كَانَ فِى يُوسُفَ وَإِخْوَتِهِۦٓ ءَايَـٰتٌ لِّلسَّآئِلِينَ ٧

8. ಅವರು (ಸಹೋದರರು) ಹೇಳಿದ ಸಂದರ್ಭ: 'ನಮ್ಮ ತಂದೆಗೆ ನಮಗಿಂತಲೂ ಹೆಚ್ಚು ಪ್ರಿಯರು ಯೂಸುಫ್ ಮತ್ತು ಅವನ ಸಹೋದರನಾಗಿರುವರು. ನಾವೊಂದು (ಬಲಿಷ್ಠ) ತಂಡವಾಗಿರುವೆವು. ಖಂಡಿತವಾಗಿಯೂ ನಮ್ಮ ತಂದೆ ಸ್ಪಷ್ಟವಾದ ಪ್ರಮಾದದಲ್ಲಿರುವರು.

إِذْ قَالُوا۟ لَيُوسُفُ وَأَخُوهُ أَحَبُّ إِلَىٰٓ أَبِينَا مِنَّا وَنَحْنُ عُصْبَةٌ إِنَّ أَبَانَا لَفِى ضَلَـٰلٍ مُّبِينٍ ٨

9. ನೀವು ಯೂಸುಫ್‌ನನ್ನು ವಧಿಸಿರಿ ಅಥವಾ ಅವನನ್ನು ಯಾವುದಾದರೊಂದು ಭೂಪ್ರದೇಶದಲ್ಲಿ ಎಸೆದು ಬನ್ನಿರಿ. ಹಾಗಾದರೆ ನಿಮ್ಮ ತಂದೆಯ ಮುಖವು ನಿಮಗೆ

ٱقْتُلُوا۟ يُوسُفَ أَوِ ٱطْرَحُوهُ أَرْضًا يَخْلُ لَكُمْ وَجْهُ أَبِيكُمْ وَتَكُونُوا۟ مِنۢ بَعْدِهِۦ قَوْمًا صَـٰلِحِينَ ٩

1 ಮುಂದೆ ಯೂಸುಫ್(عَلَيْهِ السَّلَامُ)ರಿಗೆ ಲಭಿಸಲಿರುವ ಮಹತ್ವದೆಡೆಗೆ ಸೂಚನೆ ನೀಡುವ ಈ ಕನಸಿನ ಕುರಿತು ಸಹೋದರರು ಅರಿತರೆ ಅವರಿಗೆ ಯೂಸುಫ್(عَلَيْهِ السَّلَامُ)ರ ಮೇಲೆ ಮತ್ಸರವುಂಟಾಗುವುದು. ಆಗ ಯೂಸುಫ್(عَلَيْهِ السَّلَامُ)ರ ವಿರುದ್ಧ ಸಂಚು ಹೂಡಲು ಸೈತಾನನು ಅವರನ್ನು ಪ್ರೇರೇಪಿಸಿಬಿಡುವನೋ ಎಂಬ ಆಶಂಕೆಯು ಯಅ್‌ಕೂಬ್(عَلَيْهِ السَّلَامُ)ರಿಗಿತ್ತು.

2 ಇಲ್ಲಿ ಆಬಾಅ್ ಎಂದರೆ ಪೂರ್ವಿಕರು ಎಂದರ್ಥ.

ಸಿಗುವುದು.[1] ಅದರ ಬಳಿಕ ನಿಮಗೆ ಸಾತ್ವಿಕರಾದ ಜನರಾಗಿ ಮಾರ್ಪಡಬಹುದು.'[2]

**10.** ಅವರ ಪೈಕಿ ಒಬ್ಬ ವಕ್ತಾರನು ಹೇಳಿದನು: 'ನೀವು ಯೂಸುಫ್‌ನನ್ನು ವಧಿಸಬೇಡಿರಿ. ನಿಮಗೇನಾದರೂ ಮಾಡಬೇಕೆಂದಿದ್ದರೆ ಅವನನ್ನು (ಒಂದು) ಬಾವಿಯ ತಳಭಾಗಕ್ಕೆ ಎಸೆದು ಬಿಡಿರಿ. ಯಾವುದಾದರೂ ಯಾತ್ರಿಕರ ತಂಡವು ಅವನನ್ನು ಎತ್ತಿಕೊಳ್ಳಬಹುದು'.

قَالَ قَآئِلٌ مِّنْهُمْ لَا تَقْتُلُواْ يُوسُفَ وَأَلْقُوهُ فِى غَيَٰبَتِ ٱلْجُبِّ يَلْتَقِطْهُ بَعْضُ ٱلسَّيَّارَةِ إِن كُنتُمْ فَٰعِلِينَ ١٠

**11.** (ತರುವಾಯ ತಮ್ಮ ತಂದೆಯ ಬಳಿ ಬಂದು) ಅವರು ಹೇಳಿದರು: 'ಓ ನಮ್ಮ ತಂದೆಯವರೇ! ತಮಗೇನಾಗಿದೆ? ಯೂಸುಫ್‌ನ ವಿಷಯದಲ್ಲಿ ತಾವೇಕೆ ನಮ್ಮನ್ನು ನಂಬುತ್ತಿಲ್ಲ? ಖಂಡಿತವಾಗಿಯೂ ನಾವು ಅವನ ಹಿತಾಕಾಂಕ್ಷಿಗಳಾಗಿರುವೆವು.

قَالُواْ يَٰٓأَبَانَا مَالَكَ لَا تَأْمَ۫نَّا عَلَىٰ يُوسُفَ وَإِنَّا لَهُۥ لَنَٰصِحُونَ ١١

**12.** ನಾಳೆ ನಮ್ಮೊಂದಿಗೆ ಅವನನ್ನು ಕಳುಹಿಸಿಕೊಡಿರಿ. ಅವನು ಉಲ್ಲಾಸದೊಂದಿಗೆ ನಡೆದಾಡುತ್ತಾ ಆಟವಾಡಲಿ. ಖಂಡಿತವಾಗಿಯೂ ನಾವು ಅವನನ್ನು ಕಾಪಾಡುವೆವು'.

أَرْسِلْهُ مَعَنَا غَدًا يَرْتَعْ وَيَلْعَبْ وَإِنَّا لَهُۥ لَحَٰفِظُونَ ١٢

**13.** ತಂದೆ ಹೇಳಿದರು: 'ನೀವು ಅವನನ್ನು ಕೊಂಡೊಯ್ಯುವುದು ಖಂಡಿತವಾಗಿಯೂ ನನಗೆ ಸಂಕಟವನ್ನುಂಟು ಮಾಡುತ್ತಿದೆ. ನೀವು ಅವನ ಕುರಿತು ಅಲಕ್ಷ್ಯರಾಗಿರುವಾಗ ತೋಳವು ಅವನನ್ನು ತಿನ್ನಬಹುದು ಎಂದು ನಾನು ಭಯಪಡುತ್ತಿರುವೆನು'.

قَالَ إِنِّى لَيَحْزُنُنِىٓ أَن تَذْهَبُواْ بِهِۦ وَأَخَافُ أَن يَأْكُلَهُ ٱلذِّئْبُ وَأَنتُمْ عَنْهُ غَٰفِلُونَ ١٣

**14.** ಅವರು ಹೇಳಿದರು: 'ನಾವೊಂದು (ಬಲಿಷ್ಠ) ತಂಡವಾಗಿರುವಾಗ ತೋಳವು ಅವನನ್ನು ತಿನ್ನುವುದಾದರೆ ಖಂಡಿತವಾಗಿಯೂ ನಷ್ಟ ಹೊಂದಿದವರು ನಾವೇ ಆಗಿರುವೆವು'.

قَالُواْ لَئِنْ أَكَلَهُ ٱلذِّئْبُ وَنَحْنُ عُصْبَةٌ إِنَّآ إِذًا لَّخَٰسِرُونَ ١٤

---

1 ಯಅ್‌ಕೂಬ್(عَلَيْهِ السَّلَامُ)ರಿಗೆ ಯೂಸುಫ್ ಸೇರಿದಂತೆ ಹನ್ನೆರಡು ಮಕ್ಕಳಿದ್ದರು. ಅವರು ಯೂಸುಫ್(عَلَيْهِ السَّلَامُ)ರನ್ನು ಹೆಚ್ಚು ಪ್ರೀತಿಸುತ್ತಿದ್ದಾರೆ ಎಂಬ ಭಾವನೆಯಿಂದಾಗಿ ಅಣ್ಣಂದಿರಿಗೆ ಯೂಸುಫ್ ರೊಂದಿಗೆ ತೀವ್ರ ಅಸೂಯೆಯಿತ್ತು. ಯೂಸುಫ್(عَلَيْهِ السَّلَامُ) ರನ್ನು ವಧಿಸಿದರೆ ಸ್ವಲ್ಪಕಾಲ ತಂದೆಗೆ ತೀವ್ರ ದುಃಖವುಂಟಾಗಬಹುದಾದರೂ ಕ್ರಮೇಣ ಅವರು ಯೂಸುಫ್(عَلَيْهِ السَّلَامُ) ರನ್ನು ಮರೆತುಬಿಡುವರು. ನಂತರ ತಂದೆಯ ಪ್ರೀತಿಯು ನಮಗೆ ಮರಳಿ ಸಿಗುವುದು ಎಂದು ಅವರು ಎಣಿಸಿದ್ದರು.

2 ಕೊಲೆಗೈದ ನಂತರ ಪಶ್ಚಾತ್ತಾಪಪಟ್ಟು ಸಾತ್ವಿಕರಾಗಿ ಬಾಳಬಹುದು ಎಂದು ಅವರು ಆಶಿಸಿದ್ದರು.

فَلَمَّا ذَهَبُواْ بِهِۦ وَأَجۡمَعُوٓاْ أَن يَجۡعَلُوهُ فِي غَيَٰبَتِ ٱلۡجُبِّۚ وَأَوۡحَيۡنَآ إِلَيۡهِ لَتُنَبِّئَنَّهُم بِأَمۡرِهِمۡ هَٰذَا وَهُمۡ لَا يَشۡعُرُونَ ١٥

**15.** ತರುವಾಯ ಅವರು ಅವರೊಂದಿಗೆ (ಯೂಸುಫ್‌ರೊಂದಿಗೆ) ಹೊರಟಾಗ ಮತ್ತು ಅವರನ್ನು ಬಾವಿಯೊಂದರ ತಳಭಾಗಕ್ಕೆ ಎಸೆಯುವುದರ ಬಗ್ಗೆ ಅವರು ಏಕಾಭಿಪ್ರಾಯ ಹೊಂದಿದಾಗ (ಅವರು ತಮ್ಮ ಕ್ರೂರಕೃತ್ಯವನ್ನು ಜಾರಿಗೊಳಿಸಿಯೇ ಬಿಟ್ಟರು). 'ತಾವು ಅವರಿಗೆ (ಎಂದಾದರೊಮ್ಮೆ) ಅವರ ಈ ಕೃತ್ಯದ ಕುರಿತು ಖಂಡಿತವಾಗಿಯೂ ತಿಳಿಸಿಕೊಡುವಿರಿ.[1] (ಅಂದು) ಅವರು ಇದರ ಕುರಿತು ಪ್ರಜ್ಞೆಯಿಲ್ಲದವರಾಗಿರುವರು.' ಎಂದು ನಾವು ಅವರಿಗೆ (ಯೂಸುಫ್‌ರಿಗೆ) ದಿವ್ಯಸಂದೇಶವನ್ನು ನೀಡಿದೆವು.

وَجَآءُوٓ أَبَاهُمۡ عِشَآءٗ يَبۡكُونَ ١٦

**16.** ಸಂಜೆಯಾದಾಗ ಅವರು ತಮ್ಮ ತಂದೆಯ ಬಳಿಗೆ ಅಳುತ್ತಾ ಬಂದರು.

قَالُواْ يَٰٓأَبَانَآ إِنَّا ذَهَبۡنَا نَسۡتَبِقُ وَتَرَكۡنَا يُوسُفَ عِندَ مَتَٰعِنَا فَأَكَلَهُ ٱلذِّئۡبُۖ وَمَآ أَنتَ بِمُؤۡمِنٖ لَّنَا وَلَوۡ كُنَّا صَٰدِقِينَ ١٧

**17.** ಅವರು ಹೇಳಿದರು: 'ಓ ನಮ್ಮ ತಂದೆಯವರೇ! ನಾವು ಸ್ಪರ್ಧಿಸುತ್ತಾ ಓಡಿದೆವು ಮತ್ತು ಯೂಸುಫ್‌ನನ್ನು ನಮ್ಮ ಸಾಮಗ್ರಿಗಳ ಬಳಿ ಬಿಟ್ಟಿದ್ದೆವು. ಆಗ ತೋಳವು ಅವನನ್ನು ತಿಂದು ಹಾಕಿತು. ನಾವು ಸತ್ಯವನ್ನೇ ನುಡಿಯುವವರಾಗಿದ್ದರೂ ಕೂಡ ತಾವು ನಮ್ಮನ್ನು ನಂಬಲಾರಿರಿ'.

وَجَآءُو عَلَىٰ قَمِيصِهِۦ بِدَمٖ كَذِبٖۚ قَالَ بَلۡ سَوَّلَتۡ لَكُمۡ أَنفُسُكُمۡ أَمۡرٗاۖ فَصَبۡرٞ جَمِيلٞۖ وَٱللَّهُ ٱلۡمُسۡتَعَانُ عَلَىٰ مَا تَصِفُونَ ١٨

**18.** ಅವರು ಯೂಸುಫ್‌ರ ಅಂಗಿಗೆ ಮಿಥ್ಯರಕ್ತವನ್ನು ಹಚ್ಚಿ ತಂದಿದ್ದರು. ತಂದೆ ಹೇಳಿದರು: 'ಅಲ್ಲ. ನಿಮ್ಮ ಮನಸ್ಸು ನಿಮಗೊಂದು ವಿಷಯವನ್ನು ಆಕರ್ಷಣೀಯವಾಗಿ ತೋರಿಸಿದೆ. ಆದ್ದರಿಂದ ಉತ್ತಮವಾಗಿ ಸಹನೆ ವಹಿಸುವುದೇ ಸರಿ. ನೀವು ವರ್ಣಿಸುತ್ತಿರುವ ವಿಷಯದಲ್ಲಿ ಸಹಾಯ ಬೇಡಲಾಗುವವನು ಅಲ್ಲಾಹು ಮಾತ್ರವಾಗಿರುವನು'.

وَجَآءَتۡ سَيَّارَةٞ فَأَرۡسَلُواْ وَارِدَهُمۡ فَأَدۡلَىٰ

**19.** ಅಲ್ಲಿಗೆ ಯಾತ್ರಿಕರ ಒಂದು ತಂಡವು ಬಂದಿತು. ಅವರು ತಮ್ಮ ನೀರು ತರುವವನನ್ನು

1 ತದನಂತರ ಈಜಿಪ್ಟಿನಲ್ಲಿ ಯೂಸುಫ್(عَلَيْهِ ٱلسَّلَامُ)ರವರು ಇದರ ಕುರಿತು ಸಹೋದರರೊಂದಿಗೆ ಮಾತನಾಡಿದ್ದಾಗಿ 89ನೇ ಸೂಕ್ತಿಯಲ್ಲಿ ಹೇಳಲಾಗಿದೆ.

دَلْوَهُۥۖ قَالَ يَٰبُشْرَىٰ هَٰذَا غُلَٰمٌۚ وَأَسَرُّوهُ بِضَٰعَةًۚ وَٱللَّهُ عَلِيمٌۢ بِمَا يَعْمَلُونَ ﴿١٩﴾

ಕಳುಹಿಸಿದರು. ಅವನು ತನ್ನ ಬಕೀಟನ್ನು ಇಳಿಸಿದನು. ಅವನು ಹೇಳಿದನು: ‘ಓ ಸಂತಸದ ಸುದ್ದಿ! ಇಲ್ಲೊಬ್ಬ ಹುಡುಗ!’ ಅವರು ಅವರನ್ನು (ಯೂಸುಫ್‌ರನ್ನು) ಒಂದು ವ್ಯಾಪಾರದ ಸರಕಾಗಿ ಬಚ್ಚಿಟ್ಟರು. ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿಯುವವನಾಗಿರುವನು.

وَشَرَوْهُ بِثَمَنٍۭ بَخْسٍ دَرَٰهِمَ مَعْدُودَةٍ وَكَانُوا۟ فِيهِ مِنَ ٱلزَّٰهِدِينَ ﴿٢٠﴾

**20.** ಅವರು ಆತನ(ಯೂಸುಫ್‌ರ)ನ್ನು ಚಿಲ್ಲರೆ ಕಾಸಿಗೆ –ಕೆಲವು ಬೆಳ್ಳಿ ನಾಣ್ಯಗಳಿಗೆ– ಮಾರಿದರು. ಅವರು ಆತನ(ಯೂಸುಫ್‌ರ) ವಿಷಯದಲ್ಲಿ ಅನಾಸಕ್ತಿಯುಳ್ಳವರ ಪೈಕಿ ಸೇರಿದವರಾಗಿದ್ದರು.[1]

وَقَالَ ٱلَّذِى ٱشْتَرَىٰهُ مِن مِّصْرَ لِٱمْرَأَتِهِۦٓ أَكْرِمِى مَثْوَىٰهُ عَسَىٰٓ أَن يَنفَعَنَآ أَوْ نَتَّخِذَهُۥ وَلَدًاۚ وَكَذَٰلِكَ مَكَّنَّا لِيُوسُفَ فِى ٱلْأَرْضِ وَلِنُعَلِّمَهُۥ مِن تَأْوِيلِ ٱلْأَحَادِيثِۚ وَٱللَّهُ غَالِبٌ عَلَىٰٓ أَمْرِهِۦ وَلَٰكِنَّ أَكْثَرَ ٱلنَّاسِ لَا يَعْلَمُونَ ﴿٢١﴾

**21.** ಆತನನ್ನು ಈಜಿಪ್ಟಿನಿಂದ ಖರೀದಿಸಿದ ವ್ಯಕ್ತಿ ತನ್ನ ಪತ್ನಿಯೊಂದಿಗೆ ಹೇಳಿದನು: ‘ಇವನಿಗೆ ಗೌರವಾರ್ಹ ವಸತಿಯನ್ನು ಒದಗಿಸು. ಇವನು ನಮಗೆ ಪ್ರಯೋಜನಕಾರಿಯಾಗಲೂ ಬಹುದು ಅಥವಾ ನಮಗೆ ಇವನನ್ನು ಪುತ್ರನನ್ನಾಗಿ ಮಾಡಿಕೊಳ್ಳಬಹುದು’. ಹೀಗೆ ನಾವು ಯೂಸುಫ್‌ರಿಗೆ ಆ ಭೂಪ್ರದೇಶದಲ್ಲಿ ಅನುಕೂಲತೆಯನ್ನು ಮಾಡಿಕೊಟ್ಟೆವು. ಇದು ನಾವು ಅವರಿಗೆ ಸ್ವಪ್ನ ವ್ಯಾಖ್ಯಾನವನ್ನು ಕಲಿಸಿಕೊಡುವ ಸಲುವಾಗಿತ್ತು. ಅಲ್ಲಾಹು ತನ್ನ ವಿಷಯದಲ್ಲಿ ಜಯಶಾಲಿಯಾಗುವನು. ಆದರೆ ಜನರಲ್ಲಿ ಹೆಚ್ಚಿನವರೂ ಅರಿತುಕೊಳ್ಳಲಾರರು.

وَلَمَّا بَلَغَ أَشُدَّهُۥٓ ءَاتَيْنَٰهُ حُكْمًا وَعِلْمًاۚ وَكَذَٰلِكَ نَجْزِى ٱلْمُحْسِنِينَ ﴿٢٢﴾

**22.** ತರುವಾಯ ಅವರು (ಯೂಸುಫ್‌ರು) ಪೂರ್ಣ ಬೆಳವಣಿಗೆಯನ್ನು ತಲುಪಿದಾಗ ನಾವು ಅವರಿಗೆ ಯುಕ್ತಿಯನ್ನೂ ಜ್ಞಾನವನ್ನೂ ಕರುಣಿಸಿದೆವು. ಸತ್ಕರ್ಮವೆಸಗುವವರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

1 ದಾರಿಯಲ್ಲಿ ಸಿಕ್ಕಿದ ಹುಡುಗನಿಗೆ ಯಾವ ಬೆಲೆ ಸಿಕ್ಕಿದರೂ ಪರವಾಗಿಲ್ಲ ಎಂದವರು ಪರಿಗಣಿಸಿದ್ದರು.

23. ಆತ ಯಾರ ಮನೆಯಲ್ಲಿದ್ದರೋ ಆಕೆ[1] ಆತನನ್ನು ವಶೀಕರಿಸಲು ಯತ್ನಿಸಿದಳು. ಆಕೆ ಬಾಗಿಲುಗಳನ್ನು ಮುಚ್ಚಿ ಹೇಳಿದಳು: 'ಇತ್ತ ಬಾ'. ಆತ (ಯೂಸುಫ್) ಹೇಳಿದರು: 'ನಾನು ಅಲ್ಲಾಹುವಿನೊಂದಿಗೆ ಅಭಯ ಯಾಚಿಸುತ್ತಿರುವೆನು. ಖಂಡಿತವಾಗಿಯೂ ಅವನು ನನ್ನ ರಬ್ಬಾಗಿರುವನು. ಅವನು ನನ್ನ ವಾಸಸ್ಥಳವನ್ನು ಉತ್ತಮಗೊಳಿಸಿರುವನು.[2] ಖಂಡಿತವಾಗಿಯೂ ಅಕ್ರಮಿಗಳು ಯಶಸ್ವಿಯಾಗಲಾರರು'.

وَرَٰوَدَتۡهُ ٱلَّتِي هُوَ فِي بَيۡتِهَا عَن نَّفۡسِهِۦ وَغَلَّقَتِ ٱلۡأَبۡوَٰبَ وَقَالَتۡ هَيۡتَ لَكَۚ قَالَ مَعَاذَ ٱللَّهِۖ إِنَّهُۥ رَبِّيٓ أَحۡسَنَ مَثۡوَايَۖ إِنَّهُۥ لَا يُفۡلِحُ ٱلظَّٰلِمُونَ ﴿٢٣﴾

24. ಆಕೆಗೆ ಆತನಲ್ಲಿ ಮೋಹವುಂಟಾಯಿತು. ತನ್ನ ರಬ್‌ನ ಪ್ರಮಾಣವನ್ನು ಕಾಣದಿರುತ್ತಿದ್ದರೆ ಆತನಿಗೂ ಆಕೆಯಲ್ಲಿ ಮೋಹವುಂಟಾಗುತ್ತಿತ್ತು. ಹೀಗೆ ಅವರಿಂದ ಕೆಡುಕು ಹಾಗೂ ನೀಚಕೃತ್ಯವನ್ನು ತಿರುಗಿಸಿಬಿಡುವ ಸಲುವಾಗಿ (ಇದು ಸಂಭವಿಸಿತು). ಖಂಡಿತವಾಗಿಯೂ ಆತ ನಮ್ಮ ನಿಷ್ಕಳಂಕ ದಾಸರಲ್ಲಿ ಸೇರಿದವರಾಗಿದ್ದರು.

وَلَقَدۡ هَمَّتۡ بِهِۦۖ وَهَمَّ بِهَا لَوۡلَآ أَن رَّءَا بُرۡهَٰنَ رَبِّهِۦۚ كَذَٰلِكَ لِنَصۡرِفَ عَنۡهُ ٱلسُّوٓءَ وَٱلۡفَحۡشَآءَۚ إِنَّهُۥ مِنۡ عِبَادِنَا ٱلۡمُخۡلَصِينَ ﴿٢٤﴾

25. ಅವರಿಬ್ಬರೂ ಸ್ಪರ್ಧಿಸುತ್ತಾ ಬಾಗಿಲಿನೆಡೆಗೆ ಓಡಿದರು. ಆಕೆ ಆತನ ಅಂಗಿಯನ್ನು ಹಿಂಭಾಗದಿಂದ (ಹಿಡಿದು) ಹರಿದಳು. ಅವರಿಬ್ಬರೂ ಬಾಗಿಲ ಬಳಿ ಆಕೆಯ ಯಜಮಾನನನ್ನು (ಪತಿಯನ್ನು) ಕಂಡರು. ಆಕೆ ಹೇಳಿದಳು: 'ತಮ್ಮ ಪತ್ನಿಯೊಂದಿಗೆ ಕೆಟ್ಟ ಬಯಕೆಯನ್ನು ಹೊಂದಿರುವವನಿಗೆ ದೊರೆಯುವ ಶಿಕ್ಷೆಯು ಅವನನ್ನು ಸೆರೆಮನೆಯಲ್ಲಿಡುವುದು ಅಥವಾ ಯಾತನಾಮಯ ಶಿಕ್ಷೆಯನ್ನು ನೀಡುವುದರ ವಿನಾ ಬೇರೇನೂ ಆಗಿರಬಾರದು'.

وَٱسۡتَبَقَا ٱلۡبَابَ وَقَدَّتۡ قَمِيصَهُۥ مِن دُبُرٖ وَأَلۡفَيَا سَيِّدَهَا لَدَا ٱلۡبَابِۚ قَالَتۡ مَا جَزَآءُ مَنۡ أَرَادَ بِأَهۡلِكَ سُوٓءًا إِلَّآ أَن يُسۡجَنَ أَوۡ عَذَابٌ أَلِيمٞ ﴿٢٥﴾

---

1 ಅರಸನ ಪತ್ನಿಯ ಹೆಸರನ್ನು ಕುರ್‌ಆನ್‌ನಲ್ಲಿ ಹೇಳಲಾಗಿಲ್ಲ. ಆಕೆಯ ಹೆಸರು ಝುಲೈಖಾ ಆಗಿದೆಯೆಂದು ತಫ್ಸೀರ್ ಗ್ರಂಥಗಳಲ್ಲಿ ಕಾಣಬಹುದು.

2 'ನನ್ನ ರಬ್' ಎಂಬ ಈ ವಚನವು ಪ್ರಪಂಚದ ಪರಿಪಾಲಕ ಎಂಬ ಅರ್ಥದಲ್ಲಿಯೂ ನನ್ನ ಒಡೆಯ, ಅಥವಾ ಮನೆಯ ಯಜಮಾನ ಎಂಬರ್ಥದಲ್ಲಿಯೂ ಆಗಿರುವ ಸಾಧ್ಯತೆಯಿದೆ.

26. ಯೂಸುಫ್ ಹೇಳಿದರು: 'ನನ್ನನ್ನು ವಶೀಕರಿಸಲು ಯತ್ನಿಸಿದವಳು ಆಕೆಯೇ ಆಗಿರುವಳು'. ಆಗ ಆಕೆಯ ಕುಟುಂಬದಲ್ಲಿ ಸೇರಿದ ಒಬ್ಬ ಸಾಕ್ಷಿ ಈ ರೀತಿ ಸಾಕ್ಷಿ ನುಡಿದನು: 'ಅವನ ಅಂಗಿಯು ಮುಂಭಾಗದಿಂದ ಹರಿದಿರುವುದಾದರೆ ಆಕೆ ಹೇಳಿದ್ದು ಸತ್ಯವಾಗಿದೆ ಮತ್ತು ಅವನು ಸುಳ್ಳು ನುಡಿಯುವವರಲ್ಲಿ ಸೇರಿದವನಾಗಿರುವನು.

قَالَ هِيَ رَٰوَدَتۡنِي عَن نَّفۡسِيۚ وَشَهِدَ شَاهِدٞ مِّنۡ أَهۡلِهَآ إِن كَانَ قَمِيصُهُۥ قُدَّ مِن قُبُلٖ فَصَدَقَتۡ وَهُوَ مِنَ ٱلۡكَٰذِبِينَ ٢٦

27. ಆದರೆ ಅವನ ಅಂಗಿಯು ಹಿಂಭಾಗದಿಂದ ಹರಿದಿರುವುದಾದರೆ ಆಕೆ ಹೇಳಿದ್ದು ಸುಳ್ಳಾಗಿದೆ ಮತ್ತು ಅವನು ಸತ್ಯ ನುಡಿಯುವವರಲ್ಲಿ ಸೇರಿದವನಾಗಿರುವನು'.

وَإِن كَانَ قَمِيصُهُۥ قُدَّ مِن دُبُرٖ فَكَذَبَتۡ وَهُوَ مِنَ ٱلصَّٰدِقِينَ ٢٧

28. ಆದರೆ ಆತನ ಅಂಗಿಯು ಹಿಂಭಾಗದಿಂದ ಹರಿದಿರುವುದನ್ನು ಕಂಡಾಗ ಅವನು (ಮನೆಯೊಡೆಯನು ತನ್ನ ಪತ್ನಿಯೊಂದಿಗೆ) ಹೇಳಿದನು: 'ಖಂಡಿತವಾಗಿಯೂ ಇದು ನಿಮ್ಮ (ಸ್ತ್ರೀಯರ) ತಂತ್ರಗಳಲ್ಲಿ ಸೇರಿದ್ದಾಗಿದೆ. ಖಂಡಿತವಾಗಿಯೂ ನಿಮ್ಮ ತಂತ್ರವು ಭೀಕರವಾಗಿದೆ.

فَلَمَّا رَءَا قَمِيصَهُۥ قُدَّ مِن دُبُرٖ قَالَ إِنَّهُۥ مِن كَيۡدِكُنَّۖ إِنَّ كَيۡدَكُنَّ عَظِيمٞ ٢٨

29. ಯೂಸುಫ್! ನೀನು ಇದನ್ನು ಕಡೆಗಣಿಸು. (ಓ ಹೆಣ್ಣೇ!) ನೀನು ನಿನ್ನ ಪಾಪಕ್ಕಾಗಿ ಕ್ಷಮೆಯಾಚಿಸು. ಖಂಡಿತವಾಗಿಯೂ ನೀನು ಪಾಪಿಗಳಲ್ಲಿ ಸೇರಿದವಳಾಗಿರುವೆ'.

يُوسُفُ أَعۡرِضۡ عَنۡ هَٰذَاۚ وَٱسۡتَغۡفِرِي لِذَنۢبِكِۖ إِنَّكِ كُنتِ مِنَ ٱلۡخَاطِـِٔينَ ٢٩

30. ಪಟ್ಟಣದಲ್ಲಿರುವ ಕೆಲವು ಸ್ತ್ರೀಯರು ಹೇಳಿದರು: 'ಪ್ರಭುವಿನ ಪತ್ನಿ ಆಕೆಯ ಸೇವಕನನ್ನು ವಶೀಕರಿಸಲು ಯತ್ನಿಸುತ್ತಿರುವಳು. ಆಕೆ ಅವನನ್ನು ಗಾಢವಾಗಿ ಪ್ರೀತಿಸುತ್ತಿರುವಳು. ಖಂಡಿತವಾಗಿಯೂ ಆಕೆ ಸ್ಪಷ್ಟವಾದ ದಾರಿಗೇಡಿನಲ್ಲಿರುವುದಾಗಿ ನಾವು ಕಾಣುತ್ತಿರುವೆವು'.

۞وَقَالَ نِسۡوَةٞ فِي ٱلۡمَدِينَةِ ٱمۡرَأَتُ ٱلۡعَزِيزِ تُرَٰوِدُ فَتَىٰهَا عَن نَّفۡسِهِۦۖ قَدۡ شَغَفَهَا حُبًّاۖ إِنَّا لَنَرَىٰهَا فِي ضَلَٰلٖ مُّبِينٖ ٣٠

31. ಅವರ ಕುಹಕದ ಬಗ್ಗೆ ಕೇಳಿ ತಿಳಿದಾಗ ಆಕೆ ಅವರೆಡೆಗೆ ಆಳನ್ನು ಕಳುಹಿಸಿದಳು. (ಅವರು ಬಂದಾಗ) ಅವರಿಗೆ ಒರಗಿ ಕೂರಲು

فَلَمَّا سَمِعَتۡ بِمَكۡرِهِنَّ أَرۡسَلَتۡ إِلَيۡهِنَّ وَأَعۡتَدَتۡ لَهُنَّ مُتَّكَـٔٗا وَءَاتَتۡ كُلَّ وَٰحِدَةٖ

مِّنۡهُنَّ سِكِّينٗا وَقَالَتِ ٱخۡرُجۡ عَلَيۡهِنَّۖ
فَلَمَّا رَأَيۡنَهُۥٓ أَكۡبَرۡنَهُۥ وَقَطَّعۡنَ أَيۡدِيَهُنَّ
وَقُلۡنَ حَٰشَ لِلَّهِ مَا هَٰذَا بَشَرًا إِنۡ هَٰذَآ
إِلَّا مَلَكٞ كَرِيمٞ ﴿٣١﴾

ಆಸನಗಳ ವ್ಯವಸ್ಥೆಯನ್ನು ಮಾಡಿದಳು.[1] ಅವರಲ್ಲಿ ಪ್ರತಿಯೊಬ್ಬರಿಗೂ (ಹಣ್ಣನ್ನು ಕತ್ತರಿಸಲು) ಆಕೆ ಒಂದೊಂದು ಚೂರಿಯನ್ನು ನೀಡಿದಳು. ತರುವಾಯ ಆಕೆ (ಯೂಸುಫ್‌ರೊಂದಿಗೆ) ಹೇಳಿದಳು: 'ಅವರ ಎದುರಿಗೆ ಹೊರಟುಬಾ'. ಹಾಗೆಯೇ ಆತನನ್ನು ಕಂಡಾಗ ಅವರು ಮೂಕವಿಸ್ಮಿತರಾದರು ಮತ್ತು ತಮ್ಮ ಕೈಗಳನ್ನೇ ಕತ್ತರಿಸಿದರು.[2] ಅವರು ಹೇಳಿದರು: 'ಅಲ್ಲಾಹು ಪರಮಪಾವನನು! ಇವರು ಮನುಷ್ಯರಲ್ಲ! ಇವರೊಬ್ಬ ಗೌರವಾರ್ಹ ಮಲಕ್ ಮಾತ್ರವಾಗಿರುವರು'.

قَالَتۡ فَذَٰلِكُنَّ ٱلَّذِي لُمۡتُنَّنِي فِيهِۖ وَلَقَدۡ
رَٰوَدتُّهُۥ عَن نَّفۡسِهِۦ فَٱسۡتَعۡصَمَۖ وَلَئِن لَّمۡ
يَفۡعَلۡ مَآ ءَامُرُهُۥ لَيُسۡجَنَنَّ وَلَيَكُونٗا مِّنَ
ٱلصَّٰغِرِينَ ﴿٣٢﴾

32. ಆಕೆ ಹೇಳಿದಳು: 'ಯಾವ ವ್ಯಕ್ತಿಯ ಬಗ್ಗೆ ನೀವು ನನ್ನನ್ನು ದೂಷಿಸಿದಿರೋ ಆ ವ್ಯಕ್ತಿಯೇ ಇವನು! ಖಂಡಿತವಾಗಿಯೂ ನಾನು ಅವನನ್ನು ವಶೀಕರಿಸಲು ಯತ್ನಿಸಿದ್ದೆನು. ಆದರೆ ಅವನು (ಸ್ವತಃ ಕಳಂಕಕ್ಕೊಳಗಾಗದೆ) ಪಾರಾದನು. ನಾನು ಅವನೊಂದಿಗೆ ಏನನ್ನು ಆದೇಶಿಸುವೆನೋ ಅದನ್ನು ಅವನು ಮಾಡದಿದ್ದರೆ ಖಂಡಿತವಾಗಿಯೂ ಅವನನ್ನು ಸೆರೆಮನೆಯಲ್ಲಿಡಲಾಗುವುದು ಮತ್ತು ಅವನು ಅಪಮಾನಿತರಲ್ಲಿ ಸೇರಿದವನಾಗುವನು'.

قَالَ رَبِّ ٱلسِّجۡنُ أَحَبُّ إِلَيَّ مِمَّا يَدۡعُونَنِيٓ
إِلَيۡهِۖ وَإِلَّا تَصۡرِفۡ عَنِّي كَيۡدَهُنَّ أَصۡبُ
إِلَيۡهِنَّ وَأَكُن مِّنَ ٱلۡجَٰهِلِينَ ﴿٣٣﴾

33. ಆತ (ಯೂಸುಫ್) ಹೇಳಿದರು: 'ಓ ನನ್ನ ರಬ್! ಇವರು ನನ್ನನ್ನು ಯಾವುದರೆಡೆಗೆ ಕರೆಯುತ್ತಿರುವರೋ ಅದಕ್ಕಿಂತಲೂ ಸೆರೆಮನೆಯೇ ನನಗೆ ಹೆಚ್ಚು ಪ್ರಿಯವಾಗಿದೆ. ಇವರ ಕುತಂತ್ರವನ್ನು ನೀನು ನನ್ನಿಂದ ಸರಿಸಿ ಬಿಡದಿದ್ದರೆ ನಾನು ಅವರೆಡೆಗೆ ವಾಲುವವನಾಗುವೆನು ಮತ್ತು ನಾನು ಅವಿವೇಕಿಗಳ ಪೈಕಿ ಸೇರಿದವನಾಗುವೆನು'.

1 'ಮುತ್ತಕಅ್' ಎಂದರೆ ಒರಗಿ ಕೂರುವ ಆಸನ ಎಂದರ್ಥ. ಕೆಲವರು ಇದಕ್ಕೆ ಔತಣಕೂಟ ಎಂಬರ್ಥವನ್ನು ನೀಡಿದ್ದಾರೆ.

2 ರಾಣಿಯು ಯೂಸುಫ್(عَلَيْهِ السَّلَامُ)ರನ್ನು ಕರೆಸಿದ್ದು ಆ ಸ್ತ್ರೀಯರು ಹಣ್ಣನ್ನು ಕತ್ತರಿಸಿ ತಿನ್ನುತ್ತಿರುವ ಸಂದರ್ಭದಲ್ಲಾಗಿತ್ತು. ಯೂಸುಫ್(عَلَيْهِ السَّلَامُ)ರವರ ಸೌಂದರ್ಯವನ್ನು ಕಂಡು ಮೂಕವಿಸ್ಮಿತರಾದ ಅವರು ತಮಗೆ ಅರಿವಿಲ್ಲದೆಯೇ ತಮ್ಮ ಬೆರಳುಗಳನ್ನು ಕತ್ತರಿಸಿದ್ದರು.

34. ಆಗ ಆತನ ರಬ್ ಆತನ ಪ್ರಾರ್ಥನೆಗೆ ಉತ್ತರಿಸಿದನು. ಅವರ ಕುತಂತ್ರವನ್ನು ಆತನಿಂದ ಸರಿಸಿಬಿಟ್ಟನು. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

فَٱسۡتَجَابَ لَهُۥ رَبُّهُۥ فَصَرَفَ عَنۡهُ كَيۡدَهُنَّۚ إِنَّهُۥ هُوَ ٱلسَّمِيعُ ٱلۡعَلِيمُ ٣٤

35. ತರುವಾಯ ಪುರಾವೆಗಳನ್ನು ಕಂಡು ಮನದಟ್ಟಾದ ಬಳಿಕವೂ ಅವರನ್ನು ಒಂದು ಅವಧಿಯ ತನಕ ಸೆರೆಮನೆಯಲ್ಲಿಡಬೇಕೆಂದು ಅವರಿಗೆ ಹೊಳೆಯಿತು.(1)

ثُمَّ بَدَا لَهُم مِّنۢ بَعۡدِ مَا رَأَوُاْ ٱلۡأٓيَٰتِ لَيَسۡجُنُنَّهُۥ حَتَّىٰ حِينٖ ٣٥

36. ಇಬ್ಬರು ಯುವಕರು ಆತನೊಂದಿಗೆ ಸೆರೆಮನೆಯನ್ನು ಪ್ರವೇಶಿಸಿದರು. ಅವರಲ್ಲೊಬ್ಬನು ಹೇಳಿದನು: ‘ನಾನು ಮದ್ಯವನ್ನು ಹಿಂಡುತ್ತಿರುವುದಾಗಿ ಕನಸು ಕಂಡಿರುವೆನು’. ಇನ್ನೊಬ್ಬನು ಹೇಳಿದನು: ‘ನಾನು ನನ್ನ ತಲೆಯ ಮೇಲೆ ರೊಟ್ಟಿಯನ್ನು ಹೊತ್ತುಕೊಂಡಿದ್ದು ಹಕ್ಕಿಗಳು ಅದರಿಂದ ತಿನ್ನುತ್ತಿರುವುದಾಗಿ ಕನಸು ಕಂಡಿರುವೆನು. ಇದರ ವ್ಯಾಖ್ಯಾನವನ್ನು ತಾವು ನಮಗೆ ತಿಳಿಸಿಕೊಡಿರಿ. ಖಂಡಿತವಾಗಿಯೂ ನಾವು ತಮ್ಮನ್ನು ಸಜ್ಜನರಲ್ಲಿ ಸೇರಿದವರಾಗಿ ಕಾಣುತ್ತಿರುವೆವು’.

وَدَخَلَ مَعَهُ ٱلسِّجۡنَ فَتَيَانِۖ قَالَ أَحَدُهُمَآ إِنِّيٓ أَرَىٰنِيٓ أَعۡصِرُ خَمۡرٗاۖ وَقَالَ ٱلۡأٓخَرُ إِنِّيٓ أَرَىٰنِيٓ أَحۡمِلُ فَوۡقَ رَأۡسِي خُبۡزٗا تَأۡكُلُ ٱلطَّيۡرُ مِنۡهُۖ نَبِّئۡنَا بِتَأۡوِيلِهِۦٓۖ إِنَّا نَرَىٰكَ مِنَ ٱلۡمُحۡسِنِينَ ٣٦

37. ಆತ(ಯೂಸುಫ್) ಹೇಳಿದರು: ‘ನಿಮಗೆ ಒದಗಿಸಲಾಗುವ ಯಾವುದೇ ಆಹಾರವು ನಿಮ್ಮ ಬಳಿಗೆ ಬರಲಾರದು. ಅದು ನಿಮ್ಮ ಬಳಿಗೆ ಬರುವ ಮೊದಲೇ ನಾನು ಅದರ (ಆ ಕನಸಿನ) ವ್ಯಾಖ್ಯಾನವನ್ನು ನಿಮಗೆ ತಿಳಿಸಿಕೊಡದೆ ಇರಲಾರೆನು. ಅದು ನನ್ನ ರಬ್ ನನಗೆ ಕಲಿಸಿಕೊಟ್ಟಿರುವುದರಲ್ಲಿ ಸೇರಿದ್ದಾಗಿದೆ. ಅಲ್ಲಾಹುವಿನಲ್ಲಿ ವಿಶ್ವಾಸವಿಡದ ಮತ್ತು ಪರಲೋಕವನ್ನು ನಿಷೇಧಿಸುವವರಾಗಿರುವ ಜನರ ಮಾರ್ಗವನ್ನು ನಾನು ತ್ಯಜಿಸಿರುವೆನು.

قَالَ لَا يَأۡتِيكُمَا طَعَامٞ تُرۡزَقَانِهِۦٓ إِلَّا نَبَّأۡتُكُمَا بِتَأۡوِيلِهِۦ قَبۡلَ أَن يَأۡتِيَكُمَاۚ ذَٰلِكُمَا مِمَّا عَلَّمَنِي رَبِّيٓۚ إِنِّي تَرَكۡتُ مِلَّةَ قَوۡمٖ لَّا يُؤۡمِنُونَ بِٱللَّهِ وَهُم بِٱلۡأٓخِرَةِ هُمۡ كَٰفِرُونَ ٣٧

1 ಯೂಸುಫ್(عَلَيۡهِ ٱلسَّلَامُ)ರವರು ಅಪರಾಧಿಯಲ್ಲದಿದ್ದರೂ ಸಮಸ್ಯೆಯನ್ನು ಪರಿಹರಿಸಲು ಅವರನ್ನು ಸೆರೆಮನೆಯಲ್ಲಿಡುವುದು ಉತ್ತಮವೆಂದು ಅರಸನು ಭಾವಿಸಿದನು. ಯೂಸುಫ್(عَلَيۡهِ ٱلسَّلَامُ)ರವರು ಕೇವಲ ಒಬ್ಬ ಸೇವಕ. ಅವರು ನಾಡಿನ ದೊರೆಗಳು. ಆದ್ದರಿಂದ ಅವರ ನಿರ್ಧಾರವನ್ನು ಪ್ರಶ್ನಿಸುವವರಾರೂ ಇರಲಾರರು.

38. ನಾನು ನನ್ನ ಪೂರ್ವಿಕರಾದ ಇಬ್ರಾಹೀಮ್, ಇಸ್‌ಹಾಕ್ ಮತ್ತು ಯಅ್‌ಕೂಬ್‌ರವರ ಮಾರ್ಗವನ್ನು ಹಿಂಬಾಲಿಸಿರುವೆನು. ಅಲ್ಲಾಹುವಿನೊಂದಿಗೆ ಏನನ್ನೇ ಆದರೂ ಸಹಭಾಗಿತ್ವ ಮಾಡುವುದು ನಮಗೆ ಯುಕ್ತವಾದುದಲ್ಲ. ಅದು (ಸನ್ಮಾರ್ಗವು) ನಮ್ಮ ಮತ್ತು (ಇತರ) ಮನುಷ್ಯರ ಮೇಲಿರುವ ಅಲ್ಲಾಹುವಿನ ಅನುಗ್ರಹದಿಂದಾಗಿದೆ. ಆದರೆ ಜನರಲ್ಲಿ ಹೆಚ್ಚಿನವರೂ ಕೃತಜ್ಞತೆ ಸಲ್ಲಿಸುವುದಿಲ್ಲ.

وَٱتَّبَعۡتُ مِلَّةَ ءَابَآءِيٓ إِبۡرَٰهِيمَ وَإِسۡحَٰقَ وَيَعۡقُوبَۚ مَا كَانَ لَنَآ أَن نُّشۡرِكَ بِٱللَّهِ مِن شَيۡءٖۚ ذَٰلِكَ مِن فَضۡلِ ٱللَّهِ عَلَيۡنَا وَعَلَى ٱلنَّاسِ وَلَٰكِنَّ أَكۡثَرَ ٱلنَّاسِ لَا يَشۡكُرُونَ ٣٨

39. ನನ್ನ ಸೆರೆಮನೆಯ ಇಬ್ಬರು ಗೆಳೆಯರೇ! ವಿಭಿನ್ನರಾದ ಅನೇಕ ಪ್ರಭುಗಳಿರುವುದು ಉತ್ತಮವೇ, ಅಥವಾ ಏಕೈಕನೂ ಸರ್ವಾಧಿಕಾರಿಯೂ ಆಗಿರುವ ಅಲ್ಲಾಹು ಉತ್ತಮನೇ?

يَٰصَٰحِبَيِ ٱلسِّجۡنِ ءَأَرۡبَابٞ مُّتَفَرِّقُونَ خَيۡرٌ أَمِ ٱللَّهُ ٱلۡوَٰحِدُ ٱلۡقَهَّارُ ٣٩

40. ನೀವು ಅಲ್ಲಾಹುವಿನ ಹೊರತು ಆರಾಧಿಸುತ್ತಿರುವುದು ನೀವು ಮತ್ತು ನಿಮ್ಮ ಪೂರ್ವಿಕರು ಹೆಸರಿಟ್ಟಿರುವ ಕೆಲವು ಹೆಸರುಗಳ ವಿನಾ ಇನ್ನೇನನ್ನೂ ಅಲ್ಲ. ಅವುಗಳ ಕುರಿತು ಅಲ್ಲಾಹು ಯಾವುದೇ ಆಧಾರಪ್ರಮಾಣವನ್ನೂ ಅವತೀರ್ಣಗೊಳಿಸಿಲ್ಲ. ಆಜ್ಞಾಧಿಕಾರವಿರುವುದು ಅಲ್ಲಾಹುವಿಗೆ ಮಾತ್ರವಾಗಿದೆ. ನೀವು ಅವನ ಹೊರತು ಇತರ ಯಾರನ್ನೂ ಆರಾಧಿಸಬಾರದೆಂದು ಅವನು ಆಜ್ಞಾಪಿಸಿರುವನು. ನೇರವಾದ ಧರ್ಮವು ಇದಾಗಿದೆ. ಆದರೆ ಜನರಲ್ಲಿ ಹೆಚ್ಚಿನವರೂ ಅರಿಯುವುದಿಲ್ಲ.

مَا تَعۡبُدُونَ مِن دُونِهِۦٓ إِلَّآ أَسۡمَآءٗ سَمَّيۡتُمُوهَآ أَنتُمۡ وَءَابَآؤُكُم مَّآ أَنزَلَ ٱللَّهُ بِهَا مِن سُلۡطَٰنٍۚ إِنِ ٱلۡحُكۡمُ إِلَّا لِلَّهِ أَمَرَ أَلَّا تَعۡبُدُوٓاْ إِلَّآ إِيَّاهُۚ ذَٰلِكَ ٱلدِّينُ ٱلۡقَيِّمُ وَلَٰكِنَّ أَكۡثَرَ ٱلنَّاسِ لَا يَعۡلَمُونَ ٤٠

41. ನನ್ನ ಸೆರೆಮನೆಯ ಇಬ್ಬರು ಗೆಳೆಯರೇ! ನಿಮ್ಮಲ್ಲೊಬ್ಬನು ತನ್ನ ಯಜಮಾನನಿಗೆ ಮದ್ಯವನ್ನು ಕುಡಿಸುವನು.[1] ಆದರೆ ಇನ್ನೊಬ್ಬನು ಶಿಲುಬೆಗೇರಿಸಲಾಗುವನು. ತರುವಾಯ ಅವನ ತಲೆಯಿಂದ ಹಕ್ಕಿಗಳು

يَٰصَٰحِبَيِ ٱلسِّجۡنِ أَمَّآ أَحَدُكُمَا فَيَسۡقِي رَبَّهُۥ خَمۡرٗاۖ وَأَمَّا ٱلۡأٓخَرُ فَيُصۡلَبُ فَتَأۡكُلُ ٱلطَّيۡرُ مِن رَّأۡسِهِۦۚ قُضِيَ ٱلۡأَمۡرُ ٱلَّذِي فِيهِ تَسۡتَفۡتِيَانِ ٤١

1 ಅವನು ಸೆರೆಮನೆಯಿಂದ ಬಿಡುಗಡೆಗೊಂಡು ಅರಸನಿಗೆ ಮದ್ಯವನ್ನು ಬಡಿಸುವ ಕೆಲಸದಲ್ಲಿ ನೇಮಿಸಲ್ಪಡುವನು ಎಂದರ್ಥ.

ಕುಕ್ಕಿ ತಿನ್ನುವುವು. ಯಾವ ವಿಷಯದ ಕುರಿತು ನೀವಿಬ್ಬರು ವಿಧಿ ಕೇಳಿರುವಿರೋ ಆ ವಿಷಯವು ತೀರ್ಮಾನಿಸಲ್ಪಟ್ಟಿರುವುದು’.(1)

وَقَالَ لِلَّذِى ظَنَّ أَنَّهُۥ نَاجٍ مِّنْهُمَا ٱذْكُرْنِى عِندَ رَبِّكَ فَأَنسَىٰهُ ٱلشَّيْطَٰنُ ذِكْرَ رَبِّهِۦ فَلَبِثَ فِى ٱلسِّجْنِ بِضْعَ سِنِينَ ﴿٤٢﴾

**42.** ಅವರಿಬ್ಬರ ಪೈಕಿ ಪಾರಾಗುವವನೆಂದು ತಾನು ಭಾವಿಸಿದ ವ್ಯಕ್ತಿಯೊಂದಿಗೆ ಆತ (ಯೂಸುಫ್) ಹೇಳಿದರು: ‘ನಿನ್ನ ಯಜಮಾನನ ಬಳಿ ನನ್ನ ಬಗ್ಗೆ ಪ್ರಸ್ತಾಪ ಮಾಡು’. ಆದರೆ ಅವನು ತನ್ನ ಯಜಮಾನನ ಬಳಿ ಅದರ ಪ್ರಸ್ತಾಪವೆತ್ತುವುದನ್ನು ಸೈತಾನನು ಅವನಿಗೆ ಮರೆಯುವಂತೆ ಮಾಡಿದನು. ಆದ್ದರಿಂದ ಕೆಲವು ವರ್ಷಗಳ ಕಾಲ ಆತ (ಯೂಸುಫ್‌ರು) ಸೆರೆಮನೆಯಲ್ಲೇ ಕಳೆದರು.

وَقَالَ ٱلْمَلِكُ إِنِّىٓ أَرَىٰ سَبْعَ بَقَرَٰتٍ سِمَانٍ يَأْكُلُهُنَّ سَبْعٌ عِجَافٌ وَسَبْعَ سُنۢبُلَٰتٍ خُضْرٍ وَأُخَرَ يَابِسَٰتٍ ۖ يَٰٓأَيُّهَا ٱلْمَلَأُ أَفْتُونِى فِى رُءْيَٰىَ إِن كُنتُمْ لِلرُّءْيَا تَعْبُرُونَ ﴿٤٣﴾

**43.** (ಒಮ್ಮೆ) ಅರಸನು ಹೇಳಿದನು: ‘ಕೊಬ್ಬಿದ ಏಳು ಹಸುಗಳನ್ನು ಕೃಶಕಾಯದ ಏಳು ಹಸುಗಳು ತಿನ್ನುತ್ತಿರುವುದಾಗಿ ಮತ್ತು ಏಳು ಹಸಿರು ಪೈರುಗಳನ್ನು ಹಾಗೂ ಏಳು ಒಣಗಿದ ಪೈರುಗಳನ್ನು ನಾನು (ಕನಸಿನಲ್ಲಿ) ಕಂಡಿರುವೆನು. ಓ ಮುಖಂಡರೇ! ನೀವು ಸ್ವಪ್ನ ವ್ಯಾಖ್ಯಾನ ನೀಡುವವರಾಗಿದ್ದರೆ ನನ್ನ ಕನಸಿನ ವಿಷಯದಲ್ಲಿ ನೀವು ನನಗೆ ವಿಧಿಯನ್ನು ತಿಳಿಸಿಕೊಡಿರಿ’.

قَالُوٓا۟ أَضْغَٰثُ أَحْلَٰمٍ ۖ وَمَا نَحْنُ بِتَأْوِيلِ ٱلْأَحْلَٰمِ بِعَٰلِمِينَ ﴿٤٤﴾

**44.** ಅವರು ಹೇಳಿದರು: ‘ಹಲವು ತರಹದ ದುಸ್ವಪ್ನಗಳು! ನಾವು ಇಂತಹ ದುಃಸ್ವಪ್ನಗಳ ವ್ಯಾಖ್ಯಾನದ ಕುರಿತು ಅರಿವುಳ್ಳವರಲ್ಲ’.

وَقَالَ ٱلَّذِى نَجَا مِنْهُمَا وَٱدَّكَرَ بَعْدَ أُمَّةٍ أَنَا۠ أُنَبِّئُكُم بِتَأْوِيلِهِۦ فَأَرْسِلُونِ ﴿٤٥﴾

**45.** ಅವರಿಬ್ಬರ (ಯೂಸುಫ್‌ರೊಂದಿಗೆ ಸೆರೆಮನೆಯಲ್ಲಿದ್ದ ಇಬ್ಬರ) ಪೈಕಿ ಪಾರಾದವನು ಒಂದು ದೀರ್ಘ ಕಾಲಾವಧಿಯ ಬಳಿಕ (ಯೂಸುಫ್‌ರನ್ನು) ಸ್ಮರಿಸಿ ಹೇಳಿದನು: ‘ಅದರ ವ್ಯಾಖ್ಯಾನದ ಕುರಿತು ನಾನು ನಿಮಗೆ ತಿಳಿಸಿಕೊಡುವೆನು. ನೀವು (ಅದಕ್ಕೋಸ್ಕರ) ನನ್ನನ್ನು ಕಳುಹಿಸಿರಿ’.

---

1 ಅಲ್ಲಾಹು ತೀರ್ಮಾನಿಸಿದ ಸಂಗತಿಯನ್ನು ಅವನು ತಿಳಿಸಿಕೊಟ್ಟ ಪ್ರಕಾರ ಯೂಸುಫ್ (عَلَيْهِ ٱلسَّلَامُ) ರವರು ವಿವರಿಸಿಕೊಡುತ್ತಿದ್ದರು.

يُوسُفُ أَيُّهَا ٱلصِّدِّيقُ أَفْتِنَا فِى سَبْعِ بَقَرَٰتٍ
سِمَانٍ يَأْكُلُهُنَّ سَبْعٌ عِجَافٌ وَسَبْعِ
سُنۢبُلَٰتٍ خُضْرٍ وَأُخَرَ يَابِسَٰتٍ لَّعَلِّىٓ أَرْجِعُ
إِلَى ٱلنَّاسِ لَعَلَّهُمْ يَعْلَمُونَ ﴿٤٦﴾

**46.** (ಅವನು ಯೂಸುಫ್‌ರ ಬಳಿಗೆ ಬಂದು ಹೇಳಿದನು:) 'ಓ ಸತ್ಯಸಂಧರಾದ ಯೂಸುಫ್‌ರವರೇ! ಕೊಬ್ಬಿದ ಏಳು ಹಸುಗಳನ್ನು ಕೃಶಕಾಯದ ಏಳು ಹಸುಗಳು ತಿನ್ನುವುದರ ಕುರಿತು, ಮತ್ತು ಏಳು ಹಸಿರು ಪೈರುಗಳು ಹಾಗೂ ಒಣಗಿದ ಪೈರುಗಳ ಕುರಿತು ತಾವು ನಮಗೆ ವಿಧಿಯನ್ನು ತಿಳಿಸಿಕೊಡಿರಿ. ಜನರು ಅರಿತುಕೊಳ್ಳುವ ಸಲುವಾಗಿ ಆ ಮಾಹಿತಿಯೊಂದಿಗೆ ನಾನು ಅವರ ಬಳಿಗೆ ಮರಳುವೆನು'

قَالَ تَزْرَعُونَ سَبْعَ سِنِينَ دَأَبًا فَمَا
حَصَدتُّمْ فَذَرُوهُ فِى سُنۢبُلِهِۦٓ إِلَّا قَلِيلًا
مِّمَّا تَأْكُلُونَ ﴿٤٧﴾

**47.** ಆತ(ಯೂಸುಫ್) ಹೇಳಿದರು: 'ನೀವು ಏಳು ವರ್ಷಗಳ ಕಾಲ ನಿರಂತರ ಕೃಷಿ ಮಾಡುವಿರಿ. ತರುವಾಯ ನೀವು ಕಟಾವು ಮಾಡಿರುವುದರಲ್ಲಿ ನೀವು ತಿನ್ನುವುದಕ್ಕಾಗಿ ಸ್ವಲ್ಪ ಉಳಿಸಿ, ಉಳಿದವುಗಳನ್ನು ಅದರ ಪೈರಿನಲ್ಲೇ ಬಿಟ್ಟುಬಿಡಿರಿ.

ثُمَّ يَأْتِى مِنۢ بَعْدِ ذَٰلِكَ سَبْعٌ شِدَادٌ
يَأْكُلْنَ مَا قَدَّمْتُمْ لَهُنَّ إِلَّا قَلِيلًا مِّمَّا
تُحْصِنُونَ ﴿٤٨﴾

**48.** ತರುವಾಯ ಅದರ ಬಳಿಕ ಕಠಿಣವಾದ ಏಳು ವರ್ಷಗಳು ಬರುವುವು. ಅವು (ಆ ಏಳು ವರ್ಷಗಳು) ನೀವು ಪೂರ್ವಭಾವಿಯಾಗಿ ತೆಗೆದಿಟ್ಟಿರುವ ಎಲ್ಲವನ್ನೂ ತಿಂದು ಮುಗಿಸುವುವು. ನೀವು ಜೋಪಾನವಾಗಿಟ್ಟಿರುವ ಕೆಲವನ್ನು ಹೊರತು.

ثُمَّ يَأْتِى مِنۢ بَعْدِ ذَٰلِكَ عَامٌ فِيهِ يُغَاثُ
ٱلنَّاسُ وَفِيهِ يَعْصِرُونَ ﴿٤٩﴾

**49.** ತರುವಾಯ ಅದರ ಬಳಿಕ ಒಂದು ವರ್ಷವು ಬರುವುದು. ಅದರಲ್ಲಿ ಜನರಿಗೆ ಸಮೃದ್ಧಿ ನೀಡಲಾಗುವುದು. ಅದರಲ್ಲಿ ಅವರು (ಮದ್ಯ ಮತ್ತಿತರ ವಸ್ತುಗಳನ್ನು) ಹಿಂಡಿ ತೆಗೆಯುವರು'.

وَقَالَ ٱلْمَلِكُ ٱئْتُونِى بِهِۦ ۖ فَلَمَّا جَآءَهُ
ٱلرَّسُولُ قَالَ ٱرْجِعْ إِلَىٰ رَبِّكَ فَسْـَٔلْهُ مَا
بَالُ ٱلنِّسْوَةِ ٱلَّٰتِى قَطَّعْنَ أَيْدِيَهُنَّ ۚ إِنَّ رَبِّى
بِكَيْدِهِنَّ عَلِيمٌ ﴿٥٠﴾

**50.** ಅರಸನು ಹೇಳಿದನು: 'ನೀವು ಆತನನ್ನು (ಯೂಸುಫ್‌ರನ್ನು) ನನ್ನ ಬಳಿಗೆ ಕರೆತನ್ನಿರಿ'. ತನ್ನ ಬಳಿಗೆ ದೂತನು ಬಂದಾಗ ಆತ(ಯೂಸುಫ್) ಹೇಳಿದರು: 'ತಾವು ತಮ್ಮ ಯಜಮಾನನ ಬಳಿಗೆ ಮರಳಿ ತಮ್ಮ ಕೈಗಳನ್ನು ಕತ್ತರಿಸಿದ ಆ ಸ್ತ್ರೀಯರ ನಿಲುವೇನೆಂದು

ಅವರೊಂದಿಗೆ ಕೇಳಿರಿ. ಖಂಡಿತವಾಗಿಯೂ ನನ್ನ ರಬ್ ಅವರ ತಂತ್ರದ ಕುರಿತು ಅರಿವುಳ್ಳವನಾಗಿರುವನು'.

قَالَ مَا خَطۡبُكُنَّ إِذۡ رَٰوَدتُّنَّ يُوسُفَ عَن نَّفۡسِهِۦۚ قُلۡنَ حَٰشَ لِلَّهِ مَا عَلِمۡنَا عَلَيۡهِ مِن سُوٓءٖۚ قَالَتِ ٱمۡرَأَتُ ٱلۡعَزِيزِ ٱلۡـَٰٔنَ حَصۡحَصَ ٱلۡحَقُّ أَنَا۠ رَٰوَدتُّهُۥ عَن نَّفۡسِهِۦ وَإِنَّهُۥ لَمِنَ ٱلصَّٰدِقِينَ ﴿٥١﴾

51. ಅರಸನು (ಆ ಸ್ತ್ರೀಯರನ್ನು ಕರೆಸಿ) ಕೇಳಿದನು: 'ನೀವು ಯೂಸುಫ್‌ರನ್ನು ವಶೀಕರಿಸಲು ಯತ್ನಿಸಿದಾಗ ನಿಮ್ಮ ಸ್ಥಿತಿ ಏನಾಗಿತ್ತು?' ಅವರು ಹೇಳಿದರು: 'ಅಲ್ಲಾಹು ಪರಮಪಾವನನು! ಅವರ ಬಗ್ಗೆ ಕೆಡುಕಾಗಿರುವ ಏನನ್ನೂ ನಾವು ಅರಿತಿಲ್ಲ'. ಪ್ರಭುವಿನ ಪತ್ನಿ ಹೇಳಿದಳು: 'ಈಗ ಸತ್ಯವು ಬಹಿರಂಗವಾಗಿದೆ. ಅವರನ್ನು ವಶೀಕರಿಸಲು ಯತ್ನಿಸಿದವಳು ನಾನೇ ಆಗಿದ್ದೆನು. ಖಂಡಿತವಾಗಿಯೂ ಅವರು ಸತ್ಯಸಂಧರಲ್ಲಿ ಸೇರಿದವರಾಗಿರುವರು.

ذَٰلِكَ لِيَعۡلَمَ أَنِّي لَمۡ أَخُنۡهُ بِٱلۡغَيۡبِ وَأَنَّ ٱللَّهَ لَا يَهۡدِي كَيۡدَ ٱلۡخَآئِنِينَ ﴿٥٢﴾

52. ಅದು (ನಾನು ಹೀಗೆ ಹೇಳುತ್ತಿರುವುದು) ಯಾಕೆಂದರೆ (ಅವರ) ಅನುಪಸ್ಥಿತಿಯಲ್ಲಿ ನಾನು ಅವರನ್ನು ವಂಚಿಸಿಲ್ಲವೆಂದು ಅವರು ಅರಿಯುವ ಸಲುವಾಗಿಯೂ(1) ಮತ್ತು ವಂಚಕರ ತಂತ್ರವನ್ನು ಅಲ್ಲಾಹು ಖಂಡಿತವಾಗಿಯೂ ಗುರಿಮುಟ್ಟಿಸಲಾರನು ಎಂಬುದರಿಂದಲೂ ಆಗಿದೆ.

۞ وَمَآ أُبَرِّئُ نَفۡسِيٓۚ إِنَّ ٱلنَّفۡسَ لَأَمَّارَةُۢ بِٱلسُّوٓءِ إِلَّا مَا رَحِمَ رَبِّيٓۚ إِنَّ رَبِّي غَفُورٞ رَّحِيمٞ ﴿٥٣﴾

53. ನಾನು ನನ್ನ ಮನಸ್ಸನ್ನು ಪಾಪದಿಂದ ವಿಮುಕ್ತಗೊಳಿಸಲಾರೆನು. ಖಂಡಿತವಾಗಿಯೂ ಮನಸ್ಸು ದುಷ್ಕರ್ಮವನ್ನು ಪ್ರೇರೇಪಿಸುತ್ತಲೇ ಇರುವಂತದ್ದಾಗಿದೆ. ನನ್ನ ರಬ್‌ನ ಕರುಣೆಗೆ ಪಾತ್ರವಾದ ಮನಸ್ಸಿನ ಹೊರತು. ಖಂಡಿತವಾಗಿಯೂ ನನ್ನ ರಬ್ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು'.

---

1 ಯೂಸುಫ್(عَلَيْهِ السَّلَامُ) ರನ್ನು ಸೆರೆಮನೆಗೆ ತಳ್ಳಿದ ಬಳಿಕ ತಾನು ಅವರ ಅನುಪಸ್ಥಿತಿಯಲ್ಲಿ ಅವರ ಬಗ್ಗೆ ಯಾವುದೇ ಕೆಟ್ಟ ಆರೋಪವನ್ನೂ ಮಾಡಿಲ್ಲವೆಂದು ರಾಣಿ ಸಾರಿ ಹೇಳುತ್ತಾಳೆ. ಆಕೆಗೆ ತನ್ನ ತಪ್ಪು ಮನವರಿಕೆಯಾಗಿ ಅವಳು ಪಶ್ಚಾತ್ತಾಪಪಟ್ಟಳು. 'ಲಮ್ ಅಖುನ್‌ಹು ಬಿಲ್‌ಗೈಬ್' ಎಂಬುದನ್ನು 'ಪ್ರಭುವಿನ ಅನುಪಸ್ಥಿತಿಯಲ್ಲಿ ನಾನು ಅವರನ್ನು ವಂಚಿಸಿಲ್ಲ' ಅಂದರೆ ಯೂಸುಫ್(عَلَيْهِ السَّلَامُ)ರನ್ನು ವಶೀಕರಿಸಲು ಯತ್ನಿಸಿದ್ದರೂ ಸಹ ಅವರೊಂದಿಗೆ ಅನೈತಿಕ ಕ್ರಿಯೆಯಲ್ಲಿ ಏರ್ಪಟ್ಟಿಲ್ಲ ಎಂದು ಕೆಲವು ವ್ಯಾಖ್ಯಾನಕಾರರು ಅರ್ಥ ನೀಡಿದ್ದಾರೆ.

54. ಅರಸನು ಹೇಳಿದನು: 'ನೀವು ಅವರನ್ನು ನನ್ನ ಬಳಿಗೆ ಕರೆತನ್ನಿರಿ. ನಾನು ಅವರನ್ನು ನನ್ನ ಆಪ್ತ ವ್ಯಕ್ತಿಯಾಗಿ ಮಾಡಿಕೊಳ್ಳುವೆನು'. ತರುವಾಯ ಅವರೊಂದಿಗೆ ಮಾತನಾಡಿದಾಗ ಅರಸನು ಹೇಳಿದನು: 'ಖಂಡಿತವಾಗಿಯೂ ತಾವು ಇಂದು ನಮ್ಮ ಬಳಿ ಪದವಿಯುಳ್ಳವರೂ, ಪ್ರಾಮಾಣಿಕರೂ ಆಗಿರುವಿರಿ'.

وَقَالَ ٱلۡمَلِكُ ٱئۡتُونِي بِهِۦٓ أَسۡتَخۡلِصۡهُ لِنَفۡسِيۖ فَلَمَّا كَلَّمَهُۥ قَالَ إِنَّكَ ٱلۡيَوۡمَ لَدَيۡنَا مَكِينٌ أَمِينٞ ٥٤

55. ಆತ(ಯೂಸುಫ್) ಹೇಳಿದರು: 'ತಾವು ನನಗೆ ಭೂಮಿಯ ಖಜಾನೆಗಳ ಅಧಿಕಾರವನ್ನು ನೀಡಿರಿ. ಖಂಡಿತವಾಗಿಯೂ ನಾನು ಸಂಪೂರ್ಣ ಜ್ಞಾನವಿರುವ ಒಬ್ಬ ಕಾವಲುಗಾರನಾಗಿರುವೆನು'.[1]

قَالَ ٱجۡعَلۡنِي عَلَىٰ خَزَآئِنِ ٱلۡأَرۡضِۖ إِنِّي حَفِيظٌ عَلِيمٞ ٥٥

56. ಹೀಗೆ ನಾವು ಯೂಸುಫ್‌ರಿಗೆ ಭೂಮಿಯಲ್ಲಿ ಅವರು ಇಚ್ಛಿಸುವ ಕಡೆ ವಾಸಿಸುವ ರೀತಿಯಲ್ಲಿ ಅಧಿಕಾರವನ್ನು ನೀಡಿದೆವು. ನಾವು ನಮ್ಮ ಕಾರುಣ್ಯವನ್ನು ನಾವಿಚ್ಛಿಸುವವರಿಗೆ ನೀಡುವೆವು. ಸತ್ಕರ್ಮವೆಸಗುವವರ ಪ್ರತಿಫಲವನ್ನು ನಾವು ವ್ಯರ್ಥಗೊಳಿಸಲಾರೆವು.

وَكَذَٰلِكَ مَكَّنَّا لِيُوسُفَ فِي ٱلۡأَرۡضِ يَتَبَوَّأُ مِنۡهَا حَيۡثُ يَشَآءُۚ نُصِيبُ بِرَحۡمَتِنَا مَن نَّشَآءُۖ وَلَا نُضِيعُ أَجۡرَ ٱلۡمُحۡسِنِينَ ٥٦

57. ವಿಶ್ವಾಸವಿಟ್ಟವರಿಗೆ ಮತ್ತು ಭಯಭಕ್ತಿ ಪಾಲಿಸುವವರಿಗೆ ಪರಲೋಕದ ಪ್ರತಿಫಲವು ಅತ್ಯುತ್ತಮವಾಗಿದೆ.

وَلَأَجۡرُ ٱلۡأٓخِرَةِ خَيۡرٞ لِّلَّذِينَ ءَامَنُواْ وَكَانُواْ يَتَّقُونَ ٥٧

58. ಯೂಸುಫ್‌ರ ಸಹೋದರರು ಬಂದು[2] ಅವರ ಬಳಿಗೆ ಪ್ರವೇಶಿಸಿದರು. ಯೂಸುಫ್ ಅವರನ್ನು ಗುರುತಿಸಿದರು. ಆದರೆ ಅವರು ಯೂಸುಫ್‌ರನ್ನು ಗುರುತಿಸಲಿಲ್ಲ.

وَجَآءَ إِخۡوَةُ يُوسُفَ فَدَخَلُواْ عَلَيۡهِ فَعَرَفَهُمۡ وَهُمۡ لَهُۥ مُنكِرُونَ ٥٨

---

1 ಸುಸ್ಥಿತಿಯ ಕಾಲದಲ್ಲಿ ಬೆಳೆದ ಕೃಷಿಯಲ್ಲಿ ಅತ್ಯಗತ್ಯವಾಗಿರುವುದನ್ನು ಬಳಸಿ ಮಿಕ್ಕಿದ್ದನ್ನು ಶೇಖರಿಸಿಟ್ಟು ತರುವಾಯ ಅದನ್ನು ಬಳಸುವ ಮೂಲಕ ಬರಗಾಲವನ್ನು ಎದುರಿಸಲು ಕೆಲವು ಯೋಜನೆಗಳನ್ನು ತಕ್ಷಣ ರೂಪಿಸಬೇಕಾದ ಅಗತ್ಯವಿತ್ತು. ಅದರ ಹೊಣೆಯನ್ನು ತನಗೆ ವಹಿಸಿಕೊಡುವಂತೆ ಯೂಸುಫ್(عَلَيْهِ السَّلَامُ)ರವರು ಅರಸನೊಂದಿಗೆ ವಿನಂತಿಸಿದರು.

2 ಕನ್‌ಆನ್ ಪ್ರದೇಶದಲ್ಲಿ ಬರಗಾಲವು ತೀವ್ರವಾದಾಗ ಈಜಿಪ್ಟಿನಲ್ಲಿ ಆಹಾರಸಾಮಗ್ರಿಗಳು ದೊರೆಯುತ್ತವೆ ಎಂಬ ಮಾಹಿತಿ ಪಡೆದು ಅವರ ಸಹೋದರರು ಬಂದಿದ್ದರು. ಧಾನ್ಯದ ಬೆಲೆಯಾಗಿ ನೀಡಬೇಕಾದ ಸಾಮಗ್ರಿಗಳನ್ನೂ ಅವರು ತಂದಿದ್ದರು.

59. ಅವರಿಗೆ ಬೇಕಾದ ಸಾಮಗ್ರಿಗಳನ್ನು ಅವರಿಗೆ ಸಿದ್ಧಪಡಿಸಿಕೊಟ್ಟಾಗ ಆತ(ಯೂಸುಫ್) ಹೇಳಿದರು: 'ನಿಮ್ಮ ತಂದೆಗೆ ಸೇರಿರುವ ನಿಮ್ಮ ಸಹೋದರನನ್ನು[1] ನನ್ನ ಬಳಿಗೆ ಕರೆತನ್ನಿರಿ. ನಾನು ಅಳತೆಯನ್ನು ಪೂರ್ಣವಾಗಿ ನೀಡುವವನೂ, ಅತ್ಯುತ್ತಮ ಆತಿಥ್ಯವನ್ನು ನೀಡುವವನೂ ಆಗಿರುವೆನೆಂದು ನೀವು ಕಾಣುತ್ತಿಲ್ಲವೇ?

وَلَمَّا جَهَّزَهُم بِجَهَازِهِمْ قَالَ ٱئْتُونِى بِأَخٍ لَّكُم مِّنْ أَبِيكُمْ ۚ أَلَا تَرَوْنَ أَنِّىٓ أُوفِى ٱلْكَيْلَ وَأَنَا۠ خَيْرُ ٱلْمُنزِلِينَ ﴿٥٩﴾

60. ನೀವು ಅವನನ್ನು ನನ್ನ ಬಳಿಗೆ ಕರೆತರದಿದ್ದರೆ ಇನ್ನು ಮುಂದೆ ನಿಮಗೆ ನನ್ನ ವತಿಯಿಂದ ಅಳೆದು ನೀಡಲಾಗುವುದಿಲ್ಲ ಮತ್ತು ನೀವು ನನ್ನ ಬಳಿಗೆ ಬರಬೇಕಾಗಿಯೂ ಇಲ್ಲ'.

فَإِن لَّمْ تَأْتُونِى بِهِۦ فَلَا كَيْلَ لَكُمْ عِندِى وَلَا تَقْرَبُونِ ﴿٦٠﴾

61. ಅವರು ಹೇಳಿದರು: 'ಅವನ ವಿಷಯದಲ್ಲಿ ನಾವು ಅವನ ತಂದೆಯ (ಮನವೊಲಿಸಲು) ಪ್ರಯತ್ನಿಸುವೆವು. ಖಂಡಿತವಾಗಿಯೂ ನಾವದನ್ನು ಮಾಡುವೆವು'.

قَالُوا۟ سَنُرَٰوِدُ عَنْهُ أَبَاهُ وَإِنَّا لَفَٰعِلُونَ ﴿٦١﴾

62. ಅವನು ಆತ(ಯೂಸುಫ್) ತನ್ನ ಆಳುಗಳೊಂದಿಗೆ ಹೇಳಿದರು: 'ಅವರು ತಂದಿರುವ ಸಾಮಗ್ರಿಗಳನ್ನು ನೀವು ಅವರ ಗಂಟುಮೂಟೆಗಳಲ್ಲಿಯೇ ಇಟ್ಟುಬಿಡಿರಿ. ಅವರು ತಮ್ಮ ಕುಟುಂಬಿಕರ ಬಳಿಗೆ ಮರಳಿದಾಗ ಅದನ್ನು ಅರಿತುಕೊಳ್ಳುವರು. ಒಂದು ವೇಳೆ ಅವರು ಮರಳಿ ಬರಲೂಬಹುದು'.

وَقَالَ لِفِتْيَٰنِهِ ٱجْعَلُوا۟ بِضَٰعَتَهُمْ فِى رِحَالِهِمْ لَعَلَّهُمْ يَعْرِفُونَهَآ إِذَا ٱنقَلَبُوٓا۟ إِلَىٰٓ أَهْلِهِمْ لَعَلَّهُمْ يَرْجِعُونَ ﴿٦٢﴾

63. ತರುವಾಯ ಅವರು ತಮ್ಮ ತಂದೆಯ ಬಳಿಗೆ ಮರಳಿದಾಗ ಅವರು ಹೇಳಿದರು: 'ಓ ನಮ್ಮ ತಂದೆಯವರೇ! ನಮಗೆ ಅಳೆದು ಕೊಡುವುದನ್ನು ತಡೆಹಿಡಿಯಲಾಗಿದೆ. ಆದ್ದರಿಂದ ತಾವು ನಮ್ಮ ಜೊತೆಗೆ ನಮ್ಮ ಸಹೋದರನನ್ನು ಕಳುಹಿಸಿಕೊಡಿರಿ. ಆಗ ನಮಗೆ ಅಳೆದು ಕೊಡಲಾಗುವುದು.

فَلَمَّا رَجَعُوٓا۟ إِلَىٰٓ أَبِيهِمْ قَالُوا۟ يَٰٓأَبَانَا مُنِعَ مِنَّا ٱلْكَيْلُ فَأَرْسِلْ مَعَنَآ أَخَانَا نَكْتَلْ وَإِنَّا لَهُۥ لَحَٰفِظُونَ ﴿٦٣﴾

1 ಪ್ರವಾದಿ ಯೂಸುಫ್(عَلَيْهِ السَّلَامُ)ಮತ್ತು ಕಿರಿಯ ಸಹೋದರ ಬಿನ್ಯಾಮಿನ್ ಒಂದೇ ತಾಯಿಯ ಮಕ್ಕಳಾಗಿದ್ದರು. ಅವರ ಇತರ ಸಹೋದರರು ಮಲತಾಯಿಯ ಮಕ್ಕಳಾಗಿದ್ದರು.

ಖಂಡಿತವಾಗಿಯೂ ನಾವವನನ್ನು ಕಾಪಾಡಿಕೊಳ್ಳುವೆವು'.

قَالَ هَلْ ءَامَنُكُمْ عَلَيْهِ إِلَّا كَمَآ أَمِنتُكُمْ عَلَىٰٓ أَخِيهِ مِن قَبْلُ فَٱللَّهُ خَيْرٌ حَٰفِظًا وَهُوَ أَرْحَمُ ٱلرَّٰحِمِينَ ﴿٦٤﴾

**64.** ಅವರು (ತಂದೆ) ಹೇಳಿದರು: 'ಈ ಹಿಂದೆ ಅವನ ಸಹೋದರನ ವಿಷಯದಲ್ಲಿ ನಾನು ನಿಮ್ಮನ್ನು ನಂಬಿದಂತೆಯೇ ವಿನಾ ಇವನ ಕುರಿತು ನನಗೆ ನಿಮ್ಮನ್ನು ನಂಬಲಾದೀತೇ? ಆದರೆ ಉತ್ತಮವಾಗಿ ಕಾಪಾಡುವವನು ಅಲ್ಲಾಹುವಾಗಿರುವನು. ಅವನು ಕರುಣೆಯುಳ್ಳವರಲ್ಲೇ ಅತ್ಯಧಿಕ ಕರುಣೆಯುಳ್ಳವನಾಗಿರುವನು'.

وَلَمَّا فَتَحُواْ مَتَٰعَهُمْ وَجَدُواْ بِضَٰعَتَهُمْ رُدَّتْ إِلَيْهِمْۖ قَالُواْ يَٰٓأَبَانَا مَا نَبْغِيۖ هَٰذِهِۦ بِضَٰعَتُنَا رُدَّتْ إِلَيْنَاۖ وَنَمِيرُ أَهْلَنَا وَنَحْفَظُ أَخَانَا وَنَزْدَادُ كَيْلَ بَعِيرٍۖ ذَٰلِكَ كَيْلٌ يَسِيرٌ ﴿٦٥﴾

**65.** ಅವರು ತಮ್ಮ ಗಂಟುಮೂಟೆಗಳನ್ನು ಬಿಚ್ಚಿದಾಗ ತಮ್ಮ ಸರಕುಗಳು ತಮಗೆ ಮರಳಿಸಲ್ಪಟ್ಟಿರುವುದಾಗಿ ಕಂಡರು. ಅವರು ಹೇಳಿದರು: 'ಓ ನಮ್ಮ ತಂದೆಯವರೇ! ನಮಗೆ ಇನ್ನೇನು ಬೇಕು? ಇಗೋ ನಮ್ಮ ಸರಕುಗಳನ್ನು ನಮಗೇ ಮರಳಿಸಲಾಗಿದೆ. (ಆದರೂ) ನಾವು ನಮ್ಮ ಕುಟುಂಬಕ್ಕೆ ಆಹಾರವನ್ನು ತರುವೆವು ಮತ್ತು ನಮ್ಮ ಸಹೋದರನನ್ನು ಕಾಪಾಡಿಕೊಳ್ಳುವೆವು. ಒಂದು ಒಂಟೆಯು ಹೊರುವ ತೂಕವು ನಮಗೆ ಹೆಚ್ಚುವರಿಯಾಗಿ ದೊರೆಯುವುದು. ಅದೊಂದು ಸಣ್ಣ ಪ್ರಮಾಣದ ಅಳತೆಯಾಗಿದೆ'.(1)

قَالَ لَنْ أُرْسِلَهُۥ مَعَكُمْ حَتَّىٰ تُؤْتُونِ مَوْثِقًا مِّنَ ٱللَّهِ لَتَأْتُنَّنِي بِهِۦٓ إِلَّآ أَن يُحَاطَ بِكُمْۖ فَلَمَّآ ءَاتَوْهُ مَوْثِقَهُمْ قَالَ ٱللَّهُ عَلَىٰ مَا نَقُولُ وَكِيلٌ ﴿٦٦﴾

**66.** ಅವರು (ತಂದೆ) ಹೇಳಿದರು: 'ನೀವು ಅವನನ್ನು ಖಂಡಿತವಾಗಿಯೂ ನನ್ನ ಬಳಿಗೆ ಕರೆತರುವಿರಿ ಎಂದು ಅಲ್ಲಾಹುವಿನ ಹೆಸರಲ್ಲಿ ನೀವು ಖಾತ್ರಿ ನೀಡುವವರೆಗೆ ಅವನನ್ನು ನಿಮ್ಮ ಜೊತೆಗೆ ನಾನೆಂದೂ ಕಳುಹಿಸಿ ಕೊಡಲಾರೆನು. ಆದರೆ ನೀವು (ಅಪಾಯಗಳಿಂದ) ಆವರಿಸಲ್ಪಡುವ

1 ಯಸೀರ್ ಎಂಬ ಪದಕ್ಕೆ ಸುಲಭ, ಕಡಿಮೆ ಎಂಬಿತ್ಯಾದಿ ಅರ್ಥಗಳಿವೆ. ಈಜಿಪ್ಟಿನ ಅರಸನ ಮಟ್ಟಿಗೆ ಒಂದು ಒಂಟೆ ಹೊರುವಷ್ಟು ತೂಕವು ಒಂದು ಚಿಕ್ಕ ಪ್ರಮಾಣವಾಗಿದೆ. ಯೂಸುಫ್(عَلَيْهِ السَّلَام)ರ ಸಹೋದರರ ಮಟ್ಟಿಗೆ ಅದು ಸುಲಭವಾಗಿ ಸಿಗುವಂತದ್ದೂ ಆಗಿದೆ.

ಹೊರತು'.[1] ಕೊನೆಗೆ ಅವರು ಅವರಿಗೆ ಖಾತ್ರಿ ನೀಡಿದಾಗ ಅವರು (ತಂದೆ) ಹೇಳಿದರು: 'ನಾವು ಹೇಳುತ್ತಿರುವುದರ ಮೇಲುಸ್ತುವಾರಿ ವಹಿಸುವವನು ಅಲ್ಲಾಹುವಾಗಿರುವನು'.

وَقَالَ يَٰبَنِيَّ لَا تَدۡخُلُواْ مِنۢ بَابٖ وَٰحِدٖ وَٱدۡخُلُواْ مِنۡ أَبۡوَٰبٖ مُّتَفَرِّقَةٖۖ وَمَآ أُغۡنِي عَنكُم مِّنَ ٱللَّهِ مِن شَيۡءٍۖ إِنِ ٱلۡحُكۡمُ إِلَّا لِلَّهِۖ عَلَيۡهِ تَوَكَّلۡتُۖ وَعَلَيۡهِ فَلۡيَتَوَكَّلِ ٱلۡمُتَوَكِّلُونَ ٦٧

67. ಅವರು (ತಂದೆ) ಹೇಳಿದರು: 'ಓ ನನ್ನ ಮಕ್ಕಳೇ! ನೀವು ಒಂದೇ ಬಾಗಿಲಿನ ಮೂಲಕ ಪ್ರವೇಶಿಸದೆ ಬೇರೆ ಬೇರೆ ಬಾಗಿಲುಗಳ ಮೂಲಕ ಪ್ರವೇಶಿಸಿರಿ.[2] ಅಲ್ಲಾಹು ವಿಧಿಸಿದ ಏನನ್ನೂ ನಿಮ್ಮಿಂದ ದೂರೀಕರಿಸಲು ನನ್ನಿಂದಾಗದು. ವಿಧಿ ನೀಡುವ ಅಧಿಕಾರವು ಅಲ್ಲಾಹುವಿಗೆ ಮಾತ್ರವಾಗಿದೆ. ನಾನು ಅವನ ಮೇಲೆ ಭರವಸೆ ಇಟ್ಟಿರುವೆನು. ಭರವಸೆಯಿಡುವವರು ಅವನ ಮೇಲೆಯೇ ಭರವಸೆಯಿಡಲಿ'.

وَلَمَّا دَخَلُواْ مِنۡ حَيۡثُ أَمَرَهُمۡ أَبُوهُم مَّا كَانَ يُغۡنِي عَنۡهُم مِّنَ ٱللَّهِ مِن شَيۡءٍ إِلَّا حَاجَةٗ فِي نَفۡسِ يَعۡقُوبَ قَضَىٰهَاۚ وَإِنَّهُۥ لَذُو عِلۡمٖ لِّمَا عَلَّمۡنَٰهُ وَلَٰكِنَّ أَكۡثَرَ ٱلنَّاسِ لَا يَعۡلَمُونَ ٦٨

68. ಅವರ ತಂದೆಯು ಅವರೊಂದಿಗೆ ಆದೇಶಿಸಿದ ಪ್ರಕಾರವೇ ಅವರು ಪ್ರವೇಶಿಸಿದಾಗ ಅದು ಅವರಿಂದ ಅಲ್ಲಾಹು ವಿಧಿಸಿದ ಏನನ್ನೂ ತಡೆಯಲು ಅವರಿಂದ ಸಾಧ್ಯವಾಗಲಿಲ್ಲ. ಯಅ್‌ಕೂಬ್ ತಮ್ಮ ಮನಸ್ಸಿನಲ್ಲಿದ್ದ ಆಸೆಯೊಂದನ್ನು ಈಡೇರಿಸಿದರು ಎಂಬುದರ ಹೊರತು.[3] ನಾವು ಅವರಿಗೆ ಕಲಿಸಿಕೊಟ್ಟಿರುವ ಕಾರಣ ಖಂಡಿತವಾಗಿಯೂ ಅವರು (ಯಅ್‌ಕೂಬ್‌ರು) ಅರಿವುಳ್ಳವರೇ ಆಗಿರುವರು. ಆದರೆ ಜನರಲ್ಲಿ ಹೆಚ್ಚಿನವರೂ ಅರಿತುಕೊಳ್ಳುವುದಿಲ್ಲ.

1 ಅವರು ಮಹಾ ಅಪಾಯಕ್ಕೊಳಗಾಗಿ ಸ್ವತಃ ತಮ್ಮನ್ನೇ ಕಾಪಾಡಿಕೊಳ್ಳುವುದಕ್ಕಾಗಲಿ ಅಥವಾ ಕಿರಿಯ ಸಹೋದರನನ್ನು ಕಾಪಾಡುವುದಕ್ಕಾಗಲಿ ಸಾಧ್ಯವಾಗದೆ ಹೋದರೆ ಯಾರನ್ನೂ ದೂಷಿಸಿ ಪ್ರಯೋಜನವಿರಲಾರದು.

2 ಈಜಿಪ್ಟನ್ನು ಪ್ರವೇಶಿಸುವಾಗ ಅಥವಾ ರಾಜಧಾನಿಯನ್ನು ಪ್ರವೇಶಿಸುವಾಗ.

3 ಮನುಷ್ಯನು ಎಷ್ಟೇ ಮುಂಜಾಗ್ರತೆ ವಹಿಸಿದರೂ ಅಲ್ಲಾಹು ವಿಧಿಸಿದ್ದೆಲ್ಲವೂ ಖಂಡಿತವಾಗಿಯೂ ಸಂಭವಿಸುತ್ತದೆ. ಅದರೂ ಅವನು ತನಗೆ ಸಾಧ್ಯವಿರುವ ಎಲ್ಲಾ ಮುಂಜಾಗ್ರತೆಗಳನ್ನು ವಹಿಸಬೇಕಾಗಿದೆ. ಪುತ್ರರನ್ನು ಈಜಿಪ್ಟ್‌ಗೆ ಕಳುಹಿಸುವ ಸಂದರ್ಭದಲ್ಲಿ ಯಅ್‌ಕೂಬ್ (عَلَيۡهِ السَّلَامُ)ರ ಮನಸ್ಸಿನಲ್ಲಿ ಯಾವುದೋ ಒಂದು ಭಯವಿತ್ತು. ಆದ್ದರಿಂದ ಅವರು ಪುತ್ರರೊಂದಿಗೆ ಬೇರೆ ಬೇರೆ ಬಾಗಿಲುಗಳ ಮೂಲಕ ಪ್ರವೇಶಿಸುವಂತೆ ಆಜ್ಞಾಪಿಸಿದರು. ಅವರ ಭಯ ಯಾವುದರ ಕುರಿತಾಗಿತ್ತೆಂದು ಕುರ್‌ಆನ್‌ನಿಂದಾಗಲಿ ಹದೀಸಿನಿಂದಾಗಲಿ ಸ್ಪಷ್ಟವಲ್ಲ.

69. ಅವರು ಯೂಸುಫ್‌ರ ಬಳಿಗೆ ಪ್ರವೇಶಿಸಿದಾಗ ಆತ(ಯೂಸುಫ್) ತಮ್ಮ ಸಹೋದರನನ್ನು[1] ತಮ್ಮೆಡೆಗೆ ನಿಕಟಗೊಳಿಸಿದರು. ತರುವಾಯ ಆತ ಹೇಳಿದರು: 'ಖಂಡಿತವಾಗಿಯೂ ನಾನು ನಿನ್ನ ಸಹೋದರನಾಗಿರುವೆನು. ಆದ್ದರಿಂದ ಅವರು (ಹಿರಿಯ ಸಹೋದರರು) ಮಾಡುತ್ತಿರುವುದರ ಕುರಿತು ನೀನು ದುಃಖಿಸದಿರು'.

وَلَمَّا دَخَلُواْ عَلَىٰ يُوسُفَ ءَاوَىٰٓ إِلَيۡهِ أَخَاهُۖ قَالَ إِنِّيٓ أَنَا۠ أَخُوكَ فَلَا تَبۡتَئِسۡ بِمَا كَانُواْ يَعۡمَلُونَ ٦٩

70. ತರುವಾಯ ಅವರ ಪಾಲಿನ ಸಾಮಗ್ರಿಗಳನ್ನು ಅವರಿಗೆ ಸಿದ್ಧಪಡಿಸಿಕೊಡುವಾಗ ಆತ(ಯೂಸುಫ್) ಪಾನಪಾತ್ರೆಯನ್ನು[2] ತಮ್ಮ ಸಹೋದರನ ಗಂಟುಮೂಟೆಯಲ್ಲಿಟ್ಟರು. ತರುವಾಯ ಉದ್ಘೋಷಕನು ಘೋಷಿಸಿದನು: 'ಓ ಯಾತ್ರಿಕ ತಂಡದವರೇ! ಖಂಡಿತವಾಗಿಯೂ ನೀವು ಕಳ್ಳರಾಗಿರುವಿರಿ'.

فَلَمَّا جَهَّزَهُم بِجَهَازِهِمۡ جَعَلَ ٱلسِّقَايَةَ فِي رَحۡلِ أَخِيهِ ثُمَّ أَذَّنَ مُؤَذِّنٌ أَيَّتُهَا ٱلۡعِيرُ إِنَّكُمۡ لَسَٰرِقُونَ ٧٠

71. ಅವರು (ಯಾತ್ರಿಕ ತಂಡದವರು) ಅವರೆಡೆಗೆ ತಿರುಗಿ ಕೇಳಿದರು: 'ನೀವು ಏನನ್ನು ಕಳಕೊಂಡಿರುವಿರಿ?'

قَالُواْ وَأَقۡبَلُواْ عَلَيۡهِم مَّاذَا تَفۡقِدُونَ ٧١

72. ಅವರು ಹೇಳಿದರು: 'ನಾವು ಅರಸನ ಅಳತೆ ಪಾತ್ರೆಯನ್ನು ಕಳೆದುಕೊಂಡಿರುವೆವು. ಅದನ್ನು ತಂದು ಕೊಡುವವನಿಗೆ ಒಂದು ಒಂಟೆಯು ಹೊರುವಷ್ಟು ತೂಕ(ದ ಧಾನ್ಯ)ವನ್ನು ನೀಡಲಾಗುವುದು. ಅದರ ಹೊಣೆಯನ್ನು ನಾನು ವಹಿಸಿಕೊಂಡಿರುವೆನು'.

قَالُواْ نَفۡقِدُ صُوَاعَ ٱلۡمَلِكِ وَلِمَن جَآءَ بِهِۦ حِمۡلُ بَعِيرٖ وَأَنَا۠ بِهِۦ زَعِيمٞ ٧٢

73. ಅವರು ಹೇಳಿದರು: 'ಅಲ್ಲಾಹುವಿನ ಮೇಲಾಣೆ! ನಾವು ಭೂಮಿಯಲ್ಲಿ ಕ್ಷೋಭೆಯನ್ನುಂಟುಮಾಡಲು ಬಂದವರಲ್ಲವೆಂದು ನೀವು ಅರಿತಿರುವಿರಿ. ನಾವು ಕಳ್ಳರೂ ಅಲ್ಲ'.

قَالُواْ تَٱللَّهِ لَقَدۡ عَلِمۡتُم مَّا جِئۡنَا لِنُفۡسِدَ فِي ٱلۡأَرۡضِ وَمَا كُنَّا سَٰرِقِينَ ٧٣

1 ಯೂಸುಫ್(عَلَيۡهِ ٱلسَّلَامُ)ರವರು ತಮ್ಮ ಸಹೋದರನಾದ ಬಿನ್ಯಾಮಿನ್‌ರನ್ನು ತಮ್ಮೆಡೆಗೆ ಬರಮಾಡಿಕೊಂಡು ತಾನು ಯಾರೆಂದು ತಿಳಿಸಿಕೊಟ್ಟರು.

2 ಧಾನ್ಯಗಳನ್ನು ಅಳೆಯಲು ಅವರು ಬಳಸುತ್ತಿದ್ದುದು ನಿರ್ದಿಷ್ಟ ಪ್ರಮಾಣವನ್ನು ಹೊಂದಿರುವ ಒಂದು ಪಾನಪಾತ್ರೆಯನ್ನಾಗಿತ್ತು.

74. ಅವರು ಕೇಳಿದರು: ‘ನೀವು ಸುಳ್ಳು ನುಡಿಯುವವರಾಗಿದ್ದರೆ ಅದಕ್ಕೆ ಯಾವ ಶಿಕ್ಷೆಯನ್ನು ನೀಡಬೇಕು?’

قَالُواْ فَمَا جَزَٰٓؤُهُۥٓ إِن كُنتُمۡ كَٰذِبِينَ ﴿٧٤﴾

75. ಅವರು ಹೇಳಿದರು: ‘ಅದಕ್ಕಿರುವ ಶಿಕ್ಷೆಯೇನೆಂದರೆ ಯಾರ ಗಂಟುಮೂಟೆಯಲ್ಲಿ ಅದು ಪತ್ತೆಯಾಗುವುದೋ ಅವನನ್ನು ಹಿಡಿದಿಡುವುದು ಅದಕ್ಕಿರುವ ಶಿಕ್ಷೆಯಾಗಿದೆ. ಅಕ್ರಮಿಗಳಿಗೆ ನಾವು ಹೀಗೆ ಶಿಕ್ಷೆಯನ್ನು ನೀಡುವೆವು’.

قَالُواْ جَزَٰٓؤُهُۥ مَن وُجِدَ فِي رَحۡلِهِۦ فَهُوَ جَزَٰٓؤُهُۥۚ كَذَٰلِكَ نَجۡزِي ٱلظَّٰلِمِينَ ﴿٧٥﴾

76. ತರುವಾಯ ಆತ(ಯೂಸುಫ್) ತಮ್ಮ ಸಹೋದರನ ಗಂಟುಮೂಟೆಗಳಿಗಿಂತ ಮುಂಚಿತವಾಗಿ ಅವರ ಗಂಟು ಮೂಟೆಗಳಿಂದಲೇ ತಪಾಸಣೆಯನ್ನು ಆರಂಭಿಸಿದರು. ತರುವಾಯ ತಮ್ಮ ಸಹೋದರನ ಮೂಟೆಯಿಂದ ಅದನ್ನು ಹೊರತೆಗೆದರು. ಹೀಗೆ ನಾವು ಯೂಸುಫ್‌ರಿಗಾಗಿ ತಂತ್ರ ಹೂಡಿದೆವು. ಅಲ್ಲಾಹು ಇಚ್ಛಿಸುವ ಹೊರತು ಅರಸನ ಕಾನೂನಿನ ಪ್ರಕಾರ ತಮ್ಮ ಸಹೋದರನನ್ನು ತಮ್ಮ ಬಳಿ ಹಿಡಿದಿಟ್ಟುಕೊಳ್ಳಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ನಾವಿಚ್ಛಿಸುವವರನ್ನು ನಾವು ಹಲವು ಪದವಿಗಳಿಗೇರಿಸುವೆವು. ಜ್ಞಾನವುಳ್ಳವರೆಲ್ಲರ ಮೇಲೊಬ್ಬ ಪರಮ ಜ್ಞಾನಿಯಿರುವನು.

فَبَدَأَ بِأَوۡعِيَتِهِمۡ قَبۡلَ وِعَآءِ أَخِيهِ ثُمَّ ٱسۡتَخۡرَجَهَا مِن وِعَآءِ أَخِيهِۚ كَذَٰلِكَ كِدۡنَا لِيُوسُفَۖ مَا كَانَ لِيَأۡخُذَ أَخَاهُ فِي دِينِ ٱلۡمَلِكِ إِلَّآ أَن يَشَآءَ ٱللَّهُۚ نَرۡفَعُ دَرَجَٰتٖ مَّن نَّشَآءُۗ وَفَوۡقَ كُلِّ ذِي عِلۡمٍ عَلِيمٞ ﴿٧٦﴾

77. ಅವರು(ಸಹೋದರರು) ಹೇಳಿದರು: ‘ಈತ ಕಳ್ಳತನ ಮಾಡಿದ್ದರೆ (ಅದರಲ್ಲಿ ಅಚ್ಚರಿಯಿಲ್ಲ), ಮುಂಚೆ ಈತನ ಸಹೋದರನೂ ಕಳ್ಳತನ ಮಾಡಿರುವನು’.(1) ಆದರೆ ಯೂಸುಫ್ ಅದನ್ನು ತಮ್ಮ ಮನಸ್ಸಿನಲ್ಲಿ ಗುಟ್ಟಾಗಿಟ್ಟರು.

۞ قَالُوٓاْ إِن يَسۡرِقۡ فَقَدۡ سَرَقَ أَخٞ لَّهُۥ مِن قَبۡلُۚ فَأَسَرَّهَا يُوسُفُ فِي نَفۡسِهِۦ وَلَمۡ يُبۡدِهَا لَهُمۡۚ قَالَ أَنتُمۡ شَرّٞ مَّكَانٗاۖ وَٱللَّهُ أَعۡلَمُ بِمَا تَصِفُونَ ﴿٧٧﴾

1 ಮುಂಚೆ ಯೂಸುಫ್(عَلَيۡهِ السَّلَامُ) ರವರು ಕಳವು ಮಾಡಿದ್ದರೆಂದು ಅವರು ಆರೋಪಿಸಿದರು. ಯೂಸುಫ್(عَلَيۡهِ السَّلَامُ) ರವರು ಕಳವುಗೈದರೆಂದು ಅವರು ಹೇಳುವ ಘಟನೆಯು ಯಾವುದೆಂಬುದರ ಕುರಿತು ವ್ಯಾಖ್ಯಾನಕಾರರಲ್ಲಿ ಏಕಾಭಿಪ್ರಾಯವಿಲ್ಲ. ಯಾರೂ ಕಾಣದಂತೆ ಒಂದು ವಿಗ್ರಹವನ್ನು ಧ್ವಂಸಗೊಳಿಸಿದ್ದರ ಕುರಿತಾಗಿದೆಯೆಂದು ಕೆಲವರು ಹೇಳಿದ್ದಾರೆ. ಮನೆಯವರಿಗೆ ತಿಳಿಯದೆ ಏನೋ ಒಂದು ವಸ್ತುವನ್ನು ದಾನವಾಗಿ ನೀಡಿದ್ದರ ಕುರಿತಾಗಿದೆಯೆಂದು ಇತರ ಕೆಲವರು ಹೇಳುತ್ತಾರೆ.

ಅವರು ಅದನ್ನು (ಅದರ ಪ್ರತಿಕ್ರಿಯೆಯನ್ನು) ಅವರಿಗೆ ಬಹಿರಂಗಪಡಿಸಲಿಲ್ಲ. ಅವರು (ಸ್ವಗತವಾಗಿ) ಹೇಳಿದರು: 'ನೀವು ನಿಕೃಷ್ಟ ನಿಲುವನ್ನು ಹೊಂದಿದವರಾಗಿರುವಿರಿ. ನೀವು ಹೆಣೆಯುತ್ತಿರುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿತಿರುವನು'.

78. ಅವರು ಹೇಳಿದರು: 'ಓ ಪ್ರಭು! ಈತನಿಗೆ ವಯೋವೃದ್ಧರಾದ ಒಬ್ಬ ತಂದೆಯಿರುವರು. ಆದ್ದರಿಂದ ಈತನ ಸ್ಥಾನದಲ್ಲಿ ನಮ್ಮಲ್ಲೊಬ್ಬನನ್ನು ಹಿಡಿದಿಟ್ಟುಕೊಳ್ಳಿರಿ. ಖಂಡಿತವಾಗಿಯೂ ತಮ್ಮನ್ನು ನಾವು ಸಾತ್ವಿಕರಲ್ಲಿ ಸೇರಿದವರಾಗಿ ಕಾಣುತ್ತಿರುವೆವು'.

قَالُواْ يَـٰٓأَيُّهَا ٱلۡعَزِيزُ إِنَّ لَهُۥٓ أَبٗا شَيۡخٗا
كَبِيرٗا فَخُذۡ أَحَدَنَا مَكَانَهُۥٓۖ إِنَّا نَرَىٰكَ مِنَ
ٱلۡمُحۡسِنِينَ ٧٨

79. ಆತ ಹೇಳಿದರು: 'ಅಲ್ಲಾಹು ಕಾಪಾಡಲಿ! ನಾವು ನಮ್ಮ ವಸ್ತುವನ್ನು ಯಾರ ಬಳಿ ಪತ್ತೆ ಮಾಡಿರುವೆವೋ ಅವನನ್ನಲ್ಲದೆ ಬೇರೊಬ್ಬನನ್ನು ನಾವು ಹಿಡಿದಿಟ್ಟು ಕೊಳ್ಳುವುದೇ? ಹಾಗೆ ಮಾಡಿದರೆ ಖಂಡಿತವಾಗಿಯೂ ನಾವು ಅಕ್ರಮಿಗಳಾಗುವೆವು'.

قَالَ مَعَاذَ ٱللَّهِ أَن نَّأۡخُذَ إِلَّا مَن وَجَدۡنَا
مَتَٰعَنَا عِندَهُۥٓ إِنَّآ إِذٗا لَّظَٰلِمُونَ ٧٩

80. ಕೊನೆಗೆ ಅವರು ಅವನ (ಸಹೋದರನ) ಕುರಿತು ನಿರಾಶರಾದಾಗ ಏಕಾಂತ ಸ್ಥಳಕ್ಕೆ ತೆರಳಿ ಸಮಾಲೋಚನೆ ಮಾಡಿದರು. ಅವರ ಪೈಕಿ ಹಿರಿಯವನು ಹೇಳಿದನು: 'ನಿಮ್ಮ ತಂದೆ ಅಲ್ಲಾಹುವಿನ ಹೆಸರಿನಲ್ಲಿ ನಿಮ್ಮಿಂದ ಖಾತ್ರಿ ಪಡೆದಿರುವರು ಮತ್ತು ಯೂಸುಫ್‌ರ ವಿಷಯದಲ್ಲಿ ಹಿಂದೆ ನೀವು ಲೋಪವೆಸಗಿರುವಿರಿ ಎಂದು ನೀವು ಅರಿತಿಲ್ಲವೇ? ಆದ್ದರಿಂದ ನನ್ನ ತಂದೆ ನನಗೆ ಅನುಮತಿ ನೀಡುವ ತನಕ ಅಥವಾ ಅಲ್ಲಾಹು ನನಗೆ ವಿಧಿತೀರ್ಪು ನೀಡುವ ತನಕ ನಾನೆಂದೂ ಈ ದೇಶವನ್ನು ಬಿಟ್ಟು ಕದಲಲಾರೆನು. ವಿಧಿ ನೀಡುವವರಲ್ಲಿ ಅವನು ಅತ್ಯುತ್ತಮನಾಗಿರುವನು.

فَلَمَّا ٱسۡتَيۡـَٔسُواْ مِنۡهُ خَلَصُواْ نَجِيّٗاۖ قَالَ
كَبِيرُهُمۡ أَلَمۡ تَعۡلَمُوٓاْ أَنَّ أَبَاكُمۡ قَدۡ أَخَذَ
عَلَيۡكُم مَّوۡثِقٗا مِّنَ ٱللَّهِ وَمِن قَبۡلُ مَا
فَرَّطتُمۡ فِي يُوسُفَۖ فَلَنۡ أَبۡرَحَ ٱلۡأَرۡضَ
حَتَّىٰ يَأۡذَنَ لِيٓ أَبِيٓ أَوۡ يَحۡكُمَ ٱللَّهُ لِيۖ وَهُوَ
خَيۡرُ ٱلۡحَٰكِمِينَ ٨٠

81. ನೀವು ನಿಮ್ಮ ತಂದೆಯ ಬಳಿಗೆ ಮರಳಿ ಹೋಗಿ ಹೇಳಿರಿ: ಓ ನಮ್ಮ ತಂದೆಯವರೇ! ಖಂಡಿತವಾಗಿಯೂ ನಿಮ್ಮ ಮಗನು ಕಳ್ಳತನ ಮಾಡಿರುವನು. ನಾವು ಅರಿತಿರುವ ಆಧಾರದಲ್ಲೇ ವಿನಾ ನಾವು ಸಾಕ್ಷ್ಯವಹಿಸಿಲ್ಲ.[1] ಅಗೋಚರವಾಗಿರುವುದನ್ನು ಅರಿಯಲು ನಮ್ಮಿಂದ ಸಾಧ್ಯವಿಲ್ಲ.[2]

ٱرْجِعُوٓا۟ إِلَىٰٓ أَبِيكُمْ فَقُولُوا۟ يَـٰٓأَبَانَآ إِنَّ ٱبْنَكَ سَرَقَ وَمَا شَهِدْنَآ إِلَّا بِمَا عَلِمْنَا وَمَا كُنَّا لِلْغَيْبِ حَـٰفِظِينَ ﴿٨١﴾

82. ನಾವು ಯಾವ ದೇಶಕ್ಕೆ ಹೋಗಿದ್ದೆವೋ ಅವರೊಂದಿಗೂ, ನಾವು ಜೊತೆಯಾಗಿ ಯಾತ್ರೆ ಮಾಡಿದ ಯಾತ್ರಿಕ ತಂಡದವರೊಂದಿಗೂ ವಿಚಾರಿಸಿರಿ. ಖಂಡಿತವಾಗಿಯೂ ನಾವು ಸತ್ಯವನ್ನೇ ನುಡಿಯುವವರಾಗಿರುವೆವು'.

وَسْـَٔلِ ٱلْقَرْيَةَ ٱلَّتِى كُنَّا فِيهَا وَٱلْعِيرَ ٱلَّتِىٓ أَقْبَلْنَا فِيهَا ۖ وَإِنَّا لَصَـٰدِقُونَ ﴿٨٢﴾

83. ಅವರು (ತಂದೆ) ಹೇಳಿದರು: 'ಅಲ್ಲ, ನಿಮ್ಮ ಮನಸ್ಸು ನಿಮಗೆ ಯಾವುದೋ ಒಂದು ವಿಷಯವನ್ನು ಆಕರ್ಷಣೀಯವಾಗಿ ತೋರಿಸಿದೆ. ಆದ್ದರಿಂದ ಉತ್ತಮವಾದ ಸಹನೆ ವಹಿಸುವುದೇ ಸರಿ. ಅವರೆಲ್ಲರನ್ನೂ ಅಲ್ಲಾಹು ನನ್ನ ಬಳಿಗೆ ತರಲೂಬಹುದು. ಖಂಡಿತವಾಗಿಯೂ ಅವನು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು'.

قَالَ بَلْ سَوَّلَتْ لَكُمْ أَنفُسُكُمْ أَمْرًا ۖ فَصَبْرٌ جَمِيلٌ ۖ عَسَى ٱللَّهُ أَن يَأْتِيَنِى بِهِمْ جَمِيعًا ۚ إِنَّهُۥ هُوَ ٱلْعَلِيمُ ٱلْحَكِيمُ ﴿٨٣﴾

84. ತರುವಾಯ ಅವರು (ತಂದೆ) ಅವರಿಂದ ವಿಮುಖರಾಗಿ ಹೇಳಿದರು: 'ಯೂಸುಫ್‌ನ ವಿಷಯವು ಎಷ್ಟು ದುಃಖಕರವಾಗಿದೆ!' ತಾವು ಅದುಮಿಟ್ಟುಕೊಂಡಿರುವ ದುಃಖದ ನಿಮಿತ್ತ ಅವರು ದೃಷ್ಟಿಯನ್ನು ಕಳೆದುಕೊಂಡಿದ್ದರು.

وَتَوَلَّىٰ عَنْهُمْ وَقَالَ يَـٰٓأَسَفَىٰ عَلَىٰ يُوسُفَ وَٱبْيَضَّتْ عَيْنَاهُ مِنَ ٱلْحُزْنِ فَهُوَ كَظِيمٌ ﴿٨٤﴾

85. ಅವರು ಹೇಳಿದರು: 'ಅಲ್ಲಾಹುವಿನ ಮೇಲಾಣೆ! ತಾವು ಸಂಪೂರ್ಣವಾಗಿ ಬಲಹೀನರಾಗುವವರೆಗೆ ಅಥವಾ

قَالُوا۟ تَٱللَّهِ تَفْتَؤُا۟ تَذْكُرُ يُوسُفَ حَتَّىٰ تَكُونَ حَرَضًا أَوْ تَكُونَ

1 ಸಹೋದರನ ಗಂಟುಮೂಟೆಯಿಂದ ಕಳವುಗೈದ ವಸ್ತುವನ್ನು' ಪತ್ತೆ ಮಾಡಿರುವುದಕ್ಕೆ ನಾವು ದೃಕ್ಸಾಕ್ಷಿಗಳಾಗಿದ್ದೆವು ಎಂದರ್ಥ.

2 ಅವನು ಕಳವು ಮಾಡುವನೆಂದು ಮೊದಲೇ ತಿಳಿದುಕೊಳ್ಳಲು ನಮಗೆ ಸಾಧ್ಯವಿಲ್ಲ ಎಂದರ್ಥ.

مِنَ ٱلْهَٰلِكِينَ ﴿٨٥﴾

ಮರಣಹೊಂದುವವರೆಗೆ ಯೂಸುಫ್‌ನನ್ನು ಸ್ಮರಿಸುತ್ತಲೇ ಇರುವಿರಿ!'

قَالَ إِنَّمَآ أَشْكُواْ بَثِّى وَحُزْنِىٓ إِلَى ٱللَّهِ وَأَعْلَمُ مِنَ ٱللَّهِ مَا لَا تَعْلَمُونَ ﴿٨٦﴾

**86.** ಅವರು (ತಂದೆ) ಹೇಳಿದರು: 'ನಾನು ನನ್ನ ದುಃಖ ಹಾಗೂ ಸಂಕಟವನ್ನು ಅಲ್ಲಾಹುವಿನೊಂದಿಗೆ ಮಾತ್ರ ತೋಡಿಕೊಳ್ಳುವೆನು. ನೀವು ಅರಿತಿರದ ವಿಷಯಗಳನ್ನು ಅಲ್ಲಾಹುವಿನಿಂದ ನಾನು ಅರಿಯುತ್ತಿರುವೆನು.[1]

يَٰبَنِىَّ ٱذْهَبُواْ فَتَحَسَّسُواْ مِن يُوسُفَ وَأَخِيهِ وَلَا تَاْيْـَٔسُواْ مِن رَّوْحِ ٱللَّهِ ۖ إِنَّهُۥ لَا يَاْيْـَٔسُ مِن رَّوْحِ ٱللَّهِ إِلَّا ٱلْقَوْمُ ٱلْكَٰفِرُونَ ﴿٨٧﴾

**87.** ನನ್ನ ಮಕ್ಕಳೇ! ನೀವು ಹೋಗಿ ಯೂಸುಫ್ ಮತ್ತು ಅವನ ಸಹೋದರನ ಬಗ್ಗೆ ವಿಚಾರಿಸಿರಿ. ಅಲ್ಲಾಹುವಿನ ಸಾಂತ್ವನದ ಕುರಿತು ನಿರಾಶರಾಗದಿರಿ. ಖಂಡಿತವಾಗಿಯೂ ಅವಿಶ್ವಾಸಿಗಳ ಹೊರತು ಇನ್ನಾರೂ ಅಲ್ಲಾಹುವಿನ ಸಾಂತ್ವನದ ಕುರಿತು ನಿರಾಶರಾಗಲಾರರು'.

فَلَمَّا دَخَلُواْ عَلَيْهِ قَالُواْ يَٰٓأَيُّهَا ٱلْعَزِيزُ مَسَّنَا وَأَهْلَنَا ٱلضُّرُّ وَجِئْنَا بِبِضَٰعَةٍ مُّزْجَىٰةٍ فَأَوْفِ لَنَا ٱلْكَيْلَ وَتَصَدَّقْ عَلَيْنَآ ۖ إِنَّ ٱللَّهَ يَجْزِى ٱلْمُتَصَدِّقِينَ ﴿٨٨﴾

**88.** ಆತ ಅವರು ಯೂಸುಫ್‌ರ ಬಳಿಗೆ ಪ್ರವೇಶಿಸಿ ಹೇಳಿದರು: 'ಓ ದೊರೆಯೇ! ನಮಗೂ ನಮ್ಮ ಕುಟುಂಬಕ್ಕೂ ವಿಪತ್ತು ತಟ್ಟಿದೆ. ನಾವು ತಂದಿರುವುದು ಕಳಪೆ ಸರಕುಗಳಾಗಿವೆ. ಆದ್ದರಿಂದ ತಾವು ನಮಗೆ ಪೂರ್ಣವಾಗಿ ಅಳೆದುಕೊಡಿರಿ ಮತ್ತು ಉದಾರವಾಗಿ ದಾನ ಮಾಡಿರಿ. ಖಂಡಿತವಾಗಿಯೂ ಅಲ್ಲಾಹು ಉದಾರ ದಾನಿಗಳಿಗೆ ಪ್ರತಿಫಲವನ್ನು ನೀಡುವನು'.

قَالَ هَلْ عَلِمْتُم مَّا فَعَلْتُم بِيُوسُفَ وَأَخِيهِ إِذْ أَنتُمْ جَٰهِلُونَ ﴿٨٩﴾

**89.** ಆತ ಹೇಳಿದರು: 'ನೀವು ಅಜ್ಞಾನಿಗಳಾಗಿದ್ದಾಗ ಯೂಸುಫ್ ಮತ್ತು ಅವನ ಸಹೋದರನೊಂದಿಗೆ ನೀವೇನು ಮಾಡಿರುವಿರಿ ಎಂಬುದನ್ನು ನೀವು ಅರಿತಿರುವಿರಾ?'

قَالُوٓاْ أَءِنَّكَ لَأَنتَ يُوسُفُ ۖ قَالَ أَنَا۠ يُوسُفُ

**90.** ಅವರು ಕೇಳಿದರು: 'ಯೂಸುಫ್ ತಾವೇ ಏನು?' ಆತ ಹೇಳಿದರು: 'ನಾನೇ ಯೂಸುಫ್

1 ಯೂಸುಫ್(عَلَيْهِ السَّلَامُ) ಚಿಕ್ಕ ವಯಸ್ಸಿನಲ್ಲಿ ಕಂಡ ಕನಸು ಮತ್ತು ತದನಂತರ ಸಂಭವಿಸಿದ ಕೆಲವೊಂದು ಘಟನೆಗಳು ಅಸಾಮಾನ್ಯವಾದ ಕೆಲವು ಸಂಗತಿಗಳೆಡೆಗೆ ಸೂಚನೆಯನ್ನು ನೀಡುತ್ತಿವೆಯೆಂದು ಅವರಿಗೆ ಭಾಸವಾಗಿತ್ತು. ಅಲ್ಲಾಹು ಅವನನ್ನು ಕೈಬಿಡಲಾರನು ಎಂಬ ಶುಭ ನಿರೀಕ್ಷೆಯೂ ಅವರಿಗಿತ್ತು. ಆದರೂ ಅಲ್ಲಾಹು ತಿಳಿಸಿಕೊಡದ ಅಗೋಚರ ವೃತ್ತಾಂತಗಳ ಕುರಿತು ನಿಖರವಾಗಿ ಅರಿತುಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಅವರು ಪ್ರವಾದಿಗಳಾಗಿದ್ದರೂ ಸರಿ.

وَهَٰذَآ أَخِيۖ قَدۡ مَنَّ ٱللَّهُ عَلَيۡنَآۖ إِنَّهُۥ مَن يَتَّقِ وَيَصۡبِرۡ فَإِنَّ ٱللَّهَ لَا يُضِيعُ أَجۡرَ ٱلۡمُحۡسِنِينَ ﴿٩٠﴾

ಮತ್ತು ಈತ ನನ್ನ ಸಹೋದರ. ಅಲ್ಲಾಹು ನಮ್ಮ ಮೇಲೆ ಕೃಪೆ ತೋರಿರುವನು. ಖಂಡಿತವಾಗಿಯೂ ಯಾರು ಭಯಭಕ್ತಿ ಪಾಲಿಸುವರೋ ಮತ್ತು ಸಹನೆ ವಹಿಸುವರೋ ಅವರ ಪ್ರತಿಫಲವನ್ನು ಅಲ್ಲಾಹು ಖಂಡಿತವಾಗಿಯೂ ವ್ಯರ್ಥಗೊಳಿಸಲಾರನು’.

قَالُواْ تَٱللَّهِ لَقَدۡ ءَاثَرَكَ ٱللَّهُ عَلَيۡنَا وَإِن كُنَّا لَخَٰطِـِٔينَ ﴿٩١﴾

**91.** ಅವರು ಹೇಳಿದರು: ‘ಅಲ್ಲಾಹುವಿನ ಮೇಲಾಣೆ! ಖಂಡಿತವಾಗಿಯೂ ಅಲ್ಲಾಹು ತಮಗೆ ನಮಗಿಂತಲೂ ಆದ್ಯತೆಯನ್ನು ನೀಡಿರುವನು. ಖಂಡಿತವಾಗಿಯೂ ನಾವು ಪಾಪಿಗಳಾಗಿರುವೆವು’.

قَالَ لَا تَثۡرِيبَ عَلَيۡكُمُ ٱلۡيَوۡمَۖ يَغۡفِرُ ٱللَّهُ لَكُمۡۖ وَهُوَ أَرۡحَمُ ٱلرَّٰحِمِينَ ﴿٩٢﴾

**92.** ಆತ ಹೇಳಿದರು: ‘ಇಂದು ನಿಮ್ಮ ಮೇಲೆ ಯಾವುದೇ ಆಕ್ಷೇಪವಿಲ್ಲ. ಅಲ್ಲಾಹು ನಿಮ್ಮನ್ನು ಕ್ಷಮಿಸಲಿ. ಅವನು ಕರುಣೆಯುಳ್ಳವರಲ್ಲೇ ಅತ್ಯಧಿಕ ಕರುಣೆಯುಳ್ಳವನಾಗಿರುವನು’.

ٱذۡهَبُواْ بِقَمِيصِي هَٰذَا فَأَلۡقُوهُ عَلَىٰ وَجۡهِ أَبِي يَأۡتِ بَصِيرٗا وَأۡتُونِي بِأَهۡلِكُمۡ أَجۡمَعِينَ ﴿٩٣﴾

**93.** ‘ನೀವು ನನ್ನ ಈ ಅಂಗಿಯನ್ನು ಕೊಂಡೊಯ್ದು ಅದನ್ನು ನನ್ನ ತಂದೆಯ ಮುಖದ ಮೇಲೆ ಹಾಕಿರಿ. ಆಗ ಅವರು ದೃಷ್ಟಿಯುಳ್ಳವರಾಗುವರು.[1] ನೀವು ನಿಮ್ಮ ಕುಟುಂಬದವರೆಲ್ಲರನ್ನೂ ನನ್ನ ಬಳಿಗೆ ಕರೆತನ್ನಿರಿ’.

وَلَمَّا فَصَلَتِ ٱلۡعِيرُ قَالَ أَبُوهُمۡ إِنِّي لَأَجِدُ رِيحَ يُوسُفَۖ لَوۡلَآ أَن تُفَنِّدُونِ ﴿٩٤﴾

**94.** ಯಾತ್ರಿಕ ತಂಡವು (ಈಜಿಪ್ಟಿನಿಂದ) ಹೊರಟಾಗ, ಅವರ ತಂದೆ (ತನ್ನ ಬಳಿಯಿರುವವರೊಂದಿಗೆ) ಹೇಳಿದರು: ‘ಖಂಡಿತವಾಗಿಯೂ ನನಗೆ ಯೂಸುಫ್‌ನ ಸುಗಂಧವು ಅನುಭವವಾಗುತ್ತಿದೆ.[2] ನೀವು ನನ್ನನ್ನು ಬುದ್ಧಿಭ್ರಮಣೆಗೊಂಡವನೆಂದು ಭಾವಿಸುವುದಿಲ್ಲವೆಂದಾದರೆ (ನಿಮಗಿದನ್ನು ನಂಬಬಹುದಾಗಿದೆ)’.

---

1 ಯೂಸುಫ್(عَلَيْهِ السَّلَامُ)ರನ್ನು ತೋಳ ತಿಂದಿದೆ ಎಂದು ಭಾವಿಸುವುದಕ್ಕಾಗಿ ಅವರು ಮುಂಚೆ ಅವರ ಅಂಗಿಗೆ ನಕಲಿ ರಕ್ತವನ್ನು ಹಚ್ಚಿ ತಂದೆಗೆ ತೋರಿಸಿದ್ದರು. ಅದು ಅವರನ್ನು ಸದಾ ದುಃಖಕ್ಕೀಡಾಗಿಸಿ ಅವರನ್ನು ದೃಷ್ಟಿಹೀನಗೊಳಿಸಿತ್ತು. ಈಗ ಮತ್ತೊಂದು ಅಂಗಿಯನ್ನು ಅದಕ್ಕೆ ವಿರುದ್ಧ ಪರಿಣಾಮವನ್ನುಂಟುಮಾಡಲು ಕಳುಹಿಸಲಾಗಿದೆ.

2 ಅದು ಅಲ್ಲಾಹು ಅವರಿಗೆ ಉಂಟು ಮಾಡಿದ ಒಂದು ವಿಶೇಷ ಅನುಭವವಾಗಿತ್ತು.

95. ಅವರು ಹೇಳಿದರು: 'ಅಲ್ಲಾಹುವಿನ ಮೇಲಾಣೆ! ಖಂಡಿತವಾಗಿಯೂ ತಾವು ತಮ್ಮ ಹಳೆಯ ಪ್ರಮಾದದಲ್ಲೇ ಇರುವಿರಿ'.

قَالُواْ تَٱللَّهِ إِنَّكَ لَفِى ضَلَٰلِكَ ٱلْقَدِيمِ ﴿٩٥﴾

96. ತರುವಾಯ ಶುಭವಾರ್ತೆ ನೀಡುವವನು ಬಂದು ಆ ಅಂಗಿಯನ್ನು ಆತನ ಮುಖದ ಮೇಲೆ ಹಾಕಿದನು. ಆಗ ಆತ ದೃಷ್ಟಿಯುಳ್ಳವರಾದರು. ಅವರು ಹೇಳಿದರು: 'ನೀವು ಅರಿಯದಿರುವ ಅನೇಕ ವಿಷಯಗಳನ್ನು ನಾನು ಅಲ್ಲಾಹುವಿನಿಂದ ಅರಿಯುತ್ತಿರುವೆನೆಂದು ನಾನು ನಿಮ್ಮೊಂದಿಗೆ ಹೇಳಿರಲಿಲ್ಲವೇ?'

فَلَمَّآ أَن جَآءَ ٱلْبَشِيرُ أَلْقَىٰهُ عَلَىٰ وَجْهِهِۦ فَٱرْتَدَّ بَصِيرًاۖ قَالَ أَلَمْ أَقُل لَّكُمْ إِنِّىٓ أَعْلَمُ مِنَ ٱللَّهِ مَا لَا تَعْلَمُونَ ﴿٩٦﴾

97. ಅವರು ಹೇಳಿದರು: 'ಓ ನಮ್ಮ ತಂದೆಯವರೇ! ನಮ್ಮ ಪಾಪಗಳನ್ನು ಕ್ಷಮಿಸುವುದಕ್ಕೋಸ್ಕರ ತಾವು (ಅಲ್ಲಾಹುವಿನೊಂದಿಗೆ) ನಮಗಾಗಿ ಪ್ರಾರ್ಥಿಸಿರಿ. ಖಂಡಿತವಾಗಿಯೂ ನಾವು ಪಾಪಿಗಳಾಗಿರುವೆವು'.

قَالُواْ يَٰٓأَبَانَا ٱسْتَغْفِرْ لَنَا ذُنُوبَنَآ إِنَّا كُنَّا خَٰطِـِٔينَ ﴿٩٧﴾

98. ಅವರು ಹೇಳಿದರು: 'ನಾನು ಸದ್ಯವೇ ನಿಮಗೋಸ್ಕರ ನನ್ನ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡುವೆನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು'.

قَالَ سَوْفَ أَسْتَغْفِرُ لَكُمْ رَبِّىٓۖ إِنَّهُۥ هُوَ ٱلْغَفُورُ ٱلرَّحِيمُ ﴿٩٨﴾

99. ತರುವಾಯ ಅವರು ಯೂಸುಫ್‌ರ ಬಳಿ ರಬ್‌ನೊಂದಿಗೆ ಯೂಸುಫ್ ತಮ್ಮ ಮಾತಾಪಿತರನ್ನು ತಮ್ಮೆಡೆಗೆ ನಿಕಟಗೊಳಿಸಿದರು. ಅವರು ಹೇಳಿದರು: 'ಅಲ್ಲಾಹು ಇಚ್ಛಿಸುವುದಾದರೆ ನೀವು ನಿರ್ಭೀತರಾಗಿ ಈಜಿಪ್ಟನ್ನು ಪ್ರವೇಶಿಸಿರಿ'.

فَلَمَّا دَخَلُواْ عَلَىٰ يُوسُفَ ءَاوَىٰٓ إِلَيْهِ أَبَوَيْهِ وَقَالَ ٱدْخُلُواْ مِصْرَ إِن شَآءَ ٱللَّهُ ءَامِنِينَ ﴿٩٩﴾

100. ಆತ ತಮ್ಮ ಮಾತಾಪಿತರನ್ನು ಸಿಂಹಾಸನದಲ್ಲಿ ಕೂರಿಸಿದರು. ಅವರು ಆತನ ಮುಂದೆ ಸಾಷ್ಟಾಂಗ ಮಾಡುತ್ತಾ ಬಿದ್ದರು.[1] ಆತ

وَرَفَعَ أَبَوَيْهِ عَلَى ٱلْعَرْشِ وَخَرُّواْ لَهُۥ سُجَّدًاۖ وَقَالَ يَٰٓأَبَتِ هَٰذَا تَأْوِيلُ رُءْيَٰىَ

1 ಈ ಸಾಷ್ಟಾಂಗವು ಆರಾಧನೆಯ ರೂಪದಲ್ಲಿರುವುದಲ್ಲ. ಪ್ರೀತ್ಯಾದರವನ್ನು ಸೂಚಿಸುವ ಒಂದು ಶಿಷ್ಟಾಚಾರವಾಗಿದೆ.

مِن قَبۡلُ قَدۡ جَعَلَهَا رَبِّي حَقّٗاۖ وَقَدۡ أَحۡسَنَ
بِيٓ إِذۡ أَخۡرَجَنِي مِنَ ٱلسِّجۡنِ وَجَآءَ بِكُم
مِّنَ ٱلۡبَدۡوِ مِنۢ بَعۡدِ أَن نَّزَغَ ٱلشَّيۡطَٰنُ
بَيۡنِي وَبَيۡنَ إِخۡوَتِيٓۚ إِنَّ رَبِّي لَطِيفٞ لِّمَا
يَشَآءُۚ إِنَّهُۥ هُوَ ٱلۡعَلِيمُ ٱلۡحَكِيمُ ﴿١٠٠﴾

ಹೇಳಿದರು: ‘ಓ ನನ್ನ ತಂದೆಯವರೇ! ಇದು ಮುಂಚೆ ನಾನು ಕಂಡ ಕನಸಿನ ವ್ಯಾಖ್ಯಾನವಾಗಿದೆ. ನನ್ನ ರಬ್ ಅದನ್ನು ವಾಸ್ತವಗೊಳಿಸಿರುವನು. ಅವನು ನನ್ನನ್ನು ಸೆರೆಮನೆಯಿಂದ ಹೊರತಂದಾಗಲೂ, ನನ್ನ ಮತ್ತು ನನ್ನ ಸಹೋದರರ ಮಧ್ಯೆ ಸೈತಾನನು ಕಲಹವನ್ನು ಪ್ರೇರೇಪಿಸಿದ ಬಳಿಕ ಮರುಭೂಮಿಯಿಂದ ಅವನು ನಿಮ್ಮೆಲ್ಲರನ್ನೂ (ನನ್ನ ಬಳಿಗೆ) ಕರೆತಂದಾಗಲೂ, ಅವನು ನನ್ನೊಂದಿಗೆ ಒಳಿತನ್ನೇ ಬಗೆದಿರುವನು. ಖಂಡಿತವಾಗಿಯೂ ನನ್ನ ರಬ್ ತಾನಿಚ್ಛಿಸುವವುಗಳನ್ನು ಸೂಕ್ಷ್ಮವಾಗಿ ನಿಯಂತ್ರಿಸುವವನಾಗಿರುವನು. ಖಂಡಿತವಾಗಿಯೂ ಅವನು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು’.

۞ رَبِّ قَدۡ ءَاتَيۡتَنِي مِنَ ٱلۡمُلۡكِ وَعَلَّمۡتَنِي
مِن تَأۡوِيلِ ٱلۡأَحَادِيثِۚ فَاطِرَ ٱلسَّمَٰوَٰتِ
وَٱلۡأَرۡضِ أَنتَ وَلِيِّۦ فِي ٱلدُّنۡيَا وَٱلۡأٓخِرَةِۖ
تَوَفَّنِي مُسۡلِمٗا وَأَلۡحِقۡنِي بِٱلصَّٰلِحِينَ ﴿١٠١﴾

**101.** (ಯೂಸುಫ್ ಪ್ರಾರ್ಥಿಸಿದರು:) ‘ಓ ನನ್ನ ರಬ್! ನೀನು ನನಗೆ ಆಡಳಿತದಿಂದ (ಒಂದಂಶವನ್ನು) ನೀಡಿರುವೆ ಮತ್ತು ಸ್ವಪ್ನ ವ್ಯಾಖ್ಯಾನದಿಂದ (ಕೆಲವನ್ನು) ಕಲಿಸಿರುವೆ. ಓ ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನೇ! ಇಹಲೋಕದಲ್ಲೂ ಪರಲೋಕದಲ್ಲೂ ನನ್ನ ಸಂರಕ್ಷಕನು ನೀನೇ ಆಗಿರುವೆ. ನನ್ನನ್ನು ಮುಸ್ಲಿಮನನ್ನಾಗಿ ಮೃತಪಡಿಸು ಮತ್ತು ನನ್ನನ್ನು ಸಜ್ಜನರಲ್ಲಿ ಸೇರಿಸು’.

ذَٰلِكَ مِنۡ أَنۢبَآءِ ٱلۡغَيۡبِ نُوحِيهِ إِلَيۡكَۖ
وَمَا كُنتَ لَدَيۡهِمۡ إِذۡ أَجۡمَعُوٓاْ أَمۡرَهُمۡ وَهُمۡ
يَمۡكُرُونَ ﴿١٠٢﴾

**102.** (ಓ ಪ್ರವಾದಿಯವರೇ!) ಇದು ಅಗೋಚರ ವೃತ್ತಾಂತಗಳಲ್ಲಿ ಸೇರಿದ್ದಾಗಿದೆ. ಇದನ್ನು ನಾವು ದಿವ್ಯಸಂದೇಶವಾಗಿ ತಮಗೆ ನೀಡುತ್ತಿರುವೆವು. (ಯೂಸುಫ್‌ರ ವಿರುದ್ಧ) ಸಂಚು ರೂಪಿಸುತ್ತಾ ಅವರು ತಮ್ಮ ಕಾರ್ಯವಿಧಾನವನ್ನು ಸಮಾಲೋಚನೆ ಮಾಡಿ ನಿರ್ಧರಿಸಿದಾಗ ತಾವು ಅವರ ಬಳಿಯಿರಲಿಲ್ಲ.

**103.** ತಾವು ಎಷ್ಟು ಹಂಬಲಿಸಿದರೂ ಜನರಲ್ಲಿ ಹೆಚ್ಚಿನವರೂ ವಿಶ್ವಾಸವಿಡಲಾರರು.(1)

وَمَآ أَكۡثَرُ ٱلنَّاسِ وَلَوۡ حَرَصۡتَ
بِمُؤۡمِنِينَ ١٠٣

**104.** ತಾವು ಅವರೊಂದಿಗೆ ಇದಕ್ಕಾಗಿ ಯಾವ ಪ್ರತಿಫಲವನ್ನೂ ಬೇಡುತ್ತಿಲ್ಲ. ಇದು ಸರ್ವಲೋಕದವರಿಗಿರುವ ಒಂದು ಉಪದೇಶ ಮಾತ್ರವಾಗಿದೆ.

وَمَا تَسۡـَٔلُهُمۡ عَلَيۡهِ مِنۡ أَجۡرٍۚ إِنۡ هُوَ إِلَّا
ذِكۡرٞ لِّلۡعَٰلَمِينَ ١٠٤

**105.** ಆಕಾಶಗಳಲ್ಲೂ, ಭೂಮಿಯಲ್ಲೂ ಎಷ್ಟೊಂದು ದೃಷ್ಟಾಂತಗಳಿವೆ! ಅವುಗಳನ್ನು ಕಡೆಗಣಿಸುತ್ತಾ ಅವರು ಅವುಗಳ ಸಮೀಪದಿಂದಲೇ ಹಾದುಹೋಗುತ್ತಿರುವರು.

وَكَأَيِّن مِّنۡ ءَايَةٖ فِي ٱلسَّمَٰوَٰتِ وَٱلۡأَرۡضِ
يَمُرُّونَ عَلَيۡهَا وَهُمۡ عَنۡهَا مُعۡرِضُونَ ١٠٥

**106.** ಅವರಲ್ಲಿ ಹೆಚ್ಚಿನವರೂ ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವವರಾಗಿಯೇ ವಿನಾ ಅವನಲ್ಲಿ ವಿಶ್ವಾಸವಿಡಲಾರರು.(2)

وَمَا يُؤۡمِنُ أَكۡثَرُهُم بِٱللَّهِ إِلَّا وَهُم
مُّشۡرِكُونَ ١٠٦

**107.** ಅವರನ್ನು ಸುತ್ತುವರಿಯುವ ವಿಧದಲ್ಲಿ ಅಲ್ಲಾಹುವಿನ ಶಿಕ್ಷೆಯು ಅವರೆಡೆಗೆ ಬರುವುದರ ಕುರಿತು ಅಥವಾ ಅವರು ಅಲಕ್ಷ್ಯರಾಗಿರುವಾಗ ಹಠಾತ್ತನೆ ಅಂತ್ಯದಿನವು ಅವರೆಡೆಗೆ ಬರುವುದರ ಕುರಿತು ಅವರು ನಿರ್ಭೀತರಾಗಿರುವರೇ?

أَفَأَمِنُوٓاْ أَن تَأۡتِيَهُمۡ غَٰشِيَةٞ مِّنۡ عَذَابِ
ٱللَّهِ أَوۡ تَأۡتِيَهُمُ ٱلسَّاعَةُ بَغۡتَةٗ وَهُمۡ لَا
يَشۡعُرُونَ ١٠٧

**108.** (ಓ ಪ್ರವಾದಿಯವರೇ!) ಹೇಳಿರಿ: 'ಇದೇ ನನ್ನ ಮಾರ್ಗ. ನಾನು ದೃಢವಾದ ಪರಿಜ್ಞಾನದೊಂದಿಗೆ ಅಲ್ಲಾಹುವಿನೆಡೆಗೆ ಆಹ್ವಾನಿಸುತ್ತಿರುವೆನು; ನಾನು ಮತ್ತು ನನ್ನನ್ನು

قُلۡ هَٰذِهِۦ سَبِيلِيٓ أَدۡعُوٓاْ إِلَى ٱللَّهِۚ عَلَىٰ
بَصِيرَةٍ أَنَا۠ وَمَنِ ٱتَّبَعَنِيۖ وَسُبۡحَٰنَ ٱللَّهِ
وَمَآ أَنَا۠ مِنَ ٱلۡمُشۡرِكِينَ ١٠٨

---

1 ಎಷ್ಟು ಪ್ರಬಲ ಪುರಾವೆಗಳು ದೊರೆತರೂ ಅಲ್ಲಾಹುವಿನ ಸಂದೇಶವನ್ನು ತಿರಸ್ಕರಿಸುವುದನ್ನೇ ರೂಢಿ ಮಾಡಿಕೊಂಡ ಅನೇಕ ಜನರಿದ್ದಾರೆ. ಸೈತಾನನ ಪ್ರಚೋದನೆಯನ್ನು ಮೆಟ್ಟಿನಿಲ್ಲುವಂತಹ ಮನೋದಾರ್ಢ್ಯತೆ ಇಲ್ಲದಿರುವುದೇ ಇದಕ್ಕೆ ಕಾರಣವಾಗಿದೆ.

2 ಸರ್ವಲೋಕಗಳ ರಬ್‌ನಲ್ಲಿ ವಿಶ್ವಾಸವಿಡುವ ಮತ್ತು ಅವನ ಏಕತ್ವವನ್ನು ಅಂಗೀಕರಿಸುವವರ ಪೈಕಿ ಹೆಚ್ಚಿನವರೂ ಶಿರ್ಕ್ (ದೇವಸಹಭಾಗಿತ್ವ) ಮಾಡುತ್ತಾರೆ. ಅರ್ಥಾತ್ ಅವನ ಹೊರತಾದವರನ್ನು ಆರಾಧಿಸುವವರೋ, ಪ್ರಾರ್ಥಿಸುವವರೋ ಆಗಿದ್ದಾರೆ. ಇದೊಂದು ಅಕ್ಷಮ್ಯ ಅಪರಾಧವಾಗಿದೆ. ಅಲ್ಲಾಹು ಏಕೈಕನೆಂದು ವಿಶ್ವಾಸವಿಟ್ಟ ಮಾತ್ರಕ್ಕೆ ಓರ್ವನು ಸತ್ಯವಿಶ್ವಾಸಿಯಾಗುವುದಿಲ್ಲ. ಇಬಾದತ್‌ನ (ಆರಾಧನೆಯ) ಯಾವುದೇ ಒಂದು ಅಂಶವನ್ನು ಕೂಡ ಅಲ್ಲಾಹೇತರರಿಗೆ ಅರ್ಪಿಸದಿರುವುದು ಸತ್ಯವಿಶ್ವಾಸದ ಅನಿವಾರ್ಯ ಘಟಕವಾಗಿದೆ ಎಂಬುದನ್ನು ಈ ಸೂಕ್ತಿಯು ಸಂಶಯಕ್ಕೆಡೆಯಿಲ್ಲದಂತೆ ಸ್ಪಷ್ಟಪಡಿಸುತ್ತದೆ.

ಅನುಸರಿಸಿದವರು. ಅಲ್ಲಾಹು ಪರಮಪಾವನನು. ನಾನು (ಅವನೊಂದಿಗೆ) ಸಹಭಾಗಿತ್ವ ಮಾಡುವವರಲ್ಲಿ ಸೇರಿದವನಲ್ಲ'.

109. ವಿವಿಧ ದೇಶದವರ ಪೈಕಿ ತಮಗಿಂತ ಮುಂಚೆ ನಾವು ಪುರುಷರನ್ನೇ ಹೊರತು ಇನ್ನಾರನ್ನೂ ದಿವ್ಯಸಂದೇಶ ನೀಡಿ ಸಂದೇಶವಾಹಕರನ್ನಾಗಿ ಕಳುಹಿಸಿಲ್ಲ.[1] ಅವರು (ಸತ್ಯನಿಷೇಧಿಗಳು) ಭೂಮಿಯಲ್ಲಿ ಸಂಚರಿಸಿ ತಮ್ಮ ಪೂರ್ವಿಕರ ಪರ್ಯಾವಸಾನವು ಹೇಗಿತ್ತು ಎಂಬುದನ್ನು ನೋಡಲಿಲ್ಲವೇ? ಭಯಭಕ್ತಿ ಪಾಲಿಸುವವರ ಪಾಲಿಗೆ ಪರಲೋಕವೇ ಅತ್ಯುತ್ತಮವಾಗಿದೆ. ಹೀಗಿದ್ದೂ ನೀವು ಚಿಂತಿಸುವುದಿಲ್ಲವೇ?

وَمَآ أَرۡسَلۡنَا مِن قَبۡلِكَ إِلَّا رِجَالٗا نُّوحِيٓ إِلَيۡهِم مِّنۡ أَهۡلِ ٱلۡقُرَىٰٓۗ أَفَلَمۡ يَسِيرُواْ فِي ٱلۡأَرۡضِ فَيَنظُرُواْ كَيۡفَ كَانَ عَٰقِبَةُ ٱلَّذِينَ مِن قَبۡلِهِمۡۗ وَلَدَارُ ٱلۡأٓخِرَةِ خَيۡرٞ لِّلَّذِينَ ٱتَّقَوۡاْۚ أَفَلَا تَعۡقِلُونَ ١٠٩

110. ಕೊನೆಗೆ ಸಂದೇಶವಾಹಕರು ನಿರಾಶರಾದಾಗ ಮತ್ತು ಅವರು ತಮ್ಮೊಂದಿಗೆ ಹೇಳಿದ್ದು ಸುಳ್ಳೆಂದು ಜನರಿಗೆ ಖಾತ್ರಿಯಾದಾಗ ನಮ್ಮ ಸಹಾಯವು ಅವರೆಡೆಗೆ (ಸಂದೇಶ ವಾಹಕರೆಡೆಗೆ) ಬಂದಿತು. ತರುವಾಯ ನಾವಿಚ್ಛಿಸಿದವರಿಗೆ ರಕ್ಷೆ ನೀಡಲಾಯಿತು. ಅಪರಾಧಿಗಳಾದ ಜನರಿಂದ ನಮ್ಮ ಶಿಕ್ಷೆಯನ್ನು ತಡೆ ಹಿಡಿಯಲಾಗದು.

حَتَّىٰٓ إِذَا ٱسۡتَيۡـَٔسَ ٱلرُّسُلُ وَظَنُّوٓاْ أَنَّهُمۡ قَدۡ كُذِبُواْ جَآءَهُمۡ نَصۡرُنَا فَنُجِّيَ مَن نَّشَآءُۖ وَلَا يُرَدُّ بَأۡسُنَا عَنِ ٱلۡقَوۡمِ ٱلۡمُجۡرِمِينَ ١١٠

111. ಅವರ ಚರಿತ್ರೆಗಳಲ್ಲಿ ಬುದ್ಧಿವಂತರಿಗೆ ಖಂಡಿತವಾಗಿಯೂ ನೀತಿಪಾಠವಿದೆ. ಅದು ಹೆಣೆಯಲಾಗಿರುವ ವೃತ್ತಾಂತವಲ್ಲ. ಆದರೆ ಅದು ಅದಕ್ಕಿಂತ ಮೊದಲಿನ (ಗ್ರಂಥಗಳ) ದೃಢೀಕರಣವೂ, ಸಕಲ ವಿಷಯಗಳ ಕುರಿತಾದ ಒಂದು ವಿಶದೀಕರಣವೂ, ವಿಶ್ವಾಸವಿಡುವ ಜನರಿಗೆ ಮಾರ್ಗದರ್ಶಿಯೂ ಕಾರುಣ್ಯವೂ ಆಗಿದೆ.

لَقَدۡ كَانَ فِي قَصَصِهِمۡ عِبۡرَةٞ لِّأُوْلِي ٱلۡأَلۡبَٰبِۗ مَا كَانَ حَدِيثٗا يُفۡتَرَىٰ وَلَٰكِن تَصۡدِيقَ ٱلَّذِي بَيۡنَ يَدَيۡهِ وَتَفۡصِيلَ كُلِّ شَيۡءٖ وَهُدٗى وَرَحۡمَةٗ لِّقَوۡمٖ يُؤۡمِنُونَ ١١١

1 ಪ್ರತಿಯೊಂದು ಪ್ರದೇಶಕ್ಕೂ ಅವರಿಂದಲೇ ವಿಶೇಷವಾಗಿ ಆರಿಸಲ್ಪಟ್ಟ ಪುರುಷರನ್ನು ಮಾತ್ರ ಅಲ್ಲಾಹು ಸಂದೇಶವಾಹಕರನ್ನಾಗಿ ಕಳುಹಿಸಿರುವನು.

## ಅರ್ರಅ್‌ದ್ (ಸಿಡಿಲು)[1]

## سُورَةُ الرَّعۡدِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 43

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್ ಲಾಮ್ ಮೀಮ್ ರಾ. ಇವು ಗ್ರಂಥದ ಸೂಕ್ತಿಗಳಾಗಿವೆ. ತಮ್ಮ ರಬ್‌ನ ವತಿಯಿಂದ ತಮ್ಮೆಡೆಗೆ ಏನನ್ನು ಅವತೀರ್ಣಗೊಳಿಸಲಾಗಿದೆಯೋ ಅದು ಸತ್ಯವಾಗಿದೆ. ಆದರೆ ಜನರಲ್ಲಿ ಹೆಚ್ಚಿನವರೂ ವಿಶ್ವಾಸವಿಡಲಾರರು.

الٓمٓرۚ تِلۡكَ ءَايَٰتُ ٱلۡكِتَٰبِۗ وَٱلَّذِيٓ أُنزِلَ إِلَيۡكَ مِن رَّبِّكَ ٱلۡحَقُّ وَلَٰكِنَّ أَكۡثَرَ ٱلنَّاسِ لَا يُؤۡمِنُونَ ١

2. ನೀವು ಕಾಣುವಂತಹ ಯಾವುದೇ ಸ್ಥಂಭಗಳಿಲ್ಲದೆ ಆಕಾಶವನ್ನು ಎತ್ತಿ ನಿಲ್ಲಿಸಿದವನು ಅಲ್ಲಾಹುವಾಗಿರುವನು.[2] ತರುವಾಯ ಅವನು ಸಿಂಹಾಸನಾರೂಢನಾದನು. ಸೂರ್ಯನನ್ನೂ, ಚಂದ್ರನನ್ನೂ ಅವನು ಅಧೀನಗೊಳಿಸಿರುವನು. ಎಲ್ಲವೂ ಒಂದು ನಿಶ್ಚಿತ ಅವಧಿಯ ತನಕ ಚಲಿಸುತ್ತಿರುವುವು. ಅವನು ಎಲ್ಲ ಸಂಗತಿಗಳನ್ನೂ ನಿಯಂತ್ರಿಸುತ್ತಿರುವನು. ನೀವು ನಿಮ್ಮ ರಬ್‌ನ ಭೇಟಿಯ ಬಗ್ಗೆ ದೃಢವಿಶ್ವಾಸ ಹೊಂದುವ ಸಲುವಾಗಿ ಅವನು ದೃಷ್ಟಾಂತಗಳನ್ನು ವಿವರಿಸುತ್ತಿರುವನು.

ٱللَّهُ ٱلَّذِي رَفَعَ ٱلسَّمَٰوَٰتِ بِغَيۡرِ عَمَدٖ تَرَوۡنَهَاۖ ثُمَّ ٱسۡتَوَىٰ عَلَى ٱلۡعَرۡشِۖ وَسَخَّرَ ٱلشَّمۡسَ وَٱلۡقَمَرَۖ كُلّٞ يَجۡرِي لِأَجَلٖ مُّسَمّٗىۚ يُدَبِّرُ ٱلۡأَمۡرَ يُفَصِّلُ ٱلۡأٓيَٰتِ لَعَلَّكُم بِلِقَآءِ رَبِّكُمۡ تُوقِنُونَ ٢

3. ಭೂಮಿಯನ್ನು ವಿಶಾಲಗೊಳಿಸಿದವನು ಅವನಾಗಿರುವನು. ಅವನು ಅದರಲ್ಲಿ ನಾಟಿ ನಿಲ್ಲುವ ಪರ್ವತಗಳನ್ನು ಮತ್ತು ನದಿಗಳನ್ನು

وَهُوَ ٱلَّذِي مَدَّ ٱلۡأَرۡضَ وَجَعَلَ فِيهَا رَوَٰسِيَ وَأَنۡهَٰرٗاۖ وَمِن كُلِّ ٱلثَّمَرَٰتِ جَعَلَ

1 13ನೇ ವಚನದಲ್ಲಿ ಸಿಡಿಲಿನ ಕುರಿತು ಪ್ರಸ್ತಾಪವಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಪರಸ್ಪರ ಡಿಕ್ಕಿ ಹೊಡೆದು ನುಚ್ಚುನೂರಾಗದ ರೀತಿಯಲ್ಲಿ ಅಸಂಖ್ಯಾತ ಆಕಾಶಕಾಯಗಳನ್ನು ಶೂನ್ಯಾಕಾಶದಲ್ಲಿ ಊರೆಕೊಟ್ಟು ನಿಲ್ಲಿಸುವ ಶಕ್ತಿನಿಯಮವು ಅತ್ಯಂತ ಸಂಕೀರ್ಣವಾಗಿದೆ. ನಿಶ್ಚಿತ ಕಕ್ಷೆಗಳನ್ನು ಮತ್ತು ನಿಗದಿತ ವೇಗವನ್ನು ಹೊಂದಿರುವ ಆಕಾಶಕಾಯಗಳ ಸಂವಿಧಾನವು ಸರ್ವಜ್ಞನೂ, ಸರ್ವಶಕ್ತನೂ ಆದ ಸೃಷ್ಟಿಕರ್ತನ ಅಸ್ತಿತ್ವವನ್ನು ಸಾಬೀತುಪಡಿಸುತ್ತದೆ.

فِيهَا زَوْجَيْنِ ٱثْنَيْنِ ۖ يُغْشِى ٱلَّيْلَ ٱلنَّهَارَ ۚ
إِنَّ فِى ذَٰلِكَ لَءَايَـٰتٍ لِّقَوْمٍ يَتَفَكَّرُونَ ﴿٣﴾

ಉಂಟುಮಾಡಿದನು. ಎಲ್ಲ ವಿಧದ ಫಲವರ್ಗಗಳಲ್ಲೂ ಅವನು ಎರಡು ಜೋಡಿಗಳನ್ನು(1) ಮಾಡಿರುವನು. ಅವನು ರಾತ್ರಿಯಿಂದ ಹಗಲನ್ನು ಹೊದಿಸುವನು. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಅದರಲ್ಲಿ ದೃಷ್ಟಾಂತಗಳಿವೆ.

وَفِى ٱلْأَرْضِ قِطَعٌ مُّتَجَـٰوِرَٰتٌ وَجَنَّـٰتٌ
مِّنْ أَعْنَـٰبٍ وَزَرْعٌ وَنَخِيلٌ صِنْوَانٌ وَغَيْرُ
صِنْوَانٍ يُسْقَىٰ بِمَآءٍ وَٰحِدٍ وَنُفَضِّلُ
بَعْضَهَا عَلَىٰ بَعْضٍ فِى ٱلْأُكُلِ ۚ إِنَّ فِى
ذَٰلِكَ لَءَايَـٰتٍ لِّقَوْمٍ يَعْقِلُونَ ﴿٤﴾

4. ಭೂಮಿಯಲ್ಲಿ ಒಂದಕ್ಕೊಂದು ಹತ್ತಿರವಾಗಿರುವಂತಹ ಖಂಡಗಳಿವೆ.(2) ದ್ರಾಕ್ಷಿ ತೋಟಗಳೂ, ಕೃಷಿಗಳೂ ಇವೆ. ಒಂದೇ ಕಾಂಡದಿಂದ ಹಲವು ಗೆಲ್ಲುಗಳಾಗಿ ಬೆಳೆಯುವ ಮತ್ತು ಬೇರೆ ಬೇರೆ ಕಾಂಡಗಳಿಂದ ಬೆಳೆಯುವ ಖರ್ಜೂರದ ಮರಗಳೂ ಇವೆ. ಇವುಗಳಿಗೆಲ್ಲ ಒಂದೇ ಜಲದಿಂದ ನೀರುಣಿಸಲಾಗುತ್ತದೆ. ಫಲಗಳ ವಿಷಯದಲ್ಲಿ ನಾವು ಅವುಗಳ ಪೈಕಿ ಕೆಲವನ್ನು ಇತರವುಗಳಿಗಿಂತ ಶ್ರೇಷ್ಠಗೊಳಿಸುವೆವು. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಅದರಲ್ಲಿ ದೃಷ್ಟಾಂತಗಳಿವೆ.

۞ وَإِن تَعْجَبْ فَعَجَبٌ قَوْلُهُمْ أَءِذَا كُنَّا
تُرَٰبًا أَءِنَّا لَفِى خَلْقٍ جَدِيدٍ ۗ أُو۟لَـٰٓئِكَ ٱلَّذِينَ
كَفَرُوا۟ بِرَبِّهِمْ ۖ وَأُو۟لَـٰٓئِكَ ٱلْأَغْلَـٰلُ فِىٓ
أَعْنَاقِهِمْ ۖ وَأُو۟لَـٰٓئِكَ أَصْحَـٰبُ ٱلنَّارِ ۖ هُمْ
فِيهَا خَـٰلِدُونَ ﴿٥﴾

5. ತಾವು ಅಚ್ಚರಿಪಡುವುದಾದರೆ 'ನಾವು ಮಣ್ಣಾಗಿ ಹೋದ ಬಳಿಕ ನಮ್ಮನ್ನು ಪುನಃ ಹೊಸದಾಗಿ ಸೃಷ್ಟಿಸಲಾಗುವುದೇ?' ಎಂಬ ಅವರ ಮಾತು ಅತ್ಯಂತ ಅಚ್ಚರಿದಾಯಕವಾಗಿದೆ. ಅಂತಹವರು ತಮ್ಮ ರಬ್‌ನಲ್ಲಿ ಅವಿಶ್ವಾಸವಿಟ್ಟವರಾಗಿರುವರು. ಕೊರಳುಗಳಲ್ಲಿ ಸಂಕೋಲೆಗಳಿರುವವರು ಅವರಾಗಿರುವರು. ಅವರು ನರಕವಾಸಿಗಳಾಗಿರುವರು. ಅದರಲ್ಲಿ ಅವರು ಶಾಶ್ವತವಾಗಿ ವಾಸಿಸುವರು.

1 ಝೌಜೈನ್ ಎಂಬ ಪದಕ್ಕೆ ಜೋಡಿಗಳು, ವಿಧಗಳು, ಸಂಗಾತಿಗಳು ಇತ್ಯಾದಿ ಅರ್ಥಗಳಿವೆ.

2 ಭೂಮಿಯಲ್ಲಿ ಪರಸ್ಪರ ಹತ್ತಿರವಿರುವ ಅನೇಕ ಖಂಡಗಳಿವೆ. ಈ ಖಂಡಗಳ ಮಣ್ಣು ವಿಭಿನ್ನವಾಗಿದ್ದು ಒಂದೊಂದು ರೀತಿಯ ಮಣ್ಣು ಒಂದೊಂದು ರೀತಿಯ ಬೆಳೆಗೆ ಸೂಕ್ತವಾಗಿರುತ್ತದೆ. ಒಂದಕ್ಕೊಂದು ಹತ್ತಿರವಿರುವ ಅನೇಕ ಪ್ಲೇಟ್‌ಗಳು ಅಥವಾ ಖಂಡಗಳು ಜೋಡಿಸಲ್ಪಟ್ಟು ಭೂಮುಖವು ಉಂಟಾಗಿದೆಯೆಂದು ಆಧುನಿಕ ವಿಜ್ಞಾನವು ಹೇಳುತ್ತದೆ. ಈ ವಚನದಲ್ಲಿ ಹೇಳಲಾದ 'ಪರಸ್ಪರ ಹತ್ತಿರವಿರುವ ಖಂಡಗಳು' ಎಂಬುದರ ತಾತ್ಪರ್ಯವೇನೆಂದು ನಿಖರವಾಗಿ ಹೇಳಲಾಗದು.

6. (ಓ ಪ್ರವಾದಿಯವರೇ!) ಅವರು ತಮ್ಮೊಂದಿಗೆ ಒಳಿತಿಗಿಂತ ಮುಂಚಿತವಾಗಿ ಕೆಡುಕಿಗೋಸ್ಕರ (ಶಿಕ್ಷೆಗೋಸ್ಕರ) ಆತುರಪಡುತ್ತಿರುವರು. ಅವರಿಗಿಂತ ಮುಂಚೆ ಮಾದರೀಯೋಗ್ಯ ಶಿಕ್ಷೆಗಳು ಗತಿಸಿಹೋಗಿವೆ. ಮನುಷ್ಯರು ಅಕ್ರಮವೆಸಗಿದವರಾಗಿದ್ದೂ ಸಹ ತಮ್ಮ ರಬ್ ಖಂಡಿತವಾಗಿಯೂ ಅವರಿಗೆ ಪಾಪಮುಕ್ತಿಯನ್ನು ನೀಡುವವನಾಗಿರುವನು.[1] ಖಂಡಿತವಾಗಿಯೂ ತಮ್ಮ ರಬ್ ಅತಿಕಠಿಣವಾಗಿ ಶಿಕ್ಷಿಸುವವನೂ ಆಗಿರುವನು.

وَيَسْتَعْجِلُونَكَ بِٱلسَّيِّئَةِ قَبْلَ ٱلْحَسَنَةِ وَقَدْ خَلَتْ مِن قَبْلِهِمُ ٱلْمَثُلَٰتُ ۗ وَإِنَّ رَبَّكَ لَذُو مَغْفِرَةٍ لِّلنَّاسِ عَلَىٰ ظُلْمِهِمْ ۖ وَإِنَّ رَبَّكَ لَشَدِيدُ ٱلْعِقَابِ ٦

7. 'ಇವರ ರಬ್‌ನ ವತಿಯಿಂದ ಇವರ ಮೇಲೆ ಒಂದು ದೃಷ್ಟಾಂತವನ್ನು ಇಳಿಸಲಾಗಿಲ್ಲವೇಕೆ?' ಎಂದು (ಪ್ರವಾದಿಯವರನ್ನು ಗೇಲಿಮಾಡುತ್ತಾ) ಸತ್ಯ ನಿಷೇಧಿಗಳು ಕೇಳುವರು. (ಓ ಪ್ರವಾದಿಯವರೇ!) ತಾವೊಬ್ಬ ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿರುವಿರಿ. ಎಲ್ಲ ಜನ ಸಮುದಾಯಕ್ಕೂ ಒಬ್ಬೊಬ್ಬ ಮಾರ್ಗದರ್ಶಕರಿರುವರು.

وَيَقُولُ ٱلَّذِينَ كَفَرُواْ لَوْلَآ أُنزِلَ عَلَيْهِ ءَايَةٌ مِّن رَّبِّهِۦٓ ۗ إِنَّمَآ أَنتَ مُنذِرٌ ۖ وَلِكُلِّ قَوْمٍ هَادٍ ٧

8. ಪ್ರತಿಯೊಬ್ಬ ಹೆಣ್ಣು ಏನನ್ನು ಗರ್ಭ ಧರಿಸುತ್ತಿರುವಳೆಂದು ಅಲ್ಲಾಹು ಅರಿಯುವನು. ಗರ್ಭಾಶಯಗಳು ಕಡಿಮೆಯುಂಟು ಮಾಡುವುದನ್ನೂ, ವರ್ಧನೆಯುಂಟು ಮಾಡುವುದನ್ನೂ ಅವನು ಅರಿಯುವನು.[2] ಅವನ ಬಳಿ ಪ್ರತಿಯೊಂದು ವಸ್ತುವೂ ಒಂದು ನಿಶ್ಚಿತ ಪ್ರಮಾಣದಲ್ಲಿದೆ.

ٱللَّهُ يَعْلَمُ مَا تَحْمِلُ كُلُّ أُنثَىٰ وَمَا تَغِيضُ ٱلْأَرْحَامُ وَمَا تَزْدَادُ ۖ وَكُلُّ شَىْءٍ عِندَهُۥ بِمِقْدَارٍ ٨

9. ಅವನು ಅಗೋಚರವಾಗಿರುವುದನ್ನು ಮತ್ತು ಗೋಚರವಾಗಿರುವುದನ್ನು ಅರಿಯುವವನೂ, ಮಹಾನನೂ ಅತ್ಯುನ್ನತನೂ ಆಗಿರುವನು.

عَٰلِمُ ٱلْغَيْبِ وَٱلشَّهَٰدَةِ ٱلْكَبِيرُ ٱلْمُتَعَالِ ٩

1 ಮಹಾ ಅಕ್ರಮವೆಸಗಿದ ವ್ಯಕ್ತಿ ಕೂಡ ನಿಷ್ಕಳಂಕವಾಗಿ ಪಶ್ಚಾತ್ತಾಪಪಟ್ಟು, ತಪ್ಪನ್ನು ಪುನರಾವರ್ತಿಸುವುದಿಲ್ಲವೆಂದು ದೃಢ ನಿಶ್ಚಯ ಮಾಡಿದರೆ ಖಂಡಿತವಾಗಿಯೂ ಅಲ್ಲಾಹು ಅವನನ್ನು ಕ್ಷಮಿಸುವನು.

2 ಗರ್ಭಸ್ಥ ಶಿಶುಗಳ ಸಂಖ್ಯೆ ಕಮ್ಮಿಯೋ ಅಥವಾ ಹೆಚ್ಚೋ, ಗರ್ಭಸ್ಥ ಶಿಶು ಪೂರ್ಣ ಬೆಳವಣಿಗೆ ಹೊಂದಿದೆಯೋ ಅಥವಾ ಇಲ್ಲವೋ, ಗರ್ಭಕಾಲವು ಹೆಚ್ಚಾಗುವುದೋ ಅಥವಾ ಕಮ್ಮಿಯಾಗುವುದೋ ಇತ್ಯಾದಿಗಳೆಲ್ಲವನ್ನೂ ಅಲ್ಲಾಹು ಅರಿಯುತ್ತಾನೆ.

سَوَآءٞ مِّنكُم مَّنۡ أَسَرَّ ٱلۡقَوۡلَ وَمَن جَهَرَ
بِهِۦ وَمَنۡ هُوَ مُسۡتَخۡفِۭ بِٱلَّيۡلِ وَسَارِبُۢ
بِٱلنَّهَارِ ١٠

**10.** ನಿಮ್ಮ ಪೈಕಿ ರಹಸ್ಯವಾಗಿ ಮಾತನಾಡಿದವನು, ಬಹಿರಂಗವಾಗಿ ಮಾತನಾಡಿದವನು, ರಾತ್ರಿಯಲ್ಲಿ ಅಡಗುವವನು ಮತ್ತು ಹಗಲಲ್ಲಿ ನಡೆದಾಡುವವನು (ಅಲ್ಲಾಹುವಿನ ಮಟ್ಟಿಗೆ) ಸಮಾನರಾಗಿರುವರು.[1]

لَهُۥ مُعَقِّبَٰتٞ مِّنۢ بَيۡنِ يَدَيۡهِ وَمِنۡ خَلۡفِهِۦ
يَحۡفَظُونَهُۥ مِنۡ أَمۡرِ ٱللَّهِۗ إِنَّ ٱللَّهَ لَا يُغَيِّرُ
مَا بِقَوۡمٍ حَتَّىٰ يُغَيِّرُواْ مَا بِأَنفُسِهِمۡۗ وَإِذَآ
أَرَادَ ٱللَّهُ بِقَوۡمٖ سُوٓءٗا فَلَا مَرَدَّ لَهُۥۚ وَمَا
لَهُم مِّن دُونِهِۦ مِن وَالٍ ١١

**11.** ಮಾನವನಿಗೆ ಅವನ ಮುಂದಿನಿಂದಲೂ ಹಿಂದಿನಿಂದಲೂ ನಿರಂತರವಾಗಿ ಬರುತ್ತಾ ಅಲ್ಲಾಹುವಿನ ಆದೇಶ ಪ್ರಕಾರ ಅವನನ್ನು ಕಾಪಾಡುವ (ಮಲಕ್‌ಗಳು) ಇರುವರು. ಜನರು ತಮ್ಮ ನಿಲುವಿನಲ್ಲಿ ಬದಲಾವಣೆ ತರುವವರೆಗೆ ಅಲ್ಲಾಹು ಯಾವುದೇ ಜನತೆಯ ಸ್ಥಿತಿಯನ್ನು ಖಂಡಿತವಾಗಿಯೂ ಬದಲಾಯಿಸಲಾರನು.[2] ಒಂದು ಜನತೆಗೆ ಹಾನಿಯುಂಟುಮಾಡಲು ಅಲ್ಲಾಹು ಇಚ್ಛಿಸಿದರೆ ಅದನ್ನು ಸರಿಸಿ ಬಿಡಲು ಸಾಧ್ಯವಿಲ್ಲ. ಅವನ ಹೊರತು ಅವರಿಗೆ ಬೇರೆ ಸಂರಕ್ಷಕರೂ ಇಲ್ಲ.

هُوَ ٱلَّذِي يُرِيكُمُ ٱلۡبَرۡقَ خَوۡفٗا وَطَمَعٗا
وَيُنشِئُ ٱلسَّحَابَ ٱلثِّقَالَ ١٢

**12.** ಭಯ ಮತ್ತು ನಿರೀಕ್ಷೆಯನ್ನು ಹುಟ್ಟಿಸುತ್ತಾ ನಿಮಗೆ ಮಿಂಚನ್ನು ತೋರಿಸಿಕೊಡುವವನು ಅವನಾಗಿರುವನು. ಅವನು (ಜಲ ನಿಮಿತ್ತ) ಭಾರವಾಗಿರುವ ಮೋಡಗಳನ್ನು ಸೃಷ್ಟಿಸುವನು.

وَيُسَبِّحُ ٱلرَّعۡدُ بِحَمۡدِهِۦ وَٱلۡمَلَٰٓئِكَةُ مِنۡ
خِيفَتِهِۦ وَيُرۡسِلُ ٱلصَّوَٰعِقَ فَيُصِيبُ بِهَا
مَن يَشَآءُ وَهُمۡ يُجَٰدِلُونَ فِي ٱللَّهِ وَهُوَ
شَدِيدُ ٱلۡمِحَالِ ١٣

**13.** ಸಿಡಿಲು ಅವನ ಸ್ತುತಿಯೊಂದಿಗೆ ಅವನ ಪರಿಪಾವನತೆಯನ್ನು ಕೊಂಡಾಡುತ್ತಿರುವುದು.[3] ಮಲಕ್‌ಗಳು ಸಹ ಅವನ ಭಯದಿಂದ (ಅವನನ್ನು ಸ್ತುತಿಸುತ್ತಿರುವರು). ಅವನು ಸಿಡಿಲುಗಳನ್ನು ಕಳುಹಿಸುವನು. ತರುವಾಯ ಅವನು ತಾನಿಚ್ಛಿಸುವವರಿಗೆ ಅವುಗಳನ್ನು ತಗುಲಿಸುವನು. ಆದರೂ ಅವರು

---

1 ಎಲ್ಲರ ಕುರಿತು ಮತ್ತು ಎಲ್ಲ ವಿಷಯಗಳ ಕುರಿತು ಅಲ್ಲಾಹು ಅರಿಯುತ್ತಾನೆ.

2 ವ್ಯಕ್ತಿ ಮತ್ತು ಸಮಾಜದ ಅಭಿವೃದ್ಧಿ ಮತ್ತು ಪತನವು ಅವರ ಬದುಕಿನ ನಿಲುವು ಮತ್ತು ಕರ್ಮರೀತಿಗಳನ್ನು ಅವಲಂಬಿಸಿಕೊಂಡಿದೆ. ಮನುಷ್ಯರು ತಮ್ಮ ನಿಲುವಿನಲ್ಲಿ ಸ್ವತಃ ಬದಲಾವಣೆಯನ್ನು ತರುವ ತನಕ ಅಲ್ಲಾಹು ಅವರ ಸ್ಥಿತಿಗತಿಗಳನ್ನು ಬದಲಾಯಿಸಲಾರನು.

3 ಪ್ರಕೃತಿಯಲ್ಲಿರುವ ಪ್ರತಿಯೊಂದು ವಿದ್ಯಮಾನವೂ ಅಲ್ಲಾಹುವಿನ ಸೃಷ್ಟಿ ವೈಭವವನ್ನು ಪ್ರಶಂಸಿಸುತ್ತದೆ.

(ಅವಿಶ್ವಾಸಿಗಳು) ಅಲ್ಲಾಹುವಿನ ಕುರಿತು ತರ್ಕಿಸುತ್ತಿರುವರು. ಅವನು ಪ್ರಬಲಶಕ್ತಿಯುಳ್ಳವನಾಗಿರುವನು.

14. ಅವನೊಂದಿಗಿರುವ ಪ್ರಾರ್ಥನೆಯೇ ಸತ್ಯವಾದ ಪ್ರಾರ್ಥನೆ. ಅವನ ಹೊರತು ಯಾರೊಂದಿಗೆಲ್ಲ ಅವರು ಪ್ರಾರ್ಥಿಸುತ್ತಿರುವರೋ ಅವರಾರೂ ಅವರಿಗೆ ಉತ್ತರ ನೀಡಲಾರರು. ಅವರ ಸ್ಥಿತಿಯು ತನ್ನ ಎರಡು ಕೈಗಳನ್ನು ನೀರಿನೆಡೆಗೆ (ಸ್ವತಃ) ಅದುವೇ ತನ್ನ ಬಾಯಿಗೆ ತಲುಪುವ ಸಲುವಾಗಿ ಚಾಚಿದವನಂತೆ ಮಾತ್ರವಾಗಿದೆ. ಅದು ಅವನ ಬಾಯಿಗೆ ತಲುಪಲಾರದು. ಸತ್ಯನಿಷೇಧಿಗಳ ಪ್ರಾರ್ಥನೆಯು ವ್ಯರ್ಥವೇ ವಿನಾ ಇನ್ನೇನೂ ಅಲ್ಲ.

لَهُۥ دَعۡوَةُ ٱلۡحَقِّۚ وَٱلَّذِينَ يَدۡعُونَ مِن دُونِهِۦ لَا يَسۡتَجِيبُونَ لَهُم بِشَيۡءٍ إِلَّا كَبَٰسِطِ كَفَّيۡهِ إِلَى ٱلۡمَآءِ لِيَبۡلُغَ فَاهُ وَمَا هُوَ بِبَٰلِغِهِۦۚ وَمَا دُعَآءُ ٱلۡكَٰفِرِينَ إِلَّا فِي ضَلَٰلٖ ١٤

15. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ಸ್ವಇಚ್ಛೆಯಿಂದ ಅಥವಾ ನಿರ್ಬಂಧಿತರಾಗಿ ಅಲ್ಲಾಹುವಿಗೆ ಸಾಷ್ಟಾಂಗವೆರಗುತ್ತಿರುವರು. ಪ್ರಭಾತ ಮತ್ತು ಮುಸ್ಸಂಜೆಗಳಲ್ಲಿ ಅವರ ನೆರಳುಗಳೂ (ಅವನಿಗೆ ಸಾಷ್ಟಾಂಗವೆರಗುತ್ತಿರುವುವು).(1)

وَلِلَّهِ يَسۡجُدُ مَن فِي ٱلسَّمَٰوَٰتِ وَٱلۡأَرۡضِ طَوۡعٗا وَكَرۡهٗا وَظِلَٰلُهُم بِٱلۡغُدُوِّ وَٱلۡأٓصَالِ۩ ١٥

16. (ಓ ಪ್ರವಾದಿಯವರೇ!) ಕೇಳಿರಿ: 'ಆಕಾಶಗಳ ಮತ್ತು ಭೂಮಿಯ ರಬ್ಬಾಗಿರುವವನು ಯಾರು?' ಹೇಳಿರಿ: 'ಅಲ್ಲಾಹು'. ಹೇಳಿರಿ: 'ಆದರೂ ಅವನನ್ನು ಬಿಟ್ಟು, ಸ್ವತಃ ತಮಗೇ ಯಾವ ಲಾಭವನ್ನೂ, ಹಾನಿಯನ್ನೂ ಸ್ವಾಧೀನದಲ್ಲಿಟ್ಟುಕೊಳ್ಳದಂತಹ ರಕ್ಷಕರನ್ನು ನೀವು ಮಾಡಿಕೊಂಡಿರುವಿರಾ?' ಕೇಳಿರಿ: 'ಕುರುಡನೂ ದೃಷ್ಟಿಯುಳ್ಳವನೂ(2)

قُلۡ مَن رَّبُّ ٱلسَّمَٰوَٰتِ وَٱلۡأَرۡضِ قُلِ ٱللَّهُۚ قُلۡ أَفَٱتَّخَذۡتُم مِّن دُونِهِۦٓ أَوۡلِيَآءَ لَا يَمۡلِكُونَ لِأَنفُسِهِمۡ نَفۡعٗا وَلَا ضَرّٗاۚ قُلۡ هَلۡ يَسۡتَوِي ٱلۡأَعۡمَىٰ وَٱلۡبَصِيرُ أَمۡ هَلۡ تَسۡتَوِي ٱلظُّلُمَٰتُ وَٱلنُّورُۗ أَمۡ جَعَلُواْ لِلَّهِ شُرَكَآءَ خَلَقُواْ كَخَلۡقِهِۦ فَتَشَٰبَهَ ٱلۡخَلۡقُ

1 ಬೆಳಗ್ಗೆ ಮತ್ತು ಸಂಜೆಯ ವೇಳೆಗಳಲ್ಲಿ ಅವರ ನೆರಳು ದೀರ್ಘವಾಗುವುದು ಮತ್ತು ಗಿಡ್ಡವಾಗುವುದು ಅಲ್ಲಾಹುವಿನ ನಿಯಮ ಪ್ರಕಾರವೇ ಹೊರತು ಅವರ ತೀರ್ಮಾನ ಪ್ರಕಾರವಲ್ಲ. ನೆರಳು ತಿರುಗುವುದು ಅವರು ತಿರುಗಿದೆಡೆಗಲ್ಲ. ಬದಲಾಗಿ ಅಲ್ಲಾಹು ನಿಶ್ಚಯಿಸಿದ ದಿಕ್ಕಿನೆಡೆಗಾಗಿದೆ.

2 ಯಾವುದೇ ಪುರಾವೆಯಿಲ್ಲದೆ ಯಾರಿಗಾದರೂ ದಿವ್ಯತ್ವವನ್ನು ಕಲ್ಪಿಸಿಕೊಳ್ಳುವವರು ಅಂಧಕಾರದಲ್ಲಿ ಅಲೆದಾಡುವವರಾಗಿದ್ದಾರೆ. ಜಗತ್ತಿನ ಪ್ರಭುವನ್ನು ಮಾತ್ರ ಆರಾಧಿಸುವವರು ಪರಮ ಸತ್ಯದ ಪ್ರಕಾಶವನ್ನು ಪಡೆದವರಾಗಿದ್ದಾರೆ.

عَلَيۡهِمۡۚ قُلِ ٱللَّهُ خَٰلِقُ كُلِّ شَيۡءٖ وَهُوَ
ٱلۡوَٰحِدُ ٱلۡقَهَّٰرُ ١٦

ಸಮಾನರಾಗುವರೇ? ಅಥವಾ ಅಂಧಕಾರಗಳು ಮತ್ತು ಪ್ರಕಾಶವು ಸಮಾನವಾಗುವುದೇ? ಅಥವಾ ಅವರು ಅಲ್ಲಾಹುವಿಗೆ ಸಹಭಾಗಿಗಳನ್ನಾಗಿ ಮಾಡಿರುವವರು, ಅವನು ಸೃಷ್ಟಿಸುವಂತೆಯೇ ಸೃಷ್ಟಿಸಿ (ಎರಡೂ ಕಡೆಯ) ಸೃಷ್ಟಿಗಳನ್ನು ಅವರಿಗೆ ಗುರುತಿಸಲು ಸಾಧ್ಯವಾಗದೇ ಹೋಯಿತೇ?' ಹೇಳಿರಿ: 'ಸರ್ವ ವಸ್ತುಗಳ ಸೃಷ್ಟಿಕರ್ತನು ಅಲ್ಲಾಹುವಾಗಿರುವನು. ಅವನು ಏಕಮೇವನೂ ಸರ್ವಾಧಿಕಾರಿಯೂ ಆಗಿರುವನು'.

أَنزَلَ مِنَ ٱلسَّمَآءِ مَآءٗ فَسَالَتۡ أَوۡدِيَةُۢ
بِقَدَرِهَا فَٱحۡتَمَلَ ٱلسَّيۡلُ زَبَدٗا رَّابِيٗاۖ وَمِمَّا
يُوقِدُونَ عَلَيۡهِ فِي ٱلنَّارِ ٱبۡتِغَآءَ حِلۡيَةٍ أَوۡ
مَتَٰعٖ زَبَدٞ مِّثۡلُهُۥۚ كَذَٰلِكَ يَضۡرِبُ ٱللَّهُ
ٱلۡحَقَّ وَٱلۡبَٰطِلَۚ فَأَمَّا ٱلزَّبَدُ فَيَذۡهَبُ جُفَآءٗۖ
وَأَمَّا مَا يَنفَعُ ٱلنَّاسَ فَيَمۡكُثُ فِي ٱلۡأَرۡضِۚ
كَذَٰلِكَ يَضۡرِبُ ٱللَّهُ ٱلۡأَمۡثَالَ ١٧

**17.** ಅವನು (ಅಲ್ಲಾಹು) ಆಕಾಶದಿಂದ ಮಳೆನೀರನ್ನು ಸುರಿಸಿದನು. ತರುವಾಯ ನೀರು ಕಣಿವೆಗಳಲ್ಲಿ ಅವುಗಳ (ಗಾತ್ರದ) ಪ್ರಮಾಣಕ್ಕನುಗುಣವಾಗಿ ಹರಿಯಿತು. ಆಗ ಆ ಹರಿವು ಮೇಲ್ಭಾಗದಲ್ಲಿ ತೇಲುತ್ತಿರುವ ನೊರೆಗಳನ್ನು ಹೊತ್ತು ಕೊಂಡು ಹರಿಯತೊಡಗಿತು. ಅವರು ಯಾವುದಾದರೂ ಆಭರಣವನ್ನೋ ಉಪಕರಣವನ್ನೋ ನಿರ್ಮಿಸಲು ಬೆಂಕಿಯಲ್ಲಿ ಕಾಯಿಸುವ ಲೋಹದಿಂದಲೂ ಇದೇ ರೀತಿಯ ನೊರೆಯುಂಟಾಗುತ್ತದೆ. ಹೀಗೆ ಅಲ್ಲಾಹು ಸತ್ಯ ಮತ್ತು ಅಸತ್ಯವನ್ನು ಉದಾಹರಣೆಯಾಗಿ ತೋರಿಸಿ ಕೊಡುವನು. ತರುವಾಯ ನೊರೆಯು ಆವಿಯಾಗಿ ಹೊರಟು ಹೋಗುತ್ತದೆ. ಮನುಷ್ಯರಿಗೆ ಪ್ರಯೋಜನವಿರುವುದು ಭೂಮಿಯಲ್ಲಿ ತಂಗುತ್ತದೆ.(1) ಹೀಗೆ ಅಲ್ಲಾಹು ಉಪಮೆಗಳನ್ನು ವಿವರಿಸಿಕೊಡುವನು.

لِلَّذِينَ ٱسۡتَجَابُواْ لِرَبِّهِمُ ٱلۡحُسۡنَىٰۚ وَٱلَّذِينَ

**18.** ತಮ್ಮ ರಬ್‌ನ ಕರೆಗೆ ಓಗೊಟ್ಟವರಾರೋ ಅವರಿಗೆ ಅತ್ಯುತ್ತಮ ಪ್ರತಿಫಲವಿದೆ. ಅವನ

1 ಶುದ್ಧವಾದ ಲೋಹವು ಕೆಳಭಾಗದಲ್ಲಿ ತಂಗುತ್ತದೆ. ಶುದ್ಧ ನೀರು ಭೂಮಿಯಾಳಕ್ಕೆ ಇಂಗಿ ಮನುಷ್ಯರಿಗೂ ಜಾನುವಾರುಗಳಿಗೂ ಪ್ರಯೋಜನಕಾರಿಯಾಗುತ್ತದೆ. ಬದುಕೆಂಬ ಪ್ರವಾಹದ ಮೇಲ್ಭಾಗದಲ್ಲಿ ಅಸತ್ಯದ ಕಸಕಡ್ಡಿಗಳು ತೇಲುತ್ತಿರುವುದನ್ನು ನಮಗೆ ಕೆಲವೊಮ್ಮೆ ಕಾಣಬಹುದಾಗಿದೆ. ಆದರೆ ಕಾಲಕ್ರಮೇಣ ಅವೆಲ್ಲವೂ ನಾಶವಾಗಿ ಹೋಗುತ್ತವೆ. ಆದರೆ ಸತ್ಯವು ಸ್ಥಾಯಿಯಾದ ಅಂಗೀಕಾರದೊಂದಿಗೆ ಸಮಾಜದ ಅಂತರ್ಧಾರೆಯಾಗಿ ನೆಲೆನಿಲ್ಲುತ್ತದೆ.

ಕರೆಗೆ ಓಗೊಡದವರಾರೋ ಅವರ ಬಳಿ ಭೂಮಿಯಲ್ಲಿರುವುದೆಲ್ಲವೂ ಮತ್ತು ಅದರೊಂದಿಗೆ ಅದರಷ್ಟೇ ಬೇರೆಯೂ ಇದ್ದರೂ (ತಮ್ಮ ರಕ್ಷೆಗಾಗಿ) ಅವರು ಅವೆಲ್ಲವನ್ನೂ ವಿಮೋಚನಾ ಶುಲ್ಕವಾಗಿ ನೀಡುತ್ತಿದ್ದರು! ಅವರಿಗೆ ತೀವ್ರತರದ ವಿಚಾರಣೆಯಿದೆ ಮತ್ತು ಅವರ ವಾಸಸ್ಥಳವು ನರಕವಾಗಿದೆ. ಆ ವಾಸಸ್ಥಳ ಎಷ್ಟು ನಿಕೃಷ್ಟವಾದುದು!

لَمْ يَسْتَجِيبُوا۟ لَهُۥ لَوْ أَنَّ لَهُم مَّا فِى ٱلْأَرْضِ جَمِيعًا وَمِثْلَهُۥ مَعَهُۥ لَٱفْتَدَوْا۟ بِهِۦٓ ۚ أُو۟لَـٰٓئِكَ لَهُمْ سُوٓءُ ٱلْحِسَابِ وَمَأْوَىٰهُمْ جَهَنَّمُ ۖ وَبِئْسَ ٱلْمِهَادُ ﴿١٨﴾

19. ಹಾಗಾದರೆ ತಮಗೆ ತಮ್ಮ ರಬ್‌ನ ವತಿಯಿಂದ ಅವತೀರ್ಣಗೊಂಡಿರುವುದು ಸತ್ಯವೆಂದು ಅರಿತಿರುವವನು ಕುರುಡನಾದ ಒಬ್ಬನಂತಾಗುವನೇ? ಬುದ್ಧಿವಂತರು ಮಾತ್ರ ಚಿಂತಿಸಿ ಗ್ರಹಿಸುವರು.

۞ أَفَمَن يَعْلَمُ أَنَّمَآ أُنزِلَ إِلَيْكَ مِن رَّبِّكَ ٱلْحَقُّ كَمَنْ هُوَ أَعْمَىٰٓ ۚ إِنَّمَا يَتَذَكَّرُ أُو۟لُوا۟ ٱلْأَلْبَـٰبِ ﴿١٩﴾

20. ಅಲ್ಲಾಹುವಿನೊಂದಿಗಿರುವ ಬಾಧ್ಯತೆಯನ್ನು ನೆರವೇರಿಸುವವರು ಮತ್ತು ಕರಾರನ್ನು ಉಲ್ಲಂಘಿಸದವರು,

ٱلَّذِينَ يُوفُونَ بِعَهْدِ ٱللَّهِ وَلَا يَنقُضُونَ ٱلْمِيثَـٰقَ ﴿٢٠﴾

21. ಅಲ್ಲಾಹು ಜೋಡಿಸಲು ಆಜ್ಞಾಪಿಸಿರುವುದನ್ನು (ಸಂಬಂಧಗಳನ್ನು) ಜೋಡಿಸುವವರು, ತಮ್ಮ ರಬ್ಬನ್ನು ಭಯಪಡುವವರು, ತೀವ್ರತರದ ವಿಚಾರಣೆಯನ್ನು ಭಯಪಡುವವರು,

وَٱلَّذِينَ يَصِلُونَ مَآ أَمَرَ ٱللَّهُ بِهِۦٓ أَن يُوصَلَ وَيَخْشَوْنَ رَبَّهُمْ وَيَخَافُونَ سُوٓءَ ٱلْحِسَابِ ﴿٢١﴾

22. ತಮ್ಮ ರಬ್‌ನ ಸಂತೃಪ್ತಿಯನ್ನು ಆಶಿಸಿ ಸಹನೆ ವಹಿಸುವವರು, ನಮಾಝನ್ನು ಸಂಸ್ಥಾಪಿಸುವವರು, ನಾವು ನೀಡಿರುವವುಗಳಿಂದ ಗುಪ್ತವಾಗಿ ಮತ್ತು ಬಹಿರಂಗವಾಗಿ ಖರ್ಚು ಮಾಡುವವರು ಮತ್ತು ಕೆಡುಕನ್ನು ಒಳಿತಿನಿಂದ ತಡೆಯುವವರು. ಅಂತಹವರಿಗೆ ಇಹಲೋಕದ ಪರ್ಯಾವಸಾನವು ಅನುಕೂಲಕರವಾಗಿರುವುದು.

وَٱلَّذِينَ صَبَرُوا۟ ٱبْتِغَآءَ وَجْهِ رَبِّهِمْ وَأَقَامُوا۟ ٱلصَّلَوٰةَ وَأَنفَقُوا۟ مِمَّا رَزَقْنَـٰهُمْ سِرًّا وَعَلَانِيَةً وَيَدْرَءُونَ بِٱلْحَسَنَةِ ٱلسَّيِّئَةَ أُو۟لَـٰٓئِكَ لَهُمْ عُقْبَى ٱلدَّارِ ﴿٢٢﴾

23. ಶಾಶ್ವತವಾಗಿ ವಾಸಿಸುವುದಕ್ಕಿರುವ ಸ್ವರ್ಗೋದ್ಯಾನಗಳು! ಅವರು ಮತ್ತು ಅವರ ಪೂರ್ವಿಕರ, ಸಂಗಾತಿಗಳ, ಸಂತತಿಗಳ ಪೈಕಿ ಸೇರಿದ ಸಜ್ಜನರು ಅದರಲ್ಲಿ ಪ್ರವೇಶಿಸುವರು.

جَنَّـٰتُ عَدْنٍ يَدْخُلُونَهَا وَمَن صَلَحَ مِنْ ءَابَآئِهِمْ وَأَزْوَٰجِهِمْ وَذُرِّيَّـٰتِهِمْ ۖ وَٱلْمَلَـٰٓئِكَةُ يَدْخُلُونَ عَلَيْهِم مِّن كُلِّ بَابٍ ﴿٢٣﴾

ಸರ್ವ ದ್ವಾರಗಳಿಂದಲೂ ಅವರೆಡೆಗೆ ಪ್ರವೇಶಿಸುತ್ತಾ ಮಲಕ್‌ಗಳು ಹೇಳುವರು:

24. 'ನೀವು ಸಹನೆ ವಹಿಸಿರುವ ಕಾರಣ ನಿಮಗೆ ಶಾಂತಿಯಿರಲಿ!' ಅವರ ಅಂತಿಮ ಭವನ(ಸ್ವರ್ಗ)ವು ಎಷ್ಟು ಉತ್ತಮವಾದುದು!

سَلَٰمٌ عَلَيۡكُم بِمَا صَبَرۡتُمۡۚ فَنِعۡمَ عُقۡبَى ٱلدَّارِ ٢٤

25. ಅಲ್ಲಾಹುವಿನೊಂದಿಗಿರುವ ಕರಾರನ್ನು ಸುದೃಢಗೊಳಿಸಿದ ನಂತರವೂ ಅದನ್ನು ಉಲ್ಲಂಘಿಸುವವರು, ಅಲ್ಲಾಹು ಜೋಡಿಸಲು ಆಜ್ಞಾಪಿಸಿರುವುದನ್ನು (ಸಂಬಂಧಗಳನ್ನು) ಕಡಿಯುವವರು ಮತ್ತು ಭೂಮಿಯಲ್ಲಿ ವಿನಾಶವನ್ನುಂಟು ಮಾಡುವವರು. ಅವರಿಗೆ ಶಾಪವಿರುವುದು ಮತ್ತು ಅವರಿಗೆ ನಿಕೃಷ್ಟ ಭವನವಿರುವುದು!

وَٱلَّذِينَ يَنقُضُونَ عَهۡدَ ٱللَّهِ مِنۢ بَعۡدِ مِيثَٰقِهِۦ وَيَقۡطَعُونَ مَآ أَمَرَ ٱللَّهُ بِهِۦٓ أَن يُوصَلَ وَيُفۡسِدُونَ فِي ٱلۡأَرۡضِ أُوْلَٰٓئِكَ لَهُمُ ٱللَّعۡنَةُ وَلَهُمۡ سُوٓءُ ٱلدَّارِ ٢٥

26. ಅಲ್ಲಾಹು ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು ಸೀಮಿತಗೊಳಿಸುವನು. ಅವರು ಇಹಲೋಕ ಜೀವನದೊಂದಿಗೆ ಸಂತುಷ್ಟರಾಗಿರುವರು. ಆದರೆ ಪರಲೋಕಕ್ಕೆ ಹೋಲಿಸಿದರೆ ಇಹಲೋಕ ಜೀವನವು ಒಂದು (ಕ್ಷುಲ್ಲಕವಾದ) ಸುಖಾನುಭೂತಿ ಮಾತ್ರವಾಗಿರುವುದು.

ٱللَّهُ يَبۡسُطُ ٱلرِّزۡقَ لِمَن يَشَآءُ وَيَقۡدِرُۚ وَفَرِحُواْ بِٱلۡحَيَوٰةِ ٱلدُّنۡيَا وَمَا ٱلۡحَيَوٰةُ ٱلدُّنۡيَا فِي ٱلۡأٓخِرَةِ إِلَّا مَتَٰعٞ ٢٦

27. 'ಇವರ ಮೇಲೆ ಇವರ ರಬ್‌ನ ವತಿಯಿಂದ ಯಾವುದಾದರೂ ದೃಷ್ಟಾಂತವನ್ನು ಇಳಿಸಲಾಗಿಲ್ಲವೇಕೆ?' ಎಂದು ಸತ್ಯನಿಷೇಧಿಗಳು (ಪ್ರವಾದಿಯವರನ್ನು ಗೇಲಿ ಮಾಡುತ್ತಾ) ಕೇಳುವರು. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹು ತಾನಿಚ್ಛಿಸುವವರನ್ನು ಪಥಭ್ರಷ್ಟ ಗೊಳಿಸುವನು ಮತ್ತು ಪಶ್ಚಾತ್ತಾಪಪಟ್ಟು ಮರಳಿದವರನ್ನು ತನ್ನ ಮಾರ್ಗದೆಡೆಗೆ ಮುನ್ನಡೆಸುವನು'.

وَيَقُولُ ٱلَّذِينَ كَفَرُواْ لَوۡلَآ أُنزِلَ عَلَيۡهِ ءَايَةٞ مِّن رَّبِّهِۦۚ قُلۡ إِنَّ ٱللَّهَ يُضِلُّ مَن يَشَآءُ وَيَهۡدِيٓ إِلَيۡهِ مَنۡ أَنَابَ ٢٧

28. ಅಂದರೆ ವಿಶ್ವಾಸವಿಟ್ಟವರನ್ನು ಮತ್ತು ಅಲ್ಲಾಹುವಿನ ಸ್ಮರಣೆಯಿಂದಾಗಿ ಹೃದಯಗಳು ಶಾಂತಗೊಳ್ಳುವವರನ್ನು. ಅರಿಯಿರಿ!

ٱلَّذِينَ ءَامَنُواْ وَتَطۡمَئِنُّ قُلُوبُهُم بِذِكۡرِ ٱللَّهِۗ أَلَا بِذِكۡرِ ٱللَّهِ تَطۡمَئِنُّ ٱلۡقُلُوبُ ٢٨

ಹೃದಯಗಳು ಶಾಂತಗೊಳ್ಳುವುದು ಅಲ್ಲಾಹುವಿನ ಸ್ಮರಣೆಯಿಂದಾಗಿದೆ.

**29.** ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರಿಗೆ ಮಂಗಳವಾಗಲಿ! ಮರಳಿ ತಲುಪುವ ಉತ್ತಮ ವಾಸಸ್ಥಳವು (ಅವರಿಗಿರುವುದಾಗಿದೆ).

ٱلَّذِينَ ءَامَنُواْ وَعَمِلُواْ ٱلصَّٰلِحَٰتِ طُوبَىٰ لَهُمۡ وَحُسۡنُ مَـَٔابٖ ٢٩

**30.** ಹೀಗೆ ನಾವು ತಮ್ಮನ್ನು ಒಂದು ಸಮುದಾಯಕ್ಕೆ ಸಂದೇಶವಾಹಕರನ್ನಾಗಿ ಕಳುಹಿಸಿರುವೆವು. ಅದಕ್ಕಿಂತ ಮುಂಚೆ ಅನೇಕ ಸಮುದಾಯಗಳು ಗತಿಸಿಹೋಗಿವೆ. ನಾವು ತಮಗೆ ದಿವ್ಯ ಸಂದೇಶವಾಗಿ ನೀಡಿರುವುದನ್ನು ತಾವು ಅವರಿಗೆ ಓದಿಕೊಡುವ ಸಲುವಾಗಿ (ತಮ್ಮನ್ನು ಕಳುಹಿಸಿರುವೆವು). ಅವರು ಪರಮ ದಯಾಮಯನಲ್ಲಿ ಅವಿಶ್ವಾಸವಿಡುತ್ತಿರುವರು. ಹೇಳಿರಿ: 'ನನ್ನ ರಬ್ ಅವನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ನಾನು ಅವನ ಮೇಲೆ ಭರವಸೆಯಿಟ್ಟಿರುವೆನು. ನನ್ನ ಮರಳುವಿಕೆಯು ಅವನೆಡೆಗೇ ಆಗಿರುವುದು'.

كَذَٰلِكَ أَرۡسَلۡنَٰكَ فِيٓ أُمَّةٖ قَدۡ خَلَتۡ مِن قَبۡلِهَآ أُمَمٞ لِّتَتۡلُوَاْ عَلَيۡهِمُ ٱلَّذِيٓ أَوۡحَيۡنَآ إِلَيۡكَ وَهُمۡ يَكۡفُرُونَ بِٱلرَّحۡمَٰنِۚ قُلۡ هُوَ رَبِّي لَآ إِلَٰهَ إِلَّا هُوَ عَلَيۡهِ تَوَكَّلۡتُ وَإِلَيۡهِ مَتَابِ ٣٠

**31.** ಪಾರಾಯಣ ಮಾಡಲಾಗುವ ಒಂದು ಗ್ರಂಥದ ಮೂಲಕ ಪರ್ವತಗಳನ್ನು ಚಲಿಸುವಂತೆ ಮಾಡಲ್ಪಟ್ಟರೂ, ಅಥವಾ ಅದರಿಂದಾಗಿ ಭೂಮಿಯನ್ನು ನುಚ್ಚುನೂರು ಮಾಡಲ್ಪಟ್ಟರೂ ಅಥವಾ ಅದರ ಮೂಲಕ ಮೃತಪಟ್ಟವರನ್ನು ಮಾತನಾಡಿಸಲ್ಪಟ್ಟರೂ (ಅವರು ವಿಶ್ವಾಸವಿಡಲಾರರು). ಆದರೆ ಎಲ್ಲ ವಿಷಯಗಳ ತೀರ್ಮಾನವು ಅಲ್ಲಾಹುವಿನ ನಿಯಂತ್ರಣದಲ್ಲಿದೆ. ಅಲ್ಲಾಹು ಇಚ್ಛಿಸುತ್ತಿದ್ದರೆ ಸರ್ವ ಮನುಷ್ಯರನ್ನೂ ಅವನು ಸನ್ಮಾರ್ಗದಲ್ಲಿ ಸೇರಿಸುತ್ತಿದ್ದನು ಎಂಬುದನ್ನು ಸತ್ಯವಿಶ್ವಾಸಿಗಳು ಅರಿತುಕೊಂಡಿಲ್ಲವೇ?[1] ಸತ್ಯನಿಷೇಧಿಗಳಿಗೆ

وَلَوۡ أَنَّ قُرۡءَانٗا سُيِّرَتۡ بِهِ ٱلۡجِبَالُ أَوۡ قُطِّعَتۡ بِهِ ٱلۡأَرۡضُ أَوۡ كُلِّمَ بِهِ ٱلۡمَوۡتَىٰۗ بَل لِّلَّهِ ٱلۡأَمۡرُ جَمِيعًاۗ أَفَلَمۡ يَاْيۡـَٔسِ ٱلَّذِينَ ءَامَنُوٓاْ أَن لَّوۡ يَشَآءُ ٱللَّهُ لَهَدَى ٱلنَّاسَ جَمِيعٗاۗ وَلَا يَزَالُ ٱلَّذِينَ كَفَرُواْ تُصِيبُهُم بِمَا صَنَعُواْ قَارِعَةٌ أَوۡ تَحُلُّ قَرِيبٗا مِّن دَارِهِمۡ حَتَّىٰ يَأۡتِيَ وَعۡدُ ٱللَّهِۚ إِنَّ ٱللَّهَ لَا يُخۡلِفُ ٱلۡمِيعَادَ ٣١

1 'ಅಫಲಮ್ ಯಯ್‌ಅಸ್' ಎಂಬುದರ ಅರ್ಥವು ಆಸೆ ಮುರಿದಿಲ್ಲವೇ ಎಂದಾಗಿದೆ. ಸರ್ವ ಮನುಷ್ಯರನ್ನೂ ಸತ್ಯಮಾರ್ಗದಲ್ಲಿ ಸೇರಿಸಲು ಅಲ್ಲಾಹು ಇಚ್ಛಿಸಿಲ್ಲ ಎಂಬ ಮೂಲತತ್ವವನ್ನು ಸತ್ಯವಿಶ್ವಾಸಿಗಳು ಅರಿತುಕೊಳ್ಳುವುದಾಗಲಿ,

ಅವರ ಕೃತ್ಯದ ನಿಮಿತ್ತ ಯಾವುದಾದರೂ ಆಪತ್ತು ಬಾಧಿಸುತ್ತಲೇ ಇರುವುದು ಅಥವಾ ಅವರ ವಾಸಸ್ಥಳದ ಬಳಿಯೇ ಅದು (ಶಿಕ್ಷೆಯು) ಇಳಿಯುತ್ತಿರುವುದು; ಅಲ್ಲಾಹುವಿನ ವಾಗ್ದಾನವು ಬರುವ ತನಕ.(1) ಖಂಡಿತವಾಗಿಯೂ ಅಲ್ಲಾಹು ವಾಗ್ದಾನವನ್ನು ಉಲ್ಲಂಘಿಸುವವನಲ್ಲ.

وَلَقَدِ ٱسْتُهْزِئَ بِرُسُلٍ مِّن قَبْلِكَ فَأَمْلَيْتُ لِلَّذِينَ كَفَرُوا۟ ثُمَّ أَخَذْتُهُمْ ۖ فَكَيْفَ كَانَ عِقَابِ ﴿٣٢﴾

32. ಖಂಡಿತವಾಗಿಯೂ ತಮಗಿಂತ ಮುಂಚೆಯೂ ಸಂದೇಶವಾಹಕರು ಅಪಹಾಸ್ಯಕ್ಕೀಡಾಗಿರುವರು. ಆಗ ನಾನು ಸತ್ಯನಿಷೇಧಿಗಳಿಗೆ ಕಾಲಾವಕಾಶವನ್ನು ಹೆಚ್ಚಿಸಿಕೊಟ್ಟಿರುವೆನು. ತರುವಾಯ ನಾನು ಅವರನ್ನು ಹಿಡಿದೆನು. ಆಗ ನನ್ನ ಶಿಕ್ಷೆಯು ಹೇಗಿತ್ತು?

أَفَمَنْ هُوَ قَآئِمٌ عَلَىٰ كُلِّ نَفْسٍۭ بِمَا كَسَبَتْ ۗ وَجَعَلُوا۟ لِلَّهِ شُرَكَآءَ قُلْ سَمُّوهُمْ ۚ أَمْ تُنَبِّـُٔونَهُۥ بِمَا لَا يَعْلَمُ فِى ٱلْأَرْضِ أَم بِظَـٰهِرٍ مِّنَ ٱلْقَوْلِ ۗ بَلْ زُيِّنَ لِلَّذِينَ كَفَرُوا۟ مَكْرُهُمْ وَصُدُّوا۟ عَنِ ٱلسَّبِيلِ ۗ وَمَن يُضْلِلِ ٱللَّهُ فَمَا لَهُۥ مِنْ هَادٍ ﴿٣٣﴾

33. ಹಾಗಾದರೆ ಪ್ರತಿಯೊಬ್ಬ ವ್ಯಕ್ತಿಯೂ ನಿರ್ವಹಿಸುವ ಕರ್ಮದ ಮೇಲುಸ್ತುವಾರಿ ವಹಿಸುವವನು (ಅಲ್ಲಾಹು) (ಏನೂ ಅರಿಯದವರಂತಾಗಿರುವನೇ?) ಅವರು ಅಲ್ಲಾಹುವಿಗೆ ಸಹಭಾಗಿಗಳನ್ನು ಮಾಡಿಕೊಂಡಿರುವರು. (ಓ ಪ್ರವಾದಿಯವರೇ!) ಹೇಳಿರಿ: 'ಅವರ ಹೆಸರನ್ನು ಹೇಳಿಕೊಡಿರಿ, ಭೂಮಿಯಲ್ಲಿ ಅಲ್ಲಾಹು ಅರಿಯದಿರುವ ವಿಷಯವೊಂದನ್ನು ಅವನಿಗೆ ನೀವು ತಿಳಿಸಿಕೊಡುತ್ತಿರುವಿರಾ? ಅಥವಾ (ನೀವು ಹೇಳುತ್ತಿರುವುದು) ಬಾಹ್ಯ ಪ್ರಕಟನೆಯ ಮಾತುಗಳಾಗಿವೆಯೇ?'(2) ಅಲ್ಲ, ಸತ್ಯನಿಷೇಧಿಗಳಿಗೆ ಅವರ ಕುತಂತ್ರವನ್ನು

---

ಜನರೆಲ್ಲರೂ ವಿಶ್ವಾಸವಿಡುವುದನ್ನು ನೋಡುವ ಆಸೆಯನ್ನು ಕೈಬಿಡುವುದಾಗಲಿ ಮಾಡಲಿಲ್ಲವೇಕೆ? ಎಂದು ಅಲ್ಲಾಹು ಕೇಳುತ್ತಿರುವನು.

1 ಪ್ರವಾದಿ(ﷺ)ರವರಿಗೆ ಮತ್ತು ಸಹಾಬಾಗಳಿಗೆ ಅಲ್ಲಾಹು ವಾಗ್ದಾನ ಮಾಡಿರುವ ನಿರ್ಣಾಯಕ ವಿಜಯಕ್ಕೆ ಮತ್ತು ಸತ್ಯನಿಷೇಧಿಗಳ ಹೀನಾಯ ಸೋಲಿಗೆ ಸಮಯವಾಗುವ ತನಕ.

2 ಅಲ್ಲಾಹುವಿನ ಅಧಿಕಾರ ಮತ್ತು ಹಕ್ಕುಗಳನ್ನು ಇತರರಿಗೆ ಹಂಚಿಕೊಡುವವರು, ಹಾಗೆ ಹಂಚಲು ಏನಾದರೂ ಆಧಾರಪುರಾವೆಗಳಿವೆಯೇ ಎಂಬುದನ್ನು ಅನ್ವೇಷಿಸುವುದಿಲ್ಲ. ಗಹನವಾದ ತಿಳುವಳಿಕೆಯಿಲ್ಲದ ಬಾಯಿಮಾತುಗಳ ಮೂಲಕ ದಿವ್ಯತ್ವವನ್ನು ಸೃಷ್ಟಿಸುವುದೇ ಅವರ ಜಾಯಮಾನವಾಗಿರುತ್ತದೆ.

ಆಕರ್ಷಕಗೊಳಿಸಲಾಗಿದೆ ಮತ್ತು ಅವರನ್ನು (ನೈಜ) ಮಾರ್ಗದಿಂದ ತಡೆಯಲಾಗಿದೆ. ಅಲ್ಲಾಹು ಯಾರನ್ನಾದರೂ ಪಥಭ್ರಷ್ಟ ಗೊಳಿಸಿದರೆ ಅವನಿಗೆ ಮಾರ್ಗದರ್ಶನ ನೀಡುವವರು ಯಾರೂ ಇಲ್ಲ.

لَّهُمْ عَذَابٌ فِى ٱلْحَيَوٰةِ ٱلدُّنْيَا ۖ وَلَعَذَابُ ٱلْءَاخِرَةِ أَشَقُّ ۖ وَمَا لَهُم مِّنَ ٱللَّهِ مِن وَاقٍ ﴿٣٤﴾

34. ಅವರಿಗೆ ಇಹಲೋಕದಲ್ಲಿ ಶಿಕ್ಷೆಯಿದೆ. ಪರಲೋಕದ ಶಿಕ್ಷೆಯಂತೂ ಅತಿ ದಾರುಣವಾಗಿದೆ. ಅಲ್ಲಾಹುವಿನ ಶಿಕ್ಷೆಯಿಂದ ಅವರನ್ನು ಪಾರುಗೊಳಿಸುವವರು ಯಾರೂ ಇರಲಾರರು.

۞ مَّثَلُ ٱلْجَنَّةِ ٱلَّتِى وُعِدَ ٱلْمُتَّقُونَ ۖ تَجْرِى مِن تَحْتِهَا ٱلْأَنْهَـٰرُ ۖ أُكُلُهَا دَآئِمٌ وَظِلُّهَا ۚ تِلْكَ عُقْبَى ٱلَّذِينَ ٱتَّقَوا۟ ۖ وَّعُقْبَى ٱلْكَـٰفِرِينَ ٱلنَّارُ ﴿٣٥﴾

35. ಭಯಭಕ್ತಿ ಪಾಲಿಸುವವರಿಗೆ ವಾಗ್ದಾನ ಮಾಡಲಾಗಿರುವ ಸ್ವರ್ಗವು (ಹೀಗಿದೆ:) ಅದರ ತಳಭಾಗದಲ್ಲಿ ನದಿಗಳು ಹರಿಯುತ್ತಿರುವುವು. ಅದರ ಫಲ ಮತ್ತು ಅದರ ನೆರಳು ಶಾಶ್ವತವಾಗಿರುವುದು. ಅದು ಭಯಭಕ್ತಿ ಪಾಲಿಸುವವರ ಪರ್ಯಾವಸಾನವಾಗಿದೆ! ಸತ್ಯನಿಷೇಧಿಗಳ ಪರ್ಯಾವಸಾನವು ನರಕಾಗ್ನಿಯಾಗಿದೆ.

وَٱلَّذِينَ ءَاتَيْنَـٰهُمُ ٱلْكِتَـٰبَ يَفْرَحُونَ بِمَآ أُنزِلَ إِلَيْكَ ۖ وَمِنَ ٱلْأَحْزَابِ مَن يُنكِرُ بَعْضَهُۥ ۚ قُلْ إِنَّمَآ أُمِرْتُ أَنْ أَعْبُدَ ٱللَّهَ وَلَآ أُشْرِكَ بِهِۦٓ ۚ إِلَيْهِ أَدْعُوا۟ وَإِلَيْهِ مَـَٔابِ ﴿٣٦﴾

36. ನಾವು (ಈ ಹಿಂದೆ) ಯಾರಿಗೆ ಗ್ರಂಥವನ್ನು ನೀಡಿರುವೆವೋ ತಮಗೆ ಅವತೀರ್ಣಗೊಂಡಿರು ವುದರಲ್ಲಿ(ಕುರ್‌ಆನ್‌ನಲ್ಲಿ) ಅವರು ಹರ್ಷಪಡುತ್ತಿರುವರು. ಅದರ ಕೆಲವು ಭಾಗಗಳನ್ನು ನಿಷೇಧಿಸುವವರೂ ಅವರ ಪಂಗಡದಲ್ಲಿರುವರು. ತಾವು ಹೇಳಿರಿ: 'ನನ್ನೊಂದಿಗೆ ಆಜ್ಞಾಪಿಸಲಾಗಿರುವುದು ಅಲ್ಲಾಹುವನ್ನು ಆರಾಧಿಸಲು ಮತ್ತು ಅವನೊಂದಿಗೆ ಯಾವುದೇ ಸಹಭಾಗಿತ್ವ ಮಾಡದಿರಲು ಮಾತ್ರವಾಗಿದೆ. ನಾನು (ನಿಮ್ಮನ್ನು) ಕರೆಯುತ್ತಿರುವುದು ಅವನೆಡೆಗಾಗಿದೆ. ನನ್ನ ಮರಳುವಿಕೆಯೂ ಅವನೆಡೆಗಾಗಿದೆ'.

وَكَذَٰلِكَ أَنزَلۡنَٰهُ حُكۡمًا عَرَبِيّٗاۚ وَلَئِنِ ٱتَّبَعۡتَ أَهۡوَآءَهُم بَعۡدَ مَا جَآءَكَ مِنَ ٱلۡعِلۡمِ مَا لَكَ مِنَ ٱللَّهِ مِن وَلِيّٖ وَلَا وَاقٖ ٣٧

**37.** ಹೀಗೆ ನಾವಿದನ್ನು (ಕುರ್‌ಆನನ್ನು) ಅರಬಿ ಭಾಷೆಯಲ್ಲಿರುವ ನಿಯಮ ಶಾಸ್ತ್ರವನ್ನಾಗಿ ಅವತೀರ್ಣಗೊಳಿಸಿರುವೆವು. ತಮ್ಮೆಡೆಗೆ ಜ್ಞಾನವು ಬಂದ ಬಳಿಕವೂ ತಾವು ಅವರ ದೇಹೇಚ್ಛೆಗಳನ್ನು ಅನುಸರಿಸುವುದಾದರೆ ಅಲ್ಲಾಹುವಿನ ಶಿಕ್ಷೆಯಿಂದ ತಮ್ಮನ್ನು ಪಾರು ಮಾಡಲು ಯಾವುದೇ ರಕ್ಷಕನಾಗಲಿ, ಕಾವಲುಗಾರನಾಗಲಿ ತಮಗಿರಲಾರರು.

وَلَقَدۡ أَرۡسَلۡنَا رُسُلٗا مِّن قَبۡلِكَ وَجَعَلۡنَا لَهُمۡ أَزۡوَٰجٗا وَذُرِّيَّةٗۚ وَمَا كَانَ لِرَسُولٍ أَن يَأۡتِيَ بِـَٔايَةٍ إِلَّا بِإِذۡنِ ٱللَّهِۗ لِكُلِّ أَجَلٖ كِتَابٞ ٣٨

**38.** ತಮಗಿಂತ ಮುಂಚೆಯೂ ನಾವು ಸಂದೇಶವಾಹಕರನ್ನು ಕಳುಹಿಸಿರುವೆವು. ಅವರಿಗೆ ನಾವು ಪತ್ನಿಯರನ್ನೂ ಸಂತತಿಗಳನ್ನೂ ಮಾಡಿಕೊಟ್ಟಿರುವೆವು. ಅಲ್ಲಾಹುವಿನ ಅನುಮತಿಯ ವಿನಾ ಯಾವುದೇ ಒಂದು ದೃಷ್ಟಾಂತವನ್ನು ತರಲು ಯಾವ ಸಂದೇಶವಾಹಕನಿಗೂ ಸಾಧ್ಯವಾಗಲಾರದು. ಪ್ರತಿಯೊಂದು ಕಾಲಕ್ಕೂ ಒಂದು (ಆಧಾರ ಪ್ರಮಾಣ) ಗ್ರಂಥವಿರುವುದು.

يَمۡحُواْ ٱللَّهُ مَا يَشَآءُ وَيُثۡبِتُۖ وَعِندَهُۥٓ أُمُّ ٱلۡكِتَٰبِ ٣٩

**39.** ಅಲ್ಲಾಹು ತಾನಿಚ್ಛಿಸಿದ್ದನ್ನು ಅಳಿಸುವನು ಮತ್ತು ಅವನು (ತಾನಿಚ್ಛಿಸಿದ್ದನ್ನು) ಸ್ಥಿರಗೊಳಿಸುವನು. ಮೂಲಗ್ರಂಥವಿರುವುದು ಅವನ ಬಳಿಯಲ್ಲೇ ಆಗಿದೆ.[1]

وَإِن مَّا نُرِيَنَّكَ بَعۡضَ ٱلَّذِي نَعِدُهُمۡ أَوۡ نَتَوَفَّيَنَّكَ فَإِنَّمَا عَلَيۡكَ ٱلۡبَلَٰغُ وَعَلَيۡنَا ٱلۡحِسَابُ ٤٠

**40.** ನಾವು ಅವರಿಗೆ ಮುನ್ನೆಚ್ಚರಿಕೆ ನೀಡಿರುವವುಗಳ ಪೈಕಿ ಕೆಲವನ್ನು ನಾವು ತಮಗೆ ತೋರಿಸಿಕೊಟ್ಟರೂ ಅಥವಾ (ಅದಕ್ಕಿಂತ ಮುಂಚೆಯೇ) ನಾವು ತಮ್ಮನ್ನು ಮೃತಪಡಿಸಿದರೂ ತಮ್ಮ ಮೇಲಿರುವುದು ಸಂದೇಶವನ್ನು ತಲುಪಿಸುವ ಹೊಣೆ

1 ಕಿತಾಬ್ ಎಂಬ ಪದಕ್ಕೆ ಗ್ರಂಥ, ದಾಖಲೆ ಇತ್ಯಾದಿ ಅರ್ಥಗಳಿವೆ. ಪ್ರಸ್ತುತ ಸೂಕ್ತಿಯು ಅಲ್ಲಾಹುವಿನ ಪ್ರಾಪಂಚಿಕ ಆಡಳಿತದಲ್ಲಿನ ಕಾರ್ಯವಿಧಾನದ ಬಗ್ಗೆ ಮೊತ್ತವಾಗಿ ಪರಾಮರ್ಶಿಸುತ್ತದೆ ಎಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಎಲ್ಲ ವಿಷಯಗಳಿಗೂ ಅವನು ಕಾಲಾವಧಿಯನ್ನು ನಿಶ್ಚಯಿಸಿ ದಾಖಲಿಸಿದ್ದಾನೆ. ಎಲ್ಲ ವಿಷಯಗಳಿಗೂ ಅವನು ಕಟ್ಟಳೆಗಳನ್ನಿಟ್ಟಿದ್ದಾನೆ. ಕಾಲಾವಧಿಯನ್ನು ನಿಶ್ಚಯಿಸಿ ಅವನು ಗ್ರಂಥಗಳನ್ನು ಅವತೀರ್ಣಗೊಳಿಸುತ್ತಾನೆ. ಶಾಸನಗಳಲ್ಲಿ ಕೆಲವನ್ನು ಅವನು ಕಾಲಕ್ಕನುಸಾರವಾಗಿ ಬದಲಾಯಿಸುತ್ತಾನೆ ಮತ್ತು ಕೆಲವನ್ನು ಸ್ಥಿರವಾಗಿಡುತ್ತಾನೆ. ಮೂಲಗ್ರಂಥವೆಂದರೆ ಜಗದೊಡೆಯನ ಬಳಿಯಿರುವ ದಾಖಲೆಯಾಗಿದೆ.

ಮಾತ್ರವಾಗಿದೆ.[1] ವಿಚಾರಣೆ ಮಾಡಬೇಕಾದ ಹೊಣೆಯಿರುವುದು ನಮ್ಮ ಮೇಲಾಗಿದೆ.

41. ನಾವು ಭೂಮಿಯನ್ನು ಅದರ ವಿವಿಧ ತುದಿಗಳಿಂದ ಕುಗ್ಗಿಸುತ್ತಿರುವುದನ್ನು ಅವರು ಕಾಣಲಿಲ್ಲವೇ?[2] ಅಲ್ಲಾಹು ವಿಧಿ ನೀಡುವನು. ಅವನ ವಿಧಿಯನ್ನು ತಿದ್ದುಪಡಿ ಮಾಡುವವರಾರೂ ಇಲ್ಲ. ಅವನು ಅತಿಶೀಘ್ರವಾಗಿ ವಿಚಾರಣೆ ಮಾಡುವವನಾಗಿರುವನು.

أَوَ لَمۡ يَرَوۡاْ أَنَّا نَأۡتِي ٱلۡأَرۡضَ نَنقُصُهَا مِنۡ أَطۡرَافِهَاۚ وَٱللَّهُ يَحۡكُمُ لَا مُعَقِّبَ لِحُكۡمِهِۦۚ وَهُوَ سَرِيعُ ٱلۡحِسَابِ ٤١

42. ಇವರಿಗಿಂತ ಮುಂಚಿನವರೂ ತಂತ್ರ ಹೂಡಿರುವರು. ಆದರೆ ತಂತ್ರಗಳೆಲ್ಲವೂ ಇರುವುದು ಅಲ್ಲಾಹುವಿಗಿರುವುದಾಗಿದೆ. ಪ್ರತಿಯೊಬ್ಬ ವ್ಯಕ್ತಿ ಏನು ಮಾಡುತ್ತಿರುವನು ಎಂಬುದನ್ನು ಅವನು ಅರಿಯುವನು. ಜಗತ್ತಿನ ಪರ್ಯಾವಸಾನವು ಯಾರ ಪಾಲಿಗೆ ಅನುಕೂಲಕರವಾಗಿರುವುದೆಂದು ಸತ್ಯನಿಷೇಧಿಗಳು ಸದ್ಯವೇ ಅರಿಯಲಿರುವರು.

وَقَدۡ مَكَرَ ٱلَّذِينَ مِن قَبۡلِهِمۡ فَلِلَّهِ ٱلۡمَكۡرُ جَمِيعٗاۖ يَعۡلَمُ مَا تَكۡسِبُ كُلُّ نَفۡسٖۗ وَسَيَعۡلَمُ ٱلۡكُفَّٰرُ لِمَنۡ عُقۡبَى ٱلدَّارِ ٤٢

43. ಸತ್ಯನಿಷೇಧಿಗಳು ಹೇಳುವರು: 'ತಾವು (ಅಲ್ಲಾಹುವಿನಿಂದ) ಕಳುಹಿಸಲ್ಪಟ್ಟವರಲ್ಲ'. ತಾವು ಹೇಳಿರಿ: 'ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅಲ್ಲಾಹು ಸಾಕು ಮತ್ತು ಯಾರ ಬಳಿ ಗ್ರಂಥದ ಜ್ಞಾನವಿದೆಯೋ ಅವರು ಸಹ ಸಾಕು.

وَيَقُولُ ٱلَّذِينَ كَفَرُواْ لَسۡتَ مُرۡسَلٗاۚ قُلۡ كَفَىٰ بِٱللَّهِ شَهِيدَۢا بَيۡنِي وَبَيۡنَكُمۡ وَمَنۡ عِندَهُۥ عِلۡمُ ٱلۡكِتَٰبِ ٤٣

---

1 ಯಾರನ್ನು ಯಾವಾಗ ಹೇಗೆ ಶಿಕ್ಷಿಸಬೇಕೆಂಬುದನ್ನು ತೀರ್ಮಾನಿಸುವವನು ಅಲ್ಲಾಹು ಮಾತ್ರವಾಗಿದ್ದಾನೆ. ಕೆಲವೊಮ್ಮೆ ಪ್ರವಾದಿಗಳು ನೋಡುತ್ತಿದ್ದ ಹಾಗೆಯೇ ಅಲ್ಲಾಹುವಿನ ಶಿಕ್ಷಾಕ್ರಮವು ಜರಗಲೂಬಹುದು ಅಥವಾ ಕೆಲವೊಮ್ಮೆ ಅಕ್ರಮಿಗಳಿಗೆ ಒಂದು ಅವಧಿಯವರೆಗೆ ಕಾಲಾವಕಾಶ ನೀಡಲಾಗಲೂಬಹುದು.

2 ಒಂದು ಕಾಲದಲ್ಲಿ ಅರೇಬಿಯ ಸಂಪೂರ್ಣವಾಗಿ ಬಹುದೇವಾರಾಧಕರ ಅಧೀನದಲ್ಲಿತ್ತು. ಅರೇಬಿಯ ಭೂಪಟದಲ್ಲಿ ಇಸ್ಲಾಮ್‌ಗೆ ಯಾವುದೇ ಸ್ಥಾನವಿರಲಿಲ್ಲ. ಆದರೆ ಇಸ್ಲಾಮೀ ಸಂದೇಶಪ್ರಚಾರ ಮತ್ತು ಧರ್ಮ ಸಮರವು ಗೆಲುವು ಸಾಧಿಸಲು ಆರಂಭಗೊಂಡಂದಿನಿಂದ ಬಹುದೇವಾರಾಧಕರ ವಶದಲ್ಲಿದ್ದ ಪ್ರದೇಶಗಳು ಕುಗ್ಗಲಾರಂಭಿಸಿದವು. ಕಾಲಕ್ರಮೇಣ ಅರೇಬಿಯಾ ಸಂಪೂರ್ಣವಾಗಿ ಇಸ್ಲಾಮೀ ರಾಷ್ಟ್ರದ ಭಾಗವಾಗಿ ಮಾರ್ಪಟ್ಟಿತು. ಆ ಬಳಿಕ ಇತರ ರಾಜ್ಯಗಳಿಗೂ ಇಸ್ಲಾಮ್ ವ್ಯಾಪಿಸಿತು.

## ಇಬ್ರಾಹೀಮ್

## سُورَةُ إِبۡرَاهِيمَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 52

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್ ಲಾಮ್ ರಾ. ಇದು ತಾವು ಮನುಷ್ಯರನ್ನು ಅವರ ರಬ್‌ನ ಅನುಮತಿಯ ಮೇರೆಗೆ ಅಂಧಕಾರಗಳಿಂದ ಪ್ರಕಾಶದೆಡೆಗೆ, ಪ್ರತಾಪಶಾಲಿಯೂ ಸ್ತುತ್ಯರ್ಹನೂ ಆಗಿರುವ (ಅಲ್ಲಾಹುವಿನ) ಮಾರ್ಗದೆಡೆಗೆ ಹೊರತರಲು ತಮಗೆ ನಾವು ಅವತೀರ್ಣಗೊಳಿಸಿರುವ ಗ್ರಂಥವಾಗಿದೆ.

الٓرۚ كِتَٰبٌ أَنزَلۡنَٰهُ إِلَيۡكَ لِتُخۡرِجَ ٱلنَّاسَ مِنَ ٱلظُّلُمَٰتِ إِلَى ٱلنُّورِ بِإِذۡنِ رَبِّهِمۡ إِلَىٰ صِرَٰطِ ٱلۡعَزِيزِ ٱلۡحَمِيدِ ١

2. ಆಕಾಶಗಳಲ್ಲಿರುವುದು ಮತ್ತು ಭೂಮಿಯಲ್ಲಿರುವುದು ಯಾರಿಗೆ ಸೇರಿದೆಯೋ ಆ ಅಲ್ಲಾಹುವಿನ (ಮಾರ್ಗದೆಡೆಗೆ). ಸತ್ಯನಿಷೇಧಿಗಳಿಗೆ ಕಠಿಣ ಶಿಕ್ಷೆಯ ನಿಮಿತ್ತ ವಿನಾಶವು ಕಾದಿದೆ.

ٱللَّهِ ٱلَّذِي لَهُۥ مَا فِي ٱلسَّمَٰوَٰتِ وَمَا فِي ٱلۡأَرۡضِۗ وَوَيۡلٞ لِّلۡكَٰفِرِينَ مِنۡ عَذَابٖ شَدِيدٍ ٢

3. ಪರಲೋಕಕ್ಕಿಂತಲೂ ಹೆಚ್ಚಾಗಿ ಇಹಲೋಕವನ್ನು ಪ್ರೀತಿಸುವವರು, ಅಲ್ಲಾಹುವಿನ ಮಾರ್ಗದಿಂದ ಜನರನ್ನು ತಡೆಗಟ್ಟುವವರು ಮತ್ತು ಅದನ್ನು (ಆ ಮಾರ್ಗವನ್ನು) ವಕ್ರಗೊಳಿಸಲು ಆಶಿಸುವವರು ಯಾರೋ ಅವರಿಗೆ. ಅವರು ಅತಿವಿದೂರವಾದ ಪಥಭ್ರಷ್ಟತೆಯಲ್ಲಿರುವರು.

ٱلَّذِينَ يَسۡتَحِبُّونَ ٱلۡحَيَوٰةَ ٱلدُّنۡيَا عَلَى ٱلۡأٓخِرَةِ وَيَصُدُّونَ عَن سَبِيلِ ٱللَّهِ وَيَبۡغُونَهَا عِوَجًاۚ أُوْلَٰٓئِكَ فِي ضَلَٰلِۭ بَعِيدٖ ٣

4. ನಾವು ಯಾವುದೇ ಸಂದೇಶವಾಹಕರನ್ನೂ ಅವರು ತಮ್ಮ ಜನತೆಗೆ (ಸಂಗತಿಗಳನ್ನು) ವಿವರಿಸುವ ಸಲುವಾಗಿ ಅವರ ಭಾಷೆಯಲ್ಲಿಯೇ (ಸಂದೇಶ ನೀಡಿದ) ಹೊರತು ಕಳುಹಿಸಿಲ್ಲ. ಅಲ್ಲಾಹು ತಾನಿಚ್ಛಿಸುವವರನ್ನು ಪಥಭ್ರಷ್ಟಗೊಳಿಸುವನು ಮತ್ತು ತಾನಿಚ್ಛಿಸುವವರನ್ನು ಸನ್ಮಾರ್ಗಕ್ಕೆ ಸೇರಿಸುವನು. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَمَآ أَرۡسَلۡنَا مِن رَّسُولٍ إِلَّا بِلِسَانِ قَوۡمِهِۦ لِيُبَيِّنَ لَهُمۡۖ فَيُضِلُّ ٱللَّهُ مَن يَشَآءُ وَيَهۡدِي مَن يَشَآءُۚ وَهُوَ ٱلۡعَزِيزُ ٱلۡحَكِيمُ ٤

5. ‘ತಮ್ಮ ಜನತೆಯನ್ನು ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತನ್ನಿರಿ ಮತ್ತು ಅಲ್ಲಾಹುವಿನ (ಅನುಗ್ರಹದ) ದಿನಗಳ ಕುರಿತು ಅವರಿಗೆ ನೆನಪಿಸಿಕೊಡಿರಿ’ ಎಂಬ ಆದೇಶದೊಂದಿಗೆ ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳೊಂದಿಗೆ ಕಳುಹಿಸಿದೆವು. ಅತ್ಯಧಿಕ ಸಹನೆ ಪಾಲಿಸುವ ಮತ್ತು ಅತಿಹೆಚ್ಚು ಕೃತಜ್ಞತೆ ಸಲ್ಲಿಸುವ ಎಲ್ಲರಿಗೂ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ.

وَلَقَدْ أَرْسَلْنَا مُوسَىٰ بِـَٔايَٰتِنَآ أَنْ أَخْرِجْ
قَوْمَكَ مِنَ ٱلظُّلُمَٰتِ إِلَى ٱلنُّورِ وَذَكِّرْهُم
بِأَيَّىٰمِ ٱللَّهِ ۚ إِنَّ فِى ذَٰلِكَ لَءَايَٰتٍ لِّكُلِّ صَبَّارٍ
شَكُورٍ ﴿٥﴾

6. ಮೂಸಾ ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ): ‘ನಿಮಗೆ ಘೋರ ಶಿಕ್ಷೆಯನ್ನು ನೀಡುತ್ತಿದ್ದ, ನಿಮ್ಮ ಗಂಡುಮಕ್ಕಳನ್ನು ವಧಿಸುತ್ತಿದ್ದ, ನಿಮ್ಮ ಸ್ತ್ರೀಯರನ್ನು ಜೀವಂತ ಬಿಡುತ್ತಿದ್ದ ಫಿರ್‌ಔನನ ಜನರಿಂದ ನಿಮ್ಮನ್ನು ರಕ್ಷಿಸಿದ ಸಂದರ್ಭದಲ್ಲಿ ಅಲ್ಲಾಹು ನಿಮ್ಮೊಂದಿಗೆ ತೋರಿಸಿದ ಔದಾರ್ಯವನ್ನು ಸ್ಮರಿಸಿರಿ. ಖಂಡಿತವಾಗಿಯೂ ಅದರಲ್ಲಿ ನಿಮ್ಮ ರಬ್‌ನ ವತಿಯ ಮಹಾ ಪರೀಕ್ಷೆಯಿತ್ತು’.

وَإِذْ قَالَ مُوسَىٰ لِقَوْمِهِ ٱذْكُرُوا۟ نِعْمَةَ ٱللَّهِ
عَلَيْكُمْ إِذْ أَنجَىٰكُم مِّنْ ءَالِ فِرْعَوْنَ
يَسُومُونَكُمْ سُوٓءَ ٱلْعَذَابِ وَيُذَبِّحُونَ
أَبْنَآءَكُمْ وَيَسْتَحْيُونَ نِسَآءَكُمْ ۚ وَفِى
ذَٰلِكُم بَلَآءٌ مِّن رَّبِّكُمْ عَظِيمٌ ﴿٦﴾

7. ‘ನೀವು ಕೃತಜ್ಞತೆ ಸಲ್ಲಿಸುವುದಾದರೆ ಖಂಡಿತ ವಾಗಿಯೂ ನಾನು ನಿಮಗೆ (ಅನುಗ್ರಹವನ್ನು) ಹೆಚ್ಚಿಸಿಕೊಡುವೆನು. ಆದರೆ ನೀವು ಕೃತಘ್ನರಾಗುವುದಾದರೆ ಖಂಡಿತವಾಗಿಯೂ ನನ್ನ ಶಿಕ್ಷೆಯು ಅತಿ ಕಠಿಣವಾಗಿದೆ’ ಎಂದು ನಿಮ್ಮ ರಬ್ ಘೋಷಿಸಿದ ಸಂದರ್ಭ.

وَإِذْ تَأَذَّنَ رَبُّكُمْ لَئِن شَكَرْتُمْ
لَأَزِيدَنَّكُمْ ۖ وَلَئِن كَفَرْتُمْ إِنَّ عَذَابِى
لَشَدِيدٌ ﴿٧﴾

8. ಮೂಸಾ ಹೇಳಿದರು: ‘ನೀವು ಮತ್ತು ಭೂಮಿಯಲ್ಲಿರುವವರೆಲ್ಲರೂ ಒಟ್ಟಾಗಿ ನಿಷೇಧಿಸಿದರೂ ಖಂಡಿತವಾಗಿಯೂ ಅಲ್ಲಾಹು ಪರಾಶ್ರಯ ಮುಕ್ತನೂ ಸ್ತುತ್ಯರ್ಹನೂ ಆಗಿರುವನು (ಎಂಬುದನ್ನು ನೀವು ಅರಿತುಕೊಳ್ಳಿರಿ)’.[1]

وَقَالَ مُوسَىٰٓ إِن تَكْفُرُوٓا۟ أَنتُمْ وَمَن فِى
ٱلْأَرْضِ جَمِيعًا فَإِنَّ ٱللَّهَ لَغَنِىٌّ حَمِيدٌ ﴿٨﴾

1 ಮಾನವ ಕುಲವು ಸಂಪೂರ್ಣವಾಗಿ ಅಲ್ಲಾಹುವನ್ನು ನಿಷೇಧಿಸಿದರೂ ಅಲ್ಲಾಹುವಿಗೆ ಅದರಲ್ಲಿ ಯಾವುದೇ ನಷ್ಟವಿಲ್ಲ. ಆದರೆ ಅವರಿಗೇ ಅಪಾರ ನಷ್ಟವನ್ನು ಅನುಭವಿಸಬೇಕಾಗಿ ಬರುವುದು.

9. ನೂಹ್‌ರ ಜನತೆ, ಆದ್, ಸಮೂದ್ ಜನಾಂಗ ಮತ್ತು ಅಲ್ಲಾಹುವಿಗೆ ಮಾತ್ರ (ನಿಖರವಾಗಿ) ತಿಳಿದಿರುವ ಅವರ ನಂತರ ಬಂದ ಜನಾಂಗಗಳು, ಇವರೆಲ್ಲರನ್ನೊಳಗೊಂಡ ನಿಮ್ಮ ಪೂರ್ವಿಕರ ವೃತ್ತಾಂತವು ನಿಮ್ಮೆಡೆಗೆ ಬಂದಿಲ್ಲವೇ? ನಮ್ಮ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಾಗ ಅವರು ತಮ್ಮ ಕೈಗಳನ್ನು ತಮ್ಮ ಬಾಯಿಯೆಡೆಗೆ[1] ಮರಳಿಸಿ 'ಖಂಡಿತವಾಗಿಯೂ ನೀವು ಯಾವುದರೊಂದಿಗೆ ಕಳುಹಿಸಲ್ಪಟ್ಟಿರುವಿರೋ ಅದರಲ್ಲಿ ನಾವು ಅವಿಶ್ವಾಸವಿಟ್ಟಿರುವೆವು. ನೀವು ಯಾವುದರೆಡೆಗೆ ನಮ್ಮನ್ನು ಆಹ್ವಾನಿಸುತ್ತಿರುವಿರೋ ಅದರ ಕುರಿತು ಖಂಡಿತವಾಗಿಯೂ ನಾವು ಅವಿಶ್ವಾಸಜನಕ ಸಂದೇಹದಲ್ಲಿರುವೆವು' ಎಂದು ಹೇಳಿದರು.

أَلَمۡ يَأۡتِكُمۡ نَبَؤُاْ ٱلَّذِينَ مِن قَبۡلِكُمۡ قَوۡمِ
نُوحٖ وَعَادٖ وَثَمُودَ وَٱلَّذِينَ مِنۢ بَعۡدِهِمۡ
لَا يَعۡلَمُهُمۡ إِلَّا ٱللَّهُۚ جَآءَتۡهُمۡ رُسُلُهُم
بِٱلۡبَيِّنَٰتِ فَرَدُّوٓاْ أَيۡدِيَهُمۡ فِيٓ أَفۡوَٰهِهِمۡ
وَقَالُوٓاْ إِنَّا كَفَرۡنَا بِمَآ أُرۡسِلۡتُم بِهِۦ وَإِنَّا
لَفِي شَكّٖ مِّمَّا تَدۡعُونَنَآ إِلَيۡهِ مُرِيبٖ ٩

10. ಅವರೆಡೆಗೆ ಕಳುಹಿಸಲಾದ ಸಂದೇಶವಾಹಕರು ಹೇಳಿದರು: 'ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾಗಿರುವ ಅಲ್ಲಾಹುವಿನ ಕುರಿತು ನಿಮಗೆ ಸಂದೇಹವೇ? ನಿಮಗೆ ನಿಮ್ಮ ಪಾಪಗಳನ್ನು ಮನ್ನಿಸಿಕೊಡಲು ಮತ್ತು ನಿರ್ಣಿತವಾದ ಒಂದು ಅವಧಿಯವರೆಗೆ ನಿಮಗೆ ಕಾಲಾವಕಾಶವನ್ನು ಹೆಚ್ಚಿಸಿಕೊಡಲು ಅವನು ನಿಮ್ಮನ್ನು ಕರೆಯುತ್ತಿರುವನು'. ಅವರು (ಜನರು) ಹೇಳಿದರು: 'ನೀವು ನಮ್ಮಂತಿರುವ ಮನುಷ್ಯರು ಮಾತ್ರವಾಗಿರುವಿರಿ. ನಮ್ಮ ಪೂರ್ವಿಕರು ಯಾವುದನ್ನು ಆರಾಧಿಸುತ್ತಿದ್ದರೋ ಅದರಿಂದ ನಮ್ಮನ್ನು ವಿಮುಖರನ್ನಾಗಿಸಲು ನೀವು ಇಚ್ಛಿಸುತ್ತಿರುವಿರಿ. ಆದ್ದರಿಂದ ನೀವು ನಮಗೆ ಸ್ಪಷ್ಟವಾದ ಯಾವುದಾದರೂ ಆಧಾರ ಪ್ರಮಾಣವನ್ನು ತಂದುಕೊಡಿರಿ'.

۞قَالَتۡ رُسُلُهُمۡ أَفِي ٱللَّهِ شَكّٞ فَاطِرِ
ٱلسَّمَٰوَٰتِ وَٱلۡأَرۡضِۖ يَدۡعُوكُمۡ لِيَغۡفِرَ لَكُم
مِّن ذُنُوبِكُمۡ وَيُؤَخِّرَكُمۡ إِلَىٰٓ أَجَلٖ مُّسَمّٗىۚ
قَالُوٓاْ إِنۡ أَنتُمۡ إِلَّا بَشَرٞ مِّثۡلُنَا تُرِيدُونَ أَن
تَصُدُّونَا عَمَّا كَانَ يَعۡبُدُ ءَابَآؤُنَا فَأۡتُونَا
بِسُلۡطَٰنٖ مُّبِينٖ ١٠

1 ಕೋಪದಿಂದ ಕೈಕಚ್ಚಿದರು ಅಥವಾ ಪ್ರತಿಭಟನೆಯನ್ನು ಸೂಚಿಸುವ ಸಲುವಾಗಿ ಬಾಯಿಮುಚ್ಚಿದರು ಎಂದು ಅರ್ಥೈಸಬಹುದು.

قَالَتْ لَهُمْ رُسُلُهُمْ إِن نَّحْنُ إِلَّا بَشَرٌ مِّثْلُكُمْ وَلَٰكِنَّ ٱللَّهَ يَمُنُّ عَلَىٰ مَن يَشَآءُ مِنْ عِبَادِهِۦ ۖ وَمَا كَانَ لَنَآ أَن نَّأْتِيَكُم بِسُلْطَٰنٍ إِلَّا بِإِذْنِ ٱللَّهِ ۚ وَعَلَى ٱللَّهِ فَلْيَتَوَكَّلِ ٱلْمُؤْمِنُونَ ﴿١١﴾

**11.** ಅವರೆಡೆಗೆ ಕಳುಹಿಸಲಾದ ಸಂದೇಶವಾಹಕರು ಅವರೊಂದಿಗೆ ಹೇಳಿದರು: 'ನಾವು ನಿಮ್ಮಂತಿರುವ ಮನುಷ್ಯರು ಮಾತ್ರವಾಗಿರುವೆವು. ಆದರೆ ಅಲ್ಲಾಹು ತನ್ನ ದಾಸರ ಪೈಕಿ ತಾನಿಚ್ಛಿಸುವವರ ಮೇಲೆ ಔದಾರ್ಯ ತೋರುವನು. ಅಲ್ಲಾಹುವಿನ ಅನುಮತಿಯ ವಿನಾ ನಿಮಗೆ ಯಾವುದಾದರೂ ಪುರಾವೆಯನ್ನು ತಂದುಕೊಡಲು ನಮ್ಮಿಂದಾಗದು. ಸತ್ಯವಿಶ್ವಾಸಿಗಳು ಅಲ್ಲಾಹುವಿನ ಮೇಲೆ ಭರವಸೆಯಿಡಲಿ.

وَمَا لَنَآ أَلَّا نَتَوَكَّلَ عَلَى ٱللَّهِ وَقَدْ هَدَىٰنَا سُبُلَنَا ۚ وَلَنَصْبِرَنَّ عَلَىٰ مَآ ءَاذَيْتُمُونَا ۚ وَعَلَى ٱللَّهِ فَلْيَتَوَكَّلِ ٱلْمُتَوَكِّلُونَ ﴿١٢﴾

**12.** ಅಲ್ಲಾಹು ನಮ್ಮನ್ನು ನಮ್ಮ ಮಾರ್ಗಗಳೆಡೆಗೆ ಮುನ್ನಡೆಸಿರುವಾಗ ಅವನ ಮೇಲೆ ಭರವಸೆಯಿಡದಿರಲು ನಮಗೇನಾಗಿದೆ? ನೀವು ನಮಗೆ ನೀಡಿದ ಹಿಂಸೆಗಳನ್ನು ಖಂಡಿತವಾಗಿಯೂ ನಾವು ಸಹಿಸಿಕೊಳ್ಳುವೆವು. ಭರವಸೆಯಿಡುವವರು ಅಲ್ಲಾಹುವಿನ ಮೇಲೆ ಭರವಸೆಯಿಡಲಿ'.

وَقَالَ ٱلَّذِينَ كَفَرُوا۟ لِرُسُلِهِمْ لَنُخْرِجَنَّكُم مِّنْ أَرْضِنَآ أَوْ لَتَعُودُنَّ فِى مِلَّتِنَا ۖ فَأَوْحَىٰٓ إِلَيْهِمْ رَبُّهُمْ لَنُهْلِكَنَّ ٱلظَّٰلِمِينَ ﴿١٣﴾ وَلَنُسْكِنَنَّكُمُ ٱلْأَرْضَ مِنۢ بَعْدِهِمْ ۚ ذَٰلِكَ لِمَنْ خَافَ مَقَامِى وَخَافَ وَعِيدِ ﴿١٤﴾

**13-14.** ತಮ್ಮೆಡೆಗೆ ಕಳುಹಿಸಲಾದ ಸಂದೇಶವಾಹಕರೊಂದಿಗೆ ಅವಿಶ್ವಾಸಿಗಳು ಹೇಳಿದರು: 'ಖಂಡಿತವಾಗಿಯೂ ನಾವು ನಿಮ್ಮನ್ನು ನಮ್ಮ ಊರಿನಿಂದ ಹೊರಗಟ್ಟುವೆವು ಅಥವಾ ನೀವು ನಮ್ಮ ಧರ್ಮಕ್ಕೆ ಮರಳಲೇಬೇಕು'. ಆಗ ಅವರಿಗೆ (ಆ ಸಂದೇಶವಾಹಕರಿಗೆ) ಅವರ ರಬ್ 'ಖಂಡಿತವಾಗಿಯೂ ನಾವು ಆ ಅಕ್ರಮಿಗಳನ್ನು ನಾಶಗೊಳಿಸುವೆವು ಮತ್ತು ಅವರ ಬಳಿಕ ನಾವು ನಿಮ್ಮನ್ನು ಭೂಮಿಯಲ್ಲಿ ವಾಸಗೊಳಿಸುವೆವು. ಇದು ನನ್ನ ಸ್ಥಾನವನ್ನು[1] ಭಯಪಡುವ ಮತ್ತು ನನ್ನ ಮುನ್ನೆಚ್ಚರಿಕೆಯನ್ನು ಭಯಪಡುವ ಜನರಿಗಿರುವ ನನ್ನ ಅನುಗ್ರಹವಾಗಿದೆ' ಎಂದು ದಿವ್ಯಸಂದೇಶವನ್ನು ನೀಡಿದನು.

---

1 ಅಲ್ಲಾಹುವಿನ ಯಾವುದೇ ಹೊಂದಾಣಿಕೆ ಮಾಡಲಾಗದಂತಹ ವಿಚಾರಣೆಯನ್ನು ಸಕಲ ಏಕಾಧಿಪತಿಗಳೂ ಎದುರಿಸುವ ದಿನದಂದು ಅಲ್ಲಾಹುವಿಗಿರುವ ಅನುಪಮವೂ ಅತ್ಯುನ್ನತವೂ ಆಗಿರುವ ಸ್ಥಾನ.

وَٱسۡتَفۡتَحُواْ وَخَابَ كُلُّ جَبَّارٍ عَنِيدٖ ١٥

15. ಅವರು (ಆ ಸಂದೇಶವಾಹಕರು ಅಲ್ಲಾಹುವಿನೊಂದಿಗೆ) ಜಯವನ್ನು ಬೇಡಿದರು. ಪ್ರತಿಯೊಬ್ಬ ಹಠಮಾರಿ ಸರ್ವಾಧಿಕಾರಿಯೂ ಪರಾಭವಗೊಂಡನು.[1]

مِّن وَرَآئِهِۦ جَهَنَّمُ وَيُسۡقَىٰ مِن مَّآءٖ صَدِيدٖ ١٦

16. ನರಕಾಗ್ನಿಯು ಅವನ ಮುಂದೆಯೇ ಇರುವುದು. ರಕ್ತ ಮತ್ತು ಕೀವು ಮಿಶ್ರಿತವಾಗಿರುವ ನೀರಿನಿಂದ ಅವನಿಗೆ ಕುಡಿಸಲಾಗುವುದು.

يَتَجَرَّعُهُۥ وَلَا يَكَادُ يُسِيغُهُۥ وَيَأۡتِيهِ ٱلۡمَوۡتُ مِن كُلِّ مَكَانٖ وَمَا هُوَ بِمَيِّتٖۖ وَمِن وَرَآئِهِۦ عَذَابٌ غَلِيظٞ ١٧

17. ಅವನು ಅದನ್ನು ಗುಟುಕರಿಸಲು ಪ್ರಯತ್ನಿಸುವನು. ಅದನ್ನು ಗಂಟಲ ಕೆಳಗಿಳಿಸಲು ಅವನಿಂದ ಸಾಧ್ಯವಾಗದು. ಮರಣವು ಎಲ್ಲ ಕಡೆಗಳಿಂದಲೂ ಅವನೆಡೆಗೆ ಬರುವುದು. ಆದರೂ ಅವನು ಮರಣಹೊಂದಲಾರನು. ಅದರ ಬೆನ್ನಲ್ಲೇ ಅತಿಕಠೋರ ಶಿಕ್ಷೆಯೂ ಇರುವುದು.

مَّثَلُ ٱلَّذِينَ كَفَرُواْ بِرَبِّهِمۡۖ أَعۡمَٰلُهُمۡ كَرَمَادٍ ٱشۡتَدَّتۡ بِهِ ٱلرِّيحُ فِي يَوۡمٍ عَاصِفٖۖ لَّا يَقۡدِرُونَ مِمَّا كَسَبُواْ عَلَىٰ شَيۡءٖۚ ذَٰلِكَ هُوَ ٱلضَّلَٰلُ ٱلۡبَعِيدُ ١٨

18. ತಮ್ಮ ರಬ್ಬನ್ನು ನಿಷೇಧಿಸಿದವರ ಕರ್ಮಗಳ ಉದಾಹರಣೆಯು ಬಿರುಗಾಳಿಯ ದಿನದಂದು ಭೀಕರವಾಗಿ ಬೀಸಿದ ಗಾಳಿಗೆ ಹಾರಿಹೋಗುವ ಬೂದಿಯಂತಾಗಿದೆ. ಅವರು ಸಂಪಾದಿಸಿದವುಗಳಿಂದ ಏನನ್ನೂ ಸವಿಯಲು ಅವರಿಗೆ ಸಾಧ್ಯವಾಗದು.[2] ಅತಿ ವಿದೂರವಾದ ಪಥಭ್ರಷ್ಟತೆಯು ಅದೇ ಆಗಿದೆ.

أَلَمۡ تَرَ أَنَّ ٱللَّهَ خَلَقَ ٱلسَّمَٰوَٰتِ وَٱلۡأَرۡضَ بِٱلۡحَقِّۚ إِن يَشَأۡ يُذۡهِبۡكُمۡ وَيَأۡتِ بِخَلۡقٖ جَدِيدٖ ١٩

19. ಅಲ್ಲಾಹು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿರುವನು ಎಂಬುದನ್ನು ತಾವು ಕಂಡಿಲ್ಲವೇ? ಅವನಿಚ್ಛಿಸಿದರೆ ನಿಮ್ಮನ್ನು ಅಳಿಸಿಬಿಡುವನು ಮತ್ತು ಹೊಸತೊಂದು ಸೃಷ್ಟಿಯನ್ನು ತರುವನು.

---

1 ಸತ್ಯನಿಷೇಧಿಗಳ ಧಿಕ್ಕಾರವು ಮಿತಿಮೀರಿದಾಗ ಪ್ರವಾದಿಗಳು ಅವರ ವಿರುದ್ಧ ಅಲ್ಲಾಹುವಿನೊಂದಿಗೆ ಪ್ರಾರ್ಥಿಸಿದರು ಮತ್ತು ವಿವಿಧ ರೀತಿಯ ಶಿಕ್ಷೆಗಳಿಗೆ ಸತ್ಯನಿಷೇಧಿಗಳು ವಿಧೇಯರಾದರು.

2 ಗಾಳಿಯಲ್ಲಿ ಹಾರಿದ ಬೂದಿಯನ್ನು ಮರಳಿಪಡೆದು ಉಪಯೋಗಿಸಲು ಸಾಧ್ಯವಾಗದಂತೆ ಸತ್ಯನಿಷೇಧಿಗಳ ಕರ್ಮಗಳೂ ಸಂಪೂರ್ಣವಾಗಿ ಫಲಶೂನ್ಯವಾಗಿವೆ.

وَمَا ذَٰلِكَ عَلَى ٱللَّهِ بِعَزِيزٍ ﴿٢٠﴾

20. ಅಲ್ಲಾಹುವಿನ ಮಟ್ಟಿಗೆ ಅದೊಂದು ಕಷ್ಟಕರ ವಿಷಯವಲ್ಲ.

وَبَرَزُواْ لِلَّهِ جَمِيعًا فَقَالَ ٱلضُّعَفَـٰٓؤُاْ لِلَّذِينَ
ٱسْتَكْبَرُوٓاْ إِنَّا كُنَّا لَكُمْ تَبَعًا فَهَلْ أَنتُم
مُّغْنُونَ عَنَّا مِنْ عَذَابِ ٱللَّهِ مِن شَىْءٍ ۚ
قَالُواْ لَوْ هَدَىٰنَا ٱللَّهُ لَهَدَيْنَـٰكُمْ ۖ سَوَآءٌ
عَلَيْنَآ أَجَزِعْنَآ أَمْ صَبَرْنَا مَا لَنَا مِن
مَّحِيصٍ ﴿٢١﴾

21. ಅವರೆಲ್ಲರೂ ಅಲ್ಲಾಹುವಿನೆಡೆಗೆ ಹೊರಟುಬರುವರು.[1] ಆಗ ದುರ್ಬಲರು ದುರಹಂಕಾರಿಗಳೊಂದಿಗೆ ಹೇಳುವರು: 'ಖಂಡಿತವಾಗಿಯೂ ನಾವು ನಿಮ್ಮ ಹಿಂಬಾಲಕರಾಗಿದ್ದೆವು. ಆದ್ದರಿಂದ ನೀವು ಅಲ್ಲಾಹುವಿನ ಶಿಕ್ಷೆಯಿಂದ ಸ್ವಲ್ಪವನ್ನಾದರೂ ನಮ್ಮಿಂದ ದೂರಮಾಡುವಿರಾ?' ಅವರು (ಅಹಂಕಾರಿಗಳು) ಹೇಳುವರು: 'ಅಲ್ಲಾಹು ನಮ್ಮನ್ನು ಸನ್ಮಾರ್ಗದಲ್ಲಿ ಸೇರಿಸಿರುತ್ತಿದ್ದರೆ ನಾವು ನಿಮ್ಮನ್ನೂ ಸನ್ಮಾರ್ಗದಲ್ಲಿ ಸೇರಿಸುತ್ತಿದ್ದೆವು. ನಾವು ತಾಳ್ಮೆಗೆಟ್ಟರೂ ತಾಳ್ಮೆ ವಹಿಸಿದರೂ ನಮ್ಮ ಪಾಲಿಗೆ ಅದು ಸಮಾನವಾಗಿದೆ; ನಮಗೆ ನಮಗೆ ಯಾವುದೇ ರಕ್ಷಾಮಾರ್ಗವೂ ಇಲ್ಲ'.

وَقَالَ ٱلشَّيْطَـٰنُ لَمَّا قُضِىَ ٱلْأَمْرُ إِنَّ
ٱللَّهَ وَعَدَكُمْ وَعْدَ ٱلْحَقِّ وَوَعَدتُّكُمْ
فَأَخْلَفْتُكُمْ ۖ وَمَا كَانَ لِىَ عَلَيْكُم مِّن
سُلْطَـٰنٍ إِلَّآ أَن دَعَوْتُكُمْ فَٱسْتَجَبْتُمْ
لِى ۖ فَلَا تَلُومُونِى وَلُومُوٓاْ أَنفُسَكُم ۖ مَّآ
أَنَا۠ بِمُصْرِخِكُمْ وَمَآ أَنتُم بِمُصْرِخِىَّ ۖ إِنِّى
كَفَرْتُ بِمَآ أَشْرَكْتُمُونِ مِن قَبْلُ ۗ إِنَّ
ٱلظَّـٰلِمِينَ لَهُمْ عَذَابٌ أَلِيمٌ ﴿٢٢﴾

22. ವಿಷಯವನ್ನು ತೀರ್ಮಾನಿಸಲಾದಾಗ ಸೈತಾನನು ಹೇಳುವನು:[2] 'ಖಂಡಿತವಾಗಿಯೂ ಅಲ್ಲಾಹು ನಿಮ್ಮೊಂದಿಗೆ ಸತ್ಯವಾಗ್ದಾನವನ್ನು ವಾಗ್ದಾನ ಮಾಡಿದ್ದನು. ನಾನೂ ನಿಮ್ಮೊಂದಿಗೆ ವಾಗ್ದಾನ ಮಾಡಿದ್ದೆನು. ಆದರೆ ನಾನು (ನನ್ನ ವಾಗ್ದಾನವನ್ನು) ಉಲ್ಲಂಘಿಸಿರುವೆನು. ನನಗೆ ನಿಮ್ಮ ಮೇಲೆ ಯಾವ ಅಧಿಕಾರವೂ ಇರಲಿಲ್ಲ. ನಾನು ನಿಮ್ಮನ್ನು ಕರೆದಾಗ ನೀವು ನನ್ನ ಕರೆಗೆ ಓಗೊಟ್ಟಿರಿ. ಆದ್ದರಿಂದ ನೀವು ನನ್ನನ್ನು ದೂಷಿಸದಿರಿ. ನಿಮ್ಮನ್ನೇ ನೀವು ದೂಷಿಸಿರಿ. ನಿಮಗೆ ನೆರವು ನೀಡಲು ನನ್ನಿಂದಾಗದು. ನನಗೆ ನೆರವು ನೀಡಲು ನಿಮ್ಮಿಂದಲೂ

1 ಪರಲೋಕದಲ್ಲಿ ಎದುರಾಗಲಿರುವ ಒಂದು ಸನ್ನಿವೇಶವನ್ನು ಮುಂದಿಟ್ಟು ಅಲ್ಲಾಹು ಜನರ ಚಿಂತನೆಯನ್ನು ಇಲ್ಲಿ ಬಡಿದೆಬ್ಬಿಸುತ್ತಿದ್ದಾನೆ.

2 ಅಲ್ಲಾಹು ಇಲ್ಲಿ ಪರಲೋಕದ ಇನ್ನೊಂದು ದೃಶ್ಯವನ್ನು ಮುಂದಿಡುತ್ತಿದ್ದಾನೆ. ಸೈತಾನನಿಗೂ ಅವನ ಅನುಯಾಯಿಗಳಿಗೂ ನರಕಾಗ್ನಿಯನ್ನು ವಿಧಿಸಲ್ಪಟ್ಟ ನಂತರ ತನ್ನ ದುರ್ಬೋಧನೆಗೆ ಒಳಗಾಗಿ ನರಕವಾಸಿಗಳಾದವರೊಂದಿಗೆ ಸೈತಾನನು ಮಾಡುವ ಮಾತುಕತೆಯನ್ನು ಅಲ್ಲಾಹು ಇಲ್ಲಿ ಪ್ರಸ್ತಾಪಿಸುತ್ತಿದ್ದಾನೆ.

ಆಗದು. ಈ ಹಿಂದೆ ನೀವು ನನ್ನನ್ನು ಸಹಭಾಗಿಯನ್ನಾಗಿ ಮಾಡಿರುವುದನ್ನು ನಾನು ನಿಷೇಧಿಸಿರುವೆನು.[1] ಖಂಡಿತವಾಗಿಯೂ ಅಕ್ರಮಿಗಳಿಗೆ ಯಾತನಾಮಯ ಶಿಕ್ಷೆಯಿರುವುದು'.

وَأُدْخِلَ ٱلَّذِينَ ءَامَنُواْ وَعَمِلُواْ ٱلصَّـٰلِحَـٰتِ جَنَّـٰتٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَا بِإِذْنِ رَبِّهِمْ ۖ تَحِيَّتُهُمْ فِيهَا سَلَـٰمٌ ﴿٢٣﴾

**23.** ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರನ್ನು ತಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸಲಾಗುವುದು. ಅವರ ರಬ್‌ನ ಅನುಮತಿ ಮೇರೆಗೆ ಅವರದರಲ್ಲಿ ಶಾಶ್ವತವಾಗಿ ವಾಸಿಸುವರು. ಅಲ್ಲಿ ಅವರಿಗಿರುವ ಅಭಿವಂದನೆಯು 'ಸಲಾಮ್' ಎಂದಾಗಿರುವುದು.

أَلَمْ تَرَ كَيْفَ ضَرَبَ ٱللَّهُ مَثَلًا كَلِمَةً طَيِّبَةً كَشَجَرَةٍ طَيِّبَةٍ أَصْلُهَا ثَابِتٌ وَفَرْعُهَا فِى ٱلسَّمَآءِ ﴿٢٤﴾

**24.** ಉತ್ತಮವಾದ ವಚನಕ್ಕೆ ಅಲ್ಲಾಹು ನೀಡುವ ಉಪಮೆಯು ಹೇಗಿದೆಯೆಂದು ತಾವು ಕಂಡಿಲ್ಲವೇ? (ಅದು) ಒಂದು ಉತ್ತಮ ವೃಕ್ಷದಂತಿದೆ. ಅದರ ಬೇರು ಸುಭದ್ರವಾಗಿದೆ ಮತ್ತು ರೆಂಬೆಗಳು ಆಕಾಶದೆತ್ತರಕ್ಕೇರಿ ನಿಂತಿವೆ.

تُؤْتِىٓ أُكُلَهَا كُلَّ حِينٍۭ بِإِذْنِ رَبِّهَا ۗ وَيَضْرِبُ ٱللَّهُ ٱلْأَمْثَالَ لِلنَّاسِ لَعَلَّهُمْ يَتَذَكَّرُونَ ﴿٢٥﴾

**25.** ತನ್ನ ರಬ್‌ನ ಅಪ್ಪಣೆಯೊಂದಿಗೆ ಅದು ಎಲ್ಲ ಕಾಲಗಳಲ್ಲೂ ತನ್ನ ಫಲವನ್ನು ನೀಡುತ್ತಲೇ ಇರುವುದು.[2] ಜನರು ಚಿಂತಿಸಿ ಗ್ರಹಿಸುವುದಕ್ಕಾಗಿ ಅಲ್ಲಾಹು ಅವರಿಗೆ ಉಪಮೆಗಳನ್ನು ನೀಡುತ್ತಿರುವನು.

وَمَثَلُ كَلِمَةٍ خَبِيثَةٍ كَشَجَرَةٍ خَبِيثَةٍ ٱجْتُثَّتْ مِن فَوْقِ ٱلْأَرْضِ مَا لَهَا مِن قَرَارٍ ﴿٢٦﴾

**26.** ಕೆಟ್ಟ ವಚನದ ಉಪಮೆಯು ಭೂಮಿಯ ಮೇಲ್ಮೈಯಿಂದ ಕೀಳಲಾಗಿರುವ ಒಂದು ಕೆಟ್ಟ ವೃಕ್ಷದಂತಿದೆ. ಅದಕ್ಕೆ ಯಾವುದೇ ಸ್ಥಿರತೆಯೂ ಇಲ್ಲ.

---

1 ಸೈತಾನನನ್ನು ಅಲ್ಲಾಹುವಿಗೆ ಸಹಭಾಗಿಯಾಗಿ ಮಾಡುವುದು ಎರಡು ವಿಧದಲ್ಲಾಗಿರುತ್ತದೆ. ಒಂದು: ನೇರವಾಗಿ ಅವನನ್ನೇ ಆರಾಧಿಸುವುದು. ಅಗೋಚರ ಮಾರ್ಗಗಳ ಮೂಲಕ ನೆರವು ದೊರೆಯುವುದಕ್ಕಾಗಿ ಸೈತಾನನ ಸೇವೆ ಮಾಡುವ ಜನರು ಎಲ್ಲ ಕಾಲದಲ್ಲೂ ಇದ್ದರು. ಭೂತ ಸೇವೆಗಳು ಇದರಲ್ಲಿ ಸೇರಿದ್ದಾಗಿವೆ. ಎರಡು: ಅವನ ಪ್ರಲೋಭನೆಗೆ ಒಳಗಾಗಿ ವಿವಿಧ ವ್ಯಕ್ತಿಗಳನ್ನು ಮತ್ತು ಶಕ್ತಿಗಳನ್ನು ಆರಾಧಿಸುವುದು.

2 ಸತ್ಯಸಾಕ್ಷ್ಯವನ್ನು ಘೋಷಿಸುವ ವಚನವು ಯಾವುದೇ ಗಾಳಿಗೂ ಮುರಿದು ಬೀಳದೆ, ತನ್ನ ಗೆಲ್ಲುಗಳನ್ನು ಆಕಾಶದೆತ್ತರಕ್ಕೆ ಚಾಚಿಕೊಂಡಿರುವ ಮತ್ತು ಎಲ್ಲ ಋತುಗಳಲ್ಲೂ ಫಲಗಳನ್ನು ನೀಡುವ ಒಂದು ಉತ್ತಮವಾದ ಮರದಂತೆ ಸುದೃಢವೂ ಫಲದಾಯಕವೂ ಆಗಿದೆ.

يُثَبِّتُ ٱللَّهُ ٱلَّذِينَ ءَامَنُواْ بِٱلْقَوْلِ ٱلثَّابِتِ فِي ٱلْحَيَوٰةِ ٱلدُّنْيَا وَفِي ٱلْآخِرَةِۖ وَيُضِلُّ ٱللَّهُ ٱلظَّٰلِمِينَۚ وَيَفْعَلُ ٱللَّهُ مَا يَشَآءُ ﴿٢٧﴾

**27.** ಅಲ್ಲಾಹು ಸತ್ಯವಿಶ್ವಾಸಿಗಳನ್ನು ಇಹಲೋಕದಲ್ಲೂ ಪರಲೋಕದಲ್ಲೂ ಸುದೃಢ ವಚನದ ಮೂಲಕ ದೃಢವಾಗಿ ನೆಲೆಯೂರಿಸುವನು.[1] ಅಲ್ಲಾಹು ಅಕ್ರಮಿಗಳನ್ನು ಪಥಭ್ರಷ್ಟಗೊಳಿಸುವನು. ಅಲ್ಲಾಹು ತಾನಿಚ್ಛಿಸಿದ್ದನ್ನು ಮಾಡುವನು.

۞ أَلَمْ تَرَ إِلَى ٱلَّذِينَ بَدَّلُواْ نِعْمَتَ ٱللَّهِ كُفْرًا وَأَحَلُّواْ قَوْمَهُمْ دَارَ ٱلْبَوَارِ ﴿٢٨﴾ جَهَنَّمَ يَصْلَوْنَهَاۖ وَبِئْسَ ٱلْقَرَارُ ﴿٢٩﴾

**28-29.** ಅಲ್ಲಾಹುವಿನ ಅನುಗ್ರಹಕ್ಕೆ (ಕೃತಜ್ಞತೆ ಸಲ್ಲಿಸುವ) ಬದಲು ಕೃತಘ್ನತೆ ತೋರಿಸುವ ಮತ್ತು ತಮ್ಮ ಜನತೆಯನ್ನು ನಾಶದ ಭವನಕ್ಕೆ ಅಥವಾ ನರಕಾಗ್ನಿಗೆ ಇಳಿಸಿದ ಜನರನ್ನು[2] ತಾವು ಕಂಡಿಲ್ಲವೇ? ಅವರು ಅದರಲ್ಲಿ ಉರಿಯುವರು. ಆ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!

وَجَعَلُواْ لِلَّهِ أَندَادًا لِّيُضِلُّواْ عَن سَبِيلِهِۦۗ قُلْ تَمَتَّعُواْ فَإِنَّ مَصِيرَكُمْ إِلَى ٱلنَّارِ ﴿٣٠﴾

**30.** ಅವರು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ವ್ಯತಿಚಲನೆಗೊಳಿಸುವ ಸಲುವಾಗಿ ಅವನಿಗೆ ಕೆಲವು ಪ್ರತಿಸ್ಪರ್ಧಿಗಳನ್ನು ಮಾಡಿರುವರು. ಹೇಳಿರಿ: 'ನೀವು ಸುಖವಾಗಿ ಜೀವಿಸಿರಿ. ಖಂಡಿತವಾಗಿಯೂ ನಿಮ್ಮ ಮರಳುವಿಕೆಯು ನರಕಾಗ್ನಿಯೆಡೆಗಾಗಿದೆ'.

قُل لِّعِبَادِيَ ٱلَّذِينَ ءَامَنُواْ يُقِيمُواْ ٱلصَّلَوٰةَ وَيُنفِقُواْ مِمَّا رَزَقْنَٰهُمْ سِرًّا وَعَلَانِيَةً مِّن قَبْلِ أَن يَأْتِيَ يَوْمٌ لَّا بَيْعٌ فِيهِ وَلَا خِلَٰلٌ ﴿٣١﴾

**31.** ಸತ್ಯವಿಶ್ವಾಸಿಗಳಾದ ನನ್ನ ದಾಸರೊಂದಿಗೆ ಅವರು ನಮಾಝನ್ನು ಸಂಸ್ಥಾಪಿಸಲಿ ಮತ್ತು ಯಾವುದೇ ಕ್ರಯ– ವಿಕ್ರಯವಾಗಲಿ, ಗೆಳೆತನವಾಗಲಿ ಪ್ರಯೋಜನಕರವಾಗದ ದಿನವೊಂದು ಬರುವ ಮುನ್ನ ನಾವು ಅವರಿಗೆ ನೀಡಿರುವ ಸಂಪತ್ತಿನಿಂದ ಅವರು (ಒಳಿತಿನ ಮಾರ್ಗದಲ್ಲಿ) ಗುಪ್ತವಾಗಿ ಮತ್ತು ಬಹಿರಂಗವಾಗಿ ಖರ್ಚು ಮಾಡಲಿ ಎಂದು ಹೇಳಿರಿ.

---

1 ಯಾವುದೇ ಪರೀಕ್ಷೆಗಳ ಸಂದರ್ಭಗಳಲ್ಲೂ ಧೃತಿಗೆಡದೆ ಅಚಂಚಲರಾಗಿರಲು ಸತ್ಯವಿಶ್ವಾಸಿಗಳಿಗೆ ಅಲ್ಲಾಹು ನೆರವನ್ನು ನೀಡುವನು.

2 ಈ ಸೂಕ್ತಿಯು ಬಹುದೇವಾರಾಧನೆಯ ವಕ್ತಾರರ ಕುರಿತಾಗಿದೆ. ಅಲ್ಲಾಹು ನೀಡಿದ ಸಮೃದ್ಧಿ ಹಾಗೂ ಐಶ್ವರ್ಯಕ್ಕೆ ಅವನಿಗೆ ಕೃತಜ್ಞತೆ ಅರ್ಪಿಸುವುದರ ಬದಲು ಯಾವುದೋ ದೇವ ದೇವತೆಗಳಿಗೆ, ಸಜ್ಜನ ಮಹಾತ್ಮರಿಗೆ ಬಲಿ ಹರಕೆಗಳನ್ನು ಅರ್ಪಿಸಲು ಪ್ರೇರೇಪಿಸುವವರು ಜನರನ್ನು ನರಕದೆಡೆಗೆ ಕೊಂಡೊಯ್ಯುವವರಾಗಿದ್ದಾರೆ.

**32.** ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಅಲ್ಲಾಹುವಾಗಿರುವನು. ಅವನು ಆಕಾಶದಿಂದ ಮಳೆನೀರನ್ನು ಸುರಿಸಿದನು. ತರುವಾಯ ಅದರ ಮೂಲಕ ನಿಮಗೆ ಆಹಾರವಾಗಿ ಫಲವರ್ಗಗಳನ್ನು ಉತ್ಪಾದಿಸಿದನು. ಸಮುದ್ರದಲ್ಲಿ ಅವನ ಆಜ್ಞೆಯ ಮೇರೆಗೆ ಚಲಿಸುವ ಸಲುವಾಗಿ ಅವನು ನಿಮಗೆ ಹಡಗುಗಳನ್ನು ಅಧೀನಗೊಳಿಸಿಕೊಟ್ಟಿರುವನು. ಅವನು ನಿಮಗೆ ನದಿಗಳನ್ನೂ ಅಧೀನಗೊಳಿಸಿಕೊಟ್ಟಿರುವನು.(1)

ٱللَّهُ ٱلَّذِى خَلَقَ ٱلسَّمَٰوَٰتِ وَٱلْأَرْضَ وَأَنزَلَ مِنَ ٱلسَّمَآءِ مَآءً فَأَخْرَجَ بِهِۦ مِنَ ٱلثَّمَرَٰتِ رِزْقًا لَّكُمْ ۖ وَسَخَّرَ لَكُمُ ٱلْفُلْكَ لِتَجْرِىَ فِى ٱلْبَحْرِ بِأَمْرِهِۦ ۖ وَسَخَّرَ لَكُمُ ٱلْأَنْهَٰرَ ﴿٣٢﴾

**33.** ನಿರಂತರವಾಗಿ ಚಲಿಸುವ ರೀತಿಯಲ್ಲಿ ಸೂರ್ಯನನ್ನೂ ಚಂದ್ರನನ್ನೂ ಅವನು ನಿಮಗೆ ಅಧೀನಗೊಳಿಸಿ ಕೊಟ್ಟಿರುವನು. ರಾತ್ರಿಯನ್ನೂ ಹಗಲನ್ನೂ ಅವನು ನಿಮಗೆ ಅಧೀನಗೊಳಿಸಿಕೊಟ್ಟಿರುವನು.

وَسَخَّرَ لَكُمُ ٱلشَّمْسَ وَٱلْقَمَرَ دَآئِبَيْنِ ۖ وَسَخَّرَ لَكُمُ ٱلَّيْلَ وَٱلنَّهَارَ ﴿٣٣﴾

**34.** ನೀವು ಅವನೊಂದಿಗೆ ಬೇಡಿರುವುದೆಲ್ಲವನ್ನೂ ಅವನು ನಿಮಗೆ ನೀಡಿರುವನು. ನೀವು ಅಲ್ಲಾಹುವಿನ ಅನುಗ್ರಹಗಳನ್ನು ಎಣಿಸುವುದಾದರೆ ಅವುಗಳನ್ನು ಎಣಿಕೆ ಮಾಡಲು ನಿಮ್ಮಿಂದ ಸಾಧ್ಯವಾಗದು. ಖಂಡಿತವಾಗಿಯೂ ಮನುಷ್ಯನು ಮಹಾ ಅಕ್ರಮಿಯೂ ಕೃತಘ್ನನೂ ಆಗಿರುವನು.

وَءَاتَىٰكُم مِّن كُلِّ مَا سَأَلْتُمُوهُ ۚ وَإِن تَعُدُّوا۟ نِعْمَتَ ٱللَّهِ لَا تُحْصُوهَآ ۗ إِنَّ ٱلْإِنسَٰنَ لَظَلُومٌ كَفَّارٌ ﴿٣٤﴾

**35.** ಇಬ್ರಾಹೀಮ್‌ರು ಪ್ರಾರ್ಥಿಸಿದ ಸಂದರ್ಭ(ವನ್ನು ಸ್ಮರಿಸಿರಿ): ‘ಓ ನನ್ನ ರಬ್! ಈ ನಾಡನ್ನು (ಮಕ್ಕಾವನ್ನು) ನಿರ್ಭಯತೆಯುಳ್ಳದ್ದಾಗಿ ಮಾಡು ಮತ್ತು ನನ್ನನ್ನೂ ನನ್ನ ಮಕ್ಕಳನ್ನೂ ವಿಗ್ರಹಾರಾಧನೆಯಿಂದ ದೂರವಿರಿಸು’ ಎಂದು.

وَإِذْ قَالَ إِبْرَٰهِيمُ رَبِّ ٱجْعَلْ هَٰذَا ٱلْبَلَدَ ءَامِنًا وَٱجْنُبْنِى وَبَنِىَّ أَن نَّعْبُدَ ٱلْأَصْنَامَ ﴿٣٥﴾

**36.** ‘ಓ ನನ್ನ ರಬ್! ಖಂಡಿತವಾಗಿಯೂ ಅವು (ವಿಗ್ರಹಗಳು) ಜನರ ಪೈಕಿ ಅನೇಕರನ್ನು ಪಥಭ್ರಷ್ಟಗೊಳಿಸಿವೆ. ಆದ್ದರಿಂದ ಯಾರು ನನ್ನನ್ನು ಅನುಸರಿಸುವನೋ ಅವನು ನನ್ನವನಾಗಿರುವನು. ಯಾರಾದರೂ ನನ್ನನ್ನು

رَبِّ إِنَّهُنَّ أَضْلَلْنَ كَثِيرًا مِّنَ ٱلنَّاسِ ۖ فَمَن تَبِعَنِى فَإِنَّهُۥ مِنِّى ۖ وَمَنْ عَصَانِى فَإِنَّكَ غَفُورٌ رَّحِيمٌ ﴿٣٦﴾

1 ಹಡಗುಗಳು ನೀರಿನಲ್ಲಿ ತೇಲುತ್ತಿರುವುದು ಮತ್ತು ಹಾಯಿದೋಣಿಗಳು ಗಾಳಿಯ ನೆರವಿನ ಮೂಲಕ ಚಲಿಸುತ್ತಿರುವುದು ಅಲ್ಲಾಹು ನಿಶ್ಚಯಿಸಿದ ಪ್ರಕೃತಿ ನಿಯಮದ ಪ್ರಕಾರವಾಗಿದೆ.

ಧಿಕ್ಕರಿಸುವುದಾದರೆ ಖಂಡಿತವಾಗಿಯೂ ನೀನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವೆ'.

37. 'ಓ ನಮ್ಮ ರಬ್! ನಾನು ನನ್ನ ಸಂತತಿಯಲ್ಲಿ ಸೇರಿದವರನ್ನು ಯಾವ ಕೃಷಿಯೂ ಇಲ್ಲದ ಕಣಿವೆಯೊಂದರಲ್ಲಿ ನಿನ್ನ ಪವಿತ್ರ ಭವನ(ಕಅ್‌ಬಾಲಯ)ದ ಬಳಿ ತಂಗುವಂತೆ ಮಾಡಿರುವೆನು.(1) ಓ ನಮ್ಮ ರಬ್! ಅವರು ನಮಾಝ್ ನಿರ್ವಹಿಸುವ ಸಲುವಾಗಿ (ಹೀಗೆ ಮಾಡಿರುವೆನು). ಆದ್ದರಿಂದ ನೀನು ಜನರಲ್ಲಿ ಕೆಲವರ ಹೃದಯಗಳು ಅವರೆಡೆಗೆ ವಾಲುವಂತೆ ಮಾಡು ಮತ್ತು ಅವರಿಗೆ ಫಲವರ್ಗಗಳಿಂದ ಅನ್ನಾಧಾರವನ್ನು ನೀಡು.(2) ಅವರು ಕೃತಜ್ಞತೆ ಸಲ್ಲಿಸಲೂಬಹುದು'.

رَّبَّنَآ إِنِّيٓ أَسۡكَنتُ مِن ذُرِّيَّتِي بِوَادٍ غَيۡرِ ذِي زَرۡعٍ عِندَ بَيۡتِكَ ٱلۡمُحَرَّمِ رَبَّنَا لِيُقِيمُواْ ٱلصَّلَوٰةَ فَٱجۡعَلۡ أَفۡـِٔدَةٗ مِّنَ ٱلنَّاسِ تَهۡوِيٓ إِلَيۡهِمۡ وَٱرۡزُقۡهُم مِّنَ ٱلثَّمَرَٰتِ لَعَلَّهُمۡ يَشۡكُرُونَ ٣٧

38. 'ಓ ನಮ್ಮ ರಬ್! ನಾವು ಗೌಪ್ಯವಾಗಿಡುವುದನ್ನೂ, ಬಹಿರಂಗಗೊಳಿಸುವುದನ್ನೂ ನೀನು ಅರಿಯುವೆ. ಭೂಮಿಯಲ್ಲಾಗಲಿ, ಆಕಾಶದಲ್ಲಾಗಲಿ ಯಾವುದೇ ಒಂದು ವಸ್ತುವೂ ಅಲ್ಲಾಹುವಿನಿಂದ ಮರೆಯಾಗಿರಲಾರದು'.

رَبَّنَآ إِنَّكَ تَعۡلَمُ مَا نُخۡفِي وَمَا نُعۡلِنُۗ وَمَا يَخۡفَىٰ عَلَى ٱللَّهِ مِن شَيۡءٖ فِي ٱلۡأَرۡضِ وَلَا فِي ٱلسَّمَآءِ ٣٨

39. 'ವೃದ್ಧಾಪ್ಯದಲ್ಲಿ ನನಗೆ ಇಸ್ಮಾಈಲ್ ಮತ್ತು ಇಸ್‌ಹಾಕ್‌ನನ್ನು ದಯಪಾಲಿಸಿದ ಅಲ್ಲಾಹುವಿಗೆ ಸ್ತುತಿ. ಖಂಡಿತವಾಗಿಯೂ ನನ್ನ ರಬ್ ಪ್ರಾರ್ಥನೆಯನ್ನು ಆಲಿಸುವವನಾಗಿರುವನು'.

ٱلۡحَمۡدُ لِلَّهِ ٱلَّذِي وَهَبَ لِي عَلَى ٱلۡكِبَرِ إِسۡمَٰعِيلَ وَإِسۡحَٰقَۚ إِنَّ رَبِّي لَسَمِيعُ ٱلدُّعَآءِ ٣٩

40. 'ಓ ನನ್ನ ರಬ್! ನನ್ನನ್ನು ಮತ್ತು ನನ್ನ ಸಂತತಿಯಲ್ಲಿ ಸೇರಿದವರನ್ನೂ ನಮಾಝನ್ನು ಸಂಸ್ಥಾಪಿಸುವವರನ್ನಾಗಿ ಮಾಡು. ಓ ನಮ್ಮ ರಬ್! ನನ್ನ ಪ್ರಾರ್ಥನೆಯನ್ನು ಸ್ವೀಕರಿಸು'.

رَبِّ ٱجۡعَلۡنِي مُقِيمَ ٱلصَّلَوٰةِ وَمِن ذُرِّيَّتِيۚ رَبَّنَا وَتَقَبَّلۡ دُعَآءِ ٤٠

---

1 ಪ್ರವಾದಿ ಇಬ್ರಾಹೀಮ್(عَلَيۡهِ ٱلسَّلَامُ)ರವರು ತಮ್ಮ ಪುತ್ರರ ಪೈಕಿ ಒಬ್ಬರಾದ ಇಸ್ಮಾಈಲ್(عَلَيۡهِ ٱلسَّلَامُ) ರನ್ನು ಮಕ್ಕಾದಲ್ಲಿ ತಂಗುವಂತೆ ಮಾಡಿದರು. ಅವರ ಸಂತತಿಯು ಕಅ್‌ಬಾ ಪರಿಸರದಲ್ಲಿ ದೇವಪ್ರಜ್ಞೆಯುಳ್ಳವರಾಗಿ ಬಾಳುವುದಾಗಿತ್ತು ಅದರ ಗುರಿ. ಕೃಷಿ ಮಾಡಲು ಯೋಗ್ಯವಲ್ಲದ ಮಕ್ಕಾ ಭೂಮಿಯಲ್ಲಿ ಫಲವರ್ಗಗಳು ಲಭ್ಯವಾಗುವ ಸಾಧ್ಯತೆ ತೀರಾ ವಿರಳವಾಗಿತ್ತು.

2 ಪ್ರವಾದಿ ಇಬ್ರಾಹೀಮ್(عَلَيۡهِ ٱلسَّلَامُ)ರವರ ಪ್ರಾರ್ಥನೆಯನ್ನು ಅಲ್ಲಾಹು ಸ್ವೀಕರಿಸಿದನು. ನಂತರದ ಕಾಲಘಟ್ಟದಲ್ಲಿ ಮಕ್ಕಾ ಫಲೋತ್ಪನ್ನಗಳು ಯಥೇಷ್ಟವಾಗಿ ತಲುಪುವ ಒಂದು ಜನನಿಬಿಡ ಪ್ರದೇಶವಾಯಿತು.

**41.** ‘ಓ ನಮ್ಮ ರಬ್! ವಿಚಾರಣೆಯನ್ನು ಸ್ಥಾಪಿಸಲಾಗುವ ದಿನದಂದು ನನಗೂ, ನನ್ನ ಮಾತಾಪಿತರಿಗೂ ಮತ್ತು ಸತ್ಯವಿಶ್ವಾಸಿಗಳಿಗೂ ಪಾಪಮುಕ್ತಿಯನ್ನು ನೀಡು’.

رَبَّنَا ٱغۡفِرۡ لِي وَلِوَٰلِدَيَّ وَلِلۡمُؤۡمِنِينَ يَوۡمَ
يَقُومُ ٱلۡحِسَابُ ٤١

**42.** ಅಕ್ರಮಿಗಳು ಮಾಡುತ್ತಿರುವವುಗಳ ಕುರಿತು ಅಲ್ಲಾಹು ಅಲಕ್ಷ್ಯನಾಗಿರುವನೆಂದು ತಾವೆಂದೂ ಭಾವಿಸದಿರಿ. ಅವನು ಅವರಿಗೆ ಕಾಲಾವಕಾಶ ನೀಡುತ್ತಿರುವುದು ಕಣ್ಣುಗಳು ಭೀತಿಯಿಂದ ದಿಟ್ಟಿಸಿ ನೋಡುವ (ಭಯಾನಕವಾದ) ದಿನವೊಂದರ ತನಕ ಮಾತ್ರವಾಗಿದೆ.

وَلَا تَحۡسَبَنَّ ٱللَّهَ غَٰفِلًا عَمَّا يَعۡمَلُ
ٱلظَّٰلِمُونَۚ إِنَّمَا يُؤَخِّرُهُمۡ لِيَوۡمٖ تَشۡخَصُ
فِيهِ ٱلۡأَبۡصَٰرُ ٤٢

**43.** (ಅಂದು) ಧಾವಂತದಿಂದ ಓಡುತ್ತಾ ತಲೆಗಳನ್ನು ಎತ್ತಿಹಿಡಿಯುತ್ತಾ (ಅವರು ಬರುವರು). ಅವರ ದೃಷ್ಟಿಗಳು ಅವರೆಡೆಗೆ ಮರಳಲಾರವು. ಅವರ ಹೃದಯಗಳು ಬರಿದಾಗಿರುವುವು.

مُهۡطِعِينَ مُقۡنِعِي رُءُوسِهِمۡ لَا يَرۡتَدُّ إِلَيۡهِمۡ
طَرۡفُهُمۡۖ وَأَفۡـِٔدَتُهُمۡ هَوَآءٞ ٤٣

**44.** ಜನರೆಡೆಗೆ ಶಿಕ್ಷೆಯು ಬರುವ ದಿನವೊಂದರ ಬಗ್ಗೆ ತಾವು ಅವರಿಗೆ ಮುನ್ನೆಚ್ಚರಿಕೆಯನ್ನು ನೀಡಿರಿ. ಆಗ ಅಕ್ರಮವೆಸಗಿದವರು ಹೇಳುವರು: ‘ಓ ನಮ್ಮ ರಬ್! ಸಮೀಪದ ಒಂದು ಅವಧಿಯ ತನಕ ನಮಗೆ ಕಾಲಾವಕಾಶವನ್ನು ನೀಡು. ನಾವು ನಿನ್ನ ಕರೆಗೆ ಓಗೊಡುವೆವು ಮತ್ತು ಸಂದೇಶವಾಹಕರನ್ನು ಅನುಸರಿಸುವೆವು’. ನಿಮಗೆ (ಪರಲೋಕದೆಡೆಗೆ) ಹೋಗಬೇಕಾಗಿ ಬರಲಾರದೆಂದು ಮುಂಚೆ ನೀವು ಆಣೆ ಹಾಕಿ ಹೇಳುತ್ತಿರಲಿಲ್ಲವೇ?’ (ಎಂದು ಅವರಿಗೆ ಉತ್ತರಿಸಲಾಗುವುದು).

وَأَنذِرِ ٱلنَّاسَ يَوۡمَ يَأۡتِيهِمُ ٱلۡعَذَابُ
فَيَقُولُ ٱلَّذِينَ ظَلَمُواْ رَبَّنَآ أَخِّرۡنَآ إِلَىٰٓ أَجَلٖ
قَرِيبٖ نُّجِبۡ دَعۡوَتَكَ وَنَتَّبِعِ ٱلرُّسُلَۗ أَوَلَمۡ
تَكُونُوٓاْ أَقۡسَمۡتُم مِّن قَبۡلُ مَا لَكُم مِّن
زَوَالٖ ٤٤

**45.** ಸ್ವತಃ ತಮ್ಮ ಮೇಲೆಯೇ ಅಕ್ರಮವೆಸಗಿದವರ ವಾಸಸ್ಥಳಗಳಲ್ಲಿ ನೀವು ವಾಸಿಸಿದಿರಿ. ಅವರೊಂದಿಗೆ ನಾವು ಹೇಗೆ ವರ್ತಿಸಿದೆವು ಎಂಬುದು ನಿಮಗೆ ಸ್ಪಷ್ಟವಾಗಿ ತಿಳಿದಿತ್ತು. ನಾವು ನಿಮಗೆ ಉಪಮೆಗಳನ್ನೂ ವಿವರಿಸಿ ಕೊಟ್ಟಿದ್ದೆವು.

وَسَكَنتُمۡ فِي مَسَٰكِنِ ٱلَّذِينَ ظَلَمُوٓاْ
أَنفُسَهُمۡ وَتَبَيَّنَ لَكُمۡ كَيۡفَ فَعَلۡنَا بِهِمۡ
وَضَرَبۡنَا لَكُمُ ٱلۡأَمۡثَالَ ٤٥

وَقَدْ مَكَرُوا۟ مَكْرَهُمْ وَعِندَ ٱللَّهِ مَكْرُهُمْ وَإِن كَانَ مَكْرُهُمْ لِتَزُولَ مِنْهُ ٱلْجِبَالُ ﴿٤٦﴾

**46.** ಅವರು ತಮ್ಮ ತಂತ್ರವನ್ನು ಹೂಡಿದರು. ಅವರಿಗಿರುವ ತಂತ್ರವು ಅಲ್ಲಾಹುವಿನ ಬಳಿಯಿದೆ.[1] ಅವರ ತಂತ್ರದಿಂದಾಗಿ ಪರ್ವತಗಳು ಚಲಿಸುವಂತೇನೂ ಆಗಿಲ್ಲ.

فَلَا تَحْسَبَنَّ ٱللَّهَ مُخْلِفَ وَعْدِهِۦ رُسُلَهُۥٓ إِنَّ ٱللَّهَ عَزِيزٌ ذُو ٱنتِقَامٍ ﴿٤٧﴾

**47.** ಅಲ್ಲಾಹು ತನ್ನ ಸಂದೇಶವಾಹಕರಿಗೆ ನೀಡಿರುವ ವಾಗ್ದಾನವನ್ನು ಅವನು ಉಲ್ಲಂಘಿಸುವನು ಎಂದು ತಾವು ಭಾವಿಸದಿರಿ. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಶಿಕ್ಷಾಕ್ರಮ ಕೈಗೊಳ್ಳುವವನೂ ಆಗಿರುವನು.

يَوْمَ تُبَدَّلُ ٱلْأَرْضُ غَيْرَ ٱلْأَرْضِ وَٱلسَّمَٰوَٰتُ ۖ وَبَرَزُوا۟ لِلَّهِ ٱلْوَٰحِدِ ٱلْقَهَّارِ ﴿٤٨﴾

**48.** ಭೂಮಿಯು ಈ ಭೂಮಿಯಲ್ಲದ ಇನ್ನೊಂದಾಗಿಯೂ, ಅದರಂತೆ ಆಕಾಶಗಳೂ ಮಾರ್ಪಡುವ[2] ಮತ್ತು ಏಕೈಕನೂ ಸರ್ವಾಧಿಕಾರಿಯೂ ಆಗಿರುವ ಅಲ್ಲಾಹುವಿನೆಡೆಗೆ ಅವರೆಲ್ಲರೂ ಹೊರಟು ಬರುವ ದಿನ!

وَتَرَى ٱلْمُجْرِمِينَ يَوْمَئِذٍ مُّقَرَّنِينَ فِى ٱلْأَصْفَادِ ﴿٤٩﴾

**49.** ಅಂದು ಅಪರಾಧಿಗಳನ್ನು ಸಂಕೋಲೆಗಳಲ್ಲಿ ಪರಸ್ಪರ ಜೋಡಿಸಿ ಬಂಧಿಸಿರುವುದಾಗಿ ತಾವು ಕಾಣುವಿರಿ.

سَرَابِيلُهُم مِّن قَطِرَانٍ وَتَغْشَىٰ وُجُوهَهُمُ ٱلنَّارُ ﴿٥٠﴾

**50.** ಅವರ ಉಡುಪುಗಳು ಕಪ್ಪು ಡಾಮರಿನದ್ದಾಗಿರುವುದು ಮತ್ತು ಅವರ ಮುಖಗಳನ್ನು ಬೆಂಕಿಯು ಮುಚ್ಚಿಕೊಳ್ಳುವುದು.

لِيَجْزِىَ ٱللَّهُ كُلَّ نَفْسٍ مَّا كَسَبَتْ ۚ إِنَّ ٱللَّهَ سَرِيعُ ٱلْحِسَابِ ﴿٥١﴾

**51.** ಅಲ್ಲಾಹು ಪ್ರತಿಯೊಬ್ಬ ವ್ಯಕ್ತಿಗೂ ಅವನು ಸಂಪಾದಿಸಿರುವುದರ ಪ್ರತಿಫಲವನ್ನು ನೀಡುವ ಸಲುವಾಗಿ. ಖಂಡಿತವಾಗಿಯೂ ಅಲ್ಲಾಹು ವೇಗವಾಗಿ ವಿಚಾರಣೆ ಮಾಡುವವನಾಗಿರುವನು.

---

1 'ಮಕ್ರುಹುಂ' ಎಂಬ ಪದಕ್ಕೆ ಅವರ ತಂತ್ರ ಅಥವಾ ಅವರಿಗಿರುವ ತಂತ್ರ ಎಂದು ಅರ್ಥ ನೀಡಬಹುದಾಗಿದೆ. ಅವರಿಗಿರುವ ಅಲ್ಲಾಹುವಿನ ತಂತ್ರವೆಂದರೆ ಅವರಿಗಾಗಿ ತಂತ್ರಪೂರ್ವಕ ಸಿದ್ಧಪಡಿಸಲಾದ ಶಿಕ್ಷೆಯಾಗಿದೆ. ಅವರ ತಂತ್ರವೆಂದು ಭಾಷಾಂತರಿಸುವಾಗ ತಂತ್ರದ ಫಲವನ್ನು ಉದ್ದೇಶಿಸಲಾಗುತ್ತದೆ.

2 ಪರಲೋಕವು ಅಸ್ತಿತ್ವಕ್ಕೆ ಬರುವಾಗ ಭೂಮ್ಯಾಕಾಶಗಳ ವ್ಯವಸ್ಥೆಗಳೆಲ್ಲವೂ ಬದಲಾಗುವುದು ಎಂದು ಇದರಿಂದ ತಿಳಿದುಬರುತ್ತದೆ.

52. ಇದು ಮನುಷ್ಯರಿಗಿರುವ ಒಂದು ಸುಸ್ಪಷ್ಟ ಉಪದೇಶವಾಗಿದೆ. ಇದರ ಮೂಲಕ ಅವರಿಗೆ ಮುನ್ನೆಚ್ಚರಿಕೆ ನೀಡಲಾಗುವ ಸಲುವಾಗಿ, ಏಕೈಕ ಆರಾಧ್ಯನು ಅವನು ಮಾತ್ರವಾಗಿರುವನೆಂದು ಅವರು ಅರಿತುಕೊಳ್ಳುವ ಸಲುವಾಗಿ ಮತ್ತು ಬುದ್ಧಿವಂತರು ಚಿಂತಿಸಿ ಗ್ರಹಿಸುವ ಸಲುವಾಗಿ(ರುವ ಉಪದೇಶ).

هَٰذَا بَلَٰغٌ لِّلنَّاسِ وَلِيُنذَرُواْ بِهِۦ وَلِيَعۡلَمُوٓاْ أَنَّمَا هُوَ إِلَٰهٌ وَٰحِدٌ وَلِيَذَّكَّرَ أُوْلُواْ ٱلۡأَلۡبَٰبِ ٥٢

## ಅಲ್ ಹಿಜ್ರ್[1]

## سُورَةُ الحِجۡرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 99

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲಿಫ್ ಲಾಮ್ ರಾ. ಇವು ಗ್ರಂಥದ ಮತ್ತು ಸ್ಪಷ್ಟವಾದ ಕುರ್‌ಆನ್‌ನ ಸೂಕ್ತಿಗಳಾಗಿವೆ.

الٓرۚ تِلۡكَ ءَايَٰتُ ٱلۡكِتَٰبِ وَقُرۡءَانٖ مُّبِينٖ ١

2. ನಾವು ಮುಸ್ಲಿಮರಾಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಕೆಲವೊಮ್ಮೆ ಸತ್ಯನಿಷೇಧಿಗಳು ಆಶಿಸುವರು.

رُّبَمَا يَوَدُّ ٱلَّذِينَ كَفَرُواْ لَوۡ كَانُواْ مُسۡلِمِينَ ٢

3. ತಾವು ಅವರನ್ನು ಬಿಟ್ಟುಬಿಡಿರಿ. ಅವರು ತಿನ್ನುತ್ತಲೂ, ಸುಖವಾಗಿ ಜೀವಿಸುತ್ತಲೂ, ಅಭಿಲಾಷೆಗಳಲ್ಲಿ ಮಗ್ನರಾಗುತ್ತಲೂ ಇರಲಿ. (ತರುವಾಯ) ಅವರು ಅರಿತುಕೊಳ್ಳುವರು.

ذَرۡهُمۡ يَأۡكُلُواْ وَيَتَمَتَّعُواْ وَيُلۡهِهِمُ ٱلۡأَمَلُۖ فَسَوۡفَ يَعۡلَمُونَ ٣

4. ನಾವು ಯಾವುದೇ ನಾಡನ್ನೂ ಅದಕ್ಕೆ ನಿಶ್ಚಿತವಾದ ಅವಧಿಯನ್ನು ನೀಡಲಾಗಿರುವ ಹೊರತು ನಾಶಮಾಡಿಲ್ಲ.

وَمَآ أَهۡلَكۡنَا مِن قَرۡيَةٍ إِلَّا وَلَهَا كِتَابٞ مَّعۡلُومٞ ٤

5. ಯಾವ ಜನತೆಯೂ ಅದರ ಅವಧಿಯನ್ನು ದಾಟಿಹೋಗಲಾರದು. (ಅವಧಿಯನ್ನು ಬಿಟ್ಟು) ಅವರು ಹಿಂದಕ್ಕೂ ಹೋಗಲಾರರು.

مَّا تَسۡبِقُ مِنۡ أُمَّةٍ أَجَلَهَا وَمَا يَسۡتَـٔۡخِرُونَ ٥

6. ಅವರು (ಸತ್ಯನಿಷೇಧಿಗಳು) ಹೇಳಿದರು: 'ಓ ದಿವ್ಯ ಸಂದೇಶ ಅವತೀರ್ಣಗೊಂಡಿರುವ ಮನುಷ್ಯನೇ! ಖಂಡಿತವಾಗಿಯೂ ನೀನೊಬ್ಬ ಮತಿಭ್ರಾಂತನೇ ಆಗಿರುವೆ.

وَقَالُواْ يَٰٓأَيُّهَا ٱلَّذِي نُزِّلَ عَلَيۡهِ ٱلذِّكۡرُ إِنَّكَ لَمَجۡنُونٞ ٦

7. ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ ನೀನೇಕೆ ನಮ್ಮ ಬಳಿಗೆ ಮಲಕ್‌ಗಳನ್ನು ತರುವುದಿಲ್ಲ?'[2]

لَّوۡ مَا تَأۡتِينَا بِٱلۡمَلَٰٓئِكَةِ إِن كُنتَ مِنَ ٱلصَّٰدِقِينَ ٧

---

1 80ನೇ ಸೂಕ್ತಿಯಲ್ಲಿ ಹಿಜ್ರ್ ನಿವಾಸಿಗಳ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಒಬ್ಬರು ಅಲ್ಲಾಹುವಿನ ಸಂದೇಶವಾಹಕರಾಗಬೇಕಾದರೆ ಅವರೊಂದಿಗೆ ಮಲಕ್‌ಗಳು ಕೂಡ ಕಳುಹಿಸಲ್ಪಡಬೇಕು ಎಂಬುದು ಅವರ ವಾದವಾಗಿತ್ತು.

8. ಆದರೆ ಸಮರ್ಪಕವಾದ ಕಾರಣವಿರುವ ಹೊರತು ನಾವು ಮಲಕ್‌ಗಳನ್ನು ಇಳಿಸಲಾರೆವು. ಅಂತಹ ಸಂದರ್ಭದಲ್ಲಿ ಅವರಿಗೆ (ಸತ್ಯನಿಷೇಧಿಗಳಿಗೆ) ಕಾಲಾವಕಾಶವನ್ನು ನೀಡಲಾಗದು.[1]

مَا نُنَزِّلُ ٱلۡمَلَٰٓئِكَةَ إِلَّا بِٱلۡحَقِّ وَمَا كَانُوٓاْ إِذٗا مُّنظَرِينَ ٨

9. ಖಂಡಿತವಾಗಿಯೂ ಈ ಉಪದೇಶವನ್ನು ಅವತೀರ್ಣಗೊಳಿಸಿದವರು ನಾವಾಗಿರುವೆವು. ಖಂಡಿತವಾಗಿಯೂ ಇದನ್ನು ನಾವು ಸಂರಕ್ಷಿಸುವೆವು.[2]

إِنَّا نَحۡنُ نَزَّلۡنَا ٱلذِّكۡرَ وَإِنَّا لَهُۥ لَحَٰفِظُونَ ٩

10. ಖಂಡಿತವಾಗಿಯೂ ತಮಗಿಂತ ಮುಂಚೆ ಪೂರ್ವಿಕರ ಅನೇಕ ಪಂಗಡಗಳೆಡೆಗೆ ನಾವು ಸಂದೇಶವಾಹಕರನ್ನು ಕಳುಹಿಸಿದ್ದೆವು.

وَلَقَدۡ أَرۡسَلۡنَا مِن قَبۡلِكَ فِي شِيَعِ ٱلۡأَوَّلِينَ ١٠

11. ಅವರೆಡೆಗೆ ಯಾವೊಬ್ಬ ಸಂದೇಶವಾಹಕ ಬಂದಾಗಲೂ ಅವರನ್ನು ಅವರು ಅಪಹಾಸ್ಯ ಮಾಡದೆ ಬಿಟ್ಟಿರಲಿಲ್ಲ.

وَمَا يَأۡتِيهِم مِّن رَّسُولٍ إِلَّا كَانُواْ بِهِۦ يَسۡتَهۡزِءُونَ ١١

12. ಹೀಗೆ ಅಪರಾಧಿಗಳ ಹೃದಯಗಳಲ್ಲಿ ಅದನ್ನು (ಅಪಹಾಸ್ಯವನ್ನು) ನಾವು ನುಸುಳಿಸಿ ಬಿಡುವೆವು.

كَذَٰلِكَ نَسۡلُكُهُۥ فِي قُلُوبِ ٱلۡمُجۡرِمِينَ ١٢

13. ಪೂರ್ವಿಕರ ಮೇಲೆ (ಅಲ್ಲಾಹುವಿನ) ಕ್ರಮವು ಜರುಗಿಯೂ ಸಹ ಅವರು ಇದರಲ್ಲಿ ವಿಶ್ವಾಸವಿಡಲಾರರು.

لَا يُؤۡمِنُونَ بِهِۦ وَقَدۡ خَلَتۡ سُنَّةُ ٱلۡأَوَّلِينَ ١٣

14-15. ಅವರಿಗೆ ನಾವು ಆಕಾಶದಿಂದ ಒಂದು ದ್ವಾರವನ್ನು ತೆರೆದುಕೊಟ್ಟು, ತರುವಾಯ ಅದರ ಮೂಲಕ ಅವರು ಏರಿಹೋದರೂ ಸಹ ಅವರು ಹೇಳುವರು: 'ನಮ್ಮ ಕಣ್ಣುಗಳಿಗೆ ಅಮಲು ಬಾಧಿಸಿದೆ. ಅಲ್ಲ, ನಾವು ಮಾಟಕ್ಕೊಳಗಾದ ಒಂದು ಜನತೆಯಾಗಿರುವೆವು'.

وَلَوۡ فَتَحۡنَا عَلَيۡهِم بَابٗا مِّنَ ٱلسَّمَآءِ فَظَلُّواْ فِيهِ يَعۡرُجُونَ ١٤ لَقَالُوٓاْ إِنَّمَا سُكِّرَتۡ أَبۡصَٰرُنَا بَلۡ نَحۡنُ قَوۡمٞ مَّسۡحُورُونَ ١٥

---

1 ಮಲಕ್‌ಗಳನ್ನು ಕಳುಹಿಸಿದ ಬಳಿಕವೂ ಅವರು ವಿಶ್ವಾಸವಿಡುವುದಿಲ್ಲವೆಂದಾದರೆ, ಬಳಿಕ ಅಲ್ಲಾಹುವಿನ ಶಿಕ್ಷೆಯು ಬರುವುದು ತಡವಾಗಲಾರದು.

2 ಯಾವುದೇ ರೀತಿಯ ಬದಲಾವಣೆಗಾಗಲಿ, ತಿದ್ದುಪಡಿಗಾಗಲಿ ಒಳಗಾಗದಂತೆ ಅಲ್ಲಾಹು ಆದರಣೀಯ ಕುರ್‌ಆನನ್ನು ಅಂತ್ಯದಿನದ ತನಕ ಸಂರಕ್ಷಿಸುವನು.

16. ನಾವು ಆಕಾಶದಲ್ಲಿ ನಕ್ಷತ್ರ ಪುಂಜಗಳನ್ನು ಮಾಡಿರುವೆವು ಮತ್ತು ವೀಕ್ಷಕರಿಗಾಗಿ ಅವುಗಳನ್ನು ಅಲಂಕರಿಸಿರುವೆವು.

وَلَقَدْ جَعَلْنَا فِى ٱلسَّمَآءِ بُرُوجًا وَزَيَّنَّـٰهَا لِلنَّـٰظِرِينَ ﴿١٦﴾

17. ಬಹಿಷ್ಕೃತರಾಗಿರುವ ಎಲ್ಲ ಸೈತಾನರಿಂದಲೂ ನಾವು ಅದನ್ನು ಸಂರಕ್ಷಿಸಿರುವೆವು.

وَحَفِظْنَـٰهَا مِن كُلِّ شَيْطَـٰنٍ رَّجِيمٍ ﴿١٧﴾

18. ಆದರೆ ಕದ್ದಾಲಿಸಲು ಯತ್ನಿಸುವವನ ಹೊರತು. ಆಗ ಪ್ರತ್ಯಕ್ಷ ಅಗ್ನಿಜ್ವಾಲೆಯೊಂದು ಅವನನ್ನು ಹಿಂಬಾಲಿಸುವುದು.[1]

إِلَّا مَنِ ٱسْتَرَقَ ٱلسَّمْعَ فَأَتْبَعَهُۥ شِهَابٌ مُّبِينٌ ﴿١٨﴾

19. ನಾವು ಭೂಮಿಯನ್ನು ವಿಶಾಲಗೊಳಿಸಿರುವೆವು. ಅದರಲ್ಲಿ ನಾಟಿ ನಿಲ್ಲುವ ಪರ್ವತಗಳನ್ನು ಸ್ಥಾಪಿಸಿರುವೆವು. ಅದರಲ್ಲಿ ನಾವು ಪ್ರಮಾಣವನ್ನು ನಿಶ್ಚಯಿಸಲಾದ ಸಕಲ ವಸ್ತುಗಳನ್ನೂ[2] ಬೆಳೆಸಿರುವೆವು.

وَٱلْأَرْضَ مَدَدْنَـٰهَا وَأَلْقَيْنَا فِيهَا رَوَٰسِىَ وَأَنۢبَتْنَا فِيهَا مِن كُلِّ شَىْءٍ مَّوْزُونٍ ﴿١٩﴾

20. ನಿಮಗೂ, ಯಾರಿಗೆ ನೀವು ಅನ್ನಾಹಾರ ಒದಗಿಸುವುದಿಲ್ಲವೋ ಅವರಿಗೂ, ನಾವು ಅದರಲ್ಲಿ ಜೀವನ ಮಾರ್ಗಗಳನ್ನು ಮಾಡಿಕೊಟ್ಟಿರುವೆವು.[3]

وَجَعَلْنَا لَكُمْ فِيهَا مَعَـٰيِشَ وَمَن لَّسْتُمْ لَهُۥ بِرَٰزِقِينَ ﴿٢٠﴾

21. ಯಾವುದೇ ವಸ್ತುವೂ ಇಲ್ಲ; ಅದರ ಖಜಾನೆಗಳು ನಮ್ಮ ಬಳಿಯಿರದ ಹೊರತು. (ಆದರೆ) ಒಂದು ನಿರ್ದಿಷ್ಟ ಪ್ರಮಾಣದೊಂದಿಗಲ್ಲದೆ ಅದನ್ನು ನಾವು ಇಳಿಸಲಾರೆವು.[4]

وَإِن مِّن شَىْءٍ إِلَّا عِندَنَا خَزَآئِنُهُۥ وَمَا نُنَزِّلُهُۥٓ إِلَّا بِقَدَرٍ مَّعْلُومٍ ﴿٢١﴾

1 ಆಕಾಶಲೋಕದಿಂದ ಮಾಹಿತಿಗಳನ್ನು ಕದ್ದಾಲಿಸಲು ಸೈತಾನರು ಪ್ರಯತ್ನಿಸುವರು. ಆಗ ಅವರೆಡೆಗೆ ಅಗ್ನಿಜ್ವಾಲೆಗಳು ಎಸೆಯಲ್ಪಡುವುದೆಂದು ಕುರ್‌ಆನ್‌ನ ಹಲವೆಡೆ ಕಾಣಬಹುದು. ಮಲಕ್‌ಗಳ ಮತ್ತು ಪಿಶಾಚಿ (ಜಿನ್ನ್)ಗಳ ಪ್ರಕೃತಿ ಮತ್ತು ಕಾರ್ಯನಿರ್ವಹಣೆಯ ಕುರಿತು ಕುರ್‌ಆನ್ ಮತ್ತು ಪ್ರವಾದಿ(ﷺ)ರವರ ವಚನಗಳು ತಿಳಿಸಿರುವುದಕ್ಕಿಂತ ಹೆಚ್ಚಾಗಿ ಮನುಷ್ಯರಿಗೆ ಏನನ್ನೂ ತಿಳಿಯಲು ಸಾಧ್ಯವಾಗಲಾರದು.

2 ಭೂಮಿಯಲ್ಲಿ ಅಲ್ಲಾಹು ಬೆಳೆಸಿದ ಸಸ್ಯಗಳ ಗುಣಗಣಗಳು ನಿಶ್ಚಿತ ಹಾಗೂ ಸಂತುಲಿತವೆಂದು ಇದರಿಂದ ಗ್ರಹಿಸಬಹುದು. 'ಮೌಝೂನ್' ಎಂಬ ಪದಕ್ಕೆ ತೂಕ ಅಥವಾ ಪ್ರಮಾಣ ನಿಶ್ಚಯಿಸಲ್ಪಟ್ಟದ್ದು, ಸಮತೋಲನ ಇತ್ಯಾದಿ ಅರ್ಥಗಳಿವೆ.

3 ಗರ್ಭಸ್ಥ ಶಿಶುಗಳ ಸಹಿತ ಸರ್ವ ಜೀವರಾಶಿಗಳಿಗೂ ಅವುಗಳ ಪ್ರಕೃತಿಗೆ ಸರಿ ಹೊಂದುವ ಆಹಾರವನ್ನೊದಗಿಸುವ ಅಲ್ಲಾಹುವಿಗಿಂತ ದೊಡ್ಡ ಅನುಗ್ರಹದಾತನು ಇನ್ನಾರಿದ್ದಾನೆ?

4 ಅಲ್ಲಾಹುವಿಗೆ ಯಾವುದೇ ವಸ್ತುವನ್ನೂ ಯಥೇಷ್ಟವಾಗಿ ಸೃಷ್ಟಿಸಲು ಸಾಧ್ಯವಿದೆ. ಆದರೆ ನಿಗದಿತ ಪ್ರಮಾಣದಲ್ಲೇ ಹೊರತು ಅವನು ಏನೊಂದನ್ನೂ ಸೃಷ್ಟಿಸುವುದಿಲ್ಲ.

22. ನಾವು ಮೋಡಗಳನ್ನು ಉತ್ಪಾದಿಸುವ ಗಾಳಿಯನ್ನು[1] ಕಳುಹಿಸುವೆವು. ತರುವಾಯ ಆಕಾಶದಿಂದ ಮಳೆನೀರನ್ನು ಸುರಿಸುವೆವು. ತರುವಾಯ ಅದನ್ನು ನಿಮಗೆ ಕುಡಿಯಲು ನೀಡುವೆವು. ಅದನ್ನು ಸಂಗ್ರಹಿಸಿಡಲು ನಿಮಗಂತೂ ಸಾಧ್ಯವಾಗಲಾರದು.[2]

وَأَرۡسَلۡنَا ٱلرِّيَٰحَ لَوَٰقِحَ فَأَنزَلۡنَا مِنَ ٱلسَّمَآءِ مَآءً فَأَسۡقَيۡنَٰكُمُوهُ وَمَآ أَنتُمۡ لَهُۥ بِخَٰزِنِينَ ٢٢

23. ಖಂಡಿತವಾಗಿಯೂ ಜೀವ ನೀಡುವವರು ಮತ್ತು ಮೃತಪಡಿಸುವವರು ನಾವಾಗಿರುವೆವು. (ಎಲ್ಲದರ) ವಾರೀಸುದಾರರೂ ನಾವಾಗಿರುವೆವು.

وَإِنَّا لَنَحۡنُ نُحۡيِۦ وَنُمِيتُ وَنَحۡنُ ٱلۡوَٰرِثُونَ ٢٣

24. ಖಂಡಿತವಾಗಿಯೂ ನಿಮ್ಮ ಪೈಕಿ ಮುಂಚೆ ಗತಿಸಿದವರನ್ನು (ಪೂರ್ವಿಕರನ್ನು) ನಾವು ಅರಿತಿರುವೆವು. ನಂತರದವರನ್ನೂ (ಮುಂದೆ ಬರುವವರನ್ನು) ನಾವು ಅರಿತಿರುವೆವು.[3]

وَلَقَدۡ عَلِمۡنَا ٱلۡمُسۡتَقۡدِمِينَ مِنكُمۡ وَلَقَدۡ عَلِمۡنَا ٱلۡمُسۡتَـٔۡخِرِينَ ٢٤

25. ಖಂಡಿತವಾಗಿಯೂ ತಮ್ಮ ರಬ್ ಅವರನ್ನು ಒಟ್ಟುಗೂಡಿಸುವನು. ಖಂಡಿತವಾಗಿಯೂ ಅವನು ಯುಕ್ತಿಪೂರ್ಣನೂ ಸರ್ವಜ್ಞಾನಿಯೂ ಆಗಿರುವನು.

وَإِنَّ رَبَّكَ هُوَ يَحۡشُرُهُمۡۚ إِنَّهُۥ حَكِيمٌ عَلِيمٞ ٢٥

26. ಕಪ್ಪಾಗಿರುವ ಕೆಸರು ಹದಮಾಡಿ ಉಂಟುಮಾಡಿದ (ತಟ್ಟಿದರೆ) ಶಬ್ದವುಂಟುಮಾಡುವ, ಜೇಡಿಮಣ್ಣು ರೂಪದಿಂದ ನಾವು ಮನುಷ್ಯನನ್ನು ಸೃಷ್ಟಿಸಿದೆವು.

وَلَقَدۡ خَلَقۡنَا ٱلۡإِنسَٰنَ مِن صَلۡصَٰلٖ مِّنۡ حَمَإٖ مَّسۡنُونٖ ٢٦

27. ಜಿನ್ನ್‌ಗಳನ್ನು ನಾವು ಅದಕ್ಕಿಂತ ಮುಂಚೆಯೇ ಅತಿಶಾಖವಿರುವ ಅಗ್ನಿಜ್ವಾಲೆಯಿಂದ ಸೃಷ್ಟಿಸಿದೆವು.

وَٱلۡجَآنَّ خَلَقۡنَٰهُ مِن قَبۡلُ مِن نَّارِ ٱلسَّمُومِ ٢٧

---

1 'ಲವಾಕಿಹ್' ಎಂಬ ಪದವನ್ನು ಸಸ್ಯಗಳಲ್ಲಿ ಪರಾಗಸ್ಪರ್ಶ ನಡೆಸುವ ಗಾಳಿ ಎಂದು ಸಹ ವ್ಯಾಖ್ಯಾನಿಸಲಾಗಿದೆ. ಅಂತರಿಕ್ಷದಲ್ಲಿರುವ ನೀರಾವಿಯನ್ನು ಕಾರ್ಮೋಡಗಳನ್ನಾಗಿ ಬದಲಾಯಿಸುವುದರಲ್ಲಿ ಮತ್ತು ಕಾರ್ಮೋಡಗಳನ್ನು ವಿವಿಧ ಭೂಪ್ರದೇಶಗಳೆಡೆಗೆ ರವಾನಿಸುವುದರಲ್ಲಿ ಗಾಳಿಗೆ ಬಹುದೊಡ್ಡ ಪಾತ್ರವಿದೆ.

2 ಅತಿದೀರ್ಘ ಕಾಲಕ್ಕಾಗಿ ನೀರನ್ನು ಸಂಗ್ರಹಿಸಿಡಲು ಮಾನವನಿಗೆ ಸಾಧ್ಯವಿಲ್ಲ. ನೀರಾವಿ–ಕಾರ್ಮೋಡ–ಮಳೆ ಈ ರೀತಿಯ ಒಂದು ಚಕ್ರ (cycling) ನಿಯಮಾವಳಿಯು ಇಲ್ಲದಿರುತ್ತಿದ್ದರೆ ಇಲ್ಲಿನ ಜೀವನವೇ ದುಸ್ತರವಾಗುತ್ತಿತ್ತು..

3 ಜೀವನ–ಮರಣ ಹಾಗೂ ಕರ್ಮಗಳಲ್ಲಿ ಮುಂದೆ ಇರುವವರನ್ನು ಮತ್ತು ಹಿಂದೆ ಉಳಿದವರನ್ನು ಅಲ್ಲಾಹು ಸಮಾನವಾಗಿ ಅರಿಯುತ್ತಾನೆ.

**28.** ತಮ್ಮ ರಬ್ ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ: 'ಕಪ್ಪಾಗಿರುವ, ಕೆಸರು ಹದಮಾಡಿ ಉಂಟುಮಾಡಿದ (ತಟ್ಟಿದರೆ) ಶಬ್ದವುಂಟುಮಾಡುವ, ಜೇಡಿಮಣ್ಣು ರೂಪದಿಂದ ಖಂಡಿತವಾಗಿಯೂ ನಾನು ಮನುಷ್ಯನನ್ನು ಸೃಷ್ಟಿಸುವೆನು.

وَإِذْ قَالَ رَبُّكَ لِلْمَلَٰٓئِكَةِ إِنِّي خَٰلِقُۢ بَشَرًا مِّن صَلْصَٰلٍ مِّنْ حَمَإٍ مَّسْنُونٍ ٢٨

**29.** ತರುವಾಯ ನಾನು ಅವನಿಗೆ ಪೂರ್ಣ ರೂಪವನ್ನು ನೀಡಿ, ಅವನಿಗಾಗಿ ಸೃಷ್ಟಿಸಲಾಗಿರುವ ಆತ್ಮವನ್ನು ಅವನಲ್ಲಿ ಊದಿದರೆ ನೀವು ಅವನಿಗೆ ಸಾಷ್ಟಾಂಗವೆರಗಿರಿ'.[1]

فَإِذَا سَوَّيْتُهُۥ وَنَفَخْتُ فِيهِ مِن رُّوحِي فَقَعُوا۟ لَهُۥ سَٰجِدِينَ ٢٩

**30.** ಆಗ ಮಲಕ್‌ಗಳೆಲ್ಲರೂ ಒಟ್ಟಾಗಿ ಸಾಷ್ಟಾಂಗ ವೆರಗಿದರು.

فَسَجَدَ ٱلْمَلَٰٓئِكَةُ كُلُّهُمْ أَجْمَعُونَ ٣٠

**31.** ಇಬ್ಲೀಸನ ಹೊರತು. ಅವನು ಸಾಷ್ಟಾಂಗವೆರಗುವವರೊಂದಿಗೆ ಸೇರಲು ನಿರಾಕರಿಸಿದನು.

إِلَّآ إِبْلِيسَ أَبَىٰٓ أَن يَكُونَ مَعَ ٱلسَّٰجِدِينَ ٣١

**32.** ಅಲ್ಲಾಹು ಕೇಳಿದನು: 'ಓ ಇಬ್ಲೀಸ್! ನೀನು ಸಾಷ್ಟಾಂಗವೆರಗಿದವರಲ್ಲಿ ಸೇರದಿರಲು ಕಾರಣವೇನು?'

قَالَ يَٰٓإِبْلِيسُ مَا لَكَ أَلَّا تَكُونَ مَعَ ٱلسَّٰجِدِينَ ٣٢

**33.** ಅವನು ಹೇಳಿದನು: 'ನೀನು ಕಪ್ಪಾಗಿರುವ, ಕೆಸರು ಹದಮಾಡಿ ಉಂಟುಮಾಡಿದ (ತಟ್ಟಿದರೆ) ಶಬ್ದವುಂಟುಮಾಡುವ, ಜೇಡಿಮಣ್ಣು ರೂಪದಿಂದ ಸೃಷ್ಟಿಸಿದ ಒಬ್ಬ ಮನುಷ್ಯನಿಗೆ ಸಾಷ್ಟಾಂಗವೆರಗಬೇಕಾದವನಲ್ಲ ನಾನು!'

قَالَ لَمْ أَكُن لِّأَسْجُدَ لِبَشَرٍ خَلَقْتَهُۥ مِن صَلْصَٰلٍ مِّنْ حَمَإٍ مَّسْنُونٍ ٣٣

**34.** ಅಲ್ಲಾಹು ಹೇಳಿದನು: 'ಇಲ್ಲಿಂದ ಹೊರಟು ಹೋಗು. ಖಂಡಿತವಾಗಿಯೂ ನೀನು ಬಹಿಷ್ಕೃತನಾಗಿರುವೆ.

قَالَ فَٱخْرُجْ مِنْهَا فَإِنَّكَ رَجِيمٌ ٣٤

**35.** ಖಂಡಿತವಾಗಿಯೂ ವಿಚಾರಣೆಯ ದಿನದ ತನಕ ಶಾಪವು ನಿನ್ನ ಮೇಲಿರುವುದು'.

وَإِنَّ عَلَيْكَ ٱللَّعْنَةَ إِلَىٰ يَوْمِ ٱلدِّينِ ٣٥

---

1 ಈ ಸುಜೂದ್ (ಸಾಷ್ಟಾಂಗವು) ಭೂಮಿಯಲ್ಲಿ ಸ್ವತಂತ್ರವಾದ ಕಾರ್ಯ ನಿರ್ವಹಣೆಯನ್ನು ವಹಿಸಿಕೊಡಲಾಗಿರುವ ಮನುಷ್ಯ ಎಂಬ ಸೃಷ್ಟಿಗೆ ಗೌರವವನ್ನು ಸೂಚಿಸುವ ಸಲುವಾಗಿದೆ. ಇದು ಆರಾಧನಾಭಾವವನ್ನು ಹೊಂದಿರುವ ಸುಜೂದ್ ಅಲ್ಲ.

36. ಅವನು ಹೇಳಿದನು: 'ಓ ನನ್ನ ರಬ್! ಅವರನ್ನು ಪುನರುತ್ಥಾನಗೊಳಿಸಲಾಗುವ ದಿನದ ತನಕ ನನಗೆ ಕಾಲಾವಕಾಶವನ್ನು ನೀಡು'.

قَالَ رَبِّ فَأَنظِرۡنِيٓ إِلَىٰ يَوۡمِ يُبۡعَثُونَ ٣٦

37-38. ಅಲ್ಲಾಹು ಹೇಳಿದನು: 'ಆ ನಿಶ್ಚಿತಾವಧಿಯು ಬರುವ ದಿನದ ತನಕ ಖಂಡಿತವಾಗಿಯೂ ನೀನು ಕಾಲಾವಕಾಶ ನೀಡಲಾದವರಲ್ಲಿ ಸೇರಿದವನಾಗಿರುವೆ'.

قَالَ فَإِنَّكَ مِنَ ٱلۡمُنظَرِينَ ٣٧ إِلَىٰ يَوۡمِ ٱلۡوَقۡتِ ٱلۡمَعۡلُومِ ٣٨

39. ಅವನು ಹೇಳಿದನು: 'ಓ ನನ್ನ ರಬ್! ನೀನು ನನ್ನನ್ನು ಪಥಭ್ರಷ್ಟಗೊಳಿಸಿರುವುದರಿಂದಾಗಿ ಖಂಡಿತವಾಗಿಯೂ ನಾನು ಅವರಿಗೆ ಭೂಲೋಕದಲ್ಲಿ (ದುಷ್ಕೃತ್ಯಗಳನ್ನು) ಆಕರ್ಷಕಗೊಳಿಸಿ ತೋರಿಸುವೆನು ಮತ್ತು ಅವರೆಲ್ಲರನ್ನೂ ನಾನು ಪಥಭ್ರಷ್ಟಗೊಳಿಸುವೆನು.

قَالَ رَبِّ بِمَآ أَغۡوَيۡتَنِي لَأُزَيِّنَنَّ لَهُمۡ فِي ٱلۡأَرۡضِ وَلَأُغۡوِيَنَّهُمۡ أَجۡمَعِينَ ٣٩

40. ಅವರ ಪೈಕಿ ನಿನ್ನ ನಿಷ್ಕಳಂಕ ದಾಸರಾಗಿರುವವರ ಹೊರತು'.[1]

إِلَّا عِبَادَكَ مِنۡهُمُ ٱلۡمُخۡلَصِينَ ٤٠

41. ಅಲ್ಲಾಹು ಹೇಳಿದನು: 'ಇದು ನನ್ನೆಡೆಗಿರುವ ನೇರವಾದ ಮಾರ್ಗವಾಗಿದೆ.[2]

قَالَ هَٰذَا صِرَٰطٌ عَلَيَّ مُسۡتَقِيمٌ ٤١

42. ಖಂಡಿತವಾಗಿಯೂ ನಿನ್ನನ್ನು ಅನುಸರಿಸಿದ ದುರ್ಮಾರ್ಗಿಗಳ ಮೇಲೆಯೇ ಹೊರತು ನನ್ನ ದಾಸರ ಮೇಲೆ ನಿನಗೆ ಯಾವುದೇ ಅಧಿಕಾರವಿರಲಾರದು'.

إِنَّ عِبَادِي لَيۡسَ لَكَ عَلَيۡهِمۡ سُلۡطَٰنٌ إِلَّا مَنِ ٱتَّبَعَكَ مِنَ ٱلۡغَاوِينَ ٤٢

43. ಖಂಡಿತವಾಗಿಯೂ ಅವರೆಲ್ಲರಿಗೂ ನಿಶ್ಚಯಿಸಲಾಗಿರುವ ಸ್ಥಾನವು ನರಕಾಗ್ನಿಯಾಗಿದೆ.

وَإِنَّ جَهَنَّمَ لَمَوۡعِدُهُمۡ أَجۡمَعِينَ ٤٣

44. ಅದಕ್ಕೆ ಏಳು ದ್ವಾರಗಳಿವೆ. ಪ್ರತಿಯೊಂದು ದ್ವಾರದ ಮೂಲಕವೂ ಪ್ರವೇಶಿಸುವ ಸಲುವಾಗಿ ಅವರ ಪೈಕಿ ವಿಂಗಡಿಸಲಾಗಿರುವ ವಿಭಾಗಗಳಿವೆ.

لَهَا سَبۡعَةُ أَبۡوَٰبٖ لِّكُلِّ بَابٖ مِّنۡهُمۡ جُزۡءٞ مَّقۡسُومٌ ٤٤

45. ಖಂಡಿತವಾಗಿಯೂ ಭಯಭಕ್ತಿ ಪಾಲಿಸಿದವರು ಉದ್ಯಾನಗಳಲ್ಲಿ ಮತ್ತು ಚಿಲುಮೆಗಳಲ್ಲಿರುವರು.

إِنَّ ٱلۡمُتَّقِينَ فِي جَنَّٰتٖ وَعُيُونٍ ٤٥

1 ಅಲ್ಲಾಹುವಿನ ನಿಷ್ಕಳಂಕ ದಾಸರನ್ನು ದಾರಿಗೆಡಿಸಲು ಸಾಧ್ಯವಾದೀತೆಂಬ ನಿರೀಕ್ಷೆಯು ಇಬ್ಲೀಸನಿಗಿರಲಿಲ್ಲ.

2 'ಇದು ನಾನು ತೋರಿಸಿಕೊಡಬೇಕಾದ ಸತ್ಯಮಾರ್ಗವಾಗಿದೆ' ಎಂದೂ ವ್ಯಾಖ್ಯಾನಿಸಲ್ಪಟ್ಟಿದೆ.

46. ನಿರ್ಭೀತರಾಗಿ ಶಾಂತಿಯೊಂದಿಗೆ ಅದರಲ್ಲಿ ಪ್ರವೇಶಿಸಿರಿ' (ಎಂದು ಅವರನ್ನು ಸ್ವಾಗತಿಸಲಾಗುವುದು).

ٱدْخُلُوهَا بِسَلَٰمٍ ءَامِنِينَ ﴿٤٦﴾

47. ಅವರ ಹೃದಯಗಳಲ್ಲಿ ವಿದ್ವೇಷವೇನಾದರೂ ಇದ್ದರೆ ನಾವದನ್ನು ತೆಗೆದುಹಾಕುವೆವು. ಅವರು ಮಂಚಗಳಲ್ಲಿ[1] ಪರಸ್ಪರ ಎದುರು ಬದುರಾಗಿ ಸಹೋದರ ಭಾವದೊಂದಿಗೆ ಆಸೀನರಾಗುವರು.

وَنَزَعْنَا مَا فِى صُدُورِهِم مِّنْ غِلٍّ إِخْوَٰنًا عَلَىٰ سُرُرٍ مُّتَقَٰبِلِينَ ﴿٤٧﴾

48. ಅಲ್ಲಿ ಯಾವುದೇ ದಣಿವು ಅವರನ್ನು ಸ್ಪರ್ಶಿಸಲಾರದು ಮತ್ತು ಅವರನ್ನು ಅಲ್ಲಿಂದ ಹೊರಹಾಕಲಾಗುವುದೂ ಇಲ್ಲ.

لَا يَمَسُّهُمْ فِيهَا نَصَبٌ وَمَا هُم مِّنْهَا بِمُخْرَجِينَ ﴿٤٨﴾

49. (ಓ ಪ್ರವಾದಿಯವರೇ!) ಖಂಡಿತವಾಗಿಯೂ ನಾನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವೆನೆಂದು ನನ್ನ ದಾಸರಿಗೆ ತಿಳಿಸಿಕೊಡಿರಿ.

۞ نَبِّئْ عِبَادِىٓ أَنِّىٓ أَنَا ٱلْغَفُورُ ٱلرَّحِيمُ ﴿٤٩﴾

50. ಖಂಡಿತವಾಗಿಯೂ ನನ್ನ ಶಿಕ್ಷೆಯು ಅತ್ಯಂತ ಯಾತನಾಮಯವಾಗಿರುವ ಶಿಕ್ಷೆಯೆಂದೂ (ತಿಳಿಸಿಕೊಡಿರಿ).

وَأَنَّ عَذَابِى هُوَ ٱلْعَذَابُ ٱلْأَلِيمُ ﴿٥٠﴾

51. ಇಬ್ರಾಹೀಮ್‌ರ (ಬಳಿಗೆ ಬಂದ) ಅತಿಥಿಗಳ ಕುರಿತು ತಾವು ಅವರಿಗೆ ತಿಳಿಸಿಕೊಡಿರಿ.

وَنَبِّئْهُمْ عَن ضَيْفِ إِبْرَٰهِيمَ ﴿٥١﴾

52. ಅವರು ಇಬ್ರಾಹೀಮ್‌ರ ಬಳಿಗೆ ಬಂದು 'ಸಲಾಮ್' ಎಂದು ಹೇಳಿದ ಸಂದರ್ಭ. ಇಬ್ರಾಹೀಮ್ ಹೇಳಿದರು: 'ಖಂಡಿತವಾಗಿಯೂ ನಾವು ನಿಮ್ಮ ಬಗ್ಗೆ ಭಯಭೀತರಾಗಿರುವೆವು'.[2]

إِذْ دَخَلُوا۟ عَلَيْهِ فَقَالُوا۟ سَلَٰمًا قَالَ إِنَّا مِنكُمْ وَجِلُونَ ﴿٥٢﴾

53. ಅವರು ಹೇಳಿದರು: 'ತಾವು ಭಯಪಡದಿರಿ! ಖಂಡಿತವಾಗಿಯೂ ನಾವು ಇಗೋ ತಮಗೆ

قَالُوا۟ لَا تَوْجَلْ إِنَّا نُبَشِّرُكَ بِغُلَٰمٍ عَلِيمٍ ﴿٥٣﴾

1 'ಸುರುರ್' ಎಂಬುದು 'ಸರೀರ್' ಎಂಬ ಪದದ ಬಹುವಚನವಾಗಿದೆ. ಮಂಚ, ವಿಶೇಷ ತರಹದ ಆಸನ ಇತ್ಯಾದಿಗಳನ್ನು ಸೂಚಿಸಲು ಈ ಪದ ಬಳಸಲಾಗುತ್ತದೆ.

2 ಇಬ್ರಾಹೀಮ್ (عَلَيْهِ ٱلسَّلَامُ)ರವರು ಅತಿಥಿಗಳಿಗೆ ಆಹಾರ ನೀಡಿದಾಗ ಅವರು ಅದನ್ನು ಸೇವಿಸಲಿಲ್ಲ. ಅದನ್ನು ಕಂಡಾಗ ಅವರ ಬಗ್ಗೆ ಇಬ್ರಾಹೀಮ್ (عَلَيْهِ ٱلسَّلَامُ)ರಿಗೆ ಭಯವುಂಟಾಯಿತೆಂದು 11:70ರಲ್ಲಿ ಹೇಳಲಾಗಿದೆ.

ಜ್ಞಾನಿಯಾಗಿರುವ ಒಂದು ಗಂಡು ಮಗುವಿನ ಕುರಿತು ಶುಭವಾರ್ತೆಯನ್ನು ತಿಳಿಸುತ್ತಿದ್ದೇವೆ'.

قَالَ أَبَشَّرْتُمُونِي عَلَىٰٓ أَن مَّسَّنِيَ ٱلْكِبَرُ فَبِمَ تُبَشِّرُونَ ﴿٥٤﴾

**54.** ಇಬ್ರಾಹೀಮ್ ಹೇಳಿದರು: 'ನನಗೆ ವೃದ್ಧಾಪ್ಯ ಬಾಧಿಸಿದ ಬಳಿಕವೇನು ನೀವು ನನಗೆ ಶುಭವಾರ್ತೆ ತಿಳಿಸುತ್ತಿರುವುದು? ನೀವು ನನಗೆ ಯಾವುದರ ಕುರಿತು ಶುಭವಾರ್ತೆ ತಿಳಿಸುತ್ತಿರುವಿರಿ?'

قَالُوا۟ بَشَّرْنَـٰكَ بِٱلْحَقِّ فَلَا تَكُن مِّنَ ٱلْقَـٰنِطِينَ ﴿٥٥﴾

**55.** ಅವರು ಹೇಳಿದರು: 'ನಾವು ತಮಗೆ ಶುಭವಾರ್ತೆಯನ್ನು ತಿಳಿಸಿರುವುದು ಒಂದು ಸತ್ಯದ ಕುರಿತಾಗಿದೆ. ಆದ್ದರಿಂದ ತಾವು ನಿರಾಶೆಪಡುವವರಲ್ಲಿ ಸೇರದಿರಿ'.

قَالَ وَمَن يَقْنَطُ مِن رَّحْمَةِ رَبِّهِۦٓ إِلَّا ٱلضَّآلُّونَ ﴿٥٦﴾

**56.** ಇಬ್ರಾಹೀಮ್ ಹೇಳಿದರು: 'ಪಥಭ್ರಷ್ಟರಾಗಿರುವವರ ವಿನಾ ತನ್ನ ರಬ್‌ನ ಕಾರುಣ್ಯದ ಕುರಿತು ನಿರಾಶರಾಗುವವರು ಇನ್ನಾರಿರುವರು?'

قَالَ فَمَا خَطْبُكُمْ أَيُّهَا ٱلْمُرْسَلُونَ ﴿٥٧﴾

**57.** ಇಬ್ರಾಹೀಮ್ ಹೇಳಿದರು: 'ಓ ದೂತರೇ! (ನೀವು ಬಂದಿರುವ) ನಿಮ್ಮ (ಮುಖ್ಯ) ವಿಷಯವೇನು?'

قَالُوٓا۟ إِنَّآ أُرْسِلْنَآ إِلَىٰ قَوْمٍ مُّجْرِمِينَ ﴿٥٨﴾

**58.** ಅವರು ಹೇಳಿದರು: 'ನಮ್ಮನ್ನು ಅಪರಾಧಿಗಳಾದ ಒಂದು ಜನತೆಯೆಡೆಗೆ ಕಳುಹಿಸಲಾಗಿದೆ.

إِلَّآ ءَالَ لُوطٍ إِنَّا لَمُنَجُّوهُمْ أَجْمَعِينَ ﴿٥٩﴾

**59.** (ಆದರೆ) ಲೂತ್‌ರ ಕುಟುಂಬವು ಇದರಿಂದ ಹೊರತಾಗಿದೆ. ಖಂಡಿತವಾಗಿಯೂ ನಾವು ಅವರೆಲ್ಲರನ್ನೂ ರಕ್ಷಿಸುವೆವು.

إِلَّا ٱمْرَأَتَهُۥ قَدَّرْنَآ إِنَّهَا لَمِنَ ٱلْغَـٰبِرِينَ ﴿٦٠﴾

**60.** ಆದರೆ ಅವರ ಪತ್ನಿಯ ಹೊರತು. ಖಂಡಿತವಾಗಿಯೂ ಆಕೆಯನ್ನು ಹಿಂದೆ ಉಳಿದವರಲ್ಲಿ (ಶಿಕ್ಷೆಗೀಡಾಗುವವರಲ್ಲಿ) ಸೇರುವವಳೆಂದು ನಾವು ಗಣಿಸಿರುವೆವು'.(1)

---

1 ಅಲ್ಲಾಹು ತೀರ್ಮಾನಿಸಿದ ಸಂಗತಿಯ ಕುರಿತು ನಾವು ಗಣಿಸಿರುವೆವು ಎಂದು ಮಲಕ್‌ಗಳು ಹೇಳುವುದು ಅಲ್ಲಾಹುವಿನ ತೀರ್ಮಾನವನ್ನು ಕಾರ್ಯಗತಗೊಳಿಸಲು ನಾವು ತೀರ್ಮಾನಿಸಿದೆವು ಎಂಬ ಅರ್ಥದಲ್ಲಾಗಿದೆ. ಅಲ್ಲಾಹುವಿನ ತೀರ್ಮಾನಕ್ಕೆ ವಿರುದ್ಧವಾದ ತೀರ್ಮಾನವನ್ನು ಕೈಗೊಳ್ಳಲು ಮಲಕ್‌ಗಳಿಗೆ ಸಾಧ್ಯವಿಲ್ಲ.

**61-62.** ತರುವಾಯ ಲೂತ್‌ರ ಕುಟುಂಬದೆಡೆಗೆ ಆ ದೂತರು ಬಂದಾಗ ಲೂತ್ ಹೇಳಿದರು: 'ಖಂಡಿತವಾಗಿಯೂ ನೀವು ಅಪರಿಚಿತ ಜನರಾಗಿರುವಿರಿ'.

**63.** ಅವರು (ಮಲಕ್‌ಗಳು) ಹೇಳಿದರು: 'ಅಲ್ಲ, ಯಾವುದರ (ಶಿಕ್ಷೆಯ) ಕುರಿತು ಅವರು (ಜನರು) ಸಂದೇಹದಲ್ಲಿರುವರೋ ಅದರೊಂದಿಗೇ ನಾವು ತಮ್ಮೆಡೆಗೆ ಬಂದಿರುವೆವು.

**64.** ನಾವು ತಮ್ಮೆಡೆಗೆ ಸತ್ಯದೊಂದಿಗೇ ಬಂದಿರುವೆವು. ಖಂಡಿತವಾಗಿಯೂ ನಾವು ಸತ್ಯವನ್ನು ನುಡಿಯುವವರಾಗಿರುವೆವು.

**65.** ಆದ್ದರಿಂದ ರಾತ್ರಿಯ ಅಲ್ಪಭಾಗವು ಬಾಕಿಯಿರುವಾಗ ತಾವು ತಮ್ಮ ಕುಟುಂಬದೊಂದಿಗೆ ಪ್ರಯಾಣಮಾಡಿರಿ. ತಾವು ಅವರನ್ನು ಹಿಂದಿನಿಂದ ಹಿಂಬಾಲಿಸಿರಿ. ನಿಮ್ಮಲ್ಲಿ ಯಾರೂ ಹಿಂದಿರುಗಿ ನೋಡದಿರಲಿ. ನಿಮಗೆ ಆದೇಶ ನೀಡಲಾಗುವ ದಿಕ್ಕಿನೆಡೆಗೆ ಸಾಗಿರಿ'.

**66.** ಆ ವಿಷಯವನ್ನು, (ಅಂದರೆ) ಬೆಳಗಾಗುವುದರೊಂದಿಗೆ ಇವರ ಬುಡವನ್ನೇ ಕತ್ತರಿಸಿ ಹಾಕಲಾಗುವುದೆಂಬ ವಿಷಯವನ್ನು ನಾವು ಅವರಿಗೆ (ಲೂತ್‌ರಿಗೆ) ಖಚಿತವಾಗಿ ತಿಳಿಸಿಕೊಟ್ಟೆವು.

**67.** ನಗರ ವಾಸಿಗಳು ಹರ್ಷಪಡುತ್ತಾ ಬಂದರು.(1)

**68.** ಲೂತ್ ಹೇಳಿದರು: 'ಖಂಡಿತವಾಗಿಯೂ ಇವರು ನನ್ನ ಅತಿಥಿಗಳಾಗಿರುವರು. ಆದ್ದರಿಂದ ನೀವು ನನ್ನನ್ನು ನಾಚಿಕೆಗೇಡುಮಾಡದಿರಿ.

**69.** ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅಪಮಾನ ಮಾಡದಿರಿ.

فَلَمَّا جَآءَ ءَالَ لُوطٍ ٱلْمُرْسَلُونَ ﴿٦١﴾ قَالَ
إِنَّكُمْ قَوْمٌ مُّنكَرُونَ ﴿٦٢﴾

قَالُوا۟ بَلْ جِئْنَٰكَ بِمَا كَانُوا۟ فِيهِ
يَمْتَرُونَ ﴿٦٣﴾

وَأَتَيْنَٰكَ بِٱلْحَقِّ وَإِنَّا لَصَٰدِقُونَ ﴿٦٤﴾

فَأَسْرِ بِأَهْلِكَ بِقِطْعٍ مِّنَ ٱلَّيْلِ وَٱتَّبِعْ
أَدْبَٰرَهُمْ وَلَا يَلْتَفِتْ مِنكُمْ أَحَدٌ
وَٱمْضُوا۟ حَيْثُ تُؤْمَرُونَ ﴿٦٥﴾

وَقَضَيْنَآ إِلَيْهِ ذَٰلِكَ ٱلْأَمْرَ أَنَّ دَابِرَ هَٰٓؤُلَآءِ
مَقْطُوعٌ مُّصْبِحِينَ ﴿٦٦﴾

وَجَآءَ أَهْلُ ٱلْمَدِينَةِ يَسْتَبْشِرُونَ ﴿٦٧﴾

قَالَ إِنَّ هَٰٓؤُلَآءِ ضَيْفِى فَلَا
تَفْضَحُونِ ﴿٦٨﴾

وَٱتَّقُوا۟ ٱللَّهَ وَلَا تُخْزُونِ ﴿٦٩﴾

1 ಲೂತ್(عَلَيْهِ السَّلَامُ) ರವರ ಬಳಿಗೆ ಬಂದ ಯುವಕರನ್ನು ಪ್ರಕೃತಿ ವಿರುದ್ಧ ಲೈಂಗಿಕ ಕ್ರಿಯೆಗೆ (ಸಲಿಂಗರತಿಗೆ) ಬಳಸಬಹುದೆಂದು ಭಾವಿಸಿ ಅವರು ಬಂದಿದ್ದರು.

**70.** ಅವರು ಹೇಳಿದರು: 'ತಮ್ಮನ್ನು ನಾವು ಜನರಿಂದ (ಜನರ ವಿಷಯದಲ್ಲಿ ಹಸ್ತಕ್ಷೇಪ ಮಾಡುವುದರಿಂದ) ವಿರೋಧಿಸಿರಲಿಲ್ಲವೇ?

قَالُوٓاْ أَوَ لَمْ نَنْهَكَ عَنِ ٱلْعَـٰلَمِينَ ﴿٧٠﴾

**71.** ಲೂತ್ ಹೇಳಿದರು: 'ಇವರು ನನ್ನ ಹೆಣ್ಮಕ್ಕಳು (ಇವರನ್ನು ವಿವಾಹವಾಗಿರಿ). ನೀವು ಮಾಡುವವರಾಗಿದ್ದರೆ.

قَالَ هَـٰٓؤُلَآءِ بَنَاتِىٓ إِن كُنتُمْ فَـٰعِلِينَ ﴿٧١﴾

**72.** ತಮ್ಮ ಜೀವನದ ಮೇಲಾಣೆ![1] ಖಂಡಿತವಾಗಿಯೂ ಅವರು ತಮ್ಮ ಅಮಲಿನಲ್ಲಿ ತೇಲಾಡುತ್ತಿದ್ದರು.

لَعَمْرُكَ إِنَّهُمْ لَفِى سَكْرَتِهِمْ يَعْمَهُونَ ﴿٧٢﴾

**73.** ಸೂರ್ಯೋದಯವಾಗುವುದರೊಂದಿಗೆ ಘೋರ ಶಬ್ದವು ಅವರನ್ನು ಹಿಡಿದುಬಿಟ್ಟಿತು.

فَأَخَذَتْهُمُ ٱلصَّيْحَةُ مُشْرِقِينَ ﴿٧٣﴾

**74.** ತರುವಾಯ ನಾವು ಆ ನಾಡನ್ನು ಬುಡಮೇಲುಗೊಳಿಸಿದೆವು ಮತ್ತು ಅವರ ಮೇಲೆ ಸುಟ್ಟ ಇಟ್ಟಿಗೆಗಳ ಮಳೆಗೆರೆದೆವು.

فَجَعَلْنَا عَـٰلِيَهَا سَافِلَهَا وَأَمْطَرْنَا عَلَيْهِمْ حِجَارَةً مِّن سِجِّيلٍ ﴿٧٤﴾

**75.** ವಿವೇಚನೆಯೊಂದಿಗೆ ನೋಡಿ ಗ್ರಹಿಸುವವರಿಗೆ ಖಂಡಿತವಾಗಿಯೂ ಅದರಲ್ಲಿ ಹಲವು ದೃಷ್ಟಾಂತಗಳಿವೆ.

إِنَّ فِى ذَٰلِكَ لَـَٔايَـٰتٍ لِّلْمُتَوَسِّمِينَ ﴿٧٥﴾

**76-77.** ಖಂಡಿತವಾಗಿಯೂ ಅದು (ಆ ನಾಡು) (ಇಂದೂ) ನೆಲೆನಿಂತಿರುವ ಹಾದಿಯಲ್ಲಿಯೇ ಇದೆ.[2] ಖಂಡಿತವಾಗಿಯೂ ಅದರಲ್ಲಿ ವಿಶ್ವಾಸಿಗಳಿಗೆ ಒಂದು ದೃಷ್ಟಾಂತವಿದೆ.

وَإِنَّهَا لَبِسَبِيلٍ مُّقِيمٍ ﴿٧٦﴾ إِنَّ فِى ذَٰلِكَ لَـَٔايَةً لِّلْمُؤْمِنِينَ ﴿٧٧﴾

**78–79.** ಖಂಡಿತವಾಗಿಯೂ ವೃಕ್ಷವನದಲ್ಲಿ[3] ವಾಸಿಸುತ್ತಿದ್ದ ಜನರು ಅಕ್ರಮಿಗಳಾಗಿದ್ದರು. ಆದ್ದರಿಂದ ನಾವು ಅವರ ವಿರುದ್ಧ

وَإِن كَانَ أَصْحَـٰبُ ٱلْأَيْكَةِ لَظَـٰلِمِينَ ﴿٧٨﴾ فَٱنتَقَمْنَا مِنْهُمْ وَإِنَّهُمَا لَبِإِمَامٍ مُّبِينٍ ﴿٧٩﴾

1 'ಅಮ್ರ್' ಎಂಬ ಪದಕ್ಕೆ ಆಯುಷ್ಯ ಅಥವಾ ಜೀವ ಎಂಬ ಅರ್ಥವಿದೆ. ಅಭಿಸಂಬೋಧಿತನ ಬದುಕಿನ ಮೇಲೆ ಆಣೆಯಿಟ್ಟು ಮಾತನಾಡುವ ಶೈಲಿಯು ಅರಬಿಗಳ ಮಧ್ಯೆ ಸಾಮಾನ್ಯವಾಗಿತ್ತು. ಈ ವಾಕ್ಯವನ್ನು ಅಲ್ಲಾಹು ಹೇಳಿರುವುದು ಲೂತ್(عَلَيْهِ السَّلَامُ)ರೊಂದಿಗೋ ಅಥವಾ ಮುಹಮ್ಮದ್(صَلَّى اللهُ عَلَيْهِ وَسَلَّمَ)ರೊಂದಿಗೋ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ.

2 ಅರಬರ ವಾಣಿಜ್ಯ ಮಾರ್ಗಗಳ ಪೈಕಿ ಕೆಲವು ನಾಶ ಮಾಡಲಾದ ಸೊದೋಮ್ ಪ್ರದೇಶವನ್ನು ಒಳಗೊಂಡಿರುವ ಮೃತಸಮುದ್ರದ ಸನಿಹದಿಂದ ಹಾದುಹೋಗುತ್ತಿದ್ದವು. ಕುರ್‌ಆನ್ ಅವತೀರ್ಣವಾಗುವ ಕಾಲದಲ್ಲಿ ಆ ನಾಡಿನ ನಾಶಗ್ರಸ್ತ ಅವಶೇಷಗಳು ಆ ಪ್ರದೇಶದಲ್ಲಿ ಕಾಣಬಹುದಾಗಿತ್ತು ಎಂದು ಹಲವು ಸೂಕ್ತಿಗಳು ತಿಳಿಸುತ್ತವೆ.

3 'ಐಕತ್' (ವೃಕ್ಷವನ) ಎಂದರೆ ವೃಕ್ಷಗಳಿಂದ ತುಂಬಿದ ಪ್ರದೇಶ ಎಂದರ್ಥ. ಇದು ಮದ್ಯನ್ ಭೂಪ್ರದೇಶದ ಸಮೀಪವಿತ್ತು. ಶುಐಬ್(عَلَيْهِ السَّلَامُ)ರವರು ಅವರೆಡೆಗೆ ಕಳುಹಿಸಲ್ಪಟ್ಟ ಪ್ರವಾದಿಯಾಗಿದ್ದರು.

ಶಿಕ್ಷಾಕ್ರಮಗಳನ್ನು ಕೈಗೊಂಡೆವು. ಖಂಡಿತವಾಗಿಯೂ ಈ ಎರಡು ಪ್ರದೇಶಗಳೂ[1] ಬಯಲು ಹಾದಿಯಲ್ಲಿಯೇ ಇವೆ.

**80.** ಖಂಡಿತವಾಗಿಯೂ ಹಿಜ್ರ್[2] ನಿವಾಸಿಗಳು ಸಂದೇಶವಾಹಕರನ್ನು ನಿಷೇಧಿಸಿದರು.

وَلَقَدۡ كَذَّبَ أَصۡحَٰبُ ٱلۡحِجۡرِ ٱلۡمُرۡسَلِينَ ٨٠

**81.** ನಾವು ಅವರಿಗೆ ನಮ್ಮ ದೃಷ್ಟಾಂತಗಳನ್ನು ನೀಡಿದ್ದೆವು. ಆದರೆ ಅವರು ಅವುಗಳನ್ನು ಕಡೆಗಣಿಸಿದರು.

وَءَاتَيۡنَٰهُمۡ ءَايَٰتِنَا فَكَانُواْ عَنۡهَا مُعۡرِضِينَ ٨١

**82.** ಅವರು ಪರ್ವತಗಳನ್ನು ಕೊರೆದು ಮನೆಗಳನ್ನು ನಿರ್ಮಿಸಿ ನಿರ್ಭೀತರಾಗಿ ಜೀವಿಸುತ್ತಿದ್ದರು.

وَكَانُواْ يَنۡحِتُونَ مِنَ ٱلۡجِبَالِ بُيُوتًا ءَامِنِينَ ٨٢

**83.** ಹೀಗಿರುವಾಗ ಪ್ರಭಾತವೇಳೆಯಲ್ಲಿ ಘೋರವಾದ ಶಬ್ದವೊಂದು ಅವರನ್ನು ಹಿಡಿದುಬಿಟ್ಟಿತು.

فَأَخَذَتۡهُمُ ٱلصَّيۡحَةُ مُصۡبِحِينَ ٨٣

**84.** ಆಗ ಅವರು ಸಂಪಾದಿಸಿದ ಯಾವುದೂ ಸಹ ಅವರ ಪ್ರಯೋಜನಕ್ಕೆ ಬರಲಿಲ್ಲ.

فَمَآ أَغۡنَىٰ عَنۡهُم مَّا كَانُواْ يَكۡسِبُونَ ٨٤

**85.** ಆಕಾಶಗಳು ಮತ್ತು ಭೂಮಿ ಹಾಗೂ ಅವೆರಡರ ಮಧ್ಯೆಯಿರುವುದನ್ನು ಸತ್ಯದೊಂದಿಗೇ ವಿನಾ ನಾವು ಸೃಷ್ಟಿಸಿಲ್ಲ. ಖಂಡಿತವಾಗಿಯೂ ಅಂತ್ಯದಿನವು ಬರಲಿರುವುದು. ಆದ್ದರಿಂದ ತಾವು ಸುಂದರವಾದ ಕ್ಷಮೆಯೊಂದಿಗೆ ಕ್ಷಮಿಸಿರಿ.[3]

وَمَا خَلَقۡنَا ٱلسَّمَٰوَٰتِ وَٱلۡأَرۡضَ وَمَا بَيۡنَهُمَآ إِلَّا بِٱلۡحَقِّۗ وَإِنَّ ٱلسَّاعَةَ لَأٓتِيَةٞۖ فَٱصۡفَحِ ٱلصَّفۡحَ ٱلۡجَمِيلَ ٨٥

**86.** ಖಂಡಿತವಾಗಿಯೂ ತಮ್ಮ ರಬ್ ಎಲ್ಲವನ್ನೂ ಸೃಷ್ಟಿಸುವವನೂ ಎಲ್ಲವನ್ನೂ ಅರಿಯುವವನೂ ಆಗಿರುವನು.

إِنَّ رَبَّكَ هُوَ ٱلۡخَلَّٰقُ ٱلۡعَلِيمُ ٨٦

---

1 ಸೊದೋಮ್ ಪ್ರದೇಶ ಮತ್ತು ಮದ್ಯನ್ ಪರಿಸರ.

2 ಹಿಜ್ರ್ ಮದೀನಾ ಮತ್ತು ತಬೂಕಿನ ಮಧ್ಯೆಯಿರುವ ಪ್ರದೇಶವಾಗಿದೆ. ಸಮೂದ್ ಜನಾಂಗವು ಅಲ್ಲಿ ವಾಸವಾಗಿತ್ತು.

3 ಸತ್ಯನಿಷೇಧಿಗಳು ಶಿಕ್ಷಿಸಲ್ಪಡಲಾರರು ಎಂದು ಭಾವಿಸಿ ದುಃಖಪಡಬೇಕಾಗಿಲ್ಲ. ವಿಚಾರಣೆಯ ದಿನವು ಬರುವುದೆಂಬುದು ಖಚಿತವಾಗಿದೆ. ಆದ್ದರಿಂದ ಅವರ ದುಷ್ಟತನಕ್ಕೆ ಕ್ಷಮೆ ನೀಡಿರಿ. ಅವರನ್ನು ಅಲ್ಲಾಹು ವಿಚಾರಿಸಿಕೊಳ್ಳುವನು.

87. ಖಂಡಿತವಾಗಿಯೂ ನಾವು ತಮಗೆ ಪುನರಾವರ್ತಿಸಿ ಓದಲಾಗುವ ಏಳು ಸೂಕ್ತಿಗಳನ್ನು[1] ಮತ್ತು ಮಹಾ ಕುರ್‌ಆನನ್ನು ನೀಡಿರುವೆವು.

وَلَقَدۡ ءَاتَيۡنَٰكَ سَبۡعٗا مِّنَ ٱلۡمَثَانِي وَٱلۡقُرۡءَانَ ٱلۡعَظِيمَ ٨٧

88. ನಾವು ಅವರ (ಅವಿಶ್ವಾಸಿಗಳ) ಪೈಕಿ ಹಲವು ಪಂಗಡಗಳಿಗೆ ನೀಡಿರುವ ಸುಖಭೋಗಗಳೆಡೆಗೆ ತಾವು ತಮ್ಮ ದೃಷ್ಟಿಯನ್ನು ಹಾಯಿಸದಿರಿ.[2] ಅವರ ಬಗ್ಗೆ ತಾವು ದುಃಖಿಸದಿರಿ.[3] ತಾವು ಸತ್ಯವಿಶ್ವಾಸಿಗಳಿಗೆ ತಮ್ಮ ರೆಕ್ಕೆಯನ್ನು ತಗ್ಗಿಸಿಕೊಡಿರಿ.[4]

لَا تَمُدَّنَّ عَيۡنَيۡكَ إِلَىٰ مَا مَتَّعۡنَا بِهِۦٓ أَزۡوَٰجٗا مِّنۡهُمۡ وَلَا تَحۡزَنۡ عَلَيۡهِمۡ وَٱخۡفِضۡ جَنَاحَكَ لِلۡمُؤۡمِنِينَ ٨٨

89. ‘ಖಂಡಿತವಾಗಿಯೂ ನಾನು ಒಬ್ಬ ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನಾಗಿರುವೆನು’ ಎಂದು ಹೇಳಿರಿ.

وَقُلۡ إِنِّيٓ أَنَا ٱلنَّذِيرُ ٱلۡمُبِينُ ٨٩

90. ಅಂದರೆ ವಿಭಜನೆ ಮಾಡಿದವರ ಮೇಲೆ ನಾವು ಅವತೀರ್ಣಗೊಳಿಸಿದಂತೆ.

كَمَآ أَنزَلۡنَا عَلَى ٱلۡمُقۡتَسِمِينَ ٩٠

91. ಅವರು ಕುರ್‌ಆನನ್ನು ವಿವಿಧ ತುಂಡುಗಳಾಗಿ ಮಾಡಿದವರಾಗಿರುವರು.[5]

ٱلَّذِينَ جَعَلُواْ ٱلۡقُرۡءَانَ عِضِينَ ٩١

92-93. ತಮ್ಮ ರಬ್‌ನ ಮೇಲಾಣೆ! ಅವರು ಮಾಡಿರುವುದರ ಬಗ್ಗೆ ಖಂಡಿತವಾಗಿಯೂ ನಾವು ಅವರೆಲ್ಲರನ್ನೂ ವಿಚಾರಣೆ ಮಾಡುವೆವು.

فَوَرَبِّكَ لَنَسۡـَٔلَنَّهُمۡ أَجۡمَعِينَ ٩٢ عَمَّا كَانُواْ يَعۡمَلُونَ ٩٣

---

1 ಇದರ ತಾತ್ಪರ್ಯವು ಸತ್ಯವಿಶ್ವಾಸಿಗಳು ನಮಾಝ್‌ನಲ್ಲಿ ದಿನನಿತ್ಯ ಪಾರಾಯಣ ಮಾಡುವ ಸೂರಃ ಅಲ್‌ಫಾತಿಹಃ ಆಗಿದೆ. ಇದರಲ್ಲಿ ಏಳು ಸೂಕ್ತಿಗಳಿವೆ.

2 ಸತ್ಯನಿಷೇಧಿಗಳಿಗೆ ಅಲ್ಲಾಹು ನೀಡಿದ ಸುಖಭೋಗಗಳೆಡೆಗೆ ಕಣ್ಣು ಹಾಯಿಸದಿರಿ. ಅದು ಕೇವಲ ಪರೀಕ್ಷೆಯಾಗಿದೆ. ಅಲ್ಲಾಹುವಿನ ಪರಮ ಅನುಗ್ರಹವೆಂದರೆ ಸತ್ಯವಿಶ್ವಾಸ, ಸತ್ಕರ್ಮ ಹಾಗೂ ಪರಲೋಕ ಮೋಕ್ಷವಾಗಿದೆ.

3 ಅವರು ವಿಶ್ವಾಸವಿಡುವುದಿಲ್ಲವೆಂದು ದುಃಖಿಸದಿರಿ ಎಂದರ್ಥ.

4 ಅವರೊಂದಿಗೆ ವಿನಯದಿಂದ ವರ್ತಿಸಿರಿ.

5 ವಿಭಜನೆ ಮಾಡಿದವರು ಎಂಬುದರ ತಾತ್ಪರ್ಯ ಯಹೂದರು ಮತ್ತು ಕ್ರೈಸ್ತರಾಗಿದ್ದಾರೆ. ಕುರ್‌ಆನ್ ಹೇಳಿದ ವಿಷಯಗಳ ಪೈಕಿ ಅವರ ಹಿತಾಸಕ್ತಿಗಳಿಗೆ ಪೂರಕವಾಗಿರುವುದನ್ನು ಅವರು ಸ್ವೀಕರಿಸಿದರು ಮತ್ತು ವಿರುದ್ಧವಾಗಿರುವುದನ್ನು ಅವರು ತಿರಸ್ಕರಿಸಿದರು. ಅವರಿಗೆ ಅಲ್ಲಾಹು ಗ್ರಂಥಗಳನ್ನು ಅವತೀರ್ಣಗೊಳಿಸಿದಂತೆಯೇ ಪ್ರವಾದಿ ಮುಹಮ್ಮದ್(ﷺ)ರವರಿಗೆ ಕುರ್‌ಆನ್ ಅವತೀರ್ಣಗೊಳಿಸಲಾಗಿದೆ. ಈ ಸೂಕ್ತಿಗಳಿಗೆ ಬೇರೆ ವ್ಯಾಖ್ಯಾನಗಳೂ ಇವೆ.

فَٱصۡدَعۡ بِمَا تُؤۡمَرُ وَأَعۡرِضۡ عَنِ ٱلۡمُشۡرِكِينَ ﴿٩٤﴾

94. ಆದ್ದರಿಂದ ತಮಗೆ ಏನನ್ನು ಆಜ್ಞಾಪಿಸಲಾಗುವುದೋ ಅದನ್ನು ಬಹಿರಂಗವಾಗಿ ಸಾರಿರಿ ಮತ್ತು ಬಹುದೇವಾರಾಧಕರಿಂದ ವಿಮುಖರಾಗಿರಿ.

إِنَّا كَفَيۡنَٰكَ ٱلۡمُسۡتَهۡزِءِينَ ﴿٩٥﴾ ٱلَّذِينَ يَجۡعَلُونَ مَعَ ٱللَّهِ إِلَٰهًا ءَاخَرَۚ فَسَوۡفَ يَعۡلَمُونَ ﴿٩٦﴾

95-96. ಅಲ್ಲಾಹುವಿನ ಜೊತೆಗೆ ಇತರ ಆರಾಧ್ಯರನ್ನು ನಿಶ್ಚಯಿಸುವ ಅಪಹಾಸ್ಯಕಾರರಿಂದ ತಮ್ಮನ್ನು ಸಂರಕ್ಷಿಸಲು ಖಂಡಿತವಾಗಿಯೂ ತಮಗೆ ನಾವು ಸಾಕು. ತರುವಾಯ ಅವರು ಅರಿತುಕೊಳ್ಳುವರು.

وَلَقَدۡ نَعۡلَمُ أَنَّكَ يَضِيقُ صَدۡرُكَ بِمَا يَقُولُونَ ﴿٩٧﴾

97. ಅವರು ಹೇಳುತ್ತಿರುವುದರ ನಿಮಿತ್ತ ಖಂಡಿತ ವಾಗಿಯೂ ತಮಗೆ ಹೃದಯದಲ್ಲಿ ಇಕ್ಕಟ್ಟು ಅನುಭವವಾಗುತ್ತಿದೆ ಎಂದು ನಾವು ಅರಿಯುತ್ತಿರುವೆವು.

فَسَبِّحۡ بِحَمۡدِ رَبِّكَ وَكُن مِّنَ ٱلسَّٰجِدِينَ ﴿٩٨﴾

98. ಆದ್ದರಿಂದ ತಾವು ತಮ್ಮ ರಬ್ಬನ್ನು ಸ್ತುತಿಸುತ್ತಾ ಅವನಿಗೆ ಸ್ತೋತ್ರಗಳನ್ನು ಸಲ್ಲಿಸಿರಿ ಮತ್ತು ಸಾಷ್ಟಾಂಗವೆರಗುವವರಲ್ಲಿ ಸೇರಿದವರಾಗಿರಿ.

وَٱعۡبُدۡ رَبَّكَ حَتَّىٰ يَأۡتِيَكَ ٱلۡيَقِينُ ﴿٩٩﴾

99. ದೃಢವಾದ ಸಂಗತಿಯು (ಮರಣವು) ತಮ್ಮೆಡೆಗೆ ಬರುವ ತನಕ ತಾವು ತಮ್ಮ ರಬ್ಬನ್ನು ಆರಾಧಿಸುತ್ತಿರಿ.

# ಅನ್ನಹ್ಲ್ (ಜೇನುನೊಣ)[1]

سُورَةُ النَّحْلِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 128

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಅಲ್ಲಾಹುವಿನ ಆಜ್ಞೆಯು ಬಂದಿದೆ[2] ಆದ್ದರಿಂದ ನೀವು ಅದಕ್ಕಾಗಿ ಆತುರ ಪಡದಿರಿ. ಅವರು ಸಹಭಾಗಿತ್ವ ಮಾಡುವುದರಿಂದ ಅಲ್ಲಾಹು ಎಷ್ಟೋ ಪರಿಪಾವನನೂ ಪರಮೋನ್ನತನೂ ಆಗಿರುವನು.

أَتَىٰٓ أَمۡرُ ٱللَّهِ فَلَا تَسۡتَعۡجِلُوهُۚ سُبۡحَٰنَهُۥ وَتَعَٰلَىٰ عَمَّا يُشۡرِكُونَ ١

2. ತನ್ನ ದಾಸರ ಪೈಕಿ ತಾನಿಚ್ಛಿಸುವವರ ಮೇಲೆ ತನ್ನ ಆಜ್ಞೆ ಪ್ರಕಾರ ಅವನು (ಸತ್ಯಸಂದೇಶವಾಗಿರುವ) ಚೈತನ್ಯದೊಂದಿಗೆ[3] ಮಲಕ್‌ಗಳನ್ನು ಇಳಿಸುವನು. 'ನನ್ನ ಹೊರತು ಅನ್ಯ ಆರಾಧ್ಯರಿಲ್ಲ, ಆದ್ದರಿಂದ ನನ್ನನ್ನು ಭಯಪಡಿರಿ' ಎಂದು ಜನರಿಗೆ ಮುನ್ನೆಚ್ಚರಿಕೆ ನೀಡಿರಿ (ಎಂಬ ಸಂದೇಶದೊಂದಿಗೆ).

يُنَزِّلُ ٱلۡمَلَٰٓئِكَةَ بِٱلرُّوحِ مِنۡ أَمۡرِهِۦ عَلَىٰ مَن يَشَآءُ مِنۡ عِبَادِهِۦٓ أَنۡ أَنذِرُوٓاْ أَنَّهُۥ لَآ إِلَٰهَ إِلَّآ أَنَا۠ فَٱتَّقُونِ ٢

3. ಅವನು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿರುವನು. ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅವನು ಅತ್ಯುನ್ನತನಾಗಿರುವನು.

خَلَقَ ٱلسَّمَٰوَٰتِ وَٱلۡأَرۡضَ بِٱلۡحَقِّۚ تَعَٰلَىٰ عَمَّا يُشۡرِكُونَ ٣

4. ಅವನು ಮನುಷ್ಯನನ್ನು ಒಂದು ವೀರ್ಯಕೋಶದಿಂದ ಸೃಷ್ಟಿಸಿರುವನು.

خَلَقَ ٱلۡإِنسَٰنَ مِن نُّطۡفَةٖ فَإِذَا هُوَ

1 68–69 ಸೂಕ್ತಿಗಳಲ್ಲಿ ಜೇನುನೊಣದ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಅಲ್ಲಾಹುವಿನ ಆಜ್ಞೆ ಎಂಬುದರ ತಾತ್ಪರ್ಯ ಈ ಜಗತ್ತಿನ ಅಂತ್ಯದ ಕುರಿತಾಗಿರುವ ಆಜ್ಞೆಯಾಗಿರಬಹುದು. ಅಥವಾ ಸತ್ಯನಿಷೇಧಿಗಳ ಸೋಲು ಅಥವಾ ನಾಶವನ್ನು ವಿಧಿಸುವ ಆಜ್ಞೆಯಾಗಿರಬಹುದು. ಮಾನವರಿಗೆ ಅತಿ ದೂರವಾಗಿ ತೋರುವ ಸಂಗತಿಯು ಅಲ್ಲಾಹುವಿನ ಮಟ್ಟಿಗೆ ಸ್ವಲ್ಪವೂ ವಿದೂರವಲ್ಲ ಮತ್ತು ಅಲ್ಲಾಹು ಅವಧಿ ನಿಶ್ಚಯಿಸಿದ ಸಂಭವಕ್ಕೆ ಮನುಷ್ಯರು ಆತುರಪಡುವುದು ಸರಿಯಲ್ಲ ಎಂದು ಈ ಸೂಕ್ತಿಯು ನಮ್ಮನ್ನು ಎಚ್ಚರಿಸುತ್ತದೆ.

3 ದಿವ್ಯಸಂದೇಶವು ನಿರ್ಜೀವ ಹೃದಯಗಳಿಗೆ ಜೀವ ನೀಡುವುದರಿಂದಲೇ ಅದನ್ನು ರೂಹ್ (ಚೈತನ್ಯ) ಎಂದು ಹೇಳಲಾಗಿದೆ.

خَصِيمٌ مُّبِينٌ ٤

ತರುವಾಯ ಅಗೋ! ಅವನು ಸ್ಪಷ್ಟ ವಿರೋಧಿಯಾಗಿರುವನು.[1]

وَٱلۡأَنۡعَٰمَ خَلَقَهَاۖ لَكُمۡ فِيهَا دِفۡءٞ وَمَنَٰفِعُ وَمِنۡهَا تَأۡكُلُونَ ٥

5. ಅವನು ಜಾನುವಾರುಗಳನ್ನೂ ಸೃಷ್ಟಿಸಿರುವನು. ಅವುಗಳಲ್ಲಿ ನಿಮಗೆ ಚಳಿಯನ್ನು ತಡೆಗಟ್ಟುವಂತದ್ದು (ಕಂಬಳಿ) ಇದೆ. ಇತರ ಪ್ರಯೋಜನಗಳೂ ಇವೆ. ಅವುಗಳಿಂದ ನೀವು ತಿನ್ನುತ್ತಲೂ ಇರುವಿರಿ.

وَلَكُمۡ فِيهَا جَمَالٌ حِينَ تُرِيحُونَ وَحِينَ تَسۡرَحُونَ ٦

6. ನೀವು ಮುಸ್ಸಂಜೆ ಅವುಗಳನ್ನು (ಕೊಟ್ಟಿಗೆಗೆ) ಮರಳಿ ತರುವ ವೇಳೆಯಲ್ಲೂ, ಅವುಗಳನ್ನು ಮೇಯಲು ಬಿಡುವ ವೇಳೆಯಲ್ಲೂ ಅವುಗಳಲ್ಲಿ ನಿಮಗೆ ಸೊಬಗಿದೆ.

وَتَحۡمِلُ أَثۡقَالَكُمۡ إِلَىٰ بَلَدٖ لَّمۡ تَكُونُواْ بَٰلِغِيهِ إِلَّا بِشِقِّ ٱلۡأَنفُسِۚ إِنَّ رَبَّكُمۡ لَرَءُوفٞ رَّحِيمٞ ٧

7. ದೈಹಿಕ ಪ್ರಯಾಸದಿಂದಲೇ ಹೊರತು ನಿಮಗೆ ತಲುಪಲು ಸಾಧ್ಯವಿಲ್ಲದಂತಹ ಪ್ರದೇಶಕ್ಕೆ ಅವು ನಿಮ್ಮ ಭಾರಗಳನ್ನು ಹೊತ್ತುಕೊಂಡು ಸಾಗುತ್ತವೆ. ಖಂಡಿತವಾಗಿಯೂ ನಿಮ್ಮ ರಬ್ ಅತ್ಯಧಿಕ ದಯಾಳುವೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَٱلۡخَيۡلَ وَٱلۡبِغَالَ وَٱلۡحَمِيرَ لِتَرۡكَبُوهَا وَزِينَةٗۚ وَيَخۡلُقُ مَا لَا تَعۡلَمُونَ ٨

8. ಅವನು ಕುದುರೆಗಳನ್ನು, ಹೇಸರಗತ್ತೆಗಳನ್ನು ಮತ್ತು ಕತ್ತೆಗಳನ್ನು ನೀವು ಪ್ರಯಾಣ ಮಾಡುವುದಕ್ಕಾಗಿ ಮತ್ತು ಅಲಂಕಾರವಾಗಿ (ಸೃಷ್ಟಿಸಿರುವನು). ನೀವು ಅರಿಯದಿರುವುದನ್ನೂ ಅವನು ಸೃಷ್ಟಿಸುವನು.[2]

وَعَلَى ٱللَّهِ قَصۡدُ ٱلسَّبِيلِ وَمِنۡهَا جَآئِرٞۚ وَلَوۡ شَآءَ لَهَدَىٰكُمۡ أَجۡمَعِينَ ٩

9. ಸತ್ಯಮಾರ್ಗವನ್ನು (ತೋರಿಸಿಕೊಡುವುದು) ಅಲ್ಲಾಹುವಿನ ಹೊಣೆಯಾಗಿದೆ. ಅವುಗಳ (ಮಾರ್ಗಗಳ) ಪೈಕಿ ಪಥಭ್ರಷ್ಟವಾದವುಗಳೂ ಇವೆ. ಅವನು ಇಚ್ಛಿಸುತ್ತಿದ್ದರೆ ನಿಮ್ಮೆಲ್ಲರನ್ನೂ ಅವನು ಸನ್ಮಾರ್ಗಕ್ಕೆ ಸೇರಿಸುತ್ತಿದ್ದನು.

1 ಎಷ್ಟೇ ದೊಡ್ಡ ವ್ಯಕ್ತಿಯಾದರೂ ಅವನು ಬೆಳೆದು ಬಂದಿರುವುದು ಒಂದು ವೀರ್ಯಕೋಶದಿಂದಾಗಿದೆ. ಅಲ್ಲಾಹುವಿನ ಸೃಷ್ಟಿ ನಿಯಮದಂತೆಯೇ ಅವನು ಬೆಳೆದು ದೊಡ್ಡವನಾದನು. ಆದರೆ ಇದೀಗ ಅವನು ಸೃಷ್ಟಿಕರ್ತನ ವಿರುದ್ಧ ತರ್ಕಿಸಲು ಆರಂಭಿಸಿರುವನು.

2 ನಾವು ಅರಿತಿರುವುದಕ್ಕಿಂತಲೂ ಹೆಚ್ಚು ನಮಗೆ ಅರಿವಿಲ್ಲದಂತಹ ವಿಷಯಗಳು ಈ ಜಗತ್ತಿನಲ್ಲಿ ಅಡಕವಾಗಿದೆಯೆಂದು ಪ್ರಪಂಚಾಧ್ಯಯನ ಮಾಡುವ ಎಲ್ಲರೂ ಅಂಗೀಕರಿಸುವ ವಾಸ್ತವಿಕತೆಯಾಗಿದೆ.

هُوَ ٱلَّذِىٓ أَنزَلَ مِنَ ٱلسَّمَآءِ مَآءًۖ لَّكُم مِّنْهُ شَرَابٌ وَمِنْهُ شَجَرٌ فِيهِ تُسِيمُونَ ١٠

10. ನಿಮಗೆ ಆಕಾಶದಿಂದ ಮಳೆನೀರನ್ನು ಇಳಿಸಿಕೊಟ್ಟವನು ಅವನಾಗಿರುವನು. ಅದರಲ್ಲಿ ನಿಮಗೆ ಕುಡಿಯುವ ನೀರಿದೆ. (ಜಾನುವಾರುಗಳನ್ನು) ಮೇಯಿಸಲು ನಿಮಗೆ ಹುಲ್ಲುಗಾವಲುಗಳುಂಟಾಗುವುದೂ ಅದರಿಂದಲೇ ಆಗಿದೆ.

يُنۢبِتُ لَكُم بِهِ ٱلزَّرْعَ وَٱلزَّيْتُونَ وَٱلنَّخِيلَ وَٱلْأَعْنَٰبَ وَمِن كُلِّ ٱلثَّمَرَٰتِۚ إِنَّ فِى ذَٰلِكَ لَءَايَةً لِّقَوْمٍ يَتَفَكَّرُونَ ١١

11. ಅವನು ನಿಮಗೆ ಅದರ (ನೀರಿನ) ಮೂಲಕ ಧಾನ್ಯಗಳನ್ನು, ಆಲಿವ್, ಖರ್ಜೂರದ ಮರ, ದ್ರಾಕ್ಷೆ ಮತ್ತು ಎಲ್ಲ ವಿಧದ ಫಲವರ್ಗಗಳನ್ನು ಉತ್ಪಾದಿಸಿಕೊಡುವನು. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಅದರಲ್ಲಿ ದೃಷ್ಟಾಂತವಿದೆ.

وَسَخَّرَ لَكُمُ ٱلَّيْلَ وَٱلنَّهَارَ وَٱلشَّمْسَ وَٱلْقَمَرَۖ وَٱلنُّجُومُ مُسَخَّرَٰتٌۢ بِأَمْرِهِۦٓۗ إِنَّ فِى ذَٰلِكَ لَءَايَٰتٍ لِّقَوْمٍ يَعْقِلُونَ ١٢

12. ಅವನು ನಿಮಗೆ ರಾತ್ರಿ ಹಗಲುಗಳನ್ನು ಮತ್ತು ಸೂರ್ಯ ಚಂದ್ರರನ್ನು ಅಧೀನಗೊಳಿಸಿಕೊಟ್ಟಿರುವನು. ನಕ್ಷತ್ರಗಳು ಅವನ ಆಜ್ಞೆಗೆ ವಿಧೇಯಗೊಳಿಸಲ್ಪಟ್ಟವುಗಳಾಗಿವೆ. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.

وَمَا ذَرَأَ لَكُمْ فِى ٱلْأَرْضِ مُخْتَلِفًا أَلْوَٰنُهُۥٓۗ إِنَّ فِى ذَٰلِكَ لَءَايَةً لِّقَوْمٍ يَذَّكَّرُونَ ١٣

13. ಅವನು ನಿಮಗಾಗಿ ಭೂಮಿಯಲ್ಲಿ ವಿಭಿನ್ನ ವರ್ಣಗಳೊಂದಿಗೆ[1] ಸೃಷ್ಟಿಸಿರುವವುಗಳು ಸಹ (ಅವನ ಆಜ್ಞೆಗೆ ವಿಧೇಯವಾಗಿವೆ). ಖಂಡಿತವಾಗಿಯೂ ಚಿಂತಿಸಿ ಗ್ರಹಿಸುವವರಿಗೆ ಇದರಲ್ಲಿ ದೃಷ್ಟಾಂತವಿದೆ.

وَهُوَ ٱلَّذِى سَخَّرَ ٱلْبَحْرَ لِتَأْكُلُوا۟ مِنْهُ لَحْمًا طَرِيًّا وَتَسْتَخْرِجُوا۟ مِنْهُ حِلْيَةً تَلْبَسُونَهَاۖ وَتَرَى ٱلْفُلْكَ مَوَاخِرَ فِيهِ وَلِتَبْتَغُوا۟ مِن فَضْلِهِۦ وَلَعَلَّكُمْ تَشْكُرُونَ ١٤

14. ನೀವು ತಾಜಾ ಮಾಂಸವನ್ನು ತೆಗೆದು ತಿನ್ನುವ ಸಲುವಾಗಿ ಮತ್ತು ನೀವು ಧರಿಸುವಂತಹ ಆಭರಣಗಳನ್ನು[2] ಹೊರತೆಗೆಯುವ ಸಲುವಾಗಿ ಸಮುದ್ರವನ್ನು ಅಧೀನಗೊಳಿಸಿಕೊಟ್ಟವನು ಅವನಾಗಿರುವನು. ಹಡಗುಗಳು ಅದರ ಮೂಲಕ ನೀರನ್ನು ಸೀಳುತ್ತಾ ಸಾಗುವುದನ್ನು

1 ಬಣ್ಣವೆಂಬುದು ಅತ್ಯಂತ ವಿಸ್ಮಯಕರ ವಿಷಯವಾಗಿದೆ. ಹಲವು ವಸ್ತುಗಳನ್ನು ಆಕರ್ಷಕ ಮತ್ತು ಸ್ವಾದವುಳ್ಳದ್ದಾಗಿ ಮಾಡುವುದು ಅವುಗಳ ಬಣ್ಣವೇ ಆಗಿದೆ. ಬಣ್ಣವು ಹಲವು ವಸ್ತುಗಳಿಗೆ ವೈವಿಧ್ಯತೆಯನ್ನು ನೀಡುತ್ತದೆ. ಕೆಲವೊಮ್ಮೆ ಬಣ್ಣವು ರಕ್ಷಾಕವಚವಾಗಿಯೂ ಮಾರ್ಪಡುತ್ತದೆ.

2 ಸಮುದ್ರದಿಂದ ಹೊರತೆಗೆಯುವ ಮುತ್ತುಗಳಿಗೆ ಆಭರಣಗಳ ರಚನೆಯಲ್ಲಿ ಯಾವತ್ತೂ ಪ್ರಮುಖ ಪಾತ್ರವಿದೆ.

ತಾವು ಕಾಣುವಿರಿ. ನೀವು ಅವನ ಔದಾರ್ಯದಿಂದ ಅರಸುವ ಸಲುವಾಗಿ ಮತ್ತು ನೀವು ಕೃತಜ್ಞತೆ ಸಲ್ಲಿಸುವವರಾಗುವ ಸಲುವಾಗಿ (ಅವನು ಅದನ್ನು ನಿಮಗೆ ಅಧೀನಗೊಳಿಸಿಕೊಟ್ಟಿರುವನು).

وَأَلْقَىٰ فِي ٱلْأَرْضِ رَوَٰسِيَ أَن تَمِيدَ بِكُمْ وَأَنْهَٰرًا وَسُبُلًا لَّعَلَّكُمْ تَهْتَدُونَ ١٥

15. ಭೂಮಿಯು ನಿಮ್ಮೊಂದಿಗೆ ಅಲುಗಾಡದಿರಲು ಅದರಲ್ಲಿ ಅವನು ನಾಟಿ ನಿಲ್ಲುವ ಪರ್ವತಗಳನ್ನು ಸ್ಥಾಪಿಸಿರುವನು. ನೀವು ದಾರಿಯನ್ನು ಕಂಡುಕೊಳ್ಳುವ ಸಲುವಾಗಿ[1] ನದಿಗಳನ್ನು ಮತ್ತು ಮಾರ್ಗಗಳನ್ನು (ಅವನು ನಿರ್ಮಿಸಿರುವನು).

وَعَلَٰمَٰتٍ ۚ وَبِٱلنَّجْمِ هُمْ يَهْتَدُونَ ١٦

16. (ಇವುಗಳ ಹೊರತಾಗಿ) ಹಲವು ಮಾರ್ಗಸೂಚಿಗಳೂ ಇವೆ. ನಕ್ಷತ್ರಗಳ ಮೂಲಕವೂ ಅವರು ದಾರಿ ಕಂಡುಕೊಳ್ಳುವರು.

أَفَمَن يَخْلُقُ كَمَن لَّا يَخْلُقُ ۗ أَفَلَا تَذَكَّرُونَ ١٧

17. ಹೀಗಿರುವಾಗ ಸೃಷ್ಟಿಸುವವನು ಸೃಷ್ಟಿಸದವನಂತೆ ಇರುವನೇ? ನೀವು ಚಿಂತಿಸಿ ಗ್ರಹಿಸಲಾರಿರೇ?

وَإِن تَعُدُّوا۟ نِعْمَةَ ٱللَّهِ لَا تُحْصُوهَآ ۗ إِنَّ ٱللَّهَ لَغَفُورٌ رَّحِيمٌ ١٨

18. ಅಲ್ಲಾಹುವಿನ ಅನುಗ್ರಹಗಳನ್ನು ನೀವು ಎಣಿಸುವುದಾದರೆ ಅವುಗಳನ್ನು ಎಣಿಕೆ ಮಾಡಲು ನಿಮ್ಮಿಂದ ಸಾಧ್ಯವಾಗದು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَٱللَّهُ يَعْلَمُ مَا تُسِرُّونَ وَمَا تُعْلِنُونَ ١٩

19. ನೀವು ಮರೆಮಾಚುವುದನ್ನೂ ಬಹಿರಂಗ ಪಡಿಸುವುದನ್ನೂ ಅಲ್ಲಾಹು ಅರಿಯುವನು.

وَٱلَّذِينَ يَدْعُونَ مِن دُونِ ٱللَّهِ لَا يَخْلُقُونَ شَيْـًٔا وَهُمْ يُخْلَقُونَ ٢٠

20. ಅಲ್ಲಾಹುವಿನ ಹೊರತು ಅವರು ಯಾರೊಂದಿಗೆ ಪ್ರಾರ್ಥಿಸುತ್ತಿರುವರೋ ಅವರು ಏನನ್ನೂ ಸೃಷ್ಟಿಸಲಾರರು. ಅವರೇ ಸೃಷ್ಟಿಸಲ್ಪಟ್ಟವರಾಗಿರುವರು.

---

1 ಸಮುದ್ರದಲ್ಲೂ ತೀರದಲ್ಲೂ ಸಂಚರಿಸುವವರಿಗೆ ನದಿಗಳು, ಕಣಿವೆಗಳು ಮತ್ತು ನಕ್ಷತ್ರಗಳು ದಿಕ್ಸೂಚಿಗಳಾಗಿ ಕಾರ್ಯನಿರ್ವಹಿಸುತ್ತವೆ.

21. ಅವರು (ಪ್ರಾರ್ಥಿಸಲ್ಪಡುವವರು) ಮರಣ ಹೊಂದಿದವರಾಗಿರುವರು. ಬದುಕಿರುವವರಲ್ಲ! ತಮ್ಮನ್ನು ಯಾವಾಗ ಪುನರುತ್ಥಾನಗೊಳಿಸಲಾಗುವುದು ಎಂಬ ಪ್ರಜ್ಞೆಯೂ ಅವರಿಗಿರಲಾರದು.[1]

أَمْوَٰتٌ غَيْرُ أَحْيَآءٍۖ وَمَا يَشْعُرُونَ أَيَّانَ يُبْعَثُونَ ﴿٢١﴾

22. ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನು. ಆದರೆ ಪರಲೋಕದಲ್ಲಿ ವಿಶ್ವಾಸವಿಡದವರು ಯಾರೋ ಅವರ ಹೃದಯಗಳು ನಿಷೇಧಗುಣವಿರುವುದಾಗಿವೆ ಮತ್ತು ಅವರು ಅಹಂಕಾರಿಗಳಾಗಿರುವರು.

إِلَٰهُكُمْ إِلَٰهٌ وَٰحِدٌۚ فَٱلَّذِينَ لَا يُؤْمِنُونَ بِٱلْأَخِرَةِ قُلُوبُهُم مُّنكِرَةٌ وَهُم مُّسْتَكْبِرُونَ ﴿٢٢﴾

23. ಅವರು ಮರೆಮಾಚುವುದನ್ನೂ ಬಹಿರಂಗಪಡಿಸುವುದನ್ನೂ ಅಲ್ಲಾಹು ಅರಿಯುತ್ತಿರುವನು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಖಂಡಿತವಾಗಿಯೂ ಅವನು ಅಹಂಕಾರಿಗಳನ್ನು ಮೆಚ್ಚಲಾರನು.

لَا جَرَمَ أَنَّ ٱللَّهَ يَعْلَمُ مَا يُسِرُّونَ وَمَا يُعْلِنُونَۚ إِنَّهُۥ لَا يُحِبُّ ٱلْمُسْتَكْبِرِينَ ﴿٢٣﴾

24. 'ನಿಮ್ಮ ರಬ್ ಏನನ್ನು ಅವತೀರ್ಣಗೊಳಿಸಿರುವನು?' ಎಂದು ಅವರೊಂದಿಗೆ ಕೇಳಿದರೆ 'ಪೂರ್ವಿಕರ ಪುರಾಣಕತೆಗಳನ್ನು' ಎಂದು ಅವರು ಉತ್ತರಿಸುವರು.

وَإِذَا قِيلَ لَهُم مَّاذَآ أَنزَلَ رَبُّكُمْ قَالُوٓاْ أَسَٰطِيرُ ٱلْأَوَّلِينَ ﴿٢٤﴾

25. ಅವರು ಅಂತ್ಯದಿನದಂದು ತಮ್ಮ ಪಾಪಭಾರವನ್ನು ಪೂರ್ಣವಾಗಿ ಹೊರಲು ಮತ್ತು ಯಾವುದೇ ಜ್ಞಾನವಿಲ್ಲದೆ ಅವರು ಯಾರನ್ನೆಲ್ಲ ದಾರಿಗೆಡಿಸಿರುವರೋ ಅವರ ಪಾಪದ ಒಂದು ಭಾಗವನ್ನು ಹೊರಲು (ಅದು ಕಾರಣವಾಗುವುದು). ಅರಿಯಿರಿ! ಅವರು ಹೊರುವ ಆ ಭಾರವು ಎಷ್ಟು ನಿಕೃಷ್ಟವಾದುದು!

لِيَحْمِلُوٓاْ أَوْزَارَهُمْ كَامِلَةً يَوْمَ ٱلْقِيَٰمَةِ وَمِنْ أَوْزَارِ ٱلَّذِينَ يُضِلُّونَهُم بِغَيْرِ عِلْمٍۗ أَلَا سَآءَ مَا يَزِرُونَ ﴿٢٥﴾

1 ಧರ್ಮವಿಶ್ವಾಸಿಗಳಲ್ಲಿ ಹೆಚ್ಚಿನವರೂ ಇಷ್ಟಾರ್ಥ ಸಿದ್ಧಿಗಾಗಿ ಮೃತ ಮಹಾತ್ಮರ ಗೋರಿಗಳನ್ನು ಅರಸುತ್ತಾ ಸಾಗುತ್ತಾರೆ ಹಾಗೂ ಮೃತರೊಂದಿಗೆ ಪ್ರಾರ್ಥಿಸುತ್ತಾರೆ. ಆದರೆ ಮರಣ ಹೊಂದಿರುವವರಿಗೆ ಸ್ವತಃ ತಮ್ಮದೇ ವಿಷಯದಲ್ಲೂ ಏನನ್ನೂ ಮಾಡಲು ಸಾಧ್ಯವಿಲ್ಲ ಮತ್ತು ತಮ್ಮ ವಿಧಿಯ ಕುರಿತು ತಿಳಿಯಲು ಕೂಡ ಅವರಿಗೆ ಸಾಧ್ಯವಿಲ್ಲವೆಂದು ಅಲ್ಲಾಹು ಹೇಳುತ್ತಿರುವನು. ಹೀಗಿರುವಾಗ ಅವರಿಗೆ ಇತರರ ಉದ್ದೇಶಗಳನ್ನು ಈಡೇರಿಸಿಕೊಡಲು ಸಾಧ್ಯವಾಗುವುದಾದರೂ ಹೇಗೆ.?

26. ಅವರಿಗಿಂತ ಮುಂಚಿನವರೂ ತಂತ್ರ ಹೂಡಿರುವರು. ಆಗ ಅಲ್ಲಾಹು ಅವರು ನಿರ್ಮಿಸಿರುವುದರ ಅಡಿಪಾಯವನ್ನು ಧ್ವಂಸಗೊಳಿಸಿದನು. ಆಗ ಛಾವಣಿಯು ಅವರ ಮೇಲ್ಭಾಗದಿಂದ ಅವರ ಮೇಲೆ ಕುಸಿದು ಬಿತ್ತು.(1) ಅವರು ನಿರೀಕ್ಷಿಸದ ಕಡೆಯಿಂದ ಶಿಕ್ಷೆಯು ಅವರೆಡೆಗೆ ಬಂದಿತು.

قَدْ مَكَرَ ٱلَّذِينَ مِن قَبْلِهِمْ فَأَتَى ٱللَّهُ بُنْيَـٰنَهُم مِّنَ ٱلْقَوَاعِدِ فَخَرَّ عَلَيْهِمُ ٱلسَّقْفُ مِن فَوْقِهِمْ وَأَتَىٰهُمُ ٱلْعَذَابُ مِنْ حَيْثُ لَا يَشْعُرُونَ ﴿٢٦﴾

27. ತರುವಾಯ ಅಂತ್ಯದಿನದಂದು ಅವನು ಅವರನ್ನು ಅಪಮಾನಗೊಳಿಸುವನು. ನನಗೆ ಸಹಭಾಗಿಗಳಿದ್ದಾರೆಂದು ವಾದಿಸುತ್ತಾ ನೀವು ವಿಭಜನೆಗೊಂಡಿದ್ದಿರಿ. ಅವರು ಎಲ್ಲಿರುವರು?' ಎಂದು ಅವನು ಕೇಳುವನು. ಜ್ಞಾನ ನೀಡಲಾದವರು ಹೇಳುವರು: 'ಖಂಡಿತವಾಗಿಯೂ ಇಂದು ಅಪಮಾನ ಮತ್ತು ಶಿಕ್ಷೆಯು ಸತ್ಯನಿಷೇಧಿಗಳ ಮೇಲಾಗಿದೆ'.

ثُمَّ يَوْمَ ٱلْقِيَـٰمَةِ يُخْزِيهِمْ وَيَقُولُ أَيْنَ شُرَكَآءِىَ ٱلَّذِينَ كُنتُمْ تُشَـٰٓقُّونَ فِيهِمْ ۚ قَالَ ٱلَّذِينَ أُوتُوا۟ ٱلْعِلْمَ إِنَّ ٱلْخِزْىَ ٱلْيَوْمَ وَٱلسُّوٓءَ عَلَى ٱلْكَـٰفِرِينَ ﴿٢٧﴾

28. ಸ್ವತಃ ತಮ್ಮೊಂದಿಗೆ ಅಕ್ರಮವೆಸಗುತ್ತಿರುವಾಗಲೇ ಯಾವೊಂದು ಜನತೆಯ ಬದುಕನ್ನು ಮಲಕ್‌ಗಳು ಕೊನೆಗೊಳಿಸುವರೋ ಅವರ ಮೇಲಾಗಿದೆ. 'ನಾವು ಯಾವುದೇ ಕೆಡುಕನ್ನೂ ಮಾಡಿರಲಿಲ್ಲ' ಎನ್ನುತ್ತಾ ಅವರು ಶರಣಾಗಲು ಮುಂದಾಗುವರು.(2) ಹಾಗಲ್ಲ! ಖಂಡಿತವಾಗಿಯೂ ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿಯುವವನಾಗಿರುವನು.

ٱلَّذِينَ تَتَوَفَّىٰهُمُ ٱلْمَلَـٰٓئِكَةُ ظَالِمِىٓ أَنفُسِهِمْ ۖ فَأَلْقَوُا۟ ٱلسَّلَمَ مَا كُنَّا نَعْمَلُ مِن سُوٓءٍ ۚ بَلَىٰٓ إِنَّ ٱللَّهَ عَلِيمٌۢ بِمَا كُنتُمْ تَعْمَلُونَ ﴿٢٨﴾

29. ಆದ್ದರಿಂದ ನೀವು ನರಕದ ಬಾಗಿಲುಗಳನ್ನು ಪ್ರವೇಶಿಸಿರಿ. (ನೀವು) ಅದರಲ್ಲಿ ಶಾಶ್ವತ ವಾಸಿಗಳಾಗಿರುವಿರಿ. ಅಹಂಕಾರಿಗಳ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!

فَٱدْخُلُوٓا۟ أَبْوَٰبَ جَهَنَّمَ خَـٰلِدِينَ فِيهَا ۖ فَلَبِئْسَ مَثْوَى ٱلْمُتَكَبِّرِينَ ﴿٢٩﴾

---

1 ಪ್ರವಾದಿಗಳನ್ನು ಮತ್ತು ಸತ್ಯವಿಶ್ವಾಸಿಗಳನ್ನು ಸೋಲಿಸಲು ಅವರು ಕುತಂತ್ರದ ಒಂದು ಸೌಧವನ್ನೇ ನಿರ್ಮಿಸಿದ್ದರು. ಆದರೆ ಅಲ್ಲಾಹುವಿನ ತಂತ್ರವು ಅವರ ಕುತಂತ್ರದ ಅಡಿಪಾಯವನ್ನೇ ಬುಡಮೇಲುಗೊಳಿಸುವುದಾಗಿತ್ತು.

2 ಭೂಮಿಯಲ್ಲಿ ಹದ್ದುಮೀರಿ ಧಿಕ್ಕಾರ ತೋರಿದವರೆಲ್ಲರೂ ಪರಲೋಕದಲ್ಲಿ ಅಲ್ಲಾಹುವಿಗೆ ಶರಣಾಗಲು ಸಿದ್ಧರಾಗುವರು. ಆದರೆ ಅದರಿಂದ ಅವರಿಗೆ ಯಾವುದೇ ಪ್ರಯೋಜನವೂ ಲಭಿಸದು.

30. 'ನಿಮ್ಮ ರಬ್ ಏನನ್ನು ಅವತೀರ್ಣಗೊಳಿಸಿರುವನು?' ಎಂದು ಭಯಭಕ್ತಿ ಪಾಲಿಸಿದವರೊಂದಿಗೆ ಕೇಳಲಾದರೆ ಅವರು ಹೇಳುವರು: 'ಉತ್ತಮವಾಗಿರುವುದನ್ನು'. ಒಳಿತಿನಪಾಲಕರಿಗೆ ಈ ಇಹಲೋಕದಲ್ಲೇ ಸತ್ಫಲವಿದೆ. ಪರಲೋಕ ಭವನವು ಅತ್ಯುತ್ತಮವಾದುದಾಗಿದೆ. ಭಯಭಕ್ತಿ ಪಾಲಿಸುವವರಿಗಿರುವ ಭವನವು ಎಷ್ಟು ಉತ್ತಮವಾದುದು!

۞ وَقِيلَ لِلَّذِينَ ٱتَّقَوۡاْ مَاذَآ أَنزَلَ رَبُّكُمۡۚ قَالُواْ خَيۡرٗاۗ لِّلَّذِينَ أَحۡسَنُواْ فِي هَٰذِهِ ٱلدُّنۡيَا حَسَنَةٞۚ وَلَدَارُ ٱلۡأٓخِرَةِ خَيۡرٞۚ وَلَنِعۡمَ دَارُ ٱلۡمُتَّقِينَ ٣٠

31. ಅವರು ಶಾಶ್ವತವಾಸಕ್ಕಾಗಿ ಪ್ರವೇಶಿಸುವ ಸ್ವರ್ಗೋದ್ಯಾನಗಳು. ಅದರ ತಳಭಾಗದಿಂದ ನದಿಗಳು ಹರಿಯುತ್ತಿರುವುವು. ಅವರು ಬಯಸುವುದೆಲ್ಲವೂ ಅವರಿಗೆ ಅಲ್ಲಿರುವುವು. ಹೀಗೆ ಭಯಭಕ್ತಿ ಪಾಲಿಸುವವರಿಗೆ ಅಲ್ಲಾಹು ಪ್ರತಿಫಲವನ್ನು ನೀಡುವನು.

جَنَّٰتُ عَدۡنٖ يَدۡخُلُونَهَا تَجۡرِي مِن تَحۡتِهَا ٱلۡأَنۡهَٰرُۖ لَهُمۡ فِيهَا مَا يَشَآءُونَۚ كَذَٰلِكَ يَجۡزِي ٱللَّهُ ٱلۡمُتَّقِينَ ٣١

32. (ಅಂದರೆ) ಸಜ್ಜನರಾಗಿರುವಾಗ ಯಾವೊಂದು ಜನತೆಯ ಬದುಕನ್ನು ಮಲಕ್‌ಗಳು ಕೊನೆಗೊಳಿಸುವರೋ ಅವರಿಗೆ. ಅವರು (ಮಲಕ್‌ಗಳು) ಹೇಳುವರು: 'ನಿಮ್ಮ ಮೇಲೆ ಶಾಂತಿಯಿರಲಿ. ನೀವು ಮಾಡಿಕೊಂಡಿರುವುದರ ಫಲವಾಗಿ ನೀವು ಸ್ವರ್ಗವನ್ನು ಪ್ರವೇಶಿಸಿರಿ'.

ٱلَّذِينَ تَتَوَفَّىٰهُمُ ٱلۡمَلَٰٓئِكَةُ طَيِّبِينَ يَقُولُونَ سَلَٰمٌ عَلَيۡكُمُ ٱدۡخُلُواْ ٱلۡجَنَّةَ بِمَا كُنتُمۡ تَعۡمَلُونَ ٣٢

33. ತಮ್ಮ ಬಳಿಗೆ ಮಲಕ್‌ಗಳು ಬರುವುದನ್ನು ಅಥವಾ ತಮ್ಮ ರಬ್‌ನ ಆಜ್ಞೆ ಬರುವುದನ್ನು ಹೊರತು ಅವರು ಬೇರೆ ಏನನ್ನಾದರೂ ಕಾಯುತ್ತಿರುವರೇ?[1] ಅವರ ಪೂರ್ವಿಕರೂ ಹೀಗೆಯೇ ಮಾಡಿದ್ದರು. ಅಲ್ಲಾಹು ಅವರೊಂದಿಗೆ ಅನ್ಯಾಯವೆಸಗಿರಲಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದರು.

هَلۡ يَنظُرُونَ إِلَّآ أَن تَأۡتِيَهُمُ ٱلۡمَلَٰٓئِكَةُ أَوۡ يَأۡتِيَ أَمۡرُ رَبِّكَۚ كَذَٰلِكَ فَعَلَ ٱلَّذِينَ مِن قَبۡلِهِمۡۚ وَمَا ظَلَمَهُمُ ٱللَّهُ وَلَٰكِن كَانُوٓاْ أَنفُسَهُمۡ يَظۡلِمُونَ ٣٣

---

1 ತಮ್ಮನ್ನು ಶಿಕ್ಷಿಸಲು ಮಲಕ್‌ಗಳು ಅಲ್ಲಾಹುವಿನ ಆಜ್ಞೆಯೊಂದಿಗೆ ಬರುವ ತನಕ ವಿಶ್ವಾಸವಿಡದೆ ಕಾದುಕುಳಿತು, ಮರಣವನ್ನು ಕಣ್ಣಮುಂದೆ ಕಾಣುವಾಗ ವಿಶ್ವಾಸವಿಡುವುದು ಅವರ ಉದ್ದೇಶವಾಗಿದ್ದರೆ ಆ ವಿಶ್ವಾಸವು ಅವರಿಗೆ ಯಾವುದೇ ಪ್ರಯೋಜನವನ್ನೂ ನೀಡಲಾರದು.

34. ಕೊನೆಗೆ ತಾವು ಮಾಡಿಕೊಂಡಿರುವುದರ ದುಷ್ಫಲವು ಅವರಿಗೆ ಬಾಧಿಸಿತು ಮತ್ತು ಅವರು ಯಾವುದರ ಕುರಿತು ಗೇಲಿ ಮಾಡುತ್ತಿದ್ದರೋ ಅದು ಅವರನ್ನು ಆವರಿಸಿತು.

فَأَصَابَهُمْ سَيِّـَٔاتُ مَا عَمِلُواْ وَحَاقَ بِهِم مَّا كَانُواْ بِهِۦ يَسْتَهْزِءُونَ ٣٤

35. (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡಿದವರು ಹೇಳಿದರು: 'ಅಲ್ಲಾಹು ಇಚ್ಛಿಸುತ್ತಿದ್ದರೆ ನಾವಾಗಲಿ, ನಮ್ಮ ಪೂರ್ವಿಕರಾಗಲಿ ಅವನ ಹೊರತು ಏನನ್ನೂ ಆರಾಧಿಸುತ್ತಿರಲಿಲ್ಲ. ಅವನ ಆಜ್ಞೆಯ ವಿನಾ ಏನನ್ನೂ ನಾವು ನಿಷಿದ್ಧಗೊಳಿಸುತ್ತಿರಲಿಲ್ಲ'. ಅವರ ಪೂರ್ವಿಕರೂ ಹೀಗೆಯೇ ಮಾಡಿದ್ದರು. ಆದರೆ ಸಂದೇಶವಾಹಕರ ಮೇಲೆ ಸಂದೇಶವನ್ನು ತಲುಪಿಸುವುದರ ಹೊರತು ಇನ್ನೇನಾದರೂ ಹೊಣೆಯಿದೆಯೇ?[1]

وَقَالَ ٱلَّذِينَ أَشْرَكُواْ لَوْ شَآءَ ٱللَّهُ مَا عَبَدْنَا مِن دُونِهِۦ مِن شَىْءٍ نَّحْنُ وَلَآ ءَابَآؤُنَا وَلَا حَرَّمْنَا مِن دُونِهِۦ مِن شَىْءٍ ۚ كَذَٰلِكَ فَعَلَ ٱلَّذِينَ مِن قَبْلِهِمْ ۚ فَهَلْ عَلَى ٱلرُّسُلِ إِلَّا ٱلْبَلَٰغُ ٱلْمُبِينُ ٣٥

36. 'ನೀವು ಅಲ್ಲಾಹುವನ್ನು ಆರಾಧಿಸಿರಿ ಮತ್ತು ತಾಗೂತನ್ನು ವರ್ಜಿಸಿರಿ' (ಎಂದು ಬೋಧಿಸುವ ಸಲುವಾಗಿ) ಖಂಡಿತವಾಗಿಯೂ ನಾವು ಪ್ರತಿಯೊಂದು ಸಮುದಾಯಕ್ಕೂ ಸಂದೇಶವಾಹಕರನ್ನು ಕಳುಹಿಸಿರುವೆವು. ತರುವಾಯ ಅವರಲ್ಲಿ ಕೆಲವರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಿದನು. ಇನ್ನು ಕೆಲವರ ಮೇಲೆ ಪಥಭ್ರಷ್ಟತೆಯು ಸ್ಥಿರವಾಯಿತು. ಆದ್ದರಿಂದ ನೀವು ಭೂಮಿಯಲ್ಲಿ ಸಂಚರಿಸಿರಿ ಮತ್ತು ಸತ್ಯನಿಷೇಧಿಗಳ ಪರ್ಯಾವಸಾನವು ಹೇಗಿತ್ತೆಂಬುದನ್ನು ನೋಡಿರಿ.

وَلَقَدْ بَعَثْنَا فِى كُلِّ أُمَّةٍ رَّسُولًا أَنِ ٱعْبُدُواْ ٱللَّهَ وَٱجْتَنِبُواْ ٱلطَّٰغُوتَ ۖ فَمِنْهُم مَّنْ هَدَى ٱللَّهُ وَمِنْهُم مَّنْ حَقَّتْ عَلَيْهِ ٱلضَّلَٰلَةُ ۚ فَسِيرُواْ فِى ٱلْأَرْضِ فَٱنظُرُواْ كَيْفَ كَانَ عَٰقِبَةُ ٱلْمُكَذِّبِينَ ٣٦

37. (ಓ ಪ್ರವಾದಿಯವರೇ!) ಅವರು ಸನ್ಮಾರ್ಗದಲ್ಲಿ ಸೇರಬೇಕೆಂದು ತಾವು ಹಂಬಲಿಸುವುದಾದರೆ (ಅದು ವ್ಯರ್ಥವಾಗಿದೆ. ಯಾಕೆಂದರೆ)

إِن تَحْرِصْ عَلَىٰ هُدَىٰهُمْ فَإِنَّ ٱللَّهَ لَا يَهْدِى مَن يُضِلُّ ۖ وَمَا لَهُم مِّن نَّٰصِرِينَ ٣٧

1 ಅಲ್ಲಾಹು ಇಚ್ಛಿಸುತ್ತಿದ್ದರೆ ನಾವು ಬಹುದೇವಾರಾಧನೆ ಮಾಡುತ್ತಿರಲಿಲ್ಲ. ನಾವು ಹೀಗಾಗಬೇಕೆಂದು ಅಲ್ಲಾಹು ಇಚ್ಛಿಸಿದ್ದರಿಂದಲೇ ನಾವು ಹೀಗಾಗಿದ್ದೇವೆ ಎಂಬ ವಾದವು ಹೊಸತಲ್ಲ. ಅದು ಮಾನವ ಇತಿಹಾಸದಷ್ಟೇ ಪ್ರಾಚೀನವಾಗಿದೆ. ಖಂಡಿತವಾಗಿಯೂ ಅದು ಮಿಥ್ಯವಾದವಾಗಿದೆ. ಸತ್ಯಾಸತ್ಯತೆಯನ್ನು ಸ್ಪಷ್ಟಗೊಳಿಸಿಕೊಡಲು ಗ್ರಂಥಗಳ ಸಹಿತ ಪ್ರವಾದಿಗಳನ್ನು ಕಳುಹಿಸುವುದು ಮತ್ತು ಸತ್ಯ ಅಥವಾ ಮಿಥ್ಯವನ್ನು ಆರಿಸುವ ಸ್ವಾತಂತ್ರ್ಯವನ್ನು ಮನುಷ್ಯನಿಗೆ ನೀಡುವುದು ಮತ್ತು ಅವನು ಸ್ವತಃ ಆರಿಸಿದ ಜೀವನವಿಧಾನಕ್ಕೆ ಸೂಕ್ತ ಪ್ರತಿಫಲವನ್ನು ನೀಡುವುದು ಅಲ್ಲಾಹು ನಿಶ್ಚಯಿಸಿದ ಕ್ರಮವಾಗಿದೆ. ಇದರಲ್ಲಿ ಸ್ವಲ್ಪವೂ ಅನ್ಯಾಯವಿಲ್ಲ.

ಅಲ್ಲಾಹು ಯಾರನ್ನು ಪಥಭ್ರಷ್ಟಗೊಳಿಸುವನೋ ಅವನನ್ನು ಖಂಡಿತವಾಗಿಯೂ ಅವನು ಸನ್ಮಾರ್ಗದಲ್ಲಿ ಸೇರಿಸಲಾರನು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

38. 'ಮರಣಹೊಂದುವವರನ್ನು ಅಲ್ಲಾಹು ಪುನರುತ್ಥಾನಗೊಳಿಸಲಾರನು' ಎಂದು ಅವರು ಪರಮಾವಧಿ ಖಾತ್ರಿಯೊಂದಿಗೆ ಪ್ರಮಾಣ ಮಾಡುವಂತೆ ಅಲ್ಲಾಹುವಿನ ಮೇಲೆ ಆಣೆ ಹಾಕಿ ಹೇಳಿದರು. ಹಾಗಲ್ಲ! ಅದು ಅವನು ಹೊಣೆವಹಿಸಿಕೊಂಡಿರುವ ಸತ್ಯವಾಗ್ದಾನವಾಗಿದೆ. ಆದರೆ ಜನರಲ್ಲಿ ಹೆಚ್ಚಿನವರೂ ಅರಿಯಲಾರರು.

وَأَقْسَمُوا۟ بِٱللَّهِ جَهْدَ أَيْمَـٰنِهِمْ لَا يَبْعَثُ ٱللَّهُ مَن يَمُوتُ ۚ بَلَىٰ وَعْدًا عَلَيْهِ حَقًّا وَلَـٰكِنَّ أَكْثَرَ ٱلنَّاسِ لَا يَعْلَمُونَ ﴿٣٨﴾

39. (ಅವರನ್ನು ಪುನರುತ್ಥಾನಗೊಳಿಸುವುದು ಯಾಕೆಂದರೆ) ಯಾವ ವಿಷಯದಲ್ಲಿ ಅವರು ಭಿನ್ನರಾಗಿದ್ದರೋ ಅದನ್ನು ಅವರಿಗೆ ಸ್ಪಷ್ಟಪಡಿಸಿಕೊಡುವ ಸಲುವಾಗಿ ಮತ್ತು ತಾವು ಸುಳ್ಳು ಹೇಳುವವರಾಗಿದ್ದವೆಂದು ಸತ್ಯನಿಷೇಧಿಗಳು ಮನಗಾಣುವ ಸಲುವಾಗಿದೆ.

لِيُبَيِّنَ لَهُمُ ٱلَّذِى يَخْتَلِفُونَ فِيهِ وَلِيَعْلَمَ ٱلَّذِينَ كَفَرُوٓا۟ أَنَّهُمْ كَانُوا۟ كَـٰذِبِينَ ﴿٣٩﴾

40. ನಾವೊಂದು ಸಂಗತಿಯನ್ನು ಇಚ್ಛಿಸಿದರೆ ಅದಕ್ಕೆ ಸಂಬಂಧಿಸಿ ನಮ್ಮ ಮಾತು ಅದರೊಂದಿಗೆ 'ಉಂಟಾಗು' ಎಂದು ಹೇಳುವುದು ಮಾತ್ರವಾಗಿದೆ. ತಕ್ಷಣ ಅದು ನಾವು ಉಂಟಾಗುವುದು.

إِنَّمَا قَوْلُنَا لِشَىْءٍ إِذَآ أَرَدْنَـٰهُ أَن نَّقُولَ لَهُۥ كُن فَيَكُونُ ﴿٤٠﴾

41. ಹಿಂಸೆಗೊಳಗಾದ ಬಳಿಕವೂ ಅಲ್ಲಾಹುವಿನ ಮಾರ್ಗದಲ್ಲಿ ಸ್ವಂತ ಊರನ್ನು ತ್ಯಜಿಸಿ ಹೋದವರಾರೋ ಖಂಡಿತವಾಗಿಯೂ ನಾವು ಅವರಿಗೆ ಇಹಲೋಕದಲ್ಲಿ ಉತ್ತಮ ವಾಸಸ್ಥಳವನ್ನು ಮಾಡಿಕೊಡುವೆವು. ಆದರೆ ಪರಲೋಕದ ಪ್ರತಿಫಲವು ಅತ್ಯಂತ ದೊಡ್ಡದು. ಅವರು (ಅದನ್ನು) ಅರಿತಿರುತ್ತಿದ್ದರೆ!

وَٱلَّذِينَ هَاجَرُوا۟ فِى ٱللَّهِ مِنۢ بَعْدِ مَا ظُلِمُوا۟ لَنُبَوِّئَنَّهُمْ فِى ٱلدُّنْيَا حَسَنَةً ۖ وَلَأَجْرُ ٱلْـَٔاخِرَةِ أَكْبَرُ ۚ لَوْ كَانُوا۟ يَعْلَمُونَ ﴿٤١﴾

42. ಅವರು (ಮುಹಾಜಿರ್‌ಗಳು) ಸಹನೆ ವಹಿಸಿದವರು ಮತ್ತು ತಮ್ಮ ರಬ್‌ನ ಮೇಲೆ ಭರವಸೆಯಿಟ್ಟವರಾಗಿರುವರು.

ٱلَّذِينَ صَبَرُوا۟ وَعَلَىٰ رَبِّهِمْ يَتَوَكَّلُونَ ﴿٤٢﴾

43. ತಮಗಿಂತ ಮುಂಚೆ ನಾವು ಸಂದೇಶವಾಹಕರಾಗಿ ಪುರುಷರನ್ನಲ್ಲದೆ ಕಳುಹಿಸಿಲ್ಲ.[1] ಅವರಿಗೆ ನಾವು ದಿವ್ಯಸಂದೇಶವನ್ನು ನೀಡುತ್ತೇವೆ. ನಿಮಗೆ ಅರಿವಿಲ್ಲವೆಂದಾದರೆ (ಗ್ರಂಥಗಳ ಮೂಲಕ) ಅರಿವು ಗಳಿಸಿರುವವರೊಂದಿಗೆ ಕೇಳಿ ನೋಡಿರಿ.

وَمَآ أَرۡسَلۡنَا مِن قَبۡلِكَ إِلَّا رِجَالٗا نُّوحِيٓ إِلَيۡهِمۡۖ فَسۡـَٔلُوٓاْ أَهۡلَ ٱلذِّكۡرِ إِن كُنتُمۡ لَا تَعۡلَمُونَ ٤٣

44. ಸ್ಪಷ್ಟವಾದ ಪುರಾವೆಗಳೊಂದಿಗೆ ಹಾಗೂ ಗ್ರಂಥಗಳೊಂದಿಗೆ (ಅವರನ್ನು ನಾವು ಕಳುಹಿಸಿದೆವು). ಜನರಿಗೆ ಅವತೀರ್ಣಗೊಂಡಿರುವುದನ್ನು ತಾವು ಅವರಿಗೆ ವಿವರಿಸಿಕೊಡುವ ಸಲುವಾಗಿ ಮತ್ತು ಅವರು ಚಿಂತಿಸಿ ಗ್ರಹಿಸುವುದಕ್ಕಾಗಿ ತಮಗೆ ನಾವು ಸಂದೇಶವನ್ನು ಅವತೀರ್ಣಗೊಳಿಸಿದೆವು.

بِٱلۡبَيِّنَٰتِ وَٱلزُّبُرِۗ وَأَنزَلۡنَآ إِلَيۡكَ ٱلذِّكۡرَ لِتُبَيِّنَ لِلنَّاسِ مَا نُزِّلَ إِلَيۡهِمۡ وَلَعَلَّهُمۡ يَتَفَكَّرُونَ ٤٤

45-47. ಆದರೆ ಕೆಟ್ಟದಾದ ಒಳಸಂಚುಗಳನ್ನು ಹೂಡಿದವರು ಯಾರೋ ಅವರನ್ನು ಅಲ್ಲಾಹು ಭೂಮಿಯಲ್ಲಿ ಹುದುಗಿಸಿ ಬಿಡಲಾರನೆಂದಾಗಲಿ ಅಥವಾ ಅವರು ನಿರೀಕ್ಷಿಸದ ಕಡೆಯಿಂದ ಶಿಕ್ಷೆಯು ಅವರೆಡೆಗೆ ಬರಲಾರದೆಂದಾಗಲಿ ಅಥವಾ ಅವರು ಅತ್ತಿತ್ತ ಚಲಿಸುತ್ತಿರುವಾಗ ಅವರಿಗೆ ಸೋಲಿಸಲು ಸಾಧ್ಯವಾಗದ ರೀತಿಯಲ್ಲಿ ಅವನು ಅವರನ್ನು ಹಿಡಿಯಲಾರನೆಂದಾಗಲಿ ಅಥವಾ ಅವರು ಭಯಭೀತರಾಗಿರುವಾಗಲೇ ಅವನು ಅವರನ್ನು ಹಿಡಿಯಲಾರನೆಂದಾಗಲಿ ಅವರು ನಿರ್ಭೀತರಾಗಿರುವರೇ? ಖಂಡಿತವಾಗಿಯೂ ನಿಮ್ಮ ರಬ್ ಅತ್ಯಂತ ದಯಾಳುವೂ ಅಪಾರ ಕರುಣೆಯುಳ್ಳವನೂ ಆಗಿರುವನು.[2]

أَفَأَمِنَ ٱلَّذِينَ مَكَرُواْ ٱلسَّيِّـَٔاتِ أَن يَخۡسِفَ ٱللَّهُ بِهِمُ ٱلۡأَرۡضَ أَوۡ يَأۡتِيَهُمُ ٱلۡعَذَابُ مِنۡ حَيۡثُ لَا يَشۡعُرُونَ ٤٥ أَوۡ يَأۡخُذَهُمۡ فِي تَقَلُّبِهِمۡ فَمَا هُم بِمُعۡجِزِينَ ٤٦ أَوۡ يَأۡخُذَهُمۡ عَلَىٰ تَخَوُّفٖ فَإِنَّ رَبَّكُمۡ لَرَءُوفٞ رَّحِيمٌ ٤٧

1 ಇದು ಅಲ್ಲಾಹು ಸಂದೇಶವಾಹಕರನ್ನಾಗಿ ಕಳುಹಿಸಬೇಕಾದುದು ಮಲಕ್‌ಗಳನ್ನಲ್ಲವೇ ಎಂದು ಕೇಳುವವರಿಗೆ ನೀಡಿದ ಉತ್ತರವಾಗಿದೆ. ಪೂರ್ವಗ್ರಂಥಗಳು ಲಭಿಸಿದವರೊಂದಿಗೆ ಕೇಳಿದರೆ ಮಾನವರನ್ನಲ್ಲದೆ ಸಂದೇಶವಾಹಕರಾಗಿ ಬೇರೆ ಯಾರನ್ನೂ ಅಲ್ಲಾಹು ಕಳುಹಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ.

2 ಯಾವುದೇ ಸಂದರ್ಭದಲ್ಲೂ ಯಾವುದೇ ರೀತಿಯಲ್ಲೂ ಶಿಕ್ಷಿಸಲು ಅಲ್ಲಾಹುವಿಗೆ ಸಾಧ್ಯವಿದೆ. ಆದರೆ ಅವನು ತನ್ನ ಅಪಾರ ಕಾರುಣ್ಯದಿಂದ ಅವರಿಗೆ ಕಾಲಾವಕಾಶವನ್ನು ದೀರ್ಘಗೊಳಿಸುತ್ತಾನೆ.

أَوَلَمْ يَرَوْا۟ إِلَىٰ مَا خَلَقَ ٱللَّهُ مِن شَىْءٍ
يَتَفَيَّؤُا۟ ظِلَـٰلُهُۥ عَنِ ٱلْيَمِينِ وَٱلشَّمَآئِلِ
سُجَّدًا لِّلَّهِ وَهُمْ دَٰخِرُونَ ﴿٤٨﴾

**48.** ಅಲ್ಲಾಹು ಸೃಷ್ಟಿಸಿದ ಯಾವುದೇ ವಸ್ತುವಿನೆಡೆಗೆ ಅವರು ನೋಡಲಿಲ್ಲವೇ? ದೈನ್ಯಭಾವದಿಂದಲೂ, ಅಲ್ಲಾಹುವಿಗೆ ಸಾಷ್ಟಾಂಗವೆರಗುತ್ತಲೂ ಅದರ ನೆರಳುಗಳು ಬಲಕ್ಕೂ ಎಡಕ್ಕೂ ತಿರುಗುತ್ತಾ ಇವೆ.

وَلِلَّهِ يَسْجُدُ مَا فِى ٱلسَّمَـٰوَٰتِ وَمَا فِى
ٱلْأَرْضِ مِن دَآبَّةٍ وَٱلْمَلَـٰٓئِكَةُ وَهُمْ لَا
يَسْتَكْبِرُونَ ﴿٤٩﴾

**49.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಪ್ರತಿಯೊಂದು ಜೀವಿಯೂ ಅಲ್ಲಾಹುವಿಗೆ ಸಾಷ್ಟಾಂಗವೆರಗುತ್ತಿದೆ. ಮಲಕ್‌ಗಳು ಕೂಡ (ಸಾಷ್ಟಾಂಗವೆರಗುತ್ತಿರುವರು). ಅವರು ಅಹಂಕಾರಪಡಲಾರರು.

يَخَافُونَ رَبَّهُم مِّن فَوْقِهِمْ وَيَفْعَلُونَ مَا
يُؤْمَرُونَ ۩ ﴿٥٠﴾

**50.** ಅವರು ತಮ್ಮ ಮೇಲಿರುವ ತಮ್ಮ ರಬ್ಬನ್ನು ಭಯಪಡುವರು ಮತ್ತು ಅವರೊಂದಿಗೆ ಏನನ್ನು ಆಜ್ಞಾಪಿಸಲಾಗುವುದೋ ಅದನ್ನು ಅವರು ನಿರ್ವಹಿಸುವರು.

۞ وَقَالَ ٱللَّهُ لَا تَتَّخِذُوٓا۟ إِلَـٰهَيْنِ ٱثْنَيْنِ ۖ إِنَّمَا
هُوَ إِلَـٰهٌ وَٰحِدٌ ۖ فَإِيَّـٰىَ فَٱرْهَبُونِ ﴿٥١﴾

**51.** ಅಲ್ಲಾಹು ಹೇಳಿರುವನು: ‘ನೀವು ಇಬ್ಬರು ಆರಾಧ್ಯರನ್ನು ಮಾಡಿಕೊಳ್ಳದಿರಿ. ಏಕಮೇವ ಆರಾಧ್ಯನು ಅವನು ಮಾತ್ರವಾಗಿರುವನು. ಆದ್ದರಿಂದ (ಏಕಮೇವ ಆರಾಧ್ಯನಾಗಿರುವ) ನನ್ನನ್ನು ಮಾತ್ರ ಭಯಪಡಿರಿ’.

وَلَهُۥ مَا فِى ٱلسَّمَـٰوَٰتِ وَٱلْأَرْضِ وَلَهُ ٱلدِّينُ
وَاصِبًا ۚ أَفَغَيْرَ ٱللَّهِ تَتَّقُونَ ﴿٥٢﴾

**52.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದ್ದಾಗಿವೆ. ನಿರಂತರವಾಗಿರುವ ಶರಣಾಗತಿಯು ಅವನಿಗೆ ಮಾತ್ರವಾಗಿದೆ. ಹೀಗಿರುವಾಗ ನೀವು ಅಲ್ಲಾಹು ಅಲ್ಲದವರೊಂದಿಗೆ ಭಯಭಕ್ತಿ ತೋರಿಸುವಿರಾ?

وَمَا بِكُم مِّن نِّعْمَةٍ فَمِنَ ٱللَّهِ ۖ ثُمَّ إِذَا
مَسَّكُمُ ٱلضُّرُّ فَإِلَيْهِ تَجْـَٔرُونَ ﴿٥٣﴾

**53.** ನಿಮಗೆ ಅನುಗ್ರಹವಾಗಿ ಏನೇ ಇದ್ದರೂ ಅದು ಅಲ್ಲಾಹುವಿನಿಂದಾಗಿದೆ. ತರುವಾಯ ನಿಮಗೇನಾದರೂ ಹಾನಿ ತಟ್ಟಿದರೆ ನೀವು ಗಟ್ಟಿಯಾಗಿ ಕೂಗಿ ಮೊರೆಯಿಡುವುದೂ ಅವನಲ್ಲೇ ಆಗಿದೆ.

ثُمَّ إِذَا كَشَفَ ٱلضُّرَّ عَنكُمْ إِذَا فَرِيقٌ
مِّنكُم بِرَبِّهِمْ يُشْرِكُونَ ﴿٥٤﴾

**54.** ತರುವಾಯ ಅವನು ನಿಮ್ಮಿಂದ ಆ ಹಾನಿಯನ್ನು ನಿವಾರಿಸಿದರೆ ಅಗೋ ನಿಮ್ಮ ಪೈಕಿ ಒಂದು ಗುಂಪು ತಮ್ಮ ರಬ್‌ನೊಂದಿಗೆ ಸಹಭಾಗಿತ್ವ ಮಾಡುವರು.

55. ನಾವು ಅವರಿಗೆ ಏನನ್ನು ದಯಪಾಲಿಸಿರುವೆವೋ ಅದರಲ್ಲಿ ಅವರು ಕೃತಘ್ನತೆಯನ್ನು ತೋರುತ್ತಿರುವರು. ನೀವು ಸುಖವಾಗಿ ಜೀವಿಸಿರಿ. ತರುವಾಯ ನೀವು ಅರಿತುಕೊಳ್ಳುವಿರಿ.[1]

لِيَكۡفُرُواْ بِمَآ ءَاتَيۡنَٰهُمۡۚ فَتَمَتَّعُواْ فَسَوۡفَ تَعۡلَمُونَ ٥٥

56. ನಾವು ಅವರಿಗೆ ದಯಪಾಲಿಸಿರುವುದರಲ್ಲಿ ಒಂದು ಪಾಲನ್ನು ಅವರು ತಮಗೆ (ಸ್ಪಷ್ಟವಾದ) ಅರಿವಿಲ್ಲದ ಕೆಲವು (ಮಿಥ್ಯಾರಾಧ್ಯರಿಗೆ) ಮುಡಿಪಾಗಿಡುತ್ತಿರುವರು.[2] ಅಲ್ಲಾಹುವಿನ ಮೇಲಾಣೆ! ನೀವು ಹೆಣೆಯುತ್ತಿರುವುದರ ಕುರಿತು ಖಂಡಿತವಾಗಿಯೂ ನಿಮ್ಮೊಂದಿಗೆ ಪ್ರಶ್ನಿಸಲಾಗುವುದು.

وَيَجۡعَلُونَ لِمَا لَا يَعۡلَمُونَ نَصِيبٗا مِّمَّا رَزَقۡنَٰهُمۡۗ تَٱللَّهِ لَتُسۡـَٔلُنَّ عَمَّا كُنتُمۡ تَفۡتَرُونَ ٥٦

57. ಅವರು ಅಲ್ಲಾಹುವಿಗೆ ಹೆಣ್ಮಕ್ಕಳನ್ನು ನಿಶ್ಚಯಿಸುತ್ತಿರುವರು.[3] ಅವನು ಪರಮಪಾವನನು! ಅವರಿಗಿರುವುದಾದರೋ ಅವರು ಇಷ್ಟಪಡುವಂತಹುದು (ಗಂಡುಮಕ್ಕಳು)!

وَيَجۡعَلُونَ لِلَّهِ ٱلۡبَنَٰتِ سُبۡحَٰنَهُۥ وَلَهُم مَّا يَشۡتَهُونَ ٥٧

58. ಅವರ ಪೈಕಿ ಒಬ್ಬನಿಗೆ ಹೆಣ್ಣುಮಗು ಜನಿಸಿದ ಶುಭ ವಾರ್ತೆಯನ್ನು ತಿಳಿಸಲಾದರೆ ರೋಷಾಕುಲನಾಗಿರುತ್ತಾ ಅವನ ಮುಖವು ಕಠ್ರಗಾಗುವುದು.

وَإِذَا بُشِّرَ أَحَدُهُم بِٱلۡأُنثَىٰ ظَلَّ وَجۡهُهُۥ مُسۡوَدّٗا وَهُوَ كَظِيمٞ ٥٨

59. ತನಗೆ ತಿಳಿಸಲಾಗಿರುವ ಆ ಶುಭವಾರ್ತೆಯ ಅಪಮಾನದಿಂದಾಗಿ ಅವನು ಜನರಿಂದ ಅಡಗಿಕೊಳ್ಳುವನು. ಅಪಮಾನದೊಂದಿಗೆ ಅದನ್ನು ಉಳಿಸಿಕೊಳ್ಳಬೇಕೋ ಅಥವಾ ಅದನ್ನು ಮಣ್ಣಿನಲ್ಲಿ ಹೂಳಬೇಕೋ (ಎಂದಾಗಿರುವುದು ಅವನ ಆಲೋಚನೆ!). ಅರಿತುಕೊಳ್ಳಿರಿ! ಅವರು ಕೈಗೊಳ್ಳುವ ತೀರ್ಮಾನವು ಎಷ್ಟು ನಿಕೃಷ್ಟವಾದುದು![4]

يَتَوَٰرَىٰ مِنَ ٱلۡقَوۡمِ مِن سُوٓءِ مَا بُشِّرَ بِهِۦٓۚ أَيُمۡسِكُهُۥ عَلَىٰ هُونٍ أَمۡ يَدُسُّهُۥ فِي ٱلتُّرَابِۗ أَلَا سَآءَ مَا يَحۡكُمُونَ ٥٩

1 ಬಹುದೇವಾರಾಧನೆಯ ಪರಿಣಾಮವೇನೆಂಬುದು ನಿಮಗೆ ಪರಲೋಕದಲ್ಲಿ ಸ್ಪಷ್ಟವಾಗಿ ತಿಳಿದುಬರುವುದು.

2 ಇಲ್ಲಿ ಪ್ರಸ್ತಾಪಿಸಲಾಗಿರುವುದು ಮಿಥ್ಯಾರಾಧ್ಯರಿಗೆ ಬಲಿ ಹರಕೆಗಳಾಗಿ ಪ್ರಾಣಿ, ಬೆಳೆ, ಸಂಪತ್ತು ಇತ್ಯಾದಿಗಳನ್ನು ನೀಡುವುದರ ಕುರಿತಾಗಿದೆ.

3 ಮಲಕ್‌ಗಳು ಅಲ್ಲಾಹುವಿನ ಹೆಣ್ಮಕ್ಕಳೆಂದು ಹಲವರು ವಿಶ್ವಾಸವಿಟ್ಟಿದ್ದರು.

4 ತನಗೊಂದು ಹೆಣ್ಣುಮಗು ಹುಟ್ಟಿದೆಯೆಂದು ತಿಳಿದರೆ ಅಪಮಾನದಿಂದ ಮನೆಯಲ್ಲೇ ಅಡಗಿಕೂರುವ ಅದೇ ವ್ಯಕ್ತಿ

لِلَّذِينَ لَا يُؤْمِنُونَ بِٱلْءَاخِرَةِ مَثَلُ ٱلسَّوْءِ ۖ وَلِلَّهِ ٱلْمَثَلُ ٱلْأَعْلَىٰ ۚ وَهُوَ ٱلْعَزِيزُ ٱلْحَكِيمُ ﴿٦٠﴾

**60.** ಕೆಟ್ಟ ವಿಶೇಷಣವಿರುವುದು ಪರಲೋಕದಲ್ಲಿ ವಿಶ್ವಾಸವಿಡದವರಿಗಾಗಿದೆ. ಅತ್ಯುನ್ನತವಾದ ವಿಶೇಷಣವಿರುವುದು ಅಲ್ಲಾಹುವಿಗಾಗಿದೆ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَلَوْ يُؤَاخِذُ ٱللَّهُ ٱلنَّاسَ بِظُلْمِهِم مَّا تَرَكَ عَلَيْهَا مِن دَآبَّةٍ وَلَٰكِن يُؤَخِّرُهُمْ إِلَىٰٓ أَجَلٍ مُّسَمًّى ۖ فَإِذَا جَآءَ أَجَلُهُمْ لَا يَسْتَـْٔخِرُونَ سَاعَةً ۖ وَلَا يَسْتَقْدِمُونَ ﴿٦١﴾

**61.** ಮನುಷ್ಯರ ಅಕ್ರಮದ ನಿಮಿತ್ತ ಅಲ್ಲಾಹು ಅವರನ್ನು (ತಕ್ಷಣ) ಶಿಕ್ಷಿಸುವುದಾಗಿದ್ದರೆ ಭೂಮಿಯ ಮೇಲೆ ಯಾವುದೇ ಜೀವಿಯನ್ನೂ ಅವನು ಉಳಿಯಗೊಡುತ್ತಿರಲಿಲ್ಲ. ಆದರೆ ನಿಶ್ಚಿತ ಅವಧಿಯವರೆಗೆ ಅವನು ಅವರಿಗೆ ಕಾಲಾವಕಾಶವನ್ನು ದೀರ್ಘಿಸಿಕೊಡುವನು. ಅವರ ಅವಧಿಯೇನಾದರೂ ಬಂದುಬಿಟ್ಟರೆ ಅದನ್ನು ಒಂದು ಕ್ಷಣದಷ್ಟು ಹಿಂದಕ್ಕೆ ತಳ್ಳಲು ಅವರಿಂದಾಗದು. ಅದನ್ನು ಮುಂದಕ್ಕೆ ತಳ್ಳಲೂ ಅವರಿಂದಾಗದು.

وَيَجْعَلُونَ لِلَّهِ مَا يَكْرَهُونَ ۚ وَتَصِفُ أَلْسِنَتُهُمُ ٱلْكَذِبَ أَنَّ لَهُمُ ٱلْحُسْنَىٰ ۖ لَا جَرَمَ أَنَّ لَهُمُ ٱلنَّارَ وَأَنَّهُم مُّفْرَطُونَ ﴿٦٢﴾

**62.** ಸ್ವತಃ ತಾವು ಇಷ್ಟಪಡದಿರುವುದನ್ನು ಅವರು ಅಲ್ಲಾಹುವಿಗೆ ವಹಿಸಿಕೊಡುವರು. ಅತ್ಯುತ್ತಮವಾಗಿರುವುದು ಅವರಿಗಿರುವುದಾಗಿದೆಯೆಂದು ಅವರ ನಾಲಗೆಗಳು ಸುಳ್ಳು ಸುಳ್ಳಾಗಿ ವರ್ಣಿಸುತ್ತಿರುವುವು. ಸಂದೇಹವೇ ಇಲ್ಲ! ಖಂಡಿತವಾಗಿಯೂ ಅವರಿಗೆ ನರಕಾಗ್ನಿಯಿರುವುದು. ಅವರನ್ನು (ಅದರೆಡೆಗೆ) ಮುಂದಿನಿಂದ ಸಾಗಿಸಲಾಗುವುದು.(1)

تَٱللَّهِ لَقَدْ أَرْسَلْنَآ إِلَىٰٓ أُمَمٍ مِّن قَبْلِكَ فَزَيَّنَ لَهُمُ ٱلشَّيْطَٰنُ أَعْمَٰلَهُمْ فَهُوَ وَلِيُّهُمُ ٱلْيَوْمَ وَلَهُمْ عَذَابٌ أَلِيمٌ ﴿٦٣﴾

**63.** ಅಲ್ಲಾಹುವಿನ ಮೇಲಾಣೆ! ತಮಗಿಂತ ಮುಂಚೆಯೂ ನಾವು ಅನೇಕ ಸಮುದಾಯಗಳೆಡೆಗೆ ಸಂದೇಶವಾಹಕರನ್ನು ಕಳುಹಿಸಿರುವೆವು. ಆದರೆ ಸೈತಾನನು ಅವರಿಗೆ

---

ಸರ್ವಲೋಕಗಳ ಪ್ರಭುವಾದ ಅಲ್ಲಾಹುವಿಗೆ ಹೆಣ್ಮಕ್ಕಳಿದ್ದಾರೆಂದು ಹೇಳುತ್ತಿರುವನು. ತನಗೆ ಅಹಿತಕರವಾಗಿರುವುದನ್ನು ಅಲ್ಲಾಹುವಿನ ಹೆಸರಿನಲ್ಲಿ ಆರೋಪಿಸುವಾಗ ಅವನು ಅಲ್ಲಾಹುವಿನ ಮಹತ್ವವನ್ನು ಪರಿಗಣಿಸುವುದಿಲ್ಲ.

1 ಅವರಿಗೆ ಗಂಡುಮಕ್ಕಳು ಮತ್ತು ಅಲ್ಲಾಹುವಿಗೆ ಹೆಣ್ಣುಮಕ್ಕಳು! ಅವರಿಗೆ ಅಥವಾ ಅವರ ಮಿಥ್ಯಾರಾಧ್ಯರಿಗೆ ಉತ್ತಮವಾದ ಸಂಪಾದನೆಗಳು ಮತ್ತು ಅಲ್ಲಾಹುವಿಗೆ (ದಾನಧರ್ಮಗಳಾಗಿ) ಕೆಟ್ಟ ವಸ್ತುಗಳು!! ಈ ನಿಲುವು ಸ್ವೀಕರಿಸಿದವರಿಗೆ ನರಕವಿದೆ. ಮೊಟ್ಟಮೊದಲನೆಯದಾಗಿ ನರಕಾಗ್ನಿಯೆಡೆಗೆ ಸಾಗಿಸಲಾಗುವುದು ಅವರನ್ನೇ ಆಗಿದೆ.

ಅವರ (ದುಷ್)ಕರ್ಮಗಳನ್ನು ಆಕರ್ಷಕಗೊಳಿಸಿಕೊಟ್ಟಿರುವನು. ಇಂದು ಅವನು ಅವರ ಮಿತ್ರನಾಗಿರುವನು. ಅವರಿಗೆ ಯಾತನಾಮಯ ಶಿಕ್ಷೆಯಿರುವುದು.

**64.** ಯಾವ ವಿಷಯದಲ್ಲಿ ಅವರು ಭಿನ್ನರಾಗಿರುವರೋ ಅದನ್ನು ಅವರಿಗೆ ಸ್ಪಷ್ಟಗೊಳಿಸುವ ಸಲುವಾಗಿ ಮತ್ತು ವಿಶ್ವಾಸವಿಡುವ ಜನರಿಗೆ ಮಾರ್ಗದರ್ಶನ ಹಾಗೂ ಕಾರುಣ್ಯವಾಗಿ ವಿನಾ ತಮಗೆ ನಾವು ಗ್ರಂಥವನ್ನು ಅವತೀರ್ಣಗೊಳಿಸಿಲ್ಲ.

وَمَآ أَنزَلۡنَا عَلَيۡكَ ٱلۡكِتَٰبَ إِلَّا لِتُبَيِّنَ لَهُمُ ٱلَّذِي ٱخۡتَلَفُواْ فِيهِ وَهُدٗى وَرَحۡمَةٗ لِّقَوۡمٖ يُؤۡمِنُونَ ٦٤

**65.** ಅಲ್ಲಾಹು ಆಕಾಶದಿಂದ ಮಳೆನೀರನ್ನು ಸುರಿಸಿದನು. ತರುವಾಯ ಅದರಿಂದ ಅವನು ನಿರ್ಜೀವವಾಗಿದ್ದ ಭೂಮಿಯನ್ನು ಜೀವಂತಗೊಳಿಸಿದನು. ಆಲಿಸಿ ಗ್ರಹಿಸುವ ಜನರಿಗೆ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತವಿದೆ'.

وَٱللَّهُ أَنزَلَ مِنَ ٱلسَّمَآءِ مَآءٗ فَأَحۡيَا بِهِ ٱلۡأَرۡضَ بَعۡدَ مَوۡتِهَآۚ إِنَّ فِي ذَٰلِكَ لَأٓيَةٗ لِّقَوۡمٖ يَسۡمَعُونَ ٦٥

**66.** ಖಂಡಿತವಾಗಿಯೂ ನಿಮಗೆ ಜಾನುವಾರುಗಳಲ್ಲಿ ಒಂದು ಪಾಠವಿದೆ. ಅವುಗಳ ಉದರಗಳಲ್ಲಿರುವುದರಿಂದ (ಅಂದರೆ) ಮಲ ಮತ್ತು ರಕ್ತದ ನಡುವಿನಿಂದಿರುವ,[1] ಕುಡಿಯುವವರಿಗೆ ಸ್ವಾದಿಷ್ಟಕರವಾಗಿರುವ ಶುದ್ಧ ಹಾಲನ್ನು ನಾವು ನಿಮಗೆ ಕುಡಿಯಲು ನೀಡುವೆವು.

وَإِنَّ لَكُمۡ فِي ٱلۡأَنۡعَٰمِ لَعِبۡرَةٗۖ نُّسۡقِيكُم مِّمَّا فِي بُطُونِهِۦ مِنۢ بَيۡنِ فَرۡثٖ وَدَمٖ لَّبَنًا خَالِصٗا سَآئِغٗا لِّلشَّٰرِبِينَ ٦٦

**67.** ಖರ್ಜೂರದ ಮರಗಳ ಮತ್ತು ದ್ರಾಕ್ಷಿ ಬಳ್ಳಿಗಳ ಫಲಗಳಿಂದಲೂ (ನಿಮಗೆ ನಾವು ಕುಡಿಯಲು ನೀಡುವೆವು). ಅದರಿಂದ ನೀವು ಅಮಲು ಪದಾರ್ಥಗಳನ್ನು ಮತ್ತು ಉತ್ತಮ

وَمِن ثَمَرَٰتِ ٱلنَّخِيلِ وَٱلۡأَعۡنَٰبِ تَتَّخِذُونَ مِنۡهُ سَكَرٗا وَرِزۡقًا حَسَنًاۚ إِنَّ فِي ذَٰلِكَ لَأٓيَةٗ لِّقَوۡمٖ يَعۡقِلُونَ ٦٧

1 ಜಾನುವಾರುಗಳು ತಿನ್ನುವ ಆಹಾರದ ಒಂದಂಶವು ಮಲಮೂತ್ರವಾಗಿ ವಿಸರ್ಜಿಸಲ್ಪಡುತ್ತದೆ. ಇನ್ನೊಂದಂಶವು ಶರೀರಕ್ಕೆ ಹೀರಲ್ಪಡುತ್ತವೆ. ಅದರಲ್ಲಿ ಒಂದಂಶವು ರಕ್ತವಾಗಿ ಮಾರ್ಪಡುತ್ತದೆ. ಮತ್ತೊಂದಂಶವು ಹಾಲಾಗಿ ಮಾರ್ಪಡುತ್ತದೆ. ಒಂದೇ ವಿಧದ ಆಹಾರ ಸೇವನೆಯಿಂದಲೇ ಇಷ್ಟೊಂದು ಪರಿವರ್ತನೆಗಳು!

ಆಹಾರಗಳನ್ನು ತಯಾರಿಸುವಿರಿ.[1] ಖಂಡಿತವಾಗಿಯೂ ಚಿಂತಿಸುವವರಿಗೆ ಅದರಲ್ಲಿ ದೃಷ್ಟಾಂತವಿದೆ.

68. ತಮ್ಮ ರಬ್ ಜೇನು ನೊಣಕ್ಕೆ ಹೀಗೆ ಸಂದೇಶವನ್ನು ನೀಡಿದನು: 'ಬೆಟ್ಟಗಳಲ್ಲಿ, ವೃಕ್ಷಗಳಲ್ಲಿ ಮತ್ತು ಮನುಷ್ಯರು ಎತ್ತರಿಸಿ ಕಟ್ಟುವವುಗಳಲ್ಲಿ ಗೂಡುಗಳನ್ನು ನಿರ್ಮಿಸು.

وَأَوْحَىٰ رَبُّكَ إِلَى ٱلنَّحْلِ أَنِ ٱتَّخِذِى مِنَ ٱلْجِبَالِ بُيُوتًا وَمِنَ ٱلشَّجَرِ وَمِمَّا يَعْرِشُونَ ﴿٦٨﴾

69. ತರುವಾಯ ಎಲ್ಲ ವಿಧ ಫಲವರ್ಗಗಳಿಂದಲೂ ತಿಂದು, ನಿನ್ನ ರಬ್ ಅನುಕೂಲಕರವಾಗಿ ಮಾಡಿಕೊಟ್ಟಿರುವ ಮಾರ್ಗಗಳಲ್ಲಿ ಚಲಿಸು.'[2] ಅವುಗಳ ಉದರಗಳಿಂದ ವಿಭಿನ್ನ ಬಣ್ಣಗಳಿರುವ ಪಾನೀಯವು ಹೊರಬರುತ್ತದೆ. ಅದರಲ್ಲಿ ಮನುಷ್ಯರಿಗೆ ಉಪಶಮನವಿದೆ. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಅದರಲ್ಲಿ ದೃಷ್ಟಾಂತವಿದೆ.

ثُمَّ كُلِى مِن كُلِّ ٱلثَّمَرَٰتِ فَٱسْلُكِى سُبُلَ رَبِّكِ ذُلُلًا ۚ يَخْرُجُ مِنۢ بُطُونِهَا شَرَابٌ مُّخْتَلِفٌ أَلْوَٰنُهُۥ فِيهِ شِفَآءٌ لِّلنَّاسِ ۗ إِنَّ فِى ذَٰلِكَ لَـَٔايَةً لِّقَوْمٍ يَتَفَكَّرُونَ ﴿٦٩﴾

70. ನಿಮ್ಮನ್ನು ಅಲ್ಲಾಹು ಸೃಷ್ಟಿಸಿದನು. ತರುವಾಯ ನಿಮ್ಮನ್ನು ಅವನು ಮೃತಪಡಿಸುವನು. (ಅನೇಕ ವಿಷಯಗಳನ್ನು) ಅರಿತುಕೊಂಡ ಬಳಿಕವೂ ಏನನ್ನೂ ಅರಿಯದಿರುವಂತಹ ಸ್ಥಿತಿಗೆ ತಲುಪುವಂತೆ[3] ನಿಮ್ಮ ಪೈಕಿ ಕೆಲವರು ಅತಿ ಬಲಹೀನತೆಯ ಪ್ರಾಯದೆಡೆಗೆ ತಳ್ಳಲ್ಪಡುವರು. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಸರ್ವಶಕ್ತನೂ ಆಗಿರುವನು.

وَٱللَّهُ خَلَقَكُمْ ثُمَّ يَتَوَفَّىٰكُمْ ۚ وَمِنكُم مَّن يُرَدُّ إِلَىٰٓ أَرْذَلِ ٱلْعُمُرِ لِكَىْ لَا يَعْلَمَ بَعْدَ عِلْمٍ شَيْـًٔا ۚ إِنَّ ٱللَّهَ عَلِيمٌ قَدِيرٌ ﴿٧٠﴾

1 ಒಂದೇ ವಿಧದ ಫಲಗಳಿಂದ ಹಾನಿಕಾರಕವಾದ ಅಮಲು ಪದಾರ್ಥವೂ ವಿಶಿಷ್ಟವಾದ ಫಲ ರಸಗಳೂ ಜನರಿಗೆ ಸಿಗುತ್ತವೆ. ಉತ್ತಮವಾದುದನ್ನು ಮತ್ತು ಕೆಟ್ಟದ್ದನ್ನು ಆರಿಸಿ ಉಪಯೋಗಿಸಲು ಅಲ್ಲಾಹು ಜನರಿಗೆ ಅವಕಾಶ ನೀಡಿರುವನು.

2 ಬೇಟೆಯಾಡುವ, ಮನೆ ನಿರ್ಮಿಸುವ ಮತ್ತು ಆತ್ಮರಕ್ಷಣೆಗಾಗಿ ಯೋಜನೆ ರೂಪಿಸುವ ವಿಷಯಗಳಲ್ಲಿ ಪ್ರಾಣಿಪಕ್ಷಿಗಳಿಗೆ ಅನುಪಮ ವೈಶಿಷ್ಟ್ಯತೆಗಳಿವೆ. ಜೇನು ನೊಣವು ಈ ವಿಷಯದಲ್ಲಿ ಅನೇಕ ವಿಶೇಷತೆಗಳನ್ನು ಹೊಂದಿರುವ ಜೀವಿಯಾಗಿದೆ. ಅಸಾಧಾರಣವಾದ ಸಾಮರ್ಥ್ಯದೊಂದಿಗೆ ಜೇನು ನೊಣಗಳು ಜೇನನ್ನು ಮತ್ತು ಮಕರಂದವನ್ನು ಸಂಗ್ರಹಿಸುತ್ತವೆ. ಅಸಾಮಾನ್ಯವಾದ ವಿದಗ್ಧತೆಯೊಂದಿಗೆ ಮತ್ತು ಅತೀವ ಸೂಕ್ಷ್ಮತೆಯೊಂದಿಗೆ ಅವು ಗೂಡನ್ನು ನಿರ್ಮಿಸುತ್ತವೆ. ಇವೆಲ್ಲವನ್ನೂ ಕಲಿಸಿಕೊಟ್ಟಿದ್ದು ಯಾರು? ಜಗದೊಡೆಯನಾದ ಅಲ್ಲಾಹುವಿನ ವಿನಾ ಇನ್ನಾರೂ ಅಲ್ಲ.

3 ವೃದ್ಧಾಪ್ಯದಲ್ಲಿ ಕೆಲವರಿಗೆ ಚಿಂತನಾಶಕ್ತಿ ಮತ್ತು ಜ್ಞಾಪಕಶಕ್ತಿ ಪೂರ್ಣವಾಗಿ ಅಥವಾ ಭಾಗಶಃ ನಷ್ಟವಾಗುತ್ತದೆ.

71. ಅನ್ನಾಧಾರದ ವಿಷಯದಲ್ಲಿ ಅಲ್ಲಾಹು ನಿಮ್ಮಲ್ಲಿ ಕೆಲವರನ್ನು ಇತರ ಕೆಲವರಿಗಿಂತ ಶ್ರೇಷ್ಠಗೊಳಿಸಿರುವನು. ಆದರೆ (ಅನ್ನಾಧಾರದ ವಿಷಯದಲ್ಲಿ) ಮಿಗಿಲಾಗಿರುವವರು ತಮ್ಮ ಅನ್ನಾಧಾರವನ್ನು ತಮ್ಮ ಬಲಗೈಗಳು ಸ್ವಾಧೀನ ದಲ್ಲಿಟ್ಟುಕೊಂಡಿರುವವ(ಗುಲಾಮ)ರಿಗೆ ಒಪ್ಪಿಸಿ, ಅನ್ನಾಧಾರದ ವಿಷಯದಲ್ಲಿ ಅವರು (ಒಡೆಯ ಮತ್ತು ಗುಲಾಮ) ಸಮಾನರಾಗುವುದೂ ಇಲ್ಲ. ಹೀಗಿರುವಾಗ ಅವರು ಅಲ್ಲಾಹುವಿನ ಅನುಗ್ರಹವನ್ನು ನಿಷೇಧಿಸುತ್ತಿರುವರೇ?[1]

وَٱللَّهُ فَضَّلَ بَعۡضَكُمۡ عَلَىٰ بَعۡضٖ فِي ٱلرِّزۡقِۚ فَمَا ٱلَّذِينَ فُضِّلُواْ بِرَآدِّي رِزۡقِهِمۡ عَلَىٰ مَا مَلَكَتۡ أَيۡمَٰنُهُمۡ فَهُمۡ فِيهِ سَوَآءٌۚ أَفَبِنِعۡمَةِ ٱللَّهِ يَجۡحَدُونَ ٧١

72. ಅಲ್ಲಾಹು ನಿಮ್ಮಿಂದಲೇ ನಿಮಗೆ ಸಂಗಾತಿಗಳನ್ನು ಮಾಡಿಕೊಟ್ಟಿರುವನು. ನಿಮ್ಮ ಸಂಗಾತಿಗಳ ಮೂಲಕ ನಿಮಗೆ ಅವನು ಮಕ್ಕಳನ್ನೂ ಮೊಮ್ಮಕ್ಕಳನ್ನೂ ಮಾಡಿಕೊಟ್ಟಿರುವನು. ವಿಶಿಷ್ಟ ವಸ್ತುಗಳಿಂದ ಅವನು ನಿಮಗೆ ಅನ್ನಾಧಾರವನ್ನೂ ಒದಗಿಸಿರುವನು. ಹೀಗಿರುವಾಗ ಅವರು ಅಸತ್ಯದಲ್ಲಿ ವಿಶ್ವಾಸವಿಟ್ಟು ಅಲ್ಲಾಹುವಿನ ಅನುಗ್ರಹವನ್ನು ನಿಷೇಧಿಸುತ್ತಿರುವರೇ?

وَٱللَّهُ جَعَلَ لَكُم مِّنۡ أَنفُسِكُمۡ أَزۡوَٰجٗا وَجَعَلَ لَكُم مِّنۡ أَزۡوَٰجِكُم بَنِينَ وَحَفَدَةٗ وَرَزَقَكُم مِّنَ ٱلطَّيِّبَٰتِۚ أَفَبِٱلۡبَٰطِلِ يُؤۡمِنُونَ وَبِنِعۡمَتِ ٱللَّهِ هُمۡ يَكۡفُرُونَ ٧٢

73. ಅವರು ಅಲ್ಲಾಹುವಿನ ಹೊರತು ಆಕಾಶಗಳಿಂದಾಗಲಿ ಅಥವಾ ಭೂಮಿಯಿಂದಾಗಲಿ ಅವರಿಗೆ ಯಾವುದೇ ಅನ್ನಾಧಾರವನ್ನೂ ಒಡೆತನದಲ್ಲಿಟ್ಟುಕೊಂಡಿರದವರನ್ನು ಮತ್ತು (ಯಾವುದಕ್ಕೂ) ಸಾಮರ್ಥ್ಯವಿಲ್ಲದವರನ್ನು ಆರಾಧಿಸುತ್ತಿರುವರು.

وَيَعۡبُدُونَ مِن دُونِ ٱللَّهِ مَا لَا يَمۡلِكُ لَهُمۡ رِزۡقٗا مِّنَ ٱلسَّمَٰوَٰتِ وَٱلۡأَرۡضِ شَيۡـٔٗا وَلَا يَسۡتَطِيعُونَ ٧٣

1 ಕುರ್‌ಆನ್ ಅವತೀರ್ಣವಾಗುವ ಕಾಲದಲ್ಲಿ ಅರೇಬಿಯಾದಲ್ಲಿ ಗುಲಾಮಗಿರಿ ಪದ್ಧತಿಯು ಅಸ್ತಿತ್ವದಲ್ಲಿತ್ತು. ಆ ಪದ್ಧತಿಯ ಕೆಳಗೆ ಬದುಕುತ್ತಿದ್ದವರಿಗೆ ಸರಳವಾಗಿ ಅರ್ಥವಾಗುವ ವಿಧದಲ್ಲಿ ಏಕದೇವ ಸಿದ್ಧಾಂತದ ಮೂಲಸ್ವರೂಪವನ್ನು ಒತ್ತಿಹೇಳಲಾಗಿದೆ. ಓರ್ವ ಯಜಮಾನನು ತನ್ನ ಗುಲಾಮರಿಗೆ ತನ್ನ ಸಂಪತ್ತನ್ನಾಗಲಿ, ಐಶ್ವರ್ಯವನ್ನಾಗಲಿ ಪಾಲುಮಾಡಿ ಕೊಡಲಾರನು. ಹೀಗಿರುವಾಗ ಅಲ್ಲಾಹು ತನ್ನ ಅಧಿಕಾರವನ್ನು ದೇವದೇವತೆಯರಿಗೆ ಪಾಲು ಮಾಡಿಕೊಟ್ಟಿದ್ದಾನೆಂದು ಹೇಳುವುದರಲ್ಲಿ ಯಾವ ನ್ಯಾಯವಿದೆ? ಅಭೌತಿಕ ಮಾರ್ಗಗಳ ಮೂಲಕ ಸೃಷ್ಟಿಗಳಿಂದ ಲಾಭನಷ್ಟಗಳನ್ನು ನಿರೀಕ್ಷಿಸುವವರು ನಿಜಾರ್ಥದಲ್ಲಿ ಅಲ್ಲಾಹು ತಮಗೆ ನೀಡಿರುವ ಅನುಗ್ರಹಗಳನ್ನು ನಿಷೇಧಿಸುತ್ತಿದ್ದಾರೆ.

74. ಆದ್ದರಿಂದ ನೀವು ಅಲ್ಲಾಹುವಿಗೆ ಉಪಮೆಗಳನ್ನು ಹೇಳದಿರಿ.[1] ಖಂಡಿತವಾಗಿಯೂ ಅಲ್ಲಾಹು ಅರಿಯುವನು ಮತ್ತು ನೀವು ಅರಿಯಲಾರಿರಿ.

فَلَا تَضۡرِبُواْ لِلَّهِ ٱلۡأَمۡثَالَۚ إِنَّ ٱللَّهَ يَعۡلَمُ وَأَنتُمۡ لَا تَعۡلَمُونَ ٧٤

75. ಇನ್ನೊಬ್ಬನ ಒಡೆತನಕ್ಕೆ ಸೇರಿರುವ, ಯಾವುದಕ್ಕೂ ಸಾಮರ್ಥ್ಯವಿಲ್ಲದ ಒಬ್ಬ ಗುಲಾಮನನ್ನು ಮತ್ತು ನಾವು ನಮ್ಮ ವತಿಯಿಂದ ಉತ್ತಮ ಅನ್ನಾಧಾರವನ್ನು ಒದಗಿಸಿ, ಅದರಿಂದ ಗುಪ್ತವಾಗಿ ಮತ್ತು ಬಹಿರಂಗವಾಗಿ ವ್ಯಯಿಸುವ ಇನ್ನೊಬ್ಬನನ್ನೂ ಅಲ್ಲಾಹು ಉಪಮೆಯಾಗಿ ತೋರಿಸುತ್ತಿರುವನು. ಇವರು ಸಮಾನರಾಗುವರೇ? ಅಲ್ಲಾಹುವಿಗೆ ಸ್ತುತಿ. ಆದರೆ ಅವರಲ್ಲಿ ಹೆಚ್ಚಿನವರೂ ಅರಿಯಲಾರರು.

۞ضَرَبَ ٱللَّهُ مَثَلًا عَبۡدًا مَّمۡلُوكًا لَّا يَقۡدِرُ عَلَىٰ شَيۡءٖ وَمَن رَّزَقۡنَٰهُ مِنَّا رِزۡقًا حَسَنًا فَهُوَ يُنفِقُ مِنۡهُ سِرًّا وَجَهۡرًاۖ هَلۡ يَسۡتَوُۥنَۚ ٱلۡحَمۡدُ لِلَّهِۚ بَلۡ أَكۡثَرُهُمۡ لَا يَعۡلَمُونَ ٧٥

76. ಇಬ್ಬರು ವ್ಯಕ್ತಿಗಳನ್ನು ಅಲ್ಲಾಹು ಉಪಮೆಯಾಗಿ ತೋರಿಸುವನು. ಅವರಲ್ಲೊಬ್ಬನು ಯಾವುದಕ್ಕೂ ಸಾಮರ್ಥ್ಯವಿಲ್ಲದ ಒಬ್ಬ ಮೂಕನಾಗಿರುವನು. ಅವನು ತನ್ನ ಯಜಮಾನನಿಗೆ ಒಂದು ಹೊರೆಯಾಗಿರುವನು. ಅವನನ್ನು ಯಾವ ಕಡೆಗೆ ತಿರುಗಿಸಿದರೂ ಅವನು ಯಾವ ಒಳಿತನ್ನೂ ತರಲಾರನು. ಇವನು ಮತ್ತು ಸತ್ಯದ ಹಾದಿಯಲ್ಲಿ ಅಚಲನಾಗಿದ್ದುಕೊಂಡು ನ್ಯಾಯ ಪಾಲಿಸಲು ಆಜ್ಞಾಪಿಸುವ ಇನ್ನೊಬ್ಬನು ಸಮಾನರಾಗುವರೇ?[2]

وَضَرَبَ ٱللَّهُ مَثَلٗا رَّجُلَيۡنِ أَحَدُهُمَآ أَبۡكَمُ لَا يَقۡدِرُ عَلَىٰ شَيۡءٖ وَهُوَ كَلٌّ عَلَىٰ مَوۡلَىٰهُ أَيۡنَمَا يُوَجِّههُّ لَا يَأۡتِ بِخَيۡرٍ هَلۡ يَسۡتَوِي هُوَ وَمَن يَأۡمُرُ بِٱلۡعَدۡلِ وَهُوَ عَلَىٰ صِرَٰطٖ مُّسۡتَقِيمٖ ٧٦

---

1 ಅಲ್ಲಾಹುವೇತರರನ್ನು ಆರಾಧಿಸುವವರು ಮತ್ತು ಅವರೊಂದಿಗೆ ಪ್ರಾರ್ಥಿಸುವವರು ತಮ್ಮ ನಿಲುವನ್ನು ಸಮರ್ಥಿಸಲು ಅಲ್ಲಾಹುವಿಗೆ ಕೆಲವು ಉದಾಹರಣೆಗಳನ್ನು ನೀಡುತ್ತಾರೆ. ವಕೀಲನ ಮೂಲಕವಲ್ಲದೆ ನ್ಯಾಯಾಲಯದಿಂದ ನ್ಯಾಯಬೇಡಲು ಸಾಧ್ಯವೇ? ಶಿಫಾರಸ್ಸುಗಾರನಿಲ್ಲದೆ ಪ್ರಧಾನಮಂತ್ರಿಯಿಂದ ಯಾವುದೇ ಕಾರ್ಯವನ್ನು ನೆರವೇರಿಸಿಕೊಳ್ಳಲು ಸಾಧ್ಯವೇ? ಎಂದೆಲ್ಲಾ ಕೇಳುತ್ತಾ ಮಧ್ಯವರ್ತಿಗಳು ಬೇಕೆಂಬುದಕ್ಕೆ ಪುರಾವೆಗಳನ್ನು ನಿರ್ಮಿಸಲು ಯತ್ನಿಸುವ ಅನೇಕ ಮಂದಿ ನಮ್ಮ ನಡುವೆಯೇ ಇದ್ದಾರೆ.

2 ಸ್ವತಂತ್ರನೂ ಪರಮಾಧಿಕಾರವುಳ್ಳವನೂ ಆಗಿರುವ ಅಲ್ಲಾಹುವಿಗೆ ಸಮಾನರಾಗಿ ಸೃಷ್ಟಿಗಳ ಪೈಕಿ ಯಾರನ್ನಾದರೂ ಪರಿಗಣಿಸುವುದು ಮಹಾ ಪ್ರಮಾದವಾಗಿದೆಯೆಂದು ಈ ಉದಾಹರಣೆಗಳು ಸ್ಪಷ್ಟಪಡಿಸುತ್ತವೆ.

77. ಆಕಾಶಗಳ ಮತ್ತು ಭೂಮಿಯ ಅಗೋಚರ ಜ್ಞಾನವು ಅಲ್ಲಾಹುವಿಗಾಗಿದೆ. ಅಂತ್ಯಘಳಿಗೆಯ ವಿಷಯವು ಕಣ್ಣೆವೆಯಿಕ್ಕುವಂತೆ ಮಾತ್ರವಾಗಿದೆ ಅಥವಾ ಅದಕ್ಕಿಂತಲೂ ಹತ್ತಿರವಾಗಿದೆ. ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَلِلَّهِ غَيۡبُ ٱلسَّمَٰوَٰتِ وَٱلۡأَرۡضِۚ وَمَآ أَمۡرُ ٱلسَّاعَةِ إِلَّا كَلَمۡحِ ٱلۡبَصَرِ أَوۡ هُوَ أَقۡرَبُۚ إِنَّ ٱللَّهَ عَلَىٰ كُلِّ شَيۡءٖ قَدِيرٞ ٧٧

78. ನೀವು ಏನನ್ನೂ ಅರಿತಿರದಂತಹ ಸ್ಥಿತಿಯಲ್ಲಿ ಅಲ್ಲಾಹು ನಿಮ್ಮನ್ನು ನಿಮ್ಮ ತಾಯಂದಿರ ಉದರಗಳಿಂದ ಹೊರತಂದನು.[1] ನಿಮಗೆ ಅವನು ಶ್ರವಣವನ್ನು, ದೃಷ್ಟಿಗಳನ್ನು, ಮತ್ತು ಹೃದಯಗಳನ್ನು ನೀಡಿದನು. ನೀವು ಕೃತಜ್ಞತೆ ಸಲ್ಲಿಸುವವರಾಗುವ ಸಲುವಾಗಿ.

وَٱللَّهُ أَخۡرَجَكُم مِّنۢ بُطُونِ أُمَّهَٰتِكُمۡ لَا تَعۡلَمُونَ شَيۡـٔٗا وَجَعَلَ لَكُمُ ٱلسَّمۡعَ وَٱلۡأَبۡصَٰرَ وَٱلۡأَفۡـِٔدَةَ لَعَلَّكُمۡ تَشۡكُرُونَ ٧٨

79. (ಅಲ್ಲಾಹುವಿನ ಆಜ್ಞೆಗೆ) ವಿಧೇಯವಾಗಿ ದಿಗಂತದಲ್ಲಿ ಹಾರಾಡುವ ಹಕ್ಕಿಗಳೆಡೆಗೆ ಅವರು ನೋಡುವುದಿಲ್ಲವೇ? ಅಲ್ಲಾಹುವಿನ ಹೊರತು ಇನ್ನಾರೂ ಅವುಗಳನ್ನು ಆಧರಿಸಿ ಹಿಡಿಯುವುದಿಲ್ಲ. ಖಂಡಿತವಾಗಿಯೂ ವಿಶ್ವಾಸ ವಿಡುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.

أَلَمۡ يَرَوۡاْ إِلَى ٱلطَّيۡرِ مُسَخَّرَٰتٖ فِي جَوِّ ٱلسَّمَآءِ مَا يُمۡسِكُهُنَّ إِلَّا ٱللَّهُۚ إِنَّ فِي ذَٰلِكَ لَأٓيَٰتٖ لِّقَوۡمٖ يُؤۡمِنُونَ ٧٩

80. ಅಲ್ಲಾಹು ನಿಮ್ಮ ಮನೆಗಳನ್ನು ನಿಮಗೆ ವಿಶ್ರಾಂತಿ ತಾಣವನ್ನಾಗಿ ಮಾಡಿಕೊಟ್ಟಿರುವನು. ಅವನು ನಿಮಗೆ ಜಾನುವಾರುಗಳ ತೊಗಲುಗಳಿಂದ ಡೇರೆಗಳನ್ನು ಮಾಡಿಕೊಟ್ಟಿರುವನು. ನೀವು ಪ್ರಯಾಣ ಮಾಡುವ ದಿನದಂದು ಮತ್ತು ನೀವು ಬೀಡುಬಿಡುವ ದಿನದಂದು ಅವುಗಳನ್ನು ನೀವು ಅನಾಯಾಸವಾಗಿ ಬಳಸುತ್ತಿರುವಿರಿ.[2] ಅವುಗಳ

وَٱللَّهُ جَعَلَ لَكُم مِّنۢ بُيُوتِكُمۡ سَكَنٗا وَجَعَلَ لَكُم مِّن جُلُودِ ٱلۡأَنۡعَٰمِ بُيُوتٗا تَسۡتَخِفُّونَهَا يَوۡمَ ظَعۡنِكُمۡ وَيَوۡمَ إِقَامَتِكُمۡ وَمِنۡ أَصۡوَافِهَا وَأَوۡبَارِهَا وَأَشۡعَارِهَآ أَثَٰثٗا وَمَتَٰعًا إِلَىٰ حِينٖ ٨٠

1 ಸ್ವತಂತ್ರವಾಗಿ ಆಹಾರ ಹುಡುಕುವ, ಗೂಡುಕಟ್ಟುವ ಮತ್ತು ಆತ್ಮರಕ್ಷಣೆ ಮಾಡುವ ಅರಿವಿನೊಂದಿಗೇ ಪ್ರಾಣಿಪಕ್ಷಿಗಳು ಜನ್ಮತಾಳುತ್ತವೆ. ಆದರೆ ಮನುಷ್ಯನು ಏನನ್ನೂ ಅರಿಯದೆ ಜನ್ಮತಾಳುತ್ತಾನೆ. ಇದು ಮನುಷ್ಯನನ್ನು ಇತರ ಜೀವಿಗಳಿಂದ ಬೇರ್ಪಡಿಸುವ ಮೂಲಭೂತವಾದ ಒಂದು ವಿಶೇಷತೆಯಾಗಿದೆ.

2 ತಾತ್ಕಾಲಿಕ ವಾಸಕ್ಕಾಗಿ ಹಗುರವೂ ಭದ್ರವೂ ಆದ ಡೇರೆ ಅಥವಾ ಗುಡಾರಗಳನ್ನು ನಿರ್ಮಿಸಲು ಪ್ರಾಣಿಗಳ ತೊಗಲು ಹೆಚ್ಚು ಪ್ರಯೋಜನಕಾರಿಯಾಗಿರುತ್ತದೆ.

ಉಣ್ಣೆ, ತುಪ್ಪಳ ಮತ್ತು ಕೂದಲುಗಳಿಂದ ಒಂದು ಕಾಲಾವಧಿಯವರೆಗೆ ಬಳಸಲಾಗುವಂತಹ ಗ್ರಹೋಪಕರಣಗಳನ್ನು ಮತ್ತು ಉಪಭೋಗವಸ್ತುಗಳನ್ನು (ಅವನು ಮಾಡಿಕೊಟ್ಟಿರುವನು).

**81.** ಅಲ್ಲಾಹು ತಾನು ಸೃಷ್ಟಿಸಿದ ವಸ್ತುಗಳಿಂದ ನಿಮಗೆ ನೆರಳನ್ನು ಮಾಡಿಕೊಟ್ಟಿರುವನು. ಅವನು ನಿಮಗೆ ಪರ್ವತಗಳಲ್ಲಿ ಆಶ್ರಯದಾಣಗಳನ್ನು ಮಾಡಿಕೊಟ್ಟಿರುವನು. ನಿಮ್ಮನ್ನು ಸೆಖೆಯಿಂದ ರಕ್ಷಿಸುವ ಕವಚಗಳನ್ನು ಮತ್ತು ನೀವು ಪರಸ್ಪರ ಕಾದಾಡುವಾಗ ನಿಮ್ಮನ್ನು ರಕ್ಷಿಸುವ ಕವಚಗಳನ್ನು ಅವನು ನಿಮಗೆ ಮಾಡಿಕೊಟ್ಟಿರುವನು. ಹೀಗೆ ನಿಮ್ಮ ಮೇಲಿರುವ ತನ್ನ ಅನುಗ್ರಹವನ್ನು ಅವನು ಪೂರ್ಣಗೊಳಿಸುವನು. ನೀವು (ಅವನಿಗೆ) ಶರಣಾಗತರಾಗುವ ಸಲುವಾಗಿ.

وَٱللَّهُ جَعَلَ لَكُم مِّمَّا خَلَقَ ظِلَٰلًا وَجَعَلَ لَكُم مِّنَ ٱلْجِبَالِ أَكْنَٰنًا وَجَعَلَ لَكُمْ سَرَٰبِيلَ تَقِيكُمُ ٱلْحَرَّ وَسَرَٰبِيلَ تَقِيكُم بَأْسَكُمْ كَذَٰلِكَ يُتِمُّ نِعْمَتَهُۥ عَلَيْكُمْ لَعَلَّكُمْ تُسْلِمُونَ ﴿٨١﴾

**82.** ಅವರೇನಾದರೂ ವಿಮುಖರಾಗುವುದಾದರೆ ತಮ್ಮ ಮೇಲಿರುವ ಹೊಣೆಯು (ಸಂದೇಶವನ್ನು) ಸ್ಪಷ್ಟವಾಗಿ ತಲುಪಿಸಿಕೊಡುವುದು ಮಾತ್ರವಾಗಿದೆ.

فَإِن تَوَلَّوْا۟ فَإِنَّمَا عَلَيْكَ ٱلْبَلَٰغُ ٱلْمُبِينُ ﴿٨٢﴾

**83.** ಅವರು ಅಲ್ಲಾಹುವಿನ ಅನುಗ್ರಹವನ್ನು ಅರಿತು ಕೊಂಡಿರುವರು. ಅದರ ಬಳಿಕವೂ ಅವರು ಅದನ್ನು ನಿಷೇಧಿಸುತ್ತಿರುವರು. ಅವರಲ್ಲಿ ಹೆಚ್ಚಿನವರೂ ಕೃತಘ್ನರಾಗಿರುವರು.(1)

يَعْرِفُونَ نِعْمَتَ ٱللَّهِ ثُمَّ يُنكِرُونَهَا وَأَكْثَرُهُمُ ٱلْكَٰفِرُونَ ﴿٨٣﴾

**84.** ನಾವು ಪ್ರತಿಯೊಂದು ಸಮುದಾಯದಿಂದಲೂ ಒಬ್ಬ ಸಾಕ್ಷಿಯನ್ನು ಎಬ್ಬಿಸುವ ದಿನ.(2) ತರುವಾಯ ಸತ್ಯನಿಷೇಧಿಗಳಿಗೆ (ನೆಪಗಳನ್ನು ಹೇಳಲು) ಅನುಮತಿ ನೀಡಲಾಗದು. ಅವರಿಂದ ಪರಿಹಾರವನ್ನು ಸಹ ಕೇಳಲಾಗದು.

وَيَوْمَ نَبْعَثُ مِن كُلِّ أُمَّةٍ شَهِيدًا ثُمَّ لَا يُؤْذَنُ لِلَّذِينَ كَفَرُوا۟ وَلَا هُمْ يُسْتَعْتَبُونَ ﴿٨٤﴾

**85.** ಅಕ್ರಮಿಗಳು ಶಿಕ್ಷೆಯನ್ನು ಕಾಣುವ ಸಂದರ್ಭದಲ್ಲಿ ಅವರಿಗೆ ಅದನ್ನು ಹಗುರಗೊಳಿಸಲಾಗದು. ಅವರಿಗೆ ಕಾಲಾವಕಾಶವನ್ನೂ ನೀಡಲಾಗದು.

وَإِذَا رَءَا ٱلَّذِينَ ظَلَمُوا۟ ٱلْعَذَابَ فَلَا يُخَفَّفُ عَنْهُمْ وَلَا هُمْ يُنظَرُونَ ﴿٨٥﴾

---

1 ಕಾಫಿರ್ ಎಂಬ ಪದಕ್ಕೆ ಸತ್ಯನಿಷೇಧಿ, ಕೃತಘ್ನ ಇತ್ಯಾದಿ ಅರ್ಥಗಳಿವೆ.

2 ಪರಲೋಕದಲ್ಲಿ ಪ್ರತಿಯೊಂದು ಸಮುದಾಯವನ್ನೂ ಅಲ್ಲಾಹು ವಿಚಾರಣೆಗೆ ತೆಗೆದುಕೊಳ್ಳುವಾಗ ಅವರೆಡೆಗೆ ಕಳುಹಿಸಲಾಗಿರುವ ಪ್ರವಾದಿಯನ್ನು ಅವರ ಮೇಲೆ ಸಾಕ್ಷಿಯಾಗಿ ತರುವನು.

وَإِذَا رَءَا ٱلَّذِينَ أَشۡرَكُواْ شُرَكَآءَهُمۡ قَالُواْ رَبَّنَا هَٰٓؤُلَآءِ شُرَكَآؤُنَا ٱلَّذِينَ كُنَّا نَدۡعُواْ مِن دُونِكَۖ فَأَلۡقَوۡاْ إِلَيۡهِمُ ٱلۡقَوۡلَ إِنَّكُمۡ لَكَٰذِبُونَ ﴿٨٦﴾

**86.** (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡಿಕೊಂಡವರು (ಪರಲೋಕದಲ್ಲಿ) ತಮ್ಮ ಸಹಭಾಗಿಗಳನ್ನು ಕಾಣುವಾಗ 'ಓ ನಮ್ಮ ರಬ್! ನಿನ್ನ ಹೊರತಾಗಿ ನಾವು ಪ್ರಾರ್ಥಿಸುತ್ತಿದ್ದ ನಮ್ಮ ಸಹಭಾಗಿಗಳು ಇವರಾಗಿರುವರು' ಎಂದು ಹೇಳುವರು. ಆಗ ಅವರು (ಸಹಭಾಗಿಗಳು) 'ಖಂಡಿತವಾಗಿಯೂ ನೀವು ಸುಳ್ಳು ಹೇಳುವವರಾಗಿರುವಿರಿ' ಎಂಬ ಮಾತನ್ನು ಅವರಿಗೆ ಉತ್ತರವಾಗಿ ಹೇಳುವರು.[1]

وَأَلۡقَوۡاْ إِلَى ٱللَّهِ يَوۡمَئِذٍ ٱلسَّلَمَۖ وَضَلَّ عَنۡهُم مَّا كَانُواْ يَفۡتَرُونَ ﴿٨٧﴾

**87.** ಅಂದು ಅವರು ಅಲ್ಲಾಹುವಿಗೆ ಶರಣಾಗತಿಯನ್ನು ಪ್ರಕಟಿಸುವರು. ಅವರು ಹೆಣೆದಿರುವುದೆಲ್ಲವೂ ಅವರನ್ನು ಬಿಟ್ಟು ದೂರಸರಿಯುವುವು.

ٱلَّذِينَ كَفَرُواْ وَصَدُّواْ عَن سَبِيلِ ٱللَّهِ زِدۡنَٰهُمۡ عَذَابًا فَوۡقَ ٱلۡعَذَابِ بِمَا كَانُواْ يُفۡسِدُونَ ﴿٨٨﴾

**88.** ಅವಿಶ್ವಾಸವಿಟ್ಟವರು ಮತ್ತು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದವರು ಯಾರೋ ಅವರು ವಿನಾಶವುಂಟು ಮಾಡುತ್ತಿರುವ ಫಲವಾಗಿ ನಾವು ಅವರಿಗೆ ಶಿಕ್ಷೆಯ ಮೇಲೆ ಶಿಕ್ಷೆಯನ್ನು ಹೆಚ್ಚಿಸಿಕೊಡುವೆವು.

وَيَوۡمَ نَبۡعَثُ فِي كُلِّ أُمَّةٖ شَهِيدًا عَلَيۡهِم مِّنۡ أَنفُسِهِمۡۖ وَجِئۡنَا بِكَ شَهِيدًا عَلَىٰ هَٰٓؤُلَآءِۚ وَنَزَّلۡنَا عَلَيۡكَ ٱلۡكِتَٰبَ تِبۡيَٰنٗا لِّكُلِّ شَيۡءٖ وَهُدٗى وَرَحۡمَةٗ وَبُشۡرَىٰ لِلۡمُسۡلِمِينَ ﴿٨٩﴾

**89.** ನಾವು ಪ್ರತಿಯೊಂದು ಸಮುದಾಯದಲ್ಲಿಯೂ ಅವರಿಂದಲೇ ಇರುವ ಒಬ್ಬ ಸಾಕ್ಷಿಯನ್ನು ಅವರ ಮೇಲೆ ಕಳುಹಿಸುವ ಮತ್ತು ಇವರ ಮೇಲೆ ಸಾಕ್ಷಿಯಾಗಿ ನಾವು ತಮ್ಮನ್ನು ತರುವ ದಿನ! ನಾವು ತಮಗೆ ಈ ಗ್ರಂಥವನ್ನು ಎಲ್ಲ ವಿಷಯಗಳಿಗಿರುವ ವಿಶದೀಕರಣವಾಗಿ, ಮಾರ್ಗದರ್ಶಿಯಾಗಿ ಮತ್ತು ಕಾರುಣ್ಯವಾಗಿ ಹಾಗೂ ಶರಣಾಗತರಾಗಿ ಬದುಕುವವರಿಗೆ ಒಂದು ಶುಭವಾರ್ತೆಯಾಗಿ ಅವತೀರ್ಣಗೊಳಿಸಿರುವೆವು.

۞إِنَّ ٱللَّهَ يَأۡمُرُ بِٱلۡعَدۡلِ وَٱلۡإِحۡسَٰنِ

**90.** ಖಂಡಿತವಾಗಿಯೂ ಅಲ್ಲಾಹು ನ್ಯಾಯ ಪಾಲಿಸಲು, ಒಳಿತನ್ನು ಮಾಡಲು ಮತ್ತು

1 ಅಲ್ಲಾಹುವಿನ ಹಕ್ಕು ಮತ್ತು ಅಧಿಕಾರಗಳಲ್ಲಿ ತಮ್ಮನ್ನು ಸಹಭಾಗಿಗಳಾಗಿ ಮಾಡಿ ನಮ್ಮನ್ನು ಆರಾಧಿಸಿರಿ ಎಂದು ಅವರಾರೂ ಬೇಡಿಕೆಯಿಟ್ಟಿರಲಿಲ್ಲ. ಆದ್ದರಿಂದಲೇ ಆರಾಧಕರ ವಾದಗಳನ್ನು ಅವರು ತಿರಸ್ಕರಿಸುವರು.

وَإِيتَآيِٕ ذِى ٱلۡقُرۡبَىٰ وَيَنۡهَىٰ عَنِ ٱلۡفَحۡشَآءِ
وَٱلۡمُنكَرِ وَٱلۡبَغۡيِۚ يَعِظُكُمۡ لَعَلَّكُمۡ
تَذَكَّرُونَ ﴿٩٠﴾

ಸಂಬಂಧಿಕರಿಗೆ (ನೆರವು) ನೀಡಲು ಆಜ್ಞಾಪಿಸುತ್ತಿರುವನು. ನೀಚಕೃತ್ಯಗಳನ್ನು, ದುರಾಚಾರಗಳನ್ನು ಮತ್ತು ಅತಿಕ್ರಮಗಳನ್ನು ಅವನು ವಿರೋಧಿಸುತ್ತಿರುವನು.[1] ನೀವು ಚಿಂತಿಸಿ ಗ್ರಹಿಸುವ ಸಲುವಾಗಿ ಅವನು ನಿಮಗೆ ಉಪದೇಶ ನೀಡುತ್ತಿರುವನು.

وَأَوۡفُواْ بِعَهۡدِ ٱللَّهِ إِذَا عَٰهَدتُّمۡ وَلَا تَنقُضُواْ
ٱلۡأَيۡمَٰنَ بَعۡدَ تَوۡكِيدِهَا وَقَدۡ جَعَلۡتُمُ
ٱللَّهَ عَلَيۡكُمۡ كَفِيلًاۚ إِنَّ ٱللَّهَ يَعۡلَمُ مَا
تَفۡعَلُونَ ﴿٩١﴾

**91.** ನೀವು ಕರಾರು ಮಾಡುವಾಗ ಅಲ್ಲಾಹುವಿನೊಂದಿಗಿರುವ ಕರಾರನ್ನು ನೆರವೇರಿಸಿರಿ.[2] ಅಲ್ಲಾಹುವನ್ನು ನಿಮ್ಮ ಹೊಣೆಗಾರನನ್ನಾಗಿ ಮಾಡಿ ನೀವು ಖಾತ್ರಿಯೊಂದಿಗೆ ಪ್ರಮಾಣ ಮಾಡಿದ ಬಳಿಕ ಅದನ್ನು ಉಲ್ಲಂಘಿಸದಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದನ್ನು ಅಲ್ಲಾಹು ಅರಿಯುವನು.

وَلَا تَكُونُواْ كَٱلَّتِى نَقَضَتۡ غَزۡلَهَا مِنۢ
بَعۡدِ قُوَّةٍ أَنكَٰثًا تَتَّخِذُونَ أَيۡمَٰنَكُمۡ
دَخَلَۢا بَيۡنَكُمۡ أَن تَكُونَ أُمَّةٌ هِىَ
أَرۡبَىٰ مِنۡ أُمَّةٍۚ إِنَّمَا يَبۡلُوكُمُ ٱللَّهُ بِهِۦۚ
وَلَيُبَيِّنَنَّ لَكُمۡ يَوۡمَ ٱلۡقِيَٰمَةِ مَا كُنتُمۡ فِيهِ
تَخۡتَلِفُونَ ﴿٩٢﴾

**92.** ನೂಲನ್ನು ಗಟ್ಟಿಯಾಗಿ ಸುತ್ತಿದ ಬಳಿಕ ಅದನ್ನು ಎಳೆಗಳಾಗಿ ಬಿಚ್ಚಿ ಹಾಕುವ ಒಬ್ಬಳಂತೆ ನೀವಾಗದಿರಿ. ಒಂದು ಸಮುದಾಯವು ಇನ್ನೊಂದು ಸಮುದಾಯಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವ ಕಾರಣದಿಂದಾಗಿ ನೀವು ನಿಮ್ಮ ಪ್ರತಿಜ್ಞೆಗಳನ್ನು ಪರಸ್ಪರ ವಂಚನಾ ಮಾರ್ಗಗಳನ್ನಾಗಿ ಮಾಡುತ್ತಿರುವಿರಿ.[3] ಅಲ್ಲಾಹು ಕೇವಲ ನಿಮ್ಮನ್ನು ಅದರ ಮೂಲಕ ಪರೀಕ್ಷಿಸುತ್ತಿರುವನು. ಯಾವ ವಿಷಯದಲ್ಲಿ ನೀವು ಭಿನ್ನರಾಗಿ ಹೋದಿರೋ ಅದನ್ನು ಅಂತ್ಯದಿನದಂದು ಅವನು ನಿಮಗೆ ಸ್ಪಷ್ಟಪಡಿಸಿಕೊಡುವನು.

---

1 ನ್ಯಾಯಸಮ್ಮತವಾಗಿರುವ ಎಲ್ಲವನ್ನೂ ಇಸ್ಲಾಮ್ ಪ್ರೋತ್ಸಾಹಿಸುತ್ತದೆ. ನ್ಯಾಯಕ್ಕೆ ವಿರುದ್ಧವಾಗಿರುವ ಎಲ್ಲವನ್ನೂ ಇಸ್ಲಾಮ್ ವಿರೋಧಿಸುತ್ತದೆ. ಆದ್ದರಿಂದಲೇ ಇಸ್ಲಾಮಿನ ಬೋಧನೆಗಳು ಸಜ್ಜನರಿಗೆ ಅಸ್ವೀಕಾರವಾಗಲಾರದು.

2 ಇಸ್ಲಾಮಿನ ತಳಹದಿಯಲ್ಲಿ ಸತ್ಯವಿಶ್ವಾಸಿಗಳು ಮಾಡುವ ಯಾವುದೇ ಕರಾರು ಕೂಡ ಅಲ್ಲಾಹುವಿನ ಕರಾರು ಅಥವಾ ಅಲ್ಲಾಹುವಿನೊಂದಿಗಿರುವ ಕರಾರಾಗಿರುತ್ತದೆ.

3 ನಾವು ನಿಮಗೆ ಯಾವುದೇ ಸಂದರ್ಭದಲ್ಲೂ ಸಹಾಯಮಾಡುವೆವೆಂದು ಪ್ರತಿಜ್ಞೆ ಮಾಡುತ್ತಾ ಒಂದು ಗುಂಪಿನೊಂದಿಗೆ ಮೈತ್ರಿ ಮಾಡಿ, ನಂತರ ಅವರಿಗಿಂತಲೂ ಬಲಿಷ್ಠರಾದ ಇನ್ನೊಂದು ಗುಂಪಿನೊಂದಿಗೆ ಮೈತ್ರಿ ಮಾಡುವ ಅವಕಾಶ ಸಿಕ್ಕಿದರೆ ಮೊದಲನೆ ಗುಂಪಿಗೆ ವಿರುದ್ಧವಾಗಿ ಅವರೊಂದಿಗೆ ಮೈತ್ರಿ ಮಾಡಿಕೊಳ್ಳುವ ಸ್ವಭಾವವನ್ನು ಇಲ್ಲಿ ಟೀಕಿಸಲಾಗಿದೆ.

وَلَوۡ شَآءَ ٱللَّهُ لَجَعَلَكُمۡ أُمَّةٗ وَٰحِدَةٗ وَلَٰكِن يُضِلُّ مَن يَشَآءُ وَيَهۡدِي مَن يَشَآءُۚ وَلَتُسۡـَٔلُنَّ عَمَّا كُنتُمۡ تَعۡمَلُونَ ﴿٩٣﴾

93. ಅಲ್ಲಾಹು ಇಚ್ಛಿಸುತ್ತಿದ್ದರೆ ಅವನು ನಿಮ್ಮನ್ನು ಏಕೈಕ ಸಮುದಾಯವಾಗಿ ಮಾಡುತ್ತಿದ್ದನು. ಆದರೆ ಅವನು ತಾನಿಚ್ಛಿಸುವವರನ್ನು ಪಥಭ್ರಷ್ಟಗೊಳಿಸುವನು ಮತ್ತು ತಾನಿಚ್ಛಿಸುವವರನ್ನು ಸನ್ಮಾರ್ಗದಲ್ಲಿ ಸೇರಿಸುವನು. ನೀವು ಮಾಡುತ್ತಿರುವುದರ ಕುರಿತು ಖಂಡಿತವಾಗಿಯೂ ನಿಮ್ಮೊಂದಿಗೆ ಪ್ರಶ್ನಿಸಲಾಗುವುದು.

وَلَا تَتَّخِذُوٓاْ أَيۡمَٰنَكُمۡ دَخَلَۢا بَيۡنَكُمۡ فَتَزِلَّ قَدَمُۢ بَعۡدَ ثُبُوتِهَا وَتَذُوقُواْ ٱلسُّوٓءَ بِمَا صَدَدتُّمۡ عَن سَبِيلِ ٱللَّهِ وَلَكُمۡ عَذَابٌ عَظِيمٞ ﴿٩٤﴾

94. ನೀವು ನಿಮ್ಮ ಶಪಥಗಳನ್ನು ಪರಸ್ಪರ ವಂಚನಾ ಮಾರ್ಗಗಳನ್ನಾಗಿ ಮಾಡದಿರಿ. (ಇಸ್ಲಾಮಿನಲ್ಲಿ) ಸುದೃಢರಾಗಿ ಬೇರೂರಿದ ಬಳಿಕ ಕಾಲು ಜಾರುವಂತಾಗಲು[1] ಮತ್ತು ಅಲ್ಲಾಹುವಿನ ಮಾರ್ಗದಿಂದ ನೀವು ಜನರನ್ನು ತಡೆದಿರುವ ಸಲುವಾಗಿ ಶಿಕ್ಷೆಯನ್ನು ಸವಿಯುವಂತಾಗಲು ಅದು ಹೇತುವಾಗಬಹುದು. ಭೀಕರವಾದ ಶಿಕ್ಷೆಯೂ ನಿಮಗಿರುವುದು.

وَلَا تَشۡتَرُواْ بِعَهۡدِ ٱللَّهِ ثَمَنٗا قَلِيلًاۚ إِنَّمَا عِندَ ٱللَّهِ هُوَ خَيۡرٞ لَّكُمۡ إِن كُنتُمۡ تَعۡلَمُونَ ﴿٩٥﴾

95. ಅಲ್ಲಾಹುವಿನೊಂದಿಗಿರುವ ಕರಾರಿಗೆ ಬದಲಾಗಿ ನೀವು ತುಚ್ಛವಾದ ಬೆಲೆಯನ್ನು ಪಡೆಯದಿರಿ. ಖಂಡಿತವಾಗಿಯೂ ಅಲ್ಲಾಹುವಿನ ಬಳಿಯಿರುವುದೇ ನಿಮಗೆ ಉತ್ತಮವಾಗಿದೆ. ನೀವು (ವಾಸ್ತವವನ್ನು) ಅರಿಯುವವರಾಗಿದ್ದರೆ.

مَا عِندَكُمۡ يَنفَدُ وَمَا عِندَ ٱللَّهِ بَاقٖۗ وَلَنَجۡزِيَنَّ ٱلَّذِينَ صَبَرُوٓاْ أَجۡرَهُم بِأَحۡسَنِ مَا كَانُواْ يَعۡمَلُونَ ﴿٩٦﴾

96. ನಿಮ್ಮ ಬಳಿಯಿರುವುದು ಬರಿದಾಗಿ ಹೋಗುವುದು ಮತ್ತು ಅಲ್ಲಾಹುವಿನ ಬಳಿಯಿರುವುದು ಬಾಕಿಯುಳಿಯುವುದು. ಸಹನೆ ಪಾಲಿಸಿದವರಿಗೆ ಅವರು ಮಾಡುತ್ತಿರುವ ಕರ್ಮಗಳಲ್ಲಿ ಅತ್ಯುತ್ತಮವಾಗಿರುವುದಕ್ಕೆ ಅನುಗುಣವಾಗಿ ನಾವು ಅವರಿಗಿರುವ ಪ್ರತಿಫಲವನ್ನು ನೀಡುವೆವು.

مَنۡ عَمِلَ صَٰلِحٗا مِّن ذَكَرٍ أَوۡ أُنثَىٰ وَهُوَ مُؤۡمِنٞ فَلَنُحۡيِيَنَّهُۥ حَيَوٰةٗ طَيِّبَةٗۖ وَلَنَجۡزِيَنَّهُمۡ أَجۡرَهُم بِأَحۡسَنِ مَا كَانُواْ يَعۡمَلُونَ ﴿٩٧﴾

97. ಗಂಡಾಗಲಿ, ಹೆಣ್ಣಾಗಲಿ ಸತ್ಯವಿಶ್ವಾಸಿಯಾಗಿರುತ್ತಾ ಯಾರು ಸತ್ಕರ್ಮಗಳನ್ನು ಮಾಡುವರೋ ಖಂಡಿತವಾಗಿಯೂ ನಾವು ಅವನಿಗೆ ಉತ್ತಮವಾದ ಜೀವನವನ್ನು ನೀಡುವೆವು. ಅವರು ಮಾಡುತ್ತಿರುವ ಕರ್ಮಗಳಲ್ಲಿ

1 ಪ್ರತಿಜ್ಞೆಗಳನ್ನು ಉಲ್ಲಂಘಿಸುವುದು ಇಸ್ಲಾಮಿನಲ್ಲಿ ಅಚಲವಾಗಿ ನೆಲೆನಿಲ್ಲದಿರುವ ಸೂಚನೆ ಮತ್ತು ಪಥಭ್ರಷ್ಟತೆಯ ಲಕ್ಷಣವಾಗಿದೆಯೆಂದು ಇದರಿಂದ ಗ್ರಹಿಸಬಹುದು.

ಅತ್ಯುತ್ತಮವಾಗಿರುವುದಕ್ಕೆ ಅನುಗುಣವಾಗಿ ನಾವು ಅವರಿಗಿರುವ ಪ್ರತಿಫಲವನ್ನು ನೀಡುವೆವು.

98. ತಾವು ಕುರ್‌ಆನ್ ಪಾರಾಯಣ ಮಾಡುವುದಾದರೆ ಬಹಿಷ್ಕೃತನಾದ ಸೈತಾನನಿಂದ ಅಲ್ಲಾಹುವಿನೊಂದಿಗೆ ಅಭಯವನ್ನು ಯಾಚಿಸಿರಿ.

فَإِذَا قَرَأْتَ ٱلْقُرْءَانَ فَٱسْتَعِذْ بِٱللَّهِ مِنَ ٱلشَّيْطَٰنِ ٱلرَّجِيمِ ﴿٩٨﴾

99. ವಿಶ್ವಾಸವಿಡುವವರು ಮತ್ತು ತಮ್ಮ ರಬ್‌ನ ಮೇಲೆ ಭರವಸೆಯಿಡುವವರು ಯಾರೋ ಅವರ ಮೇಲೆ ಅವನಿಗೆ (ಸೈತಾನನಿಗೆ) ಖಂಡಿತವಾಗಿಯೂ ಯಾವುದೇ ಅಧಿಕಾರವಿರಲಾರದು.

إِنَّهُۥ لَيْسَ لَهُۥ سُلْطَٰنٌ عَلَى ٱلَّذِينَ ءَامَنُوا۟ وَعَلَىٰ رَبِّهِمْ يَتَوَكَّلُونَ ﴿٩٩﴾

100. ಅವನಿಗೆ ಅಧಿಕಾರವಿರುವುದು ಅವನನ್ನು ರಕ್ಷಕನನ್ನಾಗಿ ಮಾಡಿಕೊಳ್ಳುವವರ ಮೇಲೆ ಮತ್ತು ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡಿಕೊಳ್ಳುವವರ ಮೇಲೆ ಮಾತ್ರವಾಗಿದೆ.

إِنَّمَا سُلْطَٰنُهُۥ عَلَى ٱلَّذِينَ يَتَوَلَّوْنَهُۥ وَٱلَّذِينَ هُم بِهِۦ مُشْرِكُونَ ﴿١٠٠﴾

101. ನಾವು ಒಂದು ಸೂಕ್ತಿಯ ಸ್ಥಾನದಲ್ಲಿ ಇನ್ನೊಂದು ಸೂಕ್ತಿಯನ್ನು ಬದಲಿಯಾಗಿ ತಂದರೆ –ತಾನು ಅವತೀರ್ಣಗೊಳಿಸುವುದರ ಬಗ್ಗೆ ಅಲ್ಲಾಹು ಚೆನ್ನಾಗಿ ಅರಿಯುವವನಾಗಿರುವನು– ಅವರು ಹೇಳುವರು: ‘ಖಂಡಿತವಾಗಿಯೂ ನೀನೊಬ್ಬ ಸ್ವತಃ ರಚಿಸಿ ಹೇಳುವ ವ್ಯಕ್ತಿ ಮಾತ್ರವಾಗಿರುವೆ’. ಹಾಗಲ್ಲ, ಅವರಲ್ಲಿ ಹೆಚ್ಚಿನವರೂ (ವಿಷಯವನ್ನು) ಅರ್ಥಮಾಡಿಕೊಳ್ಳಲಾರರು.

وَإِذَا بَدَّلْنَآ ءَايَةً مَّكَانَ ءَايَةٍ وَٱللَّهُ أَعْلَمُ بِمَا يُنَزِّلُ قَالُوٓا۟ إِنَّمَآ أَنتَ مُفْتَرٍۭ بَلْ أَكْثَرُهُمْ لَا يَعْلَمُونَ ﴿١٠١﴾

102. ಹೇಳಿರಿ: ‘ವಿಶ್ವಾಸವಿಟ್ಟವರನ್ನು ದೃಢವಾಗಿ ನೆಲೆಯೂರಿಸುವ ಸಲುವಾಗಿ ಮತ್ತು ವಿಧೇಯರಾಗಿರುವವರಿಗೆ ಮಾರ್ಗದರ್ಶನವಾಗಿ ಮತ್ತು ಶುಭವಾರ್ತೆಯಾಗಿ ತಮ್ಮ ರಬ್‌ನ ಕಡೆಯಿಂದ ಪವಿತ್ರಾತ್ಮನು ಇದನ್ನು ಸತ್ಯದೊಂದಿಗೆ ಇಳಿಸಿ ತಂದಿರುವನು’.

قُلْ نَزَّلَهُۥ رُوحُ ٱلْقُدُسِ مِن رَّبِّكَ بِٱلْحَقِّ لِيُثَبِّتَ ٱلَّذِينَ ءَامَنُوا۟ وَهُدًى وَبُشْرَىٰ لِلْمُسْلِمِينَ ﴿١٠٢﴾

**103.** ‘ಪ್ರವಾದಿಯವರಿಗೆ ಕಲಿಸಿಕೊಡುತ್ತಿರುವುದು ಕೇವಲ ಒಬ್ಬ ಮನುಷ್ಯನು ಮಾತ್ರವಾಗಿರುವನು’ ಎಂದು ಅವರು ಹೇಳುತ್ತಿರುವರೆಂದು ಖಂಡಿತವಾಗಿಯೂ ನಾವು ಅರಿತಿರುವೆವು. ಯಾವ ವ್ಯಕ್ತಿಯ ಕಡೆಗೆ ಅವರು ಸೂಚನೆ ನೀಡುತ್ತಿರುವರೋ ಅವನ ಭಾಷೆಯು ಅರಬೇತರವಾಗಿದೆ.[1] ಆದರೆ ಇದು ಸ್ಪಷ್ಟವಾದ ಅರಬೀ ಭಾಷೆಯಾಗಿದೆ.

وَلَقَدْ نَعْلَمُ أَنَّهُمْ يَقُولُونَ إِنَّمَا يُعَلِّمُهُۥ
بَشَرٌ ۗ لِّسَانُ ٱلَّذِى يُلْحِدُونَ إِلَيْهِ أَعْجَمِىٌّ
وَهَٰذَا لِسَانٌ عَرَبِىٌّ مُّبِينٌ ﴿١٠٣﴾

**104.** ಅಲ್ಲಾಹುವಿನ ದೃಷ್ಟಾಂತಗಳಲ್ಲಿ ವಿಶ್ವಾಸವಿಡದವರಾರೋ ಅವರನ್ನು ಖಂಡಿತವಾಗಿಯೂ ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು. ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು.

إِنَّ ٱلَّذِينَ لَا يُؤْمِنُونَ بِـَٔايَٰتِ ٱللَّهِ لَا
يَهْدِيهِمُ ٱللَّهُ وَلَهُمْ عَذَابٌ أَلِيمٌ ﴿١٠٤﴾

**105.** ಅಲ್ಲಾಹುವಿನ ದೃಷ್ಟಾಂತಗಳಲ್ಲಿ ವಿಶ್ವಾಸವಿಡದವರಾರೋ ಅವರು ಮಾತ್ರವಾಗಿರುವರು ಸುಳ್ಳನ್ನು ಹೆಣೆಯುವವರು. ಮಿಥ್ಯವಾದಿಗಳು ಸಹ ಅವರೇ ಆಗಿರುವರು.

إِنَّمَا يَفْتَرِى ٱلْكَذِبَ ٱلَّذِينَ لَا يُؤْمِنُونَ
بِـَٔايَٰتِ ٱللَّهِ ۖ وَأُو۟لَٰٓئِكَ هُمُ ٱلْكَٰذِبُونَ ﴿١٠٥﴾

**106.** ತನ್ನ ವಿಶ್ವಾಸದ ಬಳಿಕ ಅಲ್ಲಾಹುವಿನಲ್ಲಿ ಅವಿಶ್ವಾಸವಿಟ್ಟವನಾರೋ; ಅವನ ಹೃದಯವು ಶಾಂತವಾಗಿದ್ದು[2] ಬಲವಂತಕ್ಕೊಳಗಾದವನೂ ಅಲ್ಲದ ಒಬ್ಬನ ಹೊರತು; ಆದರೆ ಯಾರು ತೆರೆದ ಹೃದಯದೊಂದಿಗೆ ಅವಿಶ್ವಾಸವಿಡುತ್ತಾರೋ, ಅವರ ಮೇಲೆ ಅಲ್ಲಾಹುವಿನ ವತಿಯ

مَن كَفَرَ بِٱللَّهِ مِنۢ بَعْدِ إِيمَٰنِهِۦٓ إِلَّا مَنْ
أُكْرِهَ وَقَلْبُهُۥ مُطْمَئِنٌّۢ بِٱلْإِيمَٰنِ وَلَٰكِن
مَّن شَرَحَ بِٱلْكُفْرِ صَدْرًا فَعَلَيْهِمْ
غَضَبٌ مِّنَ ٱللَّهِ وَلَهُمْ عَذَابٌ عَظِيمٌ ﴿١٠٦﴾

1 ಪೂರ್ವಗ್ರಂಥಗಳನ್ನು ಕಲಿತ ರೋಮನ್ ಪ್ರಜೆಯೊಬ್ಬನು ಹೇಳಿಕೊಡುವ ವಿಷಯಗಳನ್ನು ಮುಹಮ್ಮದ್(ﷺ) ರವರು ಹೇಳುತ್ತಿದ್ದಾರೆಂದು ಆರೋಪಿಸುವವರಿಗೆ ನೀಡಿದ ಉತ್ತರವಾಗಿದೆ ಇದು. ಅರಬ್ ಸಾಹಿತಿಗಳಿಗೇ ಸವಾಲೆಸೆಯುವ ಒಂದು ಮಹಾ ಗ್ರಂಥದ ವಚನಗಳನ್ನು ಓರ್ವ ರೋಮನ್ ಪ್ರಜೆಯ ಬಾಯಿಯಿಂದ ಬಂದ ಮಾತುಗಳಾಗಿವೆಯೆಂದು ಹೇಳಿದರೆ ಸಾಮಾನ್ಯ ಜ್ಞಾನವಿರುವವರಾರೂ ಅದನ್ನು ಅಂಗೀಕರಿಸಲಾರರು.

2 ಅಲ್ಲಾಹು ನೋಡುವುದು ಮನುಷ್ಯರ ಹೃದಯಗಳೆಡೆಗಾಗಿದೆ. ಹೃದಯದಲ್ಲಿ ದೃಢವಾದ ವಿಶ್ವಾಸವಿದ್ದು ಓರ್ವನು ಬಲವಂತಕ್ಕೊಳಗಾಗಿ ಅವಿಶ್ವಾಸ ಘೋಷಣೆ ಮಾಡಿದರೆ ಅಥವಾ ನಿರ್ಬಂಧಿತನಾಗಿ ವಿಗ್ರಹಪೂಜೆ ಮಾಡಿಬಿಟ್ಟರೆ ಅವನು ಅಪರಾಧಿಯಲ್ಲ.

ಕ್ರೋಧವಿದೆ. ಅವರಿಗೆ ಮಹಾ ಶಿಕ್ಷೆಯೂ ಇದೆ.

ذَٰلِكَ بِأَنَّهُمُ ٱسْتَحَبُّوا۟ ٱلْحَيَوٰةَ ٱلدُّنْيَا عَلَى ٱلْءَاخِرَةِ وَأَنَّ ٱللَّهَ لَا يَهْدِى ٱلْقَوْمَ ٱلْكَٰفِرِينَ ﴿١٠٧﴾

**107.** ಅದು ಅವರು ಪರಲೋಕಕ್ಕಿಂತಲೂ ಹೆಚ್ಚಾಗಿ ಇಹಲೋಕವನ್ನು ಇಷ್ಟಪಟ್ಟಿರುವ ಕಾರಣದಿಂದಾಗಿದೆ. ಖಂಡಿತವಾಗಿಯೂ ಸತ್ಯನಿಷೇಧಿಗಳಾಗಿರುವ ಜನತೆಯನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

أُو۟لَٰٓئِكَ ٱلَّذِينَ طَبَعَ ٱللَّهُ عَلَىٰ قُلُوبِهِمْ وَسَمْعِهِمْ وَأَبْصَٰرِهِمْ ۖ وَأُو۟لَٰٓئِكَ هُمُ ٱلْغَٰفِلُونَ ﴿١٠٨﴾

**108.** ಅವರೆಂದರೆ ಯಾರ ಹೃದಯಗಳಿಗೆ, ಶ್ರವಣಗಳಿಗೆ ಮತ್ತು ದೃಷ್ಟಿಗಳಿಗೆ ಅಲ್ಲಾಹು ಮುದ್ರೆ ಹಾಕಿರುವನೋ ಅಂತಹವರು ಅವರೇ ಆಗಿರುವರು. ಅಲಕ್ಷ್ಯರಾಗಿರುವವರೂ ಅವರೇ ಆಗಿರುವರು.

لَا جَرَمَ أَنَّهُمْ فِى ٱلْءَاخِرَةِ هُمُ ٱلْخَٰسِرُونَ ﴿١٠٩﴾

**109.** ಪರಲೋಕದಲ್ಲಿ ನಷ್ಟಹೊಂದಿದವರು ಅವರೇ ಆಗಿರುವರು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ.

ثُمَّ إِنَّ رَبَّكَ لِلَّذِينَ هَاجَرُوا۟ مِنۢ بَعْدِ مَا فُتِنُوا۟ ثُمَّ جَٰهَدُوا۟ وَصَبَرُوٓا۟ إِنَّ رَبَّكَ مِنۢ بَعْدِهَا لَغَفُورٌ رَّحِيمٌ ﴿١١٠﴾

**110.** ತರುವಾಯ ಖಂಡಿತವಾಗಿಯೂ ತಮ್ಮ ರಬ್‌ನ ಸಹಾಯವು ಹಿಂಸೆಗೊಳಗಾದ ಬಳಿಕ ವಲಸೆ ಹೋದವರು, ಅನಂತರ ಹೋರಾಡಿದವರು ಮತ್ತು ಸಹನೆ ಪಾಲಿಸಿದವರಿಗಿರುವುದು. ಖಂಡಿತವಾಗಿಯೂ ತಮ್ಮ ರಬ್ ಅದರ ಬಳಿಕವೂ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

۞ يَوْمَ تَأْتِى كُلُّ نَفْسٍ تُجَٰدِلُ عَن نَّفْسِهَا وَتُوَفَّىٰ كُلُّ نَفْسٍ مَّا عَمِلَتْ وَهُمْ لَا يُظْلَمُونَ ﴿١١١﴾

**111.** ಪ್ರತಿಯೊಬ್ಬ ವ್ಯಕ್ತಿಯೂ ಸ್ವತಃ ತನ್ನ ಪರವಾಗಿ ತರ್ಕಿಸುತ್ತಾ ಬರುವ ಮತ್ತು ಪ್ರತಿಯೊಬ್ಬ ವ್ಯಕ್ತಿಗೂ ಅವನು ಮಾಡಿರುವುದಕ್ಕಿರುವ ಪ್ರತಿಫಲವನ್ನು ಪೂರ್ಣವಾಗಿ ಕೊಡಲಾಗುವ ಹಾಗೂ ಅವರೊಂದಿಗೆ ಯಾವುದೇ ಅನ್ಯಾಯವೆಸಗಲಾಗದ ದಿನ.

وَضَرَبَ ٱللَّهُ مَثَلًا قَرْيَةً كَانَتْ ءَامِنَةً مُّطْمَئِنَّةً يَأْتِيهَا رِزْقُهَا رَغَدًا مِّن كُلِّ

**112.** ಸುರಕ್ಷಿತವಾಗಿರುವ ಮತ್ತು ನೆಮ್ಮದಿಯಿಂದ ಕೂಡಿರುವ ಒಂದು ಊರನ್ನು ಅಲ್ಲಾಹು ಉದಾಹರಣೆಯಾಗಿ ತೋರಿಸಿರುವನು. ಅದಕ್ಕೆ

مَكَانٍ فَكَفَرَتْ بِأَنْعُمِ ٱللَّهِ فَأَذَاقَهَا ٱللَّهُ لِبَاسَ ٱلْجُوعِ وَٱلْخَوْفِ بِمَا كَانُوا۟ يَصْنَعُونَ ﴿١١٢﴾

ಬೇಕಾದ ಆಹಾರವು ಎಲ್ಲ ಕಡೆಗಳಿಂದಲೂ ಅಲ್ಲಿಗೆ ಹೇರಳವಾಗಿ ಬರುತ್ತಿತ್ತು. ಆದರೂ ಆ ಊರಿನ ನಿವಾಸಿಗಳು ಅಲ್ಲಾಹುವಿನ ಅನುಗ್ರಹಗಳನ್ನು ನಿಷೇಧಿಸಿದರು. ಆಗ ಅವರು ಮಾಡುತ್ತಿದ್ದ ಕರ್ಮಗಳ ಫಲವಾಗಿ ಅಲ್ಲಾಹು ಅವರಿಗೆ ಹಸಿವು ಮತ್ತು ಭಯದ ಉಡುಪನ್ನು ಸವಿಯುವಂತೆ ಮಾಡಿದನು.[1]

وَلَقَدْ جَآءَهُمْ رَسُولٌ مِّنْهُمْ فَكَذَّبُوهُ فَأَخَذَهُمُ ٱلْعَذَابُ وَهُمْ ظَٰلِمُونَ ﴿١١٣﴾

**113.** ಅವರಿಂದಲೇ ಇರುವ ಒಬ್ಬ ಸಂದೇಶವಾಹಕರು ಅವರ ಬಳಿ ಬಂದಿದ್ದರು. ಆದರೆ ಅವರು ಅವರನ್ನು (ಆ ಸಂದೇಶ ವಾಹಕರನ್ನು) ನಿಷೇಧಿಸಿದರು. ಆಗ ಅವರು ಅಕ್ರಮಿಗಳಾಗಿರುತ್ತಲೇ ಶಿಕ್ಷೆಯು ಅವರನ್ನು ಹಿಡಿದುಕೊಂಡಿತು.

فَكُلُوا۟ مِمَّا رَزَقَكُمُ ٱللَّهُ حَلَٰلًا طَيِّبًا وَٱشْكُرُوا۟ نِعْمَتَ ٱللَّهِ إِن كُنتُمْ إِيَّاهُ تَعْبُدُونَ ﴿١١٤﴾

**114.** ಆದ್ದರಿಂದ ಅಲ್ಲಾಹು ನಿಮಗೆ ಒದಗಿಸಿರುವ ಧರ್ಮಸಮ್ಮತವಾಗಿರುವ ಮತ್ತು ಉತ್ತಮವಾಗಿರುವವುಗಳಿಂದ ತಿನ್ನಿರಿ. ಅಲ್ಲಾಹುವಿನ ಅನುಗ್ರಹಕ್ಕೆ ಕೃತಜ್ಞತೆ ಸಲ್ಲಿಸಿರಿ. ನೀವು ಅವನನ್ನೇ ಆರಾಧಿಸುವವರಾಗಿದ್ದರೆ.

إِنَّمَا حَرَّمَ عَلَيْكُمُ ٱلْمَيْتَةَ وَٱلدَّمَ وَلَحْمَ ٱلْخِنزِيرِ وَمَآ أُهِلَّ لِغَيْرِ ٱللَّهِ بِهِۦ ۖ فَمَنِ ٱضْطُرَّ غَيْرَ بَاغٍ وَلَا عَادٍ فَإِنَّ ٱللَّهَ غَفُورٌ رَّحِيمٌ ﴿١١٥﴾

**115.** ಅವನು ನಿಮಗೆ ನಿಷಿದ್ಧಗೊಳಿಸಿರುವುದು ಶವ, ರಕ್ತ, ಹಂದಿ ಮಾಂಸ ಮತ್ತು ಅಲ್ಲಾಹುವೇತರರ ಹೆಸರಿನಲ್ಲಿ ಘೋಷಿಸಲ್ಪಟ್ಟಿರುವುದನ್ನು[2] ಮಾತ್ರವಾಗಿದೆ. ಯಾರಾದರೂ (ಇವುಗಳನ್ನು ತಿನ್ನಲು) ನಿರ್ಬಂಧಿತನಾದರೆ, ಅವನು ಅದನ್ನು (ತಿನ್ನಲು) ಬಯಸುವವನೋ ಮಿತಿಮೀರಿ ತಿನ್ನುವವನೋ ಅಲ್ಲದಿದ್ದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

---

1 'ಲಿಬಾಸ್' ಎಂಬುದರ ಅರ್ಥವು ಉಡುಪು ಅಥವಾ ಕವಚ ಎಂದಾಗಿದೆ. ಹಸಿವು ಮತ್ತು ಭಯದ ಉಡುಪು ಧರಿಸಿದಂತಹ ಸ್ಥಿತಿಯನ್ನು ಅಲ್ಲಾಹು ಅವರಿಗೆ ತಂದೊಡ್ಡಿದನು ಎಂದೂ ಇದರಿಂದ ಅರ್ಥೈಸಬಹುದು.

2 ಅಲ್ಲಾಹುವೇತರರಿಗೆ ಬಲಿಯರ್ಪಿಸಿರುವುದು ಅಥವಾ ಹರಕೆ ಹೊರಲಾಗಿರುವುದು.

116. ನಿಮ್ಮ ನಾಲಗೆಗಳು ವರ್ಣಿಸುತ್ತಿರುವುದರ ನಿಮಿತ್ತ 'ಇದು ಧರ್ಮಸಮ್ಮತವಾಗಿದೆ ಮತ್ತು ಇದು ನಿಷಿದ್ಧವಾಗಿದೆ' ಎಂದು ನೀವು ಸುಳ್ಳು ಹೇಳದಿರಿ. (ಇದರಿಂದಾಗಿ) ನೀವು ಅಲ್ಲಾಹುವಿನ ಮೇಲೆ ಸುಳ್ಳು ಹೆಣೆಯುವವರಾಗುವಿರಿ. ಖಂಡಿತವಾಗಿಯೂ ಅಲ್ಲಾಹುವಿನ ಮೇಲೆ ಸುಳ್ಳು ಹೆಣೆಯುವವರಾರೋ ಅವರೆಂದೂ ಯಶಸ್ಸುಗಳಿಸಲಾರರು.

وَلَا تَقُولُواْ لِمَا تَصِفُ أَلۡسِنَتُكُمُ ٱلۡكَذِبَ هَٰذَا حَلَٰلٌ وَهَٰذَا حَرَامٌ لِّتَفۡتَرُواْ عَلَى ٱللَّهِ ٱلۡكَذِبَۚ إِنَّ ٱلَّذِينَ يَفۡتَرُونَ عَلَى ٱللَّهِ ٱلۡكَذِبَ لَا يُفۡلِحُونَ ١١٦

117. (ಅವರಿಗಿರುವುದು) ತುಚ್ಛವಾದ ಸುಖಾಡಂಬರ ಮಾತ್ರವಾಗಿದೆ. (ಪರಲೋಕದಲ್ಲಿ) ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು.

مَتَٰعٌ قَلِيلٌ وَلَهُمۡ عَذَابٌ أَلِيمٌ ١١٧

118. ನಾವು ಈ ಹಿಂದೆ ತಮಗೆ ವಿವರಿಸಿಕೊಟ್ಟಿರುವ ವಸ್ತುಗಳನ್ನು ಯಹೂದರ ಮೇಲೆ ನಿಷಿದ್ಧಗೊಳಿಸಿದ್ದೆವು. ನಾವು ಅವರೊಂದಿಗೆ ಯಾವುದೇ ಅನ್ಯಾಯವೆಸಗಿರಲಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯ ವೆಸಗಿದ್ದರು.[1]

وَعَلَى ٱلَّذِينَ هَادُواْ حَرَّمۡنَا مَا قَصَصۡنَا عَلَيۡكَ مِن قَبۡلُۖ وَمَا ظَلَمۡنَٰهُمۡ وَلَٰكِن كَانُوٓاْ أَنفُسَهُمۡ يَظۡلِمُونَ ١١٨

119. ತರುವಾಯ, ಅಜ್ಞಾನದಿಂದಾಗಿ ಪಾಪವನ್ನು ಮಾಡಿದ ನಂತರ ಪಶ್ಚಾತ್ತಾಪಪಟ್ಟು (ಬದುಕನ್ನು) ಸುಧಾರಣೆ ಮಾಡಿದವರಿಗೆ ಖಂಡಿತವಾಗಿಯೂ ತಮ್ಮ ರಬ್ (ಕ್ಷಮಿಸುವವನಾಗಿದ್ದಾನೆ). ಅದರ ಬಳಿಕ ಖಂಡಿತವಾಗಿಯೂ ತಮ್ಮ ರಬ್ ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆ ತೋರುವವನೂ ಆಗಿರುವನು.

ثُمَّ إِنَّ رَبَّكَ لِلَّذِينَ عَمِلُواْ ٱلسُّوٓءَ بِجَهَٰلَةٖ ثُمَّ تَابُواْ مِنۢ بَعۡدِ ذَٰلِكَ وَأَصۡلَحُوٓاْ إِنَّ رَبَّكَ مِنۢ بَعۡدِهَا لَغَفُورٞ رَّحِيمٌ ١١٩

120. ಖಂಡಿತವಾಗಿಯೂ ಇಬ್ರಾಹೀಮ್ ಅಲ್ಲಾಹುವಿಗೆ ಶರಣಾಗಿ ಜೀವಿಸುತ್ತಿದ್ದ ಮತ್ತು ಸತ್ಯಮಾರ್ಗದಲ್ಲಿ (ವಿಚಲಿತರಾಗದೆ) ನೆಲೆಯೂರಿದ್ದ ಒಂದು

إِنَّ إِبۡرَٰهِيمَ كَانَ أُمَّةٗ قَانِتٗا لِّلَّهِ حَنِيفٗا وَلَمۡ يَكُ مِنَ ٱلۡمُشۡرِكِينَ ١٢٠

1 ಸೂರಃ ಅಲ್‌ಅನ್‌ಆಮ್ 146ನೇ ಸೂಕ್ತಿಯಲ್ಲಿ ಇದನ್ನು ವಿವರಿಸಲಾಗಿದೆ.

ಸಮುದಾಯವಾಗಿದ್ದರು.[1] ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.

121. ಅವರು ಅಲ್ಲಾಹುವಿನ ಅನುಗ್ರಹಗಳಿಗೆ ಕೃತಜ್ಞತೆ ಸಲ್ಲಿಸುವವರಾಗಿದ್ದರು. ಅಲ್ಲಾಹು ಅವರನ್ನು ಆರಿಸಿರುವನು ಮತ್ತು ನೇರ ಮಾರ್ಗದೆಡೆಗೆ ಮುನ್ನಡೆಸಿರುವನು.

شَاكِرًا لِّأَنْعُمِهِۚ ٱجْتَبَىٰهُ وَهَدَىٰهُ إِلَىٰ صِرَٰطٍ مُّسْتَقِيمٍ ﴿١٢١﴾

122. ನಾವು ಅವರಿಗೆ ಇಹಲೋಕದಲ್ಲಿ ಒಳಿತನ್ನು ದಯಪಾಲಿಸಿರುವೆವು. ಪರಲೋಕದಲ್ಲಿ ಅವರು ಖಂಡಿತವಾಗಿಯೂ ಸಜ್ಜನರ ಪೈಕಿ ಸೇರಿದವರಾಗಿರುವರು.

وَءَاتَيْنَٰهُ فِى ٱلدُّنْيَا حَسَنَةًۖ وَإِنَّهُۥ فِى ٱلْءَاخِرَةِ لَمِنَ ٱلصَّٰلِحِينَ ﴿١٢٢﴾

123. ತರುವಾಯ, ನಾವು ತಮಗೆ 'ಸತ್ಯಮಾರ್ಗದಲ್ಲಿ (ವಿಚಲಿತನಾಗದೆ) ನೆಲೆಯೂರಿ ನಿಂತಿರುವ ಇಬ್ರಾಹೀಮ್‌ರ ಮಾರ್ಗವನ್ನು ಅನುಸರಿಸಿರಿ' ಎಂದು ದಿವ್ಯಸಂದೇಶವನ್ನು ನೀಡಿದೆವು. ಅವರು ಬಹುದೇವಾರಾಧಕರಲ್ಲಿ ಸೇರಿದವರಾಗಿರಲಿಲ್ಲ.[2]

ثُمَّ أَوْحَيْنَآ إِلَيْكَ أَنِ ٱتَّبِعْ مِلَّةَ إِبْرَٰهِيمَ حَنِيفًاۖ وَمَا كَانَ مِنَ ٱلْمُشْرِكِينَ ﴿١٢٣﴾

124. ಸಬ್ಬತ್ ದಿನವನ್ನು ಶಾಸನವಾಗಿ ಮಾಡಿರುವುದು ಅದರ ವಿಷಯದಲ್ಲಿ ಭಿನ್ನರಾದವರ ಮೇಲೆಯೇ ಆಗಿದೆ. ಅವರು ಯಾವ ವಿಷಯದಲ್ಲಿ ಭಿನ್ನರಾದರೋ ಆ ವಿಷಯದಲ್ಲಿ ಅಂತ್ಯದಿನದಂದು ತಮ್ಮ ರಬ್ ಅವರ ಮಧ್ಯೆ ಖಂಡಿತವಾಗಿಯೂ ತೀರ್ಪು ನೀಡುವನು.

إِنَّمَا جُعِلَ ٱلسَّبْتُ عَلَى ٱلَّذِينَ ٱخْتَلَفُوا۟ فِيهِۚ وَإِنَّ رَبَّكَ لَيَحْكُمُ بَيْنَهُمْ يَوْمَ ٱلْقِيَٰمَةِ فِيمَا كَانُوا۟ فِيهِ يَخْتَلِفُونَ ﴿١٢٤﴾

125. ಯುಕ್ತಿಭಾವದೊಂದಿಗೆ ಮತ್ತು ಸದುಪದೇಶದ ಮೂಲಕ ತಾವು ತಮ್ಮ ರಬ್‌ನ ಮಾರ್ಗದೆಡೆಗೆ ಆಹ್ವಾನಿಸಿರಿ ಮತ್ತು

ٱدْعُ إِلَىٰ سَبِيلِ رَبِّكَ بِٱلْحِكْمَةِ وَٱلْمَوْعِظَةِ ٱلْحَسَنَةِۖ وَجَٰدِلْهُم بِٱلَّتِى هِىَ أَحْسَنُۚ

---

1 ಮಾದರೀಯೋಗ್ಯನಾಗಿರುವ ಒಬ್ಬ ನಾಯಕನನ್ನು ಕೇಂದ್ರೀಕರಿಸಿ ಉತ್ಕೃಷ್ಟ ಸಮಾಜವೊಂದು ರೂಪುಗೊಳ್ಳುತ್ತದೆ. ಅಂಥಹ ಒಬ್ಬ ನಾಯಕನನ್ನು ಕೇವಲ ಒಬ್ಬ ವ್ಯಕ್ತಿ ಎಂದು ಕೀಳಾಗಿ ಪರಿಗಣಿಸಬಾರದು. ಒಂದು ಸಮುದಾಯ ಅಥವಾ ಸಮಾಜವೆಂಬ ವಿಶೇಷಣವನ್ನು ಅವರಿಗೆ ನೀಡುವುದೇ ಹೆಚ್ಚು ಸೂಕ್ತವಾಗಿರುತ್ತದೆ.

2 ನಾವು ಪ್ರವಾದಿ ಇಬ್ರಾಹೀಮ್ (عَلَيْهِ السَّلَامُ) ರವರ ವಂಶದವರೆಂದು ಅರೇಬಿಯಾದ ಬಹುದೇವಾರಾಧಕರು ಹೆಮ್ಮೆ ಪಡುತ್ತಿದ್ದುದರಿಂದಲೇ ಈ ವಿಷಯವನ್ನು ಪುನರಾವರ್ತಿಸಿ ಹೇಳಲಾಗಿದೆ.

إِنَّ رَبَّكَ هُوَ أَعۡلَمُ بِمَن ضَلَّ عَن سَبِيلِهِۦ وَهُوَ أَعۡلَمُ بِٱلۡمُهۡتَدِينَ ﴿١٢٥﴾

ಅತ್ಯುತ್ತಮವಾದ ರೀತಿಯಲ್ಲಿ ಅವರೊಂದಿಗೆ ತರ್ಕಿಸಿರಿ. ತನ್ನ ಮಾರ್ಗದಿಂದ ವ್ಯತಿಚಲಿಸಿದವರ ಕುರಿತು ತಮ್ಮ ರಬ್ ಖಂಡಿತವಾಗಿಯೂ ಅರಿತಿರುವನು ಮತ್ತು ಸನ್ಮಾರ್ಗ ಪಡೆದವರ ಕುರಿತೂ ಅವನು ಅರಿತಿರುವನು.

وَإِنۡ عَاقَبۡتُمۡ فَعَاقِبُواْ بِمِثۡلِ مَا عُوقِبۡتُم بِهِۦۖ وَلَئِن صَبَرۡتُمۡ لَهُوَ خَيۡرٞ لِّلصَّٰبِرِينَ ﴿١٢٦﴾

**126.** ನೀವು ಶಿಕ್ಷಾಕ್ರಮ ಕೈಗೊಳ್ಳುವುದಾದರೆ ನಿಮ್ಮ ವಿರುದ್ಧ (ವಿರೋಧಿಗಳಿಂದ) ಶಿಕ್ಷಾಕ್ರಮ ಕೈಗೊಳ್ಳಲಾಗಿರುವುದಕ್ಕೆ ಸಮಾನವಾಗಿರುವ ನೀವೂ ಶಿಕ್ಷಾಕ್ರಮ ಕೈಗೊಳ್ಳಿರಿ. ನೀವು ಸಹನೆ ವಹಿಸುವುದಾದರೆ ಸಹನಾಶೀಲರ ಪಾಲಿಗೆ ಅದು ಅತ್ಯುತ್ತಮವಾಗಿದೆ.

وَٱصۡبِرۡ وَمَا صَبۡرُكَ إِلَّا بِٱللَّهِۚ وَلَا تَحۡزَنۡ عَلَيۡهِمۡ وَلَا تَكُ فِي ضَيۡقٖ مِّمَّا يَمۡكُرُونَ ﴿١٢٧﴾

**127.** ತಾವು ಸಹನೆ ವಹಿಸಿರಿ. ತಮಗೆ ಸಹನೆ ವಹಿಸಲು ಸಾಧ್ಯವಾಗುತ್ತಿರುವುದು ಅಲ್ಲಾಹುವಿನ ಅನುಗ್ರಹದಿಂದ ಮಾತ್ರವಾಗಿದೆ. ಅವರ (ಸತ್ಯನಿಷೇಧಿಗಳ) ವಿಷಯದಲ್ಲಿ ತಾವು ದುಃಖಿಸದಿರಿ. ಅವರು ಕುತಂತ್ರ ಹೂಡುತ್ತಿರುವುದರ ಕುರಿತು ತಾವು ಸಂಕಟಪಡದಿರಿ.

إِنَّ ٱللَّهَ مَعَ ٱلَّذِينَ ٱتَّقَواْ وَّٱلَّذِينَ هُم مُّحۡسِنُونَ ﴿١٢٨﴾

**128.** ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸಿದವರ ಮತ್ತು ಸಜ್ಜನರಾಗಿರುವವರ ಜೊತೆಗಿರುವನು.

# ಬನೂ ಇಸ್ರಾಯೀಲ್[1]

# سُورَةُ بَنِيٓ إِسۡرَٰٓءِيلَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 111

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

سُبۡحَٰنَ ٱلَّذِيٓ أَسۡرَىٰ بِعَبۡدِهِۦ لَيۡلٗا مِّنَ
ٱلۡمَسۡجِدِ ٱلۡحَرَامِ إِلَى ٱلۡمَسۡجِدِ ٱلۡأَقۡصَا
ٱلَّذِي بَٰرَكۡنَا حَوۡلَهُۥ لِنُرِيَهُۥ مِنۡ ءَايَٰتِنَآۚ
إِنَّهُۥ هُوَ ٱلسَّمِيعُ ٱلۡبَصِيرُ ١

1. ತನ್ನ ದಾಸನನ್ನು (ಪ್ರವಾದಿಯವರನ್ನು) ಒಂದು ರಾತ್ರಿಯಲ್ಲಿ ಮಸ್ಜಿದುಲ್ ಹರಾಮ್‌ನಿಂದ, ನಾವು ಪರಿಸರವನ್ನು ಅನುಗ್ರಹಪೂರ್ಣಗೊಳಿಸಿರುವಂತಹ ಮಸ್ಜಿದುಲ್ ಅಕ್ಸಾದೆಡೆಗೆ, ನಮ್ಮ ದೃಷ್ಟಾಂತಗಳಲ್ಲಿ ಕೆಲವನ್ನು ಅವರಿಗೆ ತೋರಿಸಿಕೊಡುವ ಸಲುವಾಗಿ ನಿಶಾಪ್ರಯಾಣ ಮಾಡಿಸಿದವನು ಪರಮ ಪಾವನನಾಗಿರುವನು![2] ಖಂಡಿತವಾಗಿಯೂ ಅವನು (ಅಲ್ಲಾಹು) ಎಲ್ಲವನ್ನು ಆಲಿಸುವವನೂ, ವೀಕ್ಷಿಸುವವನೂ ಆಗಿರುವನು.

وَءَاتَيۡنَا مُوسَى ٱلۡكِتَٰبَ وَجَعَلۡنَٰهُ هُدٗى
لِّبَنِيٓ إِسۡرَٰٓءِيلَ أَلَّا تَتَّخِذُواْ مِن دُونِي
وَكِيلٗا ٢

2. ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು. ಅದನ್ನು ಇಸ್ರಾಈಲ್ ಸಂತತಿಗಳಿಗೆ ಒಂದು ಮಾರ್ಗದರ್ಶಿಯನ್ನಾಗಿ ಮಾಡಿದೆವು. 'ನನ್ನ ಹೊರತು ಇನ್ನಾರನ್ನೂ ನೀವು ರಕ್ಷಕರನ್ನಾಗಿ ಮಾಡಿಕೊಳ್ಳದಿರಿ' ಎಂದು (ಆದೇಶ ನೀಡುವ ಗ್ರಂಥವಾಗಿತ್ತದು).

ذُرِّيَّةَ مَنۡ حَمَلۡنَا مَعَ نُوحٍۚ إِنَّهُۥ كَانَ عَبۡدٗا
شَكُورٗا ٣

3. ನಾವು ನೂಹ್‌ರೊಂದಿಗೆ ಹಡಗಿನಲ್ಲಿ ಹತ್ತಿಸಿದವರ ಸಂತತಿಗಳೇ! ಖಂಡಿತವಾಗಿಯೂ ಅವರು(ನೂಹ್) ಅತ್ಯಂತ ಕೃತಜ್ಞ ದಾಸರಾಗಿದ್ದರು.

---

1 ಪ್ರವಾದಿ(ﷺ)ರವರ ನಿಶಾಯಾತ್ರೆಯ ಕುರಿತು ಪ್ರಸ್ತಾಪಿಸಿರುವ ಕಾರಣ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಅಲ್ಲಾಹು ಮುಹಮ್ಮದ್(ﷺ)ರವರನ್ನು ಒಂದೇ ರಾತ್ರಿಯಲ್ಲಿ ಮಕ್ಕಾದಿಂದ ಪ್ಯಾಲಸ್ತೀನ್ ನಲ್ಲಿರುವ ಮಸ್ಜಿದುಲ್ ಅಕ್ಸಾ(ಬೈತುಲ್ ಮುಕದ್ದಿಸ್)ಗೆ, ತರುವಾಯ ಅಲ್ಲಿಂದ ಆಕಾಶಗಳಿಗೆ ಕೊಂಡೊಯ್ದು, ತದನಂತರ ಮಕ್ಕಕ್ಕೆ ಮರಳಿಸಿದನು. ಇದೊಂದು ಮುಅ್‌ಜಿಝುತ್ (ಅಸಾಮಾನ್ಯ ಘಟನೆ) ಆಗಿತ್ತು. ಈ ಘಟನೆ ಜರುಗಿದ್ದು ಹಿಜ್ರಾದ ಒಂದು ವರ್ಷ ಹಿಂದಿನ ರಬೀಉಲ್ ಅವ್ವಲ್ 17ನೇ ರಾತ್ರಿಯಲ್ಲಾಗಿತ್ತೆಂದು ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಮಸ್ಜಿದುಲ್ ಅಕ್ಸಾದೆಡೆಗಿರುವ ನಿಶಾ ಯಾತ್ರೆಯನ್ನು ಇಸ್ರಾಅ್ ಎಂದು ಕರೆಯಲಾದರೆ ತರುವಾಯ ಜರುಗಿದ ಆಕಾಶಾರೋಹಣವನ್ನು ಮಿಅ್‌ರಾಜ್ ಎಂದು ಕರೆಯಲಾಗುತ್ತದೆ. ಮಸ್ಜಿದುಲ್ ಅಕ್ಸಾದ ಪರಿಸರವು ಕೃಷಿ ಮತ್ತು ತೋಟಗಳಿಂದ ಸಮೃದ್ಧವಾಗಿರುವ ಹಾಗೂ ಜನವಾಸ ಯೋಗ್ಯವಾಗಿರುವ ಭೂಪ್ರದೇಶವಾಗಿದೆ.

وَقَضَيْنَآ إِلَىٰ بَنِىٓ إِسْرَٰٓءِيلَ فِى ٱلْكِتَٰبِ لَتُفْسِدُنَّ فِى ٱلْأَرْضِ مَرَّتَيْنِ وَلَتَعْلُنَّ عُلُوًّا كَبِيرًا ﴿٤﴾

4. ಖಂಡಿತವಾಗಿಯೂ ನೀವು ಭೂಮಿಯಲ್ಲಿ ಎರಡು ಬಾರಿ ಕ್ಷೋಭೆಯನ್ನುಂಟುಮಾಡುವಿರಿ ಮತ್ತು ಮಹಾ ಗರ್ವವನ್ನು ತೋರುವಿರಿ ಎಂದು ನಾವು ಗ್ರಂಥದಲ್ಲಿ ಇಸ್ರಾಈಲ್ ಸಂತತಿಗಳಿಗೆ ವಿಧಿಯನ್ನು ನೀಡಿರುವೆವು.

فَإِذَا جَآءَ وَعْدُ أُولَىٰهُمَا بَعَثْنَا عَلَيْكُمْ عِبَادًا لَّنَآ أُو۟لِى بَأْسٍ شَدِيدٍ فَجَاسُوا۟ خِلَٰلَ ٱلدِّيَارِ ۚ وَكَانَ وَعْدًا مَّفْعُولًا ﴿٥﴾

5. ಅವೆರಡರಲ್ಲಿ ಮೊದಲನೆಯದಕ್ಕೆ ನಿಶ್ಚಯಿಸಲಾದ (ಶಿಕ್ಷೆಯ) ಸಮಯವು ಬಂದಾಗ ಮಹಾ ಶೂರರಾದ ನಮ್ಮ ಕೆಲವು ದಾಸರನ್ನು ನಾವು ನಿಮ್ಮ ವಿರುದ್ಧ ಕಳುಹಿಸುವೆವು. ಅವರು ಮನೆಮನೆಗಳ ಮಧ್ಯೆ (ನಿಮ್ಮನ್ನು) ಹುಡುಕುತ್ತಾ ಸಾಗುವರು.[1] ಖಂಡಿತವಾಗಿಯೂ ಅದು ಕಾರ್ಯರೂಪಕ್ಕೆ ತರಲಾದ ಒಂದು ವಾಗ್ದಾನವೇ ಆಗಿದೆ.[2]

ثُمَّ رَدَدْنَا لَكُمُ ٱلْكَرَّةَ عَلَيْهِمْ وَأَمْدَدْنَٰكُم بِأَمْوَٰلٍ وَبَنِينَ وَجَعَلْنَٰكُمْ أَكْثَرَ نَفِيرًا ﴿٦﴾

6. ತರುವಾಯ ನಾವು ಅವರ ವಿರುದ್ಧ ನಿಮಗೆ ವಿಜಯವನ್ನು ಮರಳಿ ನೀಡಿದವು.[3] ಸಂಪತ್ತು ಮತ್ತು ಸಂತಾನಗಳ ಮೂಲಕ ನಾವು ನಿಮ್ಮನ್ನು ಸಂಪನ್ನರನ್ನಾಗಿಸಿದೆವು. ನಿಮ್ಮನ್ನು ಅಧಿಕ ಜನಬಲವುಳ್ಳವರನ್ನಾಗಿಯೂ ಮಾಡಿದೆವು.

إِنْ أَحْسَنتُمْ أَحْسَنتُمْ لِأَنفُسِكُمْ ۖ وَإِنْ أَسَأْتُمْ فَلَهَا ۚ فَإِذَا جَآءَ وَعْدُ ٱلْـَٔاخِرَةِ لِيَسُـۥٓـُٔوا۟ وُجُوهَكُمْ وَلِيَدْخُلُوا۟ ٱلْمَسْجِدَ كَمَا دَخَلُوهُ أَوَّلَ مَرَّةٍ وَلِيُتَبِّرُوا۟ مَا عَلَوْا۟ تَتْبِيرًا ﴿٧﴾

7. ನೀವು ಸತ್ಕರ್ಮವೆಸಗುವುದಾದರೆ ನೀವು ಸತ್ಕರ್ಮವೆಸಗುವುದು ಸ್ವತಃ ನಿಮ್ಮದೇ ಒಳಿತಿಗಾಗಿದೆ. ನೀವು ದುಷ್ಕರ್ಮವಸಗುವುದಾದರೆ (ಅದರ ದುಷ್ಪರಿಣಾಮವು) ಸ್ವತಃ ನಿಮಗೇ ಆಗಿದೆ. ತರುವಾಯ (ಅವೆರಡರ ಪೈಕಿ) ಕೊನೆಯದಕ್ಕೆ

1 ಅವರು ನಿಮ್ಮನ್ನು ಕೊಲ್ಲಲು ಮತ್ತು ಸೊತ್ತನ್ನು ಲೂಟಿ ಮಾಡಲು ಜನವಾಸವಿರುವ ಸ್ಥಳಗಳಲ್ಲೆಲ್ಲ ಹುಡುಕುವರು ಎಂದರ್ಥ.

2 ಕುರ್‌ಆನ್ ಹೇಳುವ ಈ ಘಟನೆಯು ಯಾವುದೆಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಭಿನ್ನಮತವಿದೆ. ಯಹೂದರ ಮೇಲೆ ಆಕ್ರಮಣಗೈದ ಮೂವರು ಅರಸರ ಹೆಸರುಗಳನ್ನು ಇಲ್ಲಿ ಸೂಚಿಸಲಾಗುತ್ತದೆ. ಒಂದು: ಜಾಲೂತ್ ಅಥವಾ ಗೋಲಿಯತ್ (ಗೇಲಿಯೇತ್). ಎರಡು: ಬಾಬಿಲೋನಿಯಾದ ಸಿನ್‌ಹಾರಿಬ್. ಮೂರು: ಬುಖ್ತುನಸ್ಸುರ್ ಅಥವಾ ನೆಬೂಕಡ್ ನಝುರ್ ಎಂಬ ಬಾಬಿಲೋನಿಯನ್ ಚಕ್ರವರ್ತಿ. ಯಹೂದರು ಅಕ್ರಮ ಮತ್ತು ಅಹಂಕಾರದ ತುತ್ತತುದಿಯಲ್ಲಿ ವಿಹರಿಸುತ್ತಿದ್ದಾಗ ಉಗ್ರ ದಾಳಿಯ ಮೂಲಕ ಅವರನ್ನು ನಿರ್ನಾಮ ಮಾಡಿದ ಮಹಾಶೂರನಾದ ನೆಬೂಕಡ್‌ನಝುರ್‌ನನ್ನಾಗಿರಬಹುದು ಇಲ್ಲಿ ಸೂಚಿಸಿರುವುದು.

3 ನಂತರ ಶತ್ರುಗಳ ವಿರುದ್ಧ ಯಹೂದರು ವಿಜಯಗಳಿಸಿದರು, ಸೆರೆಯಾಳುಗಳನ್ನು ಬಿಡಿಸಿದರು ಮತ್ತು ಸೂರೆಹೋದ ಸಂಪತ್ತುಗಳನ್ನು ಮರಳಿ ವಶಪಡಿಸಿದರು.

ನಿಶ್ಚಯಿಸಲಾದ(ಶಿಕ್ಷೆಯ)ಸಮಯವು ಬಂದರೆ ನಿಮ್ಮ ಮುಖಗಳನ್ನು ಅಪಕೀರ್ತಿಗೊಳಿಸುವ ಸಲುವಾಗಿ ಮತ್ತು ಅವರು ಮೊದಲನೆ ಬಾರಿ ಆರಾಧನಾಲಯವನ್ನು ಪ್ರವೇಶಿಸಿದಂತೆ ಅದರ ಬಳಿಕವೂ ಪ್ರವೇಶಿಸುವ ಸಲುವಾಗಿ ಹಾಗೂ ಅವರು ವಶಪಡಿಸಿರುವುದೆಲ್ಲವನ್ನೂ ಅವರು ಧ್ವಂಸಗೊಳಿಸುವ ಸಲುವಾಗಿ (ನಾವು ಶತ್ರುಗಳನ್ನು ಕಳುಹಿಸುವೆವು).(1)

عَسَىٰ رَبُّكُمْ أَن يَرْحَمَكُمْۚ وَإِنْ عُدتُّمْ عُدْنَاۘ وَجَعَلْنَا جَهَنَّمَ لِلْكَٰفِرِينَ حَصِيرًا ٨

**8.** ನಿಮ್ಮ ರಬ್ ನಿಮಗೆ ದಯೆ ತೋರಲೂ ಬಹುದು. ನೀವು ಪುನರಾವರ್ತಿಸುವುದಾದರೆ ನಾವೂ ಪುನರಾವರ್ತಿಸುವೆವು.(2) ನಾವು ನರಕಾಗ್ನಿಯನ್ನು ಸತ್ಯ ನಿಷೇಧಿಗಳಿಗೆ ಒಂದು ಸೆರೆಮನೆಯನ್ನಾಗಿ ಮಾಡಿರುವೆವು.

إِنَّ هَٰذَا ٱلْقُرْءَانَ يَهْدِى لِلَّتِى هِىَ أَقْوَمُ وَيُبَشِّرُ ٱلْمُؤْمِنِينَ ٱلَّذِينَ يَعْمَلُونَ ٱلصَّٰلِحَٰتِ أَنَّ لَهُمْ أَجْرًا كَبِيرًا ٩

**9.** ಖಂಡಿತವಾಗಿಯೂ ಈ ಕುರ್‌ಆನ್ ಅತ್ಯಂತ ನೇರವಾಗಿರುವ ಮಾರ್ಗದೆಡೆಗೆ ಮುನ್ನಡೆಸುತ್ತದೆ ಮತ್ತು ಸತ್ಕರ್ಮವೆಸಗುವ ಸತ್ಯವಿಶ್ವಾಸಿಗಳಿಗೆ ಮಹಾ ಪ್ರತಿಫಲ ವಿದೆಯೆಂಬ ಶುಭವಾರ್ತೆಯನ್ನು ತಿಳಿಸುತ್ತದೆ.

وَأَنَّ ٱلَّذِينَ لَا يُؤْمِنُونَ بِٱلْءَاخِرَةِ أَعْتَدْنَا لَهُمْ عَذَابًا أَلِيمًا ١٠

**10.** ಪರಲೋಕದಲ್ಲಿ ವಿಶ್ವಾಸವಿಡದವರಾರೋ ಅವರಿಗೆ ನಾವು ಯಾತನಾಮಯ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು ಎಂಬ (ಶುಭವಾರ್ತೆಯನ್ನೂ ತಿಳಿಸುತ್ತದೆ).

وَيَدْعُ ٱلْإِنسَٰنُ بِٱلشَّرِّ دُعَآءَهُۥ بِٱلْخَيْرِۖ وَكَانَ ٱلْإِنسَٰنُ عَجُولًا ١١

**11.** ಮನುಷ್ಯನು ಒಳಿತಿಗಾಗಿ ಪ್ರಾರ್ಥಿಸುವಂತೆಯೇ ಕೆಡುಕಿಗಾಗಿಯೂ ಪ್ರಾರ್ಥಿಸುವನು. ಮನುಷ್ಯನು ಬಹಳ ಆತುರಪಡುವವನಾಗಿರುವನು.(3)

---

1 ಯಹೂದರು ಅಕ್ರಮ ಮತ್ತು ಅಹಂಕಾರದ ಪರಾಕಾಷ್ಠೆಯಲ್ಲಿದ್ದಾಗ ಶತ್ರುಗಳ ಕೈಯಿಂದ ಅವರನ್ನು ಅಲ್ಲಾಹು ವಿನಾಶಗೊಳಿಸುವ ಎರಡನೇ ಸಂದರ್ಭವು ಈಗಾಗಲೇ ಸಂಭವಿಸಿದೆಯೇ ಅಥವಾ ಮುಂದೆ ಸಂಭವಿಸಲಿಕ್ಕಿದೆಯೇ ಎಂಬುದನ್ನು ಖಚಿತವಾಗಿ ಹೇಳಲು ಯಾವುದೇ ಆಧಾರಗಳಿಲ್ಲ. ಅಸ್ಪಿಯಾನೋಸ್ ಎಂಬ ಹೆಸರಿನ ರೋಮನ್ ಚಕ್ರವರ್ತಿ ಯಹೂದರ ಮೇಲೆ ಮಾಡಿದ ಆಕ್ರಮಣವು ಈ ಎರಡನೇ ಸಂದರ್ಭವಾಗಿದೆಯೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.

2 ನೀವು ಅತಿಕ್ರಮಗಳನ್ನು ಪುನರಾವರ್ತಿಸುವುದಾದರೆ ಅಲ್ಲಾಹು ಶಿಕ್ಷಾಕ್ರಮಗಳನ್ನೂ ಪುನರಾವರ್ತಿಸುವನು ಎಂದರ್ಥ.

3 ಇಲ್ಲಿ ಸೂಚಿಸಿರುವುದು ಅಲ್ಲಾಹುವಿನ ಶಿಕ್ಷೆಯ ಕುರಿತು ಪ್ರವಾದಿ(ﷺ)ರವರು ಮುನ್ನೆಚ್ಚರಿಕೆ ನೀಡಿದಾಗ ಅದಕ್ಕಾಗಿ ಆತುರ ಪಟ್ಟವರ ಕುರಿತಾಗಿದೆ.

**12.** ರಾತ್ರಿ ಮತ್ತು ಹಗಲನ್ನು ನಾವು ಎರಡು ದೃಷ್ಟಾಂತಗಳನ್ನಾಗಿ ಮಾಡಿರುವೆವು. ರಾತ್ರಿಯೆಂಬ ದೃಷ್ಟಾಂತವನ್ನು ನಾವು ಮಬ್ಬಾಗಿ ಮಾಡಿರುವೆವು ಮತ್ತು ಹಗಲೆಂಬ ದೃಷ್ಟಾಂತವನ್ನು ಪ್ರಕಾಶಮಾನವಾಗಿ ಮಾಡಿರುವೆವು. ಇದು ನೀವು ನಿಮ್ಮ ರಬ್‌ನ ವತಿಯ ಅನುಗ್ರಹವನ್ನು ಅರಸುವ ಸಲುವಾಗಿ ಮತ್ತು ವರ್ಷಗಳ ಎಣಿಕೆ ಮತ್ತು ಲೆಕ್ಕವನ್ನು ಅರಿತುಕೊಳ್ಳುವ ಸಲುವಾಗಿದೆ. ನಾವು ಪ್ರತಿಯೊಂದು ವಿಷಯವನ್ನೂ ಸ್ಪಷ್ಟವಾಗಿ ವಿವರಿಸಿರುವೆವು.

وَجَعَلْنَا ٱلَّيْلَ وَٱلنَّهَارَ ءَايَتَيْنِ ۖ فَمَحَوْنَآ
ءَايَةَ ٱلَّيْلِ وَجَعَلْنَآ ءَايَةَ ٱلنَّهَارِ مُبْصِرَةً
لِّتَبْتَغُوا۟ فَضْلًا مِّن رَّبِّكُمْ وَلِتَعْلَمُوا۟
عَدَدَ ٱلسِّنِينَ وَٱلْحِسَابَ ۚ وَكُلَّ شَىْءٍ
فَصَّلْنَٰهُ تَفْصِيلًا ﴿١٢﴾

**13.** ಪ್ರತಿಯೊಬ್ಬ ವ್ಯಕ್ತಿಗೂ ಅವನ ಶಕುನವನ್ನು ನಾವು ಅವನ ಕೊರಳಿನಲ್ಲಿಯೇ ಬಂಧಿಸಿರುವೆವು.[1] ಪುನರುತ್ಥಾನ ದಿನದಂದು ನಾವು ಅವನಿಗೋಸ್ಕರ ಒಂದು ಗ್ರಂಥವನ್ನು ಹೊರತರುವೆವು. ಅವನು ಅದನ್ನು ತೆರೆದಿಟ್ಟಿರುವುದಾಗಿ ಕಾಣುವನು.

وَكُلَّ إِنسَٰنٍ أَلْزَمْنَٰهُ طَٰٓئِرَهُۥ فِى عُنُقِهِۦ ۖ
وَنُخْرِجُ لَهُۥ يَوْمَ ٱلْقِيَٰمَةِ كِتَٰبًا يَلْقَىٰهُ
مَنشُورًا ﴿١٣﴾

**14.** ‘ನಿನ್ನ ಗ್ರಂಥವನ್ನು ಓದು! ನಿನ್ನನ್ನು ವಿಚಾರಣೆ ಮಾಡಲು ಇಂದು ನೀನೇ ಸಾಕು!’ (ಎಂದು ಅವನೊಂದಿಗೆ ಹೇಳಲಾಗುವುದು).

ٱقْرَأْ كِتَٰبَكَ كَفَىٰ بِنَفْسِكَ ٱلْيَوْمَ عَلَيْكَ
حَسِيبًا ﴿١٤﴾

**15.** ಯಾರಾದರೂ ಸನ್ಮಾರ್ಗವನ್ನು ಪಡೆಯುವುದಾದರೆ ಅವನದನ್ನು ಪಡೆಯುವುದು ಸ್ವತಃ ಅವನದೇ ಒಳಿತಿಗಾಗಿದೆ. ಯಾರಾದರೂ ಪಥಭ್ರಷ್ಟನಾಗುವುದಾದರೆ ಅವನು ತನ್ನ ಕೆಡುಕಿಗಾಗಿಯೇ ಪಥಭ್ರಷ್ಟನಾಗುತ್ತಾನೆ. ಪಾಪಭಾರವನ್ನು ಹೊರುವ ಯಾರೂ ಬೇರೊಬ್ಬನ ಪಾಪಭಾರವನ್ನು ಹೊರಲಾರನು.

مَّنِ ٱهْتَدَىٰ فَإِنَّمَا يَهْتَدِى لِنَفْسِهِۦ ۖ وَمَن
ضَلَّ فَإِنَّمَا يَضِلُّ عَلَيْهَا ۚ وَلَا تَزِرُ وَازِرَةٌ
وِزْرَ أُخْرَىٰ ۗ وَمَا كُنَّا مُعَذِّبِينَ حَتَّىٰ
نَبْعَثَ رَسُولًا ﴿١٥﴾

1 .ತ್ವಾಇರ್ ಎಂಬ ಪದದ ಭಾಷಿಕ ಅರ್ಥವು ಹಕ್ಕಿ ಎಂದಾಗಿದೆ. ಹಕ್ಕಿಯೊಂದನ್ನು ಹಾರಿಸಿ ಅದು ಬಲಗಡೆಗೆ ಹಾರುತ್ತದೋ ಅಥವಾ ಎಡಗಡೆಗೆ ಹಾರುತ್ತದೋ ಎಂದು ನೋಡಿ ಶಕುನವನ್ನು ನಿರ್ಧರಿಸುವ ಪದ್ಧತಿಯು ಅರೇಬಿಯಾದಲ್ಲಿತ್ತು. ತನ್ನಿಮಿತ್ತ ತ್ವಾಇರ್ ಎಂಬ ಪದವನ್ನು ಶಕುನ ಎಂಬುದಕ್ಕೆ ಪರ್ಯಾಯವಾಗಿ ಬಳಸಲಾಯಿತು. ಪ್ರಸ್ತುತ ಸೂಕ್ತಿಯು ಶಕುನದಲ್ಲಿರುವ ವಿಶ್ವಾಸವನ್ನು ನಿರಾಕರಿಸುತ್ತದೆ ಮತ್ತು ಯಾವುದೇ ವ್ಯಕ್ತಿಯ ವಿಧಿನಿಯತಿಯನ್ನು ನಿರ್ಧರಿಸುವುದು ಅವನ ಕರ್ಮಗಳಾಗಿವೆ ಎಂಬುದನ್ನು ಸ್ಥಾಪಿಸುತ್ತದೆ.

ಒಬ್ಬ ಸಂದೇಶವಾಹಕನನ್ನು ಕಳುಹಿಸುವ ತನಕ ನಾವು (ಯಾರನ್ನೂ) ಶಿಕ್ಷಿಸಲಾರೆವು.[1]

وَإِذَآ أَرَدۡنَآ أَن نُّهۡلِكَ قَرۡيَةً أَمَرۡنَا مُتۡرَفِيهَا فَفَسَقُواْ فِيهَا فَحَقَّ عَلَيۡهَا ٱلۡقَوۡلُ فَدَمَّرۡنَٰهَا تَدۡمِيرٗا ١٦

**16.** ನಾವು ಯಾವುದೇ ಊರನ್ನು ನಾಶ ಮಾಡಲು ಬಯಸಿದರೆ ಅದರಲ್ಲಿರುವ ಸುಖಲೋಲುಪರಿಗೆ ಆದೇಶ ನೀಡುವೆವು. ಆದರೆ ಅವರು (ಅದನ್ನು ಕಡೆಗಣಿಸಿ) ಅಲ್ಲಿ ಸ್ವೇಚ್ಛಾಚಾರದೊಂದಿಗೆ ವರ್ತಿಸುವರು. ಆಗ (ಶಿಕ್ಷೆಯ) ಮಾತು ಅದರ (ಆ ಊರಿನವರ) ವಿಷಯದಲ್ಲಿ ದೃಢಪಡುವುದು. ತರುವಾಯ ನಾವದನ್ನು ಸಂಪೂರ್ಣವಾಗಿ ನಾಶ ಮಾಡುವೆವು.

وَكَمۡ أَهۡلَكۡنَا مِنَ ٱلۡقُرُونِ مِنۢ بَعۡدِ نُوحٖۗ وَكَفَىٰ بِرَبِّكَ بِذُنُوبِ عِبَادِهِۦ خَبِيرَۢا بَصِيرٗا ١٧

**17.** ನೂಹ್‌ರ ನಂತರ ಎಷ್ಟೊಂದು ತಲೆಮಾರುಗಳನ್ನು ನಾವು ನಾಶಗೊಳಿಸಿರುವೆವು! ತನ್ನ ದಾಸರ ಪಾಪಗಳ ಕುರಿತು ಸೂಕ್ಷ್ಮ ಅರಿವುಳ್ಳವನಾಗಿ ಮತ್ತು ವೀಕ್ಷಿಸುವವನಾಗಿ ತಮ್ಮ ರಬ್ ಮಾತ್ರ ಸಾಕು.

مَّن كَانَ يُرِيدُ ٱلۡعَاجِلَةَ عَجَّلۡنَا لَهُۥ فِيهَا مَا نَشَآءُ لِمَن نُّرِيدُ ثُمَّ جَعَلۡنَا لَهُۥ جَهَنَّمَ يَصۡلَىٰهَا مَذۡمُومٗا مَّدۡحُورٗا ١٨

**18.** ಯಾರಾದರೂ ಕ್ಷಣಿಕವಾಗಿರುವುದನ್ನು (ಇಹಲೋಕವನ್ನು) ಬಯಸುವುದಾದರೆ ಅವರಿಗೆ ಅಥವಾ (ಅವರ ಪೈಕಿ) ನಾವಿಚ್ಛಿಸುವವನಿಗೆ, ನಾವಿಚ್ಛಿಸುವುದನ್ನು ಇಲ್ಲಿಯೇ ತ್ವರಿತವಾಗಿ ನೀಡುವೆವು. ತರುವಾಯ ಅವನಿಗೆ ನಾವು ನರಕಾಗ್ನಿಯನ್ನು ನೀಡುವೆವು. ಅವನು ಅಪಮಾನಿತನಾಗಿ ಮತ್ತು ಬಹಿಷ್ಕೃತನಾಗಿ ಅದರಲ್ಲಿ ಉರಿಯುವನು.[2]

وَمَنۡ أَرَادَ ٱلۡأٓخِرَةَ وَسَعَىٰ لَهَا سَعۡيَهَا وَهُوَ مُؤۡمِنٞ فَأُوْلَٰٓئِكَ كَانَ سَعۡيُهُم مَّشۡكُورٗا ١٩

**19.** ಯಾರಾದರೂ ಪರಲೋಕವನ್ನು ಬಯಸುವುದಾದರೆ ಮತ್ತು ಸತ್ಯವಿಶ್ವಾಸಿಯಾಗಿರುತ್ತಾ ಅದಕ್ಕಾಗಿ ಅದರದ್ದೇ ಆದ ಪರಿಶ್ರಮಪಡುವುದಾದರೆ ಅಂತಹವರ ಪರಿಶ್ರಮವು ಪ್ರತಿಫಲಾರ್ಹವಾಗಿರುವುದು.

---

1 ಪ್ರವಾದಿಯ(ﷺ)ಕುರಿತು ಅಥವಾ ಗ್ರಂಥದ ಕುರಿತು ಅರಿತುಕೊಳ್ಳಲು ಒಮ್ಮೆಯೂ ಅವಕಾಶ ಸಿಗದ ವ್ಯಕ್ತಿ ಶಿಕ್ಷಾರ್ಹನಾಗಲಾರನೆಂದು ಇದರಿಂದ ಗ್ರಹಿಸಬಹುದು.

2 ಐಹಿಕ ಸುಖವನ್ನು ಬಯಸುವುದು ಅಥವಾ ಆಸ್ವಾದಿಸುವುದು ಪಾಪವಲ್ಲ. ಆದರೆ ಇಲ್ಲಿ ಆಕ್ಷೇಪಿಸಲಾಗಿರುವುದು ಐಹಿಕ ಸುಖವನ್ನು ಜೀವನದ ಪರಮಗುರಿಯನ್ನಾಗಿ ಮಾಡಿಕೊಳ್ಳುವುದನ್ನಾಗಿದೆ.

20. ಇವರಲ್ಲಿ ಮತ್ತು ಅವರಲ್ಲಿ ಸೇರಿದ ಪ್ರತಿಯೊಬ್ಬರಿಗೂ ನಾವು (ಇಹಲೋಕದಲ್ಲಿ) ಸಹಾಯ ನೀಡುವೆವು. ಇದು ತಮ್ಮ ರಬ್‌ನ ಕೊಡುಗೆಯಲ್ಲಿ ಸೇರಿದ್ದಾಗಿದೆ.[1] ತಮ್ಮ ರಬ್‌ನ ಕೊಡುಗೆಯು ತಡೆದಿರಿಸಲಾಗುವಂತದ್ದಲ್ಲ.

كُلًّا نُّمِدُّ هَٰٓؤُلَآءِ وَهَٰٓؤُلَآءِ مِنْ عَطَآءِ رَبِّكَۚ وَمَا كَانَ عَطَآءُ رَبِّكَ مَحْظُورًا ﴿٢٠﴾

21. ನಾವು ಅವರ ಪೈಕಿ ಕೆಲವರನ್ನು ಇತರ ಕೆಲವರಿಗಿಂತ ಶ್ರೇಷ್ಠಗೊಳಿಸಿರುವುದು ಹೇಗೆಂದು ನೋಡಿರಿ. ಪರಲೋಕ ಜೀವನವು ಮಹಾ ಪದವಿಯುಳ್ಳದ್ದೂ ಮಹಾ ಶ್ರೇಷ್ಠತೆಯುಳ್ಳದ್ದೂ ಆಗಿದೆ.

ٱنظُرْ كَيْفَ فَضَّلْنَا بَعْضَهُمْ عَلَىٰ بَعْضٍۚ وَلَلْـَٔاخِرَةُ أَكْبَرُ دَرَجَٰتٍ وَأَكْبَرُ تَفْضِيلًا ﴿٢١﴾

22. ನೀನು ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರನ್ನು ಮಾಡಿಕೊಳ್ಳದಿರು. ಹಾಗೇನಾದರೂ ಮಾಡಿದರೆ ನೀನು ಅಪಮಾನಿತನೂ, ಕೈಬಿಡಲಾದವನೂ ಆಗಿ ಕೂರುವೆ.

لَّا تَجْعَلْ مَعَ ٱللَّهِ إِلَٰهًا ءَاخَرَ فَتَقْعُدَ مَذْمُومًا مَّخْذُولًا ﴿٢٢﴾

23. ನೀನು ಅವನ ಹೊರತು ಬೇರೆ ಯಾರನ್ನೂ ಆರಾಧಿಸದಿರಲು ಮತ್ತು ಮಾತಾಪಿತರಿಗೆ ಒಳಿತನ್ನು ಮಾಡಲು ನಿನ್ನ ರಬ್ ವಿಧಿಸಿರುವನು. ಅವರ (ಮಾತಾಪಿತರ) ಪೈಕಿ ಒಬ್ಬರು ಅಥವಾ ಇಬ್ಬರೂ ನಿನ್ನ ಬಳಿ ವೃದ್ಧಾಪ್ಯವನ್ನು ತಲುಪಿದರೆ ಅವರೊಂದಿಗೆ 'ಛೆ' ಎಂದು ಹೇಳುವುದಾಗಲಿ, ಅವರನ್ನು ಗದರಿಸುವುದಾಗಲಿ ಮಾಡದಿರು. ಗೌರವದಿಂದ ಕೂಡಿದ ಮಾತುಗಳನ್ನಷ್ಟೇ ಅವರೊಂದಿಗೆ ಹೇಳು.

۞ وَقَضَىٰ رَبُّكَ أَلَّا تَعْبُدُوٓا۟ إِلَّآ إِيَّاهُ وَبِٱلْوَٰلِدَيْنِ إِحْسَٰنًاۚ إِمَّا يَبْلُغَنَّ عِندَكَ ٱلْكِبَرَ أَحَدُهُمَآ أَوْ كِلَاهُمَا فَلَا تَقُل لَّهُمَآ أُفٍّ وَلَا تَنْهَرْهُمَا وَقُل لَّهُمَا قَوْلًا كَرِيمًا ﴿٢٣﴾

24. ಕರುಣೆಯಿಂದಿರುವ ವಿನಮ್ರತೆಯ ರೆಕ್ಕೆಯನ್ನು ಅವರಿಬ್ಬರಿಗೂ ತಗ್ಗಿಸಿಕೊಡು[2] ಮತ್ತು 'ಓ ನನ್ನ ರಬ್! ಚಿಕ್ಕಂದಿನಲ್ಲಿ ಅವರಿಬ್ಬರೂ ನನ್ನನ್ನು ಸಾಕಿಸಲಹಿದಂತೆ ಅವರಿಗೆ ದಯೆ ತೋರು' ಎಂದು ಪ್ರಾರ್ಥಿಸು.

وَٱخْفِضْ لَهُمَا جَنَاحَ ٱلذُّلِّ مِنَ ٱلرَّحْمَةِ وَقُل رَّبِّ ٱرْحَمْهُمَا كَمَا رَبَّيَانِى صَغِيرًا ﴿٢٤﴾

1 ಇಹಲೋಕದಲ್ಲಿ ಅಲ್ಲಾಹುವಿನ ಅನುಗ್ರಹವು ಸತ್ಯವಿಶ್ವಾಸಿಗಳಿಗೆ ಮತ್ತು ಸತ್ಯನಿಷೇಧಿಗಳಿಗೆ ತಾರತಮ್ಯವಿಲ್ಲದೆಯೇ ಸಿಗುತ್ತದೆ. ಆದರೆ ಪರಲೋಕದ ಅನುಗ್ರಹವು ವಿಶ್ವಾಸಿಗಳಿಗೆ ಮಾತ್ರವಾಗಿದೆ.

2 ಗರ್ವ ಮತ್ತು ಅಹಂಕಾರವನ್ನು ಬದಿಗಿಟ್ಟು ಮಾತಾಪಿತರೊಂದಿಗೆ ಅತ್ಯಂತ ವಿನಯದಿಂದ ವರ್ತಿಸಬೇಕಾಗಿದೆ.

25. ನಿಮ್ಮ ಮನಸ್ಸುಗಳಲ್ಲಿರುವುದನ್ನು ನಿಮ್ಮ ರಬ್ ಚೆನ್ನಾಗಿ ಅರಿಯುವನು. ನೀವು ಸಜ್ಜನರಾಗಿದ್ದರೆ, ಪಶ್ಚಾತ್ತಾಪಪಟ್ಟು ಮರಳುವವರಿಗೆ ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನಾಗಿರುವನು.

رَّبُّكُمۡ أَعۡلَمُ بِمَا فِي نُفُوسِكُمۡۚ إِن تَكُونُواْ صَٰلِحِينَ فَإِنَّهُۥ كَانَ لِلۡأَوَّٰبِينَ غَفُورٗا ٢٥

26. ಆಪ್ತಸಂಬಂಧಿಕರಿಗೆ ಅವರ ಹಕ್ಕನ್ನು ನೀಡು. ನಿರ್ಗತಿಕರಿಗೂ, ದಾರಿಹೋಕರಿಗೂ (ಅವರ ಹಕ್ಕನ್ನು ನೀಡು). ನೀನು ದುಂದುಗಾರಿಕೆ ಮಾಡದಿರು.

وَءَاتِ ذَا ٱلۡقُرۡبَىٰ حَقَّهُۥ وَٱلۡمِسۡكِينَ وَٱبۡنَ ٱلسَّبِيلِ وَلَا تُبَذِّرۡ تَبۡذِيرًا ٢٦

27. ಖಂಡಿತವಾಗಿಯೂ ದುಂದುಗಾರಿಕೆ ಮಾಡುವವರು ಸೈತಾನನ ಸಹೋದರರಾಗಿರುವರು. ಸೈತಾನನು ತನ್ನ ರಬ್‌ನೊಂದಿಗೆ ಅತ್ಯಧಿಕ ಕೃತಘ್ನನಾಗಿರುವನು.

إِنَّ ٱلۡمُبَذِّرِينَ كَانُوٓاْ إِخۡوَٰنَ ٱلشَّيَٰطِينِۖ وَكَانَ ٱلشَّيۡطَٰنُ لِرَبِّهِۦ كَفُورٗا ٢٧

28. ನೀನು ನಿನ್ನ ರಬ್‌ನಿಂದ ಆಶಿಸುತ್ತಿರುವ ಅನುಗ್ರಹವನ್ನು ಅರಸುತ್ತಾ ಅವರಿಂದ ವಿಮುಖನಾಗಬೇಕಾಗಿ ಬಂದರೆ ನೀನು ಅವರೊಂದಿಗೆ ಸೌಮ್ಯವಾದ ಮಾತುಗಳನ್ನಾಡು.[1]

وَإِمَّا تُعۡرِضَنَّ عَنۡهُمُ ٱبۡتِغَآءَ رَحۡمَةٖ مِّن رَّبِّكَ تَرۡجُوهَا فَقُل لَّهُمۡ قَوۡلٗا مَّيۡسُورٗا ٢٨

29. ನೀನು ನಿನ್ನ ಕೈಯನ್ನು ನಿನ್ನ ಕೊರಳಿಗೆ ಬಂಧಿಸಲ್ಪಟ್ಟಿರುವಂತೆ ಮಾಡುವುದಾಗಲಿ ಅಥವಾ ಅದನ್ನು (ಕೈಯನ್ನು) ಸಂಪೂರ್ಣವಾಗಿ ಚಾಚುವುದಾಗಲಿ ಮಾಡದಿರು.[2] ಹಾಗೇನಾದರೂ ಮಾಡಿದರೆ ನೀನು ದೂಷಿಸಲ್ಪಟ್ಟವನೂ, ಕಷ್ಟಪಡುವವನೂ ಆಗುವೆ.

وَلَا تَجۡعَلۡ يَدَكَ مَغۡلُولَةً إِلَىٰ عُنُقِكَ وَلَا تَبۡسُطۡهَا كُلَّ ٱلۡبَسۡطِ فَتَقۡعُدَ مَلُومٗا مَّحۡسُورًا ٢٩

30. ಖಂಡಿತವಾಗಿಯೂ ತಮ್ಮ ರಬ್ ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು

إِنَّ رَبَّكَ يَبۡسُطُ ٱلرِّزۡقَ لِمَن يَشَآءُ وَيَقۡدِرُۚ إِنَّهُۥ كَانَ بِعِبَادِهِۦ خَبِيرَۢا بَصِيرٗا ٣٠

1 ಮೇಲೆ ಹೇಳಲಾದವರ ಅಗತ್ಯಗಳೆಲ್ಲವನ್ನು ಪೂರೈಸಿಕೊಡಲು ನಿನಗೆ ಸಾಧ್ಯವಾಗದೆ ಹೋದರೆ ಅವರ ಅಪೇಕ್ಷೆಯನ್ನು ಕಡೆಗಣಿಸಬೇಕಾಗಿ ಬರಬಹುದು. ಆದರೆ ಅಂತಹ ಸಂದರ್ಭಗಳಲ್ಲಿಯೂ ಅಲ್ಲಾಹುವಿನ ಅನುಗ್ರಹವು ಲಭಿಸುವುದಾದರೆ ಅವರ ಅಗತ್ಯಗಳನ್ನು ಪೂರೈಸಿ ಕೊಡುವೆನೆಂಬ ಹಂಬಲವು ನಿನ್ನಲ್ಲಿರಲಿ ಮತ್ತು ಸೌಮ್ಯವಾದ ಭಾಷೆಯಲ್ಲಿ ಅವರಿಗೆ ಉತ್ತರ ನೀಡು.

2 ನೀನು ಜಿಪುಣನಾಗಲಿ ಅಥವಾ ದುಂದುಗಾರಿಕೆ ಮಾಡುವವನಾಗಲಿ ಆಗಬಾರದು.

(ತಾನಿಚ್ಛಿಸುವವರಿಗೆ) ಸಂಕುಚಿತಗೊಳಿಸುವನು. ಖಂಡಿತವಾಗಿಯೂ ಅವನು ತನ್ನ ದಾಸರ ಕುರಿತುಸೂಕ್ಷ್ಮವಾಗಿ ಅರಿಯುವವನೂ ವೀಕ್ಷಿಸುವವನೂ ಆಗಿರುವನು.

31. ಬಡತನವನ್ನು ಭಯಪಟ್ಟು ನೀವು ನಿಮ್ಮ ಮಕ್ಕಳನ್ನು ವಧಿಸದಿರಿ. ಅವರಿಗೂ, ನಿಮಗೂ ಅನ್ನಾಧಾರವನ್ನು ಒದಗಿಸುವವರು ನಾವಾಗಿರುವೆವು. ಅವರನ್ನು ವಧಿಸುವುದು ಖಂಡಿತವಾಗಿಯೂ ಮಹಾ ಅಪರಾಧವಾಗಿದೆ.

وَلَا تَقْتُلُوٓاْ أَوْلَٰدَكُمْ خَشْيَةَ إِمْلَٰقٍۖ نَّحْنُ نَرْزُقُهُمْ وَإِيَّاكُمْۚ إِنَّ قَتْلَهُمْ كَانَ خِطْـًٔا كَبِيرًا ٣١

32. ನೀವು ವ್ಯಭಿಚಾರದ ಹತ್ತಿರಕ್ಕೂ ಸುಳಿಯದಿರಿ. ಖಂಡಿತವಾಗಿಯೂ ಅದು ನೀಚಕೃತ್ಯವೂ, ಕೆಟ್ಟಮಾರ್ಗವೂ ಆಗಿದೆ.

وَلَا تَقْرَبُواْ ٱلزِّنَىٰٓۖ إِنَّهُۥ كَانَ فَٰحِشَةً وَسَآءَ سَبِيلًا ٣٢

33. ಅಲ್ಲಾಹು ಪವಿತ್ರಗೊಳಿಸಿರುವ ಜೀವವನ್ನು ನ್ಯಾಯದೊಂದಿಗೇ ಹೊರತು ವಧಿಸದಿರಿ. ಯಾರಾದರೂ ಅನ್ಯಾಯವಾಗಿ ಹತ್ಯೆಗೀಡಾದರೆ ಅವನ ಹಕ್ಕುದಾರನಿಗೆ ನಾವು (ಪ್ರತೀಕಾರದ) ಅಧಿಕಾರವನ್ನು ನೀಡಿರುವೆವು. ಆದರೆ ಅವನು ಕೊಲೆಯಲ್ಲಿ ಹದ್ದುಮೀರದಿರಲಿ.[1] ಖಂಡಿತವಾಗಿಯೂ ಅವನು ಸಹಾಯ ಮಾಡಲ್ಪಟ್ಟವನಾಗಿರುವನು.

وَلَا تَقْتُلُواْ ٱلنَّفْسَ ٱلَّتِي حَرَّمَ ٱللَّهُ إِلَّا بِٱلْحَقِّۗ وَمَن قُتِلَ مَظْلُومًا فَقَدْ جَعَلْنَا لِوَلِيِّهِۦ سُلْطَٰنًا فَلَا يُسْرِف فِّي ٱلْقَتْلِۖ إِنَّهُۥ كَانَ مَنصُورًا ٣٣

34. ಅನಾಥನು ತನ್ನ ಹರೆಯವನ್ನು ತಲುಪುವ ತನಕ ಅತ್ಯಂತ ಉತ್ತಮವಾಗಿರುವ ವಿಧದಲ್ಲೇ ಹೊರತು ಅವನ ಸಂಪತ್ತಿನ ಬಳಿಗೆ ಹೋಗದಿರಿ. ಕರಾರನ್ನು ಈಡೇರಿಸಿರಿ. ಖಂಡಿತವಾಗಿಯೂ ಕರಾರಿನ ಕುರಿತು ವಿಚಾರಣೆ ಮಾಡಲಾಗುವುದು.

وَلَا تَقْرَبُواْ مَالَ ٱلْيَتِيمِ إِلَّا بِٱلَّتِي هِيَ أَحْسَنُ حَتَّىٰ يَبْلُغَ أَشُدَّهُۥۚ وَأَوْفُواْ بِٱلْعَهْدِۖ إِنَّ ٱلْعَهْدَ كَانَ مَسْـُٔولًا ٣٤

35. ನೀವು ಅಳೆದುಕೊಡುವಾಗ ಅಳತೆಯನ್ನು ಪೂರ್ಣವಾಗಿ ಕೊಡಿರಿ. ಸರಿಯಾದ ತಕ್ಕಡಿಯಿಂದಲೇ ತೂಕ ಮಾಡಿರಿ. ಅದು ಅತ್ಯುತ್ತಮವಾಗಿದೆ ಮತ್ತು ಅಂತ್ಯಫಲದ ವಿಷಯದಲ್ಲಿ ಅತ್ಯಂತ ಶ್ರೇಷ್ಠವಾಗಿದೆ.

وَأَوْفُواْ ٱلْكَيْلَ إِذَا كِلْتُمْ وَزِنُواْ بِٱلْقِسْطَاسِ ٱلْمُسْتَقِيمِۚ ذَٰلِكَ خَيْرٌ وَأَحْسَنُ تَأْوِيلًا ٣٥

1 ಅಪರಾಧಕ್ಕಿಂತಲೂ ಕಠಿಣವಾದ ಶಿಕ್ಷೆ ನೀಡಬಾರದು. ನೈಜ ಅಪರಾಧಿಯಲ್ಲದೆ ಬೇರಾರೂ ಶಿಕ್ಷೆಗೊಳಗಾಗಬಾರದು.

**36.** ಯಾವುದರಲ್ಲಿ ನಿನಗೆ ಅರಿವಿಲ್ಲವೋ ಅದನ್ನು ನೀನು ಹಿಂಬಾಲಿಸದಿರು.[1] ಖಂಡಿತವಾಗಿಯೂ ಶ್ರವಣ, ದೃಷ್ಟಿ ಮತ್ತು ಹೃದಯ, ಇವೆಲ್ಲವೂ ವಿಚಾರಣೆಗೆ ವಿಧೇಯವಾಗುವುವು.

وَلَا تَقْفُ مَا لَيْسَ لَكَ بِهِۦ عِلْمٌ ۚ إِنَّ ٱلسَّمْعَ وَٱلْبَصَرَ وَٱلْفُؤَادَ كُلُّ أُو۟لَـٰٓئِكَ كَانَ عَنْهُ مَسْـُٔولًا ﴿٣٦﴾

**37.** ಭೂಮಿಯಲ್ಲಿ ದರ್ಪದಿಂದ ನಡೆಯದಿರು. ಖಂಡಿತವಾಗಿಯೂ ಭೂಮಿಯನ್ನು ಸೀಳುವುದಾಗಲಿ, ಎತ್ತರದಲ್ಲಿ ಪರ್ವತದ ಸಮಾನಕ್ಕೆ ತಲುಪುವುದಾಗಲಿ ನಿನ್ನಿಂದ ಸಾಧ್ಯವಾಗಲಾರದು.

وَلَا تَمْشِ فِى ٱلْأَرْضِ مَرَحًا ۖ إِنَّكَ لَن تَخْرِقَ ٱلْأَرْضَ وَلَن تَبْلُغَ ٱلْجِبَالَ طُولًا ﴿٣٧﴾

**38.** ಇವೆಲ್ಲವೂ –ಇವುಗಳಿಂದಾಗುವ ಕೆಡುಕು– ನಿನ್ನ ರಬ್‌ನ ಬಳಿ ಅಸಹ್ಯಕರವಾಗಿವೆ.

كُلُّ ذَٰلِكَ كَانَ سَيِّئُهُۥ عِندَ رَبِّكَ مَكْرُوهًا ﴿٣٨﴾

**39.** ಇದು ನಿನ್ನ ರಬ್ ನಿನಗೆ ದಿವ್ಯಸಂದೇಶವಾಗಿ ನೀಡಿರುವ ಜ್ಞಾನದಲ್ಲಿ ಸೇರಿದ್ದಾಗಿದೆ. ನೀನು ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯನನ್ನು ಮಾಡಿಕೊಳ್ಳದಿರು. ಹಾಗೇನಾದರೂ ಮಾಡಿದರೆ ನೀನು ಆಕ್ಷೇಪಾರ್ಹನೂ ಬಹಿಷ್ಕೃತನೂ ಆಗಿ ನರಕಾಗ್ನಿಯಲ್ಲಿ ಎಸೆಯಲಾಗುವೆ.

ذَٰلِكَ مِمَّآ أَوْحَىٰٓ إِلَيْكَ رَبُّكَ مِنَ ٱلْحِكْمَةِ ۗ وَلَا تَجْعَلْ مَعَ ٱللَّهِ إِلَـٰهًا ءَاخَرَ فَتُلْقَىٰ فِى جَهَنَّمَ مَلُومًا مَّدْحُورًا ﴿٣٩﴾

**40.** ನಿಮ್ಮ ರಬ್ ನಿಮಗೆ ಗಂಡುಮಕ್ಕಳನ್ನು ವಿಶೇಷವಾಗಿ ದಯಪಾಲಿಸಿ ತನಗೋಸ್ಕರ ಮಲಕ್‌ಗಳಿಂದ ಹೆಣ್ಣುಮಕ್ಕಳನ್ನು ಪಡೆದಿರುವನೇ? ಖಂಡಿತವಾಗಿಯೂ ನೀವು ಹೇಳುತ್ತಿರುವುದು ಅತಿಘೋರ ಮಾತಾಗಿದೆ.

أَفَأَصْفَىٰكُمْ رَبُّكُم بِٱلْبَنِينَ وَٱتَّخَذَ مِنَ ٱلْمَلَـٰٓئِكَةِ إِنَـٰثًا ۚ إِنَّكُمْ لَتَقُولُونَ قَوْلًا عَظِيمًا ﴿٤٠﴾

**41.** ಅವರು ಚಿಂತಿಸಿ ಗ್ರಹಿಸುವ ಸಲುವಾಗಿ ನಾವು ಈ ಕುರ್‌ಆನ್‌ನಲ್ಲಿ (ವಿಷಯಗಳನ್ನು) ನಾನಾ ವಿಧಗಳಲ್ಲಿ ವಿವರಿಸಿರುವೆವು. ಆದರೆ ಅದು ಅವರಿಗೆ ವಿದೂರತೆಯನ್ನೇ ವಿನಾ ಹೆಚ್ಚಿಸಿಕೊಡುತ್ತಿಲ್ಲ.

وَلَقَدْ صَرَّفْنَا فِى هَـٰذَا ٱلْقُرْءَانِ لِيَذَّكَّرُوا۟ وَمَا يَزِيدُهُمْ إِلَّا نُفُورًا ﴿٤١﴾

**42.** (ಓ ಪ್ರವಾದಿಯವರೇ!) ಹೇಳಿರಿ: 'ಅವರು ಹೇಳುವಂತೆ ಅವನ ಜೊತೆಗೆ ಬೇರೆ ಆರಾಧ್ಯರಿರುತ್ತಿದ್ದರೆ ಖಂಡಿತವಾಗಿಯೂ ಅವರು (ಆ ಆರಾಧ್ಯರು)

قُل لَّوْ كَانَ مَعَهُۥٓ ءَالِهَةٌ كَمَا يَقُولُونَ إِذًا لَّٱبْتَغَوْا۟ إِلَىٰ ذِى ٱلْعَرْشِ سَبِيلًا ﴿٤٢﴾

---

1 ಯಾವುದೇ ವಿಷಯದಲ್ಲೂ ಕೂಡ ಖಚಿತವಾದ ಮಾಹಿತಿ ಲಭಿಸಿದ ಬಳಿಕವೇ ಕ್ರಮಕೈಗೊಳ್ಳಬೇಕಾಗಿದೆ. ಕೇವಲ ಊಹೆಯನ್ನು ಅವಲಂಬಿಸಿ ಏನೂ ಮಾಡಬಾರದು.

ಸಿಂಹಾಸನಾಧಿಪತಿಯೆಡೆಗೆ ಯಾವುದಾದರೂ ಮಾರ್ಗವನ್ನು ಅರಸುತ್ತಿದ್ದರು'.[1]

**43.** ಅವನು ಪರಮ ಪಾವನನು! ಅವರು ಹೇಳುತ್ತಿರುವುದಕ್ಕೆ ಮಿಗಿಲಾಗಿ ಅವನು ಮಹಾ ಔನ್ನತ್ಯವನ್ನು ಹೊಂದಿದವನಾಗಿರುವನು.

سُبۡحَٰنَهُۥ وَتَعَٰلَىٰ عَمَّا يَقُولُونَ عُلُوّٗا كَبِيرٗا ﴿٤٣﴾

**44.** ಏಳು ಆಕಾಶಗಳು, ಭೂಮಿ ಮತ್ತು ಅವುಗಳಲ್ಲಿರುವವರೆಲ್ಲರೂ ಅವನ ಪರಿಪಾವನತೆಯನ್ನು ಕೊಂಡಾಡುತ್ತಿರುವರು. ಅವನ ಸ್ತುತಿಯೊಂದಿಗೆ (ಅವನ) ಪರಿಪಾವನತೆಯನ್ನು ಕೊಂಡಾಡದಿರುವ ಯಾವುದೇ ವಸ್ತುವೂ ಇಲ್ಲ. ಆದರೆ ಅವರ ಸ್ತುತಿಕೀರ್ತನೆಗಳನ್ನು ನೀವು ಗ್ರಹಿಸಲಾರಿರಿ. ಖಂಡಿತವಾಗಿಯೂ ಅವನು ಸಹನಾಶೀಲನೂ, ಅತ್ಯಧಿಕ ಕ್ಷಮಿಸುವವನೂ ಆಗಿರುವನು.

تُسَبِّحُ لَهُ ٱلسَّمَٰوَٰتُ ٱلسَّبۡعُ وَٱلۡأَرۡضُ وَمَن فِيهِنَّۚ وَإِن مِّن شَيۡءٍ إِلَّا يُسَبِّحُ بِحَمۡدِهِۦ وَلَٰكِن لَّا تَفۡقَهُونَ تَسۡبِيحَهُمۡۚ إِنَّهُۥ كَانَ حَلِيمًا غَفُورٗا ﴿٤٤﴾

**45.** ತಾವು ಕುರ್‌ಆನ್ ಪಾರಾಯಣ ಮಾಡುವಾಗ ತಮ್ಮ ಮತ್ತು ಪರಲೋಕದಲ್ಲಿ ವಿಶ್ವಾಸವಿಡದವರ ಮಧ್ಯೆ ನಾವು ಅಗೋಚರ ಪರದೆಯೊಂದನ್ನು ಅಡ್ಡವಾಗಿ ಇಡುವೆವು.

وَإِذَا قَرَأۡتَ ٱلۡقُرۡءَانَ جَعَلۡنَا بَيۡنَكَ وَبَيۡنَ ٱلَّذِينَ لَا يُؤۡمِنُونَ بِٱلۡأٓخِرَةِ حِجَابٗا مَّسۡتُورٗا ﴿٤٥﴾

**46.** ಅವರು ಅದನ್ನು ಗ್ರಹಿಸುವುದಕ್ಕೆ (ತಡೆಯಾಗಿ) ನಾವು ಅವರ ಹೃದಯಗಳ ಮೇಲೆ ಹೊದಿಕೆಗಳನ್ನಿಡುವೆವು ಮತ್ತು ಅವರ ಕಿವಿಗಳಲ್ಲಿ ಭಾರವನ್ನಿಡುವೆವು.[2] ತಾವು ಕುರ್‌ಆನ್‌ನಲ್ಲಿ ತಮ್ಮ ರಬ್ಬನ್ನು ಮಾತ್ರ ಪ್ರಸ್ತಾಪಿಸಿದರೆ ಅವರು ಜಿಗುಪ್ಸೆಯಿಂದ ಬೆನ್ನು ತಿರುಗಿಸಿ ಹೋಗುವರು.

وَجَعَلۡنَا عَلَىٰ قُلُوبِهِمۡ أَكِنَّةً أَن يَفۡقَهُوهُ وَفِيٓ ءَاذَانِهِمۡ وَقۡرٗاۚ وَإِذَا ذَكَرۡتَ رَبَّكَ فِي ٱلۡقُرۡءَانِ وَحۡدَهُۥ وَلَّوۡاْ عَلَىٰٓ أَدۡبَٰرِهِمۡ نُفُورٗا ﴿٤٦﴾

---

1 ಈ ವಾಕ್ಯವನ್ನು ಎರಡು ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಒಂದು: ಜಗದೊಡೆಯನ ಹೊರತು ಬೇರೆ ಆರಾಧ್ಯರಿರುತ್ತಿದ್ದರೆ ಅವರು ಅವನ ಬಳಿ ಸಾಗಿ ಅವನೊಂದಿಗೆ ಹೋರಾಡಿ ಅಧಿಕಾರವನ್ನು ವಶಪಡಿಸುತ್ತಿದ್ದರು. ಎರಡು: ದಿವ್ಯತ್ವವನ್ನು ಹೊರಿಸಲ್ಪಟ್ಟ ಮಲಕ್‌ಗಳು, ಮಹಾತ್ಮರು ಮುಂತಾದವರನ್ನು ನೀವು ಆರಾಧಿಸುವುದಾದರೆ ಅದು ನಿರರ್ಥಕವಾಗಿದೆ. ಯಾಕೆಂದರೆ ಅವರೆಲ್ಲರೂ ಸಿಂಹಾಸನಾಧಿಪತಿಯಾದ ಅಲ್ಲಾಹುವಿನ ಸಾಮೀಪ್ಯಕ್ಕಿರುವ ಮಾರ್ಗವನ್ನು ಹುಡುಕುತ್ತಿದ್ದಾರೆ. ಆದ್ದರಿಂದ ಅವರೊಂದಿಗೆ ಪ್ರಾರ್ಥಿಸಿ ಫಲವಿಲ್ಲ.

2 ಏಕದೇವತ್ವದಲ್ಲಿ ಮತ್ತು ಪರಲೋಕದಲ್ಲಿ ವಿಶ್ವಾಸವಿಡಲು ಅವರು ಸಿದ್ಧರಿಲ್ಲದ ಕಾರಣ ಅಲ್ಲಾಹು ಅವರ ಹೃದಯಗಳನ್ನು ಮುಚ್ಚಿದ ಸ್ಥಿತಿಯಲ್ಲಿಡುವನು.

**47.** ತಾವು ಹೇಳುವುದನ್ನು ಕಿವಿಗೊಟ್ಟು ಆಲಿಸುವಾಗ ಅವರು ಏನನ್ನು ಕಿವಿಗೊಟ್ಟು ಆಲಿಸುತ್ತಿರುವರೆಂದು ನಾವು ಚೆನ್ನಾಗಿ ಅರಿತಿರುವೆವು.[1] ಅವರು ಏಕಾಂತವಾಗಿ ಮಾತನಾಡುವ ಸಂದರ್ಭ, ಅಥವಾ 'ನೀವು ಅನುಸರಿಸುತ್ತಿರುವುದು ಒಬ್ಬ ಮಾಟ ಬಾಧಿಸಿದ ವ್ಯಕ್ತಿಯನ್ನು ಮಾತ್ರವಾಗಿದೆ' ಎಂದು ಅಕ್ರಮಿಗಳು (ತಮ್ಮನ್ನು ಗೇಲಿಮಾಡುತ್ತಾ) ಹೇಳುವ ಸಂದರ್ಭವನ್ನೂ (ನಾವು ಚೆನ್ನಾಗಿ ಅರಿತಿರುವೆವು).

نَّحۡنُ أَعۡلَمُ بِمَا يَسۡتَمِعُونَ بِهِۦٓ إِذۡ يَسۡتَمِعُونَ إِلَيۡكَ وَإِذۡ هُمۡ نَجۡوَىٰٓ إِذۡ يَقُولُ ٱلظَّٰلِمُونَ إِن تَتَّبِعُونَ إِلَّا رَجُلٗا مَّسۡحُورًا ٤٧

**48.** (ಓ ಪ್ರವಾದಿಯವರೇ!) ಅವರು ತಮಗೆ ಯಾವ ರೀತಿ ಉಪಮೆಗಳನ್ನು ನೀಡುತ್ತಿದ್ದಾರೆ ಎಂಬುದನ್ನು ನೋಡಿರಿ. ಆದ್ದರಿಂದ ಅವರು ಪಥಭ್ರಷ್ಟರಾಗಿರುವರು ಮತ್ತು ಅವರಿಗೆ ಯಾವುದೇ ದಾರಿಯನ್ನು ಕಾಣಲೂ ಸಾಧ್ಯವಾಗದು.

ٱنظُرۡ كَيۡفَ ضَرَبُواْ لَكَ ٱلۡأَمۡثَالَ فَضَلُّواْ فَلَا يَسۡتَطِيعُونَ سَبِيلٗا ٤٨

**49.** ಅವರು ಹೇಳಿದರು: 'ನಾವು ಮೂಳೆಗಳಾಗಿಯೂ ಶಿಥಿಲ ಅವಶೇಷಗಳಾಗಿಯೂ ಮಾರ್ಪಟ್ಟ ಬಳಿಕ ಖಂಡಿತವಾಗಿಯೂ ನಮ್ಮನ್ನು ಹೊಸದೊಂದು ಸೃಷ್ಟಿಯಾಗಿ ಪುನರುತ್ಥಾನಗೊಳಿಸಲಾಗುವುದೇ?'

وَقَالُوٓاْ أَءِذَا كُنَّا عِظَٰمٗا وَرُفَٰتًا أَءِنَّا لَمَبۡعُوثُونَ خَلۡقٗا جَدِيدٗا ٤٩

**50.** (ಓ ಪ್ರವಾದಿಯವರೇ!) ಹೇಳಿರಿ: 'ನೀವು ಕಲ್ಲಾಗಿ ಅಥವಾ ಕಬ್ಬಿಣವಾಗಿ ಮಾರ್ಪಡಿರಿ.

۞ قُلۡ كُونُواْ حِجَارَةً أَوۡ حَدِيدًا ٥٠

**51.** ಅಥವಾ ನಿಮ್ಮ ಹೃದಯಗಳಲ್ಲಿ ಹಿರಿದಾಗಿ ಕಾಣುವ ಯಾವುದಾದರೂ ಸೃಷ್ಟಿಯಾಗಿ ಮಾರ್ಪಡಿರಿ. (ಆದರೂ ನಿಮ್ಮನ್ನು ಪುನರುತ್ಥಾನಗೊಳಿಸಲಾಗುವುದು)'. 'ನಮ್ಮನ್ನು (ಜೀವ ನೀಡಿ) ಮರಳಿ ತರುವವನು ಯಾರು?' ಎಂದು ಅವರು ಕೇಳುವರು. 'ನಿಮ್ಮನ್ನು ಮೊದಲ ಬಾರಿಗೆ ಸೃಷ್ಟಿಸಿದವನು' ಎನ್ನಿರಿ. ಆಗ ಅವರು

أَوۡ خَلۡقٗا مِّمَّا يَكۡبُرُ فِي صُدُورِكُمۡۚ فَسَيَقُولُونَ مَن يُعِيدُنَاۖ قُلِ ٱلَّذِي فَطَرَكُمۡ أَوَّلَ مَرَّةٖۚ فَسَيُنۡغِضُونَ إِلَيۡكَ رُءُوسَهُمۡ وَيَقُولُونَ مَتَىٰ هُوَۖ قُلۡ عَسَىٰٓ أَن يَكُونَ قَرِيبٗا ٥١

1 ಟೀಕಿಸಲು ಏನಾದರೂ ನೆಪ ಹುಡುಕುವುದಕ್ಕಾಗಿ ಅವರು ಪ್ರವಾದಿ(ﷺ)ರವರ ಮಾತುಗಳನ್ನು ಕಿವಿಗೊಟ್ಟು ಆಲಿಸುತ್ತಿದ್ದರು.

ತಮ್ಮೆಡೆಗೆ (ದೃಷ್ಟಿ ಹಾಯಿಸಿ) ತಲೆಯಾಡಿಸುತ್ತಾ ಕೇಳುವರು: ‘ಅದು ಯಾವಾಗ?’ ತಾವು ಹೇಳಿರಿ: ‘ಅದು ಸಮೀಪದಲ್ಲೇ ಆಗಿರಬಹುದು’.

52. ಅವನು ನಿಮ್ಮನ್ನು ಕರೆಯುವ ಮತ್ತು ಅವನನ್ನು ಸ್ತುತಿಸುತ್ತಾ ಓಗೊಡುವ ದಿನ.[1] ನೀವು (ಇಹಲೋಕದಲ್ಲಿ) ಸ್ವಲ್ಪ ಸಮಯ ಮಾತ್ರ ತಂಗಿರುವಿರಿ ಎಂದು ನೀವು ಭಾವಿಸುವಿರಿ.

يَوْمَ يَدْعُوكُمْ فَتَسْتَجِيبُونَ بِحَمْدِهِۦ وَتَظُنُّونَ إِن لَّبِثْتُمْ إِلَّا قَلِيلًا ٥٢

53. ತಾವು ನನ್ನ ದಾಸರೊಂದಿಗೆ ಅವರು ಅತ್ಯುತ್ತಮವಾಗಿರುವುದನ್ನೇ ಮಾತನಾಡಲಿ ಎಂದು ಹೇಳಿರಿ. ಖಂಡಿತವಾಗಿಯೂ ಸೈತಾನನು ಅವರ ನಡುವೆ (ಸಂಘರ್ಷವನ್ನು) ಹುರಿದುಂಬಿಸುವನು. ಖಂಡಿತವಾಗಿಯೂ ಸೈತಾನನು ಮನುಷ್ಯನ ಪ್ರತ್ಯಕ್ಷ ಶತ್ರುವಾಗಿರುವನು.

وَقُل لِّعِبَادِى يَقُولُوا۟ ٱلَّتِى هِىَ أَحْسَنُ ۚ إِنَّ ٱلشَّيْطَٰنَ يَنزَغُ بَيْنَهُمْ ۚ إِنَّ ٱلشَّيْطَٰنَ كَانَ لِلْإِنسَٰنِ عَدُوًّا مُّبِينًا ٥٣

54. ನಿಮ್ಮ ಬಗ್ಗೆ ನಿಮ್ಮ ರಬ್ ಚೆನ್ನಾಗಿ ಅರಿತಿರುವನು. ಅವನು ಇಚ್ಛಿಸುವುದಾದರೆ ಅವನು ನಿಮಗೆ ದಯೆ ತೋರುವನು ಅಥವಾ ಅವನು ಇಚ್ಛಿಸುವುದಾದರೆ ಅವನು ನಿಮ್ಮನ್ನು ಶಿಕ್ಷಿಸುವನು. ನಾವು ತಮ್ಮನ್ನು ಅವರ ಮೇಲ್ವಿಚಾರಕರನ್ನಾಗಿ ಮಾಡಿ ಕಳುಹಿಸಿಲ್ಲ.

رَّبُّكُمْ أَعْلَمُ بِكُمْ ۖ إِن يَشَأْ يَرْحَمْكُمْ أَوْ إِن يَشَأْ يُعَذِّبْكُمْ ۚ وَمَآ أَرْسَلْنَٰكَ عَلَيْهِمْ وَكِيلًا ٥٤

55. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರ ಬಗ್ಗೆ ತಮ್ಮ ರಬ್ ಚೆನ್ನಾಗಿ ಅರಿತಿರುವನು. ಖಂಡಿತವಾಗಿಯೂ ನಾವು ಪ್ರವಾದಿಗಳಲ್ಲಿ ಕೆಲವರನ್ನು ಇತರ ಕೆಲವರಿಗಿಂತ ಶ್ರೇಷ್ಠಗೊಳಿಸಿರುವೆವು. ದಾವೂದ್‌ರಿಗೆ ನಾವು ಝಬೂರ್[2] ಎಂಬ ಗ್ರಂಥವನ್ನು ನೀಡಿರುವೆವು.

وَرَبُّكَ أَعْلَمُ بِمَن فِى ٱلسَّمَٰوَٰتِ وَٱلْأَرْضِ ۗ وَلَقَدْ فَضَّلْنَا بَعْضَ ٱلنَّبِيِّـۧنَ عَلَىٰ بَعْضٍ ۖ وَءَاتَيْنَا دَاوُۥدَ زَبُورًا ٥٥

1 ಅಲ್ಲಾಹುವಿನ ಕರೆಗೆ ಓಗೊಟ್ಟು ಎಲ್ಲರೂ ಪರಲೋಕದಲ್ಲಿ ಒಟ್ಟುಗೂಡುವ ದಿನ.

2 ಬೈಬಲ್ ಹಳೆಯ ಒಡಂಬಡಿಕೆಯ ಕೀರ್ತನೆಗಳು ಎಂಬ ಪುಸ್ತಕ ದಾವೂದ್(عَلَيْهِ السَّلَام)ರಿಗೆ ನೀಡಲಾದ ಝಬೂರ್ ಆಗಿದೆ– ಯೆಂದು ಭಾವಿಸಲಾಗುತ್ತದೆ. ಬಹುಶಃ ಕೀರ್ತನೆಗಳು ಝಬೂರಿನ ಒಂದು ಭಾಗ ಮಾತ್ರವಾಗಿರುವ ಸಾಧ್ಯತೆಯೂ ಇದೆ.

قُلِ ٱدۡعُواْ ٱلَّذِينَ زَعَمۡتُم مِّن دُونِهِۦ فَلَا يَمۡلِكُونَ كَشۡفَ ٱلضُّرِّ عَنكُمۡ وَلَا تَحۡوِيلًا ٥٦

56. (ಓ ಪ್ರವಾದಿಯವರೇ!) ಹೇಳಿರಿ: ‘ನೀವು ಅಲ್ಲಾಹುವಿನ ಹೊರತು (ಆರಾಧ್ಯರೆಂದು) ವಾದಿಸುತ್ತಿರುವವರನ್ನು ಕರೆದು ನೋಡಿರಿ. ನಿಮ್ಮಿಂದ ಹಾನಿಯನ್ನು ನಿವಾರಿಸುವ ಅಥವಾ (ನಿಮ್ಮ ಸ್ಥಿತಿಯನ್ನು) ಬದಲಾಯಿಸುವ ಯಾವುದೇ ಸಾಮರ್ಥ್ಯವನ್ನೂ ಅವರು ಅಧೀನದಲ್ಲಿಟ್ಟುಕೊಂಡಿಲ್ಲ’.

أُوْلَٰٓئِكَ ٱلَّذِينَ يَدۡعُونَ يَبۡتَغُونَ إِلَىٰ رَبِّهِمُ ٱلۡوَسِيلَةَ أَيُّهُمۡ أَقۡرَبُ وَيَرۡجُونَ رَحۡمَتَهُۥ وَيَخَافُونَ عَذَابَهُۥٓۚ إِنَّ عَذَابَ رَبِّكَ كَانَ مَحۡذُورٗا ٥٧

57. ಅವರು ಯಾರನ್ನು ಕರೆದು ಪ್ರಾರ್ಥಿಸುತ್ತಿರುವರೋ ಅವರು ಸ್ವತಃ ತಮ್ಮ ರಬ್‌ನೆಡೆಗೆ ಹತ್ತಿರವಾಗಲು ಮಾರ್ಗಗಳನ್ನು ಅರಸುತ್ತಿರುವರು.(1) ಅವರ ಪೈಕಿ ಅಲ್ಲಾಹುವಿನೊಂದಿಗೆ ಅತ್ಯಂತ ನಿಕಟವಾಗಿರುವವರು ಸಹ. ಅವರು ಅವನ ಕರುಣೆಯನ್ನು ಆಶಿಸುತ್ತಿರುವರು ಮತ್ತು ಅವನ ಶಿಕ್ಷೆಯನ್ನು ಭಯಪಡುತ್ತಿರುವರು. ಖಂಡಿತ ವಾಗಿಯೂ ತಮ್ಮ ರಬ್‌ನ ಶಿಕ್ಷೆಯು ಭಯಪಡ ಬೇಕಾದುದೇ ಆಗಿದೆ.

وَإِن مِّن قَرۡيَةٍ إِلَّا نَحۡنُ مُهۡلِكُوهَا قَبۡلَ يَوۡمِ ٱلۡقِيَٰمَةِ أَوۡ مُعَذِّبُوهَا عَذَابٗا شَدِيدٗاۚ كَانَ ذَٰلِكَ فِي ٱلۡكِتَٰبِ مَسۡطُورٗا ٥٨

58. ಪುನರುತ್ಥಾನದ ದಿನಕ್ಕಿಂತ ಮುಂಚೆ ನಾವು ನಾಶ ಮಾಡದ ಅಥವಾ ಕಠಿಣವಾಗಿ ಶಿಕ್ಷಿಸದ ಯಾವುದೇ ಊರೂ ಇರಲಾರದು. ಅದು ಗ್ರಂಥದಲ್ಲಿ ದಾಖಲಿಸಲ್ಪಟ್ಟ ವಿಷಯವಾಗಿದೆ.(2)

وَمَا مَنَعَنَآ أَن نُّرۡسِلَ بِٱلۡأٓيَٰتِ إِلَّآ أَن كَذَّبَ بِهَا ٱلۡأَوَّلُونَۚ وَءَاتَيۡنَا ثَمُودَ ٱلنَّاقَةَ مُبۡصِرَةٗ فَظَلَمُواْ بِهَاۚ وَمَا نُرۡسِلُ بِٱلۡأٓيَٰتِ إِلَّا تَخۡوِيفٗا ٥٩

59. ದೃಷ್ಟಾಂತಗಳನ್ನು ಕಳುಹಿಸಲು ನಮಗೆ ತಡೆಯಾಗಿ ಏನೂ ಇರಲಾರದು, ಪೂರ್ವಿಕರು ಅವುಗಳನ್ನು ನಿಷೇಧಿಸಿದರು ಎಂಬುದರ ಹೊರತು. ನಾವು ಸಮೂದ್ ಜನಾಂಗಕ್ಕೆ ಪ್ರತ್ಯಕ್ಷ ದೃಷ್ಟಾಂತವಾಗಿ ಒಂಟೆಯನ್ನು

---

1 ಮಲಕ್‌ಗಳು, ಪ್ರವಾದಿಗಳು, ಮಹಾತ್ಮರು ಮುಂತಾದವರೊಂದಿಗೆ ಪ್ರಾರ್ಥಿಸುವವರ ಮೂರ್ಖತನವನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಸರ್ವ ಪ್ರವಾದಿಗಳು ಮತ್ತು ಮಲಕ್‌ಗಳು ಅಲ್ಲಾಹುವಿನೊಂದಿಗೆ ನೇರವಾಗಿ ಪ್ರಾರ್ಥಿಸುವವರಾಗಿದ್ದಾರೆ. ಅಲ್ಲಾಹುವಿನೆಡೆಗೆ ಸಾಮೀಪ್ಯವನ್ನು ಗಳಿಸಲು ಅವನು ನಿಶ್ಚಯಿಸಿದ ಮಾರ್ಗವನ್ನು ಅವಲಂಬಿಸುವವರಾಗಿದ್ದಾರೆ. ಹೀಗಿರುವಾಗ ಅವರನ್ನು ಪ್ರೀತಿಸುವವರು ಅಲ್ಲಾಹುವೇತರರೊಂದಿಗೆ ಪ್ರಾರ್ಥಿಸಲು ಯಾವ ಸಮರ್ಥನೆಯಿದೆ?

2 ಪುನರುತ್ಥಾನಕ್ಕೆ ಮುಂಚಿತವಾಗಿ–ಅಂತ್ಯದಿನದಂದು–ಜಗತ್ತೆಲ್ಲವೂ ನಾಶವಾಗುವುದು. ಕಡು ಅಕ್ರಮಿಗಳ ಊರುಗಳನ್ನು ಅಲ್ಲಾಹು ಅದಕ್ಕಿಂತಲೂ ಮುಂಚೆಯೇ ನಾಶಗೊಳಿಸಲೂಬಹುದು. ಇದು ಅಲ್ಲಾಹುವಿನ ದಾಖಲೆಯಲ್ಲಿ–ಲೌಹುಲ್ ಮಹ್ಫೂಝ್‌ನಲ್ಲಿ– ಬರೆದಿಡಲಾಗಿದೆ.

ನೀಡಿದೆವು. ಆದರೆ ಅವರು ಅದರೊಂದಿಗೆ ಅಕ್ರಮವೆಸಗಿದರು. ಭಯಭೀತಿ ಉಂಟುಮಾಡುವ ಸಲುವಾಗಿಯೇ ವಿನಾ ನಾವು ದೃಷ್ಟಾಂತಗಳನ್ನು ಕಳುಹಿಸಲಾರೆವು.[1]

**60.** 'ಖಂಡಿತವಾಗಿಯೂ ತಮ್ಮ ರಬ್ ಜನರನ್ನು ಆವರಿಸಿರುವನು'[2] ಎಂದು ತಮ್ಮೊಂದಿಗೆ ನಾವು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ನಾವು ತಮಗೆ ತೋರಿಸಿರುವ ಆ ದೃಶ್ಯವನ್ನು ಮತ್ತು ಕುರ್‌ಆನ್‌ನಲ್ಲಿ ಶಪಿಸಲಾಗಿರುವ ವೃಕ್ಷವನ್ನು ನಾವು ಜನರಿಗೆ ಒಂದು ಪರೀಕ್ಷೆಯನ್ನಾಗಿಯೇ ವಿನಾ ಮಾಡಿರಲಿಲ್ಲ.[3] ನಾವು ಅವರನ್ನು ಭಯಪಡಿಸುತ್ತಿರುವೆವು. ಆದರೆ ಅದು ಅವರಿಗೆ ಪರಮ ಧಿಕ್ಕಾರದ ಹೊರತು ಇನ್ನೇನನ್ನೂ ಅಧಿಕಗೊಳಿಸಲಾರದು.

وَإِذۡ قُلۡنَا لَكَ إِنَّ رَبَّكَ أَحَاطَ بِٱلنَّاسِۚ
وَمَا جَعَلۡنَا ٱلرُّءۡيَا ٱلَّتِيٓ أَرَيۡنَٰكَ إِلَّا فِتۡنَةٗ
لِّلنَّاسِ وَٱلشَّجَرَةَ ٱلۡمَلۡعُونَةَ فِي ٱلۡقُرۡءَانِۚ
وَنُخَوِّفُهُمۡ فَمَا يَزِيدُهُمۡ إِلَّا طُغۡيَٰنٗا
كَبِيرٗا ٦٠

**61.** 'ನೀವು ಆದಮ್‌ರಿಗೆ ಸುಜೂದ್ ಮಾಡಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಆಗ ಅವರು ಸುಜೂದ್ ಮಾಡಿದರು, ಇಬ್ಲೀಸ್‌ನ ಹೊರತು. ಅವನು ಹೇಳಿದನು: 'ನೀನು ಜೇಡಿಮಣ್ಣಿನಿಂದ ಸೃಷ್ಟಿಸಿರುವವನಿಗೆ ನಾನು ಸುಜೂದ್ ಮಾಡುವುದೇ?'

وَإِذۡ قُلۡنَا لِلۡمَلَٰٓئِكَةِ ٱسۡجُدُواْ لِأٓدَمَ
فَسَجَدُوٓاْ إِلَّآ إِبۡلِيسَ قَالَ ءَأَسۡجُدُ لِمَنۡ
خَلَقۡتَ طِينٗا ٦١

**62.** ಅವನು ಹೇಳಿದನು: 'ನೀನು ನನಗಿಂತಲೂ ಹೆಚ್ಚು ಗೌರವ ನೀಡಿರುವ ಈತ ಯಾರೆಂದು ನನಗೆ ತಿಳಿಸಿಕೊಡು. ಖಂಡಿತವಾಗಿಯೂ ಪುನರುತ್ಥಾನದ ದಿನದವರೆಗೆ ನೀನು ನನಗೆ

قَالَ أَرَءَيۡتَكَ هَٰذَا ٱلَّذِي كَرَّمۡتَ عَلَيَّ
لَئِنۡ أَخَّرۡتَنِ إِلَىٰ يَوۡمِ ٱلۡقِيَٰمَةِ لَأَحۡتَنِكَنَّ
ذُرِّيَّتَهُۥٓ إِلَّا قَلِيلٗا ٦٢

1 ಜನರ ಮನಸ್ಸಿನಲ್ಲಿ ಭಯ ಮತ್ತು ಭಕ್ತಿಯನ್ನು ಉಂಟುಮಾಡುವುದಕ್ಕಾಗಿ ದೃಷ್ಟಾಂತಗಳನ್ನು ಅವತೀರ್ಣಗೊಳಿಸಲಾಗುತ್ತದೆ.

2 ಮನುಷ್ಯರು ಎಷ್ಟು ಅಹಂಕಾರಪಟ್ಟರೂ ಅವರು ಅಲ್ಲಾಹುವಿನ ನಿಯಂತ್ರಣದಲ್ಲೇ ಇರುವರು. ಅದರಿಂದ ಪಾರಾಗಲು ಅವರಿಗೆ ಸಾಧ್ಯವಾಗಲಾರದು.

3 ನಿಶಾಯಾತ್ರೆಯಲ್ಲಿ ಅಲ್ಲಾಹು ಪ್ರವಾದಿ(ﷺ)ರಿಗೆ ತೋರಿಸಿಕೊಟ್ಟ ದೃಶ್ಯಗಳ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ. ಪ್ರವಾದಿ(ﷺ)ರವರು ಅದನ್ನು ವಿವರಿಸಿಕೊಟ್ಟಾಗ ಸತ್ಯನಿಷೇಧಿಗಳು ತೀವ್ರವಾಗಿ ಗೇಲಿ ಮಾಡಿದರು. ನರಕದಲ್ಲಿ ಝುಕ್ಕೂಮ್ ಎಂಬ ಮರವಿದೆ ಮತ್ತು ದುರ್ಮಾರ್ಗಿಗಳು ಅದರಿಂದ ತಿನ್ನುವರು ಎಂದು ಕುರ್‌ಆನ್ ಪ್ರಸ್ತಾಪಿಸಿದಾಗಲೂ ಸತ್ಯನಿಷೇಧಿಗಳು ತೀವ್ರ ಸ್ವರೂಪದ ಪರಿಹಾಸ್ಯ ಮಾಡಿದರು. ಇವುಗಳೆಲ್ಲ ಅಗೋಚರ ವೃತ್ತಾಂತಗಳೊಂದಿಗೆ ಜನರ ಪ್ರತಿಕ್ರಿಯೆ ಹೇಗಿರುತ್ತದೆಯೆಂದು ಪರೀಕ್ಷಿಸುವ ಸಂದರ್ಭಗಳಾಗಿವೆ.

ಕಾಲಾವಕಾಶವನ್ನು ನೀಡುವುದಾದರೆ ಈತನ ಸಂತತಿಗಳ ಪೈಕಿ ಕೆಲವರನ್ನು ಹೊರತುಪಡಿಸಿ ಎಲ್ಲರನ್ನೂ ನಾನು ಶರಣಾಗಿಸಿ ಬಿಡುವೆನು'.

قَالَ ٱذۡهَبۡ فَمَن تَبِعَكَ مِنۡهُمۡ فَإِنَّ جَهَنَّمَ
جَزَآؤُكُمۡ جَزَآءً مَّوۡفُورًا ٦٣

**63.** ಅಲ್ಲಾಹು ಹೇಳಿದನು: 'ಹೊರಟುಹೋಗು! ಅವರ ಪೈಕಿ ಯಾರಾದರೂ ನಿನ್ನನ್ನು ಅನುಸರಿಸುವುದಾದರೆ ಖಂಡಿತವಾಗಿಯೂ ನಿಮ್ಮೆಲ್ಲರಿಗಿರುವ ಪ್ರತಿಫಲವು ನರಕಾಗ್ನಿಯಾಗಿರುವುದು. ಅದು ಪೂರ್ಣವಾದ ಪ್ರತಿಫಲವಾಗಿರುವುದು.

وَٱسۡتَفۡزِزۡ مَنِ ٱسۡتَطَعۡتَ مِنۡهُم بِصَوۡتِكَ
وَأَجۡلِبۡ عَلَيۡهِم بِخَيۡلِكَ وَرَجِلِكَ
وَشَارِكۡهُمۡ فِي ٱلۡأَمۡوَٰلِ وَٱلۡأَوۡلَٰدِ وَعِدۡهُمۡۚ
وَمَا يَعِدُهُمُ ٱلشَّيۡطَٰنُ إِلَّا غُرُورًا ٦٤

**64.** ಅವರ ಪೈಕಿ ನಿನಗೆ ಸಾಧ್ಯವಾಗುವವರೆಲ್ಲರನ್ನು ನಿನ್ನ ಧ್ವನಿಯ ಮೂಲಕ ಹುರಿದುಂಬಿಸು. ನಿನ್ನ ಅಶ್ವಸೇನೆ ಮತ್ತು ಕಾಲಾಳುಸೇನೆಯ ಮೂಲಕ ಅವರ ಮೇಲೆ ಮುಗಿಬೀಳು. ಸಂಪತ್ತಿನಲ್ಲಿಯೂ ಸಂತಾನಗಳಲ್ಲಿಯೂ ಅವರೊಂದಿಗೆ ಭಾಗಿಯಾಗು.[1] ಅವರಿಗೆ ವಾಗ್ದಾನ ಮಾಡು. ಅವರಿಗೆ ಸೈತಾನನು ಮಾಡುವ ವಾಗ್ದಾನವು ವಂಚನೆಯ ಹೊರತು ಇನ್ನೇನೂ ಆಗಿರಲಾರದು.

إِنَّ عِبَادِي لَيۡسَ لَكَ عَلَيۡهِمۡ سُلۡطَٰنٞۚ
وَكَفَىٰ بِرَبِّكَ وَكِيلٗا ٦٥

**65.** ಖಂಡಿತವಾಗಿಯೂ ನನ್ನ ದಾಸರು ಯಾರೋ ಅವರ ಮೇಲೆ ನಿನಗೆ ಯಾವುದೇ ಅಧಿಕಾರವೂ ಇರಲಾರದು. ಕಾರ್ಯನಿರ್ವಾಹಕನಾಗಿ ನಿನ್ನ ರಬ್ ಮಾತ್ರ ಸಾಕು'.

رَّبُّكُمُ ٱلَّذِي يُزۡجِي لَكُمُ ٱلۡفُلۡكَ فِي
ٱلۡبَحۡرِ لِتَبۡتَغُواْ مِن فَضۡلِهِۦٓۚ إِنَّهُۥ كَانَ
بِكُمۡ رَحِيمٗا ٦٦

**66.** ನಿಮಗೋಸ್ಕರ ಸಮುದ್ರದಲ್ಲಿ ಹಡಗನ್ನು ಚಲಾಯಿಸುತ್ತಿರುವವನು ನಿಮ್ಮ ರಬ್ಬಾಗಿರುವನು. ನೀವು ಅವನ ಅನುಗ್ರಹದಿಂದ ಅರಸುವ ಸಲುವಾಗಿ. ಖಂಡಿತವಾಗಿಯೂ ಅವನು ನಿಮ್ಮೊಂದಿಗೆ ಅತ್ಯಧಿಕ ದಯೆಯುಳ್ಳವನಾಗಿರುವನು.

---

1 ಕೌಟುಂಬಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಇಸ್ಲಾಮ್‌ಗೆ ವಿರುದ್ಧವಾದ ಮಾರ್ಗಗಳನ್ನು ಅವಲಂಬಿಸುವವರು ತಮ್ಮ ಜೀವನದಲ್ಲಿ ಸೈತಾನನಿಗೆ ಒಂದು ಪಾಲನ್ನು ನೀಡುವವರಾಗಿದ್ದಾರೆ.

67. ಸಮುದ್ರದಲ್ಲಿ ನಿಮಗೇನಾದರೂ ಹಾನಿ ತಟ್ಟಿದರೆ ನೀವು ಅಲ್ಲಾಹುವಿನ ಹೊರತು ಯಾರನ್ನೆಲ್ಲಾ ಕರೆದುಪ್ರಾರ್ಥಿಸುತ್ತಿರುವಿರೋ ಅವರೆಲ್ಲರೂ ಅಪ್ರತ್ಯಕ್ಷರಾಗುವರು.[1] ಆದರೆ ಅವನು ನಿಮ್ಮನ್ನು ಕಾಪಾಡಿ ದಡ ಸೇರಿಸಿದರೆ ನೀವು ವಿಮುಖರಾಗಿ ಬಿಡುವಿರಿ. ಮನುಷ್ಯನು ಅತ್ಯಂತ ಕೃತಘ್ನನಾಗಿರುವನು.

وَإِذَا مَسَّكُمُ ٱلضُّرُّ فِي ٱلْبَحْرِ ضَلَّ مَن تَدْعُونَ إِلَّآ إِيَّاهُ ۖ فَلَمَّا نَجَّىٰكُمْ إِلَى ٱلْبَرِّ أَعْرَضْتُمْ ۚ وَكَانَ ٱلْإِنسَٰنُ كَفُورًا ﴿٦٧﴾

68. ದಡದ ಒಂದು ಭಾಗದಲ್ಲಿ ಅವನು ನಿಮ್ಮನ್ನು ಆಳಕ್ಕೆ ಹುಗಿದು ಹೋಗುವಂತೆ ಮಾಡುವುದರ ಬಗ್ಗೆ ಅಥವಾ ಅವನು ನಿಮ್ಮ ಮೇಲೆ ಕಲ್ಲಿನ ಮಳೆಗೆರೆಯುವುದರ ಕುರಿತು ನೀವು ನಿರ್ಭೀತರಾಗಿರುವಿರಾ? ತರುವಾಯ ನಿಮ್ಮ ಸಂರಕ್ಷಣೆ ವಹಿಸುವವರಾಗಿ ಯಾರನ್ನೂ ನೀವು ಕಾಣಲಾರಿರಿ.

أَفَأَمِنتُمْ أَن يَخْسِفَ بِكُمْ جَانِبَ ٱلْبَرِّ أَوْ يُرْسِلَ عَلَيْكُمْ حَاصِبًا ثُمَّ لَا تَجِدُوا۟ لَكُمْ وَكِيلًا ﴿٦٨﴾

69. ಅಥವಾ ಅವನು ನಿಮ್ಮನ್ನು ಮತ್ತೊಮ್ಮೆ ಅಲ್ಲಿಗೆ (ಸಮುದ್ರಕ್ಕೆ) ಮರಳಿ ಕೊಂಡೊಯ್ದು, ನಿಮ್ಮ ಮೇಲೆ ಬಿರುಸಾದ ಒಂದು ಮಾರುತವನ್ನು ಕಳುಹಿಸಿ, ನೀವು ಅವಿಶ್ವಾಸವಿಟ್ಟ ಕಾರಣ ನಿಮ್ಮನ್ನು ಮುಳುಗಿಸಿ ಬಿಡುವ ಕುರಿತು ನೀವು ನಿರ್ಭೀತರಾಗಿರುವಿರಾ? ತರುವಾಯ ಅದರ ಕುರಿತು ನಮ್ಮ ವಿರುದ್ಧ ಕ್ರಮ ಕೈಗೊಳ್ಳಲು ಯಾರನ್ನೂ ನೀವು ಕಾಣಲಾರಿರಿ.

أَمْ أَمِنتُمْ أَن يُعِيدَكُمْ فِيهِ تَارَةً أُخْرَىٰ فَيُرْسِلَ عَلَيْكُمْ قَاصِفًا مِّنَ ٱلرِّيحِ فَيُغْرِقَكُم بِمَا كَفَرْتُمْ ۙ ثُمَّ لَا تَجِدُوا۟ لَكُمْ عَلَيْنَا بِهِۦ تَبِيعًا ﴿٦٩﴾

70. ಖಂಡಿತವಾಗಿಯೂ ನಾವು ಆದಮ್ ಸಂತತಿ ಗಳನ್ನು ಗೌರವಿಸಿರುವೆವು. ಅವರನ್ನು ನಾವು ಸಮುದ್ರದಲ್ಲೂ, ನೆಲದಲ್ಲೂ, ವಾಹನದಲ್ಲೂ ಸಾಗಿಸಿರುವೆವು.[2] ವಿಶಿಷ್ಟವಾದ ವಸ್ತುಗಳಿಂದ ಅವರಿಗೆ ನಾವು ಅನ್ನಾಧಾರವನ್ನು ಒದಗಿಸಿರುವೆವು. ನಾವು ಸೃಷ್ಟಿಸಿದವುಗಳ ಪೈಕಿ

۞ وَلَقَدْ كَرَّمْنَا بَنِىٓ ءَادَمَ وَحَمَلْنَٰهُمْ فِى ٱلْبَرِّ وَٱلْبَحْرِ وَرَزَقْنَٰهُم مِّنَ ٱلطَّيِّبَٰتِ وَفَضَّلْنَٰهُمْ عَلَىٰ كَثِيرٍ مِّمَّنْ خَلَقْنَا تَفْضِيلًا ﴿٧٠﴾

1 ಮಿಥ್ಯ ದೇವರುಗಳ ಆಲೋಚನೆಯು ಮನಸ್ಸಿನಿಂದ ಅಪ್ರತ್ಯಕ್ಷವಾಗಿ, ಪ್ರಾರ್ಥನೆಯನ್ನು ಅಲ್ಲಾಹುವಿಗೆ ಮಾತ್ರ ಸೀಮಿತಗೊಳಿಸುವರು ಎಂದರ್ಥ.

2 ವಾಹನವನ್ನು ಬಳಸುವ ಏಕೈಕ ಜೀವಿ ಮನುಷ್ಯನಾಗಿರುವನು. ಇತರ ಹಲವು ಅಂಶಗಳಂತೆಯೇ ಇದೂ ಅವನ ಮಹತ್ವವನ್ನು ಹೆಚ್ಚಿಸುತ್ತದೆ.

ಹೆಚ್ಚಿನವರಿಗಿಂತಲೂ ಅವರಿಗೆ ನಾವು ವಿಶೇಷ ಶ್ರೇಷ್ಠತೆಯನ್ನು ದಯಪಾಲಿಸಿರುವೆವು.

**71.** ನಾವು ಸಕಲ ಮನುಷ್ಯರನ್ನೂ ಅವರ ನಾಯಕರೊಂದಿಗೆ ಕರೆದು ಒಟ್ಟುಗೂಡಿಸುವ ದಿನ. ಆಗ ಯಾರಿಗೆ ತನ್ನ (ಕರ್ಮ) ಗ್ರಂಥವನ್ನು ತನ್ನ ಬಲಗೈಯಲ್ಲಿ ನೀಡಲಾಗುವುದೋ ಅಂತಹವರು ತಮ್ಮ ಗ್ರಂಥಗಳನ್ನು ಓದುವರು. ಅವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

يَوْمَ نَدْعُوا۟ كُلَّ أُنَاسٍۭ بِإِمَـٰمِهِمْ ۖ فَمَنْ أُوتِىَ كِتَـٰبَهُۥ بِيَمِينِهِۦ فَأُو۟لَـٰٓئِكَ يَقْرَءُونَ كِتَـٰبَهُمْ وَلَا يُظْلَمُونَ فَتِيلًا ﴿٧١﴾

**72.** ಯಾರು ಈ ಲೋಕದಲ್ಲಿ ಅಂಧನಾಗಿರುವನೋ ಅವನು ಪರಲೋಕದಲ್ಲೂ ಅಂಧನಾಗಿರುವನು.[1] ಅತ್ಯಂತ ಪಥಭ್ರಷ್ಟನೂ ಆಗಿರುವನು.

وَمَن كَانَ فِى هَـٰذِهِۦٓ أَعْمَىٰ فَهُوَ فِى ٱلْـَٔاخِرَةِ أَعْمَىٰ وَأَضَلُّ سَبِيلًا ﴿٧٢﴾

**73.** ಖಂಡಿತವಾಗಿಯೂ ನಾವು ತಮಗೆ ನೀಡಿರುವ ದಿವ್ಯಸಂದೇಶದಿಂದ ತಮ್ಮನ್ನು ಸರಿಸಿಬಿಡಲು ಅವರು ಸಿದ್ಧರಾಗಿರುವರು. ತಾವು ನಮ್ಮ ಮೇಲೆ ಅದಲ್ಲದ ಬೇರೇನನ್ನಾದರೂ ಹೆಣೆದು ರಚಿಸಬೇಕೆಂದು (ಅವರು ಬಯಸುತ್ತಿರುವರು). ಹಾಗಿರುತ್ತಿದ್ದರೆ ಅವರು ತಮ್ಮನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತಿದ್ದರು.

وَإِن كَادُوا۟ لَيَفْتِنُونَكَ عَنِ ٱلَّذِىٓ أَوْحَيْنَآ إِلَيْكَ لِتَفْتَرِىَ عَلَيْنَا غَيْرَهُۥ ۖ وَإِذًا لَّٱتَّخَذُوكَ خَلِيلًا ﴿٧٣﴾

**74.** ನಾವು ತಮ್ಮನ್ನು ಅಚಲವಾಗಿ ನಿಲ್ಲಿಸದಿರುತ್ತಿದ್ದರೆ ತಾವು ಅವರೆಡೆಗೆ ಸ್ವಲ್ಪವಾದರೂ ವಾಲುವಂತಾಗುತ್ತಿದ್ದಿರಿ.

وَلَوْلَآ أَن ثَبَّتْنَـٰكَ لَقَدْ كِدتَّ تَرْكَنُ إِلَيْهِمْ شَيْـًٔا قَلِيلًا ﴿٧٤﴾

**75.** ಹಾಗಿರುತ್ತಿದ್ದರೆ ಜೀವನದ ಇಮ್ಮಡಿ ಶಿಕ್ಷೆಯನ್ನು ಮತ್ತು ಮರಣದ ಇಮ್ಮಡಿ ಶಿಕ್ಷೆಯನ್ನು ತಾವು ಸವಿಯುವಂತೆ ನಾವು ಮಾಡುತ್ತಿದ್ದೆವು. ತರುವಾಯ ನಮ್ಮ ವಿರುದ್ಧ ತಮಗೆ ಸಹಾಯ ಮಾಡುವ ಯಾರನ್ನೂ ತಾವು ಕಾಣಲಾರಿರಿ.

إِذًا لَّأَذَقْنَـٰكَ ضِعْفَ ٱلْحَيَوٰةِ وَضِعْفَ ٱلْمَمَاتِ ثُمَّ لَا تَجِدُ لَكَ عَلَيْنَا نَصِيرًا ﴿٧٥﴾

**76.** ಖಂಡಿತವಾಗಿಯೂ ತಮ್ಮನ್ನು ಊರಿನಿಂದ ತೊಲಗಿಸಲು ಅವರು ಸಿದ್ಧರಾಗಿರುವರು.

وَإِن كَادُوا۟ لَيَسْتَفِزُّونَكَ مِنَ ٱلْأَرْضِ

---

1 ಪುರಾವೆಗಳನ್ನು ಕಂಡೂ ಸತ್ಯವನ್ನು ಸ್ವೀಕರಿಸದೆ ಇರುಳಲ್ಲಿ ಜೀವಿಸುವವನನ್ನು ಇಲ್ಲಿ ಅಂಧ ಎನ್ನಲಾಗಿದೆ. ಪರಲೋಕದಲ್ಲಿ ಯಾವುದೇ ರಕ್ಷಾಮಾರ್ಗವನ್ನು ಕಾಣದೆ ಅವರು ಅಂಧತ್ವದಲ್ಲಿಯೇ ಕಳೆಯುವರು.

لِيُخۡرِجُوكَ مِنۡهَاۖ وَإِذٗا لَّا يَلۡبَثُونَ خِلَٰفَكَ إِلَّا قَلِيلٗا ٧٦

ತಮ್ಮನ್ನು ಅಲ್ಲಿಂದ ಹೊರಗಟ್ಟುವುದೇ ಅವರ ಗುರಿಯಾಗಿದೆ. ಹಾಗಾದರೆ ತಮ್ಮ (ಹೊರಗಟ್ಟುವಿಕೆಯ) ಬಳಿಕ ಅವರು ಅಲ್ಪ ಸಮಯದವರೆಗೆ ಹೊರತು (ಅಲ್ಲಿ) ವಾಸಿಸಲಾರರು.

سُنَّةَ مَن قَدۡ أَرۡسَلۡنَا قَبۡلَكَ مِن رُّسُلِنَاۖ وَلَا تَجِدُ لِسُنَّتِنَا تَحۡوِيلًا ٧٧

77. ಇದು ತಮಗಿಂತ ಮುಂಚೆ ಕಳುಹಿಸಲಾದ ನಮ್ಮ ಸಂದೇಶವಾಹಕರ ವಿಷಯದಲ್ಲಿ ಕೈಗೊಳ್ಳಲಾಗಿರುವ ಕ್ರಮವಾಗಿದೆ.[1] ನಮ್ಮ ಕ್ರಮಕ್ಕೆ ಯಾವುದೇ ಬದಲಾವಣೆಯನ್ನೂ ತಾವು ಕಾಣಲಾರಿರಿ.

أَقِمِ ٱلصَّلَوٰةَ لِدُلُوكِ ٱلشَّمۡسِ إِلَىٰ غَسَقِ ٱلَّيۡلِ وَقُرۡءَانَ ٱلۡفَجۡرِۖ إِنَّ قُرۡءَانَ ٱلۡفَجۡرِ كَانَ مَشۡهُودٗا ٧٨

78. ಸೂರ್ಯನು (ಆಕಾಶಮಧ್ಯದಿಂದ) ಸರಿದ ಬಳಿಕ ಕತ್ತಲಾಗುವ ತನಕ (ನಿಗದಿತ ಸಮಯಗಳಲ್ಲಿ) ತಾವು ನಮಾಝನ್ನು ಸಂಸ್ಥಾಪಿಸಿರಿ.[2] ಕುರ್‌ಆನ್ ಪಾರಾಯಣ ಮಾಡಲಾಗುವ ಪ್ರಭಾತ ನಮಾಝನ್ನೂ (ಸಂಸ್ಥಾಪಿಸಿರಿ). ಖಂಡಿತವಾಗಿಯೂ ಪ್ರಭಾತ ನಮಾಝ್‌ನ ಕುರ್‌ಆನ್ ಪಾರಾಯಣವು ಸಾಕ್ಷ್ಯವಹಿಸಲ್ಪಡುವಂತದ್ದಾಗಿದೆ.[3]

وَمِنَ ٱلَّيۡلِ فَتَهَجَّدۡ بِهِۦ نَافِلَةٗ لَّكَ عَسَىٰٓ أَن يَبۡعَثَكَ رَبُّكَ مَقَامٗا مَّحۡمُودٗا ٧٩

79. ರಾತ್ರಿಯಲ್ಲಿ ಸ್ವಲ್ಪ ಸಮಯ ನಿದ್ದೆಗೆಟ್ಟು ತಾವು ಅದರೊಂದಿಗೆ (ಕುರ್‌ಆನ್ ಪಾರಾಯಣದೊಂದಿಗೆ) ನಮಾಝ್ ಮಾಡಿರಿ. ಅದು ತಮಗಿರುವ ಹೆಚ್ಚುವರಿಯಾಗಿರುವ ಒಂದು ಪುಣ್ಯಕರ್ಮವಾಗಿದೆ.[4] ತಮ್ಮ ರಬ್ ತಮ್ಮನ್ನು ಸ್ತುತ್ಯರ್ಹವಾದ ಒಂದು ಸ್ಥಾನಕ್ಕೆ ನಿಶ್ಚಯಿಸಲೂಬಹುದು.

---

1 ಪ್ರವಾದಿಗಳನ್ನು ಹೊರಗಟ್ಟಿದವರಿಗೆ ಮತ್ತು ಅವರನ್ನು ವಧಿಸಲು ಯತ್ನಿಸಿದವರಿಗೆ ಸತ್ಯದ ಸಂದೇಶವು ಒಮ್ಮೆಯೂ ಜನಪ್ರಿಯವಾಗಬಾರದು ಎಂಬ ಕೆಟ್ಟ ಹಟವು ಪ್ರೇರಣೆಯಾಗಿತ್ತು. ಆದರೆ ಸತ್ಯವನ್ನು ಸಮಾಧಿ ಮಾಡಿದೆವೆಂಬ ಸಂತೃಪ್ತಿಯೊಂದಿಗೆ ಹೆಚ್ಚು ಕಾಲ ನೆಮ್ಮದಿಯಾಗಿ ಕಳೆಯಲು ಅವರಿಗೆ ಅಲ್ಲಾಹು ಅವಕಾಶ ನೀಡಲಾರನು.

2 ಮಧ್ಯಾಹ್ನದ ನಂತರ ರಾತ್ರಿಯವರೆಗೆ ನಾಲ್ಕು ನಮಾಝ್‌ಗಳಿವೆ. ದುಹ್ರ್, ಅಸ್ರ್, ಮಗ್ರಿಬ್ ಮತ್ತು ಇಶಾ.

3 ರಾತ್ರಿ ಮತ್ತು ಹಗಲು ಮನುಷ್ಯನ ಕರ್ಮಗಳನ್ನು ಪರಿವೀಕ್ಷಣೆ ಮಾಡುತ್ತಿರಲು ಹೊಣೆ ವಹಿಸಲ್ಪಟ್ಟ ಮಲಕ್‌ಗಳು ಪ್ರಭಾತ ನಮಾಝ್‌ಗೆ ಸಾಕ್ಷಿಗಳಾಗಿರುವರು ಎಂದು ಹದೀಸ್‌ಗಳಿಂದ ತಿಳಿದುಬರುತ್ತದೆ.

4 ರಾತ್ರಿ ನಿದ್ದೆಯಿಂದೆದ್ದು ನಿರ್ವಹಿಸುವ ತಹಜ್ಜುದ್ ನಮಾಝ್ ಪ್ರವಾದಿ(ﷺ) ರವರಿಗೆ ಕಡ್ಡಾಯವಾಗಿದೆ ಮತ್ತು ಇತರ ಮುಸ್ಲಿಮರಿಗೆ ಐಚ್ಛಿಕವಾಗಿದೆಯೆಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

**80.** ಹೇಳಿರಿ: 'ಓ ನನ್ನ ರಬ್! ಸತ್ಯದ ಪ್ರವೇಶದ್ವಾರದ ಮೂಲಕ ನನ್ನನ್ನು ಒಳಸೇರಿಸು ಮತ್ತು ಸತ್ಯದ ನಿರ್ಗಮನದ್ವಾರದ ಮೂಲಕ ನನ್ನನ್ನು ಹೊರ ಕಳುಹಿಸು.[1] ನನಗೆ ನೆರವು ನೀಡುವ ಅಧಿಕೃತ ಶಕ್ತಿಯೊಂದನ್ನು[2] ನಿನ್ನ ವತಿಯಿಂದ ಮಾಡಿಕೊಡು'.

وَقُل رَّبِّ أَدۡخِلۡنِي مُدۡخَلَ صِدۡقٖ
وَأَخۡرِجۡنِي مُخۡرَجَ صِدۡقٖ وَٱجۡعَل لِّي مِن
لَّدُنكَ سُلۡطَٰنٗا نَّصِيرٗا ٨٠

**81.** ತಾವು ಹೇಳಿರಿ: 'ಸತ್ಯವು ಬಂದಿದೆ ಮತ್ತು ಮಿಥ್ಯವು ಅಳಿದಿದೆ. ಮಿಥ್ಯವು ಖಂಡಿತವಾಗಿಯೂ ಅಳಿಯುವಂತದ್ದೇ ಆಗಿದೆ'.

وَقُلۡ جَآءَ ٱلۡحَقُّ وَزَهَقَ ٱلۡبَٰطِلُۚ إِنَّ
ٱلۡبَٰطِلَ كَانَ زَهُوقٗا ٨١

**82.** ಸತ್ಯವಿಶ್ವಾಸಿಗಳಿಗೆ ಶಮನ ಮತ್ತು ಕಾರುಣ್ಯವಾಗಿರುವುದನ್ನು ನಾವು ಕುರ್‌ಆನ್‌ನ ಮೂಲಕ ಅವತೀರ್ಣಗೊಳಿಸುತ್ತಿರುವೆವು. ಅದು ಅಕ್ರಮಿಗಳಿಗೆ ನಷ್ಟವಲ್ಲದೆ (ಇನ್ನೇನನ್ನೂ) ಅಧಿಕಗೊಳಿಸಲಾರದು.

وَنُنَزِّلُ مِنَ ٱلۡقُرۡءَانِ مَا هُوَ شِفَآءٞ وَرَحۡمَةٞ
لِّلۡمُؤۡمِنِينَ وَلَا يَزِيدُ ٱلظَّٰلِمِينَ إِلَّا
خَسَارٗا ٨٢

**83.** ನಾವು ಮನುಷ್ಯನಿಗೆ ಅನುಗ್ರಹವನ್ನು ದಯಪಾಲಿಸಿದರೆ ಅವನು ವಿಮುಖನಾಗುವನು ಮತ್ತು ದೂರ ಸರಿಯುವನು. ಅವನಿಗೆ ಹಾನಿಯೇನಾದರೂ ತಟ್ಟಿದರೆ ಅವನು ಹತಾಶನಾಗುವನು.

وَإِذَآ أَنۡعَمۡنَا عَلَى ٱلۡإِنسَٰنِ أَعۡرَضَ وَنَـَٔا
بِجَانِبِهِۦ وَإِذَا مَسَّهُ ٱلشَّرُّ كَانَ يَـُٔوسٗا ٨٣

**84.** ತಾವು ಹೇಳಿರಿ: 'ಎಲ್ಲರೂ ತಮ್ಮ ತಮ್ಮ ಸಂಪ್ರದಾಯದಂತೆ ಕಾರ್ಯವೆಸಗುವರು. ಅತ್ಯಂತ ಸರಿಯಾದ ಮಾರ್ಗದಲ್ಲಿರುವವರು ಯಾರೆಂಬುದನ್ನು ತಮ್ಮ ರಬ್ ಚೆನ್ನಾಗಿ ಅರಿತಿರುವನು.

قُلۡ كُلّٞ يَعۡمَلُ عَلَىٰ شَاكِلَتِهِۦ فَرَبُّكُمۡ
أَعۡلَمُ بِمَنۡ هُوَ أَهۡدَىٰ سَبِيلٗا ٨٤

**85.** ಅವರು ತಮ್ಮೊಂದಿಗೆ ಆತ್ಮದ ಕುರಿತು ಪ್ರಶ್ನಿಸುವರು. ತಾವು ಹೇಳಿರಿ: 'ಆತ್ಮವು ನನ್ನ ರಬ್‌ನ ವಿಷಯದಲ್ಲಿ ಸೇರಿದ್ದಾಗಿದೆ. ನಿಮಗೆ ಜ್ಞಾನದಿಂದ ಸ್ವಲ್ಪವೇ ಹೊರತು ನೀಡಲಾಗಿಲ್ಲ'.

وَيَسۡـَٔلُونَكَ عَنِ ٱلرُّوحِۖ قُلِ ٱلرُّوحُ
مِنۡ أَمۡرِ رَبِّي وَمَآ أُوتِيتُم مِّنَ ٱلۡعِلۡمِ إِلَّا
قَلِيلٗا ٨٥

---

1 ನಾನು ಎತ್ತ ಪ್ರವೇಶಿಸುವುದಾದರೂ ಎಲ್ಲಿಂದ ನಿರ್ಗಮಿಸುವುದಾದರೂ ಅದನ್ನು ಸತ್ಯಸಂಧತೆಗೆ ಪೂರಕವಾಗಿರುವಂತೆ ಮಾಡು ಎಂದರ್ಥ.

2 ಸಂವಾದಗಳಲ್ಲೂ, ಯುದ್ಧಗಳಲ್ಲೂ, ಇತರ ಸಂದರ್ಭಗಳಲ್ಲೂ ಜಯಗಳಿಸಲು ಮಾನದಂಡವಾಗಿರುವ ಒಂದು ಅಧಿಕೃತ ಬೆಂಬಲ.

**86-87.** ನಾವು ಇಚ್ಛಿಸಿದ್ದರೆ ನಾವು ತಮಗೆ ನೀಡಿದ ದಿವ್ಯ ಸಂದೇಶವನ್ನು ಖಂಡಿತವಾಗಿಯೂ ಹಿಂದೆಗೆಯುತ್ತಿದ್ದೆವು. ತರುವಾಯ ಅದಕ್ಕಾಗಿ ನಮ್ಮ ವಿರುದ್ಧ ತಮಗೆ ಭರವಸೆಯಿಡಲು ಯೋಗ್ಯರಾದ ಯಾರನ್ನೂ ತಾವು ಕಾಣಲಾರಿರಿ.[1] ಅದು ತಮ್ಮ ರಬ್‌ನ ವತಿಯ ಕಾರುಣ್ಯವೇ ಹೊರತು ಇನ್ನೇನಲ್ಲ. ಖಂಡಿತವಾಗಿಯೂ ತಮ್ಮ ಮೇಲಿರುವ ಅವನ ಅನುಗ್ರಹವು ಮಹತ್ತರವಾಗಿದೆ.

وَلَئِن شِئۡنَا لَنَذۡهَبَنَّ بِٱلَّذِيٓ أَوۡحَيۡنَآ إِلَيۡكَ ثُمَّ لَا تَجِدُ لَكَ بِهِۦ عَلَيۡنَا وَكِيلًا ﴿٨٦﴾ إِلَّا رَحۡمَةٗ مِّن رَّبِّكَۚ إِنَّ فَضۡلَهُۥ كَانَ عَلَيۡكَ كَبِيرٗا ﴿٨٧﴾

**88.** (ಓ ಪ್ರವಾದಿಯವರೇ!) ಹೇಳಿರಿ: ‘ಈ ಕುರ್‌ಆನ್‌ಗೆ ಸಮಾನವಾಗಿರುವ ಒಂದನ್ನು ರಚಿಸಿ ತರಲು ಮನುಷ್ಯರು ಮತ್ತು ಜಿನ್ನ್‌ಗಳು ಒಟ್ಟುಗೂಡಿದರೂ ಸಹ ಖಂಡಿತವಾಗಿಯೂ ಇದಕ್ಕೆ ಸಮಾನವಾಗಿರುವುದನ್ನು ತರಲು ಅವರಿಂದಾಗದು. ಅವರಲ್ಲಿ ಕೆಲವರು ಇತರ ಕೆಲವರಿಗೆ ಬೆಂಬಲ ನೀಡಿದರೂ ಸರಿಯೇ’.

قُل لَّئِنِ ٱجۡتَمَعَتِ ٱلۡإِنسُ وَٱلۡجِنُّ عَلَىٰٓ أَن يَأۡتُواْ بِمِثۡلِ هَٰذَا ٱلۡقُرۡءَانِ لَا يَأۡتُونَ بِمِثۡلِهِۦ وَلَوۡ كَانَ بَعۡضُهُمۡ لِبَعۡضٖ ظَهِيرٗا ﴿٨٨﴾

**89.** ಖಂಡಿತವಾಗಿಯೂ ಈ ಕುರ್‌ಆನ್‌ನಲ್ಲಿ ನಾವು ಜನರಿಗೋಸ್ಕರ ಸರ್ವ ವಿಧದ ಉಪಮೆಗಳನ್ನೂ ವಿವರಿಸಿರುವೆವು. ಆದರೆ ಜನರಲ್ಲಿ ಹೆಚ್ಚಿನವರಿಗೂ ನಿಷೇಧಿಸುವುದಕ್ಕಾಗಿಯೇ ಹೊರತು ಮನಸ್ಸಾಗಲಿಲ್ಲ.

وَلَقَدۡ صَرَّفۡنَا لِلنَّاسِ فِي هَٰذَا ٱلۡقُرۡءَانِ مِن كُلِّ مَثَلٖ فَأَبَىٰٓ أَكۡثَرُ ٱلنَّاسِ إِلَّا كُفُورٗا ﴿٨٩﴾

**90.** ಅವರು ಹೇಳಿದರು: ‘ನೀನು ಭೂಮಿಯಿಂದ ಒಂದು ಒರತೆಯನ್ನು ಹರಿಸುವ ತನಕ ನಾವೆಂದೂ ನಿನ್ನಲ್ಲಿ ವಿಶ್ವಾಸವಿಡಲಾರೆವು.

وَقَالُواْ لَن نُّؤۡمِنَ لَكَ حَتَّىٰ تَفۡجُرَ لَنَا مِنَ ٱلۡأَرۡضِ يَنۢبُوعًا ﴿٩٠﴾

**91.** ಅಥವಾ ನಿನಗೆ ಖರ್ಜೂರ ಮತ್ತು ದ್ರಾಕ್ಷಿಯ ಒಂದು ತೋಟವಿದ್ದು, ನೀನು ಅದರ ನಡುವಿನಿಂದ ತುಂಬಿ ಹರಿಯುವ ಕಾಲುವೆಗಳನ್ನು ಹರಿಸುವ ತನಕ.’

أَوۡ تَكُونَ لَكَ جَنَّةٞ مِّن نَّخِيلٖ وَعِنَبٖ فَتُفَجِّرَ ٱلۡأَنۡهَٰرَ خِلَٰلَهَا تَفۡجِيرًا ﴿٩١﴾

1 ದಿವ್ಯ ಸಂದೇಶವನ್ನು ಅಲ್ಲಾಹು ಹಿಂದೆಗೆಯುವುದಾದರೆ ಅದನ್ನು ಮುಂದುವರಿಸುವ ವಿಷಯದಲ್ಲಿ ಭರವಸೆಯಿಡಲು ಯೋಗ್ಯರಾದ ಯಾರೂ ಇರಲಾರರು.

92. ಅಥವಾ ನೀನು ವಾದಿಸಿದಂತೆ ಆಕಾಶವನ್ನು ನಮ್ಮ ಮೇಲೆ ತುಂಡು ತುಂಡಾಗಿ ಬೀಳಿಸುವ ತನಕ[1] ಅಥವಾ ನೀನು ಅಲ್ಲಾಹುವನ್ನು ಮತ್ತು ಮಲಕ್‌ಗಳನ್ನು ಮುಖಾಮುಖಿಯಾಗಿ ತರುವ ತನಕ.

أَوْ تُسْقِطَ ٱلسَّمَآءَ كَمَا زَعَمْتَ عَلَيْنَا كِسَفًا أَوْ تَأْتِيَ بِٱللَّهِ وَٱلْمَلَٰٓئِكَةِ قَبِيلًا ﴿٩٢﴾

93. ಅಥವಾ ನಿನಗೆ ಒಂದು ಸ್ವರ್ಣ ಭವನವುಂಟಾಗುವ ತನಕ, ಅಥವಾ ನೀನು ಆಕಾಶಕ್ಕೆ ಏರಿ ಹೋಗುವ ತನಕ. ನಮಗೆ ಓದಬಹುದಾದ ಒಂದು ಗ್ರಂಥವನ್ನು ನೀನು ನಮ್ಮ ಬಳಿಗೆ ಇಳಿಸಿಕೊಡುವ ತನಕ ನೀನು ಏರಿ ಹೋಗಿರುವುದಾಗಿ ನಾವೆಂದೂ ವಿಶ್ವಾಸವಿಡಲಾರೆವು'. (ಓ ಪ್ರವಾದಿಯವರೇ!) ಹೇಳಿರಿ: 'ನನ್ನ ರಬ್ ಪರಮಪಾವನನು! ಸಂದೇಶವಾಹಕನಾಗಿರುವ ಒಬ್ಬ ಮಾನವ ಎಂಬುದರ ಹೊರತು ನಾನು ಇನ್ನೇನಾದರೂ ಆಗಿರುವೆನೇ?'[2]

أَوْ يَكُونَ لَكَ بَيْتٌ مِّن زُخْرُفٍ أَوْ تَرْقَىٰ فِي ٱلسَّمَآءِ وَلَن نُّؤْمِنَ لِرُقِيِّكَ حَتَّىٰ تُنَزِّلَ عَلَيْنَا كِتَٰبًا نَّقْرَؤُهُۥ ۗ قُلْ سُبْحَانَ رَبِّي هَلْ كُنتُ إِلَّا بَشَرًا رَّسُولًا ﴿٩٣﴾

94. ಜನರೆಡೆಗೆ ಸನ್ಮಾರ್ಗವು ಬಂದಾಗ ಅದರಲ್ಲಿ ವಿಶ್ವಾಸವಿಡಲು 'ಅಲ್ಲಾಹು ಒಬ್ಬ ಮನುಷ್ಯನನ್ನು ಸಂದೇಶವಾಹಕನಾಗಿ ಕಳುಹಿಸಿರುವನೇ?' ಎಂಬ ಅವರ ಮಾತಿನ ಹೊರತು ಬೇರೇನೂ ಅವರನ್ನು ತಡೆದಿರಲಿಲ್ಲ.

وَمَا مَنَعَ ٱلنَّاسَ أَن يُؤْمِنُوٓا۟ إِذْ جَآءَهُمُ ٱلْهُدَىٰٓ إِلَّآ أَن قَالُوٓا۟ أَبَعَثَ ٱللَّهُ بَشَرًا رَّسُولًا ﴿٩٤﴾

95. (ಓ ಪ್ರವಾದಿಯವರೇ!) ಹೇಳಿರಿ: 'ಭೂಮಿಯಲ್ಲಿರುವುದು ಶಾಂತವಾಗಿ ನಡೆಯುವ ಮಲಕ್‌ಗಳಾಗಿರುತ್ತಿದ್ದರೆ ನಾವು ಅವರೆಡೆಗೆ ಸಂದೇಶವಾಹಕನಾಗಿ ಆಕಾಶದಿಂದ ಒಬ್ಬ ಮಲಕ್‌ನನ್ನೇ ಇಳಿಸುತ್ತಿದ್ದೆವು'.

قُل لَّوْ كَانَ فِي ٱلْأَرْضِ مَلَٰٓئِكَةٌ يَمْشُونَ مُطْمَئِنِّينَ لَنَزَّلْنَا عَلَيْهِم مِّنَ ٱلسَّمَآءِ مَلَكًا رَّسُولًا ﴿٩٥﴾

96. ಹೇಳಿರಿ: 'ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅಲ್ಲಾಹು ಸಾಕು. ಖಂಡಿತವಾಗಿಯೂ ಅವನು ತನ್ನ ದಾಸರ

قُلْ كَفَىٰ بِٱللَّهِ شَهِيدًۢا بَيْنِي وَبَيْنَكُمْ ۚ إِنَّهُۥ كَانَ بِعِبَادِهِۦ خَبِيرًۢا بَصِيرًا ﴿٩٦﴾

1 ಲೋಕಾಂತ್ಯದ ಕುರಿತು ಕುರ್‌ಆನ್ ಪ್ರಸ್ತಾಪಿಸಿದ ಭವಿಷ್ಯಗಳನ್ನು ಗೇಲಿಮಾಡುತ್ತಾ ಅವರು ಹೀಗೆ ಹೇಳುತ್ತಿದ್ದರು.

2 ಸಾಕಷ್ಟು ಅದ್ಭುತ ಕಾರ್ಯಗಳನ್ನು ತೋರಿಸುವ ಶಕ್ತಿ ಪ್ರವಾದಿಗಳಿಗಿಲ್ಲ. ಅಲ್ಲಾಹು ಅವರ ಮೂಲಕ ಅದ್ಭುತ ಕಾರ್ಯಗಳನ್ನು ಪ್ರಕಟಿಸಲು ಇಚ್ಛಿಸುವಾಗ ಅವು ಸಂಭವಿಸುತ್ತವೆ.

ಕುರಿತು ಸೂಕ್ಷ್ಮವಾಗಿ ಅರಿಯುವವನೂ ವೀಕ್ಷಿಸುವವನೂ ಆಗಿರುವನು'.

97. ಅಲ್ಲಾಹು ಯಾರನ್ನು ಸನ್ಮಾರ್ಗದಲ್ಲಿ ಸೇರಿಸುವನೋ ಅವನು ಸನ್ಮಾರ್ಗವನ್ನು ಪಡೆದವನಾಗಿರುವನು. ಅವನು ಯಾರನ್ನು ದುರ್ಮಾರ್ಗದಲ್ಲಿ ಸೇರಿಸುವನೋ ಅವರ ರಕ್ಷಕರಾಗಿ ಅವನ ಹೊರತು ಇನ್ನಾರನ್ನೂ ತಾವು ಕಾಣಲಾರಿರಿ. ಪುನರುತ್ಥಾನ ದಿನದಂದು ನಾವವರನ್ನು ಅಧೋಮುಖಿಗಳಾಗಿ ಮತ್ತು ಅಂಧರೂ, ಮೂಕರೂ, ಕಿವುಡರೂ ಆಗಿ ಒಟ್ಟುಗೂಡಿಸುವೆವು. ಅವರ ವಾಸಸ್ಥಳವು ನರಕವಾಗಿರುವುದು. ಅದು ನಂದಿ ಹೋಗುವಾಗಲೆಲ್ಲ ನಾವು ಅವರಿಗೆ ಜ್ವಾಲೆಯನ್ನು ಹೆಚ್ಚಿಸಿಕೊಡುವೆವು.

وَمَن يَهْدِ ٱللَّهُ فَهُوَ ٱلْمُهْتَدِ ۖ وَمَن
يُضْلِلْ فَلَن تَجِدَ لَهُمْ أَوْلِيَآءَ مِن دُونِهِۦ ۖ
وَنَحْشُرُهُمْ يَوْمَ ٱلْقِيَـٰمَةِ عَلَىٰ وُجُوهِهِمْ
عُمْيًا وَبُكْمًا وَصُمًّا ۖ مَّأْوَىٰهُمْ جَهَنَّمُ ۖ كُلَّمَا
خَبَتْ زِدْنَـٰهُمْ سَعِيرًا ﴿٩٧﴾

98. ಅದು ಅವರು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿರುವುದಕ್ಕೆ ಮತ್ತು 'ನಾವು ಮೂಳೆಗಳಾಗಿ ಮತ್ತು ಶಿಥಿಲ ಅವಶೇಷಗಳಾಗಿಯೂ ಮಾರ್ಪಟ್ಟ ಬಳಿಕ ಹೊಸದೊಂದು ಸೃಷ್ಟಿಯಾಗಿ ಪುನರುತ್ಥಾನಗೊಳಿಸಲಾಗುವೆವೇ?' ಎಂದು ಅವರು ಹೇಳಿರುವುದಕ್ಕೆ ಅವರಿಗಿರುವ ಪ್ರತಿಫಲವಾಗಿದೆ.

ذَٰلِكَ جَزَآؤُهُم بِأَنَّهُمْ كَفَرُوا۟ بِـَٔايَـٰتِنَا
وَقَالُوٓا۟ أَءِذَا كُنَّا عِظَـٰمًا وَرُفَـٰتًا أَءِنَّا
لَمَبْعُوثُونَ خَلْقًا جَدِيدًا ﴿٩٨﴾

99. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿರುವ ಅಲ್ಲಾಹುವಿಗೆ ಇವರಂತಿರುವವರನ್ನು ಸೃಷ್ಟಿಸುವ ಸಾಮರ್ಥ್ಯವಿದೆಯೆಂದು ಅವರು ಮನಗಂಡಿಲ್ಲವೇ? ಅವನು ಅವರಿಗೊಂದು ಅವಧಿಯನ್ನು ನಿಶ್ಚಯಿಸಿರುವನು. ಅದರಲ್ಲಿ ಸಂದೇಹವೇ ಇಲ್ಲ. ಆದರೆ ಆ ಅಕ್ರಮಿಗಳಿಗೆ ನಿಷೇಧಿಸುವುದಕ್ಕಾಗಿಯೇ ಹೊರತು ಮನಸ್ಸಾಗಲಿಲ್ಲ.

۞ أَوَلَمْ يَرَوْا۟ أَنَّ ٱللَّهَ ٱلَّذِى خَلَقَ
ٱلسَّمَـٰوَٰتِ وَٱلْأَرْضَ قَادِرٌ عَلَىٰٓ أَن يَخْلُقَ
مِثْلَهُمْ وَجَعَلَ لَهُمْ أَجَلًا لَّا رَيْبَ فِيهِ
فَأَبَى ٱلظَّـٰلِمُونَ إِلَّا كُفُورًا ﴿٩٩﴾

قُل لَّوۡ أَنتُمۡ تَمۡلِكُونَ خَزَآئِنَ رَحۡمَةِ رَبِّيٓ إِذٗا لَّأَمۡسَكۡتُمۡ خَشۡيَةَ ٱلۡإِنفَاقِۚ وَكَانَ ٱلۡإِنسَٰنُ قَتُورٗا ﴿١٠٠﴾

100. (ಓ ಪ್ರವಾದಿಯವರೇ!) ಹೇಳಿರಿ: 'ನನ್ನ ರಬ್‌ನ ಕಾರುಣ್ಯದ ಖಜಾನೆಗಳು ನಿಮ್ಮ ಸ್ವಾಧೀನದಲ್ಲೇನಾದರೂ ಇರುತ್ತಿದ್ದರೆ ಖರ್ಚಾಗಬಹುದೆಂಬ ಭಯದಿಂದ ನೀವು ಹಿಡಿದಿಡುತ್ತಿದ್ದಿರಿ. ಮನುಷ್ಯನು ಕಡು ಜಿಪುಣನಾಗಿರುವನು'.

وَلَقَدۡ ءَاتَيۡنَا مُوسَىٰ تِسۡعَ ءَايَٰتِۭ بَيِّنَٰتٖۖ فَسۡـَٔلۡ بَنِيٓ إِسۡرَٰٓءِيلَ إِذۡ جَآءَهُمۡ فَقَالَ لَهُۥ فِرۡعَوۡنُ إِنِّي لَأَظُنُّكَ يَٰمُوسَىٰ مَسۡحُورٗا ﴿١٠١﴾

101. ಖಂಡಿತವಾಗಿಯೂ ನಾವು ಮೂಸಾರಿಗೆ ಸ್ಪಷ್ಟವಾದ ಒಂಬತ್ತು ದೃಷ್ಟಾಂತಗಳನ್ನು ನೀಡಿದ್ದೆವು. ಅವರು (ಮೂಸಾ) ಅವರ ಬಳಿಗೆ ಬಂದಾಗ, 'ಓ ಮೂಸಾ! ಖಂಡಿತವಾಗಿಯೂ ನಾನು ನಿನ್ನನ್ನು ಮಾಟಬಾಧಿತ ವ್ಯಕ್ತಿಯೆಂದು ಭಾವಿಸುತ್ತಿರುವೆನು' ಎಂದು ಫಿರ್‌ಔನ್ ಮೂಸಾರೊಂದಿಗೆ ಹೇಳಿದ ಸಂದರ್ಭದ ಕುರಿತು ಇಸ್ರಾಈಲ್ ಸಂತತಿಗಳೊಂದಿಗೆ ಕೇಳಿ ನೋಡಿರಿ.(1)

قَالَ لَقَدۡ عَلِمۡتَ مَآ أَنزَلَ هَٰٓؤُلَآءِ إِلَّا رَبُّ ٱلسَّمَٰوَٰتِ وَٱلۡأَرۡضِ بَصَآئِرَ وَإِنِّي لَأَظُنُّكَ يَٰفِرۡعَوۡنُ مَثۡبُورٗا ﴿١٠٢﴾

102. ಅವರು (ಮೂಸಾ) ಹೇಳಿದರು: 'ಇವುಗಳನ್ನು ಕಣ್ತೆರೆಸುವ ದೃಷ್ಟಾಂತಗಳಾಗಿ ಅವತೀರ್ಣಗೊಳಿಸಿದವನು ಆಕಾಶಗಳ ಮತ್ತು ಭೂಮಿಯ ರಬ್ ಮಾತ್ರವೇ ಹೊರತು ಇನ್ನಾರೂ ಅಲ್ಲವೆಂದು ಖಂಡಿತವಾಗಿಯೂ ನೀನು ಅರಿತುಕೊಂಡಿರುವೆ. 'ಓ ಫಿರ್‌ಔನ್! ಖಂಡಿತವಾಗಿಯೂ ನೀನು ನಾಶ ಹೊಂದಿದವನಾಗಿರುವೆ ಎಂದು ನಾನು ಭಾವಿಸುತ್ತಿರುವೆನು.

فَأَرَادَ أَن يَسۡتَفِزَّهُم مِّنَ ٱلۡأَرۡضِ فَأَغۡرَقۡنَٰهُ وَمَن مَّعَهُۥ جَمِيعٗا ﴿١٠٣﴾

103. ಅವನು ಅವರನ್ನು (ಇಸ್ರಾಈಲರನ್ನು) ಊರಿನಿಂದ ಹೊರಗಟ್ಟಲು ನಿರ್ಧರಿಸಿದನು. ಆದರೆ ನಾವು ಅವನನ್ನೂ ಅವನ ಜೊತೆಗಿರುವವರೆಲ್ಲರನ್ನೂ ಮುಳುಗಿಸಿದೆವು.

---

1 ಸತ್ಯನಿಷೇಧಿಗಳಿಗೆ ಪ್ರವಾದಿ ಮೂಸಾ(عَلَيۡهِ ٱلسَّلَامُ)ರವರ ಪ್ರವಾದಿತ್ವವು ಮನವರಿಕೆಯಾಗುವುದಕ್ಕಾಗಿ ಅಲ್ಲಾಹು ಅವರ ಮೂಲಕ ಒಂಬತ್ತು ಪುರಾವೆಗಳನ್ನು ತೋರಿಸಿಕೊಟ್ಟನು. ಒಂದು: ಅವರ ಕೈ ಬೆಳ್ಳಗಾಗುವುದು. ಎರಡು: ಅವರ ಬೆತ್ತ ಹಾವಾಗುವುದು. ಮೂರರಿಂದ ಒಂಬತ್ತರವರೆಗೆ ಇರುವಂತಹ ಪುರಾವೆಗಳು ಅವರ ವಿರೋಧಿಗಳ ಮೇಲೆ ಅಲ್ಲಾಹು ಇಳಿಸಿದ ಶಿಕ್ಷೆಗಳಾದ ಬರ, ಸಾಮಗ್ರಿಗಳ ಕೊರತೆ, ಪ್ರಳಯ, ಮಿಡತೆ, ಹೇನು, ಕಪ್ಪೆ ಮತ್ತು ರಕ್ತವಾಗಿದ್ದವು.

**104.** ಅವನ (ವಿನಾಶದ) ಬಳಿಕ ನಾವು ಇಸ್ರಾಈಲ್ ಸಂತತಿಗಳೊಂದಿಗೆ ಹೇಳಿದೆವು: 'ನೀವು ಈ ಭೂಮಿಯಲ್ಲಿ ವಾಸಿಸಿರಿ. ತರುವಾಯ ಪರಲೋಕದ ವಾಗ್ದಾನವು ಬಂದರೆ[1] ನಿಮ್ಮೆಲ್ಲರನ್ನೂ ನಾವು ಒಟ್ಟಾಗಿ ಕರೆತರುವೆವು'.

وَقُلْنَا مِنۢ بَعْدِهِۦ لِبَنِىٓ إِسْرَٰٓءِيلَ ٱسْكُنُوا۟ ٱلْأَرْضَ فَإِذَا جَآءَ وَعْدُ ٱلْـَٔاخِرَةِ جِئْنَا بِكُمْ لَفِيفًا ﴿١٠٤﴾

**105.** ಇದನ್ನು (ಕುರ್‌ಆನನ್ನು) ನಾವು ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು. ಇದು ಸತ್ಯದೊಂದಿಗೇ ಅವತೀರ್ಣಗೊಂಡಿದೆ.[2] ತಮ್ಮನ್ನು ನಾವು ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿ ಹೊರತು ಕಳುಹಿಸಿಲ್ಲ.

وَبِٱلْحَقِّ أَنزَلْنَٰهُ وَبِٱلْحَقِّ نَزَلَ ۗ وَمَآ أَرْسَلْنَٰكَ إِلَّا مُبَشِّرًا وَنَذِيرًا ﴿١٠٥﴾

**106.** ತಾವು ಜನರಿಗೆ ಸಾವಕಾಶವಾಗಿ ಓದಿಕೊಡುವ ಸಲುವಾಗಿ ನಾವು ಕುರ್‌ಆನನ್ನು (ಹಲವು ಭಾಗಗಳಾಗಿ) ವಿಂಗಡಿಸಿರುವೆವು. ನಾವು ಅದನ್ನು ಹಂತ ಹಂತವಾಗಿ ಅವತೀರ್ಣಗೊಳಿಸಿರುವೆವು.

وَقُرْءَانًا فَرَقْنَٰهُ لِتَقْرَأَهُۥ عَلَى ٱلنَّاسِ عَلَىٰ مُكْثٍ وَنَزَّلْنَٰهُ تَنزِيلًا ﴿١٠٦﴾

**107.** (ಓ ಪ್ರವಾದಿಯವರೇ!) ಹೇಳಿರಿ 'ನೀವು ಇದರಲ್ಲಿ (ಕುರ್‌ಆನ್‌ನಲ್ಲಿ) ವಿಶ್ವಾಸವಿಡಿರಿ ಅಥವಾ ವಿಶ್ವಾಸವಿಡದಿರಿ. ಖಂಡಿತವಾಗಿಯೂ ಈ ಮೊದಲು ಜ್ಞಾನವನ್ನು ನೀಡಲಾಗಿರುವವರು ಯಾರೋ ಅವರಿಗೆ ಇದನ್ನು ಓದಿಕೊಡಲಾದರೆ ಅವರು ಸಾಷ್ಟಾಂಗವೆರಗುತ್ತಾ ಮುಖಗಳ ಮೇಲೆ ಬೀಳುವರು'.[3]

قُلْ ءَامِنُوا۟ بِهِۦٓ أَوْ لَا تُؤْمِنُوٓا۟ ۚ إِنَّ ٱلَّذِينَ أُوتُوا۟ ٱلْعِلْمَ مِن قَبْلِهِۦٓ إِذَا يُتْلَىٰ عَلَيْهِمْ يَخِرُّونَ لِلْأَذْقَانِ سُجَّدًا ﴿١٠٧﴾

**108.** ಅವರು ಹೇಳುವರು: 'ನಮ್ಮ ರಬ್ ಪರಮ ಪಾವನನು! ಖಂಡಿತವಾಗಿಯೂ ನಮ್ಮ ರಬ್‌ನ ವಾಗ್ದಾನವು ಜಾರಿಯಾಗುವಂತದ್ದೇ ಆಗಿದೆ'.

وَيَقُولُونَ سُبْحَٰنَ رَبِّنَآ إِن كَانَ وَعْدُ رَبِّنَا لَمَفْعُولًا ﴿١٠٨﴾

1 ಪರಲೋಕದಲ್ಲಿ ಮನುಷ್ಯರನ್ನು ಸಂಪೂರ್ಣವಾಗಿ ಒಟ್ಟುಗೂಡಿಸುವೆನೆಂದು ಅಲ್ಲಾಹು ವಾಗ್ದಾನ ಮಾಡಿದ ಸಮಯವು ಬಂದರೆ ಎಂದರ್ಥ.

2 ಕುರ್‌ಆನ್ ಅಲ್ಲಾಹುವಿನ ಸನ್ನಿಧಿಯಿಂದ ಪ್ರವಾದಿ(ﷺ)ರವರಿಗೆ ತಲುಪುವುದರ ಮಧ್ಯೆ ಅದಕ್ಕೆ ಅಸತ್ಯದ ಯಾವುದೇ ಅಂಶವೂ ಬೆರೆತಿಲ್ಲ ಎಂದರ್ಥ.

3 ಪೂರ್ವಗ್ರಂಥಗಳ ತಿರುಳನ್ನು ಸರಿಯಾಗಿ ಮನದಟ್ಟು ಮಾಡಿಕೊಂಡವರು ಕುರ್‌ಆನನ್ನು ಆಲಿಸುವಾಗ ಅದರ ಅಧಿಕೃತತೆಯನ್ನು ಗ್ರಹಿಸಿ ಅಲ್ಲಾಹುವಿಗೆ ಸಾಷ್ಟಾಂಗ ಮಾಡುವರು.

109. ಅವರು ಅಳುತ್ತಾ ಮುಖಗಳ ಮೇಲೆ ಬೀಳುವರು. ಅದು ಅವರಿಗೆ ವಿನಮ್ರತೆಯನ್ನು ಅಧಿಕಗೊಳಿಸುವುದು.

وَيَخِرُّونَ لِلْأَذْقَانِ يَبْكُونَ وَيَزِيدُهُمْ خُشُوعًا ۩ ﴿١٠٩﴾

110. (ಓ ಪ್ರವಾದಿಯವರೇ!) ಹೇಳಿರಿ: 'ನೀವು ಅಲ್ಲಾಹು ಎಂದು ಕರೆಯಿರಿ ಅಥವಾ ರಹ್ಮಾನ್ ಎಂದು ಕರೆಯಿರಿ. ನೀವು ಯಾವ ಹೆಸರಲ್ಲಿ ಕರೆದರೂ ಅತ್ಯುತ್ಕೃಷ್ಟವಾದ ನಾಮಗಳು ಅವನಿಗಿರುವುದಾಗಿವೆ. ತಾವು ನಮಾಝುನ್ನು ಉಚ್ಛಧ್ವನಿಯಲ್ಲಾಗಲಿ ಮೆಲುಧ್ವನಿಯಲ್ಲಾಗಲಿ ನಿರ್ವಹಿಸದಿರಿ. ಅವುಗಳ ನಡುವಿನ ಮಾರ್ಗವನ್ನು ಅರಸಿರಿ'.

قُلِ ٱدْعُوا۟ ٱللَّهَ أَوِ ٱدْعُوا۟ ٱلرَّحْمَٰنَ ۖ أَيًّا مَّا تَدْعُوا۟ فَلَهُ ٱلْأَسْمَآءُ ٱلْحُسْنَىٰ ۚ وَلَا تَجْهَرْ بِصَلَاتِكَ وَلَا تُخَافِتْ بِهَا وَٱبْتَغِ بَيْنَ ذَٰلِكَ سَبِيلًا ﴿١١٠﴾

111. ಹೇಳಿರಿ: 'ಸಂತಾನವನ್ನು ಮಾಡಿಕೊಳ್ಳದಿರುವ, ಆಧಿಪತ್ಯದಲ್ಲಿ ಸಹಭಾಗಿಯಿಲ್ಲದಿರುವ ಮತ್ತು ನಿಂದ್ಯತೆಯಿಂದ ರಕ್ಷಿಸಿಕೊಳ್ಳಲು ಯಾವುದೇ ರಕ್ಷಕನ ಅಗತ್ಯವಿಲ್ಲದಿರುವ ಅಲ್ಲಾಹುವಿಗೆ ಸ್ತುತಿ'. ಅವನನ್ನು ಸರಿಯಾದ ವಿಧದಲ್ಲಿ ಮಹತ್ವೀಕರಿಸಿರಿ.

وَقُلِ ٱلْحَمْدُ لِلَّهِ ٱلَّذِى لَمْ يَتَّخِذْ وَلَدًا وَلَمْ يَكُن لَّهُۥ شَرِيكٌ فِى ٱلْمُلْكِ وَلَمْ يَكُن لَّهُۥ وَلِىٌّ مِّنَ ٱلذُّلِّ ۖ وَكَبِّرْهُ تَكْبِيرًۢا ﴿١١١﴾

## ಅಲ್‌ಕಹ್ಫ್ (ಗುಹೆ)[1]

## سُورَةُ الكَهۡفِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 110

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-2.** ತನ್ನ ದಾಸನ ಮೇಲೆ ಗ್ರಂಥವನ್ನು ಅವತೀರ್ಣಗೊಳಿಸಿರುವ ಅಲ್ಲಾಹುವಿಗೆ ಸ್ತುತಿ. ಅವನು ಅದರಲ್ಲಿ ಯಾವುದೇ ವಕ್ರತೆಯನ್ನುಂಟುಮಾಡದೆ ನೇರವಾದ ವಿಧದಲ್ಲಾಗಿಸಿರುವನು. ಇದು ಅವನ ವತಿಯ ಕಠಿಣವಾದ ಶಿಕ್ಷೆಯ ಕುರಿತು ಮುನ್ನೆಚ್ಚರಿಕೆ ನೀಡುವ ಸಲುವಾಗಿ ಮತ್ತು ಸತ್ಕರ್ಮಗೈಯ್ಯುವ ಸತ್ಯವಿಶ್ವಾಸಿಗಳಿಗೆ ಉತ್ತಮವಾದ ಪ್ರತಿಫಲವಿದೆಯೆಂಬ ಶುಭವಾರ್ತೆಯನ್ನು ತಿಳಿಸುವ ಸಲುವಾಗಿದೆ.

ٱلۡحَمۡدُ لِلَّهِ ٱلَّذِيٓ أَنزَلَ عَلَىٰ عَبۡدِهِ ٱلۡكِتَٰبَ وَلَمۡ يَجۡعَل لَّهُۥ عِوَجَاۜ ١ قَيِّمٗا لِّيُنذِرَ بَأۡسٗا شَدِيدٗا مِّن لَّدُنۡهُ وَيُبَشِّرَ ٱلۡمُؤۡمِنِينَ ٱلَّذِينَ يَعۡمَلُونَ ٱلصَّٰلِحَٰتِ أَنَّ لَهُمۡ أَجۡرًا حَسَنٗا ٢

**3.** ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

مَّٰكِثِينَ فِيهِ أَبَدٗا ٣

**4.** ‘ಅಲ್ಲಾಹು ಸಂತಾನವನ್ನು ಮಾಡಿಕೊಂಡಿರುವನು’ ಎಂದು ಹೇಳಿದವರಿಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿಯೂ ಆಗಿದೆ.

وَيُنذِرَ ٱلَّذِينَ قَالُواْ ٱتَّخَذَ ٱللَّهُ وَلَدٗا ٤

**5.** ಅವರಿಗಾಗಲಿ, ಅವರ ಪೂರ್ವಿಕರಿಗಾಗಲಿ ಅದರ ಕುರಿತು ಯಾವುದೇ ಅರಿವಿಲ್ಲ. ಅವರ ಬಾಯಿಯಿಂದ ಹೊರಬರುವ ಆ ಮಾತು ಗಂಭೀರವಾದುದಾಗಿದೆ. ಅವರು ಸುಳ್ಳನ್ನೇ ಹೊರತು ನುಡಿಯುವುದಿಲ್ಲ.

مَّا لَهُم بِهِۦ مِنۡ عِلۡمٖ وَلَا لِأٓبَآئِهِمۡۚ كَبُرَتۡ كَلِمَةٗ تَخۡرُجُ مِنۡ أَفۡوَٰهِهِمۡۚ إِن يَقُولُونَ إِلَّا كَذِبٗا ٥

**6.** ಆದ್ದರಿಂದ ಅವರು ಈ ಸಂದೇಶದಲ್ಲಿ ವಿಶ್ವಾಸವಿಡದಿದ್ದರೆ, ಅವರು ವಿಮುಖರಾಗಿ ಹೋಗಿರುವುದರಿಂದಾಗಿ (ಅದರ ಸಂಕಟದಿಂದಾಗಿ) ತಾವು ತಮ್ಮ ಜೀವಕ್ಕೆ

فَلَعَلَّكَ بَٰخِعٞ نَّفۡسَكَ عَلَىٰٓ ءَاثَٰرِهِمۡ إِن لَّمۡ يُؤۡمِنُواْ بِهَٰذَا ٱلۡحَدِيثِ أَسَفًا ٦

1 ಅಲ್ಲಾಹು ಕೆಲವು ಸತ್ಯವಿಶ್ವಾಸಿ ಯುವಕರನ್ನು ಮೂರು ಶತಮಾನಗಳ ಕಾಲ ಒಂದು ಗುಹೆಯಲ್ಲಿ ನಿದ್ರೆಗೆ ಶರಣಾಗಿಸಿ ತರುವಾಯ ಅವರನ್ನು ಎಬ್ಬಿಸಿದ ಚರಿತ್ರೆಯನ್ನು ವಿವರಿಸುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

ಅಪಾಯವನ್ನು ತಂದೊಡ್ಡುವವರಾಗಲೂ ಬಹುದು.(1)

إِنَّا جَعَلْنَا مَا عَلَى ٱلْأَرْضِ زِينَةً لَّهَا لِنَبْلُوَهُمْ أَيُّهُمْ أَحْسَنُ عَمَلًا ۝٧

7. ಖಂಡಿತವಾಗಿಯೂ ನಾವು ಭೂಮಿಯ ಮೇಲಿರುವುದನ್ನು ಅದಕ್ಕೊಂದು ಅಲಂಕಾರವಾಗಿ ಮಾಡಿರುವೆವು. ಮನುಷ್ಯರ ಪೈಕಿ ಅತ್ಯುತ್ತಮವಾಗಿ ಕರ್ಮವೆಸಗುವವರು ಯಾರೆಂಬುದನ್ನು ನಾವು ಪರೀಕ್ಷಿಸುವ ಸಲುವಾಗಿ.(2)

وَإِنَّا لَجَٰعِلُونَ مَا عَلَيْهَا صَعِيدًا جُرُزًا ۝٨

8. ಖಂಡಿತವಾಗಿಯೂ ಅದರ ಮೇಲಿರುವುದನ್ನು ನಾಶಗೊಳಿಸಿ ನಾವು ಅದನ್ನೊಂದು ಬರಡು ಪ್ರದೇಶವನ್ನಾಗಿ ಮಾಡುವೆವು.(3)

أَمْ حَسِبْتَ أَنَّ أَصْحَٰبَ ٱلْكَهْفِ وَٱلرَّقِيمِ كَانُوا۟ مِنْ ءَايَٰتِنَا عَجَبًا ۝٩

9. ಗುಹೆಯ ಮತ್ತು 'ರಕೀಮ್'ನ ಜನರು ನಮ್ಮ ದೃಷ್ಟಾಂತಗಳ ಪೈಕಿ ಒಂದು ಅದ್ಭುತವಾಗಿರುವವರು ಎಂದು ತಾವು ಭಾವಿಸಿರುವಿರಾ?(4)

إِذْ أَوَى ٱلْفِتْيَةُ إِلَى ٱلْكَهْفِ فَقَالُوا۟ رَبَّنَآ ءَاتِنَا مِن لَّدُنكَ رَحْمَةً وَهَيِّئْ لَنَا مِنْ أَمْرِنَا رَشَدًا ۝١٠

10. ಆ ಯುವಕರು ಗುಹೆಯಲ್ಲಿ ಆಶ್ರಯ ಪಡೆದ ಸಂದರ್ಭ.(5) ಅವರು ಹೇಳಿದರು: 'ಓ ನಮ್ಮ ರಬ್! ನಿನ್ನ ವತಿಯ ಕಾರುಣ್ಯವನ್ನು ನಮಗೆ ದಯಪಾಲಿಸು ಮತ್ತು ನಮ್ಮ ಕಾರ್ಯವನ್ನು ಸರಿಯಾದ ವಿಧದಲ್ಲಿ ನಿರ್ವಹಿಸಲು ನಮಗೆ ಅನುಕೂಲಮಾಡಿಕೊಡು'.

---

1 ಜನರು ಸತ್ಯವನ್ನು ಸ್ವೀಕರಿಸದಿರುವುದರಿಂದ ಮನನೊಂದು ಸಂಕಟಪಡಬೇಕಾಗಿಲ್ಲವೆಂದು ಅಲ್ಲಾಹು ಪ್ರವಾದಿ(ﷺ)ರನ್ನು ಸಾಂತ್ವನಪಡಿಸುತ್ತಿದ್ದಾನೆ. ಜನರನ್ನು ವಿಶ್ವಾಸಿಗಳಾಗಿ ಮಾಡುವುದು ಅವರ ಹೊಣೆಯಲ್ಲ. ಅವರ ಕರ್ತವ್ಯವು ಸತ್ಯವನ್ನು ತಿಳಿಸಿಕೊಡುವುದು ಮಾತ್ರವಾಗಿದೆ.

2 ಅಲ್ಲಾಹು ನೀಡಿದ ಜೀವನಾಲಂಕಾರಗಳೊಂದಿಗೆ ಸಹಜವಾದ ರೀತಿಯಲ್ಲಿ ಪ್ರತಿಕ್ರಿಯಿಸುವವರು ಯಾರೆಂದು ಪರೀಕ್ಷಿಸುವ ಸಲುವಾಗಿ.

3 ಇದು ಲೋಕಾಂತ್ಯವಾಗುವಾಗ ಭೂಮಿಗೆ ಅಲ್ಲಾಹು ಮಾಡುವ ಬದಲಾವಣೆಯ ಕುರಿತಾದ ಸೂಚನೆಯಾಗಿದೆ.

4 ಗುಹಾವಾಸಿಗಳ ಕುರಿತು ಕುರ್‌ಆನಿನ ವಿವರಣೆ ಇಲ್ಲಿಂದ ಆರಂಭಗೊಳ್ಳುತ್ತದೆ. ಗುಹಾವಾಸಿಗಳ ಚರಿತ್ರೆ ಕುರ್‌ಆನ್ ಅವತೀರ್ಣ ಕಾಲದಲ್ಲಿ ಅರಬ್ಬರ ಮಧ್ಯೆ ಮನೆಮಾತಾಗಿತ್ತು. ಅತ್ಯಂತ ದೊಡ್ಡ ಅದ್ಭುತವಾಗಿ ಅವರದನ್ನು ಗಣಿಸಿದ್ದರು. ಆದರೆ ಅಲ್ಲಾಹುವಿನ ಇನ್ನೂ ಅನೇಕ ಅದ್ಭುತಕರವಾದ ದೃಷ್ಟಾಂತಗಳಿವೆ. ಈ ಘಟನೆಯು ಅವುಗಳ ಪೈಕಿ ಅಷ್ಟೊಂದು ಅದ್ಭುತಕರವಲ್ಲದ ಒಂದಾಗಿದೆ. ರಕೀಮ್ ಎಂಬುದು ಆ ಗುಹೆಯಿರುವ ಸ್ಥಳದ ಹೆಸರಾಗಿದೆ ಅಥವಾ ಗುಹಾವಾಸಿಗಳ ಹೆಸರುಗಳನ್ನು ಬರೆದಿಡಲಾದ ಹಲಗೆಯಾಗಿದೆ ಎಂದು ಹೇಳಲಾಗುತ್ತದೆ.

5 ಆ ಯುವಕರು ಅಚಂಚಲ ಏಕದೇವವಿಶ್ವಾಸಿಗಳಾಗಿದ್ದರು. ಆದರೆ ಆ ರಾಜ್ಯವನ್ನು ಆಳುತ್ತಿದ್ದ ದಖ್ಯಾನೂಸ್ ಎಂಬ ಅರಸನು ಏಕದೇವವಿಶ್ವಾಸದ ಕಡು ವಿರೋಧಿಯಾಗಿದ್ದನು. ವಿಗ್ರಹಾರಾಧನೆ ಮಾಡಲು ಸಿದ್ಧರಿಲ್ಲದವರನ್ನು ವಧಿಸಬೇಕೆಂದು ಅರಸನು ಆಜ್ಞೆಯಿತ್ತಾಗ ಈ ಯುವಕರು ಪಲಾಯನ ಮಾಡಿ ಗುಹೆಯೊಳಗೆ ಆಶ್ರಯಪಡೆದರು.

فَضَرَبْنَا عَلَىٰٓ ءَاذَانِهِمْ فِى ٱلْكَهْفِ سِنِينَ عَدَدًا ﴿١١﴾

**11.** ಹೀಗೆ ನಾವು ಹಲವಾರು ವರ್ಷಗಳ ಕಾಲ ಆ ಗುಹೆಯಲ್ಲಿ ಅವರ ಕಿವಿಗಳನ್ನು ಮುಚ್ಚಿದೆವು (ಅವರನ್ನು ನಿದ್ದೆಗೆ ಶರಣಾಗಿಸಿದೆವು).[1]

ثُمَّ بَعَثْنَٰهُمْ لِنَعْلَمَ أَىُّ ٱلْحِزْبَيْنِ أَحْصَىٰ لِمَا لَبِثُوٓا۟ أَمَدًا ﴿١٢﴾

**12.** ತರುವಾಯ ನಾವು ಅವರನ್ನು ಎಬ್ಬಿಸಿದೆವು; ಅವರು (ಗುಹೆಯಲ್ಲಿ) ತಂಗಿದ ಅವಧಿಯ ಕುರಿತು ಎರಡು ಗುಂಪುಗಳ ಪೈಕಿ[2] ಖಚಿತವಾಗಿ ಅರಿಯುವವರು ಯಾರೆಂದು ತಿಳಿಯುವ ಸಲುವಾಗಿ.

نَّحْنُ نَقُصُّ عَلَيْكَ نَبَأَهُم بِٱلْحَقِّ ۚ إِنَّهُمْ فِتْيَةٌ ءَامَنُوا۟ بِرَبِّهِمْ وَزِدْنَٰهُمْ هُدًى ﴿١٣﴾

**13.** ಅವರ ವೃತ್ತಾಂತವನ್ನು ನಾವು ತಮಗೆ ನೈಜ ರೂಪದಲ್ಲಿ ವಿವರಿಸಿಕೊಡುವೆವು. ಅವರು ತಮ್ಮ ರಬ್‌ನಲ್ಲಿ ವಿಶ್ವಾಸವಿಟ್ಟಿದ್ದ ಕೆಲವು ಯುವಕರಾಗಿದ್ದರು. ನಾವು ಅವರಿಗೆ ಸನ್ಮಾರ್ಗವನ್ನು ಹೆಚ್ಚಿಸಿಕೊಟ್ಟೆವು.

وَرَبَطْنَا عَلَىٰ قُلُوبِهِمْ إِذْ قَامُوا۟ فَقَالُوا۟ رَبُّنَا رَبُّ ٱلسَّمَٰوَٰتِ وَٱلْأَرْضِ لَن نَّدْعُوَا۟ مِن دُونِهِۦٓ إِلَٰهًا ۖ لَّقَدْ قُلْنَآ إِذًا شَطَطًا ﴿١٤﴾

**14.** ‘ನಮ್ಮ ರಬ್ ಆಕಾಶಗಳ ಮತ್ತು ಭೂಮಿಯ ರಬ್ಬಾಗಿರುವನು. ಅವನ ಹೊರತು ಅನ್ಯ ಆರಾಧ್ಯರೊಂದಿಗೆ ನಾವೆಂದೂ ಪ್ರಾರ್ಥಿಸಲಾರೆವು. ಹಾಗೇನಾದರೂ (ಪ್ರಾರ್ಥಿಸಿದರೆ) ಖಂಡಿತವಾಗಿಯೂ ನಾವು ಅಕ್ರಮವಾದ ಮಾತನ್ನು ಹೇಳಿದವರಾಗುವೆವು’ ಎಂದು ಅವರು ಎದ್ದುನಿಂತು ಘೋಷಿಸಿದ ಸಂದರ್ಭದಲ್ಲಿ ನಾವು ಅವರ ಹೃದಯಗಳಿಗೆ ದೃಢತೆಯನ್ನು ನೀಡಿದೆವು.

هَٰٓؤُلَآءِ قَوْمُنَا ٱتَّخَذُوا۟ مِن دُونِهِۦٓ ءَالِهَةً ۖ لَّوْلَا يَأْتُونَ عَلَيْهِم بِسُلْطَٰنٍۭ بَيِّنٍ ۖ فَمَنْ أَظْلَمُ مِمَّنِ ٱفْتَرَىٰ عَلَى ٱللَّهِ كَذِبًا ﴿١٥﴾

**15.** ‘ನಮ್ಮ ಈ ಜನತೆ ಅವನ ಹೊರತಾಗಿ ಅನೇಕ ಆರಾಧ್ಯರನ್ನು ಮಾಡಿಕೊಂಡಿರುವರು. ಅವರ (ಆ ಆರಾಧ್ಯರ) ಕುರಿತು ಸ್ಪಷ್ಟವಾದ ಯಾವುದೇ ಪ್ರಮಾಣವನ್ನು ಇವರೇಕೆ ತರುತ್ತಿಲ್ಲ? ಅಲ್ಲಾಹುವಿನ ಮೇಲೆ ಸುಳ್ಳನ್ನು

1 ದ್ವರಬ್‌ನಾ ಅಲಾ ಆಝಾನಿಹಿಮ್ ಎಂಬುದರ ಭಾಷಿಕ ಅರ್ಥವು ನಾವು ಅವರ ಕಿವಿಗಳ ಮೇಲೆ ಹೊಡೆದೆವು ಎಂದಾಗಿದೆ. ಇದರ ತಾತ್ಪರ್ಯವು ಅವರನ್ನು ಒಂದು ವಿಶೇಷ ರೀತಿಯಲ್ಲಿ ನಿದ್ದೆಗಿಳಿಸಿದೆವು ಎಂದಾಗಿದೆ.

2 ತಾವು ಎಷ್ಟು ಕಾಲ ಗುಹೆಯಲ್ಲಿ ತಂಗಿದೆವು ಎಂಬ ಬಗ್ಗೆ ಗುಹಾವಾಸಿಗಳು ಎರಡು ಅಭಿಪ್ರಾಯವನ್ನು ಹೊಂದಿದ್ದರು. ಎರಡು ಗುಂಪುಗಳು ಎಂಬ ಪದದ ಉದ್ದೇಶವು ಇದಾಗಿರಬಹುದು. ಗುಹಾವಾಸಿಗಳು ಎಬ್ಬಿಸಲ್ಪಟ್ಟ ಕಾಲದಲ್ಲಿ ಊರಿನಲ್ಲಿದ್ದ ವಿಶ್ವಾಸಿಗಳು ಮತ್ತು ನಿಷೇಧಿಗಳ ಕುರಿತು ಎರಡು ಗುಂಪುಗಳು ಎಂದು ಹೇಳಿರಲೂಬಹುದು.

ಹೆಣೆದವನಿಗಿಂತಲೂ ದೊಡ್ಡ ಅಕ್ರಮಿ ಇನ್ನಾರಿರುವನು?'

**16.** (ಅವರು ಪರಸ್ಪರ ಹೇಳಿದರು): 'ಅವರನ್ನು ಮತ್ತು ಅಲ್ಲಾಹುವಿನ ಹೊರತು ಅವರು ಆರಾಧಿಸುತ್ತಿರುವವುಗಳನ್ನು ನೀವು ವರ್ಜಿಸಿರುವುದರಿಂದ ಆ ಗುಹೆಯಲ್ಲಿ ಆಶ್ರಯವನ್ನು ಪಡೆಯಿರಿ. ನಿಮ್ಮ ರಬ್ ತನ್ನ ಕಾರುಣ್ಯದಿಂದ ನಿಮಗೆ ಯಥೇಷ್ಟವಾಗಿ ನೀಡುವನು ಮತ್ತು ನಿಮ್ಮ ವಿಚಾರದಲ್ಲಿ ಅವನು ಅನುಕೂಲತೆಯನ್ನು ಮಾಡಿಕೊಡುವನು'.

وَإِذِ ٱعۡتَزَلۡتُمُوهُمۡ وَمَا يَعۡبُدُونَ إِلَّا ٱللَّهَ فَأۡوُۥٓاْ إِلَى ٱلۡكَهۡفِ يَنشُرۡ لَكُمۡ رَبُّكُم مِّن رَّحۡمَتِهِۦ وَيُهَيِّئۡ لَكُم مِّنۡ أَمۡرِكُم مِّرۡفَقٗا ١٦

**17.** ಸೂರ್ಯನು ಉದಯಿಸುವಾಗ ಅದು ಅವರ ಗುಹೆಯ ಬಲಭಾಗದೆಡೆಗೆ ಚಲಿಸುತ್ತಿರುವುದಾಗಿ ಮತ್ತು ಅದು ಅಸ್ತಮಿಸುವಾಗ ಅದು ಅವರನ್ನು ದಾಟಿ ಎಡಭಾಗದೆಡೆಗೆ ಚಲಿಸುತ್ತಿರುವುದಾಗಿ ತಾವು ಕಾಣುವಿರಿ. ಅವರು ಅದರ (ಗುಹೆಯ) ವಿಶಾಲವಾದ ಭಾಗದಲ್ಲಿರುವರು.[1] ಅದು ಅಲ್ಲಾಹುವಿನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ಅಲ್ಲಾಹು ಯಾರನ್ನು ಸನ್ಮಾರ್ಗದಲ್ಲಿ ಸೇರಿಸುವನೋ ಅವನು ಸನ್ಮಾರ್ಗವನ್ನು ಪಡೆದವನಾಗಿರುವನು. ಅವನು ಯಾರನ್ನು ದುರ್ಮಾರ್ಗದಲ್ಲಿ ಸೇರಿಸುವನೋ ಅವನನ್ನು ಸನ್ಮಾರ್ಗದೆಡೆಗೆ ತರುವ ಯಾವುದೇ ರಕ್ಷಕನನ್ನು ತಾವೆಂದೂ ಕಾಣಲಾರಿರಿ.

۞ وَتَرَى ٱلشَّمۡسَ إِذَا طَلَعَت تَّزَٰوَرُ عَن كَهۡفِهِمۡ ذَاتَ ٱلۡيَمِينِ وَإِذَا غَرَبَت تَّقۡرِضُهُمۡ ذَاتَ ٱلشِّمَالِ وَهُمۡ فِي فَجۡوَةٖ مِّنۡهُۚ ذَٰلِكَ مِنۡ ءَايَٰتِ ٱللَّهِۗ مَن يَهۡدِ ٱللَّهُ فَهُوَ ٱلۡمُهۡتَدِۖ وَمَن يُضۡلِلۡ فَلَن تَجِدَ لَهُۥ وَلِيّٗا مُّرۡشِدٗا ١٧

**18.** ಅವರು ಎಚ್ಚರದಲ್ಲಿರುವರೆಂದು ತಾವು ಭಾವಿಸುವಿರಿ. ಆದರೆ ಅವರು ನಿದ್ರೆಯಲ್ಲಿರುವರು. ನಾವವರನ್ನು ಬಲಭಾಗಕ್ಕೂ ಎಡಭಾಗಕ್ಕೂ ಹೊರಳಿಸುತ್ತಿರುವೆವು. ಅವರ ನಾಯಿಯು ಗುಹೆಯ ಬಾಗಿಲಲ್ಲಿ ತನ್ನ ಎರಡು ಕೈಗಳನ್ನು ಚಾಚಿಕೊಂಡಿದೆ. ತಾವು ಅವರೆಡೆಗೆ ಇಣುಕಿ ನೋಡುತ್ತಿದ್ದರೆ ಅವರಿಂದ ಬೆನ್ನು

وَتَحۡسَبُهُمۡ أَيۡقَاظٗا وَهُمۡ رُقُودٞۚ وَنُقَلِّبُهُمۡ ذَاتَ ٱلۡيَمِينِ وَذَاتَ ٱلشِّمَالِۖ وَكَلۡبُهُم بَٰسِطٞ ذِرَاعَيۡهِ بِٱلۡوَصِيدِۚ لَوِ ٱطَّلَعۡتَ عَلَيۡهِمۡ لَوَلَّيۡتَ مِنۡهُمۡ فِرَارٗا وَلَمُلِئۡتَ مِنۡهُمۡ رُعۡبٗا ١٨

1 ಆ ಗುಹೆಯ ವಿನ್ಯಾಸವು ಹೇಗಿತ್ತೆಂದರೆ ಪೂರ್ವಾಹ್ನವಾಗಲಿ, ಮಧ್ಯಾಹ್ನವಾಗಲಿ ಬಿಸಿಲು ಅದರೊಳಗೆ ಪ್ರವೇಶಿಸುತ್ತಿರಲಿಲ್ಲ.

ತಿರುಗಿಸಿ ಓಡುತ್ತಿದ್ದಿರಿ ಮತ್ತು ಅವರ ಬಗ್ಗೆ ಭಯಭೀತರಾಗಿ ಬಿಡುತ್ತಿದ್ದಿರಿ.

**19.** ಹೀಗೆ ಅವರು ಪರಸ್ಪರ ಪ್ರಶ್ನಿಸುವ ಸಲುವಾಗಿ ನಾವು ಅವರನ್ನು ಎಬ್ಬಿಸಿದೆವು.[1] ಅವರ ಪೈಕಿ ಒಬ್ಬರು ಹೇಳಿದರು: 'ಎಷ್ಟು ಕಾಲದವರೆಗೆ ನೀವು (ಗುಹೆಯಲ್ಲಿ) ತಂಗಿದಿರಿ?' ಇತರರು ಹೇಳಿದರು: 'ನಾವು ಒಂದು ದಿನ ಅಥವಾ ದಿನದ ಅಲ್ಪಭಾಗದಷ್ಟು ಮಾತ್ರ ತಂಗಿರುವೆವು'. ಇತರ ಕೆಲವರು ಹೇಳಿದರು: 'ನೀವು ಎಷ್ಟು ಕಾಲದವರೆಗೆ ತಂಗಿದ್ದಿರಿ ಎಂಬ ಬಗ್ಗೆ ನಿಮ್ಮ ರಬ್ ಚೆನ್ನಾಗಿ ಅರಿತಿರುವನು. ಆದ್ದರಿಂದ ನಿಮ್ಮ ಪೈಕಿ ಒಬ್ಬನನ್ನು ಈ ಬೆಳ್ಳಿನಾಣ್ಯದೊಂದಿಗೆ ಪಟ್ಟಣಕ್ಕೆ ಕಳುಹಿಸಿರಿ. ಅಲ್ಲಿ ಯಾರ ಬಳಿ ಅತ್ಯುತ್ತಮವಾದ ಆಹಾರವಿರುವುದೆಂದು ನೋಡಿ ಅವನು ಅಲ್ಲಿಂದ ನಿಮಗಾಗಿ ಆಹಾರವನ್ನು ತರಲಿ. ಅವನು ಎಚ್ಚರ ವಹಿಸಲಿ. ನಿಮ್ಮ ಬಗ್ಗೆ ಅವನು ಯಾರಿಗೂ ತಿಳಿಸಿಕೊಡದಿರಲಿ'.

وَكَذَٰلِكَ بَعَثْنَٰهُمْ لِيَتَسَآءَلُوا۟ بَيْنَهُمْ ۚ قَالَ
قَآئِلٌ مِّنْهُمْ كَمْ لَبِثْتُمْ ۖ قَالُوا۟ لَبِثْنَا يَوْمًا
أَوْ بَعْضَ يَوْمٍ ۚ قَالُوا۟ رَبُّكُمْ أَعْلَمُ بِمَا
لَبِثْتُمْ فَٱبْعَثُوٓا۟ أَحَدَكُم بِوَرِقِكُمْ هَٰذِهِۦٓ
إِلَى ٱلْمَدِينَةِ فَلْيَنظُرْ أَيُّهَآ أَزْكَىٰ طَعَامًا
فَلْيَأْتِكُم بِرِزْقٍ مِّنْهُ وَلْيَتَلَطَّفْ وَلَا
يُشْعِرَنَّ بِكُمْ أَحَدًا ﴿١٩﴾

**20.** 'ನಿಮ್ಮ ಬಗ್ಗೆ ಅವರಿಗೇನಾದರೂ ಮಾಹಿತಿ ಸಿಕ್ಕರೆ ಖಂಡಿತವಾಗಿಯೂ ಅವರು ನಿಮ್ಮನ್ನು ಕಲ್ಲೆಸೆದು ಸಾಯಿಸುವರು ಅಥವಾ ಅವರ ಧರ್ಮಕ್ಕೆ ಮರಳುವಂತೆ ನಿಮ್ಮನ್ನು ಬಲವಂತಪಡಿಸುವರು. ಹಾಗೇನಾದರೂ (ನೀವು ಮರಳಿದರೆ) ನೀವು ಎಂದಿಗೂ ಯಶಸ್ವಿಯಾಗಲಾರಿರಿ'.

إِنَّهُمْ إِن يَظْهَرُوا۟ عَلَيْكُمْ يَرْجُمُوكُمْ أَوْ
يُعِيدُوكُمْ فِى مِلَّتِهِمْ وَلَن تُفْلِحُوٓا۟ إِذًا
أَبَدًا ﴿٢٠﴾

**21.** ಹೀಗೆ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ ಮತ್ತು ಅಂತ್ಯದಿನದ ವಿಷಯದಲ್ಲಿ ಸಂದೇಹವೇ ಇಲ್ಲ ಎಂಬುದನ್ನು ಅವರು (ಜನರು) ಅರಿಯುವ ಸಲುವಾಗಿ ನಾವು ಅವರಿಗೆ ಅವರನ್ನು (ಗುಹಾವಾಸಿಗಳನ್ನು)

وَكَذَٰلِكَ أَعْثَرْنَا عَلَيْهِمْ لِيَعْلَمُوٓا۟ أَنَّ وَعْدَ
ٱللَّهِ حَقٌّ وَأَنَّ ٱلسَّاعَةَ لَا رَيْبَ فِيهَآ إِذْ
يَتَنَٰزَعُونَ بَيْنَهُمْ أَمْرَهُمْ ۖ فَقَالُوا۟ ٱبْنُوا۟
عَلَيْهِم بُنْيَٰنًا ۖ رَّبُّهُمْ أَعْلَمُ بِهِمْ ۚ

1 ಓರ್ವ ಕುರುಬನು ಗುಹೆಯ ಬಾಗಿಲನ್ನು ತೆರೆದಾಗ ಅವರು ನಿದ್ದೆಯಿಂದ ಎಚ್ಚೆತ್ತರೆಂದು ವ್ಯಾಖ್ಯಾನಕಾರರು ದಾಖಲಿಸಿದ್ದಾರೆ.

قَالَ ٱلَّذِينَ غَلَبُواْ عَلَىٰٓ أَمۡرِهِمۡ لَنَتَّخِذَنَّ عَلَيۡهِم مَّسۡجِدٗا ﴿٢١﴾

ತೋರಿಸಿ ಕೊಟ್ಟೆವು.[1] ಅವರು ಗುಹಾವಾಸಿಗಳ ವಿಷಯದಲ್ಲಿ ಪರಸ್ಪರ ತರ್ಕಿಸುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). ಆಗ ಅವರು (ಅವರ ಪೈಕಿ ಒಂದು ಗುಂಪು) ಹೇಳಿದರು: 'ನೀವು ಅವರ ಮೇಲೆ ಒಂದು ಕಟ್ಟಡವನ್ನು ನಿರ್ಮಿಸಿರಿ. ಅವರ ಬಗ್ಗೆ ಅವರ ರಬ್‌ಗೆ ಚೆನ್ನಾಗಿ ತಿಳಿದಿದೆ'. ಅವರ ವಿಷಯದಲ್ಲಿ ಪ್ರಾಬಲ್ಯ ಪಡೆದವರು ಹೇಳಿದರು: 'ಖಂಡಿತವಾಗಿಯೂ ನಾವು ಅವರ ಮೇಲೆ ಒಂದು ಮಸೀದಿಯನ್ನು ನಿರ್ಮಿಸುವೆವು'[2]

سَيَقُولُونَ ثَلَٰثَةٞ رَّابِعُهُمۡ كَلۡبُهُمۡ وَيَقُولُونَ خَمۡسَةٞ سَادِسُهُمۡ كَلۡبُهُمۡ رَجۡمَۢا بِٱلۡغَيۡبِۖ وَيَقُولُونَ سَبۡعَةٞ وَثَامِنُهُمۡ كَلۡبُهُمۡۚ قُل رَّبِّيٓ أَعۡلَمُ بِعِدَّتِهِم مَّا يَعۡلَمُهُمۡ إِلَّا قَلِيلٞۗ فَلَا تُمَارِ فِيهِمۡ إِلَّا مِرَآءٗ ظَٰهِرٗا وَلَا تَسۡتَفۡتِ فِيهِم مِّنۡهُمۡ أَحَدٗا ﴿٢٢﴾

**22.** ಅವರು (ಜನರ ಪೈಕಿ ಒಂದು ಗುಂಪು) ಹೇಳುವರು: 'ಅವರು ಮೂವರು ಮತ್ತು ನಾಲ್ಕನೆಯದು ಅವರ ನಾಯಿ'. ಇತರರು ಹೇಳುವರು: 'ಅವರು ಐವರು ಮತ್ತು ಆರನೆಯದು ಅವರ ನಾಯಿ'. ಇವು ಅಗೋಚರ ವಿಷಯದ ಕುರಿತು ಊಹಿಸಿ ಹೇಳುವುದು ಮಾತ್ರವಾಗಿದೆ. ಇನ್ನು ಕೆಲವರು ಹೇಳುವರು: 'ಅವರು ಏಳು ಜನರು ಮತ್ತು ಎಂಟನೆಯದು ಅವರ ನಾಯಿ'.[3] (ಓ ಪ್ರವಾದಿಯವರೇ!) ತಾವು ಹೇಳಿರಿ: 'ಅವರ ಸಂಖ್ಯೆಯ ಕುರಿತು ನನ್ನ ರಬ್ ಚೆನ್ನಾಗಿ ಅರಿತಿರುವನು. ಜನರಲ್ಲಿ ಕೆಲವರ ಹೊರತು ಇನ್ನಾರೂ ಅವರ ಬಗ್ಗೆ ಅರಿತಿರಲಾರರು. ಆದ್ದರಿಂದ ಸ್ಪಷ್ಟವಾದ ಅರಿವಿನ ತಳಹದಿಯಲ್ಲೇ ವಿನಾ ತಾವು ಅವರ ವಿಷಯದಲ್ಲಿ

1 ಆಹಾರ, ಪಾನೀಯಗಳನ್ನು ಸೇವಿಸದೆ ಮೂರು ಶತಮಾನಗಳ ಕಾಲ ನಿದ್ದೆ ಮಾಡಿದ ಗುಹಾವಾಸಿಗಳನ್ನು ಎಬ್ಬಿಸಿದ ಅಲ್ಲಾಹುವಿಗೆ ಲೋಕಾಂತ್ಯದ ನಂತರ ಜನರನ್ನು ಪುನರುತ್ಥಾನಗೊಳಿಸಲು ಯಾವುದೇ ಪ್ರಯಾಸವಿರಲಾರದು ಎಂದು ಈ ಘಟನೆಗೆ ಸಾಕ್ಷಿಯಾದ ಯಾರಿಗೂ ಮನದಟ್ಟಾಗಬಹುದು.

2 ಎಬ್ಬಿಸಲ್ಪಟ್ಟ ಯುವಕರು ಕೆಲವೇ ಸಮಯದೊಳಗೆ ಮರಣಹೊಂದಿದರೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಆಗ ಅವರ ನೆನಪು ಅಳಿದುಹೋಗದಿರಲು ಏನು ಮಾಡಬೇಕೆಂಬ ಬಗ್ಗೆ ಊರಿನವರಿಗೆ ತರ್ಕವುಂಟಾಯಿತು. ಅವರ ಗುಹೆಯ ಸಮೀಪ ಒಂದು ಕಟ್ಟಡವನ್ನು ನಿರ್ಮಿಸೋಣವೆಂದು ಕೆಲವರು ಹೇಳಿದರು. ಬಲಶಾಲಿಗಳಾದ ಕೆಲವರು ಅಲ್ಲಿ ಮಸೀದಿ ನಿರ್ಮಿಸಬೇಕೆಂದು ಹೇಳಿದರು.

3 ಈ ಅಭಿಪ್ರಾಯವನ್ನು ಕುರ್‌ಆನ್ ವಿಮರ್ಶಿಸದಿರುವುದರಿಂದ ಇದೇ ಸರಿಯಾದುದೆಂದು ಭಾವಿಸಬಹುದಾಗಿದೆ.

ತರ್ಕಿಸದಿರಿ.[1] ಅವರ ಬಗ್ಗೆ ಜನರಲ್ಲಿ
ಯಾರೊಂದಿಗೂ ಅಭಿಪ್ರಾಯವನ್ನು ಕೇಳದಿರಿ.

**23.** ಯಾವುದೇ ವಿಷಯದ ಬಗ್ಗೆಯೂ
'ಖಂಡಿತವಾಗಿಯೂ ನಾನು ನಾಳೆ ಅದನ್ನು
ಮಾಡುವೆನು' ಎಂದು ಹೇಳದಿರಿ.

**24.** ಅಲ್ಲಾಹು ಇಚ್ಛಿಸಿದರೆ (ಮಾಡುವೆನು) ಎಂದು
ಹೇಳುವ ಹೊರತು. ತಾವು ಮರೆತರೆ
(ನೆನಪಾದಾಗ) ತಮ್ಮ ರಬ್ಬನ್ನು ಸ್ಮರಿಸಿರಿ.[2]
'ಸನ್ಮಾರ್ಗದೆಡೆಗೆ ಇದಕ್ಕಿಂತಲೂ ಹೆಚ್ಚು
ನಿಕಟವಾಗಿರುವ ಮಾರ್ಗದಲ್ಲಿ ನನ್ನ ರಬ್
ನನ್ನನ್ನು ಮುನ್ನಡೆಸಲೂಬಹುದು' ಎಂದು
ಹೇಳಿರಿ.

**25.** ಅವರು ತಮ್ಮ ಗುಹೆಯಲ್ಲಿ ಮುನ್ನೂರು
ವರ್ಷಗಳ ಕಾಲ ತಂಗಿದರು. ಅವರು
ಒಂಬತ್ತು ವರ್ಷಗಳನ್ನು ಹೆಚ್ಚಿಸಿದರು.[3]

**26.** ಹೇಳಿರಿ: 'ಅವರು ತಂಗಿದ ಕಾಲದ ಕುರಿತು
ಅಲ್ಲಾಹು ಚೆನ್ನಾಗಿ ಅರಿತಿರುವನು. ಆಕಾಶಗಳ
ಮತ್ತು ಭೂಮಿಯ ಅಗೋಚರ
ಜ್ಞಾನವಿರುವುದು ಅವನಲ್ಲಾಗಿದೆ. ಅವನು
ಅದೆಂತಹ ದೃಷ್ಟಿಯುಳ್ಳವನು! ಅವನು
ಅದೆಂತಹ ಶ್ರವಣಶಕ್ತಿಯುಳ್ಳವನು! ಅವನ
ಹೊರತು ಜನರಿಗೆ ಯಾವುದೇ ರಕ್ಷಕರೂ

وَلَا تَقُولَنَّ لِشَاْيۡءٍ إِنِّي فَاعِلٞ ذَٰلِكَ
غَدًا ٢٣

إِلَّآ أَن يَشَآءَ ٱللَّهُۚ وَٱذۡكُر رَّبَّكَ إِذَا نَسِيتَ
وَقُلۡ عَسَىٰٓ أَن يَهۡدِيَنِ رَبِّي لِأَقۡرَبَ مِنۡ
هَٰذَا رَشَدٗا ٢٤

وَلَبِثُواْ فِي كَهۡفِهِمۡ ثَلَٰثَ مِاْئَةٖ سِنِينَ
وَٱزۡدَادُواْ تِسۡعٗا ٢٥

قُلِ ٱللَّهُ أَعۡلَمُ بِمَا لَبِثُواْۖ لَهُۥ غَيۡبُ
ٱلسَّمَٰوَٰتِ وَٱلۡأَرۡضِۖ أَبۡصِرۡ بِهِۦ وَأَسۡمِعۡۚ مَا
لَهُم مِّن دُونِهِۦ مِن وَلِيّٖ وَلَا يُشۡرِكُ فِي
حُكۡمِهِۦٓ أَحَدٗا ٢٦

---

1 ಚರಿತ್ರೆಯನ್ನು ವಿವರಿಸುವುದರಲ್ಲಿ ಕುರ್‌ಆನಿನ ಶೈಲಿ ಚರಿತ್ರೆ ಗ್ರಂಥಗಳಿಗಿಂತ ವಿಭಿನ್ನವಾಗಿದೆ. ಸ್ಥಳ, ತಾರೀಕು, ಜನನ, ಮರಣ ಇತ್ಯಾದಿಗಳನ್ನು ವಿವರಿಸುವ ಬದಲು ಪ್ರತಿಯೊಂದು ಘಟನೆಯಿಂದಲೂ ನಮಗೆ ಉಪಯುಕ್ತವಾಗಿರುವ ನೀತಿಪಾಠವನ್ನು ಹೇಳುವುದಾಗಿದೆ ಕುರ್‌ಆನಿನ ಶೈಲಿ. ಕುರ್‌ಆನ್‌ನಿಂದಿರುವ ಸ್ಪಷ್ಟವಾದ ಅರಿವಿನ ಆಧಾರದಲ್ಲಿ ಮಾತನಾಡಬೇಕೇ ವಿನಾ ಅದರಾಚೆಗಿರುವ ಅನಗತ್ಯ ವಿಷಯಗಳ ಬಗ್ಗೆ ತರ್ಕಿಸಬಾರದೆಂದು ಅಲ್ಲಾಹು ಇಲ್ಲಿ ಪ್ರವಾದಿ(ﷺ)ಯವರನ್ನು ಎಚ್ಚರಿಸುತ್ತಿದ್ದಾನೆ.

2 ಓರ್ವ ಸತ್ಯವಿಶ್ವಾಸಿ ಯಾವುದೇ ಕಾರ್ಯವನ್ನು ಮಾಡುವೆನೆಂದು ಹೇಳುವಾಗ ಇನ್‌ಶಾ ಅಲ್ಲಾಹ್ (ಅಲ್ಲಾಹು ಇಚ್ಛಿಸಿದರೆ) ಎಂದು ಹೇಳಬೇಕಾಗಿದೆ. ಅದು ಮರೆತುಹೋದರೆ ನೆನಪಾದಾಗ ಹೇಳಬೇಕಾಗಿದೆ.

3 ಚಾಂದ್ರಮಾನ ಪದ್ಧತಿಯನ್ನು ಅನುಸರಿಸಿ ಅರಬರು ಕಾಲಗಣನೆ ಮಾಡುತ್ತಾರೆ. ರೋಮನ್ನರು ಮತ್ತಿತರರು ಸೌರಮಾನ ಪದ್ಧತಿಯನ್ನು ಅನುಸರಿಸುತ್ತಾರೆ. 300 ಸೌರಮಾನ ವರ್ಷಗಳು 309 ಚಾಂದ್ರಮಾನ ವರ್ಷಗಳಾಗುತ್ತವೆ.

ಇಲ್ಲ. ತನ್ನ ನಿಯಮಾಧಿಕಾರದಲ್ಲಿ ಅವನು ಯಾರನ್ನೂ ಸಹಭಾಗಿಯನ್ನಾಗಿ ಮಾಡುವುದಿಲ್ಲ'.

27. ತಮಗೆ ದಿವ್ಯಸಂದೇಶವಾಗಿ ನೀಡಲಾಗಿರುವ ತಮ್ಮ ರಬ್‌ನ ಗ್ರಂಥವನ್ನು ಪಾರಾಯಣ ಮಾಡಿರಿ. ಅವನ ವಚನಗಳನ್ನು ಬದಲಾವಣೆ ಮಾಡುವವರಿಲ್ಲ. ಅವನ ಹೊರತು ಯಾವುದೇ ಅಭಯಸ್ಥಾನವನ್ನು ತಾವೆಂದೂ ಕಾಣಲಾರಿರಿ.

وَٱتۡلُ مَآ أُوحِيَ إِلَيۡكَ مِن كِتَابِ رَبِّكَۖ لَا مُبَدِّلَ لِكَلِمَٰتِهِۦ وَلَن تَجِدَ مِن دُونِهِۦ مُلۡتَحَدٗا ٢٧

28. ತಮ್ಮ ರಬ್‌ನ ಮುಖವನ್ನು ಆಶಿಸಿ[1] ಮುಂಜಾನೆ ಹಾಗೂ ಸಂಜೆಯಲ್ಲಿ ಅವನೊಂದಿಗೆ ಪ್ರಾರ್ಥಿಸುತ್ತಿರುವವರ ಜೊತೆಗೆ ತಾವು ತಮ್ಮ ಮನಸ್ಸನ್ನು ದೃಢವಾಗಿ ನಿಲ್ಲಿಸಿರಿ. ಐಹಿಕ ಜೀವನದ ಅಲಂಕಾರಗಳನ್ನು ಆಶಿಸಿ ತಮ್ಮ ಕಣ್ಣುಗಳು ಅವರಿಂದ ದೂರಸರಿಯದಿರಲಿ. ನಾವು ಯಾರ ಹೃದಯವನ್ನು ನಮ್ಮ ಸ್ಮರಣೆಯಿಂದ ಅಲಕ್ಷ್ಯಗೊಳಿಸಿರುವೆವೋ, ಯಾರು ಸ್ವೇಚ್ಛೆಯನ್ನು ಹಿಂಬಾಲಿಸುವನೋ ಮತ್ತು ಯಾರ ವಿಷಯವು ಮಿತಿಮೀರಿಹೋಗಿರುವುದೋ ಅಂತಹವನನ್ನು ತಾವು ಅನುಸರಿಸದಿರಿ.[2]

وَٱصۡبِرۡ نَفۡسَكَ مَعَ ٱلَّذِينَ يَدۡعُونَ رَبَّهُم بِٱلۡغَدَوٰةِ وَٱلۡعَشِيِّ يُرِيدُونَ وَجۡهَهُۥۖ وَلَا تَعۡدُ عَيۡنَاكَ عَنۡهُمۡ تُرِيدُ زِينَةَ ٱلۡحَيَوٰةِ ٱلدُّنۡيَاۖ وَلَا تُطِعۡ مَنۡ أَغۡفَلۡنَا قَلۡبَهُۥ عَن ذِكۡرِنَا وَٱتَّبَعَ هَوَىٰهُ وَكَانَ أَمۡرُهُۥ فُرُطٗا ٢٨

29. ತಾವು ಹೇಳಿರಿ: 'ಸತ್ಯವು ನಿಮ್ಮ ರಬ್‌ನ ವತಿಯಿಂದಾಗಿದೆ'. ಆದ್ದರಿಂದ (ವಿಶ್ವಾಸವಿಡಲು) ಇಚ್ಛೆಯುಳ್ಳವರು ವಿಶ್ವಾಸವಿಡಲಿ ಮತ್ತು (ಅವಿಶ್ವಾಸವಿಡಲು) ಇಚ್ಛೆಯುಳ್ಳವರು ಅವಿಶ್ವಾಸವಿಡಲಿ. ಅಕ್ರಮಿಗಳಿಗೆ ನಾವು ನರಕಾಗ್ನಿಯನ್ನು ಸಿದ್ಧಗೊಳಿಸಿರುವೆವು. ಅದರ ಗೋಡೆಗಳು ಅವರನ್ನು ಆವರಿಸಿಕೊಂಡಿರುವುವು.

وَقُلِ ٱلۡحَقُّ مِن رَّبِّكُمۡۖ فَمَن شَآءَ فَلۡيُؤۡمِن وَمَن شَآءَ فَلۡيَكۡفُرۡۚ إِنَّآ أَعۡتَدۡنَا لِلظَّٰلِمِينَ نَارًا أَحَاطَ بِهِمۡ سُرَادِقُهَاۚ وَإِن يَسۡتَغِيثُواْ يُغَاثُواْ بِمَآءٖ كَٱلۡمُهۡلِ يَشۡوِي ٱلۡوُجُوهَۚ بِئۡسَ ٱلشَّرَابُ وَسَآءَتۡ مُرۡتَفَقًا ٢٩

1 ಅಲ್ಲಾಹುವಿನ ಸಂತೃಪ್ತಿಯನ್ನು ಮಾತ್ರ ಆಶಿಸಿ ಎಂದರ್ಥ.

2 ಪ್ರವಾದಿ(ﷺ)ರವರ ಅನುಚರರಾದ ಬಡ ವಿಶ್ವಾಸಿಗಳನ್ನು ದೂರಕ್ಕಟ್ಟಿದರೆ ನಾವು ತಮ್ಮೊಂದಿಗೆ ಸೇರುವೆವೆಂದು ಮಕ್ಕಾದ ಕುರೈಶೀ ನಾಯಕರು ಪ್ರವಾದಿ(ﷺ)ರವರಿಗೆ ವಾಗ್ದಾನವಿತ್ತಿದ್ದರು. ಅವರ ಮಾತಿಗೆ ಕಿವಿಗೊಡಬಾರದೆಂದು ಅಲ್ಲಾಹು ಇಲ್ಲಿ ತಿಳಿಸುತ್ತಿರುವನು.

ಅವರು ನೀರನ್ನು ಬೇಡುವಾಗ ಕರಗಿಸಿದ ಲೋಹದಂತಿರುವ ಒಂದು ನೀರನ್ನು ಅವರಿಗೆ ಕುಡಿಯಲು ನೀಡಲಾಗುವುದು. ಅದು ಅವರ ಮುಖಗಳನ್ನು ಸುಟ್ಟು ಹಾಕುವುದು. ಆ ಪಾನೀಯ ಎಷ್ಟು ನಿಕೃಷ್ಟವಾದುದು! ಆ ವಾಸಸ್ಥಳ ಎಷ್ಟು ನಿಕೃಷ್ಟವಾದುದು!.

إِنَّ ٱلَّذِينَ ءَامَنُواْ وَعَمِلُواْ ٱلصَّـٰلِحَـٰتِ إِنَّا لَا نُضِيعُ أَجْرَ مَنْ أَحْسَنَ عَمَلًا ﴿٣٠﴾

30. ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅಂತಹ ಸತ್ಕರ್ಮ ಮಾಡುವ ಯಾರ ಪ್ರತಿಫಲವನ್ನೂ ನಾವು ವ್ಯರ್ಥಗೊಳಿಸಲಾರೆವು.

أُوْلَـٰٓئِكَ لَهُمْ جَنَّـٰتُ عَدْنٍ تَجْرِى مِن تَحْتِهِمُ ٱلْأَنْهَـٰرُ يُحَلَّوْنَ فِيهَا مِنْ أَسَاوِرَ مِن ذَهَبٍ وَيَلْبَسُونَ ثِيَابًا خُضْرًا مِّن سُندُسٍ وَإِسْتَبْرَقٍ مُّتَّكِـِٔينَ فِيهَا عَلَى ٱلْأَرَآئِكِ ۚ نِعْمَ ٱلثَّوَابُ وَحَسُنَتْ مُرْتَفَقًا ﴿٣١﴾

31. ಅಂತಹವರಿಗೆ ವಾಸಿಸಲು ಶಾಶ್ವತವಾದ ಸ್ವರ್ಗೋದ್ಯಾನಗಳಿವೆ. ಅವರ ತಳಭಾಗದಿಂದ ನದಿಗಳು ಹರಿಯುತ್ತಿರುವುವು. ಅವರಿಗೆ ಅಲ್ಲಿ ಚಿನ್ನದ ಬಳೆಗಳನ್ನು ತೊಡಿಸಲಾಗುವುದು. ತೆಳುವಾದ ಮತ್ತು ದಪ್ಪವಾದ ಹಸಿರು ರೇಷ್ಮೆ ಉಡುಪುಗಳನ್ನು ಅವರು ಧರಿಸುವರು. ಅಲ್ಲಿ ಅವರು ಅಲಂಕರಿಸಿದ ಮಂಚಗಳಲ್ಲಿ ಒರಗಿ ಕುಳಿತು ವಿಶ್ರಾಂತಿ ಪಡೆಯುತ್ತಿರುವರು. ಆ ಪ್ರತಿಫಲ ಎಷ್ಟು ಉತ್ಕೃಷ್ಟವಾದುದು! ಆ ವಾಸಸ್ಥಳ ಎಷ್ಟು ಉತ್ತಮವಾದುದು!

۞ وَٱضْرِبْ لَهُم مَّثَلًا رَّجُلَيْنِ جَعَلْنَا لِأَحَدِهِمَا جَنَّتَيْنِ مِنْ أَعْنَـٰبٍ وَحَفَفْنَـٰهُمَا بِنَخْلٍ وَجَعَلْنَا بَيْنَهُمَا زَرْعًا ﴿٣٢﴾

32. ತಾವು ಅವರಿಗೆ ಇಬ್ಬರು ವ್ಯಕ್ತಿಗಳ ಉದಾಹರಣೆಯನ್ನು ತಿಳಿಸಿಕೊಡಿರಿ. ಅವರಲ್ಲೊಬ್ಬನಿಗೆ ನಾವು ಎರಡು ದ್ರಾಕ್ಷಿತೋಟಗಳನ್ನು ಮಾಡಿಕೊಟ್ಟೆವು. ಅವುಗಳನ್ನು (ತೋಟಗಳನ್ನು) ನಾವು ಖರ್ಜೂರ ಮರಗಳಿಂದ ಆವರಿಸಿದೆವು. ಅವುಗಳ ಮಧ್ಯೆ (ತೋಟಗಳ ಮಧ್ಯೆ) ನಾವು ಧಾನ್ಯದ ಕೃಷಿಯನ್ನೂ ಮಾಡಿಕೊಟ್ಟೆವು.

كِلْتَا ٱلْجَنَّتَيْنِ ءَاتَتْ أُكُلَهَا وَلَمْ تَظْلِم مِّنْهُ شَيْـًٔا ۚ وَفَجَّرْنَا خِلَـٰلَهُمَا نَهَرًا ﴿٣٣﴾

33. ಎರಡು ತೋಟಗಳೂ ತಮ್ಮ ಫಲಗಳನ್ನು ನೀಡುತ್ತಿದ್ದವು. ಅದರಲ್ಲಿ ಅವು ಯಾವುದೇ ಕೊರತೆಯನ್ನೂ ಮಾಡಲಿಲ್ಲ. ಅವುಗಳ ಮಧ್ಯೆ ನಾವು ಒಂದು ಹೊಳೆಯನ್ನೂ ಹರಿಸಿದೆವು.

34. ಅವನಿಗೆ ಹಲವು ಆದಾಯಗಳಿದ್ದವು. ತನ್ನ ಗೆಳೆಯನೊಂದಿಗೆ ಸಂಭಾಷಣೆ ಮಾಡುತ್ತಿರುವಾಗ ಅವನು ಹೇಳಿದನು: 'ಸಂಪತ್ತಿನಲ್ಲಿ ಮತ್ತು ಜನಬಲದಲ್ಲಿ ನಾನು ನಿನಗಿಂತಲೂ ಮಿಗಿಲಾಗಿರುವೆನು'.

وَكَانَ لَهُۥ ثَمَرٌ فَقَالَ لِصَٰحِبِهِۦ وَهُوَ يُحَاوِرُهُۥٓ أَنَا۠ أَكۡثَرُ مِنكَ مَالٗا وَأَعَزُّ نَفَرٗا ﴿٣٤﴾

35. ಸ್ವತಃ ತನ್ನ ಮೇಲೆ ಅಕ್ರಮವೆಸಗಿದವನಾಗಿರುತ್ತಾ ಅವನು ತನ್ನ ತೋಟವನ್ನು ಪ್ರವೇಶಿಸಿ ಹೇಳಿದನು: 'ಇವೆಲ್ಲ ಎಂದಾದರೂ ನಾಶವಾಗಬಹುದೆಂದು ನಾನು ಭಾವಿಸಲಾರೆನು.

وَدَخَلَ جَنَّتَهُۥ وَهُوَ ظَالِمٞ لِّنَفۡسِهِۦ قَالَ مَآ أَظُنُّ أَن تَبِيدَ هَٰذِهِۦٓ أَبَدٗا ﴿٣٥﴾

36. ಅಂತ್ಯಘಳಿಗೆಯು ಸಂಭವಿಸುವುದೆಂದೂ ನಾನು ಭಾವಿಸುವುದಿಲ್ಲ. ಇನ್ನು ನನ್ನನ್ನು ನನ್ನ ರಬ್‌ನೆಡೆಗೆ ಮರಳಿ ಕೊಂಡೊಯ್ಯಲ್ಪಟ್ಟರೂ, ಮರಳಲಿಕ್ಕಾಗಿ ನನಗೆ ಖಂಡಿತವಾಗಿಯೂ ಇದಕ್ಕಿಂತಲೂ ಉತ್ತಮವಾಗಿರುವುದು ಸಿಗುವುದು'.[1]

وَمَآ أَظُنُّ ٱلسَّاعَةَ قَآئِمَةٗ وَلَئِن رُّدِدتُّ إِلَىٰ رَبِّي لَأَجِدَنَّ خَيۡرٗا مِّنۡهَا مُنقَلَبٗا ﴿٣٦﴾

37. ಅವನೊಂದಿಗೆ ಸಂಭಾಷಣೆ ಮಾಡುತ್ತಿರುವಾಗ ಅವನ ಗೆಳೆಯನು ಹೇಳಿದನು: 'ನಿನ್ನನ್ನು ಮಣ್ಣಿನಿಂದ, ತರುವಾಯ ವೀರ್ಯಕೋಶದಿಂದ ಸೃಷ್ಟಿಸಿದ, ತದನಂತರ ನಿನ್ನನ್ನು ಒಬ್ಬ ಮನುಷ್ಯನನ್ನಾಗಿ ರಚಿಸಿದವನನ್ನು ನೀನು ನಿಷೇಧಿಸುತ್ತಿರುವೆಯಾ?

قَالَ لَهُۥ صَاحِبُهُۥ وَهُوَ يُحَاوِرُهُۥٓ أَكَفَرۡتَ بِٱلَّذِي خَلَقَكَ مِن تُرَابٖ ثُمَّ مِن نُّطۡفَةٖ ثُمَّ سَوَّىٰكَ رَجُلٗا ﴿٣٧﴾

38. ಆದರೆ ಅವನು–ಅಲ್ಲಾಹು–ನನ್ನ ರಬ್ಬಾಗಿರುವನು. ನಾನು ನನ್ನ ರಬ್‌ನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಲಾರೆನು.

لَّٰكِنَّا۠ هُوَ ٱللَّهُ رَبِّي وَلَآ أُشۡرِكُ بِرَبِّيٓ أَحَدٗا ﴿٣٨﴾

39. ನೀನು ನಿನ್ನ ತೋಟವನ್ನು ಪ್ರವೇಶಿಸಿದಾಗ 'ಇದು ಅಲ್ಲಾಹು ಇಚ್ಛಿಸಿರುವುದಾಗಿದೆ. ಅಲ್ಲಾಹುವಿನಿಂದಲ್ಲದೆ ಯಾವುದೇ ಶಕ್ತಿಯೂ ಇಲ್ಲ' ಎಂದು ನಿನಗೆ ಹೇಳಬಾರದಿತ್ತೇ? ಸಂಪತ್ತು ಮತ್ತು ಸಂತತಿಯಲ್ಲಿ ನನ್ನನ್ನು ನೀನು

وَلَوۡلَآ إِذۡ دَخَلۡتَ جَنَّتَكَ قُلۡتَ مَا شَآءَ ٱللَّهُ لَا قُوَّةَ إِلَّا بِٱللَّهِۚ إِن تَرَنِ أَنَا۠ أَقَلَّ مِنكَ مَالٗا وَوَلَدٗا ﴿٣٩﴾

1 ಪರಲೋಕವೆಂಬುದು ಇದ್ದರೂ ಕೂಡ ಅಲ್ಲಿ ತನ್ನ ಸ್ಥಾನವು ಒಂದಿಷ್ಟೂ ಕೆಳಮಟ್ಟದ್ದಾಗಿರದು ಎಂಬುದು ಅವನ ವಾದವಾಗಿತ್ತು.

ನಿನಗಿಂತಲೂ ಕಡಿಮೆಯವನಾಗಿ ಕಾಣುತ್ತಿರುವುದಾದರೆ.

40. ನನ್ನ ರಬ್ ನನಗೆ ನಿನ್ನ ತೋಟಕ್ಕಿಂತಲೂ ಉತ್ತಮವಾಗಿರುವುದನ್ನು ನೀಡಲೂಬಹುದು ಮತ್ತು ನಿನ್ನ ತೋಟದತ್ತ ಅವನು ಆಕಾಶದಿಂದ ಶಿಕ್ಷೆಯನ್ನು ಕಳುಹಿಸಿ ಅದು ಜಾರುವ ನೆಲವಾಗಿ ಮಾರ್ಪಡಲೂಬಹುದು.

فَعَسَىٰ رَبِّيٓ أَن يُؤۡتِيَنِ خَيۡرٗا مِّن جَنَّتِكَ وَيُرۡسِلَ عَلَيۡهَا حُسۡبَانٗا مِّنَ ٱلسَّمَآءِ فَتُصۡبِحَ صَعِيدٗا زَلَقًا ﴿٤٠﴾

41. ಅಥವಾ ನಿನಗೆ ಎಂದಿಗೂ ಪತ್ತೆಹಚ್ಚಿ ತರಲು ಸಾಧ್ಯವಾಗದ ರೀತಿಯಲ್ಲಿ ಅದರ ನೀರು ಬತ್ತಿಹೋಗಲೂಬಹುದು'.

أَوۡ يُصۡبِحَ مَآؤُهَا غَوۡرٗا فَلَن تَسۡتَطِيعَ لَهُۥ طَلَبٗا ﴿٤١﴾

42. ಅವನ ಫಲಸಮೃದ್ಧಿಯು (ವಿನಾಶದಿಂದ) ಆವರಿಸಲ್ಪಟ್ಟಿತು. ಅವುಗಳು (ತೋಟಗಳು) ತಮ್ಮ ಚಪ್ಪರಗಳೊಂದಿಗೆ ಕುಸಿದು ಬಿದ್ದಿದ್ದ ಸ್ಥಿತಿಯಲ್ಲಿ ತಾನು ಅದಕ್ಕಾಗಿ ಖರ್ಚು ಮಾಡಿದ್ದನ್ನು (ಅದರ ನಷ್ಟವನ್ನು) ನೆನೆದು ಅವನು ಕೈ ತಿರುಗಿಸುವವನಾಗಿ ಬಿಟ್ಟನು. ಅವನು ಹೇಳಿದನು: 'ನಾನು ನನ್ನ ರಬ್‌ನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!'

وَأُحِيطَ بِثَمَرِهِۦ فَأَصۡبَحَ يُقَلِّبُ كَفَّيۡهِ عَلَىٰ مَآ أَنفَقَ فِيهَا وَهِيَ خَاوِيَةٌ عَلَىٰ عُرُوشِهَا وَيَقُولُ يَٰلَيۡتَنِي لَمۡ أُشۡرِكۡ بِرَبِّيٓ أَحَدٗا ﴿٤٢﴾

43. ಅಲ್ಲಾಹುವಿನ ಹೊರತು ಅವನಿಗೆ ಸಹಾಯ ಮಾಡಲು ಯಾವುದೇ ಗುಂಪೂ ಇರಲಿಲ್ಲ. (ಸ್ವತಃ) ರಕ್ಷಿಸಲೂ ಅವನಿಂದಾಗಲಿಲ್ಲ.

وَلَمۡ تَكُن لَّهُۥ فِئَةٞ يَنصُرُونَهُۥ مِن دُونِ ٱللَّهِ وَمَا كَانَ مُنتَصِرًا ﴿٤٣﴾

44. ಅಲ್ಲಿ ರಕ್ಷಾಧಿಕಾರವಿರುವುದು ನೈಜ ಆರಾಧ್ಯನಾಗಿರುವ ಅಲ್ಲಾಹುವಿಗೆ ಮಾತ್ರವಾಗಿದೆ. ಅವನು ಉತ್ತಮ ಪ್ರತಿಫಲವನ್ನು ನೀಡುವವನೂ ಉತ್ತಮ ಪರ್ಯಾವಸಾನದೆಡೆಗೆ ತಲುಪಿಸುವವನೂ ಆಗಿರುವನು.

هُنَالِكَ ٱلۡوَلَٰيَةُ لِلَّهِ ٱلۡحَقِّۚ هُوَ خَيۡرٞ ثَوَابٗا وَخَيۡرٌ عُقۡبٗا ﴿٤٤﴾

45. (ಓ ಪ್ರವಾದಿಯವರೇ!) ಐಹಿಕ ಜೀವನದ ಒಂದು ಉದಾಹರಣೆಯನ್ನು ತಾವು ಅವರಿಗೆ ವಿವರಿಸಿಕೊಡಿರಿ. ನಾವು ಆಕಾಶದಿಂದ ನೀರನ್ನು ಇಳಿಸಿದೆವು. ಭೂಮಿಯ ಸಸ್ಯಗಳು ಅದರೊಂದಿಗೆ ಮಿಶ್ರಿತವಾಗಿ ಬೆಳೆದವು.

وَٱضۡرِبۡ لَهُم مَّثَلَ ٱلۡحَيَوٰةِ ٱلدُّنۡيَا كَمَآءٍ أَنزَلۡنَٰهُ مِنَ ٱلسَّمَآءِ فَٱخۡتَلَطَ بِهِۦ نَبَاتُ ٱلۡأَرۡضِ فَأَصۡبَحَ هَشِيمٗا تَذۡرُوهُ ٱلرِّيَٰحُۗ وَكَانَ ٱللَّهُ عَلَىٰ كُلِّ شَيۡءٖ مُّقۡتَدِرًا ﴿٤٥﴾

ತರುವಾಯ ಅವು ಗಾಳಿಗೆ ಹಾರುವಂತಹ ಧೂಳಿಗಳಾಗಿ ಮಾರ್ಪಟ್ಟವು. (ಐಹಿಕ ಜೀವನವು ಹೀಗೆಯೇ ಆಗಿದೆ.) ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

**46.** ಸಂಪತ್ತು ಮತ್ತು ಸಂತಾನಗಳು ಐಹಿಕ ಜೀವನದ ಅಲಂಕಾರಗಳಾಗಿವೆ.(1) ಆದರೆ ನೆಲೆನಿಲ್ಲುವ ಸತ್ಕರ್ಮಗಳು ತಮ್ಮ ರಬ್‌ನ ಬಳಿ ಅತ್ಯುತ್ತಮವಾದ ಪ್ರತಿಫಲವಿರುವಂತದ್ದೂ ಅತ್ಯುತ್ತಮವಾದ ನಿರೀಕ್ಷೆಯನ್ನು ನೀಡುವಂತದ್ದೂ ಆಗಿವೆ.

ٱلۡمَالُ وَٱلۡبَنُونَ زِينَةُ ٱلۡحَيَوٰةِ ٱلدُّنۡيَاۖ
وَٱلۡبَٰقِيَٰتُ ٱلصَّٰلِحَٰتُ خَيۡرٌ عِندَ رَبِّكَ
ثَوَابٗا وَخَيۡرٌ أَمَلٗا ٤٦

**47.** ನಾವು ಪರ್ವತಗಳನ್ನು ಚಲಿಸುವಂತೆ ಮಾಡುವ, ತಾವು ಭೂಮಿಯನ್ನು ಸಮತಟ್ಟಾಗಿ ಎದ್ದು ಕಾಣುವಂತಾಗುವ ಮತ್ತು ಅವರ (ಮನುಷ್ಯರ) ಪೈಕಿ ಒಬ್ಬರನ್ನೂ ಬಿಡದೆ ಅವರನ್ನು ನಾವು ಒಟ್ಟುಗೂಡಿಸುವ ದಿನ!(2)

وَيَوۡمَ نُسَيِّرُ ٱلۡجِبَالَ وَتَرَى ٱلۡأَرۡضَ بَارِزَةٗ
وَحَشَرۡنَٰهُمۡ فَلَمۡ نُغَادِرۡ مِنۡهُمۡ أَحَدٗا ٤٧

**48.** ಅವರನ್ನು ತಮ್ಮ ರಬ್‌ನ ಮುಂದೆ ಸಾಲು ಸಾಲಾಗಿ ಪ್ರದರ್ಶಿಸಲಾಗುವುದು. (ಅಲ್ಲಾಹು ಹೇಳುವನು): 'ನಾವು ನಿಮ್ಮನ್ನು ಮೊದಲ ಬಾರಿ ಸೃಷ್ಟಿಸಿದಂತೆಯೇ ನೀವು ನಮ್ಮ ಬಳಿಗೆ ಬಂದಿರುವಿರಿ. ಆದರೆ ನಾವು ನಿಮಗೆ ನಿಶ್ಚಿತ ಸಮಯವನ್ನು(3) ಎಂದೂ ನಿರ್ಣಯಿಸಲಾರೆವು ಎಂದು ನೀವು ವಾದಿಸುತ್ತಿದ್ದಿರಿ'.

وَعُرِضُواْ عَلَىٰ رَبِّكَ صَفّٗا لَّقَدۡ جِئۡتُمُونَا
كَمَا خَلَقۡنَٰكُمۡ أَوَّلَ مَرَّةِۭۚ بَلۡ زَعَمۡتُمۡ أَلَّن
نَّجۡعَلَ لَكُم مَّوۡعِدٗا ٤٨

**49.** (ಕರ್ಮಗಳ) ಗ್ರಂಥವನ್ನು ಇಡಲಾಗುವುದು. ಆಗ ಅದರಲ್ಲಿರುವುದರ ಕುರಿತು ಭಯಭೀತರಾಗಿರುವ ಸ್ಥಿತಿಯಲ್ಲಿ ತಾವು ಅಪರಾಧಿಗಳನ್ನು ಕಾಣುವಿರಿ. ಅವರು

وَوُضِعَ ٱلۡكِتَٰبُ فَتَرَى ٱلۡمُجۡرِمِينَ
مُشۡفِقِينَ مِمَّا فِيهِ وَيَقُولُونَ يَٰوَيۡلَتَنَا مَالِ
هَٰذَا ٱلۡكِتَٰبِ لَا يُغَادِرُ صَغِيرَةٗ

1 ಸಂಪತ್ತು ಮತ್ತು ಸಂತಾನದೊಂದಿಗೆ ಪ್ರೀತಿಯಿರುವುದು ಸ್ವಾಭಾವಿಕವಾಗಿದೆ. ಅದು ತಪ್ಪಲ್ಲ. ಆದರೆ ವಿಶ್ವಾಸಿಗಳು ಶಾಶ್ವತವಾದ ಫಲವನ್ನು ನೀಡುವ ಸತ್ಕರ್ಮಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಬೇಕಾಗಿದೆ.

2 ಪುನರುತ್ಥಾನ ದಿನ.

3 ನಿಶ್ಚಿತ ಸಮಯವೆಂದರೆ ಸರ್ವ ಕರ್ಮಗಳನ್ನೂ ಸೂಕ್ಷ್ಮವಾಗಿ ವಿಚಾರಣೆ ಮಾಡಿ ಪ್ರತಿಫಲ ನೀಡುವ ಸಮಯವಾಗಿದೆ.

ಹೇಳುವರು: 'ಅಯ್ಯೋ! ನಮ್ಮ ನಾಶವೇ! ಇದೆಂತಹ ಗ್ರಂಥ? ಚಿಕ್ಕದು ಮತ್ತು ದೊಡ್ಡದಾಗಿರುವ ಏನನ್ನೂ ಇದರಲ್ಲಿ ನಿಖರವಾಗಿ ದಾಖಲಿಸದೆ ಬಿಟ್ಟಿಲ್ಲವಲ್ಲ!'. ತಾವು ಮಾಡಿರುವುದೆಲ್ಲವೂ (ದಾಖಲೆಯಲ್ಲಿ) ಮುಂದಿಡಲ್ಪಟ್ಟಿರುವುದಾಗಿ ಅವರು ಕಾಣುವರು. ತಮ್ಮ ರಬ್ ಯಾರೊಂದಿಗೂ ಅನ್ಯಾಯವೆಸಗಲಾರನು.

وَلَا كَبِيرَةً إِلَّآ أَحۡصَىٰهَاۚ وَوَجَدُواْ مَا
عَمِلُواْ حَاضِرٗاۗ وَلَا يَظۡلِمُ رَبُّكَ أَحَدٗا ٤٩

50. 'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಸಾಷ್ಟಾಂಗ ಮಾಡಿದರು; ಇಬ್ಲೀಸನ ಹೊರತು. ಅವನು ಜಿನ್ನ್‌ಗಳಲ್ಲಿ ಸೇರಿದವನಾಗಿದ್ದನು. ತನ್ನ ರಬ್‌ನ ಆದೇಶವನ್ನು ಅವನು ಧಿಕ್ಕರಿಸಿದನು. ಅವರು ನಿಮ್ಮ ಶತ್ರುಗಳಾಗಿದ್ದೂ ಸಹ ನೀವು ನನ್ನ ಹೊರತು ಅವನನ್ನು ಮತ್ತು ಅವನ ಸಂತತಿಗಳನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವಿರಾ? (ಅಲ್ಲಾಹುವಿಗೆ) ಬದಲಿಯಾಗಿ ಅಕ್ರಮಿಗಳಿಗೆ ಸಿಕ್ಕಿದ್ದು ಎಷ್ಟು ನಿಕೃಷ್ಟವಾದುದು!

وَإِذۡ قُلۡنَا لِلۡمَلَٰٓئِكَةِ ٱسۡجُدُواْ لِأٓدَمَ
فَسَجَدُوٓاْ إِلَّآ إِبۡلِيسَ كَانَ مِنَ ٱلۡجِنِّ
فَفَسَقَ عَنۡ أَمۡرِ رَبِّهِۦٓۗ أَفَتَتَّخِذُونَهُۥ
وَذُرِّيَّتَهُۥٓ أَوۡلِيَآءَ مِن دُونِي وَهُمۡ لَكُمۡ
عَدُوُّۢۚ بِئۡسَ لِلظَّٰلِمِينَ بَدَلٗا ٥٠

51. ನಾನು ಆಕಾಶಗಳ ಮತ್ತು ಭೂಮಿಯ ಸೃಷ್ಟಿಗೆ ಅಥವಾ ಸ್ವತಃ ಅವರ ಸೃಷ್ಟಿಗೆ ಅವರನ್ನು ಸಾಕ್ಷಿಗಳನ್ನಾಗಿ ಮಾಡಿಲ್ಲ. ದಾರಿಗೆಡಿಸುವವರನ್ನು ನಾನು ಸಹಾಯಕರಾಗಿ ಮಾಡಿಕೊಳ್ಳುವುದೂ ಇಲ್ಲ.(1)

۞ مَّآ أَشۡهَدتُّهُمۡ خَلۡقَ ٱلسَّمَٰوَٰتِ وَٱلۡأَرۡضِ
وَلَا خَلۡقَ أَنفُسِهِمۡ وَمَا كُنتُ مُتَّخِذَ
ٱلۡمُضِلِّينَ عَضُدٗا ٥١

52. 'ನನ್ನ ಸಹಭಾಗಿಗಳೆಂದು ನೀವು ವಾದಿಸುತ್ತಿದ್ದವರನ್ನು ಕರೆಯಿರಿ' ಎಂದು ಅವನು (ಅಲ್ಲಾಹು) ಹೇಳುವ ದಿನವು (ಗಮನಾರ್ಹವಾಗಿದೆ). ಆಗ ಅವರು ಅವರನ್ನು ಕರೆಯುವರು. ಆದರೆ ಅವರು ಅವರಿಗೆ ಉತ್ತರವನ್ನು ನೀಡಲಾರರು. ನಾವು

وَيَوۡمَ يَقُولُ نَادُواْ شُرَكَآءِيَ ٱلَّذِينَ زَعَمۡتُمۡ
فَدَعَوۡهُمۡ فَلَمۡ يَسۡتَجِيبُواْ لَهُمۡ وَجَعَلۡنَا
بَيۡنَهُم مَّوۡبِقٗا ٥٢

---

1 ಅಲ್ಲಾಹುವಿಗೆ ಸಹಾಯಕರ ಅಗತ್ಯವಿಲ್ಲ. ದಾರಿಗೆಡಿಸುವ ಸೈತಾನರನ್ನು ಅವನು ಸಹಾಯಕರನ್ನಾಗಿ ಮಾಡಿಕೊಳ್ಳುವ ಪ್ರಮೇಯವೇ ಇಲ್ಲ.

ಅವರ ಮಧ್ಯೆ ವಿನಾಶದ ಕಂದರವನ್ನುಂಟು ಮಾಡುವೆವು.[1]

53. ಅಪರಾಧಿಗಳು ನರಕವನ್ನು ನೇರವಾಗಿ ಕಾಣುವರು. ಖಂಡಿತವಾಗಿಯೂ ತಾವು ಅದರಲ್ಲಿ ಬೀಳಲಿರುವೆವೆಂದು ಅವರಿಗೆ ಖಾತ್ರಿಯಾಗುವುದು. ಅದರಿಂದ ಪಾರಾಗಲು ಯಾವುದೇ ಮಾರ್ಗವನ್ನೂ ಅವರು ಕಾಣಲಾರರು.

وَرَءَا ٱلْمُجْرِمُونَ ٱلنَّارَ فَظَنُّوٓا۟ أَنَّهُم مُّوَاقِعُوهَا وَلَمْ يَجِدُوا۟ عَنْهَا مَصْرِفًا ﴿٥٣﴾

54. ಖಂಡಿತವಾಗಿಯೂ ಜನರಿಗೋಸ್ಕರ ಸರ್ವ ವಿಧದ ಉಪಮೆಗಳನ್ನೂ ನಾವು ಈ ಕುರ್‌ಆನಿನಲ್ಲಿ ನಾನಾ ವಿಧಗಳಲ್ಲಿ ವಿವರಿಸಿಕೊಟ್ಟಿರುವೆವು. ಆದರೆ ಮನುಷ್ಯನು ಅತಿ ಹೆಚ್ಚು ತರ್ಕಿಸುವವನಾಗಿರುವನು.

وَلَقَدْ صَرَّفْنَا فِى هَٰذَا ٱلْقُرْءَانِ لِلنَّاسِ مِن كُلِّ مَثَلٍ ۚ وَكَانَ ٱلْإِنسَٰنُ أَكْثَرَ شَىْءٍ جَدَلًا ﴿٥٤﴾

55. ಮಾರ್ಗದರ್ಶನವು ತಮ್ಮ ಬಳಿಗೆ ಬಂದಾಗ ಅದರಲ್ಲಿ ವಿಶ್ವಾಸವಿಡಲು ಮತ್ತು ತಮ್ಮ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡಲು ಜನರಿಗೆ ತಡೆಯಾಗಿರುವುದೇನೆಂದರೆ ಪೂರ್ವಿಕರ ವಿಷಯದಲ್ಲಿ ಜರುಗಿದ ಅದೇ ಕ್ರಮವು ತಮಗೂ ಬರಬೇಕು ಅಥವಾ ತಮಗೆ ಶಿಕ್ಷೆಯು ನೇರವಾಗಿ ಬರಬೇಕು ಎಂಬ ಅವರ ನಿಲುವು ಮಾತ್ರವಾಗಿದೆ.[2]

وَمَا مَنَعَ ٱلنَّاسَ أَن يُؤْمِنُوٓا۟ إِذْ جَآءَهُمُ ٱلْهُدَىٰ وَيَسْتَغْفِرُوا۟ رَبَّهُمْ إِلَّآ أَن تَأْتِيَهُمْ سُنَّةُ ٱلْأَوَّلِينَ أَوْ يَأْتِيَهُمُ ٱلْعَذَابُ قُبُلًا ﴿٥٥﴾

56. ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿಯೇ ವಿನಾ ನಾವು ಸಂದೇಶವಾಹಕರನ್ನು ಕಳುಹಿಸಲಾರೆವು.

وَمَا نُرْسِلُ ٱلْمُرْسَلِينَ إِلَّا مُبَشِّرِينَ وَمُنذِرِينَ ۚ وَيُجَٰدِلُ ٱلَّذِينَ كَفَرُوا۟

1 'ಜಅಲ್‌ನಾ ಬೈನಹುಮ್ ಮೌಬಿಕನ್' ಎಂಬ ವಾಕ್ಯವು ಹಲವು ರೀತಿಯಲ್ಲಿ ವ್ಯಾಖ್ಯಾನಿಸಲ್ಪಟ್ಟಿದೆ. ಪ್ರಾರ್ಥಿಸುವವರ ಮತ್ತು ಪ್ರಾರ್ಥಿಸಲ್ಪಡುವವರ ಮಧ್ಯೆ ವಿನಾಶಕಾರಿಯಾದ ನರಕವಿರುವುದು. ಪ್ರಾರ್ಥಿಸಲ್ಪಡುವ ಸಜ್ಜನರ ಮತ್ತು ಪ್ರಾರ್ಥಿಸುವ ಬಹುದೇವಾರಾಧಕರ ಮಧ್ಯೆ ವಿನಾಶಕರವಾದ ದೂರ (ತಲುಪಲು ಪ್ರಯತ್ನಿಸುವವರು ದಣಿದು ಹೋಗುವಷ್ಟು ದೂರ) ಇರುವುದು. ಪ್ರಾರ್ಥಿಸಲ್ಪಡುವ ಮಿಥ್ಯ ದೇವರುಗಳು ಮತ್ತು ಪ್ರಾರ್ಥಿಸುವವರ ನಡುವಿನ ಸಂಬಂಧವು ವಿನಾಶಕ್ಕೆ ಹೇತುವಾಗುವುದು ಇತ್ಯಾದಿ ಪ್ರಮುಖ ವ್ಯಾಖ್ಯಾನಗಳಾಗಿವೆ.

2 ಅಲ್ಲಾಹುವಿನ ಶಿಕ್ಷೆಯ ಕುರಿತು ಪ್ರವಾದಿಗಳು ಮುನ್ನೆಚ್ಚರಿಕೆ ನೀಡಿದಾಗಲೆಲ್ಲಾ ಆ ಶಿಕ್ಷೆಯು ಬರಲಿ, ಅದನ್ನು ನೋಡಿದ ನಂತರ ನಾವು ವಿಶ್ವಾಸವಿಡುತ್ತೇವೆ ಎಂದು ಸತ್ಯನಿಷೇಧಿಗಳು ಪ್ರತಿಕ್ರಿಯಿಸುತ್ತಿದ್ದರು. ಶಿಕ್ಷೆಯು ಬರುವಾಗ ಅವರಿಗೆ ಸ್ವಲ್ಪವೂ ಕಾಲಾವಕಾಶ ನೀಡಲಾಗುತ್ತಿರಲಿಲ್ಲ.

بِٱلۡبَٰطِلِ لِيُدۡحِضُواْ بِهِ ٱلۡحَقَّۖ وَٱتَّخَذُوٓاْ
ءَايَٰتِي وَمَآ أُنذِرُواْ هُزُوٗا ٥٦

ಸತ್ಯನಿಷೇಧಿಗಳು ಮಿಥ್ಯವಾದಗಳೊಂದಿಗೆ ತರ್ಕಿಸುತ್ತಿರುವರು; ತನ್ಮೂಲಕ ಸತ್ಯವನ್ನು ಧ್ವಂಸ ಮಾಡುವ ಸಲುವಾಗಿ. ಅವರು ನನ್ನ ದೃಷ್ಟಾಂತಗಳನ್ನು ಮತ್ತು ಅವರಿಗೆ ನೀಡಲಾಗಿರುವ ಮುನ್ನೆಚ್ಚರಿಕೆಗಳನ್ನು ಹಾಸ್ಯವಸ್ತುವಾಗಿ ಮಾಡಿಕೊಂಡರು.

وَمَنۡ أَظۡلَمُ مِمَّن ذُكِّرَ بِـَٔايَٰتِ رَبِّهِۦ
فَأَعۡرَضَ عَنۡهَا وَنَسِيَ مَا قَدَّمَتۡ يَدَاهُۚ إِنَّا
جَعَلۡنَا عَلَىٰ قُلُوبِهِمۡ أَكِنَّةً أَن يَفۡقَهُوهُ
وَفِيٓ ءَاذَانِهِمۡ وَقۡرٗاۖ وَإِن تَدۡعُهُمۡ إِلَى
ٱلۡهُدَىٰ فَلَن يَهۡتَدُوٓاْ إِذًا أَبَدٗا ٥٧

57. ತನ್ನ ರಬ್‌ನ ದೃಷ್ಟಾಂತಗಳ ಕುರಿತು ನೆನಪಿಸಿ ಕೊಡಲಾಗಿ ತರುವಾಯ ಅದರಿಂದ ವಿಮುಖನಾದವನಿಗಿಂತ ಮತ್ತು ತನ್ನ ಕೈಗಳು ಪೂರ್ವಭಾವಿಯಾಗಿ ಮಾಡಿಟ್ಟಿರುವುದನ್ನು (ದುಷ್ಕರ್ಮಗಳನ್ನು) ಮರೆತುಬಿಟ್ಟವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಅವರು ಅದನ್ನು ಗ್ರಹಿಸುವುದರಿಂದ (ತಡೆಯಾಗಿ) ನಾವು ಅವರ ಹೃದಯಗಳಲ್ಲಿ ಹೊದಿಕೆ ಗಳನ್ನು ಮತ್ತು ಕಿವಿಗಳಲ್ಲಿ ಮುಚ್ಚಳಗಳನ್ನು ಇಟ್ಟಿರುವೆವು. (ಹೀಗಿರುವಾಗ) ತಾವು ಅವರನ್ನು ಸನ್ಮಾರ್ಗದೆಡೆಗೆ ಆಹ್ವಾನಿಸಿದರೆ ಅವರು ಎಂದಿಗೂ ಸನ್ಮಾರ್ಗವನ್ನು ಸ್ವೀಕಾರ ಮಾಡಲಾರರು.

وَرَبُّكَ ٱلۡغَفُورُ ذُو ٱلرَّحۡمَةِۖ لَوۡ يُؤَاخِذُهُم
بِمَا كَسَبُواْ لَعَجَّلَ لَهُمُ ٱلۡعَذَابَۚ بَل لَّهُم
مَّوۡعِدٞ لَّن يَجِدُواْ مِن دُونِهِۦ مَوۡئِلٗا ٥٨

58. ತಮ್ಮ ರಬ್ ಅತ್ಯಧಿಕ ಕ್ಷಮಿಸುವವನೂ, ಅತಿ ದಯಾಳುವೂ ಆಗಿರುವನು. ಅವರು ಮಾಡಿರುವ ಪಾಪಗಳಿಗಾಗಿ ಅವನು ಅವರನ್ನು ಶಿಕ್ಷಿಸುವುದಾದರೆ ಅವನು ಅವರಿಗೆ ಶಿಕ್ಷೆಯನ್ನು ತ್ವರಿತಗೊಳಿಸುತ್ತಿದ್ದನು. ಆದರೆ ಅವರಿಗೆ ನಿಶ್ಚಿತ ಅವಧಿಯೊಂದಿದೆ. ಅದನ್ನು ದಾಟಿ ರಕ್ಷಣೆ ಪಡೆಯಬಹುದಾದ ಯಾವುದೇ ಸ್ಥಳವನ್ನೂ ಅವರು ಕಾಣಲಾರರು.

وَتِلۡكَ ٱلۡقُرَىٰٓ أَهۡلَكۡنَٰهُمۡ لَمَّا ظَلَمُواْ
وَجَعَلۡنَا لِمَهۡلِكِهِم مَّوۡعِدٗا ٥٩

59. ಆ ನಾಡುಗಳು ಅಕ್ರಮದಲ್ಲಿ ನಿರತವಾದಾಗ ನಾವವರನ್ನು ನಾಶಗೊಳಿಸಿದೆವು. ಅವರ ನಾಶಕ್ಕೆ ನಾವು ನಿಶ್ಚಿತ ಅವಧಿಯನ್ನಿಟ್ಟಿದ್ದೆವು.

وَإِذۡ قَالَ مُوسَىٰ لِفَتَىٰهُ لَآ أَبۡرَحُ حَتَّىٰٓ أَبۡلُغَ
مَجۡمَعَ ٱلۡبَحۡرَيۡنِ أَوۡ أَمۡضِيَ حُقُبٗا ٦٠

60. ಮೂಸಾ ತನ್ನ ಸೇವಕನೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ): 'ಎರಡು ಸಮುದ್ರಗಳ ಸಂಗಮ ಸ್ಥಳವನ್ನು ತಲುಪುವ

ತನಕ ಅಥವಾ ದೀರ್ಘ ಕಾಲಾವಧಿಯನ್ನು ನಡೆದು ಕ್ರಮಿಸುವ ತನಕ ನಾನು (ಈ ಯಾತ್ರೆಯನ್ನು) ಮುಂದುವರಿಸುತ್ತಲೇ ಇರುವೆನು'.

**61.** ಅವನು ಅವರು ಅವೆರಡರ ( ಎರಡು ಸಮುದ್ರಗಳ) ಸಂಗಮ ಸ್ಥಳವನ್ನು ತಲುಪಿದಾಗ ತಮ್ಮ ಮೀನನ್ನು ಮರೆತುಬಿಟ್ಟರು.[1] ಅದು ಸಮುದ್ರಕ್ಕೆ (ಹಾರಿ) ತಾನು ಸಾಗಿದ ಹಾದಿಯನ್ನು ಒಂದು ಸುರಂಗ(ದಂತೆ) ಮಾಡಿತು.[2]

فَلَمَّا بَلَغَا مَجْمَعَ بَيْنِهِمَا نَسِيَا حُوتَهُمَا فَٱتَّخَذَ سَبِيلَهُۥ فِى ٱلْبَحْرِ سَرَبًا ﴿٦١﴾

**62.** ತರುವಾಯ ಅವರು ಆ ಸ್ಥಳವನ್ನು ದಾಟಿ ಮುಂದಕ್ಕೆ ಸಾಗಿದಾಗ ಮೂಸಾ ತನ್ನ ಸೇವಕನೊಂದಿಗೆ ಹೇಳಿದರು: 'ನಮ್ಮ ಆಹಾರವನ್ನು ನಮ್ಮ ಬಳಿಗೆ ತಾ. ನಮ್ಮ ಈ ಯಾತ್ರೆಯಿಂದಾಗಿ ನಮಗೆ ದಣಿವುಂಟಾಗಿದೆ'.

فَلَمَّا جَاوَزَا قَالَ لِفَتَىٰهُ ءَاتِنَا غَدَآءَنَا لَقَدْ لَقِينَا مِن سَفَرِنَا هَٰذَا نَصَبًا ﴿٦٢﴾

**63.** ಅವನು ಹೇಳಿದನು: 'ತಾವು ಕಂಡಿರಾ? ನಾವು ಆ ಬಂಡೆಯ ಬಳಿ ಆಶ್ರಯ ಪಡೆದಿದ್ದ ಸಂದರ್ಭದಲ್ಲಿ ನಾನು ಆ ಮೀನನ್ನು ಮರೆತೇ ಬಿಟ್ಟಿದ್ದೆ. ತಮ್ಮೊಂದಿಗೆ ಅದರ ಬಗ್ಗೆ ಹೇಳುವುದನ್ನು ನಾನು ಮರೆಯುವಂತೆ ಮಾಡಿದ್ದು ಸೈತಾನನ ಹೊರತು ಇನ್ನಾರೂ ಅಲ್ಲ. ಅದು ಸಮುದ್ರದಲ್ಲಿ ತಾನು ಸಾಗಿದ ಹಾದಿಯನ್ನು ಒಂದು ಅದ್ಭುತವನ್ನಾಗಿ ಮಾಡಿತ್ತು'.

قَالَ أَرَءَيْتَ إِذْ أَوَيْنَآ إِلَى ٱلصَّخْرَةِ فَإِنِّى نَسِيتُ ٱلْحُوتَ وَمَآ أَنسَىٰنِيهُ إِلَّا ٱلشَّيْطَٰنُ أَنْ أَذْكُرَهُۥ ۚ وَٱتَّخَذَ سَبِيلَهُۥ فِى ٱلْبَحْرِ عَجَبًا ﴿٦٣﴾

**64.** ಮೂಸಾ ಹೇಳಿದರು: 'ನಾವು ಅರಸುತ್ತಿದ್ದುದು ಅದನ್ನೇ ಆಗಿದೆ'.[3] ತಕ್ಷಣ ಅವರಿಬ್ಬರೂ ತಮ್ಮ ಹೆಜ್ಜೆಗುರುತುಗಳನ್ನು ನೋಡುತ್ತಾ ಮರಳಿದರು.

قَالَ ذَٰلِكَ مَا كُنَّا نَبْغِ ۚ فَٱرْتَدَّا عَلَىٰٓ ءَاثَارِهِمَا قَصَصًا ﴿٦٤﴾

1 ಆ ಮೀನನ್ನು ಅವರು ಒಯ್ದಿದ್ದು ಅಲ್ಲಾಹುವಿನ ಆದೇಶ ಪ್ರಕಾರವಾಗಿತ್ತೆಂದು ಹದೀಸಿನಲ್ಲಿದೆ.

2 ಮೀನು ಸಾಗಿದ ಹಾದಿಯು ಒಂದು ಸುರಂಗದಂತಾಗಿದ್ದು ಅಲ್ಲಾಹು ಮೂಸಾ(عَلَيْهِ السَّلَامُ)ರಿಗೆ ಕೆಲವು ವಿಷಯಗಳನ್ನು ಕಲಿಸುವುದಕ್ಕಾಗಿ ನಿಶ್ಚಯಿಸಿದ ವಿಶೇಷ ಕ್ರಮದ ಒಂದು ಭಾಗವಾಗಿತ್ತು.

3 ಆ ಮೀನು ಚಿಮ್ಮಿ ಹೋಗುವ ಸ್ಥಳದಲ್ಲಿ ತಾವೊಬ್ಬ ಮಹಾ ವಿದ್ವಾಂಸನನ್ನು ಕಾಣುವಿರೆಂದು ಅಲ್ಲಾಹು ಮೂಸಾ(عَلَيْهِ السَّلَامُ)ರಿಗೆ ಮುಂಚಿತವಾಗಿ ತಿಳಿಸಿದ್ದನು ಎಂದು ಹದೀಸಿನಲ್ಲಿದೆ.

**65.** ಆಗ ಅವರಿಬ್ಬರೂ ನಮ್ಮ ದಾಸರ ಪೈಕಿ ಒಬ್ಬರನ್ನು[1] ಕಂಡರು. ಅವರಿಗೆ ನಾವು ನಮ್ಮ ವತಿಯ ಕಾರುಣ್ಯವನ್ನು ದಯಪಾಲಿಸಿದ್ದೆವು ಮತ್ತು ನಮ್ಮ ವತಿಯ ಜ್ಞಾನವನ್ನೂ ಕಲಿಸಿದ್ದೆವು.

فَوَجَدَا عَبۡدٗا مِّنۡ عِبَادِنَآ ءَاتَيۡنَٰهُ رَحۡمَةٗ مِّنۡ عِندِنَا وَعَلَّمۡنَٰهُ مِن لَّدُنَّا عِلۡمٗا ٦٥

**66.** ಮೂಸಾ ಅವರೊಂದಿಗೆ ಹೇಳಿದರು: 'ತಮಗೆ ಕಲಿಸಿಕೊಡಲಾಗಿರುವ ಸನ್ಮಾರ್ಗಜ್ಞಾನದಿಂದ ತಾವು ನನಗೆ ಕಲಿಸಿಕೊಡುವುದಕ್ಕಾಗಿ ನಾನು ತಮ್ಮನ್ನು ಹಿಂಬಾಲಿಸಲೇ?'

قَالَ لَهُۥ مُوسَىٰ هَلۡ أَتَّبِعُكَ عَلَىٰٓ أَن تُعَلِّمَنِ مِمَّا عُلِّمۡتَ رُشۡدٗا ٦٦

**67.** ಆತ ಹೇಳಿದರು: 'ಖಂಡಿತವಾಗಿಯೂ ನನ್ನ ಜೊತೆಗೆ ಸಹನೆಯಿಂದಿರಲು ತಮಗೆ ಸಾಧ್ಯವಾಗದು.

قَالَ إِنَّكَ لَن تَسۡتَطِيعَ مَعِيَ صَبۡرٗا ٦٧

**68.** ತಮಗೆ ಸೂಕ್ಷ್ಮ ಅರಿವಿಲ್ಲದ ಒಂದು ವಿಷಯದಲ್ಲಿ ತಾವು ಸಹನೆಯಿಂದಿರುವುದಾದರೂ ಹೇಗೆ?'

وَكَيۡفَ تَصۡبِرُ عَلَىٰ مَا لَمۡ تُحِطۡ بِهِۦ خُبۡرٗا ٦٨

**69.** ಆತ(ಮೂಸಾ) ಹೇಳಿದರು: 'ಅಲ್ಲಾಹು ಇಚ್ಛಿಸಿದರೆ ತಾವು ನನ್ನನ್ನು ಸಹನಾಶೀಲನಾಗಿ ಕಾಣುವಿರಿ. ತಮ್ಮ ಯಾವುದೇ ಆಜ್ಞೆಯನ್ನೂ ನಾನು ಧಿಕ್ಕರಿಸಲಾರೆನು'.

قَالَ سَتَجِدُنِيٓ إِن شَآءَ ٱللَّهُ صَابِرٗا وَلَآ أَعۡصِي لَكَ أَمۡرٗا ٦٩

**70.** ಆತ ಹೇಳಿದರು: 'ಆದರೆ ತಾವು ನನ್ನನ್ನು ಹಿಂಬಾಲಿಸುವುದಾದರೆ ಯಾವುದೇ ಒಂದು ವಿಷಯದ ಕುರಿತು, ಅದರ ಬಗ್ಗೆ ನಾನು ತಮಗೆ ಮಾಹಿತಿಯನ್ನು ನೀಡುವ ತನಕ ತಾವು ನನ್ನೊಂದಿಗೆ ಪ್ರಶ್ನಿಸಬಾರದು'.

قَالَ فَإِنِ ٱتَّبَعۡتَنِي فَلَا تَسۡـَٔلۡنِي عَن شَيۡءٍ حَتَّىٰٓ أُحۡدِثَ لَكَ مِنۡهُ ذِكۡرٗا ٧٠

**71.** ತರುವಾಯ ಅವರಿಬ್ಬರೂ ಹೊರಟು ಒಂದು ಹಡಗನ್ನೇರಿದಾಗ ಆತ ಅದನ್ನು ತೂತು ಮಾಡಿದರು. ಮೂಸಾ ಹೇಳಿದರು: 'ಅದರಲ್ಲಿರುವವರನ್ನು ಮುಳುಗಿಸುವುದಕ್ಕಾಗಿ

فَٱنطَلَقَا حَتَّىٰٓ إِذَا رَكِبَا فِي ٱلسَّفِينَةِ خَرَقَهَاۖ قَالَ أَخَرَقۡتَهَا لِتُغۡرِقَ أَهۡلَهَا لَقَدۡ جِئۡتَ شَيۡـًٔا إِمۡرٗا ٧١

---

1 ಮೂಸಾ(عَلَيۡهِ ٱلسَّلَامُ)ರವರ ಸೇವಕನ ಹೆಸರು ಯೂಶಅ್ ಇಬ್ನ್ ನೂನ್ ಮತ್ತು ಅವರು ಅನುಗಮಿಸಿದ ಆ ಮಹಾ ವಿದ್ವಾಂಸನ ಹೆಸರು ಖಿಳ್ರ್ ಆಗಿದೆಯೆಂದು ತಫ್ಸೀರ್‌ಗಳಲ್ಲಿ ಕಾಣಬಹುದು. ಖಿಳ್ರ್ ಪ್ರವಾದಿ ಹೌದೋ ಅಲ್ಲವೋ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ದಿವ್ಯ ಸಂದೇಶ ಸಿಕ್ಕಿರುವುದರಿಂದಾಗಿ ಅವರು ಪ್ರವಾದಿಯಾಗಿರುವ ಸಾಧ್ಯತೆಯು ಹೆಚ್ಚಾಗಿದೆ.

ತಾವು ಅದನ್ನು ತೂತು ಮಾಡಿದಿರಾ?
ಖಂಡಿತವಾಗಿಯೂ ತಾವು ಘೋರವಾದ
ಒಂದು ಕೃತ್ಯವನ್ನು ಮಾಡಿರುವಿರಿ’.

**72.** ಆತ ಹೇಳಿದರು: ‘ನನ್ನ ಜೊತೆಗೆ
ಸಹನೆಯಿಂದಿರಲು ತಮಗೆ ಖಂಡಿತವಾಗಿಯೂ
ಸಾಧ್ಯವಾಗದೆಂದು ನಾನು ಹೇಳಿರಲಿಲ್ಲವೇ?’

قَالَ أَلَمۡ أَقُلۡ إِنَّكَ لَن تَسۡتَطِيعَ مَعِيَ
صَبۡرٗا ٧٢

**73.** ಮೂಸಾ ಹೇಳಿದರು: ‘ನಾನು
ಮರೆತುಬಿಟ್ಟಿರುವುದಕ್ಕಾಗಿ ತಾವು ನನ್ನನ್ನು
ಶಿಕ್ಷಿಸದಿರಿ. ನನ್ನ ವಿಷಯದಲ್ಲಿ
ತ್ರಾಸದಾಯಕವಾದ ಯಾವುದಕ್ಕೂ ತಾವು
ನನ್ನನ್ನು ಬಲವಂತ ಪಡಿಸದಿರಿ’.

قَالَ لَا تُؤَاخِذۡنِي بِمَا نَسِيتُ وَلَا تُرۡهِقۡنِي
مِنۡ أَمۡرِي عُسۡرٗا ٧٣

**74.** ತರುವಾಯ ಅವರಿಬ್ಬರೂ ಹೊರಟರು. ಬಳಿಕ
ಅವರು ಒಬ್ಬ ಹುಡುಗನನ್ನು ಸಂಧಿಸಿದಾಗ
ಆತ ಹುಡುಗನನ್ನು ಕೊಂದು ಹಾಕಿದರು.
ಮೂಸಾ ಹೇಳಿದರು: ‘ನಿರ್ದೋಷಿಯಾದ
ಒಬ್ಬನನ್ನು ಇನ್ನೊಬ್ಬನಿಗೆ ಬದಲಿಯಾಗಿರುವ
ಹೊರತು[1] ತಾವು ವಧಿಸಿದಿರಾ?
ಖಂಡಿತವಾಗಿಯೂ ತಾವೊಂದು ನಿಷಿದ್ಧ
ಕೃತ್ಯವನ್ನು ಮಾಡಿರುವಿರಿ’.

فَٱنطَلَقَا حَتَّىٰٓ إِذَا لَقِيَا غُلَٰمٗا فَقَتَلَهُۥ
قَالَ أَقَتَلۡتَ نَفۡسٗا زَكِيَّةَۢ بِغَيۡرِ نَفۡسٖ لَّقَدۡ
جِئۡتَ شَيۡـٔٗا نُّكۡرٗا ٧٤

**75.** ಆತ ಹೇಳಿದರು: ‘ನನ್ನ ಜೊತೆಗೆ
ತಾಳ್ಮೆಯಿಂದಿರಲು ತಮಗೆ ಖಂಡಿತವಾಗಿಯೂ
ಸಾಧ್ಯವಾಗದೆಂದು ನಾನು ತಮ್ಮೊಂದಿಗೆ
ಹೇಳಿರಲಿಲ್ಲವೇ?’

۞ قَالَ أَلَمۡ أَقُل لَّكَ إِنَّكَ لَن تَسۡتَطِيعَ
مَعِيَ صَبۡرٗا ٧٥

**76.** ಮೂಸಾ ಹೇಳಿದರು: ‘ಇದರ ಬಳಿಕ ನಾನು
ತಮ್ಮೊಂದಿಗೆ ಯಾವುದಾದರೂ ವಿಷಯದ
ಕುರಿತು ಪ್ರಶ್ನಿಸಿದರೆ ತರುವಾಯ ತಾವು
ನನ್ನನ್ನು ಜೊತೆಗಾರನನ್ನಾಗಿ ಮಾಡಬೇಕಾಗಿಲ್ಲ.
ನನ್ನಿಂದ ತಮಗೆ ಸೂಕ್ತವಾದ ಒಂದು
ಕಾರಣವು ಸಿಕ್ಕಿರುತ್ತದೆ.’[2]

قَالَ إِن سَأَلۡتُكَ عَن شَيۡءِۭ بَعۡدَهَا فَلَا
تُصَٰحِبۡنِيۖ قَدۡ بَلَغۡتَ مِن لَّدُنِّي عُذۡرٗا ٧٦

1 ಅಂದರೆ ಯಾರನ್ನೂ ಹತ್ಯೆ ಮಾಡಿರದ ನಿರಪರಾಧಿ ವ್ಯಕ್ತಿಯನ್ನು ತಾವು ಕೊಂದು ಹಾಕಿದಿರಾ? ಎಂದರ್ಥ.

2 ಮೂರನೇ ಬಾರಿಯೂ ನಾನು ಆಜ್ಞೆಯನ್ನು ಉಲ್ಲಂಘಿಸಿದರೆ ನನ್ನಿಂದ ಬೇರ್ಪಡಲು ಅದು ತಮಗೆ ಸೂಕ್ತ ಕಾರಣವಾಗಿರುವುದು.

77. ತರುವಾಯ ಅವರಿಬ್ಬರೂ ಹೊರಟರು. ಹಾಗೆಯೇ ಅವರಿಬ್ಬರೂ ಒಂದು ಪಟ್ಟಣವನ್ನು ತಲುಪಿದರು. ಅದರ ನಿವಾಸಿಗಳೊಂದಿಗೆ ಅವರು ಆಹಾರವನ್ನು ಬೇಡಿದರು. ಆದರೆ ಅವರು ಇವರಿಗೆ ಆತಿಥ್ಯ ನೀಡಲು ನಿರಾಕರಿಸಿದರು. ಆಗ ಅವರು ಅಲ್ಲಿ ಕುಸಿದು ಬೀಳಲು ಸಿದ್ಧವಾಗಿರುವ ಒಂದು ಗೋಡೆಯನ್ನು ಕಂಡರು. ಕೂಡಲೇ ಆತ ಅದನ್ನು ನೇರವಾಗಿಸಿದರು. ಮೂಸಾ ಹೇಳಿದರು: 'ತಾವು ಇಚ್ಛಿಸುತ್ತಿದ್ದರೆ ಇದಕ್ಕಾಗಿ ತಾವು ಏನಾದರೂ ಪ್ರತಿಫಲವನ್ನು ಪಡೆಯಬಹುದಿತ್ತು!'

فَٱنطَلَقَا حَتَّىٰٓ إِذَآ أَتَيَآ أَهۡلَ قَرۡيَةٍ
ٱسۡتَطۡعَمَآ أَهۡلَهَا فَأَبَوۡاْ أَن يُضَيِّفُوهُمَا
فَوَجَدَا فِيهَا جِدَارٗا يُرِيدُ أَن يَنقَضَّ
فَأَقَامَهُۥۖ قَالَ لَوۡ شِئۡتَ لَتَّخَذۡتَ عَلَيۡهِ
أَجۡرٗا ٧٧

78. ಅವರು ಹೇಳಿದರು: 'ಇದು ನನ್ನ ಹಾಗೂ ತಮ್ಮ ನಡುವಿನ ಬೇರ್ಪಡುವಿಕೆಯಾಗಿದೆ. ಯಾವುದರ ಕುರಿತು ತಮಗೆ ಸಹನೆಯಿಂದಿರಲು ಸಾಧ್ಯವಾಗಲಿಲ್ಲವೋ ಅದರ ತಿರುಳನ್ನು ನಾನು ತಮಗೆ ತಿಳಿಸಿಕೊಡುವೆನು.

قَالَ هَٰذَا فِرَاقُ بَيۡنِي وَبَيۡنِكَۚ سَأُنَبِّئُكَ
بِتَأۡوِيلِ مَا لَمۡ تَسۡتَطِع عَّلَيۡهِ صَبۡرًا ٧٨

79. ಆ ಹಡಗು ಸಮುದ್ರದಲ್ಲಿ ಕೆಲಸ ಮಾಡುವ ಕೆಲವು ಬಡವರಿಗೆ ಸೇರಿದ್ದಾಗಿತ್ತು. ಆದ್ದರಿಂದ ನಾನು ಅದನ್ನು ಹಾಳುಮಾಡಲು ಇಚ್ಛಿಸಿದೆನು. (ಯಾಕೆಂದರೆ ಉತ್ತಮ ಸ್ಥಿತಿಯಲ್ಲಿರುವ) ಎಲ್ಲ ಹಡಗುಗಳನ್ನು ಬಲವಂತದಿಂದ ವಶಪಡಿಸಿಕೊಳ್ಳುವ ಒಬ್ಬ ಅರಸನು ಅವರ ಹಿಂದಿದ್ದನು.

أَمَّا ٱلسَّفِينَةُ فَكَانَتۡ لِمَسَٰكِينَ
يَعۡمَلُونَ فِي ٱلۡبَحۡرِ فَأَرَدتُّ أَنۡ أَعِيبَهَا
وَكَانَ وَرَآءَهُم مَّلِكٞ يَأۡخُذُ كُلَّ سَفِينَةٍ
غَصۡبٗا ٧٩

80. ಆ ಹುಡುಗನ ಮಾತಾಪಿತರು ಸತ್ಯವಿಶ್ವಾಸಿಗಳಾಗಿದ್ದರು. ಆದರೆ ಅವನು ಅವರನ್ನು ಅತಿಕ್ರಮಕ್ಕೂ, ಸತ್ಯನಿಷೇಧಕ್ಕೂ ಬಲವಂತಪಡಿಸುವನೆಂದು ನಾವು ಭಯಪಟ್ಟೆವು.

وَأَمَّا ٱلۡغُلَٰمُ فَكَانَ أَبَوَاهُ مُؤۡمِنَيۡنِ فَخَشِينَآ
أَن يُرۡهِقَهُمَا طُغۡيَٰنٗا وَكُفۡرٗا ٨٠

81. ಆದ್ದರಿಂದ ಅವರಿಗೆ ಅವರ ರಬ್ ಗುಣದಲ್ಲಿ ಅವನಿಗಿಂತ ಉತ್ತಮನೂ, ಕಾರುಣ್ಯದಲ್ಲಿ ಹೆಚ್ಚು ನಿಕಟನೂ ಆಗಿರುವ ಒಬ್ಬ ಮಗನನ್ನು ಬದಲಿಯಾಗಿ ನೀಡಲೆಂದು ನಾವು ಬಯಸಿದೆವು.

فَأَرَدۡنَآ أَن يُبۡدِلَهُمَا رَبُّهُمَا خَيۡرٗا مِّنۡهُ زَكَوٰةٗ
وَأَقۡرَبَ رُحۡمٗا ٨١

**82.** ಆ ಗೋಡೆ ಪಟ್ಟಣದ ಇಬ್ಬರು ಅನಾಥ ಬಾಲಕರಿಗೆ ಸೇರಿದ್ದಾಗಿತ್ತು. ಅದರ ಅಡಿಯಲ್ಲಿ ಅವರಿಗಾಗಿ ಇರುವ ಒಂದು ನಿಧಿಯಿತ್ತು. ಅವರ ತಂದೆ ಒಬ್ಬ ಸಾತ್ವಿಕನಾಗಿದ್ದನು. ಆದ್ದರಿಂದ ಅವರಿಬ್ಬರೂ ತಮ್ಮ ಪ್ರೌಢಾವಸ್ಥೆಯನ್ನು ತಲುಪಿ ತರುವಾಯ ತಮ್ಮ ನಿಧಿಯನ್ನು ಹೊರತೆಗೆಯಬೇಕೆಂದು ತಮ್ಮ ರಬ್ ಬಯಸಿದನು.[1] ಅದು ತಮ್ಮ ರಬ್‌ನ ವತಿಯ ದಯೆಯಿಂದಾಗಿದೆ. ಇವಾವುದನ್ನೂ ನಾನು ನನ್ನ ಇಚ್ಛೆ ಪ್ರಕಾರ ಮಾಡಿರಲಿಲ್ಲ.[2] ತಮಗೆ ಯಾವುದರ ಕುರಿತು ಸಹನೆಯಿಂದಿರಲು ಸಾಧ್ಯವಾಗಲಿಲ್ಲವೋ ಅದರ ತಿರುಳು ಇದಾಗಿದೆ’.

وَأَمَّا ٱلْجِدَارُ فَكَانَ لِغُلَٰمَيْنِ يَتِيمَيْنِ فِى ٱلْمَدِينَةِ وَكَانَ تَحْتَهُۥ كَنزٌ لَّهُمَا وَكَانَ أَبُوهُمَا صَٰلِحًا فَأَرَادَ رَبُّكَ أَن يَبْلُغَآ أَشُدَّهُمَا وَيَسْتَخْرِجَا كَنزَهُمَا رَحْمَةً مِّن رَّبِّكَ ۚ وَمَا فَعَلْتُهُۥ عَنْ أَمْرِى ۚ ذَٰلِكَ تَأْوِيلُ مَا لَمْ تَسْطِع عَّلَيْهِ صَبْرًا ﴿٨٢﴾

**83.** ಅವರು ತಮ್ಮೊಂದಿಗೆ ದುಲ್‌ಕರ್ನೈನ್‌ರ[3] ಕುರಿತು ಕೇಳುವರು. ತಾವು ಹೇಳಿರಿ: ‘ಅವರ ಬಗೆಗಿನ ಮಾಹಿತಿಯನ್ನು ನಾನು ನಿಮಗೆ ಓದಿಕೊಡುವೆನು’.

وَيَسْـَٔلُونَكَ عَن ذِى ٱلْقَرْنَيْنِ ۖ قُلْ سَأَتْلُوا۟ عَلَيْكُم مِّنْهُ ذِكْرًا ﴿٨٣﴾

**84.** ಖಂಡಿತವಾಗಿಯೂ ನಾವು ಆತನಿಗೆ ಭೂಮಿಯಲ್ಲಿ ಅಧಿಕಾರವನ್ನು ನೀಡಿದೆವು ಮತ್ತು ಎಲ್ಲ ವಿಷಯಗಳಿಗಿರುವ ಮಾರ್ಗಗಳನ್ನು ನಾವು ಆತನಿಗೆ ಅನುಕೂಲ ಮಾಡಿಕೊಟ್ಟೆವು.

إِنَّا مَكَّنَّا لَهُۥ فِى ٱلْأَرْضِ وَءَاتَيْنَٰهُ مِن كُلِّ شَىْءٍ سَبَبًا ﴿٨٤﴾

**85.** ಆತ ಒಂದು ದಾರಿಯನ್ನು ಅನುಗಮಿಸಿದರು.[4]

فَأَتْبَعَ سَبَبًا ﴿٨٥﴾

---

1 ಅದಕ್ಕಾಗಿ ನಾನು ಆ ಗೋಡೆಯ ಬಿರುಕುಗಳನ್ನು ದುರಸ್ಥಿಗೊಳಿಸಿದೆನು.

2 ಇವೆಲ್ಲವನ್ನೂ ಅಲ್ಲಾಹುವಿನ ಆದೇಶ ಪ್ರಕಾರವೇ ಮಾಡಿದೆ ಎಂದರ್ಥ. ಅಲ್ಲಾಹು ಮಾಡುವ ಪ್ರವೃತ್ತಿಗಳ ಯುಕ್ತಿಯನ್ನು ಸಂಪೂರ್ಣವಾಗಿ ಗ್ರಹಿಸಿಕೊಳ್ಳಲು ನಮ್ಮಿಂದ ಸಾಧ್ಯವಾಗದು. ಅವನು ತಿಳಿಸಿಕೊಟ್ಟ ಹೊರತು ಏನನ್ನೂ ಅರಿತುಕೊಳ್ಳಲು ನಮಗೆ ಸಾಧ್ಯವಿಲ್ಲ.

3 ದುಲ್‌ಕರ್ನೈನ್ ಎಂಬ ಪದದ ಅರ್ಥವು ಎರಡು ಶತಮಾನಗಳ ಕಾಲ ಬದುಕಿದವನು ಅಥವಾ ಎರಡು ಕೊಂಬುಗಳಿರುವವನು ಎಂದಾಗಿರಬಹುದು. ಆದ್ದರಿಂದ ಇದೊಬ್ಬ ವ್ಯಕ್ತಿಯ ಹೆಸರಾಗಿರಲಾರದು. ಇದೊಂದು ಉಪನಾಮವಾಗಿರಬಹುದು. ಈ ಉಪನಾಮವಿರುವ ವ್ಯಕ್ತಿ ಯಾರೆಂಬ ಬಗ್ಗೆ ಕುರ್‌ಆನ್ ವ್ಯಾಖ್ಯಾನಕಾರರಲ್ಲಿ ಏಕಾಭಿಪ್ರಾಯವಿಲ್ಲ.

4 ಅವರು ಒಂದು ದಿಕ್ಕಿಗೆ ತಿರುಗಿ ಯಾತ್ರೆ ಹೊರಟರು ಎಂದರ್ಥ.

86. ಆತ ಸೂರ್ಯಾಸ್ತಮಾನದ ಸ್ಥಳಕ್ಕೆ ತಲುಪಿದಾಗ ಅದು ಕೆಸರು ನೀರಿರುವ ಜಲಾಶಯದಲ್ಲಿ ಅಸ್ತಮಿಸುತ್ತಿರುವುದಾಗಿ ಕಂಡರು.[1] ತರುವಾಯ ಅದರ ಬಳಿ ಒಂದು ಜನತೆಯನ್ನು ಕಂಡರು. ನಾವು ಹೇಳಿದೆವು: 'ಓ ದುಲ್‌ಕರ್ನೈನ್! ಒಂದೋ ಇವರನ್ನು ಶಿಕ್ಷಿಸಿರಿ ಅಥವಾ ಇವರಲ್ಲಿ ಒಳಿತನ್ನುಂಟುಮಾಡಿರಿ.[2]

حَتَّىٰٓ إِذَا بَلَغَ مَغۡرِبَ ٱلشَّمۡسِ وَجَدَهَا تَغۡرُبُ فِي عَيۡنٍ حَمِئَةٖ وَوَجَدَ عِندَهَا قَوۡمٗاۗ قُلۡنَا يَٰذَا ٱلۡقَرۡنَيۡنِ إِمَّآ أَن تُعَذِّبَ وَإِمَّآ أَن تَتَّخِذَ فِيهِمۡ حُسۡنٗا ٨٦

87. ಆತ (ದುಲ್‌ಕರ್ನೈನ್) ಹೇಳಿದರು: 'ಯಾರು ಅಕ್ರಮವೆಸಗುವನೋ ಅವನನ್ನು ನಾವು ಶಿಕ್ಷಿಸುವೆವು. ತರುವಾಯ ಅವನನ್ನು ಅವನ ರಬ್‌ನ ಕಡೆಗೆ ಮರಳಿಸಲಾಗುವುದು. ಆಗ ಅವನು ಅವನಿಗೆ ಕಠಿಣವಾದ ಶಿಕ್ಷೆಯನ್ನು ನೀಡುವನು'.

قَالَ أَمَّا مَن ظَلَمَ فَسَوۡفَ نُعَذِّبُهُۥ ثُمَّ يُرَدُّ إِلَىٰ رَبِّهِۦ فَيُعَذِّبُهُۥ عَذَابٗا نُّكۡرٗا ٨٧

88. ಆದರೆ ಯಾರು ವಿಶ್ವಾಸವಿಟ್ಟು ಸತ್ಕರ್ಮವೆಸಗುವನೋ ಅವನಿಗೆ ಪ್ರತಿಫಲವಾಗಿ ಉತ್ಕೃಷ್ಟವಾದ ಸ್ವರ್ಗವಿರುವುದು. ನಮ್ಮ ಆಜ್ಞೆಗಳಲ್ಲಿ ಸುಲಭವಾಗಿರುವುದನ್ನು ನಾವು ಅವನೊಂದಿಗೆ ಆದೇಶಿಸುವೆವು.[3]

وَأَمَّا مَنۡ ءَامَنَ وَعَمِلَ صَٰلِحٗا فَلَهُۥ جَزَآءً ٱلۡحُسۡنَىٰۖ وَسَنَقُولُ لَهُۥ مِنۡ أَمۡرِنَا يُسۡرٗا ٨٨

89. ತರುವಾಯ ಆತ ಬೇರೊಂದು ದಾರಿಯನ್ನು ಅನುಗಮಿಸಿದರು.

ثُمَّ أَتۡبَعَ سَبَبًا ٨٩

90. ಆತ ಸೂರ್ಯೋದಯವಾಗುವ ಸ್ಥಳಕ್ಕೆ ತಲುಪಿದಾಗ[4] ಅದು ಒಂದು ಜನತೆಯ

حَتَّىٰٓ إِذَا بَلَغَ مَطۡلِعَ ٱلشَّمۡسِ وَجَدَهَا

1 ಜನವಾಸವಿರುವ ಪ್ರದೇಶಗಳ ಪಶ್ಚಿಮ ತುದಿಗೆ ದುಲ್‌ಕರ್ನೈನ್ ತಲುಪಿದರು ಮತ್ತು ಅದರಾಚೆಗಿನ ಸಮುದ್ರದಲ್ಲಿ ಸೂರ್ಯನು ಅಸ್ತಮಿಸಿ ಮರೆಯಾಗುತ್ತಾನೆಂದು ಅಂದಿನ ಜನರು ಭಾವಿಸಿದ್ದರೆಂದು ಕುರ್‌ಆನ್ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಇದು ಮೆಡಿಟರೇನಿಯನ್ ಸಾಗರ ಅಥವಾ ಅಟ್ಲಾಂಟಿಕ್ ಸಾಗರದ ಪೂರ್ವ ತೀರವಾಗಿರಬಹುದು. ಸಮುದ್ರ ತೀರದಲ್ಲಿ ಸೂರ್ಯಾಸ್ತವನ್ನು ವೀಕ್ಷಿಸುವಾಗ ಅದು ಕೆಸರು ನೀರಿನಲ್ಲಿ ಅಸ್ತಮಿಸುವುದಾಗಿ ತೋರುತ್ತದೆ.

2 ಒಬ್ಬ ಚಕ್ರವರ್ತಿಗೆ ತಾನು ವಶಪಡಿಸಿದ ದೇಶಗಳಲ್ಲಿ ಕೆಟ್ಟ ಆಡಳಿತ ನೀಡಿ ಜನರನ್ನು ಹಿಂಸಿಸಲು ಮತ್ತು ಉತ್ತಮ ಆಡಳಿತ ನೀಡಿ ಜನರನ್ನು ಉತ್ತಮ ಸ್ಥಿತಿಗೆ ತಲುಪಿಸಲು ಸಾಧ್ಯವಿದೆ. ಅವುಗಳ ಪೈಕಿ ಅವನು ಯಾವುದನ್ನು ಆರಿಸುತ್ತಾನೋ ಅದೇ ಅವನ ಸೋಲುಗೆಲುವುಗಳನ್ನು ನಿರ್ಣಯಿಸುತ್ತದೆ.

3 ಸತ್ಯವಿಶ್ವಾಸಿಯೊಂದಿಗೆ ಅಲ್ಲಾಹು ಆಜ್ಞಾಪಿಸುವ ಸಂಗತಿಗಳು ಕಾರ್ಯಗತಗೊಳಿಸಲು ಅತ್ಯಂತ ಸುಲಭವಿರುವುದಾಗಿವೆ.

4 ಪೂರ್ವದಿಕ್ಕಿನೆಡೆಗೆ ಯಾತ್ರೆಗೈದು ಅಂದು ಜನರು ವಾಸಿಸುತ್ತಿದ್ದ ಪ್ರದೇಶಗಳ ಪೂರ್ವ ತುದಿಗೆ ಆತ ತಲುಪಿದರು ಎಂದು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

تَطۡلُعُ عَلَىٰ قَوۡمٖ لَّمۡ نَجۡعَل لَّهُم مِّن دُونِهَا سِتۡرٗا ٩٠

ಮೇಲೆ ಉದಯವಾಗುತ್ತಿರುವುದಾಗಿ ಕಂಡರು. ಅದರ (ಸೂರ್ಯನ) ಮುಂದೆ ಅವರಿಗೆ ನಾವು ಯಾವುದೇ ಪರದೆಯನ್ನೂ ಮಾಡಿಕೊಟ್ಟಿರಲಿಲ್ಲ.[1]

كَذَٰلِكَۖ وَقَدۡ أَحَطۡنَا بِمَا لَدَيۡهِ خُبۡرٗا ٩١

91. ಅದೇ ರೀತಿ (ಆತ ಮಾಡಿದರು).[2] ನಾವು (ನಮ್ಮ) ಸೂಕ್ಷ್ಮಜ್ಞಾನದಿಂದ ಅವರ ಬಳಿಯಿರುವುದನ್ನು ಪೂರ್ಣವಾಗಿ ಅರಿಯುತ್ತಿರುವೆವು.

ثُمَّ أَتۡبَعَ سَبَبًا ٩٢

92. ತರುವಾಯ ಆತ ಬೇರೊಂದು ದಾರಿಯನ್ನು ಅನುಗಮಿಸಿದರು.

حَتَّىٰٓ إِذَا بَلَغَ بَيۡنَ ٱلسَّدَّيۡنِ وَجَدَ مِن دُونِهِمَا قَوۡمٗا لَّا يَكَادُونَ يَفۡقَهُونَ قَوۡلٗا ٩٣

93. ಆತ ಎರಡು ಬೆಟ್ಟತಪ್ಪಲುಗಳ ನಡುವೆ ತಲುಪಿದಾಗ ಅದರ ಈಚೆ ಬದಿಯಲ್ಲಿ ಒಂದು ಜನತೆಯನ್ನು ಕಂಡರು. ಅವರಿಗೆ ಬಹುತೇಕ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

قَالُواْ يَٰذَا ٱلۡقَرۡنَيۡنِ إِنَّ يَأۡجُوجَ وَمَأۡجُوجَ مُفۡسِدُونَ فِي ٱلۡأَرۡضِ فَهَلۡ نَجۡعَلُ لَكَ خَرۡجًا عَلَىٰٓ أَن تَجۡعَلَ بَيۡنَنَا وَبَيۡنَهُمۡ سَدّٗا ٩٤

94. ಅವರು ಹೇಳಿದರು: 'ಓ ದುಲ್‌ಕರ್ನೈನ್! ಖಂಡಿತವಾಗಿಯೂ ಯಅ್‌ಜೂಜ್ ಮತ್ತು ಮಅ್‌ಜೂಜ್‌ಗಳು ಭೂಮಿಯಲ್ಲಿ ವಿನಾಶವನ್ನುಂಟು ಮಾಡುವವರಾಗಿರುವರು. ಆದ್ದರಿಂದ ನಮ್ಮ ಮತ್ತು ಅವರ ಮಧ್ಯೆ ಒಂದು ತಡೆಗೋಡೆಯನ್ನು ನಿರ್ಮಿಸಲು ನಾವು ತಮಗೆ ಒಂದು ತೆರಿಗೆಯನ್ನು ನಿಗದಿಗೊಳಿಸಲೇ?'

قَالَ مَا مَكَّنِّي فِيهِ رَبِّي خَيۡرٞ فَأَعِينُونِي بِقُوَّةٍ أَجۡعَلۡ بَيۡنَكُمۡ وَبَيۡنَهُمۡ رَدۡمًا ٩٥

95. ಆತ ಹೇಳಿದರು: 'ನನ್ನ ರಬ್ ನನಗೆ ಅಧೀನಗೊಳಿಸಿರುವುದು (ಅಧಿಕಾರ ಮತ್ತು ಸಂಪತ್ತು) (ನೀವು ನೀಡುವುದಕ್ಕಿಂತಲೂ) ಉತ್ತಮವಾಗಿದೆ. ಆದರೂ (ನಿಮ್ಮ ದೈಹಿಕ) ಶಕ್ತಿಯೊಂದಿಗೆ ನೀವು ನನಗೆ ಸಹಾಯ

1 ಬಿಸಿಲಿನಿಂದ ರಕ್ಷಣೆ ಪಡೆಯಲು ವಸ್ತ್ರವನ್ನು ಧರಿಸುವ ಅಥವಾ ಮನೆಗಳಲ್ಲಿ ಆಶ್ರಯ ಪಡಯುವ ರೂಢಿಯು ಅವರಿಗಿರಲಿಲ್ಲ.

2 ಪಶ್ಚಿಮ ದೇಶಗಳಲ್ಲಿರುವವರ ವಿಷಯದಲ್ಲಿ ಮಾಡಿದಂತೆಯೇ ಪೂರ್ವ ದೇಶಗಳಲ್ಲಿರುವವರ ವಿಷಯದಲ್ಲೂ ಮಾಡಿದರು ಎಂದಾಗಿರಬಹುದು.

ಮಾಡಿರಿ. ನಿಮ್ಮ ಮತ್ತು ಅವರ ಮಧ್ಯೆ ನಾನು ಬಲಿಷ್ಠ ಗೋಡೆಯೊಂದನ್ನು ನಿರ್ಮಿಸಿಕೊಡುವೆನು.[1]

ءَاتُونِى زُبَرَ ٱلۡحَدِيدِۖ حَتَّىٰٓ إِذَا سَاوَىٰ بَيۡنَ
ٱلصَّدَفَيۡنِ قَالَ ٱنفُخُواْۖ حَتَّىٰٓ إِذَا جَعَلَهُۥ
نَارًا قَالَ ءَاتُونِىٓ أُفۡرِغۡ عَلَيۡهِ قِطۡرًا ٩٦

96. ನೀವು ನನಗೆ ಕಬ್ಬಿಣದ ತುಂಡುಗಳನ್ನು ತಂದು ಕೊಡಿರಿ'. ಕೊನೆಗೆ ಆ ಎರಡು ಬೆಟ್ಟಗಳ ಪಾರ್ಶ್ವಗಳ ಎಡೆಯನ್ನು ಸಮಗೊಳಿಸಿದ ಬಳಿಕ ಆತ ಹೇಳಿದರು: 'ಊದಿರಿ'. ತರುವಾಯ ಅದನ್ನು (ಉರಿಸಿ) ಬೆಂಕಿಯಂತಾಗಿಸಿದಾಗ ಆತ ಹೇಳಿದರು: 'ನೀವು ನನಗೆ ಕರಗಿಸಿದ ತಾಮ್ರವನ್ನು ತಂದು ಕೊಡಿರಿ. ಅದನ್ನು ನಾನು ಅದರ ಮೇಲೆ ಸುರಿಯುವೆನು'.

فَمَا ٱسۡطَٰعُوٓاْ أَن يَظۡهَرُوهُ وَمَا ٱسۡتَطَٰعُواْ
لَهُۥ نَقۡبًا ٩٧

97. ತರುವಾಯ ಆ ಗೋಡೆಯನ್ನು ಏರಿ ದಾಟಲು ಯಅ್‌ಜೂಜ್ ಮತ್ತು ಮಅ್‌ಜೂಜ್‌ರಿಗೆ ಸಾಧ್ಯವಾಗಲಿಲ್ಲ. ಅದಕ್ಕೆ ಕನ್ನ ಕೊರೆಯಲೂ ಅವರಿಗೆ ಸಾಧ್ಯವಾಗಲಿಲ್ಲ.

قَالَ هَٰذَا رَحۡمَةٌ مِّن رَّبِّىۖ فَإِذَا جَآءَ
وَعۡدُ رَبِّى جَعَلَهُۥ دَكَّآءَۖ وَكَانَ وَعۡدُ رَبِّى
حَقًّا ٩٨

98. ಆತ (ದುಲ್‌ಕರ್ನೈನ್) ಹೇಳಿದರು: 'ಇದು ನನ್ನ ರಬ್‌ನ ವತಿಯ ಕರುಣೆಯಾಗಿದೆ. ಆದರೆ ನನ್ನ ರಬ್‌ನ ವಾಗ್ದಾನವು ಬಂದರೆ ಅವನು ಅದನ್ನು ನುಚ್ಚು ನೂರು ಮಾಡುವನು.[2] ನನ್ನ ರಬ್‌ನ ವಾಗ್ದಾನವು ಸತ್ಯವಾಗಿದೆ'.

۞وَتَرَكۡنَا بَعۡضَهُمۡ يَوۡمَئِذٖ يَمُوجُ فِى بَعۡضٖۖ
وَنُفِخَ فِى ٱلصُّورِ فَجَمَعۡنَٰهُمۡ جَمۡعٗا ٩٩

99. (ಅಂದು) ಅವರಲ್ಲಿ ಕೆಲವರು ಇತರ ಕೆಲವರ ಮೇಲೆ ತೆರೆಗಳಂತೆ ಏರಿಬರುವ ವಿಧದಲ್ಲಿ ನಾವು ಬಿಟ್ಟುಬಿಡುವೆವು. ಕಹಳೆಯಲ್ಲಿ ಊದಲಾಗುವುದು. ಆಗ ನಾವು ಅವರನ್ನು ಸೇರಿಸಿ ಒಟ್ಟುಗೂಡಿಸುವೆವು.

1 ಯಅ್‌ಜೂಜ್ ಮತ್ತು ಮಅ್‌ಜೂಜ್‌ರ ಆಕ್ರಮಣವನ್ನು ತಡೆಯಲು ದುಲ್‌ಕರ್ನೈನ್ ಗೋಡೆ ನಿರ್ಮಿಸಿದ್ದೆಲ್ಲಿ ಎಂಬ ಬಗ್ಗೆ ಕುರ್‌ಆನ್ ವ್ಯಾಖ್ಯಾನಕಾರರಲ್ಲಿ ಏಕಾಭಿಪ್ರಾಯವಿಲ್ಲ. ಅಝುರ್‌ಬೈಜಾನ್ ಮತ್ತು ಅರ್ಮೇನಿಯಾದ ಮಧ್ಯೆಯಿರುವ ಎರಡು ಬೆಟ್ಟಗಳ ನಡುವೆ ಈ ಕಬ್ಬಿಣದ ಗೋಡೆಯಿತ್ತು ಎಂಬ ಅಭಿಪ್ರಾಯಕ್ಕೆ ಕುರ್‌ಆನ್ ವ್ಯಾಖ್ಯಾನಕಾರರ ಪೈಕಿ ಹೆಚ್ಚಿನವರು ಆದ್ಯತೆ ನೀಡಿದ್ದಾರೆ.

2 ಯಅ್‌ಜೂಜ್ ಮತ್ತು ಮಅ್‌ಜೂಜ್‌ಗಳಿಗೆ ಆ ಗೋಡೆಯನ್ನು ಕೆಡವಿ ಮುನ್ನಡೆಯಲು ಅಲ್ಲಾಹು ಇಚ್ಛಿಸುವ ಸಂದರ್ಭದಲ್ಲಿ ಖಂಡಿತವಾಗಿಯೂ ಸಾಧ್ಯವಾಗುವುದು.

**100.** ಅಂದು ನಾವು ಸತ್ಯನಿಷೇಧಿಗಳಿಗೆ ನರಕಾಗ್ನಿಯನ್ನು ನೇರವಾಗಿ ಪ್ರದರ್ಶಿಸುವೆವು.

وَعَرَضۡنَا جَهَنَّمَ يَوۡمَئِذٖ لِّلۡكَٰفِرِينَ عَرۡضًا ١٠٠

**101.** ಅಂದರೆ ನನ್ನ ಸಂದೇಶದ ಮುಂದೆ ಯಾರ ಕಣ್ಣುಗಳಿಗೆ ಪರದೆ ಬಿದ್ದಿರುವುದೋ ಮತ್ತು ಅದನ್ನು ಆಲಿಸಿ ಗ್ರಹಿಸಲು ಯಾರಿಗೆ ಸಾಧ್ಯವಾಗಲಿಲ್ಲವೋ ಅಂತಹವರಾಗಿದ್ದಾರೆ (ಆ ಸತ್ಯನಿಷೇಧಿಗಳು).

ٱلَّذِينَ كَانَتۡ أَعۡيُنُهُمۡ فِي غِطَآءٍ عَن ذِكۡرِي وَكَانُواْ لَا يَسۡتَطِيعُونَ سَمۡعًا ١٠١

**102.** ನನ್ನ ಹೊರತು ನನ್ನ ದಾಸರನ್ನು ರಕ್ಷಕರನ್ನಾಗಿ ಮಾಡಿಕೊಳ್ಳಬಹುದೆಂದು ಸತ್ಯನಿಷೇಧಿಗಳು ಭಾವಿಸಿರುವರೇ? ಖಂಡಿತವಾಗಿಯೂ ಸತ್ಯನಿಷೇಧಿಗಳಿಗೆ ಅತಿಥಿ ಸತ್ಕಾರವಾಗಿ ನಾವು ನರಕಾಗ್ನಿಯನ್ನು ಸಿದ್ಧಗೊಳಿಸಿರುವೆವು.

أَفَحَسِبَ ٱلَّذِينَ كَفَرُوٓاْ أَن يَتَّخِذُواْ عِبَادِي مِن دُونِيٓ أَوۡلِيَآءَۚ إِنَّآ أَعۡتَدۡنَا جَهَنَّمَ لِلۡكَٰفِرِينَ نُزُلٗا ١٠٢

**103.** (ಓ ಪ್ರವಾದಿಯವರೇ!) ಕೇಳಿರಿ: 'ಕರ್ಮಗಳು ಅತಿ ಹೆಚ್ಚು ನಷ್ಟವಾದವರ ಕುರಿತು ನಾವು ನಿಮಗೆ ತಿಳಿಸಲೇ?'

قُلۡ هَلۡ نُنَبِّئُكُم بِٱلۡأَخۡسَرِينَ أَعۡمَٰلًا ١٠٣

**104.** ಅಂದರೆ ಐಹಿಕ ಜೀವನದಲ್ಲಿರುವ ತಮ್ಮ ಪರಿಶ್ರಮಗಳು ವ್ಯರ್ಥವಾಗಿ ಹೋಗಿರುವವರು. ತಾವು ಉತ್ತಮ ಕರ್ಮಗಳನ್ನು ಮಾಡುತ್ತಿರುವೆವು ಎಂದು ಅವರು ಭಾವಿಸುತ್ತಿರುವರು.

ٱلَّذِينَ ضَلَّ سَعۡيُهُمۡ فِي ٱلۡحَيَوٰةِ ٱلدُّنۡيَا وَهُمۡ يَحۡسَبُونَ أَنَّهُمۡ يُحۡسِنُونَ صُنۡعًا ١٠٤

**105.** ಅವರು ತಮ್ಮ ರಬ್‌ನ ದೃಷ್ಟಾಂತಗಳಲ್ಲಿ ಮತ್ತು ಅವನೊಂದಿಗಿರುವ ಭೇಟಿಯಲ್ಲಿ ಅವಿಶ್ವಾಸವಿಟ್ಟವರಾಗಿರುವರು. ಆದ್ದರಿಂದ ಅವರ ಕರ್ಮಗಳು ವ್ಯರ್ಥವಾದವು. ಪುನರುತ್ಥಾನ ದಿನದಂದು ನಾವು ಅವರಿಗೆ ಯಾವುದೇ ತೂಕವನ್ನೂ (ಪದವಿಯನ್ನೂ) ನಿಶ್ಚಯಿಸಲಾರೆವು.[1]

أُوْلَٰٓئِكَ ٱلَّذِينَ كَفَرُواْ بِـَٔايَٰتِ رَبِّهِمۡ وَلِقَآئِهِۦ فَحَبِطَتۡ أَعۡمَٰلُهُمۡ فَلَا نُقِيمُ لَهُمۡ يَوۡمَ ٱلۡقِيَٰمَةِ وَزۡنٗا ١٠٥

**106.** ಅದೇ ಅವರಿಗಿರುವ ಪ್ರತಿಫಲವಾಗಿದೆ. ಅವರು ಸತ್ಯವನ್ನು ನಿಷೇಧಿಸಿರುವುದಕ್ಕಿರುವ ಮತ್ತು ನನ್ನ ದೃಷ್ಟಾಂತಗಳನ್ನೂ, ಪ್ರವಾದಿಗಳನ್ನೂ

ذَٰلِكَ جَزَآؤُهُمۡ جَهَنَّمُ بِمَا كَفَرُواْ وَٱتَّخَذُوٓاْ ءَايَٰتِي وَرُسُلِي هُزُوًا ١٠٦

1 ಕರ್ಮಗಳ ಭಾರವು ಪರಲೋಕದ ಪದವಿಗಳಿಗಿರುವ ಮಾನದಂಡವಾಗಿದೆ.

ಗೇಲಿ ಮಾಡಿರುವುದಕ್ಕಿರುವ (ಶಿಕ್ಷೆಯಾದ) ನರಕಾಗ್ನಿ!

107. ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರಿಗೆ ಅತಿಥಿ ಸತ್ಕಾರವಾಗಿ ಸ್ವರ್ಗೋದ್ಯಾನಗಳಿವೆ.

إِنَّ ٱلَّذِينَ ءَامَنُواْ وَعَمِلُواْ ٱلصَّـٰلِحَـٰتِ كَانَتْ لَهُمْ جَنَّـٰتُ ٱلْفِرْدَوْسِ نُزُلًا ﴿١٠٧﴾

108. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅದರಿಂದ ದೂರವಾಗಲು ಅವರೆಂದೂ ಬಯಸಲಾರರು.

خَـٰلِدِينَ فِيهَا لَا يَبْغُونَ عَنْهَا حِوَلًا ﴿١٠٨﴾

109. (ಓ ಪ್ರವಾದಿಯವರೇ!) ಹೇಳಿರಿ: 'ಸಮುದ್ರವು ನನ್ನ ರಬ್‌ನ ವಚನಗಳನ್ನು ಬರೆಯಲಿರುವ ಶಾಯಿಯಾಗಿದ್ದರೆ ನನ್ನ ರಬ್‌ನ ವಚನಗಳು ಮುಗಿಯುವ ಮೊದಲೇ ಸಮುದ್ರಜಲವು ಖಂಡಿತ ಬತ್ತಿಹೋಗುವುದು. ಅದಕ್ಕೆ ಸಮಾನವಾದ ಇನ್ನೊಂದು ಸಮುದ್ರವನ್ನು ನಾವು ಸಹಾಯಕ್ಕಾಗಿ ತಂದರೂ ಸರಿ'.

قُل لَّوْ كَانَ ٱلْبَحْرُ مِدَادًا لِّكَلِمَـٰتِ رَبِّى لَنَفِدَ ٱلْبَحْرُ قَبْلَ أَن تَنفَدَ كَلِمَـٰتُ رَبِّى وَلَوْ جِئْنَا بِمِثْلِهِۦ مَدَدًا ﴿١٠٩﴾

110. (ಓ ಪ್ರವಾದಿಯವರೇ!) ಹೇಳಿರಿ: 'ನಾನು ನಿಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವೆನು.[1] ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನೆಂದು ನನಗೆ ದಿವ್ಯಸಂದೇಶ ನೀಡಲಾಗುತ್ತಿದೆ. ಆದ್ದರಿಂದ ಯಾರಾದರೂ ತನ್ನ ರಬ್‌ನ ಭೇಟಿಯನ್ನು ಆಶಿಸುವುದಾದರೆ ಅವನು ಸತ್ಕರ್ಮವನ್ನು ಮಾಡಲಿ ಮತ್ತು ತನ್ನ ರಬ್‌ನ ಆರಾಧನೆಯಲ್ಲಿ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರಲಿ'.

قُلْ إِنَّمَآ أَنَا۠ بَشَرٌ مِّثْلُكُمْ يُوحَىٰٓ إِلَىَّ أَنَّمَآ إِلَـٰهُكُمْ إِلَـٰهٌ وَٰحِدٌ ۖ فَمَن كَانَ يَرْجُواْ لِقَآءَ رَبِّهِۦ فَلْيَعْمَلْ عَمَلًا صَـٰلِحًا وَلَا يُشْرِكْ بِعِبَادَةِ رَبِّهِۦٓ أَحَدًۢا ﴿١١٠﴾

---

1 ಪ್ರವಾದಿ ಮುಹಮ್ಮದ್(ﷺ)ರವರು ತಿನ್ನುವ, ಕುಡಿಯುವ, ಮಾಂಸ–ರಕ್ತಗಳಿರುವ, ನೋವು–ನಲಿವುಗಳನ್ನು ಹೊಂದಿರುವ ಓರ್ವ ಮನುಷ್ಯರೇ ಆಗಿದ್ದರು. ಅಲ್ಲಾಹುವಿನಿಂದ ಅವರಿಗೆ ವಹ್ಯ್ ಲಭಿಸುತ್ತದೆ ಎಂಬುದು ಅವರನ್ನು ಇತರ ಜನಸಾಮಾನ್ಯರಿಂದ ಉನ್ನತವಾಗಿ ನಿಲ್ಲಿಸುತ್ತದೆ.

## ಮರ್ಯಮ್[1]

## سُورَةُ مَرۡيَمَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 98

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಕಾಫ್, ಹಾ, ಯಾ, ಐನ್, ಸ್ವಾದ್.

كٓهيعٓصٓ ١

2. ತಮ್ಮ ರಬ್ ತನ್ನ ದಾಸನಾಗಿರುವ ಝಕರಿಯ್ಯಾಗೆ ದಯಪಾಲಿಸಿರುವ ಅನುಗ್ರಹದ ಬಗೆಗಿನ ಪ್ರಸ್ತಾಪವಾಗಿದೆ.

ذِكۡرُ رَحۡمَتِ رَبِّكَ عَبۡدَهُۥ زَكَرِيَّآ ٢

3. ಅವರು ತಮ್ಮ ರಬ್ಬನ್ನು ಮೆಲುದನಿಯಲ್ಲಿ ಕರೆದು ಪ್ರಾರ್ಥಿಸಿದ ಸಂದರ್ಭ.

إِذۡ نَادَىٰ رَبَّهُۥ نِدَآءً خَفِيّٗا ٣

4. ಅವರು ಹೇಳಿದರು: 'ಓ ನನ್ನ ರಬ್! ನನ್ನ ಮೂಳೆಗಳು ಬಲಹೀನವಾಗಿವೆ. ತಲೆಯು ನೆರೆತು ಹೊಳೆಯುತ್ತಿದೆ. ಓ ನನ್ನ ರಬ್! ನಿನ್ನೊಂದಿಗೆ ಪ್ರಾರ್ಥಿಸಿ ನಾನೆಂದೂ ಭಾಗ್ಯಹೀನನಾಗಿಲ್ಲ.

قَالَ رَبِّ إِنِّي وَهَنَ ٱلۡعَظۡمُ مِنِّي وَٱشۡتَعَلَ ٱلرَّأۡسُ شَيۡبٗا وَلَمۡ أَكُنۢ بِدُعَآئِكَ رَبِّ شَقِيّٗا ٤

5. ನನ್ನ ನಂತರ ಬರುವ ಸಂಬಂಧಿಕರ ಕುರಿತು ನಾನು ಭಯಪಡುತ್ತಿರುವೆನು. ನನ್ನ ಪತ್ನಿ ಬಂಜೆಯಾಗಿರುವಳು. ಆದ್ದರಿಂದ ನಿನ್ನ ವತಿಯಿಂದ ನನಗೊಬ್ಬ (ಉತ್ತರಾಧಿಕಾರಿ) ಸಂಬಂಧಿಯನ್ನು ದಯಪಾಲಿಸು.

وَإِنِّي خِفۡتُ ٱلۡمَوَٰلِيَ مِن وَرَآءِي وَكَانَتِ ٱمۡرَأَتِي عَاقِرٗا فَهَبۡ لِي مِن لَّدُنكَ وَلِيّٗا ٥

6. ಅವನು ನನಗೆ ವಾರೀಸುದಾರನಾಗಿರುವನು ಮತ್ತು ಯಅ್‌ಕೂಬ್ ಕುಟುಂಬಕ್ಕೂ ವಾರೀಸುದಾರನಾಗಿರುವನು. ಓ ನನ್ನ ರಬ್! ಅವನನ್ನು (ಎಲ್ಲರಿಗೂ) ಸಂತೃಪ್ತನನ್ನಾಗಿ ಮಾಡು'.

يَرِثُنِي وَيَرِثُ مِنۡ ءَالِ يَعۡقُوبَۖ وَٱجۡعَلۡهُ رَبِّ رَضِيّٗا ٦

7. 'ಓ ಝಕರಿಯ್ಯಾ! ಖಂಡಿತವಾಗಿಯೂ ತಮಗೆ ನಾವು ಒಂದು ಗಂಡುಮಗುವಿನ ಕುರಿತು ಶುಭವಾರ್ತೆಯನ್ನು ನೀಡುತ್ತಿರುವೆವು. ಅವನ

يَٰزَكَرِيَّآ إِنَّا نُبَشِّرُكَ بِغُلَٰمٍ ٱسۡمُهُۥ يَحۡيَىٰ لَمۡ نَجۡعَل لَّهُۥ مِن قَبۡلُ سَمِيّٗا ٧

1 ಮರ್ಯಮ್ ಮತ್ತು ಅವರ ಪುತ್ರ ಈಸಾ(عَلَيۡهِ ٱلسَّلَامُ)ರವರ ಚರಿತ್ರೆಯನ್ನು ವಿವರಿಸಿರುವ ಕಾರಣ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

ಹೆಸರು ಯಹ್ಯಾ ಎಂದಾಗಿದೆ. ಇದಕ್ಕಿಂತ ಮುಂಚೆ ಯಾರನ್ನೂ ನಾವು ಆ ಹೆಸರು ಹೊಂದಿರುವವರನ್ನಾಗಿ ಮಾಡಿಲ್ಲ'.

**8.** ಝಕರಿಯ್ಯಾ ಹೇಳಿದರು: 'ಓ ನನ್ನ ರಬ್! ನನಗೊಂದು ಗಂಡುಮಗು ಆಗುವುದಾದರೂ ಹೇಗೆ? ನನ್ನ ಪತ್ನಿ ಬಂಜೆಯಾಗಿರುವಳು. ನಾನಂತೂ ವೃದ್ಧಾಪ್ಯದಿಂದಾಗಿ ಸುಕ್ಕುಗಟ್ಟಿ ಹೋಗಿರುವೆನು'.

قَالَ رَبِّ أَنَّىٰ يَكُونُ لِي غُلَٰمٞ وَكَانَتِ ٱمۡرَأَتِي عَاقِرٗا وَقَدۡ بَلَغۡتُ مِنَ ٱلۡكِبَرِ عِتِيّٗا ٨

**9.** ಅವನು (ಅಲ್ಲಾಹು) ಹೇಳಿದನು: 'ಹಾಗೆಯೇ ಆಗಿದೆ. ಮುಂಚೆ ತಾವು ಏನೇನೂ ಆಗಿರದಿದ್ದಾಗ ನಾನು ತಮ್ಮನ್ನು ಸೃಷ್ಟಿಸಿರುವೆನು. ನನ್ನ ಮಟ್ಟಿಗೆ ಹೇಳುವುದಾದರೆ ಇದೊಂದು ಕ್ಷುಲ್ಲಕ ವಿಷಯವಾಗಿದೆ ಎಂದು ತಮ್ಮ ರಬ್ ಘೋಷಿಸಿರುವನು'.

قَالَ كَذَٰلِكَ قَالَ رَبُّكَ هُوَ عَلَيَّ هَيِّنٞ وَقَدۡ خَلَقۡتُكَ مِن قَبۡلُ وَلَمۡ تَكُ شَيۡـٔٗا ٩

**10.** ಝಕರಿಯ್ಯಾ ಹೇಳಿದರು: 'ಓ ನನ್ನ ರಬ್! ನನಗೊಂದು ದೃಷ್ಟಾಂತವನ್ನು ಮಾಡಿಕೊಡು'. ಅವನು (ಅಲ್ಲಾಹು) ಹೇಳಿದನು: 'ಯಾವುದೇ ವೈಕಲ್ಯತೆಯಿಲ್ಲದಿದ್ದರೂ[1] ತಾವು ಜನರೊಂದಿಗೆ ಮೂರು (ದಿನ) ರಾತ್ರಿಗಳ ಕಾಲ ಮಾತನಾಡದಿರುವುದು ತಮಗಿರುವ ದೃಷ್ಟಾಂತವಾಗಿದೆ'.

قَالَ رَبِّ ٱجۡعَل لِّيٓ ءَايَةٗۖ قَالَ ءَايَتُكَ أَلَّا تُكَلِّمَ ٱلنَّاسَ ثَلَٰثَ لَيَالٖ سَوِيّٗا ١٠

**11.** ತರುವಾಯ ಅವರು ಮಿಹ್ರಾಬ್‌ನಿಂದ ತಮ್ಮ ಜನತೆಯೆಡೆಗೆ ತೆರಳಿ 'ನೀವು ಬೆಳಿಗ್ಗೆ ಮತ್ತು ಸಂಜೆ ಅಲ್ಲಾಹುವಿನ ಪರಿಪಾವನತೆಯನ್ನು ಕೊಂಡಾಡಿರಿ' ಎಂದು ಅವರಿಗೆ ಸನ್ನೆ ಮಾಡಿದರು.

فَخَرَجَ عَلَىٰ قَوۡمِهِۦ مِنَ ٱلۡمِحۡرَابِ فَأَوۡحَىٰٓ إِلَيۡهِمۡ أَن سَبِّحُواْ بُكۡرَةٗ وَعَشِيّٗا ١١

**12.** 'ಓ ಯಹ್ಯಾ![2] ಗ್ರಂಥವನ್ನು ಬಿಗಿಯಾಗಿ ಹಿಡಿದು ಕೊಳ್ಳಿರಿ' (ಎಂದು ನಾವು ಹೇಳಿದೆವು). ಬಾಲಕನಾಗಿರುವಾಗಲೇ ನಾವು ಅವರಿಗೆ ಜ್ಞಾನವನ್ನು ನೀಡಿದೆವು.

يَٰيَحۡيَىٰ خُذِ ٱلۡكِتَٰبَ بِقُوَّةٖۖ وَءَاتَيۡنَٰهُ ٱلۡحُكۡمَ صَبِيّٗا ١٢

---

1 ಸವಿಯ್ಯ್ ಎಂಬ ಪದಕ್ಕೆ ವೈಕಲ್ಯ ರಹಿತ, ಸಮವಾದ, ಸರಿಯಾದ, ಅನ್ಯೂನ ಎಂಬಿತ್ಯಾದಿ ಅರ್ಥಗಳಿವೆ. ಸವಿಯ್ಯನ್ ಎಂಬುದು ಮೂರು ರಾತ್ರಿಯ ವಿಶೇಷಣವಾಗಿರಬಹುದು ಅಥವಾ ಝಕರಿಯ್ಯಾ ರವರ ವಿಶೇಷಣವಾಗಿರಬಹುದು.

2 ಯಹ್ಯಾ(عَلَيْهِ السَّلَامُ)ರನ್ನು ಕ್ರೈಸ್ತರು ಸ್ನಾನಿಕ ಯೋಹಾನನೆಂದು ಕರೆಯುತ್ತಾರೆ.

وَحَنَانًا مِّن لَّدُنَّا وَزَكَوٰةًۖ وَكَانَ تَقِيًّا ﴿١٣﴾
وَبَرًّا بِوَٰلِدَيْهِ وَلَمْ يَكُن جَبَّارًا عَصِيًّا ﴿١٤﴾

**13-14.** ನಮ್ಮ ವತಿಯ ಅನುಕಂಪವನ್ನೂ, ಪಾವಿತ್ರ್ಯತೆಯನ್ನೂ (ನೀಡಿದೆವು). ಅವರು ಧರ್ಮನಿಷ್ಠೆಯುಳ್ಳವರೂ, ತಮ್ಮ ಮಾತಾಪಿತರಿಗೆ ಒಳಿತನ್ನು ಮಾಡುವವರೂ ಆಗಿದ್ದರು; ನಿಷ್ಠೂರರೋ, ಅವಿಧೇಯತೆಯುಳ್ಳವರೋ ಆಗಿರಲಿಲ್ಲ.

وَسَلَٰمٌ عَلَيْهِ يَوْمَ وُلِدَ وَيَوْمَ يَمُوتُ وَيَوْمَ
يُبْعَثُ حَيًّا ﴿١٥﴾

**15.** ಅವರು ಜನಿಸಿದ ದಿನ, ಮರಣಹೊಂದುವ ದಿನ ಮತ್ತು ಜೀವಂತವಾಗಿ ಎಬ್ಬಿಸಲಾಗುವ ದಿನ ಅವರ ಮೇಲೆ ಶಾಂತಿಯಿರುವುದು.

وَٱذْكُرْ فِى ٱلْكِتَٰبِ مَرْيَمَ إِذِ ٱنتَبَذَتْ مِنْ
أَهْلِهَا مَكَانًا شَرْقِيًّا ﴿١٦﴾

**16.** ಗ್ರಂಥದಲ್ಲಿ ಮರ್ಯಮ್‌ರ ಬಗ್ಗೆ ಪ್ರಸ್ತಾಪಿಸಿರಿ. ಅವರು ತಮ್ಮ ಮನೆಯವರಿಂದ ದೂರವಾಗಿ ಪೂರ್ವ ದಿಕ್ಕಿನಲ್ಲಿರುವ ಸ್ಥಳವೊಂದಕ್ಕೆ ಹೋಗಿ ತಂಗಿದ ಸಂದರ್ಭ.[1]

فَٱتَّخَذَتْ مِن دُونِهِمْ حِجَابًا فَأَرْسَلْنَآ
إِلَيْهَا رُوحَنَا فَتَمَثَّلَ لَهَا بَشَرًا سَوِيًّا ﴿١٧﴾

**17.** ತರುವಾಯ ಜನರು ಕಾಣದಿರಲೆಂದು ಅವರು ಒಂದು ಅಡ್ಡ ಮರೆಯನ್ನು ಮಾಡಿಕೊಂಡರು. ಆಗ ನಾವು ನಮ್ಮ ವತಿಯ ಆತ್ಮವನ್ನು (ಜಿಬ್ರೀಲರನ್ನು[2] ಅವರ ಬಳಿಗೆ ಕಳುಹಿಸಿದೆವು. ಅವರು (ಜಿಬ್ರೀಲ್) ಆಕೆಯ ಮುಂದೆ ಪೂರ್ಣ ಮನುಷ್ಯ ರೂಪದಲ್ಲಿ ಪ್ರತ್ಯಕ್ಷರಾದರು.

قَالَتْ إِنِّىٓ أَعُوذُ بِٱلرَّحْمَٰنِ مِنكَ إِن كُنتَ
تَقِيًّا ﴿١٨﴾

**18.** ಆಕೆ(ಮರ್ಯಮ್) ಹೇಳಿದರು: 'ಖಂಡಿತವಾಗಿಯೂ ನಾನು ನಿನ್ನಿಂದ ಪರಮ ದಯಾಮಯನಲ್ಲಿ ಅಭಯವನ್ನು ಯಾಚಿಸುತ್ತಿರುವೆನು. ನೀನು ಧರ್ಮನಿಷ್ಠನಾಗಿದ್ದರೆ (ನನ್ನನ್ನು ಬಿಟ್ಟು ದೂರಹೋಗು)'.[3]

قَالَ إِنَّمَآ أَنَا۠ رَسُولُ رَبِّكِ لِأَهَبَ لَكِ
غُلَٰمًا زَكِيًّا ﴿١٩﴾

**19.** ಅವರು (ಜಿಬ್ರೀಲ್) ಹೇಳಿದರು: 'ಪರಿಶುದ್ಧವಾಗಿರುವ ಒಂದು ಗಂಡುಮಗುವನ್ನು ತಮಗೆ ದಾನವಾಗಿ ನೀಡಲು ನಾನು ತಮ್ಮ ರಬ್‌ನ ಬಳಿಯಿಂದ ಬಂದಿರುವ ದೂತನು ಮಾತ್ರವಾಗಿರುವೆನು'.

---

1 ಅಲ್ಲಾಹುವಿನ ಸ್ಮರಣೆಯಲ್ಲಿ ನಿರತರಾಗಲಿಕ್ಕಾಗಿ ಅವರು ಏಕಾಂತವಾಸವನ್ನು ಆರಿಸಿದರು.

2 ಜಿಬ್ರೀಲ್ (عَلَيْهِ ٱلسَّلَامُ) ಎಂಬ ಮಲಕ್‌ನ ಕುರಿತು ಕುರ್‌ಆನ್ ಅನೇಕ ಕಡೆ ರೂಹ್ (ಆತ್ಮ), ರೂಹುಲ್ ಕುದ್ಸ್ (ಪವಿತ್ರಾತ್ಮ) ಎಂಬ ನಾಮಗಳನ್ನು ಪ್ರಯೋಗಿಸಿದೆ.

3 ಪ್ರತ್ಯಕ್ಷವಾದದ್ದು ಓರ್ವ ಮಲಕ್ ಆಗಿರುವರು ಎಂಬುದನ್ನು ತಿಳಿಯದೆ ಅವರು ಆ ರೀತಿ ಹೇಳಿದ್ದರು.

20. ಮರ್ಯಮ್ ಹೇಳಿದರು: ‘ನನಗೆ ಗಂಡುಮಗು ಆಗುವುದಾದರೂ ಹೇಗೆ? ಯಾವುದೇ ಮನುಷ್ಯನೂ ನನ್ನನ್ನು ಸ್ಪರ್ಶಿಸಿಲ್ಲ. ನಾನು ಶೀಲಗೆಟ್ಟವಳೂ ಅಲ್ಲ’.

قَالَتۡ أَنَّىٰ يَكُونُ لِي غُلَٰمٞ وَلَمۡ يَمۡسَسۡنِي بَشَرٞ وَلَمۡ أَكُ بَغِيّٗا ٢٠

21. ಜಿಬ್ರೀಲ್ ಹೇಳಿದರು: ‘(ಸಂಗತಿ) ಹಾಗೆಯೇ ಆಗಿದೆ. ಆದರೆ ತನ್ನ ಮಟ್ಟಿಗೆ ಹೇಳುವುದಾದರೆ ಅದೊಂದು ಕ್ಷುಲ್ಲಕ ವಿಷಯವಾಗಿದೆಯೆಂದು ತಮ್ಮ ರಬ್ ಹೇಳಿರುವನು’. ಅವನನ್ನು (ಆ ಮಗುವನ್ನು) ಮನುಷ್ಯರಿಗೆ ದೃಷ್ಟಾಂತವನ್ನಾಗಿ ಮಾಡಲು ಮತ್ತು ನಮ್ಮ ವತಿಯ ಕರುಣೆಯನ್ನಾಗಿ ಮಾಡಲು (ನಾವು ಇಚ್ಛಿಸುತ್ತಿರುವೆವು). ಇದು ತೀರ್ಮಾನಿಸಲಾಗಿರುವ ಒಂದು ವಿಷಯವಾಗಿದೆ.

قَالَ كَذَٰلِكِ قَالَ رَبُّكِ هُوَ عَلَيَّ هَيِّنٞۖ وَلِنَجۡعَلَهُۥٓ ءَايَةٗ لِّلنَّاسِ وَرَحۡمَةٗ مِّنَّاۚ وَكَانَ أَمۡرٗا مَّقۡضِيّٗا ٢١

22. ಹಾಗೆಯೇ ಆಕೆ ಆ ಮಗುವಿನ ಗರ್ಭಧರಿಸಿ ಆ ಬಳಿಕ ದೂರ ಸ್ಥಳವೊಂದರಲ್ಲಿ ಅದರೊಂದಿಗೆ ವಾಸಿಸತೊಡಗಿದರು.

۞فَحَمَلَتۡهُ فَٱنتَبَذَتۡ بِهِۦ مَكَانٗا قَصِيّٗا ٢٢

23. ಹಾಗೆಯೇ ಹೆರಿಗೆ ನೋವು ಅವರನ್ನು ಖರ್ಜೂರದ ಮರವೊಂದರ ಬಳಿಗೆ ತಲುಪಿಸಿತು.[1] ಅವರು ಹೇಳಿದರು: ‘ನಾನು ಇದಕ್ಕಿಂತ ಮುಂಚೆಯೇ ಮೃತಪಟ್ಟು ಸಂಪೂರ್ಣ ಮರೆಯಲ್ಪಟ್ಟವಳಾಗಿ ಬಿಡುತ್ತಿದ್ದರೆ ಎಷ್ಟು ಚೆನ್ನಾಗಿತ್ತು!’

فَأَجَآءَهَا ٱلۡمَخَاضُ إِلَىٰ جِذۡعِ ٱلنَّخۡلَةِ قَالَتۡ يَٰلَيۡتَنِي مِتُّ قَبۡلَ هَٰذَا وَكُنتُ نَسۡيٗا مَّنسِيّٗا ٢٣

24. ತಕ್ಷಣ ಅವರ ತಳಭಾಗದಿಂದ (ಒಬ್ಬನು) ಅವರನ್ನು ಕೂಗಿ ಹೇಳಿದನು: ‘ತಾವು ವ್ಯಥೆಪಡದಿರಿ! ಖಂಡಿತವಾಗಿಯೂ ತಮ್ಮ ರಬ್ ತಮ್ಮ ತಳಭಾಗದಿಂದ ಒಂದು ತೊರೆಯನ್ನು[2] ಮಾಡಿಕೊಟ್ಟಿರುವನು.

فَنَادَىٰهَا مِن تَحۡتِهَآ أَلَّا تَحۡزَنِي قَدۡ جَعَلَ رَبُّكِ تَحۡتَكِ سَرِيّٗا ٢٤

1 ಹೆರಿಗೆ ನೋವುಂಟಾದಾಗ ಮರಕ್ಕೆ ಒರಗಿ ಕುಳಿತು ವಿಶ್ರಾಂತಿ ಪಡೆಯಲಿಕ್ಕಾಗಿ ಅವರು ಅಲ್ಲಿಗೆ ಹೋಗಿರಬಹುದು.

2 ಸರಿಯ್ಯ್ ಎಂಬ ಪದವನ್ನು ತೊರೆ ಎಂದು ಭಾಷಾಂತರಿಸಲಾಗಿದೆ. ಆ ಪದಕ್ಕೆ ಮಹಾನ್ ಎಂದೂ ಅರ್ಥವಿದೆ. ಆ ಅರ್ಥದಂತೆ ಈ ವಾಕ್ಯದ ಭಾಷಾಂತರವು ‘ನಿನ್ನ ಪ್ರಭು ನಿನ್ನ ಕೆಳಗೆ ಓರ್ವ ಮಹಾನ್ (ಪುತ್ರ)ನನ್ನು ಉಂಟು ಮಾಡಿರುವನು ಎಂದಾಗುತ್ತದೆ. ಕೂಗಿ ಹೇಳಿದ್ದು ಮಲಕ್ ಆಗಿತ್ತೇ ಅಥವಾ ನವಜಾತ ಶಿಶುವಾದ ಈಸಾ(عَلَيۡهِ ٱلسَّلَامُ)

**25.** ಖರ್ಜೂರದ ಮರವನ್ನು ತಾವು ತಮ್ಮೆಡೆಗೆ ಎಳೆದು ಅಲುಗಾಡಿಸಿರಿ. ಆಗ ಅದು ತಮಗೆ ಹಣ್ಣಾದ ಖರ್ಜೂರವನ್ನು ಬೀಳಿಸುವುದು.

وَهُزِّيٓ إِلَيۡكِ بِجِذۡعِ ٱلنَّخۡلَةِ تُسَٰقِطۡ عَلَيۡكِ رُطَبٗا جَنِيّٗا ٢٥

**26.** ತರುವಾಯ ತಾವು ತಿನ್ನಿರಿ, ಕುಡಿಯಿರಿ ಮತ್ತು ಕಣ್ಮನ ತಣಿಸಿರಿ. ಜನರ ಪೈಕಿ ಯಾರನ್ನಾದರೂ ಕಂಡರೆ 'ಪರಮದಯಾಮಯನಿಗಾಗಿ ನಾನು ಉಪವಾಸವೊಂದನ್ನು ಹರಕೆ ಹೊತ್ತಿರುವೆನು. ಆದ್ದರಿಂದ ಇಂದು ನಾನು ಯಾರೊಂದಿಗೂ ಮಾತನಾಡಲಾರೆನು' ಎಂದು ಹೇಳಿರಿ.

فَكُلِي وَٱشۡرَبِي وَقَرِّي عَيۡنٗاۖ فَإِمَّا تَرَيِنَّ مِنَ ٱلۡبَشَرِ أَحَدٗا فَقُولِيٓ إِنِّي نَذَرۡتُ لِلرَّحۡمَٰنِ صَوۡمٗا فَلَنۡ أُكَلِّمَ ٱلۡيَوۡمَ إِنسِيّٗا ٢٦

**27.** ತರುವಾಯ ಆಕೆ ಅವನನ್ನು (ಮಗುವನ್ನು) ಹೊತ್ತು ಕೊಂಡು ತಮ್ಮ ಜನತೆಯ ಬಳಿ ಬಂದರು. ಅವರು ಹೇಳಿದರು: 'ಓ ಮರ್ಯಮ್! ಖಂಡಿತವಾಗಿಯೂ ನೀನು ಆಕ್ಷೇಪಾರ್ಹವಾದ ಒಂದು ಕೃತ್ಯವನ್ನು ಮಾಡಿರುವೆ.

فَأَتَتۡ بِهِۦ قَوۡمَهَا تَحۡمِلُهُۥۖ قَالُواْ يَٰمَرۡيَمُ لَقَدۡ جِئۡتِ شَيۡـٔٗا فَرِيّٗا ٢٧

**28.** ಓ ಹಾರೂನರ ಸಹೋದರೀ![1] ತಮ್ಮ ತಂದೆ ನೀಚ ಮನುಷ್ಯನಾಗಿರಲಿಲ್ಲ ಮತ್ತು ತಮ್ಮ ತಾಯಿಯೂ ಶೀಲಗೆಟ್ಟವಳಾಗಿರಲಿಲ್ಲ'.

يَٰٓأُخۡتَ هَٰرُونَ مَا كَانَ أَبُوكِ ٱمۡرَأَ سَوۡءٖ وَمَا كَانَتۡ أُمُّكِ بَغِيّٗا ٢٨

**29.** ಆಗ ಮರ್ಯಮ್ ಮಗುವಿನೆಡೆಗೆ ಸಂಜ್ಞೆ ಮಾಡಿದರು. ಅವರು (ಜನರು) ಕೇಳಿದರು: 'ತೊಟ್ಟಿಲಲ್ಲಿ ಮಗುವಾಗಿರುವವನೊಂದಿಗೆ ನಾವು ಮಾತನಾಡುವುದು ಹೇಗೆ?'

فَأَشَارَتۡ إِلَيۡهِۖ قَالُواْ كَيۡفَ نُكَلِّمُ مَن كَانَ فِي ٱلۡمَهۡدِ صَبِيّٗا ٢٩

**30.** ಮಗು (ಈಸಾ) ಹೇಳಿತು: 'ನಾನು ಅಲ್ಲಾಹುವಿನ ದಾಸನಾಗಿರುವೆನು. ಅವನು ನನಗೆ ಗ್ರಂಥವನ್ನು ನೀಡಿರುವನು ಮತ್ತು ನನ್ನನ್ನು ಪ್ರವಾದಿಯಾಗಿ ಮಾಡಿರುವನು.

قَالَ إِنِّي عَبۡدُ ٱللَّهِ ءَاتَىٰنِيَ ٱلۡكِتَٰبَ وَجَعَلَنِي نَبِيّٗا ٣٠

---

ರವರಾಗಿದ್ದರೇ ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಅಲ್ಲಾಹು ನೀಡಿದ ವಿಶೇಷ ಶಕ್ತಿಯಿಂದ ಪ್ರವಾದಿ ಈಸಾ(عَلَيْهِ السَّلَامُ)ರವರು ತೊಟ್ಟಿಲಲ್ಲಿರುವಾಗಲೇ ಮಾತನಾಡಿದ್ದಾಗಿ 30ನೇ ಸೂಕ್ತಿಯಲ್ಲಿ ಹೇಳಲಾಗಿದೆ.

1 ಹಾರೂನ್ ಎಂಬುದರ ಉದ್ದೇಶ ಮೂಸಾ(عَلَيْهِ السَّلَامُ)ರ ಸಹೋದರ ಹಾರೂನ್ ಅಲ್ಲ. ಅವರು ಸಜ್ಜನರಾಗಿರುವ ಬೇರೊಬ್ಬ ವ್ಯಕ್ತಿಯಾಗಿದ್ದಾರೆ. ಆರಾಧನೆಯಲ್ಲಿ ಮರ್ಯಮ್(عَلَيْهَا السَّلَامُ)ರವರಿಗೆ ಅವರೊಂದಿಗೆ ಬಹಳ ಹೋಲಿಕೆಯಿತ್ತು.

**31.** ನಾನು ಎಲ್ಲೇ ಇದ್ದರೂ ಅವನು ನನ್ನನ್ನು ಅನುಗ್ರಹೀತನನ್ನಾಗಿ ಮಾಡಿರುವನು. ನಾನು ಬದುಕಿರುವವರೆಗೂ ನಮಾಝ್ ಮಾಡಲು ಮತ್ತು ಝಕಾತ್ ನೀಡಲು ಅವನು ನನ್ನೊಂದಿಗೆ ಆಜ್ಞಾಪಿಸಿರುವನು.

وَجَعَلَنِى مُبَارَكًا أَيْنَ مَا كُنتُ وَأَوْصَٰنِى بِٱلصَّلَوٰةِ وَٱلزَّكَوٰةِ مَا دُمْتُ حَيًّا ﴿٣١﴾

**32.** ನನ್ನ ತಾಯಿಯೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸುವವನಾಗಿ (ಅವನು ನನ್ನನ್ನು ಮಾಡಿರುವನು). ಅವನು ನನ್ನನ್ನು ನಿಷ್ಠುರನೋ, ಭಾಗ್ಯಹೀನನೋ ಆಗಿ ಮಾಡಿಲ್ಲ.

وَبَرًّۢا بِوَٰلِدَتِى وَلَمْ يَجْعَلْنِى جَبَّارًا شَقِيًّا ﴿٣٢﴾

**33.** ನಾನು ಜನಿಸಿದ ದಿನ, ಮರಣಹೊಂದುವ ದಿನ ಮತ್ತು ಜೀವಂತವಾಗಿ ಎಬ್ಬಿಸಲ್ಪಡುವ ದಿನ ನನ್ನ ಮೇಲೆ ಶಾಂತಿಯಿರುವುದು'.

وَٱلسَّلَٰمُ عَلَىَّ يَوْمَ وُلِدتُّ وَيَوْمَ أَمُوتُ وَيَوْمَ أُبْعَثُ حَيًّا ﴿٣٣﴾

**34.** ಅವರೇ ಮರ್ಯಮ್‌ರ ಮಗನಾದ ಈಸಾ.(1) ಯಾವ ವಿಷಯದಲ್ಲಿ ಅವರು ತರ್ಕಿಸುತ್ತಿರುವರೋ ಅದರ ಕುರಿತಾದ ನೈಜ ಮಾತು ಇದಾಗಿದೆ.

ذَٰلِكَ عِيسَى ٱبْنُ مَرْيَمَ ۚ قَوْلَ ٱلْحَقِّ ٱلَّذِى فِيهِ يَمْتَرُونَ ﴿٣٤﴾

**35.** ಸಂತತಿಯೊಂದನ್ನು ಮಾಡಿಕೊಳ್ಳುವುದು ಅಲ್ಲಾಹುವಿಗೆ ಯುಕ್ತವಾದುದಲ್ಲ.(2) ಅವನು ಪರಮ ಪಾವನನು. ಯಾವುದೇ ವಿಷಯವನ್ನು ಅವನು ತೀರ್ಮಾನಿಸಿದರೆ ಅದರೊಂದಿಗೆ ಅವನು ಹೇಳುವುದು 'ಆಗು' ಎಂದು ಮಾತ್ರವಾಗಿರುವುದು. ತಕ್ಷಣ ಅದುಂಟಾಗುವುದು!

مَا كَانَ لِلَّهِ أَن يَتَّخِذَ مِن وَلَدٍ ۖ سُبْحَٰنَهُۥٓ ۚ إِذَا قَضَىٰٓ أَمْرًا فَإِنَّمَا يَقُولُ لَهُۥ كُن فَيَكُونُ ﴿٣٥﴾

**36.** (ಈಸಾ ಹೇಳಿದರು): 'ಖಂಡಿತವಾಗಿಯೂ ಅಲ್ಲಾಹು ನನ್ನ ಮತ್ತು ನಿಮ್ಮ ರಬ್ಬಾಗಿರುವನು. ಆದ್ದರಿಂದ ನೀವು ಅವನನ್ನು (ಮಾತ್ರ) ಆರಾಧಿಸಿರಿ. ನೇರವಾದ ಮಾರ್ಗವು ಇದೇ ಆಗಿದೆ'.

وَإِنَّ ٱللَّهَ رَبِّى وَرَبُّكُمْ فَٱعْبُدُوهُ ۚ هَٰذَا صِرَٰطٌ مُّسْتَقِيمٌ ﴿٣٦﴾

---

1 ಯೇಸು ಅಥವಾ ಜೀಸಸ್ ಎಂಬುದರ ಅರಬಿ ರೂಪವಾಗಿದೆ ಈಸಾ.(عَلَيْهِ السَّلَامُ) ಯಸೂಅ್ ಎಂದೂ ಹೇಳಲಾಗುತ್ತದೆ. ಮಿಶಿಹಾ ಎಂಬುದರ ಅರಬಿ ರೂಪವು ಮಸೀಹ್ (Messiah) ಎಂದಾಗಿದೆ.

2 ಯೇಸುಕ್ರಿಸ್ತರು ದೇವಪುತ್ರನೆಂಬುದು ಸಂತ ಪೌಲನು ಸ್ವತಃ ರಚಿಸಿದ ವಾದವಾಗಿದೆ.

37. ತರುವಾಯ ಅವರ ನಡುವಿನಿಂದ ಗುಂಪುಗಳು ಭಿನ್ನಮತ ಹೊಂದಿದವು.[1] ಅವಿಶ್ವಾಸಿಗಳಿಗೆ ಭಯಾನಕವಾದ ದಿನವೊಂದರ ಸಾನಿಧ್ಯದಿಂದಾಗಿ ಮಹಾವಿನಾಶವಿದೆ.

فَٱخۡتَلَفَ ٱلۡأَحۡزَابُ مِنۢ بَيۡنِهِمۡۖ فَوَيۡلٞ لِّلَّذِينَ كَفَرُواْ مِن مَّشۡهَدِ يَوۡمٍ عَظِيمٍ ٣٧

38. ಅವರು ನಮ್ಮ ಬಳಿಗೆ ಬರುವದಿನದಂದು ಅವರಿಗೆ ಎಂತಹ ಶ್ರವಣ ಮತ್ತು ಮತ್ತು ದೃಷ್ಟಿಯಿರುವುದು![2] ಆದರೆ ಇಂದು ಆ ಅಕ್ರಮಿಗಳು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವರು.

أَسۡمِعۡ بِهِمۡ وَأَبۡصِرۡ يَوۡمَ يَأۡتُونَنَا لَٰكِنِ ٱلظَّٰلِمُونَ ٱلۡيَوۡمَ فِي ضَلَٰلٖ مُّبِينٖ ٣٨

39. ನಷ್ಟಪ್ರಜ್ಞೆಯ ದಿನದ ಕುರಿತು ಅಥವಾ ವಿಷಯವು (ಅಂತಿಮವಾಗಿ) ತೀರ್ಮಾನಿಸಲಾಗುವ ಸಂದರ್ಭದ ಕುರಿತು ತಾವು ಅವರಿಗೆ ಮುನ್ನೆಚ್ಚರಿಕೆಯನ್ನು ನೀಡಿರಿ. ಅವರು ಅಲಕ್ಷ್ಯತೆಯಲ್ಲಿರುವರು ಮತ್ತು ಅವರು ವಿಶ್ವಾಸವಿಡುವುದಿಲ್ಲ.

وَأَنذِرۡهُمۡ يَوۡمَ ٱلۡحَسۡرَةِ إِذۡ قُضِيَ ٱلۡأَمۡرُ وَهُمۡ فِي غَفۡلَةٖ وَهُمۡ لَا يُؤۡمِنُونَ ٣٩

40. ಖಂಡಿತವಾಗಿಯೂ ಭೂಮಿ ಮತ್ತು ಅದರಲ್ಲಿರುವವರ ವಾರೀಸುದಾರರು ನಾವಾಗಿರುವೆವು. ಅವರನ್ನು ನಮ್ಮೆಡೆಗೇ ಮರಳಿಸಲಾಗುವುದು.

إِنَّا نَحۡنُ نَرِثُ ٱلۡأَرۡضَ وَمَنۡ عَلَيۡهَا وَإِلَيۡنَا يُرۡجَعُونَ ٤٠

41. ಗ್ರಂಥದಲ್ಲಿ ಇಬ್ರಾಹೀಮ್‌ರ ಕುರಿತು ಪ್ರಸ್ತಾಪಿಸಿರಿ. ಖಂಡಿತವಾಗಿಯೂ ಅವರು ಸತ್ಯಸಂಧರೂ ಪ್ರವಾದಿಯೂ ಆಗಿದ್ದರು.

وَٱذۡكُرۡ فِي ٱلۡكِتَٰبِ إِبۡرَٰهِيمَۚ إِنَّهُۥ كَانَ صِدِّيقٗا نَّبِيًّا ٤١

42. ಅವರು ತಮ್ಮ ತಂದೆಯೊಂದಿಗೆ ಹೇಳಿದ ಸಂದರ್ಭ: 'ಓ ನನ್ನ ತಂದೆಯವರೇ! ಆಲಿಸುವುದಾಗಲಿ, ನೋಡುವುದಾಗಲಿ ಮತ್ತು ತಮಗೆ ಯಾವುದೇ ಉಪಕಾರವನ್ನಾಗಲಿ

إِذۡ قَالَ لِأَبِيهِ يَٰٓأَبَتِ لِمَ تَعۡبُدُ مَا لَا يَسۡمَعُ وَلَا يُبۡصِرُ وَلَا يُغۡنِي عَنكَ شَيۡـٔٗا ٤٢

1 ಇಸ್ರಾಈಲರಲ್ಲಿ ಒಂದು ವಿಭಾಗವು ಪ್ರವಾದಿ ಈಸಾ(عَلَيْهِ السَّلَامُ)ರೊಂದಿಗೆ ವಿಶ್ವಾಸವಿಟ್ಟರು. ಮತ್ತೊಂದು ವಿಭಾಗವು ಯಹೂದ ಧರ್ಮದಲ್ಲೇ ನೆಲೆನಿಂತಿತು. ತರುವಾಯ ಕ್ರೈಸ್ತರು ಅನೇಕ ಗುಂಪುಗಳಾಗಿ ವಿಭಜನೆ ಹೊಂದಿದರು.

2 ಇಹಲೋಕದಲ್ಲಿ ಸತ್ಯವನ್ನು ಅರಿತುಕೊಳ್ಳಲು ಅಥವಾ ಗ್ರಹಿಸಿಕೊಳ್ಳಲು ಸಿದ್ಧರಾಗದವರು ಪರಲೋಕಕ್ಕೆ ತಲುಪಿದಾಗ ಸತ್ಯವನ್ನು ಅತ್ಯಂತ ಸ್ಪಷ್ಟವಾಗಿ ಅರಿತುಕೊಳ್ಳುವರು. ತಾವು ಕಾಣುತ್ತಿರುವುದು ಮತ್ತು ಕೇಳುತ್ತಿರುವುದು ಏನೆಂದು ಅವರಿಗೆ ಸಂಶಯಾತೀತವಾಗಿ ಸ್ಪಷ್ಟವಾಗುವುದು. ಆದರೆ ಅದರಿಂದ ಅವರಿಗೆ ಯಾವುದೇ ಪ್ರಯೋಜನವೂ ಇರಲಾರದು.

ಮಾಡದವುಗಳನ್ನು ತಾವೇಕೆ ಆರಾಧಿಸುತ್ತಿರುವಿರಿ?

43. ಓ ನನ್ನ ತಂದೆಯವರೇ! ಖಂಡಿತವಾಗಿಯೂ ತಮ್ಮ ಬಳಿಗೆ ಬರದಂತಹ ಜ್ಞಾನವು ನನ್ನ ಬಳಿಗೆ ಬಂದಿದೆ. ಆದ್ದರಿಂದ ತಾವು ನನ್ನನ್ನು ಅನುಸರಿಸಿರಿ. ನಾನು ತಮಗೆ ಸರಿಯಾದ ಮಾರ್ಗವನ್ನು ತೋರಿಸಿಕೊಡುವೆನು.

يَٰٓأَبَتِ إِنِّي قَدۡ جَآءَنِي مِنَ ٱلۡعِلۡمِ مَا لَمۡ يَأۡتِكَ فَٱتَّبِعۡنِيٓ أَهۡدِكَ صِرَٰطٗا سَوِيّٗا ٤٣

44. ಓ ನನ್ನ ತಂದೆಯವರೇ! ತಾವು ಸೈತಾನನನ್ನು ಆರಾಧಿಸದಿರಿ. ಖಂಡಿತವಾಗಿಯೂ ಸೈತಾನನು ಪರಮ ದಯಾಮಯನನ್ನು ಧಿಕ್ಕರಿಸಿದವನಾಗಿರುವನು.

يَٰٓأَبَتِ لَا تَعۡبُدِ ٱلشَّيۡطَٰنَۖ إِنَّ ٱلشَّيۡطَٰنَ كَانَ لِلرَّحۡمَٰنِ عَصِيّٗا ٤٤

45. ಓ ನನ್ನ ತಂದೆಯವರೇ! ಖಂಡಿತವಾಗಿಯೂ ಪರಮದಯಾಮಯನ ವತಿಯ ಯಾವುದಾದರೂ ಶಿಕ್ಷೆಯು ತಮ್ಮನ್ನು ಸ್ಪರ್ಶಿಸಬಹುದೆಂದು ನಾನು ಭಯ ಪಡುತ್ತಿರುವೆನು. ಆಗ ತಾವು ಸೈತಾನನ ಮಿತ್ರನಾಗಿ ಬಿಡುವಿರಿ’.

يَٰٓأَبَتِ إِنِّيٓ أَخَافُ أَن يَمَسَّكَ عَذَابٞ مِّنَ ٱلرَّحۡمَٰنِ فَتَكُونَ لِلشَّيۡطَٰنِ وَلِيّٗا ٤٥

46. ಅವನು ಹೇಳಿದನು: ‘ಓ ಇಬ್ರಾಹೀಮ್! ನೀನು ನನ್ನ ಆರಾಧ್ಯರನ್ನು ನಿರಾಕರಿಸುತ್ತಿರುವೆಯಾ? ನೀನು (ಇದನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ನಾನು ನಿನ್ನನ್ನು ಕಲ್ಲೆಸೆದು ಓಡಿಸುವೆನು. ದೀರ್ಘಕಾಲದ ತನಕ ನೀನು ನನ್ನಿಂದ ದೂರ ಹೋಗು’.

قَالَ أَرَاغِبٌ أَنتَ عَنۡ ءَالِهَتِي يَٰٓإِبۡرَٰهِيمُۖ لَئِن لَّمۡ تَنتَهِ لَأَرۡجُمَنَّكَۖ وَٱهۡجُرۡنِي مَلِيّٗا ٤٦

47. ಇಬ್ರಾಹೀಮ್ ಹೇಳಿದರು: ‘ತಮಗೆ ಸಲಾಮ್! ತಮಗಾಗಿ ನಾನು ನನ್ನ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡುವೆನು.[1] ಖಂಡಿತವಾಗಿಯೂ ಅವನು ನನ್ನೊಂದಿಗೆ ದಯೆಯುಳ್ಳವನಾಗಿರುವನು.

قَالَ سَلَٰمٌ عَلَيۡكَۖ سَأَسۡتَغۡفِرُ لَكَ رَبِّيٓۖ إِنَّهُۥ كَانَ بِي حَفِيّٗا ٤٧

1 ತಂದೆಯ ಮನಪರಿವರ್ತನೆಗೊಳ್ಳುವುದನ್ನು ಆಶಿಸಿ ಅವರು ಹೀಗೆ ವಾಗ್ದಾನ ಮಾಡಿದ್ದರು. ಆದರೆ ತಂದೆ ಸೈತಾನನ ಮಿತ್ರನಾಗಿರುವರು ಮತ್ತು ಎಂದಿಗೂ ಸನ್ಮಾರ್ಗವನ್ನು ಸ್ವೀಕರಿಸಲಾರರು ಎಂದು ಖಾತ್ರಿಯಾದಾಗ ತಂದೆಯನ್ನು ಸತ್ಯಮಾರ್ಗದೆಡೆಗೆ ಆಹ್ವಾನಿಸುವ ಪ್ರಯತ್ನವನ್ನು ಅವರು ಕೈಬಿಟ್ಟರು. ನೋಡಿರಿ: 9:114.

**48.** ನಿಮ್ಮನ್ನು ಮತ್ತು ಅಲ್ಲಾಹುವಿನ ಹೊರತು ನೀವು ಪ್ರಾರ್ಥಿಸುವವುಗಳನ್ನು ನಾನು ಬಿಟ್ಟುಬಿಡುವೆನು. ನಾನು ನನ್ನ ರಬ್‌ನೊಂದಿಗೆ ಪ್ರಾರ್ಥಿಸುವೆನು. ನನ್ನ ರಬ್‌ನೊಂದಿಗೆ ಪ್ರಾರ್ಥಿಸುವುದರಿಂದಾಗಿ ನಾನೆಂದೂ ಭಾಗ್ಯಹೀನನಾಗಿ ಬಿಡಲಾರೆನು'.

وَأَعۡتَزِلُكُمۡ وَمَا تَدۡعُونَ مِن دُونِ ٱللَّهِ وَأَدۡعُواْ رَبِّي عَسَىٰٓ أَلَّآ أَكُونَ بِدُعَآءِ رَبِّي شَقِيّٗا ﴿٤٨﴾

**49.** ತರುವಾಯ ಇಬ್ರಾಹೀಮ್ ಅವರನ್ನೂ, ಅಲಾಹುವಿನ ಹೊರತು ಅವರು ಆರಾಧಿಸುವವುಗಳನೂ. ತೊರೆದು ಹೊರಟಾಗ ನಾವು ಅವರಿಗೆ ಇಸ್‌ಹಾಕ್ (ಮಗ) ಮತ್ತು ಯಅ್‌ಕೂಬ್ (ಮೊಮ್ಮಗ)ರನ್ನು ದಯಪಾಲಿಸಿದೆವು. ಅವರೆಲ್ಲರನ್ನೂ ನಾವು ಪ್ರವಾದಿಗಳನ್ನಾಗಿ ಮಾಡಿದೆವು.

فَلَمَّا ٱعۡتَزَلَهُمۡ وَمَا يَعۡبُدُونَ مِن دُونِ ٱللَّهِ وَهَبۡنَا لَهُۥٓ إِسۡحَٰقَ وَيَعۡقُوبَۖ وَكُلّٗا جَعَلۡنَا نَبِيّٗا ﴿٤٩﴾

**50.** ಅವರಿಗೆ ನಾವು ನಮ್ಮ ಕಾರುಣ್ಯದಲ್ಲಿಂದ ನೀಡಿದೆವು ಮತ್ತು ಅವರಿಗೆ ಉನ್ನತವಾದ ಕೀರ್ತಿಯನ್ನು ಕರುಣಿಸಿದೆವು.

وَوَهَبۡنَا لَهُم مِّن رَّحۡمَتِنَا وَجَعَلۡنَا لَهُمۡ لِسَانَ صِدۡقٍ عَلِيّٗا ﴿٥٠﴾

**51.** ಗ್ರಂಥದಲ್ಲಿ ಮೂಸಾರ ಕುರಿತು ಪ್ರಸ್ತಾಪಿಸಿರಿ. ಖಂಡಿತವಾಗಿಯೂ ಅವರು ನಿಷ್ಕಳಂಕರಾಗಿದ್ದರು. ಅವರು ಸಂದೇಶವಾಹಕರೂ, ಪ್ರವಾದಿಯೂ ಆಗಿದ್ದರು.

وَٱذۡكُرۡ فِي ٱلۡكِتَٰبِ مُوسَىٰٓۚ إِنَّهُۥ كَانَ مُخۡلَصٗا وَكَانَ رَسُولٗا نَّبِيّٗا ﴿٥١﴾

**52.** ಪರ್ವತದ ಬಲಭಾಗದಿಂದ ನಾವು ಅವರನ್ನು ಕರೆದೆವು ಮತ್ತು ಗುಪ್ತ ಸಂಭಾಷಣೆಗಾಗಿ ನಾವು ಅವರನ್ನು ಹತ್ತಿರಗೊಳಿಸಿದೆವು.

وَنَٰدَيۡنَٰهُ مِن جَانِبِ ٱلطُّورِ ٱلۡأَيۡمَنِ وَقَرَّبۡنَٰهُ نَجِيّٗا ﴿٥٢﴾

**53.** ನಮ್ಮ ಕರುಣೆಯಿಂದಾಗಿ ನಾವು ಅವರಿಗೆ ಅವರ ಸಹೋದರನಾದ ಹಾರೂನ್‌ರನ್ನು ಒಬ್ಬ ಪ್ರವಾದಿಯನ್ನಾಗಿ (ಅವರಿಗೆ ಸಹಾಯಕನನ್ನಾಗಿ) ನೀಡಿದೆವು.

وَوَهَبۡنَا لَهُۥ مِن رَّحۡمَتِنَآ أَخَاهُ هَٰرُونَ نَبِيّٗا ﴿٥٣﴾

**54.** ಗ್ರಂಥದಲ್ಲಿ ಇಸ್ಮಾಈಲ್‌ರ ಕುರಿತು ಪ್ರಸ್ತಾಪಿಸಿರಿ. ಖಂಡಿತವಾಗಿಯೂ ಅವರು ವಾಗ್ದಾನ ಪಾಲಕರಾಗಿದ್ದರು. ಅವರು ಪ್ರವಾದಿಯೂ ಸಂದೇಶವಾಹಕರೂ ಆಗಿದ್ದರು.

وَٱذۡكُرۡ فِي ٱلۡكِتَٰبِ إِسۡمَٰعِيلَۚ إِنَّهُۥ كَانَ صَادِقَ ٱلۡوَعۡدِ وَكَانَ رَسُولٗا نَّبِيّٗا ﴿٥٤﴾

55. ಅವರು ತಮ್ಮ ಜನರಿಗೆ ನಮಾಝ್ ಮಾಡಲು ಮತ್ತು ಝಕಾತ್ ನೀಡಲು ಆಜ್ಞಾಪಿಸುತ್ತಿದ್ದರು. ಅವರು ತಮ್ಮ ರಬ್‌ನ ಬಳಿ ಸಂತೃಪ್ತಿ ಗಳಿಸಿದವರಾಗಿದ್ದರು.

وَكَانَ يَأۡمُرُ أَهۡلَهُۥ بِٱلصَّلَوٰةِ وَٱلزَّكَوٰةِ وَكَانَ عِندَ رَبِّهِۦ مَرۡضِيّٗا ٥٥

56. ಗ್ರಂಥದಲ್ಲಿ ಇದ್ರೀಸ್‌ರ ಕುರಿತು ಪ್ರಸ್ತಾಪಿಸಿರಿ. ಖಂಡಿತವಾಗಿಯೂ ಅವರು ಸತ್ಯಸಂಧರೂ ಪ್ರವಾದಿಯೂ ಆಗಿದ್ದರು.

وَٱذۡكُرۡ فِي ٱلۡكِتَٰبِ إِدۡرِيسَۚ إِنَّهُۥ كَانَ صِدِّيقٗا نَّبِيّٗا ٥٦

57. ನಾವು ಅವರನ್ನು ಉನ್ನತ ಪದವಿಗೆ ಏರಿಸಿದೆವು.

وَرَفَعۡنَٰهُ مَكَانًا عَلِيًّا ٥٧

58. ಅವರು ಅಲ್ಲಾಹು ಅನುಗ್ರಹ ನೀಡಿದ ಪ್ರವಾದಿಗಳಾಗಿರುವರು. ಅವರು ಆದಮ್‌ರ ಸಂತತಿಯಯಲ್ಲಿ ಸೇರಿದವರಾಗಿರುವರು. ನೂಹ್‌ರೊಂದಿಗೆ ನಾವು ಹಡಗಿನಲ್ಲಿ ಹತ್ತಿಸಿದವರಲ್ಲಿ ಸೇರಿದವರಾಗಿರುವರು ಮತ್ತು ಇಬ್ರಾಹೀಮ್ ಮತ್ತು ಇಸ್ರಾಈಲ್‌ರ ಸಂತತಿಗಳಲ್ಲಿ ಸೇರಿದವರಾಗಿರುವರು. ನಾವು ಸನ್ಮಾರ್ಗದಲ್ಲಿ ಸೇರಿಸಿ ವಿಶೇಷವಾಗಿ ಆರಿಸಿದವರಲ್ಲೂ ಸೇರಿದವರಾಗಿರುವರು. ಅವರಿಗೆ ಪರಮ ದಯಾಮಯನ ಸೂಕ್ತಿಗಳನ್ನು ಓದಿ ಕೊಡಲಾದರೆ ಅವರು ಸಾಷ್ಟಾಂಗವೆರಗುವವರೂ ಅಳುವವರೂ ಆಗಿ ಬೀಳುವರು.

أُوْلَٰٓئِكَ ٱلَّذِينَ أَنۡعَمَ ٱللَّهُ عَلَيۡهِم مِّنَ ٱلنَّبِيِّـۧنَ مِن ذُرِّيَّةِ ءَادَمَ وَمِمَّنۡ حَمَلۡنَا مَعَ نُوحٖ وَمِن ذُرِّيَّةِ إِبۡرَٰهِيمَ وَإِسۡرَٰٓءِيلَ وَمِمَّنۡ هَدَيۡنَا وَٱجۡتَبَيۡنَآۚ إِذَا تُتۡلَىٰ عَلَيۡهِمۡ ءَايَٰتُ ٱلرَّحۡمَٰنِ خَرُّواْۤ سُجَّدٗا وَبُكِيّٗا ۩ ٥٨

59. ಅವರ ನಂತರ ಅವರ ಸ್ಥಾನದಲ್ಲಿ ಬೇರೊಂದು ತಲೆಮಾರು ಬಂದಿತು. ಅವರು ನಮಾಝನ್ನು ತೊರೆದರು ಮತ್ತು ದೇಹೇಚ್ಛೆಗಳನ್ನು ಅನುಸರಿಸಿದರು. ಅದರಿಂದಾಗಿ ಅವರು ದುರ್ಮಾರ್ಗದ ಫಲವನ್ನು ಕಾಣುವರು.

۞فَخَلَفَ مِنۢ بَعۡدِهِمۡ خَلۡفٌ أَضَاعُواْ ٱلصَّلَوٰةَ وَٱتَّبَعُواْ ٱلشَّهَوَٰتِۖ فَسَوۡفَ يَلۡقَوۡنَ غَيًّا ٥٩

60. ಆದರೆ ಪಶ್ಚಾತ್ತಾಪಪಟ್ಟವರು, ವಿಶ್ವಾಸವಿಟ್ಟವರು ಹಾಗೂ ಸತ್ಕರ್ಮಗೈದವರು ಇದರಿಂದ ಹೊರತಾಗಿರುವರು. ಅವರು ಸ್ವರ್ಗವನ್ನು ಪ್ರವೇಶಿಸುವರು. ಅವರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗಲಾಗದು.

إِلَّا مَن تَابَ وَءَامَنَ وَعَمِلَ صَٰلِحٗا فَأُوْلَٰٓئِكَ يَدۡخُلُونَ ٱلۡجَنَّةَ وَلَا يُظۡلَمُونَ شَيۡـٔٗا ٦٠

**61.** ಪರಮ ದಯಾಮಯನು ತನ್ನ ದಾಸರಿಗೆ ಅಗೋಚರವಾಗಿ ವಾಗ್ದಾನ ಮಾಡಿರುವ ಶಾಶ್ವತ ವಾಸಕ್ಕಿರುವ ಸ್ವರ್ಗೋದ್ಯಾನಗಳನ್ನು (ಅವರು ಪ್ರವೇಶಿಸುವರು). ಖಂಡಿತವಾಗಿಯೂ ಅವನ ವಾಗ್ದಾನವು ನೆರವೇರುವಂತದ್ದೇ ಆಗಿದೆ.

جَنَّٰتِ عَدۡنٍ ٱلَّتِي وَعَدَ ٱلرَّحۡمَٰنُ عِبَادَهُۥ بِٱلۡغَيۡبِۚ إِنَّهُۥ كَانَ وَعۡدُهُۥ مَأۡتِيّٗا ٦١

**62.** ಸಲಾಮ್ ಎಂಬ ಮಾತನ್ನಲ್ಲದೆ ನಿರರ್ಥಕವಾದ ಯಾವುದನ್ನೂ ಅವರು ಅಲ್ಲಿ ಆಲಿಸಲಾರರು. ಅಲ್ಲಿ ಅವರಿಗೆ ಅವರ ಆಹಾರವು ಪ್ರಭಾತದಲ್ಲೂ ಮುಸ್ಸಂಜೆಯಲ್ಲೂ ಒದಗಿಸಲಾಗುತ್ತಿರುವುದು.

لَّا يَسۡمَعُونَ فِيهَا لَغۡوًا إِلَّا سَلَٰمٗاۖ وَلَهُمۡ رِزۡقُهُمۡ فِيهَا بُكۡرَةٗ وَعَشِيّٗا ٦٢

**63.** ಅದು ನಮ್ಮ ದಾಸರಲ್ಲಿ ಯಾರು ಭಯಭಕ್ತಿ ಪಾಲಿಸುವವರಾಗಿದ್ದರೋ ಅವರಿಗೆ ನಾವು ವಾರೀಸಾಗಿ ನೀಡುವ ಸ್ವರ್ಗವಾಗಿದೆ.

تِلۡكَ ٱلۡجَنَّةُ ٱلَّتِي نُورِثُ مِنۡ عِبَادِنَا مَن كَانَ تَقِيّٗا ٦٣

**64.** (ಪ್ರವಾದಿಯೊಂದಿಗೆ ಜಿಬ್ರೀಲ್ ಹೇಳಿದರು): 'ತಮ್ಮ ರಬ್‌ನ ಆಜ್ಞೆಯೊಂದಿಗೇ ಹೊರತು ನಾವು ಇಳಿಯಲಾರೆವು. ನಮ್ಮ ಮುಂಭಾಗದಲ್ಲಿ, ಹಿಂಭಾಗದಲ್ಲಿ ಮತ್ತು ಅವೆರಡರ ಮಧ್ಯೆಯಿರುವುದೆಲ್ಲವೂ ಅವನದ್ದಾಗಿವೆ. ತಮ್ಮ ರಬ್ ಮರೆತುಬಿಡುವವನಲ್ಲ'.

وَمَا نَتَنَزَّلُ إِلَّا بِأَمۡرِ رَبِّكَۖ لَهُۥ مَا بَيۡنَ أَيۡدِينَا وَمَا خَلۡفَنَا وَمَا بَيۡنَ ذَٰلِكَۚ وَمَا كَانَ رَبُّكَ نَسِيّٗا ٦٤

**65.** ಅವನು ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವವುಗಳ ರಬ್ಬಾಗಿರುವನು. ಆದ್ದರಿಂದ ಅವನನ್ನು (ಮಾತ್ರ) ಆರಾಧಿಸಿರಿ ಮತ್ತು ಅವನ ಆರಾಧನೆಯಲ್ಲಿ ತಾವು ಸಹನೆಯಿಂದ ದೃಢವಾಗಿ ನಿಲ್ಲಿರಿ. ಅವನಿಗೆ ಸರಿಸಮಾನ ನಾಮವಂತನನ್ನು ತಾವು ಅರಿತಿರುವಿರಾ?

رَّبُّ ٱلسَّمَٰوَٰتِ وَٱلۡأَرۡضِ وَمَا بَيۡنَهُمَا فَٱعۡبُدۡهُ وَٱصۡطَبِرۡ لِعِبَٰدَتِهِۦۚ هَلۡ تَعۡلَمُ لَهُۥ سَمِيّٗا ٦٥

**66.** ಮನುಷ್ಯನು ಹೇಳುವನು: 'ನಾನು ಮರಣ ಹೊಂದಿದ ಬಳಿಕ ನನ್ನನ್ನು ಪುನಃ ಜೀವಂತವಾಗಿ ಹೊರ ತರಲಾಗುವುದೇ?'

وَيَقُولُ ٱلۡإِنسَٰنُ أَءِذَا مَا مِتُّ لَسَوۡفَ أُخۡرَجُ حَيًّا ٦٦

67. ಮನುಷ್ಯನು ತಾನು ಏನೂ ಆಗಿರದಿದ್ದ ಒಂದು ಸ್ಥಿತಿಯಲ್ಲಿದ್ದಾಗ ನಾವು ಅವನನ್ನು ಮೊದಲ ಬಾರಿಗೆ ಸೃಷ್ಟಿಸಿರುವುದನ್ನು ಸ್ಮರಿಸಲಾರನೇ?

أَوَ لَا يَذْكُرُ ٱلْإِنسَٰنُ أَنَّا خَلَقْنَٰهُ مِن قَبْلُ وَلَمْ يَكُ شَيْـًٔا ﴿٦٧﴾

68. ತಮ್ಮ ರಬ್‌ನ ಮೇಲಾಣೆ! ನಾವು ಅವರನ್ನೂ, ಶೈತಾನರನ್ನೂ ಖಂಡಿತವಾಗಿಯೂ ಒಟ್ಟುಗೂಡಿಸುವೆವು. ತರುವಾಯ ಮೊಣಕಾಲೂರಿದ ಸ್ಥಿತಿಯಲ್ಲಿ ಖಂಡಿತವಾಗಿಯೂ ನಾವು ಅವರನ್ನು ನರಕದ ಸುತ್ತಲೂ ಹಾಜರುಗೊಳಿಸುವೆವು.

فَوَرَبِّكَ لَنَحْشُرَنَّهُمْ وَٱلشَّيَٰطِينَ ثُمَّ لَنُحْضِرَنَّهُمْ حَوْلَ جَهَنَّمَ جِثِيًّا ﴿٦٨﴾

69. ನಂತರ ಪ್ರತಿಯೊಂದು ಗುಂಪಿನಿಂದಲೂ ಪರಮ ದಯಾಮಯನೊಂದಿಗೆ ಕಡು ಧಿಕ್ಕಾರ ತೋರಿಸಿದವರನ್ನು ನಾವು ಬೇರ್ಪಡಿಸಿ ನಿಲ್ಲಿಸುವೆವು.

ثُمَّ لَنَنزِعَنَّ مِن كُلِّ شِيعَةٍ أَيُّهُمْ أَشَدُّ عَلَى ٱلرَّحْمَٰنِ عِتِيًّا ﴿٦٩﴾

70. ತರುವಾಯ ಅದರಲ್ಲಿ (ನರಕದಲ್ಲಿ) ಉರಿಯಲು ಅವರ ಪೈಕಿ ಹೆಚ್ಚು ಅರ್ಹರಾಗಿರುವವರು ಯಾರೆಂಬ ಬಗ್ಗೆ ನಾವು ಚೆನ್ನಾಗಿ ಅರಿತಿರುವೆವು.

ثُمَّ لَنَحْنُ أَعْلَمُ بِٱلَّذِينَ هُمْ أَوْلَىٰ بِهَا صِلِيًّا ﴿٧٠﴾

71. ಅದರ (ನರಕಾಗ್ನಿಯ) ಬಳಿಗೆ ಬರದಂತಹ ಯಾರೂ ನಿಮ್ಮಲ್ಲಿರಲಾರರು. ಅದು ತಮ್ಮ ರಬ್‌ನ ಖಚಿತವಾದ ಹಾಗೂ ಜಾರಿಯಾಗುವ ತೀರ್ಮಾನವಾಗಿದೆ.

وَإِن مِّنكُمْ إِلَّا وَارِدُهَا ۚ كَانَ عَلَىٰ رَبِّكَ حَتْمًا مَّقْضِيًّا ﴿٧١﴾

72. ತರುವಾಯ ನಾವು ಭಯಭಕ್ತಿ ಪಾಲಿಸಿದವರನ್ನು ರಕ್ಷಿಸುವೆವು ಮತ್ತು ಅಕ್ರಮಿಗಳನ್ನು ಮೊಣ ಕಾಲೂರಿದವರಾಗಿ ಅದರಲ್ಲಿ ಬಿಟ್ಟುಬಿಡುವೆವು.[1]

ثُمَّ نُنَجِّى ٱلَّذِينَ ٱتَّقَوا۟ وَّنَذَرُ ٱلظَّٰلِمِينَ فِيهَا جِثِيًّا ﴿٧٢﴾

73. ನಮ್ಮ ಸ್ಪಷ್ಟ ದೃಷ್ಟಾಂತಗಳನ್ನು ಅವರಿಗೆ ಓದಿ ಕೊಡಲಾದರೆ ಅವಿಶ್ವಾಸಿಗಳು ವಿಶ್ವಾಸಿಗಳೊಂದಿಗೆ ಹೇಳುವರು: 'ಈ ಎರಡು ಗುಂಪುಗಳಲ್ಲಿ ಅತ್ಯುತ್ತಮ ಪದವಿಯಿರುವವರು

وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ قَالَ ٱلَّذِينَ كَفَرُوا۟ لِلَّذِينَ ءَامَنُوٓا۟ أَىُّ ٱلْفَرِيقَيْنِ خَيْرٌ مَّقَامًا وَأَحْسَنُ نَدِيًّا ﴿٧٣﴾

1 ಸತ್ಯವಿಶ್ವಾಸಿಗಳನ್ನು ಮತ್ತು ಸತ್ಯನಿಷೇಧಿಗಳನ್ನು ಅಲ್ಲಾಹು ನರಕದ ಮುಂದೆ ಹಾಜರುಗೊಳಿಸುವನು ಮತ್ತು ತದನಂತರ ಧರ್ಮನಿಷ್ಠೆಯುಳ್ಳ ಸತ್ಯವಿಶ್ವಾಸಿಗಳನ್ನು ರಕ್ಷಿಸಿ ಸತ್ಯನಿಷೇಧಿಗಳನ್ನು ನರಕಕ್ಕೆ ಎಸೆಯುವನೆಂದು ಇದರಿಂದ ಗ್ರಹಿಸಬಹುದು.

ಮತ್ತು ಅತ್ಯುತ್ತಮ ಜನಬಲವುಳ್ಳವರು ಯಾರು?'[1]

74. ಸರಕು–ಸಾಮಾಗ್ರಿಗಳಲ್ಲಿ ಮತ್ತು ಬಾಹ್ಯರೂಪದಲ್ಲಿ ಅತ್ಯುತ್ತಮರಾಗಿದ್ದ ಎಷ್ಟೊಂದು ತಲೆಮಾರುಗಳನ್ನು ನಾವು ಅವರಿಗಿಂತ ಮುಂಚೆ ನಾಶಗೊಳಿಸಿರುವೆವು!

وَكَمۡ أَهۡلَكۡنَا قَبۡلَهُم مِّن قَرۡنٍ هُمۡ أَحۡسَنُ أَثَٰثٗا وَرِءۡيٗا ٧٤

75. (ಓ ಪ್ರವಾದಿಯವರೇ!) ಹೇಳಿರಿ: 'ಯಾರಾದರೂ ಪಥಭ್ರಷ್ಟನಾಗಿಬಿಟ್ಟರೆ ಪರಮ ದಯಾಮಯನು ಅವನಿಗೆ ಕಾಲಾವಧಿಯವನ್ನು ದೀರ್ಘಗೊಳಿಸಿಕೊಡುವನು'. ಕೊನೆಗೆ ಅವರು ತಮಗೆ ಮುನ್ನೆಚ್ಚರಿಕೆ ನೀಡಲಾಗುವ ಸಂಗತಿಯನ್ನು ಕಾಣುವರು; ಅಂದರೆ ಒಂದೋ ಶಿಕ್ಷೆಯನ್ನು ಅಥವಾ ಅಂತ್ಯಘಳಿಗೆಯನ್ನು ಕಾಣುವರು. ಆಗ ಅತಿನಿಕೃಷ್ಟ ಸ್ಥಾನವಿರುವವರು ಯಾರು ಮತ್ತು ಅತಿ ದುರ್ಬಲ ಸೈನ್ಯ ಯಾರದೆಂದು ಅವರು ಅರಿತುಕೊಳ್ಳುವರು.

قُلۡ مَن كَانَ فِي ٱلضَّلَٰلَةِ فَلۡيَمۡدُدۡ لَهُ ٱلرَّحۡمَٰنُ مَدًّاۚ حَتَّىٰٓ إِذَا رَأَوۡاْ مَا يُوعَدُونَ إِمَّا ٱلۡعَذَابَ وَإِمَّا ٱلسَّاعَةَ فَسَيَعۡلَمُونَ مَنۡ هُوَ شَرّٞ مَّكَانٗا وَأَضۡعَفُ جُندٗا ٧٥

76. ಸನ್ಮಾರ್ಗ ಪಡೆದವರಿಗೆ ಅಲ್ಲಾಹು ಸನ್ಮಾರ್ಗ ನಿಷ್ಠೆಯನ್ನು ಹೆಚ್ಚಿಸಿಕೊಡುವನು. ಆದರೆ ನೆಲೆನಿಲ್ಲುವ ಸತ್ಕರ್ಮಗಳು ತಮ್ಮ ರಬ್‌ನ ಬಳಿ ಅತ್ಯುತ್ತಮವಾದ ಪ್ರತಿಫಲವನ್ನು ನೀಡುವಂತದ್ದೂ ಅತ್ಯುತ್ತಮವಾದ ಪರಿಣಾಮವಿರುವಂತದ್ದೂ ಆಗಿವೆ.

وَيَزِيدُ ٱللَّهُ ٱلَّذِينَ ٱهۡتَدَوۡاْ هُدٗىۗ وَٱلۡبَٰقِيَٰتُ ٱلصَّٰلِحَٰتُ خَيۡرٌ عِندَ رَبِّكَ ثَوَابٗا وَخَيۡرٞ مَّرَدًّا ٧٦

77. ಆದರೆ ನಮ್ಮ ದೃಷ್ಟಾಂತಗಳಲ್ಲಿ ಅವಿಶ್ವಾಸವಿಟ್ಟು 'ಖಂಡಿತವಾಗಿಯೂ ನನಗೆ ಸಂಪತ್ತು ಮತ್ತು ಸಂತತಿಯನ್ನು ನೀಡಲಾಗುವುದು' ಎಂದು ಹೇಳಿದವನನ್ನು ತಾವು ಕಂಡಿರುವಿರಾ?

أَفَرَءَيۡتَ ٱلَّذِي كَفَرَ بِـَٔايَٰتِنَا وَقَالَ لَأُوتَيَنَّ مَالٗا وَوَلَدًا ٧٧

78. ಅವನು ಅಗೋಚರ ಜ್ಞಾನವನ್ನು ಅರಿತಿರುವನೇ? ಅಥವಾ ಪರಮ ದಯಾಮಯನ ಬಳಿ ಅವನು ಯಾವುದಾದರೂ ಕರಾರನ್ನು ಮಾಡಿರುವನೇ?

أَطَّلَعَ ٱلۡغَيۡبَ أَمِ ٱتَّخَذَ عِندَ ٱلرَّحۡمَٰنِ عَهۡدٗا ٧٨

1 ಇದು ಶ್ರೀಮಂತರು, ಸುಖಲೋಲುಪರು ಮತ್ತು ಜನಬಲವುಳ್ಳವರೇ ಭಾಗ್ಯವಂತರೆಂದು ಭಾವಿಸುವ ಸತ್ಯನಿಷೇಧಿಗಳು ಲೇವಡಿಯೊಂದಿಗೆ ಕೇಳುವ ಪ್ರಶ್ನೆಯಾಗಿದೆ.

كَلَّاۚ سَنَكۡتُبُ مَا يَقُولُ وَنَمُدُّ لَهُۥ مِنَ
ٱلۡعَذَابِ مَدّٗا ٧٩ وَنَرِثُهُۥ مَا يَقُولُ
وَيَأۡتِينَا فَرۡدٗا ٨٠

79-80. ಇಲ್ಲ, ಅವನು ಹೇಳುವುದನ್ನು ನಾವು ದಾಖಲಿಸುವೆವು ಮತ್ತು ಅವನಿಗೆ ನಾವು ಶಿಕ್ಷೆಯನ್ನು ಹೆಚ್ಚಿಸುತ್ತಲೇ ಇರುವೆವು. ಅವನು ಹೇಳುತ್ತಿರುವವುಗಳಿಗೆ (ಸಂಪತ್ತು ಮತ್ತು ಸಂತತಿಗಳಿಗೆ) ವಾರೀಸುದಾರರು ನಾವಾಗಿರುವೆವು. ಅವನು ನಮ್ಮ ಬಳಿಗೆ ಒಂಟಿಯಾಗಿಯೇ ಬರುವನು.

وَٱتَّخَذُواْ مِن دُونِ ٱللَّهِ ءَالِهَةٗ لِّيَكُونُواْ لَهُمۡ
عِزّٗا ٨١

81. ಅವರು ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರನ್ನು ಮಾಡಿಕೊಂಡಿರುವರು ಅವರು (ಆ ಆರಾಧ್ಯರು) ಇವರಿಗೆ ಬೆಂಬಲವಾಗುವ ಸಲುವಾಗಿ!

كَلَّاۚ سَيَكۡفُرُونَ بِعِبَادَتِهِمۡ وَيَكُونُونَ
عَلَيۡهِمۡ ضِدًّا ٨٢

82. ಇಲ್ಲ, ಇವರು ಮಾಡಿರುವ ಆರಾಧನೆಯನ್ನು ಅವರು ನಿಷೇಧಿಸುವರು ಮತ್ತು ಅವರು ಇವರ ವಿರೋಧಿಗಳಾಗಿಬಿಡುವರು.

أَلَمۡ تَرَ أَنَّآ أَرۡسَلۡنَا ٱلشَّيَٰطِينَ عَلَى
ٱلۡكَٰفِرِينَ تَؤُزُّهُمۡ أَزّٗا ٨٣

83. ಸತ್ಯನಿಷೇಧಿಗಳ ಬಳಿಗೆ, ಅವರನ್ನು ತೀವ್ರ ಪ್ರಚೋದನೆಗೊಳಪಡಿಸಲು ನಾವು ಶೈತಾನರನ್ನು ಕಳುಹಿಸಿರುವುದನ್ನು ತಾವು ಕಂಡಿಲ್ಲವೇ?

فَلَا تَعۡجَلۡ عَلَيۡهِمۡۖ إِنَّمَا نَعُدُّ لَهُمۡ
عَدّٗا ٨٤

84. ಆದ್ದರಿಂದ ಅವರ ವಿಷಯದಲ್ಲಿ ತಾವು ಆತುರ ಪಡದಿರಿ. ನಾವು ಅವರಿಗಾಗಿ (ದಿನಗಳನ್ನು) ಎಣಿಸುವುದನ್ನು ಮಾತ್ರ ಮಾಡುತ್ತಿರುವೆವು!

يَوۡمَ نَحۡشُرُ ٱلۡمُتَّقِينَ إِلَى ٱلرَّحۡمَٰنِ وَفۡدٗا ٨٥
وَنَسُوقُ ٱلۡمُجۡرِمِينَ إِلَىٰ جَهَنَّمَ وِرۡدٗا ٨٦

85-86. ಭಯಭಕ್ತಿಯಿರುವವರನ್ನು ನಾವು ಗಣ್ಯ ಅತಿಥಿಗಳನ್ನಾಗಿ ಪರಮ ದಯಾಮಯನೆಡೆಗೆ ಒಟ್ಟುಗೂಡಿಸುವ ಮತ್ತು ಅಪರಾಧಿಗಳನ್ನು ಬಾಯಾರಿದವರನ್ನಾಗಿ ನರಕದೆಡೆಗೆ ಅಟ್ಟುವ ದಿನ!

لَّا يَمۡلِكُونَ ٱلشَّفَٰعَةَ إِلَّا مَنِ ٱتَّخَذَ عِندَ
ٱلرَّحۡمَٰنِ عَهۡدٗا ٨٧

87. (ಅಂದು) ಪರಮ ದಯಾಮಯನೊಂದಿಗೆ ಕರಾರು ಮಾಡಿರುವವನ ಹೊರತು ಯಾರಿಗೂ ಶಿಫಾರಸ್ಸು ಮಾಡುವ ಅಧಿಕಾರವಿರದು.[1]

وَقَالُواْ ٱتَّخَذَ ٱلرَّحۡمَٰنُ وَلَدٗا ٨٨ لَّقَدۡ جِئۡتُمۡ
شَيۡـًٔا إِدّٗا ٨٩

88-89. ಪರಮ ದಯಾಮಯನು ಒಂದು ಸಂತತಿಯನ್ನು ಮಾಡಿಕೊಂಡಿರುವನೆಂದು ಅವರು ಹೇಳಿರುವರು. (ಓ ಜನರೇ!) ನೀವು

1 ಏಕದೇವವಿಶ್ವಾಸಿಗಳಾಗಿ ಜೀವಿಸುವೆವು ಎಂಬುದು ಮನುಷ್ಯರು ಅಲ್ಲಾಹುವಿನೊಂದಿಗೆ ಮಾಡಿಕೊಂಡಿರುವ ಕರಾರಾಗಿದೆ.

ಮಾಡಿರುವುದು ಖಂಡಿತವಾಗಿಯೂ ಒಂದು ಗುರುತರವಾದ ಕೃತ್ಯವಾಗಿದೆ.

**90-91**. ಅದರಿಂದಾಗಿ ಆಕಾಶಗಳು ಒಡೆದು ಛಿದ್ರವಾಗಿ, ಭೂಮಿಯು ಬಿರುಕು ಬಿಟ್ಟು, ಪರ್ವತಗಳು ನುಚ್ಚುನೂರಾಗಿ ಬೀಳುವಂತಾಗುವುವು. ಪರಮ ದಯಾಮಯನಿಗೆ ಸಂತತಿಯಿದೆಯೆಂದು ಅವರು ವಾದಿಸಿದ ಕಾರಣದಿಂದಾಗಿ.

تَكَادُ ٱلسَّمَٰوَٰتُ يَتَفَطَّرۡنَ مِنۡهُ وَتَنشَقُّ
ٱلۡأَرۡضُ وَتَخِرُّ ٱلۡجِبَالُ هَدًّا ﴿٩٠﴾ أَن دَعَوۡاْ
لِلرَّحۡمَٰنِ وَلَدٗا ﴿٩١﴾

**92-93**. ಸಂತತಿಯನ್ನು ಮಾಡಿಕೊಳ್ಳುವುದು ಪರಮ ದಯಾಮಯನಿಗೆ ಯುಕ್ತವಾದುದಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಯಾವುದೇ ವ್ಯಕ್ತಿಯೂ ಪರಮ ದಯಾಮಯನ ಬಳಿಗೆ ಒಬ್ಬ ದಾಸನಾಗಿಯೇ ಹೊರತು ಬರಲಾರನು.

وَمَا يَنۢبَغِي لِلرَّحۡمَٰنِ أَن يَتَّخِذَ وَلَدًا ﴿٩٢﴾ إِن
كُلُّ مَن فِي ٱلسَّمَٰوَٰتِ وَٱلۡأَرۡضِ إِلَّآ ءَاتِي
ٱلرَّحۡمَٰنِ عَبۡدٗا ﴿٩٣﴾

**94-95**. ಖಂಡಿತವಾಗಿಯೂ ಅವನು ಅವರನ್ನು ನಿಖರವಾಗಿ ಎಣಿಸಿರುವನು. ಪುನರುತ್ಥಾನ ದಿನದಂದು ಅವರ ಪೈಕಿ ಪ್ರತಿಯೊಬ್ಬರೂ ಅವನ ಬಳಿಗೆ ಒಂಟಿಯಾಗಿಯೇ ಬರುವರು.

لَّقَدۡ أَحۡصَىٰهُمۡ وَعَدَّهُمۡ عَدّٗا ﴿٩٤﴾ وَكُلُّهُمۡ
ءَاتِيهِ يَوۡمَ ٱلۡقِيَٰمَةِ فَرۡدًا ﴿٩٥﴾

**96**. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರಿಗೆ ಪರಮ ದಯಾಮಯನು ಖಂಡಿತವಾಗಿಯೂ ಪ್ರೀತಿ ಸಿಗುವಂತೆ ಮಾಡುವನು.(1)

إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ
سَيَجۡعَلُ لَهُمُ ٱلرَّحۡمَٰنُ وُدّٗا ﴿٩٦﴾

**97**. ನಾವು ಇದನ್ನು (ಈ ಕುರ್‌ಆನನ್ನು) ತಮ್ಮ ಭಾಷೆಯಲ್ಲಿ ಸರಳಗೊಳಿಸಿಕೊಟ್ಟಿರುವುದು ತಾವು ಇದರ ಮೂಲಕ ಭಯಭಕ್ತಿ ಪಾಲಿಸುವವರಿಗೆ ಶುಭವಾರ್ತೆಯನ್ನು ನೀಡುವ ಸಲುವಾಗಿಯೂ, ಹಟಮಾರಿಗಳಾದ ಜನರಿಗೆ ಇದರ ಮೂಲಕ ಎಚ್ಚರಿಕೆಯನ್ನು ನೀಡುವ ಸಲುವಾಗಿಯೂ ಮಾತ್ರವಾಗಿದೆ.

فَإِنَّمَا يَسَّرۡنَٰهُ بِلِسَانِكَ لِتُبَشِّرَ بِهِ ٱلۡمُتَّقِينَ
وَتُنذِرَ بِهِۦ قَوۡمٗا لُّدّٗا ﴿٩٧﴾

---

1 ಸತ್ಯವಿಶ್ವಾಸಿಗಳಾದ ಸತ್ಕರ್ಮಿಗಳಿಗೆ ಮಲಕ್‌ಗಳ ಮತ್ತು ಸಜ್ಜನರ ಸ್ನೇಹವು ಸಿಗುವಂತೆ ಅಲ್ಲಾಹು ಮಾಡುವನು.

وَكَمْ أَهْلَكْنَا قَبْلَهُم مِّن قَرْنٍ هَلْ تُحِسُّ
مِنْهُم مِّنْ أَحَدٍ أَوْ تَسْمَعُ لَهُمْ رِكْزًا ﴿٩٨﴾

98. ಅವರಿಗಿಂತ ಮುಂಚೆ ನಾವು ಎಷ್ಟೋ ತಲೆಮಾರುಗಳನ್ನು ನಾಶಗೊಳಿಸಿರುವೆವು. ಅವರಲ್ಲಿ ಯಾರನ್ನಾದರೂ ತಾವು ಕಾಣುತ್ತಿರುವಿರಾ? ಅಥವಾ ಅವರ ಮೆಲುದನಿಯನ್ನಾದರೂ ಆಲಿಸುತ್ತಿರುವಿರಾ?

## ತ್ವಾಹಾ

## سُورَةُ طه

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 135

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ತ್ವಾಹಾ

طه ﴿١﴾

2. ತಾವು ಕಷ್ಟಪಡಬೇಕೆಂದು ನಾವು ತಮಗೆ ಕುರ್‌ಆನನ್ನು ಅವತೀರ್ಣಗೊಳಿಸಿಲ್ಲ.

مَآ أَنزَلۡنَا عَلَيۡكَ ٱلۡقُرۡءَانَ لِتَشۡقَىٰٓ ﴿٢﴾

3. ಇದು ಭಯಪಡುವವರಿಗೆ ನೀಡುವ ಒಂದು ಉಪದೇಶ ಮಾತ್ರವಾಗಿದೆ.

إِلَّا تَذۡكِرَةٗ لِّمَن يَخۡشَىٰ ﴿٣﴾

4. ಇದು ಭೂಮಿಯನ್ನು ಮತ್ತು ಉನ್ನತವಾದ ಆಕಾಶಗಳನ್ನು ಸೃಷ್ಟಿಸಿದವನ ಬಳಿಯಿಂದ ಅವತೀರ್ಣಗೊಂಡಿರುವುದಾಗಿದೆ.

تَنزِيلٗا مِّمَّنۡ خَلَقَ ٱلۡأَرۡضَ وَٱلسَّمَٰوَٰتِ ٱلۡعُلَى ﴿٤﴾

5. ಪರಮ ದಯಾಮಯನು ಸಿಂಹಾಸನಾರೂಢನಾಗಿರುವನು.

ٱلرَّحۡمَٰنُ عَلَى ٱلۡعَرۡشِ ٱسۡتَوَىٰ ﴿٥﴾

6. ಆಕಾಶಗಳಲ್ಲಿರುವುದು, ಭೂಮಿಯಲ್ಲಿರುವುದು, ಅವೆರಡರ ಮಧ್ಯೆಯಿರುವುದು ಮತ್ತು ಮಣ್ಣಿನಡಿಯಲ್ಲಿರುವುದೆಲ್ಲವೂ ಅವನಿರುವುದಾಗಿವೆ.

لَهُۥ مَا فِي ٱلسَّمَٰوَٰتِ وَمَا فِي ٱلۡأَرۡضِ وَمَا بَيۡنَهُمَا وَمَا تَحۡتَ ٱلثَّرَىٰ ﴿٦﴾

7. ತಾವು ಧ್ವನಿಯೆತ್ತಿ ಮಾತನಾಡುವುದಾದರೆ, ಖಂಡಿತವಾಗಿಯೂ ಅವನು (ಅಲ್ಲಾಹು) ರಹಸ್ಯವಾಗಿರುವುದನ್ನೂ ಅತಿ ನಿಗೂಢವಾಗಿರುವುದನ್ನೂ ಅರಿಯುವನು.(1)

وَإِن تَجۡهَرۡ بِٱلۡقَوۡلِ فَإِنَّهُۥ يَعۡلَمُ ٱلسِّرَّ وَأَخۡفَى ﴿٧﴾

8. ಅಲ್ಲಾಹು, ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅತ್ಯುತ್ಕೃಷ್ಟವಾದ ನಾಮಗಳು ಅವನದ್ದಾಗಿವೆ.

ٱللَّهُ لَآ إِلَٰهَ إِلَّا هُوَۖ لَهُ ٱلۡأَسۡمَآءُ ٱلۡحُسۡنَىٰ ﴿٨﴾

---

1 ಅಲ್ಲಾಹು ಕೇಳಲೆಂದು ಪ್ರಾರ್ಥನೆಯನ್ನು ಅಥವಾ ಕುರ್‌ಆನ್ ಪಾರಾಯಣವನ್ನು ಗಟ್ಟಿಯಾಗಿ ಓದಬೇಕಾಗಿಲ್ಲ. ಯಾಕೆಂದರೆ ಅಲ್ಲಾಹು ಯಾವುದೇ ಧ್ವನಿಯನ್ನೂ ಕೇಳುತ್ತಾನೆ. ಆದರೆ ಸ್ವಲ್ಪ ಧ್ವನಿಯೆತ್ತಿ ಹೇಳಲು ಅಲ್ಲಾಹು ಆದೇಶಿಸಿದ ವಿಷಯಗಳನ್ನು ಹಾಗೆಯೇ ಹೇಳಬೇಕಾಗಿದೆ. ಅದರಲ್ಲಿ ನಮಗೆ ತಿಳಿದಿರದಂತಹ ಯಾವುದಾದರೂ ಯುಕ್ತಿಯಿರಬಹುದು.

9. ಮೂಸಾರ ವೃತ್ತಾಂತವು ತಮ್ಮ ಬಳಿಗೆ ಬಂದಿದೆಯೇ?

وَهَلۡ أَتَىٰكَ حَدِيثُ مُوسَىٰٓ ٩

10. ಅವರು ಒಂದು ಬೆಂಕಿಯನ್ನು ಕಂಡ ಸಂದರ್ಭ.[1] ಆಗ ಅವರು ತಮ್ಮ ಕುಟುಂಬದವರೊಂದಿಗೆ ಹೇಳಿದರು: 'ನೀವಿಲ್ಲಿ ತಂಗಿರಿ. ನಾನೊಂದು ಬೆಂಕಿಯನ್ನು ಕಂಡಿರುವೆನು. ಅದರಿಂದ ಏನಾದರೂ ಉರಿಸಿಕೊಂಡು ನಾನು ನಿಮ್ಮ ಬಳಿಗೆ ಬರುವೆನು ಅಥವಾ ಬೆಂಕಿಯ ಬಳಿ ಯಾವುದಾದರೂ ಮಾರ್ಗದರ್ಶಿಯನ್ನು ಕಾಣುವೆನು'.

إِذۡ رَءَا نَارٗا فَقَالَ لِأَهۡلِهِ ٱمۡكُثُوٓاْ إِنِّيٓ
ءَانَسۡتُ نَارٗا لَّعَلِّيٓ ءَاتِيكُم مِّنۡهَا بِقَبَسٍ
أَوۡ أَجِدُ عَلَى ٱلنَّارِ هُدٗى ١٠

11-12. ತರುವಾಯ ಅವರು ಅದರ ಬಳಿಗೆ ಬಂದಾಗ (ಹೀಗೆ) ಕರೆಯಲಾಯಿತು:[2] 'ಓ ಮೂಸಾ! ಖಂಡಿತವಾಗಿಯೂ ನಾನು ತಮ್ಮ ರಬ್ಬಾಗಿರುವೆನು. ಆದ್ದರಿಂದ ತಾವು ತಮ್ಮ ಚಪ್ಪಲಿಗಳನ್ನು ಕಳಚಿರಿ. ತಾವು ತ್ವುವಾ ಎಂಬ ಪವಿತ್ರ ಕಣಿವೆಯಲ್ಲಿರುವಿರಿ.

فَلَمَّآ أَتَىٰهَا نُودِيَ يَٰمُوسَىٰٓ ١١ إِنِّيٓ
أَنَا۠ رَبُّكَ فَٱخۡلَعۡ نَعۡلَيۡكَ إِنَّكَ بِٱلۡوَادِ
ٱلۡمُقَدَّسِ طُوٗى ١٢

13. ನಾನು ತಮ್ಮನ್ನು ಆರಿಸಿರುವೆನು. ಆದ್ದರಿಂದ ದಿವ್ಯಸಂದೇಶ ನೀಡಲಾಗುವುದನ್ನು ತಾವು ಕಿವಿಗೊಟ್ಟು ಆಲಿಸಿರಿ.

وَأَنَا ٱخۡتَرۡتُكَ فَٱسۡتَمِعۡ لِمَا يُوحَىٰٓ ١٣

14. ಖಂಡಿತವಾಗಿಯೂ ಅಲ್ಲಾಹು ನಾನೇ ಆಗಿರುವೆನು. ನನ್ನ ಹೊರತು ಅನ್ಯ ಆರಾಧ್ಯರಿಲ್ಲ. ಆದ್ದರಿಂದ ತಾವು ನನ್ನನ್ನು ಆರಾಧಿಸಿರಿ ಮತ್ತು ನನ್ನನ್ನು ಸ್ಮರಿಸುವುದಕ್ಕಾಗಿ ನಮಾಝನ್ನು ಸಂಸ್ಥಾಪಿಸಿರಿ.

إِنَّنِيٓ أَنَا ٱللَّهُ لَآ إِلَٰهَ إِلَّآ أَنَا۠ فَٱعۡبُدۡنِي وَأَقِمِ
ٱلصَّلَوٰةَ لِذِكۡرِيٓ ١٤

15. ಖಂಡಿತವಾಗಿಯೂ ಅಂತ್ಯಘಳಿಗೆಯು ಬಂದೇ ತೀರುವುದು. ಪ್ರತಿಯೊಬ್ಬ ವ್ಯಕ್ತಿಗೂ ಅವನ ಪರಿಶ್ರಮಕ್ಕೆ ಅನುಗುಣವಾಗಿ ಪ್ರತಿಫಲ ನೀಡುವ ಸಲುವಾಗಿ ನಾನು ಅದನ್ನು ಗೋಪ್ಯವಾಗಿಡುವೆನು.

إِنَّ ٱلسَّاعَةَ ءَاتِيَةٌ أَكَادُ أُخۡفِيهَا لِتُجۡزَىٰ
كُلُّ نَفۡسِۭ بِمَا تَسۡعَىٰ ١٥

---

1 ಮದ್‌ಯನ್ ಪ್ರದೇಶದಲ್ಲಿ ಹಲವು ವರ್ಷಗಳ ಕಾಲ ಆಶ್ರಯವನ್ನು ಪಡೆದ ಬಳಿಕ ಸ್ವದೇಶವಾದ ಈಜಿಪ್ಟಿಗೆ ಮರಳುವ ಹಾದಿಯಲ್ಲಿ ಸೀನಾ ಕಣಿವೆಯಲ್ಲಿ ಮೂಸಾ(عَلَيْهِ السَّلَامُ) ರವರು ಆ ಬೆಂಕಿಯನ್ನು ಕಂಡರು.

2 ಇದು ಮೂಸಾ(عَلَيْهِ السَّلَامُ)ರಿಗೆ ಅಲ್ಲಾಹುವಿನಿಂದ ಲಭಿಸುವ ಪ್ರಥಮ ಸಂದೇಶವಾಗಿದೆ.

16. ಆದ್ದರಿಂದ ಅದರಲ್ಲಿ (ಅಂತ್ಯಘಳಿಗೆಯಲ್ಲಿ) ವಿಶ್ವಾಸವಿಡದವರು ಮತ್ತು ತಮ್ಮ ದೇಹೇಚ್ಛೆಗಳನ್ನು ಅನುಸರಿಸುವವರು ಅದರಿಂದ (ಅದರಲ್ಲಿ ವಿಶ್ವಾಸವಿಡುವುದರಿಂದ) ತಮ್ಮನ್ನು ತಡೆಯದಿರಲಿ. ಹಾಗೇನಾದರೂ ಆದರೆ ತಾವು ನಾಶವಾಗುವಿರಿ.

فَلَا يَصُدَّنَّكَ عَنْهَا مَن لَّا يُؤْمِنُ بِهَا وَٱتَّبَعَ هَوَىٰهُ فَتَرْدَىٰ ﴿١٦﴾

17. ಓ ಮೂಸಾ! ತಮ್ಮ ಬಲಗೈಯ್ಯಲ್ಲಿರುವುದೇನು?'

وَمَا تِلْكَ بِيَمِينِكَ يَٰمُوسَىٰ ﴿١٧﴾

18. ಅವರು (ಮೂಸಾ) ಹೇಳಿದರು: 'ಇದು ನನ್ನ ಬೆತ್ತ. ಇದನ್ನು ನೆಲಕ್ಕೂರಿ ನಾನು ನಿಲ್ಲುವೆನು. ಅದರಿಂದ ನಾನು ನನ್ನ ಆಡುಗಳಿಗೆ (ಎಲೆಗಳನ್ನು) ಉದುರಿಸುವೆನು ಮತ್ತು ಅದರಲ್ಲಿ ನನಗೆ ಇತರ ಪ್ರಯೋಜನಗಳೂ ಇವೆ'.

قَالَ هِىَ عَصَاىَ أَتَوَكَّؤُا۟ عَلَيْهَا وَأَهُشُّ بِهَا عَلَىٰ غَنَمِى وَلِىَ فِيهَا مَـَٔارِبُ أُخْرَىٰ ﴿١٨﴾

19. ಅಲ್ಲಾಹು ಹೇಳಿದನು: 'ಓ ಮೂಸಾ! ತಾವು ಆ ಬೆತ್ತವನ್ನು ಕೆಳಕ್ಕೆ ಹಾಕಿರಿ'.

قَالَ أَلْقِهَا يَٰمُوسَىٰ ﴿١٩﴾

20. ಅವರು ಅದನ್ನು ಕೆಳಕ್ಕೆ ಹಾಕಿದರು. ಅಗೋ! ಅದೊಂದು ಹಾವಾಗಿ ಓಡುತ್ತಿರುವುದು.

فَأَلْقَىٰهَا فَإِذَا هِىَ حَيَّةٌ تَسْعَىٰ ﴿٢٠﴾

21. ಅಲ್ಲಾಹು ಹೇಳಿದನು: 'ಅದನ್ನು ಹಿಡಿಯಿರಿ. ಭಯಪಡದಿರಿ. ಅದನ್ನು ನಾವು ಅದರ ಪೂರ್ವ ಸ್ಥಿತಿಗೆ ಮರಳಿಸುವೆವು.

قَالَ خُذْهَا وَلَا تَخَفْ ۖ سَنُعِيدُهَا سِيرَتَهَا ٱلْأُولَىٰ ﴿٢١﴾

22. ತಾವು ತಮ್ಮ ಕೈಯನ್ನು ತಮ್ಮ ಕಂಕುಳಕ್ಕೆ ಸೇರಿಸಿರಿ. ಯಾವುದೇ ದೋಷವಿಲ್ಲದೆ ಸ್ಪಷ್ಟ ಶ್ವೇತವರ್ಣದೊಂದಿಗೆ ಅದು ಹೊರಬರುವುದು. ಅದು ಇನ್ನೊಂದು ದೃಷ್ಟಾಂತವಾಗಿದೆ.

وَٱضْمُمْ يَدَكَ إِلَىٰ جَنَاحِكَ تَخْرُجْ بَيْضَآءَ مِنْ غَيْرِ سُوٓءٍ ءَايَةً أُخْرَىٰ ﴿٢٢﴾

23. ಇದು ನಮ್ಮ ಮಹಾ ದೃಷ್ಟಾಂತಗಳಲ್ಲಿ ಸೇರಿದ ಕೆಲವನ್ನು ನಾವು ತಮಗೆ ತೋರಿಸಿಕೊಡುವ ಸಲುವಾಗಿದೆ.[1]

لِنُرِيَكَ مِنْ ءَايَٰتِنَا ٱلْكُبْرَى ﴿٢٣﴾

24. ತಾವು ಫಿರ್‌ಔನನ ಬಳಿಗೆ ತೆರಳಿರಿ. ಖಂಡಿತವಾಗಿಯೂ ಅವನು ಅತಿಕ್ರಮಿಯಾಗಿರುವನು'.

ٱذْهَبْ إِلَىٰ فِرْعَوْنَ إِنَّهُۥ طَغَىٰ ﴿٢٤﴾

1 ಬೆತ್ತ ಮತ್ತು ಕೈ ಓರ್ವ ಪ್ರವಾದಿಯೆಂಬ ನೆಲೆಯಲ್ಲಿ ಅವರಿಗೆ ಅಲ್ಲಾಹು ನೀಡಿದ ಮಹಾನ್ ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ.

25. ಅವರು(ಮೂಸಾ) ಹೇಳಿದರು: ‘ಓ ನನ್ನ ರಬ್! ನನ್ನ ಹೃದಯವನ್ನು ವಿಶಾಲಗೊಳಿಸು.

قَالَ رَبِّ ٱشْرَحْ لِى صَدْرِى ﴿٢٥﴾

26. ನನಗೆ ನನ್ನ ಕಾರ್ಯವನ್ನು ಸುಲಭಗೊಳಿಸು.

وَيَسِّرْ لِىٓ أَمْرِى ﴿٢٦﴾

27-28. ಜನರು ನನ್ನ ಮಾತನ್ನು ಗ್ರಹಿಸುವುದಕ್ಕಾಗಿ ನನ್ನ ನಾಲಗೆಯ ಕಟ್ಟುಗಳನ್ನು ಬಿಚ್ಚಿಹಾಕು.[1]

وَٱحْلُلْ عُقْدَةً مِّن لِّسَانِى ﴿٢٧﴾ يَفْقَهُوا۟ قَوْلِى ﴿٢٨﴾

29. ನನಗೆ ನನ್ನ ಕುಟುಂಬದಲ್ಲಿ ಸೇರಿದ ಒಬ್ಬ ಸಹಾಯಕನನ್ನು ಮಾಡಿಕೊಡು.

وَٱجْعَل لِّى وَزِيرًا مِّنْ أَهْلِى ﴿٢٩﴾

30. ನನ್ನ ಸಹೋದರನಾದ ಹಾರೂನ್‌ನನ್ನು.

هَٰرُونَ أَخِى ﴿٣٠﴾

31. ಅವನ ಮೂಲಕ ನನ್ನ ಶಕ್ತಿಯನ್ನು ಬಲಪಡಿಸು.

ٱشْدُدْ بِهِۦٓ أَزْرِى ﴿٣١﴾

32. ನನ್ನ ಕಾರ್ಯದಲ್ಲಿ ಅವನನ್ನು ಸಹಭಾಗಿಯನ್ನಾಗಿ ಮಾಡು.

وَأَشْرِكْهُ فِىٓ أَمْرِى ﴿٣٢﴾

33. ನಾವು ನಿನ್ನ ಪರಿಪಾವನತೆಯನ್ನು ಧಾರಾಳವಾಗಿ ಕೊಂಡಾಡಲು.

كَىْ نُسَبِّحَكَ كَثِيرًا ﴿٣٣﴾

34. ಮತ್ತು ನಿನ್ನನ್ನು ಹೇರಳವಾಗಿ ಸ್ಮರಿಸಲು.

وَنَذْكُرَكَ كَثِيرًا ﴿٣٤﴾

35. ಖಂಡಿತವಾಗಿಯೂ ನೀನು ನಮ್ಮನ್ನು ಸದಾ ವೀಕ್ಷಿಸುವವನಾಗಿರುವೆ’.

إِنَّكَ كُنتَ بِنَا بَصِيرًا ﴿٣٥﴾

36. ಅಲ್ಲಾಹು ಹೇಳಿದನು: ‘ಓ ಮೂಸಾ! ತಾವು ಕೇಳಿರುವುದನ್ನು ತಮಗೆ ನೀಡಲಾಗಿದೆ.

قَالَ قَدْ أُوتِيتَ سُؤْلَكَ يَٰمُوسَىٰ ﴿٣٦﴾

37. ಇನ್ನೊಂದು ಸಂದರ್ಭದಲ್ಲೂ ನಾವು ತಮಗೆ ಅನುಗ್ರಹವನ್ನು ನೀಡಿದ್ದೆವು.

وَلَقَدْ مَنَنَّا عَلَيْكَ مَرَّةً أُخْرَىٰٓ ﴿٣٧﴾

38. ತಮ್ಮ ತಾಯಿಗೆ ಸಂದೇಶ ನೀಡಬೇಕಾದ ವಿಷಯವನ್ನು ನಾವು ಸಂದೇಶ ನೀಡಿದ ಸಂದರ್ಭ!

إِذْ أَوْحَيْنَآ إِلَىٰٓ أُمِّكَ مَا يُوحَىٰٓ ﴿٣٨﴾

39. “ನೀನು ಅವನನ್ನು (ಮಗುವನ್ನು) ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ಹಾಕು. ಆಗ

أَنِ ٱقْذِفِيهِ فِى ٱلتَّابُوتِ فَٱقْذِفِيهِ فِى ٱلْيَمِّ

1 ಪ್ರವಾದಿ ಮೂಸಾ(عَلَيْهِ السَّلَامُ)ರಿಗೆ ಮಾತಿನಲ್ಲಿ ತೊದಲಿಕೆ ಇತ್ತು. ಅದರ ನಿವಾರಣೆಗಾಗಿ ಅವರು ಪ್ರಾರ್ಥಿಸಿದರು.

فَلْيُلْقِهِ ٱلْيَمُّ بِٱلسَّاحِلِ يَأْخُذْهُ عَدُوٌّ لِّي
وَعَدُوٌّ لَّهُۥ ۚ وَأَلْقَيْتُ عَلَيْكَ مَحَبَّةً مِّنِّي
وَلِتُصْنَعَ عَلَىٰ عَيْنِيٓ ٣٩

ನದಿಯು ಆ ಪೆಟ್ಟಿಗೆಯನ್ನು ದಡಕ್ಕೆ ಒಯ್ಯುವುದು. ನನ್ನ ಮತ್ತು ಅವನ ಶತ್ರುವಾಗಿರುವವನು ಅವನನ್ನು ತೆಗೆದುಕೊಳ್ಳುವನು".[1] (ಓ ಮೂಸಾ!) ನನ್ನ ವತಿಯ ಪ್ರೀತಿಯನ್ನು ನಾನು ತಮ್ಮ ಮೇಲೆ ಇಟ್ಟಿರುವೆನು. ತಾವು ನನ್ನ ಮೇಲ್ನೋಟದಲ್ಲಿ ಬೆಳೆಯುವ ಸಲುವಾಗಿ.

إِذْ تَمْشِيٓ أُخْتُكَ فَتَقُولُ هَلْ أَدُلُّكُمْ
عَلَىٰ مَن يَكْفُلُهُۥ ۖ فَرَجَعْنَٰكَ إِلَىٰٓ أُمِّكَ
كَيْ تَقَرَّ عَيْنُهَا وَلَا تَحْزَنَ ۚ وَقَتَلْتَ نَفْسًا
فَنَجَّيْنَٰكَ مِنَ ٱلْغَمِّ وَفَتَنَّٰكَ فُتُونًا ۚ
فَلَبِثْتَ سِنِينَ فِيٓ أَهْلِ مَدْيَنَ ثُمَّ جِئْتَ
عَلَىٰ قَدَرٍ يَٰمُوسَىٰ ٤٠

**40.** ತಮ್ಮ ಸಹೋದರಿ ನಡೆಯುತ್ತಾ ಬಂದು 'ಇವನ (ಮಗುವಿನ) ಪರಿಪಾಲನೆಯನ್ನು ವಹಿಸಲು ಸಾಧ್ಯವಾಗುವ ಒಬ್ಬಾಕೆಯ ಕುರಿತು ನಾನು ನಿಮಗೆ ತಿಳಿಸಿಕೊಡಲೇ?' ಎಂದು ಕೇಳಿದ ಸಂದರ್ಭ. ತರುವಾಯ ಆಕೆಯ (ತಾಯಿಯ) ಕಣ್ಮನ ತಣಿಸಲು ಮತ್ತು ಆಕೆ ದುಃಖಿಸದಿರಲು ನಾವು ತಮ್ಮನ್ನು ತಮ್ಮ ತಾಯಿಯ ಬಳಿಗೆ ಮರಳಿಸಿದೆವು. ತಾವು ಒಬ್ಬ ವ್ಯಕ್ತಿಯನ್ನು ವಧಿಸಿದಾಗ (ಅದರ) ದುಃಖದಿಂದ ನಾವು ತಮ್ಮನ್ನು ರಕ್ಷಿಸಿದೆವು. ಅನೇಕ ಪರೀಕ್ಷೆಗಳ ಮೂಲಕ ನಾವು ತಮ್ಮನ್ನು ಪರೀಕ್ಷಿಸಿದೆವು. ತರುವಾಯ ತಾವು ಮದ್‌ಯನ್ ಜನರೊಂದಿಗೆ ಹಲವು ವರ್ಷ ವಾಸಿಸಿದಿರಿ. ತರುವಾಯ ಓ ಮೂಸಾ! (ನನ್ನ) ತೀರ್ಮಾನದಂತೆ ತಾವು ಬಂದಿರುವಿರಿ!

وَٱصْطَنَعْتُكَ لِنَفْسِي ٤١

**41.** ನನ್ನ ಸ್ವಂತ ವಿಷಯಕ್ಕಾಗಿ ನಾನು ತಮ್ಮನ್ನು ಬೆಳೆಸಿರುವೆನು.

ٱذْهَبْ أَنتَ وَأَخُوكَ بِـَٔايَٰتِي وَلَا تَنِيَا فِي
ذِكْرِي ٤٢

**42.** ತಾವು ಮತ್ತು ತಮ್ಮ ಸಹೋದರನು ನನ್ನ ದೃಷ್ಟಾಂತಗಳೊಂದಿಗೆ ಹೋಗಿರಿ. ನನ್ನನ್ನು ಸ್ಮರಿಸುವ ವಿಷಯದಲ್ಲಿ ನೀವಿಬ್ಬರೂ ಉದಾಸೀನತೆ ತೋರದಿರಿ.

---

1 ಇಸ್ರಾಈಲ್ ಜನಾಂಗದಲ್ಲಿ ಜನಿಸುವ ಎಲ್ಲ ಗಂಡುಮಕ್ಕಳನ್ನೂ ವಧಿಸಲು ಫಿರ್‌ಔನ್ (ಫರೋವ) ಆದೇಶ ಹೊರಡಿಸಿದ್ದನು. ಆದರೆ ಬನೂ ಇಸ್ರಾಈಲರ ವಿಮೋಚಕನೂ ಅಲ್ಲಾಹುವಿನ ಪ್ರವಾದಿಯೂ ಆದ ಮೂಸಾ(عَلَيْهِ ٱلسَّلَامُ) ಶತ್ರುವಿನ ಅರಮನೆಯಲ್ಲೇ ಬೆಳೆಯಬೇಕೆಂಬುದು ಅಲ್ಲಾಹುವಿನ ವಿಧಿಯಾಗಿತ್ತು. ಅದನ್ನು ಜಾರಿಗೊಳಿಸುವುದಕ್ಕಾಗಿ ಮೂಸಾ(عَلَيْهِ ٱلسَّلَامُ)ರನ್ನು ಹುಟ್ಟಿದ ತಕ್ಷಣ ಒಂದು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ತೇಲಿಬಿಡಲು ಅವರ ತಾಯಿಗೆ ಆದೇಶ ನೀಡಿದನು.

43. ನೀವಿಬ್ಬರೂ ಫಿರ್‌ಔನನ ಬಳಿಗೆ ಹೋಗಿರಿ. ಖಂಡಿತವಾಗಿಯೂ ಅವನು ಅತಿಕ್ರಮಿಯಾಗಿರುವನು.

ٱذْهَبَآ إِلَىٰ فِرْعَوْنَ إِنَّهُۥ طَغَىٰ ﴿٤٣﴾

44. ನೀವು ಅವನೊಂದಿಗೆ ಸೌಮ್ಯವಾದ ಮಾತನ್ನು ಹೇಳಿರಿ. ಒಂದು ವೇಳೆ ಅವನು ಚಿಂತಿಸಿ ಗ್ರಹಿಸಲೂ ಬಹುದು ಅಥವಾ ಭಯಪಡಲೂಬಹುದು'.[1]

فَقُولَا لَهُۥ قَوْلًا لَّيِّنًا لَّعَلَّهُۥ يَتَذَكَّرُ أَوْ يَخْشَىٰ ﴿٤٤﴾

45. ಅವರಿಬ್ಬರು ಹೇಳಿದರು: 'ಓ ನಮ್ಮ ರಬ್! ಅವನು (ಫಿರ್‌ಔನ್) ನಮ್ಮ ಮೇಲೆ ಮುಗಿಬೀಳುವನೋ ಅಥವಾ ಅತಿಕ್ರಮವೆಸಗುವನೋ ಎಂದು ನಾವು ಭಯಪಡುತ್ತಿರುವೆವು'.

قَالَا رَبَّنَآ إِنَّنَا نَخَافُ أَن يَفْرُطَ عَلَيْنَآ أَوْ أَن يَطْغَىٰ ﴿٤٥﴾

46. ಅವನು(ಅಲ್ಲಾಹು) ಹೇಳಿದನು: 'ನೀವು ಭಯಪಡದಿರಿ. ಖಂಡಿತವಾಗಿಯೂ ನಾನು ನಿಮ್ಮೊಂದಿಗಿರುವೆನು. ನಾನು ಆಲಿಸುತ್ತಲೂ, ನೋಡುತ್ತಲೂ ಇರುವೆನು

قَالَ لَا تَخَافَآ ۖ إِنَّنِى مَعَكُمَآ أَسْمَعُ وَأَرَىٰ ﴿٤٦﴾

47. ನೀವಿಬ್ಬರೂ ಅವನ ಬಳಿಗೆ ಹೋಗಿ ಹೇಳಿರಿ: 'ಖಂಡಿತವಾಗಿಯೂ ನಾವು ನಿನ್ನ ರಬ್‌ನ ಸಂದೇಶವಾಹಕರಾಗಿರುವೆವು. ಆದ್ದರಿಂದ ಇಸ್ರಾಈಲ್ ಸಂತತಿಯನ್ನು ನಮ್ಮೊಂದಿಗೆ ಕಳುಹಿಸು. ಅವರನ್ನು ಹಿಂಸಿಸದಿರು. ನಿನ್ನ ರಬ್‌ನ ಕಡೆಯ ದೃಷ್ಟಾಂತದೊಂದಿಗೆ ನಾವು ನಿನ್ನ ಬಳಿಗೆ ಬಂದಿರುವೆವು. ಸನ್ಮಾರ್ಗವನ್ನು ಅನುಸರಿಸಿದವರ ಮೇಲೆ ಶಾಂತಿಯಿರುವುದು.

فَأْتِيَاهُ فَقُولَآ إِنَّا رَسُولَا رَبِّكَ فَأَرْسِلْ مَعَنَا بَنِىٓ إِسْرَٰٓءِيلَ وَلَا تُعَذِّبْهُمْ ۖ قَدْ جِئْنَٰكَ بِـَٔايَةٍ مِّن رَّبِّكَ ۖ وَٱلسَّلَٰمُ عَلَىٰ مَنِ ٱتَّبَعَ ٱلْهُدَىٰٓ ﴿٤٧﴾

48. ನಿಷೇಧಿಸಿದವರಿಗೆ ಮತ್ತು ವಿಮುಖರಾದವರಿಗೆ ಶಿಕ್ಷೆಯಿರುವುದೆಂದು' ಖಂಡಿತವಾಗಿಯೂ ನಮಗೆ ದಿವ್ಯಸಂದೇಶ ನೀಡಲಾಗಿದೆ'.

إِنَّا قَدْ أُوحِىَ إِلَيْنَآ أَنَّ ٱلْعَذَابَ عَلَىٰ مَن كَذَّبَ وَتَوَلَّىٰ ﴿٤٨﴾

49. ಫಿರ್‌ಔನ್ ಕೇಳಿದನು: 'ಓ ಮೂಸಾ! ಹಾಗಾದರೆ ನಿಮ್ಮಿಬ್ಬರ ರಬ್ ಯಾರು?'

قَالَ فَمَن رَّبُّكُمَا يَٰمُوسَىٰ ﴿٤٩﴾

1 ಸತ್ಯದ ಧ್ವನಿಯು ಪ್ರಬಲವಾಗಬಹುದೇ ಎಂಬ ಭಯವು ಎಲ್ಲ ಸ್ವೇಚ್ಛಾಧಿಪತಿಗಳಿಗೂ ಇರುವಂತದ್ದೇ ಆಗಿದೆ.

50. ಅವರು (ಮೂಸಾ) ಹೇಳಿದರು: 'ಪ್ರತಿಯೊಂದು ವಸ್ತುವಿಗೂ ಅದರ ಸ್ವಭಾವ ಪ್ರಕೃತಿಯನ್ನು ನೀಡಿ ತರುವಾಯ (ಅದಕ್ಕೆ) ಮಾರ್ಗದರ್ಶನ ಮಾಡಿದವನಾರೋ[1] ಅವನೇ ನಮ್ಮ ರಬ್'.

قَالَ رَبُّنَا ٱلَّذِىٓ أَعْطَىٰ كُلَّ شَىْءٍ خَلْقَهُۥ ثُمَّ هَدَىٰ ﴿٥٠﴾

51. ಅವನು (ಫಿರ್‌ಔನ್) ಹೇಳಿದನು: 'ಹಾಗಾದರೆ ಗತ ತಲೆಮಾರುಗಳ ಸ್ಥಿತಿಯೇನು?'[2]

قَالَ فَمَا بَالُ ٱلْقُرُونِ ٱلْأُولَىٰ ﴿٥١﴾

52. ಅವರು ಹೇಳಿದರು: 'ಅವರ ಬಗ್ಗೆಯಿರುವ ಜ್ಞಾನವು ನನ್ನ ರಬ್‌ನ ಬಳಿ ಒಂದು ಗ್ರಂಥದಲ್ಲಿದೆ. ನನ್ನ ರಬ್ ಪ್ರಮಾದವೆಸಗಲಾರನು ಮತ್ತು ಅವನು (ಏನನ್ನೂ) ಮರೆಯಲಾರನು'.

قَالَ عِلْمُهَا عِندَ رَبِّى فِى كِتَٰبٍ ۖ لَّا يَضِلُّ رَبِّى وَلَا يَنسَى ﴿٥٢﴾

53. ಭೂಮಿಯನ್ನು ನಿಮಗೊಂದು ತೊಟ್ಟಿಲನ್ನಾಗಿ ಮಾಡಿಕೊಟ್ಟವನು, ಅದರಲ್ಲಿ ನಿಮಗೆ ದಾರಿಗಳನ್ನು ತೆರೆದುಕೊಟ್ಟವನು ಮತ್ತು ಆಕಾಶದಿಂದ (ಮಳೆ)ನೀರನ್ನು ಇಳಿಸಿಕೊಟ್ಟವನು. ತರುವಾಯ ಅದರ (ನೀರಿನ) ಮೂಲಕ ನಾವು (ಅಲ್ಲಾಹು) ವಿವಿಧ ತರಹದ ಸಸ್ಯಗಳಿಂದ ಜೋಡಿಗಳನ್ನು ಉತ್ಪಾದಿಸಿದೆವು.

ٱلَّذِى جَعَلَ لَكُمُ ٱلْأَرْضَ مَهْدًا وَسَلَكَ لَكُمْ فِيهَا سُبُلًا وَأَنزَلَ مِنَ ٱلسَّمَآءِ مَآءً فَأَخْرَجْنَا بِهِۦٓ أَزْوَٰجًا مِّن نَّبَاتٍ شَتَّىٰ ﴿٥٣﴾

54. ನೀವು ತಿನ್ನಿರಿ ಮತ್ತು ನಿಮ್ಮ ಜಾನುವಾರುಗಳನ್ನು ಮೇಯಿಸಿರಿ. ಬುದ್ಧಿವಂತರಿಗೆ ಖಂಡಿತವಾಗಿಯೂ ಅದರಲ್ಲಿ ಉತ್ಪಾದಿಸಿದೆ.

كُلُوا۟ وَٱرْعَوْا۟ أَنْعَٰمَكُمْ ۗ إِنَّ فِى ذَٰلِكَ لَءَايَٰتٍ لِّأُو۟لِى ٱلنُّهَىٰ ﴿٥٤﴾

55. ನಾವು ನಿಮ್ಮನ್ನು ಅದರಿಂದಲೇ (ಭೂಮಿಯಿಂದಲೇ) ಸೃಷ್ಟಿಸಿರುವೆವು, ನಿಮ್ಮನ್ನು ಅದರೆಡೆಗೇ ಮರಳಿಸುವೆವು ಮತ್ತು ಅದರಿಂದಲೇ ನಿಮ್ಮನ್ನು ಪುನಃ ಹೊರತರುವೆವು.

۞ مِنْهَا خَلَقْنَٰكُمْ وَفِيهَا نُعِيدُكُمْ وَمِنْهَا نُخْرِجُكُمْ تَارَةً أُخْرَىٰ ﴿٥٥﴾

56. ನಾವು ಅವನಿಗೆ (ಫಿರ್‌ಔನ್‌ಗೆ) ನಮ್ಮ ದೃಷ್ಟಾಂತಗಳನ್ನು ಒಂದೊಂದಾಗಿ

وَلَقَدْ أَرَيْنَٰهُ ءَايَٰتِنَا كُلَّهَا فَكَذَّبَ وَأَبَىٰ ﴿٥٦﴾

1 ಪರಮಾಣುವಿನಿಂದ ತೊಡಗಿ ಬೃಹತ್ ನಕ್ಷತ್ರಪುಂಜಗಳವರೆಗೆ ಯಾವುದೇ ಪದಾರ್ಥವೂ ಕಟ್ಟುನಿಟ್ಟಾದ ನಿಯಮಗಳನ್ನು ಅನುಸರಿಸಿ ಕಾರ್ಯನಿರ್ವಹಿಸುತ್ತದೆ. ಪ್ರಕೃತಿಯ ಪ್ರತಿಯೊಂದು ಅಂಶವೂ ಅನುಪಮ ಮಾರ್ಗದರ್ಶಿಯ ಅಸ್ತಿತ್ವನ್ನು ಸಾಬೀತುಪಡಿಸುತ್ತದೆ.

2 ಸಂಪ್ರದಾಯವಾದದ ಅದೇ ತುರುಪು ಎಲೆಯನ್ನು ಫಿರ್‌ಔನ್ ಇಲ್ಲಿ ಬಳಸುತ್ತಿದ್ದಾನೆ. ಹಾಗಾದರೆ ನಮ್ಮ ಪೂರ್ವಿಕರೆಲ್ಲರೂ ದಾರಿಗೆಟ್ಟವರೇ? ಎಂಬ ಹಳೆಯ ರಾಗ.

ತೋರಿಸಿಕೊಟ್ಟೆವು. ಆದರೆ ಅವನು ನಿಷೇಧಿಸಿದನು ಮತ್ತು ನಿರಾಕರಿಸಿದನು.

قَالَ أَجِئۡتَنَا لِتُخۡرِجَنَا مِنۡ أَرۡضِنَا بِسِحۡرِكَ يَٰمُوسَىٰ ٥٧

57. ಅವನು ಹೇಳಿದನು: 'ಓ ಮೂಸಾ! ನೀನು ನಿನ್ನ ಮಾಂತ್ರಿಕತೆಯನ್ನು ಬಳಸಿ ನಮ್ಮನ್ನು ನಮ್ಮ ದೇಶದಿಂದ ಹೊರಗಟ್ಟುವ ಸಲುವಾಗಿ ನಮ್ಮ ಬಳಿಗೆ ಬಂದಿರುವೆಯಾ?

فَلَنَأۡتِيَنَّكَ بِسِحۡرٖ مِّثۡلِهِۦ فَٱجۡعَلۡ بَيۡنَنَا وَبَيۡنَكَ مَوۡعِدٗا لَّا نُخۡلِفُهُۥ نَحۡنُ وَلَآ أَنتَ مَكَانٗا سُوٗى ٥٨

58. ಹಾಗಾದರೆ ಇದಕ್ಕೆ ಸಮಾನವಾಗಿರುವ ಮಾಂತ್ರಿಕತೆಯನ್ನು ನಾವೂ ನಿನ್ನ ಬಳಿಗೆ ತರುವೆವು. ಆದ್ದರಿಂದ ನೀನು ನಮ್ಮ ಮತ್ತು ನಿನ್ನ ಮಧ್ಯೆ ಒಂದು ಅವಧಿಯನ್ನು ನಿಶ್ಚಯಿಸು. ಅದನ್ನು ನಾವಾಗಲಿ ನೀನಾಗಲಿ ಉಲ್ಲಂಘಿಸಬಾರದು. ಅದು ಮಧ್ಯಮವಾಗಿರುವ ಒಂದು ಸ್ಥಳದಲ್ಲಾಗಿರಲಿ'.[1]

قَالَ مَوۡعِدُكُمۡ يَوۡمُ ٱلزِّينَةِ وَأَن يُحۡشَرَ ٱلنَّاسُ ضُحٗى ٥٩

59. ಅವರು ಹೇಳಿದರು: 'ನಿಮಗಿರುವ ಅವಧಿಯು ಉತ್ಸವ ದಿನವಾಗಿದೆ.[2] (ಅಂದು) ಪೂರ್ವಾಹ್ನ ಜನರನ್ನು ಒಟ್ಟುಗೂಡಿಸಲಾಗಲಿ'.

فَتَوَلَّىٰ فِرۡعَوۡنُ فَجَمَعَ كَيۡدَهُۥ ثُمَّ أَتَىٰ ٦٠

60. ತರುವಾಯ ಫಿರ್‌ಔನ್ ನಿರ್ಗಮಿಸಿದನು. ತನ್ನ ತಂತ್ರಗಳನ್ನು ಒಟ್ಟುಗೂಡಿಸಿದನು. ನಂತರ ಅವನು (ನಿಶ್ಚಿತ ಸಮಯಕ್ಕೆ) ಬಂದನು.

قَالَ لَهُم مُّوسَىٰ وَيۡلَكُمۡ لَا تَفۡتَرُواْ عَلَى ٱللَّهِ كَذِبٗا فَيُسۡحِتَكُم بِعَذَابٖۖ وَقَدۡ خَابَ مَنِ ٱفۡتَرَىٰ ٦١

61. ಮೂಸಾ ಅವರೊಂದಿಗೆ ಹೇಳಿದರು: 'ನಿಮಗೆ ವಿನಾಶ ಕಾದಿದೆ! ನೀವು ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆಯದಿರಿ. ಹಾಗೆ ಮಾಡಿದರೆ ಯಾವುದಾದರೂ ಒಂದು ಶಿಕ್ಷೆಯ ಮೂಲಕ ಅವನು ನಿಮ್ಮನ್ನು ನಾಶ ಮಾಡುವನು. ಸುಳ್ಳನ್ನು ಹೆಣೆಯುವವನಾರೋ ಅವನು ಖಂಡಿತವಾಗಿಯೂ ಪರಾಭವಗೊಂಡಿರುವನು'.

---

1 ಸಿವಾ ಮತ್ತು ಸುವಾ ಎಂಬ ವಿಭಿನ್ನ ಪಾರಾಯಣಗಳಿವೆ. ಮಕಾನನ್ ಸಿವಾ ಎಂದಾದರೆ ಬೇರೆ ಸ್ಥಳ ಎಂದರ್ಥ. ಮಕಾನನ್ ಸುವಾ ಎಂದಾದರೆ ಎರಡು ಪಂಗಡಕ್ಕೂ ಒಂದು ವಿಧ ಅನುಕೂಲಕರವಾದ ಸ್ಥಳ, ಸಮತಟ್ಟಾದ ಪ್ರದೇಶ, ಎರಡು ವಿಭಾಗಕ್ಕೂ ಒಪ್ಪಿಗೆಯಾದ ಸ್ಥಳ ಎಂದರ್ಥ.

2 ಒಂದೇ ಸಂದರ್ಭದಲ್ಲಿ ಸಾಧ್ಯವಾದಷ್ಟೂ ಜನರಿಗೆ ಮಾಂತ್ರಿಕತೆಯ ವಿರುದ್ಧ ಅಲ್ಲಾಹುವಿನ ದೃಷ್ಟಾಂತದ ಶಕ್ತಿಯನ್ನು ತೋರಿಸಿಕೊಡಬಹುದೆಂಬ ಉದ್ದೇಶದಿಂದ ನಾಡಹಬ್ಬದ ದಿನವನ್ನು ಅವರು ಆರಿಸಿಕೊಂಡರು.

فَتَنَٰزَعُوٓاْ أَمۡرَهُم بَيۡنَهُمۡ وَأَسَرُّواْ ٱلنَّجۡوَىٰ ٦٢

62. (ಇದನ್ನು ಕೇಳಿದಾಗ) ಅವರು (ಜನರು) ಪರಸ್ಪರ ತಮ್ಮ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದರು.[1]ಅವರು ರಹಸ್ಯ ಸಂಭಾಷಣೆ ಮಾಡತೊಡಗಿದರು.

قَالُوٓاْ إِنۡ هَٰذَٰنِ لَسَٰحِرَٰنِ يُرِيدَانِ أَن يُخۡرِجَاكُم مِّنۡ أَرۡضِكُم بِسِحۡرِهِمَا وَيَذۡهَبَا بِطَرِيقَتِكُمُ ٱلۡمُثۡلَىٰ ٦٣

63. (ತರುವಾಯ) ಅವರು ಹೇಳಿದರು: 'ಖಂಡಿತವಾಗಿಯೂ ಇವರಿಬ್ಬರೂ ಮಾಂತ್ರಿಕರಾಗಿರುವರು. ಇವರು ತಮ್ಮ ಮಾಂತ್ರಿಕತೆಯಿಂದ ನಿಮ್ಮನ್ನು ನಿಮ್ಮ ದೇಶದಿಂದ ಹೊರಗಟ್ಟಲು ಮತ್ತು ನಿಮ್ಮ ಮಾದರಿಯೋಗ್ಯವಾದ ಸಂಪ್ರದಾಯವನ್ನು ನಾಶಗೊಳಿಸಲು ಬಯಸುತ್ತಿರುವರು.

فَأَجۡمِعُواْ كَيۡدَكُمۡ ثُمَّ ٱئۡتُواْ صَفّٗاۚ وَقَدۡ أَفۡلَحَ ٱلۡيَوۡمَ مَنِ ٱسۡتَعۡلَىٰ ٦٤

64. ಆದ್ದರಿಂದ ನೀವು ನಿಮ್ಮ ತಂತ್ರವನ್ನು ಒಕ್ಕೊರಲಿನಿಂದ ನಿರ್ಧರಿಸಿರಿ. ತರುವಾಯ ಒಂದೇ ಸಾಲಿನಲ್ಲಿ ಬನ್ನಿರಿ. ಮೇಲುಗೈ ಸಾಧಿಸಿದವರೇ ಇಂದು ಜಯಗಳಿಸುವರು'.

قَالُواْ يَٰمُوسَىٰٓ إِمَّآ أَن تُلۡقِيَ وَإِمَّآ أَن نَّكُونَ أَوَّلَ مَنۡ أَلۡقَىٰ ٦٥

65. ಅವರು(ಮಾಂತ್ರಿಕರು) ಹೇಳಿದರು: 'ಓ ಮೂಸಾ! ಒಂದೋ ನೀನು ಹಾಕು ಅಥವಾ ಮೊದಲು ಹಾಕುವವರು ನಾವಾಗುವೆವು'.

قَالَ بَلۡ أَلۡقُواْۖ فَإِذَا حِبَالُهُمۡ وَعِصِيُّهُمۡ يُخَيَّلُ إِلَيۡهِ مِن سِحۡرِهِمۡ أَنَّهَا تَسۡعَىٰ ٦٦

66. ಮೂಸಾ ಹೇಳಿದರು: 'ಅಲ್ಲ, ನೀವು ಹಾಕಿರಿ'. ಅಗೋ! ಅವರ ಮಾಂತ್ರಿಕತೆಯಿಂದಾಗಿ ಅವರ ಹಗ್ಗಗಳು ಮತ್ತು ಬೆತ್ತಗಳು ಚಲಿಸುತ್ತಿರುವುದಾಗಿ ಅವರಿಗೆ ಭಾಸವಾಯಿತು.

فَأَوۡجَسَ فِي نَفۡسِهِۦ خِيفَةٗ مُّوسَىٰ ٦٧

67. ಆಗ ಮೂಸಾರಿಗೆ ಮನದಲ್ಲಿ ಭಯ ಮೂಡಿತು.

قُلۡنَا لَا تَخَفۡ إِنَّكَ أَنتَ ٱلۡأَعۡلَىٰ ٦٨

68. ನಾವು ಹೇಳಿದೆವು: 'ಭಯಪಡದಿರಿ. ಖಂಡಿತವಾಗಿಯೂ ಮೇಲುಗೈ ಸಾಧಿಸುವವರು ತಾವೇ ಆಗಿರುವಿರಿ.

وَأَلۡقِ مَا فِي يَمِينِكَ تَلۡقَفۡ مَا صَنَعُوٓاْۖ إِنَّمَا صَنَعُواْ كَيۡدُ سَٰحِرٖۖ وَلَا يُفۡلِحُ ٱلسَّاحِرُ حَيۡثُ أَتَىٰ ٦٩

69. ತಾವು ತಮ್ಮ ಬಲಗೈಯ್ಯಲ್ಲಿರುವುದನ್ನು (ಬೆತ್ತವನ್ನು) ಹಾಕಿರಿ. ಅವರು ನಿರ್ಮಿಸಿದ್ದೆಲ್ಲವನ್ನೂ ಅದು ನುಂಗುವುದು'. ಅವರು ಮಾಡಿರುವುದು ಮಾಂತ್ರಿಕನ ತಂತ್ರ

1 ಪ್ರವಾದಿ ಮೂಸಾ(عَلَيْهِ السَّلَامُ)ರವರ ಎಚ್ಚರಿಕೆಯನ್ನು ಆಲಿಸಿದಾಗ ಹಲವರಿಗೆ ಅವರನ್ನು ವಿರೋಧಿಸುವುದರ ಕುರಿತು ಭಿನ್ನಮತವುಂಟಾಯಿತು. ಆದರೆ ದುರಭಿಮಾನವು ಅವರನ್ನು ಒಂದಾಗಿಸಿತು.

ಮಾತ್ರವಾಗಿದೆ. ಎಲ್ಲೇ ಹೋದರೂ ಮಾಂತ್ರಿಕನು ಯಶಸ್ಸು ಗಳಿಸಲಾರನು.

70. ಆಗ ಮಾಂತ್ರಿಕರು ಸಾಷ್ಟಾಂಗ ಬಿದ್ದರು. ಅವರು ಹೇಳಿದರು: 'ನಾವು ಹಾರೂನ್ ಮತ್ತು ಮೂಸಾರ ರಬ್‌ನಲ್ಲಿ ವಿಶ್ವಾಸವಿಟ್ಟಿರುವೆವು'.

فَأُلْقِيَ ٱلسَّحَرَةُ سُجَّدًا قَالُوٓاْ ءَامَنَّا بِرَبِّ هَٰرُونَ وَمُوسَىٰ ﴿٧٠﴾

71. ಅವನು ಹೇಳಿದನು: 'ನಾನು ನಿಮಗೆ ಅನುಮತಿ ಕೊಡುವ ಮೊದಲೇ ನೀವು ಅವನಲ್ಲಿ ವಿಶ್ವಾಸವಿಟ್ಟಿರಾ? ಖಂಡಿತವಾಗಿಯೂ ಅವನು ನಿಮಗೆ ಮಾಂತ್ರಿಕತೆಯನ್ನು ಕಲಿಸಿಕೊಟ್ಟ ನಿಮ್ಮ ನಾಯಕನಾಗಿರುವನು. ಆದ್ದರಿಂದ ಖಂಡಿತವಾಗಿಯೂ ನಾನು ನಿಮ್ಮ ಕೈಕಾಲುಗಳನ್ನು ವಿರುದ್ಧ ಪಾರ್ಶ್ವಗಳಿಂದ ಕತ್ತರಿಸುವೆನು ಮತ್ತು ಖರ್ಜೂರ ಮರದ ಕಾಂಡದಲ್ಲಿ ನಿಮ್ಮನ್ನು ಶಿಲುಬೆಗೇರಿಸುವೆನು. ನಮ್ಮ ಪೈಕಿ ಅತಿಕಠಿಣವಾದ ಮತ್ತು ದೀರ್ಘಕಾಲ ಅವಶೇಷಿಸುವ ಶಿಕ್ಷೆಯನ್ನು ನೀಡುವವನು ಯಾರೆಂದು[1] ಖಂಡಿತವಾಗಿಯೂ ನೀವು ಅರಿಯಲಿರುವಿರಿ'.

قَالَ ءَامَنتُمْ لَهُۥ قَبْلَ أَنْ ءَاذَنَ لَكُمْ ۖ إِنَّهُۥ لَكَبِيرُكُمُ ٱلَّذِى عَلَّمَكُمُ ٱلسِّحْرَ ۖ فَلَأُقَطِّعَنَّ أَيْدِيَكُمْ وَأَرْجُلَكُم مِّنْ خِلَٰفٍ وَلَأُصَلِّبَنَّكُمْ فِى جُذُوعِ ٱلنَّخْلِ وَلَتَعْلَمُنَّ أَيُّنَآ أَشَدُّ عَذَابًا وَأَبْقَىٰ ﴿٧١﴾

72. ಅವರು ಹೇಳಿದರು: 'ನಮ್ಮ ಬಳಿಗೆ ಬಂದಿರುವ ಪ್ರತ್ಯಕ್ಷ ಪುರಾವೆಗಳಿಗಿಂತಲೂ, ನಮ್ಮನ್ನು ಸೃಷ್ಟಿಸಿದವನಿಗಿಂತಲೂ ಹೆಚ್ಚಿನ ಪ್ರಾಶಸ್ತ್ಯವನ್ನು ನಾವು ನಿನಗೆಂದೂ ನೀಡಲಾರೆವು. ಆದ್ದರಿಂದ ನೀನು ಏನನ್ನು ವಿಧಿಸುವಿಯೋ ಅದನ್ನು ವಿಧಿಸು. ನಿನಗೆ ವಿಧಿಸಲು ಸಾಧ್ಯವಾಗುವುದು ಇಹಲೋಕ ಜೀವನದಲ್ಲಿ ಮಾತ್ರವಾಗಿದೆ.

قَالُواْ لَن نُّؤْثِرَكَ عَلَىٰ مَا جَآءَنَا مِنَ ٱلْبَيِّنَٰتِ وَٱلَّذِى فَطَرَنَا ۖ فَٱقْضِ مَآ أَنتَ قَاضٍ ۖ إِنَّمَا تَقْضِى هَٰذِهِ ٱلْحَيَوٰةَ ٱلدُّنْيَآ ﴿٧٢﴾

73. ನಾವು ಮಾಡಿದ ಪಾಪಗಳನ್ನೂ, ನೀನು ನಮ್ಮಿಂದ ಬಲಾತ್ಕಾರವಾಗಿ ಮಾಡಿಸಿದ ಮಾಂತ್ರಿಕತೆಯನ್ನೂ ಅವನು ನಮಗೆ ಕ್ಷಮಿಸುವ ಸಲುವಾಗಿ ನಾವು ನಮ್ಮ ರಬ್‌ನಲ್ಲಿ

إِنَّآ ءَامَنَّا بِرَبِّنَا لِيَغْفِرَ لَنَا خَطَٰيَٰنَا وَمَآ أَكْرَهْتَنَا عَلَيْهِ مِنَ ٱلسِّحْرِ ۗ وَٱللَّهُ خَيْرٌ وَأَبْقَىٰٓ ﴿٧٣﴾

1 ಅತಿ ಕಠೋರವಾದ ಶಿಕ್ಷೆಯನ್ನು ನೀಡುವ ಸಾಮರ್ಥ್ಯವಿರುವುದು ನನಗೋ, ಮೂಸಾನಿಗೋ ಅಥವಾ ಮೂಸಾನ ಆರಾಧ್ಯನಿಗೋ ಎಂಬುದನ್ನು ನಿಮಗೆ ತಿಳಿಯಬಹುದು.

ವಿಶ್ವಾಸವಿಟ್ಟಿರುವೆವು. ಅಲ್ಲಾಹು ಅತ್ಯುತ್ತಮನೂ, ಶಾಶ್ವತವಾಗಿ ಅಸ್ತಿತ್ವದಲ್ಲಿರುವವನೂ ಆಗಿರುವನು.[1]

74. ಖಂಡಿತವಾಗಿಯೂ ಯಾರು ತನ್ನ ರಬ್‌ನ ಬಳಿಗೆ ಅಪರಾಧಿಯಾಗಿ ಬರುವನೋ ಅವನಿಗಿರುವುದು ನರಕಾಗ್ನಿಯಾಗಿದೆ. ಅವನು ಅದರಲ್ಲಿ ಮರಣಹೊಂದುವುದೋ ಜೀವಿಸುವುದೋ ಇಲ್ಲ.

إِنَّهُۥ مَن يَأْتِ رَبَّهُۥ مُجْرِمًا فَإِنَّ لَهُۥ جَهَنَّمَ لَا يَمُوتُ فِيهَا وَلَا يَحْيَىٰ ﴿٧٤﴾

75. ಯಾರು ಅವನ ಬಳಿಗೆ ಸತ್ಯವಿಶ್ವಾಸಿಯಾಗಿಯೂ, ಸತ್ಕರ್ಮವೆಸಗಿದವನಾಗಿಯೂ ಬರುವನೋ ಅಂತಹವರಿಗೆ ಉನ್ನತ ಪದವಿಗಳಿರುವುವು.

وَمَن يَأْتِهِۦ مُؤْمِنًا قَدْ عَمِلَ ٱلصَّـٰلِحَـٰتِ فَأُو۟لَـٰٓئِكَ لَهُمُ ٱلدَّرَجَـٰتُ ٱلْعُلَىٰ ﴿٧٥﴾

76. ತಳಭಾಗದಿಂದ ನದಿಗಳು ಹರಿಯುವ ಶಾಶ್ವತವಾಗಿರುವ ಸ್ವರ್ಗೋದ್ಯಾನಗಳು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅದು ಪರಿಶುದ್ಧಿ ಗಳಿಸಿದವರಿಗಿರುವ ಪ್ರತಿಫಲವಾಗಿದೆ.

جَنَّـٰتُ عَدْنٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَا ۚ وَذَٰلِكَ جَزَآءُ مَن تَزَكَّىٰ ﴿٧٦﴾

77. ನಾವು ಮೂಸಾರಿಗೆ ದಿವ್ಯಸಂದೇಶವನ್ನು ನೀಡಿದೆವು: 'ರಾತ್ರಿ ವೇಳೆಯಲ್ಲಿ ನನ್ನ ದಾಸರೊಂದಿಗೆ ಹೊರಡಿರಿ. ತರುವಾಯ ಅವರಿಗೆ ಸಮುದ್ರದ ಮೂಲಕ ಒಣಗಿದ ಹಾದಿಯೊಂದನ್ನು[2] ಮಾಡಿಕೊಡಿರಿ. (ಶತ್ರುಗಳು) ಹಿಂಬಾಲಿಸಿ ಬರುವರೆಂದು ತಾವು ಭಯಪಡದಿರಿ. ತಾವು (ಏನನ್ನೂ) ಭಯಪಡದಿರಿ'.

وَلَقَدْ أَوْحَيْنَآ إِلَىٰ مُوسَىٰٓ أَنْ أَسْرِ بِعِبَادِى فَٱضْرِبْ لَهُمْ طَرِيقًا فِى ٱلْبَحْرِ يَبَسًا لَّا تَخَـٰفُ دَرَكًا وَلَا تَخْشَىٰ ﴿٧٧﴾

78. ಆಗ ಫಿರ್‌ಔನ್ ತನ್ನ ಸೈನ್ಯದೊಂದಿಗೆ ಅವರನ್ನು ಹಿಂಬಾಲಿಸಿದನು. ಆಗ ಸಮುದ್ರದಿಂದ ಅವರನ್ನು ಬಾಧಿಸಿದ್ದೆಲ್ಲವೂ ಅವರನ್ನು ಬಾಧಿಸಿದವು.

فَأَتْبَعَهُمْ فِرْعَوْنُ بِجُنُودِهِۦ فَغَشِيَهُم مِّنَ ٱلْيَمِّ مَا غَشِيَهُمْ ﴿٧٨﴾

1 ಅತ್ಯುತ್ತಮವಾದ ಪ್ರತಿಫಲ ನೀಡುವವನು ಮತ್ತು ಶಾಶ್ವತವಾಗಿರುವ ಶಿಕ್ಷೆ ನೀಡುವವನು ಎಂದೂ ಅರ್ಥೈಸಬಹುದಾಗಿದೆ.

2 ನೀರು ಎರಡು ಕಡೆಗೆ ಸರಿದು ನಡುವೆ ಉಂಟಾದ ಒಣಗಿದ ಹಾದಿ.

**79.** ಫಿರ್‌ಔನ್ ತನ್ನ ಜನರನ್ನು ಪಥಭ್ರಷ್ಟಗೊಳಿಸಿದನು. ಅವನು ಅವರನ್ನು ಸನ್ಮಾರ್ಗದೆಡೆಗೆ ಮುನ್ನಡೆಸಲಿಲ್ಲ.

وَأَضَلَّ فِرۡعَوۡنُ قَوۡمَهُۥ وَمَا هَدَىٰ ٧٩

**80.** ಓ ಇಸ್ರಾಈಲ್ ಸಂತತಿಗಳೇ! ನಾವು ನಿಮ್ಮನ್ನು ನಿಮ್ಮ ಶತ್ರುವಿನಿಂದ ರಕ್ಷಿಸಿದೆವು. ತೂರ್ ಪರ್ವತದ ಬಲಭಾಗವನ್ನು ನಾವು ನಿಮಗೆ ವಾಗ್ದಾನ ಮಾಡಿದೆವು.[1] ಮನ್ನಃ ಮತ್ತು ಸಲ್ವಾವನ್ನು ನಾವು ನಿಮಗೆ ಇಳಿಸಿಕೊಟ್ಟೆವು.

يَٰبَنِيٓ إِسۡرَٰٓءِيلَ قَدۡ أَنجَيۡنَٰكُم مِّنۡ
عَدُوِّكُمۡ وَوَٰعَدۡنَٰكُمۡ جَانِبَ
ٱلطُّورِ ٱلۡأَيۡمَنَ وَنَزَّلۡنَا عَلَيۡكُمُ ٱلۡمَنَّ
وَٱلسَّلۡوَىٰ ٨٠

**81.** ನಾವು ನಿಮಗೆ ಒದಗಿಸಿರುವ ಉತ್ತಮವಾದ ವಸ್ತುಗಳಿಂದ ತಿನ್ನಿರಿ. ಆದರೆ ಅದರಲ್ಲಿ ಮಿತಿಮೀರದಿರಿ. (ಮಿತಿಮೀರಿದರೆ) ನನ್ನ ಕ್ರೋಧವು ನಿಮ್ಮ ಮೇಲೆ ಎರಗುವುದು. ಯಾರ ಮೇಲೆ ನನ್ನ ಕ್ರೋಧವು ಎರಗುವುದೋ ಅವನು ನಾಶವಾಗಿ ಹೋಗುವನು.

كُلُواْ مِن طَيِّبَٰتِ مَا رَزَقۡنَٰكُمۡ وَلَا
تَطۡغَوۡاْ فِيهِ فَيَحِلَّ عَلَيۡكُمۡ غَضَبِيۖ وَمَن
يَحۡلِلۡ عَلَيۡهِ غَضَبِي فَقَدۡ هَوَىٰ ٨١

**82.** ಪಶ್ಚಾತ್ತಾಪಪಡುವವರಿಗೆ, ವಿಶ್ವಾಸವಿಡುವವರಿಗೆ ಮತ್ತು ಸತ್ಕರ್ಮವೆಸಗುವವರಿಗೆ, ತರುವಾಯ ಸನ್ಮಾರ್ಗದಲ್ಲಿ ದೃಢವಾಗಿ ನೆಲೆನಿಲ್ಲುವವರಿಗೆ ಖಂಡಿತವಾಗಿಯೂ ನಾನು ಅತ್ಯಧಿಕವಾಗಿ ಕ್ಷಮಿಸುವೆನು.

وَإِنِّي لَغَفَّارٞ لِّمَن تَابَ وَءَامَنَ وَعَمِلَ
صَٰلِحٗا ثُمَّ ٱهۡتَدَىٰ ٨٢

**83.** (ಅಲ್ಲಾಹು ಕೇಳಿದನು): ‘ಓ ಮೂಸಾ! ತಾವು ತಮ್ಮ ಜನರನ್ನು ಬಿಟ್ಟು ಆತುರದಿಂದ ಬರಲು ಕಾರಣವೇನು?’

۞ وَمَآ أَعۡجَلَكَ عَن قَوۡمِكَ يَٰمُوسَىٰ ٨٣

**84.** ಅವರು ಹೇಳಿದರು: ‘ಅವರು ನನ್ನ ಹಿಂದೆಯೇ ಇರುವರು. ಓ ನನ್ನ ರಬ್! ನೀನು ಸಂತೃಪ್ತನಾಗುವ ಸಲುವಾಗಿ ನಾನು ನಿನ್ನ ಬಳಿಗೆ ಆತುರಪಟ್ಟು ಬಂದಿರುವೆನು’.

قَالَ هُمۡ أُوْلَآءِ عَلَىٰٓ أَثَرِي وَعَجِلۡتُ إِلَيۡكَ
رَبِّ لِتَرۡضَىٰ ٨٤

**85.** ಅವನು(ಅಲ್ಲಾಹು) ಹೇಳಿದನು: ‘ಆದರೆ ತಾವು ಬಂದ ಬಳಿಕ ನಾವು ತಮ್ಮ ಜನರನ್ನು ಪರೀಕ್ಷಿಸಿದೆವು. ಸಾಮಿರೀ ಅವರನ್ನು ಪಥಭ್ರಷ್ಟಗೊಳಿಸಿದನು’.

قَالَ فَإِنَّا قَدۡ فَتَنَّا قَوۡمَكَ مِنۢ بَعۡدِكَ
وَأَضَلَّهُمُ ٱلسَّامِرِيُّ ٨٥

---

1 ಅಲ್ಲಾಹುವಿನ ವಿಧಿ ನಿಷೇಧಗಳನ್ನು ಸ್ವೀಕರಿಸಿ ಸೀನಾ ಕಣಿವೆಯಲ್ಲಿ ಜೀವಿಸಲು ಅವರಿಗೆ ವ್ಯವಸ್ಥೆ ಮಾಡಿಕೊಟ್ಟನು.

86. ಆಗ ಮೂಸಾ ತಮ್ಮ ಜನರ ಬಳಿಗೆ ಕುಪಿತರಾಗಿ ಮತ್ತು ದುಃಖಿತರಾಗಿ ಮರಳಿದರು. ಆತ ಹೇಳಿದರು: 'ಓ ನನ್ನ ಜನರೇ! ನಿಮ್ಮ ರಬ್ ನಿಮಗೊಂದು ಉತ್ತಮವಾದ ವಾಗ್ದಾನವನ್ನು ನೀಡಿಲ್ಲವೇ? ಆದರೂ ನಿಮಗೆ ಅವಧಿಯು ದೀರ್ಘವಾಗಿ ಹೋಯಿತೇ? ಅಥವಾ ನಿಮ್ಮ ರಬ್‌ನ ವತಿಯ ಕ್ರೋಧವು ನಿಮ್ಮ ಮೇಲೆ ಎರಗಲೆಂದು ಆಶಿಸಿ ನೀವು ನನ್ನೊಂದಿಗಿನ ಕರಾರನ್ನು ಉಲ್ಲಂಘಿಸಿದಿರಾ?'

فَرَجَعَ مُوسَىٰٓ إِلَىٰ قَوۡمِهِۦ غَضۡبَٰنَ أَسِفٗاۚ قَالَ يَٰقَوۡمِ أَلَمۡ يَعِدۡكُمۡ رَبُّكُمۡ وَعۡدًا حَسَنًاۚ أَفَطَالَ عَلَيۡكُمُ ٱلۡعَهۡدُ أَمۡ أَرَدتُّمۡ أَن يَحِلَّ عَلَيۡكُمۡ غَضَبٞ مِّن رَّبِّكُمۡ فَأَخۡلَفۡتُم مَّوۡعِدِي ٨٦

87. ಅವರು ಹೇಳಿದರು: 'ನಾವು ನಮ್ಮಿಷ್ಟ ಪ್ರಕಾರ ತಮ್ಮೊಂದಿಗಿನ ಕರಾರನ್ನು ಉಲ್ಲಂಘಿಸಿಲ್ಲ. ಆದರೆ ಆ ಜನತೆಯ ಆಭರಣಗಳ ಹೊರೆಗಳನ್ನು ನಮ್ಮ ಮೇಲೆ ಹೊರಿಸಲಾಗಿತ್ತು.(1) ತರುವಾಯ ನಾವು ಅದನ್ನು (ಬೆಂಕಿಗೆ) ಎಸೆದೆವು. ಆಗ ಸಾಮಿರೀ ಕೂಡ ಅದೇ ರೀತಿ ಅದನ್ನು (ಬೆಂಕಿಗೆ) ಎಸೆದನು.(2)

قَالُواْ مَآ أَخۡلَفۡنَا مَوۡعِدَكَ بِمَلۡكِنَا وَلَٰكِنَّا حُمِّلۡنَآ أَوۡزَارٗا مِّن زِينَةِ ٱلۡقَوۡمِ فَقَذَفۡنَٰهَا فَكَذَٰلِكَ أَلۡقَى ٱلسَّامِرِيُّ ٨٧

88. ತರುವಾಯ ಅವನು ಅವರಿಗೆ (ಅದರಿಂದ) ಹೂಂಕರಿಸುವ ಕರುವಿನ ಮೂರ್ತಿಯನ್ನು ನಿರ್ಮಿಸಿ ಕೊಟ್ಟನು.(3) ಆಗ ಅವರು (ಪರಸ್ಪರ) ಹೇಳಿದರು: 'ಇದೇ ನಿಮ್ಮ ದೇವರು ಮತ್ತು ಮೂಸಾರ ದೇವರು. ಆದರೆ ಅವರು (ಮೂಸಾ) ಮರೆತುಬಿಟ್ಟಿರುವರು'.

فَأَخۡرَجَ لَهُمۡ عِجۡلٗا جَسَدٗا لَّهُۥ خُوَارٞ فَقَالُواْ هَٰذَآ إِلَٰهُكُمۡ وَإِلَٰهُ مُوسَىٰ فَنَسِيَ ٨٨

89. ಆದರೆ ಅದು ಅವರೊಂದಿಗೆ ಒಂದು ಮಾತನ್ನು ಸಹ ಆಡುವುದಿಲ್ಲ ಮತ್ತು ಅವರಿಗೆ ಯಾವುದೇ ಹಾನಿಯನ್ನಾಗಲಿ, ಲಾಭವನ್ನಾಗಲಿ ಮಾಡಲು ಸಾಮರ್ಥ್ಯವಿಲ್ಲವೆಂದು ಅವರು ಕಾಣುವುದಿಲ್ಲವೇ?

أَفَلَا يَرَوۡنَ أَلَّا يَرۡجِعُ إِلَيۡهِمۡ قَوۡلٗا وَلَا يَمۡلِكُ لَهُمۡ ضَرّٗا وَلَا نَفۡعٗا ٨٩

---

1 ಫಿರ್‌ಔನನ ವಂಶಜರಾದ ಕಿಬ್ತೀ (ಕೋಪ್ಟಿಕ್)ಗಳ ಆಭರಣಗಳನ್ನು ಸಾಲವಾಗಿ ಪಡೆದು ಇಸ್ರಾಈಲರು ವಲಸೆ ಬಂದಿದ್ದರು. ತಮಗೆ ಮದುವೆಯೊಂದರಲ್ಲಿ ಭಾಗವಹಿಸಲಿದೆಯೆಂದು ಹೇಳಿ ಅವರು ಅಲ್ಲಿಂದ ಓಡಿದ್ದರು. ಕಿಬ್ತೀಗಳಿಗೆ ಸಂದೇಹ ಉಂಟಾಗದಿರಲು ಇಸ್ರಾಈಲರು ಹೀಗೆ ತಂತ್ರ ಹೂಡಿದ್ದರು. ಸಮುದ್ರ ದಾಟಿ ಸೀನಾ ತಲುಪಿದ ಬಳಿಕ ಆ ಆಭರಣಗಳನ್ನು ಸಂಪೂರ್ಣವಾಗಿ ಬೆಂಕಿಗೆಸೆಯಲು ಅವರಿಗೆ ಆದೇಶವುಂಟಾಯಿತು.

2 ಸಾಮಿರೀ ಇಸ್ರಾಈಲರ ಪೈಕಿ ಹೃದಯದಲ್ಲಿ ವಿಶ್ವಾಸವಿಲ್ಲದ ಓರ್ವ ಕಪಟವಿಶ್ವಾಸಿಯಾಗಿದ್ದನು.

3 ಲೋಹನಿರ್ಮಿತ ಕರುವಿನ ಉದರದೊಳಗೆ ಗಾಳಿ ಪ್ರವೇಶಿಸಿದಾಗ ಅದರಿಂದ ಹೂಂಕರಿಸುವ ಸದ್ದು ಹೊರಡುತ್ತಿತ್ತು.

90. ಇದಕ್ಕಿಂತ ಮುಂಚೆ ಹಾರೂನ್ ಅವರೊಂದಿಗೆ ಹೇಳಿದ್ದರು: 'ಓ ನನ್ನ ಜನರೇ! ಇದರ (ಈ ಕರುವಿನ) ಮೂಲಕ ನಿಮ್ಮನ್ನು ಪರೀಕ್ಷಿಸಲಾಗುತ್ತಿದೆ. ಖಂಡಿತವಾಗಿಯೂ ನಿಮ್ಮ ರಬ್ ಪರಮ ದಯಾಮಯನಾಗಿರುವನು. ಆದ್ದರಿಂದ ನನ್ನನ್ನು ಅನುಸರಿಸಿರಿ ಮತ್ತು ನನ್ನ ಆಜ್ಞೆಯನ್ನು ಪಾಲಿಸಿರಿ'.

وَلَقَدْ قَالَ لَهُمْ هَٰرُونُ مِن قَبْلُ يَٰقَوْمِ إِنَّمَا فُتِنتُم بِهِۦ ۖ وَإِنَّ رَبَّكُمُ ٱلرَّحْمَٰنُ فَٱتَّبِعُونِى وَأَطِيعُوٓا۟ أَمْرِى ﴿٩٠﴾

91. ಅವರು ಹೇಳಿದರು: 'ಮೂಸಾ ನಮ್ಮ ಬಳಿಗೆ ಮರಳಿ ಬರುವ ತನಕ ನಾವು ಇದನ್ನು ಪೂಜಿಸುತ್ತಲೇ ಇರುವೆವು'.

قَالُوا۟ لَن نَّبْرَحَ عَلَيْهِ عَٰكِفِينَ حَتَّىٰ يَرْجِعَ إِلَيْنَا مُوسَىٰ ﴿٩١﴾

92-93. ಆತ (ಮೂಸಾ) ಹೇಳಿದರು: 'ಓ ಹಾರೂನ್! ಇವರು ದಾರಿತಪ್ಪುವುದನ್ನು ಕಂಡಾಗ ನನ್ನನ್ನು ಅನುಸರಿಸದಂತೆ ನಿನ್ನನ್ನು ತಡೆದಿರುವುದಾದರೂ ಏನು?[1] ನನ್ನ ಆಜ್ಞೆ ಯನ್ನು ನೀನು ಧಿಕ್ಕರಿಸಿಬಿಟ್ಟೆಯಾ?'

قَالَ يَٰهَٰرُونُ مَا مَنَعَكَ إِذْ رَأَيْتَهُمْ ضَلُّوٓا۟ ﴿٩٢﴾ أَلَّا تَتَّبِعَنِ ۖ أَفَعَصَيْتَ أَمْرِى ﴿٩٣﴾

94. ಆತ (ಹಾರೂನ್) ಹೇಳಿದರು: 'ಓ ನನ್ನ ತಾಯಿಯ ಮಗನೇ! ತಾವು ನನ್ನ ಗಡ್ಡವನ್ನಾಗಲಿ ನನ್ನ ತಲೆಯನ್ನಾಗಲಿ ಹಿಡಿಯದಿರಿ. 'ನೀನು ಇಸ್ರಾಈಲ್ ಸಂತತಿಗಳ ಮಧ್ಯೆ ಒಡಕುಂಟು ಮಾಡಿರುವೆ. ನನ್ನ ಆಜ್ಞೆಗಾಗಿ ನೀನು ಕಾಯಲಿಲ್ಲ' ಎಂದು ತಾವು ಹೇಳುವಿರೆಂದು ನಾನು ಭಯಪಟ್ಟೆನು'.

قَالَ يَبْنَؤُمَّ لَا تَأْخُذْ بِلِحْيَتِى وَلَا بِرَأْسِىٓ ۖ إِنِّى خَشِيتُ أَن تَقُولَ فَرَّقْتَ بَيْنَ بَنِىٓ إِسْرَٰٓءِيلَ وَلَمْ تَرْقُبْ قَوْلِى ﴿٩٤﴾

95. (ಅನಂತರ ಸಾಮಿರಿಯೊಂದಿಗೆ) ಆತ ಹೇಳಿದರು: 'ಓ ಸಾಮಿರೀ! ನಿನ್ನ ವಿಷಯವೇನು?'

قَالَ فَمَا خَطْبُكَ يَٰسَٰمِرِىُّ ﴿٩٥﴾

96. ಅವನು ಹೇಳಿದನು: 'ಅವರು (ಜನರು) ಕಾಣದಿರುವುದನ್ನು ನಾನು ಕಂಡೆನು.[2] ತರುವಾಯ ದೂತನ ಹೆಜ್ಜೆಗುರುತಿನಿಂದ ನಾನೊಂದು ಹಿಡಿಯನ್ನು ಹಿಡಿದು ಅದಕ್ಕೆ

قَالَ بَصُرْتُ بِمَا لَمْ يَبْصُرُوا۟ بِهِۦ فَقَبَضْتُ قَبْضَةً مِّنْ أَثَرِ ٱلرَّسُولِ فَنَبَذْتُهَا وَكَذَٰلِكَ سَوَّلَتْ لِى نَفْسِى ﴿٩٦﴾

1 ಇದರರ್ಥ ಅವರನ್ನು ಅವರ ಪಾಡಿಗೆ ಬಿಟ್ಟು ನಿನಗೆ ನನ್ನ ಬಳಿ ಬರಬಾರದಾಗಿತ್ತೇ ಎಂದಾಗಿರಬಹುದು. ನೀನು ಯಾಕೆ ನನ್ನ ಆಜ್ಞೆಯನ್ನು ಸ್ವೀಕರಿಸಲಿಲ್ಲ ಎಂದೂ ಆಗಿರಬಹುದು.

2 ಇದರರ್ಥ ಸಾಮಾನ್ಯ ಜನರಿಗೆ ತಿಳಿಯದ ಕೆಲವು ತಂತ್ರಗಳನ್ನು ನಾನು ಕರಗತ ಮಾಡಿಕೊಂಡೆನು ಎಂದಾಗಿರಬಹುದು.

ಹಾಕಿಬಿಟ್ಟೆನು.[1] ಹೀಗೆ ನನ್ನ ಮನಸ್ಸು ನನ್ನನ್ನು ಪ್ರೇರೇಪಿಸಿತು'.

97. ಮೂಸಾ ಹೇಳಿದರು: 'ಹಾಗಾದರೆ ಹೊರಟು ಹೋಗು! ಖಂಡಿತವಾಗಿಯೂ ನಿನಗೆ ಈ ಜೀವನದಲ್ಲಿರುವುದು 'ಸ್ಪರ್ಶಿಸದಿರಿ' ಎಂದು ಹೇಳುವುದು ಮಾತ್ರವಾಗಿದೆ.[2] ಖಂಡಿತವಾಗಿಯೂ ಉಲ್ಲಂಘಿಸಲಾಗದ ಒಂದು ನಿಶ್ಚಿತ ಅವಧಿಯು ನಿನಗಿದೆ. ನೀನು ಪೂಜಿಸುತ್ತಲೇ ಇರುವ ಆ ನಿನ್ನ ದೇವರೆಡೆಗೆ ನೋಡು. ಖಂಡಿತವಾಗಿಯೂ ನಾವದನ್ನು ಸುಟ್ಟುಹಾಕುವೆವು. ತರುವಾಯ ಅದನ್ನು ಪುಡಿ ಪುಡಿ ಮಾಡಿ ಸಮುದ್ರದಲ್ಲಿ ಚೆಲ್ಲುವೆವು'.

قَالَ فَٱذْهَبْ فَإِنَّ لَكَ فِى ٱلْحَيَوٰةِ أَن تَقُولَ لَا مِسَاسَ ۖ وَإِنَّ لَكَ مَوْعِدًا لَّن تُخْلَفَهُۥ ۖ وَٱنظُرْ إِلَىٰٓ إِلَٰهِكَ ٱلَّذِى ظَلْتَ عَلَيْهِ عَاكِفًا ۖ لَّنُحَرِّقَنَّهُۥ ثُمَّ لَنَنسِفَنَّهُۥ فِى ٱلْيَمِّ نَسْفًا ﴿٩٧﴾

98. ನಿಮ್ಮ ಆರಾಧ್ಯನು ಅಲ್ಲಾಹು ಮಾತ್ರವಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನ ಜ್ಞಾನವು ಸಕಲ ವಸ್ತುಗಳನ್ನೂ ಆವರಿಸಿರುವುದು.

إِنَّمَآ إِلَٰهُكُمُ ٱللَّهُ ٱلَّذِى لَآ إِلَٰهَ إِلَّا هُوَ ۚ وَسِعَ كُلَّ شَىْءٍ عِلْمًا ﴿٩٨﴾

99. ಹೀಗೆ ಗತ ಚರಿತ್ರೆಗಳ ವೃತ್ತಾಂತಗಳಿಂದ ತಮಗೆ ನಾವು ವಿವರಿಸಿಕೊಡುವೆವು. ಖಂಡಿತವಾಗಿಯೂ ತಮಗೆ ನಾವು ನಮ್ಮ ವತಿಯ ಸಂದೇಶವನ್ನು ನೀಡಿರುವೆವು.

كَذَٰلِكَ نَقُصُّ عَلَيْكَ مِنْ أَنۢبَآءِ مَا قَدْ سَبَقَ ۚ وَقَدْ ءَاتَيْنَٰكَ مِن لَّدُنَّا ذِكْرًا ﴿٩٩﴾

100. ಯಾರು ಅದರಿಂದ ವಿಮುಖನಾಗುವನೋ ಅವನು ಖಂಡಿತವಾಗಿಯೂ ಪುನರುತ್ಥಾನ ದಿನದಂದು (ಪಾಪದ) ಹೊರೆಯನ್ನು ಹೊರುವನು.

مَّنْ أَعْرَضَ عَنْهُ فَإِنَّهُۥ يَحْمِلُ يَوْمَ ٱلْقِيَٰمَةِ وِزْرًا ﴿١٠٠﴾

101. ಅದರಲ್ಲಿ ಅವರು ಶಾಶ್ವತವಾಗಿ ವಾಸಿಸುವರು. ಪುನರುತ್ಥಾನ ದಿನದ ಅವರ ಆ ಹೊರೆಯು ಎಷ್ಟು ನಿಕೃಷ್ಟವಾದುದು!

خَٰلِدِينَ فِيهِ ۖ وَسَآءَ لَهُمْ يَوْمَ ٱلْقِيَٰمَةِ حِمْلًا ﴿١٠١﴾

---

1 'ಅಲ್ಲಾಹನ ಮಲಕ್ ಆಗಿರುವ ಜಿಬ್ರೀಲ್(عَلَيْهِ السَّلَامُ)ರವರ ಹೆಜ್ಜೆಗುರುತಿನಿಂದ ಒಂದು ಹಿಡಿ ಮಣ್ಣನ್ನು ತೆಗೆದು ಕಾಯಿಸಿದ ಲೋಹಕ್ಕೆ ಹಾಕಿದೆನು' ಎಂದು ಹೆಚ್ಚಿನ ವ್ಯಾಖ್ಯಾನಕಾರರು ಇದನ್ನು ವ್ಯಾಖ್ಯಾನಿಸಿದ್ದಾರೆ.

2 ಲಾಮಿಸಾಸ ಎಂಬುದರ ಅರ್ಥವು ಪರಸ್ಪರ ಸ್ಪರ್ಶವಿಲ್ಲ ಅಥವಾ ಪರಸ್ಪರ ಸಂಪರ್ಕವಿಲ್ಲ ಎಂದಾಗಿದೆ. ಪ್ರವಾದಿ ಮೂಸಾ(عَلَيْهِ السَّلَامُ)ರವರು ಸಾಮಿರೀಗೆ ಸಂಪೂರ್ಣ ಬಹಿಷ್ಕಾರವನ್ನು ಘೋಷಿಸಿದರು ಮತ್ತು ಅದರಿಂದಾಗಿ ಅವನು ಜೀವನಪರ್ಯಂತ ಜನರೊಂದಿಗೆ ಎಲ್ಲ ರೀತಿಯ ಸಂಬಂಧಗಳನ್ನು ಕಡಿದುಕೊಂಡವನಂತೆ ಜೀವಿಸಬೇಕಾಗಿ ಬಂತು ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ.

**102.** ಕಹಳೆಯಲ್ಲಿ ಊದಲಾಗುವ ದಿನ!. ಅಂದು ನಾವು ಅಪರಾಧಿಗಳನ್ನು ನೀಲಿ ಬಣ್ಣದವರನ್ನಾಗಿ ಒಟ್ಟುಗೂಡಿಸುವೆವು.

**103.** ಅವರು ಪರಸ್ಪರ ಪಿಸುಗುಡುತ್ತಾ ಹೇಳುವರು: 'ನೀವು (ಭೂಮಿಯಲ್ಲಿ) ಹತ್ತು ದಿನಗಳವರೆಗಲ್ಲದೆ ತಂಗಿಲ್ಲ'.

**104.** ಅವರಲ್ಲಿ ಅತ್ಯುತ್ತಮ ನಿಲುವನ್ನು ಹೊಂದಿರುವವನು 'ನೀವು ವಾಸಿಸಿರುವುದು ಒಂದೇ ಒಂದುದಿನ ಮಾತ್ರವಾಗಿದೆ'(1) ಎಂದು ಹೇಳುವಾಗ ಅವರು ಹೇಳುವುದರ ಕುರಿತು ನಾವು ಚೆನ್ನಾಗಿ ಅರಿತಿರುವೆವು.

**105.** ಅವರು ತಮ್ಮೊಂದಿಗೆ ಪರ್ವತಗಳ ಕುರಿತು ಕೇಳುವರು. ತಾವು ಹೇಳಿರಿ: 'ನನ್ನ ರಬ್ ಅವುಗಳನ್ನು ಧೂಳಿಯಾಗಿಸಿ ಚದುರಿಸಿ ಬಿಡುವನು'.

**106.** ತರುವಾಯ ಅವನು ಅದನ್ನು ಸಮತಟ್ಟಾದ ಬಯಲನ್ನಾಗಿ ಮಾಡುವನು.

**107.** ತಾವು ಅದರಲ್ಲಿ ಇಳಿಜಾರನ್ನಾಗಲಿ, ಎತ್ತರ ಪ್ರದೇಶವನ್ನಾಗಲಿ ಕಾಣಲಾರಿರಿ.

**108.** ಅಂದು ಅವರು ಕರೆನೀಡುವಾತನನ್ನು ಯಾವುದೇ ವಕ್ರತೆಯನ್ನು ತೋರಿಸದೆ ಹಿಂಬಾಲಿಸುವರು. ಧ್ವನಿಗಳೆಲ್ಲವೂ ಪರಮ ದಯಾಮಯನಿಗೆ ಶರಣಾಗಿ ಬಿಡುವುವು. ಆದ್ದರಿಂದ ತಾವು ಮೆಲುದನಿಯ ಹೊರತು ಬೇರೇನನ್ನೂ ಆಲಿಸಲಾರಿರಿ.

**109.** ಅಂದು ಪರಮ ದಯಾಮಯನು ಯಾರ ಪರವಾಗಿ ಅನುಮತಿ ನೀಡುವನೋ ಮತ್ತು ಯಾರ ಮಾತನ್ನು ಇಷ್ಟಪಡುವನೋ ಅವನಿಗೇ ಹೊರತು ಶಿಫಾರಸ್ಸು ಪ್ರಯೋಜನಕಾರಿಯಾಗಲಾರದು.

يَوۡمَ يُنفَخُ فِي ٱلصُّورِۚ وَنَحۡشُرُ ٱلۡمُجۡرِمِينَ يَوۡمَئِذٖ زُرۡقٗا ١٠٢

يَتَخَٰفَتُونَ بَيۡنَهُمۡ إِن لَّبِثۡتُمۡ إِلَّا عَشۡرٗا ١٠٣

نَّحۡنُ أَعۡلَمُ بِمَا يَقُولُونَ إِذۡ يَقُولُ أَمۡثَلُهُمۡ طَرِيقَةً إِن لَّبِثۡتُمۡ إِلَّا يَوۡمٗا ١٠٤

وَيَسۡـَٔلُونَكَ عَنِ ٱلۡجِبَالِ فَقُلۡ يَنسِفُهَا رَبِّي نَسۡفٗا ١٠٥

فَيَذَرُهَا قَاعٗا صَفۡصَفٗا ١٠٦

لَّا تَرَىٰ فِيهَا عِوَجٗا وَلَآ أَمۡتٗا ١٠٧

يَوۡمَئِذٖ يَتَّبِعُونَ ٱلدَّاعِيَ لَا عِوَجَ لَهُۥۖ وَخَشَعَتِ ٱلۡأَصۡوَاتُ لِلرَّحۡمَٰنِ فَلَا تَسۡمَعُ إِلَّا هَمۡسٗا ١٠٨

يَوۡمَئِذٖ لَّا تَنفَعُ ٱلشَّفَٰعَةُ إِلَّا مَنۡ أَذِنَ لَهُ ٱلرَّحۡمَٰنُ وَرَضِيَ لَهُۥ قَوۡلٗا ١٠٩

---

1 ಅನಂತವಾದ ದಿನವನ್ನು ತಲುಪುವಾಗ ಇಹಲೋಕ ಜೀವನವು ಒಂದು ದಿನದಷ್ಟು ಹ್ರಸ್ವವಾಗಿತ್ತೆಂದು ಅವರಿಗೆ ಭಾಸವಾಗುವುದು.

110. ಅವರ ಮುಂದಿರುವುದನ್ನೂ, ಹಿಂದಿರುವುದನ್ನೂ ಅವನು ಅರಿಯುವನು. ಅದರ ಕುರಿತು ಸಂಪೂರ್ಣವಾಗಿ ಏನನ್ನೂ ಅರಿತುಕೊಳ್ಳಲು ಅವರಿಗೆ ಸಾಧ್ಯವಾಗದು.

يَعۡلَمُ مَا بَيۡنَ أَيۡدِيهِمۡ وَمَا خَلۡفَهُمۡ وَلَا يُحِيطُونَ بِهِۦ عِلۡمٗا ﴿١١٠﴾

111. ಎಂದೆಂದಿಗೂ ಜೀವಂತವಿರುವವನು ಮತ್ತು ಎಲ್ಲವನ್ನೂ ನಿಯಂತ್ರಿಸುವವನಿಗೆ ಮುಖಗಳು ಶರಣಾಗತವಾಗಿವೆ. ಅಕ್ರಮದ ಹೊರೆಯನ್ನು ಹೊತ್ತವನು ಪರಾಭವ ಹೊಂದಿದನು.

۞ وَعَنَتِ ٱلۡوُجُوهُ لِلۡحَيِّ ٱلۡقَيُّومِۖ وَقَدۡ خَابَ مَنۡ حَمَلَ ظُلۡمٗا ﴿١١١﴾

112. ಯಾರಾದರೂ ಸತ್ಯವಿಶ್ವಾಸಿಯಾಗಿದ್ದು ಸತ್ಕರ್ಮಗಳಲ್ಲಿ ಏನನ್ನಾದರೂ ಮಾಡಿದರೆ ಅವನು ಅಕ್ರಮವನ್ನಾಗಲಿ ಅನ್ಯಾಯವನ್ನಾಗಲಿ ಭಯಪಡಬೇಕಾಗಿ ಬರದು.

وَمَن يَعۡمَلۡ مِنَ ٱلصَّٰلِحَٰتِ وَهُوَ مُؤۡمِنٞ فَلَا يَخَافُ ظُلۡمٗا وَلَا هَضۡمٗا ﴿١١٢﴾

113. ಹೀಗೆ ನಾವು ಇದನ್ನು ಅರಬಿಯಲ್ಲಿ ಪಾರಾಯಣ ಮಾಡಲಾಗುವ ಒಂದು ಗ್ರಂಥವಾಗಿ ಅವತೀರ್ಣಗೊಳಿಸಿರುವೆವು. ಅದರಲ್ಲಿ ನಾವು ಎಚ್ಚರಿಕೆಗಳನ್ನು ಅನೇಕ ವಿಧಗಳಲ್ಲಿ ವಿವರಿಸಿರುವೆವು. ಅವರು ಭಯಭಕ್ತಿ ಪಾಲಿಸುವವರಾಗುವ ಸಲುವಾಗಿ ಅಥವಾ ಅವರಲ್ಲಿ ಪ್ರಜ್ಞೆ ಮೂಡುವ ಸಲುವಾಗಿ.

وَكَذَٰلِكَ أَنزَلۡنَٰهُ قُرۡءَانًا عَرَبِيّٗا وَصَرَّفۡنَا فِيهِ مِنَ ٱلۡوَعِيدِ لَعَلَّهُمۡ يَتَّقُونَ أَوۡ يُحۡدِثُ لَهُمۡ ذِكۡرٗا ﴿١١٣﴾

114. ನೈಜ ಒಡೆಯನಾದ ಅಲ್ಲಾಹು ಅತ್ಯುನ್ನತನಾಗಿರುವನು. ಕುರ್‌ಆನನ್ನು ತಮಗೆ ಓದಿಕೊಡಲಾಗುವ ಮುನ್ನ ಅದನ್ನು ಪಾರಾಯಣ ಮಾಡಲು ತಾವು ಆತುರಪಡದಿರಿ.(1) 'ಓ ನನ್ನ ರಬ್! ನನಗೆ ಜ್ಞಾನವನ್ನು ಹೆಚ್ಚಿಸಿಕೊಡು' ಎಂದು ಹೇಳಿರಿ.

فَتَعَٰلَى ٱللَّهُ ٱلۡمَلِكُ ٱلۡحَقُّۗ وَلَا تَعۡجَلۡ بِٱلۡقُرۡءَانِ مِن قَبۡلِ أَن يُقۡضَىٰٓ إِلَيۡكَ وَحۡيُهُۥۖ وَقُل رَّبِّ زِدۡنِي عِلۡمٗا ﴿١١٤﴾

1 ಪ್ರತಿಯೊಂದು ಸಂದರ್ಭದಲ್ಲೂ ಜಿಬ್ರೀಲ್(عَلَيْهِ السَّلَامُ)ರು ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರವರಿಗೆ ದಿವ್ಯಸಂದೇಶವನ್ನು ಓದಿಕೊಡುವಾಗ ಅವರು ಓದಿಕೊಟ್ಟು ಮುಗಿಯುವುದಕ್ಕೆ ಮೊದಲೇ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರವರು ಮರೆತುಹೋಗಬಹುದೋ ಎಂಬ ಭಯದಿಂದ ಅದನ್ನು ಕಂಠಪಾಠ ಮಾಡುವುದಕ್ಕಾಗಿ ಆತುರಪಡುತ್ತಿದ್ದರು. ಅದರ ಅಗತ್ಯವಿಲ್ಲ. ಜ್ಞಾನ ಮತ್ತು ಜ್ಞಾಪಕಶಕ್ತಿಯನ್ನು ಹೆಚ್ಚಿಸಿಕೊಡಲು ಪ್ರಾರ್ಥಿಸಿದರೆ ಸಾಕೆಂದು ಅಲ್ಲಾಹು ತಿಳಿಸಿಕೊಡುತ್ತಾನೆ.

**115.** ನಾವು ಮುಂಚೆ ಆದಮ್‌ರೊಂದಿಗೆ ಕರಾರು ಮಾಡಿದ್ದೆವು. ಆದರೆ ಅವರು ಅದನ್ನು ಮರೆತರು. ಅವರಲ್ಲಿ ದೃಢನಿಶ್ಚಯವಿರುವುದಾಗಿ ನಾವು ಕಾಣಲಿಲ್ಲ.

وَلَقَدْ عَهِدْنَآ إِلَىٰٓ ءَادَمَ مِن قَبْلُ فَنَسِىَ وَلَمْ نَجِدْ لَهُۥ عَزْمًا ﴿١١٥﴾

**116.** 'ನೀವು ಆದಮ್‌ರಿಗೆ ಸುಜೂದ್ ಮಾಡಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ. ಅವರು ಸುಜೂದ್ ಮಾಡಿದರು; ಆದರೆ ಇಬ್ಲೀಸನ ಹೊರತು. ಅವನು ನಿರಾಕರಿಸಿದನು.

وَإِذْ قُلْنَا لِلْمَلَـٰٓئِكَةِ ٱسْجُدُوا۟ لِـَٔادَمَ فَسَجَدُوٓا۟ إِلَّآ إِبْلِيسَ أَبَىٰ ﴿١١٦﴾

**117.** ಆಗ ನಾವು ಹೇಳಿದೆವು: 'ಓ ಆದಮ್! ಈತ ತಮ್ಮ ಮತ್ತು ತಮ್ಮ ಸಂಗಾತಿಯ ಶತ್ರುವಾಗಿರುವನು. ಆದ್ದರಿಂದ ನಿಮ್ಮಿಬ್ಬರನ್ನೂ ಅವನು ಸ್ವರ್ಗದಿಂದ ಹೊರಗಟ್ಟದಿರಲಿ. (ಹಾಗೇನಾದರೂ ಆದರೆ) ತಾವು ಕಷ್ಟಪಡಲಿರುವಿರಿ.

فَقُلْنَا يَـٰٓـَٔادَمُ إِنَّ هَـٰذَا عَدُوٌّ لَّكَ وَلِزَوْجِكَ فَلَا يُخْرِجَنَّكُمَا مِنَ ٱلْجَنَّةِ فَتَشْقَىٰٓ ﴿١١٧﴾

**118.** ಖಂಡಿತವಾಗಿಯೂ ಇಲ್ಲಿ ತಮಗೆ ಹಸಿವೆಯಾಗಲಿ, ನಗ್ನತೆಯಾಗಲಿ ಇರಲಾರದು.

إِنَّ لَكَ أَلَّا تَجُوعَ فِيهَا وَلَا تَعْرَىٰ ﴿١١٨﴾

**119.** ಇಲ್ಲಿ ತಮಗೆ ಬಾಯಾರಿಕೆಯಾಗಲಿ ಬಿಸಿಲ ಬೇಗೆಯಾಗಲಿ ಇರಲಾರದು.

وَأَنَّكَ لَا تَظْمَؤُا۟ فِيهَا وَلَا تَضْحَىٰ ﴿١١٩﴾

**120.** ಆಗ ಸೈತಾನನು ಅವರಿಗೆ ದುಷ್ಪ್ರೇರಣೆ ಮಾಡಿದನು: 'ಓ ಆದಮ್! ಅನಶ್ವರತೆಯನ್ನು ನೀಡುವ ಒಂದು ವೃಕ್ಷದ ಕುರಿತು ಮತ್ತು ನಾಶವಾಗದ ಆಧಿಪತ್ಯದ ಕುರಿತು ನಾನು ನಿನಗೆ ತಿಳಿಸಿಕೊಡಲೇ?'

فَوَسْوَسَ إِلَيْهِ ٱلشَّيْطَـٰنُ قَالَ يَـٰٓـَٔادَمُ هَلْ أَدُلُّكَ عَلَىٰ شَجَرَةِ ٱلْخُلْدِ وَمُلْكٍ لَّا يَبْلَىٰ ﴿١٢٠﴾

**121.** ತರುವಾಯ ಅವರಿಬ್ಬರು (ಆದಮ್ ಮತ್ತು ಹವ್ವಾ) ಆ ಮರದಿಂದ ತಿಂದರು. ಆಗ ಅವರಿಬ್ಬರಿಗೂ ತಮ್ಮ ಗುಪ್ತಾಂಗಗಳು ಪ್ರಕಟವಾದವು ಮತ್ತು ಸ್ವರ್ಗದ ಎಲೆಗಳನ್ನು ಸೇರಿಸಿ ಅವರು ತಮ್ಮ ದೇಹಗಳನ್ನು ಮುಚ್ಚತೊಡಗಿದರು. ಆದಮ್ ತಮ್ಮ ರಬ್‌ನೊಂದಿಗೆ ಅವಿಧೇಯತೆ ತೋರಿದರು. ತನ್ಮೂಲಕ ಅವರು ದಾರಿತಪ್ಪಿದರು.

فَأَكَلَا مِنْهَا فَبَدَتْ لَهُمَا سَوْءَٰتُهُمَا وَطَفِقَا يَخْصِفَانِ عَلَيْهِمَا مِن وَرَقِ ٱلْجَنَّةِ ۚ وَعَصَىٰٓ ءَادَمُ رَبَّهُۥ فَغَوَىٰ ﴿١٢١﴾

122. ತರುವಾಯ ಅವರ ರಬ್ ಅವರನ್ನು ಉತ್ಕೃಷ್ಟನನ್ನಾಗಿ ಆರಿಸಿದನು ಮತ್ತು ಆತನ ಪಶ್ಚಾತ್ತಾಪವನ್ನು ಸ್ವೀಕರಿಸಿ ಆತನಿಗೆ ಮಾರ್ಗದರ್ಶನವನ್ನು ನೀಡಿದನು.

ثُمَّ ٱجْتَبَٰهُ رَبُّهُۥ فَتَابَ عَلَيْهِ وَهَدَىٰ ﴿١٢٢﴾

123. ಅವನು (ಅಲ್ಲಾಹು) ಹೇಳಿದನು: 'ನೀವಿಬ್ಬರೂ ಜೊತೆಯಾಗಿ ಇಲ್ಲಿಂದ ಇಳಿದು ಹೋಗಿರಿ. ನಿಮ್ಮಲ್ಲಿ ಕೆಲವರು ಇತರ ಕೆಲವರಿಗೆ ಶತ್ರುಗಳಾಗಿರುವರು. ನನ್ನ ವತಿಯಿಂದ ಯಾವುದಾದರೂ ಮಾರ್ಗದರ್ಶನವು ನಿಮಗೆ ಬಂದರೆ, ಆ ನನ್ನ ಮಾರ್ಗದರ್ಶನವನ್ನು ಯಾರು ಅನುಸರಿಸುವನೋ ಅವನು ಪಥಭ್ರಷ್ಟನಾಗಲಾರನು ಮತ್ತು ಕಷ್ಟಪಡಲಾರನು'.

قَالَ ٱهْبِطَا مِنْهَا جَمِيعًۢا ۖ بَعْضُكُمْ لِبَعْضٍ عَدُوٌّ ۖ فَإِمَّا يَأْتِيَنَّكُم مِّنِّى هُدًى فَمَنِ ٱتَّبَعَ هُدَاىَ فَلَا يَضِلُّ وَلَا يَشْقَىٰ ﴿١٢٣﴾

124. ಯಾರು ನನ್ನ ಸಂದೇಶವನ್ನು ಕಡೆಗಣಿಸಿ ವಿಮುಖನಾಗುವನೋ ಖಂಡಿತವಾಗಿಯೂ ಅವನಿಗಿರುವುದು ಇಕ್ಕಟ್ಟಾದ ಜೀವನವಾಗಿದೆ. ಪುನರುತ್ಥಾನ ದಿನದಂದು ಅವನನ್ನು ನಾವು ಅಂಧನನ್ನಾಗಿ ಎಬ್ಬಿಸುವೆವು.

وَمَنْ أَعْرَضَ عَن ذِكْرِى فَإِنَّ لَهُۥ مَعِيشَةً ضَنكًا وَنَحْشُرُهُۥ يَوْمَ ٱلْقِيَٰمَةِ أَعْمَىٰ ﴿١٢٤﴾

125. ಅವನು ಹೇಳುವನು: 'ಓ ನನ್ನ ರಬ್! ನಾನು ದೃಷ್ಟಿಯುಳ್ಳವನಾಗಿದ್ದೂ ಸಹ ನೀನೇಕೆ ನನ್ನನ್ನು ಅಂಧನನ್ನಾಗಿ ಪುನರುತ್ಥಾನಗೊಳಿಸಿದೆ?'

قَالَ رَبِّ لِمَ حَشَرْتَنِىٓ أَعْمَىٰ وَقَدْ كُنتُ بَصِيرًا ﴿١٢٥﴾

126. ಅವನು (ಅಲ್ಲಾಹು) ಹೇಳುವನು: 'ಹಾಗೆಯೇ ಆಗಿದೆ. ನಮ್ಮ ದೃಷ್ಟಾಂತಗಳು ನಿನ್ನ ಬಳಿಗೆ ಬಂದಾಗ ಅದನ್ನು ನೀನು ವಿಸ್ಮರಿಸಿದೆ. ಹಾಗೆಯೇ ಇಂದು ನಿನ್ನನ್ನೂ ವಿಸ್ಮರಿಸಲಾಗಿದೆ'

قَالَ كَذَٰلِكَ أَتَتْكَ ءَايَٰتُنَا فَنَسِيتَهَا ۖ وَكَذَٰلِكَ ٱلْيَوْمَ تُنسَىٰ ﴿١٢٦﴾

127. ಹದ್ದು ಮೀರುವವರಿಗೆ ಮತ್ತು ತಮ್ಮ ರಬ್‌ನ ದೃಷ್ಟಾಂತಗಳಲ್ಲಿ ವಿಶ್ವಾಸವಿಡದವರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು. ಖಂಡಿತವಾಗಿಯೂ ಪರಲೋಕದ ಶಿಕ್ಷೆಯು ಅತಿಕಠೋರವೂ ಶಾಶ್ವತವೂ ಆಗಿದೆ.

وَكَذَٰلِكَ نَجْزِى مَنْ أَسْرَفَ وَلَمْ يُؤْمِنۢ بِـَٔايَٰتِ رَبِّهِۦ ۚ وَلَعَذَابُ ٱلْءَاخِرَةِ أَشَدُّ وَأَبْقَىٰٓ ﴿١٢٧﴾

أَفَلَمْ يَهْدِ لَهُمْ كَمْ أَهْلَكْنَا قَبْلَهُم مِّنَ ٱلْقُرُونِ يَمْشُونَ فِي مَسَٰكِنِهِمْ ۗ إِنَّ فِي ذَٰلِكَ لَءَايَٰتٍ لِّأُو۟لِي ٱلنُّهَىٰ ﴿١٢٨﴾

**128**. ಅವರಿಗಿಂತ ಮುಂಚೆ ಎಷ್ಟೋ ತಲೆಮಾರುಗಳನ್ನು ನಾವು ನಾಶಗೊಳಿಸಿರುವೆವು ಎಂಬ ವಾಸ್ತವಿಕತೆಯು ಅವರಿಗೆ ಮಾರ್ಗದರ್ಶನ ಮಾಡುವುದಿಲ್ಲವೇ?[1] ಅವರ ವಾಸಸ್ಥಳಗಳ ಮೂಲಕ ಇವರು ಹಾದುಹೋಗುತ್ತಿರುವರು. ಖಂಡಿತವಾಗಿಯೂ ಇದರಲ್ಲಿ ಬುದ್ಧಿವಂತರಿಗೆ ದೃಷ್ಟಾಂತಗಳಿವೆ.

وَلَوْلَا كَلِمَةٌ سَبَقَتْ مِن رَّبِّكَ لَكَانَ لِزَامًا وَأَجَلٌ مُّسَمًّى ﴿١٢٩﴾

**129**. ತಮ್ಮ ರಬ್‌ನ ವತಿಯ ಒಂದು ವಚನವು[2] ಹಾಗೂ ಒಂದು ನಿಶ್ಚಿತ ಅವಧಿಯು ಮುಂಗಡವಾಗಿ ತೀರ್ಮಾನಿಸಲ್ಪಡದಿರುತ್ತಿದ್ದರೆ ಅದು (ಶಿಕ್ಷೆಯು) (ಇವರಿಗೂ) ಅನಿವಾರ್ಯವಾಗಿ ಬಿಡುತ್ತಿತ್ತು.

فَٱصْبِرْ عَلَىٰ مَا يَقُولُونَ وَسَبِّحْ بِحَمْدِ رَبِّكَ قَبْلَ طُلُوعِ ٱلشَّمْسِ وَقَبْلَ غُرُوبِهَا ۖ وَمِنْ ءَانَآئِ ٱلَّيْلِ فَسَبِّحْ وَأَطْرَافَ ٱلنَّهَارِ لَعَلَّكَ تَرْضَىٰ ﴿١٣٠﴾

**130**. ಆದ್ದರಿಂದ ಇವರು ಹೇಳುತ್ತಿರುವುದರ ಕುರಿತು ತಾವು ಸಹನೆವಹಿಸಿರಿ. ಸೂರ್ಯೋದಯಕ್ಕೆ ಮೊದಲು ಮತ್ತು ಸೂರ್ಯಾಸ್ತಕ್ಕೆ ಮೊದಲು ತಾವು ತಮ್ಮ ರಬ್ಬನ್ನು ಸ್ತುತಿಸುವುದರೊಂದಿಗೆ ಅವನ ಪರಿಪಾವನತೆಯನ್ನು ಕೊಂಡಾಡಿರಿ. ರಾತ್ರಿಯ ಕೆಲವು ತಾಸುಗಳಲ್ಲೂ, ಹಗಲಿನ ಕೆಲವು ಭಾಗಗಳಲ್ಲೂ ತಾವು ಅವನ ಪರಿಪಾವನತೆಯನ್ನು ಕೊಂಡಾಡಿರಿ. ತಮಗೆ ಸಂತೃಪ್ತಿಯುಂಟಾಗಲೂಬಹುದು.

وَلَا تَمُدَّنَّ عَيْنَيْكَ إِلَىٰ مَا مَتَّعْنَا بِهِۦٓ أَزْوَٰجًا مِّنْهُمْ زَهْرَةَ ٱلْحَيَوٰةِ ٱلدُّنْيَا لِنَفْتِنَهُمْ فِيهِ ۚ وَرِزْقُ رَبِّكَ خَيْرٌ وَأَبْقَىٰ ﴿١٣١﴾

**131**. ಅವರಲ್ಲಿ ಹಲವರಿಗೆ ನಾವು ನೀಡಿದ ಸುಖಾನುಭೂತಿಯೆಡೆಗೆ ತಾವು ತಮ್ಮ ದೃಷ್ಟಿಯನ್ನು ಹಾಯಿಸದಿರಿ. ಅವು ಐಹಿಕ ಜೀವನದ ಶೃಂಗಾರಗಳಾಗಿವೆ. ತನ್ಮೂಲಕ ನಾವು ಅವರನ್ನು ಪರೀಕ್ಷಿಸುತ್ತಿರುವೆವು. ತಮ್ಮ ರಬ್ ಒದಗಿಸುವ ಅನ್ನಾಧಾರವು ಅತ್ಯುತ್ತಮವೂ ಶಾಶ್ವತವೂ ಆಗಿದೆ.

---

1 ಇವರಿಗಿಂತ ಮುಂಚಿನ ಧಿಕ್ಕಾರಿಗಳ ಪತನದಿಂದ ಇವರು ನೀತಿಪಾಠ ಕಲಿತಿಲ್ಲವೇ ಎಂದರ್ಥ.

2 ಪ್ರಸ್ತುತ ಸೂಕ್ತಿಯ ಅರ್ಥವು ಪ್ರವಾದಿ ಮುಹಮ್ಮದ್(ﷺ)ರವರ ಸಮುದಾಯವನ್ನು ನಿರ್ನಾಮ ಮಾಡುವುದಿಲ್ಲ ಎಂಬ ಅಲ್ಲಾಹುವಿನ ನಿರ್ಧಾರವಾಗಿದೆಯೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ.

**132.** ತಾವು ತಮ್ಮ ಕುಟುಂಬದವರಿಗೆ ನಮಾಝ್ ನಿರ್ವಹಿಸಲು ಆದೇಶಿಸಿರಿ. ಅದರಲ್ಲಿ (ನಮಾಝ್‌ನಲ್ಲಿ) ತಾವು ಸಹನೆಯೊಂದಿಗೆ ದೃಢವಾಗಿ ನಿಲ್ಲಿರಿ. ನಾವು ತಮ್ಮೊಂದಿಗೆ ಯಾವುದೇ ಅನ್ನಾಧಾರವನ್ನು ಬೇಡುವುದಿಲ್ಲ. ತಮಗೆ ಅನ್ನಾಧಾರವನ್ನು ಒದಗಿಸುವವರು ನಾವಾಗಿರುವೆವು. ಶುಭಕರ ಅಂತ್ಯವು ಧರ್ಮನಿಷ್ಠೆಗಾಗಿದೆ.

وَأۡمُرۡ أَهۡلَكَ بِٱلصَّلَوٰةِ وَٱصۡطَبِرۡ عَلَيۡهَاۖ لَا نَسۡـَٔلُكَ رِزۡقٗاۖ نَّحۡنُ نَرۡزُقُكَۗ وَٱلۡعَٰقِبَةُ لِلتَّقۡوَىٰ ١٣٢

**133.** ಅವರು ಹೇಳಿದರು: ‘ಅವರು (ಪ್ರವಾದಿಯು) ತಮ್ಮ ರಬ್‌ನಿಂದ ನಮಗೋಸ್ಕರ ಒಂದು ದೃಷ್ಟಾಂತವನ್ನೇಕೆ ತರುವುದಿಲ್ಲ?’ ಪೂರ್ವ ಗ್ರಂಥಗಳಲ್ಲಿರುವ ಪ್ರತ್ಯಕ್ಷ ಪುರಾವೆಯು ಅವರ ಬಳಿಗೆ ಬಂದಿಲ್ಲವೇ?

وَقَالُواْ لَوۡلَا يَأۡتِينَا بِـَٔايَةٖ مِّن رَّبِّهِۦٓۚ أَوَ لَمۡ تَأۡتِهِم بَيِّنَةُ مَا فِي ٱلصُّحُفِ ٱلۡأُولَىٰ ١٣٣

**134.** ಇದಕ್ಕೆ ಮೊದಲು ಯಾವುದಾದರೂ ಶಿಕ್ಷೆಯ ಮೂಲಕ ಅವರನ್ನು ನಾವು ನಾಶ ಮಾಡುತ್ತಿದ್ದರೆ ಅವರು ಹೇಳುತ್ತಿದ್ದರು: ‘ಓ ನಮ್ಮ ರಬ್! ನೀನೇಕೆ ನಮ್ಮೆಡೆಗೆ ಒಬ್ಬ ಸಂದೇಶವಾಹಕನನ್ನು ಕಳುಹಿಸಲಿಲ್ಲ? ಹಾಗಿರುತ್ತಿದ್ದರೆ ನಾವು ಅಪಮಾನಿತರೂ, ನಿಂದಿತರೂ ಆಗುವುದಕ್ಕಿಂತ ಮುಂಚೆ ನಿನ್ನ ದೃಷ್ಟಾಂತಗಳನ್ನು ಅನುಸರಿಸುತ್ತಿದ್ದೆವು’.

وَلَوۡ أَنَّآ أَهۡلَكۡنَٰهُم بِعَذَابٖ مِّن قَبۡلِهِۦ لَقَالُواْ رَبَّنَا لَوۡلَآ أَرۡسَلۡتَ إِلَيۡنَا رَسُولٗا فَنَتَّبِعَ ءَايَٰتِكَ مِن قَبۡلِ أَن نَّذِلَّ وَنَخۡزَىٰ ١٣٤

**135.** (ಓ ಪ್ರವಾದಿಯವರೇ!) ಹೇಳಿರಿ: ‘ಎಲ್ಲರೂ ನಿರೀಕ್ಷಿಸುತ್ತಿರುವರು. ನೀವೂ ನಿರೀಕ್ಷಿಸುತ್ತಿರಿ. ಆಗ ಸತ್ಯಮಾರ್ಗದ ವಕ್ತಾರರು ಯಾರೆಂದು ನೀವು ಅರಿಯುವಿರಿ. ಸನ್ಮಾರ್ಗವನ್ನು ಪಡೆದವರು ಯಾರೆಂದೂ (ನೀವು ಅರಿಯುವಿರಿ).

قُلۡ كُلّٞ مُّتَرَبِّصٞ فَتَرَبَّصُواْۖ فَسَتَعۡلَمُونَ مَنۡ أَصۡحَٰبُ ٱلصِّرَٰطِ ٱلسَّوِيِّ وَمَنِ ٱهۡتَدَىٰ ١٣٥

## ಅಲ್ ಅಂಬಿಯಾ (ಪ್ರವಾದಿಗಳು)[1]

## سُورَةُ الأَنبِيَاءِ

ಅವತೀರ್ಣ :ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 112

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

ٱقۡتَرَبَ لِلنَّاسِ حِسَابُهُمۡ وَهُمۡ فِي غَفۡلَةٖ مُّعۡرِضُونَ ١

1. ಜನರಿಗೆ ಅವರ ವಿಚಾರಣೆಯು ಸನ್ನಿಹಿತವಾಗಿದೆ. ಅವರಂತೂ ಅಲಕ್ಷ್ಯರಾಗಿ ವಿಮುಖರಾಗುತ್ತಿರುವರು.

مَا يَأۡتِيهِم مِّن ذِكۡرٖ مِّن رَّبِّهِم مُّحۡدَثٍ إِلَّا ٱسۡتَمَعُوهُ وَهُمۡ يَلۡعَبُونَ ٢ لَاهِيَةٗ قُلُوبُهُمۡۗ وَأَسَرُّواْ ٱلنَّجۡوَى ٱلَّذِينَ ظَلَمُواْ هَلۡ هَٰذَآ إِلَّا بَشَرٞ مِّثۡلُكُمۡۖ أَفَتَأۡتُونَ ٱلسِّحۡرَ وَأَنتُمۡ تُبۡصِرُونَ ٣

2-3. ತಮ್ಮ ರಬ್‌ನ ವತಿಯ ಯಾವುದೇ ಹೊಸ ಬೋಧನೆಯು ಅವರೆಡೆಗೆ ಬಂದಾಗಲೆಲ್ಲ ಅವರು ಅದನ್ನು ವಿನೋದದಲ್ಲಿರುವವರಾಗಿಯೂ, ಅಲಕ್ಷ್ಯ ಹೃದಯದವರಾಗಿಯೂ ಹೊರತು ಆಲಿಸುತ್ತಿರಲಿಲ್ಲ. ಅಕ್ರಮಿಗಳು ಪರಸ್ಪರ ರಹಸ್ಯವಾಗಿ ಪಿಸುಗುಡುತ್ತಾ ಹೇಳುವರು: ‘ಇವರು ನಿಮ್ಮಂತಿರುವ ಒಬ್ಬ ಮನುಷ್ಯರಲ್ಲದೆ ಇನ್ನೇನಾದರೂ ಆಗಿರುವರೇ? ನೀವು ದೃಷ್ಟಿಯುಳ್ಳವರಾಗಿದ್ದೂ ಸಹ ಮಾಂತ್ರಿಕತೆಯ ಬಳಿಗೆ ತೆರಳುತ್ತಿರುವಿರಾ?’

قَالَ رَبِّي يَعۡلَمُ ٱلۡقَوۡلَ فِي ٱلسَّمَآءِ وَٱلۡأَرۡضِۖ وَهُوَ ٱلسَّمِيعُ ٱلۡعَلِيمُ ٤

4. ಅವರು (ಪ್ರವಾದಿ) ಹೇಳಿದರು: ‘ಆಕಾಶದಲ್ಲೂ, ಭೂಮಿಯಲ್ಲೂ ಹೇಳಲಾಗುವ ಮಾತನ್ನು ನನ್ನ ರಬ್ ಅರಿಯುವನು. ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು’.

بَلۡ قَالُوٓاْ أَضۡغَٰثُ أَحۡلَٰمِۭ بَلِ ٱفۡتَرَىٰهُ بَلۡ هُوَ شَاعِرٞ فَلۡيَأۡتِنَا بِـَٔايَةٖ كَمَآ أُرۡسِلَ ٱلۡأَوَّلُونَ ٥

5. ಅಲ್ಲ; ಅವರು ಹೇಳಿದರು: ‘ಇವು (ಕುರ್‌ಆನ್ ಸೂಕ್ತಿಗಳು) ಕೆಟ್ಟ ಕನಸುಗಳ ವೃತ್ತಾಂತಗಳಾಗಿವೆ. ಅಲ್ಲ; ಅದು ಅವರು (ಪ್ರವಾದಿ) ಸ್ವತಃ ರಚಿಸಿದ್ದಾಗಿದೆ. ಅಲ್ಲ, ಅವರೊಬ್ಬ ಕವಿಯಾಗಿರುವರು. ಆದರೆ, (ಅವರೇನಾದರೂ

1 ಪ್ರವಾದಿಗಳ ಸಂದೇಶದ ಕುರಿತು ವಿವರಣೆಗಳಿರುವುದರಿಂದ ಮತ್ತು ಅವರ ಚರಿತ್ರೆಗಳಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

ಪ್ರವಾದಿಯಾಗಿದ್ದರೆ) ಪೂರ್ವ ಪ್ರವಾದಿಗಳು ಯಾವ ದೃಷ್ಟಾಂತದೊಂದಿಗೆ ಕಳುಹಿಸಲ್ಪಟ್ಟಿದ್ದರೋ ಅಂತಹ ಒಂದನ್ನು ಇವರೂ ತಂದು ತೋರಿಸಲಿ’.

مَآ ءَامَنَتْ قَبْلَهُم مِّن قَرْيَةٍ أَهْلَكْنَٰهَآ أَفَهُمْ يُؤْمِنُونَ ﴿٦﴾

6. ಇವರಿಗಿಂತ ಮುಂಚೆ ನಾವು ನಾಶ ಮಾಡಿದ ಯಾವುದೇ ನಾಡಿನವರೂ ವಿಶ್ವಾಸವಿಡಲಿಲ್ಲ. ಹೀಗಿರುವಾಗ ಇವರು ವಿಶ್ವಾಸವಿಡುವರೇ?[1]

وَمَآ أَرْسَلْنَا قَبْلَكَ إِلَّا رِجَالًا نُّوحِىٓ إِلَيْهِمْ فَسْـَٔلُوٓا۟ أَهْلَ ٱلذِّكْرِ إِن كُنتُمْ لَا تَعْلَمُونَ ﴿٧﴾

7. ತಮಗಿಂತ ಮುಂಚೆ ಪುರುಷರಾಗಿರುವವರನ್ನು ಹೊರತು ಇತರ ಯಾರನ್ನೂ ನಾವು ಪ್ರವಾದಿಯಾಗಿ ಕಳುಹಿಸಿಲ್ಲ. ಅವರಿಗೆ ನಾವು ದಿವ್ಯಸಂದೇಶವನ್ನು ನೀಡುವೆವು. ನಿಮಗೆ ಅರಿವಿಲ್ಲವೆಂದಾದರೆ ಗ್ರಂಥದವರೊಂದಿಗೆ ಕೇಳಿ ನೋಡಿರಿ.

وَمَا جَعَلْنَٰهُمْ جَسَدًا لَّا يَأْكُلُونَ ٱلطَّعَامَ وَمَا كَانُوا۟ خَٰلِدِينَ ﴿٨﴾

8. ಅವರನ್ನು (ಪ್ರವಾದಿಗಳನ್ನು) ನಾವು ಆಹಾರ ಸೇವಿಸದ ಶರೀರಗಳನ್ನಾಗಿ ಮಾಡಿಲ್ಲ. ಅವರು ಶಾಶ್ವತರೂ ಆಗಿರಲಿಲ್ಲ.

ثُمَّ صَدَقْنَٰهُمُ ٱلْوَعْدَ فَأَنجَيْنَٰهُمْ وَمَن نَّشَآءُ وَأَهْلَكْنَا ٱلْمُسْرِفِينَ ﴿٩﴾

9. ತರುವಾಯ ಅವರೊಂದಿಗಿರುವ ವಾಗ್ದಾನದಲ್ಲಿ ನಾವು ಸತ್ಯಸಂಧತೆಯನ್ನು ಪಾಲಿಸಿದೆವು. ಅವರನ್ನು ಮತ್ತು ನಾವಿಚ್ಛಿಸಿದವರನ್ನು ರಕ್ಷಿಸಿದೆವು. ಹದ್ದುಮೀರಿದವರನ್ನು ನಾವು ನಾಶ ಮಾಡಿದೆವು.

لَقَدْ أَنزَلْنَآ إِلَيْكُمْ كِتَٰبًا فِيهِ ذِكْرُكُمْ أَفَلَا تَعْقِلُونَ ﴿١٠﴾

10. ಖಂಡಿತವಾಗಿಯೂ ನಾವು ನಿಮಗೊಂದು ಗ್ರಂಥವನ್ನು ಅವತೀರ್ಣಗೊಳಿಸಿರುವೆವು. ಅದರಲ್ಲಿ ನಿಮಗೆ ಉಪದೇಶವಿದೆ. ಆದರೂ ನೀವು ಚಿಂತಿಸುವುದಿಲ್ಲವೇ?

وَكَمْ قَصَمْنَا مِن قَرْيَةٍ كَانَتْ ظَالِمَةً وَأَنشَأْنَا بَعْدَهَا قَوْمًا ءَاخَرِينَ ﴿١١﴾

11. ಅಕ್ರಮ ನಿರತವಾಗಿದ್ದ ಎಷ್ಟೋ ನಾಡುಗಳನ್ನು ನಾವು ನಾಶಗೊಳಿಸಿರುವೆವು. ಅದರ ಬಳಿಕ ನಾವು ಬೇರೊಂದು ಜನತೆಯನ್ನು ಬೆಳೆಸಿದೆವು.

---

1 ಯಾವುದೇ ನಾಡಿಗೂ ಪ್ರವಾದಿಗಳನ್ನು ಕಳುಹಿಸಲಾದಾಗ ಅಲ್ಲಿನ ಜನರ ಪೈಕಿ ಕೆಲವೇ ಕೆಲವು ಮಂದಿ ಮಾತ್ರ ಅವಿರೋಧವಾಗಿ ಸತ್ಯವನ್ನು ಸ್ವೀಕರಿಸಲು ಮುಂದಾಗುತ್ತಿದ್ದರು. ಈ ಕಾರಣದಿಂದ ಆ ಪ್ರದೇಶವು ಅಲ್ಲಾಹುವಿನ ಶಿಕ್ಷೆಗೆ ಗುರಿಯಾಗುತ್ತಿತ್ತು ಮತ್ತು ಅಲ್ಲಾಹು ಸತ್ಯವಿಶ್ವಾಸಿಗಳನ್ನು ಆ ಶಿಕ್ಷೆಯಿಂದ ರಕ್ಷಿಸುತ್ತಿದ್ದನು.

12. ಹೀಗೆ ಅವರಿಗೆ ನಮ್ಮ ಶಿಕ್ಷೆಯ ಅನುಭವವಾದಾಗ ಅಗೋ ಅವರು ಅಲ್ಲಿಂದ ಓಡಿ ಪಾರಾಗಲು ಯತ್ನಿಸುತ್ತಿರುವರು.

فَلَمَّآ أَحَسُّواْ بَأۡسَنَآ إِذَا هُم مِّنۡهَا يَرۡكُضُونَ ١٢

13. (ಅವರೊಂದಿಗೆ ಹೇಳಲಾಯಿತು:) ಓಡದಿರಿ! ನಿಮಗೆ ಒದಗಿಸಲಾದ ಸುಖಾಡಂಬರಗಳೆಡೆಗೆ ಮತ್ತು ನಿಮ್ಮ ಭವನಗಳೆಡೆಗೆ ಮರಳಿರಿ. ನಿಮ್ಮೊಂದಿಗೆ ಪ್ರಶ್ನಿಸಲಾಗಲೂಬಹುದು.[1]

لَا تَرۡكُضُواْ وَٱرۡجِعُوٓاْ إِلَىٰ مَآ أُتۡرِفۡتُمۡ فِيهِ وَمَسَٰكِنِكُمۡ لَعَلَّكُمۡ تُسۡـَٔلُونَ ١٣

14. ಅವರು ಹೇಳಿದರು: 'ಅಯ್ಯೋ! ನಮ್ಮ ದುರದೃಷ್ಟವೇ! ಖಂಡಿತವಾಗಿಯೂ ನಾವು ಅಕ್ರಮಿಗಳಾಗಿರುವೆವು'.

قَالُواْ يَٰوَيۡلَنَآ إِنَّا كُنَّا ظَٰلِمِينَ ١٤

15. ತರುವಾಯ ಅವರನ್ನು ನಾವು ಕಟಾವು ಮಾಡಿದ ಫಸಲಿನಂತೆ ನಿಶ್ಚಲ ಸ್ಥಿತಿಯಲ್ಲಿಡುವವರೆಗೆ ಅವರ ರೋದನವು ಅದೇ ಆಗಿತ್ತು.

فَمَا زَالَت تِّلۡكَ دَعۡوَىٰهُمۡ حَتَّىٰ جَعَلۡنَٰهُمۡ حَصِيدًا خَٰمِدِينَ ١٥

16. ಆಕಾಶವನ್ನಾಗಲಿ, ಭೂಮಿಯನ್ನಾಗಲಿ ಅಥವಾ ಅವೆರಡರ ಮಧ್ಯೆಯಿರುವುದನ್ನಾಗಲಿ ನಾವು ವಿನೋದಕ್ಕಾಗಿ ಸೃಷ್ಟಿಸಿಲ್ಲ.

وَمَا خَلَقۡنَا ٱلسَّمَآءَ وَٱلۡأَرۡضَ وَمَا بَيۡنَهُمَا لَٰعِبِينَ ١٦

17. ಮನೋರಂಜನೆ ಉಂಟು ಮಾಡುವುದು ನಮ್ಮ ಉದ್ದೇಶವಾಗಿದ್ದರೆ ಅದನ್ನು ನಾವು ನಮ್ಮ ಬಳಿಯಿಂದಲೇ ಉಂಟುಮಾಡುತ್ತಿದ್ದೆವು. (ಆದರೆ) ನಾವು (ಅದನ್ನು) ಮಾಡುವವರಲ್ಲ.[2]

لَوۡ أَرَدۡنَآ أَن نَّتَّخِذَ لَهۡوًا لَّٱتَّخَذۡنَٰهُ مِن لَّدُنَّآ إِن كُنَّا فَٰعِلِينَ ١٧

18. ಆದರೆ ನಾವು ಸತ್ಯವನ್ನು ಅಸತ್ಯದ ಮೇಲೆ ಎಸೆಯುವೆವು. ಹಾಗೆಯೇ ಅದು ಅಸತ್ಯವನ್ನು ನಾಶ ಮಾಡುವುದು. ಅದರೊಂದಿಗೆ ಅಸತ್ಯವು ಅಳಿದುಹೋಗುವುದು. ನೀವು (ಅಲ್ಲಾಹುವಿನ ಮೇಲೆ ಸುಳ್ಳು ಸುಳ್ಳಾಗಿ) ಆರೋಪಿಸುವುದರ ನಿಮಿತ್ತ ನಿಮಗೆ ವಿನಾಶವು ಕಾದಿದೆ.

بَلۡ نَقۡذِفُ بِٱلۡحَقِّ عَلَى ٱلۡبَٰطِلِ فَيَدۡمَغُهُۥ فَإِذَا هُوَ زَاهِقٞۚ وَلَكُمُ ٱلۡوَيۡلُ مِمَّا تَصِفُونَ ١٨

1 ನೀವು ನಾಯಕರಲ್ಲವೇ? ಮನವಿ ಮತ್ತು ದೂರುಗಳೊಂದಿಗೆ ಅನೇಕ ಮಂದಿ ನಿಮ್ಮನ್ನು ನಿರೀಕ್ಷಿಸುತ್ತಿರಬಹುದು? ನೀವು ಹೀಗೆ ಓಡಿಹೋಗುವುದು ಸರಿಯೇ? ಎಂದು ಅಲ್ಲಾಹು ಅವರನ್ನು ಅಪಹಾಸ್ಯ ಮಾಡುತ್ತಿದ್ದಾನೆ.

2 ಅಲ್ಲಾಹು ಇಚ್ಛಿಸಿದರೆ ಮನರಂಜನೆಗಳಲ್ಲಿ ನಿರತನಾಗಲು ಅವನಿಗೆ ಸಾಧ್ಯವಿದೆ. ಆದರೆ ನೈಜ ಉದ್ದೇಶದಿಂದಲೇ ಹೊರತು ಅವನು ಏನನ್ನೂ ಸೃಷ್ಟಿಸಿಲ್ಲ.

**19.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರೆಲ್ಲರೂ ಅವನಿಗೆ ಸೇರಿದವರಾಗಿರುವರು. ಅವನ ಬಳಿಯಿರುವವರು (ಮಲಕ್‌ಗಳು) ಅವನನ್ನು ಆರಾಧಿಸುವುದನ್ನು ಬಿಟ್ಟು ಅಹಂಕಾರ ಪಡಲಾರರು. ಅವರಿಗೆ ದಣಿವೂ ಆಗಲಾರದು.

وَلَهُۥ مَن فِي ٱلسَّمَٰوَٰتِ وَٱلۡأَرۡضِۚ وَمَنۡ
عِندَهُۥ لَا يَسۡتَكۡبِرُونَ عَنۡ عِبَادَتِهِۦ وَلَا
يَسۡتَحۡسِرُونَ ١٩

**20.** ಅವರು ರಾತ್ರಿ–ಹಗಲು (ಅಲ್ಲಾಹುವಿನ ಪರಿಪಾವನತೆಯನ್ನು) ಕೊಂಡಾಡುತ್ತಿರುವರು. ಅವರಿಗೆ ಸುಸ್ತಾಗಲಾರದು.

يُسَبِّحُونَ ٱلَّيۡلَ وَٱلنَّهَارَ لَا يَفۡتُرُونَ ٢٠

**21.** (ಮರಣಹೊಂದಿದವರನ್ನು) ಜೀವಂತಗೊಳಿಸುವ ಸಾಮರ್ಥ್ಯವಿರುವ ಯಾವುದಾದರೂ ಆರಾಧ್ಯರನ್ನು ಅವರು ಭೂಮಿಯಿಂದಲೇ ಪಡೆದಿರುವರೇ?

أَمِ ٱتَّخَذُوٓاْ ءَالِهَةٗ مِّنَ ٱلۡأَرۡضِ هُمۡ
يُنشِرُونَ ٢١

**22.** ಅವುಗಳಲ್ಲಿ (ಆಕಾಶ ಭೂಮಿಗಳಲ್ಲಿ) ಅಲ್ಲಾಹುವಿನ ಹೊರತು ಬೇರೆ ಆರಾಧ್ಯರಿರುತ್ತಿದ್ದರೆ ಅವೆರಡೂ ಸರ್ವನಾಶವಾಗಿ ಬಿಡುತ್ತಿದ್ದವು.[1] ಅವರು ವರ್ಣಿಸುವುದರಿಂದೆಲ್ಲ ಸಿಂಹಾಸನದ ರಬ್ಬಾದ ಅಲ್ಲಾಹು ಎಷ್ಟೋ ಪರಿಪಾವನನಾಗಿರುವನು.

لَوۡ كَانَ فِيهِمَآ ءَالِهَةٌ إِلَّا ٱللَّهُ لَفَسَدَتَاۚ
فَسُبۡحَٰنَ ٱللَّهِ رَبِّ ٱلۡعَرۡشِ عَمَّا
يَصِفُونَ ٢٢

**23.** ಅವನೇನು ಮಾಡುವನೋ ಅದರ ಕುರಿತು ಅವನೊಂದಿಗೆ ಪ್ರಶ್ನಿಸಲಾಗದು. ಆದರೆ ಅವರನ್ನು ಪ್ರಶ್ನಿಸಲಾಗುವುದು.

لَا يُسۡـَٔلُ عَمَّا يَفۡعَلُ وَهُمۡ يُسۡـَٔلُونَ ٢٣

**24.** ಅವರು ಅವನ(ಅಲ್ಲಾಹುವಿನ) ಹೊರತು ಅನ್ಯ ಆರಾಧ್ಯರನ್ನು ಮಾಡಿಕೊಂಡಿರುವರೇ? ಹೇಳಿರಿ: ‘(ಅದಕ್ಕಿರುವ) ನಿಮ್ಮ ಪುರಾವೆಯನ್ನು ತನ್ನಿರಿ’. ಇದು ನನ್ನ ಜೊತೆಗಿರುವವರಿಗೂ, ನನಗಿಂತ ಮುಂಚಿನವರಿಗೂ ಇರುವ ಉಪದೇಶವಾಗಿದೆ.[2] ಆದರೆ ಅವರಲ್ಲಿ ಹೆಚ್ಚಿನವರೂ ಸತ್ಯವನ್ನು ಅರಿತುಕೊಳ್ಳಲಾರರು. ಆದ್ದರಿಂದ ಅವರು ವಿಮುಖರಾಗುತ್ತಿರುವರು.

أَمِ ٱتَّخَذُواْ مِن دُونِهِۦٓ ءَالِهَةٗۖ قُلۡ هَاتُواْ
بُرۡهَٰنَكُمۡۖ هَٰذَا ذِكۡرُ مَن مَّعِيَ وَذِكۡرُ مَن
قَبۡلِيۚ بَلۡ أَكۡثَرُهُمۡ لَا يَعۡلَمُونَ ٱلۡحَقَّۖ فَهُم
مُّعۡرِضُونَ ٢٤

---

1 ಪ್ರಪಂಚದ ಆಡಳಿತದಲ್ಲಿ ಒಂದಕ್ಕಿಂತ ಹೆಚ್ಚು ಶಕ್ತಿಗಳಿಗೆ ಪಾಲಿರುತ್ತಿದ್ದರೆ ಅವರ ಹಿತಾಸಕ್ತಿಗಳು ಪರಸ್ಪರ ಸಂಘರ್ಷಕ್ಕೊಳಗಾಗಿ ಅದು ಪ್ರಪಂಚದ ಸರ್ವನಾಶಕ್ಕೆ ಕಾರಣವಾಗುತ್ತಿತ್ತು.

2 ಎಲ್ಲ ಸಮುದಾಯಗಳಿಗೂ ನೀಡಲಾದ ದಿವ್ಯ ಸಂದೇಶವು ಮೂಲಭೂತವಾಗಿ ಏಕರೂಪದಲ್ಲಿತ್ತು.

25. ‘ನನ್ನ ಹೊರತು ಅನ್ಯ ಆರಾಧ್ಯರಿಲ್ಲ. ಆದ್ದರಿಂದ ನನ್ನನ್ನು ಆರಾಧಿಸಿರಿ’ ಎಂಬ ದಿವ್ಯಸಂದೇಶ ನೀಡದೆ ತಮಗಿಂತ ಮುಂಚೆ ಯಾವುದೇ ಸಂದೇಶವಾಹಕರನ್ನೂ ನಾವು ಕಳುಹಿಸಿಲ್ಲ.

وَمَآ أَرۡسَلۡنَا مِن قَبۡلِكَ مِن رَّسُولٍ إِلَّا نُوحِيٓ إِلَيۡهِ أَنَّهُۥ لَآ إِلَٰهَ إِلَّآ أَنَا۠ فَٱعۡبُدُونِ ﴿٢٥﴾

26. ಅವರು ಹೇಳಿದರು: ‘ಪರಮ ದಯಾಮಯನು ಸಂತತಿಯನ್ನು ಮಾಡಿಕೊಂಡಿರುವನು’. ಅವನು ಪರಮ ಪಾವನನು. ಆದರೆ; ಅವರು (ಮಲಕ್‌ಗಳು) ಅವನ ಗೌರವಾನ್ವಿತ ದಾಸರು ಮಾತ್ರವಾಗಿರುವರು.

وَقَالُواْ ٱتَّخَذَ ٱلرَّحۡمَٰنُ وَلَدٗاۗ سُبۡحَٰنَهُۥۚ بَلۡ عِبَادٞ مُّكۡرَمُونَ ﴿٢٦﴾

27. ಅವನು ಮಾತನಾಡುವುದಕ್ಕೆ ಮುಂಚಿತವಾಗಿ ಅವರು ಮಾತನಾಡಲಾರರು. ಅವರು ಅವನ ಆಜ್ಞಾನುಸಾರ ಕಾರ್ಯ ನಿರ್ವಹಿಸುವರು.(1)

لَا يَسۡبِقُونَهُۥ بِٱلۡقَوۡلِ وَهُم بِأَمۡرِهِۦ يَعۡمَلُونَ ﴿٢٧﴾

28. ಅವರ ಮುಂದಿರುವುದನ್ನೂ, ಹಿಂದಿರುವುದನ್ನೂ ಅವನು ಅರಿಯುವನು. ಅವನು ಸಂತೃಪ್ತಿ ಹೊಂದಿದವರಿಗೆ ಹೊರತು ಅವರು ಶಿಫಾರಸ್ಸು ಮಾಡಲಾರರು. ಅವರು ಅವನ ಭಯದಿಂದ ನಡುಗುತ್ತಿರುವರು.

يَعۡلَمُ مَا بَيۡنَ أَيۡدِيهِمۡ وَمَا خَلۡفَهُمۡ وَلَا يَشۡفَعُونَ إِلَّا لِمَنِ ٱرۡتَضَىٰ وَهُم مِّنۡ خَشۡيَتِهِۦ مُشۡفِقُونَ ﴿٢٨﴾

29. ‘ಅವನಲ್ಲದೆ (ಅಲ್ಲಾಹುವಲ್ಲದೆ) ನಾನೂ ಆರಾಧ್ಯನಾಗಿರುವೆನು’ ಎಂದು ಅವರಲ್ಲಿ ಯಾರಾದರೂ ಹೇಳುವುದಾದರೆ ಅವನಿಗೆ ನಾವು ನರಕಾಗ್ನಿಯನ್ನು ಪ್ರತಿಫಲವಾಗಿ ನೀಡುವೆವು. ಅಕ್ರಮಿಗಳಿಗೆ ನಾವು ಹೀಗೆಯೇ ಪ್ರತಿಫಲ ನೀಡುವೆವು.

۞وَمَن يَقُلۡ مِنۡهُمۡ إِنِّيٓ إِلَٰهٞ مِّن دُونِهِۦ فَذَٰلِكَ نَجۡزِيهِ جَهَنَّمَۚ كَذَٰلِكَ نَجۡزِي ٱلظَّٰلِمِينَ ﴿٢٩﴾

30. ಆಕಾಶಗಳು ಮತ್ತು ಭೂಮಿಯು ಪರಸ್ಪರ ಅಂಟಿಕೊಂಡಿದ್ದವು.(2) ತರುವಾಯ

أَوَلَمۡ يَرَ ٱلَّذِينَ كَفَرُوٓاْ أَنَّ ٱلسَّمَٰوَٰتِ

1 ಮಲಕ್‌ಗಳು ಅಲ್ಲಾಹುವಿನ ಹೆಣ್ಣುಮಕ್ಕಳೆಂದು ಹೇಳುವವರ ವಾದವನ್ನು ಈ ಸೂಕ್ತಿಯು ಖಂಡಿಸುತ್ತದೆ.

2 ‘ರತ್‌ಖ್’ ಎಂಬ ಪದಕ್ಕೆ ಅಂಟಿಕೊಂಡಿರುವುದು ಎಂಬರ್ಥ ನೀಡಲಾಗಿದೆ. ಮುಚ್ಚಿಕೊಂಡಿರುವುದು ಎಂಬರ್ಥವನ್ನು ಕೆಲವರು ನೀಡಿದ್ದಾರೆ. ಇದರ ಪ್ರಕಾರ ಆಯತ್ತಿನ ಅರ್ಥ: ಆಕಾಶ ಮತ್ತು ಭೂಮಿ ಮುಚ್ಚಿದ ಸ್ಥಿತಿಯಲ್ಲಾಗಿದ್ದವು ಮತ್ತು ತರುವಾಯ ನಾವು ಅವುಗಳನ್ನು ಬೇರ್ಪಡಿಸಿರುವುದನ್ನು ಸತ್ಯನಿಷೇಧಿಗಳು ಕಾಣುವುದಿಲ್ಲವೇ? ಎಂದಾಗುತ್ತದೆ. ವಾತಾವರಣ ಮತ್ತು ಭೂಮಿಯು ಒಣಗಿಹೋದ ಬಳಿಕ ಮಳೆಯನ್ನು ಸುರಿಸಿ ಪ್ರಕೃತಿಯನ್ನು ಪ್ರತ್ಯುತ್ಪಾದನೆಗಾಗಿ ತೆರೆದಿಡುವುದನ್ನು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ ಎಂದು ಪೂರ್ವಿಕ ವ್ಯಾಖ್ಯಾನಕಾರರು ಹೇಳಿದ್ದಾರೆ. ಆಕಾಶಗಳು ಮತ್ತು ಭೂಮಿಯು ರಚನೆಗೊಳ್ಳುವುದಕ್ಕೆ ಮುಂಚೆ ಆದಿಪಿಂಡವು ಏಕ ಪದಾರ್ಥವಾಗಿ

وَٱلْأَرْضَ كَانَتَا رَتْقًا فَفَتَقْنَٰهُمَا وَجَعَلْنَا مِنَ ٱلْمَآءِ كُلَّ شَىْءٍ حَىٍّ أَفَلَا يُؤْمِنُونَ ﴿٣٠﴾

ಅವುಗಳನ್ನು ನಾವು ಬೇರ್ಪಡಿಸಿದೆವು ಎಂದು ಸತ್ಯನಿಷೇಧಿಗಳು ಕಾಣುವುದಿಲ್ಲವೇ? ಜೀವವಿರುವ ಎಲ್ಲ ವಸ್ತುಗಳನ್ನೂ ನಾವು ನೀರಿನಿಂದ ಉಂಟುಮಾಡಿರುವೆವು.[1] ಹೀಗಿದ್ದೂ ಅವರು ವಿಶ್ವಾಸವಿಡುವುದಿಲ್ಲವೇ?

وَجَعَلْنَا فِى ٱلْأَرْضِ رَوَٰسِىَ أَن تَمِيدَ بِهِمْ وَجَعَلْنَا فِيهَا فِجَاجًا سُبُلًا لَّعَلَّهُمْ يَهْتَدُونَ ﴿٣١﴾

**31.** ಭೂಮಿಯು ಅವರೊಂದಿಗೆ ಅಲುಗಾಡದಿರಲು ಅದರಲ್ಲಿ ನಾವು ನಾಟಿನಿಂತಿರುವ ಪರ್ವತಗಳನ್ನು ಉಂಟುಮಾಡಿದೆವು.[2] ಅವರು ದಾರಿ ಕಾಣುವ ಸಲುವಾಗಿ ಅವುಗಳಲ್ಲಿ (ಪರ್ವತಗಳಲ್ಲಿ) ನಾವು ವಿಶಾಲವಾದ ಹಾದಿಗಳನ್ನು ಮಾಡಿಕೊಟ್ಟೆವು.

وَجَعَلْنَا ٱلسَّمَآءَ سَقْفًا مَّحْفُوظًا وَهُمْ عَنْ ءَايَٰتِهَا مُعْرِضُونَ ﴿٣٢﴾

**32.** ಆಕಾಶವನ್ನು ನಾವು ಸುರಕ್ಷಿತ ಮೇಲ್ಛಾವಣಿಯನ್ನಾಗಿ ಮಾಡಿದೆವು.[3] ಅವರು ಅದರ (ಆಕಾಶದ) ದೃಷ್ಟಾಂತಗಳನ್ನು ಗಮನಿಸದೆ ನಿರ್ಲಕ್ಷ್ಯರಾಗಿರುವರು.

وَهُوَ ٱلَّذِى خَلَقَ ٱلَّيْلَ وَٱلنَّهَارَ وَٱلشَّمْسَ وَٱلْقَمَرَ كُلٌّ فِى فَلَكٍ يَسْبَحُونَ ﴿٣٣﴾

**33.** ರಾತ್ರಿ, ಹಗಲು, ಸೂರ್ಯ ಮತ್ತು ಚಂದ್ರರನ್ನು ಸೃಷ್ಟಿಸಿದವನು ಅವನಾಗಿರುವನು. ಎಲ್ಲವೂ ಒಂದು ನಿಶ್ಚಿತ ಕಕ್ಷೆಯಲ್ಲಿ ಈಜುತ್ತಿರುವುವು.

وَمَا جَعَلْنَا لِبَشَرٍ مِّن قَبْلِكَ ٱلْخُلْدَ أَفَإِي۟ن مِّتَّ فَهُمُ ٱلْخَٰلِدُونَ ﴿٣٤﴾

**34.** (ಓ ಪ್ರವಾದಿಯವರೇ!) ತಮಗಿಂತ ಮುಂಚೆ ಯಾವ ಮನುಷ್ಯನಿಗೂ ನಾವು ಶಾಶ್ವತತೆಯನ್ನು ನೀಡಿಲ್ಲ. ಹೀಗಿರುವಾಗ ತಾವು

---

ಅಸ್ತಿತ್ವದಲ್ಲಿತ್ತು. ತರುವಾಯ ಒಂದು ಮಹಾ ಆಸ್ಫೋಟದ ಮೂಲಕ ಅವು ಪರಸ್ಪರ ಬೇರ್ಪಟ್ಟು ಇಂದಿನ ಸ್ಥಿತಿಯನ್ನು ತಲುಪಿದವು ಎಂದು ಆಧುನಿಕ ವಿಜ್ಞಾನವು ಹೇಳುತ್ತದೆ. 'ರತ್‌ಕ್' ಎಂಬ ಪದಕ್ಕೆ ಭಾಷಿಕವಾಗಿ ಹೆಚ್ಚು ಹೊಂದಾಣಿಕೆಯಿರುವ ಅರ್ಥವು ಅಂಟಿಕೊಂಡಿರುವುದು ಎಂದಾಗಿದೆ. ಇತ್ತೀಚಿನ ಕುರ್‌ಆನ್ ವ್ಯಾಖ್ಯಾನಕಾರರೆಲ್ಲರೂ ಈ ಅರ್ಥವನ್ನು ಸ್ವೀಕಾರ ಮಾಡಿದ್ದಾರೆ. ತನ್ನಿಮಿತ್ತ ಈ ಸೂಕ್ತಿಯು ಪ್ರಪಂಚೋತ್ಪತ್ತಿಯ ಬಗ್ಗೆಯಿರುವ ಆಧುನಿಕ ದೃಷ್ಟಿಕೋನದೊಂದಿಗೆ ಹೊಂದಿಕೆಯಾಗುತ್ತದೆ. ಕುರ್‌ಆನ್ ಅವತೀರ್ಣಕಾಲದಲ್ಲಿ ಜಗತ್ತಿಗೆ ಅಜ್ಞಾತವಾಗಿದ್ದ ಭೌತಿಕ ಸತ್ಯದ ಬಗ್ಗೆ ಪ್ರಸ್ತಾಪಿಸುವ ಈ ಸೂಕ್ತಿಯು ಕುರ್‌ಆನಿನ ದೈವಿಕತೆಗೆ ಸಾಕ್ಷಿ ವಹಿಸುತ್ತದೆ.

1 ನೀರು ಪ್ರತಿಯೊಂದು ಜೀವಕೋಶದ ಮುಖ್ಯ ಘಟಕವಾಗಿದೆ. ನೀರಿಲ್ಲದೆ ಜೀವವು ಅಸ್ತಿತ್ವದಲ್ಲಿರಲಾರದು.

2 ಭೂಕಂಪನಗಳನ್ನು ಕಡಿಮೆಗೊಳಿಸುವಲ್ಲಿ ಪರ್ವತಗಳು ವಹಿಸುವ ಪಾತ್ರದೆಡೆಗೆ ಭೂಗರ್ಭ ಶಾಸ್ತ್ರದ ಆಧುನಿಕ ಸಂಶೋಧನೆಗಳು ಸೂಚನೆ ನೀಡುತ್ತವೆ.

3 ಬಾಹ್ಯಾಕಾಶದಿಂದ ಬೀಳುತ್ತಿರುವ ಉಲ್ಕೆಗಳಿಂದ ಮತ್ತು ಮಾರಕವಾದ ಕೋಸ್ಮಿಕ್ ಕಿರಣಗಳಿಂದ ವಾಯುಮಂಡಲವು ಭೂಮಿಯನ್ನು ರಕ್ಷಿಸುತ್ತದೆ. ಭೂಮಿಯ ವಾಯುಮಂಡಲವು ನಮ್ಮ ಮೇಲೆ ಸುಭದ್ರವಾಗಿರುವ ಒಂದು ಮೇಲ್ಛಾವಣಿಯಂತೆ ವರ್ತಿಸುತ್ತದೆ. ಇದನ್ನೇ ಇಲ್ಲಿ ಸುರಕ್ಷಿತ ಮೇಲ್ಛಾವಣಿ ಎನ್ನಲಾಗಿರಬಹುದು.

ಮರಣಹೊಂದಿದರೆ ಅವರು ಶಾಶ್ವತರಾಗಿ ಉಳಿಯುವವರೇ?

**35.** ಪ್ರತಿಯೊಂದು ಶರೀರವೂ ಮರಣವನ್ನು ಸವಿಯಲಿದೆ. ನಾವು ಕೆಡುಕು ಮತ್ತು ಒಳಿತುಗಳನ್ನು ಪರೀಕ್ಷೆಯನ್ನಾಗಿ ಮಾಡಿ ನಿಮ್ಮನ್ನು ಪರೀಕ್ಷಿಸುವೆವು.(1) ನಿಮ್ಮನ್ನು ನಮ್ಮ ಕಡೆಗೇ ಮರಳಿಸಲಾಗುವುದು.

كُلُّ نَفْسٍ ذَآئِقَةُ ٱلْمَوْتِ ۗ وَنَبْلُوكُم بِٱلشَّرِّ وَٱلْخَيْرِ فِتْنَةً ۖ وَإِلَيْنَا تُرْجَعُونَ ﴿٣٥﴾

**36.** ಸತ್ಯನಿಷೇಧಿಗಳು ತಮ್ಮನ್ನು ಕಂಡಾಗ 'ನಿಮ್ಮ ಆರಾಧ್ಯರನ್ನು ದೂಷಿಸಿ ಮಾತನಾಡುವವನು ಇವನೇ ಏನು?' ಎನ್ನುತ್ತಾ ತಮ್ಮನ್ನು ಕೇವಲ ಹಾಸ್ಯವಸ್ತುವನ್ನಾಗಿ ಮಾಡುವರು. ಅವರಂತೂ ಪರಮ ದಯಾಮಯನ ಉಪದೇಶದಲ್ಲಿ ಅವಿಶ್ವಾಸವಿಟ್ಟವರಾಗಿರುವರು.

وَإِذَا رَءَاكَ ٱلَّذِينَ كَفَرُوٓا۟ إِن يَتَّخِذُونَكَ إِلَّا هُزُوًا أَهَـٰذَا ٱلَّذِى يَذْكُرُ ءَالِهَتَكُمْ وَهُم بِذِكْرِ ٱلرَّحْمَـٰنِ هُمْ كَـٰفِرُونَ ﴿٣٦﴾

**37.** ಮನುಷ್ಯನು ಆತುರಪಡುವವನಾಗಿಯೇ ಸೃಷ್ಟಿಸಲಾಗಿರುವನು. ನಾನು ನನ್ನ ದೃಷ್ಟಾಂತಗಳನ್ನು ಮುಂದೆ ನಿಮಗೆ ತೋರಿಸಿಕೊಡುವೆನು. ಆದ್ದರಿಂದ ನೀವು ನನ್ನೊಂದಿಗೆ ಆತುರಪಡದಿರಿ.

خُلِقَ ٱلْإِنسَـٰنُ مِنْ عَجَلٍ ۚ سَأُو۟رِيكُمْ ءَايَـٰتِى فَلَا تَسْتَعْجِلُونِ ﴿٣٧﴾

**38.** 'ನೀವು ಸತ್ಯವಂತರಾಗಿದ್ದರೆ ಈ ವಾಗ್ದಾನವು ಯಾವಾಗ (ನೆರವೇರಲಿರುವುದು)?' ಎಂದು ಅವರು ಕೇಳುವರು.

وَيَقُولُونَ مَتَىٰ هَـٰذَا ٱلْوَعْدُ إِن كُنتُمْ صَـٰدِقِينَ ﴿٣٨﴾

**39.** ಅವರಿಗೆ ತಮ್ಮ ಮುಖಗಳಿಂದಲೂ, ಬೆನ್ನುಗಳಿಂದಲೂ ನರಕಾಗ್ನಿಯನ್ನು ತಡೆಯಲು ಸಾಧ್ಯವಾಗದ ಮತ್ತು ಅವರಿಗೆ ಯಾವುದೇ ಸಹಾಯವೂ ಸಿಗದ ಒಂದು ಸಮಯದ ಕುರಿತು ಆ ಸತ್ಯನಿಷೇಧಿಗಳು ಅರಿತುಕೊಂಡಿದ್ದರೆ!

لَوْ يَعْلَمُ ٱلَّذِينَ كَفَرُوا۟ حِينَ لَا يَكُفُّونَ عَن وُجُوهِهِمُ ٱلنَّارَ وَلَا عَن ظُهُورِهِمْ وَلَا هُمْ يُنصَرُونَ ﴿٣٩﴾

**40.** ಅಲ್ಲ; ಅದು (ಅಂತ್ಯಘಳಿಗೆ) ಅವರೆಡೆಗೆ ಹಠಾತ್ತನೆ ಬರಲಿದೆ. ಆಗ ಅದು ಅವರನ್ನು ದಿಗ್ಭ್ರಾಂತರನ್ನಾಗಿಸಲಿದೆ. ಅದನ್ನು ತಡೆಯಲು

بَلْ تَأْتِيهِم بَغْتَةً فَتَبْهَتُهُمْ فَلَا يَسْتَطِيعُونَ رَدَّهَا وَلَا هُمْ يُنظَرُونَ ﴿٤٠﴾

---

1 ಲಾಭ ನಷ್ಟಗಳುಂಟಾಗುವಾಗ ಮನುಷ್ಯನ ಪ್ರತಿಕ್ರಿಯೆಯು ಇಸ್ಲಾಮಿಗೆ ಪೂರಕವಾಗಿರುವುದೋ ಅಥವಾ ವಿರುದ್ಧವಾಗಿರುವುದೋ ಎಂದು ಅಲ್ಲಾಹು ಪ್ರತಿಯೊಬ್ಬರನ್ನೂ ಪರೀಕ್ಷಿಸುವನು.

ಅವರಿಗೆ ಸಾಧ್ಯವಾಗದು. ಅವರಿಗೆ ಕಾಲಾವಕಾಶವೂ ದೊರೆಯಲಾರದು.

41. ತಮಗಿಂತ ಮುಂಚೆ ಅನೇಕ ಸಂದೇಶವಾಹಕರು ಅಪಹಾಸ್ಯಕ್ಕೀಡಾಗಿರುವರು. ತರುವಾಯ ಅವರನ್ನು ಅಪಹಾಸ್ಯ ಮಾಡಿ ತಿರಸ್ಕರಿಸಿದವರನ್ನು ಅವರು ಅಪಹಾಸ್ಯ ಮಾಡುತ್ತಿದ್ದುದು (ಶಿಕ್ಷೆಯು) ಆವರಿಸಿಬಿಟ್ಟಿತು.

وَلَقَدِ ٱسۡتُهۡزِئَ بِرُسُلٖ مِّن قَبۡلِكَ فَحَاقَ بِٱلَّذِينَ سَخِرُواْ مِنۡهُم مَّا كَانُواْ بِهِۦ يَسۡتَهۡزِءُونَ ﴿٤١﴾

42. (ಓ ಪ್ರವಾದಿಯವರೇ!) ಕೇಳಿರಿ: 'ಪರಮ ದಯಾಮಯನಿಂದ ನಿಮ್ಮನ್ನು ರಾತ್ರಿ ಮತ್ತು ಹಗಲು ರಕ್ಷಣೆ ಮಾಡುವವರು ಯಾರು?' ಅಲ್ಲ; ಅವರು ತಮ್ಮ ರಬ್‌ನ ಉಪದೇಶದಿಂದ ವಿಮುಖರಾಗಿರುವರು.

قُلۡ مَن يَكۡلَؤُكُم بِٱلَّيۡلِ وَٱلنَّهَارِ مِنَ ٱلرَّحۡمَٰنِۗ بَلۡ هُمۡ عَن ذِكۡرِ رَبِّهِم مُّعۡرِضُونَ ﴿٤٢﴾

43. ಅಥವಾ, ಅವರನ್ನು ರಕ್ಷಿಸಲು ನಮ್ಮ ಹೊರತು ಅನ್ಯ ಆರಾಧ್ಯರು ಅವರಿಗಿರುವರೇ? ಸ್ವತಃ ತಮಗೇ ಸಹಾಯ ಮಾಡಲು ಅವರಿಗೆ (ಆ ಆರಾಧ್ಯರಿಗೆ) ಸಾಧ್ಯವಾಗಲಾರದು. ನಮ್ಮ ಕಡೆಯಿಂದಲೂ ಅವರಿಗೆ ಸಹಾಯವು ಸಿಗಲಾರದು.

أَمۡ لَهُمۡ ءَالِهَةٞ تَمۡنَعُهُم مِّن دُونِنَاۚ لَا يَسۡتَطِيعُونَ نَصۡرَ أَنفُسِهِمۡ وَلَا هُم مِّنَّا يُصۡحَبُونَ ﴿٤٣﴾

44. ಅಲ್ಲ; ಅವರಿಗೂ ಅವರ ಪೂರ್ವಿಕರಿಗೂ ನಾವು ಜೀವನಾನುಕೂಲತೆಯನ್ನು ನೀಡಿದೆವು. ಹೀಗೆ ಅವರು ದೀರ್ಘಕಾಲ ಬಾಳಿ ಬದುಕಿದರು. ನಾವು ಭೂಮಿಯನ್ನು ಅದರ ಅಂಚುಗಳಿಂದ ಕುಗ್ಗಿಸುತ್ತಿರುವುದನ್ನು ಅವರು ಕಾಣುವುದಿಲ್ಲವೇ?[1] ಹೀಗಿದ್ದೂ ಅವರು ವಿಜಯಿಗಳಾಗುವರೇ?

بَلۡ مَتَّعۡنَا هَٰٓؤُلَآءِ وَءَابَآءَهُمۡ حَتَّىٰ طَالَ عَلَيۡهِمُ ٱلۡعُمُرُۗ أَفَلَا يَرَوۡنَ أَنَّا نَأۡتِي ٱلۡأَرۡضَ نَنقُصُهَا مِنۡ أَطۡرَافِهَآۚ أَفَهُمُ ٱلۡغَٰلِبُونَ ﴿٤٤﴾

45. (ಓ ಪ್ರವಾದಿಯವರೇ!) ಹೇಳಿರಿ: 'ನಾನು ನಿಮಗೆ ಎಚ್ಚರಿಕೆ ನೀಡುತ್ತಿರುವುದು ದಿವ್ಯ ಸಂದೇಶದ ಪ್ರಕಾರ ಮಾತ್ರವಾಗಿದೆ'. ಎಚ್ಚರಿಕೆ ನೀಡಲಾಗುವಾಗ ಕಿವುಡರು ಆ ಕರೆಯನ್ನು ಕೇಳಿಸಿಕೊಳ್ಳಲಾರರು.

قُلۡ إِنَّمَآ أُنذِرُكُم بِٱلۡوَحۡيِۚ وَلَا يَسۡمَعُ ٱلصُّمُّ ٱلدُّعَآءَ إِذَا مَا يُنذَرُونَ ﴿٤٥﴾

1 ಸತ್ಯನಿಷೇಧಿಗಳ ಭೂಪ್ರದೇಶಗಳು ಸತ್ಯವಿಶ್ವಾಸಿಗಳ ವಶಕ್ಕೊಳಗಾಗುವುದರ ಸೂಚನೆಯಾಗಿರಬಹುದು.

46. ತಮ್ಮ ರಬ್‌ನ ಶಿಕ್ಷೆಯಿಂದ ಒಂದು ಲಘು ವಾದ ಶ್ವಾಸವು ಅವರನ್ನು ಸ್ಪರ್ಶಿಸುವುದಾದರೆ ಖಂಡಿತವಾಗಿಯೂ ಅವರು ಹೇಳುವರು: 'ಅಯ್ಯೋ! ನಮ್ಮ ದುರದೃಷ್ಟವೇ! ಖಂಡಿತವಾಗಿಯೂ ನಾವು ಅಕ್ರಮಿಗಳಾಗಿ ಬಿಟ್ಟಿರುವೆವು'.

وَلَئِن مَّسَّتۡهُمۡ نَفۡحَةٞ مِّنۡ عَذَابِ رَبِّكَ لَيَقُولُنَّ يَٰوَيۡلَنَآ إِنَّا كُنَّا ظَٰلِمِينَ ٤٦

47. ಪುನರುತ್ಥಾನ ದಿನದಂದು ನಾವು ನ್ಯಾಯ ಪೂರ್ಣವಾದ ತಕ್ಕಡಿಗಳನ್ನು[1] ಸ್ಥಾಪಿಸುವೆವು. ಆಗ ಯಾರೊಂದಿಗೂ ಕಿಂಚಿತ್ತೂ ಅಕ್ರಮವೆಸಗಲಾಗದು. ಅದು (ಕರ್ಮವು) ಒಂದು ಸಾಸಿವೆ ಕಾಳಿನಷ್ಟು ತೂಕವಿರುವುದಾದರೂ ನಾವು ಅದನ್ನು ತರುವೆವು. ವಿಚಾರಣೆ ಮಾಡುವವರಾಗಿ ನಾವು ಸಾಕು.

وَنَضَعُ ٱلۡمَوَٰزِينَ ٱلۡقِسۡطَ لِيَوۡمِ ٱلۡقِيَٰمَةِ فَلَا تُظۡلَمُ نَفۡسٞ شَيۡـٔٗاۖ وَإِن كَانَ مِثۡقَالَ حَبَّةٖ مِّنۡ خَرۡدَلٍ أَتَيۡنَا بِهَاۗ وَكَفَىٰ بِنَا حَٰسِبِينَ ٤٧

48. ನಾವು ಮೂಸಾ ಮತ್ತು ಹಾರೂನ್‌ಗೆ ಸತ್ಯಾಸತ್ಯ ವಿವೇಚನೆಗಿರುವ ಪುರಾವೆಯನ್ನು, ಪ್ರಕಾಶವನ್ನು ಮತ್ತು ಭಯಭಕ್ತಿ ಪಾಲಿಸುವವರಿಗಿರುವ ಉಪದೇಶವನ್ನು ನೀಡಿದೆವು.

وَلَقَدۡ ءَاتَيۡنَا مُوسَىٰ وَهَٰرُونَ ٱلۡفُرۡقَانَ وَضِيَآءٗ وَذِكۡرٗا لِّلۡمُتَّقِينَ ٤٨

49. ತಮ್ಮ ರಬ್ಬನ್ನು ಅಗೋಚರವಾಗಿ ಭಯಪಡುವವರೂ, ಅಂತ್ಯದಿನದ ಕುರಿತು ಭಯಭೀತರೂ ಆಗಿರುವವರಿಗೆ (ಇರುವ ಉಪದೇಶ).

ٱلَّذِينَ يَخۡشَوۡنَ رَبَّهُم بِٱلۡغَيۡبِ وَهُم مِّنَ ٱلسَّاعَةِ مُشۡفِقُونَ ٤٩

50. ಇದು (ಕುರ್‌ಆನ್) ನಾವು ಅವತೀರ್ಣಗೊಳಿಸಿದ ಅನುಗ್ರಹಪೂರ್ಣವಾದ ಒಂದು ಉಪದೇಶವಾಗಿದೆ. ಹೀಗಿದ್ದೂ ನೀವು ಇದನ್ನು ನಿಷೇಧಿಸುತ್ತಿರುವಿರಾ?

وَهَٰذَا ذِكۡرٞ مُّبَارَكٌ أَنزَلۡنَٰهُۚ أَفَأَنتُمۡ لَهُۥ مُنكِرُونَ ٥٠

51. ಮುಂಚೆ ನಾವು ಇಬ್ರಾಹೀಮ್‌ರಿಗೆ ಅವರ ಸದ್ವಿವೇಕವನ್ನು ನೀಡಿದ್ದೆವು. ಅವರ ಕುರಿತು ನಾವು ಅರಿವುಳ್ಳವರಾಗಿದ್ದೆವು.

۞ وَلَقَدۡ ءَاتَيۡنَآ إِبۡرَٰهِيمَ رُشۡدَهُۥ مِن قَبۡلُ وَكُنَّا بِهِۦ عَٰلِمِينَ ٥١

52. ಆತ ತಮ್ಮ ತಂದೆಯೊಂದಿಗೆ ಮತ್ತು ತಮ್ಮ ಜನತೆಯೊಂದಿಗೆ 'ನೀವು ಪೂಜಿಸುತ್ತಿರುವ ಈ ವಿಗ್ರಹಗಳು ಏನು?' ಎಂದು ಕೇಳಿದ ಸಂದರ್ಭ.

إِذۡ قَالَ لِأَبِيهِ وَقَوۡمِهِۦ مَا هَٰذِهِ ٱلتَّمَاثِيلُ ٱلَّتِيٓ أَنتُمۡ لَهَا عَٰكِفُونَ ٥٢

1 ಕರ್ಮವನ್ನು ಅತ್ಯಂತ ನಿಖರವಾಗಿ ತೂಕ ಮಾಡುವ ತಕ್ಕಡಿಗಳು.

53. ಅವರು ಹೇಳಿದರು: 'ನಮ್ಮ ಪೂರ್ವಿಕರು ಇವುಗಳನ್ನು ಆರಾಧಿಸುತ್ತಿರುವುದಾಗಿ ನಾವು ಕಂಡಿರುವೆವು'.

قَالُواْ وَجَدْنَآ ءَابَآءَنَا لَهَا عَٰبِدِينَ ﴿٥٣﴾

54. ಆತ ಹೇಳಿದರು: 'ಖಂಡಿತವಾಗಿಯೂ ನೀವು ಮತ್ತು ನಿಮ್ಮ ಪೂರ್ವಿಕರು ಸ್ಪಷ್ಟವಾದ ದುರ್ಮಾರ್ಗದಲ್ಲಿರುವಿರಿ'.

قَالَ لَقَدْ كُنتُمْ أَنتُمْ وَءَابَآؤُكُمْ فِي ضَلَٰلٖ مُّبِينٖ ﴿٥٤﴾

55. ಅವರು ಕೇಳಿದರು: 'ನೀನು ನಮ್ಮ ಬಳಿಗೆ ಸತ್ಯದೊಂದಿಗೆ ಬಂದಿರುವೆಯಾ? ಅಥವಾ ನೀನು ತಮಾಷೆ ಮಾಡುವವರಲ್ಲಿ ಸೇರಿರುವೆಯಾ?'

قَالُوٓاْ أَجِئۡتَنَا بِٱلۡحَقِّ أَمۡ أَنتَ مِنَ ٱللَّٰعِبِينَ ﴿٥٥﴾

56. ಆತ ಹೇಳಿದರು: 'ಅಲ್ಲ, ನಿಮ್ಮ ರಬ್ ಆಕಾಶಗಳ ಮತ್ತು ಭೂಮಿಯ ರಬ್ಬಾಗಿರುವನು; ಅವನೆಂದರೆ ಅವುಗಳನ್ನು ಸೃಷ್ಟಿಸಿದವನು. ಅದಕ್ಕೆ ಸಾಕ್ಷಿಯಾಗಿರುವವರಲ್ಲಿ ನಾನೂ ಸೇರಿರುವೆನು.

قَالَ بَل رَّبُّكُمۡ رَبُّ ٱلسَّمَٰوَٰتِ وَٱلۡأَرۡضِ ٱلَّذِي فَطَرَهُنَّ وَأَنَا۠ عَلَىٰ ذَٰلِكُم مِّنَ ٱلشَّٰهِدِينَ ﴿٥٦﴾

57. ಅಲ್ಲಾಹುವಿನ ಮೇಲಾಣೆ! ನೀವು ಮರಳಿಹೋದ ಬಳಿಕ ಖಂಡಿತವಾಗಿಯೂ ನಾನು ನಿಮ್ಮ ವಿಗ್ರಹಗಳ ಮೇಲೆ ಒಂದು ತಂತ್ರವನ್ನು ರೂಪಿಸುವೆನು'.(1)

وَتَٱللَّهِ لَأَكِيدَنَّ أَصۡنَٰمَكُم بَعۡدَ أَن تُوَلُّواْ مُدۡبِرِينَ ﴿٥٧﴾

58. ತರುವಾಯ ಆತ ಅವುಗಳನ್ನು ನುಚ್ಚುನೂರು ಮಾಡಿದರು; ಅವುಗಳ ಪೈಕಿ ದೊಡ್ಡ ವಿಗ್ರಹವೊಂದನ್ನು ಬಿಟ್ಟು. ಅವರು (ವಿಷಯವನ್ನರಿಯಲು) ಅದರ ಬಳಿಗೆ ಮರಳಿಬರುವ ಸಲುವಾಗಿ.

فَجَعَلَهُمۡ جُذَٰذًا إِلَّا كَبِيرٗا لَّهُمۡ لَعَلَّهُمۡ إِلَيۡهِ يَرۡجِعُونَ ﴿٥٨﴾

59. ಅವರು ಹೇಳಿದರು: 'ನಮ್ಮ ಆರಾಧ್ಯರಿಗೆ ಇದನ್ನು ಮಾಡಿದವರಾರು? ಖಂಡಿತವಾಗಿಯೂ ಅವನು ಅಕ್ರಮಿಗಳಲ್ಲಿ ಸೇರಿದವನಾಗಿರುವನು'.

قَالُواْ مَن فَعَلَ هَٰذَا بِـَٔالِهَتِنَآ إِنَّهُۥ لَمِنَ ٱلظَّٰلِمِينَ ﴿٥٩﴾

---

1 ಅವರೆಲ್ಲರೂ ಉತ್ಸವದಲ್ಲಿ ಪಾಲ್ಗೊಳ್ಳಲು ಹೊರಟಾಗ ಇಬ್ರಾಹೀಮ್(عَلَيۡهِ ٱلسَّلَامُ)ರವರು ಅವರ ವಿಗ್ರಹಗಳನ್ನು ಧ್ವಂಸ ಮಾಡುವ ತಂತ್ರವನ್ನು ರೂಪಿಸಿದರು.

60. ಕೆಲವರು ಹೇಳಿದರು: 'ಇಬ್ರಾಹೀಮ್ ಎಂದು ಕರೆಯಲಾಗುವ ಒಬ್ಬ ಯುವಕ ಆ ಆರಾಧ್ಯರುಗಳ ಪ್ರಸ್ತಾಪ ಮಾಡುವುದನ್ನು ನಾವು ಕೇಳಿರುವೆವು'.

قَالُواْ سَمِعۡنَا فَتٗى يَذۡكُرُهُمۡ يُقَالُ لَهُۥٓ إِبۡرَٰهِيمُ ٦٠

61. ಅವರು ಹೇಳಿದರು: 'ಹಾಗಾದರೆ ಅವನನ್ನು ನೀವು ಜನರ ಕಣ್ಮುಂದೆ ತನ್ನಿರಿ. ಅವರು ಸಾಕ್ಷಿಯಾಗಲೂ ಬಹುದು'.

قَالُواْ فَأۡتُواْ بِهِۦ عَلَىٰٓ أَعۡيُنِ ٱلنَّاسِ لَعَلَّهُمۡ يَشۡهَدُونَ ٦١

62. ಅವರು ಕೇಳಿದರು: 'ಓ ಇಬ್ರಾಹೀಮ್! ನಮ್ಮ ಆರಾಧ್ಯರಿಗೆ ಇದನ್ನು ಮಾಡಿದವರು ನೀನೇ ಏನು?'

قَالُوٓاْ ءَأَنتَ فَعَلۡتَ هَٰذَا بِـَٔالِهَتِنَا يَٰٓإِبۡرَٰهِيمُ ٦٢

63. ಆತ ಹೇಳಿದರು: ಅಲ್ಲ; ಅದನ್ನು ಮಾಡಿರುವುದು ಅವರಲ್ಲಿ ದೊಡ್ಡದಾಗಿರುವ ಇವನಾಗಿರುವನು. ಅವರಿಗೆ ಮಾತನಾಡಲು ಸಾಧ್ಯವೆಂದಾದರೆ ಅವರೊಂದಿಗೆ ಕೇಳಿ ನೋಡಿರಿ'.

قَالَ بَلۡ فَعَلَهُۥ كَبِيرُهُمۡ هَٰذَا فَسۡـَٔلُوهُمۡ إِن كَانُواْ يَنطِقُونَ ٦٣

64. ಆಗ ಅವರು ತಮ್ಮ ಮನಸ್ಸುಗಳೆಡೆಗೆ ಮರಳಿದರು ಮತ್ತು (ಪರಸ್ಪರ) ಹೇಳಿದರು: 'ಖಂಡಿತವಾಗಿಯೂ ಅಕ್ರಮಿಗಳು ನೀವೇ ಆಗಿರುವಿರಿ'.

فَرَجَعُوٓاْ إِلَىٰٓ أَنفُسِهِمۡ فَقَالُوٓاْ إِنَّكُمۡ أَنتُمُ ٱلظَّٰلِمُونَ ٦٤

65. ತರುವಾಯ ಅವರು ತಮ್ಮ ತಲೆಗಳಿಂದ ಲಾಗ ಹಾಕಿದರು.[1] (ಅವರು ಹೇಳಿದರು): 'ಇವರು ಮಾತನಾಡಲಾರರೆಂದು ನಿನಗೆ ತಿಳಿದಿದೆಯಲ್ಲವೇ?'

ثُمَّ نُكِسُواْ عَلَىٰ رُءُوسِهِمۡ لَقَدۡ عَلِمۡتَ مَا هَٰٓؤُلَآءِ يَنطِقُونَ ٦٥

66. ಇಬ್ರಾಹೀಮ್ ಹೇಳಿದರು: 'ಹಾಗಾದರೆ ಅಲ್ಲಾಹುವಿನ ಹೊರತು ನಿಮಗೆ ಯಾವುದೇ ಲಾಭವನ್ನಾಗಲಿ, ಹಾನಿಯನ್ನಾಗಲಿ ಮಾಡದ ವಸ್ತುಗಳನ್ನು ನೀವು ಆರಾಧಿಸುತ್ತಿರುವಿರಾ?

قَالَ أَفَتَعۡبُدُونَ مِن دُونِ ٱللَّهِ مَا لَا يَنفَعُكُمۡ شَيۡـٔٗا وَلَا يَضُرُّكُمۡ ٦٦

67. ನಿಮ್ಮ ಮತ್ತು ನೀವು ಅಲ್ಲಾಹುವಿನ ಹೊರತು ಆರಾಧಿಸುತ್ತಿರುವವರ ಸ್ಥಿತಿ ಅಪಹಾಸ್ಯಕರವಾಗಿದೆ! ನೀವು ಚಿಂತಿಸುವುದಿಲ್ಲವೇ?'

أُفّٖ لَّكُمۡ وَلِمَا تَعۡبُدُونَ مِن دُونِ ٱللَّهِۚ أَفَلَا تَعۡقِلُونَ ٦٧

1 ಅವರಿಗೆ ತಮ್ಮ ತಪ್ಪಿನ ಅರಿವಾದರೂ ಅದನ್ನು ತೋರ್ಪಡಿಸದೆ ಇಬ್ರಾಹೀಮ(عَلَيۡهِ ٱلسَّلَامُ)ರೊಂದಿಗೆ ತರ್ಕಿಸಲು ಮುಂದಾದರು ಎಂದರ್ಥ.

68. ಅವರು ಹೇಳಿದರು: 'ನೀವೇನಾದರೂ ಮಾಡುವುದಾದರೆ ಈತನನ್ನು ಸುಟ್ಟು ಹಾಕಿರಿ ಮತ್ತು ನಿಮ್ಮ ಆರಾಧ್ಯರಿಗೆ ಸಹಾಯ ಮಾಡಿರಿ'.

قَالُواْ حَرِّقُوهُ وَٱنصُرُوٓاْ ءَالِهَتَكُمۡ إِن كُنتُمۡ فَٰعِلِينَ ٦٨

69. ನಾವು ಹೇಳಿದೆವು: 'ಬೆಂಕಿಯೇ! ನೀನು ಇಬ್ರಾಹೀಮ್‌ರಿಗೆ ತಂಪು ಮತ್ತು ಸುರಕ್ಷೆಯಾಗಿ ಮಾರ್ಪಡು'.

قُلۡنَا يَٰنَارُ كُونِي بَرۡدٗا وَسَلَٰمًا عَلَىٰٓ إِبۡرَٰهِيمَ ٦٩

70. ಆತನ ಮೇಲೆ ಅವರು ತಂತ್ರ ಹೂಡಲು ಬಯಸಿದರು. ಆದರೆ ನಾವು ಅವರನ್ನು ತೀರಾ ನಷ್ಟಹೊಂದಿದವರನ್ನಾಗಿ ಮಾಡಿದೆವು.

وَأَرَادُواْ بِهِۦ كَيۡدٗا فَجَعَلۡنَٰهُمُ ٱلۡأَخۡسَرِينَ ٧٠

71. ಸರ್ವಲೋಕದವರಿಗಾಗಿ ನಾವು ಅನುಗ್ರಹೀತಗೊಳಿಸಿದ ಭೂಮಿಯೆಡೆಗೆ ಅವರನ್ನು ಮತ್ತು ಲೂತ್‌ರನ್ನು ನಾವು ರಕ್ಷಿಸಿದೆವು.

وَنَجَّيۡنَٰهُ وَلُوطًا إِلَى ٱلۡأَرۡضِ ٱلَّتِي بَٰرَكۡنَا فِيهَا لِلۡعَٰلَمِينَ ٧١

72. ನಾವು ಅವರಿಗೆ ಇಸ್‌ಹಾಕ್‌ರನ್ನು ಮತ್ತು ಹೆಚ್ಚುವರಿಯಾಗಿ ಯಅ್‌ಕೂಬ್ (ಮೊಮ್ಮಗ) ರನ್ನು ದಯಪಾಲಿಸಿದೆವು. ಅವರೆಲ್ಲರನ್ನೂ ಸಜ್ಜನರನ್ನಾಗಿ ಮಾಡಿದೆವು.

وَوَهَبۡنَا لَهُۥٓ إِسۡحَٰقَ وَيَعۡقُوبَ نَافِلَةٗۖ وَكُلّٗا جَعَلۡنَا صَٰلِحِينَ ٧٢

73. ನಾವು ಅವರನ್ನು ನಮ್ಮ ಆಜ್ಞೆಯ ಪ್ರಕಾರ ಮಾರ್ಗದರ್ಶನ ನೀಡುವ ನಾಯಕರನ್ನಾಗಿ ಮಾಡಿದೆವು. ಸತ್ಕರ್ಮಗಳನ್ನು ಮಾಡಲು, ನಮಾಝ್ ಸಂಸ್ಥಾಪಿಸಲು ಮತ್ತು ಝಕಾತ್ ನೀಡಲು ನಾವು ಅವರಿಗೆ ದಿವ್ಯಸಂದೇಶವನ್ನು ನೀಡಿದೆವು. ಅವರು ನಮ್ಮನ್ನು ಆರಾಧಿಸುವವರಾಗಿದ್ದರು.

وَجَعَلۡنَٰهُمۡ أَئِمَّةٗ يَهۡدُونَ بِأَمۡرِنَا وَأَوۡحَيۡنَآ إِلَيۡهِمۡ فِعۡلَ ٱلۡخَيۡرَٰتِ وَإِقَامَ ٱلصَّلَوٰةِ وَإِيتَآءَ ٱلزَّكَوٰةِۖ وَكَانُواْ لَنَا عَٰبِدِينَ ٧٣

74. ಲೂತ್‌ರಿಗೆ ನಾವು ನ್ಯಾಯ ತೀರ್ಮಾನಾಧಿಕಾರವನ್ನು ಮತ್ತು ಜ್ಞಾನವನ್ನು ನೀಡಿದೆವು. ದುಷ್ಕೃತ್ಯಗಳಲ್ಲಿ ನಿರತರಾಗಿದ್ದವರ ನಾಡಿನಿಂದ ಅವರನ್ನು ನಾವು ರಕ್ಷಿಸಿದೆವು. ಖಂಡಿತವಾಗಿಯೂ ಅವರು (ಆ ನಾಡಿನವರು) ಧಿಕ್ಕಾರಿಗಳಾಗಿರುವ ಒಂದು ಕೆಟ್ಟ ಜನತೆಯಾಗಿದ್ದರು.

وَلُوطًا ءَاتَيۡنَٰهُ حُكۡمٗا وَعِلۡمٗا وَنَجَّيۡنَٰهُ مِنَ ٱلۡقَرۡيَةِ ٱلَّتِي كَانَت تَّعۡمَلُ ٱلۡخَبَٰٓئِثَۚ إِنَّهُمۡ كَانُواْ قَوۡمَ سَوۡءٖ فَٰسِقِينَ ٧٤

وَأَدۡخَلۡنَٰهُ فِي رَحۡمَتِنَآۖ إِنَّهُۥ مِنَ ٱلصَّٰلِحِينَ ﴿٧٥﴾

75. ನಾವು ಆತನನ್ನು ನಮ್ಮ ಕಾರುಣ್ಯದಲ್ಲಿ ಸೇರಿಸಿದೆವು. ಖಂಡಿತವಾಗಿಯೂ ಆತ ಸಜ್ಜನರಲ್ಲಿ ಸೇರಿದವರಾಗಿದ್ದರು.

وَنُوحًا إِذۡ نَادَىٰ مِن قَبۡلُ فَٱسۡتَجَبۡنَا لَهُۥ فَنَجَّيۡنَٰهُ وَأَهۡلَهُۥ مِنَ ٱلۡكَرۡبِ ٱلۡعَظِيمِ ﴿٧٦﴾

76. ನೂಹ್‌ರನ್ನು (ಸ್ಮರಿಸಿರಿ). ಆತ ಇದಕ್ಕೆ ಮುಂಚೆ ಪ್ರಾರ್ಥಿಸಿದ ಸಂದರ್ಭ. ಆಗ ನಾವು ಆತನ ಕರೆಗೆ ಓಗೊಟ್ಟೆವು. ತರುವಾಯ ಅವರನ್ನು ಮತ್ತು ಅವರ ಕುಟುಂಬವನ್ನು ಮಹಾ ಸಂಕಷ್ಟದಿಂದ ಪಾರು ಮಾಡಿದೆವು.

وَنَصَرۡنَٰهُ مِنَ ٱلۡقَوۡمِ ٱلَّذِينَ كَذَّبُواْ بِـَٔايَٰتِنَآۚ إِنَّهُمۡ كَانُواْ قَوۡمَ سَوۡءٖ فَأَغۡرَقۡنَٰهُمۡ أَجۡمَعِينَ ﴿٧٧﴾

77. ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದ ಜನತೆಯಿಂದ ನಾವು ಆತನಿಗೆ ರಕ್ಷಣೆಯನ್ನು ನೀಡಿದೆವು. ಖಂಡಿತವಾಗಿಯೂ ಅವರೊಂದು ಕೆಟ್ಟ ಜನತೆಯಾಗಿದ್ದರು. ಆದ್ದರಿಂದ ನಾವು ಅವರೆಲ್ಲರನ್ನೂ ಮುಳುಗಿಸಿದೆವು.

وَدَاوُۥدَ وَسُلَيۡمَٰنَ إِذۡ يَحۡكُمَانِ فِي ٱلۡحَرۡثِ إِذۡ نَفَشَتۡ فِيهِ غَنَمُ ٱلۡقَوۡمِ وَكُنَّا لِحُكۡمِهِمۡ شَٰهِدِينَ ﴿٧٨﴾

78. ದಾವೂದ್‌ರನ್ನೂ, (ಅವರ ಪುತ್ರ) ಸುಲೈಮಾನ್‌ರನ್ನೂ (ಸ್ಮರಿಸಿರಿ). ಒಂದು ಜನತೆಯ ಮೇಕೆಗಳು ಹೊಲಕ್ಕೆ ನುಸುಳಿ ಮೇಯ್ದ ವಿಷಯದಲ್ಲಿ ಅವರಿಬ್ಬರೂ ತೀರ್ಪು ನೀಡುತ್ತಿದ್ದ ಸಂದರ್ಭ. ಅವರ ತೀರ್ಪಿಗೆ ನಾವು ಸಾಕ್ಷಿಗಳಾಗಿದ್ದೆವು.

فَفَهَّمۡنَٰهَا سُلَيۡمَٰنَۚ وَكُلًّا ءَاتَيۡنَا حُكۡمًا وَعِلۡمًاۚ وَسَخَّرۡنَا مَعَ دَاوُۥدَ ٱلۡجِبَالَ يُسَبِّحۡنَ وَٱلطَّيۡرَۚ وَكُنَّا فَٰعِلِينَ ﴿٧٩﴾

79. ಸುಲೈಮಾನ್‌ರು (ಪ್ರಕರಣವನ್ನು) ಗ್ರಹಿಸಿಕೊಳ್ಳುವಂತೆ ನಾವು ಮಾಡಿದೆವು.(1) ಅವರಿಬ್ಬರಿಗೂ ನಾವು ನ್ಯಾಯ ತೀರ್ಮಾನಾಧಿಕಾರವನ್ನು ಮತ್ತು ಜ್ಞಾನವನ್ನು ನೀಡಿದೆವು. ದಾವೂದ್‌ರೊಂದಿಗೆ ಸ್ತುತಿಕೀರ್ತನೆ ಮಾಡುವ ಸಲುವಾಗಿ ಪರ್ವತಗಳನ್ನೂ, ಪಕ್ಷಿಗಳನ್ನೂ ನಾವು ಅಧೀನಗೊಳಿಸಿಕೊಟ್ಟೆವು.(2)

1 ಮೇಕೆಗಳ ಮಾಲಕರು ಹೊಲದ ಮಾಲಕರಿಗೆ ಹೇಗೆ ನಷ್ಟಪರಿಹಾರ ನೀಡಬೇಕೆಂಬುದನ್ನು ಪ್ರವಾದಿ ಸುಲೈಮಾನ್(عَلَيْهِ السَّلَامُ)ರವರು ಗ್ರಹಿಸುವಂತೆ ಅಲ್ಲಾಹು ಮಾಡಿದನು. ವ್ಯಾಖ್ಯಾನಕಾರರ ಪ್ರಕಾರ ಆಗ ಸುಲೈಮಾನ್(عَلَيْهِ السَّلَامُ) ರಿಗೆ ಕೇವಲ ಹನ್ನೊಂದು ವರ್ಷ ಪ್ರಾಯ. ತಂದೆಯ ತೀರ್ಪಿಗಿಂತಲೂ ಮಗನ ತೀರ್ಪು ಹೆಚ್ಚು ಸಮರ್ಪಕವಾಗಿದ್ದುದರಿಂದ ತರುವಾಯ ತಂದೆಯು ಮಗನ ತೀರ್ಪನ್ನು ಅಂಗೀಕರಿಸಿದರು.

2 ಪರ್ವತಗಳನ್ನು ಮತ್ತು ಹಕ್ಕಿಗಳನ್ನು ಪ್ರವಾದಿ ದಾವೂದ್(عَلَيْهِ السَّلَامُ) ರಿಗೆ ಅಧೀನಗೊಳಿಸಿಕೊಟ್ಟಿರುವುದರ ವಿವರಣೆಯು ನಮಗೆ ಅಜ್ಞಾತವಾಗಿದೆ. ಅಲ್ಲಾಹುವಿಗೆ ಸಕಲ ವಿಷಯಗಳಲ್ಲೂ ಸಾಮರ್ಥ್ಯವಿದೆ. ಪ್ರವಾದಿ

(ಅದನ್ನೆಲ್ಲಾ) ಮಾಡಿದವರು ನಾವಾಗಿದ್ದೆವು.

وَعَلَّمۡنَٰهُ صَنۡعَةَ لَبُوسٖ لَّكُمۡ لِتُحۡصِنَكُم مِّنۢ بَأۡسِكُمۡۖ فَهَلۡ أَنتُمۡ شَٰكِرُونَ ٨٠

**80.** ಯುದ್ಧಾಪಾಯಗಳಿಂದ ನಿಮಗೆ ರಕ್ಷಣೆ ಒದಗಿಸುವ ಸಲುವಾಗಿ ನಿಮಗೋಸ್ಕರ ಯುದ್ಧಕವಚ ನಿರ್ಮಿಸುವುದನ್ನು ನಾವು ಆತನಿಗೆ ಕಲಿಸಿಕೊಟ್ಟೆವು. ಹೀಗಿದ್ದೂ ನೀವು ಕೃತಜ್ಞರಾಗಿರುವಿರಾ?

وَلِسُلَيۡمَٰنَ ٱلرِّيحَ عَاصِفَةٗ تَجۡرِي بِأَمۡرِهِۦٓ إِلَى ٱلۡأَرۡضِ ٱلَّتِي بَٰرَكۡنَا فِيهَاۚ وَكُنَّا بِكُلِّ شَيۡءٍ عَٰلِمِينَ ٨١

**81.** ಬಲವಾಗಿ ಬೀಸುವ ಗಾಳಿಯನ್ನು ನಾವು ಸುಲೈಮಾನ್‌ರಿಗೆ (ಅಧೀನಗೊಳಿಸಿಕೊಟ್ಟೆವು). ನಾವು ಅನುಗ್ರಹೀತಗೊಳಿಸಿರುವ ಭೂಪ್ರದೇಶಕ್ಕೆ ಅದು ಆತನ ಆಜ್ಞೆ ಪ್ರಕಾರ ಚಲಿಸುತ್ತಿತ್ತು. ನಾವು ಸಕಲ ವಿಷಯಗಳ ಕುರಿತೂ ಅರಿವುಳ್ಳವರಾಗಿರುವೆವು.

وَمِنَ ٱلشَّيَٰطِينِ مَن يَغُوصُونَ لَهُۥ وَيَعۡمَلُونَ عَمَلٗا دُونَ ذَٰلِكَۖ وَكُنَّا لَهُمۡ حَٰفِظِينَ ٨٢

**82.** ಸೈತಾನರ ಪೈಕಿ ಆತನಿಗಾಗಿ (ಸಮುದ್ರದಲ್ಲಿ) ಮುಳುಗುವ ಕೆಲವರನ್ನು (ಅಧೀನಗೊಳಿಸಿಕೊಟ್ಟೆವು). ಇದಲ್ಲದೆ ಇನ್ನಿತರ ಕೆಲವು ಕೆಲಸಗಳನ್ನು ಆತ ಮಾಡುತ್ತಿದ್ದರು.(1) ನಾವು ಅವರ ಸಂರಕ್ಷಕರಾಗಿದ್ದೆವು.

۞وَأَيُّوبَ إِذۡ نَادَىٰ رَبَّهُۥٓ أَنِّي مَسَّنِيَ ٱلضُّرُّ وَأَنتَ أَرۡحَمُ ٱلرَّٰحِمِينَ ٨٣

**83.** ಅಯ್ಯೂಬ್‌ರನ್ನು (ಸ್ಮರಿಸಿರಿ). ಆತ ತಮ್ಮ ರಬ್ಬನ್ನು ಕರೆದು ಪ್ರಾರ್ಥಿಸಿದ ಸಂದರ್ಭ. 'ಖಂಡಿತವಾಗಿಯೂ ನನಗೆ ಸಂಕಷ್ಟವು ಬಾಧಿಸಿದೆ. ನೀನು ಕರುಣೆ ತೋರುವವರಲ್ಲೇ ಅತ್ಯಧಿಕ ಕರುಣೆ ತೋರುವವನಾಗಿರುವೆ'.

---

ದಾವೂದ್(عَلَيْهِ السَّلَامُ) ರವರ ಇಂಪಾದ ಕೀರ್ತನಾ ಧ್ವನಿಯು ಮೃಗಪಕ್ಷಿಗಳಲ್ಲಿ ಹಾಗೂ ನಿರ್ಜೀವ ವಸ್ತುಗಳಲ್ಲಿ ಸಂಚಲನವನ್ನುಂಟು ಮಾಡಲು ಪರ್ಯಾಪ್ತವಾಗಿತ್ತು. ಝುಬೂರ್ ಅಥವಾ ಕೀರ್ತನೆಗಳು ಅವರಿಗೆ ಲಭಿಸಿದ ದಿವ್ಯಸಂದೇಶವಾಗಿತ್ತು.

1 ಇಲ್ಲಿ ಪ್ರಸ್ತಾಪಿಸಲಾಗಿರುವುದು ಪ್ರವಾದಿ ಸುಲೈಮಾನ್(عَلَيْهِ السَّلَامُ) ರಿಗೆ ಅಲ್ಲಾಹು ವಿಶೇಷವಾಗಿ ಕರುಣಿಸಿದ ಎರಡು ಅನುಗ್ರಹಗಳ ಕುರಿತಾಗಿದೆ. ಅವರು ಯಾವೆಲ್ಲಾ ಕಾರ್ಯಗಳಿಗಾಗಿ ಗಾಳಿಯನ್ನು ಬಳಸುತ್ತಿದ್ದರೆಂಬುದಕ್ಕೆ ಸ್ಪಷ್ಟವಾದ ಪುರಾವೆಗಳಿಲ್ಲ. ಸಮುದ್ರ ಯಾತ್ರೆಯು ಅದರಲ್ಲಿ ಸೇರಿದ ಒಂದು ಪ್ರಮುಖ ಅಂಗವಾಗಿರಬಹುದು. ಮನುಷ್ಯರಿಗೆ ಕ್ಲಿಷ್ಟಕರವಾದ ಮುಳುಗುವ ಕೆಲಸಕ್ಕೆ, ನಿರ್ಮಾಣ ಕೆಲಸಕ್ಕೆ ಹಾಗೂ ಇನ್ನಿತರ ಕೆಲಸಕಾರ್ಯಗಳಿಗೆ ಅವರು ಜಿನ್ನ್‌ಗಳನ್ನು ಬಳಸುತ್ತಿದ್ದರೆಂದು ಈ ಸೂಕ್ತಿ ಮತ್ತು ಸೂರಃ ಸಬಅ್‌ನ 12–13 ಸೂಕ್ತಿಗಳು ಸ್ಪಷ್ಟಪಡಿಸುತ್ತವೆ.

فَٱسْتَجَبْنَا لَهُۥ فَكَشَفْنَا مَا بِهِۦ مِن ضُرٍّۖ وَءَاتَيْنَٰهُ أَهْلَهُۥ وَمِثْلَهُم مَّعَهُمْ رَحْمَةً مِّنْ عِندِنَا وَذِكْرَىٰ لِلْعَٰبِدِينَ ﴿٨٤﴾

84. ಆಗ ನಾವು ಆತನ ಕರೆಗೆ ಓಗೊಟ್ಟೆವು ಮತ್ತು ಆತನಲ್ಲಿದ್ದ ಸಂಕಷ್ಟವನ್ನು ನಿವಾರಿಸಿದೆವು. ಆತನಿಗೆ ಆತನ ಕುಟುಂಬವನ್ನೂ, ಅವರ ಜೊತೆಗೆ ಅವರಷ್ಟೇ ಇರುವ ಇತರರನ್ನೂ ನಮ್ಮ ವತಿಯ ಕಾರುಣ್ಯವಾಗಿ ಮತ್ತು ಆರಾಧಕರಿಗಿರುವ ಸ್ಮರಣೆಯಾಗಿ ದಯಪಾಲಿಸಿದೆವು.[1]

وَإِسْمَٰعِيلَ وَإِدْرِيسَ وَذَا ٱلْكِفْلِۖ كُلٌّ مِّنَ ٱلصَّٰبِرِينَ ﴿٨٥﴾

85. ಇಸ್ಮಾಈಲ್‌ರನ್ನು, ಇದ್ರೀಸ್‌ರನ್ನು ಮತ್ತು ದುಲ್ ಕಿಫ್ಲ್‌ರನ್ನು (ಸ್ಮರಿಸಿರಿ). ಅವರೆಲ್ಲರೂ ಸಹನಾಶೀಲರಲ್ಲಿ ಸೇರಿದವರಾಗಿದ್ದರು.

وَأَدْخَلْنَٰهُمْ فِى رَحْمَتِنَآۖ إِنَّهُم مِّنَ ٱلصَّٰلِحِينَ ﴿٨٦﴾

86. ನಾವು ಅವರನ್ನು ನಮ್ಮ ಕಾರುಣ್ಯದಲ್ಲಿ ಸೇರಿಸಿದೆವು. ಖಂಡಿತವಾಗಿಯೂ ಅವರು ಸಜ್ಜನರಲ್ಲಿ ಸೇರಿದವರಾಗಿರುವರು.

وَذَا ٱلنُّونِ إِذ ذَّهَبَ مُغَٰضِبًا فَظَنَّ أَن لَّن نَّقْدِرَ عَلَيْهِ فَنَادَىٰ فِى ٱلظُّلُمَٰتِ أَن لَّآ إِلَٰهَ إِلَّآ أَنتَ سُبْحَٰنَكَ إِنِّى كُنتُ مِنَ ٱلظَّٰلِمِينَ ﴿٨٧﴾

87. ದುನ್ನೂನ್‌ರನ್ನು[2] (ಸ್ಮರಿಸಿರಿ). ಅವರು ಕುಪಿತರಾಗಿ ಹೊರಟುಹೋದ ಸಂದರ್ಭ.[3] ನಾವು ಅವರನ್ನು ಯಾವತ್ತೂ ಕಷ್ಟಕ್ಕೆ ಸಿಲುಕಿಸಲಾರೆವು ಎಂದು ಅವರು ಭಾವಿಸಿದ್ದರು. ತರುವಾಯ ಅಂಧಕಾರಗಳ ಒಳಗಿನಿಂದ[4] ಅವರು ಕೂಗಿ ಕರೆದರು: 'ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ಪರಮ ಪಾವನನು. ಖಂಡಿತವಾಗಿಯೂ ನಾನು ಅಕ್ರಮಿಗಳಲ್ಲಿ ಸೇರಿದವನಾಗಿರುವೆನು'.

1 ಮೃತಪಟ್ಟ ಅವರ ಮಕ್ಕಳ ಬದಲು ಅಲ್ಲಾಹು ಬೇರೆ ಮಕ್ಕಳನ್ನು ದಯಪಾಲಿಸಿದನು ಮತ್ತು ಅವರಿಂದ ದೂರಸರಿದ ಬಂಧುಮಿತ್ರರನ್ನು ಅವರೆಡೆಗೆ ನಿಕಟಗೊಳಿಸಿದನು. ಮೃತಪಟ್ಟ ಅವರ ಮಕ್ಕಳನ್ನೇ ಅಲ್ಲಾಹು ಅವರಿಗಾಗಿ ಬದುಕಿಸಿದನು ಎಂದು ಅನೇಕ ವ್ಯಾಖ್ಯಾನಕಾರರು ಹೇಳಿದ್ದಾರೆ. ಪ್ರವಾದಿ ಅಯ್ಯೂಬ್(عَلَيْهِ ٱلسَّلَامُ)ರವರ ಸಹನೆಯನ್ನು ಅಲ್ಲಾಹು ಪರೀಕ್ಷಿಸುತ್ತಿದ್ದನು. ರೋಗ, ಆರ್ಥಿಕ ನಷ್ಟ, ಸಂತಾನಗಳ ಕ್ಷಯ ಇತ್ಯಾದಿಗಳಾವುದೂ ಅವರ ಸಹನೆಯನ್ನು ಕುಂದಿಸಲಿಲ್ಲ. ಅವರ ಅಪಾರ ಸಹನೆಗೆ ಅಲ್ಲಾಹು ತಕ್ಕ ಪ್ರತಿಫಲವನ್ನೇ ನೀಡಿದನು.

2 ದುನ್ನೂನ್ ಎಂಬ ಪದದ ಅರ್ಥವು ಮೀನಿನವನು ಎಂದಾಗಿದೆ. ಇದು ಮೀನಿನ ಹೊಟ್ಟೆಯಲ್ಲಿ ಸಿಲುಕಿ ಅಲ್ಲಾಹುವಿನ ನೆರವಿನಿಂದ ಪಾರಾದ ಯೂನುಸ್(عَلَيْهِ ٱلسَّلَامُ) ರವರ ಉಪನಾಮವಾಗಿದೆ.

3 ಅಸ್ಸೀರಿಯಾದ ರಾಜಧಾನಿಯಾಗಿದ್ದ ನೀನೆವಾ ನಗರಕ್ಕೆ ಯೂನುಸ್(عَلَيْهِ ٱلسَّلَامُ)ರವರು ಪ್ರವಾದಿಯಾಗಿ ಕಳುಹಿಸಲ್ಪಟ್ಟಿದ್ದರು. ಜನರು ತಮ್ಮ ಉಪದೇಶಕ್ಕೆ ಕಿವಿಗೊಡದಿರುವುದನ್ನು ಕಂಡು ರೋಸಿ ಹೋದ ಯೂನುಸ್(عَلَيْهِ ٱلسَّلَامُ) ಊರು ಬಿಟ್ಟರು.

4 ಇರುಳು, ಸಮುದ್ರ ಮತ್ತು ಮೀನಿನ ಹೊಟ್ಟೆ ಮೊದಲಾದ ಮೂರು ಕತ್ತಲೆಗಳನ್ನು ಸೇರಿಸಿ ಅಂಧಕಾರಗಳು ಎಂಬ ಬಹುವಚನವನ್ನು ಬಳಸಲಾಗಿರಬಹುದು.

| | |
|---|---|
| 88. ಆಗ ನಾವು ಅವರ ಕರೆಗೆ ಓಗೊಟ್ಟೆವು ಮತ್ತು ಅವರನ್ನು ಸಂಕಟದಿಂದ ಪಾರು ಮಾಡಿದೆವು. ನಾವು ಹೀಗೆ ಸತ್ಯವಿಶ್ವಾಸಿಗಳನ್ನು ಪಾರು ಮಾಡುವೆವು. | فَٱسْتَجَبْنَا لَهُۥ وَنَجَّيْنَٰهُ مِنَ ٱلْغَمِّ ۚ وَكَذَٰلِكَ نُـۨجِى ٱلْمُؤْمِنِينَ ﴿٨٨﴾ |
| 89. ಝಕರಿಯ್ಯಾರನ್ನು (ಸ್ಮರಿಸಿರಿ). ಅವರು ತಮ್ಮ ರಬ್ಬನ್ನು ಕರೆದು ಪ್ರಾರ್ಥಿಸಿದ ಸಂದರ್ಭ: 'ಓ ನನ್ನ ರಬ್! ನನ್ನನ್ನು (ವಾರೀಸುದಾರರಿಲ್ಲದೆ) ಒಂಟಿಯಾಗಿ ಬಿಡುದಿರು. ವಾರೀಸುದಾರರಲ್ಲಿ ನೀನೇ ಅತ್ಯುತ್ತಮನಾಗಿರುವೆ.'. | وَزَكَرِيَّآ إِذْ نَادَىٰ رَبَّهُۥ رَبِّ لَا تَذَرْنِى فَرْدًا وَأَنتَ خَيْرُ ٱلْوَٰرِثِينَ ﴿٨٩﴾ |
| 90. ಆಗ ನಾವು ಆತನ ಕರೆಗೆ ಓಗೊಟ್ಟೆವು. ಆತನಿಗೆ ಯಹ್ಯಾ (ಎಂಬ ಮಗ)ನನ್ನು ದಯಪಾಲಿಸಿದೆವು. ಆತನ ಪತ್ನಿಯನ್ನು (ಗರ್ಭಧಾರಣೆಗೆ) ಯೋಗ್ಯಳನ್ನಾಗಿಸಿದೆವು. ಖಂಡಿತವಾಗಿಯೂ ಇವರು (ಪ್ರವಾದಿಗಳು) ಸತ್ಕರ್ಮಗಳೆಡೆಗೆ ಧಾವಂತದಿಂದ ಮುನ್ನುಗ್ಗುವವರೂ, ನಿರೀಕ್ಷೆ ಮತ್ತು ಭಯದಿಂದ ನಮ್ಮೊಂದಿಗೆ ಪ್ರಾರ್ಥಿಸುವವರೂ ಆಗಿದ್ದರು. ಅವರು ನಮ್ಮೊಂದಿಗೆ ವಿನಮ್ರತೆಯುಳ್ಳವರಾಗಿದ್ದರು. | فَٱسْتَجَبْنَا لَهُۥ وَوَهَبْنَا لَهُۥ يَحْيَىٰ وَأَصْلَحْنَا لَهُۥ زَوْجَهُۥٓ ۚ إِنَّهُمْ كَانُوا۟ يُسَٰرِعُونَ فِى ٱلْخَيْرَٰتِ وَيَدْعُونَنَا رَغَبًا وَرَهَبًا ۖ وَكَانُوا۟ لَنَا خَٰشِعِينَ ﴿٩٠﴾ |
| 91. ತನ್ನ ಗುಪ್ತಾಂಗವನ್ನು ಸಂರಕ್ಷಿಸಿದಾಕೆಯನ್ನು (ಮರ್ಯಮ್‌ರನ್ನು ಸ್ಮರಿಸಿರಿ). ನಮ್ಮ ವತಿಯ ಆತ್ಮದಿಂದ ನಾವು ಆಕೆಗೆ ಊದಿದೆವು ಮತ್ತು ಆಕೆಯನ್ನೂ, ಆಕೆಯ ಮಗನನ್ನೂ ನಾವು ಸರ್ವಲೋಕದವರಿಗೆ ದೃಷ್ಟಾಂತವನ್ನಾಗಿ ಮಾಡಿದೆವು. | وَٱلَّتِىٓ أَحْصَنَتْ فَرْجَهَا فَنَفَخْنَا فِيهَا مِن رُّوحِنَا وَجَعَلْنَٰهَا وَٱبْنَهَآ ءَايَةً لِّلْعَٰلَمِينَ ﴿٩١﴾ |
| 92. (ಓ ಮನುಷ್ಯರೇ!) ಖಂಡಿತವಾಗಿಯೂ ಇದು ನಿಮ್ಮ ಸಮುದಾಯವಾಗಿದೆ. ಏಕೈಕ ಸಮುದಾಯ! ನಾನು ನಿಮ್ಮ ರಬ್ಬಾಗಿರುವೆನು.(1) ಆದ್ದರಿಂದ ನೀವು ನನ್ನನ್ನು ಆರಾಧಿಸಿರಿ. | إِنَّ هَٰذِهِۦٓ أُمَّتُكُمْ أُمَّةً وَٰحِدَةً وَأَنَا۠ رَبُّكُمْ فَٱعْبُدُونِ ﴿٩٢﴾ |

1 ಏಕೈಕ ಮನುಕುಲ ಮತ್ತು ಏಕೈಕ ಆರಾಧ್ಯನು ಎಂಬ ಮಹಾನ್ ವಿಚಾರಧಾರೆಯೆಡೆಗೆ ಪ್ರವಾದಿಗಳೆಲ್ಲರೂ ಜನರನ್ನು ಆಹ್ವಾನಿಸಿದ್ದರು.

93. ಆದರೆ ಅವರು ತಮ್ಮ ನಡುವೆ ತಮ್ಮ ಕಾರ್ಯವನ್ನು ನುಚ್ಚುನೂರು ಮಾಡಿದರು. ಎಲ್ಲರೂ ನಮ್ಮೆಡೆಗೇ ಮರಳಿ ಬರುವವರಾಗಿರುವರು.

وَتَقَطَّعُوٓاْ أَمۡرَهُم بَيۡنَهُمۡۖ كُلٌّ إِلَيۡنَا رَٰجِعُونَ ٩٣

94. ಯಾರಾದರೂ ಸತ್ಯವಿಶ್ವಾಸಿಯಾಗಿರುತ್ತಾ ಸತ್ಕರ್ಮಗಳಲ್ಲಿ ಏನನ್ನಾದರೂ ಮಾಡಿದರೆ ಅವನ ಪರಿಶ್ರಮದ ಫಲವನ್ನು (ಅವನಿಗೆ) ನಿಷೇಧಿಸಲ್ಪಡದು. ಖಂಡಿತವಾಗಿಯೂ ನಾವು ಅದನ್ನು ದಾಖಲಿಸಿಡುವೆವು.

فَمَن يَعۡمَلۡ مِنَ ٱلصَّٰلِحَٰتِ وَهُوَ مُؤۡمِنٞ فَلَا كُفۡرَانَ لِسَعۡيِهِۦ وَإِنَّا لَهُۥ كَٰتِبُونَ ٩٤

95. ನಾವು ನಾಶಮಾಡಿದ ಯಾವುದೇ ನಾಡಿನವರ ಮಟ್ಟಿಗಾದರೋ ಅವರು (ಭೂಮಿಗೆ) ಮರಳಿ ಬರಲಾರರೆಂಬುದು ಕಡ್ಡಾಯ(ಸುನಿಶ್ಚಿತ) ವಾಗಿದೆ.[1]

وَحَرَٰمٌ عَلَىٰ قَرۡيَةٍ أَهۡلَكۡنَٰهَآ أَنَّهُمۡ لَا يَرۡجِعُونَ ٩٥

96-97. ಕೊನೆಗೆ ಯಅ್‌ಜೂಜ್ ಮತ್ತು ಮಅ್‌ಜೂಜ್‌ಗಳನ್ನು ತೆರೆದುಬಿಡುವಾಗ[2] ಮತ್ತು ಅವರು ಎಲ್ಲ ಬೆಟ್ಟಗಳಿಂದಲೂ ಇಳಿದು ಬರುವಾಗ ಹಾಗೂ ಆ ಸತ್ಯ ವಾಗ್ದಾನವು ಆಗತವಾಗುವಾಗ ಸತ್ಯನಿಷೇಧಿಗಳ ಕಣ್ಣುಗಳು ಎವೆಯಿಕ್ಕದೆ ನಿಶ್ಚಲವಾಗಿರುವುವು. 'ಅಯ್ಯೋ! ನಮ್ಮ ದುರದೃಷ್ಟವೇ! ಇದರ ಕುರಿತು ನಾವು ಅಲಕ್ಷ್ಯರಾಗಿದ್ದೆವು. ಅಲ್ಲ, ನಾವು ಅಕ್ರಮಿಗಳಾಗಿದ್ದೆವು' (ಎಂದು ಅವರು ಹೇಳುವರು).

حَتَّىٰٓ إِذَا فُتِحَتۡ يَأۡجُوجُ وَمَأۡجُوجُ وَهُم مِّن كُلِّ حَدَبٖ يَنسِلُونَ ٩٦

وَٱقۡتَرَبَ ٱلۡوَعۡدُ ٱلۡحَقُّ فَإِذَا هِيَ شَٰخِصَةٌ أَبۡصَٰرُ ٱلَّذِينَ كَفَرُواْ يَٰوَيۡلَنَا قَدۡ كُنَّا فِي غَفۡلَةٖ مِّنۡ هَٰذَا بَلۡ كُنَّا ظَٰلِمِينَ ٩٧

98. ಖಂಡಿತವಾಗಿಯೂ ನೀವು ಮತ್ತು ಅಲ್ಲಾಹುವಿನ ಹೊರತು ನೀವು ಆರಾಧಿಸುವವುಗಳು ನರಕಾಗ್ನಿಯ ಇಂಧನವಾಗುವಿರಿ. ಖಂಡಿತವಾಗಿಯೂ ನೀವು ಅದಕ್ಕೆ ಬಂದು ಸೇರುವಿರಿ.

إِنَّكُمۡ وَمَا تَعۡبُدُونَ مِن دُونِ ٱللَّهِ حَصَبُ جَهَنَّمَ أَنتُمۡ لَهَا وَٰرِدُونَ ٩٨

1 ಭೌತಿಕ ನಾಶದೊಂದಿಗೆ ಅವರ ಶಿಕ್ಷೆಯು ಕೊನೆಗೊಳ್ಳುವುದಿಲ್ಲ. ಶಾಶ್ವತ ಶಿಕ್ಷೆಯನ್ನು ಸವಿಯುವುದಕ್ಕಾಗಿ ಅವರನ್ನು ಮರಳಿ ಕರೆಯಲಾಗುವುದು. ಇತರ ಕೆಲವು ವ್ಯಾಖ್ಯಾನಗಳನ್ನೂ ಈ ಸೂಕ್ತಿಗೆ ನೀಡಲಾಗಿದೆ.

2 ಯಅ್‌ಜೂಜ್ ಮತ್ತು ಮಅ್‌ಜೂಜ್‌ಗೆ ಭೂಮಿಯಾದ್ಯಂತ ಕ್ಷೋಭೆ ಹರಡಲು ಸಾಧ್ಯವಿಧೆ ಎಂಬುದು ಲೋಕಾಂತ್ಯವು ಹೆಚ್ಚು ದೂರವಿಲ್ಲ ಎಂಬುದಕ್ಕಿರುವ ಸೂಚನೆಯಾಗಿದೆಯೆಂದು ಇದರಿಂದ ಗ್ರಹಿಸಬಹುದು.

99. ಇವರು ಆರಾಧ್ಯರಾಗಿರುತ್ತಿದ್ದರೆ ಇವರದಕ್ಕೆ (ನರಕಾಗ್ನಿಗೆ) ಬಂದು ಸೇರುತ್ತಿರಲಿಲ್ಲ. ಅವರೆಲ್ಲರೂ ಅದರಲ್ಲಿ ಶಾಶ್ವತವಾಗಿ ವಾಸಿಸುವರು.

لَوْ كَانَ هَٰٓؤُلَآءِ ءَالِهَةً مَّا وَرَدُوهَا ۖ وَكُلٌّ فِيهَا خَٰلِدُونَ ﴿٩٩﴾

100. ಅವರಿಗೆ ಅಲ್ಲಿ ದೀರ್ಘವಾದ ನಿಟ್ಟುಸಿರುಗಳಿರುವುವು. ಅದರಲ್ಲಿ ಅವರು (ಏನನ್ನೂ) ಕೇಳಿಸಿಕೊಳ್ಳಲಾರರು.[1]

لَهُمْ فِيهَا زَفِيرٌ وَهُمْ فِيهَا لَا يَسْمَعُونَ ﴿١٠٠﴾

101. ಖಂಡಿತವಾಗಿಯೂ ಈ ಮೊದಲೇ ನಮ್ಮ ವತಿಯಿಂದ ಯಾರಿಗೆ ಒಳಿತು ಲಭಿಸಿದೆಯೋ ಅವರು ಅದರಿಂದ (ನರಕಾಗ್ನಿಯಿಂದ) ದೂರಸರಿಸಲಾಗುವರು.[2]

إِنَّ ٱلَّذِينَ سَبَقَتْ لَهُم مِّنَّا ٱلْحُسْنَىٰٓ أُو۟لَٰٓئِكَ عَنْهَا مُبْعَدُونَ ﴿١٠١﴾

102. ಅದರ ಕೃಶವಾದ ಸದ್ದನ್ನೂ ಅವರು ಕೇಳಲಾರರು. ತಮ್ಮ ಮನಸ್ಸುಗಳು ಹಂಬಲಿಸುವ ಸುಖಾಂಡಂಬರಗಳಲ್ಲಿ ಅವರು ಶಾಶ್ವತವಾಗಿ ವಾಸಿಸುವರು.

لَا يَسْمَعُونَ حَسِيسَهَا ۖ وَهُمْ فِى مَا ٱشْتَهَتْ أَنفُسُهُمْ خَٰلِدُونَ ﴿١٠٢﴾

103. ಆ ಘೋರ ಭೀತಿಯು ಅವರಿಗೆ ದುಃಖವುಂಟು ಮಾಡದು. ಇದು ನಿಮಗೆ ವಾಗ್ದಾನ ಮಾಡಲಾದ ನಿಮ್ಮ ದಿನವಾಗಿದೆ ಎನ್ನುತ್ತಾ ಮಲಕ್‌ಗಳು ಅವರನ್ನು ಸ್ವಾಗತಿಸುವರು.

لَا يَحْزُنُهُمُ ٱلْفَزَعُ ٱلْأَكْبَرُ وَتَتَلَقَّىٰهُمُ ٱلْمَلَٰٓئِكَةُ هَٰذَا يَوْمُكُمُ ٱلَّذِى كُنتُمْ تُوعَدُونَ ﴿١٠٣﴾

104. ಗ್ರಂಥಗಳ ಹಾಳೆಗಳನ್ನು ಸುರುಳಿಯಾಗಿ ಸುತ್ತುವಂತೆ ನಾವು ಆಕಾಶವನ್ನು ಸುತ್ತುವ ದಿನ. ಸೃಷ್ಟಿಯನ್ನು ಮೊಟ್ಟಮೊದಲ ಬಾರಿಗೆ ಆರಂಭಿಸಿದಂತೆ ನಾವದನ್ನು ಪುನರಾವರ್ತಿಸುವೆವು. ಅದು ನಮ್ಮ ಮೇಲೆ ಹೊಣೆಯಾಗಿರುವ ಒಂದು ವಾಗ್ದಾನವಾಗಿದೆ. ಖಂಡಿತವಾಗಿಯೂ ನಾವು (ಅದನ್ನು) ಜಾರಿಗೆ ತಂದೇ ತರುವೆವು.

يَوْمَ نَطْوِى ٱلسَّمَآءَ كَطَىِّ ٱلسِّجِلِّ لِلْكُتُبِ ۚ كَمَا بَدَأْنَآ أَوَّلَ خَلْقٍ نُّعِيدُهُۥ ۚ وَعْدًا عَلَيْنَآ ۚ إِنَّا كُنَّا فَٰعِلِينَ ﴿١٠٤﴾

1 ಇನ್ನೊಬ್ಬರ ಆಕ್ರಂದನವನ್ನು ಕೇಳಲಾಗದ ರೀತಿಯಲ್ಲಿ ಭಯವಿಹ್ವಲರೂ, ವಿಭ್ರಾಂತರೂ ಆಗಿರುವರು.

2 ಅಲ್ಲಾಹುವಿನ ಹೊರತಾಗಿ ಆರಾಧಿಸಲ್ಪಡುವ ಆರಾಧ್ಯರು ನರಕದ ಇಂಧನವಾಗುವರು ಎಂದು ಇಲ್ಲಿ ಹೇಳಲಾಗಿದೆ. ಆದರೆ ಪ್ರವಾದಿ ಈಸಾ(عَلَيْهِ ٱلسَّلَامُ), ಉಝೈರ್(عَلَيْهِ ٱلسَّلَامُ), ಮಲಕ್‌ಗಳು ಹಾಗೂ ಇತರ ಪ್ರವಾದಿಗಳು ಮತ್ತು ಸತ್ಯವಿಶ್ವಾಸಿಗಳು ಇದರಿಂದ ಹೊರತಾಗಿದ್ದಾರೆ. ಯಾಕೆಂದರೆ ಅವರ ಅರಿವಿಗೆ ಬಾರದೆ ಮತ್ತು ಅವರ ಅಂಗೀಕಾರವಿಲ್ಲದೆ ಅವರನ್ನು ಆರಾಧಿಸಲಾಗುತ್ತಿದೆ.

وَلَقَدۡ كَتَبۡنَا فِي ٱلزَّبُورِ مِنۢ بَعۡدِ ٱلذِّكۡرِ أَنَّ ٱلۡأَرۡضَ يَرِثُهَا عِبَادِيَ ٱلصَّٰلِحُونَ ١٠٥

105. ಖಂಡಿತವಾಗಿಯೂ ಸಜ್ಜನರಾಗಿರುವ ನನ್ನ ದಾಸರು ಭೂಮಿಯ ವಾರೀಸುದಾರರಾಗಲಿರುವರು ಎಂಬುದಾಗಿ ನಾವು ಉಪದೇಶದ ನಂತರ ಝಬೂರ್‌ನಲ್ಲಿ ದಾಖಲಿಸಿರುವೆವು.[1]

إِنَّ فِي هَٰذَا لَبَلَٰغٗا لِّقَوۡمٍ عَٰبِدِينَ ١٠٦

106. ಖಂಡಿತವಾಗಿಯೂ ಇದರಲ್ಲಿ ಆರಾಧನಾ ಮಗ್ನರಾದವರಿಗೆ ಒಂದು ಸಂದೇಶವಿದೆ.

وَمَآ أَرۡسَلۡنَٰكَ إِلَّا رَحۡمَةٗ لِّلۡعَٰلَمِينَ ١٠٧

107. ಸರ್ವಲೋಕದವರಿಗೆ ಕಾರುಣ್ಯವಾಗಿಯೇ ಹೊರತು ನಾವು ತಮ್ಮನ್ನು ಕಳುಹಿಸಿಲ್ಲ.

قُلۡ إِنَّمَا يُوحَىٰٓ إِلَيَّ أَنَّمَآ إِلَٰهُكُمۡ إِلَٰهٞ وَٰحِدٞۖ فَهَلۡ أَنتُم مُّسۡلِمُونَ ١٠٨

108. ಹೇಳಿರಿ: 'ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನೆಂದು ನನಗೆ ದಿವ್ಯ ಸಂದೇಶ ನೀಡಲಾಗುತ್ತಿದೆ. ಆದ್ದರಿಂದ ನೀವು ಮುಸ್ಲಿಮರಾಗುವಿರಾ?'

فَإِن تَوَلَّوۡاْ فَقُلۡ ءَاذَنتُكُمۡ عَلَىٰ سَوَآءٖۖ وَإِنۡ أَدۡرِيٓ أَقَرِيبٌ أَم بَعِيدٞ مَّا تُوعَدُونَ ١٠٩

109. ಅವರೇನಾದರೂ ವಿಮುಖರಾಗುವುದಾದರೆ ತಾವು ಹೇಳಿರಿ: 'ನಾನು ನಿಮ್ಮೊಂದಿಗೆ ಘೋಷಿಸಿರುವುದು ಸಮಾನ ವಿಧದಲ್ಲಾಗಿದೆ.[2] ನಿಮಗೆ ವಾಗ್ದಾನ ಮಾಡಲಾಗಿರುವ ಸಂಗತಿಯು ಹತ್ತಿರದಲ್ಲಿದೆಯೋ ಅಥವಾ ವಿದೂರದಲ್ಲಿದೆಯೋ ಎಂಬುದು ನನಗೆ ತಿಳಿಯದು.

إِنَّهُۥ يَعۡلَمُ ٱلۡجَهۡرَ مِنَ ٱلۡقَوۡلِ وَيَعۡلَمُ مَا تَكۡتُمُونَ ١١٠

110. ಖಂಡಿತವಾಗಿಯೂ ಮಾತಿನ ಪೈಕಿ ಬಹಿರಂಗವಾಗಿರುವುದನ್ನು ಅವನು ಅರಿಯುವನು. ನೀವು ಬಚ್ಚಿಡುವುದನ್ನೂ ಅವನು ಅರಿಯುವನು.

---

1 ಇಲ್ಲಿ ದಿಕ್ರ್ ಎಂಬುದರ ತಾತ್ಪರ್ಯದ ಕುರಿತು ಭಿನ್ನಾಭಿಪ್ರಾಯಗಳಿವೆ. ಅದು ಅಲ್ಲಾಹುವಿನ ಬಳಿಯಿರುವ ಮೂಲಗ್ರಂಥವೆಂದು ಹೇಳಲಾಗುತ್ತಿದೆ. ತೌರಾತ್ ಎಂದೂ ಹೇಳಲಾಗುತ್ತಿದೆ. ಅದೇ ರೀತಿ ಇಲ್ಲಿ ಹೇಳಲಾದ ಝಬೂರ್ ಎಂಬುದು ದಾವೂದ್(عَلَيۡهِ ٱلسَّلَامُ)ರಿಗೆ ನೀಡಲಾದ ಗ್ರಂಥವೆಂದೂ, ಅಲ್ಲ ಕೇವಲ ಒಂದು ಗ್ರಂಥವೆಂದೂ ಎರಡು ಅಭಿಪ್ರಾಯವಿದೆ.

2 ಅಲಾ ಸವಾಇನ್ ಎಂಬುದಕ್ಕೆ ಸಮಾನವಾಗಿ, ಸರಿಯಾದ ವಿಧದಲ್ಲಿ ಎಂದು ಅರ್ಥ ನೀಡಬಹುದು. ಅಂದರೆ ವಿಶ್ವಾಸಕ್ಕೆ ಸಂಬಂಧಿಸಿದ ವಿಷಯಗಳು, ವಿಧಿನಿಷೇಧಗಳು, ಯುದ್ಧಗಳು ಶಾಂತಿ–ಸಂಧಾನಗಳು ಇತ್ಯಾದಿಗಳ ಕುರಿತು ನಾನು ನಿಮ್ಮೊಂದಿಗೆ ಆದೇಶಿಸಿರುವುದು ಸರಿಯಾದ ವಿಧದಲ್ಲಾಗಿದೆ ಅಥವಾ ಎಲ್ಲರಿಗೂ ಸಮಾನವಾಗಿ ಬಾಧಕವಾಗುವ ರೀತಿಯಲ್ಲಾಗಿದೆ ಎಂದರ್ಥ.

111. ನನಗೆ ತಿಳಿಯದು! ಅದು ನಿಮಗೆ ಒಂದು ಪರೀಕ್ಷೆಯಾಗಿರಲೂಬಹುದು ಮತ್ತು ತಾತ್ಕಾಲಿಕವಾಗಿರುವ ಸುಖಾಡಂಬರವಾಗಿರಲೂಬಹುದು’.

وَإِنْ أَدْرِى لَعَلَّهُۥ فِتْنَةٌ لَّكُمْ وَمَتَٰعٌ إِلَىٰ حِينٍ ﴿١١١﴾

112. ಪ್ರವಾದಿಯವರು ಹೇಳಿದರು: ‘ಓ ನನ್ನ ರಬ್! ಸತ್ಯದೊಂದಿಗೆ ತೀರ್ಪು ನೀಡು. ನಮ್ಮ ರಬ್ ಪರಮ ದಯಾಮಯನೂ, ನೀವು ವರ್ಣಿಸುತ್ತಿರುವುದರ ವಿರುದ್ಧ ಸಹಾಯ ಬೇಡಲಾಗುವವನೂ ಆಗಿರುವನು’.

قَٰلَ رَبِّ ٱحْكُم بِٱلْحَقِّ ۗ وَرَبُّنَا ٱلرَّحْمَٰنُ ٱلْمُسْتَعَانُ عَلَىٰ مَا تَصِفُونَ ﴿١١٢﴾

## ಅಲ್ ಹಜ್ಜ್[1]

## سُورَةُ الحَجِّ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 78

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلنَّاسُ ٱتَّقُواْ رَبَّكُمۡۚ إِنَّ زَلۡزَلَةَ ٱلسَّاعَةِ شَيۡءٌ عَظِيمٞ ١

1. ಓ ಜನರೇ! ನಿಮ್ಮ ರಬ್ಬನ್ನು ಭಯಪಡಿರಿ. ಖಂಡಿತವಾಗಿಯೂ ಅಂತ್ಯಘಳಿಗೆಯ ಕಂಪನವು ಭಯಾನಕ ಸಂಗತಿಯಾಗಿದೆ.

يَوۡمَ تَرَوۡنَهَا تَذۡهَلُ كُلُّ مُرۡضِعَةٍ عَمَّآ أَرۡضَعَتۡ وَتَضَعُ كُلُّ ذَاتِ حَمۡلٍ حَمۡلَهَا وَتَرَى ٱلنَّاسَ سُكَٰرَىٰ وَمَا هُم بِسُكَٰرَىٰ وَلَٰكِنَّ عَذَابَ ٱللَّهِ شَدِيدٞ ٢

2. ನೀವದನ್ನು ಕಾಣುವ ದಿನದಂದು ಮೊಲೆಯುಣಿಸುವ ಯಾವುದೇ ತಾಯಿಯು ತಾನು ಮೊಲೆಯುಣಿಸುತ್ತಿರುವ ಮಗುವಿನ ಬಗ್ಗೆ ಅಲಕ್ಷ್ಯಳಾಗುವಳು. ಗರ್ಭಿಣಿಯಾಗಿರುವ ಯಾವುದೇ ಹೆಣ್ಣು ತನ್ನ ಗರ್ಭದಲ್ಲಿರುವುದನ್ನು ಹಡೆಯುವಳು ಮತ್ತು ತಾವು ಜನರನ್ನು ಮತ್ತೇರಿದವರನ್ನಾಗಿ ಕಾಣುವಿರಿ. ಆದರೆ (ವಾಸ್ತವಿಕವಾಗಿ) ಅವರು ಮತ್ತೇರಿದವರಲ್ಲ.[2] ಆದರೆ ಅಲ್ಲಾಹುವಿನ ಶಿಕ್ಷೆಯು ಕಠೋರವಾಗಿದೆ.

وَمِنَ ٱلنَّاسِ مَن يُجَٰدِلُ فِي ٱللَّهِ بِغَيۡرِ عِلۡمٖ وَيَتَّبِعُ كُلَّ شَيۡطَٰنٖ مَّرِيدٖ ٣

3. ಯಾವುದೇ ಜ್ಞಾನವಿಲ್ಲದೆ ಅಲ್ಲಾಹುವಿನ ಬಗ್ಗೆ ತರ್ಕಿಸುವ ಮತ್ತು ಧಿಕ್ಕಾರಿಗಳಾದ ಸರ್ವ ಸೈತಾನರನ್ನು ಅನುಸರಿಸುವ ಕೆಲವರು ಜನರಲ್ಲಿರುವರು.

كُتِبَ عَلَيۡهِ أَنَّهُۥ مَن تَوَلَّاهُ فَأَنَّهُۥ يُضِلُّهُۥ وَيَهۡدِيهِ إِلَىٰ عَذَابِ ٱلسَّعِيرِ ٤

4. ಯಾರಾದರೂ ಅವನನ್ನು (ಸೈತಾನನನ್ನು) ಮಿತ್ರನನ್ನಾಗಿ ಮಾಡುವುದಾದರೆ ಖಂಡಿತವಾಗಿಯೂ ಸೈತಾನನು ಅವನನ್ನು ದಾರಿತಪ್ಪಿಸುವನು ಮತ್ತು ಜ್ವಲಿಸುವ ನರಕ ಶಿಕ್ಷೆಯೆಡೆಗೆ ಮುನ್ನಡೆಸುವನು ಎಂದು ಅವನ ಕುರಿತು ಲಿಖಿತಗೊಳಿಸಲಾಗಿದೆ.

---

1 ಈ ಅಧ್ಯಾಯದಲ್ಲಿ ಹಜ್ಜ್ (ತೀರ್ಥಯಾತ್ರೆ) ನ ಕುರಿತು ಪ್ರಸ್ತಾಪವಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

2 ಅವರನ್ನು ಮತ್ತೇರಿದವರನ್ನಾಗಿ ಮಾಡಿರುವುದು ಅಮಲು ಪದಾರ್ಥಗಳಲ್ಲ. ಬದಲಾಗಿ ಅಂತ್ಯದಿನದ ಭಯವಿಹ್ವಲತೆಯಾಗಿದೆ.

5. ಓ ಜನರೇ! ಪುನರುತ್ಥಾನದ ಕುರಿತು ನಿಮಗೆ ಸಂದೇಹವಿದ್ದರೆ (ಚಿಂತಿಸಿರಿ). ಖಂಡಿತವಾಗಿಯೂ ನಾವು ನಿಮ್ಮನ್ನು ಮಣ್ಣಿನಿಂದ,[1] ತರುವಾಯ ವೀರ್ಯದಿಂದ, ತರುವಾಯ ರಕ್ತಪಿಂಡದಿಂದ, ತರುವಾಯ ರೂಪ ನೀಡಲಾದುದೂ, ರೂಪ ನೀಡಲಾಗದುದೂ ಆದ ಮಾಂಸ ಮುದ್ದೆಯಿಂದ ಸೃಷ್ಟಿಸಿರುವೆವು. ನಿಮಗೆ ವಿವರಿಸಿಕೊಡುವ ಸಲುವಾಗಿ (ನಾವಿದನ್ನು ಹೇಳುತ್ತಿರುವೆವು). ನಾವಿಚ್ಛಿಸುವುದನ್ನು ನಿಶ್ಚಿತ ಅವಧಿಯ ತನಕ ಅದನ್ನು ಗರ್ಭಾಶಯಗಳಲ್ಲಿ ಇರಿಸುವೆವು. ತರುವಾಯ ನಿಮ್ಮನ್ನು ಶಿಶುವಾಗಿ ಹೊರತರುವೆವು. ತರುವಾಯ ನೀವು ಪೂರ್ಣಶಕ್ತಿಯನ್ನು ತಲುಪುವವರೆಗೆ (ಅವನು ನಿಮ್ಮನ್ನು ಪೋಷಿಸುವನು). ನಿಮ್ಮ ಪೈಕಿ (ಬೇಗನೇ) ಮರಣಹೊಂದುವವರಿದ್ದಾರೆ. ಅರಿವು ಪಡೆದ ಬಳಿಕ ಏನನ್ನೂ ಅರಿತಿರದವರಾಗುವಂತೆ ಅತ್ಯಂತ ಬಲಹೀನವಾದ ಪ್ರಾಯದೆಡೆಗೆ ಮರಳಿಸಲಾಗುವವರೂ ಇದ್ದಾರೆ. ಭೂಮಿಯು ಒಣಗಿ ನಿರ್ಜೀವವಾಗಿರುವುದನ್ನು ತಾವು ಕಾಣುವಿರಿ. ತರುವಾಯ ನಾವು ಅದರ ಮೇಲೆ (ಮಳೆ)ನೀರನ್ನು ಸುರಿಸಿದರೆ ಅದಕ್ಕೆ ಪುಳಕವುಂಟಾಗಿ ಅದು ಬೆಳವಣಿಗೆ ಹೊಂದುತ್ತದೆ ಮತ್ತು ಸುಂದರವಾದ ಸರ್ವ ಸಸ್ಯಗಳನ್ನೂ ಹೊರತರುತ್ತದೆ.

يَـٰٓأَيُّهَا ٱلنَّاسُ إِن كُنتُمۡ فِي رَيۡبٖ مِّنَ ٱلۡبَعۡثِ فَإِنَّا خَلَقۡنَٰكُم مِّن تُرَابٖ ثُمَّ مِن نُّطۡفَةٖ ثُمَّ مِنۡ عَلَقَةٖ ثُمَّ مِن مُّضۡغَةٖ مُّخَلَّقَةٖ وَغَيۡرِ مُخَلَّقَةٖ لِّنُبَيِّنَ لَكُمۡۚ وَنُقِرُّ فِي ٱلۡأَرۡحَامِ مَا نَشَآءُ إِلَىٰٓ أَجَلٖ مُّسَمّٗى ثُمَّ نُخۡرِجُكُمۡ طِفۡلٗا ثُمَّ لِتَبۡلُغُوٓاْ أَشُدَّكُمۡۖ وَمِنكُم مَّن يُتَوَفَّىٰ وَمِنكُم مَّن يُرَدُّ إِلَىٰٓ أَرۡذَلِ ٱلۡعُمُرِ لِكَيۡلَا يَعۡلَمَ مِنۢ بَعۡدِ عِلۡمٖ شَيۡـٔٗاۚ وَتَرَى ٱلۡأَرۡضَ هَامِدَةٗ فَإِذَآ أَنزَلۡنَا عَلَيۡهَا ٱلۡمَآءَ ٱهۡتَزَّتۡ وَرَبَتۡ وَأَنۢبَتَتۡ مِن كُلِّ زَوۡجِۭ بَهِيجٖ ٥

6. ಅದು ಏಕೆಂದರೆ ಅಲ್ಲಾಹು ಸತ್ಯವಾಗಿರುವನು, ಖಂಡಿತವಾಗಿಯೂ ಅವನು ಮರಣಹೊಂದಿದವರಿಗೆ ಜೀವ ನೀಡುವನು ಮತ್ತು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು ಎಂಬುದರಿಂದಾಗಿದೆ.

ذَٰلِكَ بِأَنَّ ٱللَّهَ هُوَ ٱلۡحَقُّ وَأَنَّهُۥ يُحۡيِ ٱلۡمَوۡتَىٰ وَأَنَّهُۥ عَلَىٰ كُلِّ شَيۡءٖ قَدِيرٞ ٦

1 ಮೊಟ್ಟಮೊದಲ ಮನುಷ್ಯನನ್ನು ಜೇಡಿ ಮಣ್ಣಿನ ರೂಪದಿಂದ ಸೃಷ್ಟಿಸಲಾಗಿದೆ. ಪ್ರತಿಯೊಬ್ಬ ಮಾನವನ ಶರೀರವೂ ಮಣ್ಣಿನ ಲವಣಾಂಶಗಳನ್ನು ಹೊಂದಿದೆ.

7. ಅಂತ್ಯಘಳಿಗೆಯು ಖಂಡಿತವಾಗಿಯೂ ಬರುವುದು. ಅದರಲ್ಲಿ ಸಂದೇಹವೇ ಇಲ್ಲ. ಗೋರಿಗಳಲ್ಲಿರುವವರನ್ನು ಅಲ್ಲಾಹು ಪುನರುತ್ಥಾನಗೊಳಿಸುವನು.

وَأَنَّ ٱلسَّاعَةَ ءَاتِيَةٌ لَّا رَيۡبَ فِيهَا وَأَنَّ ٱللَّهَ يَبۡعَثُ مَن فِي ٱلۡقُبُورِ ٧

8-9. ಯಾವುದೇ ಜ್ಞಾನವಾಗಲಿ, ಮಾರ್ಗದರ್ಶಿಯಾಗಲಿ, ಬೆಳಕು ಚೆಲ್ಲುವ ಗ್ರಂಥವಾಗಲಿ ಇಲ್ಲದೆ ಅಹಂಕಾರದೊಂದಿಗೆ ತಿರುಗುತ್ತಾ ಅಲ್ಲಾಹುವಿನ ಕುರಿತು ತರ್ಕಿಸುವವನು ಜನರಲ್ಲಿರುವನು. ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ವ್ಯತಿಚಲನೆಗೊಳಿಸುವ ಸಲುವಾಗಿ (ಅವನು ಹಾಗೆ ಮಾಡುತ್ತಿರುವನು). ಅವನಿಗೆ ಇಹಲೋಕದಲ್ಲಿ ಅಪಮಾನವಿದೆ. ನಾವು ಪುನರುತ್ಥಾನ ದಿನದಂದು ಸುಟ್ಟು ಕರಕಲಾಗಿಸುವ ಶಿಕ್ಷೆಯನ್ನು ಅವನು ಸವಿಯುವಂತೆ ಮಾಡುವೆವು.

وَمِنَ ٱلنَّاسِ مَن يُجَٰدِلُ فِي ٱللَّهِ بِغَيۡرِ عِلۡمٖ وَلَا هُدٗى وَلَا كِتَٰبٖ مُّنِيرٖ ٨ ثَانِيَ عِطۡفِهِۦ لِيُضِلَّ عَن سَبِيلِ ٱللَّهِۖ لَهُۥ فِي ٱلدُّنۡيَا خِزۡيٞۖ وَنُذِيقُهُۥ يَوۡمَ ٱلۡقِيَٰمَةِ عَذَابَ ٱلۡحَرِيقِ ٩

10. (ಅವನೊಂದಿಗೆ ಹೇಳಲಾಗುವುದು): 'ಇದು ನಿನ್ನ ಕೈಗಳು ಮುಂಗಡವಾಗಿ ಮಾಡಿಟ್ಟಿರುವುದರಿಂದಾಗಿದೆ ಮತ್ತು ಅಲ್ಲಾಹು (ತನ್ನ) ದಾಸರೊಂದಿಗೆ ಕಿಂಚಿತ್ತೂ ಅನ್ಯಾಯವೆಸಗುವವನಲ್ಲ ಎಂಬುದರಿಂದಲೂ ಆಗಿದೆ'.

ذَٰلِكَ بِمَا قَدَّمَتۡ يَدَاكَ وَأَنَّ ٱللَّهَ لَيۡسَ بِظَلَّٰمٖ لِّلۡعَبِيدِ ١٠

11. ಒಂದು ಅಂಚಿನಲ್ಲಿದ್ದುಕೊಂಡು ಅಲ್ಲಾಹುವನ್ನು ಆರಾಧಿಸುವವನು ಜನರಲ್ಲಿರುವನು. ಅವನಿಗೇನಾದರೂ ಒಳಿತುಂಟಾದರೆ ಅದರಿಂದ ಅವನು ಶಾಂತನಾಗುವನು.[1] ಅವನಿಗೇನಾದರೂ ಪರೀಕ್ಷೆ ಎದುರಾದರೆ ಅವನು ತನ್ನೆಡೆಗೇ ಹೊರಳಿ ಬೀಳುವನು.[2] ಅವನಿಗೆ ಇಹಲೋಕ ಮತ್ತು ಪರಲೋಕವು ನಷ್ಟವಾಗಿದೆ. ಸ್ಪಷ್ಟವಾದ ನಷ್ಟವು ಇದೇ ಆಗಿದೆ.

وَمِنَ ٱلنَّاسِ مَن يَعۡبُدُ ٱللَّهَ عَلَىٰ حَرۡفٖۖ فَإِنۡ أَصَابَهُۥ خَيۡرٌ ٱطۡمَأَنَّ بِهِۦۖ وَإِنۡ أَصَابَتۡهُ فِتۡنَةٌ ٱنقَلَبَ عَلَىٰ وَجۡهِهِۦ خَسِرَ ٱلدُّنۡيَا وَٱلۡأٓخِرَةَۚ ذَٰلِكَ هُوَ ٱلۡخُسۡرَانُ ٱلۡمُبِينُ ١١

1 ಅವನು ಶಾಂತಚಿತ್ತನಾಗಿ ಅಲ್ಲಾಹುವನ್ನು ಆರಾಧಿಸುವನು.

2 ಬಹುದೇವಾರಾಧನೆಯೆಡೆಗೆ ಅಥವಾ ದೇವನಿಷೇಧದೆಡೆಗೆ ಅವನು ಮರಳುವನು.

12. ಅಲ್ಲಾಹುವಿನ ಹೊರತಾಗಿ ತನಗೆ ಹಾನಿಯನ್ನಾಗಲಿ ಲಾಭವನ್ನಾಗಲಿ ಮಾಡದವುಗಳನ್ನು ಅವನು ಕರೆದು ಪ್ರಾರ್ಥಿಸುತ್ತಿರುವನು. ಅತಿವಿದೂರವಾದ ಪಥಭ್ರಷ್ಟತೆಯು ಇದೇ ಆಗಿದೆ.

يَدۡعُواْ مِن دُونِ ٱللَّهِ مَا لَا يَضُرُّهُۥ وَمَا لَا يَنفَعُهُۥۚ ذَٰلِكَ هُوَ ٱلضَّلَٰلُ ٱلۡبَعِيدُ ١٢

13. ಯಾರ ಕಡೆಯ ಹಾನಿಯು ಅವನ ಕಡೆಯ ಲಾಭಕ್ಕಿಂತಲೂ ಹೆಚ್ಚು ಹತ್ತಿರದಲ್ಲಿದೆಯೋ ಅಂತಹವನನ್ನು ಅವನು ಕರೆದು ಪ್ರಾರ್ಥಿಸುತ್ತಿರುವನು. ಎಷ್ಟೊಂದು ಕೆಟ್ಟ ಸಹಾಯಕನು! ಎಷ್ಟೊಂದು ಕೆಟ್ಟ ಮಿತ್ರನು![1]

يَدۡعُواْ لَمَن ضَرُّهُۥٓ أَقۡرَبُ مِن نَّفۡعِهِۦۚ لَبِئۡسَ ٱلۡمَوۡلَىٰ وَلَبِئۡسَ ٱلۡعَشِيرُ ١٣

14. ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರನ್ನು ಅಲ್ಲಾಹು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಮಾಡಿಸುವನು. ಖಂಡಿತವಾಗಿಯೂ ಅಲ್ಲಾಹು ತಾನಿಚ್ಛಿಸುವುದನ್ನು ಮಾಡುವನು.

إِنَّ ٱللَّهَ يُدۡخِلُ ٱلَّذِينَ ءَامَنُواْ وَعَمِلُواْ ٱلصَّٰلِحَٰتِ جَنَّٰتٖ تَجۡرِي مِن تَحۡتِهَا ٱلۡأَنۡهَٰرُۚ إِنَّ ٱللَّهَ يَفۡعَلُ مَا يُرِيدُ ١٤

15. ಅಲ್ಲಾಹು ಅವರಿಗೆ (ಪ್ರವಾದಿಗೆ) ಇಹಲೋಕದಲ್ಲಿ, ಪರಲೋಕದಲ್ಲಿ ಸಹಾಯ ಮಾಡಲಾರನೆಂದು ಯಾರಾದರೂ ಭಾವಿಸುವುದಾದರೆ ಅವನು ಆಕಾಶಕ್ಕೆ ಹಗ್ಗವನ್ನು ಕಟ್ಟಿ (ಪ್ರವಾದಿಯವರಿಗೆ ಸಿಗುತ್ತಿರುವ ಸಹಾಯವನ್ನು) ಕಡಿದು ಹಾಕಲಿ.[2] ತರುವಾಯ ತನ್ನನ್ನು ಆಕ್ರೋಶಗೊಳಿಸುವ ವಿಷಯವನ್ನು (ಪ್ರವಾದಿಯ ವಿಜಯವನ್ನು) ತನ್ನ ತಂತ್ರದ ಮೂಲಕ ನಿವಾರಿಸಲು ಸಾಧ್ಯವೇ ಎಂದು ಅವನು ನೋಡಲಿ.

مَن كَانَ يَظُنُّ أَن لَّن يَنصُرَهُ ٱللَّهُ فِي ٱلدُّنۡيَا وَٱلۡأٓخِرَةِ فَلۡيَمۡدُدۡ بِسَبَبٍ إِلَى ٱلسَّمَآءِ ثُمَّ لۡيَقۡطَعۡ فَلۡيَنظُرۡ هَلۡ يُذۡهِبَنَّ كَيۡدُهُۥ مَا يَغِيظُ ١٥

1 ಯಾವ ವ್ಯಕ್ತಿಯು ಮಾಡುವ ಉಪಕಾರಕ್ಕಿಂತಲೂ ಅವನ ಉಪದ್ರವಗಳು ಹತ್ತಿರವಾಗಿದೆಯೋ ಅವನನ್ನು ಕೆಟ್ಟ ಸಹಾಯಕ, ಕೆಟ್ಟ ಮಿತ್ರ ಎಂದು ಮನುಷ್ಯನು ಪರಲೋಕದಲ್ಲಿ ಕರೆಯುವನು ಎಂದು ಕೂಡ ಈ ಸೂಕ್ತಿಯನ್ನು ಅರ್ಥೈಸಲಾಗುತ್ತದೆ. ಯದ್‌ಊ ಎಂಬ ಪದಕ್ಕೆ ಕರೆಯುವನು, ಕರೆದು ಪ್ರಾರ್ಥಿಸುವನು ಇತ್ಯಾದಿ ಅರ್ಥವಿರುವುದರಿಂದ ಇಲ್ಲಿ ವಿಭಿನ್ನ ವ್ಯಾಖ್ಯಾನವುಂಟಾಗಿದೆ.

2 ಅಲ್ಲಾಹು ತನಗೆಂದಿಗೂ ಸಹಾಯ ಮಾಡಲಾರನು ಎಂದು ಯಾರಾದರೂ ಭಾವಿಸುವುದಾದರೆ ಭಾವಣಿಗೆ ಹಗ್ಗಕಟ್ಟಿ ಅವನು ಆತ್ಮಹತ್ಯೆ ಮಾಡಿಕೊಳ್ಳಲಿ ಎಂದು ಕೆಲವರು ಇದನ್ನು ವ್ಯಾಖ್ಯಾನಿಸಿದ್ದಾರೆ.

16. ಹೀಗೆ ನಾವು ಇದನ್ನು (ಗ್ರಂಥವನ್ನು) ಸ್ಪಷ್ಟವಾದ ದೃಷ್ಟಾಂತಗಳಾಗಿ ಅವತೀರ್ಣಗೊಳಿಸಿರುವೆವು. ಅಲ್ಲಾಹು ತಾನಿಚ್ಛಿಸುವವರನ್ನು ಸನ್ಮಾರ್ಗದೆಡೆಗೆ ಮುನ್ನಡೆಸುವನು.

وَكَذَٰلِكَ أَنزَلْنَٰهُ ءَايَٰتٍ بَيِّنَٰتٍ وَأَنَّ ٱللَّهَ يَهْدِى مَن يُرِيدُ ﴿١٦﴾

17. ಸತ್ಯವಿಶ್ವಾಸಿಗಳು, ಯಹೂದರು, ಸಾಬಿಈಗಳು, ಕ್ರೈಸ್ತರು, ಮಜೂಸಿಗಳು, ಬಹುದೇವಾರಾಧಕರು, ಮೊದಲಾದವರ ಮಧ್ಯೆ ಪುನರುತ್ಥಾನ ದಿನದಂದು ಖಂಡಿತವಾಗಿಯೂ ಅಲ್ಲಾಹು ತೀರ್ಪು ನೀಡುವನು. ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳ ಮೇಲೂ ಸಾಕ್ಷಿಯಾಗಿರುವನು.

إِنَّ ٱلَّذِينَ ءَامَنُوا۟ وَٱلَّذِينَ هَادُوا۟ وَٱلصَّٰبِـِٔينَ وَٱلنَّصَٰرَىٰ وَٱلْمَجُوسَ وَٱلَّذِينَ أَشْرَكُوٓا۟ إِنَّ ٱللَّهَ يَفْصِلُ بَيْنَهُمْ يَوْمَ ٱلْقِيَٰمَةِ ۚ إِنَّ ٱللَّهَ عَلَىٰ كُلِّ شَىْءٍ شَهِيدٌ ﴿١٧﴾

18. ಆಕಾಶಗಳಲ್ಲಿರುವವರು, ಭೂಮಿಯಲ್ಲಿರುವವರು, ಸೂರ್ಯ, ಚಂದ್ರ, ನಕ್ಷತ್ರಗಳು, ಪರ್ವತಗಳು, ಮರಗಳು, ಜೀವಿಗಳು ಮತ್ತು ಜನರ ಪೈಕಿ ಹಲವರು ಅಲ್ಲಾಹುವಿಗೆ ಸಾಷ್ಟಾಂಗವೆರಗುತ್ತಿರುವರು ಎಂಬುದನ್ನು ತಾವು ಕಾಣುವುದಿಲ್ಲವೇ? (ಇತರ) ಅನೇಕ ಮಂದಿಯ ವಿಷಯದಲ್ಲಿ ಶಿಕ್ಷೆಯು ಖಾತ್ರಿಯಾಗಿದೆ. ಅಲ್ಲಾಹು ಯಾರನ್ನಾದರೂ ಅಪಮಾನಿಸುವುದಾದರೆ ಅವನನ್ನು ಗೌರವಿಸುವವರಾರೂ ಇಲ್ಲ. ಖಂಡಿತವಾಗಿಯೂ ಅಲ್ಲಾಹು ತಾನಿಚ್ಛಿಸುವುದನ್ನು ಮಾಡುವನು.

أَلَمْ تَرَ أَنَّ ٱللَّهَ يَسْجُدُ لَهُۥ مَن فِى ٱلسَّمَٰوَٰتِ وَمَن فِى ٱلْأَرْضِ وَٱلشَّمْسُ وَٱلْقَمَرُ وَٱلنُّجُومُ وَٱلْجِبَالُ وَٱلشَّجَرُ وَٱلدَّوَآبُّ وَكَثِيرٌ مِّنَ ٱلنَّاسِ ۖ وَكَثِيرٌ حَقَّ عَلَيْهِ ٱلْعَذَابُ ۗ وَمَن يُهِنِ ٱللَّهُ فَمَا لَهُۥ مِن مُّكْرِمٍ ۚ إِنَّ ٱللَّهَ يَفْعَلُ مَا يَشَآءُ ۩ ﴿١٨﴾

19. ಈ ಎರಡು ಗುಂಪುಗಳು ಪರಸ್ಪರ ವಿರುದ್ಧವಾಗಿರುವರು. ತಮ್ಮ ರಬ್‌ನ ವಿಷಯದಲ್ಲಿ ಅವರು ತರ್ಕಿಸುತ್ತಿರುವರು. ಅವಿಶ್ವಾಸವಿಟ್ಟವರಾರೋ ಅವರಿಗೆ ಅಗ್ನಿಯ ಉಡುಪುಗಳನ್ನು ಕತ್ತರಿಸಿ ಕೊಡಲಾಗುವುದು. ಅವರ ತಲೆಯ ಮೇಲಿನಿಂದ ಕುದಿಯುವ ನೀರನ್ನು ಸುರಿಯಲಾಗುವುದು.

۞ هَٰذَانِ خَصْمَانِ ٱخْتَصَمُوا۟ فِى رَبِّهِمْ ۖ فَٱلَّذِينَ كَفَرُوا۟ قُطِّعَتْ لَهُمْ ثِيَابٌ مِّن نَّارٍ يُصَبُّ مِن فَوْقِ رُءُوسِهِمُ ٱلْحَمِيمُ ﴿١٩﴾

20. ಅದರಿಂದಾಗಿ ಅವರ ಉದರಗಳಲ್ಲಿರುವುದು ಮತ್ತು ಅವರ ಚರ್ಮಗಳು ಕರಗಿ ಹೋಗುವುವು.

يُصْهَرُ بِهِۦ مَا فِى بُطُونِهِمْ وَٱلْجُلُودُ ﴿٢٠﴾

وَلَهُم مَّقَٰمِعُ مِنْ حَدِيدٍ ﴿٢١﴾

21. ಅವರಿಗೆ ಕಬ್ಬಿಣದ ದಂಡಗಳಿರುವುವು.[1]

كُلَّمَآ أَرَادُوٓاْ أَن يَخْرُجُواْ مِنْهَا مِنْ غَمٍّ أُعِيدُواْ فِيهَا وَذُوقُواْ عَذَابَ ٱلْحَرِيقِ ﴿٢٢﴾

22. ಅತಿಯಾದ ಬೇಗುದಿಯಿಂದಾಗಿ ಅದರಿಂದ ಹೊರಹೋಗಲು ಅವರು ಬಯಸುವಾಗಲೆಲ್ಲ ಅವರನ್ನು ಅದರೆಡೆಗೇ ಮರಳಿಸಲಾಗುವುದು. 'ಸುಟ್ಟು ಕರಕಲಾಗಿಸುವ ಶಿಕ್ಷೆಯ ರುಚಿಯನ್ನು ಸವಿಯಿರಿ' (ಎಂದು ಅವರೊಂದಿಗೆ ಹೇಳಲಾಗುವುದು).

إِنَّ ٱللَّهَ يُدْخِلُ ٱلَّذِينَ ءَامَنُواْ وَعَمِلُواْ ٱلصَّٰلِحَٰتِ جَنَّٰتٍ تَجْرِى مِن تَحْتِهَا ٱلْأَنْهَٰرُ يُحَلَّوْنَ فِيهَا مِنْ أَسَاوِرَ مِن ذَهَبٍ وَلُؤْلُؤًا وَلِبَاسُهُمْ فِيهَا حَرِيرٌ ﴿٢٣﴾

23. ಖಂಡಿತವಾಗಿಯೂ ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರನ್ನು ಅಲ್ಲಾಹು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಮಾಡಿಸುವನು. ಅಲ್ಲಿ ಅವರಿಗೆ ಸ್ವರ್ಣ ಕಡಗಗಳನ್ನೂ, ಮುತ್ತುಗಳನ್ನೂ ತೊಡಿಸಲಾಗುವುದು. ಅಲ್ಲಿ ಅವರಿಗಿರುವ ಉಡುಪು ರೇಶ್ಮೆಯಾಗಿರುವುದು.

وَهُدُوٓاْ إِلَى ٱلطَّيِّبِ مِنَ ٱلْقَوْلِ وَهُدُوٓاْ إِلَىٰ صِرَٰطِ ٱلْحَمِيدِ ﴿٢٤﴾

24. ಅವರಿಗೆ ಮಾರ್ಗದರ್ಶನ ನೀಡಲಾಗಿರುವುದು ಮಾತುಗಳ ಪೈಕಿ ಉತ್ತಮವಾಗಿರುವುದರ ಕಡೆಗಾಗಿದೆ. ಅವರಿಗೆ ಮಾರ್ಗದರ್ಶನ ನೀಡಲಾಗಿರುವುದು ಸ್ತುತ್ಯರ್ಹನಾದ ಅಲ್ಲಾಹುವಿನ ಮಾರ್ಗದೆಡೆಗಾಗಿದೆ.

إِنَّ ٱلَّذِينَ كَفَرُواْ وَيَصُدُّونَ عَن سَبِيلِ ٱللَّهِ وَٱلْمَسْجِدِ ٱلْحَرَامِ ٱلَّذِى جَعَلْنَٰهُ لِلنَّاسِ سَوَآءً ٱلْعَٰكِفُ فِيهِ وَٱلْبَادِ وَمَن يُرِدْ فِيهِ بِإِلْحَادٍۭ بِظُلْمٍ نُّذِقْهُ مِنْ عَذَابٍ أَلِيمٍ ﴿٢٥﴾

25. ಖಂಡಿತವಾಗಿಯೂ ಅವಿಶ್ವಾಸವಿಟ್ಟವರು ಮತ್ತು ಅಲ್ಲಾಹುವಿನ ಮಾರ್ಗದಿಂದಲೂ, ಸ್ಥಳೀಯರೂ, ಹೊರಗಿನವರೂ ಆಗಿರುವ ಎಲ್ಲ ಜನರಿಗೂ ಸಮಾನ ಹಕ್ಕಿರುವುದಾಗಿ ನಾವು ನಿಶ್ಚಯಿಸಿರುವ ಮಸ್ಜಿದುಲ್ ಹರಾಮ್‌ನಿಂದಲೂ ಜನರನ್ನು ತಡೆಯುವವರಾರೋ ಅವರು (ಎಚ್ಚರವಹಿಸಲಿ). ಅಲ್ಲಿ ಯಾರಾದರೂ ಅಕ್ರಮವಾಗಿ ಧರ್ಮಬಾಹಿರವಾದ ಏನನ್ನಾದರೂ ಮಾಡಲು ಬಯಸಿದರೆ ಅವನಿಗೆ ನಾವು ಯಾತನಾಮಯವಾದ ಶಿಕ್ಷೆಯನ್ನು ಸವಿಯುವಂತೆ ಮಾಡುವೆವು.

1 ಲೋಹದ ದಂಡಗಳಿಂದ ದಂಡಿಸಲಾಗುವುದು ಎಂದರ್ಥ.

**26.** ಇಬ್ರಾಹೀಮ್‌ರಿಗೆ ಆ ಭವನದ (ಕಅ್‌ಬಾಲಯದ) ಸ್ಥಾನವನ್ನು ನಾವು ಅನುಕೂಲಮಾಡಿಕೊಟ್ಟ[1] ಸಂದರ್ಭ. ‘ನನ್ನೊಂದಿಗೆ ಏನನ್ನೂ ಸಹಭಾಗಿಯನ್ನಾಗಿ ಮಾಡದಿರಿ ಮತ್ತು ತವಾಫ್(ಪ್ರದಕ್ಷಿಣೆ) ಮಾಡುವವರಿಗೆ ಮತ್ತು ನಿಂತುಕೊಂಡೂ, ಬಾಗಿಯೂ, ಸಾಷ್ಟಾಂಗವೆರಗುತ್ತಲೂ ಪ್ರಾರ್ಥಿಸುವವರಿಗೆ ನನ್ನ ಭವನವನ್ನು ಶುದ್ಧೀಕರಿಸಿರಿ’ ಎಂದು (ನಾವು ಅವರಿಗೆ ಆಜ್ಞಾಪಿಸಿದೆವು).

وَإِذۡ بَوَّأۡنَا لِإِبۡرَٰهِيمَ مَكَانَ ٱلۡبَيۡتِ أَن لَّا
تُشۡرِكۡ بِي شَيۡـٔٗا وَطَهِّرۡ بَيۡتِيَ لِلطَّآئِفِينَ
وَٱلۡقَآئِمِينَ وَٱلرُّكَّعِ ٱلسُّجُودِ ٢٦

**27.** (ನಾವು ಅವರೊಂದಿಗೆ ಹೇಳಿದೆವು): ‘ಹಜ್ಜ್‌ನ ಕುರಿತು ತಾವು ಜನರಿಗೆ ಘೋಷಣೆ ಮಾಡಿರಿ. ಅವರು ಪಾದಚಾರಿಗಳಾಗಿಯೂ, ವಿದೂರವಾದ ಎಲ್ಲ ಪರ್ವತ ಕಣಿವೆಗಳ ಮೂಲಕವೂ, ಎಲ್ಲ ವಿಧದ ಸಣಕಲು ಒಂಟೆಗಳ ಮೇಲೇರಿಯೂ ಅವರು ತಮ್ಮ ಬಳಿಗೆ ಬರುವರು.

وَأَذِّن فِي ٱلنَّاسِ بِٱلۡحَجِّ يَأۡتُوكَ رِجَالٗا
وَعَلَىٰ كُلِّ ضَامِرٖ يَأۡتِينَ مِن كُلِّ فَجٍّ
عَمِيقٖ ٢٧

**28.** ಅವರಿಗೆ ಪ್ರಯೋಜನಕರವಾಗಿರುವ ಸ್ಥಳಗಳಲ್ಲಿ[2] ಅವರು ಉಪಸ್ಥಿತರಿರುವ ಸಲುವಾಗಿ ಮತ್ತು ಅಲ್ಲಾಹು ಅವರಿಗೆ ನೀಡಿರುವ ಜಾನುವಾರುಗಳನ್ನು ನಿಶ್ಚಿತ ದಿನಗಳಲ್ಲಿ ಅವನ ನಾಮವನ್ನು ಉಚ್ಚರಿಸಿ ಬಲಿ ನೀಡುವ ಸಲುವಾಗಿ. ತರುವಾಯ ಅವುಗಳಿಂದ ನೀವು ತಿನ್ನಿರಿ ಮತ್ತು ನಿರ್ಗತಿಕರಿಗೂ, ಬಡವರಿಗೂ ತಿನ್ನಲು ನೀಡಿರಿ.

لِّيَشۡهَدُواْ مَنَٰفِعَ لَهُمۡ وَيَذۡكُرُواْ ٱسۡمَ
ٱللَّهِ فِيٓ أَيَّامٖ مَّعۡلُومَٰتٍ عَلَىٰ مَا رَزَقَهُم
مِّنۢ بَهِيمَةِ ٱلۡأَنۡعَٰمِۖ فَكُلُواْ مِنۡهَا وَأَطۡعِمُواْ
ٱلۡبَآئِسَ ٱلۡفَقِيرَ ٢٨

---

1 ಬವ್ವಅ್‌ನಾ ಎಂಬ ಪದಕ್ಕೆ ನಾವು ನಿಶ್ಚಯಿಸಿದೆವು, ನಾವು ಅನುಕೂಲಮಾಡಿಕೊಟ್ಟೆವು, ನಾವು ವಾಸಸ್ಥಳವನ್ನಾಗಿ ಮಾಡಿಕೊಟ್ಟೆವು ಇತ್ಯಾದಿ ಅರ್ಥಗಳಿವೆ.

2 ಹಜ್ಜ್‌ನಿಂದ ಜನರಿಗೆ ಆಧ್ಯಾತ್ಮಿಕವಾದ ಮತ್ತು ಲೌಕಿಕವಾದ ಅನೇಕ ಪ್ರಯೋಜನಗಳಿವೆ. ಮಹತ್ವಪೂರ್ಣವಾದ ಪುಣ್ಯಕರ್ಮಗಳ ಮೂಲಕ ಅವರಿಗೆ ಅಲ್ಲಾಹುವಿನ ಸಂಪ್ರೀತಿಯನ್ನು ಗಳಿಸಲು ಸಾಧ್ಯವಾಗುತ್ತದೆ. ವಿವಿಧ ದೇಶ, ವರ್ಣ, ಮತ್ತು ಭಾಷೆಗಳ ಜನರನ್ನು ಪರಿಚಯ ಮಾಡಿಕೊಳ್ಳಲು ಮತ್ತು ಪರಸ್ಪರ ವಿಚಾರ ವಿನಿಮಯ ನಡೆಸಲು ಸಾಧ್ಯವಾಗುತ್ತದೆ. ವಿವಿಧ ದೇಶಗಳ ಯಾತ್ರಾರ್ಥಿಗಳು ತಮ್ಮ ತಮ್ಮ ದೇಶಗಳ ಉತ್ಪನ್ನಗಳೊಂದಿಗೆ ಆಗಮಿಸುವುದರಿಂದ ವಾಣಿಜ್ಯ ಪ್ರಯೋಜನಗಳೂ ಉಂಟಾಗುತ್ತವೆ.

29. ತರುವಾಯ ಅವರು ತಮ್ಮ ಕೊಳೆಯನ್ನು ನಿವಾರಿಸಲಿ,[1] ತಮ್ಮ ಹರಕೆಗಳನ್ನು ಸಂದಾಯ ಮಾಡಲಿ ಮತ್ತು ಪ್ರಾಚೀನವಾದ ಆ ಭವನವನ್ನು ಪ್ರದಕ್ಷಿಣೆ ಮಾಡಲಿ.

ثُمَّ لْيَقْضُواْ تَفَثَهُمْ وَلْيُوفُواْ نُذُورَهُمْ وَلْيَطَّوَّفُواْ بِٱلْبَيْتِ ٱلْعَتِيقِ ﴿٢٩﴾

30. ಅದನ್ನು (ಅರ್ಥಮಾಡಿಕೊಳ್ಳಿರಿ). ಅಲ್ಲಾಹು ಪವಿತ್ರಗೊಳಿಸಿರುವ ವಸ್ತುಗಳನ್ನು ಯಾರಾದರೂ ಗೌರವಿಸುವುದಾದರೆ ಅದು ಅವನಿಗೆ ತನ್ನ ರಬ್‌ನ ಬಳಿ ಒಳಿತಾಗಿದೆ. ನಿಮಗೆ ಓದಿಕೊಡಲಾಗುವುದಕ್ಕೆ ಹೊರತಾಗಿರುವ ಜಾನುವಾರುಗಳನ್ನು ನಿಮಗೆ ಧರ್ಮಸಮ್ಮತಗೊಳಿಸಲಾಗಿದೆ.[2] ಆದ್ದರಿಂದ ವಿಗ್ರಹಗಳೆಂಬ ಮಾಲಿನ್ಯದಿಂದ ನೀವು ದೂರಸರಿಯಿರಿ ಮತ್ತು ಮಿಥ್ಯಮಾತುಗಳಿಂದಲೂ ದೂರಸರಿಯಿರಿ.

ذَٰلِكَۖ وَمَن يُعَظِّمْ حُرُمَٰتِ ٱللَّهِ فَهُوَ خَيْرٌ لَّهُۥ عِندَ رَبِّهِۦۗ وَأُحِلَّتْ لَكُمُ ٱلْأَنْعَٰمُ إِلَّا مَا يُتْلَىٰ عَلَيْكُمْۖ فَٱجْتَنِبُواْ ٱلرِّجْسَ مِنَ ٱلْأَوْثَٰنِ وَٱجْتَنِبُواْ قَوْلَ ٱلزُّورِ ﴿٣٠﴾

31. (ನೀವು) ಋಜುಮನಸ್ಕರಾಗಿ ಅಲ್ಲಾಹುವಿನೆಡೆಗೆ ತಿರುಗಿರಿ. ಅವನೊಂದಿಗೆ ಸಹಭಾಗಿತ್ವ ಮಾಡುವವರಾಗದಿರಿ. ಯಾರು ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವನೋ ಅವನು ಆಕಾಶದಿಂದ ಕೆಳಕ್ಕೆ ಬಿದ್ದವನಂತಿರುವನು. ತರುವಾಯ ಹಕ್ಕಿಗಳು ಅವನನ್ನು ಕಸಿದುಕೊಂಡು ಹೋಗುವುವು. ಅಥವಾ ಗಾಳಿಯು ಅವನನ್ನು ವಿದೂರ ಸ್ಥಳಕ್ಕೆ ಕೊಂಡೊಯ್ಯುವುದು.

حُنَفَآءَ لِلَّهِ غَيْرَ مُشْرِكِينَ بِهِۦۚ وَمَن يُشْرِكْ بِٱللَّهِ فَكَأَنَّمَا خَرَّ مِنَ ٱلسَّمَآءِ فَتَخْطَفُهُ ٱلطَّيْرُ أَوْ تَهْوِى بِهِ ٱلرِّيحُ فِى مَكَانٍ سَحِيقٍ ﴿٣١﴾

32. ಅದನ್ನು (ಅರ್ಥಮಾಡಿಕೊಳ್ಳಿರಿ). ಯಾರಾದರೂ ಅಲ್ಲಾಹುವಿನ ಧರ್ಮಲಾಂಛನಗಳನ್ನು ಗೌರವಿಸುವುದಾದರೆ ಖಂಡಿತವಾಗಿಯೂ ಅದು ಹೃದಯಗಳಲ್ಲಿರುವ ಭಯಭಕ್ತಿಯಿಂದಾಗಿದೆ.

ذَٰلِكَۖ وَمَن يُعَظِّمْ شَعَٰٓئِرَ ٱللَّهِ فَإِنَّهَا مِن تَقْوَى ٱلْقُلُوبِ ﴿٣٢﴾

33. ಅವುಗಳಲ್ಲಿ ನಿಮಗೆ ಒಂದು ನಿಶ್ಚಿತ ಅವಧಿಯ ತನಕ ಪ್ರಯೋಜನಗಳಿವೆ. ತರುವಾಯ ಅವುಗಳನ್ನು ಬಲಿನೀಡಬೇಕಾದ

لَكُمْ فِيهَا مَنَٰفِعُ إِلَىٰٓ أَجَلٍ مُّسَمًّى ثُمَّ مَحِلُّهَآ إِلَى ٱلْبَيْتِ ٱلْعَتِيقِ ﴿٣٣﴾

1 ಕ್ಷೌರ ಮಾಡುವುದು, ಉಗುರು ಕತ್ತರಿಸುವುದು ಇತ್ಯಾದಿಗಳನ್ನು ಕೊಳೆ ನಿವಾರಣೆ ಎನ್ನಲಾಗಿದೆ.

2 ಯಾವುದನ್ನೆಲ್ಲಾ ತಿನ್ನಬಾರದೆಂದು ಸೂರಃ ಅಲ್‌ಮಾಇದಃದಲ್ಲಿ ಹೇಳಲಾಗಿದೆ.

ಸ್ಥಳವು ಆ ಪ್ರಾಚೀನ ಭವನ (ಕಅ್‌ಬಾ) ದಲ್ಲಾಗಿದೆ.

34. ನಾವು ಪ್ರತಿಯೊಂದು ಸಮುದಾಯಕ್ಕೂ ಒಂದು ಆರಾಧನಾ ಕ್ರಮವನ್ನು[1] ನಿಶ್ಚಯಿಸಿರುವೆವು. ಅಲ್ಲಾಹು ಅವರಿಗೆ ಅನ್ನಾಧಾರವಾಗಿ ನೀಡಿದ ಜಾನುವಾರುಗಳನ್ನು ಅವರು ಅವನ ನಾಮವನ್ನು ಉಚ್ಚರಿಸಿ ಕೊಯ್ಯುವ ಸಲುವಾಗಿ. ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನು. ಆದ್ದರಿಂದ ಅವನಿಗೆ ಮಾತ್ರ ಶರಣಾಗಿರಿ. (ಓ ಪ್ರವಾದಿಯವರೇ!) ವಿನಯವಂತರಿಗೆ ಶುಭವಾರ್ತೆಯನ್ನು ತಿಳಿಸಿರಿ.

وَلِكُلِّ أُمَّةٍ جَعَلْنَا مَنسَكًا لِّيَذْكُرُوا۟ ٱسْمَ ٱللَّهِ عَلَىٰ مَا رَزَقَهُم مِّنۢ بَهِيمَةِ ٱلْأَنْعَٰمِ ۗ فَإِلَٰهُكُمْ إِلَٰهٌ وَٰحِدٌ فَلَهُۥٓ أَسْلِمُوا۟ ۗ وَبَشِّرِ ٱلْمُخْبِتِينَ ﴿٣٤﴾

35. ಅವರು ಅಲ್ಲಾಹುವಿನ ಕುರಿತು ಪ್ರಸ್ತಾಪಿಸಲಾದರೆ ಹೃದಯಗಳು ನಡುಗುವವರೂ, ತಮಗೆ ಬಾಧಿಸುವ ಆಪತ್ತನ್ನು ಸಹನೆಯೊಂದಿಗೆ ಎದುರಿಸುವವರೂ, ನಮಾಝನ್ನು ಸಂಸ್ಥಾಪಿಸುವವರೂ, ನಾವು ನೀಡಿದವುಗಳಿಂದ ವ್ಯಯಿಸುವವರೂ ಆಗಿರುವರು.

ٱلَّذِينَ إِذَا ذُكِرَ ٱللَّهُ وَجِلَتْ قُلُوبُهُمْ وَٱلصَّٰبِرِينَ عَلَىٰ مَآ أَصَابَهُمْ وَٱلْمُقِيمِى ٱلصَّلَوٰةِ وَمِمَّا رَزَقْنَٰهُمْ يُنفِقُونَ ﴿٣٥﴾

36. ಬಲಿ ಒಂಟೆಗಳನ್ನು ನಾವು ನಿಮಗಾಗಿ ಅಲ್ಲಾಹುವಿನ ಲಾಂಛನಗಳಲ್ಲಿ ಸೇರಿಸಿರುವೆವು. ನಿಮಗೆ ಅದರಲ್ಲಿ ಒಳಿತಿದೆ.[2] ಆದ್ದರಿಂದ ಅವುಗಳನ್ನು ನೀವು ಸಾಲಾಗಿ ನಿಲ್ಲಿಸಿ ಅವುಗಳ ಮೇಲೆ ಅಲ್ಲಾಹುವಿನ ನಾಮವನ್ನು ಉಚ್ಚರಿಸಿ(ಬಲಿ ನೀಡಿ)ರಿ. ತರುವಾಯ ಅವುಗಳು ತಮ್ಮ ಪಾರ್ಶ್ವಗಳ ಮೇಲೆ ಬಿದ್ದರೆ ನೀವು ಅವುಗಳಿಂದ ತಿನ್ನಿರಿ ಮತ್ತು (ಭಿಕ್ಷೆ ಬೇಡದೆ) ಸಂತೃಪ್ತನಾಗುವವನಿಗೂ, ಅಗತ್ಯವನ್ನು ಮುಂದಿಟ್ಟು ಯಾಚಿಸಿ ಬರುವವನಿಗೂ ತಿನ್ನಲು ನೀಡಿರಿ. ಹೀಗೆ ನೀವು ಕೃತಜ್ಞರಾಗುವ ಸಲುವಾಗಿ ಅವುಗಳನ್ನು ನಾವು ನಿಮಗೆ ಅಧೀನಗೊಳಿಸಿಕೊಟ್ಟಿರುವೆವು.

وَٱلْبُدْنَ جَعَلْنَٰهَا لَكُم مِّن شَعَٰٓئِرِ ٱللَّهِ لَكُمْ فِيهَا خَيْرٌ ۖ فَٱذْكُرُوا۟ ٱسْمَ ٱللَّهِ عَلَيْهَا صَوَآفَّ ۖ فَإِذَا وَجَبَتْ جُنُوبُهَا فَكُلُوا۟ مِنْهَا وَأَطْعِمُوا۟ ٱلْقَانِعَ وَٱلْمُعْتَرَّ ۚ كَذَٰلِكَ سَخَّرْنَٰهَا لَكُمْ لَعَلَّكُمْ تَشْكُرُونَ ﴿٣٦﴾

1 ಮನ್‌ಸಕ್ ಎಂಬ ಪದಕ್ಕೆ ಆರಾಧನಾ ಕರ್ಮ ಎಂದೂ, ಬಲಿಕರ್ಮ ಎಂಬ ಅರ್ಥಗಳಿವೆ.

2 ಬಲಿ ನೀಡುವವರೆಗೆ ಅವುಗಳನ್ನು ಸವಾರಿ ಮತ್ತಿತರ ಉಪಯೋಗಗಳಿಗಾಗಿ ಬಳಸಬಹುದು. ಬಲಿಯ ಮೂಲಕ ಆಧ್ಯಾತ್ಮಿಕ ಲಾಭಗಳನ್ನು ಪಡೆಯಬಹುದು.

**37.** ಖಂಡಿತವಾಗಿಯೂ ಅವುಗಳ ಮಾಂಸವಾಗಲಿ, ರಕ್ತವಾಗಲಿ ಎಂದಿಗೂ ಅಲ್ಲಾಹುವನ್ನು ತಲುಪಲಾರದು. ಆದರೆ ನಿಮ್ಮ ಭಯಭಕ್ತಿಯು ಅವನನ್ನು ತಲುಪುವುದು. ಅಲ್ಲಾಹು ನಿಮಗೆ ಮಾರ್ಗದರ್ಶನ ಮಾಡಿರುವುದರಿಂದ ನೀವು ಅವನ ಮಹತ್ವವನ್ನು ಕೊಂಡಾಡಲು ಹೀಗೆ ಅವನು ಅವುಗಳನ್ನು ನಿಮಗೆ ಅಧೀನಗೊಳಿಸಿಕೊಟ್ಟಿರುವನು. (ಓ ಪ್ರವಾದಿಯವರೇ!) ಸತ್ಕರ್ಮಿಗಳಿಗೆ ಶುಭವಾರ್ತೆ ನೀಡಿರಿ.

لَن يَنَالَ ٱللَّهَ لُحُومُهَا وَلَا دِمَآؤُهَا
وَلَٰكِن يَنَالُهُ ٱلتَّقۡوَىٰ مِنكُمۡۚ كَذَٰلِكَ
سَخَّرَهَا لَكُمۡ لِتُكَبِّرُواْ ٱللَّهَ عَلَىٰ مَا
هَدَىٰكُمۡۗ وَبَشِّرِ ٱلۡمُحۡسِنِينَ ٣٧

**38.** ಖಂಡಿತವಾಗಿಯೂ ಅಲ್ಲಾಹು ಸತ್ಯವಿಶ್ವಾಸಿಗಳಿಗಾಗಿ ಸಂರಕ್ಷಣೆಯನ್ನು ನೀಡುವನು. ಕೃತಘ್ನನಾಗಿರುವ ಯಾವ ವಂಚಕನನ್ನೂ ಅಲ್ಲಾಹು ಖಂಡಿತವಾಗಿಯೂ ಮೆಚ್ಚಲಾರನು.

۞إِنَّ ٱللَّهَ يُدَٰفِعُ عَنِ ٱلَّذِينَ ءَامَنُوٓاْۗ إِنَّ
ٱللَّهَ لَا يُحِبُّ كُلَّ خَوَّانٖ كَفُورٍ ٣٨

**39.** ಯುದ್ಧಕ್ಕೆ ಬಲಿಯಾಗುವವರಿಗೆ, ಅವರು ಮರ್ದಿತರಾಗಿರುವುದರಿಂದ (ತಿರುಗೇಟು ನೀಡಲು) ಅನುಮತಿ ನೀಡಲಾಗಿದೆ[1] ಖಂಡಿತವಾಗಿಯೂ ಅವರಿಗೆ ನೆರವು ನೀಡಲು ಅಲ್ಲಾಹು ಸಮರ್ಥನಾಗಿರುವನು.

أُذِنَ لِلَّذِينَ يُقَٰتَلُونَ بِأَنَّهُمۡ ظُلِمُواْۚ وَإِنَّ
ٱللَّهَ عَلَىٰ نَصۡرِهِمۡ لَقَدِيرٌ ٣٩

**40.** 'ನಮ್ಮ ರಬ್ ಅಲ್ಲಾಹುವಾಗಿರುವನು' ಎಂದು ಹೇಳಿರುವ ಕಾರಣಕ್ಕಾಗಿ ಮಾತ್ರ ಅವರನ್ನು ಅನ್ಯಾಯವಾಗಿ ಅವರ ಮನೆಗಳಿಂದ ಹೊರಗಟ್ಟಲಾಗಿದೆ. ಜನರ ಪೈಕಿ ಕೆಲವರನ್ನು ಇತರ ಕೆಲವರ ಮೂಲಕ ಅಲ್ಲಾಹು ತಡೆಯೊಡ್ಡದಿರುತ್ತಿದ್ದರೆ ಎಷ್ಟೋ ಸನ್ಯಾಸಿಪೀಠಗಳು, ಕ್ರೈಸ್ತ ಚರ್ಚುಗಳು, ಯಹೂದ ಮಂದಿರಗಳು ಮತ್ತು ಅಲ್ಲಾಹುವಿನ ನಾಮವನ್ನು ಹೇರಳವಾಗಿ ಉಚ್ಚರಿಸಲ್ಪಡುವ ಮಸೀದಿಗಳು ಧ್ವಂಸವಾಗುತ್ತಿದ್ದವು![2] ತನಗೆ

ٱلَّذِينَ أُخۡرِجُواْ مِن دِيَٰرِهِم بِغَيۡرِ حَقٍّ
إِلَّآ أَن يَقُولُواْ رَبُّنَا ٱللَّهُۗ وَلَوۡلَا دَفۡعُ ٱللَّهِ
ٱلنَّاسَ بَعۡضَهُم بِبَعۡضٖ لَّهُدِّمَتۡ صَوَٰمِعُ
وَبِيَعٞ وَصَلَوَٰتٞ وَمَسَٰجِدُ يُذۡكَرُ فِيهَا ٱسۡمُ
ٱللَّهِ كَثِيرٗاۗ وَلَيَنصُرَنَّ ٱللَّهُ مَن يَنصُرُهُۥٓۚ
إِنَّ ٱللَّهَ لَقَوِيٌّ عَزِيزٌ ٤٠

---

1 ಶತ್ರುಗಳು ಎಷ್ಟೇ ಹಿಂಸೆ ನೀಡಿದರೂ ಸಹನೆ ವಹಿಸಬೇಕೆಂದು ಆರಂಭಕಾಲದಲ್ಲಿ ಸತ್ಯವಿಶ್ವಾಸಿಗಳಿಗೆ ಆದೇಶಿಸಲಾಗಿತ್ತು. ಈ ಸೂಕ್ತಿಯ ಮೂಲಕ ತಿರುಗೇಟು ನೀಡಲು ಸತ್ಯವಿಶ್ವಾಸಿಗಳಿಗೆ ಅನುಮತಿ ನೀಡಲಾಯಿತು.

2 ಮಿತಿಮೀರಿದ ಧಿಕ್ಕಾರದೊಂದಿಗೆ ಹತ್ಯಾಕಾಂಡವನ್ನು ಮುಂದುವರಿಸಲು ಯಾವುದೇ ಜನತೆಗೂ ಅಲ್ಲಾಹು

ಸಹಾಯ ಮಾಡುವವರಿಗೆ ಖಂಡಿತವಾಗಿಯೂ ಅಲ್ಲಾಹು ಸಹಾಯ ಮಾಡುವನು. ಖಂಡಿತವಾಗಿಯೂ ಅಲ್ಲಾಹು ಬಲಿಷ್ಠನೂ, ಪ್ರತಾಪಶಾಲಿಯೂ ಆಗಿರುವನು.

41. ನಾವು ಅವರಿಗೆ (ಮರ್ದಿತರಿಗೆ) ಭೂಮಿಯಲ್ಲಿ ಅಧಿಕಾರವನ್ನು ನೀಡಿದರೆ ಅವರು ನಮಾಝ್ ಸಂಸ್ಥಾಪಿಸುವರು, ಝಕಾತ್ ನೀಡುವರು, ಸದಾಚಾರವನ್ನು ಆದೇಶಿಸುವರು, ದುರಾಚಾರವನ್ನು ವಿರೋಧಿಸುವರು. ಕಾರ್ಯಗಳ ಪರ್ಯಾವಸಾನವು ಅಲ್ಲಾಹುವಿಗಾಗಿದೆ.

ٱلَّذِينَ إِن مَّكَّنَّـٰهُمۡ فِي ٱلۡأَرۡضِ أَقَامُواْ ٱلصَّلَوٰةَ وَءَاتَوُاْ ٱلزَّكَوٰةَ وَأَمَرُواْ بِٱلۡمَعۡرُوفِ وَنَهَوۡاْ عَنِ ٱلۡمُنكَرِۗ وَلِلَّهِ عَٰقِبَةُ ٱلۡأُمُورِ ﴿٤١﴾

42-44. (ಓ ಪ್ರವಾದಿಯವರೇ!) ಅವರು ತಮ್ಮನ್ನು ನಿಷೇಧಿಸುವುದಾದರೆ ಅವರಿಗಿಂತ ಮುಂಚಿನವರಾದ ನೂಹ್‌ರ ಜನತೆ, ಆದ್, ಸಮೂದ್, ಇಬ್ರಾಹೀಮ್‌ರ ಜನತೆ, ಲೂತ್‌ರ ಜನತೆ ಮತ್ತು ಮದ್‌ಯನ್ ನಿವಾಸಿಗಳು (ಪ್ರವಾದಿಗಳನ್ನು) ನಿಷೇಧಿಸಿದ್ದರು. ಮೂಸಾ ಕೂಡ ನಿಷೇಧಿಸಲ್ಪಟ್ಟಿರುವರು. ಆದರೆ ನಾನು ಸತ್ಯನಿಷೇಧಿಗಳಿಗೆ ಸಮಯವನ್ನು ವಿಸ್ತರಿಸಿಕೊಟ್ಟೆನು. ತರುವಾಯ ಅವರನ್ನು ಶಿಕ್ಷಿಸಿದೆನು. ಆಗ ನನ್ನ ಶಿಕ್ಷೆಯು ಹೇಗಿತ್ತು!

وَإِن يُكَذِّبُوكَ فَقَدۡ كَذَّبَتۡ قَبۡلَهُمۡ قَوۡمُ نُوحٖ وَعَادٞ وَثَمُودُ ﴿٤٢﴾ وَقَوۡمُ إِبۡرَٰهِيمَ وَقَوۡمُ لُوطٖ ﴿٤٣﴾ وَأَصۡحَٰبُ مَدۡيَنَۖ وَكُذِّبَ مُوسَىٰۖ فَأَمۡلَيۡتُ لِلۡكَٰفِرِينَ ثُمَّ أَخَذۡتُهُمۡۖ فَكَيۡفَ كَانَ نَكِيرِ ﴿٤٤﴾

45. ಎಷ್ಟೋ ನಾಡುಗಳನ್ನು ಅವುಗಳ ನಿವಾಸಿಗಳು ಅಕ್ರಮದಲ್ಲಿ ನಿರತರಾದಾಗ ನಾವು ನಾಶಗೊಳಿಸಿರುವೆವು. ಅವು ತಮ್ಮ ಮೇಲ್ಛಾವಣಿಗಳೊಂದಿಗೆ ಕುಸಿದು ಬಿದ್ದವು. ಪಾಳುಬಿದ್ದಿರುವ ಎಷ್ಟೊಂದು ಬಾವಿಗಳು! ಎತ್ತರಿಸಿ ಕಟ್ಟಲಾದ ಎಷ್ಟೊಂದು ಕೋಟೆಗಳು!

فَكَأَيِّن مِّن قَرۡيَةٍ أَهۡلَكۡنَٰهَا وَهِيَ ظَالِمَةٞ فَهِيَ خَاوِيَةٌ عَلَىٰ عُرُوشِهَا وَبِئۡرٖ مُّعَطَّلَةٖ وَقَصۡرٖ مَّشِيدٍ ﴿٤٥﴾

46. ಅವರು ಭೂಮಿಯಲ್ಲಿ ಸಂಚರಿಸುವುದಿಲ್ಲವೇ? ಹಾಗಾದರೆ ಚಿಂತಿಸಿ ಗ್ರಹಿಸುವ ಹೃದಯಗಳು ಅಥವಾ ಕೇಳಿ ತಿಳಿಯುವ ಕಿವಿಗಳು

أَفَلَمۡ يَسِيرُواْ فِي ٱلۡأَرۡضِ فَتَكُونَ لَهُمۡ قُلُوبٞ يَعۡقِلُونَ بِهَآ أَوۡ ءَاذَانٞ يَسۡمَعُونَ

ಅವಕಾಶ ನೀಡಲಾರನು. ಒಂದು ಗುಂಪಿನ ಆಕ್ರಮಣಕ್ಕೆ ಬೇರೊಂದು ಗುಂಪಿನಿಂದ ತಡೆಯೊಡ್ಡುವ ಮೂಲಕ ಅಲ್ಲಾಹು ಭೂಮಿಯಲ್ಲಿ ಬಲ ಸಮತೋಲನವನ್ನು ಕಾಯ್ದುಕೊಳ್ಳುತ್ತಾನೆ. ಆರಾಧನಾಲಯಗಳು ಮತ್ತು ಆರಾಧನಾಮಗ್ನರಾಗಿರುವ ಸಾತ್ವಿಕರು ತನ್ಮೂಲಕ ವಿನಾಶದಿಂದ ಸಂರಕ್ಷಣೆ ಪಡೆಯುತ್ತಾರೆ.

بِهَآ فَإِنَّهَا لَا تَعۡمَى ٱلۡأَبۡصَٰرُ وَلَٰكِن تَعۡمَى ٱلۡقُلُوبُ ٱلَّتِي فِي ٱلصُّدُورِ ٤٦

ಅವರಿಗಿರುತ್ತಿದ್ದವು. ಖಂಡಿತವಾಗಿಯೂ ಕುರುಡಾಗುವುದು ಕಣ್ಣುಗಳಿಗಲ್ಲ, ಆದರೆ ಕುರುಡಾಗುವುದು ಎದೆಗಳೊಳಗಿರುವ ಹೃದಯಗಳಿಗಾಗಿವೆ.[1]

وَيَسۡتَعۡجِلُونَكَ بِٱلۡعَذَابِ وَلَن يُخۡلِفَ ٱللَّهُ وَعۡدَهُۥۚ وَإِنَّ يَوۡمًا عِندَ رَبِّكَ كَأَلۡفِ سَنَةٖ مِّمَّا تَعُدُّونَ ٤٧

47. (ಓ ಪ್ರವಾದಿಯವರೇ!) ಅವರು ತಮ್ಮೊಂದಿಗೆ ಶಿಕ್ಷೆಗಾಗಿ ಆತುರಪಡುತ್ತಿರುವರು. ಆದರೆ ಅಲ್ಲಾಹು ತನ್ನ ವಾಗ್ದಾನವನ್ನು ಎಂದಿಗೂ ಉಲ್ಲಂಘಿಸಲಾರನು. ಖಂಡಿತವಾಗಿಯೂ ತಮ್ಮ ರಬ್‌ನ ಬಳಿ ಒಂದು ದಿನವೆಂದರೆ ನೀವು ಎಣಿಸುವ ಸಾವಿರ ವರ್ಷಗಳಂತಾಗಿವೆ.[2]

وَكَأَيِّن مِّن قَرۡيَةٍ أَمۡلَيۡتُ لَهَا وَهِيَ ظَالِمَةٞ ثُمَّ أَخَذۡتُهَا وَإِلَيَّ ٱلۡمَصِيرُ ٤٨

48. ಅಕ್ರಮ ನಿರತವಾಗಿದ್ದ ಎಷ್ಟೋ ನಾಡುಗಳಿಗೆ ನಾನು ಕಾಲಾವಕಾಶವನ್ನು ವಿಸ್ತರಿಸಿಕೊಟ್ಟೆನು. ತರುವಾಯ ಅವರನ್ನು ಹಿಡಿದೆನು. (ಎಲ್ಲದರ) ಮರಳುವಿಕೆಯು ನನ್ನ ಬಳಿಗಾಗಿದೆ.

قُلۡ يَٰٓأَيُّهَا ٱلنَّاسُ إِنَّمَآ أَنَا۠ لَكُمۡ نَذِيرٞ مُّبِينٞ ٤٩

49. (ಓ ಪ್ರವಾದಿಯವರೇ!) ಹೇಳಿರಿ: 'ಓ ಜನರೇ! ನಾನು ನಿಮ್ಮೆಡೆಗಿರುವ ಓರ್ವ ಸ್ಪಷ್ಟ ಮುನ್ನೆಚ್ಚರಿಕೆ ನೀಡುವವನು ಮಾತ್ರವಾಗಿರುವೆನು'.

فَٱلَّذِينَ ءَامَنُواْ وَعَمِلُواْ ٱلصَّٰلِحَٰتِ لَهُم مَّغۡفِرَةٞ وَرِزۡقٞ كَرِيمٞ ٥٠

50. ಆದರೆ ವಿಶ್ವಾಸವಿಟ್ಟು ಸತ್ಕರ್ಮವೆಸಗುವವರಾರೋ ಅವರಿಗೆ ಪಾಪಮುಕ್ತಿಯೂ, ಗೌರವಾನ್ವಿತ ಅನ್ನಾಧಾರವೂ ಇರುವುದು.

وَٱلَّذِينَ سَعَوۡاْ فِيٓ ءَايَٰتِنَا مُعَٰجِزِينَ أُوْلَٰٓئِكَ أَصۡحَٰبُ ٱلۡجَحِيمِ ٥١

51. (ನಮ್ಮನ್ನು) ಸೋಲಿಸಬಹುದೆಂದು ಭಾವಿಸಿ ನಮ್ಮ ದೃಷ್ಟಾಂತಗಳನ್ನು ವಿಕೃತಗೊಳಿಸಲು ಯತ್ನಿಸುವವರಾರೋ ಅವರು ನರಕವಾಸಿಗಳಾಗಿರುವರು.

---

1 ಬದುಕಿಗೆ ಸತ್ಯಪ್ರಕಾಶವು ಪ್ರವೇಶಿಸಲು ಕಣ್ಣಿನ ಅಂಧತೆಯು ಎಂದೂ ತಡೆಯಾಗಲಾರದು. ಆದರೆ ಹೃದಯವು ಕುರುಡಾದರೆ ಅಸತ್ಯದ ಅಂಧಕಾರವು ಜೀವನದಾದ್ಯಂತ ಹರಡುತ್ತದೆ.

2 ಸೂರ್ಯನು ಅಸಂಖ್ಯ ಕೋಟಿ ನಕ್ಷತ್ರಗಳಲ್ಲಿ ಒಂದು ಮಾತ್ರವಾಗಿದೆ. ಒಂದು ದಿನವೆಂದರೆ ಸೌರವ್ಯೂಹದ ಗ್ರಹಗಳ ಪೈಕಿ ಒಂದಾದ ಭೂಮಿಯಲ್ಲಿ ಸೂರ್ಯ ಮತ್ತು ಭೂಮಿ ಪರಸ್ಪರ ಸಂಬಂಧದ ಆಧಾರದಲ್ಲಿ ನಿಶ್ಚಯಿಸಲಾಗುವ ಒಂದು ಕಾಲನಿರ್ಣಯವಾಗಿದೆ. ಒಂದು ಸಂಗತಿಯು ಸನ್ನಿಹಿತವಾಗಿದೆ ಎಂದರೆ ಮನುಷ್ಯನ ಮಟ್ಟಿಗೆ ಅದು ಒಂದೋ ಎರಡೋ ದಿನಗಳಲ್ಲಿ ಸಂಭವಿಸುವಂತದ್ದಾಗಿರಬಹುದು. ಆದರೆ ಆದಿಯೂ ಅಂತ್ಯವೂ ಇಲ್ಲದ ಅಲ್ಲಾಹುವಿಗೆ ಸಂಬಂಧಿಸಿದಂತೆ ಕಾಲನಿರ್ಣಯವು ಗ್ರಹ ನಕ್ಷತ್ರಗಳ ಪರಿಮಿತಿಯಲ್ಲಿ ಸೀಮಿತವಾಗಿರುವುದಲ್ಲ. ಆದ್ದರಿಂದ ಅಲ್ಲಾಹುವಿಗೆ ಸಂಬಂಧಿಸಿದಂತೆ ಒಂದು ದಿನವೆಂದರೆ ಅದು ಸಹಸ್ರಾರು ವರ್ಷಗಳಷ್ಟು ದೀರ್ಘವಾದ ಒಂದು ಯುಗವಾಗಿರಬಹುದು.

**52.** ತಮಗಿಂತ ಮೊದಲು ನಾವು ಯಾವುದೇ ಸಂದೇಶವಾಹಕರನ್ನಾಗಲಿ, ಪ್ರವಾದಿಯನ್ನಾಗಲಿ ಕಳುಹಿಸಿರಲಿಲ್ಲ, ಅವರು ಓದಿಕೊಡುವಾಗ ಆ ಓದಿಕೊಡುವ ವಿಷಯದಲ್ಲಿ ಸೈತಾನನು (ತನ್ನ ದುರ್ಬೋಧನೆಯನ್ನು) ಹಾಕದಿರದ ಹೊರತು.[1] ಆದರೆ ಸೈತಾನನು ಹಾಕಿರುವುದನ್ನು ಅಲ್ಲಾಹು ಅಳಿಸುವನು. ತರುವಾಯ ಅಲ್ಲಾಹು ತನ್ನ ಸೂಕ್ತಿಗಳನ್ನು ಪ್ರಬಲಗೊಳಿಸುವನು. ಅಲ್ಲಾಹು ಎಲ್ಲವನ್ನು ಅರಿಯುವವನೂ ಯುಕ್ತಿಪೂರ್ಣನೂ ಆಗಿರುವನು.

وَمَآ أَرۡسَلۡنَا مِن قَبۡلِكَ مِن رَّسُولٖ وَلَا نَبِيٍّ إِلَّآ إِذَا تَمَنَّىٰٓ أَلۡقَى ٱلشَّيۡطَٰنُ فِيٓ أُمۡنِيَّتِهِۦ فَيَنسَخُ ٱللَّهُ مَا يُلۡقِي ٱلشَّيۡطَٰنُ ثُمَّ يُحۡكِمُ ٱللَّهُ ءَايَٰتِهِۦۗ وَٱللَّهُ عَلِيمٌ حَكِيمٞ ٥٢

**53.** ಸೈತಾನನು ಹಾಕಿಕೊಡುವ ವಿಷಯವನ್ನು ಹೃದಯಗಳಲ್ಲಿ ರೋಗವಿರುವವರಿಗೆ ಮತ್ತು ಹೃದಯಗಳು ಕಠಿಣವಾಗಿರುವವರಿಗೆ ಒಂದು ಪರೀಕ್ಷೆಯನ್ನಾಗಿ ಮಾಡುವ ಸಲುವಾಗಿ. ಖಂಡಿತವಾಗಿಯೂ ಅಕ್ರಮಿಗಳು (ಸತ್ಯದಿಂದ) ವಿದೂರವಾದ ವಿರೋಧದಲ್ಲಿರುವರು.

لِّيَجۡعَلَ مَا يُلۡقِي ٱلشَّيۡطَٰنُ فِتۡنَةٗ لِّلَّذِينَ فِي قُلُوبِهِم مَّرَضٞ وَٱلۡقَاسِيَةِ قُلُوبُهُمۡۗ وَإِنَّ ٱلظَّٰلِمِينَ لَفِي شِقَاقِۭ بَعِيدٖ ٥٣

**54.** ಜ್ಞಾನ ನೀಡಲಾದವರು ಇದು ತಮ್ಮ ರಬ್‌ನ ವತಿಯ ಸತ್ಯವಾಗಿದೆಯೆಂದು ಅರಿತು ಇದರಲ್ಲಿ ವಿಶ್ವಾಸವಿಡುವ ಸಲುವಾಗಿ. ತರುವಾಯ ಅವರ ಹೃದಯಗಳು ಇದಕ್ಕೆ ಶರಣಾಗಲು (ಅದು ಕಾರಣವಾಗುವುದು). ಖಂಡಿತವಾಗಿಯೂ ಅಲ್ಲಾಹು ಸತ್ಯವಿಶ್ವಾಸಿಗಳನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸುವವನಾಗಿರುವನು.

وَلِيَعۡلَمَ ٱلَّذِينَ أُوتُواْ ٱلۡعِلۡمَ أَنَّهُ ٱلۡحَقُّ مِن رَّبِّكَ فَيُؤۡمِنُواْ بِهِۦ فَتُخۡبِتَ لَهُۥ قُلُوبُهُمۡۗ وَإِنَّ ٱللَّهَ لَهَادِ ٱلَّذِينَ ءَامَنُوٓاْ إِلَىٰ صِرَٰطٖ مُّسۡتَقِيمٖ ٥٤

**55.** ಅಂತ್ಯದಿನವು ಅವರ ಬಳಿಗೆ ಅನಿರೀಕ್ಷಿತವಾಗಿ ಬರುವ ತನಕ ಅಥವಾ ವಿನಾಶಕಾರಿ ದಿನವೊಂದರ ಶಿಕ್ಷೆಯು ಬರುವ ತನಕ ಆ ಸತ್ಯನಿಷೇಧಿಗಳು ಇದರ (ಸತ್ಯದ) ಬಗ್ಗೆ ಸಂದೇಹಪಡುತ್ತಲೇ ಇರುವರು.

وَلَا يَزَالُ ٱلَّذِينَ كَفَرُواْ فِي مِرۡيَةٖ مِّنۡهُ حَتَّىٰ تَأۡتِيَهُمُ ٱلسَّاعَةُ بَغۡتَةً أَوۡ يَأۡتِيَهُمۡ عَذَابُ يَوۡمٍ عَقِيمٍ ٥٥

---

1 ಯಾವೊಬ್ಬ ಪ್ರವಾದಿಯೂ ಅಲ್ಲಾಹುವಿನ ವಚನಗಳನ್ನು ಜನರಿಗೆ ಓದಿಕೊಡುವಾಗ ಅದರಲ್ಲಿ ಆಶಯಗೊಂದಲವನ್ನುಂಟು ಮಾಡಲು ಶೈತಾನನು ಪರಿಶ್ರಮಿಸುತ್ತಿದ್ದನು. ಒಮ್ಮೆ ಅವೆಲ್ಲವೂ ಬುದ್ಧಿಭ್ರಮಣೆಯಾದವನ ಊಹೆಗಳಾಗಿವೆ ಎಂದು, ಇನ್ನೊಮ್ಮೆ ಅವೆಲ್ಲವೂ ಪುರಾಣಗಳೆಂದು, ಮತ್ತೊಮ್ಮೆ ಯಾರಿಂದಲೋ ಕಲಿತ ವಿದ್ಯೆಯೆಂದು, ಮಗದೊಮ್ಮೆ ಮಾಂತ್ರಿಕ ವಿದ್ಯೆಯೆಂದೂ ಸೈತಾನನು ಜನರಿಂದ ಹೇಳಿಸುತ್ತಿದ್ದನು.

56. ಅಂದು ಆಧಿಪತ್ಯವು ಅಲ್ಲಾಹುವಿಗಾಗಿರುವುದು. ಅವನು ಅವರ ಮಧ್ಯೆ ತೀರ್ಪು ನೀಡುವನು. ಆದ್ದರಿಂದ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗೈದವರಾರೋ ಅವರು ಸುಖಾನುಭೂತಿಯ ಸ್ವರ್ಗೋದ್ಯಾನಗಳಲ್ಲಿರುವರು.

ٱلۡمُلۡكُ يَوۡمَئِذٖ لِّلَّهِ يَحۡكُمُ بَيۡنَهُمۡۚ فَٱلَّذِينَ ءَامَنُواْ وَعَمِلُواْ ٱلصَّٰلِحَٰتِ فِي جَنَّٰتِ ٱلنَّعِيمِ ٥٦

57. ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರಿಗೆ ಅಪಮಾನಕರ ಶಿಕ್ಷೆಯಿದೆ.

وَٱلَّذِينَ كَفَرُواْ وَكَذَّبُواْ بِـَٔايَٰتِنَا فَأُوْلَٰٓئِكَ لَهُمۡ عَذَابٞ مُّهِينٞ ٥٧

58. ಅಲ್ಲಾಹುವಿನ ಮಾರ್ಗದಲ್ಲಿ ವಲಸೆ ಹೋದವರು, ತರುವಾಯ ವಧಿಸಲ್ಪಟ್ಟವರು ಅಥವಾ ಮರಣ ಹೊಂದಿದವರು[1] ಯಾರೋ ಖಂಡಿತವಾಗಿಯೂ ಅಲ್ಲಾಹು ಅವರಿಗೆ ಉತ್ತಮವಾದ ಅನ್ನಾಧಾರವನ್ನು ಒದಗಿಸುವನು. ಖಂಡಿತವಾಗಿಯೂ ಅನ್ನಾಧಾರ ಒದಗಿಸುವವರಲ್ಲಿ ಅಲ್ಲಾಹು ಅತ್ಯುತ್ತಮನಾಗಿರುವನು.

وَٱلَّذِينَ هَاجَرُواْ فِي سَبِيلِ ٱللَّهِ ثُمَّ قُتِلُوٓاْ أَوۡ مَاتُواْ لَيَرۡزُقَنَّهُمُ ٱللَّهُ رِزۡقًا حَسَنٗاۚ وَإِنَّ ٱللَّهَ لَهُوَ خَيۡرُ ٱلرَّٰزِقِينَ ٥٨

59. ಖಂಡಿತವಾಗಿಯೂ ಅವರು ಸಂತೃಪ್ತರಾಗುವ ಒಂದು ಸ್ಥಳಕ್ಕೆ ಅಲ್ಲಾಹು ಅವರನ್ನು ಪ್ರವೇಶಗೊಳಿಸುವನು. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ, ಸಹನಾ ಶೀಲನೂ ಆಗಿರುವನು.

لَيُدۡخِلَنَّهُم مُّدۡخَلٗا يَرۡضَوۡنَهُۥۚ وَإِنَّ ٱللَّهَ لَعَلِيمٌ حَلِيمٞ ٥٩

60. ಅದು (ಹಾಗೆಯೇ ಆಗಿದೆ). ತನಗೆ ನೀಡಲಾದ ಶಿಕ್ಷೆಗೆ ಸಮಾನವಾದ ಶಿಕ್ಷೆಯ ಮೂಲಕ ಯಾರಾದರೂ ಪ್ರತೀಕಾರ ಕೈಗೊಂಡರೆ, ತರುವಾಯ ಅವನ ಮೇಲೆ ಅತಿಕ್ರಮವೆಸಗಲಾದರೆ[2] ಖಂಡಿತವಾಗಿಯೂ ಅಲ್ಲಾಹು ಅವನಿಗೆ ಸಹಾಯ ಮಾಡುವನು.

۞ذَٰلِكَۖ وَمَنۡ عَاقَبَ بِمِثۡلِ مَا عُوقِبَ بِهِۦ ثُمَّ بُغِيَ عَلَيۡهِ لَيَنصُرَنَّهُ ٱللَّهُۚ إِنَّ ٱللَّهَ لَعَفُوٌّ غَفُورٞ ٦٠

---

1 ಅಲ್ಲಾಹುವಿನ ಮಾರ್ಗದಲ್ಲಿ ತ್ಯಾಗಗಳನ್ನು ಸಹಿಸಿದವರು ರಣರಂಗದಲ್ಲಿ ವಧಿಸಲ್ಪಟ್ಟರೂ, ಯುದ್ಧದಲ್ಲಿ ಜಯಿಸಿ ಸಹಜ ಮರಣವನ್ನು ಹೊಂದಿದರೂ ಅವರು ಅಲ್ಲಾಹುವಿನ ಅನುಗ್ರಹಕ್ಕೆ ಪಾತ್ರರಾಗುವರು.

2 ಮುಸ್ಲಿಮರ ಕಡೆಯಿಂದ ಯಾವುದೇ ಸಂದರ್ಭದಲ್ಲೂ ಅತಿಕ್ರಮವಾಗಲಿ ದಾಳಿಯಾಗಲಿ ಉಂಟಾಗಕೂಡದು. ಆದರೆ ಮುಸ್ಲಿಮರು ಆಕ್ರಮಣಕ್ಕೊಳಗಾದರೆ ಸಮಾನ ಪ್ರಮಾಣದಲ್ಲಿ ಪ್ರತ್ಯಾಕ್ರಮಣ ಮಾಡಲು ಅವರಿಗೆ ಅನುಮತಿಯಿದೆ. ನಂತರವೂ ಮುಸ್ಲಿಮರು ಆಕ್ರಮಣಕ್ಕೊಳಗಾದರೆ ಅವರಿಗೆ ಅಲ್ಲಾಹು ಸಹಾಯದ ಭರವಸೆಯನ್ನು ನೀಡುತ್ತಾನೆ.

ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಮನ್ನಿಸುವವನೂ ಕ್ಷಮಿಸುವವನೂ ಆಗಿರುವನು.

61. ಅದು ಏಕೆಂದರೆ ಅಲ್ಲಾಹು ರಾತ್ರಿಯನ್ನು ಹಗಲಿನಲ್ಲಿ ಪ್ರವೇಶ ಮಾಡಿಸುವವನು ಮತ್ತು ಹಗಲನ್ನು ರಾತ್ರಿಯಲ್ಲಿ ಪ್ರವೇಶ ಮಾಡಿಸುವವನು ಮತ್ತು ಅಲ್ಲಾಹು ಎಲ್ಲವನ್ನು ಆಲಿಸುವವನೂ, ವೀಕ್ಷಿಸುವವನೂ ಆಗಿರುವನು ಎಂಬುದರಿಂದಾಗಿದೆ.

ذَٰلِكَ بِأَنَّ ٱللَّهَ يُولِجُ ٱلَّيْلَ فِى ٱلنَّهَارِ وَيُولِجُ ٱلنَّهَارَ فِى ٱلَّيْلِ وَأَنَّ ٱللَّهَ سَمِيعٌۢ بَصِيرٌ ﴿٦١﴾

62. ಅದು ಏಕೆಂದರೆ ಅಲ್ಲಾಹು ಸತ್ಯವಾಗಿರುವನು,[1] ಅವನ ಹೊರತು ಅವರು ಏನನ್ನು ಕರೆದು ಪ್ರಾರ್ಥಿಸುತ್ತಿರುವರೋ ಅದು ಮಿಥ್ಯೆಯಾಗಿದೆ ಮತ್ತು ಅಲ್ಲಾಹು ಅತ್ಯುನ್ನತನೂ ಮಹಾನನೂ ಆಗಿರುವನು ಎಂಬುದರಿಂದಾಗಿದೆ.

ذَٰلِكَ بِأَنَّ ٱللَّهَ هُوَ ٱلْحَقُّ وَأَنَّ مَا يَدْعُونَ مِن دُونِهِۦ هُوَ ٱلْبَٰطِلُ وَأَنَّ ٱللَّهَ هُوَ ٱلْعَلِىُّ ٱلْكَبِيرُ ﴿٦٢﴾

63. ಅಲ್ಲಾಹು ಆಕಾಶದಿಂದ (ಮಳೆ)ನೀರನ್ನು ಸುರಿಸಿ, ತರುವಾಯ ಭೂಮಿಯು ಅದರಿಂದಾಗಿ ಹಸಿರಾಗುವುದನ್ನು ತಾವು ಕಾಣುವುದಿಲ್ಲವೇ? ಖಂಡಿತವಾಗಿಯೂ ಅಲ್ಲಾಹು ಅತಿ ದಯಾಳುವೂ, ಸೂಕ್ಷ್ಮಜ್ಞಾನಿಯೂ ಆಗಿರುವನು.

أَلَمْ تَرَ أَنَّ ٱللَّهَ أَنزَلَ مِنَ ٱلسَّمَآءِ مَآءً فَتُصْبِحُ ٱلْأَرْضُ مُخْضَرَّةً ۗ إِنَّ ٱللَّهَ لَطِيفٌ خَبِيرٌ ﴿٦٣﴾

64. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಅವನದ್ದಾಗಿವೆ. ಖಂಡಿತವಾಗಿಯೂ ಅಲ್ಲಾಹು ನಿರಪೇಕ್ಷನೂ ಸ್ತುತ್ಯರ್ಹನೂ ಆಗಿರುವನು.

لَّهُۥ مَا فِى ٱلسَّمَٰوَٰتِ وَمَا فِى ٱلْأَرْضِ ۗ وَإِنَّ ٱللَّهَ لَهُوَ ٱلْغَنِىُّ ٱلْحَمِيدُ ﴿٦٤﴾

65. ಅಲ್ಲಾಹು ನಿಮಗೆ ಭೂಮಿಯಲ್ಲಿರುವುದನ್ನು ಅಧೀನಗೊಳಿಸಿಕೊಟ್ಟಿರುವನು ಎಂಬುದನ್ನು ತಾವು ಕಾಣುವುದಿಲ್ಲವೇ? ಅವನ ಆಜ್ಞೆಯಂತೆ ಸಮುದ್ರದ ಮೂಲಕ ಸಂಚರಿಸುವ ಹಡಗನ್ನೂ (ಅವನು ಅಧೀನಗೊಳಿಸಿಕೊಟ್ಟಿರುವನು). ತನ್ನ ಅಪ್ಪಣೆಯ ವಿನಾ ಭೂಮಿಯ ಮೇಲೆ ಬೀಳದಂತೆ ಅವನು ಆಕಾಶವನ್ನು ಆಧರಿಸಿ ಹಿಡಿದಿರುವನು.[2] ಖಂಡಿತವಾಗಿಯೂ ಅಲ್ಲಾಹು

أَلَمْ تَرَ أَنَّ ٱللَّهَ سَخَّرَ لَكُم مَّا فِى ٱلْأَرْضِ وَٱلْفُلْكَ تَجْرِى فِى ٱلْبَحْرِ بِأَمْرِهِۦ وَيُمْسِكُ ٱلسَّمَآءَ أَن تَقَعَ عَلَى ٱلْأَرْضِ إِلَّا بِإِذْنِهِۦٓ ۗ إِنَّ ٱللَّهَ بِٱلنَّاسِ لَرَءُوفٌ رَّحِيمٌ ﴿٦٥﴾

---

1 ಅಲ್ಲಾಹುವಿನ ಅಸ್ತಿತ್ವವು ಶಾಶ್ವತವಾದ ಸತ್ಯವಾಗಿದೆ. ಇತರೆಲ್ಲದರ ಅಸ್ತಿತ್ವವು ಕ್ಷಣಿಕವೂ, ನಶ್ವರವೂ ಆಗಿವೆ.

2 ಆಕಾಶಕಾಯಗಳು ಬಾಹ್ಯಾಕಾಶದಲ್ಲಿ ಅಲಕ್ಷ್ಯವಾಗಿ ಚಲಿಸುವುದಾದರೆ ಅವು ಪರಸ್ಪರ ಢಿಕ್ಕಿ ಹೊಡೆದು ನಿರ್ನಾಮವಾಗುತ್ತಿದ್ದವು. ಕಟ್ಟುನಿಟ್ಟಾದ ಪ್ರಕೃತಿ ನಿಯಮಗಳು ಅವುಗಳ ಚಲನೆಯನ್ನು ಮತ್ತು ಪರಿಭ್ರಮಣದ

ಜನರೊಂದಿಗೆ ಅತ್ಯಧಿಕ ದಯೆಯುಳ್ಳವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

66. ನಿಮ್ಮನ್ನು ಜೀವಂತಗೊಳಿಸಿದವನು ಅವನಾಗಿರುವನು. ತರುವಾಯ ಅವನು ನಿಮ್ಮನ್ನು ಮೃತಪಡಿಸುವನು. ತರುವಾಯ ಅವನು ನಿಮ್ಮನ್ನು ಜೀವಂತಗೊಳಿಸುವನು. ಖಂಡಿತವಾಗಿಯೂ ಮನುಷ್ಯನು ಅತ್ಯಂತ ಕೃತಘ್ನನಾಗಿರುವನು.

وَهُوَ ٱلَّذِيٓ أَحۡيَاكُمۡ ثُمَّ يُمِيتُكُمۡ ثُمَّ يُحۡيِيكُمۡۗ إِنَّ ٱلۡإِنسَٰنَ لَكَفُورٞ ٦٦

67. ಪ್ರತಿಯೊಂದು ಸಮುದಾಯಕ್ಕೂ ನಾವು ಆರಾಧನಾ ಕ್ರಮವನ್ನು ನಿಶ್ಚಯಿಸಿರುವೆವು. ಅವರು ಅದನ್ನೇ ಪಾಲಿಸಿಕೊಂಡು ಬಂದಿರುವರು. ಆದ್ದರಿಂದ ಈ ವಿಷಯದಲ್ಲಿ ಅವರು ತಮ್ಮೊಂದಿಗೆ ತರ್ಕಿಸದಿರಲಿ. ತಾವು ತಮ್ಮ ರಬ್‌ನೆಡೆಗೆ ಆಹ್ವಾನಿಸಿರಿ. ಖಂಡಿತವಾಗಿಯೂ ತಾವು ನೇರವಾದ ಸನ್ಮಾರ್ಗದಲ್ಲಿರುವಿರಿ.

لِّكُلِّ أُمَّةٖ جَعَلۡنَا مَنسَكًا هُمۡ نَاسِكُوهُۖ فَلَا يُنَٰزِعُنَّكَ فِي ٱلۡأَمۡرِۚ وَٱدۡعُ إِلَىٰ رَبِّكَۖ إِنَّكَ لَعَلَىٰ هُدٗى مُّسۡتَقِيمٖ ٦٧

68. ಅವರು ತಮ್ಮೊಂದಿಗೆ ತರ್ಕಿಸುವುದಾದರೆ ತಾವು ಹೇಳಿರಿ: 'ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿತಿರುವನು.

وَإِن جَٰدَلُوكَ فَقُلِ ٱللَّهُ أَعۡلَمُ بِمَا تَعۡمَلُونَ ٦٨

69. ನೀವು ಭಿನ್ನಾಭಿಪ್ರಾಯ ಹೊಂದಿರುವ ವಿಷಯದಲ್ಲಿ ಪುನರುತ್ಥಾನ ದಿನದಂದು ಅಲ್ಲಾಹು ನಿಮ್ಮ ಮಧ್ಯೆ ತೀರ್ಪು ನೀಡುವನು'.

ٱللَّهُ يَحۡكُمُ بَيۡنَكُمۡ يَوۡمَ ٱلۡقِيَٰمَةِ فِيمَا كُنتُمۡ فِيهِ تَخۡتَلِفُونَ ٦٩

70. ಆಕಾಶದಲ್ಲಿ ಮತ್ತು ಭೂಮಿಯಲ್ಲಿರುವುದನ್ನು ಅಲ್ಲಾಹು ಅರಿಯುತ್ತಾನೆಂದು ತಮಗೆ ತಿಳಿದಿಲ್ಲವೇ? ಖಂಡಿತವಾಗಿಯೂ ಅದೊಂದು ದಾಖಲೆಯಲ್ಲಿದೆ.[1]

أَلَمۡ تَعۡلَمۡ أَنَّ ٱللَّهَ يَعۡلَمُ مَا فِي ٱلسَّمَآءِ وَٱلۡأَرۡضِۚ إِنَّ ذَٰلِكَ فِي كِتَٰبٍۚ إِنَّ ذَٰلِكَ عَلَى ٱللَّهِ يَسِيرٞ ٧٠

---

ಪುನರಾವರ್ತನ ಕ್ರಿಯೆಯನ್ನು ಮತ್ತು ವೇಗವನ್ನು ನಿಯಂತ್ರಿಸುವುದರಿಂದಲೇ ಅವು ವ್ಯವಸ್ಥಿತವಾಗಿ ಚಲಿಸುತ್ತಿವೆ. ಅಲ್ಲಾಹು ಈ ವ್ಯವಸ್ಥಿತ ಚಲನೆಯನ್ನು ಬದಲಾಯಿಸಲು ಬಯಸುವಾಗ ಎಲ್ಲವೂ ನುಚ್ಚುನೂರಾಗಿ ಸಂಪೂರ್ಣ ನಾಶವು ಸಂಭವಿಸಲಿದೆ. ಈ ಸೂಕ್ತಿಯಲ್ಲಿರುವ ಸಮಾಅ್ ಎಂಬ ಪದದ ತಾತ್ಪರ್ಯವು ಮೋಡವೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.

1 ಪ್ರತಿಯೊಂದು ಸಂಗತಿಯೂ ನಡೆಯುತ್ತಿರುವುದು ಅಲ್ಲಾಹುವಿನ ದಾಖಲೆಯಲ್ಲಿ ಲಿಖಿತಗೊಳಿಸಲಾದ ಪ್ರಕಾರವೇ ಆಗಿರುತ್ತದೆ.

ಖಂಡಿತವಾಗಿಯೂ ಅದು ಅಲ್ಲಾಹುವಿಗೆ ಸುಲಭ ವಿಷಯವಾಗಿದೆ.

71. ಅಲ್ಲಾಹು ಯಾವುದೇ ಆಧಾರ ಪ್ರಮಾಣವನ್ನು ಇಳಿಸದ ಮತ್ತು ತಮಗೆ ಯಾವುದೇ ಅರಿವಿಲ್ಲದ ವಸ್ತುಗಳನ್ನು ಅವರು ಅಲ್ಲಾಹುವಿನ ಹೊರತು ಆರಾಧಿಸುತ್ತಿರುವರು. ಅಕ್ರಮಿಗಳಿಗೆ ಸಹಾಯಕರಾಗಿ ಯಾರೂ ಇರಲಾರರು.

وَيَعۡبُدُونَ مِن دُونِ ٱللَّهِ مَا لَمۡ يُنَزِّلۡ بِهِۦ سُلۡطَٰنٗا وَمَا لَيۡسَ لَهُم بِهِۦ عِلۡمٞۗ وَمَا لِلظَّٰلِمِينَ مِن نَّصِيرٖ ٧١

72. ನಮ್ಮ ಸ್ಪಷ್ಟವಾದ ದೃಷ್ಟಾಂತಗಳನ್ನು ಅವರಿಗೆ ಓದಿಕೊಡಲಾದರೆ ಅವಿಶ್ವಾಸಿಗಳ ಮುಖಗಳಲ್ಲಿ ತಾವು ಅಪ್ರಿಯತೆ (ಪ್ರಕಟವಾಗುವುದನ್ನು) ಅರಿಯುವಿರಿ. ನಮ್ಮ ದೃಷ್ಟಾಂತಗಳನ್ನು ಅವರಿಗೆ ಓದಿಕೊಡುವವರ ಮೇಲೆ ಹಲ್ಲೆ ಮಾಡಲು ಅವರು ಮುಂದಾಗುವರು. ಹೇಳಿರಿ: 'ಅದಕ್ಕಿಂತಲೂ ನಿಕೃಷ್ಟವಾದ ವಿಷಯವನ್ನು ನಾನು ನಿಮಗೆ ತಿಳಿಸಿಕೊಡಲೇ? ನರಕಾಗ್ನಿ! ಅಲ್ಲಾಹು ಅದನ್ನು ಸತ್ಯನಿಷೇಧಿಗಳಿಗೆ ವಾಗ್ದಾನ ಮಾಡಿರುವನು. ತಲುಪಲಿರುವ ಆ ಸ್ಥಳವು ಎಷ್ಟು ನಿಕೃಷ್ಟವಾದುದು!

وَإِذَا تُتۡلَىٰ عَلَيۡهِمۡ ءَايَٰتُنَا بَيِّنَٰتٖ تَعۡرِفُ فِي وُجُوهِ ٱلَّذِينَ كَفَرُواْ ٱلۡمُنكَرَۖ يَكَادُونَ يَسۡطُونَ بِٱلَّذِينَ يَتۡلُونَ عَلَيۡهِمۡ ءَايَٰتِنَاۗ قُلۡ أَفَأُنَبِّئُكُم بِشَرّٖ مِّن ذَٰلِكُمُۚ ٱلنَّارُ وَعَدَهَا ٱللَّهُ ٱلَّذِينَ كَفَرُواْۖ وَبِئۡسَ ٱلۡمَصِيرُ ٧٢

73. ಓ ಜನರೇ! ಒಂದು ಉದಾಹರಣೆಯನ್ನು ನೀಡಲಾಗುತ್ತದೆ. ಅದನ್ನು ಕಿವಿಗೊಟ್ಟು ಆಲಿಸಿರಿ. ಖಂಡಿತವಾಗಿಯೂ ನೀವು ಅಲ್ಲಾಹುವಿನ ಹೊರತು ಕರೆದು ಪ್ರಾರ್ಥಿಸುವವರು ಒಂದು ನೊಣವನ್ನೂ ಕೂಡ ಸೃಷ್ಟಿಸಲಾರರು. ಅದಕ್ಕಾಗಿ ಅವರೆಲ್ಲರೂ ಒಟ್ಟುಗೂಡಿದರೂ ಸರಿ! ನೊಣವು ಅವರಿಂದ ಏನನ್ನಾದರೂ ಕಸಿದುಕೊಂಡು ಹೋದರೆ ಅದರಿಂದ ಅದನ್ನು ಬಿಡಿಸಿಕೊಳ್ಳಲೂ ಅವರಿಗೆ ಸಾಧ್ಯವಾಗದು. ಪ್ರಾರ್ಥಿಸುವವನೂ ಪ್ರಾರ್ಥಿಸಲ್ಪಡುವವನೂ ಬಲಹೀನರಾಗಿರುವರು!

يَٰٓأَيُّهَا ٱلنَّاسُ ضُرِبَ مَثَلٞ فَٱسۡتَمِعُواْ لَهُۥٓۚ إِنَّ ٱلَّذِينَ تَدۡعُونَ مِن دُونِ ٱللَّهِ لَن يَخۡلُقُواْ ذُبَابٗا وَلَوِ ٱجۡتَمَعُواْ لَهُۥۖ وَإِن يَسۡلُبۡهُمُ ٱلذُّبَابُ شَيۡـٔٗا لَّا يَسۡتَنقِذُوهُ مِنۡهُۚ ضَعُفَ ٱلطَّالِبُ وَٱلۡمَطۡلُوبُ ٧٣

74. ಅಲ್ಲಾಹುವನ್ನು ಗಣನೆ ಮಾಡಬೇಕಾದ ರೀತಿಯಲ್ಲಿ ಅವರು ಗಣನೆ ಮಾಡಲಿಲ್ಲ. ಖಂಡಿತವಾಗಿಯೂ ಅಲ್ಲಾಹು ಬಲಿಷ್ಠನೂ ಪ್ರತಾಪಶಾಲಿಯೂ ಆಗಿರುವನು.

مَا قَدَرُواْ ٱللَّهَ حَقَّ قَدۡرِهِۦٓۚ إِنَّ ٱللَّهَ لَقَوِيٌّ عَزِيزٌ ٧٤

75. ಅಲ್ಲಾಹು ಮಲಕ್‌ಗಳಿಂದಲೂ, ಮನುಷ್ಯರಿಂದಲೂ ಸಂದೇಶವಾಹಕರನ್ನು ಆರಿಸುವನು.[1] ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ, ಕಾಣುವವನೂ ಆಗಿರುವನು.

ٱللَّهُ يَصۡطَفِي مِنَ ٱلۡمَلَٰٓئِكَةِ رُسُلٗا وَمِنَ ٱلنَّاسِۚ إِنَّ ٱللَّهَ سَمِيعُۢ بَصِيرٞ ٧٥

76. ಅವರ ಮುಂದಿರುವುದನ್ನೂ ಹಿಂದಿರುವುದನ್ನೂ ಅವನು ಅರಿಯುವನು. ಎಲ್ಲ ವಿಷಯಗಳೂ ಮರಳುವುದು ಅಲ್ಲಾಹುವಿನ ಬಳಿಗಾಗಿದೆ.

يَعۡلَمُ مَا بَيۡنَ أَيۡدِيهِمۡ وَمَا خَلۡفَهُمۡۚ وَإِلَى ٱللَّهِ تُرۡجَعُ ٱلۡأُمُورُ ٧٦

77. ಓ ಸತ್ಯವಿಶ್ವಾಸಿಗಳೇ! ನೀವು ತಲೆಬಾಗಿರಿ, ಸಾಷ್ಟಾಂಗವೆರಗಿರಿ, ನಿಮ್ಮ ರಬ್ಬನ್ನು ಆರಾಧಿಸಿರಿ ಹಾಗೂ ಸತ್ಕರ್ಮಗಳನ್ನು ಮಾಡಿರಿ. ನೀವು ಯಶಸ್ಸುಗಳಿಸಲೂಬಹುದು.

يَٰٓأَيُّهَا ٱلَّذِينَ ءَامَنُواْ ٱرۡكَعُواْ وَٱسۡجُدُواْۤ وَٱعۡبُدُواْ رَبَّكُمۡ وَٱفۡعَلُواْ ٱلۡخَيۡرَ لَعَلَّكُمۡ تُفۡلِحُونَ۩ ٧٧

78. ಅಲ್ಲಾಹುವಿನ ಮಾರ್ಗದಲ್ಲಿ ಹೋರಾಡಬೇಕಾದ ರೀತಿಯಲ್ಲೇ ಹೋರಾಡಿರಿ. ಅವನು ನಿಮ್ಮನ್ನು ಉತ್ಕೃಷ್ಟರನ್ನಾಗಿ ಆರಿಸಿರುವನು. ಧರ್ಮದ ವಿಷಯದಲ್ಲಿ ಅವನು ನಿಮ್ಮ ಮೇಲೆ ಯಾವುದೇ ಕಷ್ಟವನ್ನೂ ಹೇರಿಲ್ಲ. ಅದು ನಿಮ್ಮ ಪಿತಾಮಹರಾದ ಇಬ್ರಾಹೀಮ್‌ರ ಧರ್ಮವಾಗಿದೆ. ಮುಂಚೆ (ಅಂದರೆ ಪೂರ್ವಗ್ರಂಥಗಳಲ್ಲಿ) ಮತ್ತು ಇದರಲ್ಲಿ (ಕುರ್‌ಆನಿನಲ್ಲಿ) ಅವನು (ಅಲ್ಲಾಹು) ನಿಮಗೆ ಮುಸ್ಲಿಮರೆಂದು ಹೆಸರಿಟ್ಟಿರುವನು. ಇದು ಸಂದೇಶವಾಹಕರು ನಿಮಗೆ ಸಾಕ್ಷಿಯಾಗುವ ಸಲುವಾಗಿಯೂ ಮತ್ತು ನೀವು ಜನರಿಗೆ ಸಾಕ್ಷಿಗಳಾಗುವ ಸಲುವಾಗಿಯೂ ಆಗಿದೆ. ಆದ್ದರಿಂದ ನೀವು ನಮಾಝನ್ನು ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ. ಅಲ್ಲಾಹುವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಅವನು ನಿಮ್ಮ ರಕ್ಷಕನಾಗಿರುವನು. ಎಷ್ಟು ಉತ್ತಮ ರಕ್ಷಕನು! ಎಷ್ಟು ಉತ್ತಮ ಸಹಾಯಕನು!

وَجَٰهِدُواْ فِي ٱللَّهِ حَقَّ جِهَادِهِۦۚ هُوَ ٱجۡتَبَىٰكُمۡ وَمَا جَعَلَ عَلَيۡكُمۡ فِي ٱلدِّينِ مِنۡ حَرَجٖۚ مِّلَّةَ أَبِيكُمۡ إِبۡرَٰهِيمَۚ هُوَ سَمَّىٰكُمُ ٱلۡمُسۡلِمِينَ مِن قَبۡلُ وَفِي هَٰذَا لِيَكُونَ ٱلرَّسُولُ شَهِيدًا عَلَيۡكُمۡ وَتَكُونُواْ شُهَدَآءَ عَلَى ٱلنَّاسِۚ فَأَقِيمُواْ ٱلصَّلَوٰةَ وَءَاتُواْ ٱلزَّكَوٰةَ وَٱعۡتَصِمُواْ بِٱللَّهِ هُوَ مَوۡلَىٰكُمۡۖ فَنِعۡمَ ٱلۡمَوۡلَىٰ وَنِعۡمَ ٱلنَّصِيرُ ٧٨

---

1 ಮಾನವರಿಗೆ ಸತ್ಯಸಂದೇಶವನ್ನು ತಲುಪಿಸಲು ಮಾನವರನ್ನೇ ಸಂದೇಶವಾಹಕರನ್ನಾಗಿ ಕಳುಹಿಸಲಾಗುತ್ತದೆ. ಪ್ರವಾದಿಗಳಿಗೆ ದಿವ್ಯಸಂದೇಶವನ್ನು ತಲುಪಿಸಲು ಮಲಕ್‌ಗಳನ್ನು ದೂತರನ್ನಾಗಿ ಕಳುಹಿಸಲಾಗುತ್ತದೆ.

## ಅಲ್ ಮುಅ್‌ಮಿನೂನ್ (ಸತ್ಯವಿಶ್ವಾಸಿಗಳು)(1)

## سُورَةُ المُؤْمِنُونَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 118

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-4.** ತಮ್ಮ ನಮಾಝ್‌ನಲ್ಲಿ ಭಕ್ತಿಯಿರುವವರೂ, ಅನಗತ್ಯ ವಿಷಯಗಳಿಂದ ವಿಮುಖರಾಗುವವರೂ, ಝಕಾತ್ ನಿರ್ವಹಿಸುವವರೂ ಆಗಿರುವ ಸತ್ಯವಿಶ್ವಾಸಿಗಳು ಯಶಸ್ಸುಗಳಿಸಿದರು.

قَدۡ أَفۡلَحَ ٱلۡمُؤۡمِنُونَ ١ ٱلَّذِينَ هُمۡ فِي صَلَاتِهِمۡ خَٰشِعُونَ ٢ وَٱلَّذِينَ هُمۡ عَنِ ٱللَّغۡوِ مُعۡرِضُونَ ٣ وَٱلَّذِينَ هُمۡ لِلزَّكَوٰةِ فَٰعِلُونَ ٤

**5.** ಅವರು (ವಿಶ್ವಾಸಿಗಳು) ತಮ್ಮ ಗುಪ್ತಾಂಗಗಳನ್ನು ಕಾಪಾಡುವವರಾಗಿರುವರು.

وَٱلَّذِينَ هُمۡ لِفُرُوجِهِمۡ حَٰفِظُونَ ٥

**6.** ತಮ್ಮ ಪತ್ನಿಯರೊಂದಿಗೆ ಅಥವಾ ತಮ್ಮ ಅಧೀನದಲ್ಲಿರುವ ಗುಲಾಮಸ್ತ್ರೀಯರೊಂದಿಗೆ ಹೊರತು. ಆಗ ಅವರು ಆಕ್ಷೇಪಾರ್ಹರಲ್ಲ.

إِلَّا عَلَىٰٓ أَزۡوَٰجِهِمۡ أَوۡ مَا مَلَكَتۡ أَيۡمَٰنُهُمۡ فَإِنَّهُمۡ غَيۡرُ مَلُومِينَ ٦

**7.** ಆದರೆ ಯಾರು ಅದರ ಆಚೆಗಿರುವುದನ್ನು ಬಯಸುವರೋ ಅಂತಹವರು ಅತಿಕ್ರಮಿಗಳಾಗಿರುವರು.

فَمَنِ ٱبۡتَغَىٰ وَرَآءَ ذَٰلِكَ فَأُوْلَٰٓئِكَ هُمُ ٱلۡعَادُونَ ٧

**8-9.** ಅವರು (ವಿಶ್ವಾಸಿಗಳು) ತಮ್ಮ ಅಮಾನತ್ತುಗಳನ್ನು ಮತ್ತು ಕರಾರುಗಳನ್ನು ಪಾಲಿಸುವವರೂ, ತಮ್ಮ ನಮಾಝ್‌ಗಳನ್ನು ನಿಖರವಾಗಿ ಕಾಪಾಡಿಕೊಂಡು ಬರುವವರೂ ಆಗಿರುವರು.

وَٱلَّذِينَ هُمۡ لِأَمَٰنَٰتِهِمۡ وَعَهۡدِهِمۡ رَٰعُونَ ٨ وَٱلَّذِينَ هُمۡ عَلَىٰ صَلَوَٰتِهِمۡ يُحَافِظُونَ ٩

**10.** ವಾರೀಸುದಾರರು ಅವರೇ ಆಗಿರುವರು.

أُوْلَٰٓئِكَ هُمُ ٱلۡوَٰرِثُونَ ١٠

**11.** ಉನ್ನತವಾದ ಸ್ವರ್ಗವನ್ನು ವಾರೀಸಾಗಿ ಪಡೆಯುವವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

ٱلَّذِينَ يَرِثُونَ ٱلۡفِرۡدَوۡسَ هُمۡ فِيهَا خَٰلِدُونَ ١١

1 ಪ್ರಸ್ತುತ ಅಧ್ಯಾಯವು ಸತ್ಯವಿಶ್ವಾಸಿಗಳ ವೈಶಿಷ್ಟ್ಯತೆಗಳನ್ನು ವಿವರಿಸುವ ಮೂಲಕ ಆರಂಭಗೊಳ್ಳುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

**12.** ಖಂಡಿತವಾಗಿಯೂ ನಾವು ಮನುಷ್ಯನನ್ನು ಜೇಡಿಮಣ್ಣಿನ ಸತ್ವದಿಂದ ಸೃಷ್ಟಿಸಿದೆವು.

وَلَقَدْ خَلَقْنَا ٱلْإِنسَٰنَ مِن سُلَٰلَةٍ مِّن طِينٍ ١٢

**13.** ತರುವಾಯ ಅವನನ್ನು ವೀರ್ಯಕೋಶವನ್ನಾಗಿ ಮಾಡಿ ಭದ್ರವಾದ ಒಂದು ಸ್ಥಳದಲ್ಲಿಟ್ಟೆವು.

ثُمَّ جَعَلْنَٰهُ نُطْفَةً فِى قَرَارٍ مَّكِينٍ ١٣

**14.** ತರುವಾಯ ನಾವು ಆ ವೀರ್ಯಕೋಶವನ್ನು ಹೆಪ್ಪುಗಟ್ಟಿದ ಒಂದು ರಕ್ತಪಿಂಡವನ್ನಾಗಿ ಮಾಡಿದೆವು. ತರುವಾಯ ರಕ್ತಪಿಂಡವನ್ನು ಮಾಂಸದ ಮುದ್ದೆಯನ್ನಾಗಿ ಮಾಡಿದೆವು. ತರುವಾಯ ಮಾಂಸದ ಮುದ್ದೆಯನ್ನು ಮೂಳೆಗಳನ್ನಾಗಿ ಮಾಡಿದೆವು. ತರುವಾಯ ಆ ಮೂಳೆಗಳನ್ನು ಮಾಂಸದಿಂದ ಹೊದಿಸಿದೆವು. ತರುವಾಯ ಅದನ್ನು ಇನ್ನೊಂದು ಸೃಷ್ಟಿಯಾಗಿ ಬೆಳೆಸಿದೆವು. ಆದ್ದರಿಂದ ಅತ್ಯುತ್ತಮ ಸೃಷ್ಟಿಕರ್ತನಾದ ಅಲ್ಲಾಹು ಅನುಗ್ರಹಪೂರ್ಣನಾಗಿರುವನು.

ثُمَّ خَلَقْنَا ٱلنُّطْفَةَ عَلَقَةً فَخَلَقْنَا ٱلْعَلَقَةَ مُضْغَةً فَخَلَقْنَا ٱلْمُضْغَةَ عِظَٰمًا فَكَسَوْنَا ٱلْعِظَٰمَ لَحْمًا ثُمَّ أَنشَأْنَٰهُ خَلْقًا ءَاخَرَ ۚ فَتَبَارَكَ ٱللَّهُ أَحْسَنُ ٱلْخَٰلِقِينَ ١٤

**15.** ತರುವಾಯ ಅದರ ಬಳಿಕ ಖಂಡಿತವಾಗಿಯೂ ನೀವು ಮರಣಹೊಂದುವಿರಿ.

ثُمَّ إِنَّكُم بَعْدَ ذَٰلِكَ لَمَيِّتُونَ ١٥

**16.** ತರುವಾಯ ಪುನರುತ್ಥಾನದ ದಿನದಂದು ಖಂಡಿತವಾಗಿಯೂ ನಿಮ್ಮನ್ನು ಎಬ್ಬಿಸಲಾಗುವುದು.

ثُمَّ إِنَّكُمْ يَوْمَ ٱلْقِيَٰمَةِ تُبْعَثُونَ ١٦

**17.** ಖಂಡಿತವಾಗಿಯೂ ನಾವು ನಿಮ್ಮ ಮೇಲೆ ಏಳು ಪಥ(ಆಕಾಶ)ಗಳನ್ನು ಸೃಷ್ಟಿಸಿರುವೆವು. ಸೃಷ್ಟಿಯ ಕುರಿತು ನಾವೆಂದೂ ಅಲಕ್ಷ್ಯರಾಗಿಲ್ಲ.

وَلَقَدْ خَلَقْنَا فَوْقَكُمْ سَبْعَ طَرَآئِقَ وَمَا كُنَّا عَنِ ٱلْخَلْقِ غَٰفِلِينَ ١٧

**18.** ನಾವು ಆಕಾಶದಿಂದ ಒಂದು ನಿರ್ದಿಷ್ಟ ಪ್ರಮಾಣದಲ್ಲಿ (ಮಳೆ) ನೀರನ್ನು ಸುರಿಸಿ ತರುವಾಯ ಅದನ್ನು ಭೂಮಿಯಲ್ಲಿ ತಂಗುವಂತೆ ಮಾಡಿದೆವು. ಅದನ್ನು ಬತ್ತಿಹೋಗುವಂತೆ ಮಾಡಲು ಖಂಡಿತವಾಗಿಯೂ ನಾವು ಸಾಮರ್ಥ್ಯವುಳ್ಳರಾಗಿರುವೆವು.

وَأَنزَلْنَا مِنَ ٱلسَّمَآءِ مَآءًۢ بِقَدَرٍ فَأَسْكَنَّٰهُ فِى ٱلْأَرْضِ ۖ وَإِنَّا عَلَىٰ ذَهَابٍۭ بِهِۦ لَقَٰدِرُونَ ١٨

**19.** ತರುವಾಯ ಅದರಿಂದ (ನೀರಿನಿಂದ) ನಾವು ನಿಮಗೆ ಖರ್ಜೂರ ಮತ್ತು ದ್ರಾಕ್ಷಿ

فَأَنشَأْنَا لَكُم بِهِۦ جَنَّٰتٍ مِّن نَّخِيلٍ

وَأَعۡنَٰبٖ لَّكُمۡ فِيهَا فَوَٰكِهُ كَثِيرَةٞ وَمِنۡهَا تَأۡكُلُونَ ١٩

ತೋಟಗಳನ್ನು ನಿರ್ಮಿಸಿದೆವು. ಅವುಗಳಲ್ಲಿ ನಿಮಗೆ ಹೇರಳ ಫಲಾಹಾರಗಳಿವೆ. ಅವುಗಳಿಂದ ನೀವು ತಿನ್ನುತ್ತಿರುವಿರಿ.

وَشَجَرَةٗ تَخۡرُجُ مِن طُورِ سَيۡنَآءَ تَنۢبُتُ بِٱلدُّهۡنِ وَصِبۡغٖ لِّلۡأٓكِلِينَ ٢٠

20. ಸೀನಾ ಪರ್ವತದಲ್ಲಿ ಮೊಳಕೆಯೊಡೆಯುವ ಒಂದು ಮರವನ್ನೂ[1] (ನಾವು ಸೃಷ್ಟಿಸಿರುವೆವು). ಅದು ಎಣ್ಣೆಯನ್ನೂ, ಆಹಾರ ಸೇವಿಸುವವರಿಗಿರುವ ವ್ಯಂಜನವನ್ನೂ ಉತ್ಪಾದಿಸುತ್ತದೆ.

وَإِنَّ لَكُمۡ فِي ٱلۡأَنۡعَٰمِ لَعِبۡرَةٗۖ نُّسۡقِيكُم مِّمَّا فِي بُطُونِهَا وَلَكُمۡ فِيهَا مَنَٰفِعُ كَثِيرَةٞ وَمِنۡهَا تَأۡكُلُونَ ٢١

21. ಖಂಡಿತವಾಗಿಯೂ ನಿಮಗೆ ಜಾನುವಾರುಗಳಲ್ಲಿ[2] ಒಂದು ನೀತಿಪಾಠವಿದೆ. ಅವುಗಳ ಉದರಗಳಲ್ಲಿರುವುದರಿಂದ ನಾವು ನಿಮಗೆ ಕುಡಿಯಲು ನೀಡುವೆವು. ಅವುಗಳಲ್ಲಿ ನಿಮಗೆ ಯಥೇಷ್ಟ ಪ್ರಯೋಜನಗಳಿವೆ. ಅವುಗಳಿಂದ (ಮಾಂಸವನ್ನು) ನೀವು ತಿನ್ನುತ್ತಿರುವಿರಿ.

وَعَلَيۡهَا وَعَلَى ٱلۡفُلۡكِ تُحۡمَلُونَ ٢٢

22. ಅವುಗಳ ಬೆನ್ನುಗಳಲ್ಲಿ ಮತ್ತು ಹಡಗುಗಳಲ್ಲಿ ನಿಮ್ಮನ್ನು ಹೊತ್ತೊಯ್ಯಲಾಗುತ್ತಿದೆ.

وَلَقَدۡ أَرۡسَلۡنَا نُوحًا إِلَىٰ قَوۡمِهِۦ فَقَالَ يَٰقَوۡمِ ٱعۡبُدُواْ ٱللَّهَ مَا لَكُم مِّنۡ إِلَٰهٍ غَيۡرُهُۥٓۚ أَفَلَا تَتَّقُونَ ٢٣

23. ನಾವು ನೂಹ್‌ರನ್ನು ಅವರ ಜನತೆಯೆಡೆಗೆ ಸಂದೇಶವಾಹಕರಾಗಿ ಕಳುಹಿಸಿದೆವು. ಅವರು ಹೇಳಿದರು: ‘ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ. ನಿಮಗೆ ಅವನ ಹೊರತು ಅನ್ಯ ಆರಾಧ್ಯರಿಲ್ಲ. ನೀವು ಭಯಭಕ್ತಿ ಪಾಲಿಸಲಾರಿರೇ?’

فَقَالَ ٱلۡمَلَؤُاْ ٱلَّذِينَ كَفَرُواْ مِن قَوۡمِهِۦ مَا هَٰذَآ إِلَّا بَشَرٞ مِّثۡلُكُمۡ يُرِيدُ أَن يَتَفَضَّلَ عَلَيۡكُمۡ وَلَوۡ شَآءَ ٱللَّهُ لَأَنزَلَ مَلَٰٓئِكَةٗ مَّا سَمِعۡنَا بِهَٰذَا فِيٓ ءَابَآئِنَا ٱلۡأَوَّلِينَ ٢٤

24. ಆಗ ಅವರ ಜನತೆಯಲ್ಲಿದ್ದ ಸತ್ಯನಿಷೇಧಿಗಳಾದ ಪ್ರಮುಖರು ಹೇಳಿದರು: ‘ಇವನು ನಿಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವನು. ನಿಮಗಿಂತಲೂ ಹೆಚ್ಚು ಶ್ರೇಷ್ಠತೆಯನ್ನು ಗಳಿಸಲು ಅವನು ಬಯಸುತ್ತಿರುವನು. ಅಲ್ಲಾಹು ಇಚ್ಛಿಸಿದರೆ ಅವನು ಮಲಕ್‌ಗಳನ್ನು

1 ಇಲ್ಲಿ ಪ್ರಸ್ತಾಪಿಸಲಾಗಿರುವುದು ಓಲೀವ್ ವೃಕ್ಷವನ್ನಾಗಿದೆ. ಓಲೀವ್ ಎಣ್ಣೆಯನ್ನು ವ್ಯಂಜನಗಳಲ್ಲಿ ಬೆರೆಸಲು, ಭಕ್ಷ್ಯ ವಸ್ತುಗಳನ್ನು ಕರಿಯಲು ಮತ್ತು ದೇಹಕ್ಕೆ ಹಚ್ಚಲು ಬಳಸಲಾಗುತ್ತದೆ.

2 ಆಡು, ಕುರಿ, ಒಂಟೆ ಇತ್ಯಾದಿಗಳನ್ನು ಸೂಚಿಸಲು ಅನ್‌ಆಮ್ ಎಂಬ ಪದವನ್ನು ಬಳಸಲಾಗುತ್ತದೆ. ಮನುಷ್ಯರಿಗೆ ಇವುಗಳಿಂದ ಹಾಲು, ಮಾಂಸ, ರೋಮ, ಸವಾರಿ ಮುಂತಾದ ಅನೇಕ ಪ್ರಯೋಜನಗಳಿವೆ.

(ಸಂದೇಶವಾಹಕರನ್ನಾಗಿ) ಕಳುಹಿಸುತ್ತಿದ್ದನು. ಇದನ್ನು ನಾವು ನಮ್ಮ ಪೂರ್ವಿಕರಿಂದಲೂ ಸಹ ಕೇಳಿರಲಿಲ್ಲ.

إِنۡ هُوَ إِلَّا رَجُلُۢ بِهِۦ جِنَّةٞ فَتَرَبَّصُواْ بِهِۦ
حَتَّىٰ حِينٖ ٢٥

**25.** ಇವನೊಬ್ಬ ಮತಿಭ್ರಾಂತ ವ್ಯಕ್ತಿ ಮಾತ್ರವಾಗಿರುವನು. ಆದ್ದರಿಂದ ಇವನ ವಿಷಯದಲ್ಲಿ ನೀವು ಸ್ವಲ್ಪ ಕಾಲದವರೆಗೆ ಕಾಯಿರಿ’.

قَالَ رَبِّ ٱنصُرۡنِي بِمَا كَذَّبُونِ ٢٦

**26.** ಆತ ಹೇಳಿದರು: ‘ಓ ನನ್ನ ರಬ್! ಇವರು ನನ್ನನ್ನು ನಿಷೇಧಿಸಿರುವುದರಿಂದ ನೀನು ನನಗೆ ಸಹಾಯಮಾಡು’.

فَأَوۡحَيۡنَآ إِلَيۡهِ أَنِ ٱصۡنَعِ ٱلۡفُلۡكَ بِأَعۡيُنِنَا
وَوَحۡيِنَا فَإِذَا جَآءَ أَمۡرُنَا وَفَارَ ٱلتَّنُّورُ
فَٱسۡلُكۡ فِيهَا مِن كُلّٖ زَوۡجَيۡنِ ٱثۡنَيۡنِ
وَأَهۡلَكَ إِلَّا مَن سَبَقَ عَلَيۡهِ ٱلۡقَوۡلُ مِنۡهُمۡۖ
وَلَا تُخَٰطِبۡنِي فِي ٱلَّذِينَ ظَلَمُوٓاْ إِنَّهُم
مُّغۡرَقُونَ ٢٧

**27.** ಆಗ ನಾವು ಅವರಿಗೆ ದಿವ್ಯಸಂದೇಶವನ್ನು ನೀಡಿದೆವು: ನಮ್ಮ ಕಣ್ಣೋಟದ ಅಡಿಯಲ್ಲಿ ಮತ್ತು ನಮ್ಮ ದಿವ್ಯಸಂದೇಶದ ಪ್ರಕಾರ ತಾವು ಹಡಗನ್ನು ನಿರ್ಮಿಸಿರಿ. ತರುವಾಯ ನಮ್ಮ ಆಜ್ಞೆಯು ಬಂದಾಗ ಮತ್ತು ಒಲೆಯಿಂದ ಒರತೆಯೊಡೆದಾಗ, ಎಲ್ಲ ವಸ್ತುಗಳಿಂದಲೂ ಎರಡು ಜೋಡಿಯನ್ನು ಮತ್ತು ತಮ್ಮ ಕುಟುಂಬವನ್ನು ಅದರಲ್ಲಿ (ಹಡಗಿನಲ್ಲಿ) ಹತ್ತಿಸಿರಿ. ಅವರ ಪೈಕಿ ಯಾರ ಮೇಲೆ (ಶಿಕ್ಷೆಯ) ವಚನವು ಪೂರ್ವಭಾವಿಯಾಗಿ ವಿಧಿಸಲಾಗಿದೆಯೋ ಅವರ ಹೊರತು.(1) ಅಕ್ರಮವೆಸಗಿದವರ ವಿಷಯದಲ್ಲಿ ತಾವು ನನ್ನೊಂದಿಗೆ ಮಾತನಾಡದಿರಿ. ಖಂಡಿತವಾಗಿಯೂ ಅವರು ಮುಳುಗಿಸಲಾಗುವರು.

فَإِذَا ٱسۡتَوَيۡتَ أَنتَ وَمَن مَّعَكَ عَلَى
ٱلۡفُلۡكِ فَقُلِ ٱلۡحَمۡدُ لِلَّهِ ٱلَّذِي نَجَّىٰنَا مِنَ
ٱلۡقَوۡمِ ٱلظَّٰلِمِينَ ٢٨

**28.** ತರುವಾಯ ತಾವು ಮತ್ತು ತಮ್ಮ ಜೊತೆಗಿರುವವರು ಹಡಗಿನಲ್ಲಿ ಏರಿದಾಗ ಹೇಳಿರಿ: ‘ಅಕ್ರಮಿಗಳಾದ ಜನರಿಂದ ನಮ್ಮನ್ನು ರಕ್ಷಿಸಿದ ಅಲ್ಲಾಹುವಿಗೆ ಸ್ತುತಿ’.

1 ಅವಿಶ್ವಾಸದಿಂದಾಗಿ ಅಲ್ಲಾಹುವಿನ ಶಿಕ್ಷೆಗೆ ಅರ್ಹರಾದ ಅವರ ಪತ್ನಿ ಮತ್ತು ಮಗನನ್ನು ಹಡಗಿನಲ್ಲಿ ಹತ್ತಿಸಬೇಕಾಗಿಲ್ಲ ಎಂಬುದು ಅಲ್ಲಾಹುವಿನ ಆದೇಶವಾಗಿದೆ.

**29.** ತಾವು ಹೇಳಿರಿ: 'ಓ ನನ್ನ ರಬ್! ಅನುಗ್ರಹೀತವಾದ ಒಂದು ತಾಣದಲ್ಲಿ ನನ್ನನ್ನು ಇಳಿಸು. ಇಳಿಸುವವರಲ್ಲಿ ನೀನು ಅತ್ಯುತ್ತಮನಾಗಿರುವೆ'.

وَقُل رَّبِّ أَنزِلۡنِي مُنزَلٗا مُّبَارَكٗا وَأَنتَ خَيۡرُ
ٱلۡمُنزِلِينَ ٢٩

**30.** ಖಂಡಿತವಾಗಿಯೂ ಅದರಲ್ಲಿ (ಜಲಪ್ರಳಯದಲ್ಲಿ) ಅನೇಕ ದೃಷ್ಟಾಂತಗಳಿವೆ. ಖಂಡಿತವಾಗಿಯೂ ನಾವು ಪರೀಕ್ಷಿಸುವವರಾಗಿರುವೆವು.

إِنَّ فِي ذَٰلِكَ لَأٓيَٰتٖ وَإِن كُنَّا لَمُبۡتَلِينَ ٣٠

**31.** ತರುವಾಯ ಅವರ ಬಳಿಕ ನಾವು ಬೇರೊಂದು ತಲೆಮಾರನ್ನು ಬೆಳೆಸಿದೆವು.

ثُمَّ أَنشَأۡنَا مِنۢ بَعۡدِهِمۡ قَرۡنًا ءَاخَرِينَ ٣١

**32.** ತರುವಾಯ ಅವರಿಂದಲೇ ಇರುವ ಒಬ್ಬ ಸಂದೇಶವಾಹಕರನ್ನು ನಾವು ಅವರೆಡೆಗೆ ಕಳುಹಿಸಿದೆವು. (ಸಂದೇಶವಾಹಕರು ಹೇಳಿದರು): 'ನೀವು ಅಲ್ಲಾಹುವನ್ನು ಆರಾಧಿಸಿರಿ. ನಿಮಗೆ ಅವನ ಹೊರತು ಅನ್ಯ ಆರಾಧ್ಯರಿಲ್ಲ. ನೀವು ಭಯಭಕ್ತಿ ಪಾಲಿಸಲಾರಿರೇ?

فَأَرۡسَلۡنَا فِيهِمۡ رَسُولٗا مِّنۡهُمۡ أَنِ ٱعۡبُدُواْ
ٱللَّهَ مَا لَكُم مِّنۡ إِلَٰهٍ غَيۡرُهُۥٓۚ أَفَلَا
تَتَّقُونَ ٣٢

**33.** ಅವರ ಜನತೆಯಲ್ಲಿದ್ದ ಅವಿಶ್ವಾಸಿಗಳೂ, ಪರಲೋಕದ ಭೇಟಿಯನ್ನು ನಿರಾಕರಿಸಿದವರೂ, ಐಹಿಕ ಜೀವನದಲ್ಲಿ ನಾವು ಸುಖಾಡಂಬರಗಳನ್ನು ನೀಡಿದವರೂ ಆಗಿರುವ ಪ್ರಮುಖರು ಹೇಳಿದರು: 'ಇವನು ನಿಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವನು. ನೀವು ತಿನ್ನುವುದನ್ನೇ ಇವನೂ ತಿನ್ನುತ್ತಿರುವನು. ನೀವು ಕುಡಿಯುವುದನ್ನೇ ಇವನೂ ಕುಡಿಯುತ್ತಿರುವನು.

وَقَالَ ٱلۡمَلَأُ مِن قَوۡمِهِ ٱلَّذِينَ كَفَرُواْ
وَكَذَّبُواْ بِلِقَآءِ ٱلۡأٓخِرَةِ وَأَتۡرَفۡنَٰهُمۡ فِي
ٱلۡحَيَوٰةِ ٱلدُّنۡيَا مَا هَٰذَآ إِلَّا بَشَرٞ مِّثۡلُكُمۡ
يَأۡكُلُ مِمَّا تَأۡكُلُونَ مِنۡهُ وَيَشۡرَبُ مِمَّا
تَشۡرَبُونَ ٣٣

**34.** ನೀವು ನಿಮ್ಮಂತಿರುವ ಒಬ್ಬ ಮನುಷ್ಯನನ್ನು ಅನುಸರಿಸುವುದಾದರೆ ಖಂಡಿತವಾಗಿಯೂ ನೀವು ನಷ್ಟ ಹೊಂದಿದವರಾಗುವಿರಿ.

وَلَئِنۡ أَطَعۡتُم بَشَرٗا مِّثۡلَكُمۡ إِنَّكُمۡ إِذٗا
لَّخَٰسِرُونَ ٣٤

**35.** ನೀವು ಮೃತಪಟ್ಟು ಮಣ್ಣು ಮತ್ತು ಮೂಳೆಗಳಾಗಿ ಹೋದ ಬಳಿಕವೂ ನೀವು (ಪುನಃ ಜೀವ ನೀಡಿ)

أَيَعِدُكُمۡ أَنَّكُمۡ إِذَا مِتُّمۡ وَكُنتُمۡ تُرَابٗا
وَعِظَٰمًا أَنَّكُم مُّخۡرَجُونَ ٣٥

ಹೊರತರಲಾಗುವುದೆಂದು ಅವನು ನಿಮಗೆ ವಾಗ್ದಾನ ಮಾಡುತ್ತಿರುವನೇ?

**36.** ನಿಮಗೆ ಮಾಡಲಾಗುತ್ತಿರುವ ಆ ವಾಗ್ದಾನವು ಬಹುದೂರದಲ್ಲಿದೆ! ಬಹುದೂರದಲ್ಲಿದೆ!

**37.** ನಮ್ಮ ಈ ಐಹಿಕ ಜೀವನದ ಹೊರತು ಇನ್ನೇನೂ ಇಲ್ಲ. ನಾವು ಮರಣಹೊಂದುವೆವು ಮತ್ತು ಹುಟ್ಟಿ ಬರುವೆವು. ನಾವು ಪುನರುತ್ಥಾನ ಗೊಳಿಸಲಾಗುವವರಲ್ಲ.

**38.** ಇವನು (ಸಂದೇಶವಾಹಕ) ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದಿರುವ ಒಬ್ಬ ಮನುಷ್ಯ ಮಾತ್ರವಾಗಿರುವನು. ನಾವು ಇವನಲ್ಲಿ ವಿಶ್ವಾಸವಿಡಲಾರೆವು’.

**39.** ಆತ (ಸಂದೇಶವಾಹಕರು) ಹೇಳಿದರು: ‘ಓ ನನ್ನ ರಬ್! ಇವರು ನನ್ನನ್ನು ನಿಷೇಧಿಸಿರುವುದರಿಂದಾಗಿ ನೀನು ನನಗೆ ಸಹಾಯ ಮಾಡು’.

**40.** ಅಲ್ಲಾಹು ಹೇಳಿದನು: ‘ಶೀಘ್ರದಲ್ಲೇ ಅವರು ವಿಷಾದಿಸುವವರಾಗಿ ಬಿಡುವರು’.

**41.** ಹಾಗೆಯೇ ಒಂದು ಘೋರ ಶಬ್ದವು ನ್ಯಾಯ ಸಮ್ಮತವಾಗಿ ಅವರನ್ನು ಹಿಡಿಯಿತು. ಹೀಗೆ ನಾವು ಅವರನ್ನು ಕಸಕಡ್ಡಿಗಳನ್ನಾಗಿ ಪರಿವರ್ತಿಸಿದೆವು. ಆಗ ಅಕ್ರಮಿಗಳಾದ ಜನರಿಗೆ (ಅಲ್ಲಾಹುವಿನ ಕಾರುಣ್ಯವು) ವಿದೂರವಾಗಲಿ.

**42.** ತರುವಾಯ ಅವರ ಬಳಿಕ ನಾವು ಬೇರೆ ತಲೆಮಾರುಗಳನ್ನು ಬೆಳೆಸಿದೆವು.

**43.** ಯಾವುದೇ ಸಮುದಾಯವೂ ತನ್ನ ಅವಧಿಯನ್ನು ದಾಟಿ ಮುಂದೆ ಹೋಗಲಾರದು. ಅದನ್ನು ಹಿಂದಕ್ಕೆ ತಳ್ಳಲೂ ಅವರಿಂದಾಗದು.

**44.** ತರುವಾಯ ನಾವು ನಮ್ಮ ಸಂದೇಶವಾಹಕರನ್ನು ನಿರಂತರವಾಗಿ ಕಳುಹಿಸಿದೆವು. ಪ್ರತಿಯೊಂದು ಸಮುದಾಯದೆಡೆಗೂ ಅವರ

۞ هَيۡهَاتَ هَيۡهَاتَ لِمَا تُوعَدُونَ ٣٦

إِنۡ هِيَ إِلَّا حَيَاتُنَا ٱلدُّنۡيَا نَمُوتُ وَنَحۡيَا
وَمَا نَحۡنُ بِمَبۡعُوثِينَ ٣٧

إِنۡ هُوَ إِلَّا رَجُلٌ ٱفۡتَرَىٰ عَلَى ٱللَّهِ كَذِبٗا
وَمَا نَحۡنُ لَهُۥ بِمُؤۡمِنِينَ ٣٨

قَالَ رَبِّ ٱنصُرۡنِي بِمَا كَذَّبُونِ ٣٩

قَالَ عَمَّا قَلِيلٖ لَّيُصۡبِحُنَّ نَٰدِمِينَ ٤٠

فَأَخَذَتۡهُمُ ٱلصَّيۡحَةُ بِٱلۡحَقِّ فَجَعَلۡنَٰهُمۡ
غُثَآءٗۚ فَبُعۡدٗا لِّلۡقَوۡمِ ٱلظَّٰلِمِينَ ٤١

ثُمَّ أَنشَأۡنَا مِنۢ بَعۡدِهِمۡ قُرُونًا
ءَاخَرِينَ ٤٢
مَا تَسۡبِقُ مِنۡ أُمَّةٍ أَجَلَهَا وَمَا
يَسۡتَـٔۡخِرُونَ ٤٣

ثُمَّ أَرۡسَلۡنَا رُسُلَنَا تَتۡرَاۖ كُلَّ مَا جَآءَ أُمَّةٗ
رَّسُولُهَا كَذَّبُوهُۖ فَأَتۡبَعۡنَا بَعۡضَهُم بَعۡضٗا

ಸಂದೇಶವಾಹಕರು ಬಂದಾಗಲೆಲ್ಲ ಅವರು ಸಂದೇಶವಾಹಕರನ್ನು ನಿಷೇಧಿಸಿದರು. ಆಗ ಅವರನ್ನು ನಾವು ಒಂದರ ಹಿಂದೆ ಮತ್ತೊಂದಾಗಿ ನಾಶ ಮಾಡಿದೆವು. ಅವರನ್ನು ಜನಪದ ಕಥೆಗಳನ್ನಾಗಿ ಮಾಡಿದೆವು. ಆದ್ದರಿಂದ ವಿಶ್ವಾಸವಿಡದ ಜನರಿಗೆ (ಅಲ್ಲಾಹುವಿನ ಕಾರುಣ್ಯವು) ವಿದೂರವಾಗಲಿ.

وَجَعَلۡنَٰهُمۡ أَحَادِيثَۚ فَبُعۡدٗا لِّقَوۡمٖ لَّا يُؤۡمِنُونَ ﴿٤٤﴾

45-46. ತರುವಾಯ ಮೂಸಾ ಮತ್ತು ಅವರ ಸಹೋದರರಾದ ಹಾರೂನ್‌ರನ್ನು ನಾವು ನಮ್ಮ ದೃಷ್ಟಾಂತಗಳೊಂದಿಗೆ ಮತ್ತು ಸ್ಪಷ್ಟವಾದ ಆಧಾರ ಪ್ರಮಾಣಗಳೊಂದಿಗೆ ಫಿರ್‌ಔನ್ ಮತ್ತು ಅವನ ಸರದಾರರೆಡೆಗೆ ಕಳುಹಿಸಿದೆವು. ಆಗ ಅವರು ಅಹಂಕಾರಪಟ್ಟರು. ಅವರು ದುರಹಂಕಾರಿಗಳಾದ ಒಂದು ಜನತೆಯಾಗಿದ್ದರು.

ثُمَّ أَرۡسَلۡنَا مُوسَىٰ وَأَخَاهُ هَٰرُونَ بِـَٔايَٰتِنَا
وَسُلۡطَٰنٖ مُّبِينٍ ﴿٤٥﴾ إِلَىٰ فِرۡعَوۡنَ وَمَلَإِيْهِۦ
فَٱسۡتَكۡبَرُواْ وَكَانُواْ قَوۡمًا عَالِينَ ﴿٤٦﴾

47. ಅವರು ಹೇಳಿದರು: 'ನಮ್ಮಂತಿರುವ ಇಬ್ಬರು ಮನುಷ್ಯರಲ್ಲಿ ನಾವು ವಿಶ್ವಾಸವಿಡುವುದೇ? ಅದೂ ಅವರ ಜನತೆಯು ನಮಗೆ ವಿಧೇಯರಾಗಿರುವಾಗ!'

فَقَالُوٓاْ أَنُؤۡمِنُ لِبَشَرَيۡنِ مِثۡلِنَا وَقَوۡمُهُمَا لَنَا عَٰبِدُونَ ﴿٤٧﴾

48. ತರುವಾಯ ಅವರಿಬ್ಬರನ್ನೂ ಅವರು ನಿಷೇಧಿಸಿದರು. ತನ್ನಿಮಿತ್ತ ಅವರು ನಾಶಹೊಂದಿದವರಲ್ಲಿ ಸೇರಿಬಿಟ್ಟರು.

فَكَذَّبُوهُمَا فَكَانُواْ مِنَ ٱلۡمُهۡلَكِينَ ﴿٤٨﴾

49. ಅವರು (ಜನರು) ಸನ್ಮಾರ್ಗವನ್ನು ಪಡೆಯಲೆಂದು ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು.

وَلَقَدۡ ءَاتَيۡنَا مُوسَى ٱلۡكِتَٰبَ لَعَلَّهُمۡ يَهۡتَدُونَ ﴿٤٩﴾

50. ಮರ್ಯಮ್‌ರ ಪುತ್ರನನ್ನು ಮತ್ತು ಅವರ ತಾಯಿಯನ್ನು (ಮರ್ಯಮ್‌ರನ್ನು) ನಾವು ಒಂದು ದೃಷ್ಟಾಂತವನ್ನಾಗಿ ಮಾಡಿದೆವು. ವಾಸಯೋಗ್ಯವಾಗಿರುವ ಮತ್ತು ನೀರಿನ ಚಿಲುಮೆಯಿರುವಂತಹ ಒಂದು ಎತ್ತರದ ಪ್ರದೇಶದಲ್ಲಿ ನಾವು ಅವರಿಬ್ಬರಿಗೂ ಆಶ್ರಯವನ್ನು ನೀಡಿದೆವು.

وَجَعَلۡنَا ٱبۡنَ مَرۡيَمَ وَأُمَّهُۥٓ ءَايَةٗ وَءَاوَيۡنَٰهُمَآ إِلَىٰ رَبۡوَةٖ ذَاتِ قَرَارٖ وَمَعِينٖ ﴿٥٠﴾

**51.** ಓ ಸಂದೇಶವಾಹಕರೇ! ಉತ್ತಮವಾದ ವಸ್ತುಗಳಿಂದ ತಿನ್ನಿರಿ ಮತ್ತು ಸತ್ಕರ್ಮವೆಸಗಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದರ ಕುರಿತು ನಾನು ಅರಿವುಳ್ಳವನಾಗಿರುವೆನು.

يَـٰٓأَيُّهَا ٱلرُّسُلُ كُلُوا۟ مِنَ ٱلطَّيِّبَـٰتِ وَٱعْمَلُوا۟ صَـٰلِحًا ۖ إِنِّى بِمَا تَعْمَلُونَ عَلِيمٌ ﴿٥١﴾

**52.** ಖಂಡಿತವಾಗಿಯೂ ಇದು ನಿಮ್ಮ ಸಮುದಾಯವಾಗಿದೆ; ಏಕೈಕ ಸಮುದಾಯ. ನಾನು ನಿಮ್ಮ ರಬ್ಬಾಗಿರುವೆನು. ಆದ್ದರಿಂದ ನೀವು ನನ್ನನ್ನು ಭಯಪಟ್ಟು ಜೀವಿಸಿರಿ.

وَإِنَّ هَـٰذِهِۦٓ أُمَّتُكُمْ أُمَّةً وَٰحِدَةً وَأَنَا۠ رَبُّكُمْ فَٱتَّقُونِ ﴿٥٢﴾

**53.** ಆದರೆ ಅವರು ಗುಂಪುಗಳಾಗಿ ವಿಭಜನೆಗೊಂಡು ತಮ್ಮ ವಿಷಯದಲ್ಲಿ ಪರಸ್ಪರ ಭಿನ್ನಮತ ತಾಳಿದರು. ಪ್ರತಿಯೊಂದು ಗುಂಪೂ ತಮ್ಮ ಬಳಿಯಿರುವುದರಲ್ಲಿ ಸಂತುಷ್ಟರಾಗುವವರಾಗಿದ್ದಾರೆ.

فَتَقَطَّعُوٓا۟ أَمْرَهُم بَيْنَهُمْ زُبُرًا ۖ كُلُّ حِزْبٍۭ بِمَا لَدَيْهِمْ فَرِحُونَ ﴿٥٣﴾

**54.** ಆದ್ದರಿಂದ (ಓ ಪ್ರವಾದಿಯವರೇ!) ಒಂದು ಅವಧಿಯವರೆಗೆ ತಾವು ಅವರನ್ನು ಅವರ ದಾರಿಗೇಡಿನಲ್ಲಿಯೇ ಬಿಟ್ಟುಬಿಡಿರಿ.

فَذَرْهُمْ فِى غَمْرَتِهِمْ حَتَّىٰ حِينٍ ﴿٥٤﴾

**55-56.** ಸಂಪತ್ತು ಮತ್ತು ಸಂತಾನಗಳನ್ನು ನೀಡಿ ನಾವು ಅವರಿಗೆ ನೆರವು ನೀಡುತ್ತಿರುವುದನ್ನು ಅವರು ಅವರಿಗೆ ಒಳಿತುಗಳನ್ನು ಕರುಣಿಸಲು ನಾವು ಆತುರಪಡುತ್ತಿರುವೆವು ಎಂದು ಭಾವಿಸುತ್ತಿರುವರೇ?[1] ಅಲ್ಲ, ಅವರು (ವಾಸ್ತವತೆಯನ್ನು) ಗ್ರಹಿಸುವುದಿಲ್ಲ.

أَيَحْسَبُونَ أَنَّمَا نُمِدُّهُم بِهِۦ مِن مَّالٍ وَبَنِينَ ﴿٥٥﴾ نُسَارِعُ لَهُمْ فِى ٱلْخَيْرَٰتِ ۚ بَل لَّا يَشْعُرُونَ ﴿٥٦﴾

**57-61.** ಖಂಡಿತವಾಗಿಯೂ ತಮ್ಮ ರಬ್‌ನ ಭಯದಿಂದಾಗಿ ನಡುಗುವವರು, ತಮ್ಮ ರಬ್‌ನ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವವರು, ತಮ್ಮ ರಬ್‌ನೊಂದಿಗೆ ಸಹಭಾಗಿತ್ವ ಮಾಡದವರು ಮತ್ತು ತಾವು ತಮ್ಮ ರಬ್‌ನೆಡೆಗೆ

إِنَّ ٱلَّذِينَ هُم مِّنْ خَشْيَةِ رَبِّهِم مُّشْفِقُونَ ﴿٥٧﴾ وَٱلَّذِينَ هُم بِـَٔايَـٰتِ رَبِّهِمْ يُؤْمِنُونَ ﴿٥٨﴾ وَٱلَّذِينَ هُم بِرَبِّهِمْ لَا يُشْرِكُونَ ﴿٥٩﴾ وَٱلَّذِينَ يُؤْتُونَ مَآ ءَاتَوا۟ وَّقُلُوبُهُمْ وَجِلَةٌ أَنَّهُمْ إِلَىٰ رَبِّهِمْ

1 ಸಂತತಿ ಮತ್ತು ಸಂಪತ್ತಿನಲ್ಲಿ ಸಮೃದ್ಧಿ ನೀಡಲಾದವರನ್ನು ಅಲ್ಲಾಹು ಪ್ರೀತಿಸಿರುವುದರಿಂದಲೇ ಅವರಿಗೆ ಸಮೃದ್ಧಿ ನೀಡಿದ್ದಾನೆ ಎಂದು ಭಾವಿಸಬಾರದು. ಸಮೃದ್ಧಿ ಎಂಬುದು ಕೇವಲ ಒಂದು ಪರೀಕ್ಷೆಯಾಗಿದೆ. ಒಳಿತು ಮತ್ತು ಕೆಡುಕುಗಳ ಮೂಲಕ ಅಲ್ಲಾಹು ಮನುಷ್ಯನನ್ನು ಪರೀಕ್ಷಿಸುತ್ತಾನೆಂದು ಕುರ್‌ಆನ್ ಸ್ಪಷ್ಟವಾಗಿ ಹೇಳಿದೆ.

ಮರಳಬೇಕಾದವರಾಗಿರುವೆವು ಎಂದು ಹೃದಯಗಳಲ್ಲಿ ಭಯವಿಟ್ಟುಕೊಂಡು ತಾವು ದಾನ ಮಾಡುವುದೆಲ್ಲವನ್ನೂ ದಾನ ಮಾಡುವವರು ಯಾರೋ ಅವರು ಒಳಿತುಗಳಲ್ಲಿ ಧಾವಂತದಿಂದ ಮುನ್ನುಗ್ಗುವವರಾಗಿರುವರು. ಅವುಗಳಲ್ಲಿ ಮುಂಚೂಣಿಯಲ್ಲಿರುವವರೂ ಅವರಾಗಿರುವರು.

**62.** ಯಾವುದೇ ವ್ಯಕ್ತಿಗೂ ಅವನ ಸಾಮರ್ಥ್ಯಕ್ಕೆ ಮಿಗಿಲಾಗಿರುವುದನ್ನು ನಾವು ನಿರ್ಬಂಧಗೊಳಿಸಲಾರೆವು. ಸತ್ಯವನ್ನು ಬಿಚ್ಚಿಹೇಳುವ ಒಂದು ದಾಖಲೆಯು ನಮ್ಮ ಬಳಿಯಿದೆ. ಅವರೊಂದಿಗೆ ಅನ್ಯಾಯವೆಸಗಲಾಗದು.

**63.** ಆದರೆ, ಅವರ ಹೃದಯಗಳು ಈ ವಿಷಯದ ಬಗ್ಗೆ ಅಲಕ್ಷ್ಯವಾಗಿವೆ. ಇದರ ಹೊರತಾಗಿರುವ ಕೆಲವು ಕರ್ಮಗಳು ಅವರಿಗಿವೆ. ಅದನ್ನು ಅವರು ಮಾಡುತ್ತಲಿರುವರು.

**64.** ಕೊನೆಗೆ ಅವರ ಪೈಕಿ ಸುಖಲೋಲುಪರನ್ನು ನಾವು ಶಿಕ್ಷೆಯ ಮೂಲಕ ಹಿಡಿದುಕೊಂಡಾಗ ಅಗೋ! ಅವರು ರೋದಿಸುತ್ತಿರುವರು.

**65.** (ನಾವು ಹೇಳುವೆವು): ‘ಇಂದು ನೀವು ರೋದಿಸಬೇಕಾಗಿಲ್ಲ. ಖಂಡಿತವಾಗಿಯೂ ನಿಮಗೆ ನಮ್ಮ ವತಿಯ ಸಹಾಯವು ದೊರೆಯಲಾರದು.

**66–67.** ನನ್ನ ವಚನಗಳನ್ನು ನಿಮಗೆ ಓದಿಕೊಡಲಾಗುತ್ತಿತ್ತು. ಆಗ ನೀವು ಅಹಂಭಾವದೊಂದಿಗೆ ವಿಮುಖರಾಗುತ್ತಿದ್ದಿರಿ.[1] ಒಂದು ರಾತ್ರಿ

رَٰجِعُونَ ﴿٦٠﴾ أُوْلَٰٓئِكَ يُسَٰرِعُونَ فِي
ٱلۡخَيۡرَٰتِ وَهُمۡ لَهَا سَٰبِقُونَ ﴿٦١﴾

وَلَا نُكَلِّفُ نَفۡسًا إِلَّا وُسۡعَهَاۚ
وَلَدَيۡنَا كِتَٰبٞ يَنطِقُ بِٱلۡحَقِّ وَهُمۡ لَا
يُظۡلَمُونَ ﴿٦٢﴾

بَلۡ قُلُوبُهُمۡ فِي غَمۡرَةٖ مِّنۡ هَٰذَا
وَلَهُمۡ أَعۡمَٰلٞ مِّن دُونِ ذَٰلِكَ هُمۡ لَهَا
عَٰمِلُونَ ﴿٦٣﴾

حَتَّىٰٓ إِذَآ أَخَذۡنَا مُتۡرَفِيهِم بِٱلۡعَذَابِ إِذَا
هُمۡ يَجۡـَٔرُونَ ﴿٦٤﴾

لَا تَجۡـَٔرُواْ ٱلۡيَوۡمَۖ إِنَّكُم مِّنَّا لَا
تُنصَرُونَ ﴿٦٥﴾

قَدۡ كَانَتۡ ءَايَٰتِي تُتۡلَىٰ عَلَيۡكُمۡ
فَكُنتُمۡ عَلَىٰٓ أَعۡقَٰبِكُمۡ تَنكِصُونَ ﴿٦٦﴾
مُسۡتَكۡبِرِينَ بِهِۦ سَٰمِرٗا تَهۡجُرُونَ ﴿٦٧﴾

1 ಪವಿತ್ರ ಕಅಬಾ ಭವನದ ಪರಿಪಾಲಕರು ಎಂಬ ನೆಲೆಯಲ್ಲಿ ತಮಗೆ ಅಲ್ಲಾಹುವಿನ ಬಳಿ ಅತ್ಯುನ್ನತ ಸ್ಥಾನವಿದೆಯೆಂದು ಕುರೈಶಿಗಳು ವಾದಿಸುತ್ತಿದ್ದರು.

ಕಥೆಯೋ ಎಂಬಂತೆ ನೀವು ಅದರ (ಕುರ್‌ಆನ್‌ನ) ಬಗ್ಗೆ ಅಸಂಬದ್ಧವಾಗಿ ಮಾತನಾಡುತ್ತಿದ್ದಿರಿ.

68. ಈ ಮಾತಿನ (ಕುರ್‌ಆನಿನ) ಕುರಿತು ಅವರು ಚಿಂತಿಸಲಾರರೇ? ಅಥವಾ, ಅವರ ಬಳಿಗೆ ಬಂದಿರುವುದು ಅವರ ಪೂರ್ವಿಕರ ಬಳಿಗೆ ಬರದಂತಹ ಒಂದು ವಿಷಯವಾಗಿದೆಯೇ?(1)

أَفَلَمۡ يَدَّبَّرُواْ ٱلۡقَوۡلَ أَمۡ جَآءَهُم مَّا لَمۡ يَأۡتِ ءَابَآءَهُمُ ٱلۡأَوَّلِينَ ٦٨

69. ಅಥವಾ ಅವರಿಗೆ ತಮ್ಮ ಸಂದೇಶವಾಹಕರ ಪರಿಚಯವಿಲ್ಲದಿರುವುದರಿಂದ ಅವರು ಅವರನ್ನು ನಿಷೇಧಿಸುತ್ತಿರುವರೇ?(2)

أَمۡ لَمۡ يَعۡرِفُواْ رَسُولَهُمۡ فَهُمۡ لَهُۥ مُنكِرُونَ ٦٩

70. ಅಥವಾ, ಆತನಲ್ಲಿ ಬುದ್ಧಿಭ್ರಮಣೆಯಿದೆಯೆಂದು ಅವರು ಹೇಳುತ್ತಿರುವರೇ? ಅಲ್ಲ, ಆತ ಅವರ ಬಳಿಗೆ ಬಂದಿರುವುದು ಸತ್ಯದೊಂದಿಗಾಗಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ಸತ್ಯವನ್ನು ದ್ವೇಷಿಸುವವರಾಗಿರುವರು.

أَمۡ يَقُولُونَ بِهِۦ جِنَّةُۢۚ بَلۡ جَآءَهُم بِٱلۡحَقِّ وَأَكۡثَرُهُمۡ لِلۡحَقِّ كَٰرِهُونَ ٧٠

71. ಸತ್ಯವು ಅವರ ದೇಹೇಚ್ಛೆಗಳನ್ನು ಅನುಸರಿಸಿರುತ್ತಿದ್ದರೆ ಆಕಾಶಗಳು, ಭೂಮಿ ಮತ್ತು ಅವುಗಳಲ್ಲಿರುವವರೆಲ್ಲರೂ ನಾಶವಾಗುತ್ತಿದ್ದರು. ಅಲ್ಲ, ನಾವು ಅವರ ಬಳಿಗೆ ಬಂದಿರುವುದು ಅವರಿಗಿರುವ ಉಪದೇಶದೊಂದಿಗಾಗಿದೆ. ಆದರೆ ಅವರು ತಮಗಿರುವ ಉಪದೇಶದಿಂದ ವಿಮುಖರಾಗಿರುವರು.

وَلَوِ ٱتَّبَعَ ٱلۡحَقُّ أَهۡوَآءَهُمۡ لَفَسَدَتِ ٱلسَّمَٰوَٰتُ وَٱلۡأَرۡضُ وَمَن فِيهِنَّۚ بَلۡ أَتَيۡنَٰهُم بِذِكۡرِهِمۡ فَهُمۡ عَن ذِكۡرِهِم مُّعۡرِضُونَ ٧١

72. ಅಥವಾ, ತಾವು ಅವರೊಂದಿಗೆ ಏನಾದರೂ ಪ್ರತಿಫಲವನ್ನು ಬೇಡುತ್ತಿರುವಿರಾ? ಆದರೆ ತಮ್ಮ ರಬ್‌ನ ವತಿಯ ಪ್ರತಿಫಲವು ಅತ್ಯುತ್ತಮವಾಗಿದೆ. ಅವನು ಜೀವನಾಧಾರ ಒದಗಿಸುವವರಲ್ಲೇ ಅತ್ಯುತ್ತಮನಾಗಿರುವನು.

أَمۡ تَسۡـَٔلُهُمۡ خَرۡجٗا فَخَرَاجُ رَبِّكَ خَيۡرٞۖ وَهُوَ خَيۡرُ ٱلرَّٰزِقِينَ ٧٢

73. ಖಂಡಿತವಾಗಿಯೂ ತಾವು ಅವರನ್ನು ನೇರವಾದ ಮಾರ್ಗದೆಡೆಗೆ ಕರೆಯುತ್ತಿರುವಿರಿ.

وَإِنَّكَ لَتَدۡعُوهُمۡ إِلَىٰ صِرَٰطٖ مُّسۡتَقِيمٖ ٧٣

1 ಗ್ರಂಥ ಮತ್ತು ಪ್ರವಾದಿಗಳ ನಿಯುಕ್ತಿ ಅರಬರಿಗೆ ಸುಪರಿಚಿತವಾದ ಸಂಗತಿಯಾಗಿತ್ತು.

2 ಪ್ರವಾದಿ(ﷺ)ರವರ ಪ್ರಾಮಾಣಿಕತೆ ಮತ್ತು ಸತ್ಯಸಂಧತೆಯು ಅವರಿಗೆ ಚಿರಪರಿಚಿತವಾಗಿತ್ತು.

74. ಪರಲೋಕದಲ್ಲಿ ವಿಶ್ವಾಸವಿಡದವರು ಯಾರೋ ಅವರು ಆ ಮಾರ್ಗದಿಂದ ಭ್ರಂಶರಾಗಿರುವರು.

وَإِنَّ ٱلَّذِينَ لَا يُؤْمِنُونَ بِٱلْـَٔاخِرَةِ عَنِ ٱلصِّرَٰطِ لَنَـٰكِبُونَ ﴿٧٤﴾

75. ನಾವು ಅವರ ಮೇಲೆ ದಯೆ ತೋರಿಸಿ ಅವರ ಸಂಕಷ್ಟವನ್ನು ನಿವಾರಿಸಿದ್ದರೆ ಅವರು ಅಂಧವಾಗಿ ವಿಹರಿಸುತ್ತಾ ತಮ್ಮ ಅತಿಕ್ರಮದಲ್ಲಿ ಹಟತೊಟ್ಟು ನಿಲ್ಲುವರು.

۞ وَلَوْ رَحِمْنَـٰهُمْ وَكَشَفْنَا مَا بِهِم مِّن ضُرٍّ لَّلَجُّوا۟ فِى طُغْيَـٰنِهِمْ يَعْمَهُونَ ﴿٧٥﴾

76. ನಾವು ಅವರನ್ನು ಶಿಕ್ಷೆಯ ಮೂಲಕ ಹಿಡಿದು ಕೊಂಡೆವು. ಆದರೂ ಅವರು ತಮ್ಮ ರಬ್‌ಗೆ ಶರಣಾಗುವುದನ್ನಾಗಲಿ ವಿನಮ್ರರಾಗುವುದನ್ನಾಗಲಿ ಮಾಡಲಿಲ್ಲ.

وَلَقَدْ أَخَذْنَـٰهُم بِٱلْعَذَابِ فَمَا ٱسْتَكَانُوا۟ لِرَبِّهِمْ وَمَا يَتَضَرَّعُونَ ﴿٧٦﴾

77. ಕೊನೆಗೆ ನಾವು ಅವರಿಗಾಗಿ ಕಠೋರ ಶಿಕ್ಷೆಯ ಬಾಗಿಲೊಂದನ್ನು ತೆರೆದಾಗ ಅಗೋ! ಅವರು ಅದರಲ್ಲಿ ನಿರಾಶರಾಗಿ ಬಿಡುವರು.

حَتَّىٰٓ إِذَا فَتَحْنَا عَلَيْهِم بَابًا ذَا عَذَابٍ شَدِيدٍ إِذَا هُمْ فِيهِ مُبْلِسُونَ ﴿٧٧﴾

78. ನಿಮಗೆ ಶ್ರವಣ, ದೃಷ್ಟಿಗಳು ಮತ್ತು ಹೃದಯಗಳನ್ನು ಮಾಡಿಕೊಟ್ಟವನು ಅವನಾಗಿರುವನು. ನೀವು ಅಲ್ಪ ಮಾತ್ರ ಕೃತಜ್ಞತೆ ಸಲ್ಲಿಸುತ್ತಿರುವಿರಿ.

وَهُوَ ٱلَّذِىٓ أَنشَأَ لَكُمُ ٱلسَّمْعَ وَٱلْأَبْصَـٰرَ وَٱلْأَفْـِٔدَةَ ۚ قَلِيلًا مَّا تَشْكُرُونَ ﴿٧٨﴾

79. ನಿಮ್ಮನ್ನು ಭೂಮಿಯಲ್ಲಿ ಸೃಷ್ಟಿಸಿ ಹಬ್ಬಿಸಿದವನು ಅವನಾಗಿರುವನು. ನಿಮ್ಮನ್ನು ಒಟ್ಟುಗೂಡಿಸಲಾಗುವುದೂ ಅವನೆಡೆಗಾಗಿದೆ.

وَهُوَ ٱلَّذِى ذَرَأَكُمْ فِى ٱلْأَرْضِ وَإِلَيْهِ تُحْشَرُونَ ﴿٧٩﴾

80. ಜೀವ ನೀಡುವವನು ಮತ್ತು ಮರಣ ನೀಡುವವನು ಅವನಾಗಿರುವನು. ರಾತ್ರಿ ಹಗಲುಗಳ ಬದಲಾವಣೆಯು ಅವನ ನಿಯಂತ್ರಣದಲ್ಲಿವೆ. ನೀವು ಚಿಂತಿಸುವುದಿಲ್ಲವೇ?

وَهُوَ ٱلَّذِى يُحْىِۦ وَيُمِيتُ وَلَهُ ٱخْتِلَـٰفُ ٱلَّيْلِ وَٱلنَّهَارِ ۚ أَفَلَا تَعْقِلُونَ ﴿٨٠﴾

81. ಅಲ್ಲ, ಪೂರ್ವಿಕರು ಹೇಳಿದಂತೆಯೇ ಇವರೂ ಹೇಳಿರುವರು.

بَلْ قَالُوا۟ مِثْلَ مَا قَالَ ٱلْأَوَّلُونَ ﴿٨١﴾

82. ಅವರು ಹೇಳಿದರು: ‘ನಾವು ಮೃತಪಟ್ಟು ಮಣ್ಣು ಮತ್ತು ಮೂಳೆಗಳಾಗಿ ಬಿಟ್ಟರೆ ನಮ್ಮನ್ನು ಪುನರುತ್ಥಾನಗೊಳಿಸಲಾಗುವುದೇ?

قَالُوٓا۟ أَءِذَا مِتْنَا وَكُنَّا تُرَابًا وَعِظَـٰمًا أَءِنَّا لَمَبْعُوثُونَ ﴿٨٢﴾

**83.** ನಮಗೂ, ಮುಂಚೆ ನಮ್ಮ ಪೂರ್ವಿಕರಿಗೂ ಇದೇ ವಾಗ್ದಾನವನ್ನು ನೀಡಲಾಗಿದೆ. ಇದು ಪೂರ್ವಿಕರ ಪುರಾಣಗಳು ಮಾತ್ರವಾಗಿವೆ'.

لَقَدْ وُعِدْنَا نَحْنُ وَءَابَآؤُنَا هَٰذَا مِن قَبْلُ
إِنْ هَٰذَآ إِلَّآ أَسَٰطِيرُ ٱلْأَوَّلِينَ ٨٣

**84.** (ಓ ಪ್ರವಾದಿಯವರೇ!) ಕೇಳಿರಿ: 'ಭೂಮಿ ಮತ್ತು ಅದರಲ್ಲಿರುವುದು ಯಾರಿಗೆ ಸೇರಿದ್ದಾಗಿದೆ? ನೀವು ಅರಿತಿದ್ದರೆ (ಹೇಳಿರಿ)'.

قُل لِّمَنِ ٱلْأَرْضُ وَمَن فِيهَآ إِن كُنتُمْ
تَعْلَمُونَ ٨٤

**85.** ಅವರು ಹೇಳುವರು: '(ಅದು) ಅಲ್ಲಾಹುವಿನದ್ದಾಗಿದೆ'. ತಾವು ಹೇಳಿರಿ: 'ಆದರೂ ನೀವು ಚಿಂತಿಸಿ ಗ್ರಹಿಸುವುದಿಲ್ಲವೇ?'

سَيَقُولُونَ لِلَّهِ ۚ قُلْ أَفَلَا تَذَكَّرُونَ ٨٥

**86.** ಕೇಳಿರಿ: 'ಸಪ್ತಗಗನಗಳ ರಬ್ ಮತ್ತು ಮಹಾ ಸಿಂಹಾಸನದ ರಬ್ ಯಾರು?'

قُلْ مَن رَّبُّ ٱلسَّمَٰوَٰتِ ٱلسَّبْعِ وَرَبُّ
ٱلْعَرْشِ ٱلْعَظِيمِ ٨٦

**87.** ಅವರು ಹೇಳುವರು: '(ಪ್ರಭುತ್ವವು) ಅಲ್ಲಾಹುವಿನದ್ದಾಗಿದೆ'. ತಾವು ಹೇಳಿರಿ: 'ಆದರೂ ನೀವು ಭಯಭಕ್ತಿ ಪಾಲಿಸಲಾರಿರೇ?'

سَيَقُولُونَ لِلَّهِ ۚ قُلْ أَفَلَا تَتَّقُونَ ٨٧

**88.** ಕೇಳಿರಿ: 'ಸರ್ವ ವಸ್ತುಗಳ ಆಧಿಪತ್ಯವು ಯಾರ ಕೈಯ್ಯಲ್ಲಿದೆ? ಅವನು ಅಭಯವನ್ನು ನೀಡುವನು ಮತ್ತು ಅವನಿಗೆ ವಿರುದ್ಧವಾಗಿ (ಎಲ್ಲಿಂದಲೂ) ಅಭಯ ಲಭಿಸದು. ನಿಮಗೆ ತಿಳಿದಿದ್ದರೆ (ಹೇಳಿರಿ)'.

قُلْ مَنۢ بِيَدِهِۦ مَلَكُوتُ كُلِّ شَىْءٍ
وَهُوَ يُجِيرُ وَلَا يُجَارُ عَلَيْهِ إِن كُنتُمْ
تَعْلَمُونَ ٨٨

**89.** ಅವರು ಹೇಳುವರು: '(ಅವೆಲ್ಲವೂ) ಅಲ್ಲಾಹುವಿಗಿರುವುದಾಗಿವೆ'. ತಾವು ಹೇಳಿರಿ: ಹೀಗಿದ್ದೂ ನೀವು ಮಾಯಾಜಾಲದಲ್ಲಿ ಸಿಲುಕಿ ಬಿಡುವುದಾದರೂ ಹೇಗೆ?'

سَيَقُولُونَ لِلَّهِ ۚ قُلْ فَأَنَّىٰ تُسْحَرُونَ ٨٩

**90.** ಅಲ್ಲ, ನಾವು ಅವರ ಬಳಿಗೆ ಸತ್ಯದೊಂದಿಗೆ ಬಂದಿರುವೆವು. ಆದರೆ ಅವರು ಮಿಥ್ಯವಾದಿಗಳಾಗಿರುವರು.

بَلْ أَتَيْنَٰهُم بِٱلْحَقِّ وَإِنَّهُمْ لَكَٰذِبُونَ ٩٠

**91.** ಅಲ್ಲಾಹು ಯಾವುದೇ ಸಂತತಿಯನ್ನೂ ಮಾಡಿಕೊಂಡಿಲ್ಲ. ಅವನ ಜೊತೆಗೆ ಬೇರೆ ಆರಾಧ್ಯನೂ ಇಲ್ಲ. ಇರುತ್ತಿದ್ದರೆ ಪ್ರತಿಯೊಬ್ಬ

مَا ٱتَّخَذَ ٱللَّهُ مِن وَلَدٍ وَمَا كَانَ مَعَهُۥ مِنْ
إِلَٰهٍ ۚ إِذًا لَّذَهَبَ كُلُّ إِلَٰهٍۭ بِمَا خَلَقَ وَلَعَلَا

ಆರಾಧ್ಯನೂ ತಾನು ಸೃಷ್ಟಿಸಿರುವುದರೊಂದಿಗೆ ಹೊರಟುಹೋಗುತ್ತಿದ್ದನು. ಅವರ ಪೈಕಿ ಕೆಲವರು ಕೆಲವರ ಮೇಲೆ ಪ್ರಭುತ್ವ ಸಾಧಿಸಲು ಹವಣಿಸುತ್ತಿದ್ದರು. ಅವರು ಸುಳ್ಳುಸುಳ್ಳಾಗಿ ಆರೋಪಿಸುವುದರಿಂದೆಲ್ಲ ಅಲ್ಲಾಹು ಪರಮ ಪಾವನನಾಗಿರುವನು.

بَعْضُهُمْ عَلَىٰ بَعْضٍ ۚ سُبْحَـٰنَ ٱللَّهِ عَمَّا يَصِفُونَ ﴿٩١﴾

**92.** ಅವನು ಅಗೋಚರವನ್ನೂ ಗೋಚರವನ್ನೂ ಅರಿಯುವವನಾಗಿರುವನು. ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅವನು ಅತ್ಯುನ್ನತನಾಗಿರುವನು.

عَـٰلِمِ ٱلْغَيْبِ وَٱلشَّهَـٰدَةِ فَتَعَـٰلَىٰ عَمَّا يُشْرِكُونَ ﴿٩٢﴾

**93-94.** (ಓ ಪ್ರವಾದಿಯವರೇ!) ಹೇಳಿರಿ: ‘ಓ ನನ್ನ ರಬ್! ಇವರಿಗೆ ಮುನ್ನೆಚ್ಚರಿಕೆ ನೀಡಲಾಗುವ ಶಿಕ್ಷೆಯನ್ನು ನೀನು ನನಗೆ ತೋರಿಸಿಕೊಡುವುದಾದರೆ, ಓ ನನ್ನ ರಬ್! ನೀನು ನನ್ನನ್ನು ಅಕ್ರಮಿಗಳಾದ ಜನರಲ್ಲಿ ಸೇರಿಸದಿರು’.

قُل رَّبِّ إِمَّا تُرِيَنِّى مَا يُوعَدُونَ ﴿٩٣﴾ رَبِّ فَلَا تَجْعَلْنِى فِى ٱلْقَوْمِ ٱلظَّـٰلِمِينَ ﴿٩٤﴾

**95.** ನಾವು ಅವರಿಗೆ ಮುನ್ನೆಚ್ಚರಿಕೆ ನೀಡುವ ಶಿಕ್ಷೆಯನ್ನು ತಮಗೆ ತೋರಿಸಿಕೊಡಲು ಖಂಡಿತವಾಗಿಯೂ ಸಾಮರ್ಥ್ಯವುಳ್ಳವರಾಗಿರುವೆವು.

وَإِنَّا عَلَىٰٓ أَن نُّرِيَكَ مَا نَعِدُهُمْ لَقَـٰدِرُونَ ﴿٩٥﴾

**96.** ಅತ್ಯುತ್ತಮವಾಗಿರುವುದರ ಮೂಲಕ ತಾವು ಕೆಡುಕನ್ನು ತಡೆಗಟ್ಟಿರಿ. ಅವರು ಸುಳ್ಳುಸುಳ್ಳಾಗಿ ಆರೋಪಿಸುವುದರ ಕುರಿತು ನಾವು ಚೆನ್ನಾಗಿ ಅರಿತಿರುವೆವು.

ٱدْفَعْ بِٱلَّتِى هِىَ أَحْسَنُ ٱلسَّيِّئَةَ ۚ نَحْنُ أَعْلَمُ بِمَا يَصِفُونَ ﴿٩٦﴾

**97.** ಹೇಳಿರಿ: ‘ಓ ನನ್ನ ರಬ್! ಸೈತಾನರ ದುರ್ಬೋಧನೆಗಳಿಂದ ನಾನು ನಿನ್ನಲ್ಲಿ ಅಭಯ ಯಾಚಿಸುತ್ತಿರುವೆನು.

وَقُل رَّبِّ أَعُوذُ بِكَ مِنْ هَمَزَٰتِ ٱلشَّيَـٰطِينِ ﴿٩٧﴾

**98.** ಓ ನನ್ನ ರಬ್! ಅವರು (ಸೈತಾನರು) ನನ್ನ ಬಳಿ ಹಾಜರಾಗುವುದರಿಂದಲೂ ನಾನು ನಿನ್ನಲ್ಲಿ ಅಭಯ ಯಾಚಿಸುತ್ತಿರುವೆನು’.

وَأَعُوذُ بِكَ رَبِّ أَن يَحْضُرُونِ ﴿٩٨﴾

حَتَّىٰٓ إِذَا جَآءَ أَحَدَهُمُ ٱلْمَوْتُ قَالَ رَبِّ ٱرْجِعُونِ ﴿٩٩﴾ لَعَلِّىٓ أَعْمَلُ صَٰلِحًا فِيمَا تَرَكْتُ ۚ كَلَّآ ۚ إِنَّهَا كَلِمَةٌ هُوَ قَآئِلُهَا ۖ وَمِن وَرَآئِهِم بَرْزَخٌ إِلَىٰ يَوْمِ يُبْعَثُونَ ﴿١٠٠﴾

**99-100**. ಕೊನೆಗೆ ಅವರಲ್ಲೊಬ್ಬನಿಗೆ ಮರಣವು ಆಸನ್ನವಾಗುವಾಗ ಅವನು ಹೇಳುವನು: ‘ಓ ನನ್ನ ರಬ್! ನಾನು ತೊರೆದಿರುವುದನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವುದಕ್ಕಾಗಿ ನನ್ನನ್ನು (ಐಹಿಕ ಜೀವನಕ್ಕೆ) ಮರಳಿಸು’. ಎಂದಿಗೂ ಇಲ್ಲ! ಅದೊಂದು ಮಾತು ಮಾತ್ರವಾಗಿದೆ. ಅವನು ಅದನ್ನು ಹೇಳುತ್ತಲಿರುವನು. ಅವರನ್ನು ಪುನರುತ್ಥಾನಗೊಳಿಸಲಾಗುವ ದಿನದವರೆಗೂ ಅವರ ಹಿಂದೆ ಒಂದು ಪರದೆಯಿರುವುದು.(1)

فَإِذَا نُفِخَ فِى ٱلصُّورِ فَلَآ أَنسَابَ بَيْنَهُمْ يَوْمَئِذٍ وَلَا يَتَسَآءَلُونَ ﴿١٠١﴾

**101**. ಕಹಳೆಯಲ್ಲಿ ಊದಲ್ಪಟ್ಟರೆ, ಅಂದು ಅವರ ಮಧ್ಯೆ ಯಾವುದೇ ಕುಟುಂಬ ಸಂಬಂಧಗಳು ಇರಲಾರವು. ಅವರು ಪರಸ್ಪರ ವಿಚಾರಿಸುವುದೂ ಇಲ್ಲ.(2)

فَمَن ثَقُلَتْ مَوَٰزِينُهُۥ فَأُو۟لَٰٓئِكَ هُمُ ٱلْمُفْلِحُونَ ﴿١٠٢﴾

**102**. ಆಗ ಯಾರ (ಸತ್ಕರ್ಮಗಳ) ತಕ್ಕಡಿಗಳು ಭಾರವಾಗುವವೋ ಅವರು ಯಶಸ್ಸು ಗಳಿಸಿದವರಾಗಿರುವರು.

وَمَنْ خَفَّتْ مَوَٰزِينُهُۥ فَأُو۟لَٰٓئِكَ ٱلَّذِينَ خَسِرُوٓا۟ أَنفُسَهُمْ فِى جَهَنَّمَ خَٰلِدُونَ ﴿١٠٣﴾

**103**. ಯಾರ (ಸತ್ಕರ್ಮಗಳ) ತಕ್ಕಡಿಗಳು ಹಗುರವಾಗುವವೋ ಅವರು ಸ್ವತಃ ತಮ್ಮನ್ನೇ ನಷ್ಟಕ್ಕೀಡು ಮಾಡಿದವರಾಗಿರುವರು. ಅವರು ನರಕಾಗ್ನಿಯಲ್ಲಿ ಶಾಶ್ವತವಾಗಿ ವಾಸಿಸುವರು.

تَلْفَحُ وُجُوهَهُمُ ٱلنَّارُ وَهُمْ فِيهَا كَٰلِحُونَ ﴿١٠٤﴾

**104**. ನರಕಾಗ್ನಿಯು ಅವರ ಮುಖಗಳನ್ನು ಸುಟ್ಟು ಕರಕಲಾಗಿಸುವುದು. ಅವರು ಅದರಲ್ಲಿ ಹಲ್ಲುಕಿರಿಯುತ್ತಿರುವರು.

أَلَمْ تَكُنْ ءَايَٰتِى تُتْلَىٰ عَلَيْكُمْ فَكُنتُم بِهَا تُكَذِّبُونَ ﴿١٠٥﴾

**105**. (ಅವರೊಂದಿಗೆ ಹೇಳಲಾಗುವುದು): ‘ನನ್ನ ದೃಷ್ಟಾಂತಗಳನ್ನು ನಿಮಗೆ ಓದಿಕೊಡಲಾಗಿರಲಿಲ್ಲವೇ? ಆಗ ನೀವದನ್ನು ನಿಷೇಧಿಸುತ್ತಿದ್ದಿರಿ’.

1 ಅವರು ಪುನಃ ಐಹಿಕ ಜೀವನದೆಡೆಗೆ ಮರಳಲಾಗದ ಸ್ಥಿತಿಯಲ್ಲಿ ಮರಣದ ಪರದೆಯ ಹಿಂದೆ ಮರೆಯಾಗಿ ಬಿಡುವರು.

2 ಪುನರುತ್ಥಾನ ದಿನದಂದು ಪ್ರತಿಯೊಬ್ಬರೂ ತಮ್ಮ ತಮ್ಮ ಭವಿಷ್ಯದ ಕುರಿತು ಚಿಂತಾಕ್ರಾಂತರಾಗಿರುವರು. ಇತರರ ಕುರಿತು ಯೋಚಿಸಲು ಅವರು ಮುಂದಾಗಲಾರರು.

106. ಅವರು ಹೇಳುವರು: ‘ಓ ನಮ್ಮ ರಬ್! ನಮ್ಮ ದೌರ್ಭಾಗ್ಯವು ನಮ್ಮನ್ನು ಸೋಲಿಸಿದೆ. ನಾವು ಪಥಭ್ರಷ್ಟರಾದ ಜನತೆಯಾಗಿರುವೆವು.

قَالُواْ رَبَّنَا غَلَبَتْ عَلَيْنَا شِقْوَتُنَا وَكُنَّا قَوْمًا ضَآلِّينَ ﴿١٠٦﴾

107. ಓ ನಮ್ಮ ರಬ್! ನಮ್ಮನ್ನು ಇದರಿಂದ ಹೊರತೆಗೆದುಬಿಡು. ನಾವು ಪುನಃ (ದುರ್ಮಾರ್ಗದೆಡೆಗೆ) ಮರಳುವುದಾದರೆ ಖಂಡಿತವಾಗಿಯೂ ನಾವು ಅಕ್ರಮಿಗಳಾಗಿರುವೆವು’.

رَبَّنَآ أَخْرِجْنَا مِنْهَا فَإِنْ عُدْنَا فَإِنَّا ظَٰلِمُونَ ﴿١٠٧﴾

108. ಅವನು (ಅಲ್ಲಾಹು) ಹೇಳುವನು: ‘ನೀವು ಅದರಲ್ಲೇ ನಿಕೃಷ್ಟರಾಗಿ ತಂಗಿರಿ. ನನ್ನೊಂದಿಗೆ ಮಾತನಾಡದಿರಿ’.

قَالَ ٱخْسَـُٔواْ فِيهَا وَلَا تُكَلِّمُونِ ﴿١٠٨﴾

109. ಖಂಡಿತವಾಗಿಯೂ ನನ್ನ ದಾಸರ ಪೈಕಿ ಒಂದು ಗುಂಪು ಜನರು ಹೀಗೆನ್ನುತ್ತಿದ್ದರು: ‘ಓ ನಮ್ಮ ರಬ್! ನಾವು ವಿಶ್ವಾಸವಿಟ್ಟಿರುವೆವು. ಆದ್ದರಿಂದ ನಮ್ಮನ್ನು ಕ್ಷಮಿಸು ಮತ್ತು ನಮ್ಮ ಮೇಲೆ ದಯೆ ತೋರು. ನೀನು ದಯೆ ತೋರುವವರಲ್ಲಿ ಅತ್ಯುತ್ತಮನಾಗಿರುವೆ’.

إِنَّهُۥ كَانَ فَرِيقٌ مِّنْ عِبَادِى يَقُولُونَ رَبَّنَآ ءَامَنَّا فَٱغْفِرْ لَنَا وَٱرْحَمْنَا وَأَنتَ خَيْرُ ٱلرَّٰحِمِينَ ﴿١٠٩﴾

110. ಆಗ ಅವರನ್ನು ನೀವು ಗೇಲಿ ಮಾಡಿದಿರಿ. ಕೊನೆಗೆ ನನ್ನ ಬಗ್ಗೆ ನಿಮಗಿರಬೇಕಾದ ನೆನಪು ಮಾಸಿ ಹೋಗಲು ಅವರೊಂದು ಹೇತುವಾಗಿಬಿಟ್ಟರು. ಅವರ ಬಗ್ಗೆ ನೀವು ತಾತ್ಸಾರ ಮಾಡಿ ನಗುತ್ತಿದ್ದಿರಿ.

فَٱتَّخَذْتُمُوهُمْ سِخْرِيًّا حَتَّىٰٓ أَنسَوْكُمْ ذِكْرِى وَكُنتُم مِّنْهُمْ تَضْحَكُونَ ﴿١١٠﴾

111. ಅವರು ಸಹನೆ ವಹಿಸಿದ ಕಾರಣ ಅವರಿಗೆ ನಾನು ಇಂದು ಪ್ರತಿಫಲವನ್ನು ನೀಡಿರುವೆನು. ಜಯಶಾಲಿಗಳು ಅವರೇ ಆಗಿರುವರು.

إِنِّى جَزَيْتُهُمُ ٱلْيَوْمَ بِمَا صَبَرُوٓاْ أَنَّهُمْ هُمُ ٱلْفَآئِزُونَ ﴿١١١﴾

112. ಅವನು (ಅಲ್ಲಾಹು) ಕೇಳುವನು: ‘ನೀವು ಭೂಮಿಯಲ್ಲಿ ನೀವು ಭೂಮಿಯಲ್ಲಿ ತಂಗಿದ ವರ್ಷಗಳ ಸಂಖ್ಯೆಯೆಷ್ಟು?’

قَٰلَ كَمْ لَبِثْتُمْ فِى ٱلْأَرْضِ عَدَدَ سِنِينَ ﴿١١٢﴾

113. ಅವರು ಹೇಳುವರು: ‘ನಾವು ಒಂದು ದಿನ ಅಥವಾ ದಿನವೊಂದರ ಅಲ್ಪಸಮಯದಷ್ಟು ಮಾತ್ರ ತಂಗಿದ್ದೆವು. ಎಣಿಕೆ ಮಾಡಿದವರಲ್ಲಿ ಕೇಳಿ ನೋಡು’.

قَالُواْ لَبِثْنَا يَوْمًا أَوْ بَعْضَ يَوْمٍ فَسْـَٔلِ ٱلْعَآدِّينَ ﴿١١٣﴾

114. ಅವನು ಹೇಳುವನು: 'ನೀವು ಅಲ್ಪ ಸಮಯ ಮಾತ್ರ ತಂಗಿದ್ದಿರಿ. ನೀವು ಅರಿತವರಾಗಿದ್ದರೆ (ಎಷ್ಟು ಚೆನ್ನಾಗಿರುತ್ತಿತ್ತು!)'

قَٰلَ إِن لَّبِثۡتُمۡ إِلَّا قَلِيلٗاۖ لَّوۡ أَنَّكُمۡ كُنتُمۡ تَعۡلَمُونَ ١١٤

115. ನಾವು ನಿಮ್ಮನ್ನು ಉದ್ದೇಶರಹಿತವಾಗಿ ಸೃಷ್ಟಿಸಿರುವೆವು ಮತ್ತು ನೀವು ನಮ್ಮ ಬಳಿಗೆ ಮರಳಿ ಬರಲಾರಿರಿ ಎಂದೂ ನೀವು ಭಾವಿಸಿರುವಿರಾ?

أَفَحَسِبۡتُمۡ أَنَّمَا خَلَقۡنَٰكُمۡ عَبَثٗا وَأَنَّكُمۡ إِلَيۡنَا لَا تُرۡجَعُونَ ١١٥

116. ನೈಜ ಅಧಿಪತಿಯಾಗಿರುವ ಅಲ್ಲಾಹು ಪರಮೋನ್ನತನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಗೌರವಾನ್ವಿತ ಸಿಂಹಾಸನದ ಒಡೆಯನಾಗಿರುವನು.

فَتَعَٰلَى ٱللَّهُ ٱلۡمَلِكُ ٱلۡحَقُّۖ لَآ إِلَٰهَ إِلَّا هُوَ رَبُّ ٱلۡعَرۡشِ ٱلۡكَرِيمِ ١١٦

117. ಯಾರಾದರೂ ಅಲ್ಲಾಹುವಿನೊಂದಿಗೆ ಇತರ ಆರಾಧ್ಯರನ್ನು ಕರೆದು ಪ್ರಾರ್ಥಿಸುವುದಾದರೆ –ಹಾಗೆ ಪ್ರಾರ್ಥಿಸಲು ಅವನ ಬಳಿ ಯಾವುದೇ ಪುರಾವೆಯೂ ಇಲ್ಲ– ಅವನ ವಿಚಾರಣೆಯು ಅವನ ರಬ್‌ನ ಬಳಿಯಲ್ಲಾಗಿದೆ. ಸತ್ಯನಿಷೇಧಿಗಳು ಖಂಡಿತವಾಗಿಯೂ ಯಶಸ್ಸುಗಳಿಸಲಾರರು.

وَمَن يَدۡعُ مَعَ ٱللَّهِ إِلَٰهًا ءَاخَرَ لَا بُرۡهَٰنَ لَهُۥ بِهِۦ فَإِنَّمَا حِسَابُهُۥ عِندَ رَبِّهِۦٓۚ إِنَّهُۥ لَا يُفۡلِحُ ٱلۡكَٰفِرُونَ ١١٧

118. (ಓ ಪ್ರವಾದಿಯವರೇ!) ಹೇಳಿರಿ: 'ಓ ನನ್ನ ರಬ್! ನನ್ನನ್ನು ಕ್ಷಮಿಸು ಮತ್ತು ನನಗೆ ದಯೆತೋರು. ದಯೆತೋರುವವರಲ್ಲಿ ನೀನು ಅತ್ಯುತ್ತಮನಾಗಿರುವೆ.

وَقُل رَّبِّ ٱغۡفِرۡ وَٱرۡحَمۡ وَأَنتَ خَيۡرُ ٱلرَّٰحِمِينَ ١١٨

## ಅನ್ನೂರ್ (ಪ್ರಕಾಶ)[1]

## سُورَةُ النُّورِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 64

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

سُورَةٌ أَنزَلۡنَٰهَا وَفَرَضۡنَٰهَا وَأَنزَلۡنَا فِيهَآ ءَايَٰتِۭ بَيِّنَٰتٖ لَّعَلَّكُمۡ تَذَكَّرُونَ ١

1. ಇದು ನಾವು ಅವತೀರ್ಣಗೊಳಿಸಿರುವ ಮತ್ತು ಶಾಸನವಾಗಿ ಮಾಡಿರುವ ಒಂದು ಅಧ್ಯಾಯವಾಗಿದೆ. ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ನಾವು ಇದರಲ್ಲಿ ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸಿರುವೆವು.

ٱلزَّانِيَةُ وَٱلزَّانِي فَٱجۡلِدُواْ كُلَّ وَٰحِدٖ مِّنۡهُمَا مِاْئَةَ جَلۡدَةٖۖ وَلَا تَأۡخُذۡكُم بِهِمَا رَأۡفَةٞ فِي دِينِ ٱللَّهِ إِن كُنتُمۡ تُؤۡمِنُونَ بِٱللَّهِ وَٱلۡيَوۡمِ ٱلۡأٓخِرِۖ وَلۡيَشۡهَدۡ عَذَابَهُمَا طَآئِفَةٞ مِّنَ ٱلۡمُؤۡمِنِينَ ٢

2. ವ್ಯಭಿಚಾರಿ ಮತ್ತು ವ್ಯಭಿಚಾರಿಣಿಗಳ ಪೈಕಿ ಪ್ರತಿಯೊಬ್ಬರಿಗೂ ನೀವು ನೂರು ಛಡಿಯೇಟುಗಳನ್ನು ಬಾರಿಸಿರಿ.[2] ನೀವು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರಾಗಿದ್ದರೆ ಅಲ್ಲಾಹುವಿನ ಧರ್ಮನಿಯಮದಲ್ಲಿ (ಅದನ್ನು ಜಾರಿಗೊಳಿಸುವ ವಿಷಯದಲ್ಲಿ) ಅವರೊಂದಿಗಿರುವ ಅನುಕಂಪವು ನಿಮ್ಮನ್ನು ಹಿಡಿಯದಿರಲಿ. ಅವರಿಗೆ ಶಿಕ್ಷೆ ನೀಡಲಾಗುವ ಸ್ಥಳದಲ್ಲಿ ಸತ್ಯವಿಶ್ವಾಸಿಗಳ ಪೈಕಿ ಒಂದು ತಂಡವು ಹಾಜರಿರಲಿ.

ٱلزَّانِي لَا يَنكِحُ إِلَّا زَانِيَةً أَوۡ مُشۡرِكَةٗ وَٱلزَّانِيَةُ لَا يَنكِحُهَآ إِلَّا زَانٍ أَوۡ مُشۡرِكٞۚ وَحُرِّمَ ذَٰلِكَ عَلَى ٱلۡمُؤۡمِنِينَ ٣

3. ವ್ಯಭಿಚಾರಿಯು ವ್ಯಭಿಚಾರಿಣಿಯನ್ನು ಅಥವಾ ಬಹುದೇವವಿಶ್ವಾಸಿನಿಯನ್ನೇ ಹೊರತು ವಿವಾಹವಾಗುವುದಿಲ್ಲ. ವ್ಯಭಿಚಾರಿಣಿಯನ್ನು ವ್ಯಭಿಚಾರಿ ಅಥವಾ ಬಹುದೇವವಿಶ್ವಾಸಿಯ ಹೊರತು ವಿವಾಹವಾಗಲಾರರು.[3] ಅದನ್ನು ಸತ್ಯವಿಶ್ವಾಸಿಗಳ ಮೇಲೆ ನಿಷಿದ್ಧಗೊಳಿಸಲಾಗಿದೆ.

---

1 35ನೇ ಸೂಕ್ತಿಯಲ್ಲಿ ಪ್ರಕಾಶದ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ವಿವಾಹಿತ (ಅಥವಾ ವಿವಾಹಿತೆ) ವ್ಯಭಿಚಾರ ಮಾಡಿರುವುದು ನಾಲ್ವರು ಸಾಕ್ಷಿಗಳ ಮೂಲಕ ಅಥವಾ ಸ್ವಯಂ ತಪ್ಪೊಪ್ಪಿಕೊಳ್ಳುವುದರ ಮೂಲಕ ಸಾಬೀತಾದರೆ ಕಲ್ಲೆಸೆದು ಸಾಯಿಸಬೇಕೆಂಬ ಶಿಕ್ಷೆಯು ಪ್ರವಾದಿ(ﷺ)ರವರ ಸಹೀಹ್ ಆದ ಹದೀಸ್‌ಗಳ ಮೂಲಕ ಸಾಬೀತಾಗಿರುವುದರಿಂದ ಈ ಆಯತ್ತಿನ ವಿಧಿಯು ಅವಿವಾಹಿತ ವ್ಯಭಿಚಾರಿಗಳಿಗೆ ಮಾತ್ರ ಸೀಮಿತವಾಗಿದೆ ಎಂದು ಕುರ್‌ಆನ್ ವ್ಯಾಖ್ಯಾನಕಾರರು ಸ್ಪಷ್ಟವಾಗಿ ಹೇಳಿದ್ದಾರೆ.

3 ಸಾಮಾನ್ಯವಾಗಿ ಸಾತ್ವಿಕರಾಗಿರುವ ಯಾವುದೇ ಪುರುಷನಾಗಲಿ ಸ್ತ್ರೀಯಾಗಲಿ ಅನೈತಿಕ ಸಂಬಂಧ ಹೊಂದಿದವರನ್ನು ತಿಳಿದೂತಿಳಿದೂ ಬಾಳಸಂಗಾತಿಯನ್ನಾಗಿ ಮಾಡಿಕೊಳ್ಳಲಾರರು.

4. ಸುಶೀಲೆಯರ ಮೇಲೆ (ವ್ಯಭಿಚಾರದ) ಆರೋಪಮಾಡಿ ತರುವಾಯ ನಾಲ್ಕು ಸಾಕ್ಷಿಗಳನ್ನು ಹಾಜರುಪಡಿಸದವರಿಗೆ ನೀವು ಎಂಬತ್ತು ಛಡಿಯೇಟುಗಳನ್ನು ಬಾರಿಸಿರಿ. ಅವರ ಸಾಕ್ಷ್ಯವನ್ನು ನೀವು ಎಂದಿಗೂ ಸ್ವೀಕರಿಸದಿರಿ. ಧಿಕ್ಕಾರಿಗಳು ಅವರೇ ಆಗಿರುವರು.

وَٱلَّذِينَ يَرۡمُونَ ٱلۡمُحۡصَنَٰتِ ثُمَّ لَمۡ يَأۡتُواْ بِأَرۡبَعَةِ شُهَدَآءَ فَٱجۡلِدُوهُمۡ ثَمَٰنِينَ جَلۡدَةً وَلَا تَقۡبَلُواْ لَهُمۡ شَهَٰدَةً أَبَدًاۚ وَأُوْلَٰٓئِكَ هُمُ ٱلۡفَٰسِقُونَ ٤

5. ಆದರೆ ತರುವಾಯ ಪಶ್ಚಾತ್ತಾಪಪಟ್ಟು ಸುಧಾರಣೆ ಮಾಡಿಕೊಂಡವರ ಹೊರತು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

إِلَّا ٱلَّذِينَ تَابُواْ مِنۢ بَعۡدِ ذَٰلِكَ وَأَصۡلَحُواْ فَإِنَّ ٱللَّهَ غَفُورٞ رَّحِيمٞ ٥

6. ತಮ್ಮ ಪತ್ನಿಯರ ಮೇಲೆ (ವ್ಯಭಿಚಾರದ) ಆರೋಪ ಮಾಡುವವರು ಮತ್ತು ಅದಕ್ಕಾಗಿ ಸ್ವತಃ ತಮ್ಮ ಹೊರತು ಇನ್ನಾವ ಸಾಕ್ಷಿಗಳೂ ಇರದವರು ಯಾರೋ ಅವರಲ್ಲಿ ಪ್ರತಿಯೊಬ್ಬರ ಸಾಕ್ಷ್ಯವು 'ಖಂಡಿತವಾಗಿಯೂ ತಾನು ಸತ್ಯ ನುಡಿಯುವವರಲ್ಲಿ ಸೇರಿದವನಾಗಿರುವೆನು' ಎಂದು ಅಲ್ಲಾಹುವಿನ ಹೆಸರಲ್ಲಿ ನಾಲ್ಕು ಬಾರಿ ಸಾಕ್ಷ್ಯವಹಿಸುವುದಾಗಿದೆ.

وَٱلَّذِينَ يَرۡمُونَ أَزۡوَٰجَهُمۡ وَلَمۡ يَكُن لَّهُمۡ شُهَدَآءُ إِلَّآ أَنفُسُهُمۡ فَشَهَٰدَةُ أَحَدِهِمۡ أَرۡبَعُ شَهَٰدَٰتِۭ بِٱللَّهِ إِنَّهُۥ لَمِنَ ٱلصَّٰدِقِينَ ٦

7. ಐದನೆಯದಾಗಿ, ತಾನು ಸುಳ್ಳು ಹೇಳುವವರಲ್ಲಿ ಸೇರಿದವನಾಗಿದ್ದರೆ ಅಲ್ಲಾಹುವಿನ ಶಾಪವು ತನ್ನ ಮೇಲಿರಲಿ ಎಂದು (ಹೇಳಬೇಕಾಗಿದೆ).

وَٱلۡخَٰمِسَةُ أَنَّ لَعۡنَتَ ٱللَّهِ عَلَيۡهِ إِن كَانَ مِنَ ٱلۡكَٰذِبِينَ ٧

8. 'ಖಂಡಿತವಾಗಿಯೂ ಅವನು ಸುಳ್ಳು ನುಡಿಯುವವರಲ್ಲಿ ಸೇರಿದವನಾಗಿರುವನು' ಎಂದು ಅಲ್ಲಾಹುವಿನ ಹೆಸರಲ್ಲಿ ಆಕೆ ನಾಲ್ಕು ಬಾರಿ ಸಾಕ್ಷ್ಯವಹಿಸುವುದಾದರೆ ಅದು ಅವಳನ್ನು ಶಿಕ್ಷೆಯಿಂದ ವಿಮುಕ್ತಿಗೊಳಿಸುತ್ತದೆ.

وَيَدۡرَؤُاْ عَنۡهَا ٱلۡعَذَابَ أَن تَشۡهَدَ أَرۡبَعَ شَهَٰدَٰتِۭ بِٱللَّهِ إِنَّهُۥ لَمِنَ ٱلۡكَٰذِبِينَ ٨

9. ಐದನೆಯದಾಗಿ, ಅವನು ಸತ್ಯ ಹೇಳುವವರಲ್ಲಿ ಸೇರಿದವನಾಗಿದ್ದರೆ ಅಲ್ಲಾಹುವಿನ ಕ್ರೋಧವು ತನ್ನ ಮೇಲಿರಲಿ ಎಂದು (ಆಕೆ ಹೇಳಬೇಕಾಗಿದೆ).

وَٱلۡخَٰمِسَةَ أَنَّ غَضَبَ ٱللَّهِ عَلَيۡهَآ إِن كَانَ مِنَ ٱلصَّٰدِقِينَ ٩

وَلَوْلَا فَضْلُ ٱللَّهِ عَلَيْكُمْ وَرَحْمَتُهُۥ وَأَنَّ ٱللَّهَ تَوَّابٌ حَكِيمٌ ﴿١٠﴾

10. ನಿಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯವು ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಯುಕ್ತಿಪೂರ್ಣನೂ ಆಗಿರದಿರುತ್ತಿದ್ದರೆ (ನಿಮ್ಮ ಸ್ಥಿತಿ ಏನಾಗಿಬಿಡುತ್ತಿತ್ತು)?

إِنَّ ٱلَّذِينَ جَآءُو بِٱلْإِفْكِ عُصْبَةٌ مِّنكُمْ ۚ لَا تَحْسَبُوهُ شَرًّا لَّكُم ۖ بَلْ هُوَ خَيْرٌ لَّكُمْ ۚ لِكُلِّ ٱمْرِئٍ مِّنْهُم مَّا ٱكْتَسَبَ مِنَ ٱلْإِثْمِ ۚ وَٱلَّذِى تَوَلَّىٰ كِبْرَهُۥ مِنْهُمْ لَهُۥ عَذَابٌ عَظِيمٌ ﴿١١﴾

11. ಖಂಡಿತವಾಗಿಯೂ ಆ ಸುಳ್ಳು ಸುದ್ದಿಯನ್ನು[1] ತಂದವರು ನಿಮ್ಮಲ್ಲಿರುವ ಒಂದು ಗುಂಪಿನವರೇ ಆಗಿರುವರು. ಅದು ನಿಮಗೆ ಹಾನಿಕರವೆಂದು ನೀವು ಭಾವಿಸದಿರಿ. ಅಲ್ಲ, ಅದು ನಿಮಗೆ ಒಳಿತಾಗಿದೆ. ಅವರಲ್ಲಿ ಪ್ರತಿಯೊಬ್ಬನಿಗೂ ಅವನು ಸಂಪಾದಿಸಿದ ಪಾಪವಿರುವುದು. ಅವರ ಪೈಕಿ ಅದರ ನಾಯಕತ್ವ ವಹಿಸಿದವನಾರೋ ಅವನಿಗೆ ಘೋರವಾದ ಶಿಕ್ಷೆಯಿದೆ.[2]

لَّوْلَآ إِذْ سَمِعْتُمُوهُ ظَنَّ ٱلْمُؤْمِنُونَ وَٱلْمُؤْمِنَٰتُ بِأَنفُسِهِمْ خَيْرًا وَقَالُوا۟ هَٰذَآ إِفْكٌ مُّبِينٌ ﴿١٢﴾

12. ನೀವು ಅದನ್ನು ಕೇಳಿಸಿಕೊಂಡ ಸಂದರ್ಭದಲ್ಲಿ ಸತ್ಯವಿಶ್ವಾಸಿಗಳು ಮತ್ತು ಸತ್ಯವಿಶ್ವಾಸಿನಿಯರು ತಮ್ಮದೇ ಜನರ ಬಗ್ಗೆ ಸದ್ಭಾವನೆಯಿಟ್ಟು[3] 'ಇದು ಸ್ಪಷ್ಟವಾದ ಸುಳ್ಳಾರೋಪವಾಗಿದೆ' ಎಂದು ಯಾಕೆ ಹೇಳಲಿಲ್ಲ?

لَّوْلَا جَآءُو عَلَيْهِ بِأَرْبَعَةِ شُهَدَآءَ ۚ فَإِذْ لَمْ يَأْتُوا۟ بِٱلشُّهَدَآءِ فَأُو۟لَٰٓئِكَ عِندَ ٱللَّهِ هُمُ ٱلْكَٰذِبُونَ ﴿١٣﴾

13. ಅವರು ಅದಕ್ಕೆ ನಾಲ್ಕು ಸಾಕ್ಷಿಗಳನ್ನೇಕೆ ಕರೆತರಲಿಲ್ಲ? ಅವರು ಸಾಕ್ಷಿಗಳನ್ನು ಹಾಜರುಪಡಿಸದಿರುವ ಕಾರಣದಿಂದಾಗಿ ಅಲ್ಲಾಹುವಿನ ಬಳಿ ಮಿಥ್ಯವಾದಿಗಳು ಅವರೇ ಆಗಿರುವರು.

وَلَوْلَا فَضْلُ ٱللَّهِ عَلَيْكُمْ وَرَحْمَتُهُۥ فِى ٱلدُّنْيَا وَٱلْءَاخِرَةِ لَمَسَّكُمْ فِى مَآ أَفَضْتُمْ فِيهِ عَذَابٌ عَظِيمٌ ﴿١٤﴾

14. ಇಹಲೋಕದಲ್ಲೂ, ಪರಲೋಕದಲ್ಲೂ ನಿಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯವು ಇಲ್ಲದಿರುತ್ತಿದ್ದರೆ ನೀವು ಈ ಮಾತುಕತೆಯಲ್ಲಿ ತೊಡಗಿದ್ದ ಕಾರಣ ಘೋರ ಶಿಕ್ಷೆಯು ನಿಮ್ಮನ್ನು ಸ್ಪರ್ಶಿಸುತ್ತಿತ್ತು.

1 ಈ ಸೂಕ್ತಿಯಲ್ಲಿ ಪರಾಮರ್ಶಿಸಲಾಗಿರುವುದು ಪ್ರವಾದಿ(ﷺ) ರವರ ಪತ್ನಿ ಆಇಶಾ(رضي الله عنها)ರವರ ಮೇಲೆ ವ್ಯಭಿಚಾರಾರೋಪ ಹೊರಿಸಿದ ಕೆಲವರ ಕುರಿತಾಗಿದೆ.

2 ಈ ಅಪಪ್ರಚಾರದ ನಾಯಕತ್ವವನ್ನು ಕಪಟ ವಿಶ್ವಾಸಿಗಳ ನಾಯಕನಾದ ಅಬ್ದುಲ್ಲಾಹ್ ಇಬ್ನ್ ಉಬಯ್ಯ್ ವಹಿಸಿದ್ದನು.

3 ಯಾವುದೇ ಸತ್ಯವಿಶ್ವಾಸಿಗೂ ಇನ್ನೊಬ್ಬ ಸತ್ಯವಿಶ್ವಾಸಿಯ ಕುರಿತು ಸದ್ಭಾವನೆ ಮಾತ್ರವಿರಬೇಕಾಗಿದೆ.

15. ನೀವು ನಿಮ್ಮ ನಾಲಗೆಗಳಿಂದ ಅದನ್ನು ಎತ್ತಿ ಹೇಳುತ್ತಲೂ, ನಿಮಗೆ ಯಾವುದೇ ಅರಿವಿಲ್ಲದಿರುವುದನ್ನು ನಿಮ್ಮ ಬಾಯಿ ಮೂಲಕ ನೀವು ಉಚ್ಚರಿಸುತ್ತಲೂ ಇದ್ದ ಸಂದರ್ಭ. ನೀವು ಅದನ್ನೊಂದು ಕ್ಷುಲ್ಲಕ ವಿಷಯವಾಗಿ ಪರಿಗಣಿಸುತ್ತಿರುವಿರಿ. ಆದರೆ ಅದು ಅಲ್ಲಾಹುವಿನ ಬಳಿ ಗಂಭೀರ ವಿಷಯವಾಗಿದೆ.

إِذۡ تَلَقَّوۡنَهُۥ بِأَلۡسِنَتِكُمۡ وَتَقُولُونَ بِأَفۡوَاهِكُم مَّا لَيۡسَ لَكُم بِهِۦ عِلۡمٌ وَتَحۡسَبُونَهُۥ هَيِّنًا وَهُوَ عِندَ ٱللَّهِ عَظِيمٌ ١٥

16. ಅದನ್ನು ಕೇಳಿಸಿಕೊಂಡ ಸಂದರ್ಭದಲ್ಲಿ 'ಇದರ ಕುರಿತು ಮಾತನಾಡುವುದು ನಮಗೆ ಯುಕ್ತವಾದುದಲ್ಲ. (ಓ ಅಲ್ಲಾಹ್!) ನೀನು ಪರಮಪಾವನನು. ಇದೊಂದು ಮಹಾ ಆರೋಪವಾಗಿದೆ' ಎಂದು ನೀವೇಕೆ ಹೇಳಲಿಲ್ಲ?

وَلَوۡلَآ إِذۡ سَمِعۡتُمُوهُ قُلۡتُم مَّا يَكُونُ لَنَآ أَن نَّتَكَلَّمَ بِهَٰذَا سُبۡحَٰنَكَ هَٰذَا بُهۡتَٰنٌ عَظِيمٌ ١٦

17. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಇದರಂತಿರುವುದನ್ನು ನೀವೆಂದೂ ಪುನರಾವರ್ತಿಸದಿರುವ ಸಲುವಾಗಿ ಅಲ್ಲಾಹು ನಿಮಗೆ ಉಪದೇಶ ನೀಡುತ್ತಿರುವನು.

يَعِظُكُمُ ٱللَّهُ أَن تَعُودُواْ لِمِثۡلِهِۦٓ أَبَدًا إِن كُنتُم مُّؤۡمِنِينَ ١٧

18. ಅಲ್ಲಾಹು ನಿಮಗೆ ದೃಷ್ಟಾಂತಗಳನ್ನು ವಿವರಿಸಿ ಕೊಡುತ್ತಿರುವನು. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَيُبَيِّنُ ٱللَّهُ لَكُمُ ٱلۡأٓيَٰتِۚ وَٱللَّهُ عَلِيمٌ حَكِيمٌ ١٨

19. ಖಂಡಿತವಾಗಿಯೂ ಸತ್ಯವಿಶ್ವಾಸಿಗಳ ಮಧ್ಯೆ ನೀಚಕೃತ್ಯವು ಪ್ರಚಾರವಾಗುವುದನ್ನು ಇಷ್ಟಪಡುವವರು ಯಾರೋ ಅವರಿಗೆ ಇಹಲೋಕದಲ್ಲೂ ಪರಲೋಕದಲ್ಲೂ ಯಾತನಾಮಯ ಶಿಕ್ಷೆಯಿದೆ. ಅಲ್ಲಾಹು ಅರಿಯುವನು. ನೀವು ಅರಿಯಲಾರಿರಿ.

إِنَّ ٱلَّذِينَ يُحِبُّونَ أَن تَشِيعَ ٱلۡفَٰحِشَةُ فِي ٱلَّذِينَ ءَامَنُواْ لَهُمۡ عَذَابٌ أَلِيمٌ فِي ٱلدُّنۡيَا وَٱلۡأٓخِرَةِۚ وَٱللَّهُ يَعۡلَمُ وَأَنتُمۡ لَا تَعۡلَمُونَ ١٩

20. ನಿಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯವು ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹು ಅತ್ಯಧಿಕ ದಯೆಯುಳ್ಳವನೂ ಅಪಾರ ಕರುಣೆಯುಳ್ಳವನೂ ಆಗಿರದಿರುತ್ತಿದ್ದರೆ (ನಿಮ್ಮ ಸ್ಥಿತಿ ಏನಾಗಿರುತ್ತಿತ್ತು)?

وَلَوۡلَا فَضۡلُ ٱللَّهِ عَلَيۡكُمۡ وَرَحۡمَتُهُۥ وَأَنَّ ٱللَّهَ رَءُوفٞ رَّحِيمٞ ٢٠

21. ಓ ಸತ್ಯವಿಶ್ವಾಸಿಗಳೇ! ನೀವು ಸೈತಾನನ ಹೆಜ್ಜೆಗುರುತುಗಳನ್ನು ಹಿಂಬಾಲಿಸದಿರಿ. ಯಾರಾದರೂ ಸೈತಾನನ ಹೆಜ್ಜೆಗುರುತುಗಳನ್ನು ಹಿಂಬಾಲಿಸುವುದಾದರೆ ಖಂಡಿತವಾಗಿಯೂ ಅವನು (ಸೈತಾನನು) ನೀಚಕೃತ್ಯಗಳನ್ನು ಮತ್ತು ದುರಾಚಾರಗಳನ್ನು ಮಾಡಲು ಆದೇಶಿಸುವನು. ನಿಮ್ಮ ಮೇಲೆ ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯವು ಇಲ್ಲದಿರುತ್ತಿದ್ದರೆ ನಿಮ್ಮ ಪೈಕಿ ಯಾರೂ ಎಂದಿಗೂ ಪರಿಶುದ್ಧತೆಯನ್ನು ಪಡೆಯುತ್ತಿರಲಿಲ್ಲ. ಆದರೆ ಅಲ್ಲಾಹು ತಾನಿಚ್ಛಿಸುವವರಿಗೆ ಪರಿಶುದ್ಧತೆಯನ್ನು ನೀಡುವನು. ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

۞ يَـٰٓأَيُّهَا ٱلَّذِينَ ءَامَنُوا۟ لَا تَتَّبِعُوا۟ خُطُوَٰتِ ٱلشَّيْطَـٰنِ ۚ وَمَن يَتَّبِعْ خُطُوَٰتِ ٱلشَّيْطَـٰنِ فَإِنَّهُۥ يَأْمُرُ بِٱلْفَحْشَآءِ وَٱلْمُنكَرِ ۚ وَلَوْلَا فَضْلُ ٱللَّهِ عَلَيْكُمْ وَرَحْمَتُهُۥ مَا زَكَىٰ مِنكُم مِّنْ أَحَدٍ أَبَدًا وَلَـٰكِنَّ ٱللَّهَ يُزَكِّى مَن يَشَآءُ ۗ وَٱللَّهُ سَمِيعٌ عَلِيمٌ ﴿٢١﴾

22. ಕುಟುಂಬ ಸಂಬಂಧಿಕರಿಗೆ, ಬಡವರಿಗೆ ಮತ್ತು ಅಲ್ಲಾಹುವಿನ ಮಾರ್ಗದಲ್ಲಿ ಊರನ್ನು ತೊರೆದು ಬಂದವರಿಗೆ ಏನನ್ನೂ ಕೊಡಲಾರೆವೆಂದು ನಿಮ್ಮ ಪೈಕಿ ಶ್ರೇಷ್ಠತೆ ಮತ್ತು (ಆರ್ಥಿಕ) ಸಾಮರ್ಥ್ಯವಿರುವವರು ಶಪಥ ಮಾಡದಿರಲಿ. ಅವರು ಮನ್ನಿಸಲಿ ಮತ್ತು ಕ್ಷಮಿಸಲಿ.[1] ಅಲ್ಲಾಹು ನಿಮಗೆ ಕ್ಷಮೆ ನೀಡುವುದನ್ನು ನೀವು ಇಷ್ಟಪಡುವುದಿಲ್ಲವೇ?[2] ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَلَا يَأْتَلِ أُو۟لُوا۟ ٱلْفَضْلِ مِنكُمْ وَٱلسَّعَةِ أَن يُؤْتُوٓا۟ أُو۟لِى ٱلْقُرْبَىٰ وَٱلْمَسَـٰكِينَ وَٱلْمُهَـٰجِرِينَ فِى سَبِيلِ ٱللَّهِ ۖ وَلْيَعْفُوا۟ وَلْيَصْفَحُوٓا۟ ۗ أَلَا تُحِبُّونَ أَن يَغْفِرَ ٱللَّهُ لَكُمْ ۗ وَٱللَّهُ غَفُورٌ رَّحِيمٌ ﴿٢٢﴾

23. ಸುಶೀಲೆಯರು ಮತ್ತು (ನೀಚಕೃತ್ಯದ ಕುರಿತು) ಊಹಿಸಿಯೂ ಇರದ ಸತ್ಯವಿಶ್ವಾಸಿನಿಯರ ಮೇಲೆ ಸುಳ್ಳಾರೋಪ ಮಾಡುವವರು ಯಾರೋ ಖಂಡಿತವಾಗಿಯೂ ಅವರು

إِنَّ ٱلَّذِينَ يَرْمُونَ ٱلْمُحْصَنَـٰتِ ٱلْغَـٰفِلَـٰتِ ٱلْمُؤْمِنَـٰتِ لُعِنُوا۟ فِى ٱلدُّنْيَا وَٱلْـَٔاخِرَةِ وَلَهُمْ عَذَابٌ عَظِيمٌ ﴿٢٣﴾

1 ಆಇಶಾ(رضي الله عنها)ರವರ ತಂದೆ ಅಬೂಬಕ್ರ್ ಸಿದ್ದೀಕ್(رضي الله عنه)ರವರ ಸಂಬಂಧಿಗಳಲ್ಲಿ ಸೇರಿದ ಮಿಸ್ತಹ್ ಎಂಬವರೂ ಅಪಪ್ರಚಾರ ಮಾಡಿದವರಲ್ಲಿ ಸೇರಿದ್ದರು. ಅದು ಅಬೂಬಕ್ರ್ (رضي الله عنه)ರಿಗೆ ತಿಳಿದಾಗ ಇನ್ನು ಮುಂದೆ ಅವರಿಗೆ ಯಾವುದೇ ನೆರವನ್ನೂ ನೀಡುವುದಿಲ್ಲವೆಂದು ಶಪಥಗೈದರು. ಇಂತಹ ಕಟುವಾದ ಕ್ರಮಗಳು ಸರಿಯಲ್ಲವೆಂದು ಅಲ್ಲಾಹು ಈ ಸೂಕ್ತಿಯ ಮೂಲಕ ಎಚ್ಚರಿಸುತ್ತಾನೆ.

2 ಅಲ್ಲಾಹು ನಮ್ಮನ್ನು ಕ್ಷಮಿಸಬೇಕೆಂದು ನಾವು ಬಯಸುವುದಾದರೆ ನಮ್ಮ ಸಹಜೀವಿಗಳಿಗೆ ನಾವು ಕ್ಷಮಿಸಬೇಕಾಗಿದೆ.

ಇಹಲೋಕದಲ್ಲೂ ಪರಲೋಕದಲ್ಲೂ ಶಪಿಸಲ್ಪಟ್ಟಿರುವವರು. ಅವರಿಗೆ ಭೀಕರವಾದ ಶಿಕ್ಷೆಯಿರುವುದು.

يَوۡمَ تَشۡهَدُ عَلَيۡهِمۡ أَلۡسِنَتُهُمۡ وَأَيۡدِيهِمۡ
وَأَرۡجُلُهُم بِمَا كَانُواْ يَعۡمَلُونَ ٢٤

**24.** ಅವರು ಮಾಡುತ್ತಿರುವುದರ ಕುರಿತು ಅವರ ನಾಲಗೆಗಳು, ಕೈಗಳು ಮತ್ತು ಕಾಲುಗಳು ಅವರಿಗೆ ವಿರುದ್ಧವಾಗಿ ಸಾಕ್ಷಿಹೇಳುವ ದಿನದಂದು (ಆ ಶಿಕ್ಷೆಯಿರುವುದು).

يَوۡمَئِذٖ يُوَفِّيهِمُ ٱللَّهُ دِينَهُمُ ٱلۡحَقَّ وَيَعۡلَمُونَ
أَنَّ ٱللَّهَ هُوَ ٱلۡحَقُّ ٱلۡمُبِينُ ٢٥

**25.** ಅಂದು ಅಲ್ಲಾಹು ಅವರಿಗೆ ಅವರ ನಿಜವಾದ ಪ್ರತಿಫಲವನ್ನು ಪೂರ್ಣವಾಗಿ ನೀಡುವನು. ಪ್ರತ್ಯಕ್ಷವಾಗಿರುವ ಪರಮಸತ್ಯ ಅಲ್ಲಾಹುವಾಗಿರುವನು ಎಂದು ಅವರು ಅರಿತುಕೊಳ್ಳುವರು.

ٱلۡخَبِيثَٰتُ لِلۡخَبِيثِينَ وَٱلۡخَبِيثُونَ
لِلۡخَبِيثَٰتِۖ وَٱلطَّيِّبَٰتُ لِلطَّيِّبِينَ
وَٱلطَّيِّبُونَ لِلطَّيِّبَٰتِۚ أُوْلَٰٓئِكَ مُبَرَّءُونَ
مِمَّا يَقُولُونَۖ لَهُم مَّغۡفِرَةٞ وَرِزۡقٞ كَرِيمٞ ٢٦

**26.** ಕೆಟ್ಟ ಸ್ತ್ರೀಯರು ಕೆಟ್ಟ ಪುರುಷರಿಗೆ ಮತ್ತು ಕೆಟ್ಟ ಪುರುಷರು ಕೆಟ್ಟ ಸ್ತ್ರೀಯರಿಗೆ ಆಗಿರುವರು. ಉತ್ತಮ ಸ್ತ್ರೀಯರು ಉತ್ತಮ ಪುರುಷರಿಗೆ ಮತ್ತು ಉತ್ತಮ ಪುರುಷರು ಉತ್ತಮ ಸ್ತ್ರೀಯರಿಗೆ ಆಗಿರುವರು. ಇವರು (ಕೆಟ್ಟವರು) ಹೇಳುತ್ತಿರುವುದರಿಂದೆಲ್ಲ ಅವರು (ಉತ್ತಮರು) ನಿರಪರಾಧಿಗಳಾಗಿರುವರು. ಅವರಿಗೆ ಪಾಪಮುಕ್ತಿಯೂ ಗೌರವಾರ್ಹವಾದ ಅನ್ನಾಧಾರವೂ ಇರುವುದು.

يَٰٓأَيُّهَا ٱلَّذِينَ ءَامَنُواْ لَا تَدۡخُلُواْ بُيُوتًا
غَيۡرَ بُيُوتِكُمۡ حَتَّىٰ تَسۡتَأۡنِسُواْ وَتُسَلِّمُواْ
عَلَىٰٓ أَهۡلِهَاۚ ذَٰلِكُمۡ خَيۡرٞ لَّكُمۡ لَعَلَّكُمۡ
تَذَكَّرُونَ ٢٧

**27.** ಓ ಸತ್ಯವಿಶ್ವಾಸಿಗಳೇ! ನಿಮ್ಮದಲ್ಲದ ಮನೆಗಳನ್ನು, ಆ ಮನೆಯವರೊಂದಿಗೆ ಅನುಮತಿ ಕೇಳಿ ಅವರಿಗೆ ಸಲಾಮ್ ಹೇಳುವ ತನಕ ನೀವು ಪ್ರವೇಶಿಸದಿರಿ. ಅದು ನಿಮಗೆ ಉತ್ತಮವಾಗಿದೆ.[1] ನೀವು ಚಿಂತಿಸಿ ಗ್ರಹಿಸುವವರಾಗಲೂ ಬಹುದು.

1 ಅನ್ಯರ ಖಾಸಗಿ ಅಥವಾ ಕೌಟುಂಬಿಕ ಜೀವನಗಳಲ್ಲಿ ನಾವು ಅನುಚಿತವಾಗಿ ಮಧ್ಯಪ್ರವೇಶಿಸದಿರುವುದು, ಅವರನ್ನು ಸಂಪರ್ಕಿಸುವಾಗ ಸಾಧ್ಯವಾದಷ್ಟು ಗೌರವದಿಂದ ವರ್ತಿಸುವುದು ವ್ಯಕ್ತಿ ಮತ್ತು ಸಮಾಜಕ್ಕೆ ಸಮಾನವಾದ ಹಿತವನ್ನು ನೀಡುತ್ತದೆ.

فَإِن لَّمۡ تَجِدُواْ فِيهَآ أَحَدٗا فَلَا تَدۡخُلُوهَا حَتَّىٰ يُؤۡذَنَ لَكُمۡۖ وَإِن قِيلَ لَكُمُ ٱرۡجِعُواْ فَٱرۡجِعُواْۖ هُوَ أَزۡكَىٰ لَكُمۡۚ وَٱللَّهُ بِمَا تَعۡمَلُونَ عَلِيمٞ ٢٨

**28.** ಅಲ್ಲಿ ನೀವು ಯಾರನ್ನೂ ಕಾಣದೇ ಹೋದರೆ ನಿಮಗೆ ಅನುಮತಿ ಸಿಗುವ ತನಕ ನೀವು ಅವುಗಳನ್ನು ಪ್ರವೇಶಿಸದಿರಿ. 'ಮರಳಿ ಹೋಗಿರಿ' ಎಂದು ನಿಮ್ಮೊಂದಿಗೆ ಹೇಳಲಾದರೆ ಮರಳಿಹೋಗಿರಿ. ಅದು ನಿಮಗೆ ಅತ್ಯಂತ ಪರಿಶುದ್ಧವಾದುದಾಗಿದೆ. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಅರಿವುಳ್ಳವನಾಗಿರುವನು.

لَّيۡسَ عَلَيۡكُمۡ جُنَاحٌ أَن تَدۡخُلُواْ بُيُوتًا غَيۡرَ مَسۡكُونَةٖ فِيهَا مَتَٰعٞ لَّكُمۡۚ وَٱللَّهُ يَعۡلَمُ مَا تُبۡدُونَ وَمَا تَكۡتُمُونَ ٢٩

**29.** ಜನವಾಸವಿಲ್ಲದುದೂ, ನಿಮಗೆ ಏನಾದರೂ ಪ್ರಯೋಜನವಿರುವಂತಹುದೂ ಆದ ಮನೆಗಳನ್ನು ಪ್ರವೇಶಿಸುವುದರಲ್ಲಿ ನಿಮಗೆ ದೋಷವಿಲ್ಲ.[1] ನೀವು ಬಹಿರಂಗಪಡಿಸುವುದನ್ನೂ, ಬಚ್ಚಿಡುವುದನ್ನೂ ಅಲ್ಲಾಹು ಅರಿಯುವನು.

قُل لِّلۡمُؤۡمِنِينَ يَغُضُّواْ مِنۡ أَبۡصَٰرِهِمۡ وَيَحۡفَظُواْ فُرُوجَهُمۡۚ ذَٰلِكَ أَزۡكَىٰ لَهُمۡۚ إِنَّ ٱللَّهَ خَبِيرُۢ بِمَا يَصۡنَعُونَ ٣٠

**30.** (ಓ ಪ್ರವಾದಿಯವರೇ!) ಸತ್ಯವಿಶ್ವಾಸಿಗಳೊಂದಿಗೆ ಅವರು ತಮ್ಮ ದೃಷ್ಟಿಗಳನ್ನು ತಗ್ಗಿಸುವಂತೆ ಮತ್ತು ತಮ್ಮ ಗುಪ್ತಾಂಗಗಳನ್ನು ಕಾಪಾಡಿಕೊಳ್ಳುವಂತೆ ಹೇಳಿರಿ. ಅದು ಅವರಿಗೆ ಅತ್ಯಂತ ಪರಿಶುದ್ಧವಾದುದಾಗಿದೆ.[2] ಖಂಡಿತವಾಗಿಯೂ ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَقُل لِّلۡمُؤۡمِنَٰتِ يَغۡضُضۡنَ مِنۡ أَبۡصَٰرِهِنَّ وَيَحۡفَظۡنَ فُرُوجَهُنَّ وَلَا يُبۡدِينَ زِينَتَهُنَّ إِلَّا مَا ظَهَرَ مِنۡهَاۖ وَلۡيَضۡرِبۡنَ بِخُمُرِهِنَّ عَلَىٰ جُيُوبِهِنَّۖ وَلَا يُبۡدِينَ زِينَتَهُنَّ إِلَّا

**31.** ಸತ್ಯವಿಶ್ವಾಸಿನಿಯರೊಂದಿಗೆ ಅವರು ತಮ್ಮ ದೃಷ್ಟಿಗಳನ್ನು ತಗ್ಗಿಸುವಂತೆ ಮತ್ತು ತಮ್ಮ ಗುಪ್ತಾಂಗಗಳನ್ನು ಕಾಪಾಡಿಕೊಳ್ಳುವಂತೆ ಹೇಳಿರಿ. ತಮ್ಮ ಸೌಂದರ್ಯದಿಂದ ಪ್ರಕಟವಾದುದರ ಹೊರತು[3] ಬೇರಾವುದನ್ನೂ

---

1 ಸಾರ್ವಜನಿಕ ಬಳಕೆಗಾಗಿ ನಿರ್ಮಿಸಲಾದ ಕಟ್ಟಡಗಳಿಗೆ ತತ್ಸಂಬಂಧಿ ಅಗತ್ಯಗಳಿಗಾಗಿ ಪ್ರವೇಶಿಸಲು ವಿಶೇಷ ಅನುಮತಿಯ ಅಗತ್ಯವಿಲ್ಲವೆಂದು ಇದರಿಂದ ಗ್ರಹಿಸಬಹುದು. ಜನವಾಸವಿರುವ ಯಾವುದೇ ಮನೆಯನ್ನು ಅನುಮತಿ ವಿನಾಃ ಪ್ರವೇಶಿಸಬಾರದು.

2 ಪರಿಶುದ್ಧ ಜೀವನವನ್ನು ಕಾಪಾಡಿಕೊಂಡು ಬರಲು ಅನ್ಯ ಸ್ತ್ರೀಯರೆಡೆಗೆ ನೋಡದಿರುವುದು ಮತ್ತು ಅನೈತಿಕ ಸಂಬಂಧ ಹೊಂದದಿರುವುದು ಅನಿವಾರ್ಯವಾಗಿದೆ.

3 ಪ್ರಕಟವಾದುದು ಎಂಬುದರ ಅರ್ಥ ಮುಖ ಮತ್ತು ಮುಂಗೈಗಳಾಗಿವೆಯೆಂದು ವಿದ್ವಾಂಸರ ಪೈಕಿ ಒಂದು ಗುಂಪು

لِبُعُولَتِهِنَّ أَوْ ءَابَآئِهِنَّ أَوْ ءَابَآءِ بُعُولَتِهِنَّ
أَوْ أَبْنَآئِهِنَّ أَوْ أَبْنَآءِ بُعُولَتِهِنَّ أَوْ إِخْوَٰنِهِنَّ
أَوْ بَنِىٓ إِخْوَٰنِهِنَّ أَوْ بَنِىٓ أَخَوَٰتِهِنَّ أَوْ
نِسَآئِهِنَّ أَوْ مَا مَلَكَتْ أَيْمَٰنُهُنَّ أَوِ
ٱلتَّٰبِعِينَ غَيْرِ أُو۟لِى ٱلْإِرْبَةِ مِنَ ٱلرِّجَالِ
أَوِ ٱلطِّفْلِ ٱلَّذِينَ لَمْ يَظْهَرُوا۟ عَلَىٰ عَوْرَٰتِ
ٱلنِّسَآءِ ۖ وَلَا يَضْرِبْنَ بِأَرْجُلِهِنَّ لِيُعْلَمَ مَا
يُخْفِينَ مِن زِينَتِهِنَّ ۚ وَتُوبُوٓا۟ إِلَى ٱللَّهِ جَمِيعًا
أَيُّهَ ٱلْمُؤْمِنُونَ لَعَلَّكُمْ تُفْلِحُونَ ﴿٣١﴾

ಅವರು ಪ್ರದರ್ಶಿಸದಿರಲಿ. ಅವರು ತಮ್ಮ ಶಿರವಸ್ತ್ರಗಳನ್ನು ತಮ್ಮ ಎದೆಗಳ ಮೇಲೆ ಎಳೆದುಕೊಳ್ಳಲಿ. ಅವರ ಪತಿಯಂದಿರು, ಅವರ ತಂದೆಯಂದಿರು, ಅವರ ಪತಿಯ ತಂದೆಯಂದಿರು, ಅವರ ಪುತ್ರರು, ಅವರ ಪತಿಯ ಪುತ್ರರು, ಅವರ ಸಹೋದರರು, ಅವರ ಸಹೋದರ ಪುತ್ರರು, ಅವರ ಸಹೋದರಿ ಪುತ್ರರು, ಮುಸ್ಲಿಮ್ ಸ್ತ್ರೀಯರು, ಅವರ ಬಲಗೈಗಳು ಸ್ವಾಧೀನದಲ್ಲಿಟ್ಟುಕೊಂಡವರು (ಗುಲಾಮರು), ಲೈಂಗಿಕಾಸಕ್ತಿಯುಳ್ಳವರಲ್ಲದ ಪುರುಷ ಸೇವಕರು, ಸ್ತ್ರೀಯರ ಖಾಸಗಿ ಭಾಗಗಳ ಬಗ್ಗೆ ಪರಿವೆಯಿರದ ಮಕ್ಕಳು ಮುಂತಾದವರ ಹೊರತು ಇನ್ನಾರಿಗೂ ಅವರು ತಮ್ಮ ಸೌಂದರ್ಯವನ್ನು ಪ್ರದರ್ಶಿಸದಿರಲಿ. ತಾವು ಮರೆಮಾಚುವ ತಮ್ಮ ಸೌಂದರ್ಯವನ್ನು ಅರಿಯುವಂತೆ ಮಾಡುವ ಸಲುವಾಗಿ ಕಾಲನ್ನು ನೆಲಕ್ಕೆ ಬಡಿಯದಿರಲಿ.(1) ಓ ಸತ್ಯವಿಶ್ವಾಸಿಗಳೇ! ನೀವೆಲ್ಲರೂ ಅಲ್ಲಾಹುವಿನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ನೀವು ಯಶಸ್ಸುಗಳಿಸಲೂಬಹುದು.

وَأَنكِحُوا۟ ٱلْأَيَٰمَىٰ مِنكُمْ وَٱلصَّٰلِحِينَ
مِنْ عِبَادِكُمْ وَإِمَآئِكُمْ ۚ إِن يَكُونُوا۟
فُقَرَآءَ يُغْنِهِمُ ٱللَّهُ مِن فَضْلِهِۦ ۗ وَٱللَّهُ
وَٰسِعٌ عَلِيمٌ ﴿٣٢﴾

**32.** ನಿಮ್ಮಲ್ಲಿರುವ ಅವಿವಾಹಿತರಿಗೆ(2) ಮತ್ತು ನಿಮ್ಮ ಗುಲಾಮರ ಪೈಕಿ ಹಾಗೂ ಗುಲಾಮಸ್ತ್ರೀಯರ ಪೈಕಿ ಸಜ್ಜನರಾಗಿರುವವರಿಗೆ ನೀವು ವಿವಾಹ ಮಾಡಿಸಿರಿ. ಅವರು ಬಡವರಾಗಿದ್ದರೆ ಅಲ್ಲಾಹು ತನ್ನ ಅನುಗ್ರಹದಿಂದ ಅವರಿಗೆ ಐಶ್ವರ್ಯವನ್ನು ನೀಡುವನು. ಅಲ್ಲಾಹು ವಿಶಾಲ

---

ಅಭಿಪ್ರಾಯಪಟ್ಟಿದೆಯಾದರೂ ಅನ್ಯಪುರುಷರ ಮುಂದೆ ಶರೀರವನ್ನು ಸಂಪೂರ್ಣವಾಗಿ ಮುಚ್ಚುವುದು ಸ್ತ್ರೀಯರಿಗೆ ಕಡ್ಡಾಯವಾಗಿದೆ ಎಂಬುದು ಪ್ರಬಲ ಅಭಿಪ್ರಾಯವಾಗಿದೆ.

1 ಗೆಜ್ಜೆ ಸಪ್ಪಳ ಕೇಳಿಸುವುದಕ್ಕಾಗಿ ಕಾಲನ್ನು ನೆಲಕ್ಕೆ ಬಡಿದು ನಡೆಯುವುದು ಮತ್ತು ಜನರ ಗಮನ ಸೆಳೆಯಲು ಅಥವಾ ಸೌಂದರ್ಯ ಪ್ರದರ್ಶನಕ್ಕಾಗಿ ಸ್ತ್ರೀಯರು ಬಳಸುವ ಯಾವುದೇ ತಂತ್ರಗಳೂ ನಿಷಿದ್ಧವಾಗಿದೆಯೆಂದು ಇದರಿಂದ ಗ್ರಹಿಸಬಹುದು.

2 ವಿವಾಹಿತರಲ್ಲದ ಸ್ತ್ರೀ–ಪುರುಷರು ಮತ್ತು ವಿವಾಹ ಮುಕ್ತರಾದ ಸ್ತ್ರೀ–ಪುರುಷರು 'ಅಯಾಮಾ' ಎಂಬ ಪದದ ವ್ಯಾಪ್ತಿಯಲ್ಲಿ ಬರುತ್ತಾರೆ.

ಸಾಮರ್ಥ್ಯವುಳ್ಳನೂ, ಸರ್ವಜ್ಞನೂ ಆಗಿರುವನು.

وَلْيَسْتَعْفِفِ ٱلَّذِينَ لَا يَجِدُونَ نِكَاحًا حَتَّىٰ يُغْنِيَهُمُ ٱللَّهُ مِن فَضْلِهِۦ ۗ وَٱلَّذِينَ يَبْتَغُونَ ٱلْكِتَـٰبَ مِمَّا مَلَكَتْ أَيْمَـٰنُكُمْ فَكَاتِبُوهُمْ إِنْ عَلِمْتُمْ فِيهِمْ خَيْرًا ۖ وَءَاتُوهُم مِّن مَّالِ ٱللَّهِ ٱلَّذِىٓ ءَاتَىٰكُمْ ۚ وَلَا تُكْرِهُوا۟ فَتَيَـٰتِكُمْ عَلَى ٱلْبِغَآءِ إِنْ أَرَدْنَ تَحَصُّنًا لِّتَبْتَغُوا۟ عَرَضَ ٱلْحَيَوٰةِ ٱلدُّنْيَا ۚ وَمَن يُكْرِههُّنَّ فَإِنَّ ٱللَّهَ مِنۢ بَعْدِ إِكْرَٰهِهِنَّ غَفُورٌ رَّحِيمٌ ﴿٣٣﴾

33. ವಿವಾಹವಾಗಲು ಸಾಮರ್ಥ್ಯವಿಲ್ಲದವರು, ಅವರಿಗೆ ಅಲ್ಲಾಹು ತನ್ನ ಅನುಗ್ರಹದಿಂದ ಸ್ವಾವಲಂಬನೆಯನ್ನು ಒದಗಿಸುವ ತನಕ ಚಾರಿತ್ರ್ಯವನ್ನು ಕಾಪಾಡಿಕೊಳ್ಳಲಿ. ನಿಮ್ಮ ಬಲಗೈಗಳು ಸ್ವಾಧೀನದಲ್ಲಿಟ್ಟುಕೊಂಡಿರುವವರ (ಗುಲಾಮರ) ಪೈಕಿ ವಿಮೋಚನಾ ಕರಾರು ಮಾಡಲು ಬಯಸುವರಾರೋ ಅವರಲ್ಲಿ ಒಳಿತಿದೆಯೆಂದು ನೀವು ಅರಿತಿರುವುದಾದರೆ ಅವರೊಂದಿಗೆ ನೀವು ವಿಮೋಚನಾ ಕರಾರು ಮಾಡಿರಿ.[1] ಅಲ್ಲಾಹು ನಿಮಗೆ ನೀಡಿದ ಸಂಪತ್ತಿನಿಂದ ಅವರಿಗೂ ನೀಡಿ ಸಹಾಯ ಮಾಡಿರಿ. [2] ನಿಮ್ಮ ಗುಲಾಮ ಸ್ತ್ರೀಯರು ಸುಶೀಲೆಯರಾಗಿ ಬದುಕಲು ಬಯಸುವುದಾದರೆ ಐಹಿಕ ಲಾಭಗಳನ್ನು

1 ಪ್ರವಾದಿ(ﷺ)ರವರು ಧರ್ಮಪ್ರಚಾರ ಮಾಡುತ್ತಿದ್ದುದು ಗುಲಾಮ ಪದ್ಧತಿಯು ಅಸ್ತಿತ್ವದಲ್ಲಿದ್ದಂತಹ ಒಂದು ಸಮಾಜದಲ್ಲಾಗಿತ್ತು. ಗುಲಾಮ ಪದ್ಧತಿಯು ಅಲ್ಲಿನ ಸಾಮಾಜಿಕ–ಆರ್ಥಿಕ ಜೀವನದ ಒಂದು ಅವಿಭಾಜ್ಯ ಅಂಗವಾಗಿತ್ತು. ಭಾರೀ ಬೆಲೆಯನ್ನು ತೆತ್ತು ಗುಲಾಮರನ್ನು ಖರೀದಿಸಿದ ಮಾಲಕರೊಂದಿಗೆ ಯಾವುದೇ ಪರಿಹಾರ ಧನವೂ ಇಲ್ಲದೆ ಅವರನ್ನು ವಿಮೋಚನೆಗೊಳಿಸಲು ಆದೇಶಿಸುವುದು ನ್ಯಾಯಸಮ್ಮತವಾಗಲಾರದು. ಯಾಕೆಂದರೆ ಗುಲಾಮರ ಮೂಲಕವಲ್ಲದೆ ಸಂಪಾದನೆಯ ಬೇರಾವುದೇ ಮಾರ್ಗವೂ ಇಲ್ಲದ ಧನಿಕರಲ್ಲದ ಮಾಲಕರೂ ಇದ್ದರು. ಆದ್ದರಿಂದ ನಿಶ್ಶರ್ತವಾಗಿ ಗುಲಾಮರನ್ನು ವಿಮೋಚನೆಗೊಳಿಸುವುದು ಮಹೋನ್ನತವಾದ ಪುಣ್ಯಕರ್ಮವೆಂದು ಘೋಷಿಸಿ, ಅದು ಸಾಧ್ಯವಾಗದವರಿಗೆ ಗುಲಾಮರೊಂದಿಗೆ ವಿಮೋಚನಾ ಒಪ್ಪಂದವನ್ನು ಮಾಡಿಕೊಳ್ಳುವಂತೆ ಇಸ್ಲಾಮ್ ಆಹ್ವಾನ ನೀಡಿತು. ಒಂದು ನಿಶ್ಚಿತ ಮೊತ್ತವನ್ನು ಒಮ್ಮೆಲೇ ಅಥವಾ ಹಂತ ಹಂತವಾಗಿ ಮಾಲಕನಿಗೆ ಪಾವತಿಸುವುದು ಎಂಬ ನಿಬಂಧನೆಯ ಮೇರೆಗೆ ಗುಲಾಮನು ಯಜಮಾನನೊಂದಿಗೆ ಒಪ್ಪಂದವನ್ನು ಮಾಡುತ್ತಾನೆ. ಅದರೊಂದಿಗೆ ಗುಲಾಮನಿಗೆ ಆರ್ಥಿಕ ಸ್ವಾತಂತ್ರ್ಯವು ಸಿಗುತ್ತದೆ. ತಾನು ಕಷ್ಟಪಟ್ಟು ಸಂಪಾದಿಸಿದ ಆದಾಯದಲ್ಲಿ ಸ್ವಲ್ಪ ಉಳಿಕೆ ಮಾಡಿ ನಿಶ್ಚಿತ ಮೊತ್ತವನ್ನು ಪಾವತಿಸುವುದರ ಮೂಲಕ ಅವನು ಸರ್ವ ರೀತಿಯಲ್ಲೂ ಸ್ವತಂತ್ರನಾಗುವನು. ವಿಮೋಚನೆಯು ಗುಲಾಮನ ಪಾಲಿಗೆ ಹಿತಕರವಲ್ಲವೆಂದು ಯಜಮಾನನಿಗೆ ದೃಢ ನಂಬಿಕೆಯಿದ್ದರೆ ಒಪ್ಪಂದ ಮಾಡಿಕೊಳ್ಳುವಂತೆ ಗುಲಾಮನು ಬೇಡಿಕೆಯಿಟ್ಟರೂ ಅದನ್ನು ತಿರಸ್ಕರಿಸುವ ಹಕ್ಕು ಯಜಮಾನನಿಗೆ ಇದೆಯೆಂದು ಈ ಸೂಕ್ತವು ಸೂಚಿಸುತ್ತದೆ. ಗುಲಾಮನು ನಿತ್ಯರೋಗಿ ಅಥವಾ ವಯೋವೃದ್ಧನಾಗಿದ್ದರೆ ಸಂರಕ್ಷಣೆಯ ಭರವಸೆಯಿಲ್ಲದ ಸ್ವಾತಂತ್ರ್ಯಕ್ಕಿಂತಲೂ ಗುಲಾಮಗಿರಿಯೇ ಲೇಸಾಗಿದೆ.

2 ವಿಮೋಚನಾ ಒಪ್ಪಂದ ಮಾಡಿಕೊಂಡ ಗುಲಾಮರಿಗೆ ಆರ್ಥಿಕ ನೆರವನ್ನು ನೀಡುವುದು ಮತ್ತು ಗುಲಾಮರನ್ನು ವಿಮೋಚನೆಗೊಳಿಸಲು ಸನ್ನದ್ಧರಾಗದ ಯಜಮಾನರಿಂದ ಗುಲಾಮರನ್ನು ಖರೀದಿಸಿ ವಿಮೋಚನೆಗೊಳಿಸುವುದು ಮಹತ್ತರವಾದ ಪುಣ್ಯಕರ್ಮವಾಗಿದೆ. ಇದಕ್ಕಾಗಿ ಝಕಾತ್‌ನಿಂದ ಕೂಡ ಒಂದು ಪಾಲನ್ನು ವಿನಿಯೋಗಿಸುವಂತೆ ಕುರ್‌ಆನ್(9/60) ಆದೇಶಿಸುತ್ತದೆ.

ಆಶಿಸಿ ಅವರನ್ನು ವೇಶ್ಯಾವೃತ್ತಿಗೆ ಬಲವಂತಪಡಿಸದಿರಿ.[1] ಯಾರಾದರೂ ಅವರನ್ನು ಬಲವಂತಪಡಿಸುವುದಾದರೆ ಅವರು (ಗುಲಾಮಸ್ತ್ರೀಯರು) ಬಲವಂತದಿಂದಾಗಿ ತಪ್ಪೆಸಗಿದ ನಂತರ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

34. ಖಂಡಿತವಾಗಿಯೂ ನಾವು ನಿಮಗೆ ಸ್ಪಷ್ಟವಾದ ದೃಷ್ಟಾಂತಗಳನ್ನು ಅವತೀರ್ಣಗೊಳಿಸಿರುವೆವು. ನಿಮಗಿಂತ ಮುಂಚೆ ಗತಿಸಿದವರ (ಚರಿತ್ರೆಗಳಿಂದ) ಉದಾಹರಣೆಗಳನ್ನು ಮತ್ತು ಭಯಭಕ್ತಿ ಪಾಲಿಸುವವರಿಗೆ ಉಪದೇಶವನ್ನು (ಅವತೀರ್ಣಗೊಳಿಸಿರುವೆವು).

وَلَقَدْ أَنزَلْنَآ إِلَيْكُمْ ءَايَٰتٍ مُّبَيِّنَٰتٍ وَمَثَلًا مِّنَ ٱلَّذِينَ خَلَوْا۟ مِن قَبْلِكُمْ وَمَوْعِظَةً لِّلْمُتَّقِينَ ﴿٣٤﴾

35. ಅಲ್ಲಾಹು ಆಕಾಶಗಳ ಮತ್ತು ಭೂಮಿಯ ಪ್ರಕಾಶವಾಗಿರುವನು. ಅವನ ಪ್ರಕಾಶದ ಉಪಮೆಯು (ಗೋಡೆಯಲ್ಲಿ ದೀಪವನ್ನಿಡಲು ನಿರ್ಮಿಸಲಾದ) ಒಂದು ಮಾಡದಂತಿದೆ.[2] ಅದರಲ್ಲೊಂದು ದೀಪವಿದೆ. ದೀಪವು ಒಂದು ಗಾಜಿನ ಒಳಗಿದೆ. ಗಾಜು ಜ್ವಲಿಸುವ ಒಂದು ನಕ್ಷತ್ರದಂತಿದೆ. ಪೂರ್ವ ದಿಕ್ಕಿನದ್ದಾಗಲಿ ಅಥವಾ ಪಶ್ಚಿಮ ದಿಕ್ಕಿನದ್ದಾಗಲಿ ಅಲ್ಲದ ಅನುಗ್ರಹೀತವಾದ ಓಲಿವ್ ಮರದಿಂದ[3] ಅದಕ್ಕೆ (ದೀಪಕ್ಕೆ) ಇಂಧನವನ್ನು ಹೊಯ್ಯಲಾಗುತ್ತಿದೆ. ಅದರ ಎಣ್ಣೆಯನ್ನು

۞ ٱللَّهُ نُورُ ٱلسَّمَٰوَٰتِ وَٱلْأَرْضِ ۚ مَثَلُ نُورِهِۦ كَمِشْكَوٰةٍ فِيهَا مِصْبَاحٌ ۖ ٱلْمِصْبَاحُ فِى زُجَاجَةٍ ۖ ٱلزُّجَاجَةُ كَأَنَّهَا كَوْكَبٌ دُرِّىٌّ يُوقَدُ مِن شَجَرَةٍ مُّبَٰرَكَةٍ زَيْتُونَةٍ لَّا شَرْقِيَّةٍ وَلَا غَرْبِيَّةٍ يَكَادُ زَيْتُهَا يُضِىٓءُ وَلَوْ لَمْ تَمْسَسْهُ نَارٌ ۚ نُّورٌ عَلَىٰ نُورٍ ۗ يَهْدِى ٱللَّهُ لِنُورِهِۦ مَن يَشَآءُ ۚ وَيَضْرِبُ ٱللَّهُ ٱلْأَمْثَٰلَ لِلنَّاسِ ۗ وَٱللَّهُ بِكُلِّ شَىْءٍ عَلِيمٌ ﴿٣٥﴾

1 ಗುಲಾಮ ಸ್ತ್ರೀಯರನ್ನು ವೇಶ್ಯಾವಾಟಿಕೆ ಮಾಡಲು ಬಲವಂತಪಡಿಸಿ ತನ್ಮೂಲಕ ಹಣ ಸಂಪಾದಿಸುವುದು ಅತಿ ನೀಚ ಕೃತ್ಯವಾಗಿದೆ. ಕೆಡುಕನ್ನು ಮಾಡಲು ನಿರ್ಬಂಧಿತರಾಗುವ ಗುಲಾಮ ಸ್ತ್ರೀಯರಿಗೆ –ಅವರ ಹೃದಯವು ಪಾಪರಹಿತವಾಗಿದ್ದರೆ– ಅಲ್ಲಾಹು ಖಂಡಿತವಾಗಿಯೂ ಕ್ಷಮಿಸುವನು.

2 ದೀಪವನ್ನಿಡಲು ಗೋಡೆಯಲ್ಲಿ ಅರ್ಧವೃತ್ತಾಕಾರದಲ್ಲಿ ಕೊರೆದು ಮಾಡುವ ರಂಧ್ರಕ್ಕೆ ಮಿಶ್ಕಾತ್ ಎನ್ನಲಾಗುತ್ತದೆ. ದೀಪವು ಗಾಳಿಗೆ ನಂದದಿರಲು ಮತ್ತು ಬೆಳಕು ಒಂದು ನಿಶ್ಚಿತ ದಿಕ್ಕಿಗೆ ಕೇಂದ್ರೀಕೃತವಾಗಲು ಅದು ಸಹಕರಿಸುತ್ತದೆ.

3 ಬೆಟ್ಟದ ಪೂರ್ವ ಭಾಗದಲ್ಲಿರುವ ಮರಕ್ಕೆ ಮಧ್ಯಾಹ್ನ ನಂತರ ಸೂರ್ಯನು ಬೆಟ್ಟದ ಪಶ್ಚಿಮ ಭಾಗಕ್ಕೆ ಮರೆಯಾಗುವಾಗ ಬಿಸಿಲು ಸಿಗುವುದಿಲ್ಲ. ಬೆಟ್ಟದ ಪಶ್ಚಿಮ ಭಾಗದಲ್ಲಿರುವ ಮರಕ್ಕೆ ಪೂರ್ವಾಹ್ನ ಅನೇಕ ತಾಸುಗಳವರೆಗೆ ಬಿಸಿಲು ಸಿಗುವುದಿಲ್ಲ. ಇವೆರಡೂ ಅಲ್ಲದ ಅಂದರೆ ಹಗಲು ಪೂರ್ಣವಾಗಿ ಬಿಸಿಲು ಸಿಗುವ ಓಲಿವ್ ಮರವನ್ನು ಇಲ್ಲಿ ಉದ್ದೇಶಿಸಲಾಗಿದೆ ಎಂದು ಹಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಹಗಲು ಪೂರ್ಣವಾಗಿ ಬಿಸಿಲನ್ನು ಪಡೆದು ಬೆಳೆಯುವ ಓಲಿವ್ ವೃಕ್ಷದ ಎಣ್ಣೆ ಹೆಚ್ಚು ಬೆಳಗುತ್ತಿರುತ್ತದೆ.

ಬೆಂಕಿಯು ಸ್ಪರ್ಶಿಸದಿದ್ದರೂ ಅದು ಮಿನುಗುವಂತಿರುತ್ತದೆ. ಪ್ರಕಾಶದ ಮೇಲೆ ಪ್ರಕಾಶ.[1] ಅಲ್ಲಾಹು ತಾನಿಚ್ಛಿಸುವವರನ್ನು ತನ್ನ ಪ್ರಕಾಶದೆಡೆಗೆ ಮುನ್ನಡೆಸುವನು. ಅಲ್ಲಾಹು ಜನರಿಗಾಗಿ ಉಪಮೆಗಳನ್ನು ವಿವರಿಸುವನು. ಅಲ್ಲಾಹು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

فِي بُيُوتٍ أَذِنَ ٱللَّهُ أَن تُرۡفَعَ وَيُذۡكَرَ فِيهَا ٱسۡمُهُۥ يُسَبِّحُ لَهُۥ فِيهَا بِٱلۡغُدُوِّ وَٱلۡأٓصَالِ ٣٦ رِجَالٞ لَّا تُلۡهِيهِمۡ تِجَٰرَةٞ وَلَا بَيۡعٌ عَن ذِكۡرِ ٱللَّهِ وَإِقَامِ ٱلصَّلَوٰةِ وَإِيتَآءِ ٱلزَّكَوٰةِ يَخَافُونَ يَوۡمٗا تَتَقَلَّبُ فِيهِ ٱلۡقُلُوبُ وَٱلۡأَبۡصَٰرُ ٣٧

**36–37.** (ಆ ಪ್ರಕಾಶವಿರುವುದು) ಉನ್ನತವಾಗಲು ಮತ್ತು ತನ್ನ ನಾಮವು ಸ್ಮರಿಸುವಂತಾಗಲು ಅಲ್ಲಾಹು ಅಪ್ಪಣೆ ನೀಡಿರುವ ಕೆಲವು ಭವನಗಳಲ್ಲಾಗಿದೆ.[2] ಪ್ರಭಾತಗಳಲ್ಲೂ ಮುಸ್ಸಂಜೆಗಳಲ್ಲೂ ಕೆಲವು ಪುರುಷರು ಅವುಗಳಲ್ಲಿ ಅವನ ಮಹತ್ವವನ್ನು ಕೊಂಡಾಡುತ್ತಿರುವರು. ಅಲ್ಲಾಹುವನ್ನು ಸ್ಮರಿಸುವುದರಿಂದ, ನಮಾಝ್ ಸಂಸ್ಥಾಪಿಸುವುದರಿಂದ ಮತ್ತು ಝಕಾತ್ ನೀಡುವುದರಿಂದ ವ್ಯಾಪಾರವಾಗಲಿ, ಕ್ರಯ ವಿಕ್ರಯವಾಗಲಿ ಅವರ ಗಮನವನ್ನು ಬೇರೆಡೆಗೆ ಸೆಳೆಯಲಾರದು. ಹೃದಯಗಳು ಮತ್ತು ಕಣ್ಣುಗಳು ಉರುಳುವ ಒಂದು ದಿನವನ್ನು ಅವರು ಭಯಪಡುತ್ತಿರುವರು.

لِيَجۡزِيَهُمُ ٱللَّهُ أَحۡسَنَ مَا عَمِلُواْ وَيَزِيدَهُم مِّن فَضۡلِهِۦۗ وَٱللَّهُ يَرۡزُقُ مَن يَشَآءُ بِغَيۡرِ حِسَابٖ ٣٨

**38.** ಅಲ್ಲಾಹು ಅವರ ಮಾಡಿದವುಗಳಿಗೋಸ್ಕರ ಅತ್ಯುತ್ತಮ ಪ್ರತಿಫಲವನ್ನು ನೀಡುವ ಸಲುವಾಗಿ ಮತ್ತು ಅವನ ಅನುಗ್ರಹದಿಂದ ಅವರಿಗೆ ಹೆಚ್ಚುವರಿಯಾಗಿ ನೀಡುವ ಸಲುವಾಗಿ. ಅಲ್ಲಾಹು ತಾನಿಚ್ಛಿಸುವವರಿಗೆ ಲೆಕ್ಕವಿಲ್ಲದೆ ದಯಪಾಲಿಸುವನು.

---

1 ಎಣ್ಣೆಯ ಶುಭ್ರತೆ, ಗಾಜಿನ ಹೊಳಪು, ದೀಪವನ್ನಿಡುವ ರಂಧ್ರದ ಆಕೃತಿ ಇವೆಲ್ಲವೂ ಸೇರಿ ಬೆಳಕನ್ನು ಅತ್ಯಂತ ಶುಭ್ರವಾಗಿಸುತ್ತವೆ. ಶುದ್ಧ ಪ್ರಕೃತಿಯಿಂದ ಲಭಿಸುವ ಶುಭ್ರ ಪ್ರಕಾಶ. ಇದು ಸಂಪೂರ್ಣ ಜಗತ್ತಿಗೆ ಪ್ರಕಾಶವನ್ನು ನೀಡಿದ ದಿವ್ಯಪ್ರಭೆಯ ಅತ್ಯಂತ ಸರಳ ಪ್ರತೀಕವಾಗಿದೆ.

2 ಇಲ್ಲಿ ಉದ್ದೇಶಿಸಿರುವುದು ಅಲ್ಲಾಹುವಿನ ಭವನಗಳಾದ ಮಸೀದಿಗಳನ್ನಾಗಿದೆ. ದಿವ್ಯಪ್ರಭೆಯು –ಸತ್ಯ ಸನ್ಮಾರ್ಗದ ಬೆಳಕು– ಅಲ್ಲಿಂದ ಸದಾ ಹರಡುತ್ತಲೇ ಇರುತ್ತದೆ. ದೈನಂದಿನ ಚಟುವಟಿಕೆಗಳ ನಡುವೆಯೂ ಸತ್ಯವಿಶ್ವಾಸಿಗಳು ಆ ಭವನಗಳನ್ನು ಸಂದರ್ಶಿಸಲು ಹಾಗೂ ತಮ್ಮ ಹೃದಯಗಳನ್ನು ಚೈತನ್ಯಪೂರ್ಣಗೊಳಿಸಲು ಸಮಯವನ್ನು ಮೀಸಲಿಡುತ್ತಾರೆ.

**39.** ಅವಿಶ್ವಾಸಿಗಳಾರೋ ಅವರ ಕರ್ಮಗಳು ಮರುಭೂಮಿಯಲ್ಲಿರುವ ಮರೀಚಿಕೆಯಂತಾಗಿದೆ. ಬಾಯಾರಿದವನು ಅದನ್ನು ನೀರೆಂದು ಭಾವಿಸುವನು. ಕೊನೆಗೆ ಅವನು ಅದರ ಬಳಿಗೆ ಬಂದಾಗ ಅಲ್ಲಿ ಏನನ್ನೂ ಕಾಣಲಾರನು. ಆದರೆ ಅವನು ತನ್ನ ಬಳಿ ಅಲ್ಲಾಹುವನ್ನು ಕಾಣುವನು.[1] ಆಗ (ಅಲ್ಲಾಹು) ಅವನಿಗೆ ಅವನ ಲೆಕ್ಕವನ್ನು ಪೂರ್ಣವಾಗಿ ತೀರಿಸಿಕೊಡುವನು. ಅಲ್ಲಾಹು ಅತಿಶೀಘ್ರವಾಗಿ ವಿಚಾರಣೆ ಮಾಡುವವನಾಗಿರುವನು.

وَٱلَّذِينَ كَفَرُوٓاْ أَعۡمَٰلُهُمۡ كَسَرَابِۭ بِقِيعَةٖ
يَحۡسَبُهُ ٱلظَّمۡـَٔانُ مَآءً حَتَّىٰٓ إِذَا جَآءَهُۥ
لَمۡ يَجِدۡهُ شَيۡـٔٗا وَوَجَدَ ٱللَّهَ عِندَهُۥ فَوَفَّىٰهُ
حِسَابَهُۥۗ وَٱللَّهُ سَرِيعُ ٱلۡحِسَابِ ٣٩

**40.** ಅಥವಾ (ಅವರ ಕರ್ಮಗಳ ಉದಾಹರಣೆಯು) ಸಮುದ್ರದಾಳದಲ್ಲಿರುವ ಅಂಧಕಾರಗಳಂತಿದೆ. ಅಲೆಗಳು ಅದನ್ನು (ಕಡಲನ್ನು) ಮುಚ್ಚುತ್ತವೆ. ಅದರ ಮೇಲೆಯೂ ಅಲೆಗಳು; ಅದರ ಮೇಲೆ ಕಾರ್ಮೋಡಗಳು; ಒಂದರ ಮೇಲೆ ಒಂದರಂತಿರುವ ಅನೇಕ ಅಂಧಕಾರಗಳು. ಅವನು ತನ್ನ ಕೈಯನ್ನು ಹೊರಚಾಚಿದರೆ ಅವನು ಅದನ್ನು ಕಾಣಲಾರನು. ಅಲ್ಲಾಹು ಯಾರಿಗೆ ಪ್ರಕಾಶವನ್ನು ನೀಡಲಿಲ್ಲವೋ ಅವನಿಗೆ ಪ್ರಕಾಶವೇ ಇಲ್ಲ.[2]

أَوۡ كَظُلُمَٰتٖ فِي بَحۡرٖ لُّجِّيّٖ يَغۡشَىٰهُ مَوۡجٞ
مِّن فَوۡقِهِۦ مَوۡجٞ مِّن فَوۡقِهِۦ سَحَابٞۚ
ظُلُمَٰتُۢ بَعۡضُهَا فَوۡقَ بَعۡضٍ إِذَآ أَخۡرَجَ
يَدَهُۥ لَمۡ يَكَدۡ يَرَىٰهَاۗ وَمَن لَّمۡ يَجۡعَلِ ٱللَّهُ
لَهُۥ نُورٗا فَمَا لَهُۥ مِن نُّورٍ ٤٠

**41.** ಆಕಾಶಗಳಲ್ಲಿರುವವರು, ಭೂಮಿಯಲ್ಲಿರುವವರು ಮತ್ತು ರೆಕ್ಕೆಯನ್ನು ಹರಡಿಕೊಂಡಿರುವ ಹಕ್ಕಿಗಳು ಅಲ್ಲಾಹುವಿನ ಕೀರ್ತನೆ ಮಾಡುತ್ತಿರುವುದನ್ನು ತಾವು ಕಂಡಿಲ್ಲವೇ? ಪ್ರತಿಯೊಬ್ಬರಿಗೂ ತನ್ನ ಪ್ರಾರ್ಥನೆ

أَلَمۡ تَرَ أَنَّ ٱللَّهَ يُسَبِّحُ لَهُۥ مَن فِي
ٱلسَّمَٰوَٰتِ وَٱلۡأَرۡضِ وَٱلطَّيۡرُ صَٰٓفَّٰتٖۖ كُلّٞ
قَدۡ عَلِمَ صَلَاتَهُۥ وَتَسۡبِيحَهُۥۗ وَٱللَّهُ عَلِيمُۢ
بِمَا يَفۡعَلُونَ ٤١

1 ಪರಲೋಕಕ್ಕೆ ತಲುಪಿದಾಗ ತಾವು ಜೀವನದ ಯಶಸ್ಸಿಗಾಗಿ ಮಾಡಿದ ಕರ್ಮಗಳೆಲ್ಲವೂ ನಿಷ್ಫಲವಾಗಿರುವುದಾಗಿ ನಾಸ್ತಿಕರು ಮತ್ತು ಬಹುದೇವಾರಾಧಕರು ಕಾಣುವರು. ಅದೇ ರೀತಿ ಅಲ್ಲಾಹುವಿನ ವಿಚಾರಣೆ ಮತ್ತು ಅವನ ಶಿಕ್ಷಾಕ್ರಮಗಳು ಸಂದೇಶವಾಹಕರು ಮುನ್ನೆಚ್ಚರಿಕೆ ನೀಡಿದಂತೆಯೇ ಸತ್ಯವೆಂದು ಅವರು ಅಲ್ಲಿ ಕಾಣುವರು.

2 ಸತ್ಯವಿಶ್ವಾಸ ಮತ್ತು ಸನ್ಮಾರ್ಗದ ಬೆಳಕು ಸಿಗದವರು ಕತ್ತಲಲ್ಲಿ ಪರದಾಡುವವರಾಗಿದ್ದಾರೆ. ಲೌಕಿಕ ಜೀವನದ ಪ್ರಭೆ ಅವರಿಗೆ ಎಷ್ಟು ಸಿಕ್ಕರೂ ಸರಿಯೇ.

ಮತ್ತು ಕೀರ್ತನೆ ಹೇಗೆಂಬ ಅರಿವಿದೆ.[1] ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ಅರಿವುಳ್ಳವನಾಗಿರುವನು.

**42.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿನದ್ದಾಗಿದೆ. ಮರಳುವಿಕೆಯು ಅಲ್ಲಾಹುವಿನೆಡೆಗಾಗಿದೆ.

وَلِلَّهِ مُلۡكُ ٱلسَّمَٰوَٰتِ وَٱلۡأَرۡضِۖ وَإِلَى ٱللَّهِ ٱلۡمَصِيرُ ﴿٤٢﴾

**43.** ಅಲ್ಲಾಹು ಮೋಡಗಳನ್ನು ತಳ್ಳುತ್ತಾ, ತರುವಾಯ ಅವು ಪರಸ್ಪರ ಬೆಸೆಯುವಂತೆ ಮಾಡಿ, ತರುವಾಯ ಅವನು ಅದನ್ನು ಪದರ ಪದರವಾಗಿ ಅಡಕಿಡುವುದನ್ನು ತಾವು ಕಂಡಿಲ್ಲವೇ? ಆಗ ಅದರ ನಡುವಿನಿಂದ ಮಳೆನೀರು ಹೊರ ಬರುವುದನ್ನು ತಾವು ಕಾಣುವಿರಿ. ಆಕಾಶದಿಂದ –ಅಲ್ಲಿರುವ ಬೆಟ್ಟಗಳಂತಹ ಮೋಡಗಳ ರಾಶಿಗಳಿಂದ– ಅವನು ಆಲಿಕಲ್ಲುಗಳನ್ನು ಇಳಿಸುವನು. ತರುವಾಯ ತಾನಿಚ್ಛಿಸಿದವರ ಮೇಲೆ ಅವನು ಅದನ್ನು ತಗುಲಿಸುವನು. ತಾನಿಚ್ಛಿಸಿದವರಿಂದ ಅದನ್ನು ತಿರುಗಿಸಿ ಬಿಡುವನು. ಅದರ ಮಿಂಚಿನ ಪ್ರಕಾಶವು ದೃಷ್ಟಿಗಳನ್ನು ಕಿತ್ತುಕೊಳ್ಳುವಂತಿದೆ.

أَلَمۡ تَرَ أَنَّ ٱللَّهَ يُزۡجِي سَحَابٗا ثُمَّ يُؤَلِّفُ بَيۡنَهُۥ ثُمَّ يَجۡعَلُهُۥ رُكَامٗا فَتَرَى ٱلۡوَدۡقَ يَخۡرُجُ مِنۡ خِلَٰلِهِۦ وَيُنَزِّلُ مِنَ ٱلسَّمَآءِ مِن جِبَالٖ فِيهَا مِنۢ بَرَدٖ فَيُصِيبُ بِهِۦ مَن يَشَآءُ وَيَصۡرِفُهُۥ عَن مَّن يَشَآءُۖ يَكَادُ سَنَا بَرۡقِهِۦ يَذۡهَبُ بِٱلۡأَبۡصَٰرِ ﴿٤٣﴾

**44.** ಅಲ್ಲಾಹು ರಾತ್ರಿ ಮತ್ತು ಹಗಲನ್ನು ಬದಲಾವಣೆಗೊಳಿಸುತ್ತಿರುವನು. ಖಂಡಿತವಾಗಿಯೂ ದೃಷ್ಟಿಯುಳ್ಳವರಿಗೆ ಇದರಲ್ಲೊಂದು ನೀತಿಪಾಠವಿದೆ.

يُقَلِّبُ ٱللَّهُ ٱلَّيۡلَ وَٱلنَّهَارَۚ إِنَّ فِي ذَٰلِكَ لَعِبۡرَةٗ لِّأُوْلِي ٱلۡأَبۡصَٰرِ ﴿٤٤﴾

**45.** ಅಲ್ಲಾಹು ಸರ್ವ ಜೀವರಾಶಿಗಳನ್ನೂ ನೀರಿನಿಂದ ಸೃಷ್ಟಿಸಿರುವನು. ಅವುಗಳ ಪೈಕಿ ಉದರದ ಮೇಲೆ ತೆವಳುವವುಗಳಿವೆ. ಅವುಗಳ ಪೈಕಿ ಎರಡು ಕಾಲುಗಳ ಮೇಲೆ ಚಲಿಸುವವುಗಳಿವೆ. ಅವುಗಳ ಪೈಕಿ ನಾಲ್ಕು ಕಾಲುಗಳಲ್ಲಿ ಚಲಿಸುವವುಗಳಿವೆ. ಅಲ್ಲಾಹು

وَٱللَّهُ خَلَقَ كُلَّ دَآبَّةٖ مِّن مَّآءٖۖ فَمِنۡهُم مَّن يَمۡشِي عَلَىٰ بَطۡنِهِۦ وَمِنۡهُم مَّن يَمۡشِي عَلَىٰ رِجۡلَيۡنِ وَمِنۡهُم مَّن يَمۡشِي عَلَىٰٓ أَرۡبَعٖۚ يَخۡلُقُ ٱللَّهُ مَا يَشَآءُۚ إِنَّ ٱللَّهَ عَلَىٰ كُلِّ شَيۡءٖ قَدِيرٞ ﴿٤٥﴾

1 'ಪ್ರತಿಯೊಬ್ಬರ ಪ್ರಾರ್ಥನೆ ಮತ್ತು ಕೀರ್ತನೆಯನ್ನು ಅಲ್ಲಾಹು ಅರಿತಿರುವನು' ಎಂದೂ ವ್ಯಾಖ್ಯಾನಿಸಲಾಗಿದೆ.

ತಾನಿಚ್ಛಿಸಿದ್ದನ್ನು ಸೃಷ್ಟಿಸುವನು. ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

**46.** (ವಾಸ್ತವವನ್ನು) ಸ್ಪಷ್ಟಗೊಳಿಸುವ ದೃಷ್ಟಾಂತಗಳನ್ನು ನಾವು ಅವತೀರ್ಣಗೊಳಿಸಿರುವೆವು. ಅಲ್ಲಾಹು ತಾನಿಚ್ಛಿಸುವವರನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸುವನು.

لَّقَدْ أَنزَلْنَآ ءَايَٰتٍ مُّبَيِّنَٰتٍۚ وَٱللَّهُ يَهْدِى
مَن يَشَآءُ إِلَىٰ صِرَٰطٍ مُّسْتَقِيمٍ ﴿٤٦﴾

**47.** ನಾವು ಅಲ್ಲಾಹುವಿನಲ್ಲೂ, ಸಂದೇಶವಾಹಕರಲ್ಲೂ ವಿಶ್ವಾಸವಿಟ್ಟಿರುವೆವು ಮತ್ತು ಅನುಸರಿಸುತ್ತಿರುವೆವು ಎಂದು ಅವರು ಹೇಳುವರು. ತರುವಾಯ ಅದರ ಬಳಿಕವೂ ಅವರ ಪೈಕಿ ಒಂದು ಗುಂಪು ವಿಮುಖರಾಗಿ ಹೋಗುವರು. ಅಂತಹವರು ವಿಶ್ವಾಸಿಗಳೇ ಅಲ್ಲ.

وَيَقُولُونَ ءَامَنَّا بِٱللَّهِ وَبِٱلرَّسُولِ وَأَطَعْنَا
ثُمَّ يَتَوَلَّىٰ فَرِيقٌ مِّنْهُم مِّنۢ بَعْدِ ذَٰلِكَۚ وَمَآ
أُوْلَٰٓئِكَ بِٱلْمُؤْمِنِينَ ﴿٤٧﴾

**48.** (ಪ್ರವಾದಿಯವರು) ಅವರ ಮಧ್ಯೆ ತೀರ್ಪು ನೀಡುವ ಸಲುವಾಗಿ ಅವರನ್ನು ಅಲ್ಲಾಹುವಿನೆಡೆಗೆ ಮತ್ತು ಸಂದೇಶವಾಹಕರೆಡೆಗೆ ಕರೆಯಲಾದರೆ ಅವರ ಪೈಕಿ ಒಂದು ಗುಂಪು ತಿರುಗಿ ನಡೆಯುವರು.

وَإِذَا دُعُوٓاْ إِلَى ٱللَّهِ وَرَسُولِهِۦ لِيَحْكُمَ
بَيْنَهُمْ إِذَا فَرِيقٌ مِّنْهُم مُّعْرِضُونَ ﴿٤٨﴾

**49.** ಸತ್ಯವು ಅವರ ಪರವಾಗಿದ್ದರೆ ಅವರು ಅವರೆಡೆಗೆ (ಪ್ರವಾದಿಯೆಡೆಗೆ) ವಿನಮ್ರರಾಗಿ ಬರುವರು.

وَإِن يَكُن لَّهُمُ ٱلْحَقُّ يَأْتُوٓاْ إِلَيْهِ
مُذْعِنِينَ ﴿٤٩﴾

**50.** ಅವರ ಹೃದಯಗಳಲ್ಲಿ ಯಾವುದಾದರೂ ರೋಗವಿದೆಯೇ? ಅಥವಾ ಅವರಿಗೆ ಸಂದೇಹವಿದೆಯೇ? ಅಥವಾ ಅಲ್ಲಾಹು ಮತ್ತು ಅವನ ಸಂದೇಶವಾಹಕರು ಅವರೊಂದಿಗೆ ಅನ್ಯಾಯವೆಸಗುವರೆಂದು ಅವರು ಭಯಪಡುತ್ತಿರುವರೇ? ಅಲ್ಲ. ಅಕ್ರಮಿಗಳು ಅವರೇ ಆಗಿರುವರು.

أَفِى قُلُوبِهِم مَّرَضٌ أَمِ ٱرْتَابُوٓاْ أَمْ يَخَافُونَ
أَن يَحِيفَ ٱللَّهُ عَلَيْهِمْ وَرَسُولُهُۥۚ بَلْ
أُوْلَٰٓئِكَ هُمُ ٱلظَّٰلِمُونَ ﴿٥٠﴾

51. (ಪ್ರವಾದಿಯವರು) ತಮ್ಮ ಮಧ್ಯೆ ತೀರ್ಪು
ನೀಡುವ ಸಲುವಾಗಿ ಸತ್ಯವಿಶ್ವಾಸಿಗಳನ್ನು
ಅಲ್ಲಾಹುವಿನೆಡೆಗೆ ಮತ್ತು ಸಂದೇಶವಾಹಕರೆಡೆಗೆ
ಕರೆಯಲಾದರೆ ಅವರ ಮಾತು 'ನಾವು
ಆಲಿಸಿರುವೆವು ಮತ್ತು ಅನುಸರಿಸಿರುವೆವು'
ಎಂದು ಮಾತ್ರವಾಗಿರುವುದು.
ಯಶಸ್ಸುಗಳಿಸಿದವರು ಅವರೇ ಆಗಿರುವರು.

إِنَّمَا كَانَ قَوْلَ ٱلْمُؤْمِنِينَ إِذَا دُعُوٓا۟ إِلَى
ٱللَّهِ وَرَسُولِهِۦ لِيَحْكُمَ بَيْنَهُمْ أَن
يَقُولُوا۟ سَمِعْنَا وَأَطَعْنَا ۚ وَأُو۟لَـٰٓئِكَ هُمُ
ٱلْمُفْلِحُونَ ﴿٥١﴾

52. ಯಾರು ಅಲ್ಲಾಹುವನ್ನು ಮತ್ತು
ಸಂದೇಶವಾಹಕರನ್ನು ಅನುಸರಿಸುವನೋ,
ಅಲ್ಲಾಹುವನ್ನು ಭಯಪಟ್ಟು, ಅವನ ಬಗ್ಗೆ
ಎಚ್ಚರವಹಿಸುವನೋ, ಜಯಗಳಿಸಿದವರು
ಅವರೇ ಆಗಿರುವರು.

وَمَن يُطِعِ ٱللَّهَ وَرَسُولَهُۥ وَيَخْشَ ٱللَّهَ وَيَتَّقْهِ
فَأُو۟لَـٰٓئِكَ هُمُ ٱلْفَآئِزُونَ ﴿٥٢﴾

53. ತಾವು ಅವರೊಂದಿಗೆ ಆಜ್ಞಾಪಿಸಿದರೆ ಅವರು
ಖಂಡಿತವಾಗಿಯೂ ಹೊರಟುಬರುವರೆಂದು
ಅಲ್ಲಾಹುವಿನ ಮೇಲೆ ಅವರಿಗೆ ಆಣೆಯಿಡಲು
ಸಾಧ್ಯವಾಗುವ ವಿಧಗಳಲ್ಲೆಲ್ಲ ಆಣೆಯಿಟ್ಟು
ಅವರು ಹೇಳಿದರು. ತಾವು ಹೇಳಿರಿ: 'ನೀವು
ಆಣೆಯಿಡದಿರಿ. ಆದರೆ ನೈಜವಾದ
ಅನುಸರಣೆಯನ್ನು ಪಾಲಿಸಿರಿ.
ಖಂಡಿತವಾಗಿಯೂ ನೀವು ಮಾಡುತ್ತಿರುವುದರ
ಕುರಿತು ಅಲ್ಲಾಹು ಸೂಕ್ಷ್ಮವಾಗಿ
ಅರಿಯುವವನಾಗಿರುವನು'.

۞ وَأَقْسَمُوا۟ بِٱللَّهِ جَهْدَ أَيْمَـٰنِهِمْ لَئِنْ
أَمَرْتَهُمْ لَيَخْرُجُنَّ ۖ قُل لَّا تُقْسِمُوا۟ ۖ طَاعَةٌ
مَّعْرُوفَةٌ ۚ إِنَّ ٱللَّهَ خَبِيرٌۢ بِمَا تَعْمَلُونَ ﴿٥٣﴾

54. ಹೇಳಿರಿ: 'ನೀವು ಅಲ್ಲಾಹುವನ್ನು ಅನುಸರಿಸಿರಿ
ಮತ್ತು ಸಂದೇಶವಾಹಕರನ್ನು ಅನುಸರಿಸಿರಿ'.
ನೀವು ವಿಮುಖರಾಗುವುದಾದರೆ ಅವರ
(ಪ್ರವಾದಿಯವರ) ಹೊಣೆಯು ಅವರಿಗೆ
ವಹಿಸಿಕೊಡಲಾದ ವಿಷಯದಲ್ಲಿ ಮಾತ್ರವಾಗಿವೆ.
ನಿಮ್ಮ ಹೊಣೆಯು ನಿಮಗೆ ವಹಿಸಿಕೊಡಲಾದ
ವಿಷಯಗಳಲ್ಲಾಗಿದೆ. ನೀವು ಅವರನ್ನು
ಅನುಸರಿಸುವುದಾದರೆ ನೀವು ಸನ್ಮಾರ್ಗವನ್ನು
ಪಡೆಯುವಿರಿ. ಸಂದೇಶವಾಹಕರ ಹೊಣೆಯು
(ಸಂದೇಶವನ್ನು) ಸ್ಪಷ್ಟವಾಗಿ
ತಲುಪಿಸಿಕೊಡುವುದು ಮಾತ್ರವಾಗಿದೆ.

قُلْ أَطِيعُوا۟ ٱللَّهَ وَأَطِيعُوا۟ ٱلرَّسُولَ ۖ فَإِن
تَوَلَّوْا۟ فَإِنَّمَا عَلَيْهِ مَا حُمِّلَ وَعَلَيْكُم
مَّا حُمِّلْتُمْ ۖ وَإِن تُطِيعُوهُ تَهْتَدُوا۟ ۚ وَمَا عَلَى
ٱلرَّسُولِ إِلَّا ٱلْبَلَـٰغُ ٱلْمُبِينُ ﴿٥٤﴾

وَعَدَ ٱللَّهُ ٱلَّذِينَ ءَامَنُوا۟ مِنكُمْ وَعَمِلُوا۟ ٱلصَّـٰلِحَـٰتِ لَيَسْتَخْلِفَنَّهُمْ فِى ٱلْأَرْضِ كَمَا ٱسْتَخْلَفَ ٱلَّذِينَ مِن قَبْلِهِمْ وَلَيُمَكِّنَنَّ لَهُمْ دِينَهُمُ ٱلَّذِى ٱرْتَضَىٰ لَهُمْ وَلَيُبَدِّلَنَّهُم مِّنۢ بَعْدِ خَوْفِهِمْ أَمْنًا ۚ يَعْبُدُونَنِى لَا يُشْرِكُونَ بِى شَيْـًٔا ۚ وَمَن كَفَرَ بَعْدَ ذَٰلِكَ فَأُو۟لَـٰٓئِكَ هُمُ ٱلْفَـٰسِقُونَ ﴿٥٥﴾

55. ನಿಮ್ಮ ಪೈಕಿ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರೊಂದಿಗೆ, ಅಲ್ಲಾಹು ಅವರಿಗಿಂತ ಮುಂಚಿನವರಿಗೆ ಭೂಮಿಯಲ್ಲಿ ಪ್ರಾತಿನಿಧ್ಯವನ್ನು ನೀಡಿದಂತೆ ಖಂಡಿತವಾಗಿಯೂ ಅವರಿಗೂ ಪ್ರಾತಿನಿಧ್ಯವನ್ನು ನೀಡುವನು, ಅವರಿಗೆ ಸಂತೃಪ್ತಿಯಿಂದ ನೀಡಿದ ಅವರ ಧರ್ಮದ ವಿಷಯದಲ್ಲಿ ಅವರಿಗೆ ಅಧಿಕಾರವನ್ನು ನೀಡುವನು ಮತ್ತು ಅವರಿಗುಂಟಾದ ಭಯಭೀತಿಯ ಬಳಿಕ ಅವರಿಗೆ ನಿರ್ಭೀತಿಯನ್ನು ಬದಲಿಸಿ ಕೊಡುವನು ಎಂದು ವಾಗ್ದಾನ ಮಾಡಿರುವನು. ಅವರು ನನ್ನನ್ನು (ಮಾತ್ರ) ಆರಾಧಿಸುವರು ಮತ್ತು ನನ್ನೊಂದಿಗೆ ಏನನ್ನೂ ಸಹಭಾಗಿಯನ್ನಾಗಿ ಮಾಡಲಾರರು.[1] ಯಾರಾದರೂ ಅದರ ಬಳಿಕವೂ ಕೃತಘ್ನತೆ ತೋರಿದರೆ ಅವರೇ ಧಿಕ್ಕಾರಿಗಳಾಗಿರುವರು.

وَأَقِيمُوا۟ ٱلصَّلَوٰةَ وَءَاتُوا۟ ٱلزَّكَوٰةَ وَأَطِيعُوا۟ ٱلرَّسُولَ لَعَلَّكُمْ تُرْحَمُونَ ﴿٥٦﴾

56. ನೀವು ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ನೀಡಿರಿ ಮತ್ತು ಸಂದೇಶವಾಹಕರನ್ನು ಅನುಸರಿಸಿರಿ. ನಿಮಗೆ ಕರುಣೆ ಸಿಗಲೂಬಹುದು.

لَا تَحْسَبَنَّ ٱلَّذِينَ كَفَرُوا۟ مُعْجِزِينَ فِى ٱلْأَرْضِ ۚ وَمَأْوَىٰهُمُ ٱلنَّارُ ۖ وَلَبِئْسَ ٱلْمَصِيرُ ﴿٥٧﴾

57. ಸತ್ಯನಿಷೇಧಿಗಳು ಭೂಮಿಯಲ್ಲಿ (ಅಲ್ಲಾಹುವನ್ನು) ಸೋಲಿಸುವವರೆಂದು ತಾವು ಭಾವಿಸದಿರಿ. ಅವರ ವಾಸಸ್ಥಳವು ನರಕವಾಗಿದೆ. ತಲುಪಲಿರುವ ಆ ಸ್ಥಳವು ಅತ್ಯಂತ ನಿಕೃಷ್ಟವಾಗಿದೆ.

يَـٰٓأَيُّهَا ٱلَّذِينَ ءَامَنُوا۟ لِيَسْتَـْٔذِنكُمُ ٱلَّذِينَ مَلَكَتْ أَيْمَـٰنُكُمْ وَٱلَّذِينَ لَمْ يَبْلُغُوا۟

58. ಓ ಸತ್ಯವಿಶ್ವಾಸಿಗಳೇ! ನಿಮ್ಮ ಬಲಗೈಗಳು ಒಡೆತನದಲ್ಲಿಟ್ಟುಕೊಂಡಿರುವವರು (ಗುಲಾಮರು) ಮತ್ತು ನಿಮ್ಮ ಪೈಕಿ

1 ಪರಲೋಕ ಯಶಸ್ಸಿಗೆಂಬಂತೆ ಐಹಿಕ ಜೀವನದಲ್ಲಿ ಅಲ್ಲಾಹು ನೀಡುವ ಗೆಲುವು ಮತ್ತು ಅಧಿಕಾರಕ್ಕೆ ಅವನು ಶರ್ತವಾಗಿಟ್ಟಿರುವುದು ಶಿರ್ಕ್‌ನಿಂದ ಮುಕ್ತವಾದ ಏಕದೇವವಿಶ್ವಾಸ ಮತ್ತು ಅಲ್ಲಾಹು ಆದೇಶಿಸುವ ಸತ್ಕರ್ಮಗಳನ್ನು ಮಾಡುವುದನ್ನಾಗಿವೆ.

ٱلۡحُلُمَ مِنكُمۡ ثَلَٰثَ مَرَّٰتٖۚ مِّن قَبۡلِ
صَلَوٰةِ ٱلۡفَجۡرِ وَحِينَ تَضَعُونَ ثِيَابَكُم
مِّنَ ٱلظَّهِيرَةِ وَمِنۢ بَعۡدِ صَلَوٰةِ ٱلۡعِشَآءِۚ
ثَلَٰثُ عَوۡرَٰتٖ لَّكُمۡۚ لَيۡسَ عَلَيۡكُمۡ وَلَا
عَلَيۡهِمۡ جُنَاحُۢ بَعۡدَهُنَّۚ طَوَّٰفُونَ عَلَيۡكُم
بَعۡضُكُمۡ عَلَىٰ بَعۡضٖۚ كَذَٰلِكَ يُبَيِّنُ ٱللَّهُ
لَكُمُ ٱلۡأٓيَٰتِۗ وَٱللَّهُ عَلِيمٌ حَكِيمٞ ٥٨

ಹರೆಯವನ್ನು ತಲುಪಿರದವರು ಮೂರು ಸಂದರ್ಭಗಳಲ್ಲಿ ನಿಮ್ಮೊಂದಿಗೆ (ಪ್ರವೇಶಕ್ಕೆ) ಅನುಮತಿಯನ್ನು ಬೇಡಲಿ.[1] ಪ್ರಭಾತ ನಮಾಝ್‌ಗೆ ಮುಂಚೆ, ಮಧ್ಯಾಹ್ನದ ವೇಳೆ (ಮಲಗುವುದಕ್ಕಾಗಿ) ನೀವು ನಿಮ್ಮ ಉಡುಪುಗಳನ್ನು ಕಳಚಿಡುವಾಗ ಮತ್ತು ಇಶಾ ನಮಾಝ್‌ನ ಬಳಿಕ. ಇವು ನಿಮ್ಮ ಮೂರು ಖಾಸಗಿ ಸಮಯಗಳಾಗಿವೆ. ಈ ಸಮಯಗಳ ಬಳಿಕ ನಿಮಗಾಗಲಿ ಅವರಿಗಾಗಲಿ (ಬೆರೆತು ಬದುಕುವುದರಲ್ಲಿ) ಯಾವುದೇ ದೋಷವಿಲ್ಲ. ಅವರು ನಿಮ್ಮ ಸುತ್ತಲೂ ಚಲಿಸುತ್ತಿರುವವರಾಗಿರುವರು. ನೀವು ಪರಸ್ಪರ ಬೆರೆತು ಬದುಕುವವರಾಗಿರುವಿರಿ. ಹೀಗೆ ಅಲ್ಲಾಹು ನಿಮಗೆ ದೃಷ್ಟಾಂತಗಳನ್ನು ವಿವರಿಸಿಕೊಡುವನು. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَإِذَا بَلَغَ ٱلۡأَطۡفَٰلُ مِنكُمُ ٱلۡحُلُمَ
فَلۡيَسۡتَـٔۡذِنُواْ كَمَا ٱسۡتَـٔۡذَنَ ٱلَّذِينَ مِن
قَبۡلِهِمۡۚ كَذَٰلِكَ يُبَيِّنُ ٱللَّهُ لَكُمۡ ءَايَٰتِهِۦۗ
وَٱللَّهُ عَلِيمٌ حَكِيمٞ ٥٩

**59**. ನಿಮ್ಮಿಂದ ಇರುವ ಮಕ್ಕಳು ಹರೆಯವನ್ನು ತಲುಪಿದರೆ ಅವರಿಗಿಂತ ಮುಂಚಿನವರು ಅನುಮತಿ ಬೇಡಿದಂತೆ ಅವರೂ ಅನುಮತಿ ಬೇಡಲಿ.[2] ಹೀಗೆ ಅಲ್ಲಾಹು ನಿಮಗೆ ಅವನ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವನು. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَٱلۡقَوَٰعِدُ مِنَ ٱلنِّسَآءِ ٱلَّٰتِي لَا يَرۡجُونَ

**60**. ವೈವಾಹಿಕ ಬದುಕನ್ನು ಆಶಿಸದ ವೃದ್ಧೆಯರ[3] ಮಟ್ಟಿಗೆ ಸೌಂದರ್ಯವನ್ನು

1 ಇತರರ ವಸತಿಗಳಿಗೆ ಅನುಮತಿ ವಿನಾ ಪ್ರವೇಶಿಸಬಾರದೆಂದು 27ನೇ ಸೂಕ್ತಿಯಲ್ಲಿ ಹೇಳಲಾಗಿದೆ. ಆದರೆ ಓರ್ವ ವ್ಯಕ್ತಿಯೊಂದಿಗೆ ಅತ್ಯಂತ ನಿಕಟರಾಗಿರುವ ಮಕ್ಕಳು, ಸೇವಕರು ಮುಂತಾದವರು ಅವನ ಖಾಸಗಿ ಸಮಯದಲ್ಲಿ –ಗುಪ್ತಾಂಗಗಳು ಗೋಚರಿಸುವ ಸಾಧ್ಯತೆಗಳಿರುವ ಸಂದರ್ಭಗಳಲ್ಲಿ– ಅವನ ಅನುಮತಿ ಸಿಕ್ಕಿದ ಬಳಿಕವೇ ಅವನ ಕೋಣೆಯನ್ನು ಪ್ರವೇಶಿಸಬೇಕೆಂದು ಈ ಸೂಕ್ತಿಯು ಆದೇಶಿಸುತ್ತದೆ.

2 ಮಕ್ಕಳು ಪ್ರೌಢರಾದರೆ ಮಾತಾಪಿತರ ಮತ್ತು ನಿಕಟ ಸಂಬಂಧಿಕರ ಬಳಿಗೂ ಸಮ್ಮತಿ ಪಡೆದೇ ಪ್ರವೇಶಿಸಬೇಕು ಎಂದು ಈ ಸೂಕ್ತಿಯು ತಿಳಿಸುತ್ತದೆ. ಅದು ಯಾವುದೇ ಸಮಯದಲ್ಲಾದರೂ ಸರಿ.

3 ಕವಾಇದ್ ಎಂಬ ಪದಕ್ಕೆ ವೃದ್ಧೆಯರು ಎಂದು ಅರ್ಥ ನೀಡಲಾಗಿದೆ. ಇನ್ನಷ್ಟು ಸೂಕ್ಷ್ಮವಾಗಿ ಹೇಳುವುದಾದರೆ ಮುಟ್ಟು ನಿಂತುಹೋದ ಸ್ತ್ರೀಯರು ಅಥವಾ ಗರ್ಭಧಾರಣೆಯ ಸಾಧ್ಯತೆಯಿಲ್ಲದ ಸ್ತ್ರೀಯರು ಎಂದಾಗಿದೆ.

نِكَاحًا فَلَيْسَ عَلَيْهِنَّ جُنَاحٌ أَن يَضَعْنَ ثِيَابَهُنَّ غَيْرَ مُتَبَرِّجَٰتٍۭ بِزِينَةٍۖ وَأَن يَسْتَعْفِفْنَ خَيْرٌ لَّهُنَّۗ وَٱللَّهُ سَمِيعٌ عَلِيمٌ ٦٠

ಪ್ರದರ್ಶಿಸದವರಾಗಿರುವ ಸ್ಥಿತಿಯಲ್ಲಿ ತಮ್ಮ ಮೇಲುಡುಪನ್ನು ಕಳಚಿಡುವುದರಲ್ಲಿ ಅವರಿಗೆ ದೋಷವಿಲ್ಲ. ಆದರೆ ಪರಿಶುದ್ಧತೆಯನ್ನು ಕಾಪಾಡಿಕೊಳ್ಳುವುದು ಅವರಿಗೆ ಅತ್ಯುತ್ತಮವಾದುದಾಗಿದೆ.[1] ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

لَّيْسَ عَلَى ٱلْأَعْمَىٰ حَرَجٌ وَلَا عَلَى ٱلْأَعْرَجِ حَرَجٌ وَلَا عَلَى ٱلْمَرِيضِ حَرَجٌ وَلَا عَلَىٰٓ أَنفُسِكُمْ أَن تَأْكُلُوا۟ مِنۢ بُيُوتِكُمْ أَوْ بُيُوتِ ءَابَآئِكُمْ أَوْ بُيُوتِ أُمَّهَٰتِكُمْ أَوْ بُيُوتِ إِخْوَٰنِكُمْ أَوْ بُيُوتِ أَخَوَٰتِكُمْ أَوْ بُيُوتِ أَعْمَٰمِكُمْ أَوْ بُيُوتِ عَمَّٰتِكُمْ أَوْ بُيُوتِ أَخْوَٰلِكُمْ أَوْ بُيُوتِ خَٰلَٰتِكُمْ أَوْ مَا مَلَكْتُم مَّفَاتِحَهُۥٓ أَوْ صَدِيقِكُمْۚ لَيْسَ عَلَيْكُمْ جُنَاحٌ أَن تَأْكُلُوا۟ جَمِيعًا أَوْ أَشْتَاتًاۚ فَإِذَا دَخَلْتُم بُيُوتًا فَسَلِّمُوا۟ عَلَىٰٓ أَنفُسِكُمْ تَحِيَّةً مِّنْ عِندِ ٱللَّهِ مُبَٰرَكَةً طَيِّبَةًۚ كَذَٰلِكَ يُبَيِّنُ ٱللَّهُ لَكُمُ ٱلْءَايَٰتِ لَعَلَّكُمْ تَعْقِلُونَ ٦١

61. ಕುರುಡನ ಮೇಲೆ ದೋಷವಿಲ್ಲ, ಕುಂಟನ ಮೇಲೂ ದೋಷವಿಲ್ಲ, ರೋಗಿಯ ಮೇಲೂ ದೋಷವಿಲ್ಲ.[2] ನೀವು ನಿಮ್ಮ ಮನೆಗಳಲ್ಲಿ, ನಿಮ್ಮ ತಂದೆಯರ ಮನೆಗಳಲ್ಲಿ, ನಿಮ್ಮ ತಾಯಂದಿರ ಮನೆಗಳಲ್ಲಿ, ನಿಮ್ಮ ಸಹೋದರರ ಮನೆಗಳಲ್ಲಿ, ನಿಮ್ಮ ಸಹೋದರಿಯರ ಮನೆಗಳಲ್ಲಿ, ನಿಮ್ಮ ಪಿತೃಸಹೋದರರ ಮನೆಗಳಲ್ಲಿ, ನಿಮ್ಮ ಪಿತೃಸಹೋದರಿಯರ ಮನೆಗಳಲ್ಲಿ, ನಿಮ್ಮ ಮಾತೃ ಸಹೋದರರ ಮನೆಗಳಲ್ಲಿ, ನಿಮ್ಮ ಮಾತೃ ಸಹೋದರಿಯರ ಮನೆಗಳಲ್ಲಿ, ಕೀಲಿಕೈಗಳು ನಿಮ್ಮ ವಶದಲ್ಲಿರುವ ಮನೆಗಳಲ್ಲಿ,[3] ನಿಮ್ಮ ಸ್ನೇಹಿತರ ಮನೆಗಳಲ್ಲಿ ಆಹಾರ ಸೇವಿಸುವುದರಲ್ಲಿ ನಿಮ್ಮ ಮೇಲೆ ದೋಷವಿಲ್ಲ. ನೀವು ಜೊತೆಯಾಗಿ ಸೇವಿಸುವುದರಲ್ಲಿ ಅಥವಾ ಬೇರೆ ಬೇರೆ ಯಾಗಿ ಸೇವಿಸುವುದರಲ್ಲೂ ನಿಮ್ಮ ಮೇಲೆ ದೋಷವಿಲ್ಲ. ಆದರೆ ನೀವು ಯಾವುದೇ ಮನೆಯನ್ನು ಪ್ರವೇಶಿಸುವಾಗಲೂ ಅಲ್ಲಾಹುವಿನ ವತಿಯ ಅನುಗ್ರಹೀತವೂ

1 ವೃದ್ಧಾಪ್ಯದಲ್ಲೂ ಸಭ್ಯತೆಯ ವಸ್ತ್ರಧಾರಣೆಯು ಸ್ತ್ರೀಯರ ಗೌರವವನ್ನು ಹೆಚ್ಚಿಸುತ್ತದೆ.

2 ಅಂಗವಿಕಲರನ್ನು ಮನೆಗೆ ಕರೆದೊಯ್ದು ಆಹಾರ ನೀಡುವ ವಿಷಯದಲ್ಲಿ ಮನೆಯವರಿಗಿರುವ ಮತ್ತು ಇತರರೊಂದಿಗೆ ಆಹಾರ ಸೇವಿಸುವ ವಿಷಯದಲ್ಲಿ ಅಂಗವಿಕಲರಿಗಿರುವ ಪ್ರಯಾಸವನ್ನು ನಿವಾರಿಸುವುದೇ ಈ ಆಯತ್ತಿನ ಉದ್ದೇಶವೆಂದು ಅನೇಕ ವ್ಯಾಖ್ಯಾನಕಾರರು ಹೇಳಿದ್ದಾರೆ. ಸಹಭೋಜನದ ವಿಷಯದಲ್ಲಿ ಇನ್ನಿತರ ಅನೇಕ ತಪ್ಪುಕಲ್ಪನೆಗಳು ಅರಬರ ಮಧ್ಯೆ ರೂಢಿಯಲ್ಲಿದ್ದವು.

3 ಒಂದು ಮನೆಯ ಕಾರ್ಯ ನಿರ್ವಹಣಾಧಿಕಾರವನ್ನು ವಹಿಸಲ್ಪಟ್ಟ ವ್ಯಕ್ತಿಗೆ ಆ ಮನೆಯವರೊಂದಿಗೆ ಅಲ್ಲಿ ಆಹಾರ ಸೇವಿಸುವುದಕ್ಕೆ ವಿರೋಧವಿಲ್ಲ.

ಪಾವನವೂ ಆಗಿರುವ ಒಂದು ಅಭಿವಂದನೆಯೆಂಬ ನೆಲೆಯಲ್ಲಿ ಪರಸ್ಪರ ಸಲಾಮ್ ಹೇಳಿರಿ. ಹೀಗೆ ನೀವು ಚಿಂತಿಸಿ ಗ್ರಹಿಸುವುದಕ್ಕಾಗಿ ಅಲ್ಲಾಹು ನಿಮಗೆ ದೃಷ್ಟಾಂತ ಗಳನ್ನು ವಿವರಿಸಿಕೊಡುತ್ತಿರುವನು.

إِنَّمَا ٱلْمُؤْمِنُونَ ٱلَّذِينَ ءَامَنُواْ بِٱللَّهِ وَرَسُولِهِۦ وَإِذَا كَانُواْ مَعَهُۥ عَلَىٰٓ أَمْرٍ جَامِعٍ لَّمْ يَذْهَبُواْ حَتَّىٰ يَسْتَـْٔذِنُوهُ ۚ إِنَّ ٱلَّذِينَ يَسْتَـْٔذِنُونَكَ أُوْلَـٰٓئِكَ ٱلَّذِينَ يُؤْمِنُونَ بِٱللَّهِ وَرَسُولِهِۦ ۚ فَإِذَا ٱسْتَـْٔذَنُوكَ لِبَعْضِ شَأْنِهِمْ فَأْذَن لِّمَن شِئْتَ مِنْهُمْ وَٱسْتَغْفِرْ لَهُمُ ٱللَّهَ ۚ إِنَّ ٱللَّهَ غَفُورٌ رَّحِيمٌ ﴿٦٢﴾

62. ಸತ್ಯವಿಶ್ವಾಸಿಗಳು ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟವರು ಮಾತ್ರವಾಗಿರುವರು. ಒಂದು ಸಾರ್ವಜನಿಕ ವಿಷಯದಲ್ಲಿ ಅವರು ಸಂದೇಶವಾಹಕರೊಂದಿಗೆ ಪಾಲ್ಗೊಂಡರೆ ಅವರಲ್ಲಿ ಅನುಮತಿ ಬೇಡದೆ ಅವರು ನಿರ್ಗಮಿಸಲಾರರು. ತಮ್ಮೊಂದಿಗೆ ಅನುಮತಿ ಬೇಡುವವರಾರೋ ಖಂಡಿತವಾಗಿಯೂ ಅವರು ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟವರಾಗಿರುವರು. ತರುವಾಯ ಅವರು ತಮ್ಮ ಯಾವುದೇ ಅಗತ್ಯಗಳಿಗಾಗಿ (ನಿರ್ಗಮಿಸಲು) ತಮ್ಮೊಂದಿಗೆ ಅನುಮತಿ ಬೇಡಿದರೆ ಅವರ ಪೈಕಿ ತಾವಿಚ್ಛಿಸುವವರಿಗೆ ಅನುಮತಿ ನೀಡಿರಿ ಮತ್ತು ಅವರಿಗೋಸ್ಕರ ಅಲ್ಲಾಹುವಿನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

لَّا تَجْعَلُواْ دُعَآءَ ٱلرَّسُولِ بَيْنَكُمْ كَدُعَآءِ بَعْضِكُم بَعْضًا ۚ قَدْ يَعْلَمُ ٱللَّهُ ٱلَّذِينَ

63. ಸಂದೇಶವಾಹಕರ ಕರೆಯನ್ನು ನಿಮ್ಮ ಮಧ್ಯೆ, ನಿಮ್ಮಲ್ಲಿ ಕೆಲವರು ಇತರ ಕೆಲವರನ್ನು ಕರೆಯುವಂತೆ ಮಾಡಿಕೊಳ್ಳದಿರಿ.[1]

---

1 ಪ್ರವಾದಿ(ﷺ)ರವರು ನಿಮ್ಮನ್ನು ಯಾವುದಾದರೊಂದು ವಿಷಯಕ್ಕಾಗಿ ಕರೆದರೆ ಅದು ನಿಮ್ಮ ಪೈಕಿ ಒಬ್ಬರು ಇನ್ನೊಬ್ಬರನ್ನು ಕರೆಯುವಂತಾಗಿದೆ ಎಂದು ನೀವು ಪರಿಗಣಿಸಬಾರದು. ಪ್ರವಾದಿ(ﷺ)ರವರ ಕರೆಗೆ ನಿಷ್ಕಳಂಕವಾಗಿ ಉತ್ತರಿಸಿದರೆ ಮಾತ್ರ ನೀವು ನೈಜ ಸತ್ಯವಿಶ್ವಾಸಿಗಳಾಗುವಿರಿ. ಪ್ರವಾದಿ(ﷺ)ರವರನ್ನು ನೀವು ಕರೆಯುವುದು ನೀವು ಪರಸ್ಪರ ಒಬ್ಬರನ್ನೊಬ್ಬರು ಕರೆದಂತಾಗಬಾರದು ಎಂದು ಕೆಲವು ವ್ಯಾಖ್ಯಾನಕಾರರು ಅರ್ಥ ನೀಡಿದ್ದಾರೆ. ಅರ್ಥಾತ್ ಯಾ ಮುಹಮ್ಮದ್ ಎಂದು ಕರೆಯಬಾರದು. ಯಾ ರಸೂಲಲ್ಲಾಹ್, ಯಾ ನಬಿಯ್ಯಲ್ಲಾಹ್ ಎಂದು ಗೌರವಾದರದೊಂದಿಗೆ ಕರೆಯಬೇಕು. 'ಮರೆಯಾಗಿ ಹಿಡಿದು....' ಎಂಬ ವಾಕ್ಯದೊಂದಿಗೆ ಹೆಚ್ಚು ಹೊಂದಿಕೊಳ್ಳುವುದು ಮೊದಲನೇ ವ್ಯಾಖ್ಯಾನವಾಗಿದೆ.

يَتَسَلَّلُونَ مِنكُمْ لِوَاذًاۚ فَلْيَحْذَرِ ٱلَّذِينَ
يُخَالِفُونَ عَنْ أَمْرِهِۦٓ أَن تُصِيبَهُمْ فِتْنَةٌ أَوْ
يُصِيبَهُمْ عَذَابٌ أَلِيمٌ ﴿٦٣﴾

(ಇತರರನ್ನು) ಮರೆಯಾಗಿ ಹಿಡಿದು ನಿಮ್ಮ ಗುಂಪಿನಿಂದ ಜಾರಿಹೋಗುವವರ ಬಗ್ಗೆ ಅಲ್ಲಾಹು ಅರಿಯುತ್ತಾನೆ. ಆದ್ದರಿಂದ ಪ್ರವಾದಿಯವರ ಆಜ್ಞೆಗೆ ವಿರೋಧವಾಗಿ ಸಾಗುವವರು ತಮಗೇನಾದರೂ ಆಪತ್ತು ತಗಲುವುದರ ಕುರಿತು ಅಥವಾ ಯಾತನಾಮಯ ಶಿಕ್ಷೆ ತಗಲುವುದರ ಕುರಿತು ಭಯಪಡಲಿ.

أَلَآ إِنَّ لِلَّهِ مَا فِي ٱلسَّمَٰوَٰتِ وَٱلْأَرْضِۖ قَدْ
يَعْلَمُ مَآ أَنتُمْ عَلَيْهِ وَيَوْمَ يُرْجَعُونَ إِلَيْهِ
فَيُنَبِّئُهُم بِمَا عَمِلُواْۗ وَٱللَّهُ بِكُلِّ شَيْءٍ
عَلِيمٌۢ ﴿٦٤﴾

64. ಅರಿಯಿರಿ! ಖಂಡಿತವಾಗಿಯೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ನೀವು ಯಾವ ಸ್ಥಿತಿಯಲ್ಲಿರುವಿರೆಂದು ಅವನು ಅರಿತಿರುವನು. ಅವರನ್ನು ಅವನೆಡೆಗೆ ಮರಳಿ ತರಲಾಗುವ ದಿನವನ್ನೂ ಅವನು ಅರಿತಿರುವನು. ಆಗ ಅವರು ಮಾಡಿಕೊಂಡಿರುವುದರ ಕುರಿತು ಅವನು ಅವರಿಗೆ ತಿಳಿಸಿಕೊಡುವನು. ಅಲ್ಲಾಹು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

## ಅಲ್ ಫುರ್ಕಾನ್ (ಸತ್ಯಾಸತ್ಯ ವಿವೇಚನೆ)[1]

## سُورَةُ الفُرۡقَانِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 77

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಸತ್ಯಾಸತ್ಯ ವಿವೇಚನೆಗಿರುವ ಪ್ರಮಾಣವನ್ನು (ಕುರ್‌ಆನನ್ನು) ತನ್ನ ದಾಸನ (ಪ್ರವಾದಿಯವರ) ಮೇಲೆ, ಅವರು ಸರ್ವಲೋಕದವರಿಗೆ ಓರ್ವ ಮುನ್ನೆಚ್ಚರಿಕೆಗಾರನಾಗುವ ಸಲುವಾಗಿ ಅವತೀರ್ಣಗೊಳಿಸಿದವನು ಅನುಗ್ರಹಪೂರ್ಣನಾಗಿರುವನು.

تَبَارَكَ ٱلَّذِي نَزَّلَ ٱلۡفُرۡقَانَ عَلَىٰ عَبۡدِهِۦ لِيَكُونَ لِلۡعَٰلَمِينَ نَذِيرًا ١

2. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಯಾರಿಗಿದೆಯೋ ಅವನಾಗಿರುವನು (ಕುರ್‌ಆನನ್ನು ಅವತೀರ್ಣಗೊಳಿಸಿದವನು). ಅವನು ಸಂತತಿಯನ್ನು ಮಾಡಿಕೊಂಡವನಲ್ಲ. ಆಧಿಪತ್ಯದಲ್ಲಿ ಅವನೊಂದಿಗೆ ಯಾವುದೇ ಸಹಭಾಗಿಗಳಿಲ್ಲ. ಅವನು ಪ್ರತಿಯೊಂದು ವಸ್ತುವನ್ನೂ ಸೃಷ್ಟಿಸಿ ಅದನ್ನು ಸರಿಯಾದ ವಿಧದಲ್ಲಿ ವ್ಯವಸ್ಥಿತಗೊಳಿಸಿರುವನು.

ٱلَّذِي لَهُۥ مُلۡكُ ٱلسَّمَٰوَٰتِ وَٱلۡأَرۡضِ وَلَمۡ يَتَّخِذۡ وَلَدًا وَلَمۡ يَكُن لَّهُۥ شَرِيكٞ فِي ٱلۡمُلۡكِ وَخَلَقَ كُلَّ شَيۡءٖ فَقَدَّرَهُۥ تَقۡدِيرًا ٢

3. ಅವರು ಅವನ ಹೊರತು ಬೇರೆ ಆರಾಧ್ಯರನ್ನು ಮಾಡಿಕೊಂಡಿರುವರು. ಅವರು (ಆರಾಧ್ಯರು) ಏನನ್ನೂ ಸೃಷ್ಟಿಸಲಾರರು. ಅವರೇ ಸ್ವತಃ ಸೃಷ್ಟಿಸಲಾಗುತ್ತಿರುವರು. ಅವರು ಸ್ವತಃ ತಮಗಾಗಿ ಯಾವುದೇ ಹಾನಿಯನ್ನಾಗಲಿ ಲಾಭವನ್ನಾಗಲಿ ಒಡೆತನದಲ್ಲಿಟ್ಟುಕೊಳ್ಳಲಾರರು. ಮರಣವನ್ನಾಗಲಿ, ಜೀವನವನ್ನಾಗಲಿ ಅಥವಾ ಪುನರುತ್ಥಾನವನ್ನಾಗಲಿ ಅವರು ಒಡೆತನದಲ್ಲಿಟ್ಟುಕೊಳ್ಳಲಾರರು.[2]

وَٱتَّخَذُواْ مِن دُونِهِۦٓ ءَالِهَةٗ لَّا يَخۡلُقُونَ شَيۡـٔٗا وَهُمۡ يُخۡلَقُونَ وَلَا يَمۡلِكُونَ لِأَنفُسِهِمۡ ضَرّٗا وَلَا نَفۡعٗا وَلَا يَمۡلِكُونَ مَوۡتٗا وَلَا حَيَوٰةٗ وَلَا نُشُورٗا ٣

---

1 ಪ್ರಾರಂಭದಲ್ಲಿ ಫುರ್ಕಾನ್‌ನ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಸ್ವತಃ ತಮ್ಮದೇ ವಿಷಯಗಳಲ್ಲಿ ಸಂಪೂರ್ಣ ಅಸಹಾಯಕರಾದ ಆ ಆರಾಧ್ಯರುಗಳಿಂದ ಸಹಾಯವನ್ನು ನಿರೀಕ್ಷಿಸುವುದು ಮತ್ತು ಅವುಗಳನ್ನು ಪೂಜಿಸುವುದು ಮಹಾ ಮೌಢ್ಯವಾಗಿದೆ!

4. ಸತ್ಯನಿಷೇಧಿಗಳು ಹೇಳಿದರು: ‘ಇದು (ಕುರ್‌ಆನ್) ಅವರು (ಪ್ರವಾದಿ) ಸ್ವತಃ ರಚಿಸಿದ ಸುಳ್ಳು ಮಾತ್ರವಾಗಿದೆ. ಅದಕ್ಕಾಗಿ ಇತರ ಕೆಲವರು ಅವರಿಗೆ ನೆರವಾಗಿರುವರು’. ಇವರು ಮಹಾ ಅಕ್ರಮ ಮತ್ತು ಸುಳ್ಳಾರೋಪವನ್ನು ತಂದಿರುವರು.

وَقَالَ ٱلَّذِينَ كَفَرُوٓاْ إِنْ هَٰذَآ إِلَّآ إِفْكٌ ٱفْتَرَىٰهُ وَأَعَانَهُۥ عَلَيْهِ قَوْمٌ ءَاخَرُونَ ۖ فَقَدْ جَآءُو ظُلْمًا وَزُورًا ﴿٤﴾

5. ಅವರು ಹೇಳಿದರು: ‘ಇದು ಪೂರ್ವಿಕರ ಕಟ್ಟುಕಥೆಗಳು ಮಾತ್ರವಾಗಿವೆ. ಅವರು ಅದನ್ನು ಬರೆದಿಟ್ಟಿರುವರು. ತರುವಾಯ ಪ್ರಭಾತದಲ್ಲೂ ಮುಸ್ಸಂಜೆಯಲ್ಲೂ ಅದನ್ನು ಅವರಿಗೆ ಓದಿಕೊಡಲಾಗುತ್ತಿದೆ’.

وَقَالُوٓاْ أَسَٰطِيرُ ٱلْأَوَّلِينَ ٱكْتَتَبَهَا فَهِىَ تُمْلَىٰ عَلَيْهِ بُكْرَةً وَأَصِيلًا ﴿٥﴾

6. (ಓ ಪ್ರವಾದಿಯವರೇ!) ಹೇಳಿರಿ: ‘ಇದನ್ನು ಅವತೀರ್ಣಗೊಳಿಸಿದವನು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ರಹಸ್ಯಗಳನ್ನು ಅರಿಯುವವನಾಗಿರುವನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು’.

قُلْ أَنزَلَهُ ٱلَّذِى يَعْلَمُ ٱلسِّرَّ فِى ٱلسَّمَٰوَٰتِ وَٱلْأَرْضِ ۚ إِنَّهُۥ كَانَ غَفُورًا رَّحِيمًا ﴿٦﴾

7. ಅವರು ಹೇಳಿದರು: ‘ಈ ಸಂದೇಶವಾಹಕ ಯಾಕೆ ಹೀಗೆ? ಇವನು ಆಹಾರ ಸೇವಿಸುತ್ತಿರುವನು ಮತ್ತು ಪೇಟೆಗಳಲ್ಲಿ ಸಂಚರಿಸುತ್ತಿರುವನು. ಇವನ ಜೊತೆಗೆ ಮುನ್ನೆಚ್ಚರಿಕೆಗಾರನಾಗಿರಬಲ್ಲ ಒಬ್ಬ ಮಲಕ್‌ನನ್ನು ಇವನ ಬಳಿಗೆ ಕಳುಹಿಸಲಾಗಿಲ್ಲವೇಕೆ?

وَقَالُواْ مَالِ هَٰذَا ٱلرَّسُولِ يَأْكُلُ ٱلطَّعَامَ وَيَمْشِى فِى ٱلْأَسْوَاقِ لَوْلَآ أُنزِلَ إِلَيْهِ مَلَكٌ فَيَكُونَ مَعَهُۥ نَذِيرًا ﴿٧﴾

8. ಅಥವಾ ಇವನಿಗೆ ಒಂದು ನಿಧಿಯನ್ನು ಕೊಡಲಾಗಿಲ್ಲವೇಕೆ? ಅಥವಾ (ಫಲಗಳನ್ನು) ಸೇವಿಸುವುದಕ್ಕಾಗಿ ಇವನಿಗೆ ಒಂದು ತೋಟವನ್ನು ಕೊಡಲಾಗಿಲ್ಲವೇಕೆ?’ (ಪ್ರವಾದಿಯ ಕುರಿತು) ಅಕ್ರಮಿಗಳು ಹೇಳಿದರು: ‘ನೀವು ಅನುಸರಿಸುತ್ತಿರುವುದು ಒಬ್ಬ ಮಾಟ ಬಾಧಿತ ವ್ಯಕ್ತಿಯನ್ನು ಮಾತ್ರವಾಗಿದೆ’.

أَوْ يُلْقَىٰٓ إِلَيْهِ كَنزٌ أَوْ تَكُونُ لَهُۥ جَنَّةٌ يَأْكُلُ مِنْهَا ۚ وَقَالَ ٱلظَّٰلِمُونَ إِن تَتَّبِعُونَ إِلَّا رَجُلًا مَّسْحُورًا ﴿٨﴾

9. ಅವರು ತಮ್ಮ ಬಗ್ಗೆ ಯಾವೆಲ್ಲ ರೀತಿಯ ಚಿತ್ರೀಕರಣಗಳನ್ನು ನೀಡುತ್ತಿರುವರೆಂದು ನೋಡಿರಿ. ಅದರಿಂದಾಗಿ ಅವರು ಪಥಭ್ರಷ್ಟರಾಗಿರುವರು. ಆದ್ದರಿಂದ ಯಾವುದೇ ಮಾರ್ಗವನ್ನು ಕಾಣಲು ಅವರಿಗೆ ಸಾಧ್ಯವಾಗಲಾರದು.[1]

ٱنظُرْ كَيْفَ ضَرَبُواْ لَكَ ٱلْأَمْثَالَ فَضَلُّواْ فَلَا يَسْتَطِيعُونَ سَبِيلًا ۝٩

10. ತಾನು ಇಚ್ಛಿಸುವುದಾದರೆ ಅದಕ್ಕಿಂತಲೂ ಉತ್ತಮವಾದ ಅಥವಾ ತಳಭಾಗದಲ್ಲಿ ನದಿಗಳು ಹರಿಯುವ ತೋಟಗಳನ್ನು ತಮಗೆ ದಯಪಾಲಿಸಲು ಮತ್ತು ತಮಗೆ ಅರಮನೆಗಳನ್ನು ಮಾಡಿಕೊಡಲು ಸಾಮರ್ಥ್ಯವಿರುವವನಾರೋ ಅವನು ಅನುಗ್ರಹಪೂರ್ಣನಾಗಿರುವನು.

تَبَارَكَ ٱلَّذِىٓ إِن شَآءَ جَعَلَ لَكَ خَيْرًا مِّن ذَٰلِكَ جَنَّـٰتٍ تَجْرِى مِن تَحْتِهَا ٱلْأَنْهَـٰرُ وَيَجْعَل لَّكَ قُصُورًا ۝١٠

11. ಅಲ್ಲ, ಅವರು ಅಂತ್ಯಘಳಿಗೆಯನ್ನು ನಿಷೇಧಿಸಿರುವರು. ಅಂತ್ಯಘಳಿಗೆಯನ್ನು ನಿಷೇಧಿಸಿದವರಿಗೆ ನಾವು ಧಗಧಗಿಸುವ ನರಕಾಗ್ನಿಯನ್ನು ಸಿದ್ಧಗೊಳಿಸಿರುವೆವು.

بَلْ كَذَّبُواْ بِٱلسَّاعَةِ ۖ وَأَعْتَدْنَا لِمَن كَذَّبَ بِٱلسَّاعَةِ سَعِيرًا ۝١١

12. ವಿದೂರಸ್ಥಳದಿಂದ ಅದು ಅವರನ್ನು ಕಾಣುವಾಗ ಅದರ ರೋಷಾವೇಶವನ್ನು ಮತ್ತು ಆರ್ಭಟವನ್ನು ಅವರು ಕೇಳಿಸಿಕೊಳ್ಳುವರು.

إِذَا رَأَتْهُم مِّن مَّكَانٍۭ بَعِيدٍ سَمِعُواْ لَهَا تَغَيُّظًا وَزَفِيرًا ۝١٢

13. ಅವರನ್ನು ಅದರಲ್ಲಿ (ನರಕಾಗ್ನಿಯಲ್ಲಿ) ಸಂಕೋಲೆಗಳಿಂದ ಬಂಧಿಸಲ್ಪಟ್ಟು ಒಂದು ಇಕ್ಕಟ್ಟಾದ ಸ್ಥಳದಲ್ಲಿ ಇಡಲಾದರೆ ಅವರು ಅಲ್ಲಿ ವಿನಾಶಕ್ಕಾಗಿ ಕೂಗುವರು.

وَإِذَآ أُلْقُواْ مِنْهَا مَكَانًا ضَيِّقًا مُّقَرَّنِينَ دَعَوْاْ هُنَالِكَ ثُبُورًا ۝١٣

14. 'ಇಂದು ನೀವು ಒಂದು ವಿನಾಶಕ್ಕಾಗಿ ಕೂಗದಿರಿ. ಅನೇಕ ವಿನಾಶಗಳಿಗಾಗಿ ಕೂಗಿರಿ' (ಎಂದು ಅವರೊಂದಿಗೆ ಹೇಳಲಾಗುವುದು).

لَّا تَدْعُواْ ٱلْيَوْمَ ثُبُورًا وَٰحِدًا وَٱدْعُواْ ثُبُورًا كَثِيرًا ۝١٤

1 ಪ್ರವಾದಿ(ﷺ)ರವರ ವ್ಯಕ್ತಿತ್ವವನ್ನು ಕೀಳಾಗಿಸಲು ಅವರು ಮಾಡಿದ ಚಿತ್ರೀಕರಣಗಳಲ್ಲಿ ಅವರಿಗೆ ತಪ್ಪು ಸಂಭವಿಸಿದೆ. ಅವರನ್ನು ಹತ್ತಿರದಿಂದ ಅರಿತುಕೊಂಡಿರುವವರು ಅದರಿಂದ ಮೋಸಹೋಗಲಾರರು. ಪ್ರವಾದಿ(ﷺ)ರವರ ತೇಜೋವಧೆ ಮಾಡಲು ಫಲಪ್ರದವಾದ ಯಾವುದೇ ಮಾರ್ಗವನ್ನೂ ಅವರು ಕಂಡುಕೊಳ್ಳಲಾರರು.

15. (ಓ ಪ್ರವಾದಿಯವರೇ!) ಹೇಳಿರಿ: 'ಅದು ಉತ್ತಮವೇ? ಅಥವಾ ಭಯಭಕ್ತಿ ಪಾಲಿಸುವವರಿಗೆ ವಾಗ್ದಾನ ಮಾಡಲಾದ ಶಾಶ್ವತ ಸ್ವರ್ಗ ಉತ್ತಮವೇ?' ಅದು ಅವರಿಗಿರುವ ಪ್ರತಿಫಲವಾಗಿದೆ ಮತ್ತು ತಲುಪಲಿರುವ ಸ್ಥಳವೂ ಆಗಿದೆ.

قُلْ أَذَٰلِكَ خَيْرٌ أَمْ جَنَّةُ ٱلْخُلْدِ ٱلَّتِى وُعِدَ ٱلْمُتَّقُونَ ۚ كَانَتْ لَهُمْ جَزَآءً وَمَصِيرًا ﴿١٥﴾

16. ಅವರಿಗೆ ಅವರು ಬಯಸುವುದೆಲ್ಲವೂ ಅಲ್ಲಿದೆ. ಅವರು ಶಾಶ್ವತವಾಸಿಗಳಾಗಿರುವರು. ಅದು ತಮ್ಮ ರಬ್ ಹೊಣೆವಹಿಸಿಕೊಂಡಿರುವ ಜವಾಬ್ದಾರಿಯುತ ವಾಗ್ದಾನವಾಗಿದೆ.

لَّهُمْ فِيهَا مَا يَشَآءُونَ خَٰلِدِينَ ۚ كَانَ عَلَىٰ رَبِّكَ وَعْدًا مَّسْـُٔولًا ﴿١٦﴾

17. ಅವರನ್ನು ಮತ್ತು ಅಲ್ಲಾಹುವಿನ ಹೊರತು ಅವರು ಆರಾಧಿಸುತ್ತಿರುವುದನ್ನು ಅವನು ಒಟ್ಟುಗೂಡಿಸುವ ದಿನ! ತರುವಾಯ ಅವನು (ಆ ಆರಾಧ್ಯರೊಂದಿಗೆ) ಕೇಳುವನು: 'ನನ್ನ ಈ ದಾಸರನ್ನು ದಾರಿತಪ್ಪಿಸಿದವರು ನೀವೇನು? ಅಥವಾ ಅವರು ಸ್ವತಃ ದಾರಿತಪ್ಪಿದರೇ?'

وَيَوْمَ يَحْشُرُهُمْ وَمَا يَعْبُدُونَ مِن دُونِ ٱللَّهِ فَيَقُولُ ءَأَنتُمْ أَضْلَلْتُمْ عِبَادِى هَٰٓؤُلَآءِ أَمْ هُمْ ضَلُّوا۟ ٱلسَّبِيلَ ﴿١٧﴾

18. ಅವರು (ಆರಾಧ್ಯರು) ಹೇಳುವರು: 'ನೀನು ಪರಮ ಪಾವನನು! ನಿನ್ನ ಹೊರತು ಅನ್ಯರನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವುದು ನಮಗೆ ಯುಕ್ತವಾದುದಲ್ಲ. ಆದರೆ ಅವರಿಗೆ ಮತ್ತು ಅವರ ಪೂರ್ವಿಕರಿಗೆ ನೀನು ಸುಖಾನುಕೂಲತೆಯನ್ನು ಒದಗಿಸಿದೆ. ಹೀಗೆ ಅವರು ಉಪದೇಶವನ್ನು ಮರೆತುಬಿಟ್ಟರು ಮತ್ತು ಒಂದು ನಾಶ ಹೊಂದಿದ ಜನತೆಯಾಗಿ ಮಾರ್ಪಟ್ಟರು'.

قَالُوا۟ سُبْحَٰنَكَ مَا كَانَ يَنۢبَغِى لَنَآ أَن نَّتَّخِذَ مِن دُونِكَ مِنْ أَوْلِيَآءَ وَلَٰكِن مَّتَّعْتَهُمْ وَءَابَآءَهُمْ حَتَّىٰ نَسُوا۟ ٱلذِّكْرَ وَكَانُوا۟ قَوْمًۢا بُورًا ﴿١٨﴾

19. (ಆಗ ಅಲ್ಲಾಹು ಬಹುದೇವಾರಾಧಕರೊಂದಿಗೆ ಹೇಳುವನು): 'ನೀವು ಹೇಳುತ್ತಿರುವುದನ್ನು ಅವರು ನಿಷೇಧಿಸಿ ಬಿಟ್ಟಿರುವರು. ಇನ್ನು (ಶಿಕ್ಷೆಯನ್ನು) ಸರಿಸಿ ಬಿಡಲು ಅಥವಾ ಯಾವುದಾದರೂ ಸಹಾಯವನ್ನು ಪಡೆಯಲು ನಿಮ್ಮಿಂದ ಸಾಧ್ಯವಾಗದು. ಆದ್ದರಿಂದ ನಿಮ್ಮ ಪೈಕಿ ಅಕ್ರಮವೆಸಗಿದವನಾರೋ[1] ಅವನಿಗೆ

فَقَدْ كَذَّبُوكُم بِمَا تَقُولُونَ فَمَا تَسْتَطِيعُونَ صَرْفًا وَلَا نَصْرًا ۚ وَمَن يَظْلِم مِّنكُمْ نُذِقْهُ عَذَابًا كَبِيرًا ﴿١٩﴾

1 ಇಲ್ಲಿ ಅಕ್ರಮ ಎಂಬದರ ತಾತ್ಪರ್ಯವು ಬಹುದೇವಾರಾಧನೆಯಾಗಿದೆ ಎಂದು ಅನೇಕ ವ್ಯಾಖ್ಯಾನಕಾರರು ಹೇಳಿದ್ದಾರೆ.

ನಾವು ಮಹಾ ಶಿಕ್ಷೆಯ ರುಚಿಯನ್ನು ಸವಿಯುವಂತೆ ಮಾಡುವೆವು'.

**20.** ಆಹಾರವನ್ನು ಸೇವಿಸುವವರಾಗಿ ಮತ್ತು ಪೇಟೆಗಳಲ್ಲಿ ಸಂಚರಿಸುವವರಾಗಿ ಹೊರತು ತಮಗಿಂತ ಮುಂಚೆ ನಾವು ಸಂದೇಶವಾಹಕರ ಪೈಕಿ ಯಾರನ್ನೂ ಕಳುಹಿಸಿಲ್ಲ. ನೀವು ಸಹನೆ ವಹಿಸುವಿರೋ ಎಂದು ನೋಡುವುದಕ್ಕಾಗಿ ನಿಮ್ಮಲ್ಲಿ ಕೆಲವರನ್ನು ನಾವು ಇತರ ಕೆಲವರಿಗೆ ಒಂದು ಪರೀಕ್ಷೆಯನ್ನಾಗಿ ಮಾಡಿರುವೆವು.(1) ತಮ್ಮ ರಬ್ (ಎಲ್ಲವನ್ನೂ) ವೀಕ್ಷಿಸುವವನಾಗಿರುವನು.

وَمَآ أَرۡسَلۡنَا قَبۡلَكَ مِنَ ٱلۡمُرۡسَلِينَ إِلَّآ إِنَّهُمۡ لَيَأۡكُلُونَ ٱلطَّعَامَ وَيَمۡشُونَ فِي ٱلۡأَسۡوَاقِۗ وَجَعَلۡنَا بَعۡضَكُمۡ لِبَعۡضٖ فِتۡنَةً أَتَصۡبِرُونَۗ وَكَانَ رَبُّكَ بَصِيرٗا ٢٠

**21.** 'ನಮ್ಮ ಮೇಲೇಕೆ ಮಲಕ್‌ಗಳನ್ನು ಇಳಿಸಲಾಗುವುದಿಲ್ಲ? ಅಥವಾ ನಮಗೇಕೆ ನಮ್ಮ ರಬ್ಬನ್ನು (ಪ್ರತ್ಯಕ್ಷವಾಗಿ) ಕಾಣಲಾಗುವುದಿಲ್ಲ?' ಎಂದು ನಮ್ಮ ಭೇಟಿಯನ್ನು ಆಶಿಸದವರು ಹೇಳಿದರು. ಖಂಡಿತವಾಗಿಯೂ ಅವರು ಸ್ವತಃ ಅಹಂಕಾರಪಟ್ಟವರೂ ಮಹಾ ಧಿಕ್ಕಾರ ತೋರಿದವರೂ ಆಗಿರುವರು.

۞ وَقَالَ ٱلَّذِينَ لَا يَرۡجُونَ لِقَآءَنَا لَوۡلَآ أُنزِلَ عَلَيۡنَا ٱلۡمَلَٰٓئِكَةُ أَوۡ نَرَىٰ رَبَّنَاۗ لَقَدِ ٱسۡتَكۡبَرُواْ فِيٓ أَنفُسِهِمۡ وَعَتَوۡ عُتُوّٗا كَبِيرٗا ٢١

**22.** ಅವರು ಮಲಕ್‌ಗಳನ್ನು ನೋಡುವ ದಿನ!(2) ಅಂದು ಅಪರಾಧಿಗಳಿಗೆ ಯಾವುದೇ ಶುಭವಾರ್ತೆಯೂ ಇರಲಾರದು. 'ಕಠೋರವಾದ ನಿರ್ಬಂಧವನ್ನು ಹೇರಲಾಗಿದೆ' ಎಂದು ಅವರು (ಮಲಕ್‌ಗಳು) ಹೇಳುವರು.

يَوۡمَ يَرَوۡنَ ٱلۡمَلَٰٓئِكَةَ لَا بُشۡرَىٰ يَوۡمَئِذٖ لِّلۡمُجۡرِمِينَ وَيَقُولُونَ حِجۡرٗا مَّحۡجُورٗا ٢٢

1 ಅಲ್ಲಾಹು ಕೆಲವರಿಗೆ ಆಧ್ಯಾತ್ಮಿಕವಾದ ಪದವಿಗಳನ್ನು ನೀಡುತ್ತಾನೆ. ಕೆಲವರಿಗೆ ಭೌತಿಕವಾದ ಸ್ಥಾನಮಾನಗಳನ್ನೂ ಸಮೃದ್ಧಿಯನ್ನೂ ನೀಡುತ್ತಾನೆ. ಕೆಲವರಿಗೆ ಏನನ್ನೂ ನೀಡುವುದಿಲ್ಲ. ಇವೆಲ್ಲವನ್ನೂ ಅಲ್ಲಾಹು ತನ್ನ ಯುಕ್ತಿಗನುಗುಣವಾಗಿಯೇ ಮಾಡುತ್ತಿದ್ದಾನೆ. ಅದನ್ನು ಗ್ರಹಿಸಿ ಕೃತಜ್ಞತಾಪೂರ್ವಕವಾಗಿ ಪ್ರತಿಕ್ರಿಯಿಸಲು ಮತ್ತು ಸಂಕಷ್ಟಗಳನ್ನು ಸಹನೆಯೊಂದಿಗೆ ಎದುರಿಸಲು ಯಾರಿಗೆ ಸಾಧ್ಯವಾಗುತ್ತದೆ ಎಂಬುದನ್ನು ಅವನು ಪರೀಕ್ಷಿಸುತ್ತಾನೆ. ಪ್ರವಾದಿಯನ್ನು ಕಳುಹಿಸಿ ಅವರ ಕುರಿತು ನಿಮ್ಮ ನಿಲುವನ್ನೂ ಪರೀಕ್ಷಿಸುತ್ತಾನೆ. ನಿಮ್ಮ ವಿರೋಧಕ್ಕೆ ಪ್ರವಾದಿಯ ಪ್ರತಿಕ್ರಿಯೆ ಹೇಗಿರುತ್ತದೆಂಬುದನ್ನೂ ಪರೀಕ್ಷಿಸುತ್ತಾನೆ.

2 ಅರ್ಥಾತ್ ಪುನರುತ್ಥಾನ ದಿನ. ಅಂದು ಮಲಕ್‌ಗಳು ಅಪರಾಧಿಗಳೊಂದಿಗೆ 'ಇಂದು ನಿಮಗೆ ಸಂತೋಷ ಮತ್ತು ಅನುಗ್ರಹಗಳೆಲ್ಲವನ್ನೂ ತಡೆಹಿಡಿಯಲಾಗಿದೆ' ಎಂದು ಹೇಳುವರು.

23. ನಾವು ಅವರು ಮಾಡಿರುವ ಕರ್ಮಗಳೆಡೆಗೆ ತಿರುಗುವೆವು ಮತ್ತು ಅವುಗಳನ್ನು ನಾವು ಚೆದರಿದ ಧೂಳಿಯನ್ನಾಗಿ ಮಾಡುವೆವು.

وَقَدِمْنَآ إِلَىٰ مَا عَمِلُواْ مِنْ عَمَلٍ فَجَعَلْنَٰهُ هَبَآءً مَّنثُورًا ٢٣

24. ಅಂದು ಸ್ವರ್ಗವಾಸಿಗಳು ಅತ್ಯುತ್ತಮವಾದ ವಾಸಸ್ಥಳವನ್ನೂ ಅತ್ಯುತ್ತಮ ವಿಶ್ರಾಂತಿಧಾಮವನ್ನೂ ಹೊಂದಿದವರಾಗಿರುವರು.

أَصْحَٰبُ ٱلْجَنَّةِ يَوْمَئِذٍ خَيْرٌ مُّسْتَقَرًّا وَأَحْسَنُ مَقِيلًا ٢٤

25. ಆಕಾಶವು ಮೇಘಪದರಗಳು ಹೊರಹೊಮ್ಮುವ ಮತ್ತು ಮಲಕ್‌ಗಳನ್ನು ಶಕ್ತಿಯುತವಾಗಿ ಇಳಿಸಲಾಗುವ ದಿನ!

وَيَوْمَ تَشَقَّقُ ٱلسَّمَآءُ بِٱلْغَمَٰمِ وَنُزِّلَ ٱلْمَلَٰٓئِكَةُ تَنزِيلًا ٢٥

26. ಅಂದು ನೈಜವಾದ ಆಧಿಪತ್ಯವು ಪರಮ ದಯಾಮಯನಿಗಾಗಿದೆ. ಅದು ಸತ್ಯನಿಷೇಧಿಗಳ ಪಾಲಿಗೆ ಒಂದು ಕಠಿಣ ದಿನವಾಗಿದೆ.

ٱلْمُلْكُ يَوْمَئِذٍ ٱلْحَقُّ لِلرَّحْمَٰنِ ۚ وَكَانَ يَوْمًا عَلَى ٱلْكَٰفِرِينَ عَسِيرًا ٢٦

27-29. ಅಕ್ರಮಿಯು ತನ್ನ ಕೈಯ್ಯನ್ನು ಕಚ್ಚುವ ದಿನ! ಅವನು ಹೇಳುವನು: 'ನಾನು ಸಂದೇಶವಾಹಕರೊಂದಿಗೆ ಮಾರ್ಗವನ್ನು ಪಡೆದಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!, ನನ್ನ ದುರದೃಷ್ಟವೇ! ಇಂತಿಂತಹವನನ್ನು ನಾನು ಮಿತ್ರನನ್ನಾಗಿ ಮಾಡದಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ನನ್ನ ಬಳಿಗೆ ಉಪದೇಶವು ಬಂದ ನಂತರವೂ ಅವನು ನನ್ನನ್ನು ಅದರಿಂದ ತಪ್ಪಿ ಹೋಗುವಂತೆ ಮಾಡಿದನು'. ಸೈತಾನನು ಮಾನವನನ್ನು ಕೈ ಚೆಲ್ಲುವವನೇ ಆಗಿರುವನು.

وَيَوْمَ يَعَضُّ ٱلظَّالِمُ عَلَىٰ يَدَيْهِ يَقُولُ يَٰلَيْتَنِى ٱتَّخَذْتُ مَعَ ٱلرَّسُولِ سَبِيلًا ٢٧
يَٰوَيْلَتَىٰ لَيْتَنِى لَمْ أَتَّخِذْ فُلَانًا خَلِيلًا ٢٨
لَّقَدْ أَضَلَّنِى عَنِ ٱلذِّكْرِ بَعْدَ إِذْ جَآءَنِى ۗ وَكَانَ ٱلشَّيْطَٰنُ لِلْإِنسَٰنِ خَذُولًا ٢٩

30. (ಅಂದು) ಸಂದೇಶವಾಹಕರು ಹೇಳುವರು: 'ಓ ನನ್ನ ರಬ್! ಖಂಡಿತವಾಗಿಯೂ ನನ್ನ ಜನತೆಯು ಈ ಕುರ್‌ಆನನ್ನು ಕಡೆಗಣಿಸಿ ತಿರಸ್ಕರಿಸಿರುವರು'.

وَقَالَ ٱلرَّسُولُ يَٰرَبِّ إِنَّ قَوْمِى ٱتَّخَذُواْ هَٰذَا ٱلْقُرْءَانَ مَهْجُورًا ٣٠

31. ಹೀಗೆ ಪ್ರತಿಯೊಬ್ಬ ಸಂದೇಶವಾಹಕರಿಗೂ, ನಾವು ಅಪರಾಧಿಗಳಲ್ಲಿ ಸೇರಿದ ಕೆಲವು ಶತ್ರುಗಳನ್ನು ಮಾಡಿರುವೆವು. ಮಾರ್ಗದರ್ಶಕನಾಗಿ ಮತ್ತು ಸಹಾಯಕನಾಗಿ ತಮ್ಮ ರಬ್ ಸಾಕು!

وَكَذَٰلِكَ جَعَلْنَا لِكُلِّ نَبِىٍّ عَدُوًّا مِّنَ ٱلْمُجْرِمِينَ ۗ وَكَفَىٰ بِرَبِّكَ هَادِيًا وَنَصِيرًا ٣١

**32.** ಸತ್ಯನಿಷೇಧಿಗಳು ಹೇಳಿದರು: 'ಕುರ್‌ಆನನ್ನು ಇವನ ಮೇಲೆ ಒಮ್ಮೆಲೇ ಇಳಿಸಲಾಗಿಲ್ಲವೇಕೆ?' ಅದು ಹೀಗೆ (ಹಂತ ಹಂತವಾಗಿ ಅವತೀರ್ಣಗೊಳ್ಳಬೇಕಾಗಿದೆ). ಅದರ ಮೂಲಕ (ಓ ಪ್ರವಾದಿ) ತಮ್ಮ ಹೃದಯವನ್ನು ನಾವು ಸುದೃಢಗೊಳಿಸುವ ಸಲುವಾಗಿ. ಅದನ್ನು ನಾವು ತಮಗೆ ಸಾವಧಾನವಾಗಿ ಪಾರಾಯಣ ಮಾಡುತ್ತಾ ಕೇಳಿಸಿರುವೆವು.

وَقَالَ ٱلَّذِينَ كَفَرُواْ لَوْلَا نُزِّلَ عَلَيْهِ ٱلْقُرْءَانُ جُمْلَةً وَٰحِدَةً ۚ كَذَٰلِكَ لِنُثَبِّتَ بِهِۦ فُؤَادَكَ ۖ وَرَتَّلْنَٰهُ تَرْتِيلًا ﴿٣٢﴾

**33.** ಅವರು ಯಾವುದೇ ಸಮಸ್ಯೆಯೊಂದಿಗೆ ತಮ್ಮ ಬಳಿಗೆ ಬರಲಾರರು, ನಾವು ಅದರ ವಾಸ್ತವತೆಯನ್ನು ಮತ್ತು ಅತ್ಯುತ್ತಮವಾದ ವಿವರಣೆಯನ್ನು ತಮಗೆ ತಂದುಕೊಡದಿರುವ ಹೊರತು.[1]

وَلَا يَأْتُونَكَ بِمَثَلٍ إِلَّا جِئْنَٰكَ بِٱلْحَقِّ وَأَحْسَنَ تَفْسِيرًا ﴿٣٣﴾

**34.** ಮುಖಗಳನ್ನು ನೆಲಕ್ಕೂರಿದವರಾಗಿ ನರಕದೆಡೆಗೆ ಒಟ್ಟುಗೂಡಿಸಲಾಗುವವರು ಯಾರೋ ಅವರು ಅತಿ ನಿಕೃಷ್ಟ ಸ್ಥಾನದಲ್ಲಿರುವವರೂ ಅತ್ಯಧಿಕ ಪಥಭ್ರಷ್ಟರೂ ಆಗಿರುವರು.

ٱلَّذِينَ يُحْشَرُونَ عَلَىٰ وُجُوهِهِمْ إِلَىٰ جَهَنَّمَ أُوْلَٰٓئِكَ شَرٌّ مَّكَانًا وَأَضَلُّ سَبِيلًا ﴿٣٤﴾

**35.** ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು. ಅವರ ಸಹೋದರರಾದ ಹಾರೂನ್‌ರನ್ನು ಅವರೊಂದಿಗೆ ಸಹಾಯಕನನ್ನಾಗಿ ಮಾಡಿದೆವು.

وَلَقَدْ ءَاتَيْنَا مُوسَى ٱلْكِتَٰبَ وَجَعَلْنَا مَعَهُۥٓ أَخَاهُ هَٰرُونَ وَزِيرًا ﴿٣٥﴾

**36.** ನಂತರ ನಾವು ಹೇಳಿದೆವು: 'ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿರುವ ಜನರೆಡೆಗೆ ನೀವಿಬ್ಬರೂ ತೆರಳಿರಿ. ತರುವಾಯ ನಾವು ಆ ಜನರನ್ನು ಸಂಪೂರ್ಣವಾಗಿ ನಾಶ ಮಾಡಿದೆವು.

فَقُلْنَا ٱذْهَبَآ إِلَى ٱلْقَوْمِ ٱلَّذِينَ كَذَّبُواْ بِـَٔايَٰتِنَا فَدَمَّرْنَٰهُمْ تَدْمِيرًا ﴿٣٦﴾

**37.** ನೂಹ್‌ರ ಜನರನ್ನೂ (ನಾವು ನಾಶ ಮಾಡಿದೆವು). ಅವರು ಸಂದೇಶವಾಹಕರನ್ನು ನಿಷೇಧಿಸಿದಾಗ ಅವರನ್ನು ನಾವು ಮುಳುಗಿಸಿ ನಾಶಮಾಡಿದೆವು. ಅವರನ್ನು ನಾವು ಜನರಿಗೊಂದು ದೃಷ್ಟಾಂತವನ್ನಾಗಿ ಮಾಡಿದೆವು.

وَقَوْمَ نُوحٍ لَّمَّا كَذَّبُواْ ٱلرُّسُلَ أَغْرَقْنَٰهُمْ وَجَعَلْنَٰهُمْ لِلنَّاسِ ءَايَةً ۖ وَأَعْتَدْنَا لِلظَّٰلِمِينَ عَذَابًا أَلِيمًا ﴿٣٧﴾

1 ಅಂದರೆ ಪ್ರವಾದಿ(ﷺ)ರವರ ಪ್ರವಾದಿತ್ವಕ್ಕೆ ವಿರುದ್ಧವಾಗಿ ಅವರು ಯಾವುದೇ ಸಮಸ್ಯೆಯನ್ನು ಮುಂದಿಟ್ಟರೂ ಅದಕ್ಕೆ ಸೂಕ್ತವಾದ ಮತ್ತು ವಿವರಣಾತ್ಮಕವಾದ ಉತ್ತರವನ್ನು ಅಲ್ಲಾಹು ಪ್ರವಾದಿ(ﷺ)ಯವರಿಗೆ ನೀಡದಿರಲಾರನು.

(ಪರಲೋಕದಲ್ಲಿ) ಅಕ್ರಮಿಗಳಿಗೆ ನಾವು ಯಾತನಾಮಯ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

**38.** ಆದ್ ಜನಾಂಗವನ್ನು, ಸಮೂದ್ ಜನಾಂಗವನ್ನು, ರಸ್ಸ್‌ನ ಜನರನ್ನು[1] ಮತ್ತು ಅದರ ಮಧ್ಯೆ ಬದುಕಿದ ಅನೇಕ ತಲೆಮಾರುಗಳನ್ನು (ನಾವು ನಾಶ ಮಾಡಿದೆವು).

وَعَادًا وَثَمُودَاْ وَأَصْحَٰبَ ٱلرَّسِّ وَقُرُونَۢا بَيْنَ ذَٰلِكَ كَثِيرًا ﴿٣٨﴾

**39.** ಎಲ್ಲರಿಗೂ ನಾವು ಉದಾಹರಣೆಗಳನ್ನು ವಿವರಿಸಿ ಕೊಟ್ಟಿದ್ದೆವು. (ಅದನ್ನು ತಿರಸ್ಕರಿಸಿದಾಗ) ಎಲ್ಲರನ್ನೂ ನಾವು ನಿರ್ನಾಮ ಮಾಡಿದೆವು.

وَكُلًّا ضَرَبْنَا لَهُ ٱلْأَمْثَٰلَ ۖ وَكُلًّا تَبَّرْنَا تَتْبِيرًا ﴿٣٩﴾

**40.** ನಿಕೃಷ್ಟ ಮಳೆಯನ್ನು ಸುರಿಸಲಾದ ನಾಡಿನ ಮೂಲಕ[2] ಇವರು ಹಾದು ಹೋಗಿರುವರು. ಆಗ ಇವರು ಅದನ್ನು ಕಂಡಿರಲಿಲ್ಲವೇ? ಅಲ್ಲ, ಇವರು ಪುನರುತ್ಥಾನವನ್ನು ನಿರೀಕ್ಷಿಸದವರಾಗಿರುವರು.

وَلَقَدْ أَتَوْاْ عَلَى ٱلْقَرْيَةِ ٱلَّتِىٓ أُمْطِرَتْ مَطَرَ ٱلسَّوْءِ ۚ أَفَلَمْ يَكُونُواْ يَرَوْنَهَا ۚ بَلْ كَانُواْ لَا يَرْجُونَ نُشُورًا ﴿٤٠﴾

**41.** ಅವರು ತಮ್ಮನ್ನು ಕಾಣುವಾಗ ತಮ್ಮನ್ನು ಹಾಸ್ಯವಸ್ತುವನ್ನಾಗಿ ಮಾಡಿ 'ಅಲ್ಲಾಹು ಸಂದೇಶವಾಹಕನನ್ನಾಗಿ ಕಳುಹಿಸಿರುವುದು ಇವನನ್ನೇ ಏನು?' ಎಂದು ಕೇಳುವುದನ್ನು ಮಾತ್ರ ಮಾಡುವರು.

وَإِذَا رَأَوْكَ إِن يَتَّخِذُونَكَ إِلَّا هُزُوًا أَهَٰذَا ٱلَّذِى بَعَثَ ٱللَّهُ رَسُولًا ﴿٤١﴾

**42.** 'ನಮ್ಮ ಆರಾಧ್ಯರುಗಳ ವಿಷಯದಲ್ಲಿ ನಾವು ಸ್ಥಿರಚಿತ್ತತೆಯೊಂದಿಗೆ ದೃಢವಾಗಿ ನಿಲ್ಲದಿದ್ದರೆ ಇವನು ನಮ್ಮನ್ನು ಅವುಗಳಿಂದ ತಪ್ಪಿಸಿಬಿಡಲು ಸಾಧ್ಯವಾಗುತ್ತಿತ್ತು' (ಎಂದೂ ಅವರು ಹೇಳುತ್ತಿರುವರು). ಶಿಕ್ಷೆಯನ್ನು ಕಣ್ಣಾರೆ ಕಾಣುವ ಸಂದರ್ಭ ಅತ್ಯಧಿಕ ಪಥಭ್ರಷ್ಟರು ಯಾರೆಂಬುದನ್ನು ಅವರು ಅರಿಯುವರು.

إِن كَادَ لَيُضِلُّنَا عَنْ ءَالِهَتِنَا لَوْلَآ أَن صَبَرْنَا عَلَيْهَا ۚ وَسَوْفَ يَعْلَمُونَ حِينَ يَرَوْنَ ٱلْعَذَابَ مَنْ أَضَلُّ سَبِيلًا ﴿٤٢﴾

1 ರಸ್ಸ್‌ನವರ ಕುರಿತು ಕುರ್‌ಆನ್ ವ್ಯಾಖ್ಯಾನಕಾರರು ವಿಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಕೆಲವರ ಪ್ರಕಾರ ಅವರು ಶುಐಬ್(عَلَيْهِ السَّلَامُ) ರವರ ಜನತೆಯಾಗಿದ್ದಾರೆ. ಇತರ ಕೆಲವರು ಹೇಳುವ ಪ್ರಕಾರ ಅದು ಸಮೂದ್ ಜನಾಂಗದ ಒಂದು ಪಂಗಡವಾಗಿದೆ. ಇತರ ಅಭಿಪ್ರಾಯಗಳೂ ಇವೆ.

2 ಇಲ್ಲಿ ಪ್ರವಾದಿ ಲೂತ್(عَلَيْهِ السَّلَامُ)ರವರ ಊರಾದ ಸದೂಮ್ (ಸೊದೋಮ್) ನ್ನು ಉದ್ದೇಶಿಸಲಾಗಿದೆ.

43. ತನ್ನ ಆರಾಧ್ಯನನ್ನು ತನ್ನ ದೇಹೇಚ್ಛೆಯನ್ನಾಗಿ ಮಾಡಿಕೊಂಡವನನ್ನು ತಾವು ಕಂಡಿರುವಿರಾ?(1) ಹಾಗಿರುವಾಗ ಅವನ ವಿಷಯದಲ್ಲಿ ತಾವು ಹೊಣೆಯಾಗುವಿರಾ?

أَرَءَيۡتَ مَنِ ٱتَّخَذَ إِلَٰهَهُۥ هَوَىٰهُ أَفَأَنتَ تَكُونُ عَلَيۡهِ وَكِيلًا ﴿٤٣﴾

44. ಅಥವಾ ಅವರಲ್ಲಿ ಹೆಚ್ಚಿನವರೂ ಆಲಿಸುವವರು ಮತ್ತು ಚಿಂತಿಸುವವರು ಎಂದು ತಾವು ಭಾವಿಸಿರುವಿರಾ? ಅವರು ಕೇವಲ ಜಾನುವಾರುಗಳಂತೆ ಮಾತ್ರವಾಗಿರುವರು. ಅಲ್ಲ, ಅವರೇ ಅತಿಹೆಚ್ಚು ಪಥಭ್ರಷ್ಟರಾಗಿರುವರು.

أَمۡ تَحۡسَبُ أَنَّ أَكۡثَرَهُمۡ يَسۡمَعُونَ أَوۡ يَعۡقِلُونَۚ إِنۡ هُمۡ إِلَّا كَٱلۡأَنۡعَٰمِ بَلۡ هُمۡ أَضَلُّ سَبِيلًا ﴿٤٤﴾

45. ತಮ್ಮ ರಬ್ ನೆರಳನ್ನು ಹೇಗೆ ಚಾಚುವನೆಂದು ತಾವು ನೋಡಿಲ್ಲವೇ? ಅವನು ಇಚ್ಛಿಸುತ್ತಿದ್ದರೆ ಅವನು ಅದನ್ನು ನಿಶ್ಚಲವನ್ನಾಗಿ ಮಾಡುತ್ತಿದ್ದನು. ತರುವಾಯ ನಾವು ಸೂರ್ಯನನ್ನು ಅದಕ್ಕೆ ಮಾರ್ಗದರ್ಶಿಯನ್ನಾಗಿ ಮಾಡಿದೆವು.

أَلَمۡ تَرَ إِلَىٰ رَبِّكَ كَيۡفَ مَدَّ ٱلظِّلَّ وَلَوۡ شَآءَ لَجَعَلَهُۥ سَاكِنٗا ثُمَّ جَعَلۡنَا ٱلشَّمۡسَ عَلَيۡهِ دَلِيلٗا ﴿٤٥﴾

46. ತರುವಾಯ ನಾವು ಅದನ್ನು ನಮ್ಮೆಡೆಗೆ ಸ್ವಲ್ಪ ಸ್ವಲ್ಪವಾಗಿ ವಶಪಡಿಸಿದೆವು.(2)

ثُمَّ قَبَضۡنَٰهُ إِلَيۡنَا قَبۡضٗا يَسِيرٗا ﴿٤٦﴾

47. ನಿಮಗೆ ರಾತ್ರಿಯನ್ನು ಒಂದು ಉಡುಪನ್ನಾಗಿಯೂ ನಿದ್ದೆಯನ್ನು ಒಂದು ವಿಶ್ರಾಂತಿಯನ್ನಾಗಿಯೂ ಮಾಡಿಕೊಟ್ಟವನು ಅವನಾಗಿರುವನು. ಅವನು ಹಗಲನ್ನು ಎಚ್ಚೆತ್ತು ಕೊಳ್ಳುವ ಸಮಯವನ್ನಾಗಿ ಮಾಡಿರುವನು.

وَهُوَ ٱلَّذِي جَعَلَ لَكُمُ ٱلَّيۡلَ لِبَاسٗا وَٱلنَّوۡمَ سُبَاتٗا وَجَعَلَ ٱلنَّهَارَ نُشُورٗا ﴿٤٧﴾

48. ತನ್ನ ಕಾರುಣ್ಯಕ್ಕೆ ಮುಂಚೆ ಶುಭಸೂಚನೆಯಾಗಿ ಮಾರುತಗಳನ್ನು ಕಳುಹಿಸಿದವನು

وَهُوَ ٱلَّذِيٓ أَرۡسَلَ ٱلرِّيَٰحَ بُشۡرَۢا بَيۡنَ يَدَيۡ

1 ತಾನು ಯಾರನ್ನು ಅಥವಾ ಯಾವುದನ್ನು ಆರಾಧಿಸಬೇಕೆಂದು ತನ್ನಿಚ್ಛೆಯಂತೆ ತೀರ್ಮಾನ ಕೈಗೊಳ್ಳುವವನನ್ನು ಅಲ್ಲಾಹು ವಿರೋಧಿಸುತ್ತಾನೆ. ಕೆಲವು ವ್ಯಾಖ್ಯಾನಕಾರರ ಪ್ರಕಾರ ಇದರ ಅರ್ಥವು: ತನ್ನ ಇಚ್ಛೆಯನ್ನು (ಅಥವಾ ದೇಹೇಚ್ಛೆಯನ್ನು) ಆರಾಧ್ಯನನ್ನಾಗಿ ಮಾಡಿಕೊಂಡವನನ್ನು ತಾವು ಕಂಡಿರುವಿರಾ? ಎಂದಾಗಿದೆ.

2 ನೆರಳು, ಬೆಳಕು, ಬಿಸಿಲು ಇತ್ಯಾದಿಗಳು ಮನುಷ್ಯನ ಮಟ್ಟಿಗೆ ನಿರ್ಣಾಯಕ ಪ್ರಾಮುಖ್ಯತೆಯುಳ್ಳವುಗಳಾಗಿವೆ. ಸುಡುವ ಮರುಭೂಮಿಯಲ್ಲಿ ಯಾತ್ರೆ ಮಾಡುವವನಿಗೆ ಬೆಳಗ್ಗೆ ಮತ್ತು ಸಂಜೆ ಚಾಚಿಕೊಳ್ಳುವ ನೆರಳು, –ಬೋರಲು ಗುಡ್ಡಗಳ ಹಾಗೂ ಇನ್ನಿತರ ನೆರಳುಗಳು– ನೆಮ್ಮದಿಯನ್ನು ನೀಡುತ್ತವೆ. ನೆರಳು ಉದ್ದವಾಗುವುದು ಮತ್ತು ಕುಗ್ಗುವುದು ಮತ್ತು ಪುನಃ ಉದ್ದವಾಗುವುದು ಭೂಮಿಯ ಪರಿಭ್ರಮಣದಿಂದಾಗಿದೆ. ಆದರೆ ನಮಗೆ ಅದು ಅನುಭವವಾಗುವುದು ಸೂರ್ಯನ ಚಲನೆಯ ಮೂಲಕವಾಗಿದೆ. ನಮ್ಮ ಬಳಿಗೆ ಎಂಬುದರ ತಾತ್ಪರ್ಯವು 'ನಾವು ನಿರ್ಧರಿಸುವ ದಿಕ್ಕಿನೆಡೆಗೆ' ಎಂದಾಗಿದೆ.

رَحۡمَتِهِۦۚ وَأَنزَلۡنَا مِنَ ٱلسَّمَآءِ مَآءٗ طَهُورٗا ﴿٤٨﴾

ಅವನಾಗಿರುವನು. ಆಕಾಶದಿಂದ ನಾವು ಶುದ್ಧವಾದ ಜಲವನ್ನೂ ಇಳಿಸಿರುವೆವು.

لِّنُحۡـِۧيَ بِهِۦ بَلۡدَةٗ مَّيۡتٗا وَنُسۡقِيَهُۥ مِمَّا
خَلَقۡنَآ أَنۡعَٰمٗا وَأَنَاسِيَّ كَثِيرٗا ﴿٤٩﴾

**49.** ತನ್ಮೂಲಕ ನಾವು ನಿರ್ಜೀವವಾದ ಪಟ್ಟಣಕ್ಕೆ ಜೀವ ನೀಡುವ ಸಲುವಾಗಿ ಹಾಗೂ ನಾವು ಸೃಷ್ಟಿಸಿದ ಅನೇಕ ಜಾನುವಾರುಗಳಿಗೆ ಮತ್ತು ಮನುಷ್ಯರಿಗೆ ಅದನ್ನು ಕುಡಿಸುವ ಸಲುವಾಗಿ.

وَلَقَدۡ صَرَّفۡنَٰهُ بَيۡنَهُمۡ لِيَذَّكَّرُواْ فَأَبَىٰٓ
أَكۡثَرُ ٱلنَّاسِ إِلَّا كُفُورٗا ﴿٥٠﴾

**50.** ಅವರು ಚಿಂತಿಸಿ ಗ್ರಹಿಸುವುದಕ್ಕಾಗಿ ನಾವದನ್ನು (ಮಳೆನೀರನ್ನು) ಅವರ ನಡುವೆ ಹಂಚಿರುವೆವು. ಆದರೆ ಜನರಲ್ಲಿ ಹೆಚ್ಚಿನವರೂ ಕೃತಘ್ನತೆ ತೋರಿಸಲಿಕ್ಕಾಗಿಯೇ ಹೊರತು ಇನ್ನಾವುದಕ್ಕೂ ಮನಸ್ಸು ಮಾಡಲಿಲ್ಲ.

وَلَوۡ شِئۡنَا لَبَعَثۡنَا فِي كُلِّ قَرۡيَةٖ نَّذِيرٗا ﴿٥١﴾

**51.** ನಾವಿಚ್ಛಿಸುತ್ತಿದ್ದರೆ ಎಲ್ಲ ನಾಡುಗಳಿಗೂ ನಾವು ಒಬ್ಬೊಬ್ಬ ಮುನ್ನೆಚ್ಚರಿಕೆಗಾರನನ್ನು ಕಳುಹಿಸುತ್ತಿದ್ದೆವು.[1]

فَلَا تُطِعِ ٱلۡكَٰفِرِينَ وَجَٰهِدۡهُم بِهِۦ
جِهَادٗا كَبِيرٗا ﴿٥٢﴾

**52.** ಆದ್ದರಿಂದ ತಾವು ಸತ್ಯನಿಷೇಧಿಗಳನ್ನು ಅನುಸರಿಸದಿರಿ. ತಾವು ಇದರ (ಕುರ್‌ಆನ್‌ನ) ಮೂಲಕ ಅವರೊಂದಿಗೆ ಅತಿದೊಡ್ಡ ಹೋರಾಟವನ್ನು ನಡೆಸಿರಿ.

۞ وَهُوَ ٱلَّذِي مَرَجَ ٱلۡبَحۡرَيۡنِ هَٰذَا عَذۡبٞ
فُرَاتٞ وَهَٰذَا مِلۡحٌ أُجَاجٞ وَجَعَلَ بَيۡنَهُمَا
بَرۡزَخٗا وَحِجۡرٗا مَّحۡجُورٗا ﴿٥٣﴾

**53.** ಎರಡು ಜಲಾಶಯಗಳನ್ನು[2] ಸ್ವತಂತ್ರವಾಗಿ ಹರಿಯಲು ಬಿಟ್ಟವನು ಅವನಾಗಿರುವನು. ಒಂದರಲ್ಲಿ ತಿಳಿಯಾದ ಶುದ್ಧಜಲವೂ ಇನ್ನೊಂದರಲ್ಲಿ ಕಹಿಯಾದ ಉಪ್ಪು ನೀರೂ ಇರುವುದು. ಅವನು ಅವೆರಡರ ಮಧ್ಯೆ ಒಂದು ಪರದೆಯನ್ನೂ, ಬಲಿಷ್ಠವಾದ ಒಂದು ತಡೆಯನ್ನೂ ಸ್ಥಾಪಿಸಿರುವನು.[3]

---

1 ಅಲ್ಲಾಹುವಿಗೆ ಸಾಕಷ್ಟು ಪ್ರವಾದಿಗಳನ್ನು ಕಳುಹಿಸಲು ಮತ್ತು ಸಾಕಷ್ಟು ಗ್ರಂಥಗಳನ್ನು ಅವತೀರ್ಣಗೊಳಿಸಲು ಸಾಧ್ಯವಿದೆ. ಆದರೆ ಅವನು ತಾನಿಚ್ಛಿಸುವ ಸಂದರ್ಭಗಳಲ್ಲಿ ತಾನಿಚ್ಛಿಸುವ ಪ್ರದೇಶಗಳಿಗೆ ಮಾತ್ರ ಅವನು ಪ್ರವಾದಿಗಳನ್ನು ಕಳುಹಿಸಿದ್ದಾನೆ. ಅವನ ತೀರ್ಪು ಅನುಲ್ಲಂಘನೀಯವಾಗಿದೆ.

2 ಅಗಾಧ ಪ್ರಮಾಣದ ನೀರನ್ನು ಹೊಂದಿರುವ ದೊಡ್ಡ ಜಲಾಶಯಗಳನ್ನು 'ಬಹರ್' ಎನ್ನಲಾಗುತ್ತದೆ.

3 ಪ್ರಬಲ ಹರಿವನ್ನು ಹೊಂದಿರುವ ನದಿಗಳು ಸಮುದ್ರವನ್ನು ಸೇರುವಾಗ ಭಾರೀ ಅಲೆಗಳನ್ನು ಹಾಗೂ ಉಬ್ಬರಗಳನ್ನು ಗೆದ್ದು ಸಮುದ್ರದ ನೀರಿನೊಂದಿಗೆ ಬೆರೆಯದೆ ಬಹಳ ದೂರದವರೆಗೆ ಹರಿಯುತ್ತದೆ.

54. ಮನುಷ್ಯನನ್ನು ನೀರಿನಿಂದ ಸೃಷ್ಟಿಸಿದವನು ಅವನಾಗಿರುವನು. ತರುವಾಯ ಅವನನ್ನು ರಕ್ತಸಂಬಂಧವುಳ್ಳವನನ್ನಾಗಿ ಮತ್ತು ವಿವಾಹಸಂಬಂಧವುಳ್ಳವನನ್ನಾಗಿ ಮಾಡಿದನು.[1] ತಮ್ಮ ರಬ್ ಸಾಮರ್ಥ್ಯವುಳ್ಳವನಾಗಿರುವನು.

وَهُوَ ٱلَّذِى خَلَقَ مِنَ ٱلْمَآءِ بَشَرًا فَجَعَلَهُۥ نَسَبًا وَصِهْرًا ۗ وَكَانَ رَبُّكَ قَدِيرًا ﴿٥٤﴾

55. ಅವರು ಅಲ್ಲಾಹುವಿನ ಹೊರತು ತಮಗೆ ಲಾಭವನ್ನಾಗಲಿ ಹಾನಿಯನ್ನಾಗಲಿ ಮಾಡದವುಗಳನ್ನು ಆರಾಧಿಸುತ್ತಿರುವರು. ಸತ್ಯನಿಷೇಧಿಯು ತನ್ನ ರಬ್‌ಗೆ ವಿರುದ್ಧವಾಗಿ (ದುಷ್ಟಶಕ್ತಿಗಳಿಗೆ) ಬೆಂಬಲ ನೀಡುವವನಾಗಿರುವನು.

وَيَعْبُدُونَ مِن دُونِ ٱللَّهِ مَا لَا يَنفَعُهُمْ وَلَا يَضُرُّهُمْ ۗ وَكَانَ ٱلْكَافِرُ عَلَىٰ رَبِّهِۦ ظَهِيرًا ﴿٥٥﴾

56. (ಓ ಪ್ರವಾದಿಯವರೇ!) ತಮ್ಮನ್ನು ಶುಭವಾರ್ತೆ ತಿಳಿಸುವವರನ್ನಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರನ್ನಾಗಿಯೇ ವಿನಾ ನಾವು ಕಳುಹಿಸಿಲ್ಲ.

وَمَآ أَرْسَلْنَٰكَ إِلَّا مُبَشِّرًا وَنَذِيرًا ﴿٥٦﴾

57. ಹೇಳಿರಿ: 'ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡುವುದಿಲ್ಲ, ಯಾರಾದರೂ ತನ್ನ ರಬ್‌ನೆಡೆಗಿರುವ ಮಾರ್ಗವನ್ನು ಸ್ವೀಕಾರ ಮಾಡಲು ಬಯಸುವುದಾದರೆ (ಹಾಗೆ ಮಾಡಲಿ) ಎಂಬುದರ ಹೊರತು.

قُلْ مَآ أَسْـَٔلُكُمْ عَلَيْهِ مِنْ أَجْرٍ إِلَّا مَن شَآءَ أَن يَتَّخِذَ إِلَىٰ رَبِّهِۦ سَبِيلًا ﴿٥٧﴾

58. ಎಂದಿಗೂ ಮರಣಹೊಂದದೆ ಜೀವಂತವಾಗಿರುವವನ ಮೇಲೆ ತಾವು ಭರವಸೆಯನ್ನಿಡಿರಿ. ಅವನ ಸ್ತುತಿಯೊಂದಿಗೆ ಅವನನ್ನು ಕೊಂಡಾಡಿರಿ. ತನ್ನ ದಾಸರ ಪಾಪಗಳ ಕುರಿತು ಸೂಕ್ಷ್ಮಜ್ಞಾನವುಳ್ಳವನಾಗಿ ಅವನೇ ಸಾಕು.

وَتَوَكَّلْ عَلَى ٱلْحَىِّ ٱلَّذِى لَا يَمُوتُ وَسَبِّحْ بِحَمْدِهِۦ ۚ وَكَفَىٰ بِهِۦ بِذُنُوبِ عِبَادِهِۦ خَبِيرًا ﴿٥٨﴾

---

1 ಮನುಷ್ಯರು ಕೂಡ ಇತರ ಜೀವಿಗಳಂತೆ ವೀರ್ಯದಿಂದಲೇ ಬೆಳೆಯುತ್ತಾನಾದರೂ ಇತರೆಲ್ಲ ಜೀವರಾಶಿಗಳಿಗೆ ವ್ಯತಿರಿಕ್ತವಾಗಿ ಮನುಷ್ಯರ ಸಾಮಾಜಿಕ ಸಂಬಂಧಗಳು ಅವರ ಬದುಕಿಗೆ ಭದ್ರತೆಯನ್ನು ಮತ್ತು ವಿಕಸನವನ್ನು ನೀಡುತ್ತದೆ. ರಕ್ತಸಂಬಂಧ ಮತ್ತು ವೈವಾಹಿಕ ಸಂಬಂಧವು ಮನುಷ್ಯನ ಸಾಮಾಜಿಕ ಜೀವನಕ್ಕೆ ಅಡಿಪಾಯವನ್ನು ಹಾಕುತ್ತದೆ. ಸಂಬಂಧಿಕರ ಮೇಲಿರುವ ಹೊಣೆಗಾರಿಕೆಗಳನ್ನು ನಿಭಾಯಿಸಲು ಇಸ್ಲಾಮ್ ಅತಿ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದೆ. ಕುಟುಂಬ ಸಂಬಂಧವನ್ನು ಕಡಿದು ಬೇರ್ಪಡಿಸುವುದನ್ನು ಇಸ್ಲಾಮ್ ಮಹಾ ಅಪರಾಧವಾಗಿ ಪರಿಗಣಿಸುತ್ತದೆ. ಇವೆರಡು ವಿಧದ ಸಂಬಂಧಿಕರಿಗೆ ಇಸ್ಲಾಮ್ ವಾರೀಸು ಹಕ್ಕನ್ನು ನೀಡುತ್ತದೆ.

59. ಅವನು ಆಕಾಶಗಳನ್ನು, ಭೂಮಿಯನ್ನು ಮತ್ತು ಅವೆರಡರ ಮಧ್ಯೆಯಿರುವುದನ್ನು ಆರು ದಿನಗಳಲ್ಲಿ ಸೃಷ್ಟಿಸಿದವನಾಗಿರುವನು. ತರುವಾಯ ಅವನು ಸಿಂಹಾಸನಾರೂಢನಾದನು. ಅವನು ಪರಮ ದಯಾಮಯನಾಗಿರುವನು. ಇದರ ಕುರಿತು ಸೂಕ್ಷ್ಮಜ್ಞಾನವಿರುವವನಲ್ಲಿಯೇ ಕೇಳಿರಿ.

ٱلَّذِى خَلَقَ ٱلسَّمَٰوَٰتِ وَٱلْأَرْضَ وَمَا بَيْنَهُمَا فِى سِتَّةِ أَيَّامٍ ثُمَّ ٱسْتَوَىٰ عَلَى ٱلْعَرْشِ ٱلرَّحْمَٰنُ فَسْـَٔلْ بِهِۦ خَبِيرًا ﴿٥٩﴾

60. 'ಪರಮ ದಯಾಮಯನಿಗೆ ಸಾಷ್ಟಾಂಗವೆರಗಿರಿ' ಎಂದು ಅವರೊಂದಿಗೆ ಹೇಳಲಾದರೆ ಅವರು ಹೇಳುವರು: 'ಪರಮ ದಯಾಮಯ ಎಂದರೇನು?[1] ತಾವು ನಮ್ಮೊಂದಿಗೆ ಆಜ್ಞಾಪಿಸುವುದಕ್ಕೆ ನಾವು ಸಾಷ್ಟಾಂಗವೆರಗುವುದೇ?' ಹೀಗೆ ಅದು ಅವರ ವಿಕರ್ಷಣೆಯನ್ನು ಇನ್ನಷ್ಟು ಅಧಿಕಗೊಳಿಸಿತು.

وَإِذَا قِيلَ لَهُمُ ٱسْجُدُوا۟ لِلرَّحْمَٰنِ قَالُوا۟ وَمَا ٱلرَّحْمَٰنُ أَنَسْجُدُ لِمَا تَأْمُرُنَا وَزَادَهُمْ نُفُورًا ۩ ﴿٦٠﴾

61. ಆಕಾಶದಲ್ಲಿ ನಕ್ಷತ್ರಪುಂಜಗಳನ್ನು ಸ್ಥಾಪಿಸಿದವನು ಅನುಗ್ರಹಪೂರ್ಣನಾಗಿರುವನು. ಅವನು ಅದರಲ್ಲಿ ಒಂದು ದೀಪವನ್ನು (ಸೂರ್ಯನನ್ನು) ಮತ್ತು ಬೆಳಗುವ ಚಂದ್ರನನ್ನೂ ಉಂಟುಮಾಡಿರುವನು.

تَبَارَكَ ٱلَّذِى جَعَلَ فِى ٱلسَّمَآءِ بُرُوجًا وَجَعَلَ فِيهَا سِرَٰجًا وَقَمَرًا مُّنِيرًا ﴿٦١﴾

62. ರಾತ್ರಿ ಹಗಲುಗಳು ಆವರ್ತಿಸಿ ಬರುವಂತೆ ಮಾಡಿದವನು ಅವನಾಗಿರುವನು. ಚಿಂತಿಸಿ ಗ್ರಹಿಸಲು ಇಚ್ಛಿಸುವವರಿಗೆ ಅಥವಾ ಕೃತಜ್ಞತೆ ಸಲ್ಲಿಸಲು ಬಯಸುವವರಿಗೆ (ಒಂದು ದೃಷ್ಟಾಂತವಾಗಿ).

وَهُوَ ٱلَّذِى جَعَلَ ٱلَّيْلَ وَٱلنَّهَارَ خِلْفَةً لِّمَنْ أَرَادَ أَن يَذَّكَّرَ أَوْ أَرَادَ شُكُورًا ﴿٦٢﴾

63. ಪರಮ ದಯಾಮಯನ ದಾಸರು ಭೂಮಿಯಲ್ಲಿ ವಿನಮ್ರತೆಯೊಂದಿಗೆ ಚಲಿಸುವವರಾಗಿರುವರು. ಅವಿವೇಕಿಗಳು ಅವರೊಂದಿಗೆ ಮಾತನಾಡಿದರೆ ಅವರು ಶಾಂತಿಯೊಂದಿಗೆ ಉತ್ತರಿಸುವರು.[2]

وَعِبَادُ ٱلرَّحْمَٰنِ ٱلَّذِينَ يَمْشُونَ عَلَى ٱلْأَرْضِ هَوْنًا وَإِذَا خَاطَبَهُمُ ٱلْجَٰهِلُونَ قَالُوا۟ سَلَٰمًا ﴿٦٣﴾

64. ಅವರು ತಮ್ಮ ರಬ್‌ಗೆ ಸಾಷ್ಟಾಂಗವೆರಗುವವರಾಗಿ ಮತ್ತು ನಿಂತು

وَٱلَّذِينَ يَبِيتُونَ لِرَبِّهِمْ سُجَّدًا وَقِيَٰمًا ﴿٦٤﴾

1 ಅಲ್ಲಾಹು ಪರಮ ಕರುಣಾಳು ಆಗಿರುವನು ಎಂಬ ವಿಶೇಷಣವನ್ನು ಅವರು ನಿಷೇಧಿಸುತ್ತಿದ್ದರು ಮತ್ತು ದೇವ ದೇವತೆಯರ ಕರುಣೆಯನ್ನು ನಿರೀಕ್ಷಿಸುತ್ತಿದ್ದರು.

2 'ಸುರಕ್ಷಿತವಾದ ಮಾತುಗಳನ್ನು ಆಡಿ ಪಾರಾಗುವವರು' ಎಂದೂ ಅರ್ಥೈಸಿಕೊಳ್ಳಬಹುದು.

ನಮಾಝ್ ಮಾಡುವವರಾಗಿ ರಾತ್ರಿಯನ್ನು ಕಳೆಯುವವರಾಗಿರುವರು.

65-66. ಅವರು 'ಓ ನಮ್ಮ ರಬ್! ನಮ್ಮಿಂದ ನರಕ ಶಿಕ್ಷೆಯನ್ನು ಸರಿಸಿ ಬಿಡು. ಖಂಡಿತವಾಗಿಯೂ ಅದರ ಶಿಕ್ಷೆಯು ಬೇರ್ಪಡಿಸಲಾಗದ ವಿಪತ್ತಾಗಿದೆ. ಖಂಡಿತವಾಗಿಯೂ ಅದು ಅತ್ಯಂತ ನಿಕೃಷ್ಟ ತಂಗುದಾಣವೂ, ವಾಸಸ್ಥಳವೂ ಆಗಿದೆ' ಎಂದು ಹೇಳುವವರಾಗಿರುವರು.

وَٱلَّذِينَ يَقُولُونَ رَبَّنَا ٱصْرِفْ عَنَّا عَذَابَ جَهَنَّمَ إِنَّ عَذَابَهَا كَانَ غَرَامًا ﴿٦٥﴾ إِنَّهَا سَآءَتْ مُسْتَقَرًّا وَمُقَامًا ﴿٦٦﴾

67. ಅವರು ಖರ್ಚು ಮಾಡುವಾಗ ದುಂದುಗಾರಿಕೆ ಮಾಡದೆ ಮತ್ತು ಜಿಪುಣತನ ತೋರಿಸದೆ ಅವೆರಡರ ನಡುವಿನ ಮಧ್ಯಮ ಮಾರ್ಗವನ್ನು ಸ್ವೀಕರಿಸುವವರಾಗಿರುವರು.

وَٱلَّذِينَ إِذَآ أَنفَقُوا۟ لَمْ يُسْرِفُوا۟ وَلَمْ يَقْتُرُوا۟ وَكَانَ بَيْنَ ذَٰلِكَ قَوَامًا ﴿٦٧﴾

68. ಅವರು ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರನ್ನು ಕರೆದು ಪ್ರಾರ್ಥಿಸದವರೂ, ಅಲ್ಲಾಹು ಪಾವಿತ್ರ್ಯತೆ ನೀಡಿರುವ ಯಾವುದೇ ಜೀವವನ್ನೂ ನ್ಯಾಯವಾಗಿಯೇ ಹೊರತು ಹತ್ಯೆ ಮಾಡದವರೂ, ವ್ಯಭಿಚಾರ ಮಾಡದವರೂ ಆಗಿರುವರು. ಯಾರಾದರೂ ಇವುಗಳನ್ನು ಮಾಡುವುದಾದರೆ ಅವನು ಪಾಪಫಲವನ್ನು ಕಾಣುವನು.

وَٱلَّذِينَ لَا يَدْعُونَ مَعَ ٱللَّهِ إِلَٰهًا ءَاخَرَ وَلَا يَقْتُلُونَ ٱلنَّفْسَ ٱلَّتِى حَرَّمَ ٱللَّهُ إِلَّا بِٱلْحَقِّ وَلَا يَزْنُونَ ۚ وَمَن يَفْعَلْ ذَٰلِكَ يَلْقَ أَثَامًا ﴿٦٨﴾

69. ಪುನರುತ್ಥಾನ ದಿನದಂದು ಅವನಿಗೆ ಶಿಕ್ಷೆಯನ್ನು ದ್ವಿಗುಣಗೊಳಿಸಲಾಗುವುದು. ಅವನು ಅದರಲ್ಲಿ ನಿಂದ್ಯತೆಯೊಂದಿಗೆ ಶಾಶ್ವತವಾಗಿ ವಾಸಿಸುವನು.

يُضَٰعَفْ لَهُ ٱلْعَذَابُ يَوْمَ ٱلْقِيَٰمَةِ وَيَخْلُدْ فِيهِۦ مُهَانًا ﴿٦٩﴾

70. ಆದರೆ ಪಶ್ಚಾತ್ತಾಪಪಟ್ಟವರು, ವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗಳನ್ನು ಮಾಡಿದವರ ಹೊರತು. ಅಂತಹವರಿಗೆ ಅಲ್ಲಾಹು ಅವರ ಕೆಡುಕುಗಳನ್ನು ಒಳಿತುಗಳನ್ನಾಗಿ ಬದಲಿಸಿ ಕೊಡುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

إِلَّا مَن تَابَ وَءَامَنَ وَعَمِلَ عَمَلًا صَٰلِحًا فَأُو۟لَٰٓئِكَ يُبَدِّلُ ٱللَّهُ سَيِّـَٔاتِهِمْ حَسَنَٰتٍ ۗ وَكَانَ ٱللَّهُ غَفُورًا رَّحِيمًا ﴿٧٠﴾

71. ಯಾರು ಪಶ್ಚಾತ್ತಾಪಪಟ್ಟು ಸತ್ಕರ್ಮವೆಸಗುವನೋ ನಿಜವಾಗಿ ಅವನು ಅಲ್ಲಾಹುವಿನೆಡೆಗೆ ಯಥಾವತ್ತಾಗಿ ಮರಳುವನು.

وَمَن تَابَ وَعَمِلَ صَٰلِحًا فَإِنَّهُۥ يَتُوبُ إِلَى ٱللَّهِ مَتَابًا ﴿٧١﴾

**72.** ಅವರು ಸುಳ್ಳಿಗೆ ಸಾಕ್ಷಿ ನಿಲ್ಲದವರೂ, ಅನಾವಶ್ಯಕ ವಿಷಯಗಳ ಬಳಿಯಿಂದ ಹಾದುಹೋಗುವುದಾದರೆ ಸಭ್ಯರಾಗಿ ಹಾದುಹೋಗುವವರೂ ಆಗಿರುವರು.

وَٱلَّذِينَ لَا يَشۡهَدُونَ ٱلزُّورَ وَإِذَا مَرُّواْ بِٱللَّغۡوِ مَرُّواْ كِرَامٗا ٧٢

**73.** ತಮ್ಮ ರಬ್‌ನ ವಚನಗಳ ಮೂಲಕ ಅವರಿಗೆ ಉಪದೇಶ ನೀಡಲಾದರೆ ಅವರು ಅವುಗಳ ಮೇಲೆ ಕಿವುಡರೂ, ಕುರುಡರೂ ಆಗಿ ಬೀಳದವರಾಗಿರುವರು.[1]

وَٱلَّذِينَ إِذَا ذُكِّرُواْ بِـَٔايَٰتِ رَبِّهِمۡ لَمۡ يَخِرُّواْ عَلَيۡهَا صُمّٗا وَعُمۡيَانٗا ٧٣

**74.** ಅವರು, 'ಓ ನಮ್ಮ ರಬ್! ನಮ್ಮ ಪತ್ನಿಯರಲ್ಲಿ ಮತ್ತು ನಮ್ಮ ಸಂತತಿಗಳಲ್ಲಿ ನೀನು ನಮಗೆ ಕಣ್ಮನ ತಣಿಸುವಿಕೆಯನ್ನು ದಯಪಾಲಿಸು ಮತ್ತು ಭಯಭಕ್ತಿ ಪಾಲಿಸುವವರಿಗೆ ನಮ್ಮನ್ನು ಮಾದರಿಯೋಗ್ಯರನ್ನಾಗಿ ಮಾಡು' ಎಂದು ಪ್ರಾರ್ಥಿಸುವವರಾಗಿರುವರು.

وَٱلَّذِينَ يَقُولُونَ رَبَّنَا هَبۡ لَنَا مِنۡ أَزۡوَٰجِنَا وَذُرِّيَّٰتِنَا قُرَّةَ أَعۡيُنٖ وَٱجۡعَلۡنَا لِلۡمُتَّقِينَ إِمَامًا ٧٤

**75.** ಅವರಿಗೆ ಅವರು ಸಹನೆ ವಹಿಸಿರುವುದರ ಫಲವಾಗಿ (ಸ್ವರ್ಗದಲ್ಲಿ) ಉನ್ನತ ಸ್ಥಾನವನ್ನು ಪ್ರತಿಫಲವಾಗಿ ನೀಡಲಾಗುವುದು. ಅಲ್ಲಿ ಅವರನ್ನು ಅಭಿವಂದನೆ ಮತ್ತು ಶಾಂತಿಯ ಶುಭಾಶಯಗಳೊಂದಿಗೆ ಬರಮಾಡಿ ಕೊಳ್ಳಲಾಗುವುದು.

أُوْلَٰٓئِكَ يُجۡزَوۡنَ ٱلۡغُرۡفَةَ بِمَا صَبَرُواْ وَيُلَقَّوۡنَ فِيهَا تَحِيَّةٗ وَسَلَٰمًا ٧٥

**76.** ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಆ ತಂಗುದಾಣ ಮತ್ತು ವಾಸಸ್ಥಳವು ಎಷ್ಟು ಉತ್ತಮವಾದುದು!

خَٰلِدِينَ فِيهَاۚ حَسُنَتۡ مُسۡتَقَرّٗا وَمُقَامٗا ٧٦

**77.** (ಓ ಪ್ರವಾದಿಯವರೇ!) ಹೇಳಿರಿ: 'ನಿಮ್ಮ ಪ್ರಾರ್ಥನೆಯಿಲ್ಲದಿದ್ದರೆ ನನ್ನ ರಬ್ ನಿಮಗೆ ಯಾವ ಪರಿಗಣನೆಯನ್ನು ನೀಡಿಯಾನು?'.[2] ಆದರೆ ನೀವು ನಿಷೇಧಿಸಿರುವಿರಿ. ಆದ್ದರಿಂದ ಅದಕ್ಕಿರುವ ಶಿಕ್ಷೆಯು ಅನಿವಾರ್ಯವಾಗಿದೆ.

قُلۡ مَا يَعۡبَؤُاْ بِكُمۡ رَبِّي لَوۡلَا دُعَآؤُكُمۡۖ فَقَدۡ كَذَّبۡتُمۡ فَسَوۡفَ يَكُونُ لِزَامَۢا ٧٧

---

1 ಅವರು ಉಪದೇಶವನ್ನು ಆಲಿಸಲು ಅಥವಾ ಚಿಂತಿಸಿಗ್ರಹಿಸಲು ಸಿದ್ಧರಾಗದೆ ಅಂಧವಾಗಿ ವಿರೋಧಿಸುವುದರ ಬದಲು ಅದನ್ನು ಗಮನವಿಟ್ಟು ಆಲಿಸಿ ಸೂಕ್ತ ನಿಲುವನ್ನು ಹೊಂದುವವರಾಗಿದ್ದಾರೆ.

2 ಮನುಷ್ಯನು ಎಷ್ಟೇ ಉನ್ನತನಾಗಿದ್ದರೂ ಅಲ್ಲಾಹು ಪರಿಗಣಿಸುವುದಿಲ್ಲ. ಅವನೊಂದಿಗೆ ನಿಷ್ಕಳಂಕವಾಗಿ ಪ್ರಾರ್ಥಿಸುವವರನ್ನು ಮಾತ್ರ ಅವನು ಪರಿಗಣಿಸುತ್ತಾನೆ.

## ಅಶ್ಶುಅರಾಅ್ (ಕವಿಗಳು)[1]

## سُورَةُ الشُّعَرَاءِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 227

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسْمِ ٱللَّهِ ٱلرَّحْمَٰنِ ٱلرَّحِيمِ

1. ತ್ವಾ ಸೀನ್ ಮೀಮ್.

طسٓمٓ ١

2. ಇವು ಸುಸ್ಪಷ್ಟ ಗ್ರಂಥದ ಸೂಕ್ತಿಗಳಾಗಿವೆ.

تِلْكَ ءَايَٰتُ ٱلْكِتَٰبِ ٱلْمُبِينِ ٢

3. ಅವರು ವಿಶ್ವಾಸಿಗಳಾಗದಿರುವುದರ ನಿಮಿತ್ತ ತಾವು ತಮ್ಮ ಜೀವವನ್ನು ನಾಶ ಮಾಡಲೂಬಹುದು.

لَعَلَّكَ بَٰخِعٌ نَّفْسَكَ أَلَّا يَكُونُوا۟ مُؤْمِنِينَ ٣

4. ನಾವಿಚ್ಛಿಸುವುದಾದರೆ ಅವರ ಮೇಲೆ ಆಕಾಶದಿಂದ ದೃಷ್ಟಾಂತವೊಂದನ್ನು ಇಳಿಸುವೆವು. ಆಗ ಅವರ ಕೊರಳುಗಳು ಅದಕ್ಕೆ ಶರಣಾಗುವುವು.

إِن نَّشَأْ نُنَزِّلْ عَلَيْهِم مِّنَ ٱلسَّمَآءِ ءَايَةً فَظَلَّتْ أَعْنَٰقُهُمْ لَهَا خَٰضِعِينَ ٤

5. ಪರಮ ದಯಾಮಯನ ವತಿಯ ಯಾವುದೇ ಹೊಸ ಬೋಧನೆಯು ಅವರ ಬಳಿಗೆ ಬಂದಾಗಲೂ ಅವರು ಅದರಿಂದ ವಿಮುಖರಾಗದಿರಲಿಲ್ಲ.

وَمَا يَأْتِيهِم مِّن ذِكْرٍ مِّنَ ٱلرَّحْمَٰنِ مُحْدَثٍ إِلَّا كَانُوا۟ عَنْهُ مُعْرِضِينَ ٥

6. ಹೀಗೆ ಅವರು ನಿಷೇಧಿಸಿದರು. ಆದ್ದರಿಂದ ಅವರು ಯಾವುದನ್ನು ಗೇಲಿ ಮಾಡುತ್ತಿದ್ದರೋ ಅದರ ವೃತ್ತಾಂತಗಳು ಅವರೆಡೆಗೆ ಬರಲಿರುವುವು.

فَقَدْ كَذَّبُوا۟ فَسَيَأْتِيهِمْ أَنۢبَٰٓؤُا۟ مَا كَانُوا۟ بِهِۦ يَسْتَهْزِءُونَ ٦

7. ಅವರು ಭೂಮಿಯೆಡೆಗೆ ನೋಡುವುದಿಲ್ಲವೇ? ಎಲ್ಲ ವಿಧ ಉನ್ನತ ಸಸ್ಯವರ್ಗಗಳ ಪೈಕಿ ಎಷ್ಟೊಂದು ಸಸ್ಯಗಳನ್ನು ನಾವು ಅದರಲ್ಲಿ ಬೆಳೆಸಿರುವೆವು!

أَوَلَمْ يَرَوْا۟ إِلَى ٱلْأَرْضِ كَمْ أَنۢبَتْنَا فِيهَا مِن كُلِّ زَوْجٍ كَرِيمٍ ٧

8. ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ಸತ್ಯವಿಶ್ವಾಸಿಗಳಾಗಲಿಲ್ಲ.

إِنَّ فِى ذَٰلِكَ لَءَايَةً ۖ وَمَا كَانَ أَكْثَرُهُم مُّؤْمِنِينَ ٨

1 224ನೇ ಸೂಕ್ತಿಯಲ್ಲಿ ಕವಿಗಳ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

9. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلۡعَزِيزُ ٱلرَّحِيمُ ﴿٩﴾

10-11. ತಮ್ಮ ರಬ್ ಮೂಸಾರನ್ನು ಕರೆದು ಹೇಳಿದ ಸಂದರ್ಭ: 'ಅಕ್ರಮಿಗಳಾದ ಆ ಜನರ ಬಳಿಗೆ ಅಂದರೆ ಫಿರ್‌ಔನ್‌ನ ಜನರ ಬಳಿಗೆ ತೆರಳಿರಿ ಮತ್ತು ಭಯಭಕ್ತಿ ಪಾಲಿಸುವುದಿಲ್ಲವೇ (ಎಂದು ಅವರೊಂದಿಗೆ ಕೇಳಿರಿ)'.

وَإِذۡ نَادَىٰ رَبُّكَ مُوسَىٰٓ أَنِ ٱئۡتِ ٱلۡقَوۡمَ ٱلظَّٰلِمِينَ ﴿١٠﴾ قَوۡمَ فِرۡعَوۡنَۚ أَلَا يَتَّقُونَ ﴿١١﴾

12. ಆತ ಹೇಳಿದರು: 'ಓ ನನ್ನ ರಬ್! ಅವರು ನನ್ನನ್ನು ತಿರಸ್ಕರಿಸುವರೆಂದು ಖಂಡಿತವಾಗಿಯೂ ನಾನು ಭಯಪಡುತ್ತಿರುವೆನು.

قَالَ رَبِّ إِنِّيٓ أَخَافُ أَن يُكَذِّبُونِ ﴿١٢﴾

13. ನನ್ನ ಹೃದಯವು ಇಕ್ಕಟ್ಟಾಗುವುದು ಮತ್ತು ನನ್ನ ನಾಲಗೆ ಸಲೀಸಾಗಿ ಹೊರಳಲಾರದು. ಆದ್ದರಿಂದ ಹಾರೂನ್‌ರಿಗೆ ಕೂಡ ನೀನು ಸಂದೇಶವನ್ನು ಕಳುಹಿಸು.

وَيَضِيقُ صَدۡرِي وَلَا يَنطَلِقُ لِسَانِي فَأَرۡسِلۡ إِلَىٰ هَٰرُونَ ﴿١٣﴾

14. ಅವರಿಗೆ ನನ್ನ ಮೇಲೆ ಒಂದು ಅಪರಾಧದ ಆರೋಪವೂ ಇದೆ.(1) ಆದ್ದರಿಂದ ಅವರು ನನ್ನನ್ನು ಕೊಲ್ಲುವರು ಎಂದು ನಾನು ಭಯಪಡುತ್ತಿರುವೆನು'.

وَلَهُمۡ عَلَيَّ ذَنۢبٞ فَأَخَافُ أَن يَقۡتُلُونِ ﴿١٤﴾

15. ಅವನು (ಅಲ್ಲಾಹು) ಹೇಳಿದನು: 'ಎಂದಿಗೂ ಇಲ್ಲ. ನಮ್ಮ ದೃಷ್ಟಾಂತಗಳೊಂದಿಗೆ ನೀವಿಬ್ಬರೂ ತೆರಳಿರಿ. ಖಂಡಿತವಾಗಿಯೂ ನಾವೂ ನಿಮ್ಮೊಂದಿಗೆ ಆಲಿಸುತ್ತಿರುವೆವು'.

قَالَ كَلَّاۖ فَٱذۡهَبَا بِـَٔايَٰتِنَآۖ إِنَّا مَعَكُم مُّسۡتَمِعُونَ ﴿١٥﴾

16-17. ನೀವಿಬ್ಬರೂ ಫಿರ್‌ಔನ್‌ನ ಬಳಿಗೆ ತೆರಳಿ, 'ಇಸ್ರಾಈಲ್ ಸಂತತಿಗಳನ್ನು ನಮ್ಮೊಂದಿಗೆ ಕಳುಹಿಸಿಕೊಡಿರಿ ಎಂಬ ಆದೇಶದೊಂದಿಗೆ ನಾವು ಸರ್ವಲೋಕಗಳ ರಬ್‌ನ ವತಿಯಿಂದ ಕಳುಹಿಸಲಾಗಿರುವ ಸಂದೇಶವಾಹಕರಾಗಿರುವೆವು' ಎಂದು ಹೇಳಿರಿ.

فَأۡتِيَا فِرۡعَوۡنَ فَقُولَآ إِنَّا رَسُولُ رَبِّ ٱلۡعَٰلَمِينَ ﴿١٦﴾ أَنۡ أَرۡسِلۡ مَعَنَا بَنِيٓ إِسۡرَٰٓءِيلَ ﴿١٧﴾

1 ಪ್ರವಾದಿ ಮೂಸಾ(عَلَيْهِ السَّلَامُ)ರವರು ಪ್ರಮಾದವಶಾತ್ ಕಿಬ್ತೀ (ಕೋಪ್ಟ್)ಗಳ ಪೈಕಿ ಓರ್ವನನ್ನು ಕೊಲ್ಲಲು ಕಾರಣವಾದ ಘಟನೆಯ ಕುರಿತು 28/15ರಲ್ಲಿ ವಿವರಿಸಲಾಗಿದೆ.

**18.** ಅವನು (ಫಿರ್‌ಔನ್) ಹೇಳಿದನು: 'ನೀನು ಶಿಶುವಾಗಿದ್ದಾಗ ನಾವು ನಿನ್ನನ್ನು ನಮ್ಮೊಂದಿಗೆ ಪೋಷಿಸಲಿಲ್ಲವೇ? ನಿನ್ನ ಆಯುಷ್ಯದಲ್ಲಿ ಅನೇಕ ವರ್ಷಗಳನ್ನು ನೀನು ನಮ್ಮ ನಡುವೆ ಕಳೆದಿರುವೆ.

قَالَ أَلَمۡ نُرَبِّكَ فِينَا وَلِيدٗا وَلَبِثۡتَ فِينَا مِنۡ عُمُرِكَ سِنِينَ ﴿١٨﴾

**19.** ನೀನು ನಿನ್ನ ಆ (ಕೆಟ್ಟ) ಕೆಲಸವನ್ನು ಮಾಡಿರುವೆ.[1] ಖಂಡಿತವಾಗಿಯೂ ನೀನು ಕೃತಘ್ನರಲ್ಲಿ ಸೇರಿದವನಾಗಿರುವೆ'.

وَفَعَلۡتَ فَعۡلَتَكَ ٱلَّتِي فَعَلۡتَ وَأَنتَ مِنَ ٱلۡكَٰفِرِينَ ﴿١٩﴾

**20.** ಆತ (ಮೂಸಾ) ಹೇಳಿದರು: 'ಅಂದು ನಾನು ಅದನ್ನು ಮಾಡಿದ್ದೆನು. ಆಗ ನಾನು ಪ್ರಮಾದವೆಸಗಿದವರಲ್ಲಿ ಸೇರಿದವನಾಗಿದ್ದೆನು.[2]

قَالَ فَعَلۡتُهَآ إِذٗا وَأَنَا۠ مِنَ ٱلضَّآلِّينَ ﴿٢٠﴾

**21.** ತರುವಾಯ ನಿಮ್ಮ ಬಗ್ಗೆ ಭಯಪಟ್ಟಾಗ ನಾನು ನಿಮ್ಮಿಂದ ಓಡಿಹೋದೆನು. ತರುವಾಯ ನನ್ನ ರಬ್ ನನಗೆ ತತ್ವಜ್ಞಾನವನ್ನು ದಯಪಾಲಿಸಿದನು ಮತ್ತು ನನ್ನನ್ನು ಸಂದೇಶವಾಹಕರಲ್ಲಿ ಸೇರಿಸಿದನು.

فَفَرَرۡتُ مِنكُمۡ لَمَّا خِفۡتُكُمۡ فَوَهَبَ لِي رَبِّي حُكۡمٗا وَجَعَلَنِي مِنَ ٱلۡمُرۡسَلِينَ ﴿٢١﴾

**22.** ನೀನು ನನ್ನ ಮೇಲೆ ಮಾಡಿರುವುದಾಗಿ ಎತ್ತಿ ಹೇಳುತ್ತಿರುವ ಆ ಅನುಗ್ರಹವು ಇಸ್ರಾಈಲ್ ಸಂತತಿಗಳನ್ನು ನೀನು ಗುಲಾಮರನ್ನಾಗಿ ಮಾಡಿಕೊಂಡಿರುವುದರಿಂದ ಉಂಟಾದುದಾಗಿದೆ'.[3]

وَتِلۡكَ نِعۡمَةٞ تَمُنُّهَا عَلَيَّ أَنۡ عَبَّدتَّ بَنِيٓ إِسۡرَٰٓءِيلَ ﴿٢٢﴾

**23.** ಫಿರ್‌ಔನ್ ಕೇಳಿದನು: 'ಸರ್ವಲೋಕಗಳ ರಬ್ ಎಂದರೇನು?'

قَالَ فِرۡعَوۡنُ وَمَا رَبُّ ٱلۡعَٰلَمِينَ ﴿٢٣﴾

---

1 ಮೇಲೆ ಪ್ರಸ್ತಾಪಿಸಿದ ಕೊಲೆಪಾತಕದ ಕುರಿತೇ ಇಲ್ಲೂ ಸೂಚಿಸಲಾಗಿದೆ.

2 ಆಕ್ರಮಣವೊಂದನ್ನು ತಡೆಯುವುದಕ್ಕೋಸ್ಕರ ಪ್ರವಾದಿ ಮೂಸಾ(عَلَيْهِ السَّلَامُ)ರವರು ತನ್ನ ಎದುರಾಳಿಗೆ ಮುಷ್ಠಿ ಬಿಗಿಹಿಡಿದು ಹೊಡೆದಾಗ ಅದು ಆತನ ಮರಣಕ್ಕೆ ಹೇತುವಾಯಿತು.

3 'ನೀನು ನನಗೆ ಮಾಡಿರುವುದಾಗಿ ಎತ್ತಿ ಹೇಳುವ ಆ ಅನುಗ್ರಹವು ಇಸ್ರಾಈಲ್ ಸಂತತಿಯನ್ನು ನೀನು ಗುಲಾಮಗಿರಿಗೆ ದೂಡಿರುವೆ ಎಂಬುದಲ್ಲವೇ' ಎಂದೂ ಅರ್ಥೈಸಬಹುದಾಗಿದೆ. ಮೂಸಾ(عَلَيْهِ السَّلَامُ)ರವರ ಮೇಲೆ ಮಾಡಿರುವುದಾಗಿ ಫಿರ್‌ಔನ್ ಹೇಳುವ ಯಾವುದೇ ಅನುಗ್ರಹವೂ ಸದುದ್ದೇಶದಿಂದ ಮಾಡಿದ್ದಾಗಿರಲಿಲ್ಲ. ಅವೆಲ್ಲವೂ ಇಸ್ರಾಈಲರ ವಿರುದ್ಧ ಅವನು ಎಸಗಿದ ಘೋರ ಅಕ್ರಮ ಮತ್ತು ದೌರ್ಜನ್ಯಗಳ ಫಲವಾಗಿ ಉಂಟಾದ ಕೆಲವು ಘಟನೆಗಳು ಮಾತ್ರವಾಗಿದ್ದವು. ಅಲ್ಲಾಹುವಿನ ಅನುಲ್ಲಂಘನೀಯ ವಿಧಿಯು ಫಿರ್‌ಔನನಿಂದ ಇವುಗಳನ್ನು ಮಾಡಿಸಿತು ಎನ್ನುವುದೇ ಹೆಚ್ಚು ಸೂಕ್ತ. ಈ ವಾಸ್ತವಿಕತೆಯನ್ನು ವ್ಯಂಗ್ಯವಾಗಿ ಸೂಚಿಸುವುದರ ಮೂಲಕ ಮೂಸಾ(عَلَيْهِ السَّلَامُ)ರವರು ಫಿರ್‌ಔನನ ಸಮಯಸಾಧಕತನವನ್ನು ಗೇಲಿ ಮಾಡುತ್ತಾರೆ.

24. ಆತ (ಮೂಸಾ) ಹೇಳಿದರು: 'ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವವುಗಳ ರಬ್. ನೀವು ದೃಢವಿಶ್ವಾಸವುಳ್ಳವರಾಗಿದ್ದರೆ'.

قَالَ رَبُّ ٱلسَّمَٰوَٰتِ وَٱلۡأَرۡضِ وَمَا بَيۡنَهُمَآۖ إِن كُنتُم مُّوقِنِينَ ٢٤

25. ಅವನು ತನ್ನ ಸುತ್ತಲಿರುವವರೊಂದಿಗೆ ಹೇಳಿದನು: 'ಏನು? ನೀವು ಕಿವಿಗೊಟ್ಟು ಆಲಿಸುವುದಿಲ್ಲವೇ?'

قَالَ لِمَنۡ حَوۡلَهُۥٓ أَلَا تَسۡتَمِعُونَ ٢٥

26. ಆತ (ಮೂಸಾ) ಹೇಳಿದರು: '(ಅವನು) ನಿಮ್ಮ ರಬ್ ಮತ್ತು ನಿಮ್ಮ ಪೂರ್ವಿಕರ ರಬ್ಬಾಗಿರುವನು'.

قَالَ رَبُّكُمۡ وَرَبُّ ءَابَآئِكُمُ ٱلۡأَوَّلِينَ ٢٦

27. ಅವನು (ಫಿರ್‌ಔನ್) ಹೇಳಿದನು: 'ನಿಮ್ಮ ಬಳಿಗೆ ಕಳುಹಿಸಲಾಗಿರುವ ನಿಮ್ಮ ಈ ಸಂದೇಶವಾಹಕನು ಖಂಡಿತವಾಗಿಯೂ ಒಬ್ಬ ಹುಚ್ಚನಾಗಿರುವನು'.

قَالَ إِنَّ رَسُولَكُمُ ٱلَّذِيٓ أُرۡسِلَ إِلَيۡكُمۡ لَمَجۡنُونٞ ٢٧

28. ಆತ (ಮೂಸಾ) ಹೇಳಿದರು: '(ಅವನು) ಪೂರ್ವ, ಪಶ್ಚಿಮ ಹಾಗೂ ಅವೆರಡರ ಮಧ್ಯೆಯಿರುವವುಗಳ ರಬ್ಬಾಗಿರುವನು. ನೀವು ಆಲೋಚಿಸುವವರಾಗಿದ್ದರೆ'.

قَالَ رَبُّ ٱلۡمَشۡرِقِ وَٱلۡمَغۡرِبِ وَمَا بَيۡنَهُمَآۖ إِن كُنتُمۡ تَعۡقِلُونَ ٢٨

29. ಅವನು (ಫಿರ್‌ಔನ್) ಹೇಳಿದನು: 'ನೀನು ನನ್ನ ಹೊರತು ಅನ್ಯರನ್ನು ಆರಾಧ್ಯನನ್ನಾಗಿ ಮಾಡಿಕೊಳ್ಳುವುದಾದರೆ ಖಂಡಿತವಾಗಿಯೂ ನಾನು ನಿನ್ನನ್ನು ಸೆರೆಯಾಳುಗಳೊಂದಿಗೆ ಸೇರಿಸುವೆನು'.

قَالَ لَئِنِ ٱتَّخَذۡتَ إِلَٰهًا غَيۡرِي لَأَجۡعَلَنَّكَ مِنَ ٱلۡمَسۡجُونِينَ ٢٩

30. ಅವರು (ಮೂಸಾ) ಹೇಳಿದರು: 'ನಾನು ನಿನ್ನ ಬಳಿಗೆ ಸ್ಪಷ್ಟವಾದ ಯಾವುದಾದರೂ ಪುರಾವೆಯನ್ನು ತಂದರೂ (ನೀನು ಒಪ್ಪಿಕೊಳ್ಳುವುದಿಲ್ಲವೇ?)'

قَالَ أَوَلَوۡ جِئۡتُكَ بِشَيۡءٖ مُّبِينٖ ٣٠

31. ಅವನು (ಫಿರ್‌ಔನ್) ಹೇಳಿದನು: 'ಹಾಗಾದರೆ ಅದನ್ನು ತಾ. ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ'.

قَالَ فَأۡتِ بِهِۦٓ إِن كُنتَ مِنَ ٱلصَّٰدِقِينَ ٣١

32. ಆಗ ಆತ (ಮೂಸಾ) ತಮ್ಮ ಬೆತ್ತವನ್ನು ಕೆಳಗೆ ಹಾಕಿದರು. ಆಗ ಅದು ಪ್ರತ್ಯಕ್ಷ ಸರ್ಪವಾಗಿ ಮಾರ್ಪಟ್ಟಿತು.

فَأَلۡقَىٰ عَصَاهُ فَإِذَا هِيَ ثُعۡبَانٞ مُّبِينٞ ٣٢

33. ಅವರು ತಮ್ಮ ಕೈಯನ್ನು ಹೊರತೆಗೆದರು. ಆಗ ಅದು ವೀಕ್ಷಕರಿಗೆ ಬೆಳ್ಳಗಾಗಿ ಕಂಡಿತು.

وَنَزَعَ يَدَهُۥ فَإِذَا هِيَ بَيۡضَآءُ لِلنَّٰظِرِينَ ٣٣

34. ತನ್ನ ಸುತ್ತಮುತ್ತಲಿರುವ ಪ್ರಮುಖರೊಂದಿಗೆ ಅವನು (ಫಿರ್‌ಔನ್) ಹೇಳಿದನು: 'ಖಂಡಿತವಾಗಿಯೂ ಇವನೊಬ್ಬ ತಜ್ಞ ಮಾಂತ್ರಿಕನಾಗಿರುವನು.

قَالَ لِلۡمَلَإِ حَوۡلَهُۥٓ إِنَّ هَٰذَا لَسَٰحِرٌ عَلِيمٞ ٣٤

35. ಅವನು ತನ್ನ ಮಾಂತ್ರಿಕತೆಯಿಂದ ನಿಮ್ಮನ್ನು ನಿಮ್ಮ ನಾಡಿನಿಂದ ಹೊರಗಟ್ಟಲು ಇಚ್ಛಿಸುತ್ತಿದ್ದಾನೆ. ಆದ್ದರಿಂದ ನೀವೇನು ಆದೇಶಿಸುವಿರಿ'.

يُرِيدُ أَن يُخۡرِجَكُم مِّنۡ أَرۡضِكُم بِسِحۡرِهِۦ فَمَاذَا تَأۡمُرُونَ ٣٥

36. ಅವರು ಹೇಳಿದರು: 'ತಾವು ಅವನಿಗೂ, ಅವನ ಸಹೋದರನಿಗೂ ಒಂದು ಅವಕಾಶವನ್ನು ನೀಡಿರಿ. ಜನರನ್ನು ಒಟ್ಟುಗೂಡಿಸುವುದಕ್ಕಾಗಿ ತಾವು ನಗರಗಳಿಗೆ ದೂತರನ್ನು ನಿಯೋಗಿಸಿರಿ.

قَالُوٓاْ أَرۡجِهۡ وَأَخَاهُ وَٱبۡعَثۡ فِي ٱلۡمَدَآئِنِ حَٰشِرِينَ ٣٦

37. ತಜ್ಞರಾದ ಸರ್ವ ಮಾಂತ್ರಿಕರನ್ನೂ ಅವರು ತಮ್ಮ ಬಳಿಗೆ ಕರೆತರಲಿ'.

يَأۡتُوكَ بِكُلِّ سَحَّارٍ عَلِيمٖ ٣٧

38. ಹೀಗೆ ಸುಪರಿಚಿತವಾದ ಒಂದು ದಿನದ[1] ನಿಶ್ಚಿತ ಸಮಯದಲ್ಲಿ ಮಾಂತ್ರಿಕರನ್ನು ಒಟ್ಟುಗೂಡಿಸಲಾಯಿತು.

فَجُمِعَ ٱلسَّحَرَةُ لِمِيقَٰتِ يَوۡمٖ مَّعۡلُومٖ ٣٨

39. 'ನೀವು ಒಟ್ಟು ಸೇರುತ್ತೀರಲ್ಲವೇ?' ಎಂದು ಜನರೊಂದಿಗೆ ಕೇಳಲಾಯಿತು.

وَقِيلَ لِلنَّاسِ هَلۡ أَنتُم مُّجۡتَمِعُونَ ٣٩

40. ಮಾಂತ್ರಿಕರು ವಿಜಯಿಗಳಾದರೆ ನಮಗೆ ಅವರನ್ನು ಅನುಸರಿಸಬಹುದು.

لَعَلَّنَا نَتَّبِعُ ٱلسَّحَرَةَ إِن كَانُواْ هُمُ ٱلۡغَٰلِبِينَ ٤٠

41. ತರುವಾಯ ಮಾಂತ್ರಿಕರು ಬಂದಾಗ ಅವರು ಫಿರ್‌ಔನ್‌ನೊಂದಿಗೆ ಕೇಳಿದರು: ಜಯಶಾಲಿಗಳು ನಾವಾದರೆ ಖಂಡಿತವಾಗಿಯೂ ನಮಗೆ ಪ್ರತಿಫಲವಿರುವುದೇ?'

فَلَمَّا جَآءَ ٱلسَّحَرَةُ قَالُواْ لِفِرۡعَوۡنَ أَئِنَّ لَنَا لَأَجۡرًا إِن كُنَّا نَحۡنُ ٱلۡغَٰلِبِينَ ٤١

1 ಅದೊಂದು ಉತ್ಸವ ದಿನವಾಗಿತ್ತು. ಜನರು ದೊಡ್ಡ ಸಂಖ್ಯೆಯಲ್ಲಿ ಜಮಾಯಿಸುವುದಕ್ಕೋಸ್ಕರ ಆ ದಿನವನ್ನು ಆರಿಸಲಾಗಿತ್ತು.

**42.** ಅವನು (ಫಿರ್‌ಔನ್) ಹೇಳಿದನು: 'ಹೌದು! ಖಂಡಿತವಾಗಿಯೂ ನೀವು ಸಾಮೀಪ್ಯ ಗಳಿಸಿದವರಲ್ಲಿ ಸೇರಿದವರಾಗುವಿರಿ'.

قَالَ نَعَمۡ وَإِنَّكُمۡ إِذٗا لَّمِنَ ٱلۡمُقَرَّبِينَ ٤٢

**43.** ಮೂಸಾ ಅವರೊಂದಿಗೆ ಹೇಳಿದರು: 'ನಿಮಗೆ ಹಾಕಲಿಕ್ಕಿರುವುದೆಲ್ಲವನ್ನು ಹಾಕಿರಿ'.

قَالَ لَهُم مُّوسَىٰٓ أَلۡقُواْ مَآ أَنتُم مُّلۡقُونَ ٤٣

**44.** ಆಗ ಅವರು ತಮ್ಮ ಹಗ್ಗಗಳನ್ನು ಮತ್ತು ಬೆತ್ತಗಳನ್ನು ಹಾಕಿದರು. ಅವರು ಹೇಳಿದರು: 'ಫಿರ್‌ಔನ್‌ನ ಪ್ರತಾಪದ ಮೇಲಾಣೆ! ಖಂಡಿತವಾಗಿಯೂ ನಾವೇ ಜಯಶಾಲಿಗಳಾಗುವೆವು'.

فَأَلۡقَوۡاْ حِبَالَهُمۡ وَعِصِيَّهُمۡ وَقَالُواْ بِعِزَّةِ
فِرۡعَوۡنَ إِنَّا لَنَحۡنُ ٱلۡغَٰلِبُونَ ٤٤

**45.** ತರುವಾಯ ಮೂಸಾ ತಮ್ಮ ಬೆತ್ತವನ್ನು ಹಾಕಿದರು. ಆಗ ಅದು ಅವರು ಮಿಥ್ಯವಾಗಿ ನಿರ್ಮಿಸಿರುವುದೆಲ್ಲವನ್ನೂ ನುಂಗಿಹಾಕಿತು.

فَأَلۡقَىٰ مُوسَىٰ عَصَاهُ فَإِذَا هِيَ تَلۡقَفُ مَا
يَأۡفِكُونَ ٤٥

**46.** ಆಗ ಮಾಂತ್ರಿಕರು ಸಾಷ್ಟಾಂಗ ಬಿದ್ದರು.

فَأُلۡقِيَ ٱلسَّحَرَةُ سَٰجِدِينَ ٤٦

**47.** ಅವರು ಹೇಳಿದರು: 'ಸರ್ವಲೋಕಗಳ ರಬ್‌ನಲ್ಲಿ ನಾವು ವಿಶ್ವಾಸವಿಟ್ಟಿರುವೆವು'.

قَالُوٓاْ ءَامَنَّا بِرَبِّ ٱلۡعَٰلَمِينَ ٤٧

**48.** ಮೂಸಾ ಮತ್ತು ಹಾರೂನ್‌ರ ರಬ್‌ನಲ್ಲಿ.

رَبِّ مُوسَىٰ وَهَٰرُونَ ٤٨

**49.** ಅವನು (ಫಿರ್‌ಔನ್) ಹೇಳಿದನು: 'ನಾನು ನಿಮಗೆ ಅಪ್ಪಣೆ ಕೊಡುವ ಮೊದಲೇ ನೀವು ಅವನಲ್ಲಿ ವಿಶ್ವಾಸವಿಡುವುದೇ? ಖಂಡಿತವಾಗಿಯೂ ಅವನು ನಿಮಗೆ ಮಾಂತ್ರಿಕತೆಯನ್ನು ಕಲಿಸಿಕೊಟ್ಟ ನಿಮ್ಮ ಮುಖಂಡನಾಗಿರುವನು. ಮುಂದೆ ನೀವು ಅರಿತುಕೊಳ್ಳುವಿರಿ. ಖಂಡಿತವಾಗಿಯೂ ನಾನು ನಿಮ್ಮ ಕೈಗಳನ್ನು ಮತ್ತು ನಿಮ್ಮ ಕಾಲುಗಳನ್ನು ಪರಸ್ಪರ ವಿರುದ್ಧ ದಿಕ್ಕುಗಳಿಂದ[1] ಕತ್ತರಿಸುವೆನು ಮತ್ತು ನಿಮ್ಮೆಲ್ಲರನ್ನೂ ಶಿಲುಬೆಗೇರಿಸುವೆನು'.

قَالَ ءَامَنتُمۡ لَهُۥ قَبۡلَ أَنۡ ءَاذَنَ لَكُمۡۖ
إِنَّهُۥ لَكَبِيرُكُمُ ٱلَّذِي عَلَّمَكُمُ ٱلسِّحۡرَ
فَلَسَوۡفَ تَعۡلَمُونَۚ لَأُقَطِّعَنَّ أَيۡدِيَكُمۡ
وَأَرۡجُلَكُم مِّنۡ خِلَٰفٖ وَلَأُصَلِّبَنَّكُمۡ
أَجۡمَعِينَ ٤٩

**50.** ಅವರು ಹೇಳಿದರು: 'ತೊಂದರೆಯಿಲ್ಲ. ಖಂಡಿತವಾಗಿಯೂ ನಾವು ನಮ್ಮ ರಬ್‌ನ ಕಡೆಗೆ ಮರಳುವವರಾಗಿರುವೆವು.

قَالُواْ لَا ضَيۡرَۖ إِنَّآ إِلَىٰ رَبِّنَا مُنقَلِبُونَ ٥٠

---

1 ಅರ್ಥಾತ್ ಬಲಗೈ ಮತ್ತು ಎಡಗಾಲು ಅಥವಾ ಎಡಗೈ ಮತ್ತು ಬಲಗಾಲು.

51. ನಾವು ಮೊಟ್ಟ ಮೊದಲು ವಿಶ್ವಾಸವಿಟ್ಟವರಾಗಿರುವುದರಿಂದ ನಮ್ಮ ರಬ್ ನಮ್ಮ ಪಾಪಗಳನ್ನು ಮನ್ನಿಸುವನೆಂದು ನಾವು ಆಶಿಸುವೆವು'.

إِنَّا نَطۡمَعُ أَن يَغۡفِرَ لَنَا رَبُّنَا خَطَٰيَٰنَآ أَن كُنَّآ أَوَّلَ ٱلۡمُؤۡمِنِينَ ٥١

52. ಮೂಸಾರಿಗೆ ನಾವು ದಿವ್ಯಸಂದೇಶವನ್ನು ನೀಡಿದೆವು: 'ತಾವು ರಾತ್ರಿ ನನ್ನ ದಾಸರೊಂದಿಗೆ ಹೊರಡಿರಿ. ಖಂಡಿತವಾಗಿಯೂ (ಶತ್ರುಗಳು) ನಿಮ್ಮನ್ನು ಹಿಂಬಾಲಿಸುವರು'.

۞ وَأَوۡحَيۡنَآ إِلَىٰ مُوسَىٰٓ أَنۡ أَسۡرِ بِعِبَادِيٓ إِنَّكُم مُّتَّبَعُونَ ٥٢

53. ಆಗ ಜನರನ್ನು ಒಟ್ಟುಗೂಡಿಸುವುದಕ್ಕಾಗಿ ಫಿರ್‌ಔನ್ ಪಟ್ಟಣಗಳಿಗೆ ದೂತರನ್ನು ಕಳುಹಿಸಿದನು.

فَأَرۡسَلَ فِرۡعَوۡنُ فِي ٱلۡمَدَآئِنِ حَٰشِرِينَ ٥٣

54. 'ಖಂಡಿತವಾಗಿಯೂ ಇವರೊಂದು ಅಲ್ಪ ಸಂಖ್ಯಾತ ಸಮೂಹವಾಗಿರುವರು.

إِنَّ هَٰٓؤُلَآءِ لَشِرۡذِمَةٞ قَلِيلُونَ ٥٤

55. ಖಂಡಿತವಾಗಿಯೂ ಅವರು ನಮ್ಮನ್ನು ಕೆರಳಿಸುತ್ತಿರುವರು.

وَإِنَّهُمۡ لَنَا لَغَآئِظُونَ ٥٥

56. ಖಂಡಿತವಾಗಿಯೂ ನಾವು ಸಂಘಟಿತರೂ ಜಾಗರೂಕರೂ ಆಗಿರುವೆವು' (ಎಂದು ಸಾರಲು ಫಿರ್‌ಔನ್ ಆದೇಶಿಸಿದನು).

وَإِنَّا لَجَمِيعٌ حَٰذِرُونَ ٥٦

57-58. ಹೀಗೆ ನಾವು ಅವರನ್ನು ತೋಟಗಳಿಂದಲೂ, ನೀರಿನ ಚಿಲುಮೆಗಳಿಂದಲೂ, ಭಂಡಾರಗಳಿಂದಲೂ, ಗೌರವಾನ್ವಿತ ನಿವಾಸಗಳಿಂದಲೂ ಹೊರಗಟ್ಟಿದೆವು.

فَأَخۡرَجۡنَٰهُم مِّن جَنَّٰتٖ وَعُيُونٖ ٥٧
وَكُنُوزٖ وَمَقَامٖ كَرِيمٖ ٥٨

59. ಹೀಗಿದೆ (ನಮ್ಮ ಕ್ರಮ). ಅವೆಲ್ಲವನ್ನೂ ನಾವು ಇಸ್ರಾಈಲ್ ಸಂತತಿಗಳಿಗೆ ವಾರೀಸು ಹಕ್ಕನ್ನಾಗಿ ಮಾಡಿದೆವು.[1]

كَذَٰلِكَۖ وَأَوۡرَثۡنَٰهَا بَنِيٓ إِسۡرَٰٓءِيلَ ٥٩

---

1 ಫಿರ್‌ಔನ್ ಮತ್ತು ಅವನ ಸಂಗಡಿಗರು ಮುಳುಗಿ ನಾಶವಾದ ನಂತರ ಇಸ್ರಾಈಲರು ಈಜಿಪ್ಟಿನಲ್ಲಿ ವಾಸಿಸತೊಡಗಿದರೇ? ಇಸ್ರಾಈಲರು ಈಜಿಪ್ಟಿನಿಂದ ನಿರ್ಗಮಿಸಿದ ನಂತರ ಪುನಃ ಅಲ್ಲಿಗೇ ಮರಳಿ ವಾಸಿಸತೊಡಗಿದರು ಎಂಬುದಕ್ಕೆ ಕುರ್‌ಆನ್‌ನಲ್ಲಿ ಯಾವುದೇ ಖಚಿತ ಮಾಹಿತಿಗಳಿಲ್ಲ. ಈಜಿಪ್ಟಿನಿಂದ ಹೊರಟುಬಂದ ನಂತರ ಅವರು ಸೀನಾ ಕಣಿವೆಯಲ್ಲಿ ಅಲೆದಾಡುತ್ತಾ ಹಲವು ದಶಕಗಳ ನಂತರ ವಾಗ್ದಾನ ಮಾಡಲಾದ ಭೂಮಿಯನ್ನು (ಪ್ಯಾಲಸ್ತೀನನ್ನು) ಪ್ರವೇಶಿಸಿದರು ಎಂದು ಕುರ್‌ಆನ್‌ನಿಂದ ತಿಳಿದುಬರುತ್ತದೆ.

60. ತರುವಾಯ ಅವರು (ಫಿರ್‌ಔನ್ ಮತ್ತು ಸೈನ್ಯವು) ಸೂರ್ಯೋದಯದ ವೇಳೆಯಲ್ಲಿ ಅವರನ್ನು (ಇಸ್ರಾಈಲರನ್ನು) ಹಿಂಬಾಲಿಸಿದರು.

فَأَتۡبَعُوهُم مُّشۡرِقِينَ ٦٠

61. ಹಾಗೆಯೇ ಎರಡು ಪಂಗಡಗಳು ಪರಸ್ಪರ ಎದುರುಗೊಂಡಾಗ ಮೂಸಾರ ಅನುಚರರು ಹೇಳಿದರು: 'ಖಂಡಿತವಾಗಿಯೂ ನಾವು ಹಿಡಿಯಲ್ಪಡುವೆವು'.

فَلَمَّا تَرَٰٓءَا ٱلۡجَمۡعَانِ قَالَ أَصۡحَٰبُ مُوسَىٰٓ إِنَّا لَمُدۡرَكُونَ ٦١

62. ಅವರು (ಮೂಸಾ) ಹೇಳಿದರು: 'ಎಂದಿಗೂ ಇಲ್ಲ. ಖಂಡಿತವಾಗಿಯೂ ನನ್ನ ರಬ್ ನನ್ನ ಜೊತೆಗಿರುವನು. ಅವನು ನನಗೆ ದಾರಿತೋರಿಸುವನು'.

قَالَ كَلَّآۖ إِنَّ مَعِيَ رَبِّي سَيَهۡدِينِ ٦٢

63. ಆಗ ನಾವು ಮೂಸಾರಿಗೆ: 'ತಾವು ತಮ್ಮ ಬೆತ್ತದಿಂದ ಸಮುದ್ರಕ್ಕೆ ಬಡಿಯಿರಿ' ಎಂದು ದಿವ್ಯಸಂದೇಶ ನೀಡಿದೆವು. ಆಗ ಅದು (ಸಮುದ್ರ) ಇಬ್ಭಾಗವಾಗಿ ಅದರ (ನೀರಿನ) ಪ್ರತಿಯೊಂದು ಹೋಳು ದೊಡ್ಡ ಪರ್ವತದಂತಾಯಿತು.

فَأَوۡحَيۡنَآ إِلَىٰ مُوسَىٰٓ أَنِ ٱضۡرِب بِّعَصَاكَ ٱلۡبَحۡرَۖ فَٱنفَلَقَ فَكَانَ كُلُّ فِرۡقٖ كَٱلطَّوۡدِ ٱلۡعَظِيمِ ٦٣

64. ಇತರರನ್ನು (ಫಿರ್‌ಔನ್‌ನ ಜನರನ್ನು) ನಾವು ಅದರ ಬಳಿಗೆ ಮುಟ್ಟಿಸಿದೆವು.

وَأَزۡلَفۡنَا ثَمَّ ٱلۡأٓخَرِينَ ٦٤

65. ಮೂಸಾ ಮತ್ತು ಅವರೊಂದಿಗಿದ್ದ ಎಲ್ಲರನ್ನೂ ನಾವು ರಕ್ಷಿಸಿದೆವು.

وَأَنجَيۡنَا مُوسَىٰ وَمَن مَّعَهُۥٓ أَجۡمَعِينَ ٦٥

66. ತರುವಾಯ ಇತರರನ್ನು ನಾವು ಮುಳುಗಿಸಿದೆವು.

ثُمَّ أَغۡرَقۡنَا ٱلۡأٓخَرِينَ ٦٦

67. ಖಂಡಿತವಾಗಿಯೂ ಅದರಲ್ಲಿ (ಸತ್ಯನಿಷೇಧಿಗಳಿಗೆ) ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

إِنَّ فِي ذَٰلِكَ لَأٓيَةٗۖ وَمَا كَانَ أَكۡثَرُهُم مُّؤۡمِنِينَ ٦٧

---

'ಅವೆಲ್ಲವನ್ನೂ ನಾವು ಇಸ್ರಾಈಲ್ ಸಂತತಿಗಳಿಗೆ ವಾರೀಸುಹಕ್ಕನ್ನಾಗಿ ಮಾಡಿದೆವು' ಎಂಬ ಸೂಕ್ತಿಯ ತಾತ್ಪರ್ಯವು ಈಜಿಪ್ಟಿನಲ್ಲಿದ್ದುದಕ್ಕೆ ಸಮಾನವಾದ ಸುಖ ಸೌಕರ್ಯಗಳನ್ನು ನಾವವರಿಗೆ ಫ್ಯಾಲಸ್ತೀನಿನಲ್ಲಿ ನೀಡಿದೆವು ಎಂದಾಗಿದೆಯೆಂದು ಕೆಲವರು ವ್ಯಾಖ್ಯಾನಿಸಿದ್ದಾರೆ. ಫಿರ್‌ಔನ್ ಮುಳುಗಿ ನಾಶಹೊಂದಿದ ತಕ್ಷಣ ಇಸ್ರಾಈಲರು ಈಜಿಪ್ಟಿಗೆ ಮರಳಿ ಅಲ್ಲಿ ಹಲವು ಕಾಲ ವಾಸಿಸಿ ಎಂದು ಹೇಳಿದ ವ್ಯಾಖ್ಯಾನಕಾರರೂ ಇದ್ದಾರೆ. ಅವರು ಪ್ರಸ್ತುತ ಸೂಕ್ತಿಯನ್ನು ಅದರ ಬಾಹ್ಯಾರ್ಥದಲ್ಲೇ ಪರಿಗಣಿಸಿದ್ದಾರೆ. ಪ್ರಾಚೀನ ಈಜಿಪ್ಟಿನ ಕುರಿತು ಆಧುನಿಕ ಸಂಶೋಧನೆಗಳು ಈ ಅಭಿಪ್ರಾಯಕ್ಕೆ ಪೂರಕವಾಗಿದೆಯೆಂದು ಹೇಳಲಾಗುತ್ತದೆ.

68. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلۡعَزِيزُ ٱلرَّحِيمُ ٦٨

69. ಇಬ್ರಾಹೀಮ್‌ರ ವೃತ್ತಾಂತವನ್ನು ಅವರಿಗೆ ಓದಿಕೊಡಿರಿ.

وَٱتۡلُ عَلَيۡهِمۡ نَبَأَ إِبۡرَٰهِيمَ ٦٩

70. 'ನೀವು ಏನನ್ನು ಆರಾಧಿಸುತ್ತಿರುವಿರಿ' ಎಂದು ಅವರು ತಮ್ಮ ತಂದೆಯೊಂದಿಗೆ ಮತ್ತು ತಮ್ಮ ಜನತೆಯೊಂದಿಗೆ ಕೇಳಿದ ಸಂದರ್ಭ.

إِذۡ قَالَ لِأَبِيهِ وَقَوۡمِهِۦ مَا تَعۡبُدُونَ ٧٠

71. ಅವರು ಹೇಳಿದರು: 'ನಾವು ಕೆಲವು ವಿಗ್ರಹಗಳನ್ನು ಆರಾಧಿಸುತ್ತಿರುವೆವು. ಅವುಗಳ ಮುಂದೆ ಆರಾಧನಾಮಗ್ನರಾಗಿ ಕೂರುವೆವು'.

قَالُواْ نَعۡبُدُ أَصۡنَامًا فَنَظَلُّ لَهَا عَٰكِفِينَ ٧١

72. ಆತ ಹೇಳಿದರು: 'ನೀವು ಪ್ರಾರ್ಥಿಸುವಾಗ ಅವರು ಅದನ್ನು ಆಲಿಸುವರೇ?

قَالَ هَلۡ يَسۡمَعُونَكُمۡ إِذۡ تَدۡعُونَ ٧٢

73. ಅಥವಾ ನಿಮಗೆ ಲಾಭವನ್ನಾಗಲಿ ಹಾನಿಯನ್ನಾಗಲಿ ಮಾಡುವರೇ?'

أَوۡ يَنفَعُونَكُمۡ أَوۡ يَضُرُّونَ ٧٣

74. ಅವರು ಹೇಳಿದರು: 'ಅಲ್ಲ, ನಮ್ಮ ಪೂರ್ವಿಕರು ಹೀಗೆ ಮಾಡುತ್ತಿರುವುದಾಗಿ ನಾವು ಕಂಡಿರುವೆವು'.

قَالُواْ بَلۡ وَجَدۡنَآ ءَابَآءَنَا كَذَٰلِكَ يَفۡعَلُونَ ٧٤

75-76. ಆತ ಹೇಳಿದರು: 'ನೀವು ಮತ್ತು ನಿಮ್ಮ ಪೂರ್ವಿಕರು ಆರಾಧಿಸುತ್ತಿರುವುದಾದರೂ ಏನನ್ನು ಎಂದು ನೀವು ಆಲೋಚಿಸಿರುವಿರಾ?

قَالَ أَفَرَءَيۡتُم مَّا كُنتُمۡ تَعۡبُدُونَ ٧٥ أَنتُمۡ وَءَابَآؤُكُمُ ٱلۡأَقۡدَمُونَ ٧٦

77. ಅವರು (ಆರಾಧ್ಯರು) ಖಂಡಿತವಾಗಿಯೂ ನನ್ನ ಶತ್ರುಗಳಾಗಿರುವರು, ಸರ್ವಲೋಕಗಳ ರಬ್‌ನ ಹೊರತು.

فَإِنَّهُمۡ عَدُوٌّ لِّيٓ إِلَّا رَبَّ ٱلۡعَٰلَمِينَ ٧٧

78. ಅಂದರೆ ನನ್ನನ್ನು ಸೃಷ್ಟಿಸಿ ನನಗೆ ಮಾರ್ಗದರ್ಶನ ಮಾಡುತ್ತಿರುವವನು.

ٱلَّذِي خَلَقَنِي فَهُوَ يَهۡدِينِ ٧٨

79. ನನಗೆ ಅನ್ನವನ್ನೂ ಪಾನೀಯವನ್ನೂ ಒದಗಿಸುವವನು.

وَٱلَّذِي هُوَ يُطۡعِمُنِي وَيَسۡقِينِ ٧٩

80. ನಾನು ರೋಗಿಯಾದರೆ ಅವನು ನನಗೆ ಸೌಖ್ಯವನ್ನು ನೀಡುವವನು.

وَإِذَا مَرِضۡتُ فَهُوَ يَشۡفِينِ ٨٠

**81.** ನನ್ನನ್ನು ಮೃತಪಡಿಸುವವನು ಮತ್ತು ತರುವಾಯ ನನಗೆ ಜೀವ ನೀಡುವವನು.

وَٱلَّذِى يُمِيتُنِى ثُمَّ يُحۡيِينِ ﴿٨١﴾

**82.** ಪ್ರತಿಫಲ ದಿನದಂದು ಯಾರು ನನ್ನ ಪಾಪಗಳನ್ನು ಕ್ಷಮಿಸುವನೆಂದು ನಾನು ನಿರೀಕ್ಷಿಸುತ್ತಿರುವೆನೋ ಅವನು.

وَٱلَّذِىٓ أَطۡمَعُ أَن يَغۡفِرَ لِى خَطِيٓـَٔتِى يَوۡمَ ٱلدِّينِ ﴿٨٢﴾

**83.** ಓ ನನ್ನ ರಬ್! ನನಗೆ ತತ್ವಜ್ಞಾನವನ್ನು ದಯಪಾಲಿಸು ಮತ್ತು ನನ್ನನ್ನು ಸಜ್ಜನರೊಂದಿಗೆ ಸೇರಿಸು.

رَبِّ هَبۡ لِى حُكۡمًا وَأَلۡحِقۡنِى بِٱلصَّـٰلِحِينَ ﴿٨٣﴾

**84.** ಮುಂದಿನ ತಲೆಮಾರುಗಳಲ್ಲಿ ನನಗೆ ಅತ್ಯುತ್ತಮ ಕೀರ್ತಿಯನ್ನು ಕರುಣಿಸು.

وَٱجۡعَل لِّى لِسَانَ صِدۡقٍ فِى ٱلۡأٓخِرِينَ ﴿٨٤﴾

**85.** ಸುಖಸಮೃದ್ಧಿಯಿಂದ ಕೂಡಿದ ಸ್ವರ್ಗದ ವಾರೀಸುದಾರರಲ್ಲಿ ನನ್ನನ್ನು ಸೇರಿಸು.

وَٱجۡعَلۡنِى مِن وَرَثَةِ جَنَّةِ ٱلنَّعِيمِ ﴿٨٥﴾

**86.** ನನ್ನ ತಂದೆಗೆ ಪಾಪಮುಕ್ತಿ ನೀಡು. ಖಂಡಿತವಾಗಿಯೂ ಅವರು ಪಥಭ್ರಷ್ಟರಲ್ಲಿ ಸೇರಿದವರಾಗಿರುವರು.

وَٱغۡفِرۡ لِأَبِىٓ إِنَّهُۥ كَانَ مِنَ ٱلضَّآلِّينَ ﴿٨٦﴾

**87.** ಅವರನ್ನು (ಮನುಷ್ಯರನ್ನು) ಪುನರುತ್ಥಾನಗೊಳಿಸಲಾಗುವ ದಿನದಂದು ನನ್ನನ್ನು ಅಪಮಾನಗೊಳಿಸದಿರು.

وَلَا تُخۡزِنِى يَوۡمَ يُبۡعَثُونَ ﴿٨٧﴾

**88-89.** ಅಂದರೆ ಪಾಪರಹಿತವಾದ ಹೃದಯದೊಂದಿಗೆ ಅಲ್ಲಾಹುವಿನ ಬಳಿ ಬಂದವನಿಗಲ್ಲದೆ ಸಂಪತ್ತಾಗಲಿ, ಸಂತಾನವಾಗಲಿ ಪ್ರಯೋಜನಪಡದ ದಿನ!

يَوۡمَ لَا يَنفَعُ مَالٌ وَلَا بَنُونَ ﴿٨٨﴾ إِلَّا مَنۡ أَتَى ٱللَّهَ بِقَلۡبٍ سَلِيمٍ ﴿٨٩﴾

**90.** ಭಯಭಕ್ತಿ ಪಾಲಿಸಿದವರಿಗೆ (ಅಂದು) ಸ್ವರ್ಗವನ್ನು ಹತ್ತಿರಗೊಳಿಸಲಾಗುವುದು.

وَأُزۡلِفَتِ ٱلۡجَنَّةُ لِلۡمُتَّقِينَ ﴿٩٠﴾

**91.** ದುರ್ಮಾರ್ಗಿಗಳಿಗೆ ನರಕವನ್ನು ತೆರೆದು ತೋರಿಸಲಾಗುವುದು.

وَبُرِّزَتِ ٱلۡجَحِيمُ لِلۡغَاوِينَ ﴿٩١﴾

**92-93.** ‘ನೀವು ಅಲ್ಲಾಹುವಿನ ಹೊರತು ಆರಾಧಿಸುತ್ತಿದ್ದುದೆಲ್ಲವೂ ಎಲ್ಲಿ ಹೋದವು? ಅವರು ನಿಮಗೆ ಸಹಾಯ ಮಾಡುವರೇ?

وَقِيلَ لَهُمۡ أَيۡنَ مَا كُنتُمۡ تَعۡبُدُونَ ﴿٩٢﴾ مِن دُونِ ٱللَّهِ هَلۡ يَنصُرُونَكُمۡ

ಅಥವಾ ಅವರು ಸ್ವತಃ ತಮಗೇ ಸಹಾಯ ಮಾಡುವರೇ?' ಎಂದು ಅವರೊಂದಿಗೆ ಕೇಳಲಾಗುವುದು.

أَوۡ يَنتَصِرُونَ ﴿٩٣﴾

**94-95.** ತರುವಾಯ ಅವರನ್ನು (ಆ ಆರಾಧ್ಯರನ್ನು), ದುರ್ಮಾರ್ಗಿಗಳನ್ನು ಮತ್ತು ಇಬ್ಲೀಸನ ಸಂಪೂರ್ಣ ಸೈನ್ಯವನ್ನು ಅದರಲ್ಲಿ (ನರಕಾಗ್ನಿಯಲ್ಲಿ) ತಲೆಕೆಳಗಾಗಿ ಬೀಳಿಸಲಾಗುವುದು.

فَكُبۡكِبُواْ فِيهَا هُمۡ وَٱلۡغَاوُۥنَ ﴿٩٤﴾ وَجُنُودُ إِبۡلِيسَ أَجۡمَعُونَ ﴿٩٥﴾

**96.** ಅಲ್ಲಿ ಅವರು ಪರಸ್ಪರ ಜಗಳವಾಡುತ್ತಾ ಹೇಳುವರು:

قَالُواْ وَهُمۡ فِيهَا يَخۡتَصِمُونَ ﴿٩٦﴾

**97-98.** 'ಅಲ್ಲಾಹುವಿನ ಮೇಲಾಣೆ! ನಾವು ನಿಮ್ಮನ್ನು ಸರ್ವಲೋಕಗಳ ರಬ್‌ನೊಂದಿಗೆ ಸಮಾನರನ್ನಾಗಿ ಮಾಡುವಾಗ ಖಂಡಿತವಾಗಿಯೂ ನಾವು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿದ್ದೆವು.

تَٱللَّهِ إِن كُنَّا لَفِي ضَلَٰلٖ مُّبِينٍ ﴿٩٧﴾ إِذۡ نُسَوِّيكُم بِرَبِّ ٱلۡعَٰلَمِينَ ﴿٩٨﴾

**99.** ನಮ್ಮನ್ನು ಪಥಭ್ರಷ್ಟಗೊಳಿಸಿದ್ದು ಆ ಅಪರಾಧಿಗಳ ಹೊರತು ಇನ್ನಾರೂ ಅಲ್ಲ.

وَمَآ أَضَلَّنَآ إِلَّا ٱلۡمُجۡرِمُونَ ﴿٩٩﴾

**100.** ಈಗ ನಮಗೆ ಶಿಫಾರಸು ಮಾಡುವವರು ಯಾರೂ ಇಲ್ಲ.

فَمَا لَنَا مِن شَٰفِعِينَ ﴿١٠٠﴾

**101.** ಆಪ್ತ ಮಿತ್ರನೂ ಇಲ್ಲ.

وَلَا صَدِيقٍ حَمِيمٖ ﴿١٠١﴾

**102.** ನಮಗೆ ಮರಳಿ ಹೋಗುವ ಸಾಧ್ಯವಿರುತ್ತಿದ್ದರೆ ನಾವು ಸತ್ಯವಿಶ್ವಾಸಿಗಳಲ್ಲಿ ಸೇರಿದವರಾಗುತ್ತಿದ್ದೆವು'.

فَلَوۡ أَنَّ لَنَا كَرَّةٗ فَنَكُونَ مِنَ ٱلۡمُؤۡمِنِينَ ﴿١٠٢﴾

**103.** ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

إِنَّ فِي ذَٰلِكَ لَأٓيَةٗۖ وَمَا كَانَ أَكۡثَرُهُم مُّؤۡمِنِينَ ﴿١٠٣﴾

**104.** ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلۡعَزِيزُ ٱلرَّحِيمُ ﴿١٠٤﴾

**105.** ನೂಹ್‌ರ ಜನತೆಯು ಸಂದೇಶವಾಹಕರನ್ನು ನಿಷೇಧಿಸಿದರು.

كَذَّبَتۡ قَوۡمُ نُوحٍ ٱلۡمُرۡسَلِينَ ﴿١٠٥﴾

106. ‘ನೀವು ಭಯಭಕ್ತಿ ಪಾಲಿಸುವುದಿಲ್ಲವೇ?’ ಎಂದು ಅವರ ಸಹೋದರನಾದ ನೂಹ್ ಅವರೊಂದಿಗೆ ಹೇಳಿದ ಸಂದರ್ಭ.

إِذْ قَالَ لَهُمْ أَخُوهُمْ نُوحٌ أَلَا تَتَّقُونَ ١٠٦

107. ‘ಖಂಡಿತವಾಗಿಯೂ ನಾನು ನಿಮಗಾಗಿ ಇರುವ ಒಬ್ಬ ಪ್ರಾಮಾಣಿಕ ಸಂದೇಶವಾಹಕನಾಗಿರುವೆನು.

إِنِّي لَكُمْ رَسُولٌ أَمِينٌ ١٠٧

108. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُواْ ٱللَّهَ وَأَطِيعُونِ ١٠٨

109. ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡುವುದಿಲ್ಲ. ನನಗಿರುವ ಪ್ರತಿಫಲವು ಸರ್ವಲೋಕಗಳ ರಬ್‌ನ ವತಿಯಿಂದ ಮಾತ್ರವಾಗಿದೆ.

وَمَآ أَسۡـَٔلُكُمۡ عَلَيۡهِ مِنۡ أَجۡرٍۖ إِنۡ أَجۡرِيَ إِلَّا عَلَىٰ رَبِّ ٱلۡعَٰلَمِينَ ١٠٩

110. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ’.

فَٱتَّقُواْ ٱللَّهَ وَأَطِيعُونِ ١١٠

111. ಅವರು ಹೇಳಿದರು: ‘ನಿನ್ನನ್ನು ಹಿಂಬಾಲಿಸಿದವರು ಅತಿ ಕೆಳವರ್ಗದ ಜನರಾಗಿರುವಾಗ ನಾವು ನಿನ್ನಲ್ಲಿ ವಿಶ್ವಾಸವಿಡಬೇಕೇ?’

۞ قَالُوٓاْ أَنُؤۡمِنُ لَكَ وَٱتَّبَعَكَ ٱلۡأَرۡذَلُونَ ١١١

112. ಆತ ಹೇಳಿದರು: ‘ಅವರು ಮಾಡುತ್ತಿರುವುದರ ಕುರಿತು ನನಗೇನು ಜ್ಞಾನವಿದೆ?(1)

قَالَ وَمَا عِلۡمِي بِمَا كَانُواْ يَعۡمَلُونَ ١١٢

113. ಅವರನ್ನು ವಿಚಾರಣೆ ಮಾಡಬೇಕಾದ ಹೊಣೆಯಿರುವುದು ನನ್ನ ರಬ್‌ಗೆ ಮಾತ್ರವಾಗಿದೆ. ನೀವು ಗ್ರಹಿಸಿಕೊಳ್ಳುವವರಾಗಿದ್ದರೆ.

إِنۡ حِسَابُهُمۡ إِلَّا عَلَىٰ رَبِّيۖ لَوۡ تَشۡعُرُونَ ١١٣

114. ನಾನೆಂದೂ ಸತ್ಯವಿಶ್ವಾಸಿಗಳನ್ನು ದೂರ ಅಟ್ಟುವುದಿಲ್ಲ.

وَمَآ أَنَا۠ بِطَارِدِ ٱلۡمُؤۡمِنِينَ ١١٤

115. ನಾನು ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನು ಮಾತ್ರವಾಗಿರುವೆನು’.

إِنۡ أَنَا۠ إِلَّا نَذِيرٞ مُّبِينٞ ١١٥

1 ಅವರ ಉಚ್ಛತೆಗೆ ಮತ್ತು ನೀಚತೆಗೆ ಮಾನದಂಡವಾಗಿರುವುದು ಅವರ ಕರ್ಮಗಳಾಗಿವೆ. ಕರ್ಮಗಳ ವಿಚಾರಣೆ ಮಾಡುವುದು ನನ್ನ ಹೊಣೆಯಲ್ಲ. ಅದನ್ನು ವಿಚಾರಣೆ ಮಾಡಿ ಪ್ರತಿಫಲ ನೀಡುವವನು ಅಲ್ಲಾಹುವಾಗಿದ್ದಾನೆ. ಆದ್ದರಿಂದ ನೀವು ಕೆಳವರ್ಗದವರೆಂದು ಕರೆಯುವ ಸತ್ಯವಿಶ್ವಾಸಿಗಳನ್ನು ನಿಮ್ಮ ಸಂತೃಪ್ತಿಗಾಗಿ ನಾನು ದೂರ ಅಟ್ಟಲಾರೆನು ಎಂದರ್ಥ.

116. ಅವರು ಹೇಳಿದರು: ‘ಓ ನೂಹ್! ನೀನು (ಇದನ್ನು) ಸ್ಥಗಿತಗೊಳಿಸುವುದಿಲ್ಲವಾದರೆ ಖಂಡಿತವಾಗಿಯೂ ನೀನು ಕಲ್ಲೆಸೆದು ಕೊಲ್ಲಲಾದವರಲ್ಲಿ ಸೇರುವೆ’.

قَالُواْ لَئِن لَّمْ تَنتَهِ يَٰنُوحُ لَتَكُونَنَّ مِنَ ٱلْمَرْجُومِينَ ﴿١١٦﴾

117. ಆತ ಹೇಳಿದರು: ‘ಓ ನನ್ನ ರಬ್! ಖಂಡಿತವಾಗಿಯೂ ನನ್ನ ಜನರು ನನ್ನನ್ನು ನಿಷೇಧಿಸಿರುವರು.

قَالَ رَبِّ إِنَّ قَوْمِى كَذَّبُونِ ﴿١١٧﴾

118. ಆದ್ದರಿಂದ ನೀನು ನನ್ನ ಮತ್ತು ಅವರ ಮಧ್ಯೆ ನಿರ್ಣಾಯಕವಾದ ಒಂದು ತೀರ್ಪನ್ನು ನೀಡು. ನನ್ನನ್ನು ಮತ್ತು ನನ್ನ ಜೊತೆಗಿರುವ ಸತ್ಯವಿಶ್ವಾಸಿಗಳನ್ನು ರಕ್ಷಿಸು’.

فَٱفْتَحْ بَيْنِى وَبَيْنَهُمْ فَتْحًا وَنَجِّنِى وَمَن مَّعِىَ مِنَ ٱلْمُؤْمِنِينَ ﴿١١٨﴾

119. ಆಗ ನಾವು ಅವರನ್ನು ಮತ್ತು ಅವರ ಜೊತೆಗಿರುವವರನ್ನು ಭಾರ ಹೊತ್ತ ಹಡಗಿನಲ್ಲಿ ರಕ್ಷಿಸಿದೆವು.

فَأَنجَيْنَٰهُ وَمَن مَّعَهُۥ فِى ٱلْفُلْكِ ٱلْمَشْحُونِ ﴿١١٩﴾

120. ತರುವಾಯ ಉಳಿದವರನ್ನೆಲ್ಲ ಅನಂತರ ನಾವು ಮುಳುಗಿಸಿದೆವು.

ثُمَّ أَغْرَقْنَا بَعْدُ ٱلْبَاقِينَ ﴿١٢٠﴾

121. ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

إِنَّ فِى ذَٰلِكَ لَءَايَةً ۖ وَمَا كَانَ أَكْثَرُهُم مُّؤْمِنِينَ ﴿١٢١﴾

122. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلْعَزِيزُ ٱلرَّحِيمُ ﴿١٢٢﴾

123. ಆದ್ ಜನಾಂಗದವರು ಸಂದೇಶವಾಹಕರನ್ನು ನಿಷೇಧಿಸಿದರು.

كَذَّبَتْ عَادٌ ٱلْمُرْسَلِينَ ﴿١٢٣﴾

124. ‘ನೀವು ಭಯಭಕ್ತಿ ಪಾಲಿಸುವುದಿಲ್ಲವೇ?’ ಎಂದು ಅವರ ಸಹೋದರರಾದ ಹೂದ್ ಅವರೊಂದಿಗೆ ಹೇಳಿದ ಸಂದರ್ಭ.

إِذْ قَالَ لَهُمْ أَخُوهُمْ هُودٌ أَلَا تَتَّقُونَ ﴿١٢٤﴾

125. ‘ಖಂಡಿತವಾಗಿಯೂ ನಾನು ನಿಮಗಿರುವ ಒಬ್ಬ ವಿಶ್ವಾಸಾರ್ಹ ಸಂದೇಶವಾಹಕನಾಗಿರುವೆನು.

إِنِّى لَكُمْ رَسُولٌ أَمِينٌ ﴿١٢٥﴾

126. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُواْ ٱللَّهَ وَأَطِيعُونِ ﴿١٢٦﴾

127. ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡುವುದಿಲ್ಲ. ನನಗಿರುವ ಪ್ರತಿಫಲವು ಸರ್ವಲೋಕಗಳ ರಬ್‌ನ ವತಿಯಿಂದ ಮಾತ್ರವಾಗಿದೆ.

وَمَآ أَسْـَٔلُكُمْ عَلَيْهِ مِنْ أَجْرٍ ۖ إِنْ أَجْرِىَ إِلَّا عَلَىٰ رَبِّ ٱلْعَـٰلَمِينَ ١٢٧

128. ವೃಥಾ ದುರಭಿಮಾನ ಪಡುವ ಸಲುವಾಗಿ ಎಲ್ಲ ಗುಡ್ಡಗಾಡುಗಳಲ್ಲೂ ನೀವು ಪ್ರತಿಷ್ಠೆಯ ಲಾಂಛನ (ಗೋಪುರ)ಗಳನ್ನು ನಿರ್ಮಿಸುತ್ತಿರುವಿರಾ?

أَتَبْنُونَ بِكُلِّ رِيعٍ ءَايَةً تَعْبَثُونَ ١٢٨

129. ನೀವು ಶಾಶ್ವತವಾಗಿ ವಾಸಿಸುವಿರಿ ಎಂಬ ಭಾವದಲ್ಲಿ ಮಹಾಸೌಧಗಳನ್ನು ನಿರ್ಮಿಸುತ್ತಿರುವಿರಾ?

وَتَتَّخِذُونَ مَصَانِعَ لَعَلَّكُمْ تَخْلُدُونَ ١٢٩

130. ನೀವು ಬಲಪ್ರಯೋಗ ಮಾಡುವಾಗ ದಬ್ಬಾಳಿಕೆ ಮಾಡುವವರಂತೆ ಬಲಪ್ರಯೋಗ ಮಾಡುತ್ತಿರುವಿರಿ.

وَإِذَا بَطَشْتُم بَطَشْتُمْ جَبَّارِينَ ١٣٠

131. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ١٣١

132. ಸ್ವತಃ ನೀವೇ ಅರಿಯುವಂತಹವುಗಳ (ಸುಖಸೌಕರ್ಯಗಳ) ಮೂಲಕ ನಿಮಗೆ ನೆರವು ನೀಡಿದವನನ್ನು ಭಯಪಡಿರಿ.

وَٱتَّقُوا۟ ٱلَّذِىٓ أَمَدَّكُم بِمَا تَعْلَمُونَ ١٣٢

133–134. ಜಾನುವಾರುಗಳು, ಸಂತತಿಗಳು, ತೋಟಗಳು ಮತ್ತು ಕಾಲುವೆಗಳ ಮೂಲಕ ಅವನು ನಿಮಗೆ ನೆರವು ನೀಡಿರುವನು.

أَمَدَّكُم بِأَنْعَـٰمٍ وَبَنِينَ ١٣٣ وَجَنَّـٰتٍ وَعُيُونٍ ١٣٤

135. ನಿಮ್ಮ ಕುರಿತು ಭಯಾನಕ ದಿನವೊಂದರ ಶಿಕ್ಷೆಯನ್ನು ಖಂಡಿತವಾಗಿಯೂ ನಾನು ಭಯಪಡುತ್ತಿರುವೆನು’.

إِنِّىٓ أَخَافُ عَلَيْكُمْ عَذَابَ يَوْمٍ عَظِيمٍ ١٣٥

136. ಅವರು ಹೇಳಿದರು: ‘ನೀನು ಉಪದೇಶ ನೀಡಿದರೂ ಅಥವಾ ಉಪದೇಶ ನೀಡುವವರಲ್ಲಿ ಸೇರದಿದ್ದರೂ ನಮ್ಮ ಮಟ್ಟಿಗೆ ಅದು ಸಮಾನವಾಗಿದೆ.

قَالُوا۟ سَوَآءٌ عَلَيْنَآ أَوَعَظْتَ أَمْ لَمْ تَكُن مِّنَ ٱلْوَٰعِظِينَ ١٣٦

137. ಇದು[1] ಪೂರ್ವಿಕರ ಸಂಪ್ರದಾಯವೇ ಆಗಿದೆ.

إِنْ هَٰذَآ إِلَّا خُلُقُ ٱلْأَوَّلِينَ ١٣٧

138. ನಾವು ಶಿಕ್ಷೆಗೊಳಗಾಗುವವರಲ್ಲ'.

وَمَا نَحْنُ بِمُعَذَّبِينَ ١٣٨

139. ತರುವಾಯ ಅವರು ಆತನನ್ನು (ಹೂದ್‌ರನ್ನು) ನಿಷೇಧಿಸಿದರು. ಆದ್ದರಿಂದ ನಾವು ಅವರನ್ನು ನಾಶಮಾಡಿದೆವು. ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

فَكَذَّبُوهُ فَأَهْلَكْنَٰهُمْ ۗ إِنَّ فِى ذَٰلِكَ لَءَايَةً ۖ وَمَا كَانَ أَكْثَرُهُم مُّؤْمِنِينَ ١٣٩

140. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلْعَزِيزُ ٱلرَّحِيمُ ١٤٠

141. ಸಮೂದ್ ಜನಾಂಗದವರು ಸಂದೇಶವಾಹಕರನ್ನು ನಿಷೇಧಿಸಿದರು.

كَذَّبَتْ ثَمُودُ ٱلْمُرْسَلِينَ ١٤١

142. 'ನೀವು ಭಯಭಕ್ತಿ ಪಾಲಿಸುವುದಿಲ್ಲವೇ?' ಎಂದು ಅವರ ಸಹೋದರರಾದ ಸ್ವಾಲಿಹ್ ಅವರೊಂದಿಗೆ ಹೇಳಿದ ಸಂದರ್ಭ.

إِذْ قَالَ لَهُمْ أَخُوهُمْ صَٰلِحٌ أَلَا تَتَّقُونَ ١٤٢

143. 'ಖಂಡಿತವಾಗಿಯೂ ನಾನು ನಿಮಗಿರುವ ಒಬ್ಬ ವಿಶ್ವಾಸಾರ್ಹ ಸಂದೇಶವಾಹಕನಾಗಿರುವೆನು.

إِنِّى لَكُمْ رَسُولٌ أَمِينٌ ١٤٣

144. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ١٤٤

145. ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನು ಬೇಡುವುದಿಲ್ಲ. ನನಗಿರುವ ಪ್ರತಿಫಲವು ಸರ್ವಲೋಕಗಳ ರಬ್‌ನ ವತಿಯಿಂದ ಮಾತ್ರವಾಗಿದೆ.

وَمَآ أَسْـَٔلُكُمْ عَلَيْهِ مِنْ أَجْرٍ ۖ إِنْ أَجْرِىَ إِلَّا عَلَىٰ رَبِّ ٱلْعَٰلَمِينَ ١٤٥

1 'ಇದು' ಎಂಬುದರ ತಾತ್ಪರ್ಯವು ಅವರ ಧಾರ್ಮಿಕ ಆಚಾರವಾಗಿರಬಹುದು. 'ನಾವು ಸ್ವೀಕರಿಸಿದ ಈ ಧರ್ಮವು ನಮ್ಮ ಪೂರ್ವಿಕರ ಸಂಪ್ರದಾಯವಾಗಿದೆ. ಅದನ್ನು ನಾವು ಕೈಬಿಡಲಾರೆವು' ಎಂಬುದು ಈ ವಾಕ್ಯದ ಅರ್ಥವಾಗಿರಬಹುದು. ಅಥವಾ 'ಇದು' ಎಂಬುದರ ತಾತ್ಪರ್ಯವು ಪ್ರವಾದಿ ಹೂದ್(عَلَيْهِ السَّلَامُ)ರವರು ಬೋಧಿಸುತ್ತಿರುವ ವಿಶ್ವಾಸ–ಆಚಾರಗಳಾಗಿರಬಹುದು. ಆಗ ಅದರ ಅರ್ಥವು: 'ತಾವು ಹೇಳುವ ವಿಷಯಗಳು –ವಿಶೇಷವಾಗಿ ಪರಲೋಕ ಶಿಕ್ಷೆಗೆ ಸಂಬಂಧಿಸಿದ ಎಚ್ಚರಿಕೆಗಳು– ಹಳೆಯ ಕಾಲದವರು ಹೇಳುತ್ತಾ ಬಂದಿರುವ ಪುರಾಣಗಳಾಗಿವೆ. ಅವ್ಯಾವುದೂ ಸತ್ಯವಲ್ಲ' ಎಂದಾಗಿರಬಹುದು.

**146.** ಇಲ್ಲಿರುವುದರಲ್ಲೇ (ಸಮೃದ್ಧಿಯಲ್ಲೇ) ನಿರ್ಭೀತರಾಗಿ ಕಳೆಯಲು ನಿಮ್ಮನ್ನು ಬಿಟ್ಟುಬಿಡಲಾಗುವುದೇ?

أَتُتْرَكُونَ فِي مَا هَٰهُنَآ ءَامِنِينَ ﴿١٤٦﴾

**147-148.** ಅಂದರೆ ತೋಟಗಳಲ್ಲಿ, ಕಾಲುವೆಗಳಲ್ಲಿ, ಹೊಲಗಳಲ್ಲಿ ಮತ್ತು ಗೊನೆಗಳ ಭಾರದಿಂದ ತೂಗುತ್ತಿರುವ ಖರ್ಜೂರದ ಮರಗಳಲ್ಲಿ.[1]

فِي جَنَّٰتٍ وَعُيُونٍ ﴿١٤٧﴾ وَزُرُوعٍ وَنَخْلٍ طَلْعُهَا هَضِيمٌ ﴿١٤٨﴾

**149.** ನೀವು ಆಹ್ಲಾದಭರಿತರಾಗಿ ಪರ್ವತಗಳನ್ನು ಕೊರೆದು ಮನೆಗಳನ್ನು ನಿರ್ಮಿಸುತ್ತಿರುವಿರಿ.

وَتَنْحِتُونَ مِنَ ٱلْجِبَالِ بُيُوتًا فَٰرِهِينَ ﴿١٤٩﴾

**150.** ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ﴿١٥٠﴾

**151-152.** ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಮತ್ತು ಸುಧಾರಣೆ ಮಾಡದ ಅತಿಕ್ರಮಿಗಳ ಆಜ್ಞೆಯನ್ನು ನೀವು ಅನುಸರಿಸದಿರಿ’.

وَلَا تُطِيعُوٓا۟ أَمْرَ ٱلْمُسْرِفِينَ ﴿١٥١﴾ ٱلَّذِينَ يُفْسِدُونَ فِي ٱلْأَرْضِ وَلَا يُصْلِحُونَ ﴿١٥٢﴾

**153.** ಅವರು ಹೇಳಿದರು: ‘ನೀನು ಮಾಟಬಾಧಿತರ ಪೈಕಿ ಸೇರಿದ ಒಬ್ಬ ವ್ಯಕ್ತಿ ಮಾತ್ರವಾಗಿರುವೆ.[2]

قَالُوٓا۟ إِنَّمَآ أَنتَ مِنَ ٱلْمُسَحَّرِينَ ﴿١٥٣﴾

**154.** ನೀನು ನಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವೆ. ನೀನು ಸತ್ಯಸಂಧರಲ್ಲಿ ಸೇರಿದವನಾದರೆ ಯಾವುದಾದರೂ ದೃಷ್ಟಾಂತವನ್ನು ತಾ.

مَآ أَنتَ إِلَّا بَشَرٌ مِّثْلُنَا فَأْتِ بِـَٔايَةٍ إِن كُنتَ مِنَ ٱلصَّٰدِقِينَ ﴿١٥٤﴾

**155.** ಆತ ಹೇಳಿದರು: ‘ಇಗೋ ಒಂದು ಒಂಟೆ. ಅದಕ್ಕೆ ನೀರು ಕುಡಿಯಲು ಒಂದು ಸರದಿಯಿದೆ. ನಿಮಗೂ ಒಂದು ಸರದಿಯಿದೆ; ಒಂದು ನಿಶ್ಚಿತ ದಿನದಲ್ಲಿ.

قَالَ هَٰذِهِۦ نَاقَةٌ لَّهَا شِرْبٌ وَلَكُمْ شِرْبُ يَوْمٍ مَّعْلُومٍ ﴿١٥٥﴾

**156.** ಯಾವುದೇ ಹಾನಿಯೊಂದಿಗೆ ಅದನ್ನು ಮುಟ್ಟದಿರಿ. (ಹಾಗೆ ಮಾಡಿದರೆ) ಭಯಾನಕವಾದ ದಿನವೊಂದರ ಶಿಕ್ಷೆಯು ನಿಮ್ಮನ್ನು ಹಿಡಿಯಲಿರುವುದು’.

وَلَا تَمَسُّوهَا بِسُوٓءٍ فَيَأْخُذَكُمْ عَذَابُ يَوْمٍ عَظِيمٍ ﴿١٥٦﴾

1 ಐಶ್ವರ್ಯಭರಿತವಾದ ಈ ಬದುಕನ್ನು ನೀವು ಸದಾಕಾಲ ಸವಿಯುತ್ತಲೇ ಇರಲು ನಿಮಗೆ ಅನುಮತಿ ನೀಡಲಾಗುವುದು ಎಂದು ನೀವು ಭಾವಿಸಿದ್ದೀರಾ? ಎಂದರ್ಥ.

2 ತಮಗೆ ಮಾಟ ಮಾಡಲಾಗಿರುವುದರಿಂದಲೇ ತಾವು ಹೀಗೆ ಅಸಹಜವಾಗಿ ಏನೇನೋ ಮಾತನಾಡುತ್ತಿರುವಿರಿ ಎಂದು ನಾವು ಭಾವಿಸುತ್ತಿದ್ದೇವೆ ಎಂದರ್ಥ.

157. ಆದರೆ ಅವರು ಅದನ್ನು ಕಡಿದು ಸಾಯಿಸಿದರು. ತರುವಾಯ ಅವರು ವಿಷಾದಿಸುವವರಾದರು.

فَعَقَرُوهَا فَأَصْبَحُوا۟ نَـٰدِمِينَ ﴿١٥٧﴾

158. ಆಗ ಶಿಕ್ಷೆಯು ಅವರನ್ನು ಹಿಡಿದು ಬಿಟ್ಟಿತು. ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ಸತ್ಯವಿಶ್ವಾಸಿಗಳಾಗಲಾರರು.

فَأَخَذَهُمُ ٱلْعَذَابُ ۗ إِنَّ فِى ذَٰلِكَ لَـَٔايَةً ۖ وَمَا كَانَ أَكْثَرُهُم مُّؤْمِنِينَ ﴿١٥٨﴾

159. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلْعَزِيزُ ٱلرَّحِيمُ ﴿١٥٩﴾

160. ಲೂತ್‌ರ ಜನತೆ ಸಂದೇಶವಾಹಕರನ್ನು ನಿಷೇಧಿಸಿದರು.

كَذَّبَتْ قَوْمُ لُوطٍ ٱلْمُرْسَلِينَ ﴿١٦٠﴾

161. 'ನೀವು ಭಯಭಕ್ತಿ ಪಾಲಿಸುವುದಿಲ್ಲವೇ?' ಎಂದು ಅವರ ಸಹೋದರರಾದ ಲೂತ್ ಅವರೊಂದಿಗೆ ಹೇಳಿದ ಸಂದರ್ಭ.

إِذْ قَالَ لَهُمْ أَخُوهُمْ لُوطٌ أَلَا تَتَّقُونَ ﴿١٦١﴾

162. 'ಖಂಡಿತವಾಗಿಯೂ ನಾನು ನಿಮಗಿರುವ ಒಬ್ಬ ವಿಶ್ವಾಸಾರ್ಹ ಸಂದೇಶವಾಹಕನಾಗಿರುವೆನು.

إِنِّى لَكُمْ رَسُولٌ أَمِينٌ ﴿١٦٢﴾

163. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُوا۟ ٱللَّهَ وَأَطِيعُونِ ﴿١٦٣﴾

164. ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನು ಬೇಡುವುದಿಲ್ಲ. ನನಗಿರುವ ಪ್ರತಿಫಲವು ಸರ್ವಲೋಕಗಳ ರಬ್‌ನ ವತಿಯಿಂದ ಮಾತ್ರವಾಗಿದೆ.

وَمَآ أَسْـَٔلُكُمْ عَلَيْهِ مِنْ أَجْرٍ ۖ إِنْ أَجْرِىَ إِلَّا عَلَىٰ رَبِّ ٱلْعَـٰلَمِينَ ﴿١٦٤﴾

165-166. ನೀವು ಜನರ ಪೈಕಿ ಪುರುಷರ ಬಳಿಗೆ ತೆರಳುತ್ತಾ ನಿಮ್ಮ ರಬ್ ನಿಮಗಾಗಿ ಸೃಷ್ಟಿಸಿರುವ ನಿಮ್ಮ ಸಂಗಾತಿಗಳನ್ನು ನೀವು ತ್ಯಜಿಸುತ್ತಿರುವಿರಾ? ಅಲ್ಲ, ಖಂಡಿತವಾಗಿಯೂ ನೀವು ಹದ್ದುಮೀರಿದ ಒಂದು ಜನತೆಯಾಗಿರುವಿರಿ'.

أَتَأْتُونَ ٱلذُّكْرَانَ مِنَ ٱلْعَـٰلَمِينَ ﴿١٦٥﴾ وَتَذَرُونَ مَا خَلَقَ لَكُمْ رَبُّكُم مِّنْ أَزْوَٰجِكُم ۚ بَلْ أَنتُمْ قَوْمٌ عَادُونَ ﴿١٦٦﴾

167. ಅವರು ಹೇಳಿದರು: 'ಓ ಲೂತ್! ತಾವು (ಇದನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ತಾವು (ಊರಿನಿಂದ) ಹೊರಗಟ್ಟಲಾದವರಲ್ಲಿ ಸೇರುವಿರಿ'.

قَالُوا۟ لَئِن لَّمْ تَنتَهِ يَـٰلُوطُ لَتَكُونَنَّ مِنَ ٱلْمُخْرَجِينَ ﴿١٦٧﴾

قَالَ إِنِّي لِعَمَلِكُم مِّنَ ٱلْقَالِينَ ١٦٨

168. ಆತ ಹೇಳಿದರು: 'ಖಂಡಿತವಾಗಿಯೂ ನಾನು ನಿಮ್ಮ ಕೃತ್ಯವನ್ನು ಅಸಹ್ಯಪಡುವವರಲ್ಲಿ ಸೇರಿದವನಾಗಿರುವೆನು'.

رَبِّ نَجِّنِي وَأَهْلِي مِمَّا يَعْمَلُونَ ١٦٩

169. (ಲೂತ್ ಪ್ರಾರ್ಥಿಸಿದರು): 'ಓ ನನ್ನ ರಬ್! ನನ್ನನ್ನು ಮತ್ತು ನನ್ನ ಕುಟುಂಬವನ್ನು ಇವರು ಮಾಡುತ್ತಿರುವ ಕೃತ್ಯದಿಂದ ರಕ್ಷಿಸು'.

فَنَجَّيْنَهُ وَأَهْلَهُۥٓ أَجْمَعِينَ ١٧٠

170. ಆಗ ನಾವು ಆತನನ್ನು ಮತ್ತು ಆತನ ಕುಟುಂಬದವರನ್ನು ಸಂಪೂರ್ಣವಾಗಿ ರಕ್ಷಿಸಿದೆವು.

إِلَّا عَجُوزًا فِي ٱلْغَبِرِينَ ١٧١

171. ಹಿಂದೆ ಉಳಿದವರಲ್ಲಿ ಸೇರಿದ ಒಬ್ಬ ವೃದ್ಧೆಯ ಹೊರತು.[1]

ثُمَّ دَمَّرْنَا ٱلْءَاخَرِينَ ١٧٢

172. ತರುವಾಯ ಇತರೆಲ್ಲರನ್ನೂ ನಾವು ನಾಶ ಮಾಡಿದೆವು.

وَأَمْطَرْنَا عَلَيْهِم مَّطَرًا ۖ فَسَآءَ مَطَرُ ٱلْمُنذَرِينَ ١٧٣

173. ನಾವು ಅವರ ಮೇಲೆ ಒಂದು ವಿಧದ ಮಳೆಯನ್ನು ಸುರಿಸಿದೆವು. ಎಚ್ಚರಿಕೆ ನೀಡಲಾದವರಿಗೆ ಲಭಿಸಿದ ಆ ಮಳೆಯು ಎಷ್ಟು ನಿಕೃಷ್ಟವಾದುದು![2]

إِنَّ فِي ذَٰلِكَ لَءَايَةً ۖ وَمَا كَانَ أَكْثَرُهُم مُّؤْمِنِينَ ١٧٤

174. ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

وَإِنَّ رَبَّكَ لَهُوَ ٱلْعَزِيزُ ٱلرَّحِيمُ ١٧٥

175. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

كَذَّبَ أَصْحَبُ لْـَٔيْكَةِ ٱلْمُرْسَلِينَ ١٧٦

176. ಐಕತ್‌ನಲ್ಲಿ (ವೃಕ್ಷವನದಲ್ಲಿ) ವಾಸಿಸುತ್ತಿದ್ದವರು[3] ಸಂದೇಶವಾಹಕರನ್ನು ನಿಷೇಧಿಸಿದರು.

إِذْ قَالَ لَهُمْ شُعَيْبٌ أَلَا تَتَّقُونَ ١٧٧

177. 'ನೀವು ಭಯಭಕ್ತಿ ಪಾಲಿಸುವುದಿಲ್ಲವೇ?' ಎಂದು ಅವರೊಂದಿಗೆ ಶುಐಬ್‌ರು ಹೇಳಿದ ಸಂದರ್ಭ.

إِنِّي لَكُمْ رَسُولٌ أَمِينٌ ١٧٨

178. 'ಖಂಡಿತವಾಗಿಯೂ ನಾನು ನಿಮಗಿರುವ ಒಬ್ಬ ವಿಶ್ವಾಸಾರ್ಹ ಸಂದೇಶವಾಹಕನಾಗಿರುವೆನು.

1 ಆಕೆ ಲೂತ್(عَلَيْهِ ٱلسَّلَامُ)ರವರ ಪತ್ನಿಯಾಗಿದ್ದಳು ಮತ್ತು ಸತ್ಯನಿಷೇಧಿಯಾಗಿದ್ದಳು.

2 ಒಂದು ವಿಧದ ಬಿಸಿಕಲ್ಲುಗಳನ್ನು ಅವರ ಮೇಲೆ ಸುರಿಸಲಾಯಿತೆಂದು 15:74ರಲ್ಲಿ ಹೇಳಲಾಗಿದೆ.

3 ಐಕತ್‌ನವರು ಮದ್ಯನ್ ಪ್ರದೇಶದ ಸಮೀಪದಲ್ಲೇ ವಾಸಿಸುತ್ತಿದ್ದರು.

179. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَٱتَّقُواْ ٱللَّهَ وَأَطِيعُونِ ﴿١٧٩﴾

180. ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನು ಬೇಡುವುದಿಲ್ಲ. ನನಗಿರುವ ಪ್ರತಿಫಲವು ಸರ್ವಲೋಕಗಳ ರಬ್‌ನ ವತಿಯಿಂದ ಮಾತ್ರವಾಗಿದೆ.

وَمَآ أَسۡـَٔلُكُمۡ عَلَيۡهِ مِنۡ أَجۡرٍۖ إِنۡ أَجۡرِيَ إِلَّا عَلَىٰ رَبِّ ٱلۡعَٰلَمِينَ ﴿١٨٠﴾

181. ನೀವು ಅಳತೆಯನ್ನು ಪೂರ್ತಿಯಾಗಿ ಕೊಡಿರಿ. ನೀವು (ಜನರಿಗೆ) ನಷ್ಟವುಂಟು ಮಾಡುವವರಲ್ಲಿ ಸೇರದಿರಿ.

۞ أَوۡفُواْ ٱلۡكَيۡلَ وَلَا تَكُونُواْ مِنَ ٱلۡمُخۡسِرِينَ ﴿١٨١﴾

182. ಸರಿಯಾದ ತಕ್ಕಡಿಯಲ್ಲಿ ತೂಕ ಮಾಡಿರಿ.

وَزِنُواْ بِٱلۡقِسۡطَاسِ ٱلۡمُسۡتَقِيمِ ﴿١٨٢﴾

183. ಜನರಿಗೆ ಅವರ ಸಾಮಗ್ರಿಗಳನ್ನು ಕಡಿತಗೊಳಿಸದಿರಿ. ಭೂಮಿಯಲ್ಲಿ ವಿನಾಶಕಾರಿಗಳಾಗಿ ಅತಿಕ್ರಮವೆಸಗದಿರಿ.

وَلَا تَبۡخَسُواْ ٱلنَّاسَ أَشۡيَآءَهُمۡ وَلَا تَعۡثَوۡاْ فِي ٱلۡأَرۡضِ مُفۡسِدِينَ ﴿١٨٣﴾

184. ನಿಮ್ಮನ್ನು ಮತ್ತು ಪೂರ್ವ ತಲೆಮಾರುಗಳನ್ನು ಸೃಷ್ಟಿಸಿದವನನ್ನು ಭಯಪಡಿರಿ'.

وَٱتَّقُواْ ٱلَّذِي خَلَقَكُمۡ وَٱلۡجِبِلَّةَ ٱلۡأَوَّلِينَ ﴿١٨٤﴾

185. ಅವರು ಹೇಳಿದರು: 'ನೀನು ಮಾಟಬಾಧಿತರ ಪೈಕಿ ಸೇರಿದ ಒಬ್ಬ ವ್ಯಕ್ತಿ ಮಾತ್ರವಾಗಿರುವೆ.

قَالُوٓاْ إِنَّمَآ أَنتَ مِنَ ٱلۡمُسَحَّرِينَ ﴿١٨٥﴾

186. ನೀನು ನಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವೆ. ಖಂಡಿತವಾಗಿಯೂ ನೀನು ಸುಳ್ಳು ನುಡಿಯುವವರಲ್ಲಿ ಸೇರಿದವರಾಗಿರುವೆ ಎಂದು ನಾವು ಭಾವಿಸುತ್ತಿರುವೆವು.

وَمَآ أَنتَ إِلَّا بَشَرٞ مِّثۡلُنَا وَإِن نَّظُنُّكَ لَمِنَ ٱلۡكَٰذِبِينَ ﴿١٨٦﴾

187. ಆದ್ದರಿಂದ ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ ಆಕಾಶದಿಂದಿರುವ ತುಣುಕುಗಳನ್ನು ನಮ್ಮ ಮೇಲೆ ಬೀಳಿಸು'.

فَأَسۡقِطۡ عَلَيۡنَا كِسَفٗا مِّنَ ٱلسَّمَآءِ إِن كُنتَ مِنَ ٱلصَّٰدِقِينَ ﴿١٨٧﴾

188. ಆತ ಹೇಳಿದರು: 'ನೀವು ಮಾಡುತ್ತಿರುವುದರ ಕುರಿತು ನನ್ನ ರಬ್ ಚೆನ್ನಾಗಿ ಅರಿತಿರುವನು'.

قَالَ رَبِّيٓ أَعۡلَمُ بِمَا تَعۡمَلُونَ ﴿١٨٨﴾

189. ತರುವಾಯ ಅವರು ಆತನನ್ನು ನಿಷೇಧಿಸಿದರು. ಆದ್ದರಿಂದ ಮೋಡದ ನೆರಳು ಮುಸುಕಿದ ದಿನದ ಶಿಕ್ಷೆಯು ಅವರನ್ನು

فَكَذَّبُوهُ فَأَخَذَهُمۡ عَذَابُ يَوۡمِ ٱلظُّلَّةِۚ إِنَّهُۥ كَانَ عَذَابَ يَوۡمٍ عَظِيمٍ ﴿١٨٩﴾

ಹಿಡಿದುಬಿಟ್ಟಿತು.[1] ಖಂಡಿತವಾಗಿಯೂ ಅದೊಂದು ಭಯಾನಕ ದಿನದ ಶಿಕ್ಷೆಯಾಗಿತ್ತು.

190. ಖಂಡಿತವಾಗಿಯೂ (ಜನರಿಗೆ) ಅದರಲ್ಲಿ ಒಂದು ದೃಷ್ಟಾಂತವಿದೆ. ಆದರೆ ಅವರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವವರಾಗಲಿಲ್ಲ.

إِنَّ فِي ذَٰلِكَ لَأٓيَةٗۖ وَمَا كَانَ أَكۡثَرُهُم مُّؤۡمِنِينَ ١٩٠

191. ಖಂಡಿತವಾಗಿಯೂ ತಮ್ಮ ರಬ್ ಪ್ರತಾಪ ಶಾಲಿಯೂ ಕರುಣಾನಿಧಿಯೂ ಆಗಿರುವನು.

وَإِنَّ رَبَّكَ لَهُوَ ٱلۡعَزِيزُ ٱلرَّحِيمُ ١٩١

192. ಖಂಡಿತವಾಗಿಯೂ ಇದು (ಕುರ್‌ಆನ್) ಸರ್ವಲೋಕಗಳ ರಬ್ ಅವತೀರ್ಣಗೊಳಿಸಿದ್ದಾಗಿದೆ.

وَإِنَّهُۥ لَتَنزِيلُ رَبِّ ٱلۡعَٰلَمِينَ ١٩٢

193-194. ವಿಶ್ವಾಸಾರ್ಹ ಆತ್ಮನು (ಜಿಬ್ರೀಲ್) ಅದರೊಂದಿಗೆ ತಮ್ಮ ಹೃದಯದಲ್ಲಿ ಇಳಿದಿರುವರು. ತಾವು ಮುನ್ನೆಚ್ಚರಿಕೆ ನೀಡುವವರಲ್ಲಿ ಸೇರಿದವರಾಗುವ ಸಲುವಾಗಿ.

نَزَلَ بِهِ ٱلرُّوحُ ٱلۡأَمِينُ ١٩٣ عَلَىٰ قَلۡبِكَ لِتَكُونَ مِنَ ٱلۡمُنذِرِينَ ١٩٤

195. ಸ್ಪಷ್ಟವಾದ ಅರಬಿ ಭಾಷೆಯಲ್ಲಿ (ಅದು ಅವತೀರ್ಣಗೊಂಡಿದೆ).

بِلِسَانٍ عَرَبِيّٖ مُّبِينٖ ١٩٥

196. ಖಂಡಿತವಾಗಿಯೂ ಅದು ಪೂರ್ವಿಕರ ಗ್ರಂಥಗಳಲ್ಲಿರುವುದಾಗಿದೆ.[2]

وَإِنَّهُۥ لَفِي زُبُرِ ٱلۡأَوَّلِينَ ١٩٦

197. ಇಸ್ರಾಈಲ್ ಸಂತತಿಗಳಲ್ಲಿರುವ ವಿದ್ವಾಂಸರು ಅದನ್ನು ಅರಿತಿರುವರು ಎಂಬುದು ಇವರಿಗೆ (ಅವಿಶ್ವಾಸಿಗಳಿಗೆ) ಒಂದು ದೃಷ್ಟಾಂತವಾಗಲಾರದೇ?[3]

أَوَلَمۡ يَكُن لَّهُمۡ ءَايَةً أَن يَعۡلَمَهُۥ عُلَمَٰٓؤُاْ بَنِيٓ إِسۡرَٰٓءِيلَ ١٩٧

198-199. ಅದನ್ನು ನಾವು ಅರಬೇತರರಲ್ಲಿ ಸೇರಿದ ವ್ಯಕ್ತಿಯ ಮೇಲೆ ಅವತೀರ್ಣಗೊಳಿಸಿ, ತರುವಾಯ ಅವನು ಅದನ್ನು ಅವರಿಗೆ

وَلَوۡ نَزَّلۡنَٰهُ عَلَىٰ بَعۡضِ ٱلۡأَعۡجَمِينَ ١٩٨ فَقَرَأَهُۥ عَلَيۡهِم مَّا كَانُواْ بِهِۦ مُؤۡمِنِينَ ١٩٩

1 ಒಂದು ಮೋಡ ಪದರವು ಅವರ ಮೇಲ್ಭಾಗದಲ್ಲಿ ಪ್ರತ್ಯಕ್ಷಗೊಂಡು ಅದರಿಂದ ಅಗ್ನಿಯು ಅವರ ಮೇಲೆರಗಿತೆಂದು ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ.

2 ಕುರ್‌ಆನ್ ಅವತೀರ್ಣದ ಕುರಿತು ಮುನ್ಸೂಚನೆಯನ್ನು ನೀಡುವ ಮತ್ತು ಕುರ್‌ಆನಿನ ಸತ್ಯತೆಗೆ ಸಾಕ್ಷ್ಯವಹಿಸುವ ಅನೇಕ ಸೂಕ್ತಿಗಳು ಪೂರ್ವಗ್ರಂಥಗಳಲ್ಲಿವೆ.

3 ಅಬ್ದುಲ್ಲಾಹ್ ಇಬ್ನ್ ಸಲಾಮ್ (رَضِيَ ٱللَّهُ عَنْهُ)ರಂತಿರುವ ಯಹೂದ ವಿದ್ವಾಂಸರು ಕುರ್‌ಆನಿನ ದೈವಿಕತೆಗೆ ಹಾಗೂ ಪ್ರವಾದಿ(صَلَّى ٱللَّهُ عَلَيْهِ وَسَلَّمَ)ರವರ ಸಂದೇಶವಾಹಕತ್ವಕ್ಕೆ ಸಾಕ್ಷ್ಯವಹಿಸಿದ್ದರು.

ಓದಿಕೊಡುತ್ತಿದ್ದರೂ ಅವರು ಅದರಲ್ಲಿ ವಿಶ್ವಾಸವಿಡುತ್ತಿರಲಿಲ್ಲ.

**200.** ಹೀಗೆ ಅಪರಾಧಿಗಳ ಹೃದಯಗಳಲ್ಲಿ ನಾವು ಅದನ್ನು (ಅವಿಶ್ವಾಸವನ್ನು) ನುಸುಳಿಸಿರುವೆವು.

كَذَٰلِكَ سَلَكۡنَٰهُ فِي قُلُوبِ ٱلۡمُجۡرِمِينَ ٢٠٠

**201.** ಯಾತನಾಮಯ ಶಿಕ್ಷೆಯನ್ನು ಕಾಣುವ ತನಕ ಅವರು ಅದರಲ್ಲಿ ವಿಶ್ವಾಸವಿಡಲಾರರು.

لَا يُؤۡمِنُونَ بِهِۦ حَتَّىٰ يَرَوُاْ ٱلۡعَذَابَ ٱلۡأَلِيمَ ٢٠١

**202.** ಅವರು ನಿರೀಕ್ಷಿಸಿರದ ರೀತಿಯಲ್ಲಿ ಹಠಾತ್ತನೆ ಅದು ಅವರೆಡೆಗೆ ಬರುವುದು.

فَيَأۡتِيَهُم بَغۡتَةٗ وَهُمۡ لَا يَشۡعُرُونَ ٢٠٢

**203.** ಆಗ ಅವರು 'ನಮಗೆ (ಸ್ವಲ್ಪ) ಕಾಲಾವಕಾಶ ನೀಡಲಾಗುವುದೇ?' ಎಂದು ಕೇಳುವರು.

فَيَقُولُواْ هَلۡ نَحۡنُ مُنظَرُونَ ٢٠٣

**204.** ಹಾಗಾದರೆ ಅವರು ನಮ್ಮ ಶಿಕ್ಷೆಯ ಬಗ್ಗೆ ಆತುರಪಡುತ್ತಿರುವರೇ?

أَفَبِعَذَابِنَا يَسۡتَعۡجِلُونَ ٢٠٤

**205-206.** ತಾವು ಆಲೋಚಿಸಿರುವಿರಾ? ಅನೇಕ ವರ್ಷಗಳ ತನಕ ನಾವು ಅವರಿಗೆ ಸುಖಾನುಕೂಲತೆಗಳನ್ನು ನೀಡಿದೆವು. ತರುವಾಯ ಅವರಿಗೆ ಎಚ್ಚರಿಕೆ ನೀಡಲಾಗುತ್ತಿದ್ದ ಶಿಕ್ಷೆಯು ಅವರೆಡೆಗೆ ಬಂದು ಬಿಟ್ಟಿತು.

أَفَرَءَيۡتَ إِن مَّتَّعۡنَٰهُمۡ سِنِينَ ٢٠٥ ثُمَّ جَآءَهُم مَّا كَانُواْ يُوعَدُونَ ٢٠٦

**207.** (ಆದರೂ) ಅವರಿಗೆ ನೀಡಲಾಗಿರುವ ಆ ಸುಖಾನುಕೂಲತೆಗಳು ಅವರಿಗೆ ಯಾವುದೇ ಪ್ರಯೋಜನವನ್ನೂ ಮಾಡುತ್ತಿರಲಿಲ್ಲ.(1)

مَآ أَغۡنَىٰ عَنۡهُم مَّا كَانُواْ يُمَتَّعُونَ ٢٠٧

**208.** ನಾವು ಯಾವುದೇ ನಾಡನ್ನೂ ನಾಶ ಮಾಡಿಲ್ಲ; ಅದಕ್ಕೆ ಮುನ್ನೆಚ್ಚರಿಕೆಗಾರರು ಇರದ ಹೊರತು.

وَمَآ أَهۡلَكۡنَا مِن قَرۡيَةٍ إِلَّا لَهَا مُنذِرُونَ ٢٠٨

**209.** ಇದು ನೆನಪಿಸುವುದಕ್ಕಾಗಿ ಮಾತ್ರವಾಗಿದೆ. ನಾವು ಅನ್ಯಾಯ ಮಾಡುವವರಾಗಿರಲಿಲ್ಲ.

ذِكۡرَىٰ وَمَا كُنَّا ظَٰلِمِينَ ٢٠٩

**210.** ಇದರೊಂದಿಗೆ (ಕುರ್‌ಆನಿನೊಂದಿಗೆ) ಸೈತಾನರು ಇಳಿದು ಬಂದಿಲ್ಲ.(2)

وَمَا تَنَزَّلَتۡ بِهِ ٱلشَّيَٰطِينُ ٢١٠

1 ಸುದೀರ್ಘ ಕಾಲದ ಸಮೃದ್ಧಿಯ ಫಲಗಳನ್ನು ತಮ್ಮ ವಶದಲ್ಲಿಟ್ಟಿರುವ ಸಂದರ್ಭದಲ್ಲಿ ಅಲ್ಲಾಹುವಿನ ಶಿಕ್ಷೆಯು ಎರಗುವುದಾದರೂ ಕೂಡ ಆ ಶಿಕ್ಷೆಯನ್ನು ತಡೆಯಲು ಅಥವಾ ಲಘುಗೊಳಿಸಲು ಅದೊಂದೂ ಅವರಿಗೆ ಪ್ರಯೋಜನಕ್ಕೆ ಬಾರದು.

2 ಮುಹಮ್ಮದ್(ﷺ)ರಿಗೆ ಕುರ್‌ಆನನ್ನು ಓದಿಕೊಡುತ್ತಿರುವುದು ಒಬ್ಬ ಶೈತಾನನಾಗಿದ್ದಾನೆ ಎಂದು ಸತ್ಯನಿಷೇಧಿಗಳ ಪೈಕಿ ಕೆಲವರು ಅಪಪ್ರಚಾರ ಮಾಡುತ್ತಿದ್ದುದನ್ನು ಇಲ್ಲಿ ಖಂಡಿಸಲಾಗಿದೆ.

211. ಅವರಿಗೆ ಅದು ಶೋಭಿಸುವಂತದ್ದೂ ಅಲ್ಲ. ಅವರಿಗೆ ಅದು ಸಾಧ್ಯವೂ ಅಲ್ಲ.

وَمَا يَنۢبَغِي لَهُمۡ وَمَا يَسۡتَطِيعُونَ ﴿٢١١﴾

212. ಖಂಡಿತವಾಗಿಯೂ ಅವರು (ದಿವ್ಯಸಂದೇಶಕ್ಕೆ) ಕಿವಿಗೊಡುವುದರಿಂದ ದೂರಸರಿಸಲ್ಪಟ್ಟಿರುವರು.

إِنَّهُمۡ عَنِ ٱلسَّمۡعِ لَمَعۡزُولُونَ ﴿٢١٢﴾

213. ಆದ್ದರಿಂದ ತಾವು ಅಲ್ಲಾಹುವಿನ ಜೊತೆಗೆ ಅನ್ಯ ಆರಾಧ್ಯರನ್ನು ಕರೆದು ಪ್ರಾರ್ಥಿಸದಿರಿ. ಹಾಗೆ ಪ್ರಾರ್ಥಿಸಿದರೆ ತಾವು ಶಿಕ್ಷೆ ಪಡೆಯುವವರಲ್ಲಿ ಸೇರಿದವರಾಗುವಿರಿ.

فَلَا تَدۡعُ مَعَ ٱللَّهِ إِلَٰهًا ءَاخَرَ فَتَكُونَ مِنَ ٱلۡمُعَذَّبِينَ ﴿٢١٣﴾

214–215. ತಮ್ಮ ನಿಕಟ ಸಂಬಂಧಿಕರಿಗೆ ಮುನ್ನೆಚ್ಚರಿಕೆ ನೀಡಿರಿ. ತಮ್ಮನ್ನು ಅನುಸರಿಸಿದ ಸತ್ಯವಿಶ್ವಾಸಿಗಳಿಗೆ ತಮ್ಮ ರೆಕ್ಕೆಯನ್ನು ತಗ್ಗಿಸಿಕೊಡಿರಿ.[1]

وَأَنذِرۡ عَشِيرَتَكَ ٱلۡأَقۡرَبِينَ ﴿٢١٤﴾ وَٱخۡفِضۡ جَنَاحَكَ لِمَنِ ٱتَّبَعَكَ مِنَ ٱلۡمُؤۡمِنِينَ ﴿٢١٥﴾

216. ಅವರು ತಮ್ಮನ್ನು ಅನುಸರಿಸುವುದಿಲ್ಲವೆಂದಾದರೆ 'ನೀವು ಮಾಡುತ್ತಿರುವ ಯಾವುದಕ್ಕೂ ನಾನು ಹೊಣೆಗಾರನಲ್ಲ' ಎಂದು ಹೇಳಿಬಿಡಿರಿ.

فَإِنۡ عَصَوۡكَ فَقُلۡ إِنِّي بَرِيٓءٞ مِّمَّا تَعۡمَلُونَ ﴿٢١٦﴾

217. ಪ್ರತಾಪಶಾಲಿಯೂ ಕರುಣಾನಿಧಿಯೂ ಆಗಿರುವವನ ಮೇಲೆ ಭರವಸೆಯಿಡಿರಿ.

وَتَوَكَّلۡ عَلَى ٱلۡعَزِيزِ ٱلرَّحِيمِ ﴿٢١٧﴾

218. ತಾವು ನಿಂತು ನಮಾಝ್ ಮಾಡುವಾಗ ಅವನು ತಮ್ಮನ್ನು ನೋಡುತ್ತಿರುವನು.

ٱلَّذِي يَرَىٰكَ حِينَ تَقُومُ ﴿٢١٨﴾

219. ಸಾಷ್ಟಾಂಗ ಮಾಡುವವರೊಂದಿಗಿರುವ ತಮ್ಮ ಚಲನವಲನಗಳನ್ನೂ (ಅವನು ನೋಡುತ್ತಿರುವನು).

وَتَقَلُّبَكَ فِي ٱلسَّٰجِدِينَ ﴿٢١٩﴾

220. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

إِنَّهُۥ هُوَ ٱلسَّمِيعُ ٱلۡعَلِيمُ ﴿٢٢٠﴾

221. (ಓ ಪ್ರವಾದಿಯವರೇ!) 'ಶೈತಾನರು ಯಾರ ಮೇಲೆ ಇಳಿಯುತ್ತಾರೆಂದು ನಾನು ನಿಮಗೆ ತಿಳಿಸಿ ಕೊಡಲೇ?' (ಎಂದು ಅವರೊಂದಿಗೆ ಕೇಳಿರಿ).

هَلۡ أُنَبِّئُكُمۡ عَلَىٰ مَن تَنَزَّلُ ٱلشَّيَٰطِينُ ﴿٢٢١﴾

1 ಅವರೊಂದಿಗೆ ಸೌಜನ್ಯದೊಂದಿಗೆ ಮತ್ತು ಅನುಕಂಪದೊಂದಿಗೆ ವರ್ತಿಸಿರಿ ಎಂದರ್ಥ.

222. ಮಹಾ ಸುಳ್ಳರೂ, ಪಾಪಿಗಳೂ ಆಗಿರುವ ಎಲ್ಲರ ಮೇಲೂ ಅವರು (ಶೈತಾನರು) ಇಳಿಯುವರು.

تَنَزَّلُ عَلَىٰ كُلِّ أَفَّاكٍ أَثِيمٖ ﴿٢٢٢﴾

223. ಅವರು ಗಮನವಿಟ್ಟು ಆಲಿಸುವರು. ಅವರಲ್ಲಿ ಹೆಚ್ಚಿನವರೂ ಸುಳ್ಳು ನುಡಿಯುವವರಾಗಿರುವರು.

يُلْقُونَ ٱلسَّمْعَ وَأَكْثَرُهُمْ كَٰذِبُونَ ﴿٢٢٣﴾

224. ಕವಿಗಳನ್ನು ದುರ್ಮಾರ್ಗಿಗಳು ಅನುಸರಿಸುವರು.

وَٱلشُّعَرَآءُ يَتَّبِعُهُمُ ٱلْغَاوُۥنَ ﴿٢٢٤﴾

225-226. ಅವರು ಎಲ್ಲ ಕಣಿವೆಗಳಲ್ಲೂ ಅಲೆದಾಡುವವರೂ ತಾವು ಮಾಡದಿರುವುದನ್ನು ಹೇಳುವವರೂ ಆಗಿದ್ದಾರೆಂದು ತಾವು ಕಾಣುವುದಿಲ್ಲವೇ?[1]

أَلَمْ تَرَ أَنَّهُمْ فِي كُلِّ وَادٖ يَهِيمُونَ ﴿٢٢٥﴾ وَأَنَّهُمْ يَقُولُونَ مَا لَا يَفْعَلُونَ ﴿٢٢٦﴾

227. ಆದರೆ ವಿಶ್ವಾಸವಿಟ್ಟವರು, ಸತ್ಕರ್ಮಗೈದವರು, ಅಲ್ಲಾಹುವನ್ನು ಅತ್ಯಧಿಕವಾಗಿ ಸ್ಮರಿಸುವವರು, ಹಿಂಸೆಗೊಳಗಾದ ಬಳಿಕ ಆತ್ಮರಕ್ಷಣೆಗಾಗಿ ಕ್ರಮಕೈಗೊಂಡವರು[2] ಇದರಿಂದ ಹೊರತಾಗಿರುವರು. ತಾವು ಯಾವ ಪರ್ಯಾವಸಾನದೆಡೆಗೆ ಹೊರಳುತ್ತಾ ಹೊರಳುತ್ತಾ ತಲುಪುವೆವೆಂದು ಅಕ್ರಮಿಗಳು ಅರಿತುಕೊಳ್ಳುವರು.

إِلَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ وَذَكَرُواْ ٱللَّهَ كَثِيرٗا وَٱنتَصَرُواْ مِنۢ بَعْدِ مَا ظُلِمُواْۗ وَسَيَعْلَمُ ٱلَّذِينَ ظَلَمُوٓاْ أَيَّ مُنقَلَبٖ يَنقَلِبُونَ ﴿٢٢٧﴾

1 ಕಾವ್ಯವು ಒಂದು ಮಾಧ್ಯಮವಾಗಿದೆ. ಒಳಿತು ಮತ್ತು ಕೆಡುಕುಗಳೆರಡನ್ನೂ ಬೆಳೆಸಲು ಅದನ್ನು ಬಳಸಲಾಗುತ್ತದೆ. ಸಮಾಜದೊಂದಿಗೆ ತಮಗೆ ಯಾವುದೇ ಹೊಣೆಗಾರಿಕೆಯಿಲ್ಲ ಮತ್ತು ತಮಗೆ ಸುಂದರವಾಗಿ ತೋಚುವುದೆಲ್ಲವನ್ನೂ ಅಕ್ಷರರೂಪಕ್ಕಿಳಿಸುವುದೇ ಸಾಹಿತ್ಯವಾಗಿದೆ ಎಂಬ ದೃಷ್ಟಿಕೋನವು ಇಂದಿನಂತೆಯೇ ಆ ಕಾಲಘಟ್ಟದ ಕವಿಗಳನ್ನೂ ವಶೀಕರಿಸಿತ್ತು. ಸ್ವಚ್ಛಂದ ಕಾಮ, ಸುಳ್ಳಾರೋಪ, ಸ್ವಭಾವದೂಷಣೆ ಇತ್ಯಾದಿಗಳು ಅಂದಿನ ಅನೇಕ ಕವಿಗಳ ಪ್ರಮೇಯವಾಗಿದ್ದವು. ಸತ್ಯನಿಷೇಧಿಗಳಿಂದ ಹಣ ಪಡೆದು ಅನೇಕ ಕವಿಗಳು ಪ್ರವಾದಿ(ﷺ)ರವರನ್ನು ಹೀಯಾಳಿಸುತ್ತಾ ಕವಿತೆಗಳನ್ನು ರಚಿಸುತ್ತಿದ್ದರು. 224ರಿಂದ 227ರವರೆಗಿನ ಸೂಕ್ತಿಗಳು ಅವತೀರ್ಣವಾದ ಹಿನ್ನೆಲೆಯು ಇದಾಗಿತ್ತು. ರಚನಾತ್ಮಕ ಉದ್ದೇಶವನ್ನು ಹೊಂದಿರುವ ಕವಿಗಳನ್ನು 227ನೇ ಸೂಕ್ತಿಯು ದೋಷಮುಕ್ತಗೊಳಿಸುತ್ತದೆ.

2 ಇಲ್ಲಿ ಸೂಚಿಸಲಾಗಿರುವುದು ಸತ್ಯನಿಷೇಧಿ ಕವಿಗಳ ಆರೋಪಗಳಿಗೆ ಸಮರ್ಥವಾದ ಉತ್ತರವನ್ನು ನೀಡಿದ ಮುಸ್ಲಿಮ್ ಕವಿಗಳ ಕುರಿತಾಗಿದೆ.

## ಅನ್ನಮ್ಲ್ (ಇರುವೆ)[1]

## سُورَةُ النَّمۡلِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 93

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ತ್ವಾ ಸೀನ್. ಇವು ಕುರ್‌ಆನ್‌ನ ಅಥವಾ ವಿಷಯಗಳನ್ನು ಸ್ಪಷ್ಟಗೊಳಿಸುವ ಗ್ರಂಥದ ಸೂಕ್ತಿಗಳಾಗಿವೆ.

طسٓۚ تِلۡكَ ءَايَٰتُ ٱلۡقُرۡءَانِ وَكِتَابٖ مُّبِينٍ ﴿١﴾

2-3. ನಮಾಝನ್ನು ಸಂಸ್ಥಾಪಿಸುವ, ಝಕಾತ್ ನೀಡುವ ಮತ್ತು ಪರಲೋಕದಲ್ಲಿ ದೃಢವಾಗಿ ವಿಶ್ವಾಸವಿಡುವ ಸತ್ಯವಿಶ್ವಾಸಿಗಳಿಗೆ ಇದು ಮಾರ್ಗದರ್ಶಿಯೂ, ಶುಭವಾರ್ತೆಯೂ ಆಗಿದೆ.

هُدٗى وَبُشۡرَىٰ لِلۡمُؤۡمِنِينَ ﴿٢﴾ ٱلَّذِينَ يُقِيمُونَ ٱلصَّلَوٰةَ وَيُؤۡتُونَ ٱلزَّكَوٰةَ وَهُم بِٱلۡأٓخِرَةِ هُمۡ يُوقِنُونَ ﴿٣﴾

4. ಪರಲೋಕದಲ್ಲಿ ವಿಶ್ವಾಸವಿಡದವರಿಗೆ ನಾವು ಅವರ ಕರ್ಮಗಳನ್ನು ಆಕರ್ಷಕಗೊಳಿಸಿ ಕೊಟ್ಟಿರುವೆವು. ಆದ್ದರಿಂದ ಅವರು ವಿಹರಿಸುತ್ತಿರುವರು.

إِنَّ ٱلَّذِينَ لَا يُؤۡمِنُونَ بِٱلۡأٓخِرَةِ زَيَّنَّا لَهُمۡ أَعۡمَٰلَهُمۡ فَهُمۡ يَعۡمَهُونَ ﴿٤﴾

5. ಕಠಿಣ ಶಿಕ್ಷೆಯಿರುವುದು ಅವರಿಗಾಗಿದೆ. ಪರಲೋಕದಲ್ಲಿ ಅವರು ಅತ್ಯಧಿಕ ನಷ್ಟ ಹೊಂದಿದವರಾಗುವರು.

أُوْلَٰٓئِكَ ٱلَّذِينَ لَهُمۡ سُوٓءُ ٱلۡعَذَابِ وَهُمۡ فِي ٱلۡأٓخِرَةِ هُمُ ٱلۡأَخۡسَرُونَ ﴿٥﴾

6. ಖಂಡಿತವಾಗಿಯೂ ತಮಗೆ ಕುರ್‌ಆನನ್ನು ನೀಡಲಾಗುತ್ತಿರುವುದು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವವನ ಬಳಿಯಿಂದಾಗಿದೆ.

وَإِنَّكَ لَتُلَقَّى ٱلۡقُرۡءَانَ مِن لَّدُنۡ حَكِيمٍ عَلِيمٍ ﴿٦﴾

7. ಮೂಸಾ ತಮ್ಮ ಕುಟುಂಬದೊಂದಿಗೆ ಹೇಳಿದ ಸಂದರ್ಭ: 'ಖಂಡಿತವಾಗಿಯೂ ನಾನು ಒಂದು ಬೆಂಕಿಯನ್ನು ಕಂಡಿರುವೆನು.[2] ಅದರ ಬಳಿಯಿಂದ ನಾನು ನಿಮಗೆ ಏನಾದರೂ ಮಾಹಿತಿಯನ್ನು ತರುವೆನು ಅಥವಾ ಅದರಿಂದ

إِذۡ قَالَ مُوسَىٰ لِأَهۡلِهِۦٓ إِنِّيٓ ءَانَسۡتُ نَارٗا سَـَٔاتِيكُم مِّنۡهَا بِخَبَرٍ أَوۡ ءَاتِيكُم بِشِهَابٖ قَبَسٖ لَّعَلَّكُمۡ تَصۡطَلُونَ ﴿٧﴾

---

1 18ನೇ ಸೂಕ್ತಿಯಲ್ಲಿ ಇರುವೆಯ ಬಗ್ಗೆ ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಪ್ರವಾದಿ ಮೂಸಾ(عَلَيْهِ السَّلَامُ)ರವರು ಮತ್ತು ಅವರ ಕುಟುಂಬವು ಸೀನಾ ಮರುಭೂಮಿಯ ಮೂಲಕ ಹಾದು ಹೋಗುವಾಗ ಈ ಘಟನೆಯು ನಡೆಯಿತು.

ನಿಮಗೆ ಒಂದು ದೀವಟಿಗೆಯನ್ನು ಉರಿಸಿ ತರುವೆನು. ನಿಮಗೆ ಚಳಿ ಕಾಯಿಸಬಹುದು'.

فَلَمَّا جَآءَهَا نُودِيَ أَنۢ بُورِكَ مَن فِي ٱلنَّارِ وَمَنۡ حَوۡلَهَا وَسُبۡحَٰنَ ٱللَّهِ رَبِّ ٱلۡعَٰلَمِينَ ٨

8. ಹೀಗೆ ಅವರು ಅದರ ಬಳಿಗೆ ತಲುಪಿದಾಗ 'ಬೆಂಕಿಯ ಬಳಿಯಿರುವವರು ಮತ್ತು ಅದರ ಸುತ್ತಲಲ್ಲಿರುವವರು ಅನುಗ್ರಹೀತರಾಗಿರುವರು. ಸರ್ವಲೋಕಗಳ ರಬ್ಬಾದ ಅಲ್ಲಾಹು ಪರಮಪಾವನನು' ಎಂದು ಕೂಗಿ ಹೇಳಲಾಯಿತು.

يَٰمُوسَىٰٓ إِنَّهُۥٓ أَنَا ٱللَّهُ ٱلۡعَزِيزُ ٱلۡحَكِيمُ ٩

9. 'ಓ ಮೂಸಾ! ಖಂಡಿತವಾಗಿಯೂ ನಾನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಾಗಿರುವೆನು'.

وَأَلۡقِ عَصَاكَۚ فَلَمَّا رَءَاهَا تَهۡتَزُّ كَأَنَّهَا جَآنّٞ وَلَّىٰ مُدۡبِرٗا وَلَمۡ يُعَقِّبۡۚ يَٰمُوسَىٰ لَا تَخَفۡ إِنِّي لَا يَخَافُ لَدَيَّ ٱلۡمُرۡسَلُونَ ١٠

10. 'ತಾವು ತಮ್ಮ ಬೆತ್ತವನ್ನು ಕೆಳಗೆ ಹಾಕಿರಿ'. ಅದು ಸರ್ಪವೇನೋ ಎಂಬಂತೆ ಚಲಿಸುವುದನ್ನು ಕಂಡಾಗ ಅವರು ವಿಮುಖರಾಗಿ ಓಡಿದರು. ಅವರು ತಿರುಗಿ ನೋಡಲೂ ಇಲ್ಲ. (ಅಲ್ಲಾಹು ಹೇಳಿದನು:) 'ಓ ಮೂಸಾ! ತಾವು ಭಯಪಡದಿರಿ. ಖಂಡಿತವಾಗಿಯೂ ಸಂದೇಶವಾಹಕರು ನನ್ನ ಬಳಿ ಭಯಪಡಬೇಕಾಗಿಲ್ಲ.

إِلَّا مَن ظَلَمَ ثُمَّ بَدَّلَ حُسۡنَۢا بَعۡدَ سُوٓءٖ فَإِنِّي غَفُورٞ رَّحِيمٞ ١١

11. ಆದರೆ ಯಾರಾದರೂ ಅಕ್ರಮವೆಸಗಿ, ತರುವಾಯ ಕೆಡುಕಿನ ನಂತರ ಒಳಿತನ್ನು ಬದಲಿಯಾಗಿ ತಂದರೆ ಖಂಡಿತವಾಗಿಯೂ ನಾನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವೆನು.(1)

وَأَدۡخِلۡ يَدَكَ فِي جَيۡبِكَ تَخۡرُجۡ بَيۡضَآءَ مِنۡ غَيۡرِ سُوٓءٖۖ فِي تِسۡعِ ءَايَٰتٍ إِلَىٰ فِرۡعَوۡنَ وَقَوۡمِهِۦٓۚ إِنَّهُمۡ كَانُواْ قَوۡمٗا فَٰسِقِينَ ١٢

12. ತಾವು ತಮ್ಮ ಕೈಯನ್ನು ತಮ್ಮ ಅಂಗಿಯ ಕಂಕುಳದೊಳಗೆ ತೂರಿಸಿರಿ. ಅದು ಯಾವುದೇ ನ್ಯೂನತೆಯಿಲ್ಲದೆ ಬೆಳ್ಳಗಾಗಿ ಹೊರಬರುವುದು. ಇವು ಫಿರ್‌ಔನ್ ಮತ್ತು ಅವನ ಜನರೆಡೆಗಿರುವ

1 ಅಪರಾಧಿಗಳು ಭಯಭೀತಿಯೊಂದಿಗೆ ಕಳೆಯಬೇಕಾಗಿ ಬರಲಿದೆ ಎಂಬ ಸೂಚನೆಯು 10ನೇ ಸೂಕ್ತಿಯಲ್ಲಿರುವುದರಿಂದ 11ನೇ ಸೂಕ್ತಿಯಲ್ಲಿ ಕೆಡುಕನ್ನು ಬದಲಾಯಿಸಿ ಒಳಿತನ್ನು ತಂದವರಿಗೆ ಅಲ್ಲಾಹು ಕ್ಷಮಿಸುವನು ಎಂಬ ವಿಷಯವನ್ನು ವಿಶೇಷವಾಗಿ ಹೇಳಲಾಗಿದೆ. ಪ್ರವಾದಿ ಮೂಸಾ(عَلَيۡهِ ٱلسَّلَامُ)ರವರು ಪ್ರಮಾದವಶಾತ್ ಕಿಬ್ತೀ ಜನಾಂಗದ ಓರ್ವನನ್ನು ವಧಿಸಿದಂತೆ ಪ್ರವಾದಿಗಳಿಗೆ ಸಂಭವಿಸುವ ಕೆಲವೊಂದು ಪ್ರಮಾದಗಳನ್ನು ಅಲ್ಲಾಹು ಮನ್ನಿಸುವನು ಎಂಬ ವಿಷಯವನ್ನು 11ನೇ ವಚನದಲ್ಲಿ ಸೂಚಿಸಲಾಗಿದೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು.

ಒಂಬತ್ತು ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ.[1] ಖಂಡಿತವಾಗಿಯೂ ಅವರು ಧಿಕ್ಕಾರಿಗಳಾದ ಜನತೆಯಾಗಿರುವರು'.

**13.** ಅವರ ಬಳಿಗೆ ಕಣ್ತೆರೆಸುವ ವಿಧದಲ್ಲಿರುವ ನಮ್ಮ ದೃಷ್ಟಾಂತಗಳು ಬಂದಾಗ ಅವರು ಹೇಳಿದರು: 'ಇದು ಸ್ಪಷ್ಟವಾದ ಮಾಂತ್ರಿಕ ವಿದ್ಯೆಯೇ ಆಗಿದೆ'.

فَلَمَّا جَآءَتۡهُمۡ ءَايَٰتُنَا مُبۡصِرَةٗ قَالُواْ هَٰذَا سِحۡرٞ مُّبِينٞ ﴿١٣﴾

**14.** ಅವುಗಳ ಕುರಿತು ಅವರ ಹೃದಯಗಳು ದೃಢ ಪ್ರಜ್ಞೆಯನ್ನು ಗಳಿಸಿದ ಬಳಿಕವೂ ಅಕ್ರಮ ಮತ್ತು ಅಹಂಕಾರದ ನಿಮಿತ್ತ ಅವರು ಅದನ್ನು ನಿಷೇಧಿಸಿದರು. ಆಗ ಆ ವಿನಾಶಕಾರಿಗಳ ಅಂತ್ಯವು ಹೇಗಿತ್ತು ಎಂಬುದನ್ನು ನೋಡಿರಿ.

وَجَحَدُواْ بِهَا وَٱسۡتَيۡقَنَتۡهَآ أَنفُسُهُمۡ ظُلۡمٗا وَعُلُوّٗاۚ فَٱنظُرۡ كَيۡفَ كَانَ عَٰقِبَةُ ٱلۡمُفۡسِدِينَ ﴿١٤﴾

**15.** ನಾವು ದಾವೂದ್ ಮತ್ತು ಸುಲೈಮಾನ್‌ರಿಗೆ ಜ್ಞಾನವನ್ನು ನೀಡಿದೆವು. 'ತನ್ನ ಸತ್ಯವಿಶ್ವಾಸಿ ದಾಸರಲ್ಲಿ ಸೇರಿದ ಮಿಕ್ಕವರಿಗಿಂತಲೂ ನಮಗೆ ಅಧಿಕ ಶ್ರೇಷ್ಠತೆಯನ್ನು ನೀಡಿರುವ ಅಲ್ಲಾಹುವಿಗೆ ಸ್ತುತಿ' ಎಂದು ಅವರಿಬ್ಬರೂ ಹೇಳಿದರು.

وَلَقَدۡ ءَاتَيۡنَا دَاوُۥدَ وَسُلَيۡمَٰنَ عِلۡمٗاۖ وَقَالَا ٱلۡحَمۡدُ لِلَّهِ ٱلَّذِي فَضَّلَنَا عَلَىٰ كَثِيرٖ مِّنۡ عِبَادِهِ ٱلۡمُؤۡمِنِينَ ﴿١٥﴾

**16.** ಸುಲೈಮಾನರು ದಾವೂದ್‌ರ ಉತ್ತರಾಧಿಕಾರಿಯಾದರು. ಆತ ಹೇಳಿದರು: 'ಓ ಜನರೇ! ನಮಗೆ ಹಕ್ಕಿಗಳ ಭಾಷೆಯನ್ನು ಕಲಿಸಲಾಗಿದೆ. ಸರ್ವ ವಿಷಯಗಳಿಂದಲೂ ನಮಗೆ ದಯಪಾಲಿಸಲಾಗಿದೆ. ಖಂಡಿತವಾಗಿಯೂ ಸ್ಪಷ್ಟವಾದ ಅನುಗ್ರಹ ಇದುವೇ ಆಗಿದೆ'.

وَوَرِثَ سُلَيۡمَٰنُ دَاوُۥدَۖ وَقَالَ يَٰٓأَيُّهَا ٱلنَّاسُ عُلِّمۡنَا مَنطِقَ ٱلطَّيۡرِ وَأُوتِينَا مِن كُلِّ شَيۡءٍۖ إِنَّ هَٰذَا لَهُوَ ٱلۡفَضۡلُ ٱلۡمُبِينُ ﴿١٦﴾

**17.** ಸುಲೈಮಾನ್‌ರಿಗಾಗಿ ಜಿನ್ನ್, ಮನುಷ್ಯರು ಮತ್ತು ಹಕ್ಕಿಗಳಲ್ಲಿ ಸೇರಿದ ಅವರ ಸೈನ್ಯಗಳನ್ನು ಒಟ್ಟುಗೂಡಿಸಲಾಯಿತು. ಅವರು ಕ್ರಮಬದ್ಧವಾಗಿ ನಿಲ್ಲಿಸಲಾಗುತ್ತಿರುವರು.[2]

وَحُشِرَ لِسُلَيۡمَٰنَ جُنُودُهُۥ مِنَ ٱلۡجِنِّ وَٱلۡإِنسِ وَٱلطَّيۡرِ فَهُمۡ يُوزَعُونَ ﴿١٧﴾

**18.** ತರುವಾಯ ಅವರು ಇರುವೆಯ ಕಣಿವೆಯ ಮೂಲಕ ಚಲಿಸುತ್ತಿದ್ದಾಗ ಇರುವೆಯೊಂದು

حَتَّىٰٓ إِذَآ أَتَوۡاْ عَلَىٰ وَادِ ٱلنَّمۡلِ قَالَتۡ نَمۡلَةٞ

1 ಇತರ ದೃಷ್ಟಾಂತಗಳ ಕುರಿತು 7:130, 7:133 ಸೂಕ್ತಿಗಳಲ್ಲಿ ಹೇಳಲಾಗಿದೆ.

2 ಪ್ರತಿಯೊಂದು ವಿಭಾಗವನ್ನೂ ಅವರವರ ಸ್ಥಳದಿಂದ ತಪ್ಪಿಹೋಗದಂತೆ ತಡೆದು ನಿಲ್ಲಿಸಲಾಗುವುದು ಎಂದರ್ಥ.

يَـٰٓأَيُّهَا ٱلنَّمْلُ ٱدْخُلُوا۟ مَسَـٰكِنَكُمْ لَا
يَحْطِمَنَّكُمْ سُلَيْمَـٰنُ وَجُنُودُهُۥ وَهُمْ لَا
يَشْعُرُونَ ﴿١٨﴾

ಹೇಳಿತು: 'ಓ ಇರುವೆಗಳೇ! ನೀವು ನಿಮ್ಮ ವಸತಿಗಳನ್ನು ಪ್ರವೇಶಿಸಿರಿ. ಸುಲೈಮಾನ್ ಮತ್ತು ಅವರ ಸೈನ್ಯಗಳು ಅರಿವಿಲ್ಲದೆ ನಿಮ್ಮನ್ನು ತುಳಿದು ಬಿಡದಿರಲಿ'.[1]

فَتَبَسَّمَ ضَاحِكًا مِّن قَوْلِهَا وَقَالَ رَبِّ
أَوْزِعْنِىٓ أَنْ أَشْكُرَ نِعْمَتَكَ ٱلَّتِىٓ أَنْعَمْتَ
عَلَىَّ وَعَلَىٰ وَٰلِدَىَّ وَأَنْ أَعْمَلَ صَـٰلِحًا
تَرْضَىٰهُ وَأَدْخِلْنِى بِرَحْمَتِكَ فِى عِبَادِكَ
ٱلصَّـٰلِحِينَ ﴿١٩﴾

**19.** ಆಗ ಅದರ ಮಾತು ಕೇಳಿ ಅವರು (ಸುಲೈಮಾನ್) ಚೆನ್ನಾಗಿ ಮುಗುಳ್ನಕ್ಕರು. ಅವರು ಹೇಳಿದರು: 'ಓ ನನ್ನ ರಬ್! ನನಗೂ ನನ್ನ ಮಾತಾಪಿತರಿಗೂ ನೀನು ದಯಪಾಲಿಸಿರುವ ಅನುಗ್ರಹಕ್ಕೆ ಕೃತಜ್ಞತೆ ಸಲ್ಲಿಸಲು ಮತ್ತು ನೀನು ತೃಪ್ತಿಪಡುವ ಸತ್ಕರ್ಮಗಳನ್ನು ಮಾಡಲು ನನಗೆ ಪ್ರೇರಣೆಯನ್ನು ನೀಡು. ನಿನ್ನ ಕಾರುಣ್ಯದಿಂದಾಗಿ ನಿನ್ನ ಸಜ್ಜನ ದಾಸರಲ್ಲಿ ನನ್ನನ್ನು ಸೇರಿಸು'.

وَتَفَقَّدَ ٱلطَّيْرَ فَقَالَ مَا لِىَ لَآ أَرَى
ٱلْهُدْهُدَ أَمْ كَانَ مِنَ ٱلْغَآئِبِينَ ﴿٢٠﴾

**20.** ಸುಲೈಮಾನ್ ಹಕ್ಕಿಗಳನ್ನು ಪರಿಶೋಧಿಸಿದರು. ತರುವಾಯ ಅವರು ಹೇಳಿದರು: 'ಏನಾಗಿದೆ? ಹುದ್ ಹುದ್ (ಹೂಪೂ) ಹಕ್ಕಿಯನ್ನು ನಾನು ಕಾಣುತ್ತಿಲ್ಲವಲ್ಲ? ಅಥವಾ ಅದು ಅನುಪಸ್ಥಿತರಾಗಿರುವವರಲ್ಲಿ ಸೇರಿದೆಯೇ?'

لَأُعَذِّبَنَّهُۥ عَذَابًا شَدِيدًا أَوْ لَأَا۟ذْبَحَنَّهُۥٓ أَوْ
لَيَأْتِيَنِّى بِسُلْطَـٰنٍ مُّبِينٍ ﴿٢١﴾

**21.** ನಾನು ಅದಕ್ಕೆ ಕಠಿಣ ಶಿಕ್ಷೆಯನ್ನು ನೀಡುವೆನು ಅಥವಾ ಅದರ ಕತ್ತನ್ನು ಕೊಯ್ಯುವೆನು. ಅನ್ಯಥಾ ಅದು ನನಗೆ ಸ್ಪಷ್ಟವಾದ ಯಾವುದಾದರೂ ಕಾರಣವನ್ನು ತರಲಿ'.

فَمَكَثَ غَيْرَ بَعِيدٍ فَقَالَ أَحَطتُ بِمَا لَمْ
تُحِطْ بِهِۦ وَجِئْتُكَ مِن سَبَإٍۭ بِنَبَإٍ يَقِينٍ ﴿٢٢﴾

**22.** ಆದರೆ ಅದು ತಲುಪಲು ಹೆಚ್ಚು ತಡವಾಗಲಿಲ್ಲ. ಅದು ಹೇಳಿತು: 'ತಾವು ಸೂಕ್ಷ್ಮವಾಗಿ ಅರಿತಿರದ ಒಂದು ವಿಷಯವನ್ನು ನಾನು ಸೂಕ್ಷ್ಮವಾಗಿ ಅರಿತಿರುವೆನು. ನಾನು ಸಬಅ್[2] ನಿಂದ ಒಂದು ಖಚಿತ ಮಾಹಿತಿಯೊಂದಿಗೆ ಬಂದಿರುವೆನು.

---

1 ಇರುವೆಯ ಈ ಮಾತು ಅಸಾಮಾನ್ಯ ಘಟನೆಯಾಗಿದೆ. ಖಂಡಿತವಾಗಿಯೂ ಇದು ಸುಲೈಮಾನ್(عَلَيْهِ السَّلَامُ)ರಿಗೆ ಅಲ್ಲಾಹು ನೀಡಿದ ವಿಶೇಷ ಅನುಗ್ರಹಗಳ ಪೈಕಿ ಸೇರಿದ್ದಾಗಿದೆ.

2 'ಸಬಅ್' ಅಥವಾ ಶೇಬಾ ಎಂಬುದು ಪುರಾತನ ಯಮನ್‌ನ ಒಂದು ನಗರ ಅಥವಾ ಜನಾಂಗವಾಗಿದೆ. ನಂತರ ಅದು ಯಮನಿನ ಅನೇಕ ಪ್ರದೇಶಗಳಲ್ಲಿ ಆಡಳಿತವನ್ನು ಹೊಂದಿದ ಒಂದು ಸಾಮ್ರಾಜ್ಯದ ಹೆಸರಾಗಿ ಮಾರ್ಪಟ್ಟಿತು. ಇಥಿಯೋಪಿಯಾದಲ್ಲೂ ಶೇಬಾ ಸಾಮ್ರಾಜ್ಯದ ಆಡಳಿತವಿತ್ತೆಂದು ಹೇಳಲಾಗುತ್ತದೆ. ಸುಲೈಮಾನ್(عَلَيْهِ السَّلَامُ)ರವರ ಕಾಲದಲ್ಲಿ 'ಬಲ್ಕೀಸ್' ಎಂಬ ಹೆಸರಿನ ರಾಣಿ 'ಸಬಅ್' ಸಾಮ್ರಾಜ್ಯವನ್ನು ಆಳುತ್ತಿದ್ದಳು.

23. ಅವರನ್ನು ಒಬ್ಬ ಮಹಿಳೆಯು ಆಳುತ್ತಿರುವುದಾಗಿ ನಾನು ಕಂಡಿರುವೆನು. ಆಕೆಗೆ ಎಲ್ಲ ವಿಷಯಗಳಿಂದಲೂ ನೀಡಲಾಗಿದೆ. ಆಕೆಗೆ ಒಂದು ಮಹಾ ಸಿಂಹಾಸನವೂ ಇದೆ.

إِنِّي وَجَدتُّ ٱمۡرَأَةٗ تَمۡلِكُهُمۡ وَأُوتِيَتۡ مِن
كُلِّ شَيۡءٖ وَلَهَا عَرۡشٌ عَظِيمٞ ٢٣

24. ಆಕೆ ಮತ್ತು ಆಕೆಯ ಜನರು ಅಲ್ಲಾಹುವಿನ ಹೊರತು ಸೂರ್ಯನಿಗೆ ಸಾಷ್ಟಾಂಗವೆರಗುತ್ತಿರುವುದಾಗಿ ನಾನು ಕಂಡಿರುವೆನು. ಸೈತಾನನು ಅವರಿಗೆ ಅವರ ಕೃತ್ಯಗಳನ್ನು ಆಕರ್ಷಕಗೊಳಿಸಿಕೊಟ್ಟಿರುವನು ಮತ್ತು ಅವರನ್ನು ಸನ್ಮಾರ್ಗದಿಂದ ತಡೆದಿರುವನು. ಆದ್ದರಿಂದ ಅವರು ಸನ್ಮಾರ್ಗವನ್ನು ಪಡೆಯದಾದರು.

وَجَدتُّهَا وَقَوۡمَهَا يَسۡجُدُونَ لِلشَّمۡسِ
مِن دُونِ ٱللَّهِ وَزَيَّنَ لَهُمُ ٱلشَّيۡطَٰنُ
أَعۡمَٰلَهُمۡ فَصَدَّهُمۡ عَنِ ٱلسَّبِيلِ فَهُمۡ لَا
يَهۡتَدُونَ ٢٤

25. ಅವರು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಅಗೋಚರವಾಗಿರುವುದನ್ನು ಹೊರತರುವವನೂ, ನೀವು ಮರೆಮಾಚುವುದನ್ನು ಹಾಗೂ ಬಹಿರಂಗಪಡಿಸುವುದನ್ನು ಅರಿಯುವವನೂ ಆಗಿರುವ ಅಲ್ಲಾಹುವಿಗೆ ಸಾಷ್ಟಾಂಗ ವೆರಗದಿರುವುದಕ್ಕಾಗಿ (ಸೈತಾನನು ಹಾಗೆ ಮಾಡಿರುವನು).

أَلَّا يَسۡجُدُواْۤ لِلَّهِ ٱلَّذِي يُخۡرِجُ ٱلۡخَبۡءَ فِي
ٱلسَّمَٰوَٰتِ وَٱلۡأَرۡضِ وَيَعۡلَمُ مَا تُخۡفُونَ وَمَا
تُعۡلِنُونَ ٢٥

26. ಮಹಾ ಸಿಂಹಾಸನದ ಒಡೆಯನಾಗಿರುವ ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ'.

ٱللَّهُ لَآ إِلَٰهَ إِلَّا هُوَ رَبُّ ٱلۡعَرۡشِ
ٱلۡعَظِيمِ ۩ ٢٦

27. ಸುಲೈಮಾನ್ ಹೇಳಿದರು: 'ನೀನು ಹೇಳಿದ್ದು ಸತ್ಯವೋ ಅಥವಾ ನೀನು ಸುಳ್ಳು ನುಡಿಯುವವರಲ್ಲಿ ಸೇರಿದವನಾಗಿರುವೆಯೋ ಎಂದು ನಾವು ನೋಡುವೆವು.

۞قَالَ سَنَنظُرُ أَصَدَقۡتَ أَمۡ كُنتَ مِنَ
ٱلۡكَٰذِبِينَ ٢٧

28. ನನ್ನ ಈ ಓಲೆಯೊಂದಿಗೆ ತೆರಳಿ ಅದನ್ನು ಅವರ ಮುಂದೆ ಹಾಕಿಬಿಡು. ತರುವಾಯ ಅವರಿಂದ ಸರಿದು ನಿಂತು ಅವರು ನೀಡುವ ಉತ್ತರವೇನೆಂದು ನೋಡು'.

ٱذۡهَب بِّكِتَٰبِي هَٰذَا فَأَلۡقِهۡ إِلَيۡهِمۡ ثُمَّ
تَوَلَّ عَنۡهُمۡ فَٱنظُرۡ مَاذَا يَرۡجِعُونَ ٢٨

29. ಆಕೆ ಹೇಳಿದಳು: 'ಓ ಪ್ರಮುಖರೇ! ಇಗೋ! ನನಗೆ ಒಂದು ಆದರಣೀಯ ಓಲೆಯನ್ನು[1] ಹಾಕಿಬಿಡಲಾಗಿದೆ.

قَالَتْ يَٰٓأَيُّهَا ٱلْمَلَؤُا۟ إِنِّىٓ أُلْقِىَ إِلَىَّ كِتَٰبٌ كَرِيمٌ ﴿٢٩﴾

30. ಅದು ಸುಲೈಮಾನ್‌ರ ಕಡೆಯಿಂದಾಗಿದೆ. ಆ ಓಲೆಯು ಈ ತರವಿದೆ 'ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ.

إِنَّهُۥ مِن سُلَيْمَٰنَ وَإِنَّهُۥ بِسْمِ ٱللَّهِ ٱلرَّحْمَٰنِ ٱلرَّحِيمِ ﴿٣٠﴾

31. ನನ್ನ ವಿರುದ್ಧ ನೀವು ದರ್ಪ ತೋರಿಸದೆ ನನ್ನ ಬಳಿಗೆ ಶರಣಾಗತರಾಗಿ ಬನ್ನಿರಿ' ಎಂದಿದೆ'.

أَلَّا تَعْلُوا۟ عَلَىَّ وَأْتُونِى مُسْلِمِينَ ﴿٣١﴾

32. ಆಕೆ ಹೇಳಿದಳು: 'ಓ ಪ್ರಮುಖರೇ! ನನ್ನ ಈ ವಿಷಯದಲ್ಲಿ ನೀವು ನನಗೆ ಸಲಹೆ ನೀಡಿರಿ. ನೀವು ನನ್ನ ಬಳಿ ಉಪಸ್ಥಿತರಾಗಿರದ ಹೊರತು ನಾನು ಯಾವುದೇ ವಿಷಯವನ್ನೂ ಖಚಿತವಾಗಿ ತೀರ್ಮಾನಿಸುವವಳಲ್ಲ'.

قَالَتْ يَٰٓأَيُّهَا ٱلْمَلَؤُا۟ أَفْتُونِى فِىٓ أَمْرِى مَا كُنتُ قَاطِعَةً أَمْرًا حَتَّىٰ تَشْهَدُونِ ﴿٣٢﴾

33. ಅವರು ಹೇಳಿದರು: 'ನಾವು ಮಹಾ ಬಲಿಷ್ಠರೂ ಮಹಾ ಯುದ್ಧ ಸಾಮರ್ಥ್ಯವುಳ್ಳವರೂ ಆಗಿರುವೆವು. ಅಧಿಕಾರವಿರುವುದು ತಮ್ಮಲ್ಲಾಗಿದೆ. ಆದ್ದರಿಂದ ಏನು ಆಜ್ಞಾಪಿಸಬೇಕೆಂದು ತಾವು ಆಲೋಚಿಸಿರಿ'.

قَالُوا۟ نَحْنُ أُو۟لُوا۟ قُوَّةٍ وَأُو۟لُوا۟ بَأْسٍ شَدِيدٍ وَٱلْأَمْرُ إِلَيْكِ فَٱنظُرِى مَاذَا تَأْمُرِينَ ﴿٣٣﴾

34. ಆಕೆ ಹೇಳಿದಳು: 'ಖಂಡಿತವಾಗಿಯೂ ಅರಸರು ಒಂದು ನಾಡನ್ನು ಪ್ರವೇಶಿಸಿದರೆ ಅದನ್ನು ನಾಶ ಮಾಡುವರು ಮತ್ತು ಅಲ್ಲಿನ ಘನತೆಯುಳ್ಳವರನ್ನು ನಿಂದ್ಯರನ್ನಾಗಿ ಮಾಡುವರು. ಅವರು ಹೀಗೆಯೇ ಮಾಡುವರು.

قَالَتْ إِنَّ ٱلْمُلُوكَ إِذَا دَخَلُوا۟ قَرْيَةً أَفْسَدُوهَا وَجَعَلُوٓا۟ أَعِزَّةَ أَهْلِهَآ أَذِلَّةً ۖ وَكَذَٰلِكَ يَفْعَلُونَ ﴿٣٤﴾

35. ನಾನು ಅವರಿಗೆ ಒಂದು ಉಡುಗೊರೆಯನ್ನು ಕಳುಹಿಸಿ, ದೂತರು ಯಾವ ಸುದ್ದಿಯೊಂದಿಗೆ ಮರಳುವರೆಂದು ನೋಡುವೆನು'.

وَإِنِّى مُرْسِلَةٌ إِلَيْهِم بِهَدِيَّةٍ فَنَاظِرَةٌۢ بِمَ يَرْجِعُ ٱلْمُرْسَلُونَ ﴿٣٥﴾

---

1 ಅರಸರು ಹಾಗೂ ಇತರರು ಬರೆಯುವ ರೀತಿಯಲ್ಲಿ ಸುಂದರವಾಗಿ ಬರೆದು ಕವರ್‌ನೊಳಗಿಟ್ಟು ಮುದ್ರೆ ಹಾಕಲಾದ ಓಲೆ ಎಂದಾಗಿರಬಹುದು.

**36.** ತರುವಾಯ ಅವನು (ದೂತನು) ಸುಲೈಮಾನ್‌ರ ಬಳಿಗೆ ಬಂದಾಗ ಅವರು ಹೇಳಿದರು: 'ನೀವು ನನಗೆ ಸಂಪತ್ತನ್ನು ನೀಡಿ ಸಹಾಯ ಮಾಡುತ್ತಿರುವಿರಾ? ಆದರೆ ಅಲ್ಲಾಹು ನನಗೆ ಏನನ್ನು ನೀಡಿರುವನೋ ಅದು ಅವನು ನಿಮಗೆ ನೀಡಿರುವುದಕ್ಕಿಂತಲೂ ಶ್ರೇಷ್ಠವಾಗಿದೆ. ಆದರೆ ನೀವು ನಿಮ್ಮ ಉಡುಗೊರೆಯ ಬಗ್ಗೆ ಬೀಗುತ್ತಿರುವಿರಿ.

فَلَمَّا جَآءَ سُلَيۡمَٰنَ قَالَ أَتُمِدُّونَنِ بِمَالٖ فَمَآ ءَاتَىٰنِۦَ ٱللَّهُ خَيۡرٞ مِّمَّآ ءَاتَىٰكُمۚ بَلۡ أَنتُم بِهَدِيَّتِكُمۡ تَفۡرَحُونَ ٣٦

**37.** ತಾವು ಅವರ ಬಳಿಗೆ ಮರಳಿಹೋಗಿರಿ. ಖಂಡಿತವಾಗಿಯೂ ಅವರಿಗೆ ಎದುರಿಸಲು ಸಾಧ್ಯವಾಗದ ಸೈನ್ಯಗಳೊಂದಿಗೆ ನಾವು ಅವರ ಬಳಿಗೆ ತೆರಳುವೆವು. ಅವರನ್ನು ನಿಂದ್ಯರೂ, ಅಪಮಾನಿತರೂ ಆಗಿರುವ ಸ್ಥಿತಿಯಲ್ಲಿ ಅಲ್ಲಿಂದ ಹೊರದಬ್ಬುವೆವು'.

ٱرۡجِعۡ إِلَيۡهِمۡ فَلَنَأۡتِيَنَّهُم بِجُنُودٖ لَّا قِبَلَ لَهُم بِهَا وَلَنُخۡرِجَنَّهُم مِّنۡهَآ أَذِلَّةٗ وَهُمۡ صَٰغِرُونَ ٣٧

**38.** ಆತ (ಸುಲೈಮಾನ್) ಹೇಳಿದರು: 'ಓ ಪ್ರಮುಖರೇ! ಅವರು ಶರಣಾಗತರಾಗಿ ನನ್ನ ಬಳಿಗೆ ಬರುವ ಮೊದಲು ನಿಮ್ಮಲ್ಲಿ ಯಾರು ಆಕೆಯ ಸಿಂಹಾಸನವನ್ನು ನನ್ನ ಬಳಿಗೆ ತರುವಿರಿ?'

قَالَ يَٰٓأَيُّهَا ٱلۡمَلَؤُاْ أَيُّكُمۡ يَأۡتِينِي بِعَرۡشِهَا قَبۡلَ أَن يَأۡتُونِي مُسۡلِمِينَ ٣٨

**39.** ಜಿನ್ನ್‌ಗಳಲ್ಲಿದ್ದ ಒಬ್ಬ ಬಲಶಾಲಿ ಹೇಳಿದನು: 'ತಾವು ತಮ್ಮ ಈ ಸಭೆಯಿಂದ ಎದ್ದೇಳುವ ಮೊದಲೇ ನಾನು ಅದನ್ನು ತಮ್ಮ ಬಳಿಗೆ ತರುವೆನು. ಖಂಡಿತವಾಗಿಯೂ ನಾನು ಅದರಲ್ಲಿ ಶಕ್ತಿಶಾಲಿಯೂ, ವಿಶ್ವಾಸಯೋಗ್ಯನೂ ಆಗಿರುವೆನು'.

قَالَ عِفۡرِيتٞ مِّنَ ٱلۡجِنِّ أَنَا۠ ءَاتِيكَ بِهِۦ قَبۡلَ أَن تَقُومَ مِن مَّقَامِكَۖ وَإِنِّي عَلَيۡهِ لَقَوِيٌّ أَمِينٞ ٣٩

**40.** ಗ್ರಂಥದಿಂದ ಜ್ಞಾನವನ್ನು[1] ಕರಗತ ಮಾಡಿರುವ ವ್ಯಕ್ತಿ ಹೇಳಿದರು: 'ತಮ್ಮ ದೃಷ್ಟಿ ತಮ್ಮೆಡೆಗೆ ಮರುಳುವುದಕ್ಕೆ ಮುಂಚೆಯೇ

قَالَ ٱلَّذِي عِندَهُۥ عِلۡمٞ مِّنَ ٱلۡكِتَٰبِ أَنَا۠ ءَاتِيكَ بِهِۦ قَبۡلَ أَن يَرۡتَدَّ إِلَيۡكَ طَرۡفُكَۚ

1 'ಗ್ರಂಥದಿಂದ ಜ್ಞಾನವನ್ನು ಕರಗತ ಮಾಡಿಕೊಂಡಿರುವ ವ್ಯಕ್ತಿ' ಎಂದು ಯಾರ ಕುರಿತು ಹೇಳಲಾಗಿದೆ ಎಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಮಲಕ್ ಜಿಬ್ರೀಲ್, ಆಸಫ್ ಇಬ್ನ್ ಬರ್ಖಿಯಾ ಎಂಬ ಹೆಸರಿನ ಓರ್ವ ಇಸ್ರಾಈಲೀ ವಿದ್ವಾಂಸ, ಅಥವಾ ಸ್ವತಃ ಪ್ರವಾದಿ ಸುಲೈಮಾನ್(عَلَيْهِ السَّلَامُ)ರವರೇ ಆಗಿರುವರು ಎಂಬ ವಿಭಿನ್ನ ಅಭಿಪ್ರಾಯಗಳಿವೆ. ಅದು ಯಾರೇ ಆಗಿದ್ದರೂ ಇಲ್ಲಿ ಸಂಭವಿಸಿರುವುದು ಸುಲೈಮಾನ್(عَلَيْهِ السَّلَامُ)ರವರ ಮುಅ್‌ಜಿಝತ್ ಆಗಿದೆ.

ನಾನು ಅದನ್ನು ತಮ್ಮ ಬಳಿಗೆ ತರುವೆನು'. ತರುವಾಯ ಅದು (ಸಿಂಹಾಸನ) ತನ್ನ ಬಳಿ ಇರುವುದಾಗಿ ಕಂಡಾಗ ಅವರು (ಸುಲೈಮಾನ್) ಹೇಳಿದರು: 'ಇದು ನನ್ನ ರಬ್ ನನಗೆ ದಯಪಾಲಿಸಿದ ಅನುಗ್ರಹದಲ್ಲಿ ಸೇರಿದ್ದಾಗಿದೆ. ನಾನು ಕೃತಜ್ಞತೆ ಸಲ್ಲಿಸುವೆನೋ ಅಥವಾ ಕೃತಘ್ನನಾಗುವೆನೋ ಎಂದು ಪರೀಕ್ಷಿಸುವ ಸಲುವಾಗಿ. ಯಾರು ಕೃತಜ್ಞತೆ ಸಲ್ಲಿಸುವನೋ ಖಂಡಿತವಾಗಿಯೂ ಅವನು ಕೃತಜ್ಞತೆ ಸಲ್ಲಿಸುವುದು ಸ್ವತಃ ತನಗೇ ಆಗಿದೆ. ಯಾರಾದರೂ ಕೃತಘ್ನರಾಗುವುದಾದರೆ ಖಂಡಿತವಾಗಿಯೂ ನನ್ನ ರಬ್ ನಿರಪೇಕ್ಷನೂ, ಆದರಣೀಯನೂ ಆಗಿರುವನು'.

فَلَمَّا رَءَاهُ مُسۡتَقِرًّا عِندَهُۥ قَالَ هَٰذَا مِن
فَضۡلِ رَبِّي لِيَبۡلُوَنِيٓ ءَأَشۡكُرُ أَمۡ أَكۡفُرُۖ
وَمَن شَكَرَ فَإِنَّمَا يَشۡكُرُ لِنَفۡسِهِۦۖ وَمَن
كَفَرَ فَإِنَّ رَبِّي غَنِيّٞ كَرِيمٞ ٤٠

**41.** ಆತ (ಸುಲೈಮಾನ್) ಹೇಳಿದರು: 'ಆಕೆಗೆ ಗುರುತಿಸಲಾಗದ ರೀತಿಯಲ್ಲಿ ಆಕೆಯ ಸಿಂಹಾಸನವನ್ನು ಬದಲಾಯಿಸಿರಿ. ಆಕೆ ಸತ್ಯವನ್ನು ಗ್ರಹಿಸುವಳೋ ಅಥವಾ ಸತ್ಯವನ್ನು ಅರ್ಥಮಾಡಿಕೊಳ್ಳಲಾಗದವರಲ್ಲಿ ಸೇರಿದವಳಾಗುವಳೋ ಎಂಬುದನ್ನು ನೋಡೋಣ'.

قَالَ نَكِّرُواْ لَهَا عَرۡشَهَا نَنظُرۡ أَتَهۡتَدِيٓ
أَمۡ تَكُونُ مِنَ ٱلَّذِينَ لَا يَهۡتَدُونَ ٤١

**42.** ತರುವಾಯ ಆಕೆ ಬಂದಾಗ (ಆಕೆಯೊಂದಿಗೆ) ಕೇಳಲಾಯಿತು: 'ತಮ್ಮ ಸಿಂಹಾಸನವು ಇದರಂತಿದೆಯೇ?' ಆಕೆ ಹೇಳಿದಳು: 'ಇದು ಅದೇ ಎಂಬಂತೆ ಕಾಣುತ್ತದೆ. ನಮಗೆ ಇದಕ್ಕಿಂತ ಮೊದಲೇ ಜ್ಞಾನ ನೀಡಲಾಗಿದೆ ಮತ್ತು ನಾವು ಮುಸ್ಲಿಮರಾಗಿರುವೆವು'.(1)

فَلَمَّا جَآءَتۡ قِيلَ أَهَٰكَذَا عَرۡشُكِۖ قَالَتۡ
كَأَنَّهُۥ هُوَۚ وَأُوتِينَا ٱلۡعِلۡمَ مِن قَبۡلِهَا وَكُنَّا
مُسۡلِمِينَ ٤٢

**43.** ಆಕೆ ಅಲ್ಲಾಹುವಿನ ಹೊರತು ಆರಾಧಿಸುತ್ತಿದ್ದ ವಸ್ತುಗಳು ಆಕೆಯನ್ನು ತಡೆದಿದ್ದವು.(2) ಖಂಡಿತವಾಗಿಯೂ ಆಕೆ

وَصَدَّهَا مَا كَانَت تَّعۡبُدُ مِن دُونِ ٱللَّهِۖ
إِنَّهَا كَانَتۡ مِن قَوۡمٖ كَٰفِرِينَ ٤٣

1 'ಇದಕ್ಕಿಂತ ಮೊದಲೇ.' ಎಂಬಲ್ಲಿಂದ ತೊಡಗುವ ವಾಕ್ಯವು ಬಲ್ಕೀಸ್‌ರದ್ದಾಗಿದೆ ಅಥವಾ ಸುಲೈಮಾನ್ (عَلَيْهِ السَّلَامُ) ರವರದ್ದಾಗಿದೆ ಎಂಬ ವಿಭಿನ್ನ ಅಭಿಪ್ರಾಯಗಳಿವೆ.

2 ಅಲ್ಲಾಹು ಆಕೆಯನ್ನು ತಡೆದನು ಎಂದೂ ವ್ಯಾಖ್ಯಾನಿಸಲಾಗಿದೆ. ಅಲ್ಲಾಹುವಿನ ಹೊರತಾಗಿ ಆಕೆ

ಸತ್ಯನಿಷೇಧಿಗಳಾದ ಜನತೆಯಲ್ಲಿ ಸೇರಿದವಳಾಗಿದ್ದಳು.

44. 'ಅರಮನೆಯನ್ನು ಪ್ರವೇಶಿಸಿರಿ' ಎಂದು ಆಕೆಯೊಂದಿಗೆ ಹೇಳಲಾಯಿತು. ಆದರೆ ಆಕೆ ಅದನ್ನು ಕಂಡಾಗ ಅದನ್ನು ಕೊಳವೆಂದು ಭಾವಿಸಿ ಕಣಕಾಲುಗಳಿಂದ ವಸ್ತ್ರವನ್ನು ಮೇಲೆತ್ತಿದಳು. ಅವರು (ಸುಲೈಮಾನ್) ಹೇಳಿದರು: 'ಇದು ಸ್ಫಟಿಕ ತುಣುಕುಗಳನ್ನು ಹಾಸಿ ಹೊಳೆಯುವಂತೆ ಮಾಡಿರುವ ಅರಮನೆಯಾಗಿದೆ'. ಆಕೆ ಹೇಳಿದಳು: 'ಓ ನನ್ನ ರಬ್! ನಾನು ಸ್ವತಃ ನನ್ನೊಂದಿಗೇ ಅನ್ಯಾಯವೆಸಗಿರುವೆನು. ನಾನು ಸುಲೈಮಾನ್‌ರೊಂದಿಗೆ ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗೆ ಶರಣಾಗತಳಾಗಿರುವೆನು'.

قِيلَ لَهَا ٱدۡخُلِي ٱلصَّرۡحَۖ فَلَمَّا رَأَتۡهُ حَسِبَتۡهُ لُجَّةٗ وَكَشَفَتۡ عَن سَاقَيۡهَاۚ قَالَ إِنَّهُۥ صَرۡحٞ مُّمَرَّدٞ مِّن قَوَارِيرَۗ قَالَتۡ رَبِّ إِنِّي ظَلَمۡتُ نَفۡسِي وَأَسۡلَمۡتُ مَعَ سُلَيۡمَٰنَ لِلَّهِ رَبِّ ٱلۡعَٰلَمِينَ ٤٤

45. 'ನೀವು ಅಲ್ಲಾಹುವನ್ನು (ಮಾತ್ರ) ಆರಾಧಿಸಿರಿ' ಎಂಬ ಸಂದೇಶದೊಂದಿಗೆ ಸಮೂದ್ ಜನಾಂಗಕ್ಕೆ ಅವರ ಸಹೋದರನಾದ ಸ್ವಾಲಿಹ್‌ರನ್ನು ನಾವು ಕಳುಹಿಸಿದೆವು. ಆಗ ಅವರು ಪರಸ್ಪರ ತರ್ಕಿಸುವ ಎರಡು ಗುಂಪುಗಳಾಗಿ ಮಾರ್ಪಟ್ಟರು.

وَلَقَدۡ أَرۡسَلۡنَآ إِلَىٰ ثَمُودَ أَخَاهُمۡ صَٰلِحًا أَنِ ٱعۡبُدُواْ ٱللَّهَ فَإِذَا هُمۡ فَرِيقَانِ يَخۡتَصِمُونَ ٤٥

46. ಆತ ಹೇಳಿದರು: 'ಓ ನನ್ನ ಜನರೇ! ನೀವು ಒಳಿತಿಗಿಂತ ಮುಂಚೆ ಕೆಡುಕಿಗಾಗಿ ಏಕೆ ಆತುರಪಡುತ್ತಿರುವಿರಿ? ನಿಮಗೆ ಅಲ್ಲಾಹುವಿನಲ್ಲಿ ಪಾಪಮುಕ್ತಿ ಬೇಡಬಾರದೇ? ಅದರಿಂದಾಗಿ ನಿಮಗೆ ಕರುಣೆ ಸಿಗಲೂಬಹುದು'.

قَالَ يَٰقَوۡمِ لِمَ تَسۡتَعۡجِلُونَ بِٱلسَّيِّئَةِ قَبۡلَ ٱلۡحَسَنَةِۖ لَوۡلَا تَسۡتَغۡفِرُونَ ٱللَّهَ لَعَلَّكُمۡ تُرۡحَمُونَ ٤٦

47. ಅವರು ಹೇಳಿದರು: 'ತಾವು ಮತ್ತು ತಮ್ಮ ಜೊತೆಯಲ್ಲಿರುವವರಿಂದಾಗಿ ನಾವು

قَالُواْ ٱطَّيَّرۡنَا بِكَ وَبِمَن مَّعَكَۚ قَالَ

ಆರಾಧಿಸುತ್ತಿದ್ದವುಗಳಿಂದ ಸುಲೈಮಾನ್(عَلَيْهِ السَّلَامُ) ಆಕೆಯನ್ನು ತಡೆದರು ಎಂಬ ಇನ್ನೊಂದು ವ್ಯಾಖ್ಯಾನವೂ ಇದೆ. ಸರ್ವನಾಮಗಳನ್ನು ನಿರ್ಧರಿಸುವಲ್ಲಿ ಉಂಟಾಗುವ ವ್ಯತ್ಯಾಸವೇ ಈ ವಿಭಿನ್ನ ವ್ಯಾಖ್ಯಾನಗಳಿಗೆ ಕಾರಣ.

طَٰٓئِرُكُمْ عِندَ ٱللَّهِ ۖ بَلْ أَنتُمْ قَوْمٌ تُفْتَنُونَ ﴿٤٧﴾

ಅಪಶಕುನಕ್ಕೊಳಗಾಗಿರುವೆವು'.[1] ಸ್ವಾಲಿಹ್ ಹೇಳಿದರು: 'ನಿಮ್ಮ ಶಕುನವು ಅಲ್ಲಾಹುವಿನ ಬಳಿ ದಾಖಲಿಸಲಾದುದಾಗಿದೆ. ಅಲ್ಲ, ನೀವು ಪರೀಕ್ಷೆಗೆ ತುತ್ತಾಗುವ ಒಂದು ಸಮುದಾಯವಾಗಿರುವಿರಿ'.

وَكَانَ فِى ٱلْمَدِينَةِ تِسْعَةُ رَهْطٍ يُفْسِدُونَ فِى ٱلْأَرْضِ وَلَا يُصْلِحُونَ ﴿٤٨﴾

48. ಭೂಮಿಯಲ್ಲಿ ಕ್ಷೋಭೆಯನ್ನುಂಟುಮಾಡುತ್ತಿದ್ದ ಮತ್ತು ಯಾವುದೇ ಸುಧಾರಣೆಯನ್ನು ಮಾಡದ ಒಂಬತ್ತು ಜನರು ಆ ಪಟ್ಟಣದಲ್ಲಿದ್ದರು.

قَالُوا۟ تَقَاسَمُوا۟ بِٱللَّهِ لَنُبَيِّتَنَّهُۥ وَأَهْلَهُۥ ثُمَّ لَنَقُولَنَّ لِوَلِيِّهِۦ مَا شَهِدْنَا مَهْلِكَ أَهْلِهِۦ وَإِنَّا لَصَٰدِقُونَ ﴿٤٩﴾

49. 'ನಾವು ರಾತ್ರಿ ವೇಳೆಯಲ್ಲಿ ಅವನನ್ನು (ಸ್ವಾಲಿಹ್‌ರನ್ನು) ಮತ್ತು ಅವನ ಜನರನ್ನು ವಧಿಸೋಣ. ತರುವಾಯ ಅವನ ಉತ್ತರಾಧಿಕಾರಿಯೊಂದಿಗೆ, ಅವನ ಜನರ ವಿನಾಶಕ್ಕೆ ನಾವು ಸಾಕ್ಷ್ಯವಹಿಸಿಲ್ಲ, ಖಂಡಿತವಾಗಿಯೂ ನಾವು ಸತ್ಯವನ್ನು ನುಡಿಯುವವರಾಗಿರುವೆವು ಎನ್ನೋಣ ಎಂದು ನೀವು ಅಲ್ಲಾಹುವಿನ ಮೇಲೆ ಪರಸ್ಪರ ಆಣೆ ಹಾಕಿ ಹೇಳಿರಿ' ಎಂದು ಹೇಳುತ್ತಾ ಅವರು ತಮ್ಮೊಳಗೆ ದೃಢಪಡಿಸಿಕೊಂಡರು.

وَمَكَرُوا۟ مَكْرًا وَمَكَرْنَا مَكْرًا وَهُمْ لَا يَشْعُرُونَ ﴿٥٠﴾

50. ಅವರೊಂದು ತಂತ್ರವನ್ನು ಹೂಡಿದರು. ಅವರು ಗ್ರಹಿಸದ ರೀತಿಯಲ್ಲಿ ನಾವೂ ತಂತ್ರ ಹೂಡಿದೆವು.

فَٱنظُرْ كَيْفَ كَانَ عَٰقِبَةُ مَكْرِهِمْ أَنَّا دَمَّرْنَٰهُمْ وَقَوْمَهُمْ أَجْمَعِينَ ﴿٥١﴾

51. ತರುವಾಯ ಅವರ ತಂತ್ರದ ಫಲವು ಹೇಗಿತ್ತು ಎಂಬುದನ್ನು ನೋಡಿರಿ. ನಾವು ಅವರನ್ನು ಮತ್ತು ಅವರ ಜನತೆಯನ್ನು ಸಂಪೂರ್ಣವಾಗಿ ನಾಶ ಮಾಡಿದೆವು.

فَتِلْكَ بُيُوتُهُمْ خَاوِيَةًۢ بِمَا ظَلَمُوٓا۟ ۗ إِنَّ فِى ذَٰلِكَ لَءَايَةً لِّقَوْمٍ يَعْلَمُونَ ﴿٥٢﴾

52. ಹೀಗೆ ಅವರು ಅಕ್ರಮವೆಸಗಿದ ಫಲವಾಗಿ ಅಗೋ ಅವರ ಮನೆಗಳು (ಶೂನ್ಯವಾಗಿ) ಕುಸಿದುಬಿದ್ದಿವೆ. ಖಂಡಿತವಾಗಿಯೂ

---

1 ಪ್ರವಾದಿಗಳು ಅಥವಾ ಸಂದೇಶ ಪ್ರಚಾರಕರು ಒಂದು ಪ್ರದೇಶದಲ್ಲಿ ತಮ್ಮ ಬೋಧನೆಯನ್ನು ಆರಂಭಿಸಿದಾಗ ಅಲ್ಲೇನಾದರೂ ಆಪತ್ತುಗಳೋ ಅನರ್ಥಗಳೋ ಜರುಗಿದರೆ ಅವೆಲ್ಲವೂ ಪ್ರವಾದಿಗಳ ಅಪಶಕುನವೆಂದು ಪ್ರಚಾರಮಾಡಲು ಸತ್ಯನಿಷೇಧಿಗಳು ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ. ಪ್ರತಿಯೊಬ್ಬರಿಗೂ ಒದಗುವ ಸೌಭಾಗ್ಯ ಮತ್ತು ದೌರ್ಭಾಗ್ಯಗಳು ಅಲ್ಲಾಹುವಿನ ನಿರ್ಣಯ ಪ್ರಕಾರವೇ ಅವರಿಗೆ ವಿಧಿಸಲ್ಪಟ್ಟದ್ದಾಗಿದೆ ಎಂಬ ವಾಸ್ತವಿಕತೆಯನ್ನು ಸರ್ವ ಅವಿಶ್ವಾಸಿಗಳೂ ವಿಸ್ಮರಿಸುತ್ತಾರೆ.

ಅರಿವಿರುವ ಜನರಿಗೆ ಅದರಲ್ಲಿ ದೃಷ್ಟಾಂತವಿದೆ.

وَأَنجَيۡنَا ٱلَّذِينَ ءَامَنُواْ وَكَانُواْ يَتَّقُونَ ٥٣

53. ವಿಶ್ವಾಸವಿಟ್ಟವರನ್ನು ಮತ್ತು ಭಯಭಕ್ತಿ ಪಾಲಿಸಿದವರನ್ನು ನಾವು ರಕ್ಷಿಸಿದೆವು.

وَلُوطًا إِذۡ قَالَ لِقَوۡمِهِۦٓ أَتَأۡتُونَ ٱلۡفَٰحِشَةَ وَأَنتُمۡ تُبۡصِرُونَ ٥٤

54. ಲೂತ್‌ರನ್ನು (ಸ್ಮರಿಸಿರಿ). ಅವರು ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ: 'ನೀವು ಕಣ್ಣಾರೆ ಕಾಣುತ್ತಲೇ ನೀಚಕೃತ್ಯವನ್ನು ಮಾಡುತ್ತಿರುವಿರಾ?

أَئِنَّكُمۡ لَتَأۡتُونَ ٱلرِّجَالَ شَهۡوَةٗ مِّن دُونِ ٱلنِّسَآءِۚ بَلۡ أَنتُمۡ قَوۡمٞ تَجۡهَلُونَ ٥٥

55. ನೀವು ಕಾಮಶಮನಕ್ಕಾಗಿ ಸ್ತ್ರೀಯರನ್ನು ಬಿಟ್ಟು ಪುರುಷರ ಬಳಿಗೆ ತೆರಳುವುದೇ? ಅಲ್ಲ, ನೀವು ಅವಿವೇಕ ತೋರಿಸುವ ಒಂದು ಜನತೆಯಾಗಿರುವಿರಿ.

۞فَمَا كَانَ جَوَابَ قَوۡمِهِۦٓ إِلَّآ أَن قَالُوٓاْ أَخۡرِجُوٓاْ ءَالَ لُوطٖ مِّن قَرۡيَتِكُمۡۖ إِنَّهُمۡ أُنَاسٞ يَتَطَهَّرُونَ ٥٦

56. ಅವರ ಜನತೆಯ ಉತ್ತರವು 'ಲೂತ್‌ರ ಅನುಯಾಯಿಗಳನ್ನು ನಿಮ್ಮ ಊರಿನಿಂದ ಹೊರದಬ್ಬಿರಿ. ಅವರು ಶುಚಿತ್ವ ಪಾಲಿಸುವ ಕೆಲವು ಜನರಾಗಿರುವರು' ಎಂದು ಹೇಳುವುದರ ಹೊರತು ಇನ್ನೇನೂ ಆಗಿರಲಿಲ್ಲ.

فَأَنجَيۡنَٰهُ وَأَهۡلَهُۥٓ إِلَّا ٱمۡرَأَتَهُۥ قَدَّرۡنَٰهَا مِنَ ٱلۡغَٰبِرِينَ ٥٧

57. ಆಗ ನಾವು ಅವರನ್ನು ಮತ್ತು ಅವರ ಕುಟುಂಬವನ್ನು ರಕ್ಷಿಸಿದೆವು; ಅವರ ಪತ್ನಿಯ ಹೊರತು. ಹಿಂದೆ ಉಳಿದವರಲ್ಲಿ ನಾವು ಆಕೆಯನ್ನೂ ಗಣಿಸಿದೆವು.

وَأَمۡطَرۡنَا عَلَيۡهِم مَّطَرٗاۖ فَسَآءَ مَطَرُ ٱلۡمُنذَرِينَ ٥٨

58. ನಾವು ಅವರ ಮೇಲೆ ಒಂದು ವಿಧದ ಮಳೆಯನ್ನು ಸುರಿಸಿದೆವು. ಮುನ್ನೆಚ್ಚರಿಕೆ ನೀಡಲಾದವರಿಗೆ ಸುರಿಸಲಾದ ಆ ಮಳೆಯು ಎಷ್ಟು ನಿಕೃಷ್ಟವಾದುದು!

قُلِ ٱلۡحَمۡدُ لِلَّهِ وَسَلَٰمٌ عَلَىٰ عِبَادِهِ ٱلَّذِينَ ٱصۡطَفَىٰٓۗ ءَآللَّهُ خَيۡرٌ أَمَّا يُشۡرِكُونَ ٥٩

59. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹುವಿಗೆ ಸ್ತುತಿ. ಅವನು ಆರಿಸಿದ ಅವನ ದಾಸರ ಮೇಲೆ ಶಾಂತಿಯಿರಲಿ. ಅಲ್ಲಾಹು ಉತ್ತಮನೋ ಅಥವಾ ಅವರು(ಅವನೊಂದಿಗೆ) ಸಹಭಾಗಿಯಾಗಿ ಮಾಡಿದವರೋ?

أَمَّنْ خَلَقَ ٱلسَّمَٰوَٰتِ وَٱلْأَرْضَ وَأَنزَلَ لَكُم مِّنَ ٱلسَّمَآءِ مَآءً فَأَنۢبَتْنَا بِهِۦ حَدَآئِقَ ذَاتَ بَهْجَةٍ مَّا كَانَ لَكُمْ أَن تُنۢبِتُوا۟ شَجَرَهَآ ۗ أَءِلَٰهٌ مَّعَ ٱللَّهِ ۚ بَلْ هُمْ قَوْمٌ يَعْدِلُونَ ﴿٦٠﴾

60. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಮತ್ತು ಆಕಾಶದಿಂದ ನಿಮಗೆ ನೀರನ್ನು ಸುರಿಸಿದವನು ಉತ್ತಮನೋ? (ಅಥವಾ ಅವರ ಆರಾಧ್ಯರೋ?) ತರುವಾಯ ಅದರ ಮೂಲಕ ಸುಂದರವಾದ ಕೆಲವು ತೋಟಗಳನ್ನು ನಾವು ಬೆಳೆಸಿದೆವು. ಅವುಗಳಲ್ಲಿರುವ ಮರಗಳನ್ನು ಬೆಳೆಸಲು ನಿಮಗೆ ಸಾಧ್ಯವಾಗುತ್ತಿರಲಿಲ್ಲ. ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರಿರುವರೇ? ಅಲ್ಲ, ಅವರು ವ್ಯತಿಚಲಿಸುವ ಒಂದು ಜನತೆಯಾಗಿರುವರು.

أَمَّن جَعَلَ ٱلْأَرْضَ قَرَارًا وَجَعَلَ خِلَٰلَهَآ أَنْهَٰرًا وَجَعَلَ لَهَا رَوَٰسِىَ وَجَعَلَ بَيْنَ ٱلْبَحْرَيْنِ حَاجِزًا ۗ أَءِلَٰهٌ مَّعَ ٱللَّهِ ۚ بَلْ أَكْثَرُهُمْ لَا يَعْلَمُونَ ﴿٦١﴾

61. ಅಥವಾ ಭೂಮಿಯನ್ನು ವಾಸಯೋಗ್ಯವನ್ನಾಗಿ ಮಾಡಿದವನು, ಅದರ ನಡುವೆ ನದಿಗಳನ್ನು ಹರಿಸಿದವನು, ಅದಕ್ಕೆ ದೃಢತೆ ನೀಡುವ ಪರ್ವತಗಳನ್ನು ನಿರ್ಮಿಸಿದವನು ಮತ್ತು ಎರಡು ರೀತಿಯ ಜಲಾಶಯಗಳ ಮಧ್ಯೆ ಒಂದು ತಡೆಯನ್ನು ನಿರ್ಮಿಸಿದವನು ಉತ್ತಮನೋ?[1] (ಅಥವಾ ಅವರ ಆರಾಧ್ಯರೋ?) ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರಿರುವರೇ? ಅಲ್ಲ, ಅವರಲ್ಲಿ ಹೆಚ್ಚಿನವರೂ ಅರಿಯಲಾರರು.

أَمَّن يُجِيبُ ٱلْمُضْطَرَّ إِذَا دَعَاهُ وَيَكْشِفُ ٱلسُّوٓءَ وَيَجْعَلُكُمْ خُلَفَآءَ ٱلْأَرْضِ ۗ أَءِلَٰهٌ مَّعَ ٱللَّهِ ۚ قَلِيلًا مَّا تَذَكَّرُونَ ﴿٦٢﴾

62. ಅಥವಾ ಕಷ್ಟದಲ್ಲಿರುವವನು ಕರೆದು ಪ್ರಾರ್ಥಿಸಿದಾಗ ಅವನಿಗೆ ಉತ್ತರವನ್ನು ನೀಡುವವನು, ಕಷ್ಟವನ್ನು ನಿವಾರಿಸುವವನು ಮತ್ತು ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳನ್ನಾಗಿ ಮಾಡುವವನು ಉತ್ತಮನೋ? (ಅಥವಾ ಅವರ ಆರಾಧ್ಯ–ರೋ?) ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರಿರುವರೇ? ನೀವು ಅಲ್ಪವೇ ಗ್ರಹಿಸುವಿರಿ.

أَمَّن يَهْدِيكُمْ فِى ظُلُمَٰتِ ٱلْبَرِّ وَٱلْبَحْرِ وَمَن يُرْسِلُ ٱلرِّيَٰحَ بُشْرًۢا بَيْنَ يَدَىْ رَحْمَتِهِۦٓ ۗ أَءِلَٰهٌ مَّعَ ٱللَّهِ ۚ تَعَٰلَى ٱللَّهُ عَمَّا يُشْرِكُونَ ﴿٦٣﴾

63. ಅಥವಾ ದಡದ ಮತ್ತು ಸಮುದ್ರದ ಅಂಧಕಾರಗಳಲ್ಲಿ ನಿಮಗೆ ದಾರಿ ತೋರಿಸುವವನು ಮತ್ತು ತನ್ನ ಕಾರುಣ್ಯದ ಮುಂಚೆ ಶುಭವಾರ್ತೆಯಾಗಿ ಮಾರುತಗಳನ್ನು ಕಳುಹಿಸುವವನು ಉತ್ತಮನೋ? (ಅಥವಾ

1 25:53 ನೋಡಿರಿ.

ಅವರ ಆರಾಧ್ಯರೋ?) ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರಿರುವರೇ? ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅಲ್ಲಾಹು ಅತ್ಯುನ್ನತನಾಗಿರುವನು.

أَمَّن يَبۡدَؤُاْ ٱلۡخَلۡقَ ثُمَّ يُعِيدُهُۥ وَمَن يَرۡزُقُكُم مِّنَ ٱلسَّمَآءِ وَٱلۡأَرۡضِۗ أَءِلَٰهٞ مَّعَ ٱللَّهِۚ قُلۡ هَاتُواْ بُرۡهَٰنَكُمۡ إِن كُنتُمۡ صَٰدِقِينَ ٦٤

64. ಅಥವಾ ಸೃಷ್ಟಿಯನ್ನು ಆರಂಭಿಸಿ ತರುವಾಯ ಅದನ್ನು ಪುನರಾವರ್ತಿಸುವವನು ಮತ್ತು ಆಕಾಶದಿಂದ ಹಾಗೂ ಭೂಮಿಯಿಂದ ನಿಮಗೆ ಅನ್ನಾಧಾರಗಳನ್ನು ಒದಗಿಸುವವನು ಉತ್ತಮನೋ? (ಅಥವಾ ಅವರ ಆರಾಧ್ಯರೋ?) ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರಿರುವರೇ? (ಓ ಪ್ರವಾದಿಯವರೇ!) ಹೇಳಿರಿ: 'ನೀವು ಸತ್ಯವಂತರಾಗಿದ್ದರೆ ನಿಮ್ಮಲ್ಲಿರುವ ಪುರಾವೆಯನ್ನು ತನ್ನಿರಿ'.

قُل لَّا يَعۡلَمُ مَن فِي ٱلسَّمَٰوَٰتِ وَٱلۡأَرۡضِ ٱلۡغَيۡبَ إِلَّا ٱللَّهُۚ وَمَا يَشۡعُرُونَ أَيَّانَ يُبۡعَثُونَ ٦٥

65. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹುವಿನ ಹೊರತು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವರಾರೂ ಅಗೋಚರ ಜ್ಞಾನವನ್ನು ಅರಿಯಲಾರರು. ತಮ್ಮನ್ನು ಪುನರುತ್ಥಾನಗೊಳಿಸುವುದು ಯಾವಾಗ ಎಂದೂ ಅವರು ಅರಿಯಲಾರರು'.

بَلِ ٱدَّٰرَكَ عِلۡمُهُمۡ فِي ٱلۡأٓخِرَةِۚ بَلۡ هُمۡ فِي شَكّٖ مِّنۡهَاۖ بَلۡ هُم مِّنۡهَا عَمُونَ ٦٦

66. ಅಲ್ಲ, ಅವರ ಅರಿವು ಪರಲೋಕಕ್ಕೆ ತಲುಪಿ ನಿಂತಿದೆ.(1) ಅಲ್ಲ, ಅವರು ಅದರ ಕುರಿತು ಸಂದೇಹದಲ್ಲಿರುವರು. ಅಲ್ಲ, ಅವರು ಅದರ ಕುರಿತು ಅಂಧರಾಗಿರುವರು.

وَقَالَ ٱلَّذِينَ كَفَرُوٓاْ أَءِذَا كُنَّا تُرَٰبٗا وَءَابَآؤُنَآ أَئِنَّا لَمُخۡرَجُونَ ٦٧

67. ಅವಿಶ್ವಾಸಿಗಳು ಹೇಳಿದರು: 'ನಾವು ಮತ್ತು ನಮ್ಮ ಪೂರ್ವಿಕರು ಮಣ್ಣಾಗಿ ಹೋದ ಬಳಿಕ ನಮ್ಮನ್ನು (ಗೋರಿಗಳಿಂದ) ಹೊರತರಲಾಗುವುದೇ?

لَقَدۡ وُعِدۡنَا هَٰذَا نَحۡنُ وَءَابَآؤُنَا مِن قَبۡلُ إِنۡ هَٰذَآ إِلَّآ أَسَٰطِيرُ ٱلۡأَوَّلِينَ ٦٨

68. ನಮ್ಮೊಂದಿಗೂ, ಈ ಹಿಂದೆ ನಮ್ಮ ಪೂರ್ವಿಕರೊಂದಿಗೂ ಹೀಗೆ ವಾಗ್ದಾನ ಮಾಡಲಾಗಿತ್ತು. ಇವು ಪೂರ್ವಿಕರ ಪುರಾಣಗಳು ಮಾತ್ರವಾಗಿವೆ'.

1 ಇದ್ದಾರಕ ಎಂಬ ಪದಕ್ಕೆ ತಲುಪಿತು, ಮುಗಿಯಿತು, ಪೂರ್ತಿಗೊಂಡಿತು ಇತ್ಯಾದಿ ಅರ್ಥಗಳಿವೆ. 'ಪರಲೋಕದ ವಿಷಯದಲ್ಲಿ ಅವರ ತಿಳುವಳಿಕೆಯು ಅಪರ್ಯಾಪ್ತವಾಗಿದೆ'. ಅಥವಾ, 'ಅವರ ತಿಳುವಳಿಕೆಯು ಪರಿಪೂರ್ಣವಾಗಿ ಪರಲೋಕದ ನಿರಾಕರಣೆಗೆ ತಲುಪಿದೆ' ಎಂಬ ಇತರ ವ್ಯಾಖ್ಯಾನಗಳು ಇದಕ್ಕಿವೆ.

**69.** (ಓ ಪ್ರವಾದಿಯವರೇ!) ಹೇಳಿರಿ: 'ನೀವು ಭೂಮಿಯಲ್ಲಿ ಸಂಚರಿಸಿ ಅಪರಾಧಿಗಳ ಪರ್ಯಾವಸಾನವು ಹೇಗಿತ್ತೆಂಬುದನ್ನು ನೋಡಿರಿ'.

قُلْ سِيرُوا۟ فِى ٱلْأَرْضِ فَٱنظُرُوا۟ كَيْفَ كَانَ عَـٰقِبَةُ ٱلْمُجْرِمِينَ ﴿٦٩﴾

**70.** ತಾವು ಅವರ ಬಗ್ಗೆ ದುಃಖಿಸದಿರಿ. ಅವರು ಹೂಡುತ್ತಿರುವ ಕುತಂತ್ರಗಳ ಬಗ್ಗೆ ತಾವು ಕಳವಳಪಡದಿರಿ.

وَلَا تَحْزَنْ عَلَيْهِمْ وَلَا تَكُن فِى ضَيْقٍ مِّمَّا يَمْكُرُونَ ﴿٧٠﴾

**71.** ಅವರು ಹೇಳುವರು: 'ಈ ವಾಗ್ದಾನವು ಜಾರಿಯಾಗುವುದು ಯಾವಾಗ? ನೀವು ಸತ್ಯವಂತರಾಗಿದ್ದರೆ (ಹೇಳಿರಿ)'.

وَيَقُولُونَ مَتَىٰ هَـٰذَا ٱلْوَعْدُ إِن كُنتُمْ صَـٰدِقِينَ ﴿٧١﴾

**72.** ಹೇಳಿರಿ: 'ಒಂದು ವೇಳೆ ನೀವು ಆತುರಪಡುತ್ತಿರುವ ವಿಷಯಗಳಲ್ಲಿ ಕೆಲವು ನಿಮ್ಮ ಹಿಂದೆಯೇ ಇರಲೂ ಬಹುದು'.

قُلْ عَسَىٰٓ أَن يَكُونَ رَدِفَ لَكُم بَعْضُ ٱلَّذِى تَسْتَعْجِلُونَ ﴿٧٢﴾

**73.** ಖಂಡಿತವಾಗಿಯೂ ತಮ್ಮ ರಬ್ ಮನುಷ್ಯರೊಂದಿಗೆ ಮಹಾ ಔದಾರ್ಯವುಳ್ಳವನಾಗಿರುವನು. ಆದರೆ ಅವರಲ್ಲಿ ಹೆಚ್ಚಿನವರೂ ಕೃತಜ್ಞತೆ ಸಲ್ಲಿಸುವುದಿಲ್ಲ.

وَإِنَّ رَبَّكَ لَذُو فَضْلٍ عَلَى ٱلنَّاسِ وَلَـٰكِنَّ أَكْثَرَهُمْ لَا يَشْكُرُونَ ﴿٧٣﴾

**74.** ಅವರ ಹೃದಯಗಳು ಮರೆಮಾಚುವುದನ್ನೂ, ಅವರು ಬಹಿರಂಗಪಡಿಸುವುದನ್ನೂ ತಮ್ಮ ರಬ್ ಅರಿಯುವನು.

وَإِنَّ رَبَّكَ لَيَعْلَمُ مَا تُكِنُّ صُدُورُهُمْ وَمَا يُعْلِنُونَ ﴿٧٤﴾

**75.** ಆಕಾಶದಲ್ಲಾಗಲಿ ಭೂಮಿಯಲ್ಲಾಗಲಿ ಅಗೋಚರವಾಗಿರುವ ಯಾವುದೂ ಇರಲಾರದು; ಸ್ಪಷ್ಟವಾದ ಒಂದು ದಾಖಲೆಯಲ್ಲಿ ದಾಖಲಿಸಲಾಗಿರುವ ಹೊರತು.

وَمَا مِنْ غَآئِبَةٍ فِى ٱلسَّمَآءِ وَٱلْأَرْضِ إِلَّا فِى كِتَـٰبٍ مُّبِينٍ ﴿٧٥﴾

**76.** ಇಸ್ರಾಈಲ್ ಸಂತತಿಗಳು ಭಿನ್ನಾಭಿಪ್ರಾಯ ಹೊಂದುತ್ತಿರುವ ಹೆಚ್ಚಿನ ವಿಷಯಗಳನ್ನೂ ಈ ಕುರ್‌ಆನ್ ಅವರಿಗೆ ವಿವರಿಸಿ ಕೊಡುತ್ತಿದೆ.

إِنَّ هَـٰذَا ٱلْقُرْءَانَ يَقُصُّ عَلَىٰ بَنِىٓ إِسْرَٰٓءِيلَ أَكْثَرَ ٱلَّذِى هُمْ فِيهِ يَخْتَلِفُونَ ﴿٧٦﴾

**77.** ಖಂಡಿತವಾಗಿಯೂ ಇದು ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನವೂ, ಕಾರುಣ್ಯವೂ ಆಗಿದೆ.

وَإِنَّهُۥ لَهُدًى وَرَحْمَةٌ لِّلْمُؤْمِنِينَ ﴿٧٧﴾

78. ಖಂಡಿತವಾಗಿಯೂ ತಮ್ಮ ರಬ್ ತನ್ನ ವಿಧಿಯ ಮೂಲಕ ಅವರ ಮಧ್ಯೆ ತೀರ್ಪು ನೀಡುವನು. ಅವನು ಪ್ರತಾಪಶಾಲಿಯೂ ಸರ್ವಜ್ಞನೂ ಆಗಿರುವನು.

إِنَّ رَبَّكَ يَقۡضِي بَيۡنَهُم بِحُكۡمِهِۦۚ وَهُوَ ٱلۡعَزِيزُ ٱلۡعَلِيمُ ٧٨

79. ಆದ್ದರಿಂದ ತಾವು ಅಲ್ಲಾಹುವಿನ ಮೇಲೆ ಭರವಸೆಯನ್ನಿಡಿರಿ. ಖಂಡಿತವಾಗಿಯೂ ತಾವು ಸ್ಪಷ್ಟವಾದ ಸತ್ಯದಲ್ಲಿರುವಿರಿ.

فَتَوَكَّلۡ عَلَى ٱللَّهِۖ إِنَّكَ عَلَى ٱلۡحَقِّ ٱلۡمُبِينِ ٧٩

80. ಮರಣಹೊಂದಿದವರು[1] ಆಲಿಸುವಂತೆ ಮಾಡಲು ಖಂಡಿತವಾಗಿಯೂ ತಮಗೆ ಸಾಧ್ಯವಾಗದು.[2] ಕಿವುಡರು ಬೆನ್ನು ತಿರುಗಿಸಿ ಸರಿದು ಹೋದರೆ ಅವರಿಗೂ ಕರೆಯನ್ನು ಆಲಿಸುವಂತೆ ಮಾಡಲು ತಮಗೆ ಸಾಧ್ಯವಾಗಲಾರದು.

إِنَّكَ لَا تُسۡمِعُ ٱلۡمَوۡتَىٰ وَلَا تُسۡمِعُ ٱلصُّمَّ ٱلدُّعَآءَ إِذَا وَلَّوۡاْ مُدۡبِرِينَ ٨٠

81. ಕುರುಡರನ್ನು[3] ಅವರ ದುರ್ಮಾರ್ಗದಿಂದ ಸನ್ಮಾರ್ಗಕ್ಕೆ ತರಲು ತಮಗೆ ಸಾಧ್ಯವಾಗದು. ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವವರಿಗೆ ಮತ್ತು ತನ್ಮೂಲಕ ಶರಣಾಗುವವರಿಗೆ ಹೊರತು ಇನ್ನಾರಿಗೂ ಆಲಿಸುವಂತೆ ಮಾಡಲು ತಮಗೆ ಸಾಧ್ಯವಾಗದು.

وَمَآ أَنتَ بِهَٰدِي ٱلۡعُمۡيِ عَن ضَلَٰلَتِهِمۡۖ إِن تُسۡمِعُ إِلَّا مَن يُؤۡمِنُ بِـَٔايَٰتِنَا فَهُم مُّسۡلِمُونَ ٨١

82. ಆ ವಚನವು ಅವರ ಮೇಲೆ ಸಂಭವಿಸಿದರೆ[4] ಅವರಿಗಾಗಿ ನಾವು ಭೂಮಿಯಿಂದ ಒಂದು ಜೀವಿಯನ್ನು ಹೊರತರುವೆವು.[5] ಮನುಷ್ಯರು

۞وَإِذَا وَقَعَ ٱلۡقَوۡلُ عَلَيۡهِمۡ أَخۡرَجۡنَا لَهُمۡ دَآبَّةٗ مِّنَ ٱلۡأَرۡضِ تُكَلِّمُهُمۡ أَنَّ ٱلنَّاسَ

1 ಇಲ್ಲಿ ಮೃತರು ಎಂದು ವಿಶ್ಲೇಷಿಸಲ್ಪಟ್ಟಿರುವುದು ಹೃದಯದ ಸತ್ಯಾನ್ವೇಷಣಾ ತ್ವರೆಯು ಕಳೆದುಹೋದವರ ಕುರಿತಾಗಿದೆ. ವಿಷಯವನ್ನು ಆಲಿಸಿ ಗ್ರಹಿಸಲು ಸಿದ್ಧರಾಗದವರನ್ನು ಮೃತರೊಂದಿಗೆ ಹೋಲಿಸಲಾಗಿರುವುದರಿಂದ ಮೃತರು ಸರ್ವಥಾ ಆಲಿಸಲು ಅಶಕ್ತರೆಂದು ದೃಢಪಡುತ್ತದೆ.

2 ಸತ್ಯವನ್ನು ಅವರು ಗ್ರಹಿಸುವಂತೆ ಮಾಡಲು ತಮಗೆ ಸಾಧ್ಯವಾಗಲಾರದು.

3 ಈ ಸೂಕ್ತಿಗಳಲ್ಲಿ ಕಿವುಡರು, ಅಂಧರು ಎಂಬೀ ಪದಗಳನ್ನು ಅನುಕ್ರಮವಾಗಿ ಸತ್ಯವನ್ನು ಆಲಿಸಿ ಗ್ರಹಿಸದವರು, ನೋಡಿ ತಿಳಿಯದವರು ಎಂಬೀ ಅರ್ಥಗಳಲ್ಲಿ ಬಳಸಲಾಗಿದೆ.

4 ಆ ವಚನವು ಅವರ ಮೇಲೆ ಸಂಭವಿಸಿದರೆ ಎಂಬುದನ್ನು ಅಂತ್ಯದಿನವು ಸನ್ನಿಹಿತವಾಗುವುದು ಎಂದು ವ್ಯಾಖ್ಯಾನಕಾರರು ವ್ಯಾಖ್ಯಾನಿಸಿದ್ದಾರೆ. ಆ ವಚನವು ಅಂತ್ಯದಿನದ ಬಗ್ಗೆಯಿರುವ ಅಲ್ಲಾಹುವಿನ ಘೋಷಣೆಯಾಗಿದೆ.

5 ಅಂತ್ಯದಿನವು ಸನ್ನಿಹಿತವಾಗಿದೆ ಎಂದು ತಿಳಿದುಕೊಳ್ಳಲು ನೆರವಾಗುವ ಹಲವು ಸಂಗತಿಗಳು ಸಂಭವಿಸುವುದು. ಅವುಗಳ ಪೈಕಿ ಒಂದು 'ದಾಬ್ಬತುಲ್ ಅರ್ದ್'. ಅಂದರೆ ಭೂಮಿಯಿಂದ ಎಬ್ಬಿಸಲಾಗುವ ಅದ್ಭುತ ಜೀವಿ. ಈ ಜೀವಿಯ ಬಗ್ಗೆಯಿರುವ ವಿವರಣೆಗಳಲ್ಲಿ ವ್ಯಾಖ್ಯಾನಕಾರರಿಗೆ ಒಮ್ಮತವಿಲ್ಲ.

كَانُواْ بِـَٔايَـٰتِنَا لَا يُوقِنُونَ ﴿٨٢﴾

ನಮ್ಮ ದೃಷ್ಟಾಂತಗಳಲ್ಲಿ ದೃಢವಾಗಿ ವಿಶ್ವಾಸವಿಡುವುದಿಲ್ಲ ಎಂಬ ವಿಷಯವನ್ನು ಅದು ಅವರೊಂದಿಗೆ ಮಾತನಾಡುವುದು.

وَيَوْمَ نَحْشُرُ مِن كُلِّ أُمَّةٍ فَوْجًا مِّمَّن يُكَذِّبُ بِـَٔايَـٰتِنَا فَهُمْ يُوزَعُونَ ﴿٨٣﴾

**83.** ನಾವು ಪ್ರತಿಯೊಂದು ಸಮುದಾಯದಿಂದಲೂ ನಮ್ಮ ದೃಷ್ಟಾಂತಗಳನ್ನು ನಿಷೇಧಿಸುವ ಒಂದೊಂದು ಗುಂಪನ್ನು ಒಟ್ಟುಗೂಡಿಸುವ ಹಾಗೂ ತರುವಾಯ ಅವರನ್ನು ಸಾಲು ಸಾಲಾಗಿ ನಿಲ್ಲಿಸಲಾಗುವ ದಿನ!

حَتَّىٰٓ إِذَا جَآءُو قَالَ أَكَذَّبْتُم بِـَٔايَـٰتِى وَلَمْ تُحِيطُواْ بِهَا عِلْمًا أَمَّاذَا كُنتُمْ تَعْمَلُونَ ﴿٨٤﴾

**84.** ಕೊನೆಗೆ ಅವರು ಬಂದಾಗ ಅವನು (ಅಲ್ಲಾಹು) ಹೇಳುವನು: 'ನನ್ನ ದೃಷ್ಟಾಂತಗಳ ಕುರಿತು ಅಲ್ಪವೂ ಗ್ರಹಿಸದೆ ನೀವು ಅವುಗಳನ್ನು ನಿಷೇಧಿಸಿದಿರಾ? ಅಥವಾ ನೀವು ಮಾಡುತ್ತಿದ್ದುದಾದರೂ ಏನು?'

وَوَقَعَ ٱلْقَوْلُ عَلَيْهِم بِمَا ظَلَمُواْ فَهُمْ لَا يَنطِقُونَ ﴿٨٥﴾

**85.** ಅವರು ಅಕ್ರಮವೆಸಗಿದ ಕಾರಣದಿಂದಾಗಿ (ಶಿಕ್ಷೆಯ) ವಚನವು ಅವರ ಮೇಲೆ ಸಂಭವಿಸಿತು. ಆಗ ಅವರು (ಏನನ್ನೂ) ಮಾತನಾಡಲಾರರು.

أَلَمْ يَرَوْاْ أَنَّا جَعَلْنَا ٱلَّيْلَ لِيَسْكُنُواْ فِيهِ وَٱلنَّهَارَ مُبْصِرًا ۚ إِنَّ فِى ذَٰلِكَ لَـَٔايَـٰتٍ لِّقَوْمٍ يُؤْمِنُونَ ﴿٨٦﴾

**86.** ನಾವು ಅವರಿಗೆ ರಾತ್ರಿಯನ್ನು ಶಾಂತಿ ಪಡೆಯಲಿಕ್ಕಿರುವುದನ್ನಾಗಿಯೂ, ಹಗಲನ್ನು ಪ್ರಕಾಶಮಾನವನ್ನಾಗಿಯೂ ಮಾಡಿರುವುದನ್ನು ಅವರು ಕಂಡಿಲ್ಲವೇ? ವಿಶ್ವಾಸವಿಡುವ ಜನರಿಗೆ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ.

وَيَوْمَ يُنفَخُ فِى ٱلصُّورِ فَفَزِعَ مَن فِى ٱلسَّمَـٰوَٰتِ وَمَن فِى ٱلْأَرْضِ إِلَّا مَن شَآءَ ٱللَّهُ ۚ وَكُلٌّ أَتَوْهُ دَٰخِرِينَ ﴿٨٧﴾

**87.** ಕಹಳೆಯಲ್ಲಿ ಊದಲಾಗುವ ದಿನ! ಆಗ ಆಕಾಶಗಳಲ್ಲಿರುವವರು ಮತ್ತು ಭೂಮಿಯಲ್ಲಿರುವವರು ಭಯವಿಹ್ವಲರಾಗುವರು; ಅಲ್ಲಾಹು ಇಚ್ಛಿಸಿದವರ ಹೊರತು. ಎಲ್ಲರೂ ವಿನಮ್ರರಾಗಿ ಅವನ ಬಳಿಗೆ ಬರುವರು.

وَتَرَى ٱلْجِبَالَ تَحْسَبُهَا جَامِدَةً وَهِىَ تَمُرُّ مَرَّ ٱلسَّحَابِ ۚ صُنْعَ ٱللَّهِ ٱلَّذِىٓ أَتْقَنَ كُلَّ شَىْءٍ ۚ إِنَّهُۥ خَبِيرٌۢ بِمَا تَفْعَلُونَ ﴿٨٨﴾

**88.** ಪರ್ವತಗಳನ್ನು ಕಾಣುವಾಗ ಅವು ಅಚಲವಾಗಿ ನಿಂತಿರುವುದೆಂದು ತಾವು ಭಾವಿಸುವಿರಿ. ಆದರೆ ಅವು ಮೋಡಗಳು ಚಲಿಸುವಂತೆ ಚಲಿಸುವುವು.[1]ಇದು ಎಲ್ಲವನ್ನೂ

1 ಅಂತ್ಯದಿನದಂದು ಪರ್ವತಗಳು ನುಚ್ಚುನೂರಾಗುವುವು ಮತ್ತು ಅದರ ಧೂಳೀಕಣಗಳು ಮೋಡಗಳಂತೆ

ಅನ್ಯೂನಗೊಳಿಸಿದ ಅಲ್ಲಾಹುವಿನ ಕೆಲಸವಾಗಿದೆ.[1] ಖಂಡಿತವಾಗಿಯೂ ನೀವು ಮಾಡುತ್ತಿರುವುದರ ಕುರಿತು ಅವನು ಸೂಕ್ಷ್ಮವಾಗಿ ಅರಿಯುವವನಾಗಿರುವನು.

**89.** ಯಾರಾದರೂ ಒಳಿತಿನೊಂದಿಗೆ ಬಂದರೆ ಅವನಿಗೆ (ಅಂದು) ಅದಕ್ಕಿಂತಲೂ ಉತ್ತಮವಾಗಿರುವುದು ಸಿಗುವುದು. ಅಂದಿನ ಭಯವಿಹ್ವಲತೆಯಿಂದ ಅವರು ಸುರಕ್ಷಿತರಾಗಿರುವರು.

مَن جَآءَ بِٱلۡحَسَنَةِ فَلَهُۥ خَيۡرٞ مِّنۡهَا وَهُم مِّن فَزَعٖ يَوۡمَئِذٍ ءَامِنُونَ ٨٩

**90.** ಯಾರಾದರೂ ಕೆಡುಕಿನೊಂದಿಗೆ ಬಂದರೆ ಅವರು ನರಕಾಗ್ನಿಯಲ್ಲಿ ಅಧೋಮುಖಿಗಳಾಗಿ ಬೀಳಿಸಲಾಗುವರು. 'ನೀವು ಮಾಡಿರುವುದಕ್ಕಾಗಿಯೇ ಹೊರತು ನಿಮಗೆ ಪ್ರತಿಫಲ ನೀಡಲಾಗುವುದೇ?'

وَمَن جَآءَ بِٱلسَّيِّئَةِ فَكُبَّتۡ وُجُوهُهُمۡ فِي ٱلنَّارِ هَلۡ تُجۡزَوۡنَ إِلَّا مَا كُنتُمۡ تَعۡمَلُونَ ٩٠

**91.** (ಹೇಳಿರಿ): 'ನನ್ನೊಂದಿಗೆ ಆಜ್ಞಾಪಿಸಲಾಗಿರುವುದು ಈ ಪಟ್ಟಣವನ್ನು ಪವಿತ್ರಗೊಳಿಸಿದ ಇದರ ರಬ್ಬನ್ನು ಆರಾಧಿಸಬೇಕೆಂದು ಮಾತ್ರವಾಗಿದೆ. ಎಲ್ಲ ವಸ್ತುಗಳೂ ಅವನದ್ದಾಗಿವೆ. ನಾನು ಶರಣಾದವರ ಪೈಕಿ ಸೇರಿದವನಾಗಬೇಕೆಂದು ನನ್ನೊಂದಿಗೆ ಆಜ್ಞಾಪಿಸಲಾಗಿದೆ.

إِنَّمَآ أُمِرۡتُ أَنۡ أَعۡبُدَ رَبَّ هَٰذِهِ ٱلۡبَلۡدَةِ ٱلَّذِي حَرَّمَهَا وَلَهُۥ كُلُّ شَيۡءٖۖ وَأُمِرۡتُ أَنۡ أَكُونَ مِنَ ٱلۡمُسۡلِمِينَ ٩١

**92.** ಕುರ್‌ಆನನ್ನು ಓದಿಕೊಡುವಂತೆಯೂ (ನನ್ನೊಂದಿಗೆ ಆಜ್ಞಾಪಿಸಲಾಗಿದೆ). ಆದ್ದರಿಂದ ಯಾರಾದರೂ ಸನ್ಮಾರ್ಗ ಸ್ವೀಕರಿಸಿದರೆ ಅವನದನ್ನು ಸ್ವೀಕರಿಸುವುದು ತನ್ನ ಸ್ವಹಿತಕ್ಕೇ ಆಗಿದೆ. ಯಾರಾದರೂ ದಾರಿಗೆಡುವುದಾದರೆ

وَأَنۡ أَتۡلُوَاْ ٱلۡقُرۡءَانَۖ فَمَنِ ٱهۡتَدَىٰ فَإِنَّمَا يَهۡتَدِي لِنَفۡسِهِۦۖ وَمَن ضَلَّ فَقُلۡ إِنَّمَآ أَنَا۠ مِنَ ٱلۡمُنذِرِينَ ٩٢

---

ಹರಡುವುವು ಎಂದರ್ಥ. ತಾವು ನಿಶ್ಚಲವೆಂದು ಭಾವಿಸುವ ಪರ್ವತಗಳು ಹಾಗೂ ನಿಶ್ಚಲವೆಂದು ಭಾವಿಸುವ ಭೂಮಿಯು ವಾಸ್ತವಿಕವಾಗಿ ಅತಿವೇಗದಲ್ಲಿ ಚಲಿಸುತ್ತಿವೆ ಎಂಬ ವಿಷಯವನ್ನು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆಂದು ಕೆಲವು ಆಧುನಿಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

1 ಅರ್ಥಾತ್ ಎಲ್ಲವನ್ನೂ ಅನ್ಯೂನವಾಗಿ ಸೃಷ್ಟಿಸಿರುವ ಅಲ್ಲಾಹು ಖಂಡಿತವಾಗಿಯೂ ಎಲ್ಲವನ್ನೂ ನಾಶಗೊಳಿಸುವನು ಎಂದಾಗಿದೆ. ಇನ್ನೊಂದು ವ್ಯಾಖ್ಯಾನವು ಭೂಮಿಯ ಪರಿಭ್ರಮಣವು ಎಲ್ಲವನ್ನೂ ಅನ್ಯೂನವಾಗಿ ಸೃಷ್ಟಿಸಿದ ಅಲ್ಲಾಹುವಿನ ಸೃಷ್ಟಿವೈಭವದ ನಿದರ್ಶನವಾಗಿದೆ ಎಂದಾಗಿದೆ.

ತಾವು ಹೇಳಿಬಿಡಿರಿ: 'ನಾನು ಮುನ್ನೆಚ್ಚರಿಕೆಗಾರರಲ್ಲಿ ಸೇರಿದ ಒಬ್ಬನು ಮಾತ್ರವಾಗಿರುವೆನು'.

93. ತಾವು ಹೇಳಿರಿ: 'ಅಲ್ಲಾಹುವಿಗೆ ಸ್ತುತಿ. ಅವನು ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸಿ ಕೊಡುವನು. ಆಗ ನೀವು ಅದನ್ನು ಅರಿತುಕೊಳ್ಳುವಿರಿ'. ನೀವು ಮಾಡುತ್ತಿರುವ ಯಾವುದರ ಕುರಿತೂ ತಮ್ಮ ರಬ್ ಅಲಕ್ಷ್ಯನಲ್ಲ.

وَقُلِ ٱلْحَمْدُ لِلَّهِ سَيُرِيكُمْ ءَايَٰتِهِۦ فَتَعْرِفُونَهَا ۚ وَمَا رَبُّكَ بِغَٰفِلٍ عَمَّا تَعْمَلُونَ ﴿٩٣﴾

## ಅಲ್‌ಕ್ವಸಸ್ (ಕಥಾನಕ)[1]

## سُورَةُ القَصَصِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 88

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

طسٓمٓ ١

1. ತ್ವಾ–ಸೀನ್–ಮೀಮ್.

تِلۡكَ ءَايَٰتُ ٱلۡكِتَٰبِ ٱلۡمُبِينِ ٢

2. ಇವು ಸ್ಪಷ್ಟವಾದ ಗ್ರಂಥದ ಸೂಕ್ತಿಗಳಾಗಿವೆ.

نَتۡلُواْ عَلَيۡكَ مِن نَّبَإِ مُوسَىٰ وَفِرۡعَوۡنَ بِٱلۡحَقِّ لِقَوۡمٖ يُؤۡمِنُونَ ٣

3. ವಿಶ್ವಾಸವಿಡುವ ಜನರಿಗಾಗಿ ನಾವು ಮೂಸಾರ ಮತ್ತು ಫಿರ್‌ಔನನ ವೃತ್ತಾಂತದಿಂದ ಸತ್ಯದೊಂದಿಗೆ ತಮಗೆ ಓದಿಕೊಡುವೆವು.

إِنَّ فِرۡعَوۡنَ عَلَا فِي ٱلۡأَرۡضِ وَجَعَلَ أَهۡلَهَا شِيَعٗا يَسۡتَضۡعِفُ طَآئِفَةٗ مِّنۡهُمۡ يُذَبِّحُ أَبۡنَآءَهُمۡ وَيَسۡتَحۡيِۦ نِسَآءَهُمۡۚ إِنَّهُۥ كَانَ مِنَ ٱلۡمُفۡسِدِينَ ٤

4. ಖಂಡಿತವಾಗಿಯೂ ಫಿರ್‌ಔನ್ ಭೂಮಿಯಲ್ಲಿ ದರ್ಪತೋರಿದನು. ಅಲ್ಲಿನ ನಿವಾಸಿಗಳನ್ನು ವಿಭಿನ್ನ ಪಂಗಡಗಳನ್ನಾಗಿ ಮಾಡಿದನು. ಅವರ ಪೈಕಿ ಒಂದು ಪಂಗಡವನ್ನು ಬಲಹೀನರನ್ನಾಗಿ ಮಾಡಿ, ಅವರ ಗಂಡುಮಕ್ಕಳನ್ನು ಸಾಯಿಸುತ್ತಿದ್ದನು, ಅವರ ಹೆಣ್ಣುಮಕ್ಕಳನ್ನು ಜೀವಂತ ಬಿಡುತ್ತಿದ್ದನು. ಖಂಡಿತವಾಗಿಯೂ ಅವನು ವಿನಾಶಕಾರಿಗಳಲ್ಲಿ ಸೇರಿದವನಾಗಿದ್ದನು.

وَنُرِيدُ أَن نَّمُنَّ عَلَى ٱلَّذِينَ ٱسۡتُضۡعِفُواْ فِي ٱلۡأَرۡضِ وَنَجۡعَلَهُمۡ أَئِمَّةٗ وَنَجۡعَلَهُمُ ٱلۡوَٰرِثِينَ ٥

5. ಭೂಮಿಯಲ್ಲಿ ಮರ್ದಿತರಾಗಿರುವವರ ಮೇಲೆ ಔದಾರ್ಯ ತೋರಲು, ಅವರನ್ನು ನಾಯಕರನ್ನಾಗಿ ಮಾಡಲು ಮತ್ತು ಅವರನ್ನು (ಭೂಮಿಯ) ವಾರೀಸುದಾರರನ್ನಾಗಿ ಮಾಡಲು ನಾವು ಇಚ್ಛಿಸಿದೆವು.

وَنُمَكِّنَ لَهُمۡ فِي ٱلۡأَرۡضِ وَنُرِيَ فِرۡعَوۡنَ وَهَٰمَٰنَ وَجُنُودَهُمَا مِنۡهُم مَّا كَانُواْ يَحۡذَرُونَ ٦

6. ಅವರಿಗೆ (ಮರ್ದಿತರಿಗೆ) ಭೂಮಿಯಲ್ಲಿ ಅಧಿಕಾರವನ್ನು ನೀಡಲು ಮತ್ತು ಫಿರ್‌ಔನ್, ಹಾಮಾನ್ ಹಾಗೂ ಅವರ ಸೈನ್ಯಗಳು ಅವರ ಬಗ್ಗೆ ಏನನ್ನು ಭಯಪಡುತ್ತಿದ್ದರೋ ಅದನ್ನು ಅವರಿಗೆ ತೋರಿಸಿಕೊಡಲು (ನಾವು ಇಚ್ಛಿಸಿದೆವು).

---

1 ಮೂಸಾ(عَلَيْهِ السَّلَامُ), ಫಿರ್‌ಔನ್ ಮತ್ತು ಕಾರೂನ್ ಮುಂತಾದವರ ಚರಿತ್ರೆಗಳನ್ನು ವಿವರಿಸಲಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

وَأَوْحَيْنَآ إِلَىٰٓ أُمِّ مُوسَىٰٓ أَنْ أَرْضِعِيهِ ۖ فَإِذَا خِفْتِ عَلَيْهِ فَأَلْقِيهِ فِى ٱلْيَمِّ وَلَا تَخَافِى وَلَا تَحْزَنِىٓ ۖ إِنَّا رَآدُّوهُ إِلَيْكِ وَجَاعِلُوهُ مِنَ ٱلْمُرْسَلِينَ ﴿٧﴾

7. ಮೂಸಾರ ತಾಯಿಗೆ ನಾವು ಸಂದೇಶವನ್ನು ನೀಡಿದೆವು: 'ನೀನು ಆತನಿಗೆ ಮೊಲೆಯುಣಿಸು. ಆತನ ವಿಷಯದಲ್ಲಿ ನೀನೇನಾದರೂ ಭಯಪಡುವುದಾದರೆ[1] ಆತನನ್ನು ನದಿಯಲ್ಲಿ ಹಾಕು. ನೀನು ಭಯಪಡುವುದಾಗಲಿ ದುಃಖಿಸುವುದಾಗಲಿ ಮಾಡದಿರು. ಖಂಡಿತವಾಗಿಯೂ ಆತನನ್ನು ನಾವು ನಿನ್ನ ಬಳಿಗೆ ಮರಳಿ ತರುವೆವು ಮತ್ತು ಆತನನ್ನು ಸಂದೇಶವಾಹಕರಲ್ಲಿ ಒಬ್ಬನನ್ನಾಗಿ ಮಾಡುವೆವು.'

فَٱلْتَقَطَهُۥٓ ءَالُ فِرْعَوْنَ لِيَكُونَ لَهُمْ عَدُوًّا وَحَزَنًا ۗ إِنَّ فِرْعَوْنَ وَهَـٰمَـٰنَ وَجُنُودَهُمَا كَانُوا۟ خَـٰطِـِٔينَ ﴿٨﴾

8. ತರುವಾಯ ಫಿರ್‌ಔನ್‌ನ ಜನರು ಆತನನ್ನು (ನದಿಯಿಂದ) ಎತ್ತಿಕೊಂಡರು. ಅವರು (ಮೂಸಾ) ಅವರ ಶತ್ರುವಾಗುವ ಸಲುವಾಗಿ ಮತ್ತು ಅವರ ದುಃಖಕ್ಕೆ ಹೇತುವಾಗುವ ಸಲುವಾಗಿ.[2] ಖಂಡಿತವಾಗಿಯೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೈನ್ಯಗಳು ಪಾಪಿಗಳಾಗಿದ್ದರು.

وَقَالَتِ ٱمْرَأَتُ فِرْعَوْنَ قُرَّتُ عَيْنٍ لِّى وَلَكَ ۖ لَا تَقْتُلُوهُ عَسَىٰٓ أَن يَنفَعَنَآ أَوْ نَتَّخِذَهُۥ وَلَدًا وَهُمْ لَا يَشْعُرُونَ ﴿٩﴾

9. ಫಿರ್‌ಔನ್‌ನ ಪತ್ನಿ ಹೇಳಿದಳು: '(ಈ ಮಗು) ನನಗೂ, ತಮಗೂ ಕಣ್ಮಣಿಯಾಗಿದೆ. ಆದ್ದರಿಂದ ಇವನನ್ನು ವಧಿಸದಿರಿ. ನಮಗೆ ಇವನಿಂದ ಪ್ರಯೋಜನವುಂಟಾಗಲೂ ಬಹುದು ಅಥವಾ ನಮಗೆ ಇವನನ್ನು ಒಬ್ಬ ಮಗನನ್ನಾಗಿ ಮಾಡಿಕೊಳ್ಳಬಹುದು'. ಅವರು ವಾಸ್ತವತೆಯನ್ನು ಗ್ರಹಿಸಿರಲಿಲ್ಲ.

وَأَصْبَحَ فُؤَادُ أُمِّ مُوسَىٰ فَـٰرِغًا ۖ إِن كَادَتْ لَتُبْدِى بِهِۦ لَوْلَآ أَن رَّبَطْنَا عَلَىٰ قَلْبِهَا لِتَكُونَ مِنَ ٱلْمُؤْمِنِينَ ﴿١٠﴾

10. ಮೂಸಾರ ತಾಯಿಯ ಹೃದಯವು(ಅನ್ಯ ಚಿಂತೆಗಳಿಂದ) ಮುಕ್ತವಾಗಿ ಬಿಟ್ಟಿತು. ಆಕೆಯ ಹೃದಯವನ್ನು ನಾವು ದೃಢವಾಗಿ ನಿಲ್ಲಿಸದಿರುತ್ತಿದ್ದರೆ ಅವರ (ಮೂಸಾರ) ವಿಚಾರವನ್ನು ಆಕೆ ಬಹಿರಂಗಗೊಳಿಸುತ್ತಿದ್ದಳು. ಆಕೆ ಸತ್ಯವಿಶ್ವಾಸಿಗಳ ಪೈಕಿ ಸೇರುವ ಸಲುವಾಗಿ (ನಾವು ಹಾಗೆ ಮಾಡಿದೆವು).

---

1 ಇಸ್ರಾಈಲರಿಗೆ ಜನಿಸುವ ಎಲ್ಲ ಗಂಡುಮಕ್ಕಳನ್ನೂ ಕೊಲ್ಲುವಂತೆ ಫಿರ್‌ಔನ್ ಅಪ್ಪಣೆ ಹೊರಡಿಸಿದ್ದನು. ಅದು ಆ ತಾಯಿಯ ಭಯಕ್ಕೆ ಕಾರಣವಾಗಿತ್ತು.

2 ಅವರು ಮಗುವನ್ನು ಎತ್ತಿಕೊಂಡ ಕಾರಣ ಅವರ ಸ್ಥಿತಿಯು ಹಾಗಾಯಿತು ಎಂದರ್ಥ.

11. ಆಕೆ ಅವರ (ಮೂಸಾರ) ಸಹೋದರಿಯೊಂದಿಗೆ ಹೇಳಿದಳು: 'ನೀನು ಅವನ ಹಿಂದೆಯೇ ಹೋಗಿ ಅನ್ವೇಷಣೆ ಮಾಡು'. ಹೀಗೆ ಆಕೆ ಆತನನ್ನು ದೂರದಿಂದಲೇ ವೀಕ್ಷಿಸುತ್ತಿದ್ದಳು. ಆದರೆ ಅವರು ಅದನ್ನು ತಿಳಿದಿರಲಿಲ್ಲ.

وَقَالَتۡ لِأُخۡتِهِۦ قُصِّيهِۖ فَبَصُرَتۡ بِهِۦ عَن جُنُبٖ وَهُمۡ لَا يَشۡعُرُونَ ١١

12. ಅದಕ್ಕೆ ಮುಂಚೆ ನಾವು ಮೊಲೆಹಾಲುಣಿಸುವ ಸ್ತ್ರೀಯರನ್ನು ಆತನಿಗೆ ಹಾಲುಣಿಸದಂತೆ ತಡೆದಿದ್ದೆವು.[1] ಆಗ ಆಕೆ (ಸಹೋದರಿ) ಹೇಳಿದಳು: 'ನಿಮಗೋಸ್ಕರ ಇವನ ಲಾಲನೆ ಪೋಷಣೆ ಮಾಡುವ ಒಂದು ಮನೆಯವರ ಕುರಿತು ನಾನು ನಿಮಗೆ ತಿಳಿಸಿಕೊಡಲೇ? ಅವರು ಇವನ ಹಿತಾಕಾಂಕ್ಷಿಗಳೂ ಆಗಿರುವರು'.

۞وَحَرَّمۡنَا عَلَيۡهِ ٱلۡمَرَاضِعَ مِن قَبۡلُ فَقَالَتۡ هَلۡ أَدُلُّكُمۡ عَلَىٰٓ أَهۡلِ بَيۡتٖ يَكۡفُلُونَهُۥ لَكُمۡ وَهُمۡ لَهُۥ نَٰصِحُونَ ١٢

13. ತರುವಾಯ ಆತನ ತಾಯಿಯ ಕಣ್ಣು ತಂಪಾಗಲು, ಆಕೆ ದುಃಖಿಸದಿರಲು ಮತ್ತು ಅಲ್ಲಾಹುವಿನ ವಾಗ್ದಾನವು ಸತ್ಯವೆಂದು ಆಕೆ ಅರಿತುಕೊಳ್ಳಲು ನಾವು ಆತನನ್ನು ಆಕೆಗೆ ಮರಳಿಕೊಟ್ಟೆವು. ಆದರೆ ಅವರಲ್ಲಿ ಹೆಚ್ಚಿನವರೂ (ವಾಸ್ತವತೆಯನ್ನು) ಗ್ರಹಿಸುವುದಿಲ್ಲ.

فَرَدَدۡنَٰهُ إِلَىٰٓ أُمِّهِۦ كَيۡ تَقَرَّ عَيۡنُهَا وَلَا تَحۡزَنَ وَلِتَعۡلَمَ أَنَّ وَعۡدَ ٱللَّهِ حَقّٞ وَلَٰكِنَّ أَكۡثَرَهُمۡ لَا يَعۡلَمُونَ ١٣

14. ತರುವಾಯ ಅವರು (ಮೂಸಾ) ತಮ್ಮ ಪೂರ್ಣ ಬಲವನ್ನು ಪಡೆದು ಪ್ರೌಢರಾದಾಗ ನಾವು ಅವರಿಗೆ ವಿವೇಕವನ್ನು ಮತ್ತು ಜ್ಞಾನವನ್ನು ನೀಡಿದೆವು. ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು.

وَلَمَّا بَلَغَ أَشُدَّهُۥ وَٱسۡتَوَىٰٓ ءَاتَيۡنَٰهُ حُكۡمٗا وَعِلۡمٗاۚ وَكَذَٰلِكَ نَجۡزِي ٱلۡمُحۡسِنِينَ ١٤

15. ನಗರವಾಸಿಗಳು ಅಲಕ್ಷ್ಯರಾಗಿದ್ದ ಸಮಯದಲ್ಲಿ ಅವರು ಅಲ್ಲಿಗೆ ಬಂದರು.[2] ಆಗ ಅಲ್ಲಿ

وَدَخَلَ ٱلۡمَدِينَةَ عَلَىٰ حِينِ غَفۡلَةٖ مِّنۡ أَهۡلِهَا

1 ತಾಯಿಯ ಹಾಲನ್ನಲ್ಲದೆ ಇತರ ಮಹಿಳೆಯರ ಮೊಲೆಹಾಲನ್ನು ಕುಡಿಯಲು ಆ ಮಗು ಒಪ್ಪದಂತೆ ಅಲ್ಲಾಹು ಮಾಡಿದನು ಎಂದರ್ಥ.

2 ಅರಮನೆಯಲ್ಲಿ ಉನ್ನತ ಸ್ಥಾನ ನೀಡಲಾಗಿದ್ದ ಮೂಸಾ(عَلَيۡهِ ٱلسَّلَامُ) ಸಾಮಾನ್ಯವಾಗಿ ನಗರದಲ್ಲಿ ಸುತ್ತಾಡುತ್ತಿರಲಿಲ್ಲವೆಂದು ಊಹಿಸಬಹುದಾಗಿದೆ. ಆದ್ದರಿಂದ ಯಾರೂ ಗಮನಿಸದ ವಿಧದಲ್ಲಿ ಜನರು ಮಧ್ಯಾಹ್ನದ ಹೊತ್ತು ನಿದ್ರಿಸುವ ವೇಳೆಯಲ್ಲೋ ಅಥವಾ ಇತರ ವೇಳೆಯಲ್ಲೋ ಮೂಸಾ(عَلَيۡهِ ٱلسَّلَامُ) ನಗರಕ್ಕೆ ಇಳಿದರು.

فَوَجَدَ فِيهَا رَجُلَيْنِ يَقْتَتِلَانِ هَٰذَا مِن
شِيعَتِهِۦ وَهَٰذَا مِنْ عَدُوِّهِۦ ۖ فَٱسْتَغَٰثَهُ
ٱلَّذِى مِن شِيعَتِهِۦ عَلَى ٱلَّذِى مِنْ عَدُوِّهِۦ
فَوَكَزَهُۥ مُوسَىٰ فَقَضَىٰ عَلَيْهِ ۖ قَالَ هَٰذَا
مِنْ عَمَلِ ٱلشَّيْطَٰنِ ۖ إِنَّهُۥ عَدُوٌّ مُّضِلٌّ
مُّبِينٌ ﴿١٥﴾

ಇಬ್ಬರು ವ್ಯಕ್ತಿಗಳು ಪರಸ್ಪರ ಸೆಣಸಾಡುವುದನ್ನು ಕಂಡರು. ಒಬ್ಬ ತನ್ನ ಗುಂಪಿಗೆ ಸೇರಿದವನಾಗಿದ್ದನು. ಇನ್ನೊಬ್ಬನು ತನ್ನ ಶತ್ರು ಗುಂಪಿಗೆ ಸೇರಿದವನಾಗಿದ್ದನು. ಆಗ ತನ್ನ ಗುಂಪಿಗೆ ಸೇರಿದವನು ತನ್ನ ಶತ್ರುವಿನ ಗುಂಪಿಗೆ ಸೇರಿದವನ ವಿರುದ್ಧ ಅವರೊಂದಿಗೆ ಸಹಾಯ ಬೇಡಿದನು. ಆಗ ಮೂಸಾ ಅವನಿಗೆ ಮುಷ್ಠಿ ಬಿಗಿಹಿಡಿದು ಹೊಡೆದರು. ಅದು ಅವನ ಕತೆಯನ್ನು ಮುಗಿಸಿತು. ಆತ(ಮೂಸಾ) ಹೇಳಿದರು: ‘ಇದು ಸೈತಾನನ ಕೃತ್ಯದಲ್ಲಿ ಸೇರಿದ್ದಾಗಿದೆ. ಅವನು ದಾರಿಗೆಡಿಸುವ ಪ್ರತ್ಯಕ್ಷ ಶತ್ರುವಾಗಿರುವನು’.[1]

قَالَ رَبِّ إِنِّى ظَلَمْتُ نَفْسِى فَٱغْفِرْ لِى
فَغَفَرَ لَهُۥٓ ۚ إِنَّهُۥ هُوَ ٱلْغَفُورُ ٱلرَّحِيمُ ﴿١٦﴾

**16.** ಆತ(ಮೂಸಾ) ಹೇಳಿದರು: ‘ಓ ನನ್ನ ರಬ್! ಖಂಡಿತವಾಗಿಯೂ ನಾನು ನನ್ನೊಂದಿಗೇ ಅನ್ಯಾಯವೆಸಗಿರುವೆನು. ಆದ್ದರಿಂದ ನನ್ನನ್ನು ಕ್ಷಮಿಸು’. ಆಗ ಅವನು ಆತನನ್ನು ಕ್ಷಮಿಸಿದನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

قَالَ رَبِّ بِمَآ أَنْعَمْتَ عَلَىَّ فَلَنْ أَكُونَ
ظَهِيرًا لِّلْمُجْرِمِينَ ﴿١٧﴾

**17.** ಆತ ಹೇಳಿದರು: ‘ಓ ನನ್ನ ರಬ್! ನೀನು ನನಗೆ ಅನುಗ್ರಹ ನೀಡಿರುವ ನಿಮಿತ್ತ ಇನ್ನೆಂದೂ ನಾನು ಅಕ್ರಮಿಗಳಿಗೆ ಸಹಾಯ ಮಾಡುವವನಾಗಲಾರೆನು’.

فَأَصْبَحَ فِى ٱلْمَدِينَةِ خَآئِفًا يَتَرَقَّبُ فَإِذَا
ٱلَّذِى ٱسْتَنصَرَهُۥ بِٱلْأَمْسِ يَسْتَصْرِخُهُۥ ۚ
قَالَ لَهُۥ مُوسَىٰٓ إِنَّكَ لَغَوِىٌّ مُّبِينٌ ﴿١٨﴾

**18.** ತರುವಾಯ ಆತ ಪಟ್ಟಣದಲ್ಲಿ ಭಯದಿಂದಲೂ, ಎಚ್ಚರದಿಂದಲೂ ಇದ್ದರು. ಆಗ ಅಗೋ! ನಿನ್ನೆಯ ದಿನ ಆತನೊಂದಿಗೆ ಸಹಾಯ ಬೇಡಿದವನು ಪುನಃ ಆತನನ್ನು ಸಹಾಯಕ್ಕಾಗಿ ಕೂಗುತ್ತಿರುವನು! ಮೂಸಾ ಅವನೊಂದಿಗೆ ಹೇಳಿದರು: ‘ನೀನೊಬ್ಬ ಸ್ಪಷ್ಟ ದುರ್ಮಾರ್ಗಿಯಾಗಿರುವೆ’.

---

1 ತನ್ನ ಜನಾಂಗಕ್ಕೆ ಸೇರಿದವನ ಮೇಲೆ ಆಕ್ರಮಣ ಮಾಡುವುದರಿಂದ ಎದುರಾಳಿಯನ್ನು ತಡೆಯಬೇಕೆಂಬ ಉದ್ದೇಶವೇ ಹೊರತು ದಾಳಿಕೋರನನ್ನು ವಧಿಸಬೇಕೆಂಬ ಇಚ್ಛೆಯು ಅವರಿಗಿರಲಿಲ್ಲ. ತಾನೊಬ್ಬ ಕೊಲೆಪಾತಕಿಯಾಗಿ ಬಿಟ್ಟದ್ದರಲ್ಲಿ ಅವರಿಗೆ ತೀವ್ರ ವಿಷಾದವುಂಟಾಗಿತ್ತು.

19. ತರುವಾಯ ಆತ(ಮೂಸಾ) ತಮ್ಮಿಬ್ಬರಿಗೂ ಶತ್ರುವಾಗಿರುವವನನ್ನು ಹಿಡಿಯಲು ಬಯಸಿದಾಗ[1] ಅವನು ಹೇಳಿದನು:[2] ಓ ಮೂಸಾ! ನಿನ್ನೆ ಒಬ್ಬನನ್ನು ಕೊಂದಂತೆ ನನ್ನನ್ನೂ ಕೊಲ್ಲಲು ಬಯಸುವಿರಾ? ತಾವು ಭೂಮಿಯಲ್ಲಿ ದಬ್ಬಾಳಿಕೆಗಾರನಾಗಲು ಮಾತ್ರ ಬಯಸುತ್ತಿರುವಿರಿ. ಸುಧಾರಣೆ ಮಾಡುವವರಲ್ಲಿ ಸೇರಿದವನಾಗಲು ತಾವು ಇಚ್ಛಿಸುತ್ತಿಲ್ಲ'.

فَلَمَّآ أَنۡ أَرَادَ أَن يَبۡطِشَ بِٱلَّذِي هُوَ عَدُوّٞ
لَّهُمَا قَالَ يَٰمُوسَىٰٓ أَتُرِيدُ أَن تَقۡتُلَنِي كَمَا
قَتَلۡتَ نَفۡسَۢا بِٱلۡأَمۡسِۖ إِن تُرِيدُ إِلَّآ أَن
تَكُونَ جَبَّارٗا فِي ٱلۡأَرۡضِ وَمَا تُرِيدُ أَن
تَكُونَ مِنَ ٱلۡمُصۡلِحِينَ ١٩

20. ಪಟ್ಟಣದ ತುತ್ತತುದಿಯಿಂದ ಒಬ್ಬ ವ್ಯಕ್ತಿ ಓಡಿ ಬಂದು ಹೇಳಿದನು:[3] 'ಓ ಮೂಸಾ! ತಮ್ಮನ್ನು ಕೊಲ್ಲಲು ಸರದಾರರು ಸಂಚು ಹೂಡುತ್ತಿರುವರು. ಆದ್ದರಿಂದ ತಾವು (ಈಜಿಪ್ಟಿನಿಂದ) ಹೊರ ಹೋಗಿರಿ. ಖಂಡಿತ ವಾಗಿಯೂ ನಾನು ತಮ್ಮ ಹಿತಾಕಾಂಕ್ಷಿಗಳಲ್ಲಿ ಸೇರಿದವನಾಗಿರುವೆನು'.

وَجَآءَ رَجُلٞ مِّنۡ أَقۡصَا ٱلۡمَدِينَةِ يَسۡعَىٰ قَالَ
يَٰمُوسَىٰٓ إِنَّ ٱلۡمَلَأَ يَأۡتَمِرُونَ بِكَ لِيَقۡتُلُوكَ
فَٱخۡرُجۡ إِنِّي لَكَ مِنَ ٱلنَّٰصِحِينَ ٢٠

21. ಹಾಗೆ ಮೂಸಾ ಭಯದಿಂದಲೂ, ಎಚ್ಚರ ವಹಿಸುತ್ತಲೂ ಅಲ್ಲಿಂದ ಹೊರಟರು. ಆತ ಹೇಳಿದರು: 'ಓ ನನ್ನ ರಬ್! ಅಕ್ರಮಿಗಳಾಗಿರುವ ಜನರಿಂದ ನನ್ನನ್ನು ಕಾಪಾಡು'.

فَخَرَجَ مِنۡهَا خَآئِفٗا يَتَرَقَّبُۖ قَالَ رَبِّ
نَجِّنِي مِنَ ٱلۡقَوۡمِ ٱلظَّٰلِمِينَ ٢١

22. ತರುವಾಯ ಆತ ಮದ್‌ಯನ್‌ನೆಡೆಗೆ ತಿರುಗಿದಾಗ ಆತ ಹೇಳಿದರು: 'ನನ್ನ ರಬ್ ನನ್ನನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸಲೂಬಹುದು'.

وَلَمَّا تَوَجَّهَ تِلۡقَآءَ مَدۡيَنَ قَالَ عَسَىٰ رَبِّيٓ
أَن يَهۡدِيَنِي سَوَآءَ ٱلسَّبِيلِ ٢٢

---

1 ನೆರವನ್ನು ಯಾಚಿಸಿದ ಇಸ್ರಾಈಲಿ ವಂಶಜನನ್ನು ಓರ್ವ ಕಿಡಿಗೇಡಿಯೆಂಬ ನೆಲೆಯಲ್ಲಿ ಮೂಸಾ(عَلَيْهِ السَّلَام)ರವರು ಆಕ್ಷೇಪಿಸಿದರೂ ಸಮಾನ ಶತ್ರುವಿನ ವಿರುದ್ಧ ಅವನಿಗೆ ನೆರವನ್ನು ನೀಡಲು ಮೂಸಾ(عَلَيْهِ السَّلَام)ತೀರ್ಮಾನಿಸಿದರು.

2 ಇದನ್ನು ಹೇಳಿದ್ದು ಇಸ್ರಾಈಲ್ ಜನಾಂಗದವನೇ ಆಗಿದ್ದನೆಂದು ಹೆಚ್ಚಿನ ವ್ಯಾಖ್ಯಾನಕಾರರೂ ಅಭಿಪ್ರಾಯಪಡುತ್ತಾರೆ. ಮೂಸಾ(عَلَيْهِ السَّلَام)ರವರ ಆಕ್ಷೇಪವನ್ನು ಆಲಿಸಿದಾಗ ಅವನು ಮೂಸಾ(عَلَيْهِ السَّلَام)ರವರು ತನ್ನನ್ನೇ ಕೊಲ್ಲಲು ಬರುತ್ತಿದ್ದಾರೆಂದು ತಪ್ಪುಕಲ್ಪನೆಗೊಳಗಾಗಿ ಅವನು ಹೀಗೆ ಹೇಳಿದನೆಂದು ಆ ವ್ಯಾಖ್ಯಾನಕಾರರು ಹೇಳಿದ್ದಾರೆ. ಯಾಕೆಂದರೆ ಅದರ ಹಿಂದಿನ ದಿನ ಕೊಲೆಗೈದುದು ಮೂಸಾ(عَلَيْهِ السَّلَام)ರವರಾಗಿದ್ದರು ಎಂಬುದನ್ನು ತಿಳಿಯಲು ಆ ಕಿಬ್ತಿಗೆ ಸಾಧ್ಯವಿಲ್ಲವೆಂಬುದನ್ನು ಅವರು ತಮ್ಮ ವಾದಕ್ಕೆ ಪುರಾವೆಯಾಗಿ ಸೂಚಿಸುತ್ತಾರೆ. ಇದು ಕಿಬ್ತಿಯ ಮಾತೆಂದು ಅಭಿಪ್ರಾಯ ಪಟ್ಟವರೂ ಇದ್ದಾರೆ. ಈ ಮಾತುಕತೆಯ ಮೂಲಕ ಕೊಲೆಗೈದುದು ಮೂಸಾ(عَلَيْهِ السَّلَام) ರವರಾಗಿದ್ದರು ಎಂಬ ವಾರ್ತೆಯು ನಗರದಾದ್ಯಂತ ಹಬ್ಬಿತು.

3 ಮೂಸಾ(عَلَيْهِ السَّلَام)ರವರ ಹಿತಾಕಾಂಕ್ಷಿಯಾಗಿದ್ದ ಈ ವ್ಯಕ್ತಿಯು ಕಿಬ್ತೀ ಜನಾಂಗಕ್ಕೆ ಸೇರಿದವನಾಗಿದ್ದನೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

23. ಮದ್‌ಯನ್‌ನಲ್ಲಿರುವ ಜಲಾಶಯದ ಬಳಿಗೆ ಬಂದಾಗ ಅಲ್ಲಿ ಆಡುಗಳಿಗೆ ನೀರುಣಿಸುತ್ತಿರುವ ಒಂದು ಗುಂಪು ಜನರನ್ನು ಅವರು ಕಂಡರು. ಅವರ ಈಚೆ ಬದಿಯಲ್ಲಿ (ತಮ್ಮ ಆಡಿನ ಮಂದೆಯನ್ನು) ತಡೆದು ನಿಲ್ಲಿಸಿರುವ ಇಬ್ಬರು ಸ್ತ್ರೀಯರನ್ನೂ ಕಂಡರು. ಅವರು ಕೇಳಿದರು: 'ನಿಮ್ಮ ವಿಷಯವೇನು?' ಯುವತಿಯರು ಹೇಳಿದರು: 'ಕುರುಬರು (ಆಡುಗಳಿಗೆ ನೀರುಣಿಸಿ) ಮರಳಿ ಕೊಂಡೊಯ್ಯುವ ತನಕ ನಮಗೆ ನೀರುಣಿಸಲಾಗದು. ನಮ್ಮ ತಂದೆ ಒಬ್ಬ ವಯೋವೃದ್ಧರಾಗಿರುವರು'.

وَلَمَّا وَرَدَ مَآءَ مَدۡيَنَ وَجَدَ عَلَيۡهِ أُمَّةٗ مِّنَ ٱلنَّاسِ يَسۡقُونَ وَوَجَدَ مِن دُونِهِمُ ٱمۡرَأَتَيۡنِ تَذُودَانِۖ قَالَ مَا خَطۡبُكُمَاۖ قَالَتَا لَا نَسۡقِي حَتَّىٰ يُصۡدِرَ ٱلرِّعَآءُۖ وَأَبُونَا شَيۡخٞ كَبِيرٞ ٢٣

24. ಆಗ ಆತ(ಮೂಸಾ) ಅವರ ಪರವಾಗಿ (ಅವರ ಆಡುಗಳಿಗೆ) ನೀರುಣಿಸಿದರು. ತರುವಾಯ ಅವರು ನೆರಳಿನೆಡೆಗೆ ಸರಿದು ಕುಳಿತು ಪ್ರಾರ್ಥಿಸಿದರು: 'ಓ ನನ್ನ ರಬ್! ನೀನು ನನಗೆ ದಯಪಾಲಿಸುವ ಯಾವುದೇ ಒಳಿತಿಗೂ ನಾನು ಅವಶ್ಯಕತೆಯುಳ್ಳವನಾಗಿರುವೆನು.

فَسَقَىٰ لَهُمَا ثُمَّ تَوَلَّىٰٓ إِلَى ٱلظِّلِّ فَقَالَ رَبِّ إِنِّي لِمَآ أَنزَلۡتَ إِلَيَّ مِنۡ خَيۡرٖ فَقِيرٞ ٢٤

25. ಆಗ ಆ ಇಬ್ಬರು ಯುವತಿಯರ ಪೈಕಿ ಒಬ್ಬಳು ಅವರ ಬಳಿಗೆ ನಾಚಿಕೆಯಿಂದ ನಡೆಯುತ್ತಾ ಬಂದು ಹೇಳಿದಳು: 'ತಾವು ನಮ್ಮ ಪರವಾಗಿ (ಆಡುಗಳಿಗೆ) ನೀರುಣಿಸಿರುವುದರ ಪ್ರತಿಫಲವನ್ನು ತಮಗೆ ನೀಡುವ ಸಲುವಾಗಿ ನನ್ನ ತಂದೆ[1] ತಮ್ಮನ್ನು ಕರೆಯುತ್ತಿರುವರು'. ತರುವಾಯ ಮೂಸಾ ಅವರ ತಂದೆಯ ಬಳಿಗೆ ಹೋಗಿ ತನ್ನ ಕಥೆಯನ್ನು ಅವರಿಗೆ ವಿವರಿಸಿಕೊಟ್ಟಾಗ ಅವರು ಹೇಳಿದರು: 'ತಾವು ಭಯಪಡದಿರಿ! ಅಕ್ರಮಿಗಳಾದ ಆ ಜನರಿಂದ ತಾವು ಪಾರಾಗಿರುವಿರಿ'.

فَجَآءَتۡهُ إِحۡدَىٰهُمَا تَمۡشِي عَلَى ٱسۡتِحۡيَآءٖ قَالَتۡ إِنَّ أَبِي يَدۡعُوكَ لِيَجۡزِيَكَ أَجۡرَ مَا سَقَيۡتَ لَنَاۚ فَلَمَّا جَآءَهُۥ وَقَصَّ عَلَيۡهِ ٱلۡقَصَصَ قَالَ لَا تَخَفۡۖ نَجَوۡتَ مِنَ ٱلۡقَوۡمِ ٱلظَّٰلِمِينَ ٢٥

26. ಆ ಇಬ್ಬರು ಯುವತಿಯರಲ್ಲಿ ಒಬ್ಬಳು ಹೇಳಿದಳು: 'ಓ ತಂದೆಯವರೇ! ಇವರನ್ನು ನೌಕರನನ್ನಾಗಿ ಮಾಡಿಕೊಳ್ಳಿರಿ. ಖಂಡಿತವಾಗಿಯೂ ತಾವು

قَالَتۡ إِحۡدَىٰهُمَا يَٰٓأَبَتِ ٱسۡتَـٔۡجِرۡهُۖ إِنَّ خَيۡرَ مَنِ ٱسۡتَـٔۡجَرۡتَ ٱلۡقَوِيُّ ٱلۡأَمِينُ ٢٦

1 ಆ ಯುವತಿಯರ ತಂದೆಯು ಪ್ರವಾದಿ ಶುಐಬ್(عَلَيۡهِ السَّلَام) ಆಗಿದ್ದರೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

ನೌಕರನನ್ನಾಗಿ ಮಾಡಿಕೊಳ್ಳುವವರಲ್ಲಿ ಬಲಿಷ್ಠನೂ, ಪ್ರಾಮಾಣಿಕನೂ ಆಗಿರುವ ವ್ಯಕ್ತಿ ಅತ್ಯುತ್ತಮನಾಗಿರುವನು'.

27. ಅವರು (ತಂದೆ) ಹೇಳಿದರು: 'ತಾವು ಎಂಟು ವರ್ಷ ನನಗಾಗಿ ನೌಕರಿ ಮಾಡುವಿರಿ ಎಂಬ ನಿಬಂಧನೆಯ ಮೇರೆಗೆ ನನ್ನ ಈ ಇಬ್ಬರು ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ತಮಗೆ ವಿವಾಹ ಮಾಡಿ ಕೊಡಲು ನಾನು ಇಚ್ಛಿಸುತ್ತಿರುವೆನು. ತಾವು ಹತ್ತು ವರ್ಷಗಳನ್ನು ಪೂರ್ತಿ ಮಾಡುವುದಾದರೆ ಅದು ತಮ್ಮ ಇಚ್ಛೆಗೆ ಬಿಟ್ಟದ್ದಾಗಿದೆ. ತಮ್ಮನ್ನು ಕಷ್ಟಕ್ಕೀಡು ಮಾಡಲು ನಾನು ಬಯಸುವುದಿಲ್ಲ. ಅಲ್ಲಾಹು ಇಚ್ಛಿಸಿದರೆ ತಾವು ನನ್ನನ್ನು ಸಜ್ಜನರ ಪೈಕಿ ಸೇರಿದವನಾಗಿ ಕಾಣುವಿರಿ'.

قَالَ إِنِّيٓ أُرِيدُ أَنۡ أُنكِحَكَ إِحۡدَى ٱبۡنَتَيَّ هَٰتَيۡنِ عَلَىٰٓ أَن تَأۡجُرَنِي ثَمَٰنِيَ حِجَجٖۖ فَإِنۡ أَتۡمَمۡتَ عَشۡرٗا فَمِنۡ عِندِكَۖ وَمَآ أُرِيدُ أَنۡ أَشُقَّ عَلَيۡكَۚ سَتَجِدُنِيٓ إِن شَآءَ ٱللَّهُ مِنَ ٱلصَّٰلِحِينَ ٢٧

28. ಆತ(ಮೂಸಾ) ಹೇಳಿದರು: 'ಇದು ನನ್ನ ಮತ್ತು ತಮ್ಮ ಮಧ್ಯೆಯಿರುವ ನಿಶ್ಚಯವಾಗಿದೆ. ಇವೆರಡು ಅವಧಿಗಳಲ್ಲಿ ನಾನು ಯಾವುದನ್ನು ಪೂರ್ತಿ ಮಾಡಿದರೂ ತಮಗೆ ನನ್ನ ಮೇಲೆ ದ್ವೇಷ ಉಂಟಾಗಬಾರದು. ನಾವು ಹೇಳುತ್ತಿರುವುದಕ್ಕೆ ಅಲ್ಲಾಹು ಸಾಕ್ಷಿಯಾಗಿರುವನು'.

قَالَ ذَٰلِكَ بَيۡنِي وَبَيۡنَكَۖ أَيَّمَا ٱلۡأَجَلَيۡنِ قَضَيۡتُ فَلَا عُدۡوَٰنَ عَلَيَّۖ وَٱللَّهُ عَلَىٰ مَا نَقُولُ وَكِيلٞ ٢٨

29. ಹೀಗೆ ಮೂಸಾ ಆ ಅವಧಿಯನ್ನು ಪೂರ್ತಿ ಮಾಡಿ ತಮ್ಮ ಕುಟುಂಬ ಸಮೇತ ಹೊರಟಾಗ ಪರ್ವತದ ಭಾಗದಿಂದ ಅವರು ಬೆಂಕಿಯನ್ನು ಕಂಡರು. ಅವರು ತಮ್ಮ ಕುಟುಂಬದೊಂದಿಗೆ ಹೇಳಿದರು: 'ನೀವು ಇಲ್ಲೇ ನಿಲ್ಲಿರಿ. ನಾನೊಂದು ಬೆಂಕಿಯನ್ನು ಕಂಡಿರುವೆನು. ಅಲ್ಲಿಂದ ಏನಾದರೂ ಮಾಹಿತಿಯನ್ನೋ ಅಥವಾ ಒಂದು ಪಂಜನ್ನೋ ನಾನು ನಿಮ್ಮ ಬಳಿಗೆ ತರುವೆನು. ನಿಮಗೆ ಚಳಿಕಾಯಿಸಬಹುದು'.

۞فَلَمَّا قَضَىٰ مُوسَى ٱلۡأَجَلَ وَسَارَ بِأَهۡلِهِۦٓ ءَانَسَ مِن جَانِبِ ٱلطُّورِ نَارٗاۖ قَالَ لِأَهۡلِهِ ٱمۡكُثُوٓاْ إِنِّيٓ ءَانَسۡتُ نَارٗا لَّعَلِّيٓ ءَاتِيكُم مِّنۡهَا بِخَبَرٍ أَوۡ جَذۡوَةٖ مِّنَ ٱلنَّارِ لَعَلَّكُمۡ تَصۡطَلُونَ ٢٩

30. ತರುವಾಯ ಅವರು ಅದರ ಬಳಿಗೆ ಬಂದಾಗ ಆ ಅನುಗ್ರಹೀತ ಪ್ರದೇಶದಲ್ಲಿರುವ ಕಣಿವೆಯ

فَلَمَّآ أَتَىٰهَا نُودِيَ مِن شَٰطِيِٕ ٱلۡوَادِ ٱلۡأَيۡمَنِ

فِي ٱلۡبُقۡعَةِ ٱلۡمُبَٰرَكَةِ مِنَ ٱلشَّجَرَةِ أَن يَٰمُوسَىٰٓ إِنِّيٓ أَنَا ٱللَّهُ رَبُّ ٱلۡعَٰلَمِينَ ٣٠

ಬಲಭಾಗದಿಂದ, ಒಂದು ವೃಕ್ಷದಿಂದ 'ಓ ಮೂಸಾ! ಖಂಡಿತವಾಗಿಯೂ ನಾನು ಸರ್ವಲೋಕಗಳ ರಬ್ಬಾದ ಅಲ್ಲಾಹುವಾಗಿರುವೆನು' ಎಂದು ಕೂಗಿ ಕರೆಯಲಾಯಿತು.

وَأَنۡ أَلۡقِ عَصَاكَۚ فَلَمَّا رَءَاهَا تَهۡتَزُّ كَأَنَّهَا جَآنّٞ وَلَّىٰ مُدۡبِرٗا وَلَمۡ يُعَقِّبۡۚ يَٰمُوسَىٰٓ أَقۡبِلۡ وَلَا تَخَفۡۖ إِنَّكَ مِنَ ٱلۡأٓمِنِينَ ٣١

**31.** 'ತಾವು ತಮ್ಮ ಬೆತ್ತವನ್ನು ಕೆಳಗೆ ಹಾಕಿರಿ'. ತರುವಾಯ ಅದೊಂದು ಸರ್ಪವೇನೋ ಎಂಬಂತೆ ಒದ್ದಾಡುತ್ತಿರುವುದನ್ನು ಕಂಡಾಗ ಆತ(ಮೂಸಾ) ಹಿಂದಕ್ಕೆ ತಿರುಗಿ ಓಡಿದರು. ಅವರು ತಿರುಗಿ ನೋಡಲೂ ಇಲ್ಲ. ಅಲ್ಲಾಹು ಹೇಳಿದನು: 'ಓ ಮೂಸಾ! ಮುಂದೆ ಬನ್ನಿರಿ! ತಾವು ಭಯಪಡದಿರಿ. ಖಂಡಿತವಾಗಿಯೂ ತಾವು ಸುರಕ್ಷಿತರಾಗಿರುವವರಲ್ಲಿ ಸೇರಿರುವಿರಿ.

ٱسۡلُكۡ يَدَكَ فِي جَيۡبِكَ تَخۡرُجۡ بَيۡضَآءَ مِنۡ غَيۡرِ سُوٓءٖ وَٱضۡمُمۡ إِلَيۡكَ جَنَاحَكَ مِنَ ٱلرَّهۡبِۖ فَذَٰنِكَ بُرۡهَٰنَانِ مِن رَّبِّكَ إِلَىٰ فِرۡعَوۡنَ وَمَلَإِيْهِۦٓۚ إِنَّهُمۡ كَانُواْ قَوۡمٗا فَٰسِقِينَ ٣٢

**32.** ತಾವು ತಮ್ಮ ಕೈಯನ್ನು ಅಂಗಿಯ ಕಂಕುಳದೊಳಗೆ ತೂರಿಸಿರಿ. ಅದು ಯಾವುದೇ ಕೇಡೂ ಇಲ್ಲದೆ ಬೆಳ್ಳಗಾಗಿ ಹೊರಬರುವುದು. ತಾವು ಭಯದಿಂದ ಮುಕ್ತಿ ಪಡೆಯುವ ಸಲುವಾಗಿ ತಮ್ಮ ಪಾರ್ಶ್ವವನ್ನು ತಮ್ಮ ದೇಹಕ್ಕೆ ಸೇರಿಸಿ ಹಿಡಿಯಿರಿ.[1] ಇವೆರಡೂ[2] ಫಿರ್‌ಔನ್ ಮತ್ತು ಅವನ ಪ್ರಮುಖರ ಬಳಿಗೆ ತಮ್ಮ ರಬ್‌ನ ವತಿಯಿಂದಿರುವ ಎರಡು ಪುರಾವೆಗಳಾಗಿವೆ. ಖಂಡಿತವಾಗಿಯೂ ಅವರು ಧಿಕ್ಕಾರಿಗಳಾದ ಒಂದು ಜನತೆಯಾಗಿರುವರು'.

قَالَ رَبِّ إِنِّي قَتَلۡتُ مِنۡهُمۡ نَفۡسٗا فَأَخَافُ أَن يَقۡتُلُونِ ٣٣

**33.** ಅವರು ಹೇಳಿದರು: 'ಓ ನನ್ನ ರಬ್! ನಾನು ಅವರಲ್ಲೊಬ್ಬನನ್ನು ಕೊಂದಿರುವೆನು. ಆದ್ದರಿಂದ ಅವರು ನನ್ನನ್ನು ಕೊಂದು ಬಿಡುವರೆಂದು ನಾನು ಭಯಪಡುತ್ತಿರುವೆನು'.

---

1 ಕೈ ಬೆಳ್ಳಗಾದುದನ್ನು ಕಾಣುವಾಗ ಭಯವಾದರೆ ಅಂಗಿಯ ವಕ್ಷಸ್ಥಳದ ಮೂಲಕ ಕೈಯನ್ನು ಕಂಕುಳಕ್ಕೆ ಸೇರಿಸಿ ಹಿಡಿಯಿರಿ. ಆಗ ಅದು ಪೂರ್ವ ಸ್ಥಿತಿಗೆ ಮರಳುವುದು. ಇದು ಈ ಸೂಕ್ತಿಯ ತಾತ್ಪರ್ಯವಾಗಿದೆ ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಯಾವುದೇ ವಿಷಯದ ಬಗ್ಗೆ ಭಯವುಂಟಾದರೂ ಕೈಯನ್ನು ಕಂಕುಳಕ್ಕೆ ಸೇರಿಸಿ ಹಿಡಿಯುವ ಒಂದು ಸಾಮಾನ್ಯ ಸಲಹೆ ಈ ಸೂಕ್ತಿಯಲ್ಲಿ ಅಡಕವಾಗಿದೆಯೆಂದು ಇತರ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

2 ಬೆಳ್ಳಗೆ ಮಿಂಚುವ ಕೈ ಮತ್ತು ಸರ್ಪವಾಗಿ ಮಾರ್ಪಡುವ ಬೆತ್ತ ಎಂಬ ಎರಡು ದೃಷ್ಟಾಂತಗಳು.

34. ನನ್ನ ಸಹೋದರ ಹಾರೂನ್ ನನಗಿಂತಲೂ ಸ್ಪಷ್ಟವಾಗಿ ಮಾತನಾಡುವವನಾಗಿರುವನು. ಆದ್ದರಿಂದ ನನ್ನ ಸತ್ಯತೆಯನ್ನು ಸ್ಥಾಪಿಸುವ ಒಬ್ಬ ಸಹಾಯಕನಾಗಿ ಅವನನ್ನು ನನ್ನೊಂದಿಗೆ ಕಳುಹಿಸು. ಅವರು ನನ್ನನ್ನು ನಿಷೇಧಿಸುವರೆಂದು ಖಂಡಿತವಾಗಿಯೂ ನಾನು ಭಯಪಡುತ್ತಿರುವೆನು'.

وَأَخِي هَٰرُونُ هُوَ أَفۡصَحُ مِنِّي لِسَانٗا فَأَرۡسِلۡهُ مَعِيَ رِدۡءٗا يُصَدِّقُنِيٓۖ إِنِّيٓ أَخَافُ أَن يُكَذِّبُونِ ٣٤

35. ಅವನು (ಅಲ್ಲಾಹು) ಹೇಳಿದನು: 'ತಮ್ಮ ಸಹೋದರನ ಮೂಲಕ ನಾವು ತಮ್ಮ ಕೈಯನ್ನು ಬಲಪಡಿಸುವೆವು ಮತ್ತು ನಿಮಗಿಬ್ಬರಿಗೂ ನಾವು ಅಧಿಕೃತ ಶಕ್ತಿಯನ್ನು ನೀಡುವೆವು. ಆದ್ದರಿಂದ ಅವರು ನಿಮ್ಮ ಬಳಿಗೆ ತಲುಪಲಾರರು. ನಮ್ಮ ದೃಷ್ಟಾಂತಗಳ ಕಾರಣದಿಂದಾಗಿ ನೀವು ಮತ್ತು ನಿಮ್ಮನ್ನು ಅನುಸರಿಸುವವರು ಜಯಶಾಲಿಗಳಾಗುವರು'.

قَالَ سَنَشُدُّ عَضُدَكَ بِأَخِيكَ وَنَجۡعَلُ لَكُمَا سُلۡطَٰنٗا فَلَا يَصِلُونَ إِلَيۡكُمَا بِـَٔايَٰتِنَآۚ أَنتُمَا وَمَنِ ٱتَّبَعَكُمَا ٱلۡغَٰلِبُونَ ٣٥

36. ತರುವಾಯ ನಮ್ಮ ಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಮೂಸಾ ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಇದೊಂದು ಕೃತಕವಾಗಿ ರಚಿಸಲಾಗಿರುವ ಮಾಂತ್ರಿಕತೆಯಲ್ಲದೆ ಇನ್ನೇನೂ ಅಲ್ಲ. ನಮ್ಮ ಪೂರ್ವಿಕರಾದ ಪಿತಾಮಹರಲ್ಲಿ ಇಂತಹ ಒಂದು ವಿಷಯದ ಬಗ್ಗೆ ನಾವು ಕೇಳಿಯೇ ಇಲ್ಲ'.

فَلَمَّا جَآءَهُم مُّوسَىٰ بِـَٔايَٰتِنَا بَيِّنَٰتٖ قَالُواْ مَا هَٰذَآ إِلَّا سِحۡرٞ مُّفۡتَرٗى وَمَا سَمِعۡنَا بِهَٰذَا فِيٓ ءَابَآئِنَا ٱلۡأَوَّلِينَ ٣٦

37. ಮೂಸಾ ಹೇಳಿದರು: 'ತನ್ನ ವತಿಯ ಸನ್ಮಾರ್ಗದೊಂದಿಗೆ ಬಂದವರು ಯಾರು ಮತ್ತು ಈ ಜಗತ್ತಿನ ಪರ್ಯಾವಸಾನವು ಯಾರ ಪಾಲಿಗೆ ಅನುಕೂಲಕರವಾಗಿರುವುದು ಎಂದು ರಬ್ ಚೆನ್ನಾಗಿ ಅರಿತಿರುವನು. ಅಕ್ರಮಿಗಳು ಖಂಡಿತವಾಗಿಯೂ ಯಶಸ್ಸುಗಳಿಸಲಾರರು'.

وَقَالَ مُوسَىٰ رَبِّيٓ أَعۡلَمُ بِمَن جَآءَ بِٱلۡهُدَىٰ مِنۡ عِندِهِۦ وَمَن تَكُونُ لَهُۥ عَٰقِبَةُ ٱلدَّارِۖ إِنَّهُۥ لَا يُفۡلِحُ ٱلظَّٰلِمُونَ ٣٧

38. ಫಿರ್‌ಔನ್ ಹೇಳಿದನು: 'ಓ ಪ್ರಮುಖರೇ! ನಿಮಗೆ ನನ್ನ ಹೊರತು ಅನ್ಯ ಆರಾಧ್ಯರಿರುವುದಾಗಿ

وَقَالَ فِرۡعَوۡنُ يَٰٓأَيُّهَا ٱلۡمَلَأُ مَا عَلِمۡتُ

لَكُم مِّنْ إِلَـٰهٍ غَيْرِى فَأَوْقِدْ لِى يَـٰهَـٰمَـٰنُ
عَلَى ٱلطِّينِ فَٱجْعَل لِّى صَرْحًا لَّعَلِّىٓ
أَطَّلِعُ إِلَىٰٓ إِلَـٰهِ مُوسَىٰ وَإِنِّى لَأَظُنُّهُۥ مِنَ
ٱلْكَـٰذِبِينَ ٣٨

ನಾನು ಅರಿತಿಲ್ಲ. ಆದ್ದರಿಂದ ಓ ಹಾಮಾನ್![1] ನನಗೆ ಜೇಡಿಮಣ್ಣಿನ (ಇಟ್ಟಿಗೆಗಳನ್ನು) ಸುಟ್ಟುಕೊಡು. ತರುವಾಯ ನನಗೊಂದು ಉನ್ನತ ಸೌಧವನ್ನು ನಿರ್ಮಿಸಿಕೊಡು. ನಾನು ಮೂಸಾನ ಆರಾಧ್ಯನೆಡೆಗೆ ಇಣುಕಿ ನೋಡಬೇಕು. ಖಂಡಿತವಾಗಿಯೂ ಅವನು ಸುಳ್ಳು ನುಡಿಯುವವರಲ್ಲಿ ಸೇರಿದವನೆಂದು ನಾನು ಭಾವಿಸುತ್ತಿರುವೆನು'.

وَٱسْتَكْبَرَ هُوَ وَجُنُودُهُۥ فِى ٱلْأَرْضِ بِغَيْرِ
ٱلْحَقِّ وَظَنُّوٓا۟ أَنَّهُمْ إِلَيْنَا لَا يُرْجَعُونَ ٣٩

39. ಅವನು ಮತ್ತು ಅವನ ಸೈನ್ಯಗಳು ಭೂಮಿಯಲ್ಲಿ ಅನ್ಯಾಯವಾಗಿ ಅಹಂಕಾರಪಟ್ಟರು ಮತ್ತು ಅವರನ್ನು ನಮ್ಮ ಬಳಿಗೆ ಮರಳಿ ತರಲಾಗುವುದಿಲ್ಲವೆಂದು ಭಾವಿಸಿದರು.

فَأَخَذْنَـٰهُ وَجُنُودَهُۥ فَنَبَذْنَـٰهُمْ فِى ٱلْيَمِّ ۖ
فَٱنظُرْ كَيْفَ كَانَ عَـٰقِبَةُ ٱلظَّـٰلِمِينَ ٤٠

40. ಆದ್ದರಿಂದ ನಾವು ಅವನನ್ನೂ, ಅವನ ಸೈನ್ಯವನ್ನೂ ಹಿಡಿದು ಸಮುದ್ರಕ್ಕೆಸೆದೆವು. ಆಗ ಆ ಅಕ್ರಮಿಗಳ ಪರ್ಯಾವಸಾನವು ಹೇಗಿತ್ತೆಂಬುದನ್ನು ತಾವು ನೋಡಿರಿ.

وَجَعَلْنَـٰهُمْ أَئِمَّةً يَدْعُونَ إِلَى ٱلنَّارِ ۖ وَيَوْمَ
ٱلْقِيَـٰمَةِ لَا يُنصَرُونَ ٤١

41. ನಾವು ಅವರನ್ನು ನರಕಾಗ್ನಿಯೆಡೆಗೆ ಆಹ್ವಾನಿಸುವ ನಾಯಕರನ್ನಾಗಿ ಮಾಡಿದೆವು. ಪುನರುತ್ಥಾನದ ದಿನದಂದು ಅವರಿಗೆ ಯಾವುದೇ ಸಹಾಯವನ್ನು ನೀಡಲಾಗದು.

وَأَتْبَعْنَـٰهُمْ فِى هَـٰذِهِ ٱلدُّنْيَا لَعْنَةً ۖ وَيَوْمَ
ٱلْقِيَـٰمَةِ هُم مِّنَ ٱلْمَقْبُوحِينَ ٤٢

42. ಈ ಐಹಿಕ ಜೀವನದಲ್ಲಿ ನಾವು ಅವರ ಹಿಂದೆ ಶಾಪವನ್ನು ಕಳುಹಿಸಿರುವೆವು. ಪುನರುತ್ಥಾನದ ದಿನದಂದು ಅವರು ನಿಕೃಷ್ಟರಲ್ಲಿ ಸೇರಿದವರಾಗುವರು.

وَلَقَدْ ءَاتَيْنَا مُوسَى ٱلْكِتَـٰبَ مِنۢ بَعْدِ مَآ
أَهْلَكْنَا ٱلْقُرُونَ ٱلْأُولَىٰ بَصَآئِرَ لِلنَّاسِ
وَهُدًى وَرَحْمَةً لَّعَلَّهُمْ يَتَذَكَّرُونَ ٤٣

43. ಪೂರ್ವ ತಲೆಮಾರುಗಳನ್ನು ನಾಶ ಮಾಡಿದ ಬಳಿಕ ಜನರಿಗೆ ಒಳದೃಷ್ಟಿಯನ್ನು ನೀಡುವ ಪುರಾವೆಗಳಾಗಿ, ಮಾರ್ಗದರ್ಶಿಯಾಗಿ ಮತ್ತು ಕಾರುಣ್ಯವಾಗಿ ನಾವು ಮೂಸಾರಿಗೆ ಗ್ರಂಥವನ್ನು ನೀಡಿದೆವು. ಅವರು ಚಿಂತಿಸಿ ಗ್ರಹಿಸಲೂ ಬಹುದೆಂದು.

1 ಹಾಮಾನ್ ಫಿರ್‌ಔನನ ಮಂತ್ರಿಯಾಗಿದ್ದನು.

**44.** (ಓ ಪ್ರವಾದಿಯವರೇ!) ಮೂಸಾರಿಗೆ ನಾವು ಆಜ್ಞೆಯನ್ನು ವಹಿಸಿಕೊಟ್ಟ ಸಮಯದಲ್ಲಿ ಆ ಪಶ್ಚಿಮ ಬೆಟ್ಟದ ಪಾರ್ಶ್ವದಲ್ಲಿ ತಾವಿರಲಿಲ್ಲ. (ಆ ಘಟನೆಗೆ) ಸಾಕ್ಷಿಯಾದವರಲ್ಲೂ ತಾವಿರಲಿಲ್ಲ.

وَمَا كُنتَ بِجَانِبِ ٱلۡغَرۡبِيِّ إِذۡ قَضَيۡنَآ إِلَىٰ مُوسَى ٱلۡأَمۡرَ وَمَا كُنتَ مِنَ ٱلشَّٰهِدِينَ ٤٤

**45.** ಆದರೆ (ತರುವಾಯ) ನಾವು ಅನೇಕ ತಲೆಮಾರುಗಳನ್ನು ಬೆಳೆಸಿದೆವು. ಹೀಗೆ ಅವರ ಮೂಲಕ ಯುಗಗಳು ದೀರ್ಘಗೊಂಡವು. ಮದ್‌ಯನ್‌ನವರಿಗೆ ನಮ್ಮ ದೃಷ್ಟಾಂತಗಳನ್ನು ಓದಿಕೊಡುತ್ತಾ ತಾವು ಅವರೊಂದಿಗೆ ವಾಸವಾಗಿರಲಿಲ್ಲ.[1] ಆದರೆ ನಾವು ಸಂದೇಶವಾಹಕರನ್ನು ಕಳುಹಿಸುವವರಾಗಿರುವೆವು.

وَلَٰكِنَّآ أَنشَأۡنَا قُرُونٗا فَتَطَاوَلَ عَلَيۡهِمُ ٱلۡعُمُرُۚ وَمَا كُنتَ ثَاوِيٗا فِيٓ أَهۡلِ مَدۡيَنَ تَتۡلُواْ عَلَيۡهِمۡ ءَايَٰتِنَا وَلَٰكِنَّا كُنَّا مُرۡسِلِينَ ٤٥

**46.** ನಾವು (ಮೂಸಾರನ್ನು) ಕರೆದ ಸಂದರ್ಭದಲ್ಲಿ ತಾವು ಆ ಪರ್ವತದ ಪಾರ್ಶ್ವದಲ್ಲಿರಲಿಲ್ಲ. ಆದರೆ ತಮ್ಮ ರಬ್‌ನ ವತಿಯ ಕಾರುಣ್ಯದಿಂದ (ಇವೆಲ್ಲವನ್ನೂ ತಮಗೆ ತಿಳಿಸಿಕೊಡಲಾಗುತ್ತಿದೆ). ತಮಗಿಂತ ಮುಂಚೆ ಯಾವುದೇ ಮುನ್ನೆಚ್ಚರಿಕೆಗಾರರೂ ಬರದಂತಹ ಒಂದು ಜನತೆಗೆ[2] ತಾವು ಮುನ್ನೆಚ್ಚರಿಕೆ ನೀಡುವ ಸಲುವಾಗಿ. ಅವರು ಚಿಂತಿಸಿ ಗ್ರಹಿಸಲೂಬಹುದು.

وَمَا كُنتَ بِجَانِبِ ٱلطُّورِ إِذۡ نَادَيۡنَا وَلَٰكِن رَّحۡمَةٗ مِّن رَّبِّكَ لِتُنذِرَ قَوۡمٗا مَّآ أَتَىٰهُم مِّن نَّذِيرٖ مِّن قَبۡلِكَ لَعَلَّهُمۡ يَتَذَكَّرُونَ ٤٦

**47.** ಅವರ ಕೈಗಳು ಪೂರ್ವಭಾವಿಯಾಗಿ ಮಾಡಿಟ್ಟಿರುವುದರ ಫಲವಾಗಿ ಅವರಿಗೇನಾದರೂ ವಿಪತ್ತು ಬಾಧಿಸಿದರೆ 'ಓ ನಮ್ಮ ರಬ್! ನಮ್ಮ ಬಳಿಗೆ ಒಬ್ಬ ಸಂದೇಶವಾಹಕನನ್ನೇಕೆ

وَلَوۡلَآ أَن تُصِيبَهُم مُّصِيبَةُۢ بِمَا قَدَّمَتۡ أَيۡدِيهِمۡ فَيَقُولُواْ رَبَّنَا لَوۡلَآ أَرۡسَلۡتَ إِلَيۡنَا رَسُولٗا فَنَتَّبِعَ ءَايَٰتِكَ وَنَكُونَ

1 ಪ್ರವಾದಿ ಶುಐಬ್(عَلَيْهِ السَّلَامُ)ರವರ ಕಾಲದಲ್ಲಾಗಲಿ, ಮದ್ಯನ್ ನಿವಾಸಿಗಳ ನಡುವೆಯಾಗಲಿ ಜೀವಿಸಿರದ ಪ್ರವಾದಿ ಮುಹಮ್ಮದ್(صَلَّى اللَّهُ عَلَيْهِ وَسَلَّمَ)ರವರು ಮದ್ಯನ್‌ನ ಚಾರಿತ್ರಿಕ ಘಟನೆಗಳ ಕುರಿತು ಅತ್ಯಂತ ಕರಾರುವಾಕ್ಕಾಗಿ ಉಲ್ಲೇಖಿಸುತ್ತಿರುವುದು ಅವರಿಗೆ ದಿವ್ಯಸಂದೇಶವು ಲಭಿಸುತ್ತಿದೆ ಎಂಬುದಕ್ಕೆ ಪುರಾವೆಯಾಗಿ ಧಾರಾಳ ಸಾಕು. ತಾವು (ಮಕ್ಕಾ ನಿವಾಸಿಗಳಿಗೆ) ನಮ್ಮ ದೃಷ್ಟಾಂತಗಳನ್ನು ಓದಿಕೊಡುವಾಗ ಮದ್ಯನ್ ನಿವಾಸಿಗಳ ಮಧ್ಯೆ ತಾವು ವಾಸಿಸುತ್ತಿರಲಿಲ್ಲ ಎಂದು ಕೆಲವರು ಇದನ್ನು ವ್ಯಾಖ್ಯಾನಿಸಿದ್ದಾರೆ.

2 ಹೆಚ್ಚಿನ ವ್ಯಾಖ್ಯಾನಕಾರರು ನೀಡಿದ ಅರ್ಥವನ್ನೇ ಅನುವಾದದಲ್ಲಿ ನೀಡಲಾಗಿದೆ. ಇದರ ಪ್ರಕಾರ ಈ ಮೊದಲು ಯಾವುದೇ ಮುನ್ನೆಚ್ಚರಿಕೆಗಾರನನ್ನೂ ನಿಯೋಗಿಸಿರದ ಅರಬ್ ಜನತೆಗೆ ಎಚ್ಚರಿಕೆ ನೀಡುವುದಕ್ಕೋಸ್ಕರ ಮುಹಮ್ಮದ್(صَلَّى اللَّهُ عَلَيْهِ وَسَلَّمَ)ರನ್ನು ಕಳುಹಿಸಲಾಗಿದೆ ಎಂಬರ್ಥ ಬರುತ್ತದೆ. ಇನ್ನು ಕೆಲವರು 'ಮುಂಚೆ ಅವರಿಗೆ ಎಚ್ಚರಿಕೆ ನೀಡಲ್ಪಟ್ಟ ಅದೇ ವಿಚಾರದ ಕುರಿತು ನೀನು ಅವರಿಗೆ ಎಚ್ಚರಿಕೆ ನೀಡುವ ಸಲುವಾಗಿ' ಎಂದೂ ಅರ್ಥ ನೀಡಿದ್ದಾರೆ. 'ಮಾ' ಎಂಬ ಪದವನ್ನು ಎರಡೂ ರೀತಿಯಲ್ಲಿ ಬಳಸಲಾಗುವುದೇ ಇದಕ್ಕೆ ಕಾರಣ.

مِنَ ٱلْمُؤْمِنِينَ ﴿٤٧﴾

ಕಳುಹಿಸಲಿಲ್ಲ, ಹಾಗಿರುತ್ತಿದ್ದರೆ ನಾವು ನಿನ್ನ ವಚನಗಳನ್ನು ಅನುಸರಿಸುತ್ತಿದ್ದೆವು ಮತ್ತು ಸತ್ಯವಿಶ್ವಾಸಿಗಳೊಂದಿಗೆ ಸೇರಿದವರಾಗುತ್ತಿದ್ದೆವು' ಎಂದು ಅವರು ಹೇಳಲಾರರು ಎಂದಿರುತ್ತಿದ್ದರೆ (ನಾವು ತಮ್ಮನ್ನು ಸಂದೇಶವಾಹಕರನ್ನಾಗಿ ಕಳುಹಿಸುತ್ತಿರಲಿಲ್ಲ).[1]

فَلَمَّا جَآءَهُمُ ٱلْحَقُّ مِنْ عِندِنَا قَالُوا۟ لَوْلَآ أُوتِىَ مِثْلَ مَآ أُوتِىَ مُوسَىٰٓ ۚ أَوَلَمْ يَكْفُرُوا۟ بِمَآ أُوتِىَ مُوسَىٰ مِن قَبْلُ ۖ قَالُوا۟ سِحْرَانِ تَظَٰهَرَا وَقَالُوٓا۟ إِنَّا بِكُلٍّ كَٰفِرُونَ ﴿٤٨﴾

**48.** ಆದರೆ ನಮ್ಮ ವತಿಯ ಸತ್ಯವು (ಪ್ರವಾದಿಯವರ ಮೂಲಕ) ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಮೂಸಾರಿಗೆ ನೀಡಲಾಗಿರುವಂತಹ ದೃಷ್ಟಾಂತಗಳನ್ನು ಇವರಿಗೇಕೆ ನೀಡಲಾಗಿಲ್ಲ?' ಆದರೆ ಮುಂಚೆ ಮೂಸಾರಿಗೆ ನೀಡಲಾಗಿರುವುದನ್ನು ಅವರು ನಿಷೇಧಿಸಿಲ್ಲವೇ? ಅವರು ಹೇಳಿದರು: 'ಇವು ಪರಸ್ಪರ ಬೆಂಬಲ ನೀಡುವ ಎರಡು ಮಾಂತ್ರಿಕ ವಿದ್ಯೆಗಳಾಗಿವೆ'. ಅವರು ಹೇಳಿದರು: 'ನಾವು ಇವೆಲ್ಲವನ್ನೂ ನಿಷೇಧಿಸಿದವರಾಗಿರುವೆವು'.

قُلْ فَأْتُوا۟ بِكِتَٰبٍ مِّنْ عِندِ ٱللَّهِ هُوَ أَهْدَىٰ مِنْهُمَآ أَتَّبِعْهُ إِن كُنتُمْ صَٰدِقِينَ ﴿٤٩﴾

**49.** (ಓ ಪ್ರವಾದಿಯವರೇ!) ಹೇಳಿರಿ: ನೀವು ಅವೆರಡಕ್ಕಿಂತಲೂ ಹೆಚ್ಚು ಸನ್ಮಾರ್ಗವನ್ನು ತೋರಿಸುವ ಒಂದು ಗ್ರಂಥವನ್ನು ಅಲ್ಲಾಹುವಿನ ಬಳಿಯಿಂದ ತನ್ನಿರಿ. ಅದನ್ನು ನಾನು ಅನುಸರಿಸುವೆನು. ನೀವು ಸತ್ಯವಂತರಾಗಿದ್ದರೆ'.

فَإِن لَّمْ يَسْتَجِيبُوا۟ لَكَ فَٱعْلَمْ أَنَّمَا يَتَّبِعُونَ أَهْوَآءَهُمْ ۚ وَمَنْ أَضَلُّ مِمَّنِ ٱتَّبَعَ هَوَىٰهُ بِغَيْرِ هُدًى مِّنَ ٱللَّهِ ۚ إِنَّ ٱللَّهَ لَا يَهْدِى ٱلْقَوْمَ ٱلظَّٰلِمِينَ ﴿٥٠﴾

**50.** ಅವರು ತಮಗೆ ಉತ್ತರ ನೀಡದಿದ್ದರೆ ಅವರು ಅನುಸರಿಸುತ್ತಿರುವುದು ತಮ್ಮ ದೇಹೇಚ್ಛೆಗಳನ್ನು ಮಾತ್ರವಾಗಿದೆ ಎಂಬುದನ್ನು ಅರಿತುಕೊಳ್ಳಿರಿ. ಅಲ್ಲಾಹುವಿನ ವತಿಯ ಯಾವುದೇ ಮಾರ್ಗದರ್ಶನವೂ ಇಲ್ಲದೆ ದೇಹೇಚ್ಛೆಯನ್ನು ಅನುಸರಿಸಿದವನಿಗಿಂತ ದಾರಿಗೆಟ್ಟವನು ಇನ್ನಾರಿರುವನು? ಅಕ್ರಮಿಗಳಾಗಿರುವ ಜನರನ್ನು ಅಲ್ಲಾಹು ಖಂಡಿತವಾಗಿಯೂ ಸನ್ಮಾರ್ಗದಲ್ಲಿ ಸೇರಿಸಲಾರನು.

1 ನೈಜ ವಿಶ್ವಾಸಾಚಾರಗಳ ಕುರಿತು ತಿಳುವಳಿಕೆ ಕೊಡಲು ಯಾರೂ ಆಗಮಿಸದಿರುವುದರಿಂದ ನಾವು ಸತ್ಯವಿಶ್ವಾಸಿಗಳು ಮತ್ತು ಸಜ್ಜನರಾಗದೆ ಶಿಕ್ಷೆಗೆ ಅರ್ಹರಾಗಿಬಿಟ್ಟೆವು ಎಂದು ಆಪಾದನೆ ಮಾಡಲು ಯಾರಿಗೂ ಅವಕಾಶ ಸಿಗಬಾರದೆಂದು ಅಲ್ಲಾಹು ಸಂದೇಶವಾಹಕರನ್ನು ನಿಯೋಗಿಸಿದನು ಎಂದರ್ಥ.

۞ وَلَقَدْ وَصَّلْنَا لَهُمُ ٱلْقَوْلَ لَعَلَّهُمْ يَتَذَكَّرُونَ ٥١

51. ಅವರು ಚಿಂತಿಸಿ ಗ್ರಹಿಸುವುದಕ್ಕಾಗಿ ನಾವು ಅವರಿಗೆ ನಿರಂತರವಾಗಿ ವಚನವನ್ನು ತಲುಪಿಸುತ್ತಿದ್ದೆವು.(1)

ٱلَّذِينَ ءَاتَيْنَٰهُمُ ٱلْكِتَٰبَ مِن قَبْلِهِۦ هُم بِهِۦ يُؤْمِنُونَ ٥٢

52. ಇದಕ್ಕೆ ಮುಂಚೆ ನಾವು ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ಇದರಲ್ಲಿ ವಿಶ್ವಾಸವಿಡುವರು.

وَإِذَا يُتْلَىٰ عَلَيْهِمْ قَالُوٓا۟ ءَامَنَّا بِهِۦٓ إِنَّهُ ٱلْحَقُّ مِن رَّبِّنَآ إِنَّا كُنَّا مِن قَبْلِهِۦ مُسْلِمِينَ ٥٣

53. ಅವರಿಗೆ ಇದನ್ನು ಓದಿಕೊಡಲಾಗುವಾಗ ಅವರು ಹೇಳುವರು: 'ನಾವು ಇದರಲ್ಲಿ ವಿಶ್ವಾಸವಿಟ್ಟಿರುವೆವು. ಖಂಡಿತವಾಗಿಯೂ ಇದು ನಮ್ಮ ರಬ್‌ನ ವತಿಯ ಸತ್ಯವಾಗಿದೆ. ಖಂಡಿತವಾಗಿಯೂ ನಾವು ಇದಕ್ಕೆ ಮುಂಚೆಯೇ ಶರಣಾಗತರಾಗಿರುವೆವು'.

أُو۟لَٰٓئِكَ يُؤْتَوْنَ أَجْرَهُم مَّرَّتَيْنِ بِمَا صَبَرُوا۟ وَيَدْرَءُونَ بِٱلْحَسَنَةِ ٱلسَّيِّئَةَ وَمِمَّا رَزَقْنَٰهُمْ يُنفِقُونَ ٥٤

54. ಅವರು ಸಹನೆ ವಹಿಸಿರುವ ಫಲವಾಗಿ ಅವರಿಗೆ ಅವರ ಪ್ರತಿಫಲವನ್ನು ಇಮ್ಮಡಿಯಾಗಿ ನೀಡಲಾಗುವುದು. ಅವರು ಒಳಿತಿನ ಮೂಲಕ ಕೆಡುಕನ್ನು ತಡೆಯುವರು ಮತ್ತು ನಾವು ಅವರಿಗೆ ನೀಡಿದವುಗಳಿಂದ ವ್ಯಯಿಸುವರು.

وَإِذَا سَمِعُوا۟ ٱللَّغْوَ أَعْرَضُوا۟ عَنْهُ وَقَالُوا۟ لَنَآ أَعْمَٰلُنَا وَلَكُمْ أَعْمَٰلُكُمْ سَلَٰمٌ عَلَيْكُمْ لَا نَبْتَغِى ٱلْجَٰهِلِينَ ٥٥

55. ವ್ಯರ್ಥ ಮಾತುಗಳನ್ನು ಆಲಿಸಿದರೆ ಅವರು ಅದರಿಂದ ವಿಮುಖರಾಗುವರು. ಅವರು ಹೇಳುವರು: 'ನಮಗೆ ನಮ್ಮ ಕರ್ಮಗಳು ಮತ್ತು ನಿಮಗೆ ನಿಮ್ಮ ಕರ್ಮಗಳು. ನಿಮಗೆ ಸಲಾಮ್. ನಮಗೆ ಮೂರ್ಖರ ಅಗತ್ಯವಿಲ್ಲ'.

إِنَّكَ لَا تَهْدِى مَنْ أَحْبَبْتَ وَلَٰكِنَّ ٱللَّهَ يَهْدِى مَن يَشَآءُ ۚ وَهُوَ أَعْلَمُ بِٱلْمُهْتَدِينَ ٥٦

56. ಖಂಡಿತವಾಗಿಯೂ ತಾವು ಇಷ್ಟಪಡುವವರನ್ನು ಸನ್ಮಾರ್ಗದಲ್ಲಿ ಸೇರಿಸಲು ತಮಗೆ ಸಾಧ್ಯವಾಗಲಾರದು. ಆದರೆ ಅಲ್ಲಾಹು ತಾನಿಚ್ಛಿಸುವವರನ್ನು ಸನ್ಮಾರ್ಗದಲ್ಲಿ ಸೇರಿಸುವನು. ಸನ್ಮಾರ್ಗ ಪಡೆದವರ ಕುರಿತು ಅವನು ಚೆನ್ನಾಗಿ ಅರಿತಿರುವನು.(2)

---

1 ಆದರಣೀಯ ಕುರ್‌ಆನ್ ಅವತೀರ್ಣಗೊಳ್ಳಲು ಆರಂಭಿಸಿದಂದಿನಿಂದ ಅದು ಅವತೀರ್ಣಗೊಳ್ಳುತ್ತಲೇ ಇತ್ತು. ವಿವಿಧ ಭಾಗಗಳ ಅವತೀರ್ಣದ ಮಧ್ಯೆ ದೀರ್ಘಕಾಲದ ಅಂತರವೇನೂ ಇರುತ್ತಿರಲಿಲ್ಲ.

2 ಚಿಕ್ಕಂದಿನಿಂದಲೇ ಪ್ರವಾದಿ(ﷺ)ರಿಗೆ ನೆರವನ್ನು ನೀಡುತ್ತಿದ್ದ ನೀಡುತ್ತಿದ್ದ ಪಿತೃಸಹೋದರ ಅಬೂತಾಲಿಬ್‌ರನ್ನು

وَقَالُوٓاْ إِن نَّتَّبِعِ ٱلۡهُدَىٰ مَعَكَ نُتَخَطَّفۡ مِنۡ أَرۡضِنَآۚ أَوَلَمۡ نُمَكِّن لَّهُمۡ حَرَمًا ءَامِنٗا يُجۡبَىٰٓ إِلَيۡهِ ثَمَرَٰتُ كُلِّ شَيۡءٖ رِّزۡقٗا مِّن لَّدُنَّا وَلَٰكِنَّ أَكۡثَرَهُمۡ لَا يَعۡلَمُونَ ٥٧

57. 'ನಾವೇನಾದರೂ ತಮ್ಮೊಂದಿಗೆ ಸನ್ಮಾರ್ಗವನ್ನು ಹಿಂಬಾಲಿಸಿದರೆ ನಮ್ಮ ಊರಿನಿಂದ ನಾವು ಕಿತ್ತೊಗೆಯಲಾಗುವೆವು' ಎಂದು ಅವರು ಹೇಳಿದರು.(1) ಆದರೆ ನಾವು ಅವರಿಗೆ ನಿರ್ಭೀತಿಯುಳ್ಳ ಒಂದು ಪವಿತ್ರ ಕೇಂದ್ರವನ್ನು ಅಧೀನಗೊಳಿಸಿಕೊಡಲಿಲ್ಲವೇ? ಸರ್ವ ವಿಧ ಫಲಗಳನ್ನು ಅಲ್ಲಿಗೆ ಶೇಖರಿಸಿ ತರಲಾಗುತ್ತದೆ. ಅದು ನಮ್ಮ ವತಿಯ ಅನ್ನಾಧಾರವಾಗಿದೆ. ಆದರೆ ಅವರಲ್ಲಿ ಹೆಚ್ಚಿನವರೂ (ವಿಷಯವನ್ನು) ಅರ್ಥಮಾಡಿಕೊಳ್ಳಲಾರರು.(2)

وَكَمۡ أَهۡلَكۡنَا مِن قَرۡيَةِۭ بَطِرَتۡ مَعِيشَتَهَاۖ فَتِلۡكَ مَسَٰكِنُهُمۡ لَمۡ تُسۡكَن مِّنۢ بَعۡدِهِمۡ إِلَّا قَلِيلٗاۖ وَكُنَّا نَحۡنُ ٱلۡوَٰرِثِينَ ٥٨

58. ಜೀವನಾಡಂಬರಗಳಲ್ಲಿ ಮೈಮರೆತು ಅಹಂಕಾರ ಪಟ್ಟ ಎಷ್ಟೋ ನಾಡುಗಳನ್ನು ನಾವು ನಾಶಮಾಡಿರುವೆವು. ಅಗೋ ಅವರ ವಾಸಸ್ಥಳಗಳು! ಅವರ ಬಳಿಕ ಅಪೂರ್ವವಾಗಿಯೇ ಹೊರತು ಅಲ್ಲಿ ಜನವಾಸವುಂಟಾಗಿಲ್ಲ. (ಅವುಗಳ) ವಾರೀಸುದಾರರು ನಾವೇ ಆಗಿರುವೆವು.

وَمَا كَانَ رَبُّكَ مُهۡلِكَ ٱلۡقُرَىٰ حَتَّىٰ يَبۡعَثَ فِيٓ أُمِّهَا رَسُولٗا يَتۡلُواْ عَلَيۡهِمۡ ءَايَٰتِنَاۚ وَمَا كُنَّا مُهۡلِكِي ٱلۡقُرَىٰٓ إِلَّا وَأَهۡلُهَا ظَٰلِمُونَ ٥٩

59. ತಮ್ಮ ರಬ್ ಆ ನಾಡುಗಳನ್ನು, ಅವುಗಳ ಕೇಂದ್ರದಲ್ಲಿ ನಮ್ಮ ದೃಷ್ಟಾಂತಗಳನ್ನು ಜನರಿಗೆ ಓದಿಕೊಡುವ ಒಬ್ಬ ಸಂದೇಶವಾಹಕರನ್ನು ಕಳುಹಿಸುವ ತನಕ ನಾಶ ಮಾಡಲಾರನು. ನಾಡಿನ ನಿವಾಸಿಗಳು ಅಕ್ರಮಿಗಳಾಗಿರುವಾಗಲೇ ಹೊರತು ನಾವು ನಾಡುಗಳನ್ನು ನಾಶ ಮಾಡಲಾರೆವು.

---

ಸತ್ಯವಿಶ್ವಾಸಿಯಾಗಿ ಕಾಣಬೇಕೆಂಬ ಅದಮ್ಯ ಹಂಬಲವು ಪ್ರವಾದಿ(ﷺ)ರವರಿಗೆ ಇತ್ತು. ಅಬೂತಾಲಿಬ್ ಮರಣಾಸನ್ನರಾದ ಸಂದರ್ಭದಲ್ಲೂ ಕೂಡ ಪ್ರವಾದಿ(ﷺ)ರವರು ಅವರೊಂದಿಗೆ ಸತ್ಯವಿಶ್ವಾಸ ಘೋಷಿಸಲು ವಿನಂತಿಸುತ್ತಲೇ ಇದ್ದರು. ಆದರೆ ಬಹುದೇವವಿಶ್ವಾಸವನ್ನು ತಿರಸ್ಕರಿಸಲು ಅವರು ಹಿಂಜರಿದರು ಮತ್ತು ಅವಿಶ್ವಾಸಿಯಾಗಿಯೇ ಮೃತಪಟ್ಟರು. ಈ ಸಂದರ್ಭದಲ್ಲೇ ಪ್ರಸ್ತುತ ಕುರ್‌ಆನ್ ಸೂಕ್ತಿಯು ಅವತೀರ್ಣಗೊಂಡಿತೆಂದು ಹೆಚ್ಚಿನ ಕುರ್‌ಆನ್ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

1 ಇಸ್ಲಾಮಿಗೆ ಅಧಿಕಾರ ಸಿಕ್ಕಿದರೆ ಕುರೈಶಿಗಳಿಗೆ ಮಕ್ಕಾದಲ್ಲಿರುವ ಅಧಿಕಾರವು ನಷ್ಟವಾಗಲಿದೆ ಎಂದು ಅವರ ಪೈಕಿ ಕೆಲವರಿಗೆ ಭಯವಿತ್ತು.

2 ಮಕ್ಕಾ ನಿವಾಸಿಗಳು ಸವಿಯುತ್ತಿರುವ ಸಕಲ ಸೌಭಾಗ್ಯಗಳೂ ಅಲ್ಲಾಹು ದಯಪಾಲಿಸಿದ್ದಾಗಿವೆ. ಅವನ ಮೇಲೆ ವಿಶ್ವಾಸವಿಟ್ಟು ಅವನಿಗೆ ಕೃತಜ್ಞತೆಯನ್ನು ಸಲ್ಲಿಸಿದರೆ ಅವನು ತನ್ನ ಅನುಗ್ರಹಗಳನ್ನು ಹೆಚ್ಚಿಸಿಕೊಡುವನು. ಆದರೆ ಅಲ್ಲಾಹುವಿನ ಕಾರ್ಯ ವೈಖರಿಯನ್ನು ಅರ್ಥಮಾಡಿಕೊಳ್ಳದೆ ಅವರು ಅನಗತ್ಯವಾಗಿ ಆತಂಕಪಡುತ್ತಿದ್ದಾರೆ.

60. ನಿಮಗೇನಾದರೂ ನೀಡಲಾಗಿದ್ದರೆ ಅದು ಐಹಿಕ ಜೀವನದ ಆಡಂಬರ ಮತ್ತು ಅದರ ಅಲಂಕಾರ ಮಾತ್ರವಾಗಿದೆ. ಅಲ್ಲಾಹುವಿನ ಬಳಿಯಿರುವುದು ಅತ್ಯುತ್ತಮವೂ ಬಾಕಿಯುಳಿಯುವಂತದ್ದೂ ಆಗಿದೆ. ನೀವು ಚಿಂತಿಸುವುದಿಲ್ಲವೇ?

وَمَآ أُوتِيتُم مِّن شَيۡءٖ فَمَتَٰعُ ٱلۡحَيَوٰةِ ٱلدُّنۡيَا وَزِينَتُهَاۚ وَمَا عِندَ ٱللَّهِ خَيۡرٞ وَأَبۡقَىٰٓۚ أَفَلَا تَعۡقِلُونَ ٦٠

61. ಹಾಗೆಯೇ ಯಾರಿಗೆ ನಾವು ಉತ್ತಮವಾದ ವಾಗ್ದಾನವನ್ನು ನೀಡಿ ತರುವಾಯ ಅದು (ನೆರವೇರಿರುವುದಾಗಿ) ಕಾಣುವನೋ, ಅಂತಹ ಒಬ್ಬನು, ಯಾರಿಗೆ ನಾವು ಐಹಿಕ ಜೀವನದ ಸುಖಾಡಂಬರವನ್ನು ನೀಡಿ ತರುವಾಯ ಅವನು ಪುನರುತ್ಥಾನದ ದಿನದಂದು (ಶಿಕ್ಷೆಗೆ) ಹಾಜರುಗೊಳಿಸಲಾಗುವನೋ ಅಂತಹ ವ್ಯಕ್ತಿಯಂತಾಗುವನೇ?(1)

أَفَمَن وَعَدۡنَٰهُ وَعۡدًا حَسَنٗا فَهُوَ لَٰقِيهِ كَمَن مَّتَّعۡنَٰهُ مَتَٰعَ ٱلۡحَيَوٰةِ ٱلدُّنۡيَا ثُمَّ هُوَ يَوۡمَ ٱلۡقِيَٰمَةِ مِنَ ٱلۡمُحۡضَرِينَ ٦١

62. ಅವನು (ಅಲ್ಲಾಹು) ಅವರನ್ನು ಕರೆಯುವ ಮತ್ತು 'ನನ್ನ ಸಹಭಾಗಿಗಳೆಂದು ನೀವು ವಾದಿಸುತ್ತಿದ್ದವರು ಎಲ್ಲಿರುವರು?' ಎಂದು ಕೇಳುವ ದಿನ!

وَيَوۡمَ يُنَادِيهِمۡ فَيَقُولُ أَيۡنَ شُرَكَآءِيَ ٱلَّذِينَ كُنتُمۡ تَزۡعُمُونَ ٦٢

63. (ಶಿಕ್ಷೆಯ) ವಚನವು ಯಾರ ಮೇಲೆ ಸತ್ಯವಾಗಿ ಪರಿಣಮಿಸಿದೆಯೋ ಅವರು (ಅಂದು) ಹೇಳುವರು: 'ಓ ನಮ್ಮ ರಬ್! ನಾವು ದಾರಿಗೆಡಿಸಿದ್ದು ಇವರನ್ನಾಗಿದೆ. ನಾವು ದಾರಿತಪ್ಪಿದಂತೆಯೇ ಇವರನ್ನೂ ನಾವು ದಾರಿತಪ್ಪಿಸಿದೆವು. ನಿನ್ನ ಮುಂದೆ ನಾವು ನಮ್ಮ ಹೊಣೆಯಿಂದ ಮುಕ್ತರಾಗಿರುವೆವು. ಅವರು ಆರಾಧಿಸುತ್ತಿದ್ದುದು ನಮ್ಮನ್ನಲ್ಲ'.(2)

قَالَ ٱلَّذِينَ حَقَّ عَلَيۡهِمُ ٱلۡقَوۡلُ رَبَّنَا هَٰٓؤُلَآءِ ٱلَّذِينَ أَغۡوَيۡنَآ أَغۡوَيۡنَٰهُمۡ كَمَا غَوَيۡنَاۖ تَبَرَّأۡنَآ إِلَيۡكَۖ مَا كَانُوٓاْ إِيَّانَا يَعۡبُدُونَ ٦٣

1 ಪರಲೋಕ ಪ್ರತಿಫಲದ ಕುರಿತು ಅಲ್ಲಾಹುವಿನ ವಾಗ್ದಾನದ ಮೇಲೆ ವಿಶ್ವಾಸವಿಟ್ಟವನಿಗೆ ಅವನ ಶಾಶ್ವತ ಶಿಕ್ಷೆಯಿಂದ ಮುಕ್ತಿ ಪಡೆಯಬಹುದು. ಇಹಲೋಕದಲ್ಲಿ ಸಂತೃಪ್ತ ಜೀವನವನ್ನು ಸಾಗಿಸಬಹುದು. ಇಹಲೋಕದ ಸುಖಲೋಲುಪತೆಯಲ್ಲಿ ಮೈಮರೆತು ಸತ್ಯನಿಷೇಧ ಮತ್ತು ಅನೈತಿಕತೆಯನ್ನು ನೆಚ್ಚಿಕೊಂಡವನಿಗೆ ಅಂತಹ ಒಂದು ಸ್ಥಿತಿಯು ಎಂದಿಗೂ ಬರಲಾರದು.

2 ಅವರು ಜನರಿಗೆ ಹಲವು ದೇವಪರಿಕಲ್ಪನೆಗಳನ್ನು ಮತ್ತು ಪೂಜಾ ಸಂಪ್ರದಾಯಗಳನ್ನು ಆಕರ್ಷಣೀಯಗೊಳಿಸಿ ತೋರಿಸಿಕೊಡುತ್ತಿದ್ದರು. ಜನರು ತಮ್ಮನ್ನು ಆರಾಧಿಸಬೇಕೆಂದು ಅವರು ಕೋರಿರಲಿಲ್ಲ. ಅವರು ಆರಾಧಿಸಲ್ಪಡಲೂ ಇಲ್ಲ.

**64.** ‘ನೀವು ನಿಮ್ಮ ಸಹಭಾಗಿಗಳನ್ನು ಕರೆಯಿರಿ’ ಎಂದು (ಬಹುದೇವಾರಾಧಕರೊಂದಿಗೆ) ಹೇಳಲಾಗುವುದು. ಆಗ ಇವರು ಅವರನ್ನು ಕರೆಯುವರು. ಆದರೆ ಅವರು (ಸಹಭಾಗಿಗಳು) ಇವರಿಗೆ ಉತ್ತರ ನೀಡಲಾರರು. ಇವರು ಶಿಕ್ಷೆಯನ್ನು ಕಣ್ಣಾರೆ ಕಾಣುವರು. ಇವರು ಸನ್ಮಾರ್ಗವನ್ನು ಪಡೆದಿರುತ್ತಿದ್ದರೆ!

وَقِيلَ ٱدْعُوا۟ شُرَكَآءَكُمْ فَدَعَوْهُمْ فَلَمْ يَسْتَجِيبُوا۟ لَهُمْ وَرَأَوُا۟ ٱلْعَذَابَ ۚ لَوْ أَنَّهُمْ كَانُوا۟ يَهْتَدُونَ ٦٤

**65.** ಅವನು (ಅಲ್ಲಾಹು) ಅವರನ್ನು ಕರೆದು ‘ಸಂದೇಶವಾಹಕರಿಗೆ ನೀವು ನೀಡಿದ ಉತ್ತರವೇನು?’ ಎಂದು ಪ್ರಶ್ನಿಸುವ ದಿನ!

وَيَوْمَ يُنَادِيهِمْ فَيَقُولُ مَاذَآ أَجَبْتُمُ ٱلْمُرْسَلِينَ ٦٥

**66.** ಅಂದು ಅವರಿಗೆ ಮಾಹಿತಿಗಳು ಅಸ್ಪಷ್ಟವಾಗಿ ಬಿಡುವುವು. ಆಗ ಅವರು ಪರಸ್ಪರ ಕೇಳಿ ತಿಳಿಯಲಾರರು.

فَعَمِيَتْ عَلَيْهِمُ ٱلْأَنۢبَآءُ يَوْمَئِذٍ فَهُمْ لَا يَتَسَآءَلُونَ ٦٦

**67.** ಆದರೆ ಯಾರು ಪಶ್ಚಾತ್ತಾಪಪಟ್ಟು, ವಿಶ್ವಾಸ ಸ್ವೀಕರಿಸಿ, ಸತ್ಕರ್ಮವೆಸಗುವನೋ ಅವನು ಯಶಸ್ಸುಗಳಿಸಿದವರಲ್ಲಿ ಸೇರುವನು.

فَأَمَّا مَن تَابَ وَءَامَنَ وَعَمِلَ صَٰلِحًا فَعَسَىٰٓ أَن يَكُونَ مِنَ ٱلْمُفْلِحِينَ ٦٧

**68.** ತಮ್ಮ ರಬ್ ತಾನಿಚ್ಛಿಸುವುದನ್ನು ಸೃಷ್ಟಿಸುವನು ಮತ್ತು (ತಾನಿಚ್ಛಿಸುವುದನ್ನು) ಆರಿಸುವನು. ಆದರೆ ಅವರಿಗೆ ಆಯ್ಕೆ ಮಾಡುವ ಅರ್ಹತೆಯಿಲ್ಲ. ಅಲ್ಲಾಹು ಪರಮಪಾವನನು. ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅವನು ಅತ್ಯುನ್ನತನಾಗಿರುವನು.

وَرَبُّكَ يَخْلُقُ مَا يَشَآءُ وَيَخْتَارُ ۗ مَا كَانَ لَهُمُ ٱلْخِيَرَةُ ۚ سُبْحَٰنَ ٱللَّهِ وَتَعَٰلَىٰ عَمَّا يُشْرِكُونَ ٦٨

**69.** ಅವರ ಹೃದಯಗಳು ಮರೆಮಾಚುವುದನ್ನೂ, ಅವರು ಬಹಿರಂಗಪಡಿಸುವುದನ್ನೂ ತಮ್ಮ ರಬ್ ಅರಿಯುವನು.

وَرَبُّكَ يَعْلَمُ مَا تُكِنُّ صُدُورُهُمْ وَمَا يُعْلِنُونَ ٦٩

**70.** ಅವನಾಗಿರುವನು ಅಲ್ಲಾಹು! ಅವನ ಹೊರತು ಅನ್ಯ ಆರಾಧ್ಯರಿಲ್ಲ. ಇಹಲೋಕದಲ್ಲೂ ಪರಲೋಕದಲ್ಲೂ ಅವನಿಗೆ ಸ್ತುತಿ. ಆಜ್ಞಾಧಿಕಾರವು ಅವನದ್ದಾಗಿದೆ. ನಿಮ್ಮನ್ನು ಅವನೆಡೆಗೆ ಮರಳಿಸಲಾಗುವುದು.

وَهُوَ ٱللَّهُ لَآ إِلَٰهَ إِلَّا هُوَ ۖ لَهُ ٱلْحَمْدُ فِى ٱلْأُولَىٰ وَٱلْءَاخِرَةِ ۖ وَلَهُ ٱلْحُكْمُ وَإِلَيْهِ تُرْجَعُونَ ٧٠

**71.** (ಓ ಪ್ರವಾದಿಯವರೇ!) ಹೇಳಿರಿ: ‘ನೀವು ಆಲೋಚಿಸಿರುವಿರಾ? ಪುನರುತ್ಥಾನದ

قُلْ أَرَءَيْتُمْ إِن جَعَلَ ٱللَّهُ عَلَيْكُمُ ٱلَّيْلَ

سَرۡمَدًا إِلَىٰ يَوۡمِ ٱلۡقِيَٰمَةِ مَنۡ إِلَٰهٌ غَيۡرُ ٱللَّهِ يَأۡتِيكُم بِضِيَآءٍۚ أَفَلَا تَسۡمَعُونَ ٧١

ದಿನದವರೆಗೆ ಅಲ್ಲಾಹು ನಿಮ್ಮ ಮೇಲೆ ರಾತ್ರಿಯನ್ನು ಶಾಶ್ವತಗೊಳಿಸಿರುತ್ತಿದ್ದರೆ ಅಲ್ಲಾಹುವಿನ ಹೊರತು ಯಾವ ಆರಾಧ್ಯನು ನಿಮಗೆ ಬೆಳಕನ್ನು ತಂದುಕೊಡುವನು? ಆದರೂ ನೀವು ಆಲಿಸಿ ಗ್ರಹಿಸಲಾರಿರೇ?'

قُلۡ أَرَءَيۡتُمۡ إِن جَعَلَ ٱللَّهُ عَلَيۡكُمُ ٱلنَّهَارَ سَرۡمَدًا إِلَىٰ يَوۡمِ ٱلۡقِيَٰمَةِ مَنۡ إِلَٰهٌ غَيۡرُ ٱللَّهِ يَأۡتِيكُم بِلَيۡلٖ تَسۡكُنُونَ فِيهِۚ أَفَلَا تُبۡصِرُونَ ٧٢

72. ತಾವು ಹೇಳಿರಿ: 'ನೀವು ಆಲೋಚಿಸಿರುವಿರಾ! ಪುನರುತ್ಥಾನದ ದಿನದವರೆಗೆ ಅಲ್ಲಾಹು ನಿಮ್ಮ ಮೇಲೆ ಹಗಲನ್ನು ಶಾಶ್ವತಗೊಳಿಸಿರುತ್ತಿದ್ದರೆ ಅಲ್ಲಾಹುವಿನ ಹೊರತು ಯಾವ ಆರಾಧ್ಯನು ನಿಮಗೆ ವಿಶ್ರಾಂತಿ ಪಡೆಯಲು ರಾತ್ರಿಯನ್ನು ತಂದುಕೊಡುವನು? ನೀವು ನೋಡಿ ಗ್ರಹಿಸಲಾರಿರೇ?

وَمِن رَّحۡمَتِهِۦ جَعَلَ لَكُمُ ٱلَّيۡلَ وَٱلنَّهَارَ لِتَسۡكُنُواْ فِيهِ وَلِتَبۡتَغُواْ مِن فَضۡلِهِۦ وَلَعَلَّكُمۡ تَشۡكُرُونَ ٧٣

73. ರಾತ್ರಿಯಲ್ಲಿ ವಿಶ್ರಾಂತಿ ಪಡೆಯುವುದಕ್ಕಾಗಿ ಮತ್ತು (ಹಗಲಿನಲ್ಲಿ) ಅವನ ಅನುಗ್ರಹದಿಂದ ನೀವು ಅರಸುವುದಕ್ಕಾಗಿ ಹಾಗೂ ನೀವು ಕೃತಜ್ಞತೆ ಸಲ್ಲಿಸುವುದಕ್ಕಾಗಿ ಅವನು ತನ್ನ ಕಾರುಣ್ಯದಿಂದ ನಿಮಗೆ ರಾತ್ರಿಯನ್ನೂ ಹಗಲನ್ನೂ ಮಾಡಿಕೊಟ್ಟಿರುವನು.

وَيَوۡمَ يُنَادِيهِمۡ فَيَقُولُ أَيۡنَ شُرَكَآءِيَ ٱلَّذِينَ كُنتُمۡ تَزۡعُمُونَ ٧٤

74. ಅಲ್ಲಾಹು ಅವರನ್ನು ಕರೆಯುವ ಮತ್ತು 'ನನ್ನ ಸಹಭಾಗಿಗಳೆಂದು ನೀವು ವಾದಿಸುತ್ತಿದ್ದವರು ಎಲ್ಲಿರುವರು?' ಎಂದು ಕೇಳುವ ದಿನ!

وَنَزَعۡنَا مِن كُلِّ أُمَّةٖ شَهِيدٗا فَقُلۡنَا هَاتُواْ بُرۡهَٰنَكُمۡ فَعَلِمُوٓاْ أَنَّ ٱلۡحَقَّ لِلَّهِ وَضَلَّ عَنۡهُم مَّا كَانُواْ يَفۡتَرُونَ ٧٥

75. ನಾವು (ಅಂದು) ಪ್ರತಿಯೊಂದು ಸಮುದಾಯದಿಂದಲೂ ಒಬ್ಬೊಬ್ಬ ಸಾಕ್ಷಿಯನ್ನು[1] ಹೊರತರುವೆವು. ತರುವಾಯ (ಆ ಸಮುದಾಯಗಳೊಂದಿಗೆ) 'ನಿಮ್ಮ ಪುರಾವೆಯನ್ನು ತನ್ನಿರಿ' ಎಂದು ಹೇಳುವೆವು. ಆಗ ಸತ್ಯವು ಅಲ್ಲಾಹುವಿಗಾಗಿದೆಯೆಂದು ಅವರು ಅರಿತುಕೊಳ್ಳುವರು. ಅವರು ಹೆಣೆದು ರಚಿಸಿರುವುದೆಲ್ಲವೂ ಅವರಿಂದ ಅಪ್ರತ್ಯಕ್ಷವಾಗುವುವು.

1 ಅಲ್ಲಾಹು ಪ್ರತಿಯೊಂದು ಜನಸಮೂಹದೆಡೆಗೂ ನಿಯೋಗಿಸಿದ ಪ್ರವಾದಿಗಳನ್ನು ಪರಲೋಕದಲ್ಲಿ ಅವರ ವಿರುದ್ಧ ಸಾಕ್ಷಿಗಳಾಗಿ ಹಾಜರುಗೊಳಿಸುವನು.

**76.** ಖಂಡಿತವಾಗಿಯೂ ಕಾರೂನ್ ಮೂಸಾರ ಜನತೆಯಲ್ಲಿ ಸೇರಿದವನಾಗಿದ್ದನು.[1] ತರುವಾಯ ಅವನು ಅವರ ವಿರುದ್ಧ ಅತಿಕ್ರಮವೆಸಗಿದನು. ಅವನ ಖಜಾನೆಗಳು[2] ಬಲಶಾಲಿಗಳಾದ ಒಂದು ಗುಂಪು ಜನರಿಗೂ ಕೂಡ ಭಾರವಾಗುವಷ್ಟು ಖಜಾನೆಗಳನ್ನು ನಾವು ಅವನಿಗೆ ನೀಡಿದ್ದೆವು. ಅವನೊಂದಿಗೆ ಅವನ ಜನರು ಹೇಳಿದ ಸಂದರ್ಭ: 'ನೀನು ಹರ್ಷದಿಂದ ಬೀಗದಿರು. ಖಂಡಿತವಾಗಿಯೂ ಅಲ್ಲಾಹು ಹರ್ಷದಿಂದ ಬೀಗುವವರನ್ನು ಮೆಚ್ಚುವುದಿಲ್ಲ.

۞ إِنَّ قَٰرُونَ كَانَ مِن قَوۡمِ مُوسَىٰ فَبَغَىٰ عَلَيۡهِمۡۖ وَءَاتَيۡنَٰهُ مِنَ ٱلۡكُنُوزِ مَآ إِنَّ مَفَاتِحَهُۥ لَتَنُوٓأُ بِٱلۡعُصۡبَةِ أُوْلِي ٱلۡقُوَّةِ إِذۡ قَالَ لَهُۥ قَوۡمُهُۥ لَا تَفۡرَحۡۖ إِنَّ ٱللَّهَ لَا يُحِبُّ ٱلۡفَرِحِينَ ٧٦

**77.** ಅಲ್ಲಾಹು ನಿನಗೆ ನೀಡಿರುವುದರಿಂದ ಪರಲೋಕದ ಯಶಸ್ಸನ್ನು ಅರಸು. ಐಹಿಕ ಜೀವನದಲ್ಲಿ ನಿನಗಿರುವ ಪಾಲನ್ನು ಮರೆಯದಿರು.[3] ಅಲ್ಲಾಹು ನಿನಗೆ ಒಳಿತು ಮಾಡಿದಂತೆ ನೀನೂ ಜನರಿಗೆ ಒಳಿತನ್ನು ಮಾಡು. ಭೂಮಿಯಲ್ಲಿ ವಿನಾಶವನ್ನುಂಟು ಮಾಡದಿರು. ವಿನಾಶವನ್ನುಂಟು ಮಾಡುವವರನ್ನು ಖಂಡಿತವಾಗಿಯೂ ಅಲ್ಲಾಹು ಮೆಚ್ಚುವುದಿಲ್ಲ'.

وَٱبۡتَغِ فِيمَآ ءَاتَىٰكَ ٱللَّهُ ٱلدَّارَ ٱلۡأٓخِرَةَۖ وَلَا تَنسَ نَصِيبَكَ مِنَ ٱلدُّنۡيَاۖ وَأَحۡسِن كَمَآ أَحۡسَنَ ٱللَّهُ إِلَيۡكَۖ وَلَا تَبۡغِ ٱلۡفَسَادَ فِي ٱلۡأَرۡضِۖ إِنَّ ٱللَّهَ لَا يُحِبُّ ٱلۡمُفۡسِدِينَ ٧٧

**78.** ಅವನು (ಕಾರೂನ್) ಹೇಳಿದನು: 'ಇದು ನನಗೆ ಲಭಿಸಿರುವುದು ನನ್ನ ವಶದಲ್ಲಿರುವ ಅರಿವಿನಿಂದಲೇ ಆಗಿದೆ.' ಆದರೆ ಅವನಿಗಿಂತಲೂ ಹೆಚ್ಚು ಬಲಶಾಲಿಗಳಾದ ಮತ್ತು ಜನಬಲವಿದ್ದ ಅನೇಕ ತಲೆಮಾರುಗಳನ್ನು ಅವನಿಗಿಂತ ಮುಂಚೆ

قَالَ إِنَّمَآ أُوتِيتُهُۥ عَلَىٰ عِلۡمٍ عِندِيٓۚ أَوَلَمۡ يَعۡلَمۡ أَنَّ ٱللَّهَ قَدۡ أَهۡلَكَ مِن قَبۡلِهِۦ مِنَ ٱلۡقُرُونِ مَنۡ هُوَ أَشَدُّ مِنۡهُ قُوَّةً وَأَكۡثَرُ جَمۡعًاۚ وَلَا يُسۡـَٔلُ عَن ذُنُوبِهِمُ ٱلۡمُجۡرِمُونَ ٧٨

1 ಕಾರೂನ್ ಇಸ್ರಾಈಲ್ ಜನಾಂಗದಲ್ಲಿ ಸೇರಿದವನಾಗಿದ್ದನು. ಪ್ರವಾದಿ ಮೂಸಾ(عَلَيْهِ السَّلَامُ)ರವರ ತಂದೆಯ ಸಹೋದರ ಪುತ್ರನಾಗಿದ್ದನೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.

2 ಮಫಾತಿಹ್ ಎಂಬ ಪದಕ್ಕೆ ಖಜಾನೆಗಳು, ಕೀಲಿಕೈಗಳು ಇತ್ಯಾದಿ ಅರ್ಥಗಳಿವೆ.

3 ಇದನ್ನು ಎರಡು ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಒಂದು: ಇಹಲೋಕ ಜೀವನದಲ್ಲಿ ನಿನಗೆ ಅನುಮತಿಸಲ್ಪಟ್ಟ ಪಾಲಿದೆ. ಅದನ್ನು ನೀನು ಮರೆಯಬಾರದು. ಎರಡು: ಇಹಲೋಕದ ಗಳಿಕೆಗಳೆಲ್ಲವೂ ನಶ್ವರ. ಅದು ನಷ್ಟವಾಗುತ್ತದೆ. ಆದರೆ ಅದರಿಂದ ನಿನಗೆ ಶಾಶ್ವತ ಹಕ್ಕಿರುವ ಒಂದು ಪಾಲನ್ನು ಸಂಪಾದಿಸಬಹುದಾಗಿದೆ. ಅದು ನಿನ್ನ ದಾನಧರ್ಮಗಳ ಮತ್ತು ಸತ್ಕರ್ಮಗಳ ಫಲವಾಗಿದೆ. ಅದನ್ನು ನೀನು ಮರೆಯಬಾರದು.

ಅಲ್ಲಾಹು ನಾಶ ಮಾಡಿರುವುದನ್ನು ಅವನು ಅರ್ಥಮಾಡಿಕೊಂಡಿಲ್ಲವೇ? ಪಾಪಿಗಳೊಂದಿಗೆ ಅವರ ಪಾಪಗಳ ಕುರಿತು ಪ್ರಶ್ನಿಸಲಾಗದು.(1)

**79.** ತರುವಾಯ ಅವನು ಜನರೆಡೆಗೆ ವೈಭವದೊಂದಿಗೆ ಹೊರಟು ಬಂದನು. ಐಹಿಕ ಜೀವನವನ್ನು ಗುರಿಯನ್ನಾಗಿ ಮಾಡಿಕೊಂಡವರು ಅದನ್ನು ಕಂಡು ಹೇಳಿದರು: 'ಕಾರೂನ್‌ಗೆ ನೀಡಲಾಗಿರುವುದನ್ನು ನಮಗೂ ನೀಡಲಾಗಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಖಂಡಿತವಾಗಿಯೂ ಅವನು ಮಹಾ ಭಾಗ್ಯವಂತನಾಗಿರುವನು'.

فَخَرَجَ عَلَىٰ قَوْمِهِۦ فِى زِينَتِهِۦ ۖ قَالَ ٱلَّذِينَ يُرِيدُونَ ٱلْحَيَوٰةَ ٱلدُّنْيَا يَٰلَيْتَ لَنَا مِثْلَ مَآ أُوتِىَ قَٰرُونُ إِنَّهُۥ لَذُو حَظٍّ عَظِيمٍ ﴿٧٩﴾

**80.** ಜ್ಞಾನ ನೀಡಲ್ಪಟ್ಟವರು ಹೇಳಿದರು: 'ನಿಮಗೆ ವಿನಾಶ ಕಾದಿದೆ! ವಿಶ್ವಾಸವಿಟ್ಟವರಿಗೆ ಮತ್ತು ಸತ್ಕರ್ಮವೆಸಗಿದವರಿಗೆ ಅಲ್ಲಾಹುವಿನ ಪ್ರತಿಫಲವು ಅತ್ಯುತ್ತಮವಾಗಿದೆ. ಅದನ್ನು ಸಹನಾಶೀಲರಿಗಲ್ಲದೆ ನೀಡಲ್ಪಡದು.

وَقَالَ ٱلَّذِينَ أُوتُوا۟ ٱلْعِلْمَ وَيْلَكُمْ ثَوَابُ ٱللَّهِ خَيْرٌ لِّمَنْ ءَامَنَ وَعَمِلَ صَٰلِحًا ۚ وَلَا يُلَقَّىٰهَآ إِلَّا ٱلصَّٰبِرُونَ ﴿٨٠﴾

**81.** ತರುವಾಯ ನಾವು ಅವನನ್ನೂ, ಅವನ ಭವನವನ್ನೂ ಭೂಮಿಯಲ್ಲಿ ಹುದುಗಿಸಿದೆವು. ಆಗ ಅಲ್ಲಾಹುವಿನ ಹೊರತು ಅವನಿಗೆ ಸಹಾಯ ಮಾಡುವ ಯಾವ ಗುಂಪೂ ಅವನಿಗಿರಲಿಲ್ಲ. ಸ್ವತಃ ರಕ್ಷಣೆ ಪಡೆದವರಲ್ಲಿ ಸೇರಲೂ ಅವನಿಂದಾಗಲಿಲ್ಲ.

فَخَسَفْنَا بِهِۦ وَبِدَارِهِ ٱلْأَرْضَ فَمَا كَانَ لَهُۥ مِن فِئَةٍ يَنصُرُونَهُۥ مِن دُونِ ٱللَّهِ وَمَا كَانَ مِنَ ٱلْمُنتَصِرِينَ ﴿٨١﴾

**82.** ನಿನ್ನೆ ಅವನ ಸ್ಥಾನವನ್ನು ಆಶಿಸಿದವರು (ಇಂದು) ಹೀಗೆನ್ನತೊಡಗಿದರು: 'ಅಯ್ಯೋ! ಅಲ್ಲಾಹು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು (ತಾನಿಚ್ಛಿಸುವವರಿಗೆ ಅದನ್ನು) ಸಂಕುಚಿತಗೊಳಿಸುವನು. ಅಲ್ಲಾಹು ನಮ್ಮ ಮೇಲೆ ಔದಾರ್ಯ ತೋರದಿರುತ್ತಿದ್ದರೆ ಭೂಮಿ ನಮ್ಮನ್ನೂ ನುಂಗುವಂತೆ ಅವನು

وَأَصْبَحَ ٱلَّذِينَ تَمَنَّوْا۟ مَكَانَهُۥ بِٱلْأَمْسِ يَقُولُونَ وَيْكَأَنَّ ٱللَّهَ يَبْسُطُ ٱلرِّزْقَ لِمَن يَشَآءُ مِنْ عِبَادِهِۦ وَيَقْدِرُ ۖ لَوْلَآ أَن مَّنَّ ٱللَّهُ عَلَيْنَا لَخَسَفَ بِنَا ۖ وَيْكَأَنَّهُۥ لَا يُفْلِحُ ٱلْكَٰفِرُونَ ﴿٨٢﴾

1 ಅಪರಾಧಿಗಳೊಂದಿಗೆ ಅವರ ಅಪರಾಧದ ಕುರಿತು ಕೇಳಿ ತಿಳಿಯಬೇಕಾದ ಅಗತ್ಯವು ಅಲ್ಲಾಹುವಿಗಿಲ್ಲ. ಅವರು ತಮ್ಮ ಅಪರಾಧಗಳನ್ನು ಒಪ್ಪಿಕೊಳ್ಳದಿದ್ದರೂ ಅವರ ಅಪರಾಧಕ್ಕಿರುವ ಅರ್ಹ ಪ್ರತಿಫಲವನ್ನು ಅವನು ನೀಡುವನು.

ಮಾಡುತ್ತಿದ್ದನು. ಅಯ್ಯೋ! ಸತ್ಯನಿಷೇಧಿಗಳು ಎಂದೂ ಯಶಸ್ಸುಗಳಿಸಲಾರರು.

تِلْكَ ٱلدَّارُ ٱلْـَٔاخِرَةُ نَجْعَلُهَا لِلَّذِينَ لَا يُرِيدُونَ عُلُوًّا فِى ٱلْأَرْضِ وَلَا فَسَادًا ۚ وَٱلْعَـٰقِبَةُ لِلْمُتَّقِينَ ﴿٨٣﴾

83. ಭೂಮಿಯಲ್ಲಿ ಔನ್ನತ್ಯವನ್ನಾಗಲಿ, ವಿನಾಶವನ್ನಾಗಲಿ ಬಯಸದವರಿಗೆ ನಾವು ಆ ಪಾರಲೌಕಿಕ ಭವನವನ್ನು ನಿಶ್ಚಯಿಸಿಕೊಡುವೆವು. ಅಂತ್ಯಫಲವು ಭಯಭಕ್ತಿ ಪಾಲಿಸುವವರಿಗೆ ಅನುಕೂಲಕರವಾಗಿರುವುದು.

مَن جَآءَ بِٱلْحَسَنَةِ فَلَهُۥ خَيْرٌ مِّنْهَا ۖ وَمَن جَآءَ بِٱلسَّيِّئَةِ فَلَا يُجْزَى ٱلَّذِينَ عَمِلُوا۟ ٱلسَّيِّـَٔاتِ إِلَّا مَا كَانُوا۟ يَعْمَلُونَ ﴿٨٤﴾

84. ಯಾರು ಒಳಿತಿನೊಂದಿಗೆ ಬರುವನೋ ಅವನಿಗೆ ಅದಕ್ಕಿಂತಲೂ ಉತ್ತಮವಾದುದು ಸಿಗುವುದು. ಯಾರಾದರೂ ಕೆಡುಕನ್ನು ತರುವುದಾದರೆ ಪಾಪ ಮಾಡುವವರಿಗೆ ಅವರು ಮಾಡಿಕೊಂಡಿರುವುದರ ಪ್ರತಿಫಲವನ್ನಲ್ಲದೆ ಬೇರೇನೂ ನೀಡಲಾಗದು.

إِنَّ ٱلَّذِى فَرَضَ عَلَيْكَ ٱلْقُرْءَانَ لَرَآدُّكَ إِلَىٰ مَعَادٍ ۚ قُل رَّبِّىٓ أَعْلَمُ مَن جَآءَ بِٱلْهُدَىٰ وَمَنْ هُوَ فِى ضَلَـٰلٍ مُّبِينٍ ﴿٨٥﴾

85. ಖಂಡಿತವಾಗಿಯೂ ತಮಗೆ ಈ ಕುರ್‌ಆನನ್ನು ಶಾಸನವಾಗಿ ನೀಡಿರುವವನು ಮರಳಬೇಕಾದ ಸ್ಥಳಕ್ಕೇ ತಮ್ಮನ್ನು ಮರಳಿಸುವನು.[1] ತಾವು ಹೇಳಿರಿ: 'ಸನ್ಮಾರ್ಗದೊಂದಿಗೆ ಬಂದವರು ಯಾರು ಮತ್ತು ಸ್ಪಷ್ಟವಾದ ದುರ್ಮಾರ್ಗದಲ್ಲಿರುವವರು ಯಾರು ಎಂದು ನನ್ನ ರಬ್ ಚೆನ್ನಾಗಿ ಅರಿತಿರುವನು'.

وَمَا كُنتَ تَرْجُوٓا۟ أَن يُلْقَىٰٓ إِلَيْكَ ٱلْكِتَـٰبُ إِلَّا رَحْمَةً مِّن رَّبِّكَ ۖ فَلَا تَكُونَنَّ ظَهِيرًا لِّلْكَـٰفِرِينَ ﴿٨٦﴾

86. ತಮಗೆ ಗ್ರಂಥವು ನೀಡಲಾಗುವುದೆಂದು ತಾವೆಂದೂ ಆಶಿಸಿರಲಿಲ್ಲ. ಆದರೆ ತಮ್ಮ ರಬ್‌ನ ವತಿಯ ಕಾರುಣ್ಯದಿಂದಾಗಿ (ಅದು ನೀಡಲಾಗಿದೆ). ಆದ್ದರಿಂದ ತಾವು ಸತ್ಯನಿಷೇಧಿಗಳಿಗೆ ಸಹಾಯಕರಾಗದಿರಿ.

وَلَا يَصُدُّنَّكَ عَنْ ءَايَـٰتِ ٱللَّهِ بَعْدَ إِذْ

87. ಅಲ್ಲಾಹುವಿನ ಸೂಕ್ತಿಗಳು ತಮಗೆ ಅವತೀರ್ಣಗೊಳಿಸಲಾದ ಬಳಿಕ ಅವರು

1 ಅಲ್ಲಾಹು ಪ್ರವಾದಿ(ﷺ)ರವರನ್ನು ಮಕ್ಕಃವನ್ನು ಗೆದ್ದು ಅದಕ್ಕೆ ಮರಳುವಂತೆ ಮಾಡುವನು ಎಂಬ ವಾಗ್ದಾನವು ಈ ಸೂಕ್ತಿಯಲ್ಲಿ ಅಡಕವಾಗಿದೆಯೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲಾಹು ಪ್ರವಾದಿ(ﷺ)ರವರನ್ನು ಪರಲೋಕದಲ್ಲಿ ಉನ್ನತ ಪದವಿಗೇರಿಸುವನು ಎಂಬ ಸೂಚನೆಯು ಈ ಸೂಕ್ತಿಯಲ್ಲಿದೆಯೆಂದು ಅಭಿಪ್ರಾಯಪಟ್ಟವರೂ ಇದ್ದಾರೆ.

أُنزِلَتْ إِلَيْكَ ۖ وَٱدْعُ إِلَىٰ رَبِّكَ ۖ وَلَا
تَكُونَنَّ مِنَ ٱلْمُشْرِكِينَ ﴿٨٧﴾

وَلَا تَدْعُ مَعَ ٱللَّهِ إِلَٰهًا ءَاخَرَ ۘ لَآ إِلَٰهَ
إِلَّا هُوَ ۚ كُلُّ شَىْءٍ هَالِكٌ إِلَّا وَجْهَهُۥ ۚ لَهُ
ٱلْحُكْمُ وَإِلَيْهِ تُرْجَعُونَ ﴿٨٨﴾

ತಮ್ಮನ್ನು ಅದರಿಂದ ತಡೆಯದಿರಲಿ.[1] ತಾವು ತಮ್ಮ ರಬ್‌ನೆಡೆಗೆ ಕರೆ ನೀಡಿರಿ. ತಾವು ಬಹುದೇವಾರಾಧಕರಲ್ಲಿ ಸೇರಿದವರಾಗದಿರಿ.

**88**. ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರನ್ನು ಕರೆದು ಪ್ರಾರ್ಥಿಸದಿರಿ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನ ಮುಖದ ಹೊರತು ಎಲ್ಲ ವಸ್ತುಗಳೂ ನಾಶವಾಗುವುವು. ಆಜ್ಞಾಧಿಕಾರವು ಅವನಿಗಿರುವುದಾಗಿದೆ. ನೀವು ಅವನೆಡೆಗೇ ಮರಳಿಸಲ್ಪಡುವಿರಿ.

1 ಅಲ್ಲಾಹುವಿನ ಸೂಕ್ತಿಗಳನ್ನು ಬೋಧಿಸುವುದರಿಂದ ತಮ್ಮನ್ನು ಹಿಂಜರಿಯುವಂತೆ ಮಾಡಲು ಅವರೆಲ್ಲರೂ ಯತ್ನಿಸಿದರೂ ತಾವು ಹಿಂಜರಿಯಬಾರದು ಎಂದರ್ಥ.

## ಅಲ್‌ಅನ್ಕಬೂತ್ (ಜೇಡ)[1]

## سُورَةُ العَنكَبُوتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 69

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

الٓمٓ ١

1. ಅಲಿಫ್–ಲಾಮ್–ಮೀಮ್.

أَحَسِبَ ٱلنَّاسُ أَن يُتۡرَكُوٓاْ أَن يَقُولُوٓاْ ءَامَنَّا وَهُمۡ لَا يُفۡتَنُونَ ٢

2. 'ನಾವು ವಿಶ್ವಾಸವಿಟ್ಟಿರುವೆವು' ಎಂದು ಹೇಳುವ ಕಾರಣದಿಂದಾಗಿ ತಮ್ಮನ್ನು ಪರೀಕ್ಷೆಗೊಳಪಡಿಸದೆ ಬಿಟ್ಟು ಬಿಡಲಾಗುವುದು ಎಂದು ಜನರು ಭಾವಿಸಿರುವರೇ?[2]

وَلَقَدۡ فَتَنَّا ٱلَّذِينَ مِن قَبۡلِهِمۡۖ فَلَيَعۡلَمَنَّ ٱللَّهُ ٱلَّذِينَ صَدَقُواْ وَلَيَعۡلَمَنَّ ٱلۡكَٰذِبِينَ ٣

3. ಅವರ ಪೂರ್ವಿಕರನ್ನು ನಾವು ಪರೀಕ್ಷಿಸಿರುವೆವು. ಆಗ ಸತ್ಯ ನುಡಿದವರು ಯಾರೆಂದು ಅಲ್ಲಾಹು ಅರಿಯುವನು. ಸುಳ್ಳು ನುಡಿಯುವವರನ್ನೂ ಅವನು ಅರಿಯುವನು.

أَمۡ حَسِبَ ٱلَّذِينَ يَعۡمَلُونَ ٱلسَّيِّـَٔاتِ أَن يَسۡبِقُونَاۚ سَآءَ مَا يَحۡكُمُونَ ٤

4. ಅಲ್ಲ, ನಮ್ಮನ್ನು ಮೀರಿ ಹೋಗಬಹುದೆಂದು ದುಷ್ಕರ್ಮವೆಸಗುವವರು ಭಾವಿಸುತ್ತಿರುವರೇ? ಅವರು ತೀರ್ಮಾನಿಸುತ್ತಿರುವುದು ಅತ್ಯಂತ ನಿಕೃಷ್ಟವಾದುದಾಗಿದೆ.

مَن كَانَ يَرۡجُواْ لِقَآءَ ٱللَّهِ فَإِنَّ أَجَلَ ٱللَّهِ لَأٓتٖۚ وَهُوَ ٱلسَّمِيعُ ٱلۡعَلِيمُ ٥

5. ಯಾರಾದರೂ ಅಲ್ಲಾಹುವಿನೊಂದಿಗಿರುವ ಭೇಟಿಯನ್ನು ಆಶಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿಶ್ಚಯಿಸಿದ ಅವಧಿಯು ಬಂದೇ ಬರುವುದು. ಅವನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

وَمَن جَٰهَدَ فَإِنَّمَا يُجَٰهِدُ لِنَفۡسِهِۦٓۚ إِنَّ ٱللَّهَ لَغَنِيٌّ عَنِ ٱلۡعَٰلَمِينَ ٦

6. ಯಾರಾದರೂ (ಅಲ್ಲಾಹುವಿನ ಮಾರ್ಗದಲ್ಲಿ) ಹೋರಾಡುವುದಾದರೆ ಅವನು ಹೋರಾಡುವುದು ಸ್ವತಃ ತನ್ನ ಒಳಿತಿಗಾಗಿಯೇ

---

1 41ನೇ ಸೂಕ್ತಿಯಲ್ಲಿ ಬಹುದೇವಾರಾಧಕರನ್ನು ಜೇಡಕ್ಕೆ ಉಪಮಿಸಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ವಿಶ್ವಾಸಿಗಳೆಂದು ಸ್ವಯಂಘೋಷಿಸುವವರನ್ನೆಲ್ಲಾ ಸ್ವರ್ಗಪ್ರವೇಶ ಮಾಡಿಸುವುದು ಅಲ್ಲಾಹುವಿನ ನೀತಿಯಲ್ಲ. ಸಕಲ ಆಮಿಷ ಮತ್ತು ಪ್ರಚೋದನೆಗಳನ್ನು ಗೆದ್ದು, ಪರೀಕ್ಷೆಗಳನ್ನೆಲ್ಲಾ ಸ್ಥೈರ್ಯದಿಂದ ಎದುರಿಸಿ ತಮ್ಮ ವಿಶ್ವಾಸವನ್ನು ಸಾಬೀತುಪಡಿಸುವವರಿಗೆ ಮಾತ್ರ ಅಲ್ಲಾಹು ಮೋಕ್ಷವನ್ನು ನೀಡುತ್ತಾನೆ.

ಆಗಿದೆ. ಖಂಡಿತವಾಗಿಯೂ ಅಲ್ಲಾಹು ಸರ್ವಲೋಕದವರಿಂದ ನಿರಪೇಕ್ಷನಾಗಿರುವನು.

7. ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರ ಕೆಡುಕುಗಳನ್ನು ನಾವು ಅವರಿಂದ ಅಳಿಸುವೆವು. ಅವರು ಮಾಡುತ್ತಿದ್ದುದರ ಪೈಕಿ ಅತ್ಯುತ್ತಮ ವಾಗಿರುವುದಕ್ಕಿರುವ ಪ್ರತಿಫಲವನ್ನು ನಾವು ಅವರಿಗೆ ನೀಡುವೆವು.

وَٱلَّذِينَ ءَامَنُواْ وَعَمِلُواْ ٱلصَّـٰلِحَـٰتِ لَنُكَفِّرَنَّ عَنۡهُمۡ سَيِّـَٔاتِهِمۡ وَلَنَجۡزِيَنَّهُمۡ أَحۡسَنَ ٱلَّذِي كَانُواْ يَعۡمَلُونَ ٧

8. ತನ್ನ ಮಾತಾಪಿತರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಲು ನಾವು ಮನುಷ್ಯನೊಂದಿಗೆ ಆಜ್ಞಾಪಿಸಿರುವೆವು. ನಿನಗೆ ಯಾವುದೇ ಅರಿವೂ ಇಲ್ಲದಿರುವುದನ್ನು ನನ್ನೊಂದಿಗೆ ಸಹಭಾಗಿಯನ್ನಾಗಿ ಮಾಡಲು ಅವರು (ಮಾತಾಪಿತರು) ನಿನ್ನನ್ನು ಬಲವಂತಪಡಿಸಿದರೆ ಅವರನ್ನು ಅನುಸರಿಸದಿರು. ನಿಮ್ಮ ಮರಳುವಿಕೆಯು ನನ್ನ ಬಳಿಗಾಗಿದೆ. ಆಗ ನೀವು ಮಾಡಿಕೊಂಡಿರುವುದರ ಕುರಿತು ನಾನು ನಿಮಗೆ ತಿಳಿಸಿಕೊಡುವೆನು.

وَوَصَّيۡنَا ٱلۡإِنسَٰنَ بِوَٰلِدَيۡهِ حُسۡنٗاۖ وَإِن جَٰهَدَاكَ لِتُشۡرِكَ بِي مَا لَيۡسَ لَكَ بِهِۦ عِلۡمٞ فَلَا تُطِعۡهُمَآۚ إِلَيَّ مَرۡجِعُكُمۡ فَأُنَبِّئُكُم بِمَا كُنتُمۡ تَعۡمَلُونَ ٨

9. ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರನ್ನು ಖಂಡಿತವಾಗಿಯೂ ನಾವು ಸಜ್ಜನರಲ್ಲಿ ಸೇರಿಸುವೆವು.

وَٱلَّذِينَ ءَامَنُواْ وَعَمِلُواْ ٱلصَّـٰلِحَـٰتِ لَنُدۡخِلَنَّهُمۡ فِي ٱلصَّـٰلِحِينَ ٩

10. 'ನಾವು ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರುವೆವು' ಎಂದು ಹೇಳುವ ಕೆಲವರು ಮನುಷ್ಯರಲ್ಲಿರುವರು. ಆದರೆ ಅಲ್ಲಾಹುವಿನ ಮಾರ್ಗದಲ್ಲಿ ಅವರನ್ನು ಹಿಂಸಿಸಲಾದರೆ ಜನರ ಹಿಂಸೆಯನ್ನು ಅಲ್ಲಾಹುವಿನ ಶಿಕ್ಷೆಯೆಂಬಂತೆ ಅವರು ಪರಿಗಣಿಸುವರು.(1) ತಮ್ಮ ರಬ್‌ನ ವತಿಯಿಂದ ಯಾವುದಾದರೂ ಸಹಾಯವು

وَمِنَ ٱلنَّاسِ مَن يَقُولُ ءَامَنَّا بِٱللَّهِ فَإِذَآ أُوذِيَ فِي ٱللَّهِ جَعَلَ فِتۡنَةَ ٱلنَّاسِ كَعَذَابِ ٱللَّهِۖ وَلَئِن جَآءَ نَصۡرٞ مِّن رَّبِّكَ لَيَقُولُنَّ إِنَّا كُنَّا مَعَكُمۡۚ أَوَلَيۡسَ ٱللَّهُ بِأَعۡلَمَ بِمَا فِي صُدُورِ ٱلۡعَٰلَمِينَ ١٠

1 ಅಲ್ಲಾಹುವಿನ ಶಿಕ್ಷೆಯನ್ನು ಭಯಪಡುವ ರೀತಿಯಲ್ಲೇ ಜನರ ಹಿಂಸೆಗಳನ್ನು ಭಯಪಡುವ ಹಾಗೂ ಸಂದರ್ಭಕ್ಕನುಸಾರವಾಗಿ ತಮ್ಮ ಬಣ್ಣವನ್ನು ಬದಲಾಯಿಸಿಕೊಳ್ಳುವ ಕಪಟ ವಿಶ್ವಾಸಿಗಳ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ.

ಬಂದರೆ ಅವರು (ಸತ್ಯವಿಶ್ವಾಸಿಗಳೊಂದಿಗೆ) ಹೇಳುವರು: 'ಖಂಡಿತವಾಗಿಯೂ ನಾವು ನಿಮ್ಮೊಂದಿಗಿದ್ದೆವು'. ಸರ್ವಲೋಕದವರ ಹೃದಯಗಳಲ್ಲಿರುವುದರ ಕುರಿತು ಅಲ್ಲಾಹು ಚೆನ್ನಾಗಿ ಅರಿಯುವವನಲ್ಲವೇ?

11. ಸತ್ಯವಿಶ್ವಾಸವಿಟ್ಟವರನ್ನು ಖಂಡಿತವಾಗಿಯೂ ಅಲ್ಲಾಹು ಅರಿಯುವನು. ಕಪಟವಿಶ್ವಾಸಿಗಳನ್ನೂ ಅವನು ಅರಿಯುವನು.

وَلَيَعۡلَمَنَّ ٱللَّهُ ٱلَّذِينَ ءَامَنُواْ وَلَيَعۡلَمَنَّ ٱلۡمُنَٰفِقِينَ ١١

12. 'ನೀವು ನಮ್ಮ ಮಾರ್ಗವನ್ನು ಅನುಸರಿಸಿರಿ. ನಾವು ನಿಮ್ಮ ಪಾಪಗಳನ್ನು ಹೊರುವೆವು' ಎಂದು ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳೊಂದಿಗೆ ಹೇಳಿದರು. ಆದರೆ ಅವರ ಪಾಪಗಳಲ್ಲಿ ಏನನ್ನೂ ಇವರು ಹೊರಲಾರರು. ಖಂಡಿತವಾಗಿಯೂ ಇವರು ಸುಳ್ಳು ಹೇಳುವವರಾಗಿರುವರು.

وَقَالَ ٱلَّذِينَ كَفَرُواْ لِلَّذِينَ ءَامَنُواْ ٱتَّبِعُواْ سَبِيلَنَا وَلۡنَحۡمِلۡ خَطَٰيَٰكُمۡ وَمَا هُم بِحَٰمِلِينَ مِنۡ خَطَٰيَٰهُم مِّن شَيۡءٍۖ إِنَّهُمۡ لَكَٰذِبُونَ ١٢

13. ಅವರು ತಮ್ಮ ಪಾಪಭಾರಗಳನ್ನು ಮತ್ತು ತಮ್ಮ ಪಾಪಭಾರಗಳೊಂದಿಗೆ ಇತರ ಪಾಪಭಾರಗಳನ್ನೂ ಹೊರಬೇಕಾಗಿ ಬರುವುದು. ಅವರು ಸ್ವತಃ ಹೆಣೆದು ರಚಿಸಿರುವುದರ ಕುರಿತು ಪುನರುತ್ಥಾನ ದಿನದಂದು ಖಂಡಿತವಾಗಿಯೂ ಅವರೊಂದಿಗೆ ವಿಚಾರಿಸಲಾಗುವುದು.

وَلَيَحۡمِلُنَّ أَثۡقَالَهُمۡ وَأَثۡقَالٗا مَّعَ أَثۡقَالِهِمۡۖ وَلَيُسۡـَٔلُنَّ يَوۡمَ ٱلۡقِيَٰمَةِ عَمَّا كَانُواْ يَفۡتَرُونَ ١٣

14. ನಾವು ನೂಹ್‌ರನ್ನು ಅವರ ಜನತೆಯೆಡೆಗೆ ಕಳುಹಿಸಿದೆವು. ಅವರು ಐವತ್ತು ವರ್ಷಗಳನ್ನು ಹೊರತುಪಡಿಸಿ ಒಂದು ಸಾವಿರ ವರ್ಷಗಳವರೆಗೆ[1] ಅವರ ಮಧ್ಯೆ ಕಳೆದರು. ತರುವಾಯ ಅವರು ಅಕ್ರಮಿಗಳಾಗಿರುವಾಗಲೇ ಪ್ರಳಯವು ಅವರನ್ನು ಹಿಡಿಯಿತು.

وَلَقَدۡ أَرۡسَلۡنَا نُوحًا إِلَىٰ قَوۡمِهِۦ فَلَبِثَ فِيهِمۡ أَلۡفَ سَنَةٍ إِلَّا خَمۡسِينَ عَامٗا فَأَخَذَهُمُ ٱلطُّوفَانُ وَهُمۡ ظَٰلِمُونَ ١٤

1 ನೂಹ್(عَلَيْهِ السَّلَامُ)ರವರು 950 ವರ್ಷಗಳ ಕಾಲ ಜೀವಿಸಿದ್ದರು. ಅಸಾಮಾನ್ಯ ವಿಧದಲ್ಲಿ ದೀರ್ಘವಾದ ಒಂದು ಆಯುಷ್ಕಾಲವನ್ನು ಅವರ ಮಧ್ಯೆ ಸಂದೇಶಪ್ರಚಾರ ಮಾಡುವುದರಲ್ಲೇ ಸಂಪೂರ್ಣವಾಗಿ ವ್ಯಯಿಸಿಯೂ ಸಹ ಕೆಲವು ಜನರು ಮಾತ್ರ ಸತ್ಯವಿಶ್ವಾಸವನ್ನು ಸ್ವೀಕರಿಸಿದರು.

**15.** ತರುವಾಯ ನಾವು ಆತನನ್ನು ಮತ್ತು ಹಡಗಿನಲ್ಲಿರುವವರನ್ನು ರಕ್ಷಿಸಿದೆವು. ಅದನ್ನು ಸರ್ವಲೋಕದವರಿಗೆ ಒಂದು ದೃಷ್ಟಾಂತವನ್ನಾಗಿ ಮಾಡಿದೆವು.

فَأَنجَيۡنَٰهُ وَأَصۡحَٰبَ ٱلسَّفِينَةِ وَجَعَلۡنَٰهَآ ءَايَةً لِّلۡعَٰلَمِينَ ﴿١٥﴾

**16.** ಇಬ್ರಾಹೀಮ್‌ರನ್ನು ಸಹ (ನಾವು ಕಳುಹಿಸಿದೆವು). ಆತ ತಮ್ಮ ಜನರೊಂದಿಗೆ ಹೇಳಿದ ಸಂದರ್ಭ: 'ನೀವು ಅಲ್ಲಾಹುವನ್ನು ಆರಾಧಿಸಿರಿ ಮತ್ತು ಅವನನ್ನು ಭಯಪಡಿರಿ. ನೀವು ಅರಿತವರಾಗಿದ್ದರೆ ಅದು ನಿಮಗೆ ಉತ್ತಮವಾಗಿದೆ.

وَإِبۡرَٰهِيمَ إِذۡ قَالَ لِقَوۡمِهِ ٱعۡبُدُواْ ٱللَّهَ وَٱتَّقُوهُۖ ذَٰلِكُمۡ خَيۡرٞ لَّكُمۡ إِن كُنتُمۡ تَعۡلَمُونَ ﴿١٦﴾

**17.** ನೀವು ಅಲ್ಲಾಹುವಿನ ಹೊರತು ಕೆಲವು ವಿಗ್ರಹಗಳನ್ನು ಆರಾಧಿಸುತ್ತಿರುವಿರಿ ಮತ್ತು ಸುಳ್ಳನ್ನು ಹೆಣೆಯುತ್ತಿರುವಿರಿ. ನೀವು ಅಲ್ಲಾಹುವಿನ ಹೊರತು ಯಾರನ್ನು ಆರಾಧಿಸುತ್ತಿರುವಿರೋ ಅವರು ನಿಮ್ಮ ಅನ್ನಾಧಾರವನ್ನು ಸ್ವಾಧೀನದಲ್ಲಿಟ್ಟುಕೊಂಡಿಲ್ಲ.(1) ಆದ್ದರಿಂದ ನೀವು ಅಲ್ಲಾಹುವಿನ ಬಳಿ ಅನ್ನಾಧಾರವನ್ನು ಅರಸಿರಿ, ಅವನನ್ನು ಆರಾಧಿಸಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನಿಮ್ಮನ್ನು ಅವನೆಡೆಗೇ ಮರಳಿಸಲಾಗುವುದು'.

إِنَّمَا تَعۡبُدُونَ مِن دُونِ ٱللَّهِ أَوۡثَٰنٗا وَتَخۡلُقُونَ إِفۡكًاۚ إِنَّ ٱلَّذِينَ تَعۡبُدُونَ مِن دُونِ ٱللَّهِ لَا يَمۡلِكُونَ لَكُمۡ رِزۡقٗا فَٱبۡتَغُواْ عِندَ ٱللَّهِ ٱلرِّزۡقَ وَٱعۡبُدُوهُ وَٱشۡكُرُواْ لَهُۥٓۖ إِلَيۡهِ تُرۡجَعُونَ ﴿١٧﴾

**18.** ನೀವು ನಿಷೇಧಿಸುವುದಾದರೆ ನಿಮಗಿಂತ ಮುಂಚೆ ಅನೇಕ ಸಮುದಾಯದವರು ನಿಷೇಧಿಸಿರುವರು. ಸಂದೇಶವಾಹಕರ ಹೊಣೆಯು ಸ್ಪಷ್ಟವಾದ ಬೋಧನೆ ಮಾತ್ರವಾಗಿದೆ.

وَإِن تُكَذِّبُواْ فَقَدۡ كَذَّبَ أُمَمٞ مِّن قَبۡلِكُمۡۖ وَمَا عَلَى ٱلرَّسُولِ إِلَّا ٱلۡبَلَٰغُ ٱلۡمُبِينُ ﴿١٨﴾

**19.** ಅಲ್ಲಾಹು ಸೃಷ್ಟಿಯನ್ನು ಹೇಗೆ ಆರಂಭಿಸುವನು ಮತ್ತು ತರುವಾಯ ಅದನ್ನು ಹೇಗೆ ಪುನರಾವರ್ತಿಸುವನು ಎಂಬುದನ್ನು ಅವರು ಕಂಡಿಲ್ಲವೇ? ಖಂಡಿತವಾಗಿಯೂ ಅದು ಅಲ್ಲಾಹುವಿನ ಪಾಲಿಗೆ ಸುಲಭವಾಗಿದೆ.

أَوَلَمۡ يَرَوۡاْ كَيۡفَ يُبۡدِئُ ٱللَّهُ ٱلۡخَلۡقَ ثُمَّ يُعِيدُهُۥٓۚ إِنَّ ذَٰلِكَ عَلَى ٱللَّهِ يَسِيرٞ ﴿١٩﴾

1 ನಿಮ್ಮ ಅನ್ನಾಧಾರ ಮಾರ್ಗವು ಆ ಆರಾಧ್ಯರ ಅಧೀನದಲ್ಲಿಲ್ಲ.

20. ಹೇಳಿರಿ: 'ನೀವು ಭೂಮಿಯಲ್ಲಿ ಸಂಚರಿಸಿರಿ. ತರುವಾಯ ಅವನು ಸೃಷ್ಟಿಯನ್ನು ಹೇಗೆ ಆರಂಭಿಸಿರುವನು ಎಂಬುದನ್ನು ನೋಡಿರಿ. ನಂತರ ಅಲ್ಲಾಹು ಇನ್ನೊಮ್ಮೆ ಸೃಷ್ಟಿಸುವನು. ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು'.

قُلْ سِيرُوا۟ فِى ٱلْأَرْضِ فَٱنظُرُوا۟ كَيْفَ بَدَأَ ٱلْخَلْقَ ۚ ثُمَّ ٱللَّهُ يُنشِئُ ٱلنَّشْأَةَ ٱلْـَٔاخِرَةَ ۚ إِنَّ ٱللَّهَ عَلَىٰ كُلِّ شَىْءٍ قَدِيرٌ ﴿٢٠﴾

21. ತಾನಿಚ್ಛಿಸುವವರನ್ನು ಅವನು ಶಿಕ್ಷಿಸುವನು ಮತ್ತು ತಾನಿಚ್ಛಿಸುವವರಿಗೆ ಅವನು ಕರುಣೆ ತೋರುವನು. ನಿಮ್ಮನ್ನು ಅವನೆಡೆಗೇ ಮರಳಿಸಲಾಗುವುದು.

يُعَذِّبُ مَن يَشَآءُ وَيَرْحَمُ مَن يَشَآءُ ۖ وَإِلَيْهِ تُقْلَبُونَ ﴿٢١﴾

22. ಭೂಮಿಯಲ್ಲಾಗಲಿ, ಆಕಾಶದಲ್ಲಾಗಲಿ (ಅವನನ್ನು) ಸೋಲಿಸಲು ನಿಮ್ಮಿಂದಾಗದು. ಅಲ್ಲಾಹುವಿನ ಹೊರತು ನಿಮಗೆ ಯಾವುದೇ ರಕ್ಷಕನಾಗಲಿ, ಸಹಾಯಕನಾಗಲಿ ಇಲ್ಲ.

وَمَآ أَنتُم بِمُعْجِزِينَ فِى ٱلْأَرْضِ وَلَا فِى ٱلسَّمَآءِ ۖ وَمَا لَكُم مِّن دُونِ ٱللَّهِ مِن وَلِىٍّ وَلَا نَصِيرٍ ﴿٢٢﴾

23. ಅಲ್ಲಾಹುವಿನ ದೃಷ್ಟಾಂತಗಳಲ್ಲಿ ಮತ್ತು ಅವನೊಂದಿಗಿರುವ ಭೇಟಿಯಲ್ಲಿ ಅವಿಶ್ವಾಸವಿಟ್ಟವರು ಯಾರೋ ಅವರು ನನ್ನ ಕಾರುಣ್ಯದ ಬಗ್ಗೆ ನಿರಾಶರಾಗಿರುವರು.[1] ಅವರಿಗೆ ಯಾತನಾಮಯವಾದ ಶಿಕ್ಷೆಯಿದೆ.

وَٱلَّذِينَ كَفَرُوا۟ بِـَٔايَٰتِ ٱللَّهِ وَلِقَآئِهِۦٓ أُو۟لَٰٓئِكَ يَئِسُوا۟ مِن رَّحْمَتِى وَأُو۟لَٰٓئِكَ لَهُمْ عَذَابٌ أَلِيمٌ ﴿٢٣﴾

24. 'ನೀವು ಅವನನ್ನು ವಧಿಸಿರಿ ಅಥವಾ ಸುಟ್ಟು ಹಾಕಿರಿ' ಎಂದು ಹೇಳುವುದರ ಹೊರತು ಅವರ (ಇಬ್ರಾಹೀಮ್‌ರ) ಜನತೆಯು ಬೇರಾವ ಉತ್ತರವನ್ನೂ ನೀಡಲಿಲ್ಲ. ಆದರೆ ಅಲ್ಲಾಹು ಅವರನ್ನು ಅಗ್ನಿಯಿಂದ ರಕ್ಷಿಸಿದನು. ವಿಶ್ವಾಸವಿಡುವ ಜನರಿಗೆ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ.

فَمَا كَانَ جَوَابَ قَوْمِهِۦٓ إِلَّآ أَن قَالُوا۟ ٱقْتُلُوهُ أَوْ حَرِّقُوهُ فَأَنجَىٰهُ ٱللَّهُ مِنَ ٱلنَّارِ ۚ إِنَّ فِى ذَٰلِكَ لَـَٔايَٰتٍ لِّقَوْمٍ يُؤْمِنُونَ ﴿٢٤﴾

25. ಅವರು ಹೇಳಿದರು: 'ನೀವು ಅಲ್ಲಾಹುವಿನ ಹೊರತು ವಿಗ್ರಹಗಳನ್ನು (ಆರಾಧ್ಯರನ್ನಾಗಿ) ಮಾಡಿಕೊಂಡಿರುವುದು ಐಹಿಕ ಜೀವನದಲ್ಲಿ

وَقَالَ إِنَّمَا ٱتَّخَذْتُم مِّن دُونِ ٱللَّهِ أَوْثَٰنًا مَّوَدَّةَ بَيْنِكُمْ فِى ٱلْحَيَوٰةِ ٱلدُّنْيَا ۖ ثُمَّ يَوْمَ

1 ಅಲ್ಲಾಹುವಿನ ಕಾರುಣ್ಯದ ಬಗ್ಗೆಯಿರುವ ನಿರೀಕ್ಷೆಯು ನಮ್ಮನ್ನು ಮುನ್ನಡೆಸಬೇಕು. ಅಲ್ಲಾಹುವಿನ ಕಾರುಣ್ಯದ ಬಗ್ಗೆ ನೀವು ನಿರಾಶರಾಗಬಾರದು ಎಂದು ಅಲ್ಲಾಹು ನಮ್ಮನ್ನು 39:53ರಲ್ಲಿ ಎಚ್ಚರಿಸಿದ್ದಾನೆ.

ٱلۡقِيَٰمَةِ يَكۡفُرُ بَعۡضُكُم بِبَعۡضٖ وَيَلۡعَنُ بَعۡضُكُم بَعۡضٗا وَمَأۡوَىٰكُمُ ٱلنَّارُ وَمَا لَكُم مِّن نَّٰصِرِينَ ٢٥

ನೀವು ಪರಸ್ಪರ ಹೊಂದಿರುವ ಸ್ನೇಹಸಂಬಂಧದ ಹೆಸರಿನಲ್ಲಿ ಮಾತ್ರವಾಗಿದೆ.[1] ತರುವಾಯ ಪುನರುತ್ಥಾನ ದಿನದಂದು ನಿಮ್ಮಲ್ಲಿ ಕೆಲವರು ಇತರ ಕೆಲವರನ್ನು ನಿಷೇಧಿಸುವರು. ಕೆಲವರು ಇತರ ಕೆಲವರನ್ನು ಶಪಿಸುವರು. ನರಕಾಗ್ನಿಯು ನಿಮ್ಮ ವಾಸಸ್ಥಳವಾಗಿದೆ. ನಿಮಗೆ ಸಹಾಯಕರಾಗಿ ಯಾರೂ ಇರಲಾರರು'.

۞ فَـَٔامَنَ لَهُۥ لُوطٞۘ وَقَالَ إِنِّي مُهَاجِرٌ إِلَىٰ رَبِّيٓۖ إِنَّهُۥ هُوَ ٱلۡعَزِيزُ ٱلۡحَكِيمُ ٢٦

**26.** ಆಗ ಲೂತ್[2] ಅವರಲ್ಲಿ ವಿಶ್ವಾಸವಿಟ್ಟರು. ಅವರು (ಇಬ್ರಾಹೀಮ್) ಹೇಳಿದರು: 'ಖಂಡಿತವಾಗಿಯೂ ನಾನು ಊರು ಬಿಟ್ಟು ನನ್ನ ರಬ್‌ನೆಡೆಗೆ ತೆರಳುವೆನು.[3] ಖಂಡಿತವಾಗಿಯೂ ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು'.

وَوَهَبۡنَا لَهُۥٓ إِسۡحَٰقَ وَيَعۡقُوبَ وَجَعَلۡنَا فِي ذُرِّيَّتِهِ ٱلنُّبُوَّةَ وَٱلۡكِتَٰبَ وَءَاتَيۡنَٰهُ أَجۡرَهُۥ فِي ٱلدُّنۡيَاۖ وَإِنَّهُۥ فِي ٱلۡأٓخِرَةِ لَمِنَ ٱلصَّٰلِحِينَ ٢٧

**27.** ನಾವು ಅವರಿಗೆ ಇಸ್‌ಹಾಕ್‌ರನ್ನು (ಮಗನಾಗಿ) ಇಸ್‌ಹಾಕ್‌ರನ್ನು ಮತ್ತು (ಮೊಮ್ಮಗನಾಗಿ) ಯಅ್‌ಕೂಬ್‌ರನ್ನು ದಯಪಾಲಿಸಿದೆವು. ಅವರ ಸಂತತಿಗಳಲ್ಲಿ ನಾವು ಪ್ರವಾದಿತ್ವವನ್ನು ಮತ್ತು ಗ್ರಂಥವನ್ನು ನೀಡಿದೆವು. ಇಹಲೋಕದಲ್ಲಿ ನಾವು ಅವರಿಗೆ ಅವರ ಪ್ರತಿಫಲವನ್ನು ನೀಡಿರುವೆವು. ಪರಲೋಕದಲ್ಲಿ ಖಂಡಿತವಾಗಿಯೂ ಅವರು ಸಜ್ಜನರಲ್ಲಿ ಸೇರಿದವರಾಗಿರುವರು.

وَلُوطًا إِذۡ قَالَ لِقَوۡمِهِۦٓ إِنَّكُمۡ لَتَأۡتُونَ ٱلۡفَٰحِشَةَ مَا سَبَقَكُم بِهَا مِنۡ أَحَدٖ مِّنَ ٱلۡعَٰلَمِينَ ٢٨

**28.** ಲೂತ್‌ರನ್ನೂ (ನಾವು ಸಂದೇಶವಾಹಕರನ್ನಾಗಿ ಕಳುಹಿಸಿದೆವು). ಅವರು ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ: 'ಖಂಡಿತವಾಗಿಯೂ ನೀವು ಮಾಡುತ್ತಿರುವುದು ನೀಚಕೃತ್ಯವಾಗಿದೆ.

---

1 ಬಹುದೇವಾರಾಧಕರು ಪರಸ್ಪರ ತಮ್ಮಲ್ಲಿ ಹಾಗೂ ಅಧರ್ಮಿಗಳು ಪರಸ್ಪರ ತಮ್ಮಲ್ಲಿ ಲೌಕಿಕ ಹಿತಾಸಕ್ತಿಗಳ ತಳಹದಿಯಲ್ಲಿ ಬಲಿಷ್ಠ ಸ್ನೇಹ ಸಂಬಂಧವನ್ನು ಹೊಂದಿರುವುದನ್ನು ಕಾಣಬಹುದು. ಹೆಚ್ಚಿನ ಸಂದರ್ಭಗಳಲ್ಲೂ ಅಂತಹ ಸ್ನೇಹ ಸಂಬಂಧಗಳು ಏಕದೇವವಿಶ್ವಾಸವನ್ನು ಸ್ವೀಕರಿಸುವುದರಿಂದ ಅವರನ್ನು ತಡೆಯುತ್ತದೆ. ಆದರೆ ಪರಲೋಕಕ್ಕೆ ತಲುಪುವಾಗ ಆ ಸಂಬಂಧಗಳು ಮುರಿದು ಬೀಳಲಿವೆ.

2 ಲೂತ್(عَلَيْهِ ٱلسَّلَامُ)ರವರು ಪ್ರವಾದಿ ಇಬ್ರಾಹೀಮ್(عَلَيْهِ ٱلسَّلَامُ)ರವರ ಸಹೋದರ ಪುತ್ರರಾಗಿದ್ದಾರೆ.

3 ಇಬ್ರಾಹೀಮ್(عَلَيْهِ ٱلسَّلَامُ)ಮತ್ತು ಲೂತ್(عَلَيْهِ ٱلسَّلَامُ)ರವರ ಸ್ವದೇಶವು ಇರಾಕ್ ಆಗಿದೆ. ಅಲ್ಲಿಂದ ಅವರು ಪ್ಯಾಲಸ್ತೀನಿಗೆ ವಲಸೆ ಹೋದರು. ಲೂತ್(عَلَيْهِ ٱلسَّلَامُ)ರವರು ಸದೂಮ್ (ಸೊದೋಮ್) ಪ್ರದೇಶದಲ್ಲಿ ವಾಸಿಸಿದರು.

ನಿಮಗಿಂತ ಮುಂಚೆ ಸರ್ವ ಲೋಕದವರ ಪೈಕಿ ಯಾರೂ ಅದನ್ನು ಮಾಡಿರಲಿಲ್ಲ.

**29.** ನೀವು ಕಾಮಶಮನಕ್ಕಾಗಿ ಪುರುಷರ ಬಳಿಗೆ ತೆರಳುತ್ತಲೂ, (ನೈಸರ್ಗಿಕವಾದ) ಮಾರ್ಗವನ್ನು ಉಲ್ಲಂಘಿಸುತ್ತಲೂ[1] ನಿಮ್ಮ ಸಭೆಗಳಲ್ಲಿ ನಿಷಿದ್ಧಕೃತ್ಯವನ್ನು ಮಾಡುತ್ತಲೂ ಇರುವುದೇ?' ಆಗ ಅವರ ಜನತೆಯ ಉತ್ತರವು 'ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ ಅಲ್ಲಾಹುವಿನ ಶಿಕ್ಷೆಯನ್ನು ನಮ್ಮ ಬಳಿಗೆ ತಾ' ಎಂದು ಹೇಳಿರುವುದರ ಹೊರತು ಇನ್ನೇನೂ ಆಗಿರಲಿಲ್ಲ.

أَئِنَّكُمْ لَتَأْتُونَ ٱلرِّجَالَ وَتَقْطَعُونَ
ٱلسَّبِيلَ وَتَأْتُونَ فِي نَادِيكُمُ ٱلْمُنكَرَ ۖ
فَمَا كَانَ جَوَابَ قَوْمِهِۦٓ إِلَّآ أَن قَالُوا۟
ٱئْتِنَا بِعَذَابِ ٱللَّهِ إِن كُنتَ مِنَ
ٱلصَّٰدِقِينَ ﴿٢٩﴾

**30.** ಆತ (ಲೂತ್) ಹೇಳಿದರು: 'ಓ ನನ್ನ ರಬ್! ವಿನಾಶಕಾರಿಗಳಾಗಿರುವ ಈ ಜನತೆಯ ವಿರುದ್ಧ ನನಗೆ ಸಹಾಯ ಮಾಡು'.

قَالَ رَبِّ ٱنصُرْنِى عَلَى ٱلْقَوْمِ
ٱلْمُفْسِدِينَ ﴿٣٠﴾

**31.** ನಮ್ಮ ದೂತರು ಶುಭವಾರ್ತೆಯೊಂದಿಗೆ ಇಬ್ರಾಹೀಮ್‌ರ ಬಳಿಗೆ ಬಂದಾಗ ಅವರು ಹೇಳಿದರು: 'ಖಂಡಿತವಾಗಿಯೂ ನಾವು ಈ ಊರಿನವರನ್ನು ನಾಶ ಮಾಡುವೆವು. ಖಂಡಿತವಾಗಿಯೂ ಈ ಊರಿನವರು ಅಕ್ರಮಿಗಳಾಗಿರುವರು'.

وَلَمَّا جَآءَتْ رُسُلُنَآ إِبْرَٰهِيمَ بِٱلْبُشْرَىٰ
قَالُوٓا۟ إِنَّا مُهْلِكُوٓا۟ أَهْلِ هَٰذِهِ ٱلْقَرْيَةِ ۖ إِنَّ
أَهْلَهَا كَانُوا۟ ظَٰلِمِينَ ﴿٣١﴾

**32.** ಆತ (ಇಬ್ರಾಹೀಂ) ಹೇಳಿದರು: 'ಅಲ್ಲಿ ಲೂತ್ ಇದ್ದಾರೆ!' ದೂತರು ಹೇಳಿದರು: 'ಅಲ್ಲಿರುವವರ ಕುರಿತು ನಮಗೆ ಚೆನ್ನಾಗಿ ಅರಿವಿದೆ. ಅವರನ್ನು ಮತ್ತು ಅವರ ಕುಟುಂಬವನ್ನು ಖಂಡಿತವಾಗಿಯೂ ನಾವು ರಕ್ಷಿಸುವೆವು. ಅವರ ಪತ್ನಿಯ ಹೊರತು. ಆಕೆ ಶಿಕ್ಷೆಗೊಳಗಾಗುವವರಲ್ಲಿ ಸೇರಿದವಳಾಗುವಳು'.

قَالَ إِنَّ فِيهَا لُوطًا ۚ قَالُوا۟ نَحْنُ أَعْلَمُ بِمَن
فِيهَا ۖ لَنُنَجِّيَنَّهُۥ وَأَهْلَهُۥٓ إِلَّا ٱمْرَأَتَهُۥ كَانَتْ
مِنَ ٱلْغَٰبِرِينَ ﴿٣٢﴾

**33.** ನಮ್ಮ ದೂತರು ಲೂತ್‌ರ ಬಳಿಗೆ ಬಂದಾಗ ಅವರ ವಿಷಯದಲ್ಲಿ ಲೂತ್ ದುಃಖಿತರಾದರು ಮತ್ತು ಅವರ ಬಗ್ಗೆ ಅವರಿಗೆ

وَلَمَّآ أَن جَآءَتْ رُسُلُنَا لُوطًا سِىٓءَ بِهِمْ
وَضَاقَ بِهِمْ ذَرْعًا ۖ وَقَالُوا۟ لَا تَخَفْ وَلَا تَحْزَنْ

1 ತಕ್ತಊನ ಸ್ಸಬೀಲ ಎಂಬುದನ್ನು ನೀವು ದರೋಡೆ ಮಾಡುತ್ತೀರಿ ಎಂದೂ ನೀವು ದಾರಿಯನ್ನು ತಡೆಯುತ್ತೀರಿ ಎಂದೂ ವ್ಯಾಖ್ಯಾನಿಸಲಾಗಿದೆ.

إِنَّا مُنَجُّوكَ وَأَهْلَكَ إِلَّا ٱمْرَأَتَكَ كَانَتْ
مِنَ ٱلْغَٰبِرِينَ ﴿٣٣﴾

ಮನಃಕ್ಲೇಶವುಂಟಾಯಿತು.[1] ದೂತರು ಹೇಳಿದರು: ‘ತಾವು ಭಯಪಡುವುದಾಗಲಿ ದುಃಖಿಸುವುದಾಗಲಿ ಮಾಡದಿರಿ. ನಾವು ತಮ್ಮನ್ನೂ ತಮ್ಮ ಕುಟುಂಬವನ್ನೂ ಖಂಡಿತವಾಗಿಯೂ ರಕ್ಷಿಸುವೆವು. ತಮ್ಮ ಪತ್ನಿಯ ಹೊರತು. ಆಕೆ ಶಿಕ್ಷೆಗೊಳಗಾಗುವವರಲ್ಲಿ ಸೇರುವಳು.

إِنَّا مُنزِلُونَ عَلَىٰٓ أَهْلِ هَٰذِهِ ٱلْقَرْيَةِ رِجْزًا
مِّنَ ٱلسَّمَآءِ بِمَا كَانُوا۟ يَفْسُقُونَ ﴿٣٤﴾

**34.** ಈ ಊರಿನವರ ಮೇಲೆ ಅವರು ಮಾಡುತ್ತಿದ್ದ ಅನೈತಿಕ ಕೃತ್ಯದ ಫಲವಾಗಿ ನಾವು ಆಕಾಶದಿಂದ ಒಂದು ಶಿಕ್ಷೆಯನ್ನು ಇಳಿಸುವೆವು’.

وَلَقَد تَّرَكْنَا مِنْهَآ ءَايَةًۢ بَيِّنَةً لِّقَوْمٍ
يَعْقِلُونَ ﴿٣٥﴾

**35.** ಖಂಡಿತವಾಗಿಯೂ ಚಿಂತಿಸುವ ಜನರಿಗೆ ನಾವು ಅದರಲ್ಲಿ ಸ್ಪಷ್ಟವಾದ ದೃಷ್ಟಾಂತವೊಂದನ್ನು ಉಳಿಸಿರುವೆವು.

وَإِلَىٰ مَدْيَنَ أَخَاهُمْ شُعَيْبًا فَقَالَ يَٰقَوْمِ
ٱعْبُدُوا۟ ٱللَّهَ وَٱرْجُوا۟ ٱلْيَوْمَ ٱلْءَاخِرَ وَلَا
تَعْثَوْا۟ فِى ٱلْأَرْضِ مُفْسِدِينَ ﴿٣٦﴾

**36.** ಮದ್‌ಯನ್‌ನವರ ಬಳಿಗೆ ಅವರ ಸಹೋದರರಾದ ಶುಐಬ್‌ರನ್ನು (ನಾವು ಕಳುಹಿಸಿದೆವು). ಅವರು ಹೇಳಿದರು: ‘ಓ ನನ್ನ ಜನರೇ! ನೀವು ಅಲ್ಲಾಹುವನ್ನು ಆರಾಧಿಸಿರಿ ಮತ್ತು ಅಂತ್ಯದಿನವನ್ನು ನಿರೀಕ್ಷಿಸಿರಿ. ನೀವು ವಿನಾಶಕಾರಿಗಳಾಗಿ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡದಿರಿ’.

فَكَذَّبُوهُ فَأَخَذَتْهُمُ ٱلرَّجْفَةُ فَأَصْبَحُوا۟ فِى
دَارِهِمْ جَٰثِمِينَ ﴿٣٧﴾

**37.** ಆದರೆ ಅವರು ಶುಐಬ್‌ರನ್ನು ನಿಷೇಧಿಸಿದರು. ಆದ್ದರಿಂದ ಭೂಕಂಪನವು ಅವರನ್ನು ಹಿಡಿಯಿತು. ಆಗ ಅವರು ತಮ್ಮ ಮನೆಗಳಲ್ಲಿ ಅಧೋಮುಖಿಗಳಾಗಿ ಬಿದ್ದರು.

وَعَادًا وَثَمُودَا۟ وَقَد تَّبَيَّنَ لَكُم مِّن
مَّسَٰكِنِهِمْ ۖ وَزَيَّنَ لَهُمُ ٱلشَّيْطَٰنُ
أَعْمَٰلَهُمْ فَصَدَّهُمْ عَنِ ٱلسَّبِيلِ وَكَانُوا۟
مُسْتَبْصِرِينَ ﴿٣٨﴾

**38.** ಆದ್ ಮತ್ತು ಸಮೂದ್ ಜನಾಂಗಗಳನ್ನೂ (ನಾವು ನಾಶ ಮಾಡಿದೆವು). ಅವರ ವಾಸಸ್ಥಳಗಳಿಂದ ಖಂಡಿತವಾಗಿಯೂ ನಿಮಗೆ ಅದು ಸ್ಪಷ್ಟವಾಗಿ ತಿಳಿದು ಬಂದಿದೆ. ಸೈತಾನನು ಅವರಿಗೆ ಅವರ ಕರ್ಮಗಳನ್ನು ಆಕರ್ಷಕಗೊಳಿಸಿ ತೋರಿಸಿದನು ಮತ್ತು

1 ಅವರು ಆ ದೂತರನ್ನು ತಮ್ಮ ಲೈಂಗಿಕಾಸಕ್ತಿಗೆ ಬಳಸುವವರೋ ಎಂಬುದು ಅವರ ಆತಂಕವಾಗಿತ್ತು.

ಅವರನ್ನು ಸರಿಯಾದ ಮಾರ್ಗದಿಂದ ತಡೆದನು. (ವಾಸ್ತವದಲ್ಲಿ) ಅವರು ನೋಡಿ ತಿಳಿಯುವ ಸಾಮರ್ಥ್ಯವುಳ್ಳವರಾಗಿದ್ದರು.

39. ಕಾರೂನ್‌ನನ್ನೂ, ಫಿರ್‌ಔನ್‌ನನ್ನೂ, ಹಾಮಾನ್‌ನನ್ನೂ (ನಾವು ನಾಶ ಮಾಡಿದೆವು). ಮೂಸಾ ಅವರೆಡೆಗೆ ಸ್ಪಷ್ಟವಾದ ಪುರಾವೆಗಳೊಂದಿಗೆ ಬಂದಿದ್ದರು. ಆದರೆ ಅವರು ಭೂಮಿಯಲ್ಲಿ ಅಹಂಕಾರದಿಂದ ಮೆರೆದರು. ಅವರಿಗೆ (ನಮ್ಮನ್ನು) ಮೀರಿ ಹೋಗಲು ಸಾಧ್ಯವಾಗಲಿಲ್ಲ.

وَقَٰرُونَ وَفِرۡعَوۡنَ وَهَٰمَٰنَۖ وَلَقَدۡ جَآءَهُم مُّوسَىٰ بِٱلۡبَيِّنَٰتِ فَٱسۡتَكۡبَرُواْ فِي ٱلۡأَرۡضِ وَمَا كَانُواْ سَٰبِقِينَ ٣٩

40. ಹೀಗೆ ಪ್ರತಿಯೊಬ್ಬರನ್ನೂ ನಾವು ಅವರವರ ಪಾಪಕ್ಕಾಗಿ ಹಿಡಿದೆವು. ಅವರಲ್ಲಿ ಕೆಲವರ ವಿರುದ್ಧ ನಾವು ಕಲ್ಲುಗಳ ಬಿರುಗಾಳಿಯನ್ನು ಕಳುಹಿಸಿದೆವು. ಅವರಲ್ಲಿ ಕೆಲವರನ್ನು ಘೋರ ಶಬ್ದವು ಹಿಡಿಯಿತು. ಅವರಲ್ಲಿ ಕೆಲವರನ್ನು ನಾವು ಭೂಮಿಯು ನುಂಗುವಂತೆ ಮಾಡಿದೆವು. ಅವರಲ್ಲಿ ಕೆಲವರನ್ನು ಮುಳುಗಿಸಿದೆವು. ಅಲ್ಲಾಹು ಅವರೊಂದಿಗೆ ಅನ್ಯಾಯವೆಸಗಿರಲಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದರು.

فَكُلًّا أَخَذۡنَا بِذَنۢبِهِۦۖ فَمِنۡهُم مَّنۡ أَرۡسَلۡنَا عَلَيۡهِ حَاصِبٗا وَمِنۡهُم مَّنۡ أَخَذَتۡهُ ٱلصَّيۡحَةُ وَمِنۡهُم مَّنۡ خَسَفۡنَا بِهِ ٱلۡأَرۡضَ وَمِنۡهُم مَّنۡ أَغۡرَقۡنَاۚ وَمَا كَانَ ٱللَّهُ لِيَظۡلِمَهُمۡ وَلَٰكِن كَانُوٓاْ أَنفُسَهُمۡ يَظۡلِمُونَ ٤٠

41. ಅಲ್ಲಾಹುವಿನ ಹೊರತು ಅನ್ಯರನ್ನು ರಕ್ಷಕರನ್ನಾಗಿ ಮಾಡಿಕೊಂಡವರ ಉಪಮೆಯು ಜೇಡನಂತಿದೆ. ಅದೊಂದು ಮನೆಯನ್ನು ಮಾಡಿಕೊಂಡಿತು. ಮನೆಗಳ ಪೈಕಿ ಅತ್ಯಂತ ಬಲಹೀನವಾಗಿರುವುದು ಜೇಡನ ಮನೆಯಾಗಿದೆ. ಅವರು ಅರ್ಥ ಮಾಡಿಕೊಳ್ಳುವವರಾಗಿದ್ದರೆ!

مَثَلُ ٱلَّذِينَ ٱتَّخَذُواْ مِن دُونِ ٱللَّهِ أَوۡلِيَآءَ كَمَثَلِ ٱلۡعَنكَبُوتِ ٱتَّخَذَتۡ بَيۡتٗاۖ وَإِنَّ أَوۡهَنَ ٱلۡبُيُوتِ لَبَيۡتُ ٱلۡعَنكَبُوتِۚ لَوۡ كَانُواْ يَعۡلَمُونَ ٤١

42. ತನ್ನ ಹೊರತು ಅವರು ಕರೆದು ಪ್ರಾರ್ಥಿಸುತ್ತಿರುವ ಯಾವುದೇ ವಸ್ತುವನ್ನೂ ಖಂಡಿತವಾಗಿಯೂ ಅಲ್ಲಾಹು ಅರಿಯುವನು. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

إِنَّ ٱللَّهَ يَعۡلَمُ مَا يَدۡعُونَ مِن دُونِهِۦ مِن شَيۡءٖۚ وَهُوَ ٱلۡعَزِيزُ ٱلۡحَكِيمُ ٤٢

43. ಆ ಉಪಮೆಗಳನ್ನು ನಾವು ಜನರಿಗಾಗಿ ವಿವರಿಸಿ ಕೊಡುತ್ತಿರುವೆವು. ಅರಿವಿರುವವರ ಹೊರತು ಯಾರೂ ಅವುಗಳನ್ನು ಚಿಂತಿಸಿ ಗ್ರಹಿಸಲಾರರು.

وَتِلۡكَ ٱلۡأَمۡثَٰلُ نَضۡرِبُهَا لِلنَّاسِۖ وَمَا يَعۡقِلُهَآ إِلَّا ٱلۡعَٰلِمُونَ ٤٣

44. ಅಲ್ಲಾಹು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿದನು. ಖಂಡಿತವಾಗಿಯೂ ಅದರಲ್ಲಿ ಸತ್ಯವಿಶ್ವಾಸಿಗಳಿಗೆ ದೃಷ್ಟಾಂತವಿದೆ.

خَلَقَ ٱللَّهُ ٱلسَّمَٰوَٰتِ وَٱلْأَرْضَ بِٱلْحَقِّۚ إِنَّ فِى ذَٰلِكَ لَءَايَةً لِّلْمُؤْمِنِينَ ﴿٤٤﴾

45. (ಓ ಪ್ರವಾದಿಯವರೇ!) ಗ್ರಂಥದಿಂದ ತಮಗೆ ದಿವ್ಯಸಂದೇಶ ನೀಡಲಾಗಿರುವುದನ್ನು ತಾವು ಓದಿಕೊಡಿರಿ ಮತ್ತು ನಮಾಝನ್ನು ಸಂಸ್ಥಾಪಿಸಿರಿ. ಖಂಡಿತವಾಗಿಯೂ ನಮಾಝ್ ನೀಚಕೃತ್ಯಗಳಿಂದಲೂ, ದುಷ್ಕರ್ಮಗಳಿಂದಲೂ ತಡೆಯುತ್ತದೆ.[1] ಅಲ್ಲಾಹುವಿನ ಸ್ಮರಣೆಯು ಅತಿಮಹತ್ವವುಳ್ಳದ್ದಾಗಿದೆ. ನೀವು ಏನು ಮಾಡುತ್ತಿರುವಿರೋ ಅದನ್ನು ಅಲ್ಲಾಹು ಅರಿಯುತ್ತಿರುವನು.

ٱتْلُ مَآ أُوحِىَ إِلَيْكَ مِنَ ٱلْكِتَٰبِ وَأَقِمِ ٱلصَّلَوٰةَۖ إِنَّ ٱلصَّلَوٰةَ تَنْهَىٰ عَنِ ٱلْفَحْشَآءِ وَٱلْمُنكَرِۗ وَلَذِكْرُ ٱللَّهِ أَكْبَرُۗ وَٱللَّهُ يَعْلَمُ مَا تَصْنَعُونَ ﴿٤٥﴾

46. ಗ್ರಂಥದವರೊಂದಿಗೆ ಅತ್ಯುತ್ತಮವಾದ ವಿಧದಲ್ಲೇ ಹೊರತು ಸಂವಾದ ಮಾಡದಿರಿ; ಅವರ ಪೈಕಿ ಅಕ್ರಮವೆಸಗಿದವರೊಂದಿಗೆ ಹೊರತು. (ಅವರೊಡನೆ) ಹೇಳಿರಿ: ನಮಗೆ ಅವತೀರ್ಣಗೊಂಡಿರುವುದರಲ್ಲಿ ಮತ್ತು ನಿಮಗೆ ಅವತೀರ್ಣಗೊಂಡಿರುವುದರಲ್ಲಿ ನಾವು ವಿಶ್ವಾಸವಿಟ್ಟಿರುವೆವು. ನಮ್ಮ ಆರಾಧ್ಯನು ಮತ್ತು ನಿಮ್ಮ ಆರಾಧ್ಯನು ಒಬ್ಬನೇ ಆಗಿರುವನು. ನಾವು ಅವನಿಗೆ ಶರಣಾಗತರಾಗಿರುವೆವು.

۞ وَلَا تُجَٰدِلُوٓا۟ أَهْلَ ٱلْكِتَٰبِ إِلَّا بِٱلَّتِى هِىَ أَحْسَنُ إِلَّا ٱلَّذِينَ ظَلَمُوا۟ مِنْهُمْۖ وَقُولُوٓا۟ ءَامَنَّا بِٱلَّذِىٓ أُنزِلَ إِلَيْنَا وَأُنزِلَ إِلَيْكُمْ وَإِلَٰهُنَا وَإِلَٰهُكُمْ وَٰحِدٌ وَنَحْنُ لَهُۥ مُسْلِمُونَ ﴿٤٦﴾

47. ಹೀಗೆ ನಾವು ತಮಗೂ ಗ್ರಂಥವನ್ನು ಅವತೀರ್ಣಗೊಳಿಸಿರುವೆವು. ನಾವು (ಈ ಹಿಂದೆ) ಯಾರಿಗೆ ಗ್ರಂಥವನ್ನು ನೀಡಿರುವೆವೋ ಅವರು ಇದರಲ್ಲಿ ವಿಶ್ವಾಸವಿಡುವರು. ಇವರ ಪೈಕಿಯೂ[2] ಅದರಲ್ಲಿ ವಿಶ್ವಾಸವಿಡುವವರು ಇರುವರು. ನಮ್ಮ ದೃಷ್ಟಾಂತಗಳನ್ನು

وَكَذَٰلِكَ أَنزَلْنَآ إِلَيْكَ ٱلْكِتَٰبَۚ فَٱلَّذِينَ ءَاتَيْنَٰهُمُ ٱلْكِتَٰبَ يُؤْمِنُونَ بِهِۦۖ وَمِنْ هَٰٓؤُلَآءِ مَن يُؤْمِنُ بِهِۦۚ وَمَا يَجْحَدُ بِـَٔايَٰتِنَآ إِلَّا ٱلْكَٰفِرُونَ ﴿٤٧﴾

1 ನಮಾಝ್ ಅಲ್ಲಾಹುವಿನೊಂದಿಗಿರುವ ಪ್ರಾರ್ಥನೆಯಾಗಿದೆ. ಅವನೊಂದಿಗಿರುವ ಪ್ರತಿಜ್ಞೆಯನ್ನು ಮತ್ತು ವಿನಮ್ರತೆಯನ್ನು ಒಳಗೊಂಡಿದೆ. ಅದನ್ನು ಕ್ರಮಪ್ರಕಾರ ನಿರ್ವಹಿಸುವವನು ಕೆಟ್ಟ ಆಲೋಚನೆಗಳಿಂದ ಮತ್ತು ಕೆಡುಕುಗಳಿಂದ ಮುಕ್ತಿ ಪಡೆಯುವನು ಅಥವಾ ನಮಾಝಿನ ಮೂಲಕ ನಿಷ್ಕಳಂಕಗೊಂಡಿರುವ ಹೃದಯವು ಅವನನ್ನು ಅವುಗಳಿಂದೆಲ್ಲಾ ತಡೆಯುವುದು.

2 'ಇವರ ಪೈಕಿ' ಎಂಬುದರ ಉದ್ದೇಶವು ಮಕ್ಕಾದಲ್ಲಿದ್ದ ಬಹುದೇವಾರಾಧಕರಾಗಿದ್ದಾರೆ.

ಅವಿಶ್ವಾಸಿಗಳ ಹೊರತು ಇನ್ನಾರೂ ನಿಷೇಧಿಸಲಾರರು.

وَمَا كُنتَ تَتۡلُواْ مِن قَبۡلِهِۦ مِن كِتَٰبٖ وَلَا تَخُطُّهُۥ بِيَمِينِكَۖ إِذٗا لَّٱرۡتَابَ ٱلۡمُبۡطِلُونَ ٤٨

48. ಇದಕ್ಕೆ ಮುಂಚೆ ತಾವು ಯಾವುದಾದರೂ ಗ್ರಂಥವನ್ನು ಪಾರಾಯಣ ಮಾಡುವುದಾಗಲಿ, ತಮ್ಮ ಬಲಗೈಯಿಂದ ಅದನ್ನು ಬರೆಯುವುದಾಗಲಿ ಮಾಡಿರಲಿಲ್ಲ. ಹಾಗಿರುತ್ತಿದ್ದರೆ ಈ ಸತ್ಯನಿಷೇಧಿಗಳಿಗೆ ಸಂಶಯಪಡಬಹುದಾಗಿತ್ತು.[1]

بَلۡ هُوَ ءَايَٰتُۢ بَيِّنَٰتٞ فِي صُدُورِ ٱلَّذِينَ أُوتُواْ ٱلۡعِلۡمَۚ وَمَا يَجۡحَدُ بِـَٔايَٰتِنَآ إِلَّا ٱلظَّٰلِمُونَ ٤٩

49. ಆದರೆ ಜ್ಞಾನ ನೀಡಲಾದವರ ಹೃದಯಗಳಲ್ಲಿ ಅದು ಸುಸ್ಪಷ್ಟವಾದ ದೃಷ್ಟಾಂತಗಳಾಗಿವೆ. ನಮ್ಮ ದೃಷ್ಟಾಂತಗಳನ್ನು ಅಕ್ರಮಿಗಳ ಹೊರತು ಇನ್ನಾರೂ ನಿಷೇಧಿಸಲಾರರು.

وَقَالُواْ لَوۡلَآ أُنزِلَ عَلَيۡهِ ءَايَٰتٞ مِّن رَّبِّهِۦۚ قُلۡ إِنَّمَا ٱلۡأٓيَٰتُ عِندَ ٱللَّهِ وَإِنَّمَآ أَنَا۠ نَذِيرٞ مُّبِينٌ ٥٠

50. ಅವರು (ಸತ್ಯನಿಷೇಧಿಗಳು) ಹೇಳಿದರು: 'ಇವರಿಗೆ ಇವರ ರಬ್‌ನಿಂದ ದೃಷ್ಟಾಂತಗಳೇಕೆ ಇಳಿಸಿಕೊಡಲಾಗುವುದಿಲ್ಲ?' ಹೇಳಿರಿ: 'ದೃಷ್ಟಾಂತಗಳಿರುವುದು ಅಲ್ಲಾಹುವಿನ ಬಳಿ ಮಾತ್ರವಾಗಿದೆ. ನಾನು ಸ್ಪಷ್ಟವಾದ ಒಬ್ಬ ಮುನ್ನೆಚ್ಚರಿಕೆಗಾರನು ಮಾತ್ರವಾಗಿರುವೆನು'.

أَوَلَمۡ يَكۡفِهِمۡ أَنَّآ أَنزَلۡنَا عَلَيۡكَ ٱلۡكِتَٰبَ يُتۡلَىٰ عَلَيۡهِمۡۚ إِنَّ فِي ذَٰلِكَ لَرَحۡمَةٗ وَذِكۡرَىٰ لِقَوۡمٖ يُؤۡمِنُونَ ٥١

51. ನಾವು ತಮಗೆ ಗ್ರಂಥವನ್ನು ಅವತೀರ್ಣ ಗೊಳಿಸಿರುವೆವು ಎಂಬುದೇ ಅವರಿಗೆ (ದೃಷ್ಟಾಂತವಾಗಿ) ಸಾಕಾಗುವುದಿಲ್ಲವೇ? ಅದನ್ನು ಅವರಿಗೆ ಓದಿಕೊಡಲಾಗುತ್ತಿದೆ. ವಿಶ್ವಾಸವಿಡುವ ಜನರಿಗೆ ಖಂಡಿತವಾಗಿಯೂ ಅದರಲ್ಲಿ ಅನುಗ್ರಹ ಮತ್ತು ಉಪದೇಶವಿದೆ.

قُلۡ كَفَىٰ بِٱللَّهِ بَيۡنِي وَبَيۡنَكُمۡ شَهِيدٗاۖ يَعۡلَمُ مَا فِي ٱلسَّمَٰوَٰتِ وَٱلۡأَرۡضِۗ وَٱلَّذِينَ ءَامَنُواْ بِٱلۡبَٰطِلِ وَكَفَرُواْ بِٱللَّهِ أُوْلَٰٓئِكَ

52. (ಓ ಪ್ರವಾದಿಯವರೇ!) ಹೇಳಿರಿ: 'ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅಲ್ಲಾಹು ಸಾಕು. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದನ್ನು ಅವನು ಅರಿಯುವನು. ಅಸತ್ಯದಲ್ಲಿ

1 ಪ್ರವಾದಿ(ﷺ)ರವರು ಅನಕ್ಷರಸ್ತರಾಗಿದ್ದರು. ಅವರೆಂದೂ ಓದು–ಬರಹವನ್ನು ಕಲಿತವರಾಗಿರಲಿಲ್ಲ. ಈ ವಾಸ್ತವತೆಯು ಅವರ ನಿಕಟವರ್ತಿಗಳೆಲ್ಲರಿಗೂ ತಿಳಿದಿತ್ತು. ಅನಕ್ಷರಸ್ಥ ವ್ಯಕ್ತಿಯೊಬ್ಬರು ಅತ್ಯುನ್ನತ ಮಟ್ಟದಲ್ಲಿರುವ ಒಂದು ಗ್ರಂಥವನ್ನು ರಚಿಸುವುದು ಅಸಂಭವವೆಂಬುದು ಸಾಮಾನ್ಯ ಜ್ಞಾನವಿರುವ ಎಲ್ಲರಿಗೂ ತಿಳಿದಿರುವ ವಿಚಾರವಾಗಿದೆ. ಆದ್ದರಿಂದ ಮುಂಚೆಯೇ ಅವರಿಗೆ ಓದು– ಬರಹ ತಿಳಿದಿರುತ್ತಿದ್ದರೆ ಕುರ್‌ಆನ್ ಅವರ ಸ್ವಂತ ಕೃತಿಯಾಗಿರಬಹುದೇ ಎಂದು ವಿರೋಧಿಗಳು ಸಂದೇಹಪಡುವುದಕ್ಕೆ ಸ್ವಲ್ಪವಾದರೂ ಕಾರಣವಿರುತ್ತಿತ್ತು.

هُمُ ٱلۡخَٰسِرُونَ ٥٢

ವಿಶ್ವಾಸವಿಟ್ಟವರು ಮತ್ತು ಅಲ್ಲಾಹುವಿನಲ್ಲಿ ಅವಿಶ್ವಾಸವಿಟ್ಟವರು ಯಾರೋ ಅವರೇ ನಷ್ಟಹೊಂದಿದವರಾಗಿರುವರು’.

وَيَسۡتَعۡجِلُونَكَ بِٱلۡعَذَابِ وَلَوۡلَآ أَجَلٞ مُّسَمّٗى لَّجَآءَهُمُ ٱلۡعَذَابُۚ وَلَيَأۡتِيَنَّهُم بَغۡتَةٗ وَهُمۡ لَا يَشۡعُرُونَ ٥٣

**53.** ಅವರು ಶಿಕ್ಷೆಗಾಗಿ ತಮ್ಮಲ್ಲಿ ಆತುರಪಡುತ್ತಿರುವರು. ನಿಶ್ಚಿತವಾದ ಅವಧಿಯೊಂದು ಇಲ್ಲದಿರುತ್ತಿದ್ದರೆ ಶಿಕ್ಷೆಯು ಅವರ ಬಳಿಗೆ ಬಂದು ಬಿಡುತ್ತಿತ್ತು. ಖಂಡಿತವಾಗಿಯೂ ಅವರು ನಿರೀಕ್ಷಿಸದ ಸ್ಥಿತಿಯಲ್ಲಿ ಹಠಾತ್ತನೆ ಅದು ಅವರ ಬಳಿಗೆ ಬಂದೇ ಬರುವುದು.

يَسۡتَعۡجِلُونَكَ بِٱلۡعَذَابِ وَإِنَّ جَهَنَّمَ لَمُحِيطَةُۢ بِٱلۡكَٰفِرِينَ ٥٤

**54.** ಶಿಕ್ಷೆಗಾಗಿ ಅವರು ತಮ್ಮಲ್ಲಿ ಆತುರಪಡುತ್ತಿರುವರು.(1) ಖಂಡಿತವಾಗಿಯೂ ನರಕಾಗ್ನಿಯು ಸತ್ಯನಿಷೇಧಿಗಳನ್ನು ಆವರಿಸಿಕೊಂಡಿದೆ.

يَوۡمَ يَغۡشَىٰهُمُ ٱلۡعَذَابُ مِن فَوۡقِهِمۡ وَمِن تَحۡتِ أَرۡجُلِهِمۡ وَيَقُولُ ذُوقُواْ مَا كُنتُمۡ تَعۡمَلُونَ ٥٥

**55.** ಅವರ ಮೇಲ್ಭಾಗದಿಂದಲೂ, ಅವರ ಕಾಲುಗಳ ಅಡಿಭಾಗದಿಂದಲೂ ಶಿಕ್ಷೆಯು ಅವರನ್ನು ಆವರಿಸಿಬಿಡುವ ದಿನ! (ಅಂದು) ಅವನು (ಅಲ್ಲಾಹು) ಹೇಳುವನು: ‘ನೀವು ಮಾಡಿಕೊಂಡಿರುವುದರ ಫಲವನ್ನು ಸವಿಯಿರಿ’.

يَٰعِبَادِيَ ٱلَّذِينَ ءَامَنُوٓاْ إِنَّ أَرۡضِي وَٰسِعَةٞ فَإِيَّٰيَ فَٱعۡبُدُونِ ٥٦

**56.** ವಿಶ್ವಾಸಿಗಳಾಗಿರುವ ಓ ನನ್ನ ದಾಸರೇ! ಖಂಡಿತವಾಗಿಯೂ ನನ್ನ ಭೂಮಿಯು ವಿಶಾಲವಾಗಿದೆ. ಆದ್ದರಿಂದ ನೀವು ನನ್ನನ್ನು ಮಾತ್ರ ಆರಾಧಿಸಿರಿ.

كُلُّ نَفۡسٖ ذَآئِقَةُ ٱلۡمَوۡتِۖ ثُمَّ إِلَيۡنَا تُرۡجَعُونَ ٥٧

**57.** ಪ್ರತಿಯೊಂದು ಶರೀರವೂ ಮರಣದ ರುಚಿಯನ್ನು ಸವಿಯಲಿದೆ. ತರುವಾಯ ನಿಮ್ಮನ್ನು ನಮ್ಮ ಬಳಿಗೇ ಮರಳಿಸಲಾಗುವುದು.

---

1 ಪ್ರವಾದಿ(ﷺ)ರವರು ಸತ್ಯನಿಷೇಧಿಗಳಿಗೆ ಎರಡು ರೀತಿಯ ಶಿಕ್ಷೆಗಳ ಕುರಿತು ಎಚ್ಚರಿಕೆ ನೀಡಿದ್ದರು. ಒಂದು: ಇಹಲೋಕದಲ್ಲೇ ಅವರು ಎದುರಿಸಬೇಕಾಗಿ ಬರುವ ಅಪಾಯ, ಸೋಲು ಮತ್ತು ಪತನ. ಎರಡು: ಶಾಶ್ವತವಾದ ನರಕ ಶಿಕ್ಷೆ. ಇವೆರಡಕ್ಕೂ ನಿಶ್ಚಿತ ಅವಧಿಯಿದೆ. ಬದ್ರ್‌ನಿಂದ ತೊಡಗಿ ಮಕ್ಕಾ ವಿಜಯದವರೆಗೆ ನಡೆದ ಘಟನಾವಳಿಗಳ ಮೂಲಕ ತಮಗೆ ಅಲ್ಲಾಹು ಇಹಲೋಕದಲ್ಲಿ ವಿಧಿಸಿದ್ದೇನೆಂದು ಸತ್ಯನಿಷೇಧಿಗಳು ಅರಿತುಕೊಂಡರು. ಪರಲೋಕ ಶಿಕ್ಷೆಯ ಅವಧಿ ತಲುಪಿದಾಗ ಅವರು ಖಂಡಿತವಾಗಿಯೂ ಅದನ್ನು ಸವಿಯುವರು.

58. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರಿಗೆ ನಾವು ಸ್ವರ್ಗದಲ್ಲಿ, ತಳಭಾಗದಿಂದ ನದಿಗಳು ಹರಿಯುವ ಉನ್ನತ ಸೌಧಗಳಲ್ಲಿ ವಾಸಸ್ಥಳವನ್ನು ಒದಗಿಸಿಕೊಡುವೆವು. ಅದರಲ್ಲಿ ಅವರು ಶಾಶ್ವತವಾಗಿ ವಾಸಿಸುವರು. ಸತ್ಕರ್ಮವೆಸಗುವವರಿಗಿರುವ ಪ್ರತಿಫಲವು ಎಷ್ಟು ಉತ್ತಮವಾದುದು!

وَٱلَّذِينَ ءَامَنُواْ وَعَمِلُواْ ٱلصَّٰلِحَٰتِ لَنُبَوِّئَنَّهُم مِّنَ ٱلْجَنَّةِ غُرَفًا تَجْرِى مِن تَحْتِهَا ٱلْأَنْهَٰرُ خَٰلِدِينَ فِيهَا ۚ نِعْمَ أَجْرُ ٱلْعَٰمِلِينَ ﴿٥٨﴾

59. ಅವರು ತಾಳ್ಮೆ ವಹಿಸುವವರೂ ತಮ್ಮ ರಬ್‌ನ ಮೇಲೆ ಭರವಸೆಯನ್ನಿಡುವವರೂ ಆಗಿರುವರು.

ٱلَّذِينَ صَبَرُواْ وَعَلَىٰ رَبِّهِمْ يَتَوَكَّلُونَ ﴿٥٩﴾

60. ಸ್ವಂತ ಅನ್ನಾಧಾರದ ಹೊಣೆಯನ್ನು ವಹಿಸಿ ಕೊಂಡಿರದ ಎಷ್ಟೊಂದು ಜೀವಿಗಳಿವೆ![1] ಅವುಗಳಿಗೂ, ನಿಮಗೂ ಅನ್ನಾಧಾರವನ್ನು ಒದಗಿಸುವವನು ಅಲ್ಲಾಹುವಾಗಿರುವನು. ಅವನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

وَكَأَيِّن مِّن دَآبَّةٍ لَّا تَحْمِلُ رِزْقَهَا ٱللَّهُ يَرْزُقُهَا وَإِيَّاكُمْ ۚ وَهُوَ ٱلسَّمِيعُ ٱلْعَلِيمُ ﴿٦٠﴾

61. 'ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಮತ್ತು ಸೂರ್ಯ–ಚಂದ್ರರನ್ನು ಅಧೀನಗೊಳಿಸಿದವನು ಯಾರು?' ಎಂದು ತಾವು ಅವರೊಂದಿಗೆ (ಬಹು ದೇವಾರಾಧಕರೊಂದಿಗೆ) ಪ್ರಶ್ನಿಸಿದರೆ ಅವರು ಖಂಡಿತವಾಗಿಯೂ 'ಅಲ್ಲಾಹು' ಎನ್ನುವರು. ಹಾಗಾದರೆ ಅವರು (ಸತ್ಯದಿಂದ) ತಪ್ಪಿಸಲ್ಪಡುತ್ತಿರುವುದಾದರೂ ಹೇಗೆ?

وَلَئِن سَأَلْتَهُم مَّنْ خَلَقَ ٱلسَّمَٰوَٰتِ وَٱلْأَرْضَ وَسَخَّرَ ٱلشَّمْسَ وَٱلْقَمَرَ لَيَقُولُنَّ ٱللَّهُ ۖ فَأَنَّىٰ يُؤْفَكُونَ ﴿٦١﴾

62. ಅಲ್ಲಾಹು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು ತಾನಿಚ್ಛಿಸುವವರಿಗೆ ಅದನ್ನು ಸಂಕುಚಿತಗೊಳಿಸುವನು. ಖಂಡಿತವಾಗಿಯೂ ಅಲ್ಲಾಹು ಸಕಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

ٱللَّهُ يَبْسُطُ ٱلرِّزْقَ لِمَن يَشَآءُ مِنْ عِبَادِهِۦ وَيَقْدِرُ لَهُۥٓ ۚ إِنَّ ٱللَّهَ بِكُلِّ شَىْءٍ عَلِيمٌ ﴿٦٢﴾

1 ಕಠಿಣ ಪರಿಶ್ರಮಗೈದು ಅನ್ನಾಧಾರವನ್ನು ಗಳಿಸಲು ಸಾಧ್ಯವಾಗದ ಮತ್ತು ಶತ್ರುವನ್ನು ಎದುರಿಸಿ ಸೋಲಿಸಲು ಸಾಧ್ಯವಾಗದ ಎಷ್ಟೋ ಜೀವರಾಶಿಗಳಿಗೆ ಅಲ್ಲಾಹು ಅನ್ನಾಧಾರವನ್ನು ಮತ್ತು ಸಂರಕ್ಷಣೆಯನ್ನು ಒದಗಿಸುತ್ತಿರುವನು.

وَلَئِن سَأَلْتَهُم مَّن نَّزَّلَ مِنَ ٱلسَّمَآءِ مَآءً فَأَحْيَا بِهِ ٱلْأَرْضَ مِنۢ بَعْدِ مَوْتِهَا لَيَقُولُنَّ ٱللَّهُ ۚ قُلِ ٱلْحَمْدُ لِلَّهِ ۚ بَلْ أَكْثَرُهُمْ لَا يَعْقِلُونَ ﴿٦٣﴾

63. 'ಆಕಾಶದಿಂದ (ಮಳೆ)ನೀರನ್ನು ಸುರಿಸಿ ತನ್ಮೂಲಕ ನಿರ್ಜೀವವಾಗಿರುವ ಭೂಮಿಗೆ ಜೀವವನ್ನು ನೀಡಿದವನು ಯಾರು?' ಎಂದು ತಾವು ಅವರೊಂದಿಗೆ ಕೇಳಿದರೆ ಅವರು ಖಂಡಿತವಾಗಿಯೂ 'ಅಲ್ಲಾಹು' ಎನ್ನುವರು. ತಾವು ಹೇಳಿರಿ: 'ಅಲ್ಲಾಹುವಿಗೆ ಸ್ತುತಿ. ಆದರೆ ಅವರ ಪೈಕಿ ಹೆಚ್ಚಿನವರೂ ಚಿಂತಿಸಿ ಗ್ರಹಿಸುವುದಿಲ್ಲ'.[1]

وَمَا هَٰذِهِ ٱلْحَيَوٰةُ ٱلدُّنْيَآ إِلَّا لَهْوٌ وَلَعِبٌ ۚ وَإِنَّ ٱلدَّارَ ٱلْءَاخِرَةَ لَهِىَ ٱلْحَيَوَانُ ۚ لَوْ كَانُوا۟ يَعْلَمُونَ ﴿٦٤﴾

64. ಈ ಐಹಿಕ ಜೀವನವು ಕೇವಲ ವಿನೋದ ಮತ್ತು ಮನೋರಂಜನೆಯ ಹೊರತು ಇನ್ನೇನೂ ಅಲ್ಲ. ಖಂಡಿತವಾಗಿಯೂ ಪರಲೋಕ ಜೀವನವೇ ನಿಜವಾದ ಜೀವನವಾಗಿದೆ. ಅವರು ಅರಿತಿರುತ್ತಿದ್ದರೆ!

فَإِذَا رَكِبُوا۟ فِى ٱلْفُلْكِ دَعَوُا۟ ٱللَّهَ مُخْلِصِينَ لَهُ ٱلدِّينَ فَلَمَّا نَجَّىٰهُمْ إِلَى ٱلْبَرِّ إِذَا هُمْ يُشْرِكُونَ ﴿٦٥﴾

65. ಆದರೆ ಅವರು (ಬಹುದೇವಾರಾಧಕರು) ಹಡಗಿನಲ್ಲಿ ಸಂಚರಿಸುವಾಗ ವಿಧೇಯತೆಯನ್ನು ಅಲ್ಲಾಹುವಿಗೆ ನಿಷ್ಕಳಂಕಗೊಳಿಸಿ ಅವನೊಂದಿಗೆ ಪ್ರಾರ್ಥಿಸುವರು. ತರುವಾಯ ಅವನು ಅವರನ್ನು ಸುರಕ್ಷಿತವಾಗಿ ದಡಕ್ಕೆ ತಲುಪಿಸಿದರೆ ಅಗೋ! ಅವರು (ಅವನೊಂದಿಗೆ) ಸಹಭಾಗಿತ್ವವನ್ನು ಮಾಡುವರು.

لِيَكْفُرُوا۟ بِمَآ ءَاتَيْنَٰهُمْ وَلِيَتَمَتَّعُوا۟ ۖ فَسَوْفَ يَعْلَمُونَ ﴿٦٦﴾

66. ನಾವು ಅವರಿಗೆ ದಯಪಾಲಿಸಿರುವುದರಲ್ಲಿ ಅವರು ಕೃತಘ್ನತೆಯನ್ನು ತೋರುವವರು ಮತ್ತು ಸುಖವನ್ನು ಅನುಭವಿಸುವವರೂ ಆಗಿಬಿಟ್ಟರು. ಆದರೆ ಸದ್ಯವೇ ಅವರು ಅರ್ಥಮಾಡಿಕೊಳ್ಳುವರು.

أَوَلَمْ يَرَوْا۟ أَنَّا جَعَلْنَا حَرَمًا ءَامِنًا وَيُتَخَطَّفُ ٱلنَّاسُ مِنْ حَوْلِهِمْ ۚ أَفَبِٱلْبَٰطِلِ

67. ನಾವು ನಿರ್ಭಯವಾದ ಒಂದು ಪವಿತ್ರ ಸ್ಥಳವನ್ನು ನಿರ್ಮಿಸಿರುವೆವು ಎಂಬುದನ್ನು ಅವರು ನೋಡಿಲ್ಲವೇ?[2] ಅವರ

---

1 ಬಹುದೇವಾರಾಧಕರ ಪೈಕಿ ಹೆಚ್ಚಿನವರೂ ಎಲ್ಲ ಕಾಲಗಳಲ್ಲೂ ಸೃಷ್ಟಿಕರ್ತನು ಮತ್ತು ಪರಿಪಾಲಕನು ಏಕಮೇವ ಪ್ರಭುವಾಗಿರುವನು ಎಂಬ ವಿಶ್ವಾಸವನ್ನು ಹೊಂದಿದವರಾಗಿದ್ದರು. ಆದರೆ ಈ ವಿಶ್ವಾಸದ ಬೇಡಿಕೆಗೆ ವಿರುದ್ಧವಾಗಿ ಅವರು ಯಾವುದೇ ಅರ್ಹತೆಯಿಲ್ಲದವರನ್ನು ಆರಾಧಿಸುತ್ತಲೂ, ಪ್ರಾರ್ಥಿಸುತ್ತಲೂ ಇರುವರು.

2 ಪವಿತ್ರ ಕಅ್‌ಬಾ ಮತ್ತು ಅದರ ಪರಿಸರವನ್ನು ಅಲ್ಲಾಹು ಪಾವಿತ್ರ್ಯದ ಸ್ಥಳವನ್ನಾಗಿ ಮಾಡಿರುವನು. ಅಲ್ಲಿ ಅಕ್ರಮ ಅಥವಾ ಆಕ್ರಮಣ ಮಾಡುವುದು ಮಹಾ ಅಪರಾಧವಾಗಿದೆ. ಬಹುದೇವಾರಾಧಕರು ಕೂಡ ಈ

يُؤْمِنُونَ وَبِنِعْمَةِ ٱللَّهِ يَكْفُرُونَ ﴿٦٧﴾

ಸುತ್ತಮುತ್ತಲುಗಳಿಂದ ಜನರನ್ನು ಅಪಹರಿಸಲಾಗುತ್ತಿದೆ. ಆದರೂ ಅವರು ಅಸತ್ಯದಲ್ಲಿ ವಿಶ್ವಾಸವಿಟ್ಟು ಅಲ್ಲಾಹುವಿನ ಅನುಗ್ರಹಕ್ಕೆ ಕೃತಘ್ನತೆ ತೋರುತ್ತಿರುವರೇ?

وَمَنْ أَظْلَمُ مِمَّنِ ٱفْتَرَىٰ عَلَى ٱللَّهِ كَذِبًا أَوْ كَذَّبَ بِٱلْحَقِّ لَمَّا جَآءَهُۥٓ أَلَيْسَ فِى جَهَنَّمَ مَثْوًى لِّلْكَٰفِرِينَ ﴿٦٨﴾

**68.** ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದವನಿಗಿಂತ ಮತ್ತು ಸತ್ಯವು ಬಂದಾಗ ಅದನ್ನು ನಿಷೇಧಿಸಿದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಸತ್ಯನಿಷೇಧಿಗಳಿಗೆ ನರಕಾಗ್ನಿಯಲ್ಲಿ ವಾಸಸ್ಥಳವಿರಲಾರದೇ?[1]

وَٱلَّذِينَ جَٰهَدُوا۟ فِينَا لَنَهْدِيَنَّهُمْ سُبُلَنَا ۚ وَإِنَّ ٱللَّهَ لَمَعَ ٱلْمُحْسِنِينَ ﴿٦٩﴾

**69.** ನಮ್ಮ ಮಾರ್ಗದಲ್ಲಿ ಹೋರಾಟ ಮಾಡುವವರಾರೋ ಅವರನ್ನು ಖಂಡಿತವಾಗಿಯೂ ನಾವು ನಮ್ಮ ಮಾರ್ಗಗಳೆಡೆಗೆ ಮುನ್ನಡೆಸುವೆವು.[2] ಖಂಡಿತವಾಗಿಯೂ ಅಲ್ಲಾಹು ಸತ್ಕರ್ಮಿಗಳ ಜೊತೆಗಿರುವನು.

---

ಪಾವಿತ್ರ್ಯತೆಯನ್ನು ಅಂಗೀಕರಿಸಿದ್ದರು ಮತ್ತು ಹರಮ್‌ಗೂ, ಅದರಲ್ಲಿರುವವರಿಗೂ ಪೂರ್ಣ ಸುರಕ್ಷೆಯ ಭರವಸೆಯನ್ನು ನೀಡಿದ್ದರು.

1 ಸತ್ಯನಿಷೇಧಿಗಳ ವಾಸಸ್ಥಳವು ನರಕದಲ್ಲಿಯಲ್ಲವೇ? ಎಂದು ಅರ್ಥೈಸಿಕೊಳ್ಳಬಹುದು.

2 ಅವರು ಯಾವುದೇ ಕಾರ್ಯದಲ್ಲಿ ತೊಡಗಿದರೂ ಅಲ್ಲಾಹು ಇಷ್ಟಪಡುವ ಮಾರ್ಗದೆಡೆಗೆ ಅವನು ಅವರನ್ನು ಮುನ್ನಡೆಸುವನು ಎಂದರ್ಥ.

## ಅರ್ರೂಮ್ (ರೋಮನ್ನರು)

## سُورَةُ الرُّومِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 60

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

الٓمٓ ١ غُلِبَتِ ٱلرُّومُ ٢ فِيٓ أَدۡنَى ٱلۡأَرۡضِ وَهُم مِّنۢ بَعۡدِ غَلَبِهِمۡ سَيَغۡلِبُونَ ٣ فِي بِضۡعِ سِنِينَۗ لِلَّهِ ٱلۡأَمۡرُ مِن قَبۡلُ وَمِنۢ بَعۡدُۚ وَيَوۡمَئِذٖ يَفۡرَحُ ٱلۡمُؤۡمِنُونَ ٤ بِنَصۡرِ ٱللَّهِۚ يَنصُرُ مَن يَشَآءُۖ وَهُوَ ٱلۡعَزِيزُ ٱلرَّحِيمُ ٥

1–5. ಅಲಿಫ್–ಲಾಮ್–ಮೀಮ್. ಸಮೀಪ ಪ್ರದೇಶದಲ್ಲಿ ರೋಮನ್ನರು ಸೋಲಿಸಲ್ಪಟ್ಟಿರುವರು.[1] ತಮ್ಮ ಸೋಲಿನ ಬಳಿಕ ಕೆಲವೇ ವರ್ಷಗಳಲ್ಲಿ ಅವರು ಜಯಗಳಿಸುವರು. ಮುಂದಿನ ಮತ್ತು ಹಿಂದಿನ ಸಂಗತಿಗಳ ನಿಯಂತ್ರಣವು ಅಲ್ಲಾಹುವಿನದ್ದಾಗಿವೆ. ಅಲ್ಲಾಹುವಿನ ಸಹಾಯದಿಂದಾಗಿ ಅಂದು ಸತ್ಯವಿಶ್ವಾಸಿಗಳು ಸಂಭ್ರಮ ಪಡುವರು. ಅಲ್ಲಾಹು ತಾನಿಚ್ಛಿಸುವವರಿಗೆ ಸಹಾಯ ಮಾಡುವನು. ಅವನು ಪ್ರತಾಪಶಾಲಿಯೂ, ಕರುಣಾನಿಧಿಯೂ ಆಗಿರುವನು.

وَعۡدَ ٱللَّهِۖ لَا يُخۡلِفُ ٱللَّهُ وَعۡدَهُۥ وَلَٰكِنَّ أَكۡثَرَ ٱلنَّاسِ لَا يَعۡلَمُونَ ٦

6. ಇದು ಅಲ್ಲಾಹುವಿನ ವಾಗ್ದಾನವಾಗಿದೆ. ಅಲ್ಲಾಹು ತನ್ನ ವಾಗ್ದಾನವನ್ನು ಉಲ್ಲಂಘಿಸಲಾರನು. ಆದರೆ ಜನರ ಪೈಕಿ ಹೆಚ್ಚಿನವರೂ ಅರ್ಥಮಾಡಿಕೊಳ್ಳುವುದಿಲ್ಲ.

1 ಪ್ರವಾದಿ(ﷺ)ರವರ ಕಾಲದಲ್ಲಿ ಮತ್ತು ಅದಕ್ಕಿಂತ ಸ್ವಲ್ಪ ಮುಂಚೆ ಅರೇಬಿಯನ್ ಉಪದ್ವೀಪದ ಕೆಲವು ಪ್ರದೇಶಗಳಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸುವುದಕ್ಕೋಸ್ಕರ ಪರ್ಶಿಯನ್ ಮತ್ತು ರೋಮನ್ ಚಕ್ರವರ್ತಿಗಳ ಮಧ್ಯೆ ಯುದ್ಧ ನಡೆಯುತ್ತಿತ್ತು. ಗ್ರಂಥ ನೀಡಲಾದವರು ಎಂಬ ಪರಿಗಣನೆಯೊಂದಿಗೆ ಕ್ರೈಸ್ತರಾದ ರೋಮನ್ನರೊಂದಿಗೆ ಮುಸ್ಲಿಮರಿಗೆ ಒಲವಿತ್ತು. ಬಹುದೇವಾರಾಧಕರಾದ ಅರಬರಿಗೆ ಪರ್ಶಿಯನ್ನರೊಂದಿಗೆ ಒಲವಿತ್ತು. ಹಿಜ್ರಾ 5ನೇ ವರ್ಷದಲ್ಲಿ ಪರ್ಶಿಯನ್ನರು ರೋಮನ್ ಸೈನ್ಯವನ್ನು ಸೋಲಿಸಿದಾಗ ಬಹುದೇವಾರಾಧಕರು ಹಿರಿ ಹಿರಿ ಹಿಗ್ಗಿದರು. ಈ ಘಟನೆಯನ್ನು ಮುಂದಿಟ್ಟು ಮುಸ್ಲಿಮರನ್ನು ಗೇಲಿಮಾಡತೊಡಗಿದರು. ಆ ಸಂದರ್ಭದಲ್ಲಿ ಪ್ರಸ್ತುತ ಸೂಕ್ತಿಗಳು ಅವತೀರ್ಣಗೊಂಡವು. ರೋಮನ್ನರ ಸೋಲು ಕೇವಲ ತಾತ್ಕಾಲಿಕವಾಗಿದೆ, ಕೆಲವೇ ವರ್ಷಗಳೊಳಗೆ ಅವರು ಮರಳಿ ಜಯಿಸುವರು ಎಂದು ಅಲ್ಲಾಹು ಘೋಷಿಸಿದನು. ಏಳು ವರ್ಷಗಳ ಬಳಿಕ ಕುರ್ಆನ್‌ನ ಭವಿಷ್ಯನುಡಿಯು ಸತ್ಯವಾಗಿ ಪರಿಣಮಿಸಿತು. ರೋಮನ್ನರು ಯುದ್ಧವನ್ನು ಜಯಿಸಿದ್ದು ಮಾತ್ರವಲ್ಲದೆ ಪರ್ಶಿಯನ್ನರ ಸ್ವಾಧೀನದಲ್ಲಿದ್ದ ಅನೇಕ ಪ್ರದೇಶಗಳಲ್ಲಿ ಅವರು ಆಳ್ವಿಕೆಯನ್ನೂ ಪಡೆದರು.

7. ಇಹಲೋಕ ಜೀವನದ ಪೈಕಿ ಪ್ರತ್ಯಕ್ಷವಾಗಿರುವುದನ್ನು ಅವರು ಅರಿಯುವರು. ಆದರೆ ಪರಲೋಕದ ಬಗ್ಗೆ ಅವರು ಅಲಕ್ಷ್ಯತೆಯಲ್ಲೇ ಇರುವರು.

يَعْلَمُونَ ظَٰهِرًا مِّنَ ٱلْحَيَوٰةِ ٱلدُّنْيَا وَهُمْ عَنِ ٱلْـَٔاخِرَةِ هُمْ غَٰفِلُونَ ﴿٧﴾

8. ಅವರು ಸ್ವತಃ ತಮ್ಮ ಕುರಿತು ಚಿಂತಿಸಿ ನೋಡುವುದಿಲ್ಲವೇ? ಆಕಾಶಗಳನ್ನು ಮತ್ತು ಭೂಮಿಯನ್ನು, ಹಾಗೂ ಅವುಗಳ ಮಧ್ಯೆಯಿರುವುದನ್ನು ಅಲ್ಲಾಹು ಸತ್ಯದೊಂದಿಗೆ ಮತ್ತು ನಿಶ್ಚಿತ ಅವಧಿಯೊಂದಿಗೆ ಹೊರತು ಸೃಷ್ಟಿಸಿಲ್ಲ. ಖಂಡಿತವಾಗಿಯೂ ಜನರ ಪೈಕಿ ಹೆಚ್ಚಿನವರೂ ತಮ್ಮ ರಬ್‌ನೊಂದಿಗಿರುವ ಭೇಟಿಯ ಬಗ್ಗೆ ವಿಶ್ವಾಸವಿಲ್ಲದವರಾಗಿರುವರು.

أَوَلَمْ يَتَفَكَّرُوا۟ فِىٓ أَنفُسِهِم ۗ مَّا خَلَقَ ٱللَّهُ ٱلسَّمَٰوَٰتِ وَٱلْأَرْضَ وَمَا بَيْنَهُمَآ إِلَّا بِٱلْحَقِّ وَأَجَلٍ مُّسَمًّى ۗ وَإِنَّ كَثِيرًا مِّنَ ٱلنَّاسِ بِلِقَآئِ رَبِّهِمْ لَكَٰفِرُونَ ﴿٨﴾

9. ಅವರು ಭೂಮಿಯಲ್ಲಿ ಸಂಚರಿಸಿ, ತರುವಾಯ ತಮಗಿಂತ ಮುಂಚಿನವರ ಪರ್ಯಾವಸಾನವು ಹೇಗಿತ್ತೆಂಬುದನ್ನು ನೋಡಲಾರರೇ? ಅವರು ಇವರಿಗಿಂತಲೂ ಹೆಚ್ಚು ಬಲಶಾಲಿಗಳಾಗಿದ್ದರು. ಅವರು ಭೂಮಿಯಲ್ಲಿ ಉತ್ತು ಬೇಸಾಯ ಮಾಡಿದರು. ಇವರು ಜನವಾಸ ಸ್ಥಾಪಿಸಿದ್ದಕ್ಕಿಂತಲೂ ಹೆಚ್ಚಾಗಿ ಅವರು ಅದರಲ್ಲಿ ಜನವಾಸ ಸ್ಥಾಪಿಸಿದ್ದರು. ನಮ್ಮ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದರು. ಅಲ್ಲಾಹು ಅವರೊಂದಿಗೆ ಅನ್ಯಾಯವೆಸಗಿರಲಿಲ್ಲ. ಆದರೆ ಅವರು ಸ್ವತಃ ತಮ್ಮೊಂದಿಗೇ ಅನ್ಯಾಯವೆಸಗಿದರು.

أَوَلَمْ يَسِيرُوا۟ فِى ٱلْأَرْضِ فَيَنظُرُوا۟ كَيْفَ كَانَ عَٰقِبَةُ ٱلَّذِينَ مِن قَبْلِهِمْ ۚ كَانُوٓا۟ أَشَدَّ مِنْهُمْ قُوَّةً وَأَثَارُوا۟ ٱلْأَرْضَ وَعَمَرُوهَآ أَكْثَرَ مِمَّا عَمَرُوهَا وَجَآءَتْهُمْ رُسُلُهُم بِٱلْبَيِّنَٰتِ ۖ فَمَا كَانَ ٱللَّهُ لِيَظْلِمَهُمْ وَلَٰكِن كَانُوٓا۟ أَنفُسَهُمْ يَظْلِمُونَ ﴿٩﴾

10. ತರುವಾಯ, ದುಷ್ಕೃತ್ಯವೆಸಗಿದವರ ಅಂತ್ಯವು ಅತ್ಯಂತ ಹೀನವಾಗಿತ್ತು. ಅದು ಅವರು ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿರುವುದರ ಮತ್ತು ಅವುಗಳ ಬಗ್ಗೆ ಅವರು ಗೇಲಿ ಮಾಡಿರುವುದರ ಫಲವಾಗಿತ್ತು.

ثُمَّ كَانَ عَٰقِبَةَ ٱلَّذِينَ أَسَٰٓـُٔوا۟ ٱلسُّوٓأَىٰٓ أَن كَذَّبُوا۟ بِـَٔايَٰتِ ٱللَّهِ وَكَانُوا۟ بِهَا يَسْتَهْزِءُونَ ﴿١٠﴾

11. ಅಲ್ಲಾಹು ಸೃಷ್ಟಿಯನ್ನು ಆರಂಭಿಸುವನು. ತರುವಾಯ ಅದನ್ನು ಪುನರಾವರ್ತಿಸುವನು. ತರುವಾಯ ನಿಮ್ಮನ್ನು ಅವನೆಡೆಗೆ ಮರಳಿಸಲಾಗುವುದು.

ٱللَّهُ يَبْدَؤُا۟ ٱلْخَلْقَ ثُمَّ يُعِيدُهُۥ ثُمَّ إِلَيْهِ تُرْجَعُونَ ﴿١١﴾

12. ಅಂತ್ಯಘಳಿಗೆಯು ಸಂಭವಿಸುವ ದಿನದಂದು ಅಪರಾಧಿಗಳು ನಿರಾಶರಾಗುವರು.

وَيَوْمَ تَقُومُ ٱلسَّاعَةُ يُبْلِسُ ٱلْمُجْرِمُونَ ﴿١٢﴾

13. ಅವರು ಸಹಭಾಗಿಗಳಾಗಿ ಮಾಡಿಕೊಂಡವರ ಪೈಕಿ ಅವರಿಗೆ ಶಿಫಾರಸ್ಸು ಮಾಡುವವರಾಗಿ ಯಾರೂ ಇರಲಾರರು. ಅವರ ಆ ಸಹಭಾಗಿಗಳನ್ನೇ ಅವರು ನಿಷೇಧಿಸುವವರಾಗುವರು.

وَلَمْ يَكُن لَّهُم مِّن شُرَكَآئِهِمْ شُفَعَـٰٓؤُا۟ وَكَانُوا۟ بِشُرَكَآئِهِمْ كَـٰفِرِينَ ﴿١٣﴾

14. ಅಂತ್ಯಘಳಿಗೆಯು ಸಂಭವಿಸುವ ದಿನ! ಅಂದು ಅವರು (ಪರಸ್ಪರ) ಬೇರ್ಪಡುವರು.

وَيَوْمَ تَقُومُ ٱلسَّاعَةُ يَوْمَئِذٍ يَتَفَرَّقُونَ ﴿١٤﴾

15. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರು ಒಂದು ಉದ್ಯಾನವನದಲ್ಲಿ ಉಲ್ಲಾಸ ಅನುಭವಿಸುತ್ತಿರುವರು.

فَأَمَّا ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ فَهُمْ فِى رَوْضَةٍ يُحْبَرُونَ ﴿١٥﴾

16. ಆದರೆ ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ಹಾಗೂ ಪರಲೋಕದ ಭೇಟಿಯನ್ನು ನಿಷೇಧಿಸುವವರು ಯಾರೋ ಅವರನ್ನು ಶಿಕ್ಷೆಗಾಗಿ ಹಾಜರುಗೊಳಿಸಲಾಗುವುದು.

وَأَمَّا ٱلَّذِينَ كَفَرُوا۟ وَكَذَّبُوا۟ بِـَٔايَـٰتِنَا وَلِقَآئِ ٱلْـَٔاخِرَةِ فَأُو۟لَـٰٓئِكَ فِى ٱلْعَذَابِ مُحْضَرُونَ ﴿١٦﴾

17. ಆದ್ದರಿಂದ ನೀವು ಸಂಜೆ ಮತ್ತು ಮುಂಜಾನೆಗಳಲ್ಲಿ ಅಲ್ಲಾಹುವಿನ ಪರಿಪಾವನತೆಯನ್ನು ಕೊಂಡಾಡಿರಿ.

فَسُبْحَـٰنَ ٱللَّهِ حِينَ تُمْسُونَ وَحِينَ تُصْبِحُونَ ﴿١٧﴾

18. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಸ್ತುತಿಯು ಅವನಿಗಾಗಿದೆ. ಸಂಜೆ ಹಾಗೂ ಮಧ್ಯಾಹ್ನಾನಂತರವೂ (ನೀವು ಅವನನ್ನು ಕೊಂಡಾಡಿರಿ).[1]

وَلَهُ ٱلْحَمْدُ فِى ٱلسَّمَـٰوَٰتِ وَٱلْأَرْضِ وَعَشِيًّا وَحِينَ تُظْهِرُونَ ﴿١٨﴾

19. ಅವನು ನಿರ್ಜೀವಿಯಿಂದ ಜೀವಿಯನ್ನು ಹೊರತರುವವನು ಮತ್ತು ಜೀವಿಯಿಂದ ನಿರ್ಜೀವಿಯನ್ನು ಹೊರ ತರುವವನು. ಭೂಮಿಯು ನಿರ್ಜೀವವಾದ ಬಳಿಕ ಅದಕ್ಕೆ

يُخْرِجُ ٱلْحَىَّ مِنَ ٱلْمَيِّتِ وَيُخْرِجُ ٱلْمَيِّتَ مِنَ ٱلْحَىِّ وَيُحْىِ ٱلْأَرْضَ بَعْدَ مَوْتِهَا ۚ وَكَذَٰلِكَ تُخْرَجُونَ ﴿١٩﴾

1 ಹಗಲು ರಾತ್ರಿಗಳ ನಿಶ್ಚಿತ ಸಮಯಗಳಲ್ಲಿ ಅಲ್ಲಾಹುವಿನ ಸ್ತುತಿಸ್ತೋತ್ರಗಳನ್ನು ಒಳಗೊಂಡಿರುವ ನಮಾಝ್ ನಿರ್ವಹಿಸಲು ಪ್ರಸ್ತುತ 17–18 ಸೂಕ್ತಿಗಳಲ್ಲಿ ಆದೇಶಿಸಲಾಗಿದೆ ಎಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಸೂರ್ಯಾಸ್ತದ ಬಳಿಕ ನಿರ್ವಹಿಸಲಾಗುವ ಮಗ್ರಿಬ್, ಇಶಾ ನಮಾಝ್‌ಗಳು, ಪ್ರಭಾತದ ವೇಳೆಯಲ್ಲಿ ಫಜ್ರ್ ನಮಾಝ್, ಮಧ್ಯಾಹ್ನಾನಂತರ ನಿರ್ವಹಿಸಲಾಗುವ ಝುಹ್ರ್ ಮತ್ತು ಅಸ್ರ್ ನಮಾಝ್‌ಗಳು.

ಅವನು ಜೀವವನ್ನು ನೀಡುವನು. ಹೀಗೆಯೇ ನಿಮ್ಮನ್ನೂ ಹೊರತರಲಾಗುವುದು.

**20.** ಅವನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದನು, ತರುವಾಯ ಅಗೋ! ನೀವು (ಜಗತ್ತಿನಾದ್ಯಂತ) ವ್ಯಾಪಿಸುವ ಮಾನವಕುಲವಾಗಿ ಬಿಟ್ಟಿರಿ. ಇದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ.

وَمِنۡ ءَايَٰتِهِۦٓ أَنۡ خَلَقَكُم مِّن تُرَابٖ ثُمَّ إِذَآ أَنتُم بَشَرٞ تَنتَشِرُونَ ٢٠

**21.** ನೀವು ಸಮಾಧಾನಪೂರ್ವಕ ಒಂದುಗೂಡುವುದಕ್ಕಾಗಿ ನಿಮ್ಮಿಂದಲೇ ನಿಮಗೆ ಜೋಡಿಗಳನ್ನು ಸೃಷ್ಟಿಸಿರುವುದು ಮತ್ತು ನಿಮ್ಮ ಮಧ್ಯೆ ಪ್ರೇಮವನ್ನೂ, ಕರುಣೆಯನ್ನೂ ಹಾಕಿ ಕೊಟ್ಟಿರುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ಖಂಡಿತವಾಗಿಯೂ ಇದರಲ್ಲಿ ಚಿಂತಿಸುವ ಜನರಿಗೆ ದೃಷ್ಟಾಂತಗಳಿವೆ.

وَمِنۡ ءَايَٰتِهِۦٓ أَنۡ خَلَقَ لَكُم مِّنۡ أَنفُسِكُمۡ أَزۡوَٰجٗا لِّتَسۡكُنُوٓاْ إِلَيۡهَا وَجَعَلَ بَيۡنَكُم مَّوَدَّةٗ وَرَحۡمَةًۚ إِنَّ فِي ذَٰلِكَ لَأٓيَٰتٖ لِّقَوۡمٖ يَتَفَكَّرُونَ ٢١

**22.** ಆಕಾಶಗಳ ಮತ್ತು ಭೂಮಿಯ ಸೃಷ್ಟಿಯೂ, ನಿಮ್ಮ ಭಾಷೆಗಳಲ್ಲಿ ಮತ್ತು ವರ್ಣಗಳಲ್ಲಿರುವ ವ್ಯತ್ಯಾಸವೂ ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ಖಂಡಿತವಾಗಿಯೂ ಇದರಲ್ಲಿ ಅರಿವುಳ್ಳ ಜನರಿಗೆ ದೃಷ್ಟಾಂತಗಳಿವೆ.

وَمِنۡ ءَايَٰتِهِۦ خَلۡقُ ٱلسَّمَٰوَٰتِ وَٱلۡأَرۡضِ وَٱخۡتِلَٰفُ أَلۡسِنَتِكُمۡ وَأَلۡوَٰنِكُمۡۚ إِنَّ فِي ذَٰلِكَ لَأٓيَٰتٖ لِّلۡعَٰلِمِينَ ٢٢

**23.** ರಾತ್ರಿಯಲ್ಲೂ ಹಗಲಲ್ಲೂ ನೀವು ನಿದ್ರಿಸುವುದು ಹಾಗೂ ಅವನ ಅನುಗ್ರಹದಿಂದ ಅನ್ನಾಧಾರವನ್ನು ಅರಸುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ಖಂಡಿತವಾಗಿಯೂ ಇದರಲ್ಲಿ ಕೇಳಿ ತಿಳಿಯುವ ಜನರಿಗೆ ದೃಷ್ಟಾಂತಗಳಿವೆ.

وَمِنۡ ءَايَٰتِهِۦ مَنَامُكُم بِٱلَّيۡلِ وَٱلنَّهَارِ وَٱبۡتِغَآؤُكُم مِّن فَضۡلِهِۦٓۚ إِنَّ فِي ذَٰلِكَ لَأٓيَٰتٖ لِّقَوۡمٖ يَسۡمَعُونَ ٢٣

**24.** ಭಯವನ್ನು ಮತ್ತು ನಿರೀಕ್ಷೆಯನ್ನು ಹುಟ್ಟಿಸುತ್ತಾ ನಿಮಗೆ ಮಿಂಚನ್ನು ತೋರಿಸಿಕೊಡುವುದು ಹಾಗೂ ಆಕಾಶದಿಂದ ಮಳೆಯನ್ನು ಸುರಿಸಿ ತನ್ಮೂಲಕ ಭೂಮಿಗೆ–ಅದು ನಿರ್ಜೀವವಾದ ಬಳಿಕ–ಜೀವ ನೀಡುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ.

وَمِنۡ ءَايَٰتِهِۦ يُرِيكُمُ ٱلۡبَرۡقَ خَوۡفٗا وَطَمَعٗا وَيُنَزِّلُ مِنَ ٱلسَّمَآءِ مَآءٗ فَيُحۡيِۦ بِهِ ٱلۡأَرۡضَ بَعۡدَ مَوۡتِهَآۚ إِنَّ فِي ذَٰلِكَ لَأٓيَٰتٖ لِّقَوۡمٖ يَعۡقِلُونَ ٢٤

ಖಂಡಿತವಾಗಿಯೂ ಆಲೋಚಿಸುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.

**25.** ಆಕಾಶ ಮತ್ತು ಭೂಮಿಯು ಅವನ ಆಜ್ಞೆ ಪ್ರಕಾರ ನೆಲೆನಿಂತಿರುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ತರುವಾಯ ಅವನು ಒಂದೇ ಒಂದು ಕರೆಯನ್ನು ಕರೆದರೆ, ಅಗೋ! ನೀವು ಭೂಮಿಯಿಂದ ಹೊರಬರುವಿರಿ.

وَمِنۡ ءَايَٰتِهِۦٓ أَن تَقُومَ ٱلسَّمَآءُ وَٱلۡأَرۡضُ بِأَمۡرِهِۦۚ ثُمَّ إِذَا دَعَاكُمۡ دَعۡوَةٗ مِّنَ ٱلۡأَرۡضِ إِذَآ أَنتُمۡ تَخۡرُجُونَ ٢٥

**26.** ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಎಲ್ಲರೂ ಅವನ ಅಧೀನದಲ್ಲಿರುವರು. ಎಲ್ಲರೂ ಅವನಿಗೆ ಶರಣಾಗತರಾಗಿರುವರು.

وَلَهُۥ مَن فِي ٱلسَّمَٰوَٰتِ وَٱلۡأَرۡضِۖ كُلّٞ لَّهُۥ قَٰنِتُونَ ٢٦

**27.** ಸೃಷ್ಟಿಯನ್ನು ಆರಂಭಿಸುವವನು ಅವನಾಗಿರುವನು. ತರುವಾಯ ಅವನು ಅದನ್ನು ಪುನರಾವರ್ತಿಸುವನು. ಅದು ಅವನ ಮಟ್ಟಿಗೆ ಅತ್ಯಂತ ಸುಲಭವಾಗಿದೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಸರ್ವಶ್ರೇಷ್ಠ ವಿಶೇಷಣವಿರುವುದು ಅವನಿಗಾಗಿದೆ. ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

وَهُوَ ٱلَّذِي يَبۡدَؤُاْ ٱلۡخَلۡقَ ثُمَّ يُعِيدُهُۥ وَهُوَ أَهۡوَنُ عَلَيۡهِۚ وَلَهُ ٱلۡمَثَلُ ٱلۡأَعۡلَىٰ فِي ٱلسَّمَٰوَٰتِ وَٱلۡأَرۡضِۚ وَهُوَ ٱلۡعَزِيزُ ٱلۡحَكِيمُ ٢٧

**28.** ಅಲ್ಲಾಹು ನಿಮ್ಮಿಂದಲೇ ನಿಮಗೊಂದು ಉಪಮೆಯನ್ನು ನೀಡುವನು. ನಿಮ್ಮ ಬಲಗೈಗಳು ಅಧೀನ ಪಡಿಸಿರುವ ಗುಲಾಮರಲ್ಲಿ ಯಾರಾದರೂ ನಾವು ನಿಮಗೆ ನೀಡಿದ ಸಂಪತ್ತುಗಳಲ್ಲಿ ನಿಮ್ಮ ಸಹಭಾಗಿಗಳಾಗುವರೇ? ತರುವಾಯ ನೀವು ಪರಸ್ಪರ ಭಯಪಡುವಂತೆ ಅವರನ್ನೂ (ಗುಲಾಮರನ್ನೂ) ನೀವು ಭಯಪಡುವ ರೀತಿಯಲ್ಲಿ ನೀವು ಎರಡೂ ಗುಂಪುಗಳು ಅದರಲ್ಲಿ ಸಮಾನ ಹಕ್ಕುದಾರರಾಗುವರೇ? ಚಿಂತಿಸುವ ಜನರಿಗಾಗಿ ನಾವು ಹೀಗೆ ದೃಷ್ಟಾಂತಗಳನ್ನು ವಿವರಿಸಿಕೊಡುವೆವು.

ضَرَبَ لَكُم مَّثَلٗا مِّنۡ أَنفُسِكُمۡۖ هَل لَّكُم مِّن مَّا مَلَكَتۡ أَيۡمَٰنُكُم مِّن شُرَكَآءَ فِي مَا رَزَقۡنَٰكُمۡ فَأَنتُمۡ فِيهِ سَوَآءٞ تَخَافُونَهُمۡ كَخِيفَتِكُمۡ أَنفُسَكُمۡۚ كَذَٰلِكَ نُفَصِّلُ ٱلۡأٓيَٰتِ لِقَوۡمٖ يَعۡقِلُونَ ٢٨

**29.** ಆದರೆ ಅಕ್ರಮವೆಸಗಿದವರು ಯಾವ ಜ್ಞಾನವೂ ಇಲ್ಲದೆ ತಮ್ಮ ದೇಹೇಚ್ಛೆಗಳನ್ನು ಅನುಸರಿಸಿರುವರು. ಹೀಗಿರುವಾಗ ಅಲ್ಲಾಹು

بَلِ ٱتَّبَعَ ٱلَّذِينَ ظَلَمُوٓاْ أَهۡوَآءَهُم بِغَيۡرِ عِلۡمٖۖ فَمَن يَهۡدِي مَنۡ أَضَلَّ ٱللَّهُۖ

وَمَا لَهُم مِّن نَّـٰصِرِينَ ﴿٢٩﴾

ಪಥಭ್ರಷ್ಟಗೊಳಿಸಿದವರನ್ನು ಸನ್ಮಾರ್ಗದಲ್ಲಿ ಸೇರಿಸುವವರು ಯಾರಿರುವರು? ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.

فَأَقِمْ وَجْهَكَ لِلدِّينِ حَنِيفًا ۚ فِطْرَتَ ٱللَّهِ ٱلَّتِي فَطَرَ ٱلنَّاسَ عَلَيْهَا ۚ لَا تَبْدِيلَ لِخَلْقِ ٱللَّهِ ۚ ذَٰلِكَ ٱلدِّينُ ٱلْقَيِّمُ وَلَـٰكِنَّ أَكْثَرَ ٱلنَّاسِ لَا يَعْلَمُونَ ﴿٣٠﴾

**30.** ಆದ್ದರಿಂದ (ಸತ್ಯದಲ್ಲಿ) ನೇರವಾಗಿ ನೆಲೆಗೊಂಡು ತಾವು ತಮ್ಮ ಮುಖವನ್ನು ಧರ್ಮದೆಡೆಗೆ ತಿರುಗಿಸಿರಿ. ಅದು ಅಲ್ಲಾಹು ಮನುಷ್ಯರನ್ನು ಯಾವ ಪ್ರಕೃತಿಯಲ್ಲಿ ಸೃಷ್ಟಿಸಿದನೋ ಆ ಪ್ರಕೃತಿಯಾಗಿದೆ. ಅಲ್ಲಾಹುವಿನ ಸೃಷ್ಟಿ ನಿಯಮಕ್ಕೆ ಯಾವುದೇ ಬದಲಾವಣೆಯಿಲ್ಲ. ಅದುವೇ ನೇರವಾದ ಧರ್ಮ. ಆದರೆ ಮನುಷ್ಯರ ಪೈಕಿ ಹೆಚ್ಚಿನವರೂ ಅರಿತುಕೊಳ್ಳಲಾರರು.

۞ مُنِيبِينَ إِلَيْهِ وَٱتَّقُوهُ وَأَقِيمُوا۟ ٱلصَّلَوٰةَ وَلَا تَكُونُوا۟ مِنَ ٱلْمُشْرِكِينَ ﴿٣١﴾

**31.** (ನೀವು) ಅವನೆಡೆಗೆ ತಿರುಗಿದವರಾಗಿ, ಅವನನ್ನು ಭಯಪಡುತ್ತಿರಿ, ನಮಾಝ್ ಸಂಸ್ಥಾಪಿಸುತ್ತಿರಿ. ನೀವು ಬಹುದೇವಾರಾಧಕರಲ್ಲಿ ಸೇರಿದವರಾಗದಿರಿ.

مِنَ ٱلَّذِينَ فَرَّقُوا۟ دِينَهُمْ وَكَانُوا۟ شِيَعًا ۖ كُلُّ حِزْبٍۭ بِمَا لَدَيْهِمْ فَرِحُونَ ﴿٣٢﴾

**32.** (ಅಂದರೆ) ತಮ್ಮ ಧರ್ಮವನ್ನು ಒಡೆದು ಹಲವು ಪಂಗಡಗಳಾಗಿ ಹೋದವರಲ್ಲಿ (ಸೇರಿದವರಾಗದಿರಿ). ಪ್ರತಿಯೊಂದು ಪಂಗಡವೂ ತಮ್ಮ ಬಳಿಯಿರುವುದರಲ್ಲಿ ಸಂತುಷ್ಟರಾಗಿರುವರು.

وَإِذَا مَسَّ ٱلنَّاسَ ضُرٌّ دَعَوْا۟ رَبَّهُم مُّنِيبِينَ إِلَيْهِ ثُمَّ إِذَآ أَذَاقَهُم مِّنْهُ رَحْمَةً إِذَا فَرِيقٌ مِّنْهُم بِرَبِّهِمْ يُشْرِكُونَ ﴿٣٣﴾

**33.** ಜನರಿಗೆ ಯಾವುದಾದರೂ ಹಾನಿಯು ಬಾಧಿಸಿದರೆ ಅವರು ತಮ್ಮ ರಬ್‌ನೆಡೆಗೆ ತಿರುಗಿ ಅವನಲ್ಲಿ ಪ್ರಾರ್ಥಿಸುವರು. ತರುವಾಯ ಅವನು ತನ್ನ ವತಿಯ ಕಾರುಣ್ಯದ ರುಚಿಯನ್ನು ಅವರಿಗೆ ನೀಡಿದರೆ ಅವರಲ್ಲೊಂದು ಗುಂಪು ತಮ್ಮ ರಬ್‌ನೊಂದಿಗೆ ಸಹಭಾಗಿತ್ವವನ್ನು ಮಾಡುವರು.

لِيَكْفُرُوا۟ بِمَآ ءَاتَيْنَـٰهُمْ ۚ فَتَمَتَّعُوا۟ فَسَوْفَ تَعْلَمُونَ ﴿٣٤﴾

**34.** ನಾವು ಅವರಿಗೆ ದಯಪಾಲಿಸಿರುವುದರಲ್ಲಿ ಅವರು ಕೃತಘ್ನತೆಯನ್ನು ತೋರುತ್ತಿರುವರು. ಆದ್ದರಿಂದ ನೀವು ಸುಖವನ್ನು ಅನುಭವಿಸಿರಿ. ತರುವಾಯ ನೀವು ಅರ್ಥಮಾಡಿಕೊಳ್ಳುವಿರಿ.

35. ಅಥವಾ ಅವರು (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡುತ್ತಿರುವುದಕ್ಕೆ ಪೂರಕವಾಗಿ ಅವರೊಂದಿಗೆ ಮಾತನಾಡುವ ಯಾವುದಾದರೂ ಆಧಾರ ಪ್ರಮಾಣವನ್ನು ನಾವು ಅವರಿಗೆ ಇಳಿಸಿಕೊಟ್ಟಿರುವೆವೇ?

أَمۡ أَنزَلۡنَا عَلَيۡهِمۡ سُلۡطَٰنٗا فَهُوَ يَتَكَلَّمُ بِمَا كَانُواْ بِهِۦ يُشۡرِكُونَ ٣٥

36. ನಾವು ಜನರಿಗೆ ಕಾರುಣ್ಯದ ರುಚಿಯನ್ನು ನೀಡಿದರೆ ಅವರು ಅದರಲ್ಲಿ ಸಂಭ್ರಮಪಡುವರು. ಅವರ ಕೈಗಳು ಈಗಾಗಲೇ ಮಾಡಿಟ್ಟಿರುವುದರ ಫಲವಾಗಿ ಯಾವುದಾದರೂ ಕೇಡು ಅವರನ್ನು ಬಾಧಿಸಿದರೆ ಅಗೋ! ಅವರು ಹತಾಶರಾಗುವರು.

وَإِذَآ أَذَقۡنَا ٱلنَّاسَ رَحۡمَةٗ فَرِحُواْ بِهَاۖ وَإِن تُصِبۡهُمۡ سَيِّئَةُۢ بِمَا قَدَّمَتۡ أَيۡدِيهِمۡ إِذَا هُمۡ يَقۡنَطُونَ ٣٦

37. ಅಲ್ಲಾಹು ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು (ತಾನಿಚ್ಛಿಸುವವರಿಗೆ) ಅದನ್ನು ಸಂಕುಚಿತಗೊಳಿಸುವನು ಎಂಬುದನ್ನು ಅವರು ಕಂಡಿಲ್ಲವೇ? ಖಂಡಿತವಾಗಿಯೂ ವಿಶ್ವಾಸವಿಡುವ ಜನರಿಗೆ ಅದರಲ್ಲಿ ದೃಷ್ಟಾಂತಗಳಿವೆ.

أَوَ لَمۡ يَرَوۡاْ أَنَّ ٱللَّهَ يَبۡسُطُ ٱلرِّزۡقَ لِمَن يَشَآءُ وَيَقۡدِرُۚ إِنَّ فِي ذَٰلِكَ لَأٓيَٰتٖ لِّقَوۡمٖ يُؤۡمِنُونَ ٣٧

38. ಆದ್ದರಿಂದ ತಾವು ಕುಟುಂಬ ಸಂಬಂಧಿಕನಿಗೆ ಅವನ ಹಕ್ಕನ್ನು ನೀಡಿರಿ. ನಿರ್ಗತಿಕನಿಗೂ, ದಾರಿಹೋಕನಿಗೂ (ಅವರ ಹಕ್ಕನ್ನು ನೀಡಿರಿ). ಅಲ್ಲಾಹುವಿನ ಸಂತೃಪ್ತಿಯನ್ನು ಬಯಸುವವರಿಗೆ ಅದು ಉತ್ತಮವಾಗಿದೆ. ಯಶಸ್ಸುಗಳಿಸಿದವರು ಅವರೇ ಆಗಿರುವರು.

فَـَٔاتِ ذَا ٱلۡقُرۡبَىٰ حَقَّهُۥ وَٱلۡمِسۡكِينَ وَٱبۡنَ ٱلسَّبِيلِۚ ذَٰلِكَ خَيۡرٞ لِّلَّذِينَ يُرِيدُونَ وَجۡهَ ٱللَّهِۖ وَأُوْلَٰٓئِكَ هُمُ ٱلۡمُفۡلِحُونَ ٣٨

39. ಜನರ ಸಂಪತ್ತುಗಳ ಮೂಲಕ ವೃದ್ಧಿಯಾಗಲು ನೀವು ಏನನ್ನಾದರೂ ಬಡ್ಡಿಗೆ[1] ನೀಡುವುದಾದರೆ ಅದು ಅಲ್ಲಾಹುವಿನ ಬಳಿ ವೃದ್ಧಿಯಾಗಲಾರದು. ಆದರೆ ಅಲ್ಲಾಹುವಿನ ಸಂತೃಪ್ತಿಯನ್ನು ಉದ್ದೇಶಿಸಿ ನೀವು ಏನನ್ನಾದರೂ ಝಕಾತ್

وَمَآ ءَاتَيۡتُم مِّن رِّبٗا لِّيَرۡبُوَاْ فِيٓ أَمۡوَٰلِ ٱلنَّاسِ فَلَا يَرۡبُواْ عِندَ ٱللَّهِۖ وَمَآ ءَاتَيۡتُم مِّن زَكَوٰةٖ تُرِيدُونَ وَجۡهَ ٱللَّهِ فَأُوْلَٰٓئِكَ هُمُ ٱلۡمُضۡعِفُونَ ٣٩

1 'ರಿಬಾ' ಎಂದರೆ ವರ್ಧನೆ ಎಂದರ್ಥ. ಕೊಟ್ಟದ್ದಕ್ಕಿಂತ ಹೆಚ್ಚು ಸಿಗಬೇಕೆಂಬ ಉದ್ದೇಶದೊಂದಿಗೆ ನೀಡುವ ಸಾಲ, ದಾನ ಅಥವಾ ಉಡುಗೊರೆಗಳೆಲ್ಲವೂ 'ರಿಬಾ' ಎಂಬ ಪದದ ವ್ಯಾಪ್ತಿಯಲ್ಲಿ ಸೇರುತ್ತದೆಯೆಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

ಆಗಿ ನೀಡುವುದಾದರೆ ಇಮ್ಮಡಿ
ಸಂಪಾದಿಸುವವರು ಅವರೇ ಆಗಿರುವರು.

ٱللَّهُ ٱلَّذِى خَلَقَكُمْ ثُمَّ رَزَقَكُمْ
ثُمَّ يُمِيتُكُمْ ثُمَّ يُحْيِيكُمْ ۖ هَلْ مِن
شُرَكَآئِكُم مَّن يَفْعَلُ مِن ذَٰلِكُم مِّن
شَىْءٍ ۚ سُبْحَٰنَهُۥ وَتَعَٰلَىٰ عَمَّا يُشْرِكُونَ ٤٠

40. ನಿಮ್ಮನ್ನು ಸೃಷ್ಟಿಸಿದವನು ಅಲ್ಲಾಹುವಾಗಿರುವನು.
ತರುವಾಯ ಅವನು ನಿಮಗೆ ಅನ್ನಾಧಾರವನ್ನು
ಒದಗಿಸಿದನು. ತರುವಾಯ ಅವನು ನಿಮ್ಮನ್ನು
ಮೃತಪಡಿಸುವವನು. ತರುವಾಯ ಅವನು
ನಿಮಗೆ ಜೀವ ನೀಡುವನು. ಇವುಗಳ ಪೈಕಿ
ಯಾವುದಾದರೂ ಒಂದನ್ನು ಮಾಡುವವರು
ನಿಮ್ಮ ಸಹಭಾಗಿಗಳ ಪೈಕಿ ಯಾರಾದರೂ
ಇರುವರೇ? ಅವನು ಪರಮ ಪಾವನನು.
ಅವರು ಸಹಭಾಗಿತ್ವ ಮಾಡುವುದರಿಂದೆಲ್ಲಾ
ಅವನು ಅತೀತನಾಗಿರುವನು.

ظَهَرَ ٱلْفَسَادُ فِى ٱلْبَرِّ وَٱلْبَحْرِ بِمَا كَسَبَتْ
أَيْدِى ٱلنَّاسِ لِيُذِيقَهُم بَعْضَ ٱلَّذِى
عَمِلُوا۟ لَعَلَّهُمْ يَرْجِعُونَ ٤١

41. ಜನರ ಕೈಗಳು ಮಾಡಿರುವ ಕೃತ್ಯದ ನಿಮಿತ್ತ
ನೆಲದಲ್ಲೂ, ಕಡಲಲ್ಲೂ ಕ್ಷೋಭೆಯು
ಪ್ರತ್ಯಕ್ಷವಾಗಿದೆ. ಅದು ಅವರು ಮಾಡಿರುವುದರ
ಪೈಕಿ ಕೆಲವೊಂದರ ಫಲವನ್ನು ಅವರು
ಸವಿಯುವಂತೆ ಮಾಡುವ ಸಲುವಾಗಿದೆ.
ಅವರು ಮರಳಲೂಬಹುದು.

قُلْ سِيرُوا۟ فِى ٱلْأَرْضِ فَٱنظُرُوا۟ كَيْفَ
كَانَ عَٰقِبَةُ ٱلَّذِينَ مِن قَبْلُ ۚ كَانَ أَكْثَرُهُم
مُّشْرِكِينَ ٤٢

42. (ಓ ಪ್ರವಾದಿಯವರೇ!) ಹೇಳಿರಿ: ‘ನೀವು
ಭೂಮಿಯಲ್ಲಿ ಸಂಚರಿಸಿ ಮುಂಚೆ ಗತಿಸಿದವರ
ಅಂತ್ಯವು ಹೇಗಿತ್ತೆಂಬುದನ್ನು ನೋಡಿರಿ.
ಅವರಲ್ಲಿ ಹೆಚ್ಚಿನವರೂ
ಬಹುದೇವಾರಾಧಕರಾಗಿದ್ದರು’.

فَأَقِمْ وَجْهَكَ لِلدِّينِ ٱلْقَيِّمِ مِن قَبْلِ أَن
يَأْتِىَ يَوْمٌ لَّا مَرَدَّ لَهُۥ مِنَ ٱللَّهِ ۖ يَوْمَئِذٍ
يَصَّدَّعُونَ ٤٣

43. ಆದ್ದರಿಂದ ಯಾರಿಗೂ ತಡೆಯಲು
ಸಾಧ್ಯವಾಗದ ಒಂದು ದಿನವು ಅಲ್ಲಾಹುವಿನ
ವತಿಯಿಂದ ಬರುವ ಮುನ್ನ ತಾವು ತಮ್ಮ
ಮುಖವನ್ನು ನೇರವಾದ ಧರ್ಮದೆಡೆಗೆ
ತಿರುಗಿಸಿರಿ. ಅಂದು ಜನರು (ಎರಡು
ವಿಭಾಗಗಳಾಗಿ) ಬೇರ್ಪಡುವರು.

مَن كَفَرَ فَعَلَيْهِ كُفْرُهُۥ ۖ وَمَنْ عَمِلَ
صَٰلِحًا فَلِأَنفُسِهِمْ يَمْهَدُونَ ٤٤

44. ಯಾರಾದರೂ ಕೃತಘ್ನತೆ ತೋರಿದರೆ ಅವನ
ಕೃತಘ್ನತೆಯ ಕೆಡುಕು ಅವನಿಗೇ ಆಗಿದೆ.
ಯಾರಾದರೂ ಸತ್ಕರ್ಮವೆಸಗಿದರೆ ಅವರು

ಸ್ವತಃ ತಮಗಾಗಿಯೇ ಸೌಕರ್ಯವನ್ನು ಸಿದ್ಧಗೊಳಿಸುತ್ತಿರುವರು.

45. ವಿಶ್ವಾಸವಿಟ್ಟವರಿಗೆ ಮತ್ತು ಸತ್ಕರ್ಮವೆಸಗಿದವರಿಗೆ ಅಲ್ಲಾಹು ತನ್ನ ಅನುಗ್ರಹದಿಂದ ಪ್ರತಿಫಲವನ್ನು ನೀಡುವ ಸಲುವಾಗಿ. ಸತ್ಯನಿಷೇಧಿಗಳನ್ನು ಅವನು ಮೆಚ್ಚಲಾರನು.

لِيَجْزِيَ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ مِن فَضْلِهِۦٓ ۚ إِنَّهُۥ لَا يُحِبُّ ٱلْكَٰفِرِينَ ﴿٤٥﴾

46. ಅವನು (ಮಳೆಯ ಬಗ್ಗೆ) ಶುಭವಾರ್ತೆಯಾಗಿಯೂ, ತನ್ನ ಕಾರುಣ್ಯದ ರುಚಿಯನ್ನು ನಿಮಗೆ ನೀಡುವುದಕ್ಕಾಗಿಯೂ, ತನ್ನ ಆಜ್ಞೆ ಪ್ರಕಾರ ಹಡಗು ಸಂಚರಿಸುವುದಕ್ಕಾಗಿಯೂ, ಅವನ ಅನುಗ್ರಹದಿಂದ ನೀವು ಅನ್ನಾಧಾರವನ್ನು ಅರಸುವುದಕ್ಕಾಗಿಯೂ, ನೀವು ಕೃತಜ್ಞತೆ ಸಲ್ಲಿಸುವುದಕ್ಕಾಗಿಯೂ ಮಾರುತಗಳನ್ನು ಕಳುಹಿಸುತ್ತಿರುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ.

وَمِنْ ءَايَٰتِهِۦٓ أَن يُرْسِلَ ٱلرِّيَاحَ مُبَشِّرَٰتٍ وَلِيُذِيقَكُم مِّن رَّحْمَتِهِۦ وَلِتَجْرِيَ ٱلْفُلْكُ بِأَمْرِهِۦ وَلِتَبْتَغُوا۟ مِن فَضْلِهِۦ وَلَعَلَّكُمْ تَشْكُرُونَ ﴿٤٦﴾

47. ನಾವು ತಮಗಿಂತ ಮುಂಚೆ ಅನೇಕ ಪ್ರವಾದಿಗಳನ್ನು ಅವರ ಜನತೆಯೆಡೆಗೆ ಕಳುಹಿಸಿರುವೆವು. ತರುವಾಯ ಸ್ಪಷ್ಟವಾದ ಪುರಾವೆಗಳೊಂದಿಗೆ ಅವರು (ಪ್ರವಾದಿಗಳು) ಅವರ ಬಳಿಗೆ ಬಂದರು. ಆಗ ಅಪರಾಧವೆಸಗಿದವರ ಮೇಲೆ ನಾವು ಶಿಕ್ಷಾಕ್ರಮವನ್ನು ಜರುಗಿಸಿದೆವು. ವಿಶ್ವಾಸಿಗಳಿಗೆ ಸಹಾಯ ಮಾಡುವುದು ನಮ್ಮ ಬಾಧ್ಯತೆಯಾಗಿದೆ.

وَلَقَدْ أَرْسَلْنَا مِن قَبْلِكَ رُسُلًا إِلَىٰ قَوْمِهِمْ فَجَآءُوهُم بِٱلْبَيِّنَٰتِ فَٱنتَقَمْنَا مِنَ ٱلَّذِينَ أَجْرَمُوا۟ ۖ وَكَانَ حَقًّا عَلَيْنَا نَصْرُ ٱلْمُؤْمِنِينَ ﴿٤٧﴾

48. ಮಾರುತಗಳನ್ನು ಕಳುಹಿಸುವವನು ಅಲ್ಲಾಹು ವಾಗಿರುವನು. ತರುವಾಯ ಅವು (ಮಾರುತಗಳು) ಮೋಡಗಳನ್ನು ಚದುರಿಸುವುವು. ತರುವಾಯ ಅಲ್ಲಾಹು ತಾನಿಚ್ಛಿಸುವ ಪ್ರಕಾರ ಅದನ್ನು ಆಕಾಶದಲ್ಲಿ ಹರಡುವನು. ತರುವಾಯ ಅದನ್ನು ಅನೇಕ ತುಣುಕುಗಳನ್ನಾಗಿ ಮಾಡುವನು. ಆಗ ಅದರ

ٱللَّهُ ٱلَّذِى يُرْسِلُ ٱلرِّيَٰحَ فَتُثِيرُ سَحَابًا فَيَبْسُطُهُۥ فِى ٱلسَّمَآءِ كَيْفَ يَشَآءُ وَيَجْعَلُهُۥ كِسَفًا فَتَرَى ٱلْوَدْقَ يَخْرُجُ مِنْ خِلَٰلِهِۦ ۖ فَإِذَآ أَصَابَ بِهِۦ مَن يَشَآءُ مِنْ عِبَادِهِۦٓ إِذَا هُمْ يَسْتَبْشِرُونَ ﴿٤٨﴾

ನಡುವಿನಿಂದ ಮಳೆಹನಿಯು ಹೊರಬರುವುದನ್ನು ತಾವು ಕಾಣುವಿರಿ. ತರುವಾಯ ಅವನು ತನ್ನ ದಾಸರ ಪೈಕಿ ತಾನಿಚ್ಛಿಸುವವರ ಮೇಲೆ ಅದನ್ನು ಸುರಿಸಿದಾಗ ಅಗೋ! ಅವರು ಸಂತುಷ್ಟರಾಗುವರು.

49. ಇದಕ್ಕೆ ಮುನ್ನ –ಮಳೆಯು ಅವರ ಮೇಲೆ ಸುರಿಯುವುದಕ್ಕೆ ಮುನ್ನ– ಖಂಡಿತವಾಗಿಯೂ ಅವರು ಹತಾಶರಾಗಿದ್ದರು.

وَإِن كَانُواْ مِن قَبۡلِ أَن يُنَزَّلَ عَلَيۡهِم مِّن قَبۡلِهِۦ لَمُبۡلِسِينَ ٤٩

50. ಆದ್ದರಿಂದ ಅಲ್ಲಾಹುವಿನ ಕಾರುಣ್ಯದ ಫಲಗಳನ್ನು ನೋಡಿರಿ. ಭೂಮಿಯು ನಿರ್ಜೀವವಾದ ಬಳಿಕ ಅವನು ಅದಕ್ಕೆ ಹೇಗೆ ಜೀವವನ್ನು ನೀಡುವನು? ಅದನ್ನು ಮಾಡುವವನು ಖಂಡಿತವಾಗಿಯೂ ಮರಣಹೊಂದಿದವರಿಗೆ ಜೀವವನ್ನು ನೀಡುವನು. ಅವನು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

فَٱنظُرۡ إِلَىٰٓ ءَاثَٰرِ رَحۡمَتِ ٱللَّهِ كَيۡفَ يُحۡيِ ٱلۡأَرۡضَ بَعۡدَ مَوۡتِهَآۚ إِنَّ ذَٰلِكَ لَمُحۡيِ ٱلۡمَوۡتَىٰۖ وَهُوَ عَلَىٰ كُلِّ شَيۡءٖ قَدِيرٞ ٥٠

51. ನಾವು ಇನ್ನೊಂದು ಮಾರುತವನ್ನು ಕಳುಹಿಸಿ, ಅದು (ಕೃಷಿ) ಹಳದಿವರ್ಣ ಬಾಧಿಸಿದ್ದಾಗಿ ಅವರು ಕಂಡರೆ ಆ ಬಳಿಕವೂ ಅವರು ತೋರುತ್ತಲೇ ಇರುತ್ತಾರೆ.[1]

وَلَئِنۡ أَرۡسَلۡنَا رِيحٗا فَرَأَوۡهُ مُصۡفَرّٗا لَّظَلُّواْ مِنۢ بَعۡدِهِۦ يَكۡفُرُونَ ٥١

52. ಮರಣಹೊಂದಿದವರಿಗೆ[2] ಕೇಳಿಸಿಕೊಳ್ಳುವಂತೆ ಮಾಡಲು ತಮಗೆ ಖಂಡಿತ ಸಾಧ್ಯವಾಗದು. ಕಿವುಡರು ಬೆನ್ನು ತೋರಿಸಿ ತಿರುಗಿ ನಡೆದರೆ ಅವರಿಗೆ ಕರೆಯನ್ನು ಕೇಳಿಸಿಕೊಳ್ಳುವಂತೆ ಮಾಡಲೂ ತಮಗೆ ಸಾಧ್ಯವಾಗದು.

فَإِنَّكَ لَا تُسۡمِعُ ٱلۡمَوۡتَىٰ وَلَا تُسۡمِعُ ٱلصُّمَّ ٱلدُّعَآءَ إِذَا وَلَّوۡاْ مُدۡبِرِينَ ٥٢

53. ಅಂಧತೆ ಬಾಧಿಸಿದವರನ್ನು ಅವರ ದಾರಿಗೇಡಿನಿಂದ ಸನ್ಮಾರ್ಗದೆಡೆಗೆ

وَمَآ أَنتَ بِهَٰدِ ٱلۡعُمۡيِ عَن ضَلَٰلَتِهِمۡۖ

1 ಜನರ ಪೈಕಿ ಹೆಚ್ಚಿನವರೂ ಅಲ್ಲಾಹು ಸಂಪತ್ತನ್ನು ನೀಡಿದಾಗ ಕೃತಜ್ಞತೆ ಸಲ್ಲಿಸಲು ಮತ್ತು ಅಲ್ಲಾಹು ನಾಶನಷ್ಟಗಳ ಮೂಲಕ ಪರೀಕ್ಷಿಸಿದಾಗ ಸಹನೆ ಪಾಲಿಸಲು ಸಿದ್ಧರಾಗದೆ ಲಾಭ–ನಷ್ಟಗಳ ಕುರಿತು ಕೃತಘ್ನತಾ ಭಾವದೊಂದಿಗೆ ಪ್ರತಿಕ್ರಿಯೆ ತೋರುವವರಾಗಿದ್ದಾರೆ.

2 ಸತ್ಯದ ಚೈತನ್ಯವನ್ನು ಹೊಂದದೆ ಮನಸ್ಸು ನಿರ್ಜೀವವಾಗಿರುವವರನ್ನು ಉದ್ದೇಶಿಸಿ ಇಲ್ಲಿ ಮೌತಾ (ಮೃತರು) ಎಂಬ ಪದವನ್ನು ಪ್ರಯೋಗಿಸಲಾಗಿದೆ.

ಮುನ್ನಡೆಸಲು ತಮಗೆ ಸಾಧ್ಯವಾಗದು. ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವವರು ಮತ್ತು ಆ ಬಳಿಕ ಶರಣಾಗತರಾಗಿ ಬದುಕುವವರಿಗೇ ಹೊರತು ಇತರರಿಗೆ ಕೇಳಿಸಿಕೊಳ್ಳುವಂತೆ ಮಾಡಲು ತಮಗೆ ಸಾಧ್ಯವಾಗದು.

إِن تُسۡمِعُ إِلَّا مَن يُؤۡمِنُ بِـَٔايَٰتِنَا فَهُم مُّسۡلِمُونَ ﴿٥٣﴾

**54.** ನಿಮ್ಮನ್ನು ಬಲಹೀನತೆಯ ಸ್ಥಿತಿಯಲ್ಲಿ ಸೃಷ್ಟಿಸಿದವನು ಅಲ್ಲಾಹುವಾಗಿರುವನು. ತರುವಾಯ ಬಲಹೀನತೆಯ ನಂತರ ಅವನು ಬಲವನ್ನು ನೀಡಿದನು. ತರುವಾಯ ಬಲವನ್ನು ನೀಡಿದ ನಂತರ ಪುನಃ ಅವನು ಬಲಹೀನತೆಯನ್ನು ಮತ್ತು ನೆರೆತ ಕೂದಲನ್ನು ನೀಡಿದನು. ಅವನು ತಾನಿಚ್ಛಿಸುವುದನ್ನು ಸೃಷ್ಟಿಸುವನು. ಅವನು ಸರ್ವಜ್ಞನೂ, ಸರ್ವಶಕ್ತನೂ ಆಗಿರುವನು.

۞ٱللَّهُ ٱلَّذِي خَلَقَكُم مِّن ضَعۡفٖ ثُمَّ جَعَلَ مِنۢ بَعۡدِ ضَعۡفٖ قُوَّةٗ ثُمَّ جَعَلَ مِنۢ بَعۡدِ قُوَّةٖ ضَعۡفٗا وَشَيۡبَةٗۚ يَخۡلُقُ مَا يَشَآءُۚ وَهُوَ ٱلۡعَلِيمُ ٱلۡقَدِيرُ ﴿٥٤﴾

**55.** ಅಂತ್ಯಘಳಿಗೆಯು ಸಂಭವಿಸುವ ದಿನದಂದು ತಾವು (ಭೂಲೋಕದಲ್ಲಿ) ಒಂದು ತಾಸಿನವರೆಗೆ ಹೊರತು ತಂಗಿಲ್ಲವೆಂದು ಪಾಪಿಗಳು ಆಣೆಯಿಟ್ಟು ಹೇಳುವರು. ಹೀಗೆಯೇ ಅವರು ಸತ್ಯದಿಂದ ಸರಿಸಲ್ಪಟ್ಟಿರುವರು.

وَيَوۡمَ تَقُومُ ٱلسَّاعَةُ يُقۡسِمُ ٱلۡمُجۡرِمُونَ مَا لَبِثُواْ غَيۡرَ سَاعَةٖۚ كَذَٰلِكَ كَانُواْ يُؤۡفَكُونَ ﴿٥٥﴾

**56.** ಜ್ಞಾನ ಮತ್ತು ವಿಶ್ವಾಸವನ್ನು ನೀಡಲಾಗಿರುವವರು ಹೇಳುವರು: 'ಅಲ್ಲಾಹುವಿನ ಗ್ರಂಥದಲ್ಲಿರುವ ಪ್ರಕಾರ ಪುನರುತ್ಥಾನ ದಿನದವರೆಗೆ ನೀವು ತಂಗಿರುವಿರಿ. ಆದರೆ ಇಗೋ ಪುನರುತ್ಥಾನ ದಿನ! ಆದರೆ ನೀವು (ಇದರ ಬಗ್ಗೆ) ಅರ್ಥ ಮಾಡಿಕೊಂಡಿರಲಿಲ್ಲ.

وَقَالَ ٱلَّذِينَ أُوتُواْ ٱلۡعِلۡمَ وَٱلۡإِيمَٰنَ لَقَدۡ لَبِثۡتُمۡ فِي كِتَٰبِ ٱللَّهِ إِلَىٰ يَوۡمِ ٱلۡبَعۡثِۖ فَهَٰذَا يَوۡمُ ٱلۡبَعۡثِ وَلَٰكِنَّكُمۡ كُنتُمۡ لَا تَعۡلَمُونَ ﴿٥٦﴾

**57.** ಆದ್ದರಿಂದ ಅಕ್ರಮವೆಸಗಿದವರಿಗೆ ಆ ದಿನದಂದು ಅವರ ನೆಪಗಳು ಯಾವುದೇ ಪ್ರಯೋಜನವನ್ನೂ ನೀಡಲಾರವು. ಅವರೊಂದಿಗೆ ಪಶ್ಚಾತ್ತಾಪಪಡುವಂತೆಯೂ ಕೇಳಿಕೊಳ್ಳಲಾಗದು.[1]

فَيَوۡمَئِذٖ لَّا يَنفَعُ ٱلَّذِينَ ظَلَمُواْ مَعۡذِرَتُهُمۡ وَلَا هُمۡ يُسۡتَعۡتَبُونَ ﴿٥٧﴾

1 ಪಶ್ಚಾತ್ತಾಪಪಡಬೇಕಾದುದು ಇಹಲೋಕದಲ್ಲಾಗಿದೆ. ಪರಲೋಕದಲ್ಲಿ ಪಶ್ಚಾತ್ತಾಪಪಡಲು ಅಥವಾ ಪಾಪಮುಕ್ತಿ ಬೇಡಲು ಅವಕಾಶ ನೀಡಲಾಗದು.

58. ನಾವು ಈ ಕುರ್‌ಆನ್‌ನಲ್ಲಿ ಜನರಿಗೋಸ್ಕರ ಎಲ್ಲ ವಿಧದ ಉದಾಹರಣೆಗಳನ್ನೂ ವಿವರಿಸಿರುವೆವು. ತಾವು ಯಾವುದಾದರೂ ದೃಷ್ಟಾಂತದೊಂದಿಗೆ ಅವರ ಬಳಿ ತೆರಳಿದರೆ ಸತ್ಯನಿಷೇಧಿಗಳು ಹೇಳುವರು: 'ನೀವು ಕೇವಲ ಅಸತ್ಯವಾದಿಗಳು ಮಾತ್ರವಾಗಿರುವಿರಿ'.

وَلَقَدْ ضَرَبْنَا لِلنَّاسِ فِي هَٰذَا ٱلْقُرْءَانِ مِن كُلِّ مَثَلٍۚ وَلَئِن جِئْتَهُم بِـَٔايَةٍ لَّيَقُولَنَّ ٱلَّذِينَ كَفَرُوٓا۟ إِنْ أَنتُمْ إِلَّا مُبْطِلُونَ ٥٨

59. ಹೀಗೆ ಅಲ್ಲಾಹು (ವಿಷಯವನ್ನು) ಗ್ರಹಿಸದವರ ಹೃದಯಗಳಿಗೆ ಮುದ್ರೆಯೊತ್ತುವನು.

كَذَٰلِكَ يَطْبَعُ ٱللَّهُ عَلَىٰ قُلُوبِ ٱلَّذِينَ لَا يَعْلَمُونَ ٥٩

60. ಆದ್ದರಿಂದ ತಾವು ಸಹನೆವಹಿಸಿರಿ. ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ದೃಢ ವಿಶ್ವಾಸವಿಲ್ಲದ ಜನರು ತಮ್ಮನ್ನು ವಿಚಲಿತಗೊಳಿಸದಿರಲಿ.(1)

فَٱصْبِرْ إِنَّ وَعْدَ ٱللَّهِ حَقٌّۖ وَلَا يَسْتَخِفَّنَّكَ ٱلَّذِينَ لَا يُوقِنُونَ ٦٠

1 ಅವಿಶ್ವಾಸಿಗಳ ಟೀಕೆಗಳು ಅಥವಾ ಅಪಹಾಸ್ಯಗಳು ತಮ್ಮನ್ನು ದೃಢ ನಿರ್ಧಾರದಿಂದ ವಿಚಲಿತಗೊಳಿಸದಿರಲಿ ಎಂದರ್ಥ.

## ಲುಕ್ಮಾನ್[1]

## سُورَةُ لُقۡمَانَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 34

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

الٓمٓ ١ تِلۡكَ ءَايَٰتُ ٱلۡكِتَٰبِ ٱلۡحَكِيمِ ٢

1-2. ಅಲಿಫ್–ಲಾಮ್–ಮೀಮ್. ಇವು ಯುಕ್ತಿ ಪೂರ್ಣವಾಗಿರುವ ಗ್ರಂಥದ ಸೂಕ್ತಿಗಳಾಗಿವೆ.

هُدٗى وَرَحۡمَةٗ لِّلۡمُحۡسِنِينَ ٣ ٱلَّذِينَ يُقِيمُونَ ٱلصَّلَوٰةَ وَيُؤۡتُونَ ٱلزَّكَوٰةَ وَهُم بِٱلۡأٓخِرَةِ هُمۡ يُوقِنُونَ ٤

3-4. ನಮಾಝನ್ನು ಸಂಸ್ಥಾಪಿಸುವವರು, ಝಕಾತ್ ನೀಡುವವರು ಮತ್ತು ಪರಲೋಕದಲ್ಲಿ ದೃಢವಿಶ್ವಾಸವಿಡುವವರಾದ ಸಜ್ಜನರಿಗೆ ಇದು ಮಾರ್ಗದರ್ಶಿಯೂ, ಕಾರುಣ್ಯವೂ ಆಗಿದೆ.

أُوْلَٰٓئِكَ عَلَىٰ هُدٗى مِّن رَّبِّهِمۡۖ وَأُوْلَٰٓئِكَ هُمُ ٱلۡمُفۡلِحُونَ ٥

5. ಅವರು ತಮ್ಮ ರಬ್‌ನ ವತಿಯ ಮಾರ್ಗದರ್ಶನದಲ್ಲಿರುವರು. ಯಶಸ್ವಿಯಾದವರು ಅವರೇ ಆಗಿರುವರು.

وَمِنَ ٱلنَّاسِ مَن يَشۡتَرِي لَهۡوَ ٱلۡحَدِيثِ لِيُضِلَّ عَن سَبِيلِ ٱللَّهِ بِغَيۡرِ عِلۡمٖ وَيَتَّخِذَهَا هُزُوًاۚ أُوْلَٰٓئِكَ لَهُمۡ عَذَابٞ مُّهِينٞ ٦

6. ಯಾವುದೇ ಜ್ಞಾನವಿಲ್ಲದೆ ಅಲ್ಲಾಹುವಿನ ಮಾರ್ಗದಿಂದ ಜನರನ್ನು ಪಥಭ್ರಷ್ಟಗೊಳಿಸಲು ಮತ್ತು ಅದನ್ನು ಹಾಸ್ಯವಸ್ತುವನ್ನಾಗಿ ಮಾಡಿಕೊಳ್ಳಲು ವಿನೋದ ವಾರ್ತೆಗಳನ್ನು ಖರೀದಿಸುವ ಕೆಲವರು ಜನರಲ್ಲಿರುವರು. ಅಂತಹವರಿಗೆ ಅಪಮಾನಕರವಾದ ಶಿಕ್ಷೆಯಿದೆ.

وَإِذَا تُتۡلَىٰ عَلَيۡهِ ءَايَٰتُنَا وَلَّىٰ مُسۡتَكۡبِرٗا كَأَن لَّمۡ يَسۡمَعۡهَا كَأَنَّ فِيٓ أُذُنَيۡهِ وَقۡرٗاۖ فَبَشِّرۡهُ بِعَذَابٍ أَلِيمٖ ٧

7. ಅಂತಹ ಒಬ್ಬನಿಗೆ ನಮ್ಮ ಸೂಕ್ತಿಗಳನ್ನು ಓದಿಕೊಡಲಾದರೆ ಅವನು ತನ್ನ ಎರಡೂ ಕಿವಿಗಳಿಗೆ ಮುಚ್ಚಳವನ್ನು ಹಾಕಿದಂತೆ, ಅದನ್ನು ಆಲಿಸಿಯೇ ಇಲ್ಲವೆಂಬಂತೆ ದರ್ಪದಿಂದ ತಿರುಗಿ ನಡೆಯುವನು. ತಾವು ಅವನಿಗೆ ಯಾತನಾಮಯ ಶಿಕ್ಷೆಯ ಕುರಿತು ಶುಭವಾರ್ತೆಯನ್ನು ತಿಳಿಸಿರಿ.

---

1 ಇಸ್ರಾಈಲರ ಪೈಕಿ ಒಬ್ಬ ತತ್ವಜ್ಞಾನಿಯಾಗಿದ್ದ ಲುಕ್ಮಾನ್‌ರವರ ತತ್ವೋಪದೇಶಗಳನ್ನು ಒಳಗೊಂಡಿರುವುದರಿಂದಲೇ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

8. ಖಂಡಿತವಾಗಿಯೂ ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮಗಳನ್ನು ಮಾಡುವವವರಾರೋ ಅವರಿಗೆ ಸುಖಸಮೃದ್ಧವಾದ ಸ್ವರ್ಗೋದ್ಯಾನಗಳಿವೆ.

إِنَّ ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ لَهُمْ جَنَّـٰتُ ٱلنَّعِيمِ ٨

9. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅದು ಅಲ್ಲಾಹುವಿನ ಸತ್ಯವಾದ ವಾಗ್ದಾನವಾಗಿದೆ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

خَـٰلِدِينَ فِيهَا ۖ وَعْدَ ٱللَّهِ حَقًّا ۚ وَهُوَ ٱلْعَزِيزُ ٱلْحَكِيمُ ٩

10. ನೀವು ಕಾಣುವಂತಹ ಯಾವುದೇ ಸ್ತಂಭಗಳಿಲ್ಲದೆ ಅವನು ಆಕಾಶಗಳನ್ನು ಸೃಷ್ಟಿಸಿರುವನು. ಭೂಮಿಯು ನಿಮ್ಮೊಂದಿಗೆ ಅಲುಗಾಡದಿರಲು ಅವನು ಅದರಲ್ಲಿ ಅಚಲ ಪರ್ವತಗಳನ್ನು ಸ್ಥಾಪಿಸಿರುವನು. ಸರ್ವವಿಧದ ಜೀವಿಗಳನ್ನೂ ಅವನು ಅದರಲ್ಲಿ ಹಬ್ಬಿಸಿರುವನು. ಆಕಾಶದಿಂದ ನಾವು (ಮಳೆ)ನೀರನ್ನು ಸುರಿಸಿದೆವು. ತರುವಾಯ ಭೂಮಿಯಲ್ಲಿ ಉತ್ಕೃಷ್ಟವಾದ ಸರ್ವ (ಸಸ್ಯ) ಜೋಡಿಗಳನ್ನು ನಾವು ಚಿಗುರಿಸಿದೆವು.

خَلَقَ ٱلسَّمَـٰوَٰتِ بِغَيْرِ عَمَدٍ تَرَوْنَهَا ۖ وَأَلْقَىٰ فِى ٱلْأَرْضِ رَوَٰسِىَ أَن تَمِيدَ بِكُمْ وَبَثَّ فِيهَا مِن كُلِّ دَآبَّةٍ ۚ وَأَنزَلْنَا مِنَ ٱلسَّمَآءِ مَآءً فَأَنۢبَتْنَا فِيهَا مِن كُلِّ زَوْجٍ كَرِيمٍ ١٠

11. ಇವೆಲ್ಲವೂ ಅಲ್ಲಾಹುವಿನ ಸೃಷ್ಟಿಯಾಗಿವೆ. ಆದರೆ ಅವನ ಹೊರತಾದವರು ಏನನ್ನು ಸೃಷ್ಟಿಸಿರುವರು ಎಂದು ನನಗೆ ತೋರಿಸಿಕೊಡಿರಿ. ಅಲ್ಲ, ಅಕ್ರಮಿಗಳು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವರು.

هَـٰذَا خَلْقُ ٱللَّهِ فَأَرُونِى مَاذَا خَلَقَ ٱلَّذِينَ مِن دُونِهِۦ ۚ بَلِ ٱلظَّـٰلِمُونَ فِى ضَلَـٰلٍ مُّبِينٍ ١١

12. ನಾವು ಲುಕ್ಮಾನ್‌ರಿಗೆ ತತ್ವಜ್ಞಾನವನ್ನು ದಯಪಾಲಿಸಿದೆವು. 'ತಾವು ಅಲ್ಲಾಹುವಿಗೆ ಕೃತಜ್ಞತೆ ಸಲ್ಲಿಸಿರಿ. ಯಾರಾದರೂ ಕೃತಜ್ಞತೆ ಸಲ್ಲಿಸುವುದಾದರೆ ಅವನು ಕೃತಜ್ಞತೆ ಸಲ್ಲಿಸುವುದು ತನ್ನ ಒಳಿತಿಗೇ ಆಗಿದೆ. ಯಾರಾದರೂ ಕೃತಘ್ನತೆ ತೋರುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿರಪೇಕ್ಷನೂ, ಸ್ತುತ್ಯರ್ಹನೂ ಆಗಿರುವನು' (ಎಂದು ನಾವು ಅವರಿಗೆ ಉಪದೇಶ ಮಾಡಿದೆವು).

وَلَقَدْ ءَاتَيْنَا لُقْمَـٰنَ ٱلْحِكْمَةَ أَنِ ٱشْكُرْ لِلَّهِ ۚ وَمَن يَشْكُرْ فَإِنَّمَا يَشْكُرُ لِنَفْسِهِۦ ۖ وَمَن كَفَرَ فَإِنَّ ٱللَّهَ غَنِىٌّ حَمِيدٌ ١٢

13. ಲುಕ್ಮಾನ್ ತಮ್ಮ ಮಗನಿಗೆ ಉಪದೇಶ ನೀಡುತ್ತಾ ಅವನೊಂದಿಗೆ ಹೇಳಿದ ಸಂದರ್ಭ:

وَإِذْ قَالَ لُقْمَـٰنُ لِٱبْنِهِۦ وَهُوَ يَعِظُهُۥ يَـٰبُنَىَّ

لَا تُشْرِكْ بِٱللَّهِ ۖ إِنَّ ٱلشِّرْكَ لَظُلْمٌ عَظِيمٌ ﴿١٣﴾

‘ಓ ನನ್ನ ಮಗನೇ! ನೀನು ಅಲ್ಲಾಹುವಿನೊಂದಿಗೆ ಸಹಭಾಗಿತ್ವವನ್ನು ಮಾಡದಿರು. ಖಂಡಿತವಾಗಿಯೂ ಸಹಭಾಗಿತ್ವ ಮಾಡುವುದು ಘೋರ ಅಕ್ರಮವಾಗಿದೆ’.

وَوَصَّيْنَا ٱلْإِنسَٰنَ بِوَٰلِدَيْهِ حَمَلَتْهُ أُمُّهُۥ وَهْنًا عَلَىٰ وَهْنٍ وَفِصَٰلُهُۥ فِى عَامَيْنِ أَنِ ٱشْكُرْ لِى وَلِوَٰلِدَيْكَ إِلَىَّ ٱلْمَصِيرُ ﴿١٤﴾

14. ಮಾನವರಿಗೆ ಅವರ ಮಾತಾಪಿತರ ವಿಷಯದಲ್ಲಿ ನಾವು ಆಜ್ಞಾಪಿಸಿರುವೆವು. ಅವನ ತಾಯಿಯು ಬಲಹೀನತೆಯ ಮೇಲೆ ಬಲಹೀನತೆಯನ್ನು ಸಹಿಸಿ ಅವನನ್ನು ಗರ್ಭ ಧರಿಸಿರುವಳು. ಅವನ ಸ್ತನಪಾನವನ್ನು ನಿಲ್ಲಿಸಲಾಗುವುದು ಎರಡು ವರ್ಷದೊಂದಿಗಾಗಿದೆ. ನನಗೂ, ನಿನ್ನ ಮಾತಾಪಿತರಿಗೂ ಕೃತಜ್ಞನಾಗಿರು. (ನಿನ್ನ) ಮರಳುವಿಕೆಯು ನನ್ನ ಬಳಿಗೇ ಆಗಿದೆ.

وَإِن جَٰهَدَاكَ عَلَىٰٓ أَن تُشْرِكَ بِى مَا لَيْسَ لَكَ بِهِۦ عِلْمٌ فَلَا تُطِعْهُمَا ۖ وَصَاحِبْهُمَا فِى ٱلدُّنْيَا مَعْرُوفًا ۖ وَٱتَّبِعْ سَبِيلَ مَنْ أَنَابَ إِلَىَّ ۚ ثُمَّ إِلَىَّ مَرْجِعُكُمْ فَأُنَبِّئُكُم بِمَا كُنتُمْ تَعْمَلُونَ ﴿١٥﴾

15. ನಿನಗೆ ಯಾವುದೇ ಜ್ಞಾನವಿಲ್ಲದ ಏನನ್ನಾದರೂ ನನ್ನೊಂದಿಗೆ ಸಹಭಾಗಿಯನ್ನಾಗಿ ಮಾಡುವಂತೆ ಅವರಿಬ್ಬರೂ ನಿನ್ನನ್ನು ಬಲವಂತಪಡಿಸಿದರೆ, ಆಗ ಅವರನ್ನು ಅನುಸರಿಸದಿರು. ಐಹಿಕ ಜೀವನದಲ್ಲಿ ಅವರೊಂದಿಗೆ ಉತ್ತಮವಾಗಿ ವರ್ತಿಸು. ನನ್ನೆಡೆಗೆ ಮರಳಿದವರ ಮಾರ್ಗವನ್ನು ಹಿಂಬಾಲಿಸು. ತರುವಾಯ ನಿಮ್ಮ ಮರಳುವಿಕೆಯು ನನ್ನ ಬಳಿಗೇ ಆಗಿದೆ. ನೀವು ಮಾಡುತ್ತಿರುವುದರ ಕುರಿತು ಆಗ ನಾನು ನಿಮಗೆ ತಿಳಿಸಿಕೊಡುವೆನು.

يَٰبُنَىَّ إِنَّهَآ إِن تَكُ مِثْقَالَ حَبَّةٍ مِّنْ خَرْدَلٍ فَتَكُن فِى صَخْرَةٍ أَوْ فِى ٱلسَّمَٰوَٰتِ أَوْ فِى ٱلْأَرْضِ يَأْتِ بِهَا ٱللَّهُ ۚ إِنَّ ٱللَّهَ لَطِيفٌ خَبِيرٌ ﴿١٦﴾

16. ‘ಓ ನನ್ನ ಮಗನೇ! ಖಂಡಿತವಾಗಿಯೂ ಅದು (ಏನೇ ಇರಲಿ) ಒಂದು ಸಾಸಿವೆ ಕಾಳಿನಷ್ಟು ಭಾರವಿರುವುದಾದರೂ, ಅದು ಬಂಡೆಯೊಳಗೋ, ಅಥವಾ ಆಕಾಶಗಳಲ್ಲೋ, ಅಥವಾ ಭೂಮಿಯಲ್ಲೋ ಇರುವುದಾದರೂ ಅಲ್ಲಾಹು ಅದನ್ನು ತರುವನು. ಖಂಡಿತವಾಗಿಯೂ ಅಲ್ಲಾಹು ಸೂಕ್ಷ್ಮಜ್ಞನೂ, ಸೂಕ್ಷ್ಮಜ್ಞಾನಿಯೂ ಆಗಿರುವನು.

يَٰبُنَىَّ أَقِمِ ٱلصَّلَوٰةَ وَأْمُرْ بِٱلْمَعْرُوفِ وَٱنْهَ

17. ಓ ನನ್ನ ಮಗನೇ! ನಮಾಝನ್ನು ಸಂಸ್ಥಾಪಿಸು, ಸದಾಚಾರವನ್ನು ಆದೇಶಿಸು ಮತ್ತು

عَنِ ٱلۡمُنكَرِ وَٱصۡبِرۡ عَلَىٰ مَآ أَصَابَكَۖ إِنَّ
ذَٰلِكَ مِنۡ عَزۡمِ ٱلۡأُمُورِ ١٧

ದುರಾಚಾರವನ್ನು ವಿರೋಧಿಸು. ನಿನಗೆ ಬಾಧಿಸಿದ ಕಷ್ಟಗಳಲ್ಲಿ ಸಹನೆ ವಹಿಸು. ಖಂಡಿತವಾಗಿಯೂ ಅದು ಖಚಿತವಾಗಿ ಆದೇಶಿಸಲಾದ ವಿಷಯಗಳಲ್ಲಿ ಸೇರಿದ್ದಾಗಿದೆ.

وَلَا تُصَعِّرۡ خَدَّكَ لِلنَّاسِ وَلَا تَمۡشِ فِي
ٱلۡأَرۡضِ مَرَحًاۖ إِنَّ ٱللَّهَ لَا يُحِبُّ كُلَّ مُخۡتَالٖ
فَخُورٖ ١٨

**18.** ನೀನು (ದರ್ಪದಿಂದ) ನಿನ್ನ ಮುಖವನ್ನು ಜನರೆಡೆಗೆ ತಿರುಗಿಸದಿರು. ಭೂಮಿಯಲ್ಲಿ ಜಂಬದಿಂದ ನಡೆಯದಿರು. ದುರಭಿಮಾನ ಹಾಗೂ ಜಂಬವಿರುವ ಯಾರನ್ನೂ ಅಲ್ಲಾಹು ಇಷ್ಟಪಡುವುದಿಲ್ಲ.

وَٱقۡصِدۡ فِي مَشۡيِكَ وَٱغۡضُضۡ مِن صَوۡتِكَۚ
إِنَّ أَنكَرَ ٱلۡأَصۡوَٰتِ لَصَوۡتُ ٱلۡحَمِيرِ ١٩

**19.** ನಿನ್ನ ನಡೆಯಲ್ಲಿ ನೀನು ಮಿತತ್ವವನ್ನು ಪಾಲಿಸು. ನಿನ್ನ ಧ್ವನಿಯನ್ನು ತಗ್ಗಿಸು. ಖಂಡಿತವಾಗಿಯೂ ಧ್ವನಿಗಳಲ್ಲಿ ಅಸಹನೀಯವಾಗಿರುವುದು ಕತ್ತೆಯ ಧ್ವನಿಯಾಗಿದೆ.

أَلَمۡ تَرَوۡاْ أَنَّ ٱللَّهَ سَخَّرَ لَكُم مَّا
فِي ٱلسَّمَٰوَٰتِ وَمَا فِي ٱلۡأَرۡضِ وَأَسۡبَغَ
عَلَيۡكُمۡ نِعَمَهُۥ ظَٰهِرَةٗ وَبَاطِنَةٗۗ وَمِنَ
ٱلنَّاسِ مَن يُجَٰدِلُ فِي ٱللَّهِ بِغَيۡرِ عِلۡمٖ وَلَا
هُدٗى وَلَا كِتَٰبٖ مُّنِيرٖ ٢٠

**20.** ಆಕಾಶಗಳಲ್ಲಿರುವುದನ್ನು ಮತ್ತು ಭೂಮಿಯಲ್ಲಿರುವುದನ್ನು ಅಲ್ಲಾಹು ನಿಮಗೆ ಅಧೀನಗೊಳಿಸಿಕೊಟ್ಟಿರುವನು ಎಂಬುದನ್ನು ನೀವು ಕಂಡಿಲ್ಲವೇ? ಗೋಚರ ಮತ್ತು ಅಗೋಚರವಾಗಿರುವ ತನ್ನ ಅನುಗ್ರಹಗಳನ್ನು ಅವನು ನಿಮಗೆ ಪೂರ್ತೀಕರಿಸಿಕೊಟ್ಟಿರುವನು. ಯಾವುದೇ ಅರಿವಾಗಲಿ, ಮಾರ್ಗದರ್ಶನವಾಗಲಿ, ಪ್ರಕಾಶ ಬೀರುವ ಗ್ರಂಥವಾಗಲಿ ಇಲ್ಲದೆ ಅಲ್ಲಾಹುವಿನ ಬಗ್ಗೆ ತರ್ಕಿಸುವವರು ಜನರಲ್ಲಿರುವರು.

وَإِذَا قِيلَ لَهُمُ ٱتَّبِعُواْ مَآ أَنزَلَ ٱللَّهُ قَالُواْ
بَلۡ نَتَّبِعُ مَا وَجَدۡنَا عَلَيۡهِ ءَابَآءَنَآۚ أَوَلَوۡ
كَانَ ٱلشَّيۡطَٰنُ يَدۡعُوهُمۡ إِلَىٰ عَذَابِ
ٱلسَّعِيرِ ٢١

**21.** 'ಅಲ್ಲಾಹು ಅವತೀರ್ಣಗೊಳಿಸಿರುವುದನ್ನು ಅನುಸರಿಸಿರಿ' ಎಂದು ಅವರೊಂದಿಗೆ ಹೇಳಲಾದರೆ 'ಇಲ್ಲ, ನಾವು ನಮ್ಮ ಪೂರ್ವಿಕರನ್ನು ಯಾವುದರಲ್ಲಿ ನೆಲೆಗೊಂಡಿರುವುದಾಗಿ ಕಂಡಿರುವೆವೋ ಅದನ್ನೇ ಅನುಸರಿಸುವೆವು' ಎಂದು ಅವರು ಹೇಳುವರು. ಸೈತಾನನು ಅವರನ್ನು ಜ್ವಲಿಸುವ ನರಕಾಗ್ನಿಯೆಡೆಗೆ ಆಹ್ವಾನಿಸುತ್ತಿದ್ದರೂ (ಅವರು ಅದನ್ನೇ ಅನುಸರಿಸುವರೇ?)

22. ಯಾರು ಸತ್ಕರ್ಮಿಯಾಗಿದ್ದು ತನ್ನ ಮುಖವನ್ನು ಅಲ್ಲಾಹುವಿನೆಡೆಗೆ ಸಮರ್ಪಿಸುವನೋ ಅವನು ಬಲಿಷ್ಠವಾದ ಹಗ್ಗವನ್ನು ಹಿಡಿದಿರುವನು. ಸಕಲ ಸಂಗತಿಗಳ ಪರ್ಯಾವಸಾನವು ಅಲ್ಲಾಹುವಿನೆಡೆಗೇ ಆಗಿರುವುದು.

۞ وَمَن يُسْلِمْ وَجْهَهُۥٓ إِلَى ٱللَّهِ وَهُوَ مُحْسِنٌ فَقَدِ ٱسْتَمْسَكَ بِٱلْعُرْوَةِ ٱلْوُثْقَىٰ ۗ وَإِلَى ٱللَّهِ عَـٰقِبَةُ ٱلْأُمُورِ ﴿٢٢﴾

23. ಯಾರಾದರೂ ಅವಿಶ್ವಾಸವಿಟ್ಟರೆ ಅವನ ಅವಿಶ್ವಾಸವು ತಮ್ಮನ್ನು ದುಃಖಕ್ಕೀಡು ಮಾಡದಿರಲಿ. ಅವರ ಮರಳುವಿಕೆಯು ನಮ್ಮೆಡೆಗೇ ಆಗಿದೆ. ಅವರು ಮಾಡುತ್ತಿರುವುದರ ಕುರಿತು ಆಗ ನಾವು ಅವರಿಗೆ ತಿಳಿಸಿಕೊಡುವೆವು. ಖಂಡಿತವಾಗಿಯೂ ಅಲ್ಲಾಹು ಹೃದಯಗಳಲ್ಲಿರುವುದರ ಕುರಿತು ಅರಿವುಳ್ಳವನಾಗಿರುವನು.

وَمَن كَفَرَ فَلَا يَحْزُنكَ كُفْرُهُۥٓ ۚ إِلَيْنَا مَرْجِعُهُمْ فَنُنَبِّئُهُم بِمَا عَمِلُوٓا۟ ۚ إِنَّ ٱللَّهَ عَلِيمٌۢ بِذَاتِ ٱلصُّدُورِ ﴿٢٣﴾

24. ನಾವು ಅವರಿಗೆ ಕ್ಷಣಿಕ ಸುಖವನ್ನು ನೀಡುವೆವು. ತರುವಾಯ ಕಠೋರ ಶಿಕ್ಷೆಯೆಡೆಗೆ ಅವರನ್ನು ತಳ್ಳಿಬಿಡುವೆವು.

نُمَتِّعُهُمْ قَلِيلًا ثُمَّ نَضْطَرُّهُمْ إِلَىٰ عَذَابٍ غَلِيظٍ ﴿٢٤﴾

25. ‘ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಯಾರು?’ ಎಂದು ತಾವು ಅವರೊಂದಿಗೆ ಕೇಳಿದರೆ ಖಂಡಿತವಾಗಿಯೂ ಅವರು ‘ಅಲ್ಲಾಹು’ ಎನ್ನುವರು. ಹೇಳಿರಿ: ‘ಅಲ್ಲಾಹುವಿಗೆ ಸ್ತುತಿ’. ಆದರೆ ಅವರಲ್ಲಿ ಹೆಚ್ಚಿನವರೂ ಅರಿಯಲಾರರು.

وَلَئِن سَأَلْتَهُم مَّنْ خَلَقَ ٱلسَّمَـٰوَٰتِ وَٱلْأَرْضَ لَيَقُولُنَّ ٱللَّهُ ۚ قُلِ ٱلْحَمْدُ لِلَّهِ ۚ بَلْ أَكْثَرُهُمْ لَا يَعْلَمُونَ ﴿٢٥﴾

26. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದು ಅಲ್ಲಾಹುವಿನದ್ದಾಗಿವೆ. ಖಂಡಿತವಾಗಿಯೂ ಅಲ್ಲಾಹು ನಿರಪೇಕ್ಷನೂ, ಸ್ತುತ್ಯರ್ಹನೂ ಆಗಿರುವನು.

لِلَّهِ مَا فِى ٱلسَّمَـٰوَٰتِ وَٱلْأَرْضِ ۚ إِنَّ ٱللَّهَ هُوَ ٱلْغَنِىُّ ٱلْحَمِيدُ ﴿٢٦﴾

27. ಭೂಮಿಯಲ್ಲಿರುವ ಮರಗಳೆಲ್ಲವೂ ಲೇಖನಿಗಳಾಗಿ, ಸಮುದ್ರವು ಶಾಯಿಯಾಗಿ, ಅದರ ನಂತರ ಏಳು ಸಮುದ್ರಗಳು ಅದನ್ನು ಪುಷ್ಟೀಕರಿಸಿದರೂ ಅಲ್ಲಾಹುವಿನ ವಚನಗಳು ಬರೆದು ಮುಗಿಯಲಾರವು. ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَلَوْ أَنَّمَا فِى ٱلْأَرْضِ مِن شَجَرَةٍ أَقْلَـٰمٌ وَٱلْبَحْرُ يَمُدُّهُۥ مِنۢ بَعْدِهِۦ سَبْعَةُ أَبْحُرٍ مَّا نَفِدَتْ كَلِمَـٰتُ ٱللَّهِ ۗ إِنَّ ٱللَّهَ عَزِيزٌ حَكِيمٌ ﴿٢٧﴾

28. ನಿಮ್ಮನ್ನು ಸೃಷ್ಟಿಸುವುದು ಮತ್ತು ಪುನರುತ್ಥಾನಗೊಳಿಸುವುದು ಒಬ್ಬ ವ್ಯಕ್ತಿಯನ್ನು (ಸೃಷ್ಟಿಸುವಂತೆ ಮತ್ತು ಪುನರುತ್ಥಾನಗೊಳಿಸುವಂತೆ) ಮಾತ್ರವಾಗಿದೆ.[1] ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ವೀಕ್ಷಿಸುವವನೂ ಆಗಿರುವನು.

مَّا خَلْقُكُمْ وَلَا بَعْثُكُمْ إِلَّا كَنَفْسٍ وَٰحِدَةٍ ۗ إِنَّ ٱللَّهَ سَمِيعٌۢ بَصِيرٌ ﴿٢٨﴾

29. ಅಲ್ಲಾಹು ರಾತ್ರಿಯನ್ನು ಹಗಲಿನಲ್ಲಿ ನುಸುಳಿಸುವನು ಮತ್ತು ಹಗಲನ್ನು ರಾತ್ರಿಯಲ್ಲಿ ನುಸುಳಿಸುವನು ಎಂಬುದನ್ನು ತಾವು ಕಂಡಿಲ್ಲವೇ? ಅವನು ಸೂರ್ಯನನ್ನು ಮತ್ತು ಚಂದ್ರನನ್ನು ಅಧೀನಗೊಳಿಸಿರುವನು. ಎಲ್ಲವೂ ಒಂದು ನಿಶ್ಚಿತ ಅವಧಿಯವರೆಗೆ ಚಲಿಸುತ್ತಿರುವುವು. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನೆಂದು (ತಾವು ಆಲೋಚಿಸಿಲ್ಲವೇ)?

أَلَمْ تَرَ أَنَّ ٱللَّهَ يُولِجُ ٱلَّيْلَ فِى ٱلنَّهَارِ وَيُولِجُ ٱلنَّهَارَ فِى ٱلَّيْلِ وَسَخَّرَ ٱلشَّمْسَ وَٱلْقَمَرَ ۖ كُلٌّ يَجْرِىٓ إِلَىٰٓ أَجَلٍ مُّسَمًّى وَأَنَّ ٱللَّهَ بِمَا تَعْمَلُونَ خَبِيرٌ ﴿٢٩﴾

30. ಅದು ಯಾಕೆಂದರೆ ಸತ್ಯವಾಗಿರುವವನು ಅಲ್ಲಾಹು ಮಾತ್ರವಾಗಿರುವನು. ಅವನ ಹೊರತು ಅವರು ಕರೆದು ಪ್ರಾರ್ಥಿಸುವವುಗಳೆಲ್ಲವೂ ಮಿಥ್ಯೆಯಾಗಿವೆ. ಖಂಡಿತವಾಗಿಯೂ ಅಲ್ಲಾಹು ಅತ್ಯುನ್ನತನೂ, ಮಹಾನನೂ ಆಗಿರುವನು.

ذَٰلِكَ بِأَنَّ ٱللَّهَ هُوَ ٱلْحَقُّ وَأَنَّ مَا يَدْعُونَ مِن دُونِهِ ٱلْبَٰطِلُ وَأَنَّ ٱللَّهَ هُوَ ٱلْعَلِىُّ ٱلْكَبِيرُ ﴿٣٠﴾

31. ಸಮುದ್ರದಲ್ಲಿ ಹಡಗುಗಳು ಚಲಿಸುವುದು ಅಲ್ಲಾಹುವಿನ ಅನುಗ್ರಹದಿಂದಾಗಿದೆ ಎಂಬುದನ್ನು ತಾವು ನೋಡಿಲ್ಲವೇ? ಅದು ಅವನ ದೃಷ್ಟಾಂತಗಳಲ್ಲಿ ಕೆಲವನ್ನು ನಿಮಗೆ ತೋರಿಸಿಕೊಡುವ ಸಲುವಾಗಿದೆ. ಖಂಡಿತವಾಗಿಯೂ ಸಹನೆ ಪಾಲಿಸುವವರೂ, ಕೃತಜ್ಞತೆ ಸಲ್ಲಿಸುವವರೂ ಆಗಿರುವ ಎಲ್ಲರಿಗೂ ಅದರಲ್ಲಿ ದೃಷ್ಟಾಂತಗಳಿವೆ.

أَلَمْ تَرَ أَنَّ ٱلْفُلْكَ تَجْرِى فِى ٱلْبَحْرِ بِنِعْمَتِ ٱللَّهِ لِيُرِيَكُم مِّنْ ءَايَٰتِهِۦٓ ۚ إِنَّ فِى ذَٰلِكَ لَءَايَٰتٍ لِّكُلِّ صَبَّارٍ شَكُورٍ ﴿٣١﴾

1 ಕೋಟ್ಯಾನುಕೋಟಿ ಮನುಷ್ಯರನ್ನು ಅಲ್ಲಾಹು ಒಮ್ಮೆಲೇ ಪುನರುತ್ಥಾನಗೊಳಿಸುವುದು ಹೇಗೆಂದು ಸಂಶಯಪಡುವ ಕೆಲವರಿದ್ದಾರೆ. ಆದರೆ ಅಲ್ಲಾಹುವಿನ ಪಾಲಿಗೆ ಒಬ್ಬನನ್ನು ಸೃಷ್ಟಿಸುವುದು ಮತ್ತು ಕೋಟ್ಯಾನುಕೋಟಿ ಜನರನ್ನು ಸೃಷ್ಟಿಸುವುದು ಒಂದೇ ರೀತಿ ನಿಷ್ಪ್ರಯಾಸದ ವಿಷಯವಾಗಿದೆ.

**32.** ಬೆಟ್ಟದಂತಹ[1] ಅಲೆಗಳು ಅವರನ್ನು ಆವರಿಸಿದಾಗ ವಿಧೇಯತೆಯನ್ನು ಅಲ್ಲಾಹುವಿಗೆ ಮಾತ್ರ ಸೀಮಿತಗೊಳಿಸಿ ಅವರು ಅವನೊಂದಿಗೆ ಪ್ರಾರ್ಥಿಸುವರು. ಆದರೆ ಅವನು ಅವರನ್ನು ರಕ್ಷಿಸಿ ದಡಕ್ಕೆ ತಲುಪಿಸಿದರೆ ಅವರ ಪೈಕಿ ಕೆಲವರು (ಮಾತ್ರ) ಶಿಷ್ಟಾಚಾರ ಪಾಲಿಸುವರು. ಮಹಾವಂಚಕರು ಮತ್ತು ಕೃತಘ್ನರಾಗಿರುವವರ ಹೊರತು ಇನ್ನಾರೂ ನಮ್ಮ ದೃಷ್ಟಾಂತಗಳನ್ನು ನಿಷೇಧಿಸಲಾರರು.

وَإِذَا غَشِيَهُم مَّوْجٌ كَٱلظُّلَلِ دَعَوُا۟ ٱللَّهَ مُخْلِصِينَ لَهُ ٱلدِّينَ فَلَمَّا نَجَّىٰهُمْ إِلَى ٱلْبَرِّ فَمِنْهُم مُّقْتَصِدٌ ۚ وَمَا يَجْحَدُ بِـَٔايَـٰتِنَآ إِلَّا كُلُّ خَتَّارٍ كَفُورٍ ﴿٣٢﴾

**33.** ಓ ಜನರೇ! ನೀವು ನಿಮ್ಮ ರಬ್ಬನ್ನು ಭಯಪಡಿರಿ. ಯಾವ ತಂದೆಯೂ ತನ್ನ ಸಂತತಿಗೆ ಉಪಕಾರ ಮಾಡದ ಮತ್ತು ಯಾವ ಸಂತತಿಯೂ ತನ್ನ ತಂದೆಗೆ ಪ್ರಯೋಜನ ಮಾಡದ ಒಂದು ದಿನವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ಆದ್ದರಿಂದ ಐಹಿಕ ಜೀವನವು ನಿಮ್ಮನ್ನು ವಂಚಿಸದಿರಲಿ. ಮಹಾ ವಂಚಕನಾದ ಸೈತಾನನು ಅಲ್ಲಾಹುವಿನ ವಿಷಯದಲ್ಲಿ ನಿಮ್ಮನ್ನು ವಂಚಿಸದಿರಲಿ.

يَـٰٓأَيُّهَا ٱلنَّاسُ ٱتَّقُوا۟ رَبَّكُمْ وَٱخْشَوْا۟ يَوْمًا لَّا يَجْزِى وَالِدٌ عَن وَلَدِهِۦ وَلَا مَوْلُودٌ هُوَ جَازٍ عَن وَالِدِهِۦ شَيْـًٔا ۚ إِنَّ وَعْدَ ٱللَّهِ حَقٌّ ۖ فَلَا تَغُرَّنَّكُمُ ٱلْحَيَوٰةُ ٱلدُّنْيَا وَلَا يَغُرَّنَّكُم بِٱللَّهِ ٱلْغَرُورُ ﴿٣٣﴾

**34.** ಅಂತ್ಯಘಳಿಗೆಯ ಜ್ಞಾನವಿರುವುದು ಖಂಡಿತವಾಗಿಯೂ ಅಲ್ಲಾಹುವಿನ ಬಳಿಯಲ್ಲಾಗಿದೆ. ಅವನು ಮಳೆಯನ್ನು ಸುರಿಸುವನು. ಅವನು ಗರ್ಭಾಶಯಗಳಲ್ಲಿರುವುದನ್ನು ಅರಿಯುವನು.[2] ತಾನು ನಾಳೆ ಏನು ಮಾಡುವೆನೆಂದು ಯಾರೂ ಅರಿಯಲಾರರು. ತಾನು ಯಾವ ಪ್ರದೇಶದಲ್ಲಿ ಮೃತಪಡುವೆನೆಂದು ಯಾರೂ ಅರಿಯಲಾರರು. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ, ಸೂಕ್ಷ್ಮಜ್ಞಾನಿಯೂ ಆಗಿರುವನು.

إِنَّ ٱللَّهَ عِندَهُۥ عِلْمُ ٱلسَّاعَةِ وَيُنَزِّلُ ٱلْغَيْثَ وَيَعْلَمُ مَا فِى ٱلْأَرْحَامِ ۖ وَمَا تَدْرِى نَفْسٌ مَّاذَا تَكْسِبُ غَدًا ۖ وَمَا تَدْرِى نَفْسٌۢ بِأَىِّ أَرْضٍ تَمُوتُ ۚ إِنَّ ٱللَّهَ عَلِيمٌ خَبِيرٌۢ ﴿٣٤﴾

1 ಝುಲಲ್ ಎಂಬ ಪದಕ್ಕೆ ಪರ್ವತಗಳು, ಮೋಡಗಳು ಇತ್ಯಾದಿ ಅರ್ಥಗಳಿವೆ.

2 ಎಲ್ಲಿ, ಯಾವಾಗ, ಯಾವ ಪ್ರಮಾಣದಲ್ಲಿ ಮಳೆ ಲಭ್ಯವಾಗಲಿದೆಯೆಂಬುದನ್ನು ಅಲ್ಲಾಹುವಿನ ಹೊರತು ಬೇರೆ ಯಾರಿಗೂ ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ. ಹಾಗೆಯೇ ಗರ್ಭಾಶಯದಲ್ಲಿ ರೂಪುಗೊಳ್ಳುವ ಶಿಶುವಿಗೆ ಸಂಬಂಧಿಸಿದ ಪೂರ್ಣ ಮಾಹಿತಿಗಳನ್ನು ಅರಿತಿರುವವನು ಅಲ್ಲಾಹು ಮಾತ್ರವಾಗಿರುವನು.

# ಅಸ್ಸಜ್ದಃ

# سُورَةُ السَّجْدَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 30

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-2.** ಅಲಿಫ್–ಲಾಮ್–ಮೀಮ್. ಈ ಗ್ರಂಥದ ಅವತೀರ್ಣವು ಸರ್ವಲೋಕಗಳ ರಬ್‌ನ ವತಿಯಿಂದಾಗಿದೆ. ಇದರಲ್ಲಿ ಯಾವುದೇ ಸಂದೇಹವಿಲ್ಲ.

الٓمٓ ﴿١﴾ تَنزِيلُ ٱلۡكِتَٰبِ لَا رَيۡبَ فِيهِ مِن رَّبِّ ٱلۡعَٰلَمِينَ ﴿٢﴾

**3.** ಅಥವಾ ಇದನ್ನು ಅವರು (ಪ್ರವಾದಿಯವರು) ಸ್ವತಃ ರಚಿಸಿದರು ಎಂದು ಅವರು ಹೇಳುತ್ತಿರುವರೇ? ಅಲ್ಲ, ಅದು ತಮ್ಮ ರಬ್‌ನ ವತಿಯ ಸತ್ಯವಾಗಿದೆ. ತಮಗಿಂತ ಮೊದಲು ಯಾವುದೇ ಮುನ್ನೆಚ್ಚರಿಕೆಗಾರರು ಬರದಂತಹ[1] ಒಂದು ಜನತೆಗೆ ತಾವು ಎಚ್ಚರಿಕೆ ನೀಡುವ ಸಲುವಾಗಿ. ಅವರು ಸನ್ಮಾರ್ಗ ಪಡೆಯಲೂಬಹುದು.

أَمۡ يَقُولُونَ ٱفۡتَرَىٰهُۚ بَلۡ هُوَ ٱلۡحَقُّ مِن رَّبِّكَ لِتُنذِرَ قَوۡمٗا مَّآ أَتَىٰهُم مِّن نَّذِيرٖ مِّن قَبۡلِكَ لَعَلَّهُمۡ يَهۡتَدُونَ ﴿٣﴾

**4.** ಆಕಾಶಗಳನ್ನು, ಭೂಮಿಯನ್ನು ಮತ್ತು ಅವುಗಳ ಮಧ್ಯೆಯಿರುವುದನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅಲ್ಲಾಹುವಾಗಿರುವನು. ತರುವಾಯ ಅವನು ಸಿಂಹಾಸನಾರೂಢನಾದನು. ಅವನ ಹೊರತು ನಿಮಗೆ ಯಾವುದೇ ರಕ್ಷಕನಾಗಲಿ, ಶಿಫಾರಸ್ಸುಗಾರನಾಗಲಿ ಇರಲಾರರು. ನೀವು ಚಿಂತಿಸಿ ಗ್ರಹಿಸುವುದಿಲ್ಲವೇ?

ٱللَّهُ ٱلَّذِي خَلَقَ ٱلسَّمَٰوَٰتِ وَٱلۡأَرۡضَ وَمَا بَيۡنَهُمَا فِي سِتَّةِ أَيَّامٖ ثُمَّ ٱسۡتَوَىٰ عَلَى ٱلۡعَرۡشِۖ مَا لَكُم مِّن دُونِهِۦ مِن وَلِيّٖ وَلَا شَفِيعٍۚ أَفَلَا تَتَذَكَّرُونَ ﴿٤﴾

**5.** ಅವನು ಆಕಾಶದಿಂದ ಭೂಮಿಯಡೆಗೆ ಸಂಗತಿಗಳನ್ನು ನಿಯಂತ್ರಿಸುವನು.[2] ತರುವಾಯ ಒಂದು ದಿನ ಅದು ಅವನೆಡೆಗೆ

يُدَبِّرُ ٱلۡأَمۡرَ مِنَ ٱلسَّمَآءِ إِلَى ٱلۡأَرۡضِ ثُمَّ يَعۡرُجُ إِلَيۡهِ فِي يَوۡمٖ كَانَ مِقۡدَارُهُۥٓ

---

1 ಅರಬರ ಕಡೆಗೆ (ಅಥವಾ ಕುರೈಶರೆಡೆಗೆ) ಪ್ರವಾದಿ(صَلَّى ٱللَّهُ عَلَيْهِ وَسَلَّمَ)ರವರಿಗಿಂತ ಮೊದಲು ಪ್ರವಾದಿಗಳನ್ನು ಕಳುಹಿಸಲಾಗಿಲ್ಲವೆಂದು ಪ್ರಸ್ತುತ ಸೂಕ್ತಿ ಮತ್ತು ಸೂರಃ ಯಾಸೀನ್‌ನ 6ನೇ ಸೂಕ್ತಿಯು ಸ್ಪಷ್ಟಪಡಿಸಿದೆ.

2 ಆಕಾಶದಿಂದ ಭೂಮಿಯವರೆಗಿನ ಎಲ್ಲಾ ಕಾರ್ಯಗಳನ್ನೂ ಅಲ್ಲಾಹು ನಿಯಂತ್ರಿಸುತ್ತಿದ್ದಾನೆ ಎಂದೂ ಅರ್ಥೈಸಬಹುದಾಗಿದೆ.

ಏರಿಹೋಗುವುದು.[1] ಆ ದಿನದ ವಿಸ್ತಾರವು ನೀವು ಎಣಿಸುವಂತಹ ಸಾವಿರ ವರ್ಷಗಳಾಗಿದೆ.

أَلْفَ سَنَةٍ مِّمَّا تَعُدُّونَ ٥

6. ಅವನು ಗೋಚರ ಮತ್ತು ಅಗೋಚರಗಳನ್ನು ಅರಿಯುವವನೂ, ಪ್ರತಾಪಶಾಲಿಯೂ, ಕರುಣಾನಿಧಿಯೂ ಆಗಿರುವನು.

ذَٰلِكَ عَٰلِمُ ٱلْغَيْبِ وَٱلشَّهَٰدَةِ ٱلْعَزِيزُ ٱلرَّحِيمُ ٦

7. ತಾನು ಸೃಷ್ಟಿಸಿದ ಎಲ್ಲ ವಸ್ತುಗಳನ್ನೂ ವಿಶಿಷ್ಟಗೊಳಿಸಿರುವನು. ಅವನು ಮಾನವನ ಸೃಷ್ಟಿಯನ್ನು ಜೇಡಿಮಣ್ಣಿನಿಂದ ಆರಂಭಿಸಿದನು.

ٱلَّذِىٓ أَحْسَنَ كُلَّ شَىْءٍ خَلَقَهُۥ ۖ وَبَدَأَ خَلْقَ ٱلْإِنسَٰنِ مِن طِينٍ ٧

8. ತರುವಾಯ ಅವನ ಸಂತತಿಯನ್ನು ತುಚ್ಛವಾದ ನೀರಿನ ಸತ್ವದಿಂದ ಉಂಟು ಮಾಡಿದನು.

ثُمَّ جَعَلَ نَسْلَهُۥ مِن سُلَٰلَةٍ مِّن مَّآءٍ مَّهِينٍ ٨

9. ತರುವಾಯ ಅವನನ್ನು ಸರಿಯಾದ ರೂಪದಲ್ಲಿ ಮಾಡಿ, ತನ್ನ ವತಿಯ ಆತ್ಮವನ್ನು ಅವನಲ್ಲಿ ಊದಿದನು. ಅವನು ನಿಮಗೆ ಶ್ರವಣವನ್ನೂ, ದೃಷ್ಟಿಗಳನ್ನೂ, ಹೃದಯಗಳನ್ನೂ ಮಾಡಿಕೊಟ್ಟನು. ನೀವು ಅಲ್ಪವೇ ಕೃತಜ್ಞತೆ ಸಲ್ಲಿಸುವಿರಿ.

ثُمَّ سَوَّىٰهُ وَنَفَخَ فِيهِ مِن رُّوحِهِۦ ۖ وَجَعَلَ لَكُمُ ٱلسَّمْعَ وَٱلْأَبْصَٰرَ وَٱلْأَفْـِٔدَةَ ۚ قَلِيلًا مَّا تَشْكُرُونَ ٩

10. ಅವರು (ಸತ್ಯನಿಷೇಧಿಗಳು) ಹೇಳಿದರು: 'ನಾವು ಭೂಮಿಯಲ್ಲಿ ಲಯವಾಗಿ ಕಣ್ಮರೆಯಾದರೂ ನಮ್ಮನ್ನು ಹೊಸದಾಗಿ ಸೃಷ್ಟಿಸಲಾಗುವುದೇ?' ಅಲ್ಲ, ಅವರು ತಮ್ಮ ರಬ್‌ನೊಂದಿಗಿರುವ ಭೇಟಿಯನ್ನು ನಿಷೇಧಿಸಿದವರಾಗಿರುವರು.

وَقَالُوٓا۟ أَءِذَا ضَلَلْنَا فِى ٱلْأَرْضِ أَءِنَّا لَفِى خَلْقٍ جَدِيدٍۭ ۚ بَلْ هُم بِلِقَآءِ رَبِّهِمْ كَٰفِرُونَ ١٠

11. (ಓ ಪ್ರವಾದಿಯವರೇ!) ಹೇಳಿರಿ: 'ನಿಮ್ಮ ವಿಷಯದಲ್ಲಿ ಹೊಣೆ ವಹಿಸಿಕೊಡಲಾದ ಮರಣದ ಮಲಕ್ ನಿಮ್ಮನ್ನು ಮೃತಪಡಿಸುವರು. ತರುವಾಯ ನಿಮ್ಮನ್ನು ನಿಮ್ಮ ರಬ್‌ನೆಡೆಗೆ ಮರಳಿಸಲಾಗುವುದು'.

۞ قُلْ يَتَوَفَّىٰكُم مَّلَكُ ٱلْمَوْتِ ٱلَّذِى وُكِّلَ بِكُمْ ثُمَّ إِلَىٰ رَبِّكُمْ تُرْجَعُونَ ١١

---

1 ಯಾವುದೇ ವಿಷಯದಲ್ಲೂ ಯಾರಿಗೂ ತೀರ್ಪು ನೀಡಲು ಅಧಿಕಾರವಿಲ್ಲದ ಮತ್ತು ಸರ್ವ ಅಧಿಕಾರಗಳೂ ಅಲ್ಲಾಹುವಿಗೆ ಮಾತ್ರ ಸೀಮಿತವಾಗಿರುವ ನ್ಯಾಯ ತೀರ್ಮಾನದ ದಿನದ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ ಎಂದು ಹೆಚ್ಚಿನ ಕುರ್‌ಆನ್ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

**12.** ಅಪರಾಧಿಗಳು ತಮ್ಮ ರಬ್‌ನ ಬಳಿ ತಲೆತಗ್ಗಿಸಿ, ‘ಓ ನಮ್ಮ ರಬ್! ನಾವು (ಕಣ್ಣಾರೆ) ಕಂಡಿರುವೆವು ಮತ್ತು ಆಲಿಸಿರುವೆವು. ಆದ್ದರಿಂದ ನಮ್ಮನ್ನು ಮರಳಿ ಕಳುಹಿಸು. ಹಾಗಾದರೆ ನಾವು ಸತ್ಕರ್ಮಗಳನ್ನು ಮಾಡುವೆವು. ಖಂಡಿತವಾಗಿಯೂ ನಾವು ಈಗ ದೃಢವಿಶ್ವಾಸವುಳ್ಳವರಾಗಿರುವೆವು’ ಎಂದು ಹೇಳುವ ಸಂದರ್ಭವನ್ನು ತಾವು ಕಾಣುವುದಾದರೆ (ಅದೆಂತಹ ದೃಶ್ಯವಾಗಿರುವುದು)!

وَلَوْ تَرَىٰٓ إِذِ ٱلْمُجْرِمُونَ نَاكِسُوا۟ رُءُوسِهِمْ عِندَ رَبِّهِمْ رَبَّنَآ أَبْصَرْنَا وَسَمِعْنَا فَٱرْجِعْنَا نَعْمَلْ صَـٰلِحًا إِنَّا مُوقِنُونَ ١٢

**13.** ನಾವು ಇಚ್ಛಿಸುತ್ತಿದ್ದರೆ ಪ್ರತಿಯೊಬ್ಬ ವ್ಯಕ್ತಿಗೂ ಅವನ ಸನ್ಮಾರ್ಗವನ್ನು ನೀಡುತ್ತಿದ್ದೆವು. ಆದರೆ, ‘ಜಿನ್ನ್ ಮತ್ತು ಮಾನವರಿಂದ ಖಂಡಿತವಾಗಿಯೂ ನಾನು ನರಕವನ್ನು ತುಂಬುವೆನು’ ಎಂಬ ನನ್ನ ವತಿಯ ವಚನವು ಸ್ಥಿರೀಕರಿಸಲ್ಪಟ್ಟಿದೆ.(1)

وَلَوْ شِئْنَا لَـَٔاتَيْنَا كُلَّ نَفْسٍ هُدَىٰهَا وَلَـٰكِنْ حَقَّ ٱلْقَوْلُ مِنِّى لَأَمْلَأَنَّ جَهَنَّمَ مِنَ ٱلْجِنَّةِ وَٱلنَّاسِ أَجْمَعِينَ ١٣

**14.** ಆದ್ದರಿಂದ ನಿಮ್ಮ ಈ ದಿನದ ಭೇಟಿಯನ್ನು ನೀವು ಮರೆತಿರುವುದರ ಫಲವಾಗಿ ಶಿಕ್ಷೆಯನ್ನು ಸವಿಯಿರಿ. ಖಂಡಿತವಾಗಿಯೂ ನಿಮ್ಮನ್ನು ನಾವು ಮರೆತಿರುವೆವು. ನೀವು ಮಾಡುತ್ತಿದ್ದುದರ ಫಲವಾಗಿ ಶಾಶ್ವತ ಶಿಕ್ಷೆಯನ್ನು ಸವಿಯಿರಿ.

فَذُوقُوا۟ بِمَا نَسِيتُمْ لِقَآءَ يَوْمِكُمْ هَـٰذَآ إِنَّا نَسِينَـٰكُمْ ۖ وَذُوقُوا۟ عَذَابَ ٱلْخُلْدِ بِمَا كُنتُمْ تَعْمَلُونَ ١٤

**15.** ನಮ್ಮ ದೃಷ್ಟಾಂತಗಳ ಮೂಲಕ ಬೋಧಿಸಲಾದರೆ ಸಾಷ್ಟಾಂಗವೆರಗುತ್ತಾ ಬೀಳುವವರು ಮತ್ತು ತಮ್ಮ ರಬ್ಬನ್ನು ಸ್ತುತಿಸುತ್ತಾ ಕೊಂಡಾಡುವವರು ಮಾತ್ರ ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಡುವರು. ಅವರು ಅಹಂಕಾರ ಪಡಲಾರರು.

إِنَّمَا يُؤْمِنُ بِـَٔايَـٰتِنَا ٱلَّذِينَ إِذَا ذُكِّرُوا۟ بِهَا خَرُّوا۟ سُجَّدًا وَسَبَّحُوا۟ بِحَمْدِ رَبِّهِمْ وَهُمْ لَا يَسْتَكْبِرُونَ ۩ ١٥

**16.** ಭಯ ಮತ್ತು ನಿರೀಕ್ಷೆಯೊಂದಿಗೆ ತಮ್ಮ ರಬ್‌ನಲ್ಲಿ ಪ್ರಾರ್ಥಿಸುವುದಕ್ಕಾಗಿ ಅವರ

تَتَجَافَىٰ جُنُوبُهُمْ عَنِ ٱلْمَضَاجِعِ يَدْعُونَ

1 ಕೆಡುಕನ್ನು ಪ್ರಚೋದಿಸುವ ಪ್ರಲೋಭನೆಗಳನ್ನು ಮೆಟ್ಟಿನಿಂತು ಒಳಿತನ್ನು ಆರಿಸುವುದರಿಂದ ಮಹತ್ವವು ಹೆಚ್ಚಾಗುತ್ತದೆ. ಈ ಉನ್ನತಿಗೆ ತಲುಪಲು ಮಾನವ ಮತ್ತು ಜಿನ್ನ್ ಸಮೂಹಕ್ಕೆ ಅಲ್ಲಾಹು ಸಮಾನ ಅವಕಾಶವನ್ನು ನೀಡಿದ್ದಾನೆ. ಆದರೆ ಪ್ರಜ್ಞಾಪೂರ್ವಕವಾಗಿ ಕೆಡುಕನ್ನು ಆರಿಸುವವರಿಗೆ ಅರ್ಹ ಶಿಕ್ಷೆಯನ್ನು ನೀಡುವುದು ಅಲ್ಲಾಹುವಿನ ನ್ಯಾಯದ ಬೇಡಿಕೆಯಾಗಿದೆ. ಅದಕ್ಕಾಗಿಯೇ ಅವನು ನರಕಾಗ್ನಿಯನ್ನು ಸಿದ್ಧಗೊಳಿಸಿದ್ದಾನೆ.

ಪಾರ್ಶ್ವಗಳು ತಮ್ಮ ಶಯನ ಸ್ಥಳಗಳನ್ನು ಬಿಟ್ಟಗಲುವುವು.[1] ನಾವು ಅವರಿಗೆ ಒದಗಿಸಿರುವುದರಿಂದ ಅವರು ವ್ಯಯಿಸುವರು.

رَبَّهُمْ خَوْفًا وَطَمَعًا وَمِمَّا رَزَقْنَٰهُمْ يُنفِقُونَ ﴿١٦﴾

**17.** ಅವರು ಮಾಡಿರುವುದಕ್ಕಿರುವ ಪ್ರತಿಫಲವಾಗಿ ಕಣ್ಣನ್ನು ತಣಿಸುವ ಏನನ್ನೆಲ್ಲ ಅವರಿಗಾಗಿ ಗೋಪ್ಯವಾಗಿಡಲಾಗಿದೆ ಎಂಬುದನ್ನು ಯಾವ ವ್ಯಕ್ತಿಯೂ ಅರಿತಿರಲಾರನು.

فَلَا تَعْلَمُ نَفْسٌ مَّآ أُخْفِىَ لَهُم مِّن قُرَّةِ أَعْيُنٍ جَزَآءًۢ بِمَا كَانُوا۟ يَعْمَلُونَ ﴿١٧﴾

**18.** ಹೀಗಿರುವಾಗ ವಿಶ್ವಾಸಿಯಾಗಿ ಬಿಟ್ಟವನು ಧಿಕ್ಕಾರಿಯಾದವನಂತೆ ಆಗಿರುವನೇ? ಅವರು ಸಮಾನರಾಗಲಾರರು.

أَفَمَن كَانَ مُؤْمِنًا كَمَن كَانَ فَاسِقًا ۚ لَّا يَسْتَوُۥنَ ﴿١٨﴾

**19.** ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರಿಗೆ –ಅವರು ಮಾಡಿರುವುದರ ಆತಿಥ್ಯವಾಗಿ– ವಾಸಿಸಲು ಸ್ವರ್ಗೋದ್ಯಾನಗಳಿರುವುವು.

أَمَّا ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ فَلَهُمْ جَنَّٰتُ ٱلْمَأْوَىٰ نُزُلًۢا بِمَا كَانُوا۟ يَعْمَلُونَ ﴿١٩﴾

**20.** ಆದರೆ ಧಿಕ್ಕಾರವೆಸಗಿದವರು ಯಾರೋ ಅವರ ವಾಸಸ್ಥಳವು ನರಕಾಗ್ನಿಯಾಗಿದೆ. ಅವರು ಅದರಿಂದ ಹೊರಬರಲು ಯತ್ನಿಸುವಾಗಲೆಲ್ಲ ಅವರನ್ನು ಅದಕ್ಕೇ ಮರಳಿ ಕಳುಹಿಸಲಾಗುವುದು. 'ನೀವು ನಿಷೇಧಿಸುತ್ತಿದ್ದ ಆ ನರಕ ಶಿಕ್ಷೆಯನ್ನು ಸವಿಯಿರಿ' ಎಂದು ಅವರೊಂದಿಗೆ ಹೇಳಲಾಗುವುದು.

وَأَمَّا ٱلَّذِينَ فَسَقُوا۟ فَمَأْوَىٰهُمُ ٱلنَّارُ ۖ كُلَّمَآ أَرَادُوٓا۟ أَن يَخْرُجُوا۟ مِنْهَآ أُعِيدُوا۟ فِيهَا وَقِيلَ لَهُمْ ذُوقُوا۟ عَذَابَ ٱلنَّارِ ٱلَّذِى كُنتُم بِهِۦ تُكَذِّبُونَ ﴿٢٠﴾

**21.** ಆ ಮಹಾ ಶಿಕ್ಷೆಯಲ್ಲದೆ (ಐಹಿಕವಾದ) ಕೆಲವು ಸಣ್ಣ ಮಟ್ಟಿನ ಶಿಕ್ಷೆಯನ್ನೂ ನಾವು ಅವರಿಗೆ ಸವಿಯುವಂತೆ ಮಾಡುವೆವು. ಒಂದು ವೇಳೆ ಅವರು ಮರಳಲೂ ಬಹುದು.

وَلَنُذِيقَنَّهُم مِّنَ ٱلْعَذَابِ ٱلْأَدْنَىٰ دُونَ ٱلْعَذَابِ ٱلْأَكْبَرِ لَعَلَّهُمْ يَرْجِعُونَ ﴿٢١﴾

**22.** ತನ್ನ ರಬ್‌ನ ದೃಷ್ಟಾಂತಗಳ ಕುರಿತು ಬೋಧಿಸಲಾದ ಬಳಿಕ ಅವುಗಳಿಂದ ವಿಮುಖನಾದವನಿಗಿಂತಲೂ ದೊಡ್ಡ ಅಕ್ರಮಿ ಯಾರಿರುವನು? ಖಂಡಿತವಾಗಿಯೂ ನಾವು ಅಪರಾಧಿಗಳ ಮೇಲೆ ಶಿಕ್ಷಾಕ್ರಮವನ್ನು ಕೈಗೊಳ್ಳುವೆವು.

وَمَنْ أَظْلَمُ مِمَّن ذُكِّرَ بِـَٔايَٰتِ رَبِّهِۦ ثُمَّ أَعْرَضَ عَنْهَآ ۚ إِنَّا مِنَ ٱلْمُجْرِمِينَ مُنتَقِمُونَ ﴿٢٢﴾

1 ಜಗತ್ತು ನಿದ್ದೆಯಲ್ಲಿ ಮುಳುಗಿರುವಾಗ ಅವರು ಶಯ್ಯೆಗಳನ್ನು ಬಿಟ್ಟು ಪ್ರಾರ್ಥನಾ ಮಗ್ನರಾಗಿ ರಾತ್ರಿ ಕಳೆಯುವರು ಎಂದರ್ಥ.

23. ಖಂಡಿತವಾಗಿಯೂ ನಾವು ಮೂಸಾರಿಗೆ ಗ್ರಂಥವನ್ನು ನೀಡಿರುವೆವು. ಆದ್ದರಿಂದ ಅದನ್ನು ಸಂಧಿಸುವ ವಿಷಯದಲ್ಲಿ ತಾವು ಸಂದೇಹ ಪಡದಿರಿ.[1] ನಾವು ಅದನ್ನು ಇಸ್ರಾಈಲ್ ಸಂತತಿಗಳಿಗೆ ಮಾರ್ಗದರ್ಶಿಯನ್ನಾಗಿ ಮಾಡಿದೆವು.

وَلَقَدْ ءَاتَيْنَا مُوسَى ٱلْكِتَٰبَ فَلَا تَكُن فِى مِرْيَةٍ مِّن لِّقَآئِهِۦ ۖ وَجَعَلْنَٰهُ هُدًى لِّبَنِىٓ إِسْرَٰٓءِيلَ ﴿٢٣﴾

24. ಅವರು ಸಹನೆ ಪಾಲಿಸಿದಾಗ ಮತ್ತು ನಮ್ಮ ದೃಷ್ಟಾಂತಗಳಲ್ಲಿ ದೃಢವಾಗಿ ವಿಶ್ವಾಸವಿಟ್ಟವರಾದಾಗ ಅವರ ಪೈಕಿ ನಮ್ಮ ಆಜ್ಞೆಯನ್ನು ಅನುಸರಿಸಿ ಮಾರ್ಗದರ್ಶನ ಮಾಡುವ ನಾಯಕರನ್ನು ನಾವು ಉಂಟುಮಾಡಿದೆವು.

وَجَعَلْنَا مِنْهُمْ أَئِمَّةً يَهْدُونَ بِأَمْرِنَا لَمَّا صَبَرُوا۟ ۖ وَكَانُوا۟ بِـَٔايَٰتِنَا يُوقِنُونَ ﴿٢٤﴾

25. ಅವರು ಭಿನ್ನಮತ ಹೊಂದಿರುವ ವಿಷಯಗಳಲ್ಲಿ ಖಂಡಿತವಾಗಿಯೂ ತಮ್ಮ ರಬ್ ಪುನರುತ್ಥಾನ ದಿನದಂದು ಅವರ ಮಧ್ಯೆ ತೀರ್ಪು ನೀಡುವನು.

إِنَّ رَبَّكَ هُوَ يَفْصِلُ بَيْنَهُمْ يَوْمَ ٱلْقِيَٰمَةِ فِيمَا كَانُوا۟ فِيهِ يَخْتَلِفُونَ ﴿٢٥﴾

26. ಇವರಿಗಿಂತ ಮುಂಚೆ ಎಷ್ಟೋ ತಲೆಮಾರುಗಳನ್ನು ನಾವು ನಾಶಮಾಡಿರುವೆವು ಎಂಬ ವಾಸ್ತವಿಕತೆಯು ಅವರಿಗೆ ಸನ್ಮಾರ್ಗವನ್ನು ತೋರಿಸಿಕೊಡಲಿಲ್ಲವೇ? ಅವರ ವಾಸಸ್ಥಳಗಳ ಮೂಲಕ ಇವರು ಸಂಚಾರ ಮಾಡುತ್ತಿರುವರು! ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ. ಆದರೂ ಇವರು ಆಲಿಸಿ ಅರ್ಥ ಮಾಡಿಕೊಳ್ಳಲಾರರೇ?

أَوَلَمْ يَهْدِ لَهُمْ كَمْ أَهْلَكْنَا مِن قَبْلِهِم مِّنَ ٱلْقُرُونِ يَمْشُونَ فِى مَسَٰكِنِهِمْ ۚ إِنَّ فِى ذَٰلِكَ لَءَايَٰتٍ ۖ أَفَلَا يَسْمَعُونَ ﴿٢٦﴾

---

1 ಲಿಕಾಇಹೀ ಎಂಬ ಪದದಲ್ಲಿರುವ ಹೀ ಎಂಬ ಸರ್ವನಾಮಕ್ಕೆ ಅದನ್ನು ಅಥವಾ ಅವನನ್ನು ಎಂಬ ಅರ್ಥಗಳಿವೆ. ಆದ್ದರಿಂದ ಈ ಸೂಕ್ತಿಯನ್ನು ವಿಭಿನ್ನ ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. 'ಮೂಸಾ(عَلَيْهِ السَّلَامُ)ರಿಗೆ ನಾವು ಗ್ರಂಥವನ್ನು ನೀಡಿದಂತೆಯೇ ತಮಗೂ ನೀಡುತ್ತಿದ್ದೇವೆ. ಆದ್ದರಿಂದ ದಿವ್ಯ ಸಂದೇಶವು ತಮ್ಮ ಬಳಿಗೆ ಬರುವಾಗ ಅದರ ಕುರಿತು ತಮಗೆ ಸಂದೇಹವುಂಟಾಗದಿರಲಿ' ಎಂಬುದು ಒಂದು ವ್ಯಾಖ್ಯಾನವಾಗಿದೆ. ಇನ್ನೊಂದು ವ್ಯಾಖ್ಯಾನದ ಪ್ರಕಾರ 'ಅವರನ್ನು (ಮೂಸಾ(عَلَيْهِ السَّلَامُ)ರನ್ನು) ಭೇಟಿಯಾಗುವುದರ ಕುರಿತು ತಮಗೆ ಸಂಶಯವುಂಟಾಗದಿರಲಿ' ಎಂದಾಗಿದೆ. ಮಿಅ್‌ರಾಜ್‌ನ ರಾತ್ರಿ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರವರು ಮೂಸಾ(عَلَيْهِ السَّلَامُ)ರವರನ್ನು ಭೇಟಿಯಾಗಿರುವುದನ್ನು ಪ್ರಸ್ತಾಪಿಸುವ ಹದೀಸನ್ನು ಇದಕ್ಕೆ ಆಧಾರವಾಗಿ ಸೂಚಿಸಲಾಗುತ್ತದೆ. ಹಾಗೆಯೇ 'ಅವರಿಗೆ (ಮೂಸಾ(عَلَيْهِ السَّلَامُ)ರಿಗೆ) ದಿವ್ಯಸಂದೇಶ ಲಭಿಸಿದ್ದರ ಕುರಿತು ತಮಗೆ ಸಂದೇಹವುಂಟಾಗದಿರಲಿ' ಎಂದೂ ಇದನ್ನು ವ್ಯಾಖ್ಯಾನಿಸಲಾಗಿದೆ.

27. ನಾವು ಬರಡು ಭೂಮಿಗೆ ನೀರನ್ನು ಹರಿಸಿ ತನ್ಮೂಲಕ ಅವರ ಜಾನುವಾರುಗಳು ಮತ್ತು ಅವರು ತಿನ್ನುವಂತಹ ಕೃಷಿಯನ್ನು ನಾವು ಉತ್ಪಾದಿಸುತ್ತಿರುವೆವು ಎಂಬುದನ್ನು ಅವರು ಕಂಡಿಲ್ಲವೇ? ಆದರೂ ಅವರು ನೋಡಿ ಗ್ರಹಿಸುವುದಿಲ್ಲವೇ?

أَوَ لَمْ يَرَوْاْ أَنَّا نَسُوقُ ٱلْمَآءَ إِلَى ٱلْأَرْضِ ٱلْجُرُزِ فَنُخْرِجُ بِهِۦ زَرْعًا تَأْكُلُ مِنْهُ أَنْعَٰمُهُمْ وَأَنفُسُهُمْۚ أَفَلَا يُبْصِرُونَ ﴿٢٧﴾

28. ಅವರು ಹೇಳುವರು: 'ಈ ತೀರ್ಪು ಯಾವಾಗ? ನೀವು ಸತ್ಯಸಂಧರಾಗಿದ್ದರೆ (ಹೇಳಿರಿ)!'

وَيَقُولُونَ مَتَىٰ هَٰذَا ٱلْفَتْحُ إِن كُنتُمْ صَٰدِقِينَ ﴿٢٨﴾

29. (ಓ ಪ್ರವಾದಿಯವರೇ!) ಹೇಳಿರಿ: 'ಅವಿಶ್ವಾಸಿಗಳಾಗಿರುವ ಜನರು ಆ ತೀರ್ಪಿನ ದಿನದಂದು ವಿಶ್ವಾಸ ತಾಳುವುದರಿಂದ ಅವರಿಗೆ ಯಾವುದೇ ಪ್ರಯೋಜನವೂ ಇರದು. ಅವರಿಗೆ ಕಾಲಾವಕಾಶವನ್ನೂ ನೀಡಲಾಗದು.

قُلْ يَوْمَ ٱلْفَتْحِ لَا يَنفَعُ ٱلَّذِينَ كَفَرُوٓاْ إِيمَٰنُهُمْ وَلَا هُمْ يُنظَرُونَ ﴿٢٩﴾

30. ಆದ್ದರಿಂದ ತಾವು ಅವರಿಂದ ವಿಮುಖರಾಗಿರಿ ಮತ್ತು ಕಾಯುತ್ತಿರಿ. ಖಂಡಿತವಾಗಿಯೂ ಅವರೂ ಕಾಯುತ್ತಿರುವರು.

فَأَعْرِضْ عَنْهُمْ وَٱنتَظِرْ إِنَّهُم مُّنتَظِرُونَ ﴿٣٠﴾

## ಅಲ್‌ಅಹ್‌ಝಾಬ್ (ಮಿತ್ರಪಕ್ಷಗಳು)[1]

## سُورَةُ الأَحۡزَابِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 73

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلنَّبِيُّ ٱتَّقِ ٱللَّهَ وَلَا تُطِعِ ٱلۡكَٰفِرِينَ وَٱلۡمُنَٰفِقِينَۚ إِنَّ ٱللَّهَ كَانَ عَلِيمًا حَكِيمٗا ١

1. ಓ ಪ್ರವಾದಿಯವರೇ! ಅಲ್ಲಾಹುವನ್ನು ಭಯಪಡಿರಿ. ಸತ್ಯನಿಷೇಧಿಗಳನ್ನು ಮತ್ತು ಕಪಟವಿಶ್ವಾಸಿಗಳನ್ನು ಅನುಸರಿಸದಿರಿ. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَٱتَّبِعۡ مَا يُوحَىٰٓ إِلَيۡكَ مِن رَّبِّكَۚ إِنَّ ٱللَّهَ كَانَ بِمَا تَعۡمَلُونَ خَبِيرٗا ٢

2. ತಮಗೆ ತಮ್ಮ ರಬ್‌ನ ವತಿಯಿಂದ ನೀಡಲಾಗುವ ದಿವ್ಯಸಂದೇಶಗಳನ್ನು ಅನುಸರಿಸಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَتَوَكَّلۡ عَلَى ٱللَّهِۚ وَكَفَىٰ بِٱللَّهِ وَكِيلٗا ٣

3. ಅಲ್ಲಾಹುವಿನ ಮೇಲೆ ಭರವಸೆಯನ್ನಿಡಿರಿ. ಕಾರ್ಯ ನಿರ್ವಾಹಕನಾಗಿ ಅಲ್ಲಾಹು ಸಾಕು.

مَّا جَعَلَ ٱللَّهُ لِرَجُلٖ مِّن قَلۡبَيۡنِ فِي جَوۡفِهِۦۚ وَمَا جَعَلَ أَزۡوَٰجَكُمُ ٱلَّٰٓـِٔي تُظَٰهِرُونَ مِنۡهُنَّ أُمَّهَٰتِكُمۡۚ وَمَا جَعَلَ أَدۡعِيَآءَكُمۡ أَبۡنَآءَكُمۡۚ ذَٰلِكُمۡ قَوۡلُكُم بِأَفۡوَٰهِكُمۡۖ

4. ಅಲ್ಲಾಹು ಯಾವ ವ್ಯಕ್ತಿಗೂ ಅವನ ಆಂತರ್ಯದಲ್ಲಿ ಎರಡು ಹೃದಯಗಳನ್ನುಂಟು ಮಾಡಿಲ್ಲ.[2] ನಿಮ್ಮ ತಾಯಂದಿರ ಹಾಗೆ ಎಂದು ನೀವು ಘೋಷಿಸುವ ನಿಮ್ಮ ಪತ್ನಿಯರನ್ನು ಅವನು ನಿಮಗೆ ತಾಯಂದಿರನ್ನಾಗಿ ಮಾಡಿಲ್ಲ.[3]

1 ಮದೀನದಲ್ಲಿದ್ದ ಯಹೂದ ಜನಾಂಗಗಳ ಬೆಂಬಲದೊಂದಿಗೆ ಕುರೈಶಿಗಳು ಮತ್ತು ಅರೇಬಿಯಾದ ಇತರ ಕೆಲವು ಜನಾಂಗಗಳು ಸಂಘಟಿತವಾಗಿ ಮದೀನದಲ್ಲಿದ್ದ ಮುಸ್ಲಿಮರ ಮೇಲೆ ಆಕ್ರಮಣಗೈಯ್ಯಲು ಬಂದ ಘಟನೆಯ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಆತ್ಮ ಸಾಕ್ಷಿಯನ್ನು ವಂಚಿಸದೆ ಯಾರಿಗೂ ಏಕಕಾಲದಲ್ಲಿ ಪರಸ್ಪರ ವಿರುದ್ಧವಾದ ನಿಲುವುಗಳನ್ನು ಹೊಂದಲು ಸಾಧ್ಯವಿಲ್ಲ ಎಂಬುದರ ಕಡೆಗೆ ಇಲ್ಲಿ ಸೂಚನೆ ನೀಡಲಾಗಿದೆ.

3 ನೀನು ನನಗೆ ತಾಯಿ ಸಮಾನ ಎಂದು ಪತ್ನಿಯೊಂದಿಗೆ ಘೋಷಿಸಿ ಆಕೆಯೊಂದಿಗಿರುವ ದಾಂಪತ್ಯವನ್ನು ಕೊನೆಗೊಳಿಸುವ ಸಂಪ್ರದಾಯವು ಅರಬರಲ್ಲಿ ರೂಢಿಯಲ್ಲಿತ್ತು. ಇದಕ್ಕೆ ಝಿಹಾರ್ ಎನ್ನಲಾಗುತ್ತದೆ. ಝಿಹಾರ್ ಮಾಡಲಾದ ಸ್ತ್ರೀ ವಿಚ್ಛೇದಿತೆಯಾಗುತ್ತಿರಲಿಲ್ಲ. ಆಕೆಗೆ ಬೇರೆ ವಿವಾಹವಾಗುವ ಅವಕಾಶವೂ ಇರಲಿಲ್ಲ. ಇಂತಹ ಸ್ತ್ರೀದೌರ್ಜನ್ಯವನ್ನು ಇಸ್ಲಾಮ್ ಕೊನೆಗೊಳಿಸಿತು.

وَٱللَّهُ يَقُولُ ٱلْحَقَّ وَهُوَ يَهْدِى ٱلسَّبِيلَ ﴿٤﴾

ನಿಮಗೆ ಸೇರಿಸಿ ಕರೆಯಲಾಗುವ ನಿಮ್ಮ ದತ್ತುಪುತ್ರರನ್ನು ಅವನು ನಿಮಗೆ ಪುತ್ರರನ್ನಾಗಿ ಮಾಡಿಲ್ಲ.[1] ಇವೆಲ್ಲವೂ ನೀವು ನಿಮ್ಮ ಬಾಯಿಯಿಂದ ಹೇಳುವ ಮಾತುಗಳು ಮಾತ್ರವಾಗಿವೆ. ಅಲ್ಲಾಹು ಸತ್ಯವನ್ನೇ ನುಡಿಯುವನು ಮತ್ತು ಅವನು ಸನ್ಮಾರ್ಗವನ್ನು ತೋರಿಸಿಕೊಡುವನು.

ٱدْعُوهُمْ لِـَٔابَآئِهِمْ هُوَ أَقْسَطُ عِندَ ٱللَّهِ ۚ فَإِن لَّمْ تَعْلَمُوٓا۟ ءَابَآءَهُمْ فَإِخْوَٰنُكُمْ فِى ٱلدِّينِ وَمَوَٰلِيكُمْ ۚ وَلَيْسَ عَلَيْكُمْ جُنَاحٌ فِيمَآ أَخْطَأْتُم بِهِۦ وَلَٰكِن مَّا تَعَمَّدَتْ قُلُوبُكُمْ ۚ وَكَانَ ٱللَّهُ غَفُورًا رَّحِيمًا ﴿٥﴾

5. ಅವರನ್ನು (ದತ್ತುಪುತ್ರರನ್ನು) ಅವರ ತಂದೆಯಂದಿರೊಂದಿಗೆ ಸೇರಿಸಿ ಕರೆಯಿರಿ. ಅದು ಅಲ್ಲಾಹುವಿನ ಬಳಿ ಅತ್ಯಂತ ನ್ಯಾಯಬದ್ಧವಾಗಿದೆ. ಅವರ ತಂದೆಯಂದಿರು ಯಾರೆಂದು ನೀವು ತಿಳಿದಿರದಿದ್ದರೆ ಧರ್ಮದಲ್ಲಿ ಅವರು ನಿಮ್ಮ ಸಹೋದರರೂ, ಮಿತ್ರರೂ ಆಗಿರುವರು.[2] ನೀವು ಪ್ರಮಾದವಶಾತ್ ಮಾಡಿರುವುದರಲ್ಲಿ ನಿಮ್ಮ ಮೇಲೆ ದೋಷವಿಲ್ಲ.[3] ಆದರೆ ನಿಮ್ಮ ಹೃದಯಗಳು ಅರಿತುಕೊಂಡು ಮಾಡಿರುವುದು (ಪಾಪವಾಗಿದೆ). ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

---

1 ಮಕ್ಕಳನ್ನು ದತ್ತು ಸ್ವೀಕರಿಸುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಅನಾಥ ಮತ್ತು ನಿರ್ಗತಿಕ ಮಕ್ಕಳಿಗೆ ಸಂರಕ್ಷಣೆ ನೀಡುವುದನ್ನು ಇಸ್ಲಾಮ್ ಮಹಾ ಪುಣ್ಯಕರ್ಮವೆಂದು ಘೋಷಿಸಿದೆ. ಆದರೆ ದತ್ತು ಸ್ವೀಕರಿಸಲಾಗುವ ಮಗು ದತ್ತುಪುತ್ರನಾಗಿರುತ್ತಾನೆಯೇ ಹೊರತು ಸ್ವಂತ ಮಗನಾಗಲಾರನು. ದತ್ತು ಸ್ವೀಕರಿಸಿದ ವ್ಯಕ್ತಿ ಕೇವಲ ಸಂರಕ್ಷಕನೇ ಹೊರತು ನೈಜ ತಂದೆಯಾಗಲಾರನು. ತಂದೆ–ಮಗ ಸಂಬಂಧದ ಎಲ್ಲ ಮಾನದಂಡಗಳೂ ಇದಕ್ಕೆ ಅನ್ವಯವಾಗಲಾರದು. ಸಂರಕ್ಷಣೆಯ ಹೆಸರಿನಲ್ಲಿ ಸ್ಥಾಪಿತವಾಗುವ ಸಂಬಂಧವನ್ನು ರಕ್ತಸಂಬಂಧದ ಸ್ಥಾನಕ್ಕೇರಿಸಿದರೆ ಅದು ಕೆಲವು ಕೌಟುಂಬಿಕ ಮತ್ತು ಸಾಮಾಜಿಕವಾದ ಹಲವಾರು ಸಮಸ್ಯೆಗಳಿಗೆ ಕಾರಣವಾಗುವುದು.

2 ತಂದೆ ಯಾರೆಂದು ತಿಳಿದಿದ್ದರೂ ತಿಳಿಯದಿದ್ದರೂ ಒಬ್ಬ ಸತ್ಯವಿಶ್ವಾಸಿಯ ಸ್ಥಾನಕ್ಕೆ ಯಾವುದೇ ಏರುಪೇರುವುಂಟಾಗುವುದಿಲ್ಲ. ಅವನನ್ನು ಸಹೋದರನಾಗಿ, ಧಾರ್ಮಿಕ ಬಂಧುವಾಗಿ ಪರಿಗಣಿಸುವುದು ಸತ್ಯವಿಶ್ವಾಸಿಗಳ ಬಾಧ್ಯತೆಯಾಗಿದೆ. ಮವಾಲೀ ಎಂಬ ಪದಕ್ಕೆ ಸಂಬಂಧಿಕರು, ಮಿತ್ರರು, ಗುಲಾಮಗಿರಿಯಿಂದ ವಿಮೋಚಿತರಾದವರು ಇತ್ಯಾದಿ ಅರ್ಥಗಳಿವೆ.

3 ಪ್ರವಾದಿ(ﷺ)ರವರ ದತ್ತು ಪುತ್ರರಾದ ಝೈದ್(رضي الله عنه)ರನ್ನು ಕೆಲವರು ಮುಹಮ್ಮದ್(ﷺ)ರವರ ಮಗನೆಂದು ಕರೆಯುತ್ತಿದ್ದರು. ಹೀಗೆ ಓರ್ವ ವ್ಯಕ್ತಿಯನ್ನು ಅವನ ಸ್ವಂತ ತಂದೆಯಲ್ಲದವನಿಗೆ ಸೇರಿಸಿ ಕರೆಯುವುದನ್ನು ಇಸ್ಲಾಮ್ ವಿರೋಧಿಸುತ್ತದೆ. ಪ್ರಮಾದವಶಾತ್ ಹಾಗೆ ಕರೆದರೆ ಅದರಲ್ಲಿ ತಪ್ಪಿಲ್ಲ.

6. ಸತ್ಯವಿಶ್ವಾಸಿಗಳಿಗೆ ಅವರ ಶರೀರಗಳಿಗಿಂತಲೂ ಹೆಚ್ಚು ಆಪ್ತರು ಸಂದೇಶವಾಹಕರಾಗಿರುವರು. ಅವರ ಮಡದಿಯರು ಅವರಿಗೆ ಮಾತೆಯರಾಗಿರುವರು.[1] ಅಲ್ಲಾಹುವಿನ ನಿಯಮದಲ್ಲಿ ರಕ್ತ ಸಂಬಂಧಿಗಳು ಪರಸ್ಪರರಿಗೆ ಇತರ ಸತ್ಯವಿಶ್ವಾಸಿಗಳಿಗಿಂತಲೂ, ಮುಹಾಜಿರ್‌ಗಳಿಗಿಂತಲೂ ಹೆಚ್ಚು ನಿಕಟವಾಗಿರುವರು.[2] ಆದರೆ ನೀವು ನಿಮ್ಮ ಮಿತ್ರರಿಗೆ ಏನಾದರೂ ಉಪಕಾರವನ್ನು ಮಾಡುವುದಾದರೆ ಅದು ಇದರಿಂದ ಹೊರತಾಗಿದೆ. ಅದು ಗ್ರಂಥದಲ್ಲಿ ದಾಖಲಿಸಲಾಗಿರುವ ವಿಷಯವಾಗಿದೆ.

ٱلنَّبِيُّ أَوۡلَىٰ بِٱلۡمُؤۡمِنِينَ مِنۡ أَنفُسِهِمۡۖ وَأَزۡوَٰجُهُۥٓ أُمَّهَٰتُهُمۡۗ وَأُوْلُواْ ٱلۡأَرۡحَامِ بَعۡضُهُمۡ أَوۡلَىٰ بِبَعۡضٖ فِي كِتَٰبِ ٱللَّهِ مِنَ ٱلۡمُؤۡمِنِينَ وَٱلۡمُهَٰجِرِينَ إِلَّآ أَن تَفۡعَلُوٓاْ إِلَىٰٓ أَوۡلِيَآئِكُم مَّعۡرُوفٗاۚ كَانَ ذَٰلِكَ فِي ٱلۡكِتَٰبِ مَسۡطُورٗا ٦

7. ನಾವು ಪ್ರವಾದಿಗಳಿಂದ ಅವರ ಕರಾರನ್ನು ಪಡೆದ ಸಂದರ್ಭ. ತಮ್ಮಿಂದಲೂ, ನೂಹ್, ಇಬ್ರಾಹೀಮ್, ಮೂಸಾ ಮತ್ತು ಮರ್ಯಮ್‌ರ ಪುತ್ರ ಈಸಾರಿಂದಲೂ (ನಾವು ಕರಾರು ಪಡೆದ ಸಂದರ್ಭ). ನಾವು ಅವರೆಲ್ಲರಿಂದ ಪಡೆದಿರುವುದು ಗಂಭೀರವಾದ ಕರಾರನ್ನಾಗಿದೆ.

وَإِذۡ أَخَذۡنَا مِنَ ٱلنَّبِيِّـۧنَ مِيثَٰقَهُمۡ وَمِنكَ وَمِن نُّوحٖ وَإِبۡرَٰهِيمَ وَمُوسَىٰ وَعِيسَى ٱبۡنِ مَرۡيَمَۖ وَأَخَذۡنَا مِنۡهُم مِّيثَٰقًا غَلِيظٗا ٧

8. ಅವನು (ಅಲ್ಲಾಹು) ಸತ್ಯಸಂಧರೊಂದಿಗೆ ಅವರ ಸತ್ಯ ಸಂಧತೆಯ ಕುರಿತು ಪ್ರಶ್ನಿಸಲೆಂದು. ಸತ್ಯನಿಷೇಧಿಗಳಿಗೆ ಅವನು ಯಾತನಾಮಯ ಶಿಕ್ಷೆಯನ್ನು ಸಿದ್ಧಗೊಳಿಸಿರುವನು.

لِّيَسۡـَٔلَ ٱلصَّٰدِقِينَ عَن صِدۡقِهِمۡۚ وَأَعَدَّ لِلۡكَٰفِرِينَ عَذَابًا أَلِيمٗا ٨

9. ಓ ಸತ್ಯವಿಶ್ವಾಸಿಗಳೇ! ನಿಮ್ಮ ಬಳಿಗೆ ಸೈನ್ಯಗಳು ಬಂದಾಗ, ನಾವು ಅವರ ಮೇಲೆ ಗಾಳಿಯನ್ನು ಮತ್ತು ನೀವು ಕಾಣದಂತಹ ಸೈನ್ಯಗಳನ್ನು ಕಳುಹಿಸಿದ ಸಂದರ್ಭದಲ್ಲಿ ಅಲ್ಲಾಹು ನಿಮ್ಮ ಮೇಲೆ ಸುರಿಸಿದ ಅವನ ಅನುಗ್ರಹವನ್ನು

يَٰٓأَيُّهَا ٱلَّذِينَ ءَامَنُواْ ٱذۡكُرُواْ نِعۡمَةَ ٱللَّهِ عَلَيۡكُمۡ إِذۡ جَآءَتۡكُمۡ جُنُودٞ فَأَرۡسَلۡنَا عَلَيۡهِمۡ رِيحٗا وَجُنُودٗا لَّمۡ تَرَوۡهَاۚ وَكَانَ ٱللَّهُ بِمَا تَعۡمَلُونَ بَصِيرًا ٩

1 ಪ್ರವಾದಿ(ﷺ)ರವರ ಪತ್ನಿಯರಿಗೆ ಸತ್ಯವಿಶ್ವಾಸಿಗಳ ಮಾತೆಯರು ಎಂಬ ಸ್ಥಾನವನ್ನು ಇಸ್ಲಾಮ್ ನೀಡಿದೆ.

2 ಮದೀನ ಜೀವನದ ಆರಂಭಕಾಲದಲ್ಲಿ ಪ್ರವಾದಿ(ﷺ)ರವರು ಇಬ್ಬರು ಸತ್ಯವಿಶ್ವಾಸಿಗಳ ಮಧ್ಯೆ ವಿಶೇಷ ಸಹೋದರ ಸಂಬಂಧವನ್ನು ಸ್ಥಾಪಿಸಿದ್ದರು. ಅವರ ಪೈಕಿ ಒಬ್ಬನು ಮೃತಪಟ್ಟರೆ ಮತ್ತೊಬ್ಬನಿಗೆ ಅವನ ಸೊತ್ತಿನಲ್ಲಿ ವಾರೀಸು ಹಕ್ಕನ್ನು ನೀಡುತ್ತಿದ್ದರು. ಬಳಿಕ ವಾರೀಸು ಹಕ್ಕಿನ ನಿಯಮಗಳನ್ನು ವಿವರಿಸುವ ಕುರ್‌ಆನ್ ಸೂಕ್ತಿಗಳ ಮೂಲಕ ವಾರೀಸು ಹಕ್ಕು ಕೇವಲ ನಿಕಟ ಸಂಬಂಧಿಕರಿಗೆ ಮಾತ್ರವಾಗಿದೆ ಎಂದು ನಿರ್ಣಯಿಸಲಾಯಿತು. ಈ ಸೂಕ್ತಿಯ ಹೊರತು ಸೂರಃ ಅನ್‌ಫಾಲ್ 75ನೇ ಸೂಕ್ತಿಯಲ್ಲೂ ರಕ್ತ ಸಂಬಂಧಿಗಳಿಗೆ ಆದ್ಯತೆ ನೀಡಬೇಕೆಂದು ಆದೇಶಿಸಲಾಗಿದೆ.

ಸ್ಮರಿಸಿರಿ.[1] ಅಲ್ಲಾಹು ನೀವು ಮಾಡುತ್ತಿರುವುದನ್ನು ವೀಕ್ಷಿಸುವವನಾಗಿರುವನು.

إِذْ جَآءُوكُم مِّن فَوْقِكُمْ وَمِنْ أَسْفَلَ مِنكُمْ وَإِذْ زَاغَتِ ٱلْأَبْصَـٰرُ وَبَلَغَتِ ٱلْقُلُوبُ ٱلْحَنَاجِرَ وَتَظُنُّونَ بِٱللَّهِ ٱلظُّنُونَا۠ ﴿١٠﴾

10. ಅವರು ನಿಮ್ಮ ಮೇಲ್ಭಾಗದಿಂದಲೂ, ನಿಮ್ಮ ತಳಭಾಗದಿಂದಲೂ ನಿಮ್ಮ ಬಳಿಗೆ ಬಂದ ಸಂದರ್ಭ. ಕಣ್ಣುಗಳು ಜಾರಿಹೋದ, ಹೃದಯಗಳು ಗಂಟಲಿಗೆ ತಲುಪಿದ ಮತ್ತು ಅಲ್ಲಾಹುವಿನ ಕುರಿತು ನೀವು ವಿಭಿನ್ನ ಕಲ್ಪನೆಗಳನ್ನು ಕಲ್ಪಿಸಿಕೊಂಡ ಸಂದರ್ಭ.[2]

هُنَالِكَ ٱبْتُلِيَ ٱلْمُؤْمِنُونَ وَزُلْزِلُوا۟ زِلْزَالًا شَدِيدًا ﴿١١﴾

11. ಅಲ್ಲಿ ಸತ್ಯವಿಶ್ವಾಸಿಗಳನ್ನು ಪರೀಕ್ಷಿಸಲಾಯಿತು ಮತ್ತು ತೀವ್ರ ಸ್ವರೂಪದಲ್ಲಿ ನಡುಗಿಸಲಾಯಿತು.

وَإِذْ يَقُولُ ٱلْمُنَـٰفِقُونَ وَٱلَّذِينَ فِى قُلُوبِهِم مَّرَضٌ مَّا وَعَدَنَا ٱللَّهُ وَرَسُولُهُۥٓ إِلَّا غُرُورًا ﴿١٢﴾

12. ‘ಅಲ್ಲಾಹು ಮತ್ತು ಅವನ ಸಂದೇಶವಾಹಕರು ನಮ್ಮೊಂದಿಗೆ ವಾಗ್ದಾನ ಮಾಡಿರುವುದು ವಂಚನೆ ಮಾತ್ರವಾಗಿದೆ’ ಎಂದು ಕಪಟವಿಶ್ವಾಸಿಗಳು ಮತ್ತು ಹೃದಯಗಳಲ್ಲಿ ರೋಗವಿರುವವರು ಹೇಳಿದ ಸಂದರ್ಭ.

وَإِذْ قَالَت طَّآئِفَةٌ مِّنْهُمْ يَـٰٓأَهْلَ يَثْرِبَ لَا مُقَامَ لَكُمْ فَٱرْجِعُوا۟ ۚ وَيَسْتَـْٔذِنُ فَرِيقٌ مِّنْهُمُ ٱلنَّبِىَّ يَقُولُونَ إِنَّ بُيُوتَنَا عَوْرَةٌ وَمَا هِىَ بِعَوْرَةٍ ۖ إِن يُرِيدُونَ إِلَّا فِرَارًا ﴿١٣﴾

13. ‘ಓ ಯಸ್ರಿಬ್ ನಿವಾಸಿಗಳೇ[3] ಸ್ಥೈರ್ಯದಿಂದ ನಿಲ್ಲಲು ನಿಮ್ಮಿಂದಾಗದು. ಆದ್ದರಿಂದ ನೀವು ಮರಳಿ ಹೋಗಿರಿ’ ಎಂದು ಅವರ ಪೈಕಿ ಒಂದು ಗುಂಪು ಹೇಳಿದ ಸಂದರ್ಭ.[4] ‘ನಮ್ಮ ಮನೆಗಳು ಅಸುರಕ್ಷಿತವಾಗಿವೆ’ ಎನ್ನುತ್ತಾ ಅವರ ಪೈಕಿ ಇನ್ನೊಂದು ಗುಂಪು (ರಣರಂಗವನ್ನು

1 ಹಿಜ್ರಾ 5ನೇ ವರ್ಷದಲ್ಲಿ ಕುರೈಶರು ಮತ್ತು ಅವರ ಮಿತ್ರಪಕ್ಷಗಳು ಒಟ್ಟಾಗಿ 10,000 ಜನರಿರುವ ಸೇನೆಯನ್ನು ಜಮಾವಣೆಗೊಳಿಸಿ ಮದೀನಾ ಮುಸ್ಲಿಮರನ್ನು ಸುತ್ತುವರಿದು ಅವರನ್ನು ನಿರ್ಮೂಲನ ಮಾಡಲು ಯತ್ನಿಸಿದ ಘಟನೆಯ ಕಡೆಗೆ ಇಲ್ಲಿ ಸೂಚನೆ ನೀಡಲಾಗಿದೆ. ಈ ಘಟನೆಯನ್ನು ಅಹ್‌ಝಾಬ್ ಯುದ್ಧ ಅಥವಾ ಖಂದಕ್ ಯುದ್ಧ ಎಂಬ ಹೆಸರಿನಲ್ಲಿ ಕರೆಯಲಾಗುತ್ತದೆ.

2 ಅಲ್ಲಾಹು ನಮ್ಮ ಕೈಬಿಡುವನೇ ಎಂದು ಭಯಪಡುವಷ್ಟರ ಮಟ್ಟಿಗೆ ಆ ಪರೀಕ್ಷೆಯು ಕಠಿಣವಾಗಿತ್ತು.

3 ಪ್ರವಾದಿ(ﷺ)ರವರ ಆಗಮನ ಪೂರ್ವ ಮದೀನದ ಹೆಸರು ಯಸ್ರಿಬ್ ಎಂದಾಗಿತ್ತು.

4 ಶತ್ರುಗಳ ಆಗಮನ ವಾರ್ತೆ ಆಲಿಸಿದಾಗ ಮುಸ್ಲಿಮರು ಮದೀನದ ಸುತ್ತಲೂ ಹೊಂಡ (ಖಂದಕ್) ತೋಡಿದರು. ಅದನ್ನು ದಾಟಿ ಅವರೇನಾದರೂ ಮದೀನವನ್ನು ಪ್ರವೇಶಿಸಿದರೆ ಅವರನ್ನು ಎದುರಿಸುವುದಕ್ಕಾಗಿ ಮದೀನ ನಗರ ಮತ್ತು ಹೊಂಡದ ಮಧ್ಯೆ ಖಾಲಿ ಸ್ಥಳದಲ್ಲಿ ಮುಸ್ಲಿಮರು ಶಸ್ತ್ರಸಜ್ಜಿತರಾಗಿ ಡೇರೆ ಹೂಡಿದ್ದರು. ಈ ಮಧ್ಯೆ ಮುಸ್ಲಿಮರೆಡೆಯಲ್ಲಿ ಭೀತಿಯನ್ನು ಸೃಷ್ಟಿಸಲು ವದಂತಿಗಳನ್ನು ಹರಡುವುದರಲ್ಲಿ ನಿರತರಾಗಿದ್ದ ಕಪಟವಿಶ್ವಾಸಿಗಳ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ.

ಬಿಟ್ಟು ಓಡಿಹೋಗಲು) ಪ್ರವಾದಿಯೊಂದಿಗೆ ಅನುಮತಿಯನ್ನು ಕೇಳುತ್ತಿರುವರು. ಆದರೆ ಅವರ ಮನೆಗಳು ಅಸುರಕ್ಷಿತವಾಗಿಲ್ಲ. ಅವರು ಪಲಾಯನ ಮಾಡುವುದನ್ನು ಮಾತ್ರ ಬಯಸುತ್ತಿರುವರು.

**14.** ಅದರ (ಮದೀನದ) ಸರ್ವದಿಕ್ಕುಗಳಿಂದಲೂ (ಶತ್ರುಗಳು) ಅವರ ಬಳಿಗೆ ಪ್ರವೇಶಿಸಿ ತರುವಾಯ (ಮುಸ್ಲಿಮರಲ್ಲಿ) ಕ್ಷೋಭೆ ಸೃಷ್ಟಿಸಲು ಅವರೊಂದಿಗೆ ಬೇಡಿಕೆಯಿಡಲಾದರೆ ಅವರದನ್ನು ನೆರವೇರಿಸುವರು. ಅಲ್ಪವೇ ಹೊರತು ಅವರು ಅದಕ್ಕಾಗಿ ಹಿಂಜರಿಯಲಾರರು.

وَلَوْ دُخِلَتْ عَلَيْهِم مِّنْ أَقْطَارِهَا ثُمَّ سُئِلُواْ ٱلْفِتْنَةَ لَءَاتَوْهَا وَمَا تَلَبَّثُواْ بِهَآ إِلَّا يَسِيرًا ﴿١٤﴾

**15.** ಹಿಂದಿರುಗಿ ಓಡಲಾರೆವು ಎಂದು ಅವರು ಮುಂಚೆ ಅಲ್ಲಾಹುವಿನೊಂದಿಗೆ ಕರಾರು ಮಾಡಿದ್ದರು. ಅಲ್ಲಾಹುವಿನೊಂದಿಗಿರುವ ಕರಾರು ಪ್ರಶ್ನಿಸಲಾಗುವಂತದ್ದೇ ಆಗಿದೆ.

وَلَقَدْ كَانُواْ عَـٰهَدُواْ ٱللَّهَ مِن قَبْلُ لَا يُوَلُّونَ ٱلْأَدْبَـٰرَ ۚ وَكَانَ عَهْدُ ٱللَّهِ مَسْـُٔولًا ﴿١٥﴾

**16.** (ಓ ಪ್ರವಾದಿಯವರೇ!) ಹೇಳಿರಿ: 'ನೀವು ಮರಣದಿಂದ ಅಥವಾ ಹತ್ಯೆಗೀಡಾಗುವುದರಿಂದ ಪಲಾಯನ ಮಾಡುವುದಾದರೆ ಆ ಪಲಾಯನವು ನಿಮಗೆ ಯಾವುದೇ ಪ್ರಯೋಜನವನ್ನೂ ನೀಡದು. ಆ ರೀತಿ (ಪಲಾಯನ ಮಾಡಿ ಪಾರಾದರೂ) ನಿಮಗೆ ಜೀವನ ಸುಖವನ್ನು ಅಲ್ಪವೇ ಹೊರತು ನೀಡಲಾಗದು'.

قُل لَّن يَنفَعَكُمُ ٱلْفِرَارُ إِن فَرَرْتُم مِّنَ ٱلْمَوْتِ أَوِ ٱلْقَتْلِ وَإِذًا لَّا تُمَتَّعُونَ إِلَّا قَلِيلًا ﴿١٦﴾

**17.** ಹೇಳಿರಿ: ಅಲ್ಲಾಹು ನಿಮಗೇನಾದರೂ ಹಾನಿಯನ್ನು ಮಾಡಲು ಇಚ್ಛಿಸಿದ್ದರೆ, ಅಥವಾ ಅವನು ನಿಮಗೆ ಯಾವುದಾದರೂ ಅನುಗ್ರಹವನ್ನು ಕರುಣಿಸಲು ಇಚ್ಛಿಸಿದ್ದರೆ, ಅಲ್ಲಾಹುವಿನಿಂದ ನಿಮ್ಮನ್ನು ರಕ್ಷಿಸುವವನು ಯಾರಿರುವನು? ಅಲ್ಲಾಹುವಿನ ಹೊರತು ಅವರು ಯಾವುದೇ ರಕ್ಷಕನನ್ನಾಗಲಿ ಸಹಾಯಕನನ್ನಾಗಲಿ ಕಾಣಲಾರರು.

قُلْ مَن ذَا ٱلَّذِى يَعْصِمُكُم مِّنَ ٱللَّهِ إِنْ أَرَادَ بِكُمْ سُوٓءًا أَوْ أَرَادَ بِكُمْ رَحْمَةً ۚ وَلَا يَجِدُونَ لَهُم مِّن دُونِ ٱللَّهِ وَلِيًّا وَلَا نَصِيرًا ﴿١٧﴾

18. ನಿಮ್ಮ ಪೈಕಿ ತಡೆಯುವವರನ್ನು[1] ಮತ್ತು ತಮ್ಮ ಸಹೋದರರೊಂದಿಗೆ 'ನಮ್ಮ ಬಳಿ ಬನ್ನಿರಿ' ಎಂದು ಹೇಳುವವರನ್ನು[2] ಅಲ್ಲಾಹು ಅರಿತಿರುವನು. ಅಲ್ಪವೇ ಹೊರತು ಅವರಾರೂ ಯುದ್ಧಕ್ಕೆ ತೆರಳಲಾರರು.

۞قَدْ يَعْلَمُ ٱللَّهُ ٱلْمُعَوِّقِينَ مِنكُمْ وَٱلْقَآئِلِينَ لِإِخْوَٰنِهِمْ هَلُمَّ إِلَيْنَا ۖ وَلَا يَأْتُونَ ٱلْبَأْسَ إِلَّا قَلِيلًا ﴿١٨﴾

19. ಅವರು ನಿಮಗೆದುರಾಗಿ ಜಿಪುಣತನ ತೋರಿಸುವವರಾಗಿರುವರು. (ಯುದ್ಧ) ಭೀತಿಯುಂಟಾದರೆ ಅವರು ತಮ್ಮನ್ನು ದಿಟ್ಟಿಸಿ ನೋಡುತ್ತಿರುವುದಾಗಿ ತಾವು ಕಾಣುವಿರಿ. ಪ್ರಾಣಸಂಕಟವನ್ನು ಎದುರಿಸುವ ವ್ಯಕ್ತಿಯಂತೆ ಅವರ ಕಣ್ಣುಗಳು ತಿರುಗುತ್ತಿರುವುವು. ಆದರೆ (ಯುದ್ಧ) ಭೀತಿಯು ಸರಿದುಬಿಟ್ಟರೆ ಸಂಪತ್ತಿನಲ್ಲಿರುವ ಅತ್ಯಾಸೆಯಿಂದ ಅವರು ಹರಿತವಾದ ನಾಲಗೆಗಳ ಮೂಲಕ ನಿಮ್ಮನ್ನು ಟೀಕಿಸುವರು.[3] ಅಂತಹವರು ವಿಶ್ವಾಸವನ್ನಿಟ್ಟಿಲ್ಲ. ಆದ್ದರಿಂದ ಅಲ್ಲಾಹು ಅವರ ಕರ್ಮಗಳನ್ನು ನಿಷ್ಫಲಗೊಳಿಸಿರುವನು. ಅದು ಅಲ್ಲಾಹುವಿನ ಮಟ್ಟಿಗೆ ಅತಿಸುಲಭವಾಗಿದೆ.

أَشِحَّةً عَلَيْكُمْ ۖ فَإِذَا جَآءَ ٱلْخَوْفُ رَأَيْتَهُمْ يَنظُرُونَ إِلَيْكَ تَدُورُ أَعْيُنُهُمْ كَٱلَّذِى يُغْشَىٰ عَلَيْهِ مِنَ ٱلْمَوْتِ ۖ فَإِذَا ذَهَبَ ٱلْخَوْفُ سَلَقُوكُم بِأَلْسِنَةٍ حِدَادٍ أَشِحَّةً عَلَى ٱلْخَيْرِ ۚ أُو۟لَٰٓئِكَ لَمْ يُؤْمِنُوا۟ فَأَحْبَطَ ٱللَّهُ أَعْمَٰلَهُمْ ۚ وَكَانَ ذَٰلِكَ عَلَى ٱللَّهِ يَسِيرًا ﴿١٩﴾

20. ಮಿತ್ರಪಕ್ಷಗಳು ಹೊರಟುಹೋಗಿಲ್ಲವೆಂದು ಅವರು (ಕಪಟವಿಶ್ವಾಸಿಗಳು) ಭಾವಿಸುತ್ತಿರುವರು.[4] ಮಿತ್ರಪಕ್ಷಗಳು (ಮರಳಿ) ಬರುವುದಾದರೆ (ಯುದ್ಧದಲ್ಲಿ ಪಾಲ್ಗೊಳ್ಳದೆ) ನಿಮ್ಮ ಸುದ್ದಿಗಳನ್ನು ಕೇಳಿ ತಿಳಿಯುತ್ತಾ

يَحْسَبُونَ ٱلْأَحْزَابَ لَمْ يَذْهَبُوا۟ ۖ وَإِن يَأْتِ ٱلْأَحْزَابُ يَوَدُّوا۟ لَوْ أَنَّهُم بَادُونَ فِى ٱلْأَعْرَابِ يَسْـَٔلُونَ عَنْ أَنۢبَآئِكُمْ ۖ وَلَوْ كَانُوا۟ فِيكُم مَّا قَٰتَلُوٓا۟ إِلَّا قَلِيلًا ﴿٢٠﴾

1 ಪ್ರವಾದಿ(ﷺ)ರವರಿಗೆ ಬೆಂಬಲ ನೀಡುತ್ತಿದ್ದವರನ್ನು ಹಿಂಜರಿಯುವಂತೆ ಮಾಡಲು ಯತ್ನಿಸಿದ ಕಪಟವಿಶ್ವಾಸಿಗಳ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ.

2 ಅಬ್ದುಲ್ಲಾಹ್ ಇಬ್ನ್ ಉಬಯ್ಯ್‌ನಂತಹ ಕಪಟ ವಿಶ್ವಾಸಿಗಳು ಖಂದಕ್ ರಣರಂಗದಿಂದ ಅನೇಕ ಮಂದಿಯನ್ನು ಮದೀನಕ್ಕೆ ಮರಳಲು ಕರೆ ನೀಡುತ್ತಾ ಪ್ರವಾದಿ(ﷺ)ರವರಿಗಿದ್ದ ಬೆಂಬಲವನ್ನು ಕಡಿತಗೊಳಿಸಲು ಪ್ರಯತ್ನಿಸುತ್ತಿದ್ದರು.

3 ಯುದ್ಧವು ಮುಸ್ಲಿಮರ ಪರವಾಗಿ ಕೊನೆಗೊಂಡರೆ ತಕ್ಷಣ ಕಪಟವಿಶ್ವಾಸಿಗಳು ಸಮರಾರ್ಜಿತ ಸೊತ್ತಿನಲ್ಲಿ ಪಾಲನ್ನು ಪಡೆಯುವ ಬೇಡಿಕೆಯೊಂದಿಗೆ ಮುಂದೆ ಬರುತ್ತಿದ್ದರು. ಅವರಿಗೇನೂ ಕೊಡದಿದ್ದರೆ ಅವರು ಪ್ರವಾದಿ(ﷺ)ರವರನ್ನು ಮತ್ತು ಸಹಾಬಾಗಳನ್ನು ತೀಕ್ಷ್ಣವಾಗಿ ವಿಮರ್ಶಿಸುತ್ತಿದ್ದರು.

4 ಮಿತ್ರಪಕ್ಷಗಳ ದೊಡ್ಡ ಸೈನ್ಯವು ಅಲ್ಲಾಹುವಿನ ಶಿಕ್ಷೆಯಿಂದಾಗಿ ಹಿಂದಿರುಗಿ ಓಡಿದ ಬಳಿಕವೂ ಅವರು ಹೋಗಿರಲಾರರು ಎಂದು ಕಪಟ ವಿಶ್ವಾಸಿಗಳು ಭಾವಿಸಿದ್ದರು. ಹೇಡಿಗಳಾದ ಅವರಿಗೆ ಅಷ್ಟು ದೊಡ್ಡ ಸೈನ್ಯವು ಅಲ್ಲಿಂದ ಕಾಲ್ಕಿತ್ತಿದೆ ಎಂಬುದನ್ನು ನಂಬಲಾಗಲಿಲ್ಲ.

ಗ್ರಾಮೀಣ ಅರಬರ ಜೊತೆಗೆ ಮರುಭೂಮಿ ನಿವಾಸಿಗಳಾಗಿ ಕಳೆಯುತ್ತಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಅವರು (ಕಪಟವಿಶ್ವಾಸಿಗಳು) ಆಶಿಸುವರು.(1) ನಿಮ್ಮ ಜೊತೆಗಿದ್ದರೂ ಅವರು ಅಲ್ಪವೇ ಹೊರತು ಯುದ್ಧ ಮಾಡಲಾರರು.

لَّقَدْ كَانَ لَكُمْ فِي رَسُولِ ٱللَّهِ أُسْوَةٌ حَسَنَةٌ لِّمَن كَانَ يَرْجُواْ ٱللَّهَ وَٱلْيَوْمَ ٱلْءَاخِرَ وَذَكَرَ ٱللَّهَ كَثِيرًا ﴿٢١﴾

21. ಖಂಡಿತವಾಗಿಯೂ ನಿಮಗೆ ಅಲ್ಲಾಹುವಿನ ಸಂದೇಶವಾಹಕರಲ್ಲಿ ಅತ್ಯುತ್ತಮ ಮಾದರಿಯಿದೆ. ಅಂದರೆ ಅಲ್ಲಾಹುವನ್ನು ಮತ್ತು ಅಂತ್ಯದಿನವನ್ನು ಆಶಿಸುವವರಿಗೆ ಹಾಗೂ ಅಲ್ಲಾಹುವನ್ನು ಅತ್ಯಧಿಕವಾಗಿ ಸ್ಮರಿಸುವವರಿಗೆ.

وَلَمَّا رَءَا ٱلْمُؤْمِنُونَ ٱلْأَحْزَابَ قَالُواْ هَٰذَا مَا وَعَدَنَا ٱللَّهُ وَرَسُولُهُۥ وَصَدَقَ ٱللَّهُ وَرَسُولُهُۥۚ وَمَا زَادَهُمْ إِلَّآ إِيمَٰنًا وَتَسْلِيمًا ﴿٢٢﴾

22. ಸತ್ಯವಿಶ್ವಾಸಿಗಳು ಮಿತ್ರಪಕ್ಷಗಳನ್ನು ಕಂಡಾಗ 'ಇದು ಅಲ್ಲಾಹು ಮತ್ತು ಅವನ ಸಂದೇಶವಾಹಕರು ನಮ್ಮೊಂದಿಗೆ ವಾಗ್ದಾನ ಮಾಡಿದ್ದಾಗಿದೆ. ಅಲ್ಲಾಹು ಮತ್ತು ಅವನ ಸಂದೇಶವಾಹಕರು ಸತ್ಯವನ್ನೇ ನುಡಿದಿರುವರು' ಎಂದು ಹೇಳಿದರು. ಅದು ಅವರಿಗೆ ಅಧಿಕಗೊಳಿಸಿದ್ದು ವಿಶ್ವಾಸ ಮತ್ತು ವಿಧೇಯತೆಯನ್ನು ಮಾತ್ರವಾಗಿತ್ತು.

مِّنَ ٱلْمُؤْمِنِينَ رِجَالٌ صَدَقُواْ مَا عَٰهَدُواْ ٱللَّهَ عَلَيْهِۖ فَمِنْهُم مَّن قَضَىٰ نَحْبَهُۥ وَمِنْهُم مَّن يَنتَظِرُۖ وَمَا بَدَّلُواْ تَبْدِيلًا ﴿٢٣﴾

23. ಸತ್ಯವಿಶ್ವಾಸಿಗಳ ಪೈಕಿ ಕೆಲವು ಪುರುಷರಿರುವರು. ಅವರು ಅಲ್ಲಾಹುವಿನೊಂದಿಗೆ ಯಾವ ವಿಷಯದಲ್ಲಿ ಕರಾರು ಮಾಡಿರುವರೋ ಅದರಲ್ಲಿ ಅವರು ಸತ್ಯಸಂಧತೆಯನ್ನು ಪಾಲಿಸಿದರು. ಅವರ ಪೈಕಿ ಕೆಲವರು (ಹುತಾತ್ಮರಾಗುವ ಮೂಲಕ) ತಮ್ಮ ಪ್ರತಿಜ್ಞೆಯನ್ನು ನೆರವೇರಿಸಿದರು. ಅವರಲ್ಲಿ ಕೆಲವರು (ಅದನ್ನು) ನಿರೀಕ್ಷಿಸುತ್ತಿರುವರು. ಅವರು (ಕರಾರಿಗೆ) ಯಾವುದೇ ಬದಲಾವಣೆಯನ್ನೂ ಮಾಡಲಿಲ್ಲ.

لِّيَجْزِيَ ٱللَّهُ ٱلصَّٰدِقِينَ بِصِدْقِهِمْ

24. ಅಲ್ಲಾಹು ಸತ್ಯಸಂಧರಿಗೆ ಅವರ ಸತ್ಯಸಂಧತೆ ಗಿರುವ ಪ್ರತಿಫಲವನ್ನು ನೀಡುವ ಸಲುವಾಗಿ.

1 ಯಾವುದಾದರೊಂದು ಗುಂಪಿನೊಂದಿಗೆ ಸೇರಿ ಯುದ್ಧ ಮಾಡುವ ಧೈರ್ಯ ಕಪಟವಿಶ್ವಾಸಿಗಳಿಗಿರಲಿಲ್ಲ. ಆದ್ದರಿಂದ ಮದೀನದ ಹೊರಗೆ ಮರುಭೂಮಿ ನಿವಾಸಿಗಳೊಂದಿಗೆ ಸೇರಿ ಯುದ್ಧದ ಗತಿಯನ್ನು ವೀಕ್ಷಿಸಿ ಕೊನೆಗೆ ಜಯಗಳಿಸುವವರೊಂದಿಗೆ ಸೇರಿಕೊಳ್ಳಲು ಅವರು ಹವಣಿಸಿದ್ದರು.

وَيُعَذِّبَ ٱلۡمُنَٰفِقِينَ إِن شَآءَ أَوۡ يَتُوبَ عَلَيۡهِمۡۚ إِنَّ ٱللَّهَ كَانَ غَفُورٗا رَّحِيمٗا ﴿٢٤﴾

ಅವನು ಇಚ್ಛಿಸುವುದಾದರೆ ಕಪಟವಿಶ್ವಾಸಿಗಳನ್ನು ಶಿಕ್ಷಿಸುವ ಸಲುವಾಗಿ ಅಥವಾ ಅವರ ಪಶ್ಚಾತ್ತಾಪವನ್ನು ಸ್ವೀಕರಿಸುವ ಸಲುವಾಗಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

وَرَدَّ ٱللَّهُ ٱلَّذِينَ كَفَرُواْ بِغَيۡظِهِمۡ لَمۡ يَنَالُواْ خَيۡرٗاۚ وَكَفَى ٱللَّهُ ٱلۡمُؤۡمِنِينَ ٱلۡقِتَالَۚ وَكَانَ ٱللَّهُ قَوِيًّا عَزِيزٗا ﴿٢٥﴾

25. ಅಲ್ಲಾಹು ಸತ್ಯನಿಷೇಧಿಗಳನ್ನು ಅವರ ಕ್ರೋಧದೊಂದಿಗೇ ಮರಳಿ ಕಳುಹಿಸಿದನು. ಅವರು ಯಾವುದೇ ಪ್ರಯೋಜನವನ್ನೂ ಪಡೆಯಲಿಲ್ಲ. ಅಲ್ಲಾಹು ಸತ್ಯವಿಶ್ವಾಸಿಗಳಿಗೆ ಯುದ್ಧದ ಅಗತ್ಯವಿಲ್ಲದಂತೆ ಮಾಡಿದನು. ಅಲ್ಲಾಹು ಬಲಿಷ್ಠನೂ ಪ್ರತಾಪಶಾಲಿಯೂ ಆಗಿರುವನು.

وَأَنزَلَ ٱلَّذِينَ ظَٰهَرُوهُم مِّنۡ أَهۡلِ ٱلۡكِتَٰبِ مِن صَيَاصِيهِمۡ وَقَذَفَ فِي قُلُوبِهِمُ ٱلرُّعۡبَ فَرِيقٗا تَقۡتُلُونَ وَتَأۡسِرُونَ فَرِيقٗا ﴿٢٦﴾

26. ಗ್ರಂಥದವರ ಪೈಕಿ ಅವರಿಗೆ (ಸತ್ಯನಿಷೇಧಿಗಳಿಗೆ) ಬೆಂಬಲ ನೀಡಿದವರನ್ನು ಅವನು ಅವರ ಕೋಟೆಗಳಿಂದ ಕೆಳಗಿಳಿಸಿದನು ಮತ್ತು ಅವರ ಹೃದಯಗಳಲ್ಲಿ ಭಯವನ್ನು ಬಿತ್ತಿದನು.[1] ಅವರಲ್ಲಿ ಒಂದು ಗುಂಪನ್ನು ನೀವು ವಧಿಸುತ್ತಿರುವಿರಿ ಮತ್ತು ಇನ್ನೊಂದು ಗುಂಪನ್ನು ಸೆರೆಹಿಡಿಯುತ್ತಿರುವಿರಿ.

وَأَوۡرَثَكُمۡ أَرۡضَهُمۡ وَدِيَٰرَهُمۡ وَأَمۡوَٰلَهُمۡ وَأَرۡضٗا لَّمۡ تَطَـُٔوهَاۚ وَكَانَ ٱللَّهُ عَلَىٰ كُلِّ

27. ಅವರ ಜಮೀನುಗಳನ್ನು, ವಸತಿಗಳನ್ನು ಮತ್ತು ಸೊತ್ತುಗಳನ್ನು ಹಾಗೂ (ಮುಂಚೆ) ನೀವು ಕಾಲೂರಿರದ ಪ್ರದೇಶಗಳನ್ನು ಅವನು ನಿಮಗೆ

1 ಮದೀನ ನಿವಾಸಿಗಳ ವಿರುದ್ಧ ಹೊರಗಿನಿಂದ ಆಕ್ರಮಣವುಂಟಾದರೆ ಮುಸ್ಲಿಮರೊಂದಿಗೆ ಸೇರಿ ಹೋರಾಡುವೆವೆಂದು ಮದೀನದ ಯಹೂದ ಗೋತ್ರಗಳ ಪೈಕಿ ಬನೂ ಕುರೈಝಾ ಗೋತ್ರದವರು ಒಪ್ಪಂದ ಮಾಡಿದ್ದರು. ಆದರೆ ಮಿತ್ರಪಕ್ಷಗಳ ಸೈನ್ಯವು ಮದೀನವನ್ನು ಸುತ್ತುವರಿದಾಗ ಅವರು ಶತ್ರುಗಳ ಪರ ವಹಿಸಿದರು. ವಂಚಕರಾದ ಯಹೂದರಿಗೆ ಮದೀನದಲ್ಲಿರಲು ಅವಕಾಶ ನೀಡಿದರೆ ಅವರು ಮುಸ್ಲಿಮರ ಸುರಕ್ಷತೆಗೆ ಶಾಶ್ವತ ಬೆದರಿಕೆಯಾಗುವರು ಎಂಬುದನ್ನು ಮನಗಂಡ ಪ್ರವಾದಿ(ﷺ)ರವರು ಮತ್ತು ಸಹಾಬಿಗಳು ಖಂದಕ್ ಯುದ್ಧದ ಬಳಿಕ ಅವರ ವಿರುದ್ಧ ಹೋರಾಡಲು ತೀರ್ಮಾನಿಸಿದರು. ಯಹೂದರು ಮದೀನದ ಆಗ್ನೇಯ ದಿಕ್ಕಿನಲ್ಲಿದ್ದ ಯಹೂದರು ತಮ್ಮ ಕೋಟೆಗಳಲ್ಲಿ ಆಶ್ರಯ ಪಡೆದರು. ಮುಸ್ಲಿಮರು 25 ದಿನಗಳ ಕಾಲ ಅವರ ಕೋಟೆಗೆ ದಿಗ್ಬಂಧನ ಹಾಕಿದರು. ಕೊನೆಗೆ ತಮ್ಮ ವಿಷಯದಲ್ಲಿ ತೀರ್ಮಾನ ಕೈಗೊಳ್ಳುವ ಹಕ್ಕನ್ನು ಸಅ್‌ದ್ ಇಬ್ನ್ ಮುಆದ್(رَضِيَ ٱللَّهُ عَنْهُ)ರಿಗೆ ನೀಡುತ್ತಾ ಶರಣಾದರು. ಯಹೂದ ನಿಯಮ ಪ್ರಕಾರ ಅವರ ಪೈಕಿ ಉನ್ನತ ನಾಯಕರಾದ ಪುರುಷರನ್ನು ವಧಿಸಿ, ಸ್ತ್ರೀಯರನ್ನು ಮತ್ತು ಮಕ್ಕಳನ್ನು ಯುದ್ಧಕೈದಿಗಳಾಗಿ ಸೆರೆಹಿಡಿಯಲು ಸಅ್‌ದ್ ತೀರ್ಮಾನಿಸಿದರು.

ವಾರೀಸಾಗಿ ನೀಡಿದನು.[1] ಅಲ್ಲಾಹು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

شَيۡءٖ قَدِيرٗا ٢٧

**28.** ಓ ಪ್ರವಾದಿಯವರೇ! ತಮ್ಮ ಪತ್ನಿಯರೊಂದಿಗೆ ಹೇಳಿರಿ: 'ನೀವು ಐಹಿಕ ಜೀವನ ಮತ್ತು ಅದರ ಶೃಂಗಾರವನ್ನು ಬಯಸುವುದಾದರೆ ಬನ್ನಿರಿ! ನಾನು ನಿಮಗೆ ಜೀವನಾಂಶವನ್ನು ನೀಡುವೆನು ಮತ್ತು ಸುಂದರವಾದ ರೀತಿಯಲ್ಲಿ ವಿಚ್ಛೇದನೆ ಮಾಡುವೆನು.[2]

يَٰٓأَيُّهَا ٱلنَّبِيُّ قُل لِّأَزۡوَٰجِكَ إِن كُنتُنَّ
تُرِدۡنَ ٱلۡحَيَوٰةَ ٱلدُّنۡيَا وَزِينَتَهَا فَتَعَالَيۡنَ
أُمَتِّعۡكُنَّ وَأُسَرِّحۡكُنَّ سَرَاحٗا
جَمِيلٗا ٢٨

**29.** ನೀವು ಅಲ್ಲಾಹು, ಅವನ ಸಂದೇಶವಾಹಕರು ಮತ್ತು ಪರಲೋಕ ಭವನವನ್ನು ಬಯಸುವುದಾದರೆ ನಿಮ್ಮ ಪೈಕಿ ಸತ್ಕರ್ಮಿಗಳಿಗೆ ಅಲ್ಲಾಹು ಮಹಾ ಪ್ರತಿಫಲವನ್ನು ಸಿದ್ಧಗೊಳಿಸಿರುವನು.

وَإِن كُنتُنَّ تُرِدۡنَ ٱللَّهَ وَرَسُولَهُۥ وَٱلدَّارَ
ٱلۡأٓخِرَةَ فَإِنَّ ٱللَّهَ أَعَدَّ لِلۡمُحۡسِنَٰتِ
مِنكُنَّ أَجۡرًا عَظِيمٗا ٢٩

**30.** ಓ ಪ್ರವಾದಿಪತ್ನಿಯರೇ! ನಿಮ್ಮ ಪೈಕಿ ಯಾರಾದರೂ ಸ್ಪಷ್ಟವಾದ ನೀಚಕೃತ್ಯವನ್ನೆಸಗುವುದಾದರೆ ಅವರಿಗೆ ಇಮ್ಮಡಿ ಶಿಕ್ಷೆಯನ್ನು ನೀಡಲಾಗುವುದು. ಇದು ಅಲ್ಲಾಹುವಿನ ಮಟ್ಟಿಗೆ ಅತಿ ಸುಲಭವಾದುದಾಗಿದೆ.

يَٰنِسَآءَ ٱلنَّبِيِّ مَن يَأۡتِ مِنكُنَّ بِفَٰحِشَةٖ
مُّبَيِّنَةٖ يُضَٰعَفۡ لَهَا ٱلۡعَذَابُ ضِعۡفَيۡنِۚ
وَكَانَ ذَٰلِكَ عَلَى ٱللَّهِ يَسِيرٗا ٣٠

**31.** ನಿಮ್ಮ ಪೈಕಿ ಯಾರಾದರೂ ಅಲ್ಲಾಹುವಿಗೆ ಮತ್ತು ಅವನ ಸಂದೇಶವಾಹಕರಿಗೆ ವಿಧೇಯರಾಗಿರುವುದಾದರೆ ಮತ್ತು ಸತ್ಕರ್ಮವೆಸಗುವುದಾದರೆ ಆಕೆಗೆ ನಾವು

۞وَمَن يَقۡنُتۡ مِنكُنَّ لِلَّهِ وَرَسُولِهِۦ
وَتَعۡمَلۡ صَٰلِحٗا نُّؤۡتِهَآ أَجۡرَهَا مَرَّتَيۡنِ
وَأَعۡتَدۡنَا لَهَا رِزۡقٗا كَرِيمٗا ٣١

1 ಮದೀನದ ಈಶಾನ್ಯ ದಿಕ್ಕಿನಲ್ಲಿ ಸರಿಸುಮಾರು ನೂರು ಮೈಲು ದೂರದಲ್ಲಿರುವ ಖೈಬರ್ ಎಂಬ ಸ್ಥಳದಲ್ಲಿ ಯಹೂದರಿಗೆ ಎಂಟು ಕೋಟೆಗಳಿದ್ದವು. ಖೈಬರನ್ನು ಕೇಂದ್ರವಾಗಿಟ್ಟುಕೊಂಡು ಯಹೂದರು ಮುಸ್ಲಿಮರ ವಿರುದ್ಧ ಗೂಢತಂತ್ರಗಳನ್ನು ಹೂಡುತ್ತಿದ್ದರು. ಹಿಜ್ರಾ 7ನೇ ವರ್ಷದಲ್ಲಿ ಪ್ರವಾದಿ(ﷺ)ರವರು ಅಲ್ಲಿಗೆ ಒಂದು ಸೈನ್ಯದೊಂದಿಗೆ ಹೊರಟರು ಮತ್ತು ಖೈಬರನ್ನು ವಶಪಡಿಸಿದರು. 27ನೇ ಸೂಕ್ತಿಯು ಈ ಘಟನೆಯನ್ನು ಪರಾಮರ್ಶಿಸುತ್ತಿದೆಯೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

2 ಪ್ರವಾದಿ(ﷺ)ರವರ ಪತ್ನಿಯರು ಸತ್ಯವಿಶ್ವಾಸಿಗಳಿಗೆ ಮಾತೆಯರಾಗಿದ್ದಾರೆ. ಅವರಿಗೆ ಅನೇಕ ಉನ್ನತ ಜವಾಬ್ದಾರಿಗಳಿವೆ. ಇತರ ಸ್ತ್ರೀಯರಂತೆ ಲೌಕಿಕ ಆಡಂಬರಗಳು ಅವರ ಉದ್ದೇಶವಾಗಿರಬಾರದು. ಲೌಕಿಕ ಹಿತಾಸಕ್ತಿಗಳಿಗೆ ಆದ್ಯತೆ ನೀಡುವವರು ಆ ಪದವಿಯಲ್ಲಿ ಮುಂದುವರಿಯಲು ಅರ್ಹರಲ್ಲವೆಂದು ಅಲ್ಲಾಹು ಪ್ರವಾದಿ(ﷺ)ರವರ ಮೂಲಕ ತಿಳಿಸುತ್ತಾನೆ.

ಆಕೆಯ ಪ್ರತಿಫಲವನ್ನು ಇಮ್ಮಡಿಯಾಗಿ ನೀಡುವೆವು. ನಾವು ಆಕೆಗೆ ಗೌರವಾನ್ವಿತ ಅನ್ನಾಧಾರವನ್ನು ಸಿದ್ಧಗೊಳಿಸಿರುವೆವು.

**32.** ಓ ಪ್ರವಾದಿ ಪತ್ನಿಯರೇ! ನೀವು ಸ್ತ್ರೀಯರ ಪೈಕಿ ಇತರರಂತಲ್ಲ. ನೀವು ಭಯಭಕ್ತಿ ಪಾಲಿಸುವವರಾಗಿದ್ದರೆ (ಅನ್ಯರೊಂದಿಗೆ) ನಯವಾದ ಧ್ವನಿಯಲ್ಲಿ ಮಾತನಾಡದಿರಿ. ಆಗ ಹೃದಯದಲ್ಲಿ ರೋಗವಿರುವವನಿಗೆ ಮೋಹವುಂಟಾಗಬಹುದು.(1) ನೀವು ನ್ಯಾಯೋಚಿತ ಮಾತುಗಳನ್ನಾಡಿರಿ.

يَٰنِسَآءَ ٱلنَّبِيِّ لَسۡتُنَّ كَأَحَدٖ مِّنَ ٱلنِّسَآءِ إِنِ ٱتَّقَيۡتُنَّۚ فَلَا تَخۡضَعۡنَ بِٱلۡقَوۡلِ فَيَطۡمَعَ ٱلَّذِي فِي قَلۡبِهِۦ مَرَضٞ وَقُلۡنَ قَوۡلٗا مَّعۡرُوفٗا ٣٢

**33.** ನೀವು ನಿಮ್ಮ ಮನೆಗಳಲ್ಲಿ ತಂಗಿರಿ. ಗತ ಅಜ್ಞಾನ ಕಾಲದ ಸೌಂದರ್ಯ ಪ್ರದರ್ಶನದಂತಿರುವ ಸೌಂದರ್ಯ ಪ್ರದರ್ಶನವನ್ನು ಮಾಡದಿರಿ. ನಮಾಝನ್ನು ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ. ಅಲ್ಲಾಹು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸಿರಿ. ಓ (ಪ್ರವಾದಿ) ಮನೆಯವರೇ! ಅಲ್ಲಾಹು ಬಯಸುತ್ತಿರುವುದು ನಿಮ್ಮಿಂದ ಮಾಲಿನ್ಯವನ್ನು ನಿವಾರಿಸಲು ಮತ್ತು ನಿಮ್ಮನ್ನು ಸಂಪೂರ್ಣ ಶುದ್ಧೀಕರಿಸಲು ಮಾತ್ರವಾಗಿದೆ.

وَقَرۡنَ فِي بُيُوتِكُنَّ وَلَا تَبَرَّجۡنَ تَبَرُّجَ ٱلۡجَٰهِلِيَّةِ ٱلۡأُولَىٰۖ وَأَقِمۡنَ ٱلصَّلَوٰةَ وَءَاتِينَ ٱلزَّكَوٰةَ وَأَطِعۡنَ ٱللَّهَ وَرَسُولَهُۥٓۚ إِنَّمَا يُرِيدُ ٱللَّهُ لِيُذۡهِبَ عَنكُمُ ٱلرِّجۡسَ أَهۡلَ ٱلۡبَيۡتِ وَيُطَهِّرَكُمۡ تَطۡهِيرٗا ٣٣

**34.** ನಿಮ್ಮ ಮನೆಗಳಲ್ಲಿ ಓದಿಕೊಡಲಾಗುವ ಅಲ್ಲಾಹುವಿನ ಸೂಕ್ತಿಗಳನ್ನು ಮತ್ತು ತತ್ವಜ್ಞಾನವನ್ನು ಸ್ಮರಿಸಿರಿ. ಖಂಡಿತವಾಗಿಯೂ ಅಲ್ಲಾಹು ಸೂಕ್ಷ್ಮಜ್ಞನೂ, ಸೂಕ್ಷ್ಮಜ್ಞಾನಿಯೂ ಆಗಿರುವನು.

وَٱذۡكُرۡنَ مَا يُتۡلَىٰ فِي بُيُوتِكُنَّ مِنۡ ءَايَٰتِ ٱللَّهِ وَٱلۡحِكۡمَةِۚ إِنَّ ٱللَّهَ كَانَ لَطِيفًا خَبِيرًا ٣٤

**35.** (ಅಲ್ಲಾಹುವಿಗೆ) ಶರಣಾಗಿರುವ ಪುರುಷರು ಮತ್ತು ಸ್ತ್ರೀಯರು, ವಿಶ್ವಾಸಿಗಳಾಗಿರುವ ಪುರುಷರು ಮತ್ತು ಸ್ತ್ರೀಯರು,

إِنَّ ٱلۡمُسۡلِمِينَ وَٱلۡمُسۡلِمَٰتِ وَٱلۡمُؤۡمِنِينَ وَٱلۡمُؤۡمِنَٰتِ وَٱلۡقَٰنِتِينَ وَٱلۡقَٰنِتَٰتِ

1 ಪ್ರವಾದಿ ಪತ್ನಿಯರು ಅನ್ಯಪುರುಷರೊಂದಿಗೆ ಮಾತನಾಡುವಾಗ ಸಭ್ಯತೆಯ ಅತ್ಯುನ್ನತ ಮಾದರಿಗಳಾಗಿ ಮಾರ್ಪಡಬೇಕೆಂದು ಅಲ್ಲಾಹು ಉಪದೇಶ ಮಾಡುತ್ತಿರುವನು. ಮನಸ್ಸುಗಳಲ್ಲಿ ಆಸೆಯನ್ನುಂಟು ಮಾಡುವ ಸಲುಗೆಯ ಮಾತುಗಳನ್ನು ವರ್ಜಿಸಬೇಕೆಂದೂ ಅವರೊಂದಿಗೆ ಉಪದೇಶಿಸಿರುವನು. ಮುಸ್ಲಿಮ್ ಸ್ತ್ರೀಯರಿಗೆ ಅವರು ಆದರ್ಶಪ್ರಾಯರಾಗಿದ್ದಾರೆ.

وَٱلصَّٰدِقِينَ وَٱلصَّٰدِقَٰتِ وَٱلصَّٰبِرِينَ وَٱلصَّٰبِرَٰتِ وَٱلْخَٰشِعِينَ وَٱلْخَٰشِعَٰتِ وَٱلْمُتَصَدِّقِينَ وَٱلْمُتَصَدِّقَٰتِ وَٱلصَّٰٓئِمِينَ وَٱلصَّٰٓئِمَٰتِ وَٱلْحَٰفِظِينَ فُرُوجَهُمْ وَٱلْحَٰفِظَٰتِ وَٱلذَّٰكِرِينَ ٱللَّهَ كَثِيرًا وَٱلذَّٰكِرَٰتِ أَعَدَّ ٱللَّهُ لَهُم مَّغْفِرَةً وَأَجْرًا عَظِيمًا ﴿٣٥﴾

ನಿಷ್ಠಾವಂತರಾಗಿರುವ ಪುರುಷರು ಮತ್ತು ಸ್ತ್ರೀಯರು, ಸತ್ಯಸಂಧರಾಗಿರುವ ಪುರುಷರು ಮತ್ತು ಸ್ತ್ರೀಯರು, ಸಹನೆ ಪಾಲಿಸುವ ಪುರುಷರು ಮತ್ತು ಸ್ತ್ರೀಯರು, ವಿನಮ್ರರಾಗಿರುವ ಪುರುಷರು ಮತ್ತು ಸ್ತ್ರೀಯರು, ದಾನಧರ್ಮ ಮಾಡುವ ಪುರುಷರು ಮತ್ತು ಸ್ತ್ರೀಯರು, ಉಪವಾಸವನ್ನಾಚರಿಸುವ ಪುರುಷರು ಮತ್ತು ಸ್ತ್ರೀಯರು, ತಮ್ಮ ಗುಪ್ತಾಂಗಗಳನ್ನು ಸಂರಕ್ಷಿಸುವ ಪುರುಷರು ಮತ್ತು ಸ್ತ್ರೀಯರು, ಅಲ್ಲಾಹುವನ್ನು ಅತ್ಯಧಿಕವಾಗಿ ಸ್ಮರಿಸುವ ಪುರುಷರು ಮತ್ತು ಸ್ತ್ರೀಯರು. ಇವರಿಗೆ ಅಲ್ಲಾಹು ಪಾಪ ಮುಕ್ತಿಯನ್ನು ಮತ್ತು ಮಹಾ ಪ್ರತಿಫಲವನ್ನು ಸಿದ್ಧಗೊಳಿಸಿರುವನು.

وَمَا كَانَ لِمُؤْمِنٍ وَلَا مُؤْمِنَةٍ إِذَا قَضَى ٱللَّهُ وَرَسُولُهُۥٓ أَمْرًا أَن يَكُونَ لَهُمُ ٱلْخِيَرَةُ مِنْ أَمْرِهِمْ ۗ وَمَن يَعْصِ ٱللَّهَ وَرَسُولَهُۥ فَقَدْ ضَلَّ ضَلَٰلًا مُّبِينًا ﴿٣٦﴾

36. ಅಲ್ಲಾಹು ಮತ್ತು ಅವನ ಸಂದೇಶವಾಹಕರು ಒಂದು ವಿಷಯವನ್ನು ತೀರ್ಮಾನಿಸಿದ ಬಳಿಕ ಸತ್ಯವಿಶ್ವಾಸಿಗಾಗಲಿ, ಸತ್ಯವಿಶ್ವಾಸಿನಿಗಾಗಲಿ ತಮ್ಮ ವಿಷಯಕ್ಕೆ ಸಂಬಂಧಿಸಿ ಸ್ವತಂತ್ರ ಅಭಿಪ್ರಾಯವಿರುವುದು ಯುಕ್ತವಲ್ಲ. ಯಾರು ಅಲ್ಲಾಹು ಮತ್ತು ಅವನ ಸಂದೇಶವಾಹಕರನ್ನು ಧಿಕ್ಕರಿಸುವನೋ ಅವನು ಸ್ಪಷ್ಟವಾದ ವಿಧದಲ್ಲಿ ಪಥಭ್ರಷ್ಟನಾಗಿರುವನು.

وَإِذْ تَقُولُ لِلَّذِىٓ أَنْعَمَ ٱللَّهُ عَلَيْهِ وَأَنْعَمْتَ عَلَيْهِ أَمْسِكْ عَلَيْكَ زَوْجَكَ وَٱتَّقِ ٱللَّهَ وَتُخْفِى فِى نَفْسِكَ مَا ٱللَّهُ

37. 'ನಿನ್ನ ಪತ್ನಿಯನ್ನು ನಿನ್ನ ಬಳಿಯೇ ಇರಿಸು ಮತ್ತು ಅಲ್ಲಾಹುವನ್ನು ಭಯಪಡು' ಎಂದು ಅಲ್ಲಾಹು ಅನುಗ್ರಹ ನೀಡಿರುವ ಮತ್ತು ತಾವು ಅನುಗ್ರಹ ನೀಡಿರುವ ಒಬ್ಬ ವ್ಯಕ್ತಿಯೊಂದಿಗೆ[1]

1 ಝೈದ್ ಇಬ್ನ್ ಹಾರಿಸ(رضي الله عنه)ರವರು ಪ್ರವಾದಿ(ﷺ)ರವರ ಗುಲಾಮರಾಗಿದ್ದರು. ತರುವಾಯ ಪ್ರವಾದಿ(ﷺ)ರವರು ಅವರನ್ನು ವಿಮೋಚನೆಗೊಳಿಸಿ ತನ್ನ ದತ್ತುಪುತ್ರನನ್ನಾಗಿ ಮಾಡಿಕೊಂಡರು. ತಮ್ಮ ಸಂಬಂಧಿ ಜಹ್‌ಶ್‌ನ ಮಗಳಾದ ಝೈನಬ್(رضي الله عنها)ರವರನ್ನು ಪ್ರವಾದಿ(ﷺ)ರವರು ತಮ್ಮ ದತ್ತುಪುತ್ರನಿಗೆ ವಿವಾಹಮಾಡಿಕೊಟ್ಟರು. ಸುಂದರಿಯೂ ಕುಲೀನೆಯೂ ಆಗಿರುವ ಝೈನಬ್(رضي الله عنها)ರವರನ್ನು ಈ ಹಿಂದೆ ಗುಲಾಮರಾಗಿದ್ದ ಮತ್ತು ಸೌಂದರ್ಯವಿಲ್ಲದ ಝೈದ್(رضي الله عنه)ರಿಗೆ ವಿವಾಹ ಮಾಡಿಕೊಡುವುದರ ಮೂಲಕ ಅವರು ಇಸ್ಲಾಮಿನ ಸಮಾನತೆಯನ್ನು ತೋರಿಸಿಕೊಟ್ಟರು. ಆದರೆ ದಂಪತಿಗಳಿಗೆ ಹೆಚ್ಚು ಕಾಲ ಹೊಂದಾಣಿಕೆಯೊಂದಿಗೆ ಬಾಳಲು ಸಾಧ್ಯವಾಗಲಿಲ್ಲ. ಝೈನಬ್(رضي الله عنها)ರವರ ಸೌಂದರ್ಯ ಮತ್ತು ಉನ್ನತ ಮನೆತನವು ದಾಂಪತ್ಯ ಜೀವನದ ಯಶಸ್ಸಿಗೆ ಅಡ್ಡಿಯಾಯಿತು. ಝೈನಬ್(رضي الله عنها)ರೊಂದಿಗೆ ಸಂತೃಪ್ತ ದಾಂಪತ್ಯವನ್ನು ಮುಂದುವರಿಸಲು

مُبۡدِيهِ وَتَخۡشَى ٱلنَّاسَ وَٱللَّهُ أَحَقُّ أَن
تَخۡشَىٰهُۖ فَلَمَّا قَضَىٰ زَيۡدٞ مِّنۡهَا وَطَرٗا
زَوَّجۡنَٰكَهَا لِكَيۡ لَا يَكُونَ عَلَى ٱلۡمُؤۡمِنِينَ
حَرَجٞ فِيٓ أَزۡوَٰجِ أَدۡعِيَآئِهِمۡ إِذَا قَضَوۡاْ
مِنۡهُنَّ وَطَرٗاۚ وَكَانَ أَمۡرُ ٱللَّهِ مَفۡعُولٗا ٣٧

ತಾವು ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅಲ್ಲಾಹು ಬಹಿರಂಗಪಡಿಸಲಿರುವ ವಿಷಯವನ್ನು ತಾವು ತಮ್ಮ ಹೃದಯದಲ್ಲಿ ಮರೆಮಾಚಿರುವಿರಿ ಹಾಗೂ ಜನರನ್ನು ಭಯಪಟ್ಟಿರುವಿರಿ.(1) ಆದರೆ ತಾವು ಭಯಪಡಲು ಹೆಚ್ಚು ಅರ್ಹತೆಯುಳ್ಳವನು ಅಲ್ಲಾಹುವಾಗಿರುವನು. ತರುವಾಯ ಝೈದ್ ಆಕೆಯಿಂದ ಅಗತ್ಯವನ್ನು ಪೂರೈಸಿದಾಗ(2) ನಾವು ಆಕೆಯನ್ನು ತಮಗೆ ಪತ್ನಿಯನ್ನಾಗಿ ಮಾಡಿದೆವು. ಇದು ತಮ್ಮ ದತ್ತು ಪುತ್ರರು ಅವರ ಪತ್ನಿಯರಿಂದ ಅಗತ್ಯವನ್ನು ಪೂರೈಸಿದ ಬಳಿಕ ಅವರನ್ನು ವಿವಾಹವಾಗುವ ವಿಚಾರದಲ್ಲಿ ಸತ್ಯವಿಶ್ವಾಸಿಗಳಿಗೆ ಯಾವುದೇ ಪ್ರಯಾಸವೂ ಉಂಟಾಗದಿರುವ ಸಲುವಾಗಿದೆ.(3) ಅಲ್ಲಾಹುವಿನ ಆಜ್ಞೆಯು ಜಾರಿಗೊಳ್ಳುವಂತದ್ದೇ ಆಗಿದೆ.

مَّا كَانَ عَلَى ٱلنَّبِيِّ مِنۡ حَرَجٖ فِيمَا فَرَضَ
ٱللَّهُ لَهُۥۖ سُنَّةَ ٱللَّهِ فِي ٱلَّذِينَ خَلَوۡاْ مِن

**38.** ಅಲ್ಲಾಹು ತನಗೆ ನಿಶ್ಚಯಿಸಿಕೊಟ್ಟಿರುವ ವಿಷಯದಲ್ಲಿ ಪ್ರವಾದಿಯವರಿಗೆಯಾವುದೇ ವ್ಯಥೆಯೂ ಉಂಟಾಗಬೇಕಾಗಿಲ್ಲ.(4) ಮುಂಚೆ

---

ಸಾಧ್ಯವಿಲ್ಲವೆಂದು ಮನಗಂಡ ಝೈದ್(رضي الله عنه)ಪ್ರವಾದಿ(صلى الله عليه وسلم)ರವರ ಬಳಿಗೆ ಬಂದು ವಿವಾಹವಿಚ್ಛೇದನೆ ಮಾಡಲು ಅನುಮತಿಕೊಡಬೇಕೆಂದು ವಿನಂತಿಸಿದರು. ಆದರೆ ಸ್ವತಃ ತಾವೇ ಮುತುವರ್ಜಿ ವಹಿಸಿ ನೆರವೇರಿಸಿಕೊಟ್ಟ ಈ ವಿವಾಹವು ವಿಚ್ಛೇದನೆಯಲ್ಲಿ ಕೊನೆಗೊಳ್ಳುವುದು ಪ್ರವಾದಿ(صلى الله عليه وسلم)ರವರಿಗೆ ಇಷ್ಟವಿರಲಿಲ್ಲ. ಆದ್ದರಿಂದ ದಾಂಪತ್ಯವನ್ನು ಮುಂದುವರಿಸಬೇಕೆಂದು ಅವರು ಝೈದ್(رضي الله عنه)ರೊಂದಿಗೆ ವಿನಂತಿಸಿದರು.

1 ಪ್ರವಾದಿ(صلى الله عليه وسلم)ರವರು ಮರೆಮಾಚಿದ ವಿಷಯ ಯಾವುದು? ಕುರ್‌ಆನ್ ವ್ಯಾಖ್ಯಾನಕಾರರು ಈ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದಾರೆ. ಒಂದು: ವಿಚ್ಛೇದನೆಯು ಅನಿವಾರ್ಯವಾಗುವಷ್ಟರ ಮಟ್ಟಿಗೆ ಝೈದ್–ಝೈನಬ್(رضي الله عنهما)ರವರ ದಾಂಪತ್ಯವು ನುಚ್ಚುನೂರಾಗಿದೆ ಎಂಬುದನ್ನು ಪ್ರವಾದಿ(صلى الله عليه وسلم)ರವರು ಜನರಿಂದ ತಾತ್ಕಾಲಿಕವಾಗಿ ಮರೆಮಾಚಿದರು. ಎರಡು: ಝೈದ್(رضي الله عنه)ರವರು ಝೈನಬ್(رضي الله عنها)ರನ್ನು ವಿಚ್ಛೇದನೆ ಮಾಡುವರು ಮತ್ತು ತರುವಾಯ ಝೈನಬ್(رضي الله عنها)ರವರು ಪ್ರವಾದಿ(صلى الله عليه وسلم)ರವರ ಪತ್ನಿಯಾಗುವರೆಂದು ಅಲ್ಲಾಹು ಪ್ರವಾದಿ(صلى الله عليه وسلم)ರಿಗೆ ತಿಳಿಸಿದ್ದನು. ಅದನ್ನು ಪ್ರವಾದಿ(صلى الله عليه وسلم)ರವರು ತಮ್ಮ ಮನದಲ್ಲೇ ಬಚ್ಚಿಟ್ಟರು. ಇದಲ್ಲದೆ ಇನ್ನಿತರ ವ್ಯಾಖ್ಯಾನಗಳೂ ಇವೆ.

2 ಲಮ್ಮಾ ಕದಾ ವತರನ್ ಎಂಬ ವಾಕ್ಯಕ್ಕೆ ಅಗತ್ಯವನ್ನು ಪೂರೈಸಿಕೊಂಡಾಗ ಅಥವಾ ಅಗತ್ಯವಿಲ್ಲದೆ ಹೋದಾಗ ಎಂಬ ಅರ್ಥಗಳಿವೆ. ಝೈದ್(رضي الله عنه)ರವರು ವಿವಾಹ ವಿಚ್ಛೇದನೆ ನೀಡಿ ಇದ್ದಃ ಮುಗಿದ ಬಳಿಕ ಪ್ರವಾದಿ(صلى الله عليه وسلم)ರವರು ಝೈನಬ್(رضي الله عنها)ರವರನ್ನು ವಿವಾಹವಾದರು.

3 ಅರಬೀ ಸಂಪ್ರದಾಯದ ಪ್ರಕಾರ ದತ್ತುಪುತ್ರರು ವಿಚ್ಛೇದಿಸಿದ ಸ್ತ್ರೀಯರನ್ನು ದತ್ತುಪಿತರು ವಿವಾಹವಾಗಕೂಡದು ಎಂಬುದು ಅರಬ್ಬರ ನಿಲುವಾಗಿತ್ತು. ರಕ್ತಸಂಬಂಧ ಮತ್ತು ಸ್ತನಪಾನ ಸಂಬಂಧದ ಆಧಾರದಲ್ಲಿ ಮಾತ್ರ ವಿವಾಹ ನಿಷಿದ್ಧವಾಗುತ್ತದೆ ಎಂದು ಘೋಷಿಸುವ ಮೂಲಕ ಇಸ್ಲಾಮ್ ಈ ತಪ್ಪು ಭಾವನೆಯನ್ನು ತಿದ್ದಿತು.

4 ಅಲ್ಲಾಹು ವಿಧಿಸಿದ್ದನ್ನು ಯಾವುದೇ ಮನಪ್ರಯಾಸವಿಲ್ಲದೆ ಅಂಗೀಕರಿಸುವುದು ಪ್ರವಾದಿಯ ಬಾಧ್ಯತೆಯಾಗಿದೆ.

ಗತಿಸಿದವರ ಮೇಲೆ ಅಲ್ಲಾಹು ಕೈಗೊಂಡ ಕ್ರಮವಾಗಿದೆ. ಅಲ್ಲಾಹುವಿನ ಆಜ್ಞೆಯು ಖಚಿತವಾಗಿರುವ ಒಂದು ವಿಧಿಯಾಗಿದೆ.

قَبْلُ ۚ وَكَانَ أَمْرُ ٱللَّهِ قَدَرًا مَّقْدُورًا ﴿٣٨﴾

**39.** ಅಂದರೆ ಅಲ್ಲಾಹುವಿನ ಸಂದೇಶಗಳನ್ನು ತಲುಪಿಸುವ, ಅವನನ್ನು ಭಯಪಡುವ ಮತ್ತು ಅಲ್ಲಾಹುವಿನ ಹೊರತು ಇತರ ಯಾರನ್ನೂ ಭಯಪಡದವರ ವಿಷಯದಲ್ಲಿರುವ (ಅಲ್ಲಾಹುವಿನ ಕ್ರಮ). ವಿಚಾರಣೆ ಮಾಡುವವನಾಗಿ ಅಲ್ಲಾಹು ಸಾಕು.

ٱلَّذِينَ يُبَلِّغُونَ رِسَٰلَٰتِ ٱللَّهِ وَيَخْشَوْنَهُۥ وَلَا يَخْشَوْنَ أَحَدًا إِلَّا ٱللَّهَ ۗ وَكَفَىٰ بِٱللَّهِ حَسِيبًا ﴿٣٩﴾

**40.** ಮುಹಮ್ಮದ್ ನಿಮ್ಮ ಪುರುಷರ ಪೈಕಿ ಯಾರ ತಂದೆಯೂ ಅಲ್ಲ.[1] ಆದರೆ ಅವರು ಅಲ್ಲಾಹುವಿನ ಸಂದೇಶವಾಹಕರಾಗಿರುವರು ಮತ್ತು ಪ್ರವಾದಿಗಳ ಪೈಕಿ ಕಟ್ಟಕಡೆಯವರಾಗಿರುವರು.[2] ಅಲ್ಲಾಹು ಪ್ರತಿಯೊಂದು ವಿಷಯದ ಕುರಿತೂ ಅರಿವುಳ್ಳವನಾಗಿರುವನು.

مَّا كَانَ مُحَمَّدٌ أَبَآ أَحَدٍ مِّن رِّجَالِكُمْ وَلَٰكِن رَّسُولَ ٱللَّهِ وَخَاتَمَ ٱلنَّبِيِّـۧنَ ۗ وَكَانَ ٱللَّهُ بِكُلِّ شَىْءٍ عَلِيمًا ﴿٤٠﴾

**41-42.** ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಹೇರಳವಾಗಿ ಸ್ಮರಿಸಿರಿ. ಬೆಳಗ್ಗೆ ಮತ್ತು ಸಂಜೆ ಅವನನ್ನು ಕೊಂಡಾಡುತ್ತಿರಿ.

يَٰٓأَيُّهَا ٱلَّذِينَ ءَامَنُوا۟ ٱذْكُرُوا۟ ٱللَّهَ ذِكْرًا كَثِيرًا ﴿٤١﴾ وَسَبِّحُوهُ بُكْرَةً وَأَصِيلًا ﴿٤٢﴾

**43.** ಅವನು ನಿಮ್ಮ ಮೇಲೆ ಅನುಗ್ರಹಗಳನ್ನು ಸುರಿಸುವವನಾಗಿರುವನು ಮತ್ತು ಅವನ ಮಲಕ್‌ಗಳು (ನಿಮಗಾಗಿ ಪ್ರಾರ್ಥಿಸುವರು).

هُوَ ٱلَّذِى يُصَلِّى عَلَيْكُمْ وَمَلَٰٓئِكَتُهُۥ لِيُخْرِجَكُم مِّنَ ٱلظُّلُمَٰتِ إِلَى ٱلنُّورِ ۚ

---

ಜನರು ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದು ಒಬ್ಬ ಪ್ರವಾದಿಯ ಮಟ್ಟಿಗೆ ಸಮಸ್ಯೆಯಾಗಬಾರದು. ಅಲ್ಲಾಹು ತೀರ್ಮಾನ ಕೈಗೊಳ್ಳುವುದು ಸಮಗ್ರ ಜ್ಞಾನದ ಆಧಾರದಲ್ಲಾಗಿದೆ. ಜನರ ಪ್ರತಿಕ್ರಿಯೆಗೆ ನಿಮಿತ್ತವಾಗಿರುವುದು ಅವರ ಸೀಮಿತ ಜ್ಞಾನವಾಗಿದೆ. ಅದು ಯಾವತ್ತೂ ಪ್ರಬುದ್ಧವಾಗಿರಲಾರದು.

1 ಝೈದ್(رضي الله عنه)ರವರು ವಿಚ್ಛೇದಿಸಿದ ಝೈನಬ್(رضي الله عنها)ರವರನ್ನು ಪ್ರವಾದಿ(ﷺ)ರವರು ವಿವಾಹವಾದಾಗ ಅನಗತ್ಯ ವಿಮರ್ಶೆಗಳು ಉದ್ಭವವಾದವು. ಮುಹಮ್ಮದ್ ತನ್ನ ಸೊಸೆಯನ್ನೇ ವಿವಾಹವಾಗಿದ್ದಾರೆ ಎಂದು ಶತ್ರುಗಳು ಅಪಪ್ರಚಾರ ಮಾಡಿದರು. ಪ್ರವಾದಿ(ﷺ)ರವರು ಯಾರಿಗೆ ಜನ್ಮ ನೀಡಿರುವರೋ ಅವರು ಮಾತ್ರ ಅವರಿಗೆ ಪುತ್ರರಾಗುವರು. ಆದ್ದರಿಂದ ಅವರಲ್ಲಿದ್ದ ಪುರುಷರ ಪೈಕಿ ಯಾರೊಬ್ಬರಿಗೂ ಪ್ರವಾದಿ(ﷺ)ರವರು ಜನ್ಮ ನೀಡಿಲ್ಲವೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

2 ಖಾತಮ್ ಎಂದರೆ ಮುದ್ರೆ ಎಂದರ್ಥ. ಒಂದು ಪತ್ರವನ್ನು ಕೊನೆಗೊಳಿಸುವಾಗ ಅದಕ್ಕೆ ಮುದ್ರೆಯೊತ್ತಲಾಗುತ್ತದೆ. ಆದ್ದರಿಂದಲೇ ಖತ್ಮ್ ಎಂಬ ಅರಬಿ ಪದದ ಶಬ್ದಧಾತುವಿಗೆ ಮುದ್ರೆಯೊತ್ತುವುದು ಮತ್ತು ಸಮಾಪ್ತಿ ಎಂಬ ಅರ್ಥಗಳಿವೆ. ಖಾತಮುನ್ನಬಿಯ್ಯೀನ್ ಎಂಬ ಪದಕ್ಕೆ ಪ್ರವಾದಿತ್ವಕ್ಕೆ ಮುದ್ರೆಯೊತ್ತಿದ ಅಥವಾ ಪ್ರವಾದಿತ್ವವನ್ನು ಸಮಾಪ್ತಿಗೊಳಿಸಿದ ವ್ಯಕ್ತಿ ಎಂದು ಸಕಲ ಅಧಿಕೃತ ಕುರ್‌ಆನ್ ವ್ಯಾಖ್ಯಾನಕಾರರೂ ಅರ್ಥ ನೀಡಿದ್ದಾರೆ.

وَكَانَ بِٱلْمُؤْمِنِينَ رَحِيمًا ﴿٤٣﴾

ಅದು ನಿಮ್ಮನ್ನು ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತರುವ ಸಲುವಾಗಿದೆ. ಅವನು ಸತ್ಯವಿಶ್ವಾಸಿಗಳೊಂದಿಗೆ ಅತ್ಯಧಿಕ ಕರುಣೆಯುಳ್ಳವನಾಗಿರುವನು.

تَحِيَّتُهُمْ يَوْمَ يَلْقَوْنَهُۥ سَلَٰمٌۚ وَأَعَدَّ لَهُمْ أَجْرًا كَرِيمًا ﴿٤٤﴾

**44.** ಅವರು ಅವನನ್ನು ಭೇಟಿಯಾಗುವ ದಿನ ಅವರಿಗಿರುವ ಅಭಿವಂದನೆಯು ಸಲಾಮ್ ಎಂದಾಗಿರುವುದು. ಅವನು ಅವರಿಗೆ ಗೌರವಾರ್ಹ ಪ್ರತಿಫಲವನ್ನು ಸಿದ್ಧಗೊಳಿಸಿರುವನು.

يَٰٓأَيُّهَا ٱلنَّبِيُّ إِنَّآ أَرْسَلْنَٰكَ شَٰهِدًا وَمُبَشِّرًا وَنَذِيرًا ﴿٤٥﴾ وَدَاعِيًا إِلَى ٱللَّهِ بِإِذْنِهِۦ وَسِرَاجًا مُّنِيرًا ﴿٤٦﴾

**45-46.** ಓ ಪ್ರವಾದಿಯವರೇ! ಖಂಡಿತವಾಗಿಯೂ ತಮ್ಮನ್ನು ನಾವು ಒಬ್ಬ ಸಾಕ್ಷಿಯನ್ನಾಗಿಯೂ, ಶುಭವಾರ್ತೆ ತಿಳಿಸುವವರನ್ನಾಗಿಯೂ, ಮುನ್ನೆಚ್ಚರಿಕೆ ನೀಡುವವರನ್ನಾಗಿಯೂ ಕಳುಹಿಸಿರುವೆವು. ಅಲ್ಲಾಹುವಿನ ಅನುಮತಿ ಪ್ರಕಾರ ಅವನೆಡೆಗೆ ಆಹ್ವಾನಿಸುವವರನ್ನಾಗಿಯೂ ಪ್ರಕಾಶ ಬೀರುವ ಒಂದು ಜ್ಯೋತಿಯಾಗಿಯೂ (ಕಳುಹಿಸಿರುವೆವು).

وَبَشِّرِ ٱلْمُؤْمِنِينَ بِأَنَّ لَهُم مِّنَ ٱللَّهِ فَضْلًا كَبِيرًا ﴿٤٧﴾

**47.** ಸತ್ಯವಿಶ್ವಾಸಿಗಳಿಗೆ ಅಲ್ಲಾಹುವಿನ ವತಿಯಿಂದ ಮಹಾ ಔದಾರ್ಯವು ಸಿಗಲಿದೆಯೆಂಬ ಶುಭವಾರ್ತೆಯನ್ನು ಅವರಿಗೆ ತಿಳಿಸಿರಿ.

وَلَا تُطِعِ ٱلْكَٰفِرِينَ وَٱلْمُنَٰفِقِينَ وَدَعْ أَذَىٰهُمْ وَتَوَكَّلْ عَلَى ٱللَّهِۚ وَكَفَىٰ بِٱللَّهِ وَكِيلًا ﴿٤٨﴾

**48.** ಸತ್ಯನಿಷೇಧಿಗಳನ್ನು ಮತ್ತು ಕಪಟವಿಶ್ವಾಸಿಗಳನ್ನು ತಾವು ಅನುಸರಿಸದಿರಿ. ಅವರ ಕಿರುಕುಳಗಳನ್ನು ನಿರ್ಲಕ್ಷಿಸಿರಿ ಮತ್ತು ಅಲ್ಲಾಹುವಿನ ಮೇಲೆ ಭರವಸೆಯಿಡಿರಿ. ಕಾರ್ಯನಿರ್ವಾಹಕನಾಗಿ ಅಲ್ಲಾಹು ಸಾಕು.

يَٰٓأَيُّهَا ٱلَّذِينَ ءَامَنُوٓا۟ إِذَا نَكَحْتُمُ ٱلْمُؤْمِنَٰتِ ثُمَّ طَلَّقْتُمُوهُنَّ مِن قَبْلِ أَن تَمَسُّوهُنَّ فَمَا لَكُمْ عَلَيْهِنَّ مِنْ عِدَّةٍ تَعْتَدُّونَهَاۖ فَمَتِّعُوهُنَّ وَسَرِّحُوهُنَّ

**49.** ಓ ಸತ್ಯವಿಶ್ವಾಸಿಗಳೇ! ನೀವು ಸತ್ಯವಿಶ್ವಾಸಿನಿಯರನ್ನು ವಿವಾಹವಾಗಿ, ತರುವಾಯ ಅವರನ್ನು ಸ್ಪರ್ಶಿಸುವುದಕ್ಕೆ ಮುಂಚೆಯೇ ವಿಚ್ಛೇದಿಸುವುದಾದರೆ ನೀವು ಎಣಿಕೆ ಮಾಡುವ ಇದ್ದಃ[1] ಆಚರಿಸಬೇಕಾದ

1 ವಿವಾಹ ವಿಚ್ಛೇದಿತೆಯು ಬೇರೊಂದು ವಿವಾಹವಾಗದೆ ಕಾಯಲು ಬಾಧ್ಯಸ್ಥಳಾಗಿರುವ ದೀಕ್ಷಾಕಾಲವನ್ನು 'ಇದ್ದಃ' ಎನ್ನಲಾಗುತ್ತದೆ. ಆಕೆ ಗರ್ಭಿಣಿಯಲ್ಲವೆಂದು ಖಾತ್ರಿಯಾಗುವ ವರೆಗೆ ಅಥವಾ ಆಕೆ ಗರ್ಭಿಣಿಯಾಗಿದ್ದರೆ ಹೆರಿಗೆಯಾಗುವ ವರೆಗೆ 'ಇದ್ದಃ' ಆಚರಿಸಬೇಕಾಗಿದೆ. ಲೈಂಗಿಕ ಸಂಪರ್ಕವು ನಡೆಯದಿದ್ದಲ್ಲಿ ಇದರ ಅಗತ್ಯವೇ ಇರಲಾರದು.

سَرَاحًا جَمِيلًا ﴿٤٩﴾

ಹೊಣೆಯು ಅವರಿಗೆ ನಿಮ್ಮೊಂದಿಗಿಲ್ಲ. ನೀವು ಅವರಿಗೆ ಮತಾಅ್[1] ನೀಡಿರಿ ಮತ್ತು ಉತ್ತಮ ರೀತಿಯಲ್ಲಿ ಅವರನ್ನು ಬಿಡುಗಡೆ ಮಾಡಿರಿ.

يَٰٓأَيُّهَا ٱلنَّبِيُّ إِنَّآ أَحۡلَلۡنَا لَكَ أَزۡوَٰجَكَ ٱلَّٰتِيٓ ءَاتَيۡتَ أُجُورَهُنَّ وَمَا مَلَكَتۡ يَمِينُكَ مِمَّآ أَفَآءَ ٱللَّهُ عَلَيۡكَ وَبَنَاتِ عَمِّكَ وَبَنَاتِ عَمَّٰتِكَ وَبَنَاتِ خَالِكَ وَبَنَاتِ خَٰلَٰتِكَ ٱلَّٰتِي هَاجَرۡنَ مَعَكَ وَٱمۡرَأَةً مُّؤۡمِنَةً إِن وَهَبَتۡ نَفۡسَهَا لِلنَّبِيِّ إِنۡ أَرَادَ ٱلنَّبِيُّ أَن يَسۡتَنكِحَهَا خَالِصَةً لَّكَ مِن دُونِ ٱلۡمُؤۡمِنِينَۗ قَدۡ عَلِمۡنَا مَا فَرَضۡنَا عَلَيۡهِمۡ فِيٓ أَزۡوَٰجِهِمۡ وَمَا مَلَكَتۡ أَيۡمَٰنُهُمۡ

**50.** ಓ ಪ್ರವಾದಿಯವರೇ! ತಾವು ವಧುದಕ್ಷಿಣೆ ನೀಡಿ ವರಿಸಿರುವ ತಮ್ಮ ಪತ್ನಿಯರನ್ನು[2] ನಾವು ತಮಗೆ ಧರ್ಮಸಮ್ಮತಗೊಳಿಸಿರುವೆವು. ಅಲ್ಲಾಹು ತಮಗೆ (ಯುದ್ಧದಲ್ಲಿ) ಅಧೀನಗೊಳಿಸಿಕೊಟ್ಟವರ ಪೈಕಿ ತಮ್ಮ ಬಲಗೈ ಒಡೆತನದಲ್ಲಿರಿಸಿರುವ (ಗುಲಾಮ) ಸ್ತ್ರೀಯರನ್ನು,[3] ತಮ್ಮೊಂದಿಗೆ ಊರು ಬಿಟ್ಟು ಬಂದ ತಮ್ಮ ಪಿತೃಸಹೋದರ ಪುತ್ರಿಯರು, ಪಿತೃಸಹೋದರಿ ಪುತ್ರಿಯರು, ಮಾತೃಸಹೋದರ ಪುತ್ರಿಯರು, ಮಾತೃ ಸಹೋದರಿ ಪುತ್ರಿಯರು (ಮುಂತಾದವರನ್ನು ವಿವಾಹವಾಗುವುದು ತಮಗೆ ಧರ್ಮಸಮ್ಮತವಾಗಿದೆ).[4]

1 ಪತ್ನಿಯನ್ನು ವಿಚ್ಛೇದಿಸಿ ಕಳಿಸುವಾಗ ಆಕೆಯ ಮನಸ್ಸಿಗೆ ಸಂತೃಪ್ತಿ ಮತ್ತು ಬದುಕಿಗೆ ಸಾಂತ್ವನ ನೀಡುವ ರೀತಿಯಲ್ಲಿ ಪತಿಯು ಕೊಡುವ ಉಡುಗೊರೆಯನ್ನು ಮತಾಅ್ ಎನ್ನಲಾಗುತ್ತದೆ.

2 ಪ್ರವಾದಿ(ﷺ)ರವರ ಪತ್ನಿಯರು ಸತ್ಯವಿಶ್ವಾಸಿಗಳ ಮಾತೆಯರು ಎಂಬ ವಿಶೇಷ ಪದವಿಯನ್ನು ಗಳಿಸಿದ್ದಾರೆಂದು 6ನೇ ಸೂಕ್ತಿಯಲ್ಲಿ ಹೇಳಲಾಗಿದೆ. ಪ್ರವಾದಿ(ﷺ)ರವರ ಜೀವಿತಾವಧಿಯಲ್ಲೂ, ಅವರ ಮರಣಾನಂತರವೂ ಅವರ ಪತ್ನಿಯರಿಗೆ ಸಮಾಜದಲ್ಲಿ ಅನೇಕ ಮಹತ್ವಪೂರ್ಣ ಕರ್ತವ್ಯಗಳನ್ನು ನಿಭಾಯಿಸಬೇಕಾಗಿದೆ. ಆದ್ದರಿಂದ ಪ್ರವಾದಿ(ﷺ)ರವರ ವಿವಾಹಗಳು ಲೈಂಗಿಕಾಸಕ್ತಿಯನ್ನು ತೀರಿಸುವುದಕ್ಕಿಂತಲೂ ಮಿಗಿಲಾಗಿ ಈ ಮಹತ್ತರವಾದ ಸ್ಥಾನಗಳಿಗೆ ನ್ಯಾಯ ಒದಗಿಸಲಿಕ್ಕಿರುವ ಸಾಮರ್ಥ್ಯದ ಆಧಾರದಲ್ಲಾಗಿದ್ದವು. ಪ್ರಸ್ತುತ ಸೂಕ್ತಿಯು ಅವತೀರ್ಣಗೊಳ್ಳುವುದಕ್ಕೆ ಮುಂಚೆ ಪ್ರವಾದಿ(ﷺ)ರವರು ವಧುದಕ್ಷಿಣೆ ನೀಡಿ ಮಾಡಿಕೊಂಡ ವಿವಾಹಗಳಿಗೆ ಅಲ್ಲಾಹು ಅಂಗೀಕಾರ ನೀಡಿದ್ದಾನೆ. ಆದರೆ ಇನ್ನು ಮುಂದೆ ವಿವಾಹವಾಗುವುದಾದರೆ ಅದಕ್ಕಿರುವ ನಿಯಮಗಳನ್ನು ಸ್ಪಷ್ಟಗೊಳಿಸಿದ್ದಾನೆ.

3 ಪ್ರಾಚೀನ ಅರಬ್ ಜನರ ಸಂಪ್ರದಾಯ ಪ್ರಕಾರ ಯುದ್ಧ ಕೈದಿಗಳನ್ನು ಗುಲಾಮರನ್ನಾಗಿ ಮಾಡಿ ಅವರನ್ನು ಸೈನಿಕರು ಹಂಚಿಕೊಳ್ಳುತ್ತಿದ್ದರು. ಮುಸ್ಲಿಮ್ ಕೈದಿಗಳೊಂದಿಗೆ ಶತ್ರುಗಳು ಇದೇ ನಿಲುವನ್ನು ಅಂಗೀಕರಿಸಿರುವುದರಿಂದ ಮತ್ತು ಕೈದಿಗಳನ್ನು ವಿಮೋಚನೆಗೊಳಿಸಿದರೆ ಶತ್ರುಗಳು ತಕ್ಷಣ ಇನ್ನೊಂದು ಯುದ್ಧಕ್ಕೆ ಮುಂದಾಗುವ ಸಾಧ್ಯತೆಯಿರುವುದರಿಂದ ಈ ಸಂಪ್ರದಾಯವನ್ನು ಏಕಪಕ್ಷೀಯವಾಗಿ ಕೊನೆಗೊಳಿಸಲು ಮುಸ್ಲಿಮರಿಗೆ ಸಾಧ್ಯವಾಗಿರಲಿಲ್ಲ. ಓರ್ವ ಮುಸ್ಲಿಮ್ ಸೇನಾನಿಗೆ ಬಳುವಳಿಯಾಗಿ ಸಿಗುವ ಮಹಿಳಾ ಕೈದಿಯನ್ನು ಪತ್ನಿಯಂತೆ ಮಾಡಿಕೊಳ್ಳಲು ಅವನಿಗೆ ಅನುಮತಿಯಿತ್ತು. ಅನೈತಿಕ ಸಂಬಂಧದ ಮಾರ್ಗವನ್ನು ಮುಚ್ಚಲು ಇದು ಅನಿವಾರ್ಯವಾಗಿತ್ತು.

4 ಪ್ರವಾದಿ(ﷺ)ರವರ ಆಪ್ತಸಂಬಂಧಿಕರ ಪೈಕಿ ಕೆಲವರು ಹಿಂದೆಯೇ ಇಸ್ಲಾಮ್ ಸ್ವೀಕರಿಸಿದವರಾಗಿದ್ದು ಸ್ವಂತ ಊರನ್ನು ತೊರೆದು ಮದೀನಕ್ಕೆ ವಲಸೆ ಹೋಗಿದ್ದರು. ಕೆಲವರು ಮಕ್ಕಾ ವಿಜಯದವರೆಗೆ ಶತ್ರುಗಳೊಂದಿಗೆ ಮಕ್ಕಾದಲ್ಲೇ ಉಳಿದಿದ್ದರು. ಪ್ರವಾದಿ(ﷺ)ರವರು ತಂದೆಯ ಅಥವಾ ತಾಯಿಯ ಸಂಬಂಧಿಕರ ಪೈಕಿ

لِكَيۡلَا يَكُونَ عَلَيۡكَ حَرَجٞۗ وَكَانَ ٱللَّهُ غَفُورٗا رَّحِيمٗا ﴿٥٠﴾

ಸತ್ಯವಿಶ್ವಾಸಿನಿಯಾಗಿರುವ ಓರ್ವ ಹೆಣ್ಣು ಸ್ವತಃ ತನ್ನನ್ನು ಪ್ರವಾದಿಗೆ ದಾನ ಮಾಡಲು ಇಚ್ಛಿಸುವುದಾದರೆ ಮತ್ತು ಪ್ರವಾದಿಯವರು ಆಕೆಯನ್ನು ವಿವಾಹವಾಗಲು ಬಯಸುವುದಾದರೆ (ಅದು ಕೂಡ ಧರ್ಮಸಮ್ಮತವಾಗಿದೆ). ಇದು ಇತರ ಸತ್ಯವಿಶ್ವಾಸಿಗಳನ್ನು ಹೊರತುಪಡಿಸಿ ತಮಗೆ ಮಾತ್ರವಿರುವುದಾಗಿದೆ.[1] ಅವರ ಪತ್ನಿಯರ ಮತ್ತು ಅವರ ಬಲಗೈ ಒಡೆತನದಲ್ಲಿರಿಸಿರುವವರ ಕುರಿತು ನಾವು ಶಾಸನಗೊಳಿಸಿರುವುದು ನಮಗೆ ಚೆನ್ನಾಗಿ ತಿಳಿದಿದೆ.[2] ಇದು ತಮಗೆ ಯಾವುದೇ ತೊಂದರೆಯುಂಟಾಗದಿರುವ ಸಲುವಾಗಿದೆ. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

۞ تُرۡجِي مَن تَشَآءُ مِنۡهُنَّ وَتُـٔۡوِيٓ إِلَيۡكَ مَن تَشَآءُۖ وَمَنِ ٱبۡتَغَيۡتَ مِمَّنۡ عَزَلۡتَ فَلَا جُنَاحَ عَلَيۡكَۚ ذَٰلِكَ أَدۡنَىٰٓ أَن تَقَرَّ أَعۡيُنُهُنَّ وَلَا يَحۡزَنَّ وَيَرۡضَيۡنَ بِمَآ ءَاتَيۡتَهُنَّ كُلُّهُنَّۚ وَٱللَّهُ يَعۡلَمُ مَا فِي قُلُوبِكُمۡۚ

51. ಅವರ ಪೈಕಿ ತಾವಿಚ್ಛಿಸುವವರನ್ನು ತಾವು ದೂರವಿರಿಸಬಹುದು ಮತ್ತು ತಾವಿಚ್ಛಿಸುವವರನ್ನು ತಮ್ಮ ಬಳಿಗೆ ನಿಕಟಗೊಳಿಸಬಹುದು.[3] ತಾವು ದೂರ ವಿರಿಸಿದವರ ಪೈಕಿ ಯಾರನ್ನಾದರೂ ತಾವು ಬಯಸುವುದಾದರೆ ತಮಗೆ

ಯಾರನ್ನಾದರೂ ವಿವಾಹವಾಗ ಬಯಸುವುದಾದರೆ ಅದು ಇಸ್ಲಾಮಿಗಾಗಿ ದೇಶತ್ಯಾಗ ಮಾಡಿದವರನ್ನು ಮಾತ್ರವಾಗಿರಬೇಕು ಎಂದು ಅಲ್ಲಾಹು ಉಪದೇಶಿಸುತ್ತಿದ್ದಾನೆ.

1 ಓರ್ವ ಸ್ತ್ರೀ ನೇರವಾಗಿ ಓರ್ವ ಪುರುಷನನ್ನು ವರಿಸುವ ರೀತಿ ಇಸ್ಲಾಮಿನಲ್ಲಿಲ್ಲ. ವಧುವಿನ ಪೂರ್ಣ ಸಮ್ಮತಿಯೊಂದಿಗೆ ಆಕೆಯ ಪೋಷಕರು ಸಾಕ್ಷಿಗಳ ಸಮಕ್ಷಮದಲ್ಲಿ ಆಕೆಯನ್ನು ವರನಿಗೆ ಮಹ್ರ್ ನಿಶ್ಚಯಿಸಿ ವಿವಾಹ ಮಾಡಿಕೊಡುವುದಾಗಿದೆ ಇಸ್ಲಾಮಿನ ಪದ್ಧತಿ. ಆದರೆ ಪ್ರವಾದಿ(ﷺ)ರವರಿಗೆ ಈ ವಿಷಯದಲ್ಲಿ ಅಲ್ಲಾಹು ರಿಯಾಯಿತಿ ನೀಡಿದ್ದಾನೆ. ಯಾವ ಮಹ್ರನ್ನೂ ಪಡೆಯದೆ ಓರ್ವ ಸ್ತ್ರೀ ಪ್ರವಾದಿ(ﷺ)ರವರೊಂದಿಗೆ ತನ್ನನ್ನು ಪತ್ನಿಯಾಗಿ ಸ್ವೀಕರಿಸಿರಿ ಎಂದು ಕೇಳಿಕೊಂಡಲ್ಲಿ ಅದನ್ನು ಒಪ್ಪಿಕೊಳ್ಳಲು ಅಲ್ಲಾಹು ಅವರಿಗೆ ಅನುಮತಿ ನೀಡಿದ್ದಾನೆ. ಆದರೆ ಈ ರೀತಿ ಪ್ರವಾದಿ(ﷺ)ರವರು ಯಾರನ್ನಾದರೂ ವಿವಾಹವಾದ ಬಗ್ಗೆ ನಿಖರವಾಗಿ ತಿಳಿದುಬಂದಿಲ್ಲ.

2 ಸಾಮಾನ್ಯ ಮುಸ್ಲಿಮರಿಗೆ ಅನ್ವಯಿಸುವ ವಿವಾಹ–ದಾಂಪತ್ಯ ನಿಯಮಗಳು ಅಲ್‌ಬಕರಾ, ಅನ್ನಿಸಾಅ್ ಮುಂತಾದ ಅಧ್ಯಾಯಗಳಲ್ಲಿ ಮತ್ತು ಸಹೀಹಾದ ಹದೀಸ್‌ಗಳಲ್ಲಿ ದಾಖಲಾಗಿರುತ್ತವೆ.

3 ಅಗತ್ಯವೆನಿಸಿದಾಗ ಪತ್ನಿಯರೊಂದಿಗೆ ಸಹಶಯನ ಮಾಡುವ ವಿಷಯದಲ್ಲಿ ಸ್ವತಂತ್ರ ತೀರ್ಮಾನ ಕೈಗೊಳ್ಳಲು ಅಲ್ಲಾಹು ಪ್ರವಾದಿ(ﷺ)ರಿಗೆ ಅನುಮತಿ ನೀಡಿದ್ದಾನೆಂದು ಈ ಸೂಕ್ತಿಯಿಂದ ಗ್ರಹಿಸಬಹುದಾದರೂ ಸರದಿ ಕ್ರಮವನ್ನು ಕಾಪಾಡಲು ಪ್ರವಾದಿ(ﷺ)ರವರು ಮರಣದವರೆಗೆ ಎಚ್ಚರವಹಿಸಿದ್ದರು ಎಂದು ಹದೀಸ್‌ಗಳಿಂದ ತಿಳಿದುಬರುತ್ತದೆ.

وَكَانَ ٱللَّهُ عَلِيمًا حَلِيمًا ﴿٥١﴾

ದೋಷವಿಲ್ಲ.[1] ಅವರ ಕಣ್ಣು ತಣಿಯಲು, ಅವರು ದುಃಖಿಸದಿರಲು ಮತ್ತು ತಾವು ಅವರಿಗೆ ನೀಡಿರುವುದರಲ್ಲಿ ಅವರೆಲ್ಲರೂ ಸಂತೃಪ್ತರಾಗಲು ಅದು ಅತ್ಯಂತ ಸೂಕ್ತವಾಗಿದೆ. ನಿಮ್ಮ ಹೃದಯಗಳಲ್ಲಿರುವುದನ್ನು ಅಲ್ಲಾಹು ಅರಿಯುವನು. ಅಲ್ಲಾಹು ಸರ್ವಜ್ಞನೂ ಸಹನಾಶೀಲನೂ ಆಗಿರುವನು.

لَّا يَحِلُّ لَكَ ٱلنِّسَآءُ مِنۢ بَعۡدُ وَلَآ أَن تَبَدَّلَ بِهِنَّ مِنۡ أَزۡوَٰجٖ وَلَوۡ أَعۡجَبَكَ حُسۡنُهُنَّ إِلَّا مَا مَلَكَتۡ يَمِينُكَۗ وَكَانَ ٱللَّهُ عَلَىٰ كُلِّ شَيۡءٖ رَّقِيبٗا ﴿٥٢﴾

**52.** ಇನ್ನು ಮುಂದೆ (ಇತರ) ಸ್ತ್ರೀಯರನ್ನು ವಿವಾಹವಾಗಲು ತಮಗೆ ಅನುಮತಿಯಿಲ್ಲ. ಇವರ ಬದಲಿಗೆ ಇತರರನ್ನು ಪತ್ನಿಯರನ್ನಾಗಿ ಮಾಡಿಕೊಳ್ಳಲೂ ತಮಗೆ (ಅನುಮತಿಯಿಲ್ಲ).[2] ಅವರ ಸೌಂದರ್ಯವು ತಮಗೆ ಎಷ್ಟೇ ಆಕರ್ಷಕವಾಗಿ ಕಂಡರೂ ಸರಿ. ತಮ್ಮ ಬಲಗೈ ಸ್ವಾಧೀನದಲ್ಲಿರಿಸಿಕೊಂಡಿರುವ (ಗುಲಾಮಸ್ತ್ರೀಯರ) ಹೊರತು. ಅಲ್ಲಾಹು ಎಲ್ಲ ವಿಷಯಗಳನ್ನು ವೀಕ್ಷಿಸುವವನಾಗಿರುವನು.

يَـٰٓأَيُّهَا ٱلَّذِينَ ءَامَنُواْ لَا تَدۡخُلُواْ بُيُوتَ ٱلنَّبِيِّ إِلَّآ أَن يُؤۡذَنَ لَكُمۡ إِلَىٰ طَعَامٍ غَيۡرَ نَـٰظِرِينَ إِنَىٰهُ وَلَـٰكِنۡ إِذَا دُعِيتُمۡ فَٱدۡخُلُواْ فَإِذَا طَعِمۡتُمۡ فَٱنتَشِرُواْ وَلَا مُسۡتَـٔۡنِسِينَ لِحَدِيثٍۚ إِنَّ ذَٰلِكُمۡ كَانَ يُؤۡذِي ٱلنَّبِيَّ فَيَسۡتَحۡيِۦ مِنكُمۡۖ وَٱللَّهُ لَا يَسۡتَحۡيِۦ مِنَ ٱلۡحَقِّۚ وَإِذَا سَأَلۡتُمُوهُنَّ مَتَـٰعٗا فَسۡـَٔلُوهُنَّ مِن وَرَآءِ حِجَابٖۚ ذَٰلِكُمۡ أَطۡهَرُ لِقُلُوبِكُمۡ وَقُلُوبِهِنَّۚ وَمَا كَانَ لَكُمۡ أَن تُؤۡذُواْ رَسُولَ ٱللَّهِ وَلَآ أَن تَنكِحُوٓاْ

**53.** ಓ ಸತ್ಯವಿಶ್ವಾಸಿಗಳೇ! ನಿಮ್ಮನ್ನು ಆಹಾರ ಸೇವಿಸುವುದಕ್ಕಾಗಿ ಕರೆಯಲಾದರೆ ನಿಮಗೆ ಅನುಮತಿ ದೊರೆಯದ ವಿನಾ ನೀವು ಪ್ರವಾದಿಯವರ ಮನೆಗಳನ್ನು ಪ್ರವೇಶಿಸದಿರಿ. ಆಹಾರ ಸಿದ್ಧಗೊಳ್ಳುವುದನ್ನು ಎದುರು ನೋಡುತ್ತಾ ಕೂರುವವರಾಗದಿರಿ. ಆದರೆ ನಿಮ್ಮನ್ನು ಕರೆಯಲಾದರೆ ಒಳಪ್ರವೇಶಿಸಿರಿ ಮತ್ತು ಆಹಾರ ಸೇವಿಸಿದ ಬಳಿಕ ಚದುರಿ ಹೋಗಿರಿ. ನೀವು ಹರಟೆ ಹೊಡೆಯುತ್ತಾ ಕೂರುವವರಾಗದಿರಿ. ಖಂಡಿತವಾಗಿಯೂ ಇವು ಪ್ರವಾದಿಯವರಿಗೆ ಕಿರುಕುಳವುಂಟು ಮಾಡುತ್ತವೆ. ನಿಮ್ಮೊಂದಿಗೆ (ಅದನ್ನು ಹೇಳಲು) ಅವರು

1 ಪ್ರವಾದಿ(ﷺ)ರವರು ಇಚ್ಛಿಸುವುದಾದರೆ ಸಹಶಯನವನ್ನು ದೂರವಿಡಲಾದ ಪತ್ನಿಯರೊಂದಿಗೆ ಅದನ್ನು ಪುನರಾರಂಭಿಸಲು ಮತ್ತು ವಿಚ್ಛೇದನ ನೀಡಿದ ಪತ್ನಿಯರನ್ನು ಮರಳಿ ಪಡೆಯಲು ಅವರಿಗೆ ಅನುಮತಿಯಿದೆಯೆಂದು ಈ ಸೂಕ್ತಿಯಿಂದ ತಿಳಿದುಬರುತ್ತದೆ.

2 ಈ ಸೂಕ್ತಿಯು ಅವತೀರ್ಣಗೊಳ್ಳುವಾಗ ಪ್ರವಾದಿ(ﷺ)ರವರಿಗೆ ಒಂಬತ್ತು ಮಂದಿ ಪತ್ನಿಯರಿದ್ದರು. ತರುವಾಯ ಪ್ರವಾದಿ(ﷺ)ರವರು ಬೇರೆ ವಿವಾಹವಾಗಿಲ್ಲ.

أَزۡوَٰجَهُۥ مِنۢ بَعۡدِهِۦٓ أَبَدًاۚ إِنَّ ذَٰلِكُمۡ كَانَ عِندَ ٱللَّهِ عَظِيمًا ٥٣

ಸಂಕೋಚ ಪಡುತ್ತಿರುವರು. ಆದರೆ ಸತ್ಯದ ವಿಚಾರದಲ್ಲಿ ಅಲ್ಲಾಹು ಸಂಕೋಚಪಡಲಾರನು. ನೀವು ಅವರೊಂದಿಗೆ (ಪ್ರವಾದಿ ಪತ್ನಿಯರೊಂದಿಗೆ) ಯಾವುದೇ ವಸ್ತುವನ್ನು ಕೇಳುವುದಾದರೆ ಪರದೆಯ ಹಿಂದಿನಿಂದ ಕೇಳಿರಿ. ಅದು ನಿಮ್ಮ ಹೃದಯಗಳಿಗೆ ಮತ್ತು ಅವರ ಹೃದಯಗಳಿಗೆ ಹೆಚ್ಚು ಪರಿಶುದ್ಧವಾಗಿದೆ. ಅಲ್ಲಾಹುವಿನ ಪ್ರವಾದಿಗೆ ಕಿರುಕುಳ ಕೊಡುವುದು ಮತ್ತು ಅವರ ಬಳಿಕ ಅವರ ಪತ್ನಿಯರನ್ನು ವಿವಾಹವಾಗುವುದು ನಿಮಗೆ ಧರ್ಮಸಮ್ಮತವಲ್ಲ.[1] ಖಂಡಿತವಾಗಿಯೂ ಅವೆಲ್ಲವೂ ಅಲ್ಲಾಹುವಿನ ಬಳಿ ಗಂಭೀರ ವಿಷಯಗಳಾಗಿವೆ.

إِن تُبۡدُواْ شَيۡـًٔا أَوۡ تُخۡفُوهُ فَإِنَّ ٱللَّهَ كَانَ بِكُلِّ شَيۡءٍ عَلِيمًا ٥٤

**54.** ನೀವು ಏನನ್ನಾದರೂ ಬಹಿರಂಗಪಡಿಸುವುದಾದರೆ ಅಥವಾ ಮರೆಮಾಚುವುದಾದರೆ ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

لَّا جُنَاحَ عَلَيۡهِنَّ فِيٓ ءَابَآئِهِنَّ وَلَآ أَبۡنَآئِهِنَّ وَلَآ إِخۡوَٰنِهِنَّ وَلَآ أَبۡنَآءِ إِخۡوَٰنِهِنَّ وَلَآ أَبۡنَآءِ أَخَوَٰتِهِنَّ وَلَا نِسَآئِهِنَّ وَلَا مَا مَلَكَتۡ أَيۡمَٰنُهُنَّۗ وَٱتَّقِينَ ٱللَّهَۚ إِنَّ ٱللَّهَ كَانَ عَلَىٰ كُلِّ شَيۡءٖ شَهِيدًا ٥٥

**55.** ಆ ಸ್ತ್ರೀಯರಿಗೆ ಅವರ ಪಿತರೊಂದಿಗೆ, ಪುತ್ರರೊಂದಿಗೆ, ಸಹೋದರರೊಂದಿಗೆ, ಸಹೋದರ ಪುತ್ರರೊಂದಿಗೆ, ಸಹೋದರಿ ಪುತ್ರರೊಂದಿಗೆ, ಅವರಲ್ಲಿ ಸೇರಿದ ಸ್ತ್ರೀಯರೊಂದಿಗೆ ಮತ್ತು ಅವರ ಬಲಗೈಗಳು ಅಧೀನದಲ್ಲಿರಿಸಿದವರೊಂದಿಗೆ ಬೆರೆಯುವುದರಲ್ಲಿ ವಿರೋಧವಿಲ್ಲ.[2] ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳಿಗೂ ಸಾಕ್ಷಿಯಾಗಿರುವನು.

1 ಪ್ರವಾದಿಪತ್ನಿಯರನ್ನು ಸತ್ಯವಿಶ್ವಾಸಿಗಳೆಲ್ಲರೂ ತಮ್ಮ ಮಾತೆಯರಿಗೆ ಸಮಾನವಾದ ಪದವಿಯಲ್ಲಿ ಕಾಣಬೇಕಾಗಿರುವುದು ಅನಿವಾರ್ಯವಾಗಿರುವುದರಿಂದ ಅವರನ್ನು ವಿವಾಹವಾಗುವುದು ನಿಷಿದ್ಧವಾಗಿದೆ.

2 ಇವರ ಮುಂದೆ ಸ್ತ್ರೀಯರು ಪರ್ದಾ ಧರಿಸಬೇಕಾಗಿಲ್ಲ. ಸಭ್ಯವಾದ ಯಾವುದೇ ಉಡುಪುಗಳನ್ನು ಧರಿಸಿದರೂ ಸಾಕು. ಇವರೊಂದಿಗೆ ಬೆರೆಯುವುದರಲ್ಲಿ ಅಥವಾ ಹತ್ತಿರದಲ್ಲೇ ನಿಂತು ಮಾತನಾಡುವುದರಲ್ಲಿ ವಿರೋಧವಿಲ್ಲ. ಆದರೆ ಮುಸ್ಲಿಮ್ ಸ್ತ್ರೀಯರು ಮುಸ್ಲಿಮೇತರ ಸ್ತ್ರೀಯರೊಂದಿಗೆ ಹೀಗೆ ಸ್ವಚ್ಛಂದವಾಗಿ ಬೆರೆಯಬಾರದು.

**56.** ಖಂಡಿತವಾಗಿಯೂ ಅಲ್ಲಾಹು ಮತ್ತು ಅವನ ಮಲಕ್‌ಗಳು ಪ್ರವಾದಿಯವರ ಮೇಲೆ ಕರುಣೆ ತೋರುತ್ತಾರೆ. ಓ ಸತ್ಯವಿಶ್ವಾಸಿಗಳೇ! ನೀವು ಸಹ ಅವರ ಮೇಲೆ (ಅಲ್ಲಾಹುವಿನ) ಅನುಗ್ರಹ ಮತ್ತು ಶಾಂತಿಯು ವರ್ಷಿಸಲು ಪ್ರಾರ್ಥಿಸಿರಿ.[1]

إِنَّ ٱللَّهَ وَمَلَٰٓئِكَتَهُۥ يُصَلُّونَ عَلَى ٱلنَّبِيِّۚ يَٰٓأَيُّهَا ٱلَّذِينَ ءَامَنُواْ صَلُّواْ عَلَيۡهِ وَسَلِّمُواْ تَسۡلِيمًا ٥٦

**57.** ಅಲ್ಲಾಹು ಮತ್ತು ಅವನ ಸಂದೇಶವಾಹಕರಿಗೆ ಕಿರುಕುಳ ಕೊಡುವವರನ್ನು ಅಲ್ಲಾಹು ಇಹಲೋಕದಲ್ಲೂ, ಪರಲೋಕದಲ್ಲೂ ಶಪಿಸಿರುವನು. ಅವರಿಗೆ ಅವಮಾನಕರವಾದ ಶಿಕ್ಷೆಯನ್ನು ಅವನು ಸಿದ್ಧಗೊಳಿಸಿರುವನು.

إِنَّ ٱلَّذِينَ يُؤۡذُونَ ٱللَّهَ وَرَسُولَهُۥ لَعَنَهُمُ ٱللَّهُ فِي ٱلدُّنۡيَا وَٱلۡأٓخِرَةِ وَأَعَدَّ لَهُمۡ عَذَابٗا مُّهِينٗا ٥٧

**58.** ಸತ್ಯವಿಶ್ವಾಸಿಗಳಿಗೆ ಮತ್ತು ಸತ್ಯವಿಶ್ವಾಸಿನಿಗಳಿಗೆ ಅವರು (ಕೆಡುಕಾಗಿರುವ) ಏನನ್ನೂ ಮಾಡದಿದ್ದರೂ ಕಿರುಕುಳ ಕೊಡುವವರು ಯಾರೋ ಅವರು ಸುಳ್ಳಾರೋಪ ಮತ್ತು ಬಹಿರಂಗವಾದ ಪಾಪವನ್ನು ಹೊತ್ತುಕೊಂಡಿರುವರು.

وَٱلَّذِينَ يُؤۡذُونَ ٱلۡمُؤۡمِنِينَ وَٱلۡمُؤۡمِنَٰتِ بِغَيۡرِ مَا ٱكۡتَسَبُواْ فَقَدِ ٱحۡتَمَلُواْ بُهۡتَٰنٗا وَإِثۡمٗا مُّبِينٗا ٥٨

**59.** ಓ ಪ್ರವಾದಿಯವರೇ! ತಮ್ಮ ಪತ್ನಿಯರೊಂದಿಗೆ, ಪುತ್ರಿಯರೊಂದಿಗೆ ಮತ್ತು ಸತ್ಯವಿಶ್ವಾಸಿನಿ ಸ್ತ್ರೀಯರೊಂದಿಗೆ ಅವರು ತಮ್ಮ ಜಲಾಬೀಬನ್ನು[2] ತಮ್ಮ ಶರೀರದ ಮೇಲೆ ಇಳಿಸಿಕೊಳ್ಳುವಂತೆ ಹೇಳಿರಿ. ಅವರು ಗುರುತಿಸಲ್ಪಡಲು ಮತ್ತು ಕಿರುಕುಳಕ್ಕೊಳಗಾಗದಿರಲು ಅದು ಅತ್ಯಂತ ಸೂಕ್ತವಾಗಿದೆ. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَٰٓأَيُّهَا ٱلنَّبِيُّ قُل لِّأَزۡوَٰجِكَ وَبَنَاتِكَ وَنِسَآءِ ٱلۡمُؤۡمِنِينَ يُدۡنِينَ عَلَيۡهِنَّ مِن جَلَٰبِيبِهِنَّۚ ذَٰلِكَ أَدۡنَىٰٓ أَن يُعۡرَفۡنَ فَلَا يُؤۡذَيۡنَۗ وَكَانَ ٱللَّهُ غَفُورٗا رَّحِيمٗا ٥٩

**60.** ಕಪಟವಿಶ್ವಾಸಿಗಳು, ತಮ್ಮ ಹೃದಯಗಳಲ್ಲಿ ರೋಗವಿರುವವರು ಮತ್ತು ಮದೀನದಲ್ಲಿ ವದಂತಿ ಹಬ್ಬಿಸಿ ಕ್ಷೋಭೆಯನ್ನುಂಟು ಮಾಡುವವರು (ಅದನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ತಮ್ಮನ್ನು ನಾವು ಅವರ

۞ لَّئِن لَّمۡ يَنتَهِ ٱلۡمُنَٰفِقُونَ وَٱلَّذِينَ فِي قُلُوبِهِم مَّرَضٞ وَٱلۡمُرۡجِفُونَ فِي ٱلۡمَدِينَةِ لَنُغۡرِيَنَّكَ بِهِمۡ ثُمَّ لَا يُجَاوِرُونَكَ فِيهَآ إِلَّا قَلِيلٗا ٦٠

1 'ಸಲ್ಲಿಮೂ ತಸ್ಲೀಮನ್' ಎಂದರೆ 'ನೀವು ಅವರ ಆಜ್ಞೆಗಳಿಗೆ ಸಂಪೂರ್ಣ ಶರಣಾಗಿರಿ' ಎಂದು ಕೆಲವರು ಅರ್ಥ ನೀಡಿದ್ದಾರೆ.

2 ಜಲಾಬೀಬ್ ಎಂದರೆ ಶರೀರವನ್ನು ಸಂಪೂರ್ಣವಾಗಿ ಮರೆಮಾಚುವ ಉಡುಪುಗಳು ಅಥವಾ ತಲೆ, ಕತ್ತು, ಮುಖ ಮತ್ತು ಎದೆಗಳನ್ನು ಮರೆಮಾಚುವ ಉಡುಪುಗಳು ಎಂದು ಅರ್ಥ ನೀಡಲಾಗಿದೆ.

ವಿರುದ್ಧ ತಿರುಗಿಸಿ ಬಿಡುವೆವು. ತರುವಾಯ ಅಲ್ಪ ಸಮಯ ಮಾತ್ರ ಅವರಿಗೆ ತಮ್ಮ ನೆರೆಯವರಾಗಿರಲು ಸಾಧ್ಯ.

مَّلْعُونِينَ ۖ أَيْنَمَا ثُقِفُوٓا۟ أُخِذُوا۟ وَقُتِّلُوا۟ تَقْتِيلًا ﴿٦١﴾

**61.** ಅವರು ಶಾಪಪೀಡಿತ ಸ್ಥಿತಿಯಲ್ಲಿರುವವರು. ಅವರೆಲ್ಲೇ ಕಂಡುಬಂದರೂ ಹಿಡಿಯಲ್ಪಡುವವರು ಮತ್ತು ಕೊಲ್ಲಲ್ಪಡುವವರು.

سُنَّةَ ٱللَّهِ فِى ٱلَّذِينَ خَلَوْا۟ مِن قَبْلُ ۖ وَلَن تَجِدَ لِسُنَّةِ ٱللَّهِ تَبْدِيلًا ﴿٦٢﴾

**62.** ಈ ಹಿಂದೆ ಗತಿಸಿದವರ ವಿಚಾರದಲ್ಲಿ ಅಲ್ಲಾಹು ಕೈಗೊಂಡಿರುವ ಅದೇ ಕ್ರಮ.[1] ಅಲ್ಲಾಹುವಿನ ಕ್ರಮಕ್ಕೆ ತಾವು ಯಾವುದೇ ಬದಲಾವಣೆಯನ್ನೂ ಕಾಣಲಾರಿರಿ.

يَسْـَٔلُكَ ٱلنَّاسُ عَنِ ٱلسَّاعَةِ ۖ قُلْ إِنَّمَا عِلْمُهَا عِندَ ٱللَّهِ ۚ وَمَا يُدْرِيكَ لَعَلَّ ٱلسَّاعَةَ تَكُونُ قَرِيبًا ﴿٦٣﴾

**63.** ಅಂತ್ಯಘಳಿಗೆಯ ಕುರಿತು ಜನರು ತಮ್ಮೊಂದಿಗೆ ಕೇಳುವರು. ತಾವು ಹೇಳಿರಿ: 'ಅದರ ಅರಿವಿರುವುದು ಅಲ್ಲಾಹುವಿನ ಬಳಿ ಮಾತ್ರವಾಗಿದೆ'. (ಅದರ ಕುರಿತು) ತಮಗೆ ತಿಳಿಸಿಕೊಡುವಂತಹದು ಏನಿದೆ? ಅಂತ್ಯಘಳಿಗೆಯು ಸನಿಹದಲ್ಲೇ ಇರಬಹುದು!

إِنَّ ٱللَّهَ لَعَنَ ٱلْكَـٰفِرِينَ وَأَعَدَّ لَهُمْ سَعِيرًا ﴿٦٤﴾

**64.** ಖಂಡಿತವಾಗಿಯೂ ಅಲ್ಲಾಹು ಸತ್ಯನಿಷೇಧಿಗಳನ್ನು ಶಪಿಸಿರುವನು ಮತ್ತು ಅವರಿಗೆ ಧಗಧಗಿಸುವ ನರಕಾಗ್ನಿಯನ್ನು ಸಿದ್ಧಗೊಳಿಸಿರುವನು.

خَـٰلِدِينَ فِيهَآ أَبَدًا ۖ لَّا يَجِدُونَ وَلِيًّا وَلَا نَصِيرًا ﴿٦٥﴾

**65.** ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅವರು ಯಾವುದೇ ರಕ್ಷಕನನ್ನಾಗಲಿ ಸಹಾಯಕನನ್ನಾಗಲಿ ಕಾಣಲಾರರು.

يَوْمَ تُقَلَّبُ وُجُوهُهُمْ فِى ٱلنَّارِ يَقُولُونَ يَـٰلَيْتَنَآ أَطَعْنَا ٱللَّهَ وَأَطَعْنَا ٱلرَّسُولَا۠ ﴿٦٦﴾

**66.** ಅವರ ಮುಖಗಳನ್ನು ನರಕಾಗ್ನಿಯಲ್ಲಿ ಬುಡಮೇಲುಗೊಳಿಸಲಾಗುವ ದಿನ! ಅವರು ಹೇಳುವರು: 'ನಾವು ಅಲ್ಲಾಹು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸಿದ್ದರೆ ಎಷ್ಟು ಚೆನ್ನಾಗಿತ್ತು!'

وَقَالُوا۟ رَبَّنَآ إِنَّآ أَطَعْنَا سَادَتَنَا وَكُبَرَآءَنَا

**67-68.** ಅವರು ಹೇಳುವರು: 'ಓ ನಮ್ಮ ರಬ್! ನಾವು ನಮ್ಮ ನಾಯಕರನ್ನು ಮತ್ತು

1 ಯಾವ ಕಾರಣವೂ ಇಲ್ಲದೆ ಅನ್ಯಾಯವಾಗಿ ಸತ್ಯವಿಶ್ವಾಸಿಗಳನ್ನು ಹಿಂಸಿಸುವವರ ಮೇಲೆ ನಿರ್ದಾಕ್ಷಿಣ್ಯ ಕ್ರಮ ಕೈಗೊಳ್ಳುವುದು ಅಲ್ಲಾಹುವಿನ ಕ್ರಮವಾಗಿದೆ.

فَأَضَلُّونَا ٱلسَّبِيلَا ﴿٦٧﴾ رَبَّنَآ ءَاتِهِمۡ ضِعۡفَيۡنِ مِنَ ٱلۡعَذَابِ وَٱلۡعَنۡهُمۡ لَعۡنٗا كَبِيرٗا ﴿٦٨﴾

ಹಿರಿಯರನ್ನು ಅನುಸರಿಸಿದೆವು. ಅವರು ನಮ್ಮನ್ನು ಪಥಭ್ರಷ್ಟಗೊಳಿಸಿದರು. ಓ ನಮ್ಮ ರಬ್! ಅವರಿಗೆ ಇಮ್ಮಡಿ ಶಿಕ್ಷೆಯನ್ನು ನೀಡು ಮತ್ತು ಅವರನ್ನು ಉಗ್ರವಾಗಿ ಶಪಿಸು’.

يَٰٓأَيُّهَا ٱلَّذِينَ ءَامَنُواْ لَا تَكُونُواْ كَٱلَّذِينَ ءَاذَوۡاْ مُوسَىٰ فَبَرَّأَهُ ٱللَّهُ مِمَّا قَالُواْۚ وَكَانَ عِندَ ٱللَّهِ وَجِيهٗا ﴿٦٩﴾

69. ಓ ಸತ್ಯವಿಶ್ವಾಸಿಗಳೇ! ಮೂಸಾರಿಗೆ ಕಿರುಕುಳ ಕೊಟ್ಟವರಂತೆ ನೀವಾಗದಿರಿ.[1] ತರುವಾಯ ಅಲ್ಲಾಹು ಅವರು ಹೇಳಿದವುಗಳಿಂದ ಮೂಸಾರನ್ನು ಮುಕ್ತಗೊಳಿಸಿದನು.[2] ಅವರು (ಮೂಸಾ) ಅಲ್ಲಾಹುವಿನ ಬಳಿ ಉತ್ಕೃಷ್ಟರಾಗಿರುವರು.

يَٰٓأَيُّهَا ٱلَّذِينَ ءَامَنُواْ ٱتَّقُواْ ٱللَّهَ وَقُولُواْ قَوۡلٗا سَدِيدٗا ﴿٧٠﴾

70. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಸರಿಯಾದ ಮಾತುಗಳನ್ನಾಡಿರಿ.

يُصۡلِحۡ لَكُمۡ أَعۡمَٰلَكُمۡ وَيَغۡفِرۡ لَكُمۡ ذُنُوبَكُمۡۗ وَمَن يُطِعِ ٱللَّهَ وَرَسُولَهُۥ فَقَدۡ فَازَ فَوۡزًا عَظِيمًا ﴿٧١﴾

71. ಹಾಗಾದರೆ ಅವನು ನಿಮಗೆ ನಿಮ್ಮ ಕರ್ಮಗಳನ್ನು ಸುಧಾರಣೆ ಮಾಡುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಯಾರು ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸುವನೋ ಅವನು ಮಹಾ ವಿಜಯವನ್ನು ಗಳಿಸಿರುವನು.

إِنَّا عَرَضۡنَا ٱلۡأَمَانَةَ عَلَى ٱلسَّمَٰوَٰتِ وَٱلۡأَرۡضِ وَٱلۡجِبَالِ فَأَبَيۡنَ أَن يَحۡمِلۡنَهَا وَأَشۡفَقۡنَ مِنۡهَا وَحَمَلَهَا ٱلۡإِنسَٰنُۖ إِنَّهُۥ كَانَ ظَلُومٗا جَهُولٗا ﴿٧٢﴾

72. ಖಂಡಿತವಾಗಿಯೂ ನಾವು ಆ ಅಮಾನತ್ತನ್ನು (ಹೊಣೆಗಾರಿಕೆಯನ್ನು) ಆಕಾಶಗಳ, ಭೂಮಿಯ ಮತ್ತು ಪರ್ವತಗಳ ಮುಂದೆ ತೋರಿಸಿದೆವು. ಆದರೆ ಅದನ್ನು ವಹಿಸಿಕೊಳ್ಳಲು ಅವು ನಿರಾಕರಿಸಿದವು ಮತ್ತು ಅದರ ಬಗ್ಗೆ ಅವು ಭಯಪಟ್ಟವು. ಆದರೆ ಮನುಷ್ಯನು ಅದನ್ನು ವಹಿಸಿಕೊಂಡನು. ಖಂಡಿತವಾಗಿಯೂ

1 ಪ್ರವಾದಿ(ﷺ)ರವರ ನಡೆನುಡಿಗಳಲ್ಲಿ ಆಕ್ಷೇಪಾರ್ಹ ಅಂಶಗಳನ್ನು ಹುಡುಕುವ ಕಪಟವಿಶ್ವಾಸಿಗಳ ಸ್ವಭಾವವನ್ನು ಸತ್ಯವಿಶ್ವಾಸಿಗಳು ಅನುಸರಿಸಕೂಡದು ಎಂದು ಎಚ್ಚರಿಸಲಾಗಿದೆ.

2 ಪ್ರವಾದಿ ಮೂಸಾ(عَلَيْهِ ٱلسَّلَامُ)ರವರಿಗೆ ಕೆಲವು ದೈಹಿಕ ನ್ಯೂನತೆಗಳಿವೆಯೆಂದು ಜನರು ಅಪಪ್ರಚಾರ ಮಾಡಿದರು. ಅವರು ಒಂಟಿಯಾಗಿ ಸ್ನಾನ ಮಾಡುತ್ತಿರುವಾಗ ತಮ್ಮ ಉಡುಪನ್ನು ಕಳಚಿಟ್ಟ ಕಲ್ಲು ಅದರೊಂದಿಗೆ ಓಡುವಂತೆ ಮಾಡುವ ಮೂಲಕ ಅಲ್ಲಾಹು ಆ ತಪ್ಪು ಕಲ್ಪನೆಯನ್ನು ಹೋಗಲಾಡಿಸಿದನೆಂದು ಪ್ರವಾದಿ(ﷺ)ರವರು ಈ ಆಯತ್ತನ್ನು ವಿಶದೀಕರಿಸಿದ್ದಾಗಿ ಬುಖಾರಿ(3404)ರಲ್ಲಿ ಕಾಣಬಹುದು.

ಮನುಷ್ಯನು ಮಹಾ ಅಕ್ರಮಿಯೂ ಅವಿವೇಕಿಯೂ ಆಗಿರುವನು.[1]

73. ಕಪಟವಿಶ್ವಾಸಿಗಳನ್ನು ಮತ್ತು ಕಪಟವಿಶ್ವಾಸಿನಿಯರನ್ನು, ಬಹುದೇವವಿಶ್ವಾಸಿಗಳನ್ನು ಮತ್ತು ಬಹುದೇವ ವಿಶ್ವಾಸಿನಿಯರನ್ನು ಅಲ್ಲಾಹು ಶಿಕ್ಷಿಸುವ ಸಲುವಾಗಿ. ಸತ್ಯವಿಶ್ವಾಸಿಗಳ ಮತ್ತು ಸತ್ಯವಿಶ್ವಾಸಿನಿಯರ ಪಶ್ಚಾತ್ತಾಪವನ್ನು ಅಲ್ಲಾಹು ಸ್ವೀಕರಿಸುವ ಸಲುವಾಗಿ.[2] ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

لِّيُعَذِّبَ ٱللَّهُ ٱلْمُنَٰفِقِينَ وَٱلْمُنَٰفِقَٰتِ وَٱلْمُشْرِكِينَ وَٱلْمُشْرِكَٰتِ وَيَتُوبَ ٱللَّهُ عَلَى ٱلْمُؤْمِنِينَ وَٱلْمُؤْمِنَٰتِ ۗ وَكَانَ ٱللَّهُ غَفُورًا رَّحِيمًا ﴿٧٣﴾

1 ಈ ಸೂಕ್ತಿಯಲ್ಲಿ ಮನುಷ್ಯರ ಮತ್ತು ಇತರ ಸೃಷ್ಟಿಗಳ ನಡುವೆಯಿರುವ ಅಂತರದ ಕುರಿತು ಸೂಚ್ಯವಾಗಿ ತಿಳಿಸಲಾಗಿದೆ. ಬೃಹತ್ ಆಕಾಶಕಾಯಗಳಿಗಾಗಲಿ, ಭೂಮಿಗಾಗಲಿ, ಅತ್ಯುನ್ನತ ಪರ್ವತಗಳಿಗಾಗಲಿ ಈ ಅಮಾನತ್ (ಹೊಣೆಗಾರಿಕೆ) ಯನ್ನು ವಹಿಸಿಕೊಳ್ಳಲು ಸಾಧ್ಯವಿಲ್ಲ. ಅಂದರೆ ಅವುಗಳಿಗೆ ಅಲ್ಲಾಹು ನಿಶ್ಚಯಿಸಿದ ಪ್ರಕೃತಿ ನಿಯಮಗಳಿಗೆ ವಿಧೇಯವಾಗಿರಲು ಮಾತ್ರ ಸಾಧ್ಯ. ವಿಶ್ವ ವ್ಯವಸ್ಥೆಯಲ್ಲಿ ಅವು ವಹಿಸಬೇಕಾದ ಪಾತ್ರವನ್ನು ಸ್ವಯಂ ನಿಶ್ಚಯಿಸಲು ಅವುಗಳಿಗೆ ಅವಕಾಶವಿಲ್ಲ. ಆದರೆ ಮನುಷ್ಯನು ಹಾಗಲ್ಲ. ಅವನಿಗೆ ಒಂದು ಹಂತದವರೆಗೆ ಪ್ರಕೃತಿಯ ಮೇಲೆ ಆಧಿಪತ್ಯವನ್ನು ಸ್ಥಾಪಿಸುವ ಸ್ವಾತಂತ್ರ್ಯವನ್ನು ನೀಡಲಾಗಿದೆ. ಸ್ವತಂತ್ರ ಕರ್ಮಗಳ ಮೂಲಕ ತನ್ನ ವಿಧಿನಿಯತಿಯನ್ನು ನಿರ್ಧರಿಸುವ ಅವಕಾಶವನ್ನು ಅವನಿಗೆ ನೀಡಲಾಗಿದೆ. ವಿವೇಕಮತಿಗಳಾದ ಜನರು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಗೆಲುವು ಸಾಧಿಸುತ್ತಾರೆ. ಆದರೆ ಅದಕ್ಕೆ ಇನ್ನೊಂದು ಮಗ್ಗುಲು ಇದೆ. ಅಂದರೆ ಅವಿವೇಕ ಮತ್ತು ಅನ್ಯಾಯ ಮಾಡುವ ತ್ವರೆ. ಅದನ್ನು ಮೆಟ್ಟಿನಿಲ್ಲುವ ಸಾಮರ್ಥ್ಯದ ಮೇಲೆ ಮನುಷ್ಯರ ಗೆಲುವು ಮತ್ತು ಮೋಕ್ಷವು ಅವಲಂಬಿತವಾಗಿವೆ.

2 ಅಮಾನತ್ ಅಥವಾ ಹೊಣೆಗಾರಿಕೆಯನ್ನು ವಹಿಸಿಕೊಂಡು ನಿಭಾಯಿಸುವ ಶಕ್ತಿಯನ್ನು ಅಲ್ಲಾಹು ಮನುಷ್ಯರಿಗೆ ವೃಥಾ ನೀಡಿಲ್ಲ. ಆ ಶಕ್ತಿಯನ್ನು ಮನುಷ್ಯನು ಯಾವುದಕ್ಕಾಗಿ ಬಳಸುತ್ತಾನೆ ಮತ್ತು ಹೇಗೆ ವಿನಿಯೋಗಿಸುತ್ತಾನೆ ಎಂಬುದನ್ನು ವೀಕ್ಷಿಸಿ ತಕ್ಕ ಪ್ರತಿಫಲವನ್ನು ನೀಡುವ ನಿರ್ಧಾರದ ಆಧಾರದಲ್ಲಾಗಿದೆ.

## ಸಬಅ್[1]

## سُورَةُ سَبَإٍ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 54

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವುಗಳು ಯಾರದ್ದಾಗಿವೆಯೋ ಆ ಅಲ್ಲಾಹುವಿಗೆ ಸ್ತುತಿ. ಪರಲೋಕದಲ್ಲೂ ಅವನಿಗೇ ಸ್ತುತಿ. ಅವನು ಯುಕ್ತಿಪೂರ್ಣನೂ, ಸೂಕ್ಷ್ಮ ಜ್ಞಾನಿಯೂ ಆಗಿರುವನು.

ٱلۡحَمۡدُ لِلَّهِ ٱلَّذِي لَهُۥ مَا فِي ٱلسَّمَٰوَٰتِ وَمَا فِي ٱلۡأَرۡضِ وَلَهُ ٱلۡحَمۡدُ فِي ٱلۡأٓخِرَةِۚ وَهُوَ ٱلۡحَكِيمُ ٱلۡخَبِيرُ ١

2. ಭೂಮಿಯನ್ನು ಪ್ರವೇಶಿಸುವ, ಅದರಿಂದ ಹೊರಬರುವ, ಆಕಾಶದಿಂದ ಇಳಿಯುವ ಮತ್ತು ಅದರಲ್ಲಿ ಏರಿ ಹೋಗುವ ವಸ್ತುಗಳನ್ನು ಅವನು ಅರಿಯುವನು. ಅವನು ಅಪಾರ ಕರುಣೆಯುಳ್ಳವನೂ, ಅತ್ಯಧಿಕ ಕ್ಷಮಿಸುವವನೂ ಆಗಿರುವನು.

يَعۡلَمُ مَا يَلِجُ فِي ٱلۡأَرۡضِ وَمَا يَخۡرُجُ مِنۡهَا وَمَا يَنزِلُ مِنَ ٱلسَّمَآءِ وَمَا يَعۡرُجُ فِيهَاۚ وَهُوَ ٱلرَّحِيمُ ٱلۡغَفُورُ ٢

3. 'ಆ ಅಂತ್ಯಘಳಿಗೆಯು ನಮ್ಮ ಬಳಿಗೆ ಬರಲಾರದು' ಎಂದು ಸತ್ಯನಿಷೇಧಿಗಳು ಹೇಳಿದರು. ಹೇಳಿರಿ: 'ಅಲ್ಲ, ನನ್ನ ರಬ್‌ನ ಮೇಲಾಣೆ! ಅದು ನಿಮ್ಮ ಬಳಿಗೆ ಬಂದೇ ಬರುವುದು; ಅಗೋಚರ ವಿಷಯಗಳನ್ನು ಅರಿಯುವವನು (ಆ ರಬ್). ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ಒಂದು ಅಣುವಿನ ಗಾತ್ರದಲ್ಲಿರುವ ಅಥವಾ ಅದಕ್ಕಿಂತ ಚಿಕ್ಕದು ಅಥವಾ ದೊಡ್ಡದಾಗಿರುವ ಯಾವುದೂ ಅವನಿಂದ ಮರೆಯಾಗಲಾರದು. ಸ್ಪಷ್ಟವಾದ ಒಂದು ಗ್ರಂಥದಲ್ಲಿ ಒಳಪಡದಿರುವಂತಹ ಯಾವುದೂ ಇಲ್ಲ.

وَقَالَ ٱلَّذِينَ كَفَرُواْ لَا تَأۡتِينَا ٱلسَّاعَةُۖ قُلۡ بَلَىٰ وَرَبِّي لَتَأۡتِيَنَّكُمۡ عَٰلِمِ ٱلۡغَيۡبِۖ لَا يَعۡزُبُ عَنۡهُ مِثۡقَالُ ذَرَّةٖ فِي ٱلسَّمَٰوَٰتِ وَلَا فِي ٱلۡأَرۡضِ وَلَآ أَصۡغَرُ مِن ذَٰلِكَ وَلَآ أَكۡبَرُ إِلَّا فِي كِتَٰبٖ مُّبِينٖ ٣

4. ಅದು ವಿಶ್ವಾಸವಿಟ್ಟವರಿಗೆ ಮತ್ತು ಸತ್ಕರ್ಮಿಗಳಿಗೆ ಅವನು ಪ್ರತಿಫಲವನ್ನು ನೀಡುವ ಸಲುವಾಗಿದೆ. ಅವರಿಗೆ ಪಾಪಮುಕ್ತಿಯೂ ಗೌರವಾನ್ವಿತ ಅನ್ನಾಧಾರವೂ ಇರುವುದು.

لِّيَجۡزِيَ ٱلَّذِينَ ءَامَنُواْ وَعَمِلُواْ ٱلصَّٰلِحَٰتِۚ أُوْلَٰٓئِكَ لَهُم مَّغۡفِرَةٞ وَرِزۡقٞ كَرِيمٞ ٤

1 15ನೇ ಸೂಕ್ತಿಯಲ್ಲಿ ಸಬಅ್ ದೇಶದ ಕುರಿತು ವಿವರಿಸಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

**5.** (ನಮ್ಮನ್ನು) ಸೋಲಿಸುವ ಸಲುವಾಗಿ ಯಾರು ನಮ್ಮ ದೃಷ್ಟಾಂತಗಳನ್ನು ವಿರೋಧಿಸಲು ಪ್ರಯತ್ನಿಸುವವರೋ ಅವರಿಗೆ ಯಾತನಾಮಯವಾದ ಕಠಿಣ ಶಿಕ್ಷೆಯಿದೆ.

وَٱلَّذِينَ سَعَوۡ فِيٓ ءَايَٰتِنَا مُعَٰجِزِينَ
أُوْلَٰٓئِكَ لَهُمۡ عَذَابٞ مِّن رِّجۡزٍ أَلِيمٞ ٥

**6.** ತಮಗೆ ತಮ್ಮ ರಬ್‌ನ ವತಿಯಿಂದ ಅವತೀರ್ಣಗೊಂಡಿರುವುದು ಸತ್ಯವಾಗಿದೆ ಮತ್ತು ಅದು ಪ್ರತಾಪಶಾಲಿಯೂ, ಸ್ತುತ್ಯರ್ಹನೂ ಆಗಿರುವ ಅಲ್ಲಾಹುವಿನ ಮಾರ್ಗದೆಡೆಗೆ ಮುನ್ನಡೆಸುತ್ತದೆ ಎಂದು ಜ್ಞಾನ ನೀಡಲ್ಪಟ್ಟವರು ಕಾಣುತ್ತಿರುವರು.

وَيَرَى ٱلَّذِينَ أُوتُواْ ٱلۡعِلۡمَ ٱلَّذِيٓ أُنزِلَ
إِلَيۡكَ مِن رَّبِّكَ هُوَ ٱلۡحَقَّ وَيَهۡدِيٓ إِلَىٰ
صِرَٰطِ ٱلۡعَزِيزِ ٱلۡحَمِيدِ ٦

**7.** ಸತ್ಯನಿಷೇಧಿಗಳು (ವ್ಯಂಗ್ಯವಾಗಿ) ಹೇಳಿದರು: ‘ನೀವು ಸಂಪೂರ್ಣವಾಗಿ ಚಿಂದಿಯಾದ ಬಳಿಕವೂ ನಿಮ್ಮನ್ನು ಹೊಸದಾಗಿ ಸೃಷ್ಟಿಸಲಾಗುವುದು ಎಂದು ತಿಳಿಸಿ ಕೊಡುವ ಒಬ್ಬ ವ್ಯಕ್ತಿಯ ಕುರಿತು ನಾವು ನಿಮಗೆ ತಿಳಿಸಿ ಕೊಡಲೇ?’

وَقَالَ ٱلَّذِينَ كَفَرُواْ هَلۡ نَدُلُّكُمۡ عَلَىٰ
رَجُلٖ يُنَبِّئُكُمۡ إِذَا مُزِّقۡتُمۡ كُلَّ مُمَزَّقٍ
إِنَّكُمۡ لَفِي خَلۡقٖ جَدِيدٍ ٧

**8.** ಅವನು ಅಲ್ಲಾಹುವಿನ ಮೇಲೆ ಸುಳ್ಳಾರೋಪಿಸಿರುವನೇ? ಅಥವಾ ಅವನಿಗೆ ಮತಿಭ್ರಾಂತಿಯಿದೆಯೇ? ಅಲ್ಲ, ಪರಲೋಕದಲ್ಲಿ ವಿಶ್ವಾಸವಿಡದವರು ಶಿಕ್ಷೆಯಲ್ಲಿ ಮತ್ತು ವಿದೂರ ಪಥಭ್ರಷ್ಟತೆಯಲ್ಲಿರುವರು.

أَفۡتَرَىٰ عَلَى ٱللَّهِ كَذِبًا أَم بِهِۦ جِنَّةُۢۗ بَلِ
ٱلَّذِينَ لَا يُؤۡمِنُونَ بِٱلۡأٓخِرَةِ فِي ٱلۡعَذَابِ
وَٱلضَّلَٰلِ ٱلۡبَعِيدِ ٨

**9.** ಅವರ ಮುಂದಿನಿಂದಲೂ, ಹಿಂದಿನಿಂದಲೂ ಇರುವಂತಹ ಆಕಾಶ ಮತ್ತು ಭೂಮಿಯೆಡೆಗೆ ಅವರು ನೋಡುವುದಿಲ್ಲವೇ? ನಾವು ಇಚ್ಛಿಸಿದರೆ ಅವರನ್ನು ಭೂಮಿಯಲ್ಲಿ ಹುದುಗಿಸುತ್ತಿದ್ದೆವು ಅಥವಾ ಅವರ ಮೇಲೆ ಆಕಾಶದಿಂದ ತುಂಡುಗಳನ್ನು ಬೀಳಿಸುತ್ತಿದ್ದೆವು. ಅಲ್ಲಾಹುವಿನೆಡೆಗೆ (ವಿನಮ್ರತೆಯಿಂದ) ಮರಳುವ ಯಾವ ದಾಸನಿಗೂ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತವಿದೆ.

أَفَلَمۡ يَرَوۡاْ إِلَىٰ مَا بَيۡنَ أَيۡدِيهِمۡ وَمَا
خَلۡفَهُم مِّنَ ٱلسَّمَآءِ وَٱلۡأَرۡضِۚ إِن نَّشَأۡ
نَخۡسِفۡ بِهِمُ ٱلۡأَرۡضَ أَوۡ نُسۡقِطۡ عَلَيۡهِمۡ
كِسَفٗا مِّنَ ٱلسَّمَآءِۚ إِنَّ فِي ذَٰلِكَ لَأٓيَةٗ لِّكُلِّ
عَبۡدٖ مُّنِيبٖ ٩

**10.** ಖಂಡಿತವಾಗಿಯೂ ದಾವೂದ್‌ರಿಗೆ ನಾವು ನಮ್ಮ ವತಿಯ ಅನುಗ್ರಹವನ್ನು ದಯಪಾಲಿಸಿದೆವು. (ನಾವು ಆದೇಶಿಸಿದೆವು): ‘ಓ ಪರ್ವತಗಳೇ!

۞وَلَقَدۡ ءَاتَيۡنَا دَاوُۥدَ مِنَّا فَضۡلٗاۖ يَٰجِبَالُ
أَوِّبِي مَعَهُۥ وَٱلطَّيۡرَۖ وَأَلَنَّا لَهُ ٱلۡحَدِيدَ ١٠

ನೀವು ಆತನೊಂದಿಗೆ (ಸ್ತೋತ್ರಗಳನ್ನು) ಹೇಳಿರಿ. ಓ ಹಕ್ಕಿಗಳೇ! ನೀವೂ ಸಹ.[1] ನಾವು ಆತನಿಗೆ ಕಬ್ಬಿಣವನ್ನು ಮೆದುವಾಗಿಸಿಕೊಟ್ಟೆವು.[2]

أَنِ ٱعۡمَلۡ سَٰبِغَٰتٖ وَقَدِّرۡ فِي ٱلسَّرۡدِۖ وَٱعۡمَلُواْ صَٰلِحًاۖ إِنِّي بِمَا تَعۡمَلُونَ بَصِيرٞ ﴿١١﴾

11. ಪೂರ್ಣ ಗಾತ್ರದ ಕವಚಗಳನ್ನು ನಿರ್ಮಿಸಿರಿ. ಅದರ ಕೊಂಡಿಗಳನ್ನು ಸರಿಯಾದ ಅಳತೆಯಲ್ಲಾಗಿಸಿರಿ. ನೀವೆಲ್ಲರೂ ಸತ್ಕರ್ಮವೆಸಗಿರಿ'[3] ಎಂದು (ನಾವು ಆದೇಶಿಸಿದೆವು). ಖಂಡಿತವಾಗಿಯೂ ನೀವು ಮಾಡುತ್ತಿರುವುದನ್ನು ನಾನು ವೀಕ್ಷಿಸುವವನಾಗಿರುವೆನು.

وَلِسُلَيۡمَٰنَ ٱلرِّيحَ غُدُوُّهَا شَهۡرٞ وَرَوَاحُهَا شَهۡرٞۖ وَأَسَلۡنَا لَهُۥ عَيۡنَ ٱلۡقِطۡرِۖ وَمِنَ ٱلۡجِنِّ مَن يَعۡمَلُ بَيۡنَ يَدَيۡهِ بِإِذۡنِ رَبِّهِۦۖ وَمَن يَزِغۡ مِنۡهُمۡ عَنۡ أَمۡرِنَا نُذِقۡهُ مِنۡ عَذَابِ ٱلسَّعِيرِ ﴿١٢﴾

12. ಸುಲೈಮಾನ್‌ರಿಗೆ ನಾವು ಗಾಳಿಯನ್ನು (ಅಧೀನಗೊಳಿಸಿಕೊಟ್ಟೆವು). ಅದರ ಪ್ರಭಾತ ಸಂಚಾರವು ಒಂದು ತಿಂಗಳ ದೂರವಾಗಿದೆ ಮತ್ತು ಅದರ ಸಂಧ್ಯಾ ಸಂಚಾರವು ಒಂದು ತಿಂಗಳ ದೂರವಾಗಿದೆ.[4] ಅವರಿಗೆ ನಾವು ಹಿತ್ತಾಳೆಯ ಒಂದು ಒರತೆಯನ್ನು ಹರಿಸಿಕೊಟ್ಟೆವು.[5] ಅವರ ರಬ್‌ನ ಅಪ್ಪಣೆ ಪ್ರಕಾರ ಅವರ ಎದುರು ಜಿನ್ನ್‌ಗಳ ಪೈಕಿ ಕೆಲವರು ಕೆಲಸ ಮಾಡುತ್ತಲೂ ಇದ್ದರು. ಅವರಲ್ಲಿ ಯಾರಾದರೂ ನಮ್ಮ ಅಪ್ಪಣೆಗೆ

---

1 21:79ರಲ್ಲೂ ಇದರ ಕುರಿತು ಪರಾಮರ್ಶಿಸಲಾಗಿದೆ. ಪರ್ವತಗಳು ಮತ್ತು ಹಕ್ಕಿಗಳು ಪ್ರವಾದಿ ದಾವೂದ್(عَلَيْهِ السَّلَامُ)ರೊಂದಿಗೆ ಸ್ತೋತ್ರಗೀತೆಗಳನ್ನು ಹಾಡುತ್ತಿದ್ದುದರ ಕುರಿತ ವಿವರಣೆಗಳು ಕುರ್‌ಆನ್‌ನಲ್ಲಿಲ್ಲ. ಅಲ್ಲಾಹು ಯಾವ ವಿಧದ ದೃಷ್ಟಾಂತವನ್ನು ತರಲೂ ಸಾಮರ್ಥ್ಯವುಳ್ಳವನಾಗಿದ್ದಾನೆ.

2 ಕಬ್ಬಿಣವು ಗಡುಸಾದ ಗಟ್ಟಿ ಲೋಹವಾಗಿದೆ. ಅದನ್ನು ಕಾಯಿಸಿ ಜನರು ಆಯುಧ ಮತ್ತು ಇತರ ಉಪಕರಣಗಳನ್ನು ನಿರ್ಮಿಸುತ್ತಾರೆ. ಕಬ್ಬಿಣವನ್ನು ಕಾಯಿಸಿ ಮೆದುಗೊಳಿಸುವ ಜ್ಞಾನವು ಅಲ್ಲಾಹು ದಾವೂದ್(عَلَيْهِ السَّلَامُ)ರಿಗೆ ನೀಡಿದ ಅನುಗ್ರಹಗಳ ಪೈಕಿ ಪ್ರಮುಖವಾಗಿದೆ. 21:80ರಲ್ಲೂ ಇದರ ಕುರಿತು ಪರಾಮರ್ಶೆಯಿದೆ.

3 ತಂತ್ರಜ್ಞಾನ ಮತ್ತು ಅದರ ಸಾಧನೆಯು ಅಲ್ಲಾಹುವಿನ ವರದಾನವಾಗಿದೆ. ಸತ್ಕರ್ಮಗಳನ್ನು ನಿರ್ವಹಿಸುವುದರ ಮೂಲಕ ಮನುಷ್ಯರು ಅದಕ್ಕೆ ಕೃತಜ್ಞತೆ ಸಲ್ಲಿಸಬೇಕಾಗಿದೆ.

4 ಪ್ರವಾದಿ ಸುಲೈಮಾನ್(عَلَيْهِ السَّلَامُ)ರಿಗೆ ಅವರ ಸಾಮ್ರಾಜ್ಯದ ಅತಿವಿದೂರ ಪ್ರದೇಶಗಳಿಗೆ ದಿನನಿತ್ಯ ಭೇಟಿ ನೀಡುವುದಕ್ಕಾಗಿ ಅಲ್ಲಾಹು ಗಾಳಿಯನ್ನು ವಾಹನವನ್ನಾಗಿ ಮಾಡಿಕೊಟ್ಟಿದ್ದನು. ಗಾಳಿಯನ್ನು ಬಳಸಿ ಅವರು ಸಂಚಾರ ಮಾಡಿದ ವಿಶದ ವಿವರಣೆಗಳು ಕುರ್‌ಆನ್‌ನಲ್ಲಿಲ್ಲ.

5 ಕಾಯಿಸಿದ ಹಿತ್ತಾಳೆಯ ಒಂದು ದೊಡ್ಡ ಸಂಗ್ರಹವನ್ನು ಅಲ್ಲಾಹು ಅವರ ನಿಯಂತ್ರಣಕ್ಕೆ ಕೊಟ್ಟಿದ್ದನು ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ.

ವಿರುದ್ಧವಾಗಿ ವರ್ತಿಸಿದರೆ ಅವನಿಗೆ ನಾವು ಧಗಧಗಿಸುವ ನರಕಾಗ್ನಿಯ ಶಿಕ್ಷೆಯನ್ನು ಸವಿಯುವಂತೆ ಮಾಡುವೆವು.

**13.** ಉನ್ನತ ಸೌಧಗಳು,(1) ಶಿಲ್ಪಗಳು, ಜಲಾಶಯದಂತಿರುವ ಬೋಗುಣಿಗಳು, ನೆಲದಲ್ಲಿ ದೃಢವಾಗಿ ನಿಲ್ಲಿಸಲಾಗಿರುವ ಅಡುಗೆ ಪಾತ್ರೆಗಳು ಇತ್ಯಾದಿ ಅವರಿಚ್ಛಿಸುವುದೆಲ್ಲವನ್ನೂ ಅವರು (ಜಿನ್ನ್‌ಗಳು) ಆತನಿಗೆ ನಿರ್ಮಿಸಿದ್ದರು. ಓ ದಾವೂದ್ ಕುಟುಂಬದವರೇ! ನೀವು ಕೃತಜ್ಞತಾಪೂರ್ವಕ ಕಾರ್ಯವೆಸಗಿರಿ. ನನ್ನ ದಾಸರಲ್ಲಿ ಸಂಪೂರ್ಣ ಕೃತಜ್ಞರು ವಿರಳರಾಗಿರುವರು.

يَعۡمَلُونَ لَهُۥ مَا يَشَآءُ مِن مَّحَٰرِيبَ
وَتَمَٰثِيلَ وَجِفَانٖ كَٱلۡجَوَابِ وَقُدُورٖ
رَّاسِيَٰتٍۚ ٱعۡمَلُوٓاْ ءَالَ دَاوُۥدَ شُكۡرٗاۚ
وَقَلِيلٞ مِّنۡ عِبَادِيَ ٱلشَّكُورُ ١٣

**14.** ನಾವು ಅವರ ಮೇಲೆ ಮರಣವನ್ನು ವಿಧಿಸಿದಾಗ ಅವರಿಗೆ (ಜಿನ್ನ್‌ಗಳಿಗೆ) ಅವರ ಮರಣದ ಕುರಿತು ತಿಳಿಸಿದ್ದು ಅವರ ಊರುಗೋಲನ್ನು ತಿನ್ನುತ್ತಿದ್ದ ಗೆದ್ದಲ ಹುಳುಗಳಾಗಿದ್ದವು.(2) ತರುವಾಯ ಅವರು ಬಿದ್ದಾಗ ನಮಗೆ ಅಗೋಚರ ವಿಷಯಗಳು ಅರಿಯುತ್ತಿದ್ದರೆ ಅಪಮಾನಕರವಾದ ಶಿಕ್ಷೆಯಲ್ಲಿ(3) ಕಳೆಯಬೇಕಾಗಿರಲಿಲ್ಲ ಎಂದು ಜಿನ್ನ್‌ಗಳಿಗೆ ಸ್ಪಷ್ಟವಾಯಿತು.

فَلَمَّا قَضَيۡنَا عَلَيۡهِ ٱلۡمَوۡتَ مَا دَلَّهُمۡ عَلَىٰ
مَوۡتِهِۦٓ إِلَّا دَآبَّةُ ٱلۡأَرۡضِ تَأۡكُلُ مِنسَأَتَهُۥۖ
فَلَمَّا خَرَّ تَبَيَّنَتِ ٱلۡجِنُّ أَن لَّوۡ كَانُواْ
يَعۡلَمُونَ ٱلۡغَيۡبَ مَا لَبِثُواْ فِي ٱلۡعَذَابِ
ٱلۡمُهِينِ ١٤

1 ಮಹಾರೀಬ್ ಎಂಬುದಕ್ಕೆ ಉನ್ನತ ಸೌಧಗಳು ಎಂದು ಅರ್ಥ ನೀಡಲಾಗಿದೆ. ಇದನ್ನು ಕೆಲವು ವ್ಯಾಖ್ಯಾನಕಾರರು ಮಸೀದಿಗಳು ಎಂದಿದ್ದಾರೆ. ಕಮಾನುಗಳೆಂದು ಹೇಳಿದವರೂ ಇದ್ದಾರೆ.

2 ಮನುಷ್ಯರಿಗೆ ಅರಿವಿಲ್ಲದ ಅನೇಕ ವಿಷಯಗಳನ್ನು ಅರಿಯಲು ಮತ್ತು ಮನುಷ್ಯ ಸಾಮರ್ಥ್ಯಕ್ಕೆ ಅತೀತವಾದ ಅನೇಕ ಕಾರ್ಯಗಳನ್ನು ಮಾಡಲು ತಮಗೆ ಸಾಮರ್ಥ್ಯವಿದೆಯೆಂದು ಜಿನ್ನ್‌ಗಳು ಭಾವಿಸಿದ್ದರು. ಅವರನ್ನು ಅಲ್ಲಾಹು ಸುಲೈಮಾನ್(عَلَيۡهِ ٱلسَّلَامُ)ರಿಗೆ ಅಧೀನಗೊಳಿಸಿಕೊಟ್ಟಿದ್ದನು. ಸುಲೈಮಾನ್(عَلَيۡهِ ٱلسَّلَامُ)ರವರು ಊರುಗೋಲನ್ನು ನೆಲಕ್ಕೂರಿ ನಿಂತು ಕೆಲಸದ ಮೇಲುಸ್ತುವಾರಿ ವಹಿಸುತ್ತಿರುವಾಗಲೇ ಅಲ್ಲಾಹು ಅವರನ್ನು ಮೃತಪಡಿಸಿದನು. ಆದರೆ ಅದನ್ನು ತಿಳಿಯಲು ಜಿನ್ನ್‌ಗಳಿಗೆ ಸಾಧ್ಯವಾಗಲಿಲ್ಲ. ಸುಲೈಮಾನ್(عَلَيۡهِ ٱلسَّلَامُ)ರವರು ನಮ್ಮನ್ನು ಗಮನಿಸುತ್ತಿದ್ದಾರೆಂದು ಭಾವಿಸಿ ಜಿನ್ನ್‌ಗಳು ಅವಿಶ್ರಾಂತವಾಗಿ ಕೆಲಸ ಮಾಡುತ್ತಿದ್ದರು. ಕೆಲವು ದಿನಗಳ ಬಳಿಕ ಸುಲೈಮಾನ್(عَلَيۡهِ ٱلسَّلَامُ)ರವರ ಊರುಗೋಲನ್ನು ಗೆದ್ದಲು ತಿಂದುದರಿಂದ ಅದು ತುಂಡಾಗಿ ಮೃತದೇಹವು ಮಗುಚಿಬಿದ್ದಾಗಲೇ ಜಿನ್ನ್‌ಗಳು ಅವರ ಮರಣದ ಕುರಿತು ಅರಿತುಕೊಂಡರು. ಇದು ಬೈತುಲ್ ಮುಕದ್ದಿಸ್‌ನ ಕೆಲಸವು ಸ್ಥಗಿತಗೊಳ್ಳದೆ ನಿರಾತಂಕವಾಗಿ ಮುಂದುವರಿಯಲು ಅಲ್ಲಾಹು ಮಾಡಿದ ಯೋಜನೆಯಾಗಿರಬಹುದು.

3 ನಿರ್ಮಾಣ ಕೆಲಸವನ್ನು ಅವಿಶ್ರಾಂತವಾಗಿ ಮತ್ತು ಬಲವಂತವಾಗಿ ಮಾಡಬೇಕಾಗಿ ಬಂದುದರಿಂದ ಜಿನ್ನ್‌ಗಳು ಅದನ್ನೊಂದು ಶಿಕ್ಷೆಯೆಂದು ಪರಿಗಣಿಸಿದ್ದರು.

15. ಖಂಡಿತವಾಗಿಯೂ ಸಬಅ್ ದೇಶದವರಿಗೆ ಅವರ ವಾಸಸ್ಥಳದಲ್ಲೇ ಒಂದು ದೃಷ್ಟಾಂತವಿತ್ತು. ಅಂದರೆ ಬಲಭಾಗದಲ್ಲಿ ಮತ್ತು ಎಡಭಾಗದಲ್ಲಿರುವ ಎರಡು ತೋಟಗಳು. 'ನಿಮ್ಮ ರಬ್ ದಯಪಾಲಿಸಿರುವ ಅನ್ನಾಧಾರದಿಂದ ತಿನ್ನಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ಉತ್ತಮವಾದ ದೇಶ ಮತ್ತು ಅತ್ಯಧಿಕ ಕ್ಷಮಿಸುವ ರಬ್!' (ಎಂದು ಅವರೊಂದಿಗೆ ಹೇಳಲಾಯಿತು.)

لَقَدْ كَانَ لِسَبَإٍ فِي مَسْكَنِهِمْ ءَايَةٌ جَنَّتَانِ عَن يَمِينٍ وَشِمَالٍ كُلُوا۟ مِن رِّزْقِ رَبِّكُمْ وَٱشْكُرُوا۟ لَهُۥ بَلْدَةٌ طَيِّبَةٌ وَرَبٌّ غَفُورٌ ١٥

16. ಆದರೆ ಅವರು ವಿಮುಖರಾದರು. ಆಗ ನಾವು ಅಣೆಕಟ್ಟಿನ ಜಲಪ್ರವಾಹವನ್ನು ಅವರೆಡೆಗೆ ಹರಿಸಿದೆವು.[1] ಅವರ ಆ ಎರಡು ತೋಟಗಳಿಗೆ ಬದಲಿಯಾಗಿ ಕಹಿ ಫಲಗಳು, ಪಕ್ಕೆಮರಗಳು ಮತ್ತು ಕೆಲವೊಂದು ಕತ್ತಿಕಾಯಿ ಮರಗಳುಳ್ಳ ಎರಡು ತೋಟಗಳನ್ನು ಅವರಿಗೆ ನೀಡಿದೆವು.[2]

فَأَعْرَضُوا۟ فَأَرْسَلْنَا عَلَيْهِمْ سَيْلَ ٱلْعَرِمِ وَبَدَّلْنَٰهُم بِجَنَّتَيْهِمْ جَنَّتَيْنِ ذَوَاتَىْ أُكُلٍ خَمْطٍ وَأَثْلٍ وَشَىْءٍ مِّن سِدْرٍ قَلِيلٍ ١٦

17. ಅದು ಅವರು ಕೃತಘ್ನತೆ ತೋರಿಸಿದ ಕಾರಣ ನಾವು ಅವರಿಗೆ ನೀಡಿದ ಪ್ರತಿಫಲವಾಗಿದೆ. ಮಹಾ ಕೃತಘ್ನತೆ ತೋರಿಸುವವನ ವಿರುದ್ಧವೇ ಹೊರತು ನಾವು ಶಿಕ್ಷಾಕ್ರಮ ಕೈಗೊಳ್ಳುವೆವೇ?

ذَٰلِكَ جَزَيْنَٰهُم بِمَا كَفَرُوا۟ وَهَلْ نُجَٰزِىٓ إِلَّا ٱلْكَفُورَ ١٧

18. ಅವರ (ಸಬಅ್ ದೇಶದವರ) ಮತ್ತು ನಾವು ಅನುಗ್ರಹಿಸಿದ (ಸಿರಿಯಾದ) ಗ್ರಾಮಗಳ ಮಧ್ಯೆ ಸ್ಪಷ್ಟವಾಗಿ ಕಾಣುವ ಅನೇಕ ಗ್ರಾಮಗಳನ್ನು ನಾವು ಉಂಟು ಮಾಡಿದೆವು. ಅಲ್ಲಿ ನಾವು ಯಾತ್ರಾ ತಂಗುದಾಣಗಳನ್ನು

وَجَعَلْنَا بَيْنَهُمْ وَبَيْنَ ٱلْقُرَى ٱلَّتِى بَٰرَكْنَا فِيهَا قُرًى ظَٰهِرَةً وَقَدَّرْنَا فِيهَا ٱلسَّيْرَ سِيرُوا۟ فِيهَا لَيَالِىَ وَأَيَّامًا ءَامِنِينَ ١٨

1 ಪ್ರಾಚೀನಕಾಲದಲ್ಲಿ ಯಮನ್‌ನಲ್ಲಿದ್ದ ಮಅ್‌ರಿಬ್ ಎಂಬ ಅಣೆಕಟ್ಟು ಧ್ವಂಸಗೊಂಡ ಕುರಿತು ಇಲ್ಲಿ ಪರಾಮರ್ಶಿಸಲಾಗಿದೆ. ಈ ಅಣೆಕಟ್ಟಿನಿಂದ ನೀರು ಹರಿಯುವ ಕಾಲುವೆಯ ಇಕ್ಕೆಲಗಳಲ್ಲಿದ್ದ ತೋಟಗಳು ಆ ಊರಿನ ಸಂಪತ್ಸಮೃದ್ಧಿಯ ಸಂಕೇತಗಳಾಗಿದ್ದವು. ಹೀಗಿರುವಾಗ ಮಹಾ ಪ್ರಳಯದಿಂದಾಗಿ ಆ ಅಣೆಕಟ್ಟು ಒಡೆದು ಕೃಷಿಗಳು ಸಂಪೂರ್ಣವಾಗಿ ನಾಶವಾದವು. ಕೃಷಿಕ್ಷೇತ್ರದಲ್ಲಿ ತಾವು ಗಳಿಸಿಕೊಂಡಿದ್ದ ಪ್ರಗತಿಯ ಹೆಸರಲ್ಲಿ ದುರಹಂಕಾರ ಪಟ್ಟಿದ್ದ ಸಬಅ್ ದೇಶದವರು ಅಲ್ಲಾಹುವಿನ ಶಿಕ್ಷೆಯ ಮುಂದೆ ಸಂಪೂರ್ಣ ಅಸಹಾಯಕರಾಗಿದ್ದರು.

2 ಆ ತೋಟಗಳಿದ್ದ ಸ್ಥಳಗಳು ಕಾಡುಮರಗಳು, ಮುಳ್ಳಿನ ಗಿಡಗಳು ಮತ್ತು ನಿರುಪಯುಕ್ತ ಗಿಡಮರಗಳು ಮಾತ್ರ ಬೆಳೆಯುವ ಪ್ರದೇಶವಾಗಿ ಮಾರ್ಪಟ್ಟಿತು.

ನಿರ್ಣಯಿಸಿದೆವು.[1] ರಾತ್ರಿಗಳಲ್ಲೂ ಹಗಲುಗಳಲ್ಲೂ ಅದರ ಮೂಲಕ ನಿರ್ಭೀತರಾಗಿ ಪ್ರಯಾಣ ಮಾಡಿರಿ' (ಎಂದು ನಾವು ಆದೇಶಿಸಿದೆವು).

**19.** ಆಗ ಅವರು ಹೇಳಿದರು: 'ಓ ನಮ್ಮ ರಬ್! ನಮ್ಮ ಯಾತ್ರಾ ತಂಗುದಾಣಗಳ ಮಧ್ಯೆ ಅಂತರವನ್ನುಂಟುಮಾಡು'.[2] ತರುವಾಯ ಅವರು ಸ್ವತಃ ತಮ್ಮೊಂದಿಗೇ ಅಕ್ರಮವೆಸಗಿದರು. ಕೊನೆಗೆ ನಾವು ಅವರನ್ನು ದಂತಕಥೆಗಳನ್ನಾಗಿ ಮಾಡಿದೆವು ಮತ್ತು ಅವರನ್ನು ಸಂಪೂರ್ಣವಾಗಿ ಚಿಂದಿಮಾಡಿದೆವು.[3] ಸಹನೆ ಪಾಲಿಸುವ ಮತ್ತು ಕೃತಜ್ಞತೆ ಸಲ್ಲಿಸುವ ಪ್ರತಿಯೊಬ್ಬರಿಗೂ ಖಂಡಿತವಾಗಿಯೂ ಅದರಲ್ಲಿ ದೃಷ್ಟಾಂತಗಳಿವೆ.

فَقَالُواْ رَبَّنَا بَٰعِدۡ بَيۡنَ أَسۡفَارِنَا وَظَلَمُوٓاْ أَنفُسَهُمۡ فَجَعَلۡنَٰهُمۡ أَحَادِيثَ وَمَزَّقۡنَٰهُمۡ كُلَّ مُمَزَّقٍۚ إِنَّ فِي ذَٰلِكَ لَأٓيَٰتٖ لِّكُلِّ صَبَّارٖ شَكُورٖ ١٩

**20.** ಅವರ ಮೇಲಿರುವ ತನ್ನ ಗುಮಾನಿಯು ಸರಿಯಾಗಿತ್ತೆಂದು ಇಬ್ಲೀಸ್ ಸಾಬೀತುಪಡಿಸಿದನು.[4] ಅವರು ಅವನನ್ನು

وَلَقَدۡ صَدَّقَ عَلَيۡهِمۡ إِبۡلِيسُ ظَنَّهُۥ فَٱتَّبَعُوهُ إِلَّا فَرِيقٗا مِّنَ ٱلۡمُؤۡمِنِينَ ٢٠

1 ಪ್ರಾಚೀನ ಅರೇಬಿಯಾದಲ್ಲಿ ಯಮನ್‌ನಿಂದ ಸಿರಿಯಾದವರೆಗಿದ್ದ ವಾಣಿಜ್ಯ ಹೆದ್ದಾರಿಯು (ಕಾರವನ್ ರೂಟ್) ಅತ್ಯಂತ ಪ್ರಮುಖವಾಗಿತ್ತು. ಯಮನಿನ ಬಂದರುಗಳು ಅರಬ್ ದೇಶಗಳನ್ನು ಪೌರಾತ್ಯದೇಶಗಳೊಂದಿಗೆ ಸಂಪರ್ಕಿಸಿದ್ದವು. ಯಮನ್ ಮತ್ತು ಸಿರಿಯಾದ ಮಧ್ಯೆ ಓಯಸಿಸ್‌ಗಳು ಮತ್ತು ಯಾತ್ರಿಕರಿಗೆ ವಿಶ್ರಾಂತಿ ಪಡೆಯಲು ಅನೇಕ ತಂಗುದಾಣಗಳಿದ್ದವು. ಈ ವಿಶ್ರಾಂತಿಗೃಹಗಳೆಲ್ಲವೂ ಸಣ್ಣ ಸಣ್ಣ ವಾಣಿಜ್ಯ ಪಟ್ಟಣಗಳಾಗಿ ಮಾರ್ಪಟ್ಟಿದ್ದವು. ಈ ವಿಶ್ರಾಂತಿಗೃಹಗಳ ಮಧ್ಯೆ ಪರಸ್ಪರ ಹೆಚ್ಚು ಅಂತರಗಳಿಲ್ಲದಿದ್ದುದರಿಂದ ಯಮನ್ ಸಿರಿಯಾ ಹೆದ್ದಾರಿಯು ಅತ್ಯಂತ ಸುರಕ್ಷಿತವಾಗಿತ್ತು. ಯಮನ್ ನಿವಾಸಿಗಳ ವ್ಯಾಪಾರ ಪ್ರಗತಿಗೆ ಈ ಹೆದ್ದಾರಿಯು ಒಂದು ದೊಡ್ಡ ಕೊಡುಗೆಯನ್ನು ನೀಡಿತ್ತು.

2 ಜನರ ಹಿತಾಸಕ್ತಿಗಳಿಗಿಂತ ಮತ್ತು ಹೆದ್ದಾರಿಯ ಅಭಿವೃದ್ಧಿಗಿಂತ ಹೆಚ್ಚಾಗಿ ಅವರು ತಮ್ಮ ಸ್ವಾರ್ಥ ಹಿತಾಸಕ್ತಿಗಳಿಗೆ ಆದ್ಯತೆ ನೀಡಿದರು. ಏಡನ್–ಸಿರಿಯಾ ಹೆದ್ದಾರಿಯ ಎಲ್ಲ ವ್ಯಾಪಾರಗಳನ್ನೂ ತಮ್ಮ ಸ್ವಾಮ್ಯಕ್ಕೊಳಪಡಿಸಲು ಸಬಅ್ ನಿವಾಸಿಗಳು ಬಯಸಿದ್ದರು. ದಾರಿ ಮಧ್ಯೆಯಿರುವ ತಂಗುದಾಣಗಳ ಸಂಖ್ಯೆ ಕಡಿಮೆಯಾದರೆ ಮತ್ತು ಅವುಗಳ ಮಧ್ಯೆಯಿರುವ ಅಂತರವು ಹೆಚ್ಚಿದರೆ ಚಿಲ್ಲರೆ ವ್ಯಾಪಾರಿಗಳನ್ನು ಬದಿಗಿರಿಸಿ ಆ ವಾಣಿಜ್ಯ ಹೆದ್ದಾರಿ ಹಾಗೂ ತಂಗುದಾಣಗಳನ್ನು ತಮ್ಮ ಏಕಸ್ವಾಮ್ಯತೆಗೆ ತರಬಹುದೆಂದು ಅವರು ಲೆಕ್ಕಾಚಾರ ಹಾಕಿದ್ದರು.

3 ಮಅ್‌ರಿಬ್ ಅಣೆಕಟ್ಟು ಧ್ವಂಸಗೊಳ್ಳುವುದರೊಂದಿಗೆ ಯಮನ್‌ನ ಕೃಷಿಕ್ಷೇತ್ರವು ಅವನತಿ ಹೊಂದಿತು. ತಾತ್ಕಾಲಿಕ ಲಾಭವನ್ನು ಮಾತ್ರ ಉದ್ದೇಶಿಸಿ ರೂಪಿಸಿದರೂ ಅವರ ಯೋಜನೆಗಳು ವಾಣಿಜ್ಯ ಕ್ಷೇತ್ರದಲ್ಲಿ ಪ್ರತಿಕೂಲ ಪರಿಣಾಮವನ್ನುಂಟುಮಾಡಿದವು. ಹೀಗೆ ಅರೇಬಿಯಾದ ಯಮನ್ ಪ್ರತಾಪವು ಒಂದು ದಂತಕಥೆಯಾಗಿ ಮಾರ್ಪಟ್ಟಿತು. ಧರ್ಮ ಮತ್ತು ನ್ಯಾಯವನ್ನು ಕಡೆಗಣಿಸಿ ಬದುಕಿದ ಕಾರಣ ಅಲ್ಲಾಹು ಅವರಿಗೆ ನೀಡಿದ ಶಿಕ್ಷೆಯು ಅವರನ್ನು ಚಿಂದಿ ಚಿಂದಿಯಾಗಿಸಿತು.

4 ಅವರನ್ನು ಪಥಭ್ರಷ್ಟಗೊಳಿಸಬಹುದೆಂದು ಇಬ್ಲೀಸನಿಗಿದ್ದ ಗುಮಾನಿಯು ಸುಳ್ಳಾಗಲಿಲ್ಲ ಎಂದರ್ಥ.

ಅನುಸರಿಸಿದರು. ಸತ್ಯವಿಶ್ವಾಸಿಗಳಲ್ಲಿ ಸೇರಿದ ಒಂದು ಗುಂಪಿನ ಹೊರತು.

21. ಇಬ್ಲೀಸ್‌ಗೆ ಅವರ ಮೇಲೆ ಯಾವುದೇ ಅಧಿಕಾರವಿರಲಿಲ್ಲ. ಇದು ಪರಲೋಕದಲ್ಲಿ ವಿಶ್ವಾಸವಿಡುವವರನ್ನು ಅದರ ಬಗ್ಗೆ ಸಂಶಯ ತಾಳಿರುವವರ ಗುಂಪಿನಿಂದ ನಾವು ಬೇರ್ಪಡಿಸಿ ತಿಳಿಯುವುದಕ್ಕಾಗಿ ಮಾತ್ರವಾಗಿದೆ.(1) ತಮ್ಮ ರಬ್ ಪ್ರತಿಯೊಂದು ವಿಷಯವನ್ನೂ ವೀಕ್ಷಿಸುವವನಾಗಿರುವನು.

وَمَا كَانَ لَهُۥ عَلَيۡهِم مِّن سُلۡطَٰنٍ إِلَّا لِنَعۡلَمَ مَن يُؤۡمِنُ بِٱلۡأٓخِرَةِ مِمَّنۡ هُوَ مِنۡهَا فِي شَكّٖۗ وَرَبُّكَ عَلَىٰ كُلِّ شَيۡءٍ حَفِيظٞ ٢١

22. ತಾವು ಹೇಳಿರಿ: 'ಅಲ್ಲಾಹುವಿನ ಹೊರತು ನೀವು ವಾದಿಸುತ್ತಿರುವ ಎಲ್ಲರನ್ನೂ ಕರೆದು ಪ್ರಾರ್ಥಿಸಿರಿ. ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಒಂದು ಅಣುವಿನ ತೂಕದಷ್ಟು ಕೂಡ ಅವರು ತಮ್ಮ ಒಡೆತನದಲ್ಲಿರಿಸಿಕೊಂಡಿಲ್ಲ. ಅವೆರಡರಲ್ಲಿ ಅವರಿಗೆ ಯಾವ ಸಹಭಾಗಿತ್ವವೂ ಇಲ್ಲ. ಅವರ ಪೈಕಿ ಅವನಿಗೆ ಸಹಾಯಕರಾಗಿ ಯಾರೂ ಇಲ್ಲ'.

قُلِ ٱدۡعُواْ ٱلَّذِينَ زَعَمۡتُم مِّن دُونِ ٱللَّهِ لَا يَمۡلِكُونَ مِثۡقَالَ ذَرَّةٖ فِي ٱلسَّمَٰوَٰتِ وَلَا فِي ٱلۡأَرۡضِ وَمَا لَهُمۡ فِيهِمَا مِن شِرۡكٖ وَمَا لَهُۥ مِنۡهُم مِّن ظَهِيرٖ ٢٢

23. ಅವನು ಯಾರಿಗೆ ಅನುಮತಿ ನೀಡಿರುವನೋ ಅವರಿಗೇ ಹೊರತು ಅವನ ಬಳಿ ಶಿಫಾರಸ್ಸು ಪ್ರಯೋಜನವಾಗಲಾರದು.(2) ಕೊನೆಗೆ ಅವರ ಹೃದಯಗಳಿಂದ ಪರಿಭ್ರಾಂತಿಯು ದೂರವಾದಾಗ ಅವರು ಕೇಳುವರು: 'ನಿಮ್ಮ ರಬ್ ಏನು ಹೇಳಿರುವನು?'(3) ಅವರು

وَلَا تَنفَعُ ٱلشَّفَٰعَةُ عِندَهُۥٓ إِلَّا لِمَنۡ أَذِنَ لَهُۥۚ حَتَّىٰٓ إِذَا فُزِّعَ عَن قُلُوبِهِمۡ قَالُواْ مَاذَا قَالَ رَبُّكُمۡۖ قَالُواْ ٱلۡحَقَّۖ وَهُوَ ٱلۡعَلِيُّ ٱلۡكَبِيرُ ٢٣

1 ಮನುಷ್ಯರನ್ನು ದಾರಿಗೆಡಿಸುವ ಅಧಿಕಾರವನ್ನು ಅಲ್ಲಾಹು ಇಬ್ಲೀಸನಿಗೆ ನೀಡಿಲ್ಲ. ಜನರಿಗಿರುವ ವಿಶ್ವಾಸದಾರ್ಢ್ಯತೆಯನ್ನು ಮತ್ತು ಪ್ರಲೋಭನೆಯನ್ನು ಮೆಟ್ಟಿನಿಲ್ಲುವ ಅವರ ಸಾಮರ್ಥ್ಯವನ್ನು ಪರೀಕ್ಷಿಸಲು ಅಲ್ಲಾಹು ಒಂದು ಅವಕಾಶವನ್ನು ಸೃಷ್ಟಿ ಮಾಡುತ್ತಾನೆ ಎಂದು ಮಾತ್ರ.

2 ಅಲ್ಲಾಹುವಿನ ಬಳಿ ಶಿಫಾರಸ್ಸು ಫಲಪ್ರದವಾಗಬೇಕಾದರೆ ಶಿಫಾರಸ್ಸು ಮಾಡುವವನಿಗೆ ಅದಕ್ಕಿರುವ ಅನುಮತಿಯು ಅಲ್ಲಾಹುವಿನಿಂದ ಸಿಕ್ಕಿರಬೇಕು. ಯಾರ ಬಗ್ಗೆ ಶಿಫಾರಸ್ಸು ಮಾಡಬೇಕೆಂಬುದು ಕೂಡ ಅಲ್ಲಾಹುವಿನ ಅನುಮತಿಯನ್ನು ಅವಲಂಬಿಸಿದೆ.

3 ನ್ಯಾಯತೀರ್ಮಾನ ದಿನದಂದು ಮನುಷ್ಯರು ಮತ್ತು ಮಲಕ್‌ಗಳು ತಮ್ಮ ವಿಷಯದಲ್ಲಿ ಅಲ್ಲಾಹುವಿನ ತೀರ್ಪು ಏನೆಂದು ಅರಿಯದೆ ಭಯಭೀತಿಯಲ್ಲಿರುವರು. ತರುವಾಯ ಕರ್ಮಗಳ ವಿಚಾರಣೆ ನಡೆಸಿ ಸಜ್ಜನರನ್ನು ಸ್ವರ್ಗಕ್ಕೂ, ದುರ್ಜನರನ್ನು ನರಕಕ್ಕೂ ಕಳುಹಿಸಲು ಅಲ್ಲಾಹು ಆಜ್ಞಾಪಿಸುವುದರೊಂದಿಗೆ ಮಲಕ್‌ಗಳಿಗೆ ಮತ್ತು ಸತ್ಯವಿಶ್ವಾಸಿಗಳಿಗೆ ಸಮಾಧಾನವಾಗಲಿದೆ. ಆ ಸಂದರ್ಭದಲ್ಲಿ ಮಲಕ್‌ಗಳು ಪರಸ್ಪರ ಅಥವಾ ಮಲಕ್‌ಗಳು ಮತ್ತು ಸತ್ಯವಿಶ್ವಾಸಿಗಳು ಪರಸ್ಪರ ನಡೆಸುವ ಮಾತುಕತೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಉತ್ತರಿಸುವರು: 'ಸತ್ಯವನ್ನು (ಹೇಳಿರುವನು). ಅವನು ಉನ್ನತನೂ ಮಹಾನನೂ ಆಗಿರುವನು'.

24. ತಾವು ಕೇಳಿರಿ: 'ಆಕಾಶಗಳಿಂದ ಮತ್ತು ಭೂಮಿಯಿಂದ ನಿಮಗೆ ಅನ್ನಾಧಾರವನ್ನು ಒದಗಿಸುವವನು ಯಾರು?' ಹೇಳಿರಿ: 'ಅಲ್ಲಾಹುವಾಗಿರುವನು. ಖಂಡಿತವಾಗಿಯೂ ಸನ್ಮಾರ್ಗದಲ್ಲಿರುವವರು ಅಥವಾ ಸ್ಪಷ್ಟವಾದ ದುರ್ಮಾಗದಲ್ಲಿರುವವರು ಒಂದೋ ನಾವು ಇಲ್ಲವೇ ನೀವಾಗಿರುವಿರಿ'.

۞ قُلۡ مَن يَرۡزُقُكُم مِّنَ ٱلسَّمَٰوَٰتِ وَٱلۡأَرۡضِۖ قُلِ ٱللَّهُۖ وَإِنَّآ أَوۡ إِيَّاكُمۡ لَعَلَىٰ هُدًى أَوۡ فِي ضَلَٰلٖ مُّبِينٖ ٢٤

25. ತಾವು ಹೇಳಿರಿ: 'ನಾವು ಮಾಡಿರುವ ಪಾಪಗಳ ಕುರಿತು ನಿಮ್ಮೊಂದಿಗೆ ಪ್ರಶ್ನಿಸಲಾಗದು. ನೀವು ಮಾಡುತ್ತಿರುವುದರ ಕುರಿತು ನಮ್ಮೊಂದಿಗೂ ಪ್ರಶ್ನಿಸಲಾಗದು'.

قُل لَّا تُسۡـَٔلُونَ عَمَّآ أَجۡرَمۡنَا وَلَا نُسۡـَٔلُ عَمَّا تَعۡمَلُونَ ٢٥

26. ತಾವು ಹೇಳಿರಿ: 'ನಮ್ಮ ರಬ್ ನಮ್ಮನ್ನು ಪರಸ್ಪರ ಒಂದು ಗೂಡಿಸುವನು ಮತ್ತು ತರುವಾಯ ನಮ್ಮ ಮಧ್ಯೆ ಅವನು ಸತ್ಯದೊಂದಿಗೆ ತೀರ್ಪು ನೀಡುವನು. ಅವನು ಸರ್ವಜ್ಞನಾಗಿರುವ ತೀರ್ಪುಗಾರನಾಗಿರುವನು'.

قُلۡ يَجۡمَعُ بَيۡنَنَا رَبُّنَا ثُمَّ يَفۡتَحُ بَيۡنَنَا بِٱلۡحَقِّ وَهُوَ ٱلۡفَتَّاحُ ٱلۡعَلِيمُ ٢٦

27. ತಾವು ಹೇಳಿರಿ: 'ನೀವು ಅವನೊಂದಿಗೆ (ಅಲ್ಲಾಹುವಿನೊಂದಿಗೆ) ಸಹಭಾಗಿಗಳನ್ನಾಗಿ ಸೇರಿಸಿರುವವರನ್ನು ನನಗೊಮ್ಮೆ ತೋರಿಸಿಕೊಡಿರಿ. ಇಲ್ಲ! (ಅಂತಹ ಯಾವ ಸಹಭಾಗಿಯೂ ಇಲ್ಲ!) ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಾಗಿರುವನು'.

قُلۡ أَرُونِيَ ٱلَّذِينَ أَلۡحَقۡتُم بِهِۦ شُرَكَآءَۖ كَلَّاۚ بَلۡ هُوَ ٱللَّهُ ٱلۡعَزِيزُ ٱلۡحَكِيمُ ٢٧

28. ನಾವು ತಮ್ಮನ್ನು ಸಂಪೂರ್ಣ ಮನುಷ್ಯರೆಡೆಗೆ ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿಯೇ ಕಳುಹಿಸಿರುವೆವು. ಆದರೆ ಜನರ ಪೈಕಿ ಹೆಚ್ಚಿನವರೂ ಅರಿಯುವುದಿಲ್ಲ.

وَمَآ أَرۡسَلۡنَٰكَ إِلَّا كَآفَّةٗ لِّلنَّاسِ بَشِيرٗا وَنَذِيرٗا وَلَٰكِنَّ أَكۡثَرَ ٱلنَّاسِ لَا يَعۡلَمُونَ ٢٨

29. 'ನೀವು ಸತ್ಯವಂತರಾಗಿದ್ದರೆ ಈ ಎಚ್ಚರಿಕೆಯು (ನಿಜವಾಗುವುದು) ಯಾವಾಗ? ಎಂದು ಅವರು ಕೇಳುವರು.

وَيَقُولُونَ مَتَىٰ هَٰذَا ٱلۡوَعۡدُ إِن كُنتُمۡ صَٰدِقِينَ ٢٩

**30.** ಹೇಳಿರಿ: 'ನಿಮಗೆ ಒಂದು ನಿಶ್ಚಿತ ದಿನವಿದೆ. ಅದನ್ನು ಬಿಟ್ಟು ಒಂದು ಕ್ಷಣವೂ ಹಿಂದಕ್ಕೆ ಹೋಗಲು ಅಥವಾ ಮುಂದಕ್ಕೆ ಹೋಗಲು ನಿಮ್ಮಿಂದಾಗದು'

قُل لَّكُم مِّيعَادُ يَوۡمٖ لَّا تَسۡتَـٔۡخِرُونَ عَنۡهُ سَاعَةٗ وَلَا تَسۡتَقۡدِمُونَ ٣٠

**31.** 'ನಾವು ಈ ಕುರ್‌ಆನ್‌ನಲ್ಲಾಗಲಿ ಅಥವಾ ಇದಕ್ಕಿಂತ ಮುಂಚಿನ ಗ್ರಂಥಗಳಲ್ಲಾಗಲಿ ಎಂದೂ ವಿಶ್ವಾಸವಿಡಲಾರೆವು' ಎಂದು ಸತ್ಯನಿಷೇಧಿಗಳು ಹೇಳಿದರು. (ಓ ಪ್ರವಾದಿಯವರೇ!) ಈ ಅಕ್ರಮಿಗಳನ್ನು ತಮ್ಮ ಪ್ರಭುವಿನ ಬಳಿ ನಿಲ್ಲಿಸಲಾಗುವ ಸಂದರ್ಭವನ್ನು ತಾವು ಕಾಣುತ್ತಿದ್ದರೆ! ಅವರಲ್ಲಿ ಪ್ರತಿಯೊಂದು ಗುಂಪೂ ಇನ್ನೊಂದು ಗುಂಪಿನ ಮೇಲೆ ಆರೋಪ ಹೊರಿಸುವರು. ಬಲಹೀನರೆಂದು ಗಣಿಸಲಾದವರು ಅಹಂಕಾರ ಪಟ್ಟವರೊಂದಿಗೆ ಹೇಳುವರು: 'ನೀವು ಇಲ್ಲದಿರುತ್ತಿದ್ದರೆ ನಾವು ವಿಶ್ವಾಸಿಗಳಾಗಿರುತ್ತಿದ್ದೆವು'.[1]

وَقَالَ ٱلَّذِينَ كَفَرُواْ لَن نُّؤۡمِنَ بِهَٰذَا ٱلۡقُرۡءَانِ وَلَا بِٱلَّذِي بَيۡنَ يَدَيۡهِۗ وَلَوۡ تَرَىٰٓ إِذِ ٱلظَّٰلِمُونَ مَوۡقُوفُونَ عِندَ رَبِّهِمۡ يَرۡجِعُ بَعۡضُهُمۡ إِلَىٰ بَعۡضٍ ٱلۡقَوۡلَ يَقُولُ ٱلَّذِينَ ٱسۡتُضۡعِفُواْ لِلَّذِينَ ٱسۡتَكۡبَرُواْ لَوۡلَآ أَنتُمۡ لَكُنَّا مُؤۡمِنِينَ ٣١

**32.** ಅಹಂಕಾರ ಪಟ್ಟವರು ಬಲಹೀನರೆಂದು ಗಣಿಸಲಾದವರೊಂದಿಗೆ ಹೇಳುವರು: 'ಮಾರ್ಗದರ್ಶನವು ನಿಮ್ಮ ಬಳಿಗೆ ಬಂದ ಬಳಿಕ ನಾವು ನಿಮ್ಮನ್ನು ಅದರಿಂದ ತಡೆದಿರುವೆವೇ? ಅಲ್ಲ. ನೀವು ಅಪರಾಧಿಗಳೇ ಆಗಿದ್ದಿರಿ'.[2]

قَالَ ٱلَّذِينَ ٱسۡتَكۡبَرُواْ لِلَّذِينَ ٱسۡتُضۡعِفُوٓاْ أَنَحۡنُ صَدَدۡنَٰكُمۡ عَنِ ٱلۡهُدَىٰ بَعۡدَ إِذۡ جَآءَكُمۖ بَلۡ كُنتُم مُّجۡرِمِينَ ٣٢

**33.** ಬಲಹೀನರೆಂದು ಗಣಿಸಲಾದವರು ಅಹಂಕಾರ ಪಟ್ಟವರೊಂದಿಗೆ ಹೇಳುವರು: 'ಅಲ್ಲ, ಇದು ನಾವು ಅಲ್ಲಾಹುವಿನಲ್ಲಿ ಅವಿಶ್ವಾಸವಿಡಲು ಮತ್ತು ಅವನಿಗೆ ಸಮಾನರನ್ನು ಮಾಡಿಕೊಳ್ಳಲು ನೀವು ನಮ್ಮೊಂದಿಗೆ ಆದೇಶಿಸುತ್ತಿದ್ದ ಸಂದರ್ಭಗಳಲ್ಲಿ (ನೀವು) ರಾತ್ರಿ ಹಗಲು ನಡೆಸುತ್ತಿದ್ದ ಕುತಂತ್ರದ ಫಲವಾಗಿದೆ'. ಶಿಕ್ಷೆಯನ್ನು ಕಾಣುವಾಗ ಅವರು ವಿಷಾದವನ್ನು ಮನಸ್ಸಿನಲ್ಲಿ ಬಚ್ಚಿಡುವರು. ನಾವು

وَقَالَ ٱلَّذِينَ ٱسۡتُضۡعِفُواْ لِلَّذِينَ ٱسۡتَكۡبَرُواْ بَلۡ مَكۡرُ ٱلَّيۡلِ وَٱلنَّهَارِ إِذۡ تَأۡمُرُونَنَآ أَن نَّكۡفُرَ بِٱللَّهِ وَنَجۡعَلَ لَهُۥٓ أَندَادٗاۚ وَأَسَرُّواْ ٱلنَّدَامَةَ لَمَّا رَأَوُاْ ٱلۡعَذَابَۚ وَجَعَلۡنَا ٱلۡأَغۡلَٰلَ فِيٓ أَعۡنَاقِ ٱلَّذِينَ كَفَرُواْۖ هَلۡ يُجۡزَوۡنَ إِلَّا مَا كَانُواْ يَعۡمَلُونَ ٣٣

1 ನಾವು ನಿಮ್ಮ ಪ್ರಭಾವಕ್ಕೊಳಗಾಗಿರುವುದರಿಂದಲೇ ನಮಗೆ ಸತ್ಯವನ್ನು ಸ್ವೀಕರಿಸಲು ಸಾಧ್ಯವಾಗಲಿಲ್ಲ.

2 ಸತ್ಯಾನ್ವೇಷಣಾ ತ್ವರೆಯನ್ನು ಹೊಂದಿರುವ ಯಾವ ವ್ಯಕ್ತಿಯನ್ನೂ ಬಲವಂತವಾಗಿ ಸತ್ಯದಿಂದ ವಿಮುಖಗೊಳಿಸಲು ಸಾಧ್ಯವಿಲ್ಲ ಮತ್ತು ಸತ್ಯವು ಬಂದ ಬಳಿಕವೂ ನೀವು ಉದ್ದೇಶಪೂರ್ವಕವಾಗಿ ದುರ್ಮಾರ್ಗದಲ್ಲೇ ಉಳಿದಿರುವುದಕ್ಕೆ ನಾವು ಜವಾಬ್ದಾರರಲ್ಲ ಎಂದಾಗಿದೆ ಅವರು ನೀಡುವ ಉತ್ತರ.

ಸತ್ಯನಿಷೇಧಿಗಳ ಕೊರಳುಗಳಲ್ಲಿ ಸಂಕೋಲೆಗಳನ್ನು ಹಾಕುವೆವು. ಅವರು ಮಾಡಿರುವುದರ ಪ್ರತಿಫಲವನ್ನೇ ಹೊರತು ಇನ್ನೇನಾನಾದರೂ ಅವರಿಗೆ ನೀಡಲಾಗುವುದೇ?[1]

**34.** ನಾವು ಯಾವುದೇ ನಾಡಿಗೂ ಒಬ್ಬ ಮುನ್ನೆಚ್ಚರಿಕೆಗಾರನನ್ನು ಕಳುಹಿಸಿದಾಗಲೆಲ್ಲ 'ಯಾವುದರೊಂದಿಗೆ ನಿಮ್ಮನ್ನು ಕಳುಹಿಸಲಾಗಿದೆಯೋ ಅದನ್ನು ನಾವು ನಿಷೇಧಿಸಿರುವೆವು' ಎಂದು ಅಲ್ಲಿನ ಸುಖಲೋಲುಪರು ಹೇಳದಿರಲಿಲ್ಲ.

وَمَآ أَرۡسَلۡنَا فِي قَرۡيَةٖ مِّن نَّذِيرٍ إِلَّا قَالَ مُتۡرَفُوهَآ إِنَّا بِمَآ أُرۡسِلۡتُم بِهِۦ كَٰفِرُونَ ٣٤

**35.** ಅವರು ಹೇಳಿದರು: 'ನಾವು ಅತ್ಯಧಿಕ ಸಂಪತ್ತು ಮತ್ತು ಸಂತಾನವನ್ನು ಹೊಂದಿದವರಾಗಿರುವೆವು. ನಾವು ಶಿಕ್ಷೆಗೆ ಈಡಾಗಲಾರೆವು'.

وَقَالُواْ نَحۡنُ أَكۡثَرُ أَمۡوَٰلٗا وَأَوۡلَٰدٗا وَمَا نَحۡنُ بِمُعَذَّبِينَ ٣٥

**36.** ಹೇಳಿರಿ: 'ಖಂಡಿತವಾಗಿಯೂ ನನ್ನ ರಬ್ ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು (ತಾನಿಚ್ಛಿಸುವವರಿಗೆ) ಅದನ್ನು ಸಂಕುಚಿತಗೊಳಿಸುವನು.[2] ಆದರೆ ಜನರಲ್ಲಿ ಹೆಚ್ಚಿನವರೂ ಅರಿಯುವುದಿಲ್ಲ.

قُلۡ إِنَّ رَبِّي يَبۡسُطُ ٱلرِّزۡقَ لِمَن يَشَآءُ وَيَقۡدِرُ وَلَٰكِنَّ أَكۡثَرَ ٱلنَّاسِ لَا يَعۡلَمُونَ ٣٦

**37.** ನಿಮ್ಮ ಸಂಪತ್ತಾಗಲಿ ಸಂತಾನವಾಗಲಿ ನಿಮಗೆ ನಮ್ಮ ಬಳಿ ಸಾಮೀಪ್ಯವನ್ನು ಗಳಿಸಿಕೊಡದು. ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರ ಹೊರತು. ಅವರಿಗೆ ಅವರು ಮಾಡಿರುವುದರ ಫಲವಾಗಿ ಇಮ್ಮಡಿ ಪ್ರತಿಫಲವಿರುವುದು. ಅವರು ಉನ್ನತ ಸೌಧಗಳಲ್ಲಿ ಭಯಮುಕ್ತರಾಗಿ ವಾಸಿಸುವರು.

وَمَآ أَمۡوَٰلُكُمۡ وَلَآ أَوۡلَٰدُكُم بِٱلَّتِي تُقَرِّبُكُمۡ عِندَنَا زُلۡفَىٰٓ إِلَّا مَنۡ ءَامَنَ وَعَمِلَ صَٰلِحٗا فَأُوْلَٰٓئِكَ لَهُمۡ جَزَآءُ ٱلضِّعۡفِ بِمَا عَمِلُواْ وَهُمۡ فِي ٱلۡغُرُفَٰتِ ءَامِنُونَ ٣٧

---

1 ಬಲಶಾಲಿಯೋ ಬಲಹೀನನೋ ಎಂಬ ವ್ಯತ್ಯಾಸವಿಲ್ಲದೆ ಎಲ್ಲರೂ ತಾವು ಪ್ರಜ್ಞಾಪೂರ್ವಕವಾಗಿ ಮಾಡಿದ ಕರ್ಮಗಳಿಗೆ ಅಲ್ಲಾಹು ಅರ್ಹ ಪ್ರತಿಫಲವನ್ನು ನೀಡುವನು.

2 ಅಲ್ಲಾಹು ಇಹಲೋಕದಲ್ಲಿ ಸಮೃದ್ಧಿಯನ್ನು ನೀಡುವುದು ಕರ್ಮಗಳ ಆಧಾರದಲ್ಲಲ್ಲ. ಅವನು ಕೆಲವೊಮ್ಮೆ ಸಜ್ಜನರಿಗೆ ಕಡುಬಡತನವನ್ನು ನೀಡಲೂಬಹುದು. ದುರ್ಜನರಿಗೆ ಸಿರಿವಂತಿಕೆಯನ್ನು ನೀಡಲೂಬಹುದು. ಕೆಲವರಿಗೆ ಅಲ್ಲಾಹು ಸಿರಿವಂತಿಕೆಯನ್ನು ನೀಡಿದ್ದನ್ನು ಪರಿಗಣಿಸಿ ಅವರು ಶಿಕ್ಷೆಯಿಂದ ಮುಕ್ತರೆಂದು ಯಾರೂ ಭಾವಿಸಬೇಕಾಗಿಲ್ಲ.

**38.** (ನಮ್ಮನ್ನು) ಸೋಲಿಸುವುದಕ್ಕಾಗಿ ನಮ್ಮ ದೃಷ್ಟಾಂತಗಳನ್ನು ವಿರೋಧಿಸಲು ಯತ್ನಿಸುವವರಾರೋ ಅವರು ಶಿಕ್ಷೆಯಲ್ಲಿ ಹಾಜರುಗೊಳಿಸಲಾಗುವರು.

وَٱلَّذِينَ يَسۡعَوۡنَ فِيٓ ءَايَٰتِنَا مُعَٰجِزِينَ أُوْلَٰٓئِكَ فِي ٱلۡعَذَابِ مُحۡضَرُونَ ٣٨

**39.** ತಾವು ಹೇಳಿರಿ: 'ಖಂಡಿತವಾಗಿಯೂ ನನ್ನ ರಬ್ ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು ತಾನಿಚ್ಛಿಸುವವರಿಗೆ ಸಂಕುಚಿತಗೊಳಿಸುವನು. ನೀವು ಏನೇ ವ್ಯಯಿಸಿದರೂ ಅದಕ್ಕೆ ಅವನು ಬದಲಿಯನ್ನು ನೀಡುವನು. ಅನ್ನಾಧಾರ ಒದಗಿಸುವವರಲ್ಲಿ ಅವನು ಅತ್ಯುತ್ತಮನಾಗಿರುವನು'.

قُلۡ إِنَّ رَبِّي يَبۡسُطُ ٱلرِّزۡقَ لِمَن يَشَآءُ مِنۡ عِبَادِهِۦ وَيَقۡدِرُ لَهُۥۚ وَمَآ أَنفَقۡتُم مِّن شَيۡءٖ فَهُوَ يُخۡلِفُهُۥۖ وَهُوَ خَيۡرُ ٱلرَّٰزِقِينَ ٣٩

**40.** ಅವನು ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ! ತರುವಾಯ ಅವನು ಮಲಕ್‌ಗಳೊಂದಿಗೆ ಕೇಳುವನು: 'ಇವರು ಆರಾಧಿಸುತ್ತಿದ್ದುದು ನಿಮ್ಮನ್ನಾಗಿತ್ತೇ?'

وَيَوۡمَ يَحۡشُرُهُمۡ جَمِيعٗا ثُمَّ يَقُولُ لِلۡمَلَٰٓئِكَةِ أَهَٰٓؤُلَآءِ إِيَّاكُمۡ كَانُواْ يَعۡبُدُونَ ٤٠

**41.** ಅವರು ಹೇಳುವರು: 'ನೀನು ಪರಮ ಪಾವನನು! ನಮ್ಮ ರಕ್ಷಕನು ನೀನೇ ಹೊರತು ಅವರಲ್ಲ. ಆದರೆ ಅವರು ಆರಾಧಿಸುತ್ತಿದ್ದುದು ಜಿನ್ನ್‌ಗಳನ್ನಾಗಿತ್ತು.[1] ಅವರಲ್ಲಿ ಹೆಚ್ಚಿನವರೂ ಅವರ (ಜಿನ್ನ್‌ಗಳ) ಮೇಲೆ ವಿಶ್ವಾಸವಿಟ್ಟವರಾಗಿದ್ದರು'.

قَالُواْ سُبۡحَٰنَكَ أَنتَ وَلِيُّنَا مِن دُونِهِمۖ بَلۡ كَانُواْ يَعۡبُدُونَ ٱلۡجِنَّۖ أَكۡثَرُهُم بِهِم مُّؤۡمِنُونَ ٤١

**42.** ಆದ್ದರಿಂದ ಅಂದು ನಿಮಗೆ ಪರಸ್ಪರ ಲಾಭವನ್ನಾಗಲಿ ಹಾನಿಯನ್ನಾಗಲಿ ಮಾಡಲು

فَٱلۡيَوۡمَ لَا يَمۡلِكُ بَعۡضُكُمۡ لِبَعۡضٖ نَّفۡعٗا

1 ಮಲಕ್‌ಗಳನ್ನು ದೇವದೇವತೆಯರೆಂದು ಪರಿಕಲ್ಪಿಸಿ ಆರಾಧಿಸುವ ಸಂಪ್ರದಾಯವು ಅನೇಕ ಜನಸಮುದಾಯಗಳಲ್ಲಿ ರೂಢಿಯಲ್ಲಿತ್ತು. ಅವರ ಹೆಸರಲ್ಲಿ ಸ್ಥಾಪಿಸಲಾಗುವ ಮೂರ್ತಿಗಳ ಮುಂದೆ ಇಂತಹ ಆರಾಧನೆಗಳು ನಡೆಯುತ್ತಿದ್ದವು. ಇದು ಮಲಕ್‌ಗಳ ಒಪ್ಪಿಗೆಯಿಂದ ಜರುಗುತ್ತಿರಲಿಲ್ಲ. ಆ ವಿಗ್ರಹಗಳ ಬಳಿ ಮಲಕ್‌ಗಳು ಉಪಸ್ಥಿತರಾಗುತ್ತಿರಲಿಲ್ಲ. ಬದಲಾಗಿ ಶೈತಾನರ (ಜಿನ್ನ್‌ಗಳ) ದುಷ್ಪ್ರೇರಣೆ ಮತ್ತು ಉಪಸ್ಥಿತಿಯು ಅಲ್ಲಿತ್ತು. ಒಟ್ಟಿನಲ್ಲಿ ಅಲ್ಲಿ ಜರಗುತ್ತಿದ್ದುದು ಸೈತಾನರ ಆರಾಧನೆಯಾಗಿತ್ತು. ಮಲಕ್‌ಗಳು ಇಲ್ಲಿ ಹೇಳುತ್ತಿರುವುದು ಈ ವಿಷಯವನ್ನಾಗಿದೆ. ಜನರು ತನ್ನ ಆರಾಧನೆ ಮಾಡುವುದನ್ನು ಯಾರಾದರೂ ಇಷ್ಟಪಡುವುದಾದರೆ ಮಾತ್ರ ಅವನು ಮಅ್‌ಬೂದ್ (ಆರಾಧ್ಯ) ಎಂಬ ನೆಲೆಯಲ್ಲಿ ಅಲ್ಲಾಹುವಿನ ಶಿಕ್ಷೆಗೆ ಅರ್ಹನಾಗುತ್ತಾನೆ. ಪ್ರವಾದಿ ಈಸಾ(عَلَيْهِ السَّلَامُ)ಮುಂತಾದ ಮಹಾತ್ಮರು ಹಾಗೂ ಮಲಕ್‌ಗಳು ಆರಾಧಿಸಲಾಗುತ್ತಿರುವುದು ಅವರ ಅರಿವು ಅಥವಾ ಒಪ್ಪಿಗೆಯಿಂದಲ್ಲ. ಆದ್ದರಿಂದ ಅವರು ನಿರಪರಾಧಿಗಳಾಗಿದ್ದಾರೆ. ಮಲಕ್‌ಗಳ ಉತ್ತರದಲ್ಲಿ ಈ ನಿರಪರಾಧಿತನದ ಬಗ್ಗೆ ಸೂಚನೆಯಿದೆ.

وَلَا ضَرًّا وَنَقُولُ لِلَّذِينَ ظَلَمُواْ ذُوقُواْ
عَذَابَ ٱلنَّارِ ٱلَّتِي كُنتُم بِهَا تُكَذِّبُونَ ﴿٤٢﴾

ಸಾಧ್ಯವಾಗದು. 'ನೀವು ನಿಷೇಧಿಸುತ್ತಿದ್ದ ನರಕ ಶಿಕ್ಷೆಯನ್ನು ಸವಿಯಿರಿ' ಎಂದು ನಾವು ಅಕ್ರಮವೆಸಗಿದವರೊಂದಿಗೆ ಹೇಳುವೆವು.

وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ قَالُواْ مَا
هَٰذَآ إِلَّا رَجُلٌ يُرِيدُ أَن يَصُدَّكُمْ عَمَّا
كَانَ يَعْبُدُ ءَابَآؤُكُمْ وَقَالُواْ مَا هَٰذَآ إِلَّآ
إِفْكٌ مُّفْتَرًىۚ وَقَالَ ٱلَّذِينَ كَفَرُواْ لِلْحَقِّ
لَمَّا جَآءَهُمْ إِنْ هَٰذَآ إِلَّا سِحْرٌ مُّبِينٌ ﴿٤٣﴾

**43.** ನಮ್ಮ ಸೂಕ್ತಿಗಳನ್ನು ಅವರಿಗೆ ಸ್ಪಷ್ಟವಾಗಿ ಓದಿಕೊಡಲಾದರೆ ಅವರು ಜನರೊಂದಿಗೆ ಹೇಳುವರು: 'ಈತ ನಿಮ್ಮ ಪೂರ್ವಿಕರು ಏನನ್ನು ಆರಾಧಿಸುತ್ತಿದ್ದರೋ ಅದರಿಂದ ನಿಮ್ಮನ್ನು ತಡೆಯಲು ಬಯಸುವ ವ್ಯಕ್ತಿಯಾಗಿರುವನೇ ಹೊರತು ಇನ್ನೇನಲ್ಲ'. ಅವರು ಹೇಳಿದರು: 'ಇದು ಹೆಣೆದು ರಚಿಸಲಾದ ಕಟ್ಟುಕಥೆ ಮಾತ್ರವಾಗಿದೆ'. ಸತ್ಯವು ತಮ್ಮ ಬಳಿಗೆ ಬಂದಾಗ ಅದರ ಕುರಿತು ಸತ್ಯನಿಷೇಧಿಗಳು ಹೇಳಿದರು: 'ಇದು ಸ್ಪಷ್ಟವಾದ ಮಾಂತ್ರಿಕತೆ ಮಾತ್ರವಾಗಿದೆ'.

وَمَآ ءَاتَيْنَٰهُم مِّن كُتُبٍ يَدْرُسُونَهَاۖ وَمَآ
أَرْسَلْنَآ إِلَيْهِمْ قَبْلَكَ مِن نَّذِيرٍ ﴿٤٤﴾

**44.** ಅವರು ಅಧ್ಯಯನ ಮಾಡುವಂತಹ ಯಾವುದೇ ಗ್ರಂಥವನ್ನೂ ನಾವು ಅವರಿಗೆ ನೀಡಿರಲಿಲ್ಲ. ತಮಗಿಂತ ಮುಂಚೆ ಅವರೆಡೆಗೆ ಯಾವೊಬ್ಬ ಮುನ್ನೆಚ್ಚರಿಕೆಗಾರನನ್ನೂ ನಾವು ಕಳುಹಿಸಿರಲಿಲ್ಲ.[1]

وَكَذَّبَ ٱلَّذِينَ مِن قَبْلِهِمْ وَمَا بَلَغُواْ
مِعْشَارَ مَآ ءَاتَيْنَٰهُمْ فَكَذَّبُواْ رُسُلِيۖ
فَكَيْفَ كَانَ نَكِيرِ ﴿٤٥﴾

**45.** ಇವರಿಗಿಂತ ಮುಂಚಿನವರೂ ನಿಷೇಧಿಸಿದ್ದರು. ಅವರಿಗೆ ನಾವು ದಯಪಾಲಿಸಿರುವ ಹತ್ತರಲ್ಲಿ ಒಂದಂಶವನ್ನೂ ಇವರು ಪಡೆದಿಲ್ಲ.[2] ಆದರೆ ಅವರು ನಮ್ಮ ಸಂದೇಶವಾಹಕರನ್ನು ನಿಷೇಧಿಸಿದರು. ಆಗ ನನ್ನ ರೋಷವು ಹೇಗಿತ್ತು!

1 ನಾವು ಅನುಸರಿಸುತ್ತಿರುವುದು ಪೂರ್ವಿಕರ ಧರ್ಮವನ್ನಾಗಿದೆ. ಆದ್ದರಿಂದ ಅದು ಪ್ರಮಾದಮುಕ್ತವೆಂದು ಮಕ್ಕಾದ ಬಹುದೇವಾರಾಧಕರು ವಾದಿಸುತ್ತಿದ್ದರು. ಆದರೆ ಅವರು ತಮ್ಮ ಮಾದರೀ ಪುರುಷರೆಂದು ಪರಿಗಣಿಸುತ್ತಿದ್ದ ಆ ಪೂರ್ವಿಕರ ಕಡೆಗೆ ಯಾವ ಪ್ರವಾದಿಯನ್ನೂ ಕಳುಹಿಸಲಾಗಿರಲಿಲ್ಲ. ಯಾವ ಗ್ರಂಥವನ್ನೂ ಅವತೀರ್ಣಗೊಳಿಸಲಾಗಿರಲಿಲ್ಲ. ಹೀಗಿರುವಾಗ ಅವರ ವಿಶ್ವಾಸಾಚಾರಗಳು ವಿಶ್ವಾಸಯೋಗ್ಯವಾಗಿರುವುದಾದರೂ ಹೇಗೆ?

2 ಅರೇಬಿಯಾದ ಬಹುದೇವಾರಾಧಕರಿಗೆ ಅಲ್ಲಾಹು ನೀಡಿದ ಜೀವನಾನುಕೂಲತೆಗಳಿಗಿಂತ ಎಷ್ಟೋ ಪಟ್ಟು ಅಧಿಕವಾಗಿರುವುದನ್ನು ಈಜಿಪ್ಟ್ ಮತ್ತು ಯಮನ್ ನಿವಾಸಿಗಳಾದ ಪೂರ್ವಿಕರಿಗೆ ನೀಡಲಾಗಿತ್ತು. ಅಲ್ಲಾಹುವಿನ ಸಂದೇಶವಾಹಕರನ್ನು ನಿಷೇಧಿಸಿದಾಗಲೆಲ್ಲ ಅವರೆಲ್ಲರೂ ಅಲ್ಲಾಹುವಿನ ಶಿಕ್ಷೆಗೆ ಪಾತ್ರರಾಗಿದ್ದರು.

46. ಹೇಳಿರಿ: 'ನಾನು ನಿಮಗೆ ಒಂದು ವಿಷಯವನ್ನು ಉಪದೇಶಿಸುತ್ತಿರುವೆನು. ನೀವು ಅಲ್ಲಾಹುವಿಗೋಸ್ಕರ ಇಬ್ಬಿಬ್ಬರಾಗಿ ಅಥವಾ ಒಂಟಿಯಾಗಿ ನಿಲ್ಲಿರಿ. ತರುವಾಯ ಆಲೋಚಿಸಿರಿ.[1] ನಿಮ್ಮ ಒಡನಾಡಿಗೆ (ಪ್ರವಾದಿಯವರಿಗೆ) ಯಾವ ಮತಿಭ್ರಾಂತಿಯೂ ಇಲ್ಲ. ಅವರು ಭಯಾನಕವಾದ ಶಿಕ್ಷೆಯೊಂದರ ಕುರಿತು ನಿಮಗೆ ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿರುವರು'.

۞ قُلۡ إِنَّمَآ أَعِظُكُم بِوَٰحِدَةٍۖ أَن تَقُومُواْ لِلَّهِ مَثۡنَىٰ وَفُرَٰدَىٰ ثُمَّ تَتَفَكَّرُواْۚ مَا بِصَاحِبِكُم مِّن جِنَّةٍۚ إِنۡ هُوَ إِلَّا نَذِيرٞ لَّكُم بَيۡنَ يَدَيۡ عَذَابٖ شَدِيدٖ ٤٦

47. ತಾವು ಹೇಳಿರಿ: 'ನಾನು ನಿಮ್ಮೊಂದಿಗೆ ಯಾವುದಾದರೂ ಪ್ರತಿಫಲವನ್ನು ಬೇಡಿದ್ದರೆ ಅದು ನಿಮಗೋಸ್ಕರವೇ ಆಗಿದೆ.[2] ನನಗಿರುವ ಪ್ರತಿಫಲವು ಅಲ್ಲಾಹುವಿನಿಂದ ಮಾತ್ರವಾಗಿದೆ. ಅವನು ಸರ್ವ ವಿಷಯಗಳ ಮೇಲೂ ಸಾಕ್ಷಿಯಾಗಿರುವನು.

قُلۡ مَا سَأَلۡتُكُم مِّنۡ أَجۡرٖ فَهُوَ لَكُمۡۖ إِنۡ أَجۡرِيَ إِلَّا عَلَى ٱللَّهِۖ وَهُوَ عَلَىٰ كُلِّ شَيۡءٖ شَهِيدٞ ٤٧

48. ಖಂಡಿತವಾಗಿಯೂ ನನ್ನ ರಬ್ ಸತ್ಯವನ್ನು ಹಾಕಿಕೊಡುವನು. (ಅವನು) ಅಗೋಚರ ವಿಷಯಗಳನ್ನು ಚೆನ್ನಾಗಿ ಅರಿಯುವವನಾಗಿರುವನು'.

قُلۡ إِنَّ رَبِّي يَقۡذِفُ بِٱلۡحَقِّ عَلَّٰمُ ٱلۡغُيُوبِ ٤٨

49. ತಾವು ಹೇಳಿರಿ: 'ಸತ್ಯವು ಬಂದಿದೆ. ಅಸತ್ಯವು (ಯಾವುದನ್ನೂ) ಆರಂಭಿಸಲಾರದು ಮತ್ತು ಅದು (ಯಾವುದನ್ನೂ) ಪುನಃಸ್ಥಾಪಿಸದು'.

قُلۡ جَآءَ ٱلۡحَقُّ وَمَا يُبۡدِئُ ٱلۡبَٰطِلُ وَمَا يُعِيدُ ٤٩

50. ತಾವು ಹೇಳಿರಿ: 'ನಾನು ದಾರಿಗೆಟ್ಟಿರುವುದಾದರೆ ನಾನು ದಾರಿಗೆಟ್ಟಿರುವ ಪಾಪವು ನನಗೇ ಆಗಿದೆ. ನಾನೇನಾದರೂ ಸನ್ಮಾರ್ಗವನ್ನು ಪಡೆದೆನೆಂದಾದರೆ ಅದು ನನ್ನ ರಬ್ ನನಗೆ

قُلۡ إِن ضَلَلۡتُ فَإِنَّمَآ أَضِلُّ عَلَىٰ نَفۡسِيۖ وَإِنِ ٱهۡتَدَيۡتُ فَبِمَا يُوحِيٓ إِلَيَّ رَبِّيٓۚ إِنَّهُۥ سَمِيعٞ قَرِيبٞ ٥٠

1 ಜನರ ಪೈಕಿ ಹೆಚ್ಚಿನವರೂ ಪ್ರವಾದಿ(ﷺ)ರವರ ವ್ಯಕ್ತಿತ್ವವನ್ನು ಸರಿಯಾಗಿ ಬೆಲೆಕಟ್ಟುವುದಾಗಲಿ ಅಥವಾ ಅವರು ಬೋಧನೆ ಮಾಡುತ್ತಿದ್ದ ವಿಷಯಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡದೆ ಅವರನ್ನು ಅಂಧವಾಗಿ ವಿರೋಧಿಸುವ ಜನರೊಂದಿಗೆ ಯಾವುದೇ ವಿವೇಚನೆಯೂ ಇಲ್ಲದೆ ಸೇರಿಕೊಂಡವರಾಗಿದ್ದಾರೆ. ಅವರು ಅದರಿಂದ ಕೆಲಕಾಲ ದೂರನಿಂತು ಒಂಟಿಯಾಗಿ ಅಥವಾ ಇಬ್ಬಿಬ್ಬರಾಗಿ ಅಲ್ಲಾಹುವನ್ನು ಸಾಕ್ಷಿಯಾಗಿಸಿ ಗಂಭೀರವಾಗಿ ಚಿಂತಿಸಲಿ ಎಂದು ಅವರಿಗೆ ಕರೆ ನೀಡುವಂತೆ ಅಲ್ಲಾಹು ಇಲ್ಲಿ ಆದೇಶಿಸುತ್ತಿದ್ದಾನೆ.

2 ನಾನು ನಿಮ್ಮೊಂದಿಗೆ ಲೌಕಿಕವಾದ ಯಾವ ಪ್ರತಿಫಲವನ್ನೂ ಬೇಡುವುದಿಲ್ಲ. ಆದರೆ ನಾನು ನಿಮ್ಮೊಂದಿಗೆ ಒಂದನ್ನು ಮಾತ್ರ ಬೇಡುತ್ತಿದ್ದೇನೆ. ಅದೇನೆಂದರೆ ನೀವು ಸತ್ಯಮಾರ್ಗವನ್ನು ಸ್ವೀಕರಿಸಬೇಕು. ಅದರ ಪ್ರತಿಫಲ ಕೂಡ ನಿಮಗೇ ಆಗಿದೆ.

ನೀಡುತ್ತಿರುವ ದಿವ್ಯಸಂದೇಶದ ಫಲವಾಗಿದೆ. ಖಂಡಿತವಾಗಿಯೂ ಅವನು ಆಲಿಸುವವನೂ, ಅತಿನಿಕಟನೂ ಆಗಿರುವನು'.

51. ಅವರು (ಸತ್ಯನಿಷೇಧಿಗಳು) ಭಯಭೀತರಾಗುವ ಸಂದರ್ಭವನ್ನು ತಾವು ಕಾಣುತ್ತಿದ್ದರೆ![1] ಆದರೆ ಅವರು (ಹಿಡಿತದಿಂದ) ಪಾರಾಗಲಾರರು. ಸಮೀಪ ಸ್ಥಳದಿಂದಲೇ ಅವರನ್ನು ಹಿಡಿಯಲಾಗುವುದು.

وَلَوْ تَرَىٰٓ إِذْ فَزِعُوا۟ فَلَا فَوْتَ وَأُخِذُوا۟ مِن مَّكَانٍ قَرِيبٍ ﴿٥١﴾

52. 'ನಾವು ಇದರಲ್ಲಿ ವಿಶ್ವಾಸವಿಟ್ಟಿರುವೆವು' ಎಂದು ಅವರು ಹೇಳುವರು. ಆದರೆ ವಿದೂರ ಸ್ಥಳದಿಂದ (ಆ ವಿಶ್ವಾಸವನ್ನು) ಗಳಿಸಿಕೊಳ್ಳಲು ಅವರಿಗೆ ಹೇಗೆ ತಾನೇ ಸಾಧ್ಯ?[2]

وَقَالُوٓا۟ ءَامَنَّا بِهِۦ وَأَنَّىٰ لَهُمُ ٱلتَّنَاوُشُ مِن مَّكَانٍۭ بَعِيدٍ ﴿٥٢﴾

53. ಮುಂಚೆ ಅವರು ಅದರಲ್ಲಿ ಅವಿಶ್ವಾಸವಿಟ್ಟಿದ್ದರು. ಅವರು ನೇರವಾಗಿ ಅರಿಯದೆ ವಿದೂರ ಸ್ಥಳದಿಂದ ಆರೋಪ ಹೊರಿಸುತ್ತಿದ್ದರು.[3]

وَقَدْ كَفَرُوا۟ بِهِۦ مِن قَبْلُ ۖ وَيَقْذِفُونَ بِٱلْغَيْبِ مِن مَّكَانٍۭ بَعِيدٍ ﴿٥٣﴾

54. ಮುಂಚೆ ಅವರ ಪಂಗಡದವರೊಂದಿಗೆ ಮಾಡಲಾದಂತೆಯೇ ಅವರ ಮತ್ತು ಅವರ ಬಯಕೆಗಳ ಮಧ್ಯೆ ತಡೆ ಹಾಕಲಾಯಿತು.[4] ಖಂಡಿತವಾಗಿಯೂ ಅವರು ಅವಿಶ್ವಾಸ ಹುಟ್ಟಿಸುವಂತಹ ಸಂಶಯದಲ್ಲಿದ್ದರು.

وَحِيلَ بَيْنَهُمْ وَبَيْنَ مَا يَشْتَهُونَ كَمَا فُعِلَ بِأَشْيَاعِهِم مِّن قَبْلُ ۚ إِنَّهُمْ كَانُوا۟ فِى شَكٍّ مُّرِيبٍۭ ﴿٥٤﴾

1 ಸತ್ಯವಿಶ್ವಾಸಿಗಳ ದಿಗ್ವಿಜಯವನ್ನು ಕಾಣುವಾಗ ಉಂಟಾಗುವ ಭಯಭೀತಿಯನ್ನು ಇಲ್ಲಿ ಸೂಚಿಸಿರಬಹುದು. ಇಲ್ಲಿ ಉದ್ದೇಶಿಸಿದ್ದು ಮರಣಾಸನ್ನವಾಗುವಾಗ ಉಂಟಾಗುವ ವಿಭ್ರಾಂತಿಯನ್ನಾಗಿದೆ ಎಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

2 ಸತ್ಯನಿಷೇಧದಲ್ಲಿ ಅಚಲರಾಗಿ ನಿಂತು ಸತ್ಯವಿಶ್ವಾಸದಿಂದ ಬಹುದೂರ ಸಾಗಿದ ಅವಿಶ್ವಾಸಿಗಳಿಗೆ ಆಪತ್ತು ಕಣ್ಮುಂದೆ ಕಾಣುವಾಗ ನಾವು ವಿಶ್ವಾಸವಿಟ್ಟಿದ್ದೇವೆ ಎಂದು ಹೇಳುವುದರಿಂದ ವಿಶ್ವಾಸದ ಮಹತ್ವವನ್ನು ಗಳಿಸಲು ಸಾಧ್ಯವಾಗಲಾರದು. ವಿಚಾರಣಾ ದಿನದಂದು ಸತ್ಯವು ಸಂದೇಹಾತೀತವಾಗಿ ಸ್ಪಷ್ಟಗೊಂಡ ಬಳಿಕ ವಿಶ್ವಾಸವನ್ನು ಸಾರುವುದರ ನಿರರ್ಥಕತೆಯನ್ನು ಈ ಸೂಕ್ತಿಯಲ್ಲಿ ಸೂಚಿಸಲಾಗಿದೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

3 ಪ್ರವಾದಿ(ﷺ) ರವರ ವ್ಯಕ್ತಿತ್ವವನ್ನು ನೇರವಾಗಿ ತಿಳಿದುಕೊಳ್ಳಬಯಸದೆ ಶತ್ರುಗಳು ಅವರ ವಿರುದ್ಧ ಕೆಲವು ಆರೋಪಗಳನ್ನೂ ಹೊರಿಸಿದ್ದರು. ಅವರ ಗೋಚರ ಅರಿವಿಗೆ ಅತೀತವಾಗಿರುವ ಪರಲೋಕದ ಕುರಿತು ಹೇಳಲಾದಾಗ ಅವರು ಪ್ರವಾದಿ(ﷺ) ರವರನ್ನು ಅಪಹಾಸ್ಯ ಮಾಡಿದರು.

4 ಸತ್ಯವಿಶ್ವಾಸ ಮತ್ತು ಸತ್ಯವಿಶ್ವಾಸಿಗಳನ್ನು ನಿರ್ಮೂಲನಗೊಳಿಸಬೇಕೆಂದು ಪೂರ್ವಿಕರಂತೆಯೇ ಇವರು ಕೂಡ ಬಯಸಿದ್ದರು. ಆದರೆ ಅವರ ಬಯಕೆಯ ಪೂರ್ತೀಕರಣಕ್ಕೆ ಅಲ್ಲಾಹು ನಿರಂತರ ಅಡ್ಡಿಪಡಿಸುತ್ತಿದ್ದಾನೆ

## ಫಾತಿರ್ (ಸೃಷ್ಟಿಕರ್ತ)[1]

## سُورَةُ فَاطِرٍ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 45

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

ٱلۡحَمۡدُ لِلَّهِ فَاطِرِ ٱلسَّمَٰوَٰتِ وَٱلۡأَرۡضِ جَاعِلِ ٱلۡمَلَٰٓئِكَةِ رُسُلًا أُوْلِيٓ أَجۡنِحَةٖ مَّثۡنَىٰ وَثُلَٰثَ وَرُبَٰعَۚ يَزِيدُ فِي ٱلۡخَلۡقِ مَا يَشَآءُۚ إِنَّ ٱللَّهَ عَلَىٰ كُلِّ شَيۡءٖ قَدِيرٞ ١

1. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿರುವ ಮತ್ತು ಮಲಕ್‌ಗಳನ್ನು ಎರಡು, ಮೂರು ಹಾಗೂ ನಾಲ್ಕು ರೆಕ್ಕೆಗಳುಳ್ಳ[2] ದೂತರನ್ನಾಗಿ ಕಳುಹಿಸಿರುವ ಅಲ್ಲಾಹುವಿಗೆ ಸ್ತುತಿ. ಸೃಷ್ಟಿಯಲ್ಲಿ ತಾನಿಚ್ಛಿಸುವುದನ್ನು ಅವನು ಅಧಿಕಗೊಳಿಸುವನು.[3] ಖಂಡಿತವಾಗಿಯೂ ಅಲ್ಲಾಹು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

مَّا يَفۡتَحِ ٱللَّهُ لِلنَّاسِ مِن رَّحۡمَةٖ فَلَا مُمۡسِكَ لَهَاۖ وَمَا يُمۡسِكۡ فَلَا مُرۡسِلَ لَهُۥ مِنۢ بَعۡدِهِۦۚ وَهُوَ ٱلۡعَزِيزُ ٱلۡحَكِيمُ ٢

2. ಅಲ್ಲಾಹು ಜನರಿಗೆ ಯಾವುದೇ ಅನುಗ್ರಹವನ್ನು ತೆರೆದುಕೊಡುವುದಾದರೂ ಅದನ್ನು ತಡೆಹಿಡಿಯುವವರು ಯಾರೂ ಇಲ್ಲ. ಅವನು ಏನನ್ನಾದರೂ ತಡೆಹಿಡಿಯುವುದಾದರೆ ಅನಂತರ ಅದನ್ನು ಬಿಟ್ಟುಕೊಡುವವರು ಯಾರೂ ಇಲ್ಲ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

يَٰٓأَيُّهَا ٱلنَّاسُ ٱذۡكُرُواْ نِعۡمَتَ ٱللَّهِ عَلَيۡكُمۡۚ هَلۡ مِنۡ خَٰلِقٍ غَيۡرُ ٱللَّهِ

3. ಓ ಜನರೇ! ಅಲ್ಲಾಹು ನಿಮಗೆ ದಯಪಾಲಿಸಿರುವ ಅವನ ಅನುಗ್ರಹವನ್ನು ಸ್ಮರಿಸಿರಿ. ಆಕಾಶದಿಂದಲೂ

1 ಒಂದನೇ ಸೂಕ್ತಿಯಲ್ಲಿ ಸೃಷ್ಟಿಕರ್ತನ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ

2 ಮಲಕ್‌ಗಳು ಜಗತ್ತಿನ ವಿವಿಧ ಕಡೆಗಳಿಗೆ ವಿಭಿನ್ನ ಕರ್ತವ್ಯಗಳೊಂದಿಗೆ ಕಳುಹಿಸಲಾಗುವ ಅಲ್ಲಾಹುವಿನ ನಿಕಟದಾಸರಾಗಿದ್ದಾರೆ. ಅವರ ಅಸ್ತಿತ್ವದ ಕುರಿತು ಕುರ್‌ಆನ್ ಮತ್ತು ಸುನ್ನತ್ ನೀಡುವ ವಿವರಣೆಗಳ ಹೊರತು ಬೇರೆ ಮಾಹಿತಿ ಲಭ್ಯವಿಲ್ಲ. ಆದ್ದರಿಂದಲೇ ರೆಕ್ಕೆಗಳಿಗೆ ಸಂಬಂಧಿಸಿದ ಜ್ಞಾನವು ನಮ್ಮ ಅರಿವಿಗೆ ಅತೀತವಾಗಿದೆ.

3 ಅಲ್ಲಾಹು ಜಗತ್ತನ್ನು ಹಲವು ಹಂತಗಳಲ್ಲಿ ಸೃಷ್ಟಿಸಿದ್ದಾನೆ. ಭೂಮ್ಯಾಕಾಶಗಳು, ತಾರೆಗಳು ಮತ್ತು ಗ್ರಹೋಪಗ್ರಹಗಳು ವಿಕಾಸಗೊಳ್ಳುವುದಕ್ಕೆ ಮುಂಚೆ ಪದಾರ್ಥವು ಏಕಪಿಂಡವಾಗಿತ್ತೆಂದು 21:30ರಲ್ಲಿ ಹೇಳಲಾಗಿದೆ. ಸಸ್ಯಲತಾದಿ ಜೀವರಾಶಿಗಳನ್ನು ಮತ್ತು ಗೋಚರ ಪ್ರಪಂಚದ ಇತರ ಹಲವು ಪ್ರಮುಖ ಘಟಕಗಳನ್ನು ಅಲ್ಲಾಹು ನಂತರ ಸೃಷ್ಟಿಸಿದನು. ನಮ್ಮ ಊಹೆಗೂ ನಿಲುಕದ ಅನೇಕ ವಿಸ್ಮಯಗಳನ್ನು ಅವನು ಸೃಷ್ಟಿಸುತ್ತಿದ್ದಾನೆ.

يَرۡزُقُكُم مِّنَ ٱلسَّمَآءِ وَٱلۡأَرۡضِۚ لَآ إِلَٰهَ إِلَّا هُوَۖ فَأَنَّىٰ تُؤۡفَكُونَ ٣

ಭೂಮಿಯಿಂದಲೂ[1] ನಿಮಗೆ ಅನ್ನಾಧಾರವನ್ನು ಒದಗಿಸಲು ಅಲ್ಲಾಹುವಿನ ಹೊರತು ಬೇರೆ ಸೃಷ್ಟಿಕರ್ತನಿರುವನೇ? ಅವನ ಹೊರತು ಅನ್ಯ ಆರಾಧ್ಯರಿಲ್ಲ. ಆದರೂ ನೀವು ತಪ್ಪಿಸಲ್ಪಡುತ್ತಿರುವುದು ಹೇಗೆ?

وَإِن يُكَذِّبُوكَ فَقَدۡ كُذِّبَتۡ رُسُلٞ مِّن قَبۡلِكَۚ وَإِلَى ٱللَّهِ تُرۡجَعُ ٱلۡأُمُورُ ٤

4. ಅವರು ತಮ್ಮನ್ನು ನಿಷೇಧಿಸುವುದಾದರೆ ತಮಗಿಂತ ಮುಂಚೆಯೂ ಸಂದೇಶವಾಹಕರು ನಿಷೇಧಿಸಲ್ಪಟ್ಟಿರುವರು ವಿಷಯಗಳೆಲ್ಲವನ್ನೂ ಮರಳಿಸಲಾಗುವುದು ಅಲ್ಲಾಹುವಿನೆಡೆಗಾಗಿದೆ.

يَٰٓأَيُّهَا ٱلنَّاسُ إِنَّ وَعۡدَ ٱللَّهِ حَقّٞۖ فَلَا تَغُرَّنَّكُمُ ٱلۡحَيَوٰةُ ٱلدُّنۡيَا وَلَا يَغُرَّنَّكُم بِٱللَّهِ ٱلۡغَرُورُ ٥

5. ಓ ಮನುಷ್ಯರೇ! ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ಆದ್ದರಿಂದ ಐಹಿಕಜೀವನವು ನಿಮ್ಮನ್ನು ವಂಚಿಸದಿರಲಿ. ಮಹಾವಂಚಕನಾದ ಸೈತಾನನು ಅಲ್ಲಾಹುವಿನ ವಿಷಯದಲ್ಲಿ ನಿಮ್ಮನ್ನು ವಂಚಿಸದಿರಲಿ.

إِنَّ ٱلشَّيۡطَٰنَ لَكُمۡ عَدُوّٞ فَٱتَّخِذُوهُ عَدُوًّاۚ إِنَّمَا يَدۡعُواْ حِزۡبَهُۥ لِيَكُونُواْ مِنۡ أَصۡحَٰبِ ٱلسَّعِيرِ ٦

6. ಖಂಡಿತವಾಗಿಯೂ ಸೈತಾನನು ನಿಮ್ಮ ಶತ್ರುವಾಗಿರುವನು. ಆದ್ದರಿಂದ ಅವನನ್ನು ಶತ್ರುವಾಗಿಯೇ ಪರಿಗಣಿಸಿರಿ. ಅವನು ತನ್ನ ಜನರನ್ನು ಆಹ್ವಾನಿಸುತ್ತಿರುವುದು ಅವರು ನರಕವಾಸಿಗಳಲ್ಲಿ ಸೇರಿದವರಾಗಲು ಮಾತ್ರವಾಗಿದೆ.

ٱلَّذِينَ كَفَرُواْ لَهُمۡ عَذَابٞ شَدِيدٞۖ وَٱلَّذِينَ ءَامَنُواْ وَعَمِلُواْ ٱلصَّٰلِحَٰتِ لَهُم مَّغۡفِرَةٞ وَأَجۡرٞ كَبِيرٌ ٧

7. ಅವಿಶ್ವಾಸವಿಟ್ಟವರಾರೋ ಅವರಿಗೆ ಕಠಿಣ ಶಿಕ್ಷೆಯಿದೆ. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮ ವೆಸಗಿದವರು ಯಾರೋ ಅವರಿಗೆ ಪಾಪಮುಕ್ತಿಯೂ ಮಹಾ ಪ್ರತಿಫಲವೂ ಇದೆ.

أَفَمَن زُيِّنَ لَهُۥ سُوٓءُ عَمَلِهِۦ فَرَءَاهُ حَسَنٗاۖ فَإِنَّ ٱللَّهَ يُضِلُّ مَن يَشَآءُ وَيَهۡدِي

8. ಆದರೆ ತನ್ನ ದುಷ್ಕರ್ಮಗಳನ್ನು ಆಕರ್ಷಣೀಯಗೊಳಿಸಿ ತೋರಿಸಲಾಗಿ, ಅದನ್ನು ಒಳಿತೆಂದು ಭಾವಿಸಿದವನ

1 ಸೂರ್ಯಪ್ರಕಾಶವನ್ನು ಅವಲಂಬಿಸಿ ಬೆಳೆಯುವ ಸಸ್ಯಗಳು ಮತ್ತು ಸಸ್ಯಾಹಾರಿಗಳಾದ ಪ್ರಾಣಿಗಳ ಮಾಂಸವು ನಮ್ಮ ಆಹಾರವಾಗಿದೆ. ಆಕಾಶದಿಂದ ದೊರೆಯುವ ಸೌರಶಕ್ತಿ, ಮೇಲ್ಗಡೆಯಿಂದ ವರ್ಷಿಸುವ ಮಳೆನೀರು ಮತ್ತು ಭೂಮಿಯಲ್ಲಿರುವ ಧಾತುಲವಣಗಳು ಆಹಾರವನ್ನು ತಯಾರಿಸುವಲ್ಲಿ ಸಮಾನ ಪಾತ್ರವನ್ನು ವಹಿಸುತ್ತವೆ.

مَن يَشَآءُۖ فَلَا تَذۡهَبۡ نَفۡسُكَ عَلَيۡهِمۡ
حَسَرَٰتٍۚ إِنَّ ٱللَّهَ عَلِيمُۢ بِمَا يَصۡنَعُونَ ٨

ಸ್ಥಿತಿಯೋ? ಅಲ್ಲಾಹು ತಾನಿಚ್ಛಿಸುವವರನ್ನು ಪಥಭ್ರಷ್ಟಗೊಳಿಸುವನು ಮತ್ತು ತಾನಿಚ್ಛಿಸುವವರನ್ನು ಸನ್ಮಾರ್ಗದಲ್ಲಿ ಸೇರಿಸುವನು. ಆದ್ದರಿಂದ ಅವರ ಕುರಿತಿರುವ ತೀವ್ರ ದುಃಖದಿಂದಾಗಿ ತಾವು ತಮ್ಮನ್ನೇ ನಾಶ ಮಾಡದಿರಿ. ಖಂಡಿತವಾಗಿಯೂ ಅಲ್ಲಾಹು ಅವರು ಮಾಡುತ್ತಿರುವುದರ ಕುರಿತು ಅರಿವುಳ್ಳವನಾಗಿರುವನು.

وَٱللَّهُ ٱلَّذِيٓ أَرۡسَلَ ٱلرِّيَٰحَ فَتُثِيرُ سَحَابٗا
فَسُقۡنَٰهُ إِلَىٰ بَلَدٖ مَّيِّتٖ فَأَحۡيَيۡنَا بِهِ ٱلۡأَرۡضَ
بَعۡدَ مَوۡتِهَاۚ كَذَٰلِكَ ٱلنُّشُورُ ٩

**9.** ಮಾರುತಗಳನ್ನು ಕಳುಹಿಸಿದವನು ಅಲ್ಲಾಹುವಾಗಿರುವನು. ತರುವಾಯ ಅವು ಮೋಡಗಳನ್ನು ಚದುರಿಸುತ್ತವೆ. ತರುವಾಯ ನಾವು ಆ ಮೋಡವನ್ನು ನಿರ್ಜೀವವಾಗಿರುವ ಪ್ರದೇಶದೆಡೆಗೆ ಸಾಗಿಸಿ, ತನ್ಮೂಲಕ ನಾವು ಭೂಮಿಗೆ ಅದು ನಿರ್ಜೀವವಾದ ಬಳಿಕ ಸಜೀವಗೊಳಿಸುವೆವು. ಪುನರುತ್ಥಾನವು ಕೂಡ ಹೀಗೆಯೇ ಆಗಿದೆ.

مَن كَانَ يُرِيدُ ٱلۡعِزَّةَ فَلِلَّهِ ٱلۡعِزَّةُ جَمِيعًاۚ
إِلَيۡهِ يَصۡعَدُ ٱلۡكَلِمُ ٱلطَّيِّبُ وَٱلۡعَمَلُ
ٱلصَّٰلِحُ يَرۡفَعُهُۥۚ وَٱلَّذِينَ يَمۡكُرُونَ
ٱلسَّيِّـَٔاتِ لَهُمۡ عَذَابٞ شَدِيدٞۖ وَمَكۡرُ
أُوْلَٰٓئِكَ هُوَ يَبُورُ ١٠

**10.** ಯಾರಾದರೂ ಪ್ರತಾಪವನ್ನು ಬಯಸುವುದಾದರೆ ಪ್ರತಾಪವೆಲ್ಲವೂ ಅಲ್ಲಾಹುವಿನ ಅಧೀನದಲ್ಲಿವೆ.(1) ಉತ್ತಮ ವಚನಗಳು ಅವನೆಡೆಗೆ ಏರಿಹೋಗುವುವು. ಅವನು ಸತ್ಕರ್ಮವನ್ನು ಮೇಲೆತ್ತುವನು. ಯಾರು ಕುತಂತ್ರ ಹೂಡುವರೋ ಅವರಿಗೆ ಕಠಿಣ ಶಿಕ್ಷೆಯಿದೆ. ಅವರ ತಂತ್ರವು ಖಂಡಿತವಾಗಿಯೂ ನಾಶವಾಗುವುದು.

وَٱللَّهُ خَلَقَكُم مِّن تُرَابٖ ثُمَّ مِن نُّطۡفَةٖ
ثُمَّ جَعَلَكُمۡ أَزۡوَٰجٗاۚ وَمَا تَحۡمِلُ مِنۡ أُنثَىٰ
وَلَا تَضَعُ إِلَّا بِعِلۡمِهِۦۚ وَمَا يُعَمَّرُ مِن
مُّعَمَّرٖ وَلَا يُنقَصُ مِنۡ عُمُرِهِۦٓ إِلَّا

**11.** ಅಲ್ಲಾಹು ನಿಮ್ಮನ್ನು ಮಣ್ಣಿನಿಂದ, ತರುವಾಯ ವೀರ್ಯದಿಂದ ಸೃಷ್ಟಿಸಿದನು. ತರುವಾಯ ಅವನು ನಿಮ್ಮನ್ನು ಜೋಡಿಗಳನ್ನಾಗಿ ಮಾಡಿದನು. ಅವನ ಅರಿವಿನ ಪ್ರಕಾರವಲ್ಲದೆ ಯಾವುದೇ ಹೆಣ್ಣು ಗರ್ಭ ಧರಿಸುವುದಾಗಲಿ

1 ಸತ್ಯನಿಷೇಧಿಗಳ ಪ್ರತಾಪ ಮತ್ತು ಸಿರಿವಂತಿಕೆಯನ್ನು ಕಂಡು ಅನೇಕ ಮಂದಿ ಮೋಸಹೋಗುತ್ತಾರೆ. ಅವರ ಪರವಹಿಸುವುದರಿಂದ ಮತ್ತು ಅವರೊಂದಿಗೆ ಸೇರಿಕೊಳ್ಳುವುದರಿಂದ ಅಂತಸ್ತು ವೃದ್ಧಿಯಾಗುತ್ತದೆಂದು ಕೆಲವರು ಭಾವಿಸುತ್ತಾರೆ. ವಾಸ್ತವಿಕವಾಗಿ ಅದೊಂದು ತಪ್ಪು ಕಲ್ಪನೆಯಾಗಿದೆ. ಯಾರಿಗೆ ಯಾವಾಗ ಪ್ರತಾಪ ನೀಡಬೇಕೆಂದು ನಿರ್ಧರಿಸುವುದು ಅಲ್ಲಾಹುವಾಗಿದ್ದಾನೆ.

ಹಡೆಯುವುದಾಗಲಿ ಮಾಡಲಾರಳು. ದೀರ್ಘಾಯುಸ್ಸು ನೀಡಲಾದ ಯಾವುದೇ ವ್ಯಕ್ತಿಗೂ ಆಯುಸ್ಸನ್ನು ದೀರ್ಘಗೊಳಿಸುವುದಾಗಲಿ ಅಥವಾ ಅವನ ಆಯುಸ್ಸನ್ನು ಕುಗ್ಗಿಸಲಾಗುವುದಾಗಲಿ ಒಂದು ದಾಖಲೆಯಲ್ಲಿರುವ ಪ್ರಕಾರವಲ್ಲದೆ ನಡೆಯಲಾರದು. ಖಂಡಿತವಾಗಿಯೂ ಅದು ಅಲ್ಲಾಹುವಿನ ಮಟ್ಟಿಗೆ ಅತಿಸುಲಭವಾಗಿದೆ.

فِي كِتَٰبٍۚ إِنَّ ذَٰلِكَ عَلَى ٱللَّهِ يَسِيرٞ ﴿١١﴾

12. ಎರಡು ಜಲಾಶಯಗಳು ಸಮಾನವಾಗಲಾರವು. ಒಂದರಲ್ಲಿ ಕುಡಿಯಲು ರುಚಿಕರ ಸಿಹಿಯಾದ ಶುದ್ಧಜಲವಿದೆ. ಇನ್ನೊಂದರಲ್ಲಿ ಕಹಿಯಾದ ಉಪ್ಪು ನೀರಿದೆ. ಅವೆರಡು ಬಗೆಯ ನೀರಿನಿಂದಲೂ ನೀವು ತಾಜಾ ಮಾಂಸವನ್ನು[1] ತಿನ್ನುತ್ತಿರುವಿರಿ ಮತ್ತು ನೀವು ಧರಿಸುವಂತಹ ಆಭರಣಗಳನ್ನು (ಅದರಿಂದ) ಹೊರ ತೆಗೆಯುತ್ತಿರುವಿರಿ.[2] ಹಡಗುಗಳು ಅದರ ಮೂಲಕ ಸೀಳುತ್ತಾ ಸಾಗುವುದನ್ನು ತಾವು ಕಾಣುವಿರಿ. ನೀವು ಅಲ್ಲಾಹುವಿನ ಅನುಗ್ರಹದಿಂದ ಅರಸುವ ಸಲುವಾಗಿ ಮತ್ತು ಕೃತಜ್ಞತೆ ಸಲ್ಲಿಸುವ ಸಲುವಾಗಿದೆ.

وَمَا يَسۡتَوِي ٱلۡبَحۡرَانِ هَٰذَا عَذۡبٞ فُرَاتٞ سَآئِغٞ شَرَابُهُۥ وَهَٰذَا مِلۡحٌ أُجَاجٞۖ وَمِن كُلّٖ تَأۡكُلُونَ لَحۡمٗا طَرِيّٗا وَتَسۡتَخۡرِجُونَ حِلۡيَةٗ تَلۡبَسُونَهَاۖ وَتَرَى ٱلۡفُلۡكَ فِيهِ مَوَاخِرَ لِتَبۡتَغُواْ مِن فَضۡلِهِۦ وَلَعَلَّكُمۡ تَشۡكُرُونَ ﴿١٢﴾

13. ಅವನು ರಾತ್ರಿಯನ್ನು ಹಗಲಿನಲ್ಲಿ ನುಸುಳಿಸುವನು. ಹಗಲನ್ನು ರಾತ್ರಿಯಲ್ಲಿ ನುಸುಳಿಸುವನು. ಅವನು ಸೂರ್ಯನನ್ನು ಮತ್ತು ಚಂದ್ರನನ್ನು (ತನ್ನ ನಿಯಮಕ್ಕೆ) ವಿಧೇಯಗೊಳಿಸಿರುವನು. ಎಲ್ಲವೂ ನಿಶ್ಚಿತ ಅವಧಿಯವರೆಗೆ ಚಲಿಸುತ್ತಿರುವುವು. ಅವನಾಗಿರುವನು ನಿಮ್ಮ ರಬ್ಬಾದ ಅಲ್ಲಾಹು. ಆಧಿಪತ್ಯವು ಅವನಿಗಾಗಿದೆ. ಅವನ ಹೊರತು ನೀವು ಯಾರೊಂದಿಗೆ ಪ್ರಾರ್ಥಿಸುತ್ತಿರುವಿರೋ ಅವರ ಒಡೆತನದಲ್ಲಿ ಖರ್ಜೂರದ ಪೊರೆಯೂ ಇಲ್ಲ.

يُولِجُ ٱلَّيۡلَ فِي ٱلنَّهَارِ وَيُولِجُ ٱلنَّهَارَ فِي ٱلَّيۡلِ وَسَخَّرَ ٱلشَّمۡسَ وَٱلۡقَمَرَۖ كُلّٞ يَجۡرِي لِأَجَلٖ مُّسَمّٗىۚ ذَٰلِكُمُ ٱللَّهُ رَبُّكُمۡ لَهُ ٱلۡمُلۡكُۚ وَٱلَّذِينَ تَدۡعُونَ مِن دُونِهِۦ مَا يَمۡلِكُونَ مِن قِطۡمِيرٍ ﴿١٣﴾

1 ಸಮುದ್ರಗಳಿಂದ ಮತ್ತು ನದಿಗಳಿಂದ ದೊರೆಯುವ ಮನಸ್ಸಿಗೆ ಮುದ ನೀಡುವ ತಾಜಾ ಮತ್ಸ್ಯಾಹಾರಗಳು.

2 ಸಮುದ್ರದಾಳದಿಂದ ದೊರೆಯುವ ಅಮೂಲ್ಯ ಮುತ್ತುರತ್ನಗಳು.

إِن تَدۡعُوهُمۡ لَا يَسۡمَعُواْ دُعَآءَكُمۡ وَلَوۡ سَمِعُواْ مَا ٱسۡتَجَابُواْ لَكُمۡۖ وَيَوۡمَ ٱلۡقِيَٰمَةِ يَكۡفُرُونَ بِشِرۡكِكُمۡۚ وَلَا يُنَبِّئُكَ مِثۡلُ خَبِيرٖ ﴿١٤﴾

14. ನೀವು ಅವರೊಂದಿಗೆ ಪ್ರಾರ್ಥಿಸಿದರೆ ಅವರು ನಿಮ್ಮ ಪ್ರಾರ್ಥನೆಯನ್ನು ಆಲಿಸಲಾರರು. ಅವರು ಆಲಿಸಿದರೂ ನಿಮಗೆ ಉತ್ತರವನ್ನು ನೀಡಲಾರರು. ಪುನರುತ್ಥಾನದಿನದಂದು ಅವರು ನಿಮ್ಮ ಸಹಭಾಗಿತ್ವವನ್ನು ನಿಷೇಧಿಸುವರು. ಸೂಕ್ಷ್ಮಜ್ಞಾನಿಯಾದವನಂತೆ (ಅಲ್ಲಾಹುವಿನಂತೆ) ತಮಗೆ ತಿಳಿಸಿಕೊಡುವವರಾರೂ ಇಲ್ಲ.

۞ يَـٰٓأَيُّهَا ٱلنَّاسُ أَنتُمُ ٱلۡفُقَرَآءُ إِلَى ٱللَّهِۖ وَٱللَّهُ هُوَ ٱلۡغَنِيُّ ٱلۡحَمِيدُ ﴿١٥﴾

15. ಓ ಮನುಷ್ಯರೇ! ನೀವು ಅಲ್ಲಾಹುವನ್ನು ಅವಲಂಬಿಸಿದವರಾಗಿರುವಿರಿ. ಅಲ್ಲಾಹು ನಿರಪೇಕ್ಷನೂ, ಸ್ತುತ್ಯರ್ಹನೂ ಆಗಿರುವನು.

إِن يَشَأۡ يُذۡهِبۡكُمۡ وَيَأۡتِ بِخَلۡقٖ جَدِيدٖ ﴿١٦﴾

16. ಅವನು ಇಚ್ಛಿಸುವುದಾದರೆ ಅವನು ನಿಮ್ಮನ್ನು ಅಳಿಸಿ ಹೊಸ ಸೃಷ್ಟಿಯೊಂದನ್ನು ತರುವನು.

وَمَا ذَٰلِكَ عَلَى ٱللَّهِ بِعَزِيزٖ ﴿١٧﴾

17. ಅದು ಅಲ್ಲಾಹುವಿಗೆ ಕಷ್ಟವಾಗಿರುವ ವಿಷಯವಲ್ಲ.

وَلَا تَزِرُ وَازِرَةٞ وِزۡرَ أُخۡرَىٰۚ وَإِن تَدۡعُ مُثۡقَلَةٌ إِلَىٰ حِمۡلِهَا لَا يُحۡمَلۡ مِنۡهُ شَيۡءٞ وَلَوۡ كَانَ ذَا قُرۡبَىٰٓۗ إِنَّمَا تُنذِرُ ٱلَّذِينَ يَخۡشَوۡنَ رَبَّهُم بِٱلۡغَيۡبِ وَأَقَامُواْ ٱلصَّلَوٰةَۚ وَمَن تَزَكَّىٰ فَإِنَّمَا يَتَزَكَّىٰ لِنَفۡسِهِۦۚ وَإِلَى ٱللَّهِ ٱلۡمَصِيرُ ﴿١٨﴾

18. ಪಾಪಭಾರವನ್ನು ಹೊರುವ ಯಾರೂ ಇನ್ನೊಬ್ಬನ ಪಾಪಭಾರವನ್ನು ಹೊರಲಾರನು. ಭಾರದಿಂದಾಗಿ ಕಷ್ಟಪಡುವ ಒಬ್ಬನು ತನ್ನ ಭಾರವನ್ನು ಹೊರಲು (ಯಾರನ್ನಾದರೂ) ಕರೆಯುವುದಾದರೆ ಅದರಿಂದ ಏನನ್ನೂ ವಹಿಸಿಕೊಳ್ಳಲಾಗದು.[1] (ಆತ ಕರೆಯುವುದು ತನ್ನ) ನಿಕಟ ಸಂಬಂಧಿಕನನ್ನಾದರೂ ಸರಿಯೇ. ತಮ್ಮ ಮುನ್ನೆಚ್ಚರಿಕೆಯು ಫಲ ನೀಡುವುದು ತಮ್ಮ ರಬ್ಬನ್ನು ಅಗೋಚರವಾಗಿ ಭಯಪಡುವವರಿಗೆ ಮತ್ತು ನಮಾಝನ್ನು ಸಂಸ್ಥಾಪಿಸುವವರಿಗೆ ಮಾತ್ರವಾಗಿದೆ. ಯಾರು ಪರಿಶುದ್ಧತೆಯನ್ನು ಪಾಲಿಸುವನೋ ಅವನು ಪರಿಶುದ್ಧತೆಯನ್ನು ಪಾಲಿಸುವುದು ಸ್ವತಃ ತನ್ನ ಒಳಿತಿಗೇ ಆಗಿದೆ. ಮರಳುವಿಕೆಯು ಅಲ್ಲಾಹುವಿನೆಡೆಗಾಗಿದೆ.

1 ವಿಚಾರಣೆಯ ದಿನದಂದ ಒಬ್ಬ ತಂದೆಗೆ ಮಗನ ಪಾಪಭಾರವನ್ನು ಹೊರಲು ಸಾಧ್ಯವಿಲ್ಲ. ಒಬ್ಬ ಮಗನಿಗೆ ತಂದೆಯ ಪಾಪಭಾರವನ್ನು ಹೊರಲು ಸಾಧ್ಯವಿಲ್ಲ. ದಂಪತಿಗಳಲ್ಲಿ ಒಬ್ಬರಿಗೆ ಇನ್ನೊಬ್ಬರ ಪಾಪಭಾರವನ್ನು ಹೊರಲು ಸಾಧ್ಯವಿಲ್ಲ. ಪ್ರತಿಯೊಬ್ಬರೂ ತಂತಮ್ಮ ಕರ್ಮಫಲಗಳನ್ನು ಅನುಭವಿಸುವರು.

**19-23.** ಕುರುಡನು ಮತ್ತು ದೃಷ್ಟಿಯುಳ್ಳವನು ಸಮಾನರಾಗಲಾರರು. ಅಂಧಕಾರಗಳು ಮತ್ತು ಪ್ರಕಾಶವು (ಸಮಾನವಾಗಲಾರದು). ನೆರಳು ಮತ್ತು ಬಿಸಿಲು (ಸಮಾನವಾಗಲಾರದು). ಬದುಕಿರುವವರು ಮತ್ತು ಮೃತರು ಸಮಾನರಾಗಲಾರರು. ಖಂಡಿತವಾಗಿಯೂ ಅಲ್ಲಾಹು ತಾನಿಚ್ಛಿಸುವವರನ್ನು ಆಲಿಸುವಂತೆ ಮಾಡುವನು. ಗೋರಿಗಳಲ್ಲಿರುವವರನ್ನು ಆಲಿಸುವಂತೆ ಮಾಡಲು ತಮ್ಮಿಂದ ಸಾಧ್ಯವಿಲ್ಲ. ತಾವು ಮುನ್ನೆಚ್ಚರಿಕೆ ನೀಡುವವರು ಮಾತ್ರವಾಗಿರುವಿರಿ.

وَمَا يَسۡتَوِي ٱلۡأَعۡمَىٰ وَٱلۡبَصِيرُ ﴿١٩﴾ وَلَا ٱلظُّلُمَٰتُ وَلَا ٱلنُّورُ ﴿٢٠﴾ وَلَا ٱلظِّلُّ وَلَا ٱلۡحَرُورُ ﴿٢١﴾ وَمَا يَسۡتَوِي ٱلۡأَحۡيَآءُ وَلَا ٱلۡأَمۡوَٰتُۚ إِنَّ ٱللَّهَ يُسۡمِعُ مَن يَشَآءُۖ وَمَآ أَنتَ بِمُسۡمِعٖ مَّن فِي ٱلۡقُبُورِ ﴿٢٢﴾ إِنۡ أَنتَ إِلَّا نَذِيرٌ ﴿٢٣﴾

**24.** ಖಂಡಿತವಾಗಿಯೂ ನಾವು ತಮ್ಮನ್ನು ಶುಭವಾರ್ತೆ ತಿಳಿಸುವವರಾಗಿ ಮತ್ತು ಮುನ್ನೆಚ್ಚರಿಕೆ ನೀಡುವವರಾಗಿ ಸತ್ಯದೊಂದಿಗೆ ಕಳುಹಿಸಿರುವೆವು. ಒಬ್ಬ ಮುನ್ನೆಚ್ಚರಿಕೆಗಾರ ಬಂದು ಹೋಗದ ಸಮುದಾಯವೊಂದೂ ಗತಿಸಿಹೋಗಿಲ್ಲ.

إِنَّآ أَرۡسَلۡنَٰكَ بِٱلۡحَقِّ بَشِيرٗا وَنَذِيرٗاۚ وَإِن مِّنۡ أُمَّةٍ إِلَّا خَلَا فِيهَا نَذِيرٞ ﴿٢٤﴾

**25.** ಅವರು ತಮ್ಮನ್ನು ನಿಷೇಧಿಸುವುದಾದರೆ ಅವರಿಗಿಂತ ಮುಂಚಿನವರೂ ನಿಷೇಧಿಸಿರುವರು. ಸ್ಪಷ್ಟವಾದ ಪುರಾವೆಗಳು, ಆಧಾರ ಪ್ರಮಾಣಗಳು ಮತ್ತು ಪ್ರಕಾಶ ಬೀರುವ ಗ್ರಂಥದೊಂದಿಗೆ ಅವರ ಸಂದೇಶವಾಹಕರು ಅವರ ಬಳಿಗೆ ಬಂದಿದ್ದರು.

وَإِن يُكَذِّبُوكَ فَقَدۡ كَذَّبَ ٱلَّذِينَ مِن قَبۡلِهِمۡ جَآءَتۡهُمۡ رُسُلُهُم بِٱلۡبَيِّنَٰتِ وَبِٱلزُّبُرِ وَبِٱلۡكِتَٰبِ ٱلۡمُنِيرِ ﴿٢٥﴾

**26.** ತರುವಾಯ ನಾನು ಸತ್ಯನಿಷೇಧಿಗಳನ್ನು ಹಿಡಿದೆನು. ಆಗ ನನ್ನ ರೋಷವು ಹೇಗಿತ್ತು!

ثُمَّ أَخَذۡتُ ٱلَّذِينَ كَفَرُواْۖ فَكَيۡفَ كَانَ نَكِيرِ ﴿٢٦﴾

**27.** ಅಲ್ಲಾಹು ಆಕಾಶದಿಂದ (ಮಳೆ) ನೀರನ್ನು ಸುರಿಸುವುದನ್ನು ತಾವು ನೋಡುವುದಿಲ್ಲವೇ? ತರುವಾಯ ಅದರಿಂದ ನಾವು ವಿವಿಧ ಬಣ್ಣಗಳನ್ನು ಹೊಂದಿರುವ ಫಲಗಳನ್ನು ಉತ್ಪಾದಿಸಿದೆವು. ಪರ್ವತಗಳಲ್ಲೂ ಬೆಳ್ಳಗಿನ ಮತ್ತು ಕೆಂಪಗಿನ ವರ್ಣವೈವಿಧ್ಯತೆಯಿರುವ

أَلَمۡ تَرَ أَنَّ ٱللَّهَ أَنزَلَ مِنَ ٱلسَّمَآءِ مَآءٗ فَأَخۡرَجۡنَا بِهِۦ ثَمَرَٰتٖ مُّخۡتَلِفًا أَلۡوَٰنُهَاۚ وَمِنَ ٱلۡجِبَالِ جُدَدُۢ بِيضٞ وَحُمۡرٞ مُّخۡتَلِفٌ أَلۡوَٰنُهَا وَغَرَابِيبُ سُودٞ ﴿٢٧﴾

ಹಾದಿಗಳಿವೆ.(1) ಕಡುಗಪ್ಪು ಬಣ್ಣದವುಗಳೂ ಇವೆ.

وَمِنَ ٱلنَّاسِ وَٱلدَّوَآبِّ وَٱلْأَنْعَٰمِ مُخْتَلِفٌ أَلْوَٰنُهُۥ كَذَٰلِكَۗ إِنَّمَا يَخْشَى ٱللَّهَ مِنْ عِبَادِهِ ٱلْعُلَمَٰٓؤُا۟ۗ إِنَّ ٱللَّهَ عَزِيزٌ غَفُورٌ ﴿٢٨﴾

**28.** ಮನುಷ್ಯರಲ್ಲೂ, ಜೀವರಾಶಿಗಳಲ್ಲೂ, ಜಾನುವಾರುಗಳಲ್ಲೂ ಹಾಗೆಯೇ ವಿಭಿನ್ನ ಬಣ್ಣಗಳನ್ನು ಹೊಂದಿರುವವುಗಳಿವೆ.(2) ಅಲ್ಲಾಹುವಿನ ದಾಸರಲ್ಲಿ ಅವನನ್ನು ಭಯಪಡುವವರು ಅರಿವುಳ್ಳವರು ಮಾತ್ರವಾಗಿರುವರು.(3) ಖಂಡಿತವಾಗಿಯೂ ಅಲ್ಲಾಹು ಪ್ರತಾಪಶಾಲಿಯೂ, ಅತ್ಯಧಿಕ ಕ್ಷಮಿಸುವವನೂ ಆಗಿರುವನು.

إِنَّ ٱلَّذِينَ يَتْلُونَ كِتَٰبَ ٱللَّهِ وَأَقَامُوا۟ ٱلصَّلَوٰةَ وَأَنفَقُوا۟ مِمَّا رَزَقْنَٰهُمْ سِرًّا وَعَلَانِيَةً يَرْجُونَ تِجَٰرَةً لَّن تَبُورَ ﴿٢٩﴾

**29.** ಖಂಡಿತವಾಗಿಯೂ ಅಲ್ಲಾಹುವಿನ ಗ್ರಂಥವನ್ನು ಪಾರಾಯಣ ಮಾಡುವವರು, ನಮಾಝನ್ನು ಸಂಸ್ಥಾಪಿಸುವವರು ಮತ್ತು ನಾವು ನೀಡಿರುವುದರಿಂದ ಗುಪ್ತವಾಗಿಯೂ, ಬಹಿರಂಗವಾಗಿಯೂ ವ್ಯಯಿಸುವವರು ಯಾರೋ ಅವರು ಆಶಿಸುವುದು ಎಂದಿಗೂ ನಷ್ಟ ಹೊಂದದ ಒಂದು ವ್ಯಾಪಾರವನ್ನಾಗಿದೆ.

لِيُوَفِّيَهُمْ أُجُورَهُمْ وَيَزِيدَهُم مِّن فَضْلِهِۦٓۚ إِنَّهُۥ غَفُورٌ شَكُورٌ ﴿٣٠﴾

**30.** ಅವನು ಅವರಿಗೆ ಅವರ ಪ್ರತಿಫಲವನ್ನು ಪೂರ್ಣವಾಗಿ ನೀಡುವ ಸಲುವಾಗಿ ಮತ್ತು ಅವನ ಅನುಗ್ರಹದಿಂದ ಅವರಿಗೆ ಅಧಿಕವಾಗಿ ನೀಡುವ ಸಲುವಾಗಿ. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ ಕೃತಜ್ಞನೂ ಆಗಿರುವನು.

---

1 ತಿರುವು ಮುರುವಾಗಿ ಸಾಗಿರುವ ಪರ್ವತ ಕಣಿವೆಗಳು ಹಲವು ಕಡೆ ಬಂಡೆಗಳ ವರ್ಣ ವೈವಿಧ್ಯತೆಯಿಂದಾಗಿ ಗಮನಾರ್ಹವಾಗಿರುತ್ತದೆ.

2 ಪ್ರಕೃತಿಯ ವರ್ಣವಿನ್ಯಾಸ ವಿಸ್ಮಯಕರವಾದ ಒಂದು ವಿದ್ಯಮಾನವಾಗಿದೆ. ವರ್ಣವೈವಿಧ್ಯತೆಗಳ ಹಿಂದಿರುವ ನಿಗೂಢತೆಗಳ ಪೈಕಿ ಹೆಚ್ಚಿನವುಗಳು ಇನ್ನೂ ಅನಾವರಣಗೊಂಡಿಲ್ಲ. ವರ್ಣಗಳು ಅಲ್ಲಾಹುವಿನ ಸೃಷ್ಟಿ ವೈವಿಧ್ಯತೆಯ ನಿದರ್ಶನವಾಗಿದೆ.

3 ತಮ್ಮನ್ನು ಬುದ್ಧಿಜೀವಿಗಳೆಂದು ಭಾವಿಸುವ ಕೆಲವರಿದ್ದಾರೆ. ಅವರು ಅಲ್ಲಾಹುವಿನ ಭಯದ ಕುರಿತು ಎಲ್ಲಾ ಕಾಲದಲ್ಲೂ ಪ್ರಚಾರ ಮಾಡುತ್ತಾ ಬಂದಿರುವುದು ಅದು ಬುದ್ಧಿಹೀನರ ಮಾನಸಿಕ ದೌರ್ಬಲ್ಯವೆಂದಾಗಿದೆ. ಈ ನಿಲುವು ತಪ್ಪು ಮತ್ತು ಅರಿವು ಹೊಂದಿರುವ ಜನರೇ ಅಲ್ಲಾಹುವಿನ ಭಯವನ್ನು ಹೊಂದಿರುವವರು ಎಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ. ಮಿಥ್ಯಭ್ರಮೆಗಳಿಗೆ ಬಲಿಯಾಗಿ ಧರ್ಮವಿರುದ್ಧ ಅಭಿಯಾನಕ್ಕೆ ನಾಯಕತ್ವ ವಹಿಸಿದ್ದ ಅನೇಕ ಮಂದಿ ತದನಂತರ ವಿಶ್ವಾಸಿಗಳಾಗಿ ಮಾರ್ಪಟ್ಟ ಸಂಭವಗಳು ಪ್ರಜ್ಞಾವಂತರ ಕಣ್ಣು ತೆರೆಸಲು ಪರ್ಯಾಪ್ತವಾಗಿದೆ.

31. ನಾವು ತಮಗೆ ದಿವ್ಯಸಂದೇಶವಾಗಿ ನೀಡಿರುವ ಗ್ರಂಥವು ಸತ್ಯವೇ ಆಗಿದೆ. ಅದರ ಮುಂಚಿನ (ಗ್ರಂಥಗಳನ್ನು) ಅದು ದೃಢೀಕರಿಸುತ್ತದೆ. ಖಂಡಿತವಾಗಿಯೂ ಅಲ್ಲಾಹು ತನ್ನ ದಾಸರ ಕುರಿತು ಸೂಕ್ಷ್ಮವಾಗಿ ಅರಿಯುವವನೂ, ವೀಕ್ಷಿಸುವವನೂ ಆಗಿರುವನು.

وَٱلَّذِيٓ أَوۡحَيۡنَآ إِلَيۡكَ مِنَ ٱلۡكِتَٰبِ هُوَ ٱلۡحَقُّ مُصَدِّقٗا لِّمَا بَيۡنَ يَدَيۡهِۗ إِنَّ ٱللَّهَ بِعِبَادِهِۦ لَخَبِيرُۢ بَصِيرٞ ٣١

32. ತರುವಾಯ ನಮ್ಮ ದಾಸರ ಪೈಕಿ ನಾವು ಆರಿಸಿದವರಿಗೆ ಗ್ರಂಥವನ್ನು ವಾರೀಸಾಗಿ ನೀಡಿದೆವು. ಸ್ವತಃ ತಮ್ಮೊಂದಿಗೆ ಅಕ್ರಮವೆಸಗಿದವರು ಅವರಲ್ಲಿರುವರು. ಮಧ್ಯಮ ನಿಲುವನ್ನು ಹೊಂದಿದವರೂ ಅವರಲ್ಲಿರುವರು. ಅಲ್ಲಾಹುವಿನ ಅಪ್ಪಣೆಯ ಪ್ರಕಾರ ಸತ್ಕರ್ಮಗಳಲ್ಲಿ ಮುಂದೆ ಸಾಗಿದವರೂ ಅವರಲ್ಲಿರುವರು. ಮಹಾ ಅನುಗ್ರಹವು ಅದುವೇ ಆಗಿದೆ.

ثُمَّ أَوۡرَثۡنَا ٱلۡكِتَٰبَ ٱلَّذِينَ ٱصۡطَفَيۡنَا مِنۡ عِبَادِنَاۖ فَمِنۡهُمۡ ظَالِمٞ لِّنَفۡسِهِۦ وَمِنۡهُم مُّقۡتَصِدٞ وَمِنۡهُمۡ سَابِقُۢ بِٱلۡخَيۡرَٰتِ بِإِذۡنِ ٱللَّهِۚ ذَٰلِكَ هُوَ ٱلۡفَضۡلُ ٱلۡكَبِيرُ ٣٢

33. ಶಾಶ್ವತ ವಾಸಕ್ಕಾಗಿರುವ ಸ್ವರ್ಗೋದ್ಯಾನಗಳನ್ನು ಅವರು ಪ್ರವೇಶಿಸುವರು. ಅಲ್ಲಿ ಅವರಿಗೆ ಬಂಗಾರದ ಬಳೆಗಳನ್ನು ಮತ್ತು ಮುತ್ತು ರತ್ನಗಳನ್ನು ತೊಡಿಸಲಾಗುವುದು. ಅಲ್ಲಿ ಅವರ ಉಡುಪು ರೇಷ್ಮೆಯಾಗಿರುವುದು.

جَنَّٰتُ عَدۡنٖ يَدۡخُلُونَهَا يُحَلَّوۡنَ فِيهَا مِنۡ أَسَاوِرَ مِن ذَهَبٖ وَلُؤۡلُؤٗاۖ وَلِبَاسُهُمۡ فِيهَا حَرِيرٞ ٣٣

34. ಅವರು ಹೇಳುವರು: 'ನಮ್ಮಿಂದ ದುಃಖವನ್ನು ನಿವಾರಿಸಿದ ಅಲ್ಲಾಹುವಿಗೆ ಸ್ತುತಿ. ಖಂಡಿತವಾಗಿಯೂ ನಮ್ಮ ರಬ್ ಅತ್ಯಧಿಕ ಕ್ಷಮಿಸುವವನೂ, ಕೃತಜ್ಞನೂ ಆಗಿರುವನು.

وَقَالُواْ ٱلۡحَمۡدُ لِلَّهِ ٱلَّذِيٓ أَذۡهَبَ عَنَّا ٱلۡحَزَنَۖ إِنَّ رَبَّنَا لَغَفُورٞ شَكُورٌ ٣٤

35. ತನ್ನ ಅನುಗಹ್ರದ ನಿಮಿತ್ತ ಶಾಶ್ವತ ವಾಸಕ್ಕಿರುವ ಈ ಭವನದಲ್ಲಿ ನಮ್ಮನ್ನು ನಲೆಗೊಳಿಸಿದವನು ಅವನಾಗಿರುವನು. ಇಲ್ಲಿ ಯಾವುದೇ ತೊಂದರೆಯು ನಮ್ಮನ್ನು ಬಾಧಿಸದು. ಇಲ್ಲಿ ಯಾವುದೇ ದಣಿವು ನಮ್ಮನ್ನು ಸ್ಪರ್ಶಿಸದು

ٱلَّذِيٓ أَحَلَّنَا دَارَ ٱلۡمُقَامَةِ مِن فَضۡلِهِۦ لَا يَمَسُّنَا فِيهَا نَصَبٞ وَلَا يَمَسُّنَا فِيهَا لُغُوبٞ ٣٥

36. ಅವಿಶ್ವಾಸವಿಟ್ಟವರಾರೋ ಅವರಿಗೆ ನರಕಾಗ್ನಿಯಿದೆ. ಅವರ ಮೇಲೆ (ಮರಣವನ್ನು) ವಿಧಿಸಲಾಗದು. ಹಾಗಿದ್ದರೆ ಅವರಿಗೆ ಮರಣಹೊಂದಬಹುದಾಗಿತ್ತು. ಅದರ

وَٱلَّذِينَ كَفَرُواْ لَهُمۡ نَارُ جَهَنَّمَ لَا يُقۡضَىٰ عَلَيۡهِمۡ فَيَمُوتُواْ وَلَا يُخَفَّفُ عَنۡهُم مِّنۡ عَذَابِهَاۚ كَذَٰلِكَ نَجۡزِي كُلَّ كَفُورٖ ٣٦

ಶಿಕ್ಷೆಯಿಂದ ಅವರಿಗೆ ಸ್ವಲ್ಪವೂ ರಿಯಾಯಿತಿ ನೀಡಲಾಗದು. ಸರ್ವ ಕೃತಘ್ನರಿಗೂ ನಾವು ಹೀಗೆ ಪತಿಫಲವನ್ನು ನೀಡುವೆವು.

وَهُمْ يَصْطَرِخُونَ فِيهَا رَبَّنَآ أَخْرِجْنَا نَعْمَلْ صَـٰلِحًا غَيْرَ ٱلَّذِى كُنَّا نَعْمَلُ ۚ أَوَلَمْ نُعَمِّرْكُم مَّا يَتَذَكَّرُ فِيهِ مَن تَذَكَّرَ وَجَآءَكُمُ ٱلنَّذِيرُ ۖ فَذُوقُوا۟ فَمَا لِلظَّـٰلِمِينَ مِن نَّصِيرٍ ﴿٣٧﴾

37. ಅಲ್ಲಿ ಅವರು ರೋದಿಸುವರು. ‘ಓ ನಮ್ಮ ರಬ್! ನಮ್ಮನ್ನು ಹೊರ ಕಳಿಸು. (ಮುಂಚೆ) ಮಾಡುತ್ತಿದ್ದುದಕ್ಕಿಂತ ಭಿನ್ನವಾಗಿ ನಾವು ಸತ್ಕರ್ಮವನ್ನು ಮಾಡುವೆವು’. (ಆಗ ನಾವು ಹೇಳುವೆವು): ‘ಚಿಂತಿಸುವವನಿಗೆ ಚಿಂತಿಸಲು ಸಾಕಾಗುವಷ್ಟು ಆಯುಸ್ಸನ್ನು ನಾವು ನಿಮಗೆ ನೀಡಲಿಲ್ಲವೇ? ಮುನ್ನೆಚ್ಚರಿಕೆಗಾರರು ಸಹ ನಿಮ್ಮ ಬಳಿಗೆ ಬಂದಿದ್ದರು. ಆದ್ದರಿಂದ ನೀವು ಅನುಭವಿಸಿರಿ. ಅಕ್ರಮಿಗಳಿಗೆ ಸಹಾಯಕರಾಗಿ ಯಾರೂ ಇರಲಾರರು.

إِنَّ ٱللَّهَ عَـٰلِمُ غَيْبِ ٱلسَّمَـٰوَٰتِ وَٱلْأَرْضِ ۚ إِنَّهُۥ عَلِيمٌۢ بِذَاتِ ٱلصُّدُورِ ﴿٣٨﴾

38. ಖಂಡಿತವಾಗಿಯೂ ಅಲ್ಲಾಹು ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಅಗೋಚರ ವಿಷಯಗಳನ್ನು ಅರಿಯುವವನಾಗಿರುವನು. ಖಂಡಿತವಾಗಿಯೂ ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

هُوَ ٱلَّذِى جَعَلَكُمْ خَلَـٰٓئِفَ فِى ٱلْأَرْضِ ۚ فَمَن كَفَرَ فَعَلَيْهِ كُفْرُهُۥ ۖ وَلَا يَزِيدُ ٱلْكَـٰفِرِينَ كُفْرُهُمْ عِندَ رَبِّهِمْ إِلَّا مَقْتًا ۖ وَلَا يَزِيدُ ٱلْكَـٰفِرِينَ كُفْرُهُمْ إِلَّا خَسَارًا ﴿٣٩﴾

39. ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳನ್ನಾಗಿ ಮಾಡಿದವನು ಅವನಾಗಿರುವನು. ಆದ್ದರಿಂದ ಯಾರಾದರೂ ಅವಿಶ್ವಾಸವಿಡುವುದಾದರೆ ಅವನ ಅವಿಶ್ವಾಸದ ದೋಷವು ಅವನಿಗೇ ಆಗಿದೆ. ಅವಿಶ್ವಾಸಿಗಳಿಗೆ ಅವರ ಅವಿಶ್ವಾಸವು ಅವರ ರಬ್‌ನ ಬಳಿ ಕ್ರೋಧವನ್ನಲ್ಲದೆ ಇನ್ನೇನನ್ನೂ ಹೆಚ್ಚಿಸಿಕೊಡಲಾರದು. ಅವಿಶ್ವಾಸಿಗಳಿಗೆ ಅವರ ಅವಿಶ್ವಾಸವು ನಷ್ಟವನ್ನಲ್ಲದೆ ಇನ್ನೇನನ್ನೂ ಹೆಚ್ಚಿಸಿಕೊಡಲಾರದು.

قُلْ أَرَءَيْتُمْ شُرَكَآءَكُمُ ٱلَّذِينَ تَدْعُونَ مِن دُونِ ٱللَّهِ أَرُونِى مَاذَا خَلَقُوا۟ مِنَ ٱلْأَرْضِ أَمْ لَهُمْ شِرْكٌ فِى ٱلسَّمَـٰوَٰتِ أَمْ

40. ತಾವು ಹೇಳಿರಿ: ‘ಅಲ್ಲಾಹುವಿನ ಹೊರತು ನೀವು ಕರೆದು ಪ್ರಾರ್ಥಿಸುತ್ತಿರುವ ನಿಮ್ಮ ಸಹಭಾಗಿಗಳ ಕುರಿತು ನೀವು ಚಿಂತಿಸಿರುವಿರಾ? ಅವರು ಭೂಮಿಯಲ್ಲಿ ಏನನ್ನು

ءَاتَيۡنَٰهُمۡ كِتَٰبًا فَهُمۡ عَلَىٰ بَيِّنَتٖ مِّنۡهُۚ بَلۡ
إِن يَعِدُ ٱلظَّٰلِمُونَ بَعۡضُهُم بَعۡضًا إِلَّا
غُرُورًا ﴿٤٠﴾

ಸೃಷ್ಟಿಸಿರುವರೆಂದು ನನಗೆ ತೋರಿಸಿಕೊಡಿರಿ. ಅಥವಾ ಅವರಿಗೆ ಆಕಾಶಗಳಲ್ಲಿ ಯಾವುದಾದರೂ ಸಹಭಾಗಿತ್ವವಿದೆಯೇ? ಅಥವಾ ನಾವು ಅವರಿಗೆ ಯಾವುದಾದರೂ ಗ್ರಂಥವನ್ನು ನೀಡಿ ಅವರು ಅದರಲ್ಲಿರುವ ಪುರಾವೆಗೆ ಅನುಗುಣವಾಗಿ ನೆಲೆಗೊಳ್ಳುತ್ತಿರುವರೇ? ಅಲ್ಲ, ಅಕ್ರಮಿಗಳು ಪರಸ್ಪರ ವಾಗ್ದಾನ ಮಾಡುತ್ತಿರುವುದು ವಂಚನೆಯನ್ನು ಮಾತ್ರವಾಗಿದೆ.

۞إِنَّ ٱللَّهَ يُمۡسِكُ ٱلسَّمَٰوَٰتِ وَٱلۡأَرۡضَ أَن
تَزُولَاۚ وَلَئِن زَالَتَآ إِنۡ أَمۡسَكَهُمَا مِنۡ أَحَدٖ
مِّنۢ بَعۡدِهِۦٓۚ إِنَّهُۥ كَانَ حَلِيمًا غَفُورًا ﴿٤١﴾

**41.** ಖಂಡಿತವಾಗಿಯೂ ಅಲ್ಲಾಹು ಆಕಾಶಗಳನ್ನು ಮತ್ತು ಭೂಮಿಯನ್ನು (ಅದರ ಸ್ಥಾನದಿಂದ) ಜಾರಿ ಹೋಗದಂತೆ ಹಿಡಿದಿರುವನು. ಅವೇನಾದರೂ ಜಾರಿ ಹೋದರೆ ಅವನ ಹೊರತು ಯಾರಿಗೂ ಅವುಗಳನ್ನು ಹಿಡಿದು ನಿಲ್ಲಿಸಲು ಸಾಧ್ಯವಾಗದು. ಖಂಡಿತವಾಗಿಯೂ ಅವನು ಸಹನಾಶೀಲನೂ, ಅತ್ಯಧಿಕ ಕ್ಷಮಿಸುವವನೂ ಆಗಿರುವನು.

وَأَقۡسَمُواْ بِٱللَّهِ جَهۡدَ أَيۡمَٰنِهِمۡ لَئِن جَآءَهُمۡ
نَذِيرٞ لَّيَكُونُنَّ أَهۡدَىٰ مِنۡ إِحۡدَى
ٱلۡأُمَمِۖ فَلَمَّا جَآءَهُمۡ نَذِيرٞ مَّا زَادَهُمۡ إِلَّا
نُفُورًا ﴿٤٢﴾

**42.** ತಮ್ಮ ಬಳಿಗೆ ಒಬ್ಬ ಮುನ್ನೆಚ್ಚರಿಕೆಗಾರನು ಬರುವುದಾದರೆ ತಾವು ಇತರ ಯಾವುದೇ ಸಮುದಾಯಕ್ಕಿಂತಲೂ ಹೆಚ್ಚು ಸನ್ಮಾರ್ಗವನ್ನು ಪಡೆದವರಾಗುವೆವು ಎಂದು ಅವರಿಗೆ ಆಣೆಯಿಡಲು ಸಾಧ್ಯವಾಗುವಷ್ಟು ಅಲ್ಲಾಹುವಿನ ಮೇಲೆ ಆಣೆಯಿಟ್ಟು ಅವರು ಹೇಳಿದರು. ಆದರೆ ಒಬ್ಬ ಮುನ್ನೆಚ್ಚರಿಕೆಗಾರನು ಅವರ ಬಳಿಗೆ ಬಂದಾಗ ಅದು ಅವರಿಗೆ ಹೆಚ್ಚಿಸಿಕೊಟ್ಟಿರುವುದು ವಿದೂರತೆಯನ್ನು ಮಾತ್ರವಾಗಿತ್ತು.

ٱسۡتِكۡبَارٗا فِي ٱلۡأَرۡضِ وَمَكۡرَ ٱلسَّيِّيِٕۚ وَلَا
يَحِيقُ ٱلۡمَكۡرُ ٱلسَّيِّئُ إِلَّا بِأَهۡلِهِۦۚ فَهَلۡ
يَنظُرُونَ إِلَّا سُنَّتَ ٱلۡأَوَّلِينَۚ فَلَن تَجِدَ
لِسُنَّتِ ٱللَّهِ تَبۡدِيلٗاۖ وَلَن تَجِدَ لِسُنَّتِ ٱللَّهِ
تَحۡوِيلًا ﴿٤٣﴾

**43.** ಅದು ಅವರು ಭೂಮಿಯಲ್ಲಿ ಅಹಂಕಾರ ಪಟ್ಟಿರುವುದರಿಂದ ಮತ್ತು ಕುತಂತ್ರಗಳನ್ನು ಹೂಡಿರುವುದರಿಂದಾಗಿದೆ. ಕುತಂತ್ರ(ದ ಫಲ) ವು ಅದನ್ನು ಹೂಡಿದವರ ಮೇಲೆಯೇ ಎರಗುವುದು. ಹಾಗಾದರೆ ಪೂರ್ವಿಕರ ಮೇಲೆ ಕೈಗೊಳ್ಳಲಾದ ಕ್ರಮಗಳ ವಿನಾ[1] ಅವರು

1 ಅಲ್ಲಾಹುವಿನ ಕ್ರಮ ಎಂದರೆ ಪೂರ್ವ ಪ್ರವಾದಿಗಳ ವಿರೋಧಿಗಳಿಗೆ ಅಲ್ಲಾಹು ನೀಡಿದ ಕಠಿಣ ಶಿಕ್ಷೆಯಾಗಿದೆ.

ಇನ್ನೇನನ್ನು ಕಾಯುತ್ತಿರುವರು? ಅಲ್ಲಾಹುವಿನ ಕ್ರಮದಲ್ಲಿ ತಾವು ಯಾವುದೇ ಬದಲಾವಣೆಯನ್ನೂ ಕಾಣಲಾರಿರಿ. ಅಲ್ಲಾಹುವಿನ ಕ್ರಮದಲ್ಲಿ ಯಾವುದೇ ಬದಲಾವಣೆಯನ್ನೂ ತಾವು ಕಾಣಲಾರಿರಿ.

أَوَ لَمْ يَسِيرُواْ فِي ٱلْأَرْضِ فَيَنظُرُواْ كَيْفَ كَانَ عَٰقِبَةُ ٱلَّذِينَ مِن قَبْلِهِمْ وَكَانُوٓاْ أَشَدَّ مِنْهُمْ قُوَّةًۚ وَمَا كَانَ ٱللَّهُ لِيُعْجِزَهُۥ مِن شَيْءٍ فِي ٱلسَّمَٰوَٰتِ وَلَا فِي ٱلْأَرْضِۚ إِنَّهُۥ كَانَ عَلِيمًا قَدِيرًا ﴿٤٤﴾

**44.** ಅವರು ಭೂಮಿಯಲ್ಲಿ ಸಂಚರಿಸಿ ತಮ್ಮ ಪೂರ್ವಿಕರ ಪರ್ಯಾವಸಾನವು ಹೇಗಿತ್ತೆಂಬುದನ್ನು ನೋಡಿಲ್ಲವೇ? ಅವರು ಇವರಿಗಿಂತಲೂ ಅಪಾರ ಶಕ್ತಿಶಾಲಿಗಳಾಗಿದ್ದರು. ಆಕಾಶಗಳಲ್ಲಿರುವ ಅಥವಾ ಭೂಮಿಯಲ್ಲಿರುವ ಯಾವುದರಿಂದಲೂ ಅಲ್ಲಾಹುವನ್ನು ಸೋಲಿಸಲಾಗದು. ಖಂಡಿತವಾಗಿಯೂ ಅವನು ಸರ್ವಜ್ಞನೂ, ಸರ್ವಶಕ್ತನೂ ಆಗಿರುವನು.

وَلَوْ يُؤَاخِذُ ٱللَّهُ ٱلنَّاسَ بِمَا كَسَبُواْ مَا تَرَكَ عَلَىٰ ظَهْرِهَا مِن دَآبَّةٍ وَلَٰكِن يُؤَخِّرُهُمْ إِلَىٰٓ أَجَلٍ مُّسَمًّىۖ فَإِذَا جَآءَ أَجَلُهُمْ فَإِنَّ ٱللَّهَ كَانَ بِعِبَادِهِۦ بَصِيرًا ﴿٤٥﴾

**45.** ಅಲ್ಲಾಹು ಮನುಷ್ಯರನ್ನು ಅವರು ಮಾಡಿದ ಕರ್ಮಗಳ ನಿಮಿತ್ತ (ತಕ್ಷಣವೇ) ಹಿಡಿದು ಶಿಕ್ಷಿಸುವುದಾದರೆ ಭೂಮುಖದ ಮೇಲೆ ಯಾವ ಜೀವಿಯನ್ನೂ ಅವನು ಬಿಟ್ಟುಬಿಡುತ್ತಿರಲಿಲ್ಲ. ಆದರೆ ಒಂದು ನಿಶ್ಚಿತ ಅವಧಿಯವರೆಗೆ ಅವನು ಅವರಿಗೆ ಕಾಲಾವಕಾಶವನ್ನು ನೀಡುವನು. ತರುವಾಯ ಅವರ ಅವಧಿಯು ಬಂದರೆ (ಅವರಿಗೆ ಪಾರಾಗಲು ಸಾಧ್ಯವಾಗದು). ಯಾಕೆಂದರೆ ಖಂಡಿತವಾಗಿಯೂ ಅಲ್ಲಾಹು ತನ್ನ ದಾಸರನ್ನು ವೀಕ್ಷಿಸುವವನಾಗಿರುವನು.

# ಯಾಸೀನ್

# سُورَةُ يسٓ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 83

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-4.** ಯಾಸೀನ್. ತತ್ವಪೂರ್ಣವಾದ ಕುರ್‌ಆನ್‌ನ ಮೇಲಾಣೆ. ಖಂಡಿತವಾಗಿಯೂ ತಾವು ಸಂದೇಶವಾಹಕರಲ್ಲಿ ಸೇರಿದವರಾಗಿರುವಿರಿ. ತಾವು ನೇರವಾದ ಹಾದಿಯಲ್ಲಿರುವಿರಿ.

يسٓ ﴿١﴾ وَٱلۡقُرۡءَانِ ٱلۡحَكِيمِ ﴿٢﴾ إِنَّكَ لَمِنَ ٱلۡمُرۡسَلِينَ ﴿٣﴾ عَلَىٰ صِرَٰطٖ مُّسۡتَقِيمٖ ﴿٤﴾

**5.** ಇದು (ಕುರ್‌ಆನ್) ಪ್ರತಾಪಶಾಲಿಯೂ ಕರುಣಾನಿಧಿಯೂ ಆಗಿರುವವನಿಂದ ಅವತೀರ್ಣಗೊಂಡಿದೆ.

تَنزِيلَ ٱلۡعَزِيزِ ٱلرَّحِيمِ ﴿٥﴾

**6.** ತಾವು ಒಂದು ಜನತೆಗೆ ಮುನ್ನೆಚ್ಚರಿಕೆಯನ್ನು ನೀಡುವ ಸಲುವಾಗಿ. ಅವರ ಪೂರ್ವಿಕರಿಗೆ ಮುನ್ನೆಚ್ಚರಿಕೆ ನೀಡಲಾಗಿರಲಿಲ್ಲ. ಆದ್ದರಿಂದ ಅವರು ಅಲಕ್ಷ್ಯತೆಯಲ್ಲಿರುವರು.[1]

لِتُنذِرَ قَوۡمٗا مَّآ أُنذِرَ ءَابَآؤُهُمۡ فَهُمۡ غَٰفِلُونَ ﴿٦﴾

**7.** ಅವರ ಪೈಕಿ ಹೆಚ್ಚಿನವರ ಮೇಲೂ (ಶಿಕ್ಷೆಯ) ವಚನವು ಸತ್ಯವಾಗಿ ಪರಿಣಮಿಸಿದೆ. ಆದ್ದರಿಂದ ಅವರು ವಿಶ್ವಾಸವಿಡಲಾರರು.

لَقَدۡ حَقَّ ٱلۡقَوۡلُ عَلَىٰٓ أَكۡثَرِهِمۡ فَهُمۡ لَا يُؤۡمِنُونَ ﴿٧﴾

**8.** ಅವರ ಕೊರಳುಗಳಲ್ಲಿ ನಾವು ಸಂಕೋಲೆಗಳನ್ನು ಇಟ್ಟಿರುವೆವು. ಅವು (ಅವರ) ಗಲ್ಲಗಳ ತನಕ ತಲುಪಿರುವುವು. ಆದ್ದರಿಂದ ಅವರು ತಲೆಯೆತ್ತಿಕೊಂಡೇ ಇರುವರು.[2]

إِنَّا جَعَلۡنَا فِيٓ أَعۡنَٰقِهِمۡ أَغۡلَٰلٗا فَهِيَ إِلَى ٱلۡأَذۡقَانِ فَهُم مُّقۡمَحُونَ ﴿٨﴾

1 ಪ್ರವಾದಿ ಈಸಾ(عَلَيْهِ السَّلَامُ)ರವರ ಬಳಿಕ ದೀರ್ಘ ಕಾಲದವರೆಗೆ ಪ್ರವಾದಿಗಳ ನಿಯೋಗವುಂಟಾಗಿರಲಿಲ್ಲ. ಕುರ್‌ಆನ್‌ನ ಪ್ರಥಮ ಅಭಿಸಂಬೋಧಿತರಿಗೆ ಸಂಬಂಧಿಸಿದಂತೆ ಅವರ ನಿಕಟಪೂರ್ವ ಅನೇಕ ತಲೆಮಾರುಗಳು ಯಾವ ಪ್ರವಾದಿಯ ಮುನ್ನೆಚ್ಚರಿಕೆಯನ್ನೂ ಆಲಿಸದವರಾಗಿದ್ದಾರೆ. ಆದ್ದರಿಂದಲೇ ಅವರು ಸತ್ಯ ಮತ್ತು ಸನ್ಮಾರ್ಗದ ಕುರಿತು ಅಲಕ್ಷ್ಯರಾಗಿದ್ದರು.

2 ಸತ್ಯವನ್ನು ಸ್ವೀಕರಿಸುವುದರಿಂದ ಅವರನ್ನು ತಡೆಯುವಂತಹ ಅನೇಕ ಅಂಶಗಳು ಸೇರಿಕೊಂಡು ಅವರ ಕತ್ತುಗಳಲ್ಲಿ ಭಾರವೇರಿದ ಸಂಕೋಲೆಯೊಂದನ್ನು ಸೃಷ್ಟಿಸಿದೆ. ತಮ್ಮ ಸುತ್ತುಮುತ್ತಲ ದೃಷ್ಟಾಂತಗಳೆಡೆಗೆ ತಿರುಗಿ ನೋಡಲು

9. ನಾವು ಅವರ ಮುಂಭಾಗದಲ್ಲಿ ಒಂದು ತಡೆಯನ್ನು ಮತ್ತು ಅವರ ಹಿಂಭಾಗದಲ್ಲಿ ಒಂದು ತಡೆಯನ್ನು ಇಟ್ಟಿರುವೆವು. ಹೀಗೆ ನಾವು ಅವರನ್ನು ಆವರಿಸಿ ಬಿಟ್ಟಿರುವೆವು. ಆದ್ದರಿಂದ ಅವರಿಗೆ ಕಾಣಲು ಸಾಧ್ಯವಾಗದು.

وَجَعَلْنَا مِنۢ بَيْنِ أَيْدِيهِمْ سَدًّا وَمِنْ خَلْفِهِمْ سَدًّا فَأَغْشَيْنَٰهُمْ فَهُمْ لَا يُبْصِرُونَ ۝٩

10. ತಾವು ಅವರಿಗೆ ಮುನ್ನೆಚ್ಚರಿಕೆ ನೀಡಿದರೂ ಅಥವಾ ಮುನ್ನೆಚ್ಚರಿಕೆ ನೀಡದಿದ್ದರೂ ಅವರ ಪಾಲಿಗೆ ಅದು ಸಮಾನವಾಗಿದೆ. ಅವರು ವಿಶ್ವಾಸವಿಡಲಾರರು.

وَسَوَآءٌ عَلَيْهِمْ ءَأَنذَرْتَهُمْ أَمْ لَمْ تُنذِرْهُمْ لَا يُؤْمِنُونَ ۝١٠

11. ತಮ್ಮ ಎಚ್ಚರಿಕೆಯು ಫಲಪ್ರದವಾಗುವುದು ಉದ್ಬೋಧೆಯನ್ನು ಅನುಸರಿಸಿದವನಿಗೆ ಮತ್ತು ಅಗೋಚರ ಸ್ಥಿತಿಯಲ್ಲಿ ಪರಮ ದಯಾಮಯನನ್ನು ಭಯಪಡುವವನಿಗೆ ಮಾತ್ರವಾಗಿದೆ. ಆದ್ದರಿಂದ ಅವನಿಗೆ ಪಾಪಮುಕ್ತಿ ಮತ್ತು ಗೌರವಾನ್ವಿತ ಪ್ರತಿಫಲವಿದೆಯೆಂಬ ಶುಭವಾರ್ತೆಯನ್ನು ತಿಳಿಸಿರಿ.

إِنَّمَا تُنذِرُ مَنِ ٱتَّبَعَ ٱلذِّكْرَ وَخَشِيَ ٱلرَّحْمَٰنَ بِٱلْغَيْبِ ۖ فَبَشِّرْهُ بِمَغْفِرَةٍ وَأَجْرٍ كَرِيمٍ ۝١١

12. ಖಂಡಿತವಾಗಿಯೂ ನಾವು ಮರಣಹೊಂದಿದವರಿಗೆ ಜೀವ ನೀಡುವೆವು. ಅವರು ಮಾಡಿಟ್ಟ ಕರ್ಮಗಳನ್ನು ಮತ್ತು ಅವರ (ಕರ್ಮಗಳ) ಅನಂತರ ಫಲಗಳನ್ನು ನಾವು ದಾಖಲಿಸುವೆವು. ಎಲ್ಲ ವಿಷಯಗಳನ್ನೂ ನಾವು ಸುಸ್ಪಷ್ಟವಾದ ಒಂದು ಗ್ರಂಥದಲ್ಲಿ ನಿಖರವಾಗಿ ದಾಖಲಿಸಿರುವೆವು.

إِنَّا نَحْنُ نُحْيِ ٱلْمَوْتَىٰ وَنَكْتُبُ مَا قَدَّمُوا۟ وَءَاثَٰرَهُمْ ۚ وَكُلَّ شَىْءٍ أَحْصَيْنَٰهُ فِىٓ إِمَامٍ مُّبِينٍ ۝١٢

13. ಆ ದೇಶದವರನ್ನು[1] ಒಂದು ಉದಾಹರಣೆಯೆಂಬ ನೆಲೆಯಲ್ಲಿ ಅವರಿಗೆ ತಿಳಿಸಿಕೊಡಿರಿ. ಅಲ್ಲಿಗೆ ಸಂದೇಶವಾಹಕರು ಬಂದ ಸಂದರ್ಭ!

وَٱضْرِبْ لَهُم مَّثَلًا أَصْحَٰبَ ٱلْقَرْيَةِ إِذْ جَآءَهَا ٱلْمُرْسَلُونَ ۝١٣

---

ಅಥವಾ ತಲೆ ಬಗ್ಗಿಸಿ ಕಣ್ಮುಂದಿರುವ ವಾಸ್ತವಿಕತೆಗಳೆಡೆಗೆ ನೋಡಲು ಸಾಧ್ಯವಾಗದ ರೀತಿಯಲ್ಲಿ ಅವರು ಅವಿಶ್ವಾಸ ಮತ್ತು ಅನೈತಿಕತೆಯ ಬಂಧನಕ್ಕೆ ಒಳಗಾಗಿರುವರು.

1 ಈ ದೇಶ ಯಾವುದು? ಇಲ್ಲಿಗೆ ನಿಯೋಗಿಸಲಾದ ಸಂದೇಶವಾಹಕರು ಯಾರು? ಈ ಕುರಿತು ಕುರ್‌ಆನ್ ಸ್ಪಷ್ಟಪಡಿಸಿಲ್ಲ. ಸಹೀಹಾದ ಹದೀಸಿನಲ್ಲೂ ಬಂದಿಲ್ಲ. ಸಂದೇಶವಾಹಕರ ವಿಷಯದಲ್ಲಿ ಅವರು ಸ್ವೀಕರಿಸಿದ ನಿಲುವು ಮತ್ತು ಅದರ ಪರಿಣಾಮಗಳ ಕುರಿತು ಮಾತ್ರ ಒತ್ತು ನೀಡಲಾಗಿದೆ.

إِذۡ أَرۡسَلۡنَآ إِلَيۡهِمُ ٱثۡنَيۡنِ فَكَذَّبُوهُمَا فَعَزَّزۡنَا بِثَالِثٖ فَقَالُوٓاْ إِنَّآ إِلَيۡكُم مُّرۡسَلُونَ ١٤

14. ನಾವು ಅವರೆಡೆಗೆ ಇಬ್ಬರನ್ನು ಸಂದೇಶವಾಹಕರನ್ನಾಗಿ ಕಳುಹಿಸಿದಾಗ ಅವರಿಬ್ಬರನ್ನೂ ಅವರು ನಿಷೇಧಿಸಿದರು. ಆಗ ಮೂರನೆಯವರ ಮೂಲಕ ನಾವು ಅವರಿಗೆ ಬೆಂಬಲವನ್ನು ನೀಡಿದೆವು. ತರುವಾಯ ಅವರು ಹೇಳಿದರು: 'ಖಂಡಿತವಾಗಿಯೂ ನಾವು ನಿಮ್ಮ ಬಳಿಗೆ ಕಳುಹಿಸಲ್ಪಟ್ಟವರಾಗಿರುವೆವು'.

قَالُواْ مَآ أَنتُمۡ إِلَّا بَشَرٞ مِّثۡلُنَا وَمَآ أَنزَلَ ٱلرَّحۡمَٰنُ مِن شَيۡءٍ إِنۡ أَنتُمۡ إِلَّا تَكۡذِبُونَ ١٥

15. ಅವರು (ಜನರು) ಹೇಳಿದರು: 'ನೀವು ನಮ್ಮಂತಿರುವ ಮನುಷ್ಯರು ಮಾತ್ರವಾಗಿರುವಿರಿ. ಪರಮ ದಯಾಮಯನು ಏನನ್ನೂ ಅವತೀರ್ಣಗೊಳಿಸಿಲ್ಲ. ಖಂಡಿತವಾಗಿಯೂ ನೀವು ಸುಳ್ಳು ಹೇಳುತ್ತಿರುವಿರಿ'.

قَالُواْ رَبُّنَا يَعۡلَمُ إِنَّآ إِلَيۡكُمۡ لَمُرۡسَلُونَ ١٦

16. ಅವರು (ಸಂದೇಶವಾಹಕರು) ಹೇಳಿದರು: 'ಖಂಡಿತವಾಗಿಯೂ ನಾವು ನಿಮ್ಮ ಬಳಿಗೆ ಕಳುಹಿಸಲಾದವರೇ ಆಗಿರುವೆವು ಎಂದು ನಮ್ಮ ರಬ್ ಅರಿತಿರುವನು.

وَمَا عَلَيۡنَآ إِلَّا ٱلۡبَلَٰغُ ٱلۡمُبِينُ ١٧

17. ಸ್ಪಷ್ಟವಾದ ಬೋಧನೆಯ ಹೊರತು ನಮ್ಮ ಮೇಲೆ ಇನ್ನಾವ ಹೊಣೆಗಾರಿಕೆಯೂ ಇಲ್ಲ'.

قَالُوٓاْ إِنَّا تَطَيَّرۡنَا بِكُمۡۖ لَئِن لَّمۡ تَنتَهُواْ لَنَرۡجُمَنَّكُمۡ وَلَيَمَسَّنَّكُم مِّنَّا عَذَابٌ أَلِيمٞ ١٨

18. ಅವರು (ಜನರು) ಹೇಳಿದರು: 'ಖಂಡಿತವಾಗಿಯೂ ನಾವು ನಿಮ್ಮನ್ನು ಒಂದು ಅಪಶಕುನವಾಗಿ ಕಾಣುತ್ತಿರುವೆವು.[1] ನೀವು (ಇದನ್ನು) ನಿಲ್ಲಿಸದಿದ್ದರೆ ಖಂಡಿತವಾಗಿಯೂ ನಾವು ನಿಮ್ಮನ್ನು ಕಲ್ಲೆಸೆದು ಓಡಿಸುವೆವು. ಖಂಡಿತವಾಗಿಯೂ ನಮ್ಮ ವತಿಯ ಯಾತನಾಮಯ ಶಿಕ್ಷೆಯು ನಿಮ್ಮನ್ನು ಸ್ಪರ್ಶಿಸುವುದು'.

قَالُواْ طَٰٓئِرُكُم مَّعَكُمۡ أَئِن ذُكِّرۡتُمۚ بَلۡ أَنتُمۡ قَوۡمٞ مُّسۡرِفُونَ ١٩

19. ಅವರು (ಸಂದೇಶವಾಹಕರು) ಹೇಳಿದರು: 'ನಿಮ್ಮ ಅಪಶಕುನವು ನಿಮ್ಮ ಬಳಿಯಲ್ಲಿರುವುದಾಗಿದೆ.[2] ನಿಮಗೆ ಉದ್ಬೋಧೆ

---

1 ಅಂಧವಿಶ್ವಾಸಿ ಜನತೆಯೆಡೆಗೆ ಸತ್ಯದ ಸಂದೇಶಗಳೊಂದಿಗೆ ತೆರಳಿದವರನ್ನು ಅಪಶಕುನವೆಂದೇ ಹೆಚ್ಚಿನವರೂ ಭಾವಿಸುತ್ತಾರೆ. ಇವರನ್ನು ತಮ್ಮ ಪಟ್ಟಣದಲ್ಲಿ ಇರಗೊಡಲು ಬಿಟ್ಟರೆ ತಮ್ಮ ಆರಾಧ್ಯರುಗಳ ಶಾಪಕ್ಕೆ ತಾವು ತುತ್ತಾಗಬೇಕಾದೀತು ಎಂದು ಅವರು ಭಯಪಡುತ್ತಾರೆ.

2 ನಿಮ್ಮ ಪಥಭ್ರಷ್ಟ ವಿಶ್ವಾಸಗಳು ಮತ್ತು ದುಷ್ಕೃತ್ಯಗಳೇ ನಿಮಗೆ ಆಪತ್ತನ್ನು ಆಹ್ವಾನಿಸುತ್ತವೆ ಎಂದರ್ಥ.

ನೀಡಲಾಗುವಾಗ (ನಿಮ್ಮ ನಿಲುವು) ಇದಾಗಿದೆಯೇ? ಆದರೆ, ನೀವು ಮಿತಿಮೀರಿದ ಒಂದು ಜನತೆಯಾಗಿರುವಿರಿ'.

وَجَآءَ مِنۡ أَقۡصَا ٱلۡمَدِينَةِ رَجُلٞ يَسۡعَىٰ قَالَ يَٰقَوۡمِ ٱتَّبِعُواْ ٱلۡمُرۡسَلِينَ ٢٠

**20.** ಪಟ್ಟಣದ ಕೊನೆಯ ತುದಿಯಿಂದ ಓರ್ವ ವ್ಯಕ್ತಿ ಓಡಿ ಬಂದು ಹೇಳಿದರು: 'ಓ ನನ್ನ ಜನರೇ! ನೀವು ಆ ಸಂದೇಶವಾಹಕರನ್ನು ಅನುಸರಿಸಿರಿ.[1]

ٱتَّبِعُواْ مَن لَّا يَسۡـَٔلُكُمۡ أَجۡرٗا وَهُم مُّهۡتَدُونَ ٢١

**21.** ನಿಮ್ಮಿಂದ ಯಾವುದೇ ಫತಿಪ್ರಲವನ್ನೂ ಬೇಡದವರನ್ನು ಮತ್ತು ಸನ್ಮಾರ್ಗ ಪಡೆದವರನ್ನು ನೀವು ಅನುಸರಿಸಿರಿ.

وَمَا لِيَ لَآ أَعۡبُدُ ٱلَّذِي فَطَرَنِي وَإِلَيۡهِ تُرۡجَعُونَ ٢٢

**22.** ನನ್ನನ್ನು ಯಾರು ಸೃಷ್ಟಿಸಿದನೋ ಮತ್ತು ಯಾರೆಡೆಗೆ ನಿಮ್ಮನ್ನು ಮರಳಿಸಲಾಗುವುದೋ ಅವನನ್ನು ಆರಾಧಿಸದಿರಲು ನನಗಿರುವ ಸಮರ್ಥನೆಯಾದರೂ ಏನು?

ءَأَتَّخِذُ مِن دُونِهِۦٓ ءَالِهَةً إِن يُرِدۡنِ ٱلرَّحۡمَٰنُ بِضُرّٖ لَّا تُغۡنِ عَنِّي شَفَٰعَتُهُمۡ شَيۡـٔٗا وَلَا يُنقِذُونِ ٢٣

**23.** ನಾನು ಅವನ ಹೊರತು ಅನ್ಯ ಆರಾಧ್ಯರನ್ನು ಮಾಡಿಕೊಳ್ಳುವುದೇ? ಪರಮ ದಯಾಮಯನು ನನಗೇನಾದರೂ ಹಾನಿಯುಂಟು ಮಾಡಲು ಇಚ್ಛಿಸಿದರೆ ನನಗೆ ಅವರ ಶಿಫಾರಸ್ಸು ಕಿಂಚಿತ್ತೂ ಪ್ರಯೋಜನವಾಗದು. ಅವರು ನನ್ನ ರಕ್ಷಣೆಯನ್ನು ಮಾಡಲಾರರು.

إِنِّيٓ إِذٗا لَّفِي ضَلَٰلٖ مُّبِينٍ ٢٤

**24.** ನಾನೇನಾದರೂ ಹಾಗೆ ಮಾಡಿದರೆ ಖಂಡಿತವಾಗಿಯೂ ನಾನು ಸುಸ್ಪಷ್ಟವಾದ ಪಥಭ್ರಷ್ಟತೆಯಲ್ಲಾಗುವೆನು.

إِنِّيٓ ءَامَنتُ بِرَبِّكُمۡ فَٱسۡمَعُونِ ٢٥

**25.** ಖಂಡಿತವಾಗಿಯೂ ನಾನು ನಿಮ್ಮ ರಬ್‌ನಲ್ಲಿ ವಿಶ್ವಾಸವಿಟ್ಟಿರುವೆನು. ಆದ್ದರಿಂದ ನೀವು ನನ್ನ ಮಾತಿಗೆ ಕಿವಿಕೊಡಿರಿ'.

قِيلَ ٱدۡخُلِ ٱلۡجَنَّةَۖ قَالَ يَٰلَيۡتَ قَوۡمِي

**26-27.** 'ಸ್ವರ್ಗವನ್ನು ಪ್ರವೇಶಿಸಿರಿ' ಎಂದು ಹೇಳಲಾಯಿತು.[2] ಆ ವ್ಯಕ್ತಿ ಹೇಳಿದರು: 'ನನ್ನ

1 ಪಟ್ಟಣದ ಪ್ರಮುಖ ವ್ಯಕ್ತಿಗಳು ಮತ್ತು ಜನರ ಪೈಕಿ ಹೆಚ್ಚಿನವರೂ ಸಂದೇಶವಾಹಕರನ್ನು ನಿಷೇಧಿಸಿದರು. ಆದರೆ ಬೆರಳೆಣಿಕೆಯ ಕೆಲವು ಜನರು ಅವರಲ್ಲಿ ವಿಶ್ವಾಸವಿಟ್ಟರು. ಅಂತಹವರ ಪೈಕಿ ಒಬ್ಬರು ಜನರನ್ನು ಉದ್ದೇಶಿಸಿ ಸಂದೇಶವಾಹಕರ ಸಂದೇಶದ ಪ್ರಾಮುಖ್ಯತೆಯ ಬಗ್ಗೆ ಮಾತನಾಡಿದರು.

2 ಆ ಸತ್ಯವಿಶ್ವಾಸಿಯನ್ನು ಆ ಊರಿನ ಜನರು ಕೊಂದುಬಿಟ್ಟರು. ಹುತಾತ್ಮರಾದ ಬಳಿಕ ಅಲ್ಲಾಹು ಆ ವ್ಯಕ್ತಿಗೆ ಸ್ವರ್ಗದ

يَعۡلَمُونَ ٢٦ بِمَا غَفَرَ لِي رَبِّي وَجَعَلَنِي
مِنَ ٱلۡمُكۡرَمِينَ ٢٧

ರಬ್ ನನ್ನನ್ನು ಕ್ಷಮಿಸಿರುವನು ಮತ್ತು ನನ್ನನ್ನು ಗೌರವಾನ್ವಿತರ ಪೈಕಿ ಸೇರಿಸಿರುವನು ಎಂಬುದನ್ನು ನನ್ನ ಜನತೆಯು ಅರಿತಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!'

۞ وَمَآ أَنزَلۡنَا عَلَىٰ قَوۡمِهِۦ مِنۢ بَعۡدِهِۦ مِن
جُندٖ مِّنَ ٱلسَّمَآءِ وَمَا كُنَّا مُنزِلِينَ ٢٨

**28.** ಅವರ ಬಳಿಕ ಅವರ ಜನತೆಯ ವಿರುದ್ಧ ನಾವು ಆಕಾಶದಿಂದ ಯಾವುದೇ ಸೈನ್ಯವನ್ನೂ ಇಳಿಸಲಿಲ್ಲ.(1) ನಾವು ಹಾಗೆ ಇಳಿಸುವವರೂ ಅಲ್ಲ.

إِن كَانَتۡ إِلَّا صَيۡحَةٗ وَٰحِدَةٗ فَإِذَا هُمۡ
خَٰمِدُونَ ٢٩

**29.** ಅದೊಂದು ಘೋರ ಶಬ್ದ ಮಾತ್ರವಾಗಿತ್ತು. ಆಗ ಅಗೋ! ಅವರು ನಿರ್ನಾಮವಾಗಿ ಹೋದರು.

يَٰحَسۡرَةً عَلَى ٱلۡعِبَادِۚ مَا يَأۡتِيهِم مِّن رَّسُولٍ
إِلَّا كَانُواْ بِهِۦ يَسۡتَهۡزِءُونَ ٣٠

**30.** ಆ ದಾಸರ ಸ್ಥಿತಿ ಎಷ್ಟು ಪರಿತಾಪಕರ! ಯಾವುದೇ ಸಂದೇಶವಾಹಕರು ಅವರ ಬಳಿಗೆ ಬಂದಾಗಲೆಲ್ಲ ಅವರು ಅವರನ್ನು ಗೇಲಿ ಮಾಡದೆ ಬಿಟ್ಟಿರಲಿಲ್ಲ.

أَلَمۡ يَرَوۡاْ كَمۡ أَهۡلَكۡنَا قَبۡلَهُم مِّنَ
ٱلۡقُرُونِ أَنَّهُمۡ إِلَيۡهِمۡ لَا يَرۡجِعُونَ ٣١

**31.** ಅವರಿಗಿಂತ ಮುಂಚೆ ಎಷ್ಟೋ ತಲೆಮಾರುಗಳನ್ನು ನಾವು ನಾಶಗೊಳಿಸಿರುವೆವು ಮತ್ತು ಅವರಾರೂ ಇವರ ಬಳಿಗೆ ಮರಳಿ ಬರಲಾರರೆಂಬುದನ್ನು ಅವರು ಕಾಣುವುದಿಲ್ಲವೇ?

وَإِن كُلّٞ لَّمَّا جَمِيعٞ لَّدَيۡنَا مُحۡضَرُونَ ٣٢

**32.** ಖಂಡಿತವಾಗಿಯೂ ಯಾರನ್ನೂ ಬಿಡದೆ ಅವರೆಲ್ಲರನ್ನೂ ನಮ್ಮ ಮುಂದೆ ಹಾಜರುಗೊಳಿಸಲಾಗುವುದು.

وَءَايَةٞ لَّهُمُ ٱلۡأَرۡضُ ٱلۡمَيۡتَةُ أَحۡيَيۡنَٰهَا
وَأَخۡرَجۡنَا مِنۡهَا حَبّٗا فَمِنۡهُ يَأۡكُلُونَ ٣٣

**33.** ನಿರ್ಜೀವವಾಗಿರುವ ಭೂಮಿಯು ಅವರಿಗೊಂದು ದೃಷ್ಟಾಂತವಾಗಿದೆ. ನಾವು ಅದಕ್ಕೆ ಜೀವ ನೀಡಿದೆವು ಮತ್ತು ಅದರಿಂದ ಧಾನ್ಯವನ್ನು ಉತ್ಪಾದಿಸಿದೆವು. ತರುವಾಯ ಅವರು ಅದರಿಂದ ತಿನ್ನುತ್ತಿರುವರು.

---

ಕುರಿತು ಶುಭವಾರ್ತೆ ತಿಳಿಸಿದ್ದನ್ನು ಇಲ್ಲಿ ಹೇಳಲಾಗಿದೆ. ಆ ಸಂದರ್ಭದಲ್ಲೂ ಅವರ ಮನಸ್ಸಿನಲ್ಲಿದ್ದುದು ತಮ್ಮ ಊರಿನ ಜನರು ಸತ್ಯದ ಕುರಿತು ಪ್ರಜ್ಞಾವಂತರಾಗಲೆಂಬ ಹಂಬಲವಾಗಿತ್ತು.

1 ಸತ್ಯವಿಶ್ವಾಸದೆಡೆಗೆ ಕರೆದ ಸಂದೇಶವಾಹಕರೊಂದಿಗೆ ಕಠಿಣ ವಿರೋಧವನ್ನು ಪ್ರಕಟಿಸಿದ ಆ ಜನತೆಯು ಅಲ್ಲಾಹುವಿನ ಶಕ್ತಿಯ ಮುಂದೆ ಅತೀವ ಕ್ಷುಲ್ಲಕರಾಗಿದ್ದರು. ಅವರನ್ನು ದಮನಿಸಲು ಒಂದು ಸೈನ್ಯವನ್ನು ಕಳುಹಿಸಬೇಕಾದ ಅಗತ್ಯವು ಅಲ್ಲಾಹುವಿಗೆ ಬರಲಿಲ್ಲ. ಘೋರವಾದ ಶಬ್ದವೊಂದರ ಮೂಲಕ ಅವರ ಕಥೆಯನ್ನು ಮುಗಿಸಲಾಯಿತು.

**34.** ನಾವು ಅದರಲ್ಲಿ ಖರ್ಜೂರಗಳ ಮತ್ತು ದ್ರಾಕ್ಷಿಗಳ ತೋಟಗಳನ್ನು ಮಾಡಿದೆವು. ನಾವು ಅದರಲ್ಲಿ ತೊರೆಗಳನ್ನೂ ಹರಿಸಿದೆವು.

وَجَعَلْنَا فِيهَا جَنَّٰتٍ مِّن نَّخِيلٍ وَأَعْنَٰبٍ وَفَجَّرْنَا فِيهَا مِنَ ٱلْعُيُونِ ٣٤

**35.** ಅದರ ಫಲಗಳಿಂದ ತಿನ್ನುವ ಸಲುವಾಗಿ. ಅದನ್ನು ನಿರ್ಮಿಸಿದ್ದು ಅವರ ಕೈಗಳಲ್ಲ. ಆದರೂ ಅವರು ಕೃತಜ್ಞತೆ ಸಲ್ಲಿಸಲಾರರೇ?

لِيَأْكُلُوا۟ مِن ثَمَرِهِۦ وَمَا عَمِلَتْهُ أَيْدِيهِمْ ۖ أَفَلَا يَشْكُرُونَ ٣٥

**36.** ಭೂಮಿ ಉತ್ಪಾದಿಸುವ ಸಸ್ಯಗಳಲ್ಲಿ, ಅವರದೇ ವರ್ಗಗಳಲ್ಲಿ ಮತ್ತು ಅವರು ಅರಿತಿರದ ವಸ್ತುಗಳಲ್ಲಿ ಸೇರಿದ ಎಲ್ಲ ಜೋಡಿಗಳನ್ನು ಸೃಷ್ಟಿಸಿದವನು ಎಷ್ಟೋ ಪರಿಪಾವನನು![1]

سُبْحَٰنَ ٱلَّذِى خَلَقَ ٱلْأَزْوَٰجَ كُلَّهَا مِمَّا تُنۢبِتُ ٱلْأَرْضُ وَمِنْ أَنفُسِهِمْ وَمِمَّا لَا يَعْلَمُونَ ٣٦

**37.** ರಾತ್ರಿಯು ಅವರಿಗೊಂದು ದೃಷ್ಟಾಂತವಾಗಿದೆ. ನಾವು ಅದರಿಂದ ಹಗಲನ್ನು ಹೊರತೆಗೆಯುವೆವು.[2] ಆಗ ಅಗೋ! ಅವರು ಇರುಳಲ್ಲಿರುವರು.

وَءَايَةٌ لَّهُمُ ٱلَّيْلُ نَسْلَخُ مِنْهُ ٱلنَّهَارَ فَإِذَا هُم مُّظْلِمُونَ ٣٧

**38.** ಸೂರ್ಯನು ಅದರ ನಿಶ್ಚಿತ ಸ್ಥಾನದೆಡೆಗೆ ಚಲಿಸುತ್ತಿರುವನು. ಅದು ಪ್ರತಾಪಶಾಲಿಯೂ, ಸರ್ವಜ್ಞನೂ ಆಗಿರುವ ಅಲ್ಲಾಹುವಿನ ನಿರ್ಣಯವಾಗಿದೆ.

وَٱلشَّمْسُ تَجْرِى لِمُسْتَقَرٍّ لَّهَا ۚ ذَٰلِكَ تَقْدِيرُ ٱلْعَزِيزِ ٱلْعَلِيمِ ٣٨

**39.** ಚಂದ್ರನಿಗೆ ನಾವು ಕೆಲವು ಹಂತಗಳನ್ನು ನಿರ್ಣಯಿಸಿರುವೆವು. ತರುವಾಯ ಅದು ಹಳೆಯ ಖರ್ಜೂರ ಗೊನೆಯ ಬಾಗಿದ ದಿಂಡಿನಂತಾಗುವುದು.

وَٱلْقَمَرَ قَدَّرْنَٰهُ مَنَازِلَ حَتَّىٰ عَادَ كَٱلْعُرْجُونِ ٱلْقَدِيمِ ٣٩

**40.** ಸೂರ್ಯನಿಗೆ ಚಂದ್ರನನ್ನು ತಲುಪಲು ಸಾಧ್ಯವಾಗದು. ರಾತ್ರಿಯು ಹಗಲನ್ನು ದಾಟಿಹೋಗದು. ಎಲ್ಲವೂ (ನಿಶ್ಚಿತವಾದ) ಕಕ್ಷೆಯಲ್ಲೇ ಈಜುತ್ತಿರುವುವು.

لَا ٱلشَّمْسُ يَنۢبَغِى لَهَآ أَن تُدْرِكَ ٱلْقَمَرَ وَلَا ٱلَّيْلُ سَابِقُ ٱلنَّهَارِ ۚ وَكُلٌّ فِى فَلَكٍ يَسْبَحُونَ ٤٠

1 ಭೌತಿಕ ಜಗತ್ತಿನಲ್ಲಿ ಜರುಗುವ ಪ್ರತಿಯೊಂದು ವಿಕಾಸ ಪ್ರಕ್ರಿಯೆಯಲ್ಲೂ ಜೋಡಿಗಳು ಅಥವಾ ಜೊತೆಗಳು ನಿರ್ವಹಿಸುವ ಪಾತ್ರವು ಅನುಪಮವಾಗಿದೆ. ಜೋಡಿಗಳಿಂದಾಗಿ ನಡೆಯುವ ಬೆಳವಣಿಗೆಯು ಜೈವ–ಸಸ್ಯಲೋಕದಲ್ಲಿ ಅತ್ಯಂತ ಸ್ಪಷ್ಟವಾಗಿದೆ. ಸೂಕ್ಷ್ಮ ಪರಿಶೋಧನೆಯ ಮೂಲಕ ಪದಾರ್ಥಗಳ ಹಲವು ರಚನೆಗಳಲ್ಲಿ ಜೋಡಿಗಳಿಗಿರುವ ನಿರ್ಣಾಯಕ ಸ್ಥಾನವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

2 ಸಮಯದ ಒಂದು ನಿಗದಿತ ಅವಧಿಯು ಹಗಲಾಗಿ ಮಾರ್ಪಡುವುದು ಸೂರ್ಯ ಪ್ರಕಾಶದಿಂದಾಗಿದೆ. ಹಗಲು ಅಥವಾ ಅದರ ಪ್ರತೀಕವಾದ ಸೂರ್ಯ ಪ್ರಕಾಶವು ಇಲ್ಲದಾಗುವಾಗ ರಾತ್ರಿಯಾಗುತ್ತದೆ. ರಾತ್ರಿಯ ಅಥವಾ ಇರುಳಿನ ಋಣಾತ್ಮಕತೆಯನ್ನು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ.

41. ನಾವು ಅವರ ಸಂತತಿಗಳನ್ನು ಭಾರ ತುಂಬಿದ ಹಡಗಿನಲ್ಲಿ ಹೊತ್ತೊಯ್ದಿರುವುದು ಅವರಿಗೊಂದು ದೃಷ್ಟಾಂತವಾಗಿದೆ.[1]

وَءَايَةٞ لَّهُمۡ أَنَّا حَمَلۡنَا ذُرِّيَّتَهُمۡ فِي ٱلۡفُلۡكِ ٱلۡمَشۡحُونِ ٤١

42. ಅವರು ವಾಹನವಾಗಿ ಬಳಸುವ ಇತರ ವಸ್ತುಗಳನ್ನೂ ನಾವು ಅವರಿಗಾಗಿ ಸೃಷ್ಟಿಸಿರುವೆವು.

وَخَلَقۡنَا لَهُم مِّن مِّثۡلِهِۦ مَا يَرۡكَبُونَ ٤٢

43. ನಾವು ಇಚ್ಛಿಸಿದರೆ ಅವರನ್ನು ಮುಳುಗಿಸುವೆವು. ಆಗ ಅವರಿಗೆ ಸಹಾಯಕರಾಗಿ ಯಾರೂ ಇರಲಾರರು. ಅವರು ರಕ್ಷಣೆಯನ್ನೂ ಪಡೆಯಲಾರರು.

وَإِن نَّشَأۡ نُغۡرِقۡهُمۡ فَلَا صَرِيخَ لَهُمۡ وَلَا هُمۡ يُنقَذُونَ ٤٣

44. ನಮ್ಮ ವತಿಯ ಕಾರುಣ್ಯ ಮತ್ತು ಒಂದು ನಿಶ್ಚಿತ ಕಾಲದವರೆಗಿರುವ ಸುಖಸೌಕರ್ಯಗಳಾಗಿ (ನಾವು ಅವರಿಗೆ ನೀಡುವುದರ) ಹೊರತು.

إِلَّا رَحۡمَةٗ مِّنَّا وَمَتَٰعًا إِلَىٰ حِينٖ ٤٤

45. ‘ನಿಮ್ಮ ಮುಂದೆ ಬರಲಿರುವ ಮತ್ತು ನಿಮ್ಮ ಹಿಂದೆ ಗತಿಸಿಹೋಗಿರುವ ಶಿಕ್ಷೆಯ ಕುರಿತು ಭಯಪಡಿರಿ.[2] ನಿಮಗೆ ಕಾರುಣ್ಯವು ಲಭಿಸಬಹುದು’ ಎಂದು ಅವರೊಂದಿಗೆ ಹೇಳಲಾದರೆ (ಅವರದನ್ನು ನಿರ್ಲಕ್ಷಿಸುವರು).

وَإِذَا قِيلَ لَهُمُ ٱتَّقُواْ مَا بَيۡنَ أَيۡدِيكُمۡ وَمَا خَلۡفَكُمۡ لَعَلَّكُمۡ تُرۡحَمُونَ ٤٥

46. ಅವರ ರಬ್‌ನ ವತಿಯ ದೃಷ್ಟಾಂತಗಳ ಪೈಕಿ ಯಾವುದೇ ದೃಷ್ಟಾಂತವು ಅವರ ಬಳಿಗೆ ಬಂದರೂ ಅವರು ಅದರಿಂದ ವಿಮುಖರಾಗದೇ ಇರುತ್ತಿರಲಿಲ್ಲ.

وَمَا تَأۡتِيهِم مِّنۡ ءَايَةٖ مِّنۡ ءَايَٰتِ رَبِّهِمۡ إِلَّا كَانُواْ عَنۡهَا مُعۡرِضِينَ ٤٦

47. ‘ನಿಮಗೆ ಅಲ್ಲಾಹು ನೀಡಿರುವುದರಿಂದ ಖರ್ಚು ಮಾಡಿರಿ’ ಎಂದು ಅವರೊಂದಿಗೆ ಹೇಳಲಾದರೆ ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳೊಂದಿಗೆ

وَإِذَا قِيلَ لَهُمۡ أَنفِقُواْ مِمَّا رَزَقَكُمُ ٱللَّهُ قَالَ ٱلَّذِينَ كَفَرُواْ لِلَّذِينَ ءَامَنُوٓاْ أَنُطۡعِمُ

1 ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ ಈ ಸೂಕ್ತಿಯಲ್ಲಿ ಉದ್ದೇಶಿಸಿರುವುದು ಸಮುದ್ರಾಂತರ ಪ್ರದೇಶಗಳಿಗೆ ಮನುಷ್ಯರನ್ನು ತಲುಪಿಸುವುದಕ್ಕಾಗಿ ಅಲ್ಲಾಹು ಸೃಷ್ಟಿಸಿಕೊಟ್ಟ ಹಡಗು ಮುಂತಾದ ಯಾತ್ರಾ ಸೌಕರ್ಯಗಳ ಕುರಿತಾಗಿದೆ. ನೂಹ್(عَلَيْهِ ٱلسَّلَامُ)ರವರ ಕಾಲದಲ್ಲಿ ಸಂಭವಿಸಿದ ಪ್ರಳಯದಲ್ಲಿ ನಾಶವಾಗದೆ ಬದುಕುಳಿದ ಸತ್ಯವಿಶ್ವಾಸಿಗಳನ್ನು (ಅವರ ಮೂಲಕ ಅವರ ಸಂತತಿಗಳನ್ನೂ) ಹಡಗಿನಲ್ಲೇರಿಸಿ ಅಲ್ಲಾಹು ಕಾಪಾಡಿದ ಘಟನೆಯ ಕುರಿತಾಗಿದೆ ಉದ್ದೇಶ ಎಂದು ಇತರ ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಹೊಂದಿದ್ದಾರೆ.

2 ಸತ್ಯನಿಷೇಧಿ ಮತ್ತು ಧಿಕ್ಕಾರಿಗಳಾದ ಪೂರ್ವಿಕರ ಮೇಲೆರಗಿದ ಶಿಕ್ಷೆ ಮತ್ತು ಮರಣಾನಂತರ ಬರಲಿರುವ ಪರಲೋಕ ಶಿಕ್ಷೆಯ ಕುರಿತು ಭಯಪಡಿರಿ ಎಂಬುದೇ ಅವರು ಸದಾ ಕಡೆಗಣಿಸುತ್ತಿದ್ದ ಉಪದೇಶವಾಗಿತ್ತು.

مَن لَّوۡ يَشَآءُ ٱللَّهُ أَطۡعَمَهُۥٓ إِنۡ أَنتُمۡ إِلَّا فِي ضَلَٰلٖ مُّبِينٖ ٤٧

ಹೇಳುವರು: 'ಅಲ್ಲಾಹು ಇಚ್ಛಿಸಿದ್ದರೆ ಸ್ವತಃ ಅವನೇ ಆಹಾರ ನೀಡುವಂತಹ ಜನರಿಗೆ ನಾವು ಆಹಾರ ನೀಡುವುದೇ?[1] ನೀವು ಸ್ಪಷ್ಟವಾದ ಪಥಭ್ರಷ್ಟತೆಯಲ್ಲೇ ಇರುವಿರಿ'.

وَيَقُولُونَ مَتَىٰ هَٰذَا ٱلۡوَعۡدُ إِن كُنتُمۡ صَٰدِقِينَ ٤٨

48. ಅವರು ಕೇಳುವರು: 'ನೀವು ಸತ್ಯಸಂಧರಾಗಿದ್ದರೆ ಈ ವಾಗ್ದಾನವು ಸತ್ಯವಾಗಿ ಪರಿಣಮಿಸುವುದು ಯಾವಾಗ?'[2]

مَا يَنظُرُونَ إِلَّا صَيۡحَةٗ وَٰحِدَةٗ تَأۡخُذُهُمۡ وَهُمۡ يَخِصِّمُونَ ٤٩

49. ಅವರು ಕಾಯುತ್ತಿರುವುದು ಒಂದೇ ಒಂದು ಘೋರ ಶಬ್ದವನ್ನು ಮಾತ್ರವಾಗಿದೆ.[3] ಅವರು ಪರಸ್ಪರ ತರ್ಕಿಸುತ್ತಿರುವಾಗಲೇ ಅದು ಅವರನ್ನು ಹಿಡಿಯುವುದು.

فَلَا يَسۡتَطِيعُونَ تَوۡصِيَةٗ وَلَآ إِلَىٰٓ أَهۡلِهِمۡ يَرۡجِعُونَ ٥٠

50. ಆಗ ಯಾವುದೇ ವಸಿಯ್ಯತ್(ಉಯಿಲು) ಮಾಡಲೂ ಅವರಿಗೆ ಸಾಧ್ಯವಾಗದು. ತಮ್ಮ ಕುಟುಂಬದೆಡೆಗೆ ಮರಳಲೂ ಅವರಿಗೆ ಸಾಧ್ಯವಾಗದು.

وَنُفِخَ فِي ٱلصُّورِ فَإِذَا هُم مِّنَ ٱلۡأَجۡدَاثِ إِلَىٰ رَبِّهِمۡ يَنسِلُونَ ٥١

51. ಕಹಳೆಯಲ್ಲಿ ಊದಲಾಗುವುದು.[4] ಆಗ ಅಗೋ! ಅವರು ಗೋರಿಗಳಿಂದ ತಮ್ಮ ರಬ್‌ನೆಡೆಗೆ ಧಾವಿಸುವರು.

قَالُواْ يَٰوَيۡلَنَا مَنۢ بَعَثَنَا مِن مَّرۡقَدِنَاۜۗ هَٰذَا مَا وَعَدَ ٱلرَّحۡمَٰنُ وَصَدَقَ ٱلۡمُرۡسَلُونَ ٥٢

52. ಅವರು ಹೇಳುವರು: 'ಅಯ್ಯೋ! ನಮ್ಮ ದುರದೃಷ್ಟವೇ! ನಮ್ಮನ್ನು ನಮ್ಮ ನಿದ್ದೆಯಿಂದ ಎಬ್ಬಿಸಿದವರಾರು? ಇದು ಪರಮ

1 ಇದು ಸತ್ಯನಿಷೇಧಿಗಳಾದ ಜಿಪುಣರು ತಮ್ಮ ಹಿತವನ್ನು ಕಾಪಾಡುವುದಕ್ಕಾಗಿ ವಾದಿಸುವ ಒಂದು ಕುತರ್ಕವಾಗಿದೆ. ಓರ್ವನು ಹಸಿವಿನಿಂದಿರಬೇಕೆಂಬುದು ಅಲ್ಲಾಹುವಿನ ವಿಧಿಯೆಂದಾದರೆ ಅವನಿಗೆ ಆಹಾರವನ್ನು ಒದಗಿಸುವುದು ಆ ವಿಧಿಗೆ ವಿರುದ್ಧವಲ್ಲವೇ? ಎಂಬುದು ಅವರ ತರ್ಕವಾಗಿತ್ತು. ಅಲ್ಲಾಹುವಿನ ವಿಧಿ ಏನೆಂದು ತೀರ್ಮಾನಿಸಬೇಕಾದುದು ಮನುಷ್ಯರಲ್ಲ. ಪ್ರವಾದಿಗಳ ಮೂಲಕ ಅಲ್ಲಾಹು ನೀಡಿದ ಮಾರ್ಗನಿರ್ದೇಶನಗಳನ್ನು ಅನುಸರಿಸುವುದು ಮಾತ್ರ ಮನುಷ್ಯರ ಕರ್ತವ್ಯವಾಗಿದೆ.

2 ಅಂತ್ಯದಿನದ ಕುರಿತು ಮತ್ತು ಅಲ್ಲಾಹುವಿನ ಶಿಕ್ಷೆಯ ಕುರಿತು ಅವನು ನೀಡಿದ ಎಚ್ಚರಿಕೆಯು ಸತ್ಯವಾಗಿ ಪರಿಣಮಿಸುವುದನ್ನು ಕಾಣಲು ಅವರು ಆತುರಪಡುತ್ತಿದ್ದರು.

3 ಲೋಕಾಂತ್ಯದ ಘೋಷಣೆಯಾಗಿರುವ ಭಯಾನಕ ಶಬ್ದ ಅಥವಾ ಕಹಳೆಯಲ್ಲಿ ಪ್ರಥಮ ಬಾರಿಗೆ ಊದುವಾಗ ಹೊರಡುವ ಧ್ವನಿ.

4 ಎಲ್ಲವೂ ನಾಶವಾದ ಬಳಿಕ ಪುನರುತ್ಥಾನದ ಘೋಷಣೆಯಾದ ಕಹಳೆ ಧ್ವನಿಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. 53ನೆ ಸೂಕ್ತಿಯಲ್ಲಿ ಹೇಳಲಾದ ಘೋರ ಶಬ್ದವೂ ಇದೇ ಆಗಿದೆ.

ದಯಾಮಯನು ವಾಗ್ದಾನ ಮಾಡಿರುವುದಾಗಿದೆ. ಸಂದೇಶವಾಹಕರು ಸತ್ಯವನ್ನೇ ಹೇಳಿರುವರು’.

**53.** ಅದು ಒಂದೇ ಒಂದು ಘೋರ ಶಬ್ದ ಮಾತ್ರವಾಗಿರುವುದು. ಆಗ ಅಗೋ! ಅವರೆಲ್ಲರನ್ನೂ ನಮ್ಮ ಬಳಿ ಹಾಜರುಪಡಿಸಲಾಗುವುದು.

إِن كَانَتۡ إِلَّا صَيۡحَةٗ وَٰحِدَةٗ فَإِذَا هُمۡ
جَمِيعٞ لَّدَيۡنَا مُحۡضَرُونَ ٥٣

**54.** ಆ ದಿನದಂದು ಯಾರೊಂದಿಗೂ ಸ್ವಲ್ಪವೂ ಅನ್ಯಾಯವೆಸಗಲಾಗದು. ನೀವು ಮಾಡಿಕೊಂಡಿರುವುದಕ್ಕೇ ಹೊರತು ನಿಮಗೆ ಪ್ರತಿಫಲವನ್ನೂ ನೀಡಲಾಗದು.

فَٱلۡيَوۡمَ لَا تُظۡلَمُ نَفۡسٞ شَيۡـٔٗا وَلَا تُجۡزَوۡنَ
إِلَّا مَا كُنتُمۡ تَعۡمَلُونَ ٥٤

**55.** ಖಂಡಿತವಾಗಿಯೂ ಸ್ವರ್ಗವಾಸಿಗಳು ಅಂದು ಒಂದೊಂದು ಕೆಲಸದಲ್ಲಿ ಮಗ್ನರಾಗಿ ಸುಖವಾಗಿರುವರು.

إِنَّ أَصۡحَٰبَ ٱلۡجَنَّةِ ٱلۡيَوۡمَ فِي شُغُلٖ
فَٰكِهُونَ ٥٥

**56.** ಅವರು ಮತ್ತು ಅವರ ಸಂಗಾತಿಗಳು ನೆರಳುಗಳಲ್ಲಿ ಮಂಚಗಳ ಮೇಲೆ ಒರಗಿ ಕುಳಿತಿರುವರು.

هُمۡ وَأَزۡوَٰجُهُمۡ فِي ظِلَٰلٍ عَلَى ٱلۡأَرَآئِكِ
مُتَّكِـُٔونَ ٥٦

**57.** ಅಲ್ಲಿ ಅವರಿಗೆ ವಿವಿಧ ಫಲಗಳಿರುವುವು. ಅವರಿಗೆ ಅವರು ಬೇಡುವುದೆಲ್ಲವೂ ಇರುವುವು.

لَهُمۡ فِيهَا فَٰكِهَةٞ وَلَهُم مَّا يَدَّعُونَ ٥٧

**58.** ಶಾಂತಿ! ಇದು ಅವರಿಗೆ ಕರುಣಾನಿಧಿಯಾದ ರಬ್‌ನ ವತಿಯ ಅಭಿವಂದನೆಯಾಗಿದೆ.

سَلَٰمٞ قَوۡلٗا مِّن رَّبّٖ رَّحِيمٖ ٥٨

**59.** ‘ಓ ಅಪರಾಧಿಗಳೇ! ನೀವಿಂದು ಬೇರ್ಪಟ್ಟು ನಿಲ್ಲಿರಿ’ (ಎಂದು ಅಲ್ಲಿ ಘೋಷಿಸಲಾಗುವುದು).

وَٱمۡتَٰزُواْ ٱلۡيَوۡمَ أَيُّهَا ٱلۡمُجۡرِمُونَ ٥٩

**60-61.** ‘ಓ ಆದಮ್ ಸಂತತಿಗಳೇ! ನೀವು ಸೈತಾನನನ್ನು ಆರಾಧಿಸದಿರಿ.[1] ಖಂಡಿತವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರುವಾಗಿರುವನು. ನನ್ನನ್ನು ಆರಾಧಿಸಿರಿ. ನೇರವಾದ ಮಾರ್ಗವು ಇದೇ ಆಗಿದೆ’ ಎಂದು ನಾನು ನಿಮ್ಮೊಂದಿಗೆ ಆದೇಶಿಸಿರಲಿಲ್ಲವೇ?

۞أَلَمۡ أَعۡهَدۡ إِلَيۡكُمۡ يَٰبَنِيٓ ءَادَمَ أَن
لَّا تَعۡبُدُواْ ٱلشَّيۡطَٰنَۖ إِنَّهُۥ لَكُمۡ عَدُوّٞ
مُّبِينٞ ٦٠ وَأَنِ ٱعۡبُدُونِيۚ هَٰذَا صِرَٰطٞ
مُّسۡتَقِيمٞ ٦١

1 ಜಗದೊಡೆಯನನ್ನು ಮಾತ್ರ ಆರಾಧಿಸುವುದರಿಂದ ಜನರನ್ನು ವ್ಯತಿಚಲನೆಗೊಳಿಸುವತ್ತ ಶೈತಾನನು ತನ್ನ ಗಮನವನ್ನು ಕೇಂದ್ರೀಕರಿಸಿದ್ದಾನೆ. ಮನುಷ್ಯರ ಪೈಕಿ ಕೆಲವರು ಶೈತಾನರನ್ನೇ ಆರಾಧಿಸುತ್ತಾರೆ. ಹೆಚ್ಚಿನವರೂ ಆರಾಧಿಸುತ್ತಿರುವುದು ಶೈತಾನನು ಸೂಚಿಸುವ ಮಿಥ್ಯದೈವಗಳನ್ನಾಗಿದೆ. ಶೈತಾನನನ್ನು ಸಂತೃಪ್ತಗೊಳಿಸುವ ಮತ್ತು ಶೈತಾನನ ಉದ್ದೇಶವನ್ನು ಸಫಲೀಕರಿಸುವ ಎಲ್ಲ ಆರಾಧನೆಗಳೂ ಒಂದರ್ಥದಲ್ಲಿ ಅವನಿಗಿರುವ ಆರಾಧನೆಯೇ ಆಗಿರುತ್ತದೆ.

وَلَقَدْ أَضَلَّ مِنكُمْ جِبِلًّا كَثِيرًا ۖ أَفَلَمْ تَكُونُوا۟ تَعْقِلُونَ ﴿٦٢﴾

62. ಖಂಡಿತವಾಗಿಯೂ ನಿಮ್ಮ ಪೈಕಿ ಅನೇಕ ಜನರನ್ನು ಅವನು (ಸೈತಾನನು) ದಾರಿಗೆಡಿಸಿರುವನು. ಆದರೂ ನೀವು ಚಿಂತಿಸಿ ಅರ್ಥಮಾಡಿಕೊಳ್ಳಲಾರಿರೇ?

هَٰذِهِۦ جَهَنَّمُ ٱلَّتِى كُنتُمْ تُوعَدُونَ ﴿٦٣﴾

63. ಇದು ನಿಮಗೆ ಮುನ್ನೆಚ್ಚರಿಕೆ ನೀಡಲಾಗಿರುವ ನರಕವಾಗಿದೆ!

ٱصْلَوْهَا ٱلْيَوْمَ بِمَا كُنتُمْ تَكْفُرُونَ ﴿٦٤﴾

64. ನೀವು ಅವಿಶ್ವಾಸವಿಟ್ಟ ಫಲವಾಗಿ ಅದರಲ್ಲಿ ಉರಿದುಕೊಳ್ಳಿರಿ.

ٱلْيَوْمَ نَخْتِمُ عَلَىٰٓ أَفْوَٰهِهِمْ وَتُكَلِّمُنَآ أَيْدِيهِمْ وَتَشْهَدُ أَرْجُلُهُم بِمَا كَانُوا۟ يَكْسِبُونَ ﴿٦٥﴾

65. ಆ ದಿನದಂದು ನಾವು ಅವರ ಬಾಯಿಗಳಿಗೆ ಮುದ್ರೆ ಹಾಕುವೆವು, ಅವರ ಕೈಗಳು ನಮ್ಮೊಂದಿಗೆ ಮಾತನಾಡುವುವು ಮತ್ತು ಅವರು ಮಾಡಿಕೊಂಡಿರುವುದಕ್ಕೆ ಅವರ ಕಾಲುಗಳು ಸಾಕ್ಷ್ಯವಹಿಸುವುವು.

وَلَوْ نَشَآءُ لَطَمَسْنَا عَلَىٰٓ أَعْيُنِهِمْ فَٱسْتَبَقُوا۟ ٱلصِّرَٰطَ فَأَنَّىٰ يُبْصِرُونَ ﴿٦٦﴾

66. ನಾವು ಇಚ್ಛಿಸುತ್ತಿದ್ದರೆ ಅವರ ಕಣ್ಣುಗಳನ್ನು ನಾವು ಅಳಿಸಿಬಿಡುತ್ತಿದ್ದೆವು.[1] ಆದರೂ ಮಾರ್ಗದಲ್ಲಿ ಮುನ್ನಡೆಯಲು ಅವರು ಶ್ರಮಿಸುವರು. ಆದರೆ ಅವರಿಗೆ ನೋಡಲು ಸಾಧ್ಯವಾಗುವುದಾದರೂ ಹೇಗೆ?

وَلَوْ نَشَآءُ لَمَسَخْنَٰهُمْ عَلَىٰ مَكَانَتِهِمْ فَمَا ٱسْتَطَٰعُوا۟ مُضِيًّا وَلَا يَرْجِعُونَ ﴿٦٧﴾

67. ನಾವು ಇಚ್ಛಿಸುತ್ತಿದ್ದರೆ ಅವರು ನಿಂತ ಸ್ಥಳದಲ್ಲಿಯೇ ಅವರನ್ನು ರೂಪಾಂತರಗೊಳಿಸುತ್ತಿದ್ದೆವು. ಆಗ ಅವರಿಗೆ ಮುಂದಕ್ಕೆ ಸಾಗಲು ಸಾಧ್ಯವಾಗದು. ಅವರಿಗೆ ಹಿಂದಕ್ಕೆ ಮರಳಲೂ ಸಾಧ್ಯವಾಗದು.

وَمَن نُّعَمِّرْهُ نُنَكِّسْهُ فِى ٱلْخَلْقِ ۖ أَفَلَا يَعْقِلُونَ ﴿٦٨﴾

68. ಯಾರಿಗೆ ನಾವು ದೀರ್ಘಾಯುಸ್ಸನ್ನು ನೀಡುವೆವೋ ಅವನ ಪ್ರಕೃತಿಯನ್ನು ನಾವು ತಿರುವುಮುರುವುಗೊಳಿಸುವೆವು. ಆದರೂ ಅವರು ಚಿಂತಿಸಲಾರರೇ?[2]

1 ನಾವು ಅಲ್ಲಾಹುವನ್ನು ನಿಷೇಧಿಸುವವರಾಗಿದ್ದೂ ಸಹ ಅವನೇಕೆ ನಮ್ಮನ್ನು ಶಿಕ್ಷಿಸುವುದಿಲ್ಲವೆಂದು ಕೆಲವರು ಕೇಳುತ್ತಾರೆ. ಮನುಷ್ಯನನ್ನು ಸ್ತಬ್ಧಗೊಳಿಸುವಂತಹ ಶಿಕ್ಷೆಗಳನ್ನು ಇಹಲೋಕದಲ್ಲಿಯೇ ನೀಡಲು ಅಲ್ಲಾಹುವಿಗೆ ಸಾಧ್ಯವಿದೆ. ಆದರೆ ಐಹಿಕ ಜೀವನದಲ್ಲಿ ಒಂದು ಹಂತದ ವರೆಗೆ ಸ್ವತಂತ್ರವಾಗಿ ಕಾರ್ಯಾಚರಿಸುವ ಸ್ವಾತಂತ್ರ್ಯವನ್ನು ಸಜ್ಜನರಿಗೂ, ದುರ್ಜನರಿಗೂ ನೀಡುವುದು ಅಲ್ಲಾಹುವಿನ ಕ್ರಮವಾಗಿದೆ.

2 ಜ್ಞಾನ ಮತ್ತು ಸಾಮರ್ಥ್ಯದ ಉತ್ತುಂಗಕ್ಕೆ ತಲುಪಿರುವ ಮನುಷ್ಯನು ತನ್ನ ಭೂತ ಮತ್ತು ಭವಿಷ್ಯವನ್ನು ಮರೆತು

69. ನಾವು ಅವರಿಗೆ (ಪ್ರವಾದಿಯವರಿಗೆ) ಕವಿತೆಯನ್ನು ಕಲಿಸಿಕೊಟ್ಟಿಲ್ಲ. ಅದು ಅವರಿಗೆ ಯುಕ್ತವಾದುದೂ ಅಲ್ಲ. ಇದೊಂದು ಉಪದೇಶ ಮತ್ತು ವಿಷಯಗಳನ್ನು ಸ್ಪಷ್ಟಗೊಳಿಸುವ[1] ಕುರ್‌ಆನ್ ಮಾತ್ರವಾಗಿದೆ.

وَمَا عَلَّمْنَٰهُ ٱلشِّعْرَ وَمَا يَنۢبَغِى لَهُۥٓ ۚ إِنْ هُوَ إِلَّا ذِكْرٌ وَقُرْءَانٌ مُّبِينٌ ﴿٦٩﴾

70. ಇದು ಜೀವಂತವಿರುವವರಿಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿ ಮತ್ತು ಸತ್ಯನಿಷೇಧಿಗಳ ಮೇಲೆ (ಶಿಕ್ಷೆಯ) ವಚನವು ಸತ್ಯವಾಗುವ ಸಲುವಾಗಿದೆ.[2]

لِّيُنذِرَ مَن كَانَ حَيًّا وَيَحِقَّ ٱلْقَوْلُ عَلَى ٱلْكَٰفِرِينَ ﴿٧٠﴾

71. ನಮ್ಮ ಕೈಗಳು ನಿರ್ಮಿಸಿರುವವುಗಳಲ್ಲಿ ಸೇರಿದ ಜಾನುವಾರುಗಳನ್ನು ನಾವು ಅವರಿಗಾಗಿ ಸೃಷ್ಟಿಸಿರುವೆವು ಎಂಬುದನ್ನು ಅವರು ಕಂಡಿಲ್ಲವೇ? ತರುವಾಯ ಅವರು ಅವುಗಳ ಮಾಲಿಕರಾಗಿರುವರು.

أَوَلَمْ يَرَوْا۟ أَنَّا خَلَقْنَا لَهُم مِّمَّا عَمِلَتْ أَيْدِينَآ أَنْعَٰمًا فَهُمْ لَهَا مَٰلِكُونَ ﴿٧١﴾

72. ನಾವು ಅವುಗಳನ್ನು ಅವರಿಗೆ ಅಧೀನಗೊಳಿಸಿಕೊಟ್ಟಿರುವೆವು. ಅವುಗಳಲ್ಲಿ ಕೆಲವು ಅವರ ವಾಹನಗಳಾಗಿವೆ. ಅವುಗಳಿಂದ ಅವರು (ಮಾಂಸವನ್ನು) ತಿನ್ನುತ್ತಿರುವರು.

وَذَلَّلْنَٰهَا لَهُمْ فَمِنْهَا رَكُوبُهُمْ وَمِنْهَا يَأْكُلُونَ ﴿٧٢﴾

73. ಅವರಿಗೆ ಅವುಗಳಲ್ಲಿ ಅನೇಕ ಪ್ರಯೋಜನಗಳಿವೆ. (ಮಾತ್ರವಲ್ಲದೆ)

وَلَهُمْ فِيهَا مَنَٰفِعُ وَمَشَارِبُ ۖ أَفَلَا يَشْكُرُونَ ﴿٧٣﴾

ಧಿಕ್ಕಾರಿ ಯಾಗಿ ಮೆರೆಯುತ್ತಾನೆ. ಅಲ್ಲಾಹು ಅವನನ್ನು ಬೆಳೆಸಿದ್ದು ಯಾವ ಜ್ಞಾನವೂ ಇಲ್ಲದ ಸ್ಥಿತಿಯಿಂದಾಗಿದೆ. ಜ್ಞಾನ ಮತ್ತು ವಿವೇಕವು ಕಳೆದುಹೋಗುವ ವೃದ್ಧಾಪ್ಯದ ಸ್ಥಿತಿಗೆ ಖಂಡಿತವಾಗಿಯೂ ಅಲ್ಲಾಹು ಅವನನ್ನು ಮರಳಿಕೊಂಡೊಯ್ಯುವನು. ಇದನ್ನು ಚಿಂತಿಸುತ್ತಾ ಮನುಷ್ಯನು ತನ್ನ ಮೇಲೆ ಅಲ್ಲಾಹುವಿಗಿರುವ ನಿಯಂತ್ರಣಾಧಿಕಾರದ ಕುರಿತು ಸದಾ ಪ್ರಜ್ಞಾವಂತನಾಗಿರಬೇಕಾಗಿದೆ.

1 ಕವನವು ರಸಿಕನಿಗೆ ಸಂವೇದನೆಯನ್ನು ನೀಡುತ್ತದೆ. ಭಾವೋದ್ರೇಕವೇ ಅದರ ಜೀವಾಳವಾಗಿದೆ. ಮುಹಮ್ಮದ್(ﷺ)ರವರನ್ನು ಒಂದು ಕವಿಯಾಗಿ ಮತ್ತು ಕುರ್‌ಆನನ್ನು ಒಂದು ಕಾವ್ಯವಾಗಿ ಕಾಣುವ ವಿಮರ್ಶಕರು ಕುರ್‌ಆನಿನ ವಿಶೇಷತೆಗಳನ್ನು ಗ್ರಹಿಸದವರಾಗಿದ್ದಾರೆ. ಕುರ್‌ಆನ್ ಮನುಷ್ಯನ ಭಾವಾವೇಶಗಳನ್ನು ಕೆರಳಿಸುವುದಿಲ್ಲ. ಬದಲಾಗಿ ಅದು ಅವನನ್ನು ಪ್ರಜ್ಞಾವಂತನನ್ನಾಗಿಸುತ್ತದೆ. ಅದು ವಿಚಾರಶೀಲರಾದ ಜನರಿಗೆ ಓದಿಗ್ರಹಿಸಬಹುದಾದ ಗ್ರಂಥವಾಗಿದೆ. ಕುರ್‌ಆನ್ ಎಂಬ ಪದದ ಅರ್ಥವೇ ಪಾರಾಯಣ ಅಥವಾ ಪಾರಾಯಣ ಮಾಡಲಾಗುವಂತದ್ದು ಎಂದಾಗಿದೆ.

2 ಸ್ಪಷ್ಟ ಪುರಾವೆಯು ಲಭಿಸಿದ ನಂತರ ಸತ್ಯನಿಷೇಧಿಗಳಿಗೆ ನೆಪಗಳನ್ನು ಹೇಳುವ ಅವಕಾಶವಿರದು.

ಪಾನೀಯವೂ ಇದೆ.[1] ಆದರೂ ಅವರು ಕೃತಜ್ಞತೆ ಸಲ್ಲಿಸಲಾರರೇ?

74. ಅವರು ತಮಗೆ ಸಹಾಯ ಸಿಗುವುದಕ್ಕಾಗಿ ಅಲ್ಲಾಹುವಿನ ಹೊರತು ಅನೇಕ ಆರಾಧ್ಯರನ್ನು ಮಾಡಿ ಕೊಂಡಿರುವರು.

وَٱتَّخَذُواْ مِن دُونِ ٱللَّهِ ءَالِهَةً لَّعَلَّهُمْ يُنصَرُونَ ٧٤

75. ಅವರಿಗೆ ಸಹಾಯ ಮಾಡಲು ಆ ಆರಾಧ್ಯರಿಗೆ ಸಾಧ್ಯವಾಗದು. ಅವರು ಅವರಿಗಾಗಿ (ಆರಾಧ್ಯರಿಗಾಗಿ) ಸನ್ನದ್ಧ ಸೈನ್ಯವಾಗಿರುವರು.

لَا يَسْتَطِيعُونَ نَصْرَهُمْ وَهُمْ لَهُمْ جُندٌ مُّحْضَرُونَ ٧٥

76. ಆದ್ದರಿಂದ ಅವರ ಮಾತು ತಮ್ಮನ್ನು ದುಃಖಕ್ಕೀಡು ಮಾಡದಿರಲಿ. ಅವರು ಮರೆಮಾಚುವುದನ್ನೂ, ಬಹಿರಂಗಪಡಿಸುವುದನ್ನೂ ಖಂಡಿತವಾಗಿಯೂ ನಾವು ಅರಿಯುವೆವು.

فَلَا يَحْزُنكَ قَوْلُهُمْ ۘ إِنَّا نَعْلَمُ مَا يُسِرُّونَ وَمَا يُعْلِنُونَ ٧٦

77. ನಾವು ಮನುಷ್ಯನನ್ನು ಒಂದು ವೀರ್ಯಕೋಶದಿಂದ ಸೃಷ್ಟಿಸಿರುವೆವು ಎಂಬುದನ್ನು ಅವನು ಕಂಡಿಲ್ಲವೇ? ಆದರೂ ಅವನು ಒಬ್ಬ ಸ್ಪಷ್ಟವಾದ ಎದುರಾಳಿಯಾಗಿರುವನು.

أَوَلَمْ يَرَ ٱلْإِنسَٰنُ أَنَّا خَلَقْنَٰهُ مِن نُّطْفَةٍ فَإِذَا هُوَ خَصِيمٌ مُّبِينٌ ٧٧

78. ಅವನು ನಮಗೊಂದು ಉಪಮೆಯನ್ನು ನೀಡಿರುವನು[2] ಮತ್ತು ತನ್ನ ಸೃಷ್ಟಿಯನ್ನೇ ಮರೆತಿರುವನು. ಅವನು ಹೇಳಿದನು: 'ಶಿಥಿಲವಾದ ಮೂಳೆಗಳಿಗೆ ಜೀವ ನೀಡುವವನು ಯಾರು?'

وَضَرَبَ لَنَا مَثَلًا وَنَسِىَ خَلْقَهُۥ ۖ قَالَ مَن يُحْىِ ٱلْعِظَٰمَ وَهِىَ رَمِيمٌ ٧٨

79. ಹೇಳಿರಿ: 'ಅದನ್ನು ಮೊದಲ ಬಾರಿ ಸೃಷ್ಟಿಸಿದವನೇ ಅದಕ್ಕೆ ಜೀವವನ್ನು ನೀಡುವನು. ಅವನು ಸಕಲ ಸೃಷ್ಟಿಗಳ ಕುರಿತು ಅರಿವುಳ್ಳವನಾಗಿರುವನು'.

قُلْ يُحْيِيهَا ٱلَّذِىٓ أَنشَأَهَآ أَوَّلَ مَرَّةٍ ۖ وَهُوَ بِكُلِّ خَلْقٍ عَلِيمٌ ٧٩

---

1 ಹಾಲು ಮತ್ತು ಹಾಲಿನಿಂದ ತಯಾರಿಸಲಾಗುವ ಅಥವಾ ಹಾಲನ್ನು ಸೇರಿಸಿ ತಯಾರಿಸಲಾಗುವ ಪಾನೀಯಗಳು.

2 ಶಿಥಿಲವಾದ ಮೂಳೆಗಳನ್ನು ಪುನಃ ಜೋಡಿಸಿ ಮನುಷ್ಯನನ್ನು ಪುನರ್‌ನಿರ್ಮಿಸಲು ಯಾರಿಗೆ ಸಾಧ್ಯ? ಎಂದು ಕೇಳುವವರು ಸರ್ವಶಕ್ತನಾದ ಅಲ್ಲಾಹುವನ್ನು ಅಸಹಾಯಕರೂ, ಬಲಹೀನರೂ ಆಗಿರುವ ಮನುಷ್ಯರೊಂದಿಗೆ ಹೋಲಿಸುತ್ತಿದ್ದಾರೆ. ಅಸಮರ್ಥರಾದ ಸೃಷ್ಟಿಗಳ ಬಗ್ಗೆಯಿರುವ ಅದೇ ದೃಷ್ಟಿಕೋನವನ್ನು ಅವರು ಅಲ್ಲಾಹುವಿನ ಬಗ್ಗೆಯೂ ಹೊಂದಿದ್ದಾರೆ.

**80**. ನಿಮಗೆ ಹಸಿ ಮರದಿಂದ ಬೆಂಕಿಯನ್ನು ನಿರ್ಮಿಸಿಕೊಡುವವನು ಅವನಾಗಿರುವನು.[1] ಆಗ ಅಗೋ! ನೀವು ಅದರಿಂದ ಉರಿಸುತ್ತಿರುವಿರಿ.

ٱلَّذِى جَعَلَ لَكُم مِّنَ ٱلشَّجَرِ ٱلْأَخْضَرِ
نَارًا فَإِذَآ أَنتُم مِّنْهُ تُوقِدُونَ ﴿٨٠﴾

**81**. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಅವರಂತಿರುವವರನ್ನು ಸೃಷ್ಟಿಸಲು ಸಾಮರ್ಥ್ಯವುಳ್ಳವನಲ್ಲವೇ? ಹೌದು! ಅವನು ಎಲ್ಲವನ್ನೂ ಸೃಷ್ಟಿಸುವವನು ಮತ್ತು ಎಲ್ಲವನ್ನೂ ಅರಿಯುವವನಾಗಿರುವನು.

أَوَلَيْسَ ٱلَّذِى خَلَقَ ٱلسَّمَـٰوَٰتِ وَٱلْأَرْضَ
بِقَـٰدِرٍ عَلَىٰٓ أَن يَخْلُقَ مِثْلَهُم ۚ بَلَىٰ وَهُوَ
ٱلْخَلَّـٰقُ ٱلْعَلِيمُ ﴿٨١﴾

**82**. ಅವನು ಯಾವುದೇ ಸಂಗತಿಯನ್ನು ಇಚ್ಛಿಸಿದರೆ, ಅವನ ಆಜ್ಞೆಯು ಅದರೊಂದಿಗೆ 'ಉಂಟಾಗು' ಎಂದು ಹೇಳುವುದು ಮಾತ್ರವಾಗಿದೆ. ತಕ್ಷಣ ಅದು ಉಂಟಾಗುವುದು!

إِنَّمَآ أَمْرُهُۥٓ إِذَآ أَرَادَ شَيْـًٔا أَن يَقُولَ لَهُۥ
كُن فَيَكُونُ ﴿٨٢﴾

**83**. ಎಲ್ಲ ವಸ್ತುಗಳ ಆಧಿಪತ್ಯವು ಯಾರ ಕೈಯ್ಯಲ್ಲಿದೆಯೋ ಮತ್ತು ಯಾರೆಡೆಗೆ ನಿಮ್ಮನ್ನು ಮರಳಿಸಲಾಗುವುದೋ ಅವನು ಪರಮ ಪಾವನನಾಗಿರುವನು!

فَسُبْحَـٰنَ ٱلَّذِى بِيَدِهِۦ مَلَكُوتُ كُلِّ شَىْءٍ
وَإِلَيْهِ تُرْجَعُونَ ﴿٨٣﴾

---

1 ಮರದ ತುಂಡುಗಳನ್ನು ಒಂದಕ್ಕೊಂದು ಉಜ್ಜಿ ಆದಿಮಾನವರು ಬೆಂಕಿಯುರಿಸುತ್ತಿದ್ದರು.

## ಅಸ್ಸಾಫ್ಫಾತ್ (ಸಾಲುಗಟ್ಟಿ ನಿಲ್ಲುವವರು)[1]

## سُورَةُ الصَّافَّاتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 182

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلصَّٰٓفَّٰتِ صَفّٗا ١ فَٱلزَّٰجِرَٰتِ زَجۡرٗا ٢ فَٱلتَّٰلِيَٰتِ ذِكۡرًا ٣ إِنَّ إِلَٰهَكُمۡ لَوَٰحِدٞ ٤ رَّبُّ ٱلسَّمَٰوَٰتِ وَٱلۡأَرۡضِ وَمَا بَيۡنَهُمَا وَرَبُّ ٱلۡمَشَٰرِقِ ٥

**1-5.** ಸರಿಯಾಗಿ ಸಾಲುಗಟ್ಟಿ ನಿಲ್ಲುವವರೂ, ತರುವಾಯ ಬಲವಾಗಿ ತಡೆಯುವವರೂ[2] ತರುವಾಯ ಸ್ತುತಿಕೀರ್ತನೆ ಮಾಡುವವರೂ ಆಗಿರುವ ಮಲಕ್‌ಗಳ ಮೇಲಾಣೆ! ಖಂಡಿತವಾಗಿಯೂ ನಿಮ್ಮ ಆರಾಧ್ಯನು ಏಕನಾಗಿರುವನು. ಹೌದು! ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯೆ ಇರುವವುಗಳ ರಬ್ ಹಾಗೂ ಉದಯ ಸ್ಥಾನಗಳ ರಬ್.

إِنَّا زَيَّنَّا ٱلسَّمَآءَ ٱلدُّنۡيَا بِزِينَةٍ ٱلۡكَوَاكِبِ ٦

**6.** ಖಂಡಿತವಾಗಿಯೂ ಸಮೀಪದ ಆಕಾಶವನ್ನು ನಾವು ನಕ್ಷತ್ರಗಳ ಅಲಂಕಾರದಿಂದ ಶೃಂಗರಿಸಿರುವೆವು.[3]

وَحِفۡظٗا مِّن كُلِّ شَيۡطَٰنٖ مَّارِدٖ ٧

**7.** ಧಿಕ್ಕಾರಿಗಳಾಗಿರುವ ಸರ್ವ ಸೈತಾನರಿಂದಲೂ ನಾವು (ಅದನ್ನು) ಸುರಕ್ಷಿತಗೊಳಿಸಿರುವೆವು.

لَّا يَسَّمَّعُونَ إِلَى ٱلۡمَلَإِ ٱلۡأَعۡلَىٰ وَيُقۡذَفُونَ مِن كُلِّ جَانِبٖ ٨ دُحُورٗاۖ وَلَهُمۡ عَذَابٞ وَاصِبٌ ٩

**8-9.** ಅತ್ಯುನ್ನತವಾದ ಸಮೂಹದೆಡೆಗೆ[4] ಕಿವಿಗೊಟ್ಟು ಆಲಿಸಲು ಅವರಿಗೆ (ಸೈತಾನರಿಗೆ) ಸಾಧ್ಯವಾಗದು. ಸರ್ವದಿಕ್ಕುಗಳಿಂದಲೂ ಅವರನ್ನು ಎಸೆದು ಓಡಿಸಲಾಗುವುದು. ಅವರಿಗೆ ಶಾಶ್ವತ ಶಿಕ್ಷೆಯೂ ಇದೆ.

---

1 ಈ ಅಧ್ಯಾಯದ ಮೊದಲ ಸೂಕ್ತಿಯಿಂದಾಗಿ ಈ ಹೆಸರು ಬಂದಿದೆ.

2 ಝಾಜಿರಾತ್ ಎಂಬ ಪದವನ್ನು ಕೆಡುಕುಗಳನ್ನು ಅಥವಾ ದುಷ್ಟಶಕ್ತಿಗಳನ್ನು ತಡೆಯುವವರು, ಮೋಡಗಳನ್ನು ತಡೆದು ಉದ್ದೇಶಿತ ಸ್ಥಳಗಳಿಗೆ ತಿರುಗಿಸುವವರು ಎಂಬಿತ್ಯಾದಿಯಾಗಿ ವ್ಯಾಖ್ಯಾನಿಸಲಾಗಿದೆ.

3 ಬಾನಲೋಕವನ್ನು ಅಲ್ಲಾಹು ಏಳು ಆಕಾಶಗಳನ್ನಾಗಿ ರಚಿಸಿದ್ದಾನೆ. ಯಾವುದೇ ಆಕಾಶದ ಗಡಿಯನ್ನು ಅವನು ತೋರಿಸಿಕೊಟ್ಟಿಲ್ಲ. ನಮ್ಮ ನಗ್ನನೇತ್ರಗಳಿಗೆ ಗೋಚರವಾಗುವ ತಾರೆಗಳು ಒಂದನೇ ಆಕಾಶದ ಭಾಗವೆಂದು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ.

4 ಅತ್ಯುನ್ನತ ಸಮೂಹ ಎಂದರೆ ಅಲ್ಲಾಹುವಿನ ಸಾಮೀಪ್ಯ ಲಭಿಸಿದ ಮಲಕ್‌ಗಳಾಗಿದ್ದಾರೆ. ಅವರ ಮಾತನ್ನು ಆಲಿಸಲು ಅಲ್ಲಾಹು ಸೈತಾನರಿಗೆ ಅನುಮತಿ ನೀಡಲಾರನು.

10. ಆದರೆ, ಯಾರಾದರೂ ಹಠಾತ್ತನೆ ಏನನ್ನಾದರೂ ಕಸಿಯುವುದಾದರೆ ಬೇಧಿಸಿ ನುಗ್ಗುತ್ತಾ ಹೋಗುವ ಒಂದು ಅಗ್ನಿಜ್ವಾಲೆಯು ಅವನನ್ನು ಹಿಂಬಾಲಿಸುವುದು.

إِلَّا مَنْ خَطِفَ ٱلْخَطْفَةَ فَأَتْبَعَهُۥ شِهَابٌ ثَاقِبٌ ﴿١٠﴾

11. ಆದ್ದರಿಂದ (ಓ ಪ್ರವಾದಿಯವರೇ!) ತಾವು ಅವರೊಂದಿಗೆ (ಸತ್ಯನಿಷೇಧಿಗಳೊಂದಿಗೆ) ಅಭಿಪ್ರಾಯವನ್ನು ಕೇಳಿರಿ: 'ಸೃಷ್ಟಿಸಲು ಅತ್ಯಂತ ಕಷ್ಟವಾಗಿರುವುದು ಅವರನ್ನೇ? ಅಥವಾ ನಾವು ಸೃಷ್ಟಿಸಿರುವ ಇತರ ಸೃಷ್ಟಿಗಳನ್ನೇ?' ಖಂಡಿತವಾಗಿಯೂ ನಾವು ಅವರನ್ನು ಸೃಷ್ಟಿಸಿರುವುದು ಜಿಗುಟಾದ ಜೇಡಿಮಣ್ಣಿನಿಂದಾಗಿದೆ.

فَٱسْتَفْتِهِمْ أَهُمْ أَشَدُّ خَلْقًا أَم مَّنْ خَلَقْنَآ إِنَّا خَلَقْنَٰهُم مِّن طِينٍ لَّازِبٍ ﴿١١﴾

12. ಆದರೆ ತಾವು ಆಶ್ಚರ್ಯಪಟ್ಟಿರುವಿರಿ ಮತ್ತು ಅವರು ಅಪಹಾಸ್ಯ ಮಾಡುತ್ತಿರುವರು!

بَلْ عَجِبْتَ وَيَسْخَرُونَ ﴿١٢﴾

13. ಅವರಿಗೆ ಉಪದೇಶ ನೀಡಲಾದರೆ ಅವರು ಆಲೋಚಿಸುವುದಿಲ್ಲ.

وَإِذَا ذُكِّرُوا۟ لَا يَذْكُرُونَ ﴿١٣﴾

14. ಅವರು ಯಾವುದೇ ದೃಷ್ಟಾಂತವನ್ನು ಕಂಡರೂ ಗೇಲಿ ಮಾಡುವರು.

وَإِذَا رَأَوْا۟ ءَايَةً يَسْتَسْخِرُونَ ﴿١٤﴾

15. ಅವರು ಹೇಳುವರು: 'ಇದೊಂದು ಸ್ಪಷ್ಟವಾದ ಮಾಂತ್ರಿಕತೆ ಮಾತ್ರವಾಗಿದೆ.

وَقَالُوٓا۟ إِنْ هَٰذَآ إِلَّا سِحْرٌ مُّبِينٌ ﴿١٥﴾

16-17. ನಾವು ಮೃತಪಟ್ಟು ಮಣ್ಣು ಮತ್ತು ಮೂಳೆ ಚೂರುಗಳಾಗಿ ಬಿಟ್ಟ ಬಳಿಕ ನಮ್ಮನ್ನು ಮತ್ತು ನಮ್ಮ ಪೂರ್ವಿಕರನ್ನು ಪುನರುತ್ಥಾನಗೊಳಿಸಲಾಗುವುದೇ?'

أَءِذَا مِتْنَا وَكُنَّا تُرَابًا وَعِظَٰمًا أَءِنَّا لَمَبْعُوثُونَ ﴿١٦﴾ أَوَءَابَآؤُنَا ٱلْأَوَّلُونَ ﴿١٧﴾

18. ಹೇಳಿರಿ: 'ಹೌದು! (ಅಂದು) ನೀವು ಅಪಮಾನಿತರಾಗಿರುವಿರಿ'.

قُلْ نَعَمْ وَأَنتُمْ دَٰخِرُونَ ﴿١٨﴾

19. ಅದೊಂದು ಘೋರ ಶಬ್ದ ಮಾತ್ರವಾಗಿರುವುದು. ಆಗ ಅಗೋ! ಅವರು (ಎದ್ದುನಿಂತು) ನೋಡುವರು!

فَإِنَّمَا هِىَ زَجْرَةٌ وَٰحِدَةٌ فَإِذَا هُمْ يَنظُرُونَ ﴿١٩﴾

20. ಅವರು ಹೇಳುವರು: 'ಅಯ್ಯೋ! ನಮ್ಮ ದುರದೃಷ್ಟವೇ! ಇದು ಪ್ರತಿಫಲದ ದಿನವಾಗಿದೆ!'

وَقَالُوا۟ يَٰوَيْلَنَا هَٰذَا يَوْمُ ٱلدِّينِ ﴿٢٠﴾

**21.** (ಅವರಿಗೆ ಉತ್ತರಿಸಲಾಗುವುದು): 'ಇದು ನೀವು ನಿಷೇಧಿಸಿದ ನಿರ್ಣಾಯಕವಾದ ತೀರ್ಪು ನೀಡುವ ದಿನವಾಗಿದೆ'.

هَٰذَا يَوْمُ ٱلْفَصْلِ ٱلَّذِى كُنتُم بِهِۦ تُكَذِّبُونَ ﴿٢١﴾

**22–23.** (ಅಲ್ಲಾಹು ಆದೇಶಿಸುವನು): 'ಅಕ್ರಮಿಗಳನ್ನೂ, ಅವರ ಸಂಗಾತಿಗಳನ್ನೂ ಮತ್ತು ಅಲ್ಲಾಹುವಿನ ಹೊರತು ಅವರು ಆರಾಧಿಸುತ್ತಿದ್ದವುಗಳನ್ನೂ ಒಟ್ಟುಗೂಡಿಸಿರಿ. ತರುವಾಯ ಅವರನ್ನು ನರಕಾಗ್ನಿಯ ದಾರಿಯೆಡೆಗೆ ಸಾಗಿಸಿರಿ'.

۞ ٱحْشُرُوا۟ ٱلَّذِينَ ظَلَمُوا۟ وَأَزْوَٰجَهُمْ وَمَا كَانُوا۟ يَعْبُدُونَ ﴿٢٢﴾ مِن دُونِ ٱللَّهِ فَٱهْدُوهُمْ إِلَىٰ صِرَٰطِ ٱلْجَحِيمِ ﴿٢٣﴾

**24–25.** ಅವರನ್ನು ತಡೆದು ನಿಲ್ಲಿಸಿರಿ! 'ನಿಮಗೇನಾಗಿದೆ? ನೀವು ಪರಸ್ಪರ ಸಹಾಯ ಮಾಡುವುದಿಲ್ಲವೇ?' ಎಂದು ಅವರೊಂದಿಗೆ ಪ್ರಶ್ನಿಸಬೇಕಾಗಿದೆ.

وَقِفُوهُمْ ۖ إِنَّهُم مَّسْـُٔولُونَ ﴿٢٤﴾ مَا لَكُمْ لَا تَنَاصَرُونَ ﴿٢٥﴾

**26.** ಅಲ್ಲ, ಅಂದು ಅವರು ಶರಣಾಗತರಾಗಿರುವರು.

بَلْ هُمُ ٱلْيَوْمَ مُسْتَسْلِمُونَ ﴿٢٦﴾

**27–28.** ಅವರಲ್ಲಿ ಕೆಲವರು ಇತರ ಕೆಲವರೆಡೆಗೆ ತಿರುಗಿ ಪರಸ್ಪರ ಪ್ರಶ್ನಿಸುವರು. ಅವರು ಹೇಳುವರು: 'ಖಂಡಿತವಾಗಿಯೂ ನೀವು ನಮ್ಮ ಬಳಿಗೆ ಬಲಭಾಗದಿಂದ ಬಂ(ದು ನಮ್ಮನ್ನು ಸತ್ಯದಿಂದ ವಿಮುಖರಾಗಿಸಿ)ದಿರಿ.'

وَأَقْبَلَ بَعْضُهُمْ عَلَىٰ بَعْضٍ يَتَسَآءَلُونَ ﴿٢٧﴾ قَالُوٓا۟ إِنَّكُمْ كُنتُمْ تَأْتُونَنَا عَنِ ٱلْيَمِينِ ﴿٢٨﴾

**29–30.** ಅವರು ಉತ್ತರಿಸುವರು: 'ಅಲ್ಲ, ನೀವೇ ವಿಶ್ವಾಸಿಗಳಾಗಲಿಲ್ಲ.[1] ನಿಮ್ಮ ಮೇಲೆ ನಮಗೆ ಯಾವುದೇ ಅಧಿಕಾರವಿರಲಿಲ್ಲ. ಆದರೆ ನೀವು ಅತಿಕ್ರಮಿಗಳಾದ ಜನತೆಯಾಗಿದ್ದಿರಿ.

قَالُوا۟ بَل لَّمْ تَكُونُوا۟ مُؤْمِنِينَ ﴿٢٩﴾ وَمَا كَانَ لَنَا عَلَيْكُم مِّن سُلْطَٰنٍ ۖ بَلْ كُنتُمْ قَوْمًا طَٰغِينَ ﴿٣٠﴾

**31.** ಆದ್ದರಿಂದ ನಮ್ಮ ಮೇಲೆ ನಮ್ಮ ರಬ್‌ನ ವಚನವು[2] ಸತ್ಯವಾಗಿ ಬಿಟ್ಟಿತು.

فَحَقَّ عَلَيْنَا قَوْلُ رَبِّنَآ ۖ إِنَّا لَذَآئِقُونَ ﴿٣١﴾

---

1 ವಿಶ್ವಾಸ ಮತ್ತು ಸತ್ಯನಿಷೇಧವನ್ನು ಯಾರ ಮೇಲೂ ಬಲಾತ್ಕಾರವಾಗಿ ಹೇರಲು ಯಾರಿಗೂ ಸಾಧ್ಯವಿಲ್ಲ. ಬಹಿರಂಗವಾಗಿ ವಿಶ್ವಾಸ ಪ್ರಕಟನೆ ಮಾಡುವುದನ್ನು ಮತ್ತು ಅದಕ್ಕನುಸಾರವಾಗಿ ಬಹಿರಂಗವಾಗಿ ಕಾರ್ಯಾಚರಿಸುವುದನ್ನು ಮಾತ್ರ ಓರ್ವ ಸ್ವೇಚ್ಛಾಧಿಪತಿಗೆ ಗರಿಷ್ಠವಾಗಿ ತಡೆಯಲು ಸಾಧ್ಯ. ಆದ್ದರಿಂದ ಬಲವಂತಕ್ಕೊಳಗಾಗಿ ನಾವು ಅವಿಶ್ವಾಸಿಗಳಾದೆವೆಂದು ಯಾರಾದರೂ ವಾದಿಸುವುದಾದರೆ ಅದೊಂದು ನಿರರ್ಥಕ ವಾದವಾಗಿದೆ.

2 ಇದು ದುರ್ಮಾರ್ಗವನ್ನು ಸ್ವತಃ ಆರಿಸಿದವರು –ಅವರು ಬಲಶಾಲಿಗಳಾಗಿದ್ದರೂ ಬಲಹೀನರಾಗಿದ್ದರೂ– ಶಿಕ್ಷಾರ್ಹರಾಗಿದ್ದಾರೆಂಬ ಅಲ್ಲಾಹುವಿನ ಘೋಷಣೆಯಾಗಿರಬಹುದು.

ಖಂಡಿತವಾಗಿಯೂ ನಾವು (ಶಿಕ್ಷೆಯನ್ನು) ಅನುಭವಿಸಲಿರುವೆವು.

32. ಹೀಗೆ ನಾವು ನಿಮ್ಮನ್ನು ಪಥಭ್ರಷ್ಟರನ್ನಾಗಿ ಮಾಡಿದೆವು. (ಯಾಕೆಂದರೆ) ಖಂಡಿತವಾಗಿಯೂ ನಾವು ಪಥಭ್ರಷ್ಟರಾಗಿದ್ದೆವು'.[1]

فَأَغۡوَيۡنَٰكُمۡ إِنَّا كُنَّا غَٰوِينَ ٣٢

33. ಆಗ ಖಂಡಿತವಾಗಿಯೂ ಆ ದಿನದಂದು ಅವರು (ಎರಡೂ ಗುಂಪುಗಳು) ಶಿಕ್ಷೆಯಲ್ಲಿ ಪಾಲುದಾರರಾಗಿರುವರು.[2]

فَإِنَّهُمۡ يَوۡمَئِذٖ فِي ٱلۡعَذَابِ مُشۡتَرِكُونَ ٣٣

34. ಖಂಡಿತವಾಗಿಯೂ ನಾವು ಅಪರಾಧಿಗಳೊಂದಿಗೆ ಹೀಗೆಯೇ ವರ್ತಿಸುವೆವು.

إِنَّا كَذَٰلِكَ نَفۡعَلُ بِٱلۡمُجۡرِمِينَ ٣٤

35-36. 'ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ' ಎಂದು ಅವರೊಂದಿಗೆ ಹೇಳಲಾದರೆ ಅವರು ಅಹಂಕಾರ ಪಡುತ್ತಾ 'ಮತಿಭ್ರಾಂತನಾದ ಒಬ್ಬ ಕವಿಗಾಗಿ ನಾವು ನಮ್ಮ ಆರಾಧ್ಯರನ್ನು ವರ್ಜಿಸುವುದೇ?' ಎಂದು ಕೇಳುತ್ತಿದ್ದರು.

إِنَّهُمۡ كَانُوٓاْ إِذَا قِيلَ لَهُمۡ لَآ إِلَٰهَ إِلَّا ٱللَّهُ يَسۡتَكۡبِرُونَ ٣٥ وَيَقُولُونَ أَئِنَّا لَتَارِكُوٓاْ ءَالِهَتِنَا لِشَاعِرٖ مَّجۡنُونِۭ ٣٦

37. ಅಲ್ಲ, ಅವರು ಸತ್ಯದೊಂದಿಗೆ ಬಂದಿರುವರು ಮತ್ತು (ಗತ) ಪ್ರವಾದಿಗಳನ್ನು ದೃಢೀಕರಿಸಿರುವರು.

بَلۡ جَآءَ بِٱلۡحَقِّ وَصَدَّقَ ٱلۡمُرۡسَلِينَ ٣٧

38. ಖಂಡಿತವಾಗಿಯೂ ನೀವು ಯಾತನಾಮಯ ಶಿಕ್ಷೆಯನ್ನು ಸವಿಯಬೇಕಾದವರೇ ಆಗಿರುವಿರಿ.

إِنَّكُمۡ لَذَآئِقُواْ ٱلۡعَذَابِ ٱلۡأَلِيمِ ٣٨

39. ನೀವು ಮಾಡಿರುವುದಕ್ಕೆ ಮಾತ್ರವೇ ನಿಮಗೆ ಪ್ರತಿಫಲ ನೀಡಲಾಗುವುದು.

وَمَا تُجۡزَوۡنَ إِلَّا مَا كُنتُمۡ تَعۡمَلُونَ ٣٩

40-41. ಅಲ್ಲಾಹುವಿನ ನಿಷ್ಕಳಂಕ ದಾಸರು ಇದರಿಂದ ಹೊರತಾಗಿರುವರು. ಅವರಿಗೆ ಅರಿಯಲ್ಪಟ್ಟ ಅನ್ನಾಧಾರವಿರುವುದು.

إِلَّا عِبَادَ ٱللَّهِ ٱلۡمُخۡلَصِينَ ٤٠ أُوْلَٰٓئِكَ لَهُمۡ رِزۡقٞ مَّعۡلُومٞ ٤١

1 ನೀವು ನಿಮ್ಮ ವಿವೇಕವನ್ನು ಬಳಸಿ ಸನ್ಮಾರ್ಗವನ್ನು ಕಂಡುಕೊಳ್ಳಲು ಯತ್ನಿಸದೆ ನಮ್ಮ ದುರ್ಮಾರ್ಗವನ್ನು ಅನುಸರಿಸಿ ಪಥಭ್ರಷ್ಟರಾದಿರಿ ಎಂದರ್ಥ.

2 ದಾರಿಗೆಡಿಸಿದವರು ಮತ್ತು ದಾರಿಗೆಟ್ಟವರು ಶಿಕ್ಷೆಯಲ್ಲಿ ಪಾಲುದಾರರಾಗಿದ್ದಾರೆ ಎಂಬುದರಿಂದ ಅವರಿಬ್ಬರಿಗೂ ಸಮಾನ ಶಿಕ್ಷೆಯನ್ನು ನೀಡಲಾಗುವುದು ಎಂದರ್ಥವಲ್ಲ. ಸ್ವತಃ ದಾರಿಗೆಟ್ಟು ಇತರರನ್ನೂ ದಾರಿಗೆಡಿಸಿದವನಿಗೆ ಇನ್ನೂ ಕಠಿಣವಾದ ಶಿಕ್ಷೆಯನ್ನು ನೀಡಲಾಗುವುದು.

فَوَٰكِهُ وَهُم مُّكۡرَمُونَ ﴿٤٢﴾ فِي جَنَّٰتِ
ٱلنَّعِيمِ ﴿٤٣﴾ عَلَىٰ سُرُرٖ مُّتَقَٰبِلِينَ ﴿٤٤﴾

**42-44.** ವಿವಿಧ ಬಗೆಯ ಫಲಗಳು! ಸೌಭಾಗ್ಯ ತುಂಬಿದ ಸ್ವರ್ಗೋದ್ಯಾನಗಳಲ್ಲಿ ಅವರು ಗೌರವಿಸಲ್ಪಡುವರು. ಅವರು ಮಂಚಗಳಲ್ಲಿ ಪರಸ್ಪರ ಅಭಿಮುಖಿಗಳಾಗಿ ಕುಳಿತಿರುವರು.

يُطَافُ عَلَيۡهِم بِكَأۡسٖ مِّن مَّعِينِۭ ﴿٤٥﴾
بَيۡضَآءَ لَذَّةٖ لِّلشَّٰرِبِينَ ﴿٤٦﴾ لَا فِيهَا غَوۡلٞ
وَلَا هُمۡ عَنۡهَا يُنزَفُونَ ﴿٤٧﴾

**45-47.** ಒಂದು ರೀತಿಯ ಒರತೆ ನೀರು ತುಂಬಿದ ಲೋಟಗಳನ್ನು ಅವರ ಸುತ್ತಲೂ ತರಲಾಗುವುದು. ಬೆಳ್ಳಗಿರುವ ಮತ್ತು ಕುಡಿಯುವವರಿಗೆ ಮಾಧುರ್ಯವುಳ್ಳ ಪಾನೀಯ. ಅದರಲ್ಲಿ ಯಾವುದೇ ದುಷ್ಪರಿಣಾಮವಿರದು. ಅದರಿಂದಾಗಿ ಅವರಿಗೆ ನಶೆಯೂ ಉಂಟಾಗದು.(1)

وَعِندَهُمۡ قَٰصِرَٰتُ ٱلطَّرۡفِ عِينٞ ﴿٤٨﴾
كَأَنَّهُنَّ بَيۡضٞ مَّكۡنُونٞ ﴿٤٩﴾

**48-49.** ದೃಷ್ಟಿಯನ್ನು ನಿಯಂತ್ರಿಸುವ(2) ಮತ್ತು ವಿಶಾಲ ಕಣ್ಣುಗಳುಳ್ಳ ಸ್ತ್ರೀಯರು ಅವರ ಬಳಿಯಿರುವರು. ಅವರು ಜೋಪಾನವಾಗಿಡಲಾದ ಮೊಟ್ಟೆಗಳಂತಿರುವರು.(3)

فَأَقۡبَلَ بَعۡضُهُمۡ عَلَىٰ بَعۡضٖ يَتَسَآءَلُونَ ﴿٥٠﴾

**50.** ಸ್ವರ್ಗವಾಸಿಗಳ ಪೈಕಿ ಕೆಲವರು ಇತರ ಕೆಲವರಿಗೆ ಅಭಿಮುಖವಾಗಿ ಪರಸ್ಪರ ಕೇಳುವರು.

قَالَ قَآئِلٞ مِّنۡهُمۡ إِنِّي كَانَ لِي قَرِينٞ ﴿٥١﴾
يَقُولُ أَءِنَّكَ لَمِنَ ٱلۡمُصَدِّقِينَ ﴿٥٢﴾ أَءِذَا
مِتۡنَا وَكُنَّا تُرَابٗا وَعِظَٰمًا أَءِنَّا
لَمَدِينُونَ ﴿٥٣﴾

**51-53.** ಅವರ ಪೈಕಿ ಒಬ್ಬ ವಕ್ತಾರನು ಹೇಳುವನು: 'ಖಂಡಿತವಾಗಿಯೂ ನನಗೊಬ್ಬ ಗೆಳೆಯನಿದ್ದನು. ಅವನು ಹೇಳುತ್ತಿದ್ದನು: ನಿಜವಾಗಿಯೂ ನೀನು (ಪರಲೋಕದಲ್ಲಿ) ವಿಶ್ವಾಸವಿಡುವವರ ಪೈಕಿ ಸೇರಿದವನಾಗಿರುವೆಯೇನು? ನಾವು ಮೃತಪಟ್ಟು ಮಣ್ಣು ಮತ್ತು ಮೂಳೆಗಳಾಗಿ ಹೋದ ಬಳಿಕವೂ ನಮಗೆ ನಮ್ಮ ಕರ್ಮಫಲಗಳು ನೀಡಲಾಗುವುದೇ?'

---

1 ಲೌಕಿಕ ಪಾನೀಯಗಳಲ್ಲಿ ಹಲವು ಪಾನೀಯಗಳು ದುಷ್ಪರಿಣಾಮವನ್ನು ಬೀರುತ್ತವೆ. ಅವುಗಳಲ್ಲಿ ಕೆಲವು ನಶೆ ಮತ್ತು ಬುದ್ಧಿಭ್ರಮಣೆಯನ್ನು ಉಂಟುಮಾಡುತ್ತವೆ. ಆದರೆ ಸ್ವರ್ಗೀಯ ಪಾನೀಯಗಳು ಇದಕ್ಕಿಂತ ಭಿನ್ನವಾಗಿವೆ. ಅವು ಯಾವ ದುಷ್ಪರಿಣಾಮವನ್ನೂ ಬೀರುವುದಿಲ್ಲ.

2 ದೃಷ್ಟಿ ನಿಯಂತ್ರಿಸುವವರು ಎಂದರೆ ಅನ್ಯ ಪುರುಷರನ್ನು ನೋಡದ ಪತಿವ್ರತೆಯರು ಎಂದರ್ಥ.

3 ಬೆಳ್ಳಗಿನ ಸುಂದರಿಯರ ಮುಖಗಳನ್ನು ಅರಬಿಗಳು ಸಾಮಾನ್ಯವಾಗಿ ಶುಚಿಯಾಗಿ ಮತ್ತು ಜೋಪಾನವಾಗಿ ಸಂರಕ್ಷಿಸಲಾಗುವ ಉಷ್ಟ್ರಪಕ್ಷಿಯ ಮೊಟ್ಟೆಗಳೊಂದಿಗೆ ಹೋಲಿಸುತ್ತಿದ್ದರು.

قَالَ هَلْ أَنتُم مُّطَّلِعُونَ ﴿٥٤﴾ فَٱطَّلَعَ فَرَءَاهُ فِي سَوَآءِ ٱلْجَحِيمِ ﴿٥٥﴾

**54-55.** (ಬಳಿಕ ತನ್ನ ಬಳಿಯಿರುವವರೊಂದಿಗೆ) ಅವನು ಹೇಳುವನು: 'ನೀವು (ಆ ಗೆಳೆಯನನ್ನು) ಇಣುಕಿ ನೋಡಲು ಬಯಸುವಿರಾ?' ಆಗ ಅವನು ಇಣುಕಿ ನೋಡುವನು. ಆಗ ಅವನು ಅವನನ್ನು ನರಕಾಗ್ನಿಯ ಮಧ್ಯೆ ಕಾಣುವನು.

قَالَ تَٱللَّهِ إِن كِدتَّ لَتُرْدِينِ ﴿٥٦﴾ وَلَوْلَا نِعْمَةُ رَبِّي لَكُنتُ مِنَ ٱلْمُحْضَرِينَ ﴿٥٧﴾

**56-57.** ಅವನು (ಗೆಳೆಯನೊಂದಿಗೆ) ಹೇಳುವನು: 'ಅಲ್ಲಾಹುವಿನ ಮೇಲಾಣೆ! ಖಂಡಿತವಾಗಿಯೂ ನೀನು ನನ್ನನ್ನು ನಾಶ ಮಾಡುತ್ತಿದ್ದೆ. ನನ್ನ ರಬ್‌ನ ಕೃಪೆಯಿಲ್ಲದಿರುತ್ತಿದ್ದರೆ (ನರಕಾಗ್ನಿಯಲ್ಲಿ) ಹಾಜರುಗೊಳಿಸಲಾಗುವವರ ಪೈಕಿ ನಾನೂ ಸೇರಿರುತ್ತಿದ್ದೆ'.

أَفَمَا نَحْنُ بِمَيِّتِينَ ﴿٥٨﴾ إِلَّا مَوْتَتَنَا ٱلْأُولَىٰ وَمَا نَحْنُ بِمُعَذَّبِينَ ﴿٥٩﴾ إِنَّ هَٰذَا لَهُوَ ٱلْفَوْزُ ٱلْعَظِيمُ ﴿٦٠﴾ لِمِثْلِ هَٰذَا فَلْيَعْمَلِ ٱلْعَٰمِلُونَ ﴿٦١﴾

**58-61.** (ಸ್ವರ್ಗವಾಸಿಗಳು ಹೇಳುವರು): 'ನಮ್ಮ ಮೊದಲ ಮರಣದ ಹೊರತು ಇನ್ನು ನಾವು ಮೃತಪಡಲಾರೆವು. ನಾವು ಶಿಕ್ಷಿಸಲ್ಪಡುವುದೂ ಇಲ್ಲ. ಖಂಡಿತವಾಗಿಯೂ ಇದೇ ಮಹಾ ವಿಜಯವಾಗಿದೆ. ಕರ್ಮವೆಸಗುವವರು ಇದರಂತಿರುವುದಕ್ಕಾಗಿ ಕರ್ಮವೆಸಗಲಿ'.

أَذَٰلِكَ خَيْرٌ نُّزُلًا أَمْ شَجَرَةُ ٱلزَّقُّومِ ﴿٦٢﴾

**62.** ಉತ್ತಮ ಆತಿಥ್ಯವು ಇದಾಗಿದೆಯೇ? ಅಥವಾ ಝಖ್ಖೂಮ್ ಮರವೇ?(1)

إِنَّا جَعَلْنَٰهَا فِتْنَةً لِّلظَّٰلِمِينَ ﴿٦٣﴾

**63.** ಖಂಡಿತವಾಗಿಯೂ ನಾವು ಅಕ್ರಮಿಗಳಿಗೆ ಅದನ್ನು ಒಂದು ಪರೀಕ್ಷೆಯನ್ನಾಗಿ ಮಾಡಿರುವೆವು.(2)

إِنَّهَا شَجَرَةٌ تَخْرُجُ فِيٓ أَصْلِ ٱلْجَحِيمِ ﴿٦٤﴾

**64.** ಅದು ನರಕಾಗ್ನಿಯ ತಳಭಾಗದಿಂದ ಹೊರಹೊಮ್ಮುವ ಒಂದು ಮರವಾಗಿದೆ.

طَلْعُهَا كَأَنَّهُۥ رُءُوسُ ٱلشَّيَٰطِينِ ﴿٦٥﴾

**65.** ಅದರ ಗೊನೆಗಳು ಸೈತಾನರ ತಲೆಗಳಂತಿರುವುವು.

---

1 ಝಖ್ಖೂಮ್ ಮರದ ಕಾಯಿ ಅತ್ಯಂತ ಅಸಹ್ಯ ಕಹಿಯನ್ನು ಹೊಂದಿದೆ. ಅದನ್ನು ನರಕವಾಸಿಗಳಿಗೆ ಆಹಾರವಾಗಿ ನೀಡಲಾಗುವುದು

2 ಸತ್ಯನಿಷೇಧಿಗಳ ಪ್ರಶ್ನೆಯು 'ಧಗಧಗಿಸುವ ನರಕಾಗ್ನಿಯಲ್ಲಿ ಮರ ಬೆಳೆಯುತ್ತದೆಯೇ?' ಎಂಬುದಾಗಿರಬಹುದು! ಅಲ್ಲಾಹುವಿಗೆ ಯಾವುದೇ ವಸ್ತುವನ್ನೂ ಯಾವುದೇ ವಿಧದಲ್ಲೂ ಸೃಷ್ಟಿಸಲು ಸಾಧ್ಯವಿದೆಯೆಂಬ ವಾಸ್ತವತೆಯಲ್ಲಿ ಯಾರೆಲ್ಲ ವಿಶ್ವಾಸವಿಡುತ್ತಾರೆಂದು ಪರೀಕ್ಷಿಸುವುದಕ್ಕಾಗಿಯೇ ಅಲ್ಲಾಹು ಝಖ್ಖೂಮ್ ಮರವನ್ನು ಪ್ರಸ್ತಾಪಿಸಿದ್ದಾನೆ.

**66.** ಖಂಡಿತವಾಗಿಯೂ ಅವರು ಅದರಿಂದ ತಿನ್ನುವರು ಮತ್ತು ಹೊಟ್ಟೆ ತುಂಬಿಸಿಕೊಳ್ಳುವರು.

فَإِنَّهُمۡ لَأٓكِلُونَ مِنۡهَا فَمَالِـُٔونَ مِنۡهَا ٱلۡبُطُونَ ٦٦

**67-68.** ತರುವಾಯ ಅವರಿಗೆ ಅದರ ಮೇಲೆ ಕುದಿಯುವ ಪಾನೀಯದ ಒಂದು ಮಿಶ್ರಣವಿರುವುದು. ತರುವಾಯ ಅವರ ಮರಳುವಿಕೆಯು ಖಂಡಿತವಾಗಿಯೂ ನರಕಾಗ್ನಿಯೆಡೆಗೇ ಆಗಿರುವುದು.

ثُمَّ إِنَّ لَهُمۡ عَلَيۡهَا لَشَوۡبًا مِّنۡ حَمِيمٖ ٦٧
ثُمَّ إِنَّ مَرۡجِعَهُمۡ لَإِلَى ٱلۡجَحِيمِ ٦٨

**69.** ಖಂಡಿತವಾಗಿಯೂ ಅವರು ತಮ್ಮ ಪೂರ್ವಿಕರನ್ನು ಪಥಭ್ರಷ್ಟರಾಗಿ ಕಂಡಿರುವರು.

إِنَّهُمۡ أَلۡفَوۡاْ ءَابَآءَهُمۡ ضَآلِّينَ ٦٩

**70.** ಹಾಗೆ ಇವರು ಅವರ (ಪೂರ್ವಿಕರ) ಹೆಜ್ಜೆಗುರುತುಗಳ ಮೂಲಕ ಧಾವಂತದಿಂದ ಸಾಗುತ್ತಿರುವರು.

فَهُمۡ عَلَىٰٓ ءَاثَٰرِهِمۡ يُهۡرَعُونَ ٧٠

**71.** ಇವರಿಗಿಂತ ಮುಂಚಿನ ಪೂರ್ವಿಕರ ಪೈಕಿ ಹೆಚ್ಚಿನವರೂ ಪಥಭ್ರಷ್ಟರಾಗಿದ್ದರು.

وَلَقَدۡ ضَلَّ قَبۡلَهُمۡ أَكۡثَرُ ٱلۡأَوَّلِينَ ٧١

**72.** ನಾವು ಅವರಿಗೆ ಮುನ್ನೆಚ್ಚರಿಕೆಗಾರರನ್ನು ಕಳುಹಿಸಿದ್ದೆವು.

وَلَقَدۡ أَرۡسَلۡنَا فِيهِم مُّنذِرِينَ ٧٢

**73-74.** ಮುನ್ನೆಚ್ಚರಿಕೆ ನೀಡಲಾದವರ ಅಂತ್ಯ ಹೇಗಿತ್ತೆಂಬುದನ್ನು ನೋಡಿರಿ. ಅಲ್ಲಾಹುವಿನ ನಿಷ್ಕಳಂಕ ದಾಸರ ಹೊರತು.

فَٱنظُرۡ كَيۡفَ كَانَ عَٰقِبَةُ ٱلۡمُنذَرِينَ ٧٣
إِلَّا عِبَادَ ٱللَّهِ ٱلۡمُخۡلَصِينَ ٧٤

**75.** ನೂಹ್ ನಮ್ಮನ್ನು ಕರೆದು ಪ್ರಾರ್ಥಿಸಿದ್ದರು. ಆಗ ಉತ್ತರಿಸಿದವನು ಅದೆಷ್ಟು ಉತ್ತಮನು!

وَلَقَدۡ نَادَىٰنَا نُوحٞ فَلَنِعۡمَ ٱلۡمُجِيبُونَ ٧٥

**76.** ಆತನನ್ನೂ ಮತ್ತು ಅವರ ಜನರನ್ನು ನಾವು ಮಹಾ ದುರಂತದಿಂದ ಪಾರು ಮಾಡಿದೆವು.

وَنَجَّيۡنَٰهُ وَأَهۡلَهُۥ مِنَ ٱلۡكَرۡبِ ٱلۡعَظِيمِ ٧٦

**77-78.** ಆತನ ಸಂತತಿಗಳನ್ನು ನಾವು (ಭೂಮಿಯಲ್ಲಿ) ನೆಲೆನಿಲ್ಲುವವರನ್ನಾಗಿ ಮಾಡಿದೆವು ಮತ್ತು ನಂತರದ ತಲೆಮಾರುಗಳಲ್ಲಿ ಆತನ ಕೀರ್ತಿಯನ್ನು ಉಳಿಸಿದೆವು.

وَجَعَلۡنَا ذُرِّيَّتَهُۥ هُمُ ٱلۡبَاقِينَ ٧٧ وَتَرَكۡنَا
عَلَيۡهِ فِي ٱلۡأٓخِرِينَ ٧٨

**79-80.** ಸರ್ವಲೋಕದವರ ಪೈಕಿ ನೂಹ್‌ರ ಮೇಲೆ ಶಾಂತಿಯಿರಲಿ! ಖಂಡಿತವಾಗಿಯೂ ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು.

سَلَٰمٌ عَلَىٰ نُوحٖ فِي ٱلۡعَٰلَمِينَ ٧٩ إِنَّا
كَذَٰلِكَ نَجۡزِي ٱلۡمُحۡسِنِينَ ٨٠

إِنَّهُۥ مِنۡ عِبَادِنَا ٱلۡمُؤۡمِنِينَ ﴿٨١﴾ ثُمَّ أَغۡرَقۡنَا ٱلۡأٓخَرِينَ ﴿٨٢﴾

**81-82**. ಖಂಡಿತವಾಗಿಯೂ ಆತ ನಮ್ಮ ಸತ್ಯವಿಶ್ವಾಸಿ ದಾಸರಲ್ಲಿ ಸೇರಿದವರಾಗಿದ್ದರು. ತರುವಾಯ ನಾವು ಇತರರನ್ನು ಮುಳುಗಿಸಿದೆವು.

۞ وَإِنَّ مِن شِيعَتِهِۦ لَإِبۡرَٰهِيمَ ﴿٨٣﴾ إِذۡ جَآءَ رَبَّهُۥ بِقَلۡبٖ سَلِيمٍ ﴿٨٤﴾

**83-84**. ಖಂಡಿತವಾಗಿಯೂ ಇಬ್ರಾಹೀಮರು ಅವರ ಗುಂಪಿನಲ್ಲಿ ಸೇರಿದವರಾಗಿರುವರು. ಆತ ತಮ್ಮ ರಬ್‌ನ ಬಳಿಗೆ ನಿಷ್ಕಳಂಕ ಹೃದಯದೊಂದಿಗೆ ಬಂದ ಸಂದರ್ಭ!

إِذۡ قَالَ لِأَبِيهِ وَقَوۡمِهِۦ مَاذَا تَعۡبُدُونَ ﴿٨٥﴾ أَئِفۡكًا ءَالِهَةً دُونَ ٱللَّهِ تُرِيدُونَ ﴿٨٦﴾ فَمَا ظَنُّكُم بِرَبِّ ٱلۡعَٰلَمِينَ ﴿٨٧﴾

**85-87**. ಆತ ತಮ್ಮ ತಂದೆಯೊಂದಿಗೂ, ಜನತೆಯೊಂದಿಗೂ ಹೇಳಿದ ಸಂದರ್ಭ: 'ನೀವು ಏನನ್ನು ಆರಾಧಿಸುತ್ತಿರುವಿರಿ? ನೀವು ಅಲ್ಲಾಹುವಿನ ಹೊರತು ಮಿಥ್ಯಾರಾಧ್ಯರನ್ನು ಬಯಸುತ್ತಿರುವಿರಾ? ಹಾಗಾದರೆ ಸರ್ವಲೋಕಗಳ ರಬ್‌ನ ಕುರಿತು ನಿಮ್ಮ ಭಾವನೆಯೇನು?'

فَنَظَرَ نَظۡرَةٗ فِي ٱلنُّجُومِ ﴿٨٨﴾ فَقَالَ إِنِّي سَقِيمٞ ﴿٨٩﴾

**88-89**. ತರುವಾಯ ಆತ ನಕ್ಷತ್ರಗಳೆಡೆಗೆ ಒಂದು ನೋಟವನ್ನು ಬೀರಿದರು.(1) ತರುವಾಯ ಹೇಳಿದರು: 'ಖಂಡಿತವಾಗಿಯೂ ನಾನು ಅಸ್ವಸ್ಥನಾಗಿರುವೆನು'

فَتَوَلَّوۡاْ عَنۡهُ مُدۡبِرِينَ ﴿٩٠﴾

**90**. ಆಗ ಅವರು ಆತನನ್ನು ಬಿಟ್ಟು ವಿಮುಖರಾಗಿ ಹೋದರು.

فَرَاغَ إِلَىٰٓ ءَالِهَتِهِمۡ فَقَالَ أَلَا تَأۡكُلُونَ ﴿٩١﴾ مَا لَكُمۡ لَا تَنطِقُونَ ﴿٩٢﴾

**91-92**. ಆಗ ಇಬ್ರಾಹೀಮ್ ಅವರ ಆರಾಧ್ಯರೆಡೆಗೆ ತಿರುಗಿ ಹೇಳಿದರು: 'ನೀವು ತಿನ್ನುವುದಿಲ್ಲವೇ? ನಿಮಗೇನಾಗಿದೆ? ನೀವು ಮಾತನಾಡುತ್ತಿಲ್ಲವಲ್ಲ'.

فَرَاغَ عَلَيۡهِمۡ ضَرۡبَۢا بِٱلۡيَمِينِ ﴿٩٣﴾

**93**. ತರುವಾಯ ಆತ ಅವುಗಳೆಡೆಗೆ ತಿರುಗಿ ಬಲಗೈಯಿಂದ ಅವುಗಳನ್ನು ಬಲವಾಗಿ ಹೊಡೆದುರುಳಿಸಿದರು.

---

1 ಊರ ಜನರು ಉತ್ಸವವೊಂದಕ್ಕೆ ತೆರಳಲು ಸಿದ್ಧರಾದ ಸಂದರ್ಭದಲ್ಲಿ ಇಬ್ರಾಹೀಮ್(عَلَيْهِ السَّلَامُ)ರವರು 85–87 ಸೂಕ್ತಿಗಳಲ್ಲಿರುವ ಪ್ರಶ್ನೆಗಳನ್ನು ಅವರೊಂದಿಗೆ ಕೇಳುತ್ತಾರೆ. ತಾರಾಫಲದಲ್ಲಿ ನಂಬಿಕೆಯಿಟ್ಟಿರುವ ಜನತೆಗೆ ವಿಷಯವನ್ನು ಮನದಟ್ಟು ಮಾಡಿಕೊಡಲು ತರುವಾಯ ಅವರು ನಕ್ಷತ್ರವನ್ನು ನೋಡಿ ನಾನು ಅಸ್ವಸ್ಥನಾಗಿರುವೆ ಎಂದು ಹೇಳಿರಬಹುದು. ಬಹುದೇವವಿಶ್ವಾಸದಿಂದ ತನ್ನ ಜನತೆಯನ್ನು ವಿಮೋಚಿಸಲು ಸಾಧ್ಯವಾಗದೇ ಇದ್ದುದರಲ್ಲಿ ಉಂಟಾದ ಮನಕ್ಲೇಶವನ್ನು ಉದ್ದೇಶಿಸಿರಲೂಬಹುದು. ಊರ ಜನರು ಉತ್ಸವಕ್ಕೆ ತೆರಳಿದಾಗ ಅವರೊಂದಿಗೆ ತೆರಳದೆ ಊರಿನಲ್ಲಿಯೇ ಉಳಿಯುವುದಕ್ಕಾಗಿ ಅಸ್ವಸ್ಥನಾಗಿರುವೆನು ಎಂಬ ನೆಪವನ್ನು ಅವರು ಹೇಳಿದ್ದರು. ಊರ ಜನರ ಅನುಪಸ್ಥಿತಿಯಲ್ಲಿ ವಿಗ್ರಹಗಳನ್ನು ಧ್ವಂಸಗೊಳಿಸಬೇಕೆಂದು ಅವರು ಉಪಾಯ ಹೂಡಿದ್ದರು.

94–96. ತರುವಾಯ ಅವರು ಆತನೆಡೆಗೆ ಧಾವಿಸಿ ಬಂದರು. ಆತ ಹೇಳಿದರು: 'ನಿಮ್ಮನ್ನು ಮತ್ತು ನೀವು ನಿರ್ಮಿಸುತ್ತಿರುವುದನ್ನು ಸೃಷ್ಟಿಸಿದವನು ಅಲ್ಲಾಹುವಾಗಿರುವಾಗ ನೀವೇ ಸ್ವತಃ ಕಡೆದು ನಿರ್ಮಿಸಿದವುಗಳನ್ನು ಆರಾಧಿಸುತ್ತಿರುವಿರಾ?'

فَأَقْبَلُوٓاْ إِلَيْهِ يَزِفُّونَ ﴿٩٤﴾ قَالَ أَتَعْبُدُونَ مَا تَنْحِتُونَ ﴿٩٥﴾ وَٱللَّهُ خَلَقَكُمْ وَمَا تَعْمَلُونَ ﴿٩٦﴾

97. ಅವರು (ಪರಸ್ಪರ) ಹೇಳಿದರು: 'ನೀವು ಆತನಿಗೆ ಒಂದು ಅಗ್ನಿಕುಂಡವನ್ನು ನಿರ್ಮಿಸಿರಿ. ತರುವಾಯ ಆತನನ್ನು ಧಗಧಗಿಸುವ ಅಗ್ನಿಗೆಸೆಯಿರಿ'.

قَالُواْ ٱبْنُواْ لَهُۥ بُنْيَٰنًا فَأَلْقُوهُ فِى ٱلْجَحِيمِ ﴿٩٧﴾

98. ಆತ ವಿಷಯದಲ್ಲಿ ಅವರೊಂದು ತಂತ್ರವನ್ನು ಹೂಡಲು ಬಯಸಿದರು. ಆದರೆ ನಾವು ಅವರನ್ನು ಅತ್ಯಂತ ಅಧಮರನ್ನಾಗಿ ಮಾಡಿದೆವು.

فَأَرَادُواْ بِهِۦ كَيْدًا فَجَعَلْنَٰهُمُ ٱلْأَسْفَلِينَ ﴿٩٨﴾

99-100. ಆತನ ಹೇಳಿದರು: 'ಖಂಡಿತವಾಗಿಯೂ ನಾನು ನನ್ನ ರಬ್‌ನೆಡೆಗೆ ತೆರಳುವೆನು. ಅವನು ನನಗೆ ದಾರಿ ತೋರಿಸುವನು. ಓ ನನ್ನ ರಬ್! ಸಜ್ಜನರಲ್ಲಿ ಸೇರಿದವನನ್ನು ನನಗೆ (ಪುತ್ರನನ್ನಾಗಿ) ಕರುಣಿಸು'.

وَقَالَ إِنِّى ذَاهِبٌ إِلَىٰ رَبِّى سَيَهْدِينِ ﴿٩٩﴾ رَبِّ هَبْ لِى مِنَ ٱلصَّٰلِحِينَ ﴿١٠٠﴾

101. ಆಗ ನಾವು ಆತನಿಗೆ ಸಹನಾಶೀಲ ಮಗುವಿನ ಕುರಿತು ಶುಭವಾರ್ತೆಯನ್ನು ತಿಳಿಸಿದೆವು.

فَبَشَّرْنَٰهُ بِغُلَٰمٍ حَلِيمٍ ﴿١٠١﴾

102. ತರುವಾಯ ಆ ಬಾಲಕನು ಅವರೊಂದಿಗೆ ಪರಿಶ್ರಮಿಸುವ ಪ್ರಾಯಕ್ಕೆ ತಲುಪಿದಾಗ ಆತ (ಇಬ್ರಾಹೀಮ್) ಹೇಳಿದರು: 'ಓ ನನ್ನ ಮಗನೇ! ನಾನು ನಿನ್ನ ಕತ್ತನ್ನು ಕೊಯ್ಯಬೇಕೆಂದು ಕನಸು ಕಂಡಿರುವೆನು.(1) ಆದ್ದರಿಂದ ನೋಡು! ನಿನ್ನ

فَلَمَّا بَلَغَ مَعَهُ ٱلسَّعْىَ قَالَ يَٰبُنَىَّ إِنِّىٓ أَرَىٰ فِى ٱلْمَنَامِ أَنِّىٓ أَذْبَحُكَ فَٱنظُرْ مَاذَا تَرَىٰ ۚ قَالَ يَٰٓأَبَتِ ٱفْعَلْ مَا تُؤْمَرُ ۖ سَتَجِدُنِىٓ إِن شَآءَ ٱللَّهُ مِنَ ٱلصَّٰبِرِينَ ﴿١٠٢﴾

1 ಇಬ್ರಾಹೀಮ್(عَلَيْهِ السَّلَامُ)ರವರ ಮಕ್ಕಳ ಪೈಕಿ ಯಾರನ್ನು ಬಲಿ ನೀಡಲು ಆದೇಶಿಸಲಾಯಿತು? ಇಸ್ಮಾಈಲ್‌ರನ್ನೋ ಅಥವಾ ಇಸ್‌ಹಾಕ್‌ರನ್ನೋ? ಯಹೂದ-ಕ್ರೈಸ್ತ ವಿದ್ವಾಂಸರ ಪ್ರಕಾರ ಅದು ಇಸ್‌ಹಾಕ್(عَلَيْهِ السَّلَامُ) ಆಗಿದ್ದಾರೆ. ಮುಸ್ಲಿಮ್ ವಿದ್ವಾಂಸರ ಪೈಕಿ ಒಂದು ಗುಂಪು ಇದೇ ಅಭಿಪ್ರಾಯವನ್ನು ಹೊಂದಿದೆ. ಆದರೆ ಈ ಅಧ್ಯಾಯದಲ್ಲಿ ಬಲಿಯ ಬಗ್ಗೆಯಿರುವ ಪರಾಮರ್ಶೆಗಳು ಮುಗಿದ ಬಳಿಕ ಇಸ್‌ಹಾಕ್(عَلَيْهِ السَّلَامُ)ರ ಕುರಿತು ವಿಶೇಷ ಪ್ರಸ್ತಾಪವಿರುವುದರಿಂದ ಈ ಅಭಿಪ್ರಾಯವು ಸರಿಯಾಗಿರುವ ಸಾಧ್ಯತೆ ವಿರಳವಾಗಿದೆ. ಪೂರ್ವಿಕ ಮತ್ತು ಆಧುನಿಕ ಮುಸ್ಲಿಂ ವಿದ್ವಾಂಸರ ಪೈಕಿ ಹೆಚ್ಚಿನವರೂ ಬಲಿಯರ್ಪಿಸಲು ಆದೇಶಿಸಲಾಗಿದ್ದು ಇಸ್ಮಾಈಲ್(عَلَيْهِ السَّلَامُ)ರನ್ನಾಗಿದೆ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ.

ಅಭಿಪ್ರಾಯವೇನು?' ಅವನು ಹೇಳಿದನು: 'ಓ ನನ್ನ ತಂದೆಯವರೇ! ತಮಗೆ ಆಜ್ಞಾಪಿಸಲಾಗಿರುವುದನ್ನು ತಾವು ನಿರ್ವಹಿಸಿರಿ. ಅಲ್ಲಾಹು ಇಚ್ಛಿಸಿದರೆ ಖಂಡಿತವಾಗಿಯೂ ತಾವು ನನ್ನನ್ನು ಸಹನೆ ಪಾಲಿಸುವವರ ಪೈಕಿ ಸೇರಿದವನಾಗಿ ಕಾಣುವಿರಿ'.

**103-106**. ತರುವಾಯ ಅವರಿಬ್ಬರೂ (ಆಜ್ಞೆಗೆ) ಶರಣಾದಾಗ ಮತ್ತು ಅವನನ್ನು (ಮಗನನ್ನು) ಹಣೆಯ ಮೇಲೆ ಹೊರಳಿಸಿ ಮಲಗಿಸಲಾದಾಗ ನಾವು ಆತನನ್ನು ಕರೆದು ಹೇಳಿದೆವು: 'ಓ ಇಬ್ರಾಹೀಮ್! ಖಂಡಿತವಾಗಿಯೂ ತಾವು ಕನಸನ್ನು ನಿಜಗೊಳಿಸಿರುವಿರಿ. ಖಂಡಿತವಾಗಿಯೂ ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು. ಖಂಡಿತವಾಗಿಯೂ ಇದೊಂದು ಸ್ಪಷ್ಟವಾದ ಪರೀಕ್ಷೆಯೇ ಆಗಿತ್ತು'.

فَلَمَّآ أَسۡلَمَا وَتَلَّهُۥ لِلۡجَبِينِ ١٠٣ وَنَٰدَيۡنَٰهُ
أَن يَٰٓإِبۡرَٰهِيمُ ١٠٤ قَدۡ صَدَّقۡتَ ٱلرُّءۡيَآۚ إِنَّا
كَذَٰلِكَ نَجۡزِي ٱلۡمُحۡسِنِينَ ١٠٥ إِنَّ هَٰذَا
لَهُوَ ٱلۡبَلَٰٓؤُاْ ٱلۡمُبِينُ ١٠٦

**107**. ಅವನ (ಮಗನ) ಬದಲಿಗೆ ಬಲಿ ನೀಡುವುದಕ್ಕಾಗಿ ಮಹಾ ಬಲಿಮೃಗವೊಂದನ್ನು ನಾವು ನೀಡಿದೆವು.

وَفَدَيۡنَٰهُ بِذِبۡحٍ عَظِيمٖ ١٠٧

**108**. ನಂತರದವರಲ್ಲಿ ಅವರ (ಇಬ್ರಾಹೀಮ್‌ರ) ಕೀರ್ತಿಯನ್ನು ನಾವು ಉಳಿಸಿದೆವು.

وَتَرَكۡنَا عَلَيۡهِ فِي ٱلۡأٓخِرِينَ ١٠٨

**109-111**. ಇಬ್ರಾಹೀಮ್‌ರ ಮೇಲೆ ಶಾಂತಿಯಿರಲಿ! ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು. ಖಂಡಿತವಾಗಿಯೂ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಿ ಸೇರಿದವರಾಗಿರುವರು.

سَلَٰمٌ عَلَىٰٓ إِبۡرَٰهِيمَ ١٠٩ كَذَٰلِكَ نَجۡزِي
ٱلۡمُحۡسِنِينَ ١١٠ إِنَّهُۥ مِنۡ عِبَادِنَا
ٱلۡمُؤۡمِنِينَ ١١١

**112**. ನಾವು ಅವರಿಗೆ ಇಸ್‌ಹಾಕ್ ಎಂಬ ಪುತ್ರನ ಜನನದ ಬಗ್ಗೆಯೂ ಶುಭವಾರ್ತೆಯನ್ನು ತಿಳಿಸಿದೆವು.[1] ಸಜ್ಜನರಲ್ಲಿ ಸೇರಿದ ಓರ್ವ ಪ್ರವಾದಿಯೆಂಬ ನೆಲೆಯಲ್ಲಿ.

وَبَشَّرۡنَٰهُ بِإِسۡحَٰقَ نَبِيّٗا مِّنَ
ٱلصَّٰلِحِينَ ١١٢

1 ಇಸ್‌ಹಾಕ್(عَلَيْهِ السَّلَام) ಜನಿಸಿದಾಗ ಇಬ್ರಾಹೀಮ್(عَلَيْهِ السَّلَام) ರವರ ವಯಸ್ಸು 100 ಆಗಿತ್ತು ಮತ್ತು ಇಸ್ಮಾಈಲ್ (عَلَيْهِ السَّلَام) ಜನಿಸಿದಾಗ 86 ಆಗಿತ್ತು ಎಂದು ಬೈಬಲ್‌ನ ಆದಿಕಾಂಡದಲ್ಲಿ ಹೇಳಲಾಗಿದೆ.

**113.** ನಾವು ಅವರಿಗೂ, ಇಸ್‌ಹಾಕ್‌ರಿಗೂ ಅನುಗ್ರಹ ನೀಡಿದೆವು. ಅವರಿಬ್ಬರ ಸಂತತಿಗಳಲ್ಲಿ ಸಜ್ಜನರಿರುವರು. ಸ್ವತಃ ತಮ್ಮೊಂದಿಗೇ ಸ್ಪಷ್ಟವಾದ ಅಕ್ರಮವೆಸಗುವವರೂ ಇರುವರು.

وَبَٰرَكۡنَا عَلَيۡهِ وَعَلَىٰٓ إِسۡحَٰقَۚ وَمِن ذُرِّيَّتِهِمَا مُحۡسِنٞ وَظَالِمٞ لِّنَفۡسِهِۦ مُبِينٞ ﴿١١٣﴾

**114-116.** ಖಂಡಿತವಾಗಿಯೂ ನಾವು ಮೂಸಾ ಮತ್ತು ಹಾರೂನ್‌ರೊಂದಿಗೆ ಔದಾರ್ಯ ತೋರಿರುವೆವು. ಅವರಿಬ್ಬರನ್ನು ಮತ್ತು ಅವರ ಜನತೆಯನ್ನು ನಾವು ಮಹಾ ದುರಂತದಿಂದ ರಕ್ಷಿಸಿದೆವು. ನಾವು ಅವರಿಗೆ ಸಹಾಯವನ್ನೂ ಮಾಡಿದೆವು. ಆಗ ಅವರೇ ವಿಜಯಿಗಳಾದರು.

وَلَقَدۡ مَنَنَّا عَلَىٰ مُوسَىٰ وَهَٰرُونَ ﴿١١٤﴾ وَنَجَّيۡنَٰهُمَا وَقَوۡمَهُمَا مِنَ ٱلۡكَرۡبِ ٱلۡعَظِيمِ ﴿١١٥﴾ وَنَصَرۡنَٰهُمۡ فَكَانُواْ هُمُ ٱلۡغَٰلِبِينَ ﴿١١٦﴾

**117-119.** ಅವರಿಬ್ಬರಿಗೂ ನಾವು (ವಿಷಯಗಳನ್ನು) ಸ್ಪಷ್ಟಗೊಳಿಸುವ ಗ್ರಂಥವನ್ನು ನೀಡಿದೆವು ಮತ್ತು ಅವರಿಬ್ಬರನ್ನೂ ನಾವು ನೇರವಾದ ಮಾರ್ಗದೆಡೆಗೆ ಮುನ್ನಡೆಸಿದೆವು. ನಂತರದ ತಲೆಮಾರುಗಳಲ್ಲಿ ಅವರ ಕೀರ್ತಿಯನ್ನು ನಾವು ಉಳಿಸಿದೆವು.

وَءَاتَيۡنَٰهُمَا ٱلۡكِتَٰبَ ٱلۡمُسۡتَبِينَ ﴿١١٧﴾ وَهَدَيۡنَٰهُمَا ٱلصِّرَٰطَ ٱلۡمُسۡتَقِيمَ ﴿١١٨﴾ وَتَرَكۡنَا عَلَيۡهِمَا فِي ٱلۡأٓخِرِينَ ﴿١١٩﴾

**120-122.** ಮೂಸಾ ಮತ್ತು ಹಾರೂನ್‌ರ ಮೇಲೆ ಶಾಂತಿಯಿರಲಿ! ಖಂಡಿತವಾಗಿಯೂ ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು. ಖಂಡಿತವಾಗಿಯೂ ಅವರಿಬ್ಬರೂ ನಮ್ಮ ಸತ್ಯವಿಶ್ವಾಸಿ ದಾಸರಲ್ಲಿ ಸೇರಿದವರಾಗಿರುವರು.

سَلَٰمٌ عَلَىٰ مُوسَىٰ وَهَٰرُونَ ﴿١٢٠﴾ إِنَّا كَذَٰلِكَ نَجۡزِي ٱلۡمُحۡسِنِينَ ﴿١٢١﴾ إِنَّهُمَا مِنۡ عِبَادِنَا ٱلۡمُؤۡمِنِينَ ﴿١٢٢﴾

**123-124.** ಖಂಡಿತವಾಗಿಯೂ ಇಲ್ಯಾಸ್ ಪ್ರವಾದಿಗಳಲ್ಲಿ ಒಬ್ಬರಾಗಿರುವರು. ಅವರು ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ: 'ನೀವು ಭಯಭಕ್ತಿ ಪಾಲಿಸುವುದಿಲ್ಲವೇ?'

وَإِنَّ إِلۡيَاسَ لَمِنَ ٱلۡمُرۡسَلِينَ ﴿١٢٣﴾ إِذۡ قَالَ لِقَوۡمِهِۦٓ أَلَا تَتَّقُونَ ﴿١٢٤﴾

**125-126.** ನೀವು ಬಅ್ಲನ್ನು[1] ಕರೆದು ಪ್ರಾರ್ಥಿಸುತ್ತಾ ಅತ್ಯುತ್ತಮ ಸೃಷ್ಟಿಕರ್ತನನ್ನು, ನಿಮ್ಮ ಮತ್ತು ನಿಮ್ಮ ಪೂರ್ವಿಕರ ರಬ್ಬಾದ ಅಲ್ಲಾಹುವನ್ನು ತೊರೆಯುವಿರಾ?

أَتَدۡعُونَ بَعۡلٗا وَتَذَرُونَ أَحۡسَنَ ٱلۡخَٰلِقِينَ ﴿١٢٥﴾ ٱللَّهَ رَبَّكُمۡ وَرَبَّ ءَابَآئِكُمُ ٱلۡأَوَّلِينَ ﴿١٢٦﴾

---

1 ಬಅ್ಲ್ ಸಿರಿಯನ್ನರ ಸೂರ್ಯದೇವನಾಗಿದ್ದನು.

فَكَذَّبُوهُ فَإِنَّهُمْ لَمُحْضَرُونَ ﴿١٢٧﴾ إِلَّا عِبَادَ
ٱللَّهِ ٱلْمُخْلَصِينَ ﴿١٢٨﴾

**127-128.** ಆಗ ಅವರು ಆತನನ್ನು ನಿಷೇಧಿಸಿದರು. ಆದ್ದರಿಂದ ಖಂಡಿತವಾಗಿಯೂ ಅವರನ್ನು (ಶಿಕ್ಷೆಗೆ) ಹಾಜರುಗೊಳಿಸಲಾಗುವುದು. ಅಲ್ಲಾಹುವಿನ ನಿಷ್ಕಳಂಕ ದಾಸರ ಹೊರತು.

وَتَرَكْنَا عَلَيْهِ فِي ٱلْـَٔاخِرِينَ ﴿١٢٩﴾ سَلَٰمٌ عَلَىٰٓ
إِلْ يَاسِينَ ﴿١٣٠﴾

**129-130.** ನಂತರದ ತಲೆಮಾರುಗಳಲ್ಲಿ ನಾವು ಆತ ಕೀರ್ತಿಯನ್ನು ಉಳಿಸಿದೆವು. ಇಲ್ಯಾಸ್‌ರ ಮೇಲೆ ಶಾಂತಿಯಿರಲಿ!

إِنَّا كَذَٰلِكَ نَجْزِي ٱلْمُحْسِنِينَ ﴿١٣١﴾ إِنَّهُۥ
مِنْ عِبَادِنَا ٱلْمُؤْمِنِينَ ﴿١٣٢﴾

**131-132.** ಖಂಡಿತವಾಗಿಯೂ ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು. ಖಂಡಿತವಾಗಿಯೂ ಆತ ನಮ್ಮ ಸತ್ಯವಿಶ್ವಾಸಿ ದಾಸರಲ್ಲಿ ಸೇರಿದವರಾಗಿರುವರು.

وَإِنَّ لُوطًا لَّمِنَ ٱلْمُرْسَلِينَ ﴿١٣٣﴾ إِذْ نَجَّيْنَٰهُ
وَأَهْلَهُۥٓ أَجْمَعِينَ ﴿١٣٤﴾ إِلَّا عَجُوزًا فِي
ٱلْغَٰبِرِينَ ﴿١٣٥﴾

**133-135.** ಖಂಡಿತವಾಗಿಯೂ ಲೂತರು ಸಂದೇಶವಾಹಕರಲ್ಲಿ ಸೇರಿದವರಾಗಿರುವರು. ಆತನನ್ನು ಮತ್ತು ಆತನ ಕುಟುಂಬವನ್ನು ನಾವು ಸಂಪೂರ್ಣವಾಗಿ ರಕ್ಷಿಸಿದ ಸಂದರ್ಭ! ವಿಮುಖರಾದವರಲ್ಲಿ ಸೇರಿದ ಓರ್ವ ವೃದ್ಧೆಯ ಹೊರತು.

ثُمَّ دَمَّرْنَا ٱلْـَٔاخَرِينَ ﴿١٣٦﴾

**136.** ತರುವಾಯ ಇತರರನ್ನು ನಾವು ನಾಶ ಮಾಡಿದೆವು.

وَإِنَّكُمْ لَتَمُرُّونَ عَلَيْهِم مُّصْبِحِينَ ﴿١٣٧﴾
وَبِٱلَّيْلِ ۚ أَفَلَا تَعْقِلُونَ ﴿١٣٨﴾

**137-138.** ಖಂಡಿತವಾಗಿಯೂ ನೀವು ಬೆಳಿಗ್ಗೆ ಮತ್ತು ರಾತ್ರಿಯಲ್ಲಿ ಅವರ ಬಳಿಯಿಂದ ಹಾದು ಹೋಗುತ್ತಿರುವಿರಿ.[1] ಆದರೂ ನೀವು ಚಿಂತಿಸುವುದಿಲ್ಲವೇ?

وَإِنَّ يُونُسَ لَمِنَ ٱلْمُرْسَلِينَ ﴿١٣٩﴾ إِذْ أَبَقَ
إِلَى ٱلْفُلْكِ ٱلْمَشْحُونِ ﴿١٤٠﴾ فَسَاهَمَ فَكَانَ
مِنَ ٱلْمُدْحَضِينَ ﴿١٤١﴾

**139-141.** ಖಂಡಿತವಾಗಿಯೂ ಯೂನುಸರು ಸಂದೇಶವಾಹಕರಲ್ಲಿ ಸೇರಿದವರಾಗಿರುವರು. ಅವರು ಭಾರ ತುಂಬಿದ ಹಡಗಿನೆಡೆಗೆ ಪಲಾಯನ ಮಾಡಿದ[2] ಸಂದರ್ಭ!

---

1 ಲೂತ್(عَلَيْهِ السَّلَامُ)ರವರ ಜನತೆಯು ವಾಸವಾಗಿದ್ದ ನಾಶಗ್ರಸ್ತ ಊರು ಸಿರಿಯಾದೆಡೆಗೆ ತೆರಳುವ ಅರಬ್ ವ್ಯಾಪಾರ ತಂಡಗಳು ಸಂಚರಿಸುತ್ತಿದ್ದ ಹಾದಿಯಲ್ಲಾಗಿತ್ತು.

2 ಯೂನುಸ್(عَلَيْهِ السَّلَامُ)ರವರನ್ನು ಪ್ರವಾದಿಯಾಗಿ ಕಳುಹಿಸಲಾಗಿದ್ದು ನೀನೆವಾ ಪಟ್ಟಣಕ್ಕಾಗಿತ್ತು. ಅವರು ಎಷ್ಟೇ ಉಪದೇಶ ಮಾಡಿದರೂ ಜನರಾರೂ ವಿಶ್ವಾಸವಿಡಲಿಲ್ಲ. ಇದರಿಂದ ಬೇಸತ್ತು ಅವರು ಆ ಸ್ಥಳವನ್ನು ತೊರೆದು

ತರುವಾಯ ಅವರು (ಹಡಗಿನಲ್ಲಿದ್ದ ಪ್ರಯಾಣಿಕರೊಂದಿಗೆ) ಚೀಟಿಯೆತ್ತುವುದರಲ್ಲಿ ಪಾಲ್ಗೊಂಡರು.[1] ಆಗ ಅವರು ಪರಾಭವಗೊಂಡವರಲ್ಲಿ ಸೇರಿದವರಾದರು.

فَٱلۡتَقَمَهُ ٱلۡحُوتُ وَهُوَ مُلِيمٌ ١٤٢

**142.** ತರುವಾಯ ಅವರು ಆಕ್ಷೇಪಾರ್ಹ ಸ್ಥಿತಿಯಲ್ಲಿದ್ದಾಗ ದೊಡ್ಡ ಮೀನೊಂದು ಅವರನ್ನು ನುಂಗಿತು.

فَلَوۡلَآ أَنَّهُۥ كَانَ مِنَ ٱلۡمُسَبِّحِينَ ١٤٣
لَلَبِثَ فِي بَطۡنِهِۦٓ إِلَىٰ يَوۡمِ يُبۡعَثُونَ ١٤٤

**143-144.** ಆದರೆ ಅವರು ಅಲ್ಲಾಹುವಿನ ಪರಿಪಾವನತೆಯನ್ನು ಕೊಂಡಾಡುವವರಲ್ಲಿ ಸೇರಿಲ್ಲದಿರುತ್ತಿದ್ದರೆ ಜನರನ್ನು ಪುನರುತ್ಥಾನಗೊಳಿಸಲಾಗುವ ದಿನದವರೆಗೂ ಅವರು ಅದರ ಉದರದಲ್ಲೇ ತಂಗಿರುತ್ತಿದ್ದರು!

۞ فَنَبَذۡنَٰهُ بِٱلۡعَرَآءِ وَهُوَ سَقِيمٌ ١٤٥
وَأَنۢبَتۡنَا عَلَيۡهِ شَجَرَةٗ مِّن يَقۡطِينٖ ١٤٦

**145-146.** ತರುವಾಯ ಅಸ್ವಸ್ಥರಾಗಿರುವ ಸ್ಥಿತಿಯಲ್ಲಿ ನಾವು ಅವರನ್ನು ಬಯಲು ಪ್ರದೇಶಕ್ಕೆ ಎಸೆದೆವು.[2] ನಾವು ಅವರ ಮೇಲೆ ಯಕ್‌ತೀನ್ ಮರವನ್ನು ಬೆಳೆಸಿದೆವು.[3]

وَأَرۡسَلۡنَٰهُ إِلَىٰ مِاْئَةِ أَلۡفٍ أَوۡ يَزِيدُونَ ١٤٧

**147.** ನಾವು ಆತನನ್ನು ಒಂದು ಲಕ್ಷ ಅಥವಾ ಅದಕ್ಕಿಂತಲೂ ಹೆಚ್ಚು ಸಂಖ್ಯೆಯ ಜನರೆಡೆಗೆ ಕಳುಹಿಸಿದೆವು.

---

ಹೋದರು. ಅಲ್ಲಾಹುವಿನ ಆದೇಶ ಲಭಿಸದೆ ಮತ್ತು ಅವರು ಜನರಿಗೆ ತಿಳಿಸದೆ ಹೋಗಿದ್ದರು. ಆದ್ದರಿಂದಲೇ ಪಲಾಯನ ಮಾಡಿದರು ಎಂಬ ಪದವನ್ನು ಬಳಸಲಾಗಿದೆ.

1 ಅವರು ಏರಿದ ಹಡಗು ಪ್ರತಿಕೂಲ ಹವೆಯಿಂದಾಗಿ ಮುಳುಗುವಂತಾದಾಗ ಯಾರೋ ಅನಿಷ್ಟ ವ್ಯಕ್ತಿ ಹತ್ತಿದ್ದರಿಂದಲೇ ಹೀಗಾಯಿತೆಂದು ಹಡಗಿನ ಕೆಲಸಗಾರರು ಭಾವಿಸಿದರು. ಅನಿಷ್ಟ ವ್ಯಕ್ತಿಯನ್ನು ಹುಡುಕುವುದಕ್ಕಾಗಿ ಅವರು ಚೀಟಿಯೆತ್ತಲು ತೀರ್ಮಾನಿಸಿದರು. ಯೂನುಸ್(عَلَيْهِ ٱلسَّلَامُ)ರಿಗೆ ಅದರಲ್ಲಿ ಭಾಗಿಯಾಗಬೇಕಾಗಿ ಬಂತು. ಹಡಗಿನಿಂದ ಹೊರಗೆಸೆಯಬೇಕಾದ ವ್ಯಕ್ತಿಯ ಹೆಸರು ಯೂನುಸ್(عَلَيْهِ ٱلسَّلَامُ)ರದ್ದೇ ಆಗಿತ್ತು. ಹಾಗೆ ಅವರನ್ನು ಹಡಗಿನಿಂದ ಹೊರಗೆಸೆಯಲಾಯಿತು.

2 ಅಲ್ಲಾಹುವಿನ ವಿಶೇಷ ಸಂರಕ್ಷಣೆಯ ನಿಮಿತ್ತ ಮೀನಿನ ಹೊಟ್ಟೆಯಿಂದ ಅವರನ್ನು ಬಯಲು ತೀರ ಪ್ರದೇಶಕ್ಕೆ ಹೊರತಳ್ಳಲಾಯಿತು.

3 ಆಯಾಸ ಮತ್ತು ಅನಾರೋಗ್ಯ ಪೀಡಿತರಾಗಿ ಹೊರಬಂದ ಯೂನುಸ್(عَلَيْهِ ٱلسَّلَامُ)ರಿಗೆ ವಿಶ್ರಾಂತಿ ಪಡೆಯಲು ನೆರಳು ಮತ್ತು ಆರೋಗ್ಯವನ್ನು ಮರಳಿ ಪಡೆಯಲು ಪೌಷ್ಟಿಕ ಆಹಾರದ ಅಗತ್ಯವಿತ್ತು. ಅದಕ್ಕಾಗಿ ಅಲ್ಲಾಹು ಯಕ್‌ತೀನ್ ಎಂಬ ಮರವನ್ನು ಬೆಳೆಸಿದನು. ಅದು ಕುಂಬಳಕಾಯಿ, ಸೋರೆ ಮೊದಲಾದವುಗಳಂತೆ ಬಳ್ಳಿ ಬಿಟ್ಟು ಚಪ್ಪರದಂತೆ ಹರಡಿಕೊಳ್ಳುವ ಒಂದು ವಿಧ ತರಕಾರಿಯಾಗಿದೆ.

**148.** ಅವರು ವಿಶ್ವಾಸವಿಟ್ಟರು. ತನ್ನಿಮಿತ್ತ ನಾವು ಅವರಿಗೆ ದೀರ್ಘಕಾಲದ ತನಕ ಸುಖಸೌಕರ್ಯಗಳನ್ನು ಒದಗಿಸಿದೆವು.

فَـَٔامَنُواْ فَمَتَّعۡنَٰهُمۡ إِلَىٰ حِينٖ ١٤٨

**149-150.** (ಓ ಪ್ರವಾದಿಯವರೇ!) ತಮ್ಮ ರಬ್‌ಗೆ ಹೆಣ್ಣು ಮಕ್ಕಳು ಮತ್ತು ಅವರಿಗೆ ಗಂಡುಮಕ್ಕಳೇ? ಅಥವಾ ನಾವು ಮಲಕ್‌ಗಳನ್ನು ಹೆಣ್ಣಾಗಿ ಸೃಷ್ಟಿಸಿರುವುದನ್ನು ಅವರು ಕಣ್ಣಾರೆ ಕಂಡಿರುವರೇ? ಎಂದು ಅವರೊಂದಿಗೆ (ಬಹುದೇವಾರಾಧಕರೊಂದಿಗೆ) ಅಭಿಪ್ರಾಯವನ್ನು ಕೇಳಿರಿ.

فَٱسۡتَفۡتِهِمۡ أَلِرَبِّكَ ٱلۡبَنَاتُ وَلَهُمُ
ٱلۡبَنُونَ ١٤٩ أَمۡ خَلَقۡنَا ٱلۡمَلَٰٓئِكَةَ إِنَٰثٗا
وَهُمۡ شَٰهِدُونَ ١٥٠

**151-152.** ಅರಿಯಿರಿ! ಅಲ್ಲಾಹು ಸಂತಾನಕ್ಕೆ ಜನ್ಮ ನೀಡಿರುವನೆಂದು ಅವರು ಹೇಳುತ್ತಿರುವುದು ಖಂಡಿತವಾಗಿಯೂ ಅವರ ಸುಳ್ಳಾರೋಪಗಳ ಪೈಕಿ ಸೇರಿದ್ದಾಗಿದೆ. ಖಂಡಿತವಾಗಿಯೂ ಅವರು ಸುಳ್ಳು ನುಡಿಯುವವರಾಗಿರುವರು.

أَلَآ إِنَّهُم مِّنۡ إِفۡكِهِمۡ لَيَقُولُونَ ١٥١ وَلَدَ
ٱللَّهُ وَإِنَّهُمۡ لَكَٰذِبُونَ ١٥٢

**153-155.** ಗಂಡುಮಕ್ಕಳಿಗೆ ಮಿಗಿಲಾಗಿ ಅವನು ಹೆಣ್ಮಕ್ಕಳನ್ನು ಆರಿಸಿರುವನೇ? ನಿಮಗೇನಾಗಿದೆ? ನೀವು ಹೇಗೆ ತೀರ್ಪು ನೀಡುತ್ತಿರುವಿರಿ? ನೀವು ಚಿಂತಿಸಲಾರಿರೇ?

أَصۡطَفَى ٱلۡبَنَاتِ عَلَى ٱلۡبَنِينَ ١٥٣ مَا لَكُمۡ
كَيۡفَ تَحۡكُمُونَ ١٥٤ أَفَلَا تَذَكَّرُونَ ١٥٥

**156-157.** ಅಥವಾ, ಸ್ಪಷ್ಟವಾದ ಯಾವುದಾದರೂ ಆಧಾರ ಪ್ರಮಾಣವು ನಿಮಗೆ ಸಿಕ್ಕಿದೆಯೇ? ಹಾಗಿದ್ದರೆ ನೀವು ನಿಮ್ಮ ದಾಖಲೆಯನ್ನು ತನ್ನಿರಿ. ನೀವು ಸತ್ಯಸಂಧರಾಗಿದ್ದರೆ!

أَمۡ لَكُمۡ سُلۡطَٰنٞ مُّبِينٞ ١٥٦ فَأۡتُواْ
بِكِتَٰبِكُمۡ إِن كُنتُمۡ صَٰدِقِينَ ١٥٧

**158.** ಅವರು ಅಲ್ಲಾಹು ಮತ್ತು ಜಿನ್ನ್‌ಗಳ ಮಧ್ಯೆ ಕುಟುಂಬ ಸಂಬಂಧವನ್ನು ಸ್ಥಾಪಿಸಿದ್ದರು.[1] ಆದರೆ ತಮ್ಮನ್ನು ಖಂಡಿತವಾಗಿಯೂ ಶಿಕ್ಷೆಗೆ ಹಾಜರುಗೊಳಿಸಲಾಗುವುದೆಂದು ಜಿನ್ನ್‌ಗಳು ಅರಿತಿರುವರು.

وَجَعَلُواْ بَيۡنَهُۥ وَبَيۡنَ ٱلۡجِنَّةِ نَسَبٗاۚ وَلَقَدۡ
عَلِمَتِ ٱلۡجِنَّةُ إِنَّهُمۡ لَمُحۡضَرُونَ ١٥٨

**159–160.** ಅವರು ಸುಳ್ಳುಸುಳ್ಳಾಗಿ ಆರೋಪಿಸುತ್ತಿರುವುದರಿಂದೆಲ್ಲ ಅಲ್ಲಾಹು ಪರಮಪಾವನನಾಗಿರುವನು. ಆದರೆ

سُبۡحَٰنَ ٱللَّهِ عَمَّا يَصِفُونَ ١٥٩ إِلَّا عِبَادَ
ٱللَّهِ ٱلۡمُخۡلَصِينَ ١٦٠

1 ಅನೇಕ ನಾಗರಿಕತೆಗಳಲ್ಲಿ ಜಿನ್ನ್‌ಗಳನ್ನು ದೇವರೆಂದು ಪೂಜಿಸುವ ಜನರಿದ್ದರು.

ಅಲ್ಲಾಹುವಿನ ನಿಷ್ಕಳಂಕರಾದ ದಾಸರು (ಇದರಿಂದೆಲ್ಲ) ಹೊರತಾಗಿರುವರು.[1]

فَإِنَّكُمْ وَمَا تَعْبُدُونَ ﴿١٦١﴾ مَآ أَنتُمْ عَلَيْهِ بِفَٰتِنِينَ ﴿١٦٢﴾ إِلَّا مَنْ هُوَ صَالِ ٱلْجَحِيمِ ﴿١٦٣﴾

**161–163.** ಖಂಡಿತವಾಗಿಯೂ ನಿಮಗಾಗಲಿ, ನೀವು ಏನನ್ನು ಆರಾಧಿಸುತ್ತಿರುವಿರೋ ಅವುಗಳಿಗಾಗಲಿ ಅವನ (ಅಲ್ಲಾಹುವಿನ) ವಿರುದ್ಧ (ಯಾರನ್ನೂ) ಕ್ಷೋಭೆಗೊಳಪಡಿಸಲು ಸಾಧ್ಯವಾಗದು. ನರಕಾಗ್ನಿಯಲ್ಲಿ ಉರಿದು ಹೋಗುವವನ ಹೊರತು.

وَمَا مِنَّآ إِلَّا لَهُۥ مَقَامٌ مَّعْلُومٌ ﴿١٦٤﴾ وَإِنَّا لَنَحْنُ ٱلصَّآفُّونَ ﴿١٦٥﴾ وَإِنَّا لَنَحْنُ ٱلْمُسَبِّحُونَ ﴿١٦٦﴾

**164–166.** (ಮಲಕ್‌ಗಳು ಹೇಳುವರು): ನಿಶ್ಚಿತ ಸ್ಥಾನವುಳ್ಳವರಾಗಿಯೇ ಹೊರತು ನಮ್ಮ ಪೈಕಿ ಯಾರೂ ಇರಲಾರರು. ಖಂಡಿತವಾಗಿಯೂ ಸಾಲುಗಟ್ಟಿ ನಿಲ್ಲುವವರು ನಾವೇ ಆಗಿರುವೆವು. ಖಂಡಿತವಾಗಿಯೂ (ಅಲ್ಲಾಹುವಿನ) ಪರಿಪಾವನತೆಯನ್ನು ಕೊಂಡಾಡುವವರು ನಾವೇ ಆಗಿರುವೆವು.

وَإِن كَانُوا۟ لَيَقُولُونَ ﴿١٦٧﴾ لَوْ أَنَّ عِندَنَا ذِكْرًا مِّنَ ٱلْأَوَّلِينَ ﴿١٦٨﴾ لَكُنَّا عِبَادَ ٱللَّهِ ٱلْمُخْلَصِينَ ﴿١٦٩﴾

**167–169.** ಖಂಡಿತವಾಗಿಯೂ ಅವರು (ಸತ್ಯನಿಷೇಧಿಗಳು) ಹೇಳುತ್ತಿದ್ದರು: 'ಪೂರ್ವಿಕರಿಂದ ಸಿಕ್ಕಿದ ಯಾವುದಾದರೂ ಉಪದೇಶವು ನಮ್ಮ ಬಳಿಯಿರುತ್ತಿದ್ದರೆ ನಾವು ಅಲ್ಲಾಹುವಿನ ನಿಷ್ಕಳಂಕ ದಾಸರಾಗಿ ಬಿಡುತ್ತಿದ್ದೆವು'.

فَكَفَرُوا۟ بِهِۦ ۖ فَسَوْفَ يَعْلَمُونَ ﴿١٧٠﴾

**170.** ಆದರೂ ಅವರು ಇದರಲ್ಲಿ (ಈ ಗ್ರಂಥದಲ್ಲಿ) ಅವಿಶ್ವಾಸವಿಟ್ಟರು. ಆದ್ದರಿಂದ ತರುವಾಯ ಅವರು (ವಾಸ್ತವವನ್ನು) ಅರಿತುಕೊಳ್ಳುವರು.

وَلَقَدْ سَبَقَتْ كَلِمَتُنَا لِعِبَادِنَا ٱلْمُرْسَلِينَ ﴿١٧١﴾

**171.** ಸಂದೇಶವಾಹಕರಾಗಿ ಕಳುಹಿಸಲಾಗಿರುವ ನಮ್ಮ ದಾಸರೊಂದಿಗೆ ನಮ್ಮ ವಚನವು ಮುಂಚೆಯೇ ಉಂಟಾಗಿತ್ತು.

إِنَّهُمْ لَهُمُ ٱلْمَنصُورُونَ ﴿١٧٢﴾ وَإِنَّ جُندَنَا لَهُمُ ٱلْغَٰلِبُونَ ﴿١٧٣﴾

**172-173.** (ಅಂದರೆ) ಖಂಡಿತವಾಗಿಯೂ ಸಹಾಯ ಮಾಡಲಾಗುವವರು ಅವರೇ ಆಗಿರುವರು ಮತ್ತು ಖಂಡಿತವಾಗಿಯೂ ನಮ್ಮ ಸೈನ್ಯವೇ ಜಯಶಾಲಿಗಳಾಗುವರು ಎಂಬುದು.

1 ಅಲ್ಲಾಹುವಿನ ನಿಷ್ಕಳಂಕ ದಾಸರು ಅವನ ಕುರಿತು ಅವನ ಪಾವನತೆಗೆ ಯೋಗ್ಯವಲ್ಲದ ಏನನ್ನೂ ಹೇಳಲಾರರು.

**174-175.** ಆದ್ದರಿಂದ ಒಂದು ಅವಧಿಯವರೆಗೆ ತಾವು ಅವರಿಂದ ವಿಮುಖರಾಗಿರಿ. ಅವರನ್ನು ವೀಕ್ಷಿಸುತ್ತಿರಿ. ತರುವಾಯ ಅವರೇ ಕಂಡುಕೊಳ್ಳುವರು.

فَتَوَلَّ عَنْهُمْ حَتَّىٰ حِينٍ ﴿١٧٤﴾ وَأَبْصِرْهُمْ فَسَوْفَ يُبْصِرُونَ ﴿١٧٥﴾

**176-177.** ಅವರು ನಮ್ಮ ಶಿಕ್ಷೆಯ ಕುರಿತು ಆತುರ ಪಡುತ್ತಿರುವರೇ? ಆದರೆ ಅದು ಅವರ ಅಂಗಳದಲ್ಲಿ ಇಳಿದರೆ ಮುನ್ನೆಚ್ಚರಿಕೆ ನೀಡಲಾದವರ ಪ್ರಭಾತವು ಎಷ್ಟು ನಿಕೃಷ್ಟವಾಗಿರುವುದು!

أَفَبِعَذَابِنَا يَسْتَعْجِلُونَ ﴿١٧٦﴾ فَإِذَا نَزَلَ بِسَاحَتِهِمْ فَسَآءَ صَبَاحُ ٱلْمُنذَرِينَ ﴿١٧٧﴾

**178-179.** (ಆದ್ದರಿಂದ) ಒಂದು ಅವಧಿಯವರೆಗೆ ತಾವು ಅವರಿಂದ ವಿಮುಖರಾಗಿರಿ ಮತ್ತು ವೀಕ್ಷಿಸುತ್ತಿರಿ. ತರುವಾಯ ಅವರೇ ಕಂಡುಕೊಳ್ಳುವರು.

وَتَوَلَّ عَنْهُمْ حَتَّىٰ حِينٍ ﴿١٧٨﴾ وَأَبْصِرْ فَسَوْفَ يُبْصِرُونَ ﴿١٧٩﴾

**180.** ಪ್ರತಾಪದ ಒಡೆಯನಾಗಿರುವ ತಮ್ಮ ರಬ್ ಅವರು ಸುಳ್ಳು ಸುಳ್ಳಾಗಿ ಆರೋಪಿಸುವುದರಿಂದೆಲ್ಲ ಪರಮ ಪಾವನನಾಗಿರುವನು!

سُبْحَـٰنَ رَبِّكَ رَبِّ ٱلْعِزَّةِ عَمَّا يَصِفُونَ ﴿١٨٠﴾

**181-182.** ಸಂದೇಶವಾಹಕರ ಮೇಲೆ ಶಾಂತಿಯಿರಲಿ! ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗೆ ಸ್ತುತಿ.

وَسَلَـٰمٌ عَلَى ٱلْمُرْسَلِينَ ﴿١٨١﴾ وَٱلْحَمْدُ لِلَّهِ رَبِّ ٱلْعَـٰلَمِينَ ﴿١٨٢﴾

# ಸ್ವಾದ್

# سُورَةُ صٓ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 88

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-2.** ಸ್ವಾದ್. ಉಪದೇಶವನ್ನು ಒಳಗೊಂಡಿರುವ ಕುರ್‌ಆನಿನ ಮೇಲಾಣೆ! ಆದರೆ ಸತ್ಯನಿಷೇಧಿಗಳು ದುರಭಿಮಾನ ಮತ್ತು ವಿರೋಧದಲ್ಲೇ ಇರುವರು.

صٓۚ وَٱلۡقُرۡءَانِ ذِي ٱلذِّكۡرِ ١ بَلِ ٱلَّذِينَ كَفَرُواْ فِي عِزَّةٖ وَشِقَاقٖ ٢

**3.** ಅವರಿಗಿಂತ ಮುಂಚೆ ನಾವು ಎಷ್ಟೋ ತಲೆಮಾರುಗಳನ್ನು ನಾಶಗೊಳಿಸಿರುವೆವು. ಆಗ ಅವರು ರೋದಿಸಿದರು. ಆದರೆ ಅದು ಪಾರಾಗುವ ಸಮಯವಾಗಿರಲಿಲ್ಲ.

كَمۡ أَهۡلَكۡنَا مِن قَبۡلِهِم مِّن قَرۡنٖ فَنَادَواْ وَّلَاتَ حِينَ مَنَاصٖ ٣

**4.** ಅವರಿಂದಲೇ ಇರುವ ಒಬ್ಬ ಸಂದೇಶವಾಹಕರು ಅವರ ಬಳಿಗೆ ಬಂದಿರುವುದರ ಬಗ್ಗೆ ಅವರು ಆಶ್ಚರ್ಯಪಟ್ಟರು. ಸತ್ಯನಿಷೇಧಿಗಳು ಹೇಳಿದರು: 'ಈತನೊಬ್ಬ ಮಾಂತ್ರಿಕ! ಮಿಥ್ಯವಾದಿ!'[1]

وَعَجِبُوٓاْ أَن جَآءَهُم مُّنذِرٞ مِّنۡهُمۡۖ وَقَالَ ٱلۡكَٰفِرُونَ هَٰذَا سَٰحِرٞ كَذَّابٌ ٤

**5.** 'ಇವನು ಅನೇಕ ದೇವರುಗಳನ್ನು ಏಕೈಕ ಆರಾಧ್ಯನನ್ನಾಗಿ ಮಾಡಿರುವನೇ? ಖಂಡಿತವಾಗಿಯೂ ಇದೊಂದು ಅದ್ಭುತ ವಿಷಯವಾಗಿದೆ!'

أَجَعَلَ ٱلۡأٓلِهَةَ إِلَٰهٗا وَٰحِدًاۖ إِنَّ هَٰذَا لَشَيۡءٌ عُجَابٞ ٥

**6.** ಅವರ ಪೈಕಿ ಪ್ರಮುಖರು (ಹೇಳುತ್ತಾ) ಸಾಗಿದರು: 'ನೀವು ಮುಂದುವರಿಯಿರಿ! ನಿಮ್ಮ ಆರಾಧ್ಯರ ವಿಷಯದಲ್ಲಿ ತಾಳ್ಮೆಯಿಂದ ದೃಢವಾಗಿ ನಿಲ್ಲಿರಿ. ಖಂಡಿತವಾಗಿಯೂ ಇದು ಉದ್ದೇಶಪೂರ್ವಕವಾಗಿ ಮಾಡಲಾಗುತ್ತಿರುವ ಒಂದು ಸಂಗತಿಯೇ ಆಗಿದೆ.[2]

وَٱنطَلَقَ ٱلۡمَلَأُ مِنۡهُمۡ أَنِ ٱمۡشُواْ وَٱصۡبِرُواْ عَلَىٰٓ ءَالِهَتِكُمۡۖ إِنَّ هَٰذَا لَشَيۡءٞ يُرَادُ ٦

---

1 ಮುಹಮ್ಮದ್(ﷺ)ರವರು ಹುಟ್ಟಿ ಬೆಳೆದಿದ್ದು ಮಕ್ಕಾ ನಿವಾಸಿಗಳ ಮಧ್ಯೆಯೇ ಆಗಿತ್ತು. ಅವರ ಸತ್ಯಸಂಧತೆ ಮತ್ತು ಸ್ವಭಾವ ವೈಶಿಷ್ಟ್ಯತೆಯು ಅವರಿಗೆ ಚಿರಪರಿಚಿತವಾಗಿತ್ತು. ಆದರೂ ಅವರು ಪ್ರವಾದಿಯಾಗಿ ಜನರ ಮುಂದೆ ಬಂದಾಗ ಅದೇ ಜನರು ಅವರನ್ನು ಮಿಥ್ಯವಾದಿಯಾಗಿ ಚಿತ್ರೀಕರಿಸಿದರು.

2 ಮುಹಮ್ಮದ್(ﷺ)ರವರು ನಮ್ಮ ಆರಾಧ್ಯರನ್ನು ವಿಮರ್ಶಿಸುತ್ತಿರುವುದು ನಮ್ಮಿಂದ ಅಧಿಕಾರವನ್ನು

7. ಕೊನೆಯ ಧರ್ಮದಲ್ಲಿ[1] ನಾವು ಇದನ್ನು ಆಲಿಸಿಲ್ಲ. ಇದೊಂದು ಕೃತಕ ಸೃಷ್ಟಿ ಮಾತ್ರವಾಗಿದೆ!

مَا سَمِعْنَا بِهَٰذَا فِي ٱلْمِلَّةِ ٱلْـَٔاخِرَةِ إِنْ هَٰذَآ إِلَّا ٱخْتِلَٰقٌ ﴿٧﴾

8. ನಮ್ಮ ಮಧ್ಯೆ ಉಪದೇಶವು ಅವತೀರ್ಣಗೊಂಡಿರುವುದು ಇವನ ಮೇಲೆಯೇ?'[2] ಅಲ್ಲ, ಅವರು ನನ್ನ ಉಪದೇಶದ ಬಗ್ಗೆ ಸಂದೇಹದಲ್ಲಿರುವರು. ಅಲ್ಲ, ಅವರು ಈ ತನಕ ನನ್ನ ಶಿಕ್ಷೆಯನ್ನು ಸವಿದಿಲ್ಲ.

أَءُنزِلَ عَلَيْهِ ٱلذِّكْرُ مِنۢ بَيْنِنَا ۚ بَلْ هُمْ فِي شَكٍّ مِّن ذِكْرِي ۖ بَل لَّمَّا يَذُوقُوا۟ عَذَابِ ﴿٨﴾

9. ಅಥವಾ ಪ್ರತಾಪಿಯೂ, ಮಹಾ ಔದಾರ್ಯವಂತನೂ ಆಗಿರುವ ತಮ್ಮ ರಬ್‌ನ ಕಾರುಣ್ಯದ ಖಜಾನೆಗಳು ಅವರ ಬಳಿಯಿವೆಯೇ?

أَمْ عِندَهُمْ خَزَآئِنُ رَحْمَةِ رَبِّكَ ٱلْعَزِيزِ ٱلْوَهَّابِ ﴿٩﴾

10. ಅಥವಾ ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವವುಗಳ ಆಧಿಪತ್ಯವು ಅವರದ್ದಾಗಿದೆಯೇ? ಹಾಗಿದ್ದರೆ ಆ ಮಾರ್ಗಗಳ ಮೂಲಕ ಅವರು ಏರಿ ಹೋಗಲಿ!.

أَمْ لَهُم مُّلْكُ ٱلسَّمَٰوَٰتِ وَٱلْأَرْضِ وَمَا بَيْنَهُمَا ۖ فَلْيَرْتَقُوا۟ فِي ٱلْأَسْبَٰبِ ﴿١٠﴾

11. ಅಲ್ಲಿರುವುದು ಹಲವು ಪಂಗಡಗಳಲ್ಲಿ ಸೇರಿದ, ಪರಾಭವಗೊಳ್ಳಲಿರುವ ಒಂದು ಸೈನ್ಯ ಮಾತ್ರವಾಗಿದೆ.[3]

جُندٌ مَّا هُنَالِكَ مَهْزُومٌ مِّنَ ٱلْأَحْزَابِ ﴿١١﴾

---

ಕಸಿಯುವ ಒಂದು ಗೂಢ ಸಂಚಿನ ಭಾಗವಾಗಿದೆಯೆಂದು ಮಕ್ಕಾದ ಬಹುದೇವಾರಾಧಕರ ಪೈಕಿ ಪ್ರಮುಖರು ಪ್ರಚಾರ ಮಾಡುತ್ತಿದ್ದರು.

1 ಕೊನೆಯ ಧರ್ಮ ಎಂಬುದರ ತಾತ್ಪರ್ಯ ಅಂದು ಅಸ್ತಿತ್ವದಲ್ಲಿದ್ದ ಹೊಚ್ಚ ಹೊಸ ಧರ್ಮವಾದ ಕ್ರೈಸ್ತಧರ್ಮವಾಗಿರಬಹುದು. ತ್ರಿಯೇಕತ್ವದಲ್ಲಿ ನೆಲೆನಿಂತಿದ್ದ ಅಂದಿನ ಕ್ರೈಸ್ತಧರ್ಮಕ್ಕೆ ಶುದ್ಧ ಏಕದೇವ ವಿಶ್ವಾಸವು ಅಪರಿಚಿತವಾಗಿತ್ತು. ಕೊನೆಯ ಧರ್ಮ ಎಂಬುದರ ತಾತ್ಪರ್ಯ ಆ ಸತ್ಯನಿಷೇಧಿಗಳ ನಿಕಟಪೂರ್ವ ತಲೆಮಾರು ರೂಢಿಯಾಗಿಸಿದ್ದ ಬಹುದೇವಧರ್ಮವೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

2 ಅಲ್ಲಾಹು ಮುಹಮ್ಮದ್(ﷺ)ರನ್ನು ಪ್ರವಾದಿಯಾಗಿ ಕಳುಹಿಸಿದ್ದು ಮತ್ತು ಅವರಿಗೆ ದಿವ್ಯ ಸಂದೇಶವನ್ನು ನೀಡಿದ್ದು ಸ್ಥಾನಮಾನಗಳ ಕುರಿತು ಅವರು ಹೊಂದಿದ್ದ ದೃಷ್ಟಿಕೋನಕ್ಕೆ ವಿರುದ್ಧವಾಗಿತ್ತು. ತಮ್ಮ ಪೈಕಿ ಉನ್ನತ ಸ್ಥಾನವನ್ನು ಹೊಂದಿರುವ ಯಾವುದಾದರೂ ಮುಖಂಡನು ಆ ಪದವಿಗೆ ಹೆಚ್ಚು ಅರ್ಹನು ಎಂಬುದು ಅವರ ಅಭಿಪ್ರಾಯವಾಗಿತ್ತು.

3 ಪ್ರವಾದಿ(ﷺ)ರವರ ವಿರುದ್ಧ ಹೋರಾಡಲು ಬಂದಿರುವುದು ಪರಸ್ಪರ ತತ್ವಾದರ್ಶ ಹೊಂದಾಣಿಕೆಯಿಲ್ಲದ, ಗುರಿಸಾಧನೆಗಾಗಿ ದೃಢವಾಗಿ ನಿಂತು ಹೋರಾಡಲು ಸಿದ್ಧರಿಲ್ಲದ, ಸ್ವಾರ್ಥ ಹಿತಾಸಕ್ತಿಗಳನ್ನು ಸಂರಕ್ಷಿಸುವ ಪಂಗಡಗಳು ಒಟ್ಟಾಗಿ ರಚಿಸಿದ, ಪರಾಭವಗೊಳ್ಳಲಿಕ್ಕಿರುವ ಒಂದು ಸೇನೆಯಾಗಿದೆ ಎಂದರ್ಥ.

كَذَّبَتۡ قَبۡلَهُمۡ قَوۡمُ نُوحٖ وَعَادٞ وَفِرۡعَوۡنُ ذُو ٱلۡأَوۡتَادِ ﴿١٢﴾ وَثَمُودُ وَقَوۡمُ لُوطٖ وَأَصۡحَٰبُ لۡـَٔيۡكَةِۚ أُوْلَٰٓئِكَ ٱلۡأَحۡزَابُ ﴿١٣﴾

**12–13.** ಅವರಿಗಿಂತ ಮೊದಲು ನೂಹ್‌ರ ಜನತೆ, ಆದ್ ಸಮುದಾಯ, ಮೊಳೆಗಳ ಒಡೆಯನಾದ ಫಿರ್‌ಔನ್,[1] ಸಮೂದ್ ಜನತೆ, ಲೂತ್‌ರ ಸಮು ದಾಯ ಮತ್ತು ವೃಕ್ಷವನಗಳಲ್ಲಿ ವಾಸಿಸುತ್ತಿದ್ದವರು (ಸತ್ಯವನ್ನು ನಿಷೇಧಿಸಿದ್ದರು). (ಸತ್ಯಕ್ಕೆ ವಿರುದ್ಧ ಒಗ್ಗಟ್ಟಾಗಿ ನಿಂತ) ಪಂಗಡಗಳು ಅವರೇ ಆಗಿರುವರು.

إِن كُلٌّ إِلَّا كَذَّبَ ٱلرُّسُلَ فَحَقَّ عِقَابِ ﴿١٤﴾

**14.** ಇವರಲ್ಲಿ ಯಾರೂ ಸಂದೇಶವಾಹಕರನ್ನು ನಿಷೇಧಿಸದೆ ಬಿಟ್ಟಿರಲಿಲ್ಲ. ತರುವಾಯ ನನ್ನ ಶಿಕ್ಷೆಯು (ಅವರ ಮೇಲೆ) ಅನಿವಾರ್ಯವಾಯಿತು.

وَمَا يَنظُرُ هَٰٓؤُلَآءِ إِلَّا صَيۡحَةٗ وَٰحِدَةٗ مَّا لَهَا مِن فَوَاقٖ ﴿١٥﴾

**15.** ಇವರು ಒಂದೇ ಒಂದು ಘೋರ ಶಬ್ದದ ಹೊರತು ಇನ್ನೇನನ್ನೂ ಕಾಯುತ್ತಿಲ್ಲ. (ಅದು ಸಂಭವಿಸಿದರೆ ನಂತರ) ಕಿಂಚಿತ್ತೂ ಕಾಲಾವಕಾಶವಿರದು.[2]

وَقَالُواْ رَبَّنَا عَجِّل لَّنَا قِطَّنَا قَبۡلَ يَوۡمِ ٱلۡحِسَابِ ﴿١٦﴾

**16.** ಅವರು ಹೇಳುವರು: ‘ಓ ನಮ್ಮ ರಬ್! ವಿಚಾರಣಾ ದಿನಕ್ಕಿಂತ ಮೊದಲೇ ನಮಗಿರುವ (ಶಿಕ್ಷೆಯ) ಪಾಲನ್ನು ನಮಗೆ ಬೇಗನೇ ನೀಡು’.

ٱصۡبِرۡ عَلَىٰ مَا يَقُولُونَ وَٱذۡكُرۡ عَبۡدَنَا دَاوُۥدَ ذَا ٱلۡأَيۡدِۖ إِنَّهُۥٓ أَوَّابٌ ﴿١٧﴾

**17.** (ಓ ಪ್ರವಾದಿಯವರೇ!) ಅವರು ಹೇಳುತ್ತಿರುವುದರ ಬಗ್ಗೆ ತಾವು ತಾಳ್ಮೆ ವಹಿಸಿರಿ. ಬಲಿಷ್ಠರಾಗಿದ್ದ ನಮ್ಮ ದಾಸನಾದ ದಾವೂದ್‌ರನ್ನು ಸ್ಮರಿಸಿರಿ. ಖಂಡಿತವಾಗಿಯೂ ಅವರು (ಅಲ್ಲಾಹುವಿನೆಡೆಗೆ) ಅತಿಹೆಚ್ಚು ಪಶ್ಚಾತ್ತಾಪಪಟ್ಟು ಮರಳಿದವರಾಗಿದ್ದರು.

---

1 ‘ದುಲ್ ಔತಾದ್’ ಎಂಬ ಪದಕ್ಕೆ ಮೊಳೆಗಳ ಒಡೆಯನು ಅಥವಾ ಮೊಳೆಗಳನ್ನು ಬಡಿದವನು ಎಂದರ್ಥವಿದೆ. ಮೊಳೆಗಳಿಗೆ ಮಾತ್ರವಲ್ಲದೆ ನಾಟಿಬಿಡಲಾಗುವ ಗೂಟಗಳಿಗೂ ಔತಾದ್ ಎನ್ನಲಾಗುತ್ತದೆ. ಯಾರಿಗೂ ಅಲುಗಾಡಿಸಲು ಸಾಧ್ಯವಾಗದ ರೀತಿಯಲ್ಲಿ ಅಧಿಕಾರದ ಕುರ್ಚಿಯನ್ನು ಸುಭದ್ರಗೊಳಿಸಿದವನು ಎಂದು ಕೆಲವು ವ್ಯಾಖ್ಯಾನಕಾರರು ‘ದುಲ್ ಔತಾದ್’ ಎಂಬ ಪದಕ್ಕೆ ವ್ಯಾಖ್ಯಾನ ನೀಡಿದ್ದಾರೆ. ಬಡವರ ಶರೀರಗಳಲ್ಲಿ ಮೊಳೆಗಳನ್ನು ಚುಚ್ಚಿ ಹಿಂಸಿಸುವವನು ಎಂದು ಇತರ ಕೆಲವರು ಇದನ್ನು ವ್ಯಾಖ್ಯಾನಿಸಿದ್ದಾರೆ.

2 ಫವಾಕ್ ಎಂಬ ಪದದ ಅರ್ಥ ಎರಡು ಅವಧಿಗಳ ನಡುವಿನ ವಿರಾಮ ಎಂದಾಗಿದೆ. ಇಲ್ಲಿ ಅದನ್ನು ಅಲಂಕಾರಿಕವಾಗಿ ಬಳಸಲಾಗಿದೆ.

**18.** ಸಾಯಂಕಾಲದಲ್ಲೂ, ಪ್ರಭಾತ ವೇಳೆಯಲ್ಲೂ ಸ್ತುತಿಕೀರ್ತನೆ ಮಾಡುವ ವಿಧದಲ್ಲಿ ನಾವು ಪರ್ವತಗಳನ್ನು ಅವರೊಂದಿಗೆ ಶರಣಾಗಿಸಿದೆವು.(1)

إِنَّا سَخَّرْنَا ٱلْجِبَالَ مَعَهُۥ يُسَبِّحْنَ بِٱلْعَشِىِّ وَٱلْإِشْرَاقِ ﴿١٨﴾

**19.** ಒಟ್ಟುಗೂಡಿಸಲಾದ ವಿಧದಲ್ಲಿರುವ ಹಕ್ಕಿಗಳನ್ನೂ (ನಾವು ಅಧೀನಗೊಳಿಸಿದೆವು). ಎಲ್ಲವೂ ಆತನೆಡೆಗೆ ಅತ್ಯಂತ ವಿನಮ್ರತೆಯೊಂದಿಗೆ ತಿರುಗಿಕೊಂಡಿರುವುವು.

وَٱلطَّيْرَ مَحْشُورَةًۖ كُلٌّ لَّهُۥٓ أَوَّابٌ ﴿١٩﴾

**20.** ನಾವು ಆತನ ಆಧಿಪತ್ಯವನ್ನು ಬಲಪಡಿಸಿದೆವು, ಆತನಿಗೆ ತತ್ವಜ್ಞಾನವನ್ನು ಮತ್ತು ತೀರ್ಪು ನೀಡಲು ಬೇಕಾದ ವಾಕ್ಚಾತುರ್ಯವನ್ನು ನೀಡಿದೆವು.

وَشَدَدْنَا مُلْكَهُۥ وَءَاتَيْنَٰهُ ٱلْحِكْمَةَ وَفَصْلَ ٱلْخِطَابِ ﴿٢٠﴾

**21.** ತರ್ಕಿಸುವ ಕಕ್ಷಿಗಳು ಪ್ರಾರ್ಥನಾ ಪೀಠದ ಗೋಡೆಯನ್ನು ಏರಿ ಬಂದ ಸಂದರ್ಭದ ವೃತ್ತಾಂತವು ತಮಗೆ ಬಂದಿದೆಯೇ?

۞ وَهَلْ أَتَىٰكَ نَبَؤُا۟ ٱلْخَصْمِ إِذْ تَسَوَّرُوا۟ ٱلْمِحْرَابَ ﴿٢١﴾

**22.** ಅವರು ದಾವೂದ್‌ರ ಬಳಿಗೆ ಪ್ರವೇಶಿಸಿದ ಮತ್ತು ಆತ ಅವರ ಬಗ್ಗೆ ಪರಿಭ್ರಾಂತರಾದ ಸಂದರ್ಭ. ಅವರು ಹೇಳಿದರು: 'ತಾವು ಭಯಪಡದಿರಿ. ನಾವು ಎರಡು ವಿರೋಧಿ ಬಣಗಳಾಗಿರುವೆವು. ನಮ್ಮಲ್ಲಿ ಒಬ್ಬರು ಇನ್ನೊಬ್ಬರ ವಿರುದ್ಧ ಅನ್ಯಾಯವೆಸಗಿರುವರು. ಆದ್ದರಿಂದ ತಾವು ನಮ್ಮ ನಡುವೆ ನ್ಯಾಯಬದ್ಧವಾದ ತೀರ್ಪನ್ನು ನೀಡಿರಿ. ತಾವು ಅನ್ಯಾಯವೆಸಗದಿರಿ. ನಮ್ಮನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸಿರಿ.

إِذْ دَخَلُوا۟ عَلَىٰ دَاوُۥدَ فَفَزِعَ مِنْهُمْۖ قَالُوا۟ لَا تَخَفْۖ خَصْمَانِ بَغَىٰ بَعْضُنَا عَلَىٰ بَعْضٍ فَٱحْكُم بَيْنَنَا بِٱلْحَقِّ وَلَا تُشْطِطْ وَٱهْدِنَآ إِلَىٰ سَوَآءِ ٱلصِّرَٰطِ ﴿٢٢﴾

**23.** ಈತ ನನ್ನ ಸಹೋದರ. ಈತನಿಗೆ ತೊಂಬತ್ತೊಂಬತ್ತು ಹೆಣ್ಣಾಡುಗಳಿವೆ. ನನಗಿರುವುದು ಒಂದು ಹೆಣ್ಣಾಡು. ಆಗ ಅವನು ಹೇಳಿದನು: ಅದನ್ನು ನನಗೆ ಒಪ್ಪಿಸು.

إِنَّ هَٰذَآ أَخِى لَهُۥ تِسْعٌ وَتِسْعُونَ نَعْجَةً وَلِىَ نَعْجَةٌ وَٰحِدَةٌ فَقَالَ أَكْفِلْنِيهَا وَعَزَّنِى فِى ٱلْخِطَابِ ﴿٢٣﴾

1 ದಾವೂದ್(عَلَيْهِ السَّلَامُ)ರವರ ಇಂಪಾದ ಕೀರ್ತನೆಯಲ್ಲಿ ಪರ್ವತಗಳೂ ಭಾಗಿಯಾಗುತ್ತಿದ್ದವು ಎಂದರ್ಥ. ಪ್ರಕೃತಿಯ ಎಲ್ಲ ಶಕ್ತಿಗಳೂ ಅಲ್ಲಾಹುವಿನ ಮಹತ್ವವನ್ನು ಕೊಂಡಾಡುತ್ತಿವೆಯೆಂದು ಕುರ್‌ಆನಿನ ಹಲವೆಡೆ ಹೇಳಲಾಗಿದೆ.

ಸಂಭಾಷಣೆಯಲ್ಲಿ ಅವನು ನನ್ನನ್ನು ಪರಾಭವಗೊಳಿಸಿದನು’.

**24.** ಆತ ಹೇಳಿದರು: ‘ತನ್ನ ಹೆಣ್ಣಾಡುಗಳ ಗುಂಪಿಗೆ ನಿನ್ನ ಹೆಣ್ಣಾಡನ್ನೂ ಸೇರಿಸುವಂತೆ ಕೇಳುವ ಮೂಲಕ ಅವನು ನಿನ್ನೊಂದಿಗೆ ಖಂಡಿತವಾಗಿಯೂ ಅನ್ಯಾಯವೆಸಗಿರುವನು. ಖಂಡಿತವಾಗಿಯೂ ಪಾಲುದಾರರ (ಗೆಳೆಯರ) ಪೈಕಿ ಹೆಚ್ಚಿನವರೂ ಪರಸ್ಪರ ಅನ್ಯಾಯವೆಸಗುವರು. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗುವವರ ಹೊರತು. ಅಂತಹವರು ಇರುವುದು ಅತಿ ವಿರಳ’. ನಾವು ಅವರನ್ನು ಪರೀಕ್ಷಿಸಿದ್ದಾಗಿದೆಯೆಂದು ದಾವೂದ್‌ರಿಗೆ ಖಾತ್ರಿಯಾಯಿತು. ಆದ್ದರಿಂದ ಆತ ತಮ್ಮ ರಬ್‌ನೊಂದಿಗೆ ಪಾಪಮುಕ್ತಿಯನ್ನು ಬೇಡಿದರು ಮತ್ತು ಸಾಷ್ಟಾಂಗ ಬಿದ್ದು ಪಶ್ಚಾತ್ತಾಪಪಟ್ಟು ಮರಳಿದರು.

قَالَ لَقَدۡ ظَلَمَكَ بِسُؤَالِ نَعۡجَتِكَ إِلَىٰ نِعَاجِهِۦۖ وَإِنَّ كَثِيرٗا مِّنَ ٱلۡخُلَطَآءِ لَيَبۡغِي بَعۡضُهُمۡ عَلَىٰ بَعۡضٍ إِلَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ وَقَلِيلٞ مَّا هُمۡۗ وَظَنَّ دَاوُۥدُ أَنَّمَا فَتَنَّٰهُ فَٱسۡتَغۡفَرَ رَبَّهُۥ وَخَرَّۤ رَاكِعٗاۤ وَأَنَابَ۩ ٢٤

**25.** ಆಗ ನಾವು ಆತನಿಗೆ ಅದನ್ನು ಕ್ಷಮಿಸಿದೆವು. ಖಂಡಿತವಾಗಿಯೂ ಆತನಿಗೆ ನಮ್ಮ ಬಳಿ ಸಾಮೀಪ್ಯವೂ ಮರಳಿ ಬರಲು ಉತ್ತಮವಾದ ಪದವಿಯೂ ಇದೆ.[1]

فَغَفَرۡنَا لَهُۥ ذَٰلِكَۖ وَإِنَّ لَهُۥ عِندَنَا لَزُلۡفَىٰ وَحُسۡنَ مَـَٔابٖ ٢٥

**26.** (ಅಲ್ಲಾಹು ಹೇಳಿದನು): ‘ಓ ದಾವೂದ್! ಖಂಡಿತವಾಗಿಯೂ ತಮ್ಮನ್ನು ನಾವು ಭೂಮಿಯಲ್ಲಿ ಒಬ್ಬ ಪ್ರತಿನಿಧಿಯನ್ನಾಗಿ ಮಾಡಿರುವೆವು. ಆದ್ದರಿಂದ ತಾವು ಜನರ ಮಧ್ಯೆ ನ್ಯಾಯಬದ್ಧವಾದ ತೀರ್ಪನ್ನು ನೀಡಿರಿ. ತಾವು ದೇಹೇಚ್ಛೆಯನ್ನು ಅನುಸರಿಸದಿರಿ.

يَٰدَاوُۥدُ إِنَّا جَعَلۡنَٰكَ خَلِيفَةٗ فِي ٱلۡأَرۡضِ فَٱحۡكُم بَيۡنَ ٱلنَّاسِ بِٱلۡحَقِّ وَلَا تَتَّبِعِ ٱلۡهَوَىٰ فَيُضِلَّكَ عَن سَبِيلِ ٱللَّهِۚ إِنَّ ٱلَّذِينَ يَضِلُّونَ عَن سَبِيلِ ٱللَّهِ لَهُمۡ عَذَابٞ شَدِيدُۢ بِمَا نَسُواْ يَوۡمَ ٱلۡحِسَابِ ٢٦

1 ದಾವೂದ್(عَلَيْهِ السَّلَامُ)ರವರ ಪ್ರಾರ್ಥನಾ ಪೀಠದ ಗೋಡೆಯನ್ನು ಹತ್ತಿ ಬಂದ ಇಬ್ಬರು ವ್ಯಕ್ತಿಗಳು ಮನುಷ್ಯರೂಪದಲ್ಲಿ ಬಂದ ಇಬ್ಬರು ಮಲಕ್‌ಗಳಾಗಿದ್ದರೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಅವರು ಇಂತಹ ಒಂದು ಸಮಸ್ಯೆಯೊಂದಿಗೆ ದಾವೂದ್(عَلَيْهِ السَّلَامُ)ರವರ ಬಳಿ ಬಂದಿದ್ದೇಕೆ? ಮಲಕ್‌ಗಳ ಆಗಮನವು ಅವರು ಕೈಗೊಂಡ ಯಾವುದೋ ತೀರ್ಮಾನದ ಪ್ರಮಾದವನ್ನು ಅವರಿಗೆ ತಿಳಿಸಿ ಎಚ್ಚರಿಸುವ ಸಲುವಾಗಿ ಅಲ್ಲಾಹು ಏರ್ಪಡಿಸಿದ ಪರೀಕ್ಷೆಯ ಭಾಗವಾಗಿದೆಯೆಂದು 24ನೇ ಸೂಕ್ತಿಯಿಂದ ಮನದಟ್ಟಾಗುತ್ತದೆ. ಈ ಘಟನೆಗೆ ಸಂಬಂಧಿಸಿದಂತೆ ಹಲವರು ಹಲವು ಕಥೆಗಳನ್ನು ಬರೆದಿರುವರು. ಆದರೆ ಅವುಗಳಿಗೆ ಯಾವುದೇ ಆಧಾರವಿಲ್ಲ. ಅಲ್ಲಾಹುವಿನ ಅನುಗ್ರಹ ದೊರೆತ ಪ್ರವಾದಿಗಳು ಕೂಡ ವಿವಿಧ ಪರೀಕ್ಷೆಗಳಿಗೆ ಗುರಿಯಾಗಿದ್ದಾರೆಂದು ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರವರಿಗೆ ಮನದಟ್ಟಾಗಿಸಲು ಈ ಚರಿತ್ರೆಯನ್ನು ಅಲ್ಲಾಹು ಇಲ್ಲಿ ಉಲ್ಲೇಖಿಸಿದ್ದಾನೆ.

ಯಾಕೆಂದರೆ ಅದು ತಮ್ಮನ್ನು ಅಲ್ಲಾಹುವಿನ ಮಾರ್ಗದಿಂದ ಭ್ರಷ್ಟಗೊಳಿಸುವುದು. ಅಲ್ಲಾಹುವಿನ ಮಾರ್ಗದಿಂದ ಭ್ರಷ್ಟರಾಗುವವರು ಯಾರೋ ಅವರು ವಿಚಾರಣಾ ದಿನವನ್ನು ಮರೆತಿರುವ ಫಲವಾಗಿ ಖಂಡಿತವಾಗಿಯೂ ಅವರಿಗೆ ಕಠಿಣವಾದ ಶಿಕ್ಷೆಯಿದೆ.

27. ನಾವು ಆಕಾಶವನ್ನು, ಭೂಮಿಯನ್ನು ಮತ್ತು ಅವೆರಡರ ನಡುವೆಯಿರುವವುಗಳನ್ನು ವ್ಯರ್ಥವಾಗಿ ಸೃಷ್ಟಿಸಿಲ್ಲ. ಅದು ಸತ್ಯನಿಷೇಧಿಗಳ ಊಹೆಯಾಗಿದೆ. ಆದ್ದರಿಂದ ಸತ್ಯನಿಷೇಧಿಗಳಿಗೆ ನರಕ ಶಿಕ್ಷೆಯಿಂದಾಗಿ ಮಹಾನಾಶವಿದೆ.

وَمَا خَلَقْنَا ٱلسَّمَآءَ وَٱلْأَرْضَ وَمَا بَيْنَهُمَا بَٰطِلًاۚ ذَٰلِكَ ظَنُّ ٱلَّذِينَ كَفَرُوا۟ۚ فَوَيْلٌ لِّلَّذِينَ كَفَرُوا۟ مِنَ ٱلنَّارِ ﴿٢٧﴾

28. ಅಥವಾ ವಿಶ್ವಾಸವಿಟ್ಟವರನ್ನು ಮತ್ತು ಸತ್ಕರ್ಮವೆಸಗಿದವರನ್ನು ನಾವು ಭೂಮಿಯಲ್ಲಿ ವಿನಾಶವುಂಟುಮಾಡುವವರಂತೆ ಮಾಡುವೆವೇ? ಅಥವಾ ಧರ್ಮನಿಷ್ಠೆಯುಳ್ಳವರನ್ನು ನಾವು ದುಷ್ಟರಂತೆ ಮಾಡುವೆವೇ?

أَمْ نَجْعَلُ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ كَٱلْمُفْسِدِينَ فِى ٱلْأَرْضِ أَمْ نَجْعَلُ ٱلْمُتَّقِينَ كَٱلْفُجَّارِ ﴿٢٨﴾

29. ಇದು ನಾವು ತಮಗೆ ಅವತೀರ್ಣಗೊಳಿಸಿರುವ ಅನುಗ್ರಹೀತ ಗ್ರಂಥವಾಗಿದೆ. ಇದರಲ್ಲಿರುವ ದೃಷ್ಟಾಂತಗಳ ಕುರಿತು ಅವರು ಚಿಂತಿಸುವ ಸಲುವಾಗಿ ಮತ್ತು ಅದರಿಂದ ಬುದ್ಧಿವಂತರು ಪ್ರಜ್ಞಾವಂತರಾಗುವ ಸಲುವಾಗಿ.

كِتَٰبٌ أَنزَلْنَٰهُ إِلَيْكَ مُبَٰرَكٌ لِّيَدَّبَّرُوٓا۟ ءَايَٰتِهِۦ وَلِيَتَذَكَّرَ أُو۟لُوا۟ ٱلْأَلْبَٰبِ ﴿٢٩﴾

30. ನಾವು ದಾವೂದ್‌ರಿಗೆ ಸುಲೈಮಾನ್‌ರನ್ನು (ಪುತ್ರನಾಗಿ) ಕರುಣಿಸಿದೆವು. ಅತ್ಯುತ್ತಮ ದಾಸರು! ಖಂಡಿತವಾಗಿಯೂ ಅವರು (ಅಲ್ಲಾಹುವಿನೆಡೆಗೆ) ಅತ್ಯಧಿಕವಾಗಿ ಪಶ್ಚಾತ್ತಾಪಪಟ್ಟು ಮರಳುವವರಾಗಿದ್ದರು.

وَوَهَبْنَا لِدَاوُۥدَ سُلَيْمَٰنَۚ نِعْمَ ٱلْعَبْدُ إِنَّهُۥٓ أَوَّابٌ ﴿٣٠﴾

31. ನೆಗೆದು ಓಡಲು ಸಿದ್ಧವಾಗಿ ನಿಂತಿರುವ ವಿಶಿಷ್ಟ ಕುದುರೆಗಳನ್ನು ಸಂಧ್ಯಾವೇಳೆಯಲ್ಲಿ ಅವರ ಮುಂದೆ ಪ್ರದರ್ಶಿಸಲಾದ ಸಂದರ್ಭ!

إِذْ عُرِضَ عَلَيْهِ بِٱلْعَشِىِّ ٱلصَّٰفِنَٰتُ ٱلْجِيَادُ ﴿٣١﴾

32. ಆಗ ಅವರು ಹೇಳಿದರು: ‘ನಾನು ಐಶ್ವರ್ಯವನ್ನು ಪ್ರೀತಿಸಿರುವುದು ನನ್ನ ರಬ್‌ನ ಸ್ಮರಣೆಯ

فَقَالَ إِنِّىٓ أَحْبَبْتُ حُبَّ ٱلْخَيْرِ عَن ذِكْرِ رَبِّى حَتَّىٰ تَوَارَتْ بِٱلْحِجَابِ ﴿٣٢﴾

ತಳಹದಿಯಲ್ಲಾಗಿದೆ.[1] ತರುವಾಯ ಕುದುರೆಗಳು ಪರದೆಯ ಹಿಂದೆ ಮರೆಯಾದವು.[2]

33. (ಆಗ ಅವರು ಹೇಳಿದರು): 'ನೀವು ಅವುಗಳನ್ನು ನನ್ನ ಬಳಿಗೆ ಮರಳಿ ತನ್ನಿರಿ. ತರುವಾಯ ಅವರು (ಅವುಗಳ) ಕಣಕಾಲು ಮತ್ತು ಕತ್ತುಗಳನ್ನು ಸವರಲು ಆರಂಭಿಸಿದರು.[3]

رُدُّوهَا عَلَيَّۖ فَطَفِقَ مَسۡحَۢا بِٱلسُّوقِ وَٱلۡأَعۡنَاقِ ٣٣

34. ಸುಲೈಮಾನ್‌ರನ್ನು ನಾವು ಪರೀಕ್ಷಿಸಿದೆವು. ನಾವು ಅವರ ಸಿಂಹಾಸನದ ಮೇಲೆ ಒಂದು ಜಡದೇಹವನ್ನು ಹಾಕಿದೆವು.[4] ತರುವಾಯ ಅವರು ವಿನಮ್ರತೆಯಿಂದ ಮರಳಿದರು.

وَلَقَدۡ فَتَنَّا سُلَيۡمَٰنَ وَأَلۡقَيۡنَا عَلَىٰ كُرۡسِيِّهِۦ جَسَدٗا ثُمَّ أَنَابَ ٣٤

35. ಅವರು ಹೇಳಿದರು: 'ಓ ನನ್ನ ರಬ್! ನನ್ನನ್ನು ಕ್ಷಮಿಸು. ನನ್ನ ಬಳಿಕ ಯಾರಿಗೂ ಸೂಕ್ತವಲ್ಲದಂತಹ ಒಂದು ರಾಜ್ಯಭಾರವನ್ನು[5] ನನಗೆ ಕರುಣಿಸು. ಖಂಡಿತವಾಗಿಯೂ ನೀನು ಉದಾರ ದಾನಿಯಾಗಿರುವೆ'.

قَالَ رَبِّ ٱغۡفِرۡ لِي وَهَبۡ لِي مُلۡكٗا لَّا يَنۢبَغِي لِأَحَدٖ مِّنۢ بَعۡدِيٓۖ إِنَّكَ أَنتَ ٱلۡوَهَّابُ ٣٥

---

1 ಉತ್ತಮ ತಳಿಯ ಕುದುರೆಗಳು ಸೇರಿದಂತೆ ಸಂಪತ್ತನ್ನು ನಾನು ಪ್ರೀತಿಸುವುದು ಭೌತಿಕ ಜೀವನದೊಂದಿಗಿರುವ ಆಸಕ್ತಿಯಿಂದಲ್ಲ, ಬದಲಾಗಿ ಅಲ್ಲಾಹುವಿನ ಸ್ಮರಣೆಯನ್ನು ನೆಲೆನಿಲ್ಲಿಸುವ ಮತ್ತು ಅವನ ಮಾರ್ಗದಲ್ಲಿ ಹೋರಾಟ ನಡೆಸಲಿಕ್ಕಿರುವ ಕಾರಣ ಎಂಬ ನೆಲೆಯಲ್ಲಾಗಿದೆ ಎಂದರ್ಥ. "ನನ್ನ ಪ್ರಭುವಿನ ಸ್ಮರಣೆಯನ್ನು ಕೈಬಿಟ್ಟು ಸಂಪತ್ತಿನ ಪ್ರೀತಿಯಲ್ಲಿ ನಾನು ಮುಳುಗಿಹೋದೆ" ಎಂದೂ ಅರ್ಥ ನೀಡಲಾಗಿದೆ. ಆಹ್ಲಾದದೊಂದಿಗೆ ಕುದುರೆಗಳನ್ನು ವೀಕ್ಷಿಸುವ ಸಂದರ್ಭ ಸಾಯಂಕಾಲ ಪ್ರಾರ್ಥನೆಯನ್ನು ಮರೆತುಬಿಟ್ಟ ದುಃಖವನ್ನು ಪ್ರಕಟಿಸುವ ಸಲುವಾಗಿ ಸುಲೈಮಾನ್(عَلَيْهِ السَّلَامُ) ಈ ರೀತಿ ಹೇಳಿದರು ಎಂಬುದು ಇದರ ವಿವರಣೆಯಾಗಿದೆ.

2 ತವಾರತ್ ಬಿಲ್ ಹಿಜಾಬ್ ಅಂದರೆ ಅದು (ಸೂರ್ಯ) ಪರದೆಯ ಹಿಂದೆ ಸರಿದು ಮರೆಯಾಯಿತು (ಅಸ್ತಮಿಸಿತು) ಎಂದೂ ಅರ್ಥ ನೀಡಲಾಗಿದೆ.

3 ತ್ವಫಿಕ ಮಸ್‌ಹನ್ ಎಂದರೆ ಸವರಲಾರಂಭಿಸಿದನು ಎಂದರ್ಥ. ಕಡಿಯಲಾರಂಭಿಸಿದನು ಎಂಬ ಅರ್ಥದಲ್ಲಿರುವ ಒಂದು ಅಲಂಕಾರಿಕ ಪ್ರಯೋಗವಾಗಿದೆ ಅದೆಂದು ಕೆಲವರು ಅರ್ಥ ನೀಡಿದ್ದಾರೆ. ಕುದುರೆಗಳ ವೀಕ್ಷಣೆಯಿಂದಾಗಿ ತನ್ನ ಪ್ರಾರ್ಥನೆಗೆ ಅಡ್ಡಿಯುಂಟಾದುದರಿಂದ ಮನಕ್ಲೇಶವುಂಟಾಗಿ ಅವರು ಅವುಗಳನ್ನು ವಧಿಸಿದರೆಂದು ಕೆಲವರು ಹೇಳಿದ್ದಾರೆ. ಆದರೆ ಇದಕ್ಕೆ ಸ್ಪಷ್ಟ ಆಧಾರಗಳನ್ನು ಉಲ್ಲೇಖಿಸಲಾಗಿಲ್ಲ.

4 ಪ್ರಸ್ತುತ ಸೂಕ್ತಿಗೆ ವಿಭಿನ್ನ ವ್ಯಾಖ್ಯಾನಗಳನ್ನು ನೀಡಲಾಗಿದೆ. ಪ್ರಬಲವಾದ ಆಧಾರಗಳ ಅಭಾವದಿಂದಾಗಿ ಅವುಗಳ ಸರಿತಪ್ಪುಗಳನ್ನು ನಿರ್ಣಯಿಸಲು ಸಾಧ್ಯವಿಲ್ಲ. ಇಲ್ಲಿ ಪ್ರತಿಪಾದಿಸಲಾದ ವಿಷಯವು ಆಡಳಿತ ನಿರ್ವಹಣೆಗೆ ಸಂಬಂಧಿಸಿದ್ದಾಗಿರುವುದರಿಂದ ಆ ವಿಷಯದಲ್ಲಿ ಅವರಿಗೆ ಉಂಟಾದ ಯಾವುದೋ ಪರಾಭವದ ಕುರಿತು ಇಲ್ಲಿ ಪರೀಕ್ಷೆಯೆಂದು ಹೇಳಿರಬಹುದು. ತರುವಾಯ ಅವರು ಪಶ್ಚಾತ್ತಾಪಪಟ್ಟು ಮರಳಿದಾಗ ಅಲ್ಲಾಹು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದರೆಂದು ಮುಂದಿನ ಸೂಕ್ತಿಗಳು ಸ್ಪಷ್ಟಪಡಿಸುತ್ತವೆ.

5 ಅಲ್ಲಾಹು ಸುಲೈಮಾನ್(عَلَيْهِ السَّلَامُ)ರವರಿಗೆ ಅಧೀನಗೊಳಿಸಿಕೊಟ್ಟ ಶಕ್ತಿ ಸಾಮರ್ಥ್ಯಗಳನ್ನು ಇತರ ಯಾವುದೇ ಆಡಳಿತಗಾರನಿಗೂ ಅಧೀನಗೊಳಿಸಿಕೊಟ್ಟಿಲ್ಲ.

فَسَخَّرْنَا لَهُ ٱلرِّيحَ تَجْرِى بِأَمْرِهِۦ رُخَآءً حَيْثُ أَصَابَ ﴿٣٦﴾

36. ಆದ್ದರಿಂದ ನಾವು ಅವರಿಗೆ ಗಾಳಿಯನ್ನು ಅಧೀನಗೊಳಿಸಿಕೊಟ್ಟೆವು. ಅದು ಅವರ ಆಜ್ಞೆಯಂತೆ ಅವರು ನಿರ್ದೇಶಿಸುವ ಕಡೆಗೆ ಮೃದುವಾಗಿ ಚಲಿಸುತ್ತಿರುವುದು.

وَٱلشَّيَٰطِينَ كُلَّ بَنَّآءٍ وَغَوَّاصٍ ﴿٣٧﴾

37. ಕಟ್ಟಡ ನಿರ್ಮಾಣ ನಿಪುಣರಾಗಿರುವ ಮತ್ತು ಮುಳುಗು ವೀರರಾಗಿರುವ ಸರ್ವ ಶೈತಾನರನ್ನು (ಅವರಿಗೆ ಅಧೀನಗೊಳಿಸಿಕೊಟ್ಟೆವು).

وَءَاخَرِينَ مُقَرَّنِينَ فِى ٱلْأَصْفَادِ ﴿٣٨﴾

38. ಸಂಕೋಲೆಗಳಲ್ಲಿ ಬಂಧಿಸಲಾಗಿರುವ ಇತರ ಕೆಲವು (ಶೈತಾನರನ್ನೂ ಅಧೀನಗೊಳಿಸಿದೆವು).

هَٰذَا عَطَآؤُنَا فَٱمْنُنْ أَوْ أَمْسِكْ بِغَيْرِ حِسَابٍ ﴿٣٩﴾

39. 'ಇದು ನಮ್ಮ ಉಡುಗೊರೆಯಾಗಿದೆ. ಆದ್ದರಿಂದ ತಾವು ಔದಾರ್ಯ ತೋರಿಸಿರಿ ಅಥವಾ ವಶದಲ್ಲಿಟ್ಟುಕೊಳ್ಳಿರಿ. ಲೆಕ್ಕ ಪರಿಶೋಧನೆಯು ಇರಲಾರದು'[1] (ಎಂದು ನಾವು ಸುಲೈಮಾನ್‌ರೊಂದಿಗೆ ಹೇಳಿದೆವು).

وَإِنَّ لَهُۥ عِندَنَا لَزُلْفَىٰ وَحُسْنَ مَـَٔابٍ ﴿٤٠﴾

40. ಖಂಡಿತವಾಗಿಯೂ ಅವರಿಗೆ ನಮ್ಮ ಬಳಿ ಸಾಮೀಪ್ಯವೂ, ಮರಳಿ ಬರಲು ಉತ್ತಮ ಸ್ಥಾನವೂ ಇದೆ.

وَٱذْكُرْ عَبْدَنَآ أَيُّوبَ إِذْ نَادَىٰ رَبَّهُۥٓ أَنِّى مَسَّنِىَ ٱلشَّيْطَٰنُ بِنُصْبٍ وَعَذَابٍ ﴿٤١﴾

41. ನಮ್ಮ ದಾಸರಾದ ಅಯ್ಯೂಬ್‌ರನ್ನು ಸ್ಮರಿಸಿರಿ. 'ಶೈತಾನನು ನನಗೆ ಅಶಕ್ತತೆ ಮತ್ತು ಹಿಂಸೆಯನ್ನು ತಗುಲಿಸಿರುವನು'[2] ಎಂದು ಅವರು ತಮ್ಮ ರಬ್ಬನ್ನು ಕರೆದು ಹೇಳಿದ ಸಂದರ್ಭ.

ٱرْكُضْ بِرِجْلِكَ ۖ هَٰذَا مُغْتَسَلٌۢ بَارِدٌ وَشَرَابٌ ﴿٤٢﴾

42. (ನಾವು ಹೇಳಿದೆವು): 'ತಾವು ತಮ್ಮ ಕಾಲಿನಿಂದ ತುಳಿಯಿರಿ. ಅಗೋ! ತಂಪಾದ ಸ್ನಾನಜಲ ಮತ್ತು ಕುಡಿಯುವ ನೀರು!'[3]

---

1 ಅಲ್ಲಾಹು ತಮಗೆ ದಯಪಾಲಿಸಿದ ಅನುಗ್ರಹಗಳನ್ನು ವಶದಲ್ಲಿಟ್ಟುಕೊಳ್ಳಲು ಅಥವಾ ಅವುಗಳನ್ನು ಇತರರಿಗೆ ಉದಾರವಾಗಿ ನೀಡಲು ಅಲ್ಲಾಹು ಅವರಿಗೆ ಸ್ವಾತಂತ್ರ್ಯವನ್ನು ನೀಡಿದ್ದನು. ಅಲ್ಲಾಹು ಅವರ ನಿಯಂತ್ರಣಕ್ಕೆ ಒಪ್ಪಿಸಿಕೊಟ್ಟವರನ್ನು ತನ್ನ ನಿಯಂತ್ರಣದಲ್ಲೇ ಇಡಬೇಕೋ ಅಥವಾ ಕಳುಹಿಸಿಕೊಡಬೇಕೋ ಎಂದು ತೀರ್ಮಾನಿಸುವ ಅಧಿಕಾರವನ್ನು ಅಲ್ಲಾಹು ಅವರಿಗೆ ನೀಡುತ್ತಿದ್ದಾನೆ. ಅದರ ಕುರಿತು ಅವರೊಂದಿಗೆ ವಿಚಾರಣೆ ನಡೆಸಲಾಗದು ಎಂದು ಅಲ್ಲಾಹು ಭರವಸೆ ನೀಡುತ್ತಿದ್ದಾನೆ.

2 ರೋಗ ಮತ್ತು ಕಷ್ಟಕಾರ್ಪಣ್ಯಗಳ ಮೂಲಕ ಅಯ್ಯೂಬ್(عَلَيْهِ ٱلسَّلَامُ)ರವರನ್ನು ಪರೀಕ್ಷಿಸಲಾಯಿತು. ಅವರು ಎಲ್ಲವನ್ನೂ ತಾಳ್ಮೆಯಿಂದ ಸಹಿಸಿದರು. ಇದರ ಕುರಿತು ಅವರು ಅಲ್ಲಾಹುವಿನೊಂದಿಗೆ ತಮ್ಮ ಸಂಕಟವನ್ನು ತೋಡಿಕೊಂಡಿದ್ದರು.

3 ಅಲ್ಲಾಹು ಹರಿಸಿಕೊಟ್ಟ ತೊರೆಯಿಂದ ಕುಡಿದಾಗ ಮತ್ತು ಅದರಿಂದ ಸ್ನಾನಮಾಡಿದಾಗ ಅವರಿಗೆ ರೋಗಮುಕ್ತಿ

43. ನಾವು ಅವರಿಗೆ ಅವರ ಕುಟುಂಬವನ್ನು ಮತ್ತು ಅವರೊಂದಿಗೆ ಅಷ್ಟೇ ಸಂಖ್ಯೆಯ ಇತರರನ್ನೂ ಕರುಣಿಸಿದೆವು. ನಮ್ಮ ವತಿಯ ಕಾರುಣ್ಯವಾಗಿ ಮತ್ತು ಬುದ್ಧಿವಂತರಿಗೆ ಒಂದು ಉಪದೇಶವಾಗಿ.

وَوَهَبۡنَا لَهُۥٓ أَهۡلَهُۥ وَمِثۡلَهُم مَّعَهُمۡ رَحۡمَةٗ مِّنَّا وَذِكۡرَىٰ لِأُوْلِي ٱلۡأَلۡبَٰبِ ﴿٤٣﴾

44. ‘ತಾವು ಒಂದು ಹಿಡಿ ಹುಲ್ಲನ್ನು ತಮ್ಮ ಕೈಯಲ್ಲಿ ಹಿಡಿಯಿರಿ. ತರುವಾಯ ಅದರಿಂದ ಬಡಿಯಿರಿ. ತಮ್ಮ ಶಪಥವನ್ನು ಉಲ್ಲಂಘಿಸದಿರಿ’.(1) ಖಂಡಿತವಾಗಿಯೂ ನಾವು ಅವರನ್ನು ಸಹನೆ ಪಾಲಿಸುವವರಾಗಿ ಕಂಡೆವು. ಎಷ್ಟು ಉತ್ತಮ ದಾಸ ಖಂಡಿತವಾಗಿಯೂ ಆತ (ಅಲ್ಲಾಹುವಿನೆಡೆಗೆ) ಅತ್ಯಧಿಕವಾಗಿ ಪಶ್ಚಾತ್ತಾಪಪಟ್ಟು ಮರಳುವವರಾಗಿದ್ದರು.

وَخُذۡ بِيَدِكَ ضِغۡثٗا فَٱضۡرِب بِّهِۦ وَلَا تَحۡنَثۡۗ إِنَّا وَجَدۡنَٰهُ صَابِرٗاۚ نِّعۡمَ ٱلۡعَبۡدُ إِنَّهُۥٓ أَوَّابٞ ﴿٤٤﴾

45. ಬಲಿಷ್ಠರೂ, ದೂರದೃಷ್ಟಿಯುಳ್ಳವರೂ ಆಗಿದ್ದ ಇಬ್ರಾಹೀಮ್, ಇಸ್‌ಹಾಕ್, ಯಅ್‌ಕೂಬ್ ಎಂಬ ನಮ್ಮ ದಾಸರನ್ನು ಸ್ಮರಿಸಿರಿ.

وَٱذۡكُرۡ عِبَٰدَنَآ إِبۡرَٰهِيمَ وَإِسۡحَٰقَ وَيَعۡقُوبَ أُوْلِي ٱلۡأَيۡدِي وَٱلۡأَبۡصَٰرِ ﴿٤٥﴾

46. ನಿಷ್ಕಳಂಕವಾದ ಒಂದು ವಿಚಾರದಿಂದಾಗಿ ನಾವು ಅವರನ್ನು ಉತ್ಕೃಷ್ಟಗೊಳಿಸಿದೆವು. ಅದು ಪರಲೋಕ ಸ್ಮರಣೆಯಾಗಿದೆ.

إِنَّآ أَخۡلَصۡنَٰهُم بِخَالِصَةٖ ذِكۡرَى ٱلدَّارِ ﴿٤٦﴾

47. ಖಂಡಿತವಾಗಿಯೂ ಅವರು ನಮ್ಮ ಬಳಿ ಆರಿಸಲಾಗಿರುವ ಅತ್ಯುತ್ತಮರಲ್ಲಿ ಸೇರಿದವರಾಗಿರುವರು.

وَإِنَّهُمۡ عِندَنَا لَمِنَ ٱلۡمُصۡطَفَيۡنَ ٱلۡأَخۡيَارِ ﴿٤٧﴾

48. ಇಸ್ಮಾಈಲ್, ಅಲ್‌ಯಸಅ್, ಮತ್ತು ದುಲ್‌ಕಿಫ್ಲ್‌ರನ್ನು ಸ್ಮರಿಸಿರಿ. ಅವರೆಲ್ಲರೂ ಅತ್ಯುತ್ತಮರಲ್ಲಿ ಸೇರಿದವರಾಗಿರುವರು.

وَٱذۡكُرۡ إِسۡمَٰعِيلَ وَٱلۡيَسَعَ وَذَا ٱلۡكِفۡلِۖ وَكُلّٞ مِّنَ ٱلۡأَخۡيَارِ ﴿٤٨﴾

---

ಮತ್ತು ನವಚೈತನ್ಯವು ದೊರೆಯಿತು.

1 ಅಯ್ಯೂಬ್(عليه السلام)ರವರು ರೋಗಪೀಡಿತರಾದಾಗ ಅವರ ವಿರೋಧಿಯಾಗಿ ಮಾರ್ಪಟ್ಟ ಅವರ ಪತ್ನಿ ಅವರನ್ನು ಅಸಭ್ಯವಾಗಿ ನಿಂದಿಸಿ ಅಲ್ಲಾಹುವನ್ನು ನಿಷೇಧಿಸಿದರು. ಆಗ ಆಕೆಗೆ ನೂರು ಛಡಿಯೇಟು ನೀಡುವೆನೆಂದು ಅಯ್ಯೂಬ್(عليه السلام)ಶಪಥ ಮಾಡಿದ್ದರು. (ಆದರೆ ಆಕೆ ವಿಶ್ವಾಸಿನಿಯಾದ ನಂತರ) ಆ ಶಪಥವನ್ನು ಉಲ್ಲಂಘಿಸದಿರುವುದಕ್ಕಾಗಿ ನೂರು ಹುಲ್ಲುಗಳನ್ನು ಹೊಂದಿರುವ ಒಂದು ಕಟ್ಟಿನಿಂದ ಆಕೆಯನ್ನು ಒಮ್ಮೆ ಹೊಡೆಯಬೇಕೆಂದು ಅಲ್ಲಾಹು ಆದೇಶಿಸಿದನೆಂದು ಕೆಲವು ವ್ಯಾಖ್ಯಾನಕಾರರು ಈ ಸೂಕ್ತಿಗೆ ವಿಶದೀಕರಣ ನೀಡಿದ್ದಾರೆ.

49. ಇದೊಂದು ಉಪದೇಶವಾಗಿದೆ. ಖಂಡಿತವಾಗಿಯೂ ಭಯಭಕ್ತಿ ಪಾಲಿಸುವವರಿಗೆ ಮರಳಿ ಹೋಗಲು ಉತ್ತಮವಾದ ಸ್ಥಾನವಿದೆ.

هَٰذَا ذِكْرٌۚ وَإِنَّ لِلْمُتَّقِينَ لَحُسْنَ مَـَٔابٍ ﴿٤٩﴾

50. ಅವರಿಗಾಗಿ ದ್ವಾರಗಳು ತೆರೆದಿಟ್ಟಿರುವ ಶಾಶ್ವತವಾಸಕ್ಕಿರುವ ಸ್ವರ್ಗೋದ್ಯಾನಗಳು.

جَنَّـٰتِ عَدْنٍ مُّفَتَّحَةً لَّهُمُ ٱلْأَبْوَٰبُ ﴿٥٠﴾

51. ಅವರು ಅಲ್ಲಿ ಒರಗಿ ಕುಳಿತು ವಿಶ್ರಾಂತಿ ಪಡೆಯುತ್ತಾ ಸಮೃದ್ಧವಾಗಿರುವ ಫಲಗಳಿಗಾಗಿ ಮತ್ತು ಪಾನೀಯಗಳಿಗಾಗಿ ಬೇಡಿಕೆಯಿಡುತ್ತಿರುವರು.

مُتَّكِـِٔينَ فِيهَا يَدْعُونَ فِيهَا بِفَـٰكِهَةٍ كَثِيرَةٍ وَشَرَابٍ ﴿٥١﴾

52. ಅವರ ಬಳಿ ದೃಷ್ಟಿಗಳನ್ನು ನಿಯಂತ್ರಿಸುವ[1] ಸಮವಯಸ್ಕರಾದ ಸ್ತ್ರೀಯರಿರುವರು.

۞ وَعِندَهُمْ قَـٰصِرَٰتُ ٱلطَّرْفِ أَتْرَابٌ ﴿٥٢﴾

53. ವಿಚಾರಣೆಯ ದಿನಕ್ಕಾಗಿ ನಿಮಗೆ ವಾಗ್ದಾನ ಮಾಡಲಾಗಿರುವುದು ಇದನ್ನೇ ಆಗಿದೆ.

هَـٰذَا مَا تُوعَدُونَ لِيَوْمِ ٱلْحِسَابِ ﴿٥٣﴾

54. ಖಂಡಿತವಾಗಿಯೂ ಇದು ನಾವು ಒದಗಿಸುವ ಅನ್ನಾಧಾರವಾಗಿದೆ. ಅದು ಮುಗಿದು ಹೋಗದು.

إِنَّ هَـٰذَا لَرِزْقُنَا مَا لَهُۥ مِن نَّفَادٍ ﴿٥٤﴾

55. ಇದಾಗಿದೆ (ಅವರ ಸ್ಥಿತಿ!) ಖಂಡಿತವಾಗಿಯೂ ಧಿಕ್ಕಾರಿಗಳಿಗೆ ಮರಳಿ ಹೋಗಲು ಕೆಟ್ಟ ಸ್ಥಳವಿದೆ.

هَـٰذَاۚ وَإِنَّ لِلطَّـٰغِينَ لَشَرَّ مَـَٔابٍ ﴿٥٥﴾

56. ಅದು ನರಕಾಗ್ನಿಯಾಗಿದೆ! ಅವರು ಅದರಲ್ಲಿ ಉರಿಯುವರು. ಆ ವಾಸಸ್ಥಳವು ಅದೆಷ್ಟು ನಿಕೃಷ್ಟ!

جَهَنَّمَ يَصْلَوْنَهَا فَبِئْسَ ٱلْمِهَادُ ﴿٥٦﴾

57. ಇದಾಗಿದೆ (ಅವರ ಸ್ಥಿತಿ!) ಆದ್ದರಿಂದ ಅವರು ಅದನ್ನು ಸವಿಯಲಿ. ಕುದಿಯುವ ನೀರು ಮತ್ತು ಅತಿ ಶೈತ್ಯ ನೀರು!

هَـٰذَا فَلْيَذُوقُوهُ حَمِيمٌ وَغَسَّاقٌ ﴿٥٧﴾

58. ಇದೇ ರೂಪದಲ್ಲಿರುವ ಅನೇಕ ವಿಧದ ಶಿಕ್ಷೆಗಳು!

وَءَاخَرُ مِن شَكْلِهِۦٓ أَزْوَٰجٌ ﴿٥٨﴾

59. (ಮೊಟ್ಟಮೊದಲನೆಯದಾಗಿ ನರಕಾಗ್ನಿಯನ್ನು ತಲುಪಿದವರೊಂದಿಗೆ ಅಲ್ಲಾಹು ಹೇಳುವನು): 'ಇದು ನಿಮ್ಮೊಂದಿಗೆ ಪ್ರವೇಶಿಸುವ ಒಂದು

هَـٰذَا فَوْجٌ مُّقْتَحِمٌ مَّعَكُمْ لَا مَرْحَبًۢا بِهِمْۚ إِنَّهُمْ صَالُوا۟ ٱلنَّارِ ﴿٥٩﴾

1 ತನ್ನ ಸಂಗಾತಿಯ ಹೊರತು ಇತರ ಯಾರ ಮೇಲೂ ದೃಷ್ಟಿ ಹಾಯಿಸದ ಪತಿವ್ರತೆಯರು ಎಂದರ್ಥ.

ಗುಂಪಾಗಿದೆ'. (ಆಗ ಅವರು ಹೇಳುವರು): 'ಅವರಿಗೆ ಸ್ವಾಗತವಿಲ್ಲ. ಖಂಡಿತವಾಗಿಯೂ ಅವರು ನರಕಾಗ್ನಿಯಲ್ಲಿ ಉರಿಯುವವರಾಗಿರುವರು'.

قَالُواْ بَلۡ أَنتُمۡ لَا مَرۡحَبَۢا بِكُمۡۖ أَنتُمۡ قَدَّمۡتُمُوهُ لَنَاۖ فَبِئۡسَ ٱلۡقَرَارُ ٦٠

60. ಅವರು (ಪ್ರವೇಶಿಸುವ ಗುಂಪಿನವರು) ಹೇಳುವರು: 'ಅಲ್ಲ, ಸ್ವಾಗತವಿಲ್ಲದಿರುವುದು ನಿಮಗೇ ಆಗಿದೆ. ಇದನ್ನು ನಮಗೆ ತಂದಿಟ್ಟವರು ನೀವೇ ಆಗಿರುವಿರಿ.' ಆ ವಾಸಸ್ಥಳವು ಅದೆಷ್ಟು ನಿಕೃಷ್ಟವಾದುದು!

قَالُواْ رَبَّنَا مَن قَدَّمَ لَنَا هَٰذَا فَزِدۡهُ عَذَابٗا ضِعۡفٗا فِي ٱلنَّارِ ٦١

61. ಅವರು ಹೇಳುವರು: 'ಓ ನಮ್ಮ ರಬ್! ಇದನ್ನು (ಶಿಕ್ಷೆಯನ್ನು) ನಮಗೆ ತಂದಿಟ್ಟವರಾರೋ ಅವರಿಗೆ ನರಕಾಗ್ನಿಯಲ್ಲಿ ಇಮ್ಮಡಿ ಶಿಕ್ಷೆಯನ್ನು ಹೆಚ್ಚಿಸಿಕೊಡು'.

وَقَالُواْ مَا لَنَا لَا نَرَىٰ رِجَالٗا كُنَّا نَعُدُّهُم مِّنَ ٱلۡأَشۡرَارِ ٦٢

62. ಅವರು ಹೇಳುವರು: 'ನಮಗೇನಾಗಿದೆ? ನಾವು ದುರ್ಜನರಾಗಿ ಪರಿಗಣಿಸಿದ್ದ ಅನೇಕ ಮಂದಿಯನ್ನು ನಾವು ಕಾಣುತ್ತಿಲ್ಲವಲ್ಲ?[1]

أَتَّخَذۡنَٰهُمۡ سِخۡرِيًّا أَمۡ زَاغَتۡ عَنۡهُمُ ٱلۡأَبۡصَٰرُ ٦٣

63. ನಾವು ಅವರನ್ನು (ಪ್ರಮಾದವಶಾತ್) ಅಪಹಾಸ್ಯ ಮಾಡಿರುವೆವೇ? ಅಥವಾ ದೃಷ್ಟಿಗಳು ಅವರಿಂದ ಅವರನ್ನು ಬಿಟ್ಟು ಜಾರಿಹೋಯಿತೇ?'

إِنَّ ذَٰلِكَ لَحَقّٞ تَخَاصُمُ أَهۡلِ ٱلنَّارِ ٦٤

64. ನರಕವಾಸಿಗಳು ಪರಸ್ಪರ ಮಾಡುವ ಈ ಜಗಳವು ಖಂಡಿತವಾಗಿಯೂ ಅದೊಂದು ಸತ್ಯವಾಗಿದೆ.

قُلۡ إِنَّمَآ أَنَا۠ مُنذِرٞۖ وَمَا مِنۡ إِلَٰهٍ إِلَّا ٱللَّهُ ٱلۡوَٰحِدُ ٱلۡقَهَّارُ ٦٥

65. (ಓ ಪ್ರವಾದಿಯವರೇ!) ಹೇಳಿರಿ: 'ನಾನೊಬ್ಬ ಮುನ್ನೆಚ್ಚರಿಕೆಗಾರನು ಮಾತ್ರವಾಗಿರುವೆನು. ಏಕೈಕನೂ, ಸರ್ವಾಧಿಕಾರಿಯೂ ಆಗಿರುವ ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ'.

---

1 ನಾವು ಸತ್ಯಧರ್ಮದಲ್ಲಿರುವವರೆಂದು ಹೇಳುವವರು ಮತ್ತು ನೈಜ ವಿಶ್ವಾಸಿಗಳನ್ನು ಧರ್ಮಭ್ರಷ್ಟರೆಂದು ಸಾರುವವರು ನರಕಕ್ಕೆ ತಲುಪಿದಾಗ ಅವರಿಗೆ ಉಂಟಾಗುವ ತಳಮಳವನ್ನು ಅಲ್ಲಾಹು ಇಲ್ಲಿ ಚಿತ್ರೀಕರಿಸುತ್ತಿದ್ದಾನೆ. ದಾರಿಗೆಟ್ಟವರು ಮತ್ತು ನರಕವಾಸಿಗಳೆಂದು ಅವರು ಹೇಳುತ್ತಿದ್ದ ಜನರನ್ನು ನರಕದಲ್ಲಿ ಕಾಣದಿರುವುದು ಅವರಿಗೆ ಹತಾಶೆಯನ್ನುಂಟು ಮಾಡುತ್ತದೆ. ಆ 'ದಾರಿಗೆಟ್ಟ'ವರಿಗೆ ಅಲ್ಲಾಹು ಸ್ವರ್ಗವನ್ನು ನೀಡುವನೆಂದು ತಮ್ಮನ್ನು 'ಸತ್ಯವಾದಿ'ಗಳೆಂದು ವಾದಿಸಿದ ಈ ಜನರು ಊಹಿಸಿಯೂ ಇರಲಿಲ್ಲ.

**66.** ಅವನು ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವವುಗಳ ರಬ್ಬಾಗಿರುವನು. ಅವನು ಪ್ರತಾಪಶಾಲಿಯೂ, ಅತ್ಯಧಿಕ ಕ್ಷಮಿಸುವವನೂ ಆಗಿರುವನು.

رَبُّ ٱلسَّمَٰوَٰتِ وَٱلْأَرْضِ وَمَا بَيْنَهُمَا ٱلْعَزِيزُ ٱلْغَفَّٰرُ ﴿٦٦﴾

**67-68.** ತಾವು ಹೇಳಿರಿ: 'ಇದೊಂದು ಗಂಭೀರ ವಾರ್ತೆಯಾಗಿದೆ. ನೀವು ಇದನ್ನು ಕಡೆಗಣಿಸುತ್ತಿರುವಿರಿ.

قُلْ هُوَ نَبَؤٌا۟ عَظِيمٌ ﴿٦٧﴾ أَنتُمْ عَنْهُ مُعْرِضُونَ ﴿٦٨﴾

**69.** ಅತ್ಯುನ್ನತ ಸಮೂಹವು ವಾಗ್ವಾದ ನಡೆಸಿದ ಸಂದರ್ಭದ ಕುರಿತು ನನಗೆ ಯಾವ ಅರಿವಿರಲಿಲ್ಲ.[1]

مَا كَانَ لِىَ مِنْ عِلْمٍۭ بِٱلْمَلَإِ ٱلْأَعْلَىٰٓ إِذْ يَخْتَصِمُونَ ﴿٦٩﴾

**70.** ನನಗೆ ದಿವ್ಯ ಸಂದೇಶ ನೀಡಲಾಗುತ್ತಿರುವುದು ನಾನೊಬ್ಬ ಸ್ಪಷ್ಟ ಮುನ್ನೆಚ್ಚರಿಕೆಗಾರನಾಗಿರಲೆಂದು ಮಾತ್ರವಾಗಿದೆ'.

إِن يُوحَىٰٓ إِلَىَّ إِلَّآ أَنَّمَآ أَنَا۠ نَذِيرٌ مُّبِينٌ ﴿٧٠﴾

**71.** ತಮ್ಮ ರಬ್ ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ: 'ಖಂಡಿತವಾಗಿಯೂ ನಾನು ಜೇಡಿಮಣ್ಣಿನಿಂದ ಒಬ್ಬ ಮನುಷ್ಯನನ್ನು ಸೃಷ್ಟಿಸುವೆನು.

إِذْ قَالَ رَبُّكَ لِلْمَلَٰٓئِكَةِ إِنِّى خَٰلِقٌۢ بَشَرًا مِّن طِينٍ ﴿٧١﴾

**72.** ತರುವಾಯ ನಾನು ಅವನನ್ನು ರೂಪುಗೊಳಿಸಿ, ನನ್ನ ವತಿಯ ಆತ್ಮದಿಂದ ಅವನಿಗೆ ಊದಿದರೆ ನೀವು ಅವನಿಗೆ ಸಾಷ್ಟಾಂಗಮಾಡುತ್ತಾ ಎರಗಿರಿ.'.

فَإِذَا سَوَّيْتُهُۥ وَنَفَخْتُ فِيهِ مِن رُّوحِى فَقَعُوا۟ لَهُۥ سَٰجِدِينَ ﴿٧٢﴾

**73-74.** ಆಗ ಮಲಕ್‌ಗಳೆಲ್ಲರೂ ಒಟ್ಟಾಗಿ ಸಾಷ್ಟಾಂಗ ವೆರಗಿದರು; ಇಬ್ಲೀಸನ ಹೊರತು. ಅವನು ಅಹಂಕಾರ ಪಟ್ಟನು ಮತ್ತು ಸತ್ಯನಿಷೇಧಿಗಳ ಪೈಕಿ ಸೇರಿದವನಾದನು.

فَسَجَدَ ٱلْمَلَٰٓئِكَةُ كُلُّهُمْ أَجْمَعُونَ ﴿٧٣﴾ إِلَّآ إِبْلِيسَ ٱسْتَكْبَرَ وَكَانَ مِنَ ٱلْكَٰفِرِينَ ﴿٧٤﴾

**75.** ಅವನು(ಅಲ್ಲಾಹು) ಹೇಳಿದನು: 'ಓ ಇಬ್ಲೀಸ್! ನನ್ನ ಕೈಯಿಂದ ನಾನು ಸೃಷ್ಟಿಸಿರುವುದಕ್ಕೆ ಸಾಷ್ಟಾಂಗವೆರಗಲು ನಿನ್ನನ್ನು

قَالَ يَٰٓإِبْلِيسُ مَا مَنَعَكَ أَن تَسْجُدَ لِمَا خَلَقْتُ بِيَدَىَّ ۖ أَسْتَكْبَرْتَ أَمْ كُنتَ

1 ಅತ್ಯುನ್ನತ ಸಮೂಹ ಎಂಬುದರ ಉದ್ದೇಶ ಅಲ್ಲಾಹುವಿನ ಸಾಮೀಪ್ಯ ಪಡೆದ ಮಲಕ್‌ಗಳಾಗಿದ್ದಾರೆ. ಭೂಮಿಯಲ್ಲಿ ಮನುಷ್ಯನನ್ನು ಖಲೀಫ (ಪ್ರತಿನಿಧಿ)ನನ್ನಾಗಿ ಮಾಡುವ ಅಲ್ಲಾಹುವಿನ ತೀರ್ಮಾನದ ಕುರಿತು ಮಲಕ್‌ಗಳು ಸಂದೇಹಪಟ್ಟ ವಿಷಯದ ಕುರಿತು ಇಲ್ಲಿ ಸೂಚಿಸಿರಬಹುದು. ಅನಕ್ಷರಸ್ಥರಾಗಿದ್ದ ಮುಹಮ್ಮದ್(ﷺ) ರಿಗೆ ದಿವ್ಯ ಸಂದೇಶದ ಮೂಲಕವಲ್ಲದೆ ಇಂತಹ ಅಗೋಚರ ವಿಷಯಗಳ ಕುರಿತು ಅರಿಯಲು ಸಾಧ್ಯವಿರಲಿಲ್ಲ.

ಅಡ್ಡಿಪಡಿಸಿದ್ದಾದರೂ ಏನು? ನೀನು ಅಹಂಕಾರ ಪಟ್ಟೆಯಾ? ಅಥವಾ ನೀನು ದುರಭಿಮಾನ ಪಡುವವರಲ್ಲಿ ಸೇರಿದವನಾದೆಯಾ?'

76. ಅವನು (ಇಬ್ಲೀಸ್) ಹೇಳಿದನು: 'ನಾನು ಅವನಿಗಿಂತ (ಮನುಷ್ಯನಿಗಿಂತ) ಶ್ರೇಷ್ಠನಾಗಿರುವೆನು. ನೀನು ನನ್ನನ್ನು ಅಗ್ನಿಯಿಂದ ಸೃಷ್ಟಿಸಿರುವೆ. ಅವನನ್ನು ನೀನು ಜೇಡಿಮಣ್ಣಿನಿಂದ ಸೃಷ್ಟಿಸಿರುವೆ'.

77. ಅವನು (ಅಲ್ಲಾಹು) ಹೇಳಿದನು: 'ಇಲ್ಲಿಂದ ಹೊರಟು ಹೋಗು. ಖಂಡಿತವಾಗಿಯೂ ನೀನು ಬಹಿಷ್ಕೃತನಾಗಿರುವೆ'.

78. ಖಂಡಿತವಾಗಿಯೂ ವಿಚಾರಣೆಯ ದಿನದ ತನಕ ನನ್ನ ಶಾಪವು ನಿನ್ನ ಮೇಲಿರುವುದು'.

79. ಅವನು (ಇಬ್ಲೀಸ್) ಹೇಳಿದನು: 'ಓ ನನ್ನ ರಬ್! ಅವರನ್ನು ಪುನರುತ್ಥಾನಗೊಳಿಸಲಾಗುವ ದಿನದವರೆಗೆ ನನಗೆ ಕಾಲಾವಕಾಶವನ್ನು ನೀಡು'.

80-81. ಅವನು (ಅಲ್ಲಾಹು) ಹೇಳಿದನು: 'ಖಂಡಿತವಾಗಿಯೂ ನೀನು ಕಾಲಾವಕಾಶ ನೀಡಲಾದವರಲ್ಲಿ ಸೇರಿದವನಾಗಿರುವೆ. ನಿಶ್ಚಿತವಾದ ಆ ಸಮಯವು ಬರುವ ದಿನದ ತನಕ'.

82-83. ಅವನು (ಇಬ್ಲೀಸ್) ಹೇಳಿದನು: 'ನಿನ್ನ ಪ್ರತಾಪದ ಮೇಲಾಣೆ! ಖಂಡಿತವಾಗಿಯೂ ಅವರಲ್ಲಿ ಸೇರಿದ ನಿನ್ನ ನಿಷ್ಕಳಂಕ ದಾಸರ ಹೊರತು ಇತರೆಲ್ಲರನ್ನೂ ನಾನು ಪಥಭ್ರಷ್ಟಗೊಳಿಸುವೆನು'.

84-85. ಅವನು (ಅಲ್ಲಾಹು) ಹೇಳಿದನು: 'ಸತ್ಯವು ಇದೇ ಆಗಿದೆ. –ನಾನು ಸತ್ಯವನ್ನೇ ಹೇಳುತ್ತಿರುವೆನು– ಖಂಡಿತವಾಗಿಯೂ ನಿನ್ನನ್ನು ಮತ್ತು ಅವರ ಪೈಕಿ ನಿನ್ನನ್ನು

مِنَ ٱلۡعَالِينَ ٧٥

قَالَ أَنَا۠ خَيۡرٞ مِّنۡهُ خَلَقۡتَنِي مِن نَّارٖ وَخَلَقۡتَهُۥ مِن طِينٖ ٧٦

قَالَ فَٱخۡرُجۡ مِنۡهَا فَإِنَّكَ رَجِيمٞ ٧٧

وَإِنَّ عَلَيۡكَ لَعۡنَتِيٓ إِلَىٰ يَوۡمِ ٱلدِّينِ ٧٨

قَالَ رَبِّ فَأَنظِرۡنِيٓ إِلَىٰ يَوۡمِ يُبۡعَثُونَ ٧٩

قَالَ فَإِنَّكَ مِنَ ٱلۡمُنظَرِينَ ٨٠ إِلَىٰ يَوۡمِ ٱلۡوَقۡتِ ٱلۡمَعۡلُومِ ٨١

قَالَ فَبِعِزَّتِكَ لَأُغۡوِيَنَّهُمۡ أَجۡمَعِينَ ٨٢ إِلَّا عِبَادَكَ مِنۡهُمُ ٱلۡمُخۡلَصِينَ ٨٣

قَالَ فَٱلۡحَقُّ وَٱلۡحَقَّ أَقُولُ ٨٤ لَأَمۡلَأَنَّ جَهَنَّمَ مِنكَ وَمِمَّن تَبِعَكَ مِنۡهُمۡ أَجۡمَعِينَ ٨٥

ಅನುಸರಿಸಿದವರೆಲ್ಲರನ್ನೂ ಸೇರಿಸಿ ನಾನು ನರಕಾಗ್ನಿಯನ್ನು ತುಂಬಿಸುವೆನು'.

86. (ಓ ಪ್ರವಾದಿಯವರೇ!) ಹೇಳಿರಿ: 'ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡುವುದಿಲ್ಲ. ನಾನು ಹೆಣೆದು ನಿರ್ಮಿಸುವವರ ಪೈಕಿ ಸೇರಿದವನೂ ಅಲ್ಲ'.

قُلْ مَآ أَسْـَٔلُكُمْ عَلَيْهِ مِنْ أَجْرٍ وَمَآ أَنَا۠ مِنَ ٱلْمُتَكَلِّفِينَ ﴿٨٦﴾

87-88. ಇದು ಸರ್ವಲೋಕದವರಿಗಿರುವ ಒಂದು ಉಪದೇಶ ಮಾತ್ರವಾಗಿದೆ. ಒಂದು ಕಾಲಾವಧಿಯ ಬಳಿಕ ಖಂಡಿತವಾಗಿಯೂ ನೀವು ಇದರ ವೃತ್ತಾಂತವನ್ನು ಅರ್ಥ ಮಾಡಿಕೊಳ್ಳುವಿರಿ.

إِنْ هُوَ إِلَّا ذِكْرٌ لِّلْعَٰلَمِينَ ﴿٨٧﴾ وَلَتَعْلَمُنَّ نَبَأَهُۥ بَعْدَ حِينٍۭ ﴿٨٨﴾

## ಅಝ್ಝುಮರ್ (ಗುಂಪುಗಳು)[1]

## سُورَةُ الزُّمَرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 75

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

تَنزِيلُ ٱلۡكِتَٰبِ مِنَ ٱللَّهِ ٱلۡعَزِيزِ ٱلۡحَكِيمِ ١

1. ಈ ಗ್ರಂಥದ ಅವತೀರ್ಣವು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಿನ ವತಿಯಿಂದಾಗಿದೆ.

إِنَّآ أَنزَلۡنَآ إِلَيۡكَ ٱلۡكِتَٰبَ بِٱلۡحَقِّ فَٱعۡبُدِ ٱللَّهَ مُخۡلِصٗا لَّهُ ٱلدِّينَ ٢

2. ಖಂಡಿತವಾಗಿಯೂ ನಾವು ಈ ಗ್ರಂಥವನ್ನು ತಮಗೆ ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು. ಆದ್ದರಿಂದ ವಿಧೇಯತೆಯನ್ನು ಅಲ್ಲಾಹುವಿಗೆ ನಿಷ್ಕಳಂಕಗೊಳಿಸಿ ಅವನನ್ನು ಆರಾಧಿಸಿರಿ.

أَلَا لِلَّهِ ٱلدِّينُ ٱلۡخَالِصُۚ وَٱلَّذِينَ ٱتَّخَذُواْ مِن دُونِهِۦٓ أَوۡلِيَآءَ مَا نَعۡبُدُهُمۡ إِلَّا لِيُقَرِّبُونَآ إِلَى ٱللَّهِ زُلۡفَىٰٓ إِنَّ ٱللَّهَ يَحۡكُمُ بَيۡنَهُمۡ فِي مَا هُمۡ فِيهِ يَخۡتَلِفُونَۗ إِنَّ ٱللَّهَ لَا يَهۡدِي مَنۡ هُوَ كَٰذِبٞ كَفَّارٞ ٣

3. ಅರಿಯಿರಿ! ನಿಷ್ಕಳಂಕವಾದ ವಿಧೇಯತೆಯು ಅಲ್ಲಾಹುವಿಗೆ ಮಾತ್ರ ಅರ್ಹವಾದುದಾಗಿದೆ. ಅವನ ಹೊರತು ಅನ್ಯರನ್ನು ರಕ್ಷಕರನ್ನಾಗಿ ಮಾಡಿಕೊಂಡವರು (ಹೇಳುವರು): 'ನಮ್ಮನ್ನು ಅಲ್ಲಾಹುವಿನೆಡೆಗೆ ಹತ್ತಿರಗೊಳಿಸುವ ಸಲುವಾಗಿಯೇ ಹೊರತು ನಾವು ಅವರನ್ನು ಆರಾಧಿಸುತ್ತಿಲ್ಲ'. ಅವರು ಯಾವ ವಿಷಯದಲ್ಲಿ ಭಿನ್ನರಾಗಿರುವರೋ ಆ ವಿಷಯದಲ್ಲಿ ಖಂಡಿತವಾಗಿಯೂ ಅಲ್ಲಾಹು ಅವರ ಮಧ್ಯೆ ತೀರ್ಪು ನೀಡುವನು. ಖಂಡಿತವಾಗಿಯೂ ಸುಳ್ಳು ನುಡಿಯುವವನೂ, ಕೃತಘ್ನನೂ ಆಗಿರುವ ಯಾರನ್ನೂ ಅಲ್ಲಾಹು ಸನ್ಮಾರ್ಗಕ್ಕೆ ಸೇರಿಸಲಾರನು.

لَّوۡ أَرَادَ ٱللَّهُ أَن يَتَّخِذَ وَلَدٗا لَّٱصۡطَفَىٰ مِمَّا يَخۡلُقُ مَا يَشَآءُۚ سُبۡحَٰنَهُۥۖ هُوَ ٱللَّهُ ٱلۡوَٰحِدُ ٱلۡقَهَّارُ ٤

4. ಸಂತತಿಯೊಂದನ್ನು ಮಾಡಿಕೊಳ್ಳಬೇಕೆಂದು ಅಲ್ಲಾಹು ಬಯಸಿರುತ್ತಿದ್ದರೆ ಅವನು ಸೃಷ್ಟಿಸುವುದರಿಂದ ತಾನಿಚ್ಛಿಸುವುದನ್ನು ಅವನು ಆರಿಸುತ್ತಿದ್ದನು. ಅವನು ಪರಮಪಾವನನು!

---

1 ಸತ್ಯನಿಷೇಧಿಗಳನ್ನು ಗುಂಪು ಗುಂಪಾಗಿ ನರಕದೆಡೆಗೆ ಮತ್ತು ವಿಶ್ವಾಸಿಗಳನ್ನು ಗುಂಪು ಗುಂಪಾಗಿ ಸ್ವರ್ಗದೆಡೆಗೆ ಸಾಗಿಸಲಾಗುವ ಕುರಿತು 71–73 ವಚನಗಳಲ್ಲಿ ವಿವರಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

ಅವನು ಏಕನೂ, ಸರ್ವಾಧಿಕಾರಿಯೂ ಆಗಿರುವ ಅಲ್ಲಾಹುವಾಗಿರುವನು.

5. ಅವನು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿರುವನು. ರಾತ್ರಿಯನ್ನು ಅವನು ಹಗಲಿನ ಮೇಲೆ ಸುತ್ತುತ್ತಾ ಹೊದಿಸುವನು. ಹಗಲನ್ನು ರಾತ್ರಿಯ ಮೇಲೆ ಸುತ್ತುತ್ತಾ ಹೊದಿಸುವನು. ಸೂರ್ಯ ಮತ್ತು ಚಂದ್ರನನ್ನು ತನ್ನ ನಿಯಂತ್ರಣಕ್ಕೆ ವಿಧೇಯಗೊಳಿಸಿರುವನು. ಎಲ್ಲವೂ ಒಂದು ನಿಶ್ಚಿತ ಅವಧಿಯವರೆಗೆ ಚಲಿಸುತ್ತಿರುವುವು. ಅರಿಯಿರಿ! ಅವನು ಪ್ರತಾಪಶಾಲಿಯೂ ಅತ್ಯಧಿಕ ಕ್ಷಮಿಸುವವನೂ ಆಗಿರುವನು.

خَلَقَ ٱلسَّمَٰوَٰتِ وَٱلْأَرْضَ بِٱلْحَقِّۖ يُكَوِّرُ ٱلَّيْلَ عَلَى ٱلنَّهَارِ وَيُكَوِّرُ ٱلنَّهَارَ عَلَى ٱلَّيْلِۖ وَسَخَّرَ ٱلشَّمْسَ وَٱلْقَمَرَۖ كُلٌّ يَجْرِى لِأَجَلٍ مُّسَمًّىۗ أَلَا هُوَ ٱلْعَزِيزُ ٱلْغَفَّٰرُ ﴿٥﴾

6. ಅವನು ನಿಮ್ಮನ್ನು ಒಂದೇ ಶರೀರದಿಂದ ಸೃಷ್ಟಿಸಿರುವನು. ತರುವಾಯ ಅದರಿಂದ ಅದರ ಸಂಗಾತಿಯನ್ನು ಮಾಡಿದನು. ಅವನು ನಿಮಗೆ ಜಾನುವಾರುಗಳಲ್ಲಿ ಎಂಟು ಜೋಡಿಗಳನ್ನು ಇಳಿಸಿಕೊಟ್ಟಿರುವನು. ಅವನು ನಿಮ್ಮನ್ನು ನಿಮ್ಮ ಮಾತೆಯರ ಉದರಗಳಲ್ಲಿ ಮೂರು ರೀತಿಯ ಅಂಧಕಾರಗಳೊಳಗೆ ಸೃಷ್ಟಿಯ ಒಂದು ಹಂತದ ಬಳಿಕ ಮತ್ತೊಂದು ಹಂತವಾಗಿ ಸೃಷ್ಟಿಸುವನು.[1] ನಿಮ್ಮ ರಬ್ಬಾದ ಅಲ್ಲಾಹು ಅವನಾಗಿರುವನು. ಆಧಿಪತ್ಯವು ಅವನಿಗಾಗಿದೆ. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಆದರೂ ನೀವು (ಸತ್ಯದಿಂದ) ಸರಿಸಲ್ಪಡುವುದಾದರೂ ಹೇಗೆ?

خَلَقَكُم مِّن نَّفْسٍ وَٰحِدَةٍ ثُمَّ جَعَلَ مِنْهَا زَوْجَهَا وَأَنزَلَ لَكُم مِّنَ ٱلْأَنْعَٰمِ ثَمَٰنِيَةَ أَزْوَٰجٍۚ يَخْلُقُكُمْ فِى بُطُونِ أُمَّهَٰتِكُمْ خَلْقًا مِّنۢ بَعْدِ خَلْقٍ فِى ظُلُمَٰتٍ ثَلَٰثٍۚ ذَٰلِكُمُ ٱللَّهُ رَبُّكُمْ لَهُ ٱلْمُلْكُۖ لَآ إِلَٰهَ إِلَّا هُوَۖ فَأَنَّىٰ تُصْرَفُونَ ﴿٦﴾

7. ನೀವು ಕೃತಘ್ನತೆ ತೋರುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿಮ್ಮಿಂದ ನಿರಪೇಕ್ಷನಾಗಿರುವನು. ತನ್ನ ದಾಸರು ಕೃತಘ್ನತೆ ತೋರುವುದನ್ನು ಅವನು ತೃಪ್ತಿಪಡಲಾರನು. ನೀವು ಕೃತಜ್ಞತೆ ಸಲ್ಲಿಸುವುದಾದರೆ

إِن تَكْفُرُوا۟ فَإِنَّ ٱللَّهَ غَنِىٌّ عَنكُمْۖ وَلَا يَرْضَىٰ لِعِبَادِهِ ٱلْكُفْرَۖ وَإِن تَشْكُرُوا۟ يَرْضَهُ لَكُمْۗ وَلَا تَزِرُ وَازِرَةٌ وِزْرَ أُخْرَىٰۗ ثُمَّ إِلَىٰ رَبِّكُم مَّرْجِعُكُمْ فَيُنَبِّئُكُم

1 ಉದರ, ಗರ್ಭಾಶಯ, ಗರ್ಭಾಶಯದೊಳಗಿರುವ ತೆಳುವಾದ ಆವರಣ. ಇವು ಮೂರು ಸೇರಿ ಗರ್ಭದೊಳಗಿರುವ ಶಿಶುವನ್ನು ಅಂಧಕಾರಗಳ ಕೋಣೆಯಲ್ಲಿಡಲಾಗಿದೆ.

بِمَا كُنتُمۡ تَعۡمَلُونَۚ إِنَّهُۥ عَلِيمُۢ بِذَاتِ
ٱلصُّدُورِ ۝٧

ಅದರಿಂದಾಗಿ ಅವನು ನಿಮ್ಮೊಂದಿಗೆ ಸಂತೃಪ್ತನಾಗುವನು. ಪಾಪಭಾರವನ್ನು ಹೊರುವ ಯಾರೂ ಇನ್ನೊಬ್ಬರ ಭಾರವನ್ನು ಹೊರಲಾರರು. ತರುವಾಯ ನಿಮ್ಮ ಮರಳುವಿಕೆಯು ನಿಮ್ಮ ರಬ್‌ನೆಡೆಗಾಗಿದೆ. ನೀವು ಮಾಡುತ್ತಿದ್ದುದರ ಕುರಿತು ಆಗ ಅವನು ನಿಮಗೆ ತಿಳಿಸಿಕೊಡುವನು. ಖಂಡಿತವಾಗಿಯೂ ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

۞ وَإِذَا مَسَّ ٱلۡإِنسَٰنَ ضُرّٞ دَعَا رَبَّهُۥ مُنِيبًا
إِلَيۡهِ ثُمَّ إِذَا خَوَّلَهُۥ نِعۡمَةٗ مِّنۡهُ نَسِيَ مَا كَانَ
يَدۡعُوٓاْ إِلَيۡهِ مِن قَبۡلُ وَجَعَلَ لِلَّهِ أَندَادٗا
لِّيُضِلَّ عَن سَبِيلِهِۦۚ قُلۡ تَمَتَّعۡ بِكُفۡرِكَ
قَلِيلًا إِنَّكَ مِنۡ أَصۡحَٰبِ ٱلنَّارِ ۝٨

8. ಮನುಷ್ಯನಿಗೆ ಯಾವುದಾದರೂ ಹಾನಿ ತಟ್ಟಿದರೆ ಅವನು ತನ್ನ ರಬ್‌ನೆಡೆಗೆ ವಿನಮ್ರತೆಯೊಂದಿಗೆ ಮರಳುತ್ತಾ ಪ್ರಾರ್ಥಿಸುವನು. ತರುವಾಯ ತನ್ನ ವತಿಯ ಯಾವುದಾದರೂ ಅನುಗ್ರಹವನ್ನು ಅಲ್ಲಾಹು ಅವನಿಗೆ ದಯಪಾಲಿಸಿದರೆ ಯಾವುದಕ್ಕಾಗಿ ಅವನು ಮುಂಚೆ ಪ್ರಾರ್ಥಿಸಿದ್ದನೋ ಅದನ್ನು ಅವನು ಮರೆತುಬಿಡುವನು. ಅಲ್ಲಾಹುವಿನ ಮಾರ್ಗದಿಂದ ಭ್ರಷ್ಟಗೊಳಿಸುವುದಕ್ಕಾಗಿ ಅವನೊಂದಿಗೆ ಪ್ರತಿಸ್ಪರ್ಧಿಗಳನ್ನು ಮಾಡಿಕೊಳ್ಳುವನು. (ಓ ಪ್ರವಾದಿಯವರೇ!) ಹೇಳಿರಿ: 'ನಿನ್ನ ಈ ಸತ್ಯನಿಷೇಧದೊಂದಿಗೆ ನೀನು ಸ್ವಲ್ಪ ಕಾಲದವರೆಗೆ ಸುಖವಾಗಿ ಜೀವಿಸು. ಖಂಡಿತವಾಗಿಯೂ ನೀನು ನರಕವಾಸಿಗಳಲ್ಲಿ ಸೇರಿದವನಾಗಿರುವೆ.

أَمَّنۡ هُوَ قَٰنِتٌ ءَانَآءَ ٱلَّيۡلِ سَاجِدٗا وَقَآئِمٗا
يَحۡذَرُ ٱلۡأٓخِرَةَ وَيَرۡجُواْ رَحۡمَةَ رَبِّهِۦۗ قُلۡ
هَلۡ يَسۡتَوِي ٱلَّذِينَ يَعۡلَمُونَ وَٱلَّذِينَ لَا
يَعۡلَمُونَۗ إِنَّمَا يَتَذَكَّرُ أُوْلُواْ ٱلۡأَلۡبَٰبِ ۝٩

9. ಅಥವಾ, ಪರಲೋಕದ ಕುರಿತು ಎಚ್ಚರವಹಿಸಿ ತನ್ನ ರಬ್‌ನ ಕಾರುಣ್ಯವನ್ನು ಆಶಿಸಿ, ಸಾಷ್ಟಾಂಗವೆರಗುತ್ತಾ, ನಿಂತು ನಮಾಝ್ ಮಾಡುತ್ತಾ ರಾತ್ರಿ ವೇಳೆಗಳಲ್ಲಿ ವಿಧೇಯತೆ ಪ್ರಕಟಿಸುವವನೇ (ಉತ್ತಮನು? ಅಥವಾ ಸತ್ಯನಿಷೇಧಿಯೇ)? ಹೇಳಿರಿ: 'ಅರಿವುಳ್ಳವರು ಮತ್ತು ಅರಿವಿಲ್ಲದವರು ಸಮಾನರಾಗುವರೇ?' ಬುದ್ಧಿವಂತರು ಮಾತ್ರ ಚಿಂತಿಸಿ ಗ್ರಹಿಸುವರು.

10. ತಾವು ಹೇಳಿರಿ: 'ವಿಶ್ವಾಸವಿರಿಸಿದ ಓ ನನ್ನ ದಾಸರೇ! ನಿಮ್ಮ ರಬ್ಬನ್ನು ಭಯಪಡಿರಿ. ಈ ಐಹಿಕ ಜೀವನದಲ್ಲಿ ಸತ್ಕರ್ಮವೆಸಗಿದವರಿಗೆ ಸತ್ಫಲವಿದೆ. ಅಲ್ಲಾಹುವಿನ ಭೂಮಿಯು ವಿಶಾಲವಾಗಿದೆ. ಖಂಡಿತವಾಗಿಯೂ ಸಹನೆ ಪಾಲಿಸುವವರಿಗೆ ಅವರ ಪ್ರತಿಫಲವನ್ನು ಲೆಕ್ಕವಿಲ್ಲದೆ ಪೂರ್ಣವಾಗಿ ನೀಡಲಾಗುವುದು'.

قُلْ يَٰعِبَادِ ٱلَّذِينَ ءَامَنُوا۟ ٱتَّقُوا۟ رَبَّكُمْ ۚ
لِلَّذِينَ أَحْسَنُوا۟ فِى هَٰذِهِ ٱلدُّنْيَا حَسَنَةٌ ۗ
وَأَرْضُ ٱللَّهِ وَٰسِعَةٌ ۗ إِنَّمَا يُوَفَّى ٱلصَّٰبِرُونَ
أَجْرَهُم بِغَيْرِ حِسَابٍ ١٠

11. ತಾವು ಹೇಳಿರಿ: 'ವಿಧೇಯತೆಯನ್ನು ಅಲ್ಲಾಹುವಿಗೆ ನಿಷ್ಕಳಂಕಗೊಳಿಸಿ ಅವನನ್ನು ಆರಾಧಿಸಬೇಕೆಂದು ಖಂಡಿತವಾಗಿಯೂ ನನ್ನೊಂದಿಗೆ ಆಜ್ಞಾಪಿಸಲಾಗಿದೆ.

قُلْ إِنِّىٓ أُمِرْتُ أَنْ أَعْبُدَ ٱللَّهَ مُخْلِصًا لَّهُ
ٱلدِّينَ ١١

12. ವಿಧೇಯರಾಗಿರುವವರಲ್ಲಿ ನಾನು ಮೊದಲಿಗನಾಗಬೇಕೆಂದೂ ನನ್ನೊಂದಿಗೆ ಆಜ್ಞಾಪಿಸಲಾಗಿದೆ'.

وَأُمِرْتُ لِأَنْ أَكُونَ أَوَّلَ ٱلْمُسْلِمِينَ ١٢

13. ತಾವು ಹೇಳಿರಿ: 'ನಾನು ನನ್ನ ರಬ್ಬನ್ನು ಧಿಕ್ಕರಿಸುವುದಾದರೆ ಭಯಾನಕವಾದ ದಿನವೊಂದರ ಶಿಕ್ಷೆಯನ್ನು ಖಂಡಿತ ಭಯಪಡುವೆನು'.

قُلْ إِنِّىٓ أَخَافُ إِنْ عَصَيْتُ رَبِّى عَذَابَ
يَوْمٍ عَظِيمٍ ١٣

14. ತಾವು ಹೇಳಿರಿ: 'ಅಲ್ಲಾಹುವಿಗೆ ನನ್ನ ವಿಧೇಯತೆಯನ್ನು ನಿಷ್ಕಳಂಕಗೊಳಿಸುತ್ತಾ ನಾನು ಅವನನ್ನು ಆರಾಧಿಸುವೆನು'.

قُلِ ٱللَّهَ أَعْبُدُ مُخْلِصًا لَّهُۥ دِينِى ١٤

15. ಅವನ ಹೊರತು ನೀವಿಚ್ಛಿಸುವುದನ್ನು ನೀವು ಆರಾಧಿಸಿರಿ. ತಾವು ಹೇಳಿರಿ: 'ಪುನರುತ್ಥಾನ ದಿನದಂದು ಸ್ವತಃ ತಮಗೂ, ತಮ್ಮ ಜನರಿಗೂ ಯಾರು ನಷ್ಟವನ್ನು ತರುವರೋ ಖಂಡಿತವಾಗಿಯೂ ನಷ್ಟ ಹೊಂದಿದವರು ಅವರೇ ಆಗಿರುವರು. ಸ್ಪಷ್ಟವಾದ ನಷ್ಟವು ಅದೇ ಆಗಿದೆ'.

فَٱعْبُدُوا۟ مَا شِئْتُم مِّن دُونِهِۦ ۗ قُلْ إِنَّ
ٱلْخَٰسِرِينَ ٱلَّذِينَ خَسِرُوٓا۟ أَنفُسَهُمْ
وَأَهْلِيهِمْ يَوْمَ ٱلْقِيَٰمَةِ ۗ أَلَا ذَٰلِكَ هُوَ
ٱلْخُسْرَانُ ٱلْمُبِينُ ١٥

16. ಅವರಿಗೆ ಅವರ ಮೇಲ್ಭಾಗದಲ್ಲಿ ಬೆಂಕಿಯ ಮುಚ್ಚಿಗೆಗಳಿರುವುವು. ಅವರ ತಳಭಾಗದಲ್ಲೂ ಮುಚ್ಚಿಗೆಗಳಿರುವುವು. ಅಲ್ಲಾಹು ತನ್ನ ದಾಸರನ್ನು ಭಯಪಡಿಸುತ್ತಿರುವುದು ಅದರ ಕುರಿತಾಗಿದೆ.

لَهُم مِّن فَوْقِهِمْ ظُلَلٌ مِّنَ ٱلنَّارِ وَمِن
تَحْتِهِمْ ظُلَلٌ ۚ ذَٰلِكَ يُخَوِّفُ ٱللَّهُ بِهِۦ عِبَادَهُۥ ۚ
يَٰعِبَادِ فَٱتَّقُونِ ١٦

ಆದ್ದರಿಂದ ಓ ನನ್ನ ದಾಸರೇ! ನನ್ನನ್ನು ಭಯಪಡಿರಿ.

وَٱلَّذِينَ ٱجۡتَنَبُواْ ٱلطَّٰغُوتَ أَن يَعۡبُدُوهَا وَأَنَابُوٓاْ إِلَى ٱللَّهِ لَهُمُ ٱلۡبُشۡرَىٰۚ فَبَشِّرۡ عِبَادِ ﴿١٧﴾

**17.** ಮಿಥ್ಯಾರಾಧ್ಯರನ್ನು – ಅವರನ್ನು ಆರಾಧಿಸುವುದನ್ನು ವರ್ಜಿಸಿ – ಅಲ್ಲಾಹುವಿನೆಡೆಗೆ ವಿನಮ್ರತೆಯೊಂದಿಗೆ ಮರಳಿದವರಾರೋ ಅವರಿಗೆ ಶುಭವಾರ್ತೆಯಿದೆ. ಆದ್ದರಿಂದ ನನ್ನ ದಾಸರಿಗೆ ಶುಭವಾರ್ತೆಯನ್ನು ತಿಳಿಸಿರಿ.

ٱلَّذِينَ يَسۡتَمِعُونَ ٱلۡقَوۡلَ فَيَتَّبِعُونَ أَحۡسَنَهُۥٓۚ أُوْلَٰٓئِكَ ٱلَّذِينَ هَدَىٰهُمُ ٱللَّهُۖ وَأُوْلَٰٓئِكَ هُمۡ أُوْلُواْ ٱلۡأَلۡبَٰبِ ﴿١٨﴾

**18.** ಅಂದರೆ ಮಾತುಗಳನ್ನು ಕಿವಿಗೊಟ್ಟು ಆಲಿಸುವ ಮತ್ತು ಅದರಲ್ಲಿ ಅತ್ಯುತ್ತಮವಾಗಿರುವುದನ್ನು ಅನುಸರಿಸುವವರಿಗೆ. ಅಲ್ಲಾಹು ಮಾರ್ಗದರ್ಶನವನ್ನು ಮಾಡಿರುವುದು ಅವರಿಗಾಗಿದೆ ಮತ್ತು ಬುದ್ಧಿವಂತರು ಅವರೇ ಆಗಿರುವರು.

أَفَمَنۡ حَقَّ عَلَيۡهِ كَلِمَةُ ٱلۡعَذَابِ أَفَأَنتَ تُنقِذُ مَن فِي ٱلنَّارِ ﴿١٩﴾

**19.** ಯಾರಾದರೂ ಒಬ್ಬನ ಮೇಲೆ ಶಿಕ್ಷೆಯ ವಚನವು ಸ್ಥಿರಪಟ್ಟಿದ್ದರೆ (ಅವನಿಗೆ ಸಹಾಯ ಮಾಡಲು ತಮ್ಮಿಂದ ಸಾಧ್ಯವೇ)? ಆಗ ನರಕಾಗ್ನಿಯಲ್ಲಿರುವವನನ್ನು ರಕ್ಷಿಸಲು ತಮ್ಮಿಂದ ಸಾಧ್ಯವೇ?(1)

لَٰكِنِ ٱلَّذِينَ ٱتَّقَوۡاْ رَبَّهُمۡ لَهُمۡ غُرَفٞ مِّن فَوۡقِهَا غُرَفٞ مَّبۡنِيَّةٞ تَجۡرِي مِن تَحۡتِهَا ٱلۡأَنۡهَٰرُۖ وَعۡدَ ٱللَّهِ لَا يُخۡلِفُ ٱللَّهُ ٱلۡمِيعَادَ ﴿٢٠﴾

**20.** ಆದರೆ, ತಮ್ಮ ರಬ್ಬನ್ನು ಭಯಪಟ್ಟು ಜೀವಿಸುವವರಾರೋ ಅವರಿಗೆ ಮಹಡಿಗಳ ಮೇಲೆ ಮಹಡಿಗಳನ್ನು ನಿರ್ಮಿಸಲಾಗಿರುವ ಮಹಲುಗಳಿರುವುವು. ಅವುಗಳ ತಳಭಾಗದಿಂದ ನದಿಗಳು ಹರಿಯುತ್ತಿರುವುವು. ಅದು ಅಲ್ಲಾಹುವಿನ ವಾಗ್ದಾನವಾಗಿದೆ. ಅಲ್ಲಾಹು ವಾಗ್ದಾನವನ್ನು ಉಲ್ಲಂಘಿಸಲಾರನು.

أَلَمۡ تَرَ أَنَّ ٱللَّهَ أَنزَلَ مِنَ ٱلسَّمَآءِ مَآءٗ

**21.** ತಾವು ನೋಡುವುದಿಲ್ಲವೇ? ಅಲ್ಲಾಹು ಆಕಾಶದಿಂದ (ಮಳೆ)ನೀರನ್ನು ಸುರಿಸಿದನು.

1 ಪ್ರತಿಯೊಬ್ಬರೂ ಸ್ವತಃ ಆರಿಸುವ ವಿಶ್ವಾಸಾಚಾರಗಳು ಅವರವರ ವಿಧಿನಿಯತಿಯನ್ನು ನಿರ್ಣಯಿಸುತ್ತದೆ. ಸತ್ಯನಿಷೇಧ ಮತ್ತು ಧರ್ಮಬಾಹಿರ ಮಾರ್ಗವನ್ನು ಆರಿಸಿದವನ ಮೇಲೆ ಅಲ್ಲಾಹುವಿನ ಶಿಕ್ಷೆ ವಿಧಿತವಾಗುತ್ತದೆ. ಅದರಿಂದ ಅವನನ್ನು ಕಾಪಾಡಲು ಪ್ರವಾದಿಗಳು ಸೇರಿದಂತೆ ಯಾರಿಗೂ ಸಾಧ್ಯವಿಲ್ಲ.

فَسَلَكَهُۥ يَنَٰبِيعَ فِي ٱلۡأَرۡضِ ثُمَّ يُخۡرِجُ
بِهِۦ زَرۡعٗا مُّخۡتَلِفًا أَلۡوَٰنُهُۥ ثُمَّ يَهِيجُ فَتَرَىٰهُ
مُصۡفَرّٗا ثُمَّ يَجۡعَلُهُۥ حُطَٰمًاۚ إِنَّ فِي ذَٰلِكَ
لَذِكۡرَىٰ لِأُوْلِي ٱلۡأَلۡبَٰبِ ٢١

ತರುವಾಯ ಅದನ್ನು ಭೂಮಿಯಲ್ಲಿರುವ ಒರತೆಗಳಲ್ಲಿ ನುಸುಳಿಸಿದನು. ತರುವಾಯ ಅದರಿಂದಾಗಿ ವಿವಿಧ ಬಣ್ಣಗಳಿರುವ ಬೆಳೆಯನ್ನು ಅವನು ಉತ್ಪಾದಿಸುವನು. ತರುವಾಯ ಅದು ಒಣಗಿ ಹೋಗುವಾಗ ಅದು ಹಳದಿಯಾಗಿ ಮಾರ್ಪಡುವುದನ್ನು ತಾವು ಕಾಣುವಿರಿ. ತರುವಾಯ ಅವನು ಅದನ್ನು ಒಣಹುಲ್ಲಿನ ಕಡ್ಡಿಗಳನ್ನಾಗಿ ಮಾಡುವನು. ಖಂಡಿತವಾಗಿಯೂ ಬುದ್ಧಿವಂತರಿಗೆ ಅದರಲ್ಲಿ ಒಂದು ನೀತಿಪಾಠವಿದೆ.

أَفَمَن شَرَحَ ٱللَّهُ صَدۡرَهُۥ لِلۡإِسۡلَٰمِ
فَهُوَ عَلَىٰ نُورٖ مِّن رَّبِّهِۦۚ فَوَيۡلٞ لِّلۡقَٰسِيَةِ
قُلُوبُهُم مِّن ذِكۡرِ ٱللَّهِۚ أُوْلَٰٓئِكَ فِي ضَلَٰلٖ
مُّبِينٍ ٢٢

22. ಇನ್ನು ಇಸ್ಲಾಮ್ ಸ್ವೀಕರಿಸುವುದಕ್ಕಾಗಿ ಯಾರ ಹೃದಯಕ್ಕೆ ಅಲ್ಲಾಹು ವೈಶಾಲ್ಯತೆಯನ್ನು ಕರುಣಿಸುವನೋ, ತರುವಾಯ ಅವನು ತನ್ನ ರಬ್‌ನ ವತಿಯ ಪ್ರಕಾಶದಲ್ಲಿರುವನೋ (ಅವನು ಕಠಿಣ ಹೃದಯಿಯಂತೆ ಆಗುವನೇ?) ಅಲ್ಲಾಹುವಿನ ಸ್ಮರಣೆಯಿಂದ ದೂರ ಸರಿದು ಹೃದಯಗಳು ಕಠಿಣವಾಗಿರುವವರಿಗೆ ನಾಶವಿದೆ. ಅವರು ಸ್ಪಷ್ಟವಾದ ದುರ್ಮಾರ್ಗದಲ್ಲಿರುವರು.

ٱللَّهُ نَزَّلَ أَحۡسَنَ ٱلۡحَدِيثِ كِتَٰبٗا مُّتَشَٰبِهٗا
مَّثَانِيَ تَقۡشَعِرُّ مِنۡهُ جُلُودُ ٱلَّذِينَ يَخۡشَوۡنَ
رَبَّهُمۡ ثُمَّ تَلِينُ جُلُودُهُمۡ وَقُلُوبُهُمۡ إِلَىٰ
ذِكۡرِ ٱللَّهِۚ ذَٰلِكَ هُدَى ٱللَّهِ يَهۡدِي بِهِۦ
مَن يَشَآءُۚ وَمَن يُضۡلِلِ ٱللَّهُ فَمَا لَهُۥ مِنۡ
هَادٍ ٢٣

23. ಅತ್ಯುತ್ತಮವಾದ ವೃತ್ತಾಂತವನ್ನು ಅವತೀರ್ಣಗೊಳಿಸಿದವನು ಅಲ್ಲಾಹುವಾಗಿರುವನು. (ಅಂದರೆ) ವಚನಗಳಿಗೆ ಪರಸ್ಪರ ಸಾದೃಶ್ಯತೆಗಳಿರುವ ಮತ್ತು ಪುನರಾವರ್ತಿಸಲಾಗುವ ವಚನಗಳಿರುವ ಒಂದು ಗ್ರಂಥವನ್ನು. ತಮ್ಮ ರಬ್ಬನ್ನು ಭಯಪಡುವವರ ಚರ್ಮಗಳು ಅದರಿಂದಾಗಿ ನಡುಗುವುವು. ತರುವಾಯ ಅವರ ಚರ್ಮಗಳು ಮತ್ತು ಹೃದಯಗಳು ಅಲ್ಲಾಹುವನ್ನು ಸ್ಮರಿಸುವುದಕ್ಕಾಗಿ ವಿನೀತವಾಗುವುವು. ಅದು ಅಲ್ಲಾಹುವಿನ ಮಾರ್ಗದರ್ಶನವಾಗಿದೆ. ಅವನು ತಾನಿಚ್ಛಿಸುವವರನ್ನು ಅದರ ಮೂಲಕ ಸನ್ಮಾರ್ಗಕ್ಕೆ ಸೇರಿಸುವನು. ಅಲ್ಲಾಹು ಯಾರನ್ನಾದರೂ ದಾರಿಗೆಡಿಸುವುದಾದರೆ

ಅವನಿಗೆ ದಾರಿ ತೋರಿಸುವವರು ಯಾರೂ ಇಲ್ಲ.

24. ಹಾಗಾದರೆ ಪುನರುತ್ಥಾನ ದಿನದಂದು ಕಠಿಣವಾದ ಶಿಕ್ಷೆಯನ್ನು ತನ್ನ ಸ್ವಂತ ಮುಖದ ಮೂಲಕ ಎದುರಿಸಬೇಕಾಗಿ ಬರುವವನು (ಅಂದು ಸುರಕ್ಷಿತನಾಗಿರುವವನಿಗೆ ಸಮಾನನಾಗುವನೇ?) 'ನೀವು ಸಂಪಾದಿಸುತ್ತಿದ್ದುದನ್ನು ಸವಿಯಿರಿ' ಎಂದು ಅಕ್ರಮಿಗಳೊಂದಿಗೆ ಹೇಳಲಾಗುವುದು.

أَفَمَن يَتَّقِى بِوَجۡهِهِۦ سُوٓءَ ٱلۡعَذَابِ يَوۡمَ ٱلۡقِيَٰمَةِۚ وَقِيلَ لِلظَّٰلِمِينَ ذُوقُواْ مَا كُنتُمۡ تَكۡسِبُونَ ﴿٢٤﴾

25. ಅವರಿಗಿಂತ ಮುಂಚಿನವರೂ ಸತ್ಯವನ್ನು ನಿಷೇಧಿಸಿರುವರು. ಆಗ ಅವರು ನಿರೀಕ್ಷಿಸಿರದ ದಿಕ್ಕಿನಿಂದ ಶಿಕ್ಷೆಯು ಅವರ ಬಳಿಗೆ ಬಂದಿತು.

كَذَّبَ ٱلَّذِينَ مِن قَبۡلِهِمۡ فَأَتَىٰهُمُ ٱلۡعَذَابُ مِنۡ حَيۡثُ لَا يَشۡعُرُونَ ﴿٢٥﴾

26. ಹೀಗೆ ಅಲ್ಲಾಹು ಅವರಿಗೆ ಐಹಿಕ ಜೀವನದಲ್ಲಿ ಅಪಮಾನವನ್ನು ಸವಿಯುವಂತೆ ಮಾಡಿದನು. ಪರಲೋಕ ಶಿಕ್ಷೆಯಂತೂ ಅತಿ ಭಯಾನಕವಾಗಿದೆ. ಅವರು ಅದನ್ನು ಗ್ರಹಿಸುತ್ತಿದ್ದರೆ!

فَأَذَاقَهُمُ ٱللَّهُ ٱلۡخِزۡيَ فِي ٱلۡحَيَوٰةِ ٱلدُّنۡيَاۖ وَلَعَذَابُ ٱلۡأٓخِرَةِ أَكۡبَرُۚ لَوۡ كَانُواْ يَعۡلَمُونَ ﴿٢٦﴾

27. ಖಂಡಿತವಾಗಿಯೂ ನಾವು ಈ ಕುರ್‌ಆನ್‌ನಲ್ಲಿ ಜನರಿಗಾಗಿ ಎಲ್ಲ ವಿಧದ ಉಪಮೆಗಳನ್ನು ವಿವರಿಸಿರುವೆವು. ಅವರು ಚಿಂತಿಸಿ ಗ್ರಹಿಸುವ ಸಲುವಾಗಿ.

وَلَقَدۡ ضَرَبۡنَا لِلنَّاسِ فِي هَٰذَا ٱلۡقُرۡءَانِ مِن كُلِّ مَثَلٖ لَّعَلَّهُمۡ يَتَذَكَّرُونَ ﴿٢٧﴾

28. ಯಾವುದೇ ವಕ್ರತೆಯಿಲ್ಲದ ಅರಬಿ ಭಾಷೆಯಲ್ಲಿರುವ ಒಂದು ಕುರ್‌ಆನ್. ಅವರು ಭಯಭಕ್ತಿ ಪಾಲಿಸುವ ಸಲುವಾಗಿ.

قُرۡءَانًا عَرَبِيًّا غَيۡرَ ذِي عِوَجٖ لَّعَلَّهُمۡ يَتَّقُونَ ﴿٢٨﴾

29. ಅಲ್ಲಾಹು ಒಬ್ಬ ವ್ಯಕ್ತಿಯನ್ನು ಉಪಮೆಯಾಗಿ ತೋರಿಸಿರುವನು. ಪರಸ್ಪರ ಜಗಳವಾಡುವ ಕೆಲವು ಪಾಲುದಾರರು ಅವನ ಯಜಮಾನರಾಗಿರುವರು. ಒಬ್ಬನೇ ಯಜಮಾನನಿಗೆ ಮಾತ್ರ ವಿಧೇಯನಾಗಬೇಕಾದ ಇನ್ನೊಬ್ಬನನ್ನೂ (ಉಪಮೆಯಾಗಿ ತೋರಿಸಿರುವನು). ಉಪಮೆಯಲ್ಲಿ ಇವರಿಬ್ಬರೂ

ضَرَبَ ٱللَّهُ مَثَلٗا رَّجُلٗا فِيهِ شُرَكَآءُ مُتَشَٰكِسُونَ وَرَجُلٗا سَلَمٗا لِّرَجُلٍ هَلۡ يَسۡتَوِيَانِ مَثَلًاۚ ٱلۡحَمۡدُ لِلَّهِۚ بَلۡ أَكۡثَرُهُمۡ لَا يَعۡلَمُونَ ﴿٢٩﴾

ಸಮಾನರಾಗುವರೇ? ಅಲ್ಲಾಹುವಿಗೆ ಸ್ತುತಿ! ಆದರೆ ಅವರಲ್ಲಿ ಹೆಚ್ಚಿನವರೂ ಅರಿತುಕೊಳ್ಳುವುದಿಲ್ಲ.[1]

**30.** ಖಂಡಿತವಾಗಿಯೂ ತಾವು ಮರಣಹೊಂದುವಿರಿ ಮತ್ತು ಅವರೂ ಮರಣಹೊಂದುವರು.

إِنَّكَ مَيِّتٌ وَإِنَّهُم مَّيِّتُونَ ٣٠

**31.** ತರುವಾಯ ಪುನರುತ್ಥಾನದಿನದಂದು ನೀವು ನಿಮ್ಮ ರಬ್‌ನ ಬಳಿ ತರ್ಕಿಸುವಿರಿ.

ثُمَّ إِنَّكُمْ يَوْمَ ٱلْقِيَـٰمَةِ عِندَ رَبِّكُمْ تَخْتَصِمُونَ ٣١

**32.** ಅಲ್ಲಾಹುವಿನ ಮೇಲೆ ಸುಳ್ಳು ಹೇಳಿದವನಿಗಿಂತ ಮತ್ತು ಸತ್ಯವು ತನ್ನ ಬಳಿಗೆ ಬಂದಾಗ ಅದನ್ನು ನಿಷೇಧಿಸಿದವನಿಗಿಂತ ದೊಡ್ಡ ಅಕ್ರಮಿ ಯಾರಿರುವನು? ನರಕಾಗ್ನಿಯು ಸತ್ಯನಿಷೇಧಿಗಳ ವಾಸಸ್ಥಳವಲ್ಲವೇ?

۞ فَمَنْ أَظْلَمُ مِمَّن كَذَبَ عَلَى ٱللَّهِ وَكَذَّبَ بِٱلصِّدْقِ إِذْ جَآءَهُۥٓ ۚ أَلَيْسَ فِى جَهَنَّمَ مَثْوًى لِّلْكَـٰفِرِينَ ٣٢

**33.** ಯಾರು ಸತ್ಯದೊಂದಿಗೆ ಬಂದಿರುವರೋ ಹಾಗೂ ಅದರಲ್ಲಿ ವಿಶ್ವಾಸವಿಟ್ಟಿರುವರೋ ಅವರೇ ಭಯಭಕ್ತಿ ಪಾಲಿಸುವವರಾಗಿರುವರು.

وَٱلَّذِى جَآءَ بِٱلصِّدْقِ وَصَدَّقَ بِهِۦٓ ۙ أُو۟لَـٰٓئِكَ هُمُ ٱلْمُتَّقُونَ ٣٣

**34.** ಅವರು ಇಚ್ಛಿಸುವುದೆಲ್ಲವೂ ಅವರಿಗೆ ಅವರ ರಬ್‌ನ ಬಳಿಯಿರುವುದು. ಅದು ಸಜ್ಜನರಿಗಿರುವ ಪ್ರತಿಫಲವಾಗಿದೆ.

لَهُم مَّا يَشَآءُونَ عِندَ رَبِّهِمْ ۚ ذَٰلِكَ جَزَآءُ ٱلْمُحْسِنِينَ ٣٤

**35.** ಅವರು ಮಾಡಿರುವುದರಲ್ಲಿ ಅತಿಕೆಟ್ಟದಾಗಿರುವುದನ್ನೂ ಅಲ್ಲಾಹು ಅವರಿಂದ ಅಳಿಸಿಹಾಕುವನು. ಅವರು ಮಾಡಿರುವುದರಲ್ಲಿ ಅತ್ಯುತ್ತಮವಾಗಿರುವುದಕ್ಕೆ ಅನುಗುಣವಾಗಿ ಅವನು ಅವರಿಗೆ ಪ್ರತಿಫಲವನ್ನು ನೀಡುವನು.

لِيُكَفِّرَ ٱللَّهُ عَنْهُمْ أَسْوَأَ ٱلَّذِى عَمِلُوا۟ وَيَجْزِيَهُمْ أَجْرَهُم بِأَحْسَنِ ٱلَّذِى كَانُوا۟ يَعْمَلُونَ ٣٥

---

1 ಪರಸ್ಪರ ಜಗಳವಾಡುವ ಯಜಮಾನರ ಆಜ್ಞಾಪಾಲನೆ ಮಾಡುತ್ತಾ ಬದುಕಬೇಕಾದ ಗುಲಾಮನನ್ನು ಅಲ್ಲಾಹು ಬಹುದೇವವಿಶ್ವಾಸಿಯೊಂದಿಗೆ ಹೋಲಿಸುತ್ತಾನೆ. ಅಂತಹ ಒಬ್ಬ ಗುಲಾಮನು ಪರಸ್ಪರ ವಿರುದ್ಧವಾದ ಆಜ್ಞೆಗಳನ್ನು ಪಾಲಿಸಬೇಕಾಗಿ ಬರುತ್ತದೆ. ಎಲ್ಲ ಯಜಮಾನರನ್ನೂ ಪೂರ್ಣವಾಗಿ ತೃಪ್ತಿಪಡಿಸಲು ಅವನಿಂದ ಸಾಧ್ಯವಿಲ್ಲ. ಯಾವೆಲ್ಲ ಆರಾಧ್ಯರನ್ನು ಹೇಗೆಲ್ಲ ತೃಪ್ತಿಗೊಳಿಸಬಹುದು, ಯಾವಾಗ ಯಾವೆಲ್ಲ ದೇವರುಗಳು ಕೋಪಿಸಿಕೊಳ್ಳುವರು ಎಂದು ಅರಿಯಲಾಗದ ಬಹುದೇವವಿಶ್ವಾಸಿಯ ಅವಸ್ಥೆಯೂ ಹೀಗೆಯೇ ಆಗಿದೆ. ಆದರೆ ಒಬ್ಬನೇ ಯಜಮಾನನ ಸೇವೆ ಮಾಡಲು ಬಾಧ್ಯಸ್ಥನಾಗಿರುವ ಗುಲಾಮನಂತೆಯೇ ಜಗದೊಡೆಯನನ್ನು ಮಾತ್ರ ಆರಾಧಿಸುವ, ಅವನಿಗೆ ಮಾತ್ರ ಪರಮವಾದ ವಿಧೇಯತೆಯನ್ನು ಪ್ರಕಟಿಸುವ ಏಕದೇವ ವಿಶ್ವಾಸಿಯು ಅನಿಶ್ಚಿತತೆಯಿಂದ ಮುಕ್ತನಾಗಿರುತ್ತಾನೆ.

**36.** ಅಲ್ಲಾಹು ತನ್ನ ದಾಸನಿಗೆ ಸಾಕಾಗಲಾರನೇ?[1] ಅವನ ಹೊರತಾಗಿರುವ ಇತರರ ಕುರಿತು ಅವರು ತಮ್ಮನ್ನು ಹೆದರಿಸುತ್ತಿರುವರು. ಅಲ್ಲಾಹು ಯಾರನ್ನಾದರೂ ಪಥಭ್ರಷ್ಟಗೊಳಿಸಿದರೆ ಅವನಿಗೆ ಮಾರ್ಗದರ್ಶನ ಮಾಡಲು ಯಾರೂ ಇರಲಾರರು.

أَلَيۡسَ ٱللَّهُ بِكَافٍ عَبۡدَهُۥۖ وَيُخَوِّفُونَكَ بِٱلَّذِينَ مِن دُونِهِۦۚ وَمَن يُضۡلِلِ ٱللَّهُ فَمَا لَهُۥ مِنۡ هَادٖ ٣٦

**37.** ಅಲ್ಲಾಹು ಯಾರನ್ನಾದರೂ ಸನ್ಮಾರ್ಗದಲ್ಲಿ ಸೇರಿಸಿದರೆ ಅವನನ್ನು ಪಥಭ್ರಷ್ಟಗೊಳಿಸುವವರಾರೂ ಇರಲಾರರು. ಅಲ್ಲಾಹು ಪ್ರತಾಪಶಾಲಿ ಮತ್ತು ಶಿಕ್ಷಾಕ್ರಮ ಕೈಗೊಳ್ಳುವವನಲ್ಲವೇ?

وَمَن يَهۡدِ ٱللَّهُ فَمَا لَهُۥ مِن مُّضِلٍّۗ أَلَيۡسَ ٱللَّهُ بِعَزِيزٖ ذِي ٱنتِقَامٖ ٣٧

**38.** ‘ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಯಾರು?’ ಎಂದು ತಾವು ಅವರೊಂದಿಗೆ ಕೇಳಿದರೆ ಖಂಡಿತವಾಗಿಯೂ ಅವರು ‘ಅಲ್ಲಾಹು’[2] ಎನ್ನುವರು. ಹೇಳಿರಿ: ‘ಹಾಗಾದರೆ ಅಲ್ಲಾಹುವಿನ ಹೊರತು ನೀವು ಕರೆದು ಪ್ರಾರ್ಥಿಸುತ್ತಿರುವವರ ಕುರಿತು ನೀವು ಚಿಂತಿಸಿ ನೋಡಿರುವಿರಾ? ಅಲ್ಲಾಹು ನನಗೆ ಏನಾದರೂ ಹಾನಿಯನ್ನು ಬಯಸಿದರೆ ಅವನ ಹಾನಿಯನ್ನು ನಿವಾರಿಸಲು ಅವುಗಳಿಗೆ ಸಾಧ್ಯವೇ? ಅಥವಾ ಅವನು ನನಗೆ ಏನಾದರೂ ಅನುಗ್ರಹವನ್ನು ನೀಡಲು ಬಯಸಿದರೆ ಅವನ ಅನುಗ್ರಹವನ್ನು ತಡೆಗಟ್ಟಲು ಅವುಗಳಿಗೆ

وَلَئِن سَأَلۡتَهُم مَّنۡ خَلَقَ ٱلسَّمَٰوَٰتِ وَٱلۡأَرۡضَ لَيَقُولُنَّ ٱللَّهُۚ قُلۡ أَفَرَءَيۡتُم مَّا تَدۡعُونَ مِن دُونِ ٱللَّهِ إِنۡ أَرَادَنِيَ ٱللَّهُ بِضُرٍّ هَلۡ هُنَّ كَٰشِفَٰتُ ضُرِّهِۦٓ أَوۡ أَرَادَنِي بِرَحۡمَةٍ هَلۡ هُنَّ مُمۡسِكَٰتُ رَحۡمَتِهِۦۚ قُلۡ حَسۡبِيَ ٱللَّهُۖ عَلَيۡهِ يَتَوَكَّلُ ٱلۡمُتَوَكِّلُونَ ٣٨

---

1 ಒಬ್ಬ ಸತ್ಯವಿಶ್ವಾಸಿಯ ಧ್ಯೇಯವಾಕ್ಯವು ತನಗೆ ಅಲ್ಲಾಹು ಮಾತ್ರ ಸಾಕು ಎಂದಾಗಿರಬೇಕಾಗಿದೆ. ಅಲ್ಲಾಹುವೇತರರೊಂದಿಗೆ ಪ್ರಾರ್ಥಿಸುವುದು ಮತ್ತು ಅವರಿಂದ ಅಲೌಕಿಕವಾದ ಸಹಾಯವನ್ನು ನಿರೀಕ್ಷಿಸುವುದು ಸತ್ಯವಿಶ್ವಾಸಕ್ಕೆ ವಿರುದ್ಧವಾಗಿದೆ. ಅಲ್ಲಾಹುವಿನೊಂದಿಗಿರುವಂತೆ ಅಥವಾ ಅದಕ್ಕಿಂತಲೂ ಹೆಚ್ಚು ವಿಧೇಯತೆಯನ್ನು ಭೌತಿಕ ಶಕ್ತಿಗಳೊಂದಿಗೆ ಪ್ರಕಟಿಸುವುದು ಒಬ್ಬ ಸತ್ಯವಿಶ್ವಾಸಿಗೆ ಯುಕ್ತವಾದುದಲ್ಲ.

2 ಜಗತ್ತಿನಲ್ಲಿರುವ ಬಹುದೇವಾರಾಧಕರ ಪೈಕಿ ಹೆಚ್ಚಿನವರೂ ಸೃಷ್ಟಿಕರ್ತನ ಏಕತ್ವವನ್ನು ಅಂಗೀಕರಿಸುತ್ತಾರೆ. ಕುರ್‌ಆನ್ ಅವತೀರ್ಣ ಕಾಲದಲ್ಲಿ ಅರೇಬಿಯಾದಲ್ಲಿದ್ದ ಬಹುದೇವಾರಾಧಕರ ಸ್ಥಿತಿಯೂ ಇದ್ದಕ್ಕಿಂತ ಭಿನ್ನವಾಗಿರಲಿಲ್ಲ. ಸರ್ವಲೋಕಗಳ ಪರಿಪಾಲಕ ಎಂಬ ಸ್ಥಾನವನ್ನು ಅವರು ಅಲ್ಲಾಹುವಿನ ಹೊರತು ಇತರ ಯಾರಿಗೂ ನೀಡಿರಲಿಲ್ಲ. ಆದರೆ ಲಾಭವನ್ನು ತರುವ ಮತ್ತು ಹಾನಿಯನ್ನು ತಡೆಯುವ ಶಕ್ತಿಯಿರುವವರೆಂದು ಪರಿಕಲ್ಪಿಸಿ ಅವರು ಅನೇಕ ಆರಾಧ್ಯರನ್ನು ಆರಾಧಿಸುತ್ತಿದ್ದರು ಮತ್ತು ಅವರೊಂದಿಗೆ ಪ್ರಾರ್ಥಿಸುತ್ತಿದ್ದರು. ಅವರು ಮಾಡುತ್ತಿದ್ದ ಶಿರ್ಕ್ ಅಥವಾ ಬಹುದೇವಾರಾಧನೆಯು ಇದಾಗಿತ್ತು.

ಸಾಧ್ಯವೇ?' ತಾವು ಹೇಳಿರಿ: 'ನನಗೆ ಅಲ್ಲಾಹು ಸಾಕು. ಭರವಸೆಯಿಡುವವರು ಅವನ ಮೇಲೆಯೇ ಭರವಸೆಯಿಡಲಿ'.

**39-40.** ತಾವು ಹೇಳಿರಿ: 'ಓ ನನ್ನ ಜನರೇ! ನಿಮ್ಮ ನಿಲುವಿಗೆ ಅನುಗುಣವಾಗಿ ಕರ್ಮವೆಸಗಿರಿ. ನಾನೂ ಕರ್ಮವೆಸಗುವೆನು. ತರುವಾಯ ಅಪಮಾನಕರವಾದ ಶಿಕ್ಷೆಯು ಬರುವುದು ಮತ್ತು ಶಾಶ್ವತ ಶಿಕ್ಷೆಯು ಇಳಿಯುವುದು ಯಾರ ಮೇಲೆಂದು ನೀವು ಅರಿತುಕೊಳ್ಳುವಿರಿ'.

قُلْ يَٰقَوْمِ ٱعْمَلُواْ عَلَىٰ مَكَانَتِكُمْ إِنِّى عَٰمِلٌ ۖ فَسَوْفَ تَعْلَمُونَ ﴿٣٩﴾ مَن يَأْتِيهِ عَذَابٌ يُخْزِيهِ وَيَحِلُّ عَلَيْهِ عَذَابٌ مُّقِيمٌ ﴿٤٠﴾

**41.** ಖಂಡಿತವಾಗಿಯೂ ನಾವು ಮನುಷ್ಯರಿಗಾಗಿರುವ ಗ್ರಂಥವನ್ನು ತಮ್ಮ ಮೇಲೆ ಸತ್ಯದೊಂದಿಗೆ ಅವತೀರ್ಣಗೊಳಿಸಿರುವೆವು. ಆದ್ದರಿಂದ ಯಾರಾದರೂ ಸನ್ಮಾರ್ಗವನ್ನು ಪಡೆದರೆ ಅದು ಅವನ ಒಳಿತಿಗೇ ಆಗಿದೆ. ಯಾರಾದರೂ ಪಥಭ್ರಷ್ಟನಾಗುವುದಾದರೆ ಅವನು ಪಥಭ್ರಷ್ಟನಾಗುವುದರ ಪಾಪವು ಅವನಿಗೇ ಆಗಿದೆ. ತಾವು ಅವರ ಮೇಲಿರುವ ಕಾರ್ಯನಿರ್ವಾಹಕರಲ್ಲ.

إِنَّآ أَنزَلْنَا عَلَيْكَ ٱلْكِتَٰبَ لِلنَّاسِ بِٱلْحَقِّ ۖ فَمَنِ ٱهْتَدَىٰ فَلِنَفْسِهِۦ ۖ وَمَن ضَلَّ فَإِنَّمَا يَضِلُّ عَلَيْهَا ۖ وَمَآ أَنتَ عَلَيْهِم بِوَكِيلٍ ﴿٤١﴾

**42.** ಅಲ್ಲಾಹು ಆತ್ಮಗಳನ್ನು ಅವುಗಳ ಮರಣ ವೇಳೆಯಲ್ಲಿ ಪೂರ್ಣವಾಗಿ ವಶಪಡಿಸುವನು. ಮೃತಪಡದವುಗಳನ್ನು (ಮರಣವು ವಿಧಿಸಲ್ಪಡದವುಗಳನ್ನು) ಅವುಗಳ ನಿದ್ರಾವೇಳೆಯಲ್ಲಿ (ವಶಪಡಿಸುವನು). ತರುವಾಯ ಯಾವೆಲ್ಲ ಆತ್ಮಗಳ ಮೇಲೆ ಅವನು ಮರಣವನ್ನು ವಿಧಿಸಿರುವನೋ ಅವುಗಳನ್ನು ಅವನು ಹಿಡಿದಿಟ್ಟುಕೊಳ್ಳುವನು. ಉಳಿದವುಗಳನ್ನು ಒಂದು ನಿಶ್ಚಿತ ಅವಧಿಯವರೆಗೆ ಅವನು ಬಿಟ್ಟುಬಿಡುವನು. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.

ٱللَّهُ يَتَوَفَّى ٱلْأَنفُسَ حِينَ مَوْتِهَا وَٱلَّتِى لَمْ تَمُتْ فِى مَنَامِهَا ۖ فَيُمْسِكُ ٱلَّتِى قَضَىٰ عَلَيْهَا ٱلْمَوْتَ وَيُرْسِلُ ٱلْأُخْرَىٰٓ إِلَىٰٓ أَجَلٍ مُّسَمًّى ۚ إِنَّ فِى ذَٰلِكَ لَءَايَٰتٍ لِّقَوْمٍ يَتَفَكَّرُونَ ﴿٤٢﴾

**43.** ಅಥವಾ ಅವರು ಅಲ್ಲಾಹುವಿನ ಹೊರತಾದವರನ್ನು ಶಿಫಾರಸ್ಸುಗಾರರನ್ನಾಗಿ ಮಾಡಿಕೊಂಡಿರುವರೇ? ಹೇಳಿರಿ: 'ಅವರು

أَمِ ٱتَّخَذُواْ مِن دُونِ ٱللَّهِ شُفَعَآءَ ۚ قُلْ أَوَلَوْ كَانُواْ لَا يَمْلِكُونَ شَيْـًٔا وَلَا يَعْقِلُونَ ﴿٤٣﴾

(ಶಿಫಾರಸ್ಸುಗಾರರು) ಏನನ್ನೂ ಒಡೆತನದಲ್ಲಿರಿಸಿ ಕೊಳ್ಳದವರಾಗಿದ್ದರೂ, ಚಿಂತಿಸದವರಾಗಿದ್ದರೂ (ನೀವು ಅವರನ್ನು ಶಿಫಾರಸ್ಸುಗಾರರನ್ನಾಗಿ ಮಾಡುವಿರಾ)?

**44.** ತಾವು ಹೇಳಿರಿ: 'ಶಿಫಾರಸ್ಸು ಸಂಪೂರ್ಣವಾಗಿ ಅಲ್ಲಾಹುವಿಗಿರುವುದಾಗಿದೆ.[1] ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅವನಿಗಾಗಿದೆ. ತರುವಾಯ ನಿಮ್ಮನ್ನು ಮರಳಿಸಲಾಗುವುದು ಅವನೆಡೆಗೇ ಆಗಿದೆ'.

قُل لِّلَّهِ ٱلشَّفَٰعَةُ جَمِيعٗاۖ لَّهُۥ مُلۡكُ
ٱلسَّمَٰوَٰتِ وَٱلۡأَرۡضِۖ ثُمَّ إِلَيۡهِ تُرۡجَعُونَ ٤٤

**45.** ಅಲ್ಲಾಹುವಿನ ಕುರಿತು ಮಾತ್ರ ಪ್ರಸ್ತಾಪಿಸಲಾದಾಗ ಪರಲೋಕದಲ್ಲಿ ವಿಶ್ವಾಸವಿಲ್ಲದವರ ಹೃದಯಗಳಿಗೆ ಜಿಗುಪ್ಸೆಯುಂಟಾಗುತ್ತದೆ.[2] ಅಲ್ಲಾಹುವಿನ ಹೊರತಾದವರ ಕುರಿತು ಪ್ರಸ್ತಾಪಿಸಲಾದರೆ ಅಗೋ! ಅವರು ಸಂತೋಷ ಪಡುವರು.

وَإِذَا ذُكِرَ ٱللَّهُ وَحۡدَهُ ٱشۡمَأَزَّتۡ قُلُوبُ
ٱلَّذِينَ لَا يُؤۡمِنُونَ بِٱلۡأٓخِرَةِۖ وَإِذَا ذُكِرَ
ٱلَّذِينَ مِن دُونِهِۦٓ إِذَا هُمۡ يَسۡتَبۡشِرُونَ ٤٥

**46.** ತಾವು ಹೇಳಿರಿ: 'ಓ ಅಲ್ಲಾಹ್! ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನೇ! ಅಗೋಚರ ಮತ್ತು ಗೋಚರಗಳನ್ನು ಅರಿಯುವವನೇ! ನಿನ್ನ ದಾಸರ ಮಧ್ಯೆ ಅವರು ಭಿನ್ನಮತ ಹೊಂದಿರುವ ವಿಷಯದಲ್ಲಿ ತೀರ್ಪು ನೀಡುವವನು ನೀನೇ ಆಗಿರುವೆ'.

قُلِ ٱللَّهُمَّ فَاطِرَ ٱلسَّمَٰوَٰتِ وَٱلۡأَرۡضِ
عَٰلِمَ ٱلۡغَيۡبِ وَٱلشَّهَٰدَةِ أَنتَ تَحۡكُمُ بَيۡنَ
عِبَادِكَ فِي مَا كَانُواْ فِيهِ يَخۡتَلِفُونَ ٤٦

**47.** ಒಂದು ವೇಳೆ ಅಕ್ರಮಿಗಳ ವಶದಲ್ಲಿ ಭೂಮಿಯಲ್ಲಿರುವುದೆಲ್ಲವೂ ಮತ್ತು ಅದರೊಂದಿಗೆ ಅದರಷ್ಟೇ ಬೇರೆಯೂ ಇರುವುದಾದರೂ ಪುನರುತ್ಥಾನ ದಿನದ ಕಠಿಣ ಶಿಕ್ಷೆಯಿಂದ ಪಾರಾಗಲು ಅವರು ಅವೆಲ್ಲವನ್ನೂ ಪ್ರಾಯಶ್ಚಿತ್ತವಾಗಿ ನೀಡುತ್ತಿದ್ದರು. ಅವರು ಭಾವಿಸಿರದಂತಹ ಅನೇಕ ವಿಷಯಗಳು ಅಲ್ಲಾಹುವಿನಿಂದ ಅವರಿಗೆ ಬಹಿರಂಗವಾಗುವುವು.

وَلَوۡ أَنَّ لِلَّذِينَ ظَلَمُواْ مَا فِي ٱلۡأَرۡضِ جَمِيعٗا
وَمِثۡلَهُۥ مَعَهُۥ لَٱفۡتَدَوۡاْ بِهِۦ مِن سُوٓءِ
ٱلۡعَذَابِ يَوۡمَ ٱلۡقِيَٰمَةِۚ وَبَدَا لَهُم مِّنَ ٱللَّهِ
مَا لَمۡ يَكُونُواْ يَحۡتَسِبُونَ ٤٧

---

1 ಯಾರು ಮಾಡುವ ಶಿಫಾರಸ್ಸನ್ನು ಸ್ವೀಕರಿಸಬೇಕು ಮತ್ತು ಯಾರಿಗಾಗಿ ಮಾಡುವ ಶಿಫಾರಸ್ಸನ್ನು ಸ್ವೀಕರಿಸಬೇಕು ಎಂಬುದನ್ನು ನಿರ್ಧರಿಸುವ ಅಧಿಕಾರವಿರುವುದು ಕೇವಲ ಅಲ್ಲಾಹುವಿಗೆ ಮಾತ್ರವಾಗಿದೆ. ಸೃಷ್ಟಿಗಳ ಇಷ್ಟಾನಿಷ್ಟಗಳಿಗೆ ಈ ವಿಷಯದಲ್ಲಿ ಯಾವುದೇ ಪ್ರಭಾವ ಬೀರಲೂ ಸಾಧ್ಯವಿಲ್ಲ.

2 ತಾವು ಏಕದೇವವಿಶ್ವಾಸಿಗಳೆಂದು ವಾದಿಸುವವರ ಪೈಕಿ ಹೆಚ್ಚಿನವರೂ ಅಲ್ಲಾಹುವಿನೊಂದಿಗೆ ಮಾತ್ರ ಪ್ರಾರ್ಥಿಸಬೇಕೆಂದು ಹೇಳುವಾಗ ಕೋಪೋದ್ರಿಕ್ತರಾಗುತ್ತಾರೆ.

48. ಅವರು ಮಾಡಿಟ್ಟಿರುವುದರ ದುಷ್ಪರಿಣಾಮಗಳು ಅವರಿಗೆ ಬಹಿರಂಗವಾಗುವುವು. ಯಾವುದರ ಕುರಿತು ಅವರು ಗೇಲಿ ಮಾಡುತ್ತಿದ್ದರೋ ಅದು ಅವರನ್ನು ಆವರಿಸಿಕೊಳ್ಳುವುದು.

وَبَدَا لَهُمْ سَيِّـَٔاتُ مَا كَسَبُوا۟ وَحَاقَ بِهِم مَّا كَانُوا۟ بِهِۦ يَسْتَهْزِءُونَ ﴿٤٨﴾

49. ಮನುಷ್ಯನಿಗೆ ಹಾನಿಯೇನಾದರೂ ತಟ್ಟಿದರೆ ಅವನು ನಮ್ಮೊಂದಿಗೆ ಪ್ರಾರ್ಥಿಸುವನು. ತರುವಾಯ ನಾವು ಅವನಿಗೆ ನಮ್ಮ ವತಿಯ ಯಾವುದಾದರೂ ಅನುಗ್ರಹವನ್ನು ದಯಪಾಲಿಸಿದರೆ, ಅವನು ಹೇಳುವನು: 'ನನಗೆ ಇದನ್ನು ನೀಡಲಾಗಿರುವುದು ಜ್ಞಾನದ ಆಧಾರದಲ್ಲಿ ಮಾತ್ರವಾಗಿದೆ.(1) ಹಾಗಲ್ಲ, ಅದೊಂದು ಪರೀಕ್ಷೆಯಾಗಿದೆ.(2) ಆದರೆ ಅವರಲ್ಲಿ ಹೆಚ್ಚಿನವರೂ ಅದನ್ನು ಗ್ರಹಿಸಲಾರರು.

فَإِذَا مَسَّ ٱلْإِنسَـٰنَ ضُرٌّ دَعَانَا ثُمَّ إِذَا خَوَّلْنَـٰهُ نِعْمَةً مِّنَّا قَالَ إِنَّمَآ أُوتِيتُهُۥ عَلَىٰ عِلْمٍۭ ۚ بَلْ هِىَ فِتْنَةٌ وَلَـٰكِنَّ أَكْثَرَهُمْ لَا يَعْلَمُونَ ﴿٤٩﴾

50. ಇವರಿಗಿಂತ ಮುಂಚಿನವರೂ ಹೀಗೆಯೇ ಹೇಳಿದ್ದರು. ಆದರೆ ಅವರು ಸಂಪಾದಿಸಿರುವುದು ಅವರಿಗೆ ಯಾವುದೇ ಪ್ರಯೋಜನವನ್ನೂ ಮಾಡಲಿಲ್ಲ.

قَدْ قَالَهَا ٱلَّذِينَ مِن قَبْلِهِمْ فَمَآ أَغْنَىٰ عَنْهُم مَّا كَانُوا۟ يَكْسِبُونَ ﴿٥٠﴾

51. ಅವರು ಸಂಪಾದಿಸಿರುವ ದುಷ್ಪರಿಣಾಮಗಳು ಅವರನ್ನು ಬಾಧಿಸಿದವು. ಇವರ ಪೈಕಿ ಅಕ್ರಮವೆಸಗಿದವರಿಗೂ ಅವರು ಮಾಡಿಟ್ಟಿರುವುದರ ದುಷ್ಪರಿಣಾಮಗಳು ಅವರನ್ನು ಬಾಧಿಸುವುವು. (ನಮ್ಮನ್ನು) ಸೋಲಿಸಲು ಅವರಿಗೆ ಸಾಧ್ಯವಾಗದು.

فَأَصَابَهُمْ سَيِّـَٔاتُ مَا كَسَبُوا۟ ۚ وَٱلَّذِينَ ظَلَمُوا۟ مِنْ هَـٰٓؤُلَآءِ سَيُصِيبُهُمْ سَيِّـَٔاتُ مَا كَسَبُوا۟ وَمَا هُم بِمُعْجِزِينَ ﴿٥١﴾

52. ಅಲ್ಲಾಹು ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು ತಾನಿಚ್ಛಿಸುವವರಿಗೆ ಅದನ್ನು ಸಂಕುಚಿತಗೊಳಿಸುವನು ಎಂಬುದನ್ನು ಅವರು ಗ್ರಹಿಸಿಕೊಂಡಿಲ್ಲವೇ?

أَوَلَمْ يَعْلَمُوٓا۟ أَنَّ ٱللَّهَ يَبْسُطُ ٱلرِّزْقَ لِمَن يَشَآءُ وَيَقْدِرُ ۚ إِنَّ فِى ذَٰلِكَ لَـَٔايَـٰتٍ لِّقَوْمٍ يُؤْمِنُونَ ﴿٥٢﴾

1 ಈ ಅನುಗ್ರಹಕ್ಕೆ ತಾನು ಅರ್ಹನೆಂದು ಅಲ್ಲಾಹು ಅರಿತುಕೊಂಡಿರುವುದರಿಂದಲೇ ಅವನದನ್ನು ನೀಡಿದ್ದಾನೆ ಎಂಬುದು ಅವನ ತರ್ಕವಾಗಿದೆ. ನನಗೆ ಸಿಕ್ಕಿರುವ ಈ ಲಾಭವು ನನ್ನ ಸಾಮರ್ಥ್ಯದ ಫಲವಾಗಿದೆ ಎಂದೂ ಇದನ್ನು ಅರ್ಥೈಸಿಕೊಳ್ಳಬಹುದಾಗಿದೆ.

2 ಲಾಭ ನಷ್ಟಗಳ ಕುರಿತು ಮನುಷ್ಯರ ಪ್ರತಿಕ್ರಿಯೆ ಹೇಗಿರುತ್ತದೆಂದು ನೋಡುವುದಕ್ಕಾಗಿ ಅನುಗ್ರಹಗಳನ್ನು ಮತ್ತು ನಷ್ಟಗಳನ್ನು ನೀಡಿ ಅಲ್ಲಾಹು ಅವರನ್ನು ಪರೀಕ್ಷಿಸುತ್ತಾನೆ.

ಖಂಡಿತವಾಗಿಯೂ ವಿಶ್ವಾಸವಿಡುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.

53. ತಾವು ಹೇಳಿರಿ: 'ಸ್ವತಃ ತಮ್ಮ ಮೇಲೆಯೇ ಅತಿಕ್ರಮವೆಸಗಿರುವ ಓ ನನ್ನ ದಾಸರೇ! ಅಲ್ಲಾಹುವಿನ ಕಾರುಣ್ಯದ ಕುರಿತು ನೀವು ನಿರಾಶರಾಗದಿರಿ. ಖಂಡಿತವಾಗಿಯೂ ಅಲ್ಲಾಹು ಎಲ್ಲ ಪಾಪಗಳನ್ನೂ ಕ್ಷಮಿಸುವನು. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು'.

۞ قُلْ يَٰعِبَادِىَ ٱلَّذِينَ أَسْرَفُوا۟ عَلَىٰٓ أَنفُسِهِمْ لَا تَقْنَطُوا۟ مِن رَّحْمَةِ ٱللَّهِ ۚ إِنَّ ٱللَّهَ يَغْفِرُ ٱلذُّنُوبَ جَمِيعًا ۚ إِنَّهُۥ هُوَ ٱلْغَفُورُ ٱلرَّحِيمُ ﴿٥٣﴾

54. ನಿಮ್ಮ ಬಳಿಗೆ ಶಿಕ್ಷೆಯು ಬರುವುದಕ್ಕೆ ಮುಂಚಿತವಾಗಿ ನೀವು ನಿಮ್ಮ ರಬ್‌ನೆಡೆಗೆ ವಿನಮ್ರತೆಯಿಂದ ಮರಳಿರಿ ಮತ್ತು ಅವನಿಗೆ ಶರಣಾಗಿರಿ. ತರುವಾಯ (ಅದು ಬಂದ ಬಳಿಕ) ನಿಮಗೆ ಸಹಾಯವು ಲಭಿಸದು.

وَأَنِيبُوٓا۟ إِلَىٰ رَبِّكُمْ وَأَسْلِمُوا۟ لَهُۥ مِن قَبْلِ أَن يَأْتِيَكُمُ ٱلْعَذَابُ ثُمَّ لَا تُنصَرُونَ ﴿٥٤﴾

55. ನಿಮಗರಿವಿಲ್ಲದೆಯೇ ನಿಮ್ಮ ಬಳಿಗೆ ಶಿಕ್ಷೆಯು ಹಠಾತ್ತಾಗಿ ಬರುವುದಕ್ಕೆ ಮುಂಚಿತವಾಗಿ ನೀವು ನಿಮ್ಮ ರಬ್‌ನಿಂದ ನಿಮಗೆ ಅವತೀರ್ಣಗೊಂಡಿರುವುದರ ಪೈಕಿ ಅತ್ಯುತ್ತಮವಾಗಿರುವುದನ್ನು ಅನುಸರಿಸಿರಿ.

وَٱتَّبِعُوٓا۟ أَحْسَنَ مَآ أُنزِلَ إِلَيْكُم مِّن رَّبِّكُم مِّن قَبْلِ أَن يَأْتِيَكُمُ ٱلْعَذَابُ بَغْتَةً وَأَنتُمْ لَا تَشْعُرُونَ ﴿٥٥﴾

56. 'ಅಯ್ಯೋ! ನನ್ನ ದುರ್ಗತಿಯೇ! ಅಲ್ಲಾಹುವಿನ ಭಾಗದಲ್ಲಿ ನಾನು ಮಾಡಬೇಕಾಗಿರುವುದರಲ್ಲಿ ಲೋಪವೆಸಗಿಬಿಟ್ಟೆನಲ್ಲ! ಖಂಡಿತವಾಗಿಯೂ ನಾನು ಅಪಹಾಸ್ಯ ಮಾಡುವವರಲ್ಲಿ ಸೇರಿಬಿಟ್ಟೆನಲ್ಲ!' ಎಂದು ಯಾರಾದರೂ ಹೇಳಬಹುದು ಎಂಬುದರಿಂದ.

أَن تَقُولَ نَفْسٌ يَٰحَسْرَتَىٰ عَلَىٰ مَا فَرَّطتُ فِى جَنۢبِ ٱللَّهِ وَإِن كُنتُ لَمِنَ ٱلسَّٰخِرِينَ ﴿٥٦﴾

57. ಅಥವಾ 'ಅಲ್ಲಾಹು ನನ್ನನ್ನು ಸನ್ಮಾರ್ಗದಲ್ಲಿ ಸೇರಿಸಿರುತ್ತಿದ್ದರೆ ನಾನು ಭಯಭಕ್ತಿ ಪಾಲಿಸುವವರಲ್ಲಿ ಸೇರಿರುತ್ತಿದ್ದೆ' ಎಂದು ಹೇಳಬಹುದು ಎಂಬುದರಿಂದ.

أَوْ تَقُولَ لَوْ أَنَّ ٱللَّهَ هَدَىٰنِى لَكُنتُ مِنَ ٱلْمُتَّقِينَ ﴿٥٧﴾

58. ಅಥವಾ ಶಿಕ್ಷೆಯನ್ನು ಕಣ್ಣಾರೆ ಕಾಣುವ ಸಂದರ್ಭದಲ್ಲಿ, 'ಮರಳಿ ಹೋಗುವ ಒಂದು ಅವಕಾಶ ನನಗಿರುತ್ತಿದ್ದರೆ ನಾನು ಸಜ್ಜನರ ಪೈಕಿ

أَوْ تَقُولَ حِينَ تَرَى ٱلْعَذَابَ لَوْ أَنَّ لِى كَرَّةً فَأَكُونَ مِنَ ٱلْمُحْسِنِينَ ﴿٥٨﴾

ಸೇರುತ್ತಿದ್ದೆ' ಎಂದು ಹೇಳಬಹುದು ಎಂಬುದರಿಂದ.

**59.** ಹೌದು! ಖಂಡಿತವಾಗಿಯೂ ನನ್ನ ದೃಷ್ಟಾಂತಗಳು ನಿನ್ನ ಬಳಿಗೆ ಬಂದಿವೆ. ಆದರೆ ನೀನು ಅವುಗಳನ್ನು ನಿಷೇಧಿಸಿದೆ. ನೀನು ಅಹಂಕಾರಪಟ್ಟೆ. ನೀನು ಸತ್ಯನಿಷೇಧಿಗಳಲ್ಲಿ ಸೇರಿದವನಾದೆ.[1]

بَلَىٰ قَدْ جَآءَتْكَ ءَايَـٰتِى فَكَذَّبْتَ بِهَا وَٱسْتَكْبَرْتَ وَكُنتَ مِنَ ٱلْكَـٰفِرِينَ ﴿٥٩﴾

**60.** ಅಲ್ಲಾಹುವಿನ ಮೇಲೆ ಸುಳ್ಳಾರೋಪ ಮಾಡಿದವರ ಮುಖಗಳು ಪುನರುತ್ಥಾನ ದಿನದಂದು ಕಠ್ರಗಾಗಿರುವುದನ್ನು ತಾವು ಕಾಣುವಿರಿ. ನರಕಾಗ್ನಿಯಲ್ಲಿ ಅಹಂಕಾರಿಗಳಿಗೆ ವಾಸಸ್ಥಳವಿರಲಾರದೇ?

وَيَوْمَ ٱلْقِيَـٰمَةِ تَرَى ٱلَّذِينَ كَذَبُوا۟ عَلَى ٱللَّهِ وُجُوهُهُم مُّسْوَدَّةٌ ۚ أَلَيْسَ فِى جَهَنَّمَ مَثْوًى لِّلْمُتَكَبِّرِينَ ﴿٦٠﴾

**61.** ಅಲ್ಲಾಹು ಭಯಭಕ್ತಿ ಪಾಲಿಸುವವರನ್ನು ರಕ್ಷಿಸಿ ಅವರಿಗಿರುವ ಸುರಕ್ಷಿತ ಸ್ಥಳಕ್ಕೆ ತಲುಪಿಸುವನು. ಶಿಕ್ಷೆಯು ಅವರನ್ನು ಸ್ಪರ್ಶಿಸದು. ಅವರು ದುಃಖಿಸಬೇಕಾಗಿಯೂ ಬರದು.

وَيُنَجِّى ٱللَّهُ ٱلَّذِينَ ٱتَّقَوْا۟ بِمَفَازَتِهِمْ لَا يَمَسُّهُمُ ٱلسُّوٓءُ وَلَا هُمْ يَحْزَنُونَ ﴿٦١﴾

**62.** ಅಲ್ಲಾಹು ಸಕಲ ವಸ್ತುಗಳ ಸೃಷ್ಟಿಕರ್ತನಾಗಿರುವನು. ಅವನು ಸಕಲ ವಸ್ತುಗಳ ಮೇಲೂ ಕಾರ್ಯನಿರ್ವಾಹಕನಾಗಿರುವನು.

ٱللَّهُ خَـٰلِقُ كُلِّ شَىْءٍ ۖ وَهُوَ عَلَىٰ كُلِّ شَىْءٍ وَكِيلٌ ﴿٦٢﴾

**63.** ಆಕಾಶಗಳ ಮತ್ತು ಭೂಮಿಯ ಕೀಲಿಕೈಗಳಿರುವುದು ಅವನ ಅಧೀನದಲ್ಲಾಗಿದೆ. ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರೇ ನಷ್ಟ ಹೊಂದಿದವರಾಗಿರುವರು.

لَّهُۥ مَقَالِيدُ ٱلسَّمَـٰوَٰتِ وَٱلْأَرْضِ ۗ وَٱلَّذِينَ كَفَرُوا۟ بِـَٔايَـٰتِ ٱللَّهِ أُو۟لَـٰٓئِكَ هُمُ ٱلْخَـٰسِرُونَ ﴿٦٣﴾

**64.** (ಓ ಪ್ರವಾದಿಯವರೇ!) ಹೇಳಿರಿ: 'ಓ ಅವಿವೇಕಿಗಳೇ! ಅಲ್ಲಾಹುವೇತರರನ್ನು ಆರಾಧಿಸಬೇಕೆಂದು ನೀವು ನನ್ನೊಂದಿಗೆ ಆದೇಶಿಸುತ್ತಿರುವಿರಾ?'

قُلْ أَفَغَيْرَ ٱللَّهِ تَأْمُرُوٓنِّىٓ أَعْبُدُ أَيُّهَا ٱلْجَـٰهِلُونَ ﴿٦٤﴾

1 ಇದು ಶಿಕ್ಷೆಯನ್ನು ಕಣ್ಣಾರೆ ಕಾಣುವಾಗ ಸತ್ಯನಿಷೇಧಿ ಪ್ರಕಟಿಸುವ ವಿಷಾದಕ್ಕೆ ಅಲ್ಲಾಹುವಿನ ಪ್ರತಿಕ್ರಿಯೆಯಾಗಿದೆ.

65. ತಾವೇನಾದರೂ (ಅಲ್ಲಾಹುವಿನೊಂದಿಗೆ) ಸಹಭಾಗಿತ್ವ ಮಾಡಿದರೆ ಖಂಡಿತವಾಗಿಯೂ ತಮ್ಮ ಕರ್ಮಗಳೆಲ್ಲವೂ ನಿಷ್ಫಲವಾಗುವುದು ಮತ್ತು ಖಂಡಿತವಾಗಿಯೂ ತಾವು ನಷ್ಟ ಹೊಂದಿದವರಲ್ಲಿ ಸೇರಿದವರಾಗುವಿರಿ ಎಂದು ತಮಗೂ ತಮಗಿಂತ ಮುಂಚಿನವರಿಗೂ ದಿವ್ಯ ಸಂದೇಶ ನೀಡಲಾಗಿದೆ.

وَلَقَدۡ أُوحِيَ إِلَيۡكَ وَإِلَى ٱلَّذِينَ مِن قَبۡلِكَ
لَئِنۡ أَشۡرَكۡتَ لَيَحۡبَطَنَّ عَمَلُكَ وَلَتَكُونَنَّ
مِنَ ٱلۡخَٰسِرِينَ ٦٥

66. ಅಲ್ಲ, ತಾವು ಅಲ್ಲಾಹುವನ್ನು ಮಾತ್ರ ಆರಾಧಿಸಿರಿ ಮತ್ತು ಕೃತಜ್ಞತೆ ಸಲ್ಲಿಸುವವರೊಂದಿಗೆ ಸೇರಿದವರಾಗಿರಿ.

بَلِ ٱللَّهَ فَٱعۡبُدۡ وَكُن مِّنَ ٱلشَّٰكِرِينَ ٦٦

67. ಅಲ್ಲಾಹುವನ್ನು ಗಣನೆ ಮಾಡಬೇಕಾದ ರೀತಿಯಲ್ಲಿ ಅವರು ಗಣನೆ ಮಾಡಲಿಲ್ಲ. ಪುನರುತ್ಥಾನದಿನದಂದು ಭೂಮಿಯು ಸಂಪೂರ್ಣವಾಗಿ ಅವನ ಒಂದು ಹಿಡಿತದಲ್ಲಿರುವುದು ಮತ್ತು ಆಕಾಶಗಳು ಅವನ ಬಲಗೈಯಲ್ಲಿ ಸುರುಳಿಯಾಗಿ ಹಿಡಿಯಲ್ಪಟ್ಟಿರುವುವು. ಅವನು ಪರಮಪಾವನನು. ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅವನು ಅತೀತನಾಗಿರುವನು.

وَمَا قَدَرُواْ ٱللَّهَ حَقَّ قَدۡرِهِۦ وَٱلۡأَرۡضُ
جَمِيعٗا قَبۡضَتُهُۥ يَوۡمَ ٱلۡقِيَٰمَةِ وَٱلسَّمَٰوَٰتُ
مَطۡوِيَّٰتُۢ بِيَمِينِهِۦۚ سُبۡحَٰنَهُۥ وَتَعَٰلَىٰ عَمَّا
يُشۡرِكُونَ ٦٧

68. ಕಹಳೆಯಲ್ಲಿ ಊದಲಾಗುವಾಗ ಆಕಾಶಗಳಲ್ಲಿರುವವರು ಮತ್ತು ಭೂಮಿಯಲ್ಲಿರುವವರು ನಿಶ್ಚಲರಾಗುವರು. ಅಲ್ಲಾಹು ಇಚ್ಛಿಸಿದವರ ಹೊರತು. ತರುವಾಯ ಅದರಲ್ಲಿ (ಕಹಳೆಯಲ್ಲಿ) ಇನ್ನೊಮ್ಮೆ ಊದಲಾಗುವಾಗ ಅಗೋ! ಅವರು ಎದ್ದು ನಿಂತು ನೋಡುತ್ತಿರುವರು.

وَنُفِخَ فِي ٱلصُّورِ فَصَعِقَ مَن فِي ٱلسَّمَٰوَٰتِ
وَمَن فِي ٱلۡأَرۡضِ إِلَّا مَن شَآءَ ٱللَّهُۖ ثُمَّ نُفِخَ
فِيهِ أُخۡرَىٰ فَإِذَا هُمۡ قِيَامٞ يَنظُرُونَ ٦٨

69. ಭೂಮಿಯು ಅದರ ರಬ್‌ನ ಪ್ರಭೆಯಿಂದಾಗಿ ಬೆಳಗುವುದು.[1] (ಕರ್ಮಗಳ) ದಾಖಲೆಗಳನ್ನು

وَأَشۡرَقَتِ ٱلۡأَرۡضُ بِنُورِ رَبِّهَا وَوُضِعَ

1 ಭೂಮಿಯ ಇಂದಿನ ಸ್ಥಿತಿಗೆ ಅಂತ್ಯದಿನದಂದು ಬದಲಾವಣೆ ತರಲಾಗುವುದೆಂದು 14:48ರಲ್ಲಿ ಹೇಳಲಾಗಿದೆ. ಅದರ ನಂತರ ಉಂಟಾಗುವ ಸ್ಥಿತಿಯನ್ನು ಇಲ್ಲಿ ವಿವರಿಸಲಾಗಿದೆ.

ٱلۡكِتَٰبُ وَجِاْيٓءَ بِٱلنَّبِيِّـۧنَ وَٱلشُّهَدَآءِ وَقُضِيَ بَيۡنَهُم بِٱلۡحَقِّ وَهُمۡ لَا يُظۡلَمُونَ ٦٩

ಇಡಲಾಗುವುದು, ಪ್ರವಾದಿಗಳನ್ನು ಹಾಗೂ ಸಾಕ್ಷಿಗಳನ್ನು[1] ತರಲಾಗುವುದು. ತರುವಾಯ ಜನರ ಮಧ್ಯೆ ನ್ಯಾಯಬದ್ಧವಾಗಿ ತೀರ್ಪು ನೀಡಲಾಗುವುದು. ಅವರೊಂದಿಗೆ ಅನ್ಯಾಯವೆಸಗಲಾಗದು.

وَوُفِّيَتۡ كُلُّ نَفۡسٖ مَّا عَمِلَتۡ وَهُوَ أَعۡلَمُ بِمَا يَفۡعَلُونَ ٧٠

70. ಪ್ರತಿಯೊಬ್ಬ ವ್ಯಕ್ತಿಗೂ ಅವನು ಮಾಡಿದ ಕರ್ಮಗಳ (ಪ್ರತಿಫಲವನ್ನು) ಪೂರ್ಣವಾಗಿ ನೀಡಲಾಗುವುದು. ಅವರು ಮಾಡುತ್ತಿರುವುದರ ಕುರಿತು ಅವನು ಚೆನ್ನಾಗಿ ಅರಿಯುವವನಾಗಿರುವನು.

وَسِيقَ ٱلَّذِينَ كَفَرُوٓاْ إِلَىٰ جَهَنَّمَ زُمَرًاۖ حَتَّىٰٓ إِذَا جَآءُوهَا فُتِحَتۡ أَبۡوَٰبُهَا وَقَالَ لَهُمۡ خَزَنَتُهَآ أَلَمۡ يَأۡتِكُمۡ رُسُلٞ مِّنكُمۡ يَتۡلُونَ عَلَيۡكُمۡ ءَايَٰتِ رَبِّكُمۡ وَيُنذِرُونَكُمۡ لِقَآءَ يَوۡمِكُمۡ هَٰذَاۚ قَالُواْ بَلَىٰ وَلَٰكِنۡ حَقَّتۡ كَلِمَةُ ٱلۡعَذَابِ عَلَى ٱلۡكَٰفِرِينَ ٧١

71. ಸತ್ಯನಿಷೇಧಿಗಳನ್ನು ಗುಂಪು ಗುಂಪಾಗಿ ನರಕಾಗ್ನಿಯೆಡೆಗೆ ಸಾಗಿಸಲಾಗುವುದು. ಹೀಗೆ ಅವರು ಅದರ ಸಮೀಪಕ್ಕೆ ಬಂದಾಗ ಅದರ ಬಾಗಿಲುಗಳನ್ನು ತೆರೆಯಲಾಗುವುದು. 'ನಿಮಗೆ ನಿಮ್ಮ ರಬ್‌ನ ದೃಷ್ಟಾಂತಗಳನ್ನು ಓದಿಕೊಡುತ್ತಲೂ, ನಿಮ್ಮ ಈ ದಿನವನ್ನು ನೀವು ಭೇಟಿಯಾಗಲಿರುವಿರಿ ಎಂದು ನಿಮಗೆ ಎಚ್ಚರಿಕೆ ನೀಡುತ್ತಲೂ, ನಿಮ್ಮವರೇ ಆಗಿರುವ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರಲಿಲ್ಲವೇ?' ಎಂದು ಅದರ (ನರಕಾಗ್ನಿಯ) ಕಾವಲುಗಾರರು ಅವರೊಂದಿಗೆ ಕೇಳುವರು. ಅವರು ಹೇಳುವರು: 'ಹೌದು! ಆದರೆ ಸತ್ಯನಿಷೇಧಿಗಳ ಮೇಲೆ ಶಿಕ್ಷೆಯ ವಚನವು ಸತ್ಯವಾಗಿಬಿಟ್ಟಿದೆ'.

قِيلَ ٱدۡخُلُوٓاْ أَبۡوَٰبَ جَهَنَّمَ خَٰلِدِينَ فِيهَاۖ فَبِئۡسَ مَثۡوَى ٱلۡمُتَكَبِّرِينَ ٧٢

72. (ಅವರೊಂದಿಗೆ) ಹೇಳಲಾಗುವುದು: 'ನೀವು ನರಕಾಗ್ನಿಯ ದ್ವಾರಗಳ ಮೂಲಕ ಪ್ರವೇಶಿಸಿರಿ. ನೀವು ಅದರಲ್ಲಿ ಶಾಶ್ವತವಾಗಿ ವಾಸಿಸುವಿರಿ. ಅಹಂಕಾರಿಗಳ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!'

---

1 ಇಲ್ಲಿ ಹೇಳಲಾದ ಸಾಕ್ಷಿಗಳು ಎಂಬ ಪದದ ತಾತ್ಪರ್ಯ ಪ್ರವಾದಿಗಳು ಸತ್ಯಸಂದೇಶವನ್ನು ಜನರಿಗೆ ತಲುಪಿಸಿಕೊಟ್ಟಿದ್ದಾರೆ ಎಂಬುದಕ್ಕೆ ಸಾಕ್ಷಿಗಳಾಗಿ ಹಾಜರುಗೊಳಿಸಲಾಗುವ ಸಜ್ಜನರಾದ ಸತ್ಯವಿಶ್ವಾಸಿಗಳಾಗಿರಬಹುದು.

73. ತಮ್ಮ ರಬ್ಬನ್ನು ಭಯಪಟ್ಟು ಜೀವನ ಸಾಗಿಸಿದವರನ್ನು ಗುಂಪು ಗುಂಪಾಗಿ ಸ್ವರ್ಗದೆಡೆಗೆ ಕೊಂಡೊಯ್ಯಲಾಗುವುದು. ಹಾಗೆ ಅವರು ಅದರ ಸಮೀಪಕ್ಕೆ ಬಂದಾಗ ಅದರ ಬಾಗಿಲುಗಳನ್ನು ತೆರೆಯಲಾಗುವುದು. 'ನಿಮ್ಮ ಮೇಲೆ ಶಾಂತಿಯಿರಲಿ! ನೀವು ಪರಿಶುದ್ಧರಾಗಿರುವಿರಿ. ಆದ್ದರಿಂದ ಶಾಶ್ವತವಾಸಿಗಳಾಗಿ ಇದನ್ನು ಪ್ರವೇಶಿಸಿರಿ' ಎಂದು ಅದರ ಕಾವಲುಗಾರರು ಅವರೊಂದಿಗೆ ಹೇಳುವರು.

وَسِيقَ ٱلَّذِينَ ٱتَّقَوْا۟ رَبَّهُمْ إِلَى ٱلْجَنَّةِ زُمَرًا ۖ حَتَّىٰٓ إِذَا جَآءُوهَا وَفُتِحَتْ أَبْوَٰبُهَا وَقَالَ لَهُمْ خَزَنَتُهَا سَلَـٰمٌ عَلَيْكُمْ طِبْتُمْ فَٱدْخُلُوهَا خَـٰلِدِينَ ﴿٧٣﴾

74. ಅವರು ಹೇಳುವರು: 'ನಮ್ಮೊಂದಿಗಿರುವ ತನ್ನ ವಾಗ್ದಾನದಲ್ಲಿ ಸತ್ಯಸಂಧತೆಯನ್ನು ಪಾಲಿಸಿರುವ ಮತ್ತು ಸ್ವರ್ಗದಲ್ಲಿ ನಾವಿಚ್ಛಿಸುವ ಕಡೆ ವಾಸಿಸಬಹುದಾದ ರೀತಿಯಲ್ಲಿ ಈ (ಸ್ವರ್ಗ)ಭೂಮಿಗೆ ನಮ್ಮನ್ನು ವಾರೀಸುದಾರರಾಗಿ ಮಾಡಿರುವ ಅಲ್ಲಾಹುವಿಗೆ ಸ್ತುತಿ. ಕರ್ಮವೆಸಗಿದವರಿಗಿರುವ ಪ್ರತಿಫಲವು ಅದೆಷ್ಟು ವಿಶಿಷ್ಟವಾದುದು!

وَقَالُوا۟ ٱلْحَمْدُ لِلَّهِ ٱلَّذِى صَدَقَنَا وَعْدَهُۥ وَأَوْرَثَنَا ٱلْأَرْضَ نَتَبَوَّأُ مِنَ ٱلْجَنَّةِ حَيْثُ نَشَآءُ ۖ فَنِعْمَ أَجْرُ ٱلْعَـٰمِلِينَ ﴿٧٤﴾

75. ಮಲಕ್‌ಗಳು ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಕೀರ್ತನೆಯನ್ನು ಮಾಡುತ್ತಾ ಸಿಂಹಾಸನದ ಸುತ್ತಲೂ ಆವರಿಸಿಕೊಳ್ಳುತ್ತಿರುವುದಾಗಿ ತಾವು ಕಾಣುವಿರಿ. ಅವರ ಮಧ್ಯೆ ನ್ಯಾಯಬದ್ಧವಾದ ತೀರ್ಪನ್ನು ನೀಡಲಾಗುವುದು. 'ಸರ್ವಲೋಕಗಳ ರಬ್ಬಾಗಿರುವ ಅಲ್ಲಾಹುವಿಗೆ ಸ್ತುತಿ' ಎಂದು ಹೇಳಲಾಗುವುದು.

وَتَرَى ٱلْمَلَـٰٓئِكَةَ حَآفِّينَ مِنْ حَوْلِ ٱلْعَرْشِ يُسَبِّحُونَ بِحَمْدِ رَبِّهِمْ ۖ وَقُضِىَ بَيْنَهُم بِٱلْحَقِّ ۚ وَقِيلَ ٱلْحَمْدُ لِلَّهِ رَبِّ ٱلْعَـٰلَمِينَ ﴿٧٥﴾

## ಅಲ್‌ಮುಅ್‌ಮಿನ್[1] (ಸತ್ಯವಿಶ್ವಾಸಿ)

## سُورَةُ المُؤْمِنِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 85

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

حمٓ ﴿١﴾ تَنزِيلُ ٱلۡكِتَٰبِ مِنَ ٱللَّهِ ٱلۡعَزِيزِ ٱلۡعَلِيمِ ﴿٢﴾ غَافِرِ ٱلذَّنۢبِ وَقَابِلِ ٱلتَّوۡبِ شَدِيدِ ٱلۡعِقَابِ ذِي ٱلطَّوۡلِۖ لَآ إِلَٰهَ إِلَّا هُوَۖ إِلَيۡهِ ٱلۡمَصِيرُ ﴿٣﴾

**1-3.** ಹಾ–ಮೀಮ್. ಈ ಗ್ರಂಥವು ಅವತೀರ್ಣಗೊಂಡಿರುವುದು ಪ್ರತಾಪಶಾಲಿಯೂ ಸರ್ವಜ್ಞನೂ ಆಗಿರುವ ಅಲ್ಲಾಹುವಿನ ವತಿಯಿಂದಾಗಿದೆ. ಅವನು ಪಾಪವನ್ನು ಕ್ಷಮಿಸುವವನೂ, ಪಶ್ಚಾತ್ತಾಪವನ್ನು ಸ್ವೀಕರಿಸುವವನೂ, ಕಠಿಣವಾಗಿ ಶಿಕ್ಷಿಸುವವನೂ, ಅಪಾರ ಸಾಮರ್ಥ್ಯವುಳ್ಳವನೂ ಆಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಮರಳುವಿಕೆಯು ಅವನೆಡೆಗೇ ಆಗಿದೆ.

مَا يُجَٰدِلُ فِيٓ ءَايَٰتِ ٱللَّهِ إِلَّا ٱلَّذِينَ كَفَرُواْ فَلَا يَغۡرُرۡكَ تَقَلُّبُهُمۡ فِي ٱلۡبِلَٰدِ ﴿٤﴾

**4.** ಸತ್ಯನಿಷೇಧಿಗಳ ಹೊರತು ಇನ್ನಾರೂ ಅಲ್ಲಾಹುವಿನ ದೃಷ್ಟಾಂತಗಳ ಕುರಿತು ತರ್ಕಿಸಲಾರರು. ಆದ್ದರಿಂದ ನಾಡುಗಳಲ್ಲಿನ ಅವರ ಸ್ವೇಚ್ಛಾ ವಿಹಾರವು ತಮ್ಮನ್ನು ವಂಚಿಸದಿರಲಿ.

كَذَّبَتۡ قَبۡلَهُمۡ قَوۡمُ نُوحٖ وَٱلۡأَحۡزَابُ مِنۢ بَعۡدِهِمۡۖ وَهَمَّتۡ كُلُّ أُمَّةِۭ بِرَسُولِهِمۡ لِيَأۡخُذُوهُۖ وَجَٰدَلُواْ بِٱلۡبَٰطِلِ لِيُدۡحِضُواْ بِهِ ٱلۡحَقَّ فَأَخَذۡتُهُمۡۖ فَكَيۡفَ كَانَ عِقَابِ ﴿٥﴾

**5.** ಅವರಿಗಿಂತ ಮೊದಲು ನೂಹ್‌ರ ಜನತೆ ಮತ್ತು ಅವರ ನಂತರದ ಪಂಗಡಗಳು (ಸತ್ಯವನ್ನು) ನಿಷೇಧಿಸಿದ್ದರು. ಪ್ರತಿಯೊಂದು ಸಮುದಾಯವೂ ತಮ್ಮ ಸಂದೇಶವಾಹಕರನ್ನು ಹಿಡಿಯಲು ಯತ್ನಿಸಿದ್ದರು. ಅಸತ್ಯದ ಮೂಲಕ ಸತ್ಯವನ್ನು ದಮನಿಸಲು ಅವರು ತರ್ಕಿಸಿದ್ದರು. ಆದ್ದರಿಂದ ನಾನು ಅವರನ್ನು ಹಿಡಿದೆನು. ಆಗ ನನ್ನ ಶಿಕ್ಷೆಯು ಹೇಗಿತ್ತು!

1 ಸತ್ಯವಿಶ್ವಾಸಿಯ ವಿಶೇಷಗುಣಗಳತ್ತ ಬೆಳಕು ಚೆಲ್ಲುವ ಅಧ್ಯಾಯವೆಂಬ ಅರ್ಥದಲ್ಲಿ ಇದಕ್ಕೆ 'ಮುಅ್‌ಮಿನ್' ಎಂಬ ಹೆಸರನ್ನು ನೀಡಲಾಗಿದೆ. ಈ ಅಧ್ಯಾಯವನ್ನು ಗಾಫಿರ್ ಎಂದೂ ಕರೆಯಲಾಗುತ್ತದೆ. 3ನೇ ಸೂಕ್ತಿಯಲ್ಲಿರುವ 'ಗಾಫಿರ್' ಎಂಬ ಪದವು ಪ್ರಸ್ತುತ ಹೆಸರು ಬರಲು ಕಾರಣವಾಗಿದೆ.

6. ಹೀಗೆ ಸತ್ಯನಿಷೇಧಿಗಳ ಮೇಲೆ ಅವರು ನರಕ ವಾಸಿಗಳಾಗಿರುವರು ಎಂಬ ತಮ್ಮ ರಬ್‌ನ ವಚನವು ಸತ್ಯವಾಗಿ ಪರಿಣಮಿಸಿದೆ.

وَكَذَٰلِكَ حَقَّتْ كَلِمَتُ رَبِّكَ عَلَى ٱلَّذِينَ كَفَرُوٓا۟ أَنَّهُمْ أَصْحَٰبُ ٱلنَّارِ ﴿٦﴾

7. ಸಿಂಹಾಸನವನ್ನು ಹೊರುವವರು ಮತ್ತು ಅದರ ಸುತ್ತಲಲ್ಲಿರುವವರು (ಮಲಕ್‌ಗಳು) ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಕೀರ್ತನೆ ಮಾಡುತ್ತಿರುವರು. ಅವರು ಅವನಲ್ಲಿ ವಿಶ್ವಾಸವಿಟ್ಟಿರುವರು ಮತ್ತು ವಿಶ್ವಾಸವಿಟ್ಟವರಿಗಾಗಿ ಹೀಗೆ ಪಾಪಮುಕ್ತಿಯನ್ನು ಬೇಡುತ್ತಿರುವರು: 'ಓ ನಮ್ಮ ರಬ್! ನಿನ್ನ ಕಾರುಣ್ಯ ಮತ್ತು ಅರಿವು ಸರ್ವ ವಸ್ತುಗಳನ್ನೂ ವ್ಯಾಪಿಸಿಕೊಂಡಿದೆ. ಆದ್ದರಿಂದ ಪಶ್ಚಾತ್ತಾಪಪಡುವವರಿಗೆ ಮತ್ತು ನಿನ್ನ ಮಾರ್ಗವನ್ನು ಹಿಂಬಾಲಿಸುವವರಿಗೆ ಪಾಪಮುಕ್ತಿಯನ್ನು ದಯಪಾಲಿಸು. ಅವರನ್ನು ನರಕ ಶಿಕ್ಷೆಯಿಂದ ಪಾರುಮಾಡು.

ٱلَّذِينَ يَحْمِلُونَ ٱلْعَرْشَ وَمَنْ حَوْلَهُۥ يُسَبِّحُونَ بِحَمْدِ رَبِّهِمْ وَيُؤْمِنُونَ بِهِۦ وَيَسْتَغْفِرُونَ لِلَّذِينَ ءَامَنُوا۟ رَبَّنَا وَسِعْتَ كُلَّ شَىْءٍ رَّحْمَةً وَعِلْمًا فَٱغْفِرْ لِلَّذِينَ تَابُوا۟ وَٱتَّبَعُوا۟ سَبِيلَكَ وَقِهِمْ عَذَابَ ٱلْجَحِيمِ ﴿٧﴾

8. ಓ ನಮ್ಮ ರಬ್!, ನೀನು ಅವರಿಗೆ ವಾಗ್ದಾನ ಮಾಡಿರುವ ಶಾಶ್ವತವಾಸಕ್ಕಿರುವ ಸ್ವರ್ಗಗಳಲ್ಲಿ ಅವರನ್ನು ಅವರ ಮಾತಾಪಿತರ, ಪತ್ನಿಯರ ಹಾಗೂ ಸಂತತಿಗಳ ಪೈಕಿ ಸಜ್ಜನರಾಗಿರುವವರನ್ನೂ ಪ್ರವೇಶ ಮಾಡಿಸು. ಖಂಡಿತವಾಗಿಯೂ ನೀನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವೆ.

رَبَّنَا وَأَدْخِلْهُمْ جَنَّٰتِ عَدْنٍ ٱلَّتِى وَعَدتَّهُمْ وَمَن صَلَحَ مِنْ ءَابَآئِهِمْ وَأَزْوَٰجِهِمْ وَذُرِّيَّٰتِهِمْ ۚ إِنَّكَ أَنتَ ٱلْعَزِيزُ ٱلْحَكِيمُ ﴿٨﴾

9. ಅವರನ್ನು ಕೆಡುಕುಗಳಿಂದ ರಕ್ಷಿಸು. ಆ ದಿನದಂದು ನೀನು ಯಾರನ್ನು ಕೆಡುಕುಗಳಿಂದ ರಕ್ಷಿಸುವೆಯೋ ಅವನೊಂದಿಗೆ ಖಂಡಿತವಾಗಿಯೂ ನೀನು ಕರುಣೆ ತೋರಿರುವೆ. ಮಹಾ ವಿಜಯವು ಅದೇ ಆಗಿದೆ'.

وَقِهِمُ ٱلسَّيِّـَٔاتِ ۚ وَمَن تَقِ ٱلسَّيِّـَٔاتِ يَوْمَئِذٍ فَقَدْ رَحِمْتَهُۥ ۚ وَذَٰلِكَ هُوَ ٱلْفَوْزُ ٱلْعَظِيمُ ﴿٩﴾

10. ಖಂಡಿತವಾಗಿಯೂ ಸತ್ಯನಿಷೇಧಿಗಳನ್ನು ಕರೆದು ಹೇಳಲಾಗುವುದು: 'ನಿಮ್ಮನ್ನು ವಿಶ್ವಾಸದೆಡೆಗೆ ಆಹ್ವಾನಿಸಲಾದ ಬಳಿಕವೂ ನೀವು ನಿಷೇಧಿಸಿದ ಸಂದರ್ಭ ಅಲ್ಲಾಹುವಿಗೆ (ನಿಮ್ಮ ಮೇಲಿದ್ದ) ಕ್ರೋಧವು ನಿಮಗೆ ಪರಸ್ಪರರಲ್ಲಿರುವ ಕ್ರೋಧಕ್ಕಿಂತಲೂ ಹಿರಿದಾಗಿತ್ತು'.

إِنَّ ٱلَّذِينَ كَفَرُوا۟ يُنَادَوْنَ لَمَقْتُ ٱللَّهِ أَكْبَرُ مِن مَّقْتِكُمْ أَنفُسَكُمْ إِذْ تُدْعَوْنَ إِلَى ٱلْإِيمَٰنِ فَتَكْفُرُونَ ﴿١٠﴾

11. ಅವರು ಹೇಳುವರು: ‘ಓ ನಮ್ಮ ರಬ್! ನೀನು ನಮ್ಮನ್ನು ಎರಡು ಬಾರಿ ಮೃತಪಡಿಸಿರುವೆ ಮತ್ತು ಎರಡು ಬಾರಿ ಜೀವ ನೀಡಿರುವೆ.(1) ನಾವು ನಮ್ಮ ಪಾಪಗಳನ್ನು ಒಪ್ಪಿಕೊಂಡಿರುವೆವು. ಆದ್ದರಿಂದ ಹೊರಹೋಗಲು ಯಾವುದಾದರೂ ದಾರಿಯಿದೆಯೇ?’

قَالُواْ رَبَّنَآ أَمَتَّنَا ٱثۡنَتَيۡنِ وَأَحۡيَيۡتَنَا ٱثۡنَتَيۡنِ فَٱعۡتَرَفۡنَا بِذُنُوبِنَا فَهَلۡ إِلَىٰ خُرُوجٖ مِّن سَبِيلٖ ١١

12. ಇದು ಅಲ್ಲಾಹುವಿನೊಂದಿಗೆ ಮಾತ್ರ ಪ್ರಾರ್ಥಿಸಲಾದರೆ ನೀವು ನಿಷೇಧಿಸುತ್ತಿದ್ದಿರಿ. ಆದರೆ ಅವನೊಂದಿಗೆ ಸಹಭಾಗಿತ್ವ ಮಾಡಲಾದರೆ ನೀವು ವಿಶ್ವಾಸವಿಡುತ್ತಿದ್ದಿರಿ ಎಂಬುದರಿಂದಾಗಿದೆ. ಆದರೆ (ಇಂದು) ತೀರ್ಪು ನೀಡುವ ಅಧಿಕಾರವು ಅತ್ಯುನ್ನತನೂ ಮಹಾನನೂ ಆಗಿರುವ ಅಲ್ಲಾಹುವಿಗಾಗಿದೆ.

ذَٰلِكُم بِأَنَّهُۥٓ إِذَا دُعِيَ ٱللَّهُ وَحۡدَهُۥ كَفَرۡتُمۡ وَإِن يُشۡرَكۡ بِهِۦ تُؤۡمِنُواْۚ فَٱلۡحُكۡمُ لِلَّهِ ٱلۡعَلِيِّ ٱلۡكَبِيرِ ١٢

13. ಅವನು ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸಿಕೊಡುವನು. ಅವನು ನಿಮಗೆ ಆಕಾಶದಿಂದ ಅನ್ನಾಧಾರವನ್ನು ಇಳಿಸಿಕೊಡುವನು. (ಅವನೆಡೆಗೆ) ಮರಳುವವರು ಮಾತ್ರ ಚಿಂತಿಸಿ ಗ್ರಹಿಸುವರು.

هُوَ ٱلَّذِي يُرِيكُمۡ ءَايَٰتِهِۦ وَيُنَزِّلُ لَكُم مِّنَ ٱلسَّمَآءِ رِزۡقٗاۚ وَمَا يَتَذَكَّرُ إِلَّا مَن يُنِيبُ ١٣

14. ಆದ್ದರಿಂದ ವಿಧೇಯತೆಯನ್ನು ಅಲ್ಲಾಹುವಿಗೆ ನಿಷ್ಕಳಂಕಗೊಳಿಸಿ ಅವನೊಂದಿಗೆ ಪ್ರಾರ್ಥಿಸಿರಿ. ಸತ್ಯನಿಷೇಧಿಗಳು ಎಷ್ಟು ಅಸಹ್ಯಪಟ್ಟರೂ ಸರಿ.

فَٱدۡعُواْ ٱللَّهَ مُخۡلِصِينَ لَهُ ٱلدِّينَ وَلَوۡ كَرِهَ ٱلۡكَٰفِرُونَ ١٤

15. ಅವನು ಪದವಿಗಳಲ್ಲಿ ಉನ್ನತನಾಗಿರುವನು ಮತ್ತು ಸಿಂಹಾಸನದ ಅಧಿಪತಿಯಾಗಿರುವನು. ಅವನು ತನ್ನ ದಾಸರ ಪೈಕಿ ತಾನಿಚ್ಛಿಸುವವರಿಗೆ ತನ್ನ ಸಂದೇಶವಾದ ಸ್ಫೂರ್ತಿಯನ್ನು ನೀಡುವನು. (ಮನುಷ್ಯರು) ಪರಸ್ಪರ ಭೇಟಿಯಾಗುವ ದಿನದ ಕುರಿತು ಎಚ್ಚರಿಕೆ ನೀಡುವ ಸಲುವಾಗಿ.

رَفِيعُ ٱلدَّرَجَٰتِ ذُو ٱلۡعَرۡشِ يُلۡقِي ٱلرُّوحَ مِنۡ أَمۡرِهِۦ عَلَىٰ مَن يَشَآءُ مِنۡ عِبَادِهِۦ لِيُنذِرَ يَوۡمَ ٱلتَّلَاقِ ١٥

---

1 ಭೂಮಿಯಲ್ಲಿರುವ ನಿರ್ಜೀವ ಧಾತುಲವಣಗಳಿಂದಲೇ ಜೀವ ಮತ್ತು ಜೀವಿಗಳು ರೂಪುಗೊಳ್ಳುತ್ತವೆ. ಯಾವುದೇ ಜೀವಿಯೂ ಜೀವದ ಸ್ಫುರಣವಾಗಿ ರೂಪುಗೊಳ್ಳುವುದಕ್ಕೆ ಮೊದಲು ನಿರ್ಜೀವ ವಸ್ತು ಮಾತ್ರವಾಗಿರುತ್ತದೆ. ಹಾಗೆಯೇ ಯಾವುದೇ ಜೀವಿಯೂ ಮರಣದೊಂದಿಗೆ ನಿರ್ಜೀವಾವಸ್ಥೆಗೇ ಮರಳುತ್ತದೆ. ಆ ನಿರ್ಜೀವಾವಸ್ಥೆಯಿಂದ ಅಲ್ಲಾಹು ಮನುಷ್ಯನನ್ನು ಪುನರುತ್ಥಾನಗೊಳಿಸುತ್ತಾನೆ. ಹೀಗೆ ಜೀವ ಮತ್ತು ನಿರ್ಜೀವ ಸ್ಥಿತಿಯಲ್ಲಿ ಎರಡೆರಡು ಹಂತಗಳು ಮನುಷ್ಯನಿಗಿವೆ.

**16.** ಅದು ಅವರು ಬಯಲಿಗೆ ಬರುವ ದಿನವಾಗಿದೆ. ಅವರಿಗೆ ಸಂಬಂಧಿಸಿದ ಯಾವ ವಿಷಯವೂ ಅಲ್ಲಾಹುವಿನಿಂದ ಮರೆಯಾಗಿರದು. ಇಂದು ರಾಜಾಧಿಕಾರವು ಯಾರಿಗೆ? ಏಕೈಕನೂ ಸರ್ವಾಧಿಕಾರಿಯೂ ಆಗಿರುವ ಅಲ್ಲಾಹುವಿಗಾಗಿದೆ.

يَوْمَ هُم بَٰرِزُونَۖ لَا يَخْفَىٰ عَلَى ٱللَّهِ مِنْهُمْ شَيْءٌۚ لِّمَنِ ٱلْمُلْكُ ٱلْيَوْمَۖ لِلَّهِ ٱلْوَٰحِدِ ٱلْقَهَّارِ ١٦

**17.** ಈ ದಿನದಂದು ಪ್ರತಿಯೊಬ್ಬ ವ್ಯಕ್ತಿಗೂ ತಾನು ಸಂಪಾದಿಸಿರುವುದರ ಪ್ರತಿಫಲವನ್ನು ನೀಡಲಾಗುವುದು. ಇಂದು ಯಾವುದೇ ಅನ್ಯಾಯವಿಲ್ಲ. ಖಂಡಿತವಾಗಿಯೂ ಅಲ್ಲಾಹು ಅತಿವೇಗವಾಗಿ ವಿಚಾರಣೆ ಮಾಡುವವನಾಗಿರುವನು.

ٱلْيَوْمَ تُجْزَىٰ كُلُّ نَفْسٍۭ بِمَا كَسَبَتْۚ لَا ظُلْمَ ٱلْيَوْمَۚ إِنَّ ٱللَّهَ سَرِيعُ ٱلْحِسَابِ ١٧

**18.** ಆಸನ್ನವಾದ ಆ ಸಂಭವದ ದಿನದ ಬಗ್ಗೆ ತಾವು ಅವರಿಗೆ ಮುನ್ನೆಚ್ಚರಿಕೆ ನೀಡಿರಿ. ಅಂದರೆ ಹೃದಯಗಳು ಗಂಟಲ ಬಳಿ ತಲುಪುವ ಮತ್ತು ಅವರು ಉಸಿರನ್ನು ಬಿಗಿಹಿಡಿಯುವ ಸಂದರ್ಭ. ಅಕ್ರಮಿಗಳಿಗೆ ಆಪ್ತಮಿತ್ರನಾಗಿ ಮತ್ತು ಸ್ವೀಕಾರಯೋಗ್ಯ ಶಿಫಾರಸ್ಸುಗಾರನಾಗಿ ಯಾರೂ ಇಲ್ಲ.

وَأَنذِرْهُمْ يَوْمَ ٱلْـَٔازِفَةِ إِذِ ٱلْقُلُوبُ لَدَى ٱلْحَنَاجِرِ كَٰظِمِينَۚ مَا لِلظَّٰلِمِينَ مِنْ حَمِيمٍ وَلَا شَفِيعٍ يُطَاعُ ١٨

**19.** ಕಣ್ಣುಗಳ ವಂಚನೆಯ ನೋಟಗಳನ್ನು ಮತ್ತು ಹೃದಯಗಳು ಮರೆಮಾಚುವುದನ್ನು ಅವನು (ಅಲ್ಲಾಹು) ಅರಿಯುವನು.

يَعْلَمُ خَآئِنَةَ ٱلْأَعْيُنِ وَمَا تُخْفِى ٱلصُّدُورُ ١٩

**20.** ಅಲ್ಲಾಹು ಸತ್ಯದೊಂದಿಗೆ ತೀರ್ಪು ನೀಡುವನು. ಅವನ ಹೊರತು ಅವರು ಕರೆದು ಪ್ರಾರ್ಥಿಸುವವರು ಯಾವುದರಲ್ಲಿಯೂ ತೀರ್ಪು ನೀಡಲಾರರು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ಕಾಣುವವನೂ ಆಗಿರುವನು.

وَٱللَّهُ يَقْضِى بِٱلْحَقِّۖ وَٱلَّذِينَ يَدْعُونَ مِن دُونِهِۦ لَا يَقْضُونَ بِشَىْءٍۗ إِنَّ ٱللَّهَ هُوَ ٱلسَّمِيعُ ٱلْبَصِيرُ ٢٠

**21.** ಇವರು ಭೂಮಿಯಲ್ಲಿ ಸಂಚರಿಸಿ ಇವರಿಗಿಂತ ಮುಂಚಿನವರ ಪರ್ಯವಸಾನವು ಹೇಗಿತ್ತೆಂಬುದನ್ನು ನೋಡಲಾರರೇ? ಅವರು

۞ أَوَلَمْ يَسِيرُوا۟ فِى ٱلْأَرْضِ فَيَنظُرُوا۟ كَيْفَ كَانَ عَٰقِبَةُ ٱلَّذِينَ كَانُوا۟ مِن قَبْلِهِمْۚ

ಶಕ್ತಿಯಲ್ಲಿ ಮತ್ತು ಭೂಮಿಯಲ್ಲಿ (ಬಾಕಿಯುಳಿಸಿದ) ಸ್ಮಾರಕಗಳ ಮೂಲಕ ಇವರಿಗಿಂತ ಹೆಚ್ಚು ಬಲಿಷ್ಠರಾಗಿದ್ದರು. ತರುವಾಯ ಅವರ ಪಾಪಗಳ ನಿಮಿತ್ತ ಅಲ್ಲಾಹು ಅವರನ್ನು ಹಿಡಿದನು. ಅಲ್ಲಾಹುವಿನ ಶಿಕ್ಷೆಯಿಂದ ಅವರಿಗೆ ರಕ್ಷಣೆ ನೀಡುವವರಾರೂ ಇರಲಿಲ್ಲ.

كَانُوا۟ هُمْ أَشَدَّ مِنْهُمْ قُوَّةً وَءَاثَارًا فِى
ٱلْأَرْضِ فَأَخَذَهُمُ ٱللَّهُ بِذُنُوبِهِمْ وَمَا كَانَ
لَهُم مِّنَ ٱللَّهِ مِن وَاقٍ ﴿٢١﴾

22. ಇದೇಕೆಂದರೆ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಿದ್ದರು. ಆದರೆ ಅವರು ನಿಷೇಧಿಸಿದರು. ಆಗ ಅಲ್ಲಾಹು ಅವರನ್ನು ಹಿಡಿದನು. ಖಂಡಿತವಾಗಿಯೂ ಅವನು ಬಲಿಷ್ಠನೂ ಕಠಿಣವಾಗಿ ಶಿಕ್ಷಿಸುವವನೂ ಆಗಿರುವನು.

ذَٰلِكَ بِأَنَّهُمْ كَانَت تَّأْتِيهِمْ رُسُلُهُم
بِٱلْبَيِّنَٰتِ فَكَفَرُوا۟ فَأَخَذَهُمُ ٱللَّهُ ۚ إِنَّهُۥ
قَوِىٌّ شَدِيدُ ٱلْعِقَابِ ﴿٢٢﴾

23-24. ಖಂಡಿತವಾಗಿಯೂ ನಾವು ಮೂಸಾರನ್ನು ಫಿರ್‌ಔನ್, ಹಾಮಾನ್ ಮತ್ತು ಕಾರೂನ್‌ರ ಬಳಿಗೆ ನಮ್ಮ ದೃಷ್ಟಾಂತಗಳೊಂದಿಗೆ ಮತ್ತು ಸ್ಪಷ್ಟವಾದ ಆಧಾರ ಪ್ರಮಾಣದೊಂದಿಗೆ ಕಳುಹಿಸಿದ್ದೆವು. ಆದರೆ ಅವರು 'ಮಾಂತ್ರಿಕ! ಮಿಥ್ಯವಾದಿ!' ಎಂದು ಹೇಳಿದರು.

وَلَقَدْ أَرْسَلْنَا مُوسَىٰ بِـَٔايَٰتِنَا وَسُلْطَٰنٍ
مُّبِينٍ ﴿٢٣﴾ إِلَىٰ فِرْعَوْنَ وَهَٰمَٰنَ وَقَٰرُونَ
فَقَالُوا۟ سَٰحِرٌ كَذَّابٌ ﴿٢٤﴾

25. ನಮ್ಮ ವತಿಯ ಸತ್ಯದೊಂದಿಗೆ ಮೂಸಾ ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಇವನೊಂದಿಗೆ ವಿಶ್ವಾಸವಿಟ್ಟವರ ಗಂಡುಮಕ್ಕಳನ್ನು ವಧಿಸಿರಿ ಮತ್ತು ಅವರ ಸ್ತ್ರೀಯರನ್ನು ಬದುಕಲು ಬಿಡಿರಿ'. (ಆದರೆ) ಸತ್ಯನಿಷೇಧಿಗಳ ಕುತಂತ್ರವು ದಾರಿಗೇಡಿನಲ್ಲೇ ಕೊನೆಗೊಳ್ಳುವುದು.

فَلَمَّا جَآءَهُم بِٱلْحَقِّ مِنْ عِندِنَا قَالُوا۟
ٱقْتُلُوٓا۟ أَبْنَآءَ ٱلَّذِينَ ءَامَنُوا۟ مَعَهُۥ
وَٱسْتَحْيُوا۟ نِسَآءَهُمْ ۚ وَمَا كَيْدُ ٱلْكَٰفِرِينَ
إِلَّا فِى ضَلَٰلٍ ﴿٢٥﴾

26. ಫಿರ್‌ಔನ್ ಹೇಳಿದನು: 'ನನ್ನನ್ನು ಬಿಡಿರಿ! ನಾನು ಮೂಸಾನನ್ನು ಕೊಲ್ಲುವೆನು. ಅವನು ತನ್ನ ರಬ್ಬನ್ನು ಕರೆದು ಪ್ರಾರ್ಥಿಸಲಿ! ಅವನು ನಿಮ್ಮ ಧರ್ಮವನ್ನು ಬದಲಾವಣೆಗೊಳಿಸುವನು ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವನು ಎಂದು ಖಂಡಿತವಾಗಿಯೂ ನಾನು ಭಯಪಡುತ್ತಿರುವೆನು'.

وَقَالَ فِرْعَوْنُ ذَرُونِىٓ أَقْتُلْ مُوسَىٰ وَلْيَدْعُ
رَبَّهُۥٓ ۖ إِنِّىٓ أَخَافُ أَن يُبَدِّلَ دِينَكُمْ أَوْ أَن
يُظْهِرَ فِى ٱلْأَرْضِ ٱلْفَسَادَ ﴿٢٦﴾

27. ಮೂಸಾ ಹೇಳಿದರು: 'ವಿಚಾರಣಾ ದಿನದಲ್ಲಿ ವಿಶ್ವಾಸವಿಡದ ಸರ್ವ ಅಹಂಕಾರಿಗಳಿಂದಲೂ ನನ್ನ ರಬ್ ಮತ್ತು ನಿಮ್ಮ ರಬ್ ಆಗಿರುವವನೊಂದಿಗೆ ನಾನು ಅಭಯವನ್ನು ಯಾಚಿಸುತ್ತಿರುವೆನು'.

وَقَالَ مُوسَىٰٓ إِنِّي عُذْتُ بِرَبِّي وَرَبِّكُم
مِّن كُلِّ مُتَكَبِّرٍ لَّا يُؤْمِنُ بِيَوْمِ
ٱلْحِسَابِ ٢٧

28. ಫಿರ್‌ಔನ್‌ನ ಜನರಲ್ಲಿ ಸೇರಿದ, ತನ್ನ ವಿಶ್ವಾಸವನ್ನು ಮರೆಮಾಚಿದ್ದ ಸತ್ಯವಿಶ್ವಾಸಿ ವ್ಯಕ್ತಿಯೊಬ್ಬರು ಹೇಳಿದರು: 'ನನ್ನ ರಬ್ ಅಲ್ಲಾಹು ಎಂದು ಹೇಳುವ ಕಾರಣಕ್ಕಾಗಿ ನೀವು ಒಬ್ಬ ಮನುಷ್ಯನನ್ನು ಕೊಲ್ಲುವುದೇ? ಆತ ನಿಮ್ಮ ಬಳಿಗೆ ನಿಮ್ಮ ರಬ್‌ನ ವತಿಯ ಸ್ಪಷ್ಟ ಪುರಾವೆಗಳೊಂದಿಗೆ ಬಂದಿರುವರು. ಆತ ಸುಳ್ಳು ನುಡಿಯುವವರಾದರೆ ಸುಳ್ಳು ನುಡಿಯುವುದರ ಪಾಪವು ಅವರಿಗೇ ಆಗಿದೆ. ಆತ ಸತ್ಯವನ್ನು ನುಡಿಯುವವರಾದರೆ ಆತ ನಿಮಗೆ ಎಚ್ಚರಿಕೆ ನೀಡುವ ಕೆಲವು ಸಂಗತಿಗಳು (ಶಿಕ್ಷೆಗಳು) ಖಂಡಿತವಾಗಿಯೂ ನಿಮ್ಮನ್ನು ಬಾಧಿಸುವುದು. ಅತಿಕ್ರಮಿ ಮತ್ತು ಮಿಥ್ಯವಾದಿಯಾಗಿರುವ ಯಾರನ್ನೂ ಅಲ್ಲಾಹು ಖಂಡಿತವಾಗಿಯೂ ಸನ್ಮಾರ್ಗಕ್ಕೆ ಸೇರಿಸಲಾರನು.

وَقَالَ رَجُلٌ مُّؤْمِنٌ مِّنْ ءَالِ فِرْعَوْنَ
يَكْتُمُ إِيمَٰنَهُۥٓ أَتَقْتُلُونَ رَجُلًا أَن يَقُولَ
رَبِّيَ ٱللَّهُ وَقَدْ جَآءَكُم بِٱلْبَيِّنَٰتِ مِن
رَّبِّكُمْ ۖ وَإِن يَكُ كَٰذِبًا فَعَلَيْهِ كَذِبُهُۥ ۖ
وَإِن يَكُ صَادِقًا يُصِبْكُم بَعْضُ ٱلَّذِى
يَعِدُكُمْ ۖ إِنَّ ٱللَّهَ لَا يَهْدِى مَنْ هُوَ
مُسْرِفٌ كَذَّابٌ ٢٨

29. ಓ ನನ್ನ ಜನರೇ! ಭೂಮಿಯಲ್ಲಿ ಪ್ರಾಬಲ್ಯವನ್ನು ಪಡೆದಿರುವ ಕಾರಣ ಇಂದು ಆಧಿಪತ್ಯವು ನಿಮ್ಮದಾಗಿದೆ. ಆದರೆ ಅಲ್ಲಾಹುವಿನ ಶಿಕ್ಷೆ ನಮ್ಮ ಬಳಿಗೆ ಬಂದರೆ ಅದರಿಂದ ನಮಗೆ ಸಹಾಯ ಮಾಡುವವರು ಯಾರಿರುವರು?' ಫಿರ್‌ಔನ್ ಹೇಳಿದನು: ನನಗೆ (ಸರಿಯೆಂದು) ಕಾಣುತ್ತಿರುವ ಮಾರ್ಗವನ್ನು ಮಾತ್ರ ನಾನು ನಿನಗೆ ತೋರಿಸಿಕೊಡುವೆನು. ಸರಿಯಾದ ಮಾರ್ಗದೆಡೆಗೇ ಹೊರತು ನಾನು ನಿಮ್ಮನ್ನು ಮುನ್ನಡೆಸಲಾರೆನು'.

يَٰقَوْمِ لَكُمُ ٱلْمُلْكُ ٱلْيَوْمَ ظَٰهِرِينَ فِى
ٱلْأَرْضِ فَمَن يَنصُرُنَا مِنۢ بَأْسِ ٱللَّهِ إِن
جَآءَنَا ۚ قَالَ فِرْعَوْنُ مَآ أُرِيكُمْ إِلَّا مَآ
أَرَىٰ وَمَآ أَهْدِيكُمْ إِلَّا سَبِيلَ ٱلرَّشَادِ ٢٩

30. ವಿಶ್ವಾಸಿಯಾದ ಆ ವ್ಯಕ್ತಿ ಹೇಳಿದರು: 'ಓ ನನ್ನ ಜನರೇ! ಆ ಗುಂಪುಗಳ ದಿನದಂತಹ[1] ಒಂದನ್ನು ಖಂಡಿತವಾಗಿಯೂ ನಾನು ನಿಮ್ಮ ಬಗ್ಗೆಯೂ ಭಯಪಡುವೆನು.

وَقَالَ ٱلَّذِيٓ ءَامَنَ يَٰقَوۡمِ إِنِّيٓ أَخَافُ عَلَيۡكُم مِّثۡلَ يَوۡمِ ٱلۡأَحۡزَابِ ٣٠

31. ಅಂದರೆ ನೂಹ್‌ರ ಜನತೆಯ, ಆದ್, ಸಮೂದ್ ಮತ್ತು ಅವರ ನಂತರದವರ ಅನುಭವಕ್ಕೆ ಸಮಾನವಾಗಿರುವುದನ್ನು. ದಾಸರೊಂದಿಗೆ ಯಾವುದೇ ಅಕ್ರಮವನ್ನು ತೋರಲು ಅಲ್ಲಾಹು ಇಚ್ಛಿಸಲಾರನು.

مِثۡلَ دَأۡبِ قَوۡمِ نُوحٖ وَعَادٖ وَثَمُودَ وَٱلَّذِينَ مِنۢ بَعۡدِهِمۡۚ وَمَا ٱللَّهُ يُرِيدُ ظُلۡمٗا لِّلۡعِبَادِ ٣١

32. ಓ ನನ್ನ ಜನರೇ! (ನೀವು) ಪರಸ್ಪರ ಮೊರೆಯಿಟ್ಟು ರೋದಿಸುವ ದಿನವನ್ನು ನಾನು ನಿಮ್ಮ ಬಗ್ಗೆ ಖಂಡಿತವಾಗಿಯೂ ಭಯಪಡುವೆನು.

وَيَٰقَوۡمِ إِنِّيٓ أَخَافُ عَلَيۡكُمۡ يَوۡمَ ٱلتَّنَادِ ٣٢

33. ಅಂದರೆ ನೀವು ಹಿಮ್ಮುಖವಾಗಿ ತಿರುಗಿ ಓಡುವ ದಿನ! ಅಲ್ಲಾಹುವಿನಿಂದ (ಅವನ ಶಿಕ್ಷೆಯಿಂದ) ರಕ್ಷಣೆ ನೀಡುವವರಾರೂ ಇರಲಾರರು. ಅಲ್ಲಾಹು ಯಾರನ್ನಾದರೂ ಪಥಭ್ರಷ್ಟಗೊಳಿಸಿದರೆ ತರುವಾಯ ಅವನಿಗೆ ಸನ್ಮಾರ್ಗವನ್ನು ತೋರಿಸುವವರು ಯಾರೂ ಇಲ್ಲ.

يَوۡمَ تُوَلُّونَ مُدۡبِرِينَ مَا لَكُم مِّنَ ٱللَّهِ مِنۡ عَاصِمٖۗ وَمَن يُضۡلِلِ ٱللَّهُ فَمَا لَهُۥ مِنۡ هَادٖ ٣٣

34. ಇದಕ್ಕಿಂತ ಮುಂಚೆ ಸ್ಪಷ್ಟವಾದ ಪುರಾವೆಗಳೊಂದಿಗೆ ಯೂಸುಫ್ ನಿಮ್ಮ ಬಳಿಗೆ ಬಂದಿದ್ದರು. ಆಗ ಅವರು ನಿಮ್ಮ ಬಳಿಗೆ ಏನನ್ನು ತಂದಿದ್ದರೋ ಅದರ ಬಗ್ಗೆ ನೀವು ಸಂದೇಹದಲ್ಲೇ ಇದ್ದಿರಿ. ಕೊನೆಗೆ ಅವರು ಮರಣಹೊಂದಿದಾಗ 'ಇವರ ಬಳಿಕ ಅಲ್ಲಾಹು ಬೇರೊಬ್ಬ ಸಂದೇಶವಾಹಕರನ್ನು ಕಳುಹಿಸಲಾರನು' ಎಂದು ನೀವು ಹೇಳಿದಿರಿ.[2]

وَلَقَدۡ جَآءَكُمۡ يُوسُفُ مِن قَبۡلُ بِٱلۡبَيِّنَٰتِ فَمَا زِلۡتُمۡ فِي شَكّٖ مِّمَّا جَآءَكُم بِهِۦۖ حَتَّىٰٓ إِذَا هَلَكَ قُلۡتُمۡ لَن يَبۡعَثَ ٱللَّهُ مِنۢ بَعۡدِهِۦ رَسُولٗاۚ كَذَٰلِكَ يُضِلُّ ٱللَّهُ مَنۡ هُوَ مُسۡرِفٞ مُّرۡتَابٌ ٣٤

---

1 ಅಂದರೆ ಅಲ್ಲಾಹುವಿನ ವಿರುದ್ಧ ಮಹಾ ಅಕ್ರಮವೆಸಗಿದ ಗುಂಪುಗಳನ್ನು ಅಲ್ಲಾಹು ಶಿಕ್ಷಿಸಿದ ದಿನ.

2 ಭೀಕರವಾದ ಬರಗಾಲವನ್ನು ಎದುರಿಸಲು ಈಜಿಪ್ಟಿನ ಜನರಿಗೆ ಪ್ರವಾದಿ ಯೂಸುಫ್(عَلَيْهِ السَّلَامُ)ರವರು ನೆರವಾದರು. ಆದರೂ ಅವರ ಪೈಕಿ ಹೆಚ್ಚಿನವರೂ ಯೂಸುಫ್(عَلَيْهِ السَّلَامُ)ರವರ ಪ್ರವಾದಿತ್ವದಲ್ಲಿ ವಿಶ್ವಾಸವಿಡಲಿಲ್ಲ. ಯೂಸುಫ್(عَلَيْهِ السَّلَامُ)ರವರ ಮರಣಾನಂತರ ಈ ದೇಶಕ್ಕೆ ಅಲ್ಲಾಹು ಬೇರೊಬ್ಬ ಪ್ರವಾದಿಯನ್ನು ಕಳುಹಿಸಲಾರನೆಂದು ಅವರು ವಾದಿಸಿದರು. ತರುವಾಯ ಬಂದ ಪ್ರವಾದಿಗಳನ್ನು ನಿಷೇಧಿಸಲು ಅವರದನ್ನು ಒಂದು ಸಮರ್ಥನೆಯನ್ನಾಗಿ ಕಂಡರು.

ಅತಿಕ್ರಮಿಯೂ, ಸಂಶಯಗ್ರಸ್ಥನೂ
ಆಗಿರುವಂತಹವರನ್ನು ಅಲ್ಲಾಹು ಹೀಗೆ
ಪಥಭ್ರಷ್ಟಗೊಳಿಸುವನು.

ٱلَّذِينَ يُجَٰدِلُونَ فِيٓ ءَايَٰتِ ٱللَّهِ بِغَيۡرِ
سُلۡطَٰنٍ أَتَىٰهُمۡۖ كَبُرَ مَقۡتًا عِندَ ٱللَّهِ وَعِندَ
ٱلَّذِينَ ءَامَنُواْۚ كَذَٰلِكَ يَطۡبَعُ ٱللَّهُ عَلَىٰ كُلِّ
قَلۡبِ مُتَكَبِّرٖ جَبَّارٖ ٣٥

35. ಅಂದರೆ ತಮ್ಮ ಬಳಿಗೆ ಬಂದಂತಹ ಯಾವುದೇ
ಅಧಿಕೃತ ಪ್ರಮಾಣವೂ ಇಲ್ಲದೆ ಅಲ್ಲಾಹುವಿನ
ದೃಷ್ಟಾಂತಗಳಲ್ಲಿ ತರ್ಕಿಸುವವರನ್ನು. ಅದು
ಅಲ್ಲಾಹುವಿನ ಬಳಿ ಮತ್ತು ಸತ್ಯವಿಶ್ವಾಸಿಗಳ ಬಳಿ
ಮಹಾಕ್ರೋಧಕ್ಕೆ ಹೇತುವಾಗುವುದು. ಹೀಗೆ
ಸರ್ವ ಅಹಂಕಾರಿಗಳ ಮತ್ತು ಗರ್ವಿಷ್ಠರ
ಹೃದಯಗಳಿಗೆ ಅಲ್ಲಾಹು ಮುದ್ರೆಯೊತ್ತುವನು.

وَقَالَ فِرۡعَوۡنُ يَٰهَٰمَٰنُ ٱبۡنِ لِي صَرۡحٗا لَّعَلِّيٓ
أَبۡلُغُ ٱلۡأَسۡبَٰبَ ٣٦ أَسۡبَٰبَ ٱلسَّمَٰوَٰتِ
فَأَطَّلِعَ إِلَىٰٓ إِلَٰهِ مُوسَىٰ وَإِنِّي لَأَظُنُّهُۥ
كَٰذِبٗاۚ وَكَذَٰلِكَ زُيِّنَ لِفِرۡعَوۡنَ سُوٓءُ
عَمَلِهِۦ وَصُدَّ عَنِ ٱلسَّبِيلِۚ وَمَا كَيۡدُ
فِرۡعَوۡنَ إِلَّا فِي تَبَابٖ ٣٧

36-37. ಫಿರ್‌ಔನ್ ಹೇಳಿದನು: ‘ಓ ಹಾಮಾನ್!
ನನಗೆ ಆ ಮಾರ್ಗಗಳ ಮೂಲಕ,
ಆಕಾಶಮಾರ್ಗಗಳ ಮೂಲಕ ತಲುಪಿ,
ತರುವಾಯ ಮೂಸಾನ ಆರಾಧ್ಯನನ್ನು
ಇಣುಕಿನೋಡಲು ನನಗೋಸ್ಕರ ಒಂದು
ಉನ್ನತ ಗೋಪುರವನ್ನು ನಿರ್ಮಿಸಿಕೊಡು!
ಖಂಡಿತವಾಗಿಯೂ ಅವನು ಸುಳ್ಳು
ಹೇಳುತ್ತಿರುವನೆಂದು ನಾನು ಭಾವಿಸುತ್ತಿರುವೆನು’.
ಹೀಗೆ ಫಿರ್‌ಔನ್‌ನಿಗೆ ಅವನ ದುಷ್ಕೃತ್ಯವನ್ನು
ಆಕರ್ಷಕಗೊಳಿಸಲಾಯಿತು ಮತ್ತು ಅವನನ್ನು
ನೇರ ಮಾರ್ಗದಿಂದ ತಡೆಯಲಾಯಿತು.
ಫಿರ್‌ಔನನ ತಂತ್ರವು ನಷ್ಟದಲ್ಲೇ ಆಗಿತ್ತು.

وَقَالَ ٱلَّذِيٓ ءَامَنَ يَٰقَوۡمِ ٱتَّبِعُونِ أَهۡدِكُمۡ
سَبِيلَ ٱلرَّشَادِ ٣٨

38. ವಿಶ್ವಾಸವಿಟ್ಟ ಆ ವ್ಯಕ್ತಿ ಹೇಳಿದರು: ‘ಓ ನನ್ನ
ಜನರೇ! ನೀವು ನನ್ನನ್ನು ಅನುಸರಿಸಿರಿ! ನಾನು
ನಿಮಗೆ ಸರಿಯಾದ ಮಾರ್ಗವನ್ನು
ತೋರಿಸುವೆನು.

يَٰقَوۡمِ إِنَّمَا هَٰذِهِ ٱلۡحَيَوٰةُ ٱلدُّنۡيَا مَتَٰعٞ وَإِنَّ
ٱلۡأٓخِرَةَ هِيَ دَارُ ٱلۡقَرَارِ ٣٩

39. ಓ ನನ್ನ ಜನರೇ! ಈ ಐಹಿಕ ಜೀವನವು
ಒಂದು (ತಾತ್ಕಾಲಿಕ) ಸುಖ ಮಾತ್ರವಾಗಿದೆ.
ಖಂಡಿತವಾಗಿಯೂ ಶಾಶ್ವತ ವಾಸಕ್ಕಿರುವ
ಭವನವು ಪರಲೋಕವಾಗಿದೆ.

مَنۡ عَمِلَ سَيِّئَةٗ فَلَا يُجۡزَىٰٓ إِلَّا مِثۡلَهَاۖ

40. ಯಾರಾದರೂ ಒಂದು ಕೆಡುಕನ್ನು ಮಾಡಿದರೆ
ಅದಕ್ಕೆ ಸಮಾನವಾದ ಪ್ರತಿಫಲವನ್ನೇ ಅವನಿಗೆ

ನೀಡಲಾಗುವುದು.[1] ಪುರುಷನಾಗಿರಲಿ, ಸ್ತ್ರೀಯಾಗಿರಲಿ ಯಾರು ಸತ್ಯವಿಶ್ವಾಸಿಯಾಗಿದ್ದುಕೊಂಡು ಸತ್ಕರ್ಮವೆಸಗುವವರೋ ಅವರು ಸ್ವರ್ಗವನ್ನು ಪ್ರವೇಶಿಸುವರು. ಅವರಿಗೆ ಅಲ್ಲಿ ಲೆಕ್ಕವಿಲ್ಲದೆ ಅನ್ನಾಧಾರವನ್ನು ಒದಗಿಸಲಾಗುವುದು.

وَمَنْ عَمِلَ صَٰلِحًا مِّن ذَكَرٍ أَوْ أُنثَىٰ وَهُوَ مُؤْمِنٌ فَأُوْلَٰٓئِكَ يَدْخُلُونَ ٱلْجَنَّةَ يُرْزَقُونَ فِيهَا بِغَيْرِ حِسَابٍ ﴿٤٠﴾

**41.** ಓ ನನ್ನ ಜನರೇ! ನನಗೆ ಇದೇನು ಅನುಭವವಾಗುತ್ತಿದೆ? ನಾನು ನಿಮ್ಮನ್ನು ಮೋಕ್ಷದೆಡೆಗೆ ಆಹ್ವಾನಿಸುತ್ತಿರುವೆನು. ಆದರೆ ನೀವು ನನ್ನನ್ನು ನರಕಾಗ್ನಿಯೆಡೆಗೆ ಆಹ್ವಾನಿಸುತ್ತಿರುವಿರಿ!

۞ وَيَٰقَوْمِ مَا لِيٓ أَدْعُوكُمْ إِلَى ٱلنَّجَوٰةِ وَتَدْعُونَنِيٓ إِلَى ٱلنَّارِ ﴿٤١﴾

**42.** ನಾನು ಅಲ್ಲಾಹುವಿನಲ್ಲಿ ಅವಿಶ್ವಾಸವಿಡಲು ಮತ್ತು ನನಗೆ ಯಾವುದೇ ಅರಿವೂ ಇಲ್ಲದಿರುವುದನ್ನು ಅವನೊಂದಿಗೆ ಸಹಭಾಗಿಯನ್ನಾಗಿ ಮಾಡಲು ನೀವು ನನ್ನನ್ನು ಆಹ್ವಾನಿಸುತ್ತಿರುವಿರಿ! ಆದರೆ ನಾನು ಪ್ರತಾಪಶಾಲಿಯೂ ಅತ್ಯಧಿಕ ಕ್ಷಮಿಸುವವನೂ ಆಗಿರುವ ಅಲ್ಲಾಹುವಿನೆಡೆಗೆ ನಿಮ್ಮನ್ನು ಆಹ್ವಾನಿಸುತ್ತಿರುವೆನು.

تَدْعُونَنِي لِأَكْفُرَ بِٱللَّهِ وَأُشْرِكَ بِهِۦ مَا لَيْسَ لِي بِهِۦ عِلْمٌ وَأَنَا۠ أَدْعُوكُمْ إِلَى ٱلْعَزِيزِ ٱلْغَفَّٰرِ ﴿٤٢﴾

**43.** ನೀವು ನನ್ನನ್ನು ಯಾವುದರೆಡೆಗೆ ಆಹ್ವಾನಿಸುತ್ತಿರುವಿರೋ ಅದಕ್ಕೆ ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಯಾವುದೇ ಪ್ರಾರ್ಥನೆಯೂ ಇರಕೂಡದು[2]. ನಮ್ಮ ಮರಳುವಿಕೆಯು ಅಲ್ಲಾಹುವಿನೆಡೆಗಾಗಿದೆ ಮತ್ತು ಅತಿಕ್ರಮಿಗಳು ನರಕವಾಸಿಗಳಾಗಿರುವರು ಎಂಬುದು ದೃಢಪಟ್ಟ ವಿಷಯವಾಗಿದೆ.

لَا جَرَمَ أَنَّمَا تَدْعُونَنِيٓ إِلَيْهِ لَيْسَ لَهُۥ دَعْوَةٌ فِي ٱلدُّنْيَا وَلَا فِي ٱلْءَاخِرَةِ وَأَنَّ مَرَدَّنَآ إِلَى ٱللَّهِ وَأَنَّ ٱلْمُسْرِفِينَ هُمْ أَصْحَٰبُ ٱلنَّارِ ﴿٤٣﴾

---

1 ಅಲ್ಲಾಹು ಒಳಿತಿಗೆ ಅನೇಕ ಪಟ್ಟು ಪ್ರತಿಫಲ ನೀಡುವನೆಂದು ಕುರ್‌ಆನ್ ಮತ್ತು ಹದೀಸ್‌ಗಳು ನಮಗೆ ಕಲಿಸುತ್ತವೆ. ಆದರೆ ಕೆಡುಕಿಗಾದರೋ ಅದಕ್ಕೆ ತಕ್ಕ ಶಿಕ್ಷೆಯನ್ನು ಮಾತ್ರ ನೀಡುತ್ತಾನೆ. ಕ್ಷಮೆಗೆ ಅರ್ಹರಾದವರನ್ನು ಅವನು ಕ್ಷಮಿಸುತ್ತಾನೆ. ಅಲ್ಲಾಹುವಿನ ಕ್ಷಮೆ ಮತ್ತು ಕರುಣೆ ಶಿಕ್ಷೆಗಿಂತಲೂ ಮುಂಚೂಣಿಯಲ್ಲಿದೆಯೆಂದು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ.

2 ದಅ್‌ವತ್ ಎಂಬ ಪದಕ್ಕೆ ಕರೆ (ಅಥವಾ ಆಹ್ವಾನ) ಎಂಬ ಅರ್ಥವಿದೆ. ಹಾಗೆಯೇ ಪ್ರಾರ್ಥನೆ ಎಂಬ ಅರ್ಥವೂ ಇದೆ. ಆದ್ದರಿಂದಲೇ ಈ ಸೂಕ್ತಿಯಲ್ಲಿರುವ ಲೈಸಲಹೂ ದಅ್‌ವತುನ್ ಫಿದ್ದುನ್ಯಾ ವಲಾ ಫಿಲ್ ಆಖಿರಃ ಎಂಬ ವಾಕ್ಯಕ್ಕೆ ಎರಡು ರೀತಿಯಲ್ಲಿ ಅರ್ಥ ನೀಡಲಾಗಿದೆ. ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಅದರೊಂದಿಗೆ (ಮಿಥ್ಯಾರಾಧ್ಯದೊಂದಿಗೆ) ಪ್ರಾರ್ಥಿಸಕೂಡದು ಎಂಬುದು ಒಂದರ್ಥವಾದರೆ ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ (ತಮ್ಮನ್ನು ಆರಾಧಿಸಬೇಕೆಂದು) ಆಹ್ವಾನ ನೀಡುವ ಸಾಮರ್ಥ್ಯ ಅವುಗಳಿಗೆ (ವಿಗ್ರಹಗಳಿಗೆ) ಇಲ್ಲ ಎಂಬುದು ಇನ್ನೊಂದು ಅರ್ಥವಾಗಿದೆ.

44. ನಾನು ನಿಮ್ಮೊಂದಿಗೆ ಹೇಳುವುದನ್ನು ನೀವು ಅನಂತರ ಸ್ಮರಿಸಿಕೊಳ್ಳುವಿರಿ. ನಾನು ನನ್ನ ಕಾರ್ಯವನ್ನು ಅಲ್ಲಾಹುವಿಗೆ ವಹಿಸಿಕೊಡುತ್ತಿರುವೆನು. ಖಂಡಿತವಾಗಿಯೂ ಅಲ್ಲಾಹು ದಾಸರನ್ನು ವೀಕ್ಷಿಸುವವನಾಗಿರುವನು'.

فَسَتَذْكُرُونَ مَآ أَقُولُ لَكُمْۚ وَأُفَوِّضُ أَمْرِيٓ إِلَى ٱللَّهِۚ إِنَّ ٱللَّهَ بَصِيرُۢ بِٱلْعِبَادِ ﴿٤٤﴾

45. ಆಗ ಅವರು ಹೂಡಿದ ಕುತಂತ್ರಗಳ ದುಷ್ಪರಿಣಾಮಗಳಿಂದ ಅಲ್ಲಾಹು ಅವರನ್ನು ಕಾಪಾಡಿದನು. ಫಿರ್‌ಔನನ ಜನರನ್ನು ಕಠಿಣ ಶಿಕ್ಷೆಯು ಆವರಿಸಿಕೊಂಡಿತು.

فَوَقَىٰهُ ٱللَّهُ سَيِّـَٔاتِ مَا مَكَرُواْۖ وَحَاقَ بِـَٔالِ فِرْعَوْنَ سُوٓءُ ٱلْعَذَابِ ﴿٤٥﴾

46. ನರಕಾಗ್ನಿ! ಬೆಳಿಗ್ಗೆ ಮತ್ತು ಸಂಜೆ ಅವರನ್ನು ಅದರ ಮುಂದೆ ಪ್ರದರ್ಶಿಸಲಾಗುವುದು.[1] ಅಂತ್ಯಘಳಿಗೆಯು ಸಂಭವಿಸುವ ದಿನ 'ಫಿರ್‌ಔನನ ಜನರನ್ನು ಅತಿಕಠಿಣವಾದ ಶಿಕ್ಷೆಗೆ ಪ್ರವೇಶಗೊಳಿಸಿರಿ' (ಎಂದು ಆದೇಶಿಸಲಾಗುವುದು).

ٱلنَّارُ يُعْرَضُونَ عَلَيْهَا غُدُوًّا وَعَشِيًّاۚ وَيَوْمَ تَقُومُ ٱلسَّاعَةُ أَدْخِلُوٓاْ ءَالَ فِرْعَوْنَ أَشَدَّ ٱلْعَذَابِ ﴿٤٦﴾

47. ನರಕದಲ್ಲಿ ಅವರು ಪರಸ್ಪರ ಸಮರ್ಥಿಸಿಕೊಳ್ಳುವ ಸಂದರ್ಭ. ಆಗ ಬಲಹೀನರು ಅಹಂಕಾರ ಪಟ್ಟವರೊಂದಿಗೆ ಹೇಳುವರು: 'ಖಂಡಿತವಾಗಿಯೂ ನಾವು ನಿಮ್ಮನ್ನು ಅನುಸರಿಸಿ ಬದುಕುತ್ತಿದ್ದೆವು. ಆದ್ದರಿಂದ ನರಕ ಶಿಕ್ಷೆಯಿಂದ ಯಾವುದಾದರೂ ಒಂದು ಪಾಲನ್ನು ನಮ್ಮಿಂದ ದೂರಮಾಡಲು ನಿಮಗೆ ಸಾಧ್ಯವೇ?'

وَإِذْ يَتَحَآجُّونَ فِي ٱلنَّارِ فَيَقُولُ ٱلضُّعَفَـٰٓؤُاْ لِلَّذِينَ ٱسْتَكْبَرُوٓاْ إِنَّا كُنَّا لَكُمْ تَبَعًا فَهَلْ أَنتُم مُّغْنُونَ عَنَّا نَصِيبًا مِّنَ ٱلنَّارِ ﴿٤٧﴾

48. ಅಹಂಕಾರ ಪಟ್ಟವರು ಹೇಳುವರು: 'ಖಂಡಿತವಾಗಿಯೂ ನಾವೆಲ್ಲರೂ ಇದರಲ್ಲೇ ಇರುವೆವು. ಖಂಡಿತವಾಗಿಯೂ ಅಲ್ಲಾಹು ದಾಸರ ಮಧ್ಯೆ ತೀರ್ಪು ನೀಡಿಬಿಟ್ಟಿರುವನು!'

قَالَ ٱلَّذِينَ ٱسْتَكْبَرُوٓاْ إِنَّا كُلٌّ فِيهَآ إِنَّ ٱللَّهَ قَدْ حَكَمَ بَيْنَ ٱلْعِبَادِ ﴿٤٨﴾

49. ನರಕದಲ್ಲಿರುವವರು ನರಕದ ಕಾವಲುಗಾರ ರೊಂದಿಗೆ ಹೇಳುವರು: 'ನೀವು ನಿಮ್ಮ ಪ್ರಭುವಿನೊಂದಿಗೆ ಪ್ರಾರ್ಥಿಸಿರಿ! ನಮಗೆ ಒಂದು ದಿನದ ಮಟ್ಟಿಗಾದರೂ ಅವನು ಶಿಕ್ಷೆಯನ್ನು ಹಗುರಗೊಳಿಸಲಿ'.

وَقَالَ ٱلَّذِينَ فِي ٱلنَّارِ لِخَزَنَةِ جَهَنَّمَ ٱدْعُواْ رَبَّكُمْ يُخَفِّفْ عَنَّا يَوْمًا مِّنَ ٱلْعَذَابِ ﴿٤٩﴾

---

1 ಮರಣದಿಂದ ತೊಡಗಿ ಪುನರುತ್ಥಾನ ದಿನದವರೆಗೆ ಅವರನ್ನು ಹೀಗೆ ಬೆಳಿಗ್ಗೆ ಮತ್ತು ಸಂಜೆ ನರಕಾಗ್ನಿಯ ಮುಂದೆ ಹಾಜರುಗೊಳಿಸಲಾಗುವುದು ಎಂದು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

**50.** ಅವರು (ಕಾವಲುಗಾರರು) ಹೇಳುವರು: 'ನಿಮ್ಮ ಬಳಿಗೆ (ಕಳುಹಿಸಲಾದ) ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ನಿಮ್ಮ ಬಳಿಗೆ ಬಂದಿರಲಿಲ್ಲವೇ?' ಅವರು ಹೇಳುವರು: 'ಹೌದು'. ಅವರು (ಕಾವಲುಗಾರರು) ಹೇಳುವರು: ಹಾಗಾದರೆ ನೀವೇ ಪ್ರಾರ್ಥಿಸಿರಿ. ಸತ್ಯನಿಷೇಧಿಗಳ ಪ್ರಾರ್ಥನೆಯು ವ್ಯರ್ಥವಲ್ಲದೆ ಇನ್ನೇನೂ ಅಲ್ಲ'.

قَالُوٓاْ أَوَلَمۡ تَكُ تَأۡتِيكُمۡ رُسُلُكُم
بِٱلۡبَيِّنَٰتِۖ قَالُواْ بَلَىٰۚ قَالُواْ فَٱدۡعُواْۗ وَمَا
دُعَـٰٓؤُاْ ٱلۡكَٰفِرِينَ إِلَّا فِي ضَلَٰلٍ ٥٠

**51.** ಖಂಡಿತವಾಗಿಯೂ ನಾವು ನಮ್ಮ ಸಂದೇಶವಾಹಕರಿಗೆ ಮತ್ತು ವಿಶ್ವಾಸವಿಟ್ಟವರಿಗೆ ಐಹಿಕ ಜೀವನದಲ್ಲೂ, ಸಾಕ್ಷಿಗಳು ಎದ್ದು ನಿಲ್ಲುವ ದಿನದಲ್ಲೂ[1] ಸಹಾಯ ಮಾಡುವೆವು.

إِنَّا لَنَنصُرُ رُسُلَنَا وَٱلَّذِينَ ءَامَنُواْ فِي ٱلۡحَيَوٰةِ
ٱلدُّنۡيَا وَيَوۡمَ يَقُومُ ٱلۡأَشۡهَٰدُ ٥١

**52.** ಅಂದರೆ ಅಕ್ರಮಿಗಳಿಗೆ ಅವರ ನೆಪಗಳು ಪ್ರಯೋಜನಕಾರಿಯಾಗದ ದಿನ! ಶಾಪವಿರುವುದು ಅವರಿಗಾಗಿದೆ ಮತ್ತು ನಿಕೃಷ್ಟ ಭವನವಿರುವುದು ಅವರಿಗೇ ಆಗಿದೆ.

يَوۡمَ لَا يَنفَعُ ٱلظَّٰلِمِينَ مَعۡذِرَتُهُمۡۖ وَلَهُمُ
ٱللَّعۡنَةُ وَلَهُمۡ سُوٓءُ ٱلدَّارِ ٥٢

**53-54.** ನಾವು ಮೂಸಾರಿಗೆ ಮಾರ್ಗದರ್ಶನವನ್ನು ನೀಡಿದೆವು ಮತ್ತು ಇಸ್ರಾಈಲರನ್ನು ನಾವು ಗ್ರಂಥದ ವಾರೀಸುದಾರರನ್ನಾಗಿ ಮಾಡಿದೆವು. ಅದು ಬುದ್ಧಿವಂತರಿಗಿರುವ ಮಾರ್ಗದರ್ಶಿಯೂ, ಉಪದೇಶವೂ ಆಗಿತ್ತು.

وَلَقَدۡ ءَاتَيۡنَا مُوسَى ٱلۡهُدَىٰ وَأَوۡرَثۡنَا بَنِيٓ
إِسۡرَٰٓءِيلَ ٱلۡكِتَٰبَ ٥٣ هُدٗى وَذِكۡرَىٰ
لِأُوْلِي ٱلۡأَلۡبَٰبِ ٥٤

**55.** ಆದ್ದರಿಂದ ತಾವು ಸಹನೆ ವಹಿಸಿರಿ. ಖಂಡಿತ ವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ತಾವು ತಮ್ಮ ಪಾಪಕ್ಕೆ ಕ್ಷಮೆಬೇಡಿರಿ. ಸಂಜೆ ಹಾಗೂ ಬೆಳಿಗ್ಗೆ ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಕೀರ್ತನೆ ಮಾಡುತ್ತಿರಿ.

فَٱصۡبِرۡ إِنَّ وَعۡدَ ٱللَّهِ حَقّٞ وَٱسۡتَغۡفِرۡ
لِذَنۢبِكَ وَسَبِّحۡ بِحَمۡدِ رَبِّكَ بِٱلۡعَشِيِّ
وَٱلۡإِبۡكَٰرِ ٥٥

**56.** ತಮ್ಮ ಬಳಿಗೆ ಯಾವುದೇ ಅಧಿಕೃತ ಆಧಾರಪ್ರಮಾಣವೂ ಬರದೆ ಅಲ್ಲಾಹುವಿನ ದೃಷ್ಟಾಂತಗಳಲ್ಲಿ ತರ್ಕಿಸುವವರಾರೋ ಅವರ ಹೃದಯಗಳಲ್ಲಿರುವುದು ಖಂಡಿತವಾಗಿಯೂ ಅಹಂಕಾರ ಮಾತ್ರವಾಗಿದೆ. ಅವರು ಅಲ್ಲಿಗೆ

إِنَّ ٱلَّذِينَ يُجَٰدِلُونَ فِيٓ ءَايَٰتِ ٱللَّهِ بِغَيۡرِ
سُلۡطَٰنٍ أَتَىٰهُمۡ إِن فِي صُدُورِهِمۡ إِلَّا كِبۡرٞ
مَّا هُم بِبَٰلِغِيهِۚ فَٱسۡتَعِذۡ بِٱللَّهِۖ إِنَّهُۥ هُوَ
ٱلسَّمِيعُ ٱلۡبَصِيرُ ٥٦

1 ಅಂದರೆ ವಿಚಾರಣೆಯ ದಿನ.

ತಲುಪಲಾರರು.[1] ಆದ್ದರಿಂದ ತಾವು ಅಲ್ಲಾಹುವಿನೊಂದಿಗೆ ಅಭಯವನ್ನು ಯಾಚಿಸಿರಿ. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಕಾಣುವವನೂ ಆಗಿರುವನು.

57. ಖಂಡಿತವಾಗಿಯೂ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸುವುದು ಮನುಷ್ಯನನ್ನು ಸೃಷ್ಟಿಸುವುದಕ್ಕಿಂತಲೂ ಹಿರಿದಾಗಿದೆ. ಆದರೆ ಅವರಲ್ಲಿ ಹೆಚ್ಚಿನವರೂ ಗ್ರಹಿಸುವುದಿಲ್ಲ.

لَخَلْقُ ٱلسَّمَٰوَٰتِ وَٱلْأَرْضِ أَكْبَرُ مِنْ خَلْقِ ٱلنَّاسِ وَلَٰكِنَّ أَكْثَرَ ٱلنَّاسِ لَا يَعْلَمُونَ ﴿٥٧﴾

58. ಕುರುಡನು ಮತ್ತು ದೃಷ್ಟಿಯುಳ್ಳವನು ಸಮಾನರಾಗಲಾರರು. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಹಾಗೂ ದುಷ್ಕೃತ್ಯವೆಸಗಿದವರು ಸಮಾನರಾಗಲಾರರು. ನೀವು ಅಲ್ಪವೇ ಚಿಂತಿಸಿ ಗ್ರಹಿಸುತ್ತಿರುವಿರಿ.

وَمَا يَسْتَوِى ٱلْأَعْمَىٰ وَٱلْبَصِيرُ وَٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ وَلَا ٱلْمُسِىٓءُ ۚ قَلِيلًا مَّا تَتَذَكَّرُونَ ﴿٥٨﴾

59. ಆ ಅಂತ್ಯಘಳಿಗೆಯು ಬಂದೇ ಬರುವುದು. ಅದರಲ್ಲಿ ಸಂದೇಹವೇ ಇಲ್ಲ. ಆದರೆ ಜನರ ಪೈಕಿ ಹೆಚ್ಚಿನವರೂ ವಿಶ್ವಾಸವಿಡುವುದಿಲ್ಲ.

إِنَّ ٱلسَّاعَةَ لَءَاتِيَةٌ لَّا رَيْبَ فِيهَا وَلَٰكِنَّ أَكْثَرَ ٱلنَّاسِ لَا يُؤْمِنُونَ ﴿٥٩﴾

60. ನಿಮ್ಮ ರಬ್ ಹೇಳಿರುವನು: 'ನೀವು ನನ್ನೊಂದಿಗೆ ಪ್ರಾರ್ಥಿಸಿರಿ. ನಾನು ನಿಮಗೆ ಉತ್ತರವನ್ನು ನೀಡುವೆನು. ನನ್ನನ್ನು ಆರಾಧಿಸದೆ'[2] ಅಹಂಕಾರ ಪಡುವವರಾರೋ ಖಂಡಿತವಾಗಿಯೂ ಅವರು ಸದ್ಯವೇ ಅಪಮಾನಿತರಾಗಿ ನರಕಾಗ್ನಿಯನ್ನು ಪ್ರವೇಶಿಸುವರು'.

وَقَالَ رَبُّكُمُ ٱدْعُونِىٓ أَسْتَجِبْ لَكُمْ ۚ إِنَّ ٱلَّذِينَ يَسْتَكْبِرُونَ عَنْ عِبَادَتِى سَيَدْخُلُونَ جَهَنَّمَ دَاخِرِينَ ﴿٦٠﴾

61. ರಾತ್ರಿಯನ್ನು ನಿಮಗೆ ವಿಶ್ರಾಂತಿಯ ಪಡೆಯುವುದಕ್ಕಾಗಿಯೂ, ಹಗಲನ್ನು ಪ್ರಕಾಶಮಾನವಾಗಿಯೂ ಮಾಡಿದವನು ಅಲ್ಲಾಹುವಾಗಿರುವನು. ಖಂಡಿತವಾಗಿಯೂ ಅಲ್ಲಾಹು ಜನರೊಂದಿಗೆ ಔದಾರ್ಯವುಳ್ಳವನಾಗಿರುವನು. ಆದರೆ ಜನರ ಪೈಕಿ ಹೆಚ್ಚಿನವರೂ ಕೃತಜ್ಞರಾಗುವುದಿಲ್ಲ.

ٱللَّهُ ٱلَّذِى جَعَلَ لَكُمُ ٱلَّيْلَ لِتَسْكُنُوا۟ فِيهِ وَٱلنَّهَارَ مُبْصِرًا ۚ إِنَّ ٱللَّهَ لَذُو فَضْلٍ عَلَى ٱلنَّاسِ وَلَٰكِنَّ أَكْثَرَ ٱلنَّاسِ لَا يَشْكُرُونَ ﴿٦١﴾

---

1 ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸುವವರು ಆ ನಿಷೇಧದ ಮೂಲಕ ಏನನ್ನು ಸಾಧಿಸಬೇಕೆಂದಿರುವರೋ ಅದನ್ನು ಸಾಧಿಸಲು ಅವರಿಗೆ ಸಾಧ್ಯವಾಗದು ಎಂದರ್ಥ.

2 ಪ್ರಾರ್ಥನೆ ಆರಾಧನೆಯಾಗಿದೆಯೆಂದು ಪ್ರಸ್ತುತ ಸೂಕ್ತಿಯು ಸಂಶಯಕ್ಕೆಡೆಯಿಲ್ಲದಂತೆ ಸ್ಪಷ್ಟಪಡಿಸುತ್ತದೆ.

ذَٰلِكُمُ ٱللَّهُ رَبُّكُمۡ خَٰلِقُ كُلِّ شَيۡءٖ لَّآ
إِلَٰهَ إِلَّا هُوَۖ فَأَنَّىٰ تُؤۡفَكُونَ ٦٢

**62.** ನಿಮ್ಮ ರಬ್ ಮತ್ತು ಸರ್ವ ವಸ್ತುಗಳ ಸೃಷ್ಟಿಕರ್ತನಾದ ಅಲ್ಲಾಹು ಅವನೇ ಆಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಆದರೂ ನೀವು (ಸನ್ಮಾರ್ಗದಿಂದ) ತಪ್ಪಿಸಲ್ಪಡುವುದಾದರೂ ಹೇಗೆ?

كَذَٰلِكَ يُؤۡفَكُ ٱلَّذِينَ كَانُواْ بِـَٔايَٰتِ ٱللَّهِ
يَجۡحَدُونَ ٦٣

**63.** ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿದವರು ಹೀಗೆ (ಸನ್ಮಾರ್ಗದಿಂದ) ತಪ್ಪಿಸಲ್ಪಡುತ್ತಿರುವರು.

ٱللَّهُ ٱلَّذِي جَعَلَ لَكُمُ ٱلۡأَرۡضَ قَرَارٗا
وَٱلسَّمَآءَ بِنَآءٗ وَصَوَّرَكُمۡ فَأَحۡسَنَ صُوَرَكُمۡ
وَرَزَقَكُم مِّنَ ٱلطَّيِّبَٰتِۚ ذَٰلِكُمُ ٱللَّهُ
رَبُّكُمۡۖ فَتَبَارَكَ ٱللَّهُ رَبُّ ٱلۡعَٰلَمِينَ ٦٤

**64.** ನಿಮಗೋಸ್ಕರ ಭೂಮಿಯನ್ನು ವಾಸಸ್ಥಳವನ್ನಾಗಿ ಮತ್ತುಆಕಾಶವನ್ನು ಮೇಲ್ಛಾವಣಿಯನ್ನಾಗಿ ಮಾಡಿಕೊಟ್ಟವನು ಅಲ್ಲಾಹುವಾಗಿರುವನು. ಅವನು ನಿಮಗೆ ರೂಪವನ್ನು ನೀಡಿದನು. ತರುವಾಯ ಅವನು ನಿಮ್ಮ ರೂಪಗಳನ್ನು ಉತ್ತಮಗೊಳಿಸಿದನು. ಉತ್ಕೃಷ್ಟ ವಸ್ತುಗಳಿಂದ ಅವನು ನಿಮಗೆ ಅನ್ನಾಧಾರವನ್ನು ಒದಗಿಸಿದನು. ನಿಮ್ಮ ರಬ್ಬಾದ ಅಲ್ಲಾಹು ಅವನೇ ಆಗಿರುವನು. ಆದ್ದರಿಂದ ಸರ್ವಲೋಕಗಳ ರಬ್ಬಾದ ಅಲ್ಲಾಹು ಅನುಗ್ರಹೀತನಾಗಿರುವನು.

هُوَ ٱلۡحَيُّ لَآ إِلَٰهَ إِلَّا هُوَ فَٱدۡعُوهُ مُخۡلِصِينَ
لَهُ ٱلدِّينَۗ ٱلۡحَمۡدُ لِلَّهِ رَبِّ ٱلۡعَٰلَمِينَ ٦٥

**65.** ಅವನು ಜೀವಂತವಿರುವವನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಆದ್ದರಿಂದ ಶರಣಾಗತಿಯನ್ನು ಅವನಿಗೆ ನಿಷ್ಕಳಂಕಗೊಳಿಸಿ ಅವನೊಂದಿಗೆ ಪ್ರಾರ್ಥಿಸಿರಿ. ಸರ್ವಲೋಕಗಳ ರಬ್ಬಾದ ಅಲ್ಲಾಹುವಿಗೆ ಸ್ತುತಿ.

۞قُلۡ إِنِّي نُهِيتُ أَنۡ أَعۡبُدَ ٱلَّذِينَ تَدۡعُونَ
مِن دُونِ ٱللَّهِ لَمَّا جَآءَنِيَ ٱلۡبَيِّنَٰتُ مِن
رَّبِّي وَأُمِرۡتُ أَنۡ أُسۡلِمَ لِرَبِّ ٱلۡعَٰلَمِينَ ٦٦

**66.** (ಓ ಪ್ರವಾದಿಯವರೇ!) ಹೇಳಿರಿ: ‘ನನ್ನ ರಬ್‌ನ ವತಿಯಿಂದ ನನಗೆ ಪುರಾವೆಗಳು ಸಿಕ್ಕಿರುವುದರಿಂದ ಅಲ್ಲಾಹುವಿನ ಹೊರತು ನೀವು ಕರೆದು ಪ್ರಾರ್ಥಿಸುತ್ತಿರುವವರನ್ನು ಆರಾಧಿಸುವುದರಿಂದ ಖಂಡಿತವಾಗಿಯೂ ನನ್ನನ್ನು ವಿರೋಧಿಸಲಾಗಿದೆ. ಸರ್ವಲೋಕಗಳ ರಬ್‌ಗೆ ಶರಣಾಗಬೇಕೆಂದು ನನ್ನೊಂದಿಗೆ ಆಜ್ಞಾಪಿಸಲಾಗಿದೆ’.

67. ನಿಮ್ಮನ್ನು ಮಣ್ಣಿನಿಂದ, ತರುವಾಯ ವೀರ್ಯದಿಂದ, ತರುವಾಯ ಭ್ರೂಣದಿಂದ ಸೃಷ್ಟಿಸಿದವನು ಅವನಾಗಿರುವನು. ತರುವಾಯ ಅವನು ನಿಮ್ಮನ್ನು ಒಂದು ಶಿಶುವನ್ನಾಗಿ ಹೊರತರುವನು. ತರುವಾಯ ನೀವು ನಿಮ್ಮ ಪೂರ್ಣ ಶಕ್ತಿಯನ್ನು ಪಡೆಯುವುದಕ್ಕಾಗಿ ಮತ್ತು ತರುವಾಯ ನೀವು ವೃದ್ಧರಾಗುವುದಕ್ಕಾಗಿ. ನಿಮ್ಮ ಪೈಕಿ ಕೆಲವರು ಮೊದಲೇ ಮೃತಪಡುವರು. ನಿಶ್ಚಿತ ಅವಧಿಯನ್ನು ನೀವು ತಲುಪುವುದಕ್ಕಾಗಿ ಮತ್ತು ನೀವು ಚಿಂತಿಸಲೂಬಹುದು ಎಂಬುದಕ್ಕಾಗಿ.

هُوَ ٱلَّذِى خَلَقَكُم مِّن تُرَابٍ ثُمَّ مِن نُّطْفَةٍ ثُمَّ مِنْ عَلَقَةٍ ثُمَّ يُخْرِجُكُمْ طِفْلًا ثُمَّ لِتَبْلُغُوٓا۟ أَشُدَّكُمْ ثُمَّ لِتَكُونُوا۟ شُيُوخًا ۚ وَمِنكُم مَّن يُتَوَفَّىٰ مِن قَبْلُ ۖ وَلِتَبْلُغُوٓا۟ أَجَلًا مُّسَمًّى وَلَعَلَّكُمْ تَعْقِلُونَ ﴿٦٧﴾

68. ಜೀವ ನೀಡುವವನು ಮತ್ತು ಮೃತಪಡಿಸುವವನು ಅವನಾಗಿರುವನು. ಅವನು ಒಂದು ವಿಷಯವನ್ನು ನಿರ್ಧರಿಸಿದರೆ, ಅವನ ಆಜ್ಞೆಯು ಅದರೊಂದಿಗೆ 'ಉಂಟಾಗು' ಎಂದು ಹೇಳುವುದು ಮಾತ್ರವಾಗಿರುವುದು. ತಕ್ಷಣ ಅದು ಉಂಟಾಗುವುದು!

هُوَ ٱلَّذِى يُحْىِۦ وَيُمِيتُ ۖ فَإِذَا قَضَىٰٓ أَمْرًا فَإِنَّمَا يَقُولُ لَهُۥ كُن فَيَكُونُ ﴿٦٨﴾

69. ಅಲ್ಲಾಹುವಿನ ದೃಷ್ಟಾಂತಗಳ ಕುರಿತು ತರ್ಕಿಸುವವರೆಡೆಗೆ ತಾವು ನೋಡಲಿಲ್ಲವೇ? ಅವರು ಪಥಭ್ರಷ್ಟಗೊಳಿಸಲಾಗುತ್ತಿರುವುದು ಹೇಗೆಂದು!

أَلَمْ تَرَ إِلَى ٱلَّذِينَ يُجَٰدِلُونَ فِىٓ ءَايَٰتِ ٱللَّهِ أَنَّىٰ يُصْرَفُونَ ﴿٦٩﴾

70. ಅವರು ಗ್ರಂಥವನ್ನೂ, ಯಾವುದಕ್ಕಾಗಿ ನಾವು ನಮ್ಮ ಸಂದೇಶವಾಹಕರನ್ನು ಕಳುಹಿಸಿದೆವೋ ಅದನ್ನೂ ನಿಷೇಧಿಸಿದವರಾಗಿರುವರು. ಸದ್ಯವೇ ಅವರು ಅರಿತುಕೊಳ್ಳುವರು.

ٱلَّذِينَ كَذَّبُوا۟ بِٱلْكِتَٰبِ وَبِمَآ أَرْسَلْنَا بِهِۦ رُسُلَنَا ۖ فَسَوْفَ يَعْلَمُونَ ﴿٧٠﴾

71-72. ಅವರ ಕತ್ತುಗಳಲ್ಲಿರುವ ಉರುಳುಗಳು ಮತ್ತು ಸಂಕೋಲೆಗಳೊಂದಿಗೆ ಅವರನ್ನು ಕುದಿಯುವ ನೀರಿನಲ್ಲಿ ಎಳೆದೊಯ್ಯಲಾಗುವ ಸಂದರ್ಭ. ತರುವಾಯ ಅವರನ್ನು ನರಕಾಗ್ನಿಯಲ್ಲಿ ಉರಿಸಲಾಗುವುದು.

إِذِ ٱلْأَغْلَٰلُ فِىٓ أَعْنَٰقِهِمْ وَٱلسَّلَٰسِلُ يُسْحَبُونَ ﴿٧١﴾ فِى ٱلْحَمِيمِ ثُمَّ فِى ٱلنَّارِ يُسْجَرُونَ ﴿٧٢﴾

73-74. ತರುವಾಯ ಅವರೊಂದಿಗೆ ಹೇಳಲಾಗುವುದು: 'ನೀವು ಅಲ್ಲಾಹುವಿನ ಹೊರತು ಸಹಭಾಗಿಗಳನ್ನಾಗಿ ಮಾಡಿಕೊಂಡವರು

ثُمَّ قِيلَ لَهُمْ أَيْنَ مَا كُنتُمْ تُشْرِكُونَ ﴿٧٣﴾ مِن دُونِ ٱللَّهِ ۖ قَالُوا۟ ضَلُّوا۟ عَنَّا بَل لَّمْ نَكُن

نَّدْعُواْ مِن قَبْلُ شَيْـًٔاۚ كَذَٰلِكَ يُضِلُّ ٱللَّهُ
ٱلْكَٰفِرِينَ ٧٤

ಎಲ್ಲಿರುವರು?' ಅವರು ಹೇಳುವರು: 'ಅವರು ನಮ್ಮನ್ನು ಬಿಟ್ಟು ಅಪ್ರತ್ಯಕ್ಷರಾಗಿರುವರು. ಅಲ್ಲ, ನಾವು ಮುಂಚೆ ಯಾವುದನ್ನೂ ಕರೆದು ಪ್ರಾರ್ಥಿಸುತ್ತಿರಲಿಲ್ಲ'.[1] ಹೀಗೆ ಅಲ್ಲಾಹು ಸತ್ಯನಿಷೇಧಿಗಳನ್ನು ಪಥಭ್ರಷ್ಟಗೊಳಿಸುವನು.

ذَٰلِكُم بِمَا كُنتُمْ تَفْرَحُونَ فِى ٱلْأَرْضِ
بِغَيْرِ ٱلْحَقِّ وَبِمَا كُنتُمْ تَمْرَحُونَ ٧٥
ٱدْخُلُوٓاْ أَبْوَٰبَ جَهَنَّمَ خَٰلِدِينَ فِيهَاۖ
فَبِئْسَ مَثْوَى ٱلْمُتَكَبِّرِينَ ٧٦

75-76. 'ಇದೇಕೆಂದರೆ ನೀವು ಭೂಮಿಯಲ್ಲಿ ಅನ್ಯಾಯವಾಗಿ ಬೀಗುತ್ತಿದ್ದಿರಿ ಮತ್ತು ಅಹಂಕಾರ ಪಡುತ್ತಿದ್ದಿರಿ ಎಂಬುದರಿಂದಾಗಿದೆ. ನರಕದ ಬಾಗಿಲುಗಳನ್ನು ಅದರಲ್ಲಿ ಶಾಶ್ವತವಾಗಿ ವಾಸಿಸುವವರಾಗಿ ಪ್ರವೇಶಿಸಿರಿ. ಅಹಂಕಾರಿಗಳ ವಾಸಸ್ಥಳವು ಎಷ್ಟು ನಿಕೃಷ್ಟವಾದುದು!' (ಎಂದು ಅವರೊಂದಿಗೆ ಹೇಳಲಾಗುವುದು).

فَٱصْبِرْ إِنَّ وَعْدَ ٱللَّهِ حَقٌّۚ فَإِمَّا نُرِيَنَّكَ
بَعْضَ ٱلَّذِى نَعِدُهُمْ أَوْ نَتَوَفَّيَنَّكَ فَإِلَيْنَا
يُرْجَعُونَ ٧٧

77. ಆದ್ದರಿಂದ ತಾವು ಸಹನೆವಹಿಸಿರಿ. ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ನಾವು ಅವರಿಗೆ ಎಚ್ಚರಿಕೆ ನೀಡುತ್ತಿರುವ ಶಿಕ್ಷೆಗಳ ಪೈಕಿ ಕೆಲವನ್ನು ನಾವು ತಮಗೆ ತೋರಿಸಿಕೊಡುವುದಾದರೂ, (ಅಥವಾ ಅದಕ್ಕಿಂತ ಮೊದಲೇ) ತಮ್ಮನ್ನು ಮೃತಪಡಿಸುವುದಾದರೂ ಅವರನ್ನು ಮರಳಿಸಲಾಗುವುದು ನಮ್ಮೆಡೆಗೇ ಆಗಿದೆ.

وَلَقَدْ أَرْسَلْنَا رُسُلًا مِّن قَبْلِكَ مِنْهُم مَّن
قَصَصْنَا عَلَيْكَ وَمِنْهُم مَّن لَّمْ نَقْصُصْ
عَلَيْكَۗ وَمَا كَانَ لِرَسُولٍ أَن يَأْتِىَ بِـَٔايَةٍ إِلَّا
بِإِذْنِ ٱللَّهِۚ فَإِذَا جَآءَ أَمْرُ ٱللَّهِ قُضِىَ بِٱلْحَقِّ
وَخَسِرَ هُنَالِكَ ٱلْمُبْطِلُونَ ٧٨

78. ತಮಗಿಂತ ಮುಂಚೆ ನಾವು ಅನೇಕ ಸಂದೇಶವಾಹಕರನ್ನು ಕಳುಹಿಸಿರುವೆವು. ಅವರಲ್ಲಿ ಕೆಲವರ ಬಗ್ಗೆ ನಾವು ತಮಗೆ ವಿವರಿಸಿಕೊಟ್ಟಿರುವೆವು. ಅವರಲ್ಲಿ ಇನ್ನು ಕೆಲವರ ಬಗ್ಗೆ ನಾವು ತಮಗೆ ವಿವರಿಸಿ ಕೊಟ್ಟಿಲ್ಲ. ಅಲ್ಲಾಹುವಿನ ಅನುಮತಿಯ ವಿನಾ ಯಾವುದೇ ಸಂದೇಶವಾಹಕರಿಗೂ ಒಂದು ದೃಷ್ಟಾಂತವನ್ನು ತರಲು ಸಾಧ್ಯವಾಗದು. ಆದರೆ ಅಲ್ಲಾಹುವಿನ ಆಜ್ಞೆ ಬಂದರೆ ನ್ಯಾಯಬದ್ಧವಾಗಿ ತೀರ್ಪು ನೀಡಲಾಗುವುದು. ಅಲ್ಲಿ ನಷ್ಟ ಹೊಂದಿದವರು ಮಿಥ್ಯವಾದಿಗಳಾಗಿರುವರು.

1 ಪ್ರಾರ್ಥಿಸಲು ಯಾವ ಅರ್ಹತೆಯೂ ಇಲ್ಲದವುಗಳೊಂದಿಗೆ ನಾವು ಪ್ರಾರ್ಥಿಸಿದ್ದು ಕೇವಲ ಶೂನ್ಯದೊಂದಿಗೆ ಪ್ರಾರ್ಥಿಸಿದ್ದಕ್ಕೆ ಸಮಾನವಾಗಿತ್ತೆಂದು ತಮಗೆ ಈಗ ಮನದಟ್ಟಾಗಿದೆ ಎಂದು ಅವರು ಒಪ್ಪಿಕೊಳ್ಳುವರು.

79. ನಿಮಗಾಗಿ ಜಾನುವಾರುಗಳನ್ನು ಸೃಷ್ಟಿಸಿದವನು ಅಲ್ಲಾಹುವಾಗಿರುವನು. ಅವುಗಳಲ್ಲಿ ಕೆಲವನ್ನು ನೀವು ವಾಹನಗಳಾಗಿ ಬಳಸುವುದಕ್ಕಾಗಿ ಮತ್ತು ಅವುಗಳಲ್ಲಿ ಕೆಲವನ್ನು ನೀವು ತಿನ್ನುತ್ತಿರುವಿರಿ.

ٱللَّهُ ٱلَّذِى جَعَلَ لَكُمُ ٱلْأَنْعَٰمَ لِتَرْكَبُواْ مِنْهَا وَمِنْهَا تَأْكُلُونَ ٧٩

80. ನಿಮಗೆ ಅವುಗಳಲ್ಲಿ ಅನೇಕ ಉಪಯೋಗಗಳಿವೆ. ಅವುಗಳ ಮೂಲಕ ನೀವು ನಿಮ್ಮ ಹೃದಯಗಳಲ್ಲಿರುವ ಯಾವುದಾದರೂ ಅಗತ್ಯದೆಡೆಗೆ ತಲುಪುತ್ತಿರುವಿರಿ.[1] ಅವುಗಳ ಬೆನ್ನುಗಳಲ್ಲೂ, ಹಡಗುಗಳಲ್ಲೂ ನಿಮ್ಮನ್ನು ಸಾಗಿಸಲಾಗುತ್ತಿದೆ.

وَلَكُمْ فِيهَا مَنَٰفِعُ وَلِتَبْلُغُواْ عَلَيْهَا حَاجَةً فِى صُدُورِكُمْ وَعَلَيْهَا وَعَلَى ٱلْفُلْكِ تُحْمَلُونَ ٨٠

81. ಅವನು ತನ್ನ ದೃಷ್ಟಾಂತಗಳನ್ನು ನಿಮಗೆ ತೋರಿಸಿ ಕೊಡುವನು. ಆಗ ಅಲ್ಲಾಹುವಿನ ದೃಷ್ಟಾಂತಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

وَيُرِيكُمْ ءَايَٰتِهِۦ فَأَىَّ ءَايَٰتِ ٱللَّهِ تُنكِرُونَ ٨١

82. ಅವರು ಭೂಮಿಯಲ್ಲಿ ಸಂಚರಿಸಿ ತಮಗಿಂತ ಮುಂಚಿನವರ ಪರ್ಯಾವಸಾನವು ಹೇಗಿತ್ತೆಂದು ನೋಡಲಾರರೇ? ಅವರು ಇವರಿಗಿಂತಲೂ ಹೆಚ್ಚು ಜನಸಂಖ್ಯೆಯುಳ್ಳವರೂ, ಶಕ್ತಿಯಲ್ಲೂ, ಭೂಮಿಯಲ್ಲಿ ಬಿಟ್ಟುಹೋದ ಅವಶೇಷಗಳಿಂದಲೂ ಅತಿಬಲಿಷ್ಠರೂ ಆಗಿದ್ದರು. ಆದರೂ ಅವರು ಸಂಪಾದಿಸಿದ ಯಾವುದೂ ಅವರಿಗೆ ಪ್ರಯೋಜನಕರವಾಗಲಿಲ್ಲ.

أَفَلَمْ يَسِيرُواْ فِى ٱلْأَرْضِ فَيَنظُرُواْ كَيْفَ كَانَ عَٰقِبَةُ ٱلَّذِينَ مِن قَبْلِهِمْ ۚ كَانُوٓاْ أَكْثَرَ مِنْهُمْ وَأَشَدَّ قُوَّةً وَءَاثَارًا فِى ٱلْأَرْضِ فَمَآ أَغْنَىٰ عَنْهُم مَّا كَانُواْ يَكْسِبُونَ ٨٢

83. ಅವರೆಡೆಗೆ ನಿಯೋಗಿಸಲಾಗಿರುವ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಾಗ ತಮ್ಮ ಬಳಿಯಿರುವ ಜ್ಞಾನದ ನಿಮಿತ್ತ ಅವರು ಬೀಗುತ್ತಿದ್ದರು. ಯಾವುದರ ಕುರಿತು ಅವರು ಗೇಲಿ ಮಾಡುತ್ತಿದ್ದರೋ ಅದು (ಶಿಕ್ಷೆ) ಅವರನ್ನು ಆವರಿಸಿಬಿಟ್ಟಿತು.

فَلَمَّا جَآءَتْهُمْ رُسُلُهُم بِٱلْبَيِّنَٰتِ فَرِحُواْ بِمَا عِندَهُم مِّنَ ٱلْعِلْمِ وَحَاقَ بِهِم مَّا كَانُواْ بِهِۦ يَسْتَهْزِءُونَ ٨٣

1 ಯಾತ್ರೆ, ಯುದ್ಧ, ಸರಕು ಸಾಗಾಟ ಮುಂತಾದ ಅನೇಕ ಅಗತ್ಯಗಳಿಗಾಗಿ ಮನುಷ್ಯರು ಜಾನುವಾರುಗಳನ್ನು ಬಳಸುತ್ತಾರೆ

**84**. ತರುವಾಯ ನಮ್ಮ ಶಿಕ್ಷೆಯನ್ನು ಕಂಡಾಗ ಅವರು ಹೇಳಿದರು: 'ನಾವು ಅಲ್ಲಾಹುವಿನಲ್ಲಿ ಮಾತ್ರ ವಿಶ್ವಾಸವಿಟ್ಟಿರುವೆವು ಮತ್ತು ಅವನೊಂದಿಗೆ ನಾವು ಸಹಭಾಗಿಯನ್ನಾಗಿ ಮಾಡಿರುವ (ಆರಾಧ್ಯರನ್ನು) ನಾವು ನಿಷೇಧಿಸಿರುವೆವು'.

فَلَمَّا رَأَوْاْ بَأْسَنَا قَالُوٓاْ ءَامَنَّا بِٱللَّهِ وَحْدَهُۥ
وَكَفَرْنَا بِمَا كُنَّا بِهِۦ مُشْرِكِينَ ﴿٨٤﴾

**85**. ಆದರೆ ನಮ್ಮ ಶಿಕ್ಷೆಯನ್ನು ಕಂಡಾಗ ಅವರ ಸತ್ಯವಿಶ್ವಾಸವು ಅವರಿಗೆ ಪ್ರಯೋಜನಕಾರಿಯಾಗಲಿಲ್ಲ.(1) ಇದು ಅಲ್ಲಾಹು ತನ್ನ ದಾಸರ ವಿಷಯದಲ್ಲಿ ಹಿಂದೆಯೇ ಜಾರಿಗೊಳಿಸಿದ್ದ ಕ್ರಮವಾಗಿದೆ. ಅಲ್ಲಿ ಸತ್ಯನಿಷೇಧಿಗಳು ನಷ್ಟ ಹೊಂದಿದವರಾದರು.

فَلَمْ يَكُ يَنفَعُهُمْ إِيمَٰنُهُمْ لَمَّا رَأَوْاْ بَأْسَنَاۖ
سُنَّتَ ٱللَّهِ ٱلَّتِي قَدْ خَلَتْ فِي عِبَادِهِۦۖ
وَخَسِرَ هُنَالِكَ ٱلْكَٰفِرُونَ ﴿٨٥﴾

---

1 ಅಲ್ಲಾಹುವಿನ ಶಿಕ್ಷೆಯ ಕುರಿತು ಪ್ರವಾದಿಗಳು ನೀಡಿದ ಎಚ್ಚರಿಕೆಗಳನ್ನು ಕಡೆಗಣಿಸಿದ ಜನರೆಲ್ಲರೂ ಶಿಕ್ಷೆಯನ್ನು ಕಣ್ಣಾರೆ ಕಾಣುವಾಗ ಅಲ್ಲಾಹುವಿನಲ್ಲಿ ವಿಶ್ವಾಸವಿಡಲು ಸನ್ನದ್ಧರಾಗುತ್ತಾರೆ. ಆದರೆ ಮರಣವನ್ನು ಕಣ್ಣಾರೆ ಕಾಣುವ ಸಂದರ್ಭದಲ್ಲಿ ಮಾಡುವ ಆ ವಿಶ್ವಾಸ ಸಾರುವಿಕೆಯನ್ನು ಅಲ್ಲಾಹು ಎಂದೂ ಪರಿಗಣಿಸುವುದಿಲ್ಲ. ಶಿಕ್ಷೆ ಹಗುರವಾಗಲು ಸಹ ಅದು ಪ್ರಯೋಜನ ನೀಡುವುದಿಲ್ಲ.

## ಹಾಮೀಂ ಸಜದಃ[1]

## سُورَةُ حمٓ السَّجۡدَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 54

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

حمٓ ١ تَنزِيلٌ مِّنَ ٱلرَّحۡمَٰنِ ٱلرَّحِيمِ ٢

**1-2.** ಹಾ–ಮೀಮ್. ಇದು ಅವತೀರ್ಣಗೊಂಡಿರುವುದು ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವವನ ವತಿಯಿಂದಾಗಿದೆ.

كِتَٰبٌ فُصِّلَتۡ ءَايَٰتُهُۥ قُرۡءَانًا عَرَبِيًّا لِّقَوۡمٍ يَعۡلَمُونَ ٣

**3.** ಸೂಕ್ತಿಗಳನ್ನು ವಿವರಿಸಲಾಗಿರುವ ಒಂದು ಗ್ರಂಥ. ಅರ್ಥಮಾಡುವ ಜನರಿಗಾಗಿ ಅರಬಿ ಭಾಷೆಯಲ್ಲಿ ಪಾರಾಯಣ ಮಾಡಲಾಗುವ (ಒಂದು ಗ್ರಂಥ).

بَشِيرًا وَنَذِيرًا فَأَعۡرَضَ أَكۡثَرُهُمۡ فَهُمۡ لَا يَسۡمَعُونَ ٤

**4.** ಶುಭವಾರ್ತೆಯನ್ನು ತಿಳಿಸುವ ಮತ್ತು ಮುನ್ನೆಚ್ಚರಿಕೆ ನೀಡುವ (ಗ್ರಂಥ). ಆದರೆ ಅವರ ಪೈಕಿ ಹೆಚ್ಚಿನವರೂ ವಿಮುಖರಾದರು. ಅವರು ಆಲಿಸಲಾರರು.

وَقَالُواْ قُلُوبُنَا فِيٓ أَكِنَّةٖ مِّمَّا تَدۡعُونَآ إِلَيۡهِ وَفِيٓ ءَاذَانِنَا وَقۡرٞ وَمِنۢ بَيۡنِنَا وَبَيۡنِكَ حِجَابٞ فَٱعۡمَلۡ إِنَّنَا عَٰمِلُونَ ٥

**5.** ಅವರು ಹೇಳಿದರು: ‘ತಾವು ನಮ್ಮನ್ನು ಯಾವುದರೆಡೆಗೆ ಕರೆಯುತ್ತಿರುವಿರೋ ಅದನ್ನು ಗ್ರಹಿಸಲಾಗದ ರೀತಿಯಲ್ಲಿ ನಮ್ಮ ಹೃದಯಗಳನ್ನು ಮುಚ್ಚಲಾಗಿವೆ. ನಮ್ಮ ಕಿವಿಗಳು ಕಿವುಡಾಗಿವೆ. ನಮ್ಮ ಮತ್ತು ತಮ್ಮ ಮಧ್ಯೆ ಒಂದು ಪರದೆಯಿದೆ.[2] ಆದ್ದರಿಂದ ತಾವು ಕಾರ್ಯವೆಸಗಿರಿ. ಖಂಡಿತವಾಗಿಯೂ ನಾವೂ ಕಾರ್ಯವೆಸಗುವವರಾಗಿರುವೆವು’.

قُلۡ إِنَّمَآ أَنَا۠ بَشَرٞ مِّثۡلُكُمۡ يُوحَىٰٓ إِلَيَّ أَنَّمَآ إِلَٰهُكُمۡ إِلَٰهٞ وَٰحِدٞ فَٱسۡتَقِيمُوٓاْ إِلَيۡهِ وَٱسۡتَغۡفِرُوهُۗ وَوَيۡلٞ لِّلۡمُشۡرِكِينَ ٦

**6-7.** ಹೇಳಿರಿ: ‘ನಾನು ನಿಮ್ಮಂತಿರುವ ಒಬ್ಬ ಮನುಷ್ಯ ಮಾತ್ರವಾಗಿರುವೆನು. ನಿಮ್ಮ ಆರಾಧ್ಯನು ಏಕಮೇವ ಆರಾಧ್ಯನಾಗಿರುವನೆಂದು ನನಗೆ ದಿವ್ಯಸಂದೇಶ ನೀಡಲಾಗುತ್ತಿದೆ. ಆದ್ದರಿಂದ

---

1 ಹಾಮ್ ಮೀಮ್ ಸಜ್ದ ಎಂಬ ಹೆಸರೂ ಈ ಅಧ್ಯಾಯಕ್ಕಿದೆ.

2 ವಿಚಾರ ವಿನಿಮಯವು ಸಾಧ್ಯವಾಗದಷ್ಟು ನಾವು ಪರಸ್ಪರ ಅಗಲಿರುವೆವು ಎಂದು ಉದ್ದೇಶಿಸುತ್ತಿರಬಹುದು.

ٱلَّذِينَ لَا يُؤۡتُونَ ٱلزَّكَوٰةَ وَهُم بِٱلۡأٓخِرَةِ هُمۡ كَٰفِرُونَ ٧

ಅವನೆಡೆಗಿರುವ ಮಾರ್ಗದಲ್ಲಿ ನೀವು ನೇರವಾಗಿ ನೆಲೆಗೊಳ್ಳಿರಿ. ಅವನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಝಕಾತ್ ನೀಡದ ಮತ್ತು ಪರಲೋಕದಲ್ಲಿ ವಿಶ್ವಾಸವಿಡದ ಬಹುದೇವಾರಾಧಕರಿಗೆ[1] ನಾಶವಿದೆ.

إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ لَهُمۡ أَجۡرٌ غَيۡرُ مَمۡنُونٖ ٨

**8.** ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರಿಗೆ ಅಂತ್ಯವಿಲ್ಲದ ಪ್ರತಿಫಲವಿದೆ.

۞ قُلۡ أَئِنَّكُمۡ لَتَكۡفُرُونَ بِٱلَّذِي خَلَقَ ٱلۡأَرۡضَ فِي يَوۡمَيۡنِ وَتَجۡعَلُونَ لَهُۥٓ أَندَادٗاۚ ذَٰلِكَ رَبُّ ٱلۡعَٰلَمِينَ ٩

**9.** ಹೇಳಿರಿ: 'ಎರಡು ದಿನಗಳಲ್ಲಿ ಭೂಮಿಯನ್ನು ಸೃಷ್ಟಿಸಿದವನಲ್ಲಿ ಅವಿಶ್ವಾಸವಿಟ್ಟು ಅವನೊಂದಿಗೆ ನೀವು ಪ್ರತಿಸ್ಪರ್ಧಿಗಳನ್ನು ಮಾಡುವಿರಾ? ಸರ್ವಲೋಕಗಳ ರಬ್ ಅವನೇ ಆಗಿರುವನು'.

وَجَعَلَ فِيهَا رَوَٰسِيَ مِن فَوۡقِهَا وَبَٰرَكَ فِيهَا وَقَدَّرَ فِيهَآ أَقۡوَٰتَهَا فِيٓ أَرۡبَعَةِ أَيَّامٖ سَوَآءٗ لِّلسَّآئِلِينَ ١٠

**10.** ಅವನು ಅದರಲ್ಲಿ (ಭೂಮಿಯಲ್ಲಿ) –ಅದರ ಮೇಲ್ಭಾಗದಲ್ಲಿ– ಅಚಲವಾಗಿರುವ ಪರ್ವತಗಳನ್ನು ಸ್ಥಾಪಿಸಿ, ಅದರಲ್ಲಿ ಸಮೃದ್ಧಿಯನ್ನುಂಟುಮಾಡಿ, ಅದರಲ್ಲಿರುವ ಆಹಾರಗಳನ್ನು ಅಲ್ಲಿ ನಿರ್ಣಯಿಸಿದನು. (ಅವನು ಇದನ್ನು ಮಾಡಿದ್ದು) ನಾಲ್ಕು ದಿನಗಳಲ್ಲಾಗಿತ್ತು.[2] ಆವಶ್ಯಕತೆಯುಳ್ಳವರಿಗೆ ಸರಿಯಾದ ಪ್ರಮಾಣದಲ್ಲಿ.[3]

ثُمَّ ٱسۡتَوَىٰٓ إِلَى ٱلسَّمَآءِ وَهِيَ دُخَانٞ فَقَالَ

**11.** ಅದರ ಹೊರತಾಗಿ[4] ಅವನು ಆಕಾಶದೆಡೆಗೆ ತಿರುಗಿದನು. ಅದೊಂದು ಹೊಗೆಯಾಗಿತ್ತು.

---

1 ಬಹುದೇವಾರಾಧಕರಲ್ಲಿ ಸಾಮಾನ್ಯವಾಗಿ ಕಾಣುವ ಸ್ಥಿತಿಯನ್ನು ಈ ವಾಕ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಅನೇಕ ರೀತಿಯ ಪ್ರಾರ್ಥನೆ, ಪೂಜೆ ಪುನಸ್ಕಾರಗಳನ್ನು ಅತೀವ ಭಕ್ತಿಯಿಂದ ನಿರ್ವಹಿಸುವ ಅವರು ಹೆಚ್ಚಿನ ಸಂದರ್ಭಗಳಲ್ಲೂ ಆರ್ಥಿಕ ಬಾಧ್ಯತೆಗಳನ್ನು ನಿರ್ವಹಿಸುವುದರಿಂದ ವಿಮುಖರಾಗುತ್ತಾರೆ. ಇಹಲೋಕದಲ್ಲಿ ತಮ್ಮ ಬಯಕೆಗಳ ಈಡೇರಿಕೆಗಾಗಿ ಹರಕೆ ಬಲಿಗಳನ್ನು ಧಾರಾಳವಾಗಿ ನಿರ್ವಹಿಸುವವರ ಪೈಕಿ ಹೆಚ್ಚಿನವರೂ ಪರಲೋಕದಲ್ಲಿ ಸರಿಯಾದ ವಿಶ್ವಾಸವಿಲ್ಲದವರಾಗಿರುತ್ತಾರೆ.

2 ಒಂಬತ್ತನೇ ಸೂಕ್ತಿಯಲ್ಲಿ ಹೇಳಲಾದ ಭೂಮಿಯ ಸೃಷ್ಟಿ ಮತ್ತು ಹತ್ತನೇ ಸೂಕ್ತಿಯಲ್ಲಿ ಹೇಳಲಾದ ವಿಷಯಗಳೂ ಸೇರಿದಂತೆ ಒಟ್ಟು ನಾಲ್ಕು ದಿನಗಳಲ್ಲಿ ಅಥವಾ ಹಂತಗಳಲ್ಲಿ ನಡೆಯಿತೆಂದು ಪೂರ್ವಿಕರಾದ ಅನೇಕ ವ್ಯಾಖ್ಯಾನಕಾರರೂ ಅಭಿಪ್ರಾಯಪಟ್ಟಿದ್ದಾರೆ.

3 ಸವಾಅ್ ಎಂಬ ಪದಕ್ಕೆ ಸರಿಯಾದುದು, ಪೂರ್ಣವಾದುದು ಇತ್ಯಾದಿ ಅರ್ಥಗಳಿವೆ. ಸಾಇಲೀನ್ ಎಂಬ ಪದಕ್ಕೆ ಕೇಳುವವರು, ಬೇಡುವವರು, ಆವಶ್ಯಕತೆಯುಳ್ಳವರು ಇತ್ಯಾದಿ ಅರ್ಥಗಳಿವೆ.

4 ತರುವಾಯ ಎಂಬ ಅರ್ಥವಿರುವ ಸುಮ್ಮ ಎಂಬ ಅವ್ಯಯವನ್ನು ಘಟನೆಗಳ ಅನುಕ್ರಮವನ್ನು ಸೂಚಿಸಲು ಮಾತ್ರವಲ್ಲದೆ ವಿವರಣೆಗಳ ಅನುಕ್ರಮವನ್ನು ಸೂಚಿಸಲೂ ಬಳಸಲಾಗುತ್ತದೆ. 79:30ರಲ್ಲಿ ಆಕಾಶದ ಸೃಷ್ಟಿಯ ನಂತರವೇ ಭೂಮಿಯನ್ನು ವಿಕಾಸಗೊಳಿಸಲಾಯಿತೆಂದು ಹೇಳಲಾಗಿದೆ.

ಅವನು ಅದರೊಂದಿಗೆ ಮತ್ತು ಭೂಮಿಯೊಂದಿಗೆ ಹೇಳಿದನು: 'ನೀವು ವಿಧೇಯತೆಯಿಂದ ಅಥವಾ ಬಲವಂತದಿಂದ ಬನ್ನಿರಿ'. ಅವೆರಡೂ ಹೇಳಿದವು: 'ನಾವು ವಿಧೇಯತೆಯಿಂದಲೇ ಬಂದಿರುವೆವು'.

لَهَا وَلِلْأَرْضِ ٱئْتِيَا طَوْعًا أَوْ كَرْهًا قَالَتَآ
أَتَيْنَا طَآئِعِينَ ﴿١١﴾

12. ತರುವಾಯ ಎರಡು ದಿನಗಳಲ್ಲಿ ಅವನು ಅವುಗಳನ್ನು ಏಳು ಆಕಾಶಗಳನ್ನಾಗಿ ಮಾಡಿದನು. ಪ್ರತಿಯೊಂದು ಆಕಾಶದಲ್ಲೂ ಅದರ ಕಾರ್ಯನಿರ್ವಹಣೆಯನ್ನು ಆದೇಶಿಸಿದನು. ಸಮೀಪದ ಆಕಾಶವನ್ನು ನಾವು ಕೆಲವು ದೀಪಗಳಿಂದ ಅಲಂಕರಿಸಿರುವೆವು ಮತ್ತು ಸುರಕ್ಷಿತಗೊಳಿಸಿರುವೆವು. ಇದು ಪ್ರತಾಪಶಾಲಿಯೂ ಸರ್ವಜ್ಞನೂ ಆಗಿರುವ ಅಲ್ಲಾಹುವಿನ ನಿರ್ಣಯವಾಗಿದೆ.

فَقَضَىٰهُنَّ سَبْعَ سَمَٰوَاتٍ فِى يَوْمَيْنِ وَأَوْحَىٰ
فِى كُلِّ سَمَآءٍ أَمْرَهَا ۚ وَزَيَّنَّا ٱلسَّمَآءَ ٱلدُّنْيَا
بِمَصَٰبِيحَ وَحِفْظًا ۚ ذَٰلِكَ تَقْدِيرُ ٱلْعَزِيزِ
ٱلْعَلِيمِ ﴿١٢﴾

13. ಇನ್ನು ಅವರೇನಾದರೂ ವಿಮುಖರಾಗುವುದಾದರೆ ತಾವು ಹೇಳಿರಿ: 'ಆದ್, ಸಮೂದ್ ಎಂಬೀ ಸಮುದಾಯಗಳ ಮೇಲೆರಗಿದ ಭೀಕರ ಶಿಕ್ಷೆಯಂತಿರುವ ಒಂದು ಶಿಕ್ಷೆಯ ಬಗ್ಗೆ ನಾನು ನಿಮಗೆ ಎಚ್ಚರಿಕೆ ನೀಡುತ್ತಿರುವೆನು'.

فَإِنْ أَعْرَضُوا۟ فَقُلْ أَنذَرْتُكُمْ صَٰعِقَةً
مِّثْلَ صَٰعِقَةِ عَادٍ وَثَمُودَ ﴿١٣﴾

14. 'ಅಲ್ಲಾಹುವಿನ ಹೊರತು ಅನ್ಯರನ್ನು ಆರಾಧಿಸದಿರಿ' ಎಂದು ಹೇಳುತ್ತಾ ಅವರ ಮುಂಭಾಗದಿಂದಲೂ ಹಿಂಭಾಗದಿಂದಲೂ ಸಂದೇಶವಾಹಕರು ಅವರ ಬಳಿಗೆ ಬಂದಾಗ ಅವರು ಹೇಳಿದರು: 'ನಮ್ಮ ರಬ್ ಇಚ್ಛಿಸುತ್ತಿದ್ದರೆ ಅವನು ಮಲಕ್‌ಗಳನ್ನು ಇಳಿಸುತ್ತಿದ್ದನು. ಆದ್ದರಿಂದ ನಿಮ್ಮನ್ನು ಯಾವುದರೊಂದಿಗೆ ಕಳುಹಿಸಲಾಗಿದೆಯೋ ಖಂಡಿತವಾಗಿಯೂ ಅದರಲ್ಲಿ ನಾವು ಅವಿಶ್ವಾಸವಿಟ್ಟಿರುವೆವು'.

إِذْ جَآءَتْهُمُ ٱلرُّسُلُ مِنۢ بَيْنِ أَيْدِيهِمْ وَمِنْ
خَلْفِهِمْ أَلَّا تَعْبُدُوٓا۟ إِلَّا ٱللَّهَ ۖ قَالُوا۟ لَوْ شَآءَ
رَبُّنَا لَأَنزَلَ مَلَٰٓئِكَةً فَإِنَّا بِمَآ أُرْسِلْتُم بِهِۦ
كَٰفِرُونَ ﴿١٤﴾

15. ಆದ್ ಜನಾಂಗವು ಭೂಮಿಯಲ್ಲಿ ಅನ್ಯಾಯವಾಗಿ ಅಹಂಕಾರ ಪಡುತ್ತಿದ್ದರು ಮತ್ತು 'ನಮಗಿಂತಲೂ ಬಲಿಷ್ಠರು ಯಾರಿರುವರು?'

فَأَمَّا عَادٌ فَٱسْتَكْبَرُوا۟ فِى ٱلْأَرْضِ بِغَيْرِ
ٱلْحَقِّ وَقَالُوا۟ مَنْ أَشَدُّ مِنَّا قُوَّةً ۖ أَوَلَمْ يَرَوْا۟

ಎಂದು ಕೇಳುತ್ತಿದ್ದರು. ತಮ್ಮನ್ನು ಸೃಷ್ಟಿಸಿದ ಅಲ್ಲಾಹು ತಮಗಿಂತಲೂ ಬಲಿಷ್ಠನಾಗಿರುವನೆಂದು ಅವರಿಗೆ ಕಾಣುವುದಿಲ್ಲವೇ? ಅವರು ನಮ್ಮ ದೃಷ್ಟಾಂತಗಳನ್ನು ನಿಷೇಧಿಸುತ್ತಿದ್ದರು.

أَنَّ ٱللَّهَ ٱلَّذِى خَلَقَهُمْ هُوَ أَشَدُّ مِنْهُمْ قُوَّةً
وَكَانُوا۟ بِـَٔايَـٰتِنَا يَجْحَدُونَ ﴿١٥﴾

16. ತರುವಾಯ ದುರಂತ ಬಾಧಿಸಿದ ಕೆಲವು ದಿನಗಳಲ್ಲಿ ನಾವು ಅವರೆಡೆಗೆ ಭೀಕರವಾದ ಚಳಿಗಾಳಿಯೊಂದನ್ನು ಕಳುಹಿಸಿದೆವು. ಅಪಮಾನಕರ ಶಿಕ್ಷೆಯನ್ನು ಐಹಿಕ ಜೀವನದಲ್ಲಿ ಅವರು ಸವಿಯುವಂತೆ ಮಾಡುವ ಸಲುವಾಗಿ. ಆದರೆ ಪರಲೋಕದಲ್ಲಿರುವ ಶಿಕ್ಷೆಯು ಅತ್ಯಧಿಕ ನಿಂದ್ಯತೆಯಿಂದ ಕೂಡಿದ್ದಾಗಿದೆ. ಅವರಿಗೆ ಯಾವುದೇ ಸಹಾಯವೂ ಸಿಗದು.

فَأَرْسَلْنَا عَلَيْهِمْ رِيحًا صَرْصَرًا فِىٓ أَيَّامٍ
نَّحِسَاتٍ لِّنُذِيقَهُمْ عَذَابَ ٱلْخِزْىِ فِى
ٱلْحَيَوٰةِ ٱلدُّنْيَا ۖ وَلَعَذَابُ ٱلْـَٔاخِرَةِ أَخْزَىٰ ۖ
وَهُمْ لَا يُنصَرُونَ ﴿١٦﴾

17-18. ಸಮೂದ್ ಜನಾಂಗಕ್ಕೆ ನಾವು ಸನ್ಮಾರ್ಗವನ್ನು ತೋರಿಸಿಕೊಟ್ಟೆವು. ಆದರೆ ಅವರು ಸನ್ಮಾರ್ಗಕ್ಕಿಂತಲೂ ಅಂಧತೆಯನ್ನೇ ಇಷ್ಟಪಟ್ಟರು. ಆದ್ದರಿಂದ ಅವರು ಮಾಡಿಕೊಂಡಿರುವುದರ ಫಲವಾಗಿ ಅಪಮಾನಕರವಾದ ಭೀಕರ ಶಿಕ್ಷೆಯೊಂದು ಅವರನ್ನು ಹಿಡಿಯಿತು. ವಿಶ್ವಾಸವಿಟ್ಟವರನ್ನು ಮತ್ತು ಧರ್ಮನಿಷ್ಠೆ ಪಾಲಿಸಿದವರನ್ನು ನಾವು ರಕ್ಷಿಸಿದೆವು.

وَأَمَّا ثَمُودُ فَهَدَيْنَـٰهُمْ فَٱسْتَحَبُّوا۟ ٱلْعَمَىٰ
عَلَى ٱلْهُدَىٰ فَأَخَذَتْهُمْ صَـٰعِقَةُ ٱلْعَذَابِ
ٱلْهُونِ بِمَا كَانُوا۟ يَكْسِبُونَ ﴿١٧﴾ وَنَجَّيْنَا
ٱلَّذِينَ ءَامَنُوا۟ وَكَانُوا۟ يَتَّقُونَ ﴿١٨﴾

19. ಅಲ್ಲಾಹುವಿನ ಶತ್ರುಗಳನ್ನು ನರಕದೆಡೆಗೆ ಕೊಂಡೊಯ್ಯುವ ಸಲುವಾಗಿ ಒಟ್ಟುಗೂಡಿಸುವ ಮತ್ತು ಅಟ್ಟಿಕೊಂಡು ಸಾಗಿಸುವ ದಿನ!

وَيَوْمَ يُحْشَرُ أَعْدَآءُ ٱللَّهِ إِلَى ٱلنَّارِ فَهُمْ
يُوزَعُونَ ﴿١٩﴾

20. ಕೊನೆಗೆ ಅವರು ಅಲ್ಲಿಗೆ (ನರಕಕ್ಕೆ) ಬಂದಾಗ ಅವರ ಕಿವಿಗಳು, ಕಣ್ಣುಗಳು ಮತ್ತು ಚರ್ಮಗಳು ಅವರು ಮಾಡುತ್ತಿದ್ದುದರ ಬಗ್ಗೆ ಅವರಿಗೆ ವಿರುದ್ಧವಾಗಿ ಸಾಕ್ಷಿ ನುಡಿಯುವುವು.

حَتَّىٰٓ إِذَا مَا جَآءُوهَا شَهِدَ عَلَيْهِمْ
سَمْعُهُمْ وَأَبْصَـٰرُهُمْ وَجُلُودُهُم بِمَا كَانُوا۟
يَعْمَلُونَ ﴿٢٠﴾

21. ಅವರು ತಮ್ಮ ಚರ್ಮಗಳೊಂದಿಗೆ ಹೇಳುವರು: 'ನೀವೇಕೆ ನಮ್ಮ ವಿರುದ್ಧ ಸಾಕ್ಷಿ ನುಡಿದಿರಿ?'

وَقَالُوا۟ لِجُلُودِهِمْ لِمَ شَهِدتُّمْ عَلَيْنَا ۖ قَالُوٓا۟

أَنطَقَنَا ٱللَّهُ ٱلَّذِىٓ أَنطَقَ كُلَّ شَىْءٍۢ وَهُوَ
خَلَقَكُمْ أَوَّلَ مَرَّةٍۢ وَإِلَيْهِ تُرْجَعُونَ ﴿٢١﴾

ಅವು ಹೇಳುವುವು: ‘ಎಲ್ಲ ವಸ್ತುಗಳನ್ನು ಮಾತನಾಡಿಸಿದ ಅಲ್ಲಾಹು ನಮ್ಮನ್ನು ಮಾತನಾಡಿಸಿದನು’. ಮೊದಲ ಬಾರಿ ನಿಮ್ಮನ್ನು ಸೃಷ್ಟಿಸಿದವನು ಅವನೇ ಆಗಿರುವನು. ಅವನೆಡೆಗೇ ನಿಮ್ಮನ್ನು ಮರಳಿಸಲಾಗುವುದು.

وَمَا كُنتُمْ تَسْتَتِرُونَ أَن يَشْهَدَ عَلَيْكُمْ
سَمْعُكُمْ وَلَآ أَبْصَـٰرُكُمْ وَلَا جُلُودُكُمْ
وَلَـٰكِن ظَنَنتُمْ أَنَّ ٱللَّهَ لَا يَعْلَمُ كَثِيرًۭا
مِّمَّا تَعْمَلُونَ ﴿٢٢﴾

22. ನಿಮ್ಮ ಕಿವಿಗಳಾಗಲಿ, ನಿಮ್ಮ ಕಣ್ಣುಗಳಾಗಲಿ ಅಥವಾ ನಿಮ್ಮ ಚರ್ಮಗಳಾಗಲಿ ನಿಮ್ಮ ವಿರುದ್ಧ ಸಾಕ್ಷಿ ನುಡಿಯುವುವು ಎಂದು ಭಾವಿಸಿ ನೀವು (ಅವುಗಳಿಂದ) ಅಡಗಿರುತ್ತಿರಲಿಲ್ಲ. ಆದರೆ ನೀವು ಮಾಡುತ್ತಿರುವುದರ ಪೈಕಿ ಹೆಚ್ಚಿನವುಗಳನ್ನೂ ಅಲ್ಲಾಹು ಅರಿಯಲಾರನೆಂದೇ ನೀವು ಭಾವಿಸಿದಿರಿ.

وَذَٰلِكُمْ ظَنُّكُمُ ٱلَّذِى ظَنَنتُم بِرَبِّكُمْ
أَرْدَىٰكُمْ فَأَصْبَحْتُم مِّنَ ٱلْخَـٰسِرِينَ ﴿٢٣﴾

23. ಅದು ನೀವು ನಿಮ್ಮ ರಬ್‌ನ ಕುರಿತು ಭಾವಿಸಿರುವ ಭಾವನೆಯಾಗಿದೆ ಅದು ನಿಮಗೆ ನಾಶವನ್ನು ತಂದಿಟ್ಟಿದೆ. ಆದ್ದರಿಂದ ನೀವು ನಷ್ಟ ಹೊಂದಿದವರಲ್ಲಿ ಸೇರಿದವರಾದಿರಿ.

فَإِن يَصْبِرُوا۟ فَٱلنَّارُ مَثْوًۭى لَّهُمْ ۖ وَإِن
يَسْتَعْتِبُوا۟ فَمَا هُم مِّنَ ٱلْمُعْتَبِينَ ﴿٢٤﴾

24. ಅವರು ಸಹನೆ ವಹಿಸಿದರೂ ಅವರ ವಾಸಸ್ಥಳವು ನರಕಾಗ್ನಿಯಾಗಿದೆ. ಅವರು ವಿನಾಯಿತಿಯನ್ನು ಬೇಡುವುದಾದರೆ ವಿನಾಯಿತಿ ನೀಡಲಾದವರಲ್ಲಿ ಅವರು ಸೇರಲಾರರು.

۞ وَقَيَّضْنَا لَهُمْ قُرَنَآءَ فَزَيَّنُوا۟ لَهُم مَّا بَيْنَ
أَيْدِيهِمْ وَمَا خَلْفَهُمْ وَحَقَّ عَلَيْهِمُ ٱلْقَوْلُ
فِىٓ أُمَمٍۢ قَدْ خَلَتْ مِن قَبْلِهِم مِّنَ ٱلْجِنِّ
وَٱلْإِنسِ ۖ إِنَّهُمْ كَانُوا۟ خَـٰسِرِينَ ﴿٢٥﴾

25. ನಾವು ಅವರಿಗೆ ಕೆಲವು ಸಂಗಡಿಗರನ್ನು ಕೊಟ್ಟಿರುವೆವು. ಆ ಸಂಗಡಿಗರು ಅವರಿಗೆ ಅವರ ಮುಂಭಾಗದಲ್ಲಿರುವುದನ್ನು ಮತ್ತು ಹಿಂಭಾಗದಲ್ಲಿರುವುದನ್ನು ಆಕರ್ಷಕಗೊಳಿಸಿ ತೋರಿಸಿದರು. ಅವರಿಗಿಂತ ಮುಂಚೆ ಗತಿಸಿರುವ ಜಿನ್ನ್ ಮತ್ತು ಮನುಷ್ಯರ ಸಮುದಾಯಗಳ ಜೊತೆಗೆ ಇವರ ಮೇಲೂ (ಶಿಕ್ಷೆಯ) ವಚನವು ಸತ್ಯವಾಗಿ ಪರಿಣಮಿಸಿತು. ಖಂಡಿತವಾಗಿಯೂ ಅವರು ನಷ್ಟ ಹೊಂದಿದವರಾಗಿದ್ದರು.

26. ಸತ್ಯನಿಷೇಧಿಗಳು ಹೇಳಿದರು: ‘ನೀವು ಈ ಕುರ್‌ಆನನ್ನು ಆಲಿಸದಿರಿ. ಅದನ್ನು ಪಾರಾಯಣ ಮಾಡಲಾಗುವಾಗ ಗದ್ದಲ ಮಾಡಿರಿ. ನಿಮಗೆ (ಅದನ್ನು) ಸೋಲಿಸಲು ಸಾಧ್ಯವಾಗಬಹುದು’.

وَقَالَ ٱلَّذِينَ كَفَرُواْ لَا تَسۡمَعُواْ لِهَٰذَا ٱلۡقُرۡءَانِ وَٱلۡغَوۡاْ فِيهِ لَعَلَّكُمۡ تَغۡلِبُونَ ٢٦

27. ಖಂಡಿತವಾಗಿಯೂ ಆ ಸತ್ಯನಿಷೇಧಿಗಳಿಗೆ ನಾವು ಕಠಿಣವಾದ ಶಿಕ್ಷೆಯನ್ನು ಸವಿಯುವಂತೆ ಮಾಡುವೆವು. ಅವರು ಮಾಡುತ್ತಿರುವ ಕರ್ಮಗಳ ಪೈಕಿ ಅತಿಹೀನವಾಗಿರುವುದಕ್ಕೆ ನಾವು ಖಂಡಿತವಾಗಿಯೂ ಪ್ರತಿಫಲವನ್ನು ನೀಡುವೆವು.

فَلَنُذِيقَنَّ ٱلَّذِينَ كَفَرُواْ عَذَابٗا شَدِيدٗا وَلَنَجۡزِيَنَّهُمۡ أَسۡوَأَ ٱلَّذِي كَانُواْ يَعۡمَلُونَ ٢٧

28. ಅಲ್ಲಾಹುವಿನ ಶತ್ರುಗಳಿಗೆ ಪ್ರತಿಫಲವಾಗಿರುವ ನರಕಾಗ್ನಿಯು ಇದೇ ಆಗಿದೆ. ಅವರಿಗೆ ಅಲ್ಲಿ ಶಾಶ್ವತ ವಾಸಕ್ಕಿರುವ ವಸತಿಯಿರುವುದು. ಅದು ಅವರು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿರುವುದರ ಪ್ರತಿಫಲವಾಗಿದೆ.

ذَٰلِكَ جَزَآءُ أَعۡدَآءِ ٱللَّهِ ٱلنَّارُۖ لَهُمۡ فِيهَا دَارُ ٱلۡخُلۡدِ جَزَآءَۢ بِمَا كَانُواْ بِـَٔايَٰتِنَا يَجۡحَدُونَ ٢٨

29. ಸತ್ಯನಿಷೇಧಿಗಳು ಹೇಳುವರು: ‘ಓ ನಮ್ಮ ರಬ್! ನಮ್ಮನ್ನು ಪಥಭ್ರಷ್ಟಗೊಳಿಸಿದ ಜಿನ್ನ್ ಮತ್ತು ಮನುಷ್ಯರಲ್ಲಿ ಸೇರಿದ ಎರಡು ಪಂಗಡಗಳನ್ನೂ ನಮಗೆ ತೋರಿಸಿಕೊಡು. ಅವರು ಅಧಮರ ಪೈಕಿ ಸೇರಿದವರಾಗಲು ನಾವು ಅವರನ್ನು ನಮ್ಮ ಪಾದಗಳಡಿಯಲ್ಲಿ ಹಾಕಿ ತುಳಿಯುವೆವು’.

وَقَالَ ٱلَّذِينَ كَفَرُواْ رَبَّنَآ أَرِنَا ٱلَّذَيۡنِ أَضَلَّانَا مِنَ ٱلۡجِنِّ وَٱلۡإِنسِ نَجۡعَلۡهُمَا تَحۡتَ أَقۡدَامِنَا لِيَكُونَا مِنَ ٱلۡأَسۡفَلِينَ ٢٩

30. ‘ನಮ್ಮ ರಬ್ ಅಲ್ಲಾಹು’ ಎಂದು ಹೇಳಿ, ತರುವಾಯ ಅದರಲ್ಲಿ ಅಚಲರಾಗಿ ನಿಂತವರಾರೋ ಅವರ ಬಳಿಗೆ ಮಲಕ್‌ಗಳು ಇಳಿದುಬಂದು ಹೇಳುವರು:[1] ‘ನೀವು ಭಯಪಡದಿರಿ ಮತ್ತು ದುಃಖಿಸದಿರಿ. ನಿಮಗೆ ವಾಗ್ದಾನ ಮಾಡಲಾಗಿರುವ ಸ್ವರ್ಗದ ಕುರಿತು ನೀವು ಸಂತುಷ್ಟರಾಗಿರಿ.

إِنَّ ٱلَّذِينَ قَالُواْ رَبُّنَا ٱللَّهُ ثُمَّ ٱسۡتَقَٰمُواْ تَتَنَزَّلُ عَلَيۡهِمُ ٱلۡمَلَٰٓئِكَةُ أَلَّا تَخَافُواْ وَلَا تَحۡزَنُواْ وَأَبۡشِرُواْ بِٱلۡجَنَّةِ ٱلَّتِي كُنتُمۡ تُوعَدُونَ ٣٠

1 ಸಜ್ಜನರು ಮೃತಪಡುವಾಗ ಮಲಕ್‌ಗಳು ಶುಭವಾರ್ತೆಯೊಂದಿಗೆ ಆಗಮಿಸುವರೆಂದು ಹೆಚ್ಚಿನ ವ್ಯಾಖ್ಯಾನಕಾರರೂ ಅಭಿಪ್ರಾಯಪಟ್ಟಿದ್ದಾರೆ.

نَحْنُ أَوْلِيَآؤُكُمْ فِى ٱلْحَيَوٰةِ ٱلدُّنْيَا
وَفِى ٱلْءَاخِرَةِ ۖ وَلَكُمْ فِيهَا مَا تَشْتَهِىٓ
أَنفُسُكُمْ وَلَكُمْ فِيهَا مَا تَدَّعُونَ ﴿٣١﴾
نُزُلًا مِّنْ غَفُورٍ رَّحِيمٍ ﴿٣٢﴾

31-32. ಇಹಲೋಕದಲ್ಲೂ, ಪರಲೋಕದಲ್ಲೂ ನಾವು ನಿಮ್ಮ ಮಿತ್ರರಾಗಿರುವೆವು. ನಿಮ್ಮ ಮನಸ್ಸುಗಳು ಬಯಸುವುದೆಲ್ಲವೂ ನಿಮಗೆ ಅಲ್ಲಿ (ಪರಲೋಕದಲ್ಲಿ) ಇರುವುವು. ನೀವು ಬೇಡುವುದೆಲ್ಲವೂ ಅಲ್ಲಿ ನಿಮಗಿರುವುವು. ಅದು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವ ಅಲ್ಲಾಹುವಿನ ವತಿಯ ಆತಿಥ್ಯವಾಗಿದೆ.

وَمَنْ أَحْسَنُ قَوْلًا مِّمَّن دَعَآ إِلَى
ٱللَّهِ وَعَمِلَ صَٰلِحًا وَقَالَ إِنَّنِى مِنَ
ٱلْمُسْلِمِينَ ﴿٣٣﴾

33. ಅಲ್ಲಾಹುವಿನಡೆಗೆ ಆಹ್ವಾನಿಸುವ, ಸತ್ಕರ್ಮವೆಸಗುವ ಮತ್ತು ಖಂಡಿತವಾಗಿಯೂ ನಾನು ಮುಸ್ಲಿಮರ ಪೈಕಿ ಸೇರಿದವನಾಗಿರುವೆನೆಂದು ಹೇಳುವವನಿಗಿಂತ ಉತ್ತಮವಾದ ಮಾತನ್ನು ಹೇಳಿದವನು ಯಾರಿರುವನು?(1)

وَلَا تَسْتَوِى ٱلْحَسَنَةُ وَلَا ٱلسَّيِّئَةُ ۚ ٱدْفَعْ
بِٱلَّتِى هِىَ أَحْسَنُ فَإِذَا ٱلَّذِى بَيْنَكَ
وَبَيْنَهُۥ عَدَٰوَةٌ كَأَنَّهُۥ وَلِىٌّ حَمِيمٌ ﴿٣٤﴾

34. ಒಳಿತು ಮತ್ತು ಕೆಡುಕು ಸಮಾನವಾಗಲಾರದು. ಅತ್ಯುತ್ತಮವಾದುದು ಯಾವುದೋ ಅದರ ಮೂಲಕ ಮೂಲಕ ತಾವು (ಕೆಡುಕನ್ನು) ತಡೆಯಿರಿ. ಆಗ ಯಾರ ಮತ್ತು ತಮ್ಮ ಮಧ್ಯೆ ಶತ್ರುತ್ವವಿದೆಯೋ ಅವನು (ತಮ್ಮ) ಆಪ್ತ ಮಿತ್ರನೋ ಎಂಬಂತೆ ಮಾರ್ಪಡುವನು.

وَمَا يُلَقَّىٰهَآ إِلَّا ٱلَّذِينَ صَبَرُوا۟ وَمَا يُلَقَّىٰهَآ
إِلَّا ذُو حَظٍّ عَظِيمٍ ﴿٣٥﴾

35. ಸಹನೆ ಪಾಲಿಸಿದವರಿಗೇ ಹೊರತು ಇನ್ನಾರಿಗೂ ಅದಕ್ಕಿರುವ ಅನುಗ್ರಹವನ್ನು ನೀಡಲಾಗದು. ಮಹಾಭಾಗ್ಯಶಾಲಿಗಳಿಗೇ ಹೊರತು ಇನ್ನಾರಿಗೂ ಅದಕ್ಕಿರುವ ಅನುಗ್ರಹವನ್ನು ನೀಡಲಾಗದು.(2)

1 ನಿರರ್ಥಕ ಮಾತುಗಳನ್ನು ಅತೀವ ಆಸಕ್ತಿಯಿಂದ ಹೇಳುವವರು ಮತ್ತು ಆಲಿಸುವವರು ಸತ್ಯವಿಶ್ವಾಸದ ಮತ್ತು ಧಾರ್ಮಿಕ ಜೀವನದ ಬೋಧನೆಯನ್ನು ಅತಿ ಕೀಳಾಗಿ ಕಾಣುತ್ತಾರೆ. ಸತ್ಯದ ಧ್ವನಿಯನ್ನು ನಿಷ್ಕ್ರಿಯಗೊಳಿಸಲು ಕೆಡುಕಿನ ವಕ್ತಾರರು ನಡೆಸುವ ನಿರಂತರ ಶ್ರಮಗಳ ಮಧ್ಯೆಯೂ ಸತ್ಯಸಂದೇಶದ ಪ್ರಚಾರದೊಂದಿಗೆ ಮುನ್ನುಗ್ಗಲು ಸತ್ಯವಿಶ್ವಾಸಿಗಳಿಗೆ ಪ್ರಸ್ತುತ ಸೂಕ್ತಿಯು ಪ್ರೇರಣೆಯನ್ನು ನೀಡುತ್ತದೆ. ಹೌದು! ಸತ್ಯಸಂದೇಶವನ್ನು ಪ್ರಚಾರ ಮಾಡುವುದಕ್ಕಿಂತಲೂ ಉತ್ತಮವಾದ ಮಾತು ಬೇರೊಂದಿಲ್ಲ.

2 ನಿಂದೆಗೆ ಪ್ರತಿಯಾಗಿ ನಿಂದೆ, ಅವಹೇಳನಕ್ಕೆ ಪ್ರತಿಯಾಗಿ ಅವಹೇಳನ ಎಂಬ ನಿಲುವನ್ನು ಸ್ವೀಕರಿಸಲಷ್ಟೇ ಹೆಚ್ಚಿನವರಿಗೂ ಸಾಧ್ಯವಾಗುವುದು. ನಿಂದಿಸುವವರಿಗೆ ಪ್ರತಿಯಾಗಿ ನಿಂದಿಸುವ ಬದಲು ಪ್ರೀತಿಯನ್ನು ಧಾರೆಯೆರೆಯುವ ಮೂಲಕ ಇತ್ತಂಡಗಳಿಗೂ ಉಂಟಾಗಲಿರುವ ಲಾಭದ ಬಗ್ಗೆಯಿರುವ ದೂರದೃಷ್ಟಿಯು ಅಲ್ಲಾಹುವಿನ ಅನುಗ್ರಹೀತ ದಾಸರಿಗೆ ಮಾತ್ರ ದೊರೆಯುವ ವಿಶೇಷ ಗುಣವಾಗಿದೆ.

وَإِمَّا يَنزَغَنَّكَ مِنَ ٱلشَّيۡطَٰنِ نَزۡغٞ فَٱسۡتَعِذۡ
بِٱللَّهِۖ إِنَّهُۥ هُوَ ٱلسَّمِيعُ ٱلۡعَلِيمُ ٣٦

36. ಶೈತಾನನ ಕಡೆಯ ಯಾವುದಾದರೂ ದುಷ್ಪ್ರೇರಣೆಯು ತಮ್ಮನ್ನು ವ್ಯತಿಚಲನೆಗೊಳಿಸುವುದಾದರೆ ತಾವು ಅಲ್ಲಾಹುವಿನೊಂದಿಗೆ ಅಭಯವನ್ನು ಯಾಚಿಸಿರಿ. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

وَمِنۡ ءَايَٰتِهِ ٱلَّيۡلُ وَٱلنَّهَارُ وَٱلشَّمۡسُ
وَٱلۡقَمَرُۚ لَا تَسۡجُدُواْ لِلشَّمۡسِ وَلَا لِلۡقَمَرِ
وَٱسۡجُدُواْۤ لِلَّهِ ٱلَّذِي خَلَقَهُنَّ إِن كُنتُمۡ
إِيَّاهُ تَعۡبُدُونَ ٣٧

37. ರಾತ್ರಿ, ಹಗಲು, ಸೂರ್ಯ ಮತ್ತು ಚಂದ್ರ ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ. ಸೂರ್ಯನಿಗಾಗಲಿ, ಚಂದ್ರನಿಗಾಗಲಿ ಸಾಷ್ಟಾಂಗವೆರಗದಿರಿ. ಅವುಗಳನ್ನು ಸೃಷ್ಟಿಸಿದ ಅಲ್ಲಾಹುವಿಗೆ ಸಾಷ್ಟಾಂಗವೆರಗಿರಿ. ನೀವು ಅವನನ್ನು ಆರಾಧಿಸುವವರಾಗಿದ್ದರೆ.

فَإِنِ ٱسۡتَكۡبَرُواْ فَٱلَّذِينَ عِندَ رَبِّكَ
يُسَبِّحُونَ لَهُۥ بِٱلَّيۡلِ وَٱلنَّهَارِ وَهُمۡ لَا
يَسۡـَٔمُونَ۩ ٣٨

38. ಅವರೇನಾದರೂ ಅಹಂಕಾರ ಪಡುವುದಾದರೆ ತಮ್ಮ ರಬ್‌ನ ಬಳಿಯಿರುವವರು (ಮಲಕ್‌ಗಳು) ರಾತ್ರಿಯೂ ಹಗಲೂ ಅವನನ್ನು ಕೊಂಡಾಡುತ್ತಿರುವರು. ಅವರು ದಣಿಯಲಾರರು.

وَمِنۡ ءَايَٰتِهِۦٓ أَنَّكَ تَرَى ٱلۡأَرۡضَ خَٰشِعَةٗ
فَإِذَآ أَنزَلۡنَا عَلَيۡهَا ٱلۡمَآءَ ٱهۡتَزَّتۡ وَرَبَتۡۚ
إِنَّ ٱلَّذِيٓ أَحۡيَاهَا لَمُحۡيِ ٱلۡمَوۡتَىٰٓۚ إِنَّهُۥ عَلَىٰ
كُلِّ شَيۡءٖ قَدِيرٌ ٣٩

39. ಭೂಮಿಯು ಒಣಗಿ ಬರಡಾಗಿರುವುದಾಗಿ ತಾವು ಕಾಣುವಿರಿ. ತರುವಾಯ ನಾವು ಅದರ ಮೇಲೆ ನೀರನ್ನು ಸುರಿಸಿದರೆ ಅದಕ್ಕೆ ಸಂಚಲನವುಂಟಾಗುವುದು[1] ಮತ್ತು ಅದು ಬೆಳೆಯತೊಡಗುವುದು. ಇದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿದೆ. ಅದಕ್ಕೆ ಜೀವ ನೀಡಿದವನು ಖಂಡಿತವಾಗಿಯೂ ಮೃತಪಟ್ಟವರಿಗೂ ಜೀವ ನೀಡುವನು. ಖಂಡಿತವಾಗಿಯೂ ಅವನು ಸಕಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

1 ನಿರ್ಜೀವವಾಗಿರುವ ಭೂಮಿಗೆ ಮಳೆ ಸುರಿದರೆ ಅದರಲ್ಲಿ ಸಸ್ಯಗಳು ಮೊಳೆಯತೊಡಗಿ ಅದಕ್ಕೆ ಸಂಚಲನವುಂಟಾಗುತ್ತದೆ. ಬರಡಾಗಿರುವ ಮಣ್ಣಿಗೆ ನೀರು ಹರಿಯುವುದರೊಂದಿಗೆ ಅದಕ್ಕೂ ಸಂಚಲನೆ ಮತ್ತು ವಿಕಾಸವುಂಟಾಗುತ್ತದೆ.

40. ನಮ್ಮ ದೃಷ್ಟಾಂತಗಳೆಡೆಗೆ ವಕ್ರತೆ ತೋರಿಸುವವರಾರೋ ಅವರು ಖಂಡಿತವಾಗಿಯೂ ನಮ್ಮ ದೃಷ್ಟಿಯಿಂದ ಮರೆಯಾಗಿ ಹೋಗಲಾರರು. ಹಾಗಾದರೆ ನರಕಾಗ್ನಿಗೆ ಎಸೆಯಲಾಗುವವನು ಉತ್ತಮನೇ? ಅಥವಾ ಪುನರುತ್ಥಾನ ದಿನದಂದು ನಿರ್ಭೀತನಾಗಿ ಬರುವವನೇ? ನೀವು ಇಚ್ಛಿಸುವುದನ್ನು ಮಾಡಿರಿ. ಖಂಡಿತವಾಗಿಯೂ ನೀವು ಮಾಡುತ್ತಿರುವುದನ್ನು ಅವನು ವೀಕ್ಷಿಸುತ್ತಿರುವನು.

إِنَّ ٱلَّذِينَ يُلۡحِدُونَ فِيٓ ءَايَٰتِنَا لَا يَخۡفَوۡنَ عَلَيۡنَآۗ أَفَمَن يُلۡقَىٰ فِي ٱلنَّارِ خَيۡرٌ أَم مَّن يَأۡتِيٓ ءَامِنٗا يَوۡمَ ٱلۡقِيَٰمَةِۚ ٱعۡمَلُواْ مَا شِئۡتُمۡ إِنَّهُۥ بِمَا تَعۡمَلُونَ بَصِيرٌ ٤٠

41. ಖಂಡಿತವಾಗಿಯೂ ಈ ಉಪದೇಶವು ತಮ್ಮ ಬಳಿಗೆ ಬಂದಾಗ ಅದನ್ನು ನಿಷೇಧಿಸಿದವರು (ನಷ್ಟ ಹೊಂದಿದವರಾಗಿರುವರು). ಖಂಡಿತವಾಗಿಯೂ ಅದೊಂದು ಪ್ರತಾಪಶಾಲಿ ಗ್ರಂಥವಾಗಿದೆ.

إِنَّ ٱلَّذِينَ كَفَرُواْ بِٱلذِّكۡرِ لَمَّا جَآءَهُمۡۖ وَإِنَّهُۥ لَكِتَٰبٌ عَزِيزٞ ٤١

42. ಅದರ ಮುಂದಿನಿಂದಾಗಲಿ, ಹಿಂದಿನಿಂದಾಗಲಿ ಅಸತ್ಯವು ಅದರಲ್ಲಿ ಸೇರದು. ಅದು ಯುಕ್ತಿಪೂರ್ಣನೂ ಸ್ತುತ್ಯರ್ಹನೂ ಆಗಿರುವವನಿಂದ ಅವತೀರ್ಣಗೊಂಡಿರುವುದಾಗಿದೆ.

لَّا يَأۡتِيهِ ٱلۡبَٰطِلُ مِنۢ بَيۡنِ يَدَيۡهِ وَلَا مِنۡ خَلۡفِهِۦۖ تَنزِيلٞ مِّنۡ حَكِيمٍ حَمِيدٖ ٤٢

43. (ಓ ಪ್ರವಾದಿಯವರೇ!) ತಮಗಿಂತ ಮುಂಚಿನ ಸಂದೇಶವಾಹಕರೊಂದಿಗೆ ಹೇಳಲಾಗಿರುವುದನ್ನೇ ಹೊರತು ಬೇರೇನನ್ನೂ ತಮ್ಮೊಂದಿಗೆ ಹೇಳಲಾಗುತ್ತಿಲ್ಲ. ಖಂಡಿತವಾಗಿಯೂ ತಮ್ಮ ರಬ್ ಪಾಪಮುಕ್ತಿ ನೀಡುವವನೂ, ಯಾತನಾಮಯ ಶಿಕ್ಷೆ ನೀಡುವವನೂ ಆಗಿರುವನು.[1]

مَّا يُقَالُ لَكَ إِلَّا مَا قَدۡ قِيلَ لِلرُّسُلِ مِن قَبۡلِكَۚ إِنَّ رَبَّكَ لَذُو مَغۡفِرَةٖ وَذُو عِقَابٍ أَلِيمٖ ٤٣

44. ನಾವು ಇದನ್ನೊಂದು ಅರಬೇತರ ಕುರ್‌ಆನ್ ಆಗಿ ಮಾಡಿರುತ್ತಿದ್ದರೆ ಅವರು ಹೇಳುತ್ತಿದ್ದರು: 'ಇದರ ಸೂಕ್ತಿಗಳನ್ನು ವಿವರಿಸಲಾಗಿಲ್ಲವೇಕೆ? ಅರಬೇತರ (ಗ್ರಂಥ) ಮತ್ತು ಅರಬಿ(ಪ್ರವಾದಿ) ಯೇ?' ಹೇಳಿರಿ: 'ಅದು (ಕುರ್‌ಆನ್)

وَلَوۡ جَعَلۡنَٰهُ قُرۡءَانًا أَعۡجَمِيّٗا لَّقَالُواْ لَوۡلَا فُصِّلَتۡ ءَايَٰتُهُۥٓۖ ءَا۬عۡجَمِيّٞ وَعَرَبِيّٞۗ قُلۡ هُوَ لِلَّذِينَ ءَامَنُواْ هُدٗى وَشِفَآءٞۚ وَٱلَّذِينَ لَا يُؤۡمِنُونَ فِيٓ ءَاذَانِهِمۡ وَقۡرٞ وَهُوَ عَلَيۡهِمۡ

1 ಅಂದರೆ ಪಶ್ಚಾತ್ತಾಪಪಟ್ಟವರಿಗೆ ಪಾಪಮುಕ್ತಿ ಮತ್ತು ಅಧರ್ಮದಲ್ಲಿ ನಿರತರಾಗಿರುವವರಿಗೆ ಯಾತನಾಮಯ ಶಿಕ್ಷೆ.

ಸತ್ಯವಿಶ್ವಾಸಿಗಳಿಗಿರುವ ಮಾರ್ಗದರ್ಶನ ಮತ್ತು ಶಮನವಾಗಿದೆ. ವಿಶ್ವಾಸವಿಡದವರು ಯಾರೋ ಅವರ ಕಿವಿಗಳಲ್ಲಿ ಒಂದು ವಿಧ ಕಿವುಡುತನವಿದೆ. ಅದು (ಕುರ್‌ಆನ್) ಅವರ ಪಾಲಿಗೆ ಒಂದು ಅಂಧತೆಯಾಗಿದೆ. ಆ ಜನರನ್ನು ವಿದೂರವಾದ ಯಾವುದೋ ಸ್ಥಳದಿಂದ ಕರೆಯಲಾಗುತ್ತಿದೆ' (ಎಂಬಂತಿದೆ ಅವರ ಪ್ರತಿಕ್ರಿಯೆ).

عَمًىۚ أُوْلَـٰٓئِكَ يُنَادَوْنَ مِن مَّكَانِۭ بَعِيدٍ ﴿٤٤﴾

**45.** ಮೂಸಾರಿಗೆ ನಾವು ಗ್ರಂಥವನ್ನು ನೀಡಿದೆವು. ತರುವಾಯ ಅದರಲ್ಲಿ ಅವರು ಭಿನ್ನರಾದರು. ತಮ್ಮ ರಬ್‌ನ ವತಿಯ ಒಂದು ವಚನವು ಮೊದಲೇ ವಿಧಿಸಿಲ್ಲದಿರುತ್ತಿದ್ದರೆ ಅವರ ಮಧ್ಯೆ (ಈಗಾಗಲೇ) ತೀರ್ಪು ನೀಡಲಾಗಿರುತ್ತಿತ್ತು. ಖಂಡಿತವಾಗಿಯೂ ಅವರು ಇದರ (ಕುರ್‌ಆನಿನ) ಕುರಿತು ಅವಿಶ್ವಾಸ ಹುಟ್ಟಿಸುವಂತಹ ಸಂದೇಹದಲ್ಲಿರುವರು.

وَلَقَدْ ءَاتَيْنَا مُوسَى ٱلْكِتَـٰبَ فَٱخْتُلِفَ فِيهِۗ وَلَوْلَا كَلِمَةٌ سَبَقَتْ مِن رَّبِّكَ لَقُضِىَ بَيْنَهُمْۚ وَإِنَّهُمْ لَفِى شَكٍّ مِّنْهُ مُرِيبٍ ﴿٤٥﴾

**46.** ಯಾರಾದರೂ ಸತ್ಕರ್ಮವೆಸಗಿದರೆ ಅದರ ಒಳಿತು ಅವನಿಗೇ ಆಗಿದೆ. ಯಾರಾದರೂ ದುಷ್ಕರ್ಮವೆಸಗಿದರೆ ಅದರ ದೋಷವೂ ಅವನಿಗೇ ಆಗಿದೆ. ತಮ್ಮ ರಬ್ (ತನ್ನ) ದಾಸರೊಂದಿಗೆ ಅನ್ಯಾಯವೆಸಗುವವನೇ ಅಲ್ಲ.

مَّنْ عَمِلَ صَـٰلِحًا فَلِنَفْسِهِۦۖ وَمَنْ أَسَآءَ فَعَلَيْهَاۗ وَمَا رَبُّكَ بِظَلَّـٰمٍ لِّلْعَبِيدِ ﴿٤٦﴾

**47.** ಆ ಅಂತ್ಯಘಳಿಗೆಯ ಜ್ಞಾನವನ್ನು ಅವನೆಡೆಗೆ ಮರಳಿಸಲಾಗುವುದು.[1] ಅವನ ಅರಿವಿನ ವಿನಾ ಯಾವುದೇ ಫಲಗಳು ಸಹ ಅದರ ತೊಗಲಿನಿಂದ ಹೊರಬರುವುದಿಲ್ಲ; ಯಾವುದೇ ಸ್ತ್ರೀಯೂ ಗರ್ಭ ಧರಿಸುವುದಾಗಲಿ ಹಡೆಯುವುದಾಗಲಿ ಮಾಡುವುದಿಲ್ಲ. 'ನನ್ನ ಸಹಭಾಗಿಗಳು ಎಲ್ಲಿ?' ಎಂದು ಅವನು ಅವರನ್ನು ಕರೆದು ಕೇಳುವ ದಿನ! ಅವರು ಹೇಳುವರು: 'ನಾವು ನಿನಗೆ ತಿಳಿಸುತ್ತಿರುವೆವು. (ಅದಕ್ಕೆ) ಸಾಕ್ಷಿಗಳಾಗಿ ನಮ್ಮ ಪೈಕಿ ಯಾರೂ ಇಲ್ಲ'.[2]

۞ إِلَيْهِ يُرَدُّ عِلْمُ ٱلسَّاعَةِۚ وَمَا تَخْرُجُ مِن ثَمَرَٰتٍ مِّنْ أَكْمَامِهَا وَمَا تَحْمِلُ مِنْ أُنثَىٰ وَلَا تَضَعُ إِلَّا بِعِلْمِهِۦۚ وَيَوْمَ يُنَادِيهِمْ أَيْنَ شُرَكَآءِى قَالُوٓاْ ءَاذَنَّـٰكَ مَا مِنَّا مِن شَهِيدٍ ﴿٤٧﴾

1 ಅಂತ್ಯಘಳಿಗೆ ಯಾವಾಗ ಸಂಭವಿಸುತ್ತದೆಯೆಂದು ಅಲ್ಲಾಹುವಿನ ಹೊರತು ಯಾರೂ ತಿಳಿದಿಲ್ಲ.

2 ಅಲ್ಲಾಹುವೇತರರನ್ನು ಆರಾಧಿಸಲು ಮತ್ತು ಪ್ರಾರ್ಥಿಸಲು ಇಹಲೋಕದಲ್ಲಿ ಪುರಾವೆಗಳನ್ನು ಸಮರ್ಪಿಸಿ

48. ಮುಂಚೆ ಅವರು ಏನನ್ನೆಲ್ಲ ಕರೆದು ಪ್ರಾರ್ಥಿಸುತ್ತಿದ್ದರೋ ಅವೆಲ್ಲವೂ ಅವರನ್ನು ಬಿಟ್ಟು ಅಪ್ರತ್ಯಕ್ಷವಾಗುವುವು. ತಮಗೆ ಯಾವುದೇ ಅಭಯಕೇಂದ್ರವೂ ಇಲ್ಲವೆಂದು ಅವರಿಗೆ ಮನವರಿಕೆಯಾಗುವುದು.

وَضَلَّ عَنۡهُم مَّا كَانُواْ يَدۡعُونَ مِن قَبۡلُۖ وَظَنُّواْ مَا لَهُم مِّن مَّحِيصٖ ﴿٤٨﴾

49. ಒಳಿತಿಗಾಗಿ ಪ್ರಾರ್ಥಿಸುವುದರಲ್ಲಿ ಮನುಷ್ಯನಿಗೆ ಆಯಾಸವುಂಟಾಗುವುದಿಲ್ಲ. ಅವನಿಗೆ ಹಾನಿಯೇನಾದರೂ ತಟ್ಟಿದರೆ ಅವನು ಹತಾಶನೂ ನಿರಾಶನೂ ಆಗುವನು.

لَّا يَسۡـَٔمُ ٱلۡإِنسَٰنُ مِن دُعَآءِ ٱلۡخَيۡرِ وَإِن مَّسَّهُ ٱلشَّرُّ فَيَـُٔوسٞ قَنُوطٞ ﴿٤٩﴾

50. ಅವನಿಗೆ ಸಂಕಷ್ಟವು ತಟ್ಟಿದ ಬಳಿಕ ನಾವು ಅವನಿಗೆ ನಮ್ಮ ವತಿಯ ಕಾರುಣ್ಯವನ್ನು ಸವಿಯುವಂತೆ ಮಾಡಿದರೆ ಖಂಡಿತವಾಗಿಯೂ ಅವನು ಹೇಳುವನು: 'ಇದು ನನಗಿರುವುದಾಗಿದೆ. ಅಂತ್ಯಘಳಿಗೆಯು ಅಸ್ತಿತ್ವಕ್ಕೆ ಬರುವುದೆಂದು ನಾನು ಭಾವಿಸುವುದಿಲ್ಲ.(1) ಇನ್ನು ನನ್ನನ್ನು ನನ್ನ ರಬ್‌ನೆಡೆಗೆ ಮರಳಿಸಲಾದರೂ ಖಂಡಿತವಾಗಿಯೂ ಅವನ ಬಳಿ ನನಗೆ ಅತ್ಯುತ್ತಮವಾದುದೇ ಇರುವುದು. ಸತ್ಯನಿಷೇಧಿಗಳಿಗೆ ಅವರು ಮಾಡಿರುವುದರ ಬಗ್ಗೆ ನಾವು ತಿಳಿಸಿ ಕೊಡುವೆವು ಮತ್ತು ಅವರಿಗೆ ಕಠೋರವಾದ ಶಿಕ್ಷೆಯನ್ನು ಸವಿಯುವಂತೆ ಮಾಡುವೆವು.

وَلَئِنۡ أَذَقۡنَٰهُ رَحۡمَةٗ مِّنَّا مِنۢ بَعۡدِ ضَرَّآءَ مَسَّتۡهُ لَيَقُولَنَّ هَٰذَا لِي وَمَآ أَظُنُّ ٱلسَّاعَةَ قَآئِمَةٗ وَلَئِن رُّجِعۡتُ إِلَىٰ رَبِّيٓ إِنَّ لِي عِندَهُۥ لَلۡحُسۡنَىٰۚ فَلَنُنَبِّئَنَّ ٱلَّذِينَ كَفَرُواْ بِمَا عَمِلُواْ وَلَنُذِيقَنَّهُم مِّنۡ عَذَابٍ غَلِيظٖ ﴿٥٠﴾

51. ನಾವು ಮನುಷ್ಯನಿಗೆ ಅನುಗ್ರಹವನ್ನು ದಯಪಾಲಿಸಿದರೆ ಅವನು ವಿಮುಖನಾಗುವನು ಮತ್ತು ತನ್ನ ಪಾಡಿಗೆ ಸರಿದು ಬಿಡುವನು. ಆದರೆ ಅವನಿಗೇನಾದರೂ ಹಾನಿಯು ತಟ್ಟಿದರೆ ಅವನು ದೀರ್ಘವಾಗಿ ಪ್ರಾರ್ಥಿಸುವವನಾಗುವನು.

وَإِذَآ أَنۡعَمۡنَا عَلَى ٱلۡإِنسَٰنِ أَعۡرَضَ وَنَـَٔا بِجَانِبِهِۦ وَإِذَا مَسَّهُ ٱلشَّرُّ فَذُو دُعَآءٍ عَرِيضٖ ﴿٥١﴾

52. ಹೇಳಿರಿ: 'ನೀವು ಚಿಂತಿಸಿ ನೋಡಿರುವಿರಾ? ಇದು (ಕುರ್‌ಆನ್) ಅಲ್ಲಾಹುವಿನ

قُلۡ أَرَءَيۡتُمۡ إِن كَانَ مِنۡ عِندِ ٱللَّهِ ثُمَّ

---

ಸಮರ್ಥಿಸುವವರಿಗೆ ಪರಲೋಕದಲ್ಲಿ ಯಾವುದೇ ಪುರಾವೆಗಳನ್ನು ಸಮರ್ಪಿಸಲೂ ಸಾಧ್ಯವಿಲ್ಲ. ಅಲ್ಲಿ ಅವರು ಸಂಪೂರ್ಣ ಅಸಹಾಯಕರಾಗಿರುವರು.

1 ಐಶ್ವರ್ಯ ಮತ್ತು ಅನುಗ್ರಹಗಳು ಪ್ರಾಪ್ತವಾದಾಗ ಮನುಷ್ಯನು ಅಲ್ಲಾಹು ಮತ್ತು ಪರಲೋಕವನ್ನು ಮರೆತುಬಿಡುತ್ತಾನೆ.

ವತಿಯಿಂದಾಗಿದ್ದೂ, ನೀವು ಇದರಲ್ಲಿ ಅವಿಶ್ವಾಸವಿಡುವುದಾದರೆ, ವಿದೂರವಾದ ವಿರೋಧದಲ್ಲಿರುವವನಿಗಿಂತಲೂ ಹೆಚ್ಚು ಪಥಭ್ರಷ್ಟನಾದವನು ಯಾರಿರುವನು?'

كَفَرْتُم بِهِۦ مَنْ أَضَلُّ مِمَّنْ هُوَ فِى شِقَاقٍۭ بَعِيدٍ ﴿٥٢﴾

**53.** ಇದು (ಕುರ್‌ಆನ್) ಸತ್ಯವೆಂದು ಅವರಿಗೆ ಸ್ಪಷ್ಟವಾಗುವ ರೀತಿಯಲ್ಲಿ ದಿಗಂತಗಳಲ್ಲೂ, ಸ್ವತಃ ಅವರಲ್ಲೂ ನಾವು ಅವರಿಗೆ ತರುವಾಯ ನಮ್ಮ ದೃಷ್ಟಾಂತಗಳನ್ನು ತೋರಿಸಿ ಕೊಡುವೆವು. ತಮ್ಮ ರಬ್ ಎಲ್ಲ ವಿಷಯಕ್ಕೂ ಸಾಕ್ಷಿಯಾಗಿರುವನೆಂಬುದು ಸಾಕಾಗಲಾರದೇ?

سَنُرِيهِمْ ءَايَٰتِنَا فِى ٱلْءَافَاقِ وَفِىٓ أَنفُسِهِمْ حَتَّىٰ يَتَبَيَّنَ لَهُمْ أَنَّهُ ٱلْحَقُّ ۗ أَوَلَمْ يَكْفِ بِرَبِّكَ أَنَّهُۥ عَلَىٰ كُلِّ شَىْءٍ شَهِيدٌ ﴿٥٣﴾

**54.** ಅರಿಯಿರಿ! ಖಂಡಿತವಾಗಿಯೂ ಅವರು ತಮ್ಮ ರಬ್‌ನೊಂದಿಗಿರುವ ಭೇಟಿಯ ಕುರಿತು ಸಂದೇಹದಲ್ಲಿರುವರು. ಅರಿಯಿರಿ! ಖಂಡಿತವಾಗಿಯೂ ಅವನು ಎಲ್ಲ ವಸ್ತುಗಳನ್ನೂ ಆವರಿಸಿದವನಾಗಿರುವನು.

أَلَآ إِنَّهُمْ فِى مِرْيَةٍ مِّن لِّقَآءِ رَبِّهِمْ ۗ أَلَآ إِنَّهُۥ بِكُلِّ شَىْءٍ مُّحِيطٌۢ ﴿٥٤﴾

## ಅಶ್ಶೂರಾ (ಸಮಾಲೋಚನೆ)[1]

## سُورَةُ الشُّورَى

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 53

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-3.** ಹಾ–ಮೀಮ್–ಐನ್–ಸೀನ್–ಕ್ವಾಫ್. ಇದೇ ಪ್ರಕಾರ ತಮಗೂ ತಮಗಿಂತ ಮುಂಚಿನವರಿಗೂ ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹು ದಿವ್ಯಸಂದೇಶವನ್ನು ನೀಡುತ್ತಾನೆ.

حمٓ ﴿١﴾ عٓسٓقٓ ﴿٢﴾ كَذَٰلِكَ يُوحِيٓ إِلَيۡكَ وَإِلَى ٱلَّذِينَ مِن قَبۡلِكَ ٱللَّهُ ٱلۡعَزِيزُ ٱلۡحَكِيمُ ﴿٣﴾

**4.** ಆಕಾಶಗಳಲ್ಲಿರುವುದು ಮತ್ತು ಭೂಮಿಯಲ್ಲಿರುವುದು ಅವನದ್ದಾಗಿವೆ. ಅವನು ಅತ್ಯುನ್ನತನೂ ಮಹಾನನೂ ಆಗಿರುವನು.

لَهُۥ مَا فِي ٱلسَّمَٰوَٰتِ وَمَا فِي ٱلۡأَرۡضِۖ وَهُوَ ٱلۡعَلِيُّ ٱلۡعَظِيمُ ﴿٤﴾

**5.** ಆಕಾಶಗಳು ತಮ್ಮ ಮೇಲ್ಭಾಗದಿಂದ ಒಡೆದು ಚೂರಾಗುವಂತಿದೆ.[2] ಮಲಕ್‌ಗಳು ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಕೀರ್ತನೆ ಮಾಡುತ್ತಿರುವರು. ಭೂಮಿಯಲ್ಲಿರುವವರಿಗೆ ಅವರು ಪಾಪಮುಕ್ತಿಯನ್ನು ಬೇಡುತ್ತಿರುವರು. ಅರಿಯಿರಿ! ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

تَكَادُ ٱلسَّمَٰوَٰتُ يَتَفَطَّرۡنَ مِن فَوۡقِهِنَّۚ وَٱلۡمَلَٰٓئِكَةُ يُسَبِّحُونَ بِحَمۡدِ رَبِّهِمۡ وَيَسۡتَغۡفِرُونَ لِمَن فِي ٱلۡأَرۡضِۗ أَلَآ إِنَّ ٱللَّهَ هُوَ ٱلۡغَفُورُ ٱلرَّحِيمُ ﴿٥﴾

**6.** ಅವನ ಹೊರತು ಅನ್ಯರನ್ನು ರಕ್ಷಕರನ್ನಾಗಿ ಮಾಡಿಕೊಂಡವರನ್ನು ಅಲ್ಲಾಹು ಸೂಕ್ಷ್ಮವಾಗಿ ಗಮನಿಸುತ್ತಿರುವನು. ಅವರ ವಿಷಯದಲ್ಲಿ ತಾವು ಹೊಣೆಗಾರರಲ್ಲ.

وَٱلَّذِينَ ٱتَّخَذُواْ مِن دُونِهِۦٓ أَوۡلِيَآءَ ٱللَّهُ حَفِيظٌ عَلَيۡهِمۡ وَمَآ أَنتَ عَلَيۡهِم بِوَكِيلٖ ﴿٦﴾

**7.** ಹೀಗೆ, ನಾವು ತಮಗೆ ಅರಬಿ ಭಾಷೆಯಲ್ಲಿರುವ ಕುರ್‌ಆನನ್ನು ದಿವ್ಯ ಸಂದೇಶವಾಗಿ ನೀಡಿದೆವು.

وَكَذَٰلِكَ أَوۡحَيۡنَآ إِلَيۡكَ قُرۡءَانًا عَرَبِيّٗا لِّتُنذِرَ

1 38ನೇ ಸೂಕ್ತಿಯಲ್ಲಿ ಸಮಾಲೋಚನೆಯನ್ನು ಪ್ರಸ್ತಾಪಿಸಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಅಲ್ಲಾಹುವಿನ ಅಪ್ಪಣೆಯುಂಟಾದ ತಕ್ಷಣ ಒಂದಿಷ್ಟೂ ತಡವಾಗದೆ ಆಕಾಶಕಾಯಗಳು ಸಿಡಿದು ನುಚ್ಚುನೂರಾಗಲಿವೆ.

أُمَّ ٱلۡقُرَىٰ وَمَنۡ حَوۡلَهَا وَتُنذِرَ يَوۡمَ ٱلۡجَمۡعِ لَا رَيۡبَ فِيهِۚ فَرِيقٞ فِي ٱلۡجَنَّةِ وَفَرِيقٞ فِي ٱلسَّعِيرِ ٧

ಉಮ್ಮುಲ್ ಕುರಾ (ಮಕ್ಕಾ)[1] ಮತ್ತು ಅದರ ಪರಿಸರದಲ್ಲಿರುವವರಿಗೆ ತಾವು ಮುನ್ನೆಚ್ಚರಿಕೆ ನೀಡುವ ಸಲುವಾಗಿ. ಒಟ್ಟುಗೂಡಿಸುವ ದಿನದ ಕುರಿತು ತಾವು ಮುನ್ನೆಚ್ಚರಿಕೆ ನೀಡುವ ಸಲುವಾಗಿ. ಅದರಲ್ಲಿ ಸಂದೇಹವೇ ಇಲ್ಲ. ಅಂದು ಒಂದು ಗುಂಪು ಸ್ವರ್ಗದಲ್ಲಿಯೂ ಇನ್ನೊಂದು ಗುಂಪು ಧಗಧಗಿಸುವ ನರಕಾಗ್ನಿಯಲ್ಲಿಯೂ ಇರುವುವು.

وَلَوۡ شَآءَ ٱللَّهُ لَجَعَلَهُمۡ أُمَّةٗ وَٰحِدَةٗ وَلَٰكِن يُدۡخِلُ مَن يَشَآءُ فِي رَحۡمَتِهِۦۚ وَٱلظَّٰلِمُونَ مَا لَهُم مِّن وَلِيّٖ وَلَا نَصِيرٍ ٨

8. ಅಲ್ಲಾಹು ಇಚ್ಛಿಸುತ್ತಿದ್ದರೆ ಅವನು ಅವರನ್ನು (ಮನುಷ್ಯರನ್ನು) ಏಕೈಕ ಸಮುದಾಯವನ್ನಾಗಿ ಮಾಡುತ್ತಿದ್ದನು.[2] ಆದರೆ ಅವನು ತಾನಿಚ್ಛಿಸುವವರನ್ನು ತನ್ನ ಕಾರುಣ್ಯದಲ್ಲಿ ಪ್ರವೇಶಮಾಡಿಸುವನು. ಅಕ್ರಮಿಗಳಿಗೆ ಯಾವುದೇ ರಕ್ಷಕರಾಗಲಿ, ಸಹಾಯಕರಾಗಲಿ ಇರಲಾರರು.

أَمِ ٱتَّخَذُواْ مِن دُونِهِۦٓ أَوۡلِيَآءَۖ فَٱللَّهُ هُوَ ٱلۡوَلِيُّ وَهُوَ يُحۡيِ ٱلۡمَوۡتَىٰ وَهُوَ عَلَىٰ كُلِّ شَيۡءٖ قَدِيرٞ ٩

9. ಅಥವಾ, ಅವರು ಅವನ ಹೊರತು ಅನ್ಯರನ್ನು ರಕ್ಷಕರನ್ನಾಗಿ ಮಾಡಿಕೊಂಡಿರುವರೇ? ಆದರೆ ರಕ್ಷಕನು ಅಲ್ಲಾಹು ಮಾತ್ರವಾಗಿರುವನು. ಅವನು ಮರಣಹೊಂದಿದವರಿಗೆ ಜೀವವನ್ನು ನೀಡುವನು. ಅವನು ಸರ್ವ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَمَا ٱخۡتَلَفۡتُمۡ فِيهِ مِن شَيۡءٖ فَحُكۡمُهُۥٓ إِلَى ٱللَّهِۚ ذَٰلِكُمُ ٱللَّهُ رَبِّي عَلَيۡهِ تَوَكَّلۡتُ وَإِلَيۡهِ أُنِيبُ ١٠

10. ನೀವು ಯಾವುದೇ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದರೂ ಅದರ ಬಗ್ಗೆ ತೀರ್ಪು ನೀಡುವ ಹಕ್ಕಿರುವುದು ಅಲ್ಲಾಹುವಿಗಾಗಿದೆ. ಅವನೇ ನನ್ನ ರಬ್ಬಾದ ಅಲ್ಲಾಹು! ಅವನ ಮೇಲೆ ನಾನು ಭರವಸೆಯನ್ನಿಟ್ಟಿರುವೆನು. ಅವನೆಡೆಗೆ ನಾನು ವಿನಮ್ರತೆಯೊಂದಿಗೆ ಮರಳುವೆನು.

1 'ಉಮ್ಮುಲ್ ಕುರಾ' ಎಂದರೆ ನಗರಗಳ ಮಾತೆ ಅಥವಾ ಮಾತೃನಗರಿ ಎಂದರ್ಥ. ಪ್ರಸ್ತುತ ಸೂಕ್ತಿಯು ಮಕ್ಕಾ ನಗರವನ್ನು ಜಾಗತಿಕ ಸಾಂಸ್ಕೃತಿಕ ಕೇಂದ್ರ ಎಂಬ ಪದವಿಗೆ ಏರಿಸುತ್ತದೆ.

2 ಯಾರೂ ಪಥಭ್ರಷ್ಟರಾಗದಂತೆ ಸಂಪೂರ್ಣ ಮನುಕುಲವನ್ನು ಸತ್ಯದಲ್ಲಿ ನೆಲೆನಿಲ್ಲಿಸಲು ಅಲ್ಲಾಹುವಿಗೆ ಸಾಧ್ಯವಿದೆ. ಆದರೆ ಹಾಗೆ ಮಾಡಿಕೊಳ್ಳುವ ಬದಲು ಅವನು ಮನುಷ್ಯನಿಗೆ ಒಳಿತು–ಕೆಡುಕುಗಳನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ ನೀಡಿದ್ದಾನೆ. ಅಸ್ವತಂತ್ರನ ನಿರ್ದೋಷಕ್ಕಿಂತಲೂ ಸ್ವತಂತ್ರನ ಒಳಿತೇ ಮಿಗಿಲಾಗಿದೆ.

11. (ಅವನು) ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನು. ಅವನು ನಿಮ್ಮಿಂದಲೇ ನಿಮಗೆ ಜೋಡಿಗಳನ್ನು ಮಾಡಿಕೊಟ್ಟಿರುವನು. ಅವನು ಜಾನುವಾರುಗಳಿಂದಲೂ ಜೋಡಿಗಳನ್ನು (ಮಾಡಿರುವನು). ತನ್ಮೂಲಕ ಅವನು ನಿಮ್ಮನ್ನು ಸೃಷ್ಟಿಸಿ ಅಧಿಕಗೊಳಿಸುವನು.[1] ಅವನಿಗೆ ಸದೃಶವಾಗಿ ಯಾವುದೂ ಇಲ್ಲ. ಅವನು ಎಲ್ಲವನ್ನು ಆಲಿಸುವವನೂ ಎಲ್ಲವನ್ನು ವೀಕ್ಷಿಸುವವನೂ ಆಗಿರುವನು.

فَاطِرُ ٱلسَّمَٰوَٰتِ وَٱلْأَرْضِۚ جَعَلَ لَكُم مِّنْ أَنفُسِكُمْ أَزْوَٰجًا وَمِنَ ٱلْأَنْعَٰمِ أَزْوَٰجًا يَذْرَؤُكُمْ فِيهِۚ لَيْسَ كَمِثْلِهِۦ شَىْءٌۖ وَهُوَ ٱلسَّمِيعُ ٱلْبَصِيرُ ﴿١١﴾

12. ಆಕಾಶಗಳ ಮತ್ತು ಭೂಮಿಯ ಕೀಲಿಕೈಗಳು ಅವನ ವಶದಲ್ಲಿವೆ. ಅವನು ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ವಿಶಾಲಗೊಳಿಸುವನು ಮತ್ತು (ತಾನಿಚ್ಛಿಸುವವರಿಗೆ) ಅದನ್ನು ಸಂಕುಚಿತಗೊಳಿಸುವನು. ಖಂಡಿತವಾಗಿಯೂ ಅವನು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

لَهُۥ مَقَالِيدُ ٱلسَّمَٰوَٰتِ وَٱلْأَرْضِۖ يَبْسُطُ ٱلرِّزْقَ لِمَن يَشَآءُ وَيَقْدِرُۚ إِنَّهُۥ بِكُلِّ شَىْءٍ عَلِيمٌ ﴿١٢﴾

13. ನೂಹ್‌ರಿಗೆ ಆದೇಶಿಸಿರುವುದನ್ನು, ತಮಗೆ ದಿವ್ಯ ಸಂದೇಶವಾಗಿ ನೀಡಿರುವುದನ್ನು, ಇಬ್ರಾಹೀಮ್, ಮೂಸಾ, ಈಸಾ ಮುಂತಾದವರಿಗೆ ನಾವು ಆದೇಶಿಸಿರುವುದನ್ನು[2] –ಅಂದರೆ ನೀವು ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಅದರಲ್ಲಿ ಭಿನ್ನರಾಗದಿರಿ ಎಂಬ ವಿಷಯವನ್ನು– ಅವನು ನಿಮಗೆ ಧರ್ಮನಿಯಮವಾಗಿ ನಿರ್ದೇಶಿಸಿರುವನು. ನೀವು ಆ ಬಹುದೇವವಿಶ್ವಾಸಿಗಳನ್ನು ಯಾವುದರೆಡೆಗೆ ಆಹ್ವಾನಿಸುತ್ತಿರುವಿರೋ ಅದು ಅವರಿಗೆ ಅತಿಭಾರವಾಗಿ ಕಾಣುತ್ತಿದೆ. ಅಲ್ಲಾಹು ತಾನಿಚ್ಛಿಸುವವರನ್ನು ತನ್ನ ಬಳಿಗೆ

۞ شَرَعَ لَكُم مِّنَ ٱلدِّينِ مَا وَصَّىٰ بِهِۦ نُوحًا وَٱلَّذِىٓ أَوْحَيْنَآ إِلَيْكَ وَمَا وَصَّيْنَا بِهِۦٓ إِبْرَٰهِيمَ وَمُوسَىٰ وَعِيسَىٰٓۖ أَنْ أَقِيمُوا۟ ٱلدِّينَ وَلَا تَتَفَرَّقُوا۟ فِيهِۚ كَبُرَ عَلَى ٱلْمُشْرِكِينَ مَا تَدْعُوهُمْ إِلَيْهِۚ ٱللَّهُ يَجْتَبِىٓ إِلَيْهِ مَن يَشَآءُ وَيَهْدِىٓ إِلَيْهِ مَن يُنِيبُ ﴿١٣﴾

1 ಅಂದರೆ ಮನುಷ್ಯರನ್ನು ಮತ್ತು ಪ್ರಾಣಿಗಳನ್ನು ಅವನು ಜೋಡಿಗಳಾಗಿ ಸೃಷ್ಟಿಸಿದ ಕಾರಣದಿಂದ ಸಂತಾನಾಭಿವೃದ್ಧಿಯುಂಟಾಗುತ್ತದೆ ಎಂದರ್ಥ.

2 ಆದಮ್(عَلَيۡهِ ٱلسَّلَامُ)ರಿಗೆ ಅಲ್ಲಾಹು ಸತ್ಯದ ಬಗ್ಗೆ ಬೋಧಿಸಿದ್ದನು. ಅನಂತರದ ತಲೆಮಾರುಗಳಲ್ಲಿ ಮಿಥ್ಯ ವಿಶ್ವಾಸಾಚಾರಗಳು ಹೇಗೋ ಸೇರಿಕೊಂಡವು. ಜನರು ಸತ್ಯದಿಂದ ವ್ಯತಿಚಲಿಸಿದಾಗಲೆಲ್ಲ ಅವರನ್ನು ನೇರದಾರಿಗೆ ತರಲು ಮತ್ತು ಧರ್ಮವನ್ನು ಸರಿಯಾದ ವಿಧದಲ್ಲಿ ಸ್ಥಾಪಿಸಲು ಪ್ರವಾದಿಗಳನ್ನು ಕಳುಹಿಸಲಾಗುತ್ತಿತ್ತು.

ಆರಿಸಿಕೊಳ್ಳುವನು. ವಿನಮ್ರತೆಯೊಂದಿಗೆ ಮರಳುವವರನ್ನು ಅವನು ತನ್ನೆಡೆಗಿರುವ ಮಾರ್ಗದಲ್ಲಿ ಮುನ್ನಡೆಸುವನು.

وَمَا تَفَرَّقُوٓاْ إِلَّا مِنۢ بَعۡدِ مَا جَآءَهُمُ ٱلۡعِلۡمُ بَغۡيَۢا بَيۡنَهُمۡۚ وَلَوۡلَا كَلِمَةٞ سَبَقَتۡ مِن رَّبِّكَ إِلَىٰٓ أَجَلٖ مُّسَمّٗى لَّقُضِيَ بَيۡنَهُمۡۚ وَإِنَّ ٱلَّذِينَ أُورِثُواْ ٱلۡكِتَٰبَ مِنۢ بَعۡدِهِمۡ لَفِي شَكّٖ مِّنۡهُ مُرِيبٖ ١٤

**14.** ಗ್ರಂಥದವರು ಭಿನ್ನರಾಗಿರುವುದು ಅವರ ಬಳಿಗೆ ಅರಿವು ಬಂದ ಬಳಿಕವಾಗಿತ್ತು. ಅದು ಅವರು ಪರಸ್ಪರ ಇಟ್ಟುಕೊಂಡಿದ್ದ ವಿರೋಧದ ಕಾರಣದಿಂದಾಗಿತ್ತು.[1] ನಿಶ್ಚಿತವಾದ ಒಂದು ಅವಧಿಯವರೆಗೆ ಬಾಧಕವಾದ ಒಂದು ವಚನವು ತಮ್ಮ ರಬ್‌ನ ವತಿಯಿಂದ ಪೂರ್ವಭಾವಿಯಾಗಿ ಇಲ್ಲದಿರುತ್ತಿದ್ದರೆ ಅವರ ಮಧ್ಯೆ (ಕೂಡಲೇ) ತೀರ್ಪು ನೀಡಲಾಗಿರುತ್ತಿತ್ತು.[2] ಅವರ ಬಳಿಕ ಗ್ರಂಥದ ವಾರೀಸನ್ನು ಪಡೆದವರು ಖಂಡಿತವಾಗಿಯೂ ಅದರ ಬಗ್ಗೆ ಅವಿಶ್ವಾಸ ಹುಟ್ಟಿಸುವಂತಹ ಸಂದೇಹದಲ್ಲಿರುವರು.

فَلِذَٰلِكَ فَٱدۡعُۖ وَٱسۡتَقِمۡ كَمَآ أُمِرۡتَۖ وَلَا تَتَّبِعۡ أَهۡوَآءَهُمۡۖ وَقُلۡ ءَامَنتُ بِمَآ أَنزَلَ ٱللَّهُ مِن كِتَٰبٖۖ وَأُمِرۡتُ لِأَعۡدِلَ بَيۡنَكُمُۖ ٱللَّهُ رَبُّنَا وَرَبُّكُمۡۖ لَنَآ أَعۡمَٰلُنَا وَلَكُمۡ أَعۡمَٰلُكُمۡۖ لَا حُجَّةَ بَيۡنَنَا وَبَيۡنَكُمُۖ ٱللَّهُ يَجۡمَعُ بَيۡنَنَاۖ وَإِلَيۡهِ ٱلۡمَصِيرُ ١٥

**15.** ಆದ್ದರಿಂದ ತಾವು ಉಪದೇಶ ನೀಡಿರಿ. ತಮಗೆ ಆಜ್ಞಾಪಿಸಲಾಗಿರುವಂತೆ ನೇರವಾಗಿ ನೆಲೆಗೊಳ್ಳಿರಿ. ಅವರ ದೇಹೇಚ್ಛೆಗಳನ್ನು ಹಿಂಬಾಲಿಸದಿರಿ. ಹೇಳಿರಿ: 'ಅಲ್ಲಾಹು ಅವತೀರ್ಣಗೊಳಿಸಿರುವ ಎಲ್ಲ ಗ್ರಂಥಗಳಲ್ಲೂ ನಾನು ವಿಶ್ವಾಸವಿಟ್ಟಿರುವೆನು. ನಿಮ್ಮ ಮಧ್ಯೆ ನ್ಯಾಯಪಾಲಿಸುವಂತೆ ನನಗೆ ಆಜ್ಞಾಪಿಸಲಾಗಿದೆ. ನಮ್ಮ ರಬ್ ಮತ್ತು ನಿಮ್ಮ ರಬ್ ಅಲ್ಲಾಹುವಾಗಿರುವನು. ನಮಗೆ ನಮ್ಮ ಕರ್ಮಗಳು ಮತ್ತು ನಿಮಗೆ ನಿಮ್ಮ ಕರ್ಮಗಳು. ನಮ್ಮ ಮತ್ತು ನಿಮ್ಮ ಮಧ್ಯೆ ಯಾವುದೇ ತರ್ಕವೂ ಇಲ್ಲ. ಅಲ್ಲಾಹು ನಮ್ಮನ್ನು ಪರಸ್ಪರ ಒಟ್ಟುಗೂಡಿಸುವನು. ಮರಳುವಿಕೆಯು ಅವನೆಡೆಗೇ ಆಗಿದೆ.

1 ಜನರು ಗ್ರಂಥದ ನೈಜ ಉಪದೇಶಗಳಿಂದ ವ್ಯತಿಚಲಿಸಿದ ಪ್ರಮುಖ ಕಾರಣವು ಧಾರ್ಮಿಕ ಮುಖಂಡರ ಮತ್ತು ಪುರೋಹಿತರ ಮಧ್ಯೆ ನಡೆಯುತ್ತಿದ್ದಂತಹ ಸಂಘರ್ಷಗಳಾಗಿದ್ದವು.

2 ಇಹಲೋಕದಲ್ಲಿ ಒಂದು ಮಿತಿಯವರೆಗೆ ಪಾಪಿಗಳನ್ನು ಅವರ ಪಾಡಿಗೆ ಬಿಟ್ಟುಬಿಡಲು ಮತ್ತು ಅವರನ್ನು ಪರಲೋಕದಲ್ಲಿ ಶಿಕ್ಷಿಸಲು ಅಲ್ಲಾಹು ಪೂರ್ವ ನಿರ್ಧಾರ ಕೈಗೊಳ್ಳದಿರುತ್ತಿದ್ದರೆ ಪಾಪಿಗಳಿಗೆ ತಕ್ಷಣ ಶಿಕ್ಷೆ ನೀಡಲಾಗುತ್ತಿತ್ತು ಎಂದರ್ಥ.

وَٱلَّذِينَ يُحَآجُّونَ فِي ٱللَّهِ مِنۢ بَعۡدِ مَا ٱسۡتُجِيبَ لَهُۥ حُجَّتُهُمۡ دَاحِضَةٌ عِندَ رَبِّهِمۡ وَعَلَيۡهِمۡ غَضَبٞ وَلَهُمۡ عَذَابٞ شَدِيدٌ ١٦

**16.** ಅಲ್ಲಾಹುವಿನ ಕರೆಗೆ ಅಂಗೀಕಾರ ಸಿಕ್ಕಿದ ಬಳಿಕ[1] ಅವನ ವಿಷಯದಲ್ಲಿ ತರ್ಕಿಸುವವರಾರೋ ಅವರ ತರ್ಕವು ಅವರ ರಬ್‌ನ ಬಳಿ ನಿಷ್ಫಲವಾಗಿದೆ. ಅವರ ಮೇಲೆ ಕ್ರೋಧವಿದೆ ಮತ್ತು ಅವರಿಗೆ ಕಠಿಣವಾದ ಶಿಕ್ಷೆಯಿದೆ.

ٱللَّهُ ٱلَّذِيٓ أَنزَلَ ٱلۡكِتَٰبَ بِٱلۡحَقِّ وَٱلۡمِيزَانَۗ وَمَا يُدۡرِيكَ لَعَلَّ ٱلسَّاعَةَ قَرِيبٞ ١٧

**17.** ಸತ್ಯದೊಂದಿಗೆ ಗ್ರಂಥವನ್ನು ಮತ್ತು (ಸರಿ ತಪ್ಪುಗಳನ್ನು ತೂಗುವ) ತಕ್ಕಡಿಯನ್ನು[2] ಅವತೀರ್ಣಗೊಳಿಸಿದವನು ಅಲ್ಲಾಹುವಾಗಿರುವನು. ತಮಗೇನು ಗೊತ್ತು? ಆ ಅಂತ್ಯಘಳಿಗೆ ಸಮೀಪದಲ್ಲೇ ಇರಬಹುದು.

يَسۡتَعۡجِلُ بِهَا ٱلَّذِينَ لَا يُؤۡمِنُونَ بِهَاۖ وَٱلَّذِينَ ءَامَنُواْ مُشۡفِقُونَ مِنۡهَا وَيَعۡلَمُونَ أَنَّهَا ٱلۡحَقُّۗ أَلَآ إِنَّ ٱلَّذِينَ يُمَارُونَ فِي ٱلسَّاعَةِ لَفِي ضَلَٰلِۭ بَعِيدٍ ١٨

**18.** ಅದರಲ್ಲಿ (ಅಂತ್ಯಘಳಿಗೆಯಲ್ಲಿ) ವಿಶ್ವಾಸವಿಡದವರು ಅದರ ಕುರಿತು ಆತುರಪಡುತ್ತಿರುವರು. ಆದರೆ ವಿಶ್ವಾಸಿಗಳು ಅದರ ಕುರಿತು ಭಯಭೀತರಾಗಿರುವರು. ಅದು ಸತ್ಯವೆಂದು ಅವರು ಅರಿತಿರುವರು. ಅರಿಯಿರಿ! ಖಂಡಿತವಾಗಿಯೂ ಅಂತ್ಯಘಳಿಗೆಯ ವಿಷಯದಲ್ಲಿ ತರ್ಕಿಸುವವರು ವಿದೂರವಾದ ಪಥಭ್ರಷ್ಟತೆಯಲ್ಲಿರುವರು.

ٱللَّهُ لَطِيفُۢ بِعِبَادِهِۦ يَرۡزُقُ مَن يَشَآءُۖ وَهُوَ ٱلۡقَوِيُّ ٱلۡعَزِيزُ ١٩

**19.** ಅಲ್ಲಾಹು ತನ್ನ ದಾಸರೊಂದಿಗೆ ದಯೆಯುಳ್ಳವನಾಗಿರುವನು. ಅವನು ತಾನಿಚ್ಛಿಸುವವರಿಗೆ ಅನ್ನಾಧಾರವನ್ನು ಒದಗಿಸುವನು. ಅವನು ಬಲಿಷ್ಠನೂ, ಪ್ರತಾಪ ಶಾಲಿಯೂ ಆಗಿರುವನು.

مَن كَانَ يُرِيدُ حَرۡثَ ٱلۡأٓخِرَةِ نَزِدۡ لَهُۥ فِي حَرۡثِهِۦۖ وَمَن كَانَ يُرِيدُ حَرۡثَ ٱلدُّنۡيَا نُؤۡتِهِۦ مِنۡهَا وَمَا لَهُۥ فِي ٱلۡأٓخِرَةِ مِن نَّصِيبٍ ٢٠

**20.** ಯಾರಾದರೂ ಪರಲೋಕದ ಕೃಷಿಯನ್ನು ಬಯಸುವುದಾದರೆ ಅವನ ಕೃಷಿಯಲ್ಲಿ ನಾವು ಅವನಿಗೆ ಹೆಚ್ಚುವರಿಯನ್ನು ನೀಡುವೆವು. ಯಾರಾದರೂ ಇಹಲೋಕದ ಕೃಷಿಯನ್ನು ಬಯಸುವುದಾದರೆ ನಾವು ಅವನಿಗೆ ಅದರಿಂದ

---

1 ಎಲ್ಲರನ್ನೂ ಒಮ್ಮೆಲೇ ವಿಶ್ವಾಸಿಗಳನ್ನಾಗಿ ಮಾಡುವುದು ಪ್ರವಾದಿಗಳ ಕರ್ತವ್ಯವಲ್ಲ. ನಿಷ್ಪಕ್ಷಪಾತಿಗಳಾದ ಸತ್ಯಾನ್ವೇಷಿಗಳು ಸತ್ಯವನ್ನು ಅಂಗೀಕರಿಸುವುದರೊಂದಿಗೆ ಪ್ರವಾದಿಗಳ ಕರ್ತವ್ಯ ಸಫಲವಾಗುತ್ತದೆ. ತರುವಾಯ ಅವರ ವಿರುದ್ಧ ತರ್ಕಿಸುವವರ ಸರ್ವ ತರ್ಕಗಳೂ ನಿಷ್ಫಲಗೊಳ್ಳುತ್ತವೆ.

2 ಬದುಕಿನ ಯಾವುದೇ ಸಮಸ್ಯೆಯನ್ನೂ ತೂಗಿ ನೋಡಿ ಸತ್ಯ ಮತ್ತು ಅಸತ್ಯವನ್ನು ಬೇರ್ಪಡಿಸಲು ದಿವ್ಯ ಸಂದೇಶವು ನೆರವಾಗುತ್ತದೆ.

ನೀಡುವೆವು. ಪರಲೋಕದಲ್ಲಿ ಅವನಿಗೆ ಯಾವುದೇ ಪಾಲೂ ಇರಲಾರದು.[1]

**21.** ಅಲ್ಲಾಹು ಅನುಮತಿಸದ ವಿಷಯವನ್ನು ಅವರಿಗೆ ಧರ್ಮವಾಗಿ ಮಾಡಿಕೊಟ್ಟ ಯಾರಾದರೂ ಸಹಭಾಗಿಗಳು ಅವರಿಗಿರುವರೇ? ನಿರ್ಣಾಯಕ ವಿಧಿಯ ಕುರಿತಿರುವ ಆಜ್ಞೆಯು ಇಲ್ಲದಿರುತ್ತಿದ್ದರೆ ಅವರ ಮಧ್ಯೆ ತಕ್ಷಣ ತೀರ್ಪು ನೀಡಲಾಗುತ್ತಿತ್ತು. ಖಂಡಿತವಾಗಿಯೂ ಅಕ್ರಮಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆ.

أَمْ لَهُمْ شُرَكَـٰٓؤُاْ شَرَعُواْ لَهُم مِّنَ ٱلدِّينِ مَا لَمْ يَأْذَنۢ بِهِ ٱللَّهُ ۚ وَلَوْلَا كَلِمَةُ ٱلْفَصْلِ لَقُضِىَ بَيْنَهُمْ ۗ وَإِنَّ ٱلظَّـٰلِمِينَ لَهُمْ عَذَابٌ أَلِيمٌ ﴿٢١﴾

**22.** ಆ ಅಕ್ರಮಿಗಳು ತಾವು ಸಂಪಾದಿಸಿರುವುದರ ಕುರಿತು (ಪರಲೋಕದಲ್ಲಿ) ಭಯಭೀತರಾಗಿರುವುದಾಗಿ ತಾವು ಕಾಣುವಿರಿ. ಅದು (ಸಂಪಾದಿಸಿದುದರ ಶಿಕ್ಷೆಯು) ಅವರ ಮೇಲೆ ಸಂಭವಿಸಿಯೇ ತೀರುವುದು. ಸತ್ಯವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಸ್ವರ್ಗೋದ್ಯಾನಗಳಲ್ಲಿರುವರು. ಅವರು ಏನನ್ನು ಬಯಸುವರೋ ಅದು ಅವರ ರಬ್‌ನ ಬಳಿ ಅವರಿಗಿರುವುದು. ಮಹಾ ಅನುಗ್ರಹವು ಅದೇ ಆಗಿದೆ.

تَرَى ٱلظَّـٰلِمِينَ مُشْفِقِينَ مِمَّا كَسَبُواْ وَهُوَ وَاقِعٌۢ بِهِمْ ۗ وَٱلَّذِينَ ءَامَنُواْ وَعَمِلُواْ ٱلصَّـٰلِحَـٰتِ فِى رَوْضَاتِ ٱلْجَنَّاتِ ۖ لَهُم مَّا يَشَآءُونَ عِندَ رَبِّهِمْ ۚ ذَٰلِكَ هُوَ ٱلْفَضْلُ ٱلْكَبِيرُ ﴿٢٢﴾

**23.** ಅದು ವಿಶ್ವಾಸವಿಡುವ ಮತ್ತು ಸತ್ಕರ್ಮವೆಸಗುವ ತನ್ನ ದಾಸರಿಗೆ ಅಲ್ಲಾಹು ತಿಳಿಸುವ ಶುಭವಾರ್ತೆಯಾಗಿದೆ. ಹೇಳಿರಿ: 'ಇದಕ್ಕಾಗಿ ನಾನು ನಿಮ್ಮೊಂದಿಗೆ ಯಾವುದೇ ಪ್ರತಿಫಲವನ್ನೂ ಬೇಡಲಾರೆನು. ನಿಕಟ ಸಂಬಂಧದ ಹೆಸರಲ್ಲಿರುವ ಪ್ರೀತಿಯ ಹೊರತು.[2] ಯಾರಾದರೂ ಒಂದು ಸತ್ಕರ್ಮವನ್ನು ಮಾಡಿದರೆ ನಾವು ಅವನಿಗೆ

ذَٰلِكَ ٱلَّذِى يُبَشِّرُ ٱللَّهُ عِبَادَهُ ٱلَّذِينَ ءَامَنُواْ وَعَمِلُواْ ٱلصَّـٰلِحَـٰتِ ۗ قُل لَّآ أَسْـَٔلُكُمْ عَلَيْهِ أَجْرًا إِلَّا ٱلْمَوَدَّةَ فِى ٱلْقُرْبَىٰ ۗ وَمَن يَقْتَرِفْ حَسَنَةً نَّزِدْ لَهُۥ فِيهَا حُسْنًا ۚ إِنَّ ٱللَّهَ غَفُورٌ شَكُورٌ ﴿٢٣﴾

---

1 ಭೌತಿಕ ಲಾಭವನ್ನೇ ಜೀವನದ ಗುರಿಯಾಗಿ ಮಾಡಿಕೊಂಡವರಿಗೆ ಪಾರಲೌಕಿಕ ಸೌಭಾಗ್ಯವು ನಷ್ಟವಾಗುತ್ತದೆ ಎಂದರ್ಥ.

2 ಪ್ರತಿಯೊಬ್ಬರೂ ತಮ್ಮ ನಿಕಟ ಸಂಬಂಧಿಕರಿಂದ ಮತ್ತು ಆಪ್ತಮಿತ್ರರಿಂದ ಪ್ರೀತಿ ತುಂಬಿದ ವರ್ತನೆಯನ್ನು ಆಶಿಸುವುದು ಸಹಜ. ಆದರೆ ಪ್ರವಾದಿ(ﷺ)ರಿಗೆ ಅದು ಕೂಡ ಇಲ್ಲವಾಯಿತು. ಅವರ ಅನೇಕ ಸಂಬಂಧಿಕರು ಅವರೊಂದಿಗೆ ಕಠಿಣ ವಿರೋಧ ತೋರಿಸಿದ್ದು ಮಾತ್ರವಲ್ಲದೆ ಅವರ ಮೇಲೆ ನಡೆಸಲಾಗುವ ದೌರ್ಜನ್ಯಗಳಿಗೆ ನಾಯಕತ್ವವನ್ನೂ ವಹಿಸಿದ್ದರು.

ತನ್ಮೂಲಕ ಒಳಿತನ್ನು ಹೆಚ್ಚಿಸಿಕೊಡುವೆವು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ, ಅತ್ಯಧಿಕ ಕೃತಜ್ಞನೂ ಆಗಿರುವನು.

أَمْ يَقُولُونَ ٱفْتَرَىٰ عَلَى ٱللَّهِ كَذِبًا فَإِن يَشَإِ ٱللَّهُ يَخْتِمْ عَلَىٰ قَلْبِكَ وَيَمْحُ ٱللَّهُ ٱلْبَٰطِلَ وَيُحِقُّ ٱلْحَقَّ بِكَلِمَٰتِهِۦٓ إِنَّهُۥ عَلِيمٌۢ بِذَاتِ ٱلصُّدُورِ ﴿٢٤﴾

**24.** ಅಥವಾ ಅವರು (ಪ್ರವಾದಿಯವರು) ಅಲ್ಲಾಹುವಿನ ಮೇಲೆ ಸುಳ್ಳನ್ನು ಹೆಣೆದಿರುವರು ಎಂದು ಅವರು ಹೇಳುತ್ತಿರುವರೇ? ಅಲ್ಲಾಹು ಇಚ್ಛಿಸುತ್ತಿದ್ದರೆ ಅವನು ತಮ್ಮ ಹೃದಯದ ಮೇಲೆ ಮುದ್ರೆಯೊತ್ತುತ್ತಿದ್ದನು. ಅಲ್ಲಾಹು ಅಸತ್ಯವನ್ನು ಅಳಿಸುವನು ಮತ್ತು ತನ್ನ ವಚನಗಳ ಮೂಲಕ ಸತ್ಯವನ್ನು ಸ್ಥಾಪಿಸುವನು. ಖಂಡಿತವಾಗಿಯೂ ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

وَهُوَ ٱلَّذِى يَقْبَلُ ٱلتَّوْبَةَ عَنْ عِبَادِهِۦ وَيَعْفُوا۟ عَنِ ٱلسَّيِّـَٔاتِ وَيَعْلَمُ مَا تَفْعَلُونَ ﴿٢٥﴾

**25.** ಅವನು ತನ್ನ ದಾಸರಿಂದ ಪಶ್ಚಾತ್ತಾಪವನ್ನು ಸ್ವೀಕರಿಸುವವನಾಗಿರುವನು. ಅವನು ದುಷ್ಕೃತ್ಯಗಳನ್ನು ಮನ್ನಿಸುವನು. ನೀವೇನು ಮಾಡುತ್ತಿರುವಿರೋ ಅದನ್ನು ಅವನು ಅರಿಯುವನು.

وَيَسْتَجِيبُ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ وَيَزِيدُهُم مِّن فَضْلِهِۦ وَٱلْكَٰفِرُونَ لَهُمْ عَذَابٌ شَدِيدٌ ﴿٢٦﴾

**26.** ಸತ್ಯವಿಶ್ವಾಸವಿಟ್ಟವರಿಗೂ ಸತ್ಕರ್ಮವೆಸಗಿದವರಿಗೂ (ಅವರ ಪ್ರಾರ್ಥನೆಗಳಿಗೆ) ಅವನು ಉತ್ತರವನ್ನು ನೀಡುವನು ಮತ್ತು ತನ್ನ ಅನುಗ್ರಹದಿಂದ ಅವರಿಗೆ ಹೆಚ್ಚಿಸಿ ಕೊಡುವನು. ಸತ್ಯನಿಷೇಧಿಗಳಾರೋ ಅವರಿಗೆ ಕಠಿಣವಾದ ಶಿಕ್ಷೆಯಿದೆ.

۞ وَلَوْ بَسَطَ ٱللَّهُ ٱلرِّزْقَ لِعِبَادِهِۦ لَبَغَوْا۟ فِى ٱلْأَرْضِ وَلَٰكِن يُنَزِّلُ بِقَدَرٍ مَّا يَشَآءُ إِنَّهُۥ بِعِبَادِهِۦ خَبِيرٌۢ بَصِيرٌ ﴿٢٧﴾

**27.** ಅಲ್ಲಾಹು ತನ್ನ ದಾಸರಿಗೆ ಅನ್ನಾಧಾರವನ್ನು ವಿಶಾಲಗೊಳಿಸಿರುತ್ತಿದ್ದರೆ ಅವರು ಭೂಮಿಯಲ್ಲಿ ಅತಿಕ್ರಮವೆಸಗುತ್ತಿದ್ದರು. ಆದರೆ ಅವನು ತಾನು ಇಚ್ಛಿಸುವುದನ್ನು ಒಂದು ಪ್ರಮಾಣಕ್ಕನುಗುಣವಾಗಿ ಇಳಿಸಿಕೊಡುವನು. ಖಂಡಿತವಾಗಿಯೂ ಅವನು ತನ್ನ ದಾಸರ

ಕುರಿತು ಸೂಕ್ಷ್ಮಜ್ಞಾನಿಯೂ, ವೀಕ್ಷಿಸುವವನೂ ಆಗಿರುವನು.

**28.** ಮನುಷ್ಯರು ನಿರಾಶರಾದ ಬಳಿಕ ಮಳೆಯನ್ನು ಸುರಿಸುವವನು ಮತ್ತು ತನ್ನ ಕಾರುಣ್ಯವನ್ನು ಹರಡುವವನು ಅವನಾಗಿರುವನು. ಅವನು ಸ್ತುತ್ಯರ್ಹನಾದ ರಕ್ಷಕನಾಗಿರುವನು.

وَهُوَ ٱلَّذِى يُنَزِّلُ ٱلْغَيْثَ مِنۢ بَعْدِ مَا قَنَطُواْ وَيَنشُرُ رَحْمَتَهُۥ ۚ وَهُوَ ٱلْوَلِىُّ ٱلْحَمِيدُ ﴿٢٨﴾

**29.** ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿರುವುದು ಹಾಗೂ ಅವೆರಡರಲ್ಲೂ ಅವನು ಜೀವಜಾಲಗಳನ್ನು ಹಬ್ಬಿಸಿರುವುದು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ. ತಾನಿಚ್ಛಿಸುವಾಗ ಅವರನ್ನು ಒಟ್ಟುಗೂಡಿಸಲು ಅವನು ಸಾಮರ್ಥ್ಯವುಳ್ಳವನಾಗಿರುವನು.

وَمِنْ ءَايَـٰتِهِۦ خَلْقُ ٱلسَّمَـٰوَٰتِ وَٱلْأَرْضِ وَمَا بَثَّ فِيهِمَا مِن دَآبَّةٍ ۚ وَهُوَ عَلَىٰ جَمْعِهِمْ إِذَا يَشَآءُ قَدِيرٌ ﴿٢٩﴾

**30.** ನಿಮಗೆ ಯಾವುದಾದರೂ ವಿಪತ್ತು ಬಾಧಿಸಿದ್ದರೆ ಅದು ನಿಮ್ಮ ಕೈಗಳು ಮಾಡಿರುವುದರ ಫಲವಾಗಿಯೇ ಆಗಿದೆ. ಹೆಚ್ಚಿನವುಗಳನ್ನೂ ಅವನು ಮನ್ನಿಸುವನು.

وَمَآ أَصَـٰبَكُم مِّن مُّصِيبَةٍ فَبِمَا كَسَبَتْ أَيْدِيكُمْ وَيَعْفُواْ عَن كَثِيرٍ ﴿٣٠﴾

**31.** ಭೂಮಿಯಲ್ಲಿ (ಅಲ್ಲಾಹುವನ್ನು) ಸೋಲಿಸಲು ನಿಮಗೆ ಸಾಧ್ಯವಾಗದು. ಅಲ್ಲಾಹುವಿನ ಹೊರತು ನಿಮಗೆ ಅನ್ಯ ರಕ್ಷಕರಾಗಲಿ ಸಹಾಯಕರಾಗಲಿ ಇರಲಾರರು.

وَمَآ أَنتُم بِمُعْجِزِينَ فِى ٱلْأَرْضِ ۖ وَمَا لَكُم مِّن دُونِ ٱللَّهِ مِن وَلِىٍّ وَلَا نَصِيرٍ ﴿٣١﴾

**32.** ಸಮುದ್ರಗಳಲ್ಲಿ ಬೆಟ್ಟಗಳಂತೆ ಚಲಿಸುವ ಹಡಗುಗಳು ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ.

وَمِنْ ءَايَـٰتِهِ ٱلْجَوَارِ فِى ٱلْبَحْرِ كَٱلْأَعْلَـٰمِ ﴿٣٢﴾

**33.** ಅವನು ಇಚ್ಛಿಸಿದರೆ ಗಾಳಿಯನ್ನು ಸ್ತಬ್ಧಗೊಳಿಸುವನು. ಆಗ ಅವು ಸಮುದ್ರಗಳ ಮೇಲ್ಭಾಗದಲ್ಲಿ ನಿಶ್ಚಲವಾಗಿ ನಿಲ್ಲುವುವು. ಖಂಡಿತವಾಗಿಯೂ ಸಹನೆ ಪಾಲಿಸುವ ಮತ್ತು ಕೃತಜ್ಞತೆ ಸಲ್ಲಿಸುವ ಎಲ್ಲರಿಗೂ ಅದರಲ್ಲಿ ದೃಷ್ಟಾಂತಗಳಿವೆ.

إِن يَشَأْ يُسْكِنِ ٱلرِّيحَ فَيَظْلَلْنَ رَوَاكِدَ عَلَىٰ ظَهْرِهِۦٓ ۚ إِنَّ فِى ذَٰلِكَ لَـَٔايَـٰتٍ لِّكُلِّ صَبَّارٍ شَكُورٍ ﴿٣٣﴾

**34.** ಅಥವಾ ಅವರು ಮಾಡಿಕೊಂಡಿರುವುದರ ಫಲವಾಗಿ ಅವುಗಳನ್ನು (ಹಡಗುಗಳನ್ನು) ಅವನು ನಾಶ ಮಾಡುವನು. ಹೆಚ್ಚಿನವುಗಳನ್ನೂ ಅವನು ಮನ್ನಿಸುವನು.

أَوْ يُوبِقْهُنَّ بِمَا كَسَبُواْ وَيَعْفُ عَن كَثِيرٍ ﴿٣٤﴾

35. ನಮ್ಮ ದೃಷ್ಟಾಂತಗಳ ಕುರಿತು ತರ್ಕಿಸುವವರು ತಮಗೆ ಯಾವುದೇ ಅಭಯಸ್ಥಾನವೂ ಇಲ್ಲ ಎಂಬುದನ್ನು ಅರಿಯುವ ಸಲುವಾಗಿ.

وَيَعْلَمَ ٱلَّذِينَ يُجَٰدِلُونَ فِىٓ ءَايَٰتِنَا مَا لَهُم مِّن مَّحِيصٍ ﴿٣٥﴾

36. ನಿಮಗೇನಾದರೂ ನೀಡಲಾಗಿದ್ದರೆ ಅದು ಐಹಿಕ ಜೀವನದ (ತಾತ್ಕಾಲಿಕ) ಸುಖಾನುಭೂತಿ ಮಾತ್ರವಾಗಿದೆ. ಅಲ್ಲಾಹುವಿನ ಬಳಿಯಿರುವುದು[1] ಅತ್ಯುತ್ತಮವೂ ಹೆಚ್ಚು ಅವಶೇಷಿಸುವುದೂ ಆಗಿದೆ. ಅದು ವಿಶ್ವಾಸವಿಟ್ಟವರಿಗೆ ಮತ್ತು ತಮ್ಮ ರಬ್‌ನ ಮೇಲೆ ಭರವಸೆಯಿಟ್ಟವರಿಗೆ ಇರುವುದಾಗಿದೆ.

فَمَآ أُوتِيتُم مِّن شَىْءٍ فَمَتَٰعُ ٱلْحَيَوٰةِ ٱلدُّنْيَا ۖ وَمَا عِندَ ٱللَّهِ خَيْرٌ وَأَبْقَىٰ لِلَّذِينَ ءَامَنُوا۟ وَعَلَىٰ رَبِّهِمْ يَتَوَكَّلُونَ ﴿٣٦﴾

37. ಮಹಾಪಾಪಗಳನ್ನು ಮತ್ತು ನೀಚ ಕೃತ್ಯಗಳನ್ನು ವರ್ಜಿಸುವವರಿಗೆ ಮತ್ತು ಕೋಪ ಬಂದಾಗ ಕ್ಷಮಿಸುವವರಿಗೆ.

وَٱلَّذِينَ يَجْتَنِبُونَ كَبَٰٓئِرَ ٱلْإِثْمِ وَٱلْفَوَٰحِشَ وَإِذَا مَا غَضِبُوا۟ هُمْ يَغْفِرُونَ ﴿٣٧﴾

38. ತಮ್ಮ ರಬ್‌ನ ಕರೆಯನ್ನು ಸ್ವೀಕರಿಸಿದವರಿಗೆ, ನಮಾಝನ್ನು ಸಂಸ್ಥಾಪಿಸಿದವರಿಗೆ, ತಮ್ಮ ವಿಷಯವನ್ನು ಪರಸ್ಪರ ಸಮಾಲೋಚನೆಯ ಮೂಲಕ ತೀರ್ಮಾನಿಸುವವರಿಗೆ ಮತ್ತು ನಾವು ಒದಗಿಸಿರುವುದರಿಂದ ವ್ಯಯಿಸುವವರಿಗೆ.

وَٱلَّذِينَ ٱسْتَجَابُوا۟ لِرَبِّهِمْ وَأَقَامُوا۟ ٱلصَّلَوٰةَ وَأَمْرُهُمْ شُورَىٰ بَيْنَهُمْ وَمِمَّا رَزَقْنَٰهُمْ يُنفِقُونَ ﴿٣٨﴾

39. ತಮಗೆ ಯಾವುದಾದರೂ ದೌರ್ಜನ್ಯವನ್ನು ಎದುರಿಸಬೇಕಾಗಿ ಬಂದರೆ ಪ್ರತಿರೋಧ ಕ್ರಮವನ್ನು ಕೈಗೊಳ್ಳುವವರಿಗೆ.[2]

وَٱلَّذِينَ إِذَآ أَصَابَهُمُ ٱلْبَغْىُ هُمْ يَنتَصِرُونَ ﴿٣٩﴾

40. ಒಂದು ಕೆಡುಕಿಗಿರುವ ಪ್ರತಿಫಲವು ಅದಕ್ಕೆ ಸಮಾನವಾಗಿರುವ ಕೆಡುಕಾಗಿದೆ.[3] ಆದರೆ ಯಾರಾದರೂ ಮನ್ನಿಸುವುದಾದರೆ ಮತ್ತು ಸಂಧಾನ ಮಾಡುವುದಾದರೆ ಅವನಿಗಿರುವ

وَجَزَٰٓؤُا۟ سَيِّئَةٍ سَيِّئَةٌ مِّثْلُهَا ۖ فَمَنْ عَفَا وَأَصْلَحَ فَأَجْرُهُۥ عَلَى ٱللَّهِ ۚ إِنَّهُۥ لَا يُحِبُّ ٱلظَّٰلِمِينَ ﴿٤٠﴾

1 ಅರ್ಥಾತ್ ಓರ್ವ ಸತ್ಯವಿಶ್ವಾಸಿಗೆ ಪರಲೋಕದಲ್ಲಿ ಅಲ್ಲಾಹುವಿನ ವತಿಯಿಂದ ಸಿಗಲಿರುವ ಅನುಗ್ರಹಗಳು.

2 ಕ್ಷಮೆ, ಸಹನೆ ಇತ್ಯಾದಿಗಳನ್ನು ಪಾಲಿಸಬೇಕು ಎಂದರೆ ದೌರ್ಜನ್ಯಕ್ಕೀಡಾಗುವಾಗ ಕೈ ಕಟ್ಟಿ ನಿಷ್ಕ್ರಿಯನಾಗಿರಬೇಕು ಎಂದರ್ಥವಲ್ಲ. ಆತ್ಮರಕ್ಷಣೆಗಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳುವವರು ಅಲ್ಲಾಹುವಿನ ಅನುಗ್ರಹಕ್ಕೆ ಅರ್ಹರೆಂದು ಪ್ರಸ್ತುತ ಸೂಕ್ತಿಯು ಕಲಿಸುತ್ತದೆ.

3 ದೌರ್ಜನ್ಯಕ್ಕೀಡಾದ ವ್ಯಕ್ತಿಗೆ ತನ್ನ ಮೇಲೆ ಎಸಗಲಾದ ದೌರ್ಜನ್ಯಕ್ಕೆ ಸಮಾನವಾಗಿ ಪ್ರತಿರೋಧ ಕ್ರಮ ಕೈಗೊಳ್ಳುವ ಹಕ್ಕಿದೆ. ಆದರೆ ಅತಿಕ್ರಮ ಸಲ್ಲದು. ಇನ್ನು ಯಾರಾದರೂ ಸಹನೆ ಪಾಲಿಸಿದರೆ ಅದೊಂದು ಪ್ರತಿಫಲಾರ್ಹ ಸತ್ಕರ್ಮವಾಗಿದೆ.

ಪ್ರತಿಫಲವನ್ನು ನೀಡುವುದು ಅಲ್ಲಾಹುವಿನ ಕರ್ತವ್ಯವಾಗಿದೆ. ಖಂಡಿತವಾಗಿಯೂ ಅವನು ಅಕ್ರಮವೆಸಗುವವರನ್ನು ಮೆಚ್ಚುವುದಿಲ್ಲ.

وَلَمَنِ ٱنتَصَرَ بَعۡدَ ظُلۡمِهِۦ فَأُوْلَـٰٓئِكَ مَا عَلَيۡهِم مِّن سَبِيلٍ ﴿٤١﴾

41. ತಾನು ದೌರ್ಜನ್ಯಕ್ಕೊಳಗಾದ ಬಳಿಕ ಯಾರಾದರೂ ಪ್ರತಿರೋಧ ಕ್ರಮವನ್ನು ಕೈಗೊಳ್ಳುವುದಾದರೆ ಅವರ ವಿರುದ್ಧ (ತಪ್ಪನ್ನು ಹೊರಿಸಲು) ಯಾವ ಮಾರ್ಗವೂ ಇಲ್ಲ.

إِنَّمَا ٱلسَّبِيلُ عَلَى ٱلَّذِينَ يَظۡلِمُونَ ٱلنَّاسَ وَيَبۡغُونَ فِي ٱلۡأَرۡضِ بِغَيۡرِ ٱلۡحَقِّۚ أُوْلَـٰٓئِكَ لَهُمۡ عَذَابٌ أَلِيمٞ ﴿٤٢﴾

42. (ತಪ್ಪು ಹೊರಿಸಲು) ಮಾರ್ಗವಿರುವುದು ಜನರೊಂದಿಗೆ ಅನ್ಯಾಯವೆಸಗುವ ಮತ್ತು ಭೂಮಿಯಲ್ಲಿ ಅನ್ಯಾಯವಾಗಿ ಅತಿಕ್ರಮವೆಸಗುವವರ ವಿರುದ್ಧ ಮಾತ್ರವಾಗಿದೆ. ಯಾತನಾಮಯ ಶಿಕ್ಷೆಯಿರುವುದು ಅವರಿಗಾಗಿದೆ.

وَلَمَن صَبَرَ وَغَفَرَ إِنَّ ذَٰلِكَ لَمِنۡ عَزۡمِ ٱلۡأُمُورِ ﴿٤٣﴾

43. ಯಾರಾದರೂ ಸಹನೆ ಪಾಲಿಸುವುದಾದರೆ ಮತ್ತು ಕ್ಷಮಿಸುವುದಾದರೆ ಖಂಡಿತವಾಗಿಯೂ ಅದು ದೃಢ ನಿರ್ಧಾರ ಕೈಗೊಳ್ಳಬೇಕಾದ ವಿಷಯಗಳಲ್ಲಿ ಸೇರಿದ್ದಾಗಿದೆ.[1]

وَمَن يُضۡلِلِ ٱللَّهُ فَمَا لَهُۥ مِن وَلِيّٖ مِّنۢ بَعۡدِهِۦۗ وَتَرَى ٱلظَّـٰلِمِينَ لَمَّا رَأَوُاْ ٱلۡعَذَابَ يَقُولُونَ هَلۡ إِلَىٰ مَرَدّٖ مِّن سَبِيلٖ ﴿٤٤﴾

44. ಅಲ್ಲಾಹು ಯಾರನ್ನು ಪಥಭ್ರಷ್ಟಗೊಳಿಸುವನೋ ತರುವಾಯ ಅವನಿಗೆ ಯಾವುದೇ ರಕ್ಷಕನೂ ಇಲ್ಲ. ಶಿಕ್ಷೆಯನ್ನು ಕಣ್ಣಾರೆ ಕಾಣುವಾಗ ಮರಳಿ ಹೋಗಲು ಯಾವುದಾದರೂ ದಾರಿಯಿದೆಯೇ ಎಂದು ಅಕ್ರಮವೆಸಗಿದವರು ಹೇಳುತ್ತಿರುವುದಾಗಿ ತಾವು ಕಾಣುವಿರಿ.

وَتَرَىٰهُمۡ يُعۡرَضُونَ عَلَيۡهَا خَٰشِعِينَ مِنَ ٱلذُّلِّ يَنظُرُونَ مِن طَرۡفٍ خَفِيّٖۗ وَقَالَ ٱلَّذِينَ ءَامَنُوٓاْ إِنَّ ٱلۡخَٰسِرِينَ ٱلَّذِينَ خَسِرُوٓاْ أَنفُسَهُمۡ وَأَهۡلِيهِمۡ يَوۡمَ ٱلۡقِيَٰمَةِۗ أَلَآ إِنَّ ٱلظَّـٰلِمِينَ فِي عَذَابٖ مُّقِيمٖ ﴿٤٥﴾

45. ಅವಮಾನದಿಂದ ಶರಣಾಗತರಾದವರಾಗಿ ಅವರನ್ನು ಅದರ (ನರಕಾಗ್ನಿಯ) ಮುಂದೆ ಪ್ರದರ್ಶಿಸಲಾಗುವುದನ್ನು ತಾವು ಕಾಣುವಿರಿ. ಅವರು ಕುಡಿನೋಟದಿಂದ ನೋಡುತ್ತಿರುವರು. ವಿಶ್ವಾಸವಿಟ್ಟವರು ಹೇಳುವರು: 'ಪುನರುತ್ಥಾನ ದಿನದಂದು ಸ್ವತಃ ತಮ್ಮನ್ನು ಮತ್ತು ತಮ್ಮ

1 ನಿಶ್ಚಯದಾರ್ಢ್ಯತೆಯಿರುವ ಮತ್ತು ಸ್ಪಷ್ಟವಾದ ತೀರ್ಮಾನವನ್ನು ಕೈಗೊಳ್ಳುವ ಸಾಮರ್ಥ್ಯವುಳ್ಳ ವ್ಯಕ್ತಿಗೆ ಮಾತ್ರ ಸಹನೆ ಮತ್ತು ವಿನಾಯಿತಿ ತೋರಲು ಸಾಧ್ಯ.

ಸಂಬಂಧಿಕರನ್ನು ಕಳೆದುಕೊಂಡವರು ಯಾರೋ ಅವರೇ ನಷ್ಟ ಹೊಂದಿದವರಾಗಿರುವರು. ಅರಿಯಿರಿ! ಖಂಡಿತವಾಗಿಯೂ ಅಕ್ರಮಿಗಳು ಶಾಶ್ವತವಾದ ಶಿಕ್ಷೆಯಲ್ಲಿರುವರು.

**46.** ಅಲ್ಲಾಹುವಿನ ಹೊರತು ತಮಗೆ ಸಹಾಯ ಮಾಡುವ ಅನ್ಯ ರಕ್ಷಕರಾರೂ ಅವರಿಗಿರಲಾರರು. ಅಲ್ಲಾಹು ಯಾರನ್ನು ಪಥಭ್ರಷ್ಟಗೊಳಿಸುವನೋ ಅವನಿಗೆ (ಗುರಿ ಮುಟ್ಟಲು) ಯಾವ ಮಾರ್ಗವೂ ಇಲ್ಲ.

وَمَا كَانَ لَهُم مِّنْ أَوْلِيَآءَ يَنصُرُونَهُم مِّن دُونِ ٱللَّهِ ۗ وَمَن يُضْلِلِ ٱللَّهُ فَمَا لَهُۥ مِن سَبِيلٍ ﴿٤٦﴾

**47.** ಒಂದು ದಿನ ಬರುವುದಕ್ಕೆ ಮುಂಚೆ ನೀವು ನಿಮ್ಮ ರಬ್‌ನ ಕರೆಯನ್ನು ಸ್ವೀಕರಿಸಿರಿ. ಅಲ್ಲಾಹುವಿನಿಂದಿರುವ ಆ ದಿನವನ್ನು ತಡೆಹಿಡಿಯಲು ಸಾಧ್ಯವಾಗದು. ಅಂದು ನಿಮಗೆ ಯಾವುದೇ ಅಭಯಸ್ಥಾನವೂ ಇರದು. (ಪಾಪಗಳನ್ನು) ನಿರಾಕರಿಸಲೂ ನಿಮ್ಮಿಂದಾಗದು.

ٱسْتَجِيبُوا۟ لِرَبِّكُم مِّن قَبْلِ أَن يَأْتِىَ يَوْمٌ لَّا مَرَدَّ لَهُۥ مِنَ ٱللَّهِ ۚ مَا لَكُم مِّن مَّلْجَإٍ يَوْمَئِذٍ وَمَا لَكُم مِّن نَّكِيرٍ ﴿٤٧﴾

**48.** (ಓ ಪ್ರವಾದಿಯವರೇ!) ಅವರೇನಾದರೂ ವಿಮುಖರಾಗುವುದಾದರೆ ತಮ್ಮನ್ನು ನಾವು ಅವರ ಮೇಲೆ ಕಾವಲುಗಾರರನ್ನಾಗಿ ಕಳುಹಿಸಿಲ್ಲ. ತಮ್ಮ ಮೇಲಿರುವುದು ಸಂದೇಶವನ್ನು ತಲುಪಿಸುವ ಹೊಣೆ ಮಾತ್ರವಾಗಿದೆ. ಖಂಡಿತವಾಗಿಯೂ ನಾವು ನಮ್ಮ ವತಿಯ ಒಂದು ಅನುಗ್ರಹವನ್ನು ಮನುಷ್ಯನಿಗೆ ಸವಿಯುಂತೆ ಮಾಡಿದರೆ ಅದರಿಂದಾಗಿ ಅವನು ಹರ್ಷಿಸುವನು. ಅವರ ಕೈಗಳು ಮುಂಚೆ ಮಾಡಿಟ್ಟಿರುವುದರ ಫಲವಾಗಿ ಯಾವುದಾದರೂ ಕೆಡುಕು ಅವರಿಗೆ ಬಾಧಿಸಿದರೆ ಖಂಡಿತವಾಗಿಯೂ ಮನುಷ್ಯನು ಕೃತಘ್ನತೆ ತೋರುವವನಾಗುವನು.

فَإِنْ أَعْرَضُوا۟ فَمَآ أَرْسَلْنَٰكَ عَلَيْهِمْ حَفِيظًا ۖ إِنْ عَلَيْكَ إِلَّا ٱلْبَلَٰغُ ۗ وَإِنَّآ إِذَآ أَذَقْنَا ٱلْإِنسَٰنَ مِنَّا رَحْمَةً فَرِحَ بِهَا ۖ وَإِن تُصِبْهُمْ سَيِّئَةٌۢ بِمَا قَدَّمَتْ أَيْدِيهِمْ فَإِنَّ ٱلْإِنسَٰنَ كَفُورٌ ﴿٤٨﴾

**49.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗಾಗಿದೆ. ಅವನು ತಾನಿಚ್ಛಿಸುವುದನ್ನು ಸೃಷ್ಟಿಸುವನು. ಅವನು ತಾನಿಚ್ಛಿಸುವವರಿಗೆ ಹೆಣ್ಣುಮಕ್ಕಳನ್ನು ಕರುಣಿಸುವನು. ಅವನು ತಾನಿಚ್ಛಿಸುವವರಿಗೆ ಗಂಡು ಮಕ್ಕಳನ್ನು ಕರುಣಿಸುವನು.

لِّلَّهِ مُلْكُ ٱلسَّمَٰوَٰتِ وَٱلْأَرْضِ ۚ يَخْلُقُ مَا يَشَآءُ ۚ يَهَبُ لِمَن يَشَآءُ إِنَٰثًا وَيَهَبُ لِمَن يَشَآءُ ٱلذُّكُورَ ﴿٤٩﴾

50. ಅಥವಾ ಅವನು ಅವರಿಗೆ ಗಂಡು ಮತ್ತು ಹೆಣ್ಣು ಮಕ್ಕಳನ್ನು ಜೊತೆಯಾಗಿ ಕರುಣಿಸುವನು. ಅವನು ತಾನಿಚ್ಛಿಸುವವರನ್ನು ಬಂಜೆಯನ್ನಾಗಿ ಮಾಡುವನು. ಖಂಡಿತವಾಗಿಯೂ ಅವನು ಸರ್ವಜ್ಞನೂ, ಸರ್ವಶಕ್ತನೂ ಆಗಿರುವನು.

أَوْ يُزَوِّجُهُمْ ذُكْرَانًا وَإِنَٰثًا ۖ وَيَجْعَلُ مَن يَشَآءُ عَقِيمًا ۚ إِنَّهُۥ عَلِيمٌ قَدِيرٌ ﴿٥٠﴾

51. (ನೇರವಾಗಿರುವ) ದಿವ್ಯ ಸಂದೇಶ ಎಂಬ ನೆಲೆಯಲ್ಲಿ ಅಥವಾ ಒಂದು ಪರದೆಯ ಹಿಂದಿನಿಂದ ಅಥವಾ ಒಬ್ಬ ದೂತರನ್ನು[1] ಕಳುಹಿಸಿ, ಅಲ್ಲಾಹುವಿನ ಅನುಮತಿ ಪ್ರಕಾರ ಅವನು ಇಚ್ಛಿಸುವುದನ್ನು ಅವರು (ದೂತರು) ಸಂದೇಶವಾಗಿ ನೀಡುವರು ಎಂಬ ನೆಲೆಯಲ್ಲಿ ಹೊರತು ಅಲ್ಲಾಹು ತನ್ನೊಂದಿಗೆ ಮಾತನಾಡುವನು ಎಂಬ ಸ್ಥಿತಿಯು ಯಾವ ಮನುಷ್ಯನಿಗೂ ಉಂಟಾಗದು. ಖಂಡಿತವಾಗಿಯೂ ಅವನು ಉನ್ನತನೂ ಯುಕ್ತಿಪೂರ್ಣನೂ ಆಗಿರುವನು.

۞ وَمَا كَانَ لِبَشَرٍ أَن يُكَلِّمَهُ ٱللَّهُ إِلَّا وَحْيًا أَوْ مِن وَرَآيِٕ حِجَابٍ أَوْ يُرْسِلَ رَسُولًا فَيُوحِىَ بِإِذْنِهِۦ مَا يَشَآءُ ۚ إِنَّهُۥ عَلِىٌّ حَكِيمٌ ﴿٥١﴾

52. ಹೀಗೆ, ನಾವು ತಮಗೆ ನಮ್ಮ ಆಜ್ಞೆಯಿಂದಾಗಿ ಒಂದು ಸ್ಫೂರ್ತಿದಾಯಕ ಸಂದೇಶವನ್ನು ನೀಡಿರುವೆವು. ಗ್ರಂಥವಾಗಲಿ ಸತ್ಯವಿಶ್ವಾಸವಾಗಲಿ ಏನೆಂದು ತಮಗೆ ತಿಳಿದಿರಲಿಲ್ಲ. ಆದರೆ ನಾವು ಅದನ್ನು ಒಂದು ಪ್ರಕಾಶವನ್ನಾಗಿ ಮಾಡಿದೆವು. ಅದರ ಮೂಲಕ ನಮ್ಮ ದಾಸರ ಪೈಕಿ ನಾವಿಚ್ಛಿಸುವವರಿಗೆ ನಾವು ಹಾದಿಯನ್ನು ತೋರಿಸುವೆವು. ಖಂಡಿತವಾಗಿಯೂ ತಾವು ಮಾರ್ಗದರ್ಶನ ಮಾಡುತ್ತಿರುವುದು ನೇರವಾದ ಮಾರ್ಗದೆಡೆಗೇ ಆಗಿದೆ.

وَكَذَٰلِكَ أَوْحَيْنَآ إِلَيْكَ رُوحًا مِّنْ أَمْرِنَا ۚ مَا كُنتَ تَدْرِى مَا ٱلْكِتَٰبُ وَلَا ٱلْإِيمَٰنُ وَلَٰكِن جَعَلْنَٰهُ نُورًا نَّهْدِى بِهِۦ مَن نَّشَآءُ مِنْ عِبَادِنَا ۚ وَإِنَّكَ لَتَهْدِىٓ إِلَىٰ صِرَٰطٍ مُّسْتَقِيمٍ ﴿٥٢﴾

53. ಆಕಾಶಗಳಲ್ಲಿರುವುದು ಮತ್ತು ಭೂಮಿಯಲ್ಲಿರುವುದು ಯಾರದ್ದಾಗಿದೆಯೋ ಆ ಅಲ್ಲಾಹುವಿನ ಮಾರ್ಗದೆಡೆಗೆ. ಅರಿಯಿರಿ! ವಿಷಯಗಳೆಲ್ಲವೂ ಮರಳುವುದು ಅಲ್ಲಾಹುವಿನೆಡೆಗೇ ಆಗಿದೆ.

صِرَٰطِ ٱللَّهِ ٱلَّذِى لَهُۥ مَا فِى ٱلسَّمَٰوَٰتِ وَمَا فِى ٱلْأَرْضِ ۗ أَلَآ إِلَى ٱللَّهِ تَصِيرُ ٱلْأُمُورُ ﴿٥٣﴾

1 ಮುಹಮ್ಮದ್(ﷺ)ರಿಗೆ ವಹ್ಯ್ ತಲುಪಿಸುವ ಕರ್ತವ್ಯವನ್ನು ಅಲ್ಲಾಹು ಜಿಬ್ರೀಲ್ ಎಂಬ ಮಲಕ್‌ಗೆ ವಹಿಸಿಕೊಟ್ಟಿರುವನು.

# ಅಝ್ಝುಖ್ರುಫ್ (ಸ್ವರ್ಣಾಲಂಕಾರ)[1]

# سُورَةُ الزُّخْرُفِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 89

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1-3. ಹಾ–ಮೀಮ್. (ವಿಷಯಗಳನ್ನು) ವಿವರಿಸುವ ಗ್ರಂಥದ ಮೇಲಾಣೆ! ಖಂಡಿತವಾಗಿಯೂ ನಾವು ಇದನ್ನು ಅರಬೀ ಭಾಷೆಯಲ್ಲಿರುವ ಒಂದು ಕುರ್‌ಆನ್ ಆಗಿ ಮಾಡಿರುವುದು ನೀವು ಚಿಂತಿಸಿ ಗ್ರಹಿಸುವ ಸಲುವಾಗಿದೆ.

حمٓ ١ وَٱلۡكِتَٰبِ ٱلۡمُبِينِ ٢ إِنَّا جَعَلۡنَٰهُ قُرۡءَٰنًا عَرَبِيّٗا لَّعَلَّكُمۡ تَعۡقِلُونَ ٣

4. ಖಂಡಿತವಾಗಿಯೂ ಅದು ಮೂಲಗ್ರಂಥದಲ್ಲಿ ನಮ್ಮ ಬಳಿ (ಸುರಕ್ಷಿತವಾಗಿ) ಇದೆ. ಅದು ಉನ್ನತವೂ ಜ್ಞಾನಸಂಪನ್ನವೂ ಆಗಿದೆ.

وَإِنَّهُۥ فِيٓ أُمِّ ٱلۡكِتَٰبِ لَدَيۡنَا لَعَلِيٌّ حَكِيمٌ ٤

5. ಹಾಗೆ ನೀವು ಅತಿಕ್ರಮಿಗಳಾಗಿರುವ ಜನತೆಯಾಗಿರುವ ಕಾರಣ (ನಿಮ್ಮನ್ನು) ಹೊರತುಪಡಿಸಿ ನಾವು ಈ ಉಪದೇಶವನ್ನು ನಿಮ್ಮಿಂದ ದೂರಸರಿಸುವೆವೇ?

أَفَنَضۡرِبُ عَنكُمُ ٱلذِّكۡرَ صَفۡحًا أَن كُنتُمۡ قَوۡمٗا مُّسۡرِفِينَ ٥

6. ಪೂರ್ವಿಕ ಸಮುದಾಯಗಳಲ್ಲಿ ನಾವು ಎಷ್ಟೋ ಪ್ರವಾದಿಗಳನ್ನು ಕಳುಹಿಸಿರುವೆವು.

وَكَمۡ أَرۡسَلۡنَا مِن نَّبِيّٖ فِي ٱلۡأَوَّلِينَ ٦

7. ಯಾವುದೇ ಪ್ರವಾದಿಯೂ ಅವರ ಬಳಿ ಬರುವಾಗಲೆಲ್ಲ ಅವರು ಆತನನ್ನು ಗೇಲಿ ಮಾಡದೆ ಬಿಟ್ಟಿರಲಿಲ್ಲ.

وَمَا يَأۡتِيهِم مِّن نَّبِيٍّ إِلَّا كَانُواْ بِهِۦ يَسۡتَهۡزِءُونَ ٧

8. ಇವರಿಗಿಂತಲೂ ಬಲಿಷ್ಠರಾಗಿದ್ದವರನ್ನು ನಾವು ನಾಶ ಮಾಡಿರುವೆವು. ಪೂರ್ವಿಕರ ಉದಾಹರಣೆಗಳು ಈಗಾಗಲೇ ಗತಿಸಿಹೋಗಿವೆ.

فَأَهۡلَكۡنَآ أَشَدَّ مِنۡهُم بَطۡشٗا وَمَضَىٰ مَثَلُ ٱلۡأَوَّلِينَ ٨

9. 'ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವನು ಯಾರು?' ಎಂದು ತಾವು ಅವರೊಂದಿಗೆ ಕೇಳಿದರೆ 'ಅವುಗಳನ್ನು ಸೃಷ್ಟಿಸಿದವನು ಪ್ರತಾಪಶಾಲಿಯೂ ಸರ್ವಜ್ಞನೂ

وَلَئِن سَأَلۡتَهُم مَّنۡ خَلَقَ ٱلسَّمَٰوَٰتِ وَٱلۡأَرۡضَ لَيَقُولُنَّ خَلَقَهُنَّ ٱلۡعَزِيزُ ٱلۡعَلِيمُ ٩

1 35ನೇ ಸೂಕ್ತಿಯಲ್ಲಿ ಸ್ವರ್ಣಾಲಂಕಾರದ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

ಆಗಿರುವವನು’ ಎಂದು ಖಂಡಿತವಾಗಿಯೂ ಅವರು ಹೇಳುವರು.

10. ಅಂದರೆ ನಿಮಗೆ ಭೂಮಿಯನ್ನು ಒಂದು ತೊಟ್ಟಿಲನ್ನಾಗಿ[1] ಮಾಡಿಕೊಟ್ಟವನು ಮತ್ತು ನೀವು ನೇರವಾದ ಮಾರ್ಗವನ್ನು ಕಾಣಲು ಅದರಲ್ಲಿ ನಿಮಗೆ ಹಾದಿಗಳನ್ನು ಮಾಡಿಕೊಟ್ಟವನು.

ٱلَّذِى جَعَلَ لَكُمُ ٱلْأَرْضَ مَهْدًا وَجَعَلَ لَكُمْ فِيهَا سُبُلًا لَّعَلَّكُمْ تَهْتَدُونَ ﴿١٠﴾

11. ಒಂದು ಪ್ರಮಾಣಕ್ಕನುಗುಣವಾಗಿ ಆಕಾಶದಿಂದ (ಮಳೆ)ನೀರನ್ನು ಸುರಿಸಿಕೊಟ್ಟವನು. ತರುವಾಯ ಅದರಿಂದ ನಾವು ನಿರ್ಜೀವವಾದ ಪ್ರದೇಶಕ್ಕೆ ಜೀವವನ್ನು ನೀಡಿದೆವು. ನಿಮ್ಮನ್ನು (ಮರಣಾನಂತರ) ಹೀಗೆಯೇ ಹೊರತರಲಾಗುವುದು.

وَٱلَّذِى نَزَّلَ مِنَ ٱلسَّمَآءِ مَآءًۢ بِقَدَرٍ فَأَنشَرْنَا بِهِۦ بَلْدَةً مَّيْتًا ۚ كَذَٰلِكَ تُخْرَجُونَ ﴿١١﴾

12. ಎಲ್ಲ ಜೋಡಿಗಳನ್ನು ಸೃಷ್ಟಿಸಿದವನು ಮತ್ತು ನಿಮಗೆ ಸವಾರಿ ಮಾಡುವುದಕ್ಕಿರುವ ಹಡಗುಗಳನ್ನು ಹಾಗೂ ಜಾನುವಾರುಗಳನ್ನು ಮಾಡಿಕೊಟ್ಟವನು.

وَٱلَّذِى خَلَقَ ٱلْأَزْوَٰجَ كُلَّهَا وَجَعَلَ لَكُم مِّنَ ٱلْفُلْكِ وَٱلْأَنْعَٰمِ مَا تَرْكَبُونَ ﴿١٢﴾

13-14. ನೀವು ಅವುಗಳ ಬೆನ್ನ ಮೇಲೆ ಆಸೀನರಾಗುವ ಸಲುವಾಗಿ, ತರುವಾಯ ನೀವು ಅಲ್ಲಿ ಆಸೀನರಾಗುವಾಗ ನಿಮ್ಮ ರಬ್‌ನ ಅನುಗ್ರಹವನ್ನು ಸ್ಮರಿಸುವ ಸಲುವಾಗಿ ಮತ್ತು ‘ನಮಗೋಸ್ಕರ ಇದನ್ನು ವಿಧೇಯಗೊಳಿಸಿಕೊಟ್ಟವನು ಪರಮಪಾವನನಾಗಿರುವನು! ಇದನ್ನು ಹಿಡಿತದಲ್ಲಿಡಲು ನಮಗೆ ಸಾಧ್ಯವಿರಲಿಲ್ಲ. ಖಂಡಿತವಾಗಿಯೂ ನಾವು ನಮ್ಮ ರಬ್‌ನೆಡೆಗೆ ಮರಳಿಹೋಗುವವರೇ ಆಗಿರುವೆವು’ ಎಂದು ನೀವು ಹೇಳುವ ಸಲುವಾಗಿ.

لِتَسْتَوُۥا عَلَىٰ ظُهُورِهِۦ ثُمَّ تَذْكُرُوا نِعْمَةَ رَبِّكُمْ إِذَا ٱسْتَوَيْتُمْ عَلَيْهِ وَتَقُولُوا سُبْحَٰنَ ٱلَّذِى سَخَّرَ لَنَا هَٰذَا وَمَا كُنَّا لَهُۥ مُقْرِنِينَ ﴿١٣﴾ وَإِنَّآ إِلَىٰ رَبِّنَا لَمُنقَلِبُونَ ﴿١٤﴾

1 ಭೂಮಿಯ ಮೇಲ್ಮೈಯ ವಿಶೇಷತೆಗಳು, ವಾತಾವರಣ ಮತ್ತು ಹವಾಗುಣ ಇತ್ಯಾದಿ ಅನೇಕ ಘಟಕಗಳನ್ನು ಜೊತೆಗೂಡಿಸಿ ಅಲ್ಲಾಹು ಭೂಮಿಯನ್ನು ಜೀವಜಾಲಗಳಿಗೆ ತೊಟ್ಟಿಲಿನಂತೆ ಮಾಡಿರುವನು. ಮಹ್ದ್, ಮಿಹಾದ್ ಎಂಬ ಪದಗಳಿಗೆ ತೊಟ್ಟಿಲು, ಹಾಸಿಗೆ ಇತ್ಯಾದಿ ಅರ್ಥಗಳಿವೆ.

**15.** ಅವರು ಅವನ ದಾಸರ ಪೈಕಿ ಕೆಲವರನ್ನು ಅವನ ಒಂದು ಭಾಗ (ಅಥವಾ ಸಂತತಿ)ವಾಗಿ ಮಾಡಿಕೊಂಡಿರುವರು.(1) ಖಂಡಿತವಾಗಿಯೂ ಮನುಷ್ಯನು ಪ್ರತ್ಯಕ್ಷವಾಗಿಯೇ ಕೃತಘ್ನನಾಗಿರುವನು.

وَجَعَلُوا۟ لَهُۥ مِنْ عِبَادِهِۦ جُزْءًا ۚ إِنَّ ٱلْإِنسَٰنَ لَكَفُورٌ مُّبِينٌ ﴿١٥﴾

**16.** ತಾನು ಸೃಷ್ಟಿಸಿದವುಗಳ ಪೈಕಿ ಅವನು ಹೆಣ್ಣುಮಕ್ಕಳನ್ನು (ತನಗಾಗಿ) ಇಟ್ಟುಕೊಂಡು ಗಂಡು ಮಕ್ಕಳನ್ನು ನಿಮಗೆ ವಿಶೇಷವಾಗಿ ಕರುಣಿಸಿರುವನೇ?

أَمِ ٱتَّخَذَ مِمَّا يَخْلُقُ بَنَاتٍ وَأَصْفَىٰكُم بِٱلْبَنِينَ ﴿١٦﴾

**17.** ತಾನು ಪರಮ ದಯಾಮಯನಿಗೆ ಉದಾಹರಣೆಯಾಗಿ ತೋರಿಸುತ್ತಿದ್ದುದರ (ಹೆಣ್ಣುಮಗುವಿನ) ಕುರಿತು ಅವರ ಪೈಕಿ ಒಬ್ಬನಿಗೆ ಶುಭವಾರ್ತೆ ತಿಳಿಸಲಾದರೆ ಅವನ ಮುಖವು ಕರ್‍ರಗಾಗುವುದು ಮತ್ತು ಅವನು ದುಃಖಿತನಾಗುವನು.(2)

وَإِذَا بُشِّرَ أَحَدُهُم بِمَا ضَرَبَ لِلرَّحْمَٰنِ مَثَلًا ظَلَّ وَجْهُهُۥ مُسْوَدًّا وَهُوَ كَظِيمٌ ﴿١٧﴾

**18.** (ಅವರು ಅಲ್ಲಾಹುವಿಗೆ ಸಂತಾನವಾಗಿ ಮಾಡಿರುವುದು) ಆಭರಣಗಳನ್ನು ತೊಡಿಸಿ ಬೆಳೆಸಲಾಗುವ ಮತ್ತು ತರ್ಕದಲ್ಲಿ (ನ್ಯಾಯವನ್ನು) ಸ್ಪಷ್ಟಪಡಿಸಲು ಸಾಧ್ಯವಾಗದ ವ್ಯಕ್ತಿಯನ್ನೇ?(3)

أَوَمَن يُنَشَّؤُا۟ فِى ٱلْحِلْيَةِ وَهُوَ فِى ٱلْخِصَامِ غَيْرُ مُبِينٍ ﴿١٨﴾

**19.** ಪರಮ ದಯಾಮಯನ ದಾಸರಾದ ಮಲಕ್‌ಗಳನ್ನು ಅವರು ಹೆಣ್ಣಾಗಿ ಮಾಡಿರುವರು. ಅವರ (ಮಲಕ್‌ಗಳ) ಸೃಷ್ಟಿಗೆ ಅವರು ಸಾಕ್ಷಿಯಾಗಿದ್ದರೇ? ಅವರ ಸಾಕ್ಷ್ಯವನ್ನು

وَجَعَلُوا۟ ٱلْمَلَٰٓئِكَةَ ٱلَّذِينَ هُمْ عِبَٰدُ ٱلرَّحْمَٰنِ إِنَٰثًا ۚ أَشَهِدُوا۟ خَلْقَهُمْ ۚ سَتُكْتَبُ شَهَٰدَتُهُمْ وَيُسْـَٔلُونَ ﴿١٩﴾

---

1 ಸೃಷ್ಟಿಗಳು ಮತ್ತು ಸೃಷ್ಟಿಕರ್ತನು ಸಂಪೂರ್ಣ ಭಿನ್ನರಾಗಿದ್ದಾರೆ. ಮಲಕ್‌ಗಳು ಅಲ್ಲಾಹುವಿನ ಹೆಣ್ಮಕ್ಕಳೆಂದು ವಿಶ್ವಾಸವಿಡುವವರು ಮತ್ತು ಯೇಸು ಅಲ್ಲಾಹುವಿನ ಪುತ್ರನೆಂದು ವಿಶ್ವಾಸವಿಡುವವರು ತನ್ಮೂಲಕ ಸೃಷ್ಟಿ ಮತ್ತು ಸೃಷ್ಟಿಕರ್ತನ ಅಸ್ತಿತ್ವವನ್ನು ಪರಸ್ಪರ ಬೆರೆಸುವ ಮಹಾಪಾಪವನ್ನು ಮಾಡುತ್ತಿದ್ದಾರೆ.

2 ತನಗೊಂದು ಹೆಣ್ಣು ಶಿಶು ಜನಿಸುವುದು ಅವಮಾನವೆಂದು ಪರಿಗಣಿಸುವ ಮತ್ತು ಅದರಿಂದಾಗಿ ಅತೀವ ದುಃಖಿತನಾಗುವ ಅರೇಬಿಯನ್ ಬಹುದೇವವಿಶ್ವಾಸಿ ತಾನು ಆರಾಧಿಸುವ ದೇವನಿಗೆ ಹೆಣ್ಣುಮಕ್ಕಳಿದ್ದಾರೆಂದು ಆರೋಪಿಸುವುದರಲ್ಲಿರುವ ವಿರೋಧಾಭಾಸದೆಡೆಗೆ ಈ ಸೂಕ್ತಿಯು ಬೊಟ್ಟು ಮಾಡುತ್ತದೆ.

3 ಅವರ ದೃಷ್ಟಿಕೋನದಲ್ಲಿ ಸ್ತ್ರೀಯು ಬದುಕಿನಲ್ಲಿ ನಿರ್ಣಾಯಕವಾದ ಯಾವುದೇ ಪಾತ್ರವನ್ನು ವಹಿಸದ ಒಂದು ಅಲಂಕಾರ ವಸ್ತು ಮಾತ್ರವಾಗಿರುವಳು.

ದಾಖಲಿಸಲಾಗುವುದು ಮತ್ತು ಅವರನ್ನು ವಿಚಾರಣೆ ಮಾಡಲಾಗುವುದು.

20. 'ಪರಮ ದಯಾಮಯನು ಇಚ್ಛಿಸುತ್ತಿದ್ದರೆ ನಾವು ಅವರನ್ನು (ಮಲಕ್‌ಗಳನ್ನು) ಆರಾಧಿಸುತ್ತಿರಲಿಲ್ಲ' ಎಂದು ಅವರು ಹೇಳುವರು. ಅವರಿಗೆ ಅದರ ಬಗ್ಗೆ ಯಾವುದೇ ಅರಿವೂ ಇಲ್ಲ. ಅವರು ಊಹಿಸಿ ಹೇಳುತ್ತಿರುವುದು ಮಾತ್ರವಾಗಿದೆ.

وَقَالُوا۟ لَوْ شَآءَ ٱلرَّحْمَـٰنُ مَا عَبَدْنَـٰهُم ۗ مَّا لَهُم بِذَٰلِكَ مِنْ عِلْمٍ ۖ إِنْ هُمْ إِلَّا يَخْرُصُونَ ٢٠

21. ಅಲ್ಲ, ಅವರಿಗೆ ನಾವು ಈ ಹಿಂದೆ ಯಾವುದಾದರೂ ಗ್ರಂಥವನ್ನು ನೀಡಿ ಅವರು ಅದನ್ನು ಬಿಗಿಯಾಗಿ ಹಿಡಿದುಕೊಂಡಿರುವರೇ?

أَمْ ءَاتَيْنَـٰهُمْ كِتَـٰبًا مِّن قَبْلِهِۦ فَهُم بِهِۦ مُسْتَمْسِكُونَ ٢١

22. ಅಲ್ಲ, 'ನಾವು ನಮ್ಮ ಪೂರ್ವಿಕರನ್ನು ಒಂದು ಮಾರ್ಗದಲ್ಲಿರುವುದಾಗಿ ಕಂಡಿರುವೆವು. ಖಂಡಿತವಾಗಿಯೂ ನಾವು ಅವರ ಹೆಜ್ಜೆಗುರುತುಗಳಲ್ಲಿ ಸನ್ಮಾರ್ಗವನ್ನು ಕಂಡಿರುವೆವು' ಎಂದು ಅವರು ಹೇಳುವರು.

بَلْ قَالُوٓا۟ إِنَّا وَجَدْنَآ ءَابَآءَنَا عَلَىٰٓ أُمَّةٍ وَإِنَّا عَلَىٰٓ ءَاثَـٰرِهِم مُّهْتَدُونَ ٢٢

23. ಹೀಗೆ ತಮಗಿಂತ ಮುಂಚೆ ಯಾವುದೇ ಪ್ರದೇಶಕ್ಕೆ ನಾವು ಮುನ್ನೆಚ್ಚರಿಕೆಗಾರರನ್ನು ಕಳುಹಿಸಿದಾಗಲೆಲ್ಲ 'ನಾವು ನಮ್ಮ ಪೂರ್ವಿಕರನ್ನು ಒಂದು ಮಾರ್ಗದಲ್ಲಿರುವುದಾಗಿ ಕಂಡಿರುವೆವು. ಖಂಡಿತವಾಗಿಯೂ ನಾವು ಅವರ ಹೆಜ್ಜೆಗುರುತುಗಳನ್ನು ಹಿಂಬಾಲಿಸುವೆವು' ಎಂದು ಅಲ್ಲಿನ ಸುಖಲೋಲುಪರು ಹೇಳದೆ ಬಿಟ್ಟಿರಲಿಲ್ಲ.

وَكَذَٰلِكَ مَآ أَرْسَلْنَا مِن قَبْلِكَ فِى قَرْيَةٍ مِّن نَّذِيرٍ إِلَّا قَالَ مُتْرَفُوهَآ إِنَّا وَجَدْنَآ ءَابَآءَنَا عَلَىٰٓ أُمَّةٍ وَإِنَّا عَلَىٰٓ ءَاثَـٰرِهِم مُّقْتَدُونَ ٢٣

24. ಅವರು (ಮುನ್ನೆಚ್ಚರಿಕೆಗಾರರು) ಹೇಳಿದರು: 'ನೀವು ನಿಮ್ಮ ಪೂರ್ವಿಕರನ್ನು ಯಾವ ಮಾರ್ಗದಲ್ಲಿರುವುದಾಗಿ ಕಂಡಿರುವಿರೋ ಅದಕ್ಕಿಂತಲೂ ಉತ್ತಮವಾದ ಮಾರ್ಗವನ್ನು ತೋರಿಸಿಕೊಡುವ ಸಂದೇಶದೊಂದಿಗೆ ನಾನು ನಿಮ್ಮ ಬಳಿ ಬಂದರೂ (ನೀವು ಪೂರ್ವಿಕರನ್ನೇ ಹಿಂಬಾಲಿಸುವಿರಾ)? ಅವರು ಹೇಳಿದರು: 'ನಿಮ್ಮನ್ನು ಯಾವ ಸಂದೇಶದೊಂದಿಗೆ ಕಳುಹಿಸಲಾಗಿದೆಯೋ ಅದರಲ್ಲಿ ಖಂಡಿತವಾಗಿಯೂ ನಾವು ಅವಿಶ್ವಾಸವಿಟ್ಟಿರುವೆವು'.

۞ قَـٰلَ أَوَلَوْ جِئْتُكُم بِأَهْدَىٰ مِمَّا وَجَدتُّمْ عَلَيْهِ ءَابَآءَكُمْ ۖ قَالُوٓا۟ إِنَّا بِمَآ أُرْسِلْتُم بِهِۦ كَـٰفِرُونَ ٢٤

25. ಆದ್ದರಿಂದ ನಾವು ಅವರನ್ನು ಶಿಕ್ಷಿಸಿದೆವು. ಆಗ ಆ ಸತ್ಯನಿಷೇಧಿಗಳ ಅಂತ್ಯವು ಹೇಗಿತ್ತೆಂಬುದನ್ನು ನೋಡಿರಿ.

فَٱنتَقَمۡنَا مِنۡهُمۡۖ فَٱنظُرۡ كَيۡفَ كَانَ عَٰقِبَةُ ٱلۡمُكَذِّبِينَ ﴿٢٥﴾

26. ಇಬ್ರಾಹೀಮ್ ತಮ್ಮ ತಂದೆಯೊಂದಿಗೆ ಮತ್ತು ಜನತೆಯೊಂದಿಗೆ ಹೇಳಿದ ಸಂದರ್ಭ. 'ಖಂಡಿತವಾಗಿಯೂ ನೀವು ಆರಾಧಿಸುತ್ತಿರುವವುಗಳಿಂದ ನಾನು ವಿಮುಕ್ತನಾಗಿರುವೆನು.

وَإِذۡ قَالَ إِبۡرَٰهِيمُ لِأَبِيهِ وَقَوۡمِهِۦٓ إِنَّنِي بَرَآءٞ مِّمَّا تَعۡبُدُونَ ﴿٢٦﴾

27. ನನ್ನನ್ನು ಸೃಷ್ಟಿಸಿದವನ ಹೊರತು. ಯಾಕೆಂದರೆ ಖಂಡಿತವಾಗಿಯೂ ಅವನು ನನಗೆ ಮಾರ್ಗದರ್ಶನ ಮಾಡುವನು'.

إِلَّا ٱلَّذِي فَطَرَنِي فَإِنَّهُۥ سَيَهۡدِينِ ﴿٢٧﴾

28. ಅವರ ನಂತರದವರು (ಸತ್ಯದೆಡೆಗೆ) ಮರಳುವುದಕ್ಕಾಗಿ ಅವರು ಅದನ್ನು (ಆ ಘೋಷಣೆಯನ್ನು) ಅವರ ಮಧ್ಯೆ ನೆಲೆನಿಲ್ಲುವ ಒಂದು ವಚನವನ್ನಾಗಿ ಮಾಡಿದರು.

وَجَعَلَهَا كَلِمَةَۢ بَاقِيَةٗ فِي عَقِبِهِۦ لَعَلَّهُمۡ يَرۡجِعُونَ ﴿٢٨﴾

29. ಅಲ್ಲ, ಸತ್ಯಸಂದೇಶ ಮತ್ತು ಸ್ಪಷ್ಟವಾಗಿ ವಿವರಿಸಿ ಕೊಡುವ ಓರ್ವ ಸಂದೇಶವಾಹಕರು ಇವರ ಬಳಿ ಬರುವವರೆಗೆ ನಾನು ಇವರಿಗೆ ಮತ್ತು ಇವರ ಪೂರ್ವಿಕರಿಗೆ ಜೀವನಾನುಕೂಲತೆಯನ್ನು ನೀಡಿದೆನು.

بَلۡ مَتَّعۡتُ هَٰٓؤُلَآءِ وَءَابَآءَهُمۡ حَتَّىٰ جَآءَهُمُ ٱلۡحَقُّ وَرَسُولٞ مُّبِينٞ ﴿٢٩﴾

30. ಸತ್ಯವು ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಇದೊಂದು ಮಾಂತ್ರಿಕತೆಯಾಗಿದೆ. ಖಂಡಿತವಾಗಿಯೂ ನಾವು ಇದರಲ್ಲಿ ವಿಶ್ವಾಸವಿಲ್ಲದವರಾಗಿರುವೆವು'.

وَلَمَّا جَآءَهُمُ ٱلۡحَقُّ قَالُواْ هَٰذَا سِحۡرٞ وَإِنَّا بِهِۦ كَٰفِرُونَ ﴿٣٠﴾

31. 'ಈ ಎರಡು ನಗರಗಳಲ್ಲಿರುವ ಯಾರಾದರೂ ಒಬ್ಬ ಮಹಾಪುರುಷನ ಮೇಲೆ ಈ ಕುರ್‌ಆನ್ ಅವತೀರ್ಣಗೊಂಡಿಲ್ಲವೇಕೆ?' ಎಂದು ಅವರು ಹೇಳಿದರು.[1]

وَقَالُواْ لَوۡلَا نُزِّلَ هَٰذَا ٱلۡقُرۡءَانُ عَلَىٰ رَجُلٖ مِّنَ ٱلۡقَرۡيَتَيۡنِ عَظِيمٍ ﴿٣١﴾

1 ಪ್ರವಾದಿಯಾಗಬೇಕಾದುದು ಸಂಪತ್ತಾಗಲಿ ಪ್ರತಾಪವಾಗಲಿ ಇಲ್ಲದ ಮುಹಮ್ಮದ್ (ﷺ) ಅಲ್ಲ; ಬದಲಾಗಿ ಮಕ್ಕಾ ಅಥವಾ ತಾಇಫ್‌ನಲ್ಲಿರುವ ಯಾವುದಾದರೂ ಪ್ರಮುಖ ವ್ಯಕ್ತಿ ಪ್ರವಾದಿಯಾಗಬೇಕಿತ್ತು ಎಂಬುದು ಅವರ ವಾದವಾಗಿತ್ತು.

**32.** ತಮ್ಮ ರಬ್‌ನ ಅನುಗ್ರಹವನ್ನು ಹಂಚುವವರು[1] ಅವರೇನು? ಐಹಿಕ ಜೀವನದಲ್ಲಿ ಅವರ ಮಧ್ಯೆ ಅವರ ಜೀವನ ಮಾರ್ಗವನ್ನು ಹಂಚಿಕೊಟ್ಟವರು ನಾವಾಗಿರುವೆವು. ಅವರಲ್ಲಿ ಕೆಲವರು ಇತರ ಕೆಲವರನ್ನು ಅಡಿಯಾಳನ್ನಾಗಿ ಮಾಡಿಕೊಳ್ಳುವಂತಹ ವಿಧದಲ್ಲಿ ಅವರ ಪೈಕಿ ಕೆಲವರನ್ನು ಇತರ ಕೆಲವರಿಗಿಂತ ನಾವು ಹಲವು ದರ್ಜೆಗಳಿಗೆ ಏರಿಸಿರುವೆವು. ತಮ್ಮ ರಬ್‌ನ ಕಾರುಣ್ಯವು ಅವರು ಸಂಗ್ರಹಿಸಿಡುವುದಕ್ಕಿಂತಲೂ ಉತ್ತಮವಾಗಿದೆ.

أَهُمۡ يَقۡسِمُونَ رَحۡمَتَ رَبِّكَۚ نَحۡنُ قَسَمۡنَا
بَيۡنَهُم مَّعِيشَتَهُمۡ فِي ٱلۡحَيَوٰةِ ٱلدُّنۡيَاۚ وَرَفَعۡنَا
بَعۡضَهُمۡ فَوۡقَ بَعۡضٖ دَرَجَٰتٖ لِّيَتَّخِذَ
بَعۡضُهُم بَعۡضٗا سُخۡرِيّٗاۗ وَرَحۡمَتُ رَبِّكَ
خَيۡرٞ مِّمَّا يَجۡمَعُونَ ٣٢

**33.** ಮನುಷ್ಯರು ಒಂದೇ ವಿಧದ (ಕೆಟ್ಟ) ಸಮುದಾಯವಾಗಿ ಬಿಡುವುದಿಲ್ಲ ಎಂದಾಗಿದ್ದರೆ ಪರಮ ದಯಾಮಯನಲ್ಲಿ ಅವಿಶ್ವಾಸ ವಿಡುವವರ ಮನೆಗಳಿಗೆ ಬೆಳ್ಳಿಯ ಮೇಲ್ಛಾವಣಿಗಳನ್ನು ಮತ್ತು ಅವರಿಗೆ ಏರಿ ಹೋಗಲು (ಬೆಳ್ಳಿಯ) ಏಣಿಗಳನ್ನು ನಾವು ನಿರ್ಮಿಸಿಕೊಡುತ್ತಿದ್ದೆವು.

وَلَوۡلَآ أَن يَكُونَ ٱلنَّاسُ أُمَّةٗ وَٰحِدَةٗ
لَّجَعَلۡنَا لِمَن يَكۡفُرُ بِٱلرَّحۡمَٰنِ لِبُيُوتِهِمۡ
سُقُفٗا مِّن فِضَّةٖ وَمَعَارِجَ عَلَيۡهَا
يَظۡهَرُونَ ٣٣

**34-35.** ಅವರ ಮನೆಗಳಿಗೆ (ಬೆಳ್ಳಿಯ) ಬಾಗಿಲುಗಳನ್ನು, ಒರಗಿ ಕೂರಲು ಅವರಿಗೆ (ಬೆಳ್ಳಿಯ) ಮಂಚಗಳನ್ನು ಮತ್ತು ಸ್ವರ್ಣಾಲಂಕಾರಗಳನ್ನು ನಾವು ನೀಡುತ್ತಿದ್ದೆವು. ಆದರೆ ಅವೆಲ್ಲವೂ ಐಹಿಕ ಜೀವನಾನುಕೂಲತೆಗಳು ಮಾತ್ರವಾಗಿವೆ. ತಮ್ಮ ರಬ್‌ನ ಬಳಿ ಪರಲೋಕವು ಭಯಭಕ್ತಿ ಪಾಲಿಸುವವರಿಗೆ ಇರುವುದಾಗಿದೆ.

وَلِبُيُوتِهِمۡ أَبۡوَٰبٗا وَسُرُرًا عَلَيۡهَا
يَتَّكِـُٔونَ ٣٤ وَزُخۡرُفٗاۚ وَإِن كُلُّ ذَٰلِكَ لَمَّا
مَتَٰعُ ٱلۡحَيَوٰةِ ٱلدُّنۡيَاۚ وَٱلۡأٓخِرَةُ عِندَ رَبِّكَ
لِلۡمُتَّقِينَ ٣٥

**36.** ಪರಮ ದಯಾಮಯನ ಉಪದೇಶದ ಕುರಿತು ಯಾರಾದರೂ ಅಂಧನಾಗುವುದಾದರೆ ನಾವು ಅವನಿಗೆ ಒಬ್ಬ ಶೈತಾನನನ್ನು ನಿಶ್ಚಯಿಸುವೆವು. ಹಾಗೆ ಅವನು (ಶೈತಾನನು) ಅವನ ಸಂಗಡಿಗನಾಗಿರುವನು.

وَمَن يَعۡشُ عَن ذِكۡرِ ٱلرَّحۡمَٰنِ نُقَيِّضۡ لَهُۥ
شَيۡطَٰنٗا فَهُوَ لَهُۥ قَرِينٞ ٣٦

---

1 ಪ್ರವಾದಿಯ ನಿಯುಕ್ತಿಯು ಅಲ್ಲಾಹುವಿನ ಅನುಗ್ರಹವಾಗಿದೆ. ಅದು ಯಾರಿಗೆ ಸಿಗಬೇಕೆಂದು ನಿರ್ಧರಿಸಬೇಕಾದುದು ಅವರಲ್ಲ.

37. ಖಂಡಿತವಾಗಿಯೂ ಅವರು (ಸೈತಾನರು) ಅವರನ್ನು ಸನ್ಮಾರ್ಗದಿಂದ ತಡೆಯುವರು. ತಾವು ಸನ್ಮಾರ್ಗ ಪಡೆದವರೆಂದೇ ಅವರು ಭಾವಿಸಿಕೊಳ್ಳುವರು.

وَإِنَّهُمۡ لَيَصُدُّونَهُمۡ عَنِ ٱلسَّبِيلِ وَيَحۡسَبُونَ أَنَّهُم مُّهۡتَدُونَ ٣٧

38. ಕೊನೆಗೆ ನಮ್ಮ ಬಳಿಗೆ ತಲುಪುವಾಗ (ತನ್ನ ಸಂಗಡಿಗನಾದ ಸೈತಾನನೊಂದಿಗೆ) ಅವನು ಹೇಳುವನು: 'ನನ್ನ ಮತ್ತು ನಿನ್ನ ಮಧ್ಯೆ ಉದಯಾಸ್ತಮಾನ ಸ್ಥಳಗಳ ಅಂತರವಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!' ಆ ಸಂಗಡಿಗನು ಅದೆಷ್ಟು ನಿಕೃಷ್ಟನು!

حَتَّىٰٓ إِذَا جَآءَنَا قَالَ يَٰلَيۡتَ بَيۡنِي وَبَيۡنَكَ بُعۡدَ ٱلۡمَشۡرِقَيۡنِ فَبِئۡسَ ٱلۡقَرِينُ ٣٨

39. ನೀವು ಅಕ್ರಮವೆಸಗಿರುವಾಗ ಶಿಕ್ಷೆಯಲ್ಲಿ ನೀವು ಪಾಲುದಾರರಾಗಿರುವಿರಿ ಎಂಬ ವಾಸ್ತವಿಕತೆ ಇಂದು ನಿಮಗೆ ಕಿಂಚಿತ್ತೂ ಪ್ರಯೋಜನವನ್ನು ನೀಡದು.

وَلَن يَنفَعَكُمُ ٱلۡيَوۡمَ إِذ ظَّلَمۡتُمۡ أَنَّكُمۡ فِي ٱلۡعَذَابِ مُشۡتَرِكُونَ ٣٩

40. (ಓ ಪ್ರವಾದಿಯವರೇ!) ಕಿವುಡರನ್ನು ಆಲಿಸುವಂತೆ ಮಾಡಲು, ಕುರುಡರಿಗೆ ಮತ್ತು ಸ್ಪಷ್ಟವಾದ ದುರ್ಮಾರ್ಗದಲ್ಲಿರುವವರಿಗೆ ದಾರಿ ತೋರಿಸಿಕೊಡಲು ತಮಗೆ ಸಾಧ್ಯವೇ?

أَفَأَنتَ تُسۡمِعُ ٱلصُّمَّ أَوۡ تَهۡدِي ٱلۡعُمۡيَ وَمَن كَانَ فِي ضَلَٰلٖ مُّبِينٖ ٤٠

41. ನಾವು ತಮ್ಮನ್ನು ಕೊಂಡೊಯ್ಯುವುದಾದರೆ, ಖಂಡಿತವಾಗಿಯೂ ನಾವು ಅವರ ವಿರುದ್ಧ ಶಿಕ್ಷಾಕ್ರಮ ಕೈಗೊಳ್ಳುವೆವು.

فَإِمَّا نَذۡهَبَنَّ بِكَ فَإِنَّا مِنۡهُم مُّنتَقِمُونَ ٤١

42. ಅಥವಾ ಅವರಿಗೆ ನಾವು ಮುನ್ನೆಚ್ಚರಿಕೆ ನೀಡಿದ್ದನ್ನು (ಶಿಕ್ಷೆಯನ್ನು) ನಾವು ತಮಗೆ ತೋರಿಸಿಕೊಡುವುದಾದರೂ ನಾವು ಅವರ ವಿಷಯದಲ್ಲಿ ಸಾಮರ್ಥ್ಯವುಳ್ಳವರೇ ಆಗಿರುವೆವು.

أَوۡ نُرِيَنَّكَ ٱلَّذِي وَعَدۡنَٰهُمۡ فَإِنَّا عَلَيۡهِم مُّقۡتَدِرُونَ ٤٢

43. ಆದ್ದರಿಂದ ತಮಗೆ ದಿವ್ಯಸಂದೇಶವಾಗಿ ನೀಡಲಾಗಿರುವುದನ್ನು ತಾವು ಬಿಗಿಯಾಗಿ ಹಿಡಿದುಕೊಳ್ಳಿರಿ. ಖಂಡಿತವಾಗಿಯೂ ತಾವು ನೇರ ಹಾದಿಯಲ್ಲಿರುವಿರಿ.

فَٱسۡتَمۡسِكۡ بِٱلَّذِيٓ أُوحِيَ إِلَيۡكَۖ إِنَّكَ عَلَىٰ صِرَٰطٖ مُّسۡتَقِيمٖ ٤٣

44. ಖಂಡಿತವಾಗಿಯೂ ಇದು ತಮಗೆ ಮತ್ತು ತಮ್ಮ ಜನತೆಗಿರುವ ಒಂದು ಉಪದೇಶವಾಗಿದೆ. ನಿಮ್ಮನ್ನು ತರುವಾಯ ಪ್ರಶ್ನಿಸಲಾಗುವುದು.

وَإِنَّهُۥ لَذِكۡرٞ لَّكَ وَلِقَوۡمِكَۖ وَسَوۡفَ تُسۡـَٔلُونَ ٤٤

45. 'ಪರಮ ದಯಾಮಯನ ಹೊರತು ಆರಾಧಿಸಲಾಗುವಂತಹ ಯಾವುದಾದರೂ ಆರಾಧ್ಯರನ್ನು ನಾವು ಮಾಡಿಕೊಂಡಿರುವೆವೇ?' ಎಂದು ತಮಗಿಂತ ಮೊದಲು ನಾವು ಕಳುಹಿಸಿರುವ ನಮ್ಮ ಸಂದೇಶವಾಹಕರೊಂದಿಗೆ ಕೇಳಿ ನೋಡಿರಿ.(1)

وَسۡـَٔلۡ مَنۡ أَرۡسَلۡنَا مِن قَبۡلِكَ مِن رُّسُلِنَآ أَجَعَلۡنَا مِن دُونِ ٱلرَّحۡمَٰنِ ءَالِهَةٗ يُعۡبَدُونَ ٤٥

46. ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳೊಂದಿಗೆ ಫಿರ್‌ಔನ್ ಮತ್ತು ಅವನ ಪ್ರಮುಖರೆಡೆಗೆ ಕಳುಹಿಸಿದೆವು. ಆತ (ಮೂಸಾ) ಹೇಳಿದರು: 'ಖಂಡಿತವಾಗಿಯೂ ನಾನು ಸರ್ವಲೋಕಗಳ ರಬ್‌ನ ಸಂದೇಶವಾಹಕನಾಗಿರುವೆನು'.

وَلَقَدۡ أَرۡسَلۡنَا مُوسَىٰ بِـَٔايَٰتِنَآ إِلَىٰ فِرۡعَوۡنَ وَمَلَإِيْهِۦ فَقَالَ إِنِّي رَسُولُ رَبِّ ٱلۡعَٰلَمِينَ ٤٦

47. ತರುವಾಯ ಆತ ನಮ್ಮ ದೃಷ್ಟಾಂತಗಳೊಂದಿಗೆ ಅವರ ಬಳಿಗೆ ಬಂದಾಗ ಅಗೋ! ಅವರು ಅವುಗಳನ್ನು ಗೇಲಿಮಾಡಿ ನಗುತ್ತಿರುವರು.

فَلَمَّا جَآءَهُم بِـَٔايَٰتِنَآ إِذَا هُم مِّنۡهَا يَضۡحَكُونَ ٤٧

48. ನಾವು ಅವರಿಗೆ ಯಾವುದೇ ದೃಷ್ಟಾಂತವನ್ನು ತೋರಿಸಿಕೊಡುತ್ತಿದ್ದುದು ಒಂದು ಅದರ ಜೋಡಿಗಿಂತ ಹಿರಿದಾಗಿರುವ(2) ಇನ್ನೊಂದು ಎಂಬ ವಿಧದಲ್ಲೇ ಆಗಿದೆ. ಅವರು (ಪಶ್ಚಾತ್ತಾಪಪಟ್ಟು) ಮರಳುವ ಸಲುವಾಗಿ ನಾವು ಅವರನ್ನು ಶಿಕ್ಷೆಗಳ ಮೂಲಕ ಹಿಡಿದೆವು.

وَمَا نُرِيهِم مِّنۡ ءَايَةٍ إِلَّا هِيَ أَكۡبَرُ مِنۡ أُخۡتِهَاۖ وَأَخَذۡنَٰهُم بِٱلۡعَذَابِ لَعَلَّهُمۡ يَرۡجِعُونَ ٤٨

49. ಅವರು ಹೇಳಿದರು: 'ಓ ಮಾಂತ್ರಿಕನೇ! ತಮ್ಮೊಂದಿಗೆ ತಮ್ಮ ರಬ್ ಕರಾರು ಮಾಡಿಕೊಂಡಿರುವ ಪ್ರಕಾರ ತಾವು ನಮಗಾಗಿ

وَقَالُواْ يَٰٓأَيُّهَ ٱلسَّاحِرُ ٱدۡعُ لَنَا رَبَّكَ بِمَا عَهِدَ عِندَكَ إِنَّنَا لَمُهۡتَدُونَ ٤٩

---

1 ಕುರ್‌ಆನ್ ವ್ಯಾಖ್ಯಾನಕಾರರ ಪೈಕಿ ಹೆಚ್ಚಿನವರ ಅಭಿಪ್ರಾಯ ಪ್ರಕಾರ ಪೂರ್ವ ಪ್ರವಾದಿಗಳೊಂದಿಗೆ ಕೇಳಿ ನೋಡಿರಿ ಎಂಬ ವಾಕ್ಯವು ಒಂದು ಆಲಂಕಾರಿಕ ಪ್ರಯೋಗವಾಗಿದೆಯೇ ಹೊರತು ಭಾಷಾರ್ಥದಲ್ಲಿರುವ ಆಜ್ಞೆಯಲ್ಲ. ಪೂರ್ವಪ್ರವಾದಿಗಳಲ್ಲಿ ವಿಶ್ವಾಸವಿಡುವ ಸಮುದಾಯಗಳೊಂದಿಗೆ ವಿಶೇಷತಃ ಅವರ ವಿದ್ವಾಂಸರೊಂದಿಗೆ ಕೇಳಿರಿ ಎಂದಾಗಿದೆ. ಇದರ ತಾತ್ಪರ್ಯ ಯಾವುದೇ ಪ್ರವಾದಿಯಾಗಲಿ ಅಥವಾ ಗ್ರಂಥವಾಗಲಿ ಬಹುದೇವಾರಾಧನೆಯನ್ನು ಕಲಿಸಿಕೊಟ್ಟಿಲ್ಲ ಎಂಬುದನ್ನು ಈ ಸೂಕ್ತಿಯೂ ಸಮರ್ಥಿಸುತ್ತದೆ.

2 ದೃಷ್ಟಾಂತಗಳನ್ನು ಒಂದಕ್ಕಿಂತ ಮತ್ತೊಂದು ಮಿಗಿಲು ಎಂಬ ರೀತಿಯಲ್ಲಿ ಅವರಿಗೆ ತೋರಿಸಿಕೊಡಲಾಯಿತು ಎಂದರ್ಥ.

ಅವನಲ್ಲಿ ಪ್ರಾರ್ಥಿಸಿರಿ!. ಖಂಡಿತವಾಗಿಯೂ ನಾವು ಸನ್ಮಾರ್ಗವನ್ನು ಪಡೆಯುವವರಾಗುವೆವು'.

فَلَمَّا كَشَفْنَا عَنْهُمُ ٱلْعَذَابَ إِذَا هُمْ يَنكُثُونَ ﴿٥٠﴾

50. ತರುವಾಯ ನಾವು ಅವರಿಂದ ಶಿಕ್ಷೆಯನ್ನು ನಿವಾರಿಸಿದಾಗ ಅಗೋ! ಅವರು ಮಾತು ತಪ್ಪುತ್ತಿರುವರು.

وَنَادَىٰ فِرْعَوْنُ فِى قَوْمِهِۦ قَالَ يَـٰقَوْمِ أَلَيْسَ لِى مُلْكُ مِصْرَ وَهَـٰذِهِ ٱلْأَنْهَـٰرُ تَجْرِى مِن تَحْتِىٓ ۖ أَفَلَا تُبْصِرُونَ ﴿٥١﴾

51. ಫಿರ್‌ಔನ್ ತನ್ನ ಜನರೊಂದಿಗೆ ಘೋಷಿಸಿದನು: ಅವನು ಹೇಳಿದನು: 'ಓ ನನ್ನ ಜನರೇ! ಈಜಿಪ್ಟಿನ ಆಧಿಪತ್ಯವಿರುವುದು ನನಗಲ್ಲವೇ? ಈ ನದಿಗಳು ಹರಿಯುತ್ತಿರುವುದು ನನ್ನ ತಳಭಾಗದಿಂದಾಗಿದೆ. ಆದರೂ ನೀವು (ವಿಷಯಗಳನ್ನು) ಕಂಡು ತಿಳಿಯಲಾರಿರೇ?

أَمْ أَنَا۠ خَيْرٌ مِّنْ هَـٰذَا ٱلَّذِى هُوَ مَهِينٌ وَلَا يَكَادُ يُبِينُ ﴿٥٢﴾

52. ಅಥವಾ, ಅಧಮನೂ, ಸ್ಪಷ್ಟವಾಗಿ ಮಾತನಾಡಲಾಗದವನೂ ಆಗಿರುವ ಈತನಿಗಿಂತ ಉತ್ತಮನು ನಾನೇ ಆಗಿರುವೆನು.[1]

فَلَوْلَآ أُلْقِىَ عَلَيْهِ أَسْوِرَةٌ مِّن ذَهَبٍ أَوْ جَآءَ مَعَهُ ٱلْمَلَـٰٓئِكَةُ مُقْتَرِنِينَ ﴿٥٣﴾

53. ಈತನಿಗೆ ಸ್ವರ್ಣ ಕಡಗಗಳನ್ನು ತೊಡಿಸಲಾಗಿಲ್ಲವೇಕೆ? ಅಥವಾ ಈತನೊಂದಿಗೆ ಮಲಕ್‌ಗಳು ಸಹಾಯಕರಾಗಿ ಬಂದಿಲ್ಲವೇಕೆ?'[2]

فَٱسْتَخَفَّ قَوْمَهُۥ فَأَطَاعُوهُ ۚ إِنَّهُمْ كَانُوا۟ قَوْمًا فَـٰسِقِينَ ﴿٥٤﴾

54. ಹಾಗೆಯೇ ಫಿರ್‌ಔನ್ ತನ್ನ ಜನರನ್ನು ಮರುಳುಗೊಳಿಸಿದನು. ಅವರು ಅವನನ್ನು ಅನುಸರಿಸಿದರು. ಖಂಡಿತವಾಗಿಯೂ ಅವರು ಧಿಕ್ಕಾರಿಗಳಾದ ಒಂದು ಜನತೆಯಾಗಿದ್ದರು.

فَلَمَّآ ءَاسَفُونَا ٱنتَقَمْنَا مِنْهُمْ فَأَغْرَقْنَـٰهُمْ أَجْمَعِينَ ﴿٥٥﴾

55. ತರುವಾಯ ಅವರು ನಮ್ಮನ್ನು ಕೆರಳಿಸಿದಾಗ ನಾವು ಅವರನ್ನು ಶಿಕ್ಷಿಸಿದೆವು. ನಾವು ಅವರೆಲ್ಲರನ್ನು ಮುಳುಗಿಸಿದೆವು.

فَجَعَلْنَـٰهُمْ سَلَفًا وَمَثَلًا لِّلْـَٔاخِرِينَ ﴿٥٦﴾

56. ತರುವಾಯ ನಾವು ಅವರನ್ನು ಒಂದು ಪೂರ್ವ ಮಾದರಿಯನ್ನಾಗಿ ಮತ್ತು ನಂತರದವರಿಗಿರುವ ಒಂದು ಉದಾಹರಣೆಯನ್ನಾಗಿ ಮಾಡಿದೆವು.

---

1 ಮೂಸಾ(عَلَيْهِ السَّلَامُ) ರವರಿಗೆ ನಿರರ್ಗಳವಾಗಿ ಮಾತನಾಡಲು ಆಗುತ್ತಿರಲಿಲ್ಲ. ಫಿರ್‌ಔನ್ ಅದನ್ನು ಸಹ ಒಂದು ನ್ಯೂನತೆಯಾಗಿ ಎತ್ತಿತೋರಿಸುತ್ತಿದ್ದಾನೆ.

2 ಓರ್ವ ಸಂದೇಶವಾಹಕನು ಆಭರಣಗಳನ್ನು ಧರಿಸಿ ಮಲಕ್‌ಗಳನ್ನು ಅಂಗರಕ್ಷಕರನ್ನಾಗಿ ಮಾಡಿಕೊಂಡು ಬರಬೇಕು ಎಂಬುದು ಫಿರ್‌ಔನ್‌ನ ವಾದವಾಗಿತ್ತು.

57. ಮರ್ಯಮ್‌ರ ಪುತ್ರನನ್ನು ಒಂದು ಉದಾಹರಣೆಯಾಗಿ ತೋರಿಸಲಾದಾಗ ಅಗೋ! ತಮ್ಮ ಜನತೆಯು ಆ ವಿಚಾರವಾಗಿ ಅಟ್ಟಹಾಸಗೈಯ್ಯುತ್ತಿರುವರು!

۞ وَلَمَّا ضُرِبَ ٱبۡنُ مَرۡيَمَ مَثَلًا إِذَا قَوۡمُكَ مِنۡهُ يَصِدُّونَ ٥٧

58. 'ಶ್ರೇಷ್ಠರಾಗಿರುವುದು ನಮ್ಮ ಆರಾಧ್ಯರೋ ಅಥವಾ ಆತನೋ?' ಎಂದು ಅವರು ಹೇಳಿದರು. ಅವರು ತಮ್ಮೊಂದಿಗೆ ಇದನ್ನು ಹೇಳಿರುವುದು ಒಂದು ತರ್ಕಕ್ಕಾಗಿ ಮಾತ್ರವಾಗಿತ್ತು.[1] ಅಲ್ಲ, ಅವರು ಹಠಮಾರಿಗಳಾದ ಒಂದು ಜನತೆಯಾಗಿರುವರು.

وَقَالُوٓاْ ءَأَٰلِهَتُنَا خَيۡرٌ أَمۡ هُوَۚ مَا ضَرَبُوهُ لَكَ إِلَّا جَدَلَۢاۚ بَلۡ هُمۡ قَوۡمٌ خَصِمُونَ ٥٨

59. ಆತ ಒಬ್ಬ ದಾಸರು ಮಾತ್ರವಾಗಿರುವರು. ಆತನಿಗೆ ನಾವು ಅನುಗ್ರಹವನ್ನು ನೀಡಿದೆವು ಮತ್ತು ಆತನನ್ನು ಇಸ್ರಾಈಲ್ ಸಂತತಿಗಳಿಗೆ ಒಂದು ಮಾದರಿಯನ್ನಾಗಿ ಮಾಡಿದೆವು.

إِنۡ هُوَ إِلَّا عَبۡدٌ أَنۡعَمۡنَا عَلَيۡهِ وَجَعَلۡنَٰهُ مَثَلًا لِّبَنِيٓ إِسۡرَٰٓءِيلَ ٥٩

60. ನಾವು ಇಚ್ಛಿಸುತ್ತಿದ್ದರೆ (ನಿಮ್ಮ) ಉತ್ತರಾಧಿಕಾರಿಗಳಾಗಿ ಭೂಮಿಯಲ್ಲಿ ನಿಮ್ಮಿಂದಲೇ ಮಲಕ್‌ಗಳನ್ನು ಉಂಟುಮಾಡುತ್ತಿದ್ದೆವು.[2]

وَلَوۡ نَشَآءُ لَجَعَلۡنَا مِنكُم مَّلَٰٓئِكَةً فِي ٱلۡأَرۡضِ يَخۡلُفُونَ ٦٠

61. ಖಂಡಿತವಾಗಿಯೂ ಆತ ಅಂತ್ಯಘಳಿಗೆಗಿರುವ ಒಂದು ಸಂಕೇತವಾಗಿರುವರು.[3] ಆದ್ದರಿಂದ ನೀವು ಅದರ (ಅಂತ್ಯಘಳಿಗೆಯ) ಬಗ್ಗೆ

وَإِنَّهُۥ لَعِلۡمٌ لِّلسَّاعَةِ فَلَا تَمۡتَرُنَّ بِهَا وَٱتَّبِعُونِۚ هَٰذَا صِرَٰطٌ مُّسۡتَقِيمٌ ٦١

1 'ಖಂಡಿತವಾಗಿಯೂ ನೀವು ಮತ್ತು ಅಲ್ಲಾಹುವಿನ ಹೊರತು ನೀವು ಆರಾಧಿಸುವವುಗಳು ನರಕಾಗ್ನಿಯ ಇಂಧನವಾಗುವಿರಿ' (21/98) ಎಂಬ ಸೂಕ್ತಿಯ ಪ್ರಕಾರ ನಮ್ಮ ಆರಾಧ್ಯರು ಮಾತ್ರವಲ್ಲ, ಕ್ರೈಸ್ತರು ಆರಾಧಿಸುತ್ತಿರುವ ಈಸಾ(عَلَيْهِ السَّلَامُ) ಕೂಡ ನರಕಾಗ್ನಿಗೆ ಇಂಧನವಾಗಲಿದ್ದಾರೆ ಎಂದು ಬಹುದೇವಾರಾಧಕರು ತರ್ಕಿಸುತ್ತಿದ್ದರು. 21:101ರಲ್ಲಿ ಈ ಕುತರ್ಕಕ್ಕೆ ಉತ್ತರವಿದೆ. ಮಲಕ್‌ಗಳಾಗಲಿ, ಪ್ರವಾದಿಗಳಾಗಲಿ, ಸಜ್ಜನರಾಗಲಿ ತಾವು ಆರಾಧಿಸಲಾಗುವುದನ್ನು ಇಷ್ಟಪಡದ ಕಾರಣದಿಂದ ಖಂಡಿತವಾಗಿಯೂ ಅವರು ನರಕದ ಇಂಧನವಾಗಲಾರರು ಎಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

2 'ಭೂಮಿಯಲ್ಲಿ ನಿಮ್ಮ ಬದಲಿಗೆ ಮಲಕ್‌ಗಳನ್ನು ಮಾಡುತ್ತಿದ್ದೆವು' ಎಂದೂ ಅರ್ಥವಿದೆ. ತಂದೆಯಿಲ್ಲದೆ ಹುಟ್ಟುವುದು ಆರಾಧ್ಯತೆಗೆ ಪುರಾವೆಯಲ್ಲ. ಹೇಗೆ ಬೇಕಾದರೂ ಸೃಷ್ಟಿಸಲು ಅಲ್ಲಾಹುವಿಗೆ ಸಾಮರ್ಥ್ಯವಿದೆ. ಒಂದು ಸೃಷ್ಟಿಯು ಅಸಾಮಾನ್ಯವಾಗಿರುವುದು ಅದನ್ನು ಆರಾಧ್ಯವಸ್ತುವನ್ನಾಗಿ ಮಾಡಿಕೊಳ್ಳಲು ಉಪಾಧಿಯಾಗಲಾರದು. ಆರಾಧನೆಯು ಸೃಷ್ಟಿಕರ್ತನಿಗೆ ಮಾತ್ರವಿರುವುದಾಗಿದೆ.

3 ಅಂತ್ಯಕಾಲದ ಸಮೀಪದಲ್ಲಿ ಈಸಾ(عَلَيْهِ السَّلَامُ) ರವರು ಇಳಿದುಬರುವರು ಎಂದು ಅನೇಕ ಹದೀಸ್‌ಗಳಲ್ಲಿ ಉಲ್ಲೇಖಿಸಲಾಗಿದೆ. ಈಸಾ(عَلَيْهِ السَّلَامُ) ರವರ ಪುನರಾಗಮನವು ಅಂತ್ಯಕಾಲವು ಸನ್ನಿಹಿತವಾಗಿದೆ ಎಂಬುದಕ್ಕೆ ಸೂಚನೆಯಾಗಿದೆಯೆಂದು ಹೆಚ್ಚಿನ ವ್ಯಾಖ್ಯಾನಕಾರರು ಪ್ರಸ್ತುತ ಸೂಕ್ತಿಗೆ ಅರ್ಥನೀಡಿದ್ದಾರೆ.

ಸಂದೇಹಪಡದಿರಿ. ನನ್ನನ್ನು ಅನುಸರಿಸಿರಿ. ನೇರವಾದ ಹಾದಿಯು ಇದೇ ಆಗಿದೆ.

وَلَا يَصُدَّنَّكُمُ ٱلشَّيْطَٰنُ ۖ إِنَّهُۥ لَكُمْ عَدُوٌّ مُّبِينٌ ﴿٦٢﴾

**62.** ಶೈತಾನನು ನಿಮ್ಮನ್ನು (ಅದರಿಂದ) ತಡೆಯದಿರಲಿ. ಖಂಡಿತವಾಗಿಯೂ ಅವನು ನಿಮ್ಮ ಬಹಿರಂಗ ಶತ್ರುವಾಗಿರುವನು.

وَلَمَّا جَآءَ عِيسَىٰ بِٱلْبَيِّنَٰتِ قَالَ قَدْ جِئْتُكُم بِٱلْحِكْمَةِ وَلِأُبَيِّنَ لَكُم بَعْضَ ٱلَّذِى تَخْتَلِفُونَ فِيهِ ۖ فَٱتَّقُوا۟ ٱللَّهَ وَأَطِيعُونِ ﴿٦٣﴾

**63.** ಈಸಾ ಸ್ಪಷ್ಟವಾದ ಪುರಾವೆಗಳೊಂದಿಗೆ ಬಂದು ಹೇಳಿದರು: ‘ಖಂಡಿತವಾಗಿಯೂ ನಾನು ನಿಮ್ಮ ಬಳಿಗೆ ಜ್ಞಾನದೊಂದಿಗೇ ಬಂದಿರುವೆನು; ನೀವು ಭಿನ್ನಾಭಿಪ್ರಾಯ ಹೊಂದುತ್ತಿರುವ ವಿಷಯಗಳಲ್ಲಿ ಕೆಲವನ್ನು ನಿಮಗೆ ವಿವರಿಸಿಕೊಡುವ ಸಲುವಾಗಿ. ಆದ್ದರಿಂದ ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

إِنَّ ٱللَّهَ هُوَ رَبِّى وَرَبُّكُمْ فَٱعْبُدُوهُ ۚ هَٰذَا صِرَٰطٌ مُّسْتَقِيمٌ ﴿٦٤﴾

**64.** ಖಂಡಿತವಾಗಿಯೂ ಅಲ್ಲಾಹು ನನ್ನ ರಬ್ ಮತ್ತು ನಿಮ್ಮ ರಬ್ ಸಹ ಆಗಿರುವನು. ಆದ್ದರಿಂದ ಅವನನ್ನು ಆರಾಧಿಸಿರಿ. ನೇರವಾದ ಮಾರ್ಗವು ಇದೇ ಆಗಿದೆ’.

فَٱخْتَلَفَ ٱلْأَحْزَابُ مِنۢ بَيْنِهِمْ ۖ فَوَيْلٌ لِّلَّذِينَ ظَلَمُوا۟ مِنْ عَذَابِ يَوْمٍ أَلِيمٍ ﴿٦٥﴾

**65.** ತರುವಾಯ ಅವರಲ್ಲಿದ್ದ ಗುಂಪುಗಳು ಭಿನ್ನರಾದರು. ಆದ್ದರಿಂದ ಅಕ್ರಮವೆಸಗಿದವರಿಗೆ ಯಾತನಾಮಯ ದಿನವೊಂದರ ಶಿಕ್ಷೆಯಿಂದಾಗಿ ವಿನಾಶವಿದೆ!.

هَلْ يَنظُرُونَ إِلَّا ٱلسَّاعَةَ أَن تَأْتِيَهُم بَغْتَةً وَهُمْ لَا يَشْعُرُونَ ﴿٦٦﴾

**66.** ಅವರು ನಿರೀಕ್ಷಿಸದ ರೀತಿಯಲ್ಲಿ ಹಠಾತ್ತನೆ ಆ ಅಂತ್ಯಘಳಿಗೆಯು[1] ಅವರ ಬಳಿಗೆ ಬರುವುದನ್ನೇ ಹೊರತು ಅವರು ಇನ್ನೇನನ್ನು ಕಾಯುತ್ತಿರುವರು?

ٱلْأَخِلَّآءُ يَوْمَئِذٍۭ بَعْضُهُمْ لِبَعْضٍ عَدُوٌّ إِلَّا ٱلْمُتَّقِينَ ﴿٦٧﴾

**67.** ಆ ದಿನದಂದು ಮಿತ್ರರು ಪರಸ್ಪರ ಶತ್ರುಗಳಾಗುವರು; ಭಯಭಕ್ತಿ ಪಾಲಿಸುವವರ ಹೊರತು.

يَٰعِبَادِ لَا خَوْفٌ عَلَيْكُمُ ٱلْيَوْمَ وَلَآ أَنتُمْ تَحْزَنُونَ ﴿٦٨﴾

**68.** ಓ ನನ್ನ ದಾಸರೇ! ಇಂದು ನಿಮಗೆ ಯಾವುದೇ ಭಯವೂ ಇರದು. ನೀವು ದುಃಖಿಸಬೇಕಾಗಿಯೂ ಬರದು.

---

1 ಅಂತ್ಯದಿನ ಅಥವಾ ವಿಚಾರಣೆ ಮಾಡಲಾಗುವ ಸಂದರ್ಭ.

69. ನಮ್ಮ ದೃಷ್ಟಾಂತಗಳಲ್ಲಿ ವಿಶ್ವಾಸವಿಟ್ಟವರೂ, ವಿಧೇಯರಾಗಿ ಜೀವಿಸಿದವರೂ (ನೀವಾಗಿರುವಿರಿ).

ٱلَّذِينَ ءَامَنُواْ بِـَٔايَـٰتِنَا وَكَانُواْ مُسۡلِمِينَ ٦٩

70. ನೀವು ಮತ್ತು ನಿಮ್ಮ ಸಂಗಾತಿಗಳು ಸಂತೋಷದಿಂದ ಸ್ವರ್ಗವನ್ನು ಪ್ರವೇಶಿಸಿರಿ.

ٱدۡخُلُواْ ٱلۡجَنَّةَ أَنتُمۡ وَأَزۡوَٰجُكُمۡ تُحۡبَرُونَ ٧٠

71. ಸ್ವರ್ಣ ಬಟ್ಟಲುಗಳನ್ನು ಮತ್ತು ಲೋಟಗಳನ್ನು ಅವರ ಸುತ್ತಲೂ ತರಲಾಗುವುದು. ಮನಸ್ಸುಗಳು ಬಯಸುವ ಮತ್ತು ಕಣ್ಣುಗಳಿಗೆ ಆನಂದ ನೀಡುವ ವಸ್ತುಗಳು ಅಲ್ಲಿರುವುವು. ನೀವು ಅದರಲ್ಲಿ ಶಾಶ್ವತವಾಗಿ ವಾಸಿಸುವಿರಿ.

يُطَافُ عَلَيۡهِم بِصِحَافٖ مِّن ذَهَبٖ وَأَكۡوَابٖۖ وَفِيهَا مَا تَشۡتَهِيهِ ٱلۡأَنفُسُ وَتَلَذُّ ٱلۡأَعۡيُنُۖ وَأَنتُمۡ فِيهَا خَٰلِدُونَ ٧١

72. ಆ ಸ್ವರ್ಗವು ನೀವು ಮಾಡಿರುವುದರ (ಕರ್ಮಗಳ) ಫಲವಾಗಿ ನಿಮಗೆ ವಾರೀಸಾಗಿ ನೀಡಲಾದುದಾಗಿದೆ.

وَتِلۡكَ ٱلۡجَنَّةُ ٱلَّتِيٓ أُورِثۡتُمُوهَا بِمَا كُنتُمۡ تَعۡمَلُونَ ٧٢

73. ಅಲ್ಲಿ ನಿಮಗೆ ಹೇರಳವಾಗಿರುವ ಫಲಗಳಿರುವುವು. ಅದರಿಂದ ನೀವು ತಿನ್ನುವಿರಿ.

لَكُمۡ فِيهَا فَٰكِهَةٞ كَثِيرَةٞ مِّنۡهَا تَأۡكُلُونَ ٧٣

74. ಖಂಡಿತವಾಗಿಯೂ ಅಪರಾಧಿಗಳು ನರಕಾಗ್ನಿಯ ಶಿಕ್ಷೆಯಲ್ಲಿ ಶಾಶ್ವತವಾಗಿ ವಾಸಿಸುವರು.

إِنَّ ٱلۡمُجۡرِمِينَ فِي عَذَابِ جَهَنَّمَ خَٰلِدُونَ ٧٤

75. ಅದನ್ನು ಅವರಿಗೆ ಹಗುರಗೊಳಿಸಿ ಕೊಡಲಾಗದು. ಅವರು ಅದರಲ್ಲಿ ನಿರಾಶರಾಗಿರುವರು.

لَا يُفَتَّرُ عَنۡهُمۡ وَهُمۡ فِيهِ مُبۡلِسُونَ ٧٥

76. ನಾವು ಅವರೊಂದಿಗೆ ಅಕ್ರಮವೆಸಗಿಲ್ಲ. ಆದರೆ ಸ್ವತಃ ಅವರೇ ಅಕ್ರಮಿಗಳಾಗಿರುವರು.

وَمَا ظَلَمۡنَٰهُمۡ وَلَٰكِن كَانُواْ هُمُ ٱلظَّـٰلِمِينَ ٧٦

77. ಅವರು ಕೂಗಿ ಹೇಳುವರು: 'ಓ ಮಾಲಿಕ್![1] ತಮ್ಮ ರಬ್ ನಮ್ಮ ಮೇಲೆ (ಮರಣವನ್ನು) ವಿಧಿಸಲಿ!' ಅವರು (ಮಾಲಿಕ್) ಹೇಳುವರು: 'ನೀವು (ಇಲ್ಲಿ) ತಂಗಬೇಕಾದವರೇ ಆಗಿರುವಿರಿ'.

وَنَادَوۡاْ يَٰمَٰلِكُ لِيَقۡضِ عَلَيۡنَا رَبُّكَۖ قَالَ إِنَّكُم مَّٰكِثُونَ ٧٧

1 ಮಾಲಿಕ್ ನರಕದ ಮೇಲ್ವಿಚಾರಣೆಯನ್ನು ವಹಿಸಿಕೊಡಲಾದ ಮಲಕ್ ಆಗಿರುವರು.

**78.** (ಅಲ್ಲಾಹು ಹೇಳುವನು): ಖಂಡಿತವಾಗಿಯೂ ನಾವು ಸತ್ಯವನ್ನು ನಿಮ್ಮ ಬಳಿಗೆ ತಂದಿದ್ದೆವು. ಆದರೆ ನಿಮ್ಮ ಪೈಕಿ ಹೆಚ್ಚಿನವರೂ ಸತ್ಯವನ್ನು ದ್ವೇಷಿಸುವವರಾಗಿರುವರು.

لَقَدۡ جِئۡنَٰكُم بِٱلۡحَقِّ وَلَٰكِنَّ أَكۡثَرَكُمۡ لِلۡحَقِّ كَٰرِهُونَ ٧٨

**79.** ಅಥವಾ ಅವರು (ನಮ್ಮ ವಿರುದ್ಧ) ಯಾವುದಾದರೂ ವಿಷಯವನ್ನು ತೀರ್ಮಾನಿಸಿರುವರೇ? ಹಾಗಾದರೆ ತೀರ್ಮಾನ ಮಾಡುವವರು ನಾವೇ ಆಗಿರುವೆವು.

أَمۡ أَبۡرَمُوٓاْ أَمۡرٗا فَإِنَّا مُبۡرِمُونَ ٧٩

**80.** ಅಥವಾ ಅವರ ರಹಸ್ಯಗಳನ್ನು ಮತ್ತು ಗುಪ್ತ ಮಾತುಕತೆಗಳನ್ನು ನಾವು ಆಲಿಸುತ್ತಿಲ್ಲ ಎಂದು ಅವರು ಭಾವಿಸಿರುವರೇ? ಹೌದು! ನಮ್ಮ ದೂತರು (ಮಲಕ್‌ಗಳು) ಅವರ ಬಳಿ ದಾಖಲಿಸುತ್ತಿರುವರು.[1]

أَمۡ يَحۡسَبُونَ أَنَّا لَا نَسۡمَعُ سِرَّهُمۡ وَنَجۡوَىٰهُمۚ بَلَىٰ وَرُسُلُنَا لَدَيۡهِمۡ يَكۡتُبُونَ ٨٠

**81.** ತಾವು ಹೇಳಿರಿ: 'ಪರಮ ದಯಾಮಯನಿಗೆ ಸಂತತಿಯಿರುತ್ತಿದ್ದರೆ ಅದನ್ನು ಆರಾಧಿಸುವವರಲ್ಲಿ ಮೊದಲಿಗನು ನಾನಾಗಿರುವೆನು'.

قُلۡ إِن كَانَ لِلرَّحۡمَٰنِ وَلَدٞ فَأَنَا۠ أَوَّلُ ٱلۡعَٰبِدِينَ ٨١

**82.** ಆಕಾಶಗಳ ಮತ್ತು ಭೂಮಿಯ ರಬ್ ಮತ್ತು ಸಿಂಹಾಸನದ ರಬ್ ಅವರು ಸುಳ್ಳು ಸುಳ್ಳಾಗಿ ಆರೋಪಿಸುವುದರಿಂದೆಲ್ಲ ಪರಮಪಾವನನಾಗಿರುವನು.

سُبۡحَٰنَ رَبِّ ٱلسَّمَٰوَٰتِ وَٱلۡأَرۡضِ رَبِّ ٱلۡعَرۡشِ عَمَّا يَصِفُونَ ٨٢

**83.** ಆದ್ದರಿಂದ ತಾವು ಅವರನ್ನು ಬಿಟ್ಟುಬಿಡಿರಿ. ಅವರಿಗೆ ಎಚ್ಚರಿಕೆ ನೀಡಲಾಗುವ ಅವರ ಆ ದಿನವನ್ನು ಭೇಟಿಯಾಗುವವರೆಗೆ ಅವರು ಅಸಂಬದ್ಧಗಳನ್ನು ಹೇಳುತ್ತಲೂ ಆಟವಿನೋದಗಳಲ್ಲಿ ನಿರತರಾಗುತ್ತಲೂ ಇರಲಿ.

فَذَرۡهُمۡ يَخُوضُواْ وَيَلۡعَبُواْ حَتَّىٰ يُلَٰقُواْ يَوۡمَهُمُ ٱلَّذِي يُوعَدُونَ ٨٣

**84.** ಆಕಾಶದಲ್ಲಿರುವ ಆರಾಧ್ಯನು ಮತ್ತು ಭೂಮಿಯಲ್ಲಿರುವ ಆರಾಧ್ಯನು ಅವನೇ ಆಗಿರುವನು. ಅವನು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.

وَهُوَ ٱلَّذِي فِي ٱلسَّمَآءِ إِلَٰهٞ وَفِي ٱلۡأَرۡضِ إِلَٰهٞۚ وَهُوَ ٱلۡحَكِيمُ ٱلۡعَلِيمُ ٨٤

1 ಮನುಷ್ಯರ ಸರ್ವ ಕರ್ಮಗಳನ್ನೂ ಮಲಕ್‌ಗಳು ಅಲ್ಲಾಹುವಿನ ಆದೇಶ ಪ್ರಕಾರ ದಾಖಲಿಸುತ್ತಿರುವರು.

**85.** ಆಕಾಶಗಳ, ಭೂಮಿಯ ಮತ್ತು ಅವೆರಡರ ಮಧ್ಯೆಯಿರುವವುಗಳ ಆಧಿಪತ್ಯವು ಯಾರಿಗೆ ಸೇರಿದೆಯೋ ಅವನು ಅನುಗ್ರಹಪೂರ್ಣನಾಗಿರುವನು. ಅಂತ್ಯಘಳಿಗೆಯ ಜ್ಞಾನವು ಅವನ ಬಳಿ ಮಾತ್ರವಿದೆ. ನಿಮ್ಮನ್ನು ಅವನೆಡೆಗೇ ಮರಳಿಸಲಾಗುವುದು.

وَتَبَارَكَ ٱلَّذِى لَهُۥ مُلْكُ ٱلسَّمَٰوَٰتِ وَٱلْأَرْضِ وَمَا بَيْنَهُمَا وَعِندَهُۥ عِلْمُ ٱلسَّاعَةِ وَإِلَيْهِ تُرْجَعُونَ ﴿٨٥﴾

**86.** ಅವನ ಹೊರತು ಇವರು ಯಾರನ್ನು ಕರೆದು ಪ್ರಾರ್ಥಿಸುತ್ತಿರುವರೋ ಅವರು ಶಿಫಾರಸ್ಸನ್ನು ಒಡೆತನದಲ್ಲಿಟ್ಟುಕೊಂಡಿಲ್ಲ. ಅರಿತವರಾಗಿದ್ದೂ ಸತ್ಯಕ್ಕೆ ಸಾಕ್ಷ್ಯವಹಿಸಿದವರ ಹೊರತು.[1]

وَلَا يَمْلِكُ ٱلَّذِينَ يَدْعُونَ مِن دُونِهِ ٱلشَّفَٰعَةَ إِلَّا مَن شَهِدَ بِٱلْحَقِّ وَهُمْ يَعْلَمُونَ ﴿٨٦﴾

**87.** 'ಅವರನ್ನು ಸೃಷ್ಟಿಸಿದ್ದು ಯಾರು?' ಎಂದು ತಾವು ಅವರೊಂದಿಗೆ ಕೇಳಿದರೆ ಖಂಡಿತವಾಗಿಯೂ ಅವರು 'ಅಲ್ಲಾಹು' ಎನ್ನುವರು. ಆದರೂ ಅವರು ವ್ಯತಿಚಲನೆಗೊಳಗಾಗುತ್ತಿರುವುದು ಹೇಗೆ?

وَلَئِن سَأَلْتَهُم مَّنْ خَلَقَهُمْ لَيَقُولُنَّ ٱللَّهُ فَأَنَّىٰ يُؤْفَكُونَ ﴿٨٧﴾

**88.** 'ಓ ನನ್ನ ರಬ್! ಖಂಡಿತವಾಗಿಯೂ ಇವರು ವಿಶ್ವಾಸವಿಡದ ಒಂದು ಜನತೆಯಾಗಿರುವರು' ಎಂದು ಅವರು (ಪ್ರವಾದಿಯವರು) ಹೇಳುವುದನ್ನು (ಅಲ್ಲಾಹು ಅರಿತಿರುವನು).

وَقِيلِهِۦ يَٰرَبِّ إِنَّ هَٰٓؤُلَآءِ قَوْمٌ لَّا يُؤْمِنُونَ ﴿٨٨﴾

**89.** ಆದ್ದರಿಂದ ತಾವು ಅವರನ್ನು ಬಿಟ್ಟು ವಿಮುಖರಾಗಿರಿ. 'ಸಲಾಂ' ಎಂದು ಹೇಳಿರಿ. ತರುವಾಯ ಅವರು ಅರಿತುಕೊಳ್ಳುವರು.

فَٱصْفَحْ عَنْهُمْ وَقُلْ سَلَٰمٌ فَسَوْفَ يَعْلَمُونَ ﴿٨٩﴾

---

1 ಅಲ್ಲಾಹುವೇತರರೊಂದಿಗೆ ಪ್ರಾರ್ಥಿಸುವ ಹೆಚ್ಚಿನವರ ನಂಬಿಕೆಯು ಅವರು (ಮಿಥ್ಯಾರಾಧ್ಯರು) ಅಲ್ಲಾಹುವಿನ ಬಳಿ ಶಿಫಾರಸ್ಸು ಮಾಡಿ ತಮ್ಮ ಕಾರ್ಯವನ್ನು ಸಾಧಿಸಿಕೊಡುವರು ಎಂದಾಗಿರುತ್ತದೆ. ಆದರೆ ಅಂತಹ ಶಿಫಾರಸ್ಸು ಮಾಡುವ ಅಧಿಕಾರ ಯಾರಿಗೂ ಇಲ್ಲ. ಸತ್ಯಕ್ಕೆ ಸಾಕ್ಷ್ಯವಹಿಸಿದವರಿಗೆ ಶಿಫಾರಸ್ಸು ಮಾಡಲು ಅಲ್ಲಾಹು ಅನುವು ಮಾಡಿಕೊಡುತ್ತಾನೆ. ಆದರೆ ಅದಕ್ಕಾಗಿ ಅಲ್ಲಾಹುವಿನೊಂದಿಗೆ ಮಾತ್ರ ಪ್ರಾರ್ಥಿಸಬೇಕೆಂದು ಪ್ರಸ್ತುತ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

## ಅದ್ದುಖಾನ್ (ಹೊಗೆ)[1]

## سُورَةُ الدُّخَانِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 59

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-3.** ಹಾ–ಮೀಮ್. ಸುಸ್ಪಷ್ಟ ಗ್ರಂಥದ ಮೇಲಾಣೆ! ಖಂಡಿತವಾಗಿಯೂ ನಾವು ಇದನ್ನು ಒಂದು ಅನುಗ್ರಹೀತ ರಾತ್ರಿಯಲ್ಲಿ ಅವತೀರ್ಣಗೊಳಿಸಿದೆವು. ಖಂಡಿತವಾಗಿಯೂ ನಾವು ಮುನ್ನೆಚ್ಚರಿಕೆ ನೀಡುವವರಾಗಿರುವೆವು.

حمٓ ١ وَٱلۡكِتَٰبِ ٱلۡمُبِينِ ٢ إِنَّآ أَنزَلۡنَٰهُ
فِي لَيۡلَةٖ مُّبَٰرَكَةٍۚ إِنَّا كُنَّا مُنذِرِينَ ٣

**4.** ಆ ರಾತ್ರಿಯಲ್ಲಿ ಯುಕ್ತಿಪೂರ್ಣವಾದ ಪ್ರತಿಯೊಂದು ವಿಷಯವನ್ನೂ ಬೇರ್ಪಡಿಸಿ ವಿವರಿಸಲಾಗುವುದು.

فِيهَا يُفۡرَقُ كُلُّ أَمۡرٍ حَكِيمٍ ٤

**5.** ನಮ್ಮ ವತಿಯಿಂದಿರುವ ಆಜ್ಞೆ! ಖಂಡಿತವಾಗಿಯೂ ನಾವು (ಸಂದೇಶವಾಹಕರನ್ನು) ಕಳುಹಿಸುತ್ತಿರುವವರಾಗಿರುವೆವು.

أَمۡرٗا مِّنۡ عِندِنَآۚ إِنَّا كُنَّا مُرۡسِلِينَ ٥

**6.** ಅದು ತಮ್ಮ ರಬ್‌ನ ವತಿಯ ಒಂದು ಕರುಣೆಯಾಗಿದೆ. ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ, ಅರಿಯುವವನೂ ಆಗಿರುವನು.

رَحۡمَةٗ مِّن رَّبِّكَۚ إِنَّهُۥ هُوَ ٱلسَّمِيعُ
ٱلۡعَلِيمُ ٦

**7.** ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯೆಯಿರುವವುಗಳ ರಬ್. ನೀವು ದೃಢವಿಶ್ವಾಸವುಳ್ಳವರಾಗಿದ್ದರೆ.

رَبِّ ٱلسَّمَٰوَٰتِ وَٱلۡأَرۡضِ وَمَا بَيۡنَهُمَآۖ إِن
كُنتُم مُّوقِنِينَ ٧

**8.** ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಜೀವವನ್ನು ನೀಡುವನು ಮತ್ತು ಮರಣವನ್ನು ನೀಡುವನು. ಅವನು ನಿಮ್ಮ ರಬ್ ಮತ್ತು ನಿಮ್ಮ ಪೂರ್ವಿಕರ ರಬ್ಬಾಗಿರುವನು.

لَآ إِلَٰهَ إِلَّا هُوَ يُحۡيِۦ وَيُمِيتُۖ رَبُّكُمۡ
وَرَبُّ ءَابَآئِكُمُ ٱلۡأَوَّلِينَ ٨

1 10ನೇ ಸೂಕ್ತಿಯಲ್ಲಿ ಹೊಗೆಯ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

9. ಆದರೂ, ಅವರು ಸಂಶಯದಲ್ಲಿ ಆಡುತ್ತಿರುವರು.

بَلۡ هُمۡ فِي شَكّٖ يَلۡعَبُونَ ٩

10. ಆದ್ದರಿಂದ ಆಕಾಶವು ಸ್ಪಷ್ಟವಾದ ಒಂದು ಹೊಗೆಯೊಂದಿಗೆ ಬರುವ ದಿನವನ್ನು ಕಾಯುತ್ತಿರಿ.

فَٱرۡتَقِبۡ يَوۡمَ تَأۡتِي ٱلسَّمَآءُ بِدُخَانٖ مُّبِينٖ ١٠

11. ಅದು ಮನುಷ್ಯರನ್ನು ಆವರಿಸುವುದು. ಇದು ಒಂದು ಯಾತನಾಮಯವಾದ ಶಿಕ್ಷೆಯಾಗಿದೆ.[1]

يَغۡشَى ٱلنَّاسَۖ هَٰذَا عَذَابٌ أَلِيمٞ ١١

12. (ಅವರು ಹೇಳುವರು): 'ಓ ನಮ್ಮ ರಬ್! ನಮ್ಮಿಂದ ಈ ಶಿಕ್ಷೆಯನ್ನು ಹೋಗಲಾಡಿಸು. ಖಂಡಿತವಾಗಿಯೂ ನಾವು ವಿಶ್ವಾಸವಿಡುವೆವು'.

رَّبَّنَا ٱكۡشِفۡ عَنَّا ٱلۡعَذَابَ إِنَّا مُؤۡمِنُونَ ١٢

13. ಅವರಿಗೆ ಉಪದೇಶವು ಪ್ರಯೋಜನಪಡುವುದಾದರೂ ಹೇಗೆ? (ವಿಷಯವನ್ನು) ಸ್ಪಷ್ಟಗೊಳಿಸುವ ಒಬ್ಬ ಸಂದೇಶವಾಹಕರು ಅವರ ಬಳಿಗೆ ಬಂದಿರುವರು.

أَنَّىٰ لَهُمُ ٱلذِّكۡرَىٰ وَقَدۡ جَآءَهُمۡ رَسُولٞ مُّبِينٞ ١٣

14. ತರುವಾಯ ಅವರು ಅವರಿಂದ (ಸಂದೇಶವಾಹಕರಿಂದ) ವಿಮುಖರಾದರು. 'ಯಾರಿಂದಲೋ ಕಲಿಸಲಾದವನು! ಮತಿಭ್ರಾಂತನು!' ಎಂದು ಅವರು ಹೇಳಿದರು.

ثُمَّ تَوَلَّوۡاْ عَنۡهُ وَقَالُواْ مُعَلَّمٞ مَّجۡنُونٌ ١٤

15. ಖಂಡಿತವಾಗಿಯೂ ನಾವು ಶಿಕ್ಷೆಯನ್ನು ಸ್ವಲ್ಪ ನಿವಾರಿಸುವೆವು. ಆದರೆ ನೀವು ಖಂಡಿತವಾಗಿಯೂ (ಹಿಂದಿನ ಸ್ಥಿತಿಗೇ) ಮರಳುವಿರಿ!

إِنَّا كَاشِفُواْ ٱلۡعَذَابِ قَلِيلًاۚ إِنَّكُمۡ عَآئِدُونَ ١٥

16. ನಾವು ಭಾರೀ ಹಿಡಿತದೊಂದಿಗೆ ಹಿಡಿಯುವ ದಿನ! ಖಂಡಿತವಾಗಿಯೂ ನಾವು ಶಿಕ್ಷಾಕ್ರಮವನ್ನು ಕೈಗೊಳ್ಳುವೆವು.

يَوۡمَ نَبۡطِشُ ٱلۡبَطۡشَةَ ٱلۡكُبۡرَىٰٓ إِنَّا مُنتَقِمُونَ ١٦

17. ಇವರಿಗಿಂತ ಮೊದಲು ಫಿರ್‌ಔನನ ಜನತೆಯನ್ನು ನಾವು ಪರೀಕ್ಷಿಸಿದ್ದೆವು. ಗೌರವಾರ್ಹರಾದ ಒಬ್ಬ ಸಂದೇಶವಾಹಕನು ಅವರ ಬಳಿಗೆ ಬಂದರು.

۞وَلَقَدۡ فَتَنَّا قَبۡلَهُمۡ قَوۡمَ فِرۡعَوۡنَ وَجَآءَهُمۡ رَسُولٞ كَرِيمٌ ١٧

1 ಮನುಷ್ಯರನ್ನು ಪೂರ್ಣವಾಗಿ ಆವರಿಸುವ ಹೊಗೆ ಪ್ರವಾದಿ(ﷺ)ರವರ ಕಾಲದಲ್ಲೇ ಉಂಟಾಗಿತ್ತೆಂದು ಕೆಲವು ವ್ಯಾಖ್ಯಾನಕಾರರು ಹೇಳಿದರೆ ಇತರರ ಅಭಿಪ್ರಾಯ ಪ್ರಕಾರ ಈ ಹೊಗೆ ಉಂಟಾಗುವುದು ಅಂತ್ಯಕಾಲದಲ್ಲಾಗಿದೆ.

18. ‘ಅಲ್ಲಾಹುವಿನ ದಾಸರನ್ನು ನೀವು ನನಗೆ ಒಪ್ಪಿಸಿರಿ. ಖಂಡಿತವಾಗಿಯೂ ನಾನು ನಿಮ್ಮೆಡೆಗಿರುವ ಒಬ್ಬ ವಿಶ್ವಾಸಯೋಗ್ಯ ಸಂದೇಶವಾಹಕನಾಗಿರುವೆನು’ (ಎಂದು ಅವರು ಹೇಳಿದರು).

أَنْ أَدُّوٓاْ إِلَيَّ عِبَادَ ٱللَّهِۖ إِنِّي لَكُمۡ رَسُولٌ أَمِينٞ ١٨

19. ‘ನೀವು ಅಲ್ಲಾಹುವಿನ ವಿರುದ್ಧ ದರ್ಪ ತೋರದಿರಿ. ಖಂಡಿತವಾಗಿಯೂ ನಾನು ಸ್ಪಷ್ಟವಾದ ಪುರಾವೆಯೊಂದಿಗೆ ನಿಮ್ಮ ಬಳಿಗೆ ಬರುವೆನು.

وَأَن لَّا تَعۡلُواْ عَلَى ٱللَّهِۖ إِنِّيٓ ءَاتِيكُم بِسُلۡطَٰنٖ مُّبِينٖ ١٩

20. ನೀವು ನನಗೆ ಕಲ್ಲೆಸೆಯದಿರಲು ನನ್ನ ರಬ್ ಮತ್ತು ನಿಮ್ಮ ರಬ್ಬಾಗಿರುವವರೊಂದಿಗೆ ಖಂಡಿತವಾಗಿಯೂ ನಾನು ಅಭಯವನ್ನು ಯಾಚಿಸಿರುವೆನು.

وَإِنِّي عُذۡتُ بِرَبِّي وَرَبِّكُمۡ أَن تَرۡجُمُونِ ٢٠

21. ನಿಮಗೆ ನನ್ನ ಮೇಲೆ ವಿಶ್ವಾಸವಿಲ್ಲದಿದ್ದರೆ ನೀವು ನನ್ನಿಂದ ದೂರ ಸರಿಯಿರಿ’.

وَإِن لَّمۡ تُؤۡمِنُواْ لِي فَٱعۡتَزِلُونِ ٢١

22. ಇವರು ಅಪರಾಧಿಗಳಾದ ಜನತೆಯಾಗಿರುವುದರಿಂದ ಅವರು ತಮ್ಮ ರಬ್ಬನ್ನು ಕರೆದು (ಸಹಾಯಕ್ಕಾಗಿ) ಪ್ರಾರ್ಥಿಸಿದರು.

فَدَعَا رَبَّهُۥٓ أَنَّ هَٰٓؤُلَآءِ قَوۡمٞ مُّجۡرِمُونَ ٢٢

23. (ಅಲ್ಲಾಹು ಹೇಳಿದನು): ‘ತಾವು ರಾತ್ರಿ ವೇಳೆಯಲ್ಲಿ ನನ್ನ ದಾಸರೊಂದಿಗೆ ಪ್ರಯಾಣ ಮಾಡಿರಿ. ಖಂಡಿತವಾಗಿಯೂ ನೀವು (ಶತ್ರುಗಳಿಂದ) ಹಿಂಬಾಲಿಸಲ್ಪಡುವಿರಿ.

فَأَسۡرِ بِعِبَادِي لَيۡلًا إِنَّكُم مُّتَّبَعُونَ ٢٣

24. ಸಮುದ್ರವನ್ನು ಶಾಂತವಾದ ಸ್ಥಿತಿಯಲ್ಲಿ ಬಿಡಿರಿ.[1] ಖಂಡಿತವಾಗಿಯೂ ಅವರು ಮುಳುಗಿಸಲಾಗುವ ಒಂದು ಸೈನ್ಯವಾಗಿರುವರು.

وَٱتۡرُكِ ٱلۡبَحۡرَ رَهۡوًاۖ إِنَّهُمۡ جُندٞ مُّغۡرَقُونَ ٢٤

25. ಅದೆಷ್ಟೋ ತೋಟಗಳನ್ನು ಮತ್ತು ತೊರೆಗಳನ್ನು ಅವರು ಬಿಟ್ಟು ಹೋದರು!

كَمۡ تَرَكُواْ مِن جَنَّٰتٖ وَعُيُونٖ ٢٥

1 ರಹ್ವನ್ ಎಂದರೆ ಶಾಂತ ಸ್ಥಿತಿಯಲ್ಲಿರುವುದು, ಸೀಳಲಾದದ್ದು ಇತ್ಯಾದಿ ಅರ್ಥ ನೀಡಲಾಗಿದೆ. ಅಂದರೆ ಮೂಸಾ(عَلَيْهِ ٱلسَّلَامُ)ರಿಗೆ ಮತ್ತು ಅವರ ಅನುಯಾಯಿಗಳಿಗೆ ಹೀಗೆ ಆದೇಶಿಸಲಾಯಿತು: ಸಮುದ್ರವನ್ನು ಸೀಳಲಾದ ದಾರಿಯ ಮೂಲಕ ಹಾದು ಹೋಗಿರಿ. ಸಮುದ್ರವನ್ನು ಸೀಳಲಾದ –ಶಾಂತ– ಸ್ಥಿತಿಯಲ್ಲಿ ತೊರೆದು ನೀವು ಮುಂದಕ್ಕೆ ಸಾಗಿರಿ.

26. (ಅದೆಷ್ಟೋ) ಕೃಷಿಗಳನ್ನು ಮತ್ತು ಗೌರವಾನ್ವಿತ ವಸತಿಗಳನ್ನು!

وَزُرُوعٍ وَمَقَامٍ كَرِيمٍ ﴿٢٦﴾

27. ಅವರು ಆನಂದದಿಂದ ಅನುಭವಿಸುತ್ತಿದ್ದ (ಅದೆಷ್ಟೋ) ಸೌಭಾಗ್ಯಗಳನ್ನು!

وَنَعْمَةٍ كَانُوا۟ فِيهَا فَـٰكِهِينَ ﴿٢٧﴾

28. ಹೀಗೆ ಅದು (ಕೊನೆಗೊಂಡಿತು). ಅವೆಲ್ಲವನ್ನೂ ನಾವು ಬೇರೊಂದು ಜನತೆಗೆ ವಾರೀಸಾಗಿಕೊಟ್ಟೆವು.

كَذَٰلِكَ ۖ وَأَوْرَثْنَـٰهَا قَوْمًا ءَاخَرِينَ ﴿٢٨﴾

29. ಆಗ ಅವರಿಗೋಸ್ಕರ ಆಕಾಶವಾಗಲಿ ಭೂಮಿಯಾಗಲಿ ಅಳಲಿಲ್ಲ. ಅವರಿಗೆ ಕಾಲಾವಕಾಶವನ್ನೂ ನೀಡಲಾಗಲಿಲ್ಲ.

فَمَا بَكَتْ عَلَيْهِمُ ٱلسَّمَآءُ وَٱلْأَرْضُ وَمَا كَانُوا۟ مُنظَرِينَ ﴿٢٩﴾

30-31. ನಾವು ಇಸ್ರಾಈಲ್ ಸಂತತಿಗಳನ್ನು ಅಪಮಾನಕರ ಶಿಕ್ಷೆಯಿಂದ, ಫಿರ್‌ಔನ್‌ನಿಂದ ಪಾರು ಮಾಡಿಯೇ ಬಿಟ್ಟೆವು. ಖಂಡಿತವಾಗಿಯೂ ಅವನು ಅಹಂಕಾರಿಯಾಗಿದ್ದನು ಮತ್ತು ಅತಿಕ್ರಮಿಗಳ ಪೈಕಿ ಸೇರಿದವನಾಗಿದ್ದನು.

وَلَقَدْ نَجَّيْنَا بَنِىٓ إِسْرَٰٓءِيلَ مِنَ ٱلْعَذَابِ ٱلْمُهِينِ ﴿٣٠﴾ مِن فِرْعَوْنَ ۚ إِنَّهُۥ كَانَ عَالِيًا مِّنَ ٱلْمُسْرِفِينَ ﴿٣١﴾

32. ಖಂಡಿತವಾಗಿಯೂ ಅರಿತವರಾಗಿದ್ದೇ ನಾವು ಅವರನ್ನು ಸರ್ವಲೋಕದವರ ಪೈಕಿ ಉತ್ಕೃಷ್ಟರನ್ನಾಗಿ ಆರಿಸಿದೆವು.

وَلَقَدِ ٱخْتَرْنَـٰهُمْ عَلَىٰ عِلْمٍ عَلَى ٱلْعَـٰلَمِينَ ﴿٣٢﴾

33. ಸ್ಪಷ್ಟವಾದ ಪರೀಕ್ಷೆಯನ್ನು ಹೊಂದಿರುವ ಕೆಲವು ದೃಷ್ಟಾಂತಗಳನ್ನು ನಾವು ಅವರಿಗೆ ನೀಡಿದೆವು.

وَءَاتَيْنَـٰهُم مِّنَ ٱلْـَٔايَـٰتِ مَا فِيهِ بَلَـٰٓؤٌا۟ مُّبِينٌ ﴿٣٣﴾

34-36. ಆದರೆ ಇವರು ಹೇಳುತ್ತಾರೆ: ‘ನಮ್ಮ ಮೊದಲ ಮರಣದ ಹೊರತು ಬೇರೇನೂ ಇಲ್ಲ. ನಮ್ಮನ್ನು ಪುನರುತ್ಥಾನಗೊಳಿಸಲಾಗುವುದೂ ಇಲ್ಲ. ಆದ್ದರಿಂದ ನೀವು ಸತ್ಯಸಂಧರಾಗಿದ್ದರೆ ನಮ್ಮ ಪೂರ್ವಿಕರನ್ನು (ಜೀವ ನೀಡಿ) ತನ್ನಿರಿ’.

إِنَّ هَـٰٓؤُلَآءِ لَيَقُولُونَ ﴿٣٤﴾ إِنْ هِىَ إِلَّا مَوْتَتُنَا ٱلْأُولَىٰ وَمَا نَحْنُ بِمُنشَرِينَ ﴿٣٥﴾ فَأْتُوا۟ بِـَٔابَآئِنَآ إِن كُنتُمْ صَـٰدِقِينَ ﴿٣٦﴾

37. ಅತ್ಯುತ್ತಮರು ಇವರೇ? ಅಥವಾ ತುಬ್ಬಅ್[1]ನ ಜನತೆ ಮತ್ತು ಅವರಿಗಿಂತ ಮುಂಚಿನವರೇ? ನಾವು ಅವರೆಲ್ಲರನ್ನು ನಾಶ ಮಾಡಿದೆವು.

أَهُمْ خَيْرٌ أَمْ قَوْمُ تُبَّعٍ وَٱلَّذِينَ مِن قَبْلِهِمْ ۚ أَهْلَكْنَـٰهُمْ ۖ إِنَّهُمْ كَانُوا۟ مُجْرِمِينَ ﴿٣٧﴾

1 ತುಬ್ಬಅ್ ಪುರಾತನ ಯಮನ್ ಚಕ್ರವರ್ತಿಗಳ ಪದವಿ ಅಥವಾ ಕುಲನಾಮವಾಗಿತ್ತು. ಒಂದು ಕಾಲದಲ್ಲಿ ಈ ರಾಜವಂಶಕ್ಕೆ ಅರೇಬಿಯನ್ ಉಪಭೂಖಂಡ ಮತ್ತು ಪೂರ್ವ ಆಫ್ರಿಕದ ಮೇಲೆ ಆಧಿಪತ್ಯವಿತ್ತು.

ಏಕೆಂದರೆ ಖಂಡಿತವಾಗಿಯೂ ಅವರು ಅಪರಾಧಿಗಳಾಗಿದ್ದರು.

38. ನಾವು ಆಕಾಶಗಳನ್ನು, ಭೂಮಿಯನ್ನು ಮತ್ತು ಅವುಗಳ ಮಧ್ಯೆಯಿರುವವುಗಳನ್ನು ವಿನೋದಕ್ಕಾಗಿ ಸೃಷ್ಟಿಸಿಲ್ಲ.

وَمَا خَلَقْنَا ٱلسَّمَٰوَٰتِ وَٱلْأَرْضَ وَمَا بَيْنَهُمَا لَٰعِبِينَ ﴿٣٨﴾

39. ನಿಖರವಾದ ಉದ್ದೇಶದೊಂದಿಗೇ ವಿನಾ ನಾವು ಅವೆರಡನ್ನೂ ಸೃಷ್ಟಿಸಿಲ್ಲ. ಆದರೆ ಅವರಲ್ಲಿ ಹೆಚ್ಚಿನವರೂ ಅರಿಯುವುದಿಲ್ಲ.

مَا خَلَقْنَٰهُمَآ إِلَّا بِٱلْحَقِّ وَلَٰكِنَّ أَكْثَرَهُمْ لَا يَعْلَمُونَ ﴿٣٩﴾

40. ಖಂಡಿತವಾಗಿಯೂ ಅವರೆಲ್ಲರಿಗಿರುವ ನಿಶ್ಚಿತ ಸಮಯವು ಆ ನಿರ್ಣಾಯಕ ತೀರ್ಮಾನ ಕೈಗೊಳ್ಳುವ ದಿನವಾಗಿದೆ.

إِنَّ يَوْمَ ٱلْفَصْلِ مِيقَٰتُهُمْ أَجْمَعِينَ ﴿٤٠﴾

41. ಒಬ್ಬ ಸಂಬಂಧಿಕನು ಇನ್ನೊಬ್ಬ ಸಂಬಂಧಿಕನಿಗೆ ಯಾವುದೇ ಪ್ರಯೋಜನವನ್ನೂ ಮಾಡದ ಮತ್ತು ಅವರಿಗೆ ಯಾವುದೇ ಸಹಾಯವೂ ಲಭಿಸದ ದಿನ!

يَوْمَ لَا يُغْنِى مَوْلًى عَن مَّوْلًى شَيْـًٔا وَلَا هُمْ يُنصَرُونَ ﴿٤١﴾

42. ಅಲ್ಲಾಹು ಯಾರಿಗೆ ಕರುಣೆ ತೋರಿರುವನೋ ಅವರ ಹೊರತು. ಖಂಡಿತವಾಗಿಯೂ ಅವನು ಪ್ರತಾಪಶಾಲಿಯೂ ಕರುಣಾನಿಧಿಯೂ ಆಗಿರುವನು.

إِلَّا مَن رَّحِمَ ٱللَّهُ ۚ إِنَّهُۥ هُوَ ٱلْعَزِيزُ ٱلرَّحِيمُ ﴿٤٢﴾

43-44. ಖಂಡಿತವಾಗಿಯೂ ಝಕ್ಕೂಮ್ ಮರವು (ನರಕದಲ್ಲಿ) ಪಾಪಿಯ ಆಹಾರವಾಗಿದೆ.

إِنَّ شَجَرَتَ ٱلزَّقُّومِ ﴿٤٣﴾ طَعَامُ ٱلْأَثِيمِ ﴿٤٤﴾

45-46. (ಅದರ ಹಣ್ಣು) ಕಾಯಿಸಿದ ಲೋಹದಂತಿರುವುದು. ಬಿಸಿನೀರು ಕುದಿಯುವಂತೆ ಅದು ಉದರಗಳಲ್ಲಿ ಕುದಿಯುವುದು.

كَٱلْمُهْلِ يَغْلِى فِى ٱلْبُطُونِ ﴿٤٥﴾ كَغَلْىِ ٱلْحَمِيمِ ﴿٤٦﴾

47. 'ಅವನನ್ನು ಹಿಡಿಯಿರಿ! ಮತ್ತು ನರಕಾಗ್ನಿಯ ಮಧ್ಯಭಾಗಕ್ಕೆ ಎಳೆದೊಯ್ಯಿರಿ!

خُذُوهُ فَٱعْتِلُوهُ إِلَىٰ سَوَآءِ ٱلْجَحِيمِ ﴿٤٧﴾

48. ತರುವಾಯ ಕುದಿಯುವ ನೀರಿನ ಶಿಕ್ಷೆಯನ್ನು ಅವನ ತಲೆಯ ಮೇಲೆ ಸುರಿಯಿರಿ' (ಎಂದು ಆದೇಶಿಸಲಾಗುವುದು).

ثُمَّ صُبُّوا۟ فَوْقَ رَأْسِهِۦ مِنْ عَذَابِ ٱلْحَمِيمِ ﴿٤٨﴾

ذُقۡ إِنَّكَ أَنتَ ٱلۡعَزِيزُ ٱلۡكَرِيمُ ﴿٤٩﴾

49. ಇದನ್ನು ಆಸ್ವಾದಿಸು! ಖಂಡಿತವಾಗಿಯೂ ನೀನು ಪ್ರತಾಪಶಾಲಿಯೂ ಗೌರವಾನ್ವಿತನೂ ಆಗಿದ್ದೆ.

إِنَّ هَٰذَا مَا كُنتُم بِهِۦ تَمۡتَرُونَ ﴿٥٠﴾

50. ಯಾವ ವಿಷಯದ ಕುರಿತು ನೀವು ಸಂದೇಹ ಪಡುತಿದ್ದಿರೋ ಆ ವಿಷಯವು ಇದೇ ಆಗಿದೆ.

إِنَّ ٱلۡمُتَّقِينَ فِي مَقَامٍ أَمِينٖ ﴿٥١﴾

51. ಭಯಭಕ್ತಿ ಪಾಲಿಸಿದವರು ಖಂಡಿತವಾಗಿಯೂ ನಿರ್ಭಯವಾದ ವಾಸಸ್ಥಳದಲ್ಲಿರುವರು.

فِي جَنَّٰتٖ وَعُيُونٖ ﴿٥٢﴾

52. ತೋಟಗಳ ಮತ್ತು ತೊರೆಗಳಮಧ್ಯೆ.

يَلۡبَسُونَ مِن سُندُسٖ وَإِسۡتَبۡرَقٖ
مُّتَقَٰبِلِينَ ﴿٥٣﴾

53. ಮೃದುವಾದ ರೇಷ್ಮೆ ಉಡುಪು ಮತ್ತು ದಪ್ಪವಾದ
ರೇಷ್ಮೆ ಉಡುಪುಗಳನ್ನು ಅವರು ಧರಿಸುವರು.
ಅವರು ಪರಸ್ಪರ ಅಭಿಮುಖಿಗಳಾಗಿ
ಕುಳಿತಿರುವರು.

كَذَٰلِكَ وَزَوَّجۡنَٰهُم بِحُورٍ عِينٖ ﴿٥٤﴾

54. ಹೀಗಿದೆ (ಅವರ ಸ್ಥಿತಿ). ವಿಶಾಲ ಕಣ್ಣುಗಳುಳ್ಳ ಬೆಳ್ಳಗಿನ ಸ್ತ್ರೀಯರನ್ನು ನಾವು ಅವರಿಗೆ ಸಂಗಾತಿಗಳಾಗಿ ನೀಡುವೆವು.

يَدۡعُونَ فِيهَا بِكُلِّ فَٰكِهَةٍ ءَامِنِينَ ﴿٥٥﴾

55. ಸುರಕ್ಷಿತರಾಗಿ ಅವರು ಅಲ್ಲಿ ಎಲ್ಲ ವಿಧದ ಫಲಗಳಿಗಾಗಿ ಬೇಡಿಕೆಯಿಡುವರು.

لَا يَذُوقُونَ فِيهَا ٱلۡمَوۡتَ إِلَّا ٱلۡمَوۡتَةَ ٱلۡأُولَىٰۖ وَوَقَىٰهُمۡ عَذَابَ ٱلۡجَحِيمِ ﴿٥٦﴾

56. ಮೊದಲನೆಯ ಮರಣದ ಹೊರತು ಬೇರೊಂದು ಮರಣವನ್ನು ಸವಿಯಬೇಕಾಗಿ ಬರದು. ಅಲ್ಲಾಹು ಅವರನ್ನು ನರಕ ಶಿಕ್ಷೆಯಿಂದ ಪಾರುಗೊಳಿಸಿರುವನು.

فَضۡلٗا مِّن رَّبِّكَۚ ذَٰلِكَ هُوَ ٱلۡفَوۡزُ ٱلۡعَظِيمُ ﴿٥٧﴾

57. ಇದು ತಮ್ಮ ರಬ್‌ನ ವತಿಯ ಔದಾರ್ಯವಾಗಿದೆ. ಮಹಾ ವಿಜಯವು ಇದೇ ಆಗಿದೆ.

فَإِنَّمَا يَسَّرۡنَٰهُ بِلِسَانِكَ لَعَلَّهُمۡ يَتَذَكَّرُونَ ﴿٥٨﴾

58. ನಾವು ಇದನ್ನು (ಕುರ್‌ಆನನ್ನು) ತಮ್ಮ ಭಾಷೆಯಲ್ಲಿ ಸರಳಗೊಳಿಸಿರುವುದು ಅವರು ಚಿಂತಿಸಿ ಗ್ರಹಿಸುವ ಸಲುವಾಗಿ ಮಾತ್ರವಾಗಿದೆ.

فَٱرۡتَقِبۡ إِنَّهُم مُّرۡتَقِبُونَ ﴿٥٩﴾

59. ಆದ್ದರಿಂದ ತಾವು ಕಾಯುತ್ತಿರಿ. ಅವರೂ ಕಾಯುತ್ತಿರುವವರೇ ಆಗಿರುವರು.

## ಅಲ್‌ಜಾಸಿಯ (ಮಂಡಿಯೂರಿದವುಗಳು)[1]

## سُورَةُ الجَاثِيَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 37

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

حمٓ ١ تَنزِيلُ ٱلۡكِتَٰبِ مِنَ ٱللَّهِ ٱلۡعَزِيزِ ٱلۡحَكِيمِ ٢

**1-2.** ಹಾ–ಮೀಮ್. ಈ ಗ್ರಂಥದ ಅವತೀರ್ಣವು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಿನ ವತಿಯಿಂದಾಗಿದೆ.

إِنَّ فِي ٱلسَّمَٰوَٰتِ وَٱلۡأَرۡضِ لَأٓيَٰتٖ لِّلۡمُؤۡمِنِينَ ٣

**3.** ಖಂಡಿತವಾಗಿಯೂ ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಸತ್ಯವಿಶ್ವಾಸಿಗಳಿಗೆ ಹಲವು ದೃಷ್ಟಾಂತಗಳಿವೆ.

وَفِي خَلۡقِكُمۡ وَمَا يَبُثُّ مِن دَآبَّةٍ ءَايَٰتٞ لِّقَوۡمٖ يُوقِنُونَ ٤

**4.** ನಿಮ್ಮ ಸೃಷ್ಟಿಯಲ್ಲಿ ಮತ್ತು ಅವನು ಜೀವರಾಶಿಗಳನ್ನು ಹಬ್ಬಿಸಿರುವುದರಲ್ಲಿ ದೃಢವಾಗಿ ವಿಶ್ವಾಸವಿಡುವ ಜನರಿಗೆ ಅನೇಕ ದೃಷ್ಟಾಂತಗಳಿವೆ.

وَٱخۡتِلَٰفِ ٱلَّيۡلِ وَٱلنَّهَارِ وَمَآ أَنزَلَ ٱللَّهُ مِنَ ٱلسَّمَآءِ مِن رِّزۡقٖ فَأَحۡيَا بِهِ ٱلۡأَرۡضَ بَعۡدَ مَوۡتِهَا وَتَصۡرِيفِ ٱلرِّيَٰحِ ءَايَٰتٞ لِّقَوۡمٖ يَعۡقِلُونَ ٥

**5.** ರಾತ್ರಿ ಮತ್ತು ಹಗಲುಗಳ ಬದಲಾವಣೆಯಲ್ಲಿ, ಅಲ್ಲಾಹು ಆಕಾಶದಿಂದ ಅನ್ನಾಧಾರವನ್ನು ಇಳಿಸಿ ತನ್ಮೂಲಕ ಭೂಮಿಗೆ ಅದು ನಿರ್ಜೀವಗೊಂಡ ಬಳಿಕ ಜೀವವನ್ನು ನೀಡುವುದರಲ್ಲಿ ಮತ್ತು ಗಾಳಿಯ ನಿಯಂತ್ರಣದಲ್ಲಿ ಚಿಂತಿಸಿ ಗ್ರಹಿಸುವ ಜನರಿಗೆ ಅನೇಕ ದೃಷ್ಟಾಂತಗಳಿವೆ.

تِلۡكَ ءَايَٰتُ ٱللَّهِ نَتۡلُوهَا عَلَيۡكَ بِٱلۡحَقِّۖ فَبِأَيِّ حَدِيثِۭ بَعۡدَ ٱللَّهِ وَءَايَٰتِهِۦ يُؤۡمِنُونَ ٦

**6.** ಇವು ಅಲ್ಲಾಹುವಿನ ಪುರಾವೆಗಳಾಗಿವೆ. ನಾವು ತಮಗೆ ಅವುಗಳನ್ನು ಸತ್ಯದೊಂದಿಗೆ ಓದಿಕೊಡುತ್ತಿರುವೆವು. ಅಲ್ಲಾಹುವಿನ ಮತ್ತು ಅವನ ಪುರಾವೆಗಳ ಬಳಿಕ ಇನ್ನು ಯಾವ ವೃತ್ತಾಂತದಲ್ಲಿ ಅವರು ವಿಶ್ವಾಸವಿಡುವರು?

وَيۡلٞ لِّكُلِّ أَفَّاكٍ أَثِيمٖ ٧

**7.** ಸುಳ್ಳುಕೋರನೂ ಪಾಪಿಯೂ ಆಗಿರುವ ಪ್ರತಿಯೊಬ್ಬರಿಗೂ ನಾಶವಿದೆ.

---

1 28ನೇ ಸೂಕ್ತಿಯಲ್ಲಿ ಸಮುದಾಯಗಳು ಮಂಡಿಯೂರುವ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

8. ತನಗೆ ಓದಿಕೊಡಲಾಗುವ ಅಲ್ಲಾಹುವಿನ ದೃಷ್ಟಾಂತಗಳನ್ನು ಅವನು ಆಲಿಸಿ, ಅನಂತರ ಅದನ್ನು ಆಲಿಸಿಲ್ಲವೆಂಬಂತೆ ಅಹಂಕಾರ ಪಡುತ್ತಾ ಹಟತೊಟ್ಟು ನಿಲ್ಲುವನು. ಆದ್ದರಿಂದ ಅವನಿಗೆ ಯಾತನಾಮಯ ಶಿಕ್ಷೆಯ ಕುರಿತು ಶುಭವಾರ್ತೆಯನ್ನು ತಿಳಿಸಿರಿ.

يَسۡمَعُ ءَايَٰتِ ٱللَّهِ تُتۡلَىٰ عَلَيۡهِ ثُمَّ يُصِرُّ مُسۡتَكۡبِرٗا كَأَن لَّمۡ يَسۡمَعۡهَاۖ فَبَشِّرۡهُ بِعَذَابٍ أَلِيمٖ ٨

9. ಅವನು ನಮ್ಮ ಪುರಾವೆಗಳಿಂದ ಏನಾದರೂ ಅರಿತುಕೊಂಡರೆ ಅದನ್ನು ಅವನು ಹಾಸ್ಯವಸ್ತುವಾಗಿ ಮಾಡುವನು. ಅವರಿಗೆ ಅಪಮಾನಕರವಾದ ಶಿಕ್ಷೆಯಿದೆ.

وَإِذَا عَلِمَ مِنۡ ءَايَٰتِنَا شَيۡـًٔا ٱتَّخَذَهَا هُزُوًاۚ أُوْلَٰٓئِكَ لَهُمۡ عَذَابٞ مُّهِينٞ ٩

10. ನರಕಾಗ್ನಿಯು ಅವರ ಮುಂದೆಯೇ ಇದೆ! ಅವರು ಸಂಪಾದಿಸಿರುವುದಾಗಲಿ, ಅಲ್ಲಾಹುವಿನ ಹೊರತು ಅವರು ರಕ್ಷಕರನ್ನಾಗಿ ಮಾಡಿಕೊಂಡವರಾಗಲಿ ಅವರಿಗೆ ಯಾವುದೇ ಪ್ರಯೋಜನವನ್ನೂ ಮಾಡಲಾರರು. ಅವರಿಗೆ ಕಠೋರ ಶಿಕ್ಷೆಯಿದೆ.

مِّن وَرَآئِهِمۡ جَهَنَّمُۖ وَلَا يُغۡنِي عَنۡهُم مَّا كَسَبُواْ شَيۡـٔٗا وَلَا مَا ٱتَّخَذُواْ مِن دُونِ ٱللَّهِ أَوۡلِيَآءَۖ وَلَهُمۡ عَذَابٌ عَظِيمٌ ١٠

11. ಇದೊಂದು ಮಾರ್ಗದರ್ಶನವಾಗಿದೆ. ತಮ್ಮ ರಬ್‌ನ ದೃಷ್ಟಾಂತಗಳಲ್ಲಿ ಅವಿಶ್ವಾಸವಿಟ್ಟವರು ಯಾರೋ ಅವರಿಗೆ ಕಠಿಣ ವಿಧದ ಯಾತನಾಮಯ ಶಿಕ್ಷೆಯಿದೆ.

هَٰذَا هُدٗىۖ وَٱلَّذِينَ كَفَرُواْ بِـَٔايَٰتِ رَبِّهِمۡ لَهُمۡ عَذَابٞ مِّن رِّجۡزٍ أَلِيمٌ ١١

12. ಸಮುದ್ರವನ್ನು ನಿಮಗೆ ಅಧೀನಗೊಳಿಸಿಕೊಟ್ಟವನು ಅಲ್ಲಾಹುವಾಗಿರುವನು. ಅವನ ಅಪ್ಪಣೆ ಪ್ರಕಾರ ಅದರಲ್ಲಿ ಹಡಗುಗಳು ಸಂಚರಿಸುವ ಸಲುವಾಗಿ, ನೀವು ಅವನ ಅನುಗ್ರಹದಲ್ಲಿಂದ ಬೇಡಿಕೊಳ್ಳುವ ಸಲುವಾಗಿ ಮತ್ತು ನೀವು ಕೃತಜ್ಞತೆ ಸಲ್ಲಿಸುವವರಾಗುವ ಸಲುವಾಗಿ.

۞ ٱللَّهُ ٱلَّذِي سَخَّرَ لَكُمُ ٱلۡبَحۡرَ لِتَجۡرِيَ ٱلۡفُلۡكُ فِيهِ بِأَمۡرِهِۦ وَلِتَبۡتَغُواْ مِن فَضۡلِهِۦ وَلَعَلَّكُمۡ تَشۡكُرُونَ ١٢

13. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವನ್ನೂ ಅವನು ತನ್ನ ವತಿಯಿಂದ ನಿಮಗೆ ಅಧೀನಗೊಳಿಸಿ ಕೊಟ್ಟಿರುವನು. ಖಂಡಿತವಾಗಿಯೂ ಚಿಂತಿಸುವ ಜನರಿಗೆ ಅದರಲ್ಲಿ ಅನೇಕ ದೃಷ್ಟಾಂತಗಳಿವೆ.

وَسَخَّرَ لَكُم مَّا فِي ٱلسَّمَٰوَٰتِ وَمَا فِي ٱلۡأَرۡضِ جَمِيعٗا مِّنۡهُۚ إِنَّ فِي ذَٰلِكَ لَأٓيَٰتٖ لِّقَوۡمٖ يَتَفَكَّرُونَ ١٣

قُل لِّلَّذِينَ ءَامَنُواْ يَغۡفِرُواْ لِلَّذِينَ لَا يَرۡجُونَ أَيَّامَ ٱللَّهِ لِيَجۡزِيَ قَوۡمَۢا بِمَا كَانُواْ يَكۡسِبُونَ ﴿١٤﴾

14. (ಓ ಪ್ರವಾದಿಯವರೇ) ಸತ್ಯವಿಶ್ವಾಸಿಗಳೊಂದಿಗೆ ಹೇಳಿರಿ: ಅಲ್ಲಾಹುವಿನ (ಶಿಕ್ಷೆಯ) ದಿನಗಳನ್ನು ನಿರೀಕ್ಷಿಸದ ಸತ್ಯನಿಷೇಧಿಗಳನ್ನು ಅವರು ಕ್ಷಮಿಸಲಿ. ಇದು ಅವನು ಪ್ರತಿಯೊಂದು ಜನತೆಗೂ ಅವರು ಸಂಪಾದಿಸಿರುವುದರ ಫಲವನ್ನು ನೀಡುವ ಸಲುವಾಗಿದೆ.[1]

مَنۡ عَمِلَ صَٰلِحٗا فَلِنَفۡسِهِۦۖ وَمَنۡ أَسَآءَ فَعَلَيۡهَاۖ ثُمَّ إِلَىٰ رَبِّكُمۡ تُرۡجَعُونَ ﴿١٥﴾

15. ಯಾರಾದರೂ ಸತ್ಕರ್ಮವೆಸಗಿದರೆ ಅದು ಅವನ ಒಳಿತಿಗೇ ಆಗಿದೆ. ಯಾರಾದರೂ ದುಷ್ಕರ್ಮವೆಸಗಿದರೆ ಅದರ ಕೆಡುಕು ಅವನಿಗೇ ಆಗಿದೆ. ತರುವಾಯ ನಿಮ್ಮ ರಬ್‌ನೆಡೆಗೆ ನಿಮ್ಮನ್ನು ಮರಳಿಸಲಾಗುವುದು.

وَلَقَدۡ ءَاتَيۡنَا بَنِيٓ إِسۡرَٰٓءِيلَ ٱلۡكِتَٰبَ وَٱلۡحُكۡمَ وَٱلنُّبُوَّةَ وَرَزَقۡنَٰهُم مِّنَ ٱلطَّيِّبَٰتِ وَفَضَّلۡنَٰهُمۡ عَلَى ٱلۡعَٰلَمِينَ ﴿١٦﴾

16. ನಾವು ಇಸ್ರಾಈಲ್ ಸಂತತಿಗಳಿಗೆ ಗ್ರಂಥವನ್ನು, ಜ್ಞಾನವನ್ನು ಮತ್ತು ಪ್ರವಾದಿತ್ವವನ್ನು ನೀಡಿದೆವು. ಉತ್ತಮ ವಸ್ತುಗಳಿಂದ ಅವರಿಗೆ ಆಹಾರವನ್ನು ಒದಗಿಸಿದೆವು ಮತ್ತು ಸರ್ವಲೋಕದವರಿಗಿಂತ ನಾವು ಅವರಿಗೆ ಶ್ರೇಷ್ಠತೆಯನ್ನು ನೀಡಿದೆವು.

وَءَاتَيۡنَٰهُم بَيِّنَٰتٖ مِّنَ ٱلۡأَمۡرِۖ فَمَا ٱخۡتَلَفُوٓاْ إِلَّا مِنۢ بَعۡدِ مَا جَآءَهُمُ ٱلۡعِلۡمُ بَغۡيَۢا بَيۡنَهُمۡۚ إِنَّ رَبَّكَ يَقۡضِي بَيۡنَهُمۡ يَوۡمَ ٱلۡقِيَٰمَةِ فِيمَا كَانُواْ فِيهِ يَخۡتَلِفُونَ ﴿١٧﴾

17. ನಾವು ಅವರಿಗೆ (ಧಾರ್ಮಿಕ) ವಿಷಯಗಳ ಬಗ್ಗೆ ಸ್ಪಷ್ಟವಾದ ಪುರಾವೆಗಳನ್ನು ನೀಡಿದೆವು. ಆದರೆ ಅವರಿಗೆ ಅರಿವು ಬಂದ ಬಳಿಕವೇ ವಿನಾ ಅವರು ಭಿನ್ನರಾಗಿರಲಿಲ್ಲ. ಅದು ಅವರು ಪರಸ್ಪರ ಇಟ್ಟುಕೊಂಡಿದ್ದ ಅಸೂಯೆಯ ನಿಮಿತ್ತವಾಗಿತ್ತು. ಯಾವ ವಿಷಯದಲ್ಲಿ ಅವರು ಭಿನ್ನರಾದರೋ ಆ ವಿಷಯದಲ್ಲಿ ಪುನರುತ್ಥಾನ ದಿನದಂದು ತಮ್ಮ ರಬ್ ಅವರ ಮಧ್ಯೆ ಖಂಡಿತ ತೀರ್ಪು ನೀಡುವನು.

ثُمَّ جَعَلۡنَٰكَ عَلَىٰ شَرِيعَةٖ مِّنَ ٱلۡأَمۡرِ فَٱتَّبِعۡهَا وَلَا تَتَّبِعۡ أَهۡوَآءَ ٱلَّذِينَ لَا يَعۡلَمُونَ ﴿١٨﴾

18. (ಓ ಪ್ರವಾದಿಯವರೇ!) ತರುವಾಯ ತಮ್ಮನ್ನು ನಾವು (ಧಾರ್ಮಿಕ) ವಿಷಯದಲ್ಲಿ ಒಂದು ಸ್ಪಷ್ಟ ಮಾರ್ಗದಲ್ಲಿ ಮಾಡಿದೆವು. ಆದ್ದರಿಂದ ತಾವು ಅದನ್ನು ಅನುಸರಿಸಿರಿ. ಅರಿವಿಲ್ಲದವರ ದೇಹೇಚ್ಛೆಗಳನ್ನು ತಾವು ಅನುಸರಿಸದಿರಿ.

1 ಸತ್ಯನಿಷೇಧ ಮತ್ತು ಅನೈತಿಕತೆಯ ವಕ್ತಾರರೊಂದಿಗೆ ವಿದ್ವೇಷ ತೋರುವುದಕ್ಕೆ ಬದಲು ಅವರನ್ನು ಕ್ಷಮಿಸಬೇಕೆಂದು ಮತ್ತು ಅವರ ನಿಷೇಧಕ್ಕಿರುವ ಪ್ರತಿಫಲವನ್ನು ಅಲ್ಲಾಹು ಅವರಿಗೆ ನೀಡುವನು ಎಂದು ಭಾವಿಸಿ ನಿಶ್ಚಿಂತರಾಗಿರಬೇಕೆಂದು ಪ್ರಸ್ತುತ ಸೂಕ್ತಿಯು ಸತ್ಯವಿಶ್ವಾಸಿಗಳಿಗೆ ಬೋಧಿಸುತ್ತದೆ.

إِنَّهُمْ لَن يُغْنُواْ عَنكَ مِنَ ٱللَّهِ شَيْـًٔاۚ وَإِنَّ ٱلظَّـٰلِمِينَ بَعْضُهُمْ أَوْلِيَآءُ بَعْضٍۖ وَٱللَّهُ وَلِيُّ ٱلْمُتَّقِينَ ﴿١٩﴾

19. ಅಲ್ಲಾಹುವಿನ ಕಡೆಯ ಯಾವುದೇ ವಿಷಯದಲ್ಲೂ ಅವರು ತಮಗೆ ಕಿಂಚಿತ್ತೂ ಪ್ರಯೋಜನವಾಗಲಾರರು. ಖಂಡಿತವಾಗಿಯೂ ಅಕ್ರಮಿಗಳಲ್ಲಿ ಕೆಲವರು ಇತರ ಕೆಲವರ ರಕ್ಷಕರಾಗಿರುವರು. ಆದರೆ ಅಲ್ಲಾಹು ಭಯಭಕ್ತಿ ಪಾಲಿಸುವವರ ರಕ್ಷಕನಾಗಿರುವನು.

هَـٰذَا بَصَـٰٓئِرُ لِلنَّاسِ وَهُدًى وَرَحْمَةٌ لِّقَوْمٍ يُوقِنُونَ ﴿٢٠﴾

20. ಇದು ಮನುಷ್ಯರಿಗಿರುವ ಕಣ್ತೆರೆಸುವ ಪುರಾವೆಗಳಾಗಿವೆ. ದೃಢವಿಶ್ವಾಸವಿಡುವ ಜನರಿಗೆ ಮಾರ್ಗದರ್ಶಿಯೂ, ಕಾರುಣ್ಯವೂ ಆಗಿದೆ.

أَمْ حَسِبَ ٱلَّذِينَ ٱجْتَرَحُواْ ٱلسَّيِّـَٔاتِ أَن نَّجْعَلَهُمْ كَٱلَّذِينَ ءَامَنُواْ وَعَمِلُواْ ٱلصَّـٰلِحَـٰتِ سَوَآءً مَّحْيَاهُمْ وَمَمَاتُهُمْۚ سَآءَ مَا يَحْكُمُونَ ﴿٢١﴾

21. ಅಥವಾ ನಾವು ದುಷ್ಕರ್ಮವೆಸಗಿದವರನ್ನು ಸತ್ಯವಿಶ್ವಾಸವಿಟ್ಟು ಸತ್ಕರ್ಮವೆಸಗಿದವರಂತೆ –ಅಂದರೆ ಅವರ (ಎರಡೂ ಗುಂಪುಗಳ) ಜೀವನ ಮತ್ತು ಮರಣಗಳು ಸರಿಸಮಾನವಾಗುವಂತೆ– ಮಾಡುವೆವು ಎಂದು ದುಷ್ಕರ್ಮಿಗಳು ಭಾವಿಸಿರುವರೇ?[1] ಅವರು ನೀಡುತ್ತಿರುವ ತೀರ್ಪು ಅದೆಷ್ಟು ನಿಕೃಷ್ಟವಾದುದು!

وَخَلَقَ ٱللَّهُ ٱلسَّمَـٰوَٰتِ وَٱلْأَرْضَ بِٱلْحَقِّ وَلِتُجْزَىٰ كُلُّ نَفْسٍۭ بِمَا كَسَبَتْ وَهُمْ لَا يُظْلَمُونَ ﴿٢٢﴾

22. ಅಲ್ಲಾಹು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿರುವನು. ಅದು ಪ್ರತಿಯೊಬ್ಬನಿಗೂ ಅವನು ಮಾಡಿಕೊಂಡಿರುವುದಕ್ಕಿರುವ ಪ್ರತಿಫಲವನ್ನು ನೀಡುವ ಸಲುವಾಗಿದೆ. ಅವರೊಂದಿಗೆ ಅನ್ಯಾಯವೆಸಗಲಾಗದು.

أَفَرَءَيْتَ مَنِ ٱتَّخَذَ إِلَـٰهَهُۥ هَوَىٰهُ وَأَضَلَّهُ

23. ಆದರೆ ತನ್ನ ಆರಾಧ್ಯನನ್ನು ತನ್ನ ದೇಹೇಚ್ಛೆಯನ್ನಾಗಿ ಮಾಡಿಕೊಂಡವನನ್ನು

1 ರಾಜಕೀಯ ಮತ್ತು ಆರ್ಥಿಕ ಆಧಿಪತ್ಯಗಳು ಪ್ರವಾದಿ(ﷺ)ಯವರ ಮತ್ತು ಸತ್ಯವಿಶ್ವಾಸಿಗಳ ಪ್ರಮುಖ ಶತ್ರುಗಳ ವಶದಲ್ಲಿದ್ದವು. ಐಹಿಕ ಜೀವನದಲ್ಲಿ ತಮಗೆ ಐಶ್ವರ್ಯವನ್ನು ಕರುಣಿಸಿದ ಅಲ್ಲಾಹು ಪರಲೋಕದಲ್ಲೂ ತಮ್ಮನ್ನೇ ಅನುಗ್ರಹಿಸುವನು ಎಂದು ಅವರು ವಾದಿಸುತ್ತಿದ್ದರು. ಇವರ ದೃಷ್ಟಿಯಲ್ಲಿ ಸತ್ಯವಿಶ್ವಾಸಿಗಳು ಅನುಭವಿಸುತ್ತಿರುವ ಕಷ್ಟಕೋಟಲೆಗಳು ಅಲ್ಲಾಹು ಅವರನ್ನು ಕೈಬಿಟ್ಟಿದ್ದಾನೆ ಎಂಬುದರ ಸಂಕೇತವಾಗಿತ್ತು. ಅಲ್ಲಾಹುವಿನ ಕ್ರಮಗಳನ್ನು ಗ್ರಹಿಸದಿರುವುದೇ ಅವರ ಈ ತಪ್ಪು ಕಲ್ಪನೆಗೆ ಕಾರಣವಾಗಿತ್ತು. ಅಲ್ಲಾಹು ಇಹಲೋಕದಲ್ಲಿ ಸಜ್ಜನರಿಗೆ ಮತ್ತು ದುರ್ಜನರಿಗೆ ಏಕರೀತಿಯಲ್ಲಿ ಸೌಭಾಗ್ಯ ನೀಡಲೂಬಹುದು. ಆದರೆ ಮರಣಾನಂತರ ಪರಲೋಕದಲ್ಲಿ ಸತ್ಯವಿಶ್ವಾಸಿಗಳು ಮತ್ತು ಸಜ್ಜನರು ಮಾತ್ರ ಅಲ್ಲಾಹುವಿನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಐಹಿಕ ಜೀವನದಲ್ಲಿ ಅನುಗ್ರಹಿಸಿದಂತೆ ಮರಣಾನಂತರ ಜೀವನದಲ್ಲೂ ಅಲ್ಲಾಹು ನಮ್ಮನ್ನು ಅನುಗ್ರಹಿಸುವನು ಎಂದು ಸತ್ಯನಿಷೇಧಿಗಳು ಭಾವಿಸಿದ್ದರೆ ಅದು ಅವರಿಗೆ ಉಂಟಾದ ಗುರುತರವಾದ ಪ್ರಮಾದ ಮಾತ್ರವಾಗಿದೆ.

ತಾವು ಕಂಡಿರುವಿರಾ?[1] ಅರಿತುಕೊಂಡೇ ಅಲ್ಲಾಹು ಅವನನ್ನು ಪಥಭ್ರಷ್ಟಗೊಳಿಸಿರುವನು. ಅವನ ಕಿವಿ ಮತ್ತು ಹೃದಯಕ್ಕೆ ಮುದ್ರೆಯೊತ್ತಿರುವನು ಮತ್ತು ಅವನ ಕಣ್ಣಿನ ಮೇಲೆ ಒಂದು ಪರದೆಯನ್ನು ಇಟ್ಟಿರುವನು. ಹಾಗಾದರೆ ಅಲ್ಲಾಹುವಿನ ಹೊರತು ಅವನನ್ನು ಸನ್ಮಾರ್ಗದಲ್ಲಿ ಸೇರಿಸುವವರಾದರೂ ಯಾರು? ಆದರೂ ನೀವು ಚಿಂತಿಸಿ ಗ್ರಹಿಸಲಾರಿರೇ?

ٱللَّهُ عَلَىٰ عِلْمٍ وَخَتَمَ عَلَىٰ سَمْعِهِۦ وَقَلْبِهِۦ وَجَعَلَ عَلَىٰ بَصَرِهِۦ غِشَٰوَةً فَمَن يَهْدِيهِ مِنۢ بَعْدِ ٱللَّهِ ۚ أَفَلَا تَذَكَّرُونَ ٢٣

**24.** ಅವರು ಹೇಳಿದರು: ‘ಜೀವನವೆಂದರೆ ನಮ್ಮ ಐಹಿಕ ಜೀವನ ಮಾತ್ರವಾಗಿದೆ. ನಾವು ಮೃತಪಡುತ್ತೇವೆ. ನಾವು ಬದುಕುತ್ತೇವೆ. ನಮ್ಮನ್ನು ನಾಶ ಮಾಡುವುದು ಕಾಲ ಮಾತ್ರವಾಗಿದೆ’. (ವಾಸ್ತವಿಕವಾಗಿ) ಅವರಿಗೆ ಅದರ ಬಗ್ಗೆ ಯಾವ ಅರಿವೂ ಇಲ್ಲ. ಅವರು ಊಹಿಸುವುದನ್ನು ಮಾತ್ರ ಮಾಡುತ್ತಿರುವರು.

وَقَالُوا۟ مَا هِىَ إِلَّا حَيَاتُنَا ٱلدُّنْيَا نَمُوتُ وَنَحْيَا وَمَا يُهْلِكُنَآ إِلَّا ٱلدَّهْرُ ۚ وَمَا لَهُم بِذَٰلِكَ مِنْ عِلْمٍ ۖ إِنْ هُمْ إِلَّا يَظُنُّونَ ٢٤

**25.** ನಮ್ಮ ದೃಷ್ಟಾಂತಗಳನ್ನು ಅವರಿಗೆ ಸ್ಪಷ್ಟವಾಗಿ ಓದಿಕೊಡಲಾದರೆ ‘ನೀವು ಸತ್ಯಸಂಧರಾಗಿದ್ದರೆ ನಮ್ಮ ಪೂರ್ವಿಕರನ್ನು (ಜೀವಂತವಾಗಿ) ತನ್ನಿರಿ’ ಎಂದು ಹೇಳುವುದರ ಹೊರತು ಅವರ ವಾದವು ಇನ್ನೇನೂ ಆಗಿರದು.

وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ مَّا كَانَ حُجَّتَهُمْ إِلَّآ أَن قَالُوا۟ ٱئْتُوا۟ بِـَٔابَآئِنَآ إِن كُنتُمْ صَٰدِقِينَ ٢٥

**26.** ಹೇಳಿರಿ: ‘ಅಲ್ಲಾಹು ನಿಮಗೆ ಜೀವ ನೀಡುವನು. ತರುವಾಯ ಅವನು ನಿಮ್ಮನ್ನು ಮೃತಪಡಿಸುವನು. ತರುವಾಯ ಪುನರುತ್ಥಾನ ದಿನದೆಡೆಗೆ ಅವನು ನಿಮ್ಮನ್ನು ಒಟ್ಟುಗೂಡಿಸುವನು. ಅದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಮನುಷ್ಯರಲ್ಲಿ ಹೆಚ್ಚಿನವರೂ ಅರಿಯುವುದಿಲ್ಲ.

قُلِ ٱللَّهُ يُحْيِيكُمْ ثُمَّ يُمِيتُكُمْ ثُمَّ يَجْمَعُكُمْ إِلَىٰ يَوْمِ ٱلْقِيَٰمَةِ لَا رَيْبَ فِيهِ وَلَٰكِنَّ أَكْثَرَ ٱلنَّاسِ لَا يَعْلَمُونَ ٢٦

**27.** ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗಾಗಿದೆ. ಆ ಅಂತ್ಯಘಳಿಗೆಯು ಅಸ್ತಿತ್ವಕ್ಕೆ ಬರುವ ದಿನ!

وَلِلَّهِ مُلْكُ ٱلسَّمَٰوَٰتِ وَٱلْأَرْضِ ۚ وَيَوْمَ تَقُومُ ٱلسَّاعَةُ يَوْمَئِذٍ يَخْسَرُ ٱلْمُبْطِلُونَ ٢٧

1 ತನಗೆ ತೋಚಿದ್ದೆಲ್ಲದಕ್ಕೂ ದೇವತ್ವವನ್ನು ನೀಡಿ ತನ್ನಿಷ್ಟ ಪ್ರಕಾರ ಆರಾಧಿಸುವವರ ಕುರಿತು ಈ ಸೂಕ್ತಿಯು ಅವತೀರ್ಣಗೊಂಡಿತೆಂದು ಇದರ ಅವತೀರ್ಣ ಹಿನ್ನೆಲೆಯ ಕುರಿತು ಬಂದ ಸಹೀಹಾದ ವರದಿಗಳು ಸ್ಪಷ್ಟಪಡಿಸುತ್ತವೆ.

ಆ ದಿನದಂದು ಮಿಥ್ಯವಾದಿಗಳು ನಷ್ಟಕ್ಕೊಳಗಾಗುವರು.

28. (ಆ ದಿನದಂದು) ತಾವು ಎಲ್ಲ ಸಮುದಾಯಗಳನ್ನೂ ಮಂಡಿಯೂರಿದ ಸ್ಥಿತಿಯಲ್ಲಿ ಕಾಣುವಿರಿ. ಪ್ರತಿಯೊಂದು ಸಮುದಾಯವನ್ನೂ ಅದರ ದಾಖಲೆಯೆಡೆಗೆ ಕರೆಯಲಾಗುವುದು.[1] 'ನೀವು ಮಾಡಿರುವುದಕ್ಕೆ ಇಂದು ನಿಮಗೆ ಪ್ರತಿಫಲ ನೀಡಲಾಗುವುದು' (ಎಂದು ಅವರೊಂದಿಗೆ ಹೇಳಲಾಗುವುದು).

وَتَرَىٰ كُلَّ أُمَّةٍ جَاثِيَةً ۚ كُلُّ أُمَّةٍ تُدْعَىٰٓ إِلَىٰ كِتَـٰبِهَا ٱلْيَوْمَ تُجْزَوْنَ مَا كُنتُمْ تَعْمَلُونَ ﴿٢٨﴾

29. ಇದು ನಮ್ಮ ದಾಖಲೆ! ಇದು ನಿಮ್ಮ ವಿರುದ್ಧ ಸತ್ಯವನ್ನು ಹೇಳಲಿದೆ. ಖಂಡಿತವಾಗಿಯೂ ನೀವು ಮಾಡಿಕೊಂಡಿರುವುದನ್ನೆಲ್ಲ ನಾವು ದಾಖಲಿಸುತ್ತಿದ್ದೆವು.

هَـٰذَا كِتَـٰبُنَا يَنطِقُ عَلَيْكُم بِٱلْحَقِّ ۚ إِنَّا كُنَّا نَسْتَنسِخُ مَا كُنتُمْ تَعْمَلُونَ ﴿٢٩﴾

30. ಆದರೆ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರನ್ನು ಅವರ ರಬ್ ತನ್ನ ಕರುಣೆಯಲ್ಲಿ ಪ್ರವೇಶಮಾಡಿಸುವನು. ಸ್ಪಷ್ಟವಾದ ವಿಜಯವು ಅದೇ ಆಗಿದೆ.

فَأَمَّا ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ فَيُدْخِلُهُمْ رَبُّهُمْ فِى رَحْمَتِهِۦ ۚ ذَٰلِكَ هُوَ ٱلْفَوْزُ ٱلْمُبِينُ ﴿٣٠﴾

31. ಆದರೆ ಅವಿಶ್ವಾಸವಿಟ್ಟವರಾರೋ, (ಅವರೊಂದಿಗೆ ಹೇಳಲಾಗುವುದು) 'ನನ್ನ ದೃಷ್ಟಾಂತಗಳನ್ನು ನಿಮಗೆ ಓದಿಕೊಡಲಾಗಿಲ್ಲವೇ? ಆದರೂ ನೀವು ಅಹಂಕಾರಪಟ್ಟಿರಿ ಮತ್ತು ಪಾಪಿಗಳಾದ ಒಂದು ಜನತೆಯಾಗಿ ಮಾರ್ಪಟ್ಟಿರಿ'.

وَأَمَّا ٱلَّذِينَ كَفَرُوٓا۟ أَفَلَمْ تَكُنْ ءَايَـٰتِى تُتْلَىٰ عَلَيْكُمْ فَٱسْتَكْبَرْتُمْ وَكُنتُمْ قَوْمًا مُّجْرِمِينَ ﴿٣١﴾

32. 'ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ. ಆ ಅಂತ್ಯಘಳಿಗೆಯ ವಿಷಯದಲ್ಲಿ ಯಾವುದೇ ಸಂದೇಹವೂ ಇಲ್ಲ' ಎಂದು ಹೇಳಲಾದರೆ 'ಅಂತ್ಯಘಳಿಗೆಯೆಂದರೆ ಏನೆಂದು

وَإِذَا قِيلَ إِنَّ وَعْدَ ٱللَّهِ حَقٌّ وَٱلسَّاعَةُ لَا رَيْبَ فِيهَا قُلْتُم مَّا نَدْرِى مَا ٱلسَّاعَةُ إِن نَّظُنُّ إِلَّا ظَنًّا وَمَا نَحْنُ بِمُسْتَيْقِنِينَ ﴿٣٢﴾

---

1 ಯಾವುದೇ ವಿಶ್ವಾಸಾಚಾರವನ್ನು ಹೊಂದಿದವನಾಗಿರಲಿ ಅಥವಾ ಯಾವುದೇ ಧರ್ಮದಲ್ಲಿ, ವಿಭಾಗದಲ್ಲಿ ಸೇರಿದವನಾಗಿರಲಿ ಅವನ ಕರ್ಮಗಳನ್ನು ನಿಖರವಾಗಿ ದಾಖಲಿಸಲಾದ ಗ್ರಂಥವನ್ನು ಅವನಿಗೆ ನೀಡಲಾಗುವುದು. ಅದರ ಆಧಾರದಲ್ಲೇ ಅವರನ್ನು ವಿಚಾರಣೆ ಮಾಡಲಾಗುವುದು. ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ ಇಲ್ಲಿ ಹೇಳಲಾಗಿರುವ 'ದಾಖಲೆ' ಎಂದರೆ ಅದು ಪ್ರತಿಯೊಂದು ಸಮುದಾಯಕ್ಕೂ ನೀಡಲಾಗಿರುವ ಗ್ರಂಥವಾಗಿದೆ. ಪ್ರತಿಯೊಂದು ಸಮುದಾಯವನ್ನೂ ಅದಕ್ಕೆ ನೀಡಲಾದ ಗ್ರಂಥದ ಆಧಾರದಲ್ಲೇ ವಿಚಾರಣೆ ಮಾಡಲಾಗುವುದುಎಂದಾಗಿದೆ ಇದರ ತಾತ್ಪರ್ಯವೆಂದು ಅವರು ಹೇಳುತ್ತಾರೆ.

ನಮಗೆ ತಿಳಿದಿಲ್ಲ. ನಮಗಿರುವುದು ಒಂದು ಊಹೆ ಮಾತ್ರವಾಗಿದೆ. ನಮಗೆ ಯಾವ ಖಾತ್ರಿಯೂ ಇಲ್ಲ' ಎಂದು ನೀವು ಹೇಳುವಿರಿ.

وَبَدَا لَهُمْ سَيِّـَٔاتُ مَا عَمِلُواْ وَحَاقَ بِهِم مَّا كَانُواْ بِهِۦ يَسْتَهْزِءُونَ ٣٣

33. ಅವರು ಮಾಡಿರುವುದರ ಕೆಡುಕುಗಳು ಅವರಿಗೆ ಗೋಚರವಾಗುವುದು. ಅವರು ಏನನ್ನು ಗೇಲಿ ಮಾಡುತ್ತಿದ್ದರೋ ಅದು ಅವರನ್ನು ಆವರಿಸುವುದು.

وَقِيلَ ٱلْيَوْمَ نَنسَىٰكُمْ كَمَا نَسِيتُمْ لِقَآءَ يَوْمِكُمْ هَٰذَا وَمَأْوَىٰكُمُ ٱلنَّارُ وَمَا لَكُم مِّن نَّٰصِرِينَ ٣٤

34. (ಅವರೊಂದಿಗೆ) ಹೇಳಲಾಗುವುದು: 'ನಿಮ್ಮ ಈ ದಿನದ ಭೇಟಿಯನ್ನು ನೀವು ಮರೆತಂತೆ ಇಂದು ನಿಮ್ಮನ್ನೂ ನಾವು ಮರೆಯುವೆವು. ನಿಮ್ಮ ವಾಸಸ್ಥಳವು ನರಕವಾಗಿದೆ. ನಿಮಗೆ ಸಹಾಯಕರಾಗಿ ಯಾರೂ ಇಲ್ಲ'.

ذَٰلِكُم بِأَنَّكُمُ ٱتَّخَذْتُمْ ءَايَٰتِ ٱللَّهِ هُزُوًا وَغَرَّتْكُمُ ٱلْحَيَوٰةُ ٱلدُّنْيَا ۚ فَٱلْيَوْمَ لَا يُخْرَجُونَ مِنْهَا وَلَا هُمْ يُسْتَعْتَبُونَ ٣٥

35. ಇದೇಕೆಂದರೆ ನೀವು ಅಲ್ಲಾಹುವಿನ ದೃಷ್ಟಾಂತಗಳನ್ನು ಗೇಲಿ ಮಾಡಿರುವಿರಿ ಮತ್ತು ಐಹಿಕ ಜೀವನವು ನಿಮ್ಮನ್ನು ವಂಚಿಸಿದೆ ಎಂಬುದರಿಂದಾಗಿದೆ. ಆದ್ದರಿಂದ ಇಂದು ಅವರನ್ನು ಅಲ್ಲಿಂದ ಹೊರತರಲಾಗದು. ಅವರೊಂದಿಗೆ ಪ್ರಾಯಶ್ಚಿತ್ತವನ್ನೂ ಕೇಳಲಾಗದು.

فَلِلَّهِ ٱلْحَمْدُ رَبِّ ٱلسَّمَٰوَٰتِ وَرَبِّ ٱلْأَرْضِ رَبِّ ٱلْعَٰلَمِينَ ٣٦

36. ಆದ್ದರಿಂದ ಆಕಾಶಗಳ ರಬ್, ಭೂಮಿಯ ರಬ್ ಮತ್ತು ಸರ್ವಲೋಕಗಳ ರಬ್ಬಾಗಿರುವ ಅಲ್ಲಾಹುವಿಗೆ ಸ್ತುತಿ.

وَلَهُ ٱلْكِبْرِيَآءُ فِى ٱلسَّمَٰوَٰتِ وَٱلْأَرْضِ ۖ وَهُوَ ٱلْعَزِيزُ ٱلْحَكِيمُ ٣٧

37. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಮಹಾತ್ಮೆಯು ಅವನಿಗೇ ಆಗಿದೆ. ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

## ಅಲ್‌ಅಹ್ಕಾಫ್[1]

## سُورَةُ الأَحۡقَافِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 35

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1-2. ಹಾ–ಮೀಮ್. ಈ ಗ್ರಂಥದ ಅವತೀರ್ಣವು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಿನ ವತಿಯಿಂದಾಗಿದೆ.

حمٓ ١ تَنزِيلُ ٱلۡكِتَٰبِ مِنَ ٱللَّهِ ٱلۡعَزِيزِ ٱلۡحَكِيمِ ٢

3. ನಾವು ಆಕಾಶಗಳನ್ನು, ಭೂಮಿಯನ್ನು ಮತ್ತು ಅವುಗಳ ಮಧ್ಯೆಯಿರುವವುಗಳನ್ನು ಸತ್ಯದೊಂದಿಗೆ ಮತ್ತು ಒಂದು ನಿಶ್ಚಿತ ಅವಧಿಯವರೆಗೆ ವಿನಾ ಸೃಷ್ಟಿಸಿಲ್ಲ. ಸತ್ಯನಿಷೇಧಿಗಳು ತಮಗೆ ಎಚ್ಚರಿಕೆ ನೀಡಲಾಗಿರುವುದನ್ನು ಕಡೆಗಣಿಸಿ ವಿಮುಖರಾಗುತ್ತಿರುವರು.

مَا خَلَقۡنَا ٱلسَّمَٰوَٰتِ وَٱلۡأَرۡضَ وَمَا بَيۡنَهُمَآ إِلَّا بِٱلۡحَقِّ وَأَجَلٖ مُّسَمّٗىۚ وَٱلَّذِينَ كَفَرُواْ عَمَّآ أُنذِرُواْ مُعۡرِضُونَ ٣

4. (ಓ ಪ್ರವಾದಿಯವರೇ!) ಹೇಳಿರಿ: 'ಅಲ್ಲಾಹುವಿನ ಹೊರತು ನೀವು ಕರೆದು ಪ್ರಾರ್ಥಿಸುತ್ತಿರುವುದರ ಕುರಿತು ನೀವು ಚಿಂತಿಸಿರುವಿರಾ? ಅವರು ಭೂಮಿಯಲ್ಲಿ ಏನನ್ನು ಸೃಷ್ಟಿಸಿರುವರೆಂದು ನನಗೆ ತೋರಿಸಿಕೊಡಿರಿ ಅಥವಾ ಆಕಾಶಗಳ ಸೃಷ್ಟಿಯಲ್ಲಿ ಅವರಿಗೆ ಏನಾದರೂ ಸಹಭಾಗಿತ್ವವಿದೆಯೇ? ನೀವು ಸತ್ಯವಂತರಾಗಿದ್ದರೆ ಇದಕ್ಕಿಂತ ಮುಂಚಿನ ಯಾವುದಾದರೂ ಗ್ರಂಥವನ್ನು ಅಥವಾ ಜ್ಞಾನದ ಕುರುಹನ್ನು ನನ್ನ ಬಳಿಗೆ ತನ್ನಿರಿ'.

قُلۡ أَرَءَيۡتُم مَّا تَدۡعُونَ مِن دُونِ ٱللَّهِ أَرُونِي مَاذَا خَلَقُواْ مِنَ ٱلۡأَرۡضِ أَمۡ لَهُمۡ شِرۡكٞ فِي ٱلسَّمَٰوَٰتِۖ ٱئۡتُونِي بِكِتَٰبٖ مِّن قَبۡلِ هَٰذَآ أَوۡ أَثَٰرَةٖ مِّنۡ عِلۡمٍ إِن كُنتُمۡ صَٰدِقِينَ ٤

5. ಅಲ್ಲಾಹುವಿನ ಹೊರತು ಪುನರುತ್ಥಾನ ದಿನದವರೆಗೆ ತನಗೆ ಉತ್ತರ ನೀಡದವರನ್ನು ಕರೆದು ಪ್ರಾರ್ಥಿಸುವವನಿಗಿಂತಲೂ ದೊಡ್ಡ ಪಥಭ್ರಷ್ಟನು ಇನ್ನಾರಿರುವನು? ಅವರು ಇವರ ಪ್ರಾರ್ಥನೆಯ ಕುರಿತು ಅಲಕ್ಷ್ಯರಾಗಿರುವರು.

وَمَنۡ أَضَلُّ مِمَّن يَدۡعُواْ مِن دُونِ ٱللَّهِ مَن لَّا يَسۡتَجِيبُ لَهُۥٓ إِلَىٰ يَوۡمِ ٱلۡقِيَٰمَةِ وَهُمۡ عَن دُعَآئِهِمۡ غَٰفِلُونَ ٥

1 ಉದ್ದಕ್ಕೆ ಹರಡಿಕೊಂಡಿರುವ ಮರಳು ರಾಶಿಗಳಿಂದ ತುಂಬಿದ ಪ್ರದೇಶವನ್ನು ಅಹ್ಕಾಫ್ ಎನ್ನಲಾಗುತ್ತದೆ. 21ನೇ ಸೂಕ್ತಿಯಲ್ಲಿ ಆದ್ ಜನತೆಯು ವಾಸಿಸುತ್ತಿದ್ದ ಅಹ್ಕಾಫ್ ಎಂಬ ಪ್ರದೇಶದ ಕುರಿತು ಪ್ರಸ್ತಾಪವಿರುವುದರಿಂದ ಪ್ರಸ್ತುತ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

6. ಮನುಷ್ಯರನ್ನು ಒಟ್ಟುಗೂಡಿಸಲಾಗುವಾಗ ಅವರು ಇವರ ಶತ್ರುಗಳಾಗುವರು. ಇವರು ಆರಾಧನೆ ಮಾಡಿರುವುದನ್ನು ಅವರು ನಿಷೇಧಿಸುವರು.(1)

وَإِذَا حُشِرَ ٱلنَّاسُ كَانُواْ لَهُمۡ أَعۡدَآءٗ وَكَانُواْ بِعِبَادَتِهِمۡ كَٰفِرِينَ ٦

7. ಸ್ಪಷ್ಟವಾದ ರೀತಿಯಲ್ಲಿ ನಮ್ಮ ದೃಷ್ಟಾಂತಗಳನ್ನು ಅವರಿಗೆ ಓದಿಕೊಡಲಾದರೆ ಸತ್ಯವು ತಮ್ಮ ಬಳಿಗೆ ಬಂದಾಗ ಅದರ ಕುರಿತು ಆ ಸತ್ಯನಿಷೇಧಿಗಳು ಹೇಳುವರು: 'ಇದೊಂದು ಸ್ಪಷ್ಟವಾದ ಮಾಂತ್ರಿಕತೆಯಾಗಿದೆ'.

وَإِذَا تُتۡلَىٰ عَلَيۡهِمۡ ءَايَٰتُنَا بَيِّنَٰتٖ قَالَ ٱلَّذِينَ كَفَرُواْ لِلۡحَقِّ لَمَّا جَآءَهُمۡ هَٰذَا سِحۡرٞ مُّبِينٌ ٧

8. ಅಥವಾ ಇದನ್ನು ಅವರು (ಪ್ರವಾದಿಯವರು) ಸ್ವತಃ ರಚಿಸಿದರು ಎಂದು ಅವರು ಹೇಳುತ್ತಿರುವರೇ? ತಾವು ಹೇಳಿರಿ: 'ಇದು ಸ್ವತಃ ನಾನೇ ರಚಿಸಿದ್ದಾಗಿದ್ದರೆ ಅಲ್ಲಾಹುವಿನ ಶಿಕ್ಷೆಯಿಂದ ನನಗೆ ಸ್ವಲ್ಪವಾದರೂ ರಕ್ಷಣೆ ಒದಗಿಸಲು ನಿಮ್ಮಿಂದ ಸಾಧ್ಯವಾಗದು. ಅದರ (ಕುರ್‌ಆನಿನ) ಬಗ್ಗೆ ನೀವು ಮಾತುಕತೆಯಲ್ಲಿ ತಲ್ಲೀನರಾಗುವುದನ್ನು ಅವನು ಚೆನ್ನಾಗಿ ಅರಿಯುವವನಾಗಿರುವನು. ನನ್ನ ಮತ್ತು ನಿಮ್ಮ ಮಧ್ಯೆ ಸಾಕ್ಷಿಯಾಗಿ ಅವನು ಸಾಕು. ಅವನು ಅತ್ಯಧಿಕ ಕ್ಷಮಿಸುವವನೂ, ಅಪಾರ ಕರುಣೆಯುಳ್ಳವನೂ ಆಗಿರುವನು'.

أَمۡ يَقُولُونَ ٱفۡتَرَىٰهُۖ قُلۡ إِنِ ٱفۡتَرَيۡتُهُۥ فَلَا تَمۡلِكُونَ لِي مِنَ ٱللَّهِ شَيۡـًٔاۖ هُوَ أَعۡلَمُ بِمَا تُفِيضُونَ فِيهِۚ كَفَىٰ بِهِۦ شَهِيدَۢا بَيۡنِي وَبَيۡنَكُمۡۖ وَهُوَ ٱلۡغَفُورُ ٱلرَّحِيمُ ٨

9. (ಓ ಪ್ರವಾದಿಯವರೇ!) ಹೇಳಿರಿ: 'ನಾನು ಸಂದೇಶವಾಹಕರಲ್ಲಿ ಹೊಸಬನಲ್ಲ. ನನ್ನೊಂದಿಗಾಗಲಿ ಅಥವಾ ನಿಮ್ಮೊಂದಿಗಾಗಲಿ ಏನು ಮಾಡಲಾಗುವುದೆಂದು ನಾನು ಅರಿತಿಲ್ಲ. ನಾನು ಅನುಸರಿಸುತ್ತಿರುವುದು ನನಗೆ ದಿವ್ಯ ಸಂದೇಶವಾಗಿ ನೀಡಲಾಗುತ್ತಿರುವುದನ್ನು ಮಾತ್ರವಾಗಿದೆ. ನಾನೊಬ್ಬ ಸ್ಪಷ್ಟ ಮುನ್ನೆಚ್ಚರಿಕೆಗಾರನೇ ವಿನಾ ಇನ್ನೇನೂ ಅಲ್ಲ.

قُلۡ مَا كُنتُ بِدۡعٗا مِّنَ ٱلرُّسُلِ وَمَآ أَدۡرِي مَا يُفۡعَلُ بِي وَلَا بِكُمۡۖ إِنۡ أَتَّبِعُ إِلَّا مَا يُوحَىٰٓ إِلَيَّ وَمَآ أَنَا۠ إِلَّا نَذِيرٞ مُّبِينٞ ٩

1 ಅಲ್ಲಾಹುವೇತರರೊಂದಿಗೆ ಪ್ರಾರ್ಥಿಸುವುದು ಅವರಿಗೆ ಸಲ್ಲಿಸುವ ಆರಾಧನೆಯಾಗಿದೆ ಮತ್ತು ಅಲ್ಲಾಹುವಿನ ಹೊರತು ಯಾರೂ ಪ್ರಾರ್ಥನೆಗೆ ಉತ್ತರ ನೀಡುವುದಿಲ್ಲವೆಂದು 5–6 ಸೂಕ್ತಿಗಳು ಸ್ಪಷ್ಟಪಡಿಸುತ್ತವೆ. ಮಹಾತ್ಮರನ್ನು ಕರೆದು ಪ್ರಾರ್ಥಿಸುವ ಜನರಿಗೆ ಆ ಮಹಾತ್ಮರು ಪುನರುತ್ಥಾನದಿನದಂದು ಪ್ರೀತಿತೋರಲಾರರು. ಅವರಿಗಾಗಿ ಶಿಫಾರಸ್ಸು ಮಾಡಲಾರರು. ಬದಲಾಗಿ ಆ ಆರಾಧನೆಯನ್ನು ಅವರು ನಿಷೇಧಿಸುವರೆಂದು ಈ ಸೂಕ್ತಿಗಳು ನಮಗೆ ಮನದಟ್ಟು ಮಾಡಿಕೊಡುತ್ತವೆ.

10. (ಓ ಪ್ರವಾದಿಯವರೇ!) ಹೇಳಿರಿ: 'ನೀವೇನಾದರೂ ಚಿಂತಿಸಿ ನೋಡಿರುವಿರಾ? ಇದು (ಕುರ್‌ಆನ್) ಅಲ್ಲಾಹುವಿನ ವತಿಯಿಂದಾಗಿದ್ದು ನೀವು ಇದನ್ನು ನಿಷೇಧಿಸಿದ್ದು, ಇಂತಹುದೇ ಒಂದನ್ನು ಇಸ್ರಾಈಲ್ ಸಂತತಿಗಳ ಪೈಕಿ ಒಬ್ಬ ಸಾಕ್ಷಿಯು ಸಾಕ್ಷಿ ವಹಿಸಿದ್ದು,[(1)] ತರುವಾಯ ಅವನು (ಇದರಲ್ಲಿ) ವಿಶ್ವಾಸವಿಟ್ಟಿರುವಾಗ ನೀವು ಅಹಂಕಾರ ತೋರುವುದಾದರೆ (ನಿಮ್ಮ ಸ್ಥಿತಿ ಎಷ್ಟು ಶೋಚನೀಯವಾಗಿದೆ!) ಖಂಡಿತವಾಗಿಯೂ ಅಕ್ರಮಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗಕ್ಕೆ ಸೇರಿಸಲಾರನು'.

قُلۡ أَرَءَيۡتُمۡ إِن كَانَ مِنۡ عِندِ ٱللَّهِ وَكَفَرۡتُم بِهِۦ وَشَهِدَ شَاهِدٞ مِّنۢ بَنِيٓ إِسۡرَٰٓءِيلَ عَلَىٰ مِثۡلِهِۦ فَـَٔامَنَ وَٱسۡتَكۡبَرۡتُمۡۚ إِنَّ ٱللَّهَ لَا يَهۡدِي ٱلۡقَوۡمَ ٱلظَّٰلِمِينَ ١٠

11. ಸತ್ಯವಿಶ್ವಾಸಿಗಳ ಕುರಿತು ಸತ್ಯನಿಷೇಧಿಗಳು ಹೇಳಿದರು: 'ಇದೊಂದು ಒಳಿತಾಗಿದ್ದರೆ ನಮಗಿಂತ ಮುಂಚಿತವಾಗಿ ಇವರು ಅದನ್ನು ತಲುಪುತ್ತಿರಲಿಲ್ಲ'. ಇದರ ಮೂಲಕ ಅವರು ಸನ್ಮಾರ್ಗವನ್ನು ಪಡೆಯದಿರುವ ಕಾರಣ ಅವರು ಹೇಳುವರು: 'ಇದೊಂದು ಪುರಾತನ ಕಾಲದ ಕಟ್ಟುಕಥೆಯಾಗಿದೆ'.

وَقَالَ ٱلَّذِينَ كَفَرُواْ لِلَّذِينَ ءَامَنُواْ لَوۡ كَانَ خَيۡرٗا مَّا سَبَقُونَآ إِلَيۡهِۚ وَإِذۡ لَمۡ يَهۡتَدُواْ بِهِۦ فَسَيَقُولُونَ هَٰذَآ إِفۡكٞ قَدِيمٞ ١١

12. ಇದಕ್ಕಿಂತ ಮುಂಚೆ ಮೂಸಾರ ಗ್ರಂಥವು ಮಾದರಿಯೋಗ್ಯವಾಗಿ ಮತ್ತು ಕಾರುಣ್ಯವಾಗಿ ಬಂದಿತ್ತು. ಇದು (ಅದನ್ನು) ದೃಢೀಕರಿಸುವ ಮತ್ತು ಅರಬಿ ಭಾಷೆಯಲ್ಲಿರುವ ಒಂದು ಗ್ರಂಥವಾಗಿದೆ. ಅಕ್ರಮಿಗಳಿಗೆ ಎಚ್ಚರಿಕೆ ನೀಡುವ ಸಲುವಾಗಿ ಮತ್ತು ಸತ್ಕರ್ಮಿಗಳಿಗೆ ಶುಭವಾರ್ತೆ ತಿಳಿಸುವ ಸಲುವಾಗಿ.

وَمِن قَبۡلِهِۦ كِتَٰبُ مُوسَىٰٓ إِمَامٗا وَرَحۡمَةٗۚ وَهَٰذَا كِتَٰبٞ مُّصَدِّقٞ لِّسَانًا عَرَبِيّٗا لِّيُنذِرَ ٱلَّذِينَ ظَلَمُواْ وَبُشۡرَىٰ لِلۡمُحۡسِنِينَ ١٢

13. 'ನಮ್ಮ ರಬ್ ಅಲ್ಲಾಹುವಾಗಿರುವನು' ಎಂದು ಹೇಳಿ ತರುವಾಯ ನೇರವಾಗಿ ನೆಲೆನಿಂತವರು ಯಾರೋ ಅವರಿಗೆ ಯಾವ ಭಯವೂ

إِنَّ ٱلَّذِينَ قَالُواْ رَبُّنَا ٱللَّهُ ثُمَّ ٱسۡتَقَٰمُواْ فَلَا خَوۡفٌ عَلَيۡهِمۡ وَلَا هُمۡ يَحۡزَنُونَ ١٣

1 ಆಗಮಿಸಲಿರುವ ಪ್ರವಾದಿಯ ಕುರಿತು ಬೈಬಲ್‌ನಲ್ಲಿರುವ ಪ್ರತಿಪಾದನೆಗಳ ಬುನಾದಿಯಲ್ಲಿ ಪ್ರವಾದಿ(ﷺ) ರವರ ಕಾಲದ ಯಹೂದ, ಕ್ರೈಸ್ತ ಸಮುದಾಯಗಳಲ್ಲಿ ಸೇರಿದ ಅನೇಕ ಮಂದಿ ಕುರ್‌ಆನ್ ಮತ್ತು ಪ್ರವಾದಿ(ﷺ) ರವರ ಪ್ರವಾದಿತ್ವದಲ್ಲಿ ವಿಶ್ವಾಸ ತಾಳಿದ್ದರು.

ಇರಲಾರದು. ಅವರು ದುಃಖಿಸಬೇಕಾಗಿಯೂ ಬರದು.

**14.** ಅವರು ಸ್ವರ್ಗವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಇದು ಅವರು ಮಾಡಿರುವುದಕ್ಕಿರುವ ಪ್ರತಿಫಲವಾಗಿದೆ.

أُوْلَٰٓئِكَ أَصْحَٰبُ ٱلْجَنَّةِ خَٰلِدِينَ فِيهَا جَزَآءَۢ بِمَا كَانُواْ يَعْمَلُونَ ١٤

**15.** ತನ್ನ ಮಾತಾಪಿತರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ನಾವು ಮನುಷ್ಯನಿಗೆ ಉಪದೇಶ ಮಾಡಿರುವೆವು. ಅವನ ತಾಯಿ ಬಹಳ ಕಷ್ಟದಿಂದ ಅವನನ್ನು ಗರ್ಭ ಧರಿಸಿರುವಳು ಮತ್ತು ಬಹಳ ಕಷ್ಟದಿಂದಲೇ ಅವನಿಗೆ ಜನ್ಮ ನೀಡಿರುವಳು. ಅವನ ಗರ್ಭಧಾರಣೆ ಮತ್ತು ಸ್ತನಪಾನ ಬಿಡಿಸುವ ಕಾಲವು ಸೇರಿ ಒಟ್ಟು ಮೂವತ್ತು ಮಾಸಗಳಾಗಿವೆ.(1) ಕೊನೆಗೆ ಅವನು ತನ್ನ ಪೂರ್ಣ ಬಲವನ್ನು ಪಡೆದು ನಲ್ವತ್ತು ವಯಸ್ಸಿನವನಾದಾಗ ಅವನು ಹೇಳುವನು: 'ಓ ನನ್ನ ರಬ್! ನನಗೆ ಮತ್ತು ನನ್ನ ಹೆತ್ತವರಿಗೆ ನೀನು ದಯಪಾಲಿಸಿರುವ ಅನುಗ್ರಹಗಳಿಗಾಗಿ ಕೃತಜ್ಞತೆ ಸಲ್ಲಿಸಲು ಮತ್ತು ನೀನು ಸಂತೃಪ್ತನಾಗುವ ಸತ್ಕರ್ಮವನ್ನು ಮಾಡಲು ನನಗೆ ಪ್ರೇರಣೆ ನೀಡು. ನನ್ನ ಸಂತತಿಗಳಲ್ಲಿ ನನಗೆ ಒಳಿತನ್ನುಂಟುಮಾಡು. ಖಂಡಿತವಾಗಿಯೂ ನಾನು ನಿನ್ನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರುವೆನು. ಖಂಡಿತವಾಗಿಯೂ ನಾನು ಶರಣಾಗತರಾಗುವವರ ಪೈಕಿ ಸೇರಿದವನಾಗಿರುವೆನು'.

وَوَصَّيْنَا ٱلْإِنسَٰنَ بِوَٰلِدَيْهِ إِحْسَٰنًا ۖ حَمَلَتْهُ أُمُّهُۥ كُرْهًا وَوَضَعَتْهُ كُرْهًا ۖ وَحَمْلُهُۥ وَفِصَٰلُهُۥ ثَلَٰثُونَ شَهْرًا ۚ حَتَّىٰٓ إِذَا بَلَغَ أَشُدَّهُۥ وَبَلَغَ أَرْبَعِينَ سَنَةً قَالَ رَبِّ أَوْزِعْنِىٓ أَنْ أَشْكُرَ نِعْمَتَكَ ٱلَّتِىٓ أَنْعَمْتَ عَلَىَّ وَعَلَىٰ وَٰلِدَىَّ وَأَنْ أَعْمَلَ صَٰلِحًا تَرْضَىٰهُ وَأَصْلِحْ لِى فِى ذُرِّيَّتِىٓ ۖ إِنِّى تُبْتُ إِلَيْكَ وَإِنِّى مِنَ ٱلْمُسْلِمِينَ ١٥

**16.** ಅಂತಹ ಜನರಿಂದ ಅವರು ಮಾಡಿರುವ ಕರ್ಮಗಳಲ್ಲಿ ಅತ್ಯುತ್ತಮವಾಗಿರುವುದನ್ನು ನಾವು

أُوْلَٰٓئِكَ ٱلَّذِينَ نَتَقَبَّلُ عَنْهُمْ أَحْسَنَ

1 ಪೂರ್ಣವಾದ ಸ್ತನಪಾನ ಅವಧಿಯು ಎರಡು ವರ್ಷಗಳಾಗಿವೆಯೆಂದು 31:14ರಲ್ಲಿ ಹೇಳಲಾಗಿದೆ. ಆದ್ದರಿಂದ ಗರ್ಭಧಾರಣೆಯ ಅತ್ಯಂತ ಕನಿಷ್ಠ ಸಮಯವು ಆರು ತಿಂಗಳಾಗಿವೆಯೆಂದು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ. 30ರಿಂದ 34ರವರೆಗಿನ ತಿಂಗಳುಗಳಾಗಿ ಬದಲಾಗುತ್ತಾ ಬರುವ ಒಂದು ಕಾಲಾವಧಿಯನ್ನು ಸೂಚಿಸಲು 30 ತಿಂಗಳು ಎಂದು ಹೇಳುವ ಪರಿಪಾಠವಿದೆ.

مَا عَمِلُواْ وَنَتَجَاوَزُ عَن سَيِّـَٔاتِهِمۡ فِيٓ
أَصۡحَٰبِ ٱلۡجَنَّةِۖ وَعۡدَ ٱلصِّدۡقِ ٱلَّذِي كَانُواْ
يُوعَدُونَ ١٦

ಸ್ವೀಕರಿಸುವೆವು. ಅವರ ದುಷ್ಕರ್ಮಗಳನ್ನು ನಾವು ಮನ್ನಿಸುವೆವು. (ಅವರು) ಸ್ವರ್ಗವಾಸಿಗಳ ಪೈಕಿ ಸೇರಿದವರಾಗಿರುವರು. ಅದು ಅವರಿಗೆ ನೀಡಲಾಗಿರುವ ಸತ್ಯ ವಾಗ್ದಾನವಾಗಿದೆ.

وَٱلَّذِي قَالَ لِوَٰلِدَيۡهِ أُفّٖ لَّكُمَآ أَتَعِدَانِنِيٓ
أَنۡ أُخۡرَجَ وَقَدۡ خَلَتِ ٱلۡقُرُونُ مِن قَبۡلِي
وَهُمَا يَسۡتَغِيثَانِ ٱللَّهَ وَيۡلَكَ ءَامِنۡ إِنَّ
وَعۡدَ ٱللَّهِ حَقّٞ فَيَقُولُ مَا هَٰذَآ إِلَّآ أَسَٰطِيرُ
ٱلۡأَوَّلِينَ ١٧

17. ಒಬ್ಬನು ತನ್ನ ಹೆತ್ತವರೊಂದಿಗೆ ಹೇಳಿದನು: 'ಛೇ! ನಿಮಗೆ ನಾಶವಿರಲಿ! (ಮರಣಾನಂತರ) ನನ್ನನ್ನು ಹೊರತರಲಾಗುವುದೆಂದು ನೀವಿಬ್ಬರೂ ನನಗೆ ವಾಗ್ದಾನ ಮಾಡುತ್ತಿರುವಿರಾ? ನನಗಿಂತ ಮುಂಚೆ ತಲೆಮಾರುಗಳು ಗತಿಸಿಹೋಗಿವೆ'. ಅವರು (ಹೆತ್ತವರು) ಅಲ್ಲಾಹುವಿನೊಂದಿಗೆ ಸಹಾಯ ಬೇಡುತ್ತಾ ಹೇಳುವರು: 'ನಿನಗೆ ನಾಶ! ವಿಶ್ವಾಸವಿಡು! ಖಂಡಿತವಾಗಿಯೂ ಅಲ್ಲಾಹುವಿನ ವಾಗ್ದಾನವು ಸತ್ಯವಾಗಿದೆ'. ಆಗ ಅವನು ಹೇಳುವನು: 'ಇವು ಪೂರ್ವಿಕರ ಕಟ್ಟುಕಥೆಗಳು ಮಾತ್ರವಾಗಿವೆ'.

أُوْلَٰٓئِكَ ٱلَّذِينَ حَقَّ عَلَيۡهِمُ ٱلۡقَوۡلُ فِيٓ أُمَمٖ
قَدۡ خَلَتۡ مِن قَبۡلِهِم مِّنَ ٱلۡجِنِّ وَٱلۡإِنسِۖ
إِنَّهُمۡ كَانُواْ خَٰسِرِينَ ١٨

18. ಜಿನ್ನ್ ಮತ್ತು ಮನುಷ್ಯರಲ್ಲಿ ಅವರಿಗಿಂತ ಮುಂಚೆ ಗತಿಸಿಹೋಗಿರುವ ಅನೇಕ ಸಮುದಾಯಗಳ ಪೈಕಿ ಇಂತಹ ಜನರ ವಿಷಯದಲ್ಲಿ (ಶಿಕ್ಷೆಯ) ವಚನವು ಸತ್ಯವಾಗಿ ಪರಿಣಮಿಸಿದೆ. ಖಂಡಿತವಾಗಿಯೂ ಅವರು ನಷ್ಟ ಹೊಂದಿದವರಾಗಿರುವರು.

وَلِكُلّٖ دَرَجَٰتٞ مِّمَّا عَمِلُواْۖ وَلِيُوَفِّيَهُمۡ
أَعۡمَٰلَهُمۡ وَهُمۡ لَا يُظۡلَمُونَ ١٩

19. ಪ್ರತಿಯೊಬ್ಬರಿಗೂ ಅವರು ಮಾಡಿದ ಕರ್ಮಗಳಿಗೆ ಅನುಗುಣವಾಗಿ ಪದವಿಗಳಿರುವುವು. ಅದು ಅವರು ಮಾಡಿದ ಕರ್ಮಗಳ ಫಲವನ್ನು ಅವರಿಗೆ ಪೂರ್ಣವಾಗಿ ನೀಡುವ ಸಲುವಾಗಿದೆ. ಅವರೊಂದಿಗೆ ಅನ್ಯಾಯವೆಸಗಲಾಗದು.

وَيَوۡمَ يُعۡرَضُ ٱلَّذِينَ كَفَرُواْ عَلَى ٱلنَّارِ
أَذۡهَبۡتُمۡ طَيِّبَٰتِكُمۡ فِي حَيَاتِكُمُ ٱلدُّنۡيَا
وَٱسۡتَمۡتَعۡتُم بِهَا فَٱلۡيَوۡمَ تُجۡزَوۡنَ عَذَابَ
ٱلۡهُونِ بِمَا كُنتُمۡ تَسۡتَكۡبِرُونَ فِي ٱلۡأَرۡضِ
بِغَيۡرِ ٱلۡحَقِّ وَبِمَا كُنتُمۡ تَفۡسُقُونَ ٢٠

20. ಸತ್ಯನಿಷೇಧಿಗಳನ್ನು ನರಕಾಗ್ನಿಯ ಮುಂದೆ ಪ್ರದರ್ಶಿಸಲಾಗುವ ದಿನ! (ಅವರೊಂದಿಗೆ ಹೇಳಲಾಗುವುದು): 'ಐಹಿಕ ಜೀವನದಲ್ಲಿ ನಿಮ್ಮ ಉತ್ತಮ ವಸ್ತುಗಳನ್ನೆಲ್ಲ ನೀವು ಹಾಳು ಮಾಡಿದಿರಿ ಮತ್ತು ಅವುಗಳ ಮೂಲಕ ನೀವು ಸುಖವನ್ನು ಅನುಭವಿಸಿದಿರಿ. ಆದ್ದರಿಂದ ನೀವು

ಭೂಮಿಯಲ್ಲಿ ಅನ್ಯಾಯವಾಗಿ ಅಹಂಕಾರ ಪಟ್ಟ ಕಾರಣ ಮತ್ತು ಧಿಕ್ಕಾರ ತೋರಿದ ಕಾರಣ ಇಂದು ನಿಮಗೆ ನಿಂದ್ಯತೆಯ ಶಿಕ್ಷೆಯನ್ನು ಪ್ರತಿಫಲವಾಗಿ ನೀಡಲಾಗುವುದು.

21. ಆದ್ ಜನಾಂಗದವರ ಸಹೋದರನನ್ನು (ಹೂದ್‍ರನ್ನು) ಸ್ಮರಿಸಿರಿ. ಅಹ್ಕಾಫ್‍ನಲ್ಲಿರುವ ತನ್ನ ಜನರಿಗೆ ಆತ ಮುನ್ನೆಚ್ಚರಿಕೆ ನೀಡಿದ ಸಂದರ್ಭ.(1) ಅವರಿಗಿಂತ ಮುಂಚೆಯೂ ಅವರ ನಂತರವೂ ಮುನ್ನೆಚ್ಚರಿಕೆಗಾರರು ಗತಿಸಿ ಹೋಗಿರುವರು. ‘ನೀವು ಅಲ್ಲಾಹುವಿನ ಹೊರತು ಅನ್ಯರನ್ನು ಆರಾಧಿಸದಿರಿ. ಖಂಡಿತವಾಗಿಯೂ ನಾನು ನಿಮ್ಮ ಬಗ್ಗೆ ಭಯಾನಕವಾದ ದಿನವೊಂದರ ಶಿಕ್ಷೆಯನ್ನು ಭಯಪಡುತ್ತಿರುವೆನು’ (ಎಂದು ಅವರು ಎಚ್ಚರಿಸಿದರು).

۞ وَٱذۡكُرۡ أَخَا عَادٍ إِذۡ أَنذَرَ قَوۡمَهُۥ
بِٱلۡأَحۡقَافِ وَقَدۡ خَلَتِ ٱلنُّذُرُ مِنۢ بَيۡنِ
يَدَيۡهِ وَمِنۡ خَلۡفِهِۦٓ أَلَّا تَعۡبُدُوٓاْ إِلَّا
ٱللَّهَ إِنِّيٓ أَخَافُ عَلَيۡكُمۡ عَذَابَ يَوۡمٍ
عَظِيمٖ ٢١

22. ಅವರು ಹೇಳಿದರು: ‘ನಮ್ಮ ಆರಾಧ್ಯರಿಂದ ನಮ್ಮನ್ನು ತಿರುಗಿಸುವುದಕ್ಕಾಗಿ ನೀನು ನಮ್ಮ ಬಳಿಗೆ ಬಂದಿರುವಿಯಾ? ನೀನು ಸತ್ಯಸಂಧರಲ್ಲಿ ಸೇರಿದವನಾಗಿದ್ದರೆ ನಮಗೆ ಎಚ್ಚರಿಕೆ ನೀಡುವ (ಶಿಕ್ಷೆಯನ್ನು) ನಮ್ಮ ಬಳಿಗೆ ತಾ’.

قَالُوٓاْ أَجِئۡتَنَا لِتَأۡفِكَنَا عَنۡ ءَالِهَتِنَا فَأۡتِنَا
بِمَا تَعِدُنَآ إِن كُنتَ مِنَ ٱلصَّٰدِقِينَ ٢٢

23. ಆತ (ಹೂದ್) ಹೇಳಿದರು: ‘(ಅದಕ್ಕೆ ಸಂಬಂಧಿಸಿದ) ಜ್ಞಾನವಿರುವುದು ಅಲ್ಲಾಹುವಿನ ಬಳಿ ಮಾತ್ರವಾಗಿದೆ. ನನ್ನನ್ನು ಯಾವುದರೊಂದಿಗೆ ಕಳುಹಿಸಲಾಗಿದೆಯೋ ಅದನ್ನು ನಾನು ನಿಮಗೆ ತಲುಪಿಸಿಕೊಡುತ್ತಿರುವೆನು. ಆದರೆ ನಾನು ನಿಮ್ಮನ್ನು ಅವಿವೇಕಿಯಾದ ಒಂದು ಜನತೆಯಾಗಿ ಕಾಣುತ್ತಿರುವೆನು’.

قَالَ إِنَّمَا ٱلۡعِلۡمُ عِندَ ٱللَّهِ وَأُبَلِّغُكُم
مَّآ أُرۡسِلۡتُ بِهِۦ وَلَٰكِنِّيٓ أَرَىٰكُمۡ قَوۡمٗا
تَجۡهَلُونَ ٢٣

24. ತರುವಾಯ ಅವರು ಅದನ್ನು (ಶಿಕ್ಷೆಯನ್ನು) ತಮ್ಮ ಕಣಿವೆಗಳಿಗೆ ಅಭಿಮುಖವಾಗಿ ಪ್ರತ್ಯಕ್ಷವಾದ ಒಂದು ಮೋಡವಾಗಿ ಕಂಡಾಗ ಹೇಳಿದರು:

فَلَمَّا رَأَوۡهُ عَارِضٗا مُّسۡتَقۡبِلَ أَوۡدِيَتِهِمۡ
قَالُواْ هَٰذَا عَارِضٞ مُّمۡطِرُنَاۚ بَلۡ هُوَ مَا

1 ಅರೇಬಿಯಾದ ದಕ್ಷಿಣ ದಿಕ್ಕಿನ ಹದರ್‍ಮೌತ್‍ನಲ್ಲಿ ಮರಳ ರಾಶಿಗಳು ತುಂಬಿದ ಪ್ರದೇಶದಲ್ಲಿ (ಅಹ್ಕಾಫ್) ಆದ್ ಜನತೆಯು ವಾಸವಾಗಿತ್ತು. ಅವರೆಡೆಗೆ ಹೂದ್(عَلَيۡهِ ٱلسَّلَامُ)ರವರನ್ನು ಕಳುಹಿಸಲಾಗಿತ್ತು.

ٱسْتَعْجَلْتُم بِهِۦ رِيحٌ فِيهَا عَذَابٌ أَلِيمٌ ﴿٢٤﴾

'ಇದು ನಮಗೆ ಮಳೆಯನ್ನು ಸುರಿಸುವ ಒಂದು ಮೋಡವಾಗಿದೆ!' ಅಲ್ಲ, ಅದು ನೀವು ಯಾವುದಕ್ಕಾಗಿ ಆತುರಪಡುತ್ತಿದ್ದಿರೋ ಅದೇ ಆಗಿದೆ. ಯಾತನಾಮಯ ಶಿಕ್ಷೆಯನ್ನು ಹೊಂದಿರುವ ಒಂದು ಗಾಳಿ.

تُدَمِّرُ كُلَّ شَىْءٍۭ بِأَمْرِ رَبِّهَا فَأَصْبَحُوا۟ لَا يُرَىٰٓ إِلَّا مَسَـٰكِنُهُمْ ۚ كَذَٰلِكَ نَجْزِى ٱلْقَوْمَ ٱلْمُجْرِمِينَ ﴿٢٥﴾

25. ಅದು ತನ್ನ ರಬ್‌ನ ಆಜ್ಞೆಯಂತೆ ಸರ್ವ ವಸ್ತುಗಳನ್ನೂ ನಾಶ ಮಾಡುವುದು. ತರುವಾಯ ಅವರು ತಮ್ಮ ವಸತಿಗಳ ಹೊರತು ಬೇರೇನೂ ಗೋಚರವಾಗದ ಸ್ಥಿತಿಯಲ್ಲಾದರು. ಅಪರಾಧಿಗಳಾದ ಜನರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

وَلَقَدْ مَكَّنَّـٰهُمْ فِيمَآ إِن مَّكَّنَّـٰكُمْ فِيهِ وَجَعَلْنَا لَهُمْ سَمْعًا وَأَبْصَـٰرًا وَأَفْـِٔدَةً فَمَآ أَغْنَىٰ عَنْهُمْ سَمْعُهُمْ وَلَآ أَبْصَـٰرُهُمْ وَلَآ أَفْـِٔدَتُهُم مِّن شَىْءٍ إِذْ كَانُوا۟ يَجْحَدُونَ بِـَٔايَـٰتِ ٱللَّهِ وَحَاقَ بِهِم مَّا كَانُوا۟ بِهِۦ يَسْتَهْزِءُونَ ﴿٢٦﴾

26. ನಾವು ನಿಮಗೆ ಅಧಿಕಾರ ನೀಡದ ವಲಯಗಳಲ್ಲಿ ಅವರಿಗೆ ಅಧಿಕಾರ ನೀಡಿದ್ದೆವು. ಅವರಿಗೆ ಶ್ರವಣ, ದೃಷ್ಟಿ ಮತ್ತು ಹೃದಯಗಳನ್ನು ನೀಡಿದ್ದೆವು. ಆದರೆ ಅಲ್ಲಾಹುವಿನ ದೃಷ್ಟಾಂತಗಳನ್ನು ಅವರು ನಿಷೇಧಿಸಿದ್ದರಿಂದ ಅವರ ಶ್ರವಣ, ದೃಷ್ಟಿ ಮತ್ತು ಹೃದಯಗಳು ಅವರಿಗೆ ಯಾವುದೇ ಪ್ರಯೋಜನವನ್ನೂ ನೀಡಲಿಲ್ಲ. ಅವರು ಯಾವುದನ್ನು ಗೇಲಿ ಮಾಡುತ್ತಿದ್ದರೋ ಅದು ಅವರನ್ನು ಆವರಿಸಿತು.

وَلَقَدْ أَهْلَكْنَا مَا حَوْلَكُم مِّنَ ٱلْقُرَىٰ وَصَرَّفْنَا ٱلْـَٔايَـٰتِ لَعَلَّهُمْ يَرْجِعُونَ ﴿٢٧﴾

27. ನಿಮ್ಮ ಸುತ್ತಮುತ್ತಲಲ್ಲಿರುವ ಕೆಲವು ದೇಶಗಳನ್ನು ನಾವು ನಾಶ ಮಾಡಿರುವೆವು. ಅವರು ಸತ್ಯದೆಡೆಗೆ ಮರಳುವ ಸಲುವಾಗಿ ನಾವು ಪುರಾವೆಗಳನ್ನು ವಿವಿಧ ರೀತಿಯಲ್ಲಿ ವಿವರಿಸಿಕೊಟ್ಟಿದ್ದೆವು.

فَلَوْلَا نَصَرَهُمُ ٱلَّذِينَ ٱتَّخَذُوا۟ مِن دُونِ ٱللَّهِ قُرْبَانًا ءَالِهَةًۢ ۖ بَلْ ضَلُّوا۟ عَنْهُمْ ۚ وَذَٰلِكَ إِفْكُهُمْ وَمَا كَانُوا۟ يَفْتَرُونَ ﴿٢٨﴾

28. ಅವರು ಅಲ್ಲಾಹುವಿನ ಹೊರತು ಅವನೆಡೆಗೆ ಸಾಮೀಪ್ಯ ಪಡೆಯಲು ಆರಾಧ್ಯರನ್ನಾಗಿ ಮಾಡಿಕೊಂಡಿದ್ದವರು ಆ ಸಂದರ್ಭದಲ್ಲಿ ಅವರಿಗೇಕೆ ಸಹಾಯ ಮಾಡಲಿಲ್ಲ? ಅಲ್ಲ, ಅವರು (ಆರಾಧ್ಯರು) ಅವರನ್ನು ಬಿಟ್ಟು ಅಪ್ರತ್ಯಕ್ಷರಾದರು. ಅದು (ಬಹುದೇವವಿಶ್ವಾಸವು) ಅವರು ಸೃಷ್ಟಿಸಿದ ಮಿಥ್ಯೆಯೂ, ಅವರು ಕೃತಕವಾಗಿ ರಚಿಸಿದ್ದೂ ಆಗಿದೆ.

29. ಕುರ್‌ಆನನ್ನು ಕಿವಿಗೊಟ್ಟು ಆಲಿಸುವುದಕ್ಕಾಗಿ ಜಿನ್ನ್‌ಗಳ ಪೈಕಿ ಒಂದು ಗುಂಪನ್ನು ನಾವು ತಮ್ಮ ಬಳಿಗೆ ತಿರುಗಿಸಿದ ಸಂದರ್ಭ. ಅವರು ಅದಕ್ಕೆ ಸನ್ನಿಹಿತರಾದಾಗ ಅವರು ಪರಸ್ಪರ ಹೇಳಿದರು: 'ಮೌನವಹಿಸಿರಿ!' ತರುವಾಯ ಅದು ಮುಗಿದಾಗ ಅವರು ತಮ್ಮ ಜನರೆಡೆಗೆ ಮುನ್ನೆಚ್ಚರಿಕೆಗಾರರಾಗಿ ಮರಳಿದರು.

وَإِذْ صَرَفْنَآ إِلَيْكَ نَفَرًا مِّنَ ٱلْجِنِّ يَسْتَمِعُونَ ٱلْقُرْءَانَ فَلَمَّا حَضَرُوهُ قَالُوٓا۟ أَنصِتُوا۟ ۖ فَلَمَّا قُضِىَ وَلَّوْا۟ إِلَىٰ قَوْمِهِم مُّنذِرِينَ ﴿٢٩﴾

30. ಅವರು ಹೇಳಿದರು: 'ಓ ನಮ್ಮ ಜನರೇ! ಮೂಸಾರ ನಂತರ ಅವತೀರ್ಣಗೊಂಡಿರುವ ಮತ್ತು ಅದಕ್ಕಿಂತ ಮುಂಚಿನದ್ದನ್ನು ದೃಢೀಕರಿಸುವ ಒಂದು ಗ್ರಂಥವನ್ನು ಖಂಡಿತವಾಗಿಯೂ ನಾವು ಆಲಿಸಿರುವೆವು. ಅದು ಸತ್ಯದೆಡೆಗೆ ಮತ್ತು ನೇರವಾದ ಮಾರ್ಗದೆಡೆಗೆ ಮುನ್ನಡೆಸುತ್ತದೆ.

قَالُوا۟ يَـٰقَوْمَنَآ إِنَّا سَمِعْنَا كِتَـٰبًا أُنزِلَ مِنۢ بَعْدِ مُوسَىٰ مُصَدِّقًا لِّمَا بَيْنَ يَدَيْهِ يَهْدِىٓ إِلَى ٱلْحَقِّ وَإِلَىٰ طَرِيقٍ مُّسْتَقِيمٍ ﴿٣٠﴾

31. ಓ ನಮ್ಮ ಜನರೇ! ಅಲ್ಲಾಹುವಿನೆಡೆಗೆ ಕರೆಯುವ ವ್ಯಕ್ತಿಗೆ ಉತ್ತರ ನೀಡಿರಿ ಮತ್ತು ಅವರಲ್ಲಿ ವಿಶ್ವಾಸವಿಡಿರಿ. ಅವನು ನಿಮಗೆ ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ನಿಮ್ಮನ್ನು ಯಾತನಾಮಯ ಶಿಕ್ಷೆಯಿಂದ ಪಾರುಗೊಳಿಸುವನು.

يَـٰقَوْمَنَآ أَجِيبُوا۟ دَاعِىَ ٱللَّهِ وَءَامِنُوا۟ بِهِۦ يَغْفِرْ لَكُم مِّن ذُنُوبِكُمْ وَيُجِرْكُم مِّنْ عَذَابٍ أَلِيمٍ ﴿٣١﴾

32. ಅಲ್ಲಾಹುವಿನೆಡೆಗೆ ಕರೆ ನೀಡುವ ವ್ಯಕ್ತಿಗೆ ಯಾರು ಉತ್ತರ ನೀಡುವುದಿಲ್ಲವೋ, ಅವನಿಗೆ ಈ ಭೂಮಿಯಲ್ಲಿ (ಅಲ್ಲಾಹುವನ್ನು) ಸೋಲಿಸಲು ಸಾಧ್ಯವಾಗಲಾರದು. ಅಲ್ಲಾಹುವಿನ ಹೊರತು ಅವನಿಗೆ ಯಾವುದೇ ರಕ್ಷಕರೂ ಇರಲಾರರು. ಅವರು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವರು.

وَمَن لَّا يُجِبْ دَاعِىَ ٱللَّهِ فَلَيْسَ بِمُعْجِزٍ فِى ٱلْأَرْضِ وَلَيْسَ لَهُۥ مِن دُونِهِۦٓ أَوْلِيَآءُ ۚ أُو۟لَـٰٓئِكَ فِى ضَلَـٰلٍ مُّبِينٍ ﴿٣٢﴾

33. ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿರುವ ಮತ್ತು ಅವುಗಳನ್ನು ಸೃಷ್ಟಿಸಿದ ಕಾರಣದಿಂದ ದಣಿವಾಗದ ಅಲ್ಲಾಹುವಿಗೆ ಖಂಡಿತವಾಗಿಯೂ ಮೃತಪಟ್ಟವರಿಗೆ ಜೀವ ನೀಡುವ ಸಾಮರ್ಥ್ಯವಿದೆ ಎಂಬುದನ್ನು ಅವರು ಕಾಣುವುದಿಲ್ಲವೇ? ಹೌದು! ಖಂಡಿತವಾಗಿಯೂ

أَوَلَمْ يَرَوْا۟ أَنَّ ٱللَّهَ ٱلَّذِى خَلَقَ ٱلسَّمَـٰوَٰتِ وَٱلْأَرْضَ وَلَمْ يَعْىَ بِخَلْقِهِنَّ بِقَـٰدِرٍ عَلَىٰٓ أَن يُحْـِۧىَ ٱلْمَوْتَىٰ ۚ بَلَىٰٓ إِنَّهُۥ عَلَىٰ كُلِّ شَىْءٍ قَدِيرٌ ﴿٣٣﴾

ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

34. ಸತ್ಯನಿಷೇಧಿಗಳನ್ನು ನರಕಾಗ್ನಿಯ ಮುಂದೆ ಪ್ರದರ್ಶಿಸಲಾಗುವ ದಿನ! (ಅವರೊಂದಿಗೆ ಕೇಳಲಾಗುವುದು): 'ಇದು ಸತ್ಯವಲ್ಲವೇ?' ಅವರು ಹೇಳುವರು: 'ಹೌದು! ನಮ್ಮ ರಬ್‌ನ ಮೇಲಾಣೆ!' ಅವನು ಹೇಳುವನು: 'ಹಾಗಾದರೆ ನೀವು ನಿಷೇಧಿಸಿದ ಫಲವಾಗಿ ಶಿಕ್ಷೆಯನ್ನು ಸವಿಯಿರಿ!'

وَيَوْمَ يُعْرَضُ ٱلَّذِينَ كَفَرُوا۟ عَلَى ٱلنَّارِ أَلَيْسَ هَـٰذَا بِٱلْحَقِّ ۖ قَالُوا۟ بَلَىٰ وَرَبِّنَا ۚ قَالَ فَذُوقُوا۟ ٱلْعَذَابَ بِمَا كُنتُمْ تَكْفُرُونَ ﴿٣٤﴾

35. ಆದ್ದರಿಂದ ದೃಢಮನಸ್ಕರಾದ ಸಂದೇಶವಾಹಕರು ಸಹನೆ ಪಾಲಿಸಿದಂತೆ ತಾವೂ ಸಹನೆ ಪಾಲಿಸಿರಿ. ಅವರ (ಸತ್ಯನಿಷೇಧಿಗಳ) ವಿಷಯದಲ್ಲಿ ತಾವು ಆತುರಪಡದಿರಿ. ಅವರಿಗೆ ಎಚ್ಚರಿಕೆ ನೀಡಲಾಗಿರುವುದನ್ನು (ಶಿಕ್ಷೆಯನ್ನು) ಅವರು ಕಣ್ಣಾರೆ ಕಾಣುವ ದಿನ ತಾವು (ಇಹಲೋಕದಲ್ಲಿ) ತಂಗಿರುವುದು ಹಗಲಿನ ಒಂದು ತಾಸಿನಷ್ಟು ಮಾತ್ರವಾಗಿದೆ ಎಂದು ಅವರಿಗೆ ಭಾಸವಾಗುವುದು. ಇದೊಂದು ಉಪದೇಶವಾಗಿದೆ. ಆದರೆ ಧಿಕ್ಕಾರಿಗಳಾದ ಜನರನ್ನೇ ಹೊರತು ನಾಶ ಮಾಡಲಾಗುವುದೇ?

فَٱصْبِرْ كَمَا صَبَرَ أُو۟لُوا۟ ٱلْعَزْمِ مِنَ ٱلرُّسُلِ وَلَا تَسْتَعْجِل لَّهُمْ ۚ كَأَنَّهُمْ يَوْمَ يَرَوْنَ مَا يُوعَدُونَ لَمْ يَلْبَثُوٓا۟ إِلَّا سَاعَةً مِّن نَّهَارٍۭ ۚ بَلَـٰغٌ ۚ فَهَلْ يُهْلَكُ إِلَّا ٱلْقَوْمُ ٱلْفَـٰسِقُونَ ﴿٣٥﴾

# ಮುಹಮ್ಮದ್

# سُورَةُ مُحَمَّدٍ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 38

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

ٱلَّذِينَ كَفَرُواْ وَصَدُّواْ عَن سَبِيلِ ٱللَّهِ أَضَلَّ أَعۡمَٰلَهُمۡ ١

1. ಅವಿಶ್ವಾಸವಿಟ್ಟವರು ಮತ್ತು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದವರಾರೋ ಅವರ ಕರ್ಮಗಳನ್ನು ಅವನು (ಅಲ್ಲಾಹು) ನಿಷ್ಫಲಗೊಳಿಸುವನು.

وَٱلَّذِينَ ءَامَنُواْ وَعَمِلُواْ ٱلصَّٰلِحَٰتِ وَءَامَنُواْ بِمَا نُزِّلَ عَلَىٰ مُحَمَّدٍ وَهُوَ ٱلۡحَقُّ مِن رَّبِّهِمۡ كَفَّرَ عَنۡهُمۡ سَيِّـَٔاتِهِمۡ وَأَصۡلَحَ بَالَهُمۡ ٢

2. ವಿಶ್ವಾಸವಿಟ್ಟವರು, ಸತ್ಕರ್ಮವೆಸಗಿದವರು ಮತ್ತು ಮುಹಮ್ಮದ್‌ರಿಗೆ ಅವತೀರ್ಣಗೊಂಡಿರುವುದರಲ್ಲಿ –ಅದು ಅವರ ರಬ್‌ನ ವತಿಯ ಸತ್ಯವಾಗಿದೆ– ವಿಶ್ವಾಸವಿಟ್ಟವರು ಯಾರೋ ಅವರಿಂದ ಅವನು (ಅಲ್ಲಾಹು) ಅವರ ಕೆಡುಕುಗಳನ್ನು ಅಳಿಸುವನು ಮತ್ತು ಅವರ ಸ್ಥಿತಿಯನ್ನು ಉತ್ತಮಗೊಳಿಸುವನು.

ذَٰلِكَ بِأَنَّ ٱلَّذِينَ كَفَرُواْ ٱتَّبَعُواْ ٱلۡبَٰطِلَ وَأَنَّ ٱلَّذِينَ ءَامَنُواْ ٱتَّبَعُواْ ٱلۡحَقَّ مِن رَّبِّهِمۡۚ كَذَٰلِكَ يَضۡرِبُ ٱللَّهُ لِلنَّاسِ أَمۡثَٰلَهُمۡ ٣

3. ಅದೇಕೆಂದರೆ ಸತ್ಯನಿಷೇಧಿಗಳು ಅನುಸರಿಸುತ್ತಿರುವುದು ಅಸತ್ಯವನ್ನಾಗಿದೆ ಮತ್ತು ಸತ್ಯವಿಶ್ವಾಸಿಗಳು ಅನುಸರಿಸುತ್ತಿರುವುದು ತಮ್ಮ ರಬ್‌ನ ವತಿಯ ಸತ್ಯವನ್ನಾಗಿದೆ. ಹೀಗೆ ಅಲ್ಲಾಹು ಜನರಿಗೋಸ್ಕರ ಅವರ ಮಾದರಿಗಳನ್ನು ವಿವರಿಸಿಕೊಡುವನು.

فَإِذَا لَقِيتُمُ ٱلَّذِينَ كَفَرُواْ فَضَرۡبَ ٱلرِّقَابِ حَتَّىٰٓ إِذَآ أَثۡخَنتُمُوهُمۡ فَشُدُّواْ ٱلۡوَثَاقَ فَإِمَّا مَنَّۢا بَعۡدُ وَإِمَّا فِدَآءً حَتَّىٰ

4. ಆದ್ದರಿಂದ ನೀವು ಸತ್ಯನಿಷೇಧಿಗಳನ್ನು ಎದುರುಗೊಂಡರೆ ಅವರ ಕುತ್ತಿಗೆಗಳನ್ನು ಕತ್ತರಿಸಿರಿ. ಕೊನೆಗೆ ನೀವು ಅವರನ್ನು ಬಗ್ಗುಬಡಿದರೆ ಅವರನ್ನು ಬಲವಾಗಿ ಬಂಧಿಸಿರಿ.[1]

1 ಒಂದೋ ನಾವು ಶತ್ರುಗಳಿಂದ ನಿರ್ಮೂಲನೆಗೊಳ್ಳಬೇಕು ಅಥವಾ ನಾವು ಶತ್ರುಗಳನ್ನು ನಿರ್ಮೂಲನೆಗೊಳಿಸಬೇಕು. ಪ್ರವಾದಿ(ﷺ)ರವರು ಮತ್ತು ಸಹಾಬಾಗಳು ಯುದ್ಧಕ್ಕೆ ಸನ್ನದ್ಧರಾಗುತ್ತಿದ್ದುದು ಇವೆರಡರಲ್ಲೊಂದು ಅನಿವಾರ್ಯವಾಗುವ ಸಂದರ್ಭದಲ್ಲಾಗಿತ್ತು. ಇಂತಹ ಯುದ್ಧದಲ್ಲಿ ಶತ್ರುವನ್ನು ಬಗ್ಗುಬಡಿಯುವ ಮುಂಚೆ ಅವರೊಂದಿಗೆ ಯಾವುದೇ ವಿಧದಲ್ಲಿ ದಾಕ್ಷಿಣ್ಯ ತೋರಿಸುವುದೂ ಆತ್ಮಹತ್ಯೆಗೆ ಸಮಾನವಾಗಿದೆ. ನಿರ್ನಾಮವಾಗುವ ಭೀತಿಯು ನಿವಾರಣೆಯಾದರೆ ರಕ್ತದೋಕುಳಿಯನ್ನು ತಡೆಗಟ್ಟಿ ಇತರ ಸೂಕ್ತ ಕ್ರಮಗಳನ್ನು ಕೈಗೊಳ್ಳಬಹುದಾಗಿದೆ.

ತರುವಾಯ ಅದರ ನಂತರ ನೀವು (ಅವರೊಂದಿಗೆ) ದಾಕ್ಷಿಣ್ಯ ತೋರುವುದನ್ನೋ ಅಥವಾ ವಿಮೋಚನಾ ಮೌಲ್ಯವನ್ನು ಪಡೆದು ಅವರನ್ನು ಬಿಟ್ಟುಬಿಡುವುದನ್ನೋ ಮಾಡಿರಿ. ಇದು ಯುದ್ಧವು ಅದರ ಭಾರವನ್ನು ಕೆಳಗಿಡುವವರೆಗೆ ಮಾತ್ರವಾಗಿದೆ.[1] ಇದಾಗಿದೆ (ಯುದ್ಧದ) ರಿವಾಜು. ಅಲ್ಲಾಹು ಇಚ್ಛಿಸುವುದಾದರೆ ಅವರ ವಿರುದ್ಧ ಅವನು ಶಿಕ್ಷಾಕ್ರಮಗಳನ್ನು ಕೈಗೊಳ್ಳುತ್ತಿದ್ದನು. ಆದರೆ ಇದು ನಿಮ್ಮ ಪೈಕಿ ಕೆಲವರನ್ನು ಇತರ ಕೆಲವರ ಮೂಲಕ ಪರೀಕ್ಷಿಸುವ ಸಲುವಾಗಿದೆ. ಅಲ್ಲಾಹುವಿನ ಮಾರ್ಗದಲ್ಲಿ ವಧಿಸಲ್ಪಟ್ಟವರಾರೋ ಅವರ ಕರ್ಮಗಳನ್ನು ಅವನು ಎಂದೂ ನಿಷ್ಫಲಗೊಳಿಸಲಾರನು.

5. ಅವನು ಅವರನ್ನು ಗುರಿಯೆಡೆಗೆ ಮುನ್ನಡೆಸುವನು ಮತ್ತು ಅವರ ಸ್ಥಿತಿಯನ್ನು ಉತ್ತಮಗೊಳಿಸುವನು.

6. ಅವನು ಅವರನ್ನು ಸ್ವರ್ಗಕ್ಕೆ ಪ್ರವೇಶಗೊಳಿಸುವನು. ಅವನು ಅದನ್ನು ಅವರಿಗೆ ಮುಂಚೆಯೇ ಪರಿಚಯಿಸಿ ಕೊಟ್ಟಿರುವನು.

7. ಓ ಸತ್ಯವಿಶ್ವಾಸಿಗಳೇ!, ನೀವು ಅಲ್ಲಾಹುವಿಗೆ ಸಹಾಯ ಮಾಡುವುದಾದರೆ[2] ಅವನು ನಿಮಗೆ ಸಹಾಯ ಮಾಡುವನು ಮತ್ತು ಅವನು ನಿಮ್ಮ ಪಾದಗಳನ್ನು ಸುದೃಢವಾಗಿ ನಿಲ್ಲಿಸುವನು.

8. ಅವಿಶ್ವಾಸವಿಟ್ಟವರಾರೋ ಅವರಿಗೆ ನಾಶವಿರಲಿ. ಅಲ್ಲಾಹು ಅವರ ಕರ್ಮಗಳನ್ನು ವ್ಯರ್ಥಗೊಳಿಸುವನು.

تَضَعَ ٱلْحَرْبُ أَوْزَارَهَا ۚ ذَٰلِكَ ۖ وَلَوْ يَشَآءُ
ٱللَّهُ لَٱنتَصَرَ مِنْهُمْ وَلَـٰكِن لِّيَبْلُوَا۟
بَعْضَكُم بِبَعْضٍ ۗ وَٱلَّذِينَ قُتِلُوا۟ فِى سَبِيلِ
ٱللَّهِ فَلَن يُضِلَّ أَعْمَـٰلَهُمْ ٤

سَيَهْدِيهِمْ وَيُصْلِحُ بَالَهُمْ ٥

وَيُدْخِلُهُمُ ٱلْجَنَّةَ عَرَّفَهَا لَهُمْ ٦

يَـٰٓأَيُّهَا ٱلَّذِينَ ءَامَنُوٓا۟ إِن تَنصُرُوا۟ ٱللَّهَ
يَنصُرْكُمْ وَيُثَبِّتْ أَقْدَامَكُمْ ٧

وَٱلَّذِينَ كَفَرُوا۟ فَتَعْسًا لَّهُمْ وَأَضَلَّ
أَعْمَـٰلَهُمْ ٨

---

1 ಯುದ್ಧಭೀತಿಯು ನಿವಾರಣೆಯಾದರೆ ಎಲ್ಲರೊಂದಿಗೆ ಶಾಂತಿಯಿಂದ ವರ್ತಿಸಲು ಕುರ್‌ಆನ್ (60:8) ಕರೆ ನೀಡುತ್ತದೆ.

2 ಅಲ್ಲಾಹುವಿಗೆ ಸಹಾಯ ಮಾಡುವುದು ಎಂದರೆ ಅಲ್ಲಾಹುವಿನ ಧರ್ಮದ ಸೇವೆ ಮಾಡುವುದು ಎಂದರ್ಥ.

9. ಅದೇಕೆಂದರೆ ಅಲ್ಲಾಹು ಅವತೀರ್ಣಗೊಳಿಸಿದ್ದನ್ನು ಅವರು ಅಸಹ್ಯಪಟ್ಟರು ಎಂಬುದರಿಂದಾಗಿದೆ. ಆದ್ದರಿಂದ ಅವನು ಅವರ ಕರ್ಮಗಳನ್ನು ನಿಷ್ಫಲಗೊಳಿಸಿದನು.

ذَٰلِكَ بِأَنَّهُمْ كَرِهُواْ مَآ أَنزَلَ ٱللَّهُ فَأَحْبَطَ أَعْمَٰلَهُمْ ٩

10. ಅವರು ಭೂಮಿಯಲ್ಲಿ ಸಂಚರಿಸಿ ತಮಗಿಂತ ಮುಂಚಿನವರ ಅಂತ್ಯವು ಹೇಗಿತ್ತೆಂಬುದನ್ನು ನೋಡಲಾರರೇ? ಅಲ್ಲಾಹು ಅವರನ್ನು ನುಚ್ಚುನೂರು ಮಾಡಿರುವನು. ಅದರಂತಿರುವುದು (ಶಿಕ್ಷೆಯು) ಈ ಸತ್ಯನಿಷೇಧಿಗಳಿಗೂ ಇದೆ.

۞ أَفَلَمْ يَسِيرُواْ فِى ٱلْأَرْضِ فَيَنظُرُواْ كَيْفَ كَانَ عَٰقِبَةُ ٱلَّذِينَ مِن قَبْلِهِمْۖ دَمَّرَ ٱللَّهُ عَلَيْهِمْۖ وَلِلْكَٰفِرِينَ أَمْثَٰلُهَا ١٠

11. ಇದೇಕೆಂದರೆ ಅಲ್ಲಾಹು ಸತ್ಯವಿಶ್ವಾಸಿಗಳ ರಕ್ಷಕನಾಗಿರುವನು ಮತ್ತು ಸತ್ಯನಿಷೇಧಿಗಳಿಗೆ ಯಾವ ರಕ್ಷಕನೂ ಇಲ್ಲ ಎಂಬುದರಿಂದಾಗಿದೆ.

ذَٰلِكَ بِأَنَّ ٱللَّهَ مَوْلَى ٱلَّذِينَ ءَامَنُواْ وَأَنَّ ٱلْكَٰفِرِينَ لَا مَوْلَىٰ لَهُمْ ١١

12. ಖಂಡಿತವಾಗಿಯೂ ಅಲ್ಲಾಹು ಸತ್ಯವಿಶ್ವಾಸವಿಟ್ಟವರನ್ನು ಮತ್ತು ಸತ್ಕರ್ಮವೆಸಗಿದವರನ್ನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಮಾಡಿಸುವನು. ಸತ್ಯನಿಷೇಧಿಗಳು (ಇಹಲೋಕದಲ್ಲಿ) ಸುಖವನ್ನು ಅನುಭವಿಸುತ್ತಲೂ, ಜಾನುವಾರುಗಳು ತಿನ್ನುವಂತೆ ತಿನ್ನುತ್ತಲೂ ಇರುವರು. ಅವರಿಗಿರುವ ವಾಸಸ್ಥಳವು ನರಕಾಗ್ನಿಯಾಗಿದೆ.

إِنَّ ٱللَّهَ يُدْخِلُ ٱلَّذِينَ ءَامَنُواْ وَعَمِلُواْ ٱلصَّٰلِحَٰتِ جَنَّٰتٍ تَجْرِى مِن تَحْتِهَا ٱلْأَنْهَٰرُۖ وَٱلَّذِينَ كَفَرُواْ يَتَمَتَّعُونَ وَيَأْكُلُونَ كَمَا تَأْكُلُ ٱلْأَنْعَٰمُ وَٱلنَّارُ مَثْوًى لَّهُمْ ١٢

13. ತಮ್ಮನ್ನು ಹೊರಗಟ್ಟಿದ ತಮ್ಮ ಪಟ್ಟಣಕ್ಕಿಂತಲೂ ಬಲಿಷ್ಠವಾದ ಅದೆಷ್ಟು ಪಟ್ಟಣಗಳು! ಅವರನ್ನು ನಾವು ನಾಶ ಮಾಡಿದೆವು. ಅವರಿಗೆ ಸಹಾಯಕರಾಗಿ ಯಾರೂ ಇರಲಿಲ್ಲ.

وَكَأَيِّن مِّن قَرْيَةٍ هِىَ أَشَدُّ قُوَّةً مِّن قَرْيَتِكَ ٱلَّتِىٓ أَخْرَجَتْكَ أَهْلَكْنَٰهُمْ فَلَا نَاصِرَ لَهُمْ ١٣

14. ತನ್ನ ರಬ್‌ನ ವತಿಯ ಸ್ಪಷ್ಟವಾದ ಪುರಾವೆಯ ಮೇಲೆ ನೆಲೆನಿಂತಿರುವ ಒಬ್ಬ ವ್ಯಕ್ತಿಯು ತನ್ನ ದುಷ್ಕರ್ಮವು ಆಕರ್ಷಕವಾಗಿ ತೋರಿರುವ ಮತ್ತು ದೇಹೇಚ್ಛೆಗಳನ್ನು ಅನುಸರಿಸಿದವರಂತಾಗುವನೇ?

أَفَمَن كَانَ عَلَىٰ بَيِّنَةٍ مِّن رَّبِّهِۦ كَمَن زُيِّنَ لَهُۥ سُوٓءُ عَمَلِهِۦ وَٱتَّبَعُوٓاْ أَهْوَآءَهُم ١٤

مَّثَلُ ٱلۡجَنَّةِ ٱلَّتِي وُعِدَ ٱلۡمُتَّقُونَۖ فِيهَآ أَنۡهَٰرٞ مِّن مَّآءٍ غَيۡرِ ءَاسِنٖ وَأَنۡهَٰرٞ مِّن لَّبَنٖ لَّمۡ يَتَغَيَّرۡ طَعۡمُهُۥ وَأَنۡهَٰرٞ مِّنۡ خَمۡرٖ لَّذَّةٖ لِّلشَّٰرِبِينَ وَأَنۡهَٰرٞ مِّنۡ عَسَلٖ مُّصَفّٗىۖ وَلَهُمۡ فِيهَا مِن كُلِّ ٱلثَّمَرَٰتِ وَمَغۡفِرَةٞ مِّن رَّبِّهِمۡۖ كَمَنۡ هُوَ خَٰلِدٞ فِي ٱلنَّارِ وَسُقُواْ مَآءً حَمِيمٗا فَقَطَّعَ أَمۡعَآءَهُمۡ ١٥

15. ಭಯಭಕ್ತಿ ಪಾಲಿಸುವವರಿಗೆ ವಾಗ್ದಾನ ಮಾಡಲಾಗಿರುವ ಸ್ವರ್ಗವು ಹೇಗಿದೆಯೆಂದರೆ ಅದರಲ್ಲಿ ಬದಲಾವಣೆ ಹೊಂದದ ನೀರಿನ ನದಿಗಳಿವೆ, ರುಚಿಬೇಧವುಂಟಾಗದ ಹಾಲಿನ ನದಿಗಳಿವೆ, ಕುಡಿಯುವವರಿಗೆ ಸ್ವಾದಿಷ್ಟವಾದ ಮದ್ಯದ ನದಿಗಳಿವೆ ಮತ್ತು ಶುದ್ಧೀಕರಿಸಲಾದ ಜೇನಿನ ನದಿಗಳಿವೆ. ಅವರಿಗೆ ಅದರಲ್ಲಿ ಎಲ್ಲ ವಿಧದ ಫಲಗಳಿವೆ. ತಮ್ಮ ರಬ್‌ನ ವತಿಯ ಪಾಪಮುಕ್ತಿಯೂ ಇದೆ. (ಈ ಸ್ವರ್ಗವಾಸಿಗಳ ಸ್ಥಿತಿಯು) ನರಕಾಗ್ನಿಯಲ್ಲಿ ಶಾಶ್ವತವಾಗಿ ವಾಸಿಸುವವನಂತೆ ಆಗಿರುವುದೇ? ಅವರಿಗೆ ಕುಡಿಯಲು ನೀಡಲಾಗುವುದು ಕುದಿಯುವ ನೀರನ್ನಾಗಿದೆ. ಅದು ಅವರ ಕರುಳುಗಳನ್ನು ತುಂಡುತುಂಡಾಗಿಸಿ ಬಿಡುವುದು.

وَمِنۡهُم مَّن يَسۡتَمِعُ إِلَيۡكَ حَتَّىٰٓ إِذَا خَرَجُواْ مِنۡ عِندِكَ قَالُواْ لِلَّذِينَ أُوتُواْ ٱلۡعِلۡمَ مَاذَا قَالَ ءَانِفًاۚ أُوْلَٰٓئِكَ ٱلَّذِينَ طَبَعَ ٱللَّهُ عَلَىٰ قُلُوبِهِمۡ وَٱتَّبَعُوٓاْ أَهۡوَآءَهُمۡ ١٦

16. ತಾವು ಹೇಳುವುದನ್ನು ಕಿವಿಗೊಟ್ಟು ಆಲಿಸುವ ಕೆಲವರು ಅವರಲ್ಲಿರುವರು. ಕೊನೆಗೆ ಅವರು ತಮ್ಮ ಬಳಿಯಿಂದ ಹೊರಟರೆ ಜ್ಞಾನನೀಡಲಾದವರೊಂದಿಗೆ[1] ಅವರು (ಗೇಲಿ ಮಾಡುತ್ತಾ) ಹೇಳುವರು: 'ಇವನು ಈಗ ಹೇಳಿದ್ದೇನು?' ಅಂತಹ ಜನರ ಹೃದಯಗಳ ಮೇಲೆ ಅಲ್ಲಾಹು ಮುದ್ರೆಯೊತ್ತಿರುವನು. ಅವರು ತಮ್ಮ ದೇಹೇಚ್ಛೆಗಳನ್ನು ಅನುಸರಿಸುತ್ತಿರುವರು.

وَٱلَّذِينَ ٱهۡتَدَوۡاْ زَادَهُمۡ هُدٗى وَءَاتَىٰهُمۡ تَقۡوَىٰهُمۡ ١٧

17. ಸನ್ಮಾರ್ಗ ಪಡೆದವರಾರೋ ಅವರಿಗೆ ಅಲ್ಲಾಹು ಹೆಚ್ಚಿನ ಮಾರ್ಗದರ್ಶನವನ್ನು ನೀಡುವನು ಮತ್ತು ಅವರಿಗೆ ಇರಬೇಕಾದಂತಹ ಭಯಭಕ್ತಿಯನ್ನು ಅವರಿಗೆ ನೀಡುವನು.

فَهَلۡ يَنظُرُونَ إِلَّا ٱلسَّاعَةَ أَن تَأۡتِيَهُم بَغۡتَةٗۖ فَقَدۡ جَآءَ أَشۡرَاطُهَاۚ فَأَنَّىٰ لَهُمۡ إِذَا جَآءَتۡهُمۡ ذِكۡرَىٰهُمۡ ١٨

18. ಆ ಅಂತ್ಯಘಳಿಗೆಯು ಅವರ ಬಳಿಗೆ ಹಠಾತ್ತನೆ ಬರುವುದನ್ನೇ ಹೊರತು ಇನ್ನೇನನ್ನಾದರೂ ಅವರು ಕಾಯುತ್ತಿರುವರೇ? ಅದರ ಕುರುಹುಗಳು ಬಂದು ಬಿಟ್ಟಿವೆ. ತರುವಾಯ ಅದು ಅವರ ಬಳಿಗೆ ಬಂದರೆ ಅವರಿಗಿರುವ

1 ಅಂದರೆ ಯಹೂದರು ಮತ್ತು ಕ್ರೈಸ್ತರೊಂದಿಗೆ.

ಉಪದೇಶವು ಅವರಿಗೆ ಪ್ರಯೋಜನಪಡುವುದಾದರೂ ಹೇಗೆ?

**19.** ಆದ್ದರಿಂದ ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ ಎಂಬುದನ್ನು ಅರಿತುಕೊಳ್ಳಿರಿ ಮತ್ತು ತಮ್ಮ ಪಾಪಕ್ಕೆ ಕ್ಷಮೆಯನ್ನು ಬೇಡಿರಿ. ಸತ್ಯವಿಶ್ವಾಸಿ ಮತ್ತು ಸತ್ಯವಿಶ್ವಾಸಿನಿಯರಿಗೂ (ಕ್ಷಮೆಯನ್ನು ಬೇಡಿರಿ). ನಿಮ್ಮ ಚಲನವಲನಗಳನ್ನು ಮತ್ತು ವಾಸಸ್ಥಳವನ್ನು ಅಲ್ಲಾಹು ಅರಿಯುವನು.

**20.** ಸತ್ಯವಿಶ್ವಾಸಿಗಳು ಹೇಳುವರು: 'ಒಂದು ಅಧ್ಯಾಯವು ಅವತೀರ್ಣಗೊಳ್ಳಲಿಲ್ಲವೇಕೆ?' ಆದರೆ ಖಚಿತವಾದ ನಿಯಮಗಳಿರುವ ಅಧ್ಯಾಯವೊಂದು ಅವತೀರ್ಣಗೊಂಡು ಅದರಲ್ಲಿ ಯುದ್ಧದ ಕುರಿತು ಪ್ರಸ್ತಾಪಿಸಲಾದರೆ ಮೃತ್ಯು ಆವರಿಸಿ ಪ್ರಜ್ಞೆ ಕಳಕೊಂಡ ವ್ಯಕ್ತಿಯು ನೋಡುವಂತೆ, ಹೃದಯಗಳಲ್ಲಿ ರೋಗವಿರುವವರು ತಮ್ಮತ್ತ ನೋಡುತ್ತಿರುವುದಾಗಿ ತಾವು ಕಾಣುವಿರಿ. ಅದು ಅವರಿಗೆ ಅತ್ಯಂತ ಸೂಕ್ತವಾದುದಾಗಿದೆ.

**21.** ಅನುಸರಣೆ ಹಾಗೂ ಸಭ್ಯವಾದ ಮಾತು ಬೇಕಾಗಿದೆ. ಆದರೆ ವಿಷಯವು ಖಾತ್ರಿಯಾದಾಗ ಅವರು ಅಲ್ಲಾಹುವಿನೊಂದಿಗೆ ಸತ್ಯಸಂಧತೆ ತೋರಿಸಿರುತ್ತಿದ್ದರೆ ಅದು ಅವರಿಗೆ ಅತ್ಯುತ್ತಮವಾಗಿರುತ್ತಿತ್ತು.

**22.** ಆದರೆ ನೀವು ಕಾರ್ಯನಿರ್ವಹಣೆಯನ್ನು ವಹಿಸಿಕೊಳ್ಳುವುದಾದರೆ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುತ್ತಲೂ, ನಿಮ್ಮ ಕುಟುಂಬ ಸಂಬಂಧಗಳನ್ನು ಕಡಿಯುತ್ತಲೂ ಇರುವಿರಾ?

**23.** ಅಂತಹವರನ್ನು ಅಲ್ಲಾಹು ಶಪಿಸಿರುವನು. ಅವನು ಅವರನ್ನು ಕಿವುಡರನ್ನಾಗಿ ಮಾಡಿದನು ಮತ್ತು ಅವರ ಕಣ್ಣುಗಳಿಗೆ ಅಂಧತೆಯನ್ನು ನೀಡಿದನು.

فَٱعْلَمْ أَنَّهُۥ لَآ إِلَٰهَ إِلَّا ٱللَّهُ وَٱسْتَغْفِرْ لِذَنۢبِكَ وَلِلْمُؤْمِنِينَ وَٱلْمُؤْمِنَٰتِ ۗ وَٱللَّهُ يَعْلَمُ مُتَقَلَّبَكُمْ وَمَثْوَىٰكُمْ ﴿١٩﴾

وَيَقُولُ ٱلَّذِينَ ءَامَنُوا۟ لَوْلَا نُزِّلَتْ سُورَةٌ ۖ فَإِذَآ أُنزِلَتْ سُورَةٌ مُّحْكَمَةٌ وَذُكِرَ فِيهَا ٱلْقِتَالُ ۙ رَأَيْتَ ٱلَّذِينَ فِى قُلُوبِهِم مَّرَضٌ يَنظُرُونَ إِلَيْكَ نَظَرَ ٱلْمَغْشِىِّ عَلَيْهِ مِنَ ٱلْمَوْتِ ۖ فَأَوْلَىٰ لَهُمْ ﴿٢٠﴾

طَاعَةٌ وَقَوْلٌ مَّعْرُوفٌ ۚ فَإِذَا عَزَمَ ٱلْأَمْرُ فَلَوْ صَدَقُوا۟ ٱللَّهَ لَكَانَ خَيْرًا لَّهُمْ ﴿٢١﴾

فَهَلْ عَسَيْتُمْ إِن تَوَلَّيْتُمْ أَن تُفْسِدُوا۟ فِى ٱلْأَرْضِ وَتُقَطِّعُوٓا۟ أَرْحَامَكُمْ ﴿٢٢﴾

أُو۟لَٰٓئِكَ ٱلَّذِينَ لَعَنَهُمُ ٱللَّهُ فَأَصَمَّهُمْ وَأَعْمَىٰٓ أَبْصَٰرَهُمْ ﴿٢٣﴾

24. ಹಾಗಾದರೆ ಅವರು ಕುರ್‌ಆನ್‌ನನ್ನು ಚಿಂತಿಸಿ ಗ್ರಹಿಸಲಾರರೇ? ಅಥವಾ ಹೃದಯಗಳ ಮೇಲೆ ಬೀಗ ಜಡಿಯಲಾಗಿದೆಯೇ?

أَفَلَا يَتَدَبَّرُونَ ٱلْقُرْءَانَ أَمْ عَلَىٰ قُلُوبٍ أَقْفَالُهَآ ﴿٢٤﴾

25. ತಮಗೆ ಸನ್ಮಾರ್ಗವು ಸ್ಪಷ್ಟವಾದ ಬಳಿಕ ವಿಮುಖರಾಗುತ್ತಾ ತಿರುಗಿ ನಡೆದವರಾರೋ ಖಂಡಿತವಾಗಿಯೂ ಸೈತಾನನು ಅವರಿಗೆ (ಅವರ ಕೃತ್ಯಗಳನ್ನು) ಆಕರ್ಷಕಗೊಳಿಸಿ ತೋರಿಸಿರುವನು. ಅವರಿಗೆ ಅವನು (ವ್ಯರ್ಥ ನಿರೀಕ್ಷೆಗಳನ್ನು) ದೀರ್ಘ ಮಾಡಿಕೊಟ್ಟಿರುವನು.

إِنَّ ٱلَّذِينَ ٱرْتَدُّوا۟ عَلَىٰٓ أَدْبَٰرِهِم مِّنۢ بَعْدِ مَا تَبَيَّنَ لَهُمُ ٱلْهُدَى ٱلشَّيْطَٰنُ سَوَّلَ لَهُمْ وَأَمْلَىٰ لَهُمْ ﴿٢٥﴾

26. ಇದು ಅಲ್ಲಾಹು ಅವತೀರ್ಣಗೊಳಿಸಿರುವುದನ್ನು ಅಸಹ್ಯಪಡುವವರೊಂದಿಗೆ 'ಕೆಲವೊಂದು ವಿಷಯಗಳಲ್ಲಿ ನಾವು ನಿಮ್ಮ ಆಜ್ಞೆಯನ್ನು ಅನುಸರಿಸುವೆವು' ಎಂದು ಅವರು ಹೇಳಿರುವರು ಎಂಬುದರಿಂದಾಗಿದೆ. ಅವರು ರಹಸ್ಯವಾಗಿಡುವುದನ್ನು ಅಲ್ಲಾಹು ಅರಿಯುವನು.

ذَٰلِكَ بِأَنَّهُمْ قَالُوا۟ لِلَّذِينَ كَرِهُوا۟ مَا نَزَّلَ ٱللَّهُ سَنُطِيعُكُمْ فِى بَعْضِ ٱلْأَمْرِ ۖ وَٱللَّهُ يَعْلَمُ إِسْرَارَهُمْ ﴿٢٦﴾

27. ಹಾಗಾದರೆ ಮಲಕ್‌ಗಳು ಅವರ ಮುಖ ಮತ್ತು ಹಿಂಭಾಗಗಳಿಗೆ ಬಡಿಯುತ್ತಾ ಅವರನ್ನು ಮೃತಪಡಿಸುವ ಸಂದರ್ಭದಲ್ಲಿ ಅವರ ಸ್ಥಿತಿ ಹೇಗಿರಬಹುದು?

فَكَيْفَ إِذَا تَوَفَّتْهُمُ ٱلْمَلَٰٓئِكَةُ يَضْرِبُونَ وُجُوهَهُمْ وَأَدْبَٰرَهُمْ ﴿٢٧﴾

28. ಇದೇಕೆಂದರೆ ಅಲ್ಲಾಹುವಿಗೆ ಕ್ರೋಧತರಿಸುವ ವಿಷಯವನ್ನು ಅವರು ಅನುಸರಿಸಿದರು ಮತ್ತು ಅವನ ಸಂತೃಪ್ತಿಯನ್ನು ಅವರು ಅಸಹ್ಯಪಡುವರು ಎಂಬುದರಿಂದಾಗಿದೆ. ಆದ್ದರಿಂದ ಅವನು ಅವರ ಕರ್ಮಗಳನ್ನು ನಿಷ್ಫಲಗೊಳಿಸಿದನು.

ذَٰلِكَ بِأَنَّهُمُ ٱتَّبَعُوا۟ مَآ أَسْخَطَ ٱللَّهَ وَكَرِهُوا۟ رِضْوَٰنَهُۥ فَأَحْبَطَ أَعْمَٰلَهُمْ ﴿٢٨﴾

29. ಅಥವಾ, ಹೃದಯಗಳಲ್ಲಿ ರೋಗವಿರುವವರು ತಮ್ಮ ಅಂತರಂಗದಲ್ಲಿರುವ ಹಗೆಯನ್ನು ಅಲ್ಲಾಹು ಎಂದೂ ಬಹಿರಂಗಪಡಿಸಲಾರನು ಎಂದು ಭಾವಿಸಿರುವರೇ?

أَمْ حَسِبَ ٱلَّذِينَ فِى قُلُوبِهِم مَّرَضٌ أَن لَّن يُخْرِجَ ٱللَّهُ أَضْغَٰنَهُمْ ﴿٢٩﴾

30. ನಾವು ಇಚ್ಛಿಸುತ್ತಿದ್ದರೆ ತಮಗೆ ಅವರನ್ನು ತೋರಿಸಿ ಕೊಡುತ್ತಿದ್ದೆವು. ತರುವಾಯ ಅವರ

وَلَوْ نَشَآءُ لَأَرَيْنَٰكَهُمْ فَلَعَرَفْتَهُم بِسِيمَٰهُمْ ۚ

وَلَتَعۡرِفَنَّهُمۡ فِي لَحۡنِ ٱلۡقَوۡلِۚ وَٱللَّهُ يَعۡلَمُ أَعۡمَٰلَكُمۡ ٣٠

ಲಕ್ಷಣಗಳಿಂದ ತಾವು ಅವರನ್ನು ಗುರುತಿಸುತ್ತಿದ್ದಿರಿ.[1] ಮಾತಿನ ಶೈಲಿಯಿಂದಲೂ ತಮಗೆ ಅವರನ್ನು ಖಂಡಿತವಾಗಿಯೂ ಗುರುತಿಸಬಹುದಾಗಿದೆ. ಅಲ್ಲಾಹು ನಿಮ್ಮ ಕರ್ಮಗಳನ್ನು ಅರಿಯುತ್ತಿರುವನು.

وَلَنَبۡلُوَنَّكُمۡ حَتَّىٰ نَعۡلَمَ ٱلۡمُجَٰهِدِينَ مِنكُمۡ وَٱلصَّٰبِرِينَ وَنَبۡلُوَاْ أَخۡبَارَكُمۡ ٣١

**31.** ನಿಮ್ಮ ಪೈಕಿ ಹೋರಾಡುವವರನ್ನು ಮತ್ತು ಸಹನೆ ಪಾಲಿಸುವವರನ್ನು ನಾವು ಗುರುತಿಸುವ ತನಕ ಮತ್ತು ನಿಮ್ಮ ಸಂಗತಿಗಳನ್ನು ನಾವು ಪರಿಶೋಧಿಸುವ ತನಕ ಖಂಡಿತವಾಗಿಯೂ ನಾವು ನಿಮ್ಮನ್ನು ಪರೀಕ್ಷಿಸುವೆವು.

إِنَّ ٱلَّذِينَ كَفَرُواْ وَصَدُّواْ عَن سَبِيلِ ٱللَّهِ وَشَآقُّواْ ٱلرَّسُولَ مِنۢ بَعۡدِ مَا تَبَيَّنَ لَهُمُ ٱلۡهُدَىٰ لَن يَضُرُّواْ ٱللَّهَ شَيۡـٔٗا وَسَيُحۡبِطُ أَعۡمَٰلَهُمۡ ٣٢

**32.** ಅವಿಶ್ವಾಸವಿಟ್ಟವರು, ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದವರು ಮತ್ತು ತಮಗೆ ಸನ್ಮಾರ್ಗವು ಸ್ಪಷ್ಟವಾದ ಬಳಿಕ ಸಂದೇಶವಾಹಕರೊಂದಿಗೆ ವಿರೋಧ ತಾಳಿದವರು ಯಾರೋ ಅವರು ಖಂಡಿತವಾಗಿಯೂ ಅಲ್ಲಾಹುವಿಗೆ ಯಾವುದೇ ಹಾನಿಯನ್ನೂ ಮಾಡಲಾರರು. ಅವನು ಅವರ ಕರ್ಮಗಳನ್ನು ತರುವಾಯ ವ್ಯರ್ಥಗೊಳಿಸಿಬಿಡುವನು.

۞ يَٰٓأَيُّهَا ٱلَّذِينَ ءَامَنُوٓاْ أَطِيعُواْ ٱللَّهَ وَأَطِيعُواْ ٱلرَّسُولَ وَلَا تُبۡطِلُوٓاْ أَعۡمَٰلَكُمۡ ٣٣

**33.** ಓ ಸತ್ಯವಿಶ್ವಾಸಿಗಳೇ!, ನೀವು ಅಲ್ಲಾಹುವನ್ನು ಅನುಸರಿಸಿರಿ ಮತ್ತು ಸಂದೇಶವಾಹಕರನ್ನು ಅನುಸರಿಸಿರಿ. ನಿಮ್ಮ ಕರ್ಮಗಳನ್ನು ನಿಷ್ಫಲಗೊಳಿಸದಿರಿ.

إِنَّ ٱلَّذِينَ كَفَرُواْ وَصَدُّواْ عَن سَبِيلِ ٱللَّهِ ثُمَّ مَاتُواْ وَهُمۡ كُفَّارٞ فَلَن يَغۡفِرَ ٱللَّهُ لَهُمۡ ٣٤

**34.** ಅವಿಶ್ವಾಸವಿಟ್ಟವರು, ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದವರು, ತರುವಾಯ ಸತ್ಯನಿಷೇಧಿಗಳಾಗಿಯೇ ಮರಣ

1 ಮುಸ್ಲಿಮ್ ಸಮುದಾಯದ ಸದಸ್ಯರಂತೆ ನಟಿಸುತ್ತಿದ್ದ ಮತ್ತು ಮನಸ್ಸಿನಲ್ಲಿ ಮುಸ್ಲಿಮರೊಂದಿಗೆ ಹಗೆಯನ್ನು ಇಟ್ಟುಕೊಂಡಿದ್ದ ಕಪಟ ವಿಶ್ವಾಸಿಗಳ ಬಗ್ಗೆ 25ರಿಂದ 30ರವರೆಗಿನ ಸೂಕ್ತಿಗಳಲ್ಲಿ ಪ್ರಸ್ತಾಪಿಸಲಾಗಿದೆ. ಕಪಟ ವೇಷದೊಂದಿಗೆ ಚಲಿಸಿ ಎಲ್ಲ ಕಾಲದಲ್ಲೂ ಜನರನ್ನು ಮೋಸ ಮಾಡಬಹುದೆಂದು ಅವರು ಭಾವಿಸಿದ್ದರು. ಆದರೆ ಅಲ್ಲಾಹು ಪ್ರವಾದಿ(ﷺ)ರವರಿಗೆ ಅವರ ಪೈಕಿ ಹಲವರ ಬಗ್ಗೆ ಮತ್ತು ಅವರ ಗುಣಲಕ್ಷಣಗಳ ಬಗ್ಗೆ ತಿಳಿಸಿಕೊಟ್ಟ ಕಾರಣ ಪ್ರವಾದಿ(ﷺ)ರವರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಹೆಚ್ಚುಕಾಲ ಮೋಸ ಮಾಡಲು ಅವರಿಂದ ಸಾಧ್ಯವಾಗಲಿಲ್ಲ.

ಹೊಂದಿದವರಾರೋ ಅವರಿಗೆ ಅಲ್ಲಾಹು ಎಂದೂ ಕ್ಷಮಿಸಲಾರನು.

35. ಆದ್ದರಿಂದ ನೀವು ಬಲಹೀನತೆಯನ್ನು ತೋರದಿರಿ. ನೀವೇ ಶ್ರೇಷ್ಠರು ಎಂದಿರುವಾಗ ನೀವು (ಶತ್ರುಗಳನ್ನು) ಸಂಧಾನಕ್ಕೆ ಆಹ್ವಾನಿಸದಿರಿ.[1] ಅಲ್ಲಾಹು ನಿಮ್ಮ ಜೊತೆಗಿರುವನು. ಅವನು ನಿಮ್ಮ ಕರ್ಮಗಳನ್ನು ನಿಮಗೆಂದಿಗೂ ನಷ್ಟವಾಗಿಸಲಾರನು.

فَلَا تَهِنُواْ وَتَدۡعُوٓاْ إِلَى ٱلسَّلۡمِ وَأَنتُمُ ٱلۡأَعۡلَوۡنَ وَٱللَّهُ مَعَكُمۡ وَلَن يَتِرَكُمۡ أَعۡمَٰلَكُمۡ ٣٥

36. ಇಹಲೋಕ ಜೀವನವು ಆಟ ಮತ್ತು ಮನೋರಂಜನೆ ಮಾತ್ರವಾಗಿದೆ. ನೀವು ವಿಶ್ವಾಸವಿಡುವುದಾದರೆ ಮತ್ತು ಭಯಭಕ್ತಿ ಪಾಲಿಸುವುದಾದರೆ ನಿಮ್ಮ ಪ್ರತಿಫಲವನ್ನು ಅವನು ನಿಮಗೆ ನೀಡುವನು. ಅವನು ನಿಮ್ಮೊಂದಿಗೆ ನಿಮ್ಮ ಸಂಪತ್ತನ್ನು ಬೇಡಲಾರನು.[2]

إِنَّمَا ٱلۡحَيَوٰةُ ٱلدُّنۡيَا لَعِبٞ وَلَهۡوٞۚ وَإِن تُؤۡمِنُواْ وَتَتَّقُواْ يُؤۡتِكُمۡ أُجُورَكُمۡ وَلَا يَسۡـَٔلۡكُمۡ أَمۡوَٰلَكُمۡ ٣٦

37. ನಿಮ್ಮೊಂದಿಗೆ ಅದನ್ನು (ಸಂಪತ್ತನ್ನು) ಕೇಳಿ ಅವನು ನಿಮಗೆ ತೊಂದರೆ ಕೊಡುತ್ತಿದ್ದರೆ ನೀವು ಜಿಪುಣತನ ತೋರಿಸುತ್ತಿದ್ದಿರಿ ಮತ್ತು ನಿಮ್ಮ ಅಂತರಂಗದಲ್ಲಿರುವ ಹಗೆಯನ್ನು ಅವನು ಹೊರತರುತ್ತಿದ್ದನು.[3]

إِن يَسۡـَٔلۡكُمُوهَا فَيُحۡفِكُمۡ تَبۡخَلُواْ وَيُخۡرِجۡ أَضۡغَٰنَكُمۡ ٣٧

38. ಓ ಜನರೇ! ನಿಮ್ಮನ್ನು ಕರೆಯಲಾಗುತ್ತಿರುವುದು ಅಲ್ಲಾಹುವಿನ ಮಾರ್ಗದಲ್ಲಿ ಖರ್ಚು ಮಾಡುವ

هَٰٓأَنتُمۡ هَٰٓؤُلَآءِ تُدۡعَوۡنَ لِتُنفِقُواْ فِي

1 ಅಲ್ಲಾಹು ಮುಸ್ಲಿಮರಿಗೆ ಪ್ರತ್ಯಾಕ್ರಮಣ ಮಾಡಲು ಆಜ್ಞೆ ನೀಡಿದ್ದು ಅವರು ಅನ್ಯಾಯವಾಗಿ ಹಿಂಸೆಗೆ ಬಲಿಯಾಗುತ್ತಿದ್ದ ಪರಿಸ್ಥಿತಿಯಲ್ಲಾಗಿತ್ತು. ಈ ಪರಿಸ್ಥಿತಿಯಲ್ಲಿ ಮುಸ್ಲಿಮರೇ ಮುಂದೆ ಬಂದು ಸಂಧಾನಕ್ಕೆ ಸಿದ್ಧರಾಗುವುದನ್ನು ಬಲಹೀನತೆಯೆಂದೇ ಪರಿಗಣಿಸಲಾಗುತ್ತದೆ. ಸತ್ಯವಿಶ್ವಾಸ ಮತ್ತು ಆತ್ಮಸ್ಥೈರ್ಯದಲ್ಲಿ ಶತ್ರುಗಳಿಗಿಂತಲೂ ಎಷ್ಟೋ ಶ್ರೇಷ್ಠರಾಗಿರುವ ಮುಸ್ಲಿಮರು ಯಾವುದೇ ಕಾರಣಕ್ಕೂ ಹೇಡಿತನದ ನಿರ್ಧಾರ ಕೈಗೊಳ್ಳಕೂಡದು. ಆದರೆ ಶತ್ರುಗಳು ಆಕ್ರಮಣವನ್ನು ನಿಲ್ಲಿಸಿ ಸಂಧಾನದೊಂದಿಗೆ ಮುಂದೆ ಬಂದರೆ ಅದನ್ನು ಸ್ವೀಕರಿಸಬೇಕೆಂದು ಕುರ್‌ಆನ್ (8:61) ಕರೆ ನೀಡುತ್ತದೆ.

2 ಓರ್ವ ವ್ಯಕ್ತಿ ವಿಶ್ವಾಸವಿಟ್ಟು ಧರ್ಮನಿಷ್ಠೆಯನ್ನು ಪಾಲಿಸಿದರೆ ಅದರಿಂದ ಅಲ್ಲಾಹು ಸಂತೃಪ್ತನಾಗುತ್ತಾನೆ. ಅವನ ಸಂಪತ್ತನ್ನು ತನಗೆ ನೀಡಬೇಕೆಂದು ಅಲ್ಲಾಹು ಬೇಡಿಕೆಯಿಡುವುದಿಲ್ಲ. ದಾನಧರ್ಮ ಮಾಡಬೇಕೆಂದು ಅಲ್ಲಾಹು ಉಪದೇಶ ಮಾಡುವುದು ಅಲ್ಲಾಹುವಿಗಾಗಿ ಅಲ್ಲ, ಬದಲಾಗಿ ಮನುಷ್ಯರ ಒಳಿತಿಗಾಗಿದೆ.

3 ವರ್ತನೆಯಲ್ಲಿ ಸಭ್ಯತೆಯನ್ನು ತೋರಿಸುವವರ ಪೈಕಿ ಹಲವರೊಂದಿಗೆ ಹಣವನ್ನು ಕೇಳಿದೊಡನೆ ಮುಖಭಾವ ಬದಲಾಗಿ ಕೋಪ ಪ್ರಕಟವಾಗುವುದನ್ನು ಕಾಣಬಹುದು.

سَبِيلِ ٱللَّهِ فَمِنكُم مَّن يَبۡخَلُۖ وَمَن
يَبۡخَلۡ فَإِنَّمَا يَبۡخَلُ عَن نَّفۡسِهِۦۚ
وَٱللَّهُ ٱلۡغَنِيُّ وَأَنتُمُ ٱلۡفُقَرَآءُۚ وَإِن تَتَوَلَّوۡاْ
يَسۡتَبۡدِلۡ قَوۡمًا غَيۡرَكُمۡ ثُمَّ لَا يَكُونُوٓاْ
أَمۡثَٰلَكُم ٣٨

ಸಲುವಾಗಿದೆ. ಆಗ ನಿಮ್ಮ ಪೈಕಿ ಕೆಲವರು ಜಿಪುಣತೆ ತೋರುವರು. ಯಾರಾದರೂ ಜಿಪುಣತೆ ತೋರುವುದಾದರೆ ಅವನು ಸ್ವತಃ ತನ್ನೊಂದಿಗೇ ಜಿಪುಣತೆ ತೋರುತ್ತಿರುವನು. ಅಲ್ಲಾಹು ನಿರಪೇಕ್ಷನಾಗಿರುವನು. ನೀವು ನಿರ್ಗತಿಕರಾಗಿರುವಿರಿ. ನೀವು ವಿಮುಖರಾಗುವುದಾದರೆ ಅವನು ನಿಮ್ಮ ಹೊರತಾದ ಬೇರೊಂದು ಜನತೆಯನ್ನು ಬದಲಿಯಾಗಿ ತರುವನು. ಆ ಬಳಿಕ ಅವರು ನಿಮ್ಮ ಹಾಗಿರಲಾರರು.

## ಅಲ್‌ಫತ್‌ಹ್ (ವಿಜಯ)

## سُورَةُ الفَتْحِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 29

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಖಂಡಿತವಾಗಿಯೂ ನಾವು ತಮಗೆ ಸ್ಪಷ್ಟವಾದ ಒಂದು ವಿಜಯವನ್ನು ದಯಪಾಲಿಸಿರುವೆವು.[1]

إِنَّا فَتَحۡنَا لَكَ فَتۡحٗا مُّبِينٗا ١

2. ಅದು ತಮ್ಮ ಪಾಪಗಳ ಪೈಕಿ[2] ಮುಂಚೆ ಗತಿಸಿರುವುದನ್ನು ಮತ್ತು ಮುಂದೆ ಸಂಭವಿಸಲಿರುವುದನ್ನು ಅಲ್ಲಾಹು ತಮಗೆ ಕ್ಷಮಿಸುವ ಸಲುವಾಗಿ, ಅವನ ಅನುಗ್ರಹವನ್ನು ತಮ್ಮ ಮೇಲೆ ಪೂರ್ಣಗೊಳಿಸುವ ಸಲುವಾಗಿ ಹಾಗೂ ತಮ್ಮನ್ನು ನೇರಮಾರ್ಗದಲ್ಲಿ ಮುನ್ನಡೆಸುವ ಸಲುವಾಗಿದೆ.

لِّيَغۡفِرَ لَكَ ٱللَّهُ مَا تَقَدَّمَ مِن ذَنۢبِكَ وَمَا تَأَخَّرَ وَيُتِمَّ نِعۡمَتَهُۥ عَلَيۡكَ وَيَهۡدِيَكَ صِرَٰطٗا مُّسۡتَقِيمٗا ٢

3. ಪ್ರತಾಪದಿಂದ ಕೂಡಿದ ಒಂದು ಸಹಾಯವನ್ನು ಅಲ್ಲಾಹು ತಮಗೆ ನೀಡುವ ಸಲುವಾಗಿ.

وَيَنصُرَكَ ٱللَّهُ نَصۡرًا عَزِيزًا ٣

4. ಸತ್ಯವಿಶ್ವಾಸಿಗಳ ಹೃದಯಗಳಲ್ಲಿ ಶಾಂತಿಯನ್ನು ಇಳಿಸಿದವನು ಅವನಾಗಿರುವನು.[3] ಅವರಲ್ಲಿರುವ ವಿಶ್ವಾಸದೊಂದಿಗೆ ವಿಶ್ವಾಸವು ಇನ್ನೂ ಹೆಚ್ಚಾಗುವ

هُوَ ٱلَّذِيٓ أَنزَلَ ٱلسَّكِينَةَ فِي قُلُوبِ ٱلۡمُؤۡمِنِينَ لِيَزۡدَادُوٓاْ إِيمَٰنٗا مَّعَ إِيمَٰنِهِمۡۗ

---

1 ಅನೇಕ ವ್ಯಾಖ್ಯಾನಕಾರರ ಅಭಿಪ್ರಾಯ ಪ್ರಕಾರ ಹುದೈಬಿಯಾದಲ್ಲಿ ಪ್ರವಾದಿ(ﷺ)ರವರು ಶತ್ರುಗಳೊಂದಿಗೆ ಮಾಡಿದ ಒಪ್ಪಂದವನ್ನು ಇಲ್ಲಿ ಸ್ಪಷ್ಟವಾದ ವಿಜಯವೆಂದು ಹೇಳಲಾಗಿದೆ. ಈ ಹುದೈಬಿಯಾ ಒಪ್ಪಂದವು ಮಕ್ಕಾ ವಿಜಯ ಸೇರಿದಂತೆ ಇಸ್ಲಾಮ್ ಅರೇಬಿಯಾದಲ್ಲಿ ಪಡೆದ ಮಹಾನ್ ವಿಜಯಗಳಿಗೆ ನಾಂದಿಯಾಯಿತು. ಈ ಒಪ್ಪಂದದ ನಂತರ ಪ್ರವಾದಿ(ﷺ)ರವರು ಮದೀನಕ್ಕೆ ಮರಳುವ ಹಾದಿಯಲ್ಲಿ ಈ ಅಧ್ಯಾಯವು ಅವತೀರ್ಣಗೊಂಡಿತು. ಈ ಸೂಕ್ತಿಯು ಮಕ್ಕಾ ವಿಜಯದ ಕುರಿತಾದ ಭವಿಷ್ಯವೆಂದು ಇತರ ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ.

2 ಇಲ್ಲಿ ಪಾಪ ಎಂಬ ಪದದ ತಾತ್ಪರ್ಯವು ನಿಲುವು ಮತ್ತು ದೃಷ್ಟಿಕೋನಗಳಲ್ಲಿ ಬರುವಂತಹ ಕ್ಷುಲ್ಲಕ ಪ್ರಮಾದಗಳಾಗಿವೆ.

3 ಹುದೈಬಿಯಾ ಒಪ್ಪಂದಕ್ಕೆ ಮುಂಚಿತವಾಗಿ ಒಂದು ಸಂಘರ್ಷವುಂಟಾಗಲಿದೆಯೆಂಬ ಭೀತಿಯುಂಟಾದ ಸಮಯದಲ್ಲಿ ದೃಢವಿಶ್ವಾಸಿಗಳಲ್ಲದ ಕೆಲವರು ಹಿಂದೆ ಸರಿದರು. ಆಗ ನಿಷ್ಕಳಂಕ ವಿಶ್ವಾಸವಿದ್ದ ಸಹಾಬಿಗಳು ಮರಣದವರೆಗೆ ಪ್ರವಾದಿ(ﷺ)ರವರೊಂದಿಗೆ ಅಚಲವಾಗಿ ನಿಲ್ಲುವೆವು ಎಂದು ಪ್ರತಿಜ್ಞೆ ಮಾಡಿದರು. ಇಲ್ಲಿ ಪ್ರಸ್ತಾಪಿಸಿದ್ದು ಈ ಸಹಾಬಾಗಳ ಮನಃಶಾಂತಿಯ ಕುರಿತಾಗಿದೆ.

ಸಲುವಾಗಿ. ಆಕಾಶಗಳ ಮತ್ತು ಭೂಮಿಯ ಸೈನ್ಯಗಳು ಅಲ್ಲಾಹುವಿನದ್ದಾಗಿವೆ. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَلِلَّهِ جُنُودُ ٱلسَّمَٰوَٰتِ وَٱلْأَرْضِ ۚ وَكَانَ ٱللَّهُ عَلِيمًا حَكِيمًا ﴿٤﴾

5. ಸತ್ಯವಿಶ್ವಾಸಿಗಳನ್ನು ಮತ್ತು ಸತ್ಯವಿಶ್ವಾಸಿನಿಯರನ್ನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಶಾಶ್ವತವಾಸಿಗಳಾಗಿ ಪ್ರವೇಶ ಮಾಡಿಸುವ ಸಲುವಾಗಿ ಮತ್ತು ಅವರಿಂದ ಅವರ ಕೆಡುಕುಗಳನ್ನು ಅಳಿಸಿಹಾಕುವ ಸಲುವಾಗಿ. ಅದು ಅಲ್ಲಾಹುವಿನ ಬಳಿ ಒಂದು ಮಹಾ ಭಾಗ್ಯವಾಗಿದೆ.

لِّيُدْخِلَ ٱلْمُؤْمِنِينَ وَٱلْمُؤْمِنَٰتِ جَنَّٰتٍ تَجْرِى مِن تَحْتِهَا ٱلْأَنْهَٰرُ خَٰلِدِينَ فِيهَا وَيُكَفِّرَ عَنْهُمْ سَيِّـَٔاتِهِمْ ۚ وَكَانَ ذَٰلِكَ عِندَ ٱللَّهِ فَوْزًا عَظِيمًا ﴿٥﴾

6. ಅಲ್ಲಾಹುವಿನ ಕುರಿತು ತಪ್ಪುಕಲ್ಪನೆಗಳನ್ನು ಇಟ್ಟುಕೊಂಡಿರುವ ಕಪಟವಿಶ್ವಾಸಿಗಳನ್ನು ಮತ್ತು ಕಪಟವಿಶ್ವಾಸಿನಿಯರನ್ನು, ಬಹುದೇವವಿಶ್ವಾಸಿಗಳನ್ನು ಮತ್ತು ಬಹುದೇವವಿಶ್ವಾಸಿನಿಯರನ್ನು ಶಿಕ್ಷಿಸುವ ಸಲುವಾಗಿ. ಅವರ ಮೇಲೆ ಕೆಡುಕಿನ ಆವರಣವಿದೆ. ಅಲ್ಲಾಹು ಅವರ ಮೇಲೆ ಕ್ರೋಧಗೊಂಡಿರುವನು, ಅವರನ್ನು ಶಪಿಸಿರುವನು ಮತ್ತು ಅವರಿಗೆ ನರಕಾಗ್ನಿಯನ್ನು ಸಿದ್ಧಗೊಳಿಸಿರುವನು. ತಲುಪಲಿಕ್ಕಿರುವ ಆ ಸ್ಥಳವು ಅದೆಷ್ಟು ನಿಕೃಷ್ಟವಾದುದು!

وَيُعَذِّبَ ٱلْمُنَٰفِقِينَ وَٱلْمُنَٰفِقَٰتِ وَٱلْمُشْرِكِينَ وَٱلْمُشْرِكَٰتِ ٱلظَّآنِّينَ بِٱللَّهِ ظَنَّ ٱلسَّوْءِ ۚ عَلَيْهِمْ دَآئِرَةُ ٱلسَّوْءِ ۖ وَغَضِبَ ٱللَّهُ عَلَيْهِمْ وَلَعَنَهُمْ وَأَعَدَّ لَهُمْ جَهَنَّمَ ۖ وَسَآءَتْ مَصِيرًا ﴿٦﴾

7. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಸೈನ್ಯಗಳು ಅಲ್ಲಾಹುವಿನದ್ದಾಗಿವೆ. ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَلِلَّهِ جُنُودُ ٱلسَّمَٰوَٰتِ وَٱلْأَرْضِ ۚ وَكَانَ ٱللَّهُ عَزِيزًا حَكِيمًا ﴿٧﴾

8. ಖಂಡಿತವಾಗಿಯೂ ನಾವು ತಮ್ಮನ್ನು ಒಬ್ಬ ಸಾಕ್ಷಿಯಾಗಿ, ಶುಭವಾರ್ತೆ ತಿಳಿಸುವವನಾಗಿ ಮತ್ತು ಮುನ್ನೆಚ್ಚರಿಕೆ ನೀಡುವವನಾಗಿ ಕಳುಹಿಸಿರುವೆವು.

إِنَّآ أَرْسَلْنَٰكَ شَٰهِدًا وَمُبَشِّرًا وَنَذِيرًا ﴿٨﴾

9. ನೀವು ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡುವ ಸಲುವಾಗಿ, ಅವರಿಗೆ ನೆರವು ನೀಡುವ ಸಲುವಾಗಿ,

لِّتُؤْمِنُوا۟ بِٱللَّهِ وَرَسُولِهِۦ وَتُعَزِّرُوهُ وَتُوَقِّرُوهُ ۚ وَتُسَبِّحُوهُ بُكْرَةً وَأَصِيلًا ﴿٩﴾

ಅವರನ್ನು ಗೌರವಿಸುವ ಸಲುವಾಗಿ ಮತ್ತು ಬೆಳಗ್ಗೆ ಹಾಗೂ ಸಂಜೆ ಅವನ (ಅಲ್ಲಾಹುವಿನ) ಮಹತ್ವವನ್ನು ಕೊಂಡಾಡುವ ಸಲುವಾಗಿದೆ.

**10.** ಖಂಡಿತವಾಗಿಯೂ (ಓ ಪ್ರವಾದಿ) ತಮ್ಮೊಂದಿಗೆ ಪ್ರತಿಜ್ಞೆ ಮಾಡುವವರು ಪ್ರತಿಜ್ಞೆ ಮಾಡುತ್ತಿರುವುದು ಅಲ್ಲಾಹುವಿನೊಂದಿಗಾಗಿದೆ. ಅಲ್ಲಾಹುವಿನ ಕೈ ಅವರ ಕೈಗಳ ಮೇಲಿದೆ. ಆದ್ದರಿಂದ ಯಾರಾದರೂ (ಪ್ರತಿಜ್ಞೆಯನ್ನು) ಉಲ್ಲಂಘಿಸುವುದಾದರೆ ಅದನ್ನು ಉಲ್ಲಂಘಿಸುವುದರ ದೋಷವು ಅವನಿಗೇ ಆಗಿದೆ. ಯಾರಾದರೂ ತಾನು ಅಲ್ಲಾಹುವಿನೊಂದಿಗೆ ಮಾಡಿಕೊಂಡಿರುವ ಕರಾರನ್ನು ಪೂರ್ಣಗೊಳಿಸುವುದಾದರೆ ಅವನಿಗೆ ಅವನು ಮಹಾ ಪ್ರತಿಫಲವನ್ನು ನೀಡುವನು.

إِنَّ ٱلَّذِينَ يُبَايِعُونَكَ إِنَّمَا يُبَايِعُونَ ٱللَّهَ يَدُ ٱللَّهِ فَوْقَ أَيْدِيهِمْۚ فَمَن نَّكَثَ فَإِنَّمَا يَنكُثُ عَلَىٰ نَفْسِهِۦۖ وَمَنْ أَوْفَىٰ بِمَا عَٰهَدَ عَلَيْهُ ٱللَّهَ فَسَيُؤْتِيهِ أَجْرًا عَظِيمًا ﴿١٠﴾

**11.** ಗ್ರಾಮೀಣ ಅರಬರ ಪೈಕಿ ಹಿಂಜರಿದು ನಿಂತವರು ತಮ್ಮೊಂದಿಗೆ ಹೇಳುವರು: 'ನಮ್ಮ ಸಂಪತ್ತುಗಳು ಮತ್ತು ಕುಟುಂಬಗಳು (ನಿಮ್ಮೊಂದಿಗೆ ಬರಲು ಸಾಧ್ಯವಾಗದಂತೆ) ನಮ್ಮನ್ನು ಮಗ್ನಗೊಳಿಸಿವೆ. ಆದ್ದರಿಂದ ತಾವು ನಮಗೋಸ್ಕರ ಪಾಪಮುಕ್ತಿಯನ್ನು ಬೇಡಿರಿ'. ಅವರು ತಮ್ಮ ಹೃದಯಗಳಲ್ಲಿ ಇಲ್ಲದಿರುವುದನ್ನು ತಮ್ಮ ನಾಲಗೆಗಳ ಮೂಲಕ ಹೇಳುತ್ತಿರುವರು. ಹೇಳಿರಿ: 'ಹಾಗಾದರೆ ಅಲ್ಲಾಹು ನಿಮಗೆ ಯಾವುದಾದರೂ ಹಾನಿಯನ್ನು ಮಾಡಲು ಇಚ್ಛಿಸಿದರೆ ಅಥವಾ ಅವನು ನಿಮಗೆ ಯಾವುದಾದರೂ ಒಳಿತನ್ನು ನೀಡಲು ಇಚ್ಛಿಸಿದರೆ ಅವನ ಬಳಿಯಿಂದ ಏನನ್ನಾದರೂ ನಿಮಗೆ ಅಧೀನಗೊಳಿಸಿ ಕೊಡುವವರು ಯಾರಿರುವರು?' ಅಲ್ಲ, ನೀವು ಮಾಡುತ್ತಿರುವ ಕರ್ಮಗಳ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

سَيَقُولُ لَكَ ٱلْمُخَلَّفُونَ مِنَ ٱلْأَعْرَابِ شَغَلَتْنَآ أَمْوَٰلُنَا وَأَهْلُونَا فَٱسْتَغْفِرْ لَنَاۚ يَقُولُونَ بِأَلْسِنَتِهِم مَّا لَيْسَ فِى قُلُوبِهِمْۚ قُلْ فَمَن يَمْلِكُ لَكُم مِّنَ ٱللَّهِ شَيْـًٔا إِنْ أَرَادَ بِكُمْ ضَرًّا أَوْ أَرَادَ بِكُمْ نَفْعًۢاۚ بَلْ كَانَ ٱللَّهُ بِمَا تَعْمَلُونَ خَبِيرًا ﴿١١﴾

**12.** ಅಲ್ಲ, ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳು ಎಂದಿಗೂ ಅವರ ಕುಟುಂಬಗಳ ಬಳಿಗೆ ಮರಳಲಾರರು ಎಂದು ನೀವು ಭಾವಿಸಿದಿರಿ.

بَلْ ظَنَنتُمْ أَن لَّن يَنقَلِبَ ٱلرَّسُولُ وَٱلْمُؤْمِنُونَ إِلَىٰٓ أَهْلِيهِمْ أَبَدًا وَزُيِّنَ ذَٰلِكَ

ಅದನ್ನು ನಿಮ್ಮ ಹೃದಯಗಳಲ್ಲಿ ಆಕರ್ಷಕಗೊಳಿಸಿ ಕೊಡಲಾಗಿತ್ತು. ನೀವು ಭಾವಿಸಿರುವುದು ನಿಕೃಷ್ಟ ಭಾವನೆಯಾಗಿತ್ತು. ನೀವು ನಾಶವಾಗುವ ಒಂದು ಜನತೆಯಾಗಿರುವಿರಿ.

فِي قُلُوبِكُمۡ وَظَنَنتُمۡ ظَنَّ ٱلسَّوۡءِ وَكُنتُمۡ قَوۡمَۢا بُورٗا ﴿١٢﴾

13. ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶ ವಾಹಕರಲ್ಲಿ ಯಾರು ವಿಶ್ವಾಸವಿಡುವುದಿಲ್ಲವೋ ಅಂತಹ ಸತ್ಯನಿಷೇಧಿಗಳಿಗೆ ನಾವು ಧಗಧಗಿಸುವ ನರಕಾಗ್ನಿಯನ್ನು ಸಿದ್ಧಗೊಳಿಸಿರುವೆವು.

وَمَن لَّمۡ يُؤۡمِنۢ بِٱللَّهِ وَرَسُولِهِۦ فَإِنَّآ أَعۡتَدۡنَا لِلۡكَٰفِرِينَ سَعِيرٗا ﴿١٣﴾

14. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅಲ್ಲಾಹುವಿಗಾಗಿದೆ. ಅವನು ತಾನಿಚ್ಛಿಸುವವರನ್ನು ಕ್ಷಮಿಸುವನು ಮತ್ತು ತಾನಿಚ್ಛಿಸುವವರನ್ನು ಶಿಕ್ಷಿಸುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَلِلَّهِ مُلۡكُ ٱلسَّمَٰوَٰتِ وَٱلۡأَرۡضِۚ يَغۡفِرُ لِمَن يَشَآءُ وَيُعَذِّبُ مَن يَشَآءُۚ وَكَانَ ٱللَّهُ غَفُورٗا رَّحِيمٗا ﴿١٤﴾

15. ನೀವು ಸಂಪತ್ತನ್ನು ವಶಪಡಿಸುವ ಕಡೆಗೆ (ಯುದ್ಧಕ್ಕಾಗಿ) ಹೋಗುವುದಾದರೆ ಹಿಂಜರಿದು ನಿಂತವರು ಹೇಳುವರು: 'ನಮ್ಮನ್ನು ಬಿಟ್ಟುಬಿಡಿರಿ (ತಡೆಯದಿರಿ!), ನಾವೂ ನಿಮ್ಮನ್ನು ಹಿಂಬಾಲಿಸುವೆವು'. ಅಲ್ಲಾಹುವಿನ ವಚನಗಳಿಗೆ ಬದಲಾವಣೆಯನ್ನು ತರಲು ಅವರು ಇಚ್ಛಿಸುತ್ತಿರುವರು. ತಾವು ಹೇಳಿರಿ: 'ನೀವೆಂದೂ ನಮ್ಮನ್ನು ಹಿಂಬಾಲಿಸಲಾರಿರಿ. ಹೀಗೆಂದು ಅಲ್ಲಾಹು ಮುಂಚೆಯೇ ಹೇಳಿರುವನು'. ಆಗ ಅವರು ಹೇಳುವರು: ಅಲ್ಲ, ನೀವು ನಮ್ಮ ಬಗ್ಗೆ ಅಸೂಯೆ ಪಡುತ್ತಿರುವಿರಿ'. ಅಲ್ಲ, ಅವರು ಅತ್ಯಲ್ಪವಾಗಿಯೇ ಹೊರತು (ವಿಷಯವನ್ನು) ಗ್ರಹಿಸಲಾರರು.

سَيَقُولُ ٱلۡمُخَلَّفُونَ إِذَا ٱنطَلَقۡتُمۡ إِلَىٰ مَغَانِمَ لِتَأۡخُذُوهَا ذَرُونَا نَتَّبِعۡكُمۡۖ يُرِيدُونَ أَن يُبَدِّلُواْ كَلَٰمَ ٱللَّهِۚ قُل لَّن تَتَّبِعُونَا كَذَٰلِكُمۡ قَالَ ٱللَّهُ مِن قَبۡلُۖ فَسَيَقُولُونَ بَلۡ تَحۡسُدُونَنَاۚ بَلۡ كَانُواْ لَا يَفۡقَهُونَ إِلَّا قَلِيلٗا ﴿١٥﴾

16. ಗ್ರಾಮೀಣ ಅರಬಿಗಳ ಪೈಕಿ ಹಿಂಜರಿದು ನಿಂತವರೊಂದಿಗೆ ತಾವು ಹೇಳಿರಿ: 'ಮಹಾ ಆಕ್ರಮಣ ಶಕ್ತಿಯಿರುವ ಜನತೆಯನ್ನು ಎದುರಿಸುವ ಸಲುವಾಗಿ ನಿಮ್ಮನ್ನು ತರುವಾಯ ಕರೆಯಲಾಗುವುದು. ಅವರು ಶರಣಾಗುವ ವರೆಗೆ ನೀವು ಅವರೊಂದಿಗೆ ಯುದ್ಧ

قُل لِّلۡمُخَلَّفِينَ مِنَ ٱلۡأَعۡرَابِ سَتُدۡعَوۡنَ إِلَىٰ قَوۡمٍ أُوْلِي بَأۡسٖ شَدِيدٖ تُقَٰتِلُونَهُمۡ أَوۡ يُسۡلِمُونَۖ فَإِن تُطِيعُواْ يُؤۡتِكُمُ ٱللَّهُ أَجۡرًا حَسَنٗاۖ وَإِن تَتَوَلَّوۡاْ كَمَا تَوَلَّيۡتُم مِّن قَبۡلُ يُعَذِّبۡكُمۡ عَذَابًا أَلِيمٗا ﴿١٦﴾

ಮಾಡಬೇಕಾಗುವುದು! ಆಗ ನೀವು ಅನುಸರಿಸುವುದಾದರೆ ಅಲ್ಲಾಹು ನಿಮಗೆ ಉತ್ತಮ ಪ್ರತಿಫಲವನ್ನು ನೀಡುವನು. ಮುಂಚೆ ನೀವು ವಿಮುಖರಾದಂತೆ (ಮುಂದೆಯೂ) ವಿಮುಖರಾಗುವುದಾದರೆ ಅವನು ನಿಮಗೆ ಯಾತನಾಮಯ ಶಿಕ್ಷೆಯನ್ನು ನೀಡುವನು'.

لَّيۡسَ عَلَى ٱلۡأَعۡمَىٰ حَرَجٞ وَلَا عَلَى ٱلۡأَعۡرَجِ حَرَجٞ وَلَا عَلَى ٱلۡمَرِيضِ حَرَجٞۗ وَمَن يُطِعِ ٱللَّهَ وَرَسُولَهُۥ يُدۡخِلۡهُ جَنَّٰتٖ تَجۡرِي مِن تَحۡتِهَا ٱلۡأَنۡهَٰرُۖ وَمَن يَتَوَلَّ يُعَذِّبۡهُ عَذَابًا أَلِيمٗا ١٧

17. ಕುರುಡನ ಮೇಲೆ ದೋಷವಿಲ್ಲ. ಕುಂಟನ ಮೇಲೂ ದೋಷವಿಲ್ಲ. ರೋಗಿಯ ಮೇಲೂ ದೋಷವಿಲ್ಲ. ಯಾರಾದರೂ ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ಅನುಸರಿಸಿದರೆ ಅವನು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿಗೆ ಅವನನ್ನು ಪ್ರವೇಶಗೊಳಿಸುವನು. ಯಾರಾದರೂ ವಿಮುಖನಾಗುವುದಾದರೆ ಅವನಿಗೆ ಯಾತನಾಮಯ ಶಿಕ್ಷೆಯನ್ನು ನೀಡುವನು.

۞لَّقَدۡ رَضِيَ ٱللَّهُ عَنِ ٱلۡمُؤۡمِنِينَ إِذۡ يُبَايِعُونَكَ تَحۡتَ ٱلشَّجَرَةِ فَعَلِمَ مَا فِي قُلُوبِهِمۡ فَأَنزَلَ ٱلسَّكِينَةَ عَلَيۡهِمۡ وَأَثَٰبَهُمۡ فَتۡحٗا قَرِيبٗا ١٨

18. ಆ ಮರದ ಬುಡದಲ್ಲಿ ಸತ್ಯವಿಶ್ವಾಸಿಗಳು ತಮ್ಮೊಂದಿಗೆ ಪ್ರತಿಜ್ಞೆಗೈದ ಸಂದರ್ಭದಲ್ಲಿ ಖಂಡಿತವಾಗಿಯೂ ಅಲ್ಲಾಹು ಅವರ ಬಗ್ಗೆ ಸಂತೃಪ್ತನಾಗಿದ್ದನು. ಅವನು ಅವರ ಹೃದಯಗಳಲ್ಲಿರುವುದನ್ನು ಅರಿತಿರುವನು. ತರುವಾಯ ಅವನು ಅವರಿಗೆ ಮನಃಶಾಂತಿಯನ್ನು ಇಳಿಸಿಕೊಟ್ಟನು ಮತ್ತು ಶೀಘ್ರ ವಿಜಯವೊಂದನ್ನು ಅವರಿಗೆ ಪ್ರತಿಫಲವಾಗಿ ನೀಡಿದನು.

وَمَغَانِمَ كَثِيرَةٗ يَأۡخُذُونَهَاۗ وَكَانَ ٱللَّهُ عَزِيزًا حَكِيمٗا ١٩

19. ಅವರಿಗೆ ವಶಪಡಿಸಿಕೊಳ್ಳಲು ಹೇರಳ ಸಮರಾರ್ಜಿತ ಸಂಪತ್ತನ್ನು (ಅವನು ನೀಡಿದನು). ಅಲ್ಲಾಹು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَعَدَكُمُ ٱللَّهُ مَغَانِمَ كَثِيرَةٗ تَأۡخُذُونَهَا فَعَجَّلَ لَكُمۡ هَٰذِهِۦ وَكَفَّ أَيۡدِيَ ٱلنَّاسِ عَنكُمۡ وَلِتَكُونَ ءَايَةٗ لِّلۡمُؤۡمِنِينَ وَيَهۡدِيَكُمۡ صِرَٰطٗا مُّسۡتَقِيمٗا ٢٠

20. ನಿಮಗೆ ವಶಪಡಿಸಿಕೊಳ್ಳಬಹುದಾದ ಹೇರಳ ಸಮರಾರ್ಜಿತ ಸಂಪತ್ತನ್ನು ಅಲ್ಲಾಹು ನಿಮಗೆ ವಾಗ್ದಾನ ಮಾಡಿರುವನು. ಆದರೆ ಇದನ್ನು (ಖೈಬರ್ ಯುದ್ಧದ ಸಮರಾರ್ಜಿತ ಸಂಪತ್ತನ್ನು) ಅವನು ಈಗಾಗಲೇ ನಿಮಗೆ

ನೀಡಿರುವನು. ಅವನು ಜನರ ಕೈಗಳನ್ನು ನಿಮ್ಮಿಂದ ತಡೆದಿರುವನು. ಅದು ಸತ್ಯವಿಶ್ವಾಸಿಗಳಿಗೆ ಒಂದು ದೃಷ್ಟಾಂತವಾಗುವ ಸಲುವಾಗಿ ಮತ್ತು ಅವನು ನಿಮ್ಮನ್ನು ನೇರವಾದ ಮಾರ್ಗದೆಡೆಗೆ ಮುನ್ನಡೆಸುವ ಸಲುವಾಗಿದೆ.

21. ನಿಮಗೆ ಪಡೆಯಲು ಸಾಧ್ಯವಾಗಿರದಂತಹ ಇತರ ಸಾಧನೆಗಳನ್ನು (ಅವನು ನಿಮಗೆ ವಾಗ್ದಾನ ಮಾಡಿರುವನು). ಅಲ್ಲಾಹು ಅವುಗಳನ್ನು ಆವರಿಸಿಕೊಂಡಿರುವನು. ಅಲ್ಲಾಹು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

وَأُخْرَىٰ لَمْ تَقْدِرُوا۟ عَلَيْهَا قَدْ أَحَاطَ ٱللَّهُ بِهَا ۚ وَكَانَ ٱللَّهُ عَلَىٰ كُلِّ شَىْءٍ قَدِيرًا ﴿٢١﴾

22. ಆ ಸತ್ಯನಿಷೇಧಿಗಳು ನಿಮ್ಮೊಂದಿಗೆ ಯುದ್ಧ ಹೂಡಿದ್ದರೂ ಅವರು ಬೆನ್ನುತಿರುಗಿಸಿ ಓಡುತ್ತಿದ್ದರು. ತರುವಾಯ ಅವರು ಯಾವುದೇ ರಕ್ಷಕನನ್ನಾಗಲಿ ಸಹಾಯಕನನ್ನಾಗಲಿ ಕಾಣಲಾರರು.

وَلَوْ قَـٰتَلَكُمُ ٱلَّذِينَ كَفَرُوا۟ لَوَلَّوُا۟ ٱلْأَدْبَـٰرَ ثُمَّ لَا يَجِدُونَ وَلِيًّا وَلَا نَصِيرًا ﴿٢٢﴾

23. ಅದು ಮುಂಚಿನಿಂದಲೇ ಗತಿಸಿ ಹೋಗಿರುವ ಅಲ್ಲಾಹುವಿನ ಕ್ರಮವಾಗಿದೆ. ಅಲ್ಲಾಹುವಿನ ಕ್ರಮಕ್ಕೆ ತಾವು ಯಾವುದೇ ಬದಲಾವಣೆಯನ್ನೂ ಕಾಣಲಾರಿರಿ.

سُنَّةَ ٱللَّهِ ٱلَّتِى قَدْ خَلَتْ مِن قَبْلُ ۖ وَلَن تَجِدَ لِسُنَّةِ ٱللَّهِ تَبْدِيلًا ﴿٢٣﴾

24. ಅವರ (ಶತ್ರುಗಳ) ವಿರುದ್ಧ ನಿಮಗೆ ವಿಜಯವನ್ನು ದಯಪಾಲಿಸಿದ ಬಳಿಕ[1] ಮಕ್ಕಾದೊಳಗೆ ಅವರ ಕೈಗಳನ್ನು ನಿಮ್ಮಿಂದ ಮತ್ತು ನಿಮ್ಮ ಕೈಗಳನ್ನು ಅವರಿಂದ ತಡೆದವನು ಅವನಾಗಿರುವನು. ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ವೀಕ್ಷಿಸುವವನಾಗಿರುವನು.

وَهُوَ ٱلَّذِى كَفَّ أَيْدِيَهُمْ عَنكُمْ وَأَيْدِيَكُمْ عَنْهُم بِبَطْنِ مَكَّةَ مِنۢ بَعْدِ أَنْ أَظْفَرَكُمْ عَلَيْهِمْ ۚ وَكَانَ ٱللَّهُ بِمَا تَعْمَلُونَ بَصِيرًا ﴿٢٤﴾

1 ಹುದೈಬಿಯಾ ಒಪ್ಪಂದಕ್ಕೆ ಮುಂಚಿತವಾಗಿ ಮುಸ್ಲಿಮರ ವಿರುದ್ಧ ಆಕ್ರಮಣಕ್ಕೆ ಮುಂದಾದ ಒಂದು ಗುಂಪು ಆಯುಧಧಾರಿಗಳನ್ನು ಸಹಾಬಿಗಳು ಸೆರೆಹಿಡಿದು ಪ್ರವಾದಿ(ﷺ)ರವರ ಸಮ್ಮುಖದಲ್ಲಿ ಹಾಜರುಗೊಳಿಸಿದಾಗ ಪ್ರವಾದಿ(ﷺ)ರವರು ಅವರನ್ನು ಬಿಟ್ಟುಬಿಡುವಂತೆ ಆದೇಶಿಸಿದ್ದನ್ನು ಇಲ್ಲಿ ಪರಾಮರ್ಶಿಸಲಾಗಿದೆ.

25. ಅವರು ಸತ್ಯವನ್ನು ನಿಷೇಧಿಸಿದವರು, ಪವಿತ್ರ ಮಸೀದಿಯಿಂದ ನಿಮ್ಮನ್ನು ತಡೆದವರು ಮತ್ತು ಬಲಿಮೃಗಗಳು ಅವುಗಳ ನಿಶ್ಚಿತ ಸ್ಥಾನದೆಡೆಗೆ ತಲುಪುವುದನ್ನು ಅನುಮತಿಸದೆ ತಡೆಹಿಡಿದವರಾಗಿರುವರು.[1] ನಿಮಗೆ ತಿಳಿದಿರದಂತಹ ಸತ್ಯವಿಶ್ವಾಸಿಗಳಾದ ಕೆಲವು ಪುರುಷರನ್ನು ಮತ್ತು ಸತ್ಯವಿಶ್ವಾಸಿನಿಯರಾದ ಕೆಲವು ಸ್ತ್ರೀಯರನ್ನು ನೀವು ತುಳಿದು, ಬಳಿಕ (ನಿಮಗೆ) ಅರಿವಿಲ್ಲದೆ ಅವರಿಂದಾಗಿ ನಿಮ್ಮ ಮೇಲೆ ಪಾಪವು ಸಂಭವಿಸುವ ಸಾಧ್ಯತೆ ಇಲ್ಲದಿರುತ್ತಿದ್ದರೆ (ಅಲ್ಲಾಹು ನಿಮ್ಮ ಎರಡು ಬಣಗಳನ್ನು ಯುದ್ಧ ಮಾಡುವುದರಿಂದ ತಡೆಯುತ್ತಿರಲಿಲ್ಲ). ಇದು ಅಲ್ಲಾಹು ತಾನಿಚ್ಛಿಸಿದವರನ್ನು ತನ್ನ ಕಾರುಣ್ಯದಲ್ಲಿ ಸೇರಿಸಿಕೊಳ್ಳುವ ಸಲುವಾಗಿದೆ. ಅವರು (ಮಕ್ಕಾದಲ್ಲಿರುವ ವಿಶ್ವಾಸಿಗಳು ಮತ್ತು ಸತ್ಯನಿಷೇಧಿಗಳು) ಬೇರೆ ಬೇರೆಯಾಗಿ ವಾಸಿಸಿರುತ್ತಿದ್ದರೆ ಅವರ ಪೈಕಿ ಸತ್ಯನಿಷೇಧಿಗಳಿಗೆ ನಾವು ಯಾತನಾಮಯ ಶಿಕ್ಷೆಯನ್ನು ನೀಡುತ್ತಿದ್ದೆವು.

هُمُ ٱلَّذِينَ كَفَرُواْ وَصَدُّوكُمْ عَنِ ٱلْمَسْجِدِ ٱلْحَرَامِ وَٱلْهَدْىَ مَعْكُوفًا أَن يَبْلُغَ مَحِلَّهُۥ ۚ وَلَوْلَا رِجَالٌ مُّؤْمِنُونَ وَنِسَآءٌ مُّؤْمِنَٰتٌ لَّمْ تَعْلَمُوهُمْ أَن تَطَـُٔوهُمْ فَتُصِيبَكُم مِّنْهُم مَّعَرَّةٌۢ بِغَيْرِ عِلْمٍ ۖ لِّيُدْخِلَ ٱللَّهُ فِى رَحْمَتِهِۦ مَن يَشَآءُ ۚ لَوْ تَزَيَّلُواْ لَعَذَّبْنَا ٱلَّذِينَ كَفَرُواْ مِنْهُمْ عَذَابًا أَلِيمًا ﴿٢٥﴾

26. ಸತ್ಯನಿಷೇಧಿಗಳು ತಮ್ಮ ಹೃದಯಗಳಲ್ಲಿ ದುರಭಿಮಾನವನ್ನು –ಆ ಅಜ್ಞಾನಕಾಲದ ದುರಭಿಮಾನವನ್ನು– ಇಟ್ಟುಕೊಂಡಿದ್ದ ಸಂದರ್ಭ! ಆಗ ಅಲ್ಲಾಹು ಅವನ ಸಂದೇಶವಾಹಕರ ಮೇಲೆ ಮತ್ತು ಸತ್ಯವಿಶ್ವಾಸಿಗಳ ಮೇಲೆ ತನ್ನ ವತಿಯ ಮನಃಶಾಂತಿಯನ್ನು ಇಳಿಸಿಕೊಟ್ಟನು. ಭಯಭಕ್ತಿ ಪಾಲಿಸಲಿಕ್ಕಿರುವ ಆಜ್ಞೆ ಸ್ವೀಕರಿಸುವಂತೆ ಅವರನ್ನು ನಿರ್ಬಂಧಿಸಿದನು. ಅವರು ಅದಕ್ಕೆ (ಅದನ್ನು ಸ್ವೀಕರಿಸಲು) ಹೆಚ್ಚು ಅರ್ಹತೆ ಮತ್ತು ಹಕ್ಕುಳ್ಳವರಾಗಿದ್ದರು. ಅಲ್ಲಾಹು ಎಲ್ಲ ವಿಷಯಗಳ ಕುರಿತು ಅರಿವುಳ್ಳವನಾಗಿರುವನು.

إِذْ جَعَلَ ٱلَّذِينَ كَفَرُواْ فِى قُلُوبِهِمُ ٱلْحَمِيَّةَ حَمِيَّةَ ٱلْجَٰهِلِيَّةِ فَأَنزَلَ ٱللَّهُ سَكِينَتَهُۥ عَلَىٰ رَسُولِهِۦ وَعَلَى ٱلْمُؤْمِنِينَ وَأَلْزَمَهُمْ كَلِمَةَ ٱلتَّقْوَىٰ وَكَانُوٓاْ أَحَقَّ بِهَا وَأَهْلَهَا ۚ وَكَانَ ٱللَّهُ بِكُلِّ شَىْءٍ عَلِيمًا ﴿٢٦﴾

1 ಉಮ್ರಾ ನಿರ್ವಹಿಸಲು ಹೊರಟ ಪ್ರವಾದಿ(ﷺ)ರವರನ್ನು ಮತ್ತು ಸಹಾಬಿಗಳನ್ನು ಶತ್ರುಗಳು ತಡೆಹಿಡಿದಾಗ ತರುವಾಯ ಉಂಟಾದ ಒಪ್ಪಂದದ ನಿಯಮಗಳನ್ನು ಗೌರವಿಸಿ ಅವರು ಮಕ್ಕಾ ಪ್ರವೇಶಿಸದೆ ಮರಳಿ ಹೋದರು.

لَّقَدْ صَدَقَ ٱللَّهُ رَسُولَهُ ٱلرُّءْيَا بِٱلْحَقِّ ۖ لَتَدْخُلُنَّ ٱلْمَسْجِدَ ٱلْحَرَامَ إِن شَآءَ ٱللَّهُ ءَامِنِينَ مُحَلِّقِينَ رُءُوسَكُمْ وَمُقَصِّرِينَ لَا تَخَافُونَ ۖ فَعَلِمَ مَا لَمْ تَعْلَمُوا۟ فَجَعَلَ مِن دُونِ ذَٰلِكَ فَتْحًا قَرِيبًا ﴿٢٧﴾

27. ಅಲ್ಲಾಹು ತನ್ನ ಸಂದೇಶವಾಹಕರಿಗೆ ತೋರಿಸಿದ ಕನಸನ್ನು ಸತ್ಯದೊಂದಿಗೆ ಸಾಕಾರಗೊಳಿಸಿದನು. ಅಂದರೆ ಅಲ್ಲಾಹು ಇಚ್ಛಿಸಿದರೆ ಶಾಂತಚಿತ್ತರಾಗಿ, ತಲೆಬೋಳಿಸಿದವರೂ, ಕೂದಲನ್ನು ಕತ್ತರಿಸಿದವರೂ ಆಗಿರುತ್ತಾ ನೀವು ಏನನ್ನೂ ಭಯಪಡದೆ ಪವಿತ್ರ ಮಸೀದಿಯನ್ನು ಖಂಡಿತವಾಗಿಯೂ ಪ್ರವೇಶಿಸುವಿರಿ ಎಂಬ ಕನಸು.(1) ಆದರೆ ನೀವು ಅರಿಯದಿರುವುದನ್ನು ಅವನು ಅರಿತಿರುವನು. ಆದ್ದರಿಂದ ಅದರ ಹೊರತಾಗಿರುವ ಸನ್ನಿಹಿತವಾದ ಒಂದು ವಿಜಯವನ್ನು ಅವನು ದಯಪಾಲಿಸಿರುವನು.

هُوَ ٱلَّذِىٓ أَرْسَلَ رَسُولَهُۥ بِٱلْهُدَىٰ وَدِينِ ٱلْحَقِّ لِيُظْهِرَهُۥ عَلَى ٱلدِّينِ كُلِّهِۦ ۚ وَكَفَىٰ بِٱللَّهِ شَهِيدًا ﴿٢٨﴾

28. ಸನ್ಮಾರ್ಗದೊಂದಿಗೆ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕರನ್ನು ಕಳುಹಿಸಿದವನು ಅವನಾಗಿರುವನು. ಅದನ್ನು ಎಲ್ಲ ಧರ್ಮಗಳ ಮೇಲೆ ಸ್ಪಷ್ಟ ಮೇಲುಗೈ ತೋರಿಸುವ ಸಲುವಾಗಿ. ಸಾಕ್ಷಿಯಾಗಿ ಅಲ್ಲಾಹು ಸಾಕು.

مُّحَمَّدٌ رَّسُولُ ٱللَّهِ ۚ وَٱلَّذِينَ مَعَهُۥٓ أَشِدَّآءُ عَلَى ٱلْكُفَّارِ رُحَمَآءُ بَيْنَهُمْ ۖ تَرَىٰهُمْ رُكَّعًا سُجَّدًا يَبْتَغُونَ فَضْلًا مِّنَ ٱللَّهِ وَرِضْوَٰنًا ۖ سِيمَاهُمْ فِى وُجُوهِهِم مِّنْ أَثَرِ ٱلسُّجُودِ ۚ ذَٰلِكَ مَثَلُهُمْ فِى ٱلتَّوْرَىٰةِ ۚ وَمَثَلُهُمْ فِى ٱلْإِنجِيلِ كَزَرْعٍ أَخْرَجَ شَطْـَٔهُۥ فَـَٔازَرَهُۥ

29. ಮುಹಮ್ಮದ್ ಅಲ್ಲಾಹುವಿನ ಸಂದೇಶವಾಹಕರಾಗಿರುವರು. ಅವರ ಜೊತೆಗಿರುವವರು ಸತ್ಯನಿಷೇಧಿಗಳ ವಿರುದ್ಧ ಕಠೋರವಾಗಿ ವರ್ತಿಸುವವರಾಗಿರುವರು ಮತ್ತು ತಮ್ಮೊಳಗೆ ಅಪಾರ ದಯೆಯುಳ್ಳವರಾಗಿರುವರು. ಅಲ್ಲಾಹುವಿನ ವತಿಯ ಅನುಗ್ರಹ ಮತ್ತು ಸಂತೃಪ್ತಿಯನ್ನು

1 ಸಹಾಬಿಗಳೊಂದಿಗೆ ಸೇರಿ ತಾನು ಶಾಂತಿಯುತವಾಗಿ ಉಮ್ರಾ ನಿರ್ವಹಿಸುವೆನೆಂದು ಕನಸು ಕಂಡ ನಿಮಿತ್ತ ಪ್ರವಾದಿ(ﷺ)ರವರು ಸಹಾಬಿಗಳನ್ನು ಸೇರಿಸಿ ಮಕ್ಕಾದತ್ತ ಹೊರಟಿದ್ದರು. ಆದರೆ ಕುರೈಶಿಗಳು ಅವರನ್ನು ಮಧ್ಯದಲ್ಲಿಯೇ ತಡೆದು ನಿಲ್ಲಿಸಿದಾಗ, ಒಂದು ಯುದ್ಧದ ಹಂತಕ್ಕೆ ತಲುಪಿದ ಸಂಘರ್ಷವು ತರುವಾಯ ಹುದೈಬಿಯಾ ಒಪ್ಪಂದದಲ್ಲಿ ಕೊನೆಗೊಂಡು ಪ್ರವಾದಿ(ﷺ)ರವರು ಮತ್ತು ಸಹಾಬಾಗಳು ಉಮ್ರಾ ನಿರ್ವಹಿಸದೆ ಮದೀನಕ್ಕೆ ಮರಳಿದರು. ಪ್ರವಾದಿ(ﷺ)ರವರ ಕನಸು ಸಾಕಾರಗೊಂಡಿಲ್ಲವೆಂದು ಕಪಟವಿಶ್ವಾಸಿಗಳು ಹಾಗೂ ಇತರ ಜನರು ಗೇಲಿ ಮಾಡತೊಡಗಿದರು. ಈ ಸೂಕ್ತಿಯು ಅವರಿಗೆ ನೀಡಲಾದ ಉತ್ತರವಾಗಿದೆ. ಪ್ರವಾದಿ(ﷺ)ರವರು ಕಂಡದ್ದು ವ್ಯರ್ಥವಾದ ಕನಸಲ್ಲ, ಬದಲಾಗಿ ಅದು ಅಲ್ಲಾಹುವಿನ ಸತ್ಯವಾಗ್ದಾನವಾಗಿದೆ. ಮಕ್ಕಕ್ಕೆ ತೆರಳಿ ಶಾಂತಿಯುತವಾಗಿ ಉಮ್ರ ನಿರ್ವಹಿಸಲು ಮುಸ್ಲಿಮರಿಗೆ ಸಾಧ್ಯವಾಗಲಿದೆ ಮತ್ತು ಅದಕ್ಕಿರುವ ಮುನ್ನುಡಿಯಾದ ನಿರ್ಣಾಯಕವಾದ ವಿಜಯವನ್ನು ಮುಸ್ಲಿಮರು ಹುದೈಬಿಯಾ ಒಪ್ಪಂದದ ಮೂಲಕ ಗಳಿಸಿದ್ದಾರೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ. ಒಪ್ಪಂದದ ಪ್ರಕಾರ ಮಾರನೇ ವರ್ಷ ಪ್ರವಾದಿ(ﷺ)ರವರು ಮತ್ತು ಸಹಾಬಿಗಳು ಶಾಂತಿಯುತವಾಗಿ ಉಮ್ರಾ ನಿರ್ವಹಿಸಿದರು.

فَٱسۡتَغۡلَظَ فَٱسۡتَوَىٰ عَلَىٰ سُوقِهِۦ يُعۡجِبُ ٱلزُّرَّاعَ لِيَغِيظَ بِهِمُ ٱلۡكُفَّارَۗ وَعَدَ ٱللَّهُ ٱلَّذِينَ ءَامَنُواْ وَعَمِلُواْ ٱلصَّٰلِحَٰتِ مِنۡهُم مَّغۡفِرَةً وَأَجۡرًا عَظِيمًۢا ﴿٢٩﴾

ಅರಸುತ್ತಾ ಅವರು ತಲೆಬಾಗುತ್ತಲೂ ಸಾಷ್ಟಾಂಗವೆರಗುತ್ತಲೂ ನಮಾಝ್ ಮಾಡುತ್ತಿರುವುದಾಗಿ ತಾವು ಕಾಣುವಿರಿ. ಸಾಷ್ಟಾಂಗದಿಂದಾಗಿ ಅವರ ಮುಖಗಳಲ್ಲಿ ತಮ್ಮ ಗುರುತಿರುವುದು. ಅದು ಅವರ ಬಗ್ಗೆ ತೌರಾತಿನಲ್ಲಿರುವ ಉಪಮೆಯಾಗಿದೆ. ಅವರ ಕುರಿತು ಇಂಜೀಲಿನಲ್ಲಿರುವ ಉಪಮೆಯು ಹೀಗಿದೆ:[1] ಒಂದು ಬೆಳೆ ತನ್ನ ಮೊಳಕೆಯನ್ನು ಹೊರಹೊಮ್ಮಿಸಿತು. ತರುವಾಯ ಅದನ್ನು ಪುಷ್ಟೀಕರಿಸಿತು. ತರುವಾಯ ಅದು ಬಲವನ್ನು ಪಡೆಯಿತು. ತರುವಾಯ ಅದು ಕೃಷಿಕರಿಗೆ ಪುಳಕವನ್ನು ನೀಡುತ್ತಾ ತನ್ನ ಕಾಂಡದಲ್ಲಿ ನೆಟ್ಟಗೆ ನಿಂತಿತು. (ಸತ್ಯವಿಶ್ವಾಸಿಗಳನ್ನು ಹೀಗೆ ಬೆಳೆಸುವುದು) ಅವರ ನಿಮಿತ್ತ ಸತ್ಯನಿಷೇಧಿಗಳನ್ನು ರೇಗಿಸುವ ಸಲುವಾಗಿದೆ. ಅವರ ಪೈಕಿ ವಿಶ್ವಾಸವಿಟ್ಟವರಿಗೆ ಮತ್ತು ಸತ್ಕರ್ಮಗೈದವರಿಗೆ ಅಲ್ಲಾಹು ಪಾಪಮುಕ್ತಿಯನ್ನು ಮತ್ತು ಮಹಾ ಪ್ರತಿಫಲವನ್ನು ವಾಗ್ದಾನ ಮಾಡಿರುವನು.

1 ತೌರಾತ್ ಅಥವಾ ಮೂಸಾ(عَلَيْهِ السَّلَامُ)ರಿಗೆ ಅವತೀರ್ಣಗೊಂಡ ಗ್ರಂಥ ಇಂದು ಮೂಲರೂಪದಲ್ಲಿ ಲಭ್ಯವಿಲ್ಲ. ಬೈಬಲಿನ ಹಳೆಯ ಒಡಂಬಡಿಕೆಯ ಅನೇಕ ಪುಸ್ತಕಗಳಲ್ಲಿ ತೌರಾತಿನ ಅನೇಕ ಭಾಗಗಳು ಕಾಣಲು ಸಾಧ್ಯವಿರುವುದರಿಂದ ಬೈಬಲಿನ ಹಳೆಯ ಒಡಂಬಡಿಕೆಯನ್ನು ತೌರಾತೆಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಹಳೆಯ ಒಡಂಬಡಿಕೆಯ ಅರಣ್ಯಕಾಂಡ ಎಂಬ ಪುಸ್ತಕದಲ್ಲಿ ಸಾಷ್ಟಾಂಗ ನಿರತರಾದ ಸತ್ಯವಿಶ್ವಾಸಿಗಳ ಬಗ್ಗೆ ಪ್ರಸ್ತಾಪವಿದೆ. ಇಂಜೀಲ್ ಅಥವಾ ಈಸಾ(عَلَيْهِ السَّلَامُ)ರಿಗೆ ಅವತೀರ್ಣಗೊಂಡ ಗ್ರಂಥ ಕೂಡ ಮೂಲರೂಪದಲ್ಲಿ ಲಭ್ಯವಿಲ್ಲ. ಬೈಬಲಿನ ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳಲ್ಲಿ ಇಂಜೀಲಿನ ಅನೇಕ ಭಾಗಗಳು ಕಾಣಲು ಸಾಧ್ಯವಿರುವುದರಿಂದ ಬೈಬಲಿನ ಹೊಸ ಒಡಂಬಡಿಕೆಯನ್ನು ಇಂಜೀಲೆಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಒಂದು ಬೀಜ ಕ್ರಮಾನುಗತವಾಗಿ ಬೆಳೆದು ದೃಢತೆಯನ್ನು ಪಡೆಯುವ ಉಪಮೆಯನ್ನು ಮಾರ್ಕನ ಸುವಾರ್ತೆಯಲ್ಲಿ ಕಾಣಬಹುದು.

# ಅಲ್‌ಹುಜುರಾತ್ (ಕೊಠಡಿಗಳು)[1]

# سُورَةُ الحُجُرَاتِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 18

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلَّذِينَ ءَامَنُواْ لَا تُقَدِّمُواْ بَيۡنَ يَدَيِ ٱللَّهِ وَرَسُولِهِۦۖ وَٱتَّقُواْ ٱللَّهَۚ إِنَّ ٱللَّهَ سَمِيعٌ عَلِيمٞ ١

1. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹು ಮತ್ತು ಅವನ ಸಂದೇಶವಾಹಕರ ಎದುರುಗಡೆ (ಏನನ್ನೂ) ಮುಂಗಡವಾಗಿ ಮಾಡದಿರಿ. ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.

يَٰٓأَيُّهَا ٱلَّذِينَ ءَامَنُواْ لَا تَرۡفَعُوٓاْ أَصۡوَٰتَكُمۡ فَوۡقَ صَوۡتِ ٱلنَّبِيِّ وَلَا تَجۡهَرُواْ لَهُۥ بِٱلۡقَوۡلِ كَجَهۡرِ بَعۡضِكُمۡ لِبَعۡضٍ أَن تَحۡبَطَ أَعۡمَٰلُكُمۡ وَأَنتُمۡ لَا تَشۡعُرُونَ ٢

2. ಓ ಸತ್ಯವಿಶ್ವಾಸಿಗಳೇ! ನೀವು ನಿಮ್ಮ ಧ್ವನಿಗಳನ್ನು ಪ್ರವಾದಿಯವರ ಧ್ವನಿಗಿಂತ ಎತ್ತರಿಸದಿರಿ. ಅವರೊಂದಿಗೆ ಮಾತನಾಡುವಾಗ ನೀವು ಪರಸ್ಪರ ಕೂಗಾಡುವಂತೆ ಕೂಗಾಡದಿರಿ. ನಿಮಗೆ ಅರಿವಿಲ್ಲದೆಯೇ ನಿಮ್ಮ ಕರ್ಮಗಳು ನಿಷ್ಫಲವಾಗದಿರುವ ಸಲುವಾಗಿ.

إِنَّ ٱلَّذِينَ يَغُضُّونَ أَصۡوَٰتَهُمۡ عِندَ رَسُولِ ٱللَّهِ أُوْلَٰٓئِكَ ٱلَّذِينَ ٱمۡتَحَنَ ٱللَّهُ قُلُوبَهُمۡ لِلتَّقۡوَىٰۚ لَهُم مَّغۡفِرَةٞ وَأَجۡرٌ عَظِيمٌ ٣

3. ಖಂಡಿತವಾಗಿಯೂ ಅಲ್ಲಾಹುವಿನ ಸಂದೇಶ ವಾಹಕರ ಬಳಿ ತಮ್ಮ ಧ್ವನಿಗಳನ್ನು ತಗ್ಗಿಸುವವರಾರೋ ಅವರ ಹೃದಯಗಳನ್ನು ಅಲ್ಲಾಹು ಧರ್ಮನಿಷ್ಠೆಗಾಗಿ ಪರೀಕ್ಷಿಸಿರುವನು. ಅವರಿಗೆ ಪಾಪಮುಕ್ತಿಯೂ, ಮಹಾ ಪ್ರತಿಫಲವೂ ಇದೆ.

إِنَّ ٱلَّذِينَ يُنَادُونَكَ مِن وَرَآءِ ٱلۡحُجُرَٰتِ أَكۡثَرُهُمۡ لَا يَعۡقِلُونَ ٤

4. ಖಂಡಿತವಾಗಿಯೂ (ತಾವು ತಂಗುವ) ಕೊಠಡಿಗಳ ಹೊರಗಿನಿಂದ ತಮ್ಮನ್ನು ಕರೆಯುವವರಾರೋ ಅವರಲ್ಲಿ ಹೆಚ್ಚಿನವರೂ ಚಿಂತಿಸಿ ಗ್ರಹಿಸುವುದಿಲ್ಲ.

وَلَوۡ أَنَّهُمۡ صَبَرُواْ حَتَّىٰ تَخۡرُجَ إِلَيۡهِمۡ لَكَانَ خَيۡرٗا لَّهُمۡۚ وَٱللَّهُ غَفُورٞ رَّحِيمٞ ٥

5. ತಾವು ಅವರ ಬಳಿಗೆ ಹೊರಡುವ ತನಕ ಅವರು ಸಹನೆ ಪಾಲಿಸಿರುತ್ತಿದ್ದರೆ ಅದು ಅವರಿಗೆ ಅತ್ಯುತ್ತಮವಾಗಿರುತ್ತಿತ್ತು. ಅಲ್ಲಾಹು

1 ನಾಲ್ಕನೇ ಸೂಕ್ತಿಯಲ್ಲಿ ಕೊಠಡಿಗಳ ಕುರಿತು ಪ್ರಸ್ತಾಪವಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ

ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

6. ಓ ಸತ್ಯವಿಶ್ವಾಸಿಗಳೇ! ಒಬ್ಬ ದುಷ್ಟನು ಯಾವುದಾದರೂ ಮಾಹಿತಿಯೊಂದಿಗೆ ನಿಮ್ಮ ಬಳಿಗೆ ಬಂದರೆ ನೀವು ಅದರ ಕುರಿತು ಸ್ಪಷ್ಟವಾಗಿ ಪರಿಶೋಧಿಸಿ ತಿಳಿಯಿರಿ. ಅರಿವಿಲ್ಲದೆ ನೀವು ಯಾವುದಾದರೂ ಜನತೆಗೆ ಹಾನಿಯುಂಟು ಮಾಡಿ ತರುವಾಯ ಆ ಕೃತ್ಯದ ನಿಮಿತ್ತ ನೀವು ವಿಷಾದಿಸುವವರಾಗದಿರುವ ಸಲುವಾಗಿ.

يَٰٓأَيُّهَا ٱلَّذِينَ ءَامَنُوٓاْ إِن جَآءَكُمۡ فَاسِقُۢ بِنَبَإٖ فَتَبَيَّنُوٓاْ أَن تُصِيبُواْ قَوۡمَۢا بِجَهَٰلَةٖ فَتُصۡبِحُواْ عَلَىٰ مَا فَعَلۡتُمۡ نَٰدِمِينَ ٦

7. ನಿಮ್ಮ ಮಧ್ಯೆಯಿರುವುದು ಅಲ್ಲಾಹುವಿನ ಸಂದೇಶವಾಹಕರಾಗಿರುವರು ಎಂಬುದನ್ನು ಅರಿತುಕೊಳ್ಳಿರಿ. ಹೆಚ್ಚಿನ ವಿಷಯಗಳಲ್ಲಿ ಅವರು ನಿಮ್ಮನ್ನು ಅನುಸರಿಸಿರುತ್ತಿದ್ದರೆ ನೀವು ಸಂಕಷ್ಟಕ್ಕೊಳಗಾಗುತ್ತಿದ್ದಿರಿ.[1] ಆದರೂ ಅಲ್ಲಾಹು ನಿಮಗೆ ಸತ್ಯವಿಶ್ವಾಸವನ್ನು ಪ್ರಿಯಗೊಳಿಸಿದನು ಮತ್ತು ನಿಮ್ಮ ಹೃದಯಗಳಲ್ಲಿ ಅದು ಆಕರ್ಷಕವಾಗಿ ಕಾಣುವಂತೆ ಮಾಡಿದನು. ಅವಿಶ್ವಾಸ, ಧಿಕ್ಕಾರ ಮತ್ತು ಅವಿಧೇಯತೆಯನ್ನು ಅವನು ನಿಮಗೆ ಅಸಹ್ಯಕರವಾಗಿಸಿದನು. ಸನ್ಮಾರ್ಗವನ್ನು ಪಡೆದವರು ಅವರೇ ಆಗಿರುವರು.

وَٱعۡلَمُوٓاْ أَنَّ فِيكُمۡ رَسُولَ ٱللَّهِۚ لَوۡ يُطِيعُكُمۡ فِي كَثِيرٖ مِّنَ ٱلۡأَمۡرِ لَعَنِتُّمۡ وَلَٰكِنَّ ٱللَّهَ حَبَّبَ إِلَيۡكُمُ ٱلۡإِيمَٰنَ وَزَيَّنَهُۥ فِي قُلُوبِكُمۡ وَكَرَّهَ إِلَيۡكُمُ ٱلۡكُفۡرَ وَٱلۡفُسُوقَ وَٱلۡعِصۡيَانَۚ أُوْلَٰٓئِكَ هُمُ ٱلرَّٰشِدُونَ ٧

8. ಅದು ಅಲ್ಲಾಹುವಿನ ವತಿಯ ಔದಾರ್ಯ ಮತ್ತು ಅನುಗ್ರಹವಾಗಿದೆ. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

فَضۡلٗا مِّنَ ٱللَّهِ وَنِعۡمَةٗۚ وَٱللَّهُ عَلِيمٌ حَكِيمٞ ٨

9. ಸತ್ಯವಿಶ್ವಾಸಿಗಳಲ್ಲಿ ಸೇರಿದ ಎರಡು ಗುಂಪುಗಳು ಪರಸ್ಪರ ಹೊಡೆದಾಡಿದರೆ ನೀವು ಅವರ ಮಧ್ಯೆ ಸಂಧಾನಮಾಡಿರಿ. ತರುವಾಯ ಎರಡರ ಪೈಕಿ ಒಂದು ಗುಂಪು ಇನ್ನೊಂದು ಗುಂಪಿನ

وَإِن طَآئِفَتَانِ مِنَ ٱلۡمُؤۡمِنِينَ ٱقۡتَتَلُواْ فَأَصۡلِحُواْ بَيۡنَهُمَاۖ فَإِنۢ بَغَتۡ إِحۡدَىٰهُمَا عَلَى ٱلۡأُخۡرَىٰ فَقَٰتِلُواْ ٱلَّتِي تَبۡغِي حَتَّىٰ

1 ಪ್ರವಾದಿ(ﷺ)ಯನ್ನು ಕಳುಹಿಸಲಾಗಿರುವುದು ನಿಮ್ಮ ಇಚ್ಛೆಗನುಸಾರ ತೀರ್ಮಾನ ಕೈಗೊಳ್ಳುವುದಕ್ಕಲ್ಲ, ಬದಲಾಗಿ ಅಲ್ಲಾಹುವಿನ ಆದೇಶ ಪ್ರಕಾರ ಕಾರ್ಯೋನ್ಮುಖರಾಗುವುದಕ್ಕಾಗಿದೆ. ನಿಮಗೆ ಆತ್ಯಂತಿಕವಾಗಿ ಒಳಿತಾಗಿರುವುದು ಏನೆಂದು ನಿಮಗಿಂತಲೂ ಹೆಚ್ಚು ತಿಳುವಳಿಕೆಯಿರುವುದು ಅಲ್ಲಾಹುವಿನ ಪ್ರವಾದಿ(ﷺ)ಗಾಗಿದೆ ಎಂದರ್ಥ.

تَفِيٓءَ إِلَىٰٓ أَمْرِ ٱللَّهِ ۚ فَإِن فَآءَتْ فَأَصْلِحُوا۟ بَيْنَهُمَا بِٱلْعَدْلِ وَأَقْسِطُوٓا۟ ۖ إِنَّ ٱللَّهَ يُحِبُّ ٱلْمُقْسِطِينَ ﴿٩﴾

ವಿರುದ್ಧ ಅತಿಕ್ರಮವೆಸಗಿದರೆ ಅತಿಕ್ರಮವೆಸಗಿದ ಗುಂಪಿನ ವಿರುದ್ಧ ಅವರು ಅಲ್ಲಾಹುವಿನ ಆಜ್ಞೆಗೆ ಮರಳುವವರೆಗೆ ಹೋರಾಡಿರಿ. ತರುವಾಯ ಆ ಗುಂಪು ಮರಳುವುದಾದರೆ ನ್ಯಾಯಬದ್ಧವಾಗಿ ಆ ಎರಡು ಗುಂಪುಗಳ ಮಧ್ಯೆ ಸಂಧಾನ ಮಾಡಿರಿ ಮತ್ತು ನ್ಯಾಯ ಪಾಲಿಸಿರಿ. ಖಂಡಿತವಾಗಿಯೂ ಅಲ್ಲಾಹು ನ್ಯಾಯ ಪಾಲಿಸುವವರನ್ನು ಇಷ್ಟಪಡುವನು.

إِنَّمَا ٱلْمُؤْمِنُونَ إِخْوَةٌ فَأَصْلِحُوا۟ بَيْنَ أَخَوَيْكُمْ ۚ وَٱتَّقُوا۟ ٱللَّهَ لَعَلَّكُمْ تُرْحَمُونَ ﴿١٠﴾

**10.** ಸತ್ಯವಿಶ್ವಾಸಿಗಳು (ಪರಸ್ಪರ) ಸಹೋದರರಾಗಿರುವರು.[1] ಆದ್ದರಿಂದ ನಿಮ್ಮ ಇಬ್ಬರು ಸಹೋದರರ ಮಧ್ಯೆ ನೀವು ಸಂಧಾನ ಮಾಡಿರಿ. ಅಲ್ಲಾಹುವನ್ನು ಭಯಪಡಿರಿ. ನಿಮಗೆ ಕರುಣೆ ಲಭಿಸಲೂಬಹುದು.

يَـٰٓأَيُّهَا ٱلَّذِينَ ءَامَنُوا۟ لَا يَسْخَرْ قَوْمٌ مِّن قَوْمٍ عَسَىٰٓ أَن يَكُونُوا۟ خَيْرًا مِّنْهُمْ وَلَا نِسَآءٌ مِّن نِّسَآءٍ عَسَىٰٓ أَن يَكُنَّ خَيْرًا مِّنْهُنَّ ۖ وَلَا تَلْمِزُوٓا۟ أَنفُسَكُمْ وَلَا تَنَابَزُوا۟ بِٱلْأَلْقَـٰبِ ۖ بِئْسَ ٱلِٱسْمُ ٱلْفُسُوقُ بَعْدَ ٱلْإِيمَـٰنِ ۚ وَمَن لَّمْ يَتُبْ فَأُو۟لَـٰٓئِكَ هُمُ ٱلظَّـٰلِمُونَ ﴿١١﴾

**11.** ಓ ಸತ್ಯವಿಶ್ವಾಸಿಗಳೇ! ಒಂದು ಜನತೆಯು ಇನ್ನೊಂದು ಜನತೆಯನ್ನು ಅಪಹಾಸ್ಯ ಮಾಡದಿರಲಿ. ಇವರು (ಅಪಹಾಸ್ಯಕ್ಕೊಳಗಾದವರು) ಅವರಿಗಿಂತ ಉತ್ತಮರಾಗಿರಬಹುದು. ಸ್ತ್ರೀಯರ ಪೈಕಿ ಒಂದು ಗುಂಪು ಇನ್ನೊಂದು ಗುಂಪಿನ ಸ್ತ್ರೀಯರನ್ನು ಅಪಹಾಸ್ಯ ಮಾಡದಿರಲಿ. ಇವರು (ಅಪಹಾಸ್ಯಕ್ಕೊಳಗಾದವರು) ಅವರಿಗಿಂತ ಉತ್ತಮರಾಗಿರಬಹುದು. ನೀವು ಪರಸ್ಪರ ಚುಚ್ಚಿ ಮಾತನಾಡದಿರಿ. ನೀವು ಅಡ್ಡಹೆಸರುಗಳಿಂದ ಕರೆದು ಪರಸ್ಪರ ಅವಮಾನ ಮಾಡದಿರಿ. ಸತ್ಯವಿಶ್ವಾಸವನ್ನು ಸ್ವೀಕರಿಸಿದ ನಂತರ ಕೆಟ್ಟ ಹೆಸರು (ಕರೆಯುವುದು) ಅದೆಷ್ಟು ನೀಚವಾದುದು! ಯಾರು ಪಶ್ಚಾತ್ತಾಪಪಡುವುದಿಲ್ಲವೋ ಅವರು ಅಕ್ರಮಿಗಳಾಗಿರುವರು.

يَـٰٓأَيُّهَا ٱلَّذِينَ ءَامَنُوا۟ ٱجْتَنِبُوا۟ كَثِيرًا مِّنَ

**12.** ಓ ಸತ್ಯವಿಶ್ವಾಸಿಗಳೇ! ನೀವು ಊಹೆಗಳ ಪೈಕಿ ಹೆಚ್ಚಿನವುಗಳನ್ನೂ ವರ್ಜಿಸಿರಿ.

---

1 ಸತ್ಯವಿಶ್ವಾಸಿಗಳು ಒಂದೇ ತಾಯಿಯ ಮಕ್ಕಳಂತೆ ಪರಸ್ಪರ ಪ್ರೀತಿವಾತ್ಸಲ್ಯದಿಂದ ಮತ್ತು ಪರಸ್ಪರ ತಾಳ್ಮೆಯಿಂದ ವರ್ತಿಸುತ್ತಾ ಜೊತೆಯಾಗಿ ಬಾಳಬೇಕಾದವರಾಗಿದ್ದಾರೆ.

ٱلظَّنِّ إِنَّ بَعۡضَ ٱلظَّنِّ إِثۡمٞۖ وَلَا تَجَسَّسُواْ
وَلَا يَغۡتَب بَّعۡضُكُم بَعۡضًاۚ أَيُحِبُّ
أَحَدُكُمۡ أَن يَأۡكُلَ لَحۡمَ أَخِيهِ مَيۡتٗا
فَكَرِهۡتُمُوهُۚ وَٱتَّقُواْ ٱللَّهَۚ إِنَّ ٱللَّهَ تَوَّابٞ
رَّحِيمٞ ١٢

ಖಂಡಿತವಾಗಿಯೂ ಊಹೆಗಳ ಪೈಕಿ ಕೆಲವು ಪಾಪವಾಗಿವೆ. ನೀವು ಗೂಢಚರ್ಯೆ ಮಾಡದಿರಿ. ನಿಮ್ಮಲ್ಲಿ ಕೆಲವರು ಇತರ ಕೆಲವರ ಕುರಿತು ಅವರ ಅನುಪಸ್ಥಿತಿಯಲ್ಲಿ ಕೆಟ್ಟದಾಗಿ ಮಾತನಾಡದಿರಲಿ. ತನ್ನ ಸಹೋದರನು ಮೃತಪಟ್ಟು ಮಲಗಿರುವಾಗ ಅವನ ಮಾಂಸ ತಿನ್ನಲು ನಿಮ್ಮಲ್ಲಿ ಯಾರಾದರೂ ಇಷ್ಟಪಡುವರೇ?[1] ನೀವು ಅದನ್ನು (ತಿನ್ನುವುದನ್ನು) ಅಸಹ್ಯಪಡುವಿರಿ! ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَٰٓأَيُّهَا ٱلنَّاسُ إِنَّا خَلَقۡنَٰكُم مِّن ذَكَرٖ
وَأُنثَىٰ وَجَعَلۡنَٰكُمۡ شُعُوبٗا وَقَبَآئِلَ
لِتَعَارَفُوٓاْۚ إِنَّ أَكۡرَمَكُمۡ عِندَ ٱللَّهِ
أَتۡقَىٰكُمۡۚ إِنَّ ٱللَّهَ عَلِيمٌ خَبِيرٞ ١٣

13. ಓ ಮನುಷ್ಯರೇ! ಖಂಡಿತವಾಗಿಯೂ ನಾವು ನಿಮ್ಮನ್ನು ಒಂದು ಗಂಡು ಮತ್ತು ಒಂದು ಹೆಣ್ಣಿನಿಂದ ಸೃಷ್ಟಿಸಿರುವೆವು. ನೀವು ಪರಸ್ಪರ ಗುರುತಿಸುವುದಕ್ಕಾಗಿ ನಾವು ನಿಮ್ಮನ್ನು ವಿವಿಧ ಸಮುದಾಯ ಮತ್ತು ಜನಾಂಗಗಳನ್ನಾಗಿ ಮಾಡಿರುವೆವು. ಖಂಡಿತವಾಗಿಯೂ ಅಲ್ಲಾಹುವಿನ ಬಳಿ ನಿಮ್ಮ ಪೈಕಿ ಅತ್ಯಂತ ಗೌರವಾನ್ವಿತನು ನಿಮ್ಮ ಪೈಕಿ ಅತಿಹೆಚ್ಚು ಭಯಭಕ್ತಿ ಪಾಲಿಸುವವನಾಗಿರುವನು.[2] ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿರುವನು.

۞قَالَتِ ٱلۡأَعۡرَابُ ءَامَنَّاۖ قُل لَّمۡ تُؤۡمِنُواْ
وَلَٰكِن قُولُوٓاْ أَسۡلَمۡنَا وَلَمَّا يَدۡخُلِ
ٱلۡإِيمَٰنُ فِي قُلُوبِكُمۡۖ وَإِن تُطِيعُواْ ٱللَّهَ
وَرَسُولَهُۥ لَا يَلِتۡكُم مِّنۡ أَعۡمَٰلِكُمۡ

14. ಗ್ರಾಮೀಣ ಅರಬರು ಹೇಳುವರು: 'ನಾವು ವಿಶ್ವಾಸವಿಟ್ಟಿರುವೆವು'. ಹೇಳಿರಿ: 'ನೀವು ವಿಶ್ವಾಸವಿಟ್ಟಿಲ್ಲ, ಆದರೆ 'ನಾವು ಶರಣಾಗಿರುವೆವು' ಎಂದು ಹೇಳಿರಿ. ವಿಶ್ವಾಸವು ನಿಮ್ಮ ಹೃದಯವನ್ನು ಪ್ರವೇಶಿಸಿಲ್ಲ. ಅಲ್ಲಾಹು

1 ಪರದೂಷಣೆಯು ಮನುಷ್ಯ ಶವ ಭಕ್ಷಣೆಗೆ ಸಮಾನವೆಂದು ಪ್ರಸ್ತುತ ಸೂಕ್ತಿಯು ಸೂಚಿಸುತ್ತದೆ. ಸ್ವಂತ ಸಹೋದರನ ಮಾಂಸವನ್ನು ಕಚ್ಚಿ ತಿನ್ನಲು ಯಾರೂ ಇಷ್ಟಪಡುವುದಿಲ್ಲವಾದರೆ ತನ್ನ ಸಹೋದರನ ಅನುಪಸ್ಥಿತಿಯಲ್ಲಿ ಅವನಿಗೆ ಇಷ್ಟವಿಲ್ಲದ ವಿಷಯಗಳನ್ನು ಹೇಳುವುದನ್ನು ಅವನು ವರ್ಜಿಸಬೇಕಾಗಿದೆ.

2 ಸಮುದಾಯದ ಗಾತ್ರವಾಗಲಿ, ಜನಾಂಗ ಮಹಿಮೆಯಾಗಲಿ ಯಾರಿಗೂ ಅಲ್ಲಾಹುವಿನ ಬಳಿ ಸ್ಥಾನವನ್ನು ಗಳಿಸಿಕೊಡದು. ಧರ್ಮನಿಷ್ಠೆಯುಳ್ಳವನಿಗೆ ಮಾತ್ರ ಅಲ್ಲಾಹುವಿನ ಬಳಿ ಪದವಿಯಿದೆಯೆಂದು ಈ ಸೂಕ್ತಿಯು ಸೂಚಿಸುತ್ತದೆ.

شَيْـًٔاۚ إِنَّ ٱللَّهَ غَفُورٞ رَّحِيمٌ ١٤

ಮತ್ತು ಅವನ ಸಂದೇಶವಾಹಕರನ್ನು ನೀವು ಅನುಸರಿಸುವುದಾದರೆ ನಿಮಗೆ ನಿಮ್ಮ ಕರ್ಮಫಲಗಳಲ್ಲಿ ಏನನ್ನೂ ಅವನು ಕಮ್ಮಿ ಮಾಡಲಾರನು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು'.

إِنَّمَا ٱلۡمُؤۡمِنُونَ ٱلَّذِينَ ءَامَنُواْ بِٱللَّهِ وَرَسُولِهِۦ ثُمَّ لَمۡ يَرۡتَابُواْ وَجَٰهَدُواْ بِأَمۡوَٰلِهِمۡ وَأَنفُسِهِمۡ فِي سَبِيلِ ٱللَّهِۚ أُوْلَٰٓئِكَ هُمُ ٱلصَّٰدِقُونَ ١٥

15. ಅಲ್ಲಾಹು ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟು, ತರುವಾಯ ಸಂದೇಹಪಡದೆ, ತಮ್ಮ ಸಂಪತ್ತು ಮತ್ತು ಶರೀರಗಳ ಮೂಲಕ ಅಲ್ಲಾಹುವಿನ ಮಾರ್ಗದಲ್ಲಿ ಹೋರಾಟ ಮಾಡುವವರು ಯಾರೋ ಅವರು ಮಾತ್ರ ಸತ್ಯವಿಶ್ವಾಸಿಗಳಾಗಿರುವರು. ಸತ್ಯಸಂಧರು ಸಹ ಅವರೇ ಆಗಿರುವರು.

قُلۡ أَتُعَلِّمُونَ ٱللَّهَ بِدِينِكُمۡ وَٱللَّهُ يَعۡلَمُ مَا فِي ٱلسَّمَٰوَٰتِ وَمَا فِي ٱلۡأَرۡضِۚ وَٱللَّهُ بِكُلِّ شَيۡءٍ عَلِيمٞ ١٦

16. ಹೇಳಿರಿ: 'ನಿಮ್ಮ ಧರ್ಮದ ಕುರಿತು ನೀವು ಅಲ್ಲಾಹುವಿಗೆ ಕಲಿಸುವುದೇ? ಅಲ್ಲಾಹು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದನ್ನೆಲ್ಲ ಅರಿಯುವನು. ಅಲ್ಲಾಹು ಎಲ್ಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

يَمُنُّونَ عَلَيۡكَ أَنۡ أَسۡلَمُواْۖ قُل لَّا تَمُنُّواْ عَلَيَّ إِسۡلَٰمَكُمۖ بَلِ ٱللَّهُ يَمُنُّ عَلَيۡكُمۡ أَنۡ هَدَىٰكُمۡ لِلۡإِيمَٰنِ إِن كُنتُمۡ صَٰدِقِينَ ١٧

17. ಅವರು ಇಸ್ಲಾಮ್ ಧರ್ಮ ಸ್ವೀಕರಿಸಿರುವುದನ್ನು ಅವರು ತಮ್ಮೊಂದಿಗೆ ತೋರಿಸಿದ ಉಪಕಾರವಾಗಿ ಎತ್ತಿತೋರಿಸುತ್ತಿರುವರು. ತಾವು ಹೇಳಿರಿ: 'ನೀವು ಇಸ್ಲಾಮ್ ಸ್ವೀಕರಿಸಿರುವುದನ್ನು ನನ್ನೊಂದಿಗೆ ತೋರಿಸಿದ ಉಪಕಾರವಾಗಿ ಎತ್ತಿ ತೋರಿಸದಿರಿ. ಅಲ್ಲ, ಸತ್ಯವಿಶ್ವಾಸದೆಡೆಗೆ ನಿಮಗೆ ಮಾರ್ಗದರ್ಶನ ಮಾಡಿದನು ಎಂಬುದು ಅಲ್ಲಾಹು ನಿಮ್ಮೊಂದಿಗೆ ತೋರಿಸಿದ ಉಪಕಾರವಾಗಿದೆ. ನೀವು ಸತ್ಯಸಂಧರಾಗಿದ್ದರೆ (ಇದನ್ನು ಒಪ್ಪಿಕೊಳ್ಳಿರಿ)'.

إِنَّ ٱللَّهَ يَعۡلَمُ غَيۡبَ ٱلسَّمَٰوَٰتِ وَٱلۡأَرۡضِۚ وَٱللَّهُ بَصِيرُۢ بِمَا تَعۡمَلُونَ ١٨

18. ಖಂಡಿತವಾಗಿಯೂ ಅಲ್ಲಾಹು ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಅಗೋಚರ ವಿಷಯಗಳನ್ನು ಅರಿಯುವನು. ಅಲ್ಲಾಹು ನೀವು ಮಾಡುತ್ತಿರುವುದನ್ನು ವೀಕ್ಷಿಸುವವನಾಗಿರುವನು.

## ಕ್ವಾಫ್

## سُورَةُ قٓ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 45

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

قٓۚ وَٱلۡقُرۡءَانِ ٱلۡمَجِيدِ ١

1. ಕ್ವಾಫ್. ಮಹತ್ವಪೂರ್ಣವಾದ ಕುರ್‌ಆನಿನ ಮೇಲಾಣೆ.

بَلۡ عَجِبُوٓاْ أَن جَآءَهُم مُّنذِرٞ مِّنۡهُمۡ فَقَالَ ٱلۡكَٰفِرُونَ هَٰذَا شَيۡءٌ عَجِيبٌ ٢

2. ಅವರಲ್ಲೇ ಸೇರಿದ ಒಬ್ಬ ಮುನ್ನೆಚ್ಚರಿಕೆಗಾರನು ಅವರ ಬಳಿಗೆ ಬಂದಿರುವುದರಿಂದ ಅವರು ಅಚ್ಚರಿಪಟ್ಟರು. ಆಗ ಸತ್ಯನಿಷೇಧಿಗಳು ಹೇಳಿದರು: ‘ಇದೊಂದು ಅಚ್ಚರಿದಾಯಕ ವಿಷಯವಾಗಿದೆ.

أَءِذَا مِتۡنَا وَكُنَّا تُرَابٗاۖ ذَٰلِكَ رَجۡعُۢ بَعِيدٞ ٣

3. ನಾವು ಮೃತಪಟ್ಟು ಮಣ್ಣಾಗಿ ಹೋದ ಬಳಿಕ (ಪುನರುತ್ಥಾನವೇ)? ಇದು ವಿದೂರವಾಗಿರುವ ಒಂದು ಮರಳುವಿಕೆಯಾಗಿದೆ.

قَدۡ عَلِمۡنَا مَا تَنقُصُ ٱلۡأَرۡضُ مِنۡهُمۡۖ وَعِندَنَا كِتَٰبٌ حَفِيظُۢ ٤

4. ಖಂಡಿತವಾಗಿಯೂ ಅವರಿಂದ ಭೂಮಿಯು ಕುಗ್ಗಿಸುತ್ತಿರುವುದನ್ನು ನಾವು ಅರಿತಿರುವೆವು.[1] (ಮಾಹಿತಿಗಳನ್ನು)ಸೂಕ್ಷ್ಮವಾಗಿ ದಾಖಲಿಸಿರುವ ಒಂದು ಗ್ರಂಥವು ನಮ್ಮ ಬಳಿಯಿರುವುದು.

بَلۡ كَذَّبُواْ بِٱلۡحَقِّ لَمَّا جَآءَهُمۡ فَهُمۡ فِيٓ أَمۡرٖ مَّرِيجٍ ٥

5. ಆದರೆ ಸತ್ಯವು ಅವರ ಬಳಿಗೆ ಬಂದಾಗ ಅವರು ಅದನ್ನು ನಿಷೇಧಿಸಿದರು. ಹೀಗೆ ಅವರು ಒಂದು ಅಲ್ಲಾಡುವ (ಅನಿಶ್ಚಿತವಾಗಿರುವ) ಒಮದು ಸ್ಥಿತಿಯಲ್ಲಿರುವರು.

أَفَلَمۡ يَنظُرُوٓاْ إِلَى ٱلسَّمَآءِ فَوۡقَهُمۡ كَيۡفَ بَنَيۡنَٰهَا وَزَيَّنَّٰهَا وَمَا لَهَا مِن فُرُوجٖ ٦

6. ಅವರ ಮೇಲ್ಭಾಗದಲ್ಲಿರುವ ಆಕಾಶದೆಡೆಗೆ ಅವರು ನೋಡಿಲ್ಲವೇ? ಅದನ್ನು ನಾವು ಹೇಗೆ ನಿರ್ಮಿಸಿದೆವು ಮತ್ತು ಅಲಂಕರಿಸಿದೆವು ಎಂದು? ಅದಕ್ಕೆ ಯಾವುದೇ ಬಿರುಕುಗಳಿಲ್ಲ.[2]

---

1 ಮಣ್ಣು ತಿನ್ನುವ ಅವರ ಮೃತದೇಹಕ್ಕೆ ಸಂಬಂಧಿಸಿದ ಸೂಕ್ಷ್ಮ ಮಾಹಿತಿಗಳನ್ನು ಅಲ್ಲಾಹು ಅರಿತಿದ್ದಾನೆ ಎಂದರ್ಥ.

2 ಆಕಾಶಕಾಯಗಳೆಲ್ಲವೂ ನಿಖರವಾದ ಪ್ರಾಪಂಚಿಕ ನಿಯಮಗಳಿಗೆ ಬದ್ಧವಾಗಿವೆ. ಆಕಾಶಲೋಕವು ಸುವ್ಯವಸ್ಥಿತವೂ ಪೂರ್ವಯೋಜಿತವೂ ಆಗಿದೆಯೆಂದು ಖಗೋಳಶಾಸ್ತ್ರಕ್ಕೆ ಸಂಬಂಧಿಸಿದ ಅಧ್ಯಯನಗಳು ಸ್ಪಷ್ಟಪಡಿಸಿವೆ.

7. ಭೂಮಿಯನ್ನು ನಾವು ವಿಕಸಿಸಿದೆವು, ಅದರಲ್ಲಿ ಅಚಲವಾಗಿ ನಿಲ್ಲುವ ಪರ್ವತಗಳನ್ನು ಸ್ಥಾಪಿಸಿದೆವು ಮತ್ತು ಆಕರ್ಷಕವಾದ ಸರ್ವವಿಧ ಸಸ್ಯವರ್ಗಗಳನ್ನು ಅದರಲ್ಲಿ ಬೆಳೆಯುವಂತೆ ಮಾಡಿದೆವು.

وَٱلۡأَرۡضَ مَدَدۡنَٰهَا وَأَلۡقَيۡنَا فِيهَا رَوَٰسِيَ وَأَنۢبَتۡنَا فِيهَا مِن كُلِّ زَوۡجِۭ بَهِيجٖ ٧

8. (ಸತ್ಯದೆಡೆಗೆ) ಮರಳುವ ಪ್ರತಿಯೊಬ್ಬ ದಾಸನಿಗೂ ನೋಡಿ ಗ್ರಹಿಸಲು ಮತ್ತು ಸ್ಮರಿಸುವ ಸಲುವಾಗಿ.

تَبۡصِرَةٗ وَذِكۡرَىٰ لِكُلِّ عَبۡدٖ مُّنِيبٖ ٨

9. ನಾವು ಆಕಾಶದಿಂದ ಅನುಗ್ರಹೀತವಾದ (ಮಳೆ)ನೀರನ್ನು ಸುರಿಸಿದೆವು. ತರುವಾಯ ಅದರ ಮೂಲಕ ಹಲವು ವಿಧದ ತೋಟಗಳನ್ನೂ, ಕಟಾವು ಮಾಡುವ ಧಾನ್ಯಗಳನ್ನೂ ಬೆಳೆಸಿದೆವು.

وَنَزَّلۡنَا مِنَ ٱلسَّمَآءِ مَآءٗ مُّبَٰرَكٗا فَأَنۢبَتۡنَا بِهِۦ جَنَّٰتٖ وَحَبَّ ٱلۡحَصِيدِ ٩

10. ಪದರ ಪದರಗಳಾಗಿ ಗೊನೆಗಳನ್ನು ಹೊಂದಿರುವ ಎತ್ತರದ ಖರ್ಜೂರ ಮರಗಳನ್ನು.

وَٱلنَّخۡلَ بَاسِقَٰتٖ لَّهَا طَلۡعٞ نَّضِيدٞ ١٠

11. ಅವು (ನಮ್ಮ) ದಾಸರಿಗಿರುವ ಅನ್ನಾಧಾರವಾಗಿದೆ. ನಿರ್ಜೀವವಾಗಿದ್ದ ಭೂಮಿಗೆ ತನ್ಮೂಲಕ ನಾವು ಜೀವವನ್ನು ನೀಡಿದೆವು. (ಗೋರಿಗಳಿಂದ) ಹೊರತರಲಾಗುವುದೂ ಹೀಗೆಯೇ ಆಗಿದೆ.[1]

رِّزۡقٗا لِّلۡعِبَادِۖ وَأَحۡيَيۡنَا بِهِۦ بَلۡدَةٗ مَّيۡتٗاۚ كَذَٰلِكَ ٱلۡخُرُوجُ ١١

12-14. ಇವರಿಗಿಂತ ಮೊದಲು ನೂಹ್‌ರ ಜನತೆ, ರಸ್ಸ್‌ನ ಜನರು, ಸಮೂದ್ ಸಮುದಾಯದವರು, ಆದ್ ಸಮುದಾಯದವರು, ಫಿರ್‌ಔನ್, ಲೂತ್‌ನ ಸಹೋದರರು, ವೃಕ್ಷವನದಲ್ಲಿ ವಾಸವಾಗಿದ್ದವರು ಮತ್ತು ತುಬ್ಬಅ್ ಜನತೆ ಸತ್ಯವನ್ನು ನಿಷೇಧಿಸಿದ್ದರು. ಅವರೆಲ್ಲರೂ ಸಂದೇಶವಾಹಕರನ್ನು ನಿಷೇಧಿಸಿದರು. ಆಗ (ಅವರ ಮೇಲೆ) ನನ್ನ ಎಚ್ಚರಿಕೆ ಸತ್ಯವಾಗಿ ಬಿಟ್ಟಿತು.

كَذَّبَتۡ قَبۡلَهُمۡ قَوۡمُ نُوحٖ وَأَصۡحَٰبُ ٱلرَّسِّ وَثَمُودُ ١٢ وَعَادٞ وَفِرۡعَوۡنُ وَإِخۡوَٰنُ لُوطٖ ١٣ وَأَصۡحَٰبُ ٱلۡأَيۡكَةِ وَقَوۡمُ تُبَّعٖۚ كُلّٞ كَذَّبَ ٱلرُّسُلَ فَحَقَّ وَعِيدِ ١٤

---

1 ನಿರ್ಜೀವ ಭೂಮಿಯನ್ನು ಜೀವಂತಗೊಳಿಸಿದಂತೆಯೇ ಮೃತಪಟ್ಟು ಮಣ್ಣಾಗಿ ಹೋದವರನ್ನು ಅಲ್ಲಾಹು ಪುನರುತ್ಥಾನಗೊಳಿಸುವನು.

**15.** ಹಾಗಾದರೆ ಮೊದಲ ಬಾರಿ ಸೃಷ್ಟಿಸುವ ಮೂಲಕ ನಾವು ದಣಿದಿರುವೆವೇ? ಅಲ್ಲ, ಅವರು ಹೊಸದೊಂದು ಸೃಷ್ಟಿಯ ಕುರಿತು ಸಂದೇಹದಲ್ಲಿರುವರು.

أَفَعَيِينَا بِٱلۡخَلۡقِ ٱلۡأَوَّلِۚ بَلۡ هُمۡ فِي لَبۡسٖ مِّنۡ خَلۡقٖ جَدِيدٖ ١٥

**16.** ಖಂಡಿತವಾಗಿಯೂ ನಾವು ಮನುಷ್ಯನನ್ನು ಸೃಷ್ಟಿಸಿರುವೆವು. ಅವನ ಮನಸ್ಸು ಅವನೊಂದಿಗೆ ಪಿಸುಗುಟ್ಟುವುದನ್ನು ನಾವು ಅರಿಯುವೆವು. ನಾವು (ಅವನ) ಕಂಠನಾಡಿಗಿಂತಲೂ ಅವನಿಗೆ ಹೆಚ್ಚು ನಿಕಟವಾಗಿರುವೆವು.

وَلَقَدۡ خَلَقۡنَا ٱلۡإِنسَٰنَ وَنَعۡلَمُ مَا تُوَسۡوِسُ بِهِۦ نَفۡسُهُۥۖ وَنَحۡنُ أَقۡرَبُ إِلَيۡهِ مِنۡ حَبۡلِ ٱلۡوَرِيدِ ١٦

**17.** ಬಲಭಾಗದಲ್ಲಿ ಮತ್ತು ಎಡಭಾಗದಲ್ಲಿ ಕುಳಿತು ಈರ್ವರು ಪಡೆಯುವವರು ಪಡೆಯುವ ಸಂದರ್ಭ.(1)

إِذۡ يَتَلَقَّى ٱلۡمُتَلَقِّيَانِ عَنِ ٱلۡيَمِينِ وَعَنِ ٱلشِّمَالِ قَعِيدٞ ١٧

**18.** ಅವನು ಯಾವುದೇ ಮಾತನ್ನೂ ಉಚ್ಚರಿಸಲಾರನು, ಅವನ ಬಳಿ ಸಿದ್ಧನಾಗಿ ನಿಂತಿರುವ ವೀಕ್ಷಕನು ಇಲ್ಲದಿರುವ ಹೊರತು.

مَّا يَلۡفِظُ مِن قَوۡلٍ إِلَّا لَدَيۡهِ رَقِيبٌ عَتِيدٞ ١٨

**19.** ಮರಣವೇದನೆಯು ಸತ್ಯದೊಂದಿಗೆ ಬರುವುದು. ಅದು ನೀನು ಯಾವುದರಿಂದ ದೂರ ಸರಿಯುತ್ತಿದ್ದಿಯೋ ಅದೇ ಆಗಿದೆ.

وَجَآءَتۡ سَكۡرَةُ ٱلۡمَوۡتِ بِٱلۡحَقِّۖ ذَٰلِكَ مَا كُنتَ مِنۡهُ تَحِيدُ ١٩

**20.** ಕಹಳೆಯಲ್ಲಿ ಊದಲಾಗುವುದು. ಅದು ಎಚ್ಚರಿಕೆಯ ದಿನವಾಗಿದೆ.

وَنُفِخَ فِي ٱلصُّورِۚ ذَٰلِكَ يَوۡمُ ٱلۡوَعِيدِ ٢٠

**21.** (ಅಂದು) ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೊತೆಯಲ್ಲಿ ಒಬ್ಬ ಮುನ್ನಡೆಸುವವನೊಬ್ಬನು, ಒಬ್ಬ ಸಾಕ್ಷಿಯೂ ಇರುವ ಸ್ಥಿತಿಯಲ್ಲಿ(2) ಬರುವನು.

وَجَآءَتۡ كُلُّ نَفۡسٖ مَّعَهَا سَآئِقٞ وَشَهِيدٞ ٢١

**22.** (ಅಂದು ಸತ್ಯನಿಷೇಧಿಯೊಂದಿಗೆ ಹೇಳಲಾಗುವುದು): ‘ಖಂಡಿತವಾಗಿಯೂ ನೀನು ಇದರ ಕುರಿತು ಅಲಕ್ಷ್ಯನಾಗಿದ್ದೆ. ಆದರೆ ಈಗ ನಾವು ನಿನ್ನಿಂದ ಆ ಮುಸುಕನ್ನು

لَّقَدۡ كُنتَ فِي غَفۡلَةٖ مِّنۡ هَٰذَا فَكَشَفۡنَا عَنكَ غِطَآءَكَ فَبَصَرُكَ ٱلۡيَوۡمَ حَدِيدٞ ٢٢

---

1 ಪ್ರತಿಯೊಬ್ಬ ವ್ಯಕ್ತಿಯ ಇಕ್ಕೆಲಗಳಲ್ಲಿದ್ದು ಈರ್ವರು ಮಲಕ್‌ಗಳು ಅವರ ಮಾತು, ಕೃತಿಗಳನ್ನು ದಾಖಲಿಸಿಕೊಳ್ಳುತ್ತಿದ್ದಾರೆ. ಒಂದು ಮಲಕ್ ಒಳಿತುಗಳನ್ನು ಹಾಗೂ ಮತ್ತೊಂದು ಮಲಕ್ ಕೆಡುಕುಗಳನ್ನು ದಾಖಲಿಸಿಕೊಳ್ಳುತ್ತಾರೆ.

2 ವಿಚಾರಣೆಯ ದಿನದಂದು ಪ್ರತಿಯೊಬ್ಬ ವ್ಯಕ್ತಿಯ ಜೊತೆಗೆ ಅವನನ್ನು ವಿಚಾರಣಾ ವೇದಿಕೆಗೆ ಸಾಗಿಸಲು ಒಬ್ಬ ಮಲಕ್ ಮತ್ತು ಅವನ ಕರ್ಮಗಳಿಗೆ ಸಾಕ್ಷ್ಯವಹಿಸುವ ಇನ್ನೊಬ್ಬ ಮಲಕ್ ಇರಲಿದ್ದಾರೆ ಎಂದರ್ಥ.

ತೆಗೆದಿರುವೆವು.[1] ಆದ್ದರಿಂದ ಇಂದು ನಿನ್ನ ದೃಷ್ಟಿಯು ಹರಿತವುಳ್ಳದ್ದಾಗಿದೆ'.

23. ಅವನ ಸಹಚರ (ಮಲಕ್) ಹೇಳುವನು: 'ಇದು ನನ್ನ ಬಳಿ ಸಿದ್ಧವಾಗಿರುವಂತಹದು (ದಾಖಲೆ) ಆಗಿದೆ'.

وَقَالَ قَرِينُهُۥ هَٰذَا مَا لَدَيَّ عَتِيدٌ ﴿٢٣﴾

24. (ಅಲ್ಲಾಹು ಮಲಕ್‌ಗಳೊಂದಿಗೆ ಆಜ್ಞಾಪಿಸುವನು): 'ಸತ್ಯನಿಷೇಧಿ ಮತ್ತು ಧಿಕ್ಕಾರಿಯಾಗಿರುವ ಪ್ರತಿಯೊಬ್ಬನನ್ನೂ ನೀವು ನರಕಾಗ್ನಿಗೆ ಹಾಕಿರಿ'

أَلْقِيَا فِي جَهَنَّمَ كُلَّ كَفَّارٍ عَنِيدٍ ﴿٢٤﴾

25. ಅಂದರೆ ಒಳಿತನ್ನು ತಡೆದವನೂ, ಅತಿಕ್ರಮಿಯೂ, ಸಂಶಯಗ್ರಸ್ತನೂ ಆಗಿರುವ ಪ್ರತಿಯೊಬ್ಬನನ್ನೂ.

مَّنَّاعٍ لِّلْخَيْرِ مُعْتَدٍ مُّرِيبٍ ﴿٢٥﴾

26. ಅಲ್ಲಾಹುವಿನ ಜೊತೆಗೆ ಅನ್ಯ ಆರಾಧ್ಯನನ್ನು ಮಾಡಿಕೊಂಡವನನ್ನು. ಆದ್ದರಿಂದ ಅವನನ್ನು ನೀವು ಕಠಿಣವಾದ ಶಿಕ್ಷೆಯಲ್ಲಿ ಹಾಕಿರಿ.

ٱلَّذِي جَعَلَ مَعَ ٱللَّهِ إِلَٰهًا ءَاخَرَ فَأَلْقِيَاهُ فِي ٱلْعَذَابِ ٱلشَّدِيدِ ﴿٢٦﴾

27. ಅವನ ಸಹಚರನು ಹೇಳುವನು:[2] 'ಓ ನಮ್ಮ ರಬ್! ನಾನವನನ್ನು ದಾರಿಗೆಡಿಸಿಲ್ಲ. ಆದರೆ ಅವನು ವಿದೂರವಾದ ದುರ್ಮಾರ್ಗದಲ್ಲಿದ್ದನು'.

۞ قَالَ قَرِينُهُۥ رَبَّنَا مَآ أَطْغَيْتُهُۥ وَلَٰكِن كَانَ فِي ضَلَٰلٍ بَعِيدٍ ﴿٢٧﴾

28. ಅವನು (ಅಲ್ಲಾಹು) ಹೇಳುವನು: 'ನೀವು ನನ್ನ ಬಳಿ ಜಗಳವಾಡದಿರಿ. ನಾನು ನಿಮಗೆ ಮೊದಲೇ ಎಚ್ಚರಿಕೆ ನೀಡಿರುವೆನು.

قَالَ لَا تَخْتَصِمُوا۟ لَدَيَّ وَقَدْ قَدَّمْتُ إِلَيْكُم بِٱلْوَعِيدِ ﴿٢٨﴾

29. ನನ್ನ ಬಳಿ ಮಾತು ಬದಲಾಗದು. ನಾನು ದಾಸರಿಗೆ ಕಿಂಚಿತ್ತೂ ಅನ್ಯಾಯ ಮಾಡುವವನಲ್ಲ'.

مَا يُبَدَّلُ ٱلْقَوْلُ لَدَيَّ وَمَآ أَنَا۠ بِظَلَّٰمٍ لِّلْعَبِيدِ ﴿٢٩﴾

30. 'ನೀನು ತುಂಬಿದೆಯಾ' ಎಂದು ನಾವು ನರಕಾಗ್ನಿಯೊಂದಿಗೆ ಕೇಳುವ ಮತ್ತು 'ಹೆಚ್ಚುವರಿಯಾಗಿ ಏನಾದರೂ ಇದೆಯೇ' ಎಂದು ಅದು (ನರಕಾಗ್ನಿಯು) ಹೇಳುವ ದಿನ!

يَوْمَ نَقُولُ لِجَهَنَّمَ هَلِ ٱمْتَلَأْتِ وَتَقُولُ هَلْ مِن مَّزِيدٍ ﴿٣٠﴾

1 ಸೂಕ್ಷ್ಮ ಸತ್ಯಗಳನ್ನು ಗ್ರಹಿಸಲು ಇಹಲೋಕದಲ್ಲಿ ಅನೇಕ ಅಡ್ಡಿಗಳಿರಬಹುದು. ಪರಲೋಕದಲ್ಲಿ ಎಲ್ಲ ಮುಸುಕುಗಳನ್ನೂ ಮರೆಗಳನ್ನೂ ಸರಿಸುವುದರೊಂದಿಗೆ ಎಲ್ಲ ಸತ್ಯಗಳೂ ಅನಾವರಣಗೊಳ್ಳಲಿವೆ.

2 ಪ್ರಸ್ತುತ ಸೂಕ್ತಿಯಲ್ಲಿ ಹೇಳಲಾಗಿರುವ ಕರೀನ್ (ಸಹಚರ ಅಥವಾ ಜೊತೆಗಾರ) ಮನುಷ್ಯನ ಜೊತೆಗಿದ್ದು ಅವನನ್ನು ಪಥಭ್ರಷ್ಟಗೊಳಿಸುವ ಸೈತಾನನಾಗಿದ್ದಾನೆ.

**31.** ಭಯಭಕ್ತಿ ಪಾಲಿಸಿದವರಿಗೆ ವಿದೂರವಲ್ಲದ ಸ್ಥಿತಿಯಲ್ಲಿ ಸ್ವರ್ಗವನ್ನು ಹತ್ತಿರಕ್ಕೆ ತರಲಾಗುವುದು.

وَأُزۡلِفَتِ ٱلۡجَنَّةُ لِلۡمُتَّقِينَ غَيۡرَ بَعِيدٍ ٣١

**32.** (ಅವರೊಂದಿಗೆ ಹೇಳಲಾಗುವುದು): ‘ಇದು ಅಲ್ಲಾಹುವಿನೆಡೆಗೆ ಅತಿಹೆಚ್ಚು ಮರಳುವ ಮತ್ತು (ಬದುಕನ್ನು) ಸಂರಕ್ಷಿಸಿಕೊಳ್ಳುವ ಪ್ರತಿಯೊಬ್ಬರಿಗೂ ನೀಡಲಾಗುವುದೆಂದು ನಿಮಗೆ ವಾಗ್ದಾನ ಮಾಡಲ್ಪಟ್ಟದ್ದಾಗಿದೆ’.

هَٰذَا مَا تُوعَدُونَ لِكُلِّ أَوَّابٍ حَفِيظٖ ٣٢

**33.** ಅಂದರೆ ಅಗೋಚರ ಸ್ಥಿತಿಯಲ್ಲಿ ಪರಮ ದಯಾಮಯನನ್ನು ಭಯಪಟ್ಟು ವಿನಮ್ರವಾದ ಹೃದಯದೊಂದಿಗೆ ಬಂದವನಿಗೆ.

مَّنۡ خَشِيَ ٱلرَّحۡمَٰنَ بِٱلۡغَيۡبِ وَجَآءَ بِقَلۡبٖ مُّنِيبٍ ٣٣

**34.** (ಅವರೊಂದಿಗೆ ಹೇಳಲಾಗುವುದು): ‘ನೀವು ಶಾಂತಿಯೊಂದಿಗೆ ಅದನ್ನು ಪ್ರವೇಶಿಸಿರಿ. ಇದು ಶಾಶ್ವತ ವಾಸಕ್ಕಿರುವ ದಿನವಾಗಿದೆ.

ٱدۡخُلُوهَا بِسَلَٰمٖۖ ذَٰلِكَ يَوۡمُ ٱلۡخُلُودِ ٣٤

**35.** ಅವರು ಇಚ್ಛಿಸುವುದೆಲ್ಲವೂ ಅಲ್ಲಿ ಅವರಿಗಿದೆ. ನಮ್ಮ ಬಳಿ ಇನ್ನೂ ಹೆಚ್ಚುವರಿಯಿದೆ.

لَهُم مَّا يَشَآءُونَ فِيهَا وَلَدَيۡنَا مَزِيدٞ ٣٥

**36.** ಇವರಿಗಿಂತ ಮುಂಚೆ ನಾವು ಅದೆಷ್ಟು ತಲೆಮಾರುಗಳನ್ನು ನಾಶ ಮಾಡಿರುವೆವು! ಅವರು ಇವರಿಗಿಂತಲೂ ಹೆಚ್ಚು ಬಲಿಷ್ಠರಾಗಿದ್ದರು. ತರುವಾಯ ಅವರು ಪಾರಾಗಲು ಯಾವುದಾದರೂ ಸ್ಥಳವಿದೆಯೇ ಎಂದು ಊರನ್ನೆಲ್ಲ ಜಾಲಾಡಿ ನೋಡಿದರು.

وَكَمۡ أَهۡلَكۡنَا قَبۡلَهُم مِّن قَرۡنٍ هُمۡ أَشَدُّ مِنۡهُم بَطۡشٗا فَنَقَّبُواْ فِي ٱلۡبِلَٰدِ هَلۡ مِن مَّحِيصٍ ٣٦

**37.** ಹೃದಯವುಳ್ಳವನಿಗೆ ಮತ್ತು ಮನಸ್ಸಿನ ಸಾನಿಧ್ಯತೆಯೊಂದಿಗೆ ಕಿವಿಗೊಟ್ಟು ಆಲಿಸುವವನಿಗೆ ಖಂಡಿತವಾಗಿಯೂ ಇದರಲ್ಲಿ ಒಂದು ಉಪದೇಶವಿದೆ.

إِنَّ فِي ذَٰلِكَ لَذِكۡرَىٰ لِمَن كَانَ لَهُۥ قَلۡبٌ أَوۡ أَلۡقَى ٱلسَّمۡعَ وَهُوَ شَهِيدٞ ٣٧

**38.** ಆಕಾಶಗಳನ್ನು, ಭೂಮಿಯನ್ನು ಮತ್ತು ಅವುಗಳ ಮಧ್ಯೆಯಿರುವವುಗಳನ್ನು ನಾವು ಆರು ದಿನಗಳಲ್ಲಿ ಸೃಷ್ಟಿಸಿರುವೆವು. ನಮ್ಮನ್ನು ಯಾವುದೇ ದಣಿವೂ ಸ್ಪರ್ಶಿಸಲಿಲ್ಲ.

وَلَقَدۡ خَلَقۡنَا ٱلسَّمَٰوَٰتِ وَٱلۡأَرۡضَ وَمَا بَيۡنَهُمَا فِي سِتَّةِ أَيَّامٖ وَمَا مَسَّنَا مِن لُّغُوبٖ ٣٨

**39.** ಆದ್ದರಿಂದ ಅವರು ಹೇಳುವುದರ ಕುರಿತು ತಾವು ಸಹನೆ ಪಾಲಿಸಿರಿ. ಸೂರ್ಯೋದಯಕ್ಕೆ ಮುಂಚೆ ಮತ್ತು ಸೂರ್ಯಾಸ್ತಮಾನಕ್ಕೆ ಮುಂಚೆ

فَٱصۡبِرۡ عَلَىٰ مَا يَقُولُونَ وَسَبِّحۡ بِحَمۡدِ رَبِّكَ قَبۡلَ طُلُوعِ ٱلشَّمۡسِ وَقَبۡلَ ٱلۡغُرُوبِ ٣٩

ತಮ್ಮ ರಬ್‌ನ ಸ್ತುತಿಯೊಂದಿಗೆ (ಅವನ) ಪರಿಪಾವನತೆಯನ್ನು ಕೊಂಡಾಡಿರಿ

**40.** ರಾತ್ರಿಯಲ್ಲಿ ಸ್ವಲ್ಪ ಸಮಯ ಮತ್ತು ಸಾಷ್ಟಾಂಗ (ನಮಾಝ್)ಗಳ ಬಳಿಕ ಅವನ ಪರಿಪಾವನತೆಯನ್ನು ಕೊಂಡಾಡಿರಿ.

وَمِنَ ٱلَّيۡلِ فَسَبِّحۡهُ وَأَدۡبَٰرَ ٱلسُّجُودِ ٤٠

**41.** ಸಮೀಪದ ಒಂದು ಸ್ಥಳದಿಂದ ಕೂಗಿ ಕರೆಯುವವನು ಕೂಗಿ ಕರೆಯುವ ದಿನದ ಕುರಿತು ಕಿವಿಗೊಟ್ಟು ಆಲಿಸಿರಿ.

وَٱسۡتَمِعۡ يَوۡمَ يُنَادِ ٱلۡمُنَادِ مِن مَّكَانٖ قَرِيبٖ ٤١

**42.** ಅಂದರೆ ಆ ಭಯಾನಕ ಶಬ್ದವನ್ನು ಅವರು ಸತ್ಯವಾಗಿಯೂ ಆಲಿಸುವ ದಿನ! ಅದು (ಗೋರಿಗಳಿಂದ) ಹೊರಬರುವ ದಿನವಾಗಿದೆ.

يَوۡمَ يَسۡمَعُونَ ٱلصَّيۡحَةَ بِٱلۡحَقِّۚ ذَٰلِكَ يَوۡمُ ٱلۡخُرُوجِ ٤٢

**43.** ಖಂಡಿತವಾಗಿಯೂ ನಾವು ಜೀವವನ್ನು ನೀಡುವೆವು ಮತ್ತು ಮರಣವನ್ನು ನೀಡುವೆವು. ಮರಳುವಿಕೆಯು ನಮ್ಮ ಬಳಿಗೇ ಆಗಿದೆ.

إِنَّا نَحۡنُ نُحۡيِۦ وَنُمِيتُ وَإِلَيۡنَا ٱلۡمَصِيرُ ٤٣

**44.** ಭೂಮಿಯು ಅವರಿಂದ ಇಬ್ಭಾಗವಾಗಿ ಅವರು ಅತಿ ವೇಗವಾಗಿ (ಹೊರ)ಬರುವ ದಿನ. ಅದು ನಮ್ಮ ಮಟ್ಟಿಗೆ ಸುಲಭವಾಗಿರುವ ಒಗ್ಗೂಡಿಸುವಿಕೆಯಾಗಿದೆ.

يَوۡمَ تَشَقَّقُ ٱلۡأَرۡضُ عَنۡهُمۡ سِرَاعٗاۚ ذَٰلِكَ حَشۡرٌ عَلَيۡنَا يَسِيرٞ ٤٤

**45.** ಅವರು ಹೇಳುತ್ತಿರುವುದರ ಕುರಿತು ನಾವು ಚೆನ್ನಾಗಿ ಅರಿಯುತ್ತಿರುವೆವು. ತಾವು ಅವರ ಮೇಲಿರುವ ಸರ್ವಾಧಿಕಾರಿಯಲ್ಲ. ಆದ್ದರಿಂದ ನನ್ನ ಎಚ್ಚರಿಕೆಯನ್ನು ಭಯಪಡುವವರಿಗೆ ತಾವು ಕುರ್‌ಆನ್‌ನ ಮೂಲಕ ಉಪದೇಶವನ್ನು ನೀಡಿರಿ.

نَّحۡنُ أَعۡلَمُ بِمَا يَقُولُونَۖ وَمَآ أَنتَ عَلَيۡهِم بِجَبَّارٖۖ فَذَكِّرۡ بِٱلۡقُرۡءَانِ مَن يَخَافُ وَعِيدِ ٤٥

## ಅದ್ದಾರಿಯಾತ್ (ಹರಡುವವುಗಳು)

## سُورَةُ الذَّارِيَاتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 60

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلذَّٰرِيَٰتِ ذَرۡوٗا ١

1. ಬಲವಾಗಿ (ಧೂಳನ್ನು) ಹರಡುವವುಗಳ (ಗಾಳಿಯ) ಮೇಲಾಣೆ!

فَٱلۡحَٰمِلَٰتِ وِقۡرٗا ٢

2. (ನೀರಿನ) ಭಾರವನ್ನು ಹೊರುವ (ಮೋಡಗಳ) ಮೇಲಾಣೆ!

فَٱلۡجَٰرِيَٰتِ يُسۡرٗا ٣

3. ಸುಗಮವಾಗಿ ಚಲಿಸುವ (ಹಡಗುಗಳ) ಮೇಲಾಣೆ!

فَٱلۡمُقَسِّمَٰتِ أَمۡرًا ٤

4. ವಿಷಯಗಳನ್ನು ವಿಭಾಗಿಸಿಕೊಡುವವರ (ಮಲಕ್‌ಗಳ) ಮೇಲಾಣೆ!

إِنَّمَا تُوعَدُونَ لَصَادِقٞ ٥

5. ಖಂಡಿತವಾಗಿಯೂ ನಿಮಗೆ ಎಚ್ಚರಿಕೆ ನೀಡಲಾಗುವ ವಿಷಯವು ಸತ್ಯವೇ ಆಗಿದೆ.

وَإِنَّ ٱلدِّينَ لَوَٰقِعٞ ٦

6. ಖಂಡಿತವಾಗಿಯೂ ವಿಚಾರಣೆಯು ಸಂಭವಿಸುವುದೇ ಆಗಿದೆ.

وَٱلسَّمَآءِ ذَاتِ ٱلۡحُبُكِ ٧

7. ಕಕ್ಷೆಗಳನ್ನು ಹೊಂದಿರುವ ಆಕಾಶದ ಮೇಲಾಣೆ!

إِنَّكُمۡ لَفِي قَوۡلٖ مُّخۡتَلِفٖ ٨

8. ಖಂಡಿತವಾಗಿಯೂ ನೀವು ಭಿನ್ನಾಭಿಪ್ರಾಯದಲ್ಲಿರುವಿರಿ.

يُؤۡفَكُ عَنۡهُ مَنۡ أُفِكَ ٩

9. (ಸತ್ಯದಿಂದ) ತಪ್ಪಿಸಲ್ಪಟ್ಟವನು ಅದರಿಂದ (ಕುರ್‌ಆನ್‌ನಿಂದ) ತಪ್ಪಿಸಲ್ಪಡುವನು.

قُتِلَ ٱلۡخَرَّٰصُونَ ١٠ ٱلَّذِينَ هُمۡ فِي غَمۡرَةٖ
سَاهُونَ ١١

10-11. ಅವಿವೇಕತನದಲ್ಲಿ ಮಗ್ನರಾಗಿರುವ ಊಹಾಪೋಹದ ಜನರಿಗೆ ಶಾಪವಿರಲಿ.

يَسۡـَٔلُونَ أَيَّانَ يَوۡمُ ٱلدِّينِ ١٢

12. ‘ನ್ಯಾಯತೀರ್ಮಾನದ ದಿನ ಯಾವಾಗ?’ ಎಂದು ಅವರು ಕೇಳುವರು.

يَوۡمَ هُمۡ عَلَى ٱلنَّارِ يُفۡتَنُونَ ١٣

13. ಅದು ಅವರನ್ನು ನರಕಾಗ್ನಿಯಲ್ಲಿ ಪರೀಕ್ಷೆಗೆ ಒಡ್ಡಲಾಗುವ ದಿನವಾಗಿದೆ.

14. (ಅವರೊಂದಿಗೆ ಹೇಳಲಾಗುವುದು): 'ನಿಮಗಿರುವ ಪರೀಕ್ಷೆಯನ್ನು ಸವಿಯಿರಿ. ಇದು ನೀವು ಯಾವುದಕ್ಕಾಗಿ ಆತುರಪಡುತ್ತಿದ್ದಿರೋ ಅದೇ ಆಗಿದೆ'.

ذُوقُواْ فِتْنَتَكُمْ هَٰذَا ٱلَّذِى كُنتُم بِهِۦ تَسْتَعْجِلُونَ ﴿١٤﴾

15. ಖಂಡಿತವಾಗಿಯೂ ಭಯಭಕ್ತಿ ಪಾಲಿಸುವವರು ಸ್ವರ್ಗೋದ್ಯಾನಗಳಲ್ಲಿ ಮತ್ತು ತೊರೆಗಳಲ್ಲಿರುವರು.

إِنَّ ٱلْمُتَّقِينَ فِى جَنَّٰتٍ وَعُيُونٍ ﴿١٥﴾

16. ಅವರಿಗೆ ಅವರ ರಬ್ ದಯಪಾಲಿಸಿರುವುದನ್ನು ಅವರು ಪಡೆಯುತ್ತಿರುವರು. ಖಂಡಿತವಾಗಿಯೂ ಅವರು ಅದಕ್ಕಿಂತ ಮೊದಲು ಸಜ್ಜನರಾಗಿದ್ದರು.

ءَاخِذِينَ مَآ ءَاتَىٰهُمْ رَبُّهُمْ ۚ إِنَّهُمْ كَانُواْ قَبْلَ ذَٰلِكَ مُحْسِنِينَ ﴿١٦﴾

17. ಅವರು ರಾತ್ರಿಯಲ್ಲಿ ಸ್ವಲ್ಪ ಸಮಯ ಮಾತ್ರ ನಿದ್ರಿಸುತ್ತಿದ್ದರು.[1]

كَانُواْ قَلِيلًا مِّنَ ٱلَّيْلِ مَا يَهْجَعُونَ ﴿١٧﴾

18. ರಾತ್ರಿಯ ಕೊನೆಯ ಹಂತಗಳಲ್ಲಿ ಅವರು ಪಾಪಮುಕ್ತಿಯನ್ನು ಬೇಡುವವರಾಗಿದ್ದರು.

وَبِٱلْأَسْحَارِ هُمْ يَسْتَغْفِرُونَ ﴿١٨﴾

19. ಅವರ ಸಂಪತ್ತಿನಲ್ಲಿ ಬೇಡುವವನಿಗೆ ಮತ್ತು (ಅನ್ನಾಧಾರ) ತಡೆಯಲ್ಪಟ್ಟವನಿಗೆ ಒಂದು ಹಕ್ಕಿರುವುದು.[2]

وَفِىٓ أَمْوَٰلِهِمْ حَقٌّ لِّلسَّآئِلِ وَٱلْمَحْرُومِ ﴿١٩﴾

20. ದೃಢವಿಶ್ವಾಸವುಳ್ಳವರಿಗೆ ಭೂಮಿಯಲ್ಲಿ ಅನೇಕ ದೃಷ್ಟಾಂತಗಳಿವೆ.

وَفِى ٱلْأَرْضِ ءَايَٰتٌ لِّلْمُوقِنِينَ ﴿٢٠﴾

21. ಸ್ವತಃ ನಿಮ್ಮ ಶರೀರಗಳಲ್ಲೂ (ಅನೇಕ ದೃಷ್ಟಾಂತಗಳಿವೆ). ಆದರೂ ನೀವು ಕಾಣುವುದಿಲ್ಲವೇ?

وَفِىٓ أَنفُسِكُمْ ۚ أَفَلَا تُبْصِرُونَ ﴿٢١﴾

22. ಆಕಾಶದಲ್ಲಿ ನಿಮ್ಮ ಅನ್ನಾಧಾರವಿದೆ ಮತು ನಿಮ್ಮೊಂದಿಗೆ ವಾಗ್ದಾನ ಮಾಡಲಾಗಿರುವುದೂ ಇದೆ.[3]

وَفِى ٱلسَّمَآءِ رِزْقُكُمْ وَمَا تُوعَدُونَ ﴿٢٢﴾

---

1 ಅಥವಾ ಅವರು ರಾತ್ರಿಯಲ್ಲಿ ಅಧಿಕ ಸಮಯವೂ ಆರಾಧನಾ ನಿರತರಾಗುತ್ತಿದ್ದರು.

2 ಅವರು ತಾವು ಸಂಪಾದಿಸಿದ ಸಂಪತ್ತು ತಮಗೆ ಮಾತ್ರ ಹಕ್ಕುಳ್ಳದಲ್ಲ, ಅದರಲ್ಲಿ ಬಡವರಿಗೂ, ಜೀವನೋಪಾಯಕ್ಕೆ ದಾರಿಯಿಲ್ಲದ ನಿರ್ಗತಿಕರಿಗೂ ಹಕ್ಕಿದೆಯೆಂದು ಭಾವಿಸಿಕೊಂಡವರಾಗಿದ್ದಾರೆ.

3 ಜೀವರಾಶಿಗಳಿಗೆಲ್ಲ ಆಹಾರ ಲಭಿಸುವುದು ಆಕಾಶದಿಂದ ಸುರಿಯುವ ಮಳೆಯಿಂದಲೇ ಆಗಿದೆ. ಅಲ್ಲಾಹು ವಾಗ್ದಾನ ಮಾಡಿರುವ ರಕ್ಷೆ ಮತ್ತು ಶಿಕ್ಷೆಗಳು ಆಕಾಶದಿಂದಲೇ ಬರುತ್ತವೆ.

**23.** ಆಕಾಶಗಳ ಮತ್ತು ಭೂಮಿಯ ರಬ್‌ನ ಮೇಲಾಣೆ! ನೀವು ಮಾತನಾಡುತ್ತಿರುವಿರಿ ಎಂಬಂತೆಯೇ ಖಂಡಿತವಾಗಿಯೂ ಇದು ಕೂಡ ಸತ್ಯವಾಗಿದೆ.[1]

فَوَرَبِّ ٱلسَّمَآءِ وَٱلۡأَرۡضِ إِنَّهُۥ لَحَقّٞ مِّثۡلَ مَآ أَنَّكُمۡ تَنطِقُونَ ٢٣

**24.** ಇಬ್ರಾಹೀಮ್‌ರ ಗೌರವಾನ್ವಿತ ಅತಿಥಿಗಳ ವೃತ್ತಾಂತವು ತಮ್ಮ ಬಳಿಗೆ ಬಂದಿದೆಯೇ?

هَلۡ أَتَىٰكَ حَدِيثُ ضَيۡفِ إِبۡرَٰهِيمَ ٱلۡمُكۡرَمِينَ ٢٤

**25.** ಅವರು ಆತನ (ಇಬ್ರಾಹೀಮರ) ಬಳಿಗೆ ಬಂದು 'ಸಲಾಮ್' ಎಂದು ಹೇಳಿದ ಸಂದರ್ಭ. ಆಗ ಆತ ಹೇಳಿದರು: 'ಸಲಾಮ್, (ನೀವು) ಅಪರಿಚಿತ ಜನರಾಗಿರುವಿರಿ'.

إِذۡ دَخَلُواْ عَلَيۡهِ فَقَالُواْ سَلَٰمٗاۖ قَالَ سَلَٰمٞ قَوۡمٞ مُّنكَرُونَ ٢٥

**26.** ತರುವಾಯ ಆತ ಆತುರದಿಂದ ತನ್ನ ಪತ್ನಿಯ ಬಳಿ ತೆರಳಿದರು. ಬಳಿಕ ಒಂದು ಕೊಬ್ಬಿದ ಕರುವನ್ನು (ಬೇಯಿಸಿ) ತಂದರು.

فَرَاغَ إِلَىٰٓ أَهۡلِهِۦ فَجَآءَ بِعِجۡلٖ سَمِينٖ ٢٦

**27.** ತರುವಾಯ ಅದನ್ನು ಅವರ ಬಳಿ ಇಟ್ಟರು. ಆತ ಕೇಳಿದರು: 'ನೀವು ತಿನ್ನುವುದಿಲ್ಲವೇ?'

فَقَرَّبَهُۥٓ إِلَيۡهِمۡ قَالَ أَلَا تَأۡكُلُونَ ٢٧

**28.** ಆಗ ಅವರ ಬಗ್ಗೆ ಆತನ ಮನಸ್ಸಿನಲ್ಲಿ ಭಯವುಂಟಾಯಿತು. ಅವರು ಹೇಳಿದರು: 'ತಾವು ಭಯಪಡದಿರಿ'. ಜ್ಞಾನಿಯಾದ ಒಂದು ಗಂಡು ಮಗುವಿನ ಕುರಿತು ಅವರು ಆತನಿಗೆ ಶುಭವಾರ್ತೆಯನ್ನು ತಿಳಿಸಿದರು.

فَأَوۡجَسَ مِنۡهُمۡ خِيفَةٗۖ قَالُواْ لَا تَخَفۡۖ وَبَشَّرُوهُ بِغُلَٰمٍ عَلِيمٖ ٢٨

**29.** ಆಗ ಅವರ ಪತ್ನಿ ಗಟ್ಟಿಯಾಗಿ ಸದ್ದು ಮಾಡುತ್ತಾ ಮುಂದಕ್ಕೆ ಬಂದರು. ತರುವಾಯ ಆಕೆ ತನ್ನ ಮುಖಕ್ಕೆ ಬಡಿದು ಹೇಳಿದರು: 'ಬಂಜೆಯಾಗಿರುವ ಒಬ್ಬ ವೃದ್ಧೆಯೇನು (ಹಡೆಯುವುದು)?'

فَأَقۡبَلَتِ ٱمۡرَأَتُهُۥ فِي صَرَّةٖ فَصَكَّتۡ وَجۡهَهَا وَقَالَتۡ عَجُوزٌ عَقِيمٞ ٢٩

**30.** ಅವರು (ಮಲಕ್‌ಗಳು) ಹೇಳಿದರು: 'ಹೀಗೆ ತಮ್ಮ ರಬ್ ಹೇಳಿರುವನು. ಖಂಡಿತವಾಗಿಯೂ ಅವನು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು'.

قَالُواْ كَذَٰلِكِ قَالَ رَبُّكِۖ إِنَّهُۥ هُوَ ٱلۡحَكِيمُ ٱلۡعَلِيمُ ٣٠

---

1 ನಿಮಗೆ ಮಾತನಾಡಲು ಸಾಧ್ಯವಿದೆ ಎಂಬುದು ನಿಮಗೆ ನಿಷೇಧಿಸಲು ಸಾಧ್ಯವಾಗದ ಸತ್ಯವಾಗಿದ್ದರೆ ಅದರಂತೆಯೇ ದೈವಿಕವಾದ ರಕ್ಷೆ ಮತ್ತು ಶಿಕ್ಷೆಗಳ ವಿಷಯವು ಕೂಡ ಅನಿಷೇಧ್ಯವಾಗಿದೆ.

۞ قَالَ فَمَا خَطْبُكُمْ أَيُّهَا ٱلْمُرْسَلُونَ ﴿٣١﴾

31. ಆತ ಕೇಳಿದರು: 'ಓ ದೂತರೇ, ಹಾಗಾದರೆ ನಿಮ್ಮ ಸಮಾಚಾರವೇನು?'

قَالُوٓا۟ إِنَّآ أُرْسِلْنَآ إِلَىٰ قَوْمٍ مُّجْرِمِينَ ﴿٣٢﴾

32. ಅವರು ಹೇಳಿದರು: 'ನಮ್ಮನ್ನು ಅಪರಾಧಿಗಳಾದ ಒಂದು ಜನತೆಯೆಡೆಗೆ ಕಳುಹಿಸಲಾಗಿದೆ.(1)

لِنُرْسِلَ عَلَيْهِمْ حِجَارَةً مِّن طِينٍ ﴿٣٣﴾ مُّسَوَّمَةً عِندَ رَبِّكَ لِلْمُسْرِفِينَ ﴿٣٤﴾

33-34. ಅತಿಕ್ರಮಿಗಳಿಗಾಗಿ ಅವರ ರಬ್‌ನ ಬಳಿ ಗುರುತು ಹಾಕಲಾದ ಜೇಡಿಮಣ್ಣಿನ ಕಲ್ಲುಗಳನ್ನು ನಾವು ಅವರ ಮೇಲೆ ಸುರಿಸುವ ಸಲುವಾಗಿ.

فَأَخْرَجْنَا مَن كَانَ فِيهَا مِنَ ٱلْمُؤْمِنِينَ ﴿٣٥﴾

35. ಆಗ ಅಲ್ಲಿದ್ದ ಸತ್ಯವಿಶ್ವಾಸಿಗಳಲ್ಲಿ ಸೇರಿದವರನ್ನು ನಾವು ಹೊರತಂ(ದು ರಕ್ಷಿಸಿ)ದೆವು.

فَمَا وَجَدْنَا فِيهَا غَيْرَ بَيْتٍ مِّنَ ٱلْمُسْلِمِينَ ﴿٣٦﴾

36. ಆದರೆ ನಾವು ಅಲ್ಲಿ ಮುಸ್ಲಿಮರಿಗೆ ಸೇರಿದ ಒಂದೇ ಒಂದು ಮನೆಯ ವಿನಾ ಕಾಣಲಿಲ್ಲ.

وَتَرَكْنَا فِيهَآ ءَايَةً لِّلَّذِينَ يَخَافُونَ ٱلْعَذَابَ ٱلْأَلِيمَ ﴿٣٧﴾

37. ಯಾತನಾಮಯ ಶಿಕ್ಷೆಯನ್ನು ಭಯಪಡುವವರಿಗೆ ನಾವು ಅಲ್ಲಿ ಒಂದು ದೃಷ್ಟಾಂತವನ್ನು ಬಾಕಿಯುಳಿಸಿದೆವು.

وَفِى مُوسَىٰٓ إِذْ أَرْسَلْنَٰهُ إِلَىٰ فِرْعَوْنَ بِسُلْطَٰنٍ مُّبِينٍ ﴿٣٨﴾

38. ಮೂಸಾರ ಚರಿತ್ರೆಯಲ್ಲೂ (ದೃಷ್ಟಾಂತಗಳಿವೆ). ಸ್ಪಷ್ಟವಾದ ಆಧಾರ ಪ್ರಮಾಣದೊಂದಿಗೆ ನಾವು ಅವರನ್ನು ಫಿರ್‌ಔನ್‌ನ ಬಳಿಗೆ ಕಳುಹಿಸಿದ ಸಂದರ್ಭ.

فَتَوَلَّىٰ بِرُكْنِهِۦ وَقَالَ سَٰحِرٌ أَوْ مَجْنُونٌ ﴿٣٩﴾

39. ಆಗ ಅವನು ತನ್ನ ಶಕ್ತಿಯ ಕುರಿತು ಅಹಂಕಾರ ಪಟ್ಟು ವಿಮುಖನಾದನು. (ಮೂಸಾರನ್ನು) ಒಬ್ಬ ಮಾಂತ್ರಿಕ ಅಥವಾ ಹುಚ್ಚ ಎಂದು ಅವನು ಹೇಳಿದನು.

فَأَخَذْنَٰهُ وَجُنُودَهُۥ فَنَبَذْنَٰهُمْ فِى ٱلْيَمِّ وَهُوَ مُلِيمٌ ﴿٤٠﴾

40. ಆದ್ದರಿಂದ ನಾವು ಅವನನ್ನು ಮತ್ತು ಅವನ ಸೈನ್ಯಗಳನ್ನು ಹಿಡಿದೆವು. ತರುವಾಯ ಅವರನ್ನು ಕಡಲಿಗೆಸೆದೆವು. ಅವನು ಆಕ್ಷೇಪಾರ್ಹನಾಗಿದ್ದನು.

---

1 ಪ್ರಕೃತಿ ವಿರುದ್ಧ ಲೈಂಗಿಕತೆ ಮತ್ತು ಇತರ ನೀಚಕೃತ್ಯಗಳನ್ನು ಕೊನೆಗೊಳಿಸಲು ಪ್ರವಾದಿ ಲೂತ್(عَلَيْهِ ٱلسَّلَامُ)ರವರು ತಮ್ಮ ಜನತೆಗೆ ನಿರಂತರ ಉಪದೇಶಿಸಿದರೂ ಅವರು ಅದಕ್ಕೆ ಕಿವಿಗೊಡದೆ ನಿರ್ಲಕ್ಷಿಸಿದಾಗ ಅವರನ್ನು ನಾಶಮಾಡುವುದಕ್ಕಾಗಿ ಮಲಕ್‌ಗಳನ್ನು ಕಳುಹಿಸಲಾಯಿತು. ಲೂತ್(عَلَيْهِ ٱلسَّلَامُ)ರವರ ಊರಿಗೆ ಹೋಗುವ ದಾರಿಮಧ್ಯೆ ಅವರು ಇಬ್ರಾಹೀಮ್(عَلَيْهِ ٱلسَّلَامُ)ರವರ ಬಳಿಗೆ ಬಂದಿದ್ದರು.

41. ಆದ್ ಜನತೆಯಲ್ಲೂ (ದೃಷ್ಟಾಂತವಿದೆ). ನಾವು ಅವರ ಮೇಲೆ ಬರಡು ಗಾಳಿಯನ್ನು ಕಳುಹಿಸಿದ ಸಂದರ್ಭ.

وَفِي عَادٍ إِذۡ أَرۡسَلۡنَا عَلَيۡهِمُ ٱلرِّيحَ ٱلۡعَقِيمَ ﴿٤١﴾

42. ಆ ಗಾಳಿ ಯಾವೆಲ್ಲ ವಸ್ತುಗಳ ಮೇಲೆ ಬೀಸುವುದೋ ಅವೆಲ್ಲವನ್ನೂ ಅದು ಶಿಥಿಲ ಕಿಲುಬುಗಳಂತೆ ಮಾಡದೆ ಬಿಡುತ್ತಿರಲಿಲ್ಲ.

مَا تَذَرُ مِن شَيۡءٍ أَتَتۡ عَلَيۡهِ إِلَّا جَعَلَتۡهُ كَٱلرَّمِيمِ ﴿٤٢﴾

43. ಸಮೂದ್ ಜನಾಂಗದಲ್ಲೂ (ದೃಷ್ಟಾಂತವಿದೆ). 'ಒಂದು ಅವಧಿಯವರೆಗೆ ನೀವು ಸುಖವಾಗಿ ಬಾಳಿರಿ' ಎಂದು ಅವರೊಂದಿಗೆ ಹೇಳಲಾದ ಸಂದರ್ಭ.

وَفِي ثَمُودَ إِذۡ قِيلَ لَهُمۡ تَمَتَّعُواْ حَتَّىٰ حِينٍ ﴿٤٣﴾

44. ತರುವಾಯ ಅವರು ತಮ್ಮ ರಬ್‌ನ ಆಜ್ಞೆಯನ್ನು ಧಿಕ್ಕರಿಸಿದರು. ಆದ್ದರಿಂದ ಅವರು ನೋಡುತ್ತಿರುವಂತೆಯೇ ಆ ಭಯಾನಕ ಶಬ್ದವು ಅವರನ್ನು ಹಿಡಿಯಿತು.

فَعَتَوۡاْ عَنۡ أَمۡرِ رَبِّهِمۡ فَأَخَذَتۡهُمُ ٱلصَّٰعِقَةُ وَهُمۡ يَنظُرُونَ ﴿٤٤﴾

45. ಆಗ ಅವರಿಗೆ ಎದ್ದು ನಿಲ್ಲಲೂ ಸಾಧ್ಯವಾಗಲಿಲ್ಲ. ಅವರಿಗೆ ಸ್ವತಃ ರಕ್ಷಿಸಿಕೊಳ್ಳಲೂ ಆಗಲಿಲ್ಲ.

فَمَا ٱسۡتَطَٰعُواْ مِن قِيَامٍ وَمَا كَانُواْ مُنتَصِرِينَ ﴿٤٥﴾

46. ಅದಕ್ಕಿಂತ ಮುಂಚೆ ನೂಹ್‌ರ ಜನತೆಯನ್ನೂ (ನಾವು ನಾಶ ಮಾಡಿದ್ದೆವು). ಖಂಡಿತವಾಗಿಯೂ ಅವರು ಧಿಕ್ಕಾರಿಗಳಾದ ಒಂದು ಜನತೆಯಾಗಿದ್ದರು.

وَقَوۡمَ نُوحٖ مِّن قَبۡلُۖ إِنَّهُمۡ كَانُواْ قَوۡمٗا فَٰسِقِينَ ﴿٤٦﴾

47. ಆಕಾಶವನ್ನು ನಾವು ನಮ್ಮ ಶಕ್ತಿಯಿಂದ ನಿರ್ಮಿಸಿರುವೆವು. ಖಂಡಿತವಾಗಿಯೂ ನಾವು ವಿಕಾಸಗೊಳಿಸುವವರಾಗಿರುವೆವು.[1]

وَٱلسَّمَآءَ بَنَيۡنَٰهَا بِأَيۡيْدٖ وَإِنَّا لَمُوسِعُونَ ﴿٤٧﴾

48. ಭೂಮಿಯನ್ನು ನಾವು ಒಂದು ಹಾಸಿನಂತೆ ಹರಡಿರುವೆವು. ಅದನ್ನು ಹಾಸಿದವನು ಅದೆಷ್ಟು ಉತ್ತಮನು!

وَٱلۡأَرۡضَ فَرَشۡنَٰهَا فَنِعۡمَ ٱلۡمَٰهِدُونَ ﴿٤٨﴾

49. ಎಲ್ಲ ವಸ್ತುಗಳಲ್ಲೂ ನಾವು ಎರಡೆರಡು ಜೋಡಿಗಳನ್ನು ಸೃಷ್ಟಿಸಿರುವೆವು. ನೀವು ಚಿಂತಿಸಿ ಗ್ರಹಿಸುವ ಸಲುವಾಗಿ.

وَمِن كُلِّ شَيۡءٍ خَلَقۡنَا زَوۡجَيۡنِ لَعَلَّكُمۡ تَذَكَّرُونَ ﴿٤٩﴾

1 ಅಲ್ಲಾಹು ವಿಶ್ವವನ್ನು ವಿಕಾಸಗೊಳಿಸುತ್ತಿದ್ದಾನೆಂದು ಇದರಿಂದ ಗ್ರಹಿಸಬಹುದು.

50. ಆದ್ದರಿಂದ ನೀವು ಅಲ್ಲಾಹುವಿನೆಡೆಗೆ ಧಾವಿಸಿರಿ. ಖಂಡಿತವಾಗಿಯೂ ನಾನು ನಿಮಗೆ ಅವನ ವತಿಯ ಸ್ಪಷ್ಟ ಮುನ್ನೆಚ್ಚರಿಕೆಗಾರನಾಗಿರುವೆನು.

فَفِرُّوٓاْ إِلَى ٱللَّهِۖ إِنِّي لَكُم مِّنۡهُ نَذِيرٞ مُّبِينٞ ٥٠

51. ನೀವು ಅಲ್ಲಾಹುವಿನೊಂದಿಗೆ ಅನ್ಯ ಆರಾಧ್ಯರನ್ನು ಮಾಡಿಕೊಳ್ಳದಿರಿ. ಖಂಡಿತವಾಗಿಯೂ ನಾನು ನಿಮಗೆ ಅವನ ವತಿಯ ಸ್ಪಷ್ಟವಾದ ಮುನ್ನೆಚ್ಚರಿಕೆಗಾರನಾಗಿರುವೆನು.

وَلَا تَجۡعَلُواْ مَعَ ٱللَّهِ إِلَٰهًا ءَاخَرَۖ إِنِّي لَكُم مِّنۡهُ نَذِيرٞ مُّبِينٞ ٥١

52. ಹೀಗೆ ಇವರಿಗಿಂತ ಮುಂಚಿನವರ ಬಳಿಗೆ ಯಾವುದೇ ಸಂದೇಶವಾಹಕನು ಬಂದಾಗಲೂ ಅವರು ಅವನನ್ನು ಮಾಂತ್ರಿಕ ಅಥವಾ ಹುಚ್ಚ ಎಂದು ಹೇಳದೆ ಬಿಟ್ಟಿರಲಿಲ್ಲ.

كَذَٰلِكَ مَآ أَتَى ٱلَّذِينَ مِن قَبۡلِهِم مِّن رَّسُولٍ إِلَّا قَالُواْ سَاحِرٌ أَوۡ مَجۡنُونٌ ٥٢

53. ಅವರು ಅದನ್ನು (ಹಾಗೆ ಹೇಳುವುದನ್ನು) ಪರಸ್ಪರ ಉಪದೇಶ ಮಾಡಿರುವರೇ? ಅಲ್ಲ, ಅವರು ಅತಿಕ್ರಮಿಗಳಾದ ಒಂದು ಜನತೆಯಾಗಿರುವರು.

أَتَوَاصَوۡاْ بِهِۦۚ بَلۡ هُمۡ قَوۡمٞ طَاغُونَ ٥٣

54. ಆದ್ದರಿಂದ ತಾವು ಅವರಿಂದ ವಿಮುಖರಾಗಿರಿ. ತಾವು ಆಕ್ಷೇಪಾರ್ಹರಲ್ಲ.

فَتَوَلَّ عَنۡهُمۡ فَمَآ أَنتَ بِمَلُومٖ ٥٤

55. ತಾವು ಉಪದೇಶ ಮಾಡಿರಿ. ಖಂಡಿತವಾಗಿಯೂ ಉಪದೇಶವು ಸತ್ಯವಿಶ್ವಾಸಿಗಳಿಗೆ ಪ್ರಯೋಜನವಾಗುವುದು.

وَذَكِّرۡ فَإِنَّ ٱلذِّكۡرَىٰ تَنفَعُ ٱلۡمُؤۡمِنِينَ ٥٥

56. ನನ್ನನ್ನು ಆರಾಧಿಸುವುದಕ್ಕಾಗಿಯೇ ಹೊರತು ನಾನು ಜಿನ್ನ್‌ಗಳನ್ನು ಮತ್ತು ಮನುಷ್ಯರನ್ನು ಸೃಷ್ಟಿಸಿಲ್ಲ.

وَمَا خَلَقۡتُ ٱلۡجِنَّ وَٱلۡإِنسَ إِلَّا لِيَعۡبُدُونِ ٥٦

57. ನಾನು ಅವರಿಂದ ಅನ್ನಾಧಾರವನ್ನು ಬಯಸುವುದಿಲ್ಲ. ಅವರು ನನಗೆ ಆಹಾರ ಒದಗಿಸಬೇಕೆಂದೂ ನಾನು ಬಯಸುವುದಿಲ್ಲ.[1]

مَآ أُرِيدُ مِنۡهُم مِّن رِّزۡقٖ وَمَآ أُرِيدُ أَن يُطۡعِمُونِ ٥٧

1 ಗುಲಾಮ ಪದ್ಧತಿಯಲ್ಲಿ ಯಜಮಾನರು ಗುಲಾಮರನ್ನು ಖರೀದಿಸಿ ಅವರನ್ನು ಸಂರಕ್ಷಿಸುವುದು ಆ ಗುಲಾಮರಿಂದ ತಮಗೇನಾದರೂ ಆದಾಯ ಸಿಗಬೇಕು ಎಂಬ ಉದ್ದೇಶದಿಂದಾಗಿದೆ. ಆದರೆ ಅಲ್ಲಾಹು ಮತ್ತು ದಾಸರ ಸಂಬಂಧ ಹೀಗಲ್ಲ. ಅಲ್ಲಾಹು ತನ್ನ ದಾಸರಿಂದ ಅನ್ನಾಧಾರ ಬೇಡುವುದಿಲ್ಲ. ಅಲ್ಲಾಹು ಜಿನ್ನ್ ಮತ್ತು ಮನುಷ್ಯರಿಗೆ ಆಜ್ಞಾಪಿಸಿರುವುದು ಅವನನ್ನು ಮಾತ್ರ ಆರಾಧಿಸುತ್ತಾ, ಅವನ ಆಜ್ಞೆಗಳನ್ನು ಅನುಸರಿಸುತ್ತಾ ಯಶಸ್ವಿಯಾದ ಬದುಕನ್ನು ಸಾಗಿಸಲು ಮಾತ್ರವಾಗಿದೆ.

إِنَّ ٱللَّهَ هُوَ ٱلرَّزَّاقُ ذُو ٱلْقُوَّةِ ٱلْمَتِينُ ﴿٥٨﴾

58. ಖಂಡಿತವಾಗಿಯೂ ಅನ್ನಾಧಾರ ಒದಗಿಸುವವನು, ಶಕ್ತನು ಮತ್ತು ಬಲಿಷ್ಠನು ಅಲ್ಲಾಹುವಾಗಿರುವನು.

فَإِنَّ لِلَّذِينَ ظَلَمُوا۟ ذَنُوبًا مِّثْلَ ذَنُوبِ
أَصْحَـٰبِهِمْ فَلَا يَسْتَعْجِلُونِ ﴿٥٩﴾

59. (ಇಂದು) ಅಕ್ರಮವೆಸಗಿದವರಿಗೆ ಅವರ (ಪೂರ್ವಿಕರಾದ) ಸಂಗಡಿಗರಿಗೆ ಸಿಕ್ಕಿದ ಪಾಲಿನಂತಿರುವ ಪಾಲು ಖಂಡಿತವಾಗಿಯೂ ಇದೆ. ಆದ್ದರಿಂದ ಅವರು ನನ್ನೊಂದಿಗೆ ಆತುರಪಡದಿರಲಿ.

فَوَيْلٌ لِّلَّذِينَ كَفَرُوا۟ مِن يَوْمِهِمُ ٱلَّذِى
يُوعَدُونَ ﴿٦٠﴾

60. ಆದ್ದರಿಂದ ತಮಗೆ ಮುನ್ನೆಚ್ಚರಿಕೆ ನೀಡಲಾಗುತ್ತಿರುವ ಆ ದಿನದ ನಿಮಿತ್ತ ಸತ್ಯನಿಷೇಧಿಗಳಿಗೆ ನಾಶವಿದೆ.

## ಅತ್ತೂರ್

## سُورَةُ الطُّورِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 49

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ತೂರ್ (ಪರ್ವತದ) ಮೇಲಾಣೆ!

وَٱلطُّورِ ١

2-3. ತೆರೆದಿಡಲಾದ ತೊಗಲಿನ ಹಾಳೆಯಲ್ಲಿ ಲಿಖಿತಗೊಳಿಸಿರುವ ಗ್ರಂಥದ ಮೇಲಾಣೆ!

وَكِتَٰبٖ مَّسۡطُورٖ ٢ فِي رَقّٖ مَّنشُورٖ ٣

4. ಅಲ್‌ಬೈತುಲ್ ಮಅ್‌ಮೂರ್‌ನ ಮೇಲಾಣೆ![1]

وَٱلۡبَيۡتِ ٱلۡمَعۡمُورِ ٤

5. ಎತ್ತರಿಸಲಾದ ಛಾವಣಿಯ (ಆಕಾಶದ) ಮೇಲಾಣೆ!

وَٱلسَّقۡفِ ٱلۡمَرۡفُوعِ ٥

6. ತುಂಬಿದ ಸಮುದ್ರದ ಮೇಲಾಣೆ!

وَٱلۡبَحۡرِ ٱلۡمَسۡجُورِ ٦

7. ಖಂಡಿತವಾಗಿಯೂ ತಮ್ಮ ರಬ್‌ನ ಶಿಕ್ಷೆ ಸಂಭವಿಸುವುದೇ ಆಗಿದೆ.

إِنَّ عَذَابَ رَبِّكَ لَوَٰقِعٞ ٧

8. ಅದನ್ನು ತಡೆಗಟ್ಟುವವರಾರೂ ಇಲ್ಲ.

مَّا لَهُۥ مِن دَافِعٖ ٨

9-10. ಆಕಾಶವು ಪ್ರಬಲವಾಗಿ ನಡುಗುವ ಮತ್ತು ಪರ್ವತಗಳು (ಅವುಗಳ ಸ್ಥಾನಗಳಿಂದ) ಸರಿದು ಚಲಿಸುವ ದಿನ!

يَوۡمَ تَمُورُ ٱلسَّمَآءُ مَوۡرٗا ٩ وَتَسِيرُ ٱلۡجِبَالُ سَيۡرٗا ١٠

11. ಆ ದಿನದಂದು ಸತ್ಯನಿಷೇಧಿಗಳಿಗೆ ನಾಶವಿದೆ.

فَوَيۡلٞ يَوۡمَئِذٖ لِّلۡمُكَذِّبِينَ ١١

12. ಅಂದರೆ ಅನಾವಶ್ಯಕ ವಿಷಯಗಳಲ್ಲಿ ಮಗ್ನರಾಗಿ ಆಟವಾಡುತ್ತಿರುವವರಿಗೆ.

ٱلَّذِينَ هُمۡ فِي خَوۡضٖ يَلۡعَبُونَ ١٢

13. ಅವರನ್ನು ಬಲವಾಗಿ ನರಕಾಗ್ನಿಗೆ ತಳ್ಳಲಾಗುವ ದಿನ!

يَوۡمَ يُدَعُّونَ إِلَىٰ نَارِ جَهَنَّمَ دَعًّا ١٣

14. (ಅವರೊಂದಿಗೆ ಹೇಳಲಾಗುವುದು): 'ನೀವು ನಿಷೇಧಿಸುತ್ತಿದ್ದ ನರಕಾಗ್ನಿಯು ಇದೇ ಆಗಿದೆ'.

هَٰذِهِ ٱلنَّارُ ٱلَّتِي كُنتُم بِهَا تُكَذِّبُونَ ١٤

1 ಭೂಮಿಯಲ್ಲಿರುವವರು ಕಅ್‌ಬಾವನ್ನು ತವಾಫ್ ಮಾಡುವಂತೆ ಮತ್ತು ಅಲ್ಲಿ ಆರಾಧನೆ ಮಾಡುವಂತೆ ಏಳನೇ ಆಕಾಶದಲ್ಲಿ ಮಲಕ್‌ಗಳ ಆರಾಧನಾ ಕೇಂದ್ರವಾಗಿದೆ ಅಲ್‌ಬೈತುಲ್ ಮಅ್‌ಮೂರ್. ಬುಖಾರಿ ಮತ್ತು ಮುಸ್ಲಿಮ್ ಉದ್ಧರಿಸಿದ ಹದೀಸಿನಲ್ಲಿ ಇದನ್ನು ಸ್ಪಷ್ಟವಾಗಿ ಹೇಳಲಾಗಿದೆ.

أَفَسِحۡرٌ هَٰذَآ أَمۡ أَنتُمۡ لَا تُبۡصِرُونَ ١٥

15. ಹಾಗಾದರೆ ಇದು ಮಾಯಾಜಾಲವೇ? ಅಥವಾ ನೀವು ಕಾಣುತ್ತಿಲ್ಲವೇ?

ٱصۡلَوۡهَا فَٱصۡبِرُوٓاْ أَوۡ لَا تَصۡبِرُواْ سَوَآءٌ عَلَيۡكُمۡۖ إِنَّمَا تُجۡزَوۡنَ مَا كُنتُمۡ تَعۡمَلُونَ ١٦

16. ನೀವು ಅದರಲ್ಲಿ ಉರಿಯಿರಿ. ತರುವಾಯ ನೀವು ಸಹನೆ ವಹಿಸಿರಿ ಅಥವಾ ಸಹನೆ ವಹಿಸದಿರಿ. ನಿಮ್ಮ ಪಾಲಿಗೆ ಅವೆರಡೂ ಸಮಾನವಾಗಿವೆ. ನಿಮಗೆ ಪ್ರತಿಫಲ ನೀಡಲಾಗುವುದು ನೀವು ಮಾಡಿಕೊಂಡಿರುವುದಕ್ಕೆ ಮಾತ್ರವಾಗಿದೆ.

إِنَّ ٱلۡمُتَّقِينَ فِي جَنَّٰتٖ وَنَعِيمٖ ١٧

17. ಖಂಡಿತವಾಗಿಯೂ ಭಯಭಕ್ತಿ ಪಾಲಿಸುವವರು ಸ್ವರ್ಗೋದ್ಯಾನಗಳಲ್ಲಿ ಮತ್ತು ಸುಖಭೋಗಗಳಲ್ಲಿರುವರು.

فَٰكِهِينَ بِمَآ ءَاتَىٰهُمۡ رَبُّهُمۡ وَوَقَىٰهُمۡ رَبُّهُمۡ عَذَابَ ٱلۡجَحِيمِ ١٨

18. ಅವರ ರಬ್ ಅವರಿಗೆ ದಯಪಾಲಿಸಿರುವುದರಲ್ಲಿ ಅವರು ಸಂತುಷ್ಟರಾಗಿರುವರು. ಜ್ವಲಿಸುವ ನರಕಾಗ್ನಿಯ ಶಿಕ್ಷೆಯಿಂದ ಅವರ ರಬ್ ಅವರನ್ನು ಪಾರುಗೊಳಿಸಿರುವನು.

كُلُواْ وَٱشۡرَبُواْ هَنِيٓـَٔۢا بِمَا كُنتُمۡ تَعۡمَلُونَ ١٩

19. (ಅವರೊಂದಿಗೆ ಹೇಳಲಾಗುವುದು): 'ನೀವು ಮಾಡಿಕೊಂಡಿರುವುದರ ಫಲವಾಗಿ ನೀವು ಸುಖವಾಗಿ ತಿನ್ನಿರಿ ಮತ್ತು ಕುಡಿಯಿರಿ'.

مُتَّكِـِٔينَ عَلَىٰ سُرُرٖ مَّصۡفُوفَةٖۖ وَزَوَّجۡنَٰهُم بِحُورٍ عِينٖ ٢٠

20. ಸಾಲಾಗಿಟ್ಟಿರುವ ಮಂಚಗಳಲ್ಲಿ ಅವರು ಒರಗಿ ಕುಳಿತಿರುವರು. ವಿಶಾಲ ಕಣ್ಣುಗಳುಳ್ಳ ಬೆಳ್ಳಗಿನ ತರುಣಿಯರನ್ನು ನಾವು ಅವರಿಗೆ ಸಂಗಾತಿಗಳಾಗಿ ನೀಡುವೆವು.

وَٱلَّذِينَ ءَامَنُواْ وَٱتَّبَعَتۡهُمۡ ذُرِّيَّتُهُم بِإِيمَٰنٍ أَلۡحَقۡنَا بِهِمۡ ذُرِّيَّتَهُمۡ وَمَآ أَلَتۡنَٰهُم مِّنۡ عَمَلِهِم مِّن شَيۡءٖۚ كُلُّ ٱمۡرِيِٕۭ بِمَا كَسَبَ رَهِينٞ ٢١

21. ವಿಶ್ವಾಸವಿಟ್ಟವರು ಮತ್ತು ವಿಶ್ವಾಸದಲ್ಲಿ ಅವರ ಸಂತತಿಯು ಅವರನ್ನು ಹಿಂಬಾಲಿಸಿದವರು ಯಾರೋ ಅವರ ಸಂತತಿಗಳನ್ನು ನಾವು ಅವರೊಂದಿಗೆ ಸೇರಿಸುವೆವು. ನಾವು ಅವರಿಗೆ ಅವರ ಕರ್ಮಫಲದಿಂದ ಏನನ್ನೂ ಕಮ್ಮಿ ಮಾಡಲಾರೆವು. ಪ್ರತಿಯೊಬ್ಬ ವ್ಯಕ್ತಿಯೂ ತಾನು ಸಂಪಾದಿಸಿರುವುದಕ್ಕೆ (ಸ್ವಂತ ಕರ್ಮಗಳಿಗೆ) ಗಿರವಿ ಇಡಲಾದವನಾಗಿರುವನು.

وَأَمۡدَدۡنَٰهُم بِفَٰكِهَةٖ وَلَحۡمٖ مِّمَّا يَشۡتَهُونَ ٢٢

22. ಅವರು ಹಂಬಲಿಸುವ ವಿಧದ ಫಲವನ್ನು ಮತ್ತು ಮಾಂಸವನ್ನು ನಾವು ಅವರಿಗೆ ಅಧಿಕವಾಗಿ ನೀಡುವೆವು.

23. ಅಲ್ಲಿ ಅವರು ಪಾನಪಾತ್ರೆಗಳನ್ನು ಪರಸ್ಪರ ವಿನಿಮಯ ಮಾಡುತ್ತಿರುವರು. ಅಲ್ಲಿ ಅನಾವಶ್ಯಕ ಮಾತಾಗಲಿ, ಪಾಪಕೃತ್ಯವಾಗಲಿ ಇರದು.

يَتَنَٰزَعُونَ فِيهَا كَأۡسٗا لَّا لَغۡوٞ فِيهَا وَلَا تَأۡثِيمٞ ﴿٢٣﴾

24. ಅವರಿಗೆ (ಪರಿಚಾರಕರಾಗಿರುವ) ಬಾಲಕರು ಅವರ ಬಳಿ ಸುತ್ತಾಡುತ್ತಿರುವರು. ಅವರು ಸುರಕ್ಷಿತವಾಗಿಡಲಾಗಿರುವ ಮುತ್ತುಗಳಂತಿರುವರು.

۞وَيَطُوفُ عَلَيۡهِمۡ غِلۡمَانٞ لَّهُمۡ كَأَنَّهُمۡ لُؤۡلُؤٞ مَّكۡنُونٞ ﴿٢٤﴾

25. ಪರಸ್ಪರ ವಿಚಾರಿಸುತ್ತಾ ಅವರಲ್ಲಿ ಕೆಲವರು ಕೆಲವರಿಗೆ ಅಭಿಮುಖರಾಗುವರು.

وَأَقۡبَلَ بَعۡضُهُمۡ عَلَىٰ بَعۡضٖ يَتَسَآءَلُونَ ﴿٢٥﴾

26. ಅವರು ಹೇಳುವರು: 'ಖಂಡಿತವಾಗಿಯೂ ನಾವು ಮುಂಚೆ ನಮ್ಮ ಕುಟುಂಬದೊಂದಿಗೆ ಇದ್ದಾಗ ಭಯಭಕ್ತಿ ಪಾಲಿಸಿದವರಾಗಿದ್ದೆವು.(1)

قَالُوٓاْ إِنَّا كُنَّا قَبۡلُ فِيٓ أَهۡلِنَا مُشۡفِقِينَ ﴿٢٦﴾

27. ಆದ್ದರಿಂದ ಅಲ್ಲಾಹು ನಮಗೆ ಅನುಗ್ರಹವನ್ನು ದಯಪಾಲಿಸಿದನು. ರೋಮಕೂಪಗಳಲ್ಲಿ ನುಸುಳುವ ನರಕಾಗ್ನಿಯ ಶಿಕ್ಷೆಯಿಂದ ಅವನು ನಮ್ಮನ್ನು ಕಾಪಾಡಿದನು.

فَمَنَّ ٱللَّهُ عَلَيۡنَا وَوَقَىٰنَا عَذَابَ ٱلسَّمُومِ ﴿٢٧﴾

28. ಖಂಡಿತವಾಗಿಯೂ ನಾವು ಮುಂಚೆ ಅವನೊಂದಿಗೆ ಪ್ರಾರ್ಥಿಸುವವರಾಗಿದ್ದೆವು. ಖಂಡಿತವಾಗಿಯೂ ಅವನು ಔದಾರ್ಯವುಳ್ಳವನೂ, ಅಪಾರ ಕರುಣೆಯುಳ್ಳವನೂ ಆಗಿರುವನು.

إِنَّا كُنَّا مِن قَبۡلُ نَدۡعُوهُۖ إِنَّهُۥ هُوَ ٱلۡبَرُّ ٱلرَّحِيمُ ﴿٢٨﴾

29. ಆದ್ದರಿಂದ ತಾವು ಉಪದೇಶ ನೀಡಿರಿ. ತಮ್ಮ ಪ್ರಭುವಿನ ಅನುಗ್ರಹದ ನಿಮಿತ್ತ ತಾವು ಜ್ಯೋತಿಷ್ಯರೋ, ಮತಿಭ್ರಾಂತರೋ ಅಲ್ಲ.

فَذَكِّرۡ فَمَآ أَنتَ بِنِعۡمَتِ رَبِّكَ بِكَاهِنٖ وَلَا مَجۡنُونٍ ﴿٢٩﴾

30. ಅಲ್ಲ, (ಮುಹಮ್ಮದ್) ಒಬ್ಬ ಕವಿಯಾಗಿರುವರು ಮತ್ತು ಅವರಿಗೆ ಕೇಡುಗಾಲ ಬರುವುದನ್ನು ನಾವು ಕಾಯುತ್ತಿರುವೆವು ಎಂದು ಅವರು ಹೇಳುತ್ತಿರುವರೇ?

أَمۡ يَقُولُونَ شَاعِرٞ نَّتَرَبَّصُ بِهِۦ رَيۡبَ ٱلۡمَنُونِ ﴿٣٠﴾

1 ಖಂಡಿತವಾಗಿಯೂ ನಾವು ಮುಂಚೆ ನಮ್ಮ ಕುಟುಂಬದ ಕುರಿತು ಆಶಂಕೆ ಹೊಂದಿದವರಾಗಿದ್ದೆವು ಎಂದೂ ಕೆಲವು ವ್ಯಾಖ್ಯಾನಕಾರರು ವ್ಯಾಖ್ಯಾನಿಸಿದ್ದಾರೆ.

31. ತಾವು ಹೇಳಿರಿ: 'ನೀವು ಕಾಯುತ್ತಿರಿ! ಖಂಡಿತವಾಗಿಯೂ ನಾನೂ ನಿಮ್ಮೊಂದಿಗೆ ಕಾಯುವವರಲ್ಲಿ ಸೇರಿದವನಾಗಿರುವೆನು'.

قُلۡ تَرَبَّصُواْ فَإِنِّي مَعَكُم مِّنَ ٱلۡمُتَرَبِّصِينَ ٣١

32. ಅಥವಾ ಅವರ ಮನಸ್ಸುಗಳು ಅವರೊಂದಿಗೆ ಹೀಗೆ ಆದೇಶಿಸುತ್ತಿದೆಯೇ? ಅಥವಾ ಅವರು ಧಿಕ್ಕಾರಿಗಳಾದ ಒಂದು ಜನತೆಯಾಗಿರುವರೇ?

أَمۡ تَأۡمُرُهُمۡ أَحۡلَٰمُهُم بِهَٰذَآۚ أَمۡ هُمۡ قَوۡمٞ طَاغُونَ ٣٢

33. ಅಥವಾ ಅವರು (ಪ್ರವಾದಿಯವರು) ಇದನ್ನು ಹೆಣೆದು ಹೇಳಿದ್ದಾಗಿದೆ ಎಂದು ಅವರು ಹೇಳುತ್ತಿರುವರೇ? ಅಲ್ಲ, ಅವರು ವಿಶ್ವಾಸವಿಡುವುದಿಲ್ಲ.

أَمۡ يَقُولُونَ تَقَوَّلَهُۥۚ بَل لَّا يُؤۡمِنُونَ ٣٣

34. ಆದರೆ ಅವರು ಸತ್ಯಸಂಧರಾಗಿದ್ದರೆ ಇದರಂತಿರುವ ಒಂದು ವೃತ್ತಾಂತವನ್ನು ರಚಿಸಿ ತರಲಿ.

فَلۡيَأۡتُواْ بِحَدِيثٖ مِّثۡلِهِۦٓ إِن كَانُواْ صَٰدِقِينَ ٣٤

35. ಅಥವಾ ಯಾವುದೇ ವಸ್ತುವಿನಿಂದಲೂ ಅಲ್ಲದೆ ಅವರು ಸೃಷ್ಟಿಸಲ್ಪಟ್ಟಿರುವರೇ? ಅಥವಾ, ಸ್ವತಃ ಅವರೇ ಸೃಷ್ಟಿಕರ್ತರಾಗಿರುವರೇ?

أَمۡ خُلِقُواْ مِنۡ غَيۡرِ شَيۡءٍ أَمۡ هُمُ ٱلۡخَٰلِقُونَ ٣٥

36. ಅಥವಾ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದವರು ಅವರಾಗಿರುವರೇ? ಅಲ್ಲ, ಅವರು ದೃಢವಾಗಿ ವಿಶ್ವಾಸವಿಡುವುದಿಲ್ಲ.

أَمۡ خَلَقُواْ ٱلسَّمَٰوَٰتِ وَٱلۡأَرۡضَۚ بَل لَّا يُوقِنُونَ ٣٦

37. ಅಥವಾ (ಓ ಪ್ರವಾದಿ) ತಮ್ಮ ರಬ್‌ನ ಖಜಾನೆಗಳು ಅವರ ಬಳಿಯಿವೆಯೇ? ಅಥವಾ ಅಧಿಕಾರ ಚಲಾಯಿಸುವವರು ಅವರಾಗಿರುವರೇ?

أَمۡ عِندَهُمۡ خَزَآئِنُ رَبِّكَ أَمۡ هُمُ ٱلۡمُصَيۡطِرُونَ ٣٧

38. ಅಥವಾ (ಆಕಾಶದಿಂದ) ವಿಷಯಗಳನ್ನು ಕಿವಿಗೊಟ್ಟು ಆಲಿಸಲು ಅವರ ಬಳಿ ಯಾವುದಾದರೂ ಏಣಿಯಿದೆಯೇ? ಹಾಗಾದರೆ ಅವರ ಪೈಕಿ ಕಿವಿಗೊಟ್ಟು ಆಲಿಸುವವನು ಸ್ಪಷ್ಟವಾದ ಯಾವುದಾದರೂ ಆಧಾರ ಪ್ರಮಾಣವನ್ನು ತರಲಿ.[1]

أَمۡ لَهُمۡ سُلَّمٞ يَسۡتَمِعُونَ فِيهِۖ فَلۡيَأۡتِ مُسۡتَمِعُهُم بِسُلۡطَٰنٖ مُّبِينٍ ٣٨

1 ಆ ಸತ್ಯನಿಷೇಧಿಗಳು ಆಕಾಶಲೋಕದಿಂದ ಕದ್ದಾಲಿಸಿದ ಯಾವುದಾದರೂ ಜ್ಞಾನದ ಆಧಾರದಲ್ಲಿ ಮಾತನಾಡುತ್ತಿದ್ದಾರೆ ಎಂದಾದರೆ ಆ ರೀತಿ ಕದ್ದಾಲಿಸಿದ ವ್ಯಕ್ತಿ ಅದಕ್ಕಿರುವ ಪುರಾವೆಯನ್ನು ತರಲಿ ಎಂದರ್ಥ.

39. ಅಥವಾ ಅವನಿಗೆ (ಅಲ್ಲಾಹುವಿಗೆ) ಹೆಣ್ಮಕ್ಕಳು ಮತ್ತು ನಿಮಗೆ ಗಂಡುಮಕ್ಕಳೇ?

أَمْ لَهُ ٱلْبَنَٰتُ وَلَكُمُ ٱلْبَنُونَ ﴿٣٩﴾

40. ಅಥವಾ ತಾವು ಅವರೊಂದಿಗೆ ಏನಾದರೂ ಪ್ರತಿಫಲವನ್ನು ಬೇಡಿ ಅವರು ಸಾಲ ತೀರಿಸುವ ಭಾರವನ್ನು ಹೊತ್ತವರಾಗಿರುವರೇ?

أَمْ تَسْـَٔلُهُمْ أَجْرًا فَهُم مِّن مَّغْرَمٍ مُّثْقَلُونَ ﴿٤٠﴾

41. ಅಥವಾ ಅವರ ಬಳಿ ಅಗೋಚರ ಅರಿವಿದ್ದು ಅವರು ಅದನ್ನು ದಾಖಲಿಸುತ್ತಿರುವರೇ?

أَمْ عِندَهُمُ ٱلْغَيْبُ فَهُمْ يَكْتُبُونَ ﴿٤١﴾

42. ಅಥವಾ, ಅವರು ಯಾವುದಾದರೂ ಸಂಚು ಹೂಡಲು ಬಯಸುತ್ತಿರುವರೇ? ಆದರೆ ಸಂಚಿಗೆ ಬಲಿಯಾಗುವವರು ಸತ್ಯನಿಷೇಧಿಗಳೇ ಆಗಿರುವರು.

أَمْ يُرِيدُونَ كَيْدًا ۖ فَٱلَّذِينَ كَفَرُوا۟ هُمُ ٱلْمَكِيدُونَ ﴿٤٢﴾

43. ಅಥವಾ ಅವರಿಗೆ ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿರುವರೇ? ಅವರು ಸಹಭಾಗಿತ್ವ ಮಾಡುವುದರಿಂದೆಲ್ಲ ಅಲ್ಲಾಹು ಪರಮಪಾವನನಾಗಿರುವನು.

أَمْ لَهُمْ إِلَٰهٌ غَيْرُ ٱللَّهِ ۚ سُبْحَٰنَ ٱللَّهِ عَمَّا يُشْرِكُونَ ﴿٤٣﴾

44. ಆಕಾಶದಿಂದ ತುಂಡೊಂದು ಉದುರುವುದಾಗಿ ಕಂಡರೂ ಅವರು ಹೇಳುವರು: 'ಅದು ಪದರ ಪದರವಾಗಿರುವ ಮೋಡವಾಗಿದೆ'.[1]

وَإِن يَرَوْا۟ كِسْفًا مِّنَ ٱلسَّمَآءِ سَاقِطًا يَقُولُوا۟ سَحَابٌ مَّرْكُومٌ ﴿٤٤﴾

45. ಆದ್ದರಿಂದ ಅವರನ್ನು ಪ್ರಜ್ಞಾಹೀನರನ್ನಾಗಿಸುವ ಅವರ ಆ ದಿನವನ್ನು ಭೇಟಿಯಾಗುವವರೆಗೆ ತಾವು ಅವರನ್ನು ಬಿಟ್ಟುಬಿಡಿರಿ.

فَذَرْهُمْ حَتَّىٰ يُلَٰقُوا۟ يَوْمَهُمُ ٱلَّذِى فِيهِ يُصْعَقُونَ ﴿٤٥﴾

46. ಅವರ ಕುತಂತ್ರವು ಅವರಿಗೆ ಕಿಂಚಿತ್ತೂ ಪ್ರಯೋಜನವಾಗದ ಮತ್ತು ಅವರಿಗೆ ಯಾವ ಸಹಾಯವೂ ಲಭಿಸದ ದಿನ!

يَوْمَ لَا يُغْنِى عَنْهُمْ كَيْدُهُمْ شَيْـًٔا وَلَا هُمْ يُنصَرُونَ ﴿٤٦﴾

47. ಖಂಡಿತವಾಗಿಯೂ ಅಕ್ರಮವೆಸಗಿದವರಿಗೆ ಅದರ ಹೊರತಾದ ಶಿಕ್ಷೆಯೂ ಇದೆ. ಆದರೆ ಅವರ ಪೈಕಿ ಹೆಚ್ಚಿನವರೂ ಅರಿತುಕೊಳ್ಳುವುದಿಲ್ಲ.

وَإِنَّ لِلَّذِينَ ظَلَمُوا۟ عَذَابًا دُونَ ذَٰلِكَ وَلَٰكِنَّ أَكْثَرَهُمْ لَا يَعْلَمُونَ ﴿٤٧﴾

1 ಸ್ಪಷ್ಟವಾದ ದೈವಿಕ ದೃಷ್ಟಾಂತವನ್ನು ಕಂಡರೆ ಮಾತ್ರ ವಿಶ್ವಾಸವಿಡುವೆವು ಎಂದು ಹಟ ಹಿಡಿಯುವವರು ಎಂದಿಗೂ ವಿಶ್ವಾಸವಿಡಲಾರರು ಮತ್ತು ಯಾವುದೇ ದಿವ್ಯ ದೃಷ್ಟಾಂತವನ್ನು ಕಂಡರೂ ಅದನ್ನು ಪ್ರಾಕೃತಿಕ ವಿದ್ಯಮಾನವೆನ್ನುತ್ತಾ ತಿರಸ್ಕರಿಸುವರೆಂದು ಈ ಸೂಕ್ತಿಯು ತಿಳಿಸಿಕೊಡುತ್ತದೆ.

48. ತಾವು ತಮ್ಮ ರಬ್‌ನ ವಿಧಿಯನ್ನು ಸಹನೆಯೊಂದಿಗೆ ಕಾಯುತ್ತಿರಿ.[1] ಖಂಡಿತವಾಗಿಯೂ ತಾವು ನಮ್ಮ ಕಣ್ಣೋಟಗಳಲ್ಲಿರುವಿರಿ. ತಾವು ಎದ್ದೇಳುವ ಸಮಯದಲ್ಲಿ ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಪರಿಪಾವನತೆಯನ್ನು ಕೊಂಡಾಡಿರಿ.

وَٱصْبِرْ لِحُكْمِ رَبِّكَ فَإِنَّكَ بِأَعْيُنِنَا ۖ وَسَبِّحْ بِحَمْدِ رَبِّكَ حِينَ تَقُومُ ﴿٤٨﴾

49. ರಾತ್ರಿಯಲ್ಲಿ ಸ್ವಲ್ಪ ಸಮಯ ಮತ್ತು ನಕ್ಷತ್ರಗಳು ಮರೆಯಾಗುವ ಸಮಯದಲ್ಲಿ ತಾವು ಅವನ ಪರಿಪಾವನತೆಯನ್ನು ಕೊಂಡಾಡಿರಿ.

وَمِنَ ٱلَّيْلِ فَسَبِّحْهُ وَإِدْبَـٰرَ ٱلنُّجُومِ ﴿٤٩﴾

---

1 'ತಾವು ತಮ್ಮ ರಬ್‌ನ ವಿಧಿಯನ್ನು ಸಹನೆಯೊಂದಿಗೆ ಸ್ವೀಕರಿಸಿರಿ' ಎಂದೂ ಅರ್ಥ ನೀಡಲಾಗಿದೆ.

# ಅನ್ನಜ್ಮ್ (ನಕ್ಷತ್ರ)

# سُورَةُ النَّجْمِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 62

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ನಕ್ಷತ್ರದ ಮೇಲಾಣೆ! ಅದು ಮರೆಯಾಗುವಾಗ
2. ನಿಮ್ಮ ಜೊತೆಗಾರ[1] ದಾರಿತಪ್ಪಿಲ್ಲ, ಅವರು ದುರ್ಮಾರ್ಗಿಯೂ ಆಗಿಲ್ಲ.
3. ಅವರು ತನ್ನಿಚ್ಛೆಯಂತೆ ಮಾತನಾಡುವುದಿಲ್ಲ.
4. ಅದು ಅವರಿಗೆ ದಿವ್ಯಸಂದೇಶವಾಗಿ ನೀಡಲಾಗುವ ಒಂದು ಉದ್ಬೋಧೆ ಮಾತ್ರವಾಗಿದೆ.
5. ಅಪಾರ ಶಕ್ತಿಯುಳ್ಳವರು (ಜಿಬ್ರೀಲ್) ಅವರಿಗೆ ಕಲಿಸಿರುವರು.
6. ಸಮರ್ಥನಾದವನು.[2] ತರುವಾಯ ಆತ (ತಮ್ಮ ನಿಜರೂಪದಲ್ಲಿ) ನೆಲೆಗೊಂಡರು.
7. ಆತನಾದರೋ ಅತ್ಯುನ್ನತವಾದ ದಿಗಂತದಲ್ಲಿದ್ದರು.[3]
8. ತರುವಾಯ ಆತ ಹತ್ತಿರಕ್ಕೆ ಬಂದರು. ತರುವಾಯ ಇನ್ನಷ್ಟು ಹತ್ತಿರವಾದರು.
9. ಆತ ಎರಡು ಬಿಲ್ಲುಗಳ ಅಂತರದಲ್ಲೋ[4] ಅಥವಾ ಅದಕ್ಕಿಂತಲೂ ಹತ್ತಿರವೋ ಆಗಿದ್ದರು.

وَٱلنَّجۡمِ إِذَا هَوَىٰ ١

مَا ضَلَّ صَاحِبُكُمۡ وَمَا غَوَىٰ ٢

وَمَا يَنطِقُ عَنِ ٱلۡهَوَىٰٓ ٣

إِنۡ هُوَ إِلَّا وَحۡيٞ يُوحَىٰ ٤

عَلَّمَهُۥ شَدِيدُ ٱلۡقُوَىٰ ٥

ذُو مِرَّةٖ فَٱسۡتَوَىٰ ٦

وَهُوَ بِٱلۡأُفُقِ ٱلۡأَعۡلَىٰ ٧

ثُمَّ دَنَا فَتَدَلَّىٰ ٨

فَكَانَ قَابَ قَوۡسَيۡنِ أَوۡ أَدۡنَىٰ ٩

---

1 ನಲ್ವತ್ತು ವರ್ಷಗಳ ಕಾಲ ಮಕ್ಕಾ ನಿವಾಸಿಗಳಾದ ಕುರೈಶರ ಮಧ್ಯೆ ಅವರ ಉತ್ತಮ ಜೊತೆಗಾರರಾಗಿ ಬದುಕಿದ ಮುಹಮ್ಮದ್(ﷺ)ರವರ ಬಗ್ಗೆ ಇಲ್ಲಿ 'ನಿಮ್ಮ ಜೊತೆಗಾರ' ಎಂದು ಹೇಳಲಾಗಿದೆ.

2 'ದೂ ಮಿರ್ರಃ' ಎಂಬುದಕ್ಕೆ ಅಂಗಸೌಷ್ಟವವುಳ್ಳವನು, ಬುದ್ಧಿ ಸಾಮರ್ಥ್ಯವುಳ್ಳವನು ಎಂಬಿತ್ಯಾದಿಯಾಗಿ ಅರ್ಥ ನೀಡಲಾಗಿದೆ.

3 ಜಿಬ್ರೀಲ್(عَلَيْهِ السَّلَامُ) ದಿವ್ಯಸಂದೇಶದೊಂದಿಹಗೆ ತಮ್ಮ ನಿಜರೂಪದಲ್ಲಿ ಪ್ರವಾದಿ(ﷺ)ರವರ ಸಮೀಪ ಬಂದ ಸಂದರ್ಭವನ್ನು ಪ್ರಸ್ತುತ ಸೂಕ್ತಿಯಲ್ಲಿ ಸೂಚಿಸಲಾಗಿದೆಯೆಂದು ಪ್ರಮುಖ ಕುರ್‌ಆನ್ ವ್ಯಾಖ್ಯಾನಕಾರರು ಹೇಳಿದ್ದಾರೆ.

4 ಅಭಿಮುಖವಾಗಿ ನಿಂತು ಸಂಭಾಷಿಸುವ ಇಬ್ಬರು ವ್ಯಕ್ತಿಗಳ ನಡುವೆಯಿರುವ ಅಂತರವನ್ನು ಸೂಚಿಸಲು ಬಳಸುವ ಒಂದು ರೂಪಕವಾಗಿದೆ ಎರಡು ಬಿಲ್ಲುಗಳ ಅಂತರ.

فَأَوۡحَىٰٓ إِلَىٰ عَبۡدِهِۦ مَآ أَوۡحَىٰ ١٠
10. ಆಗ ಅವನು (ಅಲ್ಲಾಹು) ತನ್ನ ದಾಸನಿಗೆ ದಿವ್ಯವಾಣಿಯಾಗಿ ನೀಡಿದುದೆಲ್ಲವನ್ನು ದಿವ್ಯವಾಣಿಯಾಗಿ ನೀಡಿದನು.

مَا كَذَبَ ٱلۡفُؤَادُ مَا رَأَىٰٓ ١١
11. ಆತ ನೋಡಿದ ಆ ನೋಟವನ್ನು (ಆತನ) ಹೃದಯ ಸುಳ್ಳೆನ್ನಲಿಲ್ಲ.

أَفَتُمَٰرُونَهُۥ عَلَىٰ مَا يَرَىٰ ١٢
12. ಹೀಗಿರುವಾಗ ಆತ (ಪ್ರತ್ಯಕ್ಷವಾಗಿ) ಕಾಣುವುದರ ವಿಷಯವಾಗಿ ನೀವು ಅವರೊಂದಿಗೆ ತರ್ಕಿಸುತ್ತಿರುವಿರಾ?

وَلَقَدۡ رَءَاهُ نَزۡلَةً أُخۡرَىٰ ١٣
13. ಇನ್ನೊಂದು ಅವರೋಹಣದಲ್ಲೂ[1] ಆತ ಆ ಮಲಕನ್ನು ನೋಡಿದ್ದರು.

عِندَ سِدۡرَةِ ٱلۡمُنتَهَىٰ ١٤
14. ತುತ್ತ ತುದಿಯ ಬೋರೆ ಮರದ ಬಳಿಯಲ್ಲಿ.[2]

عِندَهَا جَنَّةُ ٱلۡمَأۡوَىٰٓ ١٥
15. ವಾಸ್ತವ್ಯದ ಸ್ವರ್ಗವು ಅದರ ಬಳಿಯಿದೆ.

إِذۡ يَغۡشَى ٱلسِّدۡرَةَ مَا يَغۡشَىٰ ١٦
16. ಆ ಬೋರೆ ವೃಕ್ಷವನ್ನು ಆವರಿಸಬೇಕಾದುದೆಲ್ಲವೂ ಆವರಿಸಿದಾಗ.

مَا زَاغَ ٱلۡبَصَرُ وَمَا طَغَىٰ ١٧
17. (ಪ್ರವಾದಿಯವರ) ದೃಷ್ಟಿಯು ಜಾರಿಹೋಗುವುದಾಗಲಿ, ಅತಿಕ್ರಮಿಸುವುದಾಗಲಿ ಮಾಡಲಿಲ್ಲ.[3]

لَقَدۡ رَأَىٰ مِنۡ ءَايَٰتِ رَبِّهِ ٱلۡكُبۡرَىٰٓ ١٨
18. ಖಂಡಿತವಾಗಿಯೂ ಅವರು ತಮ್ಮ ರಬ್‌ನ ಮಹಾ ದೃಷ್ಟಾಂತಗಳ ಪೈಕಿ ಕೆಲವನ್ನು ಕಂಡರು.

أَفَرَءَيۡتُمُ ٱللَّٰتَ وَٱلۡعُزَّىٰ ١٩
19. ನೀವು ಲಾತ ಮತ್ತು ಉಝ್ಝಾದ ಕುರಿತು ಚಿಂತಿಸಿ ನೋಡಿರುವಿರಾ?

1 ಮತ್ತೊಂದು ಬಾರಿ ಜಿಬ್ರೀಲ್(عَلَيْهِ السَّلَامُ)ರವರು ಬಾನಲೋಕದಿಂದ ಇಳಿದ ಸಂದರ್ಭ ಎಂದರ್ಥ.

2 ಸಿದ್‌ರ ಎಂಬ ಪದಕ್ಕ ಬೋರೆ ಮರ ಮತ್ತು ಮುನ್ತಹಾ ಎಂಬ ಪದಕ್ಕೆ ತುದಿ ಅಥವಾ ಗಡಿ ಎಂದರ್ಥ. ಸಿದ್ರತುಲ್ ಮುನ್ತಹಾ ಎಂದರೆ ಬಾನಲೋಕದಲ್ಲಿರುವ ಅತ್ಯದ್ಭುತವಾದ ಒಂದು ಮರವಾಗಿದೆಯೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ.

3 ಆಕಾಶಾರೋಹಣದ ಸಂದರ್ಭದಲ್ಲಿ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರವರು ಕಂಡ ದೃಶ್ಯಗಳ ಕುರಿತು 13ರಿಂದ 18ರವರೆಗಿನ ಸೂಕ್ತಿಗಳಲ್ಲಿ ವಿವರಿಸಲಾಗಿದೆಯೆಂದು ಪ್ರಮುಖ ವ್ಯಾಖ್ಯಾನಕಾರರು ಹೇಳಿದ್ದಾರೆ. ಇದಕ್ಕೆ ಮಿಅ್‌ರಾಜ್‌ನ ಕುರಿತು ವರದಿಯಾದ ಹದೀಸ್‌ಗಳು ಬೆಂಬಲ ನೀಡುತ್ತವೆ. ಅಲ್ಲಾಹು ತೋರಿಸಿಕೊಟ್ಟ ವಿಷಯಗಳನ್ನು ಕಂಡು ಗ್ರಹಿಸಿಕೊಳ್ಳುವುದರಲ್ಲಿ ಪ್ರವಾದಿ(صَلَّى ٱللَّٰهُ عَلَيْهِ وَسَلَّمَ)ರಿಗೆ ತಪ್ಪಾಗುವುದಾಗಲಿ ವಿರೋಧಿಸಲಾದ ವಿಷಯಗಳೆಡೆಗೆ ಅವರ ದೃಷ್ಟಿ ಅತಿಕ್ರಮಿಸುವುದಾಗಲಿ ಆಗಿಲ್ಲವೆಂದು 17ನೇ ಸೂಕ್ತಿಯು ಹೇಳುತ್ತದೆ.

20. ಮೂರನೆಯದಾಗಿರುವ ಬೇರೊಂದು ಮನಾತದ ಕುರಿತು[1]

وَمَنَوٰةَ ٱلثَّالِثَةَ ٱلۡأُخۡرَىٰٓ ﴿٢٠﴾

21. ನಿಮಗೆ (ಸಂತತಿಯಾಗಿ) ಗಂಡು ಮತ್ತು ಅಲ್ಲಾಹುವಿಗೆ ಹೆಣ್ಣೇನು?

أَلَكُمُ ٱلذَّكَرُ وَلَهُ ٱلۡأُنثَىٰ ﴿٢١﴾

22. ಹಾಗಾದರೆ ಅದು ನ್ಯಾಯಬದ್ಧವಲ್ಲದ ಪಾಲುಹಂಚಿಕೆಯಾಗಿದೆ![2]

تِلۡكَ إِذٗا قِسۡمَةٞ ضِيزَىٰٓ ﴿٢٢﴾

23. ಅವು (ನಿಮ್ಮ ಆರಾಧ್ಯರು) ನೀವು ಮತ್ತು ನಿಮ್ಮ ಪೂರ್ವಿಕರು ನಾಮಕರಣ ಮಾಡಿರುವ ಕೆಲವು ಹೆಸರುಗಳ ಹೊರತು ಇನ್ನೇನೂ ಅಲ್ಲ. ಅವುಗಳ ಕುರಿತು ಅಲ್ಲಾಹು ಯಾವುದೇ ಆಧಾರ ಪ್ರಮಾಣವನ್ನೂ ಇಳಿಸಿಕೊಟ್ಟಿಲ್ಲ. ಅವರು ಅನುಸರಿಸುತ್ತಿರುವುದು ಊಹೆಯನ್ನು ಮತ್ತು ದೇಹೇಚ್ಛೆಯನ್ನು ಮಾತ್ರವಾಗಿದೆ. ಅವರ ಬಳಿಗೆ ಅವರ ರಬ್‌ನ ವತಿಯ ಸನ್ಮಾರ್ಗವು ಬಂದು ಬಿಟ್ಟಿದೆ.

إِنۡ هِيَ إِلَّآ أَسۡمَآءٞ سَمَّيۡتُمُوهَآ أَنتُمۡ وَءَابَآؤُكُم مَّآ أَنزَلَ ٱللَّهُ بِهَا مِن سُلۡطَٰنٍۚ إِن يَتَّبِعُونَ إِلَّا ٱلظَّنَّ وَمَا تَهۡوَى ٱلۡأَنفُسُۖ وَلَقَدۡ جَآءَهُم مِّن رَّبِّهِمُ ٱلۡهُدَىٰٓ ﴿٢٣﴾

24. ಅಥವಾ ಮನುಷ್ಯನಿಗೆ ಅವನು ಆಶಿಸಿರುವುದು ದಕ್ಕುವುದೇ?

أَمۡ لِلۡإِنسَٰنِ مَا تَمَنَّىٰ ﴿٢٤﴾

25. ಆದರೆ ಪರಲೋಕ ಮತ್ತು ಇಹಲೋಕವು ಅಲ್ಲಾಹುವಿನದ್ದಾಗಿವೆ.[3]

فَلِلَّهِ ٱلۡأٓخِرَةُ وَٱلۡأُولَىٰ ﴿٢٥﴾

26. ಆಕಾಶಗಳಲ್ಲಿ ಅದೆಷ್ಟು ಮಲಕ್‌ಗಳಿವೆ! ಅಲ್ಲಾಹು ತಾನಿಚ್ಛಿಸುವವರಿಗೆ ಮತ್ತು ತಾನು ತೃಪ್ತಿಪಡುವವರಿಗೆ (ಶಿಫಾರಸ್ಸು) ಮಾಡಲು ಅನುಮತಿ ನೀಡಿದ ಬಳಿಕವೇ ಹೊರತು ಅವರ

۞ وَكَم مِّن مَّلَكٖ فِي ٱلسَّمَٰوَٰتِ لَا تُغۡنِي شَفَٰعَتُهُمۡ شَيۡـًٔا إِلَّا مِنۢ بَعۡدِ أَن يَأۡذَنَ ٱللَّهُ لِمَن يَشَآءُ وَيَرۡضَىٰٓ ﴿٢٦﴾

1 ಲಾತ, ಉಝ್ಝಾ ಮತ್ತು ಮನಾತ ಅರಬ್ ಜನರು ಆರಾಧಿಸುತ್ತಿದ್ದ ಮೂರು ಆರಾಧ್ಯರಾಗಿದ್ದರು. ಲಾತ ಯಾತ್ರಾರ್ಥಿಗಳಿಗೆ ಪಾಯಸ ಬಡಿಸುತ್ತಿದ್ದ ವ್ಯಕ್ತಿಯಾಗಿದ್ದರು. ಆತನ ಮರಣಾನಂತರ ಆತನ ವಿಗ್ರಹವನ್ನು ಸ್ಥಾಪಿಸಿ ಅವರು ಆರಾಧಿಸತೊಡಗಿದರು. ಉಝ್ಝಾ ಎಂಬುದು ಒಂದು ಪುಣ್ಯಮರವಾಗಿತ್ತು. ಮನಾತ ಎಂಬುದು ಹುದೈಲ್ ಜನಾಂಗದವರು ಆರಾಧಿಸುತ್ತಿದ್ದ ಒಂದು ಬಂಡೆಯಾಗಿತ್ತು. ಇಂತಹ ಆರಾಧನೆಗಳಿಗೆ ಏನಾದರೂ ಆಧಾರವಿದೆಯೇ ಎಂದು ಅವರು ಚಿಂತಿಸಿದ್ದೇ ಇಲ್ಲ. ಅವರು ಕೇವಲ ಅಂಧಾನುಕರಣೆ ಮಾತ್ರ ಮಾಡುತ್ತಿದ್ದರು.

2 ತಮ್ಮ ದೇವತೆಯರನ್ನು ಅಲ್ಲಾಹುವಿನ ಪುತ್ರಿಯರೆಂದು ಅರಬ್ ಬಹುದೇವವಿಶ್ವಾಸಿಗಳು ಕಲ್ಪಿಸಿಕೊಂಡಿದ್ದರು. ಆದರೆ ತಮಗೇನಾದರೂ ಹೆಣ್ಣುಮಗು ಜನಿಸಿದರೆ ಅವರದನ್ನು ಅವಮಾನವೆಂದು ಬಗೆದು ಜೀವಂತ ಹೂಳುತ್ತಿದ್ದರು.

3 ಇಹಲೋಕದಲ್ಲಿ ಇಷ್ಟಾರ್ಥ ಸಿದ್ಧಿಗಾಗಿ ಮತ್ತು ಪರಲೋಕದಲ್ಲಿ ಶಿಫಾರಸ್ಸು ಮಾಡುವುದಕ್ಕಾಗಿ ಬಹುದೇವಾರಾಧಕರು ಅಲ್ಲಾಹುವಿನ ಹೊರತಾದ ಆರಾಧ್ಯರನ್ನು ಅರಸುತ್ತಿದ್ದರು. ಅದೊಂದು ಭ್ರಮೆ ಮಾತ್ರವಾಗಿದೆ. ಇಹಪರದಲ್ಲಿ ಸುಖಸೌಭಾಗ್ಯ ನೀಡಲು ಅಲ್ಲಾಹುವಿಗೆ ಮಾತ್ರ ಸಾಧ್ಯ ಎಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

ಶಿಫಾರಸ್ಸು ಯಾವುದೇ ಪ್ರಯೋಜನವನ್ನೂ ನೀಡದು.

27. ಖಂಡಿತವಾಗಿಯೂ ಪರಲೋಕದಲ್ಲಿ ವಿಶ್ವಾಸವಿಡದವರು ಮಲಕ್‌ಗಳಿಗೆ ಸ್ತ್ರೀಯರ ಹೆಸರನ್ನಿಡುವರು.[1]

إِنَّ ٱلَّذِينَ لَا يُؤْمِنُونَ بِٱلْـَٔاخِرَةِ لَيُسَمُّونَ ٱلْمَلَـٰٓئِكَةَ تَسْمِيَةَ ٱلْأُنثَىٰ ﴿٢٧﴾

28. ಅವರಿಗೆ ಅದರ ಕುರಿತು ಯಾವ ಅರಿವೂ ಇಲ್ಲ. ಅವರು ಅನುಸರಿಸುತ್ತಿರುವುದು ಊಹೆಯನ್ನು ಮಾತ್ರವಾಗಿದೆ. ಖಂಡಿತವಾಗಿಯೂ ಸತ್ಯಕ್ಕೆ ಸಂಬಂಧಿಸಿದಂತೆ ಊಹೆಯೂ ಯಾವುದೇ ಪ್ರಯೋಜವನ್ನೂ ಮಾಡದು.

وَمَا لَهُم بِهِۦ مِنْ عِلْمٍ ۖ إِن يَتَّبِعُونَ إِلَّا ٱلظَّنَّ ۖ وَإِنَّ ٱلظَّنَّ لَا يُغْنِى مِنَ ٱلْحَقِّ شَيْـًٔا ﴿٢٨﴾

29. ಆದ್ದರಿಂದ ನಮ್ಮ ಸ್ಮರಣೆಯನ್ನು ಬಿಟ್ಟು ವಿಮುಖರಾದವರಿಂದ ಮತ್ತು ಇಹಲೋಕವನ್ನು ಮಾತ್ರ ಗುರಿಯಾಗಿಸಿದವರಿಂದ ತಾವು ವಿಮುಖರಾಗಿರಿ.

فَأَعْرِضْ عَن مَّن تَوَلَّىٰ عَن ذِكْرِنَا وَلَمْ يُرِدْ إِلَّا ٱلْحَيَوٰةَ ٱلدُّنْيَا ﴿٢٩﴾

30. ಜ್ಞಾನದ ಪೈಕಿ ಅವರು ತಲುಪಿರುವುದು ಕೇವಲ ಅಷ್ಟಕ್ಕೆ ಮಾತ್ರವಾಗಿದೆ. ತನ್ನ ಮಾರ್ಗದಿಂದ ವ್ಯತಿಚಲಿಸಿದವರ ಕುರಿತು ಖಂಡಿತವಾಗಿಯೂ ತಮ್ಮ ರಬ್ ಹೆಚ್ಚು ಅರಿವುಳ್ಳವನಾಗಿರುವನು. ಅವನು ಸನ್ಮಾರ್ಗ ಪಡೆದವರ ಕುರಿತೂ ಹೆಚ್ಚು ಅರಿವುಳ್ಳವನಾಗಿರುವನು.

ذَٰلِكَ مَبْلَغُهُم مِّنَ ٱلْعِلْمِ ۚ إِنَّ رَبَّكَ هُوَ أَعْلَمُ بِمَن ضَلَّ عَن سَبِيلِهِۦ وَهُوَ أَعْلَمُ بِمَنِ ٱهْتَدَىٰ ﴿٣٠﴾

31. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ಇದು ದುಷ್ಕರ್ಮವೆಸಗಿದವರಿಗೆ ಅವರು ಮಾಡಿರುವುದಕ್ಕಿರುವ ಪ್ರತಿಫಲವನ್ನು ನೀಡುವ ಸಲುವಾಗಿ ಮತ್ತು ಸತ್ಕರ್ಮವೆಸಗಿದವರಿಗೆ ಅತ್ಯುತ್ತಮ ಪ್ರತಿಫಲವನ್ನು ನೀಡುವ ಸಲುವಾಗಿದೆ.

وَلِلَّهِ مَا فِى ٱلسَّمَـٰوَٰتِ وَمَا فِى ٱلْأَرْضِ لِيَجْزِىَ ٱلَّذِينَ أَسَـٰٓـُٔوا۟ بِمَا عَمِلُوا۟ وَيَجْزِىَ ٱلَّذِينَ أَحْسَنُوا۟ بِٱلْحُسْنَى ﴿٣١﴾

32. ಅಂದರೆ ಮಹಾಪಾಪಗಳಿಂದ ಮತ್ತು ಕ್ಷುಲ್ಲಕವಲ್ಲದ ನೀಚಕೃತ್ಯಗಳಿಂದ ದೂರವಿರುವವರಿಗೆ. ಖಂಡಿತವಾಗಿಯೂ ತಮ್ಮ

ٱلَّذِينَ يَجْتَنِبُونَ كَبَـٰٓئِرَ ٱلْإِثْمِ وَٱلْفَوَٰحِشَ إِلَّا ٱللَّمَمَ ۚ إِنَّ رَبَّكَ وَٰسِعُ ٱلْمَغْفِرَةِ ۚ

1 ಅರಬ್ ಮುಶ್ರಿಕರು ಮಲಕ್‌ಗಳನ್ನು ಕೂಡ ಅಲ್ಲಾಹುವಿನ ಪುತ್ರಿಯರೆಂದು ಹೇಳುತ್ತಿದ್ದರು.

هُوَ أَعْلَمُ بِكُمْ إِذْ أَنشَأَكُم مِّنَ ٱلْأَرْضِ وَإِذْ أَنتُمْ أَجِنَّةٌ فِى بُطُونِ أُمَّهَٰتِكُمْ ۖ فَلَا تُزَكُّوٓا۟ أَنفُسَكُمْ ۖ هُوَ أَعْلَمُ بِمَنِ ٱتَّقَىٰٓ ﴿٣٢﴾

ರಬ್ ವಿಶಾಲವಾಗಿ ಪಾಪಮುಕ್ತಿ ನೀಡುವವನಾಗಿರುವನು. ನಿಮ್ಮನ್ನು ಭೂಮಿಯಿಂದ ಸೃಷ್ಟಿಸಿದ ಸಂದರ್ಭದಲ್ಲಿ[1] ಮತ್ತು ನೀವು ನಿಮ್ಮ ತಾಯಂದಿರ ಉದರಗಳಲ್ಲಿ ಗರ್ಭಸ್ಥ ಶಿಶುಗಳಾಗಿದ್ದ ಸಂದರ್ಭದಲ್ಲಿಯೂ ನಿಮ್ಮ ಕುರಿತು ಅತಿ ಹೆಚ್ಚು ಅರಿವುಳ್ಳವನು ಅವನೇ ಆಗಿರುವನು.[2] ಆದ್ದರಿಂದ ನೀವು ಆತ್ಮಪ್ರಶಂಸೆ ಮಾಡದಿರಿ. ಭಯಭಕ್ತಿ ಪಾಲಿಸಿದವರ ಬಗ್ಗೆ ಅವನು ಚೆನ್ನಾಗಿ ಅರಿತಿರುವನು.

أَفَرَءَيْتَ ٱلَّذِى تَوَلَّىٰ ﴿٣٣﴾

**33.** ವಿಮುಖನಾಗಿ ಹೋದವನನ್ನು ತಾವು ಕಂಡಿರುವಿರಾ?

وَأَعْطَىٰ قَلِيلًا وَأَكْدَىٰٓ ﴿٣٤﴾

**34.** ಅವನು ಸ್ವಲ್ಪ ದಾನಧರ್ಮ ಮಾಡಿದನು. ತರುವಾಯ ಅದನ್ನು ನಿಲ್ಲಿಸಿದನು.[3]

أَعِندَهُۥ عِلْمُ ٱلْغَيْبِ فَهُوَ يَرَىٰٓ ﴿٣٥﴾

**35.** ಅವನ ಬಳಿ ಅಗೋಚರ ಅರಿವಿದ್ದು ಅದರ ಮೂಲಕ ಅವನು ಕಂಡು ತಿಳಿಯುತ್ತಿರುವನೇ?

أَمْ لَمْ يُنَبَّأْ بِمَا فِى صُحُفِ مُوسَىٰ ﴿٣٦﴾
وَإِبْرَٰهِيمَ ٱلَّذِى وَفَّىٰٓ ﴿٣٧﴾

**36-37.** ಅಥವಾ ಮೂಸಾರ ಮತ್ತು (ಕರ್ತವ್ಯಗಳನ್ನು) ಪೂರ್ಣಗೊಳಿಸಿದ ಇಬ್ರಾಹೀಮ್‌ರ ಹೊತ್ತಗೆಗಳಲ್ಲಿರುವುದರ[4] ಕುರಿತು ಅವನಿಗೆ ತಿಳಿಸಲಾಗಿಲ್ಲವೇ?

أَلَّا تَزِرُ وَازِرَةٌ وِزْرَ أُخْرَىٰ ﴿٣٨﴾

**38.** ಅಂದರೆ ಪಾಪಭಾರವನ್ನು ಹೊರುವ ಯಾರೂ ಇನ್ನೊಬ್ಬರ ಪಾಪಭಾರವನ್ನು ಹೊರಲಾರರೆಂದು,

---

1 ಸರ್ವಶಕ್ತನಾದ ಅಲ್ಲಾಹುವಿನ ಅನುಮತಿ ಪ್ರಕಾರ ಭೂಮಿಯಲ್ಲಿರುವ ಧಾತುಲವಣಗಳು 'ಬುದ್ಧಿವಂತನಾದ ಮನುಷ್ಯ' ಎಂಬ ಮಹಾ ವಿಸ್ಮಯವಾಗಿ ಮತ್ತು ಮನುಷ್ಯನ ಅತಿಸೂಕ್ಷ್ಮವಾದ ಕೋಟ್ಯಾನುಕೋಟಿ ಕೋಶಗಳಾಗಿ ರೂಪುಗೊಳ್ಳುತ್ತವೆ.

2 ವೀರ್ಯಕೋಶ ಮತ್ತು ಅಂಡಕೋಶ ಸೇರಿಕೊಂಡು ಗರ್ಭಾಶಯದೊಳಗೆ ಸುಂದರ ಮಾನವ ಮಗುವಾಗಿ ಮಾರ್ಪಡುವ ಪ್ರಕ್ರಿಯೆಯಲ್ಲಿ ಅಲ್ಲಾಹುವಿನ ಹೊರತು ಇನ್ನಾರೂ ನಿರ್ಣಾಯಕ ಪಾತ್ರ ವಹಿಸುವುದಿಲ್ಲ. ಭ್ರೂಣದ ವ್ಯವಸ್ಥಿತವಾದ ಬೆಳವಣಿಗೆಯು ಕೇವಲ ಅಲ್ಲಾಹುವಿನ ಪರಿಪೂರ್ಣವಾದ ಅರಿವು ಮತ್ತು ಸಾಮರ್ಥ್ಯದಿಂದ ಮಾತ್ರ ನಡೆಯುತ್ತದೆ.

3 ತಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿ ಸತ್ಯಧರ್ಮವನ್ನು ಸ್ವೀಕರಿಸಿ ತರುವಾಯ ಆವೇಶ, ಆಮಿಷಗಳಿಗೆ ಬಲಿಯಾಗಿ ವಿಶ್ವಾಸವನ್ನು ಮತ್ತು ಸತ್ಕರ್ಮವನ್ನು ತ್ಯಜಿಸಿದವರ ಕುರಿತು ಪ್ರಸ್ತುತ ಸೂಕ್ತಿಯು ಅವತೀರ್ಣಗೊಂಡಿದೆ.

4 ಮೂಸಾ(عَلَيْهِ السَّلَامُ)ರಿಗೆ ಮತ್ತು ಇಬ್ರಾಹೀಮ್(عَلَيْهِ السَّلَامُ)ರಿಗೆ ನೀಡಲಾದ ಗ್ರಂಥಗಳು.

وَأَن لَّيۡسَ لِلۡإِنسَٰنِ إِلَّا مَا سَعَىٰ ٣٩

**39.** ಮನುಷ್ಯನಿಗೆ ತಾನು ಪರಿಶ್ರಮ ಪಟ್ಟಿರುವುದರ ಹೊರತು ಬೇರೇನೂ ಇಲ್ಲವೆಂದು,[1]

وَأَنَّ سَعۡيَهُۥ سَوۡفَ يُرَىٰ ٤٠

**40.** ಅವನ ಪರಿಶ್ರಮದ ಫಲವನ್ನು ತರುವಾಯ ಅವನಿಗೆ ತೋರಿಸಿಕೊಡಲಾಗುವುದೆಂದು,

ثُمَّ يُجۡزَىٰهُ ٱلۡجَزَآءَ ٱلۡأَوۡفَىٰ ٤١

**41.** ತರುವಾಯ ಅವನಿಗೆ ಅತ್ಯಂತ ಪೂರ್ಣವಾದ ಪ್ರತಿಫಲವನ್ನು ನೀಡಲಾಗುವುದೆಂದು,

وَأَنَّ إِلَىٰ رَبِّكَ ٱلۡمُنتَهَىٰ ٤٢

**42.** ಎಲ್ಲವೂ ಕೊನೆಯಾಗುವುದು ತಮ್ಮ ರಬ್‌ನ ಬಳಿಗೆಂದು,

وَأَنَّهُۥ هُوَ أَضۡحَكَ وَأَبۡكَىٰ ٤٣

**43.** ನಗುವಂತೆ ಮಾಡುವವನು ಮತ್ತು ಅಳುವಂತೆ ಮಾಡುವವನು ಅವನಾಗಿರುವನೆಂದು,

وَأَنَّهُۥ هُوَ أَمَاتَ وَأَحۡيَا ٤٤

**44.** ಮರಣವನ್ನು ನೀಡುವವನು ಮತ್ತು ಜೀವವನ್ನು ನೀಡುವವನು ಅವನಾಗಿರುವನೆಂದು,

وَأَنَّهُۥ خَلَقَ ٱلزَّوۡجَيۡنِ ٱلذَّكَرَ وَٱلۡأُنثَىٰ ٤٥
مِن نُّطۡفَةٍ إِذَا تُمۡنَىٰ ٤٦

**45-46.** ಒಂದು ವೀರ್ಯವು (ಗರ್ಭಾಶಯದಲ್ಲಿ) ಸ್ರವಿಸಲಾದಾಗ ಅದರಿಂದ ಗಂಡು ಹೆಣ್ಣು ಎಂಬ ಜೋಡಿಯನ್ನು ಸೃಷ್ಟಿಸಿದ್ದು ಅವನಾಗಿರುವನೆಂದು,

وَأَنَّ عَلَيۡهِ ٱلنَّشۡأَةَ ٱلۡأُخۡرَىٰ ٤٧

**47.** ಎರಡನೆಯ ಬಾರಿ ಜೀವ ನೀಡುವುದು ಅವನ ಹೊಣೆಯಾಗಿದೆಯೆಂದು,

وَأَنَّهُۥ هُوَ أَغۡنَىٰ وَأَقۡنَىٰ ٤٨

**48.** ಐಶ್ವರ್ಯವನ್ನು ದಯಪಾಲಿಸಿದವನು ಮತ್ತು ಸಂತೃಪ್ತಗೊಳಿಸಿದವನು ಅವನಾಗಿರುವನೆಂದು,

وَأَنَّهُۥ هُوَ رَبُّ ٱلشِّعۡرَىٰ ٤٩

**49.** ಶಿಅ್‌ರಾ ನಕ್ಷತ್ರದ ಒಡೆಯನು ಅವನಾಗಿರುವನೆಂದು,[2]

وَأَنَّهُۥٓ أَهۡلَكَ عَادًا ٱلۡأُولَىٰ ٥٠ وَثَمُودَاْ فَمَآ
أَبۡقَىٰ ٥١

**50-51.** ಒಬ್ಬನನ್ನೂ ಬಾಕಿಯುಳಿಸದೆ ಪೂರ್ವಕಾಲ ಜನತೆಯಾದ ಆದ್ ಜನಾಂಗವನ್ನು ಮತ್ತು ಸಮೂದ್ ಜನಾಂಗವನ್ನು ಅವನು ನಾಶ ಮಾಡಿದವನೆಂದು,

---

1 ಯಾವುದೇ ಮನುಷ್ಯನಿಗೆ ಮೋಕ್ಷವು ಸಿಗಬೇಕಾದರೆ ಅದಕ್ಕೆ ಅವನ ಕರ್ಮಗಳ ಹೊರತು ಇನ್ನಾವುದೂ ಪ್ರಯೋಜನವಾಗಲಾರದೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

2 ಶಿಅ್‌ರಾ ಅಥವಾ ಲುಬ್ಧಕ ನಕ್ಷತ್ರ (Sirius) ಅರೇಬಿಯಾದ ಕೆಲವು ಬಹುದೇವಾರಾಧಕರ ಆರಾಧ್ಯ ವಸ್ತುವಾಗಿತ್ತು.

**52.** ಅದಕ್ಕಿಂತ ಮುಂಚೆ ನೂಹ್‌ರ ಜನತೆಯನ್ನು (ಅವನು ನಾಶ ಮಾಡಿರುವನು). ಖಂಡಿತವಾಗಿಯೂ ಅವರು ಮಹಾ ಅಕ್ರಮಿಗಳೂ ಮಹಾಧಿಕ್ಕಾರಿಗಳೂ ಆಗಿದ್ದರು.

وَقَوۡمَ نُوحٖ مِّن قَبۡلُۖ إِنَّهُمۡ كَانُواْ هُمۡ أَظۡلَمَ وَأَطۡغَىٰ ٥٢

**53.** ಬುಡಮೇಲುಗೊಳಿಸಲಾದ ಪ್ರದೇಶವನ್ನೂ[1] ಅವನು ಧ್ವಂಸ ಮಾಡಿದನು.

وَٱلۡمُؤۡتَفِكَةَ أَهۡوَىٰ ٥٣

**54.** ತರುವಾಯ ಅವನು ಆ ಪ್ರದೇಶವನ್ನು ಭೀಕರವಾದ ಒಂದು (ಶಿಕ್ಷೆಯ) ಹೊದಿಕೆಯಿಂದ ಹೊದಿಸಿದನು.

فَغَشَّىٰهَا مَا غَشَّىٰ ٥٤

**55.** ಆದ್ದರಿಂದ ತಮ್ಮ ರಬ್‌ನ ಅನುಗ್ರಹಗಳ ಪೈಕಿ ಯಾವುದರ ಕುರಿತು ತಾವು ತರ್ಕಿಸುತ್ತಿರುವಿರಿ?

فَبِأَيِّ ءَالَآءِ رَبِّكَ تَتَمَارَىٰ ٥٥

**56.** ಇವರು (ಪ್ರವಾದಿಯವರು) ಪೂರ್ವಿಕರಾದ ಮುನ್ನೆಚ್ಚರಿಕೆಗಾರರಲ್ಲಿ ಸೇರಿದ ಒಬ್ಬ ಮುನ್ನೆಚ್ಚರಿಕೆಗಾರರಾಗಿರುವರು.

هَٰذَا نَذِيرٞ مِّنَ ٱلنُّذُرِ ٱلۡأُولَىٰٓ ٥٦

**57.** ಸನ್ನಿಹಿತವಾಗಿರುವ ಆ ಘಟನೆ[2]ಯು ಸನ್ನಿಹಿತವಾಗಿದೆ.

أَزِفَتِ ٱلۡأٓزِفَةُ ٥٧

**58.** ಅದನ್ನು ನಿವಾರಿಸುವವರು ಅಲ್ಲಾಹುವಿನ ಹೊರತು ಯಾರೂ ಇಲ್ಲ.[3]

لَيۡسَ لَهَا مِن دُونِ ٱللَّهِ كَاشِفَةٌ ٥٨

**59.** ಹಾಗಾದರೆ ನೀವು ಈ ವಾರ್ತೆಯ ಕುರಿತು ಅಚ್ಚರಿಪಡುತ್ತಿರುವಿರಾ?

أَفَمِنۡ هَٰذَا ٱلۡحَدِيثِ تَعۡجَبُونَ ٥٩

**60.** ನೀವು ನಗುತ್ತಿರುವಿರಾ? ನೀವು ಅಳಲಾರಿರಾ?

وَتَضۡحَكُونَ وَلَا تَبۡكُونَ ٦٠

**61.** ನೀವು ಅಲಕ್ಷ್ಯತೆಯಲ್ಲಿರುವಿರಾ?

وَأَنتُمۡ سَٰمِدُونَ ٦١

**62.** ಆದ್ದರಿಂದ ನೀವು ಅಲ್ಲಾಹುವಿಗೆ ಸಾಷ್ಟಾಂಗ ಮಾಡಿರಿ ಮತ್ತು (ಅವನನ್ನು) ಆರಾಧಿಸಿರಿ.

فَٱسۡجُدُواْۤ لِلَّهِۤ وَٱعۡبُدُواْ۩ ٦٢

---

1 ಅಂದರೆ ಲೂತ್(عَلَيْهِ السَّلَامُ)ರವರ ಜನತೆ ವಾಸವಾಗಿದ್ದ ಸೊದೋಮ್ ಮತ್ತು ಗೊಮೋರಾ ಪ್ರದೇಶಗಳು.

2 ಲೋಕಾಂತ್ಯ ಅಥವಾ ಅಂತಿಮ ವಿಚಾರಣೆ.

3 ಅಲ್ಲಾಹುವಿನ ಹೊರತು ಯಾರಿಗೂ ಅದನ್ನು ನಿವಾರಿಸಲು ಸಾಧ್ಯವಾಗದು ಎಂದರ್ಥ.

## ಅಲ್‌ಕಮರ್ (ಚಂದ್ರ)

## سُورَةُ القَمَرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 55

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

ٱقۡتَرَبَتِ ٱلسَّاعَةُ وَٱنشَقَّ ٱلۡقَمَرُ ١

1. ಆ ಅಂತ್ಯಘಳಿಗೆಯು ಆಸನ್ನವಾಗಿಬಿಟ್ಟಿದೆ ಮತ್ತು ಚಂದ್ರನು ಹೋಳಾಗಿರುವನು.(1)

وَإِن يَرَوۡاْ ءَايَةٗ يُعۡرِضُواْ وَيَقُولُواْ سِحۡرٞ مُّسۡتَمِرّٞ ٢

2. ಅವರು ಯಾವುದೇ ದೃಷ್ಟಾಂತವನ್ನು ಕಂಡರೂ ವಿಮುಖರಾಗುವರು ಮತ್ತು ‘ಇದು ನಿರಂತರವಾಗಿರುವ ಮಾಂತ್ರಿಕತೆಯಾಗಿದೆ’ ಎನ್ನುವರು.

وَكَذَّبُواْ وَٱتَّبَعُوٓاْ أَهۡوَآءَهُمۡۚ وَكُلُّ أَمۡرٖ مُّسۡتَقِرّٞ ٣

3. ಅವರು ನಿಷೇಧಿಸಿರುವರು ಮತ್ತು ತಮ್ಮ ದೇಹೇಚ್ಛೆಗಳನ್ನು ಅನುಸರಿಸಿರುವರು. ಯಾವುದೇ ವಿಷಯವೂ ಒಂದು ನಿಶ್ಚಿತ ಸ್ಥಾನವನ್ನು ತಲುಪಲಿರುವುದು.

وَلَقَدۡ جَآءَهُم مِّنَ ٱلۡأَنۢبَآءِ مَا فِيهِ مُزۡدَجَرٌ ٤

4. ಅವರನ್ನು (ಅವಿಶ್ವಾಸದಿಂದ) ಹಿಂದೆ ಸರಿಸಲು ಪರ್ಯಾಪ್ತವಾಗಿರುವ ವಿಷಯಗಳನ್ನು ಹೊಂದಿರುವ ಕೆಲವು ವೃತ್ತಾಂತಗಳು ಖಂಡಿತವಾಗಿಯೂ ಅವರ ಬಳಿಗೆ ಬಂದಿರುತ್ತವೆ.

حِكۡمَةُۢ بَٰلِغَةٞۖ فَمَا تُغۡنِ ٱلنُّذُرُ ٥

5. ಪರಿಪೂರ್ಣವಾದ ಜ್ಞಾನ. ಆದರೂ ಮುನ್ನೆಚ್ಚರಿಕೆಗಳು ಪ್ರಯೋಜನವಾಗುತ್ತಿಲ್ಲ.

فَتَوَلَّ عَنۡهُمۡۘ يَوۡمَ يَدۡعُ ٱلدَّاعِ إِلَىٰ شَيۡءٖ نُّكُرٍ ٦

6. ಆದ್ದರಿಂದ (ಓ ಪ್ರವಾದಿಯವರೇ!) ತಾವು ಅವರಿಂದ ವಿಮುಖರಾಗಿರಿ. ಅನಿಷ್ಟಕರವಾದ ಒಂದು ವಿಷಯದೆಡೆಗೆ ಕರೆ ನೀಡುವಾತನು(2) ಕರೆ ನೀಡುವ ದಿನ!

---

1 ಪ್ರವಾದಿ(ﷺ)ರವರ ಪ್ರವಾದಿತ್ವದಲ್ಲಿ ನಾವು ವಿಶ್ವಾಸವಿಡಬೇಕಾದರೆ ಸ್ಪಷ್ಟವಾದ ಯಾವುದಾದರೂ ದೃಷ್ಟಾಂತವನ್ನು ತೋರಿಸಲೇಬೇಕು ಎಂದು ಮಕ್ಕಾದ ಸತ್ಯನಿಷೇಧಿಗಳು ಪಟ್ಟುಹಿಡಿದಾಗ ಚಂದ್ರನು ಹೋಳಾಗಿ ಮಕ್ಕಾದಲ್ಲಿದ್ದವರು ಅದನ್ನು ನೇರವಾಗಿ ಕಂಡರೆಂದು ಬುಖಾರಿ, ಮುಸ್ಲಿಮ್ ಹಾಗೂ ಇನ್ನಿತರ ಹದೀಸ್ ಗ್ರಂಥಗಳಲ್ಲಿ ಕಾಣಬಹುದು.

2 ಪ್ರಮುಖ ವ್ಯಾಖ್ಯಾನಕಾರರ ಪ್ರಕಾರ ಇಲ್ಲಿ ಕರೆ ನೀಡುವವನು ಎಂದರೆ ಅಂತ್ಯದಿನದ ವಿಚಾರಣೆಗಾಗಿ ಜನರೆಲ್ಲರೂ ಎದ್ದುಬರಲು ಕಹಳೆಯಲ್ಲಿ ಊದುವ ಇಸ್ರಾಫೀಲ್(عَلَيْهِ السَّلَامُ) ಎಂಬ ಮಲಕ್ ಆಗಿರುವರು.

7. ದೃಷ್ಟಿಗಳು ತಗ್ಗಿರುವ ಸ್ಥಿತಿಯಲ್ಲಿ (ನಾಲ್ಕು ದಿಕ್ಕುಗಳೆಡೆಗೂ) ಹಾರಾಡುವ ಮಿಡತೆಗಳಂತೆ ಅವರು ಗೋರಿಗಳಿಂದ ಹೊರಟು ಬರುವರು.

خُشَّعًا أَبْصَٰرُهُمْ يَخْرُجُونَ مِنَ ٱلْأَجْدَاثِ كَأَنَّهُمْ جَرَادٌ مُّنتَشِرٌ ﴿٧﴾

8. ಕರೆ ನೀಡುವಾತನ ಬಳಿಗೆ ಅವರು ಧಾವಂತದಿಂದ ತೆರಳುವರು. 'ಇದೊಂದು ಪ್ರಯಾಸಕರವಾದ ದಿನವಾಗಿದೆ' ಎಂದು ಸತ್ಯನಿಷೇಧಿಗಳು ಹೇಳುವರು.

مُّهْطِعِينَ إِلَى ٱلدَّاعِ يَقُولُ ٱلْكَٰفِرُونَ هَٰذَا يَوْمٌ عَسِرٌ ﴿٨﴾

9. ಅವರಿಗಿಂತ ಮೊದಲು ನೂಹ್‌ರ ಜನತೆಯು ನಿಷೇಧಿಸಿತ್ತು. ಅವರು ನಮ್ಮ ದಾಸನನ್ನು ನಿಷೇಧಿಸಿದರು ಮತ್ತು ಮತಿಭ್ರಾಂತನೆಂದು ಕರೆದರು. ಆತ ಬೆದರಿಸಿ ಓಡಿಸಲಾದರು.

۞كَذَّبَتْ قَبْلَهُمْ قَوْمُ نُوحٍ فَكَذَّبُوا۟ عَبْدَنَا وَقَالُوا۟ مَجْنُونٌ وَٱزْدُجِرَ ﴿٩﴾

10. ಆಗ ಆತ ತಮ್ಮ ರಬ್ಬನ್ನು ಕರೆದು ಪ್ರಾರ್ಥಿಸಿದರು: 'ನಾನು ಪರಾಭವಗೊಂಡಿರುವೆನು. ಆದ್ದರಿಂದ (ನನ್ನ) ರಕ್ಷಣೆಗಾಗಿ ಕ್ರಮ ಕೈಗೊಳ್ಳು'.

فَدَعَا رَبَّهُۥٓ أَنِّى مَغْلُوبٌ فَٱنتَصِرْ ﴿١٠﴾

11. ಆಗ ಧಾರಾಕಾರವಾಗಿ ಸುರಿಯುವ ನೀರಿನೊಂದಿಗೆ ನಾವು ಆಕಾಶದ್ವಾರಗಳನ್ನು ತೆರೆದೆವು.

فَفَتَحْنَآ أَبْوَٰبَ ٱلسَّمَآءِ بِمَآءٍ مُّنْهَمِرٍ ﴿١١﴾

12. ಭೂಮಿಯಲ್ಲಿ ನಾವು ಒರತೆಗಳನ್ನು ಹರಿಸಿದೆವು. ತರುವಾಯ ಒಂದು ನಿಶ್ಚಿತವಾದ ಒಂದು ಸಂಗತಿಗಾಗಿ[1] ನೀರು ಸಂಗಮವಾಯಿತು.

وَفَجَّرْنَا ٱلْأَرْضَ عُيُونًا فَٱلْتَقَى ٱلْمَآءُ عَلَىٰٓ أَمْرٍ قَدْ قُدِرَ ﴿١٢﴾

13. ಹಲಗೆಗಳು ಮತ್ತು ಮೊಳೆಗಳಿರುವ ಒಂದು ಹಡಗಿನಲ್ಲಿ ನಾವು ಅವರನ್ನು ಹೊತ್ತೊಯ್ದೆವು.

وَحَمَلْنَٰهُ عَلَىٰ ذَاتِ أَلْوَٰحٍ وَدُسُرٍ ﴿١٣﴾

14. ಅದು ನಮ್ಮ ಕಣ್ಣೋಟದಲ್ಲಿ ಚಲಿಸುತ್ತಿದೆ. ಅದು ನಿಷೇಧಿಸಲ್ಪಟ್ಟವರಿಗೆ (ನೂಹ್‌ರಿಗೆ) ಇರುವ ಪ್ರತಿಫಲವಾಗಿದೆ.

تَجْرِى بِأَعْيُنِنَا جَزَآءً لِّمَن كَانَ كُفِرَ ﴿١٤﴾

15. ಖಂಡಿತವಾಗಿಯೂ ಅದನ್ನು (ಪ್ರಳಯವನ್ನು) ನಾವು ಒಂದು ದೃಷ್ಟಾಂತವಾಗಿ

وَلَقَد تَّرَكْنَٰهَآ ءَايَةً فَهَلْ مِن مُّدَّكِرٍ ﴿١٥﴾

1 ಎಲ್ಲ ಸತ್ಯನಿಷೇಧಿಗಳೂ ಮುಳುಗಿ ಸಾಯಬೇಕೆಂಬುದು ನಿಶ್ಚಿತ ಸಂಗತಿಯಾಗಿತ್ತು.

ಬಾಕಿಯುಳಿಸಿರುವೆವು. ಆದರೆ ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

16. ಆಗ ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳು ಹೇಗಿದ್ದವು (ಎಂಬುದನ್ನು ನೋಡಿರಿ).

فَكَيۡفَ كَانَ عَذَابِي وَنُذُرِ ١٦

17. ಚಿಂತಿಸಿ ಗ್ರಹಿಸುವುದಕ್ಕಾಗಿ ಖಂಡಿತವಾಗಿಯೂ ನಾವು ಕುರ್‌ಆನನ್ನು ಸರಳಗೊಳಿಸಿರುವೆವು. ಆದರೆ ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

وَلَقَدۡ يَسَّرۡنَا ٱلۡقُرۡءَانَ لِلذِّكۡرِ فَهَلۡ مِن مُّدَّكِرٖ ١٧

18. ಆದ್ ಜನಾಂಗವು (ಸತ್ಯವನ್ನು) ನಿಷೇಧಿಸಿತು. ತರುವಾಯ ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳು ಹೇಗಿದ್ದವು (ಎಂಬುದನ್ನು ನೋಡಿರಿ).

كَذَّبَتۡ عَادٞ فَكَيۡفَ كَانَ عَذَابِي وَنُذُرِ ١٨

19. ಬಿಟ್ಟಗಲದ ಅಪಶಕುನದ ಒಂದು ದಿನದಲ್ಲಿ ಭೀಕರವಾದ ಗಾಳಿಯೊಂದನ್ನು ನಾವು ಅವರೆಡೆಗೆ ಕಳುಹಿಸಿದೆವು.

إِنَّآ أَرۡسَلۡنَا عَلَيۡهِمۡ رِيحٗا صَرۡصَرٗا فِي يَوۡمِ نَحۡسٖ مُّسۡتَمِرّٖ ١٩

20. ಬುಡಸಮೇತ ಉರುಳುವ ಖರ್ಜೂರದ ಕಾಂಡಗಳಂತೆ ಅದು ಮನುಷ್ಯರನ್ನು ಕಿತ್ತೆಸೆಯುತ್ತಿತ್ತು.

تَنزِعُ ٱلنَّاسَ كَأَنَّهُمۡ أَعۡجَازُ نَخۡلٖ مُّنقَعِرٖ ٢٠

21. ಆಗ ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳು ಹೇಗಿದ್ದವು (ಎಂಬುದನ್ನು ನೋಡಿರಿ).

فَكَيۡفَ كَانَ عَذَابِي وَنُذُرِ ٢١

22. ಚಿಂತಿಸಿ ಗ್ರಹಿಸುವುದಕ್ಕಾಗಿ ಖಂಡಿತವಾಗಿಯೂ ನಾವು ಕುರ್‌ಆನನ್ನು ಸರಳಗೊಳಿಸಿರುವೆವು. ಆದರೆ ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

وَلَقَدۡ يَسَّرۡنَا ٱلۡقُرۡءَانَ لِلذِّكۡرِ فَهَلۡ مِن مُّدَّكِرٖ ٢٢

23. ಸಮೂದ್ ಜನಾಂಗವು ಎಚ್ಚರಿಕೆಗಳನ್ನು ನಿಷೇಧಿಸಿತು.

كَذَّبَتۡ ثَمُودُ بِٱلنُّذُرِ ٢٣

24. ಅವರು ಹೇಳಿದರು: 'ನಮ್ಮ ಪೈಕಿಯ ಒಬ್ಬ ಏಕಾಂಗಿ ಮನುಷ್ಯನನ್ನು ನಾವು ಅನುಸರಿಸುವುದೇ? ಹಾಗಾದರೆ ಖಂಡಿತವಾಗಿಯೂ ನಾವು ದುರ್ಮಾರ್ಗದಲ್ಲಿ ಮತ್ತು ಮತಿಭ್ರಾಂತಿಯಲ್ಲಾಗುವೆವು.

فَقَالُوٓاْ أَبَشَرٗا مِّنَّا وَٰحِدٗا نَّتَّبِعُهُۥٓ إِنَّآ إِذٗا لَّفِي ضَلَٰلٖ وَسُعُرٍ ٢٤

أَءُلْقِيَ ٱلذِّكْرُ عَلَيْهِ مِنۢ بَيْنِنَا بَلْ هُوَ كَذَّابٌ أَشِرٌ ﴿٢٥﴾

25. ನಮ್ಮ ನಡುವೆ ಅವನಿಗೆ ಮಾತ್ರ ಉಪದೇಶ ನೀಡಲಾಗಿದೆ ಎಂದೇ? ಅಲ್ಲ, ಅವನು ದುರಹಂಕಾರಿಯಾದ ಒಬ್ಬ ಮಿಥ್ಯವಾದಿಯಾಗಿರುವನು'.

سَيَعْلَمُونَ غَدًا مَّنِ ٱلْكَذَّابُ ٱلْأَشِرُ ﴿٢٦﴾

26. ಆದರೆ ದುರಹಂಕಾರಿಯಾದ ಮಿಥ್ಯವಾದಿ ಯಾರೆಂದು ಅವರು ನಾಳೆ ಅರಿತುಕೊಳ್ಳುವರು.

إِنَّا مُرْسِلُوا۟ ٱلنَّاقَةِ فِتْنَةً لَّهُمْ فَٱرْتَقِبْهُمْ وَٱصْطَبِرْ ﴿٢٧﴾

27. (ಸಾಲಿಹ್‌ನೊಂದಿಗೆ ನಾವು ಹೇಳಿದೆವು): 'ಖಂಡಿತವಾಗಿಯೂ ನಾವು ಅವರಿಗೆ ಒಂದು ಪರೀಕ್ಷೆ ಎಂಬ ನಿಟ್ಟಿನಲ್ಲಿ ಒಂಟೆಯನ್ನು ಕಳುಹಿಸುವೆವು. ಆದ್ದರಿಂದ ತಾವು ಅವರನ್ನು ವೀಕ್ಷಿಸುತ್ತಿರಿ ಮತ್ತು ಸಹನೆ ಪಾಲಿಸಿರಿ.

وَنَبِّئْهُمْ أَنَّ ٱلْمَآءَ قِسْمَةٌۢ بَيْنَهُمْ ۖ كُلُّ شِرْبٍ مُّحْتَضَرٌ ﴿٢٨﴾

28. ನೀರನ್ನು ಅವರ ಮಧ್ಯೆ (ಅವರಿಗೆ ಮತ್ತು ಒಂಟೆಗೆ) ಪಾಲು ಮಾಡಲಾಗಿದೆಯೆಂದು ತಾವು ಅವರಿಗೆ ತಿಳಿಸಿರಿ. ತಮ್ಮ ತಮ್ಮ ಜಲಪಾನದ ಸರದಿಯಲ್ಲಿ (ಅದರ ಹಕ್ಕುದಾರರು) ಹಾಜರಾಗಲಿ'.

فَنَادَوْا۟ صَاحِبَهُمْ فَتَعَاطَىٰ فَعَقَرَ ﴿٢٩﴾

29. ಆಗ ಅವರು ತಮ್ಮ ಗೆಳೆಯನನ್ನು ಕರೆದರು.[1] ಅವನು (ಆ ಕೃತ್ಯವನ್ನು) ವಹಿಸಿಕೊಂಡನು. ತರುವಾಯ (ಒಂಟೆಯನ್ನು) ದಾರುಣವಾಗಿ ಕೊಂದನು.

فَكَيْفَ كَانَ عَذَابِى وَنُذُرِ ﴿٣٠﴾

30. ಆಗ ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳು ಹೇಗಿದ್ದವು (ಎಂಬುದನ್ನು ನೋಡಿರಿ).

إِنَّآ أَرْسَلْنَا عَلَيْهِمْ صَيْحَةً وَٰحِدَةً فَكَانُوا۟ كَهَشِيمِ ٱلْمُحْتَظِرِ ﴿٣١﴾

31. ನಾವು ಅವರ ಮೇಲೆ ಒಂದೇ ಒಂದು ಭಯಾನಕ ಶಬ್ದವನ್ನು ಕಳುಹಿಸಿದೆವು. ಆಗ ಅವರು ಹಟ್ಟಿ ನಿರ್ಮಿಸುವವನು ಬಿಟ್ಟು ಹೋಗುವ ಹುಲ್ಲಿನ ಕಡ್ಡಿಗಳಂತಾದರು.

وَلَقَدْ يَسَّرْنَا ٱلْقُرْءَانَ لِلذِّكْرِ فَهَلْ مِن مُّدَّكِرٍ ﴿٣٢﴾

32. ಚಿಂತಿಸಿ ಗ್ರಹಿಸುವುದಕ್ಕಾಗಿ ಖಂಡಿತವಾಗಿಯೂ ನಾವು ಕುರ್‌ಆನನ್ನು ಸರಳಗೊಳಿಸಿರುವೆವು. ಆದರೆ ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

1 ಅವರ ಪೈಕಿ ಯಾವುದಕ್ಕೂ ಸಿದ್ಧನಾಗಿದ್ದ ಒಬ್ಬ ವ್ಯಕ್ತಿಯ ಮೂಲಕ ಅವರು ಆ ಕ್ರೂರಕೃತ್ಯವನ್ನು ಮಾಡಿಸಿದರು.

**33.** ಲೂತ್‌ರ ಜನತೆ ಎಚ್ಚರಿಕೆಗಳನ್ನು ನಿಷೇಧಿಸಿದರು.

كَذَّبَتۡ قَوۡمُ لُوطِۭ بِٱلنُّذُرِ ٣٣

**34.** ಖಂಡಿತವಾಗಿಯೂ ನಾವು ಅವರ ಮೇಲೆ ಹರಳುಗಲ್ಲುಗಳ ಒಂದು ಗಾಳಿಯನ್ನು ಕಳುಹಿಸಿದೆವು. ಲೂತ್‌ರ ಕುಟುಂಬವು ಅದರಿಂದ ಹೊರತಾಗಿತ್ತು. ರಾತ್ರಿಯ ಅಂತ್ಯಸಮಯದಲ್ಲಿ ನಾವು ಅವರನ್ನು ರಕ್ಷಿಸಿದೆವು.

إِنَّآ أَرۡسَلۡنَا عَلَيۡهِمۡ حَاصِبًا إِلَّآ ءَالَ لُوطٖۖ نَّجَّيۡنَٰهُم بِسَحَرٖ ٣٤

**35.** ನಮ್ಮ ವತಿಯ ಒಂದು ಅನುಗ್ರಹವಾಗಿ. ಕೃತಜ್ಞತೆ ಸಲ್ಲಿಸುವವರಿಗೆ ನಾವು ಹೀಗೆ ಪ್ರತಿಫಲವನ್ನು ನೀಡುವೆವು.

نِّعۡمَةٗ مِّنۡ عِندِنَاۚ كَذَٰلِكَ نَجۡزِي مَن شَكَرَ ٣٥

**36.** ನಮ್ಮ ಶಿಕ್ಷಾಕ್ರಮದ ಕುರಿತು ಅವರು (ಲೂತ್) ಅವರಿಗೆ ಎಚ್ಚರಿಕೆ ನೀಡಿದ್ದರು. ಆದರೆ ಅವರು ಎಚ್ಚರಿಕೆಗಳನ್ನು ಸಂದೇಹಪಟ್ಟು ತಿರಸ್ಕರಿಸಿದರು.

وَلَقَدۡ أَنذَرَهُم بَطۡشَتَنَا فَتَمَارَوۡاْ بِٱلنُّذُرِ ٣٦

**37.** ಅವರು ಅವರೊಂದಿಗೆ (ಲೂತ್‌ರೊಂದಿಗೆ) ಅವರ ಅತಿಥಿಗಳನ್ನು (ನೀಚಕೃತ್ಯಕ್ಕಾಗಿ) ಬಿಟ್ಟುಕೊಡಬೇಕೆಂದು ಬೇಡಿಕೆಯಿಟ್ಟರು. ಆಗ ಅವರ ಕಣ್ಣುಗಳನ್ನು ನಾವು ಅಳಿಸಿ ಹಾಕಿದೆವು. 'ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳ ರುಚಿಯನ್ನು ಸವಿಯಿರಿ' (ಎಂದು ನಾವು ಅವರೊಂದಿಗೆ ಹೇಳಿದೆವು).

وَلَقَدۡ رَٰوَدُوهُ عَن ضَيۡفِهِۦ فَطَمَسۡنَآ أَعۡيُنَهُمۡ فَذُوقُواْ عَذَابِي وَنُذُرِ ٣٧

**38.** ಶಾಶ್ವತವಾದ ಶಿಕ್ಷೆಯು ಮುಂಜಾನೆ ಅವರ ಬಳಿಗೆ ಬಂದೇ ಬಿಟ್ಟಿತು.

وَلَقَدۡ صَبَّحَهُم بُكۡرَةً عَذَابٞ مُّسۡتَقِرّٞ ٣٨

**39.** 'ನನ್ನ ಶಿಕ್ಷೆ ಮತ್ತು ಎಚ್ಚರಿಕೆಗಳ ರುಚಿಯನ್ನು ಸವಿಯಿರಿ' (ಎಂದು ನಾವು ಅವರೊಂದಿಗೆ ಹೇಳಿದೆವು).

فَذُوقُواْ عَذَابِي وَنُذُرِ ٣٩

**40.** ಚಿಂತಿಸಿ ಗ್ರಹಿಸುವುದಕ್ಕಾಗಿ ಖಂಡಿತವಾಗಿಯೂ ನಾವು ಕುರ್‌ಆನನ್ನು ಸರಳಗೊಳಿಸಿರುವೆವು. ಆದರೆ ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

وَلَقَدۡ يَسَّرۡنَا ٱلۡقُرۡءَانَ لِلذِّكۡرِ فَهَلۡ مِن مُّدَّكِرٖ ٤٠

41. ಫಿರ್‌ಔನ್ ಕುಟುಂಬಕ್ಕೂ ಎಚ್ಚರಿಕೆಗಳು ಬಂದಿದ್ದವು.

42. ಅವರು ನಮ್ಮ ದೃಷ್ಟಾಂತಗಳನ್ನು ಪೂರ್ಣವಾಗಿ ನಿಷೇಧಿಸಿದರು. ಆಗ ಪ್ರತಾಪಶಾಲಿ ಮತ್ತು ಬಲಿಷ್ಠನು ಹಿಡಿಯುವ ಹಿಡಿತದಿಂದ ನಾವು ಅವರನ್ನು ಹಿಡಿದೆವು.

43. (ಓ ಅರಬ್ ಜನರೇ!) ನಿಮ್ಮಲ್ಲಿರುವ ಸತ್ಯನಿಷೇಧಿಗಳು ಅವರಿಗಿಂತಲೂ ಒಳ್ಳೆಯವರೇ ಅಥವಾ ಪ್ರಮಾಣ ಗ್ರಂಥಗಳಲ್ಲಿ ನಿಮಗೇನಾದರೂ ವಿನಾಯಿತಿಯಿದೆಯೇ?

44. ಅಥವಾ 'ನಾವು ಸಂಘಟಿತರಾಗಿರುವೆವು ಮತ್ತು ಆತ್ಮರಕ್ಷಣೆಗೆ ನಾವು ಸಮರ್ಥರಾಗಿರುವೆವು' ಎಂದು ಅವರು ಹೇಳುತ್ತಿರುವರೇ?

45. ಆದರೆ ಆ ಗುಂಪು ಸದ್ಯವೇ ಪರಾಭವಗೊಳ್ಳುವುದು. ಅವರು ಬೆನ್ನು ತೋರಿಸಿ ಓಡುವರು.

46. ಅಲ್ಲ, ಅವರಿಗಿರುವ ನಿಶ್ಚಿತ ಸಮಯವು ಆ ಅಂತ್ಯಘಳಿಗೆಯಾಗಿದೆ. ಆ ಅಂತ್ಯಘಳಿಗೆಯು ಅತ್ಯಂತ ಅಪಾಯಕಾರಿಯೂ, ಅತ್ಯಂತ ಕಹಿಯೂ ಆಗಿರುವುದು.

47. ಖಂಡಿತವಾಗಿಯೂ ಆ ಅಪರಾಧಿಗಳು ಪಥಭ್ರಷ್ಟತೆಯಲ್ಲೂ, ಬುದ್ಧಿಭ್ರಮಣೆಯಲ್ಲೂ ಇರುವರು.

48. ಅಧೋಮುಖಿಯಾದ ಸ್ಥಿತಿಯಲ್ಲಿ ಅವರನ್ನು ನರಕಾಗ್ನಿಯಲ್ಲಿ ಎಳೆದೊಯ್ಯಲಾಗುವ ದಿನ! (ಅಂದು ಅವರೊಂದಿಗೆ ಹೇಳಲಾಗುವುದು): 'ನೀವು ನರಕಾಗ್ನಿಯ ಸ್ಪರ್ಶವನ್ನು ಸವಿಯಿರಿ!'

49. ಖಂಡಿತವಾಗಿಯೂ ಪ್ರತಿಯೊಂದು ವಸ್ತುವನ್ನೂ ನಾವು ಒಂದು ನಿರ್ಣಯದ ಪ್ರಕಾರ ಸೃಷ್ಟಿಸಿರುವೆವು.

وَلَقَدْ جَآءَ ءَالَ فِرْعَوْنَ ٱلنُّذُرُ ﴿٤١﴾

كَذَّبُواْ بِـَٔايَٰتِنَا كُلِّهَا فَأَخَذْنَٰهُمْ أَخْذَ عَزِيزٍ مُّقْتَدِرٍ ﴿٤٢﴾

أَكُفَّارُكُمْ خَيْرٌ مِّنْ أُوْلَٰٓئِكُمْ أَمْ لَكُم بَرَآءَةٌ فِى ٱلزُّبُرِ ﴿٤٣﴾

أَمْ يَقُولُونَ نَحْنُ جَمِيعٌ مُّنتَصِرٌ ﴿٤٤﴾

سَيُهْزَمُ ٱلْجَمْعُ وَيُوَلُّونَ ٱلدُّبُرَ ﴿٤٥﴾

بَلِ ٱلسَّاعَةُ مَوْعِدُهُمْ وَٱلسَّاعَةُ أَدْهَىٰ وَأَمَرُّ ﴿٤٦﴾

إِنَّ ٱلْمُجْرِمِينَ فِى ضَلَٰلٍ وَسُعُرٍ ﴿٤٧﴾

يَوْمَ يُسْحَبُونَ فِى ٱلنَّارِ عَلَىٰ وُجُوهِهِمْ ذُوقُواْ مَسَّ سَقَرَ ﴿٤٨﴾

إِنَّا كُلَّ شَىْءٍ خَلَقْنَٰهُ بِقَدَرٍ ﴿٤٩﴾

وَمَآ أَمۡرُنَآ إِلَّا وَٰحِدَةٞ كَلَمۡحِۭ بِٱلۡبَصَرِ ٥٠

50. ನಮ್ಮ ಆಜ್ಞೆಯು ಕಣ್ಣೆವೆಯಿಕ್ಕುವಂತೆ ಕೇವಲ ಒಂದು ಘೋಷಣೆ ಮಾತ್ರವಾಗಿದೆ.[1]

وَلَقَدۡ أَهۡلَكۡنَآ أَشۡيَاعَكُمۡ فَهَلۡ مِن مُّدَّكِرٖ ٥١

51. (ಓ ಸತ್ಯನಿಷೇಧಿಗಳೇ!) ಖಂಡಿತವಾಗಿಯೂ ನಿಮ್ಮ ಪಕ್ಷದವರನ್ನು ನಾವು ನಾಶ ಮಾಡಿರುವೆವು. ಚಿಂತಿಸಿ ಗ್ರಹಿಸುವವರು ಯಾರಾದರೂ ಇರುವರೇ?

وَكُلُّ شَيۡءٖ فَعَلُوهُ فِي ٱلزُّبُرِ ٥٢

52. ಅವರು ಮಾಡಿರುವುದೆಲ್ಲವೂ ದಾಖಲೆಗಳಲ್ಲಿವೆ.

وَكُلُّ صَغِيرٖ وَكَبِيرٖ مُّسۡتَطَرٌ ٥٣

53. ಚಿಕ್ಕದಾಗಿರುವ ಮತ್ತು ದೊಡ್ಡದಾಗಿರುವ ಎಲ್ಲ ವಿಷಯಗಳನ್ನೂ ಲಿಖಿತಗೊಳಿಸಲಾಗಿರುವುದು.

إِنَّ ٱلۡمُتَّقِينَ فِي جَنَّٰتٖ وَنَهَرٖ ٥٤

54. ಖಂಡಿತವಾಗಿಯೂ ಭಯಭಕ್ತಿ ಪಾಲಿಸಿದವರು ಉದ್ಯಾನಗಳಲ್ಲಿ ಮತ್ತು ನದಿಗಳಲ್ಲಿರುವರು.

فِي مَقۡعَدِ صِدۡقٍ عِندَ مَلِيكٖ مُّقۡتَدِرِۭ ٥٥

55. ಸತ್ಯದ ಆಸನದಲ್ಲಿ. ಬಲಿಷ್ಠನಾಗಿರುವ ಸಾಮ್ರಾಟನ ಬಳಿಯಲ್ಲಿ.

---

1 ಮನುಷ್ಯರು ತೀರ್ಮಾನಗಳನ್ನು ವಿಧಿಸಲು ಹಾಗೂ ಜಾರಿಗೆ ತರಲು ಹಲವು ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ ಮತ್ತು ಸಂದರ್ಭ ಸನ್ನಿವೇಶಗಳು ಅದಕ್ಕೆ ಅನುಕೂಲವಾಗಿರಬೇಕಾಗುತ್ತದೆ. ಆದರೆ ಅಲ್ಲಾಹುವಿನ ಆದೇಶವು ಒಂದಿಷ್ಟೂ ತಡವಾಗದೆ ತಕ್ಷಣ ಜಾರಿಗೊಳ್ಳುತ್ತದೆ.

## ಅರ್ರಹ್ಮಾನ್ (ಪರಮ ದಯಾಮಯ)

سُورَةُ الرَّحْمَٰن

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 78

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

ٱلرَّحۡمَٰنُ ١ عَلَّمَ ٱلۡقُرۡءَانَ ٢

1-2. ಪರಮ ದಯಾಮಯನು, ಕುರ್‌ಆನನ್ನು ಕಲಿಸಿದನು.

خَلَقَ ٱلۡإِنسَٰنَ ٣

3. ಅವನು ಮನುಷ್ಯನನ್ನು ಸೃಷ್ಟಿಸಿದನು.

عَلَّمَهُ ٱلۡبَيَانَ ٤

4. ಅವನಿಗೆ ಮಾತನಾಡಲು[1] ಕಲಿಸಿದನು.

ٱلشَّمۡسُ وَٱلۡقَمَرُ بِحُسۡبَانٖ ٥

5. ಸೂರ್ಯ ಮತ್ತು ಚಂದ್ರ ಒಂದು ಗಣನೆಯ ಪ್ರಕಾರ (ಚಲಿಸುತ್ತಿವೆ).

وَٱلنَّجۡمُ وَٱلشَّجَرُ يَسۡجُدَانِ ٦

6. ಸಸ್ಯಗಳು ಮತ್ತು ಮರಗಳು (ಅಲ್ಲಾಹುವಿಗೆ) ಸಾಷ್ಟಾಂಗವೆರಗುತ್ತಿವೆ.

وَٱلسَّمَآءَ رَفَعَهَا وَوَضَعَ ٱلۡمِيزَانَ ٧

7. ಆಕಾಶವನ್ನು ಅವನು ಎತ್ತರಿಸಿರುವನು ಮತ್ತು (ಎಲ್ಲವನ್ನೂ ತೂಗಿನೋಡುವ) ತಕ್ಕಡಿಯನ್ನು ಅವನು ಸ್ಥಾಪಿಸಿರುವನು.[2]

أَلَّا تَطۡغَوۡاْ فِي ٱلۡمِيزَانِ ٨

8. ಇದು ನೀವು ತಕ್ಕಡಿಯಲ್ಲಿ ಅಸಮತೋಲನ ಮಾಡದಿರುವ ಸಲುವಾಗಿದೆ.

وَأَقِيمُواْ ٱلۡوَزۡنَ بِٱلۡقِسۡطِ وَلَا تُخۡسِرُواْ ٱلۡمِيزَانَ ٩

9. ನೀವು ನ್ಯಾಯಬದ್ಧವಾಗಿ ತೂಕವನ್ನು ಸರಿಪಡಿಸಿರಿ. ತಕ್ಕಡಿಯಲ್ಲಿ ನೀವು ಕಮ್ಮಿ ಮಾಡದಿರಿ.

وَٱلۡأَرۡضَ وَضَعَهَا لِلۡأَنَامِ ١٠

10. ಅವನು ಭೂಮಿಯನ್ನು ಮನುಷ್ಯರಿಗಾಗಿ ಇಟ್ಟಿರುವನು.

فِيهَا فَٰكِهَةٞ وَٱلنَّخۡلُ ذَاتُ ٱلۡأَكۡمَامِ ١١

11. ಅದರಲ್ಲಿ ಫಲಗಳು ಮತ್ತು ಪೊರೆಗಳುಳ್ಳ ಖರ್ಜೂರ ಮರಗಳಿವೆ.

1 ಮನಸ್ಸಿನಲ್ಲಿರುವ ಆಶಯವನ್ನು ಸ್ಪಷ್ಟವಾಗಿ ಹೊರಹೊಮ್ಮಿಸುವ ಮಾತಿಗೆ ಬಯಾನ್ ಎನ್ನಲಾಗುತ್ತದೆ.

2 ಪ್ರಾಪಂಚಿಕ ವ್ಯವಸ್ಥೆಗಳಲ್ಲೆಲ್ಲ ಗೋಚರವಾಗುವ ಸಮತೋಲನವನ್ನು ಇಲ್ಲಿ ತಕ್ಕಡಿ ಎಂದು ಹೇಳಲಾಗಿರಬಹುದು. ಅದರಲ್ಲಿ ಮನುಷ್ಯನು ಅಸಮತೋಲನವನ್ನುಂಟು ಮಾಡಿದರೆ ಎಲ್ಲ ಕ್ಷೇತ್ರಗಳಲ್ಲೂ ಗೊಂದಲಮಯ ಸನ್ನಿವೇಶವುಂಟಾಗುವುದು. ಪ್ರಾಪಂಚಿಕ ವ್ಯವಸ್ಥೆಯಲ್ಲಿರುವ ಸಮತೋಲನದ ಸತ್ಫಲಗಳನ್ನು ಸವಿಯುತ್ತಿರುವ ಮನುಷ್ಯನು ತನ್ನ ಬದುಕಿನ ವ್ಯವಹಾರದಲ್ಲೂ ಸಮತೋಲನವನ್ನು ಕಾಪಾಡಲು ಬಾಧ್ಯಸ್ಥನಾಗಿದ್ದಾನೆ.

12. ಹೊಟ್ಟಿರುವ ಧಾನ್ಯಗಳೂ ಸುಗಂಧ ಸಸ್ಯಗಳೂ ಇವೆ.

وَٱلْحَبُّ ذُو ٱلْعَصْفِ وَٱلرَّيْحَانُ ﴿١٢﴾

13. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವಿಬ್ಬರು[1] ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿١٣﴾

14. ತಟ್ಟಿದರೆ ಮಡಿಕೆಯಂತೆ ಸದ್ದು ಮಾಡುವ ಜೇಡಿಮಣ್ಣಿನಿಂದ[2] ಅವನು ಮನುಷ್ಯನನ್ನು ಸೃಷ್ಟಿಸಿದನು.

خَلَقَ ٱلْإِنسَٰنَ مِن صَلْصَٰلٍ كَٱلْفَخَّارِ ﴿١٤﴾

15. ಹೊಗೆರಹಿತ ಅಗ್ನಿಜ್ವಾಲೆಯಿಂದ ಅವನು ಜಿನ್ನ್‌ಗಳನ್ನು ಸೃಷ್ಟಿಸಿದನು.

وَخَلَقَ ٱلْجَآنَّ مِن مَّارِجٍ مِّن نَّارٍ ﴿١٥﴾

16. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವಿಬ್ಬರು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿١٦﴾

17. ಅವನು ಎರಡು ಉದಯಸ್ಥಾನಗಳ ರಬ್ ಮತ್ತು ಎರಡು ಅಸ್ತಮಸ್ಥಾನಗಳ ರಬ್ ಆಗಿರುವನು.[3]

رَبُّ ٱلْمَشْرِقَيْنِ وَرَبُّ ٱلْمَغْرِبَيْنِ ﴿١٧﴾

18. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವಿಬ್ಬರು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿١٨﴾

---

1 ನಿಮ್ಮಿಬ್ಬರ ರಬ್ ಎಂದರೆ ಮನುಷ್ಯರು ಮತ್ತು ಜಿನ್ನ್‌ಗಳ ರಬ್.

2 ಸ್ವಲ್‌ಸ್ವಾಲ್ ಎಂದರೆ ತಟ್ಟಿದರೆ ಧ್ವನಿ ಮಾಡುವ ಜೇಡಿಮಣ್ಣೆಂದು ಹೆಚ್ಚಿನ ವ್ಯಾಖ್ಯಾನಕಾರರು ಹೇಳಿದ್ದಾರೆ. ಅದು ಬದಲಾದ ಜೇಡಿಮಣ್ಣೆಂದು ಇತರ ಕೆಲವರು ಅರ್ಥ ನೀಡಿದ್ದಾರೆ.

3 ಎರಡು ಉದಯಸ್ಥಾನಗಳು ಮತ್ತು ಎರಡು ಅಸ್ತಮಸ್ಥಾನಗಳು ಎಂದರೆ ಉತ್ತರಾಯಣ ಮತ್ತು ದಕ್ಷಿಣಾಯಣ ಕಾಲಗಳ ಉದಯಾಸ್ತಮ ಸ್ಥಾನಗಳೆಂದು ಅನೇಕ ವ್ಯಾಖ್ಯಾನಕಾರರು ವಿವರಿಸಿದ್ದಾರೆ. ಪೂರ್ವಾರ್ಧಗೋಳದಲ್ಲಿರುವವರಿಗೆ ಸೂರ್ಯೋದಯವಾಗುವಾಗ ಪಶ್ಚಿಮಾರ್ಧಗೋಳದಲ್ಲಿರುವವರಿಗೆ ಸೂರ್ಯಾಸ್ತವಾಗಿರುತ್ತದೆ. ಪೂರ್ವಾರ್ಧಗೋಳದಲ್ಲಿರುವವರಿಗೆ ಸೂರ್ಯಾಸ್ತವಾಗುವಾಗ ಪಶ್ಚಿಮಾರ್ಧಗೋಳದಲ್ಲಿರುವವರಿಗೆ ಸೂರ್ಯೋದಯವಾಗುತ್ತದೆ. ಹಾಗಾದರೆ ಎರಡು ಅರ್ಧಗೋಳಗಳಲ್ಲಿರುವವರಿಗೆ ವಿಭಿನ್ನವಾದ ಎರಡು ಸೂರ್ಯೋದಯಗಳು ಮತ್ತು ಎರಡು ಸೂರ್ಯಾಸ್ತಮಗಳು ಅನುಭವವಾಗುತ್ತವೆ. ಇದು ಮಶ್ರಿಕೈನಿ ಮತ್ತು ಮಗ್ರಿಬೈನಿ ಎಂಬ ಪದಗಳ ಅರ್ಥವಾಗಿರಬಹುದು. 70:40ರಲ್ಲಿ ಅನೇಕ ಉದಯಸ್ಥಾನಗಳ ಮತ್ತು ಅನೇಕ ಅಸ್ತಮಸ್ಥಾನಗಳ ರಬ್ ಎಂಬ ವಾಕ್ಯವು ಉದಯಾಸ್ತಮ ಸ್ಥಾನಗಳು ಸಾಪೇಕ್ಷಿಕವಾಗಿ ಬದಲಾಗುತ್ತಿರುತ್ತವೆ ಎಂಬುದನ್ನು ಸೂಚಿಸುತ್ತದೆ.

19. ಅವನು ಎರಡು ಸಮುದ್ರ (ಜಲಾಶಯ)ಗಳನ್ನು ಪರಸ್ಪರ ಬೆರೆಯುವಂತೆ ಬಿಟ್ಟಿರುವನು.

مَرَجَ ٱلْبَحْرَيْنِ يَلْتَقِيَانِ ﴿١٩﴾

20. ಅವೆರಡರ ಮಧ್ಯೆ ಅವು ಪರಸ್ಪರ ಅತಿಕ್ರಮಿಸಿ ದಾಟದಂತೆ ಒಂದು ತಡೆಯಿದೆ.[1]

بَيْنَهُمَا بَرْزَخٌ لَّا يَبْغِيَانِ ﴿٢٠﴾

21. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವಿಬ್ಬರು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٢١﴾

22. ಅವೆರಡರಿಂದಲೂ[2] ಮುತ್ತು ಮತ್ತು ಹವಳಗಳು ಹೊರಬರುತ್ತವೆ.

يَخْرُجُ مِنْهُمَا ٱللُّؤْلُؤُ وَٱلْمَرْجَانُ ﴿٢٢﴾

23. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٢٣﴾

24. ಸಮುದ್ರದಲ್ಲಿ (ಚಲಿಸುವ ಸಲುವಾಗಿ) ಪರ್ವತಗಳಂತೆ ಎತ್ತರವಾಗಿ ನಿರ್ಮಿಸಲಾಗುವ ಹಡಗುಗಳು ಅವನ ನಿಯಂತ್ರಣದಲ್ಲಿವೆ.

وَلَهُ ٱلْجَوَارِ ٱلْمُنشَـَٔاتُ فِى ٱلْبَحْرِ كَٱلْأَعْلَـٰمِ ﴿٢٤﴾

25. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٢٥﴾

26. ಅಲ್ಲಿ (ಭೂಮುಖದಲ್ಲಿ)ರುವ ಎಲ್ಲರೂ ನಾಶವಾಗುವರು.

كُلُّ مَنْ عَلَيْهَا فَانٍ ﴿٢٦﴾

27. ಮಹತ್ವವುಳ್ಳವನೂ ಔದಾರ್ಯವುಳ್ಳವನೂ ಆದ ತಮ್ಮ ರಬ್‌ನ ಮುಖವು ಬಾಕಿಯುಳಿಯುವುದು.

وَيَبْقَىٰ وَجْهُ رَبِّكَ ذُو ٱلْجَلَـٰلِ وَٱلْإِكْرَامِ ﴿٢٧﴾

28. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٢٨﴾

---

1 ಇಲ್ಲಿ ಪ್ರಸ್ತಾಪಿಸಿರುವುದು ನದಿನೀರು ಮತ್ತು ಸಮುದ್ರ ನೀರು ಪರಸ್ಪರ ಮಿಶ್ರವಾಗದೆ ಬಹುದೂರ ಹರಿಯುವ ನದಿಮುಖಗಳ ಬಗ್ಗೆಯಾಗಿರಬಹುದು. ಸಮುದ್ರದಲ್ಲಿಯೂ ಪರಸ್ಪರ ಮಿಶ್ರವಾಗದೆ ಬೇರ್ಪಟ್ಟು ಹರಿಯುವ ಜಲಪ್ರವಾಹಗಳಿವೆ.

2 ಅರ್ಥಾತ್ ನದಿನೀರಿನಿಂದ ಮತ್ತು ಸಮುದ್ರನೀರಿನಿಂದ.

**29.** ಆಕಾಶಗಳಲ್ಲಿರುವವರು ಮತ್ತು ಭೂಮಿಯಲ್ಲಿರುವವರು ಅವನೊಂದಿಗೆ ಬೇಡುತ್ತಿರುವರು. ಅನುದಿನವೂ ಅವನು ಕಾರ್ಯಮಗ್ನನಾಗಿರುವನು.

يَسۡـَٔلُهُۥ مَن فِي ٱلسَّمَٰوَٰتِ وَٱلۡأَرۡضِۚ كُلَّ يَوۡمٍ هُوَ فِي شَأۡنٖ ٢٩

**30.** ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٣٠

**31.** ಓ ಭಾರವುಳ್ಳ ಎರಡು ಸಮುದಾಯಗಳೇ![1] ನಿಮಗಾಗಿ ನಾವು ಬಿಡುವು ಮಾಡಿಕೊಳ್ಳುವೆವು.[2]

سَنَفۡرُغُ لَكُمۡ أَيُّهَ ٱلثَّقَلَانِ ٣١

**32.** ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٣٢

**33.** ಓ ಜಿನ್ನ್ ಮತ್ತು ಮನುಷ್ಯ ಸಮುದಾಯಗಳೇ! ಆಕಾಶಗಳ ಮತ್ತು ಭೂಮಿಯ ವಲಯಗಳಿಂದ ಹೊರಹೋಗಲು ನಿಮಗೆ ಸಾಧ್ಯವೆಂದಾದರೆ ಹೊರಹೋಗಿರಿ. ಒಂದು ಅಧಿಕಾರವು ಲಭಿಸದ ಹೊರತು ನೀವು ಹೊರಹೋಗಲಾರಿರಿ.

يَٰمَعۡشَرَ ٱلۡجِنِّ وَٱلۡإِنسِ إِنِ ٱسۡتَطَعۡتُمۡ أَن تَنفُذُواْ مِنۡ أَقۡطَارِ ٱلسَّمَٰوَٰتِ وَٱلۡأَرۡضِ فَٱنفُذُواْۚ لَا تَنفُذُونَ إِلَّا بِسُلۡطَٰنٖ ٣٣

**34.** ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٣٤

**35.** ನಿಮ್ಮಿಬ್ಬರೆಡೆಗೆ ಅಗ್ನಿಜ್ವಾಲೆ ಮತ್ತು ಹೊಗೆಯನ್ನು ಕಳುಹಿಸಲಾಗುವುದು. ಆಗ ನಿಮಗೆ ರಕ್ಷಾಮಾರ್ಗವನ್ನು ಪಡೆಯಲು ಸಾಧ್ಯವಾಗದು.

يُرۡسَلُ عَلَيۡكُمَا شُوَاظٞ مِّن نَّارٖ وَنُحَاسٞ فَلَا تَنتَصِرَانِ ٣٥

**36.** ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٣٦

**37.** ಆಕಾಶವು ಒಡೆದು ಹೋಳಾಗಿ ಅದು ಎಣ್ಣೆಯಂತೆಯೂ ಗುಲಾಬಿ ಬಣ್ಣವುಳ್ಳದ್ದೂ ಆಗುವುದು.

فَإِذَا ٱنشَقَّتِ ٱلسَّمَآءُ فَكَانَتۡ وَرۡدَةٗ كَٱلدِّهَانِ ٣٧

---

1 ಅಂದರೆ ಮನುಷ್ಯರು ಮತ್ತು ಜಿನ್ನ್‌ಗಳು.

2 ನಿಮ್ಮ ವಿಚಾರಣೆ ಮಾಡಲು ಮತ್ತು ಪ್ರತಿಫಲ ನೀಡಲು ನಾವು ಒಂದು ಸಂದರ್ಭವನ್ನು ನಿಗದಿಗೊಳಿಸುವೆವು ಎಂದರ್ಥ.

38. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٣٨

39. ಆ ದಿನದಂದು ಯಾವುದೇ ಮನುಷ್ಯನಲ್ಲಾಗಲಿ ಜಿನ್ನ್‌ನಲ್ಲಾಗಲಿ ಅವನ ಪಾಪದ ಕುರಿತು ಪ್ರಶ್ನಿಸಲಾಗದು.[1]

فَيَوْمَئِذٍ لَّا يُسْـَٔلُ عَن ذَنۢبِهِۦٓ إِنسٌ وَلَا جَآنٌّ ٣٩

40. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٠

41. ಅಪರಾಧಿಗಳನ್ನು ಅವರ ಲಕ್ಷಣಗಳ ಮೂಲಕ ಗುರುತಿಸಲಾಗುವುದು. ತರುವಾಯ (ಅವರ) ಜುಟ್ಟು ಮತ್ತು ಪಾದಗಳಿಂದ ಅವರನ್ನು ಹಿಡಿಯಲಾಗುವುದು.

يُعْرَفُ ٱلْمُجْرِمُونَ بِسِيمَٰهُمْ فَيُؤْخَذُ بِٱلنَّوَٰصِى وَٱلْأَقْدَامِ ٤١

42. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٢

43. ಅಪರಾಧಿಗಳು ನಿಷೇಧಿಸುವ ನರಕಾಗ್ನಿಯು ಇದೇ ಆಗಿದೆ.

هَٰذِهِۦ جَهَنَّمُ ٱلَّتِى يُكَذِّبُ بِهَا ٱلْمُجْرِمُونَ ٤٣

44. ಅದರ ಮತ್ತು ಕುದಿಯುವ ಬಿಸಿನೀರಿನ ನಡುವೆ ಅವರು ಸುತ್ತುತ್ತಿರುವರು.

يَطُوفُونَ بَيْنَهَا وَبَيْنَ حَمِيمٍ ءَانٍ ٤٤

45. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٥

46. ತನ್ನ ರಬ್‌ನ ಸನ್ನಿಧಿಯನ್ನು ಭಯಪಟ್ಟವನಿಗೆ ಎರಡು ಸ್ವರ್ಗೋದ್ಯಾನಗಳಿವೆ.[2]

وَلِمَنْ خَافَ مَقَامَ رَبِّهِۦ جَنَّتَانِ ٤٦

---

1 ಈ ಜಗತ್ತಿನಲ್ಲಿರುವ ನ್ಯಾಯಾಧೀಶರಿಗೆ ಅಪರಾಧಿಗಳ ವಿಚಾರಣೆ ಮಾಡಿ ಸತ್ಯವನ್ನು ಹೊರತರಬೇಕಾಗುತ್ತದೆ. ಆದರೆ ಅಲ್ಲಾಹುವಿಗೆ ನ್ಯಾಯ ತೀರ್ಮಾನ ಮಾಡಲು ಅವುಗಳ ಅಗತ್ಯವಿಲ್ಲ. ಪ್ರತಿಯೊಬ್ಬ ಮನುಷ್ಯನ ಕರ್ಮ ದಾಖಲೆಯನ್ನು ಅವನವನ ಸಮ್ಮುಖದಲ್ಲಿಟ್ಟು, ಮನುಷ್ಯನ ಕೈಕಾಲುಗಳು ಅವರಿಗೆ ವಿರುದ್ಧವಾಗಿ ಸಾಕ್ಷಿ ನುಡಿಯುವಂತೆ (36:65) ಮಾಡುವ ಮೂಲಕ ಪ್ರಶ್ನೆ ಕೇಳುವ ಅಥವಾ ವಿಚಾರಿಸುವ ಅಗತ್ಯವಿಲ್ಲವಾಗುತ್ತದೆ.

2 46ರಿಂದ 60ರವರೆಗಿನ ಸೂಕ್ತಿಗಳಲ್ಲಿ ಅಲ್ಲಾಹುವಿನ ಬಳಿ ಅತಿಹೆಚ್ಚು ಸಾಮೀಪ್ಯಗಳಿಸಿದ ದಾಸರಿಗಿರುವ ಪ್ರತಿಫಲದ

47. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٤٧﴾

48. ಹಲವು ತರಹದ ಸುಖ ಐಶ್ವರ್ಯಗಳಿರುವ ಎರಡು (ಸ್ವರ್ಗೋದ್ಯಾನಗಳು).

ذَوَاتَآ أَفۡنَانٖ ﴿٤٨﴾

49. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٤٩﴾

50. ಅವೆರಡರಲ್ಲಿಯೂ ಹರಿಯುತ್ತಿರುವ ಎರಡು ತೊರೆಗಳಿವೆ.

فِيهِمَا عَيۡنَانِ تَجۡرِيَانِ ﴿٥٠﴾

51. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٥١﴾

52. ಅವೆರಡರಲ್ಲಿಯೂ ಪ್ರತಿಯೊಂದು ಫಲವರ್ಗಕ್ಕೆ ಸೇರಿದ ಎರಡೆರಡು ಜೋಡಿಗಳಿವೆ.

فِيهِمَا مِن كُلِّ فَٰكِهَةٖ زَوۡجَانِ ﴿٥٢﴾

53. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٥٣﴾

54. ಅವರು ಕೆಲವು ಸುಖಾಸನಗಳಲ್ಲಿ ಒರಗಿ ಕುಳಿತುಕೊಂಡಿರುವರು. ಅವುಗಳ ಒಳಭಾಗವನ್ನು ದಪ್ಪ ರೇಷ್ಮೆಯಿಂದ ನಿರ್ಮಿಸಲಾಗಿದೆ. ಆ ಎರಡು ಉದ್ಯಾನಗಳಲ್ಲಿ ಫಲಗಳು ಬಾಗಿಕೊಂಡಿರುವುವು.

مُتَّكِـِٔينَ عَلَىٰ فُرُشِۭ بَطَآئِنُهَا مِنۡ إِسۡتَبۡرَقٖۚ وَجَنَى ٱلۡجَنَّتَيۡنِ دَانٖ ﴿٥٤﴾

55. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٥٥﴾

56. ದೃಷ್ಟಿಯನ್ನು ನಿಯಂತ್ರಿಸುವ ಸ್ತ್ರೀಯರು ಅವುಗಳಲ್ಲಿರುವರು. ಅವರಿಗಿಂತ ಮುಂಚೆ ಮನುಷ್ಯನಾಗಲಿ ಜಿನ್ನಾಗಲಿ ಅವರನ್ನು ಸ್ಪರ್ಶಿಸಿಲ್ಲ.

فِيهِنَّ قَٰصِرَٰتُ ٱلطَّرۡفِ لَمۡ يَطۡمِثۡهُنَّ إِنسٞ قَبۡلَهُمۡ وَلَا جَآنّٞ ﴿٥٦﴾

---

ಕುರಿತು ಮತ್ತು 62ರಿಂದ 76ರವರೆಗಿರುವ ಸೂಕ್ತಿಗಳಲ್ಲಿ ಅದರ ಕೆಳಗಿನ ಪದವಿಯಲ್ಲಿರುವ ಸತ್ಯವಿಶ್ವಾಸಿಗಳ ಪ್ರತಿಫಲದ ಕುರಿತು ಪ್ರಸ್ತಾಪಿಸಲಾಗಿದೆಯೆಂದು ಪ್ರಮುಖ ವ್ಯಾಖ್ಯಾನಕಾರರು ಹೇಳಿದ್ದಾರೆ.

57. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٥٧

58. ಅವರು ಮಾಣಿಕ್ಯ ಮತ್ತು ಹವಳದಂತಿರುವರು.

كَأَنَّهُنَّ ٱلْيَاقُوتُ وَٱلْمَرْجَانُ ٥٨

59. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٥٩

60. ಸತ್ಕರ್ಮಕ್ಕಿರುವ ಪ್ರತಿಫಲವು ಸತ್ಫಲವಲ್ಲದೆ ಇನ್ನೇನು?[1]

هَلْ جَزَآءُ ٱلْإِحْسَٰنِ إِلَّا ٱلْإِحْسَٰنُ ٦٠

61. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٦١

62. ಅವೆರಡರ ಹೊರತಾಗಿ[2] ಬೇರೆ ಎರಡು ಸ್ವರ್ಗೋದ್ಯಾನಗಳಿವೆ.

وَمِن دُونِهِمَا جَنَّتَانِ ٦٢

63. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٦٣

64. ಕಡುಹಸಿರನ್ನು ಹೊದ್ದುಕೊಂಡಿರುವ ಎರಡು ಸ್ವರ್ಗೋದ್ಯಾನಗಳು.

مُدْهَآمَّتَانِ ٦٤

65. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٦٥

66. ಅವೆರಡರಲ್ಲೂ ರಭಸವಾಗಿ ಹರಿಯುವ ಎರಡು ತೊರೆಗಳಿವೆ.

فِيهِمَا عَيْنَانِ نَضَّاخَتَانِ ٦٦

67. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٦٧

---

1 ಮನುಷ್ಯನ ಕರ್ಮ ಒಳಿತಾಗಿರುವಾಗ ಅದಕ್ಕಿರುವ ಅಲ್ಲಾಹುವಿನ ಪ್ರತಿಫಲವೂ ಒಳಿತಾಗಿರುವುದು ಎಂದರ್ಥ.

2 ಮಿನ್ ದೂನಿಹಿಮಾ ಎಂದರೆ ಅವೆರಡರ ಹೊರತಾಗಿ ಅಥವಾ ಅವೆರಡರ ಕೆಳಗಿನದಾಗಿ ಎಂದೂ ಅರ್ಥೈಸಲಾಗುತ್ತದೆ.

68. ಅವೆರಡರಲ್ಲೂ ಫಲಗಳಿವೆ, ಖರ್ಜೂರ ಮತ್ತು ದಾಳಿಂಬೆಗಳಿವೆ.

فِيهِمَا فَٰكِهَةٌ وَنَخۡلٌ وَرُمَّانٌ ٦٨

69. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٦٩

70. ಅವುಗಳಲ್ಲಿ ಸುರಸುಂದರಿಯರಾದ ಉತ್ತಮ ಸ್ತ್ರೀಯರಿರುವರು.

فِيهِنَّ خَيۡرَٰتٌ حِسَانٌ ٧٠

71. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٧١

72. ಡೇರೆಗಳಲ್ಲಿ ಸುರಕ್ಷಿತವಾಗಿಡಲಾದ ಬೆಳ್ಳಗಿನ ತರುಣಿಯರು!

حُورٌ مَّقۡصُورَٰتٌ فِي ٱلۡخِيَامِ ٧٢

73. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٧٣

74. ಅವರಿಗಿಂತ ಮೊದಲು ಮನುಷ್ಯನಾಗಲಿ ಜಿನ್ನಾಗಲಿ ಅವರನ್ನು ಸ್ಪರ್ಶಿಸಿಲ್ಲ.

لَمۡ يَطۡمِثۡهُنَّ إِنسٌ قَبۡلَهُمۡ وَلَا جَآنٌّ ٧٤

75. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٧٥

76. ಅವರು ಹಸಿರು ವರ್ಣದ ದಿಂಬುಗಳಲ್ಲಿ ಮತ್ತು ಸುಂದರ ನೆಲಹಾಸುಗಳಲ್ಲಿ ಒರಗಿ ಕುಳಿತಿರುವರು.

مُتَّكِـِٔينَ عَلَىٰ رَفۡرَفٍ خُضۡرٍ وَعَبۡقَرِيٍّ حِسَانٍ ٧٦

77. ಹಾಗಾದರೆ ನಿಮ್ಮಿಬ್ಬರ ರಬ್ ದಯಪಾಲಿಸಿರುವ ಅನುಗ್ರಹಗಳಲ್ಲಿ ನೀವು ಯಾವುದನ್ನು ನಿಷೇಧಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٧٧

78. ಮಹತ್ವಪೂರ್ಣನೂ, ಔದಾರ್ಯಪೂರ್ಣನೂ ಆಗಿರುವ ತಮ್ಮ ರಬ್‌ನ ನಾಮವು ಅನುಗ್ರಹೀತವಾಗಿದೆ.

تَبَٰرَكَ ٱسۡمُ رَبِّكَ ذِي ٱلۡجَلَٰلِ وَٱلۡإِكۡرَامِ ٧٨

## ಅಲ್‌ವಾಕಿಅಃ (ಘಟನೆ)

## سُورَةُ الوَاقِعَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 96

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

إِذَا وَقَعَتِ ٱلۡوَاقِعَةُ ١

1. ಆ ಘಟನೆಯು ಸಂಭವಿಸಿದಾಗ.

لَيۡسَ لِوَقۡعَتِهَا كَاذِبَةٌ ٢

2. ಅದರ ಸಂಭವನೀಯತೆಯನ್ನು ನಿಷೇಧಿಸುವವರು ಯಾರೂ ಇರಲಾರರು.

خَافِضَةٞ رَّافِعَةٌ ٣

3. (ಆ ಘಟನೆಯು ಕೆಲವರನ್ನು) ಕೆಳಗಿಳಿಸುವುದು ಮತ್ತು (ಕೆಲವರನ್ನು) ಮೇಲೇರಿಸುವುದು.(1)

إِذَا رُجَّتِ ٱلۡأَرۡضُ رَجّٗا ٤

4. ಭೂಮಿಯನ್ನು ತೀಕ್ಷ್ಣವಾಗಿ ನಡುಗಿಸಲಾಗುವಾಗ.

وَبُسَّتِ ٱلۡجِبَالُ بَسّٗا ٥

5. ಪರ್ವತಗಳು ನುಚ್ಚುನೂರಾಗುವಾಗ.

فَكَانَتۡ هَبَآءٗ مُّنۢبَثّٗا ٦

6. ತರುವಾಯ ಅದು ಹಾರುವ ಧೂಳಿಯಾಗುವಾಗ.

وَكُنتُمۡ أَزۡوَٰجٗا ثَلَٰثَةٗ ٧

7. ಆಗ ನೀವು ಮೂರು ಗುಂಪುಗಳಾಗುವಿರಿ.

فَأَصۡحَٰبُ ٱلۡمَيۡمَنَةِ مَآ أَصۡحَٰبُ ٱلۡمَيۡمَنَةِ ٨

8. ಒಂದು ಗುಂಪು ಬಲಭಾಗದವರು. ಬಲಭಾಗದವರ ಸ್ಥಿತಿಯೇನು?

وَأَصۡحَٰبُ ٱلۡمَشۡـَٔمَةِ مَآ أَصۡحَٰبُ ٱلۡمَشۡـَٔمَةِ ٩

9. ಇನ್ನೊಂದು ಗುಂಪು ಎಡಭಾಗದವರು. ಎಡಭಾಗದವರ ಸ್ಥಿತಿಯೇನು?(2)

1 ಇಹಲೋಕದಲ್ಲಿ ಉನ್ನತ ಸ್ಥಾನದಲ್ಲಿದ್ದ ಅನೇಕ ಮಂದಿಯ ಪದವಿ ಅಂತ್ಯದಿನದಂದು ಕೀಳಾಗಿಸಲಾಗುವುದು ಮತ್ತು ಇಹಲೋಕದಲ್ಲಿ ದೌರ್ಜನ್ಯಕ್ಕೊಳಗಾಗಿದ್ದ ಹಾಗೂ ಅವಹೇಳನಕ್ಕೊಳಗಾಗಿದ್ದ ಅನೇಕ ಜನರ ಪದವಿ ಉನ್ನತವಾಗಿರುವುದು ಎಂದರ್ಥ.

2 ಸತ್ಯವಿಶ್ವಾಸಿಗಳಿಗೆ ಮತ್ತು ಸತ್ಕರ್ಮಿಗಳಿಗೆ ಪರಲೋಕದಲ್ಲಿ ಅವರ ಕರ್ಮ ದಾಖಲೆಯನ್ನು ಬಲಗೈಯಲ್ಲಿ ನೀಡಲಾಗುವುದೆಂದು ಕುರ್‌ಆನ್ ಸ್ಪಷ್ಟಪಡಿಸಿದೆ (17:71; 69:19; 84:7). ಇಲ್ಲಿ ಬಲಭಾಗದವರು ಎಂಬ ಪದವು ಇದನ್ನೇ ಸೂಚಿಸುತ್ತದೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಸತ್ಯನಿಷೇಧಿ ಮತ್ತು ದುರ್ಮಾರ್ಗಿಗಳಾಗಿರುವ ಜನರಿಗೆ ಪರಲೋಕದಲ್ಲಿ ಅವರ ಕರ್ಮ ದಾಖಲೆಯನ್ನು ಎಡಗೈಯ ಮೂಲಕ ನೀಡಲಾಗುವುದೆಂದೂ ಹೇಳಲಾಗಿದೆ. (69:25). ಇಲ್ಲಿ ಎಡಭಾಗದವರು ಎಂಬ ಪದವು ಇದನ್ನೇ ಸೂಚಿಸುತ್ತದೆಂದು ಹೆಚ್ಚಿನ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಬಲಭಾಗ ಎಂಬ ಅರ್ಥದ ಹೊರತಾಗಿ 'ಮೈಮನಃ' ಎಂಬ ಪದಕ್ಕೆ ಉತ್ಕೃಷ್ಟ ಎಂಬ ಅರ್ಥವಿದೆ. 'ಮಶ್‌ಅಮಃ' ಎಂಬ ಪದಕ್ಕೆ ಎಡಭಾಗ ಎಂಬ ಅರ್ಥದ ಹೊರತಾಗಿ ನಿಕೃಷ್ಟ ಎಂಬ ಅರ್ಥವಿದೆ. ಆದ್ದರಿಂದ 'ಅಸ್‌ಹಾಬುಲ್ ಮೈಮನಃ' ಮತ್ತು 'ಅಸ್‌ಹಾಬುಲ್ ಮಶ್‌ಅಮಃ' ಎಂಬ ಪದಗಳಿಗೆ ಅನುಕ್ರಮವಾಗಿ ಉತ್ಕೃಷ್ಟರು ಮತ್ತು ನಿಕೃಷ್ಟರು ಎಂಬ ಅರ್ಥವೂ ಬರುತ್ತದೆ.

وَٱلسَّـٰبِقُونَ ٱلسَّـٰبِقُونَ ﴿١٠﴾

**10.** (ಸತ್ಯವಿಶ್ವಾಸದಲ್ಲಿ ಮತ್ತು ಸತ್ಕರ್ಮಗಳಲ್ಲಿ) ಮುಂಚೂಣಿಯಲ್ಲಿದ್ದವರು (ಪರಲೋಕದಲ್ಲೂ) ಮುಂಚೂಣಿಯಲ್ಲಿರುವರು.

أُوْلَـٰٓئِكَ ٱلْمُقَرَّبُونَ ﴿١١﴾

**11.** ಅವರು ಸಾಮೀಪ್ಯ ನೀಡಲಾದವರಾಗಿರುವರು.

فِي جَنَّـٰتِ ٱلنَّعِيمِ ﴿١٢﴾

**12.** ಸುಖಾನುಭೂತಿಗಳು ತುಂಬಿದ ಸ್ವರ್ಗೋದ್ಯಾನಗಳಲ್ಲಿ.

ثُلَّةٌ مِّنَ ٱلْأَوَّلِينَ ﴿١٣﴾

**13.** ಇವರು ಪೂರ್ವಿಕರಲ್ಲಿನ ಒಂದು ವಿಭಾಗವೂ,

وَقَلِيلٌ مِّنَ ٱلْـَٔاخِرِينَ ﴿١٤﴾

**14.** ನಂತರದವರಲ್ಲಿರುವ ಕೆಲವರೂ ಆಗಿರುವರು.[1]

عَلَىٰ سُرُرٍ مَّوْضُونَةٍ ﴿١٥﴾

**15.** ಅವರು ಸ್ವರ್ಣದಾರದಿಂದ ನೇಯಲಾದ ಮಂಚಗಳಲ್ಲಿರುವರು.

مُّتَّكِـِٔينَ عَلَيْهَا مُتَقَـٰبِلِينَ ﴿١٦﴾

**16.** ಅವುಗಳಲ್ಲಿ ಅವರು ಪರಸ್ಪರ ಅಭಿಮುಖವಾಗಿ ಒರಗಿ ಕುಳಿತಿರುವರು.

يَطُوفُ عَلَيْهِمْ وِلْدَٰنٌ مُّخَلَّدُونَ ﴿١٧﴾

**17.** ಚಿರಂಜೀವಿಗಳಾದ ಬಾಲಕರು ಅವರ ನಡುವೆ ಸುತ್ತುತ್ತಿರುವರು.

بِأَكْوَابٍ وَأَبَارِيقَ وَكَأْسٍ مِّن مَّعِينٍ ﴿١٨﴾

**18.** ಲೋಟಗಳು, ಹೂಜಿಗಳು ಮತ್ತು ಶುದ್ಧವಾದ ಒರತೆ ನೀರು ತುಂಬಲಾದ ಪಾನೀಯ ಪಾತ್ರೆಯೊಂದಿಗೆ.

لَّا يُصَدَّعُونَ عَنْهَا وَلَا يُنزِفُونَ ﴿١٩﴾

**19.** ಅದನ್ನು (ಕುಡಿಯುವುದರಿಂದ) ಅವರಿಗೆ ತಲೆನೋವಾಗಲಿ, ನಶೆಯಾಗಲಿ ಉಂಟಾಗದು.

وَفَـٰكِهَةٍ مِّمَّا يَتَخَيَّرُونَ ﴿٢٠﴾

**20.** ಅವರು ಇಷ್ಟಪಟ್ಟು ಆರಿಸುವ ವಿಧದಲ್ಲಿರುವ ಫಲಗಳೊಂದಿಗೆ.

وَلَحْمِ طَيْرٍ مِّمَّا يَشْتَهُونَ ﴿٢١﴾

**21.** ಅವರು ಹಂಬಲಿಸುವಂತಹ ಹಕ್ಕಿಗಳ ಮಾಂಸದೊಂದಿಗೆ (ಆ ಬಾಲಕರು ಸುತ್ತುತ್ತಿರುವರು).

وَحُورٌ عِينٌ ﴿٢٢﴾

**22.** ವಿಶಾಲವಾದ ಕಣ್ಣುಗಳುಳ್ಳ ಬೆಳ್ಳಗಿನ ತರುಣಿಯರು (ಅವರಿಗಿರುವರು).

---

1 ಸ್ವರ್ಗವಾಸಿಗಳ ಪೈಕಿ ಸತ್ಯವಿಶ್ವಾಸದ ಪರಿಪೂರ್ಣತೆಯಿಂದ ಮತ್ತು ಸತ್ಕರ್ಮಗಳ ಆಧಿಕ್ಯದಿಂದ ಅಲ್ಲಾಹುವಿನ ಬಳಿ ಅತಿಹೆಚ್ಚು ಸಾಮೀಪ್ಯ ಗಳಿಸಿದವರು ಮತ್ತು ಅದಕ್ಕಿಂತ ಕೆಳಗಿನ ದರ್ಜೆಯಲ್ಲಿರುವವರು ಇದ್ದಾರೆಂದು ಇದರಿಂದ ಗ್ರಹಿಸಬಹುದಾಗಿದೆ.

23. (ಚಿಪ್ಪುಗಳಲ್ಲಿ) ಬಚ್ಚಿಡಲಾಗಿರುವ ಮುತ್ತುಗಳಂತಿರುವವರು.

كَأَمۡثَٰلِ ٱللُّؤۡلُوِ ٱلۡمَكۡنُونِ ۝٢٣

24. ಅವರು ಮಾಡುತ್ತಿರುವುದಕ್ಕಿರುವ ಪ್ರತಿಫಲವಾಗಿ (ಇವೆಲ್ಲವನ್ನೂ ದಯಪಾಲಿಸಲಾಗುವುದು).

جَزَآءَۢ بِمَا كَانُواْ يَعۡمَلُونَ ۝٢٤

25. ಅನಾವಶ್ಯಕ ಮಾತನ್ನಾಗಲಿ, ದೋಷಾರೋಪವನ್ನಾಗಲಿ ಅವರು ಅಲ್ಲಿ ಆಲಿಸಲಾರರು.

لَا يَسۡمَعُونَ فِيهَا لَغۡوٗا وَلَا تَأۡثِيمًا ۝٢٥

26. ಶಾಂತಿ! ಶಾಂತಿ! ಎಂಬ ಮಾತಿನ ಹೊರತು.

إِلَّا قِيلٗا سَلَٰمٗا سَلَٰمٗا ۝٢٦

27. ಬಲಭಾಗದವರು! ಬಲಭಾಗದವರ ಸ್ಥಿತಿಯೇನು?

وَأَصۡحَٰبُ ٱلۡيَمِينِ مَآ أَصۡحَٰبُ ٱلۡيَمِينِ ۝٢٧

28-34. ಅವರಿಗೆ ಮುಳ್ಳುಗಳಿಲ್ಲದ ಬೋರೆ ಮರ, ಪದರ ಪದರವಾದ ಗೊನೆಗಳಿರುವ ಬಾಳೆ, ವಿಶಾಲವಾದ ನೆರಳು, ಸದಾ ಹರಿಯುತ್ತಿರುವ ನೀರು, ಎಂದಿಗೂ ಕೊನೆಗೊಳ್ಳದ ಮತ್ತು ತಡೆಯಲ್ಪಡದ ಹೇರಳ ಹಣ್ಣುಹಂಪಲುಗಳು, ಎತ್ತರದ ದಿಂಬುಗಳು ಇತ್ಯಾದಿ ಸುಖಾಡಂಬರಗಳಿರುವುವು.

فِي سِدۡرٖ مَّخۡضُودٖ ۝٢٨ وَطَلۡحٖ مَّنضُودٖ ۝٢٩
وَظِلّٖ مَّمۡدُودٖ ۝٣٠ وَمَآءٖ مَّسۡكُوبٖ ۝٣١
وَفَٰكِهَةٖ كَثِيرَةٖ ۝٣٢ لَّا مَقۡطُوعَةٖ وَلَا
مَمۡنُوعَةٖ ۝٣٣ وَفُرُشٖ مَّرۡفُوعَةٍ ۝٣٤

35. ಖಂಡಿತವಾಗಿಯೂ ನಾವು ಅವರನ್ನು (ಸ್ವರ್ಗದ ಸ್ತ್ರೀಯರನ್ನು) ಒಂದು ವಿಶೇಷ ರೀತಿಯಲ್ಲಿ ಸೃಷ್ಟಿಸಿರುವೆವು.(1)

إِنَّآ أَنشَأۡنَٰهُنَّ إِنشَآءٗ ۝٣٥

36-37. ನಾವು ಅವರನ್ನು ಕನ್ಯೆಯರನ್ನಾಗಿಯೂ, ಪ್ರಿಯತಮೆಯರನ್ನಾಗಿಯೂ, ಸಮವಯಸ್ಕರನ್ನಾಗಿಯೂ ಮಾಡಿರುವೆವು.

فَجَعَلۡنَٰهُنَّ أَبۡكَارًا ۝٣٦ عُرُبًا أَتۡرَابٗا ۝٣٧

38. ಬಲಭಾಗದವರಿಗಾಗಿ.

لِّأَصۡحَٰبِ ٱلۡيَمِينِ ۝٣٨

39-40. ಅವರು ಪೂರ್ವಿಕರಲ್ಲಿನ ಒಂದು ವಿಭಾಗವೂ ನಂತರದವರಲ್ಲಿನ ಒಂದು ವಿಭಾಗವೂ ಆಗಿರುವರು.

ثُلَّةٞ مِّنَ ٱلۡأَوَّلِينَ ۝٣٩ وَثُلَّةٞ مِّنَ ٱلۡأٓخِرِينَ ۝٤٠

1 ಸ್ವರ್ಗವಾಸಿಗಳಾದ ಸ್ತ್ರೀಯರನ್ನು ಇಹಲೋಕದಲ್ಲಿದ್ದಂತಹ ಸ್ಥಿತಿಗಿಂತ ಭಿನ್ನವಾಗಿ ಅನ್ಯೂನವಾಗಿ ಸೃಷ್ಟಿಸಲಾಗುವುದು ಎಂದರ್ಥ

41. ಎಡಭಾಗದವರು. ಎಡಭಾಗದವರ ಸ್ಥಿತಿಯೇನು?

وَأَصۡحَٰبُ ٱلشِّمَالِ مَآ أَصۡحَٰبُ ٱلشِّمَالِ ﴿٤١﴾

42-44. (ಅವರು) ತೂರಿ ನುಗ್ಗುವ ಬಿಸಿ ಗಾಳಿ, ಕುದಿಯುವ ನೀರು, ತಂಪಾಗಲಿ, ಸುಖಕರವಾಗಲಿ ಅಲ್ಲದ ಕಪ್ಪು ಹೊಗೆಯ ನೆರಳುಗಳಲ್ಲಿರುವರು.

فِي سَمُومٖ وَحَمِيمٖ ﴿٤٢﴾ وَظِلّٖ مِّن يَحۡمُومٖ ﴿٤٣﴾ لَّا بَارِدٖ وَلَا كَرِيمٍ ﴿٤٤﴾

45. ಯಾಕೆಂದರೆ ಖಂಡಿತವಾಗಿಯೂ ಅವರು ಅದಕ್ಕೆ ಮುಂಚೆ ಸುಖಲೋಲುಪರಾಗಿದ್ದರು.

إِنَّهُمۡ كَانُواْ قَبۡلَ ذَٰلِكَ مُتۡرَفِينَ ﴿٤٥﴾

46. ಅವರು ಘೋರವಾದ ಪಾಪದಲ್ಲಿ ಹಟತೊಟ್ಟು ನಿಂತವರಾಗಿದ್ದರು.

وَكَانُواْ يُصِرُّونَ عَلَى ٱلۡحِنثِ ٱلۡعَظِيمِ ﴿٤٦﴾

47. ಅವರು ಹೇಳುತ್ತಿದ್ದರು: 'ನಮ್ಮನ್ನು ಪುನರುತ್ಥಾನಗೊಳಿಸಲಾಗುವುದು ನಾವು ಮೃತರಾಗಿ ಮಣ್ಣು ಮತ್ತು ಮೂಳೆಗಳಾಗಿ ಮಾರ್ಪಟ್ಟ ಬಳಿಕವೇ?

وَكَانُواْ يَقُولُونَ أَئِذَا مِتۡنَا وَكُنَّا تُرَابٗا وَعِظَٰمًا أَءِنَّا لَمَبۡعُوثُونَ ﴿٤٧﴾

48. ನಮ್ಮ ಪೂರ್ವಿಕರನ್ನೂ (ಪುನರುತ್ಥಾನ ಗೊಳಿಸಲಾಗುವುದೇ)?'

أَوَ ءَابَآؤُنَا ٱلۡأَوَّلُونَ ﴿٤٨﴾

49. ಹೇಳಿರಿ: 'ಖಂಡಿತವಾಗಿಯೂ ಪೂರ್ವಿಕರೂ ನಂತರದವರೂ ಎಲ್ಲರೂ;

قُلۡ إِنَّ ٱلۡأَوَّلِينَ وَٱلۡأٓخِرِينَ ﴿٤٩﴾

50. ಒಂದು ನಿಶ್ಚಿತ ದಿನದ ನಿಖರವಾದ ಒಂದು ಅವಧಿಯಲ್ಲಿ ಒಟ್ಟುಗೂಡಿಸಲಾಗುವರು.

لَمَجۡمُوعُونَ إِلَىٰ مِيقَٰتِ يَوۡمٖ مَّعۡلُومٖ ﴿٥٠﴾

51. ತರುವಾಯ, ಓ ಸತ್ಯನಿಷೇಧಿಗಳಾಗಿರುವ ದುರ್ಮಾರ್ಗಿಗಳೇ!

ثُمَّ إِنَّكُمۡ أَيُّهَا ٱلضَّآلُّونَ ٱلۡمُكَذِّبُونَ ﴿٥١﴾

52. ಖಂಡಿತವಾಗಿಯೂ ನೀವು ಝಕ್ಕೂಮ್ ಮರದಿಂದ[1] ತಿನ್ನುವಿರಿ.

لَأٓكِلُونَ مِن شَجَرٖ مِّن زَقُّومٖ ﴿٥٢﴾

53. ಅದರಿಂದ ನೀವು ಹೊಟ್ಟೆಗಳನ್ನು ತುಂಬಿಸುವಿರಿ.

فَمَالِـُٔونَ مِنۡهَا ٱلۡبُطُونَ ﴿٥٣﴾

54. ಅದರ ಮೇಲೆ ನೀವು ಕುದಿಯುವ ನೀರನ್ನು ಕುಡಿಯುವಿರಿ.

فَشَٰرِبُونَ عَلَيۡهِ مِنَ ٱلۡحَمِيمِ ﴿٥٤﴾

---

1 'ಝಕ್ಕೂಮ್' ಎಂದರೆ ನರಕದಲ್ಲಿರುವ ಒಂದು ಮರ. ಇದನ್ನು 17:60ರಲ್ಲಿ ಶಪಿಸಲಾದ ಮರ ಎನ್ನಲಾಗಿದೆ. ಜ್ವಲಿಸುವ ನರಕಾಗ್ನಿಯ ಬುಡದಲ್ಲಿ ಬೆಳೆಯುವ ಮರ ಎಂದು 37:64ರಲ್ಲಿ ಇದರ ಬಗ್ಗೆ ಹೇಳಲಾಗಿದೆ. ಈ ಮರ ಅಥವಾ ಅದರ ಫಲ ದುಷ್ಕರ್ಮಿಗಳಿಗೆ ನೀಡಲಾಗುವ ಆಹಾರವಾಗಿದೆ. ಅದು ಅವರ ಉದರಗಳಲ್ಲಿ ಕಾಯಿಸಿದ ಲೋಹದಂತೆ ಕುದಿಯಲಿದೆಯೆಂದು 44:43–46ರಲ್ಲಿ ವಿವರಿಸಲಾಗಿದೆ.

55. ದಾಹದಿಂದ ಬಳಲಿದ ಒಂಟೆಯು ಕುಡಿಯುವಂತೆ ನೀವು ಕುಡಿಯುವಿರಿ.

فَشَٰرِبُونَ شُرۡبَ ٱلۡهِيمِ ٥٥

56. ಇದು ಪ್ರತಿಫಲದಿನದಂದು ಅವರಿಗಿರುವ ಔತಣವಾಗಿದೆ.

هَٰذَا نُزُلُهُمۡ يَوۡمَ ٱلدِّينِ ٥٦

57. ನಿಮ್ಮನ್ನು ಸೃಷ್ಟಿಸಿದವರು ನಾವಾಗಿರುವೆವು. ಹೀಗಿರುವಾಗ ನೀವು (ನನ್ನ ಸಂದೇಶಗಳನ್ನು) ಸತ್ಯವೆಂದು ಒಪ್ಪಿಕೊಳ್ಳದಿರುವುದು ಏಕೆ?

نَحۡنُ خَلَقۡنَٰكُمۡ فَلَوۡلَا تُصَدِّقُونَ ٥٧

58. ಹಾಗಾದರೆ ನೀವು ಸ್ರವಿಸುವ ವೀರ್ಯದ ಕುರಿತು ಚಿಂತಿಸಿ ನೋಡಿರುವಿರಾ?

أَفَرَءَيۡتُم مَّا تُمۡنُونَ ٥٨

59. ಅದನ್ನು ಸೃಷ್ಟಿಸುವವರು ನೀವೋ? ಅಥವಾ ಸೃಷ್ಟಿಕರ್ತರು ನಾವೋ?

ءَأَنتُمۡ تَخۡلُقُونَهُۥٓ أَمۡ نَحۡنُ ٱلۡخَٰلِقُونَ ٥٩

60-61. ನಾವು ನಿಮ್ಮ ನಡುವೆ ಮರಣವನ್ನು ನಿರ್ಣಯಿಸಿರುವೆವು. ನಿಮ್ಮ ಬದಲಿಗೆ ನಿಮ್ಮಂತಿರುವವರನ್ನು ತರುವೆವು[1] ಮತ್ತು ನಿಮಗೆ ಅರಿವಿಲ್ಲದ ವಿಧದಲ್ಲಿ ನಿಮ್ಮನ್ನು ಪುನಃ ಸೃಷ್ಟಿಸುವೆವು ಎಂಬ ವಿಷಯದಲ್ಲಿ ನಾವು ಎಂದಿಗೂ ಸೋಲಿಸಲ್ಪಡಲಾರೆವು.

نَحۡنُ قَدَّرۡنَا بَيۡنَكُمُ ٱلۡمَوۡتَ وَمَا نَحۡنُ
بِمَسۡبُوقِينَ ٦٠ عَلَىٰٓ أَن نُّبَدِّلَ أَمۡثَٰلَكُمۡ
وَنُنشِئَكُمۡ فِي مَا لَا تَعۡلَمُونَ ٦١

62. ಮೊದಲ ಬಾರಿ ಸೃಷ್ಟಿಸಲಾಗಿರುವ ಕುರಿತು ಖಂಡಿತವಾಗಿಯೂ ನೀವು ಅರಿತುಕೊಂಡಿರುವಿರಿ. ಆದರೂ ನೀವೇಕೆ ಚಿಂತಿಸಿ ನೋಡುವುದಿಲ್ಲ.[2]

وَلَقَدۡ عَلِمۡتُمُ ٱلنَّشۡأَةَ ٱلۡأُولَىٰ فَلَوۡلَا
تَذَكَّرُونَ ٦٢

63. ನೀವು ಮಾಡುತ್ತಿರುವ ಕೃಷಿಯ ಕುರಿತು ನೀವು ಚಿಂತಿಸಿ ನೋಡಿರುವಿರಾ?

أَفَرَءَيۡتُم مَّا تَحۡرُثُونَ ٦٣

64. ಅದನ್ನು ಬೆಳೆಸುವವರು ನೀವೋ? ಅಥವಾ ಅದನ್ನು ಬೆಳೆಸುವವರು ನಾವೋ?[3]

ءَأَنتُمۡ تَزۡرَعُونَهُۥٓ أَمۡ نَحۡنُ ٱلزَّٰرِعُونَ ٦٤

---

1 ಅನ್ ನುಬದ್ದಿಲ ಅಮ್ಸಾಲಕುಮ್ ಎಂದರೆ 'ನಿಮ್ಮ ಸ್ವರೂಪವನ್ನು ಬದಲಾಯಿಸಲು' ಎಂದು ಕೆಲವರು ಅರ್ಥ ನೀಡಿದ್ದಾರೆ.

2 ಮೊದಲ ಬಾರಿ ನಿಮ್ಮನ್ನು ಸೃಷ್ಟಿಸಿದ ಅಲ್ಲಾಹುವಿಗೆ ನಿಮ್ಮನ್ನು ಪುನಃ ಸೃಷ್ಟಿಸುವುದು ಕಷ್ಟಕರವಲ್ಲವೆಂದು ನೀವೇಕೆ ಗ್ರಹಿಸುವುದಿಲ್ಲ ಎಂದರ್ಥ.

3 ಬೀಜ ಮೊಳಕೆಯೊಡೆದು ಬೆಳೆದು ಉತ್ಪಾದನಾ ಶಕ್ತಿಯನ್ನು ಪಡೆಯುವುದರಲ್ಲಿ ಕೃಷಿಕನ ಮೂಲಭೂತವಾದ ಯಾವುದೇ ಪಾತ್ರವಿಲ್ಲ. ಸಸ್ಯ ಬೆಳವಣಿಗೆಯು ನಡೆಯುವುದು ಬೀಜದ ಕೋಶಗಳಲ್ಲಿರುವ ಜೀನ್‌ಗಳಲ್ಲಿ

65-67. ನಾವು ಇಚ್ಛಿಸಿದ್ದರೆ ಅದನ್ನು (ಬೆಳೆಯನ್ನು) ಕಿಲುಬುಗಳನ್ನಾಗಿ ಮಾಡಿಬಿಡುತ್ತಿದ್ದೆವು. ಆಗ ನೀವು ಅತಿಶಯ ಹೊಂದಿ ಹೇಳುವವರಾಗಬಹುದು: 'ಖಂಡಿತವಾಗಿಯೂ ನಾವು ಸಾಲಬಾಧಿತರಾಗಿರುವೆವು. ಅಲ್ಲ, ನಾವು (ಜೀವನಾಧಾರದಿಂದ) ತಡೆಯಲ್ಪಟ್ಟವರಾಗಿರುವೆವು'.

لَوْ نَشَآءُ لَجَعَلْنَٰهُ حُطَٰمًا فَظَلْتُمْ تَفَكَّهُونَ ﴿٦٥﴾ إِنَّا لَمُغْرَمُونَ ﴿٦٦﴾ بَلْ نَحْنُ مَحْرُومُونَ ﴿٦٧﴾

68. ನೀವು ಕುಡಿಯುವ ನೀರಿನ ಕುರಿತು ಚಿಂತಿಸಿ ನೋಡಿರುವಿರಾ?

أَفَرَءَيْتُمُ ٱلْمَآءَ ٱلَّذِى تَشْرَبُونَ ﴿٦٨﴾

69. ಅದನ್ನು ಮೋಡದಿಂದ ಇಳಿಸಿದವರು ನೀವೋ? ಅಥವಾ ಇಳಿಸುವವರು ನಾವೋ?

ءَأَنتُمْ أَنزَلْتُمُوهُ مِنَ ٱلْمُزْنِ أَمْ نَحْنُ ٱلْمُنزِلُونَ ﴿٦٩﴾

70. ನಾವು ಇಚ್ಛಿಸುತ್ತಿದ್ದರೆ ಅದನ್ನು ಅಸಹ್ಯ ಉಪ್ಪು ನೀರನ್ನಾಗಿ ಮಾಡುತ್ತಿದ್ದೆವು. ಆದರೂ ನೀವು ಕೃತಜ್ಞತೆ ಸಲ್ಲಿಸುವುದಿಲ್ಲವೇಕೆ?

لَوْ نَشَآءُ جَعَلْنَٰهُ أُجَاجًا فَلَوْلَا تَشْكُرُونَ ﴿٧٠﴾

71. ನೀವು ಉಜ್ಜಿ ಉರಿಸುವ ಬೆಂಕಿಯ ಕುರಿತು ಚಿಂತಿಸಿ ನೋಡಿರುವಿರಾ?

أَفَرَءَيْتُمُ ٱلنَّارَ ٱلَّتِى تُورُونَ ﴿٧١﴾

72. ಅದರ ಮರವನ್ನು ಸೃಷ್ಟಿಸಿದವರು[1] ನೀವೋ? ಅಥವಾ ಸೃಷ್ಟಿಸಿದವರು ನಾವೋ?

ءَأَنتُمْ أَنشَأْتُمْ شَجَرَتَهَآ أَمْ نَحْنُ ٱلْمُنشِـُٔونَ ﴿٧٢﴾

73. ನಾವು ಅದನ್ನೊಂದು ಚಿಂತನಾರ್ಹ ವಿಷಯವನ್ನಾಗಿ ಮಾಡಿರುವೆವು ಮತ್ತು ಬಡ ಪ್ರಯಾಣಿಕರಿಗೆ[2] ಒಂದು ಜೀವನಾನುಕೂಲತೆಯನ್ನಾಗಿ ಮಾಡಿರುವೆವು.

نَحْنُ جَعَلْنَٰهَا تَذْكِرَةً وَمَتَٰعًا لِّلْمُقْوِينَ ﴿٧٣﴾

---

ದಾಖಲಿಸಲಾಗಿರುವ ಅನುವಂಶೀಯ ನಿಯಮವ್ಯವಸ್ಥೆಯ ಪ್ರಕಾರವಾಗಿರುತ್ತದೆ. ಈ ವ್ಯವಸ್ಥೆಯು ಸಂಪೂರ್ಣವಾಗಿಯೂ ಅಲ್ಲಾಹುವಿನದ್ದಾಗಿದೆ.

1 ಹಿಂದಿನ ಕಾಲದವರು ಮರದ ತುಂಡುಗಳನ್ನು ಪರಸ್ಪರ ಉಜ್ಜಿ ಬೆಂಕಿಯುರಿಸುತ್ತಿದ್ದರು.

2 ಮುಖ್ವೀನ್ ಎಂಬುದಕ್ಕೆ ಮರುಭೂಮಿ ನಿವಾಸಿಗಳೆಂದೂ ಅರ್ಥ ನೀಡಲಾಗಿದೆ. ಮರುಭೂಮಿ ವಾಸಿಗಳ ಮಧ್ಯೆ ಯಾರಾದರೂ ಔತಣಕೂಟ ಏರ್ಪಡಿಸಿದರೆ ಅದಕ್ಕೆ ಪ್ರಯಾಣಿಕರನ್ನೂ ಇತರರನ್ನೂ ಆಕರ್ಷಿಸಲು ದೂರದಿಂದಲೇ ಕಾಣುವ ಸಲುವಾಗಿ ಬೆಂಕಿಯುರಿಸುತ್ತಿದ್ದರು. ರಾತ್ರಿಯಲ್ಲಿ ನಿರ್ಜನವಾದ ಮರುಭೂಮಿಯಲ್ಲಿ ಪ್ರಯಾಣಿಸುವವರು ಪರಿಸರದಲ್ಲಿ ಜನವಾಸವಿದೆಯೆಂದು ಗ್ರಹಿಸುತ್ತಿದ್ದುದು ಈ ದೊಂದಿಗಳ ಮೂಲಕವಾಗಿತ್ತು. ವನ್ಯಮೃಗಗಳನ್ನು ದೂರವಿರಿಸಲೂ ಅವರು ಬೆಂಕಿಯನ್ನು ಬಳಸುತ್ತಿದ್ದರು.

فَسَبِّحۡ بِٱسۡمِ رَبِّكَ ٱلۡعَظِيمِ ٧٤

**74.** ಆದ್ದರಿಂದ ಮಹೋನ್ನತನಾದ ತಮ್ಮ ರಬ್‌ನ ನಾಮವನ್ನು ತಾವು ಕೊಂಡಾಡಿರಿ.

۞فَلَآ أُقۡسِمُ بِمَوَٰقِعِ ٱلنُّجُومِ ٧٥

**75.** ಇಲ್ಲ, ನಾನು ನಕ್ಷತ್ರಗಳ ಅಸ್ತಮಸ್ಥಾನದ ಮೇಲೆ ಆಣೆಯಿಟ್ಟು ಹೇಳುತ್ತಿರುವೆನು.

وَإِنَّهُۥ لَقَسَمٞ لَّوۡ تَعۡلَمُونَ عَظِيمٌ ٧٦

**76.** ನೀವು ಅರಿತಿರುವುದಾದರೆ ಖಂಡಿತವಾಗಿಯೂ ಇದೊಂದು ಮಹಾ ಆಣೆಯಾಗಿದೆ.

إِنَّهُۥ لَقُرۡءَانٞ كَرِيمٞ ٧٧

**77.** ಖಂಡಿತವಾಗಿಯೂ ಇದೊಂದು ಆದರಣೀಯ ಕುರ್‌ಆನ್ ಆಗಿದೆ.

فِي كِتَٰبٖ مَّكۡنُونٖ ٧٨

**78.** ಇದು ಭದ್ರವಾಗಿ ಕಾಪಾಡಲಾಗಿರುವ ಒಂದು ದಾಖಲೆಯಲ್ಲಿದೆ.

لَّا يَمَسُّهُۥٓ إِلَّا ٱلۡمُطَهَّرُونَ ٧٩

**79.** ಪರಿಶುದ್ಧಿಯನ್ನು ನೀಡಲಾದವರ ಹೊರತು ಯಾರೂ ಇದನ್ನು ಸ್ಪರ್ಶಿಸಲಾರರು.(1)

تَنزِيلٞ مِّن رَّبِّ ٱلۡعَٰلَمِينَ ٨٠

**80.** ಇದು ಸರ್ವಲೋಕಗಳ ರಬ್‌ನಿಂದ ಅವತೀರ್ಣಗೊಂಡಿರುವುದಾಗಿದೆ.

أَفَبِهَٰذَا ٱلۡحَدِيثِ أَنتُم مُّدۡهِنُونَ ٨١

**81.** ಹಾಗಾದರೆ ನೀವು ನಿರ್ವಿಕಾರ ತೋರಿಸುತ್ತಿರುವುದು ಈ ವೃತ್ತಾಂತದ ಕುರಿತೇ?

وَتَجۡعَلُونَ رِزۡقَكُمۡ أَنَّكُمۡ تُكَذِّبُونَ ٨٢

**82.** ಸತ್ಯ ನಿಷೇಧಿಸುವುದನ್ನು ನೀವು ನಿಮ್ಮ ಹಿಸ್ಸೆಯನ್ನಾಗಿ ಮಾಡಿರುವಿರಾ?(2)

فَلَوۡلَآ إِذَا بَلَغَتِ ٱلۡحُلۡقُومَ ٨٣

**83.** ಆದರೆ ಅದು (ಪ್ರಾಣ) ಗಂಟಲಿಗೆ ತಲುಪುವಾಗ (ಅದನ್ನು ತಡೆದು ನಿಲ್ಲಿಸಲು ನಿಮಗೆ ಸಾಧ್ಯವಾಗುವುದಿಲ್ಲ) ಏಕೆ?

وَأَنتُمۡ حِينَئِذٖ تَنظُرُونَ ٨٤

**84.** ಆ ಸಮಯದಲ್ಲಿ ನೀವು ನೋಡುತ್ತಲೇ ಇರುವಿರಿ!

---

1 ಮುಹಮ್ಮದ್(ﷺ)ರಿಗೆ ಅವತೀರ್ಣಗೊಳ್ಳುವುದಕ್ಕೆ ಮುಂಚೆ ಕುರ್‌ಆನ್ ಲೌಹುಲ್ ಮಹ್ಫೂಝ್‌ನಲ್ಲಿ ಸುರಕ್ಷಿತವಾಗಿತ್ತು. ಲೌಹುಲ್ ಮಹ್ಫೂಝ್ ಎಂದರೆ ಸುರಕ್ಷಿತ ಹಲಗೆ ಎಂದರ್ಥ. ಈ ಹಲಗೆಯನ್ನು ಪರಿಶುದ್ಧರಾದ ಮಲಕ್‌ಗಳ ಹೊರತು ಯಾರೂ ಸ್ಪರ್ಶಿಸಲಾರರೆಂದು ಹೆಚ್ಚಿನ ವ್ಯಾಖ್ಯಾನಕಾರರು ಪ್ರಸ್ತುತ ಸೂಕ್ತಿಗೆ ಅರ್ಥ ನೀಡಿದ್ದಾರೆ. ಹೃದಯ ಶುದ್ಧಿಯಿರುವವರ ಹೊರತು ಯಾರೂ ಕುರ್‌ಆನ್ ಗ್ರಹಿಸಲಾರರೆಂದು ಕೆಲವು ವ್ಯಾಖ್ಯಾನಕಾರರು "ಲಾ ಯಮಸ್ಸುಹೂ ಇಲ್ಲಲ್ ಮುತಹ್ಹರೂನ್"ಎಂಬ ಸೂಕ್ತಿಗೆ ಅರ್ಥ ನೀಡಿದ್ದಾರೆ.

2 ಅಲ್ಲಾಹುವಿನ ಅನುಗ್ರಹಗಳನ್ನು ಒಪ್ಪಿಕೊಂಡು ಕೃತಜ್ಞತಾ ಪೂರ್ವಕವಾಗಿ ಸ್ಪಂದಿಸುವ ಬದಲು ಮಳೆ ಮತ್ತು ಬೆಳೆಯನ್ನು ನಕ್ಷತ್ರಗಳ ಅಥವಾ ಪ್ರಕೃತಿಯ ವರದಾನವೆಂದು ಚಿತ್ರೀಕರಿಸುವವರ ವಿಷಯದಲ್ಲಿ ಪ್ರಸ್ತುತ ಸೂಕ್ತಿಯು ಅವತೀರ್ಣಗೊಂಡಿದೆಯೆಂದು ಹಲವು ವ್ಯಾಖ್ಯಾನಕಾರರು ಹೇಳಿದ್ದಾರೆ.

**85.** ಆ ವ್ಯಕ್ತಿಯ ಪಾಲಿಗೆ ನಿಮಗಿಂತಲೂ ಹೆಚ್ಚು ಹತ್ತಿರದಲ್ಲಿರುವವರು ನಾವಾಗಿರುವೆವು. ಆದರೆ ನೀವು ಕಂಡು ತಿಳಿಯುತ್ತಿಲ್ಲ.

وَنَحۡنُ أَقۡرَبُ إِلَيۡهِ مِنكُمۡ وَلَٰكِن لَّا تُبۡصِرُونَ ٨٥

**86-87.** ನೀವು (ಅಲ್ಲಾಹುವಿನ ನಿಯಮಕ್ಕೆ) ವಿಧೇಯರಲ್ಲದವರಾದರೆ ಅದನ್ನು (ಪ್ರಾಣವನ್ನು) ಮರಳಿ ಪಡೆಯಲು ನಿಮಗೇಕೆ ಸಾಧ್ಯವಾಗುತ್ತಿಲ್ಲ; ನೀವು ಸತ್ಯಸಂಧರಾಗಿದ್ದರೆ.

فَلَوۡلَآ إِن كُنتُمۡ غَيۡرَ مَدِينِينَ ٨٦
تَرۡجِعُونَهَآ إِن كُنتُمۡ صَٰدِقِينَ ٨٧

**88.** ಅವನು (ಮೃತಪಟ್ಟವನು) ಸಾಮೀಪ್ಯ ಪಡೆದವರಲ್ಲಿ ಸೇರಿದವನಾಗಿದ್ದರೆ.

فَأَمَّآ إِن كَانَ مِنَ ٱلۡمُقَرَّبِينَ ٨٨

**89.** (ಅವನಿಗೆ) ಸಾಂತ್ವನವೂ, ವಿಶಿಷ್ಟವಾದ ಅನ್ನಾಧಾರವೂ[1] ಸುಖಾನುಭೂತಿಯ ಸ್ವರ್ಗೋದ್ಯಾನವೂ ಇರುವುದು.

فَرَوۡحٞ وَرَيۡحَانٞ وَجَنَّتُ نَعِيمٖ ٨٩

**90.** ಅವನು ಬಲಭಾಗದವರಲ್ಲಿ ಸೇರಿದವನಾಗಿದ್ದರೆ.

وَأَمَّآ إِن كَانَ مِنۡ أَصۡحَٰبِ ٱلۡيَمِينِ ٩٠

**91.** (ಅವನಿಗಿರುವ ಅಭಿವಂದನೆಯು) 'ಬಲಭಾಗದವರಲ್ಲಿ ಸೇರಿದ ನಿನಗೆ ಶಾಂತಿಯಿರಲಿ' ಎಂದಾಗಿರುವುದು.

فَسَلَٰمٞ لَّكَ مِنۡ أَصۡحَٰبِ ٱلۡيَمِينِ ٩١

**92.** ಆದರೆ ಅವನು ದುರ್ಮಾರ್ಗಿಗಳಾಗಿರುವ ಸತ್ಯನಿಷೇಧಿಗಳಲ್ಲಿ ಸೇರಿದವನಾಗಿದ್ದರೆ.

وَأَمَّآ إِن كَانَ مِنَ ٱلۡمُكَذِّبِينَ ٱلضَّآلِّينَ ٩٢

**93.** ಕುದಿಯುವ ನೀರಿನ ಸತ್ಕಾರವಿರುವುದು.

فَنُزُلٞ مِّنۡ حَمِيمٖ ٩٣

**94.** ನರಕಾಗ್ನಿಯಲ್ಲಿ ಉರಿಯುವಿಕೆಯೂ ಇರುವುದು.

وَتَصۡلِيَةُ جَحِيمٍ ٩٤

**95.** ಖಂಡಿತವಾಗಿಯೂ ಇದು ದೃಢವಾಗಿರುವ ಸತ್ಯವಾಗಿದೆ.

إِنَّ هَٰذَا لَهُوَ حَقُّ ٱلۡيَقِينِ ٩٥

**96.** ಆದ್ದರಿಂದ ತಾವು ಮಹೋನ್ನತನಾಗಿರುವ ತಮ್ಮ ರಬ್‌ನ ನಾಮವನ್ನು ಕೊಂಡಾಡಿರಿ.

فَسَبِّحۡ بِٱسۡمِ رَبِّكَ ٱلۡعَظِيمِ ٩٦

---

1 ರೈಹಾನ್ ಎಂದರೆ ಪರಿಮಳ ಎಂದೂ ಅರ್ಥವಿದೆ.

# ಅಲ್‌ಹದೀದ್ (ಕಬ್ಬಿಣ)

سُورَةُ الحَدِيدِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 29

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನ ಕೀರ್ತನೆ ಮಾಡುತ್ತಿವೆ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

سَبَّحَ لِلَّهِ مَا فِي ٱلسَّمَٰوَٰتِ وَٱلۡأَرۡضِۖ وَهُوَ ٱلۡعَزِيزُ ٱلۡحَكِيمُ ١

2. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವು ಅವನದ್ದಾಗಿದೆ. ಅವನು ಜೀವವನ್ನು ನೀಡುವನು ಮತ್ತು ಮರಣವನ್ನು ನೀಡುವನು. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

لَهُۥ مُلۡكُ ٱلسَّمَٰوَٰتِ وَٱلۡأَرۡضِۖ يُحۡيِۦ وَيُمِيتُۖ وَهُوَ عَلَىٰ كُلِّ شَيۡءٖ قَدِيرٌ ٢

3. ಅವನು ಆದಿಯೂ, ಅಂತ್ಯನೂ, ಪ್ರತ್ಯಕ್ಷನೂ, ಪರೋಕ್ಷನೂ ಆಗಿರುವನು. ಅವನು ಸರ್ವ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

هُوَ ٱلۡأَوَّلُ وَٱلۡأٓخِرُ وَٱلظَّٰهِرُ وَٱلۡبَاطِنُۖ وَهُوَ بِكُلِّ شَيۡءٍ عَلِيمٌ ٣

4. ಆಕಾಶಗಳನ್ನು ಮತ್ತು ಭೂಮಿಯನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅವನಾಗಿರುವನು. ತರುವಾಯ ಅವನು ಸಿಂಹಾಸನಾರೂಢನಾದನು. ಭೂಮಿಯನ್ನು ಪ್ರವೇಶಿಸುವ, ಅದರಿಂದ ಹೊರಹೋಗುವ, ಆಕಾಶದಿಂದ ಇಳಿಯುವ ಮತ್ತು ಅದರೆಡೆಗೆ ಏರಿಹೋಗುವ ಎಲ್ಲವನ್ನೂ ಅವನು ಅರಿಯುವನು. ನೀವೆಲ್ಲೇ ಇದ್ದರೂ ಅವನು ನಿಮ್ಮ ಜೊತೆಗಿರುವನು. ಅಲ್ಲಾಹು ನೀವು ಮಾಡುತ್ತಿರುವುದನ್ನು ವೀಕ್ಷಿಸುವವನಾಗಿರುವನು.

هُوَ ٱلَّذِي خَلَقَ ٱلسَّمَٰوَٰتِ وَٱلۡأَرۡضَ فِي سِتَّةِ أَيَّامٖ ثُمَّ ٱسۡتَوَىٰ عَلَى ٱلۡعَرۡشِۖ يَعۡلَمُ مَا يَلِجُ فِي ٱلۡأَرۡضِ وَمَا يَخۡرُجُ مِنۡهَا وَمَا يَنزِلُ مِنَ ٱلسَّمَآءِ وَمَا يَعۡرُجُ فِيهَاۖ وَهُوَ مَعَكُمۡ أَيۡنَ مَا كُنتُمۡۚ وَٱللَّهُ بِمَا تَعۡمَلُونَ بَصِيرٞ ٤

5. ಆಕಾಶಗಳ ಮತ್ತು ಭೂಮಿಯ ಆಧಿಪತ್ಯವಿರುವುದು ಅವನಿಗಾಗಿದೆ. ವಿಷಯಗಳೆಲ್ಲವೂ ಮರಳುವುದು ಅಲ್ಲಾಹುವಿನೆಡೆಗಾಗಿದೆ.

لَّهُۥ مُلۡكُ ٱلسَّمَٰوَٰتِ وَٱلۡأَرۡضِۚ وَإِلَى ٱللَّهِ تُرۡجَعُ ٱلۡأُمُورُ ٥

6. ಅವನು ರಾತ್ರಿಯನ್ನು ಹಗಲಿನಲ್ಲಿ ನುಸುಳಿಸುವನು ಮತ್ತು ಹಗಲನ್ನು ರಾತ್ರಿಯಲ್ಲಿ ನುಸುಳಿಸುವನು. ಅವನು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

يُولِجُ ٱلَّيۡلَ فِي ٱلنَّهَارِ وَيُولِجُ ٱلنَّهَارَ فِي ٱلَّيۡلِۚ وَهُوَ عَلِيمُۢ بِذَاتِ ٱلصُّدُورِ ٦

7. ನೀವು ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡಿರಿ. ಅವನು ನಿಮ್ಮನ್ನು ಯಾವ ಸಂಪತ್ತಿಗೆ ಉತ್ತರಾಧಿಕಾರಿಯಾಗಿ ಮಾಡಿರುವನೋ ಆ ಸಂಪತ್ತಿನಿಂದ ವ್ಯಯಿಸಿರಿ. ನಿಮ್ಮ ಪೈಕಿ ವಿಶ್ವಾಸವಿಟ್ಟವರು ಮತ್ತು ವ್ಯಯಿಸಿದವರು ಯಾರೋ ಅವರಿಗೆ ಮಹಾ ಪ್ರತಿಫಲವಿದೆ.

ءَامِنُواْ بِٱللَّهِ وَرَسُولِهِۦ وَأَنفِقُواْ مِمَّا جَعَلَكُم مُّسۡتَخۡلَفِينَ فِيهِۖ فَٱلَّذِينَ ءَامَنُواْ مِنكُمۡ وَأَنفَقُواْ لَهُمۡ أَجۡرٞ كَبِيرٞ ٧

8. ಅಲ್ಲಾಹುವಿನಲ್ಲಿ ವಿಶ್ವಾಸವಿಡದಿರಲು ನಿಮಗಿರುವ ಸಮರ್ಥನೆಯಾದರೂ ಏನು? ನೀವು ನಿಮ್ಮ ರಬ್‌ನಲ್ಲಿ ವಿಶ್ವಾಸವಿಡುವ ಸಲುವಾಗಿ ಸಂದೇಶವಾಹಕರು ನಿಮ್ಮನ್ನು ಆಹ್ವಾನಿಸುತ್ತಿರುವರು. ಅಲ್ಲಾಹು ನಿಮ್ಮಿಂದ ಖಾತ್ರಿಯನ್ನು ಪಡೆದಿರುವನು.(1) ನೀವು ವಿಶ್ವಾಸವಿಡುವವರಾಗಿದ್ದರೆ.

وَمَا لَكُمۡ لَا تُؤۡمِنُونَ بِٱللَّهِ وَٱلرَّسُولُ يَدۡعُوكُمۡ لِتُؤۡمِنُواْ بِرَبِّكُمۡ وَقَدۡ أَخَذَ مِيثَٰقَكُمۡ إِن كُنتُم مُّؤۡمِنِينَ ٨

9. ನಿಮ್ಮನ್ನು ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತರುವ ಸಲುವಾಗಿ ತನ್ನ ದಾಸನ ಮೇಲೆ ಸ್ಪಷ್ಟವಾದ ದೃಷ್ಟಾಂತಗಳನ್ನು ಇಳಿಸಿಕೊಡುವವನು ಅವನಾಗಿರುವನು. ಖಂಡಿತವಾಗಿಯೂ ಅಲ್ಲಾಹು ನಿಮ್ಮೊಂದಿಗೆ ಅತ್ಯಂತ ದಯೆಯುಳ್ಳವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

هُوَ ٱلَّذِي يُنَزِّلُ عَلَىٰ عَبۡدِهِۦٓ ءَايَٰتِۭ بَيِّنَٰتٖ لِّيُخۡرِجَكُم مِّنَ ٱلظُّلُمَٰتِ إِلَى ٱلنُّورِۚ وَإِنَّ ٱللَّهَ بِكُمۡ لَرَءُوفٞ رَّحِيمٞ ٩

10. ಆಕಾಶಗಳ ಮತ್ತು ಭೂಮಿಯ ಉತ್ತರಾಧಿಕಾರವು ಅಲ್ಲಾಹುವಿನದ್ದಾಗಿರುವಾಗ ಅಲ್ಲಾಹುವಿನ ಮಾರ್ಗದಲ್ಲಿ ವ್ಯಯಿಸದಿರಲು ನಿಮಗಿರುವ ಸಮರ್ಥನೆಯಾದರೂ ಏನು?

وَمَا لَكُمۡ أَلَّا تُنفِقُواْ فِي سَبِيلِ ٱللَّهِ وَلِلَّهِ مِيرَٰثُ ٱلسَّمَٰوَٰتِ وَٱلۡأَرۡضِۚ لَا يَسۡتَوِي مِنكُم مَّنۡ أَنفَقَ مِن قَبۡلِ ٱلۡفَتۡحِ وَقَٰتَلَۚ

1 ಮನುಷ್ಯ ಪ್ರಕೃತಿಯು ಖಂಡಿತವಾಗಿಯೂ ಅಲ್ಲಾಹುವಿನ ಅಸ್ತಿತ್ವದ ಬಗ್ಗೆ ಖಾತ್ರಿಯನ್ನು ನೀಡುತ್ತದೆ ಮತ್ತು ಇಲ್ಲಿ ಉದ್ದೇಶಿಸಲಾಗಿರುವುದು ಆ ಖಾತ್ರಿಯನ್ನಾಗಿದೆಯೆಂದು ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಅಲ್ಲಾಹು ಆಧ್ಯಾತ್ಮಿಕ ಲೋಕದಲ್ಲಿ ಮನುಷ್ಯರೆಲ್ಲರಿಂದ ಏಕದೇವವಿಶ್ವಾಸದ ಬಗ್ಗೆ ಕರಾರು ಪಡೆದಿರುವುದರ ಬಗ್ಗೆ ಇಲ್ಲಿ ಸೂಚಿಸಲಾಗಿದೆಯೆಂದು ಬೇರೆ ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

أُوْلَـٰٓئِكَ أَعۡظَمُ دَرَجَةٗ مِّنَ ٱلَّذِينَ أَنفَقُواْ مِنۢ بَعۡدُ وَقَٰتَلُواْۚ وَكُلّٗا وَعَدَ ٱللَّهُ ٱلۡحُسۡنَىٰۚ وَٱللَّهُ بِمَا تَعۡمَلُونَ خَبِيرٞ ١٠

ನಿಮ್ಮ ಪೈಕಿ (ಮಕ್ಕಾ) ವಿಜಯಕ್ಕೆ ಮುಂಚಿತವಾಗಿ ವ್ಯಯಿಸಿದವರು ಮತ್ತು ಯುದ್ಧದಲ್ಲಿ ಪಾಲ್ಗೊಂಡವರು (ಮತ್ತು ಅವರಲ್ಲದವರು) ಸಮಾನರಾಗಲಾರರು. ಅವರು ನಂತರದ ಕಾಲದಲ್ಲಿ ವ್ಯಯಿಸಿದವರಿಗಿಂತಲೂ ಮತ್ತು ಯುದ್ಧದಲ್ಲಿ ಪಾಲ್ಗೊಂಡವರಿಗಿಂತಲೂ ಉನ್ನತ ಪದವಿಗಳಲ್ಲಿರುವರು. ಅಲ್ಲಾಹು ಎಲ್ಲರಿಗೂ ಸ್ವರ್ಗವನ್ನು ವಾಗ್ದಾನ ಮಾಡಿರುವನು.[1] ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ಸೂಕ್ಷ್ಮಜ್ಞಾನಿಯಾಗಿರುವನು.

مَّن ذَا ٱلَّذِي يُقۡرِضُ ٱللَّهَ قَرۡضًا حَسَنٗا فَيُضَٰعِفَهُۥ لَهُۥ وَلَهُۥٓ أَجۡرٞ كَرِيمٞ ١١

**11.** ಅಲ್ಲಾಹುವಿಗೆ ಉತ್ತಮ ಸಾಲವನ್ನು ನೀಡುವವನು ಯಾರಿರುವನು? ಹಾಗಾದರೆ ಅವನು ಅದನ್ನು ಅವನಿಗೆ ಇಮ್ಮಡಿಗೊಳಿಸಿ ಕೊಡುವನು. ಅವನಿಗೆ ಗೌರವಾನ್ವಿತ ಪ್ರತಿಫಲವೂ ಇರುವುದು.

يَوۡمَ تَرَى ٱلۡمُؤۡمِنِينَ وَٱلۡمُؤۡمِنَٰتِ يَسۡعَىٰ نُورُهُم بَيۡنَ أَيۡدِيهِمۡ وَبِأَيۡمَٰنِهِمۖ بُشۡرَىٰكُمُ ٱلۡيَوۡمَ جَنَّـٰتٞ تَجۡرِي مِن تَحۡتِهَا ٱلۡأَنۡهَٰرُ خَٰلِدِينَ فِيهَاۚ ذَٰلِكَ هُوَ ٱلۡفَوۡزُ ٱلۡعَظِيمُ ١٢

**12.** ಸತ್ಯವಿಶ್ವಾಸಿಗಳ ಮತ್ತು ಸತ್ಯವಿಶ್ವಾಸಿನಿಯರ ಪ್ರಕಾಶವು ಅವರ ಮುಂಭಾಗದಿಂದಲೂ, ಬಲಭಾಗದಿಂದಲೂ ಚಲಿಸುತ್ತಿರುವುದಾಗಿ ತಾವು ಕಾಣುವ ದಿನ! (ಅಂದು ಅವರೊಂದಿಗೆ ಹೇಳಲಾಗುವುದು): 'ಇಂದು ನಿಮಗಿರುವ ಶುಭವಾರ್ತೆಯು ಸ್ವರ್ಗೋದ್ಯಾನಗಳಾಗಿವೆ. ಅವುಗಳ ತಳಭಾಗದಿಂದ ನದಿಗಳು ಹರಿಯುತ್ತಿರುವುವು. ನೀವು ಅದರಲ್ಲಿ ಶಾಶ್ವತವಾಗಿ ವಾಸಿಸುವಿರಿ. ಅದು ಮಹಾ ವಿಜಯವಾಗಿದೆ'.

يَوۡمَ يَقُولُ ٱلۡمُنَٰفِقُونَ وَٱلۡمُنَٰفِقَٰتُ لِلَّذِينَ ءَامَنُواْ ٱنظُرُونَا نَقۡتَبِسۡ مِن نُّورِكُمۡ قِيلَ ٱرۡجِعُواْ وَرَآءَكُمۡ فَٱلۡتَمِسُواْ نُورٗا

**13.** ಕಪಟವಿಶ್ವಾಸಿಗಳು ಮತ್ತು ಕಪಟವಿಶ್ವಾಸಿನಿಯರು ಸತ್ಯವಿಶ್ವಾಸಿಗಳೊಂದಿಗೆ ಹೇಳುವ ದಿನ: 'ನೀವು ನಮ್ಮನ್ನು ನೋಡಿರಿ! ನಿಮ್ಮ ಪ್ರಕಾಶದಿಂದ ನಾವೂ ಸ್ವಲ್ಪ ಎರವಲು ಪಡೆಯುವೆವು'. (ಆಗ

---

1 ಇಸ್ಲಾಮ್ ತೀವ್ರವಾಗಿ ವಿರೋಧಿಸಲ್ಪಟ್ಟು, ಮುಸ್ಲಿಮರು ಕಠಿಣ ಹಿಂಸೆಗೊಳಗಾಗಿದ್ದ ಆದ್ಯಕಾಲದಲ್ಲಿ ವಿಶ್ವಾಸವನ್ನು ಘೋಷಿಸಿ ಆಕ್ರಮಣಕಾರಿಗಳೊಂದಿಗೆ ಸೆಣಸಾಡಿದವರ ಪದವಿ ಅತ್ಯುನ್ನತವಾಗಿದೆ. ತರುವಾಯ ವಿಶ್ವಾಸವಿಟ್ಟು ತ್ಯಾಗದೊಂದಿಗೆ ಯುದ್ಧದಲ್ಲಿ ಪಾಲ್ಗೊಂಡವರಿಗೂ ಅಲ್ಲಾಹು ವಿಶೇಷ ಪ್ರತಿಫಲದ ವಾಗ್ದಾನವಿತ್ತಿದ್ದಾನೆ.

ಅವರೊಂದಿಗೆ) ಹೇಳಲಾಗುವುದು: 'ನೀವು ನಿಮ್ಮ ಹಿಂಭಾಗಕ್ಕೆ ಮರಳಿ ಹೋಗಿರಿ. ತರುವಾಯ ಪ್ರಕಾಶವನ್ನು ಅರಸಿರಿ'. ಆಗ ಅವರ ಮಧ್ಯೆ ಒಂದು ಗೋಡೆಯ ಮೂಲಕ ಮರೆಹಾಕಲಾಗುವುದು. ಅದಕ್ಕೊಂದು ಬಾಗಿಲಿದೆ. ಅದರ ಒಳಭಾಗದಲ್ಲಿ ಕಾರುಣ್ಯವಿರುವುದು[1] ಮತ್ತು ಹೊರಭಾಗದಲ್ಲಿ ಶಿಕ್ಷೆಯಿರುವುದು.

فَضُرِبَ بَيْنَهُم بِسُورٍ لَّهُۥ بَابُۢ بَاطِنُهُۥ فِيهِ ٱلرَّحْمَةُ وَظَٰهِرُهُۥ مِن قِبَلِهِ ٱلْعَذَابُ ﴿١٣﴾

**14.** ಅವರು (ಕಪಟವಿಶ್ವಾಸಿಗಳು) ಅವರನ್ನು (ಸತ್ಯವಿಶ್ವಾಸಿಗಳನ್ನು) ಕರೆದು ಹೇಳುವರು: 'ನಾವು ನಿಮ್ಮೊಂದಿಗಿರಲಿಲ್ಲವೇ?' ಸತ್ಯವಿಶ್ವಾಸಿಗಳು ಹೇಳುವರು: 'ಹೌದು! ಆದರೆ ನೀವು ಸ್ವತಃ ನಿಮ್ಮನ್ನೇ ಕ್ಷೋಭೆಗೆ ದೂಡಿದಿರಿ. (ಇತರರಿಗೆ ಕೇಡುಂಟಾಗುವುದನ್ನು) ಕಾಯುವವರಾಗಿದ್ದಿರಿ. (ಧರ್ಮದಲ್ಲಿ) ಸಂದೇಹ ಪಟ್ಟಿರಿ. ಅಲ್ಲಾಹುವಿನ ಆಜ್ಞೆ ಬರುವವರೆಗೆ ವ್ಯರ್ಥ ನಿರೀಕ್ಷೆಗಳು ನಿಮ್ಮನ್ನು ವಂಚಿಸಿದವು. ಅಲ್ಲಾಹುವಿನ ವಿಷಯದಲ್ಲಿ ಮಹಾವಂಚಕನಾದ ಸೈತಾನನು ನಿಮ್ಮನ್ನು ವಂಚಿಸಿದನು.

يُنَادُونَهُمْ أَلَمْ نَكُن مَّعَكُمْ ۖ قَالُوا۟ بَلَىٰ وَلَٰكِنَّكُمْ فَتَنتُمْ أَنفُسَكُمْ وَتَرَبَّصْتُمْ وَٱرْتَبْتُمْ وَغَرَّتْكُمُ ٱلْأَمَانِىُّ حَتَّىٰ جَآءَ أَمْرُ ٱللَّهِ وَغَرَّكُم بِٱللَّهِ ٱلْغَرُورُ ﴿١٤﴾

**15.** ಆದ್ದರಿಂದ ಇಂದು ನಿಮ್ಮಿಂದ ಅಥವಾ ಸತ್ಯನಿಷೇಧಿಗಳಿಂದ ಯಾವುದೇ ಪ್ರಾಯಶ್ಚಿತ್ತವನ್ನೂ ಸ್ವೀಕರಿಸಲಾಗದು. ನಿಮ್ಮ ವಾಸಸ್ಥಳವು ನರಕಾಗ್ನಿಯಾಗಿದೆ. ಅದೇ ನಿಮ್ಮ ಸಂಬಂಧಿಯಾಗಿದೆ.[2] ತಲುಪಲಿರುವ ಆ ಸ್ಥಳವು ಅದೆಷ್ಟು ನಿಕೃಷ್ಟವಾದುದು!

فَٱلْيَوْمَ لَا يُؤْخَذُ مِنكُمْ فِدْيَةٌ وَلَا مِنَ ٱلَّذِينَ كَفَرُوا۟ ۚ مَأْوَىٰكُمُ ٱلنَّارُ ۖ هِىَ مَوْلَىٰكُمْ ۖ وَبِئْسَ ٱلْمَصِيرُ ﴿١٥﴾

**16.** ಸತ್ಯವಿಶ್ವಾಸಿಗಳಿಗೆ, ಅವರ ಹೃದಯಗಳು ಅಲ್ಲಾಹುವಿನ ಸ್ಮರಣೆಗೂ, ಅವತೀರ್ಣಗೊಂಡಿರುವ ಸತ್ಯಕ್ಕೂ ಶರಣಾಗಲು ಮತ್ತು ಮುಂಚೆ ಗ್ರಂಥ ನೀಡಲಾದವರಂತೆ ಆಗದಿರಲು ಸಮಯವಾಗಲಿಲ್ಲವೇ?[3] ಆ

۞ أَلَمْ يَأْنِ لِلَّذِينَ ءَامَنُوٓا۟ أَن تَخْشَعَ قُلُوبُهُمْ لِذِكْرِ ٱللَّهِ وَمَا نَزَلَ مِنَ ٱلْحَقِّ وَلَا يَكُونُوا۟ كَٱلَّذِينَ أُوتُوا۟ ٱلْكِتَٰبَ مِن قَبْلُ فَطَالَ عَلَيْهِمُ ٱلْأَمَدُ فَقَسَتْ قُلُوبُهُمْ ۖ

1 ಯಾಕೆಂದರೆ ಅದು ಸತ್ಯವಿಶ್ವಾಸಿಗಳಿಗೆ ಹತ್ತಿರವಿರುವ ಭಾಗವಾಗಿದೆ.

2 'ಮೌಲಾಕುಂ' ಎಂದರೆ ನಿಮಗೆ ಅತ್ಯಂತ ಯೋಗ್ಯವಾದ ಅಭಯಸ್ಥಾನ ಎಂದು ಕೆಲವರು ಅರ್ಥ ನೀಡಿದ್ದಾರೆ.

3 ಓರ್ವ ಪ್ರವಾದಿಯ ಮರಣಾನಂತರ ಕೆಲವು ವರ್ಷಗಳು ಕಳೆದಾಗ ಆ ಪ್ರವಾದಿಯ ಶಿಕ್ಷಣಗಳು ವಿಸ್ಮರಿಸಲಾಗಿ ಧರ್ಮೋಪದೇಶಗಳನ್ನು ಸ್ವೀಕರಿಸಲಾಗದಷ್ಟು ಕಠಿಣ ಮನಸ್ಕರಾಗಿ ಬಿಡುವುದು ಪೂರ್ವಸಮುದಾಯದವರ ರೂಢಿಯಾಗಿತ್ತು. ಮುಸ್ಲಿಮರು ಹಾಗಾಗಕೂಡದೆಂದು ಇಲ್ಲಿ ಉಪದೇಶ ನೀಡಲಾಗಿದೆ.

وَكَثِيرٌ مِّنْهُمْ فَٰسِقُونَ ﴿١٦﴾

ಗ್ರಂಥದವರಿಗೆ ಕಾಲವು ದೀರ್ಘವಾಯಿತು ಮತ್ತು ಅವರ ಹೃದಯಗಳು ಕಠೋರವಾದವು. ಅವರ ಪೈಕಿ ಹೆಚ್ಚಿನವರೂ ಧಿಕ್ಕಾರಿಗಳಾಗಿದ್ದರು.

ٱعْلَمُوٓاْ أَنَّ ٱللَّهَ يُحْيِ ٱلْأَرْضَ بَعْدَ مَوْتِهَا ۚ قَدْ بَيَّنَّا لَكُمُ ٱلْـَٔايَٰتِ لَعَلَّكُمْ تَعْقِلُونَ ﴿١٧﴾

17. ಅರಿಯಿರಿ! ಖಂಡಿತವಾಗಿಯೂ ಅಲ್ಲಾಹು ಭೂಮಿಗೆ ಅದು ನಿರ್ಜೀವವಾದ ಬಳಿಕ ಜೀವ ನೀಡುವನು. ನೀವು ಚಿಂತಿಸುವ ಸಲುವಾಗಿ ಖಂಡಿತವಾಗಿಯೂ ನಾವು ನಿಮಗೆ ದೃಷ್ಟಾಂತಗಳನ್ನು ವಿವರಿಸಿಕೊಟ್ಟಿರುವೆವು.

إِنَّ ٱلْمُصَّدِّقِينَ وَٱلْمُصَّدِّقَٰتِ وَأَقْرَضُواْ ٱللَّهَ قَرْضًا حَسَنًا يُضَٰعَفُ لَهُمْ وَلَهُمْ أَجْرٌ كَرِيمٌ ﴿١٨﴾

18. ಖಂಡಿತವಾಗಿಯೂ ದಾನಧರ್ಮ ಮಾಡಿದ ಪುರುಷರು ಮತ್ತು ಸ್ತ್ರೀಯರು ಹಾಗೂ ಅಲ್ಲಾಹುವಿಗೆ ಉತ್ತಮ ಸಾಲ ನೀಡಿದವರು ಯಾರೋ ಅವರಿಗೆ ಅದನ್ನು ಇಮ್ಮಡಿಯಾಗಿ ನೀಡಲಾಗುವುದು. ಅವರಿಗೆ ಗೌರವಾನ್ವಿತ ಪ್ರತಿಫಲವಿರುವುದು.

وَٱلَّذِينَ ءَامَنُواْ بِٱللَّهِ وَرُسُلِهِۦٓ أُوْلَٰٓئِكَ هُمُ ٱلصِّدِّيقُونَ ۖ وَٱلشُّهَدَآءُ عِندَ رَبِّهِمْ لَهُمْ أَجْرُهُمْ وَنُورُهُمْ ۖ وَٱلَّذِينَ كَفَرُواْ وَكَذَّبُواْ بِـَٔايَٰتِنَآ أُوْلَٰٓئِكَ أَصْحَٰبُ ٱلْجَحِيمِ ﴿١٩﴾

19. ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟವರು ಯಾರೋ ಅವರು ತಮ್ಮ ರಬ್‌ನ ಬಳಿ ಸತ್ಯಸಂಧರೂ ಸತ್ಯಸಾಕ್ಷಿಗಳೂ ಆಗಿರುವರು. ಅವರಿಗೆ ಅವರ ಪ್ರತಿಫಲ ಮತ್ತು ಅವರ ಪ್ರಕಾಶವಿರುವುದು. ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರು ನರಕವಾಸಿಗಳಾಗಿರುವರು.

ٱعْلَمُوٓاْ أَنَّمَا ٱلْحَيَوٰةُ ٱلدُّنْيَا لَعِبٌ وَلَهْوٌ وَزِينَةٌ وَتَفَاخُرٌۢ بَيْنَكُمْ وَتَكَاثُرٌ فِى ٱلْأَمْوَٰلِ وَٱلْأَوْلَٰدِ ۖ كَمَثَلِ غَيْثٍ أَعْجَبَ ٱلْكُفَّارَ نَبَاتُهُۥ ثُمَّ يَهِيجُ فَتَرَىٰهُ مُصْفَرًّا ثُمَّ يَكُونُ حُطَٰمًا ۖ وَفِى ٱلْـَٔاخِرَةِ عَذَابٌ شَدِيدٌ وَمَغْفِرَةٌ مِّنَ ٱللَّهِ وَرِضْوَٰنٌ ۚ وَمَا ٱلْحَيَوٰةُ ٱلدُّنْيَآ إِلَّا مَتَٰعُ ٱلْغُرُورِ ﴿٢٠﴾

20. ಅರಿಯಿರಿ! ಐಹಿಕ ಜೀವನವು ಆಟ, ಮನೋರಂಜನೆ, ಶೃಂಗಾರ, ನೀವು ಪರಸ್ಪರ ಅಹಂಭಾವ ಪಡುವುದು, ಸಂಪತ್ತಿನಲ್ಲಿ ಮತ್ತು ಸಂತತಿಯಲ್ಲಿ ಹಿರಿಮೆ ತೋರಿಸುವುದು ಮಾತ್ರವಾಗಿವೆ. ಒಂದು ಮಳೆಯಂತೆ. ಅದರಿಂದ ಬೆಳೆಯುವ ಸಸ್ಯಗಳು ಕೃಷಿಕರನ್ನು ಆಕರ್ಷಿಸಿದವು. ತರುವಾಯ ಅದು ಒಣಗಿದಾಗ ಅದು ಹಳದಿ ಬಣ್ಣವಾಗಿ ಮಾರ್ಪಡುವುದನ್ನು ತಾವು ಕಾಣುವಿರಿ. ತರುವಾಯ ಅದು ಕಿಲುಬುಗಳಾಗಿ ಬಿಡುತ್ತವೆ.

ಆದರೆ ಪರಲೋಕದಲ್ಲಿ (ದುರ್ಜನರಿಗೆ) ಕಠಿಣ ಶಿಕ್ಷೆಯಿದೆ ಮತ್ತು (ಸಜ್ಜನರಿಗೆ) ಅಲ್ಲಾಹುವಿನ ವತಿಯ ಪಾಪಮುಕ್ತಿ ಮತ್ತು ಸಂತೃಪ್ತಿಯಿದೆ. ಐಹಿಕ ಜೀವನವು ವಂಚನಾತ್ಮಕ ಅನುಭೋಗವಲ್ಲದೆ ಬೇರೇನೂ ಅಲ್ಲ.

سَابِقُوٓاْ إِلَىٰ مَغۡفِرَةٖ مِّن رَّبِّكُمۡ وَجَنَّةٍ عَرۡضُهَا كَعَرۡضِ ٱلسَّمَآءِ وَٱلۡأَرۡضِ أُعِدَّتۡ لِلَّذِينَ ءَامَنُواْ بِٱللَّهِ وَرُسُلِهِۦۚ ذَٰلِكَ فَضۡلُ ٱللَّهِ يُؤۡتِيهِ مَن يَشَآءُۚ وَٱللَّهُ ذُو ٱلۡفَضۡلِ ٱلۡعَظِيمِ ﴿٢١﴾

**21.** ನಿಮ್ಮ ರಬ್‌ನ ವತಿಯ ಪಾಪಮುಕ್ತಿಯೆಡೆಗೆ ಮತ್ತು ಸ್ವರ್ಗದೆಡೆಗೆ ಮುಂಚೂಣಿಯಲ್ಲಿ ಬನ್ನಿರಿ. ಅದರ ವಿಸ್ತಾರವು ಆಕಾಶಗಳ ಮತ್ತು ಭೂಮಿಯ ವಿಸ್ತಾರದಷ್ಟಿದೆ. ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟವರಿಗಾಗಿ ಅದನ್ನು ಸಜ್ಜೀಕರಿಸಲಾಗಿದೆ. ಅದು ಅಲ್ಲಾಹುವಿನ ಅನುಗ್ರಹವಾಗಿದೆ. ತಾನಿಚ್ಛಿಸುವವರಿಗೆ ಅವನು ಅದನ್ನು ದಯಪಾಲಿಸುವನು. ಅಲ್ಲಾಹು ಮಹಾ ಅನುಗ್ರಹದ ಒಡೆಯನಾಗಿರುವನು.

مَآ أَصَابَ مِن مُّصِيبَةٖ فِي ٱلۡأَرۡضِ وَلَا فِيٓ أَنفُسِكُمۡ إِلَّا فِي كِتَٰبٖ مِّن قَبۡلِ أَن نَّبۡرَأَهَآۚ إِنَّ ذَٰلِكَ عَلَى ٱللَّهِ يَسِيرٞ ﴿٢٢﴾

**22.** ಭೂಮಿಯಲ್ಲಾಗಲಿ ನಿಮ್ಮ ಶರೀರಗಳಲ್ಲಾಗಲಿ ಯಾವುದೇ ವಿಪತ್ತು ಕೂಡಬಾಧಿಸಲಾರದು; ಅದನ್ನು ನಾವು ಸೃಷ್ಟಿಸುವುದಕ್ಕೆ ಮುಂಚೆಯೇ ಒಂದು ದಾಖಲೆಯಲ್ಲಿ ಸೇರಿಸಿಕೊಂಡಿರುವ ಹೊರತು. ಖಂಡಿತವಾಗಿಯೂ ಅದು ಅಲ್ಲಾಹುವಿನ ಪಾಲಿಗೆ ಸುಲಭವಾದುದಾಗಿದೆ.

لِّكَيۡلَا تَأۡسَوۡاْ عَلَىٰ مَا فَاتَكُمۡ وَلَا تَفۡرَحُواْ بِمَآ ءَاتَىٰكُمۡۗ وَٱللَّهُ لَا يُحِبُّ كُلَّ مُخۡتَالٖ فَخُورٍ ﴿٢٣﴾

**23.** (ನಾವು ಹೀಗೆ ಮಾಡಿರುವುದೇಕೆಂದರೆ) ನೀವು ಏನನ್ನು ಕಳಕೊಂಡಿರುವಿರೋ ಅದಕ್ಕಾಗಿ ನೀವು ದುಃಖಿಸದಿರುವ ಸಲುವಾಗಿ ಮತ್ತು ಅವನು ನಿಮಗೆ ದಯಪಾಲಿಸಿರುವುದರಲ್ಲಿ ನೀವು ಅತಿಯಾಗಿ ಹಿಗ್ಗದಿರುವ ಸಲುವಾಗಿದೆ.[1] ಅಹಂಕಾರಿಯೂ, ದುರಭಿಮಾನಿಯೂ ಆಗಿರುವ ಯಾರನ್ನೂ ಅಲ್ಲಾಹು ಮೆಚ್ಚಲಾರನು.

1 ಅಲ್ಲಾಹುವಿನ ಯುಕ್ತಿ ಮತ್ತು ನಿರ್ಧಾರಕ್ಕೆ ಅನುಸಾರವಾಗಿ ನಷ್ಟ ಮತ್ತು ಹಾನಿ ಉಂಟಾಗುವುದೆಂದು ವಿಶ್ವಾಸವಿಡುವ ವ್ಯಕ್ತಿಗೆ ಸಂಕಷ್ಟದ ಸಮಯದಲ್ಲಿ ಸಹನೆ ಪಾಲಿಸಲು ಸಾಧ್ಯವಾಗುತ್ತದೆ. ಯಾವುದೇ ಸಾಧನೆಯೂ ಅಲ್ಲಾಹುವಿನ ದಾನವೇ ಆಗಿದೆಯೆಂದು ಪರಿಗಣಿಸುವವನು ತನ್ನ ವ್ಯಕ್ತಿ ಸಾಧನೆಯಿಂದಾಗಿ ಮೈಮರೆತು ಬೀಗುವುದಾಗಲಿ ಅಹಂಕಾರ ಪಡುವುದಾಗಲಿ ಮಾಡಲಾರನು.

ٱلَّذِينَ يَبۡخَلُونَ وَيَأۡمُرُونَ ٱلنَّاسَ بِٱلۡبُخۡلِۗ وَمَن يَتَوَلَّ فَإِنَّ ٱللَّهَ هُوَ ٱلۡغَنِيُّ ٱلۡحَمِيدُ ﴿٢٤﴾

24. ಅಂದರೆ ಜಿಪುಣತೆ ತೋರಿಸುವವರನ್ನು ಮತ್ತು ಜಿಪುಣತೆ ತೋರಿಸುವಂತೆ ಜನರಿಗೆ ಆದೇಶಿಸುವವರನ್ನು. ಯಾರಾದರೂ ವಿಮುಖರಾಗುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿರಪೇಕ್ಷನೂ, ಸ್ತುತ್ಯರ್ಹನೂ ಆಗಿರುವನು.

لَقَدۡ أَرۡسَلۡنَا رُسُلَنَا بِٱلۡبَيِّنَٰتِ وَأَنزَلۡنَا مَعَهُمُ ٱلۡكِتَٰبَ وَٱلۡمِيزَانَ لِيَقُومَ ٱلنَّاسُ بِٱلۡقِسۡطِۖ وَأَنزَلۡنَا ٱلۡحَدِيدَ فِيهِ بَأۡسٞ شَدِيدٞ وَمَنَٰفِعُ لِلنَّاسِ وَلِيَعۡلَمَ ٱللَّهُ مَن يَنصُرُهُۥ وَرُسُلَهُۥ بِٱلۡغَيۡبِۚ إِنَّ ٱللَّهَ قَوِيٌّ عَزِيزٞ ﴿٢٥﴾

25. ಖಂಡಿತವಾಗಿಯೂ ನಾವು ನಮ್ಮ ಸಂದೇಶವಾಹಕರನ್ನು ಸ್ಪಷ್ಟವಾದ ದೃಷ್ಟಾಂತಗಳೊಂದಿಗೆ ಕಳುಹಿಸಿರುವೆವು. ಜನರು ನ್ಯಾಯಬದ್ಧವಾಗಿ ನೆಲೆಗೊಳ್ಳುವ ಸಲುವಾಗಿ ನಾವು ಅವರೊಂದಿಗೆ ಗ್ರಂಥವನ್ನೂ ತಕ್ಕಡಿಯನ್ನೂ[1] ಇಳಿಸಿಕೊಟ್ಟಿರುವೆವು. ಕಬ್ಬಿಣವನ್ನೂ ನಾವು ಇಳಿಸಿಕೊಟ್ಟಿರುವೆವು.[2] ಅದರಲ್ಲಿ ಕಠಿಣವಾದ ಆಯುಧ ಶಕ್ತಿಯಿದೆ ಮತ್ತು ಜನರಿಗೆ ಪ್ರಯೋಜನಗಳಿವೆ. ಇವೆಲ್ಲವೂ ಅಲ್ಲಾಹುವಿಗೆ ಮತ್ತು ಅವನ ಸಂದೇಶವಾಹಕರಿಗೆ ಅಗೋಚರವಾಗಿ ಸಹಾಯ ಮಾಡುವವರು ಯಾರೆಂದು ಅವನು ತಿಳಿಯುವ ಸಲುವಾಗಿದೆ. ಖಂಡಿತವಾಗಿಯೂ ಅಲ್ಲಾಹು ಬಲಿಷ್ಠನೂ ಪ್ರತಾಪಶಾಲಿಯೂ ಆಗಿರುವನು.

وَلَقَدۡ أَرۡسَلۡنَا نُوحٗا وَإِبۡرَٰهِيمَ وَجَعَلۡنَا فِي ذُرِّيَّتِهِمَا ٱلنُّبُوَّةَ وَٱلۡكِتَٰبَۖ فَمِنۡهُم مُّهۡتَدٖۖ وَكَثِيرٞ مِّنۡهُمۡ فَٰسِقُونَ ﴿٢٦﴾

26. ಖಂಡಿತವಾಗಿಯೂ ನಾವು ನೂಹ್‌ರನ್ನು ಮತ್ತು ಇಬ್ರಾಹೀಮ್‌ರನ್ನು (ಸಂದೇಶವಾಹಕರಾಗಿ) ಕಳುಹಿಸಿದೆವು. ಅವರಿಬ್ಬರ ಸಂತತಿಗಳಲ್ಲಿ ಪ್ರವಾದಿತ್ವವನ್ನು ಮತ್ತು ಗ್ರಂಥವನ್ನು ನಾವು ನಿಶ್ಚಯಿಸಿದೆವು. ಅವರ ಪೈಕಿ ಸನ್ಮಾರ್ಗ ಪಡೆದವರಿರುವರು.

---

1 ತಕ್ಕಡಿ ಎಂಬ ಪದದ ತಾತ್ಪರ್ಯ ಅಲ್ಲಾಹುವಿನ ಸಮತೋಲನ ನಿಯಮವಾಗಿರಬಹುದು.

2 ಅಲ್ಲಾಹು ತನ್ನ ಮಹಾ ಸಾಮರ್ಥ್ಯದಿಂದ ಮನುಷ್ಯರಿಗೆ ಸಜ್ಜೀಕರಿಸಿಕೊಟ್ಟ ಅನೇಕ ವಿಷಯಗಳನ್ನು ಸೂಚಿಸುವಲ್ಲಿ ಕುರ್‌ಆನ್ 'ಇಳಿಸಿಕೊಟ್ಟನು' ಎಂಬ ಪದವನ್ನು ಬಳಸಿದ್ದಾಗಿ ಕಾಣಬಹುದು. ಕಬ್ಬಿಣವು ಮನುಷ್ಯರಿಗೆ ಬಹಳ ಪ್ರಯೋಜನವನ್ನು ನೀಡಿದ ಒಂದು ಲೋಹವಾಗಿದೆ. ಅಸಂಖ್ಯಾತ ಜನರ ಮರಣಕ್ಕೆ ಕಾರಣವಾದುದೂ ಕೂಡ ಕಬ್ಬಿಣದಿಂದ ನಿರ್ಮಿಸಲಾದ ಆಯುಧಗಳಾಗಿವೆ. ಲೋಹಗಳು ಮತ್ತು ಧಾತುಗಳಿರುವ ಪದಾರ್ಥವು ಅಲ್ಲಾಹುವಿನ ದಾನವಾಗಿದೆ. ಅದನ್ನು ಮನುಷ್ಯರು ಹೇಗೆ ಬಳಸುತ್ತಾರೆ ಎಂಬುದರಲ್ಲಿ ಅದರ ಲಾಭ ಮತ್ತು ಹಾನಿಗಳು ಅಡಗಿವೆ.

ಅವರ ಪೈಕಿ ಹೆಚ್ಚಿನವರೂ ದುರ್ಮಾರ್ಗಿಗಳಾಗಿರುವರು.

27. ತರುವಾಯ ಅವರ ಹಿಂದೆಯೇ ನಾವು ನಮ್ಮ ಸಂದೇಶವಾಹಕರನ್ನು ನಿರಂತರವಾಗಿ ಕಳುಹಿಸಿದೆವು. ಮರ್ಯಮ್‌ರ ಮಗನಾದ ಈಸಾರನ್ನೂ ಕಳುಹಿಸಿದೆವು.(1) ನಾವು ಅವರಿಗೆ ಇಂಜೀಲನ್ನು ನೀಡಿದೆವು. ಅವರನ್ನು ಅನುಸರಿಸಿದವರ ಹೃದಯಗಳಲ್ಲಿ ನಾವು ಕೃಪೆ ಮತ್ತು ಕರುಣೆಯನ್ನು ಇಟ್ಟೆವು. ಸನ್ಯಾಸತ್ವವನ್ನು ಸ್ವತಃ ಅವರೇ ಹೊಸದಾಗಿ ನಿರ್ಮಿಸಿರುವರು. ಅಲ್ಲಾಹುವಿನ ತೃಪ್ತಿ ಗಳಿಸಲು (ಅವರು ಹೀಗೆ ಮಾಡಿದರೇ) ವಿನಾ ನಾವು ಅದನ್ನು ಅವರಿಗೆ ನಿಯಮವನ್ನಾಗಿ ಮಾಡಿರಲಿಲ್ಲ.(2) ತರುವಾಯ ಅವರು ಅದನ್ನು ಪಾಲಿಸಬೇಕಾದ ರೀತಿಯಲ್ಲಿ ಪಾಲಿಸಲೂ ಇಲ್ಲ. ಆಗ ಅವರ ಪೈಕಿ ವಿಶ್ವಾಸವಿಟ್ಟವರಿಗೆ ನಾವು ಅವರ ಪ್ರತಿಫಲವನ್ನು ನೀಡಿದೆವು. ಅವರಲ್ಲಿ ಹೆಚ್ಚಿನವರೂ ದುರ್ಮಾರ್ಗಿಗಳಾಗಿದ್ದರು.

ثُمَّ قَفَّيْنَا عَلَىٰٓ ءَاثَٰرِهِم بِرُسُلِنَا وَقَفَّيْنَا بِعِيسَى ٱبْنِ مَرْيَمَ وَءَاتَيْنَٰهُ ٱلْإِنجِيلَ ۖ وَجَعَلْنَا فِى قُلُوبِ ٱلَّذِينَ ٱتَّبَعُوهُ رَأْفَةً وَرَحْمَةً ۚ وَرَهْبَانِيَّةً ٱبْتَدَعُوهَا مَا كَتَبْنَٰهَا عَلَيْهِمْ إِلَّا ٱبْتِغَآءَ رِضْوَٰنِ ٱللَّهِ فَمَا رَعَوْهَا حَقَّ رِعَايَتِهَا ۖ فَـَٔاتَيْنَا ٱلَّذِينَ ءَامَنُوا۟ مِنْهُمْ أَجْرَهُمْ ۖ وَكَثِيرٌ مِّنْهُمْ فَٰسِقُونَ ﴿٢٧﴾

28. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡಿರಿ. ಹಾಗಾದರೆ ಅವನು ತನ್ನ ಕಾರುಣ್ಯದಿಂದ ನಿಮಗೆ ಎರಡು ಪಾಲನ್ನು ದಯಪಾಲಿಸುವನು.(3) ಅವನು

يَٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ وَءَامِنُوا۟ بِرَسُولِهِۦ يُؤْتِكُمْ كِفْلَيْنِ مِن رَّحْمَتِهِۦ وَيَجْعَل لَّكُمْ نُورًا تَمْشُونَ بِهِۦ وَيَغْفِرْ لَكُمْ ۚ وَٱللَّهُ غَفُورٌ رَّحِيمٌ ﴿٢٨﴾

1 ಈಸಾ(عَلَيْهِ السَّلَامُ)ರಿಗಿಂತ ಮುಂದೆ ನಿಯೋಗಿಸಲಾದ ಪ್ರವಾದಿಗಳನ್ನು ಕ್ರೈಸ್ತರು ಪ್ರವಾದಿಗಳೆಂದೇ ಪರಿಗಣಿಸುತ್ತಾರೆ. ಆದರೆ ಈಸಾ(عَلَيْهِ السَّلَامُ)ರವರು ಪ್ರವಾದಿಯಲ್ಲ, ದೇವಪುತ್ರರೆಂದು ಅವರು ವಾದಿಸುತ್ತಾರೆ. ಅದನ್ನು ಖಂಡಿಸಿ ಈಸಾ(عَلَيْهِ السَّلَامُ) ರವರು ಪ್ರವಾದಿ ಪರಂಪರೆಯ ಒಂದು ಕೊಂಡಿಯಾಗಿದ್ದಾರೆಂದು ಈ ಸೂಕ್ತಿಯು ಸೂಚಿಸುತ್ತದೆ.

2 ಬ್ರಹ್ಮಚರ್ಯೆ, ವನವಾಸ ಇತ್ಯಾದಿಗಳನ್ನು ಅನೇಕ ಮಂದಿ ಧಾರ್ಮಿಕ ಜೀವನದ ಪರಿಪೂರ್ಣತೆಯನ್ನಾಗಿ ಪರಿಗಣಿಸುತ್ತಾರೆ. ಇಸ್ಲಾಮ್ ಇದನ್ನು ಪ್ರೋತ್ಸಾಹಿಸುವುದಿಲ್ಲ. ಸಾಮಾಜಿಕ ಜೀವಿಯಾಗಿ ಬದುಕಿಕೊಂಡೇ ಸತ್ಯಕ್ಕೆ ಸಾಕ್ಷಿಯಾಗುವುದರಲ್ಲಿ ಮತ್ತು ಪ್ರತಿಕೂಲ ಸನ್ನಿವೇಶಗಳನ್ನು ಹಿಮ್ಮೆಟ್ಟಿಸುವುದರಲ್ಲಿ ಇಸ್ಲಾಮ್ ಮಹತ್ವವನ್ನು ಕಾಣುತ್ತದೆ.

3 ಪೂರ್ವ ಗ್ರಂಥಗಳಲ್ಲಿ ವಿಶ್ವಾಸವಿಟ್ಟಿದ್ದ ಯಹೂದರು ಮತ್ತು ಕ್ರೈಸ್ತರ ಪೈಕಿ ಇಸ್ಲಾಮ್ ಸ್ವೀಕರಿಸಿದವರ ಬಗ್ಗೆ ಈ ಸೂಕ್ತಿಯಲ್ಲಿ ಪ್ರಸ್ತಾಪಿಸಲಾಗಿದೆ ಮತ್ತು ಇಸ್ಲಾಮಿಗಿಂತ ಮುಂಚೆ ತೌರಾತ್ ಅಥವಾ ಇಂಜೀಲ್‌ಗಳಲ್ಲಿ ವಿಶ್ವಾಸವಿಟ್ಟ ಕಾರಣ ಅಲ್ಲಾಹುವಿನ ಕಾರುಣ್ಯದ ಒಂದು ಪಾಲು ಮತ್ತು ತರುವಾಯ ಕುರ್‌ಆನಿನಲ್ಲಿ ವಿಶ್ವಾಸವಿಟ್ಟ ಕಾರಣ ಎರಡನೇ ಪಾಲು ಅವರಿಗಿದೆ ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ.

ನಿಮಗೆ ಒಂದು ಪ್ರಕಾಶವನ್ನು ಮಾಡಿಕೊಡುವನು. ಅದರ ಮೂಲಕ ನೀವು (ಸರಿಯಾದ ಮಾರ್ಗದಲ್ಲಿ) ನಡೆಯಬಹುದು. ಅವನು ನಿಮಗೆ ಕ್ಷಮೆ ನೀಡುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

29. ಇದೇಕೆಂದರೆ ಅಲ್ಲಾಹುವಿನ ಅನುಗ್ರಹದಿಂದ ಏನನ್ನೂ ಒಡೆತನದಲ್ಲಿಟ್ಟುಕೊಳ್ಳಲು ಅವರಿಗೆ ಸಾಧ್ಯವಾಗದು, ಖಂಡಿತವಾಗಿಯೂ ಅನುಗ್ರಹವಿರುವುದು ಅಲ್ಲಾಹುವಿನ ಕೈಯಲ್ಲಾಗಿದೆ ಮತ್ತು ಅವನು ತಾನಿಚ್ಛಿಸುವವರಿಗೆ ಅದನ್ನು ನೀಡುವನು ಎಂದು ಗ್ರಂಥದವರು ಅರಿತುಕೊಳ್ಳುವ ಸಲುವಾಗಿದೆ. ಅಲ್ಲಾಹು ಮಹಾ ಅನುಗ್ರಹದ ಒಡೆಯನಾಗಿರುವನು.

لِّئَلَّا يَعْلَمَ أَهْلُ ٱلْكِتَٰبِ أَلَّا يَقْدِرُونَ
عَلَىٰ شَىْءٍ مِّن فَضْلِ ٱللَّهِ وَأَنَّ ٱلْفَضْلَ
بِيَدِ ٱللَّهِ يُؤْتِيهِ مَن يَشَآءُ ۚ وَٱللَّهُ ذُو
ٱلْفَضْلِ ٱلْعَظِيمِ ﴿٢٩﴾

## ಅಲ್‌ಮುಜಾದಿಲಃ (ತರ್ಕಿಸುವವಳು)[1]

## سُورَةُ المُجَادلَة

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 22

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

قَدۡ سَمِعَ ٱللَّهُ قَوۡلَ ٱلَّتِي تُجَٰدِلُكَ فِي زَوۡجِهَا وَتَشۡتَكِيٓ إِلَى ٱللَّهِ وَٱللَّهُ يَسۡمَعُ تَحَاوُرَكُمَآۚ إِنَّ ٱللَّهَ سَمِيعُۢ بَصِيرٌ ١

1. (ಓ ಪ್ರವಾದಿಯವರೇ!) ತನ್ನ ಪತಿಯ ವಿಷಯದಲ್ಲಿ ತಮ್ಮೊಂದಿಗೆ ತರ್ಕಿಸುತ್ತಿರುವ ಮತ್ತು ಅಲ್ಲಾಹುವಿನೊಂದಿಗೆ ದುಃಖವನ್ನು ತೋಡಿಕೊಳ್ಳುತ್ತಿರುವ ಒಬ್ಬಾಕೆಯ ಮಾತನ್ನು ಅಲ್ಲಾಹು ಆಲಿಸಿರುವನು. ಅಲ್ಲಾಹು ನಿಮ್ಮಿಬ್ಬರ ಸಂಭಾಷಣೆಯನ್ನು ಆಲಿಸುತ್ತಿರುವನು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ವೀಕ್ಷಿಸುವವನೂ ಆಗಿರುವನು.

ٱلَّذِينَ يُظَٰهِرُونَ مِنكُم مِّن نِّسَآئِهِم مَّا هُنَّ أُمَّهَٰتِهِمۡۖ إِنۡ أُمَّهَٰتُهُمۡ إِلَّا ٱلَّٰٓـِٔي وَلَدۡنَهُمۡۚ وَإِنَّهُمۡ لَيَقُولُونَ مُنكَرٗا مِّنَ ٱلۡقَوۡلِ وَزُورٗاۚ وَإِنَّ ٱللَّهَ لَعَفُوٌّ غَفُورٞ ٢

2. ನಿಮ್ಮ ಪೈಕಿ ತಮ್ಮ ಪತ್ನಿಯರನ್ನು ತಾಯಂದಿರಿಗೆ ಸಮಾನರೆಂದು ಘೋಷಿಸುವವರು[2] (ತಪ್ಪು ಮಾಡುತ್ತಿರುವರು). ಅವರು (ಪತ್ನಿಯರು) ಅವರ ತಾಯಂದಿರಾಗಲಾರರು. ಅವರ ತಾಯಂದಿರು ಅವರನ್ನು ಹೆತ್ತವರೇ ವಿನಾ ಇನ್ನಾರೂ ಅಲ್ಲ. ಖಂಡಿತವಾಗಿಯೂ ಅವರು ನಿಷಿದ್ಧ ಮಾತನ್ನು ಮತ್ತು ಅಸತ್ಯವನ್ನು ಹೇಳುತ್ತಿರುವರು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಪಾಪಮುಕ್ತಿ ನೀಡುವವನೂ ಆಗಿರುವನು.

وَٱلَّذِينَ يُظَٰهِرُونَ مِن نِّسَآئِهِمۡ ثُمَّ يَعُودُونَ

3. ತಮ್ಮ ಪತ್ನಿಯರನ್ನು ತಾಯಂದಿರಿಗೆ ಸಮಾನರೆಂದು ಘೋಷಿಸಿ, ತರುವಾಯ

---

1 ಝಿಹಾರ್ ಎಂಬ ದುಷ್ಟ ಸಂಪ್ರದಾಯಕ್ಕೆ ಬಲಿಯಾಗಿ ಅದರ ಸಿಂಧುತ್ವದ ಕುರಿತು ತರ್ಕಿಸುತ್ತಾ ಪ್ರವಾದಿ(ﷺ)ರವರ ಬಳಿ ಬಂದ ಓರ್ವ ಸಹಾಬಾ ವನಿತೆಯ ಪ್ರಸ್ತಾಪದೊಂದಿಗೆ ಆರಂಭಗೊಳ್ಳುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಝಿಹಾರ್ ಎಂಬುದು ಪ್ರವಾದಿ(ﷺ)ರವರ ಕಾಲದಲ್ಲಿ ಅರಬರ ಮಧ್ಯೆ ರೂಢಿಯಲ್ಲಿದ್ದ ಒಂದು ದುಷ್ಟ ಸಂಪ್ರದಾಯವಾಗಿತ್ತು. 'ಇನ್ನು ಮೇಲೆ ನಿನ್ನೊಂದಿಗಿರುವ ಲೈಂಗಿಕ ಸಂಬಂಧವು ನನ್ನ ತಾಯಿಯೊಂದಿಗಿರುವ ಲೈಂಗಿಕ ಸಂಬಂಧದಂತೆ ನನಗೆ ನಿಷಿದ್ಧವಾಗಿದೆ' ಎಂದು ಹೇಳುತ್ತಾ ಪತ್ನಿಯೊಂದಿಗಿನ ಲೈಂಗಿಕ ಸಂಬಂಧವನ್ನು ಕಡಿಯುವ ಸಂಪ್ರದಾಯಕ್ಕೆ ಝಿಹಾರ್ ಎನ್ನಲಾಗುತ್ತದೆ.

لِمَا قَالُواْ فَتَحۡرِيرُ رَقَبَةٖ مِّن قَبۡلِ أَن يَتَمَآسَّاۚ ذَٰلِكُمۡ تُوعَظُونَ بِهِۦۚ وَٱللَّهُ بِمَا تَعۡمَلُونَ خَبِيرٞ ٣

ತಾವು ಹೇಳಿರುವ ಮಾತಿನಿಂದ ಹಿಂದಕ್ಕೆ ಸರಿಯುವವರು ಯಾರೋ ಅವರು ಪರಸ್ಪರ ಸ್ಪರ್ಶಿಸುವ ಮುಂಚೆ ಒಬ್ಬ ಗುಲಾಮನನ್ನು ವಿಮೋಚನೆಗೊಳಿಸಬೇಕಾಗಿದೆ.[1] ಅದು ನಿಮಗೆ ನೀಡಲಾಗುವ ಉಪದೇಶವಾಗಿದೆ. ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ಸೂಕ್ಷ್ಮ ಜ್ಞಾನವುಳ್ಳವನಾಗಿರುವನು.

فَمَن لَّمۡ يَجِدۡ فَصِيَامُ شَهۡرَيۡنِ مُتَتَابِعَيۡنِ مِن قَبۡلِ أَن يَتَمَآسَّاۖ فَمَن لَّمۡ يَسۡتَطِعۡ فَإِطۡعَامُ سِتِّينَ مِسۡكِينٗاۚ ذَٰلِكَ لِتُؤۡمِنُواْ بِٱللَّهِ وَرَسُولِهِۦۚ وَتِلۡكَ حُدُودُ ٱللَّهِۗ وَلِلۡكَٰفِرِينَ عَذَابٌ أَلِيمٌ ٤

4. ಇನ್ನು ಯಾರಿಗಾದರೂ (ಗುಲಾಮನು) ಸಿಗದಿದ್ದರೆ, ಅವರು ಪರಸ್ಪರ ಸ್ಪರ್ಶಿಸುವುದಕ್ಕೆ ಮುಂಚೆ ನಿರಂತರವಾಗಿ ಎರಡು ತಿಂಗಳ ಕಾಲ ಉಪವಾಸ ಆಚರಿಸಬೇಕಾಗಿದೆ. ಯಾರಿಗಾದರೂ (ಅದೂ) ಸಾಧ್ಯವಿಲ್ಲವೆಂದಾದರೆ ಅವರು ಅರುವತ್ತು ಬಡವರಿಗೆ ಆಹಾರ ನೀಡಬೇಕಾಗಿದೆ. ಅದು ನೀವು ಅಲ್ಲಾಹು ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡುವ ಸಲುವಾಗಿದೆ. ಇವು ಅಲ್ಲಾಹುವಿನ ಮೇರೆಗಳಾಗಿವೆ. ಸತ್ಯನಿಷೇಧಿಗಳಿಗೆ ಯಾತನಾಮಯವಾದ ಶಿಕ್ಷೆಯಿದೆ.

إِنَّ ٱلَّذِينَ يُحَآدُّونَ ٱللَّهَ وَرَسُولَهُۥ كُبِتُواْ كَمَا كُبِتَ ٱلَّذِينَ مِن قَبۡلِهِمۡۚ وَقَدۡ أَنزَلۡنَآ ءَايَٰتِۭ بَيِّنَٰتٖۚ وَلِلۡكَٰفِرِينَ عَذَابٞ مُّهِينٞ ٥

5. ಖಂಡಿತವಾಗಿಯೂ ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುತ್ತಿರುವವರು ಅವರ ಪೂರ್ವಿಕರು ಅಪಮಾನಿಸಲಾದಂತೆ ಅಪಮಾನಿಸಲಾಗುವರು. ನಾವು ಸುಸ್ಪಷ್ಟವಾದ ಅನೇಕ ಪುರಾವೆಗಳನ್ನು ಅವತೀರ್ಣಗೊಳಿಸಿರುವೆವು. ಸತ್ಯನಿಷೇಧಿಗಳಿಗೆ ಅಪಮಾನಕರವಾದ ಶಿಕ್ಷೆಯಿದೆ.

يَوۡمَ يَبۡعَثُهُمُ ٱللَّهُ جَمِيعٗا فَيُنَبِّئُهُم بِمَا عَمِلُوٓاْۚ أَحۡصَىٰهُ ٱللَّهُ وَنَسُوهُۚ وَٱللَّهُ عَلَىٰ كُلِّ شَيۡءٖ شَهِيدٌ ٦

6. ಅಲ್ಲಾಹು ಅವರೆಲ್ಲರನ್ನೂ ಪುನರುತ್ಥಾನಗೊಳಿಸಿ, ತರುವಾಯ ಅವರು ಮಾಡಿದ ಕರ್ಮಗಳ ಕುರಿತು ಅವರಿಗೆ ತಿಳಿಸಿಕೊಡುವ ದಿನ! ಅಲ್ಲಾಹು ಅದರ ಲೆಕ್ಕವನ್ನಿಟ್ಟಿರುವನು ಮತ್ತು ಅವರು ಅದನ್ನು ಮರೆತುಬಿಟ್ಟಿರುವರು. ಅಲ್ಲಾಹು ಎಲ್ಲ ವಿಷಯಗಳ ಮೇಲೂ ಸಾಕ್ಷಿಯಾಗಿರುವನು.

1 ಇದು ಝಿಹಾರ್‌ನ ಪ್ರಾಯಶ್ಚಿತ್ತವಾಗಿದೆ.

أَلَمْ تَرَ أَنَّ ٱللَّهَ يَعْلَمُ مَا فِي ٱلسَّمَٰوَٰتِ وَمَا فِي ٱلْأَرْضِ ۖ مَا يَكُونُ مِن نَّجْوَىٰ ثَلَٰثَةٍ إِلَّا هُوَ رَابِعُهُمْ وَلَا خَمْسَةٍ إِلَّا هُوَ سَادِسُهُمْ وَلَآ أَدْنَىٰ مِن ذَٰلِكَ وَلَآ أَكْثَرَ إِلَّا هُوَ مَعَهُمْ أَيْنَ مَا كَانُوا۟ ۖ ثُمَّ يُنَبِّئُهُم بِمَا عَمِلُوا۟ يَوْمَ ٱلْقِيَٰمَةِ ۚ إِنَّ ٱللَّهَ بِكُلِّ شَيْءٍ عَلِيمٌ ۝٧

7. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದನ್ನು ಅಲ್ಲಾಹು ಅರಿಯುತ್ತಿರುವನೆಂದು ತಾವು ಕಾಣುವುದಿಲ್ಲವೇ? ಮೂವರು ಪರಸ್ಪರ ನಡೆಸುವ ಯಾವುದೇ ಗುಪ್ತ ಸಂಭಾಷಣೆಯು ನಾಲ್ಕನೆಯವನಾಗಿ ಅವನು (ಅಲ್ಲಾಹು) ಅವರೊಂದಿಗೆ ಇರದ ಹೊರತು ಜರುಗಲಾರದು. ಐವರು ನಡೆಸುವ ಸಂಭಾಷಣೆಯಾಗಿದ್ದಲ್ಲಿ ಆರನೆಯವನಾಗಿ ಅವನು ಅವರೊಂದಿಗೆ ಇರದ ಹೊರತು. ಅದಕ್ಕಿಂತ ಕಡಿಮೆ ಜನರಾಗಲಿ, ಅಧಿಕ ಜನರಾಗಲಿ ನಡೆಸುವುದು (ಸಂಭಾಷಣೆ) ಆಗಿದ್ದಲ್ಲಿ ಅವರು ಎಲ್ಲೇ ಇದ್ದರೂ ಅವನು ಅವರೊಂದಿಗೆ ಇರದ ಹೊರತು ಜರುಗಲಾರದು. ತರುವಾಯ ಪುನರುತ್ಥಾನ ದಿನದಂದು ಅವರು ಮಾಡಿರುವುದರ ಕುರಿತು ಅವನು ಅವರಿಗೆ ತಿಳಿಸಿಕೊಡುವನು. ಖಂಡಿತವಾಗಿಯೂ ಅಲ್ಲಾಹು ಎಲ್ಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

أَلَمْ تَرَ إِلَى ٱلَّذِينَ نُهُوا۟ عَنِ ٱلنَّجْوَىٰ ثُمَّ يَعُودُونَ لِمَا نُهُوا۟ عَنْهُ وَيَتَنَٰجَوْنَ بِٱلْإِثْمِ وَٱلْعُدْوَٰنِ وَمَعْصِيَتِ ٱلرَّسُولِ ۖ وَإِذَا جَآءُوكَ حَيَّوْكَ بِمَا لَمْ يُحَيِّكَ بِهِ ٱللَّهُ وَيَقُولُونَ فِيٓ أَنفُسِهِمْ لَوْلَا يُعَذِّبُنَا ٱللَّهُ بِمَا نَقُولُ ۚ حَسْبُهُمْ جَهَنَّمُ يَصْلَوْنَهَا ۖ فَبِئْسَ ٱلْمَصِيرُ ۝٨

8. ಗುಪ್ತ ಸಂಭಾಷಣೆಯಲ್ಲಿ ತೊಡಗುವುದರಿಂದ ವಿರೋಧಿಸಲಾಗಿರುವವರನ್ನು ತಾವು ಕಂಡಿಲ್ಲವೇ? ತರುವಾಯ ಅವರನ್ನು ವಿರೋಧಿಸಲಾದೆಡೆಗೆ ಅವರು ಮರಳುವರು.[1] ಪಾಪಕ್ಕೂ, ಅತಿಕ್ರಮಗಳಿಗೂ, ಸಂದೇಶವಾಹಕರನ್ನು ಧಿಕ್ಕರಿಸುವುದಕ್ಕೂ ಅವರು ಪರಸ್ಪರ ಗುಪ್ತವಾಗಿ ಉಪದೇಶ ಮಾಡುತ್ತಿರುವರು. ಅವರು ತಮ್ಮ ಬಳಿ ಬಂದರೆ ಅಲ್ಲಾಹು ತಮ್ಮನ್ನು ಅಭಿವಂದಿಸದ ರೀತಿಯಲ್ಲಿ ಅವರು ತಮ್ಮನ್ನು ಅಭಿವಂದಿಸುವರು.[2] 'ನಾವು

1 ಮುಸ್ಲಿಮರೊಂದಿಗೆ ಬೆರೆತು ಜೀವಿಸುತ್ತಿದ್ದ ಕಪಟವಿಶ್ವಾಸಿಗಳು ಮುಸ್ಲಿಮರ ವಿರುದ್ಧ ಹಲವು ರೀತಿಯ ಪಿತೂರಿಗಳನ್ನು ಹೆಣೆಯತೊಡಗಿದರು. ಈ ಮಾಹಿತಿ ಸಿಕ್ಕಿದಾಗ ಪ್ರತ್ಯೇಕ ಗುಂಪುಗಳಾಗಿ ಗುಪ್ತ ಸಂಭಾಷಣೆಯಲ್ಲಿ ತೊಡಗುವುದನ್ನು ಪ್ರವಾದಿ(ﷺ)ರವರು ನಿಷೇಧಿಸಿದರು. ಆದರೆ ಕಪಟವಿಶ್ವಾಸಿಗಳು ಈ ನಿಷೇಧವನ್ನು ಉಲ್ಲಂಘಿಸಿ ಪುನಃ ಗುಪ್ತ ಸಂಭಾಷಣೆಗಳಲ್ಲಿ ನಿರತರಾಗ ತೊಡಗಿದರು. ಅದರ ಕುರಿತು ಇಲ್ಲಿ ಸೂಚಿಸಲಾಗಿದೆ.

2 ಅಸ್ಸಲಾಮು ಅಲೈಕುಮ್ (ನಿಮ್ಮ ಮೇಲೆ ಶಾಂತಿಯಿರಲಿ) ಎಂಬ ಅಭಿವಂದನೆಯನ್ನು ಅಲ್ಲಾಹು ಅಂಗೀಕರಿಸಿದ್ದಾನೆ. ಆದರೆ ಸಲಾಮ್ ಎಂಬ ಪದಕ್ಕೆ ಬದಲಾಗಿ ಅಸ್ಸಾಮು ಅಲೈಕುಮ್ (ನಿಮ್ಮ ಮೇಲೆ ಮರಣವುಂಟಾಗಲಿ) ಎಂದು ಯಹೂದರು ಹೇಳುತ್ತಿದ್ದರು.

ಹೀಗೆ ಹೇಳುವ ನಿಮಿತ್ತ ಅಲ್ಲಾಹು ನಮ್ಮನ್ನು ಶಿಕ್ಷಿಸುವುದಿಲ್ಲವೇಕೆ?' ಎಂದು ಅವರು ಪರಸ್ಪರ ಕೇಳುವರು. ಅವರಿಗೆ ನರಕಾಗ್ನಿಯೇ ಸಾಕು. ಅವರು ಅದರಲ್ಲಿ ಉರಿಯುವರು. ಆ ಪರ್ಯವಸಾನವು ನಿಕೃಷ್ಟವೇ ಆಗಿದೆ.

يَٰٓأَيُّهَا ٱلَّذِينَ ءَامَنُوٓاْ إِذَا تَنَٰجَيۡتُمۡ فَلَا تَتَنَٰجَوۡاْ بِٱلۡإِثۡمِ وَٱلۡعُدۡوَٰنِ وَمَعۡصِيَتِ ٱلرَّسُولِ وَتَنَٰجَوۡاْ بِٱلۡبِرِّ وَٱلتَّقۡوَىٰۖ وَٱتَّقُواْ ٱللَّهَ ٱلَّذِيٓ إِلَيۡهِ تُحۡشَرُونَ ٩

9. ಓ ಸತ್ಯವಿಶ್ವಾಸಿಗಳೇ! ನೀವು ಗುಪ್ತ ಸಂಭಾಷಣೆಯಲ್ಲಿ ತೊಡಗುವುದಾದರೆ ಪಾಪಕ್ಕೂ, ಅತಿಕ್ರಮಕ್ಕೂ ಹಾಗೂ ಸಂದೇಶವಾಹಕರನ್ನು ಧಿಕ್ಕರಿಸಲಿಕ್ಕೂ ಗುಪ್ತ ಸಂಭಾಷಣೆಯನ್ನು ನಡೆಸದಿರಿ. ಪುಣ್ಯ ಮತ್ತು ಭಯಭಕ್ತಿಯಲ್ಲಿ ನೀವು ಗುಪ್ತ ಉಪದೇಶ ಮಾಡಿರಿ. ಯಾವ ಅಲ್ಲಾಹುವಿನೆಡೆಗೆ ನಿಮ್ಮನ್ನು ಒಟ್ಟುಗೂಡಿಸಲಾಗುವುದೋ ಅವನನ್ನು ನೀವು ಭಯಪಡಿರಿ.

إِنَّمَا ٱلنَّجۡوَىٰ مِنَ ٱلشَّيۡطَٰنِ لِيَحۡزُنَ ٱلَّذِينَ ءَامَنُواْ وَلَيۡسَ بِضَآرِّهِمۡ شَيۡـًٔا إِلَّا بِإِذۡنِ ٱللَّهِۚ وَعَلَى ٱللَّهِ فَلۡيَتَوَكَّلِ ٱلۡمُؤۡمِنُونَ ١٠

10. ಆ ಗುಪ್ತ ಸಂಭಾಷಣೆಯು ಕೇವಲ ಸೈತಾನನ ಕಡೆಯಿಂದಿರುವುದಾಗಿದೆ. ಅದು ಸತ್ಯ ವಿಶ್ವಾಸಿಗಳನ್ನು ದುಃಖಕ್ಕೀಡುಮಾಡುವ ಸಲುವಾಗಿದೆ. ಆದರೆ ಅಲ್ಲಾಹುವಿನ ಅನುಮತಿಯ ವಿನಾ ಅದು ಅವರಿಗೆ ಯಾವುದೇ ಹಾನಿಯನ್ನು ಮಾಡದು. ಸತ್ಯವಿಶ್ವಾಸಿಗಳು ಅಲ್ಲಾಹುವಿನ ಮೇಲೆ ಭರವಸೆಯಿಡಲಿ.

يَٰٓأَيُّهَا ٱلَّذِينَ ءَامَنُوٓاْ إِذَا قِيلَ لَكُمۡ تَفَسَّحُواْ فِي ٱلۡمَجَٰلِسِ فَٱفۡسَحُواْ يَفۡسَحِ ٱللَّهُ لَكُمۡۖ وَإِذَا قِيلَ ٱنشُزُواْ فَٱنشُزُواْ يَرۡفَعِ ٱللَّهُ ٱلَّذِينَ ءَامَنُواْ مِنكُمۡ وَٱلَّذِينَ أُوتُواْ ٱلۡعِلۡمَ دَرَجَٰتٖۚ وَٱللَّهُ بِمَا تَعۡمَلُونَ خَبِيرٞ ١١

11. ಓ ಸತ್ಯವಿಶ್ವಾಸಿಗಳೇ! 'ಸಭೆಗಳಲ್ಲಿ ಎಡೆ ಮಾಡಿಕೊಡಿರಿ' ಎಂದು ನಿಮ್ಮೊಂದಿಗೆ ಹೇಳಲಾದರೆ ಎಡೆ ಮಾಡಿಕೊಡಿರಿ. ಹಾಗಾದರೆ ಅಲ್ಲಾಹು ನಿಮಗೆ ಎಡೆ ಮಾಡಿಕೊಡುವನು. 'ಎದ್ದು ಹೋಗಿರಿ' ಎಂದು ನಿಮ್ಮೊಂದಿಗೆ ಹೇಳಲಾದರೆ ಎದ್ದು ಹೋಗಿರಿ. ನಿಮ್ಮ ಪೈಕಿ ವಿಶ್ವಾಸವಿಟ್ಟವರನ್ನು ಮತ್ತು ಜ್ಞಾನ ನೀಡಲಾದವರನ್ನು ಅಲ್ಲಾಹು ಹಲವು ದರ್ಜೆಗಳಿಗೆ ಏರಿಸುವನು. ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ಸೂಕ್ಷ್ಮವಾಗಿ ಅರಿಯುವವನಾಗಿರುವನು.

12. ಓ ಸತ್ಯವಿಶ್ವಾಸಿಗಳೇ! ನೀವು ಸಂದೇಶವಾಹಕರೊಂದಿಗೆ ಗುಪ್ತ ಸಂಭಾಷಣೆಯಲ್ಲಿ ತೊಡಗುವುದಾದರೆ ನಿಮ್ಮ ಗುಪ್ತ ಸಂಭಾಷಣೆಗೆ ಮುಂಚಿತವಾಗಿ ನೀವು ಏನಾದರೂ ದಾನಧರ್ಮ ಮಾಡಿರಿ.[1] ಅದು ನಿಮಗೆ ಉತ್ತಮವಾಗಿದೆ ಮತ್ತು ಹೆಚ್ಚು ಪರಿಶುದ್ಧವಾಗಿದೆ. ಇನ್ನು ನಿಮಗೆ (ದಾನಧರ್ಮ ಮಾಡಲು) ಏನೂ ಸಿಗದಿದ್ದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَـٰٓأَيُّهَا ٱلَّذِينَ ءَامَنُوٓاْ إِذَا نَـٰجَيْتُمُ ٱلرَّسُولَ فَقَدِّمُواْ بَيْنَ يَدَىْ نَجْوَىٰكُمْ صَدَقَةً ۚ ذَٰلِكَ خَيْرٌ لَّكُمْ وَأَطْهَرُ ۚ فَإِن لَّمْ تَجِدُواْ فَإِنَّ ٱللَّهَ غَفُورٌ رَّحِيمٌ ﴿١٢﴾

13. ನಿಮ್ಮ ಗುಪ್ತ ಸಂಭಾಷಣೆಗೆ ಮುಂಚಿತವಾಗಿ ನೀವು ದಾನಧರ್ಮ ಮಾಡುವುದರ ಕುರಿತು ಭಯಪಟ್ಟಿರುವಿರಾ?[2] ಆದರೆ ನೀವು ಅದನ್ನು ಮಾಡದಿರುವುದರಿಂದ ಮತ್ತು ಅಲ್ಲಾಹು ನಿಮಗೆ ಕ್ಷಮಿಸಿರುವುದರಿಂದ ನೀವು ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ನೀಡಿರಿ ಹಾಗೂ ಅಲ್ಲಾಹುವನ್ನೂ ಅವನ ಸಂದೇಶವಾಹಕರನ್ನೂ ಅನುಸರಿಸಿರಿ.[3] ನೀವು

ءَأَشْفَقْتُمْ أَن تُقَدِّمُواْ بَيْنَ يَدَىْ نَجْوَىٰكُمْ صَدَقَـٰتٍ ۚ فَإِذْ لَمْ تَفْعَلُواْ وَتَابَ ٱللَّهُ عَلَيْكُمْ فَأَقِيمُواْ ٱلصَّلَوٰةَ وَءَاتُواْ ٱلزَّكَوٰةَ وَأَطِيعُواْ ٱللَّهَ وَرَسُولَهُۥ ۚ وَٱللَّهُ خَبِيرٌۢ بِمَا تَعْمَلُونَ ﴿١٣﴾

1 ಪ್ರವಾದಿ(ﷺ)ರವರ ಸಭೆಯು ಬಹಿರಂಗ ಸಭೆಯಾಗಿರುತ್ತಿತ್ತು. ಸಹಾಬಿಗಳ ಪೈಕಿ ಯಾರಿಗೂ ಕೂಡ ಅಲ್ಲಿ ಪ್ರವಾದಿ(ﷺ)ರವರೊಂದಿಗೆ ವಿಷಯಗಳನ್ನು ಕೇಳಿ ಮನದಟ್ಟು ಮಾಡಿಕೊಳ್ಳಬಹುದಾಗಿತ್ತು. ಪ್ರವಾದಿ(ﷺ)ರವರು ನೀಡುವ ಉತ್ತರವನ್ನು ಆಲಿಸಿ ಗ್ರಹಿಸಲು ಎಲ್ಲರಿಗೂ ಸಾಧ್ಯವಾಗುವುದರಿಂದ ಈ ಬಹಿರಂಗ ಸಭೆಯು ಧರ್ಮಬೋಧನೆಗೆ ಉತ್ತಮ ವೇದಿಕೆಯಾಗಿತ್ತು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಪ್ರವಾದಿ(ﷺ)ರವರೊಂದಿಗೆ ವಿವಿಧ ವಿಷಯಗಳ ಕುರಿತು ಗುಪ್ತ ಸಂಭಾಷಣೆ ನಡೆಸುವುದು ಅನಿವಾರ್ಯವಾಗಿರುವ ಕೆಲವರಿದ್ದರು. ಪ್ರವಾದಿ(ﷺ)ರವರೊಂದಿಗೆ ಗುಪ್ತ ಸಂಭಾಷಣೆ ನಡೆಸಲು ಅವಕಾಶ ದೊರೆಯುವುದು ಹೆಮ್ಮೆಯ ವಿಷಯವಾಗಿ ಪರಿಗಣಿಸುವ ಧನಿಕರಾಗಿದ್ದರು ಇವರಲ್ಲಿ ಹೆಚ್ಚಿನವರು. ಪ್ರವಾದಿ(ﷺ)ರವರ ಅನುಚರರಲ್ಲಿ ಹೆಚ್ಚಿನವರೂ ಬಡವರಾಗಿದ್ದರು. ಅವರೊಂದಿಗೆ ಸಮಯ ಕಳೆಯಲು ಅಥವಾ ಅವರಿಗೆ ಮಾರ್ಗನಿರ್ದೇಶನ ನೀಡಲು ಸಾಧ್ಯವಾಗದ ವಿಧದಲ್ಲಿ ಖಾಸಗಿ ಸಂಭಾಷಣೆಗಳು ಅಧಿಕವಾಗತೊಡಗಿದಾಗ ಅಂತಹ ಸಂಭಾಷಣೆಗಳನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಮತ್ತು ಖಾಸಗಿ ಸಂಭಾಷಣೆ ಮಾಡುವ ಅವಕಾಶವನ್ನು ಅರಸುತ್ತಾ ಬರುವವರ ಪ್ರಾಮಾಣಿಕತೆಯನ್ನು ಪರೀಕ್ಷಿಸುವುದಕ್ಕಾಗಿ ಪ್ರವಾದಿ(ﷺ)ರವರೊಂದಿಗೆ ಗುಪ್ತ ಸಂಭಾಷಣೆಯಲ್ಲಿ ತೊಡಗಲು ಇಚ್ಛಿಸುವವರು ಅದಕ್ಕಿಂತ ಮುಂಚೆ ಇಸ್ಲಾಮ್ ಮತ್ತು ಮುಸ್ಲಿಮರಿಗೆ ಏನಾದರೂ ದಾನ ಮಾಡಬೇಕೆಂದು ಶಾಸನ ಮಾಡಲಾಯಿತು. ಇದು ಧನಿಕರಿಗೆ ಮಾತ್ರವಾಗಿದ್ದ ಶಾಸನವಾಗಿತ್ತೆಂದು ಹೆಚ್ಚಿನ ವ್ಯಾಖ್ಯಾನಕಾರರೂ ಹೇಳಿದ್ದಾರೆ.

2 ಜಿಪುಣರಾದ ಹಲವರು ತರುವಾಯ ಗುಪ್ತ ಸಂಭಾಷಣೆಗಾಗಿ ಬರುವುದನ್ನು ನಿಲ್ಲಿಸಿದರು.

3 ಮಹತ್ವವಿರುವುದು ಪ್ರವಾದಿ(ﷺ)ರವರೊಂದಿಗೆ ಗುಪ್ತ ಸಂಭಾಷಣೆಯನ್ನು ನಡೆಸಲು ಅವಕಾಶ ಸಿಗುವುದರಲ್ಲಿ ಅಲ್ಲ; ಬದಲಾಗಿ ಮಹತ್ವವಿರುವುದು ಇಸ್ಲಾಮಿನ ವಿಧಿನಿಷೇಧಗಳನ್ನು ಪಾಲಿಸುವುದರಲ್ಲಾಗಿದೆ.

ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

۞ أَلَمْ تَرَ إِلَى ٱلَّذِينَ تَوَلَّوْا۟ قَوْمًا غَضِبَ ٱللَّهُ عَلَيْهِم مَّا هُم مِّنكُمْ وَلَا مِنْهُمْ وَيَحْلِفُونَ عَلَى ٱلْكَذِبِ وَهُمْ يَعْلَمُونَ ﴿١٤﴾

**14.** ಅಲ್ಲಾಹು ಕೋಪಿಸಿಕೊಂಡಿರುವ ಒಂದು ಜನತೆಯೊಂದಿಗೆ (ಯಹೂದರೊಂದಿಗೆ) ಮೈತ್ರಿ ಮಾಡಿಕೊಂಡವರನ್ನು (ಕಪಟವಿಶ್ವಾಸಿಗಳನ್ನು) ತಾವು ಕಂಡಿಲ್ಲವೇ? ಅವರು ನಿಮ್ಮ ಪೈಕಿ ಸೇರಿದವರಲ್ಲ. ಅವರ (ಯಹೂದರ) ಪೈಕಿ ಸೇರಿದವರೂ ಅಲ್ಲ. ಅವರು ಅರಿತಿರುತ್ತಲೇ ಸುಳ್ಳು ಆಣೆ ಹಾಕುತ್ತಿರುವರು.

أَعَدَّ ٱللَّهُ لَهُمْ عَذَابًا شَدِيدًا ۖ إِنَّهُمْ سَآءَ مَا كَانُوا۟ يَعْمَلُونَ ﴿١٥﴾

**15.** ಅಲ್ಲಾಹು ಅವರಿಗೆ ಕಠೋರ ಶಿಕ್ಷೆಯನ್ನು ಸಿದ್ಧಗೊಳಿಸಿರುವನು. ಖಂಡಿತವಾಗಿಯೂ ಅವರು ಮಾಡುತ್ತಿರುವುದು ಅತಿ ನಿಕೃಷ್ಟವಾದುದಾಗಿದೆ!

ٱتَّخَذُوٓا۟ أَيْمَـٰنَهُمْ جُنَّةً فَصَدُّوا۟ عَن سَبِيلِ ٱللَّهِ فَلَهُمْ عَذَابٌ مُّهِينٌ ﴿١٦﴾

**16.** ಅವರು ತಮ್ಮ ಶಪಥಗಳನ್ನು ಒಂದು ಗುರಾಣಿಯಾಗಿ ಮಾಡಿಕೊಂಡಿರುವರು. ತರುವಾಯ ಅವರು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದರು. ಆದ್ದರಿಂದ ಅವರಿಗೆ ಅಪಮಾನಕರವಾದ ಶಿಕ್ಷೆಯಿದೆ.

لَّن تُغْنِىَ عَنْهُمْ أَمْوَٰلُهُمْ وَلَآ أَوْلَـٰدُهُم مِّنَ ٱللَّهِ شَيْـًٔا ۚ أُو۟لَـٰٓئِكَ أَصْحَـٰبُ ٱلنَّارِ ۖ هُمْ فِيهَا خَـٰلِدُونَ ﴿١٧﴾

**17.** ಅವರ ಸಂಪತ್ತುಗಳಾಗಲಿ, ಸಂತತಿಗಳಾಗಲಿ ಅಲ್ಲಾಹುವಿನ ಬಳಿ ಅವರಿಗೆ ಯಾವುದೇ ಪ್ರಯೋಜನವನ್ನೂ ಮಾಡದು. ಅವರು ನರಕವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.

يَوْمَ يَبْعَثُهُمُ ٱللَّهُ جَمِيعًا فَيَحْلِفُونَ لَهُۥ كَمَا يَحْلِفُونَ لَكُمْ ۖ وَيَحْسَبُونَ أَنَّهُمْ عَلَىٰ شَىْءٍ ۚ أَلَآ إِنَّهُمْ هُمُ ٱلْكَـٰذِبُونَ ﴿١٨﴾

**18.** ಅಲ್ಲಾಹು ಅವರೆಲ್ಲರನ್ನು ಪುನರುತ್ಥಾನಗೊಳಿಸುವ ದಿನ! ನಿಮ್ಮೊಂದಿಗೆ ಅವರು ಶಪಥ ಮಾಡುವಂತೆ ಅವನೊಂದಿಗೂ ಅವರು ಶಪಥ ಮಾಡುವರು. ತಾವು (ಈ ಸುಳ್ಳು ಆಣೆಯ ಮೂಲಕ) ಏನನ್ನೋ ಗಳಿಸಿರುವುದಾಗಿ ಅವರು ಭಾವಿಸುವರು. ಅರಿಯಿರಿ! ಖಂಡಿತವಾಗಿಯೂ ಸುಳ್ಳು ಹೇಳುವವರು ಅವರೇ ಆಗಿರುವರು.

ٱسْتَحْوَذَ عَلَيْهِمُ ٱلشَّيْطَـٰنُ فَأَنسَىٰهُمْ ذِكْرَ ٱللَّهِ ۚ أُو۟لَـٰٓئِكَ حِزْبُ ٱلشَّيْطَـٰنِ ۚ أَلَآ إِنَّ حِزْبَ ٱلشَّيْطَـٰنِ هُمُ ٱلْخَـٰسِرُونَ ﴿١٩﴾

**19.** ಸೈತಾನನು ಅವರನ್ನು ಸ್ವಾಧೀನಪಡಿಸಿರುವನು. ಆದ್ದರಿಂದ ಅವರು ಅಲ್ಲಾಹುವಿನ ಸ್ಮರಣೆಯನ್ನು ಮರೆಯುವಂತೆ ಮಾಡಿದನು. ಅವರು ಸೈತಾನನ ಪಕ್ಷದವರಾಗಿರುವರು.

ಅರಿಯಿರಿ! ಖಂಡಿತವಾಗಿಯೂ ಸೈತಾನನ ಪಕ್ಷದವರು ನಷ್ಟ ಹೊಂದಿದವರಾಗಿರುವರು.

إِنَّ ٱلَّذِينَ يُحَآدُّونَ ٱللَّهَ وَرَسُولَهُۥٓ أُوْلَـٰٓئِكَ فِى ٱلْأَذَلِّينَ ﴿٢٠﴾

20. ಖಂಡಿತವಾಗಿಯೂ ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುವವರು ಯಾರೋ ಅವರು ಅತ್ಯಂತ ಅಪಮಾನಿತ ಸ್ಥಿತಿಯಲ್ಲಿರುವರು.

كَتَبَ ٱللَّهُ لَأَغْلِبَنَّ أَنَا۠ وَرُسُلِىٓ ۚ إِنَّ ٱللَّهَ قَوِىٌّ عَزِيزٌ ﴿٢١﴾

21. 'ಖಂಡಿತವಾಗಿಯೂ ನಾನು ಮತ್ತು ನನ್ನ ಸಂದೇಶವಾಹಕರು ವಿಜಯಗಳಿಸುವವರಾಗಿರುವೆವು' ಎಂದು ಅಲ್ಲಾಹು ದಾಖಲಿಸಿರುವನು. ಖಂಡಿತವಾಗಿಯೂ ಅಲ್ಲಾಹು ಬಲಿಷ್ಠನೂ ಪ್ರತಾಪಶಾಲಿಯೂ ಆಗಿರುವನು.

لَّا تَجِدُ قَوْمًا يُؤْمِنُونَ بِٱللَّهِ وَٱلْيَوْمِ ٱلْـَٔاخِرِ يُوَآدُّونَ مَنْ حَآدَّ ٱللَّهَ وَرَسُولَهُۥ وَلَوْ كَانُوٓا۟ ءَابَآءَهُمْ أَوْ أَبْنَآءَهُمْ أَوْ إِخْوَٰنَهُمْ أَوْ عَشِيرَتَهُمْ ۚ أُو۟لَـٰٓئِكَ كَتَبَ فِى قُلُوبِهِمُ ٱلْإِيمَـٰنَ وَأَيَّدَهُم بِرُوحٍ مِّنْهُ ۖ وَيُدْخِلُهُمْ جَنَّـٰتٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَا ۚ رَضِىَ ٱللَّهُ عَنْهُمْ وَرَضُوا۟ عَنْهُ ۚ أُو۟لَـٰٓئِكَ حِزْبُ ٱللَّهِ ۚ أَلَآ إِنَّ حِزْبَ ٱللَّهِ هُمُ ٱلْمُفْلِحُونَ ﴿٢٢﴾

22. ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವ ಒಂದು ಜನತೆಯು ಅಲ್ಲಾಹು ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುವವರೊಂದಿಗೆ ಮೈತ್ರಿ ಸ್ಥಾಪಿಸುವುದನ್ನು ತಾವು ಕಾಣಲಾರಿರಿ. ಅವರು (ವಿರೋಧಿಗಳು) ಅವರ ತಂದೆಯಂದಿರೋ, ಪುತ್ರರೋ, ಸಹೋದರರರೋ, ಸಂಬಂಧಿಕರೋ ಆಗಿದ್ದರೂ ಸರಿ. ಅಂತಹವರ[1] ಹೃದಯಗಳಲ್ಲಿ ಅಲ್ಲಾಹು ವಿಶ್ವಾಸವನ್ನು ದಾಖಲಿಸಿಟ್ಟಿರುವನು ಮತ್ತು ತನ್ನ ವತಿಯ ಆತ್ಮ ಚೈತನ್ಯದಿಂದ ಅವನು ಅವರಿಗೆ ಬೆಂಬಲವನ್ನು ನೀಡಿರುವನು. ಅವನು ಅವರನ್ನು ತಳಭಾಗದಲ್ಲಿ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿಗೆ ಪ್ರವೇಶಮಾಡಿಸುವನು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅಲ್ಲಾಹು ಅವರ ಬಗ್ಗೆ ಸಂತೃಪ್ತನಾಗಿರುವನು ಮತ್ತು ಅವರು ಅವನ ಬಗ್ಗೆ ಸಂತೃಪ್ತರಾಗಿರುವರು. ಅವರು ಅಲ್ಲಾಹುವಿನ ಪಕ್ಷದವರಾಗಿರುವರು. ಅರಿಯಿರಿ! ಖಂಡಿತವಾಗಿಯೂ ವಿಜಯಗಳಿಸುವವರು ಅಲ್ಲಾಹುವಿನ ಪಕ್ಷದವರೇ ಆಗಿರುವರು.

1 ಅಂದರೆ ಅಲ್ಲಾಹು ಮತ್ತು ಪ್ರವಾದಿ(ﷺ)ರವರ ಶತ್ರುಗಳೊಂದಿಗೆ ಮೈತ್ರಿ ಮಾಡಿಕೊಳ್ಳದ ನೈಜ ವಿಶ್ವಾಸಿಗಳು

# ಅಲ್‌ಹಶ್ರ್ (ಗಡಿಪಾರು)[1]

سُورَةُ الحَشۡرِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 24

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನ ಕೀರ್ತನೆ ಮಾಡಿವೆ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

سَبَّحَ لِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۖ وَهُوَ ٱلۡعَزِيزُ ٱلۡحَكِيمُ ١

2. ಗ್ರಂಥದವರಲ್ಲಿ ಸೇರಿದ ಸತ್ಯನಿಷೇಧಿಗಳನ್ನು ಪ್ರಥಮ ಗಡಿಪಾರಿನಲ್ಲಿ ಅವರ ಮನೆಗಳಿಂದ ಹೊರಗಟ್ಟಿದವನು ಅವನಾಗಿರುವನು.[2] ಅವರು ಹೊರಬರುವರೆಂದು ನೀವು ಭಾವಿಸಿರಲಿಲ್ಲ. ತಮ್ಮ ಕೋಟೆಗಳು ಅಲ್ಲಾಹುವಿನಿಂದ ತಮ್ಮನ್ನು ಪ್ರತಿರೋಧಿಸಬಹುದೆಂದು ಅವರು ಭಾವಿಸಿದ್ದರು. ಆದರೆ ಅವರು ಊಹಿಸಿರದ ರೀತಿಯಲ್ಲಿ ಅಲ್ಲಾಹು ಅವರ ಬಳಿಗೆ ಬಂದನು ಮತ್ತು ಅವರ ಹೃದಯಗಳಲ್ಲಿ ಭೀತಿಯನ್ನು ಬಿತ್ತಿದನು. ಅವರು ಸ್ವತಃ ತಮ್ಮದೇ ಕೈಗಳಿಂದಲೂ, ಸತ್ಯವಿಶ್ವಾಸಿಗಳ ಕೈಗಳಿಂದಲೂ ತಮ್ಮ ಮನೆಗಳನ್ನು ಧ್ವಂಸ ಮಾಡಿದರು.[3]

هُوَ ٱلَّذِيٓ أَخۡرَجَ ٱلَّذِينَ كَفَرُواْ مِنۡ أَهۡلِ ٱلۡكِتَٰبِ مِن دِيَٰرِهِمۡ لِأَوَّلِ ٱلۡحَشۡرِۚ مَا ظَنَنتُمۡ أَن يَخۡرُجُواْۖ وَظَنُّوٓاْ أَنَّهُم مَّانِعَتُهُمۡ حُصُونُهُم مِّنَ ٱللَّهِ فَأَتَىٰهُمُ ٱللَّهُ مِنۡ حَيۡثُ لَمۡ يَحۡتَسِبُواْۖ وَقَذَفَ فِي قُلُوبِهِمُ ٱلرُّعۡبَۚ يُخۡرِبُونَ بُيُوتَهُم بِأَيۡدِيهِمۡ وَأَيۡدِي ٱلۡمُؤۡمِنِينَ فَٱعۡتَبِرُواْ يَٰٓأُوْلِي ٱلۡأَبۡصَٰرِ ٢

1 2ನೇ ಸೂಕ್ತಿಯಲ್ಲಿ ಯಹೂದಿಗಳನ್ನು ಮದೀನಾದಿಂದ ಹೊರಗಟ್ಟಿದ ಪ್ರಸ್ತಾಪವಿರುವುದರಿಂದ ಈ ಹೆಸರು ಬಂದಿದೆ.

2 ಮದೀನಕ್ಕೆ ತೆರಳಿದೊಡನೆ ಪ್ರವಾದಿ(ﷺ)ರವರು ಅಲ್ಲಿನ ಯಹೂದರೊಂದಿಗೆ ಶಾಂತಿ ಒಪ್ಪಂದವನ್ನು ಮಾಡಿಕೊಂಡಿದ್ದರು. ಆ ಒಪ್ಪಂದದ ಪ್ರಕಾರ ಮುಸ್ಲಿಮರು ಮತ್ತು ಯಹೂದರು ಪರಸ್ಪರ ದಾಳಿ ಮಾಡುವುದಾಗಲಿ, ದಾಳಿ ಮಾಡಲು ಸಹಾಯ ಮಾಡುವುದಾಗಲಿ ಕೂಡದು. ಆದರೆ ಯಹೂದರು ಹಲವು ಬಾರಿ ಈ ಒಪ್ಪಂದಕ್ಕೆ ವಿರುದ್ಧವಾಗಿ ಇಸ್ಲಾಮಿನ ಶತ್ರುಗಳೊಂದಿಗೆ ಗೂಢಾಲೋಚನೆ ಮಾಡಿಕೊಂಡಿದ್ದರು. ತನ್ನಿಮಿತ್ತ ಪ್ರವಾದಿ(ﷺ)ರವರು ಮತ್ತು ಸಹಾಬಿಗಳು ಅಲ್ಲಾಹುವಿನ ಅಪ್ಪಣೆ ಪ್ರಕಾರ ಯಹೂದ ಜನಾಂಗವೊಂದನ್ನು ಮದೀನದಿಂದ ಗಡಿಪಾರು ಮಾಡಿದರು. ಮದೀನ ತೊರೆದ ಯಹೂದರು ಖೈಬರ್‌ನಲ್ಲಿ ಆಶ್ರಯಪಡೆದರು. ಆದರೆ ಖೈಬರ್‌ನಿಂದಲೂ ಅವರು ಕಿರುಕುಳ ನೀಡಲಾರಂಭಿಸಿದಾಗ ಅವರನ್ನು ಅಲ್ಲಿಂದಲೂ ಗಡಿಪಾರು ಮಾಡುವುದು ಮುಸ್ಲಿಮರಿಗೆ ಅನಿವಾರ್ಯವಾಯಿತು.

3 ಯಹೂದರು ಮದೀನವನ್ನು ಬಿಟ್ಟು ಹೋಗುವಾಗ ಅವರ ಸರಕು ಸಾಮಗ್ರಿಗಳನ್ನು ಜೊತೆಗೊಯ್ಯಲು ಪ್ರವಾದಿ(ﷺ)ರವರು ಅನುಮತಿ ನೀಡಿದ್ದರು. ಆದ್ದರಿಂದ ಅವರು ತಮ್ಮ ಮನೆಗಳನ್ನು ಒಡೆದು

ಆದ್ದರಿಂದ ಓ ಕಣ್ಣುಳ್ಳವರೇ! ನೀವು ನೀತಿಪಾಠವನ್ನು ಕಲಿಯಿರಿ!

وَلَوۡلَآ أَن كَتَبَ ٱللَّهُ عَلَيۡهِمُ ٱلۡجَلَآءَ لَعَذَّبَهُمۡ فِي ٱلدُّنۡيَاۖ وَلَهُمۡ فِي ٱلۡأٓخِرَةِ عَذَابُ ٱلنَّارِ ٣

3. ಊರು ಬಿಟ್ಟು ಹೋಗುವುದನ್ನು ಅಲ್ಲಾಹು ಅವರ ಮೇಲೆ ವಿಧಿಸದಿರುತ್ತಿದ್ದರೆ ಅವನು ಅವರನ್ನು ಇಹಲೋಕದಲ್ಲಿ ಶಿಕ್ಷಿಸುತ್ತಿದ್ದನು.[1] ಪರಲೋಕದಲ್ಲಿ ಅವರಿಗೆ ನರಕಾಗ್ನಿಯ ಶಿಕ್ಷೆಯಿದೆ.

ذَٰلِكَ بِأَنَّهُمۡ شَآقُّواْ ٱللَّهَ وَرَسُولَهُۥۖ وَمَن يُشَآقِّ ٱللَّهَ فَإِنَّ ٱللَّهَ شَدِيدُ ٱلۡعِقَابِ ٤

4. ಅದೇಕೆಂದರೆ ಅವರು ಅಲ್ಲಾಹು ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸಿದರು ಎಂಬುದರಿಂದಾಗಿದೆ. ಯಾರಾದರೂ ಅಲ್ಲಾಹುವನ್ನು ವಿರೋಧಿಸಿದರೆ ಖಂಡಿತವಾಗಿಯೂ ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು.

مَا قَطَعۡتُم مِّن لِّينَةٍ أَوۡ تَرَكۡتُمُوهَا قَآئِمَةً عَلَىٰٓ أُصُولِهَا فَبِإِذۡنِ ٱللَّهِ وَلِيُخۡزِيَ ٱلۡفَٰسِقِينَ ٥

5. ನೀವು ಯಾವುದಾದರೂ ಖರ್ಜೂರದ ಮರವನ್ನು ಕಡಿಯುವುದಾಗಲಿ ಅಥವಾ ಅವುಗಳನ್ನು ಅವುಗಳ ಬುಡಗಳ ಮೇಲೆ ನಿಲ್ಲಲು ಬಿಟ್ಟುಬಿಡುವುದಾಗಲಿ ಮಾಡುವುದಾದರೆ ಅದು ಅಲ್ಲಾಹುವಿನ ಅಪ್ಪಣೆ ಪ್ರಕಾರವಾಗಿದೆ ಮತ್ತು ಧಿಕ್ಕಾರಿಗಳನ್ನು ಅಪಮಾನಗೊಳಿಸುವ ಸಲುವಾಗಿದೆ.

وَمَآ أَفَآءَ ٱللَّهُ عَلَىٰ رَسُولِهِۦ مِنۡهُمۡ فَمَآ أَوۡجَفۡتُمۡ عَلَيۡهِ مِنۡ خَيۡلٖ وَلَا رِكَابٖ وَلَٰكِنَّ ٱللَّهَ يُسَلِّطُ رُسُلَهُۥ عَلَىٰ مَن يَشَآءُۚ وَٱللَّهُ عَلَىٰ كُلِّ شَيۡءٖ قَدِيرٞ ٦

6. ಅಲ್ಲಾಹು ಅವರಿಂದ (ಯಹೂದರಿಂದ) ಅವನ ಸಂದೇಶವಾಹಕರಿಗೆ ಏನನ್ನು ವಶಪಡಿಸಿಕೊಟ್ಟನೋ ಅದಕ್ಕಾಗಿ ನೀವು ಕುದುರೆಗಳನ್ನೋ ಒಂಟೆಗಳನ್ನೋ ಓಡಿಸಬೇಕಾಗಿ ಬರಲಿಲ್ಲ.[2] ಆದರೆ ಅಲ್ಲಾಹು ತಾನಿಚ್ಛಿಸುವವರ ಮೇಲೆ ತನ್ನ

---

ತೆಗೆಯಬಹುದಾದ ಮರದ ತುಂಡುಗಳನ್ನು ತೆಗೆದೊಯ್ದರು. ಆದರೆ ಒಯ್ಯಲು ಸಾಧ್ಯವಾಗದ್ದನ್ನು ಮುಸ್ಲಿಮರು ಬಳಸಬಾರದೆಂದು ಅವುಗಳನ್ನು ನಾಶ ಮಾಡಿದರು. ಮನೆಗಳ ಉಳಿದ ಭಾಗಗಳನ್ನು ವಿಶ್ವಾಸಿಗಳು ನೆಲಸಮಗೊಳಿಸಿದರು.

1 ಮದೀನದ ಮುಸ್ಲಿಮರನ್ನು ನಿರ್ನಾಮ ಮಾಡಲು ನಿರಂತರ ಪಿತೂರಿಗಳನ್ನು ರೂಪಿಸುತ್ತಿದ್ದ ಯಹೂದ ಜನಾಂಗವನ್ನು ನಿರ್ನಾಮ ಮಾಡಲು ನಿರ್ಧರಿಸಿದರೂ ಅದರಲ್ಲಿ ಮಿತಿಮೀರಿಕೆಯಿಲ್ಲ. ಆದರೆ ಅಲ್ಲಾಹುವಿನ ತೀರ್ಮಾನ ಪ್ರಕಾರ ಅವರನ್ನು ಕೇವಲ ಗಡಿಪಾರು ಮಾಡಲಾಯಿತು.

2 ಅಂದರೆ ಯಾವುದೇ ಹೋರಾಟವನ್ನೂ ನಡೆಸದೆ ಯಹೂದರ ವಾಸಸ್ಥಳಗಳು ಮುಸ್ಲಿಮರ ಪಾಲಾದವು.

ಸಂದೇಶವಾಹಕರಿಗೆ ಅಧಿಕಾರವನ್ನು ಕೊಡುವನು.[1] ಅಲ್ಲಾಹು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

مَّآ أَفَآءَ ٱللَّهُ عَلَىٰ رَسُولِهِۦ مِنۡ أَهۡلِ ٱلۡقُرَىٰ فَلِلَّهِ وَلِلرَّسُولِ وَلِذِي ٱلۡقُرۡبَىٰ وَٱلۡيَتَٰمَىٰ وَٱلۡمَسَٰكِينِ وَٱبۡنِ ٱلسَّبِيلِ كَيۡ لَا يَكُونَ دُولَةَۢ بَيۡنَ ٱلۡأَغۡنِيَآءِ مِنكُمۡۚ وَمَآ ءَاتَىٰكُمُ ٱلرَّسُولُ فَخُذُوهُ وَمَا نَهَىٰكُمۡ عَنۡهُ فَٱنتَهُواْۚ وَٱتَّقُواْ ٱللَّهَۖ إِنَّ ٱللَّهَ شَدِيدُ ٱلۡعِقَابِ ۞٧

7. ಅಲ್ಲಾಹು ಅವನ ಸಂದೇಶವಾಹಕರಿಗೆ ವಿವಿಧ ಪ್ರದೇಶದವರಿಂದ ಏನನ್ನು ವಶಪಡಿಸಿಕೊಟ್ಟಿರುವನೋ ಅದು ಅಲ್ಲಾಹುವಿಗೂ, ಸಂದೇಶವಾಹಕರಿಗೂ, ನಿಕಟ ಸಂಬಂಧಿಕರಿಗೂ, ಅನಾಥರಿಗೂ, ನಿರ್ಗತಿಕರಿಗೂ, ದಾರಿಹೋಕರಿಗೂ ಇರುವುದಾಗಿದೆ. ಅದು (ಸಂಪತ್ತು) ನಿಮ್ಮ ಪೈಕಿ ಧನಿಕರ ಮಧ್ಯೆ ಮಾತ್ರ ವಿನಿಮಯವಾಗುವ ವಸ್ತುವಾಗದಿರುವ ಸಲುವಾಗಿದೆ. ಸಂದೇಶವಾಹಕರು ನಿಮಗೆ ಏನನ್ನು ನೀಡುವರೋ ಅದನ್ನು ಸ್ವೀಕರಿಸಿರಿ ಮತ್ತು ಅವರು ನಿಮ್ಮನ್ನು ಯಾವುದರಿಂದ ವಿರೋಧಿಸುವರೋ ಅದರಿಂದ ದೂರಸರಿಯಿರಿ. ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ಕಠಿಣವಾಗಿ ಶಿಕ್ಷಿಸುವವನಾಗಿರುವನು.

لِلۡفُقَرَآءِ ٱلۡمُهَٰجِرِينَ ٱلَّذِينَ أُخۡرِجُواْ مِن دِيَٰرِهِمۡ وَأَمۡوَٰلِهِمۡ يَبۡتَغُونَ فَضۡلٗا مِّنَ ٱللَّهِ وَرِضۡوَٰنٗا وَيَنصُرُونَ ٱللَّهَ وَرَسُولَهُۥٓۚ أُوْلَٰٓئِكَ هُمُ ٱلصَّٰدِقُونَ ۞٨

8. (ಆ ಸಂಪತ್ತು) ತಮ್ಮ ಮನೆಗಳಿಂದ ಮತ್ತು ಸಂಪತ್ತುಗಳಿಂದ ಹೊರಗಟ್ಟಲಾದ ಮುಹಾಜಿರ್‌ಗಳಾದ ಬಡವರಿಗೆ (ಇರುವುದಾಗಿದೆ). ಅವರು ಅಲ್ಲಾಹುವಿನ ವತಿಯ ಅನುಗ್ರಹವನ್ನು ಮತ್ತು ಸಂತೃಪ್ತಿಯನ್ನು ಅರಸುತ್ತಿರುವರು ಮತ್ತು ಅಲ್ಲಾಹು ಹಾಗೂ ಅವನ ಸಂದೇಶವಾಹಕರಿಗೆ ಸಹಾಯ ಮಾಡುತ್ತಿರುವರು. ಸತ್ಯಸಂಧರು ಅವರೇ ಆಗಿರುವರು.

وَٱلَّذِينَ تَبَوَّءُو ٱلدَّارَ وَٱلۡإِيمَٰنَ مِن قَبۡلِهِمۡ يُحِبُّونَ مَنۡ هَاجَرَ إِلَيۡهِمۡ وَلَا يَجِدُونَ فِي

9. ಅವರ (ಮುಹಾಜಿರ್‌ಗಳ) ಆಗಮನಕ್ಕೆ ಮುಂಚಿತವಾಗಿ ವಾಸಸ್ಥಳವನ್ನು ಮತ್ತು ವಿಶ್ವಾಸವನ್ನು ಸಿದ್ಧಗೊಳಿಸಿದವರಿಗೂ

1 ಯುದ್ಧವಿಲ್ಲದೆ ಪ್ರವಾದಿ(ﷺ)ರಿಗೆ ಮತ್ತು ಅನುಯಾಯಿಗಳಿಗೆ ಅಧೀನವಾಗುವ ಸಂಪತ್ತು ಸಮರಾರ್ಜಿತ ಸೊತ್ತಿನಂತೆ ಪಾಲು ಮಾಡಬೇಕಾದುದಲ್ಲ. ಬದಲಾಗಿ ಪ್ರವಾದಿ(ﷺ)ರವರು ತಮ್ಮ ವಿವೇಚನೆಗೆ ಅನುಸಾರವಾಗಿ ಸತ್ಯವಿಶ್ವಾಸಿಗಳ ಪೈಕಿ ಅರ್ಹರಿಗೆ ಅದನ್ನು ಪಾಲು ಮಾಡಬೇಕಾಗಿದೆ. ಈ ಆಯತ್ತಿನ ತಳಹದಿಯಲ್ಲಿ ಹಲವು ವ್ಯಾಖ್ಯಾನಕಾರರು ಈ ಅಭಿಪ್ರಾಯ ಹೊಂದಿದ್ದಾರೆ.

صُدُورِهِمْ حَاجَةً مِّمَّآ أُوتُواْ وَيُؤْثِرُونَ
عَلَىٰٓ أَنفُسِهِمْ وَلَوْ كَانَ بِهِمْ خَصَاصَةٌ
وَمَن يُوقَ شُحَّ نَفْسِهِۦ فَأُوْلَـٰٓئِكَ هُمُ
ٱلْمُفْلِحُونَ ﴿٩﴾

(ಅನ್ಸಾರ್‌ಗಳಿಗೂ). ಸ್ವಂತ ಊರನ್ನು ಬಿಟ್ಟು ತಮ್ಮ ಬಳಿ ಬಂದವರನ್ನು ಅವರು ಪ್ರೀತಿಸುತ್ತಿರುವರು. ಅವರಿಗೆ (ಮುಹಾಜಿರ್‌ಗಳಿಗೆ) ನೀಡಲಾದ ಸಂಪತ್ತಿನ ಕುರಿತು ಅವರು (ಅನ್ಸಾರ್‌ಗಳು) ತಮ್ಮ ಹೃದಯಗಳಲ್ಲಿ ಯಾವ ಅಗತ್ಯವನ್ನೂ ಕಾಣುವುದಿಲ್ಲ. ತಮಗೆ ಬಡತನವಿದ್ದರೂ ಸಹ ಸ್ವತಃ ತಮಗಿಂತಲೂ ಹೆಚ್ಚಾಗಿ ಅವರು ಇತರರಿಗೆ ಪ್ರಾಮುಖ್ಯತೆಯನ್ನು ನೀಡುವರು.[1] ತನ್ನ ಮನಸ್ಸಿನ ಜಿಪುಣತೆಯಿಂದ ಯಾರನ್ನು ಕಾಪಾಡಲಾಗುತ್ತದೋ ಅವರೇ ಯಶಸ್ಸು ಗಳಿಸಿದವರಾಗಿರುವರು.

وَٱلَّذِينَ جَآءُو مِنۢ بَعْدِهِمْ يَقُولُونَ
رَبَّنَا ٱغْفِرْ لَنَا وَلِإِخْوَٰنِنَا ٱلَّذِينَ سَبَقُونَا
بِٱلْإِيمَـٰنِ وَلَا تَجْعَلْ فِى قُلُوبِنَا غِلًّا لِّلَّذِينَ
ءَامَنُواْ رَبَّنَآ إِنَّكَ رَءُوفٌ رَّحِيمٌ ﴿١٠﴾

**10.** ಅವರ ಬಳಿಕ ಬಂದವರಿಗೂ. ಅವರು ಹೇಳುವರು: 'ಓ ನಮ್ಮ ರಬ್! ನಮಗೂ, ವಿಶ್ವಾಸದಲ್ಲಿ ನಮಗಿಂತ ಮುಂಚೆ ಗತಿಸಿಹೋಗಿರುವ ನಮ್ಮ ಸಹೋದರರಿಗೂ ಕ್ಷಮಿಸು. ನಮ್ಮ ಹೃದಯಗಳಲ್ಲಿ ಸತ್ಯವಿಶ್ವಾಸಿಗಳೊಂದಿಗೆ ಯಾವುದೇ ವಿದ್ವೇಷವನ್ನೂ ಉಂಟುಮಾಡದಿರು. ಓ ನಮ್ಮ ರಬ್! ಖಂಡಿತವಾಗಿಯೂ ನೀನು ಅತ್ಯಧಿಕ ದಯೆಯುಳ್ಳವನೂ, ಅಪಾರ ಕರುಣೆಯುಳ್ಳವನೂ ಆಗಿರುವೆ'.

۞ أَلَمْ تَرَ إِلَى ٱلَّذِينَ نَافَقُواْ يَقُولُونَ
لِإِخْوَٰنِهِمُ ٱلَّذِينَ كَفَرُواْ مِنْ أَهْلِ
ٱلْكِتَـٰبِ لَئِنْ أُخْرِجْتُمْ لَنَخْرُجَنَّ مَعَكُمْ
وَلَا نُطِيعُ فِيكُمْ أَحَدًا أَبَدًا وَإِن
قُوتِلْتُمْ لَنَنصُرَنَّكُمْ وَٱللَّهُ يَشْهَدُ إِنَّهُمْ
لَكَـٰذِبُونَ ﴿١١﴾

**11.** ಆ ಕಪಟ ವಿಶ್ವಾಸಿಗಳೆಡೆಗೆ ತಾವು ನೋಡಲಿಲ್ಲವೇ? ಗ್ರಂಥದವರಲ್ಲಿ ಸೇರಿದ ಸತ್ಯನಿಷೇಧಿಗಳಾದ ತಮ್ಮ ಸಹೋದರರೊಂದಿಗೆ ಅವರು ಹೇಳುವರು: 'ನಿಮ್ಮನ್ನು ಹೊರಗಟ್ಟಲಾದರೆ ಖಂಡಿತವಾಗಿಯೂ ನಾವು ನಿಮ್ಮೊಂದಿಗೆ ಹೊರಹೋಗುವೆವು. ನಿಮ್ಮ ವಿಷಯದಲ್ಲಿ ನಾವು ಯಾರನ್ನೂ ಎಂದಿಗೂ ಅನುಸರಿಸಲಾರೆವು. ನಿಮ್ಮ ವಿರುದ್ಧ ಯುದ್ಧ

1 ಮುಹಾಜಿರ್‌ಗಳೆಂದರೆ ಮಕ್ಕಾದಿಂದ ಮದೀನಕ್ಕೆ ಆಶ್ರಯ ಕೋರಿ ಬಂದ ಮುಸ್ಲಿಮರಾಗಿದ್ದಾರೆ. ಅವರಿಗೆ ಸಂರಕ್ಷಣೆ ನೀಡಿ ಸಹಾಯ ಮಾಡಿದ ಮದೀನ ನಿವಾಸಿಗಳಾದ ಮುಸ್ಲಿಮರನ್ನು ಅನ್ಸಾರ್ ಎನ್ನಲಾಗುತ್ತದೆ. ಮದೀನದಿಂದ ಬನೂ ನಳೀರ್ ಎಂಬ ಯಹೂದ ಜನಾಂಗವನ್ನು ಹೊರಗಟ್ಟಿದಾಗ ಅವರು ಬಿಟ್ಟು ಹೋದ ಸಂಪತ್ತುಗಳಲ್ಲಿ ಹೆಚ್ಚಿನವುಗಳನ್ನೂ ಪ್ರವಾದಿ(ﷺ)ರವರು ಮುಹಾಜಿರ್‌ಗಳಿಗೆ ನೀಡಿದ್ದರು. ಯಾಕೆಂದರೆ ಅವರು ಹೆಚ್ಚು ಬಡವರಾಗಿದ್ದರು. ಪ್ರಸ್ತುತ ಸಂಪತ್ತು ದೊರೆಯದ ಅನ್ಸಾರ್‌ಗಳಿಗೆ ಆ ವಿಷಯದಲ್ಲಿ ಯಾವುದೇ ವಿಧದ ಅತೃಪ್ತಿಯೂ ಇರಲಿಲ್ಲವೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

ನಡೆದರೆ ಖಂಡಿತವಾಗಿಯೂ ನಾವು ನಿಮಗೆ ಸಹಾಯ ಮಾಡುವೆವು'. ಖಂಡಿತವಾಗಿಯೂ ಅವರು ಸುಳ್ಳು ನುಡಿಯುವವರಾಗಿರುವರು ಎಂಬುದಕ್ಕೆ ಅಲ್ಲಾಹು ಸಾಕ್ಷ್ಯವಹಿಸುವನು.

12. ಅವರನ್ನು (ಯಹೂದರನ್ನು) ಹೊರಗಟ್ಟಲಾದರೆ ಇವರು (ಕಪಟವಿಶ್ವಾಸಿಗಳು) ಅವರೊಂದಿಗೆ ಖಂಡಿತವಾಗಿಯೂ ಹೊರಹೋಗಲಾರರು. ಅವರು ಒಂದು ಯುದ್ಧವನ್ನು ಎದುರಿಸಬೇಕಾಗಿ ಬಂದರೆ ಇವರು ಅವರಿಗೆ ಸಹಾಯ ಮಾಡಲಾರರು. ಇವರು ಅವರಿಗೆ ಸಹಾಯ ಮಾಡುವುದಾದರೂ ಇವರು ಖಂಡಿತವಾಗಿಯೂ ವಿಮುಖರಾಗಿ ಓಡುವರು. ತರುವಾಯ ಅವರಿಗೆ ಯಾವುದೇ ಸಹಾಯವೂ ಲಭಿಸದು.

لَئِنْ أُخْرِجُواْ لَا يَخْرُجُونَ مَعَهُمْ وَلَئِن قُوتِلُواْ لَا يَنصُرُونَهُمْ وَلَئِن نَّصَرُوهُمْ لَيُوَلُّنَّ ٱلْأَدْبَٰرَ ثُمَّ لَا يُنصَرُونَ ﴿١٢﴾

13. ಖಂಡಿತವಾಗಿಯೂ ಅವರ ಹೃದಯಗಳಲ್ಲಿ ಅಲ್ಲಾಹುವಿಗಿಂತಲೂ ಹೆಚ್ಚು ನಿಮ್ಮ ಬಗ್ಗೆ ಭಯವಿದೆ. ಇದೇಕೆಂದರೆ ಅವರು ವಾಸ್ತವಿಕತೆಯನ್ನು ಗ್ರಹಿಸದ ಒಂದು ಜನತೆಯಾಗಿರುವರು ಎಂಬುದರಿಂದಾಗಿದೆ.

لَأَنتُمْ أَشَدُّ رَهْبَةً فِي صُدُورِهِم مِّنَ ٱللَّهِۚ ذَٰلِكَ بِأَنَّهُمْ قَوْمٌ لَّا يَفْقَهُونَ ﴿١٣﴾

14. ಕೋಟೆಗಳಿಂದಾವೃತವಾದ ಪಟ್ಟಣಗಳಿಂದ ಅಥವಾ ಗೋಡೆಗಳ ಹಿಂಭಾಗದಿಂದಲೇ ಹೊರತು ಅವರು ಒಟ್ಟಾಗಿ ನಿಮ್ಮೊಂದಿಗೆ ಯುದ್ಧ ಮಾಡಲಾರರು. ಅವರಲ್ಲಿರುವ ಒಳಜಗಳವು ಅತ್ಯುಗ್ರವಾಗಿದೆ. ಅವರು ಒಗ್ಗಟ್ಟಾಗಿರುವರೆಂದು ತಾವು ಭಾವಿಸುವಿರಿ. ಆದರೆ ಅವರ ಹೃದಯಗಳು ಭಿನ್ನಮತ ಹೊಂದಿವೆ. ಇದು ಅವರು ಚಿಂತಿಸಿ ಗ್ರಹಿಸದ ಒಂದು ಜನತೆಯಾಗಿರುವರು ಎಂಬುದರಿಂದಾಗಿದೆ.

لَا يُقَٰتِلُونَكُمْ جَمِيعًا إِلَّا فِي قُرًى مُّحَصَّنَةٍ أَوْ مِن وَرَآءِ جُدُرِۭۚ بَأْسُهُم بَيْنَهُمْ شَدِيدٌۚ تَحْسَبُهُمْ جَمِيعًا وَقُلُوبُهُمْ شَتَّىٰۚ ذَٰلِكَ بِأَنَّهُمْ قَوْمٌ لَّا يَعْقِلُونَ ﴿١٤﴾

15. ಇತ್ತೀಚೆಗಷ್ಟೇ ಗತಿಸಿಹೋದ ಅವರಿಗಿಂತ ಮುಂಚಿನವರ ಸ್ಥಿತಿಯಂತೆ! ಅವರು ಮಾಡಿರುವುದರ ದುಷ್ಫಲವನ್ನು ಅವರು ಸವಿದರು. ಅವರಿಗೆ ಯಾತನಾಮಯವಾದ ಶಿಕ್ಷೆಯೂ ಇದೆ.

كَمَثَلِ ٱلَّذِينَ مِن قَبْلِهِمْ قَرِيبًاۖ ذَاقُواْ وَبَالَ أَمْرِهِمْ وَلَهُمْ عَذَابٌ أَلِيمٌ ﴿١٥﴾

16. ಸೈತಾನನ ಸ್ಥಿತಿಯಂತೆ! ‘ಅವಿಶ್ವಾಸವಿಡು’ ಎಂದು ಅವನು ಮನುಷ್ಯನೊಂದಿಗೆ ಹೇಳಿದ ಸಂದರ್ಭ. ಅವನು (ಮನುಷ್ಯನು) ಅವಿಶ್ವಾಸಿಯಾದಾಗ ಅವನು (ಸೈತಾನನು) ಹೇಳಿದನು: ‘ಖಂಡಿತವಾಗಿಯೂ ನಾನು ನಿನ್ನಿಂದ ವಿಮುಕ್ತನಾಗಿರುವೆನು. ಖಂಡಿತವಾಗಿಯೂ ನಾನು ಸರ್ವಲೋಕಗಳ ರಬ್ ಆದ ಅಲ್ಲಾಹುವನ್ನು ಭಯಪಡುತ್ತಿರುವೆನು’.

كَمَثَلِ ٱلشَّيْطَٰنِ إِذْ قَالَ لِلْإِنسَٰنِ ٱكْفُرْ
فَلَمَّا كَفَرَ قَالَ إِنِّى بَرِىٓءٌ مِّنكَ إِنِّىٓ
أَخَافُ ٱللَّهَ رَبَّ ٱلْعَٰلَمِينَ ﴿١٦﴾

17. ಹಾಗೆ ಅವರಿಬ್ಬರ ಪರ್ಯವಸಾನವು ಅವರಿಬ್ಬರೂ ನರಕಾಗ್ನಿಯಲ್ಲಿ ಶಾಶ್ವತವಾಗಿ ವಾಸಿಸುವರು ಎಂಬುದಾಗಿದೆ. ಅದು ಅಕ್ರಮಿಗಳಿಗಿರುವ ಪ್ರತಿಫಲವಾಗಿದೆ.

فَكَانَ عَٰقِبَتَهُمَآ أَنَّهُمَا فِى ٱلنَّارِ خَٰلِدَيْنِ
فِيهَا ۚ وَذَٰلِكَ جَزَٰٓؤُا۟ ٱلظَّٰلِمِينَ ﴿١٧﴾

18. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವನ್ನು ಭಯಪಡಿರಿ. ಪ್ರತಿಯೊಬ್ಬ ವ್ಯಕ್ತಿಯೂ ತಾನು ನಾಳೆಗಾಗಿ ಏನನ್ನು ಮುಂಗಡವಾಗಿ ಮಾಡಿಟ್ಟಿರುವೆನು ಎಂಬುದನ್ನು ನೋಡಲಿ. ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ನೀವು ಮಾಡುತ್ತಿರುವುದರ ಕುರಿತು ಸೂಕ್ಷ್ಮ ಜ್ಞಾನವುಳ್ಳವನಾಗಿರುವನು.

يَٰٓأَيُّهَا ٱلَّذِينَ ءَامَنُوا۟ ٱتَّقُوا۟ ٱللَّهَ وَلْتَنظُرْ
نَفْسٌ مَّا قَدَّمَتْ لِغَدٍ ۖ وَٱتَّقُوا۟ ٱللَّهَ ۚ إِنَّ ٱللَّهَ
خَبِيرٌۢ بِمَا تَعْمَلُونَ ﴿١٨﴾

19. ಅಲ್ಲಾಹುವನ್ನು ಮರೆತುಬಿಟ್ಟ ಒಂದು ಜನತೆಯಂತೆ ನೀವಾಗದಿರಿ. ಆದ್ದರಿಂದ ಅವರು ಸ್ವತಃ ಅವರನ್ನೇ ಮರೆಯುವಂತೆ ಅಲ್ಲಾಹು ಮಾಡಿದನು. ಧಿಕ್ಕಾರಿಗಳು ಅವರೇ ಆಗಿರುವರು.

وَلَا تَكُونُوا۟ كَٱلَّذِينَ نَسُوا۟ ٱللَّهَ فَأَنسَىٰهُمْ
أَنفُسَهُمْ ۚ أُو۟لَٰٓئِكَ هُمُ ٱلْفَٰسِقُونَ ﴿١٩﴾

20. ನರಕವಾಸಿಗಳು ಮತ್ತು ಸ್ವರ್ಗವಾಸಿಗಳು ಸಮಾನರಾಗಲಾರರು. ಸ್ವರ್ಗವಾಸಿಗಳು ಯಶಸ್ಸುಗಳಿಸಿದವರಾಗಿರುವರು.

لَا يَسْتَوِىٓ أَصْحَٰبُ ٱلنَّارِ وَأَصْحَٰبُ
ٱلْجَنَّةِ ۚ أَصْحَٰبُ ٱلْجَنَّةِ هُمُ ٱلْفَآئِزُونَ ﴿٢٠﴾

21. ನಾವು ಈ ಕುರ್‌ಆನನ್ನು ಒಂದು ಪರ್ವತದ ಮೇಲೆ ಅವತೀರ್ಣಗೊಳಿಸಿರುತ್ತಿದ್ದರೆ ಅದು (ಪರ್ವತ) ವಿನಮ್ರಗೊಳ್ಳುವುದನ್ನು ಮತ್ತು

لَوْ أَنزَلْنَا هَٰذَا ٱلْقُرْءَانَ عَلَىٰ جَبَلٍ لَّرَأَيْتَهُۥ
خَٰشِعًا مُّتَصَدِّعًا مِّنْ خَشْيَةِ ٱللَّهِ

وَتِلۡكَ ٱلۡأَمۡثَٰلُ نَضۡرِبُهَا لِلنَّاسِ لَعَلَّهُمۡ
يَتَفَكَّرُونَ ٢١

ಅಲ್ಲಾಹುವಿನ ಭಯದಿಂದ ಒಡೆದು ಹೋಳಾಗುವುದನ್ನು ತಾವು ಕಾಣುತ್ತಿದ್ದಿರಿ.[1] ನಾವು ಜನರಿಗಾಗಿ ಈ ಉದಾಹರಣೆಗಳನ್ನು ವಿವರಿಸಿಕೊಡುತ್ತಿರುವೆವು. ಅವರು ಚಿಂತಿಸುವ ಸಲುವಾಗಿ.

هُوَ ٱللَّهُ ٱلَّذِي لَآ إِلَٰهَ إِلَّا هُوَۖ عَٰلِمُ ٱلۡغَيۡبِ
وَٱلشَّهَٰدَةِۖ هُوَ ٱلرَّحۡمَٰنُ ٱلرَّحِيمُ ٢٢

22. ಅವನಾಗಿರುವನು ಅಲ್ಲಾಹು! ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಅಗೋಚರವಾಗಿರುವುದನ್ನು ಮತ್ತು ಗೋಚರವಾಗಿರುವುದನ್ನು ಅರಿಯುವವನಾಗಿರುವನು. ಅವನು ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವನು.

هُوَ ٱللَّهُ ٱلَّذِي لَآ إِلَٰهَ إِلَّا هُوَ ٱلۡمَلِكُ
ٱلۡقُدُّوسُ ٱلسَّلَٰمُ ٱلۡمُؤۡمِنُ ٱلۡمُهَيۡمِنُ
ٱلۡعَزِيزُ ٱلۡجَبَّارُ ٱلۡمُتَكَبِّرُۚ سُبۡحَٰنَ ٱللَّهِ عَمَّا
يُشۡرِكُونَ ٢٣

23. ಅವನಾಗಿರುವನು ಅಲ್ಲಾಹು! ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಸಾಮ್ರಾಟನೂ, ಪರಮ ಪಾವನನೂ, ಶಾಂತಿ ನೀಡುವವನೂ, ಅಭಯ ನೀಡುವವನೂ, ಮೇಲುಸ್ತುವಾರಿ ವಹಿಸುವವನೂ, ಪ್ರತಾಪಶಾಲಿಯೂ, ಸರ್ವಾಧಿಕಾರಿಯೂ ಮತ್ತು ಮಹೋನ್ನತನೂ ಆಗಿರುವನು. ಅವರು ಸಹಭಾಗಿತ್ವ ಮಾಡುವುದರಿಂದ ಅಲ್ಲಾಹು ಪರಮ ಪಾವನನಾಗಿರುವನು.

هُوَ ٱللَّهُ ٱلۡخَٰلِقُ ٱلۡبَارِئُ ٱلۡمُصَوِّرُۖ
لَهُ ٱلۡأَسۡمَآءُ ٱلۡحُسۡنَىٰۚ يُسَبِّحُ لَهُۥ مَا
فِي ٱلسَّمَٰوَٰتِ وَٱلۡأَرۡضِۖ وَهُوَ ٱلۡعَزِيزُ
ٱلۡحَكِيمُ ٢٤

24. ಅವನಾಗಿರುವನು ಅಲ್ಲಾಹು! ಅವನು ಸೃಷ್ಟಿ ಕರ್ತನೂ, ನಿರ್ಮಾತೃನೂ, ರೂಪ ನೀಡುವವನೂ ಆಗಿರುವನು. ಅವನಿಗೆ ಅತ್ಯುತ್ತಮವಾದ ನಾಮಗಳಿವೆ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನ ಮಹಾತ್ಮೆಯನ್ನು ಕೊಂಡಾಡುತ್ತಿವೆ. ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

1 ಅಲ್ಲಾಹುವಿನ ಸೂಕ್ತಿಗಳು ನೇರವಾಗಿ (ಯಾವ ಮಾಧ್ಯಮವೂ ಇಲ್ಲದೆ) ಅವತೀರ್ಣಗೊಳ್ಳುವುದು ನಮಗೆ ಊಹಿಸಲು ಸಾಧ್ಯವಾಗದ ವಿಧ ಅತಿಭಯಾನಕವಾಗಿರುವುದೆಂದು ಇದರಿಂದ ಗ್ರಹಿಸಬಹುದು. ಅಲ್ಲಾಹು ಒಂದು ಪರ್ವತದ ಮುಂದೆ ಪ್ರತ್ಯಕ್ಷವಾದಾಗ ಅದು ನುಚ್ಚುನೂರಾದ ವಿಷಯವನ್ನು 7:143ರಲ್ಲಿ ಪ್ರಸ್ತಾಪಿಸಲಾಗಿದೆ..

## ಅಲ್‌ಮುಮ್ತಹನಃ (ಪರೀಕ್ಷಿಸಲ್ಪಡಬೇಕಾದವಳು)[1]

## سُورَةُ الْمُمْتَحِنَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 13

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಓ ಸತ್ಯವಿಶ್ವಾಸಿಗಳೇ! ನನ್ನ ಶತ್ರುವೂ, ನಿಮ್ಮ ಶತ್ರುವೂ ಆಗಿರುವ ಜನರೊಂದಿಗೆ ಮೈತ್ರಿ ಮಾಡಿಕೊಂಡು ನೀವು ಅವರನ್ನು ಮಿತ್ರರನ್ನಾಗಿ ಮಾಡಿಕೊಳ್ಳದಿರಿ. ನಿಮ್ಮ ಬಳಿಗೆ ಬಂದಿರುವ ಸತ್ಯವನ್ನು ಅವರು ನಿಷೇಧಿಸಿರುವರು. ನೀವು ನಿಮ್ಮ ರಬ್ ಆಗಿರುವ ಅಲ್ಲಾಹುವಿನಲ್ಲಿ ವಿಶ್ವಾಸವಿಡುತ್ತಿರುವಿರಿ ಎಂಬುದರಿಂದಾಗಿ ಅವರು ಸಂದೇಶವಾಹಕರನ್ನೂ, ನಿಮ್ಮನ್ನೂ ಊರಿನಿಂದ ಹೊರಗಟ್ಟುತ್ತಿರುವರು. ನನ್ನ ಮಾರ್ಗದಲ್ಲಿ ಯುದ್ಧ ಮಾಡಲು ಮತ್ತು ನನ್ನ ಸಂತೃಪ್ತಿಯನ್ನು ಅರಸಲು ನೀವು ಹೊರಟಿರುವುದಾದರೆ (ಅವರೊಂದಿಗೆ ಮೈತ್ರಿ ಮಾಡದಿರಿ). ನೀವು ಅವರೊಂದಿಗೆ ಗುಪ್ತವಾಗಿ ಮೈತ್ರಿ ಮಾಡುತ್ತಿರುವಿರಿ. ನೀವು ಮರೆಮಾಚುವುದನ್ನೂ, ಬಹಿರಂಗಪಡಿಸುವುದನ್ನೂ ನಾನು ಚೆನ್ನಾಗಿ ಅರಿಯುತ್ತಿರುವೆನು. ನಿಮ್ಮ ಪೈಕಿ ಯಾರಾದರೂ ಹಾಗೆ ಮಾಡಿದರೆ ಅವನು ನೇರ ಮಾರ್ಗದಿಂದ ಪಥಭ್ರಷ್ಟಗೊಂಡಿರುವನು.

يَٰٓأَيُّهَا ٱلَّذِينَ ءَامَنُواْ لَا تَتَّخِذُواْ عَدُوِّي وَعَدُوَّكُمۡ أَوۡلِيَآءَ تُلۡقُونَ إِلَيۡهِم بِٱلۡمَوَدَّةِ وَقَدۡ كَفَرُواْ بِمَا جَآءَكُم مِّنَ ٱلۡحَقِّ يُخۡرِجُونَ ٱلرَّسُولَ وَإِيَّاكُمۡ أَن تُؤۡمِنُواْ بِٱللَّهِ رَبِّكُمۡ إِن كُنتُمۡ خَرَجۡتُمۡ جِهَٰدٗا فِي سَبِيلِي وَٱبۡتِغَآءَ مَرۡضَاتِيۚ تُسِرُّونَ إِلَيۡهِم بِٱلۡمَوَدَّةِ وَأَنَا۠ أَعۡلَمُ بِمَآ أَخۡفَيۡتُمۡ وَمَآ أَعۡلَنتُمۡۚ وَمَن يَفۡعَلۡهُ مِنكُمۡ فَقَدۡ ضَلَّ سَوَآءَ ٱلسَّبِيلِ ١

2. ಅವರು ನಿಮ್ಮನ್ನು ಸಂಧಿಸುವುದಾದರೆ ಅವರು ನಿಮ್ಮ ಶತ್ರುಗಳಾಗಿರುವರು. ಅವರು ಕೆಟ್ಟ ಉದ್ದೇಶದೊಂದಿಗೆ ನಿಮ್ಮ ವಿರುದ್ಧ ತಮ್ಮ ಕೈಗಳನ್ನು ಮತ್ತು ನಾಲಗೆಗಳನ್ನು ಚಾಚುತ್ತಿರುವರು ಮತ್ತು 'ನೀವು ಅವಿಶ್ವಾಸಿಗಳಾಗುತ್ತಿದ್ದರೆ' ಎಂದು ಅವರು ಆಶಿಸುವರು.

إِن يَثۡقَفُوكُمۡ يَكُونُواْ لَكُمۡ أَعۡدَآءٗ وَيَبۡسُطُوٓاْ إِلَيۡكُمۡ أَيۡدِيَهُمۡ وَأَلۡسِنَتَهُم بِٱلسُّوٓءِ وَوَدُّواْ لَوۡ تَكۡفُرُونَ ٢

1 10ನೇ ಸೂಕ್ತಿಯಲ್ಲಿ ಅಭಯಾರ್ಥಿಗಳಾಗಿ ಬರುವ ಸ್ತ್ರೀಯರ ವಿಶ್ವಾಸವನ್ನು ಪರೀಕ್ಷಿಸಬೇಕೆಂಬ ಆದೇಶವಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

لَن تَنفَعَكُمۡ أَرۡحَامُكُمۡ وَلَآ أَوۡلَٰدُكُمۡۚ يَوۡمَ ٱلۡقِيَٰمَةِ يَفۡصِلُ بَيۡنَكُمۡۚ وَٱللَّهُ بِمَا تَعۡمَلُونَ بَصِيرٞ ٣

3. ಪುನರುತ್ಥಾನ ದಿನದಂದು ನಿಮ್ಮ ರಕ್ತ ಸಂಬಂಧಗಳಾಗಲಿ, ನಿಮ್ಮ ಸಂತತಿಗಳಾಗಲಿ ನಿಮ್ಮ ಪ್ರಯೋಜನಕ್ಕೆ ಬರದು. ಅಲ್ಲಾಹು ನಿಮ್ಮನ್ನು ಪರಸ್ಪರ ಬೇರ್ಪಡಿಸುವನು.[1] ಅಲ್ಲಾಹು ನೀವು ಮಾಡುತ್ತಿರುವುದನ್ನು ವೀಕ್ಷಿಸುವವನಾಗಿರುವನು.

قَدۡ كَانَتۡ لَكُمۡ أُسۡوَةٌ حَسَنَةٞ فِيٓ إِبۡرَٰهِيمَ وَٱلَّذِينَ مَعَهُۥٓ إِذۡ قَالُواْ لِقَوۡمِهِمۡ إِنَّا بُرَءَٰٓؤُاْ مِنكُمۡ وَمِمَّا تَعۡبُدُونَ مِن دُونِ ٱللَّهِ كَفَرۡنَا بِكُمۡ وَبَدَا بَيۡنَنَا وَبَيۡنَكُمُ ٱلۡعَدَٰوَةُ وَٱلۡبَغۡضَآءُ أَبَدًا حَتَّىٰ تُؤۡمِنُواْ بِٱللَّهِ وَحۡدَهُۥٓ إِلَّا قَوۡلَ إِبۡرَٰهِيمَ لِأَبِيهِ لَأَسۡتَغۡفِرَنَّ لَكَ وَمَآ أَمۡلِكُ لَكَ مِنَ ٱللَّهِ مِن شَيۡءٖۖ رَّبَّنَا عَلَيۡكَ تَوَكَّلۡنَا وَإِلَيۡكَ أَنَبۡنَا وَإِلَيۡكَ ٱلۡمَصِيرُ ٤

4. ನಿಮಗೆ ಇಬ್ರಾಹೀಮ್‌ರಲ್ಲಿ ಮತ್ತು ಅವರ ಜೊತೆಗಿದ್ದವರಲ್ಲಿ ಉತ್ತಮ ಮಾದರಿಯಿದೆ. ಅವರು ತಮ್ಮ ಜನರೊಂದಿಗೆ ಹೇಳಿದ ಸಂದರ್ಭ: 'ಖಂಡಿತವಾಗಿಯೂ ನಾವು ನಿಮ್ಮಿಂದ ಮತ್ತು ಅಲ್ಲಾಹುವಿನ ಹೊರತು ನೀವು ಆರಾಧಿಸುತ್ತಿರುವವುಗಳಿಂದ ಸಂಪೂರ್ಣ ವಿಮುಕ್ತರಾಗಿರುವೆವು. ನಾವು ನಿಮ್ಮಲ್ಲಿ ಅವಿಶ್ವಾಸವಿಟ್ಟಿರುವೆವು. ನೀವು ಅಲ್ಲಾಹುವಿನಲ್ಲಿ ಮಾತ್ರ ವಿಶ್ವಾಸವಿಡುವ ತನಕ ಎಂದೆಂದಿಗೂ ನಮ್ಮ ಮತ್ತು ನಿಮ್ಮ ನಡುವೆ ಶತ್ರುತ್ವ ಮತ್ತು ವಿದ್ವೇಷವು ಬಹಿರಂಗವಾಗಿಬಿಟ್ಟಿದೆ'.[2] ಖಂಡಿತವಾಗಿಯೂ ನಾನು ತಮಗೋಸ್ಕರ ಪಾಪಮುಕ್ತಿ ಬೇಡುವೆನು ಮತ್ತು ತಮಗಾಗಿ ಅಲ್ಲಾಹುವಿನಿಂದ ಏನನ್ನೂ ಸ್ವಾಧೀನಪಡಿಸಲು ನನಗೆ ಸಾಧ್ಯವಾಗಲಾರದು ಎಂದು ಇಬ್ರಾಹೀಮ್ ತಮ್ಮ ತಂದೆಯೊಂದಿಗೆ ಹೇಳಿದ ಮಾತಿನ ಹೊರತು.[3] (ಅವರು ಪ್ರಾರ್ಥಿಸಿದರು): 'ಓ ನಮ್ಮ ರಬ್! ನಾವು ನಿನ್ನ ಮೇಲೆ ಭರವಸೆಯಿಟ್ಟಿರುವೆವು ಮತ್ತು ನಾವು

1 ನಿಮ್ಮ ರಕ್ತ ಸಂಬಂಧವಾಗಲಿ, ನಿಮ್ಮ ಸಂತತಿಯಾಗಲಿ ನಿಮಗೆ ಪ್ರಯೋಜನ ನೀಡದು. ಪುನರುತ್ಥಾನ ದಿನದಂದು ಅಲ್ಲಾಹು ನಿಮ್ಮ ಮಧ್ಯೆ ತೀರ್ಪು ನೀಡುವನು –ಹೀಗೂ ಈ ಸೂಕ್ತಿಯನ್ನು ಅರ್ಥೈಸಿಕೊಳ್ಳಬಹುದು.

2 ಸತ್ಯವಿಶ್ವಾಸಿಗಳೊಂದಿಗೆ ಶತ್ರುಗಳಂತೆ ವರ್ತಿಸುವವರೊಂದಿಗೆ ಮಾತ್ರ ಶತ್ರುತ್ವ ತೋರಿಸಬೇಕು, ಮುಸ್ಲಿಮರೊಂದಿಗೆ ಶಾಂತಿಯುತವಾಗಿ ಸಹಬಾಳ್ವೆ ನಡೆಸಲು ಆಶಿಸುವವರೊಂದಿಗೆ ಮುಸ್ಲಿಮರು ಶಾಂತಿಯುತವಾಗಿ ವರ್ತಿಸಬೇಕೆಂದು ಕುರ್‌ಆನಿನ 8:60–61 ಸೂಕ್ತಿಗಳಲ್ಲಿ ಹೇಳಲಾಗಿದೆ. ಈ ಅಧ್ಯಾಯದ 8–9 ಸೂಕ್ತಿಗಳನ್ನೂ ನೋಡಿರಿ.

3 ಇಬ್ರಾಹೀಮ್ (عَلَيْهِ السَّلَامُ) ತನ್ನ ತಂದೆಗೆ ಮಾತು ಕೊಟ್ಟ ಕಾರಣದಿಂದಾಗಿ ಅವರಿಗೆ ಪಾಪಮುಕ್ತಿಯನ್ನು ಬೇಡಿದ್ದರು. ಆದರೆ ಮುಸ್ಲಿಮರು ಈ ಮಾದರಿಯನ್ನು ಸ್ವೀಕರಿಸಿ ಅವಿಶ್ವಾಸಿಗಳಾದ ಹೆತ್ತವರಿಗೋಸ್ಕರ ಪ್ರಾರ್ಥಿಸಕೂಡದೆಂದು ಇದರಿಂದ ಗ್ರಹಿಸಬಹುದು.

ನಿನ್ನೆಡೆಗೆ ಮರಳಿರುವೆವು. ಮರಳುವಿಕೆಯು ನಿನ್ನೆಡೆಗೇ ಆಗಿದೆ.

5. ಓ ನಮ್ಮ ರಬ್! ನಮ್ಮನ್ನು ಸತ್ಯನಿಷೇಧಿಗಳ ಪರೀಕ್ಷೆಗೆ ಬಲಿಯಾಗಿಸದಿರು. ಓ ನಮ್ಮ ರಬ್! ನಮ್ಮನ್ನು ಕ್ಷಮಿಸು. ಖಂಡಿತವಾಗಿಯೂ ನೀನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವೆ'.

رَبَّنَا لَا تَجۡعَلۡنَا فِتۡنَةٗ لِّلَّذِينَ كَفَرُواْ وَٱغۡفِرۡ لَنَا رَبَّنَآۖ إِنَّكَ أَنتَ ٱلۡعَزِيزُ ٱلۡحَكِيمُ ٥

6. ಖಂಡಿತವಾಗಿಯೂ ನಿಮಗೆ–ಅಲ್ಲಾಹುವನ್ನು ಮತ್ತು ಅಂತ್ಯದಿನವನ್ನು ಆಶಿಸುವವರಿಗೆ– ಅವರಲ್ಲಿ ಉತ್ತಮ ಮಾದರಿಯಿದೆ. ಯಾರಾದರೂ ವಿಮುಖನಾಗುವುದಾದರೆ ಖಂಡಿತವಾಗಿಯೂ ಅಲ್ಲಾಹು ನಿರಪೇಕ್ಷನೂ ಸ್ತುತ್ಯರ್ಹನೂ ಆಗಿರುವನು.

لَقَدۡ كَانَ لَكُمۡ فِيهِمۡ أُسۡوَةٌ حَسَنَةٞ لِّمَن كَانَ يَرۡجُواْ ٱللَّهَ وَٱلۡيَوۡمَ ٱلۡأٓخِرَۚ وَمَن يَتَوَلَّ فَإِنَّ ٱللَّهَ هُوَ ٱلۡغَنِيُّ ٱلۡحَمِيدُ ٦

7. ನಿಮ್ಮ ಮತ್ತು ಅವರ ಪೈಕಿ ನೀವು ಶತ್ರುತ್ವ ಹೊಂದಿರುವವರ ನಡುವೆ ಅಲ್ಲಾಹು ಮೈತ್ರಿಯನ್ನು ಸ್ಥಾಪಿಸಲೂ ಬಹುದು. ಅಲ್ಲಾಹು ಸಾಮರ್ಥ್ಯವುಳ್ಳವನಾಗಿರುವನು. ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

۞ عَسَى ٱللَّهُ أَن يَجۡعَلَ بَيۡنَكُمۡ وَبَيۡنَ ٱلَّذِينَ عَادَيۡتُم مِّنۡهُم مَّوَدَّةٗۚ وَٱللَّهُ قَدِيرٞۚ وَٱللَّهُ غَفُورٞ رَّحِيمٞ ٧

8. ಧರ್ಮದ ವಿಷಯದಲ್ಲಿ ನಿಮ್ಮೊಂದಿಗೆ ಯುದ್ಧ ಮಾಡದವರು ಮತ್ತು ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಗಟ್ಟದವರು ಯಾರೋ ಅವರಿಗೆ ನೀವು ಒಳಿತು ಮಾಡುವುದನ್ನು ಮತ್ತು ಅವರೊಂದಿಗೆ ನ್ಯಾಯಪಾಲಿಸುವುದನ್ನು ಅಲ್ಲಾಹು ನಿಮಗೆ ವಿರೋಧಿಸಲಾರನು. ಖಂಡಿತವಾಗಿಯೂ ಅಲ್ಲಾಹು ನ್ಯಾಯ ಪಾಲಿಸುವವರನ್ನು ಇಷ್ಟಪಡುವನು.

لَّا يَنۡهَىٰكُمُ ٱللَّهُ عَنِ ٱلَّذِينَ لَمۡ يُقَٰتِلُوكُمۡ فِي ٱلدِّينِ وَلَمۡ يُخۡرِجُوكُم مِّن دِيَٰرِكُمۡ أَن تَبَرُّوهُمۡ وَتُقۡسِطُوٓاْ إِلَيۡهِمۡۚ إِنَّ ٱللَّهَ يُحِبُّ ٱلۡمُقۡسِطِينَ ٨

9. ಅಲ್ಲಾಹು ವಿರೋಧಿಸುವುದು ಧರ್ಮದ ವಿಷಯದಲ್ಲಿ ನಿಮ್ಮೊಂದಿಗೆ ಯುದ್ಧ ಮಾಡಿದವರು, ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಗಟ್ಟಿದವರು ಮತ್ತು ನಿಮ್ಮನ್ನು ಹೊರಗಟ್ಟುವುದರಲ್ಲಿ ಪರಸ್ಪರ ಸಹಕರಿಸಿದವರು

إِنَّمَا يَنۡهَىٰكُمُ ٱللَّهُ عَنِ ٱلَّذِينَ قَٰتَلُوكُمۡ فِي ٱلدِّينِ وَأَخۡرَجُوكُم مِّن دِيَٰرِكُمۡ وَظَٰهَرُواْ عَلَىٰٓ إِخۡرَاجِكُمۡ أَن تَوَلَّوۡهُمۡۚ وَمَن يَتَوَلَّهُمۡ فَأُوْلَٰٓئِكَ هُمُ ٱلظَّٰلِمُونَ ٩

ಯಾರೋ ಅವರೊಂದಿಗೆ ಮೈತ್ರಿ ಮಾಡುವುದನ್ನು ಮಾತ್ರವಾಗಿದೆ. ಯಾರಾದರೂ ಅವರೊಂದಿಗೆ ಮೈತ್ರಿ ಮಾಡಿಕೊಂಡರೆ ಅವರೇ ಅಕ್ರಮಿಗಳಾಗಿರುವರು.

**10.** ಓ ಸತ್ಯವಿಶ್ವಾಸಿಗಳೇ! ವಿಶ್ವಾಸಿನಿಯರಾದ ಸ್ತ್ರೀಯರು ಅಭಯಾರ್ಥಿಗಳಾಗಿ ನಿಮ್ಮ ಬಳಿಗೆ ಬಂದರೆ ಅವರನ್ನು ಪರೀಕ್ಷಿಸಿರಿ. ಅವರ ವಿಶ್ವಾಸದ ಕುರಿತು ಅಲ್ಲಾಹು ಚೆನ್ನಾಗಿ ಅರಿತಿರುವನು. ತರುವಾಯ ಅವರು ವಿಶ್ವಾಸಿನಿಯರೆಂದು ನಿಮಗೆ ಮನದಟ್ಟಾದರೆ ಅವರನ್ನು ಸತ್ಯನಿಷೇಧಿಗಳ ಬಳಿಗೆ ಮರಳಿ ಕಳುಹಿಸದಿರಿ. ಆ ಸ್ತ್ರೀಯರು ಅವರಿಗೆ ಧರ್ಮಸಮ್ಮತರಲ್ಲ. ಅವರು ಆ ಸ್ತ್ರೀಯರಿಗೂ ಧರ್ಮಸಮ್ಮತರಲ್ಲ. ಅವರಿಗೆ[1] ಅವರು ವ್ಯಯಿಸಿರುವುದನ್ನು ನೀಡಿರಿ. ನೀವು ಆ ಸ್ತ್ರೀಯರಿಗೆ ಅವರ ಪ್ರತಿಫಲವನ್ನು ನೀಡಿದರೆ ಅವರನ್ನು ವರಿಸುವುದರಲ್ಲಿ ನಿಮ್ಮ ಮೇಲೆ ದೋಷವಿಲ್ಲ. ಅವಿಶ್ವಾಸಿನಿಯರೊಂದಿಗಿನ ವಿವಾಹ ಸಂಬಂಧದಲ್ಲಿ ನೀವು ಗಟ್ಟಿಯಾಗಿ ನಿಲ್ಲದಿರಿ.[2] ನೀವೇನನ್ನು ವ್ಯಯಿಸಿರುವಿರೋ ಅದನ್ನು ಕೇಳಿ ಪಡೆಯಿರಿ.[3] ಅವರು ಏನನ್ನು ವ್ಯಯಿಸಿರುವರೋ ಅದನ್ನು ಅವರೂ ಕೇಳಿ ಪಡೆಯಲಿ. ಇದು ಅಲ್ಲಾಹುವಿನ

يَـٰٓأَيُّهَا ٱلَّذِينَ ءَامَنُوٓاْ إِذَا جَآءَكُمُ ٱلْمُؤْمِنَـٰتُ مُهَـٰجِرَٰتٍ فَٱمْتَحِنُوهُنَّ ۖ ٱللَّهُ أَعْلَمُ بِإِيمَـٰنِهِنَّ ۖ فَإِنْ عَلِمْتُمُوهُنَّ مُؤْمِنَـٰتٍ فَلَا تَرْجِعُوهُنَّ إِلَى ٱلْكُفَّارِ ۖ لَا هُنَّ حِلٌّ لَّهُمْ وَلَا هُمْ يَحِلُّونَ لَهُنَّ ۖ وَءَاتُوهُم مَّآ أَنفَقُوا۟ ۚ وَلَا جُنَاحَ عَلَيْكُمْ أَن تَنكِحُوهُنَّ إِذَآ ءَاتَيْتُمُوهُنَّ أُجُورَهُنَّ ۚ وَلَا تُمْسِكُوا۟ بِعِصَمِ ٱلْكَوَافِرِ وَسْـَٔلُوا۟ مَآ أَنفَقْتُمْ وَلْيَسْـَٔلُوا۟ مَآ أَنفَقُوا۟ ۚ ذَٰلِكُمْ حُكْمُ ٱللَّهِ ۖ يَحْكُمُ بَيْنَكُمْ ۖ وَٱللَّهُ عَلِيمٌ حَكِيمٌ ﴿١٠﴾

1 ವಿವಾಹಿತೆಯಾದ ಓರ್ವ ಮುಸ್ಲಿಮೇತರ ಸ್ತ್ರೀ ಇಸ್ಲಾಮ್ ಸ್ವೀಕರಿಸಿ ಅವಿಶ್ವಾಸಿ ಸಮುದಾಯದಿಂದ ಮುಸ್ಲಿಮ್ ಸಮುದಾಯಕ್ಕೆ ಬಂದರೆ ಏನು ಮಾಡಬೇಕೆಂದು ಇಲ್ಲಿ ಹೇಳಲಾಗಿದೆ. ಅವಳನ್ನು ಅವಿಶ್ವಾಸಿಗಳ ಕಡೆಗೆ ಮರಳಿ ಕಳುಹಿಸಬಾರದು. ಇಸ್ಲಾಮ್ ಸ್ವೀಕರಿಸಿದ ಓರ್ವ ಸ್ತ್ರೀ ಓರ್ವ ಸತ್ಯನಿಷೇಧಿಯ ಪತ್ನಿಯಾಗಿ ಮುಂದುವರಿಯಕೂಡದು. ಆದರೆ ಅವಿಶ್ವಾಸಿಯಾದ ಪತಿ ಆಕೆಗೆ ನೀಡಿದ ವಧುದಕ್ಷಿಣೆಯನ್ನು (ಮಹ್ರ್) ಮುಸ್ಲಿಮರು ಅವನಿಗೆ ಹಿಂದಿರುಗಿಸಬೇಕು. ಇದ್ದಃ ಕಳೆದ ನಂತರ ನ್ಯಾಯಬದ್ಧವಾದ ಮಹ್ರ್ ನೀಡಿ ಯಾವುದೇ ಮುಸ್ಲಿಮನಿಗೂ ಆಕೆಯನ್ನು ವರಿಸಬಹುದಾಗಿದೆ.

2 ಇಸ್ಲಾಮ್ ಸ್ವೀಕರಿಸಿದ ಓರ್ವ ವ್ಯಕ್ತಿ ಅವಿಶ್ವಾಸಿಯಾದ ಸ್ತ್ರೀಯೊಂದಿಗೆ ದಾಂಪತ್ಯ ಸಂಬಂಧವನ್ನು ಮುಂದುವರಿಸಕೂಡದು.

3 ಮುಸ್ಲಿಮರ ಪತ್ನಿಯರ ಪೈಕಿ ಯಾರಾದರೂ ಅವಿಶ್ವಾಸಿಯಾಗಿ, ಅವಿಶ್ವಾಸಿಗಳ ಪತ್ನಿಯರಾಗಿ ಬಿಟ್ಟರೆ ಮೊದಲ ಪತಿ ನೀಡಿದ ಮಹ್ರನ್ನು ಅವಿಶ್ವಾಸಿಗಳಿಂದ ವಸೂಲು ಮಾಡುವ ಹಕ್ಕು ಮುಸ್ಲಿಮರಿಗಿರುತ್ತದೆ.

ನಿಯಮವಾಗಿದೆ. ಅವನು ನಿಮ್ಮ ಮಧ್ಯೆ ತೀರ್ಪು ನೀಡುವನು. ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

11. ನಿಮ್ಮ ಪತ್ನಿಯರ ಪೈಕಿ ಯಾರಾದರೂ ಸತ್ಯನಿಷೇಧಿಗಳ ಕಡೆಗೆ ಹೋಗಿ ಅವರು ನಿಮಗೆ ನಷ್ಟವಾದರೆ, ತರುವಾಯ ನೀವು ಕ್ರಮ ಕೈಗೊಳ್ಳುವುದಾದರೆ, ಯಾರ ಪತ್ನಿಯರು ನಷ್ಟವಾಗಿರುವರೋ, ಅವರಿಗೆ ಅವರು ವ್ಯಯಿಸಿದ ಮೊತ್ತ (ಮಹ್ರ್)ದಂತಿರುವುದನ್ನು ನೀಡಿರಿ. ನೀವು ಯಾವ ಅಲ್ಲಾಹುವಿನಲ್ಲಿ ವಿಶ್ವಾಸವಿಡುತ್ತಿರುವಿರೋ ಅವನನ್ನು ಭಯಪಡಿರಿ.

وَإِن فَاتَكُمۡ شَيۡءٞ مِّنۡ أَزۡوَٰجِكُمۡ إِلَى ٱلۡكُفَّارِ فَعَاقَبۡتُمۡ فَـَٔاتُواْ ٱلَّذِينَ ذَهَبَتۡ أَزۡوَٰجُهُم مِّثۡلَ مَآ أَنفَقُواْۚ وَٱتَّقُواْ ٱللَّهَ ٱلَّذِيٓ أَنتُم بِهِۦ مُؤۡمِنُونَ ١١

12. ಓ ಪ್ರವಾದಿಯವರೇ! ‘ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡಲಾರೆವು, ಕಳ್ಳತನ ಮಾಡಲಾರೆವು, ವ್ಯಭಿಚಾರ ಮಾಡಲಾರೆವು, ತಮ್ಮ ಮಕ್ಕಳನ್ನು ವಧಿಸಲಾರೆವು, ತಮ್ಮ ಕೈಕಾಲುಗಳ ಮಧ್ಯೆ ಸುಳ್ಳಾರೋಪವನ್ನು ಹೊರಿಸಲಾರೆವು[1] ಮತ್ತು ಯಾವುದೇ ಸತ್ಕರ್ಮದಲ್ಲೂ ತಮ್ಮೊಂದಿಗೆ ಅವಿಧೇಯತೆ ತೋರಲಾರೆವು ಎಂದು ಪ್ರತಿಜ್ಞೆ ಮಾಡುತ್ತಾ ಸತ್ಯವಿಶ್ವಾಸಿನಿಯರು ತಮ್ಮ ಬಳಿಗೆ ಬಂದರೆ ತಾವು ಅವರ ಪ್ರತಿಜ್ಞೆಯನ್ನು ಸ್ವೀಕರಿಸಿರಿ ಮತ್ತು ಅವರಿಗಾಗಿ ಅಲ್ಲಾಹುವಿನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

يَـٰٓأَيُّهَا ٱلنَّبِيُّ إِذَا جَآءَكَ ٱلۡمُؤۡمِنَٰتُ يُبَايِعۡنَكَ عَلَىٰٓ أَن لَّا يُشۡرِكۡنَ بِٱللَّهِ شَيۡـٔٗا وَلَا يَسۡرِقۡنَ وَلَا يَزۡنِينَ وَلَا يَقۡتُلۡنَ أَوۡلَٰدَهُنَّ وَلَا يَأۡتِينَ بِبُهۡتَٰنٖ يَفۡتَرِينَهُۥ بَيۡنَ أَيۡدِيهِنَّ وَأَرۡجُلِهِنَّ وَلَا يَعۡصِينَكَ فِي مَعۡرُوفٖ فَبَايِعۡهُنَّ وَٱسۡتَغۡفِرۡ لَهُنَّ ٱللَّهَۚ إِنَّ ٱللَّهَ غَفُورٞ رَّحِيمٞ ١٢

13. ಓ ಸತ್ಯವಿಶ್ವಾಸಿಗಳೇ! ಅಲ್ಲಾಹು ಕ್ರೋಧಗೊಂಡಿರುವ ಒಂದು ಜನತೆಯೊಂದಿಗೆ ನೀವು ಮೈತ್ರಿ ಮಾಡದಿರಿ. ಗೋರಿಗಳಲ್ಲಿರುವವರ ಬಗ್ಗೆ ಸತ್ಯನಿಷೇಧಿಗಳು ನಿರಾಶರಾದಂತೆ ಪರಲೋಕದ ಬಗ್ಗೆ ಅವರು ನಿರಾಶರಾಗಿರುವರು.

يَـٰٓأَيُّهَا ٱلَّذِينَ ءَامَنُواْ لَا تَتَوَلَّوۡاْ قَوۡمًا غَضِبَ ٱللَّهُ عَلَيۡهِمۡ قَدۡ يَئِسُواْ مِنَ ٱلۡأٓخِرَةِ كَمَا يَئِسَ ٱلۡكُفَّارُ مِنۡ أَصۡحَٰبِ ٱلۡقُبُورِ ١٣

1 ವ್ಯಭಿಚಾರದ ಮೂಲಕ ಗರ್ಭಿಣಿಯಾಗಿ ಅದನ್ನು ಪತಿಯ ಮೇಲೆ ಆರೋಪಿಸುವ ಸ್ತ್ರೀಯರ ಕಡೆಗಿರುವ ಸೂಚನೆ.

## ಅಸ್ಸಫ್ಫ್ (ಸಾಲು)

## سُورَةُ الصَّفِّ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 14

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವುಗಳು ಅಲ್ಲಾಹುವಿನ ಕೀರ್ತನೆ ಮಾಡಿವೆ. ಅವನು ಪ್ರತಾಪ ಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

2. ಓ ಸತ್ಯವಿಶ್ವಾಸಿಗಳೇ! ನೀವು ಮಾಡದಿರುವುದನ್ನು ಏಕೆ ಹೇಳುತ್ತಿರುವಿರಿ?

3. ನೀವು ಮಾಡದಿರುವುದನ್ನು ನೀವು ಹೇಳುವುದು ಅಲ್ಲಾಹುವಿನ ಬಳಿ ಮಹಾ ಕ್ರೋಧಕ್ಕೆ ಕಾರಣವಾಗುತ್ತದೆ.

4. (ಇಟ್ಟಿಗೆಗಳನ್ನು) ಸುದೃಢವಾಗಿ ಜೋಡಿಸಲಾಗಿರುವ ಒಂದು ಗೋಡೆಯಂತೆ ಸಾಲು ಸಾಲಾಗಿ ನಿಂತು ತನ್ನ ಮಾರ್ಗದಲ್ಲಿ ಯುದ್ಧ ಮಾಡುವವರನ್ನು ಅಲ್ಲಾಹು ಖಂಡಿತವಾಗಿಯೂ ಇಷ್ಟಪಡುವನು.

5. ಮೂಸಾ ತಮ್ಮ ಜನತೆಯೊಂದಿಗೆ ಹೇಳಿದ ಸಂದರ್ಭ: 'ಓ ನನ್ನ ಜನರೇ! ನೀವೇಕೆ ನನಗೆ ಕಿರುಕುಳ ಕೊಡುತ್ತಿರುವಿರಿ? ನಾನು ನಿಮ್ಮೆಡೆಗೆ ಕಳುಹಿಸಲಾಗಿರುವ ಅಲ್ಲಾಹುವಿನ ಸಂದೇಶವಾಹಕನಾಗಿರುವೆನು ಎಂಬುದನ್ನು ನೀವು ಅರಿತಿರುವಿರಿ!' ತರುವಾಯ ಅವರು ಸರಿದು ಬಿಟ್ಟಾಗ ಅಲ್ಲಾಹು ಅವರ ಹೃದಯಗಳನ್ನು ಸರಿದುಬಿಡುವಂತೆ ಮಾಡಿದನು. ಅಲ್ಲಾಹು ಧಿಕ್ಕಾರಿಗಳಾದ ಜನರನ್ನು ಸನ್ಮಾರ್ಗದಲ್ಲಿ ಸೇರಿಸಲಾರನು.

بِسۡمِ ٱللَّهِ ٱلرَّحۡمَٰنِ ٱلرَّحِيمِ

سَبَّحَ لِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۖ
وَهُوَ ٱلۡعَزِيزُ ٱلۡحَكِيمُ ١

يَٰٓأَيُّهَا ٱلَّذِينَ ءَامَنُواْ لِمَ تَقُولُونَ مَا لَا
تَفۡعَلُونَ ٢
كَبُرَ مَقۡتًا عِندَ ٱللَّهِ أَن تَقُولُواْ مَا لَا
تَفۡعَلُونَ ٣

إِنَّ ٱللَّهَ يُحِبُّ ٱلَّذِينَ يُقَٰتِلُونَ فِي سَبِيلِهِۦ
صَفّٗا كَأَنَّهُم بُنۡيَٰنٞ مَّرۡصُوصٞ ٤

وَإِذۡ قَالَ مُوسَىٰ لِقَوۡمِهِۦ يَٰقَوۡمِ لِمَ تُؤۡذُونَنِي
وَقَد تَّعۡلَمُونَ أَنِّي رَسُولُ ٱللَّهِ إِلَيۡكُمۡۖ
فَلَمَّا زَاغُوٓاْ أَزَاغَ ٱللَّهُ قُلُوبَهُمۡۚ وَٱللَّهُ لَا
يَهۡدِي ٱلۡقَوۡمَ ٱلۡفَٰسِقِينَ ٥

وَإِذْ قَالَ عِيسَى ٱبْنُ مَرْيَمَ يَٰبَنِىٓ إِسْرَٰٓءِيلَ
إِنِّى رَسُولُ ٱللَّهِ إِلَيْكُم مُّصَدِّقًا لِّمَا بَيْنَ
يَدَىَّ مِنَ ٱلتَّوْرَىٰةِ وَمُبَشِّرًۢا بِرَسُولٍ يَأْتِى
مِنۢ بَعْدِى ٱسْمُهُۥٓ أَحْمَدُ ۖ فَلَمَّا جَآءَهُم
بِٱلْبَيِّنَٰتِ قَالُوا۟ هَٰذَا سِحْرٌ مُّبِينٌ ٦

6. ಮರ್ಯಮ್‌ರ ಪುತ್ರ ಈಸಾ ಹೇಳಿದ ಸಂದರ್ಭ:' ಓ ಇಸ್ರಾಈಲ್ ಸಂತತಿಗಳೇ! ನಾನು ನನಗಿಂತ ಮುಂಚಿನ ತೌರಾತನ್ನು ದೃಢೀಕರಿಸುವವನಾಗಿ ಮತ್ತು ನನ್ನ ನಂತರ ಬರುವ ಅಹ್ಮದ್ ಎಂಬ ಹೆಸರಿನ ಒಬ್ಬ ಸಂದೇಶವಾಹಕರ ಕುರಿತು[1] ಶುಭವಾರ್ತೆ ತಿಳಿಸುವವನಾಗಿ ನಿಮ್ಮೆಡೆಗೆ ಕಳುಹಿಸಲಾಗಿರುವ ಅಲ್ಲಾಹುವಿನ ಸಂದೇಶವಾಹಕನಾಗಿರುವೆನು. ತರುವಾಯ ಆತ (ಪ್ರವಾದಿ ಮುಹಮ್ಮದರು) ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿಗೆ ಬಂದಾಗ ಅವರು ಹೇಳಿದರು: 'ಇದು ಸ್ಪಷ್ಟವಾದ ಮಾಂತ್ರಿಕತೆಯಾಗಿದೆ'.

وَمَنْ أَظْلَمُ مِمَّنِ ٱفْتَرَىٰ عَلَى ٱللَّهِ
ٱلْكَذِبَ وَهُوَ يُدْعَىٰٓ إِلَى ٱلْإِسْلَٰمِ ۚ وَٱللَّهُ لَا
يَهْدِى ٱلْقَوْمَ ٱلظَّٰلِمِينَ ٧

7. ತನ್ನನ್ನು ಇಸ್ಲಾಮಿನೆಡೆಗೆ ಆಹ್ವಾನಿಸಲಾಗುವಾಗ ಅಲ್ಲಾಹುವಿನ ಹೆಸರಲ್ಲಿ ಸುಳ್ಳನ್ನು ಹೆಣೆದವನಿಗಿಂತಲೂ ದೊಡ್ಡ ಅಕ್ರಮಿ ಇನ್ನಾರಿರುವನು? ಅಕ್ರಮಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

يُرِيدُونَ لِيُطْفِـُٔوا۟ نُورَ ٱللَّهِ بِأَفْوَٰهِهِمْ وَٱللَّهُ
مُتِمُّ نُورِهِۦ وَلَوْ كَرِهَ ٱلْكَٰفِرُونَ ٨

8. ಅವರು ತಮ್ಮ ಬಾಯಿಯ ಮೂಲಕ ಅಲ್ಲಾಹುವಿನ ಪ್ರಕಾಶವನ್ನು ಊದಿ ನಂದಿಸಲು ಇಚ್ಛಿಸುತ್ತಿರುವರು. ಆದರೆ ಸತ್ಯನಿಷೇಧಿಗಳು ಅಸಹ್ಯಪಟ್ಟರೂ ಅಲ್ಲಾಹು ತನ್ನ ಪ್ರಕಾಶವನ್ನು ಪೂರ್ಣಗೊಳಿಸುವವನಾಗಿರುವನು.

هُوَ ٱلَّذِىٓ أَرْسَلَ رَسُولَهُۥ بِٱلْهُدَىٰ وَدِينِ
ٱلْحَقِّ لِيُظْهِرَهُۥ عَلَى ٱلدِّينِ كُلِّهِۦ وَلَوْ كَرِهَ
ٱلْمُشْرِكُونَ ٩

9. ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ, ಅದನ್ನು ಸರ್ವ ಧರ್ಮಗಳ ಮೇಲೂ ಸ್ಪಷ್ಟ ಮೇಲುಗೈ ತೋರಿಸುವ ಸಲುವಾಗಿ ತನ್ನ ಸಂದೇಶವಾಹಕರನ್ನು ಕಳುಹಿಸಿದವನು ಅವನಾಗಿರುವನು. ಬಹುದೇವಾರಾಧಕರಿಗೆ (ಅದು) ಎಷ್ಟು ಅಸಹ್ಯಕರವಾದರೂ ಸರಿ!

---

1 ಅಹ್ಮದ್ ಎಂಬುದು ಪ್ರವಾದಿ(ﷺ)ರವರ ಇನ್ನೊಂದು ಹೆಸರಾಗಿದೆ. ಅಹ್ಮದ್, ಮುಹಮ್ಮದ್ ಎಂಬೀ ಹೆಸರುಗಳ ಅರ್ಥ ಪ್ರಶಂಸನೀಯ ಎಂದಾಗಿದೆ. ಈಸಾ(عَلَيْهِ السَّلَام)ರವರ (ಯೇಸುವಿನ) ನಂತರ ಬರುವ ಸಂದೇಶವಾಹಕರ ಕುರಿತು ಯೋಹಾನನ ಸುವಾರ್ತೆಯಲ್ಲಿ ಪ್ರಸ್ತಾಪಿಸಲಾದ ಪೆರಿಕ್ಲೀಟಸ್ ಎಂಬ ಗ್ರೀಕ್ ಪದದ ಅರ್ಥ ಕೂಡ ಇದೇ ಆಗಿದೆ.

10. ಓ ಸತ್ಯವಿಶ್ವಾಸಿಗಳೇ! ಯಾತನಾಮಯವಾದ ಶಿಕ್ಷೆಯಿಂದ ನಿಮ್ಮನ್ನು ಪಾರು ಮಾಡುವ ಒಂದು ವ್ಯಾಪಾರದ ಕುರಿತು ನಾನು ನಿಮಗೆ ತಿಳಿಸಿಕೊಡಲೇ?

يَٰٓأَيُّهَا ٱلَّذِينَ ءَامَنُواْ هَلْ أَدُلُّكُمْ عَلَىٰ تِجَٰرَةٍ تُنجِيكُم مِّنْ عَذَابٍ أَلِيمٍ ١٠

11. ನೀವು ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡಿರಿ. ಅಲ್ಲಾಹುವಿನ ಮಾರ್ಗದಲ್ಲಿ ನಿಮ್ಮ ಸಂಪತ್ತುಗಳ ಮೂಲಕ ಮತ್ತು ಶರೀರಗಳ ಮೂಲಕ ಹೋರಾಡಿರಿ. ಅದು ನಿಮಗೆ ಅತ್ಯುತ್ತಮವಾಗಿದೆ; ನೀವು ಅರಿವುಳ್ಳವರಾಗಿದ್ದರೆ.

تُؤْمِنُونَ بِٱللَّهِ وَرَسُولِهِۦ وَتُجَٰهِدُونَ فِى سَبِيلِ ٱللَّهِ بِأَمْوَٰلِكُمْ وَأَنفُسِكُمْ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ١١

12. ಹಾಗಾದರೆ ಅವನು ನಿಮಗೆ ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ತಳಭಾಗದಿಂದ ತೊರೆಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಮತ್ತು ಶಾಶ್ವತ ವಾಸಕ್ಕಾಗಿರುವ ಸ್ವರ್ಗೋದ್ಯಾನಗಳ ವಿಶಿಷ್ಟ ವಸತಿಗಳಲ್ಲಿ ಅವನು ನಿಮ್ಮನ್ನು ಪ್ರವೇಶ ಮಾಡಿಸುವನು. ಮಹಾ ವಿಜಯವು ಅದೇ ಆಗಿದೆ.

يَغْفِرْ لَكُمْ ذُنُوبَكُمْ وَيُدْخِلْكُمْ جَنَّٰتٍ تَجْرِى مِن تَحْتِهَا ٱلْأَنْهَٰرُ وَمَسَٰكِنَ طَيِّبَةً فِى جَنَّٰتِ عَدْنٍ ذَٰلِكَ ٱلْفَوْزُ ٱلْعَظِيمُ ١٢

13. ನೀವು ಇಷ್ಟಪಡುವ ಇನ್ನೊಂದನ್ನೂ (ಅವನು ನಿಮಗೆ ನೀಡುವನು). ಅದು ಅಲ್ಲಾಹುವಿನ ಕಡೆಯ ಸಹಾಯ ಮತ್ತು ಸನ್ನಿಹಿತವಾಗಿರುವ ವಿಜಯವಾಗಿದೆ. (ಓ ಪ್ರವಾದಿಯವರೇ!) ಸತ್ಯವಿಶ್ವಾಸಿಗಳಿಗೆ ಶುಭವಾರ್ತೆಯನ್ನು ತಿಳಿಸಿರಿ.

وَأُخْرَىٰ تُحِبُّونَهَا نَصْرٌ مِّنَ ٱللَّهِ وَفَتْحٌ قَرِيبٌ وَبَشِّرِ ٱلْمُؤْمِنِينَ ١٣

14. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿನ ಸಹಾಯಕರಾಗಿರಿ. ಮರ್ಯಮ್‌ರ ಪುತ್ರ ಈಸಾ 'ಅಲ್ಲಾಹುವಿನೆಡೆಗಿರುವ ಮಾರ್ಗದಲ್ಲಿ ನನ್ನ ಸಹಾಯಕರಾಗಿ ಯಾರಿರುವಿರಿ?' ಎಂದು ಹವಾರಿಗಳೊಂದಿಗೆ ಕೇಳಿದಂತೆ. ಹವಾರಿಗಳು ಹೇಳಿದರು: 'ನಾವು ಅಲ್ಲಾಹುವಿನ ಸಹಾಯಕರಾಗಿರುವೆವು'. ಹೀಗೆ ಇಸ್ರಾಈಲ್ ಸಂತತಿಗಳಲ್ಲಿ ಸೇರಿದ ಒಂದು ಪಂಗಡವು ವಿಶ್ವಾಸವಿಟ್ಟಿತು ಹಾಗೂ ಮತ್ತೊಂದು ಪಂಗಡವು ನಿಷೇಧಿಸಿತು. ತರುವಾಯ ವಿಶ್ವಾಸವಿಟ್ಟವರಿಗೆ ಅವರ ಶತ್ರುಗಳ ವಿರುದ್ಧ ನಾವು ಬೆಂಬಲವನ್ನು ನೀಡಿದೆವು. ಹೀಗೆ ಅವರು ವಿಜಯಶಾಲಿಗಳಾದರು.

يَٰٓأَيُّهَا ٱلَّذِينَ ءَامَنُواْ كُونُوٓاْ أَنصَارَ ٱللَّهِ كَمَا قَالَ عِيسَى ٱبْنُ مَرْيَمَ لِلْحَوَارِيِّـۧنَ مَنْ أَنصَارِىٓ إِلَى ٱللَّهِ قَالَ ٱلْحَوَارِيُّونَ نَحْنُ أَنصَارُ ٱللَّهِ فَـَٔامَنَت طَّآئِفَةٌ مِّنۢ بَنِىٓ إِسْرَٰٓءِيلَ وَكَفَرَت طَّآئِفَةٌ فَأَيَّدْنَا ٱلَّذِينَ ءَامَنُواْ عَلَىٰ عَدُوِّهِمْ فَأَصْبَحُواْ ظَٰهِرِينَ ١٤

## ಅಲ್‌ಜುಮುಅಃ[1]

## سُورَةُ الجُمُعَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 11

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವುಗಳು ಸಾಮ್ರಾಟನೂ, ಪರಮ ಪವಿತ್ರನೂ, ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವ ಅಲ್ಲಾಹುವಿನ ಕೀರ್ತನೆ ಮಾಡುತ್ತಿವೆ.

يُسَبِّحُ لِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِ ٱلۡمَلِكِ ٱلۡقُدُّوسِ ٱلۡعَزِيزِ ٱلۡحَكِيمِ ١

2. ಅನಕ್ಷರಸ್ಥರ ಮಧ್ಯೆ, ತನ್ನ ದೃಷ್ಟಾಂತಗಳನ್ನು ಅವರಿಗೆ ಓದಿಕೊಡುವ ಸಲುವಾಗಿ, ಅವರನ್ನು ಸಂಸ್ಕರಿಸುವ ಸಲುವಾಗಿ ಮತ್ತು ಅವರಿಗೆ ಗ್ರಂಥ ಹಾಗೂ ತತ್ವಜ್ಞಾನವನ್ನು ಕಲಿಸಿಕೊಡುವ ಸಲುವಾಗಿ ಅವರಿಂದಲೇ ಇರುವ ಒಬ್ಬ ಸಂದೇಶವಾಹಕನನ್ನು ಕಳುಹಿಸಿದವನು ಅವನಾಗಿರುವನು. ಖಂಡಿತವಾಗಿಯೂ ಇದಕ್ಕಿಂತ ಮುಂಚೆ ಅವರು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿದ್ದರು.

هُوَ ٱلَّذِي بَعَثَ فِي ٱلۡأُمِّيِّـۧنَ رَسُولٗا مِّنۡهُمۡ يَتۡلُواْ عَلَيۡهِمۡ ءَايَٰتِهِۦ وَيُزَكِّيهِمۡ وَيُعَلِّمُهُمُ ٱلۡكِتَٰبَ وَٱلۡحِكۡمَةَ وَإِن كَانُواْ مِن قَبۡلُ لَفِي ضَلَٰلٖ مُّبِينٖ ٢

3. ಅವರ ಪೈಕಿ ಸೇರಿದವರೂ, ಇನ್ನೂ ಅವರೊಂದಿಗೆ ಸೇರಿಕೊಳ್ಳದವರೂ ಆಗಿರುವ ಇತರರೆಡೆಗೂ (ಅವರನ್ನು ಕಳುಹಿಸಲಾಗಿದೆ).[2] ಅವನು ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುವನು.

وَءَاخَرِينَ مِنۡهُمۡ لَمَّا يَلۡحَقُواْ بِهِمۡۚ وَهُوَ ٱلۡعَزِيزُ ٱلۡحَكِيمُ ٣

4. ಅದು ಅಲ್ಲಾಹುವಿನ ಅನುಗ್ರಹವಾಗಿದೆ. ಅವನು ತಾನಿಚ್ಛಿಸುವವರಿಗೆ ಅದನ್ನು ದಯಪಾಲಿಸುವನು. ಅಲ್ಲಾಹು ಮಹಾ ಅನುಗ್ರಹದಾತನಾಗಿರುವನು.

ذَٰلِكَ فَضۡلُ ٱللَّهِ يُؤۡتِيهِ مَن يَشَآءُۚ وَٱللَّهُ ذُو ٱلۡفَضۡلِ ٱلۡعَظِيمِ ٤

---

1 9ನೇ ಸೂಕ್ತಿಯಲ್ಲಿ ಜುಮುಅಃ ನಮಾಝ್‌ನ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಈ ಅಧ್ಯಾಯಕ್ಕೆ ಈ ಹೆಸರು ಬಂದಿದೆ.

2 ಪ್ರವಾದಿ(ﷺ)ರವರ ಸಮಕಾಲೀನರೋ ದೇಶೀಯರೋ ಅಲ್ಲದವರಿಗೂ ಅವರ ಸಂದೇಶವಾಹಕತ್ವವು ಅನ್ವಯವಾಗುತ್ತದೆ.

5. ತೌರಾತಿನ ಹೊಣೆ ವಹಿಸಿಕೊಡಲಾದವರು ಮತ್ತು ತರುವಾಯ ಅದನ್ನು ವಹಿಸಿಕೊಳ್ಳದಿರುವವರ (ಯಹೂದರ) ಉದಾಹರಣೆಯು ಗ್ರಂಥಗಳನ್ನು ಹೊರುವ ಕತ್ತೆಯಂತಾಗಿದೆ.[(1)] ಅಲ್ಲಾಹುವಿನ ದೃಷ್ಟಾಂತಗಳನ್ನು ನಿಷೇಧಿಸಿರುವ ಜನರ ಉದಾಹರಣೆಯು ಅದೆಷ್ಟು ನಿಕೃಷ್ಟವಾದುದು! ಅಕ್ರಮಿಗಳಾಗಿರುವ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

مَثَلُ ٱلَّذِينَ حُمِّلُوا۟ ٱلتَّوْرَىٰةَ ثُمَّ لَمْ يَحْمِلُوهَا كَمَثَلِ ٱلْحِمَارِ يَحْمِلُ أَسْفَارًۢا ۚ بِئْسَ مَثَلُ ٱلْقَوْمِ ٱلَّذِينَ كَذَّبُوا۟ بِـَٔايَٰتِ ٱللَّهِ ۚ وَٱللَّهُ لَا يَهْدِى ٱلْقَوْمَ ٱلظَّٰلِمِينَ ﴿٥﴾

6. (ಓ ಪ್ರವಾದಿಯವರೇ!) ಹೇಳಿರಿ: 'ಓ ಯಹೂದರೇ! ಇತರೆಲ್ಲರ ಹೊರತು ನೀವು ಮಾತ್ರ ಅಲ್ಲಾಹುವಿನ ಮಿತ್ರರಾಗಿರುವಿರಿ ಎಂದು ನೀವು ವಾದಿಸುವುದಾದರೆ ನೀವು ಮರಣವನ್ನು ಆಶಿಸಿರಿ.[(2)] ನೀವು ಸತ್ಯಸಂಧರಾಗಿದ್ದರೆ'.

قُلْ يَٰٓأَيُّهَا ٱلَّذِينَ هَادُوٓا۟ إِن زَعَمْتُمْ أَنَّكُمْ أَوْلِيَآءُ لِلَّهِ مِن دُونِ ٱلنَّاسِ فَتَمَنَّوُا۟ ٱلْمَوْتَ إِن كُنتُمْ صَٰدِقِينَ ﴿٦﴾

7. ಆದರೆ ಅವರ ಕೈಗಳು ಪೂರ್ವಭಾವಿಯಾಗಿ ಮಾಡಿಟ್ಟಿರುವುದರ ಫಲವಾಗಿ ಅವರು ಎಂದಿಗೂ ಅದನ್ನು ಆಶಿಸಲಾರರು. ಅಲ್ಲಾಹು ಅಕ್ರಮಿಗಳ ಕುರಿತು ಅರಿವುಳ್ಳವನಾಗಿರುವನು.

وَلَا يَتَمَنَّوْنَهُۥٓ أَبَدًۢا بِمَا قَدَّمَتْ أَيْدِيهِمْ ۚ وَٱللَّهُ عَلِيمٌۢ بِٱلظَّٰلِمِينَ ﴿٧﴾

8. (ಓ ಪ್ರವಾದಿಯವರೇ!) ಹೇಳಿರಿ: 'ಯಾವ ಮರಣದಿಂದ ನೀವು ಓಡಿ ಹೋಗುತ್ತಿರುವಿರೋ ಅದು ಖಂಡಿತವಾಗಿಯೂ ನಿಮ್ಮನ್ನು ಭೇಟಿಯಾಗಲಿದೆ. ತರುವಾಯ ಅಗೋಚರವನ್ನು ಮತ್ತು ಗೋಚರವನ್ನು ಅರಿಯುವವನ ಬಳಿಗೆ ನಿಮ್ಮನ್ನು ಮರಳಿಸಲಾಗುವುದು. ಆಗ ನೀವು ಮಾಡಿಕೊಂಡಿರುವವುಗಳ ಕುರಿತು ಅವನು ನಿಮಗೆ ತಿಳಿಸಿಕೊಡುವನು'.

قُلْ إِنَّ ٱلْمَوْتَ ٱلَّذِى تَفِرُّونَ مِنْهُ فَإِنَّهُۥ مُلَٰقِيكُمْ ۖ ثُمَّ تُرَدُّونَ إِلَىٰ عَٰلِمِ ٱلْغَيْبِ وَٱلشَّهَٰدَةِ فَيُنَبِّئُكُم بِمَا كُنتُمْ تَعْمَلُونَ ﴿٨﴾

1 ಗ್ರಂಥದ ವಾಹಕರೆಂದು ಅಭಿಮಾನ ಪಡುವ, ಆದರೆ ಗ್ರಂಥದ ಸಾರೋಪದೇಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳದ ಎಲ್ಲರಿಗೂ ಈ ಉಪಮೆಯು ಅನ್ವಯವಾಗುತ್ತದೆ.

2 ಮರಣದೊಂದಿಗೆ ಸ್ವರ್ಗೀಯ ಸುಖಗಳು ಲಭಿಸಲಿವೆ ಎಂದು ದೃಢವಾಗಿ ಹೇಳುವಷ್ಟು ಆರಾಧ್ಯಸಾಮೀಪ್ಯವನ್ನು ನಾವು ಗಳಿಸಿದ್ದೇವೆ ಎಂಬ ಯಹೂದಿಗಳ ವಾದವು ಸತ್ಯಸಂಧವಾಗಿದ್ದರೆ ಅವರು ಮರಣವನ್ನು ಆಶಿಸಲಿ. ಹಲವು ರೀತಿಯ ಕಷ್ಟಗಳನ್ನು ಅನುಭವಿಸಿ ಇಹಲೋಕದಲ್ಲಿ ಬದುಕುವುದು ಅವರ ಪಾಲಿಗೆ ಯೋಗ್ಯವಾದುದಲ್ಲ.

9. ಓ ಸತ್ಯವಿಶ್ವಾಸಿಗಳೇ! ಶುಕ್ರವಾರದಂದು ನಮಾಝ್‌ಗಾಗಿ ನಿಮ್ಮನ್ನು ಕರೆಯಲಾದರೆ ಅಲ್ಲಾಹುವಿನ ಸ್ಮರಣೆಯೆಡೆಗೆ ವೇಗವಾಗಿ ಧಾವಿಸಿರಿ ಮತ್ತು ವ್ಯಾಪಾರವನ್ನು ವರ್ಜಿಸಿರಿ. ಅದು ನಿಮಗೆ ಉತ್ತಮವಾಗಿದೆ. ನೀವು ಅರಿತವರಾಗಿದ್ದರೆ.

يَٰٓأَيُّهَا ٱلَّذِينَ ءَامَنُوٓاْ إِذَا نُودِىَ لِلصَّلَوٰةِ مِن يَوْمِ ٱلْجُمُعَةِ فَٱسْعَوْاْ إِلَىٰ ذِكْرِ ٱللَّهِ وَذَرُواْ ٱلْبَيْعَ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿٩﴾

10. ತರುವಾಯ ನಮಾಝ್ ನಿರ್ವಹಿಸಿದ ಬಳಿಕ ನೀವು ಭೂಮಿಯಲ್ಲಿ ಚದುರಿ ಹೋಗಿರಿ ಮತ್ತು ಅಲ್ಲಾಹುವಿನ ಅನುಗ್ರಹದಿಂದ ಅರಸಿರಿ. ನೀವು ಅಲ್ಲಾಹುವನ್ನು ಹೇರಳವಾಗಿ ಸ್ಮರಿಸಿರಿ. ನೀವು ಯಶಸ್ಸು ಗಳಿಸಲೂ ಬಹುದು.

فَإِذَا قُضِيَتِ ٱلصَّلَوٰةُ فَٱنتَشِرُواْ فِى ٱلْأَرْضِ وَٱبْتَغُواْ مِن فَضْلِ ٱللَّهِ وَٱذْكُرُواْ ٱللَّهَ كَثِيرًا لَّعَلَّكُمْ تُفْلِحُونَ ﴿١٠﴾

11. ಅವರೊಂದು ವ್ಯಾಪಾರವನ್ನಾಗಲಿ, ಮನೋರಂಜನೆಯನ್ನಾಗಲಿ ಕಂಡರೆ ಅದರೆಡೆಗೆ ಧಾವಿಸುವರು ಮತ್ತು ತಮ್ಮನ್ನು ನಿಂತ ಸ್ಥಿತಿಯಲ್ಲೇ ಬಿಟ್ಟುಬಿಡುವರು.(1) ಹೇಳಿರಿ: ಮನೋರಂಜನೆಗಿಂತಲೂ, ವ್ಯಾಪಾರಕ್ಕಿಂತಲೂ ಅಲ್ಲಾಹುವಿನ ಬಳಿಯಿರುವುದು ಅತ್ಯುತ್ತಮವಾಗಿದೆ. ಅಲ್ಲಾಹು ಅನ್ನಾಧಾರ ನೀಡುವವರಲ್ಲಿ ಅತ್ಯುತ್ತಮನಾಗಿರುವನು.

وَإِذَا رَأَوْاْ تِجَٰرَةً أَوْ لَهْوًا ٱنفَضُّوٓاْ إِلَيْهَا وَتَرَكُوكَ قَآئِمًا ۚ قُلْ مَا عِندَ ٱللَّهِ خَيْرٌ مِّنَ ٱللَّهْوِ وَمِنَ ٱلتِّجَٰرَةِ ۚ وَٱللَّهُ خَيْرُ ٱلرَّٰزِقِينَ ﴿١١﴾

---

1 ಒಂದು ಶುಕ್ರವಾರದಂದು ಮದೀನ ಮಸೀದಿಯ ಮಿಂಬರ್‌ನಲ್ಲಿ ಪ್ರವಾದಿ(ﷺ)ರವರು ಖುತ್ಬಾ ನಿರ್ವಹಿಸುತ್ತಿದ್ದಾಗ ಮದೀನದ ಮಾರುಕಟ್ಟೆಗೆ ವರ್ತಕರ ತಂಡವೊಂದು ಆಗಮಿಸಿ ಗದ್ದಲ ಮಾಡತೊಡಗಿದಾಗ ಖುತ್ಬಾ ಆಲಿಸುತ್ತಿದ್ದವರ ಪೈಕಿ ಕೆಲವರ ಹೊರತು ಉಳಿದವರೆಲ್ಲರೂ ಮಾರುಕಟ್ಟೆಗೆ ಓಡಿದರು. ಆ ಸಂದರ್ಭದಲ್ಲಿ ಈ ಸೂಕ್ತಿಯು ಅವತೀರ್ಣಗೊಂಡಿತು.

## ಅಲ್‌ಮುನಾಫಿಕೂನ್ (ಕಪಟವಿಶ್ವಾಸಿಗಳು)

## سُورَةُ المُنَافِقُونَ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 11

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

إِذَا جَآءَكَ ٱلۡمُنَٰفِقُونَ قَالُواْ نَشۡهَدُ إِنَّكَ لَرَسُولُ ٱللَّهِۗ وَٱللَّهُ يَعۡلَمُ إِنَّكَ لَرَسُولُهُۥ وَٱللَّهُ يَشۡهَدُ إِنَّ ٱلۡمُنَٰفِقِينَ لَكَٰذِبُونَ ١

1. ಕಪಟ ವಿಶ್ವಾಸಿಗಳು ತಮ್ಮ ಬಳಿಗೆ ಬಂದರೆ ಅವರು ಹೇಳುವರು: 'ಖಂಡಿತವಾಗಿಯೂ ತಾವು ಅಲ್ಲಾಹುವಿನ ಸಂದೇಶವಾಹಕರಾಗಿರುವಿರಿ ಎಂದು ನಾವು ಸಾಕ್ಷ್ಯವಹಿಸುವೆವು'. ಖಂಡಿತವಾಗಿಯೂ ತಾವು ಅಲ್ಲಾಹುವಿನ ಸಂದೇಶವಾಹಕರಾಗಿರುವಿರಿ ಎಂಬುದು ಅಲ್ಲಾಹುವಿಗೆ ತಿಳಿದಿದೆ. ಖಂಡಿತವಾಗಿಯೂ ಕಪಟವಿಶ್ವಾಸಿಗಳು ಸುಳ್ಳು ನುಡಿಯುವವರಾಗಿರುವರು ಎಂಬುದಕ್ಕೆ ಅಲ್ಲಾಹು ಸಾಕ್ಷ್ಯ ವಹಿಸುವನು.

ٱتَّخَذُوٓاْ أَيۡمَٰنَهُمۡ جُنَّةٗ فَصَدُّواْ عَن سَبِيلِ ٱللَّهِۚ إِنَّهُمۡ سَآءَ مَا كَانُواْ يَعۡمَلُونَ ٢

2. ಅವರು ತಮ್ಮ ಪ್ರತಿಜ್ಞೆಗಳನ್ನು ಒಂದು ಗುರಾಣಿಯನ್ನಾಗಿ ಮಾಡಿಕೊಂಡಿರುವರು.[1] ಹೀಗೆ ಅವರು ಅಲ್ಲಾಹುವಿನ ಮಾರ್ಗದಿಂದ (ಜನರನ್ನು) ತಡೆದಿರುವರು. ಖಂಡಿತವಾಗಿಯೂ ಅವರು ಮಾಡುತ್ತಿರುವುದು ಅತಿ ನಿಕೃಷ್ಟವಾದುದಾಗಿದೆ.

ذَٰلِكَ بِأَنَّهُمۡ ءَامَنُواْ ثُمَّ كَفَرُواْ فَطُبِعَ عَلَىٰ قُلُوبِهِمۡ فَهُمۡ لَا يَفۡقَهُونَ ٣

3. ಅದು ಅವರು ಮೊದಲು ವಿಶ್ವಾಸವಿಟ್ಟು ತರುವಾಯ ನಿಷೇಧಿಸಿದರು ಎಂಬುದರಿಂದಾಗಿದೆ. ಆದ್ದರಿಂದ ಅವರ ಹೃದಯಗಳ ಮೇಲೆ ಮುದ್ರೆಯೊತ್ತಲಾಯಿತು. ತನ್ನಿಮಿತ್ತ ಅವರು (ವಿಷಯವನ್ನು) ಗ್ರಹಿಸಲಾರರು.

---

1 ಇಸ್ಲಾಮ್ ಮತ್ತು ಮುಸ್ಲಿಮರ ವಿರುದ್ಧ ಅನೇಕ ಪಿತೂರಿಗಳನ್ನು ರೂಪಿಸುತ್ತಿದ್ದ ಕಪಟವಿಶ್ವಾಸಿಗಳು ಆತ್ಮರಕ್ಷಣೆಗಾಗಿ ತಾವು ಸತ್ಯವಿಶ್ವಾಸಿಗಳು ಎಂದು ಆಣೆಯಿಟ್ಟು ಹೇಳುವುದು ಒಂದು ತಂತ್ರ ಮಾತ್ರವಾಗಿತ್ತು.

4. ತಾವು ಅವರನ್ನು ಕಂಡರೆ ಅವರ ಶರೀರಗಳು ತಮ್ಮನ್ನು ಅಚ್ಚರಿಪಡಿಸುವುವು! ಅವರು ಮಾತನಾಡತೊಡಗಿದರೆ ತಾವು ಅವರ ಮಾತನ್ನು ಕೇಳುತ್ತಾ ಕೂರುವಿರಿ.[1] ಅವರು ಒರಗಿ ನಿಲ್ಲಿಸಲಾದ ಮರದ ದಿಮ್ಮಿಗಳಂತಿರುವರು. ಪ್ರತಿಯೊಂದು ಸದ್ದೂ ತಮಗೆ ವಿರುದ್ಧವಾಗಿದೆಯೆಂದು ಅವರು ಭಾವಿಸುವರು.[2] ಅವರೇ ವೈರಿಗಳು! ಆದ್ದರಿಂದ ಅವರ ಬಗ್ಗೆ ಎಚ್ಚರವಹಿಸಿರಿ. ಅಲ್ಲಾಹು ಅವರನ್ನು ನಾಶ ಮಾಡಲಿ. ಅವರನ್ನು ಹೇಗೆ ದಾರಿತಪ್ಪಿಸಲಾಗುತ್ತಿದೆ?

۞ وَإِذَا رَأَيْتَهُمْ تُعْجِبُكَ أَجْسَامُهُمْۖ وَإِن يَقُولُواْ تَسْمَعْ لِقَوْلِهِمْۖ كَأَنَّهُمْ خُشُبٌ مُّسَنَّدَةٌۖ يَحْسَبُونَ كُلَّ صَيْحَةٍ عَلَيْهِمْۚ هُمُ ٱلْعَدُوُّ فَٱحْذَرْهُمْۚ قَٰتَلَهُمُ ٱللَّهُۖ أَنَّىٰ يُؤْفَكُونَ ﴿٤﴾

5. 'ಬನ್ನಿರಿ. ಅಲ್ಲಾಹುವಿನ ಸಂದೇಶವಾಹಕರು ನಿಮಗೋಸ್ಕರ ಪಾಪಮುಕ್ತಿಯನ್ನು ಬೇಡುವರು' ಎಂದು ಅವರೊಂದಿಗೆ ಹೇಳಲಾದರೆ ಅವರು ತಮ್ಮ ತಲೆಯನ್ನು ತಿರುಗಿಸುವರು. ಅವರು ಅಹಂಕಾರ ಪಡುತ್ತಾ ವಿಮುಖರಾಗಿ ಹೋಗುವುದನ್ನು ತಾವು ಕಾಣುವಿರಿ.

وَإِذَا قِيلَ لَهُمْ تَعَالَوْاْ يَسْتَغْفِرْ لَكُمْ رَسُولُ ٱللَّهِ لَوَّوْاْ رُءُوسَهُمْ وَرَأَيْتَهُمْ يَصُدُّونَ وَهُم مُّسْتَكْبِرُونَ ﴿٥﴾

6. ತಾವು ಅವರಿಗೋಸ್ಕರ ಪಾಪಮುಕ್ತಿಯನ್ನು ಬೇಡಿದರೂ ಅಥವಾ ಬೇಡದಿದ್ದರೂ ಅವರ ಪಾಲಿಗೆ ಅದು ಸಮಾನವಾಗಿದೆ. ಅಲ್ಲಾಹು ಎಂದಿಗೂ ಅವರನ್ನು ಕ್ಷಮಿಸಲಾರನು. ಖಂಡಿತವಾಗಿಯೂ ದುರ್ಮಾರ್ಗಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.

سَوَآءٌ عَلَيْهِمْ أَسْتَغْفَرْتَ لَهُمْ أَمْ لَمْ تَسْتَغْفِرْ لَهُمْ لَن يَغْفِرَ ٱللَّهُ لَهُمْۚ إِنَّ ٱللَّهَ لَا يَهْدِى ٱلْقَوْمَ ٱلْفَٰسِقِينَ ﴿٦﴾

7. 'ಅಲ್ಲಾಹುವಿನ ಸಂದೇಶವಾಹಕರ ಬಳಿಯಿರುವವರಿಗೆ, ಅವರು (ಅಲ್ಲಿಂದ) ಚದುರಿಹೋಗುವ ತನಕ ಏನನ್ನೂ

هُمُ ٱلَّذِينَ يَقُولُونَ لَا تُنفِقُواْ عَلَىٰ مَنْ عِندَ رَسُولِ ٱللَّهِ حَتَّىٰ يَنفَضُّواْۗ وَلِلَّهِ

1 ಕಪಟವಿಶ್ವಾಸಿಗಳು ದೈಹಿಕ ಸೌಷ್ಟವವುಳ್ಳವರೂ ಮತ್ತು ಸಮರ್ಥವಾಗಿ ಮಾತನಾಡುವ ಸಾಮರ್ಥ್ಯವುಳ್ಳವರೂ ಆಗಿದ್ದರು.

2 ಕಪಟವಿಶ್ವಾಸಿಗಳು ಸದಾ ಭಯದಲ್ಲಿರುತ್ತಿದ್ದರು. ತಮ್ಮ ನಿಜಸ್ಥಿತಿಯನ್ನು ಯಾರಾದರೂ ಅರಿಯುತ್ತಿದ್ದಾರೆಯೇ ಎಂದು ಅವರು ಸದಾ ಮೈಯೆಲ್ಲಾ ಕಿವಿಯಾಗಿಸಿ ನಡೆಯುತ್ತಿದ್ದರು. ಆಗ ಅವರು ಆಲಿಸುವ ಕೆಲವು ಸದ್ದುಗಳನ್ನು ತಮಗೆ ವಿರುದ್ಧವಾಗಿದೆಯೆಂದು ಭಾವಿಸಿ ಅವರು ಆತಂಕಗೊಳ್ಳುತ್ತಿದ್ದರು.

ವ್ಯಯಿಸದಿರಿ' ಎಂದು ಹೇಳುವವರಾಗಿರುವವರು ಅವರು.[1] ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಖಜಾನೆಗಳು ಅಲ್ಲಾಹುವಿನದ್ದಾಗಿವೆ. ಆದರೆ ಕಪಟವಿಶ್ವಾಸಿಗಳು ವಿಷಯವನ್ನು ಗ್ರಹಿಸುವುದಿಲ್ಲ.

خَزَآئِنُ ٱلسَّمَٰوَٰتِ وَٱلْأَرْضِ وَلَٰكِنَّ ٱلْمُنَٰفِقِينَ لَا يَفْقَهُونَ ٧

8. ಅವರು ಹೇಳುವರು: 'ನಾವು ಮದೀನಕ್ಕೆ ಮರಳಿದರೆ ಹೆಚ್ಚು ಪ್ರತಾಪವಿರುವವರು ಕೀಳಾಗಿರುವವರನ್ನು ಖಂಡಿತವಾಗಿಯೂ ಹೊರಗಟ್ಟುವರು'.[2] ಪ್ರತಾಪವಿರುವುದು ಅಲ್ಲಾಹುವಿಗೆ, ಅವನ ಸಂದೇಶವಾಹಕರಿಗೆ ಮತ್ತು ಸತ್ಯವಿಶ್ವಾಸಿಗಳಿಗಾಗಿದೆ. ಆದರೆ ಕಪಟವಿಶ್ವಾಸಿಗಳು (ವಿಷಯವನ್ನು) ಅರ್ಥ ಮಾಡಿಕೊಳ್ಳುವುದಿಲ್ಲ.

يَقُولُونَ لَئِن رَّجَعْنَآ إِلَى ٱلْمَدِينَةِ لَيُخْرِجَنَّ ٱلْأَعَزُّ مِنْهَا ٱلْأَذَلَّ ۚ وَلِلَّهِ ٱلْعِزَّةُ وَلِرَسُولِهِۦ وَلِلْمُؤْمِنِينَ وَلَٰكِنَّ ٱلْمُنَٰفِقِينَ لَا يَعْلَمُونَ ٨

9. ಓ ಸತ್ಯವಿಶ್ವಾಸಿಗಳೇ! ನಿಮ್ಮ ಸಂಪತ್ತು ಮತ್ತು ಸಂತತಿಗಳು ಅಲ್ಲಾಹುವಿನ ಸ್ಮರಣೆಯಿಂದ ನಿಮ್ಮನ್ನು ಅಲಕ್ಷ್ಯಗೊಳಿಸದಿರಲಿ. ಯಾರು ಹಾಗೆ ಮಾಡುವರೋ ಅವರೇ ನಷ್ಟ ಹೊಂದಿದವರಾಗಿರುವರು.

يَٰٓأَيُّهَا ٱلَّذِينَ ءَامَنُوا۟ لَا تُلْهِكُمْ أَمْوَٰلُكُمْ وَلَآ أَوْلَٰدُكُمْ عَن ذِكْرِ ٱللَّهِ ۚ وَمَن يَفْعَلْ ذَٰلِكَ فَأُو۟لَٰٓئِكَ هُمُ ٱلْخَٰسِرُونَ ٩

10. ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಮರಣವು ಆಸನ್ನವಾಗುವುದಕ್ಕೆ ಮುಂಚಿತವಾಗಿ ನಾವು ನಿಮಗೆ ನೀಡಿರುವುದರಿಂದ ವ್ಯಯಿಸಿರಿ. ಆ ಸಮಯದಲ್ಲಿ ಅವನು ಹೇಳುವನು: 'ಓ ನನ್ನ ರಬ್! ಸಮೀಪದ ಒಂದು ಅವಧಿಯವರೆಗೆ ನೀನೇಕೆ ನನಗೆ ಕಾಲಾವಕಾಶವನ್ನು ನೀಡಲಿಲ್ಲ?

وَأَنفِقُوا۟ مِن مَّا رَزَقْنَٰكُم مِّن قَبْلِ أَن يَأْتِىَ أَحَدَكُمُ ٱلْمَوْتُ فَيَقُولَ رَبِّ لَوْلَآ أَخَّرْتَنِىٓ إِلَىٰٓ أَجَلٍ قَرِيبٍ فَأَصَّدَّقَ وَأَكُن مِّنَ ٱلصَّٰلِحِينَ ١٠

1 ಕಪಟವಿಶ್ವಾಸಿಗಳು ಅನ್ಸಾರ್‌ಗಳ ಬಳಿ ತೆರಳಿ ಅವರು ಮುಹಾಜಿರ್‌ಗಳಿಗೆ ಒದಗಿಸುತ್ತಿದ್ದ ಸಹಾಯವನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದರು.

2 ತಾವು ಪ್ರತಾಪಶಾಲಿಗಳಾಗಿರುವುದರಿಂದ ಬಲಹೀನರಾದ ಮುಸ್ಲಿಮರನ್ನು ಮದೀನದಿಂದ ಹೊರಗಟ್ಟಲು ತಮಗೆ ಸಾಧ್ಯವಿದೆಯೆಂದು ಕಪಟವಿಶ್ವಾಸಿಗಳು ಭಾವಿಸಿದ್ದರು. ಆದ್ದರಿಂದಲೇ ಅವರು ಮುಸ್ಲಿಮರ ಶತ್ರುಗಳೊಂದಿಗೆ ಸಂಚುಗಳಲ್ಲಿ ಭಾಗಿಯಾದರು. ಗುಪ್ತ ಮಾತುಕತೆಗಳಲ್ಲಿ ಅವರು ಈ ವಿಷಯವನ್ನು ಸ್ಪಷ್ಟವಾಗಿ ಹೇಳುತ್ತಿದ್ದರು. 'ಮುರೈಸಿಅ್' ಯುದ್ಧದಲ್ಲಿ ಅವರ ಮುಖಂಡ ಅಬ್ದುಲ್ಲಾಹ್ ಇಬ್ನ್ ಉಬಯ್ಯ್ ಈ ವಿಷಯವನ್ನು ಬಹಿರಂಗವಾಗಿ ಹೇಳಿದ್ದನು.

ಹಾಗಿದ್ದರೆ ನಾನು ದಾನಧರ್ಮ ಮಾಡುವವನಾಗುತ್ತಿದ್ದೆನು ಮತ್ತು ಸಜ್ಜನರಲ್ಲಿ ಸೇರಿದವನಾಗುತ್ತಿದ್ದೆನು'.

11. ಯಾವುದೇ ಒಬ್ಬ ವ್ಯಕ್ತಿಯ ಅವಧಿಯು ಬಂದರೆ ತರುವಾಯ ಅಲ್ಲಾಹು ಅವನಿಗೆ ಎಂದಿಗೂ ಕಾಲಾವಕಾಶವನ್ನು ನೀಡಲಾರನು. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

وَلَن يُؤَخِّرَ ٱللَّهُ نَفۡسًا إِذَا جَآءَ أَجَلُهَاۚ
وَٱللَّهُ خَبِيرُۢ بِمَا تَعۡمَلُونَ ﴿١١﴾

## ಅತ್ತಗಾಬುನ್ (ನಷ್ಟ ಬಹಿರಂಗವಾಗುವುದು)(1)

## سُورَةُ التَّغَابُنِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 18

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يُسَبِّحُ لِلَّهِ مَا فِي ٱلسَّمَٰوَٰتِ وَمَا فِي ٱلۡأَرۡضِۖ لَهُ ٱلۡمُلۡكُ وَلَهُ ٱلۡحَمۡدُۖ وَهُوَ عَلَىٰ كُلِّ شَيۡءٖ قَدِيرٌ ١

1. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವವುಗಳು ಅಲ್ಲಾಹುವನ್ನು ಕೊಂಡಾಡುತ್ತಿವೆ. ಆಧಿಪತ್ಯವಿರುವುದು ಅವನಿಗಾಗಿದೆ. ಸ್ತುತಿಯು ಅವನಿಗಾಗಿದೆ. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

هُوَ ٱلَّذِي خَلَقَكُمۡ فَمِنكُمۡ كَافِرٞ وَمِنكُم مُّؤۡمِنٞۚ وَٱللَّهُ بِمَا تَعۡمَلُونَ بَصِيرٌ ٢

2. ನಿಮ್ಮನ್ನು ಸೃಷ್ಟಿಸಿದವನು ಅವನಾಗಿರುವನು. ಹಾಗೆ ನಿಮ್ಮಲ್ಲಿ ಸತ್ಯನಿಷೇಧಿಗಳಿರುವರು ಮತ್ತು ನಿಮ್ಮಲ್ಲಿ ಸತ್ಯವಿಶ್ವಾಸಿಗಳೂ ಇರುವರು. ನೀವು ಮಾಡುತ್ತಿರುವುದನ್ನು ಅಲ್ಲಾಹು ವೀಕ್ಷಿಸುವವನಾಗಿರುವನು.

خَلَقَ ٱلسَّمَٰوَٰتِ وَٱلۡأَرۡضَ بِٱلۡحَقِّ وَصَوَّرَكُمۡ فَأَحۡسَنَ صُوَرَكُمۡۖ وَإِلَيۡهِ ٱلۡمَصِيرُ ٣

3. ಅವನು ಆಕಾಶಗಳನ್ನು ಮತ್ತು ಭೂಮಿಯನ್ನು ಸತ್ಯದೊಂದಿಗೆ ಸೃಷ್ಟಿಸಿರುವನು. ಅವನು ನಿಮಗೆ ರೂಪವನ್ನು ನೀಡಿರುವನು ಮತ್ತು ನಿಮ್ಮ ರೂಪಗಳನ್ನು ಉತ್ತಮಗೊಳಿಸಿರುವನು. ಮರಳುವಿಕೆಯು ಅವನೆಡೆಗೇ ಆಗಿದೆ.

يَعۡلَمُ مَا فِي ٱلسَّمَٰوَٰتِ وَٱلۡأَرۡضِ وَيَعۡلَمُ مَا تُسِرُّونَ وَمَا تُعۡلِنُونَۚ وَٱللَّهُ عَلِيمُۢ بِذَاتِ ٱلصُّدُورِ ٤

4. ಆಕಾಶಗಳಲ್ಲಿರುವುದನ್ನು ಮತ್ತು ಭೂಮಿಯಲ್ಲಿರುವುದನ್ನು ಅವನು ಅರಿಯುವನು. ನೀವು ಮರೆಮಾಚುವುದನ್ನೂ ಬಹಿರಂಗ ಪಡಿಸುವುದನ್ನೂ ಅವನು ಅರಿಯುವನು. ಅಲ್ಲಾಹು ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

أَلَمۡ يَأۡتِكُمۡ نَبَؤُاْ ٱلَّذِينَ كَفَرُواْ مِن قَبۡلُ

5. ಮುಂಚೆ ನಿಷೇಧಿಸಿದವರ ವೃತ್ತಾಂತವು ನಿಮ್ಮಲ್ಲಿಗೆ ಬಂದು ತಲುಪಿಲ್ಲವೇ? ಅವರ ಕರ್ಮದ

1 9ನೇ ಸೂಕ್ತಿಯಲ್ಲಿ ನಷ್ಟ ಬಹಿರಂಗವಾಗುವ ದಿನದ ಕುರಿತು ಪ್ರಸ್ತಾಪಿಸಲಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

فَذَاقُواْ وَبَالَ أَمۡرِهِمۡ وَلَهُمۡ عَذَابٌ أَلِيمٌ ٥

ಪರಿಣಾಮವನ್ನು ಅವರು ಸವಿದರು. ಅವರಿಗೆ (ಪರಲೋಕದಲ್ಲಿ) ಯಾತನಾಮಯವಾದ ಶಿಕ್ಷೆಯಿದೆ.

ذَٰلِكَ بِأَنَّهُۥ كَانَت تَّأۡتِيهِمۡ رُسُلُهُم بِٱلۡبَيِّنَٰتِ فَقَالُوٓاْ أَبَشَرٞ يَهۡدُونَنَا فَكَفَرُواْ وَتَوَلَّواْۖ وَّٱسۡتَغۡنَى ٱللَّهُۚ وَٱللَّهُ غَنِيٌّ حَمِيدٞ ٦

6. ಅದೇಕೆಂದರೆ ಅವರೆಡೆಗಿರುವ ಸಂದೇಶವಾಹಕರು ಸ್ಪಷ್ಟವಾದ ಪುರಾವೆಗಳೊಂದಿಗೆ ಅವರ ಬಳಿ ಬರುತ್ತಿದ್ದರು ಎಂಬುದರಿಂದಾಗಿದೆ. ಆಗ ಅವರು ಹೇಳಿದರು: 'ಒಬ್ಬ ಮನುಷ್ಯನು ನಮಗೆ ಮಾರ್ಗದರ್ಶನ ನೀಡುವುದೇ?'[1] ತರುವಾಯ ಅವರು ನಿಷೇಧಿಸಿದರು ಮತ್ತು ವಿಮುಖರಾಗಿ ಹೋದರು. ಅಲ್ಲಾಹು ನಿರಪೇಕ್ಷನಾಗಿರುವನು. ಅಲ್ಲಾಹು ನಿರಾವಲಂಬಿಯೂ, ಸ್ತುತ್ಯರ್ಹನೂ ಆಗಿರುವನು.

زَعَمَ ٱلَّذِينَ كَفَرُوٓاْ أَن لَّن يُبۡعَثُواْۚ قُلۡ بَلَىٰ وَرَبِّي لَتُبۡعَثُنَّ ثُمَّ لَتُنَبَّؤُنَّ بِمَا عَمِلۡتُمۡۚ وَذَٰلِكَ عَلَى ٱللَّهِ يَسِيرٞ ٧

7. ತಮ್ಮನ್ನು ಪುನರುತ್ಥಾನಗೊಳಿಸಲಾಗುವುದಿಲ್ಲ ಎಂದು ಸತ್ಯನಿಷೇಧಿಗಳು ವಾದಿಸಿದರು. (ಓ ಪ್ರವಾದಿಯವರೇ!) ಹೇಳಿರಿ: 'ಹೌದು! ನನ್ನ ರಬ್‌ನ ಮೇಲಾಣೆ! ಖಂಡಿತವಾಗಿಯೂ ನಿಮ್ಮನ್ನು ಪುನರುತ್ಥಾನಗೊಳಿಸಲಾಗುವುದು. ತರುವಾಯ ನೀವು ಮಾಡಿರುವುದರ ಕುರಿತು ನಿಮಗೆ ತಿಳಿಸಿಕೊಡಲಾಗುವುದು. ಅದು ಅಲ್ಲಾಹುವಿನ ಮಟ್ಟಿಗೆ ಅತಿ ಸುಲಭವಾಗಿದೆ'.

فَـَٔامِنُواْ بِٱللَّهِ وَرَسُولِهِۦ وَٱلنُّورِ ٱلَّذِيٓ أَنزَلۡنَاۚ وَٱللَّهُ بِمَا تَعۡمَلُونَ خَبِيرٞ ٨

8. ಆದ್ದರಿಂದ ನೀವು ಅಲ್ಲಾಹುವಿನಲ್ಲಿಯೂ, ಅವನ ಸಂದೇಶವಾಹಕರಲ್ಲಿಯೂ, ನಾವು ಅವತೀರ್ಣಗೊಳಿಸಿರುವ ಪ್ರಕಾಶದಲ್ಲಿಯೂ ವಿಶ್ವಾಸವಿಡಿರಿ. ನೀವು ಮಾಡುತ್ತಿರುವುದರ ಕುರಿತು ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು.

يَوۡمَ يَجۡمَعُكُمۡ لِيَوۡمِ ٱلۡجَمۡعِۖ ذَٰلِكَ يَوۡمُ ٱلتَّغَابُنِۗ وَمَن يُؤۡمِنۢ بِٱللَّهِ وَيَعۡمَلۡ صَٰلِحٗا

9. ಒಟ್ಟುಗೂಡಿಸಲಾಗುವ ಆ ದಿನಕ್ಕಾಗಿ ಅವನು ನಿಮ್ಮನ್ನು ಒಟ್ಟುಗೂಡಿಸುವ ದಿನ! ಅದು ನಷ್ಟ ಬಹಿರಂಗವಾಗುವ ದಿನವಾಗಿದೆ.[2] ಯಾರು

1 ತಮ್ಮಂತಿರುವ ಓರ್ವ ಮನುಷ್ಯನನ್ನು ಮಾರ್ಗದರ್ಶಕನಾಗಿ ಅಂಗೀಕರಿಸಲು ನಮಗೆ ಸಾಧ್ಯವಿಲ್ಲ ಎಂಬುದು ಅವರ ನಿಲುವಾಗಿತ್ತು.

2 ತಮಗೆ ಉಂಟಾಗಿರುವ ನಷ್ಟದ ಪ್ರಮಾಣವು ಎಷ್ಟು ಭೀಕರವಾಗಿದೆಯೆಂದು ಅಂತಿಮ ನ್ಯಾಯ ತೀರ್ಮಾನದ ದಿನದಲ್ಲಿ ಸತ್ಯನಿಷೇಧಿಗಳಿಗೆ ಸ್ಪಷ್ಟವಾಗಿ ಮನದಟ್ಟಾಗಲಿದೆ.

ಅಲ್ಲಾಹುವಿನಲ್ಲಿ ವಿಶ್ವಾಸವಿಡುವನೋ ಮತ್ತು ಸತ್ಕರ್ಮವೆಸಗುವನೋ ಅವನ ಪಾಪಗಳನ್ನು ಅವನು (ಅಲ್ಲಾಹು) ಅಳಿಸಿಹಾಕುವನು ಮತ್ತು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ಅವನನ್ನು ಪ್ರವೇಶ ಮಾಡಿಸುವನು. ಅದರಲ್ಲಿ (ಸ್ವರ್ಗದಲ್ಲಿ) ಅವರು ಶಾಶ್ವತವಾಗಿ ವಾಸಿಸುವರು. ಮಹಾ ವಿಜಯವು ಅದೇ ಆಗಿದೆ.

يُكَفِّرْ عَنْهُ سَيِّـَٔاتِهِۦ وَيُدْخِلْهُ جَنَّـٰتٍ
تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَآ
أَبَدًا ۚ ذَٰلِكَ ٱلْفَوْزُ ٱلْعَظِيمُ ٩

10. ಅವಿಶ್ವಾಸವಿಟ್ಟವರು ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರು ನರಕವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. (ಅವರು) ತಲುಪುವ ಆ ಸ್ಥಳವು ನಿಕೃಷ್ಟವೇ ಆಗಿದೆ.

وَٱلَّذِينَ كَفَرُوا۟ وَكَذَّبُوا۟ بِـَٔايَـٰتِنَآ أُو۟لَـٰٓئِكَ
أَصْحَـٰبُ ٱلنَّارِ خَـٰلِدِينَ فِيهَا ۖ وَبِئْسَ
ٱلْمَصِيرُ ١٠

11. ಅಲ್ಲಾಹುವಿನ ಅಪ್ಪಣೆ ಪ್ರಕಾರವೇ ಹೊರತು ಯಾವುದೇ ವಿಪತ್ತೂ ಬಾಧಿಸಿಲ್ಲ. ಯಾರಾದರೂ ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟರೆ ಅವನ ಹೃದಯವನ್ನು ಅವನು ಸನ್ಮಾರ್ಗದಲ್ಲಿ ಮುನ್ನಡೆಸುವನು. ಅಲ್ಲಾಹು ಎಲ್ಲ ವಿಷಯಗಳ ಕುರಿತೂ ಅರಿವುಳ್ಳವನಾಗಿರುವನು.

مَآ أَصَابَ مِن مُّصِيبَةٍ إِلَّا بِإِذْنِ ٱللَّهِ ۗ
وَمَن يُؤْمِنۢ بِٱللَّهِ يَهْدِ قَلْبَهُۥ ۚ وَٱللَّهُ بِكُلِّ
شَىْءٍ عَلِيمٌ ١١

12. ನೀವು ಅಲ್ಲಾಹುವನ್ನು ಅನುಸರಿಸಿರಿ ಮತ್ತು ಸಂದೇಶವಾಹಕರನ್ನು ಅನುಸರಿಸಿರಿ. ನೀವು ವಿಮುಖರಾಗುವುದಾದರೆ ನಮ್ಮ ಸಂದೇಶವಾಹಕರ ಹೊಣೆಯು ಸ್ಪಷ್ಟವಾದ ರೀತಿಯಲ್ಲಿ ತಲುಪಿಸಿಕೊಡುವುದು ಮಾತ್ರವಾಗಿದೆ.

وَأَطِيعُوا۟ ٱللَّهَ وَأَطِيعُوا۟ ٱلرَّسُولَ ۚ فَإِن تَوَلَّيْتُمْ
فَإِنَّمَا عَلَىٰ رَسُولِنَا ٱلْبَلَـٰغُ ٱلْمُبِينُ ١٢

13. ಅಲ್ಲಾಹು; ಅವನ ಹೊರತು ಅನ್ಯ ಆರಾಧ್ಯರಿಲ್ಲ. ಸತ್ಯವಿಶ್ವಾಸಿಗಳು ಅಲ್ಲಾಹುವಿನ ಮೇಲೆ ಭರವಸೆಯಿಡಲಿ.

ٱللَّهُ لَآ إِلَـٰهَ إِلَّا هُوَ ۚ وَعَلَى ٱللَّهِ فَلْيَتَوَكَّلِ
ٱلْمُؤْمِنُونَ ١٣

14. ಓ ಸತ್ಯವಿಶ್ವಾಸಿಗಳೇ! ಖಂಡಿತವಾಗಿಯೂ ನಿಮ್ಮ ಪತ್ನಿಯರಲ್ಲಿ ಮತ್ತು ನಿಮ್ಮ ಮಕ್ಕಳಲ್ಲಿ

يَـٰٓأَيُّهَا ٱلَّذِينَ ءَامَنُوٓا۟ إِنَّ مِنْ أَزْوَٰجِكُمْ

ನಿಮಗೆ ಶತ್ರುಗಳಿರುವರು. ಆದ್ದರಿಂದ ಅವರ ಬಗ್ಗೆ ಎಚ್ಚರವಹಿಸಿರಿ. ನೀವು ಮನ್ನಿಸುವುದಾದರೆ, ವಿನಾಯಿತಿ ತೋರುವುದಾದರೆ ಮತ್ತು ಕ್ಷಮಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

وَأَوۡلَٰدِكُمۡ عَدُوّٗا لَّكُمۡ فَٱحۡذَرُوهُمۡۚ وَإِن تَعۡفُواْ وَتَصۡفَحُواْ وَتَغۡفِرُواْ فَإِنَّ ٱللَّهَ غَفُورٞ رَّحِيمٌ ١٤

**15.** ನಿಮ್ಮ ಸಂಪತ್ತುಗಳು ಮತ್ತು ನಿಮ್ಮ ಸಂತಾನಗಳು ಒಂದು ಪರೀಕ್ಷೆ ಮಾತ್ರವಾಗಿದೆ. ಮಹಾ ಪ್ರತಿಫಲವಿರುವುದು ಅಲ್ಲಾಹುವಿನ ಬಳಿಯಾಗಿದೆ.

إِنَّمَآ أَمۡوَٰلُكُمۡ وَأَوۡلَٰدُكُمۡ فِتۡنَةٞۚ وَٱللَّهُ عِندَهُۥٓ أَجۡرٌ عَظِيمٞ ١٥

**16.** ಆದ್ದರಿಂದ ನಿಮಗೆ ಸಾಧ್ಯವಾಗುವಷ್ಟರ ಮಟ್ಟಿಗೆ ಅಲ್ಲಾಹುವನ್ನು ಭಯಪಡಿರಿ. ಆಲಿಸಿರಿ, ಅನುಸರಿಸಿರಿ ಮತ್ತು ಸ್ವತಃ ನಿಮಗೇ ಒಳಿತಾಗಿರುವ ವಿಧದಲ್ಲಿ ವ್ಯಯಿಸಿರಿ.[1] ಮನಸ್ಸಿನ ಜಿಪುಣತೆಯಿಂದ ಯಾರನ್ನು ಪಾರುಮಾಡಲಾಗುವುದೋ ಅವರೇ ಯಶಸ್ಸು ಗಳಿಸಿದವರಾಗಿರುವರು.

فَٱتَّقُواْ ٱللَّهَ مَا ٱسۡتَطَعۡتُمۡ وَٱسۡمَعُواْ وَأَطِيعُواْ وَأَنفِقُواْ خَيۡرٗا لِّأَنفُسِكُمۡۗ وَمَن يُوقَ شُحَّ نَفۡسِهِۦ فَأُوْلَٰٓئِكَ هُمُ ٱلۡمُفۡلِحُونَ ١٦

**17.** ನೀವು ಅಲ್ಲಾಹುವಿಗೆ ಉತ್ತಮವಾದ ಸಾಲವನ್ನು ನೀಡುವುದಾದರೆ ಅವನು ಅದನ್ನು ನಿಮಗೆ ಇಮ್ಮಡಿಗೊಳಿಸಿ ಕೊಡುವನು ಮತ್ತು ನಿಮ್ಮನ್ನು ಕ್ಷಮಿಸುವನು. ಅಲ್ಲಾಹು ಅತ್ಯಧಿಕ ಕೃತಜ್ಞನೂ, ಸಹನಾಶೀಲನೂ ಆಗಿರುವನು.

إِن تُقۡرِضُواْ ٱللَّهَ قَرۡضًا حَسَنٗا يُضَٰعِفۡهُ لَكُمۡ وَيَغۡفِرۡ لَكُمۡۚ وَٱللَّهُ شَكُورٌ حَلِيمٌ ١٧

**18.** ಅವನು ಅಗೋಚರವಾಗಿರುವುದನ್ನು ಮತ್ತು ಗೋಚರವಾಗಿರುವುದನ್ನು ಅರಿಯುವವನೂ, ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು.

عَٰلِمُ ٱلۡغَيۡبِ وَٱلشَّهَٰدَةِ ٱلۡعَزِيزُ ٱلۡحَكِيمُ ١٨

---

1 ಅಲ್ಲಾಹು ಆದೇಶಿಸಿದ ದಾರಿಯಲ್ಲಿ ವ್ಯಯಿಸಿದರೆ ವ್ಯಯಿಸುವ ವ್ಯಕ್ತಿಗೆ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಒಳಿತಾಗಲಿದೆ. ಅಲ್ಲಾಹು ವಿರೋಧಿಸಿದ ದಾರಿಯಲ್ಲಿ ವ್ಯಯಿಸಿದರೆ ಅದು ಅವನಿಗೆ ಎಂದಿಗೂ ಒಳಿತಾಗಿ ಪರಿಣಮಿಸಲಾರದು.

## ಅತ್ತಲಾಕ್ (ವಿವಾಹವಿಚ್ಛೇದನೆ)

## سُورَةُ الطَّلَاقِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 12

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلنَّبِيُّ إِذَا طَلَّقۡتُمُ ٱلنِّسَآءَ فَطَلِّقُوهُنَّ لِعِدَّتِهِنَّ وَأَحۡصُواْ ٱلۡعِدَّةَۖ وَٱتَّقُواْ ٱللَّهَ رَبَّكُمۡۖ لَا تُخۡرِجُوهُنَّ مِنۢ بُيُوتِهِنَّ وَلَا يَخۡرُجۡنَ إِلَّآ أَن يَأۡتِينَ بِفَٰحِشَةٖ مُّبَيِّنَةٖۚ وَتِلۡكَ حُدُودُ ٱللَّهِۚ وَمَن يَتَعَدَّ حُدُودَ ٱللَّهِ فَقَدۡ ظَلَمَ نَفۡسَهُۥۚ لَا تَدۡرِي لَعَلَّ ٱللَّهَ يُحۡدِثُ بَعۡدَ ذَٰلِكَ أَمۡرٗا ١

1. ಓ ಪ್ರವಾದಿಯವರೇ! ನೀವು (ವಿಶ್ವಾಸಿಗಳು) ಸ್ತ್ರೀಯರನ್ನು ವಿಚ್ಛೇದಿಸುವುದಾದರೆ ಅವರನ್ನು ಅವರ ಇದ್ದಃ ಕಾಲಕ್ಕೆ (ಲೆಕ್ಕಹಾಕಿ) ವಿಚ್ಛೇದಿಸಿರಿ ಮತ್ತು ಇದ್ದಃ ಕಾಲವನ್ನು ಎಣಿಸಿಕೊಳ್ಳಿರಿ.(1) ನಿಮ್ಮ ರಬ್ ಆದ ಅಲ್ಲಾಹುವನ್ನು ಭಯಪಡಿರಿ. ನೀವು ಅವರನ್ನು ಅವರ ಮನೆಗಳಿಂದ ಹೊರಗೆ ಕಳಿಸದಿರಿ ಮತ್ತು ಸ್ವತಃ ಅವರು ಹೊರಹೋಗದಿರಲಿ.(2) ಅವರು ಪ್ರತ್ಯಕ್ಷವಾದ ಯಾವುದಾದರೂ ನೀಚಕೃತ್ಯವನ್ನು ಮಾಡುವ ಹೊರತು. ಇವು ಅಲ್ಲಾಹುವಿನ ನಿಯಮ–ಮೇರೆಗಳಾಗಿವೆ. ಅಲ್ಲಾಹುವಿನ ನಿಯಮ–ಮೇರೆಗಳನ್ನು ಯಾರಾದರೂ ಮೀರುವುದಾದರೆ ಅವನು ಸ್ವತಃ ತನ್ನ ಮೇಲೆಯೇ ಅನ್ಯಾಯವೆಸಗಿರುವನು. ಇದರ ಬಳಿಕ ಅಲ್ಲಾಹು ಹೊಸದಾಗಿ ಯಾವುದಾದರೂ ವಿಷಯವನ್ನು ತರುವನೋ ಎಂಬುದರ ಬಗ್ಗೆ ತಾವು ಅರಿತಿಲ್ಲ.(3)

فَإِذَا بَلَغۡنَ أَجَلَهُنَّ فَأَمۡسِكُوهُنَّ بِمَعۡرُوفٍ

2. ಅವರು (ವಿಚ್ಛೇದಿತೆಯರು) ತಮ್ಮ ಅವಧಿಯನ್ನು ತಲುಪಿದರೆ ಶಿಷ್ಟಾಚಾರಕ್ಕೆ ಅನುಗುಣವಾಗಿ

---

1 ಗರ್ಭಿಣಿಯರಲ್ಲದ ವಿಚ್ಛೇದಿತೆಯರ ಇದ್ದಃ ಕಾಲ ಅಥವಾ ಪುನರ್ವಿವಾಹ ಮಾಡದೆ ಅವರು ಕಾಯಬೇಕಾದ ಕಾಲ ಮೂರು ಶುದ್ಧಾವಸ್ಥೆಗಳಾಗಿವೆ. ಲೈಂಗಿಕ ಸಂಬಂಧ ಉಂಟಾಗದ ಒಂದು ಶುದ್ಧಾವಸ್ಥೆಯಲ್ಲಿ ಮಾತ್ರ ಪತಿ ತನ್ನ ಪತ್ನಿಗೆ ವಿಚ್ಛೇದನೆ ನೀಡಬಹುದು. ಮುಟ್ಟಿನ ಅವಧಿಯಲ್ಲಿ ತಲಾಕ್ ನೀಡಕೂಡದು. ಗರ್ಭಿಣಿಯರ ಇದ್ದಃ ಅವರ ಹೆರಿಗೆಯ ತನಕವಾಗಿದೆ.

2 ವಿಚ್ಛೇದಿತೆಯು ಇದ್ದಃ ಕಾಲದಲ್ಲಿ ವಿಚ್ಛೇದನ ನೀಡಿದ ಪತಿಯ ಮನೆಯಲ್ಲೇ ತಂಗಿರಬೇಕು. ದಾಂಪತ್ಯವನ್ನು ಪುನಃ ಸ್ಥಾಪಿಸಲು ಮತ್ತು ಅಗಲಿಕೆಯ ನೋವನ್ನು ನಿವಾರಿಸಲು ಇದು ಸಹಾಯಕವಾಗಬಹುದು.

3 ಜಗಳ ಮತ್ತು ವಿಚ್ಛೇದನೆಯ ನಂತರ ದಂಪತಿಗಳ ಮನಸ್ಸಿನಲ್ಲಿ ವಿಷಾದ ಅಥವಾ ವಿವಾಹ ಸಂಬಂಧವನ್ನು ಪುನಃ ಸ್ಥಾಪಿಸಬೇಕೆಂಬ ಹಂಬಲವನ್ನು ಅಲ್ಲಾಹು ಹುಟ್ಟಿಸಬಹುದು. ಅದನ್ನು ಮುಂಚಿತವಾಗಿ ಅರಿತುಕೊಳ್ಳಲು ಮನುಷ್ಯರಿಗೆ ಸಾಧ್ಯವಿಲ್ಲ ಎಂದರ್ಥ.

أَوْ فَارِقُوهُنَّ بِمَعْرُوفٖ وَأَشْهِدُواْ ذَوَيْ
عَدْلٖ مِّنكُمْ وَأَقِيمُواْ ٱلشَّهَٰدَةَ لِلَّهِۚ
ذَٰلِكُمْ يُوعَظُ بِهِۦ مَن كَانَ يُؤْمِنُ بِٱللَّهِ
وَٱلْيَوْمِ ٱلْـَٔاخِرِۚ وَمَن يَتَّقِ ٱللَّهَ يَجْعَل لَّهُۥ
مَخْرَجٗا ٢

ಅವರನ್ನು ಬಳಿ ಇರಿಸಿಕೊಳ್ಳಿರಿ ಅಥವಾ ಶಿಷ್ಟಾಚಾರಕ್ಕೆ ಅನುಗುಣವಾಗಿ ಅವರನ್ನು ಕಳುಹಿಸಿಕೊಡಿರಿ. ನಿಮ್ಮಲ್ಲಿನ ಇಬ್ಬರು ನ್ಯಾಯವಂತರನ್ನು ಸಾಕ್ಷಿ ನಿಲ್ಲಿಸಿರಿ. ಅಲ್ಲಾಹುವಿಗೋಸ್ಕರ ಸಾಕ್ಷ್ಯವನ್ನು ಸರಿಯಾದ ವಿಧದಲ್ಲಿ ಸ್ಥಾಪಿಸಿರಿ.[1] ಅದು ಅಲ್ಲಾಹುವಿನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವವರಿಗೆ ನೀಡಲಾಗಿರುವ ಉಪದೇಶವಾಗಿದೆ. ಯಾರಾದರೂ ಅಲ್ಲಾಹುವನ್ನು ಭಯಪಡುವುದಾದರೆ ಅಲ್ಲಾಹು ಅವನಿಗೆ ಹೊರಹೋಗುವ ಒಂದು ಮಾರ್ಗವನ್ನು ಮಾಡಿಕೊಡುವನು.

وَيَرْزُقْهُ مِنْ حَيْثُ لَا يَحْتَسِبُۚ وَمَن
يَتَوَكَّلْ عَلَى ٱللَّهِ فَهُوَ حَسْبُهُۥٓۚ إِنَّ ٱللَّهَ بَٰلِغُ
أَمْرِهِۦۚ قَدْ جَعَلَ ٱللَّهُ لِكُلِّ شَيْءٖ قَدْرٗا ٣

3. ಅವನು ಊಹಿಸಿರದ ವಿಧದಲ್ಲಿ ಅವನಿಗೆ ಅನ್ನಾಧಾರವನ್ನು ಒದಗಿಸುವನು. ಯಾರಾದರೂ ಅಲ್ಲಾಹು ವಿನ ಮೇಲೆ ಭರವಸೆಯಿಡುವುದಾದರೆ ಅವನಿಗೆ ಅಲ್ಲಾಹು ಸಾಕು. ಖಂಡಿತವಾಗಿಯೂ ಅಲ್ಲಾಹು ತನ್ನ ಕಾರ್ಯವನ್ನು ಪೂರ್ಣಗೊಳಿಸುವನು. ಪ್ರತಿಯೊಂದು ವಿಷಯಕ್ಕೂ ಅಲ್ಲಾಹು ಒಂದು ಕ್ರಮವನ್ನು ನಿಶ್ಚಯಿಸಿರುವನು.

وَٱلَّٰٓـِٔي يَئِسْنَ مِنَ ٱلْمَحِيضِ مِن
نِّسَآئِكُمْ إِنِ ٱرْتَبْتُمْ فَعِدَّتُهُنَّ ثَلَٰثَةُ
أَشْهُرٖ وَٱلَّٰٓـِٔي لَمْ يَحِضْنَۚ وَأُوْلَٰتُ ٱلْأَحْمَالِ
أَجَلُهُنَّ أَن يَضَعْنَ حَمْلَهُنَّۚ وَمَن يَتَّقِ ٱللَّهَ
يَجْعَل لَّهُۥ مِنْ أَمْرِهِۦ يُسْرٗا ٤

4. ನಿಮ್ಮ ಸ್ತ್ರೀಯರ ಪೈಕಿ ಮುಟ್ಟಿನ ಬಗ್ಗೆ ನಿರಾಶರಾಗಿರುವವರ[2] ಕುರಿತು ಹೇಳುವುದಾದರೆ ಅವರ ಇದ್ದಃದ ವಿಷಯದಲ್ಲಿ ನಿಮಗೆ ಸಂದೇಹವಿದ್ದರೆ, ಅವರ ಇದ್ದಃವು ಮೂರು ತಿಂಗಳುಗಳಾಗಿವೆ. ಮುಟ್ಟಾಗದವರ ವಿಷಯವೂ ಇದೇ ರೀತಿಯಾಗಿದೆ. ಗರ್ಭಿಣಿಯರ ಕುರಿತು ಹೇಳುವುದಾದರೆ ಅವರ ಅವಧಿಯು ಅವರು ತಮ್ಮ ಗರ್ಭವನ್ನು ಹೆರುವ ತನಕವಾಗಿದೆ. ಯಾರಾದರೂ ಅಲ್ಲಾಹುವನ್ನು ಭಯಪಡುವುದಾದರೆ ಅಲ್ಲಾಹು ಅವನಿಗೆ ಅವನ ವಿಷಯವನ್ನು ಸರಳವಾಗಿಸಿ ಕೊಡುವನು.

---

1 ಅಗತ್ಯ ಬರುವಾಗ ಸಾಕ್ಷಿಗಳು ನಿಷ್ಪಕ್ಷವಾಗಿ ಸಾಕ್ಷಿ ಹೇಳಬೇಕು ಎಂದರ್ಥ.

2 ಋತುಸ್ರಾವದ ಪ್ರಾಯವನ್ನು ದಾಟಿದವರು.

5. ಇದು ಅಲ್ಲಾಹುವಿನ ಆಜ್ಞೆಯಾಗಿದೆ. ಅವನು ಇದನ್ನು ನಿಮಗೆ ಅವತೀರ್ಣಗೊಳಿಸಿರುವನು. ಯಾರಾದರೂ ಅಲ್ಲಾಹುವನ್ನು ಭಯಪಡುವುದಾದರೆ ಅವನ ಪಾಪಗಳನ್ನು ಅವನು ಅಳಿಸಿಹಾಕುವನು ಮತ್ತು ಅವನಿಗೆ ಪ್ರತಿಫಲವನ್ನು ಹಿರಿದಾಗಿಸಿಕೊಡುವನು.

ذَٰلِكَ أَمْرُ ٱللَّهِ أَنزَلَهُۥٓ إِلَيْكُمْ ۚ وَمَن يَتَّقِ ٱللَّهَ يُكَفِّرْ عَنْهُ سَيِّـَٔاتِهِۦ وَيُعْظِمْ لَهُۥٓ أَجْرًا ﴿٥﴾

6. ನಿಮ್ಮ ಸಾಮರ್ಥ್ಯಕ್ಕೆ ಸೇರಿದ, ನೀವು ವಾಸ ಮಾಡುವ ಸ್ಥಳದಲ್ಲೇ ಅವರನ್ನು ವಾಸಮಾಡಿಸಿರಿ. ಅವರನ್ನು ಇಕ್ಕಟ್ಟುಗೊಳಿಸುವ ಸಲುವಾಗಿ ಅವರನ್ನು ಸತಾಯಿಸದಿರಿ. ಅವರು ಗರ್ಭಿಣಿಯರಾಗಿದ್ದರೆ ಅವರು ಹೆರುವ ತನಕ ಅವರಿಗೆ ಖರ್ಚು ಮಾಡುತ್ತಿರಿ. ಅವರು ನಿಮಗಾಗಿ (ಶಿಶುವಿಗೆ) ಸ್ತನಪಾನ ಮಾಡುವುದಾದರೆ ಅವರಿಗೆ ಅವರ ಪ್ರತಿಫಲವನ್ನು ಕೊಡಿರಿ. ನೀವು ಪರಸ್ಪರ ಶಿಷ್ಟಾಚಾರದೊಂದಿಗೆ ಸಮಾಲೋಚನೆ ನಡೆಸಿರಿ. ನಿಮ್ಮ ಪೈಕಿ ಎರಡೂ ಕಡೆಯವರಿಗೂ ಇಕ್ಕಟ್ಟಾಗುವುದಾದರೆ ಅವನಿಗಾಗಿ ಬೇರೊಬ್ಬ ಸ್ತ್ರೀ ಸ್ತನಪಾನ ಮಾಡಲಿ.

أَسْكِنُوهُنَّ مِنْ حَيْثُ سَكَنتُم مِّن وُجْدِكُمْ وَلَا تُضَآرُّوهُنَّ لِتُضَيِّقُوا۟ عَلَيْهِنَّ ۚ وَإِن كُنَّ أُو۟لَٰتِ حَمْلٍ فَأَنفِقُوا۟ عَلَيْهِنَّ حَتَّىٰ يَضَعْنَ حَمْلَهُنَّ ۚ فَإِنْ أَرْضَعْنَ لَكُمْ فَـَٔاتُوهُنَّ أُجُورَهُنَّ ۖ وَأْتَمِرُوا۟ بَيْنَكُم بِمَعْرُوفٍ ۖ وَإِن تَعَاسَرْتُمْ فَسَتُرْضِعُ لَهُۥٓ أُخْرَىٰ ﴿٦﴾

7. ಸಾಮರ್ಥ್ಯವಿರುವವನು ತನ್ನ ಸಾಮರ್ಥ್ಯದಿಂದ ಖರ್ಚಿಗೆ ನೀಡಲಿ. ಯಾರಿಗಾದರೂ ತನ್ನ ಅನ್ನಾಧಾರವು ಇಕ್ಕಟ್ಟಾದರೆ ಅಲ್ಲಾಹು ಅವನಿಗೆ ನೀಡಿರುವುದರಿಂದ ಅವನು ಖರ್ಚಿಗೆ ನೀಡಲಿ. ಅಲ್ಲಾಹು ಅವನಿಗೆ ನೀಡಿರುವುದನ್ನೇ ವಿನಾ (ಕೊಡಬೇಕೆಂದು) ಯಾರನ್ನೂ ಅಲ್ಲಾಹು ಬಲವಂತ ಮಾಡಲಾರನು. ಅಲ್ಲಾಹು ಇಕ್ಕಟ್ಟಿನ ಬಳಿಕ ಅನುಕೂಲತೆಯನ್ನು ಮಾಡಿಕೊಡುವನು.

لِيُنفِقْ ذُو سَعَةٍ مِّن سَعَتِهِۦ ۖ وَمَن قُدِرَ عَلَيْهِ رِزْقُهُۥ فَلْيُنفِقْ مِمَّآ ءَاتَىٰهُ ٱللَّهُ ۚ لَا يُكَلِّفُ ٱللَّهُ نَفْسًا إِلَّا مَآ ءَاتَىٰهَا ۚ سَيَجْعَلُ ٱللَّهُ بَعْدَ عُسْرٍ يُسْرًا ﴿٧﴾

8. ಎಷ್ಟೊಂದು ದೇಶದವರು ತಮ್ಮ ರಬ್‌ನ ಮತ್ತು ಅವನ ಸಂದೇಶವಾಹಕರ ಆಜ್ಞೆಯನ್ನು ಧಿಕ್ಕರಿಸಿರುವರು! ನಂತರ ನಾವು ಅವರನ್ನು ಕಠೋರವಾಗಿ ವಿಚಾರಣೆ ಮಾಡಿದೆವು ಮತ್ತು ಅವರನ್ನು ಹೀನವಾದ ರೀತಿಯಲ್ಲಿ ಶಿಕ್ಷಿಸಿದೆವು.

وَكَأَيِّن مِّن قَرْيَةٍ عَتَتْ عَنْ أَمْرِ رَبِّهَا وَرُسُلِهِۦ فَحَاسَبْنَٰهَا حِسَابًا شَدِيدًا وَعَذَّبْنَٰهَا عَذَابًا نُّكْرًا ﴿٨﴾

9. ಹೀಗೆ ಅವರು ತಮ್ಮ ನಿಲುವಿನ ದುಷ್ಫಲವನ್ನು ಸವಿದರು. ಅವರ ಕರ್ಮಗಳ ಪರ್ಯಾವಸಾನವು ನಷ್ಟವೇ ಆಗಿತ್ತು.

فَذَاقَتْ وَبَالَ أَمْرِهَا وَكَانَ عَـٰقِبَةُ أَمْرِهَا خُسْرًا ﴿٩﴾

10. ಅಲ್ಲಾಹು ಅವರಿಗೆ ಕಠೋರವಾದ ಶಿಕ್ಷೆಯನ್ನು ಸಿದ್ಧಪಡಿಸಿರುವನು. ಆದ್ದರಿಂದ ಸತ್ಯವಿಶ್ವಾಸಿಗಳಾದ ಬುದ್ಧಿವಂತರೇ! ನೀವು ಅಲ್ಲಾಹುವನ್ನು ಭಯಪಡಿರಿ. ಖಂಡಿತವಾಗಿಯೂ ಅಲ್ಲಾಹು ನಿಮಗೊಂದು ಸ್ಮರಣೆಯನ್ನು (ಸಂದೇಶ)ವನ್ನು ಅವತೀರ್ಣಗೊಳಿಸಿರುವನು.

أَعَدَّ ٱللَّهُ لَهُمْ عَذَابًا شَدِيدًا ۖ فَٱتَّقُوا۟ ٱللَّهَ يَـٰٓأُو۟لِى ٱلْأَلْبَـٰبِ ٱلَّذِينَ ءَامَنُوا۟ ۚ قَدْ أَنزَلَ ٱللَّهُ إِلَيْكُمْ ذِكْرًا ﴿١٠﴾

11. ಅಥವಾ ಅಲ್ಲಾಹುವಿನ ಸ್ಪಷ್ಟವಾದ ದೃಷ್ಟಾಂತ ಗಳನ್ನು ನಿಮಗೆ ಓದಿಕೊಡುವ ಒಬ್ಬ ಸಂದೇಶವಾಹಕರನ್ನು ನಿಮ್ಮ ಬಳಿಗೆ ಇಳಿಸಿರುವನು. ವಿಶ್ವಾಸವಿಟ್ಟವರನ್ನು ಮತ್ತು ಸತ್ಕರ್ಮವೆಸಗಿದವರನ್ನು ಅಂಧಕಾರಗಳಿಂದ ಪ್ರಕಾಶದೆಡೆಗೆ ಹೊರತರುವ ಸಲುವಾಗಿ. ಯಾರಾದರೂ ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟು ಸತ್ಕರ್ಮವೆಸಗುವುದಾದರೆ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿಗೆ ಅವನು ಅವರನ್ನು ಪ್ರವೇಶಗೊಳಿಸುವನು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅವನಿಗೆ ಅಲ್ಲಾಹು ಅನ್ನಾಧಾರವನ್ನು ಉತ್ತಮಗೊಳಿಸಿರುವನು.

رَّسُولًا يَتْلُوا۟ عَلَيْكُمْ ءَايَـٰتِ ٱللَّهِ مُبَيِّنَـٰتٍ لِّيُخْرِجَ ٱلَّذِينَ ءَامَنُوا۟ وَعَمِلُوا۟ ٱلصَّـٰلِحَـٰتِ مِنَ ٱلظُّلُمَـٰتِ إِلَى ٱلنُّورِ ۚ وَمَن يُؤْمِنۢ بِٱللَّهِ وَيَعْمَلْ صَـٰلِحًا يُدْخِلْهُ جَنَّـٰتٍ تَجْرِى مِن تَحْتِهَا ٱلْأَنْهَـٰرُ خَـٰلِدِينَ فِيهَآ أَبَدًا ۖ قَدْ أَحْسَنَ ٱللَّهُ لَهُۥ رِزْقًا ﴿١١﴾

12. ಏಳು ಆಕಾಶಗಳನ್ನು ಮತ್ತು ಭೂಮಿಯಿಂದ ಅದಕ್ಕೆ ಸಮಾನವಾಗಿರುವುದನ್ನು ಸೃಷ್ಟಿಸಿದವನು ಅಲ್ಲಾಹುವಾಗಿರುವನು.[1] ಅವುಗಳ ಮಧ್ಯೆ (ಅವನ) ಆಜ್ಞೆಯು ಇಳಿಯುವುದು. ಅಲ್ಲಾಹು ಎಲ್ಲ ವಿಷಯದಲ್ಲೂ ಸಾಮರ್ಥ್ಯವುಳ್ಳವನಾಗಿರುವನು ಮತ್ತು ಅವನು ಎಲ್ಲ ವಸ್ತುವನ್ನೂ ಪೂರ್ಣವಾಗಿ ಆವರಿಸಿರುವನು ಎಂಬುದನ್ನು ನೀವು ಅರಿಯುವ ಸಲುವಾಗಿ.

ٱللَّهُ ٱلَّذِى خَلَقَ سَبْعَ سَمَـٰوَٰتٍ وَمِنَ ٱلْأَرْضِ مِثْلَهُنَّ ۖ يَتَنَزَّلُ ٱلْأَمْرُ بَيْنَهُنَّ لِتَعْلَمُوٓا۟ أَنَّ ٱللَّهَ عَلَىٰ كُلِّ شَىْءٍ قَدِيرٌ وَأَنَّ ٱللَّهَ قَدْ أَحَاطَ بِكُلِّ شَىْءٍ عِلْمًۢا ﴿١٢﴾

---

1 ಏಳು ಆಕಾಶಗಳಂತೆ ಏಳು ಭೂಮಿಗಳೂ ಇವೆಯೆಂದು ವ್ಯಾಖ್ಯಾನಕಾರರು ಇದಕ್ಕೆ ಅರ್ಥ ನೀಡಿದ್ದಾರೆ. ಸಹೀಹಾದ ಹದೀಸ್‌ಗಳಲ್ಲೂ ಇದನ್ನು ಬೆಂಬಲಿಸುವ ಪರಾಮರ್ಶೆಗಳನ್ನು ಕಾಣಬಹುದು.

## ಅತ್ತಹ್ರೀಮ್ (ನಿಷಿದ್ಧಗೊಳಿಸುವುದು)

## سُورَةُ التَّحْرِيمِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 12

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

يَٰٓأَيُّهَا ٱلنَّبِيُّ لِمَ تُحَرِّمُ مَآ أَحَلَّ ٱللَّهُ لَكَۖ تَبۡتَغِي مَرۡضَاتَ أَزۡوَٰجِكَۚ وَٱللَّهُ غَفُورٞ رَّحِيمٞ ١

1. ಓ ಪ್ರವಾದಿಯವರೇ! ತಾವು ತಮ್ಮ ಪತ್ನಿಯರ ಸಂತೃಪ್ತಿಯನ್ನು ಅರಸುತ್ತಾ, ಅಲ್ಲಾಹು ತಮಗೆ ಧರ್ಮ ಸಮ್ಮತಗೊಳಿಸಿರುವುದನ್ನು ಏಕೆ ನಿಷಿದ್ಧಗೊಳಿಸುತ್ತಿರುವಿರಿ?(1) ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

قَدۡ فَرَضَ ٱللَّهُ لَكُمۡ تَحِلَّةَ أَيۡمَٰنِكُمۡۚ وَٱللَّهُ مَوۡلَىٰكُمۡۖ وَهُوَ ٱلۡعَلِيمُ ٱلۡحَكِيمُ ٢

2. ನಿಮ್ಮ ಶಪಥಗಳಿಗಿರುವ ಪರಿಹಾರವನ್ನು(2) ಅಲ್ಲಾಹು ನಿಮಗೆ ನಿಯಮವನ್ನಾಗಿ ನಿಶ್ಚಯಿಸಿರುವನು. ಅಲ್ಲಾಹು ನಿಮ್ಮ ಒಡೆಯನಾಗಿರುವನು. ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَإِذۡ أَسَرَّ ٱلنَّبِيُّ إِلَىٰ بَعۡضِ أَزۡوَٰجِهِۦ حَدِيثٗا فَلَمَّا نَبَّأَتۡ بِهِۦ وَأَظۡهَرَهُ ٱللَّهُ عَلَيۡهِ عَرَّفَ

3. ಪ್ರವಾದಿಯವರು ತನ್ನ ಪತ್ನಿಯರ ಪೈಕಿ ಒಬ್ಬಾಕೆಯೊಂದಿಗೆ ಒಂದು ಮಾತನ್ನು ಗುಟ್ಟಾಗಿ ಹೇಳಿದ ಸಂದರ್ಭ. ತರುವಾಯ ಆಕೆ ಅದನ್ನು

---

1 ಪ್ರವಾದಿಪತ್ನಿಯರು ಉನ್ನತವಾದ ಧಾರ್ಮಿಕ ಮಾನದಂಡಗಳನ್ನು ಪಾಲಿಸುವವರಾಗಿದ್ದರೂ ಸ್ತ್ರೀ ಸಹಜವಾದ ಕೆಲವು ದೌರ್ಬಲ್ಯಗಳು ಅವರಲ್ಲಿದ್ದವು. ಪ್ರವಾದಿ(ﷺ) ರಿಗೆ ಇತರ ಪತ್ನಿಯರಿಗಿಂತಲೂ ಹೆಚ್ಚು ಪ್ರೀತಿ ತನ್ನೊಂದಿಗೆ ಇರಬೇಕೆಂದು ಅವರ ಪೈಕಿ ಕೆಲವರು ಆಸೆಪಟ್ಟಿದ್ದರು. ಒಮ್ಮೆ ಪ್ರವಾದಿ(ﷺ)ರವರು ತಮ್ಮ ಪತ್ನಿಯರಲ್ಲಿ ಒಬ್ಬರಾದ ಝೈನಬ್ ಬಿನ್ತ್ ಜಹ್‌ಶ್(رضي الله عنها)ರವರ ಮನೆಯಲ್ಲಿ ಸ್ವಲ್ಪ ಜೇನು ಸವಿದರು. ಹೇಗೋ ಈ ಮಾಹಿತಿಯನ್ನು ಪಡೆದ ಆಇಶಾ(رضي الله عنها)ಮತ್ತು ಹಫ್ಸಾ(رضي الله عنها)ರಿಗೆ ಅದು ಅಷ್ಟೊಂದು ಇಷ್ಟವಾಗಲಿಲ್ಲ. ಪ್ರವಾದಿ(ﷺ)ರವರು ತಮ್ಮ ಬಳಿಗೆ ಬಂದಾಗ ತಾವು ಮಗಾಫಿರ್ ಅಂಟನ್ನು ಜಗಿದಿದ್ದೀರಿ, ತಮ್ಮ ಬಾಯಿ ವಾಸನೆ ಬರುತ್ತಿದೆ ಎಂದು ಹೇಳಬೇಕೆಂದು ಅವರಿಬ್ಬರೂ ನಿರ್ಧರಿಸಿದರು. ತಾನು ಸ್ವಲ್ಪ ಜೇನನ್ನು ಸವಿದಿರುವೆನೆಂದು ಪ್ರವಾದಿ(ﷺ)ರವರು ಅವರಿಗೆ ಹೇಳಿದರು. ತದನಂತರ ತಮ್ಮ ಪತ್ನಿಯರಿಗೆ ಇಷ್ಟವಿಲ್ಲದ ಜೇನನ್ನು ತಾನಿನ್ನು ಸೇವಿಸುವುದಿಲ್ಲವೆಂದು ಅವರು ಶಪಥ ಮಾಡಿದರು. ಅಲ್ಲಾಹು ಧರ್ಮಸಮ್ಮತಗೊಳಿಸಿದ ಜೇನನ್ನು ಪತ್ನಿಯರ ಹಿತಾಸಕ್ತಿಯನ್ನು ಗೌರವಿಸಿ ವರ್ಜಿಸುವುದು ಸರಿಯಲ್ಲವೆಂದು ಅಲ್ಲಾಹು ಈ ಸೂಕ್ತಿಯ ಮೂಲಕ ಪ್ರವಾದಿ(ﷺ)ರವರನ್ನು ಎಚ್ಚರಿಸಿದ್ದಾನೆ.

2 ಒಂದು ಸತ್ಕರ್ಮವನ್ನಾಗಲಿ, ಧರ್ಮಸಮ್ಮತವಾದ ಒಂದು ಕರ್ಮವನ್ನಾಗಲಿ ಮಾಡುವುದಿಲ್ಲವೆಂದು ಅಲ್ಲಾಹುವಿನ ಹೆಸರಲ್ಲಿ ಶಪಥ ಮಾಡಕೂಡದು. ಯಾರಾದರೂ ಹಾಗೆ ಮಾಡಿದರೆ ಆ ಶಪಥವನ್ನು ಉಲ್ಲಂಘಿಸಿ ಅದಕ್ಕೆ ಪ್ರಾಯಶ್ಚಿತ್ತ ನೀಡಬೇಕು.

بَعۡضَهُۥ وَأَعۡرَضَ عَنۢ بَعۡضٖۖ فَلَمَّا نَبَّأَهَا بِهِۦ قَالَتۡ مَنۡ أَنۢبَأَكَ هَٰذَاۖ قَالَ نَبَّأَنِيَ ٱلۡعَلِيمُ ٱلۡخَبِيرُ ٣

(ಇನ್ನೊಬ್ಬಳಿಗೆ) ತಿಳಿಸಿದರು.[1] ಅಲ್ಲಾಹು ಅದನ್ನು ಅವರಿಗೆ (ಪ್ರವಾದಿಗೆ) ಬಹಿರಂಗಪಡಿಸಿದಾಗ ಅವರು ಅದರ ಕೆಲವು ಭಾಗವನ್ನು (ಆ ಪತ್ನಿಗೆ) ತಿಳಿಸಿದರು ಮತ್ತು ಕೆಲವು ಭಾಗವನ್ನು ಬಿಟ್ಟರು. ಹೀಗೆ ಆಕೆಯೊಂದಿಗೆ (ಆ ಪತ್ನಿಯೊಂದಿಗೆ) ಅವರು ಅದನ್ನು ತಿಳಿಸಿದಾಗ ಆಕೆ ಕೇಳಿದರು: 'ತಮಗೆ ಇದನ್ನು ತಿಳಿಸಿಕೊಟ್ಟವರು ಯಾರು?' ಅವರು ಹೇಳಿದರು: 'ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿರುವವನು ನನಗೆ ತಿಳಿಸಿಕೊಟ್ಟಿರುವನು'.

إِن تَتُوبَآ إِلَى ٱللَّهِ فَقَدۡ صَغَتۡ قُلُوبُكُمَاۖ وَإِن تَظَٰهَرَا عَلَيۡهِ فَإِنَّ ٱللَّهَ هُوَ مَوۡلَىٰهُ وَجِبۡرِيلُ وَصَٰلِحُ ٱلۡمُؤۡمِنِينَۖ وَٱلۡمَلَٰٓئِكَةُ بَعۡدَ ذَٰلِكَ ظَهِيرٌ ٤

4. ನೀವಿಬ್ಬರೂ[2] ಅಲ್ಲಾಹುವಿನೆಡೆಗೆ ಪಶ್ಚಾತ್ತಾಪಪಟ್ಟು ಮರಳುವುದಾದರೆ (ಹಾಗೆ ಮಾಡಿರಿ). ಯಾಕೆಂದರೆ ನಿಮ್ಮಿಬ್ಬರ ಹೃದಯಗಳೂ (ಕೆಡುಕಿನೆಡೆಗೆ) ವಾಲಿಕೊಂಡಿವೆ. ಇನ್ನು ನೀವಿಬ್ಬರೂ ಅವರ (ಪ್ರವಾದಿಯ) ವಿರುದ್ಧ ಪರಸ್ಪರ ಸಹಕರಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ಅವರ ಒಡೆಯನಾಗಿರುವನು. ಜಿಬ್ರೀಲ್ ಮತ್ತು ಸಜ್ಜನರಾದ ಸತ್ಯವಿಶ್ವಾಸಿಗಳೂ ಅದರ ಜೊತೆಗೆ ಮಲಕ್‌ಗಳೂ ಸಹ ಅವರ ಸಹಾಯಕರಾಗಿರುವರು.

عَسَىٰ رَبُّهُۥٓ إِن طَلَّقَكُنَّ أَن يُبۡدِلَهُۥٓ أَزۡوَٰجًا خَيۡرٗا مِّنكُنَّ مُسۡلِمَٰتٖ مُّؤۡمِنَٰتٖ قَٰنِتَٰتٖ تَٰٓئِبَٰتٍ عَٰبِدَٰتٖ سَٰٓئِحَٰتٖ ثَيِّبَٰتٖ وَأَبۡكَارٗا ٥

5. (ಓ ಪ್ರವಾದಿಪತ್ನಿಯರೇ!) ಅವರು ನಿಮ್ಮನ್ನು ವಿಚ್ಛೇದಿಸುವುದಾದರೆ ನಿಮಗಿಂತಲೂ ಉತ್ತಮರಾದ ಪತ್ನಿಯರನ್ನು ಅವರಿಗೆ ಅವರ ಪ್ರಭು ಬದಲಿಯಾಗಿ ನೀಡಲೂಬಹುದು. ಮುಸ್ಲಿಮರೂ, ಸತ್ಯವಿಶ್ವಾಸಿನಿಯರೂ,

1 ತಾನು ಇನ್ನು ಮೇಲೆ ಜೇನು ಸೇವಿಸುವುದಿಲ್ಲ ಎಂದು ಶಪಥ ಮಾಡಿದ ವಿಷಯ ಹಾಗೂ ಇನ್ನಿತರ ವಿಷಯಗಳನ್ನು ಪ್ರವಾದಿ(ﷺ)ರವರು ಪತ್ನಿಯರ ಪೈಕಿ ಓರ್ವರಾದ ಹಫ್ಸಾ(رَضِيَ ٱللَّهُ عَنۡهَا)ರಿಗೆ ತಿಳಿಸಿದ್ದರು. ಇದನ್ನು ಇತರ ಯಾರಿಗೂ ತಿಳಿಸಕೂಡದೆಂದು ಅವರು ಹಫ್ಸಾ(رَضِيَ ٱللَّهُ عَنۡهَا)ರಿಗೆ ಆದೇಶಿಸಿದ್ದರು. ಆದರೆ ಅಷ್ಟೊಂದು ಗಂಭೀರ ವಿಷಯವಲ್ಲವೆಂಬ ಭಾವನೆಯಿಂದ ಹಫ್ಸಾ (رَضِيَ ٱللَّهُ عَنۡهَا)ಇದನ್ನು ಆಇಶಾ(رَضِيَ ٱللَّهُ عَنۡهَا)ರಿಗೆ ತಿಳಿಸಿದ್ದರು.

2 ಪ್ರವಾದಿಪತ್ನಿಯರಾದ ಆಇಶಾ(رَضِيَ ٱللَّهُ عَنۡهَا)ಮತ್ತು ಹಫ್ಸಾ(رَضِيَ ٱللَّهُ عَنۡهَا)ರ ಕುರಿತು ಸೂಚನೆ. ಯಾವುದೇ ಸಣ್ಣ ವಿಷಯದಲ್ಲಾದರೂ ಸರಿ, ಪ್ರವಾದಿ(ﷺ)ರವರ ಆದೇಶವನ್ನು ಅವರ ಪತ್ನಿಯರು ಕಟ್ಟುನಿಟ್ಟಾಗಿ ಪಾಲಿಸಬೇಕಾಗಿದೆ. ಇದರಲ್ಲಿರುವ ಚಿಕ್ಕ ಪ್ರಮಾದವನ್ನೂ ಅಲ್ಲಾಹು ಗಂಭೀರವಾಗಿ ಪರಿಗಣಿಸುತ್ತಾನೆ.

ಭಯಭಕ್ತಿ ಪಾಲಿಸುವವರೂ, ಪಶ್ಚಾತ್ತಾಪಪಡುವವರೂ, ಆರಾಧನಾ ನಿರತರೂ, ಉಪವಾಸ ಆಚರಿಸುವವರೂ, ವಿಧವೆಗಳೂ, ಕನ್ಯೆಯರೂ ಆಗಿರುವವರನ್ನು.

6. ಓ ಸತ್ಯವಿಶ್ವಾಸಿಗಳೇ! ಮನುಷ್ಯರನ್ನು ಮತ್ತು ಕಲ್ಲುಗಳನ್ನು ಇಂಧನವಾಗಿ ಬಳಸುವ ನರಕಾಗ್ನಿಯಿಂದ ಸ್ವತಃ ನಿಮ್ಮನ್ನೂ, ನಿಮ್ಮ ಕುಟುಂಬದವರನ್ನೂ ರಕ್ಷಿಸಿರಿ. ಅದರ ಮೇಲುಸ್ತುವಾರಿ ವಹಿಸಲು ಕಠೋರ ಸ್ವಭಾವದವರೂ, ಅತಿ ಬಲಿಷ್ಠರೂ ಆಗಿರುವ ಮಲಕ್‌ಗಳಿರುವರು. ಅಲ್ಲಾಹು ಅವರೊಂದಿಗೆ ಆಜ್ಞಾಪಿಸಿದ ಯಾವುದೇ ವಿಷಯವನ್ನೂ ಅವರು ಧಿಕ್ಕರಿಸಲಾರರು. ಅವರೊಂದಿಗೆ ಆಜ್ಞಾಪಿಸಲಾಗುವ ಯಾವುದೇ ಆಜ್ಞೆಯನ್ನೂ ಅವರು ಪಾಲಿಸುವರು.

يَـٰٓأَيُّهَا ٱلَّذِينَ ءَامَنُواْ قُوٓاْ أَنفُسَكُمۡ وَأَهۡلِيكُمۡ نَارٗا وَقُودُهَا ٱلنَّاسُ وَٱلۡحِجَارَةُ عَلَيۡهَا مَلَـٰٓئِكَةٌ غِلَاظٞ شِدَادٞ لَّا يَعۡصُونَ ٱللَّهَ مَآ أَمَرَهُمۡ وَيَفۡعَلُونَ مَا يُؤۡمَرُونَ ٦

7. ಓ ಸತ್ಯನಿಷೇಧಿಗಳೇ! ಇಂದು ನೀವು ನೆಪಗಳನ್ನು ಹೇಳದಿರಿ. ನಿಮಗೆ ಪ್ರತಿಫಲ ನೀಡಲಾಗುವುದು ನೀವು ಮಾಡಿರುವುದಕ್ಕೆ ಮಾತ್ರವಾಗಿದೆ.[1]

يَـٰٓأَيُّهَا ٱلَّذِينَ كَفَرُواْ لَا تَعۡتَذِرُواْ ٱلۡيَوۡمَۖ إِنَّمَا تُجۡزَوۡنَ مَا كُنتُمۡ تَعۡمَلُونَ ٧

8. ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿನೆಡೆಗೆ ನಿಷ್ಕಳಂಕವಾದ ಪಶ್ಚಾತ್ತಾಪದೊಂದಿಗೆ ಮರಳಿರಿ. ನಿಮ್ಮ ರಬ್ ನಿಮ್ಮ ಪಾಪಗಳನ್ನು ಅಳಿಸಿಹಾಕುವನು ಮತ್ತು ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಪ್ರವೇಶ ಮಾಡಿಸಬಹುದು. ಅಲ್ಲಾಹು ಪ್ರವಾದಿಯನ್ನು ಮತ್ತು ಅವರೊಂದಿಗೆ ವಿಶ್ವಾಸವಿಟ್ಟವರನ್ನು ಅಪಮಾನಗೊಳಿಸದ ದಿನ! ಅವರ ಪ್ರಕಾಶವು ಅವರ ಮುಂಭಾಗದಿಂದಲೂ, ಬಲಭಾಗದಿಂದಲೂ ಚಲಿಸುತ್ತಿರುವುದು. ಅವರು ಹೇಳುವರು: 'ಓ ನಮ್ಮ ರಬ್! ನಮ್ಮ ಪ್ರಕಾಶವನ್ನು ನಮಗೆ ಪೂರ್ಣಗೊಳಿಸಿಕೊಡು ಮತ್ತು ನಮಗೆ ಕ್ಷಮೆ

يَـٰٓأَيُّهَا ٱلَّذِينَ ءَامَنُواْ تُوبُوٓاْ إِلَى ٱللَّهِ تَوۡبَةٗ نَّصُوحًا عَسَىٰ رَبُّكُمۡ أَن يُكَفِّرَ عَنكُمۡ سَيِّـَٔاتِكُمۡ وَيُدۡخِلَكُمۡ جَنَّـٰتٖ تَجۡرِي مِن تَحۡتِهَا ٱلۡأَنۡهَٰرُ يَوۡمَ لَا يُخۡزِي ٱللَّهُ ٱلنَّبِيَّ وَٱلَّذِينَ ءَامَنُواْ مَعَهُۥۖ نُورُهُمۡ يَسۡعَىٰ بَيۡنَ أَيۡدِيهِمۡ وَبِأَيۡمَٰنِهِمۡ يَقُولُونَ رَبَّنَآ أَتۡمِمۡ لَنَا نُورَنَا وَٱغۡفِرۡ لَنَآۖ إِنَّكَ عَلَىٰ كُلِّ شَيۡءٖ قَدِيرٞ ٨

1 ನರಕಾಗ್ನಿಗೆ ಪ್ರವೇಶ ಮಾಡಿಸಲಾಗುವ ಸಮಯದಲ್ಲಿ ಸತ್ಯನಿಷೇಧಿಗಳೊಂದಿಗೆ ಹೀಗೆನ್ನಲಾಗುವುದು.

ನೀಡು. ಖಂಡಿತವಾಗಿಯೂ ನೀನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವೆ'.

يَـٰٓأَيُّهَا ٱلنَّبِيُّ جَـٰهِدِ ٱلْكُفَّارَ وَٱلْمُنَـٰفِقِينَ وَٱغْلُظْ عَلَيْهِمْ ۚ وَمَأْوَىٰهُمْ جَهَنَّمُ ۖ وَبِئْسَ ٱلْمَصِيرُ ﴿٩﴾

9. ಓ ಪ್ರವಾದಿಯವರೇ! ತಾವು ಸತ್ಯನಿಷೇಧಿಗಳೊಂದಿಗೆ ಮತ್ತು ಕಪಟವಿಶ್ವಾಸಿಗಳೊಂದಿಗೆ ಹೋರಾಡಿರಿ. ಅವರೊಂದಿಗೆ ಕಠೋರವಾಗಿ ವರ್ತಿಸಿರಿ. ಅವರ ವಾಸಸ್ಥಳವು ನರಕಾಗ್ನಿಯಾಗಿದೆ. ತಲುಪಲಿರುವ ಆ ಸ್ಥಳ ಅದೆಷ್ಟು ನಿಕೃಷ್ಟವಾದುದು!

ضَرَبَ ٱللَّهُ مَثَلًا لِّلَّذِينَ كَفَرُوا۟ ٱمْرَأَتَ نُوحٍ وَٱمْرَأَتَ لُوطٍ ۖ كَانَتَا تَحْتَ عَبْدَيْنِ مِنْ عِبَادِنَا صَـٰلِحَيْنِ فَخَانَتَاهُمَا فَلَمْ يُغْنِيَا عَنْهُمَا مِنَ ٱللَّهِ شَيْـًٔا وَقِيلَ ٱدْخُلَا ٱلنَّارَ مَعَ ٱلدَّٰخِلِينَ ﴿١٠﴾

10. ನೂಹ್‌ರ ಪತ್ನಿಯನ್ನು ಮತ್ತು ಲೂತ್‌ರ ಪತ್ನಿಯನ್ನು ಅಲ್ಲಾಹು ಸತ್ಯನಿಷೇಧಿಗಳಿಗೆ ಉದಾಹರಣೆಯಾಗಿ ತೋರಿಸಿರುವನು. ಅವರಿಬ್ಬರೂ ನಮ್ಮ ದಾಸರ ಪೈಕಿ ಸಜ್ಜನರಾಗಿದ್ದ ಇಬ್ಬರು ದಾಸರ ಕೆಳಗಿದ್ದರು. ತರುವಾಯ ಅವರಿಬ್ಬರನ್ನೂ ಇವರು (ಪತ್ನಿಯರು) ವಂಚಿಸಿದರು. ಆಗ ಅಲ್ಲಾಹುವಿನ ಶಿಕ್ಷೆಯಿಂದ ಏನನ್ನೂ ಅವರಿಬ್ಬರೂ ಇವರಿಗೆ (ಪತ್ನಿಯರಿಗೆ) ನಿವಾರಿಸಿಕೊಡಲಿಲ್ಲ.[1] 'ನರಕಾಗ್ನಿಯನ್ನು ಪ್ರವೇಶಿಸುವ ಜನರೊಂದಿಗೆ ನೀವಿಬ್ಬರೂ ಪ್ರವೇಶಿಸಿರಿ' ಎಂದು ಅವರೊಂದಿಗೆ ಹೇಳಲಾಯಿತು.

وَضَرَبَ ٱللَّهُ مَثَلًا لِّلَّذِينَ ءَامَنُوا۟ ٱمْرَأَتَ فِرْعَوْنَ إِذْ قَالَتْ رَبِّ ٱبْنِ لِى عِندَكَ بَيْتًا فِى ٱلْجَنَّةِ وَنَجِّنِى مِن فِرْعَوْنَ وَعَمَلِهِۦ وَنَجِّنِى مِنَ ٱلْقَوْمِ ٱلظَّـٰلِمِينَ ﴿١١﴾

11. ಸತ್ಯವಿಶ್ವಾಸಿಗಳಿಗೆ ಉಪಮೆಯಾಗಿ ಅಲ್ಲಾಹು ಫಿರ್‌ಔನನ ಪತ್ನಿಯನ್ನು ತೋರಿಸಿರುವನು.[2] ಆಕೆ ಹೇಳಿದ ಸಂದರ್ಭ: 'ಓ ನನ್ನ ರಬ್! ನನಗೆ ನಿನ್ನ ಬಳಿ ಸ್ವರ್ಗದಲ್ಲಿ ಒಂದು ಭವನವನ್ನು ನಿರ್ಮಿಸಿಕೊಡು. ಫಿರ್‌ಔನ್

1 ಇಬ್ಬರು ಪ್ರವಾದಿಗಳ ಪತ್ನಿಯರಾಗಿದ್ದೂ ಅಲ್ಲಾಹುವಿನ ಶಿಕ್ಷೆಯಿಂದ ಪಾರುಗೊಳಿಸಲು ಆ ದಾಂಪತ್ಯ ಸಂಬಂಧವು ಅವರಿಗೆ ಸಹಾಯ ಮಾಡಲಿಲ್ಲ. ಅದೇ ರೀತಿ ಮುಹಮ್ಮದ್(ﷺ)ರವರೊಂದಿಗೆ ಕುಟುಂಬ ಸಂಬಂಧವಿದೆ ಎಂಬ ಹೆಸರಿನಲ್ಲಿ ಪರಲೋಕ ಮೋಕ್ಷ ಸಿಗಲಾರದು. ಅವರು ವಿಶ್ವಾಸವಿಟ್ಟು ಸತ್ಕರ್ಮವೆಸಗಿದವರಾಗಿರುವ ಹೊರತು.

2 ಮೂಸಾ(عَلَيْهِ السَّلَامُ)ರವರ ವಿರೋಧಿಯೂ ನಿರಂಕುಶ ಸರ್ವಾಧಿಕಾರಿಯೂ ಆಗಿದ್ದ ಫಿರ್‌ಔನ್‌ನ ಪತ್ನಿಯು (ವ್ಯಾಖ್ಯಾನಕಾರರ ಪ್ರಕಾರ ಆಕೆಯ ಹೆಸರು ಆಸಿಯಾ ಎಂದಾಗಿದೆ) ಮೂಸಾ(عَلَيْهِ السَّلَامُ)ರವರ ಸಂದೇಶದಲ್ಲಿ ದೃಢವಾಗಿ ವಿಶ್ವಾಸವಿಟ್ಟಿದ್ದರು. ಆಕೆ ವಿಶ್ವಾಸಿನಿಯಾದ ಮಾಹಿತಿ ಪಡೆದ ಫಿರ್‌ಔನ್ ಆಕೆಯನ್ನು ಕ್ರೂರವಾಗಿ ಹಿಂಸೆಗೊಳಪಡಿಸಿದ್ದನು.

ಮತ್ತು ಅವನ ಕೃತ್ಯಗಳಿಂದ ನನ್ನನ್ನು ಕಾಪಾಡು. ಅಕ್ರಮಿಗಳಾದ ಜನರಿಂದಲೂ ನನ್ನನ್ನು ರಕ್ಷಿಸು'.

وَمَرۡيَمَ ٱبۡنَتَ عِمۡرَٰنَ ٱلَّتِيٓ أَحۡصَنَتۡ
فَرۡجَهَا فَنَفَخۡنَا فِيهِ مِن رُّوحِنَا وَصَدَّقَتۡ
بِكَلِمَٰتِ رَبِّهَا وَكُتُبِهِۦ وَكَانَتۡ مِنَ
ٱلۡقَٰنِتِينَ ١٢

**12.** ತನ್ನ ಗುಪ್ತಾಂಗವನ್ನು ಸಂರಕ್ಷಿಸಿದ ಇಮ್ರಾನ್‌ರ ಮಗಳಾದ ಮರ್ಯಮ್‌ರನ್ನೂ (ಉಪಮೆಯಾಗಿ ತೋರಿಸಿರುವನು). ತರುವಾಯ ನಮ್ಮ ವತಿಯ ಆತ್ಮದಿಂದ[1] ನಾವು ಅದರಲ್ಲಿ ಊದಿದೆವು. ತನ್ನ ರಬ್‌ನ ವಚನಗಳಲ್ಲಿ ಮತ್ತು ಗ್ರಂಥಗಳಲ್ಲಿ ಅವರು (ಮರ್ಯಮ್) ವಿಶ್ವಾಸವಿಟ್ಟಿರುವರು ಮತ್ತು ಅವರು ಭಯಭಕ್ತಿ ಪಾಲಿಸುವವರಲ್ಲಿ ಸೇರಿದವರಾಗಿದ್ದರು.

1 ಅಲ್ಲಾಹುವಿನ ಆತ್ಮವೆಂದರೆ ಅಲ್ಲಾಹುವಿನ ಸೃಷ್ಟಿಗಳಾದ ಆತ್ಮಗಳಲ್ಲಿ ಒಂದು ಎಂದಾಗಿದೆ. ಆತ್ಮಗಳೆಲ್ಲವೂ ಅಲ್ಲಾಹುವಿನ ಸೃಷ್ಟಿಗಳಾಗಿವೆ. ಇಲ್ಲಿ ಆತ್ಮವನ್ನು ಅಲ್ಲಾಹುವಿನೆಡೆಗೆ ಸೇರಿಸಿರುವುದು ಅದನ್ನು ಸೃಷ್ಟಿಸಿರುವುದು ಅಲ್ಲಾಹುವಾಗಿದ್ದಾನೆ ಎಂಬರ್ಥದಲ್ಲಾಗಿದೆ

# ಅಲ್‌ಮುಲ್ಕ್ (ಆಧಿಪತ್ಯ)

# سُورَةُ المُلْكِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 30

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಧಿಪತ್ಯವು ಯಾರ ಕೈಯ್ಯಲ್ಲಿದೆಯೋ ಅವನು ಅನುಗ್ರಹಪೂರ್ಣನಾಗಿರುವನು. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು.

تَبَٰرَكَ ٱلَّذِي بِيَدِهِ ٱلۡمُلۡكُ وَهُوَ عَلَىٰ كُلِّ شَيۡءٖ قَدِيرٌ ١

2. ನಿಮ್ಮಲ್ಲಿ ಹೆಚ್ಚು ಉತ್ತಮವಾಗಿ ಕರ್ಮವೆಸಗುವವರು ಯಾರು ಎಂದು ಪರೀಕ್ಷಿಸುವ ಸಲುವಾಗಿ ಅವನು ಮರಣ ಮತ್ತು ಜೀವನವನ್ನು ಸೃಷ್ಟಿಸಿರುವನು. ಅವನು ಪ್ರತಾಪಶಾಲಿಯೂ ಅತ್ಯಧಿಕ ಕ್ಷಮಿಸುವವನೂ ಆಗಿರುವನು.

ٱلَّذِي خَلَقَ ٱلۡمَوۡتَ وَٱلۡحَيَوٰةَ لِيَبۡلُوَكُمۡ أَيُّكُمۡ أَحۡسَنُ عَمَلٗاۚ وَهُوَ ٱلۡعَزِيزُ ٱلۡغَفُورُ ٢

3. ಅವನು ಏಳು ಆಕಾಶಗಳನ್ನು ಪದರ ಪದರಗಳಾಗಿ ಸೃಷ್ಟಿಸಿದವನಾಗಿರುವನು. ಪರಮ ದಯಾಮಯನ ಸೃಷ್ಟಿಯಲ್ಲಿ ಯಾವುದೇ ನ್ಯೂನತೆಯನ್ನೂ ತಾವು ಕಾಣಲಾರಿರಿ. ಆದರೆ ತಾವು ದೃಷ್ಟಿಯನ್ನು ಮತ್ತೊಮ್ಮೆ ಮರಳಿಸಿರಿ. ಯಾವುದಾದರೂ ಬಿರುಕನ್ನು ತಾವು ಕಾಣುತ್ತಿರುವಿರಾ?[1]

ٱلَّذِي خَلَقَ سَبۡعَ سَمَٰوَٰتٖ طِبَاقٗاۖ مَّا تَرَىٰ فِي خَلۡقِ ٱلرَّحۡمَٰنِ مِن تَفَٰوُتٖۖ فَٱرۡجِعِ ٱلۡبَصَرَ هَلۡ تَرَىٰ مِن فُطُورٖ ٣

4. ತರುವಾಯ ಎರಡುಬಾರಿ ತಾವು ದೃಷ್ಟಿಯನ್ನು ಮರಳಿಸಿರಿ. ಆ ಕಣ್ಣು ತಮ್ಮ ಬಳಿಗೆ ಪರಾಭವಗೊಂಡ ಸ್ಥಿತಿಯಲ್ಲಿ ದೈನ್ಯತೆಯಿಂದ ಮರಳುವುದು.

ثُمَّ ٱرۡجِعِ ٱلۡبَصَرَ كَرَّتَيۡنِ يَنقَلِبۡ إِلَيۡكَ ٱلۡبَصَرُ خَاسِئٗا وَهُوَ حَسِيرٞ ٤

5. ಅತಿ ಸಮೀಪದ ಆಕಾಶವನ್ನು ನಾವು ದೀಪಗಳಿಂದ ಅಲಂಕರಿಸಿರುವೆವು.[2] ನಾವು

وَلَقَدۡ زَيَّنَّا ٱلسَّمَآءَ ٱلدُّنۡيَا بِمَصَٰبِيحَ

1 ಅಂತರಿಕ್ಷಲೋಕದ ಅಂದರೆ ಮಹಾ ಪ್ರಪಂಚದ ರಚನೆಯ ಕುರಿತು ಮನುಷ್ಯನಿಗೆ ಸ್ವಲ್ಪ ಮಾತ್ರ ಅರಿತುಕೊಳ್ಳಲು ಸಾಧ್ಯವಾಗಿದೆ. ನಮಗೆ ಲಭಿಸಿರುವ ಅರಿವಿನ ಪ್ರಕಾರ ಆಕಾಶಕಾಯಗಳ ಸ್ಥಾನ, ಚಲನೆ ಇತ್ಯಾದಿಗಳೆಲ್ಲವೂ ಸುವ್ಯವಸ್ಥಿತವಾಗಿವೆ, ಎಲ್ಲಿಯೂ ಯಾವ ನ್ಯೂನತೆಯೂ ಗೋಚರವಲ್ಲ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

2 ಒಂದನೇ ಆಕಾಶವು ಅಸಂಖ್ಯಾತ ನಕ್ಷತ್ರಗಳನ್ನು ಒಳಗೊಂಡಿದೆಯೆಂದು ಈ ಸೂಕ್ತಿಯು ಸೂಚಿಸುತ್ತದೆ.

وَجَعَلۡنَٰهَا رُجُومٗا لِّلشَّيَٰطِينِۖ وَأَعۡتَدۡنَا لَهُمۡ عَذَابَ ٱلسَّعِيرِ ٥

ಸೈತಾನರನ್ನು ಎಸೆದು ಓಡಿಸುವಂತದ್ದಾಗಿ ನಾವು ಅವುಗಳನ್ನು ಮಾಡಿರುವೆವು.[1] ಅವರಿಗೆ ನಾವು ಧಗಧಗಿಸುವ ನರಕ ಶಿಕ್ಷೆಯನ್ನು ಸಿದ್ಧಗೊಳಿಸಿರುವೆವು.

وَلِلَّذِينَ كَفَرُواْ بِرَبِّهِمۡ عَذَابُ جَهَنَّمَۖ وَبِئۡسَ ٱلۡمَصِيرُ ٦

6. ತಮ್ಮ ರಬ್‌ನಲ್ಲಿ ಅವಿಶ್ವಾಸವಿಟ್ಟವರಿಗೆ ನರಕ ಶಿಕ್ಷೆಯಿದೆ. ತಲುಪಲಿರುವ ಆ ಸ್ಥಳವು ಅತಿ ನಿಕೃಷ್ಟವೇ ಆಗಿದೆ.

إِذَآ أُلۡقُواْ فِيهَا سَمِعُواْ لَهَا شَهِيقٗا وَهِيَ تَفُورُ ٧

7. ಅವರನ್ನು ಅದಕ್ಕೆ (ನರಕಾಗ್ನಿಗೆ) ಎಸೆಯಲಾದಾಗ ಅವರು ಅದರ ಒಂದು ಗರ್ಜನೆಯನ್ನು ಆಲಿಸುವರು. ಅದು ಕೊತಕೊತನೆ ಕುದಿಯುತ್ತಿರುವುದು.

تَكَادُ تَمَيَّزُ مِنَ ٱلۡغَيۡظِۖ كُلَّمَآ أُلۡقِيَ فِيهَا فَوۡجٞ سَأَلَهُمۡ خَزَنَتُهَآ أَلَمۡ يَأۡتِكُمۡ نَذِيرٞ ٨

8. ಕ್ರೋಧದಿಂದಾಗಿ ಅದು ಸಿಡಿದು ಹೋಗುವಂತಿರುವುದು. ಒಂದೊಂದು ಗುಂಪನ್ನು ಅದರೊಳಗೆ (ನರಕದೊಳಗೆ) ಎಸೆಯಲಾಗುವಾಗಲೆಲ್ಲ ಅದರ ಕಾವಲುಗಾರರು ಅವರೊಂದಿಗೆ ಕೇಳುವರು: 'ನಿಮ್ಮ ಬಳಿಗೆ ಮುನ್ನೆಚ್ಚರಿಕೆ ನೀಡುವವರು ಬಂದಿರಲಿಲ್ಲವೇ?'

قَالُواْ بَلَىٰ قَدۡ جَآءَنَا نَذِيرٞ فَكَذَّبۡنَا وَقُلۡنَا مَا نَزَّلَ ٱللَّهُ مِن شَيۡءٍ إِنۡ أَنتُمۡ إِلَّا فِي ضَلَٰلٖ كَبِيرٖ ٩

9. ಅವರು ಹೇಳುವರು: 'ಹೌದು! ನಮ್ಮ ಬಳಿಗೆ ಮುನ್ನೆಚ್ಚರಿಕೆ ನೀಡುವವರು ಬಂದಿದ್ದರು. ಆದರೆ ನಾವು ನಿಷೇಧಿಸಿದೆವು. ಅಲ್ಲಾಹು ಏನನ್ನೂ ಅವತೀರ್ಣಗೊಳಿಸಿಲ್ಲ, ನೀವು ಮಹಾ ಪಥಭ್ರಷ್ಟತೆಯಲ್ಲೇ ಇರುವಿರಿ[2] ಎಂದು ನಾವು ಹೇಳಿದೆವು'.

وَقَالُواْ لَوۡ كُنَّا نَسۡمَعُ أَوۡ نَعۡقِلُ مَا كُنَّا فِيٓ أَصۡحَٰبِ ٱلسَّعِيرِ ١٠

10. 'ನಾವು ಆಲಿಸುವುದಾಗಲಿ, ಚಿಂತಿಸುವುದಾಗಲಿ ಮಾಡಿರುತ್ತಿದ್ದರೆ ನಾವು ಧಗಧಗಿಸುವ ನರಕಾಗ್ನಿಯ ನಿವಾಸಿಗಳಲ್ಲಿ ಸೇರಿದವರಾಗುತ್ತಿರಲಿಲ್ಲ' ಎಂದು ಅವರು ಹೇಳುವರು.

1 ಇದರ ತಾತ್ಪರ್ಯ ಉಲ್ಕೆಗಳಾಗಿವೆಯೆಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯ ಪಟ್ಟಿದ್ದಾರೆ. ತಫ್ಸೀರ್ ಗ್ರಂಥಗಳಲ್ಲಿ ಇತರ ವ್ಯಾಖ್ಯಾನಗಳನ್ನೂ ಕಾಣಬಹುದು. ಇಂತಹ ವಿಷಯಗಳಲ್ಲಿ ಅಲ್ಲಾಹು ತಿಳಿಸಿಕೊಟ್ಟಿರುವುದಕ್ಕಿಂತ ಹೆಚ್ಚಾಗಿ ಏನನ್ನೂ ಖಚಿತವಾಗಿ ಹೇಳಲು ನಮಗೆ ಸಾಧ್ಯವಿಲ್ಲ.

2 ಇಹಲೋಕದಲ್ಲಿ ಸತ್ಯಧರ್ಮದ ವಕ್ತಾರರೊಂದಿಗೆ ಅವರು ಹೇಳುತ್ತಿದ್ದ ಮಾತುಗಳನ್ನು ನರಕಾಗ್ನಿಯ ಕಾವಲುಗಾರರೊಂದಿಗೆ ಅವರು ಹೇಳುವರು.

11. ಹೀಗೆ ಅವರು ತಮ್ಮ ತಪ್ಪನ್ನು ಒಪ್ಪಿಕೊಳ್ಳುವರು. ಆದ್ದರಿಂದ ಆ ನರಕವಾಸಿಗಳ ಮೇಲೆ ಶಾಪವಿರಲಿ.

فَٱعْتَرَفُوا۟ بِذَنۢبِهِمْ فَسُحْقًا لِّأَصْحَـٰبِ ٱلسَّعِيرِ ﴿١١﴾

12. ಖಂಡಿತವಾಗಿಯೂ ತಮ್ಮ ರಬ್ಬನ್ನು ಅಗೋಚರ ಸ್ಥಿತಿಯಲ್ಲಿ ಭಯಪಡುವವರಾರೋ ಅವರಿಗೆ ಪಾಪಮುಕ್ತಿಯೂ, ಮಹಾ ಪ್ರತಿಫಲವೂ ಇದೆ.

إِنَّ ٱلَّذِينَ يَخْشَوْنَ رَبَّهُم بِٱلْغَيْبِ لَهُم مَّغْفِرَةٌ وَأَجْرٌ كَبِيرٌ ﴿١٢﴾

13. ನೀವು ನಿಮ್ಮ ಮಾತನ್ನು ಗುಟ್ಟಾಗಿರಿಸಿರಿ ಅಥವಾ ಬಹಿರಂಗಪಡಿಸಿರಿ. ಖಂಡಿತವಾಗಿಯೂ ಅವನು (ಅಲ್ಲಾಹು) ಹೃದಯಗಳಲ್ಲಿರುವುದನ್ನು ಅರಿಯುವವನಾಗಿರುವನು.

وَأَسِرُّوا۟ قَوْلَكُمْ أَوِ ٱجْهَرُوا۟ بِهِۦٓ ۖ إِنَّهُۥ عَلِيمٌۢ بِذَاتِ ٱلصُّدُورِ ﴿١٣﴾

14. ಸೃಷ್ಟಿಸಿದವನು (ಎಲ್ಲವನ್ನೂ) ಅರಿಯಲಾರನೇ? ಅವನು ನಿಗೂಢ ರಹಸ್ಯಗಳನ್ನು ಅರಿಯುವವನೂ ಸೂಕ್ಷ್ಮಜ್ಞಾನಿಯೂ ಆಗಿರುವನು.

أَلَا يَعْلَمُ مَنْ خَلَقَ وَهُوَ ٱللَّطِيفُ ٱلْخَبِيرُ ﴿١٤﴾

15. ನಿಮಗೋಸ್ಕರ ಭೂಮಿಯನ್ನು ವಿಧೇಯಗೊಳಿಸಿ ಕೊಟ್ಟವನು ಅವನಾಗಿರುವನು. ಆದ್ದರಿಂದ ನೀವು ಅದರ ಭುಜಗಳ ಮೇಲೆ ನಡೆಯಿರಿ ಮತ್ತು ಅವನು ಒದಗಿಸಿರುವ ಅನ್ನಾಧಾರದಿಂದ ತಿನ್ನಿರಿ. ಪುನರುತ್ಥಾನವು ಅವನೆಡೆಗೇ ಆಗಿದೆ.

هُوَ ٱلَّذِى جَعَلَ لَكُمُ ٱلْأَرْضَ ذَلُولًا فَٱمْشُوا۟ فِى مَنَاكِبِهَا وَكُلُوا۟ مِن رِّزْقِهِۦ ۖ وَإِلَيْهِ ٱلنُّشُورُ ﴿١٥﴾

16. ಆಕಾಶದಲ್ಲಿರುವವನು ನಿಮ್ಮನ್ನು ಭೂಮಿಯೊಳಗೆ ಹುದುಗಿಸುವುದರ ಕುರಿತು ನೀವು ನಿರ್ಭೀತರಾಗಿರುವಿರಾ? ಆಗ ಅದು (ಭೂಮಿ) ಓಲಾಡುತ್ತಿರುವುದು.

ءَأَمِنتُم مَّن فِى ٱلسَّمَآءِ أَن يَخْسِفَ بِكُمُ ٱلْأَرْضَ فَإِذَا هِىَ تَمُورُ ﴿١٦﴾

17. ಅಥವಾ ಆಕಾಶದಲ್ಲಿರುವವನು ನಿಮ್ಮ ಮೇಲೆ ಹರಳು ಕಲ್ಲುಗಳ ಮಳೆಯನ್ನು ಕಳುಹಿಸುವುದರ ಕುರಿತು ನೀವು ನಿರ್ಭೀತರಾಗಿರುವಿರಾ? ನನ್ನ ಎಚ್ಚರಿಕೆ ಹೇಗಿದೆಯೆಂದು ನೀವು ತರುವಾಯ ಅರಿತುಕೊಳ್ಳುವಿರಿ.

أَمْ أَمِنتُم مَّن فِى ٱلسَّمَآءِ أَن يُرْسِلَ عَلَيْكُمْ حَاصِبًا ۖ فَسَتَعْلَمُونَ كَيْفَ نَذِيرِ ﴿١٧﴾

18. ಖಂಡಿತವಾಗಿಯೂ ಅವರಿಗಿಂತ ಮುಂಚಿನವರೂ ನಿಷೇಧಿಸಿರುವರು. ಆಗ ನನ್ನ ಪ್ರತಿಭಟನೆಯು ಹೇಗಿತ್ತು?

وَلَقَدْ كَذَّبَ ٱلَّذِينَ مِن قَبْلِهِمْ فَكَيْفَ كَانَ نَكِيرِ ﴿١٨﴾

أَوَ لَمۡ يَرَوۡاْ إِلَى ٱلطَّيۡرِ فَوۡقَهُمۡ صَٰٓفَّٰتٖ وَيَقۡبِضۡنَۚ مَا يُمۡسِكُهُنَّ إِلَّا ٱلرَّحۡمَٰنُۚ إِنَّهُۥ بِكُلِّ شَيۡءِۢ بَصِيرٌ ١٩

**19.** ಅವರ ಮೇಲ್ಭಾಗದಲ್ಲಿ ರೆಕ್ಕೆಯನ್ನು ಹರಡುತ್ತಲೂ, ಮಡಚುತ್ತಲೂ ಹಾರಾಡುವ ಹಕ್ಕಿಗಳೆಡೆಗೆ ಅವರು ನೋಡಿಲ್ಲವೇ? ಪರಮ ದಯಾಮಯನ ಹೊರತು (ಇನ್ನಾರೂ) ಅವುಗಳನ್ನು ಆಧರಿಸಿ ಹಿಡಿಯಲಾರರು. ಖಂಡಿತವಾಗಿಯೂ ಅವನು ಎಲ್ಲ ವಿಷಯಗಳನ್ನೂ ವೀಕ್ಷಿಸುವವನಾಗಿರುವನು.

أَمَّنۡ هَٰذَا ٱلَّذِي هُوَ جُندٞ لَّكُمۡ يَنصُرُكُم مِّن دُونِ ٱلرَّحۡمَٰنِۚ إِنِ ٱلۡكَٰفِرُونَ إِلَّا فِي غُرُورٍ ٢٠

**20.** ಅಥವಾ ಪರಮ ದಯಾಮಯನ ಹೊರತು ನಿಮಗೆ ಸಹಾಯ ಮಾಡಲು ಒಂದು ಸೈನ್ಯವಾಗಿರುವವನು ಯಾರಿರುವನು? ಸತ್ಯನಿಷೇಧಿಗಳು ಸಿಲುಕಿರುವುದು ವಂಚನೆಯಲ್ಲಿ ಮಾತ್ರವಾಗಿದೆ.

أَمَّنۡ هَٰذَا ٱلَّذِي يَرۡزُقُكُمۡ إِنۡ أَمۡسَكَ رِزۡقَهُۥۚ بَل لَّجُّواْ فِي عُتُوّٖ وَنُفُورٍ ٢١

**21.** ಅಥವಾ ಅಲ್ಲಾಹು ತನ್ನ ಅನ್ನಾಧಾರವನ್ನು ನಿಲ್ಲಿಸಿದರೆ ನಿಮಗೆ ಅನ್ನಾಧಾರ ನೀಡುವವನು ಯಾರಿರುವನು? ಆದರೂ ಅವರು ಧಿಕ್ಕಾರದಲ್ಲಿ ಮತ್ತು ದ್ವೇಷದಲ್ಲಿ ಮಗ್ನರಾಗಿರುವರು.

أَفَمَن يَمۡشِي مُكِبًّا عَلَىٰ وَجۡهِهِۦٓ أَهۡدَىٰٓ أَمَّن يَمۡشِي سَوِيًّا عَلَىٰ صِرَٰطٖ مُّسۡتَقِيمٖ ٢٢

**22.** ಹಾಗಾದರೆ ಸನ್ಮಾರ್ಗ ಪಡೆಯುವವನು ಅಧೋಮುಖವಾಗಿ ನಡೆಯುವವನೋ?[1] ಅಥವಾ ನೇರವಾದ ಮಾರ್ಗದಲ್ಲಿ ಸರಿಯಾಗಿ ನಡೆಯುವವನೋ?

قُلۡ هُوَ ٱلَّذِيٓ أَنشَأَكُمۡ وَجَعَلَ لَكُمُ ٱلسَّمۡعَ وَٱلۡأَبۡصَٰرَ وَٱلۡأَفۡـِٔدَةَۚ قَلِيلٗا مَّا تَشۡكُرُونَ ٢٣

**23.** ತಾವು ಹೇಳಿರಿ: 'ನಿಮ್ಮನ್ನು ಸೃಷ್ಟಿಸಿದವನು ಮತ್ತು ನಿಮಗೆ ಶ್ರವಣವನ್ನು, ದೃಷ್ಟಿಗಳನ್ನು ಮತ್ತು ಹೃದಯಗಳನ್ನು ಮಾಡಿಕೊಟ್ಟವನು ಅವನಾಗಿರುವನು. ನೀವು ಸ್ವಲ್ಪ ಮಾತ್ರ ಕೃತಜ್ಞತೆ ಸಲ್ಲಿಸುತ್ತಿರುವಿರಿ'.

قُلۡ هُوَ ٱلَّذِي ذَرَأَكُمۡ فِي ٱلۡأَرۡضِ وَإِلَيۡهِ تُحۡشَرُونَ ٢٤

**24.** ತಾವು ಹೇಳಿರಿ: 'ನಿಮ್ಮನ್ನು ಭೂಮಿಯಲ್ಲಿ ಸೃಷ್ಟಿಸಿ ಬೆಳೆಸಿದವನು ಅವನಾಗಿರುವನು. ನೀವು ಒಟ್ಟುಗೂಡಿಸಲ್ಪಡುವುದು ಅವನೆಡೆಗೇ ಆಗಿದೆ'.

---

1 ದುರ್ಮಾರ್ಗದಲ್ಲಿ ತಲೆಕೆಳಗಾಗಿ ಬೀಳುವವನು.

وَيَقُولُونَ مَتَىٰ هَٰذَا ٱلْوَعْدُ إِن كُنتُمْ
صَٰدِقِينَ ﴿٢٥﴾ قُلْ إِنَّمَا ٱلْعِلْمُ عِندَ ٱللَّهِ
وَإِنَّمَآ أَنَا۠ نَذِيرٌ مُّبِينٌ ﴿٢٦﴾

**25–26.** ಅವರು ಹೇಳುವರು: 'ಈ ವಾಗ್ದಾನ (ಸತ್ಯವಾಗುವುದು) ಯಾವಾಗ? ನೀವು ಸತ್ಯಸಂಧರಾಗಿದ್ದರೆ' (ಅದನ್ನು ಹೇಳಿಕೊಡಿರಿ). ಹೇಳಿರಿ: 'ಆ ಅರಿವಿರುವುದು ಅಲ್ಲಾಹುವಿನ ಬಳಿ ಮಾತ್ರವಾಗಿದೆ. ನಾನು ಸ್ಪಷ್ಟವಾದ ಮುನ್ನೆಚ್ಚರಿಕೆಗಾರನು ಮಾತ್ರವಾಗಿರುವೆನು'.

فَلَمَّا رَأَوْهُ زُلْفَةً سِيٓـَٔتْ وُجُوهُ ٱلَّذِينَ
كَفَرُوا۟ وَقِيلَ هَٰذَا ٱلَّذِى كُنتُم بِهِۦ
تَدَّعُونَ ﴿٢٧﴾

**27.** ಅವರು ಅದನ್ನು (ಎಚ್ಚರಿಕೆ ನೀಡಲಾದ ವಿಷಯವನ್ನು) ಸಮೀಪದಲ್ಲಿರುವುದಾಗಿ ಕಾಣುವಾಗ ಸತ್ಯನಿಷೇಧಿಗಳ ಮುಖಗಳು ಕಳೆಗುಂದುವುವು. 'ನೀವು ಯಾವುದರ ಬಗ್ಗೆ ವಾದಿಸುತ್ತಿದ್ದಿರೋ ಅದು ಇದೇ ಆಗಿದೆ' ಎಂದು (ಅವರೊಂದಿಗೆ) ಹೇಳಲಾಗುವುದು.

قُلْ أَرَءَيْتُمْ إِنْ أَهْلَكَنِىَ ٱللَّهُ وَمَن مَّعِىَ أَوْ
رَحِمَنَا فَمَن يُجِيرُ ٱلْكَٰفِرِينَ مِنْ عَذَابٍ
أَلِيمٍ ﴿٢٨﴾

**28.** ತಾವು ಹೇಳಿರಿ: 'ನೀವು ಚಿಂತಿಸಿ ನೋಡಿರುವಿರಾ? ನನ್ನನ್ನು ಮತ್ತು ನನ್ನ ಜೊತೆಯಲ್ಲಿರುವವರನ್ನು ಅಲ್ಲಾಹು ನಾಶ ಮಾಡುವುದಾದರೆ ಅಥವಾ ನಮಗೆ ಅವನು ಕರುಣೆ ತೋರಿಸುವುದಾದರೆ ಯಾತನಾಮಯ ಶಿಕ್ಷೆಯಿಂದ ಸತ್ಯನಿಷೇಧಿಗಳನ್ನು ಪಾರು ಮಾಡುವವರು ಯಾರಿರುವರು?'(1)

قُلْ هُوَ ٱلرَّحْمَٰنُ ءَامَنَّا بِهِۦ وَعَلَيْهِ تَوَكَّلْنَا ۖ
فَسَتَعْلَمُونَ مَنْ هُوَ فِى ضَلَٰلٍ مُّبِينٍ ﴿٢٩﴾

**29.** ತಾವು ಹೇಳಿರಿ: 'ಅವನು ಪರಮ ದಯಾಮಯನಾಗಿರುವನು. ನಾವು ಅವನ ಮೇಲೆ ವಿಶ್ವಾಸವಿಟ್ಟಿರುವೆವು. ನಾವು ಅವನ ಮೇಲೆ ಭರವಸೆಯನ್ನಿಟ್ಟಿರುವೆವು. ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವವರು ಯಾರು ಎಂದು ತರುವಾಯ ನೀವು ಅರಿತುಕೊಳ್ಳುವಿರಿ'.

قُلْ أَرَءَيْتُمْ إِنْ أَصْبَحَ مَآؤُكُمْ غَوْرًا
فَمَن يَأْتِيكُم بِمَآءٍ مَّعِينٍ ﴿٣٠﴾

**30.** ತಾವು ಹೇಳಿರಿ: 'ನೀವು ಚಿಂತಿಸಿ ನೋಡಿರುವಿರಾ? ನಿಮ್ಮ ನೀರು ಬತ್ತಿ ಹೋದರೆ ಹರಿಯುವ ಒರತೆ ನೀರನ್ನು ನಿಮಗೆ ತಂದು ಕೊಡುವವರು ಯಾರಿರುವರು?'

---

1 ಅಲ್ಲಾಹು ಇಹಲೋಕದಲ್ಲಿ ಶಿಕ್ಷಿಸುವುದಾದರೆ ಅದರಲ್ಲಿ ತಾವು ಮಾತ್ರವಲ್ಲ ಬದಲಾಗಿ ಪ್ರವಾದಿ(ﷺ)ರವರು ಮತ್ತು ಸತ್ಯವಿಶ್ವಾಸಿಗಳು ಕೂಡ ಭಾಗಿಯಾಗುವರು ಎಂದು ಭಾವಿಸಿ ಸಮಾಧಾನ ಪಟ್ಟಿದ್ದ ಬಹುದೇವಾರಾಧಕರಿಗೆ ಇಲ್ಲಿ ಉತ್ತರ ನೀಡಲಾಗಿದೆ. ಪ್ರವಾದಿ(ﷺ)ರವರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಶಿಕ್ಷಿಸಲಾಗುತ್ತದೋ ಅಥವಾ ರಕ್ಷಿಸಲಾಗುತ್ತದೋ ಎಂಬ ಆಧಾರದ ಮೇಲೆ ಅವಿಶ್ವಾಸಿಗಳ ವಿಧಿನಿಯತಿಯನ್ನು ನಿಶ್ಚಯಿಸಲಾಗುವುದಿಲ್ಲ. ಅವಿಶ್ವಾಸ ಮತ್ತು ಅಧರ್ಮದ ದುಷ್ಫಲದಿಂದ ತಾವು ಹೇಗೆ ಪಾರಾಗಬಹುದು ಎಂದು ಅವರು ಚಿಂತಿಸಬೇಕಾಗಿದೆ.

## ಅಲ್‌ಕಲಮ್ (ಲೇಖನಿ)

## سُورَةُ القَلَمِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 52

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ನೂನ್. ಲೇಖನಿ ಮತ್ತು ಅವರು ಬರೆಯುವುದರ ಮೇಲಾಣೆ.

نٓۚ وَٱلۡقَلَمِ وَمَا يَسۡطُرُونَ ١

2. ತಮ್ಮ ರಬ್‌ನ ಅನುಗ್ರಹದಿಂದಾಗಿ ತಾವು ಒಬ್ಬ ಮತಿಭ್ರಾಂತನಲ್ಲ.

مَآ أَنتَ بِنِعۡمَةِ رَبِّكَ بِمَجۡنُونٖ ٢

3. ಖಂಡಿತವಾಗಿಯೂ ತಮಗೆ ಮುರಿದು ಹೋಗದ ಪ್ರತಿಫಲವಿದೆ.

وَإِنَّ لَكَ لَأَجۡرًا غَيۡرَ مَمۡنُونٖ ٣

4. ಖಂಡಿತವಾಗಿಯೂ ತಾವು ಸರ್ವಶ್ರೇಷ್ಠ ಸ್ವಭಾವದಲ್ಲಿರುವಿರಿ.

وَإِنَّكَ لَعَلَىٰ خُلُقٍ عَظِيمٖ ٤

5. ಆದ್ದರಿಂದ ತರುವಾಯ ತಾವು ಕಾಣುವಿರಿ. ಅವರೂ ಕಾಣುವರು.

فَسَتُبۡصِرُ وَيُبۡصِرُونَ ٥

6. ನಿಮ್ಮ ಪೈಕಿ ಕ್ಷೋಭೆಗೊಳಗಾದವನು ಯಾರೆಂದು.(1)

بِأَييِّكُمُ ٱلۡمَفۡتُونُ ٦

7. ಖಂಡಿತವಾಗಿಯೂ ತಮ್ಮ ರಬ್ ತನ್ನ ಮಾರ್ಗದಿಂದ ಭ್ರಷ್ಟರಾದವರ ಬಗ್ಗೆ ಚೆನ್ನಾಗಿ ಅರಿತಿರುವನು. ಸನ್ಮಾರ್ಗ ಪಡೆದವರ ಕುರಿತೂ ಅವನು ಚೆನ್ನಾಗಿ ಅರಿತಿರುವನು.

إِنَّ رَبَّكَ هُوَ أَعۡلَمُ بِمَن ضَلَّ عَن سَبِيلِهِۦ وَهُوَ أَعۡلَمُ بِٱلۡمُهۡتَدِينَ ٧

8. ಆದ್ದರಿಂದ ತಾವು ಸತ್ಯನಿಷೇಧಿಗಳನ್ನು ಅನುಸರಿಸದಿರಿ.

فَلَا تُطِعِ ٱلۡمُكَذِّبِينَ ٨

9. ತಾವು ಮಣಿಯುವುದಾದರೆ ಅವರೂ ಮಣಿಯುತ್ತಿದ್ದರು ಎಂದು ಅವರು ಆಶಿಸುವರು.(2)

وَدُّواْ لَوۡ تُدۡهِنُ فَيُدۡهِنُونَ ٩

---

1 ಮುಹಮ್ಮದ್(ﷺ)ರವರು ಮಾನಸಿಕವಾದ ಯಾವುದೋ ತೊಂದರೆಯಿರುವ ವ್ಯಕ್ತಿಯೆಂದು ದೂಷಿಸುವವರಿಗೆ ಇಲ್ಲಿ ಉತ್ತರ ನೀಡಲಾಗಿದೆ. ಇಪ್ಪತ್ತಮೂರು ವರ್ಷಗಳ ಕಾಲ ಸಂಪೂರ್ಣ ಮನಸ್ಸಾನಿಧ್ಯದೊಂದಿಗೆ ಸಂದೇಶ ಪ್ರಚಾರದ ದೌತ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ಪ್ರವಾದಿ(ﷺ)ರವರು ಅನ್ಯೂನವಾದ ಮತ್ತು ವೈಕಲ್ಯರಹಿತ ಮನಸ್ಸಿನ ಒಡೆಯರಾಗಿದ್ದರೆಂಬುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ.

2 ಇಸ್ಲಾಮಿನ ವಿಶ್ವಾಸಾಚಾರಗಳನ್ನು ಕಟ್ಟುನಿಟ್ಟಾಗಿ ಪ್ರಚಾರ ಮಾಡುವ ಬದಲು ಜಾಹಿಲಿಯ್ಯತ್ತಿನ ಕೆಲವು

وَلَا تُطِعۡ كُلَّ حَلَّافٖ مَّهِينٍ ﴿١٠﴾ هَمَّازٖ مَّشَّآءِۭ بِنَمِيمٖ ﴿١١﴾ مَّنَّاعٖ لِّلۡخَيۡرِ مُعۡتَدٍ أَثِيمٍ ﴿١٢﴾ عُتُلِّۭ بَعۡدَ ذَٰلِكَ زَنِيمٍ ﴿١٣﴾

**10–13.** ಅತ್ಯಧಿಕ ಆಣೆ ಹಾಕುವವನೂ,[1] ನೀಚನೂ, ಚುಚ್ಚಿ ಮಾತನಾಡುವವನೂ, ಚಾಡಿಮಾತಿನೊಂದಿಗೆ ನಡೆಯುವವನೂ, ಒಳಿತಿಗೆ ಅಡ್ಡಿಪಡಿಸುವವನೂ, ಅತಿಕ್ರಮಿಯೂ, ಮಹಾಪಾಪಿಯೂ, ಕ್ರೂರಿಯೂ ಮಾತ್ರವಲ್ಲದೆ ಕುಲಗೆಟ್ಟವನೂ ಆಗಿರುವ ಯಾರನ್ನೂ ತಾವು ಅನುಸರಿಸದಿರಿ.

أَن كَانَ ذَا مَالٖ وَبَنِينَ ﴿١٤﴾

**14.** ಅವನು ಸಂಪತ್ತು ಮತ್ತು ಸಂತಾನವುಳ್ಳವನಾಗಿರುವನು ಎಂಬ ಕಾರಣದಿಂದ (ಅವನು ಅಂತಹ ನಿಲುವನ್ನು ಹೊಂದಿರುವನು).

إِذَا تُتۡلَىٰ عَلَيۡهِ ءَايَٰتُنَا قَالَ أَسَٰطِيرُ ٱلۡأَوَّلِينَ ﴿١٥﴾

**15.** ಅವನಿಗೆ ನಮ್ಮ ದೃಷ್ಟಾಂತಗಳನ್ನು ಓದಿಕೊಡಲಾದರೆ 'ಪೂರ್ವಿಕರ ಪುರಾಣಗಳು' ಎನ್ನುವನು.

سَنَسِمُهُۥ عَلَى ٱلۡخُرۡطُومِ ﴿١٦﴾

**16.** ತರುವಾಯ ನಾವು ಅವನಿಗೆ (ಅವನ) ಸೊಂಡಿಲಿನ ಮೇಲೆ ಬರೆ ಹಾಕುವೆವು.[2]

إِنَّا بَلَوۡنَٰهُمۡ كَمَا بَلَوۡنَآ أَصۡحَٰبَ ٱلۡجَنَّةِ إِذۡ أَقۡسَمُواْ لَيَصۡرِمُنَّهَا مُصۡبِحِينَ ﴿١٧﴾

**17.** ನಾವು ಆ ತೋಟದವರನ್ನು ಪರೀಕ್ಷಿಸಿದಂತೆ ಖಂಡಿತವಾಗಿಯೂ ಅವರನ್ನೂ ಪರೀಕ್ಷಿಸಿರುವೆವು. ಪ್ರಭಾತ ವೇಳೆಯಲ್ಲಿ ಆ ತೋಟದ ಫಲಗಳನ್ನು ಕೀಳುವೆವೆಂದು ಅವರು ಆಣೆ ಹಾಕಿ ಹೇಳಿದ ಸಂದರ್ಭ.

وَلَا يَسۡتَثۡنُونَ ﴿١٨﴾

**18.** ಅವರು (ಏನನ್ನೂ) ಹೊರತುಪಡಿಸಿ ಹೇಳಿರಲಿಲ್ಲ.[3]

---

ಆಚಾರಗಳೊಂದಿಗೆ ಹೊಂದಾಣಿಕೆ ಮಾಡಲು ಪ್ರವಾದಿ(ﷺ)ರವರು ಸನ್ನದ್ಧರಾದರೆ ಅವರೊಂದಿಗೆ ಹೊಂದಾಣಿಕೆ ಮಾಡಲು ಅರಬ್ ಬಹುದೇವ ವಿಶ್ವಾಸಿಗಳು ಸಿದ್ಧರಿದ್ದರು.

1 ಕೆಲವು ಸುಳ್ಳರಿದ್ದಾರೆ. ಸಾಮಾನ್ಯವಾಗಿ ಅವರ ಮಾತಿಗೆ ಯಾರೂ ಬೆಲೆ ಕೊಡುವುದಿಲ್ಲ. ಅದು ಅವರಿಗೂ ಚೆನ್ನಾಗಿ ಗೊತ್ತಿದೆ. ಆದ್ದರಿಂದ ಅವರು ಏನೇ ಹೇಳುವಾಗಲೂ ಇತರರು ನಂಬಬೇಕೆಂಬ ಕಾರಣದಿಂದ ಅತ್ಯಧಿಕವಾಗಿ ಆಣೆ ಹಾಕುತ್ತಾರೆ.

2 ಪ್ರವಾದಿ(ﷺ)ರವರನ್ನು ಮತ್ತು ಸತ್ಯವಿಶ್ವಾಸಿಗಳನ್ನು ನಿರ್ನಾಮ ಮಾಡುವ ಹೀನ ಪ್ರಯತ್ನಗಳಿಗೆ ನಾಯಕತ್ವ ವಹಿಸಿದ್ದ ವಲೀದ್ ಇಬ್ನ್ ಮುಗೀರ ಎಂಬವನ ಕುರಿತು ಈ ಸೂಕ್ತಿಗಳು ಅವತೀರ್ಣಗೊಂಡಿವೆಯಾದರೂ ಪ್ರಸ್ತುತ ದುರ್ಗುಣಗಳನ್ನು ಹೊಂದಿರುವ ಎಲ್ಲರಿಗೂ ಇವು ಅನ್ವಯಿಸುತ್ತವೆ.

3 ಅವರು ಫಲಗಳನ್ನು ಕೀಳಲು ನಿರ್ಧರಿಸಿದಾಗ ಇನ್‌ಶಾ ಅಲ್ಲಾಹ್ (ಅಲ್ಲಾಹು ಇಚ್ಛಿಸಿದರೆ) ಎಂದು ಹೇಳಲಿಲ್ಲ

فَطَافَ عَلَيۡهَا طَآئِفٞ مِّن رَّبِّكَ وَهُمۡ نَآئِمُونَ ١٩

**19.** ಆಗ ಅವರು ನಿದ್ರಿಸುತ್ತಿರುವಾಗ ತಮ್ಮ ರಬ್‌ನ ವತಿಯ ಒಂದು ಶಿಕ್ಷೆಯು ಆ ತೋಟದ ಮೇಲೆರಗಿತು.

فَأَصۡبَحَتۡ كَٱلصَّرِيمِ ٢٠

**20.** ಆಗ ಅದು ಕಟಾವು ಮಾಡಲಾದುದರಂತೆ ಆಗಿಬಿಟ್ಟಿತು.

فَتَنَادَوۡاْ مُصۡبِحِينَ ٢١

**21.** ತರುವಾಯ ಪ್ರಭಾತವಾದಾಗ ಅವರು ಪರಸ್ಪರ ಕರೆದು ಹೇಳಿದರು:

أَنِ ٱغۡدُواْ عَلَىٰ حَرۡثِكُمۡ إِن كُنتُمۡ صَٰرِمِينَ ٢٢

**22.** 'ನೀವು ಫಲ ಕೀಳಲು ತೆರಳುವುದಾದರೆ ಪ್ರಭಾತದಲ್ಲೇ ನಿಮ್ಮ ಕೃಷಿಸ್ಥಳಕ್ಕೆ ಹೊರಡಿರಿ'.

فَٱنطَلَقُواْ وَهُمۡ يَتَخَٰفَتُونَ ٢٣ أَن لَّا يَدۡخُلَنَّهَا ٱلۡيَوۡمَ عَلَيۡكُم مِّسۡكِينٞ ٢٤

**23–24.** 'ಇಂದು ಆ ತೋಟದಲ್ಲಿ ನಿಮ್ಮ ಬಳಿಗೆ ಯಾವುದೇ ಬಡವನೂ ಪ್ರವೇಶಿಸುವಂತಾಗಲು ಅನುವು ಮಾಡಿ ಕೊಡದಿರಿ' ಎಂದು ಅವರು ಪರಸ್ಪರ ಪಿಸುಗುಡುತ್ತಾ ತೆರಳಿದರು.

وَغَدَوۡاْ عَلَىٰ حَرۡدٖ قَٰدِرِينَ ٢٥

**25.** (ಬಡವರಿಗೆ) ತಡೆಯೊಡ್ಡಲು ಸಾಮರ್ಥ್ಯವುಳ್ಳವರಾಗಿಯೇ ಅವರು ಪ್ರಭಾತದಲ್ಲಿ ಹೊರಟರು.

فَلَمَّا رَأَوۡهَا قَالُوٓاْ إِنَّا لَضَآلُّونَ ٢٦

**26.** ಹೀಗೆ ಅದನ್ನು (ತೋಟವನ್ನು) ಕಂಡಾಗ ಅವರು ಹೇಳಿದರು: 'ಖಂಡಿತವಾಗಿಯೂ ನಾವು ಪ್ರಮಾದ ಸಂಭವಿಸಿದವರಾಗಿರುವೆವು.

بَلۡ نَحۡنُ مَحۡرُومُونَ ٢٧

**27.** ಅಲ್ಲ, ನಾವು ನಷ್ಟ ಬಾಧಿಸಿದವರಾಗಿರುವೆವು'.

قَالَ أَوۡسَطُهُمۡ أَلَمۡ أَقُل لَّكُمۡ لَوۡلَا تُسَبِّحُونَ ٢٨

**28.** ಅವರ ಪೈಕಿ ಮಧ್ಯಮ ನಿಲುವನ್ನು ಹೊಂದಿದ್ದ ಒಬ್ಬ ವ್ಯಕ್ತಿ ಹೇಳಿದನು: 'ನೀವು ಅಲ್ಲಾಹುವಿನ ಪಾವಿತ್ರ್ಯವನ್ನು ಕೊಂಡಾಡಲಿಲ್ಲವೇಕೆ ಎಂದು ನಾನು ನಿಮ್ಮೊಂದಿಗೆ ಹೇಳಿರಲಿಲ್ಲವೇ?'

قَالُواْ سُبۡحَٰنَ رَبِّنَآ إِنَّا كُنَّا ظَٰلِمِينَ ٢٩

**29.** ಅವರು ಹೇಳಿದರು: 'ನಮ್ಮ ರಬ್ ಪರಮ ಪಾವನನು. ಖಂಡಿತವಾಗಿಯೂ ನಾವು ಅಕ್ರಮಿಗಳಾಗಿರುವೆವು'.

---

ಎಂದು 'ವಲಾ ಯಸ್ತಸ್ನೂನ್' ಎಂಬ ಪದಕ್ಕೆ ಹೆಚ್ಚಿನ ವ್ಯಾಖ್ಯಾನಕಾರರು ಅರ್ಥ ನೀಡಿದ್ದಾರೆ. ಬಡವರಿಗಾಗಿ ಅವರು ಏನನ್ನೂ ತೆಗೆದಿಡಲು ನಿರ್ಧರಿಸಲಿಲ್ಲ ಎಂದು ಇದಕ್ಕೆ ಕೆಲವು ವ್ಯಾಖ್ಯಾನಕಾರರು ಅರ್ಥ ನೀಡಿದ್ದಾರೆ.

30. ಆಗ ಅವರು ಪರಸ್ಪರ ದೋಷಾರೋಪಣೆ ಮಾಡುತ್ತಾ ಅವರಲ್ಲಿ ಕೆಲವರು ಕೆಲವರ ವಿರುದ್ಧ ತಿರುಗಿ ನಿಂತರು.

فَأَقْبَلَ بَعْضُهُمْ عَلَىٰ بَعْضٍ يَتَلَوَمُونَ ٣٠

31. ಅವರು ಹೇಳಿದರು: 'ಅಯ್ಯೋ! ನಮ್ಮ ದುರ್ಗತಿಯೇ! ಖಂಡಿತವಾಗಿಯೂ ನಾವು ಅತಿಕ್ರಮಿಗಳಾಗಿರುವೆವು.

قَالُوا۟ يَـٰوَيْلَنَآ إِنَّا كُنَّا طَـٰغِينَ ٣١

32. ನಮ್ಮ ರಬ್ ನಮಗೆ ಅದಕ್ಕಿಂತಲೂ ಉತ್ತಮವಾಗಿರುವುದನ್ನು ಬದಲಿಯಾಗಿ ಕೊಡಬಹುದು. ಖಂಡಿತವಾಗಿಯೂ ನಾವು ನಮ್ಮ ರಬ್‌ನೆಡೆಗೆ ಆಸೆಯಿಂದ ತೆರಳುವವರಾಗಿರುವೆವು'.

عَسَىٰ رَبُّنَآ أَن يُبْدِلَنَا خَيْرًا مِّنْهَآ إِنَّآ إِلَىٰ رَبِّنَا رَٰغِبُونَ ٣٢

33. ಹೀಗಿದೆ ಶಿಕ್ಷೆ! ಪರಲೋಕ ಶಿಕ್ಷೆಯಂತೂ ಹೆಚ್ಚು ಗಂಭೀರವಾದುದಾಗಿದೆ. ಅವರು ಅರಿತಿರುತ್ತಿದ್ದರೆ!

كَذَٰلِكَ ٱلْعَذَابُ ۖ وَلَعَذَابُ ٱلْـَٔاخِرَةِ أَكْبَرُ ۚ لَوْ كَانُوا۟ يَعْلَمُونَ ٣٣

34. ಖಂಡಿತವಾಗಿಯೂ ಭಯಭಕ್ತಿಪಾಲಿಸುವವರಿಗೆ ಅವರ ರಬ್‌ನ ಬಳಿ ಅನುಗ್ರಹಗಳ ಸ್ವರ್ಗೋದ್ಯಾನಗಳಿವೆ.

إِنَّ لِلْمُتَّقِينَ عِندَ رَبِّهِمْ جَنَّـٰتِ ٱلنَّعِيمِ ٣٤

35. ಹಾಗಾದರೆ ನಾವು ಮುಸ್ಲಿಮರನ್ನು ಅಪರಾಧಿಗಳಂತೆ ಮಾಡುವೆವೇ?

أَفَنَجْعَلُ ٱلْمُسْلِمِينَ كَٱلْمُجْرِمِينَ ٣٥

36. ನಿಮಗೇನಾಗಿದೆ? ನೀವು ಹೇಗೆ ತೀರ್ಪು ನೀಡುತ್ತಿರುವಿರಿ?

مَا لَكُمْ كَيْفَ تَحْكُمُونَ ٣٦

37. ಅಥವಾ ನಿಮಗೆ ಯಾವುದಾದರೂ ಗ್ರಂಥವು ಲಭಿಸಿ ನೀವು ಅದನ್ನು ಅಧ್ಯಯನ ಮಾಡುತ್ತಿರುವಿರಾ?

أَمْ لَكُمْ كِتَـٰبٌ فِيهِ تَدْرُسُونَ ٣٧

38. ನೀವು (ಯಥೇಷ್ಟವಾಗಿ) ಆರಿಸುವ ವಿಷಯಗಳು ನಿಮಗೆ ಅದರಲ್ಲಿ (ಆ ಗ್ರಂಥದಲ್ಲಿ) ಬಂದಿವೆಯೇ?

إِنَّ لَكُمْ فِيهِ لَمَا تَخَيَّرُونَ ٣٨

39. ಅಥವಾ ಪುನರುತ್ಥಾನ ದಿನದವರೆಗೆ ತಲುಪುವಂತಹ, 'ನೀವು ತೀರ್ಪು ನೀಡುವುದೆಲ್ಲವೂ ನಿಮಗಿರುವುದು' ಎಂಬುದಕ್ಕಿರುವ ಯಾವುದಾದರೂ

أَمْ لَكُمْ أَيْمَـٰنٌ عَلَيْنَا بَـٰلِغَةٌ إِلَىٰ يَوْمِ ٱلْقِيَـٰمَةِ ۙ إِنَّ لَكُمْ لَمَا تَحْكُمُونَ ٣٩

ಕರಾರುಗಳು ನಾವು ನಿಮ್ಮೊಂದಿಗೆ ಹೊಣೆ ವಹಿಸಿಕೊಂಡಿರುವುದಾಗಿ ಇವೆಯೇ?

سَلۡهُمۡ أَيُّهُم بِذَٰلِكَ زَعِيمٌ ﴿٤٠﴾

40. ಅವರ ಪೈಕಿ ಆ ವಿಷಯಕ್ಕೆ ಹೊಣೆ ಹೊರಿಸಲ್ಪಡುವವನಾಗಿ ಯಾರಿರುವನು ಎಂದು ಅವರೊಂದಿಗೆ ತಾವು ಕೇಳಿ ನೋಡಿರಿ.

أَمۡ لَهُمۡ شُرَكَآءُ فَلۡيَأۡتُواْ بِشُرَكَآئِهِمۡ إِن كَانُواْ صَٰدِقِينَ ﴿٤١﴾

41. ಅಥವಾ ಅವರಿಗೆ ಯಾರಾದರೂ ಸಹಭಾಗಿಗಳಿರುವರೇ? ಹಾಗಾದರೆ ಆ ಸಹಭಾಗಿಗಳನ್ನು ಅವರು ಕರೆತರಲಿ; ಅವರು ಸತ್ಯಸಂಧರಾಗಿದ್ದರೆ.

يَوۡمَ يُكۡشَفُ عَن سَاقٖ وَيُدۡعَوۡنَ إِلَى ٱلسُّجُودِ فَلَا يَسۡتَطِيعُونَ ﴿٤٢﴾

42. ಕಣಕಾಲನ್ನು ಪ್ರದರ್ಶಿಸಲಾಗುವ[1] (ಭೀಕರವಾದ) ಒಂದು ದಿನವನ್ನು ಸ್ಮರಿಸಿರಿ! (ಅಂದು) ಸುಜೂದ್ ಮಾಡಲು ಅವರನ್ನು ಕರೆಯಲಾಗುವುದು. ಆದರೆ ಅವರಿಗೆ ಅದು ಸಾಧ್ಯವಾಗಲಾರದು.

خَٰشِعَةً أَبۡصَٰرُهُمۡ تَرۡهَقُهُمۡ ذِلَّةٞۖ وَقَدۡ كَانُواْ يُدۡعَوۡنَ إِلَى ٱلسُّجُودِ وَهُمۡ سَٰلِمُونَ ﴿٤٣﴾

43. ಅವರ ಕಣ್ಣುಗಳು ಕೆಳಕ್ಕೆ ತಗ್ಗಿರುವುವು. ಅಪಮಾನವು ಅವರನ್ನು ಆವರಿಸಿಕೊಂಡಿರುವುದು. ಅವರು ಸುರಕ್ಷಿತರಾಗಿದ್ದ ಸಮಯದಲ್ಲಿ ಸುಜೂದ್ ಮಾಡುವುದಕ್ಕಾಗಿ ಅವರನ್ನು ಕರೆಯಲಾಗಿತ್ತು.[2]

فَذَرۡنِي وَمَن يُكَذِّبُ بِهَٰذَا ٱلۡحَدِيثِۖ سَنَسۡتَدۡرِجُهُم مِّنۡ حَيۡثُ لَا يَعۡلَمُونَ ﴿٤٤﴾

44. ಆದ್ದರಿಂದ ತಾವು ನನ್ನನ್ನೂ, ಈ ವೃತ್ತಾಂತವನ್ನು ನಿಷೇಧಿಸುವವರನ್ನೂ ಬಿಟ್ಟುಬಿಡಿರಿ.[3] ಅವರು ಅರಿತಿರದ ರೀತಿಯಲ್ಲಿ ನಾವು ಅವರನ್ನು ಹಂತ ಹಂತವಾಗಿ ಹಿಡಿಯುವೆವು.

---

1 ಅಂತ್ಯದಿನದಂದು ಅಲ್ಲಾಹು ತನ್ನ ಕಣಕಾಲನ್ನು ಪ್ರದರ್ಶಿಸುವನು. ಆಗ ಸತ್ಯವಿಶ್ವಾಸಿಗಳು ಅವನಿಗೆ ಸುಜೂದ್ ಮಾಡುವರು. ಆದರೆ ಇಹಲೋಕದಲ್ಲಿ ಜನಮನ್ನಣೆಗಾಗಿ ಅಥವಾ ತೋರಿಕೆಗಾಗಿ ಸುಜೂದ್ ಮಾಡಿದವರಿಗೆ ಆಗ ಸುಜೂದ್ ಮಾಡಲು ಸಾಧ್ಯವಾಗದು. ಬುಖಾರಿ ಮತ್ತು ಮುಸ್ಲಿಮ್ ಉದ್ಧರಿಸಿದ ಹದೀಸಿನಲ್ಲಿ ಇದನ್ನು ಸ್ಪಷ್ಟವಾಗಿ ಹೇಳಲಾಗಿದೆ. ಆದರೆ ಅಲ್ಲಾಹುವಿನ ಕೈ, ಅಲ್ಲಾಹುವಿನ ಕಾಲು ಮೊದಲಾದ ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ದೃಢಪಟ್ಟಿರುವ ವಿಶೇಷಣಗಳನ್ನು ಯಾವುದೇ ಹೋಲಿಕೆಯಾಗಲಿ, ವ್ಯಾಖ್ಯಾನವಾಗಲಿ ಇಲ್ಲದೆ ಅದು ಹೇಗೆ ಬಂದಿದೆಯೋ ಹಾಗೆಯೇ ಅಂಗೀಕರಿಸಿ ಅದರಲ್ಲಿ ವಿಶ್ವಾಸವಿಡಬೇಕು. ಅದರ ರೂಪವು ನಮಗೆ ಅಜ್ಞಾತವಾಗಿದೆ.

2 ಇಹಲೋಕದಲ್ಲಿ ಅವರು ಸ್ವತಂತ್ರರು ಮತ್ತು ಆರೋಗ್ಯವಂತರಾಗಿದ್ದಾಗ ಅಲ್ಲಾಹುವಿಗೆ ಸುಜೂದ್ ಮಾಡಲು ಆದೇಶಿಸಲಾದ ಸಂದರ್ಭದಲ್ಲಿ ಅವರು ಧಿಕ್ಕರಿಸಿದ್ದರು.

3 ಸತ್ಯನಿಷೇಧಿಗಳ ಸ್ವಚ್ಛಂದತೆಯನ್ನು ಕಂಡು ಕಳವಳಪಡದಿರಿ. ಸೂಕ್ತ ರೀತಿಯಲ್ಲಿ ನಾನೇ ಅವರನ್ನು ನೋಡಿಕೊಳ್ಳುವೆನು ಎಂದು ಪ್ರವಾದಿ(ﷺ)ರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಅಲ್ಲಾಹು ಸಂತೈಸುತ್ತಿದ್ದಾನೆ.

45. ನಾನು ಅವರಿಗೆ ಕಾಲಾವಕಾಶವನ್ನು ನೀಡುವೆನು. ಖಂಡಿತವಾಗಿಯೂ ನನ್ನ ತಂತ್ರವು ಬಲಿಷ್ಠವಾಗಿದೆ.

وَأُمۡلِي لَهُمۡۚ إِنَّ كَيۡدِي مَتِينٌ ﴿٤٥﴾

46. ಅಥವಾ ತಾವು ಅವರೊಂದಿಗೆ ಯಾವುದಾದರೂ ಪ್ರತಿಫಲವನ್ನು ಬೇಡಿ ಅವರು ಸಾಲಬಾಧ್ಯತೆಯ ನಿಮಿತ್ತ ಇಕ್ಕಟ್ಟಿನಲ್ಲಿರುವರೇ?

أَمۡ تَسۡـَٔلُهُمۡ أَجۡرٗا فَهُم مِّن مَّغۡرَمٖ مُّثۡقَلُونَ ﴿٤٦﴾

47. ಅಥವಾ ಅವರ ಬಳಿ ಅಗೋಚರ ಜ್ಞಾನವಿದ್ದು ಅವರು ಬರೆದಿಡುತ್ತಿರುವರೇ?[1]

أَمۡ عِندَهُمُ ٱلۡغَيۡبُ فَهُمۡ يَكۡتُبُونَ ﴿٤٧﴾

48. ಆದ್ದರಿಂದ ತಾವು ತಮ್ಮ ರಬ್‌ನ ತೀರ್ಪನ್ನು ಕಾಯುತ್ತಾ ಸಹನೆ ವಹಿಸಿರಿ. ತಾವು ಮತ್ಸ್ಯದವನಂತೆ (ಪ್ರವಾದಿ ಯೂನುಸ್‌ರಂತೆ) ಆಗದಿರಿ. ಆತ ತೀವ್ರ ಸಂಕಟದಿಂದ ಕರೆದು ಪ್ರಾರ್ಥಿಸಿದ ಸಂದರ್ಭ.

فَٱصۡبِرۡ لِحُكۡمِ رَبِّكَ وَلَا تَكُن كَصَاحِبِ ٱلۡحُوتِ إِذۡ نَادَىٰ وَهُوَ مَكۡظُومٞ ﴿٤٨﴾

49. ಅವರ ಪ್ರಭುವಿನ ವತಿಯ ಅನುಗ್ರಹವು ಆತನನ್ನು ಮರಳಿ ಪಡೆಯದಿರುತ್ತಿದ್ದರೆ ಆತ ಆ ಪಾಳು ಭೂಮಿಯಲ್ಲಿ ಆಕ್ಷೇಪಾರ್ಹನಾಗಿ ಹೊರದಬ್ಬಲ್ಪಡುತ್ತಿದ್ದರು.

لَّوۡلَآ أَن تَدَٰرَكَهُۥ نِعۡمَةٞ مِّن رَّبِّهِۦ لَنُبِذَ بِٱلۡعَرَآءِ وَهُوَ مَذۡمُومٞ ﴿٤٩﴾

50. ಆಗ ಅವರ ರಬ್ ಆತನನ್ನು ಆರಿಸಿದನು ಮತ್ತು ಆತನನ್ನು ಸಜ್ಜನರಲ್ಲಿ ಸೇರಿಸಿದನು.

فَٱجۡتَبَٰهُ رَبُّهُۥ فَجَعَلَهُۥ مِنَ ٱلصَّٰلِحِينَ ﴿٥٠﴾

51. ಸತ್ಯನಿಷೇಧಿಗಳು ಈ ಉಪದೇಶವನ್ನು ಆಲಿಸುವಾಗ ಅವರ ಕಣ್ಣುಗಳಿಂದ ನೋಡಿ ತಾವು ಮುಗ್ಗರಿಸಿ ಬೀಳುವಂತಾಗುವವರೇ ಆಗಿರುವಿರಿ.[2] 'ಖಂಡಿತವಾಗಿಯೂ ಇವನೊಬ್ಬ ಮತಿಭ್ರಾಂತನೇ ಆಗಿರುವನು' ಎಂದು ಅವರು ಹೇಳುವರು.

وَإِن يَكَادُ ٱلَّذِينَ كَفَرُواْ لَيُزۡلِقُونَكَ بِأَبۡصَٰرِهِمۡ لَمَّا سَمِعُواْ ٱلذِّكۡرَ وَيَقُولُونَ إِنَّهُۥ لَمَجۡنُونٞ ﴿٥١﴾

52. ಇದು ಸರ್ವಲೋಕದವರಿಗಿರುವ ಒಂದು ಉಪದೇಶವಲ್ಲದೆ ಇನ್ನೇನೂ ಅಲ್ಲ.

وَمَا هُوَ إِلَّا ذِكۡرٞ لِّلۡعَٰلَمِينَ ﴿٥٢﴾

---

1 ಅಗೋಚರ ಜ್ಞಾನಕ್ಕೆ ಸಂಬಂಧಿಸಿದಂತೆ ಬಹುದೇವಾರಾಧಕರ ಬಳಿ ಯಾವುದಾದರೂ ಆಧಾರ ಪ್ರಮಾಣವಿದೆಯೇ ಎಂದರ್ಥ.

2 ತಾತ್ಸಾರ ಮತ್ತು ಮೂದಲಿಕೆಯ ನೋಟದ ಮೂಲಕ ಅವರು ಪ್ರವಾದಿ(ﷺ)ರವರನ್ನು ಹಿಂದೆ ಸರಿಯುವಂತೆ ಮಾಡಲು ಮತ್ತು ಕರ್ತವ್ಯ ನಿರ್ವಹಣೆಯನ್ನು ಅಸ್ತವ್ಯಸ್ತಗೊಳಿಸಲು ಖಂಡಿತವಾಗಿಯೂ ಪ್ರಯತ್ನಿಸುವರು ಎಂದರ್ಥ.

## ಅಲ್‌ಹಾಕ್ಕಃ (ಸತ್ಯ ಘಟನೆ)

## سُورَةُ الحَاقَّةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 52

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-3.** ಆ .ಸತ್ಯ ಘಟನೆ. ಏನದು ಆ ಸತ್ಯ ಘಟನೆ? ಆ ಸತ್ಯ ಘಟನೆ ಏನೆಂದು ತಮಗೇನು ಗೊತ್ತು?

ٱلۡحَآقَّةُ ١ مَا ٱلۡحَآقَّةُ ٢ وَمَآ أَدۡرَىٰكَ مَا ٱلۡحَآقَّةُ ٣

**4.** ಸಮೂದ್ ಜನಾಂಗ ಮತ್ತು ಆದ್ ಜನಾಂಗವು ಆ ಭೀಕರ ಘಟನೆಯನ್ನು ನಿಷೇಧಿಸಿದರು.

كَذَّبَتۡ ثَمُودُ وَعَادُۢ بِٱلۡقَارِعَةِ ٤

**5.** ಆದರೆ ಸಮೂದ್ ಜನಾಂಗವು ಅತಿ ಭಯಾನಕವಾದ ಒಂದು ಶಿಕ್ಷೆಯ ಮೂಲಕ ನಾಶ ಮಾಡಲಾಯಿತು.

فَأَمَّا ثَمُودُ فَأُهۡلِكُواْ بِٱلطَّاغِيَةِ ٥

**6.** ಆದ್ ಜನಾಂಗವು ಬಲವಾಗಿ ಅಪ್ಪಳಿಸುವ ಒಂದು ಉಗ್ರ ಬಿರುಗಾಳಿಯ ಮೂಲಕ ನಾಶ ಮಾಡಲ್ಪಟ್ಟಿತು.

وَأَمَّا عَادٞ فَأُهۡلِكُواْ بِرِيحٖ صَرۡصَرٍ عَاتِيَةٖ ٦

**7.** ನಿರಂತರ ಏಳು ರಾತ್ರಿ ಮತ್ತು ಎಂಟು ಹಗಲುಗಳ ಕಾಲ ಅವನು ಅದನ್ನು (ಗಾಳಿಯನ್ನು) ಅವರ ಮೇಲೆ ತಿರುಗಿಸಿದನು. ಆಗ ಬುಡಸಮೇತ ಉರುಳಿದ ಖರ್ಜೂರದ ಮರಗಳ ಕಾಂಡಗಳಂತೆ ಜನರು ಆ ಗಾಳಿಯಲ್ಲಿ ಮಗುಚಿ ಬಿದ್ದಿರುವುದನ್ನು ತಾವು ಕಾಣುವಿರಿ.

سَخَّرَهَا عَلَيۡهِمۡ سَبۡعَ لَيَالٖ وَثَمَٰنِيَةَ أَيَّامٍ حُسُومٗاۖ فَتَرَى ٱلۡقَوۡمَ فِيهَا صَرۡعَىٰ كَأَنَّهُمۡ أَعۡجَازُ نَخۡلٍ خَاوِيَةٖ ٧

**8.** ಅವರ ಅವಶೇಷವಾಗಿರುವ ಏನನ್ನಾದರೂ ತಾವು ಕಾಣುತ್ತಿರುವಿರಾ?

فَهَلۡ تَرَىٰ لَهُم مِّنۢ بَاقِيَةٖ ٨

**9.** ಫಿರ್‌ಔನ್, ಅವನಿಗಿಂತ ಮುಂಚಿನವರು, ಮತ್ತು ಬುಡಮೇಲಾಗಿ ಹೋದ ಪ್ರದೇಶಗಳು[1] ಪಾಪಕೃತ್ಯದೊಂದಿಗೆ ಬಂದರು.

وَجَآءَ فِرۡعَوۡنُ وَمَن قَبۡلَهُۥ وَٱلۡمُؤۡتَفِكَٰتُ بِٱلۡخَاطِئَةِ ٩

1 ಲೂತ್ (عَلَيْهِ السَّلَامُ)ರವರ ಜನತೆ ವಾಸಿಸುತ್ತಿದ್ದ ಸ್ಥಳ.

**10.** ಅವರು ತಮ್ಮ ರಬ್‌ನ ಸಂದೇಶವಾಹಕರನ್ನು ಧಿಕ್ಕರಿಸಿದರು. ಆಗ ಅವನು ಅವರನ್ನು ಬಲಿಷ್ಠವಾದ ಒಂದು ಹಿಡಿತದೊಂದಿಗೆ ಹಿಡಿದನು.

فَعَصَوْا۟ رَسُولَ رَبِّهِمْ فَأَخَذَهُمْ أَخْذَةً رَّابِيَةً ١٠

**11.** ಖಂಡಿತವಾಗಿಯೂ ನೀರು ಹದ್ದುಮೀರಿದ ಸಂದರ್ಭದಲ್ಲಿ ನಾವು ನಿಮ್ಮನ್ನು ಹಡಗಿನಲ್ಲಿ ಒಯ್ದು ರಕ್ಷಿಸಿದೆವು.[1]

إِنَّا لَمَّا طَغَا ٱلْمَآءُ حَمَلْنَٰكُمْ فِى ٱلْجَارِيَةِ ١١

**12.** ನಾವು ಅದನ್ನು ನಿಮಗೊಂದು ಸ್ಮರಣೆಯನ್ನಾಗಿ ಮಾಡುವ ಸಲುವಾಗಿ ಮತ್ತು ಗಮನವಿಟ್ಟು ಗ್ರಹಿಸುವ ಕಿವಿಗಳು ಕಿವಿಗೊಟ್ಟು ಆಲಿಸುವ ಸಲುವಾಗಿ.

لِنَجْعَلَهَا لَكُمْ تَذْكِرَةً وَتَعِيَهَآ أُذُنٌ وَٰعِيَةٌ ١٢

**13.** ಕಹಳೆಯಲ್ಲಿ ಒಂದು ಊದುವಿಕೆಯನ್ನು ಊದಲಾದಾಗ.

فَإِذَا نُفِخَ فِى ٱلصُّورِ نَفْخَةٌ وَٰحِدَةٌ ١٣

**14.** ಭೂಮಿ ಮತ್ತು ಪರ್ವತಗಳು ಎತ್ತಲ್ಪಟ್ಟು ತರುವಾಯ ಅವೆರಡನ್ನೂ ಒಂದೇ ಹೊಡೆತಕ್ಕೆ ಪುಡಿಗೈಯಲಾಗುವಾಗ.

وَحُمِلَتِ ٱلْأَرْضُ وَٱلْجِبَالُ فَدُكَّتَا دَكَّةً وَٰحِدَةً ١٤

**15.** ಆ ದಿನದಂದು ಆ ಘಟನೆಯು ಸಂಭವಿಸುವುದು.

فَيَوْمَئِذٍ وَقَعَتِ ٱلْوَاقِعَةُ ١٥

**16.** ಆಕಾಶವು ಒಡೆದು ಹೋಗುವುದು. ಅಂದು ಅದು ಅತಿ ಬಲಹೀನವಾಗಿರುವುದು.

وَٱنشَقَّتِ ٱلسَّمَآءُ فَهِىَ يَوْمَئِذٍ وَاهِيَةٌ ١٦

**17.** ಮಲಕ್‌ಗಳು ಅದರ ನಾನಾ ಭಾಗಗಳಲ್ಲಿರುವರು. ಅಂದು ತಮ್ಮ ರಬ್‌ನ ಸಿಂಹಾಸನವನ್ನು ಅವರ ಮೇಲ್ಭಾಗದಲ್ಲಿ ಎಂಟು ಮಲಕ್‌ಗಳು ಹೊರುವರು.[2]

وَٱلْمَلَكُ عَلَىٰٓ أَرْجَآئِهَا ۚ وَيَحْمِلُ عَرْشَ رَبِّكَ فَوْقَهُمْ يَوْمَئِذٍ ثَمَٰنِيَةٌ ١٧

**18.** ಅಂದಿನ ದಿನ ನಿಮ್ಮನ್ನು ಪ್ರದರ್ಶಿಸಲಾಗುವುದು. ಯಾವುದೇ ಗೋಪ್ಯ ವಿಷಯವೂ ಸಹ ನಿಮ್ಮಿಂದ ಮರೆಯಾಗದು.[3]

يَوْمَئِذٍ تُعْرَضُونَ لَا تَخْفَىٰ مِنكُمْ خَافِيَةٌ ١٨

---

1 ನೂಹ್(عَلَيْهِ ٱلسَّلَامُ)ರವರ ಕಾಲದಲ್ಲಿ ಸಂಭವಿಸಿದ ಮಹಾಪ್ರಳಯದಲ್ಲಿ ಸತ್ಯವಿಶ್ವಾಸಿಗಳನ್ನು ಅಲ್ಲಾಹು ಹಡಗಿನಲ್ಲಿ ಸಾಗಿಸಿ ರಕ್ಷಿಸಿರುವುದರೆಡೆಗೆ ಸೂಚನೆ.

2 ಪುನರುತ್ಥಾನದಿನದಂದು ಅಲ್ಲಾಹುವಿನ ಸಿಂಹಾಸನವನ್ನು ಎಂಟು ಮಲಕ್‌ಗಳು ಹೊರುವರು ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ. ಎಂಟು ಗುಂಪು ಮಲಕ್‌ಗಳೆಂದು ಇತರ ಕೆಲವರು ವ್ಯಾಖ್ಯಾನಿಸಿದ್ದಾರೆ.

3 ನೀವು ಗೌಪ್ಯವಾಗಿಟ್ಟಿದ್ದ ಮಾತು ಮತ್ತು ಕೃತ್ಯಗಳು ಅಂದು ಅನಾವರಣಗೊಳ್ಳಲಿವೆ ಎಂದರ್ಥ.

19. ಆಗ ಯಾರಿಗೆ ಅವನ ಗ್ರಂಥವನ್ನು ಬಲಗೈಯಲ್ಲಿ ನೀಡಲಾಗುವುದೋ ಅವನು ಹೇಳುವನು: 'ಇಗೋ! ನನ್ನ ಗ್ರಂಥವನ್ನು ಓದಿ ನೋಡಿರಿ!

فَأَمَّا مَنْ أُوتِيَ كِتَٰبَهُۥ بِيَمِينِهِۦ فَيَقُولُ هَآؤُمُ ٱقْرَءُواْ كِتَٰبِيَهْ ١٩

20. ಖಂಡಿತವಾಗಿಯೂ ನಾನು ನನ್ನ ವಿಚಾರಣೆಯನ್ನು[1] ಎದುರುಗೊಳ್ಳುವೆನು ಎಂದು ನಾನು ದೃಢವಾಗಿ ನಂಬಿದ್ದೆನು'.

إِنِّي ظَنَنتُ أَنِّي مُلَٰقٍ حِسَابِيَهْ ٢٠

21. ಆದ್ದರಿಂದ ಅವನು[2] ಸಂತೃಪ್ತ ಜೀವನದಲ್ಲಿರುವನು.

فَهُوَ فِي عِيشَةٍ رَّاضِيَةٍ ٢١

22. ಉನ್ನತವಾದ ಸ್ವರ್ಗದಲ್ಲಿ.

فِي جَنَّةٍ عَالِيَةٍ ٢٢

23. ಅವುಗಳ ಫಲಗಳು ಸನಿಹಕ್ಕೆ ಬಾಗಿರುವುವು.

قُطُوفُهَا دَانِيَةٌ ٢٣

24. 'ಗತಿಸಿ ಹೋದ ದಿನಗಳಲ್ಲಿ ನೀವು ಪೂರ್ವಭಾವಿಯಾಗಿ ಮಾಡಿರುವ ಕರ್ಮಗಳ ಫಲವಾಗಿ ನೀವು ಸಂತೋಷದಿಂದ ತಿನ್ನುತ್ತಲೂ, ಕುಡಿಯುತ್ತಲೂ ಇರಿ' (ಎಂದು ಅವರೊಂದಿಗೆ ಹೇಳಲಾಗುವುದು).

كُلُواْ وَٱشْرَبُواْ هَنِيٓـًٔا بِمَآ أَسْلَفْتُمْ فِي ٱلْأَيَّامِ ٱلْخَالِيَةِ ٢٤

25. ಆದರೆ ಯಾರಿಗೆ ಅವನ ಗ್ರಂಥವನ್ನು ಎಡಗೈಯ್ಯಲ್ಲಿ ನೀಡಲಾಗುವುದೋ ಅವನು ಹೇಳುವನು: 'ಅಯ್ಯೋ! ನನಗೆ ನನ್ನ ಗ್ರಂಥವನ್ನು ನೀಡಲಾಗದಿರುತ್ತಿದ್ದರೆ!

وَأَمَّا مَنْ أُوتِيَ كِتَٰبَهُۥ بِشِمَالِهِۦ فَيَقُولُ يَٰلَيْتَنِي لَمْ أُوتَ كِتَٰبِيَهْ ٢٥

26. ನನ್ನ ವಿಚಾರಣೆ ಏನೆಂದು ನಾನು ಅರಿಯದಿರುತ್ತಿದ್ದರೆ (ಎಷ್ಟು ಚೆನ್ನಾಗಿತ್ತು).

وَلَمْ أَدْرِ مَا حِسَابِيَهْ ٢٦

27. ಅದು (ಮರಣ) ಎಲ್ಲವನ್ನೂ ಕೊನೆಗೊಳಿಸುವುದಾಗಿರುತ್ತಿದ್ದರೆ (ಎಷ್ಟು ಚೆನ್ನಾಗಿತ್ತು).

يَٰلَيْتَهَا كَانَتِ ٱلْقَاضِيَةَ ٢٧

28. ನನಗೆ ನನ್ನ ಸಂಪತ್ತು ಪ್ರಯೋಜನವಾಗಲಿಲ್ಲ.

مَآ أَغْنَىٰ عَنِّي مَالِيَهْۜ ٢٨

29. ನನ್ನ ಅಧಿಕಾರ ನನ್ನಿಂದ ಕಳೆದು ಹೋಗಿದೆ.

هَلَكَ عَنِّي سُلْطَٰنِيَهْ ٢٩

30. (ಆಗ ಹೀಗೆ ಆಜ್ಞಾಪಿಸಲಾಗುವುದು): 'ಅವನನ್ನು ಹಿಡಿಯಿರಿ ಮತ್ತು ಬಂಧಿಸಿರಿ.

خُذُوهُ فَغُلُّوهُ ٣٠

---

1 ಹಿಸಾಬ್ ಎಂಬ ಪದಕ್ಕೆ ವಿಚಾರಣೆ, ಲೆಕ್ಕ ಕೇಳುವುದು ಅಥವಾ (ಕರ್ಮಗಳ) ಲೆಕ್ಕ ಎಂಬ ಅರ್ಥಗಳಿವೆ.

2 ಬಲಗೈಯಲ್ಲಿ ಕರ್ಮದಾಖಲೆ ನೀಡಲಾದವನು.

31. ತರುವಾಯ ನೀವು ಅವನನ್ನು ಧಗಧಗಿಸುವ ನರಕಾಗ್ನಿಗೆ ಪ್ರವೇಶ ಮಾಡಿಸಿರಿ.

ثُمَّ ٱلْجَحِيمَ صَلُّوهُ ﴿٣١﴾

32. ತರುವಾಯ ನೀವು ಅವನನ್ನು ಎಪ್ಪತ್ತು ಮೊಳ ಉದ್ದವಿರುವ ಒಂದು ಸಂಕೋಲೆಯಲ್ಲಿ ನುಸುಳಿಸಿರಿ.

ثُمَّ فِي سِلْسِلَةٍ ذَرْعُهَا سَبْعُونَ ذِرَاعًا فَٱسْلُكُوهُ ﴿٣٢﴾

33. ಖಂಡಿತವಾಗಿಯೂ ಅವನು ಮಹಾನನಾದ ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರಲಿಲ್ಲ.

إِنَّهُۥ كَانَ لَا يُؤْمِنُ بِٱللَّهِ ٱلْعَظِيمِ ﴿٣٣﴾

34. ಬಡವನಿಗೆ ಆಹಾರ ನೀಡಲು ಅವನು ಪ್ರೇರಣೆ ನೀಡಿರಲಿಲ್ಲ.

وَلَا يَحُضُّ عَلَىٰ طَعَامِ ٱلْمِسْكِينِ ﴿٣٤﴾

35. ಆದ್ದರಿಂದ ಇಂದು ಅವನಿಗೆ ಇಲ್ಲಿ ಯಾವ ಆಪ್ತಮಿತ್ರನೂ ಇಲ್ಲ.

فَلَيْسَ لَهُ ٱلْيَوْمَ هَٰهُنَا حَمِيمٌ ﴿٣٥﴾

36. ಗಾಯದಿಂದ ಹರಿಯುವ ಕೀವಿನ ಹೊರತು ಬೇರೆ ಆಹಾರವಿಲ್ಲ.

وَلَا طَعَامٌ إِلَّا مِنْ غِسْلِينٍ ﴿٣٦﴾

37. ಪಾಪಿಗಳ ಹೊರತು ಯಾರೂ ಅದನ್ನು ಸೇವಿಸಲಾರರು.

لَّا يَأْكُلُهُۥٓ إِلَّا ٱلْخَٰطِـُٔونَ ﴿٣٧﴾

38–39. ಆದ್ದರಿಂದ ನೀವು ಕಾಣುತ್ತಿರುವವುಗಳ ಮತ್ತು ಕಾಣದಿರುವವುಗಳ ಮೇಲೆ ಆಣೆಯಿಟ್ಟು ನಾನು ಹೇಳುತ್ತಿರುವೆನು.

فَلَآ أُقْسِمُ بِمَا تُبْصِرُونَ ﴿٣٨﴾ وَمَا لَا تُبْصِرُونَ ﴿٣٩﴾

40. ಖಂಡಿತವಾಗಿಯೂ ಇದು ಒಬ್ಬ ಗೌರವಾನ್ವಿತ ದೂತನ ಮಾತುಗಳಾಗಿವೆ.

إِنَّهُۥ لَقَوْلُ رَسُولٍ كَرِيمٍ ﴿٤٠﴾

41. ಇದು ಒಬ್ಬ ಕವಿಯ ಮಾತಲ್ಲ. ನೀವು ಅಲ್ಪವೇ ವಿಶ್ವಾಸವಿಡುತ್ತಿರುವಿರಿ.

وَمَا هُوَ بِقَوْلِ شَاعِرٍ ۚ قَلِيلًا مَّا تُؤْمِنُونَ ﴿٤١﴾

42. ಇದು ಜ್ಯೋತಿಷಿಯ ಮಾತೂ ಅಲ್ಲ. ನೀವು ಅಲ್ಪವೇ ಚಿಂತಿಸಿ ಗ್ರಹಿಸುತ್ತಿರುವಿರಿ.

وَلَا بِقَوْلِ كَاهِنٍ ۚ قَلِيلًا مَّا تَذَكَّرُونَ ﴿٤٢﴾

43. ಇದು ಸರ್ವಲೋಕಗಳ ರಬ್‌ನ ವತಿಯಿಂದ ಅವತೀರ್ಣಗೊಂಡಿರುವುದಾಗಿದೆ.

تَنزِيلٌ مِّن رَّبِّ ٱلْعَٰلَمِينَ ﴿٤٣﴾

44. ನಮ್ಮ ಹೆಸರಲ್ಲಿ ಅವರು (ಪ್ರವಾದಿಯವರು) ಯಾವುದಾದರೂ ಮಾತುಗಳನ್ನು ಸ್ವತಃ ರಚಿಸಿ ಹೇಳಿರುತ್ತಿದ್ದರೆ;

وَلَوْ تَقَوَّلَ عَلَيْنَا بَعْضَ ٱلْأَقَاوِيلِ ﴿٤٤﴾

45. ನಾವು ಅವರನ್ನು ಬಲಗೈಯಿಂದ ಹಿಡಿಯುತ್ತಿದ್ದೆವು.

لَأَخَذْنَا مِنْهُ بِٱلْيَمِينِ ﴿٤٥﴾

46. ತರುವಾಯ ಅವರ ಕಂಠನಾಡಿಯನ್ನು ನಾವು ಕತ್ತರಿಸಿ ಹಾಕುತ್ತಿದ್ದೆವು.

ثُمَّ لَقَطَعْنَا مِنْهُ ٱلْوَتِينَ ﴿٤٦﴾

47. ಆಗ ನಿಮ್ಮ ಪೈಕಿ ಯಾರಿಗೂ ಅವರಿಂದ (ಶಿಕ್ಷೆಯನ್ನು) ತಡೆಯಲಾಗದು.

فَمَا مِنكُم مِّنْ أَحَدٍ عَنْهُ حَٰجِزِينَ ﴿٤٧﴾

48. ಖಂಡಿತವಾಗಿಯೂ ಇದು (ಕುರ್‌ಆನ್) ಭಯಭಕ್ತಿ ಪಾಲಿಸುವವರಿಗಿರುವ ಒಂದು ಉಪದೇಶವಾಗಿದೆ.

وَإِنَّهُۥ لَتَذْكِرَةٌ لِّلْمُتَّقِينَ ﴿٤٨﴾

49. ಖಂಡಿತವಾಗಿಯೂ ನಿಮ್ಮ ಪೈಕಿ (ಇದನ್ನು) ನಿಷೇಧಿಸುವವರಿರುವರು ಎಂಬುದನ್ನು ನಾವು ಅರಿತಿರುವೆವು.

وَإِنَّا لَنَعْلَمُ أَنَّ مِنكُم مُّكَذِّبِينَ ﴿٤٩﴾

50. ಖಂಡಿತವಾಗಿಯೂ ಇದು ಸತ್ಯನಿಷೇಧಿಗಳ ವಿಷಾದಕ್ಕೆ ಕಾರಣವಾಗುವುದು.

وَإِنَّهُۥ لَحَسْرَةٌ عَلَى ٱلْكَٰفِرِينَ ﴿٥٠﴾

51. ಖಂಡಿತವಾಗಿಯೂ ಇದು ದೃಢವಾದ ಸತ್ಯವಾಗಿದೆ.

وَإِنَّهُۥ لَحَقُّ ٱلْيَقِينِ ﴿٥١﴾

52. ಆದ್ದರಿಂದ ತಾವು ಮಹಾನನಾಗಿರುವ ತಮ್ಮ ರಬ್‌ನ ನಾಮದ ಪಾವಿತ್ರ್ಯವನ್ನು ಕೊಂಡಾಡಿರಿ.

فَسَبِّحْ بِٱسْمِ رَبِّكَ ٱلْعَظِيمِ ﴿٥٢﴾

## ಅಲ್‌ಮಆರಿಜ್ (ಆರೋಹಣ ದಾರಿಗಳು)

## سُورَةُ المَعَارِج

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 44

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-3.** ಸತ್ಯನಿಷೇಧಿಗಳಿಗೆ ಸಂಭವಿಸಲಿರುವ, ತಡೆಯಲು ಯಾರಿಂದಲೂ ಸಾಧ್ಯವಿಲ್ಲದಿರುವ ಮತ್ತು ಆರೋಹಣ ದಾರಿಗಳ ಒಡೆಯನಾದ ಅಲ್ಲಾಹುವಿನ ವತಿಯಿಂದಿರುವ ಒಂದು ಶಿಕ್ಷೆಯ ಬಗ್ಗೆ ಕೇಳುಗನೊಬ್ಬನು ಕೇಳಿರುವನು.[1]

سَأَلَ سَآئِلُۢ بِعَذَابٖ وَاقِعٖ ١ لِّلۡكَٰفِرِينَ لَيۡسَ لَهُۥ دَافِعٞ ٢ مِّنَ ٱللَّهِ ذِي ٱلۡمَعَارِجِ ٣

**4.** ಐವತ್ತು ಸಾವಿರ ವರ್ಷಗಳ ಅವಧಿಯಿರುವ ಒಂದು ದಿನದಲ್ಲಿ ಮಲಕ್‌ಗಳು ಮತ್ತು ಆತ್ಮವು ಅವನೆಡೆಗೆ ಏರಿ ಹೋಗುವುವು.

تَعۡرُجُ ٱلۡمَلَٰٓئِكَةُ وَٱلرُّوحُ إِلَيۡهِ فِي يَوۡمٖ كَانَ مِقۡدَارُهُۥ خَمۡسِينَ أَلۡفَ سَنَةٖ ٤

**5.** ಆದರೆ (ಓ ಪ್ರವಾದಿಯವರೇ!) ತಾವು ಸುಂದರವಾದ ಸಹನೆಯನ್ನು ಪಾಲಿಸಿರಿ.

فَٱصۡبِرۡ صَبۡرٗا جَمِيلًا ٥

**6.** ಖಂಡಿತವಾಗಿಯೂ ಅವರು ಅದನ್ನು ವಿದೂರವಿರುವುದಾಗಿ ಕಾಣುತ್ತಿರುವರು.

إِنَّهُمۡ يَرَوۡنَهُۥ بَعِيدٗا ٦

**7.** ನಾವು ಅದನ್ನು ಹತ್ತಿರವಾದುದಾಗಿ ಕಾಣುತ್ತಿರುವೆವು.

وَنَرَىٰهُ قَرِيبٗا ٧

**8-9.** ಆಕಾಶವು ಕಾಯಿಸಿದ ಲೋಹದಂತಾಗುವ ಮತ್ತು ಪರ್ವತಗಳು (ಹಿಂಜಿದ) ಉಣ್ಣೆಯಂತಾಗುವ ದಿನ!

يَوۡمَ تَكُونُ ٱلسَّمَآءُ كَٱلۡمُهۡلِ ٨ وَتَكُونُ ٱلۡجِبَالُ كَٱلۡعِهۡنِ ٩

**10.** (ಅಂದು) ಯಾವುದೇ ಆಪ್ತಮಿತ್ರನೂ ಬೇರೊಬ್ಬ ಆಪ್ತಮಿತ್ರನೊಂದಿಗೆ ಏನನ್ನೂ ಕೇಳಲಾರನು.

وَلَا يَسۡـَٔلُ حَمِيمٌ حَمِيمٗا ١٠

**11–14.** ಅವರಿಗೆ ಪರಸ್ಪರರನ್ನು ತೋರಿಸಲಾಗುವುದು. ತನ್ನ ಮಕ್ಕಳನ್ನು, ತನ್ನ ಪತ್ನಿಯನ್ನು, ತನ್ನ ಸಹೋದರನನ್ನು, ತನಗೆ ಆಶ್ರಯ ನೀಡಿದ ತನ್ನ ಸಂಬಂಧಿಕರನ್ನು

يُبَصَّرُونَهُمۡۚ يَوَدُّ ٱلۡمُجۡرِمُ لَوۡ يَفۡتَدِي مِنۡ عَذَابِ يَوۡمِئِذِۭ بِبَنِيهِ ١١ وَصَٰحِبَتِهِۦ وَأَخِيهِ ١٢ وَفَصِيلَتِهِ ٱلَّتِي تُـٔۡوِيهِ ١٣

1 ಸಅಲ ಎಂಬ ಪದಕ್ಕೆ ಕೇಳಿದನು, ಬೇಡಿದನು ಇತ್ಯಾದಿ ಅರ್ಥಗಳಿವೆ.

وَمَن فِي ٱلۡأَرۡضِ جَمِيعٗا ثُمَّ يُنجِيهِ ﴿١٤﴾

ಮತ್ತು ಭೂಮಿಯಲ್ಲಿರುವ ಸರ್ವರನ್ನೂ ಪ್ರಾಯಶ್ಚಿತ್ತವಾಗಿ ನೀಡಿ ಆ ದಿನದ ಶಿಕ್ಷೆಯಿಂದ ಮುಕ್ತಿ ಪಡೆಯಲಾಗುತ್ತಿದ್ದರೆ, ತರುವಾಯ ಅದು ತನ್ನನ್ನು ರಕ್ಷಿಸುತ್ತಿದ್ದರೆ ಎಂದು ಅಪರಾಧಿಯು ಆಶಿಸುವನು.

كَلَّآۖ إِنَّهَا لَظَىٰ ﴿١٥﴾

15. ಸಂದೇಹವೇ ಬೇಡ! ಖಂಡಿತವಾಗಿಯೂ ಅದು ಧಗಧಗಿಸುವ ನರಕಾಗ್ನಿಯಾಗಿದೆ.

نَزَّاعَةٗ لِّلشَّوَىٰ ﴿١٦﴾

16. ತಲೆಯ ಚರ್ಮವನ್ನು ಸುಲಿಯುವ ಅಗ್ನಿಯಾಗಿದೆ.

تَدۡعُواْ مَنۡ أَدۡبَرَ وَتَوَلَّىٰ ﴿١٧﴾ وَجَمَعَ فَأَوۡعَىٰٓ ﴿١٨﴾

17–18. ಹಿಂದೆ ಸರಿದವನನ್ನೂ, ವಿಮುಖನಾದವನನ್ನೂ, ಸಂಗ್ರಹಿಸಿ ಜೋಪಾನವಾಗಿಟ್ಟವನನ್ನೂ ಅದು ಕರೆಯುವುದು.(1)

۞إِنَّ ٱلۡإِنسَٰنَ خُلِقَ هَلُوعًا ﴿١٩﴾

19. ಖಂಡಿತವಾಗಿಯೂ ಮನುಷ್ಯನನ್ನು ಅತ್ಯಂತ ಅಸಹನೆಯುಳ್ಳವನಾಗಿ ಸೃಷ್ಟಿಸಲಾಗಿದೆ.

إِذَا مَسَّهُ ٱلشَّرُّ جَزُوعٗا ﴿٢٠﴾ وَإِذَا مَسَّهُ ٱلۡخَيۡرُ مَنُوعًا ﴿٢١﴾

20–21. ಅವನಿಗೆ ಹಾನಿಯೇನಾದರೂ ತಟ್ಟಿದರೆ ಅವನು ಅಸಹಿಷ್ಣುತೆ ತೋರಿಸುವವನಾಗಿ ಮತ್ತು ಅವನಿಗೆ ಒಳಿತೇನಾದರೂ ದಯಪಾಲಿಸಲಾದರೆ ತಡೆದಿರಿಸುವವನಾಗಿ.

إِلَّا ٱلۡمُصَلِّينَ ﴿٢٢﴾ ٱلَّذِينَ هُمۡ عَلَىٰ صَلَاتِهِمۡ دَآئِمُونَ ﴿٢٣﴾ وَٱلَّذِينَ فِيٓ أَمۡوَٰلِهِمۡ حَقّٞ مَّعۡلُومٞ ﴿٢٤﴾ لِّلسَّآئِلِ وَٱلۡمَحۡرُومِ ﴿٢٥﴾ وَٱلَّذِينَ يُصَدِّقُونَ بِيَوۡمِ ٱلدِّينِ ﴿٢٦﴾ وَٱلَّذِينَ هُم مِّنۡ عَذَابِ رَبِّهِم مُّشۡفِقُونَ ﴿٢٧﴾

22–27. ನಮಾಝ್ ನಿರ್ವಹಿಸುವವರ ಹೊರತು. ಅಂದರೆ ತಮ್ಮ ನಮಾಝ್‌ನಲ್ಲಿ ಸದಾ ನಿಷ್ಠೆಯುಳ್ಳವರು, ಬೇಡುವವನಿಗೆ ಮತ್ತು ಅನ್ನಾಧಾರ ತಡೆಯಲಾದವನಿಗೆ ತಮ್ಮ ಸಂಪತ್ತಿನಿಂದ ನಿಶ್ಚಿತ ಹಕ್ಕನ್ನು ನೀಡುವವರು, ಪ್ರತಿಫಲ ದಿನದಲ್ಲಿ ವಿಶ್ವಾಸವಿಡುವವರು ಮತ್ತು ತಮ್ಮ ರಬ್‌ನ ವತಿಯ ಶಿಕ್ಷೆಯ ಬಗ್ಗೆ ಭಯಭೀತರಾಗಿರುವವರು (ಮುಂತಾದವರ ಹೊರತು).

1 ಸತ್ಯಸಂದೇಶವನ್ನು ಆಲಿಸದೆ ವಿಮುಖನಾದವನು ಮತ್ತು ಅಲ್ಲಾಹು ಆದೇಶಿಸಿದ ಮಾರ್ಗದಲ್ಲಿ ವ್ಯಯಿಸದೆ ಸಂಪತ್ತು ಶೇಖರಿಸಿಟ್ಟವನು ನರಕವನ್ನು ಪ್ರವೇಶಿಸುವನು ಎಂದರ್ಥ.

إِنَّ عَذَابَ رَبِّهِمْ غَيْرُ مَأْمُونٍ ﴿٢٨﴾

28. ಖಂಡಿತವಾಗಿಯೂ ಅವರ ರಬ್‌ನ ಶಿಕ್ಷೆಯು (ಬರಲಾರದೆಂದು) ಯಾರೂ ನಿಶ್ಚಿಂತರಾಗಲು ಸಾಧ್ಯವಿಲ್ಲದ್ದಾಗಿದೆ.

وَٱلَّذِينَ هُمْ لِفُرُوجِهِمْ حَـٰفِظُونَ ﴿٢٩﴾

29. ತಮ್ಮ ಗುಪ್ತಾಂಗಗಳನ್ನು ಸಂರಕ್ಷಿಸುವವರ (ಹೊರತು).

إِلَّا عَلَىٰٓ أَزْوَٰجِهِمْ أَوْ مَا مَلَكَتْ أَيْمَـٰنُهُمْ فَإِنَّهُمْ غَيْرُ مَلُومِينَ ﴿٣٠﴾

30. ತಮ್ಮ ಪತ್ನಿಯರ ಅಥವಾ ಬಲಗೈಗಳು ಒಡೆತನದಲ್ಲಿಟ್ಟುಕೊಂಡಿರುವವರ[1] ವಿಷಯದಲ್ಲಿ ಹೊರತು. ಖಂಡಿತವಾಗಿಯೂ ಅವರು ಆಕ್ಷೇಪಮುಕ್ತರಾಗಿರುವರು.

فَمَنِ ٱبْتَغَىٰ وَرَآءَ ذَٰلِكَ فَأُو۟لَـٰٓئِكَ هُمُ ٱلْعَادُونَ ﴿٣١﴾

31. ಆದರೆ ಯಾರಾದರೂ ಅದಕ್ಕಿಂತಲೂ ಆಚೆಗೆ ಬಯಸುವುದಾದರೆ ಅಂತಹವರು ಅತಿಕ್ರಮಿಗಳಾಗಿರುವರು.

وَٱلَّذِينَ هُمْ لِأَمَـٰنَـٰتِهِمْ وَعَهْدِهِمْ رَٰعُونَ ﴿٣٢﴾

32. ತಮ್ಮ ಮೇಲೆ ನಂಬಿಕೆಯಿಂದ ವಹಿಸಲಾಗಿರುವುದನ್ನು ಮತ್ತು ತಮ್ಮ ಕರಾರುಗಳನ್ನು ಪಾಲಿಸುವವರು.

وَٱلَّذِينَ هُم بِشَهَـٰدَٰتِهِمْ قَآئِمُونَ ﴿٣٣﴾

33. ತಮ್ಮ ಸಾಕ್ಷ್ಯಗಳನ್ನು ಸಾಕ್ಷ್ಯಗಳಲ್ಲಿ ದೃಢವಾಗಿ ನಿಲ್ಲುವವರು.

وَٱلَّذِينَ هُمْ عَلَىٰ صَلَاتِهِمْ يُحَافِظُونَ ﴿٣٤﴾

34. ತಮ್ಮ ನಮಾಝ್‌ಗಳನ್ನು ನಿಷ್ಠೆಯೊಂದಿಗೆ ನಿರ್ವಹಿಸುವವರು (ಮುಂತಾದವರ ಹೊರತು).

أُو۟لَـٰٓئِكَ فِى جَنَّـٰتٍ مُّكْرَمُونَ ﴿٣٥﴾

35. ಅಂತಹವರು ಸ್ವರ್ಗೋದ್ಯಾನಗಳಲ್ಲಿ ಆದರಿಸಲ್ಪಡುವವರಾಗಿರುವರು.

فَمَالِ ٱلَّذِينَ كَفَرُوا۟ قِبَلَكَ مُهْطِعِينَ ﴿٣٦﴾
عَنِ ٱلْيَمِينِ وَعَنِ ٱلشِّمَالِ عِزِينَ ﴿٣٧﴾

36–37. ಹಾಗಾದರೆ ಸತ್ಯನಿಷೇಧಿಗಳಿಗೇನಾಗಿದೆ? ಅವರು ತಮ್ಮೆಡೆಗೆ ಕತ್ತು ಚಾಚುತ್ತಾ ಬಂದು ಬಲಭಾಗಕ್ಕೂ ಎಡಭಾಗಕ್ಕೂ ಗುಂಪುಗಳಾಗಿ ಚದುರಿ ಹೋಗುತ್ತಿರುವರು.[2]

---

1 ಇಸ್ಲಾಮ್ ಆದೇಶಿಸಿದ ನಿಯಮಗಳಿಗೆ ಅನುಗುಣವಾಗಿ ಪಡೆದ ದಾಸಿಯರನ್ನು ಬಲಗೈಗಳು ಒಡೆತನದಲ್ಲಿಟ್ಟುಕೊಂಡವರು ಎನ್ನಲಾಗುತ್ತದೆ.

2 ಎಡ ಮತ್ತು ಬಲಭಾಗಗಳಿಂದ ಗುಂಪುಗಳಾಗಿ ಅವರು ತಮ್ಮತ್ತ ಕತ್ತು ಚಾಚಿ ಬರುವರು ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ.

أَيَطْمَعُ كُلُّ ٱمْرِيٍٕ مِّنْهُمْ أَن يُدْخَلَ جَنَّةَ نَعِيمٍ ﴿٣٨﴾

38. ಸುಖಾನುಭೂತಿಗಳು ತುಂಬಿದ ಸ್ವರ್ಗದಲ್ಲಿ ತಾನು ಪ್ರವೇಶಗೊಳ್ಳಬೇಕೆಂದು ಅವರ ಪೈಕಿ ಪ್ರತಿಯೊಬ್ಬರೂ ಆಸೆ ಪಡುತ್ತಿರುವರೇ?

كَلَّآ ۖ إِنَّا خَلَقْنَٰهُم مِّمَّا يَعْلَمُونَ ﴿٣٩﴾

39. ಇಲ್ಲ! ಖಂಡಿತವಾಗಿಯೂ ಅವರಿಗೆ ಅರಿಯುವಂತಹ ಒಂದರಿಂದಲೇ ನಾವು ಅವರನ್ನು ಸೃಷ್ಟಿಸಿರುವೆವು.[1]

فَلَآ أُقْسِمُ بِرَبِّ ٱلْمَشَٰرِقِ وَٱلْمَغَٰرِبِ إِنَّا لَقَٰدِرُونَ ﴿٤٠﴾ عَلَىٰٓ أَن نُّبَدِّلَ خَيْرًا مِّنْهُمْ وَمَا نَحْنُ بِمَسْبُوقِينَ ﴿٤١﴾

40–41. ಉದಯಸ್ಥಾನಗಳ ಮತ್ತು ಅಸ್ತಮಸ್ಥಾನಗಳ ರಬ್‌ನ ಮೇಲೆ ನಾನು ಆಣೆಯಿಟ್ಟು ಹೇಳುತ್ತಿರುವೆನು. ಅವರಿಗಿಂತಲೂ ಉತ್ತಮರಾಗಿರುವವರನ್ನು ಬದಲಿಯಾಗಿ ತರಲು ಖಂಡಿತವಾಗಿಯೂ ನಾವು ಸಾಮರ್ಥ್ಯವುಳ್ಳವರಾಗಿರುವೆವು. ನಾವು ಸೋಲಿಸಲ್ಪಡಲಾರೆವು.

فَذَرْهُمْ يَخُوضُوا۟ وَيَلْعَبُوا۟ حَتَّىٰ يُلَٰقُوا۟ يَوْمَهُمُ ٱلَّذِى يُوعَدُونَ ﴿٤٢﴾

42. ಆದ್ದರಿಂದ ಅವರಿಗೆ ಎಚ್ಚರಿಕೆ ನೀಡಲಾಗುತ್ತಿರುವ ಅವರ ಆ ದಿನವನ್ನು ಅವರು ಭೇಟಿಯಾಗುವ ತನಕ ಅವರನ್ನು ಸ್ವೇಚ್ಛೆಯಲ್ಲಿ ಮಗ್ನರಾಗಿರಲು ಮತ್ತು ಆಟವಾಡುತ್ತಿರಲು ಬಿಟ್ಟುಬಿಡಿರಿ.

يَوْمَ يَخْرُجُونَ مِنَ ٱلْأَجْدَاثِ سِرَاعًا كَأَنَّهُمْ إِلَىٰ نُصُبٍ يُوفِضُونَ ﴿٤٣﴾

43. ಅಂದರೆ ಅವರು ಒಂದು ಗುರಿಗಂಬದೆಡೆಗೆ ಆತುರದಿಂದ ಸಾಗುವಂತೆ ಗೋರಿಗಳಿಂದ ಆತುರದಿಂದ ಹೊರಟುಬರುವ ದಿನ!

خَٰشِعَةً أَبْصَٰرُهُمْ تَرْهَقُهُمْ ذِلَّةٌ ۚ ذَٰلِكَ ٱلْيَوْمُ ٱلَّذِى كَانُوا۟ يُوعَدُونَ ﴿٤٤﴾

44. ಅವರ ಕಣ್ಣುಗಳು ಕೆಳಕ್ಕೆ ತಗಿರುವುವು. ಅಪಮಾನವು ಅವರನ್ನು ಆವರಿಸಿರುವುದು. ಅದು ಅವರಿಗೆ ಎಚ್ಚರಿಕೆ ನೀಡಲಾಗಿರುವ ದಿನವಾಗಿದೆ.

---

1 ತುಚ್ಛವಾದ ದ್ರವದಿಂದ ಮನುಷ್ಯನನ್ನು ಸೃಷ್ಟಿಸಲಾಗಿದೆ ಎಂಬ ವಿಷಯ ಎಲ್ಲರಿಗೂ ತಿಳಿದಿದೆ. ಯಾರಿಗೂ ಹುಟ್ಟಿನಿಂದಾಗಿ ಔನ್ನತ್ಯವಿಲ್ಲ. ತತ್ವಾದರ್ಶದಲ್ಲಿ ಅಧಿಷ್ಠಿತವಾದ ಜೀವನವೇ ಔನ್ನತ್ಯದ ಮಾನದಂಡವಾಗಿದೆ

# ನೂಹ್

# سُورَةُ نُوحٍ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 28

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

إِنَّآ أَرۡسَلۡنَا نُوحًا إِلَىٰ قَوۡمِهِۦٓ أَنۡ أَنذِرۡ قَوۡمَكَ مِن قَبۡلِ أَن يَأۡتِيَهُمۡ عَذَابٌ أَلِيمٞ ١

1. 'ತಮ್ಮ ಜನತೆಯ ಬಳಿಗೆ ಯಾತನಾಮಯ ಶಿಕ್ಷೆಯು ಬರುವುದಕ್ಕೆ ಮುಂಚಿತವಾಗಿ ಅವರಿಗೆ ಎಚ್ಚರಿಕೆ ನೀಡಿರಿ' ಎಂಬ ಆದೇಶದೊಂದಿಗೆ ಖಂಡಿತವಾಗಿಯೂ ನಾವು ನೂಹ್‌ರನ್ನು ಅವರ ಜನತೆಯೆಡೆಗೆ ಕಳುಹಿಸಿದೆವು.

قَالَ يَٰقَوۡمِ إِنِّي لَكُمۡ نَذِيرٞ مُّبِينٌ ٢

2. ಅವರು ಹೇಳಿದರು: 'ಓ ನನ್ನ ಜನರೇ! ಖಂಡಿತವಾಗಿಯೂ ನಾನು ನಿಮಗೆ ಸ್ಪಷ್ಟವಾದ ಮುನ್ನೆಚ್ಚರಿಕೆಗಾರನಾಗಿರುವೆನು.

أَنِ ٱعۡبُدُواْ ٱللَّهَ وَٱتَّقُوهُ وَأَطِيعُونِ ٣

3. ನೀವು ಅಲ್ಲಾಹುವನ್ನು ಆರಾಧಿಸಿರಿ ಮತ್ತು ಅವನನ್ನು ಭಯಪಡಿರಿ ಹಾಗೂ ನನ್ನನ್ನು ಅನುಸರಿಸಿರಿ.

يَغۡفِرۡ لَكُم مِّن ذُنُوبِكُمۡ وَيُؤَخِّرۡكُمۡ إِلَىٰٓ أَجَلٖ مُّسَمًّىۚ إِنَّ أَجَلَ ٱللَّهِ إِذَا جَآءَ لَا يُؤَخَّرُۚ لَوۡ كُنتُمۡ تَعۡلَمُونَ ٤

4. ಹಾಗಾದರೆ ಅಲ್ಲಾಹು ನಿಮಗೆ ನಿಮ್ಮ ಪಾಪಗಳಲ್ಲಿ ಕೆಲವನ್ನು ಕ್ಷಮಿಸುವನು ಮತ್ತು ನಿಶ್ಚಿತವಾದ ಒಂದು ಅವಧಿಯವರೆಗೆ ಅವನು ನಿಮಗೆ ದೀರ್ಘಿಸಿ ನೀಡುವನು. ಖಂಡಿತವಾಗಿಯೂ ಅಲ್ಲಾಹುವಿನ ಅವಧಿಯು ಬಂದರೆ ಅದನ್ನು ದೀರ್ಘಿಸಿಕೊಡಲಾಗದು. ನೀವು ಅರಿತಿದ್ದರೆ'.

قَالَ رَبِّ إِنِّي دَعَوۡتُ قَوۡمِي لَيۡلٗا وَنَهَارٗا ٥

5. ಆತ ಹೇಳಿದರು: 'ಓ ನನ್ನ ರಬ್! ಖಂಡಿತವಾಗಿಯೂ ನಾನು ನನ್ನ ಜನತೆಯನ್ನು ರಾತ್ರಿಯೂ ಹಗಲೂ ಆಹ್ವಾನಿಸಿದೆನು.

فَلَمۡ يَزِدۡهُمۡ دُعَآءِيٓ إِلَّا فِرَارٗا ٦

6. ಅನಂತರ ನನ್ನ ಆಹ್ವಾನವು ಅವರಿಗೆ ಪಲಾಯನವನ್ನೇ ವಿನಾ ಇನ್ನೇನನ್ನೂ ಅಧಿಕಗೊಳಿಸಲಿಲ್ಲ.

وَإِنِّي كُلَّمَا دَعَوۡتُهُمۡ لِتَغۡفِرَ لَهُمۡ جَعَلُوٓاْ

7. ಖಂಡಿತವಾಗಿಯೂ ನೀನು ಅವರಿಗೆ ಕ್ಷಮೆ ನೀಡುವ ಸಲುವಾಗಿ ನಾನು ಅವರನ್ನು

ಆಹ್ವಾನಿಸಿದಾಗಲೆಲ್ಲ ಅವರು ತಮ್ಮ ಬೆರಳುಗಳನ್ನು ಕಿವಿಗಳಲ್ಲಿಟ್ಟರು, ತಮ್ಮ ಉಡುಪುಗಳನ್ನು ಹೊದ್ದುಕೊಂಡರು, ಹಠತೊಟ್ಟು ನಿಂತರು ಮತ್ತು ಮಹಾ ದರ್ಪವನ್ನು ತೋರಿಸಿದರು.

أَصَٰبِعَهُمْ فِىٓ ءَاذَانِهِمْ وَٱسْتَغْشَوْا۟ ثِيَابَهُمْ
وَأَصَرُّوا۟ وَٱسْتَكْبَرُوا۟ ٱسْتِكْبَارًا ٧

8. ತರುವಾಯ ನಾನು ಅವರನ್ನು ಬಹಿರಂಗವಾಗಿ ಆಹ್ವಾನಿಸಿದೆನು.

ثُمَّ إِنِّى دَعَوْتُهُمْ جِهَارًا ٨

9. ತರುವಾಯ ನಾನು ಅವರಿಗೆ ಪ್ರತ್ಯಕ್ಷವಾಗಿ ಮತ್ತು ಅತ್ಯಂತ ರಹಸ್ಯವಾಗಿ ಉಪದೇಶ ಮಾಡಿದೆನು'.

ثُمَّ إِنِّىٓ أَعْلَنتُ لَهُمْ وَأَسْرَرْتُ لَهُمْ
إِسْرَارًا ٩

10. ನಾನು ಹೇಳಿದೆನು: 'ನೀವು ನಿಮ್ಮ ರಬ್‌ನಲ್ಲಿ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಿಸುವವನಾಗಿರುವನು.

فَقُلْتُ ٱسْتَغْفِرُوا۟ رَبَّكُمْ إِنَّهُۥ كَانَ
غَفَّارًا ١٠

11. ಅವನು ನಿಮಗೆ ಮಳೆಯನ್ನು ಸಮೃದ್ಧವಾಗಿ ಸುರಿಸುವನು.

يُرْسِلِ ٱلسَّمَآءَ عَلَيْكُم مِّدْرَارًا ١١

12. ಸಂಪತ್ತು ಮತ್ತು ಸಂತತಿಗಳ ಮೂಲಕ ಅವನು ನಿಮ್ಮನ್ನು ಪೋಷಿಸುವನು. ಅವನು ನಿಮಗೆ ತೋಟಗಳನ್ನು ಮಾಡಿಕೊಡುವನು ಮತ್ತು ಅವನು ನಿಮಗೆ ನದಿಗಳನ್ನು ಮಾಡಿಕೊಡುವನು'.

وَيُمْدِدْكُم بِأَمْوَٰلٍ وَبَنِينَ وَيَجْعَل لَّكُمْ
جَنَّٰتٍ وَيَجْعَل لَّكُمْ أَنْهَٰرًا ١٢

13. ನಿಮಗೇನಾಗಿದೆ? ನೀವೇಕೆ ಅಲ್ಲಾಹುವಿಗೆ ಯಾವುದೇ ಮಹತ್ವವನ್ನೂ ನಿರೀಕ್ಷಿಸುತ್ತಿಲ್ಲ?

مَّا لَكُمْ لَا تَرْجُونَ لِلَّهِ وَقَارًا ١٣

14. ಅವನು ನಿಮ್ಮನ್ನು ಹಲವು ಹಂತಗಳಲ್ಲಿ ಸೃಷ್ಟಿಸಿರುವನು.

وَقَدْ خَلَقَكُمْ أَطْوَارًا ١٤

15. ಅಲ್ಲಾಹು ಏಳು ಆಕಾಶಗಳನ್ನು ಹೇಗೆ ಪದರಪದರಗಳಾಗಿ ಸೃಷ್ಟಿಸಿರುವನೆಂದು ನೀವು ಕಂಡಿಲ್ಲವೇ?

أَلَمْ تَرَوْا۟ كَيْفَ خَلَقَ ٱللَّهُ سَبْعَ سَمَٰوَٰتٍ
طِبَاقًا ١٥

16. ಅವನು ಅದರಲ್ಲಿ ಚಂದ್ರನನ್ನು ಒಂದು ಪ್ರಕಾಶವನ್ನಾಗಿಯೂ ಸೂರ್ಯನನ್ನು ಒಂದು ದೀಪವನ್ನಾಗಿಯೂ ಮಾಡಿರುವನು.[1]

وَجَعَلَ ٱلْقَمَرَ فِيهِنَّ نُورًا وَجَعَلَ ٱلشَّمْسَ
سِرَاجًا ١٦

1 ಬೆಳಕಿನ ಮೂಲವಾದ ಸೂರ್ಯನನ್ನು ದೀಪವೆಂದೂ, ಸೂರ್ಯ ಪ್ರಕಾಶದಿಂದ ಪ್ರತಿಫಲನಗೊಳ್ಳುವ ಚಂದ್ರನನ್ನು ಪ್ರಕಾಶವೆಂದೂ ಇಲ್ಲಿ ಕರೆಯಲಾಗಿದೆ. ಕುರ್‌ಆನ್ ಅವತೀರ್ಣಗೊಳ್ಳುವ ಕಾಲದಲ್ಲಿ ಸೂರ್ಯನ ಮತ್ತು ಚಂದ್ರನ

وَٱللَّهُ أَنۢبَتَكُم مِّنَ ٱلۡأَرۡضِ نَبَاتٗا ﴿١٧﴾

17. ಅಲ್ಲಾಹು ನಿಮ್ಮನ್ನು ಭೂಮಿಯಿಂದ ಒಂದು ಬೆಳೆಯಾಗಿ ಬೆಳೆಸಿರುವನು.(1)

ثُمَّ يُعِيدُكُمۡ فِيهَا وَيُخۡرِجُكُمۡ إِخۡرَاجٗا ﴿١٨﴾

18. ತರುವಾಯ ಅದರಲ್ಲೇ ಅವನು ನಿಮ್ಮನ್ನು ಮರಳಿಸುವನು ಮತ್ತು ಒಮ್ಮೆ ನಿಮ್ಮನ್ನು ಹೊರತರುವನು.

وَٱللَّهُ جَعَلَ لَكُمُ ٱلۡأَرۡضَ بِسَاطٗا ﴿١٩﴾

19. ಅಲ್ಲಾಹು ನಿಮಗಾಗಿ ಭೂಮಿಯನ್ನು ಒಂದು ಹಾಸನ್ನಾಗಿ ಮಾಡಿರುವನು.

لِّتَسۡلُكُواْ مِنۡهَا سُبُلٗا فِجَاجٗا ﴿٢٠﴾

20. ಅದರ ವಿಸ್ತಾರವಾಗಿರುವ ಹಾದಿಗಳಲ್ಲಿ ನೀವು ಪ್ರವೇಶಿಸುವ ಸಲುವಾಗಿ.

قَالَ نُوحٞ رَّبِّ إِنَّهُمۡ عَصَوۡنِي وَٱتَّبَعُواْ مَن لَّمۡ يَزِدۡهُ مَالُهُۥ وَوَلَدُهُۥٓ إِلَّا خَسَارٗا ﴿٢١﴾

21. ನೂಹ್ ಹೇಳಿದರು: ‘ಓ ನನ್ನ ರಬ್! ಖಂಡಿತವಾಗಿಯೂ ಇವರು ನನ್ನನ್ನು ಧಿಕ್ಕರಿಸಿರುವರು. ಯಾರಿಗೆ ಅವನ ಸಂಪತ್ತು ಮತ್ತು ಸಂತತಿಯು (ಪಾರಲೌಕಿಕ) ನಷ್ಟವನ್ನೇ ಹೊರತು ಅಧಿಕಗೊಳಿಸುವುದಿಲ್ಲವೋ ಅಂತಹವರನ್ನು ಅವರು ಅನುಸರಿಸಿರುವರು.

وَمَكَرُواْ مَكۡرٗا كُبَّارٗا ﴿٢٢﴾

22. (ಮಾತ್ರವಲ್ಲದೆ) ಅವರು (ಮುಖಂಡರು) ಮಹಾ ಕುತಂತ್ರವನ್ನು ಹೂಡಿರುವರು.

وَقَالُواْ لَا تَذَرُنَّ ءَالِهَتَكُمۡ وَلَا تَذَرُنَّ وَدّٗا وَلَا سُوَاعٗا وَلَا يَغُوثَ وَيَعُوقَ وَنَسۡرٗا ﴿٢٣﴾

23. ಅವರು ಹೇಳಿದರು: ‘(ಓ ಜನರೇ!) ನೀವು ನಿಮ್ಮ ಆರಾಧ್ಯರನ್ನು ಕೈಬಿಡದಿರಿ. ವದ್ದ್, ಸುವಾಅ್, ಯಗೂಸ್, ಯಊಕ್ ಮತ್ತು ನಸ್ರ್‌ರನ್ನು ಬಿಡದಿರಿ’.

وَقَدۡ أَضَلُّواْ كَثِيرٗاۖ وَلَا تَزِدِ ٱلظَّٰلِمِينَ إِلَّا ضَلَٰلٗا ﴿٢٤﴾

24. ಹೀಗೆ ಅವರು ಅನೇಕ ಜನರನ್ನು ದಾರಿಗೆಡಿಸಿದರು. (ಹೇ ರಬ್!) ಆ ಅಕ್ರಮಿಗಳಿಗೆ ನೀನು ಮಾರ್ಗಭ್ರಷ್ಟತೆಯನ್ನೇ ಹೊರತು ಇನ್ನೇನನ್ನೂ ಅಧಿಕಗೊಳಿಸದಿರು’.

ಬೆಳಕುಗಳ ನಡುವೆಯಿರುವ ಈ ಅಂತರ ವಿದ್ವಾಂಸರಿಗೆ ಅಜ್ಞಾತವಾಗಿತ್ತು. ಆದ್ದರಿಂದ ಕುರ್‌ಆನಿನ ಅಮಾನುಷಿಕತೆಗೆ ಇದೊಂದು ಪುರಾವೆಯಾಗಿದೆ.

1 ಆತ್ಯಂತಿಕ ವಿಶ್ಲೇಷಣೆಯ ಪ್ರಕಾರ ಭೂಮಿಯಲ್ಲಿರುವ ಧಾತುಲವಣಗಳೇ ಮನುಷ್ಯನೆಂಬ ಮಹಾ ಅದ್ಭುತವಾಗಿ ಬೆಳೆಯುತ್ತದೆ. ಪರಿಪೂರ್ಣವಾಗಿ ಯೋಜನಾಬದ್ಧ ಮತ್ತು ಸುವ್ಯವಸ್ಥಿತವಾದ ಈ ಬೆಳವಣಿಗೆಯ ಕುರಿತು ಚಿಂತಿಸುವ ಯಾರಿಗೂ ಅಲ್ಲಾಹುವಿನ ಅಸ್ತಿತ್ವವನ್ನು ನಿಷೇಧಿಸಲು ಸಾಧ್ಯವಿಲ್ಲ.

25. ಅವರ ಪಾಪಗಳ ನಿಮಿತ್ತ ಅವರನ್ನು ಮುಳುಗಿಸಲಾಯಿತು. ತರುವಾಯ ಅವರನ್ನು ನರಕಾಗ್ನಿಯಲ್ಲಿ ಪ್ರವೇಶ ಮಾಡಿಸಲಾಯಿತು.[1] ಆಗ ಅಲ್ಲಾಹುವಿನ ಹೊರತು ತಮಗೆ ಯಾವುದೇ ಸಹಾಯಕರನ್ನೂ ಅವರು ಕಾಣಲಿಲ್ಲ.

مِّمَّا خَطِيٓـَٔـٰتِهِمْ أُغْرِقُواْ فَأُدْخِلُواْ نَارًا فَلَمْ يَجِدُواْ لَهُم مِّن دُونِ ٱللَّهِ أَنصَارًا ﴿٢٥﴾

26. ನೂಹ್ ಹೇಳಿದರು: 'ಓ ನನ್ನ ರಬ್! ಭೂಮುಖದಲ್ಲಿ ಸತ್ಯನಿಷೇಧಿಗಳಲ್ಲಿ ಸೇರಿದ ಯಾವೊಬ್ಬ ನಿವಾಸಿಯನ್ನೂ ಉಳಿಸದಿರು.

وَقَالَ نُوحٌ رَّبِّ لَا تَذَرْ عَلَى ٱلْأَرْضِ مِنَ ٱلْكَـٰفِرِينَ دَيَّارًا ﴿٢٦﴾

27. ನೀನೇನಾದರೂ ಅವರನ್ನು ಉಳಿಸುವುದಾದರೆ ಖಂಡಿತವಾಗಿಯೂ ಅವರು ನಿನ್ನ ದಾಸರನ್ನು ದಾರಿಗೆಡಿಸುವರು. ದುಷ್ಟರಿಗೆ ಮತ್ತು ಸತ್ಯನಿಷೇಧಿಗಳಿಗೇ ಹೊರತು ಅವರು ಜನ್ಮ ನೀಡಲಾರರು.

إِنَّكَ إِن تَذَرْهُمْ يُضِلُّواْ عِبَادَكَ وَلَا يَلِدُوٓاْ إِلَّا فَاجِرًا كَفَّارًا ﴿٢٧﴾

28. ಓ ನನ್ನ ರಬ್! ನನಗೂ, ನನ್ನ ಮಾತಾಪಿತರಿಗೂ, ಸತ್ಯವಿಶ್ವಾಸಿಯಾಗಿ ನನ್ನ ಮನೆಯನ್ನು ಪ್ರವೇಶಿಸಿದವನಿಗೂ, ಸತ್ಯವಿಶ್ವಾಸಿಗಳಿಗೂ, ಸತ್ಯವಿಶ್ವಾಸಿನಿಯರಿಗೂ ಕ್ಷಮೆ ನೀಡು. ಅಕ್ರಮಿಗಳಿಗೆ ವಿನಾಶದ ಹೊರತು ಇನ್ನೇನನ್ನೂ ಅಧಿಕಗೊಳಿಸದಿರು.

رَّبِّ ٱغْفِرْ لِى وَلِوَٰلِدَىَّ وَلِمَن دَخَلَ بَيْتِىَ مُؤْمِنًا وَلِلْمُؤْمِنِينَ وَٱلْمُؤْمِنَـٰتِ وَلَا تَزِدِ ٱلظَّـٰلِمِينَ إِلَّا تَبَارًۢا ﴿٢٨﴾

1 ಭವಿಷ್ಯದಲ್ಲಿ ನರಕಾಗ್ನಿಗೆ ಪ್ರವೇಶಗೊಳಿಸಲಾಗುವವರ ಕುರಿತು ಪ್ರವೇಶ ಮಾಡಿಸಲಾಯಿತು ಎಂದು ಭೂತಕಾಲ ಕ್ರಿಯೆಯಲ್ಲಿ ಹೇಳಿರುವುದು ಅವರು ನರಕಾಗ್ನಿಯನ್ನು ಪ್ರವೇಶಿಸುವುದು ಖಚಿತ ಎಂದು ಸೂಚಿಸುವುದಕ್ಕಾಗಿರಬಹುದು.

## ಅಲ್‌ಜಿನ್ನ್

## سُورَةُ الجِنِّ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 28

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. (ಓ ಪ್ರವಾದಿಯವರೇ!) ಹೇಳಿರಿ: 'ಜಿನ್ನ್‌ಗಳಲ್ಲಿ ಸೇರಿದ ಒಂದು ಗುಂಪು ಕುರ್‌ಆನನ್ನು ಕಿವಿಗೊಟ್ಟು ಆಲಿಸಿರುವರೆಂದು ನನಗೆ ದಿವ್ಯ ಸಂದೇಶ ನೀಡಲಾಗಿದೆ.' ತರುವಾಯ ಅವರು (ತಮ್ಮ ಸಮುದಾಯದೊಂದಿಗೆ) ಹೇಳಿದರು: 'ಖಂಡಿತವಾಗಿಯೂ ನಾವು ಅದ್ಭುತವಾದ ಒಂದು ಕುರ್‌ಆನನ್ನು ಆಲಿಸಿರುವೆವು.

قُلۡ أُوحِيَ إِلَيَّ أَنَّهُ ٱسۡتَمَعَ نَفَرٞ مِّنَ ٱلۡجِنِّ فَقَالُوٓاْ إِنَّا سَمِعۡنَا قُرۡءَانًا عَجَبٗا ١

2. ಅದು ಸನ್ಮಾರ್ಗದೆಡೆಗೆ ದಾರಿ ತೋರಿಸುತ್ತದೆ. ಆದ್ದರಿಂದ ನಾವು ಅದರಲ್ಲಿ ವಿಶ್ವಾಸವಿಟ್ಟಿರುವೆವು. ಇನ್ನು ಮುಂದೆ ನಾವು ನಮ್ಮ ರಬ್‌ನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಲಾರೆವು.

يَهۡدِيٓ إِلَى ٱلرُّشۡدِ فَـَٔامَنَّا بِهِۦۖ وَلَن نُّشۡرِكَ بِرَبِّنَآ أَحَدٗا ٢

3. ನಮ್ಮ ರಬ್‌ನ ಮಹಾತ್ಮೆಯು ಅತ್ಯುನ್ನತವಾಗಿದೆ. ಅವನು ಸಂಗಾತಿಯನ್ನಾಗಲಿ, ಸಂತತಿಯನ್ನಾಗಲಿ ಮಾಡಿಕೊಂಡಿಲ್ಲ.

وَأَنَّهُۥ تَعَٰلَىٰ جَدُّ رَبِّنَا مَا ٱتَّخَذَ صَٰحِبَةٗ وَلَا وَلَدٗا ٣

4. ನಮ್ಮಲ್ಲಿರುವ ಅವಿವೇಕಿಗಳು ಅಲ್ಲಾಹುವಿನ ಕುರಿತು ಅತಿರೇಕದ ಮಾತುಗಳನ್ನು ಹೇಳುತ್ತಿರುವರು.

وَأَنَّهُۥ كَانَ يَقُولُ سَفِيهُنَا عَلَى ٱللَّهِ شَطَطٗا ٤

5. ಮನುಷ್ಯರು ಮತ್ತು ಜಿನ್ನ್‌ಗಳು ಅಲ್ಲಾಹುವಿನ ಮೇಲೆ ಎಂದೂ ಸುಳ್ಳುಹೇಳಲಾರರೆಂದು ನಾವು ಭಾವಿಸಿದ್ದೆವು ಎಂದೂ (ಅವರು ಹೇಳಿದರು).

وَأَنَّا ظَنَنَّآ أَن لَّن تَقُولَ ٱلۡإِنسُ وَٱلۡجِنُّ عَلَى ٱللَّهِ كَذِبٗا ٥

6. ಮನುಷ್ಯರಲ್ಲಿ ಕೆಲವರು ಜಿನ್ನ್‌ಗಳಲ್ಲಿ ಸೇರಿದ ಕೆಲವರೊಂದಿಗೆ ಅಭಯ ಯಾಚಿಸುತ್ತಿದ್ದರು. ಹೀಗೆ ಅವರು (ಮನುಷ್ಯರು) ಅವರಿಗೆ (ಜಿನ್ನ್‌ಗಳಿಗೆ) ಅಹಂಕಾರವನ್ನು ಅಧಿಕಗೊಳಿಸಿದರು.

وَأَنَّهُۥ كَانَ رِجَالٞ مِّنَ ٱلۡإِنسِ يَعُوذُونَ بِرِجَالٖ مِّنَ ٱلۡجِنِّ فَزَادُوهُمۡ رَهَقٗا ٦

7. ಅಲ್ಲಾಹು ಯಾರನ್ನೂ ಪುನರುತ್ಥಾನಗೊಳಿಸಲಾರನು ಎಂದು ನೀವು ಭಾವಿಸಿದಂತೆ ಅವರೂ ಭಾವಿಸಿದ್ದರು ಎಂದೂ (ಅವರು ಹೇಳಿದರು).

وَأَنَّهُمْ ظَنُّوا۟ كَمَا ظَنَنتُمْ أَن لَّن يَبْعَثَ ٱللَّهُ أَحَدًا ٧

8. ನಾವು ಆಕಾಶವನ್ನು ಮುಟ್ಟಿ ನೋಡಿದೆವು.[1] ಆಗ ಅದು ಬಲಿಷ್ಠ ಕಾವಲುಗಾರರಿಂದ ಮತ್ತು ಅಗ್ನಿಜ್ವಾಲೆಗಳಿಂದ ತುಂಬಿರುವುದಾಗಿ ನಾವು ಕಂಡೆವು ಎಂದೂ (ಅವರು ಹೇಳಿದರು).

وَأَنَّا لَمَسْنَا ٱلسَّمَآءَ فَوَجَدْنَٰهَا مُلِئَتْ حَرَسًا شَدِيدًا وَشُهُبًا ٨

9. (ಆಕಾಶದಲ್ಲಿರುವ) ಕೆಲವು ಆಸನಗಳಲ್ಲಿ ನಾವು ಆಲಿಸುವುದಕ್ಕಾಗಿ ಕೂರುತ್ತಿದ್ದೆವು. ಆದರೆ ಈಗ[2] ಯಾರಾದರೂ ಕಿವಿಗೊಟ್ಟು ಆಲಿಸುವುದಾದರೆ ಅವನಿಗಾಗಿ ಹೊಂಚುಹಾಕುತ್ತಿರುವ ಒಂದು ಅಗ್ನಿಜ್ವಾಲೆಯನ್ನು ಅವನು ಕಾಣುವನು ಎಂದೂ (ಅವರು ಹೇಳಿದರು).

وَأَنَّا كُنَّا نَقْعُدُ مِنْهَا مَقَٰعِدَ لِلسَّمْعِ ۖ فَمَن يَسْتَمِعِ ٱلْـَٔانَ يَجِدْ لَهُۥ شِهَابًا رَّصَدًا ٩

10. ಭೂಮಿಯಲ್ಲಿರುವವರ ವಿಷಯದಲ್ಲಿ ಕೆಡುಕನ್ನು ಉದ್ದೇಶಿಸಲಾಗಿದೆಯೇ ಅಥವಾ ಅವರ ರಬ್ ಅವರನ್ನು ಸನ್ಮಾರ್ಗದಲ್ಲಿ ಸೇರಿಸಲು ಉದ್ದೇಶಿಸಿರುವನೋ ಎಂಬುದನ್ನು ನಾವು ಅರಿಯಲಾರೆವು.

وَأَنَّا لَا نَدْرِىٓ أَشَرٌّ أُرِيدَ بِمَن فِى ٱلْأَرْضِ أَمْ أَرَادَ بِهِمْ رَبُّهُمْ رَشَدًا ١٠

11. ನಮ್ಮ ಪೈಕಿ ಸಜ್ಜನರಿರುವರು. ಅದಕ್ಕಿಂತ ಕೆಳಗಿನವರೂ ನಮ್ಮಲ್ಲಿರುವರು. ನಾವು ವಿಭಿನ್ನ ಮಾರ್ಗಗಳಲ್ಲಾಗಿ ಬಿಟ್ಟಿರುವೆವು ಎಂದೂ (ಅವರು ಹೇಳಿದರು).

وَأَنَّا مِنَّا ٱلصَّٰلِحُونَ وَمِنَّا دُونَ ذَٰلِكَ ۖ كُنَّا طَرَآئِقَ قِدَدًا ١١

12. ಭೂಮಿಯಲ್ಲಿ ನಮಗೆ ಅಲ್ಲಾಹುವನ್ನು ಸೋಲಿಸಲು ಸಾಧ್ಯವಾಗದು ಮತ್ತು ಪಲಾಯನ ಮಾಡುವ ಮೂಲಕ ಅವನನ್ನು

وَأَنَّا ظَنَنَّآ أَن لَّن نُّعْجِزَ ٱللَّهَ فِى ٱلْأَرْضِ وَلَن نُّعْجِزَهُۥ هَرَبًا ١٢

1 ಆಕಾಶದಲ್ಲಿ ರಹಸ್ಯಗಳನ್ನು ಕದ್ದಾಲಿಸಲು ಯತ್ನಿಸಿದರು ಎಂದರ್ಥ.

2 ಈಗ ಎಂಬ ಪದದ ತಾತ್ಪರ್ಯ ಕುರ್‌ಆನ್ ಅವತೀರ್ಣಗೊಳ್ಳತೊಡಗಿದ ಬಳಿಕ ಎಂದು ಹೆಚ್ಚಿನ ವ್ಯಾಖ್ಯಾನಕಾರರು ವಿವರಿಸಿದ್ದಾರೆ. ಕುರ್‌ಆನ್ ಅವತೀರ್ಣಗೊಳ್ಳುವುದಕ್ಕೆ ಮುಂಚೆ ಜಿನ್ನ್‌ಗಳು ಆಕಾಶಲೋಕದಿಂದ ಏನೋ ಕೆಲವನ್ನು ಆಲಿಸುತ್ತಿದ್ದರು ಹಾಗೂ ತರುವಾಯ ಅದು ಅವರಿಗೆ ಅಸಾಧ್ಯವಾಯಿತು ಎಂದು ಪ್ರಸ್ತುತ ಸೂಕ್ತಿಗಳು ಸೂಚಿಸುತ್ತವೆ. ಹೆಚ್ಚಿನ ವಿವರಣೆಗಳು ಕುರ್‌ಆನ್‌ನಿಂದಾಗಲಿ ಹದೀಸ್‌ಗಳಿಂದಾಗಲಿ ಲಭ್ಯವಿಲ್ಲ.

ಸೋಲಿಸಲು ಸಾಧ್ಯವಾಗದು[1] ಎಂದು ನಾವು ಭಾವಿಸಿರುವೆವು.

وَأَنَّا لَمَّا سَمِعْنَا ٱلْهُدَىٰٓ ءَامَنَّا بِهِۦ ۖ فَمَن يُؤْمِنۢ بِرَبِّهِۦ فَلَا يَخَافُ بَخْسًا وَلَا رَهَقًا ﴿١٣﴾

13. ನಾವು ಸನ್ಮಾರ್ಗವನ್ನು ಆಲಿಸಿದಾಗ ಅದರಲ್ಲಿ ವಿಶ್ವಾಸವಿಟ್ಟೆವು. ಆಗ ಯಾರು ತನ್ನ ರಬ್‌ನಲ್ಲಿ ವಿಶ್ವಾಸವಿಡುವನೋ ಅವನು ಯಾವುದೇ ನಷ್ಟವನ್ನಾಗಲಿ ಅನ್ಯಾಯವನ್ನಾಗಲಿ ಭಯಪಡಬೇಕಾಗಿ ಬರಲಾರದು ಎಂದೂ (ಅವರು ಹೇಳಿದರು).

وَأَنَّا مِنَّا ٱلْمُسْلِمُونَ وَمِنَّا ٱلْقَـٰسِطُونَ ۖ فَمَنْ أَسْلَمَ فَأُو۟لَـٰٓئِكَ تَحَرَّوْا۟ رَشَدًا ﴿١٤﴾

14. ನಮ್ಮ ಪೈಕಿ ವಿಧೇಯರಾಗಿ ಜೀವಿಸುವವರಿರುವರು. ಅನ್ಯಾಯವೆಸಗುವವರೂ ನಮ್ಮಲ್ಲಿರುವರು. ಆದರೆ ಯಾರು ವಿಧೇಯನಾಗಿರುವನೋ ಅಂತಹವರು ಸನ್ಮಾರ್ಗವನ್ನು ಅವಲಂಬಿಸಿದವರಾಗಿರುವರು.

وَأَمَّا ٱلْقَـٰسِطُونَ فَكَانُوا۟ لِجَهَنَّمَ حَطَبًا ﴿١٥﴾

15. ಆದರೆ ಅನ್ಯಾಯವೆಸಗಿದವರು ನರಕಾಗ್ನಿಯ ಸೌದೆಗಳಾಗಿ ಮಾರ್ಪಡುವರು (ಎಂದೂ ಅವರು ಹೇಳಿದರು).

وَأَلَّوِ ٱسْتَقَـٰمُوا۟ عَلَى ٱلطَّرِيقَةِ لَأَسْقَيْنَـٰهُم مَّآءً غَدَقًا ﴿١٦﴾

16. ಅವರು ಆ ಮಾರ್ಗದಲ್ಲಿ (ಇಸ್ಲಾಮಿನಲ್ಲಿ) ನೇರವಾಗಿ ನಿಲ್ಲುವುದಾದರೆ ನಾವು ಅವರಿಗೆ ಕುಡಿಯಲು ಯಥೇಷ್ಟ ನೀರನ್ನು ನೀಡುವೆವು.

لِّنَفْتِنَهُمْ فِيهِ ۚ وَمَن يُعْرِضْ عَن ذِكْرِ رَبِّهِۦ يَسْلُكْهُ عَذَابًا صَعَدًا ﴿١٧﴾

17. ತನ್ಮೂಲಕ ನಾವು ಅವರನ್ನು ಪರೀಕ್ಷಿಸುವ ಸಲುವಾಗಿ. ತನ್ನ ರಬ್‌ನ ಉಪದೇಶವನ್ನು ಬಿಟ್ಟು ಯಾರು ವಿಮುಖನಾಗುವನೋ ಅವನನ್ನು ಅವನು (ಅಲ್ಲಾಹು) ಕಠೋರವಾದ ಶಿಕ್ಷೆಗೆ ಪ್ರವೇಶ ಮಾಡಿಸುವನು (ಎಂದೂ ನನಗೆ ಬೋಧನೆ ನೀಡಲಾಗಿದೆ).

وَأَنَّ ٱلْمَسَـٰجِدَ لِلَّهِ فَلَا تَدْعُوا۟ مَعَ ٱللَّهِ أَحَدًا ﴿١٨﴾

18. ಖಂಡಿತವಾಗಿಯೂ ಮಸೀದಿಗಳು ಅಲ್ಲಾಹುವಿಗಿರುವುದಾಗಿವೆ. ಆದ್ದರಿಂದ ನೀವು ಅಲ್ಲಾಹುವಿನ ಜೊತೆಗೆ ಯಾರನ್ನೂ ಕರೆದು ಪ್ರಾರ್ಥಿಸದಿರಿ ಎಂದೂ.[2]

---

1 ಅಲ್ಲಾಹುವಿಗೆ ಗೊತ್ತಾಗದ ರೀತಿಯಲ್ಲಿ ಎಲ್ಲಿಗಾದರೂ ಓಡಿ ತಪ್ಪಿಸಿಕೊಳ್ಳಲು ಸಾಧ್ಯವಾಗದು.

2 ಇಂದು ಕೆಲವು ವಿದ್ವಾಂಸ ವೇಷಧಾರಿಗಳು ಅಲ್ಲಾಹುವಿನ ಮಸೀದಿಗಳಲ್ಲೇ ಸೃಷ್ಟಿಗಳನ್ನು ಕರೆದು ಪ್ರಾರ್ಥಿಸಲು ಹಲವಾರು ವಾದಗಳನ್ನು ಮುಂದಿಟ್ಟು ಪ್ರಸ್ತುತ ಸೂಕ್ತಿ ಮತ್ತು 20ನೇ ಸೂಕ್ತಿಯನ್ನು ದುರ್ವ್ಯಾಖ್ಯಾನ ಮಾಡುತ್ತಿದ್ದಾರೆ.

**19.** ಅಲ್ಲಾಹುವಿನ ದಾಸನು (ಪ್ರವಾದಿಯವರು) ಅವನೊಂದಿಗೆ ಪ್ರಾರ್ಥಿಸುವ ಸಲುವಾಗಿ ಎದ್ದು ನಿಂತಾಗ ಅವರು[3] ಆತನ ಸುತ್ತಲೂ ಒತ್ತೊತ್ತಾಗಿ ಗುಂಪು ಸೇರತೊಡಗಿದರು ಎಂದೂ.

وَأَنَّهُۥ لَمَّا قَامَ عَبۡدُ ٱللَّهِ يَدۡعُوهُ كَادُواْ يَكُونُونَ عَلَيۡهِ لِبَدٗا ١٩

**20.** (ಓ ಪ್ರವಾದಿಯವರೇ!) ಹೇಳಿರಿ: 'ನಾನು ನನ್ನ ರಬ್ಬನ್ನು ಮಾತ್ರ ಕರೆದು ಪ್ರಾರ್ಥಿಸುವೆನು. ಅವನೊಂದಿಗೆ ಯಾರನ್ನೂ ನಾನು ಸಹಭಾಗಿಯನ್ನಾಗಿ ಮಾಡಲಾರೆನು'.

قُلۡ إِنَّمَآ أَدۡعُواْ رَبِّي وَلَآ أُشۡرِكُ بِهِۦٓ أَحَدٗا ٢٠

**21.** ತಾವು ಹೇಳಿರಿ: 'ನಿಮಗೆ ಹಾನಿಯನ್ನಾಗಲಿ, ಸನ್ಮಾರ್ಗವನ್ನಾಗಲಿ ನೀಡುವುದು ನನ್ನ ಅಧೀನದಲ್ಲಿಲ್ಲ'.

قُلۡ إِنِّي لَآ أَمۡلِكُ لَكُمۡ ضَرّٗا وَلَا رَشَدٗا ٢١

**22.** ತಾವು ಹೇಳಿರಿ: 'ಖಂಡಿತವಾಗಿಯೂ ಅಲ್ಲಾಹುವಿನಿಂದ (ಶಿಕ್ಷೆಯಿಂದ) ಯಾರೂ ನನಗೆ ಎಂದೂ ಅಭಯವನ್ನು ನೀಡಲಾರರು. ಅವನಲ್ಲೇ ವಿನಾ ಬೇರೊಂದು ಅಭಯ ಸ್ಥಾನವನ್ನು ನಾನು ಎಂದಿಗೂ ಕಾಣಲಾರೆನು.

قُلۡ إِنِّي لَن يُجِيرَنِي مِنَ ٱللَّهِ أَحَدٞ وَلَنۡ أَجِدَ مِن دُونِهِۦ مُلۡتَحَدًا ٢٢

**23.** ಅಲ್ಲಾಹುವಿನ ವತಿಯ ಉಪದೇಶ ಮತ್ತು ಅವನ ಸಂದೇಶಗಳ ಹೊರತು (ಯಾವುದೂ ನನ್ನ ಅಧೀನದಲ್ಲಿಲ್ಲ). ಯಾರಾದರೂ ಅಲ್ಲಾಹುವನ್ನು ಮತ್ತು ಅವನ ಸಂದೇಶವಾಹಕರನ್ನು ಧಿಕ್ಕರಿಸುವುದಾದರೆ ಖಂಡಿತವಾಗಿಯೂ ಅವನಿಗೆ ನರಕಾಗ್ನಿಯಿದೆ. ಅಂತಹವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು'.

إِلَّا بَلَٰغٗا مِّنَ ٱللَّهِ وَرِسَٰلَٰتِهِۦۚ وَمَن يَعۡصِ ٱللَّهَ وَرَسُولَهُۥ فَإِنَّ لَهُۥ نَارَ جَهَنَّمَ خَٰلِدِينَ فِيهَآ أَبَدًا ٢٣

**24.** ಹಾಗೆ ಅವರಿಗೆ ಎಚ್ಚರಿಕೆ ನೀಡಲಾಗುವುದನ್ನು ಕಣ್ಣಾರೆ ಕಂಡಾಗ ಅತ್ಯಂತ ಬಲಹೀನ ಸಹಾಯಕನು ಯಾರು ಮತ್ತು ಸಂಖ್ಯೆಯಲ್ಲಿ

حَتَّىٰٓ إِذَا رَأَوۡاْ مَا يُوعَدُونَ فَسَيَعۡلَمُونَ مَنۡ أَضۡعَفُ نَاصِرٗا وَأَقَلُّ عَدَدٗا ٢٤

3 ಇಲ್ಲಿ 'ಅವರು' ಎಂದರೆ ಜಿನ್ನ್‌ಗಳು ಅಥವಾ ಸಹಾಬಿಗಳು ಅಥವಾ ಪ್ರವಾದಿ(صَلَّى ٱللَّهُ عَلَيْهِ وَسَلَّمَ)ರವರನ್ನು ಅಪಮಾನಿಸಲು ಮತ್ತು ಅಪಹಾಸ್ಯಗೈಯಲು ಮುಗಿಬೀಳುತ್ತಿದ್ದ ಶತ್ರುಗಳು ಎಂಬ ವಿಭಿನ್ನ ಅಭಿಪ್ರಾಯಗಳನ್ನು ವ್ಯಾಖ್ಯಾನಕಾರರು ಹೇಳಿದ್ದಾರೆ. ಪ್ರಬಲಾಭಿಪ್ರಾಯ ಪ್ರಕಾರ ಇಲ್ಲಿ 'ಅವರು' ಎಂದರೆ ಶತ್ರುಗಳಾಗಿದ್ದಾರೆ.

ಅತ್ಯಂತ ಕಡಿಮೆ ಯಾರು ಎಂಬುದನ್ನು ಅವರು ಅರಿತುಕೊಳ್ಳುವರು.[1]

قُلۡ إِنۡ أَدۡرِيٓ أَقَرِيبٞ مَّا تُوعَدُونَ أَمۡ يَجۡعَلُ لَهُۥ رَبِّيٓ أَمَدًا ٢٥

25. (ಓ ಪ್ರವಾದಿಯವರೇ!) ಹೇಳಿರಿ: 'ನಿಮಗೆ ಎಚ್ಚರಿಕೆ ನೀಡಲಾಗುವ ವಿಷಯವು ಹತ್ತಿರದಲ್ಲೇ ಇದೆಯೋ ಅಥವಾ ನನ್ನ ರಬ್ ಅದಕ್ಕೆ ಅವಧಿಯನ್ನು ನಿಶ್ಚಯಿಸುವನೋ ಎಂಬುದು ನನಗೆ ತಿಳಿದಿಲ್ಲ'.

عَٰلِمُ ٱلۡغَيۡبِ فَلَا يُظۡهِرُ عَلَىٰ غَيۡبِهِۦٓ أَحَدًا ٢٦

26. ಅವನು ಅಗೋಚರವನ್ನು ಅರಿಯುವವನಾಗಿರುವನು. ಆದರೆ ಅವನು ತನ್ನ ಅಗೋಚರ ಜ್ಞಾನವನ್ನು ಯಾರಿಗೂ ಪ್ರಕಟಗೊಳಿಸಲಾರನು.

إِلَّا مَنِ ٱرۡتَضَىٰ مِن رَّسُولٖ فَإِنَّهُۥ يَسۡلُكُ مِنۢ بَيۡنِ يَدَيۡهِ وَمِنۡ خَلۡفِهِۦ رَصَدٗا ٢٧

27. ಅವನು ತೃಪ್ತಿಪಟ್ಟಿರುವ ಸಂದೇಶವಾಹಕರಿಗೆ ಹೊರತು. ಆದರೆ ಖಂಡಿತವಾಗಿಯೂ ಅವನು ಅವರ (ಸಂದೇಶವಾಹಕರ) ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ ಕಾವಲುಗಾರರನ್ನು ಇರಿಸುವನು.

لِّيَعۡلَمَ أَن قَدۡ أَبۡلَغُواْ رِسَٰلَٰتِ رَبِّهِمۡ وَأَحَاطَ بِمَا لَدَيۡهِمۡ وَأَحۡصَىٰ كُلَّ شَيۡءٍ عَدَدَۢا ٢٨

28. ಅವರು (ಸಂದೇಶವಾಹಕರು) ತಮ್ಮ ರಬ್‌ನ ಸಂದೇಶಗಳನ್ನು ತಲುಪಿಸಿಕೊಟ್ಟಿರುವರೆಂದು ಅವನು (ಅಲ್ಲಾಹು) ಅರಿಯುವ ಸಲುವಾಗಿ.[2] ಅವರ ಬಳಿಯಿರುವುದನ್ನು ಅವನು ಸಂಪೂರ್ಣವಾಗಿ ಅರಿತಿರುವನು. ಅವನು ಸಕಲ ವಸ್ತುಗಳ ಸಂಖ್ಯೆಯನ್ನು ಎಣಿಸಿಟ್ಟಿರುವನು.

---

1 ಲೌಕಿಕ ಶಕ್ತಿ ಮತ್ತು ಜನಬಲವನ್ನು ಪರಿಗಣಿಸಿ ಅನೇಕ ಮಂದಿ ಅಸತ್ಯದ ಕಡೆಗೆ ವಾಲುತ್ತಾರೆ. ಆದರೆ ಅಲ್ಲಾಹುವಿನ (ಐಹಿಕ ಅಥವಾ ಪಾರಲೌಕಿಕ) ಶಿಕ್ಷೆ ಬರುವಾಗ, ಅಸತ್ಯವಾದಿಗಳಿಗೆ ಸಹಾಯ ಮಾಡಲು ಯಾರೂ ಇರಲಾರರೆಂದು ಅವರಿಗೆ ಸ್ಪಷ್ಟವಾಗಲಿದೆ.

2 ಅವರು (ಸಂದೇಶವಾಹಕರು) ತಮ್ಮ ಪ್ರಭುವಿನ ದೌತ್ಯವನ್ನು ತಲುಪಿಸಿಕೊಟ್ಟಿರುವರೆಂದು ಅವರು [ಮುಹಮ್ಮದ್ (ﷺ) ರವರು] ಅರಿಯುವ ಸಲುವಾಗಿ ಎಂದೂ ಅರ್ಥ ನೀಡಲಾಗಿದೆ.

## ಅಲ್‌ಮುಝ್ಝಮ್ಮಿಲ್
(ಬಟ್ಟೆಯಿಂದ ಹೊದಿಯಲಾಗಿರುವವನು)

## سُورَةُ المُزَّمِّلِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 20

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಓ ಬಟ್ಟೆಯಿಂದ ಹೊದ್ದುಕೊಂಡವನೇ![1]

يَٰٓأَيُّهَا ٱلۡمُزَّمِّلُ ١

2. ರಾತ್ರಿಯಲ್ಲಿ ಸ್ವಲ್ಪ ಸಮಯವನ್ನು ಹೊರತುಪಡಿಸಿ ಎದ್ದು ನಿಂತು ನಮಾಝ್ ಮಾಡಿರಿ.

قُمِ ٱلَّيۡلَ إِلَّا قَلِيلٗا ٢

3. ಅದರ (ರಾತ್ರಿಯ) ಅರ್ಧಭಾಗದಲ್ಲಿ ಅಥವಾ ಅದರಿಂದ (ಸ್ವಲ್ಪ) ಕಡಿಮೆಗೊಳಿಸಿರಿ.

نِّصۡفَهُۥٓ أَوِ ٱنقُصۡ مِنۡهُ قَلِيلًا ٣

4. ಅಥವಾ ಅದಕ್ಕಿಂತ ಅಧಿಕಗೊಳಿಸಿರಿ. ಕುರ್‌ಆನನ್ನು ಸಾವಕಾಶವಾಗಿ ಪಾರಾಯಣ ಮಾಡಿರಿ.

أَوۡ زِدۡ عَلَيۡهِ وَرَتِّلِ ٱلۡقُرۡءَانَ تَرۡتِيلًا ٤

5. ಖಂಡಿತವಾಗಿಯೂ ನಾವು ತಮ್ಮ ಮೇಲೆ ಭಾರವಾದ ಒಂದು ವಚನವನ್ನು[2] ಹಾಕಲಿರುವೆವು.

إِنَّا سَنُلۡقِي عَلَيۡكَ قَوۡلٗا ثَقِيلًا ٥

6. ಖಂಡಿತವಾಗಿಯೂ ರಾತ್ರಿಯಲ್ಲಿ ಎದ್ದು ನಮಾಝ್ ಮಾಡುವುದು ಬಲಿಷ್ಠ ಹೃದಯಸಾನಿಧ್ಯತೆಯನ್ನು ನೀಡುತ್ತದೆ ಮತ್ತು ಮಾತನ್ನು ಅತ್ಯಂತ ನೇರವಾಗಿಸುತ್ತದೆ.

إِنَّ نَاشِئَةَ ٱلَّيۡلِ هِيَ أَشَدُّ وَطۡـٔٗا وَأَقۡوَمُ قِيلًا ٦

7. ಖಂಡಿತವಾಗಿಯೂ ತಮಗೆ ಹಗಲಿನ ವೇಳೆಯಲ್ಲಿ ದೀರ್ಘವಾದ ಕೆಲಸದ ಒತ್ತಡವಿದೆ.[3]

إِنَّ لَكَ فِي ٱلنَّهَارِ سَبۡحٗا طَوِيلٗا ٧

1 ಪ್ರವಾದಿ(ﷺ)ರವರನ್ನು ಬಟ್ಟೆಯಿಂದ ಹೊದಿಸಿದವರೇ ಎಂದು ಕರೆಯಲಾಗಿರುವುದರ ಕುರಿತು ವ್ಯಾಖ್ಯಾನಕಾರರಿಗೆ ವಿಭಿನ್ನ ಅಭಿಪ್ರಾಯಗಳಿವೆ. ಮೊದಲ ಬಾರಿ ದಿವ್ಯ ಸಂದೇಶ ಲಭ್ಯವಾದಾಗ ಉಂಟಾದ ಭಯಭೀತಿಯಿಂದಾಗಿ ಹೊದಿಸಲಾದವನು, ಪ್ರಾರ್ಥನೆ ಮಾಡುವ ಸಲುವಾಗಿ ಉಡುಪುಗಳನ್ನು ಹೊದ್ದು ಸಜ್ಜಾದವನು, ಮೈಮೇಲೆ ಹೊದ್ದು ನಿದ್ರಿಸಲು ಹೊರಡುವವನು ಇತ್ಯಾದಿ ಹಲವು ವಿಧಗಳಲ್ಲಿ ಮುಝ್ಝಮ್ಮಿಲ್ ಎಂಬ ಪದವನ್ನು ವಿವರಿಸಲಾಗಿದೆ'.

2 ಅಲ್ಲಾಹು ಪ್ರವಾದಿ(ﷺ)ರಿಗೆ ಮುಂದೆ ಅವತೀರ್ಣಗೊಳಿಸಿಕೊಡಲು ಇಚ್ಛಿಸುವ ಧರ್ಮೋಪದೇಶ ಹಾಗೂ ವಿಧಿ ನಿಷೇದಗಳ ಕುರಿತು ಇಲ್ಲಿ ಭಾರವಾದ ವಚನ ಎನ್ನಲಾಗಿದೆ. ಇದು ಪ್ರವಾದಿತ್ವ ನಿಯೋಗದ ಆರಂಭ ಕಾಲದಲ್ಲಿ ಅವತೀರ್ಣಗೊಂಡ ಅಧ್ಯಾಯಗಳಲ್ಲೊಂದಾಗಿದೆ.

3 ಹಗಲ ವೇಳೆ ಕೆಲಸದ ಒತ್ತಡವಿರುವುದರಿಂದ ದೀರ್ಘ ಹೊತ್ತು ಪ್ರಾರ್ಥನೆಗಳಲ್ಲಿ ತಲ್ಲೀನರಾಗಲು ಸಾಧ್ಯವಾಗದು.

8. ತಮ್ಮ ರಬ್‌ನ ನಾಮವನ್ನು ಸ್ಮರಿಸಿರಿ ಮತ್ತು (ಇತರ ಚಿಂತೆಗಳನ್ನು ಬಿಟ್ಟು) ಅವನಿಗೆ ಪೂರ್ಣವಾಗಿ ಅರ್ಪಿಸಿಕೊಳ್ಳಿರಿ.

وَٱذْكُرِ ٱسْمَ رَبِّكَ وَتَبَتَّلْ إِلَيْهِ تَبْتِيلًا ﴿٨﴾

9. ಅವನು ಉದಯಸ್ಥಾನದ ಮತ್ತು ಅಸ್ತಮಸ್ಥಾನದ ರಬ್ ಆಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಆದ್ದರಿಂದ ಅವನನ್ನು ಭರವಸೆಯಿಡಲ್ಪಡುವವನ್ನನಾಗಿ ಮಾಡಿಕೊಳ್ಳಿರಿ.

رَّبُّ ٱلْمَشْرِقِ وَٱلْمَغْرِبِ لَآ إِلَٰهَ إِلَّا هُوَ فَٱتَّخِذْهُ وَكِيلًا ﴿٩﴾

10. ಅವರು (ಸತ್ಯನಿಷೇಧಿಗಳು) ಹೇಳುವುದರ ಕುರಿತು ತಾವು ಸಹನೆ ವಹಿಸಿರಿ ಮತ್ತು ಸುಂದರವಾದ ರೀತಿಯಲ್ಲಿ ಅವರಿಂದ ದೂರ ಸರಿಯಿರಿ.[1]

وَٱصْبِرْ عَلَىٰ مَا يَقُولُونَ وَٱهْجُرْهُمْ هَجْرًا جَمِيلًا ﴿١٠﴾

11. ನನ್ನನ್ನೂ, ಸುಖಾನುಗ್ರಹಗಳನ್ನು ಹೊಂದಿರುವ ಸತ್ಯನಿಷೇಧಿಗಳನ್ನೂ ಬಿಟ್ಟುಬಿಡಿರಿ.[2] ಅವರಿಗೆ ಸ್ವಲ್ಪ ಕಾಲಾವಕಾಶವನ್ನು ನೀಡಿರಿ.

وَذَرْنِى وَٱلْمُكَذِّبِينَ أُو۟لِى ٱلنَّعْمَةِ وَمَهِّلْهُمْ قَلِيلًا ﴿١١﴾

12. ಖಂಡಿತವಾಗಿಯೂ ನಮ್ಮ ಬಳಿ ಕಾಲು ಸಂಕೋಲೆಗಳೂ, ಧಗಧಗಿಸುವ ನರಕಾಗ್ನಿಯೂ ಇವೆ.

إِنَّ لَدَيْنَآ أَنكَالًا وَجَحِيمًا ﴿١٢﴾

13. ಉಸಿರು ಕಟ್ಟಿಸುವ ಆಹಾರವೂ ಯಾತನಾಮಯವಾದ ಶಿಕ್ಷೆಯೂ ಇವೆ.

وَطَعَامًا ذَا غُصَّةٍ وَعَذَابًا أَلِيمًا ﴿١٣﴾

14. ಭೂಮಿಯು ಮತ್ತು ಪರ್ವತಗಳು ಕಂಪಿಸುವ ಮತ್ತು ಪರ್ವತಗಳು ಹರಿಯುತ್ತಿರುವ ಮರಳ ರಾಶಿಯಂತಾಗುವ ದಿನ!

يَوْمَ تَرْجُفُ ٱلْأَرْضُ وَٱلْجِبَالُ وَكَانَتِ ٱلْجِبَالُ كَثِيبًا مَّهِيلًا ﴿١٤﴾

15. ಖಂಡಿತವಾಗಿಯೂ ನಾವು ನಿಮ್ಮೆಡೆಗೆ ನಿಮ್ಮ ಮೇಲೆ ಸಾಕ್ಷಿಯಾಗಿರುವ ಓರ್ವ ಸಂದೇಶವಾಹಕರನ್ನು ಕಳುಹಿಸಿರುವೆವು.

إِنَّآ أَرْسَلْنَآ إِلَيْكُمْ رَسُولًا شَٰهِدًا عَلَيْكُمْ كَمَآ أَرْسَلْنَآ إِلَىٰ فِرْعَوْنَ رَسُولًا ﴿١٥﴾

---

ಆದ್ದರಿಂದ ರಾತ್ರಿಯಲ್ಲಿ ಸಾಧ್ಯವಾದಷ್ಟು ಆರಾಧನೆಯಲ್ಲಿ ಮಗ್ನರಾಗಿರಿ. ಇದು ಅಲ್ಲಾಹು ಪ್ರವಾದಿ(ﷺ)ರಿಗೆ ನೀಡಿದ ಆದೇಶವಾಗಿದೆ.

1 ಸತ್ಯನಿಷೇಧಿಗಳು ಗೇಲಿ ಮಾಡುವಾಗ ಅವರ ಬಳಿ ಜಗಳಕ್ಕೆ ನಿಲ್ಲದೆ ಗೌರವಾನ್ವಿತವಾಗಿ ಅವರಿಂದ ದೂರಸರಿಯಲು ಅಲ್ಲಾಹು ಪ್ರವಾದಿ(ﷺ)ರಿಗೆ ಉಪದೇಶ ನೀಡುತ್ತಾನೆ.

2 ಸುಖಲೋಲುಪರಾದ ಸತ್ಯನಿಷೇಧಿಗಳ ಸ್ವೇಚ್ಛಂದತೆಯ ಕುರಿತು ದುಃಖಿಸದಿರಿ. ಅವರನ್ನು ನಾನು ನೋಡಿಕೊಳ್ಳುವೆನು ಎಂದು ಅಲ್ಲಾಹು ಹೇಳುತ್ತಿದ್ದಾನೆ.

ಫಿರ್‌ಔನನ ಬಳಿಗೆ ಓರ್ವ ಸಂದೇಶವಾಹಕರನ್ನು ಕಳುಹಿಸಿದಂತೆ.

16. ತರುವಾಯ ಫಿರ್‌ಔನ್ ಆ ಸಂದೇಶವಾಹಕರನ್ನು ಧಿಕ್ಕರಿಸಿದನು. ಆಗ ನಾವು ಅವನನ್ನು ಬಲಿಷ್ಠವಾದ ಒಂದು ಹಿಡಿತದಿಂದ ಹಿಡಿದೆವು.

فَعَصَىٰ فِرْعَوْنُ ٱلرَّسُولَ فَأَخَذْنَٰهُ أَخْذًا وَبِيلًا ﴿١٦﴾

17. ಆದರೆ ನೀವು ಅವಿಶ್ವಾಸವಿಡುವುದಾದರೆ ಮಕ್ಕಳನ್ನು ನೆರೆತ ಕೂದಲಿನವರನ್ನಾಗಿ ಮಾಡುವ ಒಂದು ದಿನವನ್ನು ಭಯಪಡಲು ನಿಮಗೆ ಹೇಗೆ ಸಾಧ್ಯವಾಗುವುದು?[1]

فَكَيْفَ تَتَّقُونَ إِن كَفَرْتُمْ يَوْمًا يَجْعَلُ ٱلْوِلْدَٰنَ شِيبًا ﴿١٧﴾

18. ಅದರಿಂದಾಗಿ ಆಕಾಶವು ಒಡೆದು ಹೋಗುವುದು. ಅಲ್ಲಾಹುವಿನ ವಾಗ್ದಾನವು ಜಾರಿಯಾಗಿಯೇ ತೀರುವುದು.

ٱلسَّمَآءُ مُنفَطِرٌۢ بِهِۦ ۚ كَانَ وَعْدُهُۥ مَفْعُولًا ﴿١٨﴾

19. ಖಂಡಿತವಾಗಿಯೂ ಇದೊಂದು ಉಪದೇಶವಾಗಿದೆ. ಆದ್ದರಿಂದ ಯಾರಾದರೂ ಇಚ್ಛಿಸುವುದಾದರೆ ಅವನು ತನ್ನ ರಬ್‌ನೆಡೆಗೆ ಒಂದು ಮಾರ್ಗವನ್ನು ಪಡೆದುಕೊಳ್ಳಲಿ.

إِنَّ هَٰذِهِۦ تَذْكِرَةٌ ۖ فَمَن شَآءَ ٱتَّخَذَ إِلَىٰ رَبِّهِۦ سَبِيلًا ﴿١٩﴾

20. ತಾವು ಮತ್ತು ತಮ್ಮ ಸಂಗಡವಿರುವವರಲ್ಲಿನ ಒಂದು ಗುಂಪು ಸರಿಸುಮಾರು ರಾತ್ರಿಯ ಮೂರನೇ ಎರಡು ಭಾಗ, (ಕೆಲವೊಮ್ಮೆ) ಅರ್ಧಭಾಗ, (ಕೆಲವೊಮ್ಮೆ) ಮೂರನೇ ಒಂದು ಭಾಗದಲ್ಲಿ ನಿಂತು ನಮಾಝ್ ಮಾಡುತ್ತಿರುವಿರಿ ಎಂದು ಖಂಡಿತವಾಗಿಯೂ ತಮ್ಮ ರಬ್ ಅರಿತಿರುವನು. ರಾತ್ರಿ ಮತ್ತು ಹಗಲನ್ನು ಎಣಿಸುವವನು ಅಲ್ಲಾಹುವಾಗಿರುವನು. ಅದನ್ನು ಎಣಿಸಿಡಲು ನಿಮಗೆ ಸಾಧ್ಯವಾಗದು ಎಂದು ಅವನು ಅರಿತಿರುವನು.[2] ಆದ್ದರಿಂದ ಅವನು

۞ إِنَّ رَبَّكَ يَعْلَمُ أَنَّكَ تَقُومُ أَدْنَىٰ مِن ثُلُثَىِ ٱلَّيْلِ وَنِصْفَهُۥ وَثُلُثَهُۥ وَطَآئِفَةٌ مِّنَ ٱلَّذِينَ مَعَكَ ۚ وَٱللَّهُ يُقَدِّرُ ٱلَّيْلَ وَٱلنَّهَارَ ۚ عَلِمَ أَن لَّن تُحْصُوهُ فَتَابَ عَلَيْكُمْ ۖ فَٱقْرَءُوا۟ مَا تَيَسَّرَ مِنَ ٱلْقُرْءَانِ ۚ عَلِمَ أَن سَيَكُونُ مِنكُم مَّرْضَىٰ ۙ وَءَاخَرُونَ يَضْرِبُونَ فِى ٱلْأَرْضِ يَبْتَغُونَ مِن فَضْلِ ٱللَّهِ ۙ وَءَاخَرُونَ يُقَٰتِلُونَ فِى سَبِيلِ ٱللَّهِ ۖ

1 ಭಯವಿಹ್ವಲತೆಯಿಂದಾಗಿ ಮಕ್ಕಳಿಗೆ ಹಠಾತ್ತನೆ ವೃದ್ಧಾಪ್ಯ ಬಾಧಿಸಿ ಕೂದಲು ನೆರೆತವರಾಗಿ ಬಿಡುವ ಭೀಕರ ದಿನವೊಂದರ ಶಿಕ್ಷೆಯಿಂದ ಸ್ವತಃ ತಮ್ಮನ್ನು ರಕ್ಷಣೆ ಮಾಡಲು ನಿಮಗೆ ಹೇಗೆ ತಾನೇ ಸಾಧ್ಯ?

2 ರಾತ್ರಿ ಹಗಲುಗಳ ಪ್ರಮಾಣದಲ್ಲಿ ದಿನನಿತ್ಯ ಸಣ್ಣಪುಟ್ಟ ವ್ಯತ್ಯಾಸಗಳಿರಬಹುದು. ತನ್ನಿಮಿತ್ತ ರಾತ್ರಿಯ ಪೂರ್ಣಾರ್ಧ ಅಥವಾ ಸರಿಯಾಗಿ ಮೂರನೆ ಒಂದಂಶವನ್ನು ಲೆಕ್ಕಹಾಕಲು ಹೆಚ್ಚಿನವರಿಗೆ ಅಸಾಧ್ಯವಾಗಿದೆ. ಎಲ್ಲರಿಗೂ ನಿರ್ವಹಿಸಲು ಸಾಧ್ಯವಾಗುವ ಸಂಗತಿಗಳನ್ನು ಮಾತ್ರ ಇಸ್ಲಾಮ್ ಬೋಧಿಸುತ್ತದೆ.

فَٱقۡرَءُواْ مَا تَيَسَّرَ مِنۡهُۚ وَأَقِيمُواْ ٱلصَّلَوٰةَ
وَءَاتُواْ ٱلزَّكَوٰةَ وَأَقۡرِضُواْ ٱللَّهَ قَرۡضًا
حَسَنٗاۚ وَمَا تُقَدِّمُواْ لِأَنفُسِكُم مِّنۡ خَيۡرٖ
تَجِدُوهُ عِندَ ٱللَّهِ هُوَ خَيۡرٗا وَأَعۡظَمَ أَجۡرٗاۚ
وَٱسۡتَغۡفِرُواْ ٱللَّهَۖ إِنَّ ٱللَّهَ غَفُورٞ رَّحِيمُۢ ٢٠

ನಿಮಗೆ ವಿನಾಯಿತಿ ನೀಡಿರುವನು.[1] ಆದ್ದರಿಂದ ನೀವು ಕುರ್‌ಆನ್‌ನಿಂದ ಅನುಕೂಲವಾಗಿರುವುದನ್ನು ಪಾರಾಯಣ ಮಾಡಿ ನಮಾಝ್ ಮಾಡಿರಿ. ನಿಮ್ಮ ಪೈಕಿ ರೋಗಿಗಳಿರುವರು, ಭೂಮಿಯಲ್ಲಿ ಸಂಚರಿಸಿ ಅಲ್ಲಾಹುವಿನ ಅನುಗ್ರಹವನ್ನು ಅರಸುವ ಕೆಲವರಿರುವರು ಮತ್ತು ಅಲ್ಲಾಹುವಿನ ಮಾರ್ಗದಲ್ಲಿ ಯುದ್ಧ ಮಾಡುವ ಇತರ ಕೆಲವರಿರುವರು ಎಂಬುದನ್ನು ಅಲ್ಲಾಹು ಅರಿತಿರುವನು. ಆದ್ದರಿಂದ ನೀವು ಅದರಿಂದ (ಕುರ್‌ಆನ್‌ನಿಂದ) ಅನುಕೂಲಕರವಾಗಿರುವುದನ್ನು ವಾಗಿರುವುದನ್ನು ಪಾರಾಯಣ ಮಾಡಿರಿ, ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ನೀಡಿರಿ ಮತ್ತು ಅಲ್ಲಾಹುವಿಗೆ ಉತ್ತಮವಾದ ಸಾಲವನ್ನು ನೀಡಿರಿ. ನೀವು ಸ್ವತಃ ನಿಮಗಾಗಿ ಯಾವುದೇ ಒಳಿತನ್ನು ಮುಂಗಡವಾಗಿ ಮಾಡಿದರೂ ಅಲ್ಲಾಹುವಿನ ಬಳಿ ಅದನ್ನು ಒಳಿತಾಗಿಯೂ, ಮಹಾ ಪ್ರತಿಫಲವಿರುವುದಾಗಿಯೂ ನೀವು ಕಾಣುವಿರಿ. ಅಲ್ಲಾಹುವಿನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.

---

1 2–4 ಸೂಕ್ತಿಗಳಲ್ಲಿ ಹೇಳಿದಂತೆ ರಾತ್ರಿಯ ಒಂದು ನಿಶ್ಚಿತ ಭಾಗವನ್ನು ಆರಾಧನೆಯಲ್ಲಿ ಕಳೆಯಬೇಕೆಂಬ ಆದೇಶದಿಂದ ಅಲ್ಲಾಹು ಈ ಸೂಕ್ತಿಯ ಮೂಲಕ ವಿನಾಯಿತಿ ನೀಡಿದ್ದಾನೆ.

## ಅಲ್‌ಮುದ್ದಸ್ಸಿರ್ (ಹೊದಿಯಲಾಗಿರುವವನು)

## سُورَةُ المُدَّثِّرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 56

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಓ ಹೊದ್ದುಕೊಂಡವನೇ![1]

يَٰٓأَيُّهَا ٱلۡمُدَّثِّرُ ١

2. ಎದ್ದೇಳಿರಿ! (ಜನರಿಗೆ) ಎಚ್ಚರಿಕೆ ನೀಡಿರಿ.

قُمۡ فَأَنذِرۡ ٢

3. ತಮ್ಮ ರಬ್ಬನ್ನು ಮಹತ್ವಪಡಿಸಿರಿ.

وَرَبَّكَ فَكَبِّرۡ ٣

4. ತಮ್ಮ ಉಡುಪುಗಳನ್ನು ಶುದ್ಧೀಕರಿಸಿರಿ.

وَثِيَابَكَ فَطَهِّرۡ ٤

5. ಪಾಪವನ್ನು ವರ್ಜಿಸಿರಿ.

وَٱلرُّجۡزَ فَٱهۡجُرۡ ٥

6. ಹೆಚ್ಚಿನ ಲಾಭವನ್ನು ಆಶಿಸಿ ತಾವು ಉದಾರತೆ ತೋರದಿರಿ.[2]

وَلَا تَمۡنُن تَسۡتَكۡثِرُ ٦

7. ತಮ್ಮ ರಬ್‌ಗೋಸ್ಕರ ಸಹನೆ ಪಾಲಿಸಿರಿ.

وَلِرَبِّكَ فَٱصۡبِرۡ ٧

8. ಕಹಳೆಯಲ್ಲಿ ಮೊಳಗಿಸ(ಊದ)ಲಾದಾಗ.

فَإِذَا نُقِرَ فِي ٱلنَّاقُورِ ٨

9. ಆ ದಿನವು ಪ್ರಯಾಸಕರ ದಿನವಾಗಿರುವುದು.

فَذَٰلِكَ يَوۡمَئِذٖ يَوۡمٌ عَسِيرٌ ٩

10. ಸತ್ಯನಿಷೇಧಿಗಳಿಗೆ ಸುಗಮವಲ್ಲದ ಒಂದು ದಿನ.

عَلَى ٱلۡكَٰفِرِينَ غَيۡرُ يَسِيرٖ ١٠

11. ನನ್ನನ್ನೂ, ನಾನು ಒಬ್ಬಂಟಿಯಾಗಿ ಸೃಷ್ಟಿಸಿದವನನ್ನೂ ಬಿಟ್ಟುಬಿಡಿರಿ.[3]

ذَرۡنِي وَمَنۡ خَلَقۡتُ وَحِيدٗا ١١

---

1 ಪ್ರವಾದಿ(ﷺ)ರಿಗೆ ಮೊಟ್ಟಮೊದಲಾಗಿ ಹಿರಾ ಗುಹೆಯಲ್ಲಿ ಅವತೀರ್ಣವಾದ ದಿವ್ಯಸಂದೇಶವು ಸೂರತುಲ್ ಅಲಕ್ ಆಗಿತ್ತು. ತರುವಾಯ ಕೆಲವು ಕಾಲದವರೆಗೆ ದಿವ್ಯಸಂದೇಶವು ಅವತೀರ್ಣಗೊಳ್ಳಲಿಲ್ಲ. ಹೀಗೆ ಒಂದು ವಿರಾಮದ ನಂತರ ಮೊಟ್ಟಮೊದಲು ಅವತೀರ್ಣಗೊಂಡದ್ದು ಈ ಅಧ್ಯಾಯವಾಗಿದೆಯೆಂದು ಹಲವು ವರದಿಗಳಲ್ಲಿ ಸೂಚನೆಯಿದೆ. ಭೀತಿಜನಕವಾದ ದರ್ಶನವುಂಟಾದ ಬಳಿಕ ಪ್ರವಾದಿ(ﷺ)ರವರು ಹೊದ್ದು ಮಲಗಿರುವಾಗ ಈ ಅಧ್ಯಾಯ ಅವತೀರ್ಣಗೊಂಡಿತೆಂದು ಅನೇಕ ವ್ಯಾಖ್ಯಾನಕಾರರು ಹೇಳಿದ್ದಾರೆ.

2 ಒಬ್ಬ ಸತ್ಯವಿಶ್ವಾಸಿಯು ಉದಾರತೆ ತೋರುವುದು ಜನರಿಂದ ಪ್ರತ್ಯುಪಕಾರ ಅಥವಾ ಉದಾರವಾದ ಸೌಲಭ್ಯಗಳು ಸಿಗಲೆಂಬ ಉದ್ದೇಶದಿಂದಾಗಿರಬಾರದು. ಸತ್ಯವಿಶ್ವಾಸಿ ಮಾಡುವ ಎಲ್ಲ ಸತ್ಕರ್ಮಗಳ ಪರಮ ಗುರಿ ಅಲ್ಲಾಹುವಿನ ಸಂತೃಪ್ತಿಯಾಗಿರಬೇಕಾಗಿದೆ.

3 ಅವನನ್ನು ಅಲ್ಲಾಹು ನೋಡಿಕೊಳ್ಳುವನು ಎಂದರ್ಥ.

12–13. ನಾನು ಅವನಿಗೆ ಹೇರಳ ಸಂಪತ್ತನ್ನು ಮತ್ತು ಸನ್ನದ್ಧರಾಗಿ ನಿಲ್ಲುವ ಸಂತತಿಗಳನ್ನೂ ಮಾಡಿಕೊಟ್ಟೆನು.

وَجَعَلْتُ لَهُۥ مَالًا مَّمْدُودًا ﴿١٢﴾ وَبَنِينَ شُهُودًا ﴿١٣﴾

14. ನಾನು ಅವನಿಗೆ ಉತ್ತಮ ಸೌಕರ್ಯಗಳನ್ನು ಮಾಡಿಕೊಟ್ಟೆನು.

وَمَهَّدتُّ لَهُۥ تَمْهِيدًا ﴿١٤﴾

15. ಆ ಬಳಿಕವೂ ನಾನು ಇನ್ನಷ್ಟು ನೀಡಬೇಕೆಂದು ಅವನು ಹಂಬಲಿಸುವನು.

ثُمَّ يَطْمَعُ أَنْ أَزِيدَ ﴿١٥﴾

16. ಇಲ್ಲ, ಖಂಡಿತವಾಗಿಯೂ ಅವನು ನಮ್ಮ ದೃಷ್ಟಾಂತಗಳೊಂದಿಗೆ ವಿರೋಧ ತೋರುವವನಾಗಿರುವನು.

كَلَّآ ۖ إِنَّهُۥ كَانَ لِءَايَٰتِنَا عَنِيدًا ﴿١٦﴾

17. ಕಷ್ಟಕರವಾದ ಒಂದು ಏರುವಿಕೆಯನ್ನು ಏರಲು ನಾವು ಅವನನ್ನು ತರುವಾಯ ನಿರ್ಬಂಧಿಸುವೆವು.

سَأُرْهِقُهُۥ صَعُودًا ﴿١٧﴾

18. ಖಂಡಿತವಾಗಿಯೂ ಅವನು ಆಲೋಚಿಸಿದನು ಮತ್ತು ಎಣಿಸಿದನು.

إِنَّهُۥ فَكَّرَ وَقَدَّرَ ﴿١٨﴾

19. ಆದ್ದರಿಂದ ಅವನು ನಾಶವಾಗಲಿ! ಅವನು ಎಣಿಸಿದ್ದಾದರೂ ಹೇಗೆ?

فَقُتِلَ كَيْفَ قَدَّرَ ﴿١٩﴾

20. ಪುನಃ ಅವನು ನಾಶವಾಗಲಿ! ಅವನು ಎಣಿಸಿದ್ದಾದರೂ ಹೇಗೆ?

ثُمَّ قُتِلَ كَيْفَ قَدَّرَ ﴿٢٠﴾

21. ತರುವಾಯ ಅವನು ನೋಡಿದನು.

ثُمَّ نَظَرَ ﴿٢١﴾

22. ತರುವಾಯ ಅವನು ಮುಖವನ್ನು ಸಿಂಡರಿಸಿದನು ಮತ್ತು ಹುಬ್ಬುಗಂಟಿಕ್ಕಿದನು.

ثُمَّ عَبَسَ وَبَسَرَ ﴿٢٢﴾

23. ತರುವಾಯ ಅವನು ಹಿಂದಕ್ಕೆ ತಿರುಗಿದನು ಮತ್ತು ಅಹಂಕಾರ ಪಟ್ಟನು.

ثُمَّ أَدْبَرَ وَٱسْتَكْبَرَ ﴿٢٣﴾

24. ತರುವಾಯ ಅವನು ಹೇಳಿದನು: ‘ಇದು (ಯಾರಿಂದಲೋ) ಉದ್ಧರಿಸಲಾಗುತ್ತಿರುವ ಮಾಂತ್ರಿಕತೆಯಲ್ಲದೆ ಇನ್ನೇನೂ ಅಲ್ಲ.

فَقَالَ إِنْ هَٰذَآ إِلَّا سِحْرٌ يُؤْثَرُ ﴿٢٤﴾

25. ಇದು ಮನುಷ್ಯನ ವಚನವಲ್ಲದೆ ಇನ್ನೇನೂ ಅಲ್ಲ’.[1]

إِنْ هَٰذَآ إِلَّا قَوْلُ ٱلْبَشَرِ ﴿٢٥﴾

1 ಪ್ರವಾದಿ(ﷺ)ರವರನ್ನು ಸಂದರ್ಶಿಸಿ, ಕುರ್‌ಆನ್ ದೈವಿಕ ಸಂದೇಶವೆಂದು ಮನದಟ್ಟಾದ ಬಳಿಕ ಅಬೂ

26. ನಾನು ಅವನನ್ನು ತರುವಾಯ ಸಖರ್ (ನರಕಾಗ್ನಿ)ನಲ್ಲಿಟ್ಟು ಉರಿಸುವೆನು.

سَأُصۡلِيهِ سَقَرَ ٢٦

27. ಸಖರ್ ಎಂದರೇನೆಂದು ತಮಗೆ ಗೊತ್ತೇ?

وَمَآ أَدۡرَىٰكَ مَا سَقَرُ ٢٧

28. ಅದು ಏನನ್ನೂ ಉಳಿಸದು ಮತ್ತು ಯಾರನ್ನೂ ಬಿಟ್ಟುಬಿಡದು.

لَا تُبۡقِي وَلَا تَذَرُ ٢٨

29. ಅದು ಚರ್ಮವನ್ನು ಸುಟ್ಟು ಕರಕಲಾಗಿಸಿ ರೂಪವನ್ನು ಬದಲಾಯಿಸುವುದು.

لَوَّاحَةٞ لِّلۡبَشَرِ ٢٩

30. ಅದರ ಮೇಲ್ನೋಟ ವಹಿಸಲು ಹತ್ತೊಂಬತ್ತು ಮಂದಿಯಿರುವರು.

عَلَيۡهَا تِسۡعَةَ عَشَرَ ٣٠

31. ನರಕಾಗ್ನಿಯ ಮೇಲುಸ್ತುವಾರಿ ವಹಿಸಲು ನಾವು ನೇಮಿಸಿರುವುದು ಮಲಕ್‌ಗಳನ್ನು ಮಾತ್ರವಾಗಿದೆ. ಅವರ ಸಂಖ್ಯೆಯನ್ನು ನಾವು ಸತ್ಯನಿಷೇಧಿಗಳಿಗೆ ಒಂದು ಪರೀಕ್ಷೆಯನ್ನಾಗಿ ಮಾತ್ರ ಮಾಡಿರುವೆವು.(1) ಅದು ಗ್ರಂಥ ನೀಡಲಾದವರಿಗೆ ದೃಢವಿಶ್ವಾಸವುಂಟಾಗುವ ಸಲುವಾಗಿಯೂ,(2) ಸತ್ಯವಿಶ್ವಾಸಿಗಳಿಗೆ ವಿಶ್ವಾಸವು ಅಧಿಕಗೊಳ್ಳುವ ಸಲುವಾಗಿಯೂ, ಗ್ರಂಥ ನೀಡಲಾದವರು ಮತ್ತು ಸತ್ಯವಿಶ್ವಾಸಿಗಳು ಸಂದೇಹಪಡದಿರುವ ಸಲುವಾಗಿಯೂ, 'ಅಲ್ಲಾಹು ಇದರ ಮೂಲಕ ಯಾವ ಉದಾಹರಣೆಯನ್ನು ತೋರಿಸಲು ಬಯಸುತ್ತಿರುವನು?' ಎಂದು ಹೃದಯಗಳಲ್ಲಿ ರೋಗವಿರುವವರು ಮತ್ತು ಸತ್ಯನಿಷೇಧಿಗಳು ಹೇಳುವ ಸಲುವಾಗಿಯೂ ಆಗಿದೆ.(3) ಹೀಗೆ

وَمَا جَعَلۡنَآ أَصۡحَٰبَ ٱلنَّارِ إِلَّا مَلَٰٓئِكَةٗۖ وَمَا جَعَلۡنَا عِدَّتَهُمۡ إِلَّا فِتۡنَةٗ لِّلَّذِينَ كَفَرُواْ لِيَسۡتَيۡقِنَ ٱلَّذِينَ أُوتُواْ ٱلۡكِتَٰبَ وَيَزۡدَادَ ٱلَّذِينَ ءَامَنُوٓاْ إِيمَٰنٗا وَلَا يَرۡتَابَ ٱلَّذِينَ أُوتُواْ ٱلۡكِتَٰبَ وَٱلۡمُؤۡمِنُونَ وَلِيَقُولَ ٱلَّذِينَ فِي قُلُوبِهِم مَّرَضٞ وَٱلۡكَٰفِرُونَ مَاذَآ أَرَادَ ٱللَّهُ بِهَٰذَا مَثَلٗاۚ كَذَٰلِكَ يُضِلُّ ٱللَّهُ مَن يَشَآءُ وَيَهۡدِي مَن يَشَآءُۚ وَمَا يَعۡلَمُ جُنُودَ رَبِّكَ إِلَّا هُوَۚ وَمَا هِيَ إِلَّا ذِكۡرَىٰ لِلۡبَشَرِ ٣١

---

ಜಹಲ್ ಮುಂತಾದವರ ಪ್ರೇರಣೆಗೆ ಮಣಿದು ಪ್ರವಾದಿ(ﷺ)ರವರನ್ನು ತಿರಸ್ಕರಿಸಿದ ವಲೀದ್ ಇಬ್ನ್ ಮುಗೀರಃ ಎಂಬ ಕುರೈಶೀ ಪ್ರಮುಖನ ಕುರಿತು 11ರಿಂದ 30ರವರೆಗಿನ ಸೂಕ್ತಿಗಳು ಅವತೀರ್ಣಗೊಂಡವು. ಇದು ಇಂತಹ ನಿಲುವನ್ನು ತಾಳುವ ಎಲ್ಲರಿಗೂ ಅನ್ವಯವಾಗುತ್ತದೆ.

1 ಸಾಮಾನ್ಯವಾಗಿ ಅಲೌಕಿಕ ವಿಷಯಗಳ ಕುರಿತ ಎಲ್ಲ ವಿಶದೀಕರಣಗಳನ್ನೂ ಸತ್ಯನಿಷೇಧಿಗಳು ತಿರಸ್ಕರಿಸುತ್ತಾರೆ. ನರಕದ ಕಾವಲುಗಾರರಾದ ಮಲಕ್‌ಗಳ ಸಂಖ್ಯೆ ಕೂಡ ಅವರ ಅಪಹಾಸ್ಯಕ್ಕೆ ಗುರಿಯಾಗುವುದು ಸಹಜವಾಗಿದೆ.

2 ತೌರಾತ್ ಮತ್ತು ಇಂಜೀಲ್‌ಗಳಲ್ಲಿ ಮಲಕ್‌ಗಳ ಮತ್ತು ಸ್ವರ್ಗ ನರಕಗಳ ಕುರಿತು ಹೇರಳವಾಗಿ ಪ್ರಸ್ತಾಪಿಸಲಾಗಿರುವುದರಿಂದ ಗ್ರಂಥದವರಿಗೆ ಈ ವಿಷಯ ಅಪರಿಚಿತವಾಗಿರುವ ಸಾಧ್ಯತೆಯಿಲ್ಲ.

3 ಇದೇನು ಹತ್ತೊಂಬತ್ತು? ಹದಿನೆಂಟೋ ಇಪ್ಪತ್ತೋ ಅಥವಾ ಅದಕ್ಕಿಂತಲೂ ಹೆಚ್ಚೋ ಕಡಿಮೆಯೋ ಆಗಬಾರದೇಕೆ?

ಅಲ್ಲಾಹು ತಾನಿಚ್ಛಿಸುವವರನ್ನು ದಾರಿಗೆಡಿಸುವನು ಮತ್ತು ತಾನಿಚ್ಛಿಸುವವರನ್ನು ಸನ್ಮಾರ್ಗದಲ್ಲಿ ಸೇರಿಸುವನು. ತಮ್ಮ ರಬ್‌ನ ಸೈನ್ಯಗಳನ್ನು ಅವನ ಹೊರತು ಯಾರೂ ಅರಿಯಲಾರರು. ಇದು ಮನುಷ್ಯರಿಗಿರುವ ಒಂದು ಉಪದೇಶವಲ್ಲದೆ ಇನ್ನೇನೂ ಅಲ್ಲ.

كَلَّا وَٱلْقَمَرِ ﴿٣٢﴾

32. ಅನುಮಾನವೇ ಇಲ್ಲ, ಚಂದ್ರನ ಮೇಲಾಣೆ!

وَٱلَّيْلِ إِذْ أَدْبَرَ ﴿٣٣﴾

33. ರಾತ್ರಿ ಹಿಂದೆ ಸರಿದು ಹೋಗುವಾಗ ಅದರ ಮೇಲಾಣೆ!

وَٱلصُّبْحِ إِذَآ أَسْفَرَ ﴿٣٤﴾

34. ಪ್ರಭಾತವು ಬೆಳ್ಳಗಾಗುವಾಗ ಅದರ ಮೇಲಾಣೆ!

إِنَّهَا لَإِحْدَى ٱلْكُبَرِ ﴿٣٥﴾

35. ಖಂಡಿತವಾಗಿಯೂ ಅದು (ನರಕಾಗ್ನಿಯು) ಗಂಭೀರ ವಿಷಯಗಳಲ್ಲೊಂದಾಗಿದೆ.

نَذِيرًا لِّلْبَشَرِ ﴿٣٦﴾

36. ಮನುಷ್ಯರಿಗೆ ಒಂದು ಎಚ್ಚರಿಕೆ ಎಂಬ ನೆಲೆಯಲ್ಲಿ.

لِمَن شَآءَ مِنكُمْ أَن يَتَقَدَّمَ أَوْ يَتَأَخَّرَ ﴿٣٧﴾

37. ಅಂದರೆ ನಿಮ್ಮ ಪೈಕಿ ಮುಂದಕ್ಕೆ ಸಾಗಲು ಅಥವಾ ಹಿಂದಕ್ಕೆ ಸಾಗಲು ಇಚ್ಛಿಸುವವರಿಗೆ.(1)

كُلُّ نَفْسٍۭ بِمَا كَسَبَتْ رَهِينَةٌ ﴿٣٨﴾

38. ಪ್ರತಿಯೊಬ್ಬ ವ್ಯಕ್ತಿಯೂ ತಾನು ಗಳಿಸಿರುವುದಕ್ಕೆ ಒತ್ತೆಯಿಡಲಾಗಿರುವನು.(2)

إِلَّآ أَصْحَـٰبَ ٱلْيَمِينِ ﴿٣٩﴾

39. ಬಲಭಾಗದವರ ಹೊರತು.(3)

فِى جَنَّـٰتٍ يَتَسَآءَلُونَ ﴿٤٠﴾ عَنِ ٱلْمُجْرِمِينَ ﴿٤١﴾ مَا سَلَكَكُمْ فِى سَقَرَ ﴿٤٢﴾

40–42. ಅವರು ಕೆಲವು ಸ್ವರ್ಗೋದ್ಯಾನಗಳಲ್ಲಿರುವರು. 'ನಿಮ್ಮನ್ನು

---

ಎಂದು ವಿಮರ್ಶಕರು ಕೇಳಬಹುದು. ಆದರೆ ಅಲ್ಲಾಹುವಿನ ನಿರ್ಣಯಗಳು ಅವನ ಯುಕ್ತಿ ಮತ್ತು ಇಚ್ಛೆಯನ್ನು ಅವಲಂಬಿಸಿದೆ. ಸೃಷ್ಟಿಗಳಿಗೆ ಅದು ಯುಕ್ತಿಬದ್ಧವಾಗಿ ತೋರಬೇಕೆಂದು ವಾದಿಸುವುದು ನಿರರ್ಥಕ. ಈ ಹತ್ತೊಂಬತ್ತರ ಸುತ್ತ ಅನೇಕ ಮಂದಿ ಅನೇಕ ಊಹೆಗಳನ್ನು ಹೆಣೆಯುತ್ತಿದ್ದಾರೆ. ಖಚಿತವಾದ ಪುರಾವೆಗಳ ಬೆಂಬಲವಿಲ್ಲದೆ ಕುರ್‌ಆನ್ ಸೂಕ್ತಿಗಳನ್ನು ವ್ಯಾಖ್ಯಾನಿಸುವುದು ಅಪಾಯಕಾರಿಯಾಗಿದೆ'.

1 ಎಚ್ಚರಿಕೆಗಳನ್ನು ಪಾಲಿಸಿ ಸನ್ಮಾರ್ಗದಲ್ಲಿ ಮುನ್ನಡೆಯಲು ಇಚ್ಛಿಸುವವರಿಗೆ ಹಾಗೆ ಮಾಡಬಹುದು. ಎಚ್ಚರಿಕೆಗಳನ್ನು ನಿರ್ಲಕ್ಷಿಸಿ ಹಿಂದಕ್ಕೆ ಚಲಿಸಲು ಇಚ್ಛಿಸುವವರಿಗೆ ಹಾಗೆ ಮಾಡುವ ಸ್ವಾತಂತ್ರ್ಯವೂ ಇದೆ.

2 ಪ್ರತಿಯೊಬ್ಬ ಮನುಷ್ಯನೂ ಇಹಲೋಕದಲ್ಲಿ ಮಾಡಿದ ಕರ್ಮಗಳ ಫಲವನ್ನು ಶಾಶ್ವತವಾಗಿ ಅನುಭವಿಸಲು ವಿಧಿಸಲ್ಪಟ್ಟವನಾಗಿರುವನು ಎಂದರ್ಥ.

3 ಸತ್ಯವಿಶ್ವಾಸಿಯಾಗಿದ್ದುಕೊಂಡು, ದುಷ್ಕರ್ಮಗಳಿಗಿಂತಲೂ ಅಧಿಕವಾಗಿ ಸತ್ಕರ್ಮಗಳನ್ನು ಮಾಡಿದವರು ತಮ್ಮ ಕ್ಷುಲ್ಲಕ ಪಾಪಗಳಿಗಾಗಿ ಶಿಕ್ಷೆಯನ್ನು ಅನುಭವಿಸಬೇಕಾಗಿ ಬರದು. ಪ್ರಜ್ಞಾಪೂರ್ವಕವಾಗಿ ಪಾಪ ಮಾಡಿ ಪಶ್ಚಾತ್ತಾಪ ಪಡದವರು ಶಿಕ್ಷೆಯನ್ನು ಅನುಭವಿಸಿಯೇ ತೀರುವರು.

ನರಕದಲ್ಲಿ ಪ್ರವೇಶ ಮಾಡಿಸಿದ್ದೇನು?' ಎಂದು ಅವರು ಅಪರಾಧಿಗಳ ಬಗ್ಗೆ ವಿಚಾರಿಸುವರು.

43. ಅವರು (ಅಪರಾಧಿಗಳು) ಹೇಳುವರು: 'ನಾವು ನಮಾಝ್ ಮಾಡುವವರಲ್ಲಿ ಸೇರಿದವರಾಗಿರಲಿಲ್ಲ.

قَالُواْ لَمۡ نَكُ مِنَ ٱلۡمُصَلِّينَ ﴿٤٣﴾

44. ನಾವು ನಿರ್ಗತಿಕರಿಗೆ ಆಹಾರ ನೀಡುತ್ತಿರಲಿಲ್ಲ.

وَلَمۡ نَكُ نُطۡعِمُ ٱلۡمِسۡكِينَ ﴿٤٤﴾

45. ಸ್ವೇಚ್ಛೆಯಲ್ಲಿ ಮಗ್ನರಾಗಿರುವವರೊಂದಿಗೆ ನಾವೂ ಮಗ್ನರಾಗಿದ್ದೆವು.

وَكُنَّا نَخُوضُ مَعَ ٱلۡخَآئِضِينَ ﴿٤٥﴾

46. ನಾವು ಪ್ರತಿಫಲ ದಿನವನ್ನು ನಿಷೇಧಿಸುತ್ತಿದ್ದೆವು.

وَكُنَّا نُكَذِّبُ بِيَوۡمِ ٱلدِّينِ ﴿٤٦﴾

47. ಹಾಗಿರುವಾಗ ಖಚಿತವಾದ ಆ ಮರಣವು ನಮ್ಮ ಬಳಿಗೆ ಬಂದಿತು'.

حَتَّىٰٓ أَتَىٰنَا ٱلۡيَقِينُ ﴿٤٧﴾

48. ಇನ್ನು ಶಿಫಾರಸ್ಸು ಮಾಡುವವರ ಯಾವುದೇ ಶಿಫಾರಸ್ಸೂ ಅವರಿಗೆ ಪ್ರಯೋಜನವಾಗದು.

فَمَا تَنفَعُهُمۡ شَفَٰعَةُ ٱلشَّٰفِعِينَ ﴿٤٨﴾

49–51. ಹೀಗಿರುವಾಗ ಅವರಿಗೇನಾಗಿದೆ? ಅವರು ಸಿಂಹದಿಂದ ಓಡಿ ಪಾರಾಗುವ ಬೆದರಿದ ಕತ್ತೆಗಳಂತೆ ಉಪದೇಶದಿಂದ ವಿಮುಖರಾಗುವವರಾಗಿರುವರು!

فَمَا لَهُمۡ عَنِ ٱلتَّذۡكِرَةِ مُعۡرِضِينَ ﴿٤٩﴾
كَأَنَّهُمۡ حُمُرٞ مُّسۡتَنفِرَةٞ ﴿٥٠﴾ فَرَّتۡ مِن
قَسۡوَرَةِۭ ﴿٥١﴾

52. ಅಲ್ಲ, ಆದರೆ ತನಗೆ ಅಲ್ಲಾಹುವಿನ ವತಿಯಿಂದ ತೆರೆದಿಡಲಾದ ಗ್ರಂಥಗಳನ್ನು ನೀಡಲಾಗಬೇಕೆಂದು ಅವರ ಪೈಕಿ ಪ್ರತಿಯೊಬ್ಬರೂ ಬಯಸುತ್ತಿರುವರು.[1]

بَلۡ يُرِيدُ كُلُّ ٱمۡرِيٕٖ مِّنۡهُمۡ أَن يُؤۡتَىٰ
صُحُفٗا مُّنَشَّرَةٗ ﴿٥٢﴾

53. ಅಲ್ಲ, ಆದರೆ ಅವರು ಪರಲೋಕವನ್ನು ಭಯಪಡುತ್ತಿಲ್ಲ.

كَلَّاۖ بَل لَّا يَخَافُونَ ٱلۡأٓخِرَةَ ﴿٥٣﴾

54. ಅಲ್ಲ, ಖಂಡಿತವಾಗಿಯೂ ಇದೊಂದು ಉಪದೇಶವಾಗಿದೆ.

كَلَّآ إِنَّهُۥ تَذۡكِرَةٞ ﴿٥٤﴾

---

1 ಮುಹಮ್ಮದ್(ﷺ)ರವರನ್ನು ಪ್ರವಾದಿಯೆಂದು ಒಪ್ಪಿಕೊಳ್ಳದ ಸತ್ಯನಿಷೇಧಿಗಳ ಪೈಕಿ ಪ್ರತಿಯೊಬ್ಬರೂ ತಾನು ವಿಶ್ವಾಸವಿಡಬೇಕಾದರೆ ತನಗೇ ನೇರವಾಗಿ ಗ್ರಂಥ ಅವತೀರ್ಣಗೊಳ್ಳಬೇಕು ಎಂಬ ನಿಲುವನ್ನು ತಾಳಿದ್ದರು.

55. ಆದ್ದರಿಂದ ಇಚ್ಛೆಯುಳ್ಳವರು ಇದನ್ನು ಸ್ಮರಿಸಿಕೊಳ್ಳಲಿ.

56. ಅಲ್ಲಾಹು ಇಚ್ಛಿಸಿದ ಹೊರತು ಅವರು ಸ್ಮರಿಸಲಾರರು. ಭಯಭಕ್ತಿ ತೋರಿಸಲು ಅರ್ಹನಾಗಿರುವವನು ಮತ್ತು ಪಾಪಮುಕ್ತಿ ಬೇಡಲು ಅರ್ಹನಾಗಿರುವವನು ಅವನಾಗಿರುವನು.

فَمَن شَآءَ ذَكَرَهُۥ ٥٥

وَمَا يَذْكُرُونَ إِلَّآ أَن يَشَآءَ ٱللَّهُۚ هُوَ أَهْلُ
ٱلتَّقْوَىٰ وَأَهْلُ ٱلْمَغْفِرَةِ ٥٦

## ಅಲ್‌ಕಿಯಾಮಃ (ಪುನರುತ್ಥಾನ)

## سُورَةُ القِيَامَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 40

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಪುನರುತ್ಥಾನದ ದಿನದ ಮೇಲೆ ನಾನು ಆಣೆಯಿಡುತ್ತಿರುವೆನು.

لَآ أُقۡسِمُ بِيَوۡمِ ٱلۡقِيَٰمَةِ ١

2. ದೂಷಿಸುವ ಮನಸ್ಸಿನ ಮೇಲೆ ನಾನು ಆಣೆಯಿಡುತ್ತಿರುವೆನು.

وَلَآ أُقۡسِمُ بِٱلنَّفۡسِ ٱللَّوَّامَةِ ٢

3. ನಾವು ಮನುಷ್ಯನ ಮೂಳೆಗಳನ್ನು ಒಟ್ಟುಗೂಡಿಸಲಾರೆವು ಎಂದು ಮನುಷ್ಯನು ಭಾವಿಸುತ್ತಿರುವನೇ?[1]

أَيَحۡسَبُ ٱلۡإِنسَٰنُ أَلَّن نَّجۡمَعَ عِظَامَهُۥ ٣

4. ಹೌದು! ಅವನ ಬೆರಳ ತುದಿಗಳನ್ನು ಸರಿಪಡಿಸಲು ಕೂಡ ನಾವು ಸಾಮರ್ಥ್ಯವುಳ್ಳವರಾಗಿರುವೆವು.[2]

بَلَىٰ قَٰدِرِينَ عَلَىٰٓ أَن نُّسَوِّيَ بَنَانَهُۥ ٤

5. ಆದರೂ ಮನುಷ್ಯನು ತನ್ನ ಭಾವೀ ಜೀವನದಲ್ಲಿ ಧಿಕ್ಕಾರವೆಸಗಲು ಇಚ್ಛಿಸುತ್ತಿರುವನು.

بَلۡ يُرِيدُ ٱلۡإِنسَٰنُ لِيَفۡجُرَ أَمَامَهُۥ ٥

6. ಈ 'ಪುನರುತ್ಥಾನ ದಿನ ಯಾವಾಗ?' ಎಂದು ಅವನು ಕೇಳುವನು.

يَسۡـَٔلُ أَيَّانَ يَوۡمُ ٱلۡقِيَٰمَةِ ٦

7-9. ಆದರೆ ಕಣ್ಣು ಕೋರೈಸುವಾಗ, ಚಂದ್ರನಿಗೆ ಗ್ರಹಣ ಹಿಡಿಯುವಾಗ ಮತ್ತು ಸೂರ್ಯ ಚಂದ್ರರನ್ನು ಒಂದುಗೂಡಿಸಲಾಗುವಾಗ.

فَإِذَا بَرِقَ ٱلۡبَصَرُ ٧ وَخَسَفَ ٱلۡقَمَرُ ٨
وَجُمِعَ ٱلشَّمۡسُ وَٱلۡقَمَرُ ٩

---

1 ನಾವು ಮಣ್ಣು ಮತ್ತು ಮೂಳೆಗಳಾಗಿ ಹೋದ ಬಳಿಕವೂ ನಮ್ಮನ್ನು ಪುನರ್ಜೀವಗೊಳಿಸಲಾಗುವುದೇ? ಎಂದು ಕೇಳಿದವರೊಂದಿಗೆ ಇಲ್ಲಿ ಪ್ರಶ್ನಿಸಲಾಗಿದೆ. ಮನುಷ್ಯ ಶರೀರವನ್ನು ಸರಿಯಾದ ವ್ಯವಸ್ಥೆಯೊಂದಿಗೆ ಸೃಷ್ಟಿಸಿದವನಿಗೆ ಚೂರು ಚೂರಾಗಿ ಬಿಟ್ಟ ಮೂಳೆಗಳನ್ನು ಪುನರ್ಜೋಡಣೆ ಮಾಡಲು ಕಷ್ಟವಾಗದು.

2 ಕೋಟ್ಯಾನುಕೋಟಿ ಮನುಷ್ಯರ ಪೈಕಿ ಪ್ರತಿಯೊಬ್ಬರ ಬೆರಳ ತುದಿಗಳು ವಿಭಿನ್ನವಾಗಿವೆ. ಬೆರಳಚ್ಚು ಎಂಬುದು ಗುರುತು ಪತ್ತೆಹಚ್ಚಲು ಬಳಸುವ ಎಂದೆಂದಿಗೂ ಬದಲಾಗದ ಒಂದು ಉಪಾಧಿಯಾಗಿದೆ. ಬೆರಳ ತುದಿಗಳ ಗಾತ್ರದಲ್ಲಿರುವ ಅನುಪಾತಕ್ಕನುಗುಣವಾಗಿರುವ ವ್ಯತ್ಯಾಸವು ಕೂಡ ಅತ್ಯಂತ ಪ್ರಯೋಜನಕಾರಿಯಾಗಿದೆ. ಇವೆಲ್ಲವೂ ಅಲ್ಲಾಹುವಿನ ಸೃಷ್ಟಿ ವಿಸ್ಮಯಗಳ ಉತ್ತಮ ಉದಾಹರಣೆಗಳಾಗಿವೆ.

10. ಆ ದಿನದಂದು ಮನುಷ್ಯನು ಹೇಳುವನು: 'ಓಡಿ ಪಾರಾಗುವುದಾದರೂ ಎಲ್ಲಿಗೆ?'

يَقُولُ ٱلۡإِنسَٰنُ يَوۡمَئِذٍ أَيۡنَ ٱلۡمَفَرُّ ١٠

11. ಇಲ್ಲ, ಯಾವ ರಕ್ಷಣೆಯೂ ಇಲ್ಲ.(1)

كَلَّا لَا وَزَرَ ١١

12. ಆ ದಿನದಂದು ತೆರಳಬೇಕಾಗಿರುವುದು ತಮ್ಮ ಪ್ರಭುವಿನೆಡೆಗೇ ಆಗಿದೆ.

إِلَىٰ رَبِّكَ يَوۡمَئِذٍ ٱلۡمُسۡتَقَرُّ ١٢

13. ಆ ದಿನದಂದು ಮನುಷ್ಯನು ಪೂರ್ವಭಾವಿಯಾಗಿ ಮಾಡಿರುವ ಕರ್ಮಗಳನ್ನು ಮುಂದೂಡಿರುವ ಕರ್ಮಗಳನ್ನು ಅವನಿಗೆ ತಿಳಿಸಿಕೊಡಲಾಗುವುದು.

يُنَبَّؤُاْ ٱلۡإِنسَٰنُ يَوۡمَئِذِۭ بِمَا قَدَّمَ وَأَخَّرَ ١٣

14. ಅಲ್ಲ, ಮನುಷ್ಯನು ಸ್ವತಃ ತನ್ನ ವಿರುದ್ಧವೇ ಸಾಕ್ಷಿಯಾಗಿರುವನು.

بَلِ ٱلۡإِنسَٰنُ عَلَىٰ نَفۡسِهِۦ بَصِيرَةٞ ١٤

15. ಅವನು ತನ್ನ ನೆಪಗಳನ್ನು ಮುಂದಿಟ್ಟರೂ ಸರಿ.

وَلَوۡ أَلۡقَىٰ مَعَاذِيرَهُۥ ١٥

16. ತಾವು ಅದನ್ನು (ಕುರ್‌ಆನನ್ನು) ಅವಸರದಿಂದ ಕಂಠಪಾಠ ಮಾಡುವ ಸಲುವಾಗಿ ಅದರೊಂದಿಗೆ ತಮ್ಮ ನಾಲಗೆಯನ್ನು ಅಲ್ಲಾಡಿಸದಿರಿ.

لَا تُحَرِّكۡ بِهِۦ لِسَانَكَ لِتَعۡجَلَ بِهِۦٓ ١٦

17. ಖಂಡಿತವಾಗಿಯೂ ಅದರ (ಕುರ್‌ಆನಿನ) ಕ್ರೋಢೀಕರಣ ಮತ್ತು ಅದರ ಪಾರಾಯಣವು ನಮ್ಮ ಕರ್ತವ್ಯವಾಗಿದೆ.(2)

إِنَّ عَلَيۡنَا جَمۡعَهُۥ وَقُرۡءَانَهُۥ ١٧

18. ನಾವು ಅದನ್ನು ಪಾರಾಯಣ ಮಾಡಿಕೊಟ್ಟರೆ ಆ ಪಾರಾಯಣವನ್ನು ಹಿಂಬಾಲಿಸಿರಿ.

فَإِذَا قَرَأۡنَٰهُ فَٱتَّبِعۡ قُرۡءَانَهُۥ ١٨

19. ತರುವಾಯ ಅದನ್ನು ವಿವರಿಸಿಕೊಡಬೇಕಾದುದು ನಮ್ಮ ಕರ್ತವ್ಯವಾಗಿದೆ.

ثُمَّ إِنَّ عَلَيۡنَا بَيَانَهُۥ ١٩

20. ಅಲ್ಲ, ನೀವು ಕ್ಷಣಿಕವಾದ ಈ ಜೀವನವನ್ನು ಇಷ್ಟಪಡುತ್ತಿರುವಿರಿ.

كَلَّا بَلۡ تُحِبُّونَ ٱلۡعَاجِلَةَ ٢٠

---

1 ವಝರ್ ಎಂಬ ಪದಕ್ಕೆ ರಕ್ಷಣೆ, ರಕ್ಷಣಾ ಸ್ಥಳ ಇತ್ಯಾದಿ ಅರ್ಥಗಳಿವೆ.

2 ಜಿಬ್ರೀಲ್(عَلَيْهِ السَّلَامُ) ಎಂಬ ಮಲಕ್ ದಿವ್ಯಸಂದೇಶವನ್ನು ಓದಿಕೊಟ್ಟು ನಿರ್ಗಮಿಸಿದರೆ ತಕ್ಷಣ ಪ್ರವಾದಿ(صَلَّى ٱللَّهُ عَلَيْهِ وَسَلَّمَ)ರವರು ಅದನ್ನು ಕಂಠಪಾಠ ಮಾಡುವ ಸಲುವಾಗಿ ಪುನರಾವರ್ತಿಸಿ ಉಚ್ಚರಿಸುವುದು ಸಾಮಾನ್ಯವಾಗಿತ್ತು. ಹಾಗೆ ಪುನರಾವರ್ತಿಸಿ ಕಲಿಯದಿದ್ದರೆ ಮರೆತು ಹೋಗಬಹುದೋ ಎಂದು ಅವರು ಭಯಪಟ್ಟಿದ್ದರು. ಈ ರೀತಿ ಭಯಪಡಬೇಕಾಗಿಲ್ಲ, ಕುರ್‌ಆನನ್ನು ಸಂಪೂರ್ಣವಾಗಿ ಪ್ರವಾದಿ(صَلَّى ٱللَّهُ عَلَيْهِ وَسَلَّمَ)ರವರ ಹೃದಯದಲ್ಲಿ ಕ್ರೋಢೀಕರಿಸುವ ಹೊಣೆ ಅಲ್ಲಾಹುವಿನದ್ದಾಗಿದೆಯೆಂದು ಈ ಸೂಕ್ತಿಯು ಸ್ಪಷ್ಟಪಡಿಸುತ್ತದೆ.

21. ಪರಲೋಕವನ್ನು ನೀವು ಬಿಟ್ಟುಬಿಡುತ್ತಿರುವಿರಿ.
وَتَذَرُونَ ٱلۡأٓخِرَةَ ٢١

22. ಆ ದಿನದಂದು ಕೆಲವು ಮುಖಗಳು ಪ್ರಸನ್ನವಾಗಿರುವುವು.
وُجُوهٞ يَوۡمَئِذٖ نَّاضِرَةٌ ٢٢

23. ಅವರು ತಮ್ಮ ರಬ್‌ನೆಡೆಗೆ ನೋಡುತ್ತಿರುವರು.
إِلَىٰ رَبِّهَا نَاظِرَةٞ ٢٣

24. ಆ ದಿನದಂದು ಕೆಲವು ಮುಖಗಳು ವಿಷಣ್ಣವಾಗಿರುವುವು.
وَوُجُوهٞ يَوۡمَئِذِۭ بَاسِرَةٞ ٢٤

25. ಯಾವುದೋ ಮಹಾ ವಿಪತ್ತು ಅವುಗಳ ಮೇಲೆ ಎರಗಲಿರುವುದು ಎಂದು ಅವರು ಭಾವಿಸುವರು.
تَظُنُّ أَن يُفۡعَلَ بِهَا فَاقِرَةٞ ٢٥

26. ಇಲ್ಲ, (ಪ್ರಾಣವು) ಗಂಟಲಿಗೆ ತಲುಪಿದಾಗ.
كَلَّآ إِذَا بَلَغَتِ ٱلتَّرَاقِيَ ٢٦

27. ‘ಮಂತ್ರಿಸುವವರು ಯಾರಾದರೂ ಇರುವರೇ?’ ಎಂದು ಕೇಳಲಾಗುವಾಗ.
وَقِيلَ مَنۡۜ رَاقٖ ٢٧

28. ಅದು (ತನ್ನ) ಅಗಲುವಿಕೆಯಾಗಿದೆ ಎಂದು ಅವನಿಗೆ ಖಾತ್ರಿಯಾಗುವಾಗ.
وَظَنَّ أَنَّهُ ٱلۡفِرَاقُ ٢٨

29. ಕಣಕಾಲು ಕಣಕಾಲಿನೊಂದಿಗೆ ಸೇರಿಕೊಳ್ಳುವಾಗ.[1]
وَٱلۡتَفَّتِ ٱلسَّاقُ بِٱلسَّاقِ ٢٩

30. ಆ ದಿನದಂದು (ಅವನನ್ನು) ಸಾಗಿಸುವುದು ತಮ್ಮ ರಬ್‌ನೆಡೆಗಾಗಿರುವುದು.
إِلَىٰ رَبِّكَ يَوۡمَئِذٍ ٱلۡمَسَاقُ ٣٠

31. ಆದರೆ ಅವನು ವಿಶ್ವಾಸವಿಡಲಿಲ್ಲ, ನಮಾಝ್ ನಿರ್ವಹಿಸಲಿಲ್ಲ.
فَلَا صَدَّقَ وَلَا صَلَّىٰ ٣١

32. ಆದರೆ ಅವನು ನಿಷೇಧಿಸಿದನು ಮತ್ತು ವಿಮುಖನಾದನು.
وَلَٰكِن كَذَّبَ وَتَوَلَّىٰ ٣٢

33. ತರುವಾಯ ದುರಭಿಮಾನ ಪಡುತ್ತಾ ಅವನು ತನ್ನ ಮನೆಯವರ ಕಡೆಗೆ ತೆರಳಿದನು.
ثُمَّ ذَهَبَ إِلَىٰٓ أَهۡلِهِۦ يَتَمَطَّىٰٓ ٣٣

34. (ಶಿಕ್ಷೆಯು) ನಿನಗೆ ಅತ್ಯಂತ ಅರ್ಹವಾದುದಾಗಿದೆ. ನಿನಗೆ ಅತ್ಯಂತ ಅರ್ಹವಾದುದಾಗಿದೆ.
أَوۡلَىٰ لَكَ فَأَوۡلَىٰ ٣٤

---

1 ಮರಣದ ಸಂಕಟದಿಂದಾಗಿ ಕಣಕಾಲುಗಳು ಪರಸ್ಪರ ಸುತ್ತಿಕೊಂಡ ಸ್ಥಿತಿಯಲ್ಲಾಗಲಿವೆ ಎಂದಾಗಿರಬಹುದು ಇದರ ತಾತ್ಪರ್ಯ.

ثُمَّ أَوْلَىٰ لَكَ فَأَوْلَىٰٓ ٣٥

35. ಪುನಃ ನಿನಗೆ ಅತ್ಯಂತ ಅರ್ಹವಾದುದಾಗಿದೆ. ನಿನಗೆ ಅತ್ಯಂತ ಅರ್ಹವಾದುದಾಗಿದೆ.[1]

أَيَحْسَبُ ٱلْإِنسَٰنُ أَن يُتْرَكَ سُدًى ٣٦

36. ತನ್ನನ್ನು ಸುಮ್ಮನೆ ಬಿಟ್ಟುಬಿಡಲಾಗುವುದು ಎಂದು ಮನುಷ್ಯನು ಭಾವಿಸುತ್ತಿರುವನೇ?

أَلَمْ يَكُ نُطْفَةً مِّن مَّنِيٍّ يُمْنَىٰ ٣٧

37. ಅವನು ಸ್ರವಿಸಲಾಗುವ ವೀರ್ಯದ ಒಂದು ಕಣವಾಗಿರಲಿಲ್ಲವೇ?

ثُمَّ كَانَ عَلَقَةً فَخَلَقَ فَسَوَّىٰ ٣٨

38. ತರುವಾಯ ಅವನೊಂದು ರಕ್ತಪಿಂಡವಾದನು. ತರುವಾಯ ಅಲ್ಲಾಹು (ಅವನನ್ನು) ಸೃಷ್ಟಿಸಿ ಸರಿಪಡಿಸಿದನು.

فَجَعَلَ مِنْهُ ٱلزَّوْجَيْنِ ٱلذَّكَرَ وَٱلْأُنثَىٰٓ ٣٩

39. ತರುವಾಯ ಅವನು ಅದರಿಂದ ಗಂಡು ಮತ್ತು ಹೆಣ್ಣು ಎಂಬ ಎರಡು ಜೋಡಿಯನ್ನು ಮಾಡಿದನು.

أَلَيْسَ ذَٰلِكَ بِقَٰدِرٍ عَلَىٰٓ أَن يُحْـِۧىَ ٱلْمَوْتَىٰ ٤٠

40. ಅಂತಹವನು ಮೃತಪಟ್ಟವರಿಗೆ ಜೀವ ನೀಡಲು ಸಾಮರ್ಥ್ಯವುಳ್ಳವನಲ್ಲವೇ?

1 ಶಿಕ್ಷೆಯ ಖಚಿತತೆಯನ್ನು ಸ್ಪಷ್ಟವಾಗಿ ಹೇಳುವ ಸಲುವಾಗಿ ನಾಲ್ಕು ಬಾರಿ ಅದರ ಕುರಿತು ಪುನರಾವರ್ತಿಸಲಾಗಿದೆ.

## ಅದ್ದಹ್‌ರ್

## سُورَةُ الدَّهۡرِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 31

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಮನುಷ್ಯನು ಒಂದು ಪ್ರಸ್ತಾಪಯೋಗ್ಯವಾದ ವಸ್ತುವೇ ಆಗಿರದ ಕಾಲವೊಂದು ಅವನ ಮೇಲೆ ಗತಿಸಿ ಹೋಗಿಲ್ಲವೇ?(1)

هَلۡ أَتَىٰ عَلَى ٱلۡإِنسَٰنِ حِينٞ مِّنَ ٱلدَّهۡرِ لَمۡ يَكُن شَيۡـٔٗا مَّذۡكُورًا ١

2. ಸಮ್ಮಿಶ್ರಗೊಂಡ ಒಂದು ವೀರ್ಯಕೋಶದಿಂದ ಖಂಡಿತವಾಗಿಯೂ ನಾವು ಮನುಷ್ಯನನ್ನು ಸೃಷ್ಟಿಸಿರುವೆವು. ಅವನನ್ನು ನಾವು ಪರೀಕ್ಷಿಸುವ ಸಲುವಾಗಿ. ತರುವಾಯ ನಾವು ಅವನನ್ನು ಶ್ರವಣ ಮತ್ತು ದೃಷ್ಟಿಯುಳ್ಳವನಾಗಿ ಮಾಡಿದೆವು.

إِنَّا خَلَقۡنَا ٱلۡإِنسَٰنَ مِن نُّطۡفَةٍ أَمۡشَاجٖ نَّبۡتَلِيهِ فَجَعَلۡنَٰهُ سَمِيعَۢا بَصِيرًا ٢

3. ಖಂಡಿತವಾಗಿಯೂ ನಾವು ಅವನಿಗೆ ಮಾರ್ಗವನ್ನು ತೋರಿಸಿಕೊಟ್ಟಿರುವೆವು. ಅವನು ಒಂದೋ ಕೃತಜ್ಞತೆ ಸಲ್ಲಿಸುವವನಾಗುವನು ಅಥವಾ ಕೃತಘ್ನನಾಗುವನು.

إِنَّا هَدَيۡنَٰهُ ٱلسَّبِيلَ إِمَّا شَاكِرٗا وَإِمَّا كَفُورًا ٣

4. ಖಂಡಿತವಾಗಿಯೂ ನಾವು ಸತ್ಯನಿಷೇಧಿಗಳಿಗೆ ಸಂಕೋಲೆಗಳನ್ನು, ಬೇಡಿಗಳನ್ನು ಮತ್ತು ಧಗಧಗಿಸುವ ನರಕಾಗ್ನಿಯನ್ನು ಸಿದ್ಧಗೊಳಿಸಿರುವೆವು.

إِنَّآ أَعۡتَدۡنَا لِلۡكَٰفِرِينَ سَلَٰسِلَاْ وَأَغۡلَٰلٗا وَسَعِيرًا ٤

5. ಖಂಡಿತವಾಗಿಯೂ ಪುಣ್ಯವಂತರು (ಸ್ವರ್ಗದಲ್ಲಿ) ಒಂದು ಪಾನಪಾತ್ರೆಯಿಂದ ಕುಡಿಯುವರು. ಅದರಲ್ಲಿರುವ ಮಿಶ್ರಣವು ಕರ್ಪೂರವಾಗಿರುವುದು.

إِنَّ ٱلۡأَبۡرَارَ يَشۡرَبُونَ مِن كَأۡسٖ كَانَ مِزَاجُهَا كَافُورًا ٥

6. ಅದು ಅಲ್ಲಾಹುವಿನ ದಾಸರು ಕುಡಿಯುವ ಒಂದು ಚಿಲುಮೆಯ ನೀರಾಗಿದೆ. ಅವರು ಅದನ್ನು ಚಿಮ್ಮಿಸಿ ಹರಿಯುವಂತೆ ಮಾಡುವರು.

عَيۡنٗا يَشۡرَبُ بِهَا عِبَادُ ٱللَّهِ يُفَجِّرُونَهَا تَفۡجِيرٗا ٦

1 ಪ್ರಪಂಚವು ತನ್ನ ಇಚ್ಛೆಗನುಸಾರವಾಗಿ ನಡೆಯಬೇಕೆಂದು ಹಂಬಲಿಸುವ ಸರ್ವಾಧಿಕಾರಿಯು ತನ್ನ ಅಸ್ತಿತ್ವದ ಕ್ಷಣಿಕತೆಯನ್ನು ಮರೆತು ಬಿಡುತ್ತಾನೆ. ಕೆಲವು ವರ್ಷಗಳ ಹಿಂದೆ ತನಗೆ ಅಸ್ತಿತ್ವವೇ ಇರಲಿಲ್ಲ. ಆದರೆ ತನ್ನ ಅನುಪಸ್ಥಿತಿಯಲ್ಲಿ ತನಗಿಂತ ಮುಂಚೆ ಜಗತ್ತು ಅಸ್ತಿತ್ವದಲ್ಲಿತ್ತು ಎಂಬ ವಾಸ್ತವತೆಯನ್ನು ಅವನು ಮರೆಯುತ್ತಾನೆ.

**7.** ಅವರು ಹರಕೆಗಳನ್ನು ನೆರವೇರಿಸುವವರೂ ವಿಪತ್ತು ವ್ಯಾಪಕವಾಗಿ ಹರಡುವ ಒಂದು ದಿನವನ್ನು ಭಯಪಡುವವರೂ ಆಗಿರುವರು.[1]

يُوفُونَ بِٱلنَّذۡرِ وَيَخَافُونَ يَوۡمٗا كَانَ شَرُّهُۥ مُسۡتَطِيرٗا ٧

**8.** ಆಹಾರದೊಂದಿಗೆ ಪ್ರೀತಿಯಿದ್ದೂ ಸಹ ಅವರು ಅದನ್ನು ನಿರ್ಗತಿಕರಿಗೆ, ಅನಾಥರಿಗೆ ಮತ್ತು ಸೆರೆಯಾಳುಗಳಿಗೆ ನೀಡುವರು.

وَيُطۡعِمُونَ ٱلطَّعَامَ عَلَىٰ حُبِّهِۦ مِسۡكِينٗا وَيَتِيمٗا وَأَسِيرًا ٨

**9.** (ಅವರು ಹೇಳುವರು): ‘ನಾವು ನಿಮಗೆ ಆಹಾರ ನೀಡುತ್ತಿರುವುದು ಅಲ್ಲಾಹುವಿನ ಸಂತೃಪ್ತಿಗಾಗಿ ಮಾತ್ರವಾಗಿದೆ. ನಿಮ್ಮ ವತಿಯ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗಲಿ ನಾವು ಬಯಸುವುದಿಲ್ಲ.

إِنَّمَا نُطۡعِمُكُمۡ لِوَجۡهِ ٱللَّهِ لَا نُرِيدُ مِنكُمۡ جَزَآءٗ وَلَا شُكُورًا ٩

**10.** ನಾವು ನಮ್ಮ ರಬ್‌ನ ವತಿಯಿಂದ ಮುಖವನ್ನು ವಿರೂಪಗೊಳಿಸುವ ಮತ್ತು ಕಡು ಸಂಕಷ್ಟದಿಂದ ಕೂಡಿದ ಒಂದು ದಿನವನ್ನು ಖಂಡಿತ ಭಯಪಡುತ್ತಿರುವೆವು’.

إِنَّا نَخَافُ مِن رَّبِّنَا يَوۡمًا عَبُوسٗا قَمۡطَرِيرٗا ١٠

**11.** ಆದ್ದರಿಂದ ಅಲ್ಲಾಹು ಅವರನ್ನು ಆ ದಿನದ ಕೆಡುಕಿನಿಂದ ಕಾಪಾಡುವನು ಮತ್ತು ಅವರಿಗೆ ಪ್ರಸನ್ನತೆಯನ್ನೂ, ಸಂತೋಷವನ್ನೂ ದಯಪಾಲಿಸುವನು.

فَوَقَىٰهُمُ ٱللَّهُ شَرَّ ذَٰلِكَ ٱلۡيَوۡمِ وَلَقَّىٰهُمۡ نَضۡرَةٗ وَسُرُورٗا ١١

**12.** ಅವರು ಸಹನೆ ವಹಿಸಿದ ಕಾರಣದಿಂದಾಗಿ ಅವನು ಅವರಿಗೆ ಸ್ವರ್ಗೋದ್ಯಾನವನ್ನು ಮತ್ತು ರೇಷ್ಮೆ ಉಡುಪುಗಳನ್ನು ಪ್ರತಿಫಲವಾಗಿ ನೀಡುವನು.

وَجَزَىٰهُم بِمَا صَبَرُواْ جَنَّةٗ وَحَرِيرٗا ١٢

**13.** ಅವರು ಅಲ್ಲಿ ಮೆತ್ತಗಿನ ಆಸನಗಳಲ್ಲಿ ಒರಗಿ ಕುಳಿತಿರುವರು. ಅವರು ಅಲ್ಲಿ ಬಿಸಿಲನ್ನಾಗಲಿ ತೀವ್ರ ಚಳಿಯನ್ನಾಗಲಿ ಕಾಣಲಾರರು.

مُّتَّكِـِٔينَ فِيهَا عَلَى ٱلۡأَرَآئِكِۖ لَا يَرَوۡنَ فِيهَا شَمۡسٗا وَلَا زَمۡهَرِيرٗا ١٣

**14.** ಆ ಸ್ವರ್ಗದ ನೆರಳು ಅವರ ಮೇಲೆ ನಿಕಟ ವಾಗಿರುವುದು. ಅದರ ಫಲಗಳನ್ನು ಕೀಳಲು ಅವರಿಗೆ ಅನುಕೂಲಗೊಳಿಸಲಾಗಿರುವುದು.

وَدَانِيَةً عَلَيۡهِمۡ ظِلَٰلُهَا وَذُلِّلَتۡ قُطُوفُهَا تَذۡلِيلٗا ١٤

**15–16.** ಬೆಳ್ಳಿಯ ಪಾತ್ರೆಗಳೊಂದಿಗೆ ಮತ್ತು (ಹೊಳಪಿನಲ್ಲಿ) ಸ್ಫಟಿಕದಂತಿರುವ ಬೆಳ್ಳಿಯ

وَيُطَافُ عَلَيۡهِم بِـَٔانِيَةٖ مِّن فِضَّةٖ وَأَكۡوَابٖ

1 7ರಿಂದ 10ರವರೆಗಿನ ಸೂಕ್ತಿಗಳಲ್ಲಿ ಸ್ವರ್ಗವಾಸಿಗಳ ಇಹಲೋಕ ಜೀವನ ರೀತಿಯ ಕುರಿತು ವಿವರಿಸಲಾಗಿದೆ.

كَانَتْ قَوَارِيرَا۠ ﴿١٥﴾ قَوَارِيرَا۠ مِن فِضَّةٍ قَدَّرُوهَا تَقْدِيرًا ﴿١٦﴾

ಲೋಟಗಳೊಂದಿಗೆ (ಸೇವಕರು) ಅವರ ನಡುವೆ ಸುತ್ತುತ್ತಿರುವರು. ಅವರು ಅವುಗಳಿಗೆ (ಪಾತ್ರೆಗಳಿಗೆ)ಒಂದು ಅಳತೆಗನುಸಾರವಾಗಿ ಪ್ರಮಾಣವನ್ನು ನಿಶ್ಚಯಿಸಿರುವರು.

وَيُسْقَوْنَ فِيهَا كَأْسًا كَانَ مِزَاجُهَا زَنجَبِيلًا ﴿١٧﴾

17. ಶುಂಠಿಯ ಮಿಶ್ರಣವನ್ನು ಹೊಂದಿರುವ ಒಂದು ಲೋಟವನ್ನು ಅಲ್ಲಿ ಅವರಿಗೆ ಕುಡಿಯಲು ನೀಡಲಾಗುವುದು.

عَيْنًا فِيهَا تُسَمَّىٰ سَلْسَبِيلًا ﴿١٨﴾

18. ಅಂದರೆ ಅಲ್ಲಿರುವ (ಸ್ವರ್ಗದಲ್ಲಿರುವ) ಸಲ್‌ಸಬೀಲ್ ಎಂಬ ಹೆಸರಿನ ಚಿಲುಮೆಯ ನೀರು.

۞ وَيَطُوفُ عَلَيْهِمْ وِلْدَانٌ مُّخَلَّدُونَ إِذَا رَأَيْتَهُمْ حَسِبْتَهُمْ لُؤْلُؤًا مَّنثُورًا ﴿١٩﴾

19. ಚಿರಂಜೀವಿಗಳಾದ ಕೆಲವು ಬಾಲಕರು ಅವರ ನಡುವೆ ಸುತ್ತುತ್ತಿರುವರು. ತಾವು ಅವರನ್ನು ಕಂಡರೆ ಅವರು ಹರಡಲಾಗಿರುವ ಮುತ್ತುಗಳಾಗಿದ್ದಾರೆ ಎಂದು ತಾವು ಭಾವಿಸುವಿರಿ.

وَإِذَا رَأَيْتَ ثَمَّ رَأَيْتَ نَعِيمًا وَمُلْكًا كَبِيرًا ﴿٢٠﴾

20. ತಾವು ಅಲ್ಲಿ ನೋಡಿದರೆ ಸುಖಾನುಗ್ರಹ ಮತ್ತು ಮಹಾ ಸಾಮ್ರಾಜ್ಯವೊಂದನ್ನು ಕಾಣುವಿರಿ.

عَالِيَهُمْ ثِيَابُ سُندُسٍ خُضْرٌ وَإِسْتَبْرَقٌ ۖ وَحُلُّوٓا۟ أَسَاوِرَ مِن فِضَّةٍ وَسَقَىٰهُمْ رَبُّهُمْ شَرَابًا طَهُورًا ﴿٢١﴾

21. ಅವರ ಮೇಲೆ ಹಸಿರು ಬಣ್ಣದ ತೆಳುವಾದ ರೇಷ್ಮೆ ಉಡುಪುಗಳು ಮತ್ತು ದಪ್ಪವಾದ ರೇಷ್ಮೆ ಉಡುಪುಗಳಿರುವುವು. ಬೆಳ್ಳಿಯ ಕಡಗಗಳನ್ನು ಅವರಿಗೆ ತೊಡಿಸಲಾಗುವುದು. ಅವರ ರಬ್ ಅವರಿಗೆ ಅತ್ಯಂತ ಶುದ್ಧವಾದ ಪಾನೀಯವನ್ನು ಕುಡಿಯಲು ನೀಡುವನು.[1]

إِنَّ هَٰذَا كَانَ لَكُمْ جَزَآءً وَكَانَ سَعْيُكُم مَّشْكُورًا ﴿٢٢﴾

22. (ಅವರೊಂದಿಗೆ ಹೇಳಲಾಗುವುದು): 'ಖಂಡಿತವಾಗಿಯೂ ಇದು ನಿಮಗಿರುವ ಪ್ರತಿಫಲವಾಗಿದೆ. ನಿಮ್ಮ ಪರಿಶ್ರಮವನ್ನು ಕೃತಜ್ಞತಾ ಪೂರ್ವಕ ಸ್ವೀಕರಿಸಲಾಗಿದೆ'.

إِنَّا نَحْنُ نَزَّلْنَا عَلَيْكَ ٱلْقُرْءَانَ تَنزِيلًا ﴿٢٣﴾

23. ಖಂಡಿತವಾಗಿಯೂ ನಾವು ತಮಗೆ ಈ ಕುರ್‌ಆನನ್ನು ಹಂತ ಹಂತವಾಗಿ ಅವತೀರ್ಣಗೊಳಿಸಿರುವೆವು.

---

1 ಸ್ವರ್ಗದಲ್ಲಿರುವ ಅನುಗ್ರಹಗಳನ್ನು ಮನುಷ್ಯರಿಗೆ ಪರಿಚಿತವಾಗಿರುವ ರೀತಿಯಲ್ಲಿ ವಿವರಿಸಿದರೆ ಮಾತ್ರ ಅವರಿಗೆ ಅದನ್ನು ಗ್ರಹಿಸಲು ಸಾಧ್ಯ. ಆದರೆ ಅವು ಇಹಲೋಕದ ಅನುಗ್ರಹಗಳಂತೆ ಪರಿಮಿತ, ಶುಷ್ಕ ಮತ್ತು ತಾತ್ಕಾಲಿಕವೆಂದು ಅರ್ಥೈಸುವುದು ತಪ್ಪಾಗುತ್ತದೆ. ಸ್ವರ್ಗದಲ್ಲಿರುವ ಸುಖಾಡಂಬರಗಳು ಭೂಮಿಯಲ್ಲಿರುವವುಗಳಿಗಿಂತ ಸಂಪೂರ್ಣ ಭಿನ್ನವಾಗಿರಲಿವೆ.

24. ಆದ್ದರಿಂದ ತಾವು ತಮ್ಮ ರಬ್‌ನ ತೀರ್ಪನ್ನು ಸಹನೆಯೊಂದಿಗೆ ಕಾಯುತ್ತಿರಿ. ಅವರ ಪೈಕಿ ಯಾವ ಪಾಪಿಯನ್ನೂ, ಕೃತಘ್ನನನ್ನೂ ತಾವು ಅನುಸರಿಸದಿರಿ.

فَٱصۡبِرۡ لِحُكۡمِ رَبِّكَ وَلَا تُطِعۡ مِنۡهُمۡ ءَاثِمًا أَوۡ كَفُورٗا ﴿٢٤﴾

25. ಮುಂಜಾನೆ ಮತ್ತು ಸಂಜೆ ತಮ್ಮ ರಬ್‌ನ ನಾಮವನ್ನು ಸ್ಮರಿಸುತ್ತಿರಿ.

وَٱذۡكُرِ ٱسۡمَ رَبِّكَ بُكۡرَةٗ وَأَصِيلٗا ﴿٢٥﴾

26. ರಾತ್ರಿಯಲ್ಲಿ ತಾವು ಅವನಿಗೆ ಸಾಷ್ಟಾಂಗ ಮಾಡಿರಿ ಮತ್ತು ದೀರ್ಘವಾದ ರಾತ್ರಿ ವೇಳೆಯಲ್ಲಿ ಅವನ ಪರಿಪಾವನತೆಯನ್ನು ಕೊಂಡಾಡಿರಿ.

وَمِنَ ٱلَّيۡلِ فَٱسۡجُدۡ لَهُۥ وَسَبِّحۡهُ لَيۡلٗا طَوِيلًا ﴿٢٦﴾

27. ಖಂಡಿತವಾಗಿಯೂ ಇವರು ಕ್ಷಣಿಕವಾದ ಐಹಿಕ ಜೀವನವನ್ನು ಇಷ್ಟಪಡುತ್ತಿರುವವರು. ಭಾರವಾದ ಒಂದು ದಿನವನ್ನು ಅವರು ತಮ್ಮ ಬೆನ್ನ ಹಿಂದೆಯೇ ಬಿಟ್ಟುಬಿಡುತ್ತಿರುವವರು.

إِنَّ هَٰٓؤُلَآءِ يُحِبُّونَ ٱلۡعَاجِلَةَ وَيَذَرُونَ وَرَآءَهُمۡ يَوۡمٗا ثَقِيلٗا ﴿٢٧﴾

28. ಅವರನ್ನು ಸೃಷ್ಟಿಸಿದವರು ಮತ್ತು ಅವರ ಶರೀರ ರಚನೆಯನ್ನು ಸುದೃಢಗೊಳಿಸಿದವರು ನಾವಾಗಿರುವೆವು. ನಾವು ಇಚ್ಛಿಸುವುದಾದರೆ ಅವರಿಗೆ ಸಮಾನರಾಗಿರುವವರನ್ನು ಅವರಿಗೆ ಬದಲಿಯಾಗಿ ತರುವೆವು.

نَّحۡنُ خَلَقۡنَٰهُمۡ وَشَدَدۡنَآ أَسۡرَهُمۡۖ وَإِذَا شِئۡنَا بَدَّلۡنَآ أَمۡثَٰلَهُمۡ تَبۡدِيلًا ﴿٢٨﴾

29. ಖಂಡಿತವಾಗಿಯೂ ಇದೊಂದು ಉಪದೇಶವಾಗಿದೆ. ಆದ್ದರಿಂದ ಯಾರಾದರೂ ಇಚ್ಛಿಸುವುದಾದರೆ ಅವನು ತನ್ನ ರಬ್‌ನೆಡೆಗಿರುವ ಮಾರ್ಗವನ್ನು ಪಡೆದುಕೊಳ್ಳಲಿ.

إِنَّ هَٰذِهِۦ تَذۡكِرَةٞۖ فَمَن شَآءَ ٱتَّخَذَ إِلَىٰ رَبِّهِۦ سَبِيلٗا ﴿٢٩﴾

30. ಅಲ್ಲಾಹು ಇಚ್ಛಿಸಿದ ಹೊರತು ನೀವು ಇಚ್ಛಿಸಲಾರಿರಿ.[1] ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುವನು.

وَمَا تَشَآءُونَ إِلَّآ أَن يَشَآءَ ٱللَّهُۚ إِنَّ ٱللَّهَ كَانَ عَلِيمًا حَكِيمٗا ﴿٣٠﴾

31. ಅವನು ತಾನಿಚ್ಛಿಸುವವರನ್ನು ತನ್ನ ಕಾರುಣ್ಯದಲ್ಲಿ ಪ್ರವೇಶ ಮಾಡಿಸುವನು. ಅಕ್ರಮಿಗಳಿಗೆ ಅವನು ಯಾತನಾಮಯವಾದ ಶಿಕ್ಷೆಯನ್ನು ಸಿದ್ಧಗೊಳಿಸಿರುವನು.

يُدۡخِلُ مَن يَشَآءُ فِي رَحۡمَتِهِۦۚ وَٱلظَّٰلِمِينَ أَعَدَّ لَهُمۡ عَذَابًا أَلِيمَۢا ﴿٣١﴾

1 ಪ್ರಪಂಚದ ಸೂಕ್ಷ್ಮ ಮತ್ತು ಸ್ಥೂಲವಾದ ಯಾವ ವಸ್ತುವೂ, ಮನುಷ್ಯ ಸೇರಿದಂತೆ ಯಾವ ಜೀವಿಯೂ ಹೇಗೆ ವರ್ತಿಸಬೇಕೆಂದು ನಿರ್ಧರಿಸುವುದು ಅಲ್ಲಾಹುವಾಗಿದ್ದಾನೆ. ಅವನ ನಿರ್ಧಾರದ ಹೊರತು ಏನೂ ಸಂಭವಿಸುವುದಿಲ್ಲ.

## ಅಲ್‌ಮುರ್ಸಲಾತ್ (ನಿಯೋಗಿಸಲ್ಪಡುವವುಗಳು)

## سُورَةُ المُرسَلَاتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 50

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلۡمُرۡسَلَٰتِ عُرۡفٗا ١ فَٱلۡعَٰصِفَٰتِ عَصۡفٗا ٢ وَٱلنَّٰشِرَٰتِ نَشۡرٗا ٣ فَٱلۡفَٰرِقَٰتِ فَرۡقٗا ٤ فَٱلۡمُلۡقِيَٰتِ ذِكۡرًا ٥ عُذۡرًا أَوۡ نُذۡرًا ٦

1-6. ನಿರಂತರವಾಗಿ ಕಳುಹಿಸಲಾಗುವ, ರಭಸದಿಂದ ಅಪ್ಪಳಿಸುವ, ವ್ಯಾಪಕವಾಗಿ ಹಬ್ಬುವ, ಬೇರ್ಪಡಿಸಿ ವಿವೇಚನೆ ಮಾಡುವ, ಒಂದು ನೆಪವಾಗಿ ಅಥವಾ ಎಚ್ಚರಿಕೆಯಾಗಿ ದಿವ್ಯಸಂದೇಶ ಹಾಕಿಕೊಡುವವುಗಳ ಮೇಲಾಣೆ.[1]

إِنَّمَا تُوعَدُونَ لَوَٰقِعٞ ٧

7. ನಿಮಗೆ ಎಚ್ಚರಿಕೆ ನೀಡಲಾಗುವ ವಿಷಯವು ಖಂಡಿತ ಸಂಭವಿಸಿಯೇ ತೀರುವುದು.

فَإِذَا ٱلنُّجُومُ طُمِسَتۡ ٨

8. ನಕ್ಷತ್ರಗಳ ಪ್ರಕಾಶವನ್ನು ಅಳಿಸಲಾದಾಗ.

وَإِذَا ٱلسَّمَآءُ فُرِجَتۡ ٩

9. ಆಕಾಶವನ್ನು ಸೀಳಲಾದಾಗ.

وَإِذَا ٱلۡجِبَالُ نُسِفَتۡ ١٠

10. ಪರ್ವತಗಳನ್ನು ಧೂಳೀಪಟ ಮಾಡಲಾದಾಗ.

وَإِذَا ٱلرُّسُلُ أُقِّتَتۡ ١١

11. ಸಂದೇಶವಾಹಕರಿಗೆ ಸಮಯವನ್ನು ನಿಶ್ಚಯಿಸಲಾದಾಗ.[2]

لِأَيِّ يَوۡمٍ أُجِّلَتۡ ١٢

12. ಯಾವ ದಿನಕ್ಕಾಗಿ ಅವರಿಗೆ ಅವಧಿ ನಿಶ್ಚಯಿಸಲಾಗಿದೆ?

لِيَوۡمِ ٱلۡفَصۡلِ ١٣

13. ನ್ಯಾಯ ತೀರ್ಮಾನದ ದಿನಕ್ಕಾಗಿ.

وَمَآ أَدۡرَىٰكَ مَا يَوۡمُ ٱلۡفَصۡلِ ١٤

14. ನ್ಯಾಯ ತೀರ್ಮಾನದ ದಿನ ಏನೆಂದು ತಮಗೆ ಗೊತ್ತಿದೆಯೇ?

---

1 1ರಿಂದ 5ರವರೆಗಿನ ಸೂಕ್ತಿಗಳಲ್ಲಿ ಪ್ರಸ್ತಾಪಿಸಲಾದ ವಿಶೇಷಣಗಳೆಲ್ಲವೂ ಮಲಕ್‌ಗಳ ಕುರಿತಾಗಿದೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯ ಹೊಂದಿದ್ದಾರೆ. 1–3 ಸೂಕ್ತಿಗಳಲ್ಲಿ ಗಾಳಿಯ ಕುರಿತು ಮತ್ತು 4–5ರಲ್ಲಿ ಮಲಕ್‌ಗಳ ಕುರಿತು ಪ್ರಸ್ತಾಪಿಸಲಾಗಿದೆಯೆಂದು ಇತರ ಕೆಲವರು ಅಭಿಪ್ರಾಯ ಹೊಂದಿದ್ದಾರೆ.

2 ಪುನರುತ್ಥಾನ ದಿನದಂದು ಪ್ರತಿಯೊಬ್ಬ ಪ್ರವಾದಿಯನ್ನೂ ಅಲ್ಲಾಹು ಪ್ರತ್ಯೇಕವಾಗಿ ಕರೆಯುವನು. ತರುವಾಯ ಆ ಪ್ರವಾದಿಯ ಜನತೆ ಅವರ ಉಪದೇಶದೊಂದಿಗೆ ಹೇಗೆ ಪ್ರತಿಕ್ರಿಯಿಸಿದರೆಂದು ಅವನು ಕೇಳುವನು. ಹೀಗೆ ಸಮುದಾಯಗಳ ವಿಷಯದಲ್ಲಿ ಸಾಕ್ಷ್ಯ ವಹಿಸಲು ಸಂದೇಶವಾಹಕರಿಗೆ ಸಮಯ ನಿಶ್ಚಯಿಸಿ ಕೊಡುವುದರ ಕುರಿತು ಇಲ್ಲಿ ಸೂಚಿಸಲಾಗಿದೆ.

| | |
|---|---|
| 15. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيۡلٞ يَوۡمَئِذٖ لِّلۡمُكَذِّبِينَ ١٥ |
| 16. ನಾವು ಪೂರ್ವಿಕರನ್ನು ನಾಶ ಮಾಡಲಿಲ್ಲವೇ? | أَلَمۡ نُهۡلِكِ ٱلۡأَوَّلِينَ ١٦ |
| 17. ತರುವಾಯ ನಾವು ಅವರ ನಂತರದವರನ್ನು ಅವರ ಹಿಂದೆಯೇ ಕಳುಹಿಸುವೆವು. | ثُمَّ نُتۡبِعُهُمُ ٱلۡأٓخِرِينَ ١٧ |
| 18. ಅಪರಾಧಿಗಳೊಂದಿಗೆ ನಾವು ಹೀಗೆಯೇ ವರ್ತಿಸುವೆವು. | كَذَٰلِكَ نَفۡعَلُ بِٱلۡمُجۡرِمِينَ ١٨ |
| 19. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيۡلٞ يَوۡمَئِذٖ لِّلۡمُكَذِّبِينَ ١٩ |
| 20. ತುಚ್ಛವಾದ ಒಂದು ದ್ರವದಿಂದ ನಾವು ನಿಮ್ಮನ್ನು ಸೃಷ್ಟಿಸಲಿಲ್ಲವೇ? | أَلَمۡ نَخۡلُقكُّم مِّن مَّآءٖ مَّهِينٖ ٢٠ |
| 21–22. ತರುವಾಯ ನಾವು ಅದನ್ನು ನಿಶ್ಚಿತವಾದ ಒಂದು ಅವಧಿಯವರೆಗೆ ಭದ್ರವಾದ ಒಂದು ಸ್ಥಳದಲ್ಲಿಟ್ಟೆವು. | فَجَعَلۡنَٰهُ فِي قَرَارٖ مَّكِينٍ ٢١ إِلَىٰ قَدَرٖ مَّعۡلُومٖ ٢٢ |
| 23. ಹೀಗೆ ನಾವು (ಎಲ್ಲವನ್ನು) ನಿರ್ಣಯಿಸಿರುವೆವು. ಆದ್ದರಿಂದ ನಿರ್ಣಯ ಮಾಡುವುದರಲ್ಲಿ ನಾವು ಎಷ್ಟು ಉತ್ತಮರು![1] | فَقَدَرۡنَا فَنِعۡمَ ٱلۡقَٰدِرُونَ ٢٣ |
| 24. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيۡلٞ يَوۡمَئِذٖ لِّلۡمُكَذِّبِينَ ٢٤ |
| 25–26. ಮೃತರನ್ನು ಮತ್ತು ಬದುಕಿರುವವರನ್ನು ಒಳಗೊಳ್ಳುವಂತೆ ನಾವು ಭೂಮಿಯನ್ನು ಮಾಡಲಿಲ್ಲವೇ? | أَلَمۡ نَجۡعَلِ ٱلۡأَرۡضَ كِفَاتًا ٢٥ أَحۡيَآءٗ وَأَمۡوَٰتٗا ٢٦ |
| 27. ನಾವು ಅದರಲ್ಲಿ ಎತ್ತರದವುಗಳಾಗಿ ನಾಟಿ ನಿಲ್ಲುವ ಪರ್ವತಗಳನ್ನು ಸ್ಥಾಪಿಸಿದೆವು. ನಿಮಗೆ ಕುಡಿಯಲು ಶುದ್ಧವಾದ ನೀರನ್ನು ನೀಡಿದೆವು. | وَجَعَلۡنَا فِيهَا رَوَٰسِيَ شَٰمِخَٰتٖ وَأَسۡقَيۡنَٰكُم مَّآءٗ فُرَاتٗا ٢٧ |
| 28. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيۡلٞ يَوۡمَئِذٖ لِّلۡمُكَذِّبِينَ ٢٨ |
| 29. (ಓ ಸತ್ಯನಿಷೇಧಿಗಳೇ!) ನೀವು ಯಾವುದನ್ನು ನಿಷೇಧಿಸುತ್ತಿದ್ದಿರೋ ಅದರೆಡೆಗೆ ತೆರಳಿರಿ. | ٱنطَلِقُوٓاْ إِلَىٰ مَا كُنتُم بِهِۦ تُكَذِّبُونَ ٢٩ |

1 ಅತ್ಯಂತ ತುಚ್ಛವಾಗಿ ಕಾಣುವ ವೀರ್ಯ ಮತ್ತು ಅಂಡ ಕೋಶದಿಂದ ಕೋಟ್ಯಾನುಕೋಟಿ ಸೂಕ್ಷ್ಮ ಕೋಶಗಳನ್ನು ಹೊಂದಿರುವ ಮನುಷ್ಯನನ್ನು ಅಲ್ಲಾಹು ಅತ್ಯಂತ ನಿಖರವಾಗಿ ಬೆಳೆಸಿ ಹೊರತರುತ್ತಾನೆ.

| | |
|---|---|
| 30. ಮೂರು ಶಾಖೆಗಳಿರುವ ಒಂದು ರೀತಿಯ ನೆರಳಿನೆಡೆಗೆ[1] ತೆರಳಿರಿ. | ٱنطَلِقُوٓاْ إِلَىٰ ظِلٍّ ذِى ثَلَٰثِ شُعَبٍ ﴿٣٠﴾ |
| 31. ಅದು ನೆರಳು ನೀಡಲಾರದು. ಅಗ್ನಿಜ್ವಾಲೆಯಿಂದ ರಕ್ಷಣೆಯನ್ನೂ ಒದಗಿಸಲಾರದು. | لَّا ظَلِيلٍ وَلَا يُغْنِى مِنَ ٱللَّهَبِ ﴿٣١﴾ |
| 32. ಖಂಡಿತವಾಗಿಯೂ ಅದು (ನರಕಾಗ್ನಿಯು) ದೊಡ್ಡ ಕಟ್ಟಡದಂತೆ ಎತ್ತರವಿರುವ ಕಿಡಿಗಳನ್ನು ಎಸೆಯುತ್ತಿರುವುದು. | إِنَّهَا تَرْمِى بِشَرَرٍ كَٱلْقَصْرِ ﴿٣٢﴾ |
| 33. ಅದು (ಕಿಡಿಯು) ಹಳದಿ ಬಣ್ಣದ ಒಂಟೆಗಳ ಹಿಂಡಿನಂತಿರುವುದು. | كَأَنَّهُۥ جِمَٰلَتٌ صُفْرٌ ﴿٣٣﴾ |
| 34. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٣٤﴾ |
| 35. ಇದು ಅವರು ತುಟಿಬಿಚ್ಚದಂತಹ ದಿನವಾಗಿದೆ. | هَٰذَا يَوْمُ لَا يَنطِقُونَ ﴿٣٥﴾ |
| 36. ನೆಪಗಳನ್ನು ಹೇಳಲು ಅವರಿಗೆ ಅನುಮತಿ ನೀಡಲಾಗದು. | وَلَا يُؤْذَنُ لَهُمْ فَيَعْتَذِرُونَ ﴿٣٦﴾ |
| 37. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٣٧﴾ |
| 38. (ಅವರೊಂದಿಗೆ ಹೇಳಲಾಗುವುದು): 'ಇದು ನ್ಯಾಯ ತೀರ್ಮಾನದ ದಿನವಾಗಿದೆ. ನಾವು ನಿಮ್ಮನ್ನೂ, ಪೂರ್ವಿಕರನ್ನೂ ಒಟ್ಟುಗೂಡಿಸಿರುವೆವು. | هَٰذَا يَوْمُ ٱلْفَصْلِ ۖ جَمَعْنَٰكُمْ وَٱلْأَوَّلِينَ ﴿٣٨﴾ |
| 39. ನಿಮಲ್ಲಿ ಯಾವುದಾದರೂ ತಂತ್ರವಿದ್ದರೆ ಆ ತಂತ್ರವನ್ನು ಪ್ರಯೋಗಿಸಿರಿ'. | فَإِن كَانَ لَكُمْ كَيْدٌ فَكِيدُونِ ﴿٣٩﴾ |
| 40. ಆ ದಿನದಂದು ನಿಷೇಧಿಗಳಿಗೆ ನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٤٠﴾ |
| 41. ಖಂಡಿತವಾಗಿಯೂ ಭಯಭಕ್ತಿ ಪಾಲಿಸಿದವರು (ಸ್ವರ್ಗದಲ್ಲಿ) ನೆರಳುಗಳಲ್ಲಿ ಮತ್ತು ಚಿಲುಮೆಗಳಲ್ಲಿರುವರು. | إِنَّ ٱلْمُتَّقِينَ فِى ظِلَٰلٍ وَعُيُونٍ ﴿٤١﴾ |
| 42. ಅವರು ಇಷ್ಟಪಡುವ ವಿಧದ ಫಲಗಳಲ್ಲಿ. | وَفَوَٰكِهَ مِمَّا يَشْتَهُونَ ﴿٤٢﴾ |
| 43. (ಅವರೊಂದಿಗೆ ಹೇಳಲಾಗುವುದು): 'ನೀವು ಮಾಡಿಕೊಂಡಿರುವುದರ ಫಲವಾಗಿ | كُلُواْ وَٱشْرَبُواْ هَنِيٓـًٔا بِمَا كُنتُمْ تَعْمَلُونَ ﴿٤٣﴾ |

1 ನರಕದಿಂದ ಶಾಖೆಗಳಾಗಿ ಹರಡಿಕೊಳ್ಳುವ ಕಪ್ಪು ಹೊಗೆಯ ನೆರಳಿನ ಕುರಿತು ಇಲ್ಲಿ ಸೂಚಿಸಲಾಗಿದೆ.

ಸಂತೋಷದಿಂದ ತಿನ್ನುತ್ತಲೂ ಕುಡಿಯುತ್ತಲೂ ಇರಿ.

44. ಖಂಡಿತವಾಗಿಯೂ ನಾವು ಸಜ್ಜನರಿಗೆ ಹೀಗೆ ಪ್ರತಿಫಲವನ್ನು ನೀಡುವೆವು'.

إِنَّا كَذَٰلِكَ نَجۡزِي ٱلۡمُحۡسِنِينَ ﴿٤٤﴾

45. ಆ ದಿನದಂದು ನಿಷೇಧಿಗಳಿಗೆ ನಾಶವಿದೆ.

وَيۡلٞ يَوۡمَئِذٖ لِّلۡمُكَذِّبِينَ ﴿٤٥﴾

46. (ಅವರೊಂದಿಗೆ ಹೇಳಲಾಗುವುದು): 'ನೀವು ಅಲ್ಪ ಸಮಯದವರೆಗೆ ತಿನ್ನಿರಿ ಮತ್ತು ಸುಖವಾಗಿ ಬಾಳಿರಿ. ಖಂಡಿತವಾಗಿಯೂ ನೀವು ಅಪರಾಧಿಗಳಾಗಿರುವಿರಿ'.

كُلُواْ وَتَمَتَّعُواْ قَلِيلًا إِنَّكُم مُّجۡرِمُونَ ﴿٤٦﴾

47. ಆ ದಿನದಂದು ನಿಷೇಧಿಗಳಿಗೆ ನಾಶವಿದೆ.

وَيۡلٞ يَوۡمَئِذٖ لِّلۡمُكَذِّبِينَ ﴿٤٧﴾

48. ಅವರೊಂದಿಗೆ ತಲೆಬಾಗಲು ಹೇಳಲಾದಾಗ ಅವರು ತಲೆಬಾಗಲಾರರು.[1]

وَإِذَا قِيلَ لَهُمُ ٱرۡكَعُواْ لَا يَرۡكَعُونَ ﴿٤٨﴾

49. ಆ ದಿನದಂದು ನಿಷೇಧಿಗಳಿಗೆ ನಾಶವಿದೆ.

وَيۡلٞ يَوۡمَئِذٖ لِّلۡمُكَذِّبِينَ ﴿٤٩﴾

50. ಇದರ (ಈ ಕುರ್‌ಆನಿನ) ಬಳಿಕ ಇನ್ನು ಯಾವ ವೃತ್ತಾಂತದಲ್ಲಿ ಅವರು ವಿಶ್ವಾಸವಿಡುವರು?

فَبِأَيِّ حَدِيثِۭ بَعۡدَهُۥ يُؤۡمِنُونَ ﴿٥٠﴾

---

1 ಇಹಲೋಕದಲ್ಲಿ ಸತ್ಯನಿಷೇಧಿಗಳು ತಾಳುವ ನಿಲುವನ್ನು ಇಲ್ಲಿ ಸೂಚಿಸಲಾಗಿದೆ. ತಲೆಬಾಗುತ್ತಾ, ಸಾಷ್ಟಾಂಗವೆರಗುತ್ತಾ ಅಲ್ಲಾಹುವಿನೊಂದಿಗೆ ಪ್ರಾರ್ಥಿಸಲು ಅವರೊಂದಿಗೆ ಆದೇಶಿಸಲಾದರೆ ಅವರು ಅದನ್ನು ಅನುಸರಿಸಲಾರರು.

## ಅನ್ನಬಅ್ (ವೃತ್ತಾಂತ)

## سُورَةُ النَّبَإِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 40

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1.** ಅವರು ಪರಸ್ಪರ ಯಾವುದರ ಕುರಿತು ವಿಚಾರಿಸುತ್ತಿರುವರು?

عَمَّ يَتَسَآءَلُونَ ١

**2-3.** ಅವರು ಯಾವುದರ ಕುರಿತು ಭಿನ್ನಾಭಿಪ್ರಾಯದಲ್ಲಿರುವರೋ ಆ ಮಹಾ ವೃತ್ತಾಂತದ ಕುರಿತು.

عَنِ ٱلنَّبَإِ ٱلۡعَظِيمِ ٢ ٱلَّذِي هُمۡ فِيهِ مُخۡتَلِفُونَ ٣

**4.** ಸಂದೇಹವೇ ಇಲ್ಲ. ಅವರು ತರುವಾಯ ಅರಿತುಕೊಳ್ಳುವರು.

كَلَّا سَيَعۡلَمُونَ ٤

**5.** ಪುನಃ ಸಂದೇಹವೇ ಇಲ್ಲ. ಅವರು ತರುವಾಯ ಅರಿತುಕೊಳ್ಳುವರು.

ثُمَّ كَلَّا سَيَعۡلَمُونَ ٥

**6-7.** ನಾವು ಭೂಮಿಯನ್ನು ಒಂದು ಹಾಸನ್ನಾಗಿಯೂ, ಪರ್ವತಗಳನ್ನು ಗೂಟಗಳನ್ನಾಗಿಯೂ ಮಾಡಿಲ್ಲವೇ?

أَلَمۡ نَجۡعَلِ ٱلۡأَرۡضَ مِهَٰدٗا ٦ وَٱلۡجِبَالَ أَوۡتَادٗا ٧

**8.** ನಿಮ್ಮನ್ನು ನಾವು ಜೋಡಿಗಳನ್ನಾಗಿ ಸೃಷ್ಟಿಸಿರುವೆವು.

وَخَلَقۡنَٰكُمۡ أَزۡوَٰجٗا ٨

**9.** ನಿಮ್ಮ ನಿದ್ದೆಯನ್ನು ನಾವು ವಿಶ್ರಾಂತಿಯನ್ನಾಗಿ ಮಾಡಿರುವೆವು.

وَجَعَلۡنَا نَوۡمَكُمۡ سُبَاتٗا ٩

**10.** ರಾತ್ರಿಯನ್ನು ನಾವು ಒಂದು ಉಡುಪನ್ನಾಗಿ ಮಾಡಿರುವೆವು.(1)

وَجَعَلۡنَا ٱلَّيۡلَ لِبَاسٗا ١٠

**11.** ಹಗಲನ್ನು ನಾವು ಜೀವನೋಪಾಯ ವೇಳೆಯನ್ನಾಗಿ ಮಾಡಿರುವೆವು.

وَجَعَلۡنَا ٱلنَّهَارَ مَعَاشٗا ١١

**12.** ನಿಮ್ಮ ಮೇಲ್ಭಾಗದಲ್ಲಿ ನಾವು ಬಲಿಷ್ಠವಾದ ಏಳು ಆಕಾಶಗಳನ್ನು ನಿರ್ಮಿಸಿರುವೆವು.

وَبَنَيۡنَا فَوۡقَكُمۡ سَبۡعٗا شِدَادٗا ١٢

---

1 ಒಂದು ಉಡುಪು ನೀಡುವಂತಹ ಮರೆ ಮತ್ತು ಖಾಸಗಿತನವನ್ನು ರಾತ್ರಿಯ ಕತ್ತಲು ನಮಗೆ ನೀಡುತ್ತದೆ.

| | |
|---|---|
| **13.** ಉರಿಯುವ ಒಂದು ದೀಪವನ್ನು ನಾವು ಮಾಡಿರುವೆವು. | وَجَعَلْنَا سِرَاجًا وَهَّاجًا ﴿١٣﴾ |
| **14.** ಕಾರ್ಮೋಡಗಳಿಂದ ಧಾರಾಕಾರವಾಗಿ ಸುರಿಯುವ ನೀರನ್ನು ನಾವು ಇಳಿಸಿಕೊಟ್ಟಿರುವೆವು. | وَأَنزَلْنَا مِنَ ٱلْمُعْصِرَٰتِ مَآءً ثَجَّاجًا ﴿١٤﴾ |
| **15–16.** ತನ್ಮೂಲಕ ಧಾನ್ಯವನ್ನು ಹಾಗೂ ಸಸ್ಯವನ್ನು, ಮತ್ತು ದಟ್ಟವಾಗಿ ಬೆಳೆಯುವ ತೋಟಗಳನ್ನು ಹೊರತರುವ ಸಲುವಾಗಿ. | لِّنُخْرِجَ بِهِۦ حَبًّا وَنَبَاتًا ﴿١٥﴾ وَجَنَّـٰتٍ أَلْفَافًا ﴿١٦﴾ |
| **17.** ಖಂಡಿತವಾಗಿಯೂ ತೀರ್ಮಾನದ ದಿನವು ಸಮಯ ನಿಶ್ಚಯಿಸಲ್ಪಟ್ಟದ್ದಾಗಿದೆ. | إِنَّ يَوْمَ ٱلْفَصْلِ كَانَ مِيقَـٰتًا ﴿١٧﴾ |
| **18.** ಅಂದರೆ ಕಹಳೆಯಲ್ಲಿ ಊದಲಾಗುವ ಮತ್ತು ನೀವು ಗುಂಪು ಗುಂಪಾಗಿ ಬರುವ ದಿನ! | يَوْمَ يُنفَخُ فِى ٱلصُّورِ فَتَأْتُونَ أَفْوَاجًا ﴿١٨﴾ |
| **19.** ಆಕಾಶವನ್ನು ತೆರೆಯಲಾಗುವುದು. ತರುವಾಯ ಅದು ಹಲವು ದ್ವಾರಗಳಾಗಿ ಮಾರ್ಪಡುವುದು. | وَفُتِحَتِ ٱلسَّمَآءُ فَكَانَتْ أَبْوَٰبًا ﴿١٩﴾ |
| **20.** ಪರ್ವತಗಳು ಚಲಿಸಲ್ಪಡುವುವು. ಆಗ ಅವು ಮರೀಚಿಕೆಯಂತಾಗಿ ಬಿಡುವುವು. | وَسُيِّرَتِ ٱلْجِبَالُ فَكَانَتْ سَرَابًا ﴿٢٠﴾ |
| **21–22.** ಖಂಡಿತವಾಗಿಯೂ ನರಕಾಗ್ನಿಯು ಅತಿಕ್ರಮಿಗಳಿಗಾಗಿ ಕಾಯುತ್ತಿರುವ ಸ್ಥಳವೂ, (ಅವರಿಗೆ) ಮರಳಿ ತಲುಪಬೇಕಾದ ಸ್ಥಳವೂ ಆಗಿದೆ. | إِنَّ جَهَنَّمَ كَانَتْ مِرْصَادًا ﴿٢١﴾ لِّلطَّـٰغِينَ مَـَٔابًا ﴿٢٢﴾ |
| **23.** ಅವರು ಅದರಲ್ಲಿ ಯುಗಯುಗಾಂತರ ತಂಗುವವರಾಗಿರುವರು. | لَّـٰبِثِينَ فِيهَآ أَحْقَابًا ﴿٢٣﴾ |
| **24.** ಅವರು ಅಲ್ಲಿ ತಂಪನ್ನಾಗಲಿ, ಪಾನೀಯವನ್ನಾಗಲಿ ಸವಿಯಲಾರರು. | لَّا يَذُوقُونَ فِيهَا بَرْدًا وَلَا شَرَابًا ﴿٢٤﴾ |
| **25.** ಕುದಿಯುವ ನೀರು ಮತ್ತು ಅತಿತಣ್ಣಗಿನ ನೀರಿನ ಹೊರತು. | إِلَّا حَمِيمًا وَغَسَّاقًا ﴿٢٥﴾ |
| **26.** ಅದು ಸೂಕ್ತವಾದ ಪ್ರತಿಫಲವಾಗಿದೆ. | جَزَآءً وِفَاقًا ﴿٢٦﴾ |
| **27.** ಖಂಡಿತವಾಗಿಯೂ ಅವರು ವಿಚಾರಣೆಯನ್ನು ನಿರೀಕ್ಷಿಸುತ್ತಿರಲಿಲ್ಲ. | إِنَّهُمْ كَانُوا۟ لَا يَرْجُونَ حِسَابًا ﴿٢٧﴾ |

28. ಅವರು ನಮ್ಮ ದೃಷ್ಟಾಂತಗಳನ್ನು ಸಂಪೂರ್ಣವಾಗಿ ನಿಷೇಧಿಸಿರುವರು.

وَكَذَّبُواْ بِـَٔايَٰتِنَا كِذَّابٗا ٢٨

29. ನಾವು ಎಲ್ಲ ವಿಷಯಗಳನ್ನೂ ಲಿಖಿತವಾಗಿ ಎಣಿಸಿಟ್ಟಿರುವೆವು.

وَكُلَّ شَيۡءٍ أَحۡصَيۡنَٰهُ كِتَٰبٗا ٢٩

30. ಆದ್ದರಿಂದ ನೀವು (ಶಿಕ್ಷೆಯನ್ನು) ಸವಿಯಿರಿ. ಖಂಡಿತವಾಗಿಯೂ ನಾವು ನಿಮಗೆ ಶಿಕ್ಷೆಯ ಹೊರತು ಇನ್ನೇನನ್ನೂ ಹೆಚ್ಚಿಸಿಕೊಡಲಾರೆವು.

فَذُوقُواْ فَلَن نَّزِيدَكُمۡ إِلَّا عَذَابًا ٣٠

31. ಖಂಡಿತವಾಗಿಯೂ ಭಯಭಕ್ತಿ ಪಾಲಿಸಿದವರಿಗೆ ವಿಜಯವಿದೆ.

إِنَّ لِلۡمُتَّقِينَ مَفَازًا ٣١

32. ಅಂದರೆ (ಸ್ವರ್ಗದಲ್ಲಿರುವ) ತೋಟಗಳು ಮತ್ತು ದ್ರಾಕ್ಷೆಗಳು.

حَدَآئِقَ وَأَعۡنَٰبٗا ٣٢

33. ಉಬ್ಬಿದ ಎದೆಗಳುಳ್ಳ ಸಮವಯಸ್ಕರಾದ ತರುಣಿಯರು.

وَكَوَاعِبَ أَتۡرَابٗا ٣٣

34. ತುಂಬಿದ ಲೋಟಗಳು.

وَكَأۡسٗا دِهَاقٗا ٣٤

35. ಅವರು ಅಲ್ಲಿ ಅನಾವಶ್ಯಕ ಮಾತುಗಳನ್ನಾಗಲಿ, ಯಾವೊಂದು ಮಿಥ್ಯ ವಾರ್ತೆಯನ್ನಾಗಲಿ ಆಲಿಸಲಾರರು.

لَّا يَسۡمَعُونَ فِيهَا لَغۡوٗا وَلَا كِذَّٰبٗا ٣٥

36. (ಅದು) ತಮ್ಮ ರಬ್‌ನ ವತಿಯ ಒಂದು ಪ್ರತಿಫಲವೂ ಗಣಿಸಲಾದ ಒಂದು ಉಡುಗೊರೆಯೂ ಆಗಿದೆ.

جَزَآءٗ مِّن رَّبِّكَ عَطَآءً حِسَابٗا ٣٦

37. ಆಕಾಶಗಳ, ಭೂಮಿಯ ಮತ್ತು ಅವುಗಳ ಮಧ್ಯೆಯಿರುವವುಗಳ ರಬ್ ಮತ್ತು ಪರಮದಯಾಮಯನು ಆಗಿರುವವನ (ಉಡುಗೊರೆ). ಅವನೊಂದಿಗೆ ಸಂಭಾಷಣೆ ಮಾಡಲು ಅವರಿಗೆ ಸಾಧ್ಯವಾಗದು.[1]

رَّبِّ ٱلسَّمَٰوَٰتِ وَٱلۡأَرۡضِ وَمَا بَيۡنَهُمَا
ٱلرَّحۡمَٰنِۖ لَا يَمۡلِكُونَ مِنۡهُ خِطَابٗا ٣٧

1 ಅಲ್ಲಾಹುವಿನೊಂದಿಗೆ ಮಾತನಾಡಿ ಅವನ ನಿರ್ಧಾರವನ್ನು ಬದಲಾಯಿಸಲು ಅಥವಾ ಶಿಕ್ಷೆಯನ್ನು ಹಗುರವಾಗಿಸಲು ಅಥವಾ ಅವನು ತನ್ನ ಅನುಗ್ರಹಗಳನ್ನು ವಾಪಸು ಪಡೆಯುವಂತೆ ಮಾಡಲು ಯಾರಿಗೂ ಸಾಧ್ಯವಾಗದು.

38. ರೂಹ್[1] ಮತ್ತು ಮಲಕ್‌ಗಳು ಸಾಲು ಸಾಲಾಗಿ ನಿಲ್ಲುವ ದಿನ. ಪರಮ ದಯಾಮಯನಾದ ಅಲ್ಲಾಹನು ಅನುಮತಿ ನೀಡಿದವನ ಮತ್ತು ಸತ್ಯವನ್ನೇ ನುಡಿಯುವವರ ವಿನಾ ಇನ್ನಾರೂ ಅಂದು ಮಾತನಾಡಲಾರರು.

يَوۡمَ يَقُومُ ٱلرُّوحُ وَٱلۡمَلَٰٓئِكَةُ صَفّٗاۖ لَّا يَتَكَلَّمُونَ إِلَّا مَنۡ أَذِنَ لَهُ ٱلرَّحۡمَٰنُ وَقَالَ صَوَابٗا ﴿٣٨﴾

39. ಅದು ಸತ್ಯವಾದ ದಿನವಾಗಿದೆ. ಆದ್ದರಿಂದ ಯಾರಾದರೂ ಇಚ್ಛಿಸುವುದಾದರೆ ಅವನು ತನ್ನ ರಬ್‌ನೆಡೆಗಿರುವ ಮರಳುವಿಕೆಯ ಮಾರ್ಗವನ್ನು ಪಡೆದುಕೊಳ್ಳಲಿ.

ذَٰلِكَ ٱلۡيَوۡمُ ٱلۡحَقُّۖ فَمَن شَآءَ ٱتَّخَذَ إِلَىٰ رَبِّهِۦ مَـَٔابًا ﴿٣٩﴾

40. ಹತ್ತಿರದಲ್ಲೇ ಇರುವ ಒಂದು ಶಿಕ್ಷೆಯ ಕುರಿತು ಖಂಡಿತವಾಗಿಯೂ ನಾವು ನಿಮಗೆ ಮುನ್ನೆಚ್ಚರಿಕೆ ನೀಡಿರುವೆವು. ತನ್ನ ಕೈಗಳು ಪೂರ್ವಭಾವಿಯಾಗಿ ಮಾಡಿಟ್ಟಿರುವುದನ್ನು ಮನುಷ್ಯನು ಕಾಣುವ ಮತ್ತು ಸತ್ಯನಿಷೇಧಿಯು 'ಅಯ್ಯೋ! ನಾನು ಮಣ್ಣಾಗಿ ಹೋಗುತ್ತಿದ್ದರೆ ಎಷ್ಟು ಚೆನ್ನಾಗಿತ್ತು' ಎಂದು ಹೇಳುವ ದಿನ!

إِنَّآ أَنذَرۡنَٰكُمۡ عَذَابٗا قَرِيبٗا يَوۡمَ يَنظُرُ ٱلۡمَرۡءُ مَا قَدَّمَتۡ يَدَاهُ وَيَقُولُ ٱلۡكَافِرُ يَٰلَيۡتَنِي كُنتُ تُرَٰبَۢا ﴿٤٠﴾

1 ಆತ್ಮ ಎಂಬ ಅರ್ಥದಲ್ಲಿ 'ರೂಹ್' ಎಂಬ ಪದವನ್ನು ಕುರ್‌ಆನ್ ಧಾರಾಳವಾಗಿ ಬಳಸಿದೆ. ಕೆಲವು ಸ್ಥಳಗಳಲ್ಲಿ ಜಿಬ್ರೀಲ್ ಎಂಬ ಮಲಕನ್ನು 'ರೂಹ್' ಎಂಬ ಹೆಸರಿನಿಂದ ಕುರ್‌ಆನ್ ಕರೆದಿದೆ. ಇಲ್ಲಿ ಯಾವ ಅರ್ಥದಲ್ಲಿ ಬಳಸಲಾಗಿದೆ ಎಂಬ ಬಗ್ಗೆ ವ್ಯಾಖ್ಯಾನಕಾರರ ಮಧ್ಯೆ ಒಮ್ಮತವಿಲ್ಲ.

## ಅನ್ನಾಝಿಆತ್ (ಹೊರಗೆಳೆಯುವವುಗಳು)

## سُورَةُ النَّازِعَاتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 46

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلنَّٰزِعَٰتِ غَرۡقٗا ١ وَٱلنَّٰشِطَٰتِ نَشۡطٗا ٢ وَٱلسَّٰبِحَٰتِ سَبۡحٗا ٣ فَٱلسَّٰبِقَٰتِ سَبۡقٗا ٤ فَٱلۡمُدَبِّرَٰتِ أَمۡرٗا ٥

1-5. (ಅವಿಶ್ವಾಸಿಗಳೆಡೆಗೆ) ಇಳಿದು (ಅವರ ಆತ್ಮಗಳನ್ನು) ಹೊರಗೆಳೆಯುವವುಗಳ ಮೇಲಾಣೆ! (ಸತ್ಯವಿಶ್ವಾಸಿಗಳ ಆತ್ಮಗಳನ್ನು) ಸೌಮ್ಯವಾಗಿ ಹೊರಗೆಳೆಯುವುಗಳ ಮೇಲಾಣೆ! ರಭಸವಾಗಿ ಹರಿದು ಬರುವವುಗಳ ಮೇಲಾಣೆ! ತರುವಾಯ ಮುಂದಕ್ಕೆ ಜಿಗಿದು ಸಾಗುವ ಮತ್ತು ಕಾರ್ಯಗಳನ್ನು ನಿಯಂತ್ರಿಸುವವುಗಳ ಮೇಲಾಣೆ.[1]

يَوۡمَ تَرۡجُفُ ٱلرَّاجِفَةُ ٦

6. ಆ ಕಂಪಿಸುವ ಘಟನೆಯು ಕಂಪನವನ್ನುಂಟು ಮಾಡುವ ದಿನ!

تَتۡبَعُهَا ٱلرَّادِفَةُ ٧

7. ಅದನ್ನು ಹಿಂಬಾಲಿಸಿ ಅದರ ಹಿಂದೆಯೇ ಬರುವ ಮತ್ತೊಂದು![2]

قُلُوبٞ يَوۡمَئِذٖ وَاجِفَةٌ ٨

8. ಅಂದು ಕೆಲವು ಹೃದಯಗಳು ನಡುಗುತ್ತಿರುವುವು.

أَبۡصَٰرُهَا خَٰشِعَةٞ ٩

9. ಅವುಗಳ ಕಣ್ಣುಗಳು ಕೆಳಕ್ಕೆ ತಗ್ಗಿರುವುವು.

يَقُولُونَ أَءِنَّا لَمَرۡدُودُونَ فِي ٱلۡحَافِرَةِ ١٠

10. ಅವರು ಹೇಳುವರು: ‘ಖಂಡಿತವಾಗಿಯೂ ನಮ್ಮನ್ನು (ನಮ್ಮ) ಪೂರ್ವಸ್ಥಿತಿಗೆ ಮರಳಿಸಲಾಗುವುದೇ?

أَءِذَا كُنَّا عِظَٰمٗا نَّخِرَةٗ ١١

11. ನಾವು ಶಿಥಿಲವಾದ ಮೂಳೆಗಳಾಗಿ ಹೋದ ಬಳಿಕವೂ (ನಮ್ಮನ್ನು ಮರಳಿಸಲಾಗುವುದೇ)?’

قَالُواْ تِلۡكَ إِذٗا كَرَّةٌ خَاسِرَةٞ ١٢

12. ಅವರು ಹೇಳುವರು: ‘ಹಾಗಾದರೆ ಅದೊಂದು ನಷ್ಟ ತುಂಬಿದ ಮರಳುವಿಕೆಯಾಗಿರುವುದು’.

1 ಒಂದರಿಂದ ಐದರವರೆಗಿನ ಸೂಕ್ತಿಗಳಲ್ಲಿರುವ ವಿಶೇಷಣಗಳೆಲ್ಲವೂ ಮಲಕ್‌ಗಳನ್ನು ಸೂಚಿಸುತ್ತವೆ ಎಂದು ಪ್ರಮುಖ ವ್ಯಾಖ್ಯಾನಕಾರರು ಹೇಳಿದ್ದಾರೆ. ಅಲ್ಲಾಹು ತನ್ನ ಸೃಷ್ಟಿಗಳ ಪೈಕಿ ತಾನಿಚ್ಛಿಸಿದವರ ಮೇಲೆ ಆಣೆಯಿಡುತ್ತಾನೆ.

2 ಇಲ್ಲಿರುವ ಸೂಚನೆಯು ಲೋಕಾಂತ್ಯದ ವೇಳೆ ಕಹಳೆಯಲ್ಲಿ ಮೊಳಗಿಸಲಾಗುವ ಎರಡು ಸಂದರ್ಭಗಳ ಕುರಿತಾಗಿದೆ.

**13.** ಅದು ಒಂದೇ ಒಂದು ಘೋರ ಶಬ್ದ ಮಾತ್ರವಾಗಿರುವುದು.

فَإِنَّمَا هِيَ زَجۡرَةٞ وَٰحِدَةٞ ١٣

**14.** ಆಗ ಅಗೋ! ಅವರು ಸಮತಟ್ಟಾದ ಬಯಲಲ್ಲಿರುವರು.[(1)]

فَإِذَا هُم بِٱلسَّاهِرَةِ ١٤

**15.** ಮೂಸಾರ ವೃತ್ತಾಂತವು ತಮ್ಮ ಬಳಿಗೆ ಬಂದಿದೆಯೇ?

هَلۡ أَتَىٰكَ حَدِيثُ مُوسَىٰٓ ١٥

**16.** ತುವಾ ಎಂಬ ಪವಿತ್ರ ಕಣಿವೆಯಲ್ಲಿ ಅವರ ರಬ್ ಅವರನ್ನು ಕರೆದು ಹೀಗೆಂದ ಸಂದರ್ಭ.

إِذۡ نَادَىٰهُ رَبُّهُۥ بِٱلۡوَادِ ٱلۡمُقَدَّسِ طُوًى ١٦

**17.** 'ತಾವು ಫಿರ್‌ಔನನ ಬಳಿಗೆ ಹೋಗಿರಿ. ಖಂಡಿತವಾಗಿಯೂ ಅವನು ಮಿತಿಮೀರಿರುವನು.

ٱذۡهَبۡ إِلَىٰ فِرۡعَوۡنَ إِنَّهُۥ طَغَىٰ ١٧

**18.** ತರುವಾಯ ಹೀಗೆ ಕೇಳಿರಿ: ಪರಿಶುದ್ಧಿಯನ್ನು ಪಡೆಯಲು ನೀನು ಸಿದ್ಧನಿರುವೆಯಾ?

فَقُلۡ هَل لَّكَ إِلَىٰٓ أَن تَزَكَّىٰ ١٨

**19.** ನಾನು ನಿನಗೆ ನಿನ್ನ ರಬ್‌ನೆಡೆಗಿರುವ ಹಾದಿಯನ್ನು ತೋರಿಸುವೆನು. ತನ್ನಿಮಿತ್ತ ನೀನು ಭಯಪಡಲು (ಸಿದ್ಧನಿರುವೆಯಾ?).

وَأَهۡدِيَكَ إِلَىٰ رَبِّكَ فَتَخۡشَىٰ ١٩

**20.** ತರುವಾಯ ಅವರು (ಮೂಸಾ) ಅವನಿಗೆ ಆ ಮಹಾ ದೃಷ್ಟಾಂತವನ್ನು ತೋರಿಸಿಕೊಟ್ಟರು.[(2)]

فَأَرَىٰهُ ٱلۡأٓيَةَ ٱلۡكُبۡرَىٰ ٢٠

**21.** ಆದರೆ ಅವನು ನಿಷೇಧಿಸಿದನು ಮತ್ತು ಧಿಕ್ಕರಿಸಿದನು.

فَكَذَّبَ وَعَصَىٰ ٢١

**22.** ತರುವಾಯ ಅವನು ವಿರುದ್ಧ ಶ್ರಮಗಳನ್ನು ನಡೆಸುವುದಕ್ಕಾಗಿ ಹಿಂದಿರುಗಿ ಹೋದನು.

ثُمَّ أَدۡبَرَ يَسۡعَىٰ ٢٢

**23.** ತರುವಾಯ ಅವನು (ತನ್ನ ಜನರನ್ನು) ಒಟ್ಟುಗೂಡಿಸಿದನು. ಬಳಿಕ ಘೋಷಿಸಿದನು:

فَحَشَرَ فَنَادَىٰ ٢٣

**24.** 'ನಾನು ನಿಮ್ಮ ಅತ್ಯುನ್ನತನಾದ ಪ್ರಭುವಾಗಿರುವೆನು' ಎಂದು ಅವನು ಹೇಳಿದನು.

فَقَالَ أَنَا۠ رَبُّكُمُ ٱلۡأَعۡلَىٰ ٢٤

---

1 ಎಲ್ಲರೂ ಗೋರಿಗಳಿಂದ ಹೊರಬಂದು ಸಮತಟ್ಟಾದ ಭೂಮುಖದ ಮೇಲೆ ಸಮ್ಮೇಳನಗೊಳ್ಳುವರು. ಲೋಕಾಂತ್ಯದೊಂದಿಗೆ ಭೂಮಿಯಲ್ಲಿರುವುದೆಲ್ಲವೂ ನಾಶವಾಗಿ ಭೂಮುಖವು ಒಂದು ಸಮತಟ್ಟಾದ ಬಯಲಾಗಿಬಿಡುವುದು. ಪುನರುತ್ಥಾನಗೊಂಡ ಮನುಷ್ಯರು ಅಲ್ಲಿ ಸಮ್ಮೇಳನಗೊಳ್ಳುವರು.

2 ಅವರು ಕೆಳಗೆ ಹಾಕುವ ಬೆತ್ತ ಹಾವಾಗಿ ಮಾರ್ಪಡುವುದೇ ಆ ಮಹಾದೃಷ್ಟಾಂತವಾಗಿದೆ.

**25.** ಆಗ ಪರಲೋಕ ಮತ್ತು ಇಹಲೋಕದ ಶಿಕ್ಷೆಗಾಗಿ ಅಲ್ಲಾಹು ಅವನನ್ನು ಹಿಡಿದನು.

فَأَخَذَهُ ٱللَّهُ نَكَالَ ٱلۡأٓخِرَةِ وَٱلۡأُولَىٰٓ ﴿٢٥﴾

**26.** ಖಂಡಿತವಾಗಿಯೂ ಭಯಪಡುವವರಿಗೆ ಅದರಲ್ಲಿ ಒಂದು ನೀತಿಪಾಠವಿದೆ.

إِنَّ فِي ذَٰلِكَ لَعِبۡرَةٗ لِّمَن يَخۡشَىٰٓ ﴿٢٦﴾

**27.** ಸೃಷ್ಟಿಸಲು ಅತಿ ಕ್ಲಿಷ್ಟಕರವಾಗಿರುವುದು ನಿಮ್ಮನ್ನೇ ಅಥವಾ ಆಕಾಶವನ್ನೇ? ಅವನು ಅದನ್ನು (ಆಕಾಶವನ್ನು) ನಿರ್ಮಿಸಿರುವನು.

ءَأَنتُمۡ أَشَدُّ خَلۡقًا أَمِ ٱلسَّمَآءُۚ بَنَىٰهَا ﴿٢٧﴾

**28.** ಅದರ ಛಾವಣಿಯನ್ನು ಅವನು ಏರಿಸಿರುವನು ಮತ್ತು ಅದನ್ನು ವ್ಯವಸ್ಥಿತಗೊಳಿಸಿದನು.

رَفَعَ سَمۡكَهَا فَسَوَّىٰهَا ﴿٢٨﴾

**29.** ಅದರ ರಾತ್ರಿಯನ್ನು ಅವನು ಕತ್ತಲನ್ನಾಗಿ ಮಾಡಿದನು ಮತ್ತು ಅದರ ಹಗಲನ್ನು ಅವನು ಪ್ರತ್ಯಕ್ಷಗೊಳಿಸಿದನು.

وَأَغۡطَشَ لَيۡلَهَا وَأَخۡرَجَ ضُحَىٰهَا ﴿٢٩﴾

**30.** ಅದರ ನಂತರ ಅವನು ಭೂಮಿಯನ್ನು ವಿಕಸನಗೊಳಿಸಿದನು.

وَٱلۡأَرۡضَ بَعۡدَ ذَٰلِكَ دَحَىٰهَآ ﴿٣٠﴾

**31.** ಅದರಿಂದ ಅದರ ನೀರನ್ನೂ, ಸಸ್ಯಜಾಲಗಳನ್ನೂ ಅವನು ಹೊರತಂದನು.

أَخۡرَجَ مِنۡهَا مَآءَهَا وَمَرۡعَىٰهَا ﴿٣١﴾

**32.** ಅವನು ಪರ್ವತಗಳನ್ನು ದೃಢವಾಗಿ ಸ್ಥಾಪಿಸಿದನು.

وَٱلۡجِبَالَ أَرۡسَىٰهَا ﴿٣٢﴾

**33.** ನಿಮ್ಮ ಮತ್ತು ನಿಮ್ಮ ಜಾನುವಾರುಗಳ ಪ್ರಯೋಜನಕ್ಕಾಗಿ.[1]

مَتَٰعٗا لَّكُمۡ وَلِأَنۡعَٰمِكُمۡ ﴿٣٣﴾

**34.** ಆದರೆ ಆ ಮಹಾ ವಿಪತ್ತು ಬರುವ ಸಂದರ್ಭ.

فَإِذَا جَآءَتِ ٱلطَّآمَّةُ ٱلۡكُبۡرَىٰ ﴿٣٤﴾

**35.** ಅಂದರೆ ಮನುಷ್ಯನು ತಾನು ಪರಿಶ್ರಮಿಸಿ ಮಾಡಿಟ್ಟಿರುವುದರ ಕುರಿತು ಸ್ಮರಿಸುವ ದಿನ!

يَوۡمَ يَتَذَكَّرُ ٱلۡإِنسَٰنُ مَا سَعَىٰ ﴿٣٥﴾

**36.** ನೋಡುವವರಿಗಾಗಿ ನರಕಾಗ್ನಿಯನ್ನು ಪ್ರತ್ಯಕ್ಷಗೊಳಿಸಲಾಗುವ ದಿನ!

وَبُرِّزَتِ ٱلۡجَحِيمُ لِمَن يَرَىٰ ﴿٣٦﴾

**37–39.** ಮಿತಿಮೀರಿದವನು ಮತ್ತು ಇಹಲೋಕ ಜೀವನಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದವನಾರೋ, ಖಂಡಿತವಾಗಿಯೂ

فَأَمَّا مَن طَغَىٰ ﴿٣٧﴾ وَءَاثَرَ ٱلۡحَيَوٰةَ
ٱلدُّنۡيَا ﴿٣٨﴾ فَإِنَّ ٱلۡجَحِيمَ هِيَ ٱلۡمَأۡوَىٰ ﴿٣٩﴾

---

1 'ನಿಮ್ಮ ಮತ್ತು ನಿಮ್ಮ ಜಾನುವಾರುಗಳ ಪ್ರಯೋಜನಕ್ಕಾಗಿ' ಎಂಬ ಸೂಕ್ತಿಯು 30–32 ಸೂಕ್ತಿಗಳ ಜೊತೆ ಸಂಬಂಧ ಹೊಂದಿದೆ.

ಧಗಧಗಿಸುವ ನರಕಾಗ್ನಿಯು (ಅವನ) ವಾಸಸ್ಥಳವಾಗಿರುವುದು.

**40–41.** ಆದರೆ ಯಾರು ತನ್ನ ರಬ್‌ನ ಸ್ಥಾನವನ್ನು[1] ಭಯಪಡುವನೋ ಮತ್ತು ಮನಸ್ಸನ್ನು ದೇಹೇಚ್ಛೆಗಳಿಂದ ನಿಗ್ರಹಿಸುವನೋ, ಖಂಡಿತವಾಗಿಯೂ ಸ್ವರ್ಗವೇ (ಅವನಿಗಿರುವ) ವಾಸಸ್ಥಳವಾಗಿರುವುದು.

وَأَمَّا مَنْ خَافَ مَقَامَ رَبِّهِۦ وَنَهَى ٱلنَّفْسَ عَنِ ٱلْهَوَىٰ ﴿٤٠﴾ فَإِنَّ ٱلْجَنَّةَ هِىَ ٱلْمَأْوَىٰ ﴿٤١﴾

**42.** ಆ ಅಂತ್ಯಘಳಿಗೆಯ ಕುರಿತು 'ಅದು ಯಾವಾಗ ಸಂಭವಿಸುತ್ತದೆ? ' ಎಂದು ಅವರು ತಮ್ಮಲ್ಲಿ ಕೇಳುವರು.

يَسْـَٔلُونَكَ عَنِ ٱلسَّاعَةِ أَيَّانَ مُرْسَىٰهَا ﴿٤٢﴾

**43.** ಅದರ ಕುರಿತು ತಮಗೆ ಹೇಳಿಲಿಕ್ಕಿರುವುದಾದರೂ ಏನು?[2]

فِيمَ أَنتَ مِن ذِكْرَىٰهَآ ﴿٤٣﴾

**44.** ಅದರ ಸಮಾಪ್ತಿಯು ತಮ್ಮ ರಬ್‌ನೆಡೆಗಾಗಿದೆ.

إِلَىٰ رَبِّكَ مُنتَهَىٰهَآ ﴿٤٤﴾

**45.** ತಾವು ಅದನ್ನು ಭಯಪಡುವವರಿಗಿರುವ ಒಬ್ಬ ಮುನ್ನೆಚ್ಚರಿಕೆಗಾರರು ಮಾತ್ರವಾಗಿರುವಿರಿ.

إِنَّمَآ أَنتَ مُنذِرُ مَن يَخْشَىٰهَا ﴿٤٥﴾

**46.** ಅದನ್ನು ಅವರು ಕಾಣುವ ದಿನ ಒಂದು ಸಂಜೆ ಅಥವಾ ಒಂದು ಮುಂಜಾನೆಯ ವಿನಾ ಅವರು (ಇಲ್ಲಿ) ತಂಗಿರಲೇ ಇಲ್ಲ ಎಂಬಂತೆ (ಅವರಿಗೆ ಭಾಸವಾಗುವುದು).

كَأَنَّهُمْ يَوْمَ يَرَوْنَهَا لَمْ يَلْبَثُوٓا۟ إِلَّا عَشِيَّةً أَوْ ضُحَىٰهَا ﴿٤٦﴾

---

1 ಅಲ್ಲಾಹುವಿನ ಸ್ಥಾನ ಎಂದರೆ ಪುನರುತ್ಥಾನದ ದಿನ ಅಲ್ಲಾಹುವಿನ ಮುಂದೆ ವಿಚಾರಣೆಗೆ ಗುರಿಯಾಗುವ ಸ್ಥಾನ ಅಥವಾ ಆ ನಿಲ್ಲುವಿಕೆ ಎಂದು ಹೆಚ್ಚಿನ ವ್ಯಾಖ್ಯಾನಕಾರರು ವಿವರಿಸಿದ್ದಾರೆ.

2 ಅಂತ್ಯದಿನವು ಖಚಿತವಾಗಿ ಯಾವಾಗ ಸಂಭವಿಸಲಿದೆಯೆಂದು ಪ್ರವಾದಿ(ﷺ)ರಿಗೆ ತಿಳಿಸಿಕೊಡಲಾಗಲಿಲ್ಲ ಎಂಬುದರ ಕಡೆಗೆ ಸೂಚನೆ.

## ಅಬಸ (ಮುಖ ಸಿಂಡರಿಸಿದನು)

## سُورَةُ عَبَسَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 42

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

عَبَسَ وَتَوَلَّىٰٓ ١ أَن جَآءَهُ ٱلۡأَعۡمَىٰ ٢

**1-2.** ಅವರ (ಪ್ರವಾದಿಯವರ) ಬಳಿಗೆ ಆ ಅಂಧ ವ್ಯಕ್ತಿ ಬಂದ ಕಾರಣದಿಂದ ಅವರು ಮುಖವನ್ನು ಸಿಂಡರಿಸಿ ವಿಮುಖರಾದರು.

وَمَا يُدۡرِيكَ لَعَلَّهُۥ يَزَّكَّىٰٓ ٣

**3.** (ಓ ಪ್ರವಾದಿಯವರೇ!) ತಮಗೇನು ಗೊತ್ತು? ಅವರು (ಅಂಧ ವ್ಯಕ್ತಿ) ಬಹುಶಃ ಪರಿಶುದ್ಧತೆಯನ್ನು ಪಡೆಯಲೂಬಹುದು.

أَوۡ يَذَّكَّرُ فَتَنفَعَهُ ٱلذِّكۡرَىٰٓ ٤

**4.** ಅಥವಾ ಉಪದೇಶ ಪಡೆದು, ಆ ಉಪದೇಶವು ಅವರಿಗೆ ಪ್ರಯೋಜನವಾಗಲೂ ಬಹುದು.

أَمَّا مَنِ ٱسۡتَغۡنَىٰ ٥ فَأَنتَ لَهُۥ تَصَدَّىٰ ٦

**5-6.** ಆದರೆ ಯಾರು ಸ್ವಯಂ ಪರ್ಯಾಪ್ತತೆಯನ್ನು ತೋರಿಸಿದನೋ ತಾವು ಅವನೆಡೆಗೆ ಗಮನ ಹರಿಸುತ್ತಿರುವಿರಿ.

وَمَا عَلَيۡكَ أَلَّا يَزَّكَّىٰ ٧

**7.** ಅವನು ಪರಿಶುದ್ಧತೆಯನ್ನು ಪಡೆಯದಿರುವುದರಲ್ಲಿ ತಮಗಿರುವ ದೋಷವಾದರೂ ಏನು?

وَأَمَّا مَن جَآءَكَ يَسۡعَىٰ ٨ وَهُوَ يَخۡشَىٰ ٩ فَأَنتَ عَنۡهُ تَلَهَّىٰ ١٠

**8–10.** ಆದರೆ (ಅಲ್ಲಾಹುವನ್ನು) ಭಯಪಟ್ಟು ತಮ್ಮ ಬಳಿಗೆ ಓಡಿ ಬಂದಾತ ಯಾರೋ ಆತನ ವಿಷಯದಲ್ಲಿ ತಾವು ಅಸಡ್ಡೆ ತೋರುತ್ತಿರುವಿರಿ.[1]

---

1 ಒಮ್ಮೆ ಪ್ರವಾದಿ(ﷺ)ರವರು ಕುರೈಶೀ ನಾಯಕರೊಂದಿಗೆ ಮಾತುಕತೆ ನಡೆಸುತ್ತಿದ್ದರು. ಅವರು ಇಸ್ಲಾಮ್ ಸ್ವೀಕರಿಸುವರೆಂಬ ನಿರೀಕ್ಷೆ ಪ್ರವಾದಿ(ﷺ)ರಿಗಿತ್ತು. ಆ ಸಂದರ್ಭದಲ್ಲಿ ಅಂಧ ಸಹಾಬಿಯಾದ ಅಬ್ದುಲ್ಲಾಹ್ ಇಬ್ನ್ ಉಮ್ಮಿ ಮಕ್ತೂಮ್(رَضِيَ ٱللَّهُ عَنْهُ) ಎಂಬವರು ಇಸ್ಲಾಮಿನ ಕುರಿತು ಕಲಿಯಲಿಕ್ಕಾಗಿ ಪ್ರವಾದಿ(ﷺ)ರವರ ಬಳಿಗೆ ಬಂದರು. ಆ ಬಡ ಅಂಧ ಸಹಾಬಿಗೆ ಮಹತ್ವ ನೀಡಿದರೆ ಅದು ಕುರೈಶೀ ನಾಯಕರಿಗೆ ಅಪ್ರಿಯವೆನಿಸಿ ಅವರು ಇಸ್ಲಾಮ್ ಸ್ವೀಕರಿಸುವುದರಿಂದ ಹಿಂದೆ ಸರಿಯುವರೋ ಎಂಬ ಭಯ ನಿಮಿತ್ತ ಪ್ರವಾದಿ(ﷺ)ರವರು ಆ ಅಂಧ ಸಹಾಬಿಯ ಆಗಮನದ ಕುರಿತು ಅಸಂತೃಪ್ತಿ ತೋರ್ಪಡಿಸಿದರು. ಅದು ಸರಿಯಲ್ಲವೆಂದು ಸೂಚಿಸುತ್ತಾ ಪ್ರಸ್ತುತ ಸೂಕ್ತಿಗಳು ಅವತೀರ್ಣಗೊಂಡವು. ಕುರ್‌ಆನ್ ಪ್ರವಾದಿ(ﷺ)ರವರ ಸ್ವಂತ ಕೃತಿಯಲ್ಲ ಮತ್ತು ಅದರಲ್ಲಿ ಏನಾದರೂ ಸೇರಿಸಲು ಅಥವಾ ಕಡಿತಗೊಳಿಸಲು ಅವರಿಗೆ ಸ್ವಾತಂತ್ರ್ಯವಿಲ್ಲ ಎಂಬುದಕ್ಕೆ ಈ ಸೂಕ್ತಿಗಳು ಪುರಾವೆಯಾಗಿವೆ.

كَلَّآ إِنَّهَا تَذۡكِرَةٞ ﴿١١﴾

**11.** ಅನುಮಾನವೇ ಇಲ್ಲ. ನಿಸ್ಸಂದೇಹವಾಗಿಯೂ ಇದು (ಕುರ್‌ಆನ್) ಒಂದು ಉಪದೇಶವಾಗಿದೆ.

فَمَن شَآءَ ذَكَرَهُۥ ﴿١٢﴾

**12.** ಆದ್ದರಿಂದ ಯಾರು ಇಚ್ಛಿಸುವನೋ ಅವನು ಅದನ್ನು ಸ್ಮರಿಸಲಿ.

فِي صُحُفٖ مُّكَرَّمَةٖ ﴿١٣﴾ مَّرۡفُوعَةٖ مُّطَهَّرَةِۭ ﴿١٤﴾

**13–14.** ಅದು ಆದರಣೀಯವಾದ, ಔನ್ನತ್ಯ ನೀಡಲಾದ ಮತ್ತು ಪರಿಶುದ್ಧಗೊಳಿಸಲಾದ ಕೆಲವು ದಾಖಲೆಗಳಲ್ಲಿವೆ.[1]

بِأَيۡدِي سَفَرَةٖ ﴿١٥﴾ كِرَامِۭ بَرَرَةٖ ﴿١٦﴾

**15–16.** ಅದು ಗೌರವಾನ್ವಿತರೂ, ಪುಣ್ಯವಂತರೂ ಆಗಿರುವ ಕೆಲವು ದೂತರ ಕೈಗಳಲ್ಲಿವೆ.

قُتِلَ ٱلۡإِنسَٰنُ مَآ أَكۡفَرَهُۥ ﴿١٧﴾

**17.** ಮನುಷ್ಯನು ನಾಶವಾಗಲಿ! ಅವನು ಇಷ್ಟೊಂದು ಕೃತಘ್ನನಾಗಲು ಕಾರಣವೇನು?

مِنۡ أَيِّ شَيۡءٍ خَلَقَهُۥ ﴿١٨﴾

**18.** ಅಲ್ಲಾಹು ಅವನನ್ನು ಯಾವ ವಸ್ತುವಿನಿಂದ ಸೃಷ್ಟಿಸಿರುವನು?

مِن نُّطۡفَةٍ خَلَقَهُۥ فَقَدَّرَهُۥ ﴿١٩﴾

**19.** ಒಂದು ವೀರ್ಯಕೋಶದಿಂದ ಅವನನ್ನು ಸೃಷ್ಟಿಸಿ, ತರುವಾಯ ಅವನನ್ನು (ಅವನ ವಿಷಯವನ್ನು) ನಿರ್ಣಯಿಸಿದನು.

ثُمَّ ٱلسَّبِيلَ يَسَّرَهُۥ ﴿٢٠﴾

**20.** ತರುವಾಯ ಅವನು ಮಾರ್ಗವನ್ನು ಸುಗಮಗೊಳಿಸಿದನು.

ثُمَّ أَمَاتَهُۥ فَأَقۡبَرَهُۥ ﴿٢١﴾

**21.** ತರುವಾಯ ಅವನನ್ನು ಮೃತಪಡಿಸಿದನು ಮತ್ತು ಗೋರಿಯಲ್ಲಿ ದಫನ ಮಾಡಿಸಿದನು.

ثُمَّ إِذَا شَآءَ أَنشَرَهُۥ ﴿٢٢﴾

**22.** ತರುವಾಯ ಅವನು ತಾನಿಚ್ಛಿಸುವಾಗ ಅವನನ್ನು ಪುನರುತ್ಥಾನಗೊಳಿಸುವನು.

كَلَّا لَمَّا يَقۡضِ مَآ أَمَرَهُۥ ﴿٢٣﴾

**23.** ಇಲ್ಲ, ಅಲ್ಲಾಹು ಅವನೊಂದಿಗೆ ಆದೇಶಿಸಿರುವುದನ್ನು ಅವನು ನಿರ್ವಹಿಸಲಿಲ್ಲ.

فَلۡيَنظُرِ ٱلۡإِنسَٰنُ إِلَىٰ طَعَامِهِۦٓ ﴿٢٤﴾

**24.** ಆದರೆ ಮನುಷ್ಯನು ತನ್ನ ಆಹಾರದೆಡೆಗೆ ನೋಡಲಿ.

أَنَّا صَبَبۡنَا ٱلۡمَآءَ صَبّٗا ﴿٢٥﴾

**25.** ನಾವು ರಭಸವಾಗಿ ಮಳೆಯನ್ನು ಸುರಿಸಿದೆವು.

---

1 ಆಕಾಶಲೋಕದಲ್ಲಿ ಅಲ್ಲಾಹುವಿನ ಸೂಕ್ತಿಗಳನ್ನು ಲಿಖಿತಗೊಳಿಸಲಾಗಿರುವ ಸುಭದ್ರ ದಾಖಲೆಗಳ ಕುರಿತು ಇಲ್ಲಿ ಸೂಚಿಸಲಾಗಿದೆಯೆಂದು ಪ್ರಮುಖ ವ್ಯಾಖ್ಯಾನಕಾರರು ಹೇಳಿದ್ದಾರೆ.

26. ತರುವಾಯ ನಾವು ಭೂಮಿಯನ್ನು ಒಂದು ವಿಧದಲ್ಲಿ ಸೀಳಿದೆವು.[1]

ثُمَّ شَقَقْنَا ٱلْأَرْضَ شَقًّا ﴿٢٦﴾

27–31. ತರುವಾಯ ಅದರಲ್ಲಿ ನಾವು ಧಾನ್ಯವನ್ನು, ದ್ರಾಕ್ಷಿ ಮತ್ತು ತರಕಾರಿಗಳನ್ನು, ಆಲಿವ್ ಮತ್ತು ಖರ್ಜೂರ ಮರಗಳನ್ನು, ದಟ್ಟವಾಗಿರುವ ತೋಟಗಳನ್ನು ಹಾಗೂ ಫಲಗಳನ್ನು ಮತ್ತು ಹುಲ್ಲುಗಳನ್ನು ಬೆಳೆಸಿದೆವು.

فَأَنۢبَتْنَا فِيهَا حَبًّا ﴿٢٧﴾ وَعِنَبًا وَقَضْبًا ﴿٢٨﴾
وَزَيْتُونًا وَنَخْلًا ﴿٢٩﴾ وَحَدَآئِقَ غُلْبًا ﴿٣٠﴾
وَفَٰكِهَةً وَأَبًّا ﴿٣١﴾

32. ನಿಮ್ಮ ಮತ್ತು ನಿಮ್ಮ ಜಾನುವಾರುಗಳ ಪ್ರಯೋಜನಕ್ಕಾಗಿ.

مَّتَٰعًا لَّكُمْ وَلِأَنْعَٰمِكُمْ ﴿٣٢﴾

33. ಆದರೆ ಕಿವಿಯನ್ನಪ್ಪಳಿಸುವ ಆ ಶಬ್ದವು ಬಂದಾಗ.

فَإِذَا جَآءَتِ ٱلصَّآخَّةُ ﴿٣٣﴾

34–36. ಅಂದರೆ ಮನುಷ್ಯನು ತನ್ನ ಸಹೋದರನಿಂದಲೂ, ತನ್ನ ತಾಯಿಯಿಂದಲೂ, ತನ್ನ ತಂದೆಯಿಂದಲೂ, ತನ್ನ ಪತ್ನಿಯಿಂದಲೂ, ತನ್ನ ಮಕ್ಕಳಿಂದಲೂ ದೂರ ಓಡುವ ದಿನ!

يَوْمَ يَفِرُّ ٱلْمَرْءُ مِنْ أَخِيهِ ﴿٣٤﴾ وَأُمِّهِۦ
وَأَبِيهِ ﴿٣٥﴾ وَصَٰحِبَتِهِۦ وَبَنِيهِ ﴿٣٦﴾

37. ಆ ದಿನದಂದು ಅವರ ಪೈಕಿ ಪ್ರತಿಯೊಬ್ಬ ವ್ಯಕ್ತಿಗೂ ಇತರರೆಡೆಗೆ ಗಮನಕೊಡದಷ್ಟು ತನ್ನದೇ ಆದ (ಚಿಂತೆಯ) ವಿಷಯಗಳಿರುವುವು.[2]

لِكُلِّ ٱمْرِئٍ مِّنْهُمْ يَوْمَئِذٍ شَأْنٌ يُغْنِيهِ ﴿٣٧﴾

38–39. ಅಂದು ಕೆಲವು ಮುಖಗಳು ಪ್ರಸನ್ನವಾಗಿಯೂ, ನಗುತ್ತಲೂ, ಸಂತಸದಿಂದಲೂ ಇರುವುವು.

وُجُوهٌ يَوْمَئِذٍ مُّسْفِرَةٌ ﴿٣٨﴾ ضَاحِكَةٌ
مُّسْتَبْشِرَةٌ ﴿٣٩﴾

40. ಅಂದು ಬೇರೆ ಕೆಲವು ಮುಖಗಳಿಗೆ ಧೂಳು ಆವರಿಸಿಕೊಂಡಿರುವುದು.

وَوُجُوهٌ يَوْمَئِذٍ عَلَيْهَا غَبَرَةٌ ﴿٤٠﴾

41. ಅವುಗಳನ್ನು ಕಾರ್ಗತ್ತಲೆಯು ಕವಿದಿರುವುದು.

تَرْهَقُهَا قَتَرَةٌ ﴿٤١﴾

42. ಅವಿಶ್ವಾಸಿಗಳು ಮತ್ತು ಧಿಕ್ಕಾರಿಗಳು ಅವರೇ ಆಗಿರುವರು.

أُو۟لَٰٓئِكَ هُمُ ٱلْكَفَرَةُ ٱلْفَجَرَةُ ﴿٤٢﴾

---

1 ಮಳೆಯಿಂದ ತೇವಗೊಂಡ ಭೂಮಿಯನ್ನು ಸೀಳಿಕೊಂಡು ಮೊಳಕೆಯೊಡೆಯುವ ಸಸ್ಯಜಾಲಗಳ ಮುಖಾಂತರ ಸರ್ವ ಜೀವರಾಶಿಗಳಿಗೂ ಆಹಾರ ಲಭಿಸುತ್ತದೆ.

2 ಅಂತ್ಯದಿನದಂದು ಪ್ರತಿಯೊಬ್ಬ ಮನುಷ್ಯನೂ ಅತ್ಯಂತ ಭಯಭೀತನಾಗಿರುವನು. ಸ್ವತಃ ತನ್ನ ಭವಿಷ್ಯದ ಕುರಿತಾದ ಭಯದ ನಿಮಿತ್ತ ಇತರರ ಕುರಿತು ಚಿಂತಿಸಲು ಅಥವಾ ಇತರರ ಸಮಸ್ಯೆಗಳನ್ನು ಆಲಿಸಲು ಅವನಿಗೆ ಬಿಡುವು ಇರಲಾರದು.

# ಅತ್ತಕ್ವೀರ್ (ಸುತ್ತಿ ಹೊದಿಯಲಾಗುವುದು)

سُورَةُ التَّكْوِيرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 29

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಸೂರ್ಯನನ್ನು ಸುತ್ತಿ ಹೊದಿಯಲಾಗುವಾಗ.[1]

إِذَا ٱلشَّمۡسُ كُوِّرَتۡ ١

2. ನಕ್ಷತ್ರಗಳು ಉದುರಿ ಬೀಳುವಾಗ.

وَإِذَا ٱلنُّجُومُ ٱنكَدَرَتۡ ٢

3. ಪರ್ವತಗಳು ಚಲಿಸಲ್ಪಡುವಾಗ.

وَإِذَا ٱلۡجِبَالُ سُيِّرَتۡ ٣

4. ಪೂರ್ಣ ಗರ್ಭಿಣಿಗಳಾದ ಒಂಟೆಗಳನ್ನು ನಿರ್ಲಕ್ಷಿಸಲಾಗುವಾಗ.[2]

وَإِذَا ٱلۡعِشَارُ عُطِّلَتۡ ٤

5. ವನ್ಯ ಮೃಗಗಳನ್ನು ಒಟ್ಟುಗೂಡಿಸಲಾಗುವಾಗ.[3]

وَإِذَا ٱلۡوُحُوشُ حُشِرَتۡ ٥

6. ಸಮುದ್ರಗಳನ್ನು ಧಗಧಗನೆ ಉರಿಸಲಾಗುವಾಗ.[4]

وَإِذَا ٱلۡبِحَارُ سُجِّرَتۡ ٦

7. ಆತ್ಮಗಳನ್ನು ಜೋಡಿಸಲಾಗುವಾಗ.[5]

وَإِذَا ٱلنُّفُوسُ زُوِّجَتۡ ٧

8-9. (ಜೀವಂತ) ಹೂಳಲಾದ ಹೆಣ್ಣು ಶಿಶುವಿನೊಂದಿಗೆ ಅವಳು ಯಾವ ತಪ್ಪಿಗಾಗಿ ವಧಿಸಲ್ಪಟ್ಟಳೆಂದು ಕೇಳಲಾಗುವಾಗ.

وَإِذَا ٱلۡمَوۡءُۥدَةُ سُئِلَتۡ ٨ بِأَيِّ ذَنۢبٖ قُتِلَتۡ ٩

10. (ಕರ್ಮಗಳನ್ನು ದಾಖಲಿಸಲಾದ) ಗ್ರಂಥಗಳನ್ನು ತೆರೆದಿಡಲಾಗುವಾಗ.

وَإِذَا ٱلصُّحُفُ نُشِرَتۡ ١٠

11. ಆಕಾಶಲೋಕವನ್ನು ಮರೆಸರಿಸಿ ತೋರಿಸಲಾಗುವಾಗ.

وَإِذَا ٱلسَّمَآءُ كُشِطَتۡ ١١

---

1 ಸೂರ್ಯನು ಪ್ರಕಾಶರಹಿತನಾಗುವಾಗ ಎಂದರ್ಥ.

2 ಪೂರ್ಣ ಗರ್ಭಿಣಿ ಒಂಟೆಗಳು ಅರಬರ ಪಾಲಿಗೆ ಅತ್ಯಂತ ಅಮೂಲ್ಯವಾದ ಸಂಪತ್ತಾಗಿದ್ದವು. ಅಂತ್ಯದಿನದಂದು ಅವುಗಳನ್ನು ತಿರುಗಿನೋಡಲೂ ಜನರಿರಲಾರರು ಎಂದರ್ಥ.

3 ಅಂತ್ಯದಿನದಂದು ಪರಿಭ್ರಾಂತಿಯಿಂದಾಗಿ ವನ್ಯ ಮೃಗಗಳೆಲ್ಲವೂ ಒಂದೊಂದು ಕೇಂದ್ರಗಳಲ್ಲಿ ಒಟ್ಟುಗೂಡಲಿವೆ. ಯಾರ ಮೇಲೂ ದಾಳಿ ಮಾಡಲು ಅವು ಆಸಕ್ತಿತೋರಲಾರವು ಎಂಬುದು ಇಲ್ಲಿನ ಉದ್ದೇಶವಾಗಿರಬಹುದು.

4 ಸಜ್ಜರ ಎಂದರೆ ಧಗಧಗನೆ ಉರಿಸಿದನು, ಕೊತಕೊತನೆ ಕುದಿಯುವಂತೆ ಮಾಡಿದನು ಇತ್ಯಾದಿ ಅರ್ಥಗಳಿವೆ.

5 ಸಜ್ಜನರನ್ನು ಸಜ್ಜನರೊಂದಿಗೆ ಮತ್ತು ದುರ್ಜನರನ್ನು ದುರ್ಜನರೊಂದಿಗೆ ಒಟ್ಟುಗೂಡಿಸಲ್ಪಡುವಾಗ ಎಂದು ಕೆಲವರು ಅರ್ಥ ನೀಡಿದ್ದಾರೆ.

**12.** ಜ್ವಲಿಸುವ ನರಕಾಗ್ನಿಯನ್ನು ಧಗಧಗನೆ ಉರಿಸಲಾಗುವಾಗ.

وَإِذَا ٱلْجَحِيمُ سُعِّرَتْ ﴿١٢﴾

**13.** ಸ್ವರ್ಗವನ್ನು ಸಮೀಪಕ್ಕೆ ತರಲಾಗುವಾಗ.

وَإِذَا ٱلْجَنَّةُ أُزْلِفَتْ ﴿١٣﴾

**14.** ಪ್ರತಿಯೊಬ್ಬ ವ್ಯಕ್ತಿಯೂ ತಾನು ಸಿದ್ಧಪಡಿಸಿ ತಂದಿರುವುದೇನೆಂಬುದನ್ನು ಅರಿತುಕೊಳ್ಳುವನು.(1)

عَلِمَتْ نَفْسٌ مَّآ أَحْضَرَتْ ﴿١٤﴾

**15-16.** ಹಿಂದಕ್ಕೆ ಸರಿಯುತ್ತಲೂ, ಚಲಿಸುತ್ತಲೂ, ಅಪ್ರತ್ಯಕ್ಷವಾಗುತ್ತಲೂ ಇರುವವುಗಳ (ನಕ್ಷತ್ರಗಳ) ಮೇಲೆ ನಾನು ಆಣೆಯಿಡುವೆನು.

فَلَآ أُقْسِمُ بِٱلْخُنَّسِ ﴿١٥﴾ ٱلْجَوَارِ ٱلْكُنَّسِ ﴿١٦﴾

**17-18.** ರಾತ್ರಿಯು ಸರಿಯುವಾಗ ಅದರ ಮೇಲೆ ಮತ್ತು ಪ್ರಭಾತವು ಅರಳುವಾಗ ಅದರ ಮೇಲೆ ಆಣೆ ಹಾಕಿ ಹೇಳುವೆನು.

وَٱلَّيْلِ إِذَا عَسْعَسَ ﴿١٧﴾ وَٱلصُّبْحِ إِذَا تَنَفَّسَ ﴿١٨﴾

**19-21.** ಖಂಡಿತವಾಗಿಯೂ ಇದು (ಈ ಕುರ್‌ಆನ್) ಗೌರವಾನ್ವಿತರೂ, ಬಲಿಷ್ಠರೂ, ಸಿಂಹಾಸನದ ಅಧಿಪತಿಯಾದ ಅಲ್ಲಾಹುವಿನ ಬಳಿ ಪದವಿಯುಳ್ಳವರೂ, ಅಲ್ಲಿ ಅನುಸರಿಸಲ್ಪಡುವವರೂ, ನಂಬಿಗಸ್ಥರೂ ಆಗಿರುವ ಒಬ್ಬ ಸಂದೇಶವಾಹಕರ(2) ಮಾತಾಗಿದೆ.

إِنَّهُۥ لَقَوْلُ رَسُولٍ كَرِيمٍ ﴿١٩﴾ ذِى قُوَّةٍ عِندَ ذِى ٱلْعَرْشِ مَكِينٍ ﴿٢٠﴾ مُّطَاعٍ ثَمَّ أَمِينٍ ﴿٢١﴾

**22.** ಖಂಡಿತವಾಗಿಯೂ ನಿಮ್ಮ ಒಡನಾಡಿ (ಪ್ರವಾದಿ) ಒಬ್ಬ ಮತಿಭ್ರಾಂತರಲ್ಲ.

وَمَا صَاحِبُكُم بِمَجْنُونٍ ﴿٢٢﴾

**23.** ಖಂಡಿತವಾಗಿಯೂ ಆತ ಅವರನ್ನು (ಜಿಬ್ರೀಲ್‌ರನ್ನು) ಪ್ರತ್ಯಕ್ಷ ದಿಗಂತದಲ್ಲಿ ಕಂಡಿರುವರು.

وَلَقَدْ رَءَاهُ بِٱلْأُفُقِ ٱلْمُبِينِ ﴿٢٣﴾

**24.** ಆತ ಅಗೋಚರ ವಿಷಯಗಳ ಬಗ್ಗೆ ಜಿಪುಣತೆ ತೋರಿಸುವವರಲ್ಲ.(3)

وَمَا هُوَ عَلَى ٱلْغَيْبِ بِضَنِينٍ ﴿٢٤﴾

---

1 ಪುನರುತ್ಥಾನ ದಿನದಂದು ಕರ್ಮ ದಾಖಲೆಯು ಕೈಯಲ್ಲಿ ನೀಡಲಾಗುವಾಗ ಇಹಲೋಕದಲ್ಲಿ ತಾನು ಮಾಡಿದ್ದು ಪರಲೋಕದಲ್ಲಿ ಸತ್ಫಲಗಳನ್ನು ನೀಡುವ ಸತ್ಕರ್ಮಗಳನ್ನೇ ಅಥವಾ ಪರಲೋಕದಲ್ಲಿ ದುಷ್ಫಲಗಳನ್ನು ನೀಡುವ ದುಷ್ಕರ್ಮಗಳನ್ನೇ ಎಂದು ಪ್ರತಿಯೊಬ್ಬರೂ ಅರಿತುಕೊಳ್ಳುವರು.

2 ಇಲ್ಲಿ ಸಂದೇಶವಾಹಕರು ಎಂದರೆ ಪ್ರವಾದಿ(ﷺ)ರಿಗೆ ಅಲ್ಲಾಹುವಿನಿಂದ ಸಂದೇಶಗಳನ್ನು ತಲುಪಿಸಿಕೊಡುವ ಜಿಬ್ರೀಲ್(عَلَيْهِ ٱلسَّلَامُ) ಎಂಬ ಮಲಕ್ ಆಗಿದ್ದಾರೆ.

3 ಜನರಿಗೆ ತಿಳಿಸಿಕೊಡಬೇಕೆಂದು ಅಲ್ಲಾಹು ಪ್ರವಾದಿ(ﷺ)ರಿಗೆ ವಹಿಸಿಕೊಟ್ಟ ಅಗೋಚರ ಜ್ಞಾನಗಳನ್ನು ಅವರು ಒಂದಿಷ್ಟೂ ಕಡಿತಗೊಳಿಸದೆ ನಿಖರವಾಗಿ ತಿಳಿಸಿಕೊಟ್ಟಿದ್ದಾರೆ ಎಂದರ್ಥ.

25. ಇದು (ಕುರ್‌ಆನ್) ಬಹಿಷ್ಕೃತನಾದ ಶೈತಾನನ ಮಾತಲ್ಲ.

وَمَا هُوَ بِقَوْلِ شَيْطَٰنٍ رَّجِيمٍ ﴿٢٥﴾

26. ಆದರೂ ನೀವು ಎತ್ತ ಹೋಗುತ್ತಿರುವಿರಿ?

فَأَيْنَ تَذْهَبُونَ ﴿٢٦﴾

27. ಇದು ಸರ್ವಲೋಕದ ಜನರಿಗಿರುವ ಒಂದು ಉಪದೇಶವಲ್ಲದೆ ಇನ್ನೇನೂ ಅಲ್ಲ.

إِنْ هُوَ إِلَّا ذِكْرٌ لِّلْعَٰلَمِينَ ﴿٢٧﴾

28. ಅಂದರೆ ನಿಮ್ಮ ಪೈಕಿ ನೇರವಾಗಿ ನೆಲೆಗೊಳ್ಳಲು ಇಚ್ಛಿಸುವವರಿಗಾಗಿ.

لِمَن شَآءَ مِنكُمْ أَن يَسْتَقِيمَ ﴿٢٨﴾

29. ಸರ್ವ ಲೋಕಗಳ ರಬ್ ಆದ ಅಲ್ಲಾಹು ಇಚ್ಛಿಸಿದ ಹೊರತು ನೀವು ಇಚ್ಛಿಸಲಾರಿರಿ.[1]

وَمَا تَشَآءُونَ إِلَّآ أَن يَشَآءَ ٱللَّهُ رَبُّ ٱلْعَٰلَمِينَ ﴿٢٩﴾

1 ಅಲ್ಲಾಹುವಿನ ನಿರ್ಧಾರಕ್ಕೆ ವಿರುದ್ಧವಾಗಿ ಯಾವ ತೀರ್ಮಾನ ಕೈಗೊಳ್ಳಲೂ ಮನುಷ್ಯನಿಗೆ ಸಾಧ್ಯವಿಲ್ಲ.

## ಅಲ್ ಇನ್‌ಫಿತಾರ್ (ಒಡೆದು ಸಿಡಿಯುವಿಕೆ)

## سُورَةُ الانفِطَارِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 19

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

إِذَا ٱلسَّمَآءُ ٱنفَطَرَتۡ ١

1. ಆಕಾಶವು ಒಡೆದು ಸಿಡಿಯುವಾಗ.

وَإِذَا ٱلۡكَوَاكِبُ ٱنتَثَرَتۡ ٢

2. ನಕ್ಷತ್ರಗಳು ಉದುರಿ ಬೀಳುವಾಗ.

وَإِذَا ٱلۡبِحَارُ فُجِّرَتۡ ٣

3. ಸಮುದ್ರಗಳನ್ನು ಉಕ್ಕಿ ಹರಿಸಲಾಗುವಾಗ.

وَإِذَا ٱلۡقُبُورُ بُعۡثِرَتۡ ٤

4. ಗೋರಿಗಳು ಬುಡಮೇಲುಗೊಳಿಸಲಾಗುವಾಗ.

عَلِمَتۡ نَفۡسٞ مَّا قَدَّمَتۡ وَأَخَّرَتۡ ٥

5. ಪ್ರತಿಯೊಬ್ಬ ವ್ಯಕ್ತಿಯೂ ತಾನು ಪೂರ್ವಭಾವಿಯಾಗಿ ಮಾಡಿರುವುದನ್ನೂ, ಹಿಂದಕ್ಕೆ ಸರಿಸಿಟ್ಟಿರುವುದನ್ನೂ ಅರಿತುಕೊಳ್ಳುವನು.

يَـٰٓأَيُّهَا ٱلۡإِنسَٰنُ مَا غَرَّكَ بِرَبِّكَ ٱلۡكَرِيمِ ٦

6. ಓ ಮನುಷ್ಯನೇ! ಔದಾರ್ಯವಂತನಾದ ನಿನ್ನ ರಬ್‌ನ ವಿಷಯದಲ್ಲಿ ನಿನ್ನನ್ನು ವಂಚಿಸಿದ್ದಾದರೂ ಏನು?[1]

ٱلَّذِي خَلَقَكَ فَسَوَّىٰكَ فَعَدَلَكَ ٧

7. ಅವನು ನಿನ್ನನ್ನು ಸೃಷ್ಟಿಸಿದನು, ನಿನ್ನನ್ನು ರೂಪಿಸಿದನು ಮತ್ತು ನಿನ್ನನ್ನು ಸರಿಯಾದ ಸ್ಥಿತಿಯಲ್ಲಾಗಿಸಿದನು.

فِيٓ أَيِّ صُورَةٖ مَّا شَآءَ رَكَّبَكَ ٨

8. ತಾನಿಚ್ಛಿಸಿದ ರೂಪದಲ್ಲಿ ಅವನು ನಿನ್ನನ್ನು ರಚಿಸಿದನು.

كَلَّا بَلۡ تُكَذِّبُونَ بِٱلدِّينِ ٩

9. ಇಲ್ಲ, ನೀವು ಪ್ರತಿಫಲದ ದಿನವನ್ನು ನಿಷೇಧಿಸುತ್ತಿರುವಿರಿ.

وَإِنَّ عَلَيۡكُمۡ لَحَٰفِظِينَ ١٠

10. ಖಂಡಿತವಾಗಿಯೂ ನಿಮ್ಮ ಮೇಲೆ ಮೇಲ್ವಿಚಾರಕರಾದ ಕೆಲವರಿರುವರು.

كِرَامٗا كَٰتِبِينَ ١١

11. ದಾಖಲಿಸುತ್ತಿರುವ ಕೆಲವು ಗೌರವಾನ್ವಿತರು.[2]

---

1 ನಿನ್ನ ಪ್ರಭು ತನ್ನ ಅನುಗ್ರಹಗಳನ್ನು ನಿನಗೆ ಉದಾರವಾಗಿ ನೀಡಿಯೂ ಸಹ ಯಾರ ವಂಚನೆಗೆ ಬಲಿಯಾಗಿ ನೀನು ಅವನನ್ನು ನಿಷೇಧಿಸಿ ಮಿಥ್ಯಾರಾಧ್ಯರನ್ನು ಪೂಜಿಸುತ್ತಿರುವೆ? ಎಂದರ್ಥ.

2 ಅಲ್ಲಾಹುವಿನ ಅಪ್ಪಣೆ ಪ್ರಕಾರ ಪ್ರತೀಯೊಬ್ಬ ಮನುಷ್ಯನ ಮಾತು ಕೃತಿಯನ್ನು ದಾಖಲಿಸಿಕೊಳ್ಳುವ ಮಲಕ್‌ಗಳು.

يَعْلَمُونَ مَا تَفْعَلُونَ ﴿١٢﴾

12. ನೀವು ಮಾಡುವುದೆಲ್ಲವನ್ನೂ ಅವರು ಅರಿಯುವರು.

إِنَّ ٱلْأَبْرَارَ لَفِى نَعِيمٍ ﴿١٣﴾

13. ಖಂಡಿತವಾಗಿಯೂ ಪುಣ್ಯವಂತರು ಸುಖಾನುಭೂತಿಯಲ್ಲಿರುವರು.

وَإِنَّ ٱلْفُجَّارَ لَفِى جَحِيمٍ ﴿١٤﴾

14. ಖಂಡಿತವಾಗಿಯೂ ದುಷ್ಕರ್ಮಿಗಳು ಜ್ವಲಿಸುವ ನರಕಾಗ್ನಿಯಲ್ಲಿರುವರು.

يَصْلَوْنَهَا يَوْمَ ٱلدِّينِ ﴿١٥﴾

15. ಪ್ರತಿಫಲ ದಿನದಂದು ಅವರು ಅದರಲ್ಲಿ ಪ್ರವೇಶಿಸಿ ಉರಿಯುವರು.

وَمَا هُمْ عَنْهَا بِغَآئِبِينَ ﴿١٦﴾

16. ಅವರಿಗೆ ಅದರಿಂದ ಅನುಪಸ್ಥಿತರಾಗಲು ಸಾಧ್ಯವಾಗದು.

وَمَآ أَدْرَىٰكَ مَا يَوْمُ ٱلدِّينِ ﴿١٧﴾

17. ಪ್ರತಿಫಲದ ದಿನ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

ثُمَّ مَآ أَدْرَىٰكَ مَا يَوْمُ ٱلدِّينِ ﴿١٨﴾

18. ಪುನಃ, ಪ್ರತಿಫಲದ ದಿನ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

يَوْمَ لَا تَمْلِكُ نَفْسٌ لِّنَفْسٍ شَيْـًٔا ۖ وَٱلْأَمْرُ
يَوْمَئِذٍ لِّلَّهِ ﴿١٩﴾

19. ಇನ್ನೊಬ್ಬನಿಗಾಗಿ ಏನನ್ನೂ ಅಧೀನಗೊಳಿಸಲು ಯಾರಿಗೂ ಸಾಧ್ಯವಾಗದ ದಿನ! ಅಂದು ಕಾರ್ಯ ನಿರ್ವಹಣೆಯ ಅಧಿಕಾರವು (ಕೇವಲ) ಅಲ್ಲಾಹುವಿಗಾಗಿರುವುದು.

## ಅಲ್ ಮುತಫ್ಫಿಫೀನ್
## (ಅಳವಿನಲ್ಲಿ ಕಡಿತಗೊಳಿಸುವವರು)

## سُورَةُ المُطَفِّفِينَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 36

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَيۡلٞ لِّلۡمُطَفِّفِينَ ١

1. ಅಳವಿನಲ್ಲಿ ಕಡಿತಗೊಳಿಸುವವರಿಗೆ ಮಹಾ ನಾಶವಿದೆ.

ٱلَّذِينَ إِذَا ٱكۡتَالُواْ عَلَى ٱلنَّاسِ
يَسۡتَوۡفُونَ ٢ وَإِذَا كَالُوهُمۡ أَو وَّزَنُوهُمۡ
يُخۡسِرُونَ ٣

2-3. ಅಂದರೆ ಅವರು ಜನರಿಂದ ಅಳೆದು ಪಡೆಯುವಾಗ ಪೂರ್ಣವಾಗಿ ಪಡೆಯುವವರು ಮತ್ತು ಜನರಿಗೆ ಅಳೆದು ಕೊಡುವಾಗ ಅಥವಾ ತೂಕ ಮಾಡಿ ಕೊಡುವಾಗ ಕಡಿಮೆ ಮಾಡುವವರು.

أَلَا يَظُنُّ أُوْلَٰٓئِكَ أَنَّهُم مَّبۡعُوثُونَ ٤
لِيَوۡمٍ عَظِيمٖ ٥

4-5. ಭಯಾನಕವಾದ ಒಂದು ದಿನಕ್ಕಾಗಿ ತಮ್ಮನ್ನು ಪುನರುತ್ಥಾನಗೊಳಿಸಲಾಗುವುದು ಎಂದು ಅವರು ವಿಶ್ವಾಸವಿಡುವುದಿಲ್ಲವೇ?.

يَوۡمَ يَقُومُ ٱلنَّاسُ لِرَبِّ ٱلۡعَٰلَمِينَ ٦

6. ಸರ್ವ ಲೋಕಗಳ ರಬ್‌ನೆಡೆಗೆ ಜನರು ಎದ್ದುಬರುವ ದಿನ!

كَلَّآ إِنَّ كِتَٰبَ ٱلۡفُجَّارِ لَفِي سِجِّينٖ ٧

7. ಸಂದೇಹವೇ ಇಲ್ಲ, ದುಷ್ಕರ್ಮಿಗಳ ದಾಖಲೆಯು ಸಿಜ್ಜೀನ್‌ನಲ್ಲೇ ಇರುವುದು.

وَمَآ أَدۡرَىٰكَ مَا سِجِّينٞ ٨

8. ಸಿಜ್ಜೀನ್ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

كِتَٰبٞ مَّرۡقُومٞ ٩

9. ಅದು ಲಿಖಿತಗೊಳಿಸಲಾದ ಒಂದು ಗ್ರಂಥವಾಗಿದೆ.(1)

وَيۡلٞ يَوۡمَئِذٖ لِّلۡمُكَذِّبِينَ ١٠

10. ಆ ದಿನದಂದು ನಿಷೇಧಿಗಳಿಗೆ ನಾಶವಿದೆ.

ٱلَّذِينَ يُكَذِّبُونَ بِيَوۡمِ ٱلدِّينِ ١١

11. ಅಂದರೆ ಪ್ರತಿಫಲ ದಿನವನ್ನು ನಿಷೇಧಿಸುವವರಿಗೆ.

وَمَا يُكَذِّبُ بِهِۦٓ إِلَّا كُلُّ مُعۡتَدٍ أَثِيمٍ ١٢

12. ಸರ್ವ ಮಿತಿಮೀರಿದ ಮತ್ತು ಮಹಾಪಾಪಿಯಾಗಿರುವವರ ಹೊರತು ಯಾರೂ ಅದನ್ನು ನಿಷೇಧಿಸಲಾರರು.

---

1 ಸರ್ವ ದುಷ್ಕರ್ಮಿಗಳ ಕರ್ಮಗಳನ್ನು ದಾಖಲಿಸಲಾದ ದಾಖಲೆಗಳ ಸಂಗ್ರಹವಾಗಿದೆ ಸಿಜ್ಜೀನ್ ಎಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

13. ಅವನಿಗೆ ನಮ್ಮ ದೃಷ್ಟಾಂತಗಳನ್ನು ಓದಿಕೊಡಲಾದರೆ ಅವನು 'ಪೂರ್ವಿಕರ ಪುರಾಣಗಳು' ಎನ್ನುವನು.

إِذَا تُتْلَىٰ عَلَيْهِ ءَايَٰتُنَا قَالَ أَسَٰطِيرُ ٱلْأَوَّلِينَ ﴿١٣﴾

14. ಅಲ್ಲ, ಅವರು ಮಾಡುತ್ತಿದ್ದ ಕರ್ಮಗಳು ಅವರ ಹೃದಯಗಳಲ್ಲಿ ಕಲೆಯನ್ನುಂಟು ಮಾಡಿವೆ.

كَلَّا ۖ بَلْ ۜ رَانَ عَلَىٰ قُلُوبِهِم مَّا كَانُوا۟ يَكْسِبُونَ ﴿١٤﴾

15. ಅಲ್ಲ, ಖಂಡಿತವಾಗಿಯೂ ಆ ದಿನದಂದು ಅವರು ತಮ್ಮ ರಬ್‌ನಿಂದ ಮರೆಯಾಗಿಸಲ್ಪಡುವರು.[1]

كَلَّآ إِنَّهُمْ عَن رَّبِّهِمْ يَوْمَئِذٍ لَّمَحْجُوبُونَ ﴿١٥﴾

16. ತರುವಾಯ ಅವರನ್ನು ಧಗಧಗಿಸುವ ನರಕಾಗ್ನಿಯಲ್ಲಿ ಪ್ರವೇಶಿಸಿ ಉರಿಯುವವರಾಗುವರು.

ثُمَّ إِنَّهُمْ لَصَالُوا۟ ٱلْجَحِيمِ ﴿١٦﴾

17. ತರುವಾಯ ಹೇಳಲಾಗುವುದು: 'ನೀವು ನಿಷೇಧಿಸುತ್ತಿದ್ದ ವಿಷಯವು ಇದೇ ಆಗಿದೆ.'

ثُمَّ يُقَالُ هَٰذَا ٱلَّذِى كُنتُم بِهِۦ تُكَذِّبُونَ ﴿١٧﴾

18. ಸಂದೇಹವೇ ಇಲ್ಲ, ಸಜ್ಜನರ ದಾಖಲೆಯು ಇಲ್ಲಿಯ್ಯೂನ್‌ನಲ್ಲೇ ಇರುವುದು.

كَلَّآ إِنَّ كِتَٰبَ ٱلْأَبْرَارِ لَفِى عِلِّيِّينَ ﴿١٨﴾

19. ಇಲ್ಲಿಯ್ಯೂನ್ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

وَمَآ أَدْرَىٰكَ مَا عِلِّيُّونَ ﴿١٩﴾

20. ಅದು ಲಿಖಿತಗೊಳಿಸಲಾದ ಗ್ರಂಥವಾಗಿದೆ.[2]

كِتَٰبٌ مَّرْقُومٌ ﴿٢٠﴾

21. ಸಾಮೀಪ್ಯ ಪಡೆದವರು ಅದರ ಬಳಿ ಸನ್ನಿಹಿತರಾಗುವರು.[3]

يَشْهَدُهُ ٱلْمُقَرَّبُونَ ﴿٢١﴾

22. ಖಂಡಿತವಾಗಿಯೂ ಸಜ್ಜನರು ಸುಖಾನುಭೂತಿಗಳಲ್ಲಿರುವರು.

إِنَّ ٱلْأَبْرَارَ لَفِى نَعِيمٍ ﴿٢٢﴾

23. ಆಸನಗಳಲ್ಲಿ ಕುಳಿತು ಅವರು ನೋಡುತ್ತಿರುವರು.

عَلَى ٱلْأَرَآئِكِ يَنظُرُونَ ﴿٢٣﴾

---

1 ಸತ್ಯವಿಶ್ವಾಸಿಗಳಿಗೆ ಪರಲೋಕದಲ್ಲಿ ಅಲ್ಲಾಹುವನ್ನು ನೇರವಾಗಿ ಕಾಣುವ ಸೌಭಾಗ್ಯವಿದೆ. ಆದರೆ ಈ ಅವಕಾಶವು ಸತ್ಯನಿಷೇಧಿಗಳಿಗೆ ನಿಷಿದ್ಧಗೊಳಿಸಲಾಗಿದೆ.

2 ಸಜ್ಜನರ ಕರ್ಮಗಳನ್ನು ದಾಖಲಿಸಲಾದ ಗ್ರಂಥವಾಗಿದೆ ಇಲ್ಲಿಯ್ಯೂನ್ ಎಂದು ಹಲವು ವ್ಯಾಖ್ಯಾನಕಾರರು ಹೇಳಿದ್ದಾರೆ.

3 ಯಶ್‌ಹದು ಎಂದರೆ ಸಾಕ್ಷ್ಯವಹಿಸುವನು, ಹಾಜರಾಗುವನು ಇತ್ಯಾದಿ ಅರ್ಥಗಳಿವೆ. ಸಾಮೀಪ್ಯ ಪಡೆದವರು ಎಂದರೆ ಮಲಕ್‌ಗಳು ಎಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ದಾಖಲೆಗಳ ಸಂಗ್ರಹಕ್ಕೆ ಮಲಕ್‌ಗಳ ಸಾನಿಧ್ಯ ಅಥವಾ ಕಾವಲು ಇರಲಿದೆಯೆಂದರ್ಥ.

**24.** ಅವರ ಮುಖಗಳಲ್ಲಿ ಸುಖಾನುಭೂತಿಯ ಕಾಂತಿಯನ್ನು ತಾವು ಗುರುತಿಸುವಿರಿ.

تَعۡرِفُ فِي وُجُوهِهِمۡ نَضۡرَةَ ٱلنَّعِيمِ ٢٤

**25.** ಮುದ್ರೆ ಹಾಕಲಾದ ಶುದ್ಧ ಮದ್ಯದಿಂದ ಅವರಿಗೆ ಕುಡಿಯಲು ನೀಡಲಾಗುವುದು.

يُسۡقَوۡنَ مِن رَّحِيقٖ مَّخۡتُومٍ ٢٥

**26.** ಅದರ ಮುದ್ರೆಯು ಕಸ್ತೂರಿಯಾಗಿರುವುದು. ಪೈಪೋಟಿ ನಡೆಸುವವರು ಅದಕ್ಕಾಗಿ ಪೈಪೋಟಿ ನಡೆಸಲಿ.

خِتَٰمُهُۥ مِسۡكٞۚ وَفِي ذَٰلِكَ فَلۡيَتَنَافَسِ ٱلۡمُتَنَٰفِسُونَ ٢٦

**27.** ಅದರ ಮಿಶ್ರಣವು ತಸ್ನೀಮ್ ಆಗಿರುವುದು.

وَمِزَاجُهُۥ مِن تَسۡنِيمٍ ٢٧

**28.** ಅಂದರೆ ಸಾಮೀಪ್ಯ ಪಡೆದವರು ಕುಡಿಯುವ ಒಂದು ಒರತೆ ನೀರು.

عَيۡنٗا يَشۡرَبُ بِهَا ٱلۡمُقَرَّبُونَ ٢٨

**29.** ಖಂಡಿತವಾಗಿಯೂ ಅಪರಾಧಿಗಳು ಸತ್ಯವಿಶ್ವಾಸಿಗಳನ್ನು ಗೇಲಿಮಾಡಿ ನಗುತ್ತಿದ್ದರು.

إِنَّ ٱلَّذِينَ أَجۡرَمُواْ كَانُواْ مِنَ ٱلَّذِينَ ءَامَنُواْ يَضۡحَكُونَ ٢٩

**30.** ಅವರ (ಸತ್ಯವಿಶ್ವಾಸಿಗಳ) ಮುಂದಿನಿಂದ ಹಾದು ಹೋಗುವಾಗ ಅವರು ಪರಸ್ಪರ ಕಣ್ಣು ಮಿಟುಕಿಸುತ್ತಿದ್ದರು.

وَإِذَا مَرُّواْ بِهِمۡ يَتَغَامَزُونَ ٣٠

**31.** ತಮ್ಮ ಆಪ್ತೇಷ್ಟರ ಬಳಿಗೆ ಮರಳುವಾಗ ಅವರು ಸಂಭ್ರಮಿಸುತ್ತಾ ಮರಳುತ್ತಿದ್ದರು.

وَإِذَا ٱنقَلَبُوٓاْ إِلَىٰٓ أَهۡلِهِمُ ٱنقَلَبُواْ فَكِهِينَ ٣١

**32.** ಅವರನ್ನು (ಸತ್ಯವಿಶ್ವಾಸಿಗಳನ್ನು) ಕಾಣುವಾಗ 'ಖಂಡಿತವಾಗಿಯೂ ಇವರು ದಾರಿಗೆಟ್ಟವರೇ ಆಗಿರುವರು' ಎನ್ನುತ್ತಿದ್ದರು.

وَإِذَا رَأَوۡهُمۡ قَالُوٓاْ إِنَّ هَٰٓؤُلَآءِ لَضَآلُّونَ ٣٢

**33.** ಅವರ (ಸತ್ಯವಿಶ್ವಾಸಿಗಳ) ಮೇಲೆ ಮೇಲ್ವಿಚಾರಕರಾಗಿ ಇವರನ್ನು ಕಳುಹಿಸಲಾಗಿಲ್ಲ.

وَمَآ أُرۡسِلُواْ عَلَيۡهِمۡ حَٰفِظِينَ ٣٣

**34.** ಆದರೆ ಆ ದಿನದಂದು (ಅಂತ್ಯದಿನದಂದು) ಸತ್ಯವಿಶ್ವಾಸಿಗಳು ಸತ್ಯನಿಷೇಧಿಗಳನ್ನು ಗೇಲಿಮಾಡಿ ನಗುವರು.

فَٱلۡيَوۡمَ ٱلَّذِينَ ءَامَنُواْ مِنَ ٱلۡكُفَّارِ يَضۡحَكُونَ ٣٤

**35.** ಆಸನಗಳಲ್ಲಿ ಕುಳಿತು ಅವರು ನೋಡುತ್ತಿರುವರು.

عَلَى ٱلۡأَرَآئِكِ يَنظُرُونَ ٣٥

**36.** ಸತ್ಯನಿಷೇಧಿಗಳಿಗೆ ಅವರು ಮಾಡಿರುವುದರ ಪ್ರತಿಫಲವನ್ನು ನೀಡಲಾಗಿದೆಯೇ? ಎಂದು.

هَلۡ ثُوِّبَ ٱلۡكُفَّارُ مَا كَانُواْ يَفۡعَلُونَ ٣٦

## ಅಲ್‌ಇನ್‌ಶಿಕಾಕ್ (ಒಡೆದು ಸೀಳುವಿಕೆ)

## سُورَةُ الانْشِقَاقِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 25

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

**1-2.** ಆಕಾಶವು ಒಡೆದು ಸೀಳುವಾಗ ಮತ್ತು ಅದು ತನ್ನ ರಬ್‌ಗೆ ಶರಣಾಗುವಾಗ. ಅದು (ಹೀಗೆ ಶರಣಾಗುವುದು) ಅದರ ಬಾಧ್ಯತೆಯಾಗಿದೆ.

إِذَا ٱلسَّمَآءُ ٱنشَقَّتۡ ۝١ وَأَذِنَتۡ لِرَبِّهَا وَحُقَّتۡ ۝٢

**3-5.** ಭೂಮಿಯು ವಿಸ್ತರಿಸಲಾಗುವಾಗ, ಅದರಲ್ಲಿರುವುದನ್ನು (ಹೊರ)ಹಾಕಿ ಅದು ಬರಿದಾಗುವಾಗ ಮತ್ತು ಅದು ತನ್ನ ರಬ್‌ಗೆ ಶರಣಾಗುವಾಗ. ಅದು (ಹೀಗೆ ಶರಣಾಗುವುದು) ಅದರ ಬಾಧ್ಯತೆಯಾಗಿದೆ.[1]

وَإِذَا ٱلۡأَرۡضُ مُدَّتۡ ۝٣ وَأَلۡقَتۡ مَا فِيهَا وَتَخَلَّتۡ ۝٤ وَأَذِنَتۡ لِرَبِّهَا وَحُقَّتۡ ۝٥

**6.** ಓ ಮನುಷ್ಯನೇ! ನೀನು ನಿನ್ನ ರಬ್‌ನೆಡೆಗೆ ಕಠಿಣ ಪರಿಶ್ರಮ ಮಾಡಿ ತೆರಳುವವನಾಗಿರುವೆ.[2] ಮತ್ತು ಅವನನ್ನು ಭೇಟಿಯಾಗುವವನಾಗಿರುವೆ.

يَٰٓأَيُّهَا ٱلۡإِنسَٰنُ إِنَّكَ كَادِحٌ إِلَىٰ رَبِّكَ كَدۡحٗا فَمُلَٰقِيهِ ۝٦

**7-8.** ಆದರೆ (ಪರಲೋಕದಲ್ಲಿ) ಯಾರಿಗೆ ಅವನ ಗ್ರಂಥವನ್ನು ಬಲಗೈಯಲ್ಲಿ ನೀಡಲಾಗುವುದೋ ಅವನನ್ನು ಸರಳವಾದ ವಿಚಾರಣೆಗೆ ಗುರಿ ಮಾಡಲಾಗುವುದು.

فَأَمَّا مَنۡ أُوتِيَ كِتَٰبَهُۥ بِيَمِينِهِۦ ۝٧ فَسَوۡفَ يُحَاسَبُ حِسَابٗا يَسِيرٗا ۝٨

**9.** ತನ್ನ ಆಪ್ತೇಷ್ಟರ ಬಳಿಗೆ ಸಂತಸದಿಂದ ಮರಳುವನು.

وَيَنقَلِبُ إِلَىٰٓ أَهۡلِهِۦ مَسۡرُورٗا ۝٩

**10-12.** ಆದರೆ ಯಾರಿಗೆ ಅವನ ಗ್ರಂಥವನ್ನು ಬೆನ್ನ ಹಿಂದಿನಿಂದ ನೀಡಲಾಗುವುದೋ ಅವನು 'ಅಯ್ಯೋ! ನನ್ನ ದುರ್ಗತಿಯೇ!' ಎಂದು ರೋದಿಸುವನು ಮತ್ತು ಧಗಧಗಿಸುವ ನರಕಾಗ್ನಿಯಲ್ಲಿ ಪ್ರವೇಶಿಸಿ ಉರಿಯುವನು.

وَأَمَّا مَنۡ أُوتِيَ كِتَٰبَهُۥ وَرَآءَ ظَهۡرِهِۦ ۝١٠ فَسَوۡفَ يَدۡعُواْ ثُبُورٗا ۝١١ وَيَصۡلَىٰ سَعِيرًا ۝١٢

---

1 ಒಂದರಿಂದ ಐದರವರೆಗಿನ ಸೂಕ್ತಿಗಳಲ್ಲಿ ಹೇಳಿದ ವಿಷಯಗಳೆಲ್ಲ ಅಂತ್ಯದಿನದಂದು ಸಂಭವಿಸುವ ಘಟನೆಗಳಾಗಿವೆ.

2 ಒಳಿತು ಅಥವಾ ಕೆಡುಕಾದ ಸಂಗತಿಗಳಿಗಿರುವ ನಿರಂತರ ಪರಿಶ್ರಮದ ನಡುವೆ ಮನುಷ್ಯನು ಮೃತಪಟ್ಟು ಅಲ್ಲಾಹುವಿನ ಬಳಿಗೆ ತೆರಳುತ್ತಾನೆ.

13. ಖಂಡಿತವಾಗಿಯೂ ಅವನು ತನ್ನ ಆಪ್ತೇಷ್ಟರೊಂದಿಗೆ ಸಂತೋಷದಿಂದ ಕಳೆಯುವವನಾಗಿದ್ದನು.

إِنَّهُۥ كَانَ فِيٓ أَهۡلِهِۦ مَسۡرُورًا ﴿١٣﴾

14. ತಾನು (ಅಲ್ಲಾಹುವಿನೆಡೆಗೆ) ಮರಳಿ ಬರಲಾರೆನೆಂದೇ ಅವನು ಭಾವಿಸಿದ್ದನು.

إِنَّهُۥ ظَنَّ أَن لَّن يَحُورَ ﴿١٤﴾

15. ಹೌದು! ಖಂಡಿತವಾಗಿಯೂ ಅವನ ರಬ್ ಅವನನ್ನು ವೀಕ್ಷಿಸುವವನಾಗಿರುವನು.

بَلَىٰٓۚ إِنَّ رَبَّهُۥ كَانَ بِهِۦ بَصِيرٗا ﴿١٥﴾

16-18. ಆದರೆ ನಾನು ಅಸ್ತಮಾನ ಶೋಭೆಯ ಮೇಲೆ, ರಾತ್ರಿ ಮತ್ತು ಅದು ಒಟ್ಟಾಗಿಸುವುದರ ಮೇಲೆ[1] ಮತ್ತು ಚಂದ್ರನು ಪರಿಪೂರ್ಣತೆಯನ್ನು ಪಡೆಯುವಾಗ ಅದರ ಮೇಲೆ ಆಣೆಯಿಡು(ತ್ತಾ ಹೇಳು)ತ್ತಿರುವೆನು.

فَلَآ أُقۡسِمُ بِٱلشَّفَقِ ﴿١٦﴾ وَٱلَّيۡلِ وَمَا
وَسَقَ ﴿١٧﴾ وَٱلۡقَمَرِ إِذَا ٱتَّسَقَ ﴿١٨﴾

19. ಖಂಡಿತವಾಗಿಯೂ ನೀವು ಹಂತ ಹಂತವಾಗಿ ಮೇಲೇರುತ್ತಿರುವಿರಿ.[2]

لَتَرۡكَبُنَّ طَبَقًا عَن طَبَقٖ ﴿١٩﴾

20. ಆದರೆ ಅವರಿಗೇನಾಗಿದೆ? ಅವರು ವಿಶ್ವಾಸವಿಡುವುದಿಲ್ಲ.

فَمَا لَهُمۡ لَا يُؤۡمِنُونَ ﴿٢٠﴾

21. ಅವರಿಗೆ ಕುರ್‌ಆನ್ ಓದಿಕೊಡಲಾದರೆ ಅವರು ಸಾಷ್ಟಾಂಗವೆರಗುವುದಿಲ್ಲ.[3]

وَإِذَا قُرِئَ عَلَيۡهِمُ ٱلۡقُرۡءَانُ لَا
يَسۡجُدُونَۤ۩ ﴿٢١﴾

22. ಅಲ್ಲ, ಅವಿಶ್ವಾಸಿಗಳು ನಿಷೇಧಿಸುತ್ತಿರುವರು.

بَلِ ٱلَّذِينَ كَفَرُواْ يُكَذِّبُونَ ﴿٢٢﴾

23. ಅವರು ಮನಸ್ಸುಗಳಲ್ಲಿ ಸಂಗ್ರಹಿಸಿಡುವುದರ ಬಗ್ಗೆ ಅಲ್ಲಾಹು ಚೆನ್ನಾಗಿ ಅರಿಯುವವನಾಗಿರುವನು.

وَٱللَّهُ أَعۡلَمُ بِمَا يُوعُونَ ﴿٢٣﴾

---

1 ಮುಂಜಾನೆ ಗೂಡು ತೊರೆದು ಹೊರಹೋಗುವ ಜೀವಿಗಳು, ಮನೆಗಳಿಂದ ವಿವಿಧ ಕೆಲಸಗಳೆಡೆಗೆ ತೆರಳುವ ಮನುಷ್ಯರು ರಾತ್ರಿ ಗೂಡುಗಳಲ್ಲಿ ಮತ್ತು ಮನೆಗಳಲ್ಲಿ ಒಟ್ಟು ಸೇರುವುದರ ಬಗ್ಗೆಯಾಗಿರಬಹುದು ಇಲ್ಲಿರುವ ಸೂಚನೆ.

2 ಮನುಷ್ಯನ ಜೀವನವು ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಯೆಡೆಗೆ ಅಭಿವೃದ್ಧಿ ಹೊಂದುತ್ತಿರುತ್ತದೆ. ಭೌತಿಕ ಮತ್ತು ಅಧ್ಯಾತ್ಮಿಕವಾದ ಎಲ್ಲ ಪ್ರಗತಿಗಳೂ ಹಂತ ಹಂತವಾಗಿಯೇ ಜರುಗುತ್ತವೆ.

3 ಪ್ರಸ್ತುತ ಸೂಕ್ತಿಯು ಪಾರಾಯಣ ಮಾಡಿದಾಗ ಪ್ರವಾದಿ(ﷺ)ರವರು ಸಾಷ್ಟಾಂಗ ಮಾಡಿದ್ದಾಗಿ ಹದೀಸ್‌ಗಳಲ್ಲಿ ವರದಿಯಾಗಿದೆ. ಲಾ ಯಸ್ಜುದೂನ್ ಎಂಬ ಪದಕ್ಕೆ ಅವರು ವಿನಮ್ರತೆ ತೋರುವುದಿಲ್ಲ ಎಂದೂ ಕೆಲವರು ಅರ್ಥ ನೀಡಿದ್ದಾರೆ.

فَبَشِّرۡهُم بِعَذَابٍ أَلِيمٍ ﴿٢٤﴾

24. ಆದ್ದರಿಂದ (ಓ ಪ್ರವಾದಿಯವರೇ!) ಅವರಿಗೆ ಯಾತನಾಮಯ ಶಿಕ್ಷೆಯೊಂದರ ಕುರಿತು ಶುಭವಾರ್ತೆ ತಿಳಿಸಿರಿ.

إِلَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ لَهُمۡ أَجۡرٌ غَيۡرُ مَمۡنُونِۭ ﴿٢٥﴾

25. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರ ಹೊರತು. ಅವರಿಗೆ ನಿಂತುಹೋಗದ ಪ್ರತಿಫಲವಿರುವುದು.

## ಅಲ್‌ಬುರೂಜ್ (ನಕ್ಷತ್ರ ಪುಂಜಗಳು)

سُورَةُ البُرُوجِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 22

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ನಕ್ಷತ್ರ ಪುಂಜಗಳಿರುವ ಆಕಾಶದ ಮೇಲಾಣೆ!

وَٱلسَّمَآءِ ذَاتِ ٱلۡبُرُوجِ ١

2. ವಾಗ್ದಾನ ಮಾಡಲಾಗಿರುವ ಆ ದಿನದ ಮೇಲಾಣೆ!

وَٱلۡيَوۡمِ ٱلۡمَوۡعُودِ ٢

3. ಸಾಕ್ಷಿ ಮತ್ತು ಸಾಕ್ಷ್ಯವಹಿಸಲಾಗುವ ವಿಷಯದ ಮೇಲಾಣೆ!

وَشَاهِدٖ وَمَشۡهُودٖ ٣

4. ಆ ಹೊಂಡದವರು ನಾಶವಾಗಲಿ.

قُتِلَ أَصۡحَٰبُ ٱلۡأُخۡدُودِ ٤

5. ಅಂದರೆ ಸೌದೆ ತುಂಬಲಾದ ಅಗ್ನಿಯ ಜನರು.

ٱلنَّارِ ذَاتِ ٱلۡوَقُودِ ٥

6. ಅವರು ಅದರ ಬಳಿ ಕುಳಿತಿದ್ದ ಸಂಧರ್ಭ.

إِذۡ هُمۡ عَلَيۡهَا قُعُودٞ ٦

7. ಅವರು ಸತ್ಯವಿಶ್ವಾಸಿಗಳೊಂದಿಗೆ ಏನು ಮಾಡುತ್ತಿದ್ದರೋ ಅದಕ್ಕೆ ಅವರು ಪ್ರತ್ಯಕ್ಷದರ್ಶಿಗಳಾಗಿದ್ದರು.(1)

وَهُمۡ عَلَىٰ مَا يَفۡعَلُونَ بِٱلۡمُؤۡمِنِينَ شُهُودٞ ٧

8-9. ಅವರ (ಆ ಸತ್ಯವಿಶ್ವಾಸಿಗಳ) ಮೇಲೆ ಅವರು (ದುಷ್ಟರು) ಹೊರಿಸಿದ ಆರೋಪವು ಅವರು ಪ್ರತಾಪಶಾಲಿಯೂ, ಸ್ತುತ್ಯರ್ಹನೂ, ಆಕಾಶಗಳ ಮತ್ತು ಭೂಮಿಯ ಮೇಲೆ ಆಧಿಪತ್ಯವುಳ್ಳವನೂ ಆಗಿರುವ ಅಲ್ಲಾಹುವಿನಲ್ಲಿ ವಿಶ್ವಾಸವಿಟ್ಟಿರುವರು ಎಂಬುದು ಮಾತ್ರವಾಗಿತ್ತು. ಅಲ್ಲಾಹು ಎಲ್ಲ ವಿಷಯಗಳ ಮೇಲೂ ಸಾಕ್ಷಿಯಾಗಿರುವನು.

وَمَا نَقَمُواْ مِنۡهُمۡ إِلَّآ أَن يُؤۡمِنُواْ بِٱللَّهِ ٱلۡعَزِيزِ ٱلۡحَمِيدِ ٨ ٱلَّذِي لَهُۥ مُلۡكُ ٱلسَّمَٰوَٰتِ وَٱلۡأَرۡضِۚ وَٱللَّهُ عَلَىٰ كُلِّ شَيۡءٖ شَهِيدٌ ٩

1 ಯಥೇಷ್ಟವಾಗಿ ಸೌದೆಗಳನ್ನು ತುಂಬಿಸಿದ ಅಗ್ನಿ ಕುಂಡವನ್ನು ನಿರ್ಮಿಸಿ, ಸತ್ಯವಿಶ್ವಾಸಿಗಳನ್ನು ಅದಕ್ಕೆಸೆದು, ಅವರು ಸುಟ್ಟು ಕರಕಲಾಗುವುದನ್ನು ಕಂಡು ಆನಂದಿಸುವ ಕಠಿಣ ಹೃದಯಿಗಳಾದ ದುಷ್ಟರು ಹಿಂದಿನ ಕಾಲದಲ್ಲಿದ್ದರು.

10. ಸತ್ಯವಿಶ್ವಾಸಿಗಳನ್ನು ಮತ್ತು ಸತ್ಯವಿಶ್ವಾಸಿನಿಯರನ್ನು ಹಿಂಸಿಸುವವರು ಮತ್ತು ಆ ಬಳಿಕ ಪಶ್ಚಾತ್ತಾಪ ಪಡದವರು ಯಾರೋ ಅವರಿಗೆ ಖಂಡಿತವಾಗಿಯೂ ನರಕಶಿಕ್ಷೆಯಿದೆ. ಅವರಿಗೆ ಸುಟ್ಟು ಕರಕಲಾಗಿಸುವ ಶಿಕ್ಷೆಯಿದೆ.

إِنَّ ٱلَّذِينَ فَتَنُواْ ٱلْمُؤْمِنِينَ وَٱلْمُؤْمِنَٰتِ ثُمَّ لَمْ يَتُوبُواْ فَلَهُمْ عَذَابُ جَهَنَّمَ وَلَهُمْ عَذَابُ ٱلْحَرِيقِ ﴿١٠﴾

11. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರಿಗೆ ಖಂಡಿತವಾಗಿಯೂ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿವೆ. ಮಹಾ ವಿಜಯವು ಅದೇ ಆಗಿದೆ.

إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ لَهُمْ جَنَّٰتٌ تَجْرِى مِن تَحْتِهَا ٱلْأَنْهَٰرُ ۚ ذَٰلِكَ ٱلْفَوْزُ ٱلْكَبِيرُ ﴿١١﴾

12. ಖಂಡಿತವಾಗಿಯೂ ತಮ್ಮ ರಬ್‌ನ ಹಿಡಿತವು ಕಠೋರವಾದುದೇ ಆಗಿದೆ.

إِنَّ بَطْشَ رَبِّكَ لَشَدِيدٌ ﴿١٢﴾

13. ಖಂಡಿತವಾಗಿಯೂ ಮೊದಲ ಬಾರಿ ಸೃಷ್ಟಿಸುವವನು ಮತ್ತು ಪುನರಾವರ್ತಿಸುವವನು ಅವನೇ ಆಗಿರುವನು.

إِنَّهُۥ هُوَ يُبْدِئُ وَيُعِيدُ ﴿١٣﴾

14–16. ಅವನು ಅತ್ಯಧಿಕ ಕ್ಷಮಿಸುವವನೂ, ಅತ್ಯಧಿಕ ಪ್ರೀತಿಯುಳ್ಳವನೂ, ಸಿಂಹಾಸನದ ಒಡೆಯನೂ, ಮಹತ್ವವುಳ್ಳವನೂ, ತಾನು ಇಚ್ಛಿಸುವುದನ್ನು ಸಂಪೂರ್ಣ ಜಾರಿಗೆ ತರುವವನೂ ಆಗಿರುವನು.

وَهُوَ ٱلْغَفُورُ ٱلْوَدُودُ ﴿١٤﴾ ذُو ٱلْعَرْشِ ٱلْمَجِيدُ ﴿١٥﴾ فَعَّالٌ لِّمَا يُرِيدُ ﴿١٦﴾

17–18. ಆ ಸೈನ್ಯಗಳ ಅಥವಾ ಫಿರ್‌ಔನ್ ಮತ್ತು ಸಮೂದ್‌ನ ವೃತ್ತಾಂತವು ತಮ್ಮ ಬಳಿಗೆ ಬಂದಿದೆಯೇ?

هَلْ أَتَىٰكَ حَدِيثُ ٱلْجُنُودِ ﴿١٧﴾ فِرْعَوْنَ وَثَمُودَ ﴿١٨﴾

19. ಅಲ್ಲ, ಸತ್ಯನಿಷೇಧಿಗಳು ನಿಷೇಧಿಸುವುದರಲ್ಲೇ ಮಗ್ನರಾಗಿರುವರು.

بَلِ ٱلَّذِينَ كَفَرُواْ فِى تَكْذِيبٍ ﴿١٩﴾

20. ಅಲ್ಲಾಹು ಅವರ ಹಿಂದಿನಿಂದ (ಅವರನ್ನು) ಆವರಿಸಿಕೊಳ್ಳುವವನಾಗಿರುವನು.

وَٱللَّهُ مِن وَرَآئِهِم مُّحِيطٌ ﴿٢٠﴾

21. ಅಲ್ಲ, ಅದು ಮಹತ್ವಪೂರ್ಣವಾದ ಒಂದು ಕುರ್‌ಆನ್ ಆಗಿದೆ.

بَلْ هُوَ قُرْءَانٌ مَّجِيدٌ ﴿٢١﴾

22. ಅದು ಸುರಕ್ಷಿತವಾದ ಒಂದು ಫಲಕದಲ್ಲಿದೆ.[1]

فِى لَوْحٍ مَّحْفُوظٍۭ ﴿٢٢﴾

1 'ಅಲ್ಲೌಹುಲ್ ಮಹ್‌ಫೂಝ್' (ಸುರಕ್ಷಿತ ಫಲಕ) ಎಂಬುದು ಅಲ್ಲಾಹುವಿನ ಸೂಕ್ತಿಗಳನ್ನು ದಾಖಲಿಸಲಾಗಿರುವ ಮತ್ತು ಅವನ ವಿಶೇಷ ರಕ್ಷಣೆಯಲ್ಲಿರುವ ಒಂದು ದಾಖಲೆಯಾಗಿದೆ.

## ಅತ್ತಾರಿಕ್ (ರಾತ್ರಿ ಬರುವಂತಹುದು)

## سُورَةُ الطَّارِقِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 17

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆಕಾಶದ ಮೇಲಾಣೆ. ರಾತ್ರಿ ಬರುವುದರ ಮೇಲಾಣೆ!

وَٱلسَّمَآءِ وَٱلطَّارِقِ ١

2. ರಾತ್ರಿಯಲ್ಲಿ ಬರುವುದು ಎಂದರೆ ಏನೆಂದು ತಮಗೆ ಗೊತ್ತಿದೆಯೇ?

وَمَآ أَدۡرَىٰكَ مَا ٱلطَّارِقُ ٢

3. ಅದು ಒಳತೂರಿ ಮುನ್ನುಗ್ಗುವ ನಕ್ಷತ್ರವಾಗಿದೆ.

ٱلنَّجۡمُ ٱلثَّاقِبُ ٣

4. ತನ್ನ ವಿಷಯದಲ್ಲಿ ಒಬ್ಬ ಮೇಲ್ವಿಚಾರಕನಿರದೆ ಯಾವೊಬ್ಬನೂ ಇರಲಾರನು.

إِن كُلُّ نَفۡسٖ لَّمَّا عَلَيۡهَا حَافِظٞ ٤

5. ಆದರೆ ತನ್ನನ್ನು ಯಾವುದರಿಂದ ಸೃಷ್ಟಿಸಲಾಗಿದೆ ಎಂಬುದನ್ನು ಮನುಷ್ಯನು ಚಿಂತಿಸಿ ನೋಡಲಿ.

فَلۡيَنظُرِ ٱلۡإِنسَٰنُ مِمَّ خُلِقَ ٥

6. ಚಿಮ್ಮುವ ಒಂದು ದ್ರವದಿಂದ ಅವನನ್ನು ಸೃಷ್ಟಿಸಲಾಗಿದೆ.

خُلِقَ مِن مَّآءٖ دَافِقٖ ٦

7. ಅದು ಬೆನ್ನು ಮೂಳೆ ಮತ್ತು ಪಕ್ಕೆಲುಬುಗಳ ನಡುವಿನಿಂದ ಹೊರಬರುತ್ತದೆ.[1]

يَخۡرُجُ مِنۢ بَيۡنِ ٱلصُّلۡبِ وَٱلتَّرَآئِبِ ٧

8-9. ರಹಸ್ಯಗಳನ್ನು ಪರೀಕ್ಷಿಸಲಾಗುವ ದಿನದಂದು ಅವನನ್ನು (ಮನುಷ್ಯನನ್ನು) ಮರಳಿ ತರಲು ಖಂಡಿತವಾಗಿಯೂ ಅಲ್ಲಾಹು ಸಾಮರ್ಥ್ಯವುಳ್ಳವನಾಗಿರುವನು.

إِنَّهُۥ عَلَىٰ رَجۡعِهِۦ لَقَادِرٞ ٨ يَوۡمَ تُبۡلَى ٱلسَّرَآئِرُ ٩

10. ಆಗ ಅವನಿಗೆ (ಮನುಷ್ಯನಿಗೆ) ಯಾವ ಶಕ್ತಿಯಾಗಲಿ ಇರದು; ಸಹಾಯಕರಾಗಲಿ ಇರಲಾರರು.

فَمَا لَهُۥ مِن قُوَّةٖ وَلَا نَاصِرٖ ١٠

---

1 'ಯಖ್ರುಜು' ಎಂಬ ಪದಕ್ಕೆ ಅವನು ಹೊರಬರುತ್ತಾನೆ ಎಂದು ಅರ್ಥ ನೀಡಿದ ವ್ಯಾಖ್ಯಾನಕಾರರಿದ್ದಾರೆ. 'ಯಖ್ರುಜು' ಎಂಬ ಪದಕ್ಕೆ ಆವಿರ್ಭವಿಸುವುದು ಎಂದೂ ಅರ್ಥ ನೀಡಬಹುದು. ಈ ಸೂಕ್ತಿಯ ಬಗ್ಗೆ ಪೌರಾಣಿಕ ಮತ್ತು ಆಧುನಿಕ ವ್ಯಾಖ್ಯಾನಕಾರರು ವಿವರಣಾತ್ಮಕವಾದ ಚರ್ಚೆಗಳನ್ನು ಮಾಡಿದ್ದಾರೆ.

وَٱلسَّمَآءِ ذَاتِ ٱلرَّجۡعِ ﴿١١﴾ وَٱلۡأَرۡضِ ذَاتِ
ٱلصَّدۡعِ ﴿١٢﴾

**11-12.** ಪದೇ ಪದೇ ಮಳೆಯನ್ನು ಸುರಿಸುವ ಆಕಾಶದ ಮೇಲಾಣೆ! ಸಸ್ಯಲತಾದಿಗಳನ್ನು ಮೊಳಕೆಯೊಡೆಸುವ ಭೂಮಿಯ ಮೇಲಾಣೆ!

إِنَّهُۥ لَقَوۡلٞ فَصۡلٞ ﴿١٣﴾

**13.** ಖಂಡಿತವಾಗಿಯೂ ಇದು ನಿರ್ಣಾಯಕವಾದ ಒಂದು ಮಾತಾಗಿದೆ.

وَمَا هُوَ بِٱلۡهَزۡلِ ﴿١٤﴾

**14.** ಇದು ಹಾಸ್ಯವಲ್ಲ.

إِنَّهُمۡ يَكِيدُونَ كَيۡدٗا ﴿١٥﴾

**15.** ಖಂಡಿತವಾಗಿಯೂ ಅವರು (ಮಹಾ) ತಂತ್ರವನ್ನು ಹೂಡುತ್ತಿರುವರು.

وَأَكِيدُ كَيۡدٗا ﴿١٦﴾

**16.** ನಾನೂ (ಮಹಾ) ತಂತ್ರವನ್ನು ಹೂಡುವೆನು.

فَمَهِّلِ ٱلۡكَٰفِرِينَ أَمۡهِلۡهُمۡ رُوَيۡدَۢا ﴿١٧﴾

**17.** ಆದ್ದರಿಂದ (ಓ ಪ್ರವಾದಿಯವರೇ!) ತಾವು ಸತ್ಯನಿಷೇಧಿಗಳಿಗೆ ಕಾಲಾವಕಾಶ ನೀಡಿರಿ. ಸ್ವಲ್ಪ ಸಮಯದವರೆಗೆ ಅವರಿಗೆ ತಾವು ಕಾಲಾವಕಾಶ ಕೊಟ್ಟುಬಿಡಿರಿ.

## ಅಲ್‍ಅಅ್‍ಲಾ (ಅತ್ಯುನ್ನತನು)

سُورَةُ الأَعۡلَىٰ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 19

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

سَبِّحِ ٱسۡمَ رَبِّكَ ٱلۡأَعۡلَى ۝١ ٱلَّذِي خَلَقَ فَسَوَّىٰ ۝٢

**1-2.** ಸೃಷ್ಟಿಸಿರುವ ಮತ್ತು ವ್ಯವಸ್ಥಿತಗೊಳಿಸಿರುವ ಅತ್ಯುನ್ನತನಾದ ತಮ್ಮ ರಬ್‍ನ ನಾಮವನ್ನು ಕೊಂಡಾಡಿರಿ.

وَٱلَّذِي قَدَّرَ فَهَدَىٰ ۝٣ وَٱلَّذِيٓ أَخۡرَجَ ٱلۡمَرۡعَىٰ ۝٤ فَجَعَلَهُۥ غُثَآءً أَحۡوَىٰ ۝٥

**3-5.** ನಿಯಮವನ್ನು ನಿರ್ಣಯಿಸಿ ಮಾರ್ಗದರ್ಶನ ಮಾಡಿದವನೂ,[1] ಮೇವು ಪ್ರದೇಶಗಳನ್ನು ಉಂಟುಮಾಡಿದವನೂ, ತರುವಾಯ ಅದನ್ನು ಒಣಗಿದ ಕಸಕಡ್ಡಿಗಳನ್ನಾಗಿ ಮಾಡಿದವನೂ ಆಗಿರುವ (ರಬ್‍ನ ನಾಮವನ್ನು).

سَنُقۡرِئُكَ فَلَا تَنسَىٰٓ ۝٦

**6.** ನಾವು ತಮಗೆ ಓದಿಕೊಡುವೆವು. ಆಗ ತಾವು ಮರೆಯಲಾರಿರಿ.

إِلَّا مَا شَآءَ ٱللَّهُۚ إِنَّهُۥ يَعۡلَمُ ٱلۡجَهۡرَ وَمَا يَخۡفَىٰ ۝٧

**7.** ಅಲ್ಲಾಹು ಇಚ್ಛಿಸಿರುವುದರ ಹೊರತು.[2] ಖಂಡಿತವಾಗಿಯೂ ಅವನು ಬಹಿರಂಗವಾಗಿರುವುದನ್ನೂ ರಹಸ್ಯವಾಗಿರುವುದನ್ನೂ ಅರಿಯುವನು.

وَنُيَسِّرُكَ لِلۡيُسۡرَىٰ ۝٨

**8.** ಅತ್ಯಂತ ಸರಳವಾಗಿರುವುದರೆಡೆಗೆ ನಾವು ತಮಗೆ ಅನುಕೂಲ ಮಾಡಿಕೊಡುವೆವು.

فَذَكِّرۡ إِن نَّفَعَتِ ٱلذِّكۡرَىٰ ۝٩

**9.** ಆದ್ದರಿಂದ ಉಪದೇಶವು ಫಲ ನೀಡುವುದಾದರೆ ತಾವು ಉಪದೇಶ ನೀಡಿರಿ.

---

1 ಪ್ರಕೃತಿಯಲ್ಲಿರುವ ಚೇತನ ಮತ್ತು ಅಚೇತನವಾಗಿರುವ ಎಲ್ಲ ವಸ್ತುಗಳಿಗೂ ಅಲ್ಲಾಹು ಸೂಕ್ಷ್ಮವಾದ ಮತ್ತು ನಿಖರವಾದ ನಿಯಮಗಳನ್ನು ವಿಧಿಸಿದ್ದಾನೆ. ಪ್ರತಿಯೊಂದು ವಸ್ತು ಹೇಗೆ ವರ್ತಿಸಬೇಕೆಂಬ ಬಗ್ಗೆ ಮಾರ್ಗದರ್ಶನವನ್ನು ಅದರೊಂದಿಗೇ ಅವನು ನೀಡಿದ್ದಾನೆ.

2 ಇದರ ಅರ್ಥ ಕುರ್‌ಆನಿನ ಯಾವುದಾದರೂ ಭಾಗವನ್ನು ಪ್ರವಾದಿ(ﷺ)ರವರು ಮರೆತು ಬಿಡುವರು ಎಂದಲ್ಲ. ಜ್ಞಾಪಕ ಶಕ್ತಿಯಂತೆಯೇ ಮರೆವೂ ಕೂಡ ಅಲ್ಲಾಹುವಿನ ಒಂದು ಅನುಗ್ರಹವೇ ಆಗಿದೆ. ಕೆಲವು ಮಹಾ ದುರ್ಘಟನೆಗಳನ್ನು ಮರೆಯಲು ಸಾಧ್ಯವಾಗಬೇಕಾದುದು ಬದುಕಿನ ಸತ್ಯಗಳನ್ನು ಯಶಸ್ವಿಯಾಗಿ ಎದುರಿಸಲು ಅನಿವಾರ್ಯವಾಗಿದೆ. ಪ್ರವಾದಿ(ﷺ)ರವರು ಏನೆಲ್ಲ ಜ್ಞಾಪಕದಲ್ಲಿಡಬೇಕು ಮತ್ತು ಏನೆಲ್ಲ ಮರೆಯಬೇಕೆಂಬುದನ್ನು ಅಲ್ಲಾಹು ನಿರ್ಧರಿಸುತ್ತಾನೆ.

| | |
|---|---|
| 10. ಭಯಪಡುವವರು ಉಪದೇಶವನ್ನು ಸ್ವೀಕರಿಸುವರು | سَيَذَّكَّرُ مَن يَخْشَىٰ ﴿١٠﴾ |
| 11. ಅತ್ಯಂತ ಭಾಗ್ಯಹೀನನಾದವನು ಅದನ್ನು (ಉಪದೇಶವನ್ನು) ಬಿಟ್ಟು ದೂರಸರಿಯುವನು. | وَيَتَجَنَّبُهَا ٱلْأَشْقَى ﴿١١﴾ |
| 12. ಅವನು ಬಹುದೊಡ್ಡ ಅಗ್ನಿಯಲ್ಲಿ ಪ್ರವೇಶಿಸಿ ಉರಿಯುವವನಾಗಿರುವನು. | ٱلَّذِى يَصْلَى ٱلنَّارَ ٱلْكُبْرَىٰ ﴿١٢﴾ |
| 13. ತರುವಾಯ ಅವನು ಅದರಲ್ಲಿ ಮೃತಪಡಲಾರನು. ಜೀವಂತವಾಗಿಯೂ ಇರಲಾರನು.(1) | ثُمَّ لَا يَمُوتُ فِيهَا وَلَا يَحْيَىٰ ﴿١٣﴾ |
| 14-15. ಖಂಡಿತವಾಗಿಯೂ ಪರಿಶುದ್ಧಿ ಪಡೆದವನು ಮತ್ತು ತನ್ನ ರಬ್‌ನ ನಾಮವನ್ನು ಸ್ಮರಿಸಿದವನು, ತರುವಾಯ ನಮಾಝ್ ಮಾಡಿದವನು ಯಶಸ್ಸು ಗಳಿಸಿದನು. | قَدْ أَفْلَحَ مَن تَزَكَّىٰ ﴿١٤﴾ وَذَكَرَ ٱسْمَ رَبِّهِۦ فَصَلَّىٰ ﴿١٥﴾ |
| 16. ಆದರೆ ನೀವು ಐಹಿಕ ಜೀವನಕ್ಕೆ ಹೆಚ್ಚು ಆದ್ಯತೆ ನೀಡುತ್ತಿರುವಿರಿ. | بَلْ تُؤْثِرُونَ ٱلْحَيَوٰةَ ٱلدُّنْيَا ﴿١٦﴾ |
| 17. ಪರಲೋಕವು ಅತ್ಯುತ್ತಮವೂ ಶಾಶ್ವತವೂ ಆಗಿದೆ. | وَٱلْءَاخِرَةُ خَيْرٌ وَأَبْقَىٰٓ ﴿١٧﴾ |
| 18. ಖಂಡಿತವಾಗಿಯೂ ಇದು ಪೂರ್ವ ಗ್ರಂಥಗಳಲ್ಲಿದೆ. | إِنَّ هَٰذَا لَفِى ٱلصُّحُفِ ٱلْأُولَىٰ ﴿١٨﴾ |
| 19. ಅದರೆ ಇಬ್ರಾಹೀಮ್ ಮತ್ತು ಮೂಸರ ಗ್ರಂಥಗಳಲ್ಲಿ.(2) | صُحُفِ إِبْرَٰهِيمَ وَمُوسَىٰ ﴿١٩﴾ |

1 ಯಾವುದೇ ಸುಖವಾಗಲಿ ಸಂತೋಷವಾಗಲಿ ಇಲ್ಲದ ಮತ್ತು ದುರಂತಗಳಿಂದ ತುಂಬಿದ ನರಕವಾಸವನ್ನು ಜೀವನವೆಂದು ಹೇಳಲು ಸಾಧ್ಯವಿಲ್ಲ. ಮರಣದ ಮೂಲಕ ಆ ದುರಂತಗಳಿಂದ ಮುಕ್ತಿ ಸಿಗುತ್ತಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ನರಕವಾಸಿಗಳು ಆಸೆಪಡುವರು. ಆದರೆ ಅಲ್ಲಾಹು ಅವರಿಗೆ ಮರಣವನ್ನು ವಿಧಿಸುವುದಿಲ್ಲ.

2 ಪಾಪ, ಪುಣ್ಯ ಮತ್ತು ಮೋಕ್ಷದ ಕುರಿತು ಕುರ್‌ಆನಿನಲ್ಲಿ ಪ್ರಸ್ತಾಪಿಸಲಾದ ವಿಷಯಗಳ ಸಾರಾಂಶವು ಪೂರ್ವ ಪ್ರವಾದಿಗಳಿಗೆ ನೀಡಲಾದ ಗ್ರಂಥಗಳಲ್ಲಿರುವುದೇ ಆಗಿದೆ ಎಂದರ್ಥ.

## ಅಲ್‌ಗಾಶಿಯಃ (ಆವರಿಸುವ ಘಟನೆ)

## سُورَةُ الغَاشِيَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 26

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. (ಓ ಪ್ರವಾದಿಯವರೇ!) ಆ ಆವರಿಸುವ ಘಟನೆಯ ಕುರಿತಿರುವ[1] ವೃತ್ತಾಂತವು ತಮಗೆ ತಲುಪಿದೆಯೇ?

هَلۡ أَتَىٰكَ حَدِيثُ ٱلۡغَٰشِيَةِ ١

2-3. ಆ ದಿನದಂದು ಕೆಲವು ಮುಖಗಳು ವಿನಮ್ರವಾಗಿರುವುವು ಮತ್ತು ಪರಿಶ್ರಮದಿಂದ ಬಳಲಿರುವುವು.[2]

وُجُوهٞ يَوۡمَئِذٍ خَٰشِعَةٌ ٢ عَامِلَةٞ نَّاصِبَةٞ ٣

4. ಅವು ತೀವ್ರ ಉಷ್ಣತೆಯ ಅಗ್ನಿಯನ್ನು ಪ್ರವೇಶಿಸುವುವು.

تَصۡلَىٰ نَارًا حَامِيَةٗ ٤

5. ಕೊತಕೊತನೆ ಕುದಿಯುವ ಒಂದು ಒರತೆಯಿಂದ ಅವರಿಗೆ ಕುಡಿಸಲಾಗುವುದು.

تُسۡقَىٰ مِنۡ عَيۡنٍ ءَانِيَةٖ ٥

6. ದರೀಅ್‌ನಿಂದಲೇ[3] ಹೊರತು ಅವರಿಗೆ ಇನ್ನಾವುದೇ ಆಹಾರವೂ ಇಲ್ಲ.

لَّيۡسَ لَهُمۡ طَعَامٌ إِلَّا مِن ضَرِيعٖ ٦

7. ಅದು ಪೋಷಣೆ ನೀಡಲಾರದು. ಹಸಿವೆಯನ್ನೂ ನಿವಾರಿಸಲಾರದು.

لَّا يُسۡمِنُ وَلَا يُغۡنِي مِن جُوعٖ ٧

8. ಅಂದು ಕೆಲವು ಮುಖಗಳು ತುಂಬಾ ಹೊಳೆಯುತ್ತಿರುವುವು.

وُجُوهٞ يَوۡمَئِذٖ نَّاعِمَةٞ ٨

9. ತಮ್ಮ ಪರಿಶ್ರಮದ ಬಗ್ಗೆ ಅವು ಸಂತೃಪ್ತವಾಗಿರುವುವು.[4]

لِّسَعۡيِهَا رَاضِيَةٞ ٩

---

1 ಭಯ ಮತ್ತು ಆಘಾತಗಳು ಎಲ್ಲರನ್ನೂ ಆವರಿಸುವ ಅಂತ್ಯದಿನ.

2 ಅಲ್ಲಾಹುವಿನ ವಿಚಾರಣೆ ಮತ್ತು ಶಿಕ್ಷೆಯ ಕುರಿತಿರುವ ಭಯದ ನಿಮಿತ್ತ ಆ ಮುಖಗಳು ಕೆಳಕ್ಕೆ ಬಾಗಿರುವುವು. ಅವರು ಭೌತಿಕ ಉದ್ದೇಶಗಳಿಗೋಸ್ಕರ ಪರಿಶ್ರಮಪಟ್ಟವರೋ ಅಥವಾ ಪ್ರಮಾದಪೂರಿತ ಧಾರ್ಮಿಕ ಸಂಪ್ರದಾಯಗಳನ್ನು ನಿರ್ವಹಿಸಿ ದಣಿದವರೋ ಆಗಿರುವರು. ಆದರೆ ಅಂತ್ಯದಿನದಂದು ಅದಾವುದೂ ಅವರಿಗೆ ಪ್ರಯೋಜನವಾಗದು.

3 ದರೀಅ್ ಎಂದರೆ ಅತ್ಯಂತ ಕಹಿಯಾದ ಸಸ್ಯವೆಂದು ಅನೇಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ.

4 ಇಹಲೋಕದಲ್ಲಿ ತಾವು ಮಾಡಿದ ಕರ್ಮಗಳು ಸಫಲವಾಗಿರುವುದರಲ್ಲಿ ಅವರು ಸಂತುಷ್ಟರಾಗುವರು.

10. ಉನ್ನತ ಸ್ವರ್ಗದಲ್ಲಿ.
فِي جَنَّةٍ عَالِيَةٍ ١٠

11. ಅಲ್ಲಿ ಅನಾವಶ್ಯಕವಾದ ಯಾವುದೇ ಮಾತನ್ನೂ ಅವರು ಆಲಿಸಲಾರರು.
لَّا تَسۡمَعُ فِيهَا لَٰغِيَةٗ ١١

12. ಅದರಲ್ಲಿ ಹರಿಯುತ್ತಿರುವ ಒರತೆಯಿದೆ.
فِيهَا عَيۡنٞ جَارِيَةٞ ١٢

13-16. ಅಲ್ಲಿ ಎತ್ತರಿಸಿಡಲಾದ ಮಂಚಗಳು, ಸಿದ್ಧವಾಗಿಡಲಾದ ಲೋಟಗಳು, ಸಾಲು ಸಾಲಾಗಿ ಇಡಲಾದ ದಿಂಬುಗಳು ಮತ್ತು ಹರಡಲಾದ ಜಮಖಾನೆಗಳಿವೆ.
فِيهَا سُرُرٞ مَّرۡفُوعَةٞ ١٣ وَأَكۡوَابٞ مَّوۡضُوعَةٞ ١٤ وَنَمَارِقُ مَصۡفُوفَةٞ ١٥ وَزَرَابِيُّ مَبۡثُوثَةٌ ١٦

17. ಅವರು ಒಂಟೆಯೆಡೆಗೆ ನೋಡುವುದಿಲ್ಲವೇ?[1] ಅದನ್ನು ಹೇಗೆ ಸೃಷ್ಟಿಸಲಾಗಿದೆಯೆಂದು?
أَفَلَا يَنظُرُونَ إِلَى ٱلۡإِبِلِ كَيۡفَ خُلِقَتۡ ١٧

18. ಆಕಾಶದೆಡೆಗೆ (ಅವರು ನೋಡುವುದಿಲ್ಲವೇ)? ಅದನ್ನು ಹೇಗೆ ಎತ್ತರಿಸಲಾಗಿದೆಯೆಂದು?
وَإِلَى ٱلسَّمَآءِ كَيۡفَ رُفِعَتۡ ١٨

19. ಪರ್ವತಗಳೆಡೆಗೆ (ಅವರು ನೋಡುವುದಿಲ್ಲವೇ)? ಅವುಗಳನ್ನು ಹೇಗೆ ನಾಟಿ ನಿಲ್ಲಿಸಲಾಗಿದೆಯೆಂದು?
وَإِلَى ٱلۡجِبَالِ كَيۡفَ نُصِبَتۡ ١٩

20. ಭೂಮಿಯೆಡೆಗೆ (ಅವರು ನೋಡುವುದಿಲ್ಲವೇ)? ಅದನ್ನು ಹೇಗೆ ಹರಡಲಾಗಿದೆಯೆಂದು?[2]
وَإِلَى ٱلۡأَرۡضِ كَيۡفَ سُطِحَتۡ ٢٠

21. ಆದ್ದರಿಂದ (ಓ ಪ್ರವಾದಿಯವರೇ!) ತಾವು ಉಪದೇಶ ನೀಡಿರಿ. ತಾವು ಒಬ್ಬ ಉಪದೇಶಕನು ಮಾತ್ರವಾಗಿರುವಿರಿ.
فَذَكِّرۡ إِنَّمَآ أَنتَ مُذَكِّرٞ ٢١

22. ತಾವು ಅವರ ಮೇಲೆ ಅಧಿಕಾರ ಚಲಾಯಿಸಬೇಕಾದವರಲ್ಲ.
لَّسۡتَ عَلَيۡهِم بِمُصَيۡطِرٍ ٢٢

1 ಮರುಭೂಮಿಯಲ್ಲಿ ಮನುಷ್ಯನ ಅಗತ್ಯಗಳನ್ನು ನೆರವೇರಿಸುವ ಮತ್ತು ಮರುಭೂಮಿಯ ಪ್ರಕೃತಿಗೆ ಹೊಂದಾಣಿಕೆಯಾಗುವ ಒಂಟೆಯ ಶರೀರ ರಚನೆಯು ಅದ್ಭುತಕರವಾಗಿದೆ. ಒಂಟೆಯನ್ನು ಸೂಕ್ಷ್ಮವಾಗಿ ವೀಕ್ಷಿಸುವ ಯಾರಿಗೂ ಸೃಷ್ಟಿಕರ್ತನ ಸೃಷ್ಟಿ ವೈಭವದ ಕುರಿತು ಆಲೋಚಿಸದಿರಲು ಸಾಧ್ಯವಿಲ್ಲ.

2 ಭೂಮಿಯು ಅತಿವೇಗದಲ್ಲಿ ತಿರುಗುತ್ತಿರುವ ಒಂದು ಗ್ರಹವಾಗಿದೆ. ಆದರೂ ಅದರ ಮೇಲ್ಮೈ ಮನುಷ್ಯನ ಎಲ್ಲ ವಿಧದ ಅಗತ್ಯಗಳಿಗೂ ಸಹಾಯಕವಾಗುವ ರೀತಿಯಲ್ಲಿ ವಿಶಾಲವಾಗಿ ಹರಡಲಾಗಿದೆ.

إِلَّا مَن تَوَلَّىٰ وَكَفَرَ ﴿٢٣﴾ فَيُعَذِّبُهُ ٱللَّهُ ٱلْعَذَابَ ٱلْأَكْبَرَ ﴿٢٤﴾

**23-24.** ಆದರೆ ಯಾರಾದರೂ ವಿಮುಖನಾದರೆ ಮತ್ತು ಅವಿಶ್ವಾಸವಿಟ್ಟರೆ ಅಲ್ಲಾಹು ಅವನಿಗೆ ಅತಿಘೋರ ಶಿಕ್ಷೆಯನ್ನು ಶಿಕ್ಷಿಸುವನು.

إِنَّ إِلَيْنَآ إِيَابَهُمْ ﴿٢٥﴾

**25.** ಖಂಡಿತವಾಗಿಯೂ ಅವರ ಮರಳುವಿಕೆಯು ನಮ್ಮೆಡೆಗಾಗಿದೆ.

ثُمَّ إِنَّ عَلَيْنَا حِسَابَهُم ﴿٢٦﴾

**26.** ತರುವಾಯ ಖಂಡಿತವಾಗಿಯೂ ಅವರ ವಿಚಾರಣೆ ಮಾಡುವುದು ನಮ್ಮ ಬಾಧ್ಯತೆಯಾಗಿದೆ.

# ಅಲ್‌ಫಜ್ರ್ (ಪ್ರಭಾತ)

سُورَةُ الفَجْرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 30

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلۡفَجۡرِ ١ وَلَيَالٍ عَشۡرٖ ٢ وَٱلشَّفۡعِ وَٱلۡوَتۡرِ ٣ وَٱلَّيۡلِ إِذَا يَسۡرِ ٤ هَلۡ فِي ذَٰلِكَ قَسَمٞ لِّذِي حِجۡرٍ ٥

1-5. ಪ್ರಭಾತದ ಮೇಲಾಣೆ! ಹತ್ತು ರಾತ್ರಿಗಳ ಮೇಲಾಣೆ![1] ಸಮ ಮತ್ತು ಬೆಸಗಳ ಮೇಲಾಣೆ![2] ರಾತ್ರಿ ಚಲಿಸುತ್ತಿರುವಾಗ ಅದರ ಮೇಲಾಣೆ! ವಿಷಯಪ್ರಜ್ಞೆಯುಳ್ಳವನಿಗೆ ಅದರಲ್ಲಿ (ಮೇಲೆ ಹೇಳಿರುವುದರಲ್ಲಿ) ಆಣೆಯಿದೆಯೇ?

أَلَمۡ تَرَ كَيۡفَ فَعَلَ رَبُّكَ بِعَادٍ ٦

6. ಆದ್ ಸಮುದಾಯದೊಂದಿಗೆ ತಮ್ಮ ರಬ್ ಏನು ಮಾಡಿದನೆಂದು ತಾವು ಕಂಡಿಲ್ಲವೇ?

إِرَمَ ذَاتِ ٱلۡعِمَادِ ٧

7. ಅಂದರೆ ಸ್ಥಂಭಗಳ ಒಡೆಯರಾದ ಇರಮ್ ಗೋತ್ರದೊಂದಿಗೆ[3]

ٱلَّتِي لَمۡ يُخۡلَقۡ مِثۡلُهَا فِي ٱلۡبِلَٰدِ ٨

8. ಅದರಂತಿರುವ ಒಂದನ್ನು ದೇಶಗಳಲ್ಲಿ ಸೃಷ್ಟಿಸಲಾಗಿರದ ಗೋತ್ರ.[4]

وَثَمُودَ ٱلَّذِينَ جَابُواْ ٱلصَّخۡرَ بِٱلۡوَادِ ٩ وَفِرۡعَوۡنَ ذِي ٱلۡأَوۡتَادِ ١٠

9-10. ಕಣಿವೆಯಲ್ಲಿ ಬಂಡೆ ಒಡೆದು ಕಟ್ಟಡ ನಿರ್ಮಿಸುತ್ತಿದ್ದ ಸಮೂದ್ ಜನಾಂಗದೊಂದಿಗೆ ಮತ್ತು ಮೊಳೆಗಳ ಒಡೆಯನಾದ ಫಿರ್‌ಔನ್‌ನೊಂದಿಗೆ.[5]

---

1 ಇದರ ತಾತ್ಪರ್ಯ ದುಲ್‌ಹಿಜ್ಜಃ ತಿಂಗಳ ಮೊದಲ ಹತ್ತು ದಿನಗಳಾಗಿವೆಯೆಂದು ಕೆಲವು ಪ್ರಮುಖ ವ್ಯಾಖ್ಯಾನಕಾರರು ಹೇಳಿದ್ದಾರೆ.

2 ಸಂಖ್ಯೆಗಳಲ್ಲಿರುವ ಬೆಸ ಮತ್ತು ಸಮಸಂಖ್ಯೆಗಳಂತೆಯೇ ಪದಾರ್ಥಗಳಲ್ಲೂ ಬೆಸ ಮತ್ತು ಸಮಗಳು ಅಥವಾ ಧಾತು ಮತ್ತು ಸಂಯುಕ್ತಗಳಿವೆ. ಇವು ಒಂದಕ್ಕೊಂದು ಸೇರಿ ಅವಳಿಗಳಾಗುವ ಹಾಗೂ ದ್ವಿಗುಣಗೊಳ್ಳುವ ಸ್ವಭಾವವೇ ಜೀವ ಸಸ್ಯರಾಶಿಗಳ ಬೆಳವಣಿಗೆಗೆ ಹೇತುವಾಗಿದೆ. ಇಷ್ಟೆಲ್ಲ ಮಹತ್ವ ಇರುವುದರಿಂದಲೇ ಅಲ್ಲಾಹು ಬೆಸ ಮತ್ತು ಸಮಗಳ ಮೇಲೆ ಆಣೆಹಾಕಿರಬಹುದು.

3 ಇರಮ್ ಎಂಬುದು ಆದ್ ಸಮುದಾಯದ ಮತ್ತೊಂದು ಹೆಸರಾಗಿದೆ ಅಥವಾ ಆದ್ ಸಮುದಾಯದ ರಾಜಧಾನಿಯ ಹೆಸರಾಗಿದೆ ಎಂಬ ಎರಡು ಅಭಿಪ್ರಾಯಗಳಿವೆ. ಅವರ ಸ್ಥಳಗಳಲ್ಲಿ ಸ್ಮಾರಕ ಸ್ಥೂಪಗಳನ್ನು ನಿರ್ಮಿಸಿದ ಕಾರಣ ಅವರನ್ನು ಸ್ಥಂಭಗಳ ಒಡೆಯರೆಂದು ಕರೆಯಲಾಗಿರಲೂಬಹುದು.

4 ದೈಹಿಕ ಸೌಷ್ಠವದಲ್ಲಿ ಮತ್ತು ದೇಹದಾರ್ಢ್ಯತೆಯಲ್ಲಿ ಆ ಸಮುದಾಯವು ಅಪ್ರತಿಮವಾಗಿತ್ತು ಎಂದರ್ಥ.

5 ಇಲ್ಲಿ ಮೊಳೆಗಳೆಂದರೆ ಅಧಿಕಾರದ ಪ್ರತೀಕವೆಂದು ಅಥವಾ ಹಿಂಸೆಯ ಪ್ರತೀಕವೆಂದು ಅಭಿಪ್ರಾಯಪಟ್ಟವರಿದ್ದಾರೆ.

ٱلَّذِينَ طَغَوۡاْ فِي ٱلۡبِلَٰدِ ﴿١١﴾ فَأَكۡثَرُواْ فِيهَا ٱلۡفَسَادَ ﴿١٢﴾

**11-12.** ಅವರು ಭೂಮಿಯಲ್ಲಿ ಅತಿಕ್ರಮವೆಸಗಿದವರು ಮತ್ತು ಅಲ್ಲಿ ಕ್ಷೋಭೆಯನ್ನು ಹೆಚ್ಚಿಸಿದವರಾಗಿರುವರು.

فَصَبَّ عَلَيۡهِمۡ رَبُّكَ سَوۡطَ عَذَابٍ ﴿١٣﴾

**13.** ಆಗ ತಮ್ಮ ರಬ್ ಅವರ ಮೇಲೆ ಶಿಕ್ಷೆಯ ಚಾಟಿಯನ್ನು ಸುರಿಸಿದನು.

إِنَّ رَبَّكَ لَبِٱلۡمِرۡصَادِ ﴿١٤﴾

**14.** ಖಂಡಿತವಾಗಿಯೂ ತಮ್ಮ ರಬ್ ಹೊಂಚಿನ ತಾಣದಲ್ಲೇ ಇರುವನು.[1]

فَأَمَّا ٱلۡإِنسَٰنُ إِذَا مَا ٱبۡتَلَىٰهُ رَبُّهُۥ فَأَكۡرَمَهُۥ وَنَعَّمَهُۥ فَيَقُولُ رَبِّيٓ أَكۡرَمَنِ ﴿١٥﴾

**15.** ಆದರೆ ಮನುಷ್ಯನನ್ನು ಅವನ ರಬ್ ಪರೀಕ್ಷಿಸಿ, ತರುವಾಯ ಅವನನ್ನು ಆದರಿಸಿ ಅವನಿಗೆ ಸುಖವನ್ನು ಕರುಣಿಸಿದರೆ ಅವನು 'ನನ್ನ ರಬ್ ನನ್ನನ್ನು ಆದರಿಸಿರುವನು' ಎಂದು ಹೇಳುವನು.

وَأَمَّآ إِذَا مَا ٱبۡتَلَىٰهُ فَقَدَرَ عَلَيۡهِ رِزۡقَهُۥ فَيَقُولُ رَبِّيٓ أَهَٰنَنِ ﴿١٦﴾

**16.** ಆದರೆ ಅವನನ್ನು (ಮನುಷ್ಯನನ್ನು) ಅವನು ಪರೀಕ್ಷಿಸಿ, ತರುವಾಯ ಅವನ ಅನ್ನಾಧಾರವನ್ನು ಸಂಕುಚಿತಗೊಳಿಸಿದರೆ ಅವನು 'ನನ್ನ ರಬ್ ನನ್ನನ್ನು ನಿಂದಿಸಿರುವನು' ಎಂದು ಹೇಳುವನು.[2]

كَلَّاۖ بَل لَّا تُكۡرِمُونَ ٱلۡيَتِيمَ ﴿١٧﴾

**17.** ಅಲ್ಲ, ನೀವು ಅನಾಥನನ್ನು ಆದರಿಸುತ್ತಿಲ್ಲ.[3]

وَلَا تَحَٰٓضُّونَ عَلَىٰ طَعَامِ ٱلۡمِسۡكِينِ ﴿١٨﴾ وَتَأۡكُلُونَ ٱلتُّرَاثَ أَكۡلٗا لَّمّٗا ﴿١٩﴾ وَتُحِبُّونَ ٱلۡمَالَ حُبّٗا جَمّٗا ﴿٢٠﴾

**18-20.** ಬಡವನಿಗೆ ಅನ್ನ ನೀಡಲು ನೀವು ಪ್ರೇರಣೆ ನೀಡುತ್ತಿಲ್ಲ. ನೀವು ವಾರೀಸು ಸೊತ್ತನ್ನು ಬಾಚುತ್ತಾ ತಿನ್ನುತ್ತಿರುವಿರಿ ಮತ್ತು ಸಂಪತ್ತನ್ನು ಮಿತಿಮೀರಿ ಪ್ರೀತಿಸುತ್ತಿರುವಿರಿ.

---

1 ಅವನು ಸದಾ ವೀಕ್ಷಿಸುತ್ತಿರುವನು ಎಂದರ್ಥ.

2 ಓರ್ವ ಸತ್ಯವಿಶ್ವಾಸಿ ಕಷ್ಟ ಸುಖಗಳನ್ನು ಒಂದೇ ರೀತಿಯಲ್ಲಿ ಅವೆರಡೂ ಅಲ್ಲಾಹುವಿನ ಪರೀಕ್ಷೆಯಾಗಿದೆಯೆಂದು ಅರ್ಥಮಾಡಿ ಕೊಂಡು ಸೂಕ್ತ ಪ್ರತಿಕ್ರಿಯೆಯನ್ನು ನೀಡಬೇಕಾದವನಾಗಿದ್ದಾನೆ. ಮನುಷ್ಯನಿಗೆ ಅನುಗ್ರಹಗಳು ಲಭ್ಯವಾದಾಗ ಅದು ತನ್ನ ಮಹತ್ವದ ಫಲವೆಂದು ಭಾವಿಸದೆ ಅಲ್ಲಾಹುವಿನ ದಾನವೆಂದು ಪರಿಗಣಿಸಿ ಕೃತಜ್ಞತಾಪೂರ್ವಕ ಪ್ರತಿಕ್ರಿಯಿಸಬೇಕಾಗಿದೆ. ಕಷ್ಟಗಳು ಬರುವಾಗ ನಿರಾಶೆ ಮತ್ತು ವ್ಯಥೆ ತೋರದೆ ತಾಳ್ಮೆ ವಹಿಸಬೇಕಾಗಿದೆ. ಆದರೆ ಮನುಷ್ಯರಲ್ಲಿ ಹೆಚ್ಚಿನವರೂ ಇದಕ್ಕೆ ವಿರುದ್ಧವಾಗಿ ವರ್ತಿಸುತ್ತಾರೆ.

3 ಅನಾಥರನ್ನು ಸಂರಕ್ಷಿಸುತ್ತೇವೆಂದು ವಾದಿಸುವ ಕೆಲವು ವ್ಯಕ್ತಿಗಳು ಮತ್ತು ಸಂಸ್ಥೆಗಳು ಅನಾಥರೊಂದಿಗೆ ಗೌರವಾದರ ತೋರದೆ ಅವರನ್ನು ತುಚ್ಛವಾಗಿ ಕಾಣುತ್ತಾರೆ. ತಮ್ಮ ಮನಸ್ಸಿನಲ್ಲಿ ಅನಾಥರಿಗೆ ಆದರ ತೋರುವವರಿಗೆ ಮಾತ್ರ ಅಲ್ಲಾಹುವಿನ ಬಳಿ ಪ್ರತಿಫಲವಿದೆ.

كَلَّآ إِذَا دُكَّتِ ٱلۡأَرۡضُ دَكّٗا دَكّٗا ﴿٢١﴾ وَجَآءَ رَبُّكَ وَٱلۡمَلَكُ صَفّٗا صَفّٗا ﴿٢٢﴾ وَجِاْيٓءَ يَوۡمَئِذِۭ بِجَهَنَّمَۚ يَوۡمَئِذٖ يَتَذَكَّرُ ٱلۡإِنسَٰنُ وَأَنَّىٰ لَهُ ٱلذِّكۡرَىٰ ﴿٢٣﴾

**21-23.** ಅಲ್ಲ, ಭೂಮಿಯನ್ನು ಪುಡಿ ಪುಡಿ ಮಾಡಲಾಗುವಾಗ, ತಮ್ಮ ರಬ್ ಮತ್ತು ಸಾಲುಸಾಲಾಗಿ ಮಲಕ್‌ಗಳು ಬಂದಾಗ ಹಾಗೂ ಅಂದು ನರಕಾಗ್ನಿಯನ್ನು ತರಲಾದಾಗ. ಆ ದಿನದಂದು ಮನುಷ್ಯನಿಗೆ ಜ್ಞಾಪಕ ಬರುವುದು.[1] ಅವನಿಗೆ ಜ್ಞಾಪಕವು ಪ್ರಯೋಜನಕ್ಕೆ ಬರುವುದಾದರೂ ಎಲ್ಲಿಂದ?

يَقُولُ يَٰلَيۡتَنِي قَدَّمۡتُ لِحَيَاتِي ﴿٢٤﴾

**24.** ಅವನು ಹೇಳುವನು: 'ಅಯ್ಯೋ! ನಾನು ನನ್ನ ಜೀವನಕ್ಕಾಗಿ (ಸತ್ಕರ್ಮಗಳನ್ನು) ಪೂರ್ವಭಾವಿಯಾಗಿ ಮಾಡಿಟ್ಟಿರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!?'

فَيَوۡمَئِذٖ لَّا يُعَذِّبُ عَذَابَهُۥٓ أَحَدٞ ﴿٢٥﴾

**25.** ಆದ್ದರಿಂದ ಆ ದಿನದಂದು ಅಲ್ಲಾಹು ಶಿಕ್ಷಿಸುವ ರೀತಿಯಲ್ಲಿ ಯಾರೂ ಶಿಕ್ಷಿಸಲಾರರು.

وَلَا يُوثِقُ وَثَاقَهُۥٓ أَحَدٞ ﴿٢٦﴾

**26.** ಅವನು ಹಿಡಿದು ಬಂಧಿಸುವಂತೆ ಯಾರೂ ಹಿಡಿದು ಬಂಧಿಸಲಾರರು.

يَٰٓأَيَّتُهَا ٱلنَّفۡسُ ٱلۡمُطۡمَئِنَّةُ ﴿٢٧﴾ ٱرۡجِعِيٓ إِلَىٰ رَبِّكِ رَاضِيَةٗ مَّرۡضِيَّةٗ ﴿٢٨﴾

**27-28.** ಓ ಶಾಂತವಾಗಿರುವ ಆತ್ಮವೇ! ನೀನು ನಿನ್ನ ರಬ್‌ನೆಡೆಗೆ ಸಂತೃಪ್ತನಾಗಿ ಮತ್ತು ಸಂತೃಪ್ತಿಗೆ ಪಾತ್ರನಾಗಿ ಮರಳು.

فَٱدۡخُلِي فِي عِبَٰدِي ﴿٢٩﴾

**29.** ತರುವಾಯ ನನ್ನ ದಾಸರ ಗುಂಪಿನಲ್ಲಿ ಪ್ರವೇಶಿಸು.

وَٱدۡخُلِي جَنَّتِي ﴿٣٠﴾

**30.** ನನ್ನ ಸ್ವರ್ಗವನ್ನು ಪ್ರವೇಶಿಸು.

---

1 ಅಲ್ಲಾಹುವಿನ ವಿಚಾರಣೆ ಮತ್ತು ಶಿಕ್ಷೆ ಆಸನ್ನವಾಗುವ ಸಂದರ್ಭದಲ್ಲಿ ಅಂದರೆ ನ್ಯಾಯ ತೀರ್ಮಾನದ ದಿನದಂದು ಸತ್ಯನಿಷೇಧಿಗಳು ಪ್ರವಾದಿಗಳ ಉಪದೇಶ ಮತ್ತು ಎಚ್ಚರಿಕೆಗಳನ್ನು ಜ್ಞಾಪಿಸುವರು. ಆದರೆ ಆ ಸಮಯದಲ್ಲಿ ಆ ಜ್ಞಾಪಕದಿಂದ ಅವರಿಗೆ ಯಾವ ಪ್ರಯೋಜನವೂ ಉಂಟಾಗದು.

## ಅಲ್‌ಬಲದ್ (ಪಟ್ಟಣ)

## سُورَةُ البَلَدِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 20

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ನಾನು ಈ ಪಟ್ಟಣದ (ಮಕ್ಕಾದ) ಮೇಲೆ ಆಣೆಯಿಡುವೆನು.

لَآ أُقۡسِمُ بِهَٰذَا ٱلۡبَلَدِ ١

2. ತಾವು ಈ ಪಟ್ಟಣದ ನಿವಾಸಿಯಾಗಿರುವಿರಿ.[1]

وَأَنتَ حِلُّۢ بِهَٰذَا ٱلۡبَلَدِ ٢

3. ಜನ್ಮದಾತನ ಮತ್ತು ಅವನು ಜನ್ಮ ನೀಡಿದವುಗಳ ಮೇಲಾಣೆ![2]

وَوَالِدٖ وَمَا وَلَدَ ٣

4. ಖಂಡಿತವಾಗಿಯೂ ಮನುಷ್ಯನನ್ನು ನಾವು ಸೃಷ್ಟಿಸಿರುವುದು ಕಷ್ಟವನ್ನು ಅನುಭವಿಸುವ ಸ್ಥಿತಿಯಲ್ಲಾಗಿದೆ.[3]

لَقَدۡ خَلَقۡنَا ٱلۡإِنسَٰنَ فِي كَبَدٍ ٤

5. ತನ್ನನ್ನು ನಿಯಂತ್ರಿಸಲು ಯಾರಿಗೂ ಸಾಧ್ಯವೇ ಇಲ್ಲವೆಂದು ಅವನು ಭಾವಿಸುತ್ತಿರುವನೇ?

أَيَحۡسَبُ أَن لَّن يَقۡدِرَ عَلَيۡهِ أَحَدٞ ٥

6. ಅವನು ಹೇಳುವನು: 'ನಾನು ಸಂಪತ್ತನ್ನು ಯಥೇಷ್ಟವಾಗಿ ಹಾಳು ಮಾಡಿರುವೆನು'.[4]

يَقُولُ أَهۡلَكۡتُ مَالٗا لُّبَدًا ٦

7. ತನ್ನನ್ನು ಯಾರೂ ಕಾಣಲಾರರೆಂದು ಅವನು ಭಾವಿಸುತ್ತಿರುವನೇ?

أَيَحۡسَبُ أَن لَّمۡ يَرَهُۥٓ أَحَدٌ ٧

---

1 ಹಿಲ್ಲ್ ಎಂದರೆ ನಿವಾಸಿ, ಅನುಮತಿಯಿರುವವನು, ಸ್ವಾತಂತ್ರ್ಯವಿರುವವನು ಇತ್ಯಾದಿ ಅರ್ಥಗಳಿವೆ.

2 ಒಬ್ಬ ವ್ಯಕ್ತಿ ಜನ್ಮದಾತ ಮತ್ತು ಇನ್ನೊಬ್ಬ ವ್ಯಕ್ತಿ ಜನಿಸಿದವನಾಗುವುದು –ತಂದೆ, ತಾಯಿ ಮತ್ತು ಸಂತತಿಯಾಗುವುದು– ಜನನದೊಂದಿಗೆ ಸಂಬಂಧ ಹೊಂದಿರುವ ಅತಿಸೂಕ್ಷ್ಮ ದೈವಿಕ ನಿಯಮದ ಪ್ರಕಾರವಾಗಿದೆ.

3 ಬದುಕಿನ ಎಲ್ಲ ಸಾಧನೆಗಳಿಗೂ ಮಾನದಂಡ ಕಠಿಣ ಪರಿಶ್ರಮವಾಗಿದೆ. ಒಂದಿಷ್ಟು ಪರಿಶ್ರಮಿಸಲು ಅಥವಾ ಕ್ಲೇಶ ಸಹಿಸಲು ಸಿದ್ಧನಾಗದವನು ಬದುಕಿನಲ್ಲಿ ಯಶಸ್ವಿಯಾಗಲಾರನು.

4 ದೇವಭಯವಿಲ್ಲದ ಧನಿಕರು ಧರ್ಮಬಾಹಿರವಾಗಿ ಸಂಪತ್ತನ್ನು ವ್ಯಯಿಸುವವರೂ, ಅದರ ಹೆಸರಲ್ಲಿ ದುರಭಿಮಾನ ಪಡುವವರೂ ಆಗಿರುತ್ತಾರೆ ಮತ್ತು ತಮ್ಮ ಕರ್ಮಗಳನ್ನು ಅಲ್ಲಾಹು ವೀಕ್ಷಿಸುತ್ತಿದ್ದಾನೆಂಬುದರ ಬಗ್ಗೆ ಪ್ರಜ್ಞೆಯಿಲ್ಲದವರಾಗಿದ್ದಾರೆ.

**8-9.** ಅವನಿಗೆ ನಾವು ಎರಡು ಕಣ್ಣುಗಳು, ಒಂದು ನಾಲಗೆ ಮತ್ತು ಎರಡು ತುಟಿಗಳನ್ನು ಮಾಡಿಕೊಡಲಿಲ್ಲವೇ?

أَلَمۡ نَجۡعَل لَّهُۥ عَيۡنَيۡنِ ٨ وَلِسَانٗا وَشَفَتَيۡنِ ٩

**10.** ಸ್ಪಷ್ಟವಾದ ಎರಡು ಹಾದಿಗಳನ್ನು[1] ನಾವು ಅವನಿಗೆ ತೋರಿಸಿಕೊಟ್ಟಿರುವೆವು.

وَهَدَيۡنَٰهُ ٱلنَّجۡدَيۡنِ ١٠

**11.** ತರುವಾಯ ಆ ಕಡಿದಾದ ಹಾದಿಯಲ್ಲಿ[2] ಅವನು ಪ್ರವೇಶಿಸಲಿಲ್ಲ.

فَلَا ٱقۡتَحَمَ ٱلۡعَقَبَةَ ١١

**12.** ಆ ಕಡಿದಾದ ಹಾದಿ ಏನೆಂದು ತಮಗೆ ಗೊತ್ತಿದೆಯೇ?

وَمَآ أَدۡرَىٰكَ مَا ٱلۡعَقَبَةُ ١٢

**13-16.** ಅದು ಒಬ್ಬ ಗುಲಾಮನನ್ನು ವಿಮೋಚನೆಗೊಳಿಸುವುದಾಗಿದೆ. ಅಥವಾ ಹಸಿವಿನ ದಿನದಲ್ಲಿ ಸಂಬಂಧಿಕನಾಗಿರುವ ಒಬ್ಬ ಅನಾಥನಿಗೆ ಅಥವಾ ಕಡು ಬಡತನದಲ್ಲಿರುವ ಒಬ್ಬ ನಿರ್ಗತಿಕನಿಗೆ ಆಹಾರ ನೀಡುವುದಾಗಿದೆ.

فَكُّ رَقَبَةٍ ١٣ أَوۡ إِطۡعَٰمٞ فِي يَوۡمٖ ذِي مَسۡغَبَةٖ ١٤ يَتِيمٗا ذَا مَقۡرَبَةٍ ١٥ أَوۡ مِسۡكِينٗا ذَا مَتۡرَبَةٖ ١٦

**17.** ಮಾತ್ರವಲ್ಲ, ಅವನು ವಿಶ್ವಾಸವಿಡುವವರ ಹಾಗೂ ಸಹನೆಯಿಂದ ಮತ್ತು ಕರುಣೆಯಿಂದ ಪರಸ್ಪರ ಉಪದೇಶ ನೀಡುವವರ ಪೈಕಿ ಸೇರುವುದಾಗಿದೆ.

ثُمَّ كَانَ مِنَ ٱلَّذِينَ ءَامَنُواْ وَتَوَاصَوۡاْ بِٱلصَّبۡرِ وَتَوَاصَوۡاْ بِٱلۡمَرۡحَمَةِ ١٧

**18.** ಹಾಗೆ ಮಾಡುವವರೇ ಬಲಭಾಗದವರು.

أُوْلَٰٓئِكَ أَصۡحَٰبُ ٱلۡمَيۡمَنَةِ ١٨

**19.** ನಮ್ಮ ದೃಷ್ಟಾಂತಗಳನ್ನು ನಿಷೇಧಿಸಿದವರಾರೋ ಅವರೇ ಎಡಭಾಗದವರಾಗಿರುವರು.[3]

وَٱلَّذِينَ كَفَرُواْ بِـَٔايَٰتِنَا هُمۡ أَصۡحَٰبُ ٱلۡمَشۡـَٔمَةِ ١٩

**20.** ಅವರ ಮೇಲೆ ಆವರಿಸಲಾಗಿರುವ ನರಕಾಗ್ನಿಯಿದೆ.

عَلَيۡهِمۡ نَارٞ مُّؤۡصَدَةُۢ ٢٠

---

1 ಸತ್ಯ ಮತ್ತು ಅಸತ್ಯದ ಹಾದಿಗಳು ಸ್ಪಷ್ಟವಾಗಿವೆ. ಯಾವ ಸಂದೇಹವೂ ಉಳಿಯದ ರೀತಿಯಲ್ಲಿ ಅಲ್ಲಾಹು ಪ್ರವಾದಿಗಳ ಮೂಲಕ ಅವೆರಡನ್ನು ಬೇರ್ಪಡಿಸಿ ತೋರಿಸಿದ್ದಾನೆ.

2 ಸತ್ಯದ ಹಾದಿಯು ಅನಾಯಾಸವಾಗಿ ಚಲಿಸುವಂತದ್ದಲ್ಲ. ಅತ್ಯಂತ ಪ್ರಯಾಸದೊಂದಿಗೆ ಏರುತ್ತಾ ಸಾಗಬೇಕಾದ ಕಡಿದಾದ ಹಾದಿಯೊಂದಿಗೆ ಅದನ್ನು ಹೋಲಿಸಲಾಗಿದೆ.

3 ಬಲಭಾಗದವರು ಮತ್ತು ಎಡಭಾಗದವರು ಎಂಬ ಪದಗಳ ಕುರಿತು ಗ್ರಹಿಸಲು ಸೂರತುಲ್ ವಾಕಿಅಃದ ಅನುವಾದ ಮತ್ತು ವ್ಯಾಖ್ಯಾನವನ್ನು ನೋಡಿರಿ.

## ಅಶ್ಶಮ್ಸ್ (ಸೂರ್ಯ)

## سُورَةُ الشَّمْسِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 15

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಸೂರ್ಯ ಮತ್ತು ಅದರ ಪ್ರಭೆಯ ಮೇಲಾಣೆ!

وَٱلشَّمۡسِ وَضُحَىٰهَا ١

2. ಚಂದ್ರನ ಮೇಲಾಣೆ! ಅದು ಅದನ್ನು ಹಿಂಬಾಲಿಸಿ ಬರುವಾಗ.

وَٱلۡقَمَرِ إِذَا تَلَىٰهَا ٢

3. ಹಗಲಿನ ಮೇಲಾಣೆ! ಅದು ಅದನ್ನು (ಸೂರ್ಯನನ್ನು) ಪ್ರತ್ಯಕ್ಷಗೊಳಿಸುವಾಗ.

وَٱلنَّهَارِ إِذَا جَلَّىٰهَا ٣

4. ರಾತ್ರಿಯ ಮೇಲಾಣೆ! ಅದು ಅದನ್ನು ಆವರಿಸುವಾಗ.

وَٱلَّيۡلِ إِذَا يَغۡشَىٰهَا ٤

5. ಆಕಾಶ ಮತ್ತು ಅದನ್ನು ಸ್ಥಾಪಿಸಿದ ವಿಧಾನದ ಮೇಲಾಣೆ!

وَٱلسَّمَآءِ وَمَا بَنَىٰهَا ٥

6. ಭೂಮಿ ಮತ್ತು ಅದನ್ನು ವಿಸ್ತಾರಗೊಳಿಸಿದ ವಿಧಾನದ ಮೇಲಾಣೆ!

وَٱلۡأَرۡضِ وَمَا طَحَىٰهَا ٦

7. ಮನುಷ್ಯ ಮನಸ್ಸು ಮತ್ತು ಅದನ್ನು ವ್ಯವಸ್ಥಿತಗೊಳಿಸಿದ ವಿಧಾನದ ಮೇಲಾಣೆ.!

وَنَفۡسٖ وَمَا سَوَّىٰهَا ٧

8. ತರುವಾಯ ಅವನು ಅದಕ್ಕೆ ಅದರ ದುಷ್ಟತೆಯನ್ನೂ, ಶಿಷ್ಟತೆಯನ್ನೂ ತಿಳಿಸಿಕೊಟ್ಟನು.[(1)]

فَأَلۡهَمَهَا فُجُورَهَا وَتَقۡوَىٰهَا ٨

9. ಖಂಡಿತವಾಗಿಯೂ ಅದನ್ನು (ಶರೀರವನ್ನು) ಪರಿಶುದ್ಧಗೊಳಿಸಿದವನು ಯಶಸ್ಸು ಗಳಿಸಿದನು.

قَدۡ أَفۡلَحَ مَن زَكَّىٰهَا ٩

10. ಅದನ್ನು ಮಲಿನಗೊಳಿಸಿದವನು ಖಂಡಿತವಾಗಿಯೂ ಪರಾಭವಗೊಂಡನು.

وَقَدۡ خَابَ مَن دَسَّىٰهَا ١٠

11. ಸಮೂದ್ ಜನಾಂಗವು ತನ್ನ ಧಿಕ್ಕಾರದ ನಿಮಿತ್ತ (ಸತ್ಯವನ್ನು) ನಿಷೇಧಿಸಿತು.

كَذَّبَتۡ ثَمُودُ بِطَغۡوَىٰهَآ ١١

1 ದುಷ್ಟತೆ ಮತ್ತು ಶಿಷ್ಟತೆಯ ಬಗ್ಗೆಯಿರುವ ಪ್ರಜ್ಞೆಯನ್ನು ಅಲ್ಲಾಹು ಮನುಷ್ಯ ಪ್ರಕೃತಿಯಲ್ಲೇ ನಿಕ್ಷೇಪಿಸಿದ್ದಾನೆ

12. ಅವರ ಪೈಕಿ ಅತ್ಯಂತ ದುಷ್ಟನು ಸಿದ್ಧವಾಗಿ ಹೊರಟು ನಿಂತಾಗ.

إِذِ ٱنۢبَعَثَ أَشۡقَىٰهَا ﴿١٢﴾

13. ಆಗ ಅಲ್ಲಾಹುವಿನ ಸಂದೇಶವಾಹಕರು ಅವರೊಂದಿಗೆ ಹೇಳಿದರು: 'ಅಲ್ಲಾಹುವಿನ ಒಂಟೆಯ ಕುರಿತು ಮತ್ತು ಅದರ ಜಲಪಾನದ ಕುರಿತು ಎಚ್ಚರವಹಿಸಿರಿ.[1]

فَقَالَ لَهُمۡ رَسُولُ ٱللَّهِ نَاقَةَ ٱللَّهِ وَسُقۡيَٰهَا ﴿١٣﴾

14. ಆಗ ಅವರು ಅವರನ್ನು (ಸಂದೇಶವಾಹಕರನ್ನು) ನಿಷೇಧಿಸಿದರು ಮತ್ತು ಅದನ್ನು (ಒಂಟೆಯನ್ನು) ಕತ್ತು ಕೊಯ್ದು ಸಾಯಿಸಿದರು. ಆಗ ಅವರ ಪಾಪದ ನಿಮಿತ್ತ ಅವರ ರಬ್ ಅವರನ್ನು ನಾಶ ಮಾಡಿದನು ಮತ್ತು ಅದನ್ನು (ಅವರೆಲ್ಲರ ಮೇಲೂ) ಸಮಾನಗೊಳಿಸಿದನು.

فَكَذَّبُوهُ فَعَقَرُوهَا فَدَمۡدَمَ عَلَيۡهِمۡ رَبُّهُم بِذَنۢبِهِمۡ فَسَوَّىٰهَا ﴿١٤﴾

15. ಅದರ ಪರಿಣಾಮದ ಕುರಿತು ಅವನು ಭಯಪಟ್ಟಿರಲೂ ಇಲ್ಲ.

وَلَا يَخَافُ عُقۡبَٰهَا ﴿١٥﴾

1 7:73–79, 11:64–66, 26:155–158 ಸೂಕ್ತಿಗಳನ್ನು ನೋಡಿರಿ.

## ಅಲ್ಲೈಲ್ (ರಾತ್ರಿ)

## سُورَةُ اللَّيْلِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 21

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ರಾತ್ರಿಯ ಮೇಲಾಣೆ! ಅದು ಆವರಿಸುತ್ತಿರುವಾಗ.

وَٱلَّيۡلِ إِذَا يَغۡشَىٰ ١

2. ಹಗಲಿನ ಮೇಲಾಣೆ! ಅದು ಪ್ರತ್ಯಕ್ಷವಾಗುವಾಗ.

وَٱلنَّهَارِ إِذَا تَجَلَّىٰ ٢

3. ಗಂಡು ಮತ್ತು ಹೆಣ್ಣನ್ನು ಸೃಷ್ಟಿಸಿದ ವಿಧಾನದ ಮೇಲಾಣೆ!

وَمَا خَلَقَ ٱلذَّكَرَ وَٱلۡأُنثَىٰٓ ٣

4. ಖಂಡಿತವಾಗಿಯೂ ನಿಮ್ಮ ಪರಿಶ್ರಮವು ವಿಭಿನ್ನ ರೂಪದಲ್ಲಿರುವುದಾಗಿದೆ.

إِنَّ سَعۡيَكُمۡ لَشَتَّىٰ ٤

5-7. ಆದರೆ ಯಾರು ದಾನಧರ್ಮ ಮಾಡುವನೋ, ಭಯಭಕ್ತಿ ಪಾಲಿಸುವನೋ ಮತ್ತು ಅತ್ಯುತ್ತಮವಾಗಿರುವುದನ್ನು ದೃಢೀಕರಿಸುವನೋ ಅವನಿಗೆ ನಾವು ಅತ್ಯಂತ ಸುಗಮ ವಾಗಿರುವುದರೆಡೆಗೆ ಅನುಕೂಲ ಮಾಡಿಕೊಡುವೆವು.(1)

فَأَمَّا مَنۡ أَعۡطَىٰ وَٱتَّقَىٰ ٥ وَصَدَّقَ
بِٱلۡحُسۡنَىٰ ٦ فَسَنُيَسِّرُهُۥ لِلۡيُسۡرَىٰ ٧

8-10. ಆದರೆ ಯಾರು ಜಿಪುಣತೆ ತೋರಿಸಿ, ಸ್ವಯಂ ಪರ್ಯಾಪ್ತತೆಯನ್ನು ಪ್ರಕಟಿಸಿ, ಅತ್ಯುತ್ತಮವಾಗಿರುವುದನ್ನು ನಿಷೇಧಿಸುವನೋ ಅವನಿಗೆ ನಾವು ಅತ್ಯಂತ ಕಷ್ಟವಾಗಿರುವುದರೆಡೆಗೆ ಅನುಕೂಲ ಮಾಡಿ ಕೊಡುವೆವು.(2)

وَأَمَّا مَنۢ بَخِلَ وَٱسۡتَغۡنَىٰ ٨ وَكَذَّبَ
بِٱلۡحُسۡنَىٰ ٩ فَسَنُيَسِّرُهُۥ لِلۡعُسۡرَىٰ ١٠

11. ಅವನು ನಾಶವಾಗಿ ಹೋಗುವಾಗ ಅವನ ಸಂಪತ್ತು ಅವನ ಪ್ರಯೋಜನಕ್ಕೆ ಬರದು.

وَمَا يُغۡنِي عَنۡهُ مَالُهُۥٓ إِذَا تَرَدَّىٰٓ ١١

---

1 ಔದಾರ್ಯ ಮತ್ತು ಧರ್ಮನಿಷ್ಠೆಯನ್ನು ಹೊಂದಿರುವ ಮತ್ತು ಉತ್ತಮ ಜೀವನಶೈಲಿಯನ್ನು ಅಂಗೀಕರಿಸುವವನಿಗೆ ಅಲ್ಲಾಹು ಬದುಕನ್ನು ಸುಗಮಗೊಳಿಸುವನು ಎಂದರ್ಥ.

2 ಅತ್ಯಂತ ಪ್ರಯಾಸಕರ ಬದುಕಿಗೆ ಅಲ್ಲಾಹು ಅವನನ್ನು ಸಾಗಿಸುವನು ಎಂದರ್ಥ.

إِنَّ عَلَيۡنَا لَلۡهُدَىٰ ﴿١٢﴾

12. ಖಂಡಿತವಾಗಿಯೂ ಮಾರ್ಗದರ್ಶನ ನೀಡುವುದು ನಮ್ಮ ಬಾಧ್ಯತೆಯಾಗಿದೆ.

وَإِنَّ لَنَا لَلۡأٓخِرَةَ وَٱلۡأُولَىٰ ﴿١٣﴾

13. ಖಂಡಿತವಾಗಿಯೂ ಪರಲೋಕ ಮತ್ತು ಇಹಲೋಕಗಳು ನಮಗಿರುವುದಾಗಿವೆ.

فَأَنذَرۡتُكُمۡ نَارٗا تَلَظَّىٰ ﴿١٤﴾

14. ಆದ್ದರಿಂದ ಧಗಧಗಿಸುವ ಅಗ್ನಿಯ ಕುರಿತು ನಾನು ನಿಮಗೆ ಎಚ್ಚರಿಕೆ ನೀಡಿರುವೆನು.

لَا يَصۡلَىٰهَآ إِلَّا ٱلۡأَشۡقَى ﴿١٥﴾ ٱلَّذِي كَذَّبَ وَتَوَلَّىٰ ﴿١٦﴾

15-16. ನಿಷೇಧಿಸಿದವನೂ, ವಿಮುಖನಾಗಿ ಹೋದವನೂ ಆಗಿರುವ ಅತಿ ದುಷ್ಟನ ಹೊರತು ಇನ್ನಾರೂ ಅದನ್ನು ಪ್ರವೇಶಿಸಲಾರರು.

وَسَيُجَنَّبُهَا ٱلۡأَتۡقَى ﴿١٧﴾ ٱلَّذِي يُؤۡتِي مَالَهُۥ يَتَزَكَّىٰ ﴿١٨﴾

17-18. ಪರಿಶುದ್ಧಿ ಗಳಿಸುವುದಕ್ಕಾಗಿ ತನ್ನ ಸಂಪತ್ತನ್ನು ವ್ಯಯಿಸುವ ಅತ್ಯಧಿಕ ಭಯಭಕ್ತಿಯುಳ್ಳವನನ್ನು ಅದರಿಂದ ದೂರೀಕರಿಸಲಾಗುವುದು.

وَمَا لِأَحَدٍ عِندَهُۥ مِن نِّعۡمَةٖ تُجۡزَىٰٓ ﴿١٩﴾

19. ಪ್ರತ್ಯುಪಕಾರ ಮಾಡಬೇಕಾದ ಯಾವುದೇ ಅನುಗ್ರಹವೂ ಅವನ ಬಳಿ ಯಾರಿಗೂ ಇಲ್ಲ.[1]

إِلَّا ٱبۡتِغَآءَ وَجۡهِ رَبِّهِ ٱلۡأَعۡلَىٰ ﴿٢٠﴾

20. ಅತ್ಯುನ್ನತನಾಗಿರುವ ತನ್ನ ರಬ್‌ನ ಸಂತೃಪ್ತಿಯನ್ನು ಅರಸುವುದರ ಹೊರತು.

وَلَسَوۡفَ يَرۡضَىٰ ﴿٢١﴾

21. ಅವನು ತರುವಾಯ ಸಂತೃಪ್ತನಾಗುವನು.

1 ಆತ್ಮಶುದ್ಧಿಯನ್ನು ಬಯಸುವ ವ್ಯಕ್ತಿ ಯಾರಿಗೆ ಯಾವುದೇ ಸಹಾಯ ಮಾಡಿದರೂ ಅದು ಪ್ರತ್ಯುಪಕಾರ ಸಿಗಬೇಕು ಎಂಬ ಉದ್ದೇಶದಿಂದ ಆಗಿರಲಾರದು. ಅಲ್ಲಾಹುವಿನ ಸಂತೃಪ್ತಿಯನ್ನು ಆಕಾಂಕ್ಷಿಸಿ ಮಾತ್ರವಾಗಿರುವುದು ಎಂದರ್ಥ.

## ಅದ್ದುಹಾ (ಪೂರ್ವಾಹ್ನ)

## سُورَةُ الضُّحَىٰ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 11

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسْمِ ٱللَّهِ ٱلرَّحْمَٰنِ ٱلرَّحِيمِ

1. ಪೂರ್ವಾಹ್ನದ ಮೇಲಾಣೆ!

وَٱلضُّحَىٰ ﴿١﴾

2. ರಾತ್ರಿಯ ಮೇಲಾಣೆ! ಅದು ಶಾಂತವಾಗುವಾಗ.

وَٱلَّيْلِ إِذَا سَجَىٰ ﴿٢﴾

3. (ಓ ಪ್ರವಾದಿಯವರೇ!) ತಮ್ಮ ರಬ್ ತಮ್ಮನ್ನು ಕೈಬಿಟ್ಟಿಲ್ಲ. ದ್ವೇಷಿಸಿಯೂ ಇಲ್ಲ.

مَا وَدَّعَكَ رَبُّكَ وَمَا قَلَىٰ ﴿٣﴾

4. ಖಂಡಿತವಾಗಿಯೂ ಇಹಲೋಕಕ್ಕಿಂತಲೂ ಪರಲೋಕವು ತಮಗೆ ಉತ್ತಮವಾಗಿದೆ.

وَلَلْـَٔاخِرَةُ خَيْرٌ لَّكَ مِنَ ٱلْأُولَىٰ ﴿٤﴾

5. ಸದ್ಯವೇ ತಮ್ಮ ರಬ್ ತಮಗೆ (ಅನುಗ್ರಹಗಳನ್ನು) ಕರುಣಿಸುವನು. ಆಗ ತಾವು ಸಂತೃಪ್ತರಾಗುವಿರಿ.

وَلَسَوْفَ يُعْطِيكَ رَبُّكَ فَتَرْضَىٰٓ ﴿٥﴾

6. ಅವನು ತಮ್ಮನ್ನು ಒಬ್ಬ ಅನಾಥನಾಗಿ ಕಂಡಾಗ[1] (ತಮಗೆ) ಆಶ್ರಯ ನೀಡಲಿಲ್ಲವೇ?

أَلَمْ يَجِدْكَ يَتِيمًا فَـَٔاوَىٰ ﴿٦﴾

7. ತಮ್ಮನ್ನು ದಾರಿ ಅರಿಯದವನಾಗಿ ಕಂಡಾಗ ಅವನು (ತಮಗೆ) ಮಾರ್ಗದರ್ಶನ ಮಾಡಿರುವನು.

وَوَجَدَكَ ضَآلًّا فَهَدَىٰ ﴿٧﴾

8. ಅವನು ತಮ್ಮನ್ನು ನಿರ್ಗತಿಕನಾಗಿ ಕಂಡಾಗ (ತಮಗೆ) ಐಶ್ವರ್ಯವನ್ನು ನೀಡಿರುವನು.[2]

وَوَجَدَكَ عَآئِلًا فَأَغْنَىٰ ﴿٨﴾

9. ಆದ್ದರಿಂದ ತಾವು ಅನಾಥನನ್ನು ದಮನಿಸದಿರಿ.

فَأَمَّا ٱلْيَتِيمَ فَلَا تَقْهَرْ ﴿٩﴾

10. ಬೇಡುತ್ತಾ ಬರುವವನನ್ನು ಗದರಿಸದಿರಿ.

وَأَمَّا ٱلسَّآئِلَ فَلَا تَنْهَرْ ﴿١٠﴾

11. ತಮ್ಮ ರಬ್‌ನ ಅನುಗ್ರಹದ ಕುರಿತು ತಾವು ಮಾತನಾಡುತ್ತಿರಿ.

وَأَمَّا بِنِعْمَةِ رَبِّكَ فَحَدِّثْ ﴿١١﴾

1 ಪ್ರವಾದಿ(ﷺ)ರು ತಾಯಿಯ ಗರ್ಭದಲ್ಲಿರುವಾಗಲೇ ಅವರ ತಂದೆ ತೀರಿಹೋದರು. ಆರು ವಯಸ್ಸಾದಾಗ ಅವರ ತಾಯಿಯೂ ತೀರಿಹೋದರು. ಅನಾಥರಾಗಿದ್ದ ಅವರನ್ನು ಮೊದಲು ಅವರ ಅಜ್ಜ ಮತ್ತು ನಂತರ ಚಿಕ್ಕಪ್ಪ ಸಾಕಿದರು.

2 ಅಜ್ಜ ಮತ್ತು ಚಿಕ್ಕಪ್ಪನ ಸಹಾಯವನ್ನು ಆಶ್ರಯಿಸಿ ಬದುಕಬೇಕಾಗಿ ಬಂದ ನಿರ್ಗತಿಕರಾದ ಪ್ರವಾದಿ(ﷺ)ರಿಗೆ ತರುವಾಯ ಖದೀಜಃ (رضي الله عنها)ರವರ ವ್ಯಾಪಾರದಲ್ಲಿ ಸೇರುವ ಮೂಲಕ ಅಲ್ಲಾಹುವಿನ ಅನುಗ್ರಹದಿಂದ ಉತ್ತಮ ಆರ್ಥಿಕ ನೆಲೆಗಟ್ಟನ್ನು ಗಳಿಸಿದರು.

## ಅಲಮ್ ನಶ್‌ರಹ್

سُورَةُ أَلَمْ نَشْرَحْ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 8

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ನಾವು ತಮಗೆ ತಮ್ಮ ಹೃದಯವನ್ನು ವಿಶಾಲಗೊಳಿಸಲಿಲ್ಲವೇ?

أَلَمۡ نَشۡرَحۡ لَكَ صَدۡرَكَ ١

2-3. ತಮ್ಮ ಬೆನ್ನನ್ನು ಮುರಿಯುತ್ತಿದ್ದ ತಮ್ಮ ಭಾರವನ್ನು ನಾವು ತಮ್ಮಿಂದ ಕೆಳಗಿಳಿಸಿದೆವು.

وَوَضَعۡنَا عَنكَ وِزۡرَكَ ٢ ٱلَّذِيٓ أَنقَضَ ظَهۡرَكَ ٣

4. ನಾವು ತಮಗೆ ತಮ್ಮ ಕೀರ್ತಿಯನ್ನು ಉತ್ತುಂಗಕ್ಕೇರಿಸಿದೆವು.(1)

وَرَفَعۡنَا لَكَ ذِكۡرَكَ ٤

5. ಆದ್ದರಿಂದ ಖಂಡಿತವಾಗಿಯೂ ಇಕ್ಕಟ್ಟಿನೊಂದಿಗೆ ಒಂದು ಅನುಕೂಲತೆಯಿರುವುದು.

فَإِنَّ مَعَ ٱلۡعُسۡرِ يُسۡرًا ٥

6. ಖಂಡಿತವಾಗಿಯೂ ಇಕ್ಕಟ್ಟಿನೊಂದಿಗೆ ಒಂದು ಅನುಕೂಲತೆಯಿರುವುದು.(2)

إِنَّ مَعَ ٱلۡعُسۡرِ يُسۡرًا ٦

7. ಆದ್ದರಿಂದ ತಮಗೆ ವಿರಾಮ ಸಿಕ್ಕರೆ ತಾವು (ಆರಾಧನೆಗಳಲ್ಲಿ) ಪರಿಶ್ರಮಿಸಿರಿ.(3)

فَإِذَا فَرَغۡتَ فَٱنصَبۡ ٧

8. ತಮ್ಮ ರಬ್‌ನೆಡೆಗೇ ತಮ್ಮ ಹಂಬಲವನ್ನು ಸಮರ್ಪಿಸಿರಿ.

وَإِلَىٰ رَبِّكَ فَٱرۡغَب ٨

---

1 ಕಠಿಣ ವಿರೋಧಗಳನ್ನು ಎದುರಿಸಿಕೊಂಡು ಪ್ರವಾದಿ(ﷺ)ರವರು ಬದುಕನ್ನು ಸಾಗಿಸಿದ್ದರು. ಹೆಚ್ಚಿನವರೂ ಅಂತಹ ಸಂಕಷ್ಟಗಳ ಮುಂದೆ ಹತಾಶರಾಗುವುದು ಅಥವಾ ಅಸಹಿಷ್ಣುಗಳಾಗುವುದು ಸಾಮಾನ್ಯ. ಆದರೆ ಅಲ್ಲಾಹುವಿನ ವಿಶೇಷ ಅನುಗ್ರಹದಿಂದಾಗಿ ಪ್ರವಾದಿ(ﷺ)ರವರು ಯಾವಾಗಲೂ ಆತ್ಮವಿಶ್ವಾಸ ಮತ್ತು ಹೃದಯವೈಶಾಲ್ಯತೆಯೊಂದಿಗೆ ವರ್ತಿಸುತ್ತಿದ್ದರು. ಎಲ್ಲ ಪ್ರಯಾಸ ಮತ್ತು ಪ್ರತಿಕೂಲ ಪರಿಸ್ಥಿತಿಗಳನ್ನು ಹಿಮ್ಮೆಟ್ಟಿಸಲು ಅವರಿಗೆ ಇದು ನೆರವಾಗಿತ್ತು. ಮನುಷ್ಯ ಚರಿತ್ರೆಯಲ್ಲಿ ಅನುಪಮವಾದ ಗುರಿಗಳನ್ನು ಸಾಧಿಸಲು ಅವರನ್ನು ಪ್ರಾಪ್ತರನ್ನಾಗಿಸಿದ್ದು ಕೂಡ ಇದೇ ಆಗಿತ್ತು.

2 ಹೆಚ್ಚಿನ ಜನರ ಸೋಲಿಗೆ ಕಾರಣ ಅಶುಭ ಚಿಂತನೆಗಳು ಮತ್ತು ಜೀವನದಲ್ಲಿರುವ ಹತಾಶೆಯಾಗಿದೆ. ಯಾವುದಾದರೂ ಕ್ಷೇತ್ರದಲ್ಲಿ ಸ್ವಲ್ಪ ಇಕ್ಕಟ್ಟುಂಟಾದರೆ ಜಿಗುಪ್ಸೆಪಡುವವರಿಗೆ ಅಮೂಲ್ಯವಾಗಿರುವುದನ್ನೇನೂ ಸಾಧಿಸಲು ಸಾಧ್ಯವಾಗದು. ಆದರೆ ಕ್ಲೇಶ ಮತ್ತು ತ್ಯಾಗಗಳ ಫಲವಾಗಿ ಅನುಕೂಲತೆ ಮತ್ತು ವೈಶಾಲ್ಯತೆಗಳು ಲಭಿಸುತ್ತವೆ ಎಂಬ ಸತ್ಯವನ್ನು ಗ್ರಹಿಸಿದ ವ್ಯಕ್ತಿಯನ್ನು ಯಾವುದೇ ಅಡ್ಡಿಯೂ ದಣಿವುಗೊಳಿಸಲಾರದು. ಈ ಸೂಕ್ತಿಯು ನಮಗೆ ನೀಡುವ ಪಾಠ ಇದಾಗಿದೆ.

3 ಪರಿಶ್ರಮಗಳನ್ನು ಎಂದೂ ಸ್ಥಗಿತಗೊಳಿಸಕೂಡದು. ಆಲಸ್ಯವನ್ನು ಬಿಟ್ಟು ನಿರಂತರ ಸತ್ಕರ್ಮಗಳಲ್ಲಿ ಮಗ್ನರಾಗಿರಿ. ಅದು ಜೀವನದ ಯಶಸ್ವಿಗಿರುವ ಅನಿವಾರ್ಯ ಘಟಕವಾಗಿದೆ.

## ಅತ್ತೀನ್ (ಅಂಜೂರ)

## سُورَةُ التِّينِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 8

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1-3. ಅಂಜೂರ, ಆಲಿವ್, ಸೀನಾ ಪರ್ವತ ಮತ್ತು ನಿರ್ಭಯತೆಯಿರುವ ಈ ಪಟ್ಟಣದ ಮೇಲಾಣೆ!

وَٱلتِّينِ وَٱلزَّيۡتُونِ ١ وَطُورِ سِينِينَ ٢ وَهَٰذَا ٱلۡبَلَدِ ٱلۡأَمِينِ ٣

4. ಖಂಡಿತವಾಗಿಯೂ ನಾವು ಮನುಷ್ಯನನ್ನು ಅತ್ಯುತ್ತಮ ರಚನೆಯೊಂದಿಗೆ ಸೃಷ್ಟಿಸಿರುವೆವು.

لَقَدۡ خَلَقۡنَا ٱلۡإِنسَٰنَ فِيٓ أَحۡسَنِ تَقۡوِيمٖ ٤

5. ತರುವಾಯ ನಾವು ಅವನನ್ನು ಅಧಮರಲ್ಲಿ ಅಧಮನನ್ನಾಗಿ ಮಾಡಿದೆವು.(1)

ثُمَّ رَدَدۡنَٰهُ أَسۡفَلَ سَٰفِلِينَ ٥

6. ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರ ಹೊರತು. ಆದರೆ ಅವರಿಗೆ ನಿಂತುಹೋಗದ ಪ್ರತಿಫಲವಿರುವುದು.

إِلَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ فَلَهُمۡ أَجۡرٌ غَيۡرُ مَمۡنُونٖ ٦

7. ಹೀಗಿರುವಾಗ (ಓ ಪ್ರವಾದಿಯವರೇ!) ಇದರ ಬಳಿಕವೂ (ಪರಲೋಕದ) ಪ್ರತಿಫಲ ಕ್ರಮದ ವಿಷಯದಲ್ಲಿ ತಮ್ಮನ್ನು ನಿಷೇಧಿಸಲು ಅವರಿಗಿರುವ ಸಮರ್ಥನೆಯಾದರೂ ಏನು?

فَمَا يُكَذِّبُكَ بَعۡدُ بِٱلدِّينِ ٧

8. ಅಲ್ಲಾಹು ತೀರ್ಪುಗಾರರಲ್ಲೇ ಅತಿದೊಡ್ಡ ತೀರ್ಪುಗಾರನಲ್ಲವೇ?

أَلَيۡسَ ٱللَّهُ بِأَحۡكَمِ ٱلۡحَٰكِمِينَ ٨

---

1 ಇತರ ಯಾವುದೇ ಜೀವಿಗೂ ಸಾಧಿಸಲು ಸಾಧ್ಯವಾಗದ ಅನೇಕ ಸಾಧನೆಗಳನ್ನು ಮಾಡುವ ವಿಧದಲ್ಲಿರುವ ಸವಿಶೇಷ ರಚನೆಯೊಂದಿಗೆ ಅಲ್ಲಾಹು ಮನುಷ್ಯನನ್ನು ಸೃಷ್ಟಿಸಿದ್ದಾನೆ. ಇತರ ಯಾವುದೇ ಜೀವಿಗೂ ಸಾಧಿಸಲು ಸಾಧ್ಯವಾಗದ ಅತ್ಯಂತ ದುಷ್ಟ ಮತ್ತು ನಿಕೃಷ್ಟ ಸ್ಥಿತಿಗೆ ಅಧಃಪತನಗೊಳ್ಳುವ ಸಾಧ್ಯತೆಯನ್ನೂ ಅಲ್ಲಾಹು ಮನುಷ್ಯ ರಚನೆಯಲ್ಲಿ ಒಳಪಡಿಸಿದ್ದಾನೆ. ಔನ್ನತ್ಯ ಮತ್ತು ಅಧಃಪತನದೆಡೆಗೆ ಸಾಗಿಸುವ ಜೀವನ ಕ್ರಮಗಳು ಯಾವುವು ಎಂಬುದನ್ನು ಸಹ ಅವನು ಮನುಷ್ಯನಿಗೆ ತಿಳಿಸಿಕೊಟ್ಟಿದ್ದಾನೆ.

## ಅಲ್‌ಅಲಕ್ (ರಕ್ತಪಿಂಡ)

## سُورَةُ العَلَقِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 19

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

**1.** ಸೃಷ್ಟಿಸಿರುವ ತಮ್ಮ ರಬ್‌ನ ನಾಮದಿಂದ ಓದಿರಿ.[1]

**2.** ಅವನು ಮನುಷ್ಯನನ್ನು ರಕ್ತಪಿಂಡದಿಂದ ಸೃಷ್ಟಿಸಿರುವನು.

**3-4.** ತಾವು ಓದಿರಿ. ಲೇಖನಿಯ ಮೂಲಕ ಕಲಿಸಿಕೊಟ್ಟ ತಮ್ಮ ರಬ್ ಅತ್ಯಧಿಕ ಔದಾರ್ಯವುಳ್ಳವನಾಗಿರುವನು.

**5.** ಅವನು ಮನುಷ್ಯನಿಗೆ ಅರಿವಿಲ್ಲದಿರುವುದನ್ನು ಅವನು ಕಲಿಸಿಕೊಟ್ಟಿರುವನು.[2]

**6-7.** ನಿಸ್ಸಂದೇಹವಾಗಿಯೂ, ಮನುಷ್ಯನು ಸ್ವತಃ ತನ್ನನ್ನು ಸ್ವಯಂ ಪರ್ಯಾಪ್ತನಾಗಿ ಕಂಡಿರುವುದರಿಂದ ಅವನು ಧಿಕ್ಕಾರಿಯಾಗಿ ಬಿಟ್ಟಿರುವನು.[3]

**8.** ಖಂಡಿತವಾಗಿಯೂ ಮರಳುವಿಕೆಯು ತಮ್ಮ ರಬ್‌ನೆಡೆಗೇ ಆಗಿದೆ.

**9-10.** ಒಬ್ಬ ದಾಸನು ನಮಾಝ್ ಮಾಡುವಾಗ ಅವನನ್ನು ತಡೆಯುವವನನ್ನು ತಾವು ಕಂಡಿರುವಿರಾ?

بِسۡمِ ٱللَّهِ ٱلرَّحۡمَٰنِ ٱلرَّحِيمِ

ٱقۡرَأۡ بِٱسۡمِ رَبِّكَ ٱلَّذِي خَلَقَ ١

خَلَقَ ٱلۡإِنسَٰنَ مِنۡ عَلَقٍ ٢

ٱقۡرَأۡ وَرَبُّكَ ٱلۡأَكۡرَمُ ٣ ٱلَّذِي عَلَّمَ بِٱلۡقَلَمِ ٤

عَلَّمَ ٱلۡإِنسَٰنَ مَا لَمۡ يَعۡلَمۡ ٥

كَلَّآ إِنَّ ٱلۡإِنسَٰنَ لَيَطۡغَىٰٓ ٦ أَن رَّءَاهُ ٱسۡتَغۡنَىٰٓ ٧

إِنَّ إِلَىٰ رَبِّكَ ٱلرُّجۡعَىٰٓ ٨

أَرَءَيۡتَ ٱلَّذِي يَنۡهَىٰ ٩ عَبۡدًا إِذَا صَلَّىٰٓ ١٠

---

1 ಮುಹಮ್ಮದ್(ﷺ)ರಿಗೆ ಮೊಟ್ಟಮೊದಲು ಅವತೀರ್ಣಗೊಂಡ ದಿವ್ಯ ಸಂದೇಶವು ಈ ಅಧ್ಯಾಯದ ಮೊದಲ ಐದು ಸೂಕ್ತಿಗಳಾಗಿವೆ. ಮಕ್ಕಾದಲ್ಲಿರುವ ಹಿರಾ ಗುಹೆಯಲ್ಲಿ ಜಿಬ್ರೀಲ್(عَلَيْهِ السَّلَامُ)ಎಂಬ ಮಲಕ್ ಇದನ್ನು ಓದಿಕೊಟ್ಟರು.

2 ವಿಚಾರ ಸೃಷ್ಟಿಗಾಗಿ ಲೇಖನಿಯ ಮೂಲಕವಿರುವ ಬರವಣಿಗೆಯನ್ನು ಒಂದು ಉಪಾಧಿಯಾಗಿ ಮಾಡಿಕೊಂಡ ಏಕೈಕ ಜೀವಿ ಮನುಷ್ಯನಾಗಿದ್ದಾನೆ. ಜ್ಞಾನ ಸಂಗ್ರಹಗಳ ಮೂಲಕ ಮನುಷ್ಯ ತಲೆಮಾರುಗಳನ್ನು ಸಂಸ್ಕೃತಿಯ ಮತ್ತು ನಾಗರಿಕತೆಯ ಹಕ್ಕುದಾರರನ್ನಾಗಿ ಮಾಡಿದ್ದು ಅಕ್ಷರ ಜ್ಞಾನವಾಗಿತ್ತು.

3 ಧಿಕ್ಕಾರ ಮತ್ತು ದಾರ್ಷ್ಟ್ಯತನವು ಉದ್ಭವವಾಗುವುದು ತನಗೆ ಯಾರ ಆಶ್ರಯವೂ ಬೇಕಾಗಿಲ್ಲ ಮತ್ತು ತಾನು ಯಾರನ್ನೂ ಭಯಪಡಬೇಕಾಗಿಲ್ಲ ಎಂಬ ಭಾವನೆಯಿಂದಾಗಿದೆ. ಚಿಕ್ಕದಾದ ಮತ್ತು ದೊಡ್ಡದಾದ ಎಲ್ಲ ವಿಷಯಗಳಲ್ಲೂ ತಾನು ಅಲ್ಲಾಹುವನ್ನು ಆಶ್ರಯಿಸಿ ಬದುಕುತ್ತಿದ್ದೇನೆ ಮತ್ತು ಅವನ ಸನ್ನಿಧಿಗೆ ಮರಳಿ ಹೋಗುವವನಾಗಿದ್ದೇನೆ ಎಂಬ ಪ್ರಜ್ಞೆ ಸತ್ಯವಿಶ್ವಾಸಿಯನ್ನು ವಿನಮ್ರನನ್ನಾಗಿಯೂ ಆರ್ದ್ರನನ್ನಾಗಿಯೂ ಮಾಡುತ್ತದೆ.

أَرَءَيْتَ إِن كَانَ عَلَى ٱلْهُدَىٰٓ ﴿١١﴾ أَوْ أَمَرَ بِٱلتَّقْوَىٰٓ ﴿١٢﴾

**11-12.** ಅವನು ಸನ್ಮಾರ್ಗದಲ್ಲಾಗಿದ್ದರೆ ಅಥವಾ ಭಯಭಕ್ತಿ ಪಾಲಿಸುವಂತೆ ಆದೇಶಿಸುತ್ತಿದ್ದರೆ[1] (ಅವನ ಸ್ಥಿತಿ ಏನಾಗಿರಬಹುದೆಂದು) ತಾವು ಕಂಡಿರುವಿರಾ?

أَرَءَيْتَ إِن كَذَّبَ وَتَوَلَّىٰٓ ﴿١٣﴾

**13.** ಅವನು (ತಡೆಯುವವನು) ನಿಷೇಧಿಸಿದರೆ ಮತ್ತು ವಿಮುಖನಾದರೆ (ಅವನ ಸ್ಥಿತಿ ಏನಾಗಿರಬಹುದೆಂದು) ತಾವು ಕಂಡಿರುವಿರಾ?

أَلَمْ يَعْلَم بِأَنَّ ٱللَّهَ يَرَىٰ ﴿١٤﴾

**14.** ಅಲ್ಲಾಹು ಕಾಣುತ್ತಿರುವನೆಂಬುದನ್ನು ಅವನು ಅರಿಯಲಾರನೇ?[2]

كَلَّا لَئِن لَّمْ يَنتَهِ لَنَسْفَعًۢا بِٱلنَّاصِيَةِ ﴿١٥﴾

**15.** ನಿಸ್ಸಂದೇಹವಾಗಿಯೂ, ಅವನು ನಿಲ್ಲಿಸದಿದ್ದರೆ ಖಂಡಿತವಾಗಿಯೂ ನಾವು ಆ ಮುಂದಲೆಯನ್ನು ಹಿಡಿದು ಎಳೆಯುವೆವು.

نَاصِيَةٍ كَٰذِبَةٍ خَاطِئَةٍ ﴿١٦﴾

**16.** ಸುಳ್ಳು ನುಡಿಯುವ, ಪಾಪವೆಸಗುವ ಮುಂದಲೆಯನ್ನು.

فَلْيَدْعُ نَادِيَهُۥ ﴿١٧﴾

**17.** ತರುವಾಯ ಅವನು ತನ್ನ ಸಭೆಯಲ್ಲಿರುವವರನ್ನು ಕರೆಯಲಿ.

سَنَدْعُ ٱلزَّبَانِيَةَ ﴿١٨﴾

**18.** ನಾವು ಝಬಾನಿಯಃ(ಶಿಕ್ಷೆ ಜಾರಿಗೊಳಿಸುವ ಮಲಕ್)ಗಳನ್ನು ಕರೆಯುವೆವು.

كَلَّا لَا تُطِعْهُ وَٱسْجُدْ وَٱقْتَرِب ۩ ﴿١٩﴾

**19.** ನಿಸ್ಸಂದೇಹವಾಗಿಯೂ, ತಾವು ಅವನನ್ನು ಅನುಸರಿಸದಿರಿ. ತಾವು ಸಾಷ್ಟಾಂಗವೆರಗಿರಿ ಮತ್ತು ಸಾಮೀಪ್ಯವನ್ನು ಗಳಿಸಿರಿ.

---

1 ಮುಸ್ಲಿಮ್ ವರದಿ ಮಾಡಿದ ಹದೀಸೊಂದರಲ್ಲಿರುವಂತೆ ಪ್ರವಾದಿ(ﷺ)ರವರು ನಮಾಝ್ ಮಾಡುವುದನ್ನು ವಿರೋಧಿಸಲು ಮತ್ತು ತಡೆಯಲು ಯತ್ನಿಸಿದ ಅಬೂಜಹಲನ ಕುರಿತು ಈ ಸೂಕ್ತಿಯಲ್ಲಿ ಸೂಚಿಸಲಾಗಿದೆ. ಪ್ರಾರ್ಥನೆ ಮತ್ತು ಸತ್ಕರ್ಮಗೈಯವುದನ್ನು ತಡೆಯುವ ಎಲ್ಲರಿಗೂ ಇದು ಅನ್ವಯವಾಗುತ್ತದೆ. ಅಬೂ ಜಹಲ್‌ಗಾಗಲಿ ಅಥವಾ ಅವನ ಸಂಗಡಿಗರಿಗಾಗಲಿ ತೊಂದರೆ ಮಾಡುವ ಯಾವ ಕೃತ್ಯವನ್ನೂ ಪ್ರವಾದಿ(ﷺ) ರವರು ಮಾಡಿರಲಿಲ್ಲ. ಆದರೂ ಅಬೂಜಹಲ್ ಮತ್ತಿತರರು ತಮ್ಮ ಸಂಪ್ರದಾಯಿಕ ಧರ್ಮವನ್ನು ಪ್ರವಾದಿ(ﷺ)ರವರು ನಾಶ ಮಾಡಲು ಹವಣಿಸುತ್ತಿದ್ದಾರೆಂದು ಆರೋಪಿಸಿ ಅವರನ್ನು ವಿರೋಧಿಸುತ್ತಿದ್ದರು. ಅವರ ಆರೋಪ ಮತ್ತು ನಿಲುವಿಗೆ ವಿರುದ್ಧವಾಗಿ ಪ್ರವಾದಿ(ﷺ)ರವರು ಸನ್ಮಾರ್ಗಿಯೂ ಧರ್ಮಿಷ್ಠರೂ ಆಗಿದ್ದರೆ ಅವರ ಸ್ಥಿತಿ ಎಷ್ಟು ಶೋಚನೀಯವಾಗಿರಬಹುದು ಎಂದು ಅಲ್ಲಾಹು ಇಲ್ಲಿ ಕೇಳುತ್ತಿದ್ದಾನೆ.

2 ಸ್ವಂತ ಧರ್ಮವನ್ನು ಸಂರಕ್ಷಿಸುವ ಭಾವನೆಯಲ್ಲಿ ಅಬೂ ಜಹಲ್ ಮಾಡುವುದು ವಾಸ್ತವಿಕವಾಗಿ ಸತ್ಯನಿಷೇಧ ಮತ್ತು ಸತ್ಯದೊಂದಿಗಿರುವ ಅವಗಣನೆಯಾಗಿದ್ದರೆ ಅವನ ಸ್ಥಿತಿ ಎಷ್ಟು ಶೋಚನೀಯವಾಗಿರಬಹುದೆಂದು ಅವನು ಚಿಂತಿಸುವುದಿಲ್ಲವೇ ಎಂದು ಅಲ್ಲಾಹು ಕೇಳುತ್ತಾನೆ.

# ಅಲ್‌ಕದ್ರ್ (ನಿರ್ಣಯ)

سُورَةُ القَدْرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 5

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಖಂಡಿತವಾಗಿಯೂ ನಾವು ಇದನ್ನು (ಕುರ್‌ಆನನ್ನು) ನಿರ್ಣಯದ ರಾತ್ರಿಯಲ್ಲಿ(1) ಅವತೀರ್ಣಗೊಳಿಸಿರುವೆವು.

إِنَّآ أَنزَلۡنَٰهُ فِي لَيۡلَةِ ٱلۡقَدۡرِ ١

2. ನಿರ್ಣಯದ ರಾತ್ರಿ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

وَمَآ أَدۡرَىٰكَ مَا لَيۡلَةُ ٱلۡقَدۡرِ ٢

3. ನಿರ್ಣಯದ ರಾತ್ರಿಯು ಸಾವಿರ ಮಾಸಗಳಿಗಿಂತಲೂ ಶ್ರೇಷ್ಠವಾಗಿದೆ.

لَيۡلَةُ ٱلۡقَدۡرِ خَيۡرٞ مِّنۡ أَلۡفِ شَهۡرٖ ٣

4. ಮಲಕ್‌ಗಳು ಮತ್ತು ಆತ್ಮವು(2) ಅವರ ಪ್ರಭುವಿನ ಎಲ್ಲ ವಿಷಯಗಳಿಗೆ ಸಂಬಂಧಿಸಿದ ಅಪ್ಪಣೆಯೊಂದಿಗೆ ಆ ರಾತ್ರಿಯಲ್ಲಿ ಇಳಿದು ಬರುವುವು.

تَنَزَّلُ ٱلۡمَلَٰٓئِكَةُ وَٱلرُّوحُ فِيهَا بِإِذۡنِ رَبِّهِم مِّن كُلِّ أَمۡرٖ ٤

5. ಪ್ರಭಾತೋದಯದ ತನಕ ಅದು (ಆ ರಾತ್ರಿಯು) ಶಾಂತಿಯಾಗಿರುವುದು.

سَلَٰمٌ هِيَ حَتَّىٰ مَطۡلَعِ ٱلۡفَجۡرِ ٥

---

1 ಪವಿತ್ರ ಕುರ್‌ಆನ್ ಅವತೀರ್ಣಗೊಂಡ ಅಥವಾ ಅವತೀರ್ಣಾರಂಭಗೊಂಡ ರಾತ್ರಿಯನ್ನು ಸೂರಃ ಅದ್ದುಖಾನ್‌ನಲ್ಲಿ ಲೈಲುತುಲ್ ಮುಬಾರಕಃ ಎನ್ನಲಾಗಿದೆ. ಇಲ್ಲಿ ಅದನ್ನು ಲೈಲತುಲ್ ಕದ್ರ್ ಎನ್ನಲಾಗಿದೆ. ಕದ್ರ್ ಎಂಬ ಪದಕ್ಕೆ ನಿರ್ಣಯ, ಮಹತ್ವ ಇತ್ಯಾದಿ ಅರ್ಥಗಳಿವೆ. ಪವಿತ್ರ ಕುರ್‌ಆನಿನ ಅವತೀರ್ಣವು ಮಾನವ ಚರಿತ್ರೆಯಲ್ಲೇ ಒಂದು ಪ್ರಮುಖ ತಿರುವಾಗಿದೆ. ಸಂಪೂರ್ಣ ಮಾನವ ಕುಲಕ್ಕೆ ಒಂದು ಮಾರ್ಗದರ್ಶಿಯಾಗಿ ಕುರ್‌ಆನ್ ಅವತೀರ್ಣಗೊಂಡ ರಾತ್ರಿಗೆ ಇತರ ರಾತ್ರಿಗಳಿಗಿಲ್ಲದ ಮಹತ್ವವನ್ನು ಅಲ್ಲಾಹು ನೀಡಿದ್ದಾನೆ. ಈ ರಾತ್ರಿ ರಮದಾನ್ ತಿಂಗಳಲ್ಲಾಗಿದೆಯೆಂದು ಕುರ್‌ಆನಿನ 2:185 ನೇ ಸೂಕ್ತಿಯಿಂದ ಮನದಟ್ಟು ಮಾಡಬಹುದು. ಅದು ರಮದಾನ್ ತಿಂಗಳ ಕೊನೆಯ ಹತ್ತು ರಾತ್ರಿಗಳಲ್ಲಿ ಒಂದಾಗಿದೆಯೆಂದು ಹದೀಸ್‌ಗಳಲ್ಲಿ ಹೇಳಲಾಗಿದೆ.

2 ಇಲ್ಲಿ ರೂಹ್ (ಆತ್ಮ) ಎಂಬ ಪದದಿಂದ ಉದ್ದೇಶಿಸಲಾಗಿರುವುದು ಜಿಬ್ರೀಲ್ (عَلَيۡهِ ٱلسَّلَامُ) ಆಗಿದೆಯೆಂಬುದು ಪ್ರಬಲಾಭಿಪ್ರಾಯವಿದೆ.

## ಅಲ್‌ಬಯ್ಯಿನಃ (ಸ್ಪಷ್ಟ ಪುರಾವೆ)

## سُورَةُ البَيِّنَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 8

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಗ್ರಂಥದವರಲ್ಲಿ ಮತ್ತು ಬಹುದೇವವಿಶ್ವಾಸಿಗಳಲ್ಲಿ ಸೇರಿದ ಸತ್ಯನಿಷೇಧಿಗಳು ಸ್ಪಷ್ಟವಾದ ಪುರಾವೆ ತಮ್ಮ ಬಳಿಗೆ ಬರುವ ತನಕ (ಸತ್ಯನಿಷೇಧದಿಂದ) ಬೇರ್ಪಡುವವರಾಗಿರಲಿಲ್ಲ.

لَمۡ يَكُنِ ٱلَّذِينَ كَفَرُواْ مِنۡ أَهۡلِ ٱلۡكِتَٰبِ وَٱلۡمُشۡرِكِينَ مُنفَكِّينَ حَتَّىٰ تَأۡتِيَهُمُ ٱلۡبَيِّنَةُ ١

2-3. ಅಂದರೆ ನೇರವಾದ ದಾಖಲೆಗಳಿರುವ ಪರಿಶುದ್ಧ ನೀಡಲಾದ ಪುಟಗಳನ್ನು ಓದಿಕೊಡುವ ಅಲ್ಲಾಹುವಿನ ವತಿಯ ಒಬ್ಬ ಸಂದೇಶವಾಹಕರು (ಬರುವ ತನಕ).

رَسُولٞ مِّنَ ٱللَّهِ يَتۡلُواْ صُحُفٗا مُّطَهَّرَةٗ ٢ فِيهَا كُتُبٞ قَيِّمَةٞ ٣

4. ಗ್ರಂಥ ನೀಡಲಾದವರು ತಮ್ಮ ಬಳಿಗೆ ಸ್ಪಷ್ಟವಾದ ಪುರಾವೆಯು ಬಂದ ಬಳಿಕವೇ ಹೊರತು ಭಿನ್ನರಾಗಿರಲಿಲ್ಲ.[1]

وَمَا تَفَرَّقَ ٱلَّذِينَ أُوتُواْ ٱلۡكِتَٰبَ إِلَّا مِنۢ بَعۡدِ مَا جَآءَتۡهُمُ ٱلۡبَيِّنَةُ ٤

5. ಶರಣಾಗತಿಯನ್ನು ಅಲ್ಲಾಹುವಿಗೆ ಮಾತ್ರ ಸಮರ್ಪಿಸಿ, ಋಜುಮನಸ್ಕರಾಗಿರುತ್ತಾ ಅವನನ್ನು ಆರಾಧಿಸಲು, ನಮಾಝ್ ಸಂಸ್ಥಾಪಿಸಲು ಮತ್ತು ಝಕಾತ್ ನೀಡಲು ಹೊರತು ಅವರೊಂದಿಗೆ ಇನ್ನೇನೂ ಆದೇಶಿಸಲಾಗಿಲ್ಲ. ನೇರವಾದ ಧರ್ಮವು ಅದೇ ಆಗಿದೆ.

وَمَآ أُمِرُوٓاْ إِلَّا لِيَعۡبُدُواْ ٱللَّهَ مُخۡلِصِينَ لَهُ ٱلدِّينَ حُنَفَآءَ وَيُقِيمُواْ ٱلصَّلَوٰةَ وَيُؤۡتُواْ ٱلزَّكَوٰةَۚ وَذَٰلِكَ دِينُ ٱلۡقَيِّمَةِ ٥

6. ಖಂಡಿತವಾಗಿಯೂ ಗ್ರಂಥ ನೀಡಲಾದವರಲ್ಲಿ ಮತ್ತು ಬಹುದೇವವಿಶ್ವಾಸಿಗಳಲ್ಲಿ ಸೇರಿದ ಸತ್ಯನಿಷೇಧಿಗಳು ನರಕಾಗ್ನಿಯಲ್ಲಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅವರು ಸೃಷ್ಟಿಗಳಲ್ಲೇ ನಿಕೃಷ್ಟರಾಗಿರುವರು.

إِنَّ ٱلَّذِينَ كَفَرُواْ مِنۡ أَهۡلِ ٱلۡكِتَٰبِ وَٱلۡمُشۡرِكِينَ فِي نَارِ جَهَنَّمَ خَٰلِدِينَ فِيهَآۚ أُوْلَٰٓئِكَ هُمۡ شَرُّ ٱلۡبَرِيَّةِ ٦

1 ಗ್ರಂಥ ನೀಡಲಾದವರು ಪರಸ್ಪರ ತಮ್ಮಲ್ಲಿ ಭಿನ್ನಾಭಿಪ್ರಾಯ ತಾಳಿರುವುದು ಪುರಾವೆ ಲಭಿಸದ ಕಾರಣದಿಂದಲ್ಲ. ಬದಲಾಗಿ ಅವರ ಮಧ್ಯೆ ಇದ್ದ ಹಗೆತನ ಮತ್ತು ಹಠಮಾರಿತನದಿಂದಾಗಿತ್ತು.

7. ಖಂಡಿತವಾಗಿಯೂ ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರು ಸೃಷ್ಟಿಗಳಲ್ಲೇ ಉತ್ತಮರಾಗಿರುವರು.

8. ಅವರಿಗೆ ತಮ್ಮ ರಬ್‌ನ ಬಳಿಯಿರುವ ಪ್ರತಿಫಲವು ತಳಭಾಗದಿಂದ ನದಿಗಳು ಹರಿಯುವ, ಶಾಶ್ವತವಾಸಕ್ಕಿರುವ ಸ್ವರ್ಗೋದ್ಯಾನಗಳಾಗಿವೆ. ಅವರು ಅದರಲ್ಲಿ ಎಂದೆಂದಿಗೂ ಶಾಶ್ವತವಾಗಿ ವಾಸಿಸುವರು. ಅಲ್ಲಾಹು ಅವರ ಬಗ್ಗೆ ಸಂತೃಪ್ತನಾಗಿರುವನು ಮತ್ತು ಅವರು ಅವನ (ಅಲ್ಲಾಹುವಿನ) ಬಗ್ಗೆ ಸಂತೃಪ್ತರಾಗಿರುವರು. ಇದು ಯಾರು ತನ್ನ ರಬ್ಬನ್ನು ಭಯಪಡುವನೋ ಅವನಿಗಿರುವುದಾಗಿದೆ.

إِنَّ ٱلَّذِينَ ءَامَنُواْ وَعَمِلُواْ ٱلصَّـٰلِحَـٰتِ
أُوْلَـٰٓئِكَ هُمۡ خَيۡرُ ٱلۡبَرِيَّةِ ٧

جَزَآؤُهُمۡ عِندَ رَبِّهِمۡ جَنَّـٰتُ عَدۡنٖ تَجۡرِي
مِن تَحۡتِهَا ٱلۡأَنۡهَٰرُ خَٰلِدِينَ فِيهَآ أَبَدٗاۖ
رَّضِيَ ٱللَّهُ عَنۡهُمۡ وَرَضُواْ عَنۡهُۚ ذَٰلِكَ لِمَنۡ
خَشِيَ رَبَّهُۥ ٨

## ಅಝ್ಝಿಲ್‌ಝಾಲ್ (ಕಂಪನ)

## سُورَةُ الزَّلۡزَلَةِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 8

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಭೂಮಿಯನ್ನು ಕಂಪಿಸಲಾಗುವಾಗ; ಅದರ ಆ ಭಯಾನಕವಾದ ಕಂಪನ.

إِذَا زُلۡزِلَتِ ٱلۡأَرۡضُ زِلۡزَالَهَا ١

2-3. ಭೂಮಿಯು ತನ್ನ ಭಾರಗಳನ್ನು ಹೊರತಳ್ಳುವಾಗ ಮತ್ತು 'ಅದಕ್ಕೇನಾಯಿತು?' ಎಂದು ಮನುಷ್ಯನು ಹೇಳುವಾಗ.(1)

وَأَخۡرَجَتِ ٱلۡأَرۡضُ أَثۡقَالَهَا ٢ وَقَالَ ٱلۡإِنسَٰنُ مَا لَهَا ٣

4. ಆ ದಿನದಂದು ಅದು (ಭೂಮಿಯು) ತನ್ನ ವೃತ್ತಾಂತಗಳನ್ನು ತಿಳಿಸಿಕೊಡುವುದು.

يَوۡمَئِذٖ تُحَدِّثُ أَخۡبَارَهَا ٤

5. ತಮ್ಮ ರಬ್ ಅದಕ್ಕೆ ಸಂದೇಶ ನೀಡಿದ ನಿಮಿತ್ತ.

بِأَنَّ رَبَّكَ أَوۡحَىٰ لَهَا ٥

6. ಅಂದು ಮನುಷ್ಯರಿಗೆ ಅವರ ಕರ್ಮಗಳನ್ನು ತೋರಿಸಲಾಗುವುದಕ್ಕಾಗಿ ಅವರು ಹಲವು ಗುಂಪುಗಳಾಗಿ ಹೊರಡುವರು.

يَوۡمَئِذٖ يَصۡدُرُ ٱلنَّاسُ أَشۡتَاتٗا لِّيُرَوۡاْ أَعۡمَٰلَهُمۡ ٦

7. ಆಗ ಯಾರು ಒಂದು ಅಣುವಿನ ತೂಕದಷ್ಟು ಒಳಿತು ಮಾಡಿರುವನೋ ಅವನು ಅದನ್ನು ಕಾಣುವನು.

فَمَن يَعۡمَلۡ مِثۡقَالَ ذَرَّةٍ خَيۡرٗا يَرَهُۥ ٧

8. ಯಾರು ಒಂದು ಅಣುವಿನ ತೂಕದಷ್ಟು ಕೆಡುಕು ಮಾಡಿರುವನೋ ಅವನು ಅದನ್ನು ಕಾಣುವನು.(2)

وَمَن يَعۡمَلۡ مِثۡقَالَ ذَرَّةٖ شَرّٗا يَرَهُۥ ٨

---

1 ಅಂತ್ಯದಿನದಂದು ಜರಗುವ ಘಟನೆಗಳ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

2 ಮನುಷ್ಯನು ಇಹಲೋಕದಲ್ಲಿ ಮಾಡಿದ ಅತಿಕ್ಷುಲ್ಲಕ ಕರ್ಮಗಳಿಗೂ ಅಲ್ಲಾಹು ಪರಲೋಕದಲ್ಲಿ ನಿಖರವಾದ ಪ್ರತಿಫಲವನ್ನು ನೀಡುವನು ಎಂದರ್ಥ.

## ಅಲ್‌ಆದಿಯಾತ್ (ಓಡುವವುಗಳು)

## سُورَةُ العَادِيَاتِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 11

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

وَٱلۡعَٰدِيَٰتِ ضَبۡحٗا ١ فَٱلۡمُورِيَٰتِ
قَدۡحٗا ٢ فَٱلۡمُغِيرَٰتِ صُبۡحٗا ٣ فَأَثَرۡنَ
بِهِۦ نَقۡعٗا ٤ فَوَسَطۡنَ بِهِۦ جَمۡعًا ٥

**1-5.** ಏದುಸಿರು ಬಿಡುತ್ತಾ ಓಡುವವುಗಳೂ, (ಗೊರಸನ್ನು ಕಲ್ಲಿಗೆ) ತಾಗಿಸಿ ಬೆಂಕಿಕಿಡಿ ಹಾರಿಸುವವುಗಳೂ, ತರುವಾಯ ಪ್ರಭಾತದ ವೇಳೆ ಆಕ್ರಮಣಗೈಯ್ಯುವವುಗಳೂ, ಆಗ ಧೂಳನ್ನು ಹರಡಿಸುವವುಗಳೂ, ತನ್ಮೂಲಕ (ಶತ್ರು) ಗುಂಪಿನ ಮಧ್ಯೆ ನುಗ್ಗುವವುಗಳೂ ಆಗಿರುವ (ಕುದುರೆಗಳ) ಮೇಲಾಣೆ.

إِنَّ ٱلۡإِنسَٰنَ لِرَبِّهِۦ لَكَنُودٞ ٦

**6.** ಖಂಡಿತವಾಗಿಯೂ ಮನುಷ್ಯನು ತನ್ನ ರಬ್‌ಗೆ ಕೃತಘ್ನತೆ ತೋರುವವನೇ ಆಗಿರುವನು.

وَإِنَّهُۥ عَلَىٰ ذَٰلِكَ لَشَهِيدٞ ٧

**7.** ಖಂಡಿತವಾಗಿಯೂ ಅವನು ಅದಕ್ಕೆ ಸಾಕ್ಷ್ಯ ವಹಿಸುವವನಾಗಿರುವನು.

وَإِنَّهُۥ لِحُبِّ ٱلۡخَيۡرِ لَشَدِيدٌ ٨

**8.** ಖಂಡಿತವಾಗಿಯೂ ಅವನು ಸಂಪತ್ತಿನೊಂದಿಗೆ ಅತೀವ ಪ್ರೀತಿಯುಳ್ಳವನಾಗಿರುವನು.

۞ أَفَلَا يَعۡلَمُ إِذَا بُعۡثِرَ مَا فِي ٱلۡقُبُورِ ٩
وَحُصِّلَ مَا فِي ٱلصُّدُورِ ١٠ إِنَّ رَبَّهُم بِهِمۡ
يَوۡمَئِذٖ لَّخَبِيرُۢ ١١

**9-11.** ಆದರೆ ಅವನು ಅರಿಯುವುದಿಲ್ಲವೇ? ಗೋರಿಗಳಲ್ಲಿರುವುದನ್ನು ಬುಡಮೇಲುಗೊಳಿಸಿ ಹೊರತರಲಾದರೆ ಮತ್ತು ಹೃದಯಗಳಲ್ಲಿರುವುದನ್ನು ಬಹಿರಂಗಪಡಿಸಲಾದರೆ[1] ಖಂಡಿತವಾಗಿಯೂ ಅವರ ರಬ್ ಆ ದಿನದಂದು ಅವರ ಕುರಿತು ಸೂಕ್ಷ್ಮವಾಗಿ ಅರಿಯುವವನೇ ಆಗಿರುವನು.

---

1 ಪುನರುತ್ಥಾನ ದಿನದಂದು ಯಾರಿಗೂ ಕೂಡ ಮನಸ್ಸಿನಲ್ಲಿ ಏನನ್ನೂ ಬಚ್ಚಿಡಲು ಸಾಧ್ಯವಿಲ್ಲ. ಪ್ರತಿಯೊಬ್ಬ ವ್ಯಕ್ತಿ ಮಾಡಿದ ಮತ್ತು ಹೇಳಿದ ವಿಷಯಗಳಿಗೆ ಅವನ ಅಂಗಾಂಗಗಳು ಸ್ವತಃ ಸಾಕ್ಷಿವಹಿಸಲಿವೆಯೆಂದು ಕುರ್‌ಆನ್ 36:65 ಮತ್ತು 41:20ರಲ್ಲಿ ಹೇಳಲಾಗಿದೆ.

## ಅಲ್‌ಕಾರಿಅಃ (ಭಯಾನಕ ಘಟನೆ)

## سُورَةُ القَارِعَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 11

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

1. ಭಯಾನಕವಾದ ಆ ಘಟನೆ!

2. ಭಯಾನಕವಾದ ಆ ಘಟನೆ ಎಂದರೇನು?

3. ಭಯಾನಕವಾದ ಆ ಘಟನೆ ಎಂದರೇನೆಂದು ತಮಗೆ ಗೊತ್ತಿದೆಯೇ?

4-5. ಮನುಷ್ಯರು ಚದುರಿದ ಹಾತೆಗಳಂತೆಯೂ ಪರ್ವತಗಳು ಹಿಂಜಿದ ಉಣ್ಣೆಯಂತೆಯೂ ಆಗುವ ದಿನ!

6-7. ಆಗ ಯಾರ ತಕ್ಕಡಿಗಳು ಭಾರವಾಗುವುವೋ ಅವನು ಸಂತೃಪ್ತ ಬದುಕಿನಲ್ಲಿರುವನು.(1)

8-9. ಆದರೆ ಯಾರ ತಕ್ಕಡಿಗಳು ಹಗುರವಾಗುವುವೋ ಅವನ ವಾಸಸ್ಥಳವು ಹಾವಿಯಃ ಆಗಿರುವುದು.

10. ಹಾವಿಯಃ ಎಂದರೇನೆಂದು ತಮಗೆ ಗೊತ್ತಿದೆಯೇ?

11. ಅದು ತೀವ್ರ ಉಷ್ಣತೆಯ ನರಕಾಗ್ನಿಯಾಗಿದೆ.

بِسۡمِ ٱللَّهِ ٱلرَّحۡمَٰنِ ٱلرَّحِيمِ

ٱلۡقَارِعَةُ ١

مَا ٱلۡقَارِعَةُ ٢

وَمَآ أَدۡرَىٰكَ مَا ٱلۡقَارِعَةُ ٣

يَوۡمَ يَكُونُ ٱلنَّاسُ كَٱلۡفَرَاشِ
ٱلۡمَبۡثُوثِ ٤ وَتَكُونُ ٱلۡجِبَالُ كَٱلۡعِهۡنِ
ٱلۡمَنفُوشِ ٥

فَأَمَّا مَن ثَقُلَتۡ مَوَٰزِينُهُۥ ٦ فَهُوَ فِي
عِيشَةٖ رَّاضِيَةٖ ٧

وَأَمَّا مَنۡ خَفَّتۡ مَوَٰزِينُهُۥ ٨ فَأُمُّهُۥ
هَاوِيَةٞ ٩

وَمَآ أَدۡرَىٰكَ مَا هِيَهۡ ١٠

نَارٌ حَامِيَةُۢ ١١

---

1 ತಕ್ಕಡಿಯ ಸತ್ಕರ್ಮದ ತಟ್ಟೆಗಳು ಭಾರವಾದರೆ ಪರಲೋಕದಲ್ಲಿ ಸಂತೃಪ್ತ ಜೀವನ ಖಚಿತ. ಕರ್ಮಗಳ ತೂಕ ಮತ್ತು ಅದನ್ನು ತೂಗುವ ತಕ್ಕಡಿ ಅಗೋಚರ ಪ್ರಪಂಚದ ವಾಸ್ತವಿಕತೆ ಎಂಬ ನೆಲೆಯಲ್ಲಿ ಕುರ್‌ಆನ್ ನಮಗೆ ಕಲಿಸಿಕೊಡುವ ವಿಷಯವಾಗಿದೆ. ಅದರ ಬಗ್ಗೆಯಿರುವ ಮಾಹಿತಿಗಳನ್ನು ಈ ಭೌತಿಕ ಲೋಕದಲ್ಲಿ ನಮ್ಮಿಂದ ಗ್ರಹಿಸಲಾಗದು.

## ಅತ್ತಕಾಸುರ್ (ದೊಡ್ಡಸ್ತಿಕೆ ತೋರಿಸುವುದು)

سُورَةُ التَّكَاثُرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 8

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

أَلۡهَىٰكُمُ ٱلتَّكَاثُرُ ١ حَتَّىٰ زُرۡتُمُ ٱلۡمَقَابِرَ ٢

1-2. ನೀವು ಗೋರಿಗಳನ್ನು ಸಂದರ್ಶಿಸುವವರೆಗೂ ಪರಸ್ಪರ ಹಿರಿಮೆ ತೋರುವ ವಿಷಯವು ನಿಮ್ಮನ್ನು ಅಲಕ್ಷ್ಯರನ್ನಾಗಿ ಮಾಡಿದೆ.(1)

كَلَّا سَوۡفَ تَعۡلَمُونَ ٣

3. ಸಂದೇಹವೇ ಇಲ್ಲ, ನೀವು ತರುವಾಯ ಅರಿಯಲಿರುವಿರಿ.

ثُمَّ كَلَّا سَوۡفَ تَعۡلَمُونَ ٤

4. ಪುನಃ ಸಂದೇಹವೇ ಇಲ್ಲ, ನೀವು ತರುವಾಯ ಅರಿಯುವಿರಿ.

كَلَّا لَوۡ تَعۡلَمُونَ عِلۡمَ ٱلۡيَقِينِ ٥ لَتَرَوُنَّ ٱلۡجَحِيمَ ٦

5-6. ಸಂದೇಹವೇ ಇಲ್ಲ, ನೀವು ದೃಢವಾದ ಜ್ಞಾನವನ್ನು ಅರಿಯುವವರಾಗಿದ್ದರೆ ಜ್ವಲಿಸುತ್ತಿರುವ ನರಕಾಗ್ನಿಯನ್ನು ಖಂಡಿತವಾಗಿಯೂ ನೀವು ಕಾಣುವಿರಿ.

ثُمَّ لَتَرَوُنَّهَا عَيۡنَ ٱلۡيَقِينِ ٧

7. ಪುನಃ ಖಂಡಿತವಾಗಿಯೂ ನೀವು ಅದನ್ನು ದೃಢವಾಗಿ ಕಣ್ಣಾರೆ ಕಾಣುವಿರಿ.

ثُمَّ لَتُسۡـَٔلُنَّ يَوۡمَئِذٍ عَنِ ٱلنَّعِيمِ ٨

8. ತರುವಾಯ ಆ ದಿನದಂದು ಸುಖಾನುಭೂತಿಗಳ ಕುರಿತು ಖಂಡಿತವಾಗಿಯೂ ನಿಮ್ಮಲ್ಲಿ ಪ್ರಶ್ನಿಸಲಾಗುವುದು.(2)

---

1 ನೀವು ಗೋರಿಗಳನ್ನು ಸಂದರ್ಶಿಸುವವರೆಗೆ ಎಂದರೆ ನೀವು ಮೃತಪಟ್ಟು ಗೋರಿಯಲ್ಲಿ ದಫನ ಗೊಳಿಸಲಾಗುವವರೆಗೆ ಎಂದರ್ಥ. ಭೌತಿಕ ಸಾಧನೆಗಳ ಹೆಸರಲ್ಲಿರುವ ದೊಡ್ಡಸ್ತಿಕೆ ಮತ್ತು ದುರಭಿಮಾನ ನಿಮಿತ್ತ ಮನುಷ್ಯನು ಸತ್ಯ ಮತ್ತು ಧರ್ಮದ ಕುರಿತು ನಿರ್ಲಕ್ಷ್ಯನಾಗುವ ಸ್ಥಿತಿ ಮರಣದ ವರೆಗೆ ಮುಂದುವರಿಯಲಿದೆ ಎಂಬ ವಾಸ್ತವಿಕತೆಯಡೆಗೆ ಈ ಸೂಕ್ತಿಯು ಸೂಚನೆ ನೀಡುತ್ತದೆ.

2 ನಾವು ಜೀವಿಸುವ ಪ್ರತಿಯೊಂದು ನಿಮಿಷದಲ್ಲಿಯೂ ನಾವು ಅಲ್ಲಾಹುವಿನ ಅಸಂಖ್ಯ ಅನುಗ್ರಹಗಳನ್ನು ಸವಿಯುತ್ತಿದ್ದೇವೆ. ಈ ಅನುಗ್ರಹಗಳಿಗೆ ಪ್ರತಿಯಾಗಿ ನಾವೇನು ಮಾಡಿದ್ದೇವೆ ಎಂಬ ಅಲ್ಲಾಹುವಿನ ಪ್ರಶ್ನೆಗೆ ಉತ್ತರಿಸದೆ ಪಾರಾಗಲು ಸಾಧ್ಯವಾಗದು.

## ಅಲ್‌ಅಸ್ರ್ (ಕಾಲ)

## سُورَةُ العَصۡرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 3

بِسۡمِ ٱللَّهِ ٱلرَّحۡمَٰنِ ٱلرَّحِيمِ

وَٱلۡعَصۡرِ ١

إِنَّ ٱلۡإِنسَٰنَ لَفِي خُسۡرٍ ٢

إِلَّا ٱلَّذِينَ ءَامَنُواْ وَعَمِلُواْ ٱلصَّٰلِحَٰتِ
وَتَوَاصَوۡاْ بِٱلۡحَقِّ وَتَوَاصَوۡاْ بِٱلصَّبۡرِ ٣

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

1. ಕಾಲದ ಮೇಲಾಣೆ!
2. ಖಂಡಿತವಾಗಿಯೂ ಮನುಷ್ಯನು ನಷ್ಟದಲ್ಲಿಯೇ ಇರುವನು.(1)
3. ಸತ್ಯವಿಶ್ವಾಸವಿಟ್ಟವರು, ಸತ್ಕರ್ಮವೆಸಗಿದವರು, ಸತ್ಯವನ್ನು ಪಾಲಿಸಲು ಪರಸ್ಪರ ಉಪದೇಶ ಮಾಡಿದವರು ಮತ್ತು ಸಹನೆಯನ್ನು ಪಾಲಿಸಲು ಪರಸ್ಪರ ಉಪದೇಶ ಮಾಡಿದವರ ಹೊರತು.

---

1 ಜೀವನದ ಲಾಭ ನಷ್ಟಗಳ ಕುರಿತಿರುವ ಭೌತಿಕ ದೃಷ್ಟಿಕೋನವು ಎಲ್ಲ ಕಾಲದ ಮನುಷ್ಯರಿಗೂ ಸುಪರಿಚಿತವಾಗಿದೆ. ಆದರೆ ಭೌತಿಕ ಲಾಭಗಳು ಕೇವಲ ತಾತ್ಕಾಲಿಕವಾಗಿವೆ. ಆತ್ಯಂತಿಕವಾದ ನಷ್ಟದಿಂದ –ಪರಲೋಕ ಶಿಕ್ಷೆಯಿಂದ– ರಕ್ಷೆ ಹೊಂದಲು ಅದು ನಮಗೆ ಸಹಾಯಕವಾಗದು. ಸತ್ಯವಿಶ್ವಾಸ, ಸತ್ಕರ್ಮ, ಸತ್ಯ ಹಾಗೂ ಸಹನೆಯನ್ನು ಪಾಲಿಸುವುದಕ್ಕಾಗಿ ಮಾಡುವ ಉಪದೇಶ ಮಾತ್ರ ನಮ್ಮನ್ನು ಮಹಾ ನಷ್ಟದಿಂದ ಕಾಪಾಡುವುದು.

## ಅಲ್‌ಹುಮಝಃ (ಚುಚ್ಚಿ ಮಾತನಾಡುವವರು)

## سُورَةُ الهُمَزَةِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 9

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಚುಚ್ಚಿ ಮಾತನಾಡುವವನೂ, ಮೂದಲಿಸುವವನೂ ಆಗಿರುವ ಪ್ರತಿಯೊಬ್ಬನಿಗೂ ನಾಶವಿದೆ.

وَيۡلٞ لِّكُلِّ هُمَزَةٖ لُّمَزَةٍ ۝١

2. ಅಂದರೆ ಅವನು ಸಂಪತ್ತನ್ನು ಕೂಡಿಡುವವನೂ, ಅದನ್ನು ಎಣಿಸುತ್ತಿರುವವನೂ ಆಗಿರುವವನಿಗೆ.

ٱلَّذِي جَمَعَ مَالٗا وَعَدَّدَهُۥ ۝٢

3. ಅವನ ಸಂಪತ್ತು ಅವನಿಗೆ ಶಾಶ್ವತ ಬದುಕನ್ನು ನೀಡಿದೆ ಎಂದು ಅವನು ಭಾವಿಸುತ್ತಿರುವನು.

يَحۡسَبُ أَنَّ مَالَهُۥٓ أَخۡلَدَهُۥ ۝٣

4. ಸಂದೇಹವೇ ಇಲ್ಲ, ಖಂಡಿತವಾಗಿಯೂ ಅವನನ್ನು ಹುತಮಃದಲ್ಲಿ ಎಸೆಯಲಾಗುವುದು.

كَلَّاۖ لَيُنۢبَذَنَّ فِي ٱلۡحُطَمَةِ ۝٤

5. ಹುತಮಃ ಎಂದರೆ ಏನೆಂದು ತಮಗೆ ಗೊತ್ತಿದೆಯೇ?

وَمَآ أَدۡرَىٰكَ مَا ٱلۡحُطَمَةُ ۝٥

6-7. ಅದು ಹೃದಯಗಳೆಡೆಗೆ ನೆಗೆಯುವ ಹೊತ್ತಿ ಉರಿಸಲಾದ ಅಲ್ಲಾಹುವಿನ ಅಗ್ನಿಯಾಗಿದೆ.

نَارُ ٱللَّهِ ٱلۡمُوقَدَةُ ۝٦ ٱلَّتِي تَطَّلِعُ عَلَى ٱلۡأَفۡـِٔدَةِ ۝٧

8-9. ಖಂಡಿತವಾಗಿಯೂ ಅದು ಚಾಚಲಾಗಿರುವ ಸ್ತಂಭಗಳಲ್ಲಿದ್ದು ಅವರ ಮೇಲೆ ಮುಚ್ಚಿಕೊಂಡಿರುವುದು.

إِنَّهَا عَلَيۡهِم مُّؤۡصَدَةٞ ۝٨ فِي عَمَدٖ مُّمَدَّدَةِۭ ۝٩

## ಅಲ್‌ಫೀಲ್ (ಆನೆ)

## سُورَةُ الفِيلِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 5

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಆನೆಯ ಜನರೊಂದಿಗೆ ತಮ್ಮ ರಬ್ ಹೇಗೆ ವರ್ತಿಸಿದನೆಂದು ತಾವು ಕಂಡಿಲ್ಲವೇ?

أَلَمۡ تَرَ كَيۡفَ فَعَلَ رَبُّكَ بِأَصۡحَٰبِ ٱلۡفِيلِ ١

2. ಅವನು ಅವರ ತಂತ್ರವನ್ನು ಪ್ರಮಾದದಲ್ಲಾಗಿಸಲಿಲ್ಲವೇ?

أَلَمۡ يَجۡعَلۡ كَيۡدَهُمۡ فِي تَضۡلِيلٖ ٢

3-4. ಸುಟ್ಟ ಜೇಡಿಮಣ್ಣಿನ ಕಲ್ಲುಗಳನ್ನು ಅವರ ಮೇಲೆಸೆಯುವ ಗುಂಪು ಗುಂಪಾಗಿರುವ ಹಕ್ಕಿಗಳನ್ನು ಅವನು ಅವರೆಡೆಗೆ ಕಳುಹಿಸಿದನು.[1]

وَأَرۡسَلَ عَلَيۡهِمۡ طَيۡرًا أَبَابِيلَ ٣ تَرۡمِيهِم بِحِجَارَةٖ مِّن سِجِّيلٖ ٤

5. ಹಾಗೆ ಅವನು ಅವರನ್ನು ತಿಂದುಳಿದ ಹೊಟ್ಟಿನಂತಾಗಿಸಿದನು.[2]

فَجَعَلَهُمۡ كَعَصۡفٖ مَّأۡكُولِۭ ٥

---

1 ಈ ಅಧ್ಯಾಯದ ಹಿನ್ನೆಲೆ ಪ್ರವಾದಿ(ﷺ)ರವರ ಜನನಕ್ಕಿಂತ ಕೆಲವೇ ತಿಂಗಳ ಹಿಂದೆ ಸಂಭವಿಸಿದ ಒಂದು ಘಟನೆಯಾಗಿದೆ. ಅಂದು ಯಮನ್ ದೇಶವು ಇತಿಯೋಪಿಯಾ ಸಾಮ್ರಾಟನ ವಶದಲ್ಲಿತ್ತು. ಯಮನ್ ರಾಜ್ಯವನ್ನು ಅವನ ಅಧೀನದಲ್ಲಿದ್ದ ಅಬ್ರಹಃ ಎಂಬ ಅರಸನು ಆಳುತ್ತಿದ್ದನು. ಯಮನ್‌ನಲ್ಲಿ ಮಹಾ ದೇವಾಲಯವೊಂದನ್ನು ನಿರ್ಮಿಸಿ ಅದನ್ನು ಅರಬರ ತೀರ್ಥಾಟನಾ ಕೇಂದ್ರವಾಗಿಸಿ ಅವರ ಗಮನವನ್ನು ಕಅ್‌ಬಾಲಯದಿಂದ ತಿರುಗಿಸಿಬಿಡಬೇಕೆಂದು ಕ್ರೈಸ್ತನಾಗಿದ್ದ ಅಬ್ರಹಃ ಹವಣಿಸಿದ್ದನು. ಆದರೆ ಅರಬರು ಅತ್ತ ಮುಖಮಾಡದ್ದರಿಂದ ಹತಾಶನಾದ ಅಬ್ರಹಃ ಕಅ್‌ಬಾಲಯವನ್ನೇ ಕೆಡವಿ ಹಾಕಲು ಆನೆಯ ಮೇಲೇರಿ ತನ್ನ ಸೈನ್ಯದೊಂದಿಗೆ ಹೊರಟನು. ಕಅ್‌ಬಾಲಯದ ಪರಿಪಾಲಕರಾಗಿದ್ದ ಕುರೈಶರಿಗೆ ಅವನ ಮಹಾ ಸೈನ್ಯವನ್ನು ಎದುರಿಸುವ ತಾಕತ್ತಿರಲಿಲ್ಲ. ಪ್ರತಿರೋಧಿಸಲು ಸಾಧ್ಯವಾಗದ್ದರಿಂದ ಅವರು ಕೈಚೆಲ್ಲಿ ಕುಳಿತರು. ಈ ಸಂದರ್ಭ ಅಸಾಮಾನ್ಯ ಘಟನೆಯ ಮೂಲಕ ಅಲ್ಲಾಹು ಅಬ್ರಹಃನ ಸೈನ್ಯವನ್ನು ನಾಶ ಮಾಡಿದನು. ಸುಟ್ಟ ಜೇಡಿ ಮಣ್ಣಿನ ಕಲ್ಲುಗಳನ್ನು ಅವರ ಮೇಲಸೆಯಲು ಅಲ್ಲಾಹು ಹಕ್ಕಿಗಳ ಗುಂಪುಗಳನ್ನು ಕಳುಹಿಸಿದನು. ಆ ಕಲ್ಲುಗಳು ಅವರನ್ನು ನಾಶ ಮಾಡಿದವು. ಪವಿತ್ರ ಕಅ್‌ಬಾಲಯಕ್ಕೆ ಯಾವುದೇ ಹಾನಿಯೂ ಉಂಟಾಗದೆ ದಾಳಿಕೋರರು ನಾಶವಾದರು. ಮುಹಮ್ಮದ್(ﷺ)ರವರಿಗೆ ಪ್ರವಾದಿತ್ವ ಲಭಿಸಿದ ಆರಂಭಕಾಲದಲ್ಲಿ ಕುರೈಶರು ಅಬ್ರಹಃನ ಈ ನಾಶವನ್ನು ತಮ್ಮ ಇತಿಹಾಸದಲ್ಲಿ ಜರಗಿದ ಮಹಾ ಘಟನೆಯಾಗಿ ಪರಿಗಣಿಸಿದ್ದರು. ಆದರೆ ಇದರ ಸಮಗ್ರ ಮಾಹಿತಿ ಅವರಿಗಿರಲಿಲ್ಲ. ಅಲ್ಲಾಹು ತಿಳಿಸಿಕೊಟ್ಟಿರುವುದಕ್ಕಿಂತ ಹೆಚ್ಚಾಗಿ ಏನನ್ನೂ ತಿಳಿಯಲು ನಮಗೂ ಸಾಧ್ಯವಿಲ್ಲ.

2 ಇಲ್ಲಿನ ತಾತ್ಪರ್ಯವು ಹೊಲದಲ್ಲಿ ಜಾನುವಾರುಗಳು ಮೇಯ್ದು ಉಳಿದ ಹುಲ್ಲುಗಳ ಅವಶೇಷಗಳಂತೆ ಅಥವಾ ಹುಳು ತಿಂದು ನಾಶ ಮಾಡಿದ ಒಣಹುಲ್ಲಿನ ಕಿಲುಬುಗಳಂತೆಯೂ ಆಗಿರಬಹುದು.

## ಕುರೈಶ್

## سُورَةُ قُرَيْشٍ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 4

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

لِإِيلَٰفِ قُرَيۡشٍ ١ إِۦلَٰفِهِمۡ رِحۡلَةَ ٱلشِّتَآءِ وَٱلصَّيۡفِ ٢ فَلۡيَعۡبُدُواْ رَبَّ هَٰذَا ٱلۡبَيۡتِ ٣ ٱلَّذِيٓ أَطۡعَمَهُم مِّن جُوعٖ وَءَامَنَهُم مِّنۡ خَوۡفِۭ ٤

**1-4.** ಕುರೈಶ್ ಜನಾಂಗವನ್ನು ಬೆಸೆದಿರುವ ಕಾರಣದಿಂದ ಮತ್ತು ಚಳಿಗಾಲ ಹಾಗೂ ಬೇಸಿಗೆ ಕಾಲದ ಯಾತ್ರೆಯ ಮೂಲಕ ಅವರನ್ನು ಬೆಸೆದಿರುವ ಕಾರಣದಿಂದ ಈ ಭವನದ ರಬ್ಬನ್ನು –ಅವರು ಹಸಿದಿರುವಾಗ ಆಹಾರ ಒದಗಿಸಿದ ಮತ್ತು ಭಯಕ್ಕೆ ಬದಲಾಗಿ ಅವರಿಗೆ ನಿರ್ಭಯತೆಯನ್ನು ಕರುಣಿಸಿದ ರಬ್ಬನ್ನು– ಅವರು ಆರಾಧಿಸಲಿ.(1)

1 ಕುರೈಶೀ ಜನಾಂಗವು ಅರೇಬಿಯಾದ ಉನ್ನತ ವಂಶದವರಾಗಿದ್ದರು. ಈ ಜನಾಂಗಕ್ಕೆ ಸೇರಿದ ಬನೂ ಹಾಶಿಮ್ ಮನೆತನದಲ್ಲಿ ಪ್ರವಾದಿ(ﷺ)ರವರು ಜನಿಸಿದ್ದರು. ಅರಬರು ಮಕ್ಕಾ ಪಟ್ಟಣಕ್ಕೆ ಪಾವಿತ್ರ್ಯತೆ ಕಲ್ಪಿಸಿದ್ದರು. ಅಲ್ಲಿ ಯುದ್ಧ, ದಾಳಿ ಇತ್ಯಾದಿಗಳನ್ನು ಅವರು ನಿಷಿದ್ಧವೆಂದು ಸಾರಿದ್ದರು. ಆದ್ದರಿಂದಲೇ ಮಕ್ಕಾ ನಿವಾಸಿಗಳಾದ ಕುರೈಶರು ಯುದ್ಧ ಮತ್ತು ದಾಳಿಗಳಿಂದ ಸುರಕ್ಷಿತರಾಗಿದ್ದರು. ಪವಿತ್ರ ಕಅ್‌ಬಾಲಯದ ಪರಿಪಾಲಕರು ಎಂಬ ನಿಟ್ಟಿನಲ್ಲಿ ಅವರಿಗೆ ಅರೇಬಿಯಾದ್ಯಂತ ಗೌರವ ಮತ್ತು ಸ್ಥಾನಮಾನ ಲಭ್ಯವಾಗಿತ್ತು. ಆದ್ದರಿಂದಲೇ ಅವರ ವ್ಯಾಪಾರ ಯಾತ್ರೆಯು ಸುರಕ್ಷಿತ ಮತ್ತು ಲಾಭಕರವಾಗಿತ್ತು. ಅವರ ಪ್ರಮುಖ ಅನ್ನಾಧಾರ ಮಾರ್ಗವು ಬೇಸಿಗೆಯಲ್ಲಿ ಸಿರಿಯಾದತ್ತ ಮತ್ತು ಚಳಿಗಾಲದಲ್ಲಿ ಯಮನ್‌ನತ್ತ ಚಲಿಸುತ್ತಿದ್ದ ವ್ಯಾಪಾರ ಯಾತ್ರೆಯಾಗಿತ್ತು. ಹೀಗೆ ಅವರಿಗೆ ಅನೇಕ ಅನುಕೂಲತೆಗಳನ್ನು ಮಾಡಿಕೊಟ್ಟಿರುವ ಅಲ್ಲಾಹುವನ್ನು –ಕಅ್‌ಬಾಲಯದ ಒಡೆಯನನ್ನು– ಮಾತ್ರ ಆರಾಧಿಸಲು ಅವರು ಬಾಧ್ಯಸ್ತರಾಗಿದ್ದಾರೆಂದು ಅಲ್ಲಾಹು ನೆನಪಿಸುತ್ತಿದ್ದಾನೆ.

## ಅಲ್‌ಮಾಊನ್ (ಪರೋಪಕಾರಿ ವಸ್ತುಗಳು)

## سُورَةُ المَاعُونِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 7

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಧರ್ಮವನ್ನು ಸುಳ್ಳಾಗಿಸುವವನು ಯಾರೆಂದು ತಾವು ಕಂಡಿರುವಿರಾ?

أَرَءَيۡتَ ٱلَّذِي يُكَذِّبُ بِٱلدِّينِ ﴿١﴾

2-3. ಅವನು ತಬ್ಬಲಿಯನ್ನು ಅಟ್ಟುವವನು ಮತ್ತು ಬಡವನ ಅನ್ನದ ವಿಷಯದಲ್ಲಿ ಪ್ರೇರಣೆ ನೀಡದವನಾಗಿರುವನು.(1)

فَذَٰلِكَ ٱلَّذِي يَدُعُّ ٱلۡيَتِيمَ ﴿٢﴾ وَلَا يَحُضُّ
عَلَىٰ طَعَامِ ٱلۡمِسۡكِينِ ﴿٣﴾

4-7. ತಮ್ಮ ನಮಾಝ್‌ಗಳ ಬಗ್ಗೆ ಅಲಕ್ಷ್ಯರಾಗಿರುವ, ಜನರಿಗೆ ತೋರಿಸುವುದಕ್ಕಾಗಿ ಕರ್ಮವೆಸಗುವ ಮತ್ತು ಪರೋಪಕಾರಿ ವಸ್ತುಗಳನ್ನು(2) ತಡೆದಿರಿಸುವವರಾಗಿರುವ ನಮಾಝಿಗರಿಗೆ ನಾಶವಿದೆ.

فَوَيۡلٞ لِّلۡمُصَلِّينَ ﴿٤﴾ ٱلَّذِينَ هُمۡ عَن
صَلَاتِهِمۡ سَاهُونَ ﴿٥﴾ ٱلَّذِينَ هُمۡ
يُرَآءُونَ ﴿٦﴾ وَيَمۡنَعُونَ ٱلۡمَاعُونَ ﴿٧﴾

---

1 ಎಲ್ಲ ಕಾಲಗಳಲ್ಲೂ ಧರ್ಮ ನಿಷೇಧ ಮತ್ತು ಧರ್ಮನಿಷೇಧಿಗಳಿಗೆ ಬೆಂಬಲ ನೀಡುತ್ತಿರುವವರು ವಿಶ್ವಾಸವು ಹೃದಯಕ್ಕೆ ಇಳಿಯದೆ ಬಾಹ್ಯವಾಗಿ ಕೆಲವು ಧಾರ್ಮಿಕ ಆಚಾರಗಳಲ್ಲಿ ತಲ್ಲೀನರಾಗುವ ಜನರಾಗಿದ್ದಾರೆ. ಅನಾಥರ ಮತ್ತು ನಿರ್ಗತಿಕರ ರಕ್ಷಣೆಗೆ ಧಾವಿಸದೆ, ಅಸಡ್ಡೆಯೊಂದಿಗೆ ನಮಾಝ್ ಮಾಡುತ್ತಲೂ, ಚಿಕ್ಕ ಪುಟ್ಟ ಸೇವೆಗಳನ್ನು ಮಾಡಲು ಹೇಸುತ್ತಲೂ, ಭಕ್ತರ ಸೋಗು ಹಾಕುತ್ತಲೂ ಇರುವ ಕಪಟಿಗಳು ಧರ್ಮದ ವಿಶ್ವಾಸವನ್ನೇ ನಂದಿಸುವವರಾಗಿದ್ದಾರೆ.

2 ಪರೋಪಕಾರ ಮಾಡುವ ಮನಸ್ಥಿತಿಯನ್ನು ಹೊಂದಿರುವ ಜನರು ಪರಸ್ಪರ ಎರವಲು ನೀಡುವ ಗೃಹೋಪಯೋಗಿ ವಸ್ತುಗಳು.

## ಅಲ್‌ಕೌಸರ್ (ಯಥೇಷ್ಟತೆ)

## سُورَةُ الكَوثَرِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 3

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಖಂಡಿತವಾಗಿಯೂ ನಾವು ತಮಗೆ ಯಥೇಷ್ಟ ಒಳಿತನ್ನು ದಯಪಾಲಿಸಿರುವೆವು.

إِنَّآ أَعۡطَيۡنَٰكَ ٱلۡكَوۡثَرَ ١

2. ಆದ್ದರಿಂದ ತಾವು ತಮ್ಮ ರಬ್‌ಗಾಗಿ ನಮಾಝ್ ಮಾಡಿರಿ ಮತ್ತು ಬಲಿಯರ್ಪಿಸಿರಿ.

فَصَلِّ لِرَبِّكَ وَٱنۡحَرۡ ٢

3. ಖಂಡಿತವಾಗಿಯೂ ತಮ್ಮೊಂದಿಗೆ ಶತ್ರುತ್ವ ಹೊಂದಿರುವವನೇ ಬೇರು ಕಡಿದು ಹೋದವನಾಗಿರುವನು. (ಭವಿಷ್ಯವಿಲ್ಲದವನಾಗಿರುವನು).[1]

إِنَّ شَانِئَكَ هُوَ ٱلۡأَبۡتَرُ ٣

---

1 ಪ್ರವಾದಿ(ﷺ)ರಿಗೆ ಗಂಡು ಮಕ್ಕಳಿಲ್ಲದ ಕಾರಣ ಶತ್ರುಗಳು ಅವರನ್ನು ಅಬ್ತರ್ (ಬೇರು ಕಡಿದು ಹೋದವನು) ಅಥವಾ ಉತ್ತರಾಧಿಕಾರಿಯಿಲ್ಲದವನು ಎಂದು ಕರೆದು ಗೇಲಿ ಮಾಡುತ್ತಿದ್ದರು. ಇದನ್ನು ಖಂಡಿಸಿ ಪ್ರವಾದಿ(ﷺ)ರೊಂದಿಗೆ ಶತ್ರುತ್ವ ಹೊಂದಿರುವವನೇ ಅಬ್ತರ್ ಅಥವಾ ಭವಿಷ್ಯವಿಲ್ಲದವನು ಎಂದು ಅಲ್ಲಾಹು ಹೇಳಿದ್ದಾನೆ.

## ಅಲ್‌ಕಾಫಿರೂನ್ (ಅವಿಶ್ವಾಸಿಗಳು)

## سُورَةُ الكَافِرُونَ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 6

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1-2. (ಓ ಪ್ರವಾದಿಯವರೇ!) ಹೇಳಿರಿ: ‘ಓ ಅವಿಶ್ವಾಸಿಗಳೇ! ನೀವು ಆರಾಧಿಸುವುದನ್ನು ನಾನು ಆರಾಧಿಸುವುದಿಲ್ಲ.

قُلۡ يَـٰٓأَيُّهَا ٱلۡكَٰفِرُونَ ١ لَآ أَعۡبُدُ مَا تَعۡبُدُونَ ٢

3. ನಾನು ಆರಾಧಿಸುವುದನ್ನು ನೀವೂ ಆರಾಧಿಸುವವರಲ್ಲ.

وَلَآ أَنتُمۡ عَٰبِدُونَ مَآ أَعۡبُدُ ٣

4. ನೀವು ಆರಾಧಿಸುವುದನ್ನು ನಾನು ಆರಾಧಿಸುವವನಲ್ಲ.

وَلَآ أَنَا۠ عَابِدٞ مَّا عَبَدتُّمۡ ٤

5. ನಾನು ಆರಾಧಿಸುವುದನ್ನು ನೀವೂ ಆರಾಧಿಸುವವರಲ್ಲ.

وَلَآ أَنتُمۡ عَٰبِدُونَ مَآ أَعۡبُدُ ٥

6. ನಿಮಗೆ ನಿಮ್ಮ ಧರ್ಮ. ನನಗೆ ನನ್ನ ಧರ್ಮ’.[1]

لَكُمۡ دِينُكُمۡ وَلِيَ دِينِ ٦

---

1 ಓರ್ವ ಸತ್ಯವಿಶ್ವಾಸಿ ವಿಶ್ವಾಸ ಮತ್ತು ಆರಾಧನೆಗೆ ಸಂಬಂಧಿಸಿದಂತೆ ತನ್ನ ವ್ಯತಿರಿಕ್ತತೆಯನ್ನು ಕಾಪಾಡಬೇಕಾದವನಾಗಿದ್ದಾನೆ. ಏಕದೇವಾರಾಧನಾ ಸಿದ್ಧಾಂತಕ್ಕೆ ವಿರುದ್ಧವಾದ ಯಾವುದೇ ಆರಾಧನಾ ಕ್ರಮವನ್ನೂ ಅವನು ಪಾಲಿಸಕೂಡದು.

## ಅನ್ನಸ್ರ್ (ಸಹಾಯ)

## سُورَةُ النَّصۡرِ

ಅವತೀರ್ಣ : ಮದೀನಾದಲ್ಲಿ – ಒಟ್ಟು ಸೂಕ್ತಿಗಳು : 3

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

إِذَا جَآءَ نَصۡرُ ٱللَّهِ وَٱلۡفَتۡحُ ١

1. ಅಲ್ಲಾಹುವಿನ ಸಹಾಯವೂ, ವಿಜಯವೂ ಬಂದಾಗ.

وَرَأَيۡتَ ٱلنَّاسَ يَدۡخُلُونَ فِي دِينِ ٱللَّهِ أَفۡوَاجٗا ٢

2. ಜನರು ಅಲ್ಲಾಹುವಿನ ಧರ್ಮಕ್ಕೆ ಗುಂಪು ಗುಂಪಾಗಿ ಪ್ರವೇಶಿಸುವುದನ್ನು ತಾವು ಕಂಡಾಗ.

فَسَبِّحۡ بِحَمۡدِ رَبِّكَ وَٱسۡتَغۡفِرۡهُۚ إِنَّهُۥ كَانَ تَوَّابَۢا ٣

3. ತಮ್ಮ ರಬ್‌ನ ಸ್ತುತಿಯೊಂದಿಗೆ ಅವನ ಪರಿಪಾವನತೆಯನ್ನು ಕೊಂಡಾಡಿರಿ. ಅವನೊಂದಿಗೆ ಪಾಪಮುಕ್ತಿಯನ್ನು ಬೇಡಿರಿ. ಖಂಡಿತವಾಗಿಯೂ ಅವನು ಪಶ್ಚಾತ್ತಾಪವನ್ನು ಸ್ವೀಕರಿಸುವವನಾಗಿರುವನು.

## ತಬ್ಬತ್ (ನಾಶವಾದವು)

## سُورَةُ تَبَّتْ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 5

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

تَبَّتۡ يَدَآ أَبِي لَهَبٖ وَتَبَّ ١

1. ಅಬೂಲಹಬ್‌ನ ಎರಡು ಕೈಗಳೂ ನಾಶವಾಗಿವೆ. ಅವನೂ ನಾಶವಾಗಿರುವನು.(1)

مَآ أَغۡنَىٰ عَنۡهُ مَالُهُۥ وَمَا كَسَبَ ٢

2. ಅವನ ಸಂಪತ್ತಾಗಲಿ, ಅವನು ಸಂಪಾದಿಸಿರುವುದಾಗಲಿ ಅವನಿಗೆ ಪ್ರಯೋಜನವಾಗಲಿಲ್ಲ.

سَيَصۡلَىٰ نَارٗا ذَاتَ لَهَبٖ ٣

3. ಅಗ್ನಿಜ್ವಾಲೆಗಳುಳ್ಳ ನರಕಾಗ್ನಿಯನ್ನು ಅವನು ಪ್ರವೇಶಿಸುವನು.

وَٱمۡرَأَتُهُۥ حَمَّالَةَ ٱلۡحَطَبِ ٤

4. ಸೌದೆ ಹೊರುವವಳಾದ ಅವನ ಪತ್ನಿಯ ಸಹಿತ.

فِي جِيدِهَا حَبۡلٞ مِّن مَّسَدِۭ ٥

5. ಅವಳ ಕೊರಳಲ್ಲಿ ಖರ್ಜೂರ ಮರದ ನಾರಿನಿಂದ ನೇಯಲಾದ ಒಂದು ಹಗ್ಗವಿರುವುದು.(2)

---

1 ಅಬೂಲಹಬ್ ಎಂಬ ಹೆಸರಲ್ಲಿ ಪರಿಚಿತನಾಗಿದ್ದ ಅಬ್ದುಲ್ ಉಝ್ಝಾ ಎಂಬವನು ಪ್ರವಾದಿ(ﷺ)ರವರ ಚಿಕ್ಕಪ್ಪನಾಗಿದ್ದನು. ಪ್ರವಾದಿ(ﷺ)ರವರ ಧರ್ಮಪ್ರಚಾರವನ್ನು ತೀವ್ರವಾಗಿ ವಿರೋಧಿಸುತ್ತಿದ್ದ ಮತ್ತು ಪ್ರವಾದಿ(ﷺ)ರವರ ಮೇಲೆ ಅಪಪ್ರಚಾರ ಮಾಡುತ್ತಿದ್ದ ಕಾರಣ ಅವನು ಅಲ್ಲಾಹುವಿನ ಶಾಪ ಮತ್ತು ಕೋಪಕ್ಕೆ ಗುರಿಯಾದನು.

2 ಸೌದೆ ಹೊರುವವಳು ಎಂದರೆ ಅನ್ಯರನ್ನು ದೂಷಿಸುವವಳು ಎಂಬ ಅರ್ಥದಲ್ಲಿ ಆಲಂಕಾರಿಕವಾಗಿ ಹೇಳಲಾಗಿದೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯ ಪಟ್ಟಿದ್ದಾರೆ. ಪ್ರವಾದಿ(ﷺ)ರವರು ಚಲಿಸುತ್ತಿದ್ದ ದಾರಿಯಲ್ಲಿ ಆಕೆ ಮುಳ್ಳುಗಳನ್ನು ಹಾಕುತ್ತಿದ್ದುದರಿಂದಲೇ ಆಕೆಯನ್ನು ಹಾಗೆ ಕರೆಯಲಾಗಿದೆಯೆಂದು ಇತರರು ಅಭಿಪ್ರಾಯ ಪಟ್ಟಿದ್ದಾರೆ. ಅವಳ ಕತ್ತಿನಲ್ಲಿ ಹಗ್ಗವಿರುವುದು ಎಂದರೆ ಮುಳ್ಳುಗಳನ್ನು ಕಟ್ಟಿ ತರುವ ಸಲುವಾಗಿ ಆಕೆ ಹಗ್ಗವನ್ನು ಕೊರಳಿಗೆ ಹಾಕಿ ಸಾಗುತ್ತಿದ್ದಳು ಎಂಬ ಅರ್ಥದಲ್ಲಾಗಿರಬಹುದು. ಇದು ನರಕದಲ್ಲಿ ಆಕೆಗಿರುವ ಶಿಕ್ಷೆಯೆಡೆಗೆ ಸೂಚನೆಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯ ಪಡುತ್ತಾರೆ.

## ಅಲ್‌ಇಖ್ಲಾಸ್ (ನಿಷ್ಕಳಂಕತೆ)

## سُورَةُ الإِخْلَاصِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 4

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

بِسْمِ ٱللَّهِ ٱلرَّحْمَٰنِ ٱلرَّحِيمِ

1. (ಓ ಪ್ರವಾದಿಯವರೇ!) ಹೇಳಿರಿ: ‘ಅವನು ಅಲ್ಲಾಹು! ಏಕಮೇವನಾಗಿರುವನು.

قُلْ هُوَ ٱللَّهُ أَحَدٌ ١

2. ಅಲ್ಲಾಹು ಸರ್ವರಿಗೂ ಆಶ್ರಯದಾತನಾಗಿರುವನು.

ٱللَّهُ ٱلصَّمَدُ ٢

3. ಅವನು (ಯಾರಿಗೂ) ಜನ್ಮವನ್ನು ನೀಡಿಲ್ಲ. ಅವನು (ಯಾರದೇ ಸಂತತಿಯಾಗಿ) ಜನಿಸಿದವನೂ ಅಲ್ಲ.

لَمْ يَلِدْ وَلَمْ يُولَدْ ٣

4. ಅವನಿಗೆ ಸರಿಸಾಟಿಯಾಗಿ ಯಾರೂ ಇಲ್ಲ’.

وَلَمْ يَكُن لَّهُۥ كُفُوًا أَحَدٌۢ ٤

## ಅಲ್‌ಫಲಕ್ (ಪ್ರಭಾತ)

## سُورَةُ الفَلَقِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 5

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

1. ತಾವು ಹೇಳಿರಿ. 'ಪ್ರಭಾತದ ರಬ್‌ನೊಂದಿಗೆ ನಾನು ಅಭಯವನ್ನು ಯಾಚಿಸುತ್ತಿರುವೆನು.

2-5. ಅವನು ಸೃಷ್ಟಿಸಿದವುಗಳ ಕೆಡುಕಿನಿಂದ, ಇರುಳು ಕವಿದಾಗ ರಾತ್ರಿಯ ಕೆಡುಕಿನಿಂದ, ಗಂಟುಗಳಲ್ಲಿ ಊದುವ (ಮಾಟಗಾತಿ) ಸ್ತ್ರೀಯರ ಕೆಡುಕಿನಿಂದ ಮತ್ತು ಅಸೂಯೆಪಡುವವನು ಅಸೂಯೆಪಡುವಾಗ ಅವನ ಕೆಡುಕಿನಿಂದ'.

بِسۡمِ ٱللَّهِ ٱلرَّحۡمَٰنِ ٱلرَّحِيمِ

قُلۡ أَعُوذُ بِرَبِّ ٱلۡفَلَقِ ١

مِن شَرِّ مَا خَلَقَ ٢ وَمِن شَرِّ غَاسِقٍ
إِذَا وَقَبَ ٣ وَمِن شَرِّ ٱلنَّفَّٰثَٰتِ
فِي ٱلۡعُقَدِ ٤ وَمِن شَرِّ حَاسِدٍ إِذَا
حَسَدَ ٥

## ಅನ್ನಾಸ್ (ಮನುಷ್ಯರು)

## سُورَةُ النَّاسِ

ಅವತೀರ್ಣ : ಮಕ್ಕಾದಲ್ಲಿ – ಒಟ್ಟು ಸೂಕ್ತಿಗಳು : 6

بِسۡمِ ٱللَّهِ ٱلرَّحۡمَٰنِ ٱلرَّحِيمِ

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹುವಿನ ನಾಮದಿಂದ

قُلۡ أَعُوذُ بِرَبِّ ٱلنَّاسِ ١ مَلِكِ
ٱلنَّاسِ ٢ إِلَٰهِ ٱلنَّاسِ ٣

**1-3.** ತಾವು ಹೇಳಿರಿ: 'ಮನುಷ್ಯರ ರಬ್ ಆಗಿರುವವನೂ, ಮನುಷ್ಯರ ಅಧಿಪತಿಯೂ, ಮನುಷ್ಯರ ಆರಾಧ್ಯನೂ ಆಗಿರುವವನೊಂದಿಗೆ ನಾನು ಅಭಯವನ್ನು ಬೇಡುತ್ತಿರುವೆನು.

مِن شَرِّ ٱلۡوَسۡوَاسِ ٱلۡخَنَّاسِ ٤ ٱلَّذِى
يُوَسۡوِسُ فِى صُدُورِ ٱلنَّاسِ ٥ مِنَ ٱلۡجِنَّةِ
وَٱلنَّاسِ ٦

**4-6.** ಮನುಷ್ಯರ ಹೃದಯಗಳಲ್ಲಿ ದುರ್ಬೋಧನೆ ಮಾಡಿ ಹಿಂದಕ್ಕೆ ಸರಿಯುವ ಮತ್ತು ಮನುಷ್ಯರು ಹಾಗೂ ಜಿನ್ನ್‌ಗಳಲ್ಲಿ ಸೇರಿದವನಾಗಿರುವ ದುರ್ಬೋಧಕರ ಕೆಡುಕಿನಿಂದ'.

# فِهرِسُ بأَسمَاءِ السُّوَرِ وبَيَانِ المَكِّيِّ والمَدَنِيِّ مِنهَا

## ಪವಿತ್ರ ಕುರ್‌ಆನ್ ಸಂಪೂರ್ಣ ಕನ್ನಡ ಅರ್ಥಾನುವಾದ


| ಕ್ರಮ ಸಂಖ್ಯೆ | ಅಧ್ಯಾಯ ಪುಟ | ಅವತೀರ್ಣ | ಪುಟ ಸಂಖ್ಯೆ | السورة |
|---|---|---|---|---|
| 1 | ಅಲ್‌ಫಾತಿಹಃ (ಪ್ರಾರಂಭ) | ಮಕ್ಕಾದಲ್ಲಿ | 1 | سورة الفاتحة |
| 2 | ಅಲ್‌ಬಕರಃ (ಹಸು) | ಮದೀನಾದಲ್ಲಿ | 2 | سورة البقرة |
| 3 | ಆಲು ಇಮ್ರಾನ್ (ಇಮ್ರಾನ್‌ರ ಕುಟುಂಬ) | ಮದೀನಾದಲ್ಲಿ | 87 | سورة آل عمران |
| 4 | ಅನ್ನಿಸಾಅ್ (ಸ್ತ್ರೀಯರು) | ಮದೀನಾದಲ್ಲಿ | 137 | سورة النساء |
| 5 | ಅಲ್‌ಮಾಇದಃ (ಭಕ್ಷ್ಯಹರಿವಾಣ) | ಮದೀನಾದಲ್ಲಿ | 189 | سورة المائدة |
| 6 | ಅಲ್‌ಅನ್‌ಆಮ್ (ಜಾನುವಾರುಗಳು) | ಮಕ್ಕಾದಲ್ಲಿ | 227 | سورة الأنعام |
| 7 | ಅಲ್‌ಅಅ್‌ರಾಫ್ (ಎತ್ತರದ ಸ್ಥಳಗಳು) | ಮಕ್ಕಾದಲ್ಲಿ | 272 | سورة الأعراف |
| 8 | ಅಲ್‌ಅನ್ಫಾಲ್ (ಸಮರಾರ್ಜಿತ ಸೊತ್ತುಗಳು) | ಮದೀನಾದಲ್ಲಿ | 321 | سورة الأنفال |
| 9 | ಅತ್ತೌಬಃ (ಪಶ್ಚಾತ್ತಾಪ) | ಮದೀನಾದಲ್ಲಿ | 341 | سورة التوبة |
| 10 | ಯೂನುಸ್ | ಮಕ್ಕಾದಲ್ಲಿ | 379 | سورة يونس |
| 11 | ಹೂದ್ | ಮಕ್ಕಾದಲ್ಲಿ | 405 | سورة هود |
| 12 | ಯೂಸುಫ್ | ಮಕ್ಕಾದಲ್ಲಿ | 434 | سورة يوسف |
| 13 | ಅರ್ರಅ್‌ದ್ (ಸಿಡಿಲು) | ಮದೀನಾದಲ್ಲಿ | 461 | سورة الرعد |
| 14 | ಇಬ್ರಾಹೀಮ್ | ಮಕ್ಕಾದಲ್ಲಿ | 474 | سورة إبراهيم |
| 15 | ಅಲ್‌ಹಿಜ್ರ್ | ಮಕ್ಕಾದಲ್ಲಿ | 487 | سورة الحجر |
| 16 | ಅನ್ನಹ್ಲ್ (ಜೇನುನೊಣ) | ಮಕ್ಕಾದಲ್ಲಿ | 500 | سورة النحل |
| 17 | ಬನೂ ಇಸ್ರಾಯೀಲ್ | ಮಕ್ಕಾದಲ್ಲಿ | 529 | سورة بني إسرائيل |
| 18 | ಅಲ್‌ಕಹ್‌ಫ್ (ಗುಹೆ) | ಮಕ್ಕಾದಲ್ಲಿ | 554 | سورة الكهف |
| 19 | ಮರ್ಯಮ್ | ಮಕ್ಕಾದಲ್ಲಿ | 579 | سورة مريم |
| 20 | ತ್ವಾಹಾ | ಮಕ್ಕಾದಲ್ಲಿ | 595 | سورة طه |
| 21 | ಅಲ್ ಅಂಬಿಯಾ (ಪ್ರವಾದಿಗಳು) | ಮಕ್ಕಾದಲ್ಲಿ | 616 | سورة الأنبياء |
| 22 | ಅಲ್ ಹಜ್ಜ್ | ಮದೀನಾದಲ್ಲಿ | 636 | سورة الحج |
| 23 | ಅಲ್ ಮುಅ್‌ಮಿನೂನ್ (ಸತ್ಯವಿಶ್ವಾಸಿಗಳು) | ಮಕ್ಕಾದಲ್ಲಿ | 654 | سورة المؤمنون |
| 24 | ಅನ್ನೂರ್ (ಪ್ರಕಾಶ) | ಮದೀನಾದಲ್ಲಿ | 670 | سورة النور |

| ಕ್ರಮ ಸಂಖ್ಯೆ | ಅಧ್ಯಾಯ ಪುಟ | ಅವತೀರ್ಣ | ಪುಟ ಸಂಖ್ಯೆ | السورة |
|---|---|---|---|---|
| 25 | ಅಲ್ ಫುರ್ಕಾನ್ (ಸತ್ಯಾಸತ್ಯ ವಿವೇಚನೆ) | ಮಕ್ಕಾದಲ್ಲಿ | 690 | سورة الفرقان |
| 26 | ಅಶ್ಶುಅರಾಅ್ (ಕವಿಗಳು) | ಮಕ್ಕಾದಲ್ಲಿ | 704 | سورة الشعراء |
| 27 | ಅನ್ನಮ್ಲ್ (ಇರುವೆ) | ಮಕ್ಕಾದಲ್ಲಿ | 727 | سورة النمل |
| 28 | ಅಲ್‌ಕ್ವಸಸ್ (ಕಥಾನಕ) | ಮಕ್ಕಾದಲ್ಲಿ | 745 | سورة القصص |
| 29 | ಅಲ್‌ಅನ್ಕಬೂತ್ (ಜೇಡ) | ಮಕ್ಕಾದಲ್ಲಿ | 766 | سورة العنكبوت |
| 30 | ಅರ್ರೂಮ್ (ರೋಮನ್ನರು) | ಮಕ್ಕಾದಲ್ಲಿ | 781 | سورة الروم |
| 31 | ಲುಕ್ಮಾನ್ | ಮಕ್ಕಾದಲ್ಲಿ | 793 | سورة لقمان |
| 32 | ಅಸ್ಸಜ್ದಃ | ಮಕ್ಕಾದಲ್ಲಿ | 800 | سورة السجدة |
| 33 | ಅಲ್‌ಅಹ್‌ಝಾಬ್ (ಮಿತ್ರಪಕ್ಷಗಳು) | ಮದೀನಾದಲ್ಲಿ | 806 | سورة الأحزاب |
| 34 | ಸಬಅ್ | ಮಕ್ಕಾದಲ್ಲಿ | 828 | سورة سبإ |
| 35 | ಫಾತಿರ್ (ಸೃಷ್ಟಿಕರ್ತ) | ಮಕ್ಕಾದಲ್ಲಿ | 842 | سورة فاطر |
| 36 | ಯಾಸೀನ್ | ಮಕ್ಕಾದಲ್ಲಿ | 853 | سورة يس |
| 37 | ಅಸ್ಸಾಫ್ಫಾತ್ (ಸಾಲುಗಟ್ಟಿ ನಿಲ್ಲುವವರು) | ಮಕ್ಕಾದಲ್ಲಿ | 866 | سورة الصافات |
| 38 | ಸ್ವಾದ್ | ಮಕ್ಕಾದಲ್ಲಿ | 882 | سورة ص |
| 39 | ಅಝ್ಝುಮರ್ (ಗುಂಪುಗಳು) | ಮಕ್ಕಾದಲ್ಲಿ | 896 | سورة الزمر |
| 40 | ಅಲ್‌ಮುಅ್‌ಮಿನ್ (ಸತ್ಯವಿಶ್ವಾಸಿ) | ಮಕ್ಕಾದಲ್ಲಿ | 913 | سورة المؤمن |
| 41 | ಹಾಮೀಂ ಸಜದಃ | ಮಕ್ಕಾದಲ್ಲಿ | 930 | سورة حم السجدة |
| 42 | ಅಶ್ಶೂರಾ (ಸಮಾಲೋಚನೆ) | ಮಕ್ಕಾದಲ್ಲಿ | 942 | سورة الشورى |
| 43 | ಅಝ್ಝುಖ್ರುಫ್ (ಸ್ವರ್ಣಾಲಂಕಾರ) | ಮಕ್ಕಾದಲ್ಲಿ | 954 | سورة الزخرف |
| 44 | ಅದ್ದುಖಾನ್ (ಹೊಗೆ) | ಮಕ್ಕಾದಲ್ಲಿ | 968 | سورة الدخان |
| 45 | ಅಲ್‌ಜಾಸಿಯ (ಮಂಡಿಯೂರಿದವುಗಳು) | ಮಕ್ಕಾದಲ್ಲಿ | 974 | سورة الجاثية |
| 46 | ಅಲ್‌ಅಹ್ಕಾಫ್ | ಮಕ್ಕಾದಲ್ಲಿ | 981 | سورة الأحقاف |
| 47 | ಮುಹಮ್ಮದ್ | ಮದೀನಾದಲ್ಲಿ | 990 | سورة محمد |
| 48 | ಅಲ್‌ಫತ್‌ಹ್ (ವಿಜಯ) | ಮದೀನಾದಲ್ಲಿ | 999 | سورة الفتح |
| 49 | ಅಲ್‌ಹುಜುರಾತ್ (ಕೊಠಡಿಗಳು) | ಮದೀನಾದಲ್ಲಿ | 1008 | سورة الحجرات |
| 50 | ಕ್ವಾಫ್ | ಮಕ್ಕಾದಲ್ಲಿ | 1013 | سورة ق |
| 51 | ಅದ್ದಾರಿಯಾತ್ (ಹರಡುವವುಗಳು) | ಮಕ್ಕಾದಲ್ಲಿ | 1019 | سورة الذاريات |
| 52 | ಅತ್ತೂರ್ | ಮಕ್ಕಾದಲ್ಲಿ | 1026 | سورة الطور |
| 53 | ಅನ್ನಜ್ಮ್ (ನಕ್ಷತ್ರ) | ಮಕ್ಕಾದಲ್ಲಿ | 1032 | سورة النجم |
| 54 | ಅಲ್‌ಕಮರ್ (ಚಂದ್ರ) | ಮಕ್ಕಾದಲ್ಲಿ | 1039 | سورة القمر |

| ಕ್ರಮ ಸಂಖ್ಯೆ | ಅಧ್ಯಾಯ ಪುಟ | ಅವತೀರ್ಣ | ಪುಟ ಸಂಖ್ಯೆ | السورة |
|---|---|---|---|---|
| 55 | ಅರ್ರಹ್ಮಾನ್ (ಪರಮ ದಯಾಮಯ) | ಮದೀನಾದಲ್ಲಿ | 1046 | سورة الرحمن |
| 56 | ಅಲ್‌ವಾಕಿಅಃ (ಘಟನೆ) | ಮಕ್ಕಾದಲ್ಲಿ | 1054 | سورة الواقعة |
| 57 | ಅಲ್‌ಹದೀದ್ (ಕಬ್ಬಿಣ) | ಮದೀನಾದಲ್ಲಿ | 1062 | سورة الحديد |
| 58 | ಅಲ್‌ಮುಜಾದಿಲಃ (ತರ್ಕಿಸುವವಳು) | ಮದೀನಾದಲ್ಲಿ | 1071 | سورة المجادلة |
| 59 | ಅಲ್‌ಹಶ್ರ್ (ಗಡಿಪಾರು) | ಮದೀನಾದಲ್ಲಿ | 1078 | سورة الحشر |
| 60 | ಅಲ್‌ಮುಮ್ತಹನಃ (ಪರೀಕ್ಷಿಸಲ್ಪಡಬೇಕಾದವಳು) | ಮದೀನಾದಲ್ಲಿ | 1085 | سورة الممتحنة |
| 61 | ಅಸ್ಸಫ್ಫ್ (ಸಾಲು) | ಮದೀನಾದಲ್ಲಿ | 1090 | سورة الصف |
| 62 | ಅಲ್‌ಜುಮುಅಃ | ಮದೀನಾದಲ್ಲಿ | 1093 | سورة الجمعة |
| 63 | ಅಲ್‌ಮುನಾಫಿಕೂನ್ (ಕಪಟವಿಶ್ವಾಸಿಗಳು) | ಮದೀನಾದಲ್ಲಿ | 1096 | سورة المنافقون |
| 64 | ಅತ್ತಗಾಬುನ್ (ನಷ್ಟ ಬಹಿರಂಗವಾಗುವುದು) | ಮದೀನಾದಲ್ಲಿ | 1100 | سورة التغابن |
| 65 | ಅತ್ತಲಾಕ್ (ವಿವಾಹವಿಚ್ಛೇದನೆ) | ಮದೀನಾದಲ್ಲಿ | 1104 | سورة الطلاق |
| 66 | ಅತ್ತಹ್ರೀಮ್ (ನಿಷಿದ್ಧಗೊಳಿಸುವುದು) | ಮದೀನಾದಲ್ಲಿ | 1108 | سورة التحريم |
| 67 | ಅಲ್‌ಮುಲ್ಕ್ (ಆಧಿಪತ್ಯ) | ಮಕ್ಕಾದಲ್ಲಿ | 1113 | سورة الملك |
| 68 | ಅಲ್‌ಕಲಮ್ (ಲೇಖನಿ) | ಮಕ್ಕಾದಲ್ಲಿ | 1118 | سورة القلم |
| 69 | ಅಲ್‌ಹಾಕ್ಕಃ (ಸತ್ಯ ಘಟನೆ) | ಮಕ್ಕಾದಲ್ಲಿ | 1124 | سورة الحاقة |
| 70 | ಅಲ್‌ಮಆರಿಜ್ (ಆರೋಹಣ ದಾರಿಗಳು) | ಮಕ್ಕಾದಲ್ಲಿ | 1129 | سورة المعارج |
| 71 | ನೂಹ್ | ಮಕ್ಕಾದಲ್ಲಿ | 1133 | سورة نوح |
| 72 | ಅಲ್‌ಜಿನ್ನ್ | ಮಕ್ಕಾದಲ್ಲಿ | 1137 | سورة الجن |
| 73 | ಅಲ್‌ಮುಝ್ಝಮ್ಮಿಲ್ (ಬಟ್ಟೆಯಿಂದ ಹೊದಿಯಲಾಗಿರುವವನು) | ಮಕ್ಕಾದಲ್ಲಿ | 1142 | سورة المزمل |
| 74 | ಅಲ್‌ಮುದ್ದಸ್ಸಿರ್ (ಹೊದಿಯಲಾಗಿರುವವನು) | ಮಕ್ಕಾದಲ್ಲಿ | 1146 | سورة المدثر |
| 75 | ಅಲ್‌ಕಿಯಾಮಃ (ಪುನರುತ್ಥಾನ) | ಮಕ್ಕಾದಲ್ಲಿ | 1152 | سورة القيامة |
| 76 | ಅದ್ದಹ್‌ರ್ | ಮದೀನಾದಲ್ಲಿ | 1156 | سورة الدهر |
| 77 | ಅಲ್‌ಮುರ್ಸಲಾತ್ (ನಿಯೋಗಿಸಲ್ಪಡುವವುಗಳು) | ಮಕ್ಕಾದಲ್ಲಿ | 1160 | سورة المرسلات |
| 78 | ಅನ್ನಬಅ್ (ವೃತ್ತಾಂತ) | ಮಕ್ಕಾದಲ್ಲಿ | 1164 | سورة النبإ |
| 79 | ಅನ್ನಾಝಿಆತ್ (ಹೊರಗೆಳೆಯುವವುಗಳು) | ಮಕ್ಕಾದಲ್ಲಿ | 1168 | سورة النازعات |
| 80 | ಅಬಸ (ಮುಖ ಸಿಂಡರಿಸಿದನು) | ಮಕ್ಕಾದಲ್ಲಿ | 1172 | سورة عبس |
| 81 | ಅತ್ತಕ್ವೀರ್ (ಸುತ್ತಿ ಹೊದಿಯಲಾಗುವುದು) | ಮಕ್ಕಾದಲ್ಲಿ | 1175 | سورة التكوير |
| 82 | ಅಲ್ ಇನ್‌ಫಿತಾರ್ (ಒಡೆದು ಸಿಡಿಯುವಿಕೆ) | ಮಕ್ಕಾದಲ್ಲಿ | 1178 | سورة الانفطار |
| 83 | ಅಲ್ ಮುತಫ್ಫಿಫೀನ್ (ಅಳವಿನಲ್ಲಿ ಕಡಿತಗೊಳಿಸುವವರು) | ಮಕ್ಕಾದಲ್ಲಿ | 1180 | سورة المطففين |
| 84 | ಅಲ್‌ಇನ್‌ಶಿಕಾಕ್ (ಒಡೆದು ಸೀಳುವಿಕೆ) | ಮಕ್ಕಾದಲ್ಲಿ | 1183 | سورة الانشقاق |

| ಕ್ರಮ ಸಂಖ್ಯೆ | ಅಧ್ಯಾಯ ಪುಟ | ಅವತೀರ್ಣ | ಪುಟ ಸಂಖ್ಯೆ | السورة |
|---|---|---|---|---|
| 85 | ಅಲ್‌ಬುರೂಜ್ (ನಕ್ಷತ್ರ ಪುಂಜಗಳು) | ಮಕ್ಕಾದಲ್ಲಿ | 1186 | سورة البروج |
| 86 | ಅತ್ತಾರಿಕ್ (ರಾತ್ರಿ ಬರುವಂತಹುದು) | ಮಕ್ಕಾದಲ್ಲಿ | 1188 | سورة الطارق |
| 87 | ಅಲ್‌ಅಅ್‌ಲಾ (ಅತ್ಯುನ್ನತನು) | ಮಕ್ಕಾದಲ್ಲಿ | 1190 | سورة الأعلى |
| 88 | ಅಲ್‌ಗಾಶಿಯಃ (ಆವರಿಸುವ ಘಟನೆ) | ಮಕ್ಕಾದಲ್ಲಿ | 1192 | سورة الغاشية |
| 89 | ಅಲ್‌ಫಜ್ರ್ (ಪ್ರಭಾತ) | ಮಕ್ಕಾದಲ್ಲಿ | 1195 | سورة الفجر |
| 90 | ಅಲ್‌ಬಲದ್ (ಪಟ್ಟಣ) | ಮಕ್ಕಾದಲ್ಲಿ | 1198 | سورة البلد |
| 91 | ಅಶ್ಶಮ್ಸ್ (ಸೂರ್ಯ) | ಮಕ್ಕಾದಲ್ಲಿ | 1200 | سورة الشمس |
| 92 | ಅಲ್ಲೈಲ್ (ರಾತ್ರಿ) | ಮಕ್ಕಾದಲ್ಲಿ | 1202 | سورة الليل |
| 93 | ಅದ್ದುಹಾ (ಪೂರ್ವಾಹ್ನ) | ಮಕ್ಕಾದಲ್ಲಿ | 1204 | سورة الضحى |
| 94 | ಅಲಮ್ ನಶ್‌ರಹ್ | ಮಕ್ಕಾದಲ್ಲಿ | 1205 | سورة ألم نشرح |
| 95 | ಅತ್ತೀನ್ (ಅಂಜೂರ) | ಮಕ್ಕಾದಲ್ಲಿ | 1206 | سورة التين |
| 96 | ಅಲ್‌ಅಲಕ್ (ರಕ್ತಪಿಂಡ) | ಮಕ್ಕಾದಲ್ಲಿ | 1207 | سورة العلق |
| 97 | ಅಲ್‌ಕದ್ರ್ (ನಿರ್ಣಯ) | ಮಕ್ಕಾದಲ್ಲಿ | 1209 | سورة القدر |
| 98 | ಅಲ್‌ಬಯ್ಯಿನಃ (ಸ್ಪಷ್ಟ ಪುರಾವೆ) | ಮದೀನಾದಲ್ಲಿ | 1210 | سورة البينة |
| 99 | ಅಝ್ಝಿಲ್‌ಝಾಲ್ (ಕಂಪನ) | ಮದೀನಾದಲ್ಲಿ | 1212 | سورة الزلزال |
| 100 | ಅಲ್‌ಆದಿಯಾತ್ (ಓಡುವವುಗಳು) | ಮಕ್ಕಾದಲ್ಲಿ | 1213 | سورة العاديات |
| 101 | ಅಲ್‌ಕಾರಿಅಃ (ಭಯಾನಕ ಘಟನೆ) | ಮಕ್ಕಾದಲ್ಲಿ | 1214 | سورة القارعة |
| 102 | ಅತ್ತಕಾಸುರ್ (ದೊಡ್ಡಸ್ತಿಕೆ ತೋರಿಸುವುದು) | ಮಕ್ಕಾದಲ್ಲಿ | 1215 | سورة التكاثر |
| 103 | ಅಲ್‌ಅಸ್ರ್ (ಕಾಲ) | ಮಕ್ಕಾದಲ್ಲಿ | 1216 | سورة العصر |
| 104 | ಅಲ್‌ಹುಮಝಃ (ಚುಚ್ಚಿ ಮಾತನಾಡುವವರು) | ಮಕ್ಕಾದಲ್ಲಿ | 1217 | سورة الهمزة |
| 105 | ಅಲ್‌ಫೀಲ್ (ಆನೆ) | ಮಕ್ಕಾದಲ್ಲಿ | 1218 | سورة الفيل |
| 106 | ಕುರೈಶ್ | ಮಕ್ಕಾದಲ್ಲಿ | 1219 | سورة قريش |
| 107 | ಅಲ್‌ಮಾಊನ್ (ಪರೋಪಕಾರಿ ವಸ್ತುಗಳು) | ಮಕ್ಕಾದಲ್ಲಿ | 1220 | سورة الماعون |
| 108 | ಅಲ್‌ಕೌಸರ್ (ಯಥೇಷ್ಟತೆ) | ಮಕ್ಕಾದಲ್ಲಿ | 1221 | سورة الكوثر |
| 109 | ಅಲ್‌ಕಾಫಿರೂನ್ (ಅವಿಶ್ವಾಸಿಗಳು) | ಮಕ್ಕಾದಲ್ಲಿ | 1222 | سورة الكافرون |
| 110 | ಅನ್ನಸ್ರ್ (ಸಹಾಯ) | ಮದೀನಾದಲ್ಲಿ | 1223 | سورة النصر |
| 111 | ತಬ್ಬತ್ (ನಾಶವಾದವು) | ಮಕ್ಕಾದಲ್ಲಿ | 1224 | سورة تبت |
| 112 | ಅಲ್‌ಇಖ್ಲಾಸ್ (ನಿಷ್ಕಳಂಕತೆ) | ಮಕ್ಕಾದಲ್ಲಿ | 1225 | سورة الإخلاص |
| 113 | ಅಲ್‌ಫಲಕ್ (ಪ್ರಭಾತ) | ಮಕ್ಕಾದಲ್ಲಿ | 1226 | سورة الفلق |
| 114 | ಅನ್ನಾಸ್ (ಮನುಷ್ಯರು) | ಮಕ್ಕಾದಲ್ಲಿ | 1227 | سورة الناس |

إنّ وزارة الشؤون الإسلامية والدعوة والإرشاد

في المملكة العربية السعودية

المشرفة على

مجمع الملك فهد لطباعة المصحف الشريف
في المدينة المنورة

إذ يسرها أن يصدر المجمع هذه الطبعة من

ترجمة معاني القرآن الكريم

إلى اللغة الكنادية

تسأل الله أن ينفع بها الناس

وأن يجزي

خادم الحرمين الشريفين الملك سلمان بن عبد العزيز آل سعود

أحسن الجزاء على جهوده العظيمة في نشر كتاب الله الكريم

والله ولي التوفيق

